


# ಜ್ಞಾನ ಗಂಗೋತ್ರಿ

## ಕಲೆ, ಸಾಹಿತ್ಯ



ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ

# ಜ್ಞಾನ ಗಂಗೋತ್ರಿ

## ಕಿರಿಯರ ವಿಶ್ವಕೋಶ

## ೫

## ಕಲೆ, ಸಾಹಿತ್ಯ

ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ

# ಜ್ಞಾನ ಗಂಗೋತ್ರಿ

## ಕಿರಿಯರ ವಿಶ್ವಕೋಶ

ಸಂಪುಟ ಐದು

**ಕಲೆ, ಸಾಹಿತ್ಯ**




ಬೆಂಗಳೂರು
೧೯೭೩

# ಜ್ಞಾನ ಪ್ರಯೋಗಾಲಯ

'ಜ್ಞಾನ ಗಂಗೋತ್ರಿ'ಯ ಲೇಖನಗಳ ಒರೆಗಲ್ಲು ಪರೀಕ್ಷೆಗೆ ವ್ಯವಸ್ಥೆ
ಜಯನಗರ ಹೈಸ್ಕೂಲಿನ ಸಹಕಾರದೊಂದಿಗೆ

ಪ್ರಯೋಗಾಲಯದ ಸದಸ್ಯರು :

೮, ೯ ಮತ್ತು ೧೦ನೇ ತರಗತಿಗಳ

ವಿದ್ಯಾರ್ಥಿ ವಿದ್ಯಾರ್ಥಿನಿಯರು ಮತ್ತು ಅಧ್ಯಾಪಕರು

# ಸಂಪಾದಕ ಮಂಡಲಿ

# ಜ್ಞಾನ ಗಂಗೋತ್ರಿ

ಏಳು ಸಂಪುಟಗಳಲ್ಲಿ

## ಸಂಪುಟ ೧

### ಮನುಕುಲದ ಕಥೆ

ಗವಿಜೀವನದಿಂದ ಚಂದ್ರಯಾನದ ತನಕ :
ನಾಗರಿಕತೆಗಳು : ಧರ್ಮಗಳು : ತತ್ತ್ವಜ್ಞಾನಗಳು :
ರಾಜ್ಯಗಳ ಉದಯ : ರಾಜಕೀಯ ವ್ಯವಸ್ಥೆಗಳು :
ವ್ಯಾಪಾರ, ವಾಣಿಜ್ಯ, ಕೈಗಾರಿಕೆ : ಭೂಗೋಳ :
ಇತಿಹಾಸಪ್ರಸಿದ್ಧ ಸ್ತ್ರೀ–ಪುರುಷರು

## ಸಂಪುಟ ೨

### ಜೀವಜಗತ್ತು

ಸಸ್ಯವಿಜ್ಞಾನ : ಪ್ರಾಣಿವಿಜ್ಞಾನ : ಶರೀರವಿಜ್ಞಾನ :
ಮನೋವಿಜ್ಞಾನ : ವೈದ್ಯಕೀ : ಶಸ್ತ್ರಚಿಕಿತ್ಸೆ : ಕೃಷಿ :
ಮತ್ಸ್ಯೋದ್ಯಮ : ತೋಟಗಾರಿಕೆ : ವಿಖ್ಯಾತ
ಜೀವವಿಜ್ಞಾನಿಗಳು

## ಸಂಪುಟ ೩

### ಭೌತಜಗತ್ತು

ಭೌತವಿಜ್ಞಾನ : ರಸಾಯನವಿಜ್ಞಾನ: ಖಗೋಲವಿಜ್ಞಾನ .
ಗಣಿತ : ಭೂವಿಜ್ಞಾನ : ಪವನವಿಜ್ಞಾನ : ವ್ಯೋಮಯಾನ:
ಗ್ರಹಾಂತರಯಾನ : ಈ ಕ್ಷೇತ್ರಗಳ ವಿಜ್ಞಾನಿಗಳು

## ಸಂಪುಟ ೪

### ಯಂತ್ರಜಗತ್ತು

ಎಂಜಿನಿಯರಿಂಗ್ –ಮಿಲಿಟರಿ, ಸಿವಿಲ್,
ಮೆಕ್ಯಾನಿಕಲ್, ಎಲೆಕ್ಟ್ರಿಕಲ್ : ತಾಂತ್ರಿಕತೆ :
ಘನ, ಲಘು ಮತ್ತು ಬೃಹತ್ ಪ್ರಮಾಣದ
ಕೈಗಾರಿಕೋದ್ಯಮಗಳು : ದೂರ
ಸಂಪರ್ಕ ಸಾಧನ : ಎಲೆಕ್ಟ್ರಾನಿಕ್ಸ್
ಈ ಕ್ಷೇತ್ರಗಳ ಕೀರ್ತಿಶಾಲಿಗಳು

## ಸಂಪುಟ ೫

### ಕಲೆ, ಸಾಹಿತ್ಯ

ನೃತ್ಯ, ಸಂಗೀತ, ನಾಟಕಕಲೆ, ಚಿತ್ರಕಲೆ,
ಶಿಲ್ಪಕಲೆ, ವಾಸ್ತುಶಿಲ್ಪ, ಸಾಹಿತ್ಯ ಆರಂಭದ
ನಾಗರಿಕತೆಯಿಂದ ಆಧುನಿಕ ಅವಧಿಯತನಕ :
ಭಾರತೀಯ ಮತ್ತು ಗ್ರೀಕ್ ಮಹಾಕಾವ್ಯಗಳು :
ಕರ್ನಾಟಕದ, ಭಾರತದ, ವಿದೇಶಗಳ ಖ್ಯಾತ
ಸಾಹಿತಿಗಳು, ಕಲಾವಿದರು

## ಸಂಪುಟ ೬

### ಕ್ರೀಡೆ, ಮನೋಲ್ಲಾಸ

ಜಗತ್ತಿನ ಕ್ರೀಡೆಗಳು, ಆಟಗಳು :
ಶರೀರ ಶಿಕ್ಷಣ : ಪ್ರಸಿದ್ಧ ಕ್ರೀಡಾಪಟುಗಳು :
ಹವ್ಯಾಸಗಳು : ಮನೋರಂಜನೆ

## ಸಂಪುಟ ೭

### ಭಾರತದ ಕಥೆ

ಚರಿತ್ರಪೂರ್ವ ಕಾಲಾವಧಿಯಿಂದ ಗಾಂಧೀಯುಗದ ತನಕ : ಪ್ರಾಚೀನ ಭಾರತದಲ್ಲಿ ವಿಜ್ಞಾನ, ಸಾಹಿತ್ಯ : ಧರ್ಮೋಪದೇಶಕರು : ಮಹಾನ್ ಆಡಳಿತಗಾರರು : ದಾಸ್ಯ–ಸ್ವಾತಂತ್ರ್ಯ : ವಿವಿಧತೆಯಲ್ಲಿ ಏಕತೆ : ಭಾರತದ ಭೂಗೋಳ, ಕೃಷಿ, ಕೈಗಾರಿಕೋದ್ಯಮ : ಭಾರತ ಮತ್ತು ವ್ಯೋಮಯುಗ : ಜಗತ್ತಿನ ಸಮಕಾಲೀನ ಬದುಕು ಮತ್ತು ಘಟನೆಗಳ ಬಗೆಗೆ ಪೂರಕ ಲೇಖನಗಳು : ವಿಶ್ವದ ಹಿನ್ನೆಲೆಯಲ್ಲಿ ಭಾರತದ ಕಥೆ

# ಈ ಸಂಪುಟದ ಸಮಾಲೋಚಕರು

ಆದ್ಯ ರಂಗಾಚಾರ್ಯ
ಬೆಂಗಳೂರು

ವಿ. ಸೀತಾರಾಮಯ್ಯ
ಬೆಂಗಳೂರು

ಬಿ. ಪುಟ್ಟಸ್ವಾಮಯ್ಯ
ಬೆಂಗಳೂರು

ಡಾ. ಜಿ. ಎಚ್. ವೀರಣ್ಣ
ಬೆಂಗಳೂರು

ಬಿ. ಜಯಮ್ಮ
ಬೆಂಗಳೂರು

ಕೆ. ಕೆ. ಹೆಬ್ಬಾರ್
ಮುಂಬಯಿ

ಬಿ. ವಿ. ಕೆ. ಶಾಸ್ತ್ರೀ
ಬೆಂಗಳೂರು

ಮಾಯಾರಾವ್
ನವದೆಹಲಿ

ಡಾ. ಕೆ. ಕೃಷ್ಣಮೂರ್ತಿ
ಮುಖ್ಯಸ್ಥ, ಸಂಸ್ಕೃತ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಾ. ಎಚ್. ತಿಪ್ಪೇರುದ್ರಸ್ವಾಮಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

ಡಾ. ಯು. ಆರ್. ಅನಂತಮೂರ್ತಿ
ಮಾನಸ ಗಂಗೋತ್ರಿ
ಮೈಸೂರು

ವಿ. ದೊರೆಸ್ವಾಮಿ ಐಯಂಗಾರ್
ಮ್ಯೂಸಿಕ್ ಪ್ರೊಡ್ಯೂಸರ್
ಆಕಾಶವಾಣಿ
ಬೆಂಗಳೂರು

ಆರ್. ವಿ. ಶೇಷಾದ್ರಿ ಗವಾಯಿ
ಸಂಪಾದಕ
' ಗಾಯನ ಗಂಗಾ '
ಬೆಂಗಳೂರು

ಆರ್. ಸತ್ಯನಾರಾಯಣ
ಪ್ರಾಧ್ಯಾಪಕ
ಶ್ರೀ ವರಲಕ್ಷ್ಮಿ ಲಲಿತ ಕಲಾ ಅಕಾಡೆಮಿ
ಮೈಸೂರು

ಡಾ. ಆರ್. ಸಿ. ಹಿರೇಮಠ
ನಿರ್ದೇಶಕ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಪ್ರೊ. ಕೆ. ಎ. ಚೆಟ್ಟಿ
[illegible]
ಮುಂಬಯಿ

ಡಾ. ಎಚ್. ಕೆ. ರಂಗನಾಥ
ಉಪ ನಿರ್ದೇಶಕ
ಭಾರತ ಸರಕಾರದ ಗೀತ ನಾಟಕ ವಿಭಾಗ
ಬೆಂಗಳೂರು

ಸಿ. ಪಿ. ಕೃಷ್ಣಕುಮಾರ್
ಮಾನಸ ಗಂಗೋತ್ರಿ
ಮೈಸೂರು

ಕಯ್ಯಾರ ಕಿಞ್ಞಣ್ಣ ರೈ
ಅಧ್ಯಾಪಕ
ನವಜೀವನ ಹೈಸ್ಕೂಲು
ಪೆರಡಾಲ

ಡಾ. ಜಿ. ಎಸ್. ಆಮೂರ
ಮುಖ್ಯಸ್ಥ, ಇಂಗ್ಲಿಷ್ ವಿಭಾಗ
ಮರಾಠವಾಡ ವಿಶ್ವವಿದ್ಯಾಲಯ
ಔರಂಗಾಬಾದ್

ಕೆ. ವೆಂಕಟರಾಮಪ್ಪ
ವಿಶ್ರಾಂತ ಕನ್ನಡ ಪ್ರಾಧ್ಯಾಪಕ
ಮೈಸೂರು

ಕೆ. ವಿ. ಸುಬ್ಬಣ್ಣ
ಅಕ್ಷರ ಪ್ರಕಾಶನ
ಸಾಗರ

ಪಿ. ಆರ್. ತಿಪ್ಪೇಸ್ವಾಮಿ
ಕ್ಯೂರೇಟರ್
ಜಾನಪದ ವಸ್ತುಸಂಗ್ರಹಾಲಯ
ಮೈಸೂರು

ಡಾ. ಜೀ. ಶಂ. ಪರಮಶಿವಯ್ಯ
ಮಾನಸ ಗಂಗೋತ್ರಿ
ಮೈಸೂರು

ಶ್ರೀನಿವಾಸ ಉಡುಪ
ಸಂಗೀತ ಅಧ್ಯಾಪಕ
ಬೆಸೆಂಟ್ ಬಾಲಿಕಾ ಪ್ರೌಢಶಾಲೆ
ಮಂಗಳೂರು

ನಾರಾಯಣ ಸಂಗಮ
ಬೆಂಗಳೂರು

# ನೆನಕೆ

**ಪುಟ ಸಂಯೋಜನೆ —**

**ಬಹ್ವಂಶ ರೇಖಾಚಿತ್ರಗಳ ರಚನೆ :**

ಕೆ. ಮುರಲೀಧರ

**ಕೆಲವು ರೇಖಾಚಿತ್ರಗಳು :**

ಎಸ್. ಆರ್. ಐಯಂಗಾರ್ ; ಆರ್. ಎಸ್. ನಾಯ್ಡು ; ಕೆ. ಬಿ. ಕುಲಕರ್ಣಿ ; ವಿಜಯ್

**ಛಾಯಾಚಿತ್ರಗಳು :**

ಬಿ. ಕೇಸರ ಸಿಂಗ್, ಕೆ. ಜಿ. ಸೋಮಶೇಖರ್, ಟಿ. ಎಲ್. ರಾಮಸ್ವಾಮಿ, ವೈ. ಎಂ. ಆನಂದವರ್ಧನ. ಕರ್ನಾಟಿಕ್ ಫೋಟೋ ಸ್ಟುಡಿಯೊ, ಪ್ರಭಾತ್ ಶಿಶುವಿಹಾರ ; ಸಾಗರ್ ಸ್ಟುಡಿಯೊ, ಬೆಂಗಳೂರು ; ಭವಾನಿ ಸ್ಟುಡಿಯೊ, ಚಿಕ್ಕಬಳ್ಳಾಪುರ ; ಸ್ಟುಡಿಯೊ ಆನಂದ್, ಧಾರವಾಡ ; ಸೋವಿಯೆತ್ ವಾರ್ತಾ ವಿಭಾಗ, ಸಂಯುಕ್ತ ಸಂಸ್ಥಾನ ವಾರ್ತಾ ಕೇಂದ್ರ —ಮದರಾಸು ; ಇಸ್ರೇಲ್ ಕಾನ್ಸಲೇಟ್, ಮುಂಬಯಿ ; ಎನ್. ಸಿ. ದೇಸಾಯಿ, ಸಂತೋಷ ಕುಮಾರ ಗುಲ್ವಾಡಿ, ಶಿವರಂಜನ ಗುಲ್ವಾಡಿ —ಮುಂಬಯಿ ; ಪ್ರಹ್ಲಾದ ಕೋನೇರಿ, ಕಾರ್ಗಲ್ ; ಕೆ. ಎನ್. ಸುಂದರರಾಜ್, ಮೈಸೂರು

**ಚಿತ್ರಕೃತಿ–ಶಿಲ್ಪಕೃತಿಗಳ ಛಾಯಾಚಿತ್ರಗಳು :**

ಕೆ. ಎ. ಚಿಟ್ಟಿ, ಮುಂಬಯಿ ; ಸುಕನ್ಯಾ ರಾಜಶೇಖರ್, ಬೆಂಗಳೂರು ; ಬಿ. ಪಿ. ಬಾಯಿರಿ, ಉಡುಪಿ ; ರುಮಾಲೆ ಚೆನ್ನಬಸವಯ್ಯ, ಬೆಂಗಳೂರು ; ಆರ್. ಎಂ. ಹಡಪದ, ಬೆಂಗಳೂರು ; ಇಕ್ಬಾಲ್ ಫರೀದ್, ಮೈಸೂರು

**ವರ್ಣಚಿತ್ರಗಳು :**

ಕಥಕ್ಕಳಿ ನಾಯಕ ಪಾತ್ರ : ಕಲಾಕ್ಷೇತ್ರ, ಮದರಾಸು
ವಿಜಯ—1970 : ಕೆ. ಕೆ. ಹೆಬ್ಬಾರ್
ಶಾಂಭಲಾದ ಗೀತೆ : ನಿಕೊಲಾಯಿ ರೊರೀಕ್
ನಮ್ಮಿಂದಲೇ ನಮ್ಮ ಸೆರೆಮನೆಯ ನಿರ್ಮಾಣ : ಸ್ವೆತಸ್ಲಾವ್ ರೊರೀಕ್
ನವರಸ : ವಸುಂಧರಾ ದೊರೆಸ್ವಾಮಿ
ಹಂಸ ಸರೋವರ : ನೊವೊಸ್ತಿ ಪ್ರೆಸ್ ಏಜನ್ಸಿ, ಮಾಸ್ಕೊ
ಆಟಿಗೆ : ಎನ್. ಕೆ. ಅನಂತರಾಮ್, ಐ.ಟಿ.ಐ.
ಶ್ರೀ ರಾಮಾಯಣ ದರ್ಶನಂ ನೃತ್ಯರೂಪಕ : ಎಂ. ಎಸ್. ನಟರಾಜನ್
ಅಭಿಮನ್ಯು, ಹನುಮಂತ : ಸಂತೋಷಕುಮಾರ ಗುಲ್ವಾಡಿ
ಒಡ್ಡೋಲಗ : ಮಣಿಪಾಲ್ ಪವರ್ ಪ್ರೆಸ್
ಹೋಮರನ ಮೂರ್ತಿ ಶಿಲ್ಪವನ್ನು ಅವಲೋಕಿಸುತ್ತಿರುವ ಅರಿಸ್ಟಾಟಲ್ : ರೆಂಬ್ರಾಂಟ್– ಮೆಟ್ರೊಪಾಲಿಟನ್ ಆರ್ಟ್ ಮ್ಯೂಸಿಯಂ, ನ್ಯೂಯಾರ್ಕ್
ವೀಣೆಯ ಹುಚ್ಚು : ವೆಂಕಟಪ್ಪ —ಜಯಚಾಮರಾಜೇಂದ್ರ ಆರ್ಟ್ ಗ್ಯಾಲರಿ, ಮೈಸೂರು
ಕಸೂತಿ ರೂಪಸಿ : ವೆರ್ಮೀರ್ —ದಿ ಲೊವ್ರ್ ಮ್ಯೂಸಿಯಂ, ಪ್ಯಾರಿಸ್
ಒಡಹುಟ್ಟಿದವರು : ಪಿಕಾಸೊ —ಬೇಸ್ಲ್ ಮ್ಯೂಸಿಯಂ, ಬ್ರುಸ್ಸೆಲ್ಸ್
ಸಂಗೀತ ವಾದ್ಯಗಳು : ಬಿ. ಕೇಸರ ಸಿಂಗ್

**ವರ್ಣಚಿತ್ರಗಳ ಸಂಯೋಜನೆ :**

ವಿಜಯ್

**ವರ್ಣಪಡಿಯಚ್ಚು ತಯಾರಿಕೆ :**

ಕಲಾಕ್ಷೇತ್ರ, ಮದರಾಸು

**ಸೇವೆ ಎರವಲು :**

ಅಡ್ಯನಡ್ಕ ಕೃಷ್ಣಭಟ್ —ವಿಜಯ ಕಾಲೇಜ್, ಮುಲ್ಕಿ ಮತ್ತು ರಾಜ್ಯದ ಡೈರೆಕ್ಟರ್ ಆಫ್ ಕೊಲಿಜಿಯೇಟ್ ಎಜುಕೇಷನ್, ಬೆಂಗಳೂರು

**ಬರೆವಣಿಗೆ ನೆರವು :**

ರಾಜಾ ಶೈಲೇಶಚಂದ್ರ ಗುಪ್ತ ; ಕೆ. ವಿ. ರಾವ್

**ವಿವಿಧ ಸಹಾಯ :**

ಹಮ್‌ಜಾ ಇಮಾಮ್, ಮ್ಯಾಕ್ಸ್‌ಮುಲ್ಲರ್ ಭವನ, ಬೆಂಗಳೂರು ; ಸಿ. ಆರ್. ರಾವ್, ರಚನಾ ಅಡ್ವರ್ಟೈಸರ್ಸ್, ಬೆಂಗಳೂರು ; ಕೆ. ಎಸ್. ರಾಮಕೃಷ್ಣ ಮೂರ್ತಿ ಸಂಪಾದಕ 'ಕನ್ನಡ ಪ್ರಭ', ಕೆ. ಎಸ್. ನಾರಾಯಣಸ್ವಾಮಿ ಸಹಾಯಕ ಸಂಪಾದಕ 'ಕನ್ನಡ ಪ್ರಭ', ಎಂ. ಬಿ. ಸಿಂಗ್ ಸಂಪಾದಕ 'ಮಯೂರ', ಬಿ. ವಿ. ವೈಕುಂಠ ರಾಜು ಉಪಸಂಪಾದಕ 'ಪ್ರಜಾವಾಣಿ', ಸುರೇಂದ್ರ ದಾನಿ ಸಹಾಯಕ ಸಂಪಾದಕ 'ಸಂಯುಕ್ತ ಕರ್ನಾಟಕ' —ಬೆಂಗಳೂರು ; ಎಸ್. ವಿ. ಪಾಟೀಲ ಸಹಾಯಕ ಸಂಪಾದಕ 'ಕರ್ಮವೀರ', ಹುಬ್ಬಳ್ಳಿ ; ಪಿ. ಕೆ. ನಾರಾಯಣ, ಮಂಗಳೂರು ; ಎಂ. ಎಸ್. ಕೇಶವಭಟ್, ಸಿ. ಆರ್. ಕೃಷ್ಣರಾವ್, ಕೆ. ಎಲ್. ಗೋಪಾಲಕೃಷ್ಣರಾವ್ —ಮದರಾಸು ; ಭಾರತ ಸರಕಾರದ ವಾರ್ತಾಕೇಂದ್ರ, ಬೆಂಗಳೂರು; ಬಿ. ಶ್ರೀ. ಪಾಂಡುರಂಗರಾವ್, ರಾಜಶ್ರೀ, ಎಸ್. ಎಲ್. ಸಿಂಹ —ಬೆಂಗಳೂರು ; ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು ; ಡಿ. ವಿ. ಕೆ. ಮೂರ್ತಿ, ಮೈಸೂರು, ಎಚ್. ಕುಸುಮಾಕರ್, ಎಂ. ಶ್ರೀಧರಮೂರ್ತಿ, ಎಲ್. ಗುಂಡಪ್ಪ; ಎಂ. ವಿ. ಸೀತಾರಾಮಯ್ಯ, ಹೊ. ಶ್ರೀನಿವಾಸಯ್ಯ, ಸುರೇಶ್‌ಖಾಂಡೇಕರ್, ಬೆಂಗಳೂರು; ಎಸ್. ರಾಮಚಂದ್ರ ಭಟ್, ನವ ಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು ; ಎಂ. ಎ. ವೆಂಕಟಾಚಾರ್, ಎ. ಸುಬ್ಬರಾವ್, ಬಿ. ಕೃಷ್ಣ ಸಂಪಾದಕ 'ರಂಗಮಂಟಪ'—ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು; ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ ; ಡೈರೆಕ್ಟರ್, ಆಕಾಶವಾಣಿ — ಬೆಂಗಳೂರು ; ಎನ್. ವಿ. ಕೃಷ್ಣ ವಾರಿಯರ್, ತಿರುವನಂತಪುರ ; ಸಾಲಾರ್‌ಜಂಗ್ ವಸ್ತುಸಂಗ್ರಹಾಲಯ, ಹೈದರಾಬಾದ್ ; ಲಲಿತ ಕಲಾ ಅಕಾದೆಮಿ, ನವದೆಹಲಿ ; ಎಸ್. ಬಾಲೂರಾವ್, ಸಾಹಿತ್ಯ ಅಕಾದೆಮಿ, ನವದೆಹಲಿ; ಎಂ. ಎಸ್. ಭಾರದ್ವಾಜ್, ಮೈಸೂರು ಸರಕಾರದ ವಾರ್ತಾಧಿಕಾರಿ, ನವದೆಹಲಿ ; ಟೈಮ್ಸ್ ಆಫ್ ಇಂಡಿಯಾ, ಮುಂಬಯಿ ; ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ ; ಫೆಡರಲ್ ರಿಪಬ್ಲಿಕ್ ಆಫ್ ಜರ್ಮನಿ ದೂತಾವಾಸ, ಜರ್ಮನ್ ಡೆಮಕ್ರಾಟಿಕ್ ರಿಪಬ್ಲಿಕ್ ದೂತಾವಾಸ–ನವದೆಹಲಿ

# ಆಭಾರ ಮನ್ನಣೆ

ಏಳು ಸಂಪುಟಗಳ ಕಿರಿಯರ ವಿಶ್ವಕೋಶ 'ಜ್ಞಾನ ಗಂಗೋತ್ರಿ' ಯು ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರದ ಬೃಹತ್ ಯೋಜನೆ.

ಈ ಯೋಜನೆಯನ್ನು ಕಾರ್ಯಗತಗೊಳಿಸಲು ರಾಜ್ಯ ಸರಕಾರ ಯಾವುದೇ ಸಹಾಯಧನವನ್ನಾಗಲೀ ಗ್ರಾಂಟನ್ನಾಗಲೀ ಕೊಟ್ಟಿಲ್ಲ. ಬದಲು ಈ ಕೆಳಗಿನಂತೆ ಅಮೂಲ್ಯ ನೆರವು ನೀಡಿದೆ :

— ಐದು ವಾರ್ಷಿಕ ಕಂತುಗಳಲ್ಲಿ ಮರುಸಂದಾಯ ಮಾಡಬೇಕಾದ 9 ಲಕ್ಷ ರೂಪಾಯಿಗಳ ಸಾಲ.

— ಶಾಲಾ ವಾಚನಾಲಯಗಳಿಗಾಗಿ 15,000 ಪ್ರತಿಗಳ ಖರೀದಿ.

— ಸರಕಾರೀ ಮುದ್ರಣಾಲಯದಲ್ಲಿ ಸಂಪುಟಗಳನ್ನು ಮುದ್ರಿಸಲು ಅನುಮತಿ.

ಯೋಜನೆಯ ವೆಚ್ಚಕ್ಕಾಗಿ ನಾವು ಪಡೆದ ಸಾಲದಲ್ಲಿ ರೂ. 4,20,000ವನ್ನು ಈಗಾಗಲೇ ಹಿಂತಿರುಗಿಸಿದ್ದೇವೆ.

ಸರಕಾರ ತಾನು ಕೊಳ್ಳುವ ಪ್ರತಿಗಳಿಗೆ ರೂ. 50ರ ಮುಖಬೆಲೆ ನೀಡುವುದಿಲ್ಲ : ಉತ್ಪಾದನಾವೆಚ್ಚದ ಆಧಾರದ ಮೇಲೆ ಒಂದು ಪ್ರತಿಗೆ ರೂ. 37ನ್ನು ಮಾತ್ರ ಕೊಡುತ್ತದೆ. ಈ ಖರೀದಿಯಿಂದ ದೊರೆತ ಹಣದ ಹೆಚ್ಚಿನಂಶ ಮುದ್ರಣಾಲಯದ ಬಿಲ್ಲು ಪಾವತಿ ಮಾಡಲು ವಿನಿಯೋಗವಾಗುತ್ತದೆ.

ನಿಗದಿಯಾದ ದಿನಗಳಲ್ಲಿ ಸಾಲದ ಮರುಪಾವತಿಯಾಗುತ್ತಿರುವಷ್ಟೇ ವ್ಯವಸ್ಥಿತವಾಗಿ, ಸರಕಾರೀ ಮುದ್ರಣಾಲಯದ ಬಿಲ್ಲುಗಳನ್ನೂ ಸಂದಾಯ ಮಾಡುತ್ತಿದ್ದೇವೆ.

ನಾವು ಮುದ್ರಿಸುತ್ತಿರುವ ಪ್ರತಿಗಳ ಸಂಖ್ಯೆ 20,000. ಸರಕಾರಕ್ಕೆ ಸಲ್ಲಿಸಿ ಉಳಿಯುವ 5,000 ಪ್ರತಿಗಳಿಗೆ ಮಹಾಜನತೆಯೇ ಗ್ರಾಹಕರು. ಯೋಜನೆಯ ಉಳಿದ ಅವಧಿಯ ವೆಚ್ಚಕ್ಕೂ ಸಾಲದ ಪೂರ್ತಿ ಮರುಪಾವತಿಗೂ ಈ ಪ್ರತಿಗಳ ಮಾರಾಟದಿಂದ ಹಣ ದೊರಕಿಸಬೇಕಾಗಿದೆ. ಕೊಳ್ಳುವವರಿಗೆ ಅನುಕೂಲವಾಗಲೆಂದು ರೂ. 350ರ ಬದಲು ರೂ. 280ರ ಮುಂಗಡ ಸಂದಾಯಕ್ಕೆ ಏಳು ಸಂಪುಟಗಳನ್ನು ಒದಗಿಸುತ್ತಿದ್ದೇವೆ. ಗ್ರಾಹಕರಿಗೆ ಪ್ರತಿಗಳನ್ನು ತಲುಪಿಸುವ ವೆಚ್ಚವೂ ನಮ್ಮದೇ. ಈ ರಿಯಾಯಿತಿ ದರಕ್ಕೆ ಜನರು ಪ್ರತಿಗಳನ್ನು ಬೇಗನೆ ಕೊಳ್ಳಬೇಕೆಂಬುದು ನಮ್ಮ ಪ್ರಾರ್ಥನೆ. 'ಜ್ಞಾನ ಗಂಗೋತ್ರಿ' ಗಾಗಿ ಒಟ್ಟಿಗೆ 280 ರೂ. ತೆರಲಾಗದವರಿಗೋಸ್ಕರ ಕೆನರಾ ಬ್ಯಾಂಕ್ ಮತ್ತು ಸಿಂಡಿಕೇಟ್ ಬ್ಯಾಂಕ್ ಸಾಲ ಸೌಲಭ್ಯ ನೀಡಲು ಸಮ್ಮತಿಸಿ ಉಪಕಾರ ಮಾಡಿವೆ. ಈ ಏರ್ಪಾಡಿನ ಪ್ರಯೋಜನವನ್ನು ಹೆಚ್ಚು ಜನ ಪಡೆಯುವರೆಂದು ನಾವು ನಂಬಿದ್ದೇವೆ.

ಐದನೆಯ ಸಂಪುಟ ಪ್ರಕಟವಾಗಿ, ಆರನೆಯ ಸಂಪುಟ ಅಚ್ಚಿಗೆ ಹೋಗುತ್ತಿರುವ ಈ ವೇಳೆಯಲ್ಲಿ 'ಜ್ಞಾನ ಗಂಗೋತ್ರಿ' ಯೋಜನೆಯ ಯಶಸ್ಸಿಗೆ ಕಾರಣರಾದವರನ್ನೆಲ್ಲ ಕೃತಜ್ಞತಾಪೂರ್ವಕವಾಗಿ ಮತ್ತೊಮ್ಮೆ ಸ್ಮರಿಸಿಕೊಳ್ಳುವುದು ನಮ್ಮ ಕರ್ತವ್ಯ.

○ ಈ ಯೋಜನೆಯ ಕಾರ್ಯಾರಂಭಕ್ಕೆ ನೆರವಾದ ಆಗಿನ ವಿದ್ಯಾ ಸಚಿವ ಶ್ರೀ ಕೆ. ವಿ. ಶಂಕರಗೌಡರು, ಅರ್ಥ ಸಚಿವ ಶ್ರೀ ರಾಮಕೃಷ್ಣ ಹೆಗಡೆಯವರು, ಸಹಕಾರ ಸಚಿವ ಶ್ರೀ ಎಂ. ಪಿ. ನಾಡಗೌಡರು —ಮೇಲಾಗಿ ಮುಖ್ಯ ಮಂತ್ರಿ ಶ್ರೀ ವೀರೇಂದ್ರ ಪಾಟೀಲರು ; ಈ ಯೋಜನೆಯ ಬಗೆಗೆ ತೀವ್ರ ಆಸಕ್ತಿ ವಹಿಸಿ ಪ್ರೋತ್ಸಾಹಿಸುತ್ತಿರುವ ಈಗಿನ ವಿದ್ಯಾ ಸಚಿವ ಶ್ರೀ ಎ. ಆರ್. ಬದರೀನಾರಾಯಣ್ ಅವರು, ಅರ್ಥ ಸಚಿವ ಶ್ರೀ ಎಂ. ವೈ. ಘೋರ್ಪಡೆಯವರು, ಸಹಕಾರ ಸಚಿವ ಶ್ರೀ ಪಿ. ಶಂಕರ ಆಳ್ವರು — ಮೇಲಾಗಿ ಮುಖ್ಯಮಂತ್ರಿ ಶ್ರೀ ಡಿ. ದೇವರಾಜ ಅರಸರು ಇವರಿಗೆಲ್ಲ ನಮ್ಮ ಕೃತಜ್ಞತೆ ಸಲ್ಲುತ್ತದೆ.

○ ಆಗಿನ ಶಿಕ್ಷಣ ಕಾರ್ಯದರ್ಶಿ ಶ್ರೀ ಜಯರಾಮನ್ ಅವರು, ಅನಂತರದ ಶಿಕ್ಷಣ ಕಾರ್ಯದರ್ಶಿ ಶ್ರೀ ಕೆ. ಆರ್. ರಾಮಚಂದ್ರನ್ ಅವರು, ಈಗಿನ ಶಿಕ್ಷಣ ಕಮಿಷನರ್ ಶ್ರೀ ಸ್ಯಾಮುಯಲ್ ಅಪ್ಪಾಜಿ ಅವರು ಅರ್ಥ ಕಮಿಷನರ್ ಶ್ರೀ ಮಣಿ ನಾರಾಯಣಸ್ವಾಮಿ ಮತ್ತು ಅವರ ಸಹೋದ್ಯೋಗಿಗಳು, ಸರಕಾರದ ಪರವಾಗಿ 15,000 ಪ್ರತಿಗಳನ್ನು ಪ್ರಸ್ತುತ ಪಡೆಯುತ್ತಿರುವ ಪಠ್ಯಪುಸ್ತಕಗಳ ನಿರ್ದೇಶಕ ಶ್ರೀ ಎಂ. ಎಚ್. ನಾಯಕ್ ಅವರು —ಇವರಿಗೂ ನಾವು ಆಭಾರಿಗಳಾಗಿದ್ದೇವೆ.

○ ಸರಕಾರೀ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಬಿ. ಪಿ. ಮಲ್ಲರಾಜೇ ಅರಸು ಅವರು ದಕ್ಷತೆಗೂ ಆಡಳಿತ ಸಾಮರ್ಥ್ಯಕ್ಕೂ ಹೆಸರಾದವರು. ಈ ಸಲ ಎಂಟು ಮುದ್ರಣ ಯಂತ್ರಗಳನ್ನು ತೆರವು ಮಾಡಿಕೊಟ್ಟು, 20,000 ಪ್ರತಿಗಳ ದ್ವಿವರ್ಣ ಮುದ್ರಣ ಎರಡೇ ತಿಂಗಳ ಅವಧಿಯಲ್ಲಿ ಮುಗಿಯಲು ನೆರವಾಗಿದ್ದಾರೆ. ಸಂಪುಟದಲ್ಲಿರುವ ಸಾವಿರಾರು ಛಾಯಾಚಿತ್ರಗಳ ಪಡಿಯಚ್ಚುಗಳನ್ನೂ ಸರಕಾರೀ ಮುದ್ರಣಾಲಯದಲ್ಲೇ ಸಿದ್ಧಪಡಿಸಿಕೊಟ್ಟಿದ್ದಾರೆ. ಸೊಗಸಾದ 12 ವರ್ಣಪುಟಗಳೂ ಅಲ್ಲಿಯೇ

# ಈ ಸಂಪುಟವನ್ನು ಕುರಿತು

ಇಗೋ, ‘ಜ್ಞಾನ ಗಂಗೋತ್ರಿ’ಯ ಐದನೆಯಸಂಪುಟ—‘ಕಲೆ, ಸಾಹಿತ್ಯ.’

ನೃತ್ಯ. ಸಂಗೀತ. ನಾಟಕ ಕಲೆ. ಚಿತ್ರ ಕಲೆ. ಶಿಲ್ಪ. ವಾಸ್ತುಶಿಲ್ಪ ಹಾಗೂ ಸಾಹಿತ್ಯ –ಇವುಗಳ ವಿವಿಧ ಪ್ರಕಾರಗಳು– ಈ ಸಂಪುಟದ ವ್ಯಾಪ್ತಿ. ಚರಿತ್ರಪೂರ್ವದಿನಗಳಿಂದ ಆಧುನಿಕ ಕಾಲಾವಧಿಯವರೆಗೆ ವಿವಿಧ ಕಲಾ ಸಾಹಿತ್ಯ ಪ್ರಕಾರಗಳು ಸಾಗಿ ಬಂದಿರುವ ದಾರಿಗಳು ಹಲವು. ಈ ಎಲ್ಲ ದಾರಿಗಳು ಬಂದು ಸೇರುವುದು ಬದುಕಿನ ಬಯಲನ್ನು. ಅಲ್ಲಿದೆ. ಮಾನವ ನಾಗರಿಕತೆಯ ವೈಭವಶಾಲಿ. ಮಾರ್ಗಕ್ರಮಣದಿಂದ ಆ ಗುರಿಯನ್ನು ತಲುಪಿದಾಗಲೇ ಬದುಕು ಹಸನಾಗುತ್ತದೆ. ಅರ್ಥಪೂರ್ಣವಾಗುತ್ತದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಸಂಪುಟವನ್ನು ನಾವು ರಚಿಸಿದ್ದೇವೆ.

ಸಾಹಿತ್ಯ ಕಲೆಗಳಿಗೆ ಸಂಬಂಧಿಸಿದಂತೆ ಒಂದು ಸಹಸ್ರ ಶೀರ್ಷಿಕೆಗಳನ್ನು ಆರಿಸಿಕೊಳ್ಳಬಹುದು. ಕ್ಷೇತ್ರವನ್ನು ಹಿಗ್ಗಿಸಿ ಆ ಸಂಖ್ಯೆಯನ್ನು ಇಮ್ಮಡಿ-ಮುಮ್ಮಡಿಗೊಳಿಸುವುದೂ ಸಾಧ್ಯ. ಆದರೆ ನಮಗಿರುವುದು ಏಳುನೂರು ಪುಟಗಳ ವಿಸ್ತಾರ ಮಾತ್ರ. ಇಷ್ಟರಲ್ಲೇ ಅಡಕವಾಗುವಂತೆ 544 ಲೇಖನಗಳನ್ನು ಸಿದ್ಧಪಡಿಸಿದ್ದೇವೆ. ಕಲಾ–ಸಾಹಿತ್ಯ ವಿಷಯವಾಗಿ ಕಿರಿಯರು ಅರಿಯಲೇಬೇಕಾದ ಎಲ್ಲ ಅಂಶಗಳನ್ನೂ ಸಿದ್ಧ ಆಹಾರದ ರೂಪದಲ್ಲಿ ಇಲ್ಲಿ ನೀಡಿದ್ದೇವೆ.

ವಿಶ್ವದ ವ್ಯಾಪ್ತಿಯಿಲ್ಲದೆ ಯಾವ ಶಿಕ್ಷಣವೂ ಸಮಗ್ರ ಎನಿಸುವುದಿಲ್ಲ. ಪೂರ್ವ–ಪಶ್ಚಿಮ ಎಂಬ ಭೇದಕ್ಕಾಗಲೀ ಭಾಷೆಗಳ ಬಗೆಗಿನ ತರತಮ ಭಾವಕ್ಕಾಗಲೀ ಇಲ್ಲಿ ಸ್ಥಾನವಿಲ್ಲ. ವೈಯಕ್ತಿಕ ಒಲವು ಏನೇ ಇರಲಿ. ಜ್ಞಾನ ಜ್ಞಾನವೇ. ಇಂಥದು ಸ್ವೀಕಾರ ಯೋಗ್ಯ. ಇಂಥದು ಅಲ್ಲ –ಎನ್ನುವಂತೆಯೇ ಇಲ್ಲ. ಎಲ್ಲ ಅರಿವೂ ಕೈಗೆಟುಕಿದಾಗ ಮಾತ್ರ. ವೈಯಕ್ತಿಕ ಆಯ್ಕೆ ಸುಲಭ.

ನಾಲ್ಕು ಕೋಟಿ ಪದಗಳಿರುವ. ಹಲವು ಸಹಸ್ರ ಪುಟಗಳಿರುವ ‘ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕಾ’ದಲ್ಲೂ ಯಾವುದೇ ಒಂದು ಲೇಖನದಲ್ಲಿ ಎಲ್ಲ ಮಾಹಿತಿ ದೊರೆಯುವುದಿಲ್ಲ. ವಿವರಗಳನ್ನೆಲ್ಲ ತುರುಕಲು ಹೊರಟರೆ ಪ್ರತಿ ಲೇಖನವೂ ಒಂದು ಪುಸ್ತಕವಾದೀತು. ವಿಶ್ವಕೋಶದ ಬರವಣಿಗೆ ಆ ರೀತಿಯಲ್ಲಿರುವುದು ಸಾಧ್ಯವೂ ಅಲ್ಲ. ಸಾಧುವೂ ಅಲ್ಲ. ಕಿರಿಯರ ವಿಶ್ವಕೋಶದಲ್ಲಿಯೂ ಇದು ಅತ್ಯಂತ ಸ್ಫುಟವಾದ ಸತ್ಯ. ಆದರೂ. ಕಿರಿಯರ ಬೌದ್ಧಿಕ ಅವಶ್ಯತೆಗಳನ್ನು ಗಮನದಲ್ಲಿಟ್ಟು ಲೇಖನಗಳನ್ನು ಸಿದ್ಧಗೊಳಿಸಿದ್ದೇವೆ. ಅಕ್ಷರಾನುಕ್ರಮವಾಗಿ ಏರ್ಪಡಿಸಿರುವ ‘ಜ್ಞಾನ ಗಂಗೋತ್ರಿ’ಯಲ್ಲಿ ಸಂಪುಟದ ಬೇರೆ ಬೇರೆ ಕಡೆ ಪೂರಕ ಲೇಖನಗಳು ಕಾಣಸಿಗುತ್ತವೆ. ಅಂಥ ಸಂದರ್ಭಗಳಲ್ಲಿ. ಒಂದು ವಿಷಯವನ್ನು ಕುರಿತ ಲೇಖನದ ಮುಕ್ತಾಯದಲ್ಲಿ. ಮುಂದೆ ನೋಡಬೇಕಾದ ಲೇಖನಗಳನ್ನು ಸೂಚಿಸಿದೆ. ಉದಾಹರಣೆಗೆ : ‘ನೀತಿ ಕಥೆ’. ಅದರ ಅಂತ್ಯದಲ್ಲಿ ನೋಡಿ : ಈಸೋಪ್; ಕಿಪ್ಲಿಂಗ್; ಗ್ರಿಮ್ ಸೋದರರು; ಚಾಸರ್ ; ‘ಪಂಚತಂತ್ರ’–ಎಂದಿದೆ. ‘ಜ್ಞಾನ ಗಂಗೋತ್ರಿ’ಯ ಬೇರೆ ಸಂಪುಟಗಳಲ್ಲಿ ಪೂರಕ ಮಾಹಿತಿ ದೊರೆಯುವುದೂ ಸಾಧ್ಯ. ಆಗ. ನೋಡಬೇಕಾದ ಸಂಪುಟ. ಶೀರ್ಷಿಕೆ ಯಾವುವೆಂಬುದನ್ನು ಸೂಚಿಸಲಾಗಿದೆ.

ಎಂದಿನಂತೆ ಸಾಕಷ್ಟು ಜಿಜ್ಞಾಸೆ ನಡೆದ ಮೇಲಷ್ಟೇ ‘ಕಲೆ. ಸಾಹಿತ್ಯ’ ಸಂಪುಟದಲ್ಲಿ ಬರಬೇಕಾದ ಶೀರ್ಷಿಕೆಗಳ ಪಟ್ಟಿಯನ್ನು ಸಿದ್ಧಗೊಳಿಸಿದೆವು. ಆಯ್ಕೆ ತೊಡಕಿನದೆನಿಸಿದ್ದು ವ್ಯಕ್ತಿಚಿತ್ರಗಳ ವಿಷಯದಲ್ಲಿ. ತಮ್ಮ ಮಹತ್ಸಾಧನೆಗಳಿಂದ ಜಗದ್ವಂದ್ಯರಾದ ಕಲಾವಿದರು. ಸಾಹಿತಿಗಳು ಇಲ್ಲಿ ವಿರಾಜಮಾನರು. ಸಾಧಾರಣವಾಗಿ ಇವರೆಲ್ಲ ಇತಿಹಾಸದ ಅಧ್ಯಾಯಗಳಾದವರು. ತಮ್ಮ ಶ್ರೇಷ್ಠ ಕೃತಿಗಳಿಂದ ಮಹಾಮನ್ನಣೆ ಗಳಿಸಿ. ಇನ್ನೂ ನಮ್ಮೊಡನಿದ್ದು ಸೃಜನಶೀಲ ಚಟುವಟಿಕೆಯಲ್ಲಿರುವವರಿಗೂ ಇಲ್ಲಿ ಸ್ಥಾನ. ಕನ್ನಡ ಸಾಹಿತ್ಯದ ಪರಿಚಯವನ್ನು ನಮ್ಮ ಕಿರಿಯರಿಗೆ ಮಾಡಿಕೊಡುವ ಅವಕಾಶ ಈ ಸಂಪುಟದಲ್ಲಿ ಮಾತ್ರ ಇರುವುದರಿಂದ, ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷ ಪೀಠವನ್ನೇರಿದ ಎಲ್ಲ ಸಾಹಿತಿಗಳನ್ನು ಕುರಿತ ಲೇಖನಗಳನ್ನು ಸೇರಿಸಿದ್ದೇವೆ. ಸ್ಥಾನ. ಪುರಸ್ಕಾರ, ಪ್ರಶಸ್ತಿ ದೊರೆತವರು ಮಾತ್ರ ಶ್ರೇಷ್ಠರು ಎಂದು ಇವರ ಅರ್ಥವಲ್ಲ. ಆದರೆ. ಕೆಲವು ಎಲ್ಲೆ ಗುರುತುಗಳನ್ನು ಹಾಕಿಕೊಳ್ಳದೆ ಇಂಥ ಕೆಲಸವನ್ನು ಮುಗಿಸುವುದಕ್ಕಾಗುವುದಿಲ್ಲವಲ್ಲ ? ಕೆಲ ನ್ಯೂನತೆಗಳು ಅನಿವಾರ್ಯವಾಗಬಹುದು, ಈ ಬಗೆಯ ಅರೆಕೊರೆಗಳು ಇಲ್ಲಿ ಕಂಡು ಬಂದರೆ ನಮ್ಮನ್ನು ಮನ್ನಿಸಬೇಕು.

ಈ ಸಂಪುಟದಲ್ಲಿರುವ ಲೇಖನಗಳಲ್ಲಿ. ಯಾವುದೇ ರೂಪದಲ್ಲಿ. ಪ್ರಧಾನ ಸಂಪಾದಕನನ್ನೂ ಒಳಗೊಂಡು ಸಂಪಾದಕ ವರ್ಗದ ಯಾರ ಪ್ರಸ್ತಾಪವೂ ಇರುವುದಿಲ್ಲ. ಇದರಿಂದ ಸತ್ಯಕ್ಕೆ ಅಪಚಾರವಾಗುತ್ತದೆ —ಎಂದು ಹೇಳಿದವರುಂಟು. ಈ ಒಂದು ವಿಷಯದಲ್ಲಿ ಸಮಾಲೋಚಕರ ಸಲಹೆಗಳನ್ನು ನಾವು ಸ್ವೀಕರಿಸಿಲ್ಲ. ಅವರು ದಯವಿಟ್ಟು ತಪ್ಪೆಣಿಸಬಾರದು.

‘ಜ್ಞಾನ ಗಂಗೋತ್ರಿ’ ಯಾವುದೇ ವಿಶ್ವಕೋಶದ ಪಡಿನೆಳಲಲ್ಲ. ಹಲವು ಮೂಲಗಳಿಂದ ಸಾಮಗ್ರಿ ಸಂಗ್ರಹಿಸಿ ಸ್ವತಂತ್ರವಾಗಿ ಬರೆಯುವುದು ನಮ್ಮ ವಿಧಾನ. ಒಳಗೆ ಅಕ್ಷರಾನುಕ್ರಮವಾಗಿ ಬಿಡಿಬಿಡಿಯಾಗಿರುವ ಹೂರಣದ ಒಟ್ಟು ಪರಿಚಯವನ್ನು ಸಂಪುಟದ ಆರಂಭದಲ್ಲೇ ನೀಡುವ ‘ಸಮೀಕ್ಷೆ’ಯಂತೂ ನಮ್ಮದೇ ವೈಶಿಷ್ಟ್ಯ.

ಮೊದಲ ಸಂಪುಟದಿಂದಲೂ ನಾವು ಮುಂದಿರಿಸಿಕೊಂಡ ಗುರಿ —ಬರೆವಣಿಗೆಯಲ್ಲಿ ಸರಳತೆ. ಈ ಬಗೆಯ ಬರೆಹ [illegible] ಸುಲಭವಾಗಿ ಅರ್ಥವಾಗಲಿ. ಒಂದು ರೀತಿಯಲ್ಲಿ, ನಮ್ಮ ಸಂಪಾದಕವರ್ಗದ [illegible] 20 [illegible]. ದಂಡೆಯ ಮೇಲೆ ನಿಂತವರು–ಕುಳಿತವರೆಲ್ಲ ನಮ್ಮ ಸಾಹಸ ನೋಡಿ ಚಪ್ಪಾಳೆ ತಟ್ಟಿರುವರೆಂದು ನಮಗೆ ಸಮಾಧಾನ.

ಪ್ರತಿ ದಿನದ ಬೆಳಿಗ್ಗೆ ಸಂಪಾದಕವರ್ಗದ ಸಭೆ. ಉಪ ಸಂಪಾದಕರು ಆ ದಿನ ಬರೆಯಬೇಕಾದ ಲೇಖನಗಳ ವ್ಯಾಪ್ತಿಯ ಬಗೆಗೆ ಚರ್ಚೆ. ಬಳಿಕ ಉಪ ಸಂಪಾದಕರಿಂದ ಸಾಮಗ್ರಿ ಸಂಗ್ರಹ. ಅಪರಾಹ್ನ ಲೇಖನದ ಬರೆವಣಿಗೆ. ಮರುದಿನ ಬೆಳಗ್ಗೆ ಹಿಂದಿನ ದಿನ ಬರೆದಾದ ಲೇಖನಗಳ ಗುಣ ದೋಷಗಳ ಮಥನ. ಮತ್ತೆ ಆ ದಿನ ಬರೆಯಬೇಕಾದ ಲೇಖನಗಳ ವ್ಯಾಪ್ತಿಯ ಬಗೆಗೆ ಜಿಜ್ಞಾಸೆ. ಇದು ದುಡಿಮೆಯ ಒಂದು ಹಂತದ ಚಿತ್ರ.

ಇನ್ನೊಂದು ಹಂತದಲ್ಲಿ, ಉಪ ಸಂಪಾದಕರು ಬರೆದಿರುವ ಕರಡು ಲೇಖನಗಳ ಪರಿಷ್ಕರಣ, ಪರಿಶೀಲನೆ –ಸಂಪಾದಕರು, ಪ್ರಧಾನ ಸಂಪಾದಕರಿಂದ.

ಮೂರನೆಯ ಹಂತ, ಜಯನಗರ ಹೈಸ್ಕೂಲಿನ ಸಹಕಾರದೊಂದಿಗೆ ನಾವು ನಡೆಸುತ್ತಿರುವ ಜ್ಞಾನ ಪ್ರಯೋಗಾಲಯದಲ್ಲಿ ಮಾದರಿ ಲೇಖನಗಳ ಒರೆಗಲ್ಲು ಪರೀಕ್ಷೆ. 8, 9, 10ನೆಯ ತರಗತಿಗಳ 60 ಜನ ವಿದ್ಯಾರ್ಥಿಗಳೂ ಅಧ್ಯಾಪಕರೂ ಈ ಪ್ರಯೋಗಾಲಯದ ಸದಸ್ಯರು. ಇವರ ಅಧಿವೇಶನ ಮೂರು ತಿಂಗಳಿಗೊಮ್ಮೆ ತಪ್ಪದೆ ನಡೆಯುತ್ತದೆ. ಮಾದರಿ ಲೇಖನಗಳನ್ನು ಪ್ರಯೋಗಾಲಯದ ಸದಸ್ಯರಿಗೆ ಮುಂಚಿತವಾಗಿಯೇ ಒದಗಿಸುತ್ತೇವೆ. ಇಡಿಯ ಸಂಪಾದಕವರ್ಗ ಪ್ರಯೋಗಾಲಯದಲ್ಲಿ ಭಾಗವಹಿಸುತ್ತದೆ. ಲೇಖನಗಳ ವಾಚನ–ಚರ್ಚೆ ನಡೆಯುತ್ತದೆ. ನಮ್ಮ ಬರೆವಣಿಗೆಯ ಗುಣಮಟ್ಟವನ್ನು ನಿರ್ಧರಿಸಲು ಪ್ರಯೋಗಾಲಯದ ಅಧಿವೇಶನಗಳು ನೆರವಾಗುತ್ತವೆ.

ನಾಲ್ಕನೆಯ ಹಂತದಲ್ಲಿ ಪರಿಣತರ— ಸಮಾಲೋಚಕರ— ಪ್ರವೇಶ. ಅವರ ಅಭಿಪ್ರಾಯ ಅಗತ್ಯವೆಂದು ನಮಗೆ ಅನಿಸುವ ಲೇಖನಗಳ ಆಯ್ಕೆ. ಅವರಿಂದ ಆ ಲೇಖನಗಳ ಅವಲೋಕನ.

ಬೆರಳಚ್ಚು ಪ್ರತಿ ಮುದ್ರಣಾಲಯಕ್ಕೆ ಹೋದ ಮೇಲೂ ಈ ಚಿಕಿತ್ಸೆ ತಪ್ಪಿದ್ದಲ್ಲ. ಸಂಪಾದಕರು, ಪ್ರಧಾನ ಸಂಪಾದಕರು ಕರಡನ್ನು ಎರಡೆರಡು ಸಲ ಓದುವುದು ನಮ್ಮಲ್ಲಿ ಕಡ್ಡಾಯ. ಹೀಗೆ ನ್ಯೂನತೆ ನಿವಾರಣೆಗಾಗಿ, ನೀರು ಮರಳುವವರೆಗೂ —ಮುದ್ರಣ ಆಗುವವರೆಗೂ— ಜರಡಿ ಹಿಡಿಯುತ್ತಲೇ ಇರುತ್ತೇವೆ. ಹಸನು ಮಾಡುತ್ತಲೇ ಇರುತ್ತೇವೆ.

ಈ ಸಂಪುಟದಲ್ಲಿರುವ ಎಲ್ಲ ಲೇಖನಗಳನ್ನೂ ನಮ್ಮ ಸಂಪಾದಕವರ್ಗದವರೇ ಬರೆದಿದ್ದಾರೆ. ಮೇಲಿನ ಪರೀಕ್ಷಾವಿಧಾನಕ್ಕೆ ಅವು ಒಳಗಾಗಿವೆ.

ಈ ಸಲ ಸಾಮಗ್ರಿ ಸಂಗ್ರಹಕ್ಕೆ ಸಂಬಂಧಿಸಿ ಇನ್ನೂ ಒಂದು ತೊಂದರೆಯನ್ನು ನಾವು ಇದಿರಿಸಬೇಕಾಯಿತು. (ವಾಸ್ತವವಾಗಿ, ಐದು-ಆರು–ಏಳು ಈ ಮೂರೂಸಂಪುಟಗಳಿಗೆ ಅನ್ವಯಿಸುವ ಮಾತು ಇದು). ವಿದೇಶೀಯ ವ್ಯಕ್ತಿ–ವಿಷಯಗಳನ್ನು ಕುರಿತ ಮಾಹಿತಿ ಹಲವು ಮೂಲಗಳಲ್ಲಿ ದೊರೆಯುತ್ತದೆ. ಆದರೆ ನಮ್ಮ ದೇಶಕ್ಕೆ, ನಮ್ಮ ಜನಕ್ಕೆ ಸಂಬಂಧಿಸಿ, ಅಧಿಕೃತ ವಿವರಗಳ ಅಭಾವ ನಮ್ಮನ್ನು ಅಣಕಿಸುತ್ತದೆ. ತಾಳೆ ನೋಡಲು ಬೇರೆ ಮೂಲಗಳಿಲ್ಲ. ಹೇಳಿಕೆ ಕೇಳಿಕೆಗಳನ್ನು ಅವಲಂಬಿಸಿ ಸಾಮಗ್ರಿ ಸಂಗ್ರಹಿಸಬೇಕಾಗುತ್ತದೆ. ನಾಲ್ಕು ಶತಮಾನಗಳ ಹಿಂದಿನ ಪಶ್ಚಿಮ ದೇಶದ ಪ್ರಮುಖನೊಬ್ಬ ಹುಟ್ಟಿದ ವರ್ಷ, ತಿಂಗಳು, ದಿನ, ಸ್ಥಳ ಎಲ್ಲ ವಿವರಗಳೂ ದೊರೆಯುತ್ತವೆ. ಆದರೆ ಕೆಲವೇ ವರ್ಷಗಳ ಹಿಂದೆ ಕಣ್ಮರೆಯಾದ ನಮ್ಮವರ ಜನನ–ನಿಧನ ದಿನಾಂಕ ಇತ್ಯಾದಿ ವಿವರಗಳು ಸಿಗದೆಯೂ ಇರಬಹುದು. ಎಂಥ ವಿಪರ್ಯಾಸ! ಇಂಥವರಲ್ಲೂ ಅತ್ಯಂತ ಎಚ್ಚರ ವಹಿಸಿ ನಮ್ಮ ಅನೇಕ ಲೇಖನಗಳನ್ನು ಬರೆದಿದ್ದೇವೆ. ಮುಂದೆ ಇನ್ನೂ ಉತ್ತಮ ಬರೆವಣಿಗೆಗೆ ಇವು ತಳಹದಿಯಾಗುತ್ತವೆ ಎಂಬ ನಂಬಿಕೆ ನಮಗಿದೆ.

ಈ ಸಂಪುಟದ ವ್ಯಕ್ತಿಗಳನ್ನು ಕುರಿತಾದ ಶೀರ್ಷಿಕೆಗಳನ್ನು ಅಕ್ಷರಾನುಕ್ರಮವಾಗಿ ಜೋಡಿಸಿರುವ ವಿಧಾನದಲ್ಲಿ ಹೊಸತನವನ್ನು ಕಾಣುವಿರಿ. ನಮ್ಮ ವಿಶ್ವಕೋಶಗಳ ವಿಧಾನ ನಮ್ಮ ಪರಿಸರಕ್ಕೆ ನಮ್ಮ ರೀತಿರಿವಾಜುಗಳಿಗೆ ಹೊಂದಿಕೊಂಡಿರಬೇಕು, ವಿಷಯ ಗ್ರಹಣ ಸುಲಭವಾಗಬೇಕು ಎನ್ನುವುದೇ ಈ ಬದಲಾವಣೆಗೆ ಕಾರಣ. ಉದಾಹರಣೆಗೆ, ಕೀಟ್ಸ್—ಜೋಲಾ—ಹ್ಯೂಗೋ ಇಂಥವರನ್ನೆಲ್ಲ ಸಾಧಾರಣವಾಗಿ ಹೇಗೆ ಕರೆಯುವೆವೋ ಆ ಹೆಸರುಗಳ ಕೆಳಗೇ ಅವರನ್ನು ಕುರಿತ ಲೇಖನಗಳು ಸಿಗುತ್ತವೆ. ಶೀರ್ಷಿಕೆ 'ಅಯ್ಯಂಗಾರ್, ವೆಂಕಟೇಶ, ಮಾಸ್ತಿ' ಎಂದಲ್ಲ 'ಮಾಸ್ತಿ ವೆಂಕಟೇಶ ಅಯ್ಯಂಗಾರ್' ಎಂದೇ ಇದೆ. 'ಪುಟ್ಟಪ್ಪ, ವೆಂಕಟಪ್ಪ, ಕುಪ್ಪಳಿ' —ಎನ್ನದೆ, ಹೆಚ್ಚು ಲೇಖನಕ್ಕೆ 'ಕುವೆಂಪು' ಎಂದು ಹೆಸರು ನೀಡಿದ್ದೇವೆ. ಈ ವಿಧಾನ ಒಗ್ಗಲು ಹೆಚ್ಚು ಸಮಯ ಬೇಡ. ಒಗ್ಗಿದ ಮೇಲೆ ವಾಚನ ಸುಲಭವಾಗುತ್ತದೆ. ಉಪಯುಕ್ತತೆ ಹೆಚ್ಚುತ್ತದೆ.

ಒಬ್ಬರನ್ನು ಎರಡು ಮೂರು ಹೆಸರುಗಳಿಂದ ಕರೆಯುವ ಪದ್ಧತಿಯೂ ಇದೆ ಎಂಬುದನ್ನು ಗಮನದಲ್ಲಿಟ್ಟು ಸಂದರ್ಭ ಸೂಚಿಯಲ್ಲಿ ಆ ಎಲ್ಲ ಹೆಸರುಗಳನ್ನೂ ತೋರಿಸಿದ್ದೇವೆ. ಪುಟಗಳ ಎಡ–ಬಲ ಮೇಲ್ಮೂಲೆಗಳಲ್ಲಿ ಶೀರ್ಷಿಕೆಗಳ ನಿರ್ದೇಶವಂತೂ

ಇದ್ದೇ ಇವೆ. ಹೇರಳ ಚಿತ್ರಗಳಿರುವ ಸಂಪುಟದ ಪುಟಗಳನ್ನು ಸರಾಯಾಸವಾಗಿ ತಿರುವಿ ಹಾಕಬಹುದು. ಅವುಗಳ ಬಗ್ಗೆ ಯಾವುದಾದರೂ ವಿಷಯ ತಿಳಿಯಬೇಕೆಂದಿದ್ದರೆ, ಸಂದರ್ಭಸೂಚಿಯ ನೆರವನ್ನು ಪಡೆಯುವುದೇ ಸುಲಭ.

ನಮ್ಮ ಸಮಾಲೋಚಕ ಬಂಧುಗಳು ನೀಡಿರುವ ನೆರವನ್ನು ಇಲ್ಲಿ ವಿಶೇಷವಾಗಿ ಸ್ಮರಿಸಿಕೊಳ್ಳಬೇಕು. ಅವರು ಲೇಖನಗಳನ್ನು ತಿದ್ದಿಕೊಟ್ಟು ಸಂದೇಹಗಳನ್ನು ಬಗೆಹರಿಸಿ, ಕಾಗದಗಳಿಗೆಲ್ಲ ಉತ್ತರವಿತ್ತು, ಸೂಕ್ತ ಸಲಹೆಗಳನ್ನು ಕೊಟ್ಟು ಸಹಾಯ ಮಾಡಿದ್ದಾರೆ.

ಪ್ರೊ. ದೇಜಗೌ ಚಿಂತನ ಯಾವುದೇ ಸಂಸ್ಥೆಗೆ ಶೋಭೆ ತರುವಂಥದು. ಕನ್ನಡದ ಪ್ರತಿಯೊಂದು ಕೆಲಸದಲ್ಲೂ ಅವರು ಸ್ಫೂರ್ತಿಯ ಚಿಲುಮೆ. ಅವರ ಅಧ್ಯಕ್ಷತೆಯಲ್ಲಿ 'ಜ್ಞಾನ ಗಂಗೋತ್ರಿ'ಯ ಸಂಪಾದಕ ಮಂಡಲಿ ಯೋಗ್ಯ ಮಾರ್ಗದರ್ಶನ ನೀಡಿ, ಕಿರಿಯರ ವಿಶ್ವಕೋಶ ಯೋಜನೆಯ ಯಶಸ್ಸಿಗೆ ಕಾರಣವಾಗಿದೆ. ಪ್ರೊ. ದೇಜಗೌ ಅವರಿಗೂ ಮಂಡಲಿಯ ಎಲ್ಲ ಸದಸ್ಯರಿಗೂ ನಾವು ಋಣಿಗಳು. ಜ್ಞಾನ ಪ್ರಯೋಗಾಲಯದ ರಚನೆಗೆ ನೆರವಾಗಿರುವ ಜಯನಗರ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ ಎಚ್. ಎಸ್. ರಾಮಚಂದ್ರರಾಯರಿಗೆ ನಮ್ಮ ನೆನಕೆಗಳು.

ಈ ಸಂಪುಟದ ಬಿಡುಗಡೆಯ ವೇಳೆಯಲ್ಲೇ ಮುಂದಿನ ಸಂಪುಟದ (ಕ್ರೀಡೆ, ಮನೋಲ್ಲಾಸ) ಹಸ್ತಪ್ರತಿಯನ್ನು ಸರಕಾರೀ ಮುದ್ರಣಾಲಯದ ನಿರ್ದೇಶಕ ಶ್ರೀ ಜಿ. ಟಿ. ಮಲ್ಲರಾಜೇ ಅರಸು ಅವರ ಕೈಗೊಪ್ಪಿಸುತ್ತಿದ್ದೇವೆ. ಇದೇ ವರ್ಷ ಆಗಸ್ಟ್ ತಿಂಗಳಲ್ಲಿ ಆ ಸಂಪುಟ ಹೊರಬರುತ್ತದೆಂಬ ಭರವಸೆ ತಳೆದಿದ್ದೇವೆ.

ಆಗ ಮತ್ತೆ ಭೇಟಿಯಾಗೋಣ.

25 ಮಾರ್ಚ್ 1973 — **ನಿರಂಜನ**
ಬೆಂಗಳೂರು — ಪ್ರಧಾನ ಸಂಪಾದಕ

## ಕಂಬನಿ

ಸಂಪುಟದ ಬಿಡುಗಡೆಯ ಸಂತೋಷ ಸಂದರ್ಭದಲ್ಲೂ ಒಂದು ಹನಿ ಕಣ್ಣೀರು......

ತಮ್ಮ ದೈಹಿಕ ತೊಂದರೆಗಳನ್ನು ಗಮನಿಸದೆ 'ಜ್ಞಾನ ಗಂಗೋತ್ರಿ'ಯ ಸಂಪಾದಕ ಮಂಡಲಿಯ ಸದಸ್ಯರಾಗಲು ಸಮ್ಮತಿಸಿದವರು ಶ್ರೀ ಎಚ್. ಸಿ. ಕಪಿನೀಪತಿಭಟ್ಟರು. ಎಂಜಿನಿಯರಿಂಗನ್ನು ಕುರಿತು ಶ್ರೇಷ್ಠ ಮಟ್ಟದ ಕೃತಿಗಳನ್ನು ಕನ್ನಡದಲ್ಲಿ ರಚಿಸಿದ ಮಹಾನುಭಾವರು ಅವರು. ಅವರ ವಿದ್ವತ್ತಿನ ಪೂರ್ಣ ಲಾಭವನ್ನು ನಾವು ಪಡೆಯುವುದಕ್ಕೆ ಮೊದಲೇ ಶ್ರೀ ಕಪಿನೀಪತಿಭಟ್ಟರು ಕಾಲವಾದರು.

'ಕಲೆ ಸಾಹಿತ್ಯ' ಸಂಪುಟದ ಸಮಾಲೋಚಕರಲ್ಲಿ ಒಬ್ಬರಾಗಿರಲು ನಾಟಕರತ್ನ ಡಾ. ಜಿ. ಎಚ್. ವೀರಣ್ಣನವರು ಒಪ್ಪಿದರೆಂದು ನಮಗೆ ಸಂತೋಷವಾಯಿತು. ಪರಿಶೀಲನೆಗೆಂದು ಕಳುಹಿಸಿದ ಲೇಖನಗಳನ್ನು ಅವರು ತಡಮಾಡದೆ ಓದಿ ತಮ್ಮ ಸಲಹೆಗಳೊಡನೆ ಹಿಂತಿರುಗಿಸಿದರು; ಆದರೆ ಸಂಪುಟದ ಪ್ರಕಟಣೆಗೆ ಮುನ್ನವೇ ಜೀವನರಂಗದಿಂದ ನಿಷ್ಕ್ರಮಿಸಿದರು.

ಕಲಾ ಸಂಪನ್ನರಾದ, ಸುಭಗ ಲೇಖಕರಾದ, ಶ್ರೀ ನಾರಾಯಣ ಸಂಗಮರು ನಮ್ಮ ಸಮಾಲೋಚಕರಲ್ಲಿ ಒಬ್ಬರಾಗಿದ್ದು ಲೇಖನಗಳನ್ನು ಪರಿಶೀಲಿಸಿ ಕೊಟ್ಟು ನಮ್ಮನ್ನು ಉಪಕೃತರನ್ನಾಗಿ ಮಾಡಿದರು. ಆದರೆ ಈ ಸಂಪುಟ ಹೊರಬೀಳುವ ವೇಳೆಗೆ ಅವರಿಲ್ಲ; ಗಾಂಧೀಭವನದಲ್ಲಿ ಭಾಷಣಮಾಡುತ್ತಲಿದ್ದವರು, ಅಲ್ಲೇ ಕುಸಿದು ಕಣ್ಮರೆಯಾದರು.

ಈ ಅಳಲಿನ ಸರಣಿ ಸಾಲದೆಂದು ನಮ್ಮ ಯುವ ಸಹೋದ್ಯೋಗಿ ಶ್ರೀ ಕಾ. ರಾ. ಸಾರಂಗ ವಾಹನ ಅಪಘಾತಕ್ಕೆ ತುತ್ತಾಗಿ ನಮ್ಮನ್ನು ಅಗಲಿದ್ದಾರೆ. 26 ಅಥವಾ 27 ಸಾಯುವ ವಯಸ್ಸಲ್ಲ. ಅದು ಯೌವನದ ಕನಸುಗಳು ಗರಿಗೆದರುವ ವೇಳೆ. ಈ ಜನವರಿ ಮೊದಲಲ್ಲಿ 'ಜ್ಞಾನ ಗಂಗೋತ್ರಿ'ಯ ಸಂಪಾದಕವರ್ಗವನ್ನು ಸಾರಂಗ ಸೇರಿದರು. ಐದನೆಯ ಸಂಪುಟದ ಮುದ್ರಣ ಆದೇ ಆಗ ಆರಂಭವಾಗಿತ್ತು; ಲೇಖನರಾಶಿಯನ್ನು ಮುದ್ರಿತ ಸಂಪುಟವಾಗಿ ಮಾರ್ಪಡಿಸುವ ಮಹಾಕಾರ್ಯದಲ್ಲಿ ಅವರು ಭಾಗವಹಿಸಿದರು. ಅಷ್ಟು ಹೊತ್ತಿಗೆ ಆರನೆಯ ಸಂಪುಟದ ಲೇಖನಗಳ ಬರವಣಿಗೆ ಮುಗಿದು, ಏಳನೆಯ ಸಂಪುಟದ ಲೇಖನಗಳನ್ನು ಬರೆಯಲು ತೊಡಗಿದ್ದೆವು. ಆ ಕೆಲಸದಲ್ಲಿ ಸಾರಂಗ ಉತ್ಸಾಹದಿಂದ ಭಾಗಿಯಾದರು. ತಮ್ಮ ದಕ್ಷತೆಯಿಂದ ಸಹೋದ್ಯೋಗಿಗಳ ಮೆಚ್ಚುಗೆ ಗಳಿಸಿದರು. ತಮ್ಮ ಸುಸಂಸ್ಕೃತ ನಡವಳಿಕೆಯಿಂದ ಎಲ್ಲರ ಪ್ರೇಮ ಆದರಗಳಿಗೆ ಪಾತ್ರರಾದರು. ಸಾರಂಗರ ನಿಷ್ಠೆ-ಶ್ರದ್ಧೆ ಕಂಡ ನಮಗೆ, ಇಂಥವರಿರುವಾಗ 'ಜ್ಞಾನ ಗಂಗೋತ್ರಿ'ಯ ಕೊನೆಯ ಹಂತದ ಕಠಿಣ ಪಯಣವೂ ಅತ್ಯಂತ ಹರ್ಷದಾಯಕವಾಗುತ್ತದೆ ಎನಿಸಿತು. ಆದರೆ ಅಲ್ಪಾಯುವಾಯಿತು, ಆ ಹರ್ಷ.

ಸಾಂಘಿಕ ದುಡಿಮೆಯ ಫಲವಾದ ಈ ಸಂಪುಟವನ್ನು ಓದುಗರ ಕೈಗಿಡುವ ಮುನ್ನ ಅಗಲಿದ ನಮ್ಮ ಬಂಧುಗಳನ್ನು ನೆನೆದು ಕಂಬನಿ ಮಿಡಿಯುತ್ತೇವೆ.

**ನಿರಂಜನ**

# ಸಮೀಕ್ಷೆ

## ೧

ನರ್ತನ, ಗಾಯನ, ಚಿತ್ರಣ ಎಲ್ಲರಿಗೂ ಇಷ್ಟ. ಕತೆಯೂ ಅಷ್ಟೆ.

ಕಲೆಗಳಿಲ್ಲದ ದೇಶವಿಲ್ಲ. ಸಾಹಿತ್ಯವಿಲ್ಲದ ಭಾಷೆ ಇಲ್ಲ.

ಈ ಜಗತ್ತಿನಲ್ಲಿ ಪ್ರಪ್ರಥಮವಾಗಿ ನರ್ತಿಸಿದ್ದು ಯಾರು ? ಮೊಟ್ಟಮೊದಲು ಯಾರು ಹಾಡಿದರು ? ಯಾವನು ಆದ್ಯ ಚಿತ್ರಕಾರ ? ಮೊದಲ ಕಥೆ ಯಾರು ಹೇಳಿದರು ?

ಉತ್ತರ ಸುಲಭವಲ್ಲ. ಅದು ಗತಕಾಲದ ಕತ್ತಲಲ್ಲಿ ಅಡಗಿದೆ.

ಇತಿಹಾಸದ ಪುಟಗಳಲ್ಲಿ ಆ ಬಗೆಗೆ ಏನನ್ನೂ ಕಾಣೆವು. ಅದರಾಚೆಗಿನ ಪುರಾಣಗಳೊ ? ಅವು ಸತ್ಯಮಿಥ್ಯಗಳ ಕಡಲು. ಅದನ್ನು ಕಡೆಯಬೇಕು.

ಮಾನವ ನಡೆದು ಬಂದ ದಾರಿಯಲ್ಲಿ ನಾವು ಹಿಂದಕ್ಕೆ ಸಾಗಬಹುದು. ಕಂದಕ–ಕಂದರಗಳು ಇದಿರಾಗುತ್ತವೆ. ಇವನ್ನು ಹಾದು ಹೋಗಬೇಕು. ಅದು ಕಲ್ಪನೆಯ ಕಸರತ್ತು. ಆಗ......

...ಆ ಕತ್ತಲೆಯಲ್ಲಿ ಎಲ್ಲಿಂದಲೋ ತಮಟೆ ಸಪ್ಪಳ ಕೇಳಿಬರುತ್ತದೆ; ಇಂಪಾದ ಧ್ವನಿ ಅಲೆಯಲೆಯಾಗಿ ಬಳಿಸಾರುತ್ತದೆ; ರೇಖೆಗಳ ಮಸಕು ಚಿತ್ರ ಸ್ಫುಟಗೊಳ್ಳುತ್ತದೆ.

...ರಾಗ, ಮಾತು ರೂಪಿಸುತ್ತದೆ; ಮಾತು, ಕತೆಯಾಗುತ್ತದೆ.



# ೧

ನರ್ತನ, ಸಂಗೀತ, ಚಿತ್ರಕಲೆ, ಸಾಹಿತ್ಯ — ಇವಕ್ಕೆಲ್ಲ ಯಾವುದು ಮಾತೃಕೆ? ಆಯಾ ಪ್ರದೇಶದ (ದೇಶದ) ಜಾನಪದ.

ಜನಜೀವನದ ಒಂದಂಗವಾಗಿ ಕಲೆ, ಸಾಹಿತ್ಯ ರೂಪುಗೊಂಡ ರೀತಿ ರೋಮಾಂಚಕಾರಿ.

...ತೊಟ್ಟಿಲಲ್ಲಿರುವ ಮಗುವೇ ಎತ್ತರದ ಸ್ವರಾಲಾಪಗಳನ್ನು ರೂಪಿಸುತ್ತದೆ. ತಾಯಿಯ ಗಮನ ಸೆಳೆಯಲು. ಕೆಳಗೆ ಒದ್ದೆಯಾಗಿರಬಹುದು. ಹಸಿವಾಗಿದ್ದರಂತೂ ರಾಗಮಾಲಿಕೆ ಆರಂಭ. ಮಾತು ಬಂದರೆ, "ಅಮ್ಮ . . . ಮ್ಮಾ . . ."

ಅನುಕರಣೆ ಮಗುವಿಗೆ ಸಹಜ ಪ್ರವೃತ್ತಿ. ಲೋಕವ್ಯವಹಾರದ ಮೊದಲ ಪಾಠವೇ ಆ ವಿಧಾನದಿಂದ. ಅದು, ದೊಡ್ಡವನಾದ ಮೇಲೂ ಬಿಡಲಾರದ ಹುಟ್ಟುಗುಣ.

ಬಳುಕುವ ಬಳ್ಳಿ, ಗಾಳಿಗೆ ತೊನೆದಾಡುವ ಗಿಡಮರ ನೋಡುವವರ ಮೇಲೆ ಮೋಡಿ ಬೀರುತ್ತವೆ. ಯಾವುದಕ್ಕೋ ಕೈ ತಾಕಿ ವಿಚಿತ್ರ ಸದ್ದು ಹೊರಟಾಗ ವಿಸ್ಮಯವೆನಿಸುತ್ತದೆ. ಮತ್ತೆ ಅಂಥದೇ ಸದ್ದನ್ನು ಪಡೆಯುವ ಬಯಕೆ. ಸದ್ದಿನ ಮೇಲೆ ಸದ್ದು ಲಯಬದ್ಧವಾದಾಗ ಅದಕ್ಕೆ ಅನುಗುಣವಾಗಿ ಹೆಜ್ಜೆ ಇಡುವ ತವಕ. ಮಾನವ ಈಗ, ಬಳುಕುವ ಬಾಗುವ ತಾಳತಟ್ಟುವ ನೆಗೆಯುವ ನರ್ತಕ.

ಇಂಥ ಚಲನೆಯಿಂದ ಒಳಗಿನ ಸಂತಸ ಹೊರಹೊಮ್ಮುತ್ತದೆ.

ಗುಡುಗು ಮಿಂಚು ಎಂದರೆ ಭಯ ಆದಿಮಾನವನಿಗೆ. ಗವಿಯ ರಕ್ಷಣೆಯಲ್ಲಿ, ಕಿವಿಗಡಚಿಕ್ಕುವ ಸದ್ದನ್ನು ತಾನೇ ಹುಟ್ಟಿಸಿ, ಗುಡುಗನ್ನು ಆತ ಅಣಕಿಸಿರಬಹುದು. ಅಥವಾ ಹೊರಗೆ ಶಾಂತವಾದಾಗ, ತನ್ನ ಗುಡುಗುನರ್ತನದಿಂದ ಪ್ರಕೃತಿಯನ್ನು ಅವನು ಆರಾಧಿಸಿರಬಹುದು.

ಬೇಟೆಯಲ್ಲಿ ಗಾಯಗೊಂಡರೆ ಆರ್ತನಾದದ ಆಲಾಪನೆ. ಮಿಕ ಸತ್ತರೆ ವಿಜಯೋತ್ಸಾಹದ ಕೂಗು–ಕುಣಿತ.

ಹಿಮವರ್ಷದಲ್ಲೋ ಮುಸಲಧಾರೆ ಮಳೆಯಲ್ಲೋ ಬಾಹ್ಯಸಂಚಾರ ದುಸ್ಸಾಧ್ಯವಾದಾಗ, ಗವಿಯೊಳಗೆ ಶಿಲೆಯ ಮೇಲೆ ಚಿತ್ತಾರ ಬಿಡಿಸುವ ಅಪೇಕ್ಷೆ. ತಾನು ಬೇಟೆಯಾಡಬೇಕಾದ ಕ್ರೂರ ಮೃಗಗಳದೇ ಚಿತ್ರ. ಚಿತ್ರದ ಮೃಗವನ್ನು ಕೊಂದಾಗ ಹರ್ಷೋನ್ಮಾದ. ಬೇಟೆಯಲ್ಲಿ ತಾನು ಯಶಸ್ವಿಯಾಗುವೆನೆಂಬ ನಂಬಿಕೆ.

ಪ್ರಾಚೀನ ಕಾಲದಲ್ಲಿ ಹೆತ್ತವಳದೇ ಪ್ರಾಬಲ್ಯ. ಗಂಡಸರು ಬೇಟೆಗೆ ಹೋದಾಗ ನಿದ್ದೆ ಬೇಡವೆಂದ ಮಗುವಿಗೆ ಆ ಅಮ್ಮ ಗೊಗ್ಗಯ್ಯನ ಕತೆ ಹೇಳಿರಬೇಕು. ಬೇಟೆಯಿಂದ ಮರಳಿದವರು ತಮ್ಮ ಸಾಹಸವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿರಬೇಕು.

ಗವಿಮಾನವನ ಜೀವನದ ಹೊಸ ಅಧ್ಯಾಯಕ್ಕೆ ಕಾರಣವಾದದ್ದು ಚಕಮಕಿ ಬೆಂಕಿ. ಮಾಂಸ ಬೆಂದು ರುಚಿಯಾಯಿತು. ಚಳಿಯಿಂದ ರಕ್ಷಣೆ ದೊರೆಯಿತು.

ಆ ಕಾಲದಲ್ಲಿ ಪ್ರತಿ ಬೇಟೆಯೂ ಸಾವಿನೊಡನೆ ಸೆಣಸಾಟ. ಗಿಡಮರಗಳ ಫಲ ಸವಿದಾಗ ಮನುಷ್ಯ ವ್ಯವಸಾಯಜೀವಿಯಾದ, ಬಯಲುವಾಸಿಯಾದ. ತನಗೆ ನೆರವಾಗಲೆಂದು ಕೆಲ ಮೃಗಗಳನ್ನು ಹಿಡಿದು ಸಾಕಿದ, ಪಳಗಿಸಿದ. ಉತ್ತ ನೆಲದಲ್ಲಿ ಬಿತ್ತಿದ ಬೀಜ ಮೊಳಕೆಯೊಡೆದು ಸಸಿಯಾಯಿತು; ಟಿಸಿಲೊಡೆದು ಫಸಲಾಯಿತು.

ಬೆಂಕಿ ದೇವರು, ಮಳೆ ದೇವರು ಅವನಿಗೆ ಇಷ್ಟವಾದರು. ಅವರನ್ನು ತನ್ನದೇ ಆದ ರೀತಿಯಲ್ಲಿ ಆತ ಸ್ತುತಿಸಿದ. ಕೃತಜ್ಞತಾಭಾವದಿಂದ ನರ್ತಿಸಿದ. ತನ್ನ ದುಡಿಮೆಯ ಉಪಕರಣಗಳನ್ನು ಅಲಂಕರಿಸಿ ಪೂಜಿಸಿದ.

ಶಿಲೆಯ ಮೇಲಿನ ಚಿತ್ತಾರಗಳು : ಗವಿಮಾನವನ ಸೃಷ್ಟಿ

ಹಾಗೆಯೇ ದುಡಿಯುತ್ತ ಆತ ಹಾಡಿದ. ಸುಗ್ಗಿಯ ಸಡಗರದಲ್ಲಿ ಮೈಮರೆತು ಕುಣಿದ.

ಆಗ ಇದ್ದುದು ಭೌಗೋಳಿಕ ಅಡೆತಡೆಗಳಿಂದ ಬೇರ್ಪಟ್ಟ ಸಹಸ್ರಾರು ಪ್ರದೇಶಗಳು.

ಒಂದೊಂದು ಪ್ರದೇಶದಲ್ಲಿ ಒಂದೊಂದು ಭಾಷೆ. ಅಲ್ಲಿನದೇ ವಿಶಿಷ್ಟ ಜೀವನಕ್ರಮ. ಅವರದೇ ರೀತಿಯ ಕುಶಲ ಕಸುಬು. ಕುಣಿತ, ಹಾಡು, ಕತೆ. ಆರಾಧನೆಯಲ್ಲೂ ಬೇರೆ ಬೇರೆ ವಿಧಾನ. ಆಕಾರ ನೀಡಿದ ದೇವರು ದಿಂಡರು ; ರೂಪುಗೊಂಡ ನೀತಿ ನೇಮ — ಎಲ್ಲದರಲ್ಲೂ ವೈವಿಧ್ಯ.

ಇವೆಲ್ಲದರ ಮೊತ್ತ ಆ ಜನಸಮುದಾಯದ ಸಂಸ್ಕೃತಿ — ಜಾನಪದ. ಪೀಳಿಗೆಯಿಂದ ಪೀಳಿಗೆಗೆ ಅದರ ಬಳುವಳಿ.

ನೈಲ್ ನದೀ ತೀರ. ಯೂಫ್ರೆಟೀಸ್–ಟೈಗ್ರಿಸ್ ನದೀ ತೀರ. ಸಿಂಧೂ ನದೀ ತೀರ [illegible] ಗ್ರೀಸಿನ ದ್ವೀಪ ಸಮುಚ್ಚಯ ಶ್ರೇಷ್ಠ ಕಲೆ–ಸಾಹಿತ್ಯ–ಸಂಸ್ಕೃತಿಗಳಿಗೆ ತವರಾಯಿತು.

ದಾಳಿಯಿಡುವ ದಂಡುಗಳು. ಉರುಳುವ ಕಿರೀಟಗಳು. ಉರಿಯುವ ಕಲಾ ಕೃತಿಗಳು—ಇವೆಲ್ಲದರ ನಡುವೆಯೂ [illegible] ಗೊಂಡಿತು; ವಿದ್ಯೆ ಸಂಪತ್ತಿನ ಸ್ವಾಮ್ಯಕ್ಕೇರಿತು. ಶಾಸ್ತ್ರಗಳು ಮೈತಳೆದುವು. ಜಾನಪದದಿಂದಲೇ [illegible] ಭಿನ್ನವೆಂದು ತೋರಿದ, ಪ್ರಥಮ ವರ್ಗದ —ಶ್ರೇಷ್ಠಗುಣದ— (ಕ್ಲಾಸಿಕಲ್) ನೃತ್ಯ ಸಂಗೀತ ಶಿಲ್ಪ ಸಾಹಿತ್ಯಗಳು ರೂಪುಗೊಂಡುವು.

ಕಳೆದ ಇಪ್ಪತ್ತು ಶತಮಾನಗಳಿಗೂ ಹೆಚ್ಚಿನ ಅವಧಿಯಲ್ಲಿ ಕಲೆ. ಸಾಹಿತ್ಯಗಳ ಕ್ಷೇತ್ರದಲ್ಲಿ ಆಗಿರುವ ಪ್ರಯೋಗಗಳಿಗೆ ಒಂದು ಲೆಕ್ಕವೆ ? ಹಳೆಯ ಸಂಪ್ರದಾಯಗಳು ಮಣ್ಣುಗೂಡಿದುವು. ನೂತನ ಆವಿಷ್ಕಾರಗಳಲ್ಲಿ ಕೆಲವು ಅಲ್ಪಾಯುವಾದುವು. ಗಟ್ಟಿಯಾದ ಬೇರೆ ಕೆಲವು ಹೊಸ ಸಂಪ್ರದಾಯಗಳೆನಿಸಿದುವು.



ಉಜ್‌ಬೆಕ್‌ಸ್ತಾನದ ಜಾನಪದ ನೃತ್ಯ

ಕಾಲದುದ್ದಕ್ಕೂ ಒಂದು ಅಂಶ ಮಾತ್ರ ಮತ್ತೆ ಮತ್ತೆ ಸ್ಪಷ್ಟವಾಗಿದೆ. ಅದು ಜಾನಪದದ ಹಿರಿಮೆ.

ಜಾನಪದದ ಭದ್ರ ಬುನಾದಿಯ ಮೇಲೆ ನಿಂತಾಗಲೇ ಒಂದು ಕಲೆ ಅಥವಾ ಸಾಹಿತ್ಯ ಶ್ರೇಷ್ಠವಾಗುತ್ತದೆ: ದೀರ್ಘಾಯುವಾಗುತ್ತದೆ. ಇದು ಚ್ಯುತಿ ಇಲ್ಲದ ಸತ್ಯ.

## ೨

ಪೂರ್ವದಲ್ಲಿರಲಿ, ಪಶ್ಚಿಮದಲ್ಲಿರಲಿ ದೈವಿಕ ಆರಾಧನೆಯ ಒಂದಂಗವಾಗಿಯೇ ನರ್ತನ ಬೆಳೆದಿದೆ.

ನಾಲ್ಕು ಸಾವಿರ ವರ್ಷಗಳ ಹಿಂದೆ ಈಜಿಪ್ಟಿನ ಧಾರ್ಮಿಕ ಉತ್ಸವಗಳಲ್ಲಿ ಅರಸರೂ ನರ್ತಿಸುತ್ತಿದ್ದರು.

ಪ್ರಾಚೀನ ಗ್ರೀಸಿನಲ್ಲೂ ಅಷ್ಟೆ. ಉತ್ಸವದಲ್ಲಿ ಐವತ್ತು ಜನರ ಮೇಳ ದೇವತೆಯ ಚರಿತೆಯನ್ನು ಹಾಡುತ್ತ ಕುಣಿಯುತ್ತಿತ್ತು.

ಕಾಲ ಕಳೆದಂತೆ ಪಶ್ಚಿಮದ ರಾಷ್ಟ್ರಗಳಲ್ಲಿ ಮನೋರಂಜನೆಯೊಂದೇ ನರ್ತನದ ಗುರಿಯಾಯಿತು. ಅಲ್ಲಲ್ಲಿನ ಜಾನಪದ ನೃತ್ಯಗಳನ್ನು ಆಧರಿಸಿ ವಿವಿಧ ನೃತ್ಯಪ್ರಕಾರಗಳು ಹುಟ್ಟಿದುವು. ಸಮುದಾಯ ನೃತ್ಯ, ಕೂಟ ನೃತ್ಯಗಳೂ ರಂಗಮಂಚದ ನೃತ್ಯಗಳೂ ಶಾಸ್ತ್ರೀಯ ರೂಪ ತಾಳಿದುವು.

16ನೆಯ ಶತಮಾನದಲ್ಲಿ ವಿಶಿಷ್ಟ ನೃತ್ಯರೂಪವಾದ ಬ್ಯಾಲೆ ಯೂರೋಪಿನಲ್ಲಿ ಜನ್ಮ ತಳೆಯಿತು. ಇದು ರೂಪುಗೊಳ್ಳಲು ಫ್ರಾನ್ಸಿನಲ್ಲಿ ಜೀನ್ ಜಾರ್ಜ್ ನವರೆ ಮತ್ತು ರಷ್ಯದಲ್ಲಿ ಸೆರ್ಗಿ ದಿಯ ಗೆಲೆವ್ ಕಾರಣರು. 20ನೆಯ ಶತಮಾನದಲ್ಲಿ ಆನ್ನಾ ಪಾವ್ಲೋವ ಬ್ಯಾಲೆ ನರ್ತಕಿಯಾಗಿ ಜಗದ್ವಿಖ್ಯಾತಳಾದಳು. ಇಸಡೊರಾ ಡಂಕನ್ ಆಂತರಿಕ ಭಾವನೆಗಳಿಗೆ ಮೂರ್ತರೂಪ ನೀಡುವ ಮಾಧ್ಯಮವಾಗಿ ನೃತ್ಯವನ್ನು ಬಳಸಿದಳು; ಅವಳ 'ಸ್ವಚ್ಛಂದನರ್ತನ' ನೃತ್ಯಲೋಕದ ಹಲವು ಬಾಗಿಲುಗಳನ್ನು ತೆರೆದೆಸೆಯಿತು.



ಬ್ಯಾಲೆ ನರ್ತಕಿ ಆನ್ನಾ ಪಾವ್ಲೋವ

× × ×          × × ×

ಕಾಶ್ಮೀರದಿಂದ ಕೇರಳದ ತನಕ, ಮಹಾರಾಷ್ಟ್ರ ಸೌರಾಷ್ಟ್ರಗಳಿಂದ ಮಣಿಪುರದವರೆಗೆ ಭಾರತೀಯ ಜಾನಪದ ನೃತ್ಯವೆಲ್ಲ ವರ್ಣಮಯ, ವೈವಿಧ್ಯಮಯ. ಕರ್ನಾಟಕದ ಹುತ್ತರಿ – ಸುಗ್ಗಿ ಕುಣಿತ, ಕೋಲಾಟ, ಕೇರಳದ ಓಣಮ್ ಉತ್ಸವದ ಕೈಕೊಟ್ಟಿ ಕಳಿ ನೃತ್ಯ, ರಾಜಸ್ಥಾನದ ಘುಮರ್–ಬಂಜಾರಾ, ಮಣಿಪುರದ ರಾಸ್, ಪಂಜಾಬಿನ ಭಾಂಗ್ರಾ, ಮಧ್ಯಪ್ರದೇಶದ ಗೊಂಡ್–ಸಂತಾಲರ ನರ್ತನ, ಗುಜರಾತಿನ ಗಾರಬ (ಕುಂಭ) ನೃತ್ಯ— ಇವೆಲ್ಲ ನಮ್ಮ ದೇಶದಲ್ಲಿ ತಲೆತಲಾಂತರಗಳಿಂದ ಉಳಿದುಬಂದಿರುವ ಜಾನಪದ ಸಂಪತ್ತು. ಧಾರ್ಮಿಕ, ಸಾಮಾಜಿಕ ಉತ್ಸವಗಳಲ್ಲಿ, ಜಾನಪದ ನೃತ್ಯ ಏರ್ಪಡುವುದು ಸಾಮಾನ್ಯ ಸಂಗತಿ.

ಆರಂಭದಲ್ಲಿ ಜಾನಪದ ರೂಪದಲ್ಲೇ ಇದ್ದು ಕ್ರಮೇಣ ಶಾಸ್ತ್ರೀಯ ಸ್ವರೂಪ ಪಡೆದು, ಅರಮನೆ ಗುರುಮನೆಗಳ ನೆರವಿನಿಂದ ವಿಕಾಸಗೊಂಡ ಭಾರತೀಯ ನೃತ್ಯಗಳು : ಭರತನಾಟ್ಯ, ಕಥಕ್, ಕಥಕ್ಕಳಿ, ಮಣಿಪುರಿ, ಒಡಿಸ್ಸಿ, ಕೂಚಿಪುಡಿ.

ಈ ರೂಪಾಂತರಕ್ಕೆ ಸುಸ್ಪಷ್ಟ ಉದಾಹರಣೆ : ಕಥಕ್. ಪುರಾತನ ಕಾಲದಲ್ಲಿ ಕಥಿಕರು ಊರಿಂದೂರಿಗೆ ಅಲೆಯುತ್ತಿದ್ದರು. ಅವರು ಕಥನಕಾರರು. ಗಾಯನ ನರ್ತನ ಅಭಿನಯಗಳ ನೆರವಿನಿಂದ ಪುರಾಣಕಥೆಗಳನ್ನು ಹೇಳುತ್ತ ಜನರ ಮನಸ್ಸನ್ನು ರಂಜಿಸುತ್ತಿದ್ದರು. ಕಾಲಕ್ರಮೇಣ ಈ ನೃತ್ಯವಿಧಾನದಿಂದಲೇ ಕಥಕ್ ಹುಟ್ಟಿತು. ಭರತನ 'ನಾಟ್ಯಶಾಸ್ತ್ರ'ವನ್ನು ಆಧರಿಸಿ ಅದು ಶಾಸ್ತ್ರೀಯ ರೂಪ ಪಡೆಯಿತು.

ಭರತನ 'ನಾಟ್ಯಶಾಸ್ತ್ರ' 1800 ವರ್ಷಗಳಿಗೆ ಹಿಂದಿನದು. ಅಥವಾ ಬೇರೆ ಕೆಲ ಅಭಿಪ್ರಾಯಗಳಂತೆ 1000 ಅಥವಾ 1500 ವರ್ಷಗಳಿಗೆ ಆಚಿನದು. ಭರತಮುನಿ ಈ ಸಂಸ್ಕೃತ ಗ್ರಂಥವನ್ನು ರಚಿಸಿದ ಎಂದು ಹೇಳಿಕೆ. 'ನಾಟ್ಯಶಾಸ್ತ್ರ'ದ ಕರ್ತೃ ತನ್ನ ಕೃತಿಯ ಬಗೆಗೆ ಹೀಗೆ ತಿಳಿಸಿದ್ದಾನೆ: ಭೂಲೋಕದಲ್ಲಿ

ರಂಗಭೂಮಿಯ ಮೇಲೆ ಇಸಡೊರಾ –ಚಿತ್ರಕಾರ ಕಂಡಂತೆ



ಮಧ್ಯಪ್ರದೇಶದ ಗೊಂಡ್ ನೃತ್ಯ



ಗುಜರಾತಿನ ಯೋಧನೃತ್ಯ

ಜನರು ಕೀಳು ಅಭಿರುಚಿಯ ದುರ್ವ್ಯಸನಿಗಳಾಗಿರುವುದನ್ನು ಕಂಡು ದೇವತೆಗಳು ಬ್ರಹ್ಮನ ಬಳಿಗೆ ಹೋದರಂತೆ. ನರರ ಉದ್ಧಾರಕ್ಕಾಗಿ ಐದನೆಯ ಒಂದು ವೇದವನ್ನು ರಚಿಸು ಎಂದು ಕೇಳಿಕೊಂಡರಂತೆ. ಆಗಲೆಂದು ಬ್ರಹ್ಮ ಒಪ್ಪಿ 'ನಾಟ್ಯವೇದ' ವನ್ನು ನಿರ್ಮಿಸಿದನಂತೆ. ಅದನ್ನು ಆಧರಿಸಿ ತಾನು (ಭರತಮುನಿ) 'ನಾಟ್ಯಶಾಸ್ತ್ರ' ರಚಿಸಿದನಂತೆ.

ಕಥೆ ಎಂತೇ ಇರಲಿ, ಹಲವಾರು ಶತಮಾನಗಳಿಂದ ಪ್ರಚಲಿತವಾಗಿದ್ದ ಭಾರತದ ವಿವಿಧ ಕಲಾರೂಪಗಳಿಗೆ ಶಾಸ್ತ್ರೀಯ ನೆಲೆಗಟ್ಟನ್ನು 'ನಾಟ್ಯಶಾಸ್ತ್ರ' ನೀಡಿತು.

ಭಾರತೀಯ ಶಾಸ್ತ್ರೀಯ ನರ್ತನದ ವಿಂಗಡಣೆ ಈ ರೀತಿ :

—ನೃತ್ತ (ಅಭಿನಯವಿಲ್ಲದ ಶುದ್ಧ ನರ್ತನ)

—ನೃತ್ಯ (ಶುದ್ಧ ನರ್ತನ ಮತ್ತು ಅಭಿನಯ ; ಕಥಾವಸ್ತುವಿಲ್ಲ)

—ನಾಟ್ಯ (ಪೂರ್ಣ ಕಥಾವಸ್ತುವಿದ್ದು, ನೃತ್ತ, ಅಭಿನಯ, ರಸಗಳ ಮಿಲನ)

ಈ ವಿಭಜನೆಯನ್ನು ಅನುಸರಿಸಿ ವಿವಿಧ ಭಾರತೀಯ ನೃತ್ಯಗಳು ರೂಪುಗೊಂಡಿವೆ.

ಭೂಮಿಯ ಮೇಲಣ ಬಡಪಾಯಿಗಳಿಗಾಗಿ ಬ್ರಹ್ಮ 'ನಾಟ್ಯವೇದ' ಸೃಷ್ಟಿಸಿದ ಮೇಲೂ ಮಾನವರು ಅದರಿಂದ ಪಾಠ ಕಲಿತರೆಂದು ಹೇಳಲು ಆಧಾರವಿಲ್ಲ! ನಾಟ್ಯವನ್ನು ದೈವಿಕವಾಗಿ ಪರಿಗಣಿಸಿದರೂ ನರ್ತಕ ನರ್ತಕಿಯರನ್ನು ನಮ್ಮ ದೇಶದಲ್ಲಿ ಈ ಶತಮಾನದವರೆಗೂ ಹೆಚ್ಚಿನ ಗೌರವದಿಂದ ಕಂಡುದಿಲ್ಲ.

ಸ್ವಾತಂತ್ರ್ಯ ಸಂಘರ್ಷದ ಬೆಳಕಿನಲ್ಲಷ್ಟೇ ಕಲೆಯ ಲೋಕ ಕಣ್ಣುಜ್ಜಿಕೊಂಡಿತು.

ಉದಯಶಂಕರ್, ಆನ್ನಾ ಪಾವ್ಲೊವ ಬೊಟ್ಟುಮಾಡಿ ತೋರಿದ ಭಾರತೀಯ ನೃತ್ಯತಾರೆಯಾದ. ಚಿತ್ರಕಲೆ ಕಲಿಯಲು ಇಂಗ್ಲೆಂಡಿಗೆ ಹೋದವನು ನರ್ತಕನಾಗಿ ಮರಳಿದ. 'ಗೋದಿಯ ಪೈರಿನ ಹೊಲದ ಮೇಲೆ ಬೀಸುವ ಮಾರುತದಂತೆ ನನ್ನ ಜೀವನದ ಹಾದಿಯನ್ನು ಪಾವ್ಲೊವ ಬದಲಿಸಿದಳು'—ಎಂದ ಉದಯಶಂಕರ್. ಅವನಿಂದ ಆರಂಭವಾಯಿತು ಶಾಸ್ತ್ರೀಯ ತಳಹದಿಯ ಮೇಲೆ ಭಾರತೀಯ ಬ್ಯಾಲೆ.

ನಮ್ಮ ನೃತ್ಯ ಪ್ರಕಾರಗಳ ಪುನರುಜ್ಜೀವನಕ್ಕೆ ಕವೀಂದ್ರ ರವೀಂದ್ರರ ಶಾಂತಿನಿಕೇತನ, ರುಕ್ಮಿಣಿ ಅರುಂಡೇಲರ ಕಲಾಕ್ಷೇತ್ರ, ಕವಿ ವಲ್ಲತ್ತೋಳರ ಕಲಾಮಂಡಲ—ಇಂಥ ಸಂಸ್ಥೆಗಳು ಕಾರಣವಾದುವು. ನೃತ್ಯಕ್ಕಾಗಿಯೇ ಜೀವನವನ್ನು ಮೀಸಲಿಟ್ಟ ಯುವಕ ಯುವತಿಯರ ಹೊಸ ಪೀಳಿಗೆ ಭಾರತೀಯ ನೃತ್ಯಗಳಿಗೆ ಅಂತರರಾಷ್ಟ್ರೀಯ ಖ್ಯಾತಿಯನ್ನು ದೊರಕಿಸಿಕೊಟ್ಟಿತು.

ಶಾಸ್ತ್ರೀಯ ನೃತ್ಯಶಿಕ್ಷಣ ಪಶ್ಚಿಮದಲ್ಲೂ ಅಷ್ಟೆ, ಭಾರತದಲ್ಲೂ ಅಷ್ಟೆ—ನಿಷ್ಠುರ ಶಿಸ್ತಿನಿಂದ ಕೂಡಿದ್ದು. ಧಾರ್ಮಿಕ ಹಿನ್ನೆಲೆಯುಳ್ಳಂತೂ ಈ ಶಿಕ್ಷಣ ತಪಸ್ಸಿನ ರೂಪ ತಳೆಯುತ್ತದೆ. ಗುರು–ಶಿಷ್ಯ ಪರಂಪರೆಗೆ ಇಲ್ಲಿ ವಿಶೇಷ ಮಹತ್ವ.

ಪ್ರಮುಖ ಭಾರತೀಯ ನೃತ್ಯವಿಧಾನಗಳಲ್ಲೊಂದಾದ ಕೂಚಿಪುಡಿಗೆ ಆ ಹೆಸರು ಬಂದಿರುವುದು ಅದು ಜನ್ಮತಾಳಿದ ಗ್ರಾಮದಿಂದ (ಕುಶೀಲವಪುರಿ, ಕುಚೇಲಪುರಿ, ಕೂಚಿಪುಡಿ). ಕೂಚಿಪುಡಿಯ ಸುತ್ತುಮುತ್ತಲ ಆರು ಗ್ರಾಮಗಳಲ್ಲೆಲ್ಲ ಈ ನೃತ್ಯದಲ್ಲಿ ಪರಿಣತರೇ ನಿವಾಸಿಗಳು. 15–16ನೆಯ ಶತಮಾನದಲ್ಲಿ ಈ ಸಂಪ್ರದಾಯವನ್ನು ಆರಂಭಿಸಿದಾತ ಶ್ರೀ ಸಿದ್ಧೇಂದ್ರಯೋಗಿ. ಸಮೀಪದ ಶ್ರೀಕಾಕುಲಂ ಹಿಂದೆ ಶಾತವಾಹನರ ರಾಜಧಾನಿಯಾಗಿತ್ತು. 300 ದೇವದಾಸಿಯರ (ದೇಗುಲದ ನರ್ತಕಿಯರ) ಕುಟುಂಬಗಳು ಅಲ್ಲಿ ವಾಸವಾಗಿದ್ದುವು. ಸಿದ್ಧೇಂದ್ರಯೋಗಿ ಆರಂಭಿಸಿದ್ದು ಅತ್ಯಂತ ಮಡಿವಂತಿಕೆಯ ಕಲಾವಂತಿಕೆ. ನೃತ್ಯದ ಕಥಾವಸ್ತು ಭಾಗವತದಿಂದ ಎತ್ತಿಕೊಂಡದ್ದು. ಈ ನೃತ್ಯ ರೂಪುಗೊಂಡ ಆರಂಭದಲ್ಲಿ, ಪುರುಷನೇ ಸ್ತ್ರೀ ಪಾತ್ರಧಾರಿ–ನರ್ತಕಿ. ಸಿದ್ಧೇಂದ್ರಯೋಗಿ ಈ ನೃತ್ಯವನ್ನು



ಶಾಸ್ತ್ರೀಯ ಪರಂಪರೆ ;
ಗುರುವಿನಿಂದ ಕಿರಿಯನಿಗೆ ಪಾಠ

ಬ್ರಾಹ್ಮಣರಿಗಷ್ಟೇ ಸೀಮಿತಗೊಳಿಸಿದ್ದ. ಅವರಲ್ಲಿ ಗಂಡು ಹುಟ್ಟಿದೊಡನೆಯೇ ಅವರ ನಡುವಿಗೊಂದು ಕಿರುಗೆಜ್ಜೆ ಕಟ್ಟುತ್ತಿದ್ದರು.

ಆಧುನಿಕತೆಯ ಹಿನ್ನೆಲೆಯಲ್ಲಿ ಇದು ವಿಪರ್ಯಾಸವಾಗಿ ಕಂಡರೂ ಈ ಶಿಕ್ಷಣ ದೊರೆಯುವುದು ಸಂಪ್ರದಾಯಬದ್ಧವಾಗಿಯೇ.

ಭಾರತದ ಇನ್ನೊಂದು ಶ್ರೇಷ್ಠ ನೃತ್ಯವಾದ ಕಥಕ್ಕಳಿಯಲ್ಲಿ ಪಾರಂಗತರಾಗಲು ಹತ್ತು ವರ್ಷಗಳ ಶಿಕ್ಷಣ ಬೇಕು.

ಹಿಂದೆ ಕಥಕ್ಕಳಿ ತಂಡಗಳು ಕೇರಳದಲ್ಲಿ ಊರಿಂದೂರಿಗೆ ಅಲೆಯುತ್ತಿದ್ದುವು. ದೊಡ್ಡ ಜಮೀನ್ದಾರರ ಮನೆಗಳ ಮುಂದೆ ನಿಂತು ಕಥಕ್ಕಳಿ ಅಭಿನಯಕ್ಕೆ ಅಪ್ಪಣೆ ಕೇಳಬೇಕಾಗುತ್ತಿತ್ತು. ತಂಡದ ಪೋಷಾಕು ಮತ್ತಿತರ ಪರಿಕರಗಳನ್ನು ಮೂವರು ಹೊತ್ತು ತರುತ್ತಿದ್ದರು. ಅವರಲ್ಲಿ ಪ್ರತಿಯೊಬ್ಬರಿಗೂ ತಿಂಗಳಿಗೆ ಊಟ ಸಹಿತ 3 ರೂಪಾಯಿ ವೇತನ. ಒಂದು ರಾತ್ರೆಯ ಕಥಕ್ಕಳಿ ಅಭಿನಯಕ್ಕೆ ತಂಡಕ್ಕೆ ದೊರೆಯುತ್ತಿದ್ದುದು ಉಣ್ಣಲು ಗಂಜಿ ಮತ್ತು 10 ರೂಪಾಯಿ ಸಂಭಾವನೆ. ಅದರಲ್ಲಿ ಪ್ರಮುಖ ನರ್ತಕನಿಗೆ ಆ ರಾತ್ರೆಯ ಅಭಿನಯಕ್ಕೆ ಮೂರು ರೂಪಾಯಿ. ಉಳಿದವರಿಗೆ ಆಗಿನ ಲೆಕ್ಕದಲ್ಲಿ ತಲಾ ಎರಡಾಣೆ ಬಂದರೂ ಬಂತೇ. ಇದೇ ಸ್ಥಿತಿ ಮುಂದುವರಿದಿದ್ದರೆ ಆ ಕಲೆ ಉಳಿಯುತ್ತಿತ್ತೋ ಇಲ್ಲವೋ ಹೇಳುವುದು ಕಷ್ಟ. ಕೇರಳದ ಮಹಾಕವಿ ವಲ್ಲತ್ತೋಳ್ ಕಲಾಮಂಡಲವನ್ನು ಸಂಘಟಿಸಿ ಕಥಕ್ಕಳಿಯನ್ನು ರಾಷ್ಟ್ರದ ಮನೆಮಾತಾಗಿ ಮಾಡಿದರು. ಅವರ ಪರಿಶ್ರಮದ ಫಲವಾಗಿ ಇಂದು ಕಥಕ್ಕಳಿ ತಂಡ ಲೋಕಸಂಚಾರವನ್ನೂ ಮಾಡುತ್ತಿದೆ.

ನರ್ತನದ್ದು ಹಾವಭಾವಗಳ ಭಾಷೆ. ಆ ಭಾಷೆಯ ಅಕ್ಷರಗಳು ಹಸ್ತಮುದ್ರೆಗಳು. ಇಂಥ ಭಾಷೆ ಈಗ ವಿಶ್ವಮಾನ್ಯತೆ ಗಳಿಸುತ್ತಿದೆ.

× × ×   × × ×   × × ×

ಹಿಂದೆಯೂ ಒಂದು ಕಾಲದಲ್ಲಿ ಭಾರತೀಯ ನೃತ್ಯ ಪರಂಪರೆ ಕಡಲುಗಳಾಚೆ ಸಾಗಿತ್ತು, ಕಾಂಬೋಡಿಯಾ ಮತ್ತಿತರ ದೇಶಗಳಿಗೆ. ಅದರ ಫಲಶ್ರುತಿ –ಪೌರಸ್ತ್ಯ ಎನ್ನಿಸಿಕೊಳ್ಳುವ ಅಲ್ಲಿನ ವಿಶಿಷ್ಟ ನೃತ್ಯಪ್ರಕಾರ. ಹಾಗೆಯೇ ಇಂಡೊನೇಷ್ಯಕ್ಕೆ ಸೇರಿದ ಬಾಲಿ ದ್ವೀಪದ ನೃತ್ಯವೂ ಲೋಕವಿಖ್ಯಾತವಾದದ್ದು.

ಕಥಕ್ಕಳಿಯ ರಾಮ, ಸೀತೆ : ಚಾತುನ್ನಿ ನಾಯರ್, ಮೃಣಾಲಿನಿ ಸಾರಾಭಾಯಿ

...... ಮೇಲೆ ಆಕಾಶವಿರುವ ಬಯಲು ನಾಟ್ಯಮಂದಿರವೇ ಇರಲಿ, ರಕ್ಷಿತ ರಂಗಮಂಟಪವೇ ಇರಲಿ, ನರ್ತನ ಆರಂಭವಾದ ಕೆಲವೇ ನಿಮಿಷಗಳಲ್ಲಿ ಪ್ರೇಕ್ಷಕ ಪರವಶನಾಗುತ್ತಾನೆ. ಅದು ಕಿನ್ನರ ಲೋಕದ ಸಂಚಾರವಿರಬಹುದು, ರಮ್ಯ ಪ್ರಕೃತಿಯಲ್ಲಿ ಅಲೆದಾಟವಿರಬಹುದು. ಎಲ್ಲರಿಗೂ ಇದು ಮೆಚ್ಚುಗೆಯ ವಿಹಾರ. ನರ್ತನದ ಮೋಡಿಯಿಂದ ಯಾರಿಗೂ ಬಿಡುಗಡೆ ಇಲ್ಲ.

## ೪



ಹಾಡು ಬೀಸುವ ಮೋಡಿಯೂ ಅಸಾಧಾರಣವಾದದ್ದು. ಹುಟ್ಟಿದ ಮಗುವನ್ನು ತೂಗಿ ತಟ್ಟಿ ರಮಿಸುವ ವಿಧಾನದಷ್ಟೇ ಹಳೆಯದು ಜೋಗುಳ. ದೇಶ–ಭಾಷೆ ಯಾವುದಿದ್ದರೂ ಮಾತೆ ಜೋಗುಳದ ಹಾಡು ಬಲ್ಲಳು.

ಪ್ರಾಚೀನ ಈಜಿಪ್ಟ್–ಗ್ರೀಸ್‌ಗಳ ದೇವತಾರಾಧನೆಯಲ್ಲಿ ಸಂಗೀತವಿದ್ದಿತು: ಅದು ಸ್ತೋತ್ರ, ಸ್ತುತಿ.

ಇದು ಜಾನಪದದೊಡನೆ ನೇರ ಸಂಪರ್ಕ ಹೊಂದಿದ್ದ ಸಂಗೀತ.

ಗ್ರೀಕ್ ಸಂಸ್ಕೃತಿ ಅಳಿದು, ರೋಮನ್ ಸಾಮ್ರಾಜ್ಯವೂ ಪತನಗೊಂಡ ಮೇಲೆ, ಯೂರೊಪಿನಲ್ಲಿ ಕ್ರೈಸ್ತ ಮತ ಸಂಗೀತಕ್ಕೆ ಆಸರೆ ನೀಡಿತು. ಪ್ರಾರ್ಥನಾ ಮಂದಿರದ ಮೇಳ –ಹಾಡುಗಾರರ ತಂಡ– ಆ ಸಮಾಜದಲ್ಲಿ ವಿಶಿಷ್ಟ ಸ್ಥಾನ ಪಡೆಯಿತು. ಇದು ಧರ್ಮ ಪ್ರಧಾನ ಸಂಗೀತ.

ಲೈರ್ ತಂತಿವಾದ್ಯ ನುಡಿಸುತ್ತಿರುವ
ಪ್ರಾಚೀನ ಸಂಗೀತಗಾರ

ಅದೇ ವೇಳೆಗೆ ಅಲೆಯುವ ಹಾಡುಗಾರನೂ ತನ್ನ ವಾದ್ಯದಿಂದ ಏಕನಾದ ಮಿಾಟು ತ್ತಿದ್ದ ; ಕಥನ ಕವನಗಳನ್ನು ರಾಗವಾಗಿ ಹಾಡುತ್ತಿದ್ದ.

—ಇದು ಯೂರೋಪಿನ 'ಮಧ್ಯಯುಗ'ದಲ್ಲಿದ್ದ ಪರಿಸ್ಥಿತಿ. (ಮಧ್ಯಯುಗ ಎಂದರೆ ಕ್ರಿಸ್ತಶಕ 5ರಿಂದ 15ನೆಯ ಶತಮಾನಗಳ ವರೆಗಿನ ಕಾಲಾವಧಿ. ಕ್ರಿಸ್ತಾನಂತರ ಸಾವಿರ [illegible] ಆಧುನಿಕ ಇತಿಹಾಸಕಾರನಿಗೆ ಆಗಿನದು ಮಧ್ಯಕಾಲ; ಅದಕ್ಕೆ 500 ವರ್ಷ ಹಿಂದೆ ಹಾಗೂ 500 ವರ್ಷ ಮುಂದೆ ಮಧ್ಯ ಯುಗ.)

ಆ ಕಾಲಾವಧಿಯ ಬಳಿಕ ಯೂರೋಪಿನಲ್ಲಿ ಹೊಸ 'ಯುಗ' ಆರಂಭವಾಯಿತು. ಅದು ನವೋದಯ—ಮೂರು ಶತಮಾನಗಳ ಪ್ರಭಾವ್ಯೈಭವ. ಬರಿಯ ಶ್ರದ್ಧೆಯ ಬದಲು ವಿಚಾರಶೀಲತೆ ತಲೆದೋರಿತು. ಅನ್ವೇಷಣೆ ಬದುಕಿನ ಪ್ರಧಾನ ಪ್ರವೃತ್ತಿಯಾಯಿತು. ಜ್ಞಾನ ವಿಜ್ಞಾನವಾಯಿತು. ಯೂರೋಪಿನಲ್ಲಿ ಆ ವೇಳೆಯಲ್ಲಿ ಎಲ್ಲ ಕಲೆಗಳೂ ವಿಕಾಸಗೊಂಡುವು.

ಆಗ ಜರ್ಮನಿ–ಆಸ್ಟ್ರಿಯಗಳು ಸಂಗೀತ ಪ್ರಪಂಚಕ್ಕೆ ನೀಡಿದ ಕೊಡುಗೆ ಶ್ರೇಷ್ಠತಮ ವಾದದ್ದು. ವಾಗ್ನೆರ್ ಮಹಾನ್ ವಾಗ್ಗೇಯಕಾರ. ಆ ಶ್ರೇಣಿಯಲ್ಲೇ ವಿರಾಜಮಾನರು –ಮೊಜಾರ್ಟ್, ಬಿಥೋವನ್, ಬ್ರಾಮ್ಸ್. ಸಂಗೀತವನ್ನು ಬರೆದಿಡುವ ಪದ್ಧತಿ ರೂಢಿಗೆ ಬಂತು. ಸಂಗೀತ ಶಿಕ್ಷಣಕ್ಕೂ ಪ್ರಸಾರಕ್ಕೂ ಸ್ವರಪ್ರಸ್ತಾರ ಸಹಾಯಕವಾಯಿತು. ಸ್ವರಮೇಳ ಗಳು ರಚಿತವಾದುವು. ನೂತನವಾಗಿ ರೂಪುಗೊಂಡ ನಗರ ಪಟ್ಟಣಗಳಲ್ಲಿ, ಹೊಸದಾಗಿ ಮೆರೆದ ವರ್ತಕವರ್ಗದಲ್ಲಿ, 'ಕಲಿತವರ' ಮನೆಗಳಲ್ಲಿ ಆಗಿನ ಸಂಗೀತ ರಚನೆಗಳು ಮನೆಮಾಡಿ ದುವು. ಸಂಗೀತ ರೂಪಕಗಳಾದ ಆಪೆರಾಗಳು ರಸಪೋಷಣ ನೀಡಿದುವು. ವಾದ್ಯ ಸಂಗೀತದ ಹಿನ್ನೆಲೆಯಲ್ಲಿ ಬ್ಯಾಲೆಗಳು –ನೃತ್ಯರೂಪಕಗಳು– ಸಿದ್ಧವಾದುವು. 19ನೆಯ ಶತಮಾನದಲ್ಲೂ ಪಾಶ್ಚಾತ್ಯ ಸಂಗೀತದಲ್ಲಿನ ಶಾಸ್ತ್ರೀಯ ಪರಂಪರೆ ಮುಂದುವರಿಯಲು ರಷ್ಯದ ಚೈಕಾವ್‌ಸ್ಕಿ, ಪೋಲೆಂಡಿನ ಶೊಪೆನ್, ಜರ್ಮನಿಯ ಶೂಬರ್ಟ್ ಕಾರಣರಾದರು.




ಸಂಗೀತ ಬರೆಯುವ ಪದ್ಧತಿ ರೂಢಿಗೆ ಬಂತು : ಬಿಥೋವನ್

ಕಲೆಯ ಇತರ ಪ್ರಕಾರಗಳಲ್ಲಿ ನಡೆದ ಪ್ರಯೋಗಗಳು ಸಂಗೀತದ ಮೇಲೂ ಪ್ರಭಾವ ಬೀರಿದುವು. ಆ ಅಭಿರುಚಿಗೆ ತಕ್ಕಂತೆ ಸಂಗೀತದಲ್ಲೂ ಹೊಸ ಶೈಲಿಗಳು ಹುಟ್ಟಿಕೊಂಡುವು.

ನವೋದಯ ಕಾಲದಲ್ಲಿ ನಾವಿಕ ಕೊಲಂಬಸ್ ಹೊಸ ಜಗತ್ತನ್ನು ಕಂಡುಹಿಡಿದಿದ್ದ. ಯೂರೋಪಿನ ವಿವಿಧ ಭಾಗಗಳ ಜನ ಅಮೆರಿಕಕ್ಕೆ ವಲಸೆಹೋಗಿ ನೆಲೆಸಿದರು. ಅವರೊಂದಿಗೆ ವಿಭಿನ್ನ ಜಾನಪದ ಕಲಾ ಪ್ರಕಾರಗಳೂ ಅಮೆರಿಕ ಸೇರಿದುವು. ದುಡಿಮೆಗಾಗಿ ಆಫ್ರಿಕದಿಂದ ಕರಿಯ ಗುಲಾಮರನ್ನು ಬಿಳಿಯ ಕರೆದೊಯ್ದ. ಅವರ ಜಾನಪದ ಸಂಗೀತವೂ ಹೊಸ ನಾಡನ್ನು ಮುಟ್ಟಿತು.

ನೀಗ್ರೊ ಸಂಗೀತದಿಂದ ಸ್ಫೂರ್ತಿ ಪಡೆದು ರೂಪುಗೊಂಡಿರುವ ವಾದ್ಯ ಸಂಗೀತ, ಅಮೆರಿಕದ ಜಾಸ್. ಇದು ಈ ಶತಮಾನದ ಅದ್ಭುತ ಸಂಗೀತ ಸೃಷ್ಟಿ; ಲೋಕ ಸಂಗೀತಕ್ಕೆ ನೀಗ್ರೊ ನೀಡಿರುವ ಶ್ರೇಷ್ಠ ಕೊಡುಗೆ. ಜಾಸ್ ಬಂದಿರುವುದು ಜೇಸರ್ ಎಂಬ ಫ್ರೆಂಚ್ ಪದದಿಂದ. ಜೇಸರ್ ಎಂದರೆ ಹರಟೆ. ಜಾಸ್—'ಸಂಗೀತದ ಹರಟೆ'. ಜಾಸ್ ವಾದ್ಯಮೇಳದಲ್ಲಿ ಪ್ರತಿ ಕಚೇರಿಯೂ ವಿಶಿಷ್ಟವಾದದ್ದು. ಪ್ರತಿ ಸಲವೂ ಹೊಸತನದ ಸಾಧನೆ.

ಡ್ಯೂಕ್ ಎಲಿಂಗ್ಟನ್, ಲೂಯಿ ಆರ್ಮ್‌ಸ್ಟ್ರಾಂಗ್ ಈ ಸಂಗೀತದ ಶಿಲ್ಪಿಗಳು. (ಆರ್ಮ್‌ಸ್ಟ್ರಾಂಗ್ ಈಜು ಕಲಿತು, ನೀರಿನಲ್ಲಿ ಮುಳುಗಿ ಮೂರು ಮಿನಿಟು ಉಸಿರು ಬಿಗಿಹಿಡಿಯುತ್ತಿದ್ದ; ಒಂದೇ ಉಸಿರಿಗೆ ವಾದ್ಯ ಬಾರಿಸಲು ಇದರಿಂದ ಸಹಾಯವಾಗುತ್ತಿತ್ತು.)

20ನೆಯ ಶತಮಾನದ ಮಧ್ಯದಲ್ಲಿ ಶಾಸ್ತ್ರೀಯ ಸಂಗೀತಕ್ಕೆ ಪ್ರತಿ ಕ್ರಿಯೆಯಾಗಿ, ಇಂಗ್ಲೆಂಡಿನಲ್ಲಿ ಬೀಟ್ಲ್ ಸಂಗೀತ ಹುಟ್ಟಿತು. ನಾಲ್ವರು 'ಮಿಡತೆ'ಗಳ ಬಳಗ ಈ ಬೀಟ್ಲ್ ತಂಡ. ಜಾನಪದದಿಂದ ಉದಿಸಿದ ಈ ಸಂಗೀತ ಪ್ರಕಾರ ಲೋಕದಾದ್ಯಂತ ಗಳಿಸಿರುವ ಜನಪ್ರಿಯತೆ

ಬೀಟ್ಲ್ ಬಳಗ : ಜಾನ್, ಪಾಲ್, ರಿಂಗೋ, ಜಾರ್ಜ್



[illegible] ಬೇರೆ ಬೇರೆಯಾದರೂ ಪಾಶ್ಚಾತ್ಯ ಸಂಗೀತದ ಸ್ಥಾನ ಅಸ್ಥಿರವಾಗಲಿಲ್ಲ. ಅದರಿಂದ ಪ್ರಭಾವಿತವಾಗಿ [illegible] — 'ರಾಕ್'. ಇದು 'ಹೊಯ್ಲಾಟದ' ಸಂಗೀತ. ಆಗಾಗ್ಗೆ 'ರಾಕ್' ಸಂಗೀತೋತ್ಸವಗಳು [illegible] ಲಕ್ಷಾಂತರ ಭಾಗವಹಿಸುತ್ತಾರೆ. ಮಾನವ ನಾಗರಿಕತೆಯನ್ನು [illegible] ರೀತಿಯಲ್ಲಿ ಇಲ್ಲಿ 'ಹೊಯ್ಲಾಟ' ನಡೆಯುತ್ತದೆ

ಜಾನಪದದಿಂದ ಜೀವತಳೆದು, ಶಾಸ್ತ್ರೀಯವಾಗಿ, ಪುನಃ ಜನಪ್ರಿಯ (ಪಾಪ್—ಪಾಪ್ಯುಲರ್) ಸಂಗೀತಕ್ಕೆ. ಇದು ಒಂದು ಬಗೆಯ ಲಯಬದ್ಧ ಏರಿಳಿತ.

× × ×　　× × ×　　× × ×

ದೇವರನ್ನು 'ನಾದಬ್ರಹ್ಮ' ಎಂದು ಕರೆದಿರುವ ದೇಶ ಭಾರತ. ಇಲ್ಲಿ ಸಂಗೀತಕ್ಕೆ ವೇದಕಾಲದಿಂದಲೂ (ಇಂದಿಗೆ 3,500 ವರ್ಷಗಳ ಹಿಂದೆ) ಹಿರಿಯ ಸ್ಥಾನ.

ಭಾರತೀಯ ಸಂಗೀತ ಶಾಸ್ತ್ರವನ್ನು ಗಾಂಧರ್ವ ಎನ್ನುತ್ತಿದ್ದರು. ಗಾಂಧರ್ವಕ್ಕೆ ಸಾಮಗಾನವೇ ಮೂಲ ಎನ್ನುವುದು ಸಾಮಾನ್ಯ ತಿಳಿವಳಿಕೆ. ಸಾಮದಲ್ಲಿ ಹಾಡುವುದು ವೇದಮಂತ್ರಗಳನ್ನು. ಇತರ ಸ್ತುತಿಗೀತೆಗಳು, ಗಾಂಧರ್ವದ ಗೇಯ ವಸ್ತುಗಳು. ಸಾಮಗಾನದ ತಳಹದಿಯ ಮೇಲೆಯೇ ಗಾಂಧರ್ವ ತತ್ತ್ವ ರೂಪಿತವಾಯಿತು.

ಭರತಮುನಿಯೇ ಗಾಂಧರ್ವ ತತ್ತ್ವದ ಆದ್ಯಪ್ರವರ್ತಕ.

ಶತಮಾನಗಳುದ್ದಕ್ಕೂ ಪರಕೀಯರ ದಾಳಿಯಿಂದ ಜರ್ಜರಿತವಾದ ದೇಶದಲ್ಲಿ ಸಂಗೀತ ಏಕಮುಖವಾಗಿ ವಿಕಾಸಹೊಂದಲಿಲ್ಲ. ಸಂಗೀತದಲ್ಲಿ ಪಾರಮಾರ್ಥಿಕ – ಲೌಕಿಕಗಳ ಅನ್ವಯ ಬಹಳಮಟ್ಟಿಗೆ ಸಾಧಿಸಲಾಗದ ಆದರ್ಶವಾಗಿಯೇ ಉಳಿಯಿತು. ಭಾರತೀಯ ಸಂಗೀತ ಅವನತಿಯ ದಾರಿ ಹಿಡಿದಿದ್ದ 13ನೆಯ ಶತಮಾನದಲ್ಲಿ ಶಾರ್ಙ್ಗದೇವ ತನ್ನ 'ಸಂಗೀತ ರತ್ನಾಕರ'ವನ್ನು ರಚಿಸಿದ.

ಮುಂದೆ ಭಾರತೀಯ ಸಂಗೀತ ಎರಡು ಸ್ಪಷ್ಟ ಕವಲುಗಳಾಗಿ ಬೆಳೆಯಿತು : ಹಿಂದೂಸ್ತಾನಿ ಮತ್ತು ಕರ್ಣಾಟಕ. ಮೊಗಲರ ಆಳ್ವಿಕೆಯಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ರಾಜಾಶ್ರಯ ದೊರೆಯಿತು. ತಾನ್‌ಸೇನನಂಥ ಅಪ್ರತಿಮ ಗಾಯಕರು ಆ ಸಂಗೀತದ ಧ್ವಜವಾಹಕರಾದರು.

ದಕ್ಷಿಣದಲ್ಲಿ ತ್ಯಾಗರಾಜರು ಕರ್ಣಾಟಕ ಸಂಗೀತದ ಶಕಪುರುಷರಾದರು. ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತ, ಶಾಮಶಾಸ್ತ್ರಿ – ಇವರು ಕರ್ಣಾಟಕ ಸಂಗೀತದ ತ್ರಿಮೂರ್ತಿಗಳು. ಅಪೂರ್ವ ಕೃತಿಗಳನ್ನು ರಚಿಸಿದರು. ವಾಗ್ಗೇಯಕಾರರಾಗಿ, ವಿದ್ವಾಂಸರಾಗಿ, ಹಾಡುಗಾರರಾಗಿ ಮತ್ತು ಆಚಾರ್ಯರಾಗಿ ದುಡಿದ ಹಲವಾರು ಸಂಗೀತಜ್ಞರಿಂದ ಕರ್ಣಾಟಕ ಸಂಗೀತ ನೆಲೆಗೊಂಡಿತು.

ತ್ಯಾಗರಾಜರಿಗೆ ಸಂಗೀತ ಆತ್ಮೋನ್ನತಿಯ ಸಾಧನವಾಗಿತ್ತು. ಅದರಲ್ಲೇ ಅವರು ಮುಕ್ತಿಯನ್ನು ಕಂಡರು. ಹಾಗೆಯೇ ಇನ್ನೂ ಕೆಲವರು ನಾದಬ್ರಹ್ಮನ ಉಪಾಸನೆಯಲ್ಲಿ ಸಿದ್ಧಿ ಪಡೆದರು. ಹೀಗಿದ್ದರೂ, ಪೋಷಕರಿಲ್ಲದೆ ಹೇಗೆ ಬೆಳೆದೀತು ಕಲೆ ? 19ನೆಯ ಶತಮಾನದಲ್ಲಿ, ಸ್ವತಃ ಗೇಯಕಾರರಾಗಿದ್ದ ತಿರುವಾಂಕೂರಿನ ಮಹಾರಾಜ ಸ್ವಾತಿ ತಿರುನಾಳ್ ಸಂಗೀತಗಾರರಿಗೆ ಆಶ್ರಯ ನೀಡಿ ಕಲಾಪೋಷಣೆ ಮಾಡಿದರು. ತಂಜಾವೂರು ಅರಸುಮನೆತನವೂ ಮೈಸೂರಿನ ಅರಸುಮನೆತನವೂ ಸಂಗೀತಕ್ಕೆ ಪ್ರೋತ್ಸಾಹವಿತ್ತು, ಸಂಗೀತ ವಿದ್ವಾಂಸರನೇಕರ ಉತ್ಕರ್ಷಕ್ಕೆ ಸಹಾಯಕವಾದುವು. ಉತ್ತರ ಭಾರತದಲ್ಲೂ ಅನೇಕ ಅರಸರು ಸಂಗೀತಕಲೆಗೆ ಆಶ್ರಯದಾತರಾದರು.

ಭಾರತೀಯ ಸಂಗೀತದ ವಿಕಾಸವನ್ನು ವಿವರಿಸುವ ಪುರಾತನ ಗ್ರಂಥಗಳ ಪ್ರಕಟಣೆಗೆ ಕಾರಣರಾದವರು ಆಚಾರ್ಯ ಭಾತ್‌ಖಂಡೆ. ಕರ್ಣಾಟಕ ಸಂಗೀತವನ್ನು ಕುರಿತ ಕೆಲವು ಅಪೂರ್ವ ಗ್ರಂಥಗಳೂ ಅವರಿಂದ ಪ್ರಕಾಶಿತವಾದುವು.

ಹಿಂದೂಸ್ತಾನಿ—ಕರ್ಣಾಟಕ ಸಂಗೀತಗಳೆರಡಕ್ಕೂ ರಕ್ಷಾಕವಚವಾಗಿರುವುದು ಗುರು–ಶಿಷ್ಯ ಪರಂಪರೆ. ಗುರುವಿನ ಗುಲಾಮನಾಗಿ ದುಡಿಯುತ್ತ ಶಿಷ್ಯ ಕಲಾಸಾಧಕನಾಗುವ ಪದ್ಧತಿ ವಿಶಿಷ್ಟವಾದದ್ದು.

ಅಲ್ಲಾವುದ್ದೀನ್ ಖಾನ್, ವಿಷ್ಣು ದಿಗಂಬರ ಪಲೂಸ್ಕರರಂಥ ಕಲಾತಪಸ್ವಿಗಳು ಮನೋರಂಜನೆಯ ಮನೆಯಲ್ಲಿ ಬಂದಿಯಾಗಿದ್ದ ಔತ್ತರೇಯ ಸಂಗೀತವನ್ನು ಪಾವಿತ್ರ್ಯದ ಎತ್ತರಕ್ಕೆ ಒಯ್ದರು.

ಈಗ ಪ್ರತಿವರ್ಷವೂ ನಡೆಯುವ ತ್ಯಾಗರಾಜ ಆರಾಧನೆ, ತಾನ್‌ಸೇನ್ ಆರಾಧನೆಗಳು ನಮ್ಮ ಆತ್ಮಾಭಿಮಾನವನ್ನು ತಟ್ಟಿ ಎಚ್ಚರಿಸುತ್ತವೆ; ನಮ್ಮ ಸಂಗೀತದ ಹಿರಿಮೆಯನ್ನು ಲೋಕಕ್ಕೆ ಸಾರುತ್ತವೆ.

ಶಾಸ್ತ್ರೀಯ ಪರಿಶುದ್ಧತೆ ಭಾರತೀಯ ಸಂಗೀತ ಜೀವನದ ಉಸಿರು ಎನ್ನಬಹುದು. ಇಷ್ಟಿದ್ದರೂ ನಮ್ಮ ಸಂಗೀತಗಾರರು ಇತರ ಸಂಗೀತವನ್ನು ತಿರಸ್ಕರಿಸುವುದಿಲ್ಲ. ಈ ಪ್ರವೃತ್ತಿ ತೀರಾ ಆಧುನಿಕವೂ ಅಲ್ಲ.

ಕರ್ಣಾಟಕ ಸಂಗೀತದ ಅಧ್ವರ್ಯುಗಳಲ್ಲೊಬ್ಬರಾದ ಮುತ್ತುಸ್ವಾಮಿ ದೀಕ್ಷಿತರು ತಮ್ಮಂದಿರೊಡನೆ ಆಗಾಗ್ಗೆ ಮದರಾಸಿನ ಸೇಂಟ್ ಜಾರ್ಜ್ ಕೋಟೆಗೆ ಹೋಗುತ್ತಿದ್ದರು. ಅಲ್ಲಿ ಬ್ಯಾಂಡಿನವರು ಬಾರಿಸುತ್ತಿದ್ದ ಪಾಶ್ಚಾತ್ಯ ಸಂಗೀತವನ್ನು ಆಲಿಸುತ್ತಿದ್ದರು. ಮುಂದೆ ಖ್ಯಾತ ಸಂಗೀತಗಾರರಾದ ಮೇಲೆ ದೀಕ್ಷಿತರು, ಈಸ್ಟ್ ಇಂಡಿಯಾ ಕಂಪನಿಯ ಒಬ್ಬ ಅಧಿಕಾರಿಯ ಅಪೇಕ್ಷೆಯಂತೆ, ಇಂಗ್ಲಿಷ್ ರಾಗಗಳನ್ನು ಭಾರತೀಯರಿಗೆ ಪರಿಚಯ ಮಾಡಿಕೊಡುವುದಕ್ಕೋಸ್ಕರ, ಸುಮಾರು ಐವತ್ತಕ್ಕೂ ಹೆಚ್ಚು ಆಂಗ್ಲ ಗೀತಗಳಿಗೆ ಸಂಸ್ಕೃತ ಸಾಹಿತ್ಯವನ್ನು ಜೋಡಿಸಿಕೊಟ್ಟರು.

ತ್ಯಾಗರಾಜರ ಪ್ರಖ್ಯಾತ ಶಿಷ್ಯ ವೀಣಾ ಕುಪ್ಪಯ್ಯರ್ ಕೂಡ, ಮದರಾಸಿನ ಸೇಂಟ್ ಜಾರ್ಜ್ ಕೋಟೆಯ ಮೇಲೆ ನುಡಿಸುತ್ತಿದ್ದ ಐರೋಪ್ಯ ಬ್ಯಾಂಡನ್ನು ಆಲಿಸಿಯೇ ಪಾಶ್ಚಾತ್ಯ ಸಂಗೀತ ಕಲಿತರು.



ರವಿಶಂಕರ್ : ಸಿತಾರ್

ಅನ್ವೇಷಣೆಯಂತೂ ಗಾಂಧರ್ವತತ್ತ್ವದಲ್ಲೇ ಅಡಕವಾಗಿದೆ. ಮೆನುಹಿನ್–ರವಿಶಂಕರರ ಪಿಟೀಲು-ಸಿತಾರುಗಳ ದ್ವಂದ್ವಗಾನ ಸಾಧ್ಯವಾಗಿರುವುದು ನವಪ್ರಯೋಗಪ್ರಿಯತೆಯ ಫಲವಾಗಿಯೇ. ಸುಗಮ ಸಂಗೀತ ಲಲಿತ ಸಂಗೀತಗಳಿಗೂ ಆ ಪ್ರವೃತ್ತಿಯೇ ಕಾರಣ.

ಬೀಟ್ಲ್‌ಗಳು ಭಾರತೀಯ ಸಿತಾರಿನ ನಾದಲೋಕದಲ್ಲಿ ಪ್ರಜೆಗಳಾಗಬಯಸಿದರು. ಜಾರ್ಜ್ ಹ್ಯಾರಿಸನ್ ರವಿಶಂಕರರ ಶಿಷ್ಯನಾದ. ಸಿತಾರ್ ಅಮೆರಿಕದಲ್ಲಿ ವಿಕ್ರಯವಾಗಿ, ಗಣನೀಯ ಮೊತ್ತದಲ್ಲಿ ಡಾಲರುಗಳನ್ನು ಗಳಿಸಿತು !

ಅಮೆರಿಕದ ಒಗ್ಗಿನ್ಸ್, ತಮಿಳು ನಾಡಿಗೆ ಬಂದು, ಶೀಘ್ರ ತಪಸ್ಸಿನಿಂದಲೇ ಸಿದ್ಧಿ ಪಡೆದು, ಒಗ್ಗಿನ್ಸ್ ಭಾಗವತರ್ ಎನಿಸಿಕೊಂಡ.

19ನೆಯ ಶತಮಾನದಲ್ಲಿ ಕಾಳಿದಾಸನ ' ಶಾಕುಂತಲ ' ಜರ್ಮನ್ ಭಾಷೆಗೆ ಅನುವಾದಗೊಂಡಾಗ ಷೂಬರ್ಟ್ ಆ ಕೃತಿಗೆ ಸಂಗೀತ ಅಳವಡಿಸಿದ. ಆಧುನಿಕ ಪಾಶ್ಚಾತ್ಯ ಸಂಗೀತಜ್ಞ ಹೆನ್ರಿ ಕೊವೆಲ್ ತನ್ನದೊಂದು ಹೊಸ ಸ್ವರಮೇಳದಲ್ಲಿ ಭಾರತೀಯ ರಾಗ ಚಾರುಕೇಶಿಯನ್ನು ಬಳಸಿಕೊಂಡ.

ಚೀನ, ಮಲಯ, ಜಾವಾಗಳ ಸಂಗೀತದಲ್ಲಿ ಮೋಹನ, ಶುದ್ಧ ಸಾವೇರಿ ರಾಗಗಳ ಛಾಯೆಯನ್ನು ಗುರುತಿಸಬಹುದು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಶತಮಾನಗಳ ಹಿಂದೆಯೇ ಭಾರತೀಯ ಸಂಸ್ಕೃತಿಯ ಪ್ರಭಾವಕ್ಕೆ ಆ ದೇಶಗಳು ಒಳಗಾಗಿದ್ದುವು.

x x x x x x x x x

ಅಂತಸ್ಸತ್ತ್ವವಿಲ್ಲದ ಸಂಗೀತ ಬಾಹ್ಯ ಪ್ರಭಾವದಿಂದ ತನ್ನ ಸ್ವಂತಿಕೆಯನ್ನು ಪೂರ್ತಿಯಾಗಿ ಕಳೆದುಕೊಳ್ಳುವುದೂ ಉಂಟು. ಉದಾಹರಣೆಗೆ ಫಿಲಿಪ್ಪೀನಿನ ಸಂಗೀತ. ಪಾಶ್ಚಾತ್ಯ ಸಂಗೀತದೊಡನೆ ಅದೀಗ ಬೆರೆತುಹೋಗಿದೆ.

ಅಲ್ಲಿಯೂ ಜಾನಪದ ಸಂಗೀತ ತನ್ನ ರಾಷ್ಟ್ರೀಯತೆಯನ್ನು —ವಿಶಿಷ್ಟ ಸ್ವರೂಪವನ್ನು— ಉಳಿಸಿಕೊಂಡಿದೆ. ಆ ಸಂಗೀತವನ್ನು ನುಡಿಸುವ ವಾದ್ಯ ಕಾಡಿಯೋಟಿ. ಅದು ' ಮತಾಂತರ ' ಹೊಂದದೆ ಕಾಡಿಯೋಟಿಯಾಗಿಯೇ ಉಳಿದಿದೆ.

೫

ಜಗತ್ತಿನ ಬೇರೆ ಬೇರೆ ಭಾಗಗಳ ಮೂರು ಪ್ರಾಚೀನ ನಾಗರಿಕತೆಗಳಲ್ಲಿ ಹೆಚ್ಚು ಕಡಮೆ ಏಕಕಾಲದಲ್ಲೇ ನಾಟಕ ಕಲೆ ಅರಳಿತೆನ್ನುವುದು ಎಷ್ಟು ವಿಸ್ಮಯಕರ! ಚುರುಕು ಸಂವಾದ ವಿಚಿತ್ರ ಮಾನವನ ನಾಜೂಕು ಚಟುವಟಿಕೆ. ಮುದ್ರಣ ತಿಳಿಯದ ಹಿಂದಿನ ಕಾಲದಲ್ಲಿ ಪ್ರಾಸಬದ್ಧ ಪದ್ಯವೇ ಕಂಠಪಾಠಕ್ಕೆ ಸುಲಭ. ನಾಟಕೀಯ ಸಂವಾದವೂ ಪದ್ಯದಲ್ಲೇ.

ಈ ಜಾನಪದ ಸಂಭಾಷಣೆಯೇ ನಾಟಕದ ಮೂಲ. ಎರಡು ಸಾವಿರಕ್ಕೂ ಹೆಚ್ಚು ವರ್ಷಗಳ ಹಿಂದೆ ಅದು ಪುರಾತನ ಈಜಿಪ್ಟಿನಲ್ಲಿತ್ತು, ಗ್ರೀಸಿನಲ್ಲಿತ್ತು, ಭಾರತದಲ್ಲಿತ್ತು.



ಒಗ್ಗಿನ್ಸ್ ಭಾಗವತರ ಕಚೇರಿ



ಗ್ರೀಕ್ ಟ್ರಾಜಿಡಿ, ಕಾಮಿಡಿ ನಟರಿಗೆ ಸ್ಥಿರ ಮುಖವಾಡ



ಈಜಿಪ್ಟಿನ ಒಸೈರಿಸ್ ದೇವತೆಯ ಉತ್ಸವಕಾಲದ ಚಟುವಟಿಕೆ ನಾಟಕದ ಬೀಜರೂಪ, ಎನ್ನುತ್ತಾರೆ ತಜ್ಞರು.

ಗ್ರೀಸಿನಲ್ಲಿ ಡಯೋನಿಸಸ್ ದ್ರಾಕ್ಷಾರಸ ದೇವತೆಯ ಪ್ರೀತ್ಯರ್ಥ ಉತ್ಸವ ನಡೆಯುತ್ತಿತ್ತು. ಅಲ್ಲಿ ಮೇಳದ ನಾಯಕ ದೇವತಾ ಕಥೆಯನ್ನು ಕುರಿತು ಸಂವಾದ ನಡೆಸುತ್ತಿದ್ದ. ಆತನೇ ನಾಟಕಲೋಕದ ಮೊದಲ ನಟ.

ಭಾರತದ ಋಗ್ವೇದದಲ್ಲಿ ಸಂವಾದಗಳನ್ನು ಕಾಣುತ್ತೇವೆ. ಆ ವೇದರಚನೆಗೂ ಮುನ್ನವೇ ಇಂಥ ಸಂವಾದ ವೈಖರಿ ಬಳಕೆಯಲ್ಲಿ ಇದ್ದಿರಬೇಕು.

ಪ್ರಾಚೀನ ಗ್ರೀಸಿನ ಬಯಲು ನಾಟ್ಯಮಂದಿರ : ಭಗ್ನಾವಶೇಷ

ಗ್ರೀಸನು ಲೋಕವನ್ನು ಮಿಂಚಿನಂತೆ ಬೆಳಗಿದ ಪ್ರಖರ ನಾಗರಿಕತೆ. ಜಗತ್ತನ್ನು ಕುರಿತ ಕೌತುಕ, ಕುತೂಹಲ, ಪ್ರಜಾಪ್ರಭುತ್ವ, ತರ್ಕ, [illegible], ವಿಜ್ಞಾನ, ಕ್ರೀಡೆ —ಈ ಹಿನ್ನೆಲೆಯಲ್ಲಿ ಅಲ್ಲಿ ಕಲೆಗಳು ವಿಕಾಸಗೊಂಡವು. ನಾಟಕ ಪ್ರಮುಖ ಕಲಾಪ್ರಕಾರವಾದದ್ದು ಸ್ವಾಭಾವಿಕ. ಸೋಫೋಕ್ಲೀಸ್, ಯೂರಿಪಿಡೀಸ್, ಏಸ್ಕಿಲಸ್, ಅರಿಸ್ಟಾಫನೀಸ್....ಇಂಥ ಭವ್ಯನಾಟಕಕಾರರನ್ನು ನೀಡಿತು ಗ್ರೀಸಿನ ಆ ಸ್ವರ್ಣಯುಗ!

ಸದಾಕಾಲವೂ ಉಳಿಯುವ ಟ್ರಾಜಿಡಿಗಳು; ಎಲ್ಲ ಕಾಲಗಳಿಗೂ ಸಲ್ಲುವ ಕಾಮಿಡಿಗಳು.

ಪ್ರತಿವರ್ಷವೂ ನಾಟಕಗಳ ಸ್ಪರ್ಧೆ. ಪೌರರ ಮುಂದೆ ಅವುಗಳ ಅಭಿನಯಕ್ಕಾಗಿ ಬಯಲು ನಾಟ್ಯ ಮಂದಿರ.

ಅದು ಆಗಸದೆತ್ತರಕ್ಕೆ ಬೆಳೆಯ ಬೇಕಿದ್ದ ಮಾನವನ ಅದ್ಭುತ ಚಟುವಟಿಕೆ. ಆ ಭವ್ಯ ಸಂಸ್ಕೃತಿ ಅಲ್ಪ ಕಾಲದಲ್ಲೇ ಮಣ್ಣು ಪಾಲಾದದ್ದು, ಗ್ರೀಕ್ ನಾಟಕ ಬರಿ ನೆನಪಿನ ಬುತ್ತಿಯಾದದ್ದು—ಲೋಕದ ದುರಂತ ಸಂಭವಗಳಲ್ಲೊಂದು.



ಪ್ರಾಚೀನ ಭಾರತೀಯ ರಂಗಮಂದಿರದ ಮಾದರಿ : ಹಿನ್ನೋಟ

x x x x x x x x x

ಭಾರತದಲ್ಲಿ ವೇದಕಾಲದ, ಅದರಾಚೆಗಿನ, ಸಮೃದ್ಧ ಬದುಕಿನಲ್ಲಿ ನಾಟಕ ಮೆರೆದಿರಬೇಕು.

ಪ್ರಾಚೀನ ಭಾರತೀಯ ನಾಟಕ ಎಂದು ಈಗ ನುಡಿಯುವುದು, ಸಂಸ್ಕೃತ ನಾಟಕಗಳತ್ತ ಬೊಟ್ಟು ಮಾಡಿ. ಅವುಗಳಿಗೂ ಮೊದಲು ಈ ದೇಶದಲ್ಲಿ ನಾಟಕಗಳು ಇದ್ದಿರಬೇಕು.

'ನಾಟ್ಯಶಾಸ್ತ್ರ'ವನ್ನು ಬರೆದ ಭರತಮುನಿ ಲೋಕವ್ಯವಹಾರದಲ್ಲಿ ಅತ್ಯಂತ ನಿಷ್ಣಾತ; ಸಂದೇಹವಿಲ್ಲ. ತನ್ನ ಗ್ರಂಥಕ್ಕೆ ಆತ ದೇವರೊಡನೆಯೇ ಸಂಪರ್ಕ ಕಲ್ಪಿಸಿದ. ತನ್ನ ಮೊದಲ ನಾಟಕವನ್ನು ಸ್ವರ್ಗ ಲೋಕದಲ್ಲಿ ಇಂದ್ರನ ಸಮ್ಮುಖದಲ್ಲೇ ಆಡಿಸಿದ. ಸಂದರ್ಭ : ಇಂದ್ರಲೋಕದ ಧ್ವಜ ಉತ್ಸವ. ನಾಟಕದ ವಸ್ತು : ಒಳಿತು ಕೆಡುಕುಗಳ ನಡುವೆ ಹೋರಾಟ. ನಾಟಕ ನೋಡುತ್ತಿದ್ದ ದೇವತೆಗಳಿಗೆ ಖುಷಿಯೋ ಖುಷಿ. ನಟರ ಮೇಲೆ ಉಡುಗೊರೆಗಳ ಮಳೆಗರೆದರು. (ಭರತಮುನಿಯ ನೂರು ಮಕ್ಕಳೇ ಪಾತ್ರಧಾರಿಗಳು !) ಪ್ರೇಕ್ಷಕಗಣದಲ್ಲಿದ್ದ ಅಸುರರು, ತಮ್ಮನ್ನು ಅವಮಾನಿಸಲಾಗುತ್ತಿದೆ ಎಂದು ಪ್ರತಿಭಟಿಸುತ್ತ ಗದ್ದಲ ಎಬ್ಬಿಸಿದರು. ಶಾಂತಿ ನೆಲೆಸುವಂತೆ ಮಾಡಲು ಇಂದ್ರ ಬಲ ಪ್ರಯೋಗಿಸಬೇಕಾಯಿತು. ಇದರ ಫಲವಾಗಿ ಹುಟ್ಟಿತು —ನಾಟಕದ ಅಭಿನಯಕ್ಕೆಂದೇ ರಂಗಮಂದಿರ. ಸ್ವರ್ಗದ ಶಿಲ್ಪಿ ವಿಶ್ವಕರ್ಮ ಅದರ ನಿರ್ಮಾತೃ. 'ನಾಟ್ಯಶಾಸ್ತ್ರ'ದಲ್ಲಿ ಸೂಚಿಸಲಾಗಿರುವ ರಂಗಮಂದಿರಕ್ಕೆ ಅದು ಮಾದರಿ.

ಕ್ರಿಸ್ತಶಕ ಮೊದಲ ಶತಮಾನದ್ದು ಎನ್ನಲಾದ ಅಶ್ವಘೋಷನ ಕೃತಿಗಳ ತುಣುಕುಗಳಷ್ಟೇ ನಮಗೆ ದೊರೆತಿವೆ. ಆ ತುಣುಕುಗಳ ಮೌಲ್ಯಮಾಪನದಿಂದ, ಆತ ಶ್ರೇಷ್ಠ ನಾಟಕಗಳನ್ನು ಬರೆದ ಎನ್ನಬಹುದು.

ಭಾಸನ ಪ್ರಸ್ತಾಪವನ್ನು ಕಾಳಿದಾಸನೂ ಅನಂತರದ ಕವಿಗಳೂ ಮಾಡಿದರೆಂದು, ಆತನೊಂದು ದಾರಿಕಂಬವಾದ. ಭಾಸನ ಕೃತಿಗಳು ದೊರೆತುದು ಮಾತ್ರ ಕೇವಲ ಅರ್ಧ ಶತಮಾನದ ಹಿಂದೆ, ಆತ ರಚಿಸಿ ಸುಮಾರು 1700 ವರ್ಷಗಳಾದ ಮೇಲೆ. ಯಾವ ಚಕ್ರವರ್ತಿಯ ಆಶ್ರಯವೂ ಇರಲಿಲ್ಲ ಭಾಸನಿಗೆ. ಆತ ದೇಗುಲದ ಜಾತ್ರೆಯ ವೇಳೆಯಲ್ಲಿ ತನ್ನ ನಾಟಕಗಳನ್ನು ಅಭಿನಯಿಸಿದ. ದೇಗುಲ ಜಾತ್ರೆಯ ನಾಟಕಕ್ಕೂ ಜಾನಪದಕ್ಕೂ ಇರುವ ಸಂಬಂಧ ನಿಕಟ. ಭಾರತದ ಎಲ್ಲ ಜಾನಪದ ನಾಟ್ಯ ಪ್ರಕಾರಗಳಿಗೂ ದೇವಾಲಯದ ಪ್ರಾಂಗಣವೇ ರಂಗಮಂಚ. ಇದಕ್ಕೆ ಧಾರ್ಮಿಕ ಮಹತ್ವವಿಲ್ಲ. ಹಳ್ಳಿಯ ಅಥವಾ ಊರಿನ ಜನ ನೆರೆಯಲು ದೇವಸ್ಥಾನದ ಅಂಗಳಕ್ಕಿಂತ ಪ್ರಶಸ್ತವಾದ ಸ್ಥಳ ಬೇರೆ ಯಾವುದು ?

ಭಾಸ, ಶೂದ್ರಕ, ಕಾಳಿದಾಸ, ವಿಶಾಖದತ್ತ, ಭವಭೂತಿ ....ಪ್ರತಿಯೊಬ್ಬರೂ ನಾಟಕರತ್ನಗಳನ್ನೇ ನೀಡಿದರು.

ಹತ್ತಾರು ಶತಮಾನಗಳ ಬಳಿಕ ಕಾಳಿದಾಸ ಐರೋಪ್ಯ ಪ್ರವಾಸವನ್ನೂ ಕೈಕೊಂಡ. ಜರ್ಮನ್, ಇಂಗ್ಲಿಷ್, ರಷ್ಯನ್ ಮತ್ತಿತರ ಭಾಷೆಗಳಿಗೆ ಕಾಳಿದಾಸನ ಕೃತಿ 'ಶಾಕುಂತಲ' ತರ್ಜುಮೆಯಾದಾಗ, ಭಾರತೀಯ ನಾಟಕ ಪರಂಪರೆಗೆ ಹೊಳೆಯುವ ಕಳಶ ನಿರ್ಮಾಣವಾಯಿತು.

x x x x x x x x x

ಶೇಕ್ಸ್‌ಪಿಯರ್ ಸ್ಮಾರಕ: ಹುಟ್ಟೂರು ಸ್ಟ್ರಾಟ್‌ಫರ್ಡ್‌ನಲ್ಲಿ





ಅಧುನಿಕ ಹವ್ಯಾಸಿ ನಾಟಕಶಾಲೆ — ಅಮೆರಿಕದಲ್ಲಿ

ಗ್ರೀಕ್ ನಾಟಕ ಪರಂಪರೆಯನ್ನು ಕಳೆದು ಕೊಂಡ ಯೂರೋಪಿನಲ್ಲಿ ರಂಗಮಂಟಪ ಮತ್ತೆ ತಲೆ ಎತ್ತಿದ್ದು 'ಮಧ್ಯಯುಗ' ಮುಗಿದ ಬಳಿಕ, ನವೋದಯದ ಕಾಲಾವಧಿಯಲ್ಲಿ. ಆಗ ಒಬ್ಬ ಶ್ರೇಷ್ಠ ನಾಟಕಕಾರನನ್ನು ಇಂಗ್ಲೆಂಡು ಜಗತ್ತಿಗೆ ನೀಡಿತು. ವಿಲಿಯಂ ಶೇಕ್ಸ್‌ಪಿಯರ್. ಆತ ನಾಟಕ ಬರೆದ, ಅಭಿನಯಿಸಿದ, ನಾಟಕ ಮಂದಿರ ನಿರ್ಮಿಸಿದ. ಅವನ ವರೆಗಿನ ಇಂಗ್ಲೆಂಡು ಬೇರೆಯೇ; ಅನಂತರದ ಇಂಗ್ಲೆಂಡು ಬೇರೆಯೇ. ಆಂಗ್ಲ ನಾಗರಿಕತೆಯ ನಿಶಾನೆಯಾಯಿತು ಶೇಕ್ಸ್‌ಪಿಯರ್ ನಾಟಕ.

ಮುಂದೆ ಫ್ರಾನ್ಸಿನ ಮೋಲಿಯೇರ್, ನಾರ್ವೆಯ ಇಬ್ಸೆನ್, ರಷ್ಯದ ಗೊಗೋಲ್ —ಇವರ ಕೃತಿಗಳು ಯೂರೋಪಿನ ಭಾಷೆಗಳಿಗೆ ಅನುವಾದಗೊಂಡು ಐರೋಪ್ಯ ರಂಗಮಂದಿರಗಳಲ್ಲಿ ಪ್ರದರ್ಶಿತವಾದುವು. ಬರ್ಲಿನ್ – ಪ್ಯಾರಿಸ್‌ಗಳು ರಂಗಭೂಮಿಯ ಜಾಗೃತಕೇಂದ್ರಗಳಾದುವು.

1898ರಲ್ಲಿ ಮಾಸ್ಕೊ ಕಲಾರಂಗಮಂದಿರ ಸ್ಥಾಪಿತವಾಗಿ ನಾಟಕಕಲೆಯ ಇತಿಹಾಸದಲ್ಲಿ ಹೊಸ ಅಧ್ಯಾಯ ಆರಂಭವಾಯಿತು. ಸ್ತನಿಸ್ಲಾವ್‌ಸ್ಕಿ ರಂಗಭೂಮಿಯನ್ನು ಜೀವಂತಗೊಳಿಸುವ ಚಳುವಳಿಗೆ ನಾಯಕನಾದ. 'ಅಭಿನಯಿಸುವ ಪ್ರತಿಯೊಂದು ಪಾತ್ರದಲ್ಲೂ ನೀನು ನೀನೇ ಆಗಿರು. ಆದರೆ ಪ್ರತಿಯೊಂದು ಪಾತ್ರದಲ್ಲೂ ಭಿನ್ನವಾಗಿರು' ಎಂಬ ಕರೆಯನ್ನು ನಟನಟಿಯರಿಗೆ ನೀಡಿದವನು ಆತ. ಚೆಖಾಫ್, ಗಾರ್ಕಿಯರ ನಾಟಕಗಳು ಅಲ್ಲಿ ಪ್ರದರ್ಶಿತವಾಗಿ ಸಿದ್ಧಿಯ ಹೊಸ ಹಂತಗಳನ್ನು ಮುಟ್ಟಿದುವು.

ಇಂಗ್ಲೆಂಡಿನಲ್ಲಿ ಶೇಕ್ಸ್‌ಪಿಯರನ ಅನಂತರದ ದೀರ್ಘ ವಿರಾಮವನ್ನು ಬರ್ನಾರ್ಡ್ ಷಾ ಮುಕ್ತಾಯಗೊಳಿಸಿದ.

20ನೆಯ ಶತಮಾನ ಹೊಸ ಬಗೆಯ ನಾಟಕಗಳಿಗೆ ನಾಂದಿ ಹಾಡಿತು.



ಜರ್ಮನಿಯ ಸೂತ್ರದಗೊಂಬೆ ನಾಟಕ

ಬೆಕೆಟ್ ಐರ್‌ಲೆಂಡಿನಿಂದ ಬಂದು ಪ್ಯಾರಿಸಿನಲ್ಲಿ ನೆಲೆಸಿ, ಇಂಗ್ಲಿಷ್, ಫ್ರೆಂಚ್ ಭಾಷೆಗಳೆರಡರಲ್ಲೂ ಕೃತಿ ರಚಿಸುವ ನಾಟಕಕಾರ. ಆತನ 'ಗೋದೋನ ನಿರೀಕ್ಷೆಯಲ್ಲಿ' ಆಧುನಿಕ ಯುಗಧರ್ಮದ ಪ್ರತೀಕ. ಬೆಕೆಟ್, ಕಾಮು, ಅನೂಯಿ, ಅಯನೆಸ್ಕೊ ಮತ್ತಿತರರು ಸಮಾಜವನ್ನು ವಿಮರ್ಶಿಸಹೋಗುವುದಿಲ್ಲ. ಮಾನವನ ಸ್ಥಿತಿಗತಿಗಳನ್ನು ಕುರಿತದ್ದು ಅವರ ವಿಮರ್ಶೆ. ಅವರೆಲ್ಲ 'ಬಂಡಾಯವೆದ್ದಿರುವ ಮಾನವ ಜೀವಿಗಳು'.



ಮಾಸ್ಕೋ ನಗರದ ಬಾಲ್ಶಾಯ್ ರಂಗಮಂದಿರ

20ನೆಯ ಶತಮಾನದ ಅತ್ಯಂತ ಪ್ರಭಾವಶಾಲೀ ನಾಟಕಕಾರರಲ್ಲೊಬ್ಬ ಜರ್ಮನಿಯ ಬ್ರೆಕ್ಟ್. ಈತ ಕವಿ, ನಾಟಕಕಾರ, ನಾಟಕ ನಿರ್ಮಾಪಕ. ಜಾಗತಿಕ ರಂಗಭೂಮಿಗೆ ಬ್ರೆಕ್ಟ್‌ನ ಕೊಡುಗೆ ಅಮೂಲ್ಯ.

ಬರ್ನಾರ್ಡ್ ಷಾಗಿಂತ ತುಸು ಭಿನ್ನ ದಾರಿ ತುಳಿದ ಆಸ್ಬರ್ನ್‌ನಿಂಥ 'ಕ್ರುದ್ಧ ಯುವಕ'ರಿಂದ ಬ್ರಿಟಿಷ ರಂಗಭೂಮಿಗೆ ಹೊಸ ನಾಟಕಗಳು ದೊರೆತುವು. ಅಲ್ಲನ್ ಬೇಟ್ಸ್. ಲಾರೆನ್ಸ್ ಆಲಿವಿಯರ್. ರೆಕ್ಸ್ ಹ್ಯಾರಿಸನ್. ನೋಯೆಲ್ ಕವಾರ್ಡರು ನಾಟ್ಯಪ್ರತಿಭೆಯಿಂದ ಖ್ಯಾತರಾದವರು.

ಅಮೆರಿಕದಲ್ಲಿ ಯೂಜೀನ್ ಓನೀಲನ ಪರಂಪರೆ. ಆರ್ಥರ್ ಮಿಲ್ಲರ್ – ಟೆನಿಸಿ ವಿಲಿಯಮ್ಸರ ದಾರಿಯಾಗಿ ಎಡ್ವರ್ಡ್ ಆಲ್ಬಿಯವರೆಗೆ ತಲುಪಿದೆ. ವಸ್ತು–ತಂತ್ರಗಳೆರಡೂ ಪರಿಷ್ಕಾರಗೊಳ್ಳುತ್ತ ಸಾಗಿವೆ.

ಆಧುನಿಕ ಜಗತ್ತಿನಲ್ಲಿ ನಾಟಕಮಂದಿರ ಸಿರಿವಂತಿಕೆಯು ಹೋಗಿಯಿಲ್ಲ. ಅದು ನಾಗರಿಕ ಬದುಕಿನಲ್ಲಿ ಅನಿವಾರ್ಯವಾಗಿರುವ ಅಂಗ. ಹೀಗಿರುತ್ತ, ಅಮೆರಿಕದಲ್ಲಿ 'ಕುಡುಕ' ಎಂಬ ನಾಟಕ 1933 ರಿಂದ 1953ರ ವರೆಗೆ ಇಪ್ಪತ್ತು ವರ್ಷ ನಡೆಯಿತೆಂದಾಗಲೀ, ಇಂಗ್ಲೆಂಡಿನಲ್ಲಿ 'ಇಲಿ ಕತ್ತರಿ' ಇಪ್ಪತ್ತು ವರ್ಷಗಳ ದಾಖಲೆಯನ್ನು ಮುರಿಯಿತೆಂದಾಗಲೀ ನಾವು ಆಶ್ಚರ್ಯಪಡಬೇಕಾಗಿಲ್ಲ. ಅಷ್ಟು ವರ್ಷಗಳ ಮೇಲಾದರೂ ಜನ ಬೇಸತ್ತು, ಬೇರೆ ನಾಟಕಗಳು ಬಂದುವಲ್ಲ –ಎಂದು ಸಮಾಧಾನಪಡಬೇಕು !

ಸೋವಿಯೆತ್ ಒಕ್ಕೂಟದಲ್ಲಿ ರಂಗಮಂದಿರಕ್ಕಿರುವ ಪ್ರಾಧಾನ್ಯ ಗಮನಾರ್ಹ. ಅಲ್ಲಿ 500 ವೃತ್ತಿ ರಂಗಮಂದಿರಗಳಿವೆ. 450,000 ಜನಸಂಖ್ಯೆಗೆ ಒಂದರಂತೆ. ಈ ವೃತ್ತಿ ರಂಗಮಂದಿರಗಳು 300 ವರ್ಷ ಹಳೆಯವು. ಇವುಗಳಲ್ಲಿ ನಾಲ್ಕರಲ್ಲಿ ಒಂದು ಮಕ್ಕಳ ರಂಗಮಂದಿರ. ಇವಲ್ಲದೆ ಸೂತ್ರದ ಗೊಂಬೆ ರಂಗಮಂದಿರಗಳಿವೆ. ಇವು ಪ್ರತಿವರ್ಷ 70,000 ಪ್ರದರ್ಶನಗಳನ್ನು ನೀಡುತ್ತವೆ. ಇವನ್ನು 2 ಕೋಟಿ ಮಕ್ಕಳು ನೋಡುತ್ತಾರೆ.

× × × × × ×


ಕರ್ನಾಟಕದ ಕಾಣಿಕೆ : ಯಕ್ಷಗಾನ

10ನೆಯ ಶತಮಾನದ ವೇಳೆಗೆ ಸಂಸ್ಕೃತ ನಾಟಕಗಳ ಅಭಿನಯ ನಿಂತುಹೋಯಿತು. ಅನಂತರದ ಐದಾರು ಶತಮಾನಗಳ ಅವಧಿಯಲ್ಲಿ ಜಾನಪದ ರಂಗಭೂಮಿ ದೇಶದ ವಿವಿಧ ಭಾಗಗಳಲ್ಲಿ ವಿವಿಧ ರೂಪಗಳಲ್ಲಿ ಕಂಡುಬಂತು. (ಇದು ಒಂದು ರೀತಿಯ ಪುನರುದಯ. ಏಕೆಂದರೆ 'ನಾಟ್ಯಶಾಸ್ತ್ರ' ರಚಿತವಾದುದಕ್ಕೂ ಮೊದಲು ಜಾನಪದ ರಂಗಭೂಮಿ ಇತ್ತು. ಅಲ್ಲಿನ ನಾಟಕಗಳನ್ನು ಉಪರೂಪಕಗಳೆನ್ನುತ್ತಿದ್ದರು.)

ಇಬ್ಬರು ಸಂಗಡಿಗರೊಡನೆ—'ಲವ' ಮತ್ತು 'ಕುಶ'—ಊರಿಂದೂರಿಗೆ ಚಲಿಸುತ್ತಿದ್ದ ಚಾರಣ ಕವಿ. ಜಾನಪದ ನಾಟಕಕಾರ. ದೇವಾಲಯದ ಆವರಣವಿಲ್ಲದ ಕಡೆ ಬೀದಿಯ ಅಂಚಿನಲ್ಲೂ ಬಯಲಲ್ಲೂ ಆತ ಪ್ರದರ್ಶನ ನೀಡುತ್ತಿದ್ದ. ಚಾರಣರ ಜಾತಿಯೇ ಸಿದ್ಧವಾಯಿತು. ಮುಂದೆ ಭಕ್ತಿಪಂಥ ಹರಿಕಥೆ, ಕಥಾ ಕಾಲಕ್ಷೇಪ, ಕೀರ್ತನೆಗಳಿಗೆ ಕಾರಣವಾಯಿತು ; ಜಾನಪದ ರಂಗಭೂಮಿಗೆ ಹೊಸ ಪ್ರೇರಣೆ ನೀಡಿತು. ಬಂಗಾಳ, ಮಹಾರಾಷ್ಟ್ರ, ಉತ್ತರ ಭಾರತ, ಆಂಧ್ರ, ಕರ್ನಾಟಕಗಳಲ್ಲಿ ಜಾತ್ರಾ, ತಮಾಷಾ, ನೌಟಂಕಿ, ಬುರ್ರಕಥೆ, ಯಕ್ಷಗಾನಗಳು ಜಾನಪದ ನಾಟಕರೂಪಗಳಾದುವು.

ಪರಕೀಯ ಆಕ್ರಮಣಗಳ ಫಲವಾಗಿ ಪ್ರಭುತ್ವಗಳು ಬದಲಾದರೂ ಈ ಜಾನಪದ ಚಟುವಟಿಕೆ ಅಬಾಧಿತವಾಗಿ ನಡೆಯಿತು.


ಭರತೇಂದು ಹರಿಶ್ಚಂದ್ರ :
ಭಾರತದ ಪ್ರಥಮ ಆಧುನಿಕ ನಾಟಕಕಾರ



'ಕಬೂಕಿ' ನಾಟಕದ ಇಬ್ಬರು ಪಾತ್ರಧಾರಿಗಳು



'ಕನ್ಯಾಶುಲ್ಕಮು' ಕರ್ತೃ ಗುರುಜಾಡ

ಭಾರತೀಯ ಭಾಷೆಯಲ್ಲಿ ಪ್ರಥಮ ರಂಗನಾಟಕ ಪ್ರದರ್ಶಿತವಾದದ್ದು ಕಲ್ಕತ್ತೆಯಲ್ಲಿ, ಬಂಗಾಳಿ ಭಾಷೆಯಲ್ಲಿ. 18ನೆಯ ಶತಮಾನದ ಕೊನೆಯ ಭಾಗದಲ್ಲಿ ಗೆರಾಸಿಮ್ ಲೆಬೆದೆವ್ ಎಂಬ ರಷ್ಯದ ಪ್ರಜೆ ಭಾರತಕ್ಕೆ ಆಗಮಿಸಿದ್ದ. ಆತ ಸಂಸ್ಕೃತ ಮತ್ತು ಬಂಗಾಳಿ ಭಾಷೆಗಳನ್ನು ಅಭ್ಯಸಿಸಿದ. ಗೋಲಕನಾಥ್ ದಾಸ್ ಎಂಬವನ ಜೊತೆಗೂಡಿ ಶೇಕ್ಸ್ಪಿಯರನ ನಾಟಕವನ್ನು ಬಂಗಾಳಿ ಭಾಷೆಗೆ ಅನುವಾದಿಸಿ, ಆ ನಾಟಕವನ್ನು ಪ್ರದರ್ಶಿಸಿದ. ಸಂಸ್ಕೃತದ ವ್ಯಾಪ್ತಿಯ ಹೊರಗೆ ಭಾರತೀಯ ರಂಗಭೂಮಿ ತಲೆ ಎತ್ತಿದ್ದು ಆ ರೀತಿಯಾಗಿ. ಮುಂದೆ ಪ್ರಸನ್ನಕುಮಾರ ಠಾಕೂರ್ ಎಂಬಾತ ಬಂಗಾಳಿ ನಾಟಕಗಳನ್ನು ಏರ್ಪಡಿಸಿದ.

ಭರತೇಂದು ಹರಿಶ್ಚಂದ್ರ ಭಾರತೀಯ ರಂಗಭೂಮಿಗೆ ಹೊಸ ಚೇತನ ನೀಡಿದ ಪ್ರಥಮ ಆಧುನಿಕ ನಾಟಕಕಾರ. ಅವನ ಹಿಂದೀ ನಾಟಕಗಳು ಜನರನ್ನು ರಂಜಿಸಿದುವು, ಜನರಿಗೆ ಶಿಕ್ಷಣ ನೀಡಿದುವು.

ಸ್ವಾತಂತ್ರ್ಯ ಹೋರಾಟದ ಕಾವು ಏರಿದಂತೆ, ಜನರು ಹೆಚ್ಚು ಹೆಚ್ಚಾಗಿ ಅಭಿಮಾನಧನರಾದಂತೆ, ರಂಗಭೂಮಿಯ ಚಟುವಟಿಕೆ ಅಂಟುಜಾಡ್ಯವಾಯಿತು. ಮುಂಬಯಿಯಲ್ಲಿ ಶ್ರೇಷ್ಠ ಕಲಾಕೃತಿಗಳನ್ನು ಪ್ರದರ್ಶಿಸಿದ ಸಂಸ್ಥೆ ಪಾರಸೀ ನಾಟಕ ಮಂಡಳಿ. ಭಾರತೀಯ ರಂಗಭೂಮಿಯನ್ನು ರೂಪಿಸುವುದರಲ್ಲಿ ಪಾರಸೀ ಸಮಾಜ ವಹಿಸಿದ ಪಾತ್ರ ಅಪ್ರತಿಮವಾದದ್ದು. ಮುಂಬಯಿಯಲ್ಲಿ ಪಾರಸೀ ಜನ ಹೆಚ್ಚಾಗಿ ವಾಸವಾಗಿದ್ದ ಪ್ರದೇಶದಲ್ಲೇ ನಾಟಕ ಮಂದಿರ (ಪ್ಲೇ–ಹೌಸ್)ಗಳು ಇರುತ್ತಿದ್ದುವು. ಕೆಲವರ್ಷಗಳ ಹಿಂದಿನವರೆಗೂ ಈ ಪ್ರದೇಶಕ್ಕೆ 'ಪೀಲಾ ಹೌಸ್' ಎಂಬ ಅಡ್ಡ ಹೆಸರಿತ್ತು. ಪಾರಸೀ ನಾಟಕ ಮಂಡಳಿ ದೂರದೂರದ ಊರುಗಳಿಗೆ ಸಂಚರಿಸಿದಂತೆ, ಹೋದಲ್ಲೆಲ್ಲ ನಾಟಕದ ಹಣತೆಗಳು ಹತ್ತಿಕೊಂಡುವು. ಪ್ರತಿಯೊಂದು ಜ್ಯೋತಿ ಅಲ್ಲಲ್ಲಿನ ಭಾಷೆಯನ್ನಾಡಿತು.

'ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನ' ಕನ್ನಡದ ಮೊದಲ ಸ್ವತಂತ್ರ ನಾಟಕ. 1887ರಲ್ಲಿ ಸೂರಿ ವೆಂಕಟರಮಣಶಾಸ್ತ್ರೀ ಎಂಬವರು ಅದನ್ನು ಬರೆದರು. ತೆಲುಗಿನಲ್ಲಿ ಗುರುಜಾಡ ಅಪ್ಪಾರಾವು ವಿರಚಿತ 'ಕನ್ಯಾಶುಲ್ಕಮು' ನಾಟಕ ಸಾಮಾಜಿಕ ಕ್ರಾಂತಿಯ ದೀವಿಗೆಯಾಯಿತು.

ಹರಿದುಹಂಚಿಹೋಗಿದ್ದ ಕನ್ನಡ ನಾಡಿನಲ್ಲೂ ಮುಖ್ಯ ಕೇಂದ್ರಗಳಲ್ಲಿ ರಂಗಭೂಮಿಗಳು ಸ್ಥಾಪಿತವಾದುವು. ನಟಶ್ರೇಷ್ಠರು ಅನಭಿಷಿಕ್ತ ಚಕ್ರವರ್ತಿಗಳಾದರು. ಜನ ನಿದ್ದೆಗೆಟ್ಟರು.

x x x x x x x x x

ಪೌರಸ್ತ್ಯ ದೇಶವಾದ ಜಪಾನಿನಲ್ಲಿ 13ನೆಯ ಶತಮಾನದಲ್ಲಿ 'ನೋ' ನಾಟಕಗಳು ಆರಂಭವಾದುವು. ಇವು ದೃಶ್ಯಗಳಿಲ್ಲದ ಕ್ರಿಯೆಯೂ ಇಲ್ಲದ ನಾಟಕಗಳು. 17ನೆಯ ಶತಮಾನದಲ್ಲಿ ಕ್ರಿಯಾ ಪ್ರಧಾನವಾದ 'ಕಬೂಕಿ' ನಾಟಕಗಳು ರೂಪುಗೊಂಡುವು.

'ನೋ' ಮತ್ತು 'ಕಬೂಕಿ' ಜಪಾನಿನ ರಾಷ್ಟ್ರೀಯ ರಂಗಭೂಮಿಯ ಕೃತಿಗಳು, ನಾಟಕಲೋಕಕ್ಕೆ ಜಪಾನಿನ ವಿಶಿಷ್ಟ ರಾಷ್ಟ್ರೀಯ ಕೊಡುಗೆ.

ರಾಷ್ಟ್ರೀಯ ಸಂಗೀತ ರೂಪಕಗಳಿಗೆ ಹೆಸರಾಗಿದ್ದ ದೇಶ, ಚೀನ. ಶತಮಾನಗಳುದ್ದಕ್ಕೂ ಚೀನ ಅನುಭವಿಸಿದ ಅವಸ್ಥಾಂತರಗಳ ಫಲವಾಗಿ ಅಲ್ಲಿ ನಾಟಕ ಕಲೆಯ ಬೆಳವಣಿಗೆ ಮೊಟಕಾಯಿತು.

ಈಗ ಆಧುನಿಕ ಚೀನದ ರಂಗಭೂಮಿ ಸೇವೆ ಸಲ್ಲಿಸುತ್ತಿರುವುದು ಆಳುವ ವರ್ಗಕ್ಕೆ, ಅದರ ರಾಜಕೀಯ ಸಿದ್ಧಾಂತಗಳಿಗೆ. ಚೀನದಲ್ಲಿ ಎಲ್ಲವೂ ಜನತೆಯ ಹೆಸರಲ್ಲೇ ನಡೆದರೂ ನಿಜವಾದ ಜಾನಪದ ಕಲೆಯಿಂದ ಸ್ಫೂರ್ತಿ ಪಡೆದು ವಿಕಾಸಹೊಂದಲು ನಾಟಕಕಲೆಗೆ ಅವಕಾಶವೇ ದೊರೆತಿಲ್ಲ.

## ೬

ಸತ್ಯವಾದದ್ದೆಲ್ಲ ಸುಂದರ, ಸುಂದರವಾದದ್ದೆಲ್ಲ ಸತ್ಯ—ಎಂದ ಆಧುನಿಕ ಆಂಗ್ಲಕವಿ ಕೀಟ್ಸ್.

ಪ್ರಾಚೀನ ಗ್ರೀಸಿನ ತತ್ತ್ವಜ್ಞಾನಿ ಪ್ಲೇಟೋ ಸೌಂದರ್ಯ, ಸತ್ಯ, ಸದಾಚಾರಗಳ ಬಗೆಗೆ ಮಾತನಾಡಿದ್ದ. ಅವನೆಂದ ಮುಖ್ಯಾಂಶ: ಸದ್ವರ್ತನೆ ಸದ್ವಿಚಾರಗಳಿಗೆ ಸೌಂದರ್ಯವು ಪ್ರೇರಕ– ಎಂಬ ತತ್ತ್ವ.

ನಮ್ಮಲ್ಲಿ ಕೂಡ 'ಸತ್ಯಂ, ಶಿವಂ, ಸುಂದರಂ' (ಸತ್ಯವಾದದ್ದು, ಮಂಗಳಕರವಾದದ್ದು, ಸುಂದರವಾದದ್ದು) ಎನ್ನುತ್ತೇವೆ.

ಸೌಂದರ್ಯ ಎಂದರೇನು ? ಸುಂದರವಾದದ್ದು ಯಾವುದು ?

ಒಂದು ಶತಮಾನದಲ್ಲಿ ಸುಂದರವಾಗಿ ಕಂಡದ್ದು ಇನ್ನೊಂದು ಶತಮಾನದಲ್ಲಿ ಹಾಗೆ ತೋರದೆ ಇರಬಹುದು. ಒಂದು ನಾಗರಿಕತೆಯ ದೃಷ್ಟಿಯಲ್ಲಿ ಸುಂದರವಾದದ್ದು ಇನ್ನೊಂದು ನಾಗರಿಕತೆಯ ದೃಷ್ಟಿಯಲ್ಲಿ ಸುಂದರವಲ್ಲದಿರಬಹುದು. ಅಷ್ಟೇಕೆ? ಒಂದೇ ಸಮಾಜದಲ್ಲಿ ಒಬ್ಬರಿಗೆ ಸುಂದರವೆನಿಸಿದ್ದು ಇನ್ನೊಬ್ಬರಿಗೆ ಸಮ್ಮತವಾಗದೆ ಹೋಗಬಹುದು.

ಒಂದು ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯವಿಲ್ಲ: ಪರಿಪೂರ್ಣ ಸೌಂದರ್ಯ ಎನ್ನುವುದೇ ಇಲ್ಲ; ಅದು ಸಾಧಿಸಬೇಕಾದ ಆದರ್ಶ ಮಾತ್ರ.

'ಕಲೆ' ಎಂದೊಡನೆಯೇ 'ಸೌಂದರ್ಯ' ನೆನಪಿಗೆ ಬರುತ್ತದೆ. 'ಚಿತ್ರಕಲೆ' 'ಶಿಲ್ಪಕಲೆ' ಎಂದಾಗಲೂ ಅಷ್ಟೆ.

ಕಲೆ ಏನನ್ನು ಸಾಧಿಸುತ್ತದೆ ? ಪ್ರಕೃತಿಯ ಅನುಕರಣೆಯನ್ನೆ ? ಅಥವಾ, ಅದರ ಆದರ್ಶ ಚಿತ್ರಣವನ್ನೆ ? ಇಲ್ಲವೆ, ನಿಸರ್ಗದ ವ್ಯಾಖ್ಯಾನವನ್ನೆ ?

ಸಮಾಜ ಸುಧಾರಣೆಯೇ ಕಲೆಯ ಕೆಲಸ ಎನ್ನುವವರೂ ಉಂಟು. ಕಲೆ ಸಂಪರ್ಕ ಸಾಧನ; ಅದೊಂದು ಲೋಕಭಾಷೆ; ಆ ಭಾಷೆಯನ್ನು ಎಲ್ಲರೂ ಅರಿತಿರಬೇಕು: ಸದುದ್ದೇಶಕ್ಕಾಗಿ ಅದನ್ನು ಬಳಸಬೇಕು –ಎಂದ, 19ನೆಯ ಶತಮಾನದ ಸಾಹಿತ್ಯರುಷಿ ಟಾಲ್‌ಸ್ಟಾಯ್.

ತತ್ತ್ವಜ್ಞಾನಿಗಳು —ಕಲಾವಿದರು ಕೂಡಾ— ಕಲೆಯು ಪ್ರಕೃತಿಯ ಅನುಕರಣೆ ಎಂದಿದ್ದಾರೆ. 15ನೆಯ ಶತಮಾನದ ಮೇಧಾವಿ ಕಲಾವಿದ ಲಿಯೊನಾರ್ದೊ ದ ವಿಂಚಿಯೂ ಇತರ ಅನೇಕ ಕಲಾವಿದರೂ ಈ ಮಾತನ್ನು ಒಪ್ಪಿದ್ದಾರೆ.

ಯಾವಾಗಲೂ ನಿಜವಾದ ಕಲೆ ಆರಂಭವಾಗುವುದು ಪ್ರಕೃತಿಯಿಂದಲೇ —ಎನ್ನಬಹುದು.

ಈ ಬಗೆಗೆ ಕೆಲ ಖ್ಯಾತ ಚಿತ್ರಕಾರರ ಅಭಿಮತಗಳನ್ನು ಅರಿಯೋಣ. ವಿಂಚಿಯ ಪ್ರಕಾರ:

"ಒಬ್ಬ ಚಿತ್ರಕಾರನಿಗೆ, ತನ್ನ ಮನಸೆಳೆಯುವ ಸೌಂದರ್ಯವನ್ನು ತಾನು ನೋಡಬೇಕು ಎನಿಸಿದರೆ, ಅದನ್ನು ಆತ ಸೃಷ್ಟಿಸಬಲ್ಲ. ಕುರೂಪವಾದದ್ದನ್ನು ಇಲ್ಲವೆ ನಗೆಬರಿಸುವಂಥದ್ದನ್ನು ಅಥವಾ ನಿಜವಾಗಿಯೂ ಶೋಕಪೂರ್ಣವಾದದ್ದನ್ನು ನೋಡಬೇಕೆನಿಸಿದರೆ, ಆತನೇ ಅವುಗಳ ಸೃಷ್ಟಿಕರ್ತ, ಒಡೆಯ. ಸತ್ವವಲ್ಲಾಗಲೀ, ಕಲ್ಪನೆಯಲ್ಲಾಗಲೀ ವಿಶ್ವದಲ್ಲಿ ಏನೇನು ಅಡಗಿದೆಯೋ ಅದೆಲ್ಲ ಪ್ರಥಮವಾಗಿ ಆತನ ಮನಸ್ಸಿನಲ್ಲಿದೆ, ಬಳಿಕ ಅವನ ಕೈಯಲ್ಲಿದೆ." ಚಿತ್ರಕಲೆಯ ಅಭ್ಯಾಸಿಗಳಿಗೆ ಅವನೆಂದ:

"ಮನಸ್ಸಿನೊಳಗೆ ನಡೆಯುವುದು ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ಮುಖವನ್ನು ಚಿತ್ರಿಸಿ."

ವಿಂಚಿಯ ಸಮಕಾಲೀನ, ವಿಖ್ಯಾತ ಶಿಲ್ಪಿ – ಚಿತ್ರಕಾರ ಮೈಕೆಲೆಂಜಲೋ:

"ಚಿತ್ರಕಲೆಯು ಸಂಗೀತ, ಮಧುರ ರಾಗ. ಅದನ್ನು ಬುದ್ಧಿಶಕ್ತಿಯೊಂದೇ ಮೆಚ್ಚಬಲ್ಲುದು—ಅದೂ, ತುಸು ಪ್ರಯಾಸದಿಂದ."

19ನೆಯ ಶತಮಾನದ ರೆನ್ವಾ:

"ಒಂದು ಚಿತ್ರ ಸೊಗಸಾಗಿರಬೇಕು; ಹರ್ಷಪೂರ್ಣವಾಗಿರಬೇಕು ಮತ್ತು ಸುಂದರವಾಗಿರಬೇಕು—ಹೌದು. ಸುಂದರವಾಗಿರಬೇಕು!"

ರೆನ್ವಾನ ಸಮಕಾಲೀನ ವಾನ್ ಗೋ:

"ಸೂರ್ಯನನ್ನು ಚಿತ್ರಿಸುವಾಗ ನಾನು ಬಯಸುವುದು ಇಷ್ಟನ್ನು: ಅಗಾಧ ವೇಗದಲ್ಲಿ ಅದು ಉರುಳುತ್ತಿರುವಂತೆ, ಬೆಳಕನ್ನೂ ಅಪಾರ ಶಕ್ತಿಯ ಶಾಖತರಂಗಗಳನ್ನೂ ಅದು ಸೂಸುತ್ತಿರುವಂತೆ, ನೋಡುವವರಿಗೆ ಅನಿಸಬೇಕು."

ನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ಸಮಷ್ಟಿಯಲ್ಲಿ ಈ ಎಲ್ಲ ಅಭಿಪ್ರಾಯಗಳ ಪರಿಣಾಮ ಒಂದೇ.

ಚಿತ್ರಕಾರನ ವೈಯಕ್ತಿಕ ಪ್ರತಿಕ್ರಿಯೆಗಳ ಅಭಿವ್ಯಕ್ತಿ, ಆತ ಬರೆಯುವ ಚಿತ್ರ.

ಪ್ರತಿಕ್ರಿಯೆ ವೈಯಕ್ತಿಕವಾದರೂ ಚಿತ್ರಕಾರನದು ಲೋಕಭಾಷೆ. ಆ ಕಾರಣದಿಂದ ಆತನ 'ಶ್ರೋತೃ'ಗಳ ಸಂಖ್ಯೆ ಅಪಾರ.

x x x x x x x x x

ಜಗತ್ತಿನಲ್ಲಿ ರಚಿತವಾದ ಮೊದಲ ಚಿತ್ರದ ಬಗೆಗೆ ಒಂದು ದಂತಕಥೆ ಇದೆ:

ಇಬ್ಬರು ಮಿತ್ರರು ನಡೆದು ಹೋಗುತ್ತಿದ್ದರಂತೆ. ತಮ್ಮ ನೆರಳುಗಳಲ್ಲಿ ತಮ್ಮದೇ ರೂಪಗಳನ್ನು ಕಂಡು ಚಕಿತರಾದರಂತೆ. ಅವರನ್ನೇ ಹಿಂಬಾಲಿಸುವ ರೂಪಗಳು. ಓಡಿದರೆ ಅವೂ ಓಡುತ್ತಿದ್ದುವು. ಹಿಡಿದು ನಿಲ್ಲಿಸುವುದು ಹೇಗೆ? ಒಬ್ಬನಿಗೆ ಉಪಾಯ ಹೊಳೆಯಿತು. ತನ್ನ ಮಿತ್ರನಿಗೆ "ಹಾಗೇ ನಿಂತುಕೋ" ಎಂದ. ಚೂಪಾದ ಕಲ್ಲನ್ನೆತ್ತಿಕೊಂಡು, ಮಿತ್ರನ ನೆರಳನ್ನು ತಲೆಯಿಂದ ಪಾದದವರೆಗೆ ಗುರುತಿಸಿದ. ಪೂರ್ತಿಯಾದಾಗ ನೆರಳಿನಚಿತ್ರ ದೊರೆಯಿತು.

ಪ್ರಕೃತಿಯ ಅನುಕರಣದಿಂದ ಚಿತ್ರ ಶಿಲ್ಪವಾಗುತ್ತದೆ ಎನ್ನುವುದಕ್ಕೆ ವಿವರಣೆ ಈ ದಂತ ಕಥೆ.

ಸುಮಾರು 20,000—30,000 ವರ್ಷ ಹಿಂದಿನ ಕಾಲದಲ್ಲಿ, ಶಿಲಾಯುಗದ ಮೊದಲ ಅವಧಿಯಲ್ಲಿ, ಮಾನವ ಚಿತ್ರ ಬರೆಯಲು ಅರಿತಿದ್ದ. ಆತ ಬಿಡಿಸಿದ್ದು ಪ್ರಾಣಿಗಳ ಚಿತ್ರಗಳನ್ನು ಮೂಳೆಗಳ ಮೇಲೆ, ಕಲ್ಲುಗಳ ಮೇಲೆ. ಗವಿಯೊಳಗಿನ ಗೋಡೆಗಳಲ್ಲಿ ಆಗಿನ ಮಾನವರು ಬರೆದ ಚಿತ್ರಗಳು – ಬಣ್ಣದ ಚಿತ್ರಗಳು– ಉತ್ತಮ ಮಟ್ಟದವು. ಆಗತಾನೇ ಮಾನವ ಚಿತ್ರ ಬರೆಯಲು ಆರಂಭಿಸಿರಲಾರ; ಅದಕ್ಕೂ ಹಲವು ಸಹಸ್ರ ವರ್ಷಗಳ ಹಿಂದಿನಿಂದ ಆತ ಚಿತ್ರ ಬರೆಯುತ್ತಲಿದ್ದು, ಆ ವೇಳೆಗೆ ಕೈ ಪಳಗಿರಬೇಕು –ಎಂಬ ವಾದವಿದೆ. ಅದು ಪ್ರಾಚೀನ ನಾಗರಿಕತೆಯೊಂದರ ಅಂತಿಮ ಘಟ್ಟವೇ ಆಗಿರಬಹುದು.



ಸಹಾರಾದ –ಪ್ರಾಚೀನ ಉಬ್ಬುಚಿತ್ರ



ಓರಣಗೊಳಿಸಿದ ಒರಟು ರೂಪ : 'ಶಿಲ್ಪ ಸುಂದರಿ'

ಶಿಲಾಯುಗದ ಉತ್ತರಾರ್ಧದಲ್ಲಿ ಮಾನವ ಹಸಿ ಮಣ್ಣಿನಿಂದ ಮಡಕೆ ಮಾಡಲು ಕಲಿತ. ಮಾಡಿದ ಮಡಕೆಯ ಮೇಲೆ ಆತ ಚಿತ್ರ ಬಿಡಿಸಿದ. ದಿನಬಳಕೆಯ ವಸ್ತುವಾದರೂ ಸರಿಯೆ, ಅದರಲ್ಲಿ ಅಲಂಕಾರವಿರಬೇಕು. ಉಪಯುಕ್ತತೆ ಮತ್ತು ಕಲಾವಂತಿಕೆ ಪರಸ್ಪರ ಹೆಣೆದುಕೊಂಡುದನ್ನು ಇಲ್ಲಿ ಕಾಣುತ್ತೇವೆ. ಈ ಹೆಣಿಕೆ ಕಾಲ ಮುದ್ದಕ್ಕೂ ಏಕಪ್ರಕಾರವಾಗಿ ಸಾಗಿಬಂದಿದೆ.

ಯಾವುದೋ ಸೀಳುಮರದಲ್ಲಿ ಪ್ರಾಣಿಯ ಇಲ್ಲವೆ ಮನುಷ್ಯನ ಆಕೃತಿಯನ್ನು ಭ್ರಮಿಸಿದಂತಾಗಿ ಪ್ರಾಚೀನ ಮಾನವ ವಿಸ್ಮಿತನಾಗಿರಬಹುದು. ಆ ಆಕಾರವನ್ನು ಕೊರೆದು ಆತ ಸ್ಪಷ್ಟಗೊಳಿಸಿರಬಹುದು. ಹಾಗೆಯೇ ಶಿಲೆಯ ಒಂದು ತುಣುಕಿನಲ್ಲಿ ಕಂಡುಬಂದ ಒರಟುರೂಪವನ್ನು ಓರಣಗೊಳಿಸಿದಾಗ, ಮೊದಲ ಶಿಲ್ಪಕೃತಿ ಸಿದ್ಧವಾಗಿರಬಹುದು. ಹೋರಾಟದ ಬದುಕು, ದುಡಿಮೆ; ಜೊತೆಗೆ ಸೌಂದರ್ಯಪ್ರಜ್ಞೆ. ನಿತ್ಯದ ಉಪಯೋಗಕ್ಕಾಗಿ ಪರಿಕರಗಳನ್ನು ನಿರ್ಮಿಸುತ್ತ ಮನಸ್ಸಿನ ಆನಂದಕ್ಕಾಗಿ ಆ ಪರಿಕರಗಳ ಮೇಲೆ ಚಿತ್ರಣ.

ಹೀಗೆ, ಬರಹ ರೂಪುಗೊಂಡುದಕ್ಕೂ ಹಲವು ಸಹಸ್ರ ವರ್ಷಗಳ ಹಿಂದೆ ಚರಿತ್ರಪೂರ್ವ ಮಾನವನ ಕೈಯಲ್ಲಿ ಚಿತ್ರಕಲೆ, ಶಿಲ್ಪಕಲೆ ವಿಕಾಸಗೊಂಡಿತು.

× × × × × × × × ×

ನರ್ತಿಸಿದ, ಹಾಡಿದ, ಅಭಿನಯಿಸಿದ ಮಾನವ ಚಿತ್ರಕಲೆ–ಶಿಲ್ಪಕಲೆಗಳಲ್ಲೂ ಪರಿಣತನಾದದ್ದು ಸ್ವಾಭಾವಿಕ. ಆರಂಭದಲ್ಲಿ ನಾಗರಿಕತೆ ಅರಳಿದ ನೈಲ್, ಯೂಫ್ರೆಟೀಸ್–ಟೈಗ್ರೀಸ್ ಸಿಂಧು ನದೀ ತೀರಗಳಲ್ಲಿ, ಚೀನ ಗ್ರೀಸ್ ರೋಮ್‌ಗಳಲ್ಲಿ, ಶ್ರೇಷ್ಠ ಚಿತ್ರ–ಶಿಲ್ಪ, ಕಲೆಗಳ ಹೇರಳ ಸಾಕ್ಷ್ಯ ದೊರೆತಿದೆ. ಆಯಾ ರಾಷ್ಟ್ರೀಯ ಜೀವನದ ಅಧ್ಯಯನಕ್ಕೆ ಅವು ಸಾಧನಗಳಾಗಿವೆ.

ಪ್ರಾಚೀನ ಈಜಿಪ್ಟಿನ ರಾಜರಾಣಿಯರ ಅಲಂಕೃತ ಗೋರಿಗಳಿಂದ, ಆಗಿನ ಚಿತ್ರಕಾರರು ಏಳು ಬಣ್ಣಗಳನ್ನು ಬಳಸುತ್ತಿದ್ದರೆಂಬ ಅಂಶ ತಿಳಿದುಬಂದಿದೆ. ಬಣ್ಣಗಳನ್ನು ಆಗ ಬಿಲ್ಲೆಗಳ ರೂಪದಲ್ಲಿ ತಟ್ಟುತ್ತಿದ್ದರು. ತೊಗಲು ಚೀಲಗಳಲ್ಲಿ ಆ ಬಣ್ಣಗಳನ್ನಿಡುತ್ತಿದ್ದರು. ಚಿತ್ರಣಕ್ಕೆ ಬಣ್ಣವನ್ನು ಅಣಿಗೊಳಿಸುತ್ತಿದ್ದುದು ಮಡಕೆಗಳಲ್ಲಿ. ಜೊಂಡುಗರಿಕೆಗಳಿಂದ ಬ್ರಷ್ ನಿರ್ಮಿಸುತ್ತಿದ್ದರು. ಇಲ್ಲಿ ಚಿತ್ರಕಲೆ–ಶಿಲ್ಪಕಲೆಗಳು ಬೆರೆತಿದ್ದುವು. ಶಿಲ್ಪಚಿತ್ತಾರಗಳಿಗೆ ಬಣ್ಣಹಾಕುತ್ತಿದ್ದರು.

ಭವ್ಯಶಿಲ್ಪಗಳದ್ದು ವಿಶಿಷ್ಟ ಶೈಲಿ. ಈಜಿಪ್ಟಿನ ಮರಳುಗಾಡು ಹಿನ್ನೆಲೆಯಲ್ಲಿ ತ್ರಿಆಯಾಮಗಳ ಈ ಕೃತಿಗಳು ತಮ್ಮದೇ ಸೊಬಗನ್ನು ಮೆರೆಯುತ್ತವೆ.

ಮೆಸಪೊಟಾಮಿಯದ ಯೂಫ್ರೆಟೀಸ್ ತೀರದಲ್ಲಿ ಶಿಲ್ಪಕಲೆ ವಿಕಾಸಗೊಳ್ಳಲಿಲ್ಲ. ಅದು ಶಿಲೆಗಳಿಲ್ಲದ, ಕೃಷಿಭೂಮಿಯೇ ಪ್ರಧಾನವಾಗಿದ್ದ ಪ್ರದೇಶ. ಆದರೆ ಅಲ್ಲಿನ ಜನ ಹಸಿಮಣ್ಣಿನಲ್ಲಿ ಚಿತ್ರಗಳನ್ನು ರಚಿಸಿ, ಸುಟ್ಟು, ಅವು ದೀರ್ಘಕಾಲ ಬಾಳುವಂತೆ ಮಾಡಿದರು. ಈ ಕಲಾಕೃತಿಗಳು ಕ್ರಿ. ಪೂ. 2600 ವರ್ಷ ಹಿಂದಿನ ಆ ನಾಗರಿಕತೆಯ ಶ್ರೇಷ್ಠ ಸಾಧನೆ.



ಈಜಿಪ್ಟಿನ ಗೋರಿಗಳಲ್ಲಿ ದೊರೆತ ಬಣ್ಣ ಮತ್ತಿತರ ಅಲಂಕರಣ ಪರಿಕರಗಳು


'ಕಂಚಿನ ಹುಡುಗಿ'—ಮೊಹೆಂಜೊದಾರೊ ಭಗ್ನಾವಶೇಷಗಳಲ್ಲಿ ದೊರೆತ

ಅಸ್ಸೀರಿಯ (ಕ್ರಿ.ಪೂ. 2450) ಮತ್ತು ಬ್ಯಾಬಿಲೋನಿಯ (ಕ್ರಿ.ಪೂ. 2600)ಗಳ ಚಿತ್ರಕಲೆಯಲ್ಲಿ ಪ್ರಾಣಿರೂಪಗಳ ಸೊಗಸಾದ ಚಿತ್ರಣವಿದೆ.

ಭಾರತದಲ್ಲಿ ಚಿತ್ರಕಲೆಯದು 5000 ವರ್ಷಗಳಿಗೂ ಹಿಂದಿನ ಇತಿಹಾಸ. ಆರ್ಯರು ಈ ದೇಶಕ್ಕೆ ಬರುವುದಕ್ಕೆ ಮುನ್ನವೇ ಸಿಂಧು ನದೀ ತೀರದಲ್ಲಿ ನಾಗರಿಕತೆ ಉಚ್ಛ್ರಾಯ ಸ್ಥಿತಿಯನ್ನು ತಲಪಿತ್ತು. ಹರಪ್ಪಾ–ಮೊಹೆಂಜೊದಾರೊಗಳ ಭಗ್ನಾವಶೇಷಗಳಲ್ಲಿ ಆ ಜನಾಂಗದ ಕಲಾನಿಪುಣತೆಯನ್ನು ಸಾರುವ ಕೃತಿಗಳು ದೊರೆತಿವೆ. ಅಲ್ಲಿನ 'ಕಂಚಿನ ಹುಡುಗಿ' ಪ್ರತಿಮೆ ಮೋಹಕತೆಗೂ ಕುಸುರಿನ ಕೆಲಸಕ್ಕೂ ಶ್ರೇಷ್ಠ ನಿದರ್ಶನವಾಗಿದೆ.

ಆರ್ಯರ ಆಗಮನದ ಅನಂತರವೂ ಚಿತ್ರಕಲೆ ವಿಕಾಸಗೊಂಡಿತು. ಯಜ್ಞಕುಂಡ, ಮದುವೆ ಮಂಟಪ, ಸಭಾಸದನ—ಇವುಗಳ ರಂಗೋಲಿ ಮತ್ತಿತರ ಅಲಂಕರಣ ವೇದಕಾಲದಲ್ಲಿ ಪರಿಪುಷ್ಟಗೊಂಡ ಕಲೆ. "ದೇವರ ಚಿತ್ರವನ್ನು ಚರ್ಮದ ಹಾಳೆಯ ಮೇಲೆ ಚಿತ್ರಿಸುತ್ತೇನೆ," ಎನ್ನುತ್ತ ಅಗ್ನಿದೇವನನ್ನು ಸ್ತುತಿಸುವ ಶ್ಲೋಕ ಋಗ್ವೇದದಲ್ಲಿದೆ. ಪುರಾಣಗಳಲ್ಲೂ ಚಿತ್ರಕಲೆಯ ಪ್ರಸ್ತಾಪವಿದೆ. ಚಿತ್ರಕಲೆಯಲ್ಲಿ ರೂಪಭೇದ, ಪ್ರಮಾಣ, ಭಾವ, ಲಾವಣ್ಯಯೋಜನ, ಸಾದೃಶ್ಯ, ವರ್ಣಿಕಾಭಂಗ ಎಂಬ ಆರು ಅಂಗಗಳಿವೆ ಎಂದು ಕ್ರಿ.ಪೂ. 3ನೆಯ ಶತಮಾನದ ವಾತ್ಸ್ಯಾಯನನ 'ಕಾಮಸೂತ್ರ' ಹೇಳುತ್ತದೆ.

ಚೀನದ್ದು 4,000 ವರ್ಷ ಹಳೆಯದಾದ ನಾಗರಿಕತೆ. ಅಲ್ಲಿ ಬೌದ್ಧಮತದ ಪ್ರವೇಶಕ್ಕೆ ಮುಂಚೆ. ಚಿತ್ರಕಲೆ– ಶಿಲ್ಪಕಲೆ. ಮೊದಮೊದಲು ಪೂರ್ವಿಕರ ಆರಾಧನೆಗಷ್ಟೇ ಮೀಸಲಾಗಿತ್ತು. ಸಮಾಧಿಗಳ ಮೇಲೆ ಅಲಂಕರಣ ಶಿಲ್ಪಕೃತಿಗಳಿರುತ್ತಿದ್ದುವು. ಚಿತ್ತಾರಗಳಿದ್ದ ಕಂಚಿನ ಪಾತ್ರೆಗಳನ್ನು ಆಗ ನಿರ್ಮಿಸುತ್ತಿದ್ದರು.


ಈಜಿಪ್ಟಿನ ಚಿತ್ರಕಾರರು

ಗ್ರೀಕ್ ಶಿಲ್ಪಕಲೆ–ಚಿತ್ರಕಲೆ ಆರಂಭವಾದದ್ದು ಕ್ರಿ.ಪೂ. 1500ರ ವೇಳೆಗೆ. ಸುಮಾರು 1000 ವರ್ಷ ಕಾಲ ಇದು ವಿಕಾಸಗೊಂಡಿತು. ಕ್ರಿ.ಪೂ. 5ನೆಯ ಶತಮಾನದ ಹೊತ್ತಿಗೆ ಪೂರ್ಣ ವಿಕಾಸದ ಹಂತವನ್ನು ಮುಟ್ಟಿತು. ಕ್ರಿ.ಪೂ. 1ನೆಯ ಶತಮಾನದವರೆಗೂ ಗ್ರೀಕ್ ಶಿಲ್ಪ ಮಹತ್ವದ್ದೆನಿಸಿತು. ಮಹಾಶಿಲ್ಪಿ ಫಿಡಿಯಾಸ್ ಆಗ ರಚಿಸಿದ ಒಲಿಂಪಿಯದ ಜೂಸ್ ದೇವತೆ, ಪಾರ್ಥೆನಾನ್ ಆರಾಧನಾ ಮಂದಿರದ ಅಥೀನಾ ದೇವತೆ ಅಮರವೆನಿಸಿವೆ.

ಪಾತ್ರೆಗಳ ಮೇಲಿನ ಚಿತ್ರಣದಲ್ಲೂ ಗ್ರೀಕರು ಕುಶಲಿಗಳಾಗಿದ್ದರು.

ಗ್ರೀಕ್ ಶಿಲ್ಪ ಇತರ ರಾಷ್ಟ್ರಗಳ ಶಿಲ್ಪದ ಮೇಲೂ ಪ್ರಭಾವ ಬೀರಿದ್ದನ್ನು ಕಾಣುತ್ತೇವೆ.

ರೋಮನರದು ಗ್ರೀಕ್ ಕಲೆಯ ಅನುಕರಣ. ರೋಮ್ ಮತ್ತು ಪಾಂಪೆ ನಗರಗಳ ಭಗ್ನಾವಶೇಷಗಳಲ್ಲಿ, ಶ್ರೇಷ್ಠ ಗ್ರೀಕ್ ಕೃತಿಗಳನ್ನು ಪ್ರತಿಮಾಡಿ ರಚಿಸಿದ ಅನೇಕ ಕೃತಿಗಳು ದೊರೆತಿವೆ. ಗ್ರೀಕ್ ವೀರ ಅಲೆಗ್ಸಾಂಡರ್ ಭಾರತದ ವಾಯುವ್ಯ ಪ್ರದೇಶದವರೆಗೂ ದಂಡೆತ್ತಿಹೋದ ಮೇಲೆ, ಅಲೆಗ್ಸಾಂಡ್ರಿಯಾ ನಗರವನ್ನು ಈಜಿಪ್ಟಿನಲ್ಲಿ ಸ್ಥಾಪಿಸಿದ ಬಳಿಕ, ಗ್ರೀಕ್ ಶಿಲ್ಪ ಕಲೆಯ ಪ್ರಭಾವ ಭೂಮಧ್ಯ ಸಮುದ್ರ ತೀರದ ಪೂರ್ವಭಾಗದ ದೇಶಗಳ ಮೇಲೂ ಭಾರತದ ಮೇಲೂ ಮೂಡಿತು. ಅಫ್‌ಘಾನಿಸ್ಥಾನದ ಕಾಂದಹಾರದಲ್ಲಿ ಗ್ರೀಕ್–ಭಾರತೀಯ ಪರಂಪರೆಗಳ ಸಂಕರದಿಂದ ಗಾಂಧಾರಶಿಲ್ಪ ಹುಟ್ಟಿತು. ಈ ಶೈಲಿಯ ಬುದ್ಧ ಪ್ರತಿಮೆಗಳು ಸೌಂದರ್ಯಕ್ಕೂ ಕೋಮಲತೆಗೂ ಹೆಸರಾಗಿವೆ.

ಪ್ರಾಚೀನ ಗ್ರೀಸಿನಲ್ಲಿ ತಟ್ಟೆಯ ಮೇಲೆ ಅಲಂಕರಣ ಚಿತ್ರ



ಭಾರತದಿಂದ ಬೌದ್ಧಮತ ಚೀನಕ್ಕೆ ಹೋದ ಮೇಲೆ, ಚೀನೀ ಶಿಲ್ಪಕಲೆಯೂ ಗಾಂಧಾರಶಿಲ್ಪದ – ಪರ್ಯಾಯವಾಗಿ ಗ್ರೀಕ್


ಈಜಿಪ್ಟಿನ ಶಿಲ್ಪದ ವಾಸ್ತವದೃಷ್ಟಿ : ಗ್ರೀಕ್ ಶಿಲ್ಪದ ಕಲಾದೃಷ್ಟಿ



ಕಾರ್ಯಮಗ್ನ ಕಲಾವಿದ : ಅಜಂತ ಭಿತ್ತಿಚಿತ್ರ ರಚನೆ

ಶಿಲ್ಪದ –ಪ್ರಭಾವಕ್ಕೆ ಒಳಗಾಯಿತು. ವಿಂಧ್ಯಪರ್ವತದ ದಕ್ಷಿಣಕ್ಕಿರುವ ಅಜಂತಾ–ಎಲ್ಲೋರ ಜಗತ್ತಿನ ಕಲಾವಿದರ ಪುಣ್ಯಕ್ಷೇತ್ರಗಳಲ್ಲಿ ಒಂದು. ಇದು ಯಾವ ಬಾಹ್ಯಪ್ರಭಾವವೂ ಇಲ್ಲದ ಭಾರತೀಯ ಚಿತ್ರಕಲೆ– ಶಿಲ್ಪಕಲೆ. ಅಜಂತಾ–ಗುಹೆಗಳ ಭಿತ್ತಿಚಿತ್ರಗಳೂ ಎಲ್ಲೋರದ ಗುಹಾಂತ ರ್ದೇವಾಲಯಗಳೂ ಸುಮಾರು 800 ವರ್ಷಗಳಿಗೂ ಹೆಚ್ಚು ಕಾಲದ ಪರಿಶ್ರಮದ ಫಲ. ಕೆಲವು ತಲೆಮಾರುಗಳ ಚಿತ್ರಕಾರರು–ಶಿಲ್ಪಿಗಳು ಇಲ್ಲಿ ದುಡಿದಿರಬೇಕು.

ಅಜಂತ ಗವಿವಾಸಿಯಾದ ಆದಿಮಾನವನ ಚಿತ್ರಸೃಷ್ಟಿಯಲ್ಲ. ಜಗತ್ತಿನ ಸುಖವನ್ನು ತೊರೆದು ಏಕಾಂತದಲ್ಲಿ ಇರಬಯಸಿದ ಭಿಕ್ಕುಗಳು ತಮಗಾಗಿ ನಿರ್ಮಿಸಿಕೊಂಡ ಕಲಾಪರಿಸರ. (ಭಿಕ್ಕುಗಳಲ್ಲದವರೂ ಚಿತ್ರಕಾರರಾಗಿ ದುಡಿದಿರುವುದು ಸಹಜ.)

ಇದರ ರಚನೆ ಆರಂಭವಾದದ್ದು ಕ್ರಿ.ಪೂ. 2ನೆಯ ಶತಮಾನದಲ್ಲಿ.ಬುದ್ಧನ ಜೀವನ ಹಾಗೂ ಜಾತಕಕಥೆಗಳ ಈ ಚಿತ್ರಶಾಲೆ ಬೌದ್ಧ ಧರ್ಮದ ವೈಭವದ ಪ್ರತೀಕ. ಎಲ್ಲೋರದಲ್ಲಿ ಬೌದ್ಧ ಧರ್ಮ ಮಾತ್ರವಲ್ಲದೆ ಪೌರಾಣಿಕ, ಜೈನಧಾರ್ಮಿಕ ಸಂಪ್ರದಾಯಗಳಿಗೆ ಸೇರಿದ ಗುಹಾಲಯಗಳೂ ಇವೆ. ಮೂರ್ತಿಶಿಲ್ಪ ಅಲಂಕಾರಶಿಲ್ಪಗಳಿಗೆ ಹೆಸರಾದ ಕೈಲಾಸ ದೇವಾಲಯ ಕ್ರಿ.ಶ. 250ರ ನಿರ್ಮಾಣ.

6ನೆಯ ಶತಮಾನದಲ್ಲಿ ಕನ್ನಡದ ಚಾಲುಕ್ಯ ರಾಜವಂಶದ ಆಶ್ರಯದಲ್ಲಿ ಬಾದಾಮಿಯ ಗುಹಾಂತರ್ದೇವಾಲಯಗಳು ರಚಿತವಾದುವು. ಅಲ್ಲಿನ ಭಿತ್ತಿಚಿತ್ರಗಳು ಭಾರತೀಯ ಚಿತ್ರಕಲೆಯ ಹೆಗ್ಗುರುತಾದುವು.

ಮುಂದೆ ತಾಳೆಗರಿ ಬರಹದ ಅಲಂಕರಣದಲ್ಲಿ, ಸಂದರ್ಭ ಚಿತ್ರಗಳಲ್ಲಿ, ಭಾರತೀಯ ಚಿತ್ರ ಕಾರರ ಓರಿಮೆಯನ್ನು ಕಾಣುತ್ತೇವೆ. ಸಂಸ್ಕೃತ ನಾಟಕಗಳಲ್ಲಂತೂ ಚಿತ್ರಲೇಖನದ ಪ್ರಸ್ತಾಪ ಹೇರಳವಾಗಿವೆ.

x x x x x x x x x

ಅಳಿದುಹೋದ ಗ್ರೀಕ್ ಕಲಾವೈಭವ ರೋಮನ್ ಸಾಮ್ರಾಜ್ಯದ ಭವ್ಯತೆಯ ದಿನಗಳಲ್ಲಿ ಮಾತ್ರ ಮ್ಲಾನವಾಯಿತು. ಈ ಸಾಮ್ರಾಜ್ಯ ಮಣ್ಣುಪಾಲಾಗಿ. ಸಣ್ಣ ಪುಟ್ಟ ರಾಜ್ಯಗಳನೇಕ ತಲೆ ಎತ್ತಿ. ಕ್ರೈಸ್ತಧರ್ಮ ಯೂರೋಪಿನ ಜನಾಂಗಗಳನ್ನು ಆವರಿಸಿತಂತೆ. ಕ್ರೈಸ್ತಧರ್ಮವೊಂದೇ ಚಿತ್ರಕಲೆ—ಶಿಲ್ಪಕಲೆಗಳಿಗೆ ಆಸರೆಯಾಯಿತು. ಯೂರೋಪಿನ ಪೂರ್ವಭಾಗದಲ್ಲಿ –ಮಧ್ಯ ಪ್ರಾಚ್ಯದಲ್ಲಿ– ಬೈಜಾಂಟಿಯಮ್ ಸಾಮ್ರಾಜ್ಯದಲ್ಲಿ ಮಾತ್ರ ಚಿತ್ರಕಲೆ–ಶಿಲ್ಪಕಲೆಗಳಿಗೆ ಪ್ರೋತ್ಸಾಹ ದೊರೆಯಿತು. ಕಾನ್‌ಸ್ಟಾಂಟಿನೋಪ್‌ಲ್ ಅವರ ರಾಜಧಾನಿ. ಪ್ರಮುಖ ನಗರ ರಾವೆನ್ನಾದಲ್ಲಿ ಇಂದಿಗೂ ಬೈಜಾಂಟಿಯಮ್ ಕಲೆಯ ಸಾಧನೆಗಳನ್ನು ಕಾಣಬಹುದು.



ಬಳಗದೊಡನೆ ರಾಣಿ ಥಿಯೊಡೊರಾ : ಬೈಜಾಂಟಿಯಮ್ ಚಿತ್ರಕಲೆ

7ನೆಯ ಶತಮಾನದಲ್ಲಿ ಮಹಮ್ಮದೀಯ ಮತ ತಲೆ ಎತ್ತಿ ಪೂರ್ವದ ಪ್ರದೇಶಗಳಿಗೂ ಪಶ್ಚಿಮದಲ್ಲಿ ಸ್ಪೇನಿನ ತನಕವೂ ವ್ಯಾಪಿಸಿತು.

ಮರಳುಗಾಡು ಪ್ರದೇಶವಾದ ಅರೇಬಿಯದಲ್ಲಿ ಶಿಲ್ಪಕಲೆ ಇರಲಿಲ್ಲ. ಆದರೆ ಅರಬರು ಕೆತ್ತನೆಯ ಕೆಲಸಗಳಲ್ಲಿ, ಅಂದದ ಸಮ್ಗ್ರಿಯಲ್ಲಿ ಕುಶಲರಾಗಿದ್ದರು. ಇಲ್ಲಿ ಗ್ರೀಕ್ ಶೈಲಿ ಅರಬರ ಕಲಾಸಾಮರ್ಥ್ಯದೊಡನೆ ಬೆರೆಯಿತು. ಮಹಮ್ಮದೀಯ ಆಳ್ವಿಕೆಯಲ್ಲಿ ಸ್ಪೇನಿನಲ್ಲೂ ಈ ಬಗೆಯ ಕಲೆ ವಿಕಾಸಗೊಂಡಿತು. ಕಿರುಚಿತ್ರ ರಚನೆ ಪರ್ಷಿಯದ ವೈಶಿಷ್ಟ್ಯ. ಪರ್ಷಿಯದವರಿಗೆ ಉದ್ಯಾನ, ಕಾರಂಜಿ, ಕಾಲುವೆಗಳೆಂದರೆ. ಅರಳುವ ಹೂ, ಭೂರಿ ಭೋಜನ



ಕಿರುಚಿತ್ರಗಳು ಬಿಹ್‌ಜಾದ್ ವಿರಚಿತ

ಎಂದರೆ ಬಲು ಇಷ್ಟ. ಅವರ ಚಿತ್ರಗಳಲ್ಲೆಲ್ಲ ಇದೇ ವಸ್ತು. ಬಣ್ಣದ ಪ್ರಯೋಗದಲ್ಲಿ ಅವರದು ಎತ್ತಿದ ಕೈ. 15ನೆಯ ಶತಮಾನದ ಬೆಹ್‌ಜಾದ್ ಪರ್ಷಿಯದ ಚಿತ್ರಕಲೆಯ ಮಹಾನ್ ಚಿತ್ರಕಾರ.

ರೋಮನ್ ಸಾಮ್ರಾಜ್ಯದ ಪತನಾನಂತರ ಪ್ರಾಬಲ್ಯಕ್ಕೆ ಬಂದ ವಿವಿಧ ಯುರೋಪ್ಯ ಪ್ರದೇಶಗಳಲ್ಲಿ ರೋಮನ್ ಶಿಲ್ಪ-ಚಿತ್ರಕಲೆಗಳ ಬಗೆಗೆ ಆಸಕ್ತಿ ತೋರಿಬಂತು. ಇದು ತುಸು ಬದಲಾವಣೆಗಳೊಡನೆ ಬಳಕೆಗೆ ಬಂದ ರೋಮನ್ ಶೈಲಿ (ರೋಮನಸ್ಕ್ ಶೈಲಿ).

ಇಟಲಿಯಲ್ಲಿ ಗೋಡೆಗಳ ಮೇಲೆ ಚಿತ್ತಾರ ಬಿಡಿಸುವ ಚಿತ್ರಕಲೆ ರೂಪುಗೊಂಡಿತು. ಇದನ್ನು ಫ್ರೆಸ್ಕೋ ಎಂದು ಕರೆದರು. ಇಟಾಲಿಯನ್ ಭಾಷೆಯಲ್ಲಿ ಫ್ರೆಸ್ಕೋ ಎಂದರೆ ಹೊಚ್ಚ ಹೊಸದು.

ಚಿತ್ರಕಲೆ, ಶಿಲ್ಪ, ವಾಸ್ತುಶಿಲ್ಪಗಳಲ್ಲಿ ನೂತನ ಪ್ರಯೋಗಗಳು ನಡೆದುವು. ಮುಂದೆ ನವೋದಯ ಕಾಲದಲ್ಲಿ ಶಾಸ್ತ್ರೀಯತೆಯ ಆರಾಧನೆ ಆರಂಭವಾದಾಗ. ತಮ್ಮ ಹಿಂದಿನವರ ಪ್ರಯೋಗಗಳು ಆ ಆರಾಧಕರಿಗೆ ಇಷ್ಟವಾಗಲಿಲ್ಲ. ಅವರು ಅವನ್ನು 'ಗಾತಿಕ್' (ಅನಾಗರಿಕ) ಎಂದರು. ಉತ್ತರದಿಂದ ಬಂದು ಆಕ್ರಮಣ ನಡೆಸಿದ್ದ ಅನಾಗರಿಕರು 'ಗಾತ್' ಬುಡಕಟ್ಟಿನವರು. ಅದರಿಂದ 'ಗಾತಿಕ್' ಪದ. ಆದರೆ ನವೋದಯದ ವೇಳೆಗೆ. ಸಂಪ್ರದಾಯಕ್ಕಿಂತ ಭಿನ್ನವಾದ ಈ ಶೈಲಿ ಯುರೋಪಿನ ರಾಜ್ಯಗಳಿಗೆಲ್ಲ ಹರಡಿ ಹೆಚ್ಚು ಹೆಚ್ಚು ಜನಪ್ರಿಯವಾಗಿತ್ತು: 'ಗಾತಿಕ್ ಶೈಲಿ' ಹೊಸದೊಂದು ಸಂಪ್ರದಾಯವೇ ಆಗಿತ್ತು.

ಗಾತಿಕ್ ಶಿಲ್ಪಕಲೆಯಲ್ಲಿ ನೀಳ ಗೆರೆಗಳಿಗೆ. ನೀಳ ಆಕೃತಿಗಳಿಗೆ ಪ್ರಾಧಾನ್ಯ. ರೋಮನಸ್ಕ್ ಅವಧಿಗಿಂತ ಈ ಶಿಲ್ಪಗಳು. ಚಿತ್ರಗಳು ಹೆಚ್ಚು ಸಹಜ. ಪೀಠಗಳ ಮೇಲೆ ಶಿಲ್ಪಕೃತಿಗಳನ್ನು ನಿಲ್ಲಿಸತೊಡಗಿದರು. 13–14ನೆಯ ಶತಮಾನಗಳಲ್ಲಿ ಯುರೋಪನ್ನೆಲ್ಲ ವ್ಯಾಪಿಸಿದ ಈ ಶೈಲಿ ಅಂತರರಾಷ್ಟ್ರೀಯ ಶೈಲಿ ಎಂದು ಹೆಸರು ಪಡೆಯಿತು.

× × ×    × × ×    × × ×

ಇತ್ತ ಚೀನದಲ್ಲಿ, ಕ್ರಿ.ಶ. 5ನೆಯ ಶತಮಾನದ ವರೆಗೂ ಬೌದ್ಧಮತದ ಪ್ರಭಾವಲಯದಲ್ಲಿ ಶಿಲ್ಪಕಲೆ ಬೆಳೆಯಿತು.

ಚೀನವನ್ನು ಟಾಂಗ್ ರಾಜವಂಶ (618–907) ಆಳುತ್ತಿದ್ದಾಗ ಚಿತ್ರಕಾರರು. ಶಿಲ್ಪಿಗಳು ಮತ್ತಿತರ ಕಲಾವಿದರಿಗೆ ಪೋಷಣೆ ದೊರೆಯಿತು. ಚೀನೀ ಶಿಲ್ಪಕಲೆ ಆ ಅವಧಿಯಲ್ಲಿ ಶ್ರೇಷ್ಠತೆಯ ಮಟ್ಟವನ್ನು ಮುಟ್ಟಿತು. ಗುಹಾಂತರ್ದೇವಾಲಯಗಳಲ್ಲಿ ಕೆಲಸ ಮುಂದುವರಿಯಿತು. ಸಮಾಧಿಗಳಲ್ಲಿ ಪ್ರಾಣಿಗಳ ಶಿಲ್ಪಕೃತಿಗಳು ರಚಿತವಾದುವು. ಕಂಚಿನ ಪ್ರತಿಮೆಗಳನ್ನು ಎರಕ ಹುಯ್ಯುವ ಪ್ರಾಚೀನ ಚೀನೀ ಕಲೆಗೆ ಉತ್ತೇಜನ ಲಭಿಸಿತು. ಆ ಕಾಲದ ಸಮಾಧಿಗಳಲ್ಲಿ ದೊರೆತಿರುವ ಆವೆ ಮಣ್ಣಿನ ಆಕೃತಿಗಳಂತೂ ಜೀವಂತವೆನಿಸುವಷ್ಟು ಸೊಗಸಾಗಿವೆ. ಆವೆ ಮಣ್ಣಿನ ಮೆದುತನ ಆಕೃತಿಯಲ್ಲಿ ಸಹಜ ರೂಪವನ್ನು ಮೂಡಿಸಲು ಸಹಾಯಕ. ಸೈನಿಕರು. ಸ್ತ್ರೀಯರು. ನರ್ತಕಿಯರು. ಪೋಲೋ ಆಟಗಾರರು. ಕುದುರೆ ಮತ್ತಿತರ ಪ್ರಾಣಿಗಳು —ಇಂಥ ವೈವಿಧ್ಯವನ್ನು ಅಲ್ಲಿ ಕಾಣುತ್ತೇವೆ.



ಆವೆಮಣ್ಣಿನ ಚೀನೀ ಕುದುರೆಗಳು : ಜೀವಂತವೆನಿಸುವಷ್ಟು ಸೊಗಸು

ಸೂಂಗ್ ವಂಶದ ಆಳ್ವಿಕೆಯಲ್ಲಿ (960—1280) ಚಿತ್ರಕಲೆಗೆ ಅಗ್ರಪೂಜೆ ಸಂದಿತು. ಶಿಲ್ಪ ಕಲೆ ಕ್ರಮೇಣ ಇಳಿಮುಖವಾಯಿತು. ಅದು ದಂತ ಹಾಗೂ ಅಮೂಲ್ಯ ಶಿಲೆಗಳ ಕೆತ್ತನೆಯ ಕುಶಲ ಕೆಲಸ ಮಾತ್ರವಾಗಿ ಉಳಿಯಿತು.

ಅಲ್ಲಿ ಶ್ರೇಷ್ಠ ಚಿತ್ರಕಾರರು ಕವಿಗಳೂ ಆಗಿದ್ದರು: ತತ್ತ್ವಜ್ಞಾನಿಗಳು ಇಲ್ಲವೆ ಧರ್ಮ ಗುರುಗಳಾಗಿದ್ದರು. ಇದು ಆಗಿನ ಚೀನದ ವೈಶಿಷ್ಟ್ಯ. ಇವರೆಲ್ಲರಿಗೂ ಏಕ ರೀತಿಯ ಸಾಹಿತ್ಯ ಶಿಕ್ಷಣ ದೊರೆಯುತ್ತಿತ್ತು.

13ನೆಯ ಶತಮಾನದಲ್ಲಿ ಮಾರ್ಕೊ ಪೋಲೊ ಚೀನೀ ಪ್ರವಾಸದಿಂದ ಮರಳಿದ ಮೇಲಷ್ಟೇ ಬಾಹ್ಯ ಜಗತ್ತಿಗೆ ಚೀನೀ ಕಲೆಯ ಪರಿಚಯವಾಯಿತು. ಜಪಾನಿನಲ್ಲಿ ಚಿತ್ರಕಲೆಯ ಶ್ರೇಷ್ಠ ಕೃತಿಗಳು ನಿರ್ಮಾಣವಾದದ್ದು ಫುಜಿವಾರಾ ರಾಜವಂಶದ ಅವಧಿಯಲ್ಲಿ (900—1190). ಲೌಕಿಕ ವಿಷಯಗಳಿಗೆ ಈ ಕೃತಿಗಳಲ್ಲಿ ಪ್ರಾಮುಖ್ಯ. ಇವೆಲ್ಲ ಶ್ರೀಮಂತವರ್ಗದ ಸಾಮಾಜಿಕ, ಸೈನಿಕ ಜೀವನದ ಚಿತ್ರಣ. ಜಪಾನೀ ಮನೆಗಳಲ್ಲಿ ಕಾಣಸಿಗುವ ಚಿತ್ರ ರಂಜಿತ ಮಡಿಚುವ-ಸ್ಕ್ರೀನ್ ಆಗಿನ ಕಾಲದ ಸೃಷ್ಟಿ.

ಜಪಾನಿನಲ್ಲಿ ಕಲ್ಲು ಕಡಮೆ. ಆ ಕಾರಣದಿಂದ ಶಿಲ್ಪಕಲೆಯ ಬೆಳವಣಿಗೆಯನ್ನು ಕಾಣೆವು. ಅಲ್ಲಿ ಶಿಲ್ಪಿ ಬಳಸುವುದು ಮರ. ಲೋಹ ಮತ್ತು ಆವೆಮಣ್ಣು. ಇಂಥ ಕೆಲಸದಲ್ಲಿ ಚೀನೀ ಶಿಲ್ಪಕಲಾಶೈಲಿಯ ಹೋಲಿಕೆ ಕಂಡುಬರುತ್ತದೆ.

ಅಜಂತಾ ಚಿತ್ರಕಲೆಯ ವೈಭವದ ಬಳಿಕ ಶಿಲ್ಪಕಲೆ ಶತಮಾನಗಳುದ್ದಕ್ಕೂ ಶ್ರೇಷ್ಠ ಕೃತಿಗಳನ್ನು ನಿರ್ಮಿಸುತ್ತ ಸಾಗಿತು. ಭಾರತೀಯ ದೇವಾಲಯಗಳ ನಿರ್ಮಾಣ ಭಾರತೀಯ ವಾಸ್ತುಶಿಲ್ಪದ ಹಿರಿಮೆಗೆ ಎಂತೋ ಅಂತೆಯೇ ಶಿಲ್ಪಕಲೆಯ ಹಿರಿಮೆಗೂ ಸಾಕ್ಷಿ. ಈ

ವಿಷಯದಲ್ಲಿ ದಕ್ಷಿಣ ಭಾರತದ ಶಿಲ್ಪವೈಭವ ತನ್ನದೇ ಆದ ವೈಶಿಷ್ಟ್ಯವನ್ನು ಮೆರೆದಿದೆ. ದ್ರಾವಿಡ, ಚಾಲುಕ್ಯ, ಹೊಯ್ಸಳ ಶಿಲ್ಪ ನಿರ್ಮಾಣ ಲೋಕಖ್ಯಾತಿ ಗಳಿಸಿದೆ.

ಕೇಶವೇಶನ ರಾಣಿಯರ್ ಶುಕವಾಣಿಯರ್ ಫಣಿವೇಣಿಯರ್ ।
ಹಾಸ ಸಂಜ್ಞೆಯ ನೀರೆಯರ್ ಸುಶರೀರೆಯರ್ ಸ್ಮರವೀರೆಯರ್ ॥
ಲಾಸಗಾಯನ ವಾದನಂಗಳ ಜಾಣೆಯರ್ ದೃಗುಬಾಣೆಯರ್ ।
ರಾಸಲೀಲೆಯೊಳಾಡುವರ್ ಸಲೆ ಪಾಡುವರ್ ಕುಣಿದಾಡುವರ್ ॥

—ಕವಿ ಡಿ.ವಿ.ಜಿ. 'ಅನ್ತಃಪುರಗೀತೆ' ಯಲ್ಲಿ ಬೇಲೂರು ಚೆನ್ನಕೇಶವ ದೇವಾಲಯದ ಶಿಲಾಬಾಲಿಕೆಯರನ್ನು ಕುರಿತು ಹಾಡಿರುವುದು ಹೀಗೆ.

ಪಾಶ್ಚಾತ್ಯರು ಹೊಸ ಭೂಖಂಡವನ್ನು ಕಂಡುಹಿಡಿದು, ಅದಕ್ಕೆ ಅಮೆರಿಕ ಎಂದು ಹೆಸರಿಡುವುದಕ್ಕೆ ಮುನ್ನ ಅಲ್ಲಿ ವಿವಿಧ ಬುಡಕಟ್ಟುಗಳ ಜನ ವಾಸಿಸುತ್ತಿದ್ದರು. ಅವರ ಸಂಸ್ಕೃತಿಗಳಲ್ಲಿ –ವಿಶೇಷವಾಗಿ ಮಾಯಾ ಸಂಸ್ಕೃತಿಯಲ್ಲಿ– ಚಿತ್ರಕಲೆ ಶಿಲ್ಪಕಲೆಗಳು ವಿಕಾಸ ಗೊಂಡಿದ್ದುವು. ಮರವನ್ನು ಉಪಯೋಗಿಸಿ ನಿರ್ಮಿಸಿದ ಅವರ ಕಲಾಕೃತಿಗಳು ಅತ್ಯಂತ ನಾಜೂಕಿನ ಸೃಷ್ಟಿ.



—ಆಫ್ರಿಕದ ಬುಶ್ ಜನರ ಚಿತ್ರಕಲೆ

ಆಫ್ರಿಕದಲ್ಲೂ ಸಹಸ್ರಾರು ವರ್ಷಗಳ ಅವಧಿಯಲ್ಲಿ ವಿವಿಧ ಸಂಸ್ಕೃತಿಗಳಲ್ಲಿ ನಾಗರಿಕತೆ ತನ್ನದೇ ಆದ ರೀತಿಯಲ್ಲಿ ಅರಳಿತೆಂದು ಈಗ ನಾವು ಅರಿತಿದ್ದೇವೆ. ಆ ಕಾಲದಲ್ಲಿ ಚಿತ್ರಕಲೆ, ಶಿಲ್ಪಕಲೆಗಳೂ ಅಲ್ಲಿ ವಿಕಾಸಗೊಂಡುವು.

ಬೇಲೂರು ಸ್ತಂಭಗಳು : ಹೊಯ್ಸಳ ಶಿಲ್ಪ

ದಕ್ಷಿಣ ಆಫ್ರಿಕದ 'ಬುಶ್' ಜನರ ಚಿತ್ರಕಲೆ ಪ್ರಶಂಸಾರ್ಹವಾದದ್ದು.

x x x x x x x x x

13ನೆಯ ಶತಮಾನದಲ್ಲೇ ಗ್ರೀಕ್ ರೋಮನ್ ಕಲೆಗಳ ಗತವೈಭವದ ಬಗೆಗೆ ಇಟಲಿಯಲ್ಲಿ ಮತ್ತೆ ಮೂಡಿದ ಆಸಕ್ತಿಯಿಂದ ಕಲೆಗಳು ಪುನಶ್ಚೇತನಗೊಂಡುವು. ಆ ಶತಮಾನದ ಕಲಾವಿದ ಜಿಯತ್ತೊ (ಈತ ಶಿಲ್ಪಿ–ಕವಿ–ವಾಗ್ಗೇಯಕಾರ–ವಾಸ್ತುಶಿಲ್ಪಿ ಕೂಡಾ) ಇತರ ಚಿತ್ರಕಾರರ ನೆರವಿನಿಂದ ಸಂತ ಫ್ರಾನ್ಸಿಸನ ಆರಾಧನಾ ಮಂದಿರದಲ್ಲಿ ರಚಿಸಿದ ಇಪ್ಪತ್ತೆಂಟು ಕಥನ ದೃಶ್ಯಗಳು ಇಡಿಯ ಯೂರೋಪಿನ ಗಮನವನ್ನು ಸೆಳೆದುವು.

ಮುಂದೆ ಒಂದು ಶತಮಾನದ ಬಳಿಕ ಶಿಲ್ಪಿ ಡೊನಾಟೆಲೋ ಶ್ರೇಷ್ಠ ಶಿಲ್ಪಕೃತಿಗಳನ್ನು ನಿರ್ಮಿಸಿದ. ಆತ ರಚಿಸಿ ಎರಕಹುಯ್ದ ಡೇವಿಡನ ಕಂಚಿನ ಪ್ರತಿಮೆ ಉತ್ಕೃಷ್ಟ ಕಲಾಕೃತಿ. ಮುಂದಿನ ಶತಮಾನಗಳ ಮಹಾನ್ ಶಿಲ್ಪಿ–ಚಿತ್ರಕಾರ ಮೈಕೆಲೆಂಜಲೋ ಮತ್ತು ಖ್ಯಾತ ಚಿತ್ರಕಾರ ರಾಫೇಲ್, ಡೊನಾಟೆಲೋನಿಂದ –ಆತನ ಕೃತಿಗಳಿಂದ– ತಾವು ಎಷ್ಟನ್ನೋ ಕಲಿತೆವು ಎಂದುದುಂಟು.

14ನೆಯ ಶತಮಾನದ ಆರಂಭದಲ್ಲಿ ಚಿತ್ರ–ಶಿಲ್ಪಕಲೆಗಳಲ್ಲಿ ಬೆಳಕು–ನೆರಳುಗಳ ಹಾಗೂ ಘನಾಕೃತಿಯ ಅಧ್ಯಯನ ಆರಂಭವಾಯಿತು.

ಬೈಜಾಂಟಿಯಮ್ ಸಾಮ್ರಾಜ್ಯದ ಪತನ(1453) — ತುರ್ಕರಿಂದ ಕಾನ್‌ಸ್ಟಾಂಟಿನೋಪ್‌ಲ್‌ನ ಆಕ್ರಮಣ – ಕಲೆಯ ಲೋಕದಲ್ಲಿ ಹೊಸ ಒಂದು ಅಧ್ಯಾಯಕ್ಕೆ ನಾಂದಿಯಾಯಿತು. ಬೈಜಾಂಟಿಯಮ್ ದೊರೆಗಳ ಕೃಪಾಶ್ರಯದಲ್ಲಿದ್ದ ಗ್ರೀಕ್ ಮೂಲದ ಚಿತ್ರಕಾರರೂ ಶಿಲ್ಪಿಗಳೂ ಅಲ್ಲಿಂದ ಪಲಾಯನ ಮಾಡಿದರು, ಇಟಲಿಯನ್ನು ತಲಪಿ ಅಲ್ಲಿ ನೆಲೆಸಿದರು. ಪರಿಣಾಮ : ಅಪೂರ್ವ ಕಲಾಚಟುವಟಿಕೆ.

ಅದು ಯೂರೋಪಿನ ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ತೀವ್ರ ಬದಲಾವಣೆಗಳು ಆಗುತ್ತಿದ್ದ ಕಾಲ. ನಗರಗಳು



'ಮೋನ ಲೀಸಾ' : ದ ವಿಂಚಿ

ನಿರ್ಮಾಣಗೊಂಡುವು. ವರ್ತಕ ವರ್ಗ ಬಲಶಾಲಿಯಾಯಿತು. ಹಣ ವಿನಿಮಯ ಸಾಧನವಾಯಿತು. ಮರಣಾನಂತರದ ಬದುಕಿಗೆ ಹೆಚ್ಚು ಮಹತ್ವಕೊಡುತ್ತಿದ್ದ ಕಾಲ ಕಳೆದು, ಬದುಕಿರುವಾಗಲೇ ಸುಖಪಡಬೇಕು —ಎಂದು ಜನರಿಗೆ ಅನಿಸತೊಡಗಿತು. ವಿಜ್ಞಾನ ವಿಕಾಸಗೊಂಡಂತೆ, ಅನ್ವೇಷಣೆ ಜೀವನಕ್ರಮವಾದಂತೆ, ಪರಿಸರದ ಪ್ರಭುವಾಗಲು ಮಾನವ ಯತ್ನಿಸಿದ. ಅರಾಜಕತೆಯ ಬದಲು ರಾಜಕೀಯ ಸ್ಥಿರತೆಯ ಕೇಂದ್ರಗಳು ರೂಪುಗೊಂಡುವು

ಇಂಥ ಮಹಾಸಂಭವಗಳೊಡನೆ ಆರಂಭವಾದ 15ನೆಯ ಶತಮಾನದ ಮಧ್ಯದಲ್ಲಿ ಮುದ್ರಣ ಯಂತ್ರ ರೂಪಿತವಾಯಿತು. ಬೌದ್ಧಿಕ ಕ್ಷೇತ್ರದಲ್ಲಿ ಅದು ಅಸಾಧಾರಣ ಕ್ರಾಂತಿ ಉಂಟುಮಾಡಿತು. ಶಿಕ್ಷಣ ಕ್ರೈಸ್ತಮಠಗಳಿಂದ ಹೊರಹರಿಯಿತು.

ಬದುಕಿನ ಈ ಹೊಸ ದೃಷ್ಟಿ ಶಾಸ್ತ್ರೀಯ ಕಲೆ, ಪಾಂಡಿತ್ಯಗಳ ಬಗೆಗೆ ಶ್ರದ್ಧೆ ತೋರಿತು ಪ್ರಗತಿಯನ್ನೂ ಬಯಸಿತು. ವಿಚಾರ ಸ್ವಾತಂತ್ರ್ಯಕ್ಕೆ ಮಹತ್ವ ನೀಡಿತು. ಅದಮ್ಯ ಕುತೂಹಲ ಗರಿಗೆದರಿತು. ತಲುಪಲಾಗದ ಗುರಿಯೇ ಇಲ್ಲ –ಎನ್ನುವಂತಾಯಿತು.

ಫ್ಲಾರೆನ್ಸ್ ನಗರ 15ನೆಯ ಶತಮಾನದಲ್ಲಿ ಕಲಾಚಟುವಟಿಕೆಗಳ ಮುಖ್ಯ ಕೇಂದ್ರ. ಅಂಥ ಇನ್ನೊಂದು ಕೇಂದ್ರ, ವೆನಿಸ್. ಇಟಲಿಯ ಈ ಎರಡು ಪ್ರದೇಶಗಳಲ್ಲಿ ಎರಡು ವಿಶಿಷ್ಟ ಶೈಲಿಗಳೇ ರೂಪುಗೊಂಡುವು.

ನವೋದಯದ ಮಹಾಪ್ರಭೃತಿಗಳು ವಿಂಚಿ ಮತ್ತು ಮೈಕೆಲೆಂಜಲೋ. ವಿಂಚಿ ಆ ಯುಗಧರ್ಮದ ವಾಣಿ. ಆತ ಅಸಾಧಾರಣ ಪ್ರತಿಭೆಯ ಮಾನವಶ್ರೇಷ್ಠ. ಕಲೆ–ವಿಜ್ಞಾನಗಳೆರಡನ್ನೂ ಕರಗತಮಾಡಿಕೊಂಡ ಸಮಗ್ರ ವ್ಯಕ್ತಿತ್ವ ಅವನದು. ಕುಸ್ತಿ, ಕುದುರೆ ಪಳಗಿಸುವುದು –ಅವನ ಹವ್ಯಾಸ. ಆತ ಬಿಟ್ಟುಹೋದ 5000 ಪುಟಗಳ ಟಿಪ್ಪಣಿ, ಮುಂದಿನ ಜನಾಂಗಗಳ ಅಧ್ಯಯನ ಸಾಮಗ್ರಿ. ನಾಲ್ಕು ವರ್ಷ ದುಡಿದು ಆತ ಚಿತ್ರಿಸಿದ 'ಮೋನಾ ಲೀಸಾ' ಸಾಟಿಯಿಲ್ಲದ ಚಿತ್ರಕೃತಿ.

ಮೈಕೆಲೆಂಜಲೋನದೂ ನವೋದಯ ಶೈಲಿಯ ಜೀವನ. ಸುಮಾರು 90 ವರ್ಷ ಬದುಕಿದ ಆತ ಕೊನೆಯವರೆಗೂ ಕಾರ್ಯನಿರತನಾಗಿದ್ದ. ಆತ ಚಟುವಟಿಕೆ ಆರಂಭಿಸಿದ್ದು ಪ್ಲೇಟೋನ ತತ್ತ್ವಜ್ಞಾನವನ್ನು ತಲೆಯಲ್ಲಿ ತುಂಬಿಕೊಂಡು. ದಾಂತೆಯ ಕವಿತೆಗಳನ್ನು ಬಾಯಿಯಲ್ಲಿ ಕುರುಕುತ್ತ. ಶಿಲ್ಪಿಯಾಗಿ ದುಡಿದ. "ಮಗುವಾಗಿದ್ದಾಗ ಕಲ್ಲುಕುಟಿಗನ ಹೆಂಡತಿ ಮೊಲೆಯೂಡಿಸಿದ್ದರಿಂದ ನಾನು ಶಿಲ್ಪಿಯಾದೆ!"–ಎನ್ನುತ್ತಿದ್ದ. ಆರಾಧನಾ ಮಂದಿರದ ಛಾವಣಿ ಚಿತ್ರರಚನೆಗೆ ಪೋಪ್ ಕರೆದಾಗ, "ಚಿತ್ರರಚನೆ ನನ್ನ ಕೆಲಸವಲ್ಲ. ರಾಫೇಲ್ ಮಾಡಲಿ" ಎಂದ. ಹಾಗೆ ಹೇಳಿದರೂ ನಾಲ್ಕು ವರ್ಷಗಳ ಕಾಲ ಛಾವಣಿಯ ಎತ್ತರದಲ್ಲಿ ಅಂಗಾತ ಮಲಗಿ 10,000 ಚದರ ಅಡಿಗಳ ವಿಸ್ತಾರದಲ್ಲಿ ಸೃಷ್ಟಿ ಪುರಾಣದ ಕಥೆಯನ್ನು –ಸೃಷ್ಟಿ, ಮಾನವನ ಪತನ, ಪ್ರಳಯ– ಚಿತ್ರಿಸಿ, ಅಮರನಾದ. ಅವನು ರಚಿಸಿದ ಶಿಲ್ಪಕೃತಿಗಳಂತೂ ಅನೇಕ.

ಹೊಯ್ದಾಟಗಳ ಅವಿಶ್ರಾಂತ ಮನಸ್ಸು ಅವನದು. ಕವಿ ಕೂಡಾ. ಸಿಟ್ಟು ಬಂದರೆ ಸಿಡಿಯುತ್ತಿದ್ದ. ಆದರೂ ಸಹೃದಯಿ. ಶಿಲ್ಪಿ ಘಿಬರ್ತಿ ಫ್ಲಾರೆನ್ಸಿನ ಆರಾಧನಾ ಮಂದಿರದ ಪೂರ್ವ ದಿಕ್ಕಿನ ದ್ವಾರವನ್ನು ಕಂಚಿನಲ್ಲಿ ಎರಕಹೊಯ್ದಿದ್ದ. ಅದ್ಭುತ ಕೃತಿ. ಅದನ್ನು ನೋಡಿದಾಗ ಮೈಕೆಲೆಂಜಲೋ "ಸ್ವರ್ಗದ ಮಹಾದ್ವಾರವಾಗಲು ಇದು ಅರ್ಹವಾಗಿದೆ", ಎಂದ.

ಬದುಕಿದ್ದಾಗಲೇ ಲೋಕ ವಿಖ್ಯಾತನಾಗಿದ್ದರೂ "ನಾನು ಏನನ್ನೂ ಸಾಧಿಸಲಿಲ್ಲ" ಎಂದು ಕೊರಗುತ್ತ ಕಾಲವಾದ.

ಜರ್ಮನಿಯ ಅಲ್ಬ್ರೆಕ್ಟ್ ಡ್ಯೂರೆರ್ (15-16ನೆಯ ಶತಮಾನ) ಅಕ್ಕಸಾಲಿಗ ವೃತ್ತಿಯಲ್ಲಿ ತರಬೇತು ಪಡೆದ ಕಲಾವಿದ. ಆದರೆ ಖ್ಯಾತನಾದದ್ದು ತಾಮ್ರದ



ಮೈಕೆಲೆಂಜಲೋ ಕೃತಿ



'ಮೃತ ಯೇಸು' : ಬೆಲ್ಲಿನಿ



'ಬೇಸರ' : ಡ್ಯೂರೆರ್ ಕೆತ್ತನೆ

ಕೆತ್ತನೆಯ ಉತ್ತಮ ಕೆಲಸಕ್ಕಾಗಿ. ಆತ ನಿರ್ಮಿಸಿದ ಕೃತಿಗಳಲ್ಲಿ ಜರ್ಮನಿಯ ಅಶಾಂತ ಹೃದಯ ಮಿಡಿಯಿತು.

ಬೆಲ್ಲಿನಿ, ಇಟಲಿಯಲ್ಲಿ ತೈಲಚಿತ್ರ ರಚನೆ ಆರಂಭಿಸಿದ ಕಲಾವಿದ. ಬಾಟಿಚೆಲ್ಲಿ ದಾಂತೆಯ 'ಡಿವೈನ್ ಕಾಮಿಡಿ'ಗೆ ಚಿತ್ರಗಳನ್ನು ಬರೆದ. ವೆನಿಸಿನ ಶ್ರೇಷ್ಠ ಚಿತ್ರಕಾರ ಟಿಷನ್. 'ತಲೆಗಳು ಯೋಚಿಸುತ್ತಿರುವಂತೆ, ಶರೀರಕ್ಕೆ ಸ್ಪರ್ಶಸಾಮರ್ಥ್ಯವಿರುವಂತೆ' ಆತ ಚಿತ್ರ ರಚಿಸುತ್ತಿದ್ದ.

ಟಿಷನ್ ತೀರಿಕೊಂಡಾಗ ಚಿತ್ರಕಾರ ಎಲ್ ಗ್ರೆಕೋಗೆ 35 ವರ್ಷ. 50 ವರ್ಷ ಆದಾಗಲೂ ತನ್ನ ಕೈಪಳಗಲೆಂದು ಟಿಷನ್ ಮತ್ತಿತರ ಚಿತ್ರಕಾರರ ಕೃತಿಗಳನ್ನು ಆತ ಪ್ರತಿಮಾಡುತ್ತಲೇ ಇದ್ದ. ಮುಂದೆ ಸ್ವತಂತ್ರ ಕೃತಿಗಳನ್ನು ರಚಿಸತೊಡಗಿ ತೈಲಚಿತ್ರ ರಚನೆಯಲ್ಲಿ ಟಿಷನನ ಸಾಧನೆಯನ್ನು ಮೀರಿಸಿದ. ಎಲ್ ಗ್ರೆಕೋ ಕೈಯಲ್ಲಿ ಬಣ್ಣ ರುದ್ರನಾಟ್ಯ ಆಡಿತು.

ಬಾಟಿಚೆಲ್ಲಿ ಕೃತಿ : 'ಯುವಕನ ಪದಕ'



ಮೈಕೆಲೆಂಜಲೋ ರಚಿಸಿದ್ದ 'ಅಂತಿಮ ತೀರ್ಮಾನ' ಚಿತ್ರಮಾಲಿಕೆಯಲ್ಲಿ ನಗ್ನಚಿತ್ರಗಳಿದ್ದುವು. ಅವುಗಳಿಗೆ ಪೋಷಾಕು ತೊಡಿಸಬೇಕೆಂದು ಧರ್ಮಪೀಠ ನಿರ್ಧರಿಸಿತು. ಎಲ್ ಗ್ರೆಕೋಗೆ ಕರೆಹೋಯಿತು. "ಮೈಕೆಲೆಂಜಲೋ ಒಳ್ಳೆಯವನೇನೋ ಸರಿ. ಆದರೆ ಅವನಿಗೆ ಚಿತ್ರಕಲೆ ಬರದು. ಆ ಚಿತ್ರಗಳನ್ನೆಲ್ಲ ಅಳಿಸಿಹಾಕಿ. ಅಷ್ಟೇ ಶ್ರೇಷ್ಠವಾದ, ಆದರೆ ಸಭ್ಯವಾದ, ಚಿತ್ರಗಳನ್ನು ರಚಿಸುತ್ತೇನೆ" ಎಂದ ಎಲ್ ಗ್ರೆಕೋ. (ಫಿಬೆರ್ತಿಯ ಶಿಲ್ಪಕೃತಿಯನ್ನು ಕುರಿತು ಮೈಕೆಲೆಂಜಲೋ ಆಡಿದ ಮಾತೆಲ್ಲಿ ? ಇದೆಲ್ಲಿ ?)

ಸ್ಪೇನಿನ ದೊರೆ ಒಂದು ಬೃಹತ್ ಅರಮನೆ ಕಟ್ಟಿಸತೊಡಗಿ





'ದೇವ ಕನ್ನಿಕೆಯರು' : ಎಲ್ ಗ್ರೆಕೋ



ದಾಗ. ಇಟಲಿಯ ಅನೇಕ ಕಲಾವಿದರು ದುಡಿಯಲೆಂದು ಸ್ಪೇನಿಗೆ ಹೋದರು. ಆ ಗುಂಪಿನಲ್ಲಿದ್ದ ಚಿತ್ರಕಾರ ಎಲ್ ಗ್ರೆಕೋ.

"ಪ್ರಕೃತಿ ನನಗೆ ಕೊಟ್ಟಿರುವ ವಿಶೇಷ ಪ್ರತಿಭೆಯಿಂದಾಗಿ ಯಾವ ಕೆಲಸವಾದರೂ ನನ್ನ ವಶವಾಗುತ್ತದೆ", ಎಂದು ಬಡಿವಾರದ ಮಾತು ಆಡುತ್ತಿದ್ದ ಚೆಲ್ಲಿನಿ. ಶ್ರೇಷ್ಠ ಲೋಹ ಶಿಲ್ಪಿಯಾಗಿದ್ದ, ಆತ ಒಳ್ಳೆಯ ಅಕ್ಕಸಾಲಿಗ. ಒಳ್ಳೆಯ ಕಲಾವಿದ.

ರೂಬೆನ್ಸ್ ಚಿತ್ರಕಲೆ, ಪ್ರಭುತ್ವಗಳ ನಡುವಣ ರಾಯಭಾರ– ಎರಡರಲ್ಲೂ ಖ್ಯಾತಿ ಗಳಿಸಿದ ಕಲಾವಿದ. ಅವನ ಚಿತ್ರಗಳಿಗಾಗಿ ಬೇಡಿಕೆ ಎಷ್ಟು ತೀವ್ರವಾಯಿತೆಂದರೆ ತನ್ನ ಚಿತ್ರಲೇಖನದ ವಿವಿಧ ಹಂತಗಳಲ್ಲಿ ದುಡಿಯಲು ಚಿತ್ರಕಾರರನ್ನು ಆತ ನೇಮಿಸುತ್ತಿದ್ದ. "ಇದು ನೀವು ಬರೆದದ್ದಲ್ಲ. ಇಷ್ಟು ಬೆಲೆ ಸಲ್ಲದು." ಎಂದರೆ, ಆತನ ಉತ್ತರ: "ನಾನೇ ಪೂರ್ತಿಯಾಗಿ ಬರೆದರೆ ಬೆಲೆ ಇನ್ನೂ ಜಾಸ್ತಿ."

ಡಚ್ ಕಲಾವಿದ ರೆಂಬ್ರಾಂಟನ ಕೆತ್ತನೆ ಕೆಲಸ ಅಸಾಧಾರಣವಾದದ್ದು. ಬೆಳಕು ನೆರಳುಗಳ ವಿನ್ಯಾಸದ ವರ್ಣರಚನೆಯಲ್ಲಿ ಅವನು ನಿಸ್ಸೀಮ. ಮೇಲಾಗಿ, ಕಲಾವಿದನ ಕೃತಿರಚನಾ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಸಂಕಷ್ಟ ಅನುಭವಿಸಿದ ಧೀಮಂತ ಆತ.

ಡಚ್ಚರು ಸ್ಪಾನಿಷ್ ನೌಕಾಪಡೆಯ ಮೇಲೆ ವಿಜಯಗಳಿಸಿದ ಸಂಭ್ರಮದ ದಿನಗಳು. ಹದಿನಾರು ಜನ ಯೋಧರ ತಂಡ ತಮ್ಮ ಚಿತ್ರ ಬರೆಯುವಂತೆ ರೆಂಬ್ರಾಂಟ್‌ಗೆ ಹೇಳಿತು. 14 ಅಡಿ ಉದ್ದ 12 ಅಡಿ ಅಗಲದ ಚಿತ್ರ. ಚಿತ್ರಕ್ಕಾಗಿ ತಂಡದ ಒಬ್ಬೊಬ್ಬರೂ ಕೊಡಲೊಪ್ಪಿದ್ದು 500 ಡಾಲರು. ಇದು ಬೆಳಕು ನೆರಳುಗಳ ಹೊಯ್ದಾಟದ ಸೊಗಸಾದ ಕೃತಿ (ರಚನೆ: 1642ರಲ್ಲಿ). ತಂಡದವರಿಗೆ ಒಪ್ಪಿಗೆಯಾಗಲಿಲ್ಲ. "ಕೆಲವರು ಚೆನ್ನಾಗಿ ಕಾಣಿಸ್ತಾರೆ; ಕೆಲವರು ಮಸುಕಾಗಿ ಕಾಣಿಸ್ತಾರೆ". ಎಂದರು. "ಈ ಚಿತ್ರ ಬೇಡ." ಎಂದುಬಿಟ್ಟರು. ಮುಂದೆ ರೆಂಬ್ರಾಂಟನ ಬಳಿಗೆ ಚಿತ್ರ ಬರೆಸಲು ಬರುವವರ ಸಂಖ್ಯೆ ಇಳಿದುಹೋಯಿತು.

ವರ್ಮೀರ್ ಗೃಹಜೀವನವನ್ನು, ತನ್ನ ಚಿತ್ರಗಳ ಮೂಲಕ ಅಮರಗೊಳಿಸಿದ ಖ್ಯಾತ ಡಚ್ ಚಿತ್ರಕಾರ. ಬರಿಗೈಯವನಾಗಿ ಪತ್ನಿಯನ್ನೂ ಹತ್ತು ಮಕ್ಕಳನ್ನೂ ಬಿಟ್ಟು ತೀರಿಕೊಂಡ.

× × ×          × × ×          × × ×

ನವೋದಯ ಕಲೆ ಹಲವು ವರ್ಣಗಳಲ್ಲಿ, ಹಲವು ವಿಧಗಳಲ್ಲಿ ಅರಳಿದ್ದನ್ನು ಕಂಡೆವು. ಇದು ಸರ್ವವ್ಯಾಪಿಯಾದ ಚಳುವಳಿ.

ಅಂಥದೊಂದು ಪ್ರವೃತ್ತಿಗೆ ತನಗೆ ಅರಿವಿಲ್ಲದೆಯೋ ಮೈಕೆಲೆಂಜಲೋ ಜನಕನಾಗಿದ್ದ. ಈ ಮಹಾಶಿಲ್ಪಿ–ಚಿತ್ರಕಾರ ಕಲಾಕೃತಿಯ ಅಂಗಗಳಿಗಿಂತ ಆಕೃತಿಯ ಒಟ್ಟು ಪರಿಣಾಮದೆಡೆಗೆ ಗಮನ ನೀಡುತ್ತಿದ್ದ. ಆ ಮಟ್ಟಿಗೆ ಶಾಸ್ತ್ರೀಯ ಪಂಥಕ್ಕಿಂತ ಅವನದು ಭಿನ್ನವಾದದ್ದು. ಮುಂದೆ, ಎಲ್ಲವನ್ನೂ ಬಲ್ಲವರಂತೆ ವರ್ತಿಸುತ್ತಿದ್ದ ಎದೆಗಾರ ಕಲಾವಿದರನ್ನು ಅವಹೇಳನ ಮಾಡುವುದಕ್ಕೋಸ್ಕರ, ಬಾರೋಕ್ (ವಕ್ರ) ಪದ ಹುಟ್ಟಿತು. ಬರಬರುತ್ತ ಬಾರೋಕ್ ಒಂದು ಶೈಲಿಯಾಯಿತು.

17ನೆಯ ಶತಮಾನದ ಐರೋಪ್ಯ ಕಲೆಯನ್ನು ಬಣ್ಣಿಸುವುದಕ್ಕೆ ಇಂದು ಬಾರೋಕ್ ಪದವನ್ನು ಬಳಸುತ್ತಾರೆ. ಬಾರೋಕ್ ಶೈಲಿ ಪ್ರತಿ ರಾಷ್ಟ್ರದಲ್ಲೂ ತನ್ನದೇ ಆದ ವಿಶಿಷ್ಟ ಸ್ವರೂಪವನ್ನು ಪಡೆಯಿತು.

18ನೆಯ ಶತಮಾನದಲ್ಲಿ ಬಾರೋಕ್ ಶೈಲಿ ನಯಗೊಂಡಿತು, ಹೆಚ್ಚು ಲಘುವಾಯಿತು. ಇದನ್ನು ರೊಕೋಕೋ ಎಂದು ಕರೆದರು. (ಈ ಶೈಲಿಯಲ್ಲಿ ರೊಕೇಲ್ ಮತ್ತು ಕಾಕಿಲ್ ಕಲ್ಲು, ಚಿಪ್ಪು ಬಳಸಿದ್ದರಿಂದ ರೊಕೋಕೋ ಹೆಸರು.)



'ಇರುಳಿನ ಕಾವಲು' : ರೆಂಬ್ರಾಂಟ್



ಗೋಯಾ ರಚಿತ ರೂಪಚಿತ್ರ

ವಾಸ್ತವತೆಯತ್ತ ವಾಲುವ ಪ್ರವೃತ್ತಿ ಒಂದೆಡೆ ರೂಪತಳೆದರೆ, ಇನ್ನೊಂದೆಡೆ ಅದು ಕಥನ ಚಿತ್ರಗಳ ಶೈಲಿಯಾಯಿತು.

ಭೂದೃಶ್ಯಗಳ ಚಿತ್ರಣ 17ನೆಯ ಶತಮಾನದಲ್ಲಿ ಹಾಲೆಂಡಿನಲ್ಲಿ ಸ್ವತಂತ್ರ ಶೈಲಿಯಾಗಿ ಬೆಳೆಯಿತು.

ಇಂಗ್ಲೆಂಡಿನಲ್ಲಿ ಚಿತ್ರಕಾರ ಹೊಗಾರ್ತ್ (17–18ನೇ ಶತಮಾನ) ತನ್ನನ್ನು ಸಾಹಿತಿ ಎಂದು ಬಣ್ಣಿಸಿಕೊಳ್ಳುತ್ತಿದ್ದ. "ರಂಗಭೂಮಿಯ ನಾಟಕದ ಹಾಗೆ ತೋರುವ ಚಿತ್ರಗಳನು ಬರೆಯುವುದು ನನಗೆ ಇಷ್ಟ. ನನ್ನ ಚಿತ್ರವೇ ನನ್ನ ರಂಗಭೂಮಿ. ನಾನು ಚಿತ್ರಿಸುವ ಸ್ತ್ರೀಪುರುಷರೇ ನನ್ನ ನಟ–ನಟಿಯರು," ಎನ್ನುತ್ತಿದ್ದ. ಇಂಗ್ಲೆಂಡಿನಲ್ಲಿ ದೇಶೀಯ ಚಿತ್ರಕಲೆ ಆತನಿಂದ ಮೊದಲಾಯಿತು. ಜನಸಾಮಾನ್ಯರೂ ಹೊಗಾರ್ತನ ಕೃತಿಗಳಿಗೆ ವಸ್ತುವಾದರು. ಆತ ಬರೆದ 'ಮೀನು ಮಾರುವ ಹುಡುಗಿ' ಸುಪ್ರಸಿದ್ಧ ಚಿತ್ರ.



18–19ನೆಯ ಶತಮಾನದ ಗೋಯಾ ಸ್ಪೇನಿನಲ್ಲಿ ಬಿರುಗಾಳಿಯಂತೆ ಬೀಸಿದ ಚಿತ್ರಕಾರ. ಎಲ್ಲರಿಗೂ ಆತನಿಂದ ಚಿತ್ರ ಬರೆಸಿಕೊಳ್ಳುವ ಅಪೇಕ್ಷೆ. ರೂಪಚಿತ್ರ ಅವನ ವೈಶಿಷ್ಟ್ಯ. ಅದೂ ಕಟಿಯ ಮೇಲ್ಭಾಗದ ಚಿತ್ರ. "ಕೈಗಳನ್ನೂ ಚಿತ್ರಿಸಬೇಕು ಎನ್ನುವಿರಾದರೆ ಹೆಚ್ಚು ಬೆಲೆ", ಎನ್ನುತ್ತಿದ್ದ.

ಟರ್ನರ್ ಇಂಗ್ಲೆಂಡಿನ ಇನ್ನೊಬ್ಬ ಖ್ಯಾತ ಚಿತ್ರಕಾರ. ತನ್ನ ಚಿತ್ರಗಳಿಗೆ ಎಷ್ಟು ಒಪ್ಪವಿಟ್ಟರೂ ಅವನಿಗೆ ತೃಪ್ತಿ ಇಲ್ಲ. ತಾನು ಮಾರಿದ ಚಿತ್ರಗಳನ್ನು ಹರಾಜಿನಲ್ಲಿ ಹೆಚ್ಚು ಬೆಲೆ ಕೊಟ್ಟು ತಾನೇ ಕೊಳ್ಳುತ್ತಿದ್ದ. "ಅವು ನನ್ನ ಮಕ್ಕಳು"—ಎಂಬುದು ಆತ ನೀಡುತ್ತಿದ್ದ ವಿವರಣೆ.



19ನೆಯ ಶತಮಾನದಲ್ಲಿ "ದೇವತೆಗಳನ್ನು ನಾನು ಕಂಡಿಲ್ಲ" ಎಂದು ಗುಡುಗಿ, ಸಾಮಾನ್ಯ ಜನಜೀವನವನ್ನು ತನ್ನ ಚಿತ್ರಗಳ ವಸ್ತುವಾಗಿ ಮಾಡಿದವನು ಫ್ರಾನ್ಸಿನ ಕೂರ್ಬೆ.

ಚಿತ್ರಶಾಲೆಗಳಿಗೆ ಹೋಗಿ ಅಲ್ಲಿ ಸುಪ್ರಸಿದ್ಧ ಚಿತ್ರಕಾರರ ಕೃತಿಗಳನ್ನು ಪ್ರತಿಮಾಡುವುದು ಕಲಾವಿದ್ಯಾರ್ಥಿಗಳು ಅನುಸರಿಸುತ್ತಿದ್ದ ರೀತಿ. ಅದನ್ನು ಜರೆದು, ಕೂರ್ಬೆ ನೆಂದ: "ಚಿತ್ರಸಂಗ್ರಹಾಲಯವನ್ನು 20 ವರ್ಷಗಳ ಕಾಲ ಮುಚ್ಚಬೇಕು. ಇಂದಿನ ಚಿತ್ರಕಾರರು ಜಗತ್ತನ್ನು ತಮ್ಮದೇ ಕಣ್ಣುಗಳಲ್ಲಿ ನೋಡತೊಡಗುವುದು ಇದರಿಂದ ಸಾಧ್ಯವಾಗ್ತದೆ".

ಫ್ರಾನ್ಸಿನ ಮಹಾಕ್ರಾಂತಿಯ ವೇಳೆಯಲ್ಲಿ ಕ್ರಾಂತಿಕಾರಿ ಕಲಾವಿದನಾಗಿ ಹೋರಾಡಿದ ಕೂರ್ಬೆ, ಚಿತ್ರಕಾರರ ವಾಮಪಂಥ ಅಸ್ತಿತ್ವಕ್ಕೆ ಬರಲು ಕಾರಣನಾದ.

ಕೂರ್ಬನಿಗಿಂತ ಕಿರಿಯುವನಾದ ದಗಾ, 35ನೆಯ ವರ್ಷದಲ್ಲಿ ತನ್ನ ಚಿತ್ರಕಲೆಯ ಬಗೆಗೆ ಅತೃಪ್ತಿ ಪಟ್ಟು ಹೊಸ ಅಭಿವ್ಯಕ್ತಿಗಾಗಿ ಚಡಪಡಿಸಿದ.

19ನೆಯ ಶತಮಾನದಲ್ಲಿ ವಾಸ್ತವವಾದದ ಶೈಲಿ ಎಷ್ಟು ವಿಪರೀತಕ್ಕೆ ಹೋಯಿತೆಂದರೆ, ಚಿತ್ರದಲ್ಲಿ ಸಂಯೋಜನೆಗಿಂತಲೂ ಆಕೃತಿಯ ವಿವರಗಳ ಸಹಜತೆಯೇ ಮುಖ್ಯವೆನಿಸಿತು. ಶತಮಾನದ ಕೊನೆಯ ವೇಳೆಗೆ ಇದಕ್ಕೆ ಪ್ರತಿಕ್ರಿಯೆ ಅನಿವಾರ್ಯವಾಯಿತು.



ಚೀನೀ ಪಿಂಗಾಣಿ ಕಲೆ : ಇಂಗ್ಲಿಷರಿಂದ ಅನುಕರಣೆ

× × ×    × × ×    × × ×

ಭಾರತೀಯ ಚಿತ್ರಕಲೆಯಲ್ಲಿ ಹೊಸ ಶೈಲಿಯೊಂದು ಆರಂಭವಾದದ್ದು ಮೊಗಲರ ಆಳ್ವಿಕೆಯಲ್ಲಿ, 16ನೆಯ ಶತಮಾನದಲ್ಲಿ. ಪರ್ಷಿಯದ ವರ್ಣಮಯ ಕಿರುಚಿತ್ರ ರಚನೆ ಹಾಗೂ ಭಾರತದ ಚಿತ್ರಕಲೆಯ ಗುಣಾಂಶಗಳನ್ನು ಒಳಗೊಂಡ ವಿಶಿಷ್ಟ ಶೈಲಿ ಮೊಗಲ್ ಚಿತ್ರಕಲೆ. ಆಸ್ಥಾನದ ಪ್ರೋತ್ಸಾಹ ಈ ಚಿತ್ರ ಕಲೆಯ ಶೀಘ್ರ ವಿಕಾಸಕ್ಕೆ ಕಾರಣವಾಯಿತು.

ಈ ಚಿತ್ರಕಲೆಗೆ ಸರಿಸಮವಾಗಿ ಅಭಿವೃದ್ಧಿ ಹೊಂದಿದ್ದು ರಜಪೂತ ಕಲೆ. ಇದರ ಬೆಳವಣಿಗೆಗೆ ಉತ್ತೇಜನ ಮೊಗಲರಿಂದಲೇ ದೊರೆಯಿತು. ಆಶ್ಚರ್ಯದ ಸಂಗತಿಯೆಂದರೆ, ಮೊಗಲರಿಗೆ ಉಗ್ರ ಪ್ರತಿಭಟನೆ ನೀಡಿದ ಮೇವಾರದಲ್ಲೇ ರಜಪೂತ ಚಿತ್ರಕಲೆ ವಿಕಾಸಗೊಂಡಿತು. 17ನೆಯ ಶತಮಾನದ 'ರಾಗ ರಾಗಿಣಿ' 'ರಾಗಮಾಲಾ' ಚಿತ್ರ ವೃಂದ ರಜಪೂತ ಚಿತ್ರಕಲೆಯ ಬೆಡಗನ್ನು ಸಾರುತ್ತದೆ.

'ರಜಮ್‌ನಾಮ', 'ಮಹಾಭಾರತ'ದ ಪರ್ಷಿಯನ್ ತರ್ಜುಮೆ. ಅದನ್ನು ಮಾಡಿಸಿದವನು ಅಕ್ಬರ್. 'ರಜಮ್‌ನಾಮ'ಕ್ಕಾಗಿ ಆತ ವಿವಿಧ ಚಿತ್ರಕಾರರಿಂದ 169 ಚಿತ್ರಗಳನ್ನು ಬರೆಸಿದ. ಅಕ್ಬರ್ ಬರೆಸಿದ ಇನ್ನೊಂದು ಗ್ರಂಥ. ಸಾಹಸದ ಮತ್ತು ರಂಜನೆಯ ಕಥೆಗಳ ಸಂಗ್ರಹ—'ಹಮ್‌ಜನಾಮ'. ಇದರಲ್ಲಿ 1,375 ಚಿತ್ರಗಳಿವೆ.

ರಾಜಸ್ಥಾನ ಚಿತ್ರಕಲೆಯಂತೆ ಪಹಾರಿ ಚಿತ್ರಕಲಾಶೈಲಿಯೂ ದಖ್ಖನೀ ಶೈಲಿಯೂ ಬೆಳೆದುವು.

ಭಾರತದ ವಿವಿಧ ಭಾಗಗಳ ಮೇಲೆ ಈಸ್ಟ್ ಇಂಡಿಯಾ ಕಂಪನಿಯ –ಅಂದರೆ, ಆಂಗ್ಲರ– ಆಡಳಿತ ಬಲವಾದಂತೆ, ಇಂಗ್ಲೆಂಡಿನಿಂದ ತರಿಸಿದ ಚಿತ್ರಗಳ ಅನುಕರಣೆಯೇ ಮುಖ್ಯವಾಗಿದ್ದ 'ಕಂಪೆನಿ ಕಲಾಶೈಲಿ'ಯೂ ಹುಟ್ಟಿಕೊಂಡಿತು.

ಚೀನದಲ್ಲಿ ಪಿಂಗಾಣಿ ಚಿತ್ರಕಲೆ ಊರ್ಜಿತಕ್ಕೆ ಬಂತು. 18ನೆಯ ಶತಮಾನದ ವೇಳೆಗೆ ಈ ಕೃತಿಗಳು ಯೂರೋಪನ್ನು ತಲಪಿದಾಗ ಅಪಾರ ಮೆಚ್ಚುಗೆ ಗಳಿಸಿದುವು. ಇಂಗ್ಲೆಂಡಿನ ಚಿತ್ರಕಾರರು ಆ ಕಲೆಯನ್ನು ಅನುಕರಿಸತೊಡಗಿದರು.

ಚಿತ್ರಮಾಲೆಯಂಥ ಲಿಪಿ ಇರುವ ಚೀನದಲ್ಲಿ ಆಲಂಕಾರಿಕ ಬ್ರಷ್ ಚಿತ್ರಣ ಸಹಜವಾಗಿಯೇ ಪ್ರಗತಿಹೊಂದಿತು.

ಜಪಾನಿನ ಚಿತ್ರಕಲೆಯ ಪರಿಚಯ ಬಾಹ್ಯ ಜಗತ್ತಿಗೆ ಆದದ್ದು 18ನೆಯ ಶತಮಾನದ ಅಂತ್ಯ ಭಾಗ ಹಾಗೂ 19ನೆಯ ಶತಮಾನದ ಆರಂಭದಲ್ಲಿ, ಮುದ್ರಣ ಕಲೆಯಲ್ಲಿ ಜಪಾನು ಮೇಲ್ಮೆ ಗಳಿಸಿದಾಗ, ಜಪಾನಿನ ಚಿತ್ರಗಳ ಮುದ್ರಿತ ಪ್ರತಿಗಳು ಯೂರೋಪಿನಲ್ಲಿ ಎಲ್ಲರ ಗಮನ ಸೆಳೆದುವು.

× × ×    × × ×    × × ×

ಕ್ಯಾಮರಾ 19ನೆಯ ಶತಮಾನದ ಮಧ್ಯದಲ್ಲಿ ಕಾಣಿಸಿಕೊಂಡುದೇ ತಡ, ಚಿತ್ರಕಲಾ ಲೋಕದಲ್ಲಿ ಅಲ್ಲೋಲಕಲ್ಲೋಲ ಉಂಟಾಯಿತು. ಒಂದು ಯಂತ್ರ ಮನುಷ್ಯನ ರೂಪವನ್ನು ಕ್ಷಿಪ್ರವಾಗಿ ಸೆರೆಹಿಡಿಯಲು ಸಮರ್ಥವಾಯಿತೆಂದಮೇಲೆ, ಚಿತ್ರಕಾರನಿಂದೇನು ಉಪಯೋಗ ? ರೂಪಚಿತ್ರವನ್ನು, ಬಳಗಚಿತ್ರವನ್ನು ಚಿತ್ರಕಾರರಿಂದ ಬರೆಸುವ ಪದ್ಧತಿ ಮಾಯವಾಯಿತು. ಕೆಲ ಚಿತ್ರಕಾರರೇನೋ ಕ್ಯಾಮರಾಕ್ಕಿಂತಲೂ ಚೆನ್ನಾಗಿ, ಅದರಷ್ಟೇ ಸಹಜವಾಗಿ, ರೂಪಚಿತ್ರ ಬಿಡಿಸಲು ಯತ್ನಿಸಿದರು. ಆದರೆ ಯಂತ್ರದೊಡನೆ ಮಾನವನ ಸ್ಪರ್ಧೆ ಅರ್ಥಹೀನವಾಯಿತು. ಆಗಿನ್ನೂ ಕ್ಯಾಮರಾದಲ್ಲಿ ಬಣ್ಣಗಳ ಛಾಯಾಚಿತ್ರಣ ಆಗುತ್ತಿರಲಿಲ್ಲ. ಚಿತ್ರಕಾರರು, ಬಣ್ಣದ ಚಿತ್ರ ಬರೆಸುವುದು ತಮ್ಮಿಂದ ಮಾತ್ರ ಸಾಧ್ಯ ಎಂದುಕೊಂಡರು. ಮುಂದೆ ಆ ಆಸೆಯೂ ಉಳಿಯಲಿಲ್ಲ. ಕ್ಯಾಮರಾ ಸೃಷ್ಟಿಸುವ ಚಿತ್ರಕ್ಕಿಂತ ತೀರ ಭಿನ್ನವಾದ ರೀತಿಯಲ್ಲಿ ತಾವು ಚಿತ್ರಿಸುವುದು ಅನಿವಾರ್ಯವೆನಿಸಿತು. ಹಾಗೆ ಮೊದಲಾಯಿತು ಆಧುನಿಕ ಚಿತ್ರಕಲೆ.

ಕ್ಲಾಡ್ ಮೊನೆ ಹಾಗೂ ಆತನ ಮಿತ್ರರು ಕಥಾವಸ್ತುಚಿತ್ರಣವನ್ನು ತ್ಯಜಿಸಿ, ಸಮಕಾಲೀನ ದೃಶ್ಯ



'ಟ್ಯೂಲಿಪ್ ಹೊಲಗಳು' : ಕ್ಲಾಡ್ ಮೊನೆ



'ಫಸಲು' : ವಾನ್ ಗೋ

ಗಳನ್ನು ಚಿತ್ರಿಸತೊಡಗಿದರು. ಶಾಸ್ತ್ರೀಯ ಕುಂಚವಿಧಾನದ ಬದಲು ಬಣ್ಣಗಳಲ್ಲಿ ಚೆಲ್ಲಾಟ ನಡೆಸಿದರು. ವರ್ಣರೇಖೆಗಳ ಬದಲು ಬೆಳಕಿನತ್ತ ಗಮನ ಕೇಂದ್ರೀಕರಿಸಿದರು. ಆ ರೀತಿ 1870ರ ಅನಂತರದ ವರ್ಷಗಳಲ್ಲಿ ಆಧುನಿಕ ಚಿತ್ರಕಲೆ ರೂಪುಗೊಂಡಿತು.

ನೂತನ ಚಿತ್ರಕಲಾಶೈಲಿಯಲ್ಲಿ ಪ್ರಸಿದ್ಧರಾದವರು, ಕ್ಲಾಡ್ ಮೊನೆ, ಪಾಲ್ ಗಾಗಿನ್, ವಾನ್ ಗೋ, ಸೇಜಾನ್, ಎಡ್ವರ್ಡ್ ಮಾನೆ.

ಪ್ಯಾರಿಸ್ಸಿನ ಖ್ಯಾತ ಚಿತ್ರಶಾಲೆ ಏರ್ಪಡಿಸುತ್ತಿದ್ದ ವಾರ್ಷಿಕ ಚಿತ್ರಪ್ರದರ್ಶನದಲ್ಲಿ ಈ ಯುವಕ ಚಿತ್ರಕಾರರ ಕೃತಿಗಳನ್ನಿಡಲು ಅವಕಾಶವೇ ಸಿಗುತ್ತಿರಲಿಲ್ಲ. ತೀರ್ಪುಗಾರರು ಒಂದಲ್ಲ ಒಂದು ಕಾರಣ ಹೇಳಿ ಅವರ ಕೃತಿಗಳನ್ನು ತಿರಸ್ಕರಿಸುತ್ತಿದ್ದರು. ಆ ಚಿತ್ರಪ್ರದರ್ಶನದ ಎದುರಲ್ಲೇ ರಸ್ತೆಯಂಚಿನಲ್ಲಿ ಈ ಚಿತ್ರಕಾರರು ತಮ್ಮ 'ತಿರಸ್ಕೃತ ಚಿತ್ರ'ಗಳ ಪ್ರದರ್ಶನ ಏರ್ಪಡಿಸಿದರು. ಅವರಲ್ಲಿದ್ದ ಒಂದು ಚಿತ್ರ ಕ್ಲಾಡ್ ಮೊನೆಯ 'ಸಮುಷ್ಟಿಪರಿಣಾಮ : ಸೂರ್ಯೋದಯ'. ವಿಮರ್ಶಕರು ಪರಿಹಾಸ್ಯಮಾಡಲೆಂದು ಆ ಪ್ರದರ್ಶನದ ಎಲ್ಲ ಚಿತ್ರಗಳನ್ನೂ ಸಮುಷ್ಟಿ ಪರಿಣಾಮ ಚಿತ್ರಗಳೆಂದು ಕರೆದರು. ಅಂದಿನಿಂದ ಸಮುಷ್ಟಿಪರಿಣಾಮವಾದ ಪಾಶ್ಚಾತ್ಯ ಚಿತ್ರಕಲೆಯು ಹೊಸ ಪಂಥವಾಯಿತು. ಆ ಹತ್ತು ವರ್ಷಗಳಲ್ಲಿ ಈ ಚಿತ್ರಕಾರರ ತಂಡ ಈ ಬಗೆಯ ಒಟ್ಟು ಏಳು ಪ್ರದರ್ಶನಗಳನ್ನು ನಡೆಸಿತು.

ಈ ಪಂಥದ ಗುರು ಕ್ಲಾಡ್ ಮೊನೆ. ಜೀವನದುದ್ದಕ್ಕೂ ದಾರಿದ್ರ್ಯಕ್ಕೆದಿರು ನಿಷ್ಠುರ ಹೋರಾಟ ನಡೆಸಿದ. ಮಗು ಹುಟ್ಟಿದಾಗ ಅದಕ್ಕೆ ಹಾಲಿಲ್ಲ; ತಾಯಿಗೆ ಆಹಾರವಿಲ್ಲ; ಈತ ಉಪವಾಸ. 'ಕಾಮಿಲ್ ಮತ್ತು ಮಗು' ಆತ ಆಗ ಬರೆದ ಕೃತಿ. ಅವನು ಸತ್ತು ನಾಲ್ಕು ದಶಕಗಳಾದ ಮೇಲೆ 504,000 ಡಾಲರುಗಳಿಗೆ ಅದು ಮಾರಾಟವಾಯಿತು !

ಬೆಳಕಿನ ಹಾಗೂ ಬಣ್ಣಗಳ ನೆಲೆಯಿಂದ ಪ್ರಕೃತಿಯನ್ನು ತಾವು ಕಂಡಂತೆ ಚಿತ್ರಿಸುವುದು ಸಮುಷ್ಟಿಪರಿಣಾಮವಾದಿಗಳ ಚಿತ್ರಣವಿಧಾನ. ಚಿತ್ರ ಇಲ್ಲಿ ಕಥೆ ಹೇಳುವುದಿಲ್ಲ. ಆದರ್ಶದ ಯಾವುದೇ ಘೋಷವಿಲ್ಲ. ಅರ್ಥಮಾಡಿಕೊಳ್ಳಲು ನೆರವಾಗುವ ಸುಳುಹಿಲ್ಲ. ಇಲ್ಲಿ ಚಿತ್ರವನ್ನು 'ಓದು' ವಂತಿಲ್ಲ. ಕಲಾಕೃತಿ ಎಂದು ಅದನ್ನು 'ನೋಡ' ಬೇಕು.

ಈ ಚಿತ್ರಕಾರರು ಒಂದು ತಂಡದ ಸದಸ್ಯರಂತಿದ್ದರೂ ಕ್ರಮೇಣ ಅವರು ತಮ್ಮದೇ ಆದ ವೈಯಕ್ತಿಕ ಶೈಲಿಗಳನ್ನು ರೂಪಿಸಿಕೊಂಡರು.

ಪಾಲ್ ಗಾಗಿನ್ ತನ್ನ ಚಿತ್ರದಲ್ಲಿ ಏನನ್ನೋ ಹೇಳಲು ಯತ್ನಿಸಿದ. ಭಾವನೆಯಾಗಲೀ ಸಂವೇದನೆಯಾಗಲೀ ಅಲ್ಲ; ಆತ ಹೊರಗೆಡವಲು ಬಯಸಿದ್ದು ವಿಚಾರವನ್ನು. ಅವನ ಶೈಲಿಯನ್ನು ಸಂಕೇತವಾದ ಎಂದು ಕರೆದರು.

ಭಿತ್ತಿಚಿತ್ರಗಳನ್ನು ಅಂಟಿಸುವ ಕೆಲಸಮಾಡಿಯೋ, ಬೇಡಿಯೋ ಜೀವಿಸುತ್ತಿದ್ದ ವಾನ್ ಗೋ ಚಿತ್ರಗಳ ಮೂಲಕ ತನ್ನ ವೈಯಕ್ತಿಕ ಸಂಕಟವನ್ನು ಹೊರಹೊಮ್ಮಿಸಲು ಪ್ರಯತ್ನಿಸಿದ. ತಾನು ನೋಡಿದ್ದನ್ನು ಚಿತ್ರಿಸದೆ ತನಗೆ ಅನಿಸಿದ್ದನ್ನು ಚಿತ್ರಿಸಿದ. ಅದನ್ನು ಅಭಿವ್ಯಕ್ತಿವಾದ ಎಂದರು.

ಹೀಗೆ ಶಾಸ್ತ್ರೀಯತೆಯ ಕಟ್ಟೆ ಒಡೆದುದೇ ತಡ, ಪ್ರವಾಹ ಹತ್ತು ದಿಕ್ಕುಗಳಲ್ಲಿ ಹರಿಯಿತು. ಅನಂತರದ ಕಲಾವಿದರಿಗೆ ಈ ನಾವೀನ್ಯವೇ ನವಸಂಪ್ರದಾಯವಾಯಿತು.

"ಅಲ್ಪ ಕಾಲದ್ದಾದರೂ ತೀವ್ರ ಉತ್ಸುಕ 'ಜೀವನವೇ ನನಗೆ ಇಷ್ಟ" ಎಂದು ನುಡಿದ ಮೋಡಿಗ್ಲ್ಯಾನಿ, ವಿಶಿಷ್ಟವೆನಿಸುವ ಚಿತ್ರಗಳನ್ನು ರಚಿಸಿ ತನ್ನ 36ನೆಯ ವರ್ಷದಲ್ಲಿ ಕಾಲವಾದ.

ಮೋಡಿಗ್ಲ್ಯಾನಿ ವಿರಚಿತ 'ಗೆಳತಿ





ಅರಣ್ಯದ ಪ್ರಾಣಿಗಳು : ರೂಸೋ



'ಬಿಳಿಯ ಪುಕ್ಕಗಳು' : ಮಾಟಿಸ್

ಬೀದಿಯಲ್ಲೊಬ್ಬ ಚಿತ್ರವಿಚಿತ್ರ ಸಾಮಾನುಗಳನ್ನು ಮಾರುತ್ತ ಹೋಗುತ್ತಿದ್ದ. ಅವನ ಬಳಿ ಬಣ್ಣದ ಪೆಟ್ಟಿಗೆ ಇತ್ತು. ಒಬ್ಬ ಅದನ್ನು ಕೊಂಡು ತನ್ನ ಮಗನಿಗೆ ಕೊಟ್ಟ. ಹುಡುಗ–ಸೇಜಾನ್– ಆ ಬಣ್ಣಗಳನ್ನು ಪ್ರಯೋಗಿಸಿ ಚಿತ್ರಕಾರನಾದ.

19ನೆಯ ಶತಮಾನದಲ್ಲಿ ಬಂಡಾಯವೆದ್ದ ಚಿತ್ರಕಾರರಲ್ಲಿ ಸೇಜಾನನೂ ಒಬ್ಬ. ಆತ ತನ್ನದೇ ಶೈಲಿಯನ್ನು ರೂಪಿಸಿಕೊಳ್ಳುತ್ತ, "ಪ್ರಕೃತಿಯಲ್ಲಿ ಪ್ರತಿಯೊಂದೂ ಶಂಕು, ಉರುಳೆ, ಘನ ಆಕಾರಗಳಿಗೆ ಅಂಟಿಕೊಂಡಿದೆ". ಎಂದ. ಆ ವಿಚಾರಸರಣಿ ತೀರಾ ಹೊಸ ಚಿತ್ರಕಲಾ ಪಂಥಕ್ಕೆ ಅನುವು ಮಾಡಿಕೊಟ್ಟಿತು.

ಸುಂಕದ ಅಧಿಕಾರಿಯಾಗಿದ್ದಾಗ ಆಗೊಮ್ಮೆ ಈಗೊಮ್ಮೆ ತನ್ನ ಮನಸ್ಸಂತೋಷಕ್ಕಾಗಿ ಇಷ್ಟ ಬಂದಂತೆ ಚಿತ್ರಬರೆಯುತ್ತಿದ್ದವನು ಮುಗ್ಧ ಮನಸ್ಸಿನ ಹೆನ್ರಿ ರೂಸೋ. ಉದ್ಯೋಗದಿಂದ ನಿವೃತ್ತನಾದ ಮೇಲೆ ಚಿತ್ರಕಲೆಯಲ್ಲೇ ನಿರತನಾದ. ಮಕ್ಕಳ ಚಿತ್ರಪುಸ್ತಕಗಳಿಂದ ಪ್ರಭಾವಿತನಾಗಿ, ಪ್ರಾಣಿಸಂಗ್ರಹಾಲಯದಲ್ಲಿ ಸುತ್ತಾಡಿ ಬಂದು, ಕಲ್ಪನೆಯ ಪ್ರಾಣಿಗಳನ್ನು, ಅರಣ್ಯಗಳನ್ನು ಅವನು ಚಿತ್ರಿಸುತ್ತಿದ್ದ. ಜನ ಆ ಚಿತ್ರಗಳನ್ನು ಕಂಡು ನಕ್ಕರೆ, ತನ್ನ ಕೃತಿಗಳನ್ನು ಮೆಚ್ಚಿಕೊಂಡಿದ್ದಾರೆ ಎಂದು ರೂಸೋ ಭಾವಿಸುತ್ತಿದ್ದ. ಚಿಲ್ಲರೆ ದುಡ್ಡು ಕೊಟ್ಟು ಯಾರಾದರೂ ಒಂದು ಚಿತ್ರ ಕೊಂಡರೆ, ನೆರೆಹೊರೆಯವರನ್ನು ತಿಂಡಿ ತಿನಿಸಿಗೆ ಕರೆಯುತ್ತಿದ್ದ. ಅಲ್ಲಿ ತಾನು ಪಿಟೀಲು ಬಾರಿಸುತ್ತ ಮೈಮರೆಯುತ್ತಿದ್ದ.

ಅವನು ಬಿಡಿಸುತ್ತಿದ್ದ ವಿಶಿಷ್ಟ ಆಕೃತಿಗಳು, ಅದ್ಭುತ ವರ್ಣಸಂಯೋಜನೆ, ಕ್ರಮೇಣ ಅವನಿಗೆ ಲೋಕಖ್ಯಾತಿಯನ್ನು ತಂದುವು.

ಲಾತ್ರೆಕ್ 27ನೆಯ ವಯಸ್ಸಿನಲ್ಲಿ ನಿಧನನಾದ ಚಿತ್ರಕಾರ. ಅವನ ಕೃತಿಗಳದು ಮಾತ್ರ ಶತಮಾನಗಳ ದೀರ್ಘ ಆಯುಸ್ಸು. ಗೋಡೆಗಳಿಗೆ ಅಂಟಿಸುವ ಪ್ರಚಾರಚಿತ್ರಗಳ ಹೊಸ ಶೈಲಿ ಅವನಿಂದ ಮೊದಲಾಯಿತು.

ಆ ಕಾಲದಲ್ಲಿ ಪ್ರಸಿದ್ಧಿ ಪಡೆದ ಚಿತ್ರಕಾರರು ಮಾಟಿಸ್ ಮತ್ತು ಗೆಳೆಯರು. ಆಫ್ರಿಕದಿಂದ ಯೂರೋಪಿಗೆ ಬರತೊಡಗಿದ್ದ ಪ್ರಾಚೀನ ಜಾನಪದ ಚಿತ್ರಕೃತಿಗಳ ನಾವೀನ್ಯ ಇವರ ಮೇಲೆ ಪ್ರಭಾವ ಬೀರಿತು. ರೂಸೋನ ಕೃತಿಗಳಲ್ಲೂ ಆ ಬಗೆಯ ಹೊಸತನವನ್ನು ಅವರು ಕಂಡರು. ಈ ಗೆಳೆಯರು 1905 ರಲ್ಲಿ ತಮ್ಮ ಚಿತ್ರಗಳ ಒಂದು ಪ್ರದರ್ಶನ ಏರ್ಪಡಿಸಿದರು. ಅದನ್ನು ನೋಡಿದವನೊಬ್ಬ "ಇದು ಕಾಡು.

ಲಾತ್ರೆಕ್‌ನ ಭಿತ್ತಿಚಿತ್ರ



ಪಿಕಾಸೋ ಕೃತಿ



ಯುವಕ ಪಿಕಾಸೋ





ಪಿಕಾಸೋ ಪ್ರತಿಭಟನೆ : ಗೆರನಿಕಾ

ಮೃಗಗಳ ಪಂಜರ" ಎಂದ. ಫ್ರೆಂಚ್ ಭಾಷೆಯಲ್ಲಿ ಫಾವ್ ಎಂದರೆ ಕಾಡುಮೃಗ. ಆ ಚಿತ್ರಗಳ ಶೈಲಿ ಅಂದಿನಿಂದ ಫಾವಿಸಂ ಆಯಿತು. ತನ್ನ ಮೊದಲ ಕೃತಿಯಲ್ಲೇ ವಾಸ್ತವವಾದಕ್ಕೆ ವಿದಾಯ ನುಡಿದ ಕಲಾವಿದ, ಮಾಟಿಸ್. ಆತ ಫಾವ್ ಪಂಥದ 'ದೊರೆ' ಎನಿಸಿಕೊಂಡ.

ಆಗ ಆಫ್ರಿಕದ ಕಲಾಕೃತಿಗಳಿಂದ ಸ್ಫೂರ್ತಿ ಪಡೆದು ಅಪೂರ್ವ ಕೃತಿಗಳನ್ನು ರಚಿಸಿದ ಇನ್ನೊಬ್ಬ ಯುವಕ ಪಿಕಾಸೋ. 20ನೆಯ ಶತಮಾನದಲ್ಲಿ ಈತ ಜಗತ್ತಿನ ಶ್ರೇಷ್ಠ ಕಲಾವಿದನಾಗಿ ಕೀರ್ತಿಯ ಶಿಖರಕ್ಕೇರಿದ.

x x x x x x x x x

ಇಪ್ಪತ್ತನೆಯ ಶತಮಾನ ಆರಂಭವಾದಾಗ ಪ್ಯಾರಿಸ್ ನಗರ ಹೊಸಪೀಳಿಗೆಯ ಚಿತ್ರಕಾರರ ಜೇನುಗೂಡಾಗಿತ್ತು. ಹಳೆಯ ಸಂಪ್ರದಾಯಗಳಿಂದ ಮುಕ್ತರಾದ ಐರೋಪ್ಯ ಕಲಾವಿದರು ಚಿತ್ರಕಲಾ ಲೋಕದಲ್ಲಿ ಹೊಸ ಬಗೆಯ ಅಭಿವ್ಯಕ್ತಿ ವಿಧಾನಗಳಿಗಾಗಿ, ಶೈಲಿಗಳಿಗಾಗಿ ನಿರಂತರ ಶೋಧ ನಡೆಸಿದರು. ಇಂಥ ಕಾಲದ್ದು, ಇಂಥ ನಾಗರಿಕತೆಯದು ಎಂದು ನೋಡದೆ ಎಲ್ಲ ಕಲಾಕೃತಿಗಳನ್ನೂ ಅಭ್ಯಸಿಸತೊಡಗಿದರು.

ಪಿಕಾಸೋ ಮತ್ತು ಆತನ ಅನುಯಾಯಿಗಳು ಎಲ್ಲ ರೂಪಗಳನ್ನೂ ಘಟ್ಟಿ ಹಿಡಿದು ಜಾಮಿತೀಯ ಆಕಾರಗಳಿಗೆ ಇಳಿಸಿದರು.

ಪಿಕಾಸೋ ಮೂಲತಃ ಸ್ಪೇನಿನವನು. ಕಲಾಕಾಶಿಯಾದ ಪ್ಯಾರಿಸಿಗೆ ಬಂದ ಯುವಕ ಒಂದು ಕೊಠಡಿಯಲ್ಲಿ ಒಬ್ಬ ಲೇಖಕನೊಂದಿಗೆ ಇರತೊಡಗಿದ, ಅಲ್ಲಿದ್ದದ್ದು ಒಂದೇ ಹಾಸಿಗೆ. ರಾತ್ರೆ ಲೇಖಕ ಮಲಗಿದ್ದಾಗ ತಾನು ಎಚ್ಚರವಿದ್ದು ಚಿತ್ರ ರಚಿಸುತ್ತಿದ್ದ. ಹಗಲು ಲೇಖಕ ಬರೆಯುತ್ತಿದ್ದಾಗ, ತಾನು ನಿದ್ದೆ ಹೋಗುತ್ತಿದ್ದ. ಒಂದು ರಾತ್ರೆ ಭೀಕರ ಚಳಿ ತಡೆಯಲಾಗದೆ ಆ ವರ್ಷ ತಾನು ರಚಿಸಿದ್ದ ಚಿತ್ರಗಳನ್ನೆಲ್ಲ ಉರಿಸಿ ಆತ ಮೈ ಕಾಯಿಸಿಕೊಳ್ಳಬೇಕಾಯಿತು. (ಪಿಕಾಸೋ ಈಗ ಜಗದ್ವಂದ್ಯ. ರಾತ್ರೆ ನಿದ್ರಿಸುತ್ತಿದ್ದ ಆ ಲೇಖಕ ಯಾರೋ ಏನಾದನೋ ತಿಳಿಯದು!)

ಈ ಶತಮಾನದ ಮೂರನೆಯ ದಶಕದ ಅಂತ್ಯದಲ್ಲಿ ಹಿಟ್ಲರ್‌ಶಾಹಿ ಯೂರೋಪಿನಲ್ಲಿ ರಣ ಕಹಳೆಯೂದಿದಾಗ ಪಿಕಾಸೋ ಅದರ ಕಡುವಿರೋಧಿಯಾದ. ಹಿಟ್ಲರನ ವಿಮಾನ ಪಡೆ ಬಾಂಬು ಸುರಿದು ಸ್ಪೇನಿನ ಗೆರನಿಕಾ ನಗರವನ್ನು ಧ್ವಂಸಗೊಳಿಸಿತು. ಆಗ ಪಿಕಾಸೋ ಪ್ಯಾರಿಸಿನ ತನ್ನ ಕೊಠಡಿಯಲ್ಲಿ ಎರಡು ತಿಂಗಳ ಕಾಲ ಒಂದೇ ಸಮನೆ ಚಿತ್ರಿಸುತ್ತ ಪೂರ್ತಿಗೊಳಿಸಿದ ಕೃತಿ, 'ಗೆರನಿಕಾ'. ತಿವಿತಕ್ಕೊಳಗಾದ ಕುದುರೆ, ಗೂಳಿ, ದೀಪದ ಬುರುಡೆ, ಉರಿಯುವ ಮನೆ, ಖಡ್ಗವನ್ನು ಭದ್ರವಾಗಿ ಹಿಡಿದುಕೊಂಡಿರುವ ಸತ್ತ ಸೈನಿಕ –ಇವೆಲ್ಲ ಆ ಚಿತ್ರದಲ್ಲಿರುವ ಅಂಶಗಳು.

ಫ್ರಾನ್ಸನ್ನು ಆಕ್ರಮಿಸಿದ ಹಿಟ್ಲರನ ಭಟರು ಪಿಕಾಸೋನ ಕೊಠಡಿಗೆ ಬಂದರು. 'ಗೆರನಿಕಾ'ದತ್ತ ಬೊಟ್ಟುಮಾಡಿ,

"ಈ ಚಿತ್ರ ಬಿಡಿಸಿದ್ದು ಯಾರು ?" ಎಂದು ಕೇಳಿದರು. "ನೀವು!" ಎಂದು ಉತ್ತರ ನೀಡಿದ ಪಿಕಾಸೋ.

'ನಮ್ಮ ವಿಕೃತಗೊಂಡಿರುವ ಯುಗದ ಸಂಕಟಕ್ಕೀಡಾಗಿರುವ ದುರಂತ ಆತ್ಮ' ಎಂದು ಪಿಕಾಸೋನನ್ನು ಕಲಾತಜ್ಞರು ಬಣ್ಣಿಸಿದ್ದಾರೆ.

ಯುದ್ಧ ಮುಕ್ತಾಯವಾದಾಗ ಪಿಕಾಸೋ ತಾನು ಫ್ರೆಂಚ್ ಕಮ್ಯೂನಿಸ್ಟ್ ಪಕ್ಷವನ್ನು ಸೇರಿರುವುದಾಗಿ ಹೇಳಿಕೆ ನೀಡಿದ.

ಈ ಕಾಲಾವಧಿಯ ಬೇರೆ ಕೆಲವರು ಘನಾಕೃತಿ ಕಲಾಶೈಲಿಗಿಂತ ಭಿನ್ನವಾದೊಂದು ಶೈಲಿಯನ್ನು ರೂಪಿಸಿದರು. ಅವರು ಎಲೆಗಳ ಬಣ್ಣಕ್ಕೆ ಮಹತ್ವ ನೀಡಿದರು, ಆಕಾರಕ್ಕಲ್ಲ.



'ವಿಚಾರಿ' : ರೋಡಿನ್ ಶಿಲ

ವಸ್ತುವಿನ ಕೆಲ ಗುಣಗಳನ್ನು ಎತ್ತಿತೋರಿಸುವುದಕ್ಕಾಗಿ ಬೇರೆ ಕೆಲ ಗುಣಗಳನ್ನು ಹಿಂದಕ್ಕೆ ತಳ್ಳಿದರು. ಇಲ್ಲಿ ಕಂಡುಬಂದದ್ದು ಸಂಗೀತ, ವಾಸ್ತುಶಿಲ್ಪಗಳ ಅನುಕರಣ. ಇದು 'ಅಮೂರ್ತ ಕಲೆ' ಎನಿಸಿಕೊಂಡಿತು.

× × ×   × × ×   × × ×

17ನೆಯ ಶತಮಾನದ ಬರ್ನಿನಿ ಖ್ಯಾತ ಶಿಲ್ಪಿ ಹಾಗೂ ವಾಸ್ತುಶಿಲ್ಪಿ. 14ನೆಯ ಲೂಯಿ ದರ್ಪ ಅಧಿಕಾರಮದಗಳಿಗೆ ಹೆಸರಾಂತವನು. ಬರ್ನಿನಿ ರಚಿಸಿದ ಅವನ ಶಿಲ್ಪ ಲೂಯಿಯ ರೂಪಗುಣಗಳ ಚಿತ್ರಣ.



ಹದಿನಾಲ್ಕನೆಯ ಲೂಯಿ : ಬರ್ನಿನಿ

ಶಿಲ್ಪಕಲೆಯಲ್ಲಿ ಆಧುನಿಕತೆ ಕಂಡುಬಂದದ್ದು 19ನೆಯ ಶತಮಾನದಲ್ಲಿ. ತನ್ನ ಸಮಕಾಲೀನ ಚಿತ್ರಕಾರರು ಚಿತ್ರಕಲೆಯನ್ನು ಬಂಧಮುಕ್ತಗೊಳಿಸಲು ಯತ್ನಿಸಿದಂತೆ, ಶಿಲ್ಪಕಲೆಯನ್ನು ಸಂಪ್ರದಾಯಶೀಲತೆಯಿಂದ ಮುಕ್ತಗೊಳಿಸಲು ಶಿಲ್ಪಿ ರೊಡಿನ್ ಉದ್ಯುಕ್ತನಾದ. "ಮಟ್ಟ ಮತ್ತು ಗಾತ್ರಗಳೇ ಜೀವನದ ಮತ್ತು ಸೌಂದರ್ಯದ ಎಲ್ಲ ನಿಯಮಗಳೆಂದು ನನಗೆ ಅನಿಸುತ್ತಿದೆ," ಎಂದು ರೊಡಿನ್ ಅಭಿಪ್ರಾಯ ಪಟ್ಟ. 'ವಿಚಾರಿ' —ಆತ ಕಡೆದ ಪ್ರಖ್ಯಾತ ಶಿಲ್ಪಕೃತಿ.

ಜೇಕಬ್ ಎಪ್‌ಸ್ಟೀನ್ ಬೆಲೆಬಾಳುವ ಕೊಡುಗೆಗಳನ್ನಿತ್ತ ಈ ಶತಮಾನದ ಶಿಲ್ಪಿ.

× × ×   × × ×   × × ×

ಎಷ್ಟೋ ಸಲ ಒಂದು ವಸ್ತುವಿನ ಬೆಲೆ ನಮಗೆ ಗೊತ್ತಾಗುವುದು, ಅದು ಕಳೆದು ಹೋದ ಬಳಿಕ. ಸ್ವಾತಂತ್ರ್ಯದ ವಿಷಯದಲ್ಲೂ ಅಷ್ಟೆ. ನಾವು ಗುಲಾಮರಾದ ಮೇಲೆ, "ಅಯ್ಯೋ ಹೀಗಾಯಿತಲ್ಲಾ" ಎಂದು ಕೈಹಿಸುಕಿಕೊಂಡೆವು. ಹಾಗೆ ಅರಿವು ಅಸ್ಪಷ್ಟವಾಗಿ ಮೂಡಿದ ಶತಮಾನ 19ನೆಯದು. ಆಗ ಜಾಗೃತಗೊಳ್ಳತೊಡಗಿದ ಸ್ವಾಭಿಮಾನ ನಿಧಾನವಾಗಿ ಚಿತ್ರಕಲೆಯನ್ನೂ ಆವರಿಸಿತು. 20ನೆಯ ಶತಮಾನದಲ್ಲಿ ಅದು ಚಿತ್ರಶೈಲಿಯ ಮೇಲೆ ಸ್ಪಷ್ಟ ಪರಿಣಾಮ ಬೀರಿತು. ರಾಜಾರವಿವರ್ಮ ಶ್ರೇಷ್ಠ ನಿರೂಪಣಾ ಚಿತ್ರಗಳನ್ನು ರಚಿಸಿದ್ದು 19ನೆಯ ಶತಮಾನದಲ್ಲಿ. ಪಾಶ್ಚಾತ್ಯ ಸಾಂಪ್ರದಾಯಿಕ ಚಿತ್ರಶೈಲಿ ಆತನ ಮೇಲೆ ಪ್ರಭಾವ ಬೀರಿತ್ತು. ಆದರೆ ಚಿತ್ರ ವಸ್ತುಗಳಿಗೆ ಸಂಬಂಧಿಸಿ ರವಿವರ್ಮ ಅಪ್ಪಟ ದೇಶೀಯನಾಗಿದ್ದ. ಮುದ್ರಣ ಯಂತ್ರದ ಸೌಲಭ್ಯವೂ ಭಾರತದಲ್ಲಿ ಒದಗಿಬಂದು, ರವಿವರ್ಮನ ಚಿತ್ರಗಳ ಪ್ರತಿಗಳು ಸುಲಭ ಬೆಲೆಗೆ ಹೇರಳವಾಗಿ ದೊರೆತುವು; ಮನೆ ಮನೆಗಳನ್ನು ತಲಪಿದುವು. ಆತ ಭಾರತದ ಜನಪ್ರಿಯ ಚಿತ್ರಕಾರನಾದ.

ಆಗ ಆಂಗ್ಲರ ಕೃಪಾವಲಯದಲ್ಲಿ ಉಸಿರಾಡುತ್ತಿದ್ದ ರಾಜಮನೆತನಗಳಿದ್ದುವು. ಅಂಥ ಆಶ್ರಿತ ಸಂಸ್ಥಾನಗಳಲ್ಲಿ ಒಂದಾದ ಮೈಸೂರು, ಚಿತ್ರಕಲೆಗೆ ಪ್ರೋತ್ಸಾಹ ನೀಡಿತು. ಮೈಸೂರು ಚಿತ್ರಶೈಲಿಯೊಂದು ಆಗ ರೂಪುಗೊಂಡಿತು.

ಆಂಗ್ಲರು ನಮ್ಮ ಸ್ವಾತಂತ್ರ್ಯಹರಣ ಮಾಡಿದರು. ಆದರೆ ಆಂಗ್ಲರವನೇ ಒಬ್ಬ ರಾಷ್ಟ್ರೀಯ ಕಾಂಗ್ರೆಸಿನ ಸ್ಥಾಪನೆಗೆ ಕಾರಣನಾದ. ಹಾಗೆಯೇ ಕಲೆಯ ಲೋಕದಲ್ಲೂ ಒಬ್ಬ ಆಂಗ್ಲ –1896ರಲ್ಲಿ ಕಲ್ಕತ್ತೆಯ ಕಲಾ ಶಾಲೆಗೆ ಪ್ರಿನ್ಸಿಪಾಲ್ ಆಗಿ ಬಂದ ಹ್ಯಾವೆಲ್– ಭಾರತೀಯ ಕಲೆಯ ಪುನರುಜ್ಜೀವನಕ್ಕೆ ಕಾರಣರಾದರು. ಭಾರತೀಯ ಚಿತ್ರಕಲಾ ಪರಂಪರೆಯನ್ನು ಅಭ್ಯಸಿಸಿದ ಹ್ಯಾವೆಲ್ ಅದರ ಬಗೆಗೆ ಅಪಾರ ಗೌರವ ತಳೆದರು. ಸ್ವಂತಿಕೆಯ ಭಾವನೆ ತಮ್ಮ ಶಿಷ್ಯರಲ್ಲಿ ಮೂಡುವಂತೆ ಮಾಡಿದರು. ಅಬನೀಂದ್ರನಾಥ ಠಾಕೂರ್ ಅವರ ಶಿಷ್ಯ.

ಅಬನೀಂದ್ರರು ಕವಿ ರವೀಂದ್ರರ ಅಣ್ಣನ ಮಗ. ಆ ಕುಟುಂಬದ ಜಾಯಮಾನವೇ ಸ್ವಾಭಿಮಾನದ್ದು. ಹ್ಯಾವೆಲ್ ಊದಿದಾಗ ಬೂದಿ ಹಾರಿ ಕೆಂಡ ಪ್ರಜ್ವಲಿಸಿತು. ಸ್ವತಂತ್ರ ಶೈಲಿಯಲ್ಲಿ ಚಿತ್ರ ಬರೆಯುವ ಪ್ರವೃತ್ತಿಯನ್ನು ಅಬನೀಂದ್ರರು ಮೈಗೂಡಿಸಿಕೊಂಡರು. ಅವರು ಬಹುಮುಖ ಪ್ರತಿಭೆಯ ಕಲಾವಿದ. ರವೀಂದ್ರರು ಹಾಡುತ್ತಿದ್ದಾಗ ಅವರು ವಾದ್ಯ ಬಾರಿಸುತ್ತಿದ್ದರು; ರವೀಂದ್ರರ ನಾಟಕಗಳಲ್ಲಿ ಅಭಿನಯಿಸುತ್ತಿದ್ದರು. ಮಕ್ಕಳಿಗಾಗಿ ಅವರು ಕತೆ, ಕವನಗಳನ್ನೂ ಬರೆದರು.

ಹ್ಯಾವೆಲ್ ನಿವೃತ್ತಿಯ ಬಳಿಕ ಅಬನೀಂದ್ರರು ಕಲಾಶಾಲೆಯ ಪ್ರಿನ್ಸಿಪಾಲರಾದರು. ಅವರ ಶಿಷ್ಯರು ನಂದಲಾಲ ಬಸು, ವೆಂಕಟಪ್ಪ, ದೇವೀ ಪ್ರಸಾದ್ ರಾಯ್ ಚೌಧುರಿ. ಪಾಶ್ಚಾತ್ಯ ಶೈಲಿಯ ಅಂಧಾನುಕರಣೆ ಬೇಡ ಎಂದು ಹ್ಯಾವೆಲ್ ನುಡಿದಿದ್ದರೆ, ಅಬ



ನಂದಲಾಲ ಬಸು ವಿರಚಿತ ಮರಕೆತ್ತನೆ

[illegible] " ಎಂದು [illegible]. [illegible] ಅವಕ್ಕೆ [illegible] ಇತ್ತು. ವಿಶ್ವಭಾರತಿಯಲ್ಲಿ ಚಿತ್ರಕಲಾ ಪ್ರಾಧ್ಯಾಪಕರಾದರು.

[illegible] ಅಬನೀಂದ್ರರು ಹೆಸರಾದರು. ಪಾಶ್ಚಾತ್ಯರು ಅವರ ಕೃತಿಗಳನ್ನು ಹೊಗಳಿದ ಮೇಲೆ ಭಾರತೀಯರೂ ಕೊಂಡಾಡತೊಡಗಿದರು.

[illegible] ಭಾರತೀಯ ಚಿತ್ರಕಲೆಗೆ ನೀಡಿರುವ ಕೊಡುಗೆ ಕಡಿಮೆಯಲ್ಲ. ಅವರ [illegible] ಚಿತ್ರಪ್ರಯೋಗಗಳು ಹೊಸ [illegible] ಪ್ರೇರಕವಾದುವು. ಮಹಾತ್ಮಾ ಗಾಂಧಿಯವರು ವಿಶ್ವಭಾರತಿಯೊಡನೆ ಸಂಪರ್ಕವಿಟ್ಟುಕೊಂಡರು. ಅಬನೀಂದ್ರರನ್ನೂ ನಂದಲಾಲ [illegible] ಅದು ಆ ಕಾಲದ ಸಹಜ [illegible]. "ಆತ್ಮಗ್ಲಾನಿ, ಆತ್ಮನಿಂದೆಯಿಂದ ಭಾರತೀಯ ಚಿತ್ರಕಲೆಯನ್ನು [illegible] ಲೋಕಮಾನ್ಯತೆಗೆ ಅದು ಅರ್ಹವೆಂದು ತೋರಿಸಿಕೊಟ್ಟರು" — ಎಂದು ಅಬನೀಂದ್ರರ ಬಗೆಗೆ ಗಾಂಧಿಜಿ ನುಡಿದಿದ್ದಾರೆ.

ಅಬನೀಂದ್ರರ ಪರಂಪರೆ ನಂದಲಾಲ ಬಸು, ವೆಂಕಟಪ್ಪ ಮತ್ತಿತರರಿಂದ ಮುಂದುವರಿಯಿತು.

ಅನಂತರದ ಕಲಾವಿದರಲ್ಲಿ ಜಾನಪದ ಕಲೆಯಿಂದ ಸ್ಫೂರ್ತಿ ಪಡೆದು ತಮ್ಮದೇ ಆದ ಪ್ರಭಾವೀ ಶೈಲಿಯನ್ನು ರೂಪಿಸಿದವರು ಜಮಿನಿ ರಾಯ್.

ಅಮೃತ ಶೇರ್ ಗಿಲ್ ನಿಗಿ ನಿಗಿ ಕೆಂಡದಂತೆ ಬೆಳಗಿ 29ನೆಯ ವರ್ಷದಲ್ಲೆ ಬೂದಿಯಾದ ಶ್ರೇಷ್ಠ ಕಲಾವಿದೆ. (ತಾಯಿ ಹಂಗೆರಿ ಯುವಳು, ತಂದೆ ಭಾರತೀಯ). ಕೌಮಾರ್ಯದ ಅನಂತರದ ಕೆಲವು ವರ್ಷಗಳನ್ನು ಪ್ಯಾರಿಸಿನಲ್ಲಿ ಕಳೆದು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದರು. ಆದರೆ ಈ ಶತಮಾನದ ಮೂರನೆಯ ದಶಕದಲ್ಲಿ ಭಾರತಕ್ಕೆ ಮರಳಿ, ಇಲ್ಲಿನ ಜನಜೀವನವನ್ನು ಚಿತ್ರಿಸುವ ಅನೇಕ ಕೃತಿಗಳನ್ನು ರಚಿಸಿದರು.

'ಮಹಿಳೆಯರು' : ಅಮೃತ ಶೇರ್‌ಗಿಲ್

ಭಾರತೀಯ ಚಿತ್ರಕಲೆಯ ಪುನಶ್ಚೇತನಕ್ಕೆ ಕಲ್ಕತ್ತಾ ಕೇಂದ್ರವಾಯಿತು; ಮುಂಬಯಿಯಲ್ಲಿ ಪಾಶ್ಚಾತ್ಯ ಚಿತ್ರಕಲಾಶೈಲಿ ಪ್ರಭಾವ ಬೀರಿತು. ಇಂದಿನ ಆಧುನಿಕ ಚಿತ್ರಶೈಲಿಯಲ್ಲಿ ಮುಂಬಯಿಯಲ್ಲಿರುವ ಹಲವಾರು ಕಲಾವಿದರಿಂದ ಶ್ರೇಷ್ಠಕೃತಿಗಳು ರಚಿತವಾಗಿವೆ. ಹಾಗೆಯೇ ದಿಲ್ಲಿ ಮದರಾಸುಗಳೂ ಆಧುನಿಕ ಚಿತ್ರಕಲೆಯ ಕೇಂದ್ರಗಳಾಗಿವೆ. (ಮದರಾಸಿನ ಬಳಿ ಹದಿನಾರು ಜನ ಚಿತ್ರಕಾರರು 'ಚೋಳಮಂಡಲ'ವೆಂಬ ಕಲಾ ಗ್ರಾಮವನ್ನು ರಚಿಸಿಕೊಂಡಿದ್ದಾರೆ.)

ಹುಸೇನ್ (ರಾಮಾಯಣ, ಮಹಾಭಾರತ ಚಿತ್ರಮಾಲಿಕೆ ಖ್ಯಾತಿಯ ಚಿತ್ರಕಾರ), ಅಕ್ಬರ್ ಪದಮ್‌ಸೀ, ಕೃಷ್ಣ ಹೆಬ್ಬಾರ್, ಕೃಷನ್ ಖನ್ನಾ, ರಾಮ್‌ಕುಮಾರ್, ಗಾಯ್ತೊಂಡೆ, ಫ್ರಾನ್ಸಿಸ್ ಡಿಸೋಜ, ಸತೀಶ್ ಗುಜರಾಲ್, ಕೃಷ್ಣ ರೆಡ್ಡಿ, ವಾಸುದೇವ್ ಇವರೆಲ್ಲ ನವಪೀಳಿಗೆಯ ಭಾರತೀಯ ಚಿತ್ರಕಾರರು. ಇವರದು ಇಂಥಿಂಥದೇ ಶೈಲಿ ಎಂದು ಖಚಿತವಾಗಿ ಹೇಳುವುದು ಕಷ್ಟ. ಚಿಂತನಶೀಲತೆ, ಪ್ರಯೋಗಶೀಲತೆ, ಅತೃಪ್ತಿ— ಹೊಸ ಸಾಧನೆಗೆ ಅತ್ಯವಶ್ಯ. ಈ ಗುಣಗಳಿರುವ ಚಿತ್ರಕಾರರು ತಮ್ಮ ನೆಲೆಯನ್ನು ಕಂಡುಕೊಳ್ಳಲು, ತಮ್ಮದೇ ಶೈಲಿಯನ್ನು ರೂಪಿಸಲು ಸದಾ ಯತ್ನಿಸುತ್ತಿರುತ್ತಾರೆ.

×××     ×××     ×××

ವ್ಯಂಗ್ಯಚಿತ್ರಕಲೆಗೂ ಚಿತ್ರಕಲೆಯಲ್ಲಿ ಪ್ರಮುಖ ಸ್ಥಾನವಿದೆ. ಅಣಕ, ವಿಡಂಬನೆ ಮಾನವನಿಗೂ ಸಹಜವಾದದ್ದು. ಇದು ಪಶ್ಚಿಮದಲ್ಲೂ ಇದೆ; ಪೂರ್ವದಲ್ಲೂ ಇದೆ. 7ನೆಯ ಶತಮಾನದ ಜಪಾನಿನ ಒಂದು ಭಾವಣೆಯಲ್ಲಿ ಆಧುನಿಕ ವ್ಯಂಗ್ಯ ಚಿತ್ರಕ್ಕೆ ಸಮನಾದ ಒಂದು ಚಿತ್ರ ದೊರೆತಿದೆ. ಈ ಬಗೆಯ ವಿಡಂಬನೆಗೂ ರಾಜಕೀಯ ಸಾಮಾಜಿಕ ಪ್ರಶ್ನೆಗಳಿಗೂ ನಿಕಟ ಸಂಬಂಧ. ಪ್ರಮುಖ ಪತ್ರಿಕೆಗಳಲ್ಲೆಲ್ಲ ವ್ಯಂಗ್ಯ ಚಿತ್ರಗಳಿದ್ದೇ ಇರುತ್ತವೆ.

ಖ್ಯಾತ ಆಂಗ್ಲ ವ್ಯಂಗ್ಯಚಿತ್ರಕಾರ ಡೇವಿಡ್ ಲೋ ಈ ಕ್ಷೇತ್ರದಲ್ಲಿ ವಿಶ್ವಪರಂಪರೆಯನ್ನೇ ಸೃಷ್ಟಿಸಿದ.



ನಿಕೊಲಾಸ್ ರೋರೀಕ್



ಸ್ವೆತಸ್ಲಾವ್ ರೋರೀಕ್



ಅನಟೊಲಿ ಕೊಕೊರಿನ್

ಭಾರತದಲ್ಲಿ ವ್ಯಂಗ್ಯ ಚಿತ್ರಕಾರರೆಂದು ಖ್ಯಾತರಾಗಿರುವವರು ಶಂಕರ್, ಲಕ್ಷ್ಮಣ್, ಅಬು, ಮೂರ್ತಿ . . .

x x x     x x x     x x x

ನೃತ್ಯ, ಸಂಗೀತ ನಾಟಕಗಳಲ್ಲಿರುವಂತೆ ಚಿತ್ರಕಲೆಯಲ್ಲೂ ಶೈಲಿಗಳ ವಿಶ್ವಸಂಚಾರಕ್ಕೆ ಅಡ್ಡಿಗಳಿಲ್ಲ.

ರಷ್ಯದ ನಿಕೊಲಾಸ್ ರೋರೀಕ್ ಕಳೆದ ಶತಮಾನದ ಅಂತ್ಯದಲ್ಲಿ ಭಾರತಕ್ಕೆ ಬಂದು ಹಿಮಾಲಯದ ತಪ್ಪಲುಗಳಲ್ಲಿ ದಿನಕಳೆದರು. ಭವ್ಯ ನಿಸರ್ಗ ಚಿತ್ರಗಳನ್ನು ರಚಿಸಿದರು. ಕುಲು ಕಣಿವೆಯಲ್ಲೇ ಕೊನೆಯ ಉಸಿರೆಳೆದರು.

ಅವರ ಪುತ್ರ ಸ್ವೆತಸ್ಲಾವ್ ರೋರೀಕ್ ಭಾರತದಲ್ಲೇ ನೆಲೆಸಿರುವ ಶ್ರೇಷ್ಠ ಚಿತ್ರಕಾರ. ಕೊಕೊರಿನ್ ಭಾರತಕ್ಕೆ ಬಂದು, ಉದ್ದಗಲಕ್ಕೆ ಸಂಚಾರಮಾಡಿ, ಭಾರತೀಯ ಜೀವನವನ್ನು ಕುರಿತು ಚಿತ್ರಗಳನ್ನು ರಚಿಸಿರುವ ರಷ್ಯನ್ ಚಿತ್ರಕಾರ.

ಭಾರತೀಯ ಸತೀಶ್ ಗುಜರಾಲ್ ಚಿತ್ರಕಲೆಯ ಅಧ್ಯಯನಕ್ಕೆಂದು ಮೆಕ್ಸಿಕೋಗೆ ಹೋದರು. (ಮರಳಿ ಬಂದು ಶಿಲ್ಪಿಯಾದರು !)

ಕೃಷ್ಣ ಹೆಬ್ಬಾರ್ ಆಧುನಿಕ ವಿದ್ಯಾರ್ಥಿಯಾಗಿ ಪ್ಯಾರಿಸಿನ ಚಿತ್ರ ಸಂಗ್ರಹಾಲಯಗಳಲ್ಲಿ ಸುತ್ತಾಡಿದರು . . . .

ಚಿತ್ರ ಆಡುವುದು ರೇಖೆ ವರ್ಣಗಳ ಲೋಕಭಾಷೆ ಎಂದ ಮೇಲೆ, ಇಂಥ ಕಲಾವಲಸೆ – ಪರ್ಯಟನ ಸ್ವಾಭಾವಿಕವೇ ಸರಿ.



'ಭಾರತೀಯ ರೈತರು': ಕೊಕೊರಿನ್ ಕಂಡಂತೆ



ಗ್ರೀಕ್ ವಾಸ್ತುಶಿಲ್ಪ

೭

ಎಷ್ಟೋ ವೇಳೆ ಚಿತ್ರಕಲೆ ಶಿಲ್ಪಕಲೆಗಳು ಪರಸ್ಪರ ಹೆಣೆದುಕೊಂಡಿದ್ದುದನ್ನು ಕಂಡೆವಲ್ಲವೆ? ಶಿಲ್ಪ, ವಾಸ್ತುಶಿಲ್ಪಗಳದು ಅಂಥದೇ ನಂಟು. ಅನೇಕ ಖ್ಯಾತಚಿತ್ರಕಾರರು ಶಿಲ್ಪಿಗಳೂ ಆಗಿದ್ದರು. ಹಾಗೆಯೇ ಹಲವು ಜನ ಶಿಲ್ಪಿಗಳು ವಾಸ್ತುಶಿಲ್ಪಿಗಳೂ ಆಗಿದ್ದರು. (17ನೆಯ ಶತಮಾನದ ಬರ್ನಿನಿ ಅಂಥವರಲ್ಲೊಬ್ಬ. ಶಿಲ್ಪ ವಾಸ್ತುಶಿಲ್ಪಗಳೆರಡರಲ್ಲೂ ಆತ ನಿಷ್ಣಾತನಾಗಿದ್ದ.)

ಆದಿಮಾನವನೇನೋ ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ಕಂಡು ಬಂದ ಗವಿಯಲ್ಲಿ ವಾಸಮಾಡಿದ. ಮುಂದೆ ಬಯಲುಜೀವಿಯಾದಾಗ ಆತ ಗುಡಿಸಲು ಕಟ್ಟಿಕೊಂಡ. ಅವಶ್ಯತೆಗೆ ತಕ್ಕಂತೆ ಗುಡಿಸಲಿಗೊಂದು ರೂಪ. ಗುಡಿಸಲುಗಳ ಸಮುದಾಯವೇ ಅಗತ್ಯವಾದಾಗ, ಅವನ್ನು ಕಟ್ಟುವುದರಲ್ಲಿ ಒಂದು ವ್ಯವಸ್ಥೆ, ಯೋಜನೆ. ಬಳಗದ ನಾಯಕನಿಗೆ ತುಸು ದೊಡ್ಡದಾದ ಮನೆ. ಆ ವಸತಿಯನ್ನು ನೋಡಿದೊಡನೆಯೇ ಅರ್ಥವಾಗಬೇಕು ವಾಸಿಸುವವನ ಅಂತಸ್ತು. ನೋಡುವವರಲ್ಲಿ ಅಂಥ ಭಾವನೆ ಹುಟ್ಟುವಂತೆ ಆ ರಚನೆ.

ಆರಂಭದ ನಾಗರಿಕತೆಗಳನ್ನು ತೆಗೆದುಕೊಳ್ಳೋಣ. ಈಜಿಪ್ಟಿನ ಭಾರೀ ಪಿರಮಿಡ್ಡುಗಳು, ಸ್ಥೂಲ ಗಾತ್ರದ ಶಿಲ್ಪಗಳು ಸಹಸ್ರ ಸಹಸ್ರ ವರ್ಷಗಳಿಂದ ಹಾಗೆಯೇ ಇವೆ. ಇನ್ನೂ ಸಹಸ್ರ ಸಹಸ್ರ ವರ್ಷ ಅವು ಇರಬಹುದು. ಗಿಜೆ ಗ್ರಾಮದಲ್ಲಿರುವ 240 ಅಡಿ ಉದ್ದ 66 ಅಡಿ ಎತ್ತರದ, 13 ಅಡಿ ಅಗಲದ ಮನುಷ್ಯಮುಖವಿರುವ ಸಿಂಹ –ಸ್ಫಿಂಕ್ಸ್ –5000 ವರ್ಷ ಹಳೆಯದು. ಇನ್ನೂ ಅದೆಷ್ಟೋ ಸಹಸ್ರವರ್ಷ ಅದು ಉಳಿಯುವುದು ಖಚಿತ. ತಾವು ಅನಶ್ವರರು ಎಂದು ಪ್ರಾಚೀನ ಈಜಿಪ್ಟಿನ ಜನರ ಭಾವನೆ. ಗೋರಿಗಳಲ್ಲಿ ಸತ್ತವರಿಗಾಗಿ ತಿಂಡಿತೀರ್ಥಗಳನ್ನು ಅವರು ಇಡುತ್ತಿದ್ದರಲ್ಲ? ಅವರ ಶಿಲ್ಪ ವಾಸ್ತುಶಿಲ್ಪಗಳಲ್ಲಿ ವ್ಯಕ್ತವಾಗುವುದು ಅದೇ ಮನೋಭಾವ. ಈಜಿಪ್ಟಿನ ದೇವಾಲಯಗಳೂ ಹಾಗೆಯೇ. ಗರ್ಭಗುಡಿ ತಲಪಲು ಬಹಳ ದೂರ ನಡೆಯಬೇಕು. ಎರಡೂ ಕಡೆ ಎತ್ತರದ ಕಂಬಗಳು. ನಡೆಯುವವನಿಗೆ ತಾನು ಕಿರಿಯವನು ಎಂಬ ಭಾವನೆ. ಹಾಗೆ ಅನಿಸಬೇಕೆಂದೇ ಆ ಬಗೆಯ ವಾಸ್ತುಶಿಲ್ಪ.

ರೋಮನ್ ವಾಸ್ತುಶಿಲ್ಪ



ಈಜಿಪ್ಟಿನಲ್ಲಿ ಗುಲಾಮ ಕೆಲಸಗಾರರು ಹೇರಳ ಸಂಖ್ಯೆಯಲ್ಲಿ ಸಿಗುತ್ತಿದ್ದರು. ಗ್ರೀಸಿನಲ್ಲಿ ಹಾಗಲ್ಲ. ಅಲ್ಲಿ ಪ್ರಾಚೀನ ಪ್ರಜಾಸ್ವಾತಂತ್ರ್ಯದ ಫಲವಾಗಿ ಗುಲಾಮರ ಸಂಖ್ಯೆ ಕಡಿಮೆಯಾಗುತ್ತ ಹೋಯಿತು. ಅವರ ವಾಸ್ತುಶಿಲ್ಪ ರಚನೆಗಳು ಆಕಾರದಲ್ಲಿ ತುಸು ಕಿರಿದಾಗಬೇಕಾಯಿತು. ಅಲ್ಲಿ ಹೊರಗೆಯೇ ಜನರ ಓಡಾಟ ಹೆಚ್ಚು. ಎಲ್ಲ ಕಡೆಗಳಿಂದಲೂ ಜನ ನೋಡುವಂತೆ ಕಟ್ಟಡ. ಎಲ್ಲ ದಿಕ್ಕುಗಳಿಂದಲೂ ಆಕರ್ಷಕ ನೋಟ ಸಿಗುವಂತೆ ರಚನೆ.

ಮುಂದೆ ರೋಮನರ ಕಾಲ ಬಂತು. ಈ ಜನ ವಾಸ್ತುಶಿಲ್ಪ ಹೆಚ್ಚು ಉಪಯುಕ್ತವಾಗಬೇಕು ಎಂದರು. ಅವರ ಕೊಲೋಸಿಯಂ –ಕ್ರೀಡಾಂಗಣ– ಶ್ರೇಷ್ಠವಾದದ್ದು. ಅವರು ಕಟ್ಟಿಸಿದ ಸಾರ್ವಜನಿಕ ಸ್ನಾನಗೃಹಗಳಂತೂ ವಿಶಿಷ್ಟ ನಿರ್ಮಾಣ. ರೋಮನರ ಸ್ನಾನಗೃಹ ಎಂದರೆ ಅಲ್ಲಿ ಭೋಜನ ಶಾಲೆ ಇರುತ್ತಿತ್ತು, ಕ್ರೀಡಾ ಭವನವಿರುತ್ತಿತ್ತು, ದೇವಾಲಯವೂ ಇರುತ್ತಿತ್ತು. ಐರೋಪ್ಯ ನಗರಗಳಲ್ಲಿ ಸಾರ್ವಜನಿಕ ಕಟ್ಟಡಗಳನ್ನು ಮುಂದೆ ಕಟ್ಟಿದಾಗ, ರೋಮನ್ ಸ್ನಾನಗೃಹಗಳ ರಚನೆಯನ್ನು ಮಾದರಿಯಾಗಿ ಇಟ್ಟುಕೊಂಡರು.

ರೋಮನರು 330ರಲ್ಲಿ ಬೈಜಾಂಟಿಯಮ್ ಸಾಮ್ರಾಜ್ಯವನ್ನು ಸ್ಥಾಪಿಸಿದಾಗ, ಅಲ್ಲಿದ್ದ ಗ್ರೀಕ್ ವಂಶಜರಾದ ಕಟ್ಟಡ ಕಾರ್ಮಿಕರು ರೋಮನ್–ಗ್ರೀಕ್ ಅಂಶಗಳನ್ನು ಒಳಗೊಂಡ ವಾಸ್ತುಶಿಲ್ಪ ರಚನೆಗೆ ಕಾರಣರಾದರು. ಕಟ್ಟಡದ ಒಳಗೆ ಅಲಂಕರಣ, ಮೊಸೇಯಿಕ್ ಬಳಕೆ ಅಲ್ಲಿ ಮುಖ್ಯವಾದುವು.

ಮುಂದಿನ ಶತಮಾನಗಳಲ್ಲಿ ಯುರೋಪಿನ ಹಲವೆಡೆ ರೋಮನ್ ವಾಸ್ತುಶಿಲ್ಪದ ಬಗೆಗೆ ಆಸಕ್ತಿ ಮರುಕಳಿಸಿ 'ರೋಮನಸ್ಕ್ ವಾಸ್ತುಶಿಲ್ಪ' ರೂಢಿಗೆ ಬಂತು.





ಗಾತಿಕ್ ವಾಸ್ತುಶಿಲ್ಪ

ಕ್ರಮೇಣ ಸಂಪ್ರದಾಯಕ್ಕಿಂತ ಭಿನ್ನವಾದ (ಮುಂದೆ 'ಗಾತಿಕ್' ಎನಿಸಿಕೊಂಡ) ವಾಸ್ತುಶಿಲ್ಪಶೈಲಿ ರೂಪುಗೊಂಡಿತು. 13–14ನೆಯ ಶತಮಾನಗಳಲ್ಲಿ, ಚೂಪು ಕಮಾನಿನ, ತೆಳ್ಳನೆಯ ಕಂಬಗಳ, ದೊಡ್ಡ ಕಿಟಕಿಗಳ ಕಟ್ಟಡಗಳು ಯುರೋಪಿನ ಹಲವು ದೇಶಗಳಲ್ಲಿ ನಿರ್ಮಿತವಾದುವು.

ನವೋದಯ ಕಾಲದಲ್ಲಿ ಇಂಗ್ಲೆಂಡಿನಲ್ಲಿ 18ನೆಯ ಶತಮಾನದಲ್ಲಿ ಮೂವರು ಜಾರ್ಜ್ ದೊರೆಗಳು ಆಳಿದರು. ಅವರ ಕಾಲದ ಗೃಹ ನಿರ್ಮಾಣಕ್ಕೆ, ಯೋಜಿತ ನಗರಗಳ ರಚನೆಗೆ ಜಾರ್ಜಿಯನ್ ವಾಸ್ತುಶಿಲ್ಪ ಎಂಬ ಹೆಸರು ಬಂತು.

ಚಿತ್ರಕಲೆ ಶಿಲ್ಪಕಲೆಗಳಲ್ಲಿ ಕಂಡು ಬಂದ ಬಾರೋಕ್ ಶೈಲಿ ವಾಸ್ತುಶಿಲ್ಪಕ್ಕೂ ಅನ್ವಯವಾಯಿತು. ಇದಕ್ಕೆ ಶ್ರೇಷ್ಠ ನಿದರ್ಶನ, 1506ರಲ್ಲಿ ಆರಂಭವಾಗಿ 60 ವರ್ಷಗಳ ಕಾಲ ನಿರ್ಮಾಣ ಕಾರ್ಯ ನಡೆದ ರೋಮ್ ನಗರದ ಸಂತ ಪೀಟರನ ಇಗರ್ಜಿ. ಸಂಪ್ರದಾಯ ಶೈಲಿಯಲ್ಲಿ ಆ ಇಗರ್ಜಿಗಾಗಿ ನಕಾಶೆ ತಯಾರಿಸಿದವನು ವಾಸ್ತುಶಿಲ್ಪಿ ಬರ್ಮಾಂಟೆ. ಆ ನಕಾಶೆಯನ್ನು ಬದಲಾಯಿಸುತ್ತ ಹೋದವರಲ್ಲಿ ಚಿತ್ರಕಾರ ರಾಫೇಲನೂ ಒಬ್ಬ. ಮೈಕೆಲೇಂಜಲೋ ತನ್ನ 70ನೆಯ ವಯಸ್ಸಿನಲ್ಲಿ ಆ ಇಗರ್ಜಿ ಕಟ್ಟಡಕ್ಕೆ 430 ಅಡಿಗಳ ಗುಮ್ಮಟ ರೂಪಿಸಿದ. ಇಪ್ಪತ್ತು ವರ್ಷಗಳ ಮೇಲೆ ಆತ ತೀರಿಕೊಂಡಾಗಲೂ ಆ ಗುಮ್ಮಟದ ರಚನೆ ಮುಗಿದಿರಲಿಲ್ಲ. ಮುಂದೆ ಶಿಲ್ಪಿ–ವಾಸ್ತುಶಿಲ್ಪಿ ಬರ್ನಿನಿ ಎಡಬಲ ಎರಡೂ ಕಡೆ ಕಂಬಸಾಲುಗಳನ್ನು ನಿರ್ಮಿಸಿದ.



ಕ್ರಮೇಣ ನೇರಗೆರೆ, ಕೋನ, ಸಮತಟ್ಟು ಮೈ, ಸಮರೂಪತೆಗಳ ಬದಲು, ದುಂಡಗಿನ ಸುಲಭ ತಿರುವು, ತೆಳು ಕಲ್ಲು, ಚಿಪ್ಪುಗಳ ಬಳಕೆ ಆರಂಭವಾದುವು. ಇದು ರೊಕೋಕೋ ಶೈಲಿ.

ಕಾಲ ಕಳೆದಂತೆ ಕಟ್ಟಡದಲ್ಲಿ ಸರಳತೆ, ಉಪಯುಕ್ತತೆ ಮುಖ್ಯವೆನಿಸಿದುವು.

1887–89ರಲ್ಲಿ ಪ್ಯಾರಿಸ್ ಔದ್ಯೋಗಿಕ ವಸ್ತು ಪ್ರದರ್ಶನದ ನೆನಪಿಗಾಗಿ 195 ಮೀಟರ್ ಎತ್ತರದ ಎಫೆಲ್ ಗೋಪುರ ನಿರ್ಮಾಣವಾಯಿತು. ಕಬ್ಬಿಣದಲ್ಲಿ ಅಂಥ ರಚನೆ ಅದೇ ಮೊದಲಿನದು. ಇಂಥದನ್ನು ಕಟ್ಟುವುದು ಸಾಧ್ಯವಿಲ್ಲ ಎಂದು ಮೊದಲು ನುಡಿದವರು, ನಿರ್ಮಾಣಕಾರ್ಯ ಮುಗಿದಮೇಲೆ, "ಇದು ಬಹಳ ಕಾಲ ಉಳಿಯುವುದಿಲ್ಲ", ಎಂದರು. ಎಫೆಲ್ ಗೋಪುರ ಮಾತ್ರ ಎತ್ತಿದ ತಲೆಯನ್ನು ಇನ್ನು ತಗ್ಗಿಸಿಯೇ ಇಲ್ಲ.

ಸಿಮೆಂಟು ಕಬ್ಬಿಣಗಳ ಬಳಕೆ ಸಾಧ್ಯವಾದಾಗ ವಾಸ್ತು ಶಿಲ್ಪಕ್ಕೆ ರೆಕ್ಕೆ ಬಂದಂತಾಯಿತು.

ಖ್ಯಾತ ಫ್ರೆಂಚ್ ವಾಸ್ತು ಶಿಲ್ಪಿ ಲ ಕಾರ್ಬುಸಿಯರ್ ಬಿಸಿಲು ತಡೆಗಳನ್ನು ರೂಪಿಸಿದ ; ವಾಸ್ತುಶಿಲ್ಪದ ಹೊಸತೊಂದು ಉಜ್ವಲ ಅಧ್ಯಾಯವನ್ನು ಬರೆದ.

ಖ್ಯಾತ ವಾಸ್ತುಶಿಲ್ಪಿ : ಲ ಕಾರ್ಬುಸಿಯರ್

× × × × × × × × ×

ಮೊಗಲರ ಆಳ್ವಿಕೆಯಲ್ಲಿ ಪರ್ಷಿಯದ ವಾಸ್ತುಶಿಲ್ಪ ಭಾರತದಲ್ಲಿ ಪ್ರಭಾವ ಬೀರಿತು. ತಾಜ್ ಮಹಲ್ ಮತ್ತಿತರ ಹಲವು ನಿರ್ಮಾಣಗಳಲ್ಲಿ ಭಾರತೀಯ ಹಾಗೂ ಪರ್ಷಿಯನ್ ವಾಸ್ತುಶಿಲ್ಪ ಶೈಲಿಗಳು ಮೇಳೈಸಿದುವು.

ಬ್ರಿಟಿಷ್ ಸಾಮ್ರಾಜ್ಯದ ವಸಾಹತುಗಳಲ್ಲಿ ಆಂಗ್ಲ ವಾಸ್ತುಶಿಲ್ಪ ಶೈಲಿ ಬೇರೂರಿದ್ದು ಸ್ವಾಭಾವಿಕ. ಭಾರತದ ಕಲ್ಕತ್ತೆ, ದಿಲ್ಲಿ ಮತ್ತಿತರ ನಗರಗಳಲ್ಲಿ ಆಂಗ್ಲಶೈಲಿಯ ಕಟ್ಟಡಗಳು ನಿರ್ಮಾಣಗೊಂಡುವು.

ಭಾರತ ಸ್ವತಂತ್ರವಾದ ಮೇಲೆ ನಿರ್ಮಿತವಾದ ಪ್ರಥಮ ನಗರ ಚಂಡೀಘಡ. ಅದರ ವಾಸ್ತುಶಿಲ್ಪಿ ಲ ಕಾರ್ಬುಸಿಯರ್. ತನ್ನ ವಿಶಿಷ್ಟತೆಗಾಗಿ, ಶ್ರೇಷ್ಠತೆಗಾಗಿ ಅದೀಗ ಲೋಕಪ್ರಸಿದ್ಧಿ ಪಡೆದಿದೆ.

ಇಂಗ್ಲೆಂಡನ್ನು ಬಿಟ್ಟು ಹೊಸ ಜಗತ್ತಿನಲ್ಲಿ – ಅಮೆರಿಕದಲ್ಲಿ– ನೆಲೆಸಲು ಬಂದವರು ತಮ್ಮೊಡನೆ ಜಾರ್ಜಿಯನ್ ವಾಸ್ತುಶಿಲ್ಪದ ಜ್ಞಾನವನ್ನೂ ಒಯ್ದರು. ಹಲವು ಐರೋಪ್ಯ ಕಲೆ–ಸಂಸ್ಕೃತಿಗಳ ಸಂಗಮವಾದ ಅಮೆರಿಕ, ಬರಬರುತ್ತ ತನ್ನದೇ ವಾಸ್ತುಶಿಲ್ಪ ಶೈಲಿಯನ್ನು ರೂಪಿಸಿಕೊಂಡಿತು. ಜಗತ್ತಿಗೆ ಅಮೆರಿಕದ ವಾಸ್ತುಶಿಲ್ಪ ನೀಡಿರುವ ಕೊಡುಗೆ —ಗಗನಚುಂಬಿ. ಸುಪ್ರಸಿದ್ಧ ವಾಸ್ತುಶಿಲ್ಪಿ ರಿಚರ್ಡ್ ಬಕ್‌ಮಿನ್ಸ್ಟರ್ ಫುಲ್ಲರ್ ಭವಿಷ್ಯತ್ತಿಗಾಗಿ 'ಗುಮ್ಮಟ ಮನೆ' ಗಳನ್ನು ರಚಿಸಿದ್ದಾನೆ.

× × × × × × × × ×

ವಾಸ್ತುಶಿಲ್ಪವೆಂದರೆ ಕಟ್ಟಡದ ಭದ್ರತೆ ಮತ್ತು ಸೊಬಗು ಮಾತ್ರ ಎಂಬ ಭಾವನೆ ಹಿಂದೆ ಇತ್ತು. ಅದೀಗ ಮಾಯವಾಗಿದೆ. ಒಂದು ಕಟ್ಟಡ ಸುಂದರವಾಗಿರಬೇಕು ಹಾಗೂ ಅದರಲ್ಲಿ ಎಲ್ಲ ಅನುಕೂಲಗಳಿರಬೇಕು ಎಂಬುದು, ಎಲ್ಲರೂ ಒಪ್ಪುವ ಸಂಗತಿ. ಆದರೆ ಇಷ್ಟೇ ಸಾಲದು. ಕಟ್ಟಡದೊಳಗೆ ಹಗಲನ್ನೋ ಇರುಳನ್ನೋ ಕಳೆಯುವವನ ಭಾವನಾತ್ಮಕ ಅವಶ್ಯತೆಗಳು ಕೆಲವಿರುತ್ತವೆ. ಆಧುನಿಕ ವಾಸ್ತುಶಿಲ್ಪಿ ಇದನ್ನೂ ಗಮನಿಸುತ್ತಾನೆ.

ಪ್ರಾಚೀನ ರೋಮಿನ ಖ್ಯಾತ ವಾಸ್ತುಶಿಲ್ಪಿ ವಿಟ್ರೂವಿಯಸ್ ಪಾಲ್ಲಿಯೊ ವಾಸ್ತುಶಿಲ್ಪಿಯನ್ನು ಹೀಗೆ ಬಣ್ಣಿಸಿದ್ದಾನೆ :

"ವಾಸ್ತುಶಿಲ್ಪಿ ಜ್ಞಾನ ಸಂಗ್ರಹದಲ್ಲಿ ಚತುರನೂ ಶಕ್ತನೂ ಆಗಿರಬೇಕು. ಕೈ ಬರಹ ಚೆನ್ನಾಗಿರಬೇಕು. ನಕಾಶೆ ರಚನೆಯಲ್ಲಿ ಸಮರ್ಥನಾಗಿರಬೇಕು ; ಜ್ಯಾಮಿತಿ, ದೃಷ್ಟಿಶಾಸ್ತ್ರ, ಅಂಕೆಸಂಖ್ಯೆಗಳಲ್ಲಿ ಪರಿಣತನಿರಬೇಕು ; ಇತಿಹಾಸದ ಪರಿಚಯವಿರಬೇಕು ; ಪ್ರಾಕೃತಿಕ ಮತ್ತು ನೈತಿಕ ತತ್ತ್ವಜ್ಞಾನ ಅರಿತಿರಬೇಕು : ತಕ್ಕ ಮಟ್ಟಿನ ಸಂಗೀತಗಾರನಾಗಿರಬೇಕು. ಕಾನೂನಿನಲ್ಲೂ ಭೌತವಸ್ತುಗಳ ಮತ್ತು ಆಕಾಶಕಾಯಗಳ ಚಲನೆಯ ನಿಯಮಗಳಲ್ಲೂ ಬಲ್ಲಿದನಿರಬೇಕು."

ಆತನಿಗೆ ಕಲ್ಪನಾಶಕ್ತಿಯೂ ಇರಬೇಕು —ಎಂಬುದನ್ನು ಮೇಲಿನದಕ್ಕೆ ಸೇರಿಸಿದಾಗ, ವಾಸ್ತುಶಿಲ್ಪಿಯ ಶಿಲ್ಪಚಿತ್ರ ಪೂರ್ಣವಾಗುತ್ತದೆ.



ನ್ಯೂಯಾರ್ಕ್ ನಗರದ ಎಂಪೈರ್ ಸ್ಟೇಟ್ ಕಟ್ಟಡ

## ೮

ಒಂದು ಗಾದೆ ಇದೆ :

" ಸಾಹಿತ್ಯದ ಬಗೆಗೆ, ಸಂಗೀತ ಮತ್ತಿತರ ಕಲೆಗಳ ಬಗೆಗೆ ಏನನ್ನೂ ತಿಳಿಯದವನು ಬಾಲ-ಕೋಡುಗಳಿಲ್ಲದ ಪ್ರಾಣಿಯೇ ಸರಿ."

ಬರಿ ಪ್ರಾಣಿಯಷ್ಟೇ ಅಲ್ಲ, ಬಾಲವಿಲ್ಲದ ಕೋಡುಗಳಿಲ್ಲದ ಪ್ರಾಣಿ !

" ಆಡುವ ಮಾತು ಮಾನಸಿಕ ಅನುಭವದ ಸಂಕೇತ ; ಬರೆಯುವ ಪದ ಆಡುವ ಮಾತಿನ ಸಂಕೇತ. "

— ಇದು ಗ್ರೀಕ್ ಕಲ್ಪನೆ.

ಬರಹದ ರೂಪದಲ್ಲಿ ಕಂಡುಬರುವ ಪದದ ಮಹತ್ವವನ್ನು ಯಾರೂ ಅಲ್ಲಗಳೆಯುವುದಿಲ್ಲ.

ಆದರೆ ಬರಹ ಬೇರೆ, ಸಾಹಿತ್ಯ ಬೇರೆ. ನೃತ್ಯ, ಸಂಗೀತ, ಚಿತ್ರಕಲೆ, ಶಿಲ್ಪ, ವಾಸ್ತುಶಿಲ್ಪಗಳಿಗೆ ತಮ್ಮದೇ ಆದ ಖಚಿತ ಭಾಷೆಗಳಿವೆ. ಇಡುವ ಹೆಜ್ಜೆ, ಮೀಟುವ ತಂತಿ, ಬರೆಯುವ ರೇಖೆ, ಚಾಣದ ಪೆಟ್ಟು, ಜೋಡಿಸುವ ಇಟ್ಟಿಗೆ ನಿರ್ದಿಷ್ಟ ಫಲ ನೀಡುತ್ತವೆ. ಸಾಹಿತ್ಯದಲ್ಲಿ ಹಾಗಲ್ಲ. ಅಕ್ಷರ-ಪದಗಳನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಬಳಸುತ್ತಾರೆ. ಜನರ ಭಾಷೆಯ ಪ್ರಯೋಜನ ಒಂದಲ್ಲ, ಹಲವು. ಆ ಭಾಷೆಯನ್ನು ಉಪಯೋಗಿಸಿ ಸಾಹಿತ್ಯ ಸೃಷ್ಟಿಸಬೇಕು.

ಪ್ರಪಂಚದ ಅತ್ಯಂತ ಪ್ರಾಚೀನ ಪುಸ್ತಕ : ಚೀನೀ ಭಾಷೆಯ ಬೌದ್ಧ 'ವಜ್ರಸೂತ್ರ'—9ನೇ ಶತಮಾನದ್ದು

ನೋಡಿದಿರಾ ಸಾಹಿತ್ಯದ ಹಿರಿಮೆ ! —ಎಂದು ಬರೆಹಗಾರರು ಹೆಮ್ಮೆ ಪಡಬಹುದು. ಆದರೆ, ಅವರು ಸೃಷ್ಟಿಸುವ ಸಾಹಿತ್ಯದ ಶ್ರೇಷ್ಠತೆ ಅದರ ಗುಣವನ್ನು ಅವಲಂಬಿಸಿದೆ.

ಮನುಷ್ಯ ಮಾತನಾಡಲು ಕಲಿತಂದಿನಿಂದಲೂ ಒಂದು ಬಗೆಯ ಸಾಹಿತ್ಯ ಸೃಷ್ಟಿಯಾಗಿರಲೇ ಬೇಕು. ಅಜ್ಜಿ ಮೊಮ್ಮಗುವಿಗೆ, ತಾಯಿ ಕಂದನಿಗೆ ಹೇಳಿರುವ ಕಥೆಗಳೆಲ್ಲ, ಅವರು ಹಾಡಿರುವ ಲಾಲಿಪದಗಳೆಲ್ಲ, ಸಾಹಿತ್ಯವೇ. ಆ ಬಗೆಯ ಜಾನಪದ ಸಾಹಿತ್ಯದ್ದು ಪ್ರಾಚೀನ ಪರಂಪರೆ.

ಆದರೆ ಸಾಹಿತ್ಯಕೃತಿ ಜನರ ಗಮನ ಸೆಳೆಯುವುದು ಅದು ಬರಹರೂಪದಲ್ಲಿ –ಅದರಲ್ಲೂ ಪುಸ್ತಕರೂಪದಲ್ಲಿ– ಪ್ರಕಟವಾದಾಗ.

ಆವೆಮಣ್ಣಿನ ಫಲಕ, ತೊಗಲು, ಭೂರ್ಜ ಪತ್ರ, ತಾಳೆಗರಿ ಓಲೆ, ರೇಶಿಮೆ ಬಟ್ಟೆ, ಕಾಗದ —ಹೀಗೆ, ಬರೆಯಲು (ಸಾಹಿತ್ಯ ಸೃಷ್ಟಿಸಲು) ಮಾನವ ಬಳಸಿರುವ ಸಾಮಗ್ರಿಗಳು ಹಲವು.

ಪ್ರಾಚೀನ ಕಾಲದಿಂದ ಈಗಿನವರೆಗೆ ಗ್ರಂಥಗಳೆಂದರೆ ಜನರಿಗೆ ಭಕ್ತಿ. ದಪ್ಪಗಿದ್ದರೆ ಗ್ರಂಥ, ತೆಳ್ಳಗಿದ್ದರೆ ಪುಸ್ತಕ. ತೆಳ್ಳಗಿದ್ದರೂ ಏನಂತೆ ? ಪ್ರತ್ಯೇಕವಾಗಿ ಮುದ್ರಿಸಿದಾಗ ಕೆಲವೇ ಪುಟಗಳ ಹೊತ್ತಗೆಯಾಗುವ 'ಭಗವದ್ಗೀತೆ'ಯ ಮಹತ್ವ ಕಡಮೆಯೆ ?

ಪುಸ್ತಕಗಳ ಬಗೆಗೆ ಬಹಳ ಜನ ಗುಣಗಾನ ಮಾಡಿದ್ದಾರೆ. ಪುಸ್ತಕಗಳು —ಸಾಹಿತ್ಯ ಕೃತಿಗಳು— ಸಾಮಾನ್ಯ ಮನುಷ್ಯರ ಮೇಲಷ್ಟೇ ಅಲ್ಲ, ಮಾನವ ಶ್ರೇಷ್ಠರ ಮೇಲೂ ಪ್ರಭಾವ ಬೀರಿವೆ.

‘ಅನ್ ಟು ದಿಸ್ ಲಾಸ್ಟ್’ ಗಾಂಧಿಜಿಗೆ ಮಾರ್ಗದರ್ಶನ ಮಾಡಿದ ಪುಟ್ಟ ಪುಸ್ತಕ.

‘ಈ ಪುಸ್ತಕದ [illegible] ಆಧಾರದ [illegible] ಒಳ್ಳೆಯ ಪುಸ್ತಕಗಳು ರೂಪಿಸಿಕೊಡುತ್ತವೆ,” ಎಂದಿದ್ದಾರೆ ಗಾಂಧಿಜಿ.

[illegible]’ ಎಂಬ ಪುಸ್ತಕ 19ನೆಯ ಶತಮಾನದಲ್ಲಿ ಯುವಕ ಡಾರ್ವಿನನ ಮೇಲೆ ಮೋಡಿ ಬೀರಿತು. ಅದರ ಫಲವಾಗಿ ಆತ ‘ಬೀಗ್ಲ್’ ಹಡಗಿನಲ್ಲಿ ಸಂಚಾರ ಹೊರಟ. ಪರಿಣಾಮ: ವಿಕಾಸವಾದದ ಸಿದ್ಧಾಂತ.

ಪುಸ್ತಕದ [illegible] ಅಂಥದು. ಅದನ್ನು ಮುಟ್ಟಿದರೂ ಸಾಕು. ಒಂದು ಥರಾ ಆಗುತ್ತೇವೆ. ಅದು ಪರಾಗಸ್ಪರ್ಶ.

ಫೆರಡೆ. ಪುಸ್ತಕಗಳನ್ನು ಬೈಂಡ್ ಮಾಡುವ ಅಂಗಡಿಯಲ್ಲಿ ದುಡಿತ. ಅದು ವೇತನವಿಲ್ಲದ ಶಿಷ್ಯವೃತ್ತಿ. ಪುಸ್ತಕಗಳನ್ನು ಬೈಂಡ್ ಮಾಡುತ್ತ, ಮಾಡುತ್ತ ಅವನ್ನು ಓದಿಯೂ ಬಿಟ್ಟ. ಕೆಲ ವರ್ಷಗಳಲ್ಲೇ ವಿಜ್ಞಾನಿಯಾದ.

ಗ್ರಂಥಪ್ರೇಮಿ ರಷ್ಯದ ಖ್ಯಾತ ಸಾಹಿತಿ ಮಾಕ್ಸಿಂ ಗಾರ್ಕಿಯ ಸಾಷ್ಟಾಂಗ ಪ್ರಣಾಮ ಈ ರೀತಿಯದು:

“ನನ್ನಲ್ಲಿರುವ ಒಳ್ಳೆಯದೆಲ್ಲ ಪುಸ್ತಕಗಳಿಂದ ಬಂದದ್ದು: ಅದಕ್ಕಾಗಿ ಅವುಗಳಿಗೆ ನಾನು ಋಣಿ. ಕಿನ್ನರ ಕಥೆಗಳ ಮಾಯಾಪಕ್ಷಿಗಳ ಹಾಗೆ ಪುಸ್ತಕಗಳು ತಮ್ಮ ಗೀತೆಗಳನ್ನು ನನಗಾಗಿ ಹಾಡಿದುವು: ಸೆರೆಯಲ್ಲಿ ತೊಳಲುತ್ತಿರುವವನೊಡನೆ ಸಂಪರ್ಕ ಬೆಳೆಸುವಂತೆ ನನ್ನೊಡನೆ ಮಾತನಾಡಿದುವು. ಬದುಕಿನ ವೈವಿಧ್ಯ, ಸಿರಿವಂತಿಕೆ, ಒಳ್ಳಿತು ಹಾಗೂ ಸೌಂದರ್ಯ ಗಳತ್ತ ಸಾಗುವ ಮಾನವನ ಎಂಟೆದೆಯ ಸಾಹಸದ ಬಗೆಗೆ ಅವು ಹಾಡಿದುವು. ಒಂದೊಂದು ಪುಸ್ತಕವೂ ಮೃಗೀಯತೆಯಿಂದ ಮಾನವತೆಯತ್ತ ನಾನು ಏರಿದ ಏಣಿಯ ಒಂದೊಂದು ಮೆಟ್ಟಿಲು......”



ಹೋಮರನ ಶಿಲ್ಪ, ಅವನ ಕೃತಿಯ ಗಾಯಕ ಮತ್ತು ಶ್ರೋತೃಗಳು

ಜನನಾಯಕ, ವಿಜ್ಞಾನಿ, ಸಾಹಿತಿ — ಹೀಗೆ ಎಲ್ಲರನ್ನೂ ಮರುಳುಗೊಳಿಸಿರುವ ಮಂತ್ರ ಶಕ್ತಿ, ಪುಸ್ತಕ.

ಇದನ್ನು ನೋಡಿದಾಗ, ಬರೆಹಗಾರನ ಹೆಮ್ಮೆ ಸ್ವಲ್ಪ ಮಟ್ಟಿಗೆ ಕ್ಷಮ್ಯ ಎನಿಸಬಹುದು !

××× ××× ×××

ಅತ್ಯಂತ ಪ್ರಾಚೀನ ಸಾಹಿತ್ಯಕೃತಿಗಳೆಂದು ಈ ದಿನ ಲೋಕಮನ್ನಣೆಗೆ ಪಾತ್ರವಾಗಿರುವ ಗ್ರಂಥಗಳು: ಗ್ರೀಕರ ‘ಇಲಿಯಡ್’ ಮತ್ತು ‘ಒಡಿಸ್ಸಿ’. ಈ ಮಹಾ ಕಾವ್ಯಗಳ ಮೂಲ, ಕ್ರಿ.ಪೂ. 1000 ವರ್ಷಗಳಿಗೂ ಕೆಲ ಶತಮಾನ ಹಿಂದಿನ ಗ್ರೀಕ್ ಬುಡಕಟ್ಟುಗಳಲ್ಲಿ ಪ್ರಚಲಿತವಿದ್ದ ಕಥೆಗಳು, ಕಥಾಗೀತೆಗಳು. ಗ್ರೀಕ್ ಗಾಯಕರು ಭೋಜನ ಮತ್ತಿತರ ಸಮಾರಂಭಗಳಲ್ಲಿ ತಮ್ಮವರ ಸಾಹಸದ ಕಥಾಗೀತೆಗಳನ್ನು ಹಾಡುತ್ತಿದ್ದರು. ಕ್ರಿ. ಪೂ. 8ನೆಯ ಶತಮಾನದಲ್ಲಿ ಗ್ರೀಸಿನಲ್ಲಿ ಬರೆವಣಿಗೆ ರೂಢಿಗೆ ಬಂದ ಮೇಲೆ ಆ ಗೀತೆಗಳನ್ನು ಬರೆದಿಟ್ಟರು. ಇವು ಪರಿಷ್ಕಾರ ಹೊಂದುತ್ತ ‘ಇಲಿಯಡ್’, ‘ಒಡಿಸ್ಸಿ’ ಮಹಾಕಾವ್ಯಗಳಾದವು.

ಅಂಧ ಗಾಯಕ–ಕವಿ ಹೋಮರ್ ಎಂಬಾತ ಇವುಗಳ ಕರ್ತೃ ಎನ್ನುವುದು ಒಂದು ಮತ. ಗ್ರೀಕ್ ಭಾಷೆಯಲ್ಲಿ ‘ಹೋಮರ್’ ಪದಕ್ಕೆ ಜೋಡಿಸುವವನು ಎಂಬ ಅರ್ಥವೂ ಇದೆ; ಈ ಕಥಾಗೀತೆಗಳನ್ನು ಜೋಡಿಸಿದವನು ಹೋಮರ್, ಎಂಬುದು ಮತ್ತೊಂದು ಮತ. ಹೋಮರ್ ಎಂಬ ಕವಿ ಪ್ರಚಲಿತ ಗೀತೆಗಳನ್ನು ಪರಿಷ್ಕರಿಸಿ ಆ ಕಾವ್ಯಗಳನ್ನು ರಚಿಸಿದ — ಎಂಬುದು ಇನ್ನೊಂದು ಮತ.

ಏನೇ ಇರಲಿ ಹೋಮರನ ‘ಇಲಿಯಡ್’ ‘ಒಡಿಸ್ಸಿ’ ಗಳೆಂದೇ ಅವು ಪ್ರಸಿದ್ಧವಾಗಿವೆ. ಕೆಲ ಗ್ರೀಕ್ ಬುಡಕಟ್ಟುಗಳ ತಂಡ ಏಷ್ಯಾ ಮೈನರ್‌ನ ಟ್ರಾಯ್ ನಗರಕ್ಕೆ ಮುತ್ತಿಗೆ ಹಾಕಿ ಅದನ್ನು ಸೂರೆಗೊಂಡ ಕಥೆ ‘ಇಲಿಯಡ್’. ಗ್ರೀಕ್ ನಾಯಕರಲ್ಲೊಬ್ಬನಾದ ಒಡೀಸಿಯಸ್ (ಯೂಲಿಸೆಸ್) ಟ್ರಾಯ್ ಯುದ್ಧದಿಂದ ತನ್ನ ದ್ವೀಪಕ್ಕೆ ಮರಳುವ ಕಥೆ — ‘ಒಡಿಸ್ಸಿ’.

ಇವೆರಡೂ ಲಲಿತ, ಸರಳ ಕಾವ್ಯಗಳು. ಆಡು ಭಾಷೆಯ ಕಥನ. ಪಾಂಡಿತ್ಯ ಪ್ರದರ್ಶನವಿಲ್ಲ. ಮನುಷ್ಯರು ದೇವರುಗಳೆಲ್ಲ ಇಲ್ಲಿನ ಪಾತ್ರಗಳು. ಕೆಲವು ಪ್ರಸಂಗಗಳ ಬಣ್ಣನೆಯನ್ನು ಓದುವಾಗ ಉಸಿರು ಬಿಗಿಹಿಡಿಯುವಂತಾದರೆ, ಬೇರೆ ಕೆಲವೆಡೆ ಬರುವ ಹಾಸ್ಯ ಪ್ರಸಂಗ ಗಳಿಂದ ಹೊಟ್ಟೆ ಹುಣ್ಣಾಗುತ್ತದೆ. ಮಾನವ ಜೀವನದ ಒಗಟನ್ನು ಅರ್ಥಮಾಡಿಕೊಳ್ಳಲು ಹೋಮರ್ ಇಲ್ಲಿ ಪ್ರಯತ್ನಿಸಿದ್ದಾನೆ. ವೇದನೆ ಯಾತನೆಗಳ ಮೂಲಕ ಪರಿಶುದ್ಧತೆ ಪ್ರಾಪ್ತವಾಗುವುದು, ಇಲ್ಲಿನ ಚಿತ್ರಣ.

ಭಾರತದ ಆದಿಕಾವ್ಯ ‘ರಾಮಾಯಣ’ ವನ್ನೂ ಅನಂತರದ ಮಹಾಕಾವ್ಯ ‘ಮಹಾಭಾರತ’ ವನ್ನೂ ‘ಇಲಿಯಡ್’, ‘ಒಡಿಸ್ಸಿ’ ಗಳೊಡನೆ ತಕ್ಕಡಿಯಲ್ಲಿಟ್ಟು ತೂಗಬೇಕೆಂದು ಆಸೆಯಾಗುವುದು ಸಹಜ. ನಮ್ಮದಕ್ಕೆ ಬೇರೆ ಯಾವುದೂ ಸಾಟಿಯಿಲ್ಲ ಎಂದು ನಾವು ಸಾಧಿಸು ವುದೂ ಸ್ವಾಭಾವಿಕ.

ಇಂಥವರಲ್ಲೂ ಒಂದೆರಡು ಸ್ವಾರಸ್ಯದ ಅಂಶಗಳನ್ನು ನಾವು ಗುರುತಿಸದೆ ಇರಲಾರೆವು. ಕ್ರಿಸ್ತ ಶಕಕ್ಕೆ ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ವಾಯುವ್ಯದ ಮಾರ್ಗವಾಗಿ ಆರ್ಯರು ಭಾರತದೊಳಕ್ಕೆ (ಆಗಿನ ಜಂಬೂದ್ವೀಪ) ಬಂದರು. ಹೆಚ್ಚು ಕಡಿಮೆ ಅದೇ ಕಾಲದಲ್ಲಿ ಆರ್ಯ ಮೂಲದವರೇ ಆದ ಗ್ರೀಕ್ ಬುಡಕಟ್ಟುಗಳ ಜನರು ಭೂಮಧ್ಯ ಸಮುದ್ರತೀರದ ದ್ವೀಪಗಳನ್ನು ತಲಪಿದರು. ಕಥೆಗಾರರು ಭಾರತಕ್ಕೆ ಬಂದ ಆರ್ಯರ ಜೊತೆಗೂ ಇದ್ದರು; ಗ್ರೀಕರ ಜೊತೆಗೂ ಇದ್ದರು. ಆ ಗಾಯಕರು ಹಾಡುತ್ತಿದ್ದ ಕಥೆಗಳೇ ಮುಂದೆ ಅಲ್ಲಲ್ಲಿ ಕಾವ್ಯಗಳಾದುವು. 'ಇಲಿಯಡ್'ನ ಟ್ರಾಯ್ ದಹನಕ್ಕೂ 'ರಾಮಾಯಣ'ದ ಲಂಕಾದಹನಕ್ಕೂ ಸಾಮ್ಯವಿಲ್ಲವೆ? (ಅಲ್ಲಿ ಹೆಲೆನ್, ಇಲ್ಲಿ ಸೀತೆ) ಧಾರ್ಮಿಕ ನೆಲೆಯಿಂದ "ಛೆ! ಛೆ!" ಎನ್ನಬಹುದು. ತೀರಾ ಅಸ್ವಾಭಾವಿಕವಾಗಿ ಕಂಡೀತೆ? ಶತಮಾನಗಳಾಚೆ ಹೊರಟ ಒಂದೇ ಜಾನಪದ ಕಥಾಬೀಜದಿಂದ ಈ ಬಳ್ಳಿಗಳು ಹರಡಿರಬಹುದೆ? ಇಂಥ ಜಿಜ್ಞಾಸೆ ಅರ್ಥಪೂರ್ಣ ಅಧ್ಯಯನವಾಗುತ್ತದೆ.

ಬೇರೆ ಬೇರೆ ಗ್ರೀಕ್ ಬುಡಕಟ್ಟುಗಳ ಜನರಲ್ಲಿ ಸ್ವಾಭಿಮಾನವನ್ನು ತುಂಬಲು, ಅವರನ್ನು ಒಂದಾಗಿ ಬೆಸೆಯಲು 'ಇಲಿಯಡ್', 'ಒಡಿಸ್ಸಿ'ಗಳು ನೆರವಾದುವು. ಹಾಗೆಯೇ ಕ್ರಿಸ್ತ ಶಕಕ್ಕೆ ತುಸು ಮುನ್ನವೂ ಅನಂತರವೂ ಒಂದರ ಮೇಲೊಂದರಂತೆ ನಮ್ಮ ಮೇಲೆ ನಡೆದ ಪರಕೀಯ ದಾಳಿಗಳ ಕಾಲದಲ್ಲಿ ರಾಷ್ಟ್ರಪ್ರಜ್ಞೆಯನ್ನು ಹೆಚ್ಚಿಸಲು 'ರಾಮಾಯಣ', 'ಮಹಾಭಾರತ'ಗಳು ಸಹಾಯಕವಾದುವು.



ಯುದ್ಧರಂಗದಲ್ಲಿ ರಥಾರೂಢ ರಾಮ : ಹಳೇಬೀಡು ಹೊಯ್ಸಳೇಶ್ವರ ದೇವಾಲಯದ ಭಿತ್ತಿಶಿಲ್ಪ

ನಮಗೆ ಈಗ ತಿಳಿದಿರುವುದಿಷ್ಟು: ಕ್ರಿ.ಪೂ. 6ನೆಯ ಶತಮಾನದಲ್ಲೇ ರಾಮಕಥೆ ಇದ್ದಿರಬೇಕು. ಮುಂದಿನ ಬೌದ್ಧ ಜಾತಕಗಳಲ್ಲಿ ಆ ಕಥೆ ಇದೆ. ಜೈನ ಪುರಾಣ, ಉಪನಿಷತ್ತುಗಳಲ್ಲೂ ಇದೆ.

ರಾಮ ಚಾರಿತ್ರಿಕ ಪುರುಷನಲ್ಲ ಎಂದು ಒಂದು ಮತ. ಹೌದು ಎನ್ನುವುದು ಇನ್ನೊಂದು ಮತ. ವಾಲ್ಮೀಕಿ ಎಂಬವನಂತೂ ಇದ್ದ. ಕ್ರಿ.ಪೂ. 3ನೆಯ ಶತಮಾನದಲ್ಲಿ ಅವನು ಜೀವಿಸಿದ್ದನೆಂದು ಎಣಿಕೆ. ಹಿಂದಿನ ರಾಮಕಥೆಯನ್ನು ಆಧರಿಸಿ ಆತ 'ರಾಮಾಯಣ' ರಚಿಸಿರಬಹುದು. ಭಾರತೀಯ ಸಾಹಿತ್ಯದಲ್ಲಿ ಆತನೇ ಆದಿಕವಿ. ಆಗ ಬರೆದಿಟ್ಟ ಕಾವ್ಯ ಅದಲ್ಲ. ಅದು ಕಂಠಸೃಷ್ಟಿ. ಕಂಠಪಾಠ. ಹಾಡುತ್ತ ಹಾಡುತ್ತ ಮುಂದಿನವರು ಪರಿಷ್ಕರಿಸಿರಬಹುದು. ಈಗಿರುವ ಲಿಖಿತ ರೂಪವನ್ನು –ಪೂರ್ಣಸ್ವರೂಪವನ್ನು– 'ರಾಮಾಯಣ' ಪಡೆದದ್ದು ಕ್ರಿ.ಶ. 2–3ನೆಯ ಶತಮಾನಗಳಲ್ಲಿ.

ರಾಮಕಥೆ ಬಹಳ ಬೇಗನೆ ಲೋಕಸಂಚಾರಿಯಾಯಿತು. ಬೌದ್ಧ ಸಂಪ್ರದಾಯದ ರಾಮಕಥೆ 472ರಲ್ಲಿ ಚೀನೀ ಭಾಷೆಗೆ ಪರಿವರ್ತಿತವಾಯಿತು. ರಾಮಾಯಣದ ಪಾರಾಯಣಕ್ಕಾಗಿ (ಮಹಾಭಾರತದ್ದು ಕೂಡ) ಕಾಂಬೋಡಿಯದ ಅರಸು ಏರ್ಪಾಟು ಮಾಡಿದನೆಂದು 6ನೆಯ ಶತಮಾನದ ಒಂದು ಶಾಸನ ತಿಳಿಸುತ್ತದೆ. ಅಂಗರ್‌ವಾಟ್‌ನ ದೇವಾಲಯದ ಪ್ರಾಕಾರದಲ್ಲಿ ರಾಮಾಯಣ ಕಥೆಯ ಚಿತ್ರಣವಿದೆ. ಟಿಬೆಟ್ ಭಾಷೆಯಲ್ಲಿ 700ರಲ್ಲಿ ರಾಮಚರಿತೆ ರಚಿತವಾಯಿತು.


ವ್ಯಾಸ ಹೇಳಿದ 'ಮಹಾಭಾರತ'ದ ಕಥೆಯನ್ನು ಬರೆದುಕೊಳ್ಳುತ್ತಿರುವ ವಿನಾಯಕ

ಕ್ರಿಸ್ತ ಶಕೆಯಲ್ಲಂತೂ 'ರಾಮಾಯಣ' ಲೋಕದ ಅನೇಕ ಭಾಷೆಗಳಿಗೆ ಭಾಷಾಂತರಗೊಂಡಿದೆ. ಜಗತ್ತಿನಲ್ಲಿ 'ರಾಮಾಯಣ'ದ ಒಟ್ಟು 125 ಆವೃತ್ತಿಗಳಿವೆ.

ಮೂಲದಲ್ಲಿ 'ಜಯ' ಎಂಬ ಹೆಸರಿದ್ದ 'ಮಹಾಭಾರತ'ದ ಹೂರಣ ಕ್ರಿ.ಪೂ. 4ನೆಯ ಶತಮಾನದಲ್ಲಿ ರೂಪುಗೊಂಡಿತು ಎಂಬುದು ತಜ್ಞರ ಮತ. ಎಂಟು ಶತಮಾನಗಳ ಕಾಲ ಅದರ ಕರ್ಣಾಕರ್ಣಿಕೆ ಪ್ರವಾಹ ಬಲೆಯುತ್ತಲೇ ಹೋಯಿತು. ಈಗಿನ 'ಮಹಾಭಾರತ' ರೂಪ ಸಿದ್ಧವಾದದ್ದು ಕ್ರಿ.ಶ. 4ನೆಯ ಶತಮಾನದಲ್ಲಿ. ಇದು ಜಗತ್ತಿನಲ್ಲಿ ಅತ್ಯಂತ ದೊಡ್ಡ ಕಾವ್ಯ. ಶ್ಲೋಕಗಳ ಸಂಖ್ಯೆ ಒಂದು ಲಕ್ಷ. ಹೋಮರನ 'ಇಲಿಯಡ್' 'ಒಡಿಸ್ಸಿ'ಗಳನ್ನು ಒಟ್ಟಿಗೆ ಸೇರಿಸಿದರೆ, ಅದರ ಎಂಟು ಪಟ್ಟಾಗುತ್ತದೆ 'ಮಹಾಭಾರತ'ದ ಗಾತ್ರ..

ಪರಿಷ್ಕರಿಸಿದವನು —ವ್ಯಾಸ. ಮುಂದಿನ ಶತಮಾನಗಳಲ್ಲಿ 'ಮಹಾಭಾರತ' ಕಥೆಯಲ್ಲಿ ಕೈಯಾಡಿಸಿದವರೆಲ್ಲ ವ್ಯಾಸರೇ. ಇಂಥವರು 18 ಜನ ಇದ್ದರು ಎನ್ನುತ್ತಾರೆ.

'ರಾಮಾಯಣ'ದ್ದು ಕರುಣರಸ ಪ್ರಧಾನವಾದ ಆದರ್ಶಮಯವಾದ ಸರಳ ಕಥೆ. 'ಮಹಾಭಾರತ' ಹಾಗಲ್ಲ. ಇಲ್ಲಿ ಬುದ್ಧಿಮತ್ತೆಯ ಜಗ್ಗಾಟವಿದೆ. ಧರ್ಮ, ರಾಜನೀತಿ, ಅಧ್ಯಾತ್ಮ ಈ ಎಲ್ಲ ಸಮಸ್ಯೆಗಳ ಮಂಥನ ಇದೆ.

'ರಾಮಾಯಣ', 'ಮಹಾಭಾರತ'ಗಳು ಭಾರತದ ಮೊಟ್ಟ ಮೊದಲ ಸಾಹಿತ್ಯ ಕೃತಿಗಳು. ಆರಂಭದ ಎರಡು ಕೃತಿಗಳೂ ಶ್ರೇಷ್ಠತಮ ಕಾವ್ಯಗಳೆಂದು, ಗ್ರೀಕರಂತೆ ನಮಗೂ ಹೆಮ್ಮೆ. (ಅಥವಾ ನಮ್ಮಂತೆ ಅವರಿಗೂ ಹೆಮ್ಮೆ.)

x x x          x x x          x x x

ನಾಟಕ, ಕಲಾ ಪ್ರಕಾರವೂ ಹೌದು ; ಸಾಹಿತ್ಯ ಪ್ರಕಾರವೂ ಹೌದು. ನಟನಟಿಯರ ಅಭಿನಯ, ದೃಶ್ಯ ಜೋಡಣೆ, ರಂಗಸಜ್ಜಿಕೆ, ನಿರ್ದೇಶನ ಇವೆಲ್ಲ ಸೇರಿರುತ್ತವೆ, ನಾಟಕ ಕಲೆಯಲ್ಲಿ. ಹೆಚ್ಚಿನ ನಾಟಕಗಳು ಇಂಥವು. ಕೆಲವನ್ನು ಓದಿಯೇ ಸಂತೋಷ ಪಡಬೇಕು. ಕೆಲವು ಅಭಿನಯಿಸುವುದಕ್ಕೂ ಚೆನ್ನಾಗಿರುತ್ತವೆ ; ಓದುವುದಕ್ಕೂ ಚೆನ್ನಾಗಿರುತ್ತವೆ.

2300 ವರ್ಷಗಳಿಗೆ ಹಿಂದಿನ ಗ್ರೀಕ್ ನಾಟಕಗಳು –ಟ್ರಾಜಿಡಿಗಳು, ಕಾಮಿಡಿಗಳು– ಸಾಹಿತ್ಯೇತಿಹಾಸದಲ್ಲಿ ಸ್ಥಾನ ಪಡೆದಿವೆ. ಅರಿಸ್ಟಾಟಲನ ಕಾವ್ಯಮೀಮಾಂಸೆ ಆ ಕಾಲದ ಗ್ರೀಕ್ ನಾಟಕಗಳನ್ನೇ ಕುರಿತದ್ದು. ವಿಶ್ವಸಾಹಿತ್ಯಕ್ಕೆ ಗ್ರೀಸ್ ನೀಡಿರುವ ಇನ್ನೊಂದು ಕೊಡುಗೆ–ಗುಲಾಮ ಈಸೋಪ ರಚಿಸಿದ ಜಾನಪದ ಮೂಲದ ಕಥೆಗಳು. 'ಈಸೋಪನ ಕಥೆಗಳು' ಎಂದು ಅವು ಪ್ರಸಿದ್ಧ. ಇವು ಕ್ರಿ.ಪೂ. 7ನೆಯ ಶತಮಾನದ ಸೃಷ್ಟಿ. (ಭಾರತದ 'ಪಂಚತಂತ್ರ ಕಥೆಗಳು' ಆಮೇಲೆ ಬಂದುವು. ಆದರೆ ಈಸೋಪನ ಕತೆಗಳಲ್ಲಿ ಪಂಚತಂತ್ರ ಕಥೆಗಳ ಛಾಯೆ ಇದೆ. ಅಥವಾ, ಪಂಚತಂತ್ರ ಕಥೆಗಳಲ್ಲಿ ಈಸೋಪನ ಕಥೆಗಳ ಛಾಯೆ ಇದೆ. ಮೂಲ ಜಾನಪದ ಕಥಾ ಬೀಜ ಮೊಳಕೆಯೊಡೆದ ರೀತಿಯನು ನೆನಪಿಟ್ಟುಕೊಂಡರೆ, ಈ ಸಮಸ್ಯೆಯ ವಿವರಣೆ ಸುಲಭವಾಗುತ್ತದೆ.)

7ನೆಯ ಶತಮಾನದಲ್ಲಿ ಕವಿತೆ ರಚಿಸುತ್ತಿದ್ದ ಗ್ರೀಸಿನ ಸಾಫೋ ಆ ದೇಶದ ಮಾತ್ರವಲ್ಲ, ಇಡೀ ಲೋಕದ ಪ್ರಥಮ ಕವಯಿತ್ರಿಯೆಂದು ಮಂದ್ಯಳು.


ಈಸೋಪ್ ಮತ್ತು ಅತನ ಕಥಾಪಾತ್ರಗಳು

13 ಶತಮಾನಗಳು ಕಳೆದ ಮೇಲೆ ಗ್ರೀಸಿನ ಕವಿ ಸೆಫೆರಿಸ್. ನೊಬೆಲ್ ಪಾರಿತೋಷಕ ಪಡೆದು ಲೋಕಪ್ರಸಿದ್ಧನಾದ.

...'ಇಲಿಯಡ್'ಗೆ ಸಮನಾದದ್ದನ್ನು ಲ್ಯಾಟಿನ್ ಭಾಷೆಯಲ್ಲಿ ರಚಿಸಬೇಕು —ಎಂದು ರೋಮನ್ ಚಕ್ರವರ್ತಿ ಆಗಸ್ಟಸ್ ಆದೇಶ ನೀಡಿದ, ಕವಿಮಿತ್ರ ವರ್ಜಿಲನಿಗೆ. ಹಾಗೆ ಸೃಷ್ಟಿಯಾಯಿತು, ವರ್ಜಿಲನ ರಾಷ್ಟ್ರೀಯ ಮಹಾಕಾವ್ಯ 'ಈನಿಯಿಡ್'. ಕವಿತಾ ಶೈಲಿ, ಕಲ್ಪನೆ, ಪದಜೋಡಣೆ, ಲಯ ಮಾಧುರ್ಯಗಳಿಗೆ ಹೆಸರಾಂತಿರುವ ಕೃತಿ ಇದು.

"ನಾನು ಏನು ಹೇಳಬೇಕೆಂದು ಪ್ರಯತ್ನಿಸುತ್ತೇನೋ ಅದೆಲ್ಲ ಪದ್ಯದ ರೂಪದಲ್ಲೇ ಹೊರಬೀಳುತ್ತದೆ", ಎಂದು ಜಂಭಪಡುತ್ತಿದ್ದ ಓವಿಡ್, ವರ್ಜಿಲನ ಅನಂತರದ ಪ್ರಮುಖ ಕವಿ.

ಇಟಲಿಯ ಸಾಹಿತ್ಯದ ಧ್ರುವತಾರೆಯಾದವನು 13ನೆಯ ಶತಮಾನದ ಕವಿ ಡಾಂಟೆ. ಲ್ಯಾಟಿನ್ ಭಾಷೆಯ ಬದಲು ಜನರಾಡುವ ಪ್ರಾದೇಶಿಕ ಭಾಷೆಗಳು ಪ್ರವರ್ಧಮಾನಕ್ಕೆ ಬಂದ ಕಾಲ ಅದು. (ಈ ಘಟನೆಯನ್ನು ಭಾರತದಲ್ಲಿ ಸಂಸ್ಕೃತದ ಬದಲು ಪ್ರಾದೇಶಿಕ ಭಾಷೆಗಳುದಯವಾದ ಸಂಭವಕ್ಕೆ ಹೋಲಿಸಬಹುದು.)

ಸಂಗೀತ, ಚಿತ್ರಕಲೆ, ಕ್ರೀಡೆಗಳಲ್ಲೂ ಡಾಂಟೆ ಆಸಕ್ತನಾಗಿದ್ದ. ರಾಜಕೀಯ ವ್ಯಾಸಂಗವೂ ಇತ್ತು. ಫ್ಲಾರೆನ್ಸ್ ನಗರದ ರಾಜಕೀಯ ಕಲಹದ ಕಾರಣದಿಂದ ಡಾಂಟೆ ಪೌರತ್ವ ಕಳೆದುಕೊಂಡು ಬೇರೆ ನಗರಗಳಲ್ಲಿ ಅಲೆಯಬೇಕಾಯಿತು. ಒಂದು ವೃತ್ತಿಯಲ್ಲಿ ಅವಲಂಬ ಬಿಡೆ ಅವಿರತ ಆಸರೆಯಿಲ್ಲದೆ ಊರೂರು ಅಲೆಯುತ್ತಿದ್ದ 20ವರ್ಷಗಳ ಅವಧಿಯಲ್ಲಿ ಡಾಂಟೆ ತನ್ನ 'ಕಾಮಿಡಿ' ಕೃತಿಯನ್ನು ಬರೆದ. (ಮುಂದೆ ಪ್ರಕಾಶಕನೊಬ್ಬ ಅದರ ಹೊಸ ಆವೃತ್ತಿಯನ್ನು ಪ್ರಕಟಿಸಿದಾಗ 'ಕಾಮಿಡಿ'ಯ ಮುಂದೆ 'ಡಿವೈನ್' ಸೇರಿಸಿದ.)

14,000 ಸಾಲು ಉದ್ದದ ಈ ಮಹಾಕಾವ್ಯ ಇಟಲಿಯಲ್ಲಿ ಸಹಸ್ರಾರು ಜನರಿಗೆ ಈಗಲೂ ಕಂಠಪಾಠ. 50ಕ್ಕೂ ಹೆಚ್ಚು ಭಾಷೆಗಳಿಗೆ ಅನುವಾದಗೊಂಡಿದೆ. ಪ್ರತಿ ವರ್ಷ 8000ಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗುತ್ತವೆ.

ಕೊನೆಗೂ ವೃದ್ಧ ಡಾಂಟೆ ತನ್ನ ಹುಟ್ಟೂರು ಫ್ಲಾರೆನ್ಸ್‌ಗೆ ಹಿಂತಿರುಗುವುದು ಸಾಧ್ಯವಾಗಲಿಲ್ಲ. ರಾವೆನ್ನಾದಲ್ಲಿ ಕಾಲವಾದ. ಆತ ಸತ್ತ ಮೇಲೆ ಫ್ಲಾರೆನ್ಸ್, ಇಟಲಿಯ ಶ್ರೇಷ್ಠ ಕತೆಗಾರ ಬೊಕಾಚಿಯೋನನ್ನು ಕರೆಸಿ, ಅವನಿಂದ ಡಾಂಟೆಯ 'ಕಾಮಿಡಿ' ಕಾವ್ಯವನ್ನು ಓದಿಸಿತು.

ಪುರಾತನ ಮತ್ತು ಆಧುನಿಕ ಕಾಲಗಳಿಗೆ ಸಂಬಂಧ ಕಲ್ಪಿಸುವ ಸೇತುವೆ, ಡಾಂಟೆ ಕೃತಿ.

× × × × × ×

ಕ್ರಿಸ್ತ ಶಕೆಯ ಆರಂಭದ ಹತ್ತು ಶತಮಾನಗಳಲ್ಲಿ ಭಾರತದಲ್ಲಿ ಸಂಸ್ಕೃತ ಸಾಹಿತ್ಯ ಮೆರೆಯಿತು. ಉಪನಿಷತ್ತಿನ ಕಥೆಗಳು, 'ಪಂಚತಂತ್ರ', 'ಹಿತೋಪದೇಶ' ಕಥೆಗಳು ಭಾರತೀಯ ಜನಜೀವನದಲ್ಲಿ ಬೆರೆತುಹೋದುವು.

6ನೆಯ ಶತಮಾನದ ಅಂತ್ಯ ಹಾಗೂ 7ನೆಯ ಶತಮಾನದ ಪೂರ್ವಾರ್ಧದಲ್ಲಿ ಖ್ಯಾತನಾಗಿದ್ದ ಸಂಸ್ಕೃತ ಸಾಹಿತಿ, ಬಾಣಭಟ್ಟ. ಗದ್ಯದಲ್ಲಿ ಆತ ರಚಿಸಿದ ಅಪೂರ್ವ ಕೃತಿ 'ಕಾದಂಬರಿ'. (ಕನ್ನಡದಲ್ಲಿ ಕಾದಂಬರಿಯ ಪ್ರಕಾರಕ್ಕೆ ಆ ಹೆಸರು ದೊರೆತಿರುವುದು ಈ ಶೀರ್ಷಿಕೆಯಿಂದಲೇ).

ಆನಂದವರ್ಧನ 9ನೆಯ ಶತಮಾನದ ಖ್ಯಾತ ಕಾವ್ಯಮೀಮಾಂಸಕ. ಕಾವ್ಯ ಸೃಷ್ಟಿಯ ಬಗೆಗೆ ಆತ ಹೀಗೆ ಹೇಳಿದ್ದಾನೆ:

"ಅಪಾರವಾದ ಕಾವ್ಯ ಜಗತ್ತಿನಲ್ಲಿ ಕವಿಯೇ ಸೃಷ್ಟಿಕರ್ತ. ತನಗೆ ಹೇಗೆ ರುಚಿಸುವುದೋ ಹಾಗೆ ಈ ವಿಶ್ವವನ್ನು ಆತ ಪರಿವರ್ತಿಸುತ್ತಾನೆ."


'ಪಂಚತಂತ್ರ'ದ ಸಿಂಹ, ಇಲಿಮರಿ

...ಚೀನೀ ಶಾಸ್ತ್ರೀಯ ಕಾವ್ಯದ ಅಸ್ಪಷ್ಟ ಉಗಮವನ್ನು, ಮನೋವ್ಯಾಪಾರಗಳನ್ನು ನಿರೋಧಿಸಿ ಚಿತ್ತದ ಏಕಾಗ್ರತೆ ಸಾಧಿಸುವ ಜೆನ್ ಬೌದ್ಧಮತದಲ್ಲಿ ಕಾಣುತ್ತೇವೆ. ಏನನ್ನೂ ಹೇಳದೆ ಇರುವುದೇ ಜೆನ್ ಕಾವ್ಯದಲ್ಲಿ ಅತ್ಯಂತ ಅರ್ಥಪೂರ್ಣವಾದದ್ದು.

8ನೆಯ ಶತಮಾನದ ಪ್ರಖ್ಯಾತ ಚೀನಿ ಕವಿ, ಲೀಪೊ.

...ಜಪಾನಿನಲ್ಲಿ ಹ್ಯಾಕು ಜನಪ್ರಿಯ ಕಾವ್ಯ ಪ್ರಕಾರವಾಯಿತು. ಇದ್ದುದನ್ನು ಇದ್ದಂತೆ ಬಣ್ಣಿಸುವ ಪದ್ಧತಿ, ಸೊನೊಮಾರ ಶೈಲಿ.

17ನೆಯ ಶತಮಾನದಲ್ಲಿ ಮೂರು ಸಾಲುಗಳ ಕವಿತೆಯಾದ ಹಾಕು ಬಹಳ ಪರಿಷ್ಕಾರಗೊಂಡಿತು. ಖ್ಯಾತಕವಿ ಬಾಶೋ ದೊಡ್ಡ ಪದಗಳ ಬಳಕೆಯನ್ನು ಬಿಟ್ಟುಬಿಟ್ಟ. ಬರೆವಣಿಗೆಯನ್ನು ಬಲು ಸರಳಗೊಳಿಸಿದ. ಅವನಿಂದಾಗಿ, ಜನಸಾಮಾನ್ಯರೂ ಕವಿಗಳಾಗುವುದು ಸಾಧ್ಯವಾಯಿತು.

...ಬಾಗ್ದಾದ್‌ನಲ್ಲಿ ಜನ್ಮತಳೆದ ಬೃಹತ್ ಕಥಾ ಸಂಗ್ರಹ 'ಸಾವಿರದೊಂದು ರಾತ್ರಿ'. ಇವು ಯವನ ಯಾಮಿನೀ ವಿನೋದ ಕತೆಗಳು. 'ಅರೇಬಿಯನ್ ನೈಟ್ಸ್' ಎಂದೂ ಇವು ಪ್ರಖ್ಯಾತವಾಗಿವೆ. ಜಾನಪದ ರೂಪವೇ ಈ ಕೃತಿ ರಚನೆಗೆ ತಳಹದಿ.

ಆ ಕಾಲದ ಪರ್ಷಿಯನ್ ಕವಿ ಉಮರ್ ಖಯಾಮ್. 'ಯೂಕ್ಲಿಡನ ನಿರೂಪಣೆಗಳಲ್ಲಿರುವ ಕಷ್ಟಗಳು' ಎಂಬ ವಿವರಣಾತ್ಮಕ ಗಣಿತ ಗ್ರಂಥವನ್ನು ಬರೆದವನೂ ಆತನೇ. ಅವನು ಅಮರನಾಗಿರುವುದು 'ರುಬಾಯತ್' ಎಂಬ ಕೃತಿಯಿಂದ. (ಖಯಾಮನ ಕೆಲವು ಆಯ್ದ ರುಬಯ್ಯಗಳನ್ನು 19ನೆಯ ಶತಮಾನದ ಕವಿ ಫಿಟ್ಜೆರಾಲ್ಡ್ ಇಂಗ್ಲಿಷಿಗೆ ಭಾಷಾಂತರಿಸಿದ. ತನ್ನ ಅಂಕಿತವಿಲ್ಲದೆಯೇ, 1859ರಲ್ಲಿ ಅವನ್ನು ಪ್ರಕಟಿಸಿದ. ಯಾರ ಗಮನವನ್ನೂ ಅದು ಸೆಳೆಯಲಿಲ್ಲ. ಕವಿ ರೊಸೆಟ್ಟಿ ಹಳೆಯ ಪುಸ್ತಕದಂಗಡಿಯಲ್ಲಿ ಅದರ ಒಂದು ಪ್ರತಿಯನ್ನು ಕಂಡ. ಓದಿ ಸಂತೋಷಪಟ್ಟು ಕವಿ ಸ್ವಿನ್‌ಬರ್ನ್‌ಗೆ ಆ ಪುಸ್ತಕವನ್ನು ಕೊಟ್ಟ. ಅತನಿಗೂ ಮೆಚ್ಚುಗೆಯಾಗಿ, ಅದನ್ನು ಅವನು ತನ್ನ ಮಿತ್ರರಿಗಿತ್ತ. ಜನರ ದೃಷ್ಟಿ ಅತ್ತ ಹರಿಯಿತು. ಅದೆಷ್ಟೋ ಆವೃತ್ತಿಗಳಾದ ಮೇಲೂ ಆ ಕೃತಿಯ ಮಾರಾಟ ನಡೆದೇ ಇದೆ.)

× × × × × × × × ×



ಕವಿ, ಸೈನಿಕ, ವಿದ್ವಾಂಸ, ರಾಯಭಾರಿ —ಚಾಸರ್

ಗ್ರೀಸ್, ಭಾರತ, ಚೀನ, ಮಧ್ಯ ಪ್ರಾಚ್ಯ ದೇಶಗಳಲ್ಲಿ ಉತ್ಕೃಷ್ಟ ಸಾಹಿತ್ಯ ಸೃಷ್ಟಿಯಾಗುತ್ತಿದ್ದರೂ ಆ ಕಾಲಾವಧಿಯಲ್ಲಿ ಇಂಗ್ಲೆಂಡಿನಲ್ಲಿ ಮಾತ್ರ ಲಿಖಿತ ಸಾಹಿತ್ಯವಿರಲಿಲ್ಲ. ಇದ್ದ ಸ್ವಲ್ಪ ಜಾನಪದ ಸಾಹಿತ್ಯವೂ ಇಂಗ್ಲೆಂಡಿನಲ್ಲಿ ಸೃಷ್ಟಿಯಾದದ್ದಲ್ಲ; ಹೊರಗಿನಿಂದ ಆಕ್ರಮಣಕಾರರು ಬರುತ್ತ ತಮ್ಮೊಡನೆ ತಂದದ್ದು. ಆಂಗ್ಲ ಸಾಹಿತ್ಯದ ನಾಮೋಚ್ಚಾರ ಆರಂಭವಾದದ್ದೇ ಕ್ರಿ.ಶ. 10ನೆಯ ಶತಮಾನದಲ್ಲಿ.



ಮಿಲ್ಟನ್ : ಸಮಕಾಲೀನ ಚಿತ್ರಕಾರನ ಸೃಷ್ಟಿ

ಕ್ರಿ. ಶ. 700ರಲ್ಲಿ ಹಳೆಯ ಇಂಗ್ಲಿಷಿನಲ್ಲಿ ರಚಿತವಾದ ಕಾವ್ಯ—'ಬೇವೂಲ್ಫ್'. ಅದು ಸ್ಕಾಂಡಿನೇವಿಯದ ಜಾನಪದ ಮೂಲದ ಕಥಾವಸ್ತು. 300 ವರ್ಷಗಳ ಅನಂತರ (ಕ್ರಿ.ಶ 1000ದಲ್ಲಿ) ಅದನ್ನು ಬರಹಕ್ಕಿಳಿಸಿದರು. ಅದು ಕರ್ತೃವಿಲ್ಲದ, ಅಥವಾ ಹಲವು ಕರ್ತೃಗಳ ಕಾವ್ಯ. ಅಲ್ಲಿಂದ ಮೂರು – ನಾಲ್ಕು ಶತಮಾನಗಳ ಕಾಲ ಆಂಗ್ಲ ಸಾಹಿತ್ಯದಲ್ಲಿ ಹೇಳಿ ಕೊಳ್ಳುವಂಥ ಹೊಸ ಕೃತಿ ಯಾವುದೂ ಸೃಷ್ಟಿಯಾಗಲಿಲ್ಲ.

ಚಾಸರ್ ಆಂಗ್ಲ ಸಾಹಿತ್ಯದ ಆದ್ಯ ಕವಿ. ಸೈನಿಕನಾಗಿದ್ದು, ವಿದ್ವಾಂಸನಾಗಿದ್ದು, ರಾಯಭಾರಿಯಾಗಿಯೂ ಇದ್ದು ಕೃತಿ ರಚಿಸಿದವನು. ಯೂರೋಪಿನಲ್ಲಿ ಸಂಚಾರ ಮಾಡುತ್ತಿದ್ದ ಆತ ವರ್ಜಿಲ್ ಓವಿಡ್‌ರ ಕೃತಿಗಳನ್ನು ಓದಿರುವುದು ಸ್ವಾಭಾವಿಕ. ಆತ ರಚಿಸಿದ 'ಕ್ಯಾಂಟರ್‌ಬರಿ ಕಥೆಗಳು' ಎಂಬ ಕೃತಿಯಲ್ಲಿ ಮಾನವ ಸ್ವಭಾವದ ಶ್ರೇಷ್ಠ ಚಿತ್ರಣವಿದೆ. ನವೋದಯದ ಕಾಲದಲ್ಲಿ ಯೂರೋಪಿನಲ್ಲಿ ಹಲವು ಕ್ಷೇತ್ರಗಳಲ್ಲಿ ನಡೆದ ತೀವ್ರ ಚಟುವಟಿಕೆಯ ಅಲೆಗಳು ಇಂಗ್ಲೆಂಡಿಗೂ ತಟ್ಟಿದುವು. ಎಲಿಜಬೆತ್ ರಾಣಿಯ ಕಾಲದಲ್ಲಿ ಇಂಗ್ಲೆಂಡು ಸಮೃದ್ಧಿಯತ್ತ ಹೆಜ್ಜೆ ಇಡತೊಡಗಿತು. ಆ ಕಾಲದಲ್ಲಿ ನಾಟಕಕಾರ ಶೇಕ್ಸ್‌ಪಿಯರ್ ಆಂಗ್ಲ ಸಾಹಿತ್ಯಕ್ಕೆ ಮಹತ್ವದ ಕಾಣಿಕೆಗಳನ್ನು ನೀಡಿದ. ಆ ಅವಧಿಯ ಶ್ರೇಷ್ಠ ಇಂಗ್ಲಿಷ್ ಕಾವ್ಯರಚನೆಯನ್ನು ನಾವು ಕಾಣುವುದು ಆಗಿನ ನಾಟಕಗಳಲ್ಲಿ.

ರಾಜಕೀಯ ಚಟುವಟಿಕೆಗಳ ದೆಸೆಯಿಂದ ಕಷ್ಟ ಅನುಭವಿಸಿ, ನಿರಾಶನಾಗಿ, ಮುದುಕನಾಗಿ, ದೃಷ್ಟಿಯನ್ನೂ ಕಳೆದುಕೊಂಡ ಮಿಲ್ಟನ್ (17ನೆಯ ಶತಮಾನ) ತನ್ನ 'ಪ್ಯಾರಡೈಸ್ ಲಾಸ್ಟ್' ಅಮರ ಕಾವ್ಯವನ್ನು ರಚಿಸಿದ.

ಆ ಶತಮಾನ, ಆಂಗ್ಲ ಸಾಹಿತ್ಯ ಆಧುನಿಕ ಜಗತ್ತಿಗೆ ಕಾಲಿರಿಸಿದ ಅವಧಿ. 18ನೆಯ ಶತಮಾನದ ಆಧುನಿಕರು ಡ್ರೈಡನ್, ಪೋಪ್,



'ಇಲಿಯಡ್' ಭಾಷಾಂತರಿಸಿ ಪೋಪ್ ಕೊಂಡುಕೊಂಡ ಮನೆ

ಗೋಲ್ಡ್‌ಸ್ಮಿತ್, ವಿಲಿಯಂ ಬ್ಲೇಕ್. ಪ್ರಚಂಡ ಬುದ್ಧಿವಂತಿಕೆಯ, ಅದ್ಭುತ ಕಲ್ಪನೆಗಳ ಕವಿ ಪೋಪ್. ತನ್ನ ಕಾವ್ಯಸೃಷ್ಟಿಯಿಂದ ಅವನಿಗೆ ಸಂಪಾದನೆಯಾಯಿತೋ ಇಲ್ಲವೋ. ಆದರೆ 'ಇಲಿಯಡ್' ಮಹಾಕಾವ್ಯವನ್ನು ಗ್ರೀಕ್ ಭಾಷೆಯಿಂದ ಇಂಗ್ಲಿಷಿಗೆ ಭಾಷಾಂತರಿಸಿ ಬಂದ ಹಣದಿಂದ ಆತ ಮನೆ ಕೊಂಡುಕೊಂಡ.

ಆ ಶತಮಾನದ ರಾಬರ್ಟ್ ಬರ್ನ್ಸ್ ಸ್ಕಾಟ್ಲೆಂಡಿನ ರಾಷ್ಟ್ರೀಯ ಕವಿಯಾದ.

ವರ್ಡ್ಸ್‌ವರ್ತ್, ಬೈರನ್, ಕೋಲ್ರಿಜ್, ಷೆಲ್ಲಿ, ಕೀಟ್ಸ್ 19ನೆಯ ಶತಮಾನದ ಮೊದಲ ದಶಕಗಳ ನವಕವಿಗಳು. ಇವರದು ರೊಮ್ಯಾಂಟಿಕ್ ಪಂಥ. ಪ್ರಾಚೀನ ಕಥೆಗಳು, ದಂತಕಥೆಗಳು, ಮಾನವಕೋಟಿಗೆ ತಿಳಿದಿರುವ ವಿಷಯಗಳು ಕಾವ್ಯಕ್ಷೇತ್ರದಿಂದ ದೂರವಾದುವು. ವೈಯಕ್ತಿಕ ಸಂವೇದನೆಗಳು, ನಿರ್ದಿಷ್ಟ ಸನ್ನಿವೇಶದ ಮನೋಭಾವಗಳು ರೊಮ್ಯಾಂಟಿಕ್ ಕವಿತೆಗಳ ವಸ್ತುಗಳಾದುವು.

ಕೋಲ್ರಿಜಿನ ಜೊತೆಗೂಡಿ ವರ್ಡ್ಸ್‌ವರ್ತ್ ಪ್ರಕಟಿಸಿದ 'ಲಿರಿಕಲ್ ಬಾಲಡ್ಸ್' ಕವಿತಾ ಸಂಗ್ರಹ ನೂತನ ಆಂಗ್ಲ ಕಾವ್ಯದ ಹೆಗ್ಗುರುತಾಯಿತು. ಫ್ರೆಂಚ್ ಮಹಾಕ್ರಾಂತಿಯನ್ನು ಸ್ವಾಗತಿಸಿದವನು ವರ್ಡ್ಸ್‌ವರ್ತ್; ಅದರಲ್ಲಿ ಭಾಗವಹಿಸಲೆಂದು ಫ್ರಾನ್ಸಿಗೆ ಹೋದವನು ಆತ. ಫ್ರೆಂಚ್ ಗಣರಾಜ್ಯದ ಮೇಲೆ ಇಂಗ್ಲೆಂಡು ಯುದ್ಧ ಸಾರಿದಾಗ ಅವನಿಗೆ ದಿಗ್ಭ್ರಮೆಯಾಯಿತು. ಫ್ರೆಂಚ್ ಕ್ರಾಂತಿಯ ಅನಂತರದ ಘಟನೆಗಳಂತೂ ಅವನ ಭ್ರಮನಿರಸನಕ್ಕೆ ಕಾರಣವಾದುವು. ಕೋಲ್ರಿಜ್‌ನದು ಬೇರೆಯೇ ಬಗೆ. ಅನಾರೋಗ್ಯದಿಂದ ಮುಕ್ತಿ ಪಡೆಯಲೆಂದು ಆತ ಅಫೀಮು ಸೇವನೆ ಆರಂಭಿಸಿದ. ಕಡೆಗೆ ಅದರ ದಾಸನಾದ. ಹೀಗೆ ಭಿನ್ನ ವ್ಯಕ್ತಿತ್ವಗಳಿದ್ದರೂ ಅವರಿಬ್ಬರು ಅನ್ಯೋನ್ಯವಾಗಿದ್ದರು.

ಕುದುರೆಲಾಯದ ಚಾಕರನ ಮಗ ಕೀಟ್ಸ್; ಪಡೆದದ್ದು ವೈದ್ಯಕೀಯ ಶಿಕ್ಷಣ; ನರಳಿದ್ದು ಕ್ಷಯರೋಗದಿಂದ. ವಿಮರ್ಶಕ ಮ್ಯಾಥ್ಯೂ ಆರ್ನಾಲ್ಡ್ ಕೆಲ ವಿಷಯಗಳಲ್ಲಿ ಕೀಟ್ಸನನ್ನು ಶೇಕ್ಸ್‌ಪಿಯರನಿಗೆ ಹೋಲಿಸಿದ್ದಾನೆ.



ಡೆಫೋ ಸೃಷ್ಟಿಸಿದ ರಾಬಿನ್‌ಸನ್ ಕ್ರೂಸೋ– 1719ರ ಆವೃತ್ತಿಯಿಂದ

ಕೇವಲ ಮೂರೇ ವರ್ಷಗಳ ಅವಧಿಯಲ್ಲಿ ಆಂಗ್ಲ ಸಾಹಿತ್ಯದ ಮೂವರು ಖ್ಯಾತ ಕವಿಗಳು (ಕೀಟ್ಸ್–1821, ಷೆಲ್ಲಿ–1822, ಬೈರನ್–1824) ನಿಧನರಾದರು. ಕೋಲ್ರಿಜ್ ವರ್ಡ್ಸ್‌ವರ್ತರ ಕಾವ್ಯರಚನೆಯಂತೂ ಇಳಿಮುಖವಾಗಿತ್ತು. ಹೀಗೆ 19ನೆಯ ಶತಮಾನದ 4ನೆಯ ದಶಕ ಆರಂಭವಾಗುವ ವೇಳೆಗೆ ಆಂಗ್ಲ ಕಾವ್ಯ ಬದಿಗೆ ಸರಿಯಿತು. ಗದ್ಯಕ್ಕೆ ಬಂತು ಮಹಾಪೂರ. (ಗದ್ಯದೊಡನೆ ಆ ಶತಮಾನದಲ್ಲಿ ಭುಜ ತಗಲಿಸಿದ್ದು ಟೆನಿಸನನ ಕಾವ್ಯವೊಂದೇ.)

'ಪಿಲ್ಗ್ರಿಮ್ಸ್ ಪ್ರೋಗ್ರೆಸ್' 17ನೆಯ ಶತಮಾನದ ಜಾನ್ ಬನ್ಯನನ ಗದ್ಯಸೃಷ್ಟಿ. ಪ್ರಧಾನವಾಗಿ ಇದು ಧಾರ್ಮಿಕ ಸ್ವರೂಪದ ಕೃತಿ.

ಡೇನಿಯಲ್ ಡೆಫೋನ 'ರಾಬಿನ್‌ಸನ್ ಕ್ರೂಸೋ' 18ನೆಯ ಶತಮಾನದಲ್ಲಿ ಆಂಗ್ಲಲೋಕದ ಮನೆಮಾತಾಯಿತು. ಸ್ವಿಫ್ಟನ 'ಗಲಿವರನ ಪ್ರವಾಸಗಳು' ಪುಸ್ತಕವೂ ಇದೇ ಬಗೆಯ ಮನ್ನಣೆ ಪಡೆಯಿತು. ಇದು ಸಂಪೂರ್ಣ ಸತ್ಯ ಎನಿಸುವಂತೆ ರಚಿತವಾದ ಅಪ್ರತಿಮ ಕಟ್ಟುಕಥೆ. ಹೆನ್ರಿ ಫೀಲ್ಡಿಂಗನ 'ಟಾಮ್ ಜೋನ್ಸ್' ಆಂಗ್ಲ ಸಾಹಿತ್ಯದ ಶ್ರೇಷ್ಠ ಕಾದಂಬರಿಗಳಲ್ಲಿ ಒಂದೆಂದು ಮುಂದೆ ಪರಿಗಣಿತವಾಯಿತು. ಸಮಾಜದ ಮಧ್ಯಮವರ್ಗದ ಆತ್ಮೀಯ ಚಿತ್ರಣ ಜೇನ್ ಆಸ್ಟಿನಳದು ('ಪ್ರೈಡ್ ಅಂಡ್



ಭಾರೀ ಆಕೃತಿಯ ಜನರ ದೇಶದಲ್ಲಿ ಗಲಿವರ್:
1755ರಲ್ಲಿ ಪ್ರಕಟವಾದ 'ಗಲಿವರನ ಪ್ರವಾಸಗಳು' ಪುಸ್ತಕದಿಂದ



ಕಲ್ಪನೆಯ ಲೋಕದಲ್ಲಿ ಡಿಕೆನ್ಸ್—ತಾನು ಸೃಷ್ಟಿಸಿದ ಅಮರ ಪಾತ್ರಗಳಿಂದ ಆವೃತ

ಪ್ರೆಜುಡಿಸ್'). ಸೀಮಿತ ಪರಿಸರದಲ್ಲಿದ್ದುಕೊಂಡೇ ಬಿರುಗಾಳಿ ಬದುಕನ್ನು ಚಿತ್ರಿಸಿದವಳು ಎಮಿಲಿ ಬ್ರಾಂಟಿ ('ವುದರಿಂಗ್ ಹೈಟ್ಸ್'). ಜೀವನದ ಪರಿಚಿತ ಪಾತ್ರಗಳ ಶ್ರೇಷ್ಠ ಶಿಲ್ಪಿಯಾದ, ಡಿಕೆನ್ಸ್. ರೋಮಾಂಚಕಾರೀ ಚಾರಿತ್ರಿಕ ಕಾದಂಬರಿಗಳ ಮಾದಕ ಪಾನೀಯವನ್ನು ವಾಲ್ಟರ್ ಸ್ಕಾಟ್ ಸಿದ್ಧಪಡಿಸಿದ. ಹಾರ್ಡಿಯ ಕಾದಂಬರಿಗಳಲ್ಲಿ ಸೂಕ್ಷ್ಮ ಸಂವೇದನೆಯ ಪಾತ್ರಗಳು ಸೃಷ್ಟಿಯಾದುವು. ಶುಚಿಯಾದ ಮನೋರಂಜನೆಗೆ ಅಸಮಾನನೆನಿಸಿದ, ವೋಡ್‌ಹೌಸ್. ಸಾಮ್ರಾಜ್ಯದ ವೈಭವ ಕಾಲದಲ್ಲಿ ಕಿಪ್ಲಿಂಗನ ಕೃತಿಗಳು ರಂಜನೆ ನೀಡಿದುವು. ತನ್ನದಲ್ಲದ ಭಾಷೆಯನ್ನು ಕಲಿತು ಜೋಸೆಫ್ ಕಾನ್ರಾಡ್, ಮೇಲ್ಮಟ್ಟದ ರಮ್ಯ ಕಾದಂಬರಿಗಳನ್ನು ರಚಿಸಿದ.

ಉದ್ದ ತಲೆಗೂದಲು, ಮೊಣಕಾಲಿನಿಂದ ಕೊಂಚ ಕೆಳಗೆ ಇರುತ್ತಿದ್ದ ಬಿಗಿ ಷರಾಯಿ, ಹಳದಿ–ಹಸಿರು ಅಂಗಿ, ಕೈಯಲ್ಲೊಂದು ಹೂ. —19ನೆಯ ಶತಮಾನದ ಆಸ್ಕರ್ ವೈಲ್ಡ್ ಈ ರೀತಿ ಇರುತ್ತಿದ್ದ ಎಂದರೆ 'ಹೌದೆ?' ಎನಿಸಬಹುದು. ಬರೆಹಕ್ಕೆ ಸಂಬಂಧಿಸಿ ನೀತಿ ಅನೀತಿಯ ಪ್ರಶ್ನೆ ಉಲ್ಬಣಿಸಿದ್ದ ಕಾಲ ಅದು. 'ನೈತಿಕ ಅಥವಾ ಅನೈತಿಕ ಪುಸ್ತಕ ಎಂಬುದಿಲ್ಲ, ಪುಸ್ತಕವನ್ನು ಚೆನ್ನಾಗಿ ಬರೆಯಲಾಗಿದೆ ಅಥವಾ ಚೆನ್ನಾಗಿ ಬರೆದಿಲ್ಲ ಎನ್ನಬಹುದು, ಅಷ್ಟೆ', ಎಂಬುದು ಆಸ್ಕರ್ ವೈಲ್ಡ್ ವ್ಯಕ್ತಪಡಿಸಿದ ಅಭಿಪ್ರಾಯ.

ರಾಬರ್ಟ್ ಲೂಯಿ ಸ್ಟೀವನ್‌ಸನ್ ಮಕ್ಕಳು ಮುದುಕರೆಲ್ಲ ಇಷ್ಟಪಡುವ ರಂಜಕ ಸಾಹಿತ್ಯವನ್ನು ರಚಿಸಿದ.

ಇವರೆಲ್ಲರು ಓದುಗರ ಹೃದಯವನ್ನು ಸೂರೆಗೊಂಡ ಬಳಿಕ, ಮಡಿಯನ್ನು ತಪ್ಪಗೊಳಿಸುವ ಕೃತಿಗಳನ್ನು ಒಂದೆಡೆಯಿಂದ ಡಿ. ಎಚ್. ಲಾರೆನ್ಸ್ ಮತ್ತು ಇನ್ನೊಂದೆಡೆಯಿಂದ ಆಲ್ಡಸ್ ಹಕ್ಸ್ಲಿ ನಿರ್ಮಿಸಿದರು.

20ನೆಯ ಶತಮಾನದ ಆರಂಭದಲ್ಲಿ ಆಂಗ್ಲ ಸಾಹಿತ್ಯಕ್ಕೊಂದು ತಿರುವನ್ನು ನೀಡಿದವನು ಜೇಮ್ಸ್ ಜಾಯ್ಸ್. ಲೋಕದ ಗಮನ ಸೆಳೆದ ಇವನ ಕೃತಿ 'ಯೂಲಿಸೆಸ್'. ಹೋಮರನ ಯೂಲಿಸೆಸ್ ಭೌಗೋಳಿಕ ಜಗತ್ತಿನಲ್ಲೆಲ್ಲ ಸಂಚಾರಮಾಡಿದ್ದ. ಜಾಯ್ಸ್‌ನ 'ಯೂಲಿಸೆಸ್' ಡಬ್ಲಿನ್ ನಗರವಾಸಿ- ಕೈಗೊಂಡದ್ದು ಮಾನಸಲೋಕದ ಅಲೆದಾಟ. ಅದೂ ಕೇವಲ ಇಪ್ಪತ್ತನಾಲ್ಕು ಗಂಟೆಗಳ ಅವಧಿಯದು.

ಇದೇ ರೀತಿ, ವರ್ಜೀನಿಯಾ ವುಲ್ಫ್ ಬರೆವಣಿಗೆಯಲ್ಲಿ ಹೊಸ ಹಾದಿ ತುಳಿದಳು. ತನ್ನ ಕಾದಂಬರಿಗಳಲ್ಲಿ 'ಒಳಪ್ರಪಂಚ ಹೊರಗಿನದಕ್ಕಿಂತ ಬೇರೆ' ಎಂದು ತೋರಿಸಿಕೊಟ್ಟಳು.

ಶೇಕ್ಸ್‌ಪಿಯರನ ಕಾಲದಲ್ಲೇ ಒಳ್ಳೆಯ ನಾಟಕಗಳನ್ನು ಬರೆದವನು ಕ್ರಿಸ್ಟಫರ್ ಮಾರ್ಲೋ. 18ನೆಯ ಶತಮಾನದಲ್ಲಿ ಗೋಲ್ಡ್‌ಸ್ಮಿತ್, ಶೆರಿಡನರ ನಾಟಕಗಳು ಸಾಹಿತ್ಯ ಕೃತಿಗಳೆನಿಸಿದುವು. ಅನಂತರ ಗಾಲ್ಸ್‌ವರ್ದಿ ತನ್ನ ನಾಟಕಗಳಿಂದ ಗಮನ ಸೆಳೆದ.

ಅದೇ ವೇಳೆಗೆ ಬರ್ನಾರ್ಡ್ ಷಾ ನ ರಂಗಪ್ರವೇಶವಾಯಿತು. 'ನಿಜವನ್ನು ಹೇಳುವುದೇ ನನ್ನ ಹಾಸ್ಯನಿರೂಪಣೆಯ ವಿಧಾನ. ಯಾಕೆಂದರೆ ಸತ್ಯವೇ ಈ ಜಗತ್ತಿನಲ್ಲಿ ಅತ್ಯಂತ ತಮಾಷೆಯ ಸಂಗತಿ,' ಎಂದ ಷಾ.

'ವೇಸ್ಟ್ ಲ್ಯಾಂಡ್' ಕಾವ್ಯದ ಕರ್ತೃ ಎಲಿಯಟ್ ಬರೆದಿರುವ ನಾಟಕಗಳೂ ಬೆಲೆಬಾಳುವ ಸಾಹಿತ್ಯ ಎನಿಸಿವೆ. ದ್ವಿತೀಯ ಯುದ್ಧ ಆರಂಭವಾದ ಮೇಲೆ ನಾಟಕಗಳ ಪ್ರದರ್ಶನಕ್ಕೆ ಅವಕಾಶ ಕಡಿಮೆಯಾಯಿತು. ಎಲಿಯಟನ ನಾಟಕ ಬರೆವಣಿಗೆಯೂ ನಿಂತಿತು.



ಕಾರ್ಲೈಲ್ : ಸಮಕಾಲೀನ ಚಿತ್ರರಚನೆ

19–20ನೆಯ ಶತಮಾನಗಳ ನವ ಧ್ವನಿಯ ಕವಿ ಯೇಟ್ಸ್ 'ವಿವೇಕ ಮೊದಲು ಪ್ರತಿಮೆಗಳ ಮೂಲಕ ಮಾತನಾಡುತ್ತದೆ', ಎಂದ.

ಆಂಗ್ಲ ಸಾಹಿತ್ಯದ್ದು ಕೇವಲ ಒಂದು ಸಾವಿರ ವರ್ಷಗಳ ಬೆಳವಣಿಗೆಯಾದರೂ ಗುಣ ವ್ಯಾಪ್ತಿಗಳಲ್ಲಿ ಅದು ಗಮನಾರ್ಹವಾದದ್ದು. ಸಾಹಿತ್ಯರಚನೆ ಅನೇಕ ಕುಟುಂಬಗಳ ವೃತ್ತಿಯೋ ಹವ್ಯಾಸವೋ ಆಯಿತು. (ಲ್ಯಾಮ್ ಅಣ್ಣ-ತಂಗಿ, ರೊಸೆಟ್ಟಿ ಸೋದರರು–ಸೋದರಿ, ಬ್ರಾಂಟಿ ಸೋದರಿಯರು, ಬ್ರೌನಿಂಗ್ ದಂಪತಿ . . .) ಆ ಅವಧಿಯಲ್ಲಿ ಕಾರ್ಲ್ಯೈಲ್, ರಸ್ಕಿನರಂಥ ವಿಚಾರಿಗಳು ಕೃತಿ ರಚಿಸಿದರು. ಮೇಧಾವಿ ಜಾನ್ಸನ್ ಇಂಗ್ಲಿಷಿನ ತೂಕವನ್ನು ಹೆಚ್ಚಿಸಿದ. (ಬಾಸ್‌ವೆಲ್ ಬರೆದ ಜಾನ್ಸನನ ಜೀವನ ಚರಿತ್ರೆ ಶ್ರೇಷ್ಠ ಕೃತಿ. ಬರೆದು 100 ವರ್ಷಗಳಾದ ಮೇಲೆ ಬಾಸ್‌ವೆಲನ ಟಿಪ್ಪಣಿ ಪುಸ್ತಕ ದೊರೆತು, ಆ ಜೀವನವೃತ್ತ ಪ್ರಕಟವಾಯಿತು.) ನಿಘಂಟು, ವಿಶ್ವಕೋಶಗಳು ಸಿದ್ಧವಾದುವು. ಜ್ಞಾನ ಕ್ಷೇತ್ರ ವಿಸ್ತಾರಗೊಂಡಿತು. ಅನಾಗರಿಕತೆಯಿಂದ ನಾಗರಿಕತೆಗೆ ಇಂಗ್ಲಿಷರದು ವೇಗದ ನಡಿಗೆ. ಅವರ ಸಾಹಿತ್ಯದ ಪ್ರಗತಿಯೂ ಅಷ್ಟೇ ವೇಗದ್ದು.



ರಸ್ಕಿನ್ : ಸ್ವ-ರೂಪಚಿತ್ರ

× × ×          × × ×          × × ×

'ಹೊಸ ಜಗತ್ತು' ಎನಿಸಿದ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಪ್ರಾಚೀನ ಮಹಾಕಾವ್ಯವಿಲ್ಲ. ಐರೋಪ್ಯರು ಅಲ್ಲಿಗೆ ಬರುವುದಕ್ಕೆ ಮುನ್ನ ಅಲ್ಲಿದ್ದ ನಾಗರಿಕತೆಗಳು ಶಿಲ್ಪ ಮತ್ತಿತರ ಕಲೆಗಳಲ್ಲಿ ಪ್ರಗತಿ ಸಾಧಿಸಿದ್ದರೂ ಲಿಖಿತ ಸಾಹಿತ್ಯ ಅಲ್ಲಿ ರೂಪುಗೊಂಡಿರಲಿಲ್ಲ. ಹಾಡುವ, ಆಡುವ ಜಾನಪದ ಸಾಹಿತ್ಯವಷ್ಟೇ ಇದ್ದಿರಬೇಕು.

ಉಚ್ಚಾರ ವ್ಯತ್ಯಾಸದೊಡನೆ ಇಂಗ್ಲಿಷೇ ಅಮೆರಿಕದ ಭಾಷೆಯಾಯಿತು. ಭಾಷೆಯನ್ನು ಅಮೆರಿಕನ್ ಎಂದು ಕರೆದರೂ ಸರಿಯೇ. ಅಲ್ಲಿ ಕಳೆದ ನೂರು–ನೂರೈವತ್ತು ವರ್ಷಗಳಲ್ಲಿ ಸೃಷ್ಟಿಯಾದ ಕತೆ, ಕಾದಂಬರಿ, ಕಾವ್ಯ, ನಾಟಕಗಳೆಲ್ಲ ಅಮೆರಿಕನ್ ಸಾಹಿತ್ಯ.

ಅಮೆರಿಕದ ಸಾಮಾಜಿಕ ಜನಜೀವನದ ಮೊದಲ ಚಿತ್ರಣ ದೊರೆತದ್ದು ನೆಥಾನಿಯಲ್ ಹಾಥಾರ್ನನ 'ಸ್ಕಾರ್ಲೆಟ್ ಲೆಟರ್' ಮತ್ತಿತರ ಕಾದಂಬರಿಗಳಲ್ಲಿ.

ಪ್ರಕಟವಾದಾಗ ಯಾರೂ ಅದರತ್ತ ದೃಷ್ಟಿ ಹಾಯಿಸದ ಕೃತಿ, ಹೆರ್ಮನ್ ಮೆಲ್ವಿಲ್ ವಿರಚಿತ 'ಮಾಬಿ ಡಿಕ್' ಕಾದಂಬರಿ. ಶ್ರೇಷ್ಠ ವೆಂದು ಅದು ಹೊಗಳಿಸಿಕೊಂಡದ್ದು ಮೆಲ್ವಿಲನ ಮರಣಾನಂತರ. ನಿಸರ್ಗದೊಡನೆ ಮಾನವನ ಹೋರಾಟ ಆ ಕೃತಿಯ ವಸ್ತು.

ಅಮೆರಿಕನ್ ಸಮಾಜದಲ್ಲಿ ಅಸ್ಪಷ್ಟವಾಗಿ ರೂಪುಗೊಳ್ಳತೊಡಗಿದ್ದ ವರ್ಗಪದರಗಳನ್ನು ಕೆದಕಿ, ಅಪಥ್ಯವಾದುದಕ್ಕೆ ನಗೆಯ ಸಿಡಿ ಲೇಪಿಸಿ ಶ್ರೇಷ್ಠ ಕಾದಂಬರಿಗಳನ್ನು ರಚಿಸಿದವನು ಮಾರ್ಕ್ ಟ್ವೇನ್. (ತಾನು ಕಟ್ಟಿಸಿದ ವಿಚಿತ್ರ ಮನೆಯ ಛಾವಣಿಯಲ್ಲಿ ಒಂದೆಡೆ ತಗಡನ್ನಷ್ಟೇ ಟ್ವೇನ್ ಇರಿಸಿದ್ದ. ಉದ್ದೇಶ: ಮಳೆ ಬೀಳುವ ಸಪ್ಪಳ ತನಗೆ ಕೇಳಿಸಬೇಕು ಎಂಬುದು.) 20ನೆಯ ಶತಮಾನದ ಹೆಮಿಂಗ್‌ವೇಯ ಅಭಿಪ್ರಾಯದಂತೆ, 'ಟ್ವೇನ್ ಅಮೆರಿಕನ್ ಕಾದಂಬರಿಯ ಪಿತಾಮಹ.'

ಹ್ಯಾರಿಯಟ್ ಬೀಚರ್‌ಸ್ಟೋವ್ 'ಅಂಕ್‌ಲ್ ಟಾಮ್ಸ್ ಕ್ಯಾಬಿನ್' ಕಾದಂಬರಿಯ ಲೇಖಿಕೆ. ಇದು ನೀಗ್ರೋ ಜೀವನದ ನೈಜ ಚಿತ್ರಣ. ಅಮೆರಿಕದ ಅಂತರ್ಯುದ್ಧಕ್ಕೆ ಕಾರಣವಾಯಿತು ಈ ಕೃತಿ, ಎಂದವರುಂಟು.

ವಾಲ್ಟ್ ವ್ಹಿಟ್‌ಮನ್ ಅಮೆರಿಕದ ಶ್ರೇಷ್ಠ ಕವಿಯಾದ, ಜನವಾಣಿಯಾದ. ಕಾರ್ಲ್ ಸಾಂಡ್‌ಬರ್ಗ್, ರಾಬರ್ಟ್ ಫ್ರಾಸ್ಟ್ —ಅಮೆರಿಕದ ಇನ್ನಿಬ್ಬರು ಖ್ಯಾತ ಕವಿಗಳು. ವಿಕಟಕವಿ ಎನಿಸಿಕೊಂಡವನು ಆಗ್ಡನ್ ನಾಶ್.

ಜಾಕ್ ಲಂಡನ್ ಅಮೆರಿಕದ ಬಂಡಾಯಗಾರ ಲೇಖಕನಾದ.



ಮಾರ್ಕ್ ಟ್ವೇನ್ ಕಟ್ಟಿಸಿದ ವಿಚಿತ್ರ ಮನೆ

[illegible] ಅದ್ಭುತ ಔದ್ಯೋಗಿಕ ಪ್ರಗತಿಯ ಜೊತೆಯಲ್ಲೇ ಆರ್ಥಿಕ ಮುಗ್ಗಟ್ಟು ಬಂತು. [illegible] ಸಜೀವ ಚಿತ್ರಣ ಅಪ್ಟನ್ ಸಿಂಕ್ಲೇರ್. ಥಿಯೊಡರ್ ಡ್ರೈಸರ್. ಸ್ಟೀನ್‌ಬೆಕ್, ಜಾನ್ ಡಾಸ್ ಪಾಸೊಸ್ ಇವರ ಕೃತಿಗಳಲ್ಲಿ ಮೂಡಿತು.

[illegible] ಯುದ್ಧದ ಆರಂಭಕ್ಕೆ ಮುನ್ನ ಸ್ಪೇನಿನಲ್ಲಿ ಪ್ರಜಾಪ್ರಭುತ್ವ ಗಂಡಾಂತರಕ್ಕೆ ಗುರಿಯಾದಾಗ, ಕೆಲ ವಾಮಪಂಥೀಯ ಲೇಖಕರ [illegible] ಬಂದೂಕು ಹಿಡಿದು ಫ್ಯಾಸಿಸ್ಟ್ ವಿರೋಧಿಶಕ್ತಿಗಳ ಜೊತೆ ಸೇರಿ ಸ್ಪೇನಿನಲ್ಲಿ ಹೋರಾಡಿದರು. ಆ ಹೋರಾಟದಲ್ಲಿ ರಾಲ್ಫ್ ಫಾಕ್ಸ್ ಮಡಿದ. ಬದುಕಿದವರಲ್ಲಿ ಪ್ರಮುಖ, ಅರ್ನೆಸ್ಟ್ ಹೆಮಿಂಗ್‌ವೇ. ವಿಶ್ವಸಾಹಿತ್ಯದಲ್ಲಿ ಆತನ ಕೃತಿಗಳಿಗೆ ಹಿರಿಯ ಸ್ಥಾನ ಸಂದಿದೆ.

ಸಿಂಕ್ಲೇರ್ ಲೂಯಿಸ್ ಮಧ್ಯಮವರ್ಗದ ಜೀವನವನ್ನು ಕಲಾತ್ಮಕವಾಗಿ ಚಿತ್ರಿಸಿದ ಕಾದಂಬರಿಕಾರ.

ಎಡ್ಗರ್ ಅಲೆನ್ ಪೋ ಮತ್ತು ಓ ಹೆನ್ರಿ ಉತ್ತಮ ಸಣ್ಣ ಕತೆಗಳ ರಚಯಿತರು.

ಹೆ. ಜೇಮ್ಸ್ ಮನಸ್ಸಿನ ಆಳವನ್ನು ಕಾದಂಬರಿಯಲ್ಲಿ ಕೆದಕಿದವನು. ಕಾದಂಬರಿಯ ಸಿರಿವಂತಿಕೆಯನ್ನು ಹೆಚ್ಚಿಸಿದವನು ವಿಲಿಯಂ ಫಾಕ್ನರ್. ಸಾಲ್ ಬೆಲೋ ಅನಂತರದ ಪೀಳಿಗೆಯ ಹೆಸರಾಂತ ಕಾದಂಬರಿಕಾರ.

ಈ ಶತಮಾನದ ಶ್ರೇಷ್ಠ ಅಮೆರಿಕನ್ ನಾಟಕಕಾರ ಯೂಜೀನ್ ಓನೀಲ್. ಬಳಿಕ ಪ್ರಖ್ಯಾತರಾದವರು ಆರ್ಥರ್ ಮಿಲ್ಲರ್, ಟೆನೆಸಿ ವಿಲಿಯಮ್ಸ್, ಎಡ್ವರ್ಡ್ ಆಲ್ಬಿ ಮತ್ತಿತರರು.

× × ×    × × ×    × × ×

19ನೆಯ ಶತಮಾನದಲ್ಲಿ ರಷ್ಯ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಜಗತ್ತಿಗೆ ನೀಡಿತು.

ಲಿಯೊ ಟಾಲ್‌ಸ್ಟಾಯ್‌ಯ ಕತೆ ಕಾದಂಬರಿ ನಾಟಕಗಳು, ಪುಷ್ಕಿನನ ಗದ್ಯ–ಪದ್ಯ, ಟುರ್ಗೆನೈಫ್, ಡಾಸ್ಟಯೆವ್‌ಸ್ಕಿಯರ ಕಾದಂಬರಿಗಳು, ಗೊಗೋಲನ ನಾಟಕ ಹಾಗೂ ಗದ್ಯಕೃತಿ. ಚೆಖಾಫನ ಕತೆಗಳು ಮತ್ತು ನಾಟಕಗಳು —ಇವಕ್ಕೆ ಐರೋಪ್ಯ ಸಾಹಿತ್ಯದಲ್ಲಿ ಅಗ್ರಪಂಕ್ತಿ.

20ನೆಯ ಶತಮಾನದಲ್ಲಿ ಮ್ಯಾಕ್ಸಿಂ ಗಾರ್ಕಿ ದೀನದಲಿತರ ವಾಣಿಯಾದ; ತನ್ನ ಕತೆ ಕಾದಂಬರಿ ನಾಟಕಗಳಿಂದ ಲೋಕವಿಖ್ಯಾತನಾದ.

1917ರ ಕ್ರಾಂತಿಯ ಅನಂತರ ಸ್ಥಾಪಿತವಾದ ಹೊಸ ಸಮಾಜ ವ್ಯವಸ್ಥೆಯಲ್ಲಿ ಶೊಲೊಖೋವ್, ಅಲೆಕ್ಸಿ ಟಾಲ್‌ಸ್ಟಾಯ್, ಎಹ್ರೆಂಬರ್ಗ್, ಪಾಸ್ಟರ್‌ನಾಕ್ ಮತ್ತಿತರರು ಪ್ರಖ್ಯಾತ ಬರೆಹಗಾರರು.

ಕೃತಿ ರಚನೆಯ ಕೊಠಡಿಯಲ್ಲಿ ಸಾಹಿತ್ಯಋಷಿ ಟಾಲ್‌ಸ್ಟಾಯ್

ಮಯಾಕೊವ್‌ಸ್ಕಿಯದು ಅಸಾಧಾರಣ ಕವಿಚೇತನ. ಆತ್ಮಹತ್ಯೆಯಿಂದ ಆ ಕವಿ ಜೀವನ ಮೊಟಕಾಯಿತು. ಈಗಿನ ಪ್ರಖ್ಯಾತ ಕವಿ ಯೆವ್ತುಶೆಂಕೋ.

ವಾದ–ವಿವಾದಗಳಿಗೆ ಗುರಿಯಾಗಿ, ಅಂತರರಾಷ್ಟ್ರೀಯ ಖ್ಯಾತಿ ಪಡೆದಿರುವ ನೊಬೆಲ್ ಸಾಹಿತ್ಯ ಬಹುಮಾನ ವಿಜೇತ ಆಧುನಿಕ ರಷ್ಯನ್ ಕಾದಂಬರಿಕಾರ, ಅಲೆಗ್ಸಾಂಡರ್ ಸೊಲ್‌ಜೆನ್‌ಸ್ಟೀನ್.

ಸೋವಿಯೆತ್ ಒಕ್ಕೂಟದಲ್ಲಿ ಕಳೆದ ಐದು ದಶಕಗಳಲ್ಲಿ ರಷ್ಯನ್ ಭಾಷೆಯಲ್ಲದೆ ಇತರ ಪ್ರಾದೇಶಿಕ ಭಾಷೆಗಳೂ ಅಭಿವೃದ್ಧಿಗೊಂಡುವು. ಅವುಗಳಲ್ಲೂ ಸಾಹಿತ್ಯ ಸೃಷ್ಟಿಯಾಯಿತು.

× × ×    × × ×    × × ×

ಇಂಗ್ಲಿಷು ಮಾತನಾಡುವುದು ನಾಗರಿಕತೆಯ ಲಕ್ಷಣ —ಎಂದು ಕೆಲ ಭಾರತೀಯರು ಭಾವಿಸುವುದಿಲ್ಲವೆ? ಹಾಗೆ, ಫ್ರೆಂಚ್ ಮಾತನಾಡುವುದು ನಾಗರಿಕತೆಯ ಲಕ್ಷಣ ಎಂದು 19ನೆಯ ಶತಮಾನದಲ್ಲಿ ರಷ್ಯನರು ಭಾವಿಸುತ್ತಿದ್ದರು. ಕಲೆ ಸಾಹಿತ್ಯಗಳಿಗೆ ಸಂಬಂಧಿಸಿ ಪ್ಯಾರಿಸಿನ ಪ್ರಸ್ತಾಪ ಮಾಡದೇ ಇದ್ದವರು ಸುಸಂಸ್ಕೃತರಲ್ಲ. ಪ್ಯಾರಿಸನ್ನು ಹಾದುಹೋಗುವ ಸೆನ್ ನದಿ ಎಷ್ಟೋ ಕಲಾವಿದರ ಪಾಲಿಗೆ ಗಂಗಾನದಿಯ ಸ್ನಾನಘಟ್ಟ. ಚಿತ್ರಕಾರರು ಅಲ್ಲಿ ಅಲೆಯಬೇಕು : ಸಾಧಾರಣ ಪಾನಗೃಹದ ಹೋಟೆಲುಗಳಲ್ಲಿ ಕುಳಿತು ಒಣಗಿದ ಗಂಟಲನ್ನು ತಣಿಸಿಕೊಳ್ಳಬೇಕು ; ಕಲೆಯನ್ನು ಕುರಿತು ಚರ್ಚಿಸಬೇಕು.

ಐರೋಪ್ಯ ಸಾಹಿತ್ಯಕ್ಕೆ ಸಂಬಂಧಿಸಿಯೂ ಸ್ವಲ್ಪ ಮಟ್ಟಿಗೆ ಇದು ನಿಜ. ಪ್ಯಾರಿಸ್, ಲಂಡನ್, ಬರ್ಲಿನ್ —ಸಾಹಿತ್ಯ ಚಟುವಟಿಕೆಯ ಕೇಂದ್ರಗಳು. ಪ್ಯಾರಿಸಿಗೆ ಅಗ್ರಸ್ಥಾನ. 19–20ನೆಯ ಶತಮಾನಗಳಲ್ಲಿ ರಷ್ಯ, ಅಮೆರಿಕ, ಇಂಗ್ಲೆಂಡ್, ಐರ್ಲೆಂಡ್ ಮುಂತಾದ ದೇಶಗಳಿಂದ ಅಲ್ಲಿಗೆ ಬಂದು, ವಾಗ್ವಾದಗಳ ಪ್ರಖರತೆಯಲ್ಲಿ ತಲೆಬಿಸಿಮಾಡಿಕೊಂಡವರ ಸಂಖ್ಯೆ ದೊಡ್ಡದು.

17ನೆಯ ಶತಮಾನದ ಫ್ರೆಂಚ್ ನಾಟಕಕಾರ, ಮೋಲಿಯೇರ್ : 'ಆಧುನಿಕ ಕಾಮಿಡಿಗಳ ಸೃಷ್ಟಿಕರ್ತ' ಎನಿಸಿಕೊಂಡವನು. ಆತ ಸ್ವತಃ ನಟನೂ ಆಗಿದ್ದ. ಫ್ರೆಂಚ್ ಸಮಾಜವನ್ನು ಕ್ಷ–ಕಿರಣ ಚಿಕಿತ್ಸೆಗೆ ಗುರಿಮಾಡಿದ 'ಕಾನ್‌ಡೀಡ್' ಕೃತಿಯ ಕರ್ತೃ, ವಾಲ್ಟೇರ್ (18ನೆಯ ಶತಮಾನ).

ಫ್ರೆಂಚ್ ಗದ್ಯ ಕ್ಷೇತ್ರದಲ್ಲಿ 19ನೆಯ ಶತಮಾನ ವಿಪುಲ ಸೃಷ್ಟಿಯ ಕಾಲ. ಡಿಡಿರೋ ವಿಶ್ವಕೋಶ ರಚಿಸಿದ.

ಅಲೆಗ್ಸಾಂಡರ್ ಡೂಮಾ ಇತಿಹಾಸದ ಹಂದರದ ಮೇಲೆ ಸಾಹಿತ್ಯ ಶಿಲ್ಪಗಳನ್ನು ಸೃಷ್ಟಿಸಿದ. ಆತನ ಜನಪ್ರಿಯತೆ ಸಾಹಿತ್ಯಲೋಕದ ವಿಸ್ಮಯಗಳಲ್ಲೊಂದು. ನಡುರಾತ್ರಿಯ ನಿಶ್ಶಬ್ದ ವಾತಾವರಣದಲ್ಲಿ ಡೂಮಾನ ಕೃತಿ ಓದುತ್ತಿದ್ದರೆ ದೂರದಲ್ಲಿ ಕುದುರೆಗಳ ಖುರಪುಟ ಧ್ವನಿ, ಖಡ್ಗಗಳ ಝಣತ್ಕಾರ ಕೇಳಿಸಿದಂತೆ ಭಾಸವಾಗುತ್ತದೆ —ಎಂದ, ಆಂಗ್ಲ ಸಾಹಿತಿ ರಾಬರ್ಟ್ ಲೂಯಿ ಸ್ಟೀವನ್‌ಸನ್. ಡೂಮಾನ ಹೊಸ ಹೊಸ ಕೃತಿಗಳಿಗಾಗಿ ಜನರ ತಗಾದೆ ವಿಪರೀತವಾದಾಗ, ತಾನು ರಚಿಸಿಕೊಟ್ಟ ಚೌಕಟ್ಟಿನ ಮೇಲೆ ಕಥೆ ಹೊಸೆಯಲು ಅನೇಕ ಲೇಖಕರನ್ನು ಆತ ನೇಮಿಸಿಕೊಂಡ.

ಒಮ್ಮೆ ತನ್ನ ಮಗನನ್ನು ಡೂಮಾ ಕೇಳಿದ :

"ನನ್ನ ಹೊಸ ಕಾದಂಬರಿ ಓದಿದೀಯಾ ?"

ಮಗ ಉತ್ತರವಿತ್ತ :

"ಇಲ್ಲ. ನೀನು ಓದಿದೀಯಾ ?"

—ಡೂಮಾನ ಬಗೆಗೆ ಇದೊಂದು ಕಥೆ.



ಫ್ರೆಂಚ್ ವಿಶ್ವಕೋಶದ ಬಳಗ : ಕೈ ಎತ್ತಿರುವವನು ವಾಲ್ಟೇರ್, ಆತನ ಎಡಕ್ಕೆ ಡಿಡಿರೋ

ಕೋಟೆಯಂಥ ಮನೆ ಕಟ್ಟಿಸಿಕೊಂಡ ಡೂಮಾ, ದಿನದ ಉಷ್ಣತೆಯನ್ನು ಅಳೆದು ಹೇಳುವುದಕ್ಕೆಂದೇ ಒಬ್ಬನನ್ನು ನೇಮಿಸಿದ್ದ. ಮೊಪಾಸಾ ಉತ್ತಮ ಕತೆಗಾರ : ರಷ್ಯದ ಟಾಲ್‌ಸ್ಟಾಯ್‌ಗೆ ಈತ ಅಚ್ಚುಮೆಚ್ಚು. ವಿಕ್ಟರ್ ಹ್ಯೂಗೋ ಶೋಷಿತರ ಪರವಾಗಿ ಬರೆದ ಶ್ರೇಷ್ಠ ಕಾದಂಬರಿಕಾರ. ಬಾಲ್ಜಾಕ್, ಫ್ಲಾಬೇರ್, ಜೋಲಾರದು ಸಮಾಜದ ಟೊಳ್ಳಿನ ಕಲಾತ್ಮಕ ಚಿತ್ರಣ. ಜಾರ್ಜ್ ಸಾಂಡ್ ಪ್ಯಾರಿಸಿನ ಸಾಹಿತ್ಯ ಜೀವನವನ್ನು ವರ್ಣರಂಜಿತಗೊಳಿಸಿದ ಲೇಖಿಕೆ.

ಅನತೋಲ್ ಫ್ರಾನ್ಸ್, ರೊಮಾ ರೊಲಾ, ಮಾರಿಯಾಕ್, ಮಾಲ್ರೋ, ಆರಗನ್, ಸಾರ್ತ್ರ್, ಅನಂತರದ ಖ್ಯಾತ ಲೇಖಕರು. 'ತನ್ನ ಗುರಿಧ್ಯೇಯಗಳನ್ನು ತಾನೇ ನಿರ್ಧರಿಸಿಕೊಂಡು ಬದುಕಿನ ವಿಧಿಯನ್ನು ರೂಪಿಸುವ' ಅಸ್ತಿತ್ವವಾದಕ್ಕೆ ಸಾರ್ತ್ರ್ ಜನಕ. ಈ ಬಗೆಯ ಪಂಥವನ್ನೇ ಅನುಸರಿಸುತ್ತಿದ್ದ ಕಾಮು ಬೆಲೆಬಾಳುವ ಕೃತಿಗಳನ್ನು ರಚಿಸಿದ : ನಡುವಯಸ್ಸಿಗೂ ಮುನ್ನವೇ ಅಪಮೃತ್ಯುವಿಗೆ ಬಲಿಯಾದ.

ಲಘು ಅನುಭವ, ಸರಳ ಭಾಷೆಗೆ ಪ್ರತಿಯಾಗಿ ಸಾಂಕೇತಿಕ ಕಾವ್ಯಸೃಷ್ಟಿಯಲ್ಲಿ ತೊಡಗಿದವನು, 19ನೆಯ ಶತಮಾನದ ಫ್ರೆಂಚ್ ಕವಿ ಬೋದ್ಲೇರ್. ಬದುಕಿದ್ದಾಗ ಆತ ಯಾರಿಗೂ ಬೇಡದವನಾಗಿದ್ದ. ಸತ್ತ ಮೇಲೆ 20ನೆಯ ಶತಮಾನದ ಹೊಸ ಪೀಳಿಗೆಯ ಕವಿಗಳಿಗೆ ಆರಾಧ್ಯ ದೈವವಾದ.

× × × × × × × × ×

ಜರ್ಮನಿಯ ಮುಖ್ಯ ಕಾಣಿಕೆ ಮೊದಲು ಸಂಗೀತಕ್ಕೆ, ಬಳಿಕ ಸಾಹಿತ್ಯಕ್ಕೆ.

18–19ನೆಯ ಶತಮಾನದ ಬಹುಮುಖ ಪ್ರತಿಭೆಯ ಗಯಟೆ (ವಿಮರ್ಶಕ, ಪತ್ರಿಕೋದ್ಯಮಿ, ಚಿತ್ರಕಾರ, ನಾಟಕಶಾಲೆಯ ವ್ಯವಸ್ಥಾಪಕ, ರಾಜನೀತಿಜ್ಞ, ಶಿಕ್ಷಣಶಾಸ್ತ್ರಜ್ಞ, ಪ್ರಕೃತಿ ವಿಜ್ಞಾನಿ . . . .) ರಚಿಸಿದ 'ಫೌಸ್ಟ್', ಕಾಲದ ಪರೀಕ್ಷೆಯಲ್ಲಿ ಗೆದ್ದು ಅಮರತ್ವ ಪಡೆದಿರುವ ಕೃತಿ.

ಜರ್ಮನಿಯ ಕವಿಶ್ರೇಷ್ಠ, ಹೈನೆ.

ಥಾಮಸ್ ಮಾನ್, ಕಾದಂಬರಿ ರಚನೆಯಲ್ಲಿ ಜರ್ಮನ್ ಭಾಷೆಗೆ ಮೊದಲ ಸಾಲಿನಲ್ಲಿ ಸ್ಥಾನ ದೊರಕಿಸಿಕೊಟ್ಟವನು. ಅನಂತರದ ಪೀಳಿಗೆಯ ಪ್ರಖ್ಯಾತರು ಹೀನ್ರಿಕ್ ಬುಲ್ ಮತ್ತು ಗಂಟರ್ ಗ್ರಾಸ್.



ಸರ್ವಾಂಟಿಸ್ ಕಡೆದ ಕಥಾ ಮೂರ್ತಿ ಕ್ವಿಕ್ಸೋತ್ : ದಾನ್
1864ರ ಇಂಗ್ಲಿಷ್ ಭಾಷಾಂತರದಿಂದ



ಬಹುಮುಖ ಪ್ರತಿಭೆಯ ಗಯಟೆ

ಸ್ವಲ್ಪವೇ ಕಾಲ ಪ್ರಕಾಶಮಾನವಾಗಿ ಉರಿದು ಆರಿಹೋದವನು ಕಾಫ್ಕಾ. ಬದುಕಿದ್ದಾಗ ಮೆಚ್ಚುಗೆ ದೊರೆಯಲಿಲ್ಲ. ಅವನದು ಪ್ರತಿಮೆಗಳ ಭಾಷೆ, ಹೊಸ ಬಗೆಯ ಅಭಿವ್ಯಕ್ತಿ. ಸಾಯುವಾಗ, ತನ್ನ ಹಸ್ತಪ್ರತಿಗಳನ್ನೆಲ್ಲ ಸುಟ್ಟುಬಿಡು ಎಂದು ಮಿತ್ರನಿಗೆ ಬರೆದಿದ್ದ. ಆತ ಗೆಳೆಯನ ಕೊನೆಯ ಬಯಕೆಯನ್ನು ಈಡೇರಿಸದೆ, ವಿಶ್ವಸಾಹಿತ್ಯಕ್ಕೆ ಉಪಕಾರ ಮಾಡಿದ.

× × ×          × × ×          × × ×

ಸ್ಪೇನಿನ ಸರ್ವಾಂಟಿಸ್ (16–17ನೆಯ ಶತಮಾನ) 'ದಾನ್ ಕ್ವಿಕ್ಸೋತ್' ಕೃತಿಯನ್ನು ರಚಿಸಿದ ; ಬಡತನದಲ್ಲಿ ತೊಳಲಿದರೂ ಕೀರ್ತಿಶಾಲಿಯಾದ. 670 ಪಾತ್ರಗಳ ವಿಶಿಷ್ಟ ಕಾದಂಬರಿ ಆತನದು.

ನಾರ್ವೆಯಲ್ಲಿ ಇಬ್ಸೆನ್, ಪ್ರಾಗ್‌ನಲ್ಲಿ ಚಾಪೆಕ್ —ಇತರ ಭಾಷೆಗಳ ಮೂಲಕ ಐರೋಪ್ಯ ಸಾಹಿತ್ಯವನ್ನು ಬೆಳಗಿದವರು.

ಪಾಬ್ಲೊ ನೆರುದಾ ಚಿಲಿಯ ಸುಪ್ರಸಿದ್ಧ ಕವಿ.

× × ×          × × ×          × × ×

ವಿಜ್ಞಾನ ಕಥಾಸಾಹಿತ್ಯ, ಪತ್ತೇದಾರಿ ಸಾಹಿತ್ಯ ಕೃತಿಗಳು, ಮಕ್ಕಳ ಸಾಹಿತ್ಯ ಇವು ಮುಖ್ಯವಾಗಿ 19–20ನೆಯ ಶತಮಾನಗಳಲ್ಲಿ ಸ್ಫುಟಗೊಂಡ ಲಲಿತಸಾಹಿತ್ಯ ಪ್ರಭೇದಗಳು.

ವೈಜ್ಞಾನಿಕ ಬೆಳವಣಿಗೆಯ ಹಿನ್ನೆಲೆಯಲ್ಲಿ ರೂಪುಗೊಂಡದ್ದು ವಿಜ್ಞಾನ ಕಥಾಸಾಹಿತ್ಯ.

ಮೇರಿ ಶೆಲ್ಲಿ ಬರೆದ 'ಫ್ರಾಂಕನ್‌ಸ್ಟೀನ್' ಎಂಬ ಇಂಗ್ಲಿಷ್ ಕೃತಿ ಈ ರೀತಿಯ ಸಾಹಿತ್ಯದಲ್ಲಿ ಮೊದಲಿನದು.

ವಿಜ್ಞಾನ ಕಥಾಸಾಹಿತ್ಯದ ಪಿತಾಮಹ ಎಂದು ಕರೆಯುವುದು ಫ್ರಾನ್ಸಿನ ಜೂಲ್ ವರ್ನ್‌ನನ್ನು. ಆತನ ಪಾತ್ರಗಳು ಚಂದ್ರಗ್ರಹಕ್ಕೆ ಯಾನ ಮಾಡಿದುವು : ಭೂಗರ್ಭಕ್ಕೆ ಪ್ರಯಾಣ ಕೈಗೊಂಡುವು ; ಎಂಬತ್ತು ದಿನಗಳಲ್ಲಿ ಪ್ರಪಂಚ ಪ್ರದಕ್ಷಿಣೆ ಮಾಡಿದುವು. ಆತನ ಮೊದಲ ಕೃತಿ 'ಆಕಾಶಬುಟ್ಟಿಯಲ್ಲಿ ಐದು ವಾರ'. ಹದಿನೈದು ಪ್ರಕಾಶಕರು ಆ ಹಸ್ತಪ್ರತಿಯನ್ನು ತಿರಸ್ಕರಿಸಿದರು. ವರ್ನ್ ಅದನ್ನು ಒಲೆಯತ್ತ ಎಸೆದ. ಅದು ಬೆಂಕಿಯ ಪಾಲಾಗುವುದನ್ನು ಪತ್ನಿ ತಡೆದು, ಪತಿಗೆ ತಿಳಿಯದಂತೆ ಮತ್ತೊಬ್ಬ ಪ್ರಕಾಶಕನಿಗೆ ಕಳುಹಿಸಿದಳು. ಹಸ್ತಪ್ರತಿ ಸ್ವೀಕೃತವಾಯಿತು. ಮುಂದೆ ಕೃತಿಗಳು ಒಂದರ ಮೇಲೊಂದು ಪ್ರಕಟವಾಗಿ, ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡು ವರ್ನ್ ಖ್ಯಾತನಾದ.

ಇಂಗ್ಲೆಂಡಿನಲ್ಲಿ ಎಚ್. ಜಿ. ವೆಲ್ಸ್ ವಿಜ್ಞಾನದ ಹಿನ್ನೆಲೆಯಲ್ಲಿ ಅನೇಕ ಕೃತಿಗಳನ್ನು ರಚಿಸಿದ.

ವಾಸ್ತವವಾಗಿ ವಿಜ್ಞಾನ ಕಥಾಸಾಹಿತ್ಯ ಬರಿಯ ಕಲ್ಪನಾಸೃಷ್ಟಿಯಲ್ಲ. ವೈಜ್ಞಾನಿಕವಾಗಿ ನಿರ್ದುಷ್ಟವಾಗಿದ್ದರೆ ಕಥೆ ನಂಬುಗೆ ಹುಟ್ಟಿಸುತ್ತದೆ. ವಿಜ್ಞಾನಿಗಳೇ ಇಂಥ ಕಥೆ ಬರೆಯಲು ಹೊರಟಾಗ (ಗಾಮೋ, ಅಸಿಮೋವ್, ಆರ್ಥರ್ ಕ್ಲಾರ್ಕ್) ಅದು ಪ್ರಥಮ ಶ್ರೇಣಿಯ



'ಶೆರ್ಲಾಕ್ ಹೋಮ್ಸ್ ಕೊಠಡಿ'

ವಿಜ್ಞಾನ ಕಥಾಸಾಹಿತ್ಯವಾಗುತ್ತದೆ. ಒಬ್ಬ ಕತೆಗಾರನೂ ವಿಜ್ಞಾನಿಯ ಜೊತೆಯಾಗಿ ವಿಜ್ಞಾನ ಕಥಾಸಾಹಿತ್ಯ ಸೃಷ್ಟಿಸುವುದೂ ಸಾಧ್ಯ. (ಉದಾ: ಭೌತ ವಿಜ್ಞಾನಿ ಫ್ರೆಡ್ ಹಾಯ್ಲ್ ಮತ್ತು ಜಾನ್ ಎಲಿಯಟ್ ರಚಿಸಿದ ‘ಆಂಡ… ಮಿಡಾ’.)

. . .ಕೆಲವರಿಗೆ ಪತ್ತೇದಾರಿ ಕಾದಂಬರಿಗಳು ಕೈಗೆ ದೊರೆತರೆ ಊಟವೂ ಬೇಡ, ನಿದ್ದೆಯೂ ಬೇಡ. ಕದ್ದವರು ಯಾರು ? ಕೊಂದವರು ಯಾರು ? ಕಂಡುಹಿಡಿಯಲು ಎಲ್ಲರಿಗೂ ಆಸಕ್ತಿ. ರೋಮಾಂಚಕಾರೀ ಘಟನೆಗಳು, ಬುದ್ಧಿಶಕ್ತಿಯನ್ನು ತೀಕ್ಷ್ಣಗೊಳಿಸಲು ಅವಕಾಶ.

20ನೆಯ ಶತಮಾನದಲ್ಲಿ ಬಲು ಬೇಗನೆ ಜನಪ್ರಿಯತೆ ಗಳಿಸಿದ ಈ ಸಾಹಿತ್ಯ ಶೈಲಿಯ ಶಿಲ್ಪಿ, ವೈದ್ಯಕೀಯ ವೃತ್ತಿಯನ್ನು ಬಿಟ್ಟು ಬರೆವಣಿಗೆಯ ಕುದುರೆ ಏರಿದ ಆರ್ಥರ್ ಕಾನನ್‌ಡಾಯ್ಲ್. ಈತ ಸೃಷ್ಟಿಸಿದ ಪತ್ತೇದಾರ ಶೆರ್ಲಾಕ್ ಹೋಮ್ಸ್. ಈತ ನಿಜವಾದ ವ್ಯಕ್ತಿಯೆಂದೇ ಓದುಗರು ನಂಬಿದ್ದರು. ಬರೆದು ಬರೆದು ಬೇಸರವಾಗಿ ಒಂದು ಕಾದಂಬರಿಯಲ್ಲಿ ಶೆರ್ಲಾಕ್ ಹೋಮ್ಸನ್ನು ಪ್ರಪಾತಕ್ಕೆ ಕಾನನ್ ಡಾಯ್ಲ್ ತಳ್ಳಿಸಿದ. ಆತ ಸತ್ತನೆಂದು ಜನರಿಗೆ ಗಾಬರಿ. ಕಥೆ ಮುಂದುವರಿಸಿ—ಎಂದು ಗ್ರಂಥಕರ್ತನಿಗೆ ದುಂಬಾಲು ಬಿದ್ದರು. “ಹೋಮ್ಸ್ ಸತ್ತಿರಲಿಲ್ಲ, ಸತ್ತಂತೆ ನಟಿಸಿದ್ದ” ಎಂದು ವಿವರಣೆ ನೀಡಿ, ಕೃತಿಗಳ ರಚನೆಯನ್ನು ಕಾನನ್ ಡಾಯ್ಲ್ ಮುಂದುವರಿಸಬೇಕಾಯಿತು !



ತನ್ನ ಕೃತಿಗಾಗಿ ಲೂಯಿಸ್ ಕ್ಯಾರಲ್ ರಚಿಸಿದ ಚಿತ್ರ

ಶೆರ್ಲಾಕ್ ಹೋಮ್ಸನ ಕಾಲ್ಪನಿಕ ವಿಳಾಸದ ಕೊಠಡಿಯ ಪ್ರತಿರೂಪವನ್ನು ಲಂಡನಿನಲ್ಲಿ ಈಗ ಸೃಷ್ಟಿಸಲಾಗಿದೆ. ಕಾನನ್ ಡಾಯ್ಲ್ ಓದುಗರ ಮೇಲೆ ಬೀಸಿದ್ದ ಮೋಡಿಗೆ ಇದು ಕಾಣಿಕೆ.

ಅಗಥಾ ಕ್ರಿಸ್ಟಿ ಇದೇ ವೈಖರಿಯ ಕಾದಂಬರಿಗಳನ್ನು ರಚಿಸಿ ಖ್ಯಾತನಾಮಳಾದ ಆಂಗ್ಲ ಲೇಖಿಕೆ.

ಅಮೆರಿಕದಲ್ಲಿ ಪತ್ತೇದಾರಿ ಕಾದಂಬರಿಗಳ ಕರ್ತೃವೆಂದು ಹೆಸರು ಗಳಿಸಿದವನು ಅರ್ಲ್ ಸ್ಟಾನ್ಲಿ ಗಾರ್ಡನರ್. ಕುಸ್ತಿಯ ಪಟುವಾಗಿ, ವಕೀಲರ ಗುಮಾಸ್ತೆಯಾಗಿ, ಸ್ವತಃ ವಕೀಲನಾಗಿ ಪತ್ತೇದಾರಿ ಸಾಹಿತ್ಯ ರಚನೆಗೆ ಕೈ ಇಕ್ಕಿದವನು ಈತ. 1920ರಲ್ಲಿ ಈತನ ಮೊದಲ ಕೃತಿ ಪ್ರಕಟವಾದಂದಿನಿಂದ ಅವನ ಕೃತಿಗಳ ಒಟ್ಟು ಮಾರಾಟ ಸಂಖ್ಯೆ 16 ಕೋಟಿ ಪ್ರತಿಗಳು.



. . . . ‘ಈಸೋಪನ ಕತೆಗಳು’, ‘ಪಂಚತಂತ್ರ’—‘ಹಿತೋಪದೇಶ’ ಗಳು ಮಕ್ಕಳನ್ನು ರಂಜಿಸುತ್ತವೆ; ಹಿರಿಯರಿಗೂ ಇಷ್ಟವಾಗುತ್ತವೆ. ಬಣ್ಣಬಣ್ಣದ ಚಿತ್ರಗಳ ದಪ್ಪ ಅಕ್ಷರಗಳ ಪುಸ್ತಕಗಳೆಂದರೆ ಎಲ್ಲ ದೇಶಗಳ ಮಕ್ಕಳೂ ಕುಣಿದಾಡುತ್ತಾರೆ. ಇವು ಬರಿಯ ಹಾಡುಗಳಿರಬಹುದು ; ಅಭಿನಯ ಗೀತಗಳಿರಬಹುದು, ಇಲ್ಲವೆ ಕತೆಗಳಿರಬಹುದು.

ಇಂಗ್ಲಿಷ್ ಭಾಷೆಯ ಇಂಥದೊಂದು ಶ್ರೇಷ್ಠ ಸಾಹಿತ್ಯ ಕೃತಿ ‘ಆಲಿಸ್ ಇನ್ ವಂಡರ್‌ಲ್ಯಾಂಡ್’. ಗಡಿಯಾರ ನೋಡಿ, ತಡವಾಯಿತೆಂದು ಒಂದು ಬಿಲದೊಳಕ್ಕೆ ನುಸುಳುವ ಮೊಲವನ್ನು ಹಿಂಬಾಲಿಸುತ್ತಾಳೆ ಆಲಿಸ್. ಎಲ್ಲವೂ ಅದ್ಭುತವೆನಿಸುವ ಲೋಕವನ್ನು ತಲಪುತ್ತಾಳೆ. ಈ ಕಲ್ಪನೆಯ ಕಥೆಯನ್ನು ಸೃಷ್ಟಿಸಿದವನು ಲೂಯಿಸ್ ಕ್ಯಾರಲ್ (19ನೆಯ ಶತಮಾನ). ವೃತ್ತಿಯಲ್ಲಿ ಗಣಿತಶಾಸ್ತ್ರದ ಪ್ರಾಧ್ಯಾಪಕ. ಉಗ್ಗು ತೊಡಕು. ಅವಿವಾಹಿತ. ಗೆಳೆಯನ ಎಳೆಯ ಮಗಳನ್ನು ವಿಹಾರಕ್ಕೆ ಕರೆದೊಯ್ಯುವುದು,

ಕಥೆ ರಚಿಸುತ್ತಿರುವ ಎನಿಡ್ ಬ್ಲೈಟನ್—ತನ್ನ ಮಕ್ಕಳೊಡನೆ ಸಂವಾದ



3000 ವರ್ಷ ಹಿಂದಿನ ಈಜಿಪ್ಟಿನಲ್ಲಿ, ಸಮಾಜ ವ್ಯವಸ್ಥೆ ಕುಸಿದುದರ ವಿಡಂಬನೆ: ಜನ್ಮತಃ ವೈರಿಗಳು ಈಗ ಮಿತ್ರರು—ಸಿಂಹ ಜಿಂಕೆ ಪಗಡೆಯಾಟ; ಕುರಿಗಳನ್ನು ಕಾಯುವ ತೋಳ ; ಬಾತುಕೋಳಿಗಳ ಉಸ್ತುವಾರಿಗೆ ಬೆಕ್ಕು

ಅವಳಿಗಾಗಿ ಕತೆ ಹೇಳುವುದು ರೂಢಿಯಾಯಿತು. 'ಆಲಿಸ್ ಇನ್ ವಂಡರ್‌ಲ್ಯಾಂಡ್' ಆಕೆಗೋಸ್ಕರ ಹೇಳಿದ ತೀರಾ ಹೊಸ ಬಗೆಯ ಕಥೆ. ಅದನ್ನು ಬರೆದು ಬಾಲಿಕೆಗೆ ಉಡುಗೊರೆಯಾಗಿ ನೀಡಿದ. ಇತರರ ಒತ್ತಾಯಕ್ಕೆ ಕಟ್ಟುಬಿದ್ದು ಪ್ರಕಟಣೆಗೆ ಒಪ್ಪಬೇಕಾಯಿತು. ಪರಿಣಾಮವಾಗಿ ಇಂಗ್ಲಿಷ್ ಬಲ್ಲ ಮನೆಗಳಲ್ಲೆಲ್ಲ ಅದ್ಭುತ ಜಗತ್ತು ರಚಿತವಾಯಿತು.

19ನೆಯ ಶತಮಾನದ ಎಡ್ವರ್ಡ್ ಲಿಯರ್. ಕಿರಿಯರಿಗಾಗಿ ಕವನಗಳನ್ನು ರಚಿಸಿದ ಕವಿ. ಇವನ ಕೃತಿಗಳೂ ಅಪಾರ ಮೆಚ್ಚುಗೆ ಗಳಿಸಿದುವು.

ಈ ಶತಮಾನದ ಎನಿಡ್ ಬ್ಲೈಟನ್ ಮಕ್ಕಳಿಗೋಸ್ಕರ 300ಕ್ಕೂ ಹೆಚ್ಚು ಸೊಗಸಾದ ಕಿರುಕಾದಂಬರಿಗಳನ್ನು ರಚಿಸಿರುವ ಲೇಖಿಕೆ.

ಡೆನ್ಮಾರ್ಕಿನ ಹಾನ್ಸ್ ಕ್ರಿಶ್ಚಿಯನ್ ಆಂಡರ್‌ಸನ್ ಮಕ್ಕಳಿಗಾಗಿ ಮನಮೋಹಕ ಕಥೆಗಳನ್ನು ರಚಿಸಿದಾತ. ವೃತ್ತಿ ಆರಂಭಿಸಿದ್ದು ಮೋಚಿಯಾಗಿ. ಜೀವನ ನಿರ್ವಹಿಸಿದ್ದು ಕಿರಿಯರ ಕತೆಗಾರನಾಗಿ.

ಗ್ರಿಮ್ ಸಹೋದರರು ಜರ್ಮನಿಯ ಪ್ರಾಧ್ಯಾಪಕರು. ಈ ಅಣ್ಣತಮ್ಮ ಜಾನಪದ ಕಥೆಗಳನ್ನು ಸಂಗ್ರಹಿಸಿ, ಬರೆದಿಟ್ಟು, ಒಪ್ಪ ಓರಣಗೊಳಿಸಿದರು. ಆ ಪಾಕದಿಂದ ಎಳೆಯರಿಗೋಸ್ಕರ ರಸಗವಳವೇ ಸಿದ್ಧವಾಯಿತು.

ಈ ಕಥೆಗಳಿಗಂತೂ ಭೌಗೋಳಿಕ ಕಟ್ಟುಪಾಡುಗಳಿಲ್ಲವೇ ಇಲ್ಲ. ವಿಶ್ವದ ಎಲ್ಲ ಭಾಷೆಗಳಲ್ಲೂ ಇವು ಗೂಡುಕಟ್ಟುತ್ತವೆ.

...ಕಾಮಿಕ್ ಪುಸ್ತಕ (ಚಿತ್ರಕಥಾ ಪುಸ್ತಕ) ಈ ಶತಮಾನದ ಬೆಳಸು. ಕಾಮಿಕ್ ಚಿತ್ರಕಥನ ಮಾತ್ರ ಹಳೆಯದು. ಮೂರು ಸಾವಿರ ವರ್ಷಗಳ ಹಿಂದೆಯೇ ಈಜಿಪ್ಟಿನಲ್ಲಿ ಅದಿತ್ತು.

ಈಗ ಪ್ರಖ್ಯಾತ ಕಥೆಗಳೆಲ್ಲ ಕಾಮಿಕ್ ಪುಸ್ತಕಗಳ ರೂಪದಲ್ಲಿ ಮಕ್ಕಳ ಮನಸ್ಸನ್ನು ಸೆರೆಹಿಡಿಯುತ್ತವೆ.

ಇದಕ್ಕೂ ಭಾಷೆಯ ಅಡ್ಡಿ ಆತಂಕಗಳಿಲ್ಲ.

× × ×　　　　× × ×　　　　× × ×

ಪಾಶ್ಚಾತ್ಯ ಜಗತ್ತಿನ ಸಾಹಿತ್ಯ ವೈಭವಕ್ಕೆ ಯಾವ ರೀತಿಯಲ್ಲೂ ಕಡಮೆಯಲ್ಲ ಪೌರಸ್ತ್ಯ ಜಗತ್ತಿನ ಸೃಷ್ಟಿ.

ಭಾರತದಲ್ಲಿ ಸಂಸ್ಕೃತ ನೇಪಥ್ಯಕ್ಕೆ ಸರಿದಂತೆ, ದೇಶೀಯ ಭಾಷೆಗಳು ರಂಗದ ಮೇಲೆ ಅಂಬೆಗಾಲಿಟ್ಟುವು. ಬಂಗಾಳಿ, ಮರಾಠಿ, ಹೊಸದಾಗಿ ಮೈದಳೆದ ಹಿಂದಿ. ದಕ್ಷಿಣದ ಪ್ರಾಚೀನ ಭಾಷೆಯಾದ ತಮಿಳು. ಇತರ ದ್ರಾವಿಡ ಭಾಷೆಗಳಾದ ಕನ್ನಡ, ತೆಲುಗು, ಮಲಯಾಳಂ–ಈ ಭಾಷೆಗಳಲ್ಲಿ ರಾಜಾಶ್ರಯದಲ್ಲೋ ಅದಿಲ್ಲದೆಯೋ, ಸಾಹಿತ್ಯಕೃತಿಗಳ ನಿರ್ಮಾಣ ನಡೆಯಿತು. 'ರಾಮಾಯಣ,' 'ಮಹಾಭಾರತ'ಗಳು, ಸಂಸ್ಕೃತ ನಾಟಕಗಳು, ಶಾಸ್ತ್ರಗ್ರಂಥಗಳು ದೇಶೀಯ ಭಾಷೆಗಳಲ್ಲಿ ಅವತರಿಸಿದುವು.

ಮೊಗಲರ ಆಳ್ವಿಕೆಯಲ್ಲಿ ಪರ್ಷಿಯನ್ ಭಾಷೆಯ ಚೌಕಟ್ಟಿನ ಮೇಲೆ ಉರ್ದು ರೂಪಿತವಾಯಿತು.

ಆಂಗ್ಲರು ಈ ದೇಶದಲ್ಲಿ ಬಲವಾಗಿ ನೆಲೆಗೊಂಡ ಬಳಿಕ, ಕಲಿಯುವ ಸಾಮರ್ಥ್ಯವಿದ್ದ ವರ್ಗಕ್ಕೆ ಇಂಗ್ಲಿಷಿನ ವ್ಯಾಮೋಹ ಮೊದಲಾಯಿತು. ಆದರೆ, ಈ ಶತಮಾನದ ಆರಂಭದಲ್ಲಿ ಸ್ವಾತಂತ್ರ್ಯಹೋರಾಟದ ಕಹಳೆ ಕೇಳಿಸಿದ ಮೇಲೆ ಎಲ್ಲ ದೇಶೀಯ ಭಾಷೆಗಳಲ್ಲೂ ಪುನರುದಯ ತೋರಿಬಂತು. ರಾಷ್ಟ್ರದ ವಿವಿಧ ಪ್ರದೇಶಗಳ ಜನ ತಮ್ಮದೇ ನುಡಿಗಳಲ್ಲಿ ಹಾಡಿದರು, ಕಾವ್ಯ ಬರೆದರು, ಕತೆ ಹೇಳಿದರು. ಮೊದಲು ಇದು ಕಂಡುಬಂದದ್ದು ಬಂಗಾಳ–ಮಹಾರಾಷ್ಟ್ರಗಳಲ್ಲಿ. ಅತ್ತ ಬಂಕಿಮಚಂದ್ರ ಚಟ್ಟೋಪಾಧ್ಯಾಯ, ಇತ್ತ ಹರಿನಾರಾಯಣ ಆಪ್ಟೆ. ಹಿಂದಿಯಲ್ಲಿ ತುಲಸೀದಾಸ ರಾಮಾಯಣ, ಸೂರದಾಸ ರಾಮಾಯಣಗಳು ಹೊಸ ಬಗೆಯ ಸಾಹಿತ್ಯ ಸೃಷ್ಟಿಗೆ ಆ ಭಾಷೆಯನ್ನು ಅಣಿಗೊಳಿಸಿದುವು. ಉರ್ದುವಿನಲ್ಲಿ ಘಾಲಿಬ್, ಔನ್ನತ್ಯದ ಮಟ್ಟಕ್ಕೆ ಕವಿತೆಯನ್ನು ಒಯ್ದು ಮುಟ್ಟಿಸಿದ.

ಬಂಗಾಳ–ಮಹಾರಾಷ್ಟ್ರಗಳಲ್ಲಿ ಮೂಡಿದ ಪುನರುದಯ ಕರ್ನಾಟಕ ಮತ್ತಿತರ ಪ್ರದೇಶಗಳಲ್ಲೂ ತನ್ನ ಪ್ರತಿಬಿಂಬವನ್ನು ಕಂಡಿತು. ವೆಂಕಟಾಚಾರ್ಯರೂ ಗಳಗನಾಥರೂ ಕಾದಂಬರಿ ರಚನೆಗೆ (ಭಾಷಾಂತರ ಮತ್ತು ಸ್ವತಂತ್ರ ಎರಡೂ ಬಗೆಯ ಸೃಷ್ಟಿಗೆ) ಕನ್ನಡ ಗದ್ಯವನ್ನು ಯಶಸ್ವಿಯಾಗಿ ಬಳಸಿದರು.

1895ರಲ್ಲೇ ಕನ್ನಡ ಕಾದಂಬರಿ ಚಿಲಿಪಿಲಿ ನುಡಿದಿತ್ತು. ಅದು ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ.' "ಇದೊಂದು ಕಾದಂಬರಿ. ನಾನು ಬಲ್ಲಷ್ಟರ ಮಟ್ಟಿಗೆ ಇಡಿಯ ಕನ್ನಡ ನಾಡಿನಲ್ಲಿ ಮೊತ್ತ ಮೊದಲನೆಯ ಕಾದಂಬರಿ" ಎಂದು ಆ ಕೃತಿಯ ಬಗೆಗೆ



ದಿಲ್ಲಿಯಲ್ಲಿ ಘಾಲಿಬನ ಸಮಾಧಿ



ಹಾಸನ ರಾಜಾರಾವ್ : ವಿಶಿಷ್ಟ ಕೃತಿಗಳು

ನುಡಿದವರು ಮಂಜೇಶ್ವರ ಗೋವಿಂದ ಪೈ. (ಕೌಚ್‌ಮನ್ ಎಂಬ ಆಂಗ್ಲ ಕಲೆಕ್ಟರನೊಬ್ಬ ಇಂಗ್ಲಿಷಿಗೆ ಆ ಕಾದಂಬರಿಯನ್ನು ಭಾಷಾಂತರಿಸಿದ.)

ರವೀಂದ್ರನಾಥ ಠಾಕೂರರು ಭಾರತೀಯ ಪುನಶ್ಚೇತನದ ಪ್ರತೀಕವಾದರು. 1913ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ದೊರೆತು ಠಾಕೂರರು ವಿಶ್ವಕವಿ ಎನಿಸಿದರು.

ಈ ಶತಮಾನದ ಮೂರು-ನಾಲ್ಕನೆಯ ದಶಕಗಳಲ್ಲಿ ಪ್ರಗತಿಶೀಲತೆ ಭಾರತೀಯ ಸಾಹಿತ್ಯದಲ್ಲಿ ಬೀಸಿದ ಹೊಸ ಗಾಳಿ. ಸ್ವಾತಂತ್ರ್ಯ ಪ್ರಾಪ್ತಿಯ ಅನಂತರ, ರೊಮ್ಯಾಂಟಿಕ್ ಹಾಗೂ ಪ್ರಗತಿಶೀಲ ಸಂಪ್ರದಾಯಗಳಿಗೆ ಪ್ರತಿಕ್ರಿಯೆಯಾಗಿ ನವ್ಯಪಂಥ ರೂಪು ತಳೆಯಿತು.

ವಿದೇಶೀಯರ ಮಟ್ಟಿಗೆ ಭಾರತೀಯ ಸಾಹಿತ್ಯವೆಂದರೆ, ಸಣ್ಣ ಪ್ರಮಾಣದಲ್ಲಿ ಇಂಗ್ಲಿಷ್ ಮತ್ತಿತರ ಭಾಷೆಗಳಲ್ಲಿ ದೊರೆಯುವ ಭಾರತೀಯ ಕೃತಿಗಳ ಅನುವಾದಗಳು. ಇಂಗ್ಲಿಷಿನಲ್ಲೇ ಬರೆಯುವ ಭಾರತೀಯ ಲೇಖಕರೂ ಇದ್ದಾರೆ. ಇವರ ಕೃತಿಗಳನ್ನೂ ಭಾರತೀಯ ಸಾಹಿತ್ಯವೆಂದು ಹೊರಗೆ ಪರಿಗಣಿಸುತ್ತಾರೆ.



ಮುಲ್ಕ್‌ರಾಜ್ ಆನಂದ್ : ಪ್ರಗತಿಶೀಲತೆ

x x x x x x x x x

...ಚೀನದಲ್ಲಿ 20ನೆಯ ಶತಮಾನದ ಆದಿಯಲ್ಲಿ, ಮಾತನಾಡುವ ಭಾಷೆಯನ್ನು ಬರೆಹಗಾರ ಬಳಸಬೇಕು —ಎಂದು ಸಾಹಿತಿ ಹುಷಿ ಚಳುವಳಿ ಆರಂಭಿಸಿದ.

ಸೂನ್ ಯಾತ್ ಸೇನರ ನಾಯಕತ್ವದ ರಾಷ್ಟ್ರೀಯ ಆಂದೋಲನ ಸಾಹಿತ್ಯಕ್ಷೇತ್ರದ ಮೇಲೂ ಪ್ರಭಾವ ಬೀರಿದ್ದು ಸ್ವಾಭಾವಿಕ ಸಂಗತಿ. ಮುಂದೆ, ಕಮ್ಯೂನಿಸ್ಟ್ ವಿಚಾರಧಾರೆ ಚೀನೀ ಸಮಾಜವನ್ನು ತೋಯಿಸತೊಡಗಿದಾಗ ಆಗಿನ ಬರೆಹಗಾರರು ರಷ್ಯದತ್ತ ನೋಡಿದ್ದೂ ಅಷ್ಟೇ ಸಹಜ. ಆ ವೇಳೆಯಲ್ಲಿ ಚೀನೀ ಜೀವನವನ್ನು ಚಿತ್ರಿಸುವ ಶ್ರೇಷ್ಠ ಕಥೆಗಳನ್ನು ಬರೆದ ಲು ಶೂನ್ 'ಚೀನದ ಗಾರ್ಕಿ' ಎಂದು ಬಣ್ಣಿಸಲ್ಪಟ್ಟ.

ಚೀನೀ ಪರಂಪರೆಯ ಪ್ರಕಾರ ವಿದ್ವಾಂಸರೇ ಅಧಿಕಾರಿಗಳು, ಅಥವಾ ಅಧಿಕಾರಿಗಳೆಲ್ಲ ವಿದ್ವಾಂಸರು. ಅವರು ಕವಿಗಳೂ ಆಗಿರುತ್ತಿದ್ದರು.

ಪರಂಪರೆಗಳನ್ನು ಮಣ್ಣುಗೂಡಿಸಿದ ಮಾವೊ ತ್ಸೆ-ತುಂಗನ ನೇತೃತ್ವದ ಕ್ರಾಂತಿ, ಮೇಲಿನ ಒಂದು ಪರಂಪರೆಯನ್ನು ಮಾತ್ರ ಉಳಿಸಿಕೊಂಡಿದೆ. ಆದರೆ ಇದು ಪರಿಷ್ಕರಿಸಿದ ಆವೃತ್ತಿ. ಆಧುನಿಕ ಚೀನದಲ್ಲಿ ಎಲ್ಲ ಕವಿಗಳೂ ವಿದ್ವಾಂಸರೂ ಸರಕಾರದ ಉದ್ಯೋಗಿಗಳೇ!



ಮನೋಹರ ಮಳಗಾಂವ್‌ಕರ್ : ಅಲ್ಲಿನ ಭಾಷೆಯಲ್ಲಿ ಇಲ್ಲಿನ ಕಥೆ

ಈಗ ಎಲ್ಲ ಸಾಹಿತ್ಯಕೃತಿಗಳಲ್ಲೂ ಮಾವೋ ದೃಷ್ಟಿ, ಮಾವೋ ಚಿಂತನೆ. 1965ರಲ್ಲಿ ಪ್ರಕಟವಾದ 'ಒಯಾಂಗ್ ಹಾಯ್ ಗೀತ' ಎಂಬ ಕಾದಂಬರಿಯ ಬಳಿಕ ಚೀನದಲ್ಲಿ ಹೊಸ ಕಾದಂಬರಿ ಯಾವುದೂ ಪ್ರಕಟವಾಗಿಲ್ಲ. ಲೇಖಕ ಒಂಟಿಯಾಗಿ ಕೃತಿ ರಚಿಸುವುದಕ್ಕೆ ಅಲ್ಲಿ ಈಗ ಪ್ರೋತ್ಸಾಹವಿಲ್ಲ. ಸಣ್ಣಕತೆಯಾದರೂ ಸರಿಯೆ, ಒಂದು 'ತಂಡ' ದವರು ಅದನ್ನು ಬರೆಯಬೇಕು.

ಸಮಾಜವನ್ನು ಮೂಲಭೂತವಾಗಿ ಬದಲಿಸಲು ಹೊರಟ ರಾಷ್ಟ್ರಗಳ ದೃಷ್ಟಿಯಲ್ಲಿ, ಸಾಹಿತ್ಯ ರಚನೆಗೆ ಸಂಬಂಧಿಸಿ ಕೆಲವು ಕಟ್ಟುಪಾಡುಗಳು ಅನಿವಾರ್ಯ. ಚೀನದಲ್ಲಿ ನಾವು ಕಾಣುತ್ತಿರುವುದು ಅಂಥ ನಿರ್ಬಂಧಗಳ ಅತ್ಯುಗ್ರ ರೂಪವನ್ನು.

x x x x x x x x x

11ನೆಯ ಶತಮಾನದಲ್ಲಿ ಜಪಾನಿನ ಮುರಸಾಕಿ ಎಂಬ ಶ್ರೀಮಂತ ಮಹಿಳೆ ಬರೆದ 'ಗೆಂಜಿಯ ಕಥೆ' ಆರಂಭದ ಜಪಾನೀ ಸಾಹಿತ್ಯ ಕೃತಿಗಳಲ್ಲಿ ಒಂದು. ಇದನ್ನು ಆಕೆ ಬರೆಯಲು



ಆರ್. ಕೆ. ನಾರಾಯಣ್ : ಲಲಿತ ಬರೆವಣಿಗೆ

[illegible] ಸುಮಾರು ಕ್ರಿ. ಶ. 1001 ರಿಂದ 1020ರ ಅವಧಿಯಲ್ಲಿ ಅದನ್ನು ಆಕೆ ಬರೆದಿರಬೇಕು. ಈ ಕೃತಿಯಲ್ಲಿರುವುದು ಕಾಲ್ಪನಿಕ ಅರಸುಮನೆತನವೊಂದರ ಜೀವನ ವೈಖರಿಯ ಚಿತ್ರಣ.

ಭಾಷಾಂತರಗಳ ಅಭಾವದಿಂದಾಗಿ, ಜಪಾನಿನ ಸಾಹಿತ್ಯ ಸೃಷ್ಟಿಯ ಬಗೆಗೆ ಬಾಹ್ಯ ಜಗತ್ತು ಹೆಚ್ಚೇನನ್ನೂ ಅರಿತಿಲ್ಲ. ಆಧುನಿಕ ಜಪಾನೀ ಸಾಹಿತ್ಯ ಕೃತಿಗಳು ಮಾತ್ರ ಇಂಗ್ಲಿಷ್ ಭಾಷೆಯಲ್ಲಿ ಸ್ವಲ್ಪ ಮಟ್ಟಿಗೆ ಸಿಗುತ್ತವೆ. ಜಪಾನೀ ಬರೆವಣಿಗೆ ವರ್ಣಮಯವೂ ವೈವಿಧ್ಯಮಯವೂ ಆಗಿದೆ ಎಂಬುದನ್ನು ಈ ಭಾಷಾಂತರಗಳು ಸಾರುತ್ತವೆ.

ಯಸುನಾರಿ ಕವಬಾಟ, ಜಪಾನಿನ ಖ್ಯಾತ ಕಾದಂಬರಿಕಾರ. 1968ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ಪಡೆದ ಬಳಿಕ ಆಧುನಿಕ ಜಪಾನೀ ಸಾಹಿತ್ಯ ರಾಶಿಯತ್ತ ಲೋಕದ ಗಮನ ಹರಿದಿದೆ. ವಿಶ್ವಮಾನ್ಯ ಕವಬಾಟ ಇಳಿವಯಸ್ಸಿನಲ್ಲಿ ಆತ್ಮಹತ್ಯೆ ಮಾಡಿಕೊಂಡುದಂತೂ ಇತರ ದೇಶಗಳ ಜನರನ್ನು ಚಕಿತರನ್ನಾಗಿ ಮಾಡಿದೆ.

x x x x x x x x x

ದೇಶ- ಭಾಷೆಗಳು ಬೇರೆ ಬೇರೆಯಾದರೂ ಲೋಕದಾದ್ಯಂತ ನಡೆಯುವ ಸಾಹಿತ್ಯ ಸೃಷ್ಟಿ ಲಯಬದ್ಧ. ಎಷ್ಟೋ ವೇಳೆ, ಭಾಷೆಯ ಸೀಮಾ ರೇಖೆಗಳಿಗೆ ಅರ್ಥವಿಲ್ಲ ಎನಿಸುವುದುಂಟು.

ಅಮೆರಿಕದ ಎಜ್ರಾ ಪೌಂಡ್ ಯೂರೋಪನ್ನು ತನ್ನ ಪ್ರಯೋಗಕ್ಷೇತ್ರವನ್ನಾಗಿ ಮಾಡಿದ. ಹಾಸನದ ರಾಜಾರಾಯರಿಗೆ ಫ್ರಾನ್ಸೂ ಒಂದೇ, ಅಮೆರಿಕವೂ ಒಂದೇ. ವೆಸ್ಟ್ ಇಂಡೀಸಿನ ನಯ್‌ಪಾಲರಿಗೆ ಇಂಗ್ಲೆಂಡೂ ಮನೆಯಾಗುತ್ತದೆ. ತನ್ನ ದೇಶ ಬಿಟ್ಟು ಬೇರೆ ರಾಷ್ಟ್ರಗಳಲ್ಲಿ ನೆಲೆಸಿ ಅಲ್ಲಿನ ಭಾಷೆ ಕಲಿತು ಅದರಲ್ಲಿ ಬರೆಯುವವರೂ ಉಂಟು.

ಆಂಗ್ಲ ಲೇಖಕರಾದ ಸಾಮರ್‌ಸೆಟ್ ಮಾಮ್ ಅಥವಾ ಇ. ಎಂ. ಫಾರ್ಸ್ಟರ್ ಮಾಡುತ್ತಿದ್ದಂತೆ, ಬೇರೆ ಬೇರೆ ದೇಶಗಳ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿ ರಚಿಸುವುದೂ ಸಾಧ್ಯ.

ಇವರೆಲ್ಲ ನಿರ್ಮಿಸುವುದು ಆಯಾ ದೇಶದ, ಭಾಷೆಯ ಸಾಹಿತ್ಯವೆ? ಅಥವಾ ವಿಶ್ವಸಾಹಿತ್ಯವೆ?

'ವಿಶ್ವಸಾಹಿತ್ಯಕ್ಕೆ ಕಾಣಿಕೆ' ಎನ್ನುತ್ತೇವಲ್ಲ? ಅದರ ಅರ್ಥವೇನು? ಯಾವುದೇ ಒಂದು ಸಾಹಿತ್ಯಕೃತಿ ಜಗತ್ತಿನ ವಿವಿಧ ಭಾಷೆಗಳಲ್ಲಿ ಅನುವಾದಗೊಂಡು ಜನರ ಮನ್ನಣೆ ಪಡೆದಾಗಲಲ್ಲವೆ ಅದನ್ನು 'ವಿಶ್ವಸಾಹಿತ್ಯ' ಎನ್ನುವುದು?

ಕಾಳಿದಾಸನ 'ಶಾಕುಂತಲ', ಜರ್ಮನ್ ಭಾಷೆಗೆ, ಇಂಗ್ಲಿಷ್, ರಷ್ಯನ್ ಮತ್ತಿತರ ಭಾಷೆಗಳಿಗೆ ಭಾಷಾಂತರಗೊಂಡುದರಿಂದ ಕಾಳಿದಾಸ ಜಗದ್ವಂದ್ಯನಾದ.

ನಮ್ಮ ವಿವಿಧ ಭಾಷೆಗಳ ಶ್ರೇಷ್ಠ ಕೃತಿಗಳು ಎಲ್ಲ ಭಾರತೀಯ ಭಾಷೆಗಳಿಗೆ ಅನುವಾದವಾಗಿ ಆ ಕೃತಿಗಳನ್ನು ಜನ ಮೆಚ್ಚಿದಾಗಲೇ ಅವು ಭಾರತೀಯ ಸಾಹಿತ್ಯದ ಉತ್ಕೃಷ್ಟ ಕೃತಿಗಳೆನಿಸುತ್ತವೆ. ಜಗತ್ತಿನ ಹಲವಾರು ಭಾಷೆಗಳಲ್ಲಿ ಅವು ದೊರೆತಾಗ 'ವಿಶ್ವಸಾಹಿತ್ಯಕ್ಕೆ ಕಾಣಿಕೆ'ಗಳಾಗುತ್ತವೆ. ಹಾಗೆಯೇ ಪ್ರತಿಯೊಂದು ದೇಶದ ಶ್ರೇಷ್ಠ ಕೃತಿಗಳು ಲೋಕದ ಎಲ್ಲ ಭಾಷೆಗಳಲ್ಲಿ ಲಭ್ಯವಾದಾಗಲೇ ವಿಶ್ವಸಾಹಿತ್ಯ ಎನ್ನುವ ಹೆಗ್ಗಳಿಕೆ ಅವುಗಳಿಗೆ ಪ್ರಾಪ್ತವಾಗುತ್ತದೆ.

ಆಗ "ಸಾಹಿತ್ಯದ ... ಬಗೆಗೆ ಏನನ್ನೂ ತಿಳಿಯದವನು ಬಾಲ–ಕೋಡುಗಳಿಲ್ಲದ ಪ್ರಾಣಿಯೇ ಸರಿ" ಎಂಬ ಗಾದೆಯನ್ನು "ವಿಶ್ವ ಸಾಹಿತ್ಯದ ... ಬಗೆಗೆ ಏನನ್ನೂ ತಿಳಿಯದವನು ಬಾಲ–ಕೋಡುಗಳಿಲ್ಲದ ಪ್ರಾಣಿಯೇ ಸರಿ" ಎಂದು ನಾವು ಬದಲಿಸಬಹುದು!

೮

ಕಲೆ, ಸಾಹಿತ್ಯಗಳ ಕ್ಷೇತ್ರದಲ್ಲಿ ವಿಮರ್ಶೆಗೆ ಹಿರಿಯ ಸ್ಥಾನ. ನರ್ತನವಿರಲಿ, ಸಂಗೀತವಿರಲಿ, ನಾಟಕವಿರಲಿ, ಚಿತ್ರಕಲೆ ಇರಲಿ, ಶಿಲ್ಪವಿರಲಿ, ಸಾಹಿತ್ಯಕೃತಿ ಇರಲಿ —ಅದನ್ನು ತೂಗಿನೋಡಿ ಬೆಲೆಕಟ್ಟುವವನು ವಿಮರ್ಶಕ. ಕಲಾವಿದರು ಸಾಹಿತಿಗಳಿಗೆಲ್ಲ, ವಿಮರ್ಶಕನ ಮೆಚ್ಚುಗೆ ಪಡೆಯುವ ತವಕ.

ಶಾಸ್ತ್ರೀಯ ಕಲೆ-ಸಾಹಿತ್ಯಗಳ ಪರಿಜ್ಞಾನ, ಸಮಕಾಲೀನ ಪ್ರಜ್ಞೆ, ಇತಿಹಾಸದ ಅರಿವು, ಇತರ ವಿಜ್ಞಾನಗಳ ಪರಿಚಯ— ಇಂಥವೆಲ್ಲ ವಿಮರ್ಶಕನಿಗೆ ಇರಬೇಕು. ಈ ಬಗೆಯ ವಿದ್ವತ್ತು ಎಷ್ಟು ಜನರಿಗಿದೆ? ಆದ್ದರಿಂದಲೇ, ಶ್ರೇಷ್ಠ ವಿಮರ್ಶಕರ ಸಂಖ್ಯೆ ಸಣ್ಣದು.

ಪತ್ರಿಕೆಗಳಲ್ಲಿ ನಿಯತಕಾಲಿಕಗಳಲ್ಲಿ ವಿಮರ್ಶೆಗಳು ಯಾವಾಗಲೂ ಪ್ರಕಟವಾಗುತ್ತವೆ. ಇವುಗಳಲ್ಲಿ, ಕೃತಿಯನ್ನು ಅಭ್ಯಸಿಸಿ ಬರೆದ ವಿಮರ್ಶೆಗಳೂ ಇರುತ್ತವೆ; ಬರಿಯ ಹೊಗಳಿಕೆ ಇಲ್ಲವೆ ತೆಗಳಿಕೆಯಿಂದಲೇ ತುಂಬಿದ ವಿಮರ್ಶೆಗಳೂ ಇರುತ್ತವೆ.

ಎಲ್ಲ ವಿಮರ್ಶಕರಲ್ಲೂ ಇರಲೇಬೇಕಾದ ಗುಣ –ಸಹೃದಯತೆ. ಹಾಗೆ ನೋಡಿದರೆ ಸಹೃದಯತೆ ಎಲ್ಲರಲ್ಲೂ ಇರಬೇಕು. 'ಸಹೃದಯರಾದ ಪ್ರೇಕ್ಷಕರು', 'ಸಹೃದಯರಾದ ಶ್ರೋತೃಗಳು', 'ಸಹೃದಯರಾದ ವಾಚಕರು' ಎಂದೆಲ್ಲ ಹೇಳುವುದಿಲ್ಲವೆ? ವಾಸ್ತವವಾಗಿ, ಸಹೃದಯತೆ ಸಂಸ್ಕಾರದ ಲಕ್ಷಣ.

ಒಳ್ಳೆಯ ವಿಮರ್ಶಕನಿಂದಲೂ ಒಮ್ಮೊಮ್ಮೆ ತಪ್ಪು ಸಂಭವಿಸಬಹುದು. ನೋಡುವ ದೃಷ್ಟಿ ದೋಷಪೂರ್ಣವಾಗಿ, ಕೃತಿಗೆ ಆತ ಅಪಚಾರ ಎಸಗಬಹುದು.

ಎಲ್ ಗ್ರೆಕೋ ಮತ್ತು ವೆರ್ಮಿರ್ ಸಮಕಾಲೀನ ವಿಮರ್ಶಕರ ಮೆಚ್ಚುಗೆ ಗಳಿಸಲಿಲ್ಲ. ಆದರೆ ಮೂರು ಶತಮಾನಗಳ ಅನಂತರದ ಪೀಳಿಗೆ ಮಹಾನ್ ಚಿತ್ರಕಾರರೆಂದು ಅವರನ್ನು ಸ್ಮರಿಸಿತು.

20ನೆಯ ಶತಮಾನದ ಆಧುನಿಕ ಚಿತ್ರಕಾರರ ತಂಡವೂ ವಿಮರ್ಶಕರೂ ಎಲ್ ಗ್ರೆಕೋನ ಕೃತಿಗಳ ಹಿರಿಮೆಯನ್ನು ಗುರುತಿಸಿ, ಗುಣಗಾನ ಮಾಡಿದರು. ಆದರೆ, ಅದಕ್ಕೆ ಕೆಲವೇ ವರ್ಷಗಳ ಮುಂಚೆ –1907ರಲ್ಲಿ– ಪ್ರಕಟವಾದ 700 ಪುಟಗಳ ಕಲಾ ವಿಮರ್ಶನ ಗ್ರಂಥದಲ್ಲಿ ಎಲ್ ಗ್ರೆಕೋನ ಪ್ರಸ್ತಾಪವೇ ಇರಲಿಲ್ಲ!

"ಕುಡಿಕೆ ಬಣ್ಣವನ್ನು ಜನತೆಯ ಮುಖದ ಮೇಲೆ ಎರಚುತ್ತಿದ್ದಾನೆ", ಎಂದ ವಿಮರ್ಶಕ ರಸ್ಕಿನ್, ಇಂಗ್ಲೆಂಡಿನಲ್ಲಿ ನೆಲೆಸಿದ ಸಮಕಾಲೀನ ಅಮೆರಿಕನ್ ಚಿತ್ರಕಾರ ವ್ಹಿಸ್ಲರನನ್ನು ಕುರಿತು.

ಸೇಜಾನ್‌ಗೆ ಜೀವನದುದ್ದಕ್ಕೂ ಕಟು ವಿಮರ್ಶೆಯ ಭೋಜನವೇ. ವಿಮರ್ಶಕರ ತೆಗಳಿಕೆಯಿಂದ ಅವನು ಬೇಸತ್ತುಹೋದ.

ಕೆಲ ವಿಮರ್ಶಕರು ತಮ್ಮ ಬರೆವಣಿಗೆಯಿಂದ ಇತಿಹಾಸಕಾರರ ಮಟ್ಟಕ್ಕೆ ಏರುವುದುಂಟು. ಅಂಥವರು ಈ ಶತಮಾನದ ಖ್ಯಾತ ಕಲಾ ವಿಮರ್ಶಕ ಸಿಂಹಳೀಯ ಆನಂದ ಕುಮಾರಸ್ವಾಮಿ. ಆಗ್ನೇಯ ಏಷ್ಯದ ರಾಷ್ಟ್ರಗಳ —ಅದರಲ್ಲೂ ಇಂಡೊನೇಷ್ಯದ— ಕಲೆ ಬೆಳಕಿಗೆ ಬಂದದ್ದೇ ಆನಂದ ಕುಮಾರಸ್ವಾಮಿಯ ಬರೆವಣಿಗೆಯ ಮೂಲಕ.

ಖ್ಯಾತ ಕಲಾವಿಮರ್ಶಕ ಆನಂದ ಕುಮಾರಸ್ವಾಮಿ

× × ×                × × ×                × × ×

ಸಾಹಿತ್ಯ ಕ್ಷೇತ್ರದಲ್ಲೂ ಪರಿಸ್ಥಿತಿ ಇದಕ್ಕಿಂತ ಭಿನ್ನವಲ್ಲ. ಆದರೂ, ಸಾಹಿತ್ಯದ ಮೌಲ್ಯಮಾಪನಕ್ಕೊಂದು ಅಳತೆಗೋಲನ್ನು ರೂಪಿಸುವ ಪ್ರಯತ್ನ 2300 ವರ್ಷಗಳಿಗೆ ಹಿಂದೆಯೇ ನಡೆಯಿತು. ಅದು ಗ್ರೀಕ್ ತತ್ತ್ವಜ್ಞಾನಿ ಅರಿಸ್ಟಾಟಲನ ಕಾವ್ಯಮೀಮಾಂಸೆ. ಪಾಶ್ಚಾತ್ಯ ವಿಮರ್ಶೆಗೆ ಅದು ತಳಹದಿ.

ಕ್ರಿ.ಶ. 2ನೆಯ ಶತಮಾನದ ಭರತನ 'ನಾಟ್ಯಶಾಸ್ತ್ರ', 8–9–10ನೆಯ ಶತಮಾನಗಳ ದಂಡಿ ಭಾಮಹ ಆನಂದವರ್ಧನ ರಾಜಶೇಖರರ ಸಂಸ್ಕೃತ ಕೃತಿಗಳು ಭಾರತೀಯ ಕಾವ್ಯಮೀಮಾಂಸೆಗೆ ಅಡಿಪಾಯ.

ಬರೆದವನಿಗೆ, ತನ್ನನ್ನು ಇತರರು ಅರ್ಥಮಾಡಿಕೊಳ್ಳುತ್ತಿಲ್ಲ ಎಂದು ಕೆಲವೊಮ್ಮೆ ಅನ್ನಿಸುವುದುಂಟು. ಕಲೆಯ ಇತಿಹಾಸದಷ್ಟೇ ಹಳೆಯದು ಈ ಅನಿಸಿಕೆ.

ಸುಮಾರು 8ನೆಯ ಶತಮಾನದ ಖ್ಯಾತ ಸಂಸ್ಕೃತ ನಾಟಕಕಾರ ಭವಭೂತಿ ಸಿಡಿದೆದ್ದು ಹೀಗೆ ನುಡಿದ:

"ನಿಮ್ಮ ರಸಿಕತೆ ಇನ್ನೂ ಬೆಳೆದಿಲ್ಲ. ನೀವು ನನ್ನ ಕೃತಿಯಿಂದ ದೂರವಿರಿ. ನಿಮಗಾಗಿ ನಾನು ಬರೆಯಲಿಲ್ಲ. ನನಗೆ ಸಮಾನಧರ್ಮನಾದವನು ಯಾವನಾದರೊಬ್ಬ ಎಂದಾದರೂ ಹುಟ್ಟುತ್ತಾನೆ. ಕಾಲ ನಿರವಧಿ, ಪೃಥ್ವಿ ಸುವಿಪುಲ."

ಥಾಮಸ್ ಮಾನ್ ಈ ಶತಮಾನದ ಖ್ಯಾತ ಜರ್ಮನ್ ಕಾದಂಬರಿಕಾರ. "ಅವನ ಕೃತಿಗಳು ವಿಶಿಷ್ಟವಾಗಿವೆ; ಅವುಗಳಲ್ಲಿ ಇಂಥಿಂಥ ಪ್ರತೀಕಗಳಿವೆ"—ಎಂದರು ವಿಮರ್ಶಕರು. ಮಾನ್‌ಗೆ ವಿಸ್ಮಯ ಹಾಗೂ ಹಿಗ್ಗು. ತನ್ನ ಕಲ್ಪನೆಯಲ್ಲಿ ಇದ್ದಿರದ ಸಂಕೇತಗಳು ಕೃತಿಯಲ್ಲಿ ಇವೆ ಎಂದರೆ!

ಸಾಹಿತ್ಯದಲ್ಲಿನ ಕೆಲ ವಿನೂತನ ಪ್ರಯೋಗಗಳಲ್ಲಿ ಅನೇಕ ಬರೆಹಗಾರರಿಗೆ ಇಂಥದೇ ಅನುಭವ ಆಗಿರುವುದುಂಟು.

ಗ್ರಂಥಕರ್ತ ತನ್ನ ಕೃತಿಯ ಬಗೆಗೆ ಸರಿಯಾದ ತೀರ್ಪನ್ನು ತಾನೇ ಕೊಡುವುದು ಸಾಧ್ಯವೆ? ಅದು ಸಾಧ್ಯವೆಂದು ಎಲಿಯಟ್‌ಗೆ ತೋರುವುದಿಲ್ಲ. ಆದರೂ ಸಾಹಿತಿಗಳಲ್ಲೆಲ್ಲ ವಿಮರ್ಶನ ದೃಷ್ಟಿ ಇರಬೇಕು —ಎನ್ನುತ್ತಾನೆ ಆತ.

"ಕೆಲವು ಸಾಹಿತಿಗಳು ಉಳಿದವರಿಗಿಂತ ಶ್ರೇಷ್ಠರಾಗುವುದಕ್ಕೆ ಒಂದೇ ಕಾರಣ —ಅವರ ವಿಮರ್ಶನ ಶಕ್ತಿಯ ಹಿರಿಮೆ", ಎಂಬುದು ಆತನ ಅಭಿಪ್ರಾಯ.

ಪರಸ್ಪರ ಪ್ರಶಂಸೆ ಪರಸ್ಪರ ನಿಂದೆ —ಎರಡೂ ಪಿಡುಗುಗಳೇ. ಕಲಾವಿದರು–ಸಾಹಿತಿಗಳು ವಿಮರ್ಶಕರ ಪಾತ್ರವನ್ನೂ ವಹಿಸಿದಾಗ ಈ ಹಾವಳಿ ಹೆಚ್ಚು.

ವೃಥಾ ದೂಷಣೆಯಿಂದ ಒಬ್ಬನ ಸೃಜನ ಶಕ್ತಿಯನ್ನು ಮೊಟಕುಮಾಡುವುದು ಸಾಧ್ಯ. ಹೊಗಳಿಕೆ ಹೊನ್ನಶೂಲವಾಗಲೂಬಹುದು.

19ನೆಯ ಶತಮಾನದ ರಷ್ಯನ್ ವಿಮರ್ಶಕ ಬೆಲಿನ್ಸ್‌ಕಿಯ ಕೈಯಲ್ಲಿ ವಿಮರ್ಶೆ ವಿಜ್ಞಾನವಾಯಿತು. ಸಾಹಿತ್ಯ ರಚನೆಗೆ ಆಳ ವಿಸ್ತಾರಗಳನ್ನು ಅದು ನೀಡಿತು. ಅವನ ವಿಮರ್ಶೆಯಿಂದ ನೊಂದ ಬರೆಹಗಾರರೂ ಇದ್ದರು; ಸಂತೋಷಪಟ್ಟವರೂ ಇದ್ದರು.

ಸಹೃದಯತೆಯಿಂದ ಮಾತ್ರ ಕಲಾವಿದನ ಬದುಕು ಹಸನಾಗುತ್ತದೆ. ರವೀಂದ್ರರ ದೃಷ್ಟಾಂತ ನಮ್ಮ ಮುಂದಿದೆ. ತಮ್ಮ 'ಗೀತಾಂಜಲಿ'ಯ ಇಂಗ್ಲಿಷ್ ಭಾಷಾಂತರದ ಹಸ್ತಪ್ರತಿಯೊಡನೆ ಠಾಕೂರರು ಇಂಗ್ಲೆಂಡಿಗೆ ಹೋದರು. ಸ್ನೇಹಿತ ರೊಥೆನ್‌ಸ್ಟೀನ್‌ಗೆ ಅದನ್ನು ಕೊಟ್ಟರು. ಆತ ಅದನ್ನು ತನ್ನ ಕವಿಮಿತ್ರ ಯುವಕ ಯೇಟ್ಸ್‌ಗೆ ದಾಟಿಸಿದ. ಯೇಟ್ಸ್ ಹಸ್ತಪ್ರತಿಯನ್ನೋದಿ ಸಂತೋಷಪಟ್ಟ. "ನಾನು



‘ಗೀತಾಂಜಲಿ’ ಹಾಡಿ ಹೊಗಳಿದ ಸವ್ಯಧ್ಯಸಿಯು ಯೇಟ್ಸ್
–ಸಮಕಾಲೀನ ಚಿತ್ರಕಾರನ ದೃಷ್ಟಿಯಲ್ಲಿ

ಜೀವನದುದ್ದಕ್ಕೂ ಕನಸುಕಾಣುತ್ತಿದ್ದ ಜಗತ್ತನ್ನು ಈ ಗೀತೆಗಳು ತೋರಿಕೊಡುತ್ತಿವೆ'', ಎಂದ. ರೊಥೆನ್‌ಸ್ಟೀನನ ಮನೆಯಲ್ಲಿ ಸಹೃದಯ ಗೋಷ್ಠಿ ನಡೆಯಿತು. 'ಗೀತಾಂಜಲಿ'ಯನ್ನು ಯೇಟ್ಸ್ ರಾಗವಾಗಿ ಓದಿದ. (ಅವನದು ಮಧುರ ಕಂಠ.) ಎಜ್ರಾ ಪೌಂಡ್ ನೆರೆದಿದ್ದ ಯುವಕರಲ್ಲಿ ಒಬ್ಬ. ಹೀಗೆ ಆರಂಭವಾದ ಮೆಚ್ಚುಗೆಯ ಅಲೆ ನೊಬೆಲ್ ಪಾರಿತೋಷಕ ಸಮಿತಿಯ ಬಂಡೆಗೂ ಅಪ್ಪಳಿಸಿತು. ಪ್ರಥಮ ಬಾರಿಗೆ ಏಷ್ಯಾ ಖಂಡದ ಒಬ್ಬ ಕವಿಗೆ ನೊಬೆಲ್ ಸಾಹಿತ್ಯ ಬಹುಮಾನ ಪ್ರಾಪ್ತವಾಯಿತು.

ಸ್ವತಃ ಕವಿಯಾದ ಎಜ್ರಾ ಪೌಂಡ್ ಕೂಡಾ ಒಳ್ಳೆಯ ವಿಮರ್ಶಕ. ಅನೇಕರ ಬರೆವಣಿಗೆಯನ್ನು ತಿದ್ದಿದವನು ಆತ. ಎಲಿಯಟನ 'ವೇಸ್ಟ್ ಲ್ಯಾಂಡ್' ಕಾವ್ಯವನ್ನು ಪರಿಷ್ಕರಿಸಿದವನೂ ಅವನೇ. (ಆತನದು ಬುದ್ಧಿ ಮತ್ತೆ–ಮಾನವೀಯತೆಗಳ ಮಹಾ ಸಮ್ಮಿಶ್ರಣ. ಜೇಮ್ಸ್ ಜಾಯ್ಸನ ಹರುಕು ಉಡುಪನ್ನು ನೋಡಲಾರದೆ ತನ್ನಲ್ಲಿದ್ದ ಒಂದೇ ಪೋಷಾಕನ್ನು ಆತನಿಗೆ ಕೊಟ್ಟವನು ಪೌಂಡ್).

ಒಳ್ಳೆಯ ವಿಮರ್ಶೆಯಿಂದ ಕಲಾವಿದರು ಸಾಹಿತಿಗಳಿಗೆ ಮಾತ್ರವಲ್ಲ, ಸಾಮಾನ್ಯರಿಗೂ ಲಾಭವಿದೆ. ಸಮಾಜದಲ್ಲಿ ಸದಭಿರುಚಿ ಮೂಡಲು ಅಂಥ ವಿಮರ್ಶೆ ಕಾರಣವಾಗುತ್ತದೆ.

ಕಲಾವಿದರು, ಸಾಹಿತಿಗಳು ಸ್ವತಃ ವಿಮರ್ಶನಶಕ್ತಿ ಬೆಳೆಸಿಕೊಂಡರೆ ಅವರ ಕೃತಿಗಳು ಉತ್ತಮವಾಗುತ್ತವೆ. ಒಳ್ಳೆಯ ವಿಮರ್ಶಕರು ಆ ಕೃತಿಗಳ ಮೌಲ್ಯಮಾಪನ ಮಾಡಿದರೆ, ಕಲೆ ಸಾಹಿತ್ಯಗಳ ಪ್ರಗತಿಗೆ ಅಂಥ ವಿಮರ್ಶೆ ಸಹಾಯಕವಾಗುತ್ತದೆ.

## ೧೦

ದೇವಸ್ಥಾನದಲ್ಲೋ ರಾಜನ ಆಸ್ಥಾನದಲ್ಲೋ ಹಿಂದೆ ನರ್ತನ ಏರ್ಪಟ್ಟಾಗ ಅದನ್ನು ನೋಡಿ ಆನಂದಿಸುತ್ತಿದ್ದ ಜನರದು ಸೀಮಿತ ಸಂಖ್ಯೆ. ಈಗಲಾದರೋ ಚಂದ್ರನ ಮೇಲಣ ಮಾನವನರ್ತನವನ್ನು ಭೂಲೋಕದ ಕೋಟ್ಯಂತರ ಜನ ಟೆಲಿವಿಷನ್‌ನಲ್ಲಿ ನೋಡಲು ಸಾಧ್ಯ.

ಹಿಂದೆ ಗಾಯನ ಗಾಯಕನೊಂದಿಗೇ ಮರೆಯಾಗುತ್ತಿತ್ತು, ನೆನಪನ್ನು ಮಾತ್ರ ಉಳಿಸಿ. ಈಗ ವಿಜ್ಞಾನದ ನೆರವಿನಿಂದ ಯಾವ ಧ್ವನಿಯನ್ನು ಬೇಕಾದರೂ ಸೆರೆಹಿಡಿಯಬಹುದು, ರಾಗತರಂಗಗಳನ್ನು ಬಂಧನದಲ್ಲಿಡಬಹುದು.

ಒಳ್ಳೆಯ ಒಂದು ನಾಟಕದ ಅಭಿನಯವನ್ನು ಚಲನಕ್ಯಾಮರಾದ ನೆರವಿನಿಂದ ಬಿಗಿದುಕಟ್ಟಿ ಪುನರಾವರ್ತಿಸಬಹುದು.

ಚಲಚ್ಚಿತ್ರ, ರೇಡಿಯೋ, ಟೆಲಿವಿಷನ್ —ಇವೆಲ್ಲದರ ಪಾತ್ರವೂ ಆಧುನಿಕ ಜಗತ್ತಿನಲ್ಲಿ ವಿಶಿಷ್ಟ ರೂಪದ್ದು.

19ನೆಯ ಶತಮಾನದ ಮಧ್ಯದಲ್ಲಿ ಕ್ಯಾಮರಾ ರಂಗಪ್ರವೇಶಮಾಡಿದಾಗ ಕಲಾಲೋಕದಲ್ಲಿ ಆದ ಅವಸ್ಥಾಂತರಗಳನ್ನು ನಾವು ಈಗಾಗಲೇ ಗಮನಿಸಿದ್ದೇವೆ. ಅಂದಿನಿಂದ, ರೂಪಚಿತ್ರ ದಾಖಲೆಗಾಗಿ ಕಲೆಯನ್ನು ಬಳಸುವುದು ನಿಂತುಹೋಯಿತು. ಚಿತ್ರಕಲೆಯಲ್ಲಿ ನೂತನ ಶೈಲಿಗಳು ಹುಟ್ಟಿದುವು.

ಹಿಂದೆ ಚಿತ್ರಕಲೆ ಮಾಡುತ್ತಿದ್ದ ಕೆಲಸವನ್ನು ಈಗ ಕ್ಯಾಮರಾ ಮಾಡುತ್ತಿದೆ, ಚಲಚ್ಚಿತ್ರದ ಮೂಲಕ.

ನೃತ್ಯ, ಸಂಗೀತ, ಅಭಿನಯ, ಕಥೆ ಎಲ್ಲವನ್ನೂ ಒಂದರಲ್ಲೇ ನೀಡುವ ಸುರುಳಿ ಕಲೆ —ಚಲಚ್ಚಿತ್ರ. 'ರೆಸ್ಕ್ಯೂಡ್ ಬೈ ರೋವರ್' ಒಂದು ಮುದ್ದು ಮಗು ಮತ್ತು ಸಾಕುನಾಯಿಯ ಕಥೆ. ಇದು ಇಂಗ್ಲೆಂಡಿನಲ್ಲಿ ಸಿದ್ಧವಾದ ಮೊದಲ ಚಿತ್ರ. 1904ರಲ್ಲಿ. ಆಗ ಅದರ ನಿರ್ಮಾಣಕ್ಕೆ ತಗಲಿದ ವೆಚ್ಚ 7 ಪೌಂಡ್, 13 ಷಿಲಿಂಗ್, 9 ಪೆನ್ಸ್.



ಕ್ಯಾಮರಾದಲ್ಲಿ ಸ್ವ-ಚಿತ್ರವನ್ನು ಹಿಡಿಯು ಬಯಸಿದ
ಖ್ಯಾತ ಫ್ರೆಂಚ್ ಕಾದಂಬರಿಕಾರ ಜೋಲಾ



ಕ್ಯಾಮರಾ ಬಂಧನದಲ್ಲಿ ಬಿಂಬ, ಪ್ರತಿಬಿಂಬ

ಅಮೆರಿಕದಲ್ಲಿ ನಿರ್ಮಿತವಾದ ಪ್ರಥಮ ಚಲಚ್ಚಿತ್ರ 'ದಿ ಗ್ರೇಟ್ ಟ್ರೇಯ್ನ್ ರಾಬರಿ'. ಆ ದೇಶದ ಹಾಲಿವುಡ್ ನಗರ, ಚಲಚ್ಚಿತ್ರ-ಮೊಗಲರ ಮೆಕ್ಕಾ.

ಚಲಚ್ಚಿತ್ರ ಕಲೆ ಮನೋರಂಜನೆ ನೀಡಿದೆ; ಸಮಾಜವನ್ನು ವಿಮರ್ಶಿಸಿದೆ. ಚಾರ್ಲಿ ಚಾಪ್ಲಿನ್ ನಿರ್ಮಿಸಿದ ಅಭಿನಯಿಸಿದ ಚಿತ್ರಗಳು ಇಂಥವು.

ವಾಲ್ಟ್ ಡಿಸ್ನಿ ಅಸಂಖ್ಯ ಎಳೆಯ ಪ್ರೇಕ್ಷಕರಿಗಾಗಿ ಕಲಾಕೃತಿಗಳನ್ನು ಸೃಷ್ಟಿಸಿದ.

ಭಾರತದಲ್ಲಿ ಮೊದಲ ಚಲಚ್ಚಿತ್ರವನ್ನು ತಯಾರಿಸಿದವನು ದಾದಾ ಸಾಹೇಬ ಫಾಲ್ಕೆ, 1913ರಲ್ಲಿ. ಚಿತ್ರದ ಹೆಸರು 'ಸತ್ಯಹರಿಶ್ಚಂದ್ರ'.

"ಕೇವಲ ಎರಡಾಣೆಗೆ 50,000 ಚಿತ್ರಗಳನ್ನು ನೋಡಿ! ಚಿತ್ರದ ಅಗಲ ಮುಕ್ಕಾಲು ಅಂಗುಲ, ಉದ್ದ ಎರಡು ಮೈಲು!"

—ಇದು ಫಾಲ್ಕೆಯ ಜಾಹೀರು ಪ್ರಕಟಣೆ.

ಚಲಚ್ಚಿತ್ರ ಕಲೆ ಉದ್ಯಮವಾಗಿ ಲೋಕದ ಮುಂದುವರಿದ ಎಲ್ಲ ರಾಷ್ಟ್ರಗಳಲ್ಲೂ ಬೆಳೆದಿದೆ. ಖಾಸಗೀ ಉದ್ಯಮವಿಲ್ಲದ ಸೋವಿಯೆತ್ ಒಕ್ಕೂಟದಂಥ ರಾಷ್ಟ್ರಗಳಲ್ಲಿ ಶಿಕ್ಷಣ-ಮನೋರಂಜನೆ-ಪ್ರಚಾರಗಳಿಗೆ ಚಲಚ್ಚಿತ್ರ ಮೀಸಲು.

ರಷ್ಯದಲ್ಲಿ ಐಸ್‌ನ್‌ಸ್ಟೀನ್ ಮತ್ತು ಪುಡೋವ್ಕಿನ್ ಚಲಚ್ಚಿತ್ರ ನಿರ್ಮಾಣತಂತ್ರಕ್ಕೆ ರೂಪವಿತ್ತರು.

ಈ ಕಲೆಯಲ್ಲಿ ಮೂಡಿಬಂದ ಸಂಪ್ರದಾಯಕ್ಕೆ ಸವಾಲು ತಡವಿಲ್ಲದೆ ಬಂತು. ಅಂಥದೊಂದು ಚಿತ್ರ ಇಟಲಿಯ ಡಿಸಿಕಾ ತಯಾರಿಸಿದ 'ಬೈಸಿಕ್‌ಲ್ ಥೀಫ್'.

ಭಾರತದಲ್ಲಿ ಡಿಸಿಕಾನಿಂದ ಸ್ಫೂರ್ತಿ ಪಡೆದ ವ್ಯಕ್ತಿ ಸತ್ಯಜಿತ್ ರೇ. "ಒಂದು ದಿನ ನಾನೊಂದು ಶ್ರೇಷ್ಠ ಚಿತ್ರ ನಿರ್ಮಿಸ್ತೇನೆ", ಎಂದ ಯುವಕ ರೇ, 1948ರಲ್ಲಿ, ತನ್ನ ಮಿತ್ರನಿಗೆ. ಆ ಚಿತ್ರ 'ಪಥೇರ್ ಪಾಂಚಾಲಿ' ('ದಾರಿಯ ಹಾಡು'). ಬಂಗಾಳಿಯ ಪ್ರಖ್ಯಾತ ಕಾದಂಬರಿಯ ಚಿತ್ರಣ.

ಮೊದಲು ಯೂರೋಪಿನಲ್ಲಿ ಚಲಚ್ಚಿತ್ರ ಕ್ಷೇತ್ರದಲ್ಲಿ ಕಾಣಿಸಿಕೊಂಡ ಹೊಸ ಪ್ರವೃತ್ತಿ ಭಾರತಕ್ಕೆ ಮಾತ್ರವಲ್ಲ, ಇತರ ದೇಶಗಳಿಗೂ ಹಬ್ಬಿತು. 'ರಾಶೋಮನ್' ಜಪಾನಿನ ಕುರಸೋವಾ 1951ರಲ್ಲಿ ಸಿದ್ಧಗೊಳಿಸಿದ ಅಸಾಧಾರಣ ಚಿತ್ರ.

ಚಲಚ್ಚಿತ್ರಗಳ ನಿರ್ಮಾಣಕ್ಕೆ ಕಥೆ ಕಾದಂಬರಿಗಳು ಬೇಕು. ಚಲಚ್ಚಿತ್ರ ನಿರ್ಮಾಣವನ್ನು ದೃಷ್ಟಿಯಲ್ಲಿಟ್ಟುಕೊಂಡು ಕಾದಂಬರಿ ಬರೆಯುವುದು, ಚಿತ್ರ ನಿರ್ಮಾಪಕನ ಅಪೇಕ್ಷೆಯಂತೆ ಕಥೆ ರಚಿಸುವುದು, ಸಾಹಿತ್ಯದ ಮಟ್ಟಿಗೆ ಹಿತಕರವಲ್ಲದ ಪ್ರವೃತ್ತಿ.

ಚಾಪ್ಲಿನ್ ಚಿತ್ರಮಾಲೆ : ವಿವಿಧ ವೇಷಗಳಲ್ಲಿ





ಡಿಸ್ನಿಲೋಕದ ಪ್ರಜೆಗಳು



ಮಿಕಿ ಮೌಸ್



ಪಿನೋಕಿಯೋ : ವಾಲ್ಟ್ ಡಿಸ್ನಿ ಸೃಷ್ಟಿ

ಬಣ್ಣಗಳನ್ನೂ ಕ್ಯಾಮರಾ ಸೆರೆಹಿಡಿಯುತ್ತದೆ. ವರ್ಣ ಚಲಚ್ಚಿತ್ರ ನಿರ್ಮಾಣ ಸಾಧ್ಯವಾಗಿದೆ. ಅದಕ್ಕಾಗಿ ಪಾತ್ರಗಳು ಬಣ್ಣಬಣ್ಣದ ಪೋಷಾಕು ತೊಡುವುದು ಕಡ್ಡಾಯ !

ಕಲೆ, ಸಾಹಿತ್ಯಗಳ ಕ್ಷೇತ್ರದ ಮೇಲೆ ರೇಡಿಯೋ–ಟೆಲಿವಿಷನುಗಳೂ ಪ್ರಭಾವ ಬೀರಿವೆ. ರೇಡಿಯೋ ಪ್ರಸಾರ ಆರಂಭವಾದದ್ದು 1920ರಲ್ಲಿ, ಅಮೆರಿಕದಲ್ಲಿ. ಪುಸ್ತಕದ ಹಾಳೆಗಳ ಹಾಗೆ ರೇಡಿಯೋದಲ್ಲಿ ನಿಮಿಷಗಳು. ಕಾರ್ಯಕ್ರಮ ಮನೋರಂಜಕವೂ ಉಪಯುಕ್ತವೂ ಆಗಬೇಕಾದರೆ ವೈವಿಧ್ಯ ಬೇಕು. ಒಂದೇ ಕಾರ್ಯಕ್ರಮ ಗಂಟೆಗಟ್ಟಲೆ ನಡೆಯುವಂತಿಲ್ಲ.



ರೋವರ್ ನಾಯಿ, ಅದು ರಕ್ಷಿಸಿದ ಮಗು —ಪ್ರಥಮ ಆಂಗ್ಲ ಚಲಚ್ಚಿತ್ರದಲ್ಲಿ

ರೇಡಿಯೋ ಸಂಗೀತ–ನಾಟಕ ಕಾರ್ಯಕ್ರಮಗಳಿಗೆ, ಏಕಕಾಲದಲ್ಲೇ ವಿಸ್ತಾರ ಪ್ರದೇಶದಲ್ಲಿ ಲಕ್ಷಾಂತರ 'ಶ್ರೋತೃ'ಗಳು ದೊರೆಯುತ್ತಾರೆ.

ಸಂಗೀತಗಾರರಿಗೆ ಸಮಯದ ಕಟ್ಟುಪಾಡು ಬಲು ಕಷ್ಟದ್ದು. ಭಾರತದಲ್ಲಿ ಪ್ರಸಾರ ನಿಲಯಗಳು ಸ್ಥಾಪಿತವಾದ ಆರಂಭದಲ್ಲಿ ಒಂದೆಡೆ ಒಬ್ಬ ಖ್ಯಾತ ಗಾಯಕನನ್ನು ಕಾರ್ಯಕ್ರಮಕ್ಕಾಗಿ ಕರೆದರು. ಅರ್ಧ ಘಂಟೆಯ ಕಾರ್ಯಕ್ರಮ. ಗಾಯಕ ವಾದ್ಯವನ್ನು ಶ್ರುತಿಗೂಡಿಸತೊಡಗಿದ. ಅರ್ಧ ಘಂಟೆ ಮುಗಿದೇ



ಜರ್ಮನ್ ಪ್ರಾಯೋಗಿಕ ಚಿತ್ರದಲ್ಲಿ ಯುವಜನಾಂಗ

ಹೋಯಿತು. "ಈತನಕ ತಮ್ಮ ವಾದ್ಯವನ್ನು ಶ್ರುತಿಗೂಡಿಸಿದವರು......ಇವರು ಇನ್ನು ಮುಂದೆ ವಾರ್ತಾ ಪ್ರಸಾರ", ಎಂದಿತು' ಕಾರ್ಯಕ್ರಮ ನಿರೂಪಕನ ಧ್ವನಿ, ವೇಳೆ ಮುಗಿದೊಡನೆಯೇ !

ರೇಡಿಯೋದಲ್ಲಿ ಮಾತ್ರವಲ್ಲ ಸಂಗೀತ ಕಚೇರಿಗಳಲ್ಲೂ ರಾಗವರ್ಧನೆಗೆ ಈಗ

ಕಂಪ್ಯೂಟರ್ ಕಿಶೋರಿ



ಲೋಕದ ಎಲ್ಲ ಎಳೆಯರ ಪ್ರೀತಿಪಾತ್ರ : ಹಾಸ್ಯನಟ ಡ್ಯಾನಿ ಕೆ

ಒಂದೆರಡು ಘಂಟೆ ಕಾಲ ತೆಗೆದುಕೊಳ್ಳುವಂತಿಲ್ಲ. ಆಧುನಿಕ ಶ್ರೋತೃ, ಹಾಡುಗಾರಿಕೆ ಆರಂಭವಾಗಲು ಹೆಚ್ಚೆಂದರೆ ಹದಿನೈದು ಮಿನಿಟು ಕಾದಿರಬಲ್ಲ.

ರೇಡಿಯೋ ನಾಟಕದಲ್ಲೂ ಪ್ರಸಾರ ತಂತ್ರ ಅಗತ್ಯ. ಅದು ಕಿವಿಗೊಡುವ ನಾಟಕ. ಶ್ರೋತೃವಿನ ಕಿವಿಯನ್ನು ಗಮನದಲ್ಲಿಟ್ಟು ನಾಟಕಕಾರ ಪ್ರಸಾರ ನಾಟಕ ರಚಿಸಬೇಕು.

ಟೆಲಿವಿಷನ್ ದೃಶ್ಯ-ಶ್ರವಣ ಎರಡನ್ನೂ ಒದಗಿಸುವ ಮಾಧ್ಯಮ. ತೊಗಲುಗೊಂಬೆ ನಾಟಕದಂಥ ಕಲಾಪ್ರಕಾರಕ್ಕೂ ಇಲ್ಲಿ ಸ್ಥಾನವಿದೆ ; ಶಾಸ್ತ್ರೀಯ ನೃತ್ಯಕ್ಕೂ ಇದೆ; ಆಧುನಿಕ ನಾಟಕಕ್ಕೂ ಇದೆ.

ಇಲ್ಲಿಯೂ ನಿಮಿಷ ನಿಮಿಷಗಳ ಲೆಕ್ಕ. ಸಂಗೀತಗಾರ, ನಟ, ಬರೆಹಗಾರ ಎಲ್ಲರೂ ನೆನಪಿಟ್ಟುಕೊಳ್ಳಬೇಕಾದ ಅಂಶ ಇದು.

x x x x x x

ಧ್ವನಿಮುದ್ರಿಕೆಗಳು ಶಾಸ್ತ್ರೀಯಸಂಗೀತವನ್ನೂ ಲಲಿತಸಂಗೀತವನ್ನೂ ಜನರ ಹತ್ತಿರಕ್ಕೆ ಒಯ್ದಿವೆ. ಬೇಕೆನಿಸಿದಾಗ ನಮ್ಮ ಮೆಚ್ಚಿನ ರಾಗವನ್ನೋ ಹಾಡನ್ನೋ ಆಲಿಸುವುದು ಎಷ್ಟು ಸಂತೋಷದಾಯಕ !

ಹೊಸ ಹೊಸ ಯಂತ್ರಗಳ ರಚನೆ ಕಲೆಯ ಕ್ಷೇತ್ರಗಳಲ್ಲಿ ನೂತನ ಪ್ರಯೋಗಗಳಿಗೆ ಕಾರಣವಾಗಿದೆ.

ವಿದ್ಯುತ್ ಸಂಪರ್ಕ ಏರ್ಪಡಿಸಿ ಸಂಗೀತ ವಾದ್ಯಗಳನ್ನು ನುಡಿಸುವವರಿದ್ದಾರೆ. ಟೈಪ್‌ರೈಟರನ್ನು ಬಳಸಿ ಚಿತ್ರ ರಚಿಸುವವರನ್ನು ಕಂಡಿದ್ದೇವೆ.



ಟೆಲಿವಿಷನ್‌ನಲ್ಲಿ ತೊಗಲು ಗೊಂಬೆಗಳು

ಕಂಪ್ಯೂಟರ್‌ಗಳೂ ಚಿತ್ರ ಬರೆಯಲು ಶಕ್ತವಾಗಿವೆ.

x x x x x x x x x

ಚಿತ್ರಕಲೆಯ ನೆರವಿಗೆ ಬಂದದ್ದು ಮುದ್ರಣ.

[illegible] ಚಿತ್ರ ಯಾವುದೋ ಅರಮನೆಯನ್ನೋ ಶ್ರೀಮಂತಸೌಧವನ್ನೋ ಚಿತ್ರಶಾಲೆಯನ್ನೋ ಸೇರುತ್ತಿತ್ತು, ಹೆಚ್ಚು ಬೆಲೆಗೆ [illegible]. ಈಗ ಮೂಲ ಚಿತ್ರ ಎಲ್ಲೇ ಇರಲಿ ಅದರ ಮುದ್ರಿತ ಪ್ರತಿಗಳು ಅತಿ ಕಡಮೆ ಬೆಲೆಗೆ ದೊರೆಯುತ್ತವೆ. ಒಂದು ಚಿತ್ರ ಹಲವು ಸಹಸ್ರ ಮನೆಗಳನ್ನು ಅಲಂಕರಿಸುತ್ತದೆ.

ಪೌರ್ವಾತ್ಯ [illegible] ಪರಿಚಯ ಹೊರ ಜಗತ್ತಿಗೆ ಆದದ್ದೇ ಮುದ್ರಣದ ಮೂಲಕ. ಜಪಾನಿಗೆ ಒಳ್ಳೆಯ ಮುದ್ರಣ ಯಂತ್ರಗಳು ಬಂದೊಡನೆ ಚಿತ್ರಕೃತಿಗಳನ್ನು ಅಚ್ಚುಮಾಡಿದರು. ಇಂಥ ಪ್ರತಿಗಳು 19ನೆಯ ಶತಮಾನದ ಉತ್ತರಾರ್ಧದಲ್ಲಿ ಯೂರೋಪನ್ನು ತಲಪಿದುವು. ಕಲೆಯ 'ಹೊಸ ಜಗತ್ತ'ನ್ನು ಯೂರೋಪಿನ ಜನ ಕಂಡರು.

x x x x x x x x x

ಸಾಹಿತ್ಯದ ಮಟ್ಟಿಗಂತೂ ಮುದ್ರಣದ ಮಹತ್ವ ಅಷ್ಟಿಷ್ಟಲ್ಲ. ತೊಗಲು ತಾಳೆಗರಿ ರೇಷ್ಮೆಬಟ್ಟೆಗಳ ಮೇಲೆ, ಒರಟು ಕಾಗದದ ಮೇಲೆ, ಬರೆಯುತ್ತಿದ್ದ ಕಾಲ ಗತ ಯುಗದ್ದು.

ಯೂರೋಪಿನಲ್ಲಿ ಸುಧಾರಿತ ಮುದ್ರಣ ಯಂತ್ರಗಳು ಸಿದ್ಧವಾದೊಡನೆ, ಮುದ್ರಿಸಲು ಗಾತ್ರದ ಹಸ್ತಪ್ರತಿಗಳು ಬೇಕಾದುವು. ಕೆಲ ಲೇಖಕರು ದೀರ್ಘ ಕಾದಂಬರಿಗಳನ್ನು ಬರೆದರು.

ಯಾವುದೇ ಸಾಹಿತ್ಯಕೃತಿಯ ಎಷ್ಟು ಸಹಸ್ರ ಪ್ರತಿಗಳನ್ನು ಬೇಕಾದರೂ ಈಗ ಮುದ್ರಿಸಬಹುದು. ಮುದ್ರಣದ ಒಪ್ಪ ಓರಣವೂ ಹೆಚ್ಚಿದೆ. ಬಟ್ಟೆ, ತಗಡು ಮತ್ತಿತರ ಫಲಕಗಳ ಮೇಲೂ ಮುದ್ರಣ ಸಾಧ್ಯ.

ವರ್ಣಮುದ್ರಣ–ಪಡಿಯಚ್ಚು ತಯಾರಿಕೆಗಳ ಅಂಶವನ್ನೂ ಆಧುನಿಕ ಚಿತ್ರಕಾರ ಅರಿತಿರುವುದು ಅಗತ್ಯ.

...ಹೀಗೆ ಕಲೆ, ಸಾಹಿತ್ಯಗಳ ಎಲ್ಲ ಕ್ಷೇತ್ರಗಳೂ ವೈಜ್ಞಾನಿಕ ಪ್ರಗತಿಯಿಂದ ಪ್ರಭಾವಿತವಾಗಿರುವುದನ್ನು ಕಾಣುತ್ತೇವೆ.



**ಸಮಾಜದಲ್ಲಿ ಕಲಾವಿದನ, ಸಾಹಿತಿಯ ಸ್ಥಾನಮಾನಗಳೇನು ?**

ಪ್ರಾಚೀನ ಗ್ರೀಸಿನ ಪ್ರಜಾಪ್ರಭುತ್ವದಲ್ಲಿ ಲಾರಿಯಟ್ ಎಲೆಗಳ ಕಿರೀಟವಿಟ್ಟು ಕವಿಯನ್ನು ಸನ್ಮಾನಿಸುತ್ತಿದ್ದರು. ಲಾರಿಯಟ್ ಎಲೆಗಳಿಂದ ಅಲಂಕೃತನಾದ ಕವಿಯೇ ಪೊಯೆಟ್–ಲಾರಿಯಟ್.

ಮುಂದೆ ಅರಸೊತ್ತಿಗೆಗಳ ವೈಭವದ ಕಾಲದಲ್ಲಿ, ಪೂರ್ವ–ಪಶ್ಚಿಮ ದೇಶಗಳಲ್ಲೆಲ್ಲ, ಕಲಾವಿದನಿಗಾಗಲೀ ಸಾಹಿತಿಗಾಗಲೀ ರಾಜಸನ್ಮಾನ ಅಂತಿಮ ಗುರಿಯಾಯಿತು.

ಆಧುನಿಕ ರಾಷ್ಟ್ರಗಳಲ್ಲಿ ಅಕಾಡೆಮಿಗಳ ಮನ್ನಣೆಗೆ ಪಾತ್ರವಾಗುವುದಕ್ಕೂ ಅಷ್ಟೇ ಮಹತ್ವ. (2600 ವರ್ಷಗಳ ಹಿಂದೆ ಅಥೆನ್ಸಿನ ಹೊರ ವಲಯದ ಆಲಿವ್ ಮರಗಳ ತೋಪಿನಲ್ಲಿ ಅಕಾಡೆಮಿ ಹುಟ್ಟಿತು. ಆ ತೋಪು ಗ್ರೀಕ್ ವೀರ ಅಕಡಮಸನ ನೆನಪಿಗಾಗಿ ನಿರ್ಮಿತವಾಗಿದ್ದ ಸ್ಮಾರಕ ಕ್ಷೇತ್ರ. ಅಲ್ಲೊಂದು ಕ್ರೀಡಾಭವನವಿತ್ತು. ತತ್ತ್ವಜ್ಞಾನಿ ಪ್ಲೇಟೊ ಅದನ್ನೊಂದು ವಿದ್ಯಾಸಂಸ್ಥೆಯಾಗಿ ಮಾರ್ಪಡಿಸಿದ. ಅದನ್ನು ಅಕಾಡೆಮಿ ಎಂದು ಕರೆದ. ಈ ದಿನ ಹಲವು ರಾಷ್ಟ್ರಗಳಲ್ಲಿ, ತುಸು ಬದಲಾದ ಅರ್ಥದಲ್ಲಿ, ಅಕಾಡೆಮಿಗಳು ಕಲೆ ಸಾಹಿತ್ಯ ವಿಜ್ಞಾನಕ್ಷೇತ್ರಗಳಲ್ಲಿ ಉನ್ನತ ಸಮಿತಿಗಳಾಗಿ ಕೆಲಸ ಮಾಡುತ್ತಿವೆ.)

ಪಶ್ಚಿಮದಲ್ಲಿ ನೆಲೆಸಿದ ಆರ್ಯಮೂಲದ ಗ್ರೀಕರಲ್ಲೂ ಭಾರತದಲ್ಲಿ ನೆಲೆಯೂರಿದ ಆರ್ಯರಲ್ಲೂ ಗಾಯಕ ಅಪೇಕ್ಷಣೀಯ ವ್ಯಕ್ತಿಯಾಗಿದ್ದ. ಕುಲದ ಕಥೆಗಳನ್ನು, ಬಹಳ ಪ್ರಾಚೀನವಾದುವನ್ನು, ಗೀತೆಗಳ ರೂಪದಲ್ಲಿ ಹಾಡುತ್ತಿದ್ದವನು ಆತ. ಘಟನೆಗಳ ದಾಖಲುದಾರ ಅವನು.

ಆದರೆ ಈ ಗಾಯಕರು ಭೋಜನಕೂಟಗಳಲ್ಲಿ ಹಾಡಿದವರು ; (ಹೊಟ್ಟೆತುಂಬಿದಾಗಲೇ ಹಾಡು ಕೇಳಲು ಶ್ರೇಷ್ಠ ಕಾಲ !) ಹಾಡುತ್ತ ಊರೂರು ಅಲೆದವರು. ಪ್ರಾಚೀನ ಭಾರತದ ಚಾರಣ ಕವಿಗಳೂ ಅಷ್ಟೆ. ಇವರು ಹೊಟ್ಟೆ ಹೊರೆಯುತ್ತಿದ್ದುದು ಸಮಾಜದ ಇತರ ಸದಸ್ಯರ 'ನೀಡಿಕೆ'ಗಳಿಂದ.

ಇಂಥ ಕಲಾವಿದರು ಎಲ್ಲರಿಗೂ ಇಷ್ಟವೇ. ಆದರೂ ತಮ್ಮ ಮಕ್ಕಳು ಸಂಗೀತಗಾರರಾಗುವುದು ಗ್ರೀಕರಿಗೆ ಬೇಕಿರಲಿಲ್ಲ. ಮಕ್ಕಳಿಗೆ ಸ್ವಲ್ಪ ಮಟ್ಟಿನ ಸಂಗೀತ ಸಾಕು ; ಅದು ಆ ಕಲೆಯನ್ನು ತಿಳಿದುಕೊಳ್ಳುವುದಕ್ಕೋಸ್ಕರ ; ಸಂಗೀತಗಾರರಾಗುವುದಕ್ಕಲ್ಲ —ಎಂದ ಅರಿಸ್ಟಾಟಲ್. ಆಗ ಪ್ರಾಧಾನ್ಯವಿದ್ದುದು ಯೋಧ ಜೀವನಕ್ಕೆ, ರಾಜಕಾರಣಕ್ಕೆ, ವಾಣಿಜ್ಯಕ್ಕೆ.

ಮುಂದೆಯೂ ಅಷ್ಟೆ. ಈಗಲೂ ಅಷ್ಟೆ. ಚಿತ್ರಕಾರನಾಗಲು ಅಥವಾ ಸಂಗೀತಗಾರನಾಗಲು ಮಗ ಬಯಸುತ್ತಾನೆ ಎಂದರೆ ಹೆತ್ತವರಿಗೆ ಆತಂಕ.

ಭಾರತದಲ್ಲಿ ನೃತ್ಯಕ್ಕೆ ದೊರೆಯುವ ಗೌರವ, ನರ್ತಕ ನರ್ತಕಿಯರಿಗೆ ಸಲ್ಲುವುದಿಲ್ಲ. ಹಿಂದೆ ದೇವದಾಸಿಯ ನೃತ್ಯ ನೋಡಲು ಸಮಾರಂಭಗಳಲ್ಲಿ ಎಲ್ಲರೂ ನೆರೆಯುವವರೇ. ನೃತ್ಯದ ಬಳಿಕ ಮಾತ್ರ, ದೇವದಾಸಿ ಎಂದರೆ ಅಸ್ಪೃಶ್ಯೆ. ಸಂಗೀತಗಾರರ ವಿಷಯದಲ್ಲೂ ಹೀಗೆಯೇ.

ಭಾರತೀಯ ಸಮಾಜ ಬೇರೆ ಬೇರೆ ಡಬ್ಬಿಗಳನ್ನು ಜೋಡಿಸಿ ಮಾಡಿದ ರೈಲು ಗಾಡಿ. ಕಲಾವಿದ-ಸಾಹಿತಿಗಳಿಗೊಂದು ಪ್ರತ್ಯೇಕ ಡಬ್ಬಿ.

ಆದರೆ ಆ ಡಬ್ಬಿಯೊಳಗೂ ತಾರತಮ್ಯ.

ಸ್ವಲ್ಪ ಕಾಲದ ಹಿಂದಿನವರೆಗೂ ನಮ್ಮ ದೇಶದಲ್ಲಿ, ಪುರುಷ ವೀಣಾವಾದಕರೂ ಮೃದಂಗವಾದಕರೂ ಸ್ತ್ರೀಯ ಹಾಡುಗಾರಿಕೆಯಲ್ಲಿ ಪಕ್ಕ ವಾದ್ಯ ನುಡಿಸುತ್ತಿರಲಿಲ್ಲ.

ಜಾತಿ ಬೇನೆಯಂತೂ ಸರ್ವವ್ಯಾಪಿಯಾಗಿತ್ತು. ತಮಿಳುನಾಡಿನಲ್ಲಿ ನಾಟಕ ಹವ್ಯಾಸಕ್ಕೆ ಸಂಬಂಧಿಸಿದ ಕಥೆ ಹೀಗಿದೆ :

ಒಂದು ನಾಟಕದಲ್ಲಿ ಊರಿನ ಅಗಸ ಅರಸನ ಪಾತ್ರ ವಹಿಸಿದ್ದ (ರಾಜ ಪಾರ್ಟು).

ವಿದೂಷಕನತ್ತ ನೋಡಿ ಆತನೆಂದ :

"ಏಯ್! ನಮ್ಮ ಪೋಷಾಕನ್ನು ಸಿದ್ಧಪಡಿಸು."

ವಿದೂಷಕ (ಬೇರೆ ಜಾತಿಯವನೇ ಇರಬೇಕು) ನೇಪಥ್ಯಕ್ಕೆ ತೆರಳಿ, ಮರಳಿ ಬಂದು, ಸುಮ್ಮನೆ ನಿಂತ.

ಅರಸನಿಗೆ ಸಿಟ್ಟು ಬಂತು.

"ನಮ್ಮ ಬೇಟೆ ಪೋಷಾಕು ಸಿದ್ಧವಾಗಿದೆಯೇ ?"

ವಿದೂಷಕನೆಂದ :

"ಇಲ್ಲ, ಮಹಾರಾಜ. ನಾನು ಅಗಸನ ಮನೆಗೆ ಹೋದೆ. ಆದರೆ ಅವನು ಯಾವುದೊ ನಾಟಕದಲ್ಲಿ ಅಭಿನಯಿಸಲು ಹೋಗಿರುವನಂತೆ. ಈಗಿನ ಕಾಲದಲ್ಲಿ ತನ್ನ ಕುಲಕಸುಬಿನಲ್ಲಿ ಯಾರಿಗೂ ಆಸಕ್ತಿ ಇಲ್ಲ. . . . ."

ಅರಸ ಪಾತ್ರಧಾರಿಯಾಗಿದ್ದ ಅಗಸ ಹೀಗೆ ನಗೆಗೀಡಾದ. ಮಾರನೆಯ ದಿನದಿಂದ ಆತ ಊರಲ್ಲಿ ತಲೆ ಎತ್ತುವುದೇ ಕಷ್ಟವಾಯಿತು. ಊರುಬಿಟ್ಟು ಓಡಿ ಹೋದ.

ಇದು ಸಾಮಾಜಿಕ ಕ್ರೌರ್ಯದ ಫಲವಾಗಿ ಕಲೆ ಗಾಯಗೊಳ್ಳುವ ರೀತಿ.

ಇಂಗ್ಲೆಂಡಿನಲ್ಲೂ ಶೇಕ್ಸ್‌ಪಿಯರನ ಅನಂತರ ರಂಗಭೂಮಿಯ ಬಗೆಗೆ ಆಂಗ್ಲರು ಹೆಚ್ಚಿನ ಆದರ ತೋರಲಿಲ್ಲ . ಪ್ರಾಬಲ್ಯಕ್ಕೆ ಬರುತ್ತಿದ್ದ ವರ್ತಕ ಸಮಾಜಕ್ಕೆ ರಂಗಭೂಮಿಯ ಉಪಯೋಗ ಅಷ್ಟಾಗಿ ಕಾಣಲಿಲ್ಲ. ಗೋಲ್ಡ್‌ಸ್ಮಿತ್, ಶೆರಿಡನ್ ನಾಟಕಕಾರರಾದರು ; ತಮ್ಮದು 'ಗೌರವವಿಲ್ಲದ ವೃತ್ತಿ' ಎಂದು ಅರಿತೇ ನಾಟಕ ಚಟುವಟಿಕೆಯಲ್ಲಿ ನಿರತರಾದರು.

ಈ ಶತಮಾನದ ಮೊದಲ ದಶಕಗಳಲ್ಲಿ "ಫ್ರಾನ್ಸಿನಲ್ಲಿ ಎರಡು ಅದ್ಭುತಗಳಿವೆ —ಐಫೆಲ್ ಗೋಪುರ ಮತ್ತು ಮಾರಿಸ್ ಷೆವಾಲಿಯರ್," ಎನ್ನುತ್ತಿದ್ದರು. ಷೆವಾಲಿಯರ್, ನಟ. ಆತನನ್ನು ಒಂದು 'ಅದ್ಭುತ' ಎಂದು ಒಪ್ಪಿಕೊಂಡ ಸಮಾಜದಲ್ಲಿ ಆತ ಅತ್ಯಂತ ಗೌರವಾನ್ವಿತ ವ್ಯಕ್ತಿಯಾಗಿದ್ದ ಎಂದು ಮಾತ್ರ ಇದರ ಅರ್ಥವಲ್ಲ.

ಸಮಾಜದಲ್ಲಿರುವ ಮಾನದಂಡಗಳು ವಿಚಿತ್ರ. ಜನಪ್ರಿಯತೆ ಬೇರೆ, ಗೌರವ ಬೇರೆ.

19ನೆಯ ಶತಮಾನದಲ್ಲಿ ಅಟ್ಲಾಂಟಿಕ್ ಸಾಗರದಾಚೆಗಿನ ಅಮೆರಿಕದಲ್ಲಿ ಒಂದು ಮದ್ಯದಂಗಡಿ. ಕತ್ತಲಾಗಿದೆ. ಒಬ್ಬ ಕುಡಿದು ಪ್ರಜ್ಞೆತಪ್ಪಿ ಬೀಳುತ್ತಾನೆ. ಹಾಗೆಯೇ ಅವನ ಅವಸಾನವಾಗುತ್ತದೆ. ಆತ ಎಡ್ಗರ್ ಅಲೆನ್ ಪೋ. ಕತೆಗಾರ.

ಮರಣಾನಂತರ ಅವನು ಪ್ರಖ್ಯಾತನಾಗುತ್ತಾನೆ.

ಶ್ರೇಷ್ಠ ಕಲೆಯನ್ನು ನಿರ್ಮಿಸುವ ಕಲಾವಿದ, ಶ್ರೇಷ್ಠ ಸಾಹಿತ್ಯವನ್ನು ಸೃಷ್ಟಿಸುವ ಬರೆಹಗಾರ, ಸಾಮಾನ್ಯವಾಗಿ ಎಷ್ಟೊಂದು ಕಷ್ಟ ಪಡುತ್ತಾರೆ! ಅವರನ್ನು ನೋಡುವ ಸಮಾಜದ ದೃಷ್ಟಿ ಸಾಧಾರಣವಾಗಿ ಎಷ್ಟೊಂದು ಕಲುಷಿತ!

× × × × × × × × ×

ಯೂರೋಪಿನ 'ಮಧ್ಯಯುಗ'ದಲ್ಲಿ ಕಲೆಗೆ ಪೋಷಣೆ ದೊರೆತದ್ದು ಕ್ರೈಸ್ತ ಧರ್ಮಪೀಠಗಳಿಂದ. ಮೈಕೆಲೆಂಜಲೋ ಮತ್ತಿತರ ಶ್ರೇಷ್ಠ ಚಿತ್ರಕಾರರು–ಶಿಲ್ಪಿಗಳೆಲ್ಲ ಪೋಪನ ಆಣತಿಯಂತೆ ದುಡಿದವರು.

ಮಧ್ಯಯುಗದ ಫ್ಲಾರೆನ್ಸಿನಲ್ಲಿ ವೈದ್ಯರು, ಸಂಬಾರ ಜಿನಸಿ ವ್ಯಾಪಾರಿಗಳು, ತಜ್ಞರು –ಇವರ ತಂಡದಲ್ಲಿ ಕಲಾವಿದರು ಅತಿ ಕೆಳಗಿನ ಸದಸ್ಯರು. ಶಿಲ್ಪಿಗಳದು ಇನ್ನೂ ಕೆಳಗಿನ ಸ್ಥಾನ –ಗಾರೆಯವರ ಮತ್ತು ಇಟ್ಟಿಗೆ ಜೋಡಿಸುವವರ ತಂಡದಲ್ಲಿ!

14–15ನೆಯ ಶತಮಾನಗಳಲ್ಲಿ ಖ್ಯಾತ ಚಿತ್ರಕಾರರು ಅಲಂಕರಣದ ಅಥವಾ ನಕಾಶೆ ಬಿಡಿಸುವ ಯಾವ ಕೆಲಸವನ್ನು ಬೇಕಾದರೂ ಮಾಡಿ ಕೊಡುತ್ತಿದ್ದರು.

ನವೋದಯ ಕಾಲದ ಅನೇಕ ಕಲಾವಿದರು ಯುದ್ಧದ ಮಾರಕಯಂತ್ರಗಳನ್ನು ರಚಿಸಿಕೊಟ್ಟುದುಂಟು. 1483ರಲ್ಲಿ ಲಿಯೊನಾರ್ಡೊ ದ ವಿಂಚಿ ಮಿಲಾನಿನ ಡ್ಯೂಕನಲ್ಲಿ ಚಾಕರಿಗೆ ನಿಂತದ್ದು, ತಾನೊಬ್ಬ ಮಿಲಿಟರಿ ಎಂಜಿನಿಯರ್ ಎಂದು ಹೇಳಿಕೊಂಡೇ. ಮೈಕೆಲೆಂಜಲೋ ಕೂಡಾ, ಫಿರಂಗಿಗಳನ್ನು ಆಯಕಟ್ಟಿನ ಸ್ಥಳದಲ್ಲಿಟ್ಟು ಗುಡ್ಡಗಳನ್ನೂ ದುರ್ಗಗಳನ್ನೂ ಭದ್ರಪಡಿಸಲು ದುಡಿದ.

16ನೆಯ ಶತಮಾನದ ಆರಂಭದಲ್ಲಿ ಯೂರೋಪಿನ ಕಲಾವಿದರ ಸ್ಥಾನಮಾನಗಳಲ್ಲಿ ತುಸು ಬದಲಾವಣೆಯಾಯಿತು. ಕೆಲ ಚಿತ್ರಕಾರರೂ ಶಿಲ್ಪಿಗಳೂ ಪೋಪರ ಮತ್ತು ಅರಸರ ಅನುಗ್ರಹಕ್ಕೆ ಪಾತ್ರರಾದರು. ಆದರೂ ಎಷ್ಟೋ ವೇಳೆ ಮಾಡಿದ ಕೆಲಸಕ್ಕೆ ಪ್ರತಿಫಲ ದೊರಕಿಸಿ

ಕೊಟ್ಟರೆ [illegible] ಮೆಚ್ಚಿ, ಬಗೆಕಟ್ಟಿ ಸಿದ್ಧ ರಾಗವೇ ಕಾಣುತ್ತಿತ್ತು. ಆದರೆ ಅದು ಒಡೆಯನ ಕೋಪ. ದವಡೆಗೆ ಮೂಲ. ಅಂತೂ ಇಂತೂ ಅಲ್ಪಸ್ವಲ್ಪ ಹಣ ಧರ್ಮಪೀಠದ ಅಥವಾ ಅರಸನ ಬೊಕ್ಕಸದಿಂದ ಹೊರಬಿದ್ದು ಕಲಾವಿದನ ಕೈ ಸೇರುತ್ತಿತ್ತು.

ಈ ಪ್ರವೃತ್ತಿ ಯುರೋಪಿನ ಎಲ್ಲ ರಾಷ್ಟ್ರಗಳಲ್ಲೂ ಏಕಪ್ರಕಾರವಾಗಿರಲಿಲ್ಲ. ವೆನಿಸನ್ನು ಭೇಟಿ ಮಾಡಲೆಂದು ಇಟಲಿಗೆ ಬಂದ ಜರ್ಮನಿಯ ಕಲಾವಿದ ಡ್ಯೂರೆರ್, "ಇಲ್ಲಿ ಚಿತ್ರಕಾರನನ್ನು ಸಭ್ಯ ಗೃಹಸ್ಥನಂತೆ ಕಾಣುತ್ತಾರೆ", ಎಂದ. ಜರ್ಮನಿಯಲ್ಲಿ ಅವ ಬರಿ ಕೂಲಿ ಕೆಲಸಗಾರ, ಅಷ್ಟೆ." ಎಂದು ವ್ಯಥೆಪಟ್ಟ.

ನವೋದಯದ ಹೊಸ ಧ್ವನಿಯ ಪ್ರತೀಕ ಲಿಯೊನ್ ಬಾಟ್ಟಿಸ್ಟ ಆಲ್ಬೆರ್ಟಿ. 15ನೆಯ ಶತಮಾನದವನು. ಆತ ಶ್ರೀಮಂತ ಪುತ್ರ. ಆತನ ಕಲೆಗಾಗಿ ತನ್ನ ಬದುಕನ್ನು ಮೀಸಲಿಟ್ಟ. ಸಾಮಾನ್ಯ ಶ್ರಮಜೀವಿಗಳಿಂದ ವಿಷಯಗಳನ್ನು ಕಲಿಯಲು ಅವನು ಹಿಂಜರಿಯಲಿಲ್ಲ. ಕಮ್ಮಾರರು, ಚಕ್ಕಳಗಾರರು, ಮಡಕೆಯವರು, ಬಡಗಿ ದುರಸ್ತಿಯವರು, ಗೋಡೆಗಳು ಎಲ್ಲರನ್ನೂ ಅವರವರ ದುಡಿಮೆಯ ಬಗೆಗೆ ಕೇಳಿ ತಿಳಿದು ಅವರ ಕಲಾವಂತಿಕೆಯನ್ನು ಕಲಿಯುತ್ತಿದ್ದ.

17-18ನೆಯ ಶತಮಾನಗಳಲ್ಲಿ ಯುರೋಪಿನ ಚಿತ್ರಕಾರರಲ್ಲಿ ಹೆಚ್ಚಿನವರು ಜೀವಿಸಿದ್ದು ರೂಪಚಿತ್ರಗಳನ್ನು ಬರೆದು. ವ್ಯಾಪಾರ ವಾಣಿಜ್ಯಗಳು ಪ್ರಗತಿಹೊಂದಿದ್ದರಿಂದ, ಚಿತ್ರಕಾರರಿಗೆ ದುಡ್ಡುಕೊಟ್ಟು ರೂಪಚಿತ್ರಗಳನ್ನು ಬರೆಸುವ ಹವ್ಯಾಸ ಬೆಳೆಯಿತು. (ಕ್ಯಾಮರಾ ಬಂದ ಮೇಲೆ ಈ ಚಿತ್ರಕಾರರು ಅನಾಥರಾದರು.)

ಔದ್ಯೋಗಿಕ ಕ್ರಾಂತಿಯ ಫಲವಾಗಿ ಮಧ್ಯಮವರ್ಗಗಳ ಕೈಗೆ ಅಧಿಕಾರ ಬಂತು. ಆಭರಣಗಳನ್ನು ಮಾಡಿಸುವುದು, ಚಿತ್ರಗಳನ್ನು ಕೊಳ್ಳುವುದು, ಸಂಗೀತ ಕಚೇರಿಗಳಿಗೆ ಹೋಗುವುದು, ನೃತ್ಯ-ನಾಟಕಗಳನ್ನು ನೋಡುವುದು —ಈ ಪ್ರವೃತ್ತಿ ವ್ಯಾಪಕವಾಯಿತು. ಕಲಾವಿದರ ಬಗೆಗೆ ಗೌರವ ಇತ್ತೋ ಇಲ್ಲವೋ. ಕಲೆ ಬೆಲೆ ಬರುವ 'ಸರಕು' ಎಂಬುದನ್ನು ಮಾತ್ರ ಸಮಾಜ ಒಪ್ಪಿಕೊಂಡಿತು!

ಚಿತ್ರಕಾರರು ಮತ್ತಿತರ ಕಲಾವಿದರು ತಮ್ಮ ಉಳಿವಿಗಾಗಿ ವ್ಯವಹಾರ ಮನೋವೃತ್ತಿಯನ್ನು ಬೆಳೆಸಿಕೊಳ್ಳುವುದು ಅನಿವಾರ್ಯ ವಾಯಿತು.

ಇದರಿಂದಲೇ ಹುಟ್ಟಿರಬೇಕು ಈ ಮಾತು :

"ತಮ್ಮನ್ನು ಚಿತ್ರಕಾರರೆಂದು ಕರೆದುಕೊಳ್ಳುವವರಲ್ಲಿ ಹೆಚ್ಚಿನವರು ಚಿತ್ರ ಮಾರಾಟಗಾರರು ಮಾತ್ರ. ಇಷ್ಟೆ—ತಾವು ಮಾರುವ ಚಿತ್ರಗಳನ್ನು ಅವರೇ ತಯಾರಿಸುತ್ತಾರೆ."

× × × × × ×

ಭಾರತದಲ್ಲಿ ಆತ್ಮೋನ್ನತಿಯೇ ಕಲಾವಿದನ (ನರ್ತಕ, ಸಂಗೀತಗಾರ, ಚಿತ್ರಕಾರ, ಶಿಲ್ಪಿ ಇವರೆಲ್ಲರ) ಗುರಿ ಎಂದು ಎಷ್ಟು ಹೇಳಿದರೂ, ಕಲೆಗೆ ಹಸಿವಿನ ಮುಖವೂ ಒಂದಿದೆ ಎಂಬುದನ್ನು ಮರೆಯುವುದುಂಟೆ ? ಅಜಂತದ ಭಿತ್ತಿಚಿತ್ರಗಳಿರಲಿ, ಗುಹಾಂತರ್ದೇವಾಲಯಗಳಿರಲಿ, ಗೊಮ್ಮಟನಿರಲಿ, ಕಲಾತ್ಮಕ ವಿಗ್ರಹ–ಪ್ರತಿಮೆಗಳಿರಲಿ, ಅದ್ಭುತ ವಾಸ್ತುಶಿಲ್ಪಗಳಿರಲಿ ಕಲೆಯ ಹಲವು ಸಹಸ್ರ ಕೈಗಳಿಲ್ಲದೆ ಅದೊಂದೂ ಸಾಧ್ಯವಾಗಿಲ್ಲ. ನಮ್ಮ ಚಿತ್ರಕಾರರು, ಶಿಲ್ಪಿಗಳಿಗೆ ವೈಯಕ್ತಿಕ ಪ್ರಾಮುಖ್ಯ ದೊರೆಯಲಿಲ್ಲ ಎಂಬುದು ಸ್ಪಷ್ಟ. ಯಾವುದನ್ನು ಯಾರು ನಿರ್ಮಿಸಿದರೆನ್ನುವುದಕ್ಕೆ ಎಲ್ಲ ಕಡೆಗಳಲ್ಲಿ ಖಚಿತ ದಾಖಲೆಗಳಿಲ್ಲ. ಮೈಕೆಲೆಂಜಲೋನ ಹೆಸರೆತ್ತದೆ. "ಸಿಸ್ಟನ್ ಆರಾಧನಾ ಮಂದಿರವನ್ನು ಪೋಪ್ ನಿರ್ಮಿಸಿದ" ಎಂದರೆ, ನಗು ಬರುತ್ತದೆ. ಆದರೆ ನಮ್ಮ ದೇಶದಲ್ಲಿ ಯಾವುದೇ ಮಹಾಶಿಲ್ಪಿಯ ಕುಶಲಕರ್ಮಿಗಳ ಪ್ರಸ್ತಾಪಮಾಡದೆ, "ಇಂಥ ಸುಂದರ ದೇವಾಲಯವನ್ನು ಇಂಥ ಅರಸು ಕಟ್ಟಿಸಿದ" ಎಂದರೆ ನಾವು ನಗುವುದಿಲ್ಲ.

ನಮ್ಮ ಜಾನಪದ ರಂಗಭೂಮಿ ಮತ್ತಿತರ ಕಲೆಗಳ, ವೃತ್ತಿ ನಾಟಕ ಮಂಡಲಿ ಹವ್ಯಾಸಿ ನಾಟಕ ಮಂಡಲಿಗಳ ದುರವಸ್ಥೆ ಕಂಡಾಗ, ಕಲೆಯ ಲೋಕದಲ್ಲೂ ಹೊಟ್ಟೆಯ ಪ್ರಶ್ನೆ ಎಷ್ಟು ಮಹತ್ವದ್ದು ಎಂಬುದು ಅರಿವಾಗುತ್ತದೆ.

× × × × × ×

ಕಲಾವಸ್ತುಗಳನ್ನು ಕ್ರಮಬದ್ಧವಾಗಿ ಓರಣವಾಗಿ ಜೋಡಿಸಿ ಹೆಚ್ಚು ಜನರಿಗೆ ಅವನ್ನು ನೋಡಲು ಅವಕಾಶ ಮಾಡಿಕೊಡುವುದು ಹಲವು ದೇಶಗಳಲ್ಲಿ ರೂಢಿಯಲ್ಲಿರುವ ಪದ್ಧತಿ. ಇವು ಚಿತ್ರಶಾಲೆಗಳು, ವಸ್ತು ಸಂಗ್ರಹಾಲಯಗಳು.

ಹಾಗೆಯೇ ಸಾಹಿತ್ಯ ಕೃತಿಗಳೆಲ್ಲ, ಜ್ಞಾನಭಂಡಾರವೆಲ್ಲ ಒಂದೆಡೆ ದೊರೆಯುವಂತೆ ಮಾಡುವ ವ್ಯವಸ್ಥೆ –ಗ್ರಂಥಭಂಡಾರ.

ನಾಗರಿಕ ಸಮಾಜಜೀವನದಲ್ಲಿ ಇವುಗಳಿಗೆ ಪ್ರಾಧಾನ್ಯವಿದೆ.

ಸೋವಿಯೆತ್ ಒಕ್ಕೂಟದ ಲೆನಿನ್‌ಗ್ರಾಡಿನಲ್ಲೊಂದು 'ಕುಟೀರ' –2500 ಕೊಠಡಿಗಳ 'ಕುಟೀರ'. ಪ್ರತಿ ವರ್ಷ 10 ಲಕ್ಷ ಜನ ಈ ಕುಟೀರವನ್ನು ಸಂದರ್ಶಿಸುತ್ತಾರೆ. 18ನೆಯ ಶತಮಾನ



ಮುಸುಕಿನೊಳಗಿನ ಮಾಯಾಂಗನೆ:
ಸಾಲಾರ್‌ಜಂಗ್ ವಸ್ತು ಸಂಗ್ರಹಾಲಯದಲ್ಲಿ

ವಲ್ಲಿ ರಾಣಿ ಕ್ಯಾಥರಿನಳ ಕಾಲದಲ್ಲೇ ಇದು ಆರಂಭವಾಯಿತು. ಇಲ್ಲಿ 25ಲಕ್ಷ ಕಲಾವಸ್ತುಗಳಿವೆ. ಟಿಶಿಯನ್, ರಾಫೆಲ್, ರೂಬೆನ್ಸ್, ವಾನ್ ಗೋ, ರೆಂಬ್ರಾಂಟ್, ಪಿಕಾಸೊ —ಹೀಗೆ ಎಲ್ಲ ಶತಮಾನಗಳ ಶ್ರೇಷ್ಠ ಕಲಾವಿದರ ಕೃತಿಗಳು ಇಲ್ಲಿವೆ. ಈ ... ಕೊಠಡಿಗಳಲ್ಲೂ ಅಲೆದರೆ ಆಗುವ ದೂರ 15 ಮೈಲು. ಸೋಮವಾರ ಆರಂಭಿಸಿ ದಿನವೂ ಸುಮಾರು ಆರು ಘಂಟೆ ಕಾಲ ... ಯಲ್ಲಿ ಒಂದೇ ನಿಮಿಷದಂತೆ ಕಳೆದರೆ, ಮುಂದಿನ ಭಾನುವಾರ ಅಪರಾಹ್ನದ ಹೊತ್ತಿಗೆ ಕುಟೀರ ಸಂದರ್ಶನ ಮುಗಿದಿರುತ್ತದೆ.

(ಭಾರತದ ಪ್ರಧಾನಿಯಾಗಿದ್ದ ಲಾಲ್‌ಬಹದೂರ್ ಶಾಸ್ತ್ರಿ ಒಮ್ಮೆ ಈ ಕುಟೀರಕ್ಕೆ ಭೇಟಿ ನೀಡಿದರು. ಬಹಳ ಮೆಚ್ಚಿಕೊಂಡರು. ತಮ್ಮ ಜೊತೆಯಲ್ಲಿ ಇದ್ದವರಿಗೆ ಅಂದರು : "ಹಮೇ ಭಿ ಐಸಾಹಿ ಕುಛ್ ಬನಾನಾ ಪಡೇಗಾ.")

ಭಾರತದ ಖ್ಯಾತ ವಸ್ತು ಸಂಗ್ರಹಾಲಯ . ಸಾಲಾರ್ ಜಂಗ್ ಮ್ಯೂಸಿಯಂ. ಇದು ಇರುವುದು ಹೈದರಾಬಾದಿನಲ್ಲಿ. 43,000 ಕಲಾವಸ್ತುಗಳಿವೆ; 9,000 ಅಮೂಲ್ಯ ಹಸ್ತಪ್ರತಿಗಳಿವೆ; 30,000 ಮುದ್ರಿತ ಪುಸ್ತಕಗಳಿವೆ. ಇವೆಲ್ಲ ಹೈದರಾಬಾದಿನ ಹಿಂದಿನ ನಿಜಾಮ ಮನೆತನದ ಮೂರನೆಯ ಸಾಲಾರ್ ಜಂಗ್ ಮೀರ್ ಯೂಸುಫ್ ಅಲಿಖಾನರ ಸಂಗ್ರಹ. ಈಗ ರಾಷ್ಟ್ರೀಯ ಮ್ಯೂಸಿಯಂ ಎನಿಸಿದೆ.



ಸ್ತೂಪ ಆರಾಧನೆ : ನಾಗಾರ್ಜುನಕೊಂಡ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ

ಅಕಾಡೆಮಿಯಂತೆ ಮ್ಯೂಸಿಯಂ. ಹಿಂದೆ ಈ ಗ್ರೀಕ್ ಪದದ ಅರ್ಥವ್ಯಾಪ್ತಿ ಬೇರೆ. ಕಲೆ, ಸಾಹಿತ್ಯಗಳನ್ನು ಕುರಿತ ಜಿಜ್ಞಾಸೆ ಮತ್ತು ಅಭ್ಯಾಸ ನಡೆಯುವ ಸ್ಥಳ ಮ್ಯೂಸಿಯಂ. ಅಲೆಗ್ಸಾಂಡರ್ ಸ್ಥಾಪಿಸಿದ ಅಂಥದೊಂದು ಮ್ಯೂಸಿಯಂ ಅಲೆಗ್ಸಾಂಡ್ರಿಯದಲ್ಲಿದೆ.

'ಮೋನಾ ಲೀಸಾ' ವಿಂಚಿಯ ಉತ್ಕೃಷ್ಟ ಕೃತಿ. ವಾಷಿಂಗ್ಟನ್ನಿನ ರಾಷ್ಟ್ರೀಯ ಗ್ಯಾಲರಿಯಲ್ಲಿ ಅದನ್ನು ಪ್ರದರ್ಶಿಸಲು ಅನುಮತಿ ನೀಡಿ, ತನ್ನ ಮ್ಯೂಸಿಯಮಿನಲ್ಲಿದ್ದ ಆ ಚಿತ್ರವನ್ನು ಫ್ರೆಂಚ್ ಸರಕಾರ ಅಮೆರಿಕಕ್ಕೆ ಕಳುಹಿಸಿಕೊಟ್ಟಿತು, 1963ರಲ್ಲಿ. ಆ ವಿಶ್ವವಿಖ್ಯಾತ ಕೃತಿಯನ್ನು ನೋಡಲು ನುಗ್ಗಿದವರ ಸಂಖ್ಯೆ ಕೇವಲ ಒಂದು ತಿಂಗಳ ಅವಧಿಯಲ್ಲಿ 500,000.

ಮಹಾನ್ ಚಿತ್ರಕಾರರು ಬದುಕಿದ್ದಾಗ ಬಹಳ ಮಟ್ಟಿಗೆ ಬಡವರಾಗಿಯೇ ಇದ್ದವರು. ಶತಮಾನಗಳ ಅನಂತರ ಅವರ ಕೃತಿಗಳ ಬೆಲೆ ಮಾತ್ರ ದಿಗ್ಭ್ರಮೆ ಹುಟ್ಟಿಸುವಂಥದು.

1961ರಲ್ಲಿ ರೆಂಬ್ರಾಂಟನ 'ಹೋಮರನ ಶಿಲ್ಪವನ್ನು ಅವಲೋಕಿಸುತ್ತಿರುವ ಅರಿಸ್ಟಾಟಲ್' ಎಂಬ ಕೃತಿಯನ್ನು ನ್ಯೂಯಾರ್ಕಿನ ಮೆಟ್ರೊಪಾಲಿಟನ್ ಮ್ಯೂಸಿಯಂ 2,300,000 ಡಾಲರುಗಳಿಗೆ ಕೊಂಡುಕೊಂಡಿತು. ಪ್ರತಿ ದಿನವೂ 24,000 ಜನ ಅದನ್ನು ನೋಡಲೆಂದು ಮ್ಯೂಸಿಯಮಿಗೆ ಭೇಟಿ ನೀಡಿದರು.

....ಮ್ಯೂಸಿಯಮಿನಲ್ಲಿ ತನ್ನ ಒಂದು ಕೃತಿ ಪ್ರದರ್ಶಿತವಾಗುವುದು ಚಿತ್ರಕಾರನ ಪಾಲಿಗೆ ಅಭಿಮಾನದ ಸಂಗತಿ. ಜೊತೆಗೆ, ಚಿತ್ರಕಾರ ಬದುಕಿದ್ದರೆ, ಆ ಚಿತ್ರದ ವಿಕ್ರಯದಿಂದ ಬಣ್ಣ ಕುಂಚ ಕ್ಯಾನ್‌ವಾಸ್‌ಗಳನ್ನು ಕೊಳ್ಳುವುದಕ್ಕೂ ಹೊಟ್ಟೆಬಟ್ಟೆಗೂ ಒಂದಿಷ್ಟು ಹಣ ದೊರೆಯುತ್ತದೆ.

× × ×    × × ×    × × ×



ರಷ್ಯದಲ್ಲಿ ಮ್ಯಾಕ್ಸಿಂ ಗಾರ್ಕಿ ಮ್ಯೂಸಿಯಂ.

ಕೆಲ ದೇಶಗಳಲ್ಲಿ ಕಲಾವಿದರಿಗಾಗಿ, ಸಾಹಿತಿಗಳಿಗಾಗಿ ರಾಷ್ಟ್ರೀಯ ಸ್ಮಾರಕಗಳನ್ನು ರಚಿಸುತ್ತಾರೆ. ಅವರ ಹೆಸರಿನ ಭವನಗಳು, ಶಿಲ್ಪಗಳು, ಅವರಿಗೆ ಸಂಬಂಧಿಸಿದ ವಸ್ತು ಸಂಗ್ರಹಾಲಯಗಳು —ಇಂಥವು ಏರ್ಪಡುತ್ತವೆ.

ಕೆಲವರು ಬದುಕಿದ್ದಾಗಲೇ ಈ ರೀತಿ ಇತಿಹಾಸದ ಅಧ್ಯಾಯಗಳಾಗುತ್ತಾರೆ. ಕಣ್ಮರೆಯಾದ ಮೇಲೆ ಆದರಣೀಯರಾಗುವವರೇ ಹೆಚ್ಚು.

× × ×

ಪ್ರಭುತ್ವ, ಸಮಾಜದ ಶಿಖರ. ಅಧಿಕಾರವಿರುವುದು ಶಿಖರದಲ್ಲಿ, ಕೆಳಗಲ್ಲ. ಅಷ್ಟೇ ಅಲ್ಲ, ಕಲಾವಿದರು, ಸಾಹಿತಿಗಳಿಂದ ಕೆಲಸ ಮಾಡಿಸಿಕೊಂಡು ಅವರಿಗೆ ಹಣ ಕಾಸಿನ ಪ್ರತಿಫಲ ಕೊಡುವ ಸಾಮರ್ಥ್ಯ ಪ್ರಭುತ್ವಕ್ಕಿದೆ; ಬಿರುದು ಬಾವಲಿಗಳನ್ನು ನೀಡುವ ಅಧಿಕಾರವೂ ಇದೆ.

ಇಂಗ್ಲೆಂಡಿನ ಆಸ್ಥಾನ ಕವಿ —ಪೊಯೆಟ್ ಲಾರಿಯಟ್— ಪದವಿ ಗೌರವದ ಸ್ಥಾನ. ಪ್ರಭುತ್ವದ ಅಪೇಕ್ಷೆಯಂತೆ, ಶುಭಕಾಮನೆಯ ಪದ್ಯ ಅಭಿನಂದನೆಯ ಗೀತೆ ಇತ್ಯಾದಿಗಳನ್ನು ಈ ಕವಿ ಬರೆಯಬೇಕು.

ಠಾಕೂರರು ಬ್ರಿಟಿಷ್ ಸರಕಾರದಿಂದ ಸರ್ ಬಿರುದು ಪಡೆದಿದ್ದರು. ಐದನೆಯ ಜಾರ್ಜ್ ಭಾರತಕ್ಕೆ ಬಂದ ಸಂದರ್ಭದಲ್ಲಿ ಠಾಕೂರರು ಪ್ರಭುತ್ವದ ಅಪೇಕ್ಷೆಯಂತೆ ಸ್ವಾಗತಗೀತೆ ಬರೆದದ್ದುಂಟು. ಆದರೆ ಮುಂದೆ ಜಾಲಿಯನ್‌ವಾಲಾಬಾಗ್ ಹತ್ಯಾಕಾಂಡ ನಡೆದಾಗ ಅದನ್ನು ಪ್ರತಿಭಟಿಸಿ, ಬ್ರಿಟಿಷ್ ಸರಕಾರ ನೀಡಿದ್ದ ಬಿರುದನ್ನು ಅವರು ಹಿಂದಕ್ಕೆ ಕೊಟ್ಟರು.

ಅಮೆರಿಕದಲ್ಲಿ ಅಧ್ಯಕ್ಷರು, ಕಲಾವಿದರು ಸಾಹಿತಿಗಳನ್ನು ಸಂತೋಷಕೂಟಕ್ಕೆ ಕರೆಯುತ್ತಾರೆ.

ಭಾರತದಲ್ಲೂ ರಾಷ್ಟ್ರೀಯ ಉತ್ಸವಗಳ ಸಂದರ್ಭದಲ್ಲಿ ರಾಜಧಾನಿಯಲ್ಲಿ ಕವಿಮೇಳಗಳು ನಡೆಯುತ್ತವೆ.

ಹಿಂದೆ ಭೋಜರಾಜ ಅಕ್ಷರಕ್ಕೆ ಲಕ್ಷ ಹೊನ್ನು ಕೊಡುತ್ತಿದ್ದ ಎನ್ನುತ್ತಾರೆ. ಕಾಳಿದಾಸಸಂಭವರ ಅದೃಷ್ಟ! ಆದರೆ, ಅವನಿಗಿಂತಲೂ ಹಿಂದಿನವನಾದ ಭಾಸನಿಗೆ ಯಾವ ಚಕ್ರವರ್ತಿಯ ಕೃಪಾಶ್ರಯವೂ ಇರಲಿಲ್ಲ. ತನ್ನ ನಾಟಕಗಳನ್ನು ಆತ ಮಹಾಜನತೆಯ ಮುಂದೆ ಪ್ರದರ್ಶಿಸಿದ.



ಅರಸೊತ್ತಿಗೆಯಿಂದ ಅನೇಕ ಸಾಹಿತ್ಯಗೌರವಗಳನ್ನು ಸಂಪಾದಿಸಿದ ಆಂಧ್ರದ ಕವಿ, ಶ್ರೀನಾಥ; ಪೋತನ, ಅಂಥದೊಂದೂ ಬೇಡ ಎಂದವನು. ಅವನಿಗೆ ಸುಖಸೌಕರ್ಯ; ಇವನಿಗೆ ಕಡುಬಡತನ. "ವಾಸ್ತವದೃಷ್ಟಿ ಬೆಳೆಸಿಕೋ", ಎಂದು ಶ್ರೀನಾಥ ಪೋತನನಿಗೆ ಎಷ್ಟೋ ಹೇಳಿದ. ಪೋತನ ಒಪ್ಪಲಿಲ್ಲ.

ಇಂಥ ಅಭಿಮಾನಧನರು ಜಗತ್ತಿನ ಹಲವೆಡೆ ಅಲ್ಲೊಬ್ಬರು ಇಲ್ಲೊಬ್ಬರು ಸಿಗುತ್ತಾರೆ.

ಆದರೆ ಪ್ರಭುತ್ವದೊಡನೆ ವಿರಸ ಏರ್ಪಟ್ಟಾಗ ಕಲಾವಿದ, ಸಾಹಿತಿ ನರಳಬೇಕಾಗುತ್ತದೆ.

2400 ವರ್ಷಗಳ ಹಿಂದಿನ ಗ್ರೀಕ್ ನಾಟಕಕಾರ ಅರಿಸ್ಟಾಫನೀಸ್ 'ಮೋಡಗಳು' ಎಂಬ ತನ್ನ ನಾಟಕದಲ್ಲಿ ಸಾಕ್ರಟೀಸನನ್ನೇ ನಿಂದಿಸಿದ; 'ಠಕ್ಕ' ಎಂದು ಕರೆದ. ಏನೂ ಆಗಲಿಲ್ಲ.

ಆದರೆ, ಇನ್ನೊಂದು ನಾಟಕದಲ್ಲಿ ಕ್ಲಿಯಾನ್ ಎಂಬ ರಾಜಕಾರಣಿಯನ್ನು ತೆಗಳಿದಾಗ, ರಾಜದ್ರೋಹದ ಆಪಾದನೆಗೆ ಗುರಿಯಾದ!

ಪ್ರಭುತ್ವಕ್ಕೆ ಇದಿರಾಗಿ ವರ್ತಿಸುವ ಕಲಾವಿದರು ಸಾಹಿತಿಗಳಿಗೆ ಗಡೀಪಾರು, ಸೆರೆಮನೆ, ದೇಹಾಂತ ಶಿಕ್ಷೆ ತಪ್ಪಿದ್ದಲ್ಲ.

ಪ್ರಭುತ್ವ ಮನ್ನಣೆಯನ್ನು ಶ್ಲಾಘಿಸುವವರಿದ್ದಾರೆ; ಟೀಕಿಸುವವರೂ ಇದ್ದಾರೆ. ಕಲಾವಿದರ, ಸಾಹಿತಿಗಳ ಸ್ವಾತಂತ್ರ್ಯಕ್ಕೆ ರಾಜ ಮನ್ನಣೆಯಿಂದ ಧಕ್ಕೆಯಾಗುತ್ತದೆ ಎಂಬುದು ಟೀಕಿಸುವವರ ವಾದ.

'ಕಲಾವಿದರ, ಸಾಹಿತಿಗಳ ಸ್ವಾತಂತ್ರ್ಯ' ಎಂದರೇನು? ಕಲಾವಿದ, ಸಾಹಿತಿ ಸಮಾಜದ ಸದಸ್ಯರು. ಅವನಿಗೆ ಹಕ್ಕುಗಳಿರುತ್ತವೆ, ಬಾಧ್ಯತೆಗಳೂ ಇರುತ್ತವೆ. ಆತನ 'ಸ್ವಾತಂತ್ರ್ಯ'ವೆಲ್ಲ ಆ ಸಮಾಜದ ಚೌಕಟ್ಟಿನೊಳಗೇ.

ಕಲಾವಿದ, ಸಾಹಿತಿ ಸಮಾಜವನ್ನು ಬಿಟ್ಟು ಇರಬಯಸಬಹುದು; ಬಂಡಾಯವೇಳಬಹುದು; ಆ ಮನೋಧರ್ಮದ ಕೃತಿ ರಚಿಸಬಹುದು. ವೈಯಕ್ತಿಕ ದುಗುಡ ದುಮ್ಮಾನ —ಅಂಥ 'ಸ್ವಾತಂತ್ರ್ಯ' ಕ್ಕಾಗಿ ಆತ ತೆರುವ ಬೆಲೆ.

## ಗತಿ

ನೃತ್ಯ, ಸಂಗೀತ, ನಾಟಕ, ಚಿತ್ರಕಲೆ, ಶಿಲ್ಪಕಲೆ, ವಾಸ್ತುಶಿಲ್ಪ ಹಾಗೂ ಸಾಹಿತ್ಯ ಅನಾದಿ ಕಾಲದಿಂದ ಬೆಳೆದುಬಂದ ರೀತಿಯನ್ನು ಈವರೆಗೆ ಪರಿಶೀಲಿಸಿದೆವು; ವೈಜ್ಞಾನಿಕ ಪ್ರಗತಿಯ ಫಲವಾದ ಹೊಸ ಮಾಧ್ಯಮಗಳ ಬಗೆಗೆ ಅರಿತೆವು; ಸಮಾಜದಲ್ಲಿ ಸಾಹಿತಿ–ಕಲಾವಿದರ ಸ್ಥಾನಮಾನಗಳ ಕುರಿತು ಜಿಜ್ಞಾಸೆ ನಡೆಸಿದೆವು.

ಈ ಅಧ್ಯಯನದಿಂದ ಕೆಲ ಅಂಶಗಳು ಸ್ಪಷ್ಟವಾಗುತ್ತವೆ.

ಕಲೆ ಮಾನವನ ಸೃಜನಶಕ್ತಿಯ ಕುಶಲ ಅಭಿವ್ಯಕ್ತಿ. ಸಾಹಿತ್ಯ ಕೂಡಾ. ಶತ ಶತಮಾನಗಳಿಂದ ಕಲೆ ಸಾಹಿತ್ಯಗಳು ರೂಪುಗೊಂಡಿರುವುದು ಜಾನಪದ ಕಲಾ ಪ್ರಕಾರಗಳ, ಜಾನಪದ ಸಾಹಿತ್ಯ ಪ್ರಕಾರಗಳ ಆಧಾರದ ಮೇಲೆ. ಜಾನಪದಕ್ಕಿಂತ ದೂರವಾದ ಕಲೆಯಾಗಲೀ ಸಾಹಿತ್ಯವಾಗಲೀ ಅಲ್ಪಾಯು. ಸೂತ್ರ ಕಿತ್ತ ಪಟದ ಹಾಗೆ. ನೋಡಲು ಚಂದ; ಅಷ್ಟಕ್ಕೇ ಅಂತ್ಯ.

ಆಯಾ ಕಾಲಗಳಲ್ಲಿ ಸಾಮಾಜಿಕ ಬದಲಾವಣೆಗಳು, ರಾಜಕೀಯ ಪಲ್ಲಟಗಳು ಕಲೆ–ಸಾಹಿತ್ಯಗಳ ಮೇಲೆ ಪರಿಣಾಮ ಬೀರಿವೆ.

× × ×    × × ×    × × ×

ಸಾಹಿತ್ಯ, ಕಲೆಗಳ ವಿಕಾಸಕ್ರಿಯೆ ಅವ್ಯಾಹತ. ನಿನ್ನೆಯ ಈ ಸತ್ಯ ಇವತ್ತಿಗೂ ಸರಿ, ನಾಳೆಗೂ ಸರಿ.

"ಪದಗಳನ್ನು ಬಳಸಿ ಕಥೆ ಹೇಳುವ ನನ್ನ ರೀತಿಯ ಮೇಲೆ 14–15ನೆಯ ಶತಮಾನಗಳ ಕಥಾನಿರೂಪಣಾ ಚಿತ್ರಗಳು ಖಂಡಿತವಾಗಿಯೂ ಪ್ರಭಾವ ಬೀರಿವೆ," ಎಂದಿದ್ದಾನೆ ಅಮೆರಿಕದ ಬರೆಹಗಾರ ಡಾಸ್ ಪಾಸೊಸ್.



[illegible]

ವಾಸ್ತವವಾಗಿ ಕಥಾನಿರೂಪಣಾ ಚಿತ್ರಶೈಲಿ, ಶಿಲ್ಪಶೈಲಿ ಸಹಸ್ರಾರು ವರ್ಷ ಹಿಂದಿನದು. ಪ್ರಾಚೀನ ಈಜಿಪ್ಟ್, ಗ್ರೀಸ್, ಭಾರತಗಳಲ್ಲಿ ಆ ಶೈಲಿಗಳಿದ್ದುವು. ಯೂರೋಪಿನ 'ಮಧ್ಯಯುಗ'ದ ಅಂತ್ಯದಲ್ಲಿ (ನವೋದಯದ ಆದಿಭಾಗದಲ್ಲಿ) ಚಿತ್ರಕಾರ ಜಿಯತ್ತೋನ ಕೈಯಲ್ಲಿ ಕಥಾನಿರೂಪಣಾ ಶೈಲಿ ಶ್ರೇಷ್ಠ ಸಂಪ್ರದಾಯವಾಯಿತು. "20ನೆಯ ಶತಮಾನದಲ್ಲಿ ಪಿಕಾಸೋ ಆರಂಭಿಸಿದ ಘನಾಕೃತಿ ಕಲೆಯೊಂದಿಗೆ ಕಥಾನಿರೂಪಣಾ ಚಿತ್ರಶೈಲಿಯ ಕಥೆ ಮುಗಿಯಿತು"— ಎಂದರು. ಆದರೆ ಖಡಾ ಖಂಡಿತವಾಗಿ ಹೀಗೆ ಹೇಳುವುದು ತಪ್ಪು. ಕಥಾನಿರೂಪಣಾ 'ಶಿಲ್ಪ'ಗಳು ಸಾಹಿತ್ಯ, ಕಲೆಗಳಲ್ಲಿ ಮುಂದಿನ ಶತಮಾನದಲ್ಲೂ ಅದರ ಅನಂತರವೂ ಕಂಡುಬಂದರೆ ಆಶ್ಚರ್ಯಪಡಬೇಕಾಗಿಲ್ಲ. ಮಾನವ ಸಮಾಜವಿರುವವರೆಗೂ ಇದ್ದೇ ಇರುತ್ತದೆ, ಕಥನ ಕಲೆ.

ಚಿತ್ರ, ಶಿಲ್ಪಗಳಿಂದ ಸಾಹಿತಿಗಳು ಸ್ಫೂರ್ತಿ ಪಡೆಯುತ್ತಾರೆ; ಚಿತ್ರಕಾರರು ಶಿಲ್ಪಿಗಳಿಗೆ ಸಾಹಿತ್ಯ ಸ್ಫೂರ್ತಿ ನೀಡುತ್ತದೆ. ಮೈಕೆಲೆಂಜಲೋನ 'ಕೊನೆಯ ತೀರ್ಪು' ಚಿತ್ರ ದಾಂತೆಯ 'ಡಿವೈನ್ ಕಾಮಿಡಿ'ಯಿಂದ ಪ್ರೇರಿತ.

ಕಲಾವಿದರು–ಸಾಹಿತಿಗಳ ಸ್ನೇಹವೂ ಪರಂಪರಾಗತವಾದದ್ದು. ಫ್ರಾನ್ಸಿನ ಬಂಡಾಯಗಾರ –ಕಲಾವಿದ ಕೂರ್ಬೆ, ಸಾಹಿತಿ ಜೋಲಾನನ್ನು ವಾಸ್ತವತೆಯ ದಾರಿಗೆ ಒಯ್ದವನು. ಜೋಲಾ, ಸೇಜಾನನ ಕಲಾಜೀವನಕ್ಕೆ ಕಾರಣನಾದವನು. ಚಿತ್ರಕಾರ ಮಾನೆ ಹಾಗೂ ಬರೆಹಗಾರರಾದ ಫ್ಲಾಬೇರ್, ಮೊಪಾಸಾ ಸ್ನೇಹಿತರು. ಇದು ಎಲ್ಲ ಕಲಾಪ್ರಕಾರಗಳಿಗೂ ಅನ್ವಯಿಸುವ ಮಾತು.

ಇಂದಿನ ಸಂಪ್ರದಾಯಗಳಲ್ಲಿ ಕೆಲವು ನಾಳೆಗೆ ಸತ್ವಹೀನವಾಗುತ್ತವೆ. 20ನೆಯ ಶತಮಾನದಲ್ಲಾದಂತೆ 21ನೆಯ ಶತಮಾನದಲ್ಲೂ ಹೊಸ ಪ್ರಯೋಗಗಳು ನಡೆಯುವುದು ಸಹಜ.

ವಿಜ್ಞಾನ ಮತ್ತಷ್ಟು ಪ್ರಗತಿಹೊಂದಿದಂತೆ ಹೊಸ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಹಾಗೆಯೇ ಸಮಾಜದಲ್ಲಿ ಬಹುಜನಸಮುದಾಯ ಪ್ರಭುತ್ವದ ಸ್ಥಾನಕ್ಕೆ ಬಂದಂತೆ, ಸಾಹಿತ್ಯ ಕಲೆಗಳ ಹಳೆಯ ಕೊಂಡಿಗಳು ಹಲವು ಕಳಚಿ ಬೀಳುತ್ತವೆ; ಹೊಸ ಕೊಂಡಿಗಳ ಬೆಸುಗೆ ಅನಿವಾರ್ಯವಾಗುತ್ತದೆ.

ಮುದ್ರಣದಲ್ಲಿ [illegible] ಚಿತ್ರಕಲೆಯಲ್ಲಿ ಸ್ವೀಕೃತವಾದಾಗ. ಚೀನದಲ್ಲಿ ಆ ಬಗೆಗೆ ಇದ್ದದ್ದು ಅಜ್ಞಾನ ಮಾತ್ರ. [illegible] ಮೋನಾ ಲಿಸಾ ನೋಡಿದ ಚೀನೀಯರು, "ಪಶ್ಚಿಮದ ಅನಾಗರಿಕರು ಅರ್ಧ ಮುಖವನ್ನು ಮಾತ್ರ ಯಾಕೆ ತೊಳೆಯುತ್ತಾರೆ ?" ಎಂದು ಕೇಳಿದರಂತೆ! ಜಗತ್ತಿನಲ್ಲಿ ಅಭಿವೃದ್ಧಿ –ಪ್ರಗತಿ– ಎಂದೂ ಏಕರೀತಿಯಾಗಿಲ್ಲ.

ಕಲೆ, ಸಾಹಿತ್ಯ ವೈವಿಧ್ಯಪೂರ್ಣವಾಗಲು ಈ ಅಸಮತೆಯೂ ಸಹಾಯಕವೇ.

× × × × × × × × ×

ಅಸತ್ಯದಿಂದ ಸತ್ಯದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮೃತತ್ವದೆಡೆಗೆ ಪಯಣವನ್ನು ಪ್ರಾಚೀನ ಭಾರತೀಯ ಬಯಸಿದ. ಎಲ್ಲ ಪ್ರಾಚೀನ ನಾಗರಿಕತೆಗಳಲ್ಲೂ ಜನ ತೊಳಲಾಡಿದ್ದು ಆ ದಾರಿಯಲ್ಲೇ.

ಆಧುನಿಕ ಜಗತ್ತಿನಲ್ಲೂ ಮಾನವನ ಗುರಿ ಮೇಲಿನದಕ್ಕಿಂತ ಹೆಚ್ಚು ಉದಾತ್ತವಲ್ಲ.

ನಾಳೆ ಜನ ಆಡುವ ಭಾಷೆಯೂ ಇದಕ್ಕಿಂತ ಭಿನ್ನವಾಗುವುದಿಲ್ಲ.

ಆದರೂ, ವಿಕಾಸಹೊಂದುತ್ತಲೇ ಇರುವ ಮಾನವ ಹೊಸ ಹೊಸ ಮಜಲುಗಳನ್ನು ತಲುಪುತ್ತ ಬಂದಿದ್ದಾನೆ. ಎಲ್ಲ ಕ್ಷೇತ್ರಗಳಲ್ಲೂ ತನ್ನ ಹೆಜ್ಜೆ ಗುರುತುಗಳನ್ನು ಉಳಿಸಿದ್ದಾನೆ.

ಅವನದು ಇನ್ನೂ ಮುಂದುವರಿಯುವ ಜೈತ್ರಯಾತ್ರೆ. ಏಳು ಬೀಳುಗಳೇನೇ ಇದ್ದರೂ ದಿಗ್ವಿಜಯವೇ ಆತನ ಗುರಿ. ಈವರೆಗೆ ಆಗಿರುವಂತೆ ಭವಿಷ್ಯತ್ತಿನಲ್ಲೂ ಕಲೆ, ಸಾಹಿತ್ಯ ಮಾನವನ ದೀರ್ಘ ಪಯಣದ ಸಂಗಾತಿಗಳಾಗುತ್ತವೆ ; ಅವನ ಹಿರಿಮೆಯನ್ನು ಅವು ಕೊಂಡಾಡುತ್ತವೆ ; ಅವನ ದಾರಿಯನ್ನು ಬೆಳಗುತ್ತವೆ.

—ನಿರಂಜನ

ಎದುರು ಪುಟ :
**ಕಥಕ್ಕಳಿ ನಾಯಕ ಪಾತ್ರ**




ನಾಟಕಮಂದಿರದ ತುಂಬ ಪ್ರೇಕ್ಷಕರು, ಗುಜು ಗುಜು ಸದ್ದು. ಎಲ್ಲರೂ ಮಾತನಾಡುವವರೇ. ಆಗ ಅಂಕದ ಪರದೆ ನಿಧಾನವಾಗಿ ಸರಿಯಲಾರಂಭಿಸುತ್ತದೆ. ಕೂಡಲೇ ಸದ್ದು ಅಡಗುತ್ತದೆ. ಪ್ರೇಕ್ಷಕರ ದೃಷ್ಟಿಯೆಲ್ಲ ರಂಗಸ್ಥಳದ ಕಡೆಗೆ. ಅವರು ನಾಟಕ ನೋಡಲು ಸಿದ್ಧರಾಗುತ್ತಾರೆ. ಅಂಕದ ಪರದೆಯ ಮಹತ್ವ ಇದು.

ಚಲಚ್ಚಿತ್ರ ಮಂದಿರಗಳಲ್ಲಿಯೂ ಅಷ್ಟೇ. ಮುಂದಿನ ಪರದೆ ಸರಿದ ಬಳಿಕ ತೆರೆಯ ಮೇಲೆ ಚಿತ್ರ ಕಾಣಿಸಿಕೊಳ್ಳುತ್ತದೆ.

ಪ್ರಾಚೀನ ರೋಮನ್ ನಾಟಕಶಾಲೆಯಲ್ಲಿ ಅಂಕದ ಪರದೆ ಇದ್ದಿತೆಂದು ಕಂಡುಬಂದಿದೆ. ಪ್ರಾಚೀನ ಗ್ರೀಕರ ನಾಟಕಶಾಲೆಯ ರೂಪವನ್ನು ಆಧರಿಸಿ ರೋಮನರು ತಮ್ಮ ನಾಟಕಶಾಲೆಯನ್ನು ರಚಿಸಿದರು. ನಾಟಕ ಆರಂಭವಾಗುವ ಮೊದಲು ಪರದೆಯ ಹಿಂದೆ ರಂಗಭೂಮಿ ಮರೆಯಾಗಿರುತ್ತಿತ್ತು. ಇದನ್ನು ನಾಟಕದ ಆರಂಭಕ್ಕೆ ಮೊದಲು ಮೇಲಕ್ಕಾಗಲೀ ರಂಗದ ಒಂದು ಪಕ್ಕಕ್ಕಾಗಲೀ ಎಳೆಯುತ್ತಿರಲಿಲ್ಲ. ಕೆಳಕ್ಕೆ ಇಳಿಸುತ್ತಿದ್ದರು ; ನಾಟಕ ಮುಗಿದ ಮೇಲೆ ಅದನ್ನು ಮೇಲಕ್ಕೆಳೆಯುತ್ತಿದ್ದರು. ಕಾಲಕಳೆದಂತೆ, ಪ್ರತಿ ಅಂಕಗಳ ಮಧ್ಯೆ ಪರದೆಯನ್ನು ಇಳಿಸಿ. ಏರಿಸಿ. ಅದರ ಹಿಂಬದಿಯಲ್ಲಿ ದೃಶ್ಯ ಬದಲಾವಣೆಗೆ ಬೇಕಾದ ರಂಗಸಜ್ಜಿಕೆಗಳನ್ನು ಕೂಡಿಸುವುದು ಪ್ರಾಚೀನ ರೋಮಿನಲ್ಲಿ ಅನಂತರ ರೂಢಿಗೆ ಬಂತು.

ಪಾಶ್ಚಾತ್ಯ ರಂಗಭೂಮಿಯಲ್ಲಿ ಮಹಾನ್ ಆಂಗ್ಲ ನಾಟಕಕಾರ ಶೇಕ್ಸ್‌ಪಿಯರನ ಕಾಲದಲ್ಲಿ ಅಂಕದ ಪರದೆಯೇ ಇರಲಿಲ್ಲ. ಅಲ್ಲಿ ಇದರ ಉಪಯೋಗ ಸುಮಾರು 15–16 ನೆಯ ಶತಮಾನದಲ್ಲಿ ಆರಂಭವಾಯಿತು.

ರಂಗಸ್ಥಳದ ಮುಂಭಾಗದ ತುದಿಗೂ ಪ್ರೇಕ್ಷಕರಿಗೂ ನಡುವೆ ಇರುವ ಪರದೆಯೇ ಅಂಕದ ಪರದೆ. 17ನೆಯ ಶತಮಾನದಲ್ಲಿ, ನಾಟಕವನ್ನು ಪ್ರಾರಂಭಿಸುವುದಕ್ಕೆ ಮೊದಲಿನ ಪ್ರಸ್ತಾವನೆಯ ಅನಂತರ ಇದನ್ನು ಸರಿಸಲಾಗುತ್ತಿತ್ತು. 18ನೆಯ ಶತಮಾನದ ಕೊನೆಯ ದಶಕದವರೆಗೆ ಅಂಕದ ಪರದೆಯ ಬಳಕೆ ಸರ್ವಸಾಮಾನ್ಯವಾಗಿರಲಿಲ್ಲ. ಅನಂತರ ಅಂಕಗಳ ನಡುವೆ ಈ ಪ್ರಧಾನ ಪರದೆಯನ್ನು ಪ್ರತಿಸಲವೂ ಇಳಿಸುವುದು ಏರಿಸುವುದು ರೂಢಿಗೆ ಬಂತು.

ಕನ್ನಡ ನಾಟಕ ಆರಂಭವಾದದ್ದು ಕಳೆದ ಶತಮಾನದಲ್ಲಿ. ನಮ್ಮಲ್ಲಿ ಆಗಿನಿಂದಲೂ ಅಂಕದ ಪರದೆ ಬಳಕೆಯಲ್ಲಿದೆ.

ಅಂಕದ ಪರದೆಯನ್ನು ಕೆಳಗಿನಿಂದ ಮೇಲಕ್ಕೆ ಎತ್ತುವ–ಇಳಿಸುವ ವ್ಯವಸ್ಥೆ ಇರಬಹುದು. ಒಂದೇ ಬದಿಗೆ ಎಳೆಯಬಹುದು ; ಅಥವಾ ಎರಡು ಭಾಗಗಳಿರುವ ಪರದೆಯನ್ನು ಪಕ್ಕಗಳಿಗೆ ಸರಿಸಬಹುದು. ನಾಟಕಗೃಹದೊಳಕ್ಕೆ ಬರುವ ಪ್ರೇಕ್ಷಕರ ಕಣ್ಣಿಗೆ ಮೊದಲು ಕಾಣುವುದು ಪರದೆಯಾದ್ದರಿಂದ, ಅದನ್ನು ಒಳ್ಳೆಯ ಸಾಮಗ್ರಿಯಿಂದ (ಉದಾ : ಮಖಮಲ್,

ಸ್ಯಾಟಿನ್ ಮುಂತಾದ ಬೆಲೆಬಾಳುವ ಬಟ್ಟೆಗಳಿಂದ) ತಯಾರಿಸುತ್ತಾರೆ. ಬಹಳ ಕಾಲದವರೆಗೆ ಅಂಕದ ಪರದೆಯನ್ನು ಕೈಯಿಂದ ಎಳೆಯುತ್ತಿದ್ದರು. ಇದಕ್ಕೆ ಯಾಂತ್ರಿಕ ವ್ಯವಸ್ಥೆಯನ್ನು ಅಳವಡಿಸುವ ಅಭ್ಯಾಸ ಈಗೀಗ ನಮ್ಮಲ್ಲಿಯೂ ಬೆಳೆಯುತ್ತಿದೆ.

ಮತ್ತೊಂದು ರೀತಿಯ ಪರದೆಯೂ ಈಗ ಕೆಲವು ರಾಷ್ಟ್ರಗಳಲ್ಲಿ ಬಳಕೆಗೆ ಬಂದಿದೆ. ರಂಗಭೂಮಿಯ ಮೇಲೆ ಅಗ್ನಿಪ್ರಮಾದ ಸಂಭವಿಸಿದಾಗ ನಾಟಕ ಗೃಹಕ್ಕೆ ಬೆಂಕಿ ಹರಡದಂತೆ ತಡೆಗಟ್ಟಲು ಈ ಪರದೆಯನ್ನು ಉಪಯೋಗಿಸುತ್ತಾರೆ. ಇವನ್ನು ರಕ್ಷಕ ಪರದೆ ಅಥವಾ ಕಬ್ಬಿಣದ ಪರದೆ ಎಂದು ಕರೆಯುತ್ತಾರೆ. ಇದು ಅಂಕದ ಪರದೆಯಲ್ಲದಿದ್ದರೂ ಅದನ್ನು ಯೋಗ್ಯ ರೀತಿಯಲ್ಲಿ ಇಡುವುದಕ್ಕೋಸ್ಕರ ನಾಟಕ ಪ್ರಯೋಗ ಕಾಲದಲ್ಲಿ ಒಮ್ಮೆಯಾದರೂ ಉಪಯೋಗಿಸಬೇಕಾಗುತ್ತದೆ. ಹೀಗಾಗಿ, ಒಂದೊಂದು ಬಾರಿ ಅದನ್ನೇ ಅಂಕದ ಪರದೆಯಾಗಿ ಬಳಸುವುದುಂಟು.

ಹಿಂದಿನ ಕಾಲದಲ್ಲಿದ್ದಂತೆ ತೆರೆಯನ್ನು ಇಳಿಸದೆ ಪ್ರೇಕ್ಷಕರ ಇದಿರಿನಲ್ಲೇ ರಂಗಸಜ್ಜಿಕೆಗಳನ್ನು ಬದಲಾಯಿಸುವ ಕ್ರಮವೂ ಇದೆ. ಈ ವಿಧಾನದಲ್ಲಿ ಅಂಕದ ಪರದೆಯೇ ಇರುವುದಿಲ್ಲ. ದೃಶ್ಯ ಬದಲಾವಣೆಯನ್ನು ಪರದೆಯ ಇಳಿಕೆ ಏರಿಕೆಗಳ ಬದಲು, ರಂಗದ ಬೆಳಕನ್ನು ಕ್ಷೀಣಿಸಿ ಕತ್ತಲೆಮಾಡಿ ಅನಂತರ ಬೆಳಕನ್ನು ವೃದ್ಧಿಸಿ ಸೂಚಿಸುವುದು ಈಗ ಆಚರಣೆಗೆ ಬರುತ್ತಿದೆ. ಹೀಗೆ, ಅಂಕದ ಪರದೆಯ ಉಪಯೋಗ ಕಡಮೆಯಾಗುತ್ತಿದೆ.

ಒಂದು ಘಟನೆಯ ಆರಂಭ ಅಥವಾ ಮುಕ್ತಾಯಗಳಿಗೆ 'ಅಂಕದ ಪರದೆ ಸರಿಯಿತು' ಅಥವಾ 'ಅಂಕದ ಪರದೆ ಇಳಿಯಿತು' ಎಂಬ ನುಡಿಗಟ್ಟುಗಳನ್ನು ಉಪಯೋಗಿಸುವುದುಂಟು. ಬಹುಶಃ ಇನ್ನು ಮುಂದೆ ಅಂಕದ ಪರದೆ ರೂಪಕಾರ್ಥವಾಗಿ ಮಾತ್ರ ಉಳಿದು ರಂಗಭೂಮಿಯಿಂದ ಮರೆಯಾದರೂ ಆಗಬಹುದು.

## ಅಕ್ಕಮಹಾದೇವಿ

ಅಕ್ಕಮಹಾದೇವಿ 12ನೆಯ ಶತಮಾನದಲ್ಲಿದ್ದ ಸುಪ್ರಸಿದ್ಧ ಶಿವಶರಣೆ. ಹರಿಹರ ಕವಿಯ 'ಮಹಾದೇವಿಯಕ್ಕನ ರಗಳೆ', ಚಾಮರಸನ 'ಪ್ರಭುಲಿಂಗ ಲೀಲೆ', ಗೂಳೂರು ಸಿದ್ಧವೀರಣಾಚಾರ್ಯನ 'ಶೂನ್ಯ ಸಂಪಾದನೆ' ಮುಂತಾದ ಕೃತಿಗಳಲ್ಲಿ ಆಕೆಯ ಜೀವನಕ್ಕೆ ಸಂಬಂಧಿಸಿದ ವಿವರಗಳು ದೊರೆಯುತ್ತವೆ. ಹಾಗೆಯೇ ಆಕೆಯ ವಚನಗಳಿಂದಲೂ ಕೆಲವು ಅಂಶಗಳು ವ್ಯಕ್ತವಾಗುತ್ತವೆ.

ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯ ಸಮೀಪದ ಉಡುತಡಿಯ (ಈಗಿನ ಉಡುಗಣಿ—ತಡುಗಣಿ) ಸುಮತಿ ನಿರ್ಮಲರೆಂಬ ದೈವಭಕ್ತ ಸತಿಪತಿಯರ ಮಗಳು ಮಹಾದೇವಿ. ಚೆಲುವೆ, ಮುಗ್ಧೆ. ಬಾಲ್ಯದಿಂದಲೇ ಶಿವಭಕ್ತೆ.

ಒಮ್ಮೆ, ಆ ಊರಿನ ಅರಸ ಕೌಶಿಕ ಮೆರವಣಿಗೆಯಲ್ಲಿ ಹೋಗುತ್ತಿದ್ದಾಗ ಅದನ್ನು ನೋಡುತ್ತಿದ್ದ ಮಹಾದೇವಿಯನ್ನು ಕಂಡ. ಕೌಶಿಕ ಅವಳ ಮೋಹಕ ಸೌಂದರ್ಯಕ್ಕೆ ಮನಸೋತು ಅವಳನ್ನು ಮದುವೆಯಾಗಲು ಅಪೇಕ್ಷಿಸಿದ. ತಾನು ನಿರಾಕರಿಸಿದರೆ ಹೆತ್ತವರಿಗೆ ಕೌಶಿಕನಿಂದ ತೊಂದರೆಯಾದೀತೆಂದು ಬಗೆದ ಮಹಾದೇವಿ, ತನ್ನ ಗುರುಲಿಂಗಜಂಗಮ ಪೂಜೆಗೆ ಯಾವ ತೊಂದರೆಯೂ ಉಂಟಾಗದಂತೆ ನೋಡಿಕೊಳ್ಳಬೇಕೆಂಬ ನಿಯಮ ಹಾಕಿದಳು. ರಾಜನಿಗೆ ಅವಳ ಆಧ್ಯಾತ್ಮಿಕ ಜೀವನ ಸರಿಬೀಳಲಿಲ್ಲ. ಅವಮಾನ ಅಪಚಾರ ಉಂಟಾದಾಗ ಮಹಾದೇವಿ ಅರಸನನ್ನು ಬಿಟ್ಟು ಹೊರಟುಹೋದಳು.



ಅಕ್ಕ ಮಹಾದೇವಿ : ಕಾವ್ಯಮಯ ವಚನಗಳು

ಮಹಾದೇವಿಯ ಭಕ್ತಿಭಾವ 'ಶರಣ ಸತಿ ಲಿಂಗ ಪತಿ' ಸ್ವರೂಪದ್ದು. ಚೆನ್ನಮಲ್ಲಿಕಾರ್ಜುನನೇ ತನ್ನ ಪತಿ ಎಂದು ಭಾವಿಸಿ ಅವಳು ನಡೆಸಿದ ಉಗ್ರಸಾಧನೆ ಆಶ್ಚರ್ಯಕರವಾದದ್ದು. ಮಹಾದೇವಿ ಅಲ್ಲಲ್ಲಿ ಸಂಚರಿಸುತ್ತ, ಕಲ್ಯಾಣದಲ್ಲಿ ಶಿವಶರಣರ ಗೋಷ್ಠಿ ನಡೆಯುತ್ತಿದ್ದ ಅನುಭವ ಮಂಟಪಕ್ಕೆ ಬಂದಳು. ಅಲ್ಲಿ ಅಕ್ಕಮಹಾದೇವಿಗೂ ಅಲ್ಲಮಪ್ರಭುವಿಗೂ ನಡೆದ ಸಂಭಾಷಣೆಯ ನಿರೂಪಣೆ 'ಶೂನ್ಯ ಸಂಪಾದನೆ' ಗ್ರಂಥದಲ್ಲಿ ನಮಗೆ ದೊರಕುತ್ತದೆ. ಅವಳ ನಿರ್ಮಲ ಚಾರಿತ್ರ್ಯವನ್ನೂ ಉನ್ನತ ಆಧ್ಯಾತ್ಮಿಕ ಜೀವನದ ಪ್ರಭೆಯನ್ನೂ ಕಂಡ ಕಲ್ಯಾಣದ ಶಿವಶರಣರೆಲ್ಲ ಅವಳಲ್ಲಿ ಅಪೂರ್ವ ಗೌರವಾದರಗಳನ್ನು ತೋರಿದರು. ಬಸವೇಶ್ವರನನ್ನು ತಮ್ಮ ಅಣ್ಣನೆಂದು ಕಂಡಂತೆ, ಮಹಾದೇವಿಯನ್ನು ತಮ್ಮ ಅಕ್ಕನನ್ನಾಗಿ ಅಂಗೀಕರಿಸಿದರು.

ಅಕ್ಕಮಹಾದೇವಿ ತನ್ನ ಬಾಳಿನ ಕೊನೆಯ ದಿನಗಳನ್ನು ಶ್ರೀಶೈಲದ ಕದಳೀವನದಲ್ಲಿ, ಅವಳ ಆರಾಧ್ಯದೈವವಾದ ಚೆನ್ನಮಲ್ಲಿಕಾರ್ಜುನನ ಧ್ಯಾನದಲ್ಲಿ ಕಳೆದಳು.

ಅಧ್ಯಾತ್ಮ ಬೆಳದಿಂಗಳಲ್ಲಿ ವಿಕಸಿತವಾದ ಕವಿಹೃದಯ ಅಕ್ಕ ಮಹಾದೇವಿಯದು.

> ಅಳಿ ಸಂಕುಳವೇ ಮಾಮರವೇ ಬೆಳುದಿಂಗಳೇ ಕೋಗಿಲೆಯೇ
> ನಿಮ್ಮ ನಿಮ್ಮನೆಲ್ಲರನು ಬಂದು ಬೇಡುವೆನು : ಎನ್ನೊಡೆಯ
> ಚೆನ್ನಮಲ್ಲಿಕಾರ್ಜುನ ದೇವನ ಕಂಡರೆ ಕರೆದು ತೋರಿರೆ ;
> —ಇದು ಅಕ್ಕಮಹಾದೇವಿ ರಚಿಸಿದ ವಚನ.

ಅವಳ ವಚನಗಳಲ್ಲಿ ಕವಿತಾ ಸೌರಭ ಸೂಸುತ್ತದೆ. ಅಕ್ಕಮಹಾದೇವಿಯ ವಚನಗಳಷ್ಟು ಕಾವ್ಯಮಯವಾದ ವಚನಗಳು ಬೇರೆ ಇಲ್ಲ.

[illegible] ವಚನಗಳಲ್ಲಿ [illegible]. ಉಪಮೆ-ದೃಷ್ಟಾಂತಗಳ ಮೂಲಕ ಆ ಅನುಭವವನ್ನು ಸುಂದರವಾಗಿ ನಿರೂಪಿಸುವ ಜಾಣ್ಮೆ. [illegible] ಪರಿಣಾಮಕಾರಿಯಾಗಿ [illegible] ಪ್ರತಿಭೆ ಇಲ್ಲಿ ಅವಳ ವಚನಗಳನ್ನು ಉತ್ಕೃಷ್ಟ ಸಾಹಿತ್ಯದ ಶ್ರೇಣಿಗೇರಿಸಿದೆ.

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯ,
ಕಡಲ ತಡಿಯಲ್ಲಿ ಮನೆಯಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ"

"ಚಂದನವ ಕಡಿದು ಕೊರೆದು ತೇಯೊಡೆ ನೊಂದೆನೆಂದು ಕಂಪ ಬಿಟ್ಟೀತೆ..."

"ಬಂಜೆ ಬೇನೆಯನರಿಯಳು" "ಬಲತಾಯಿ ಮುದ್ದ ಬಲ್ಲಳೇ"

—ಎಷ್ಟು ರಮ್ಯ ಈ ಮಾತುಗಳು !

ಅಕ್ಕಮಹಾದೇವಿಯ ಕೆಲವು ವಚನಗಳಂತೂ ಭಾವಗೀತೆಗಳಂತಿವೆ. ವಚನಗಳಲ್ಲದೆ ತ್ರಿಪದಿ ಛಂದಸ್ಸಿನಲ್ಲಿ ರಚಿತವಾದ 'ಯೋಗಾಂಗ ತ್ರಿವಿಧಿ' ಎಂಬ ಚಿಕ್ಕ ಕೃತಿ ಕೂಡ ಅಕ್ಕಮಹಾದೇವಿಯದು.

ಅಕ್ಕಮಹಾದೇವಿ ಕನ್ನಡ ಸಾಹಿತ್ಯದ ಮೊದಲ ಕವಯತ್ರಿ.

ನೋಡಿ : ವಚನ ಸಾಹಿತ್ಯ

## ಅಕಾಡೆಮಿ

ಕ್ರಿಸ್ತ ಪೂರ್ವ 600ರ ಸುಮಾರಿನಲ್ಲಿ ಅಥೆನ್ಸಿಗೆ ಮೂರು ಕಿಲೊಮೀಟರು ದೂರದಲ್ಲಿ ಆಲಿವ್ ಮರಗಳ ಒಂದು ತೋಪು ಇದ್ದಿತು. ಆ ತೋಪಿನಲ್ಲಿ ಒಂದು ಮನೆ. ಪ್ರಾಚೀನ ಗ್ರೀಕ್ ವೀರ ಅಕಡೆಮಸ್‌ನ ನೆನಪಿಗಾಗಿ ನಿರ್ಮಿತವಾಗಿದ್ದ ಈ ಸ್ಮಾರಕ ಕ್ಷೇತ್ರದಲ್ಲಿ ಒಂದು ಕ್ರೀಡಾಭವನವನ್ನು ಕಟ್ಟಿದರು. ಯುವಜನರು ಕ್ರೀಡೆಗಳಿಗಾಗಿ ಇಲ್ಲಿ ಸೇರುತ್ತಿದ್ದರು; ಇಲ್ಲಿನ ಹೂಗಿಡ ಮರ ಶಿಲ್ಪಕೃತಿಗಳ ನಡುವೆ ವಿಹಾರಾರ್ಥವಾಗಿ ಅಲೆಯುತ್ತಿದ್ದರು. ತತ್ತ್ವಜ್ಞಾನಿ ಪ್ಲೇಟೊ ಆ ತಾಣವನ್ನು ಕೊಂಡುಕೊಂಡ. ಕ್ರಿ.ಪೂ. 385ರಲ್ಲಿ ಅದನ್ನೊಂದು ವಿದ್ಯಾಸಂಸ್ಥೆಯನ್ನಾಗಿ ಮಾರ್ಪಡಿಸಿದ. ಅಕಡೆಮಸ್ ಸ್ಮಾರಕ ಕ್ಷೇತ್ರದಲ್ಲಿ ಆರಂಭವಾದ ಈ ವಿದ್ಯಾಸಂಸ್ಥೆಯನ್ನು ಅಕಾಡೆಮಿ ಎಂದು ಕರೆದರು.

ಇಲ್ಲಿ ತತ್ತ್ವಜ್ಞಾನ, ಗಣಿತ, ಪ್ರಕೃತಿವಿಜ್ಞಾನ, ರಾಜನೀತಿಗಳು ಬೋಧನೆಯ ವಿಷಯಗಳು. ಪಾಠದ ಕೊಟಡಿಗಳು ವಿಶಾಲವಾಗಿದ್ದುವು. ಪ್ರಕೃತಿಯನ್ನು ಕುರಿತ ಅಧ್ಯಯನ ಮರಗಳ ಕೆಳಗೂ ಸಮೀಪದಲ್ಲಿದ್ದ ಗುಡ್ಡದ ತಪ್ಪಲಿನಲ್ಲೂ ಸಾಗುತ್ತಿತ್ತು. ಪ್ಲೇಟೊವಿನ ಮರಣಾನಂತರ ಅವನ ಶಿಷ್ಯ ಅರಿಸ್ಟಾಟಲ್ ಕೂಡ ತನ್ನದೇ ಆದ ಇಂಥ ಒಂದು ಅಕಾಡೆಮಿಯನ್ನು ನಡೆಸಿದ.

ಪಾಂಡಿತ್ಯದ ಕೇಂದ್ರವಾದ ಮೇಲೆ ಅಕಾಡೆಮಿ ಎಂಬ ಪದಕ್ಕೆ ವಿಶಿಷ್ಟ ಅರ್ಥ ಮೂಡಿತು. ಕಾಲಕ್ರಮೇಣ ಕಲೆ, ವಿಜ್ಞಾನ, ಸಾಹಿತ್ಯ ಅಥವಾ ತತ್ತ್ವಜ್ಞಾನಗಳಲ್ಲಿ ಪಾಂಡಿತ್ಯ ಪಡೆದವರ ಸಂಘ ಸಂಸ್ಥೆಗಳಿಗೂ ಈ ಹೆಸರು ಅನ್ವಯಿಸಲ್ಪಟ್ಟಿತು. ಮಧ್ಯಯುಗದ ಅವಧಿಯಲ್ಲಿ, ವಿಶೇಷವಾಗಿ ನವೋದಯ ಕಾಲದಲ್ಲಿ, ಇಟಲಿಯ ನಗರಗಳಲ್ಲಿ ಅಕಾಡೆಮಿಗಳು ತಲೆಯೆತ್ತಿದುವು. ಇಲ್ಲಿ ಕಲಿತವರೂ ಸಮಾಜದ ಪ್ರತಿಷ್ಠಿತರೂ ಸೇರಿ ಅನೌಪಚಾರಿಕ ಚರ್ಚಾಕೂಟವನ್ನು ನಡೆಸುತ್ತಿದ್ದರು. ಇಂಥ ಅಕಾಡೆಮಿಗಳೇ ಮುಂದೆ ಸುವ್ಯವಸ್ಥಿತ ನಿಯಮಬದ್ಧ ಸಂಘಗಳಾಗಿ ಮಾರ್ಪಟ್ಟುವು.

[illegible] ಒಂದು ಅಕಾಡೆಮಿಯೂ ಫ್ಲಾರೆನ್ಸಿನಲ್ಲಿ [illegible] ಒಂದು ಅಕಾಡೆಮಿಯೂ ಸ್ಥಾಪಿತವಾದುವು. 17ನೆಯ ಶತಮಾನದ ಆರಂಭ ಕಾಲದಲ್ಲಿ ಫ್ರಾನ್ಸಿನಲ್ಲಿ ಒಂದು ಅಕಾಡೆಮಿ ರಚಿತವಾಯಿತು. ಅದೇ ಅಕಾಡೆಮಿ ಫ್ರಾಂಕೇಸ್. 1635ರಲ್ಲಿ ಇದಕ್ಕೆ ರಾಜಮನ್ನಣೆ ದೊರೆಯಿತು. ಫ್ರೆಂಚ್ ಭಾಷೆಯ ಸತ್ವ ಹಾಗೂ ಶುದ್ಧತೆಗಳು ಇಂದಿಗೂ ಉಳಿದಿರುವುದು ಈ ಸಂಸ್ಥೆಯ [illegible]. ಈ ಅಕಾಡೆಮಿಯಲ್ಲಿ ನಲವತ್ತು ಸದಸ್ಯರು ಮಾತ್ರ ಇರುತ್ತಾರೆ. ಅವರನ್ನು 'ನಲವತ್ತು ಮಂದಿ ಅಮರರು' ಎಂದು ಕರೆಯುವುದು ವಾಡಿಕೆ. ಈ ಸಂಸ್ಥೆ ಜಗತ್ತಿನ ವಿಖ್ಯಾತ ಅಕಾಡೆಮಿಗಳಲ್ಲಿ ಒಂದು.

ವಿಜ್ಞಾನ ಅಕಾಡೆಮಿಗಳು ಆರಂಭವಾದದ್ದು 16ನೆಯ ಶತಮಾನದಲ್ಲಿ. ಇವುಗಳ ಸ್ಥಾಪನೆ ಕಲೆ, ಸಾಹಿತ್ಯ ಹಾಗೂ ತತ್ತ್ವಜ್ಞಾನ ಅಕಾಡೆಮಿಗಳ ಸ್ಥಾಪನೆಯಷ್ಟು ಸುಲಭವಾಗಲಿಲ್ಲ. ವಿಜ್ಞಾನ ವಿಚಾರಧಾರೆ ಸಾಂಪ್ರದಾಯಿಕ ಅಭಿಪ್ರಾಯಗಳಿಗೆ ವಿರುದ್ಧವಾಗಿದ್ದುದರಿಂದ ಮೊದಮೊದಲು ಅದು ಪ್ರತಿಭಟನೆಗೆ ಎಡೆಕೊಟ್ಟಿತು. 1662ರಲ್ಲಿ ಇಂಗ್ಲೆಂಡಿನ ಎರಡನೆಯ ಚಾರ್ಲ್ಸ್ ದೊರೆ ರಾಯಲ್ ಸೊಸೈಟಿಗೆ ಮಾನ್ಯತೆ ನೀಡಿದ. ನ್ಯೂಟನ್ ಮುಂತಾದ ಘನ ವಿಜ್ಞಾನಿಗಳು ಇದರ ಸದಸ್ಯರಾಗಿದ್ದರು. ಫ್ರಾನ್ಸಿನ ವಿಜ್ಞಾನ ಅಕಾಡೆಮಿ 1666ರಲ್ಲಿ ಸ್ಥಾಪಿತವಾಯಿತು. 1700ರಲ್ಲಿ ಬರ್ಲಿನ್‌ನಲ್ಲಿ ವಿಜ್ಞಾನ ಅಕಾಡೆಮಿ ಆರಂಭವಾಯಿತು. ಅಮೆರಿಕದಲ್ಲಿ 18ನೆಯ ಶತಮಾನದಲ್ಲಿ ಕಲೆ ಹಾಗೂ ವಿಜ್ಞಾನ ಅಕಾಡೆಮಿಗಳೂ ರಷ್ಯದಲ್ಲಿ 1725ರಲ್ಲಿ ವಿಜ್ಞಾನ ಅಕಾಡೆಮಿಯೂ ಆರಂಭವಾದುವು.

ಕಲಾ ಅಕಾಡೆಮಿಗಳಿಗೆ ಮಾನ್ಯತೆ ದೊರೆತದ್ದು ಕೂಡ ನವೋದಯ ಕಾಲದಲ್ಲೇ. 1648ರಲ್ಲಿ ಪ್ಯಾರಿಸ್‌ನಲ್ಲಿ ಕಲಾ ಅಕಾಡೆಮಿ ರೂಪುಗೊಂಡಿತು. ಲಂಡನಿನಲ್ಲಿ ರಾಯಲ್ ಅಕಾಡೆಮಿ ಆಫ್ ಆರ್ಟ್ಸ್ 18ನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದಿತು. ಆಯ್ಕೆ ಹೊಂದಿದ ಕೆಲವೇ ಮಂದಿ ಸದಸ್ಯರಿದ್ದ ಅಕಾಡೆಮಿ ಆಫ್ ಆರ್ಟ್ಸ್ ಅಂಡ್ ಲೆಟರ್ಸ್ ಎಂಬ ಒಂದು ಸಂಸ್ಥೆ 1904ರಲ್ಲಿ ರಚಿತವಾಯಿತು.

ಈಗ ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳಲ್ಲೂ ಅಕಾಡೆಮಿಗಳು ಇವೆ. ಇಂದಿನ ಅರ್ಥದಲ್ಲಿ ಅಕಾಡೆಮಿ ಎಂಬುದು ಸಾಹಿತ್ಯ, ಕಲೆ ಹಾಗೂ ವಿಜ್ಞಾನಗಳ ವಿಕಾಸಕ್ಕಾಗಿ ಮೀಸಲಾದ ಸಂಸ್ಥೆ. ಅಕಾಡೆಮಿ ಯಾವುದೇ ನಿರ್ದಿಷ್ಟ ಕಲೆ ಅಥವಾ ವಿಜ್ಞಾನಕ್ಕಾಗಿ ಮೀಸಲಾಗಿರುವುದೂ ಉಂಟು. ವಿಶ್ವವಿದ್ಯಾನಿಲಯಗಳೂ ಅಕಾಡೆಮಿಗಳೆಂದು ಪರಿಗಣಿಸಲ್ಪಡುತ್ತವೆ. ಅಮೆರಿಕದಲ್ಲಿ ಚಲಚ್ಚಿತ್ರ ಕ್ಷೇತ್ರದಲ್ಲಿ ಆಸ್ಕರ್ ಪ್ರಶಸ್ತಿಗಳನ್ನು ಕೊಡುವ ಅಮೆರಿಕನ್ ಅಕಾಡೆಮಿ ಆಫ್ ಮೋಷನ್ ಪಿಕ್ಚರ್ ಆರ್ಟ್ಸ್ ಅಂಡ್ ಸೈನ್ಸಸ್ ಆರಂಭವಾದದ್ದು 1929ರಲ್ಲಿ. ಸಾಹಿತ್ಯ ಅಕಾಡೆಮಿ, ಲಲಿತಕಲಾ ಅಕಾಡೆಮಿ, ಸಂಗೀತ ನಾಟಕ ಅಕಾಡೆಮಿ—ಇವು ನಮ್ಮ ರಾಷ್ಟ್ರೀಯ ಸಂಸ್ಥೆಗಳು. (ಈ ಸಂಸ್ಥೆಗಳನ್ನು ಅಕಾಡೆಮಿಗಳು ಎಂದು ಉಚ್ಚರಿಸುತ್ತಾರೆ.) ಭಾರತ ಸ್ವತಂತ್ರವಾದ ಮೇಲೆ ಪ್ರಧಾನಿ ಜವಾಹರಲಾಲ್ ನೆಹರೂ ಅವರ ಯೋಜನೆಯಂತೆ ಇವು ಸ್ಥಾಪಿತವಾದುವು. ಪ್ರತಿ ವರ್ಷ ಈ ಅಕಾಡೆಮಿಗಳು ಆಯಾ ಕ್ಷೇತ್ರದ ಪ್ರತಿಭಾವಂತ ವ್ಯಕ್ತಿಗಳಿಗೆ ಪ್ರಶಸ್ತಿಯಿತ್ತು ಸನ್ಮಾನಿಸುತ್ತವೆ; ಧನಸಹಾಯ ನೀಡುತ್ತವೆ. ತಮ್ಮ ತಮ್ಮ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸಂಶೋಧನೆ ನಡೆಯಲು ಕೂಡ ಸಹಾಯ ಮಾಡುತ್ತವೆ.

ಮೈಸೂರು ಮತ್ತು ಇತರ ರಾಜ್ಯಗಳಲ್ಲೂ ಇದೇ ಮಾದರಿಯನ್ನು ಅನುಸರಿಸಿ ಮೂರು ಅಕಾಡೆಮಿಗಳಿವೆ.

ನೋಡಿ : ಲಲಿತಕಲಾ ಅಕಾಡೆಮಿ ; ಸಂಗೀತ ನಾಟಕ ಅಕಾಡೆಮಿ ; ಸಾಹಿತ್ಯ ಅಕಾಡೆಮಿ ; ಸಂಶೋಧನೆ-2ನೆಯ ಸಂಪುಟ ; ವಿಜ್ಞಾನ ಸಂಸ್ಥೆಗಳು-3ನೆಯ ಸಂಪುಟ

## ಅಜಂತ, ಎಲ್ಲೋರ

ಸಿದ್ಧಾರ್ಥ, ರಾಜಕುಮಾರನಾಗಿ ಹುಟ್ಟಿದರೂ ಜೀವನದ ಸುಖ ದುಃಖ, ಸಾವು ನೋವುಗಳನ್ನೇ ಕುರಿತು ಆಳವಾಗಿ ಚಿಂತಿಸಿದ. ಒಲವಿನ ಮಡದಿಯನ್ನೂ ತೊಟ್ಟಿಲ ಮಗುವನ್ನೂ ಅರಮನೆಯನ್ನೂ ಬಿಟ್ಟು ನಡೆದ ; ಕಠಿಣ ತಪವನ್ನಾಚರಿಸಿ ಬುದ್ಧನಾದ.

ಅಜಂತದ ಭಿತ್ತಿಚಿತ್ರಗಳಲ್ಲಿ ಬುದ್ಧನ ಕಥೆ ಸುಂದರವಾಗಿ ರೂಪಿತವಾಗಿದೆ. ಬುದ್ಧನ ಪೂರ್ವಜನ್ಮದ ಕಥೆಗಳೇ ಜಾತಕ ಕಥೆಗಳು.

ಅಜಂತದಲ್ಲಿ ಜಾತಕ ಕಥೆಗಳನ್ನು ಆಧರಿಸಿದ ಚಿತ್ರಗಳಲ್ಲದೆ ಇತರ ಚಾರಿತ್ರಿಕ ಮತ್ತು ಆಲಂಕಾರಿಕ ಚಿತ್ರಗಳೂ ಇವೆ.

ಅಜಂತದ ಗುಹಾಲಯಗಳಿರುವುದು ಈಗಿನ ಮಹಾರಾಷ್ಟ್ರಕ್ಕೆ ಸೇರಿರುವ ಔರಂಗಾಬಾದ್ ಜಿಲ್ಲೆಯಲ್ಲಿ; ಅಂಕುಡೊಂಕಾಗಿ ಹರಿಯುವ ವಾಘೋರ ನದೀ ಕಣಿವೆಯಲ್ಲಿ; ರಮಣೀಯ ನಿಸರ್ಗದ ಮಡಿಲಲ್ಲಿ. ಈ ಗುಹೆಗಳು ಭಾರತೀಯ ಚಿತ್ರ, ಶಿಲ್ಪಕಲೆಗಳ ಆಗರ. ಬಹುಕಾಲ —ಸುಮಾರು 1200 ವರ್ಷ ಕಾಲ— ಈ ಗುಹೆಗಳು ಅಜ್ಞಾತವಾಗಿದ್ದುವು. ಕಳೆದ ಶತಮಾನದಲ್ಲಿ ಇವು ಆಕಸ್ಮಿಕವಾಗಿ ಆಂಗ್ಲ ಸವಾರನೊಬ್ಬನ ಕಣ್ಣಿಗೆ ಬಿದ್ದು, ಬೆಳಕಿಗೆ ಬಂದುವು.

ಇಲ್ಲಿ ಭಿತ್ತಿಚಿತ್ರಣ ಕಾರ್ಯ ಆರಂಭವಾದದ್ದು ಕ್ರಿ.ಪೂ. ಎರಡನೆಯ ಶತಮಾನದಲ್ಲಿ. ಈ ಕೆಲಸ ಸುಮಾರು ಎಂಟುನೂರು ಒಂಬೈನೂರು ವರ್ಷ ನಡೆಯಿತು. ಆಗ ಗುಹೆಗಳಲ್ಲಿ ಬೌದ್ಧ ಸನ್ಯಾಸಿಗಳು ವಾಸಿಸುತ್ತಿದ್ದರು. ಅವರ ದರ್ಶನಕ್ಕೂ ಉತ್ಸವಾದಿಗಳಲ್ಲಿ ಭಾಗವಹಿಸುವುದಕ್ಕೂ ಅನೇಕರು ಇಲ್ಲಿಗೆ ಬರುತ್ತಿದ್ದರು. ಬೌದ್ಧ ಧರ್ಮದ ಪ್ರಭಾವ ತಗ್ಗಿದಮೇಲೆ ಈ ಗುಹೆಗಳು ಉಪೇಕ್ಷಿಸಲ್ಪಟ್ಟುವು.

ಅಜಂತದ ಚಿತ್ರಗಳಲ್ಲಿ ಬುದ್ಧನ ಕಥೆಗಳಲ್ಲದೆ, ಪಕ್ಷಿ, ಪ್ರಾಣಿಗಳು, ಗಿಡ ಮರ ಬಳ್ಳಿಗಳು, ಮಾನವ ನಿರ್ಮಿತ ಗೃಹ ಅರಮನೆಗಳು, ವಿಲಾಸ–ವೈಭವಗಳು–ಇವೆಲ್ಲ ಮನೋಹರವಾಗಿ ಮೂಡಿವೆ. ಇವುಗಳ ನಡುವೆ ಮಾನವ ಆ ಪ್ರಪಂಚದ ಒಂದು ಅಂಗವಾಗಿ ಮೆರೆಯುತ್ತಾನೆ.

ಪ್ರಾಚೀನ ಭಾರತದ ಎಲ್ಲ ಕಲಾವಿದರಂತೆ ಅಜಂತದ ಕಲಾವಿದರೂ ಈ ಚಿತ್ರ ರಚನೆಯ ಮೂಲಕ ತಮ್ಮ ಆತ್ಮದ ಉನ್ನತಿಯನ್ನು ಅರಸಿದವರು. ಚಿತ್ರಗಳ ಪ್ರಶಾಂತ ಭಾವ, ಸೌಮ್ಯ ಮುಖಮುದ್ರೆ, ಲಲಿತ ಭಂಗಿ, ಚಲನ ವಿನ್ಯಾಸ ಇವು ವಿಶ್ವದಲ್ಲಿ ಸೃಷ್ಟಿತತ್ತ್ವ ತಾನೇ ತಾನಾಗಿ ಮೆರೆಯುವ ಬಗೆಯನ್ನು ಸೂಚಿಸುತ್ತವೆ. ಜಗತ್ತಿನ ಸುಖಗಳೆಲ್ಲ ಲಭಿಸಿದರೂ ಅವನ್ನು ಬಿಟ್ಟುಬಿಟ್ಟ ಸಿದ್ಧಾರ್ಥನ ಸತ್ವಪೂರ್ಣ ವೈರಾಗ್ಯ ಭಾವದ ಚಿತ್ರಣ ಹೃದಯಂಗಮವಾಗಿದೆ. ಈ ಚಿತ್ರಕಾರರು ಬುದ್ಧನನ್ನು ಕಂಡಿರಲಿಲ್ಲ. ಆದರೆ ಅವನ ಕರುಣೆ, ಸ್ನೇಹಪರತೆ, ಅನುಕಂಪಗಳನ್ನು ಅರಿತಿದ್ದರು. ಈ ತಿಳಿವಳಿಕೆಯ ಆಧಾರದಮೇಲೆ ಬುದ್ಧನ ಸುಂದರ ಕರುಣಾಮೂರ್ತಿಯನ್ನು ಜೀವಂತವಾಗಿ ಚಿತ್ರಿಸಿದ್ದಾರೆ. ಅಜಂತದ ಈ ಚಿತ್ರಗಳಲ್ಲಿ ಅರ್ಪಣ ಭಾವವೇ ಮುಖ್ಯ.


ಬುದ್ಧನ ಕುಮಾರ ರಾಹುಲ.

ಅಜಂತದ ಚಾರಿತ್ರಿಕ ಚಿತ್ರವೊಂದರಲ್ಲಿ, ಬಾದಾಮಿಯ ಚಾಳುಕ್ಯರ ವಂಶದ ಅರಸು ಪರಮೇಶ್ವರ ಪುಲಿಕೇಶಿಯು ಪರ್ಷಿಯ ದೇಶದ ರಾಯಭಾರಿಗೆ ಸಂದರ್ಶನ ಕೊಟ್ಟ ಐತಿಹಾಸಿಕ ಘಟನೆ ಚಿತ್ರಿಸಲ್ಪಟ್ಟಿದೆ ಎಂದು ಇತಿಹಾಸಕಾರರು ಹೇಳುತ್ತಾರೆ. ಅಜಂತದ ಭಿತ್ತಿಚಿತ್ರಗಳಲ್ಲಿ ಬಳಸಿರುವ ಬಣ್ಣ ಈ ಕಲಾವಿದರು ತಾವೇ ಸ್ಥಳೀಯವಾಗಿ ಸಿದ್ಧಪಡಿಸಿಕೊಂಡವು. ಇವು

**ಅಜಂತ ಭಿತ್ತಿಚಿತ್ರಗಳಲ್ಲಿ ಜಾತಕ ಕಥಾ ನಿರೂಪಣೆ**





ಭಗವಾನ್ ಬುದ್ಧನ ಪರಿನಿರ್ವಾಣ

ಇಂದಿಗೂ ಉಜ್ವಲವಾಗಿವೆ.

ಕೆಲವು ಪದಾರ್ಥಗಳನ್ನು ನುಣ್ಣಗೆ ಅರೆದು ಬಂಡೆಗಳಿಗೆ ಮೆತ್ತಿ ಧಾತುರಾಗದ ಕಡ್ಡಿಯಿಂದ ಚಿತ್ರ ಬರೆದಿದ್ದಾರೆ. ಇಲ್ಲಿ ಅಳಿಸಿ ತಿದ್ದಿ ಬರೆಯುವ ಪ್ರಶ್ನೆಯೇ ಇಲ್ಲ. ಆದರೂ ರೇಖೆಗಳ ಲಾಲಿತ್ಯ ಹಾಗೂ ಪ್ರಮಾಣಬದ್ಧತೆ ದೃಢವಾಗಿ ಮೂಡಿವೆ. ಇದು ಚಿತ್ರಕಾರರ ಹಿರಿಮೆಯನ್ನು ಸಾರುತ್ತದೆ.

ಅಜಂತದ ಗುಹೆಗಳು ಒಟ್ಟು 29. ಆದರೆ 1, 2, 9, 10, 16 ಮತ್ತು 17ನೆಯ ಗವಿಗಳಲ್ಲಿ ಮಾತ್ರ ಈಗ ಚಿತ್ರಗಳು ಉಳಿದಿವೆ.

ಭಿತ್ತಿಚಿತ್ರಗಳಂತೆ ವಾಸ್ತುಶಿಲ್ಪಕ್ಕೂ ಅಜಂತ ಹೆಸರಾಗಿದೆ. ಅಲ್ಲಿನ ಅಂಕಣಗಳು, ಗವಿಯ ಮುಂಭಾಗದಲ್ಲಿರುವ ಬೆಳಕು ಕಿಂಡಿ, ಅವುಗಳ ಕಂಬಗಳು, ಸ್ತೂಪಗಳು, ಮುಖಮಂಟಪಗಳು ಆಲಂಕಾರಿಕವಾಗಿ ಮಾಟವಾಗಿವೆ.

ಬೌದ್ಧರ ಗುಹಾಲಯ ರಚನೆಯ ಪರಂಪರೆಯ ಮುಂದುವರಿಕೆಯನ್ನು ಎಲ್ಲೋರದಲ್ಲಿ ಕಾಣಬಹುದು. ಎಲ್ಲೋರ ಕೂಡ ಮಹಾರಾಷ್ಟ್ರ ರಾಜ್ಯದಲ್ಲಿ, ಅಜಂತದಿಂದ ಸುಮಾರು 64 ಕಿ.ಮೀ. ನೈಋತ್ಯಕ್ಕಿದೆ. ಇಲ್ಲಿ ಬೌದ್ಧಧರ್ಮ ಮಾತ್ರವಲ್ಲದೆ ಪೌರಾಣಿಕ ಮತ್ತು ಜೈನ ಸಂಪ್ರದಾಯಗಳಿಗೆ ಸೇರಿದ ಗುಹಾಲಯಗಳೂ ಇವೆ.

ಎಲ್ಲೋರದಲ್ಲಿರುವ ಕೈಲಾಸ ಗುಹಾಲಯ ಜಗತ್ಪ್ರಸಿದ್ಧವಾದದ್ದು. ಒಂದೇ ಬಂಡೆಯಲ್ಲಿ ಕೊರೆದ ಇಂಥ ದೊಡ್ಡ ದೇವಾಲಯ ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲ. ಇದು 230ರ ಸುಮಾರಿನಲ್ಲಿ ರಾಷ್ಟ್ರಕೂಟ ವಂಶದ ಅರಸು ಒಂದನೆಯ ಕೃಷ್ಣನ ಕಾಲದಲ್ಲಿ ರಚಿತವಾಯಿತು. ಈ ಆಲಯದ ಶೈಲಿಯಲ್ಲಿ ದ್ರಾವಿಡ ಸಂಪ್ರದಾಯ ಎದ್ದುಕಾಣುತ್ತದೆ. ಸುಮಾರು 207 ಮೀ. ಉದ್ದವೂ 36 ಮೀ. ಅಗಲವೂ ಆದ ದೊಡ್ಡ ಬಂಡೆಯನ್ನು ಕಡೆದು ರಚಿಸಿರುವ ಎರಡಂತಸ್ತಿನ ಶಿವಾಲಯ ಇದು. ಇದರಲ್ಲಿ ಪ್ರಧಾನ ಆಲಯ, ಕೈಸಾಲೆ, ನಂದಿ ಮಂಟಪ, ಗೋಪುರ ಮುಂತಾದುವು ಇವೆ. ಇವುಗಳಲ್ಲಿ ಉತ್ತಮ ಮೂರ್ತಿಶಿಲ್ಪಗಳನ್ನೂ ಅಲಂಕಾರ ಶಿಲ್ಪಗಳನ್ನೂ ಕಾಣಬಹುದು.

ಈ ದೇವಾಲಯದ ಒಳಭಾಗದ ಬಂಡೆಯ ಮೇಲಂಮೈಯಲ್ಲಿ ಒಳ್ಳೆಯ ಭಿತ್ತಿಚಿತ್ರಗಳೂ ಇದ್ದುವು. ಈಗ ಇವುಗಳಲ್ಲಿ ಕೆಲವು ಮಾತ್ರ ಉಳಿದಿವೆ. ನಂದಿಮಂಟಪದ ಸಮೀಪದಲ್ಲಿ ರಾಮಾಯಣ, ಮಹಾಭಾರತದ ಕಥಾನಕಗಳನ್ನು ಸುಂದರವಾಗಿ ಕೊರೆದಿದ್ದಾರೆ. ಇವುಗಳಲ್ಲಿ ರಾವಣನು ಕೈಲಾಸ ಪರ್ವತವನ್ನು ಎತ್ತುವ ಕಥಾ ಪ್ರಸಂಗದ ಶಿಲ್ಪ ಅದ್ಭುತವಾದದ್ದು. ಕೈಲಾಸ ಪರ್ವತದ ಮೇಲೆ ಶಿವಪಾರ್ವತಿಯರಿದ್ದಾರೆ. ಕೈಲಾಸವನ್ನೆತ್ತುವ ರಾವಣನ ಪ್ರಯತ್ನದಿಂದ ಆ ಪರ್ವತ ಅಲುಗಾಡಿದಾಗ ಆ ಪರ್ವತವಾಸಿಗಳಲ್ಲಾದ ಕಳವಳ ತುಂಬ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ.

ಬೌದ್ಧ ಗವಿಗಳು 4ರಿಂದ 8ನೆಯ ಶತಮಾನದ ಅವಧಿಯವು. ಅನಂತರ ಹಿಂದೂ, ಜೈನ ಗವಿಗಳು ಕೊರೆಯಲ್ಪಟ್ಟುವು. ಇಲ್ಲಿನ ಮೂರ್ತಿ ಶಿಲ್ಪಗಳೆಲ್ಲ ಬೃಹತ್ ಗಾತ್ರದವು. ಬೌದ್ಧಗುಹೆಗಳಲ್ಲಿ ಬುದ್ಧನ ವಿವಿಧ ರೀತಿಯ ಪ್ರತಿಮೆಗಳಿವೆ. ಬಹುಮಟ್ಟಿಗೆ ದೇವದೇವತೆಗಳೇ ಎಲ್ಲೋರದ ಗುಹೆಗಳ ಶಿಲ್ಪವಸ್ತು. ಹಿಂದೂ ಗುಹೆಗಳ ಶಿಲ್ಪಗಳಿಗೆ ಪೌರಾಣಿಕ ಕಥೆಗಳೇ ವಸ್ತುಗಳು.



ಎಲ್ಲೋರದ ಕೈಲಾಸ ದೇವಾಲಯ

ಎಲ್ಲೋರದ ಶಿಲ್ಪಗಳಲ್ಲಿ ಅಲಂಕರಣ ಕೆಲಸ ಅಜಂತಕ್ಕಿಂತ ಕಡಮೆ. ಜಗತ್ತಿಗೆ ಭಾರತೀಯ ಕಲೆಯ ಅಪೂರ್ವ ಕಾಣಿಕೆ ಅಜಂತ, ಎಲ್ಲೋರ.

ನೋಡಿ : ಭಾರತೀಯ ಚಿತ್ರಕಲೆ; ಭಾರತೀಯ ಶಿಲ್ಪ ; ವಾಸ್ತುಶಿಲ್ಪ ; ಭಿತ್ತಿಚಿತ್ರ ; ಸ್ತೂಪ ; ಅಜಂತ, ಎಲ್ಲೋರ –ಸಂಪುಟ ೧

## ಅಣಕವಾಡು

" ವಿದ್ದೆಯ ಲೋಕದಿ ಕನಸಿನ ಲೈಬ್ರರಿ,  
ತಿರುವಿದೆ, ನುಂಗಿದೆ, ಪುಟಗಳ ಮುರಿದು,  
ನೋಟ್ಸನು ತೆಗೆದೆ, ಸಮ್ಮರಿ ಬರೆದೆ "

"ಕನಸಿನ ಘೋರ ಪರೀಕ್ಷೆಯಲಿ
ನುಗ್ಗಿದೆ ನಾನಾ ಹಾಲಿನಲಿ
ಒಗ್ಗಿನ ಶಕುನದ ಬಲಗಾಲಿನಲಿ
ನೀರನು ಕುಡಿದೆ, ಬುರುಡೆಯ ಕೆರದೆ
ಕಾಗದ ತುಂಬ ಗರಗರ ಬರೆದೆ"

ನಾ. ಕಸ್ತೂರಿ ಬರೆದಿರುವ ಈ ಅಣಕವಾಡು ಕುವೆಂಪು ಅವರ 'ಕಲ್ಕಿ' ಕವನದ ಅನುಕರಣ. ಅಲ್ಲಿ ಗಾಂಭೀರ್ಯ ; ಇಲ್ಲಿ ಹಾಸ್ಯದ ಬುಗ್ಗೆ.

ಒಬ್ಬ ಸಾಹಿತಿಯ ವಿಶಿಷ್ಟ ಶೈಲಿ, ಭಾಷೆ, ಛಂದಸ್ಸುಗಳನ್ನು ಅದೇ ರೀತಿ ಬಳಸಿಕೊಂಡು ಆ ಕವಿಯ ಗಂಭೀರವಾದ ಕಾವ್ಯ ಅಥವಾ ಕವನಕ್ಕೆ ಪ್ರತಿಯಾಗಿ ರಚಿಸುವ ಶುದ್ಧ ಹಾಸ್ಯಮಯ ಕೃತಿಯೇ ಅಣಕವಾಡು. ದೊಡ್ಡವರ ಮುಖಭಾವವನ್ನಾಗಲೀ ಧ್ವನಿಯನ್ನಾಗಲೀ ಪುಟಾಣಿ ಮಕ್ಕಳು ಅಣಕಿಸಿದಾಗ ಅದನ್ನು ನೋಡಿದವರಿಗೆ ಕೇಳಿದವರಿಗೆ ನಗು ಬರುತ್ತದೆ. ಹಾಗೆ ಅಣಕಿಸಿಕೊಂಡ ದೊಡ್ಡವರೂ ನಗುತ್ತಾರೆ. ಅದು ಶುದ್ಧ ಹಾಸ್ಯ. ಮಗುವಿನ ಅಣಕದಲ್ಲಿ ದೂಷಣೆ ಅಥವಾ ಚುಚ್ಚು ಭಾವನೆ ಇರುವುದಿಲ್ಲ. ಅಣಕವಾಡಿನಲ್ಲಿಯೂ ಸಾಮಾನ್ಯವಾಗಿ ಶುದ್ಧ ಹಾಸ್ಯಭಾವವಿರುತ್ತದೆ.

ಅಣಕವಾಡನ್ನು ಓದಿದವರಿಗೆ ಮೂಲವನ್ನು ಓದಬೇಕೆಂಬ ಕುತೂಹಲವೂ ಉಂಟಾಗುತ್ತದೆ.

ಆದರೆ ಅಣಕವಾಡನ್ನು ವಿಡಂಬನೆಗಾಗಿ ಬಳಸಿಕೊಂಡಾಗ ಅದು ಹರಿತವಾದ ಆಯುಧವಾಗಬಲ್ಲುದು. ಜಿ. ಪಿ. ರಾಜರತ್ನಂ ಅವರ 'ಮಹಾಕವಿ ಪುರುಷ ಸರಸ್ವತಿ' ಇಂಥದು. ಇದರಲ್ಲಿ ಗ್ರಂಥ ಸಂಪಾದನಾ ಕಾರ್ಯದ ವಿಡಂಬನೆ ಇದೆ. ಪ್ರಾಚೀನ ಕವಿಗಳ ಕಾವ್ಯಶೈಲಿಯನ್ನು ಕುರಿತ ಅಣಕವೂ ಇದೆ. ಹಿಂದಿನ ಕವಿಗಳ ಆತ್ಮಪ್ರಶಂಸೆಯ ಬಗೆಗೆ ರಾಜರತ್ನಂ :

" ಹುಟ್ಟಿದವಸುಳಿ ಕಟ್ಟಿ ಚಟ್ಟವ
ಸುಟ್ಟರೂ ಭಟ್ಟಾಗದೆಂದವ
ರಿಟ್ಟು ನುಡಿದರು ದಿಟ್ಟ ಮುನಿಗಳು ಕೊಟ್ಟ ಕಿವಿಗಳಿಗೆ
ಮುಟ್ಟದೆಯೆ ರಸ ಘಟ್ಟಿಯನು ಬಲು
ಕೆಟ್ಟ ಕಾವ್ಯವಿದೆಂದು ಮೊಟ್ಟುವ
ಮಟ್ಟು ಬುದ್ಧಿಯ ಮಟ್ಟಗೆಡಹುವ ಗಟ್ಟಿಗರು ನಾವು "

ಕನ್ನಡದಲ್ಲಿ ರಾಜರತ್ನಂ, ಕಸ್ತೂರಿ ಇವರಲ್ಲದೆ ರಾ. ಶಿ., ದಿನಕರ ದೇಸಾಯಿ, ವಿ. ಜಿ. ಭಟ್ಟ, 'ಬುಳ್ಳ', ಮೊದಲಾದವರು ಅನೇಕ ಉತ್ತಮ ಅಣಕವಾಡುಗಳನ್ನು ಬರೆದಿದ್ದಾರೆ. ಬೇಂದ್ರೆಯವರು ತಮ್ಮ 'ಹಕ್ಕಿ ಹಾರುತಿದೆ ನೋಡಿದಿರಾ' ಕವನವನ್ನು ಅಣಕಿಸಿ ತಾವೇ 'ಬೆಕ್ಕು ಹಾರುತಿದೆ ನೋಡಿದಿರಾ' ಎಂದು ಬರೆದಿದ್ದಾರೆ.



ರಾಜರತ್ನಂ

ಇಂಗ್ಲಿಷಿನಲ್ಲಿ ಇಂಥ ಅಣಕವಾಡು ಬಹು ಹಿಂದಿನಿಂದಲೂ ಕಂಡುಬರುತ್ತದೆ. ಶೇಕ್ಸ್‌ಪಿಯರ್ ತನ್ನ 'ಹ್ಯಾಮ್ಲೆಟ್' ನಾಟಕದಲ್ಲಿ ಕ್ರಿಸ್ಟಫರ್ ಮಾರ್ಲೋನ ನಾಟಕೀಯ ಶೈಲಿಯ ಅಣಕವನ್ನು ಮಾಡಿದ. ಶೇಕ್ಸ್‌ಪಿಯರನ ಬರೆವಣಿಗೆಯ ಅಣಕವನ್ನು ಮುಂದಿನವರು ಮಾಡಿದರು. ಪೋಪ್ ಇಂಥ ಅನೇಕ ಅಣಕವಾಡುಗಳನ್ನು ಬರೆದ.



ನಾ. ಕಸ್ತೂರಿ

ಯಾವ ಕಾವ್ಯವನ್ನಾಗಲೀ ಕವಿಯನ್ನಾಗಲೀ ತಮ್ಮ ಅಣಕದ ವಸ್ತುವನ್ನಾಗಿ ಇಟ್ಟುಕೊಳ್ಳದೆ, ಕೇವಲ ಹಾಸ್ಯಕ್ಕಾಗಿ ಮಾತ್ರವೇ ಬರೆದ ಕವಿತೆಗಳೂ ಕೆಲವುಂಟು.

ನಾಸೀಪುಡಿಯನು
ಮೂಗಿಗೆ ತುರುಕಿ
ಸೀನಿದ ನೆರೆಮನೆ
ಶಾಂಭಟ್ಟ
ಎಚ್ಚರ ತಪ್ಪಿತು
ಸನಿಯದ ಮುದುಕಿ
ಅದುರಿತು ನೆಲ,
ನಮ್ಮನೆ ಅಟ್ಟ

—ವಿ. ಜಿ. ಭಟ್ಟ : 'ತುಂಟನ ಪದಗಳು'

ಇಂಥ ಕವನಗಳು ಹಾಸ್ಯ ಕವನಗಳ ಗುಂಪಿನವು.

ಇಂಗ್ಲಿಷಿನಲ್ಲಿ ಇಂಥ ಸಾಹಿತ್ಯ ಪ್ರಕಾರಕ್ಕೆ ಪ್ಯಾರಡಿ ಎನ್ನುತ್ತಾರೆ. ನಿರ್ದಿಷ್ಟ ಯೋಜನೆಯುಳ್ಳ ಐದು ಸಾಲುಗಳ ಲಿಮರಿಕ್ ಕವಿತೆಯೂ ಈ ಜಾತಿಯದು. ಇಂಥವನ್ನು ಜನಪ್ರಿಯಗೊಳಿಸಿದವರು ಎಡ್ವರ್ಡ್ ಲಿಯರ್ ಮತ್ತು ಲೂಯಿಸ್ ಕ್ಯಾರಲ್. ಇವರ ಕವನಗಳು ಬುದ್ಧಿವಂತಿಕೆಯ ಹಾಸ್ಯದಿಂದ ಕೂಡಿದ್ದು ಎಂಥವರಿಗೂ ನಗುಬರಿಸುತ್ತವೆ. ಇಂಥ ಕವನಗಳಿಗೆ ವಸ್ತು ಇರಲೇಬೇಕುಎಂದಿಲ್ಲ.



ರಾ. ಶಿ.

'ಸಮಯ ಬಂದಿದೆ'
ಎಂದಿತು ವಾಲ್‌ರಸ್
'ಮಾತಾಡಲು ನಮಗೆ :



ವಿ. ಜಿ. ಭಟ್ಟ



ದಿನಕರ ದೇಸಾಯಿ

ಏಕ್ಕಡ—ಹಡಗು—ಮುಚ್ಚುವ ಮೇಣ—ಮೂಲಂಗಿ—ದೊರೆಗಳ ಬಗೆಗೆ—ಸಾಗರವೇತಕೆ ಕುದಿಯುತಲಿಹುದು ಹಂದಿಗೆ ರೆಕ್ಕೆಗಳಿರುವುದೆ?—ಎಂದು' ಲೂಯಿಸ್ ಕ್ಯಾರಲನ ಒಂದು ಕವನದಲ್ಲಿ ಬಡಗಿಗೆ ಕಡಲ ಸಿಂಹ (ವಾಲ್‌ರಸ್) ಆಡಿದ ಮಾತು ಮೇಲಿನದು.

ಹೀಗೆ ಅಸಂಬದ್ಧ ವಿಷಯಗಳೂ ಹಾಸ್ಯಕವನಗಳಿಗೆ ವಸ್ತುವಾಗಬಲ್ಲುವು. ಎಡ್ವರ್ಡ್ ಲಿಯರನ 'ಬುಕ್ ಆಫ್ ನಾನ್‌ಸೆನ್ಸ್' ಇಂಥ ಅರ್ಥವಿಲ್ಲದ ಹಾಸ್ಯಕವನಗಳ ಜನಪ್ರಿಯ ಸಂಕಲನ.

ನೋಡಿ : ಎಡ್ವರ್ಡ್ ಲಿಯರ್ ; ಚುಟಕ ; ಲೂಯಿಸ್ ಕ್ಯಾರಲ್

## ಅ ನ ಕೃ

ಹದಿನಾರು ವರ್ಷದ ಆ ಹುಡುಗನಿಗೆ 'ರತ್ನಾವಳಿ'. 'ನಿರುಪಮಾ', 'ಶಾಕುಂತಲ'ದಂಥ ಹಳೆಯ ನಾಟಕಗಳನ್ನು ನೋಡಿ ನೋಡಿ ಬೇಸರವಾಗಿ ಹೋಗಿತ್ತು. ಸುತ್ತಮುತ್ತಲೂ ಕಾಣುವ ಸಮಾಜದ ಚಿತ್ರಣವನ್ನೇಕೆ ರಂಗದ ಮೇಲೆ ತರಬಾರದು ? ಓಬೀರಾಯನ ಕಾಲದ ನಾಟಕಗಳನ್ನೇ ಆಡುತ್ತಿರಬೇಕೆ ? ಎಂಬುದು ಅವನ ಪ್ರಶ್ನೆ. ತನ್ನ ಮನೆಗೆ ಬರುತ್ತಿದ್ದ ನಾಟಕ ಶಿರೋಮಣಿ ವರದಾಚಾರ್ಯರನ್ನು ಈ ಹುಡುಗ ಒಂದು ದಿನ ಕೇಳಿಯೇ ಬಿಟ್ಟ—ಸಾಮಾಜಿಕ ನಾಟಕಗಳನ್ನೇಕೆ ನೀವು ಆಡುತ್ತಿಲ್ಲ? ಎಂದು. "ಅಂಥ ನಾಟಕಗಳು ನಮ್ಮಲ್ಲಿಲ್ಲ, ಬರೆದುಕೊಡುವವರೂ ಇಲ್ಲ" ಎಂದು ಉತ್ತರ ಕೊಟ್ಟರು ವರದಾಚಾರ್ಯರು. "ನಾನು ಬರೆದುಕೊಡುತ್ತೇನೆ ಆಡುತ್ತೀರಾ ?" ಎಂದ ಹುಡುಗ. ಈ ಸವಾಲು ಆಚಾರ್ಯರನ್ನು ಚಕಿತಗೊಳಿಸಿತು. 'ಆಗಲಿ, ನಾಟಕ ಬರಿ, ನೋಡೋಣ' ಎಂದರು. ಮಾರನೆಯ ದಿನವೇ ತನ್ನ ಮೂರಂಕದ 'ಮದುವೆಯೋ, ಮನೆ ಹಾಳೋ ?' ನಾಟಕ ಬರೆದು ಹಸ್ತಪ್ರತಿಯನ್ನು ಹುಡುಗ ಆಚಾರ್ಯರ ಕೈಗಿತ್ತ. ಅದನ್ನೋದಿದ ಆಚಾರ್ಯರು ತುಂಬ ಸಂತೋಷಪಟ್ಟು "ನೀನು ಸಾಹಿತ್ಯ ರಂಗದಲ್ಲಿ ಕೀರ್ತಿಶಾಲಿಯಾಗುತ್ತೀ" ಎಂದು ಹರಸಿದರು.

ಹದಿನಾರು ವರ್ಷದ ಆ ಹುಡುಗನೇ ಅ ನ ಕೃ.

ಅ ನ ಕೃ ಹುಟ್ಟಿದ್ದು 1908ರ ಮೇ 9ರಂದು, ಕೋಲಾರದಲ್ಲಿ. ತಂದೆ ಅರಕಲಗೂಡು ನರಸಿಂಗರಾಯರು. ತಾಯಿ ಅನ್ನಪೂರ್ಣಮ್ಮ. ಅನಕೃಗೆ ಶಾಲೆಯಲ್ಲಿ ಪಾಠಗಳಲ್ಲಿ ಅಷ್ಟಾಗಿ ಆಸಕ್ತಿ ಇರದಿದ್ದರೂ ಸಾಹಿತ್ಯ ಕಲೆಗಳಲ್ಲಿ ಬಹಳ ಶ್ರದ್ಧೆ. ಬೆಂಗಳೂರು ದೇಶೀಯ ವಿದ್ಯಾಶಾಲೆಯಲ್ಲಿ ಅವರ ಗುರುಗಳಾಗಿದ್ದ ಸಂಪದ್ಗಿರಿರಾವ್, ಕಂದಾಡೆ ಕೃಷ್ಣ ಅಯ್ಯಂಗಾರ್ ಮೊದಲಾದವರ ವಿದ್ವತ್ತು, ದೇಶಾಭಿಮಾನ ಇವರ ಮೇಲೆ ಪ್ರಭಾವ ಬೀರಿತು. ಶಾಲೆಯಲ್ಲಿದ್ದಾಗಲೇ ಉತ್ತಮ ವಾಗ್ಮಿ ಮತ್ತು ಲೇಖಕ ಎಂದು ಅನಕೃ ಹೆಸರು ಪಡೆದಿದ್ದರು. ಎಸ್.ಎಸ್.ಎಲ್.ಸಿ. ಯನ್ನು ಮುಗಿಸಿದ ಅನಕೃಗೆ ಮುಂದಿನ ವಿದ್ಯಾಭ್ಯಾಸದಲ್ಲಿ ಆಸಕ್ತಿ ಹುಟ್ಟಲಿಲ್ಲ. ಅವರು ಲೇಖಕರಾಗಿಯೇ ಉಳಿಯಲು ನಿರ್ಧರಿಸಿದರು.

ಅ ನ ಕೃ 1929ರಲ್ಲಿ 'ಕಥಾಂಜಲಿ' ಎಂಬ ಸಣ್ಣಕಥೆಗಳ ಮಾಸ ಪತ್ರಿಕೆಯೊಂದನ್ನು ಪ್ರಾರಂಭಿಸಿ ಅದನ್ನು ಕೊಂಚ ಕಾಲ ನಡೆಸಿದರು. ಅನಂತರ ಅದರ ಸಂಪಾದಕತ್ವವನ್ನು ಕೈಬಿಟ್ಟು, 1935ರಲ್ಲಿ 'ಬಾಂಬೆ ಕ್ರಾನಿಕಲ್' ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ ಸ್ವಲ್ಪ ಕಾಲ ಕೆಲಸ ಮಾಡಿದರು. ಅಲ್ಲಿಯ ವಾತಾವರಣ ಅವರಿಗೆ ಸರಿಬೀಳದ ಕಾರಣ ಬೆಂಗಳೂರಿಗೆ ಹಿಂತಿರುಗಿ, ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿಗಳಿಗೆ ವಿೂಸಲಾಗಿದ್ದ 'ವಿಶ್ವವಾಣಿ' ಮಾಸ ಪತ್ರಿಕೆಯ ಪ್ರಕಟಣೆಯನ್ನು ಕೈಗೊಂಡು ಅದರ ಸಂಪಾದಕರಾದರು. ಆದರೆ ಈ ಹೊಣೆಗಾರಿಕೆಯಿಂದ ತಾವು ನಿಯೋಜಿಸಿಕೊಂಡಿದ್ದ ಕಾದಂಬರಿಗಳನ್ನು ಬರೆಯಲು ಸಾಕಷ್ಟು ಕಾಲಾವಕಾಶ ದೊರೆಯದೆ ಹೋದಾಗ, ಈ ಪತ್ರಿಕೆಯ ಸಂಪಾದಕತ್ವವನ್ನು ಕೈಬಿಟ್ಟರು; ಕಥಾಸಾಹಿತ್ಯ ರಚನೆಗೆ ಮನಸ್ಸು ಕೊಟ್ಟರು.



ಕಾದಂಬರಿ ಸಾರ್ವಭೌಮ ಅ ನ ಕೃ

ಜೊತೆ ಜೊತೆಯಲ್ಲಿಯೇ ಕೃಷ್ಣರಾಯರು ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಆಸಕ್ತಿ ವಹಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಧ್ಯೇಯ ಧೋರಣೆ ಸಾಧನೆಗಳನ್ನು ಜನತೆಗೆ ಪರಿಚಯ ಮಾಡಿಸುವ ಉದ್ದೇಶದಿಂದ ಬಿ. ಎಂ. ಶ್ರೀಕಂಠಯ್ಯನವರು 'ಕನ್ನಡ ನುಡಿ' ಪತ್ರಿಕೆಯನ್ನು ಆರಂಭಿಸಿದಾಗ ಅ ನ ಕೃ ಅವರನ್ನು ಅದರ ಮೊದಲನೆಯ ಸಂಪಾದಕರಾಗಿ ಅವರು ನಿಯಮಿಸಿದರು. ಆದರೆ ಸ್ವಲ್ಪ ಕಾಲಾನಂತರ ಉಂಟಾದ ಭಿನ್ನಾಭಿಪ್ರಾಯಗಳಿಂದ ಅ ನ ಕೃ ತಮ್ಮ ಸಂಪಾದಕತ್ವಕ್ಕೆ ರಾಜೀನಾಮೆ ಇತ್ತರು.

ಈ ವೇಳೆಗಾಗಲೇ ಅ ನ ಕೃ ಕಾದಂಬರಿ ರಚನೆಯಲ್ಲಿ ತಕ್ಕಮಟ್ಟಿಗೆ ಮುಂದುವರಿದಿದ್ದರು. 1934ರಲ್ಲಿ ಮೊದಲ ಕಾದಂಬರಿ 'ಜೀವನಯಾತ್ರೆ' ಪ್ರಕಟವಾಗಿತ್ತು. ಕಾದಂಬರಿಕಾರರಾಗಿ ಅನಕೃ ಪ್ರಖ್ಯಾತರಾದದ್ದು ಅವರ 'ಸಂಧ್ಯಾರಾಗ' ದಿಂದ. 'ಮಂಗಳಸೂತ್ರ', 'ನಟಸಾರ್ವಭೌಮ', 'ಗೃಹಲಕ್ಷ್ಮಿ', ಮೊದಲಾದುವು ಇವರ ಇತರ ಪ್ರಖ್ಯಾತ ಕಾದಂಬರಿಗಳು.

[illegible] ಧ್ಯೇಯ ಹೋರಾಟ ಗಳ [illegible] ಅ ನ ಕೃ ಅವರ ದೃಷ್ಟಿ. ಈ ಕೃತಿಯು ಅವರ ಸಾಹಿತ್ಯ ದೃಷ್ಟಿಗೆ ಸಾಕ್ಷಿ. ಈ ನಿಲುವಿನಿಂದ ಅವರು ಅಖಿಲ ಭಾರತ ಪ್ರಗತಿಶೀಲ ಸಾಹಿತ್ಯ ಚಳುವಳಿಯೊಡನೆ ಸಂಬಂಧ ಬೆಳೆಸಿ, 1943-44ರಲ್ಲಿ ಕರ್ನಾಟಕದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿಯನ್ನು ಪ್ರಾರಂಭಿಸಿದರು. ಈ ಚಳುವಳಿ ಸಾಹಿತ್ಯ ಕ್ಷೇತ್ರದಲ್ಲಿ ಭಾರೀ ವಾದ ವಿವಾದವನ್ನು ಆರಂಭಿಸಿತು. ಮುಂದೆ ಕರ್ನಾಟಕದ ಪ್ರಗತಿಶೀಲ ಸಾಹಿತ್ಯ ವರ್ಗದಲ್ಲಿ ಭಿನ್ನಾಭಿಪ್ರಾಯಗಳುಂಟಾದುವು. ಅ ನ ಕೃ ರವರ ಕೆಲವು ಕಾದಂಬರಿಗಳು ಕಟು ಟೀಕೆಗೆ ಗುರಿಯಾದುವು. 'ಅಶ್ಲೀಲ' ಎಂಬುದು ಓದುಗರ ದೃಷ್ಟಿಯಲ್ಲಿದೆಯೇ ಹೊರತು ಕೃತಿಯಲ್ಲಿಲ್ಲ ಎಂಬುದನ್ನು ಸಮರ್ಥಿಸಲು, 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' ಎಂಬ ಗ್ರಂಥವನ್ನು ಅ ನ ಕೃ ಬರೆದು, ತಮ್ಮ ನಿಲುವನ್ನು ಎತ್ತಿಹಿಡಿದರು.

ಅ ನ ಕೃ ಅವರ ಕೆಲವು ಕಾದಂಬರಿಗಳಲ್ಲಿ ಕಟು ವಾಸ್ತವತೆಯನ್ನು ಕಾಣುವಂತೆ, ಅವರ ಇನ್ನು ಕೆಲವು ಕಾದಂಬರಿಗಳಲ್ಲಿ ಆದರ್ಶ ಪಾತ್ರ ಸೃಷ್ಟಿಯನ್ನೂ ಕಾಣುತ್ತೇವೆ. ಕಥೆ ಕಾದಂಬರಿಗಳ ವಸ್ತು ಯಾವುದೇ ಇರಲಿ ಕಥೆಯನ್ನು ಅತ್ಯಂತ ಸುಂದರವಾದ ಜೀವಂತ ಶೈಲಿಯಲ್ಲಿ ಹೇಳಬಲ್ಲ ಕಲೆ ಅ ನ ಕೃ ಅವರಿಗೆ ಸಿದ್ಧಿಸಿತ್ತು. ಅವರು ಹುಟ್ಟು ಕತೆಗಾರರು. ಜನಪ್ರಿಯತೆಯಲ್ಲಿ ಅ ನ ಕೃರನ್ನು ಮೀರಿಸಿದ ಸಮಕಾಲೀನ ಕನ್ನಡ ಕಾದಂಬರಿಕಾರರಿಲ್ಲ. 'ಕಾದಂಬರಿ ಸಾರ್ವಭೌಮ' ಎಂಬ ಬಿರುದು ಪ್ರಚಾರಕ್ಕೆ ಬಂತು.

ಅವರು ಅನೇಕ ಸಣ್ಣ ಕಥೆಗಳನ್ನೂ ಹಲವು ನಾಟಕಗಳನ್ನೂ ಬರೆದಿದ್ದಾರೆ. 'ಕಾಮನ ಸೋಲು' (1942), 'ಅಗ್ನಿಕನ್ಯೆ' (1950) ಮೊದಲಾದುವು ಅವರ ಪ್ರಮುಖ ಕಥಾ ಸಂಕಲನಗಳು.

ಅ ನ ಕೃ ಬರೆದ ಜೀವನ ಚಿತ್ರಗಳಲ್ಲಿ 'ಕನ್ನಡಕುಲ ರಸಿಕರು', 'ಕರ್ನಾಟಕದ ಕಲಾವಿದರು', 'ಕೈಲಾಸಂ' ಮೊದಲಾದುವೂ 'ನನ್ನನ್ನು ನಾನೇ ಕಂಡೆ' ಮತ್ತು 'ಬರಹಗಾರನ ಬದುಕು' ಎಂಬ ಆತ್ಮಕಥನಗಳೂ ಗಣನೀಯವಾದುವು. ಅ ನ ಕೃ ಅವರ ಕೆಲವು ಕೃತಿಗಳು ವಿವಿಧ ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ. ಇವರು ಸಂಪಾದಿಸಿದ 'ಭಾರತೀಯ ಕಲಾದರ್ಶನ' ಮತ್ತು 'ಭಾರತೀಯ ಸಂಸ್ಕೃತಿ ದರ್ಶನ' ಕನ್ನಡ ವೈಚಾರಿಕ ಸಾಹಿತ್ಯದ ಎರಡು ಅಮೂಲ್ಯ ಕೃತಿಗಳು.

ಕನ್ನಡ ಪ್ರಚಾರಕ್ಕಾಗಿ ಅ ನ ಕೃ ಇಡೀ ಕರ್ನಾಟಕವನ್ನು ಹಲವಾರು ಬಾರಿ ಸುತ್ತಿ, ಭಾಷಣಗಳನ್ನಿತ್ತು ಜನತೆಯಲ್ಲಿ ಕನ್ನಡದ ಅಭಿಮಾನ ಬೆಳೆಯುವಂತೆ ಮಾಡಿದರು. "ಕನ್ನಡ ಸಾಹಿತ್ಯದ ಕಹಳೆ ಕಡಲಾಚೆ ಹೋಗಬೇಕು, ಪ್ರಯತ್ನದಿಂದಲ್ಲ, ಪ್ರತಿಭೆಯಿಂದ" ಎಂಬುದು ಅವರ ಆಸೆಯಾಗಿತ್ತು.

1960ರಲ್ಲಿ ಮಣಿಪಾಲದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿ ಆಯ್ಕೆಗೊಂಡರು.

ರಾಜ್ಯದ ಆಡಳಿತ ಭಾಷೆ ಕನ್ನಡವಾಗಬೇಕು, ಹೆಸರು ಕರ್ನಾಟಕ ಎಂದು ಅಂಗೀಕೃತವಾಗಬೇಕು. ಕರ್ನಾಟಕದಲ್ಲಿ ಕನ್ನಡಿಗರಿಗೆ ಪ್ರಾಧಾನ್ಯವಿರುವಂತಾಗಬೇಕು ಎಂಬುದೇ ಅವರು 1962ರಲ್ಲಿ ಆರಂಭಿಸಿದ ಕನ್ನಡ ಚಳುವಳಿಯ ಪ್ರಧಾನ ಉದ್ದೇಶ. ಈ ಚಳುವಳಿ ಕನ್ನಡಿಗರಲ್ಲಿ ಆತ್ಮಾಭಿಮಾನವನ್ನೂ ಜಾಗೃತಿಯನ್ನೂ ಉಂಟುಮಾಡಿತು.

ಅ ನ ಕೃ ಅವರಿಗೆ ಸಾಹಿತ್ಯದಲ್ಲಿ ಮಾತ್ರವಲ್ಲದೆ ಕಲೆ, ಧರ್ಮ, ಇತಿಹಾಸ, ಮೊದಲಾದುವುಗಳಲ್ಲೂ ಪಾಂಡಿತ್ಯವಿತ್ತು. ಚಿತ್ರಕಲೆಯಲ್ಲಿ ಇವರಿಗಿದ್ದ ಅಗಾಧ ಪಾಂಡಿತ್ಯವನ್ನು 'ಭಾರತೀಯ ಚಿತ್ರ ಕಲೆಯಲ್ಲಿ ರಾಜಾ ರವಿವರ್ಮನ ನ್ಯಾಸ್' ಎಂಬ ಕೃತಿಯಲ್ಲಿ ಕಾಣಬಹುದು. ಸಂಗೀತದ ವಿಚಾರದಲ್ಲಿ ಅವರ ಜ್ಞಾನ ಅಪಾರವಾದ್ದು. ಈ ಗಾಯಕ ಅನುಸರಿಸುವುದು ಇಂಥದೇ ಘರಾಣೆ ಎಂದು ಹೇಳಬಲ್ಲವರಾಗಿದ್ದರು, ಅ ನ ಕೃ. ಅವರು ರಾಜ್ಯದ ಮೂರು ಅಕಾಡೆಮಿಗಳ – ಸಾಹಿತ್ಯ, ಲಲಿತ ಕಲಾ ಮತ್ತು ಸಂಗೀತ ನಾಟಕ ಅಕಾಡೆಮಿಗಳ – ಸದಸ್ಯರಾಗಿದ್ದರು. 1970ರಲ್ಲಿ ರಾಜ್ಯದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರನ್ನಾಗಿ ಅವರನ್ನು ನೇಮಿಸಲಾಯಿತು.

ಅದೇ ವರ್ಷದ ಆರಂಭದಲ್ಲಿ ಅವರಿಗೆ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ ಲಿಟ್ ಪದವಿಯನ್ನಿತ್ತು ಗೌರವಿಸಿತು.

"ಒಳ್ಳೆಯ ಸ್ನೇಹಿತರು, ಒಳ್ಳೆಯ ಪುಸ್ತಕಗಳಿಗಿಂತ ಉತ್ತಮವಾದವ್ದನ್ನು ಏನು ನಿರೀಕ್ಷಿಸಲಿ?" ಎನ್ನುತ್ತಿದ್ದ ಅ ನ ಕೃರಿಗೆ ಸ್ನೇಹಿತರೆಂದರೆ ಪ್ರಾಣ. ಮಿತ್ರರನ್ನು ಮನೆಗೆ ಕರೆದೊಯ್ದಾಗ ಅವರು ಕೊಡುತ್ತಿದ್ದ ಅತಿಥಿ ಸತ್ಕಾರ —ಅವರ ಕಾದಂಬರಿಗಳಲ್ಲಿ ಬರುವ ಆದರ್ಶ ಚಿತ್ರಣದ ನಿಜರೂಪವಾಗುತ್ತಿತ್ತು.

ಉದಯೋನ್ಮುಖ ಬರೆಹಗಾರರ ಮೇಲೆ ಅ ನ ಕೃಗೆ ತುಂಬ ಪ್ರೀತಿ. ಅಭಿಮಾನ. ಅವರಿಗೆ ಯಾವ ರೀತಿಯಲ್ಲಾದರೂ ಸಹಾಯ ಮಾಡಲು ಸದಾ ಸಿದ್ಧ. ಲೇಖಕರನ್ನು ಹುರಿದುಂಬಿಸಿ ಅವರಿಂದ ಬರೆಸುತ್ತಿದ್ದುದು ಮಾತ್ರವಲ್ಲದೆ, ಅವರು ಬರೆದುದಕ್ಕೆ ಒಪ್ಪವಿಟ್ಟು, ಅದರ ಪ್ರಕಟಣೆಗೂ ನೆರವಾಗುತ್ತಿದ್ದರು. ಕಲಾವಿದರ ವಿಚಾರದಲ್ಲೂ ಅಷ್ಟೆ. ಸಾಕಷ್ಟು ಸಂಪಾದನೆಯಿಲ್ಲದ ಅನೇಕ ಮಂದಿ ಕಲಾವಿದರಿಗೆ ರಾಜ್ಯ ಅಕಾಡೆಮಿಗಳಿಂದ ಧನ ಸಹಾಯ, ವಿಶ್ರಾಂತಿ ವೇತನಗಳನ್ನು ಕೊಡಿಸಲು ನಿರಂತರವಾಗಿ ಶ್ರಮಿಸಿದರು. ಹಲವಾರು ಸಂದರ್ಭಗಳಲ್ಲಿ ತಾವೇ ಅವರಿಗೆ ಸಹಾಯ ನೀಡಿದ್ದೂ ಉಂಟು.

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಇನ್ನೂರ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ ಅ ನ ಕೃ ಆಧುನಿಕ ಗದ್ಯ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಮಹತ್ತರವಾದದ್ದು.

ಅ ನ ಕೃ ಒಳ್ಳೆಯ ಬರೆಹಗಾರರು ಮಾತ್ರವಲ್ಲ, ತುಂಬ ಪ್ರಭಾವಶಾಲಿ ವಾಗ್ಮಿ ಕೂಡ. ಕನ್ನಡ, ಇಂಗ್ಲಿಷ್—ಈ ಎರಡು ಭಾಷೆಗಳಲ್ಲೂ ಅವರು ನಿರರ್ಗಳ ಶೈಲಿಯಲ್ಲಿ ಭಾಷಣ ಮಾಡುತ್ತಿದ್ದರು.

ತುಂಬ ಚಿಕ್ಕ ವಯಸ್ಸಿನಿಂದಲೇ ಕನ್ನಡ ನಾಡು ನುಡಿಗಳ ಸೇವೆಯನ್ನು ಕೈಗೊಂಡ ಅ ನ ಕೃ ತಮ್ಮ ಬಾಳ ಕೊನೆಯವರೆಗೂ ಆ ಸೇವೆಯನ್ನು ಮುಂದುವರಿಸಿಕೊಂಡು ಬಂದರು.

1971ರ ಆದಿ ಭಾಗದಲ್ಲಿ ಅ ನ ಕೃ ಅವರ ಆರೋಗ್ಯ ಕೆಟ್ಟಿತು. ಆ ವರ್ಷ ಜುಲಾಯಿ 8ರಂದು ಅವರು ಕೊನೆಯುಸಿರೆಳೆದರು.

**ನೋಡಿ :** ಪ್ರಗತಿಶೀಲ ಸಾಹಿತ್ಯ

## ಅನತೋಲ್ ಫ್ರಾನ್ಸ್

"ಬರೆಯುತ್ತ ಇರುವಾಗ ಕಿಟಕಿಯ ಮೂಲಕ ಬರುವ ಕಿರಣದಂತೆ. ಉತ್ತಮ ಶೈಲಿ, ಸಪ್ತವರ್ಣಗಳನ್ನು ಅಡಗಿಸಿಕೊಂಡಿರುವುದೇ ಬೆಳಕಿನ ಕಿರಣದ ಪ್ರಖರತೆಗೆ ಕಾರಣ. ಸರಳ ಶೈಲಿ ಬಿಳಿ ಬೆಳಕಿನಂತೆ, ಅದು ಸಂಕೀರ್ಣವಾದದ್ದು. ಹೊರನೋಟಕ್ಕೆ ಮಾತ್ರ ಹಾಗೆ ಕಾಣಿಸುವುದಿಲ್ಲ."

—ಹೀಗೆ ಹೇಳಿದವನು ಖ್ಯಾತ ಫ್ರೆಂಚ್ ಸಾಹಿತಿ ಅನತೋಲ್ ಫ್ರಾನ್ಸ್. ಕಾದಂಬರಿಕಾರನೆಂದೂ ಸಾಹಿತ್ಯ ಶೈಲಿಯ ಆಚಾರ್ಯನೆಂದೂ ಲೋಕದಲ್ಲೆಲ್ಲ ಆತ ಮನ್ನಣೆ ಪಡೆದಿದ್ದಾನೆ.

ಾಹಿತ್ಯ ಶೈಲಿಯ ಆಚಾರ್ಯ: ಅನತೋಲ್ ಫ್ರಾನ್ಸ್

ಅನತೋಲ್ ಫ್ರಾನ್ಸ್ 1844ರ ಏಪ್ರಿಲ್ 16ರಂದು ಪ್ಯಾರಿಸ್ಸಿನಲ್ಲಿ ಹುಟ್ಟಿದ. ತಂದೆ ಪುಸ್ತಕ ವ್ಯಾಪಾರಿ. ಒಳ್ಳೆಯ ಪುಸ್ತಕದ ಬಗೆಗೆ ಮಗನ ಅಭಿರುಚಿ ತಂದೆಯಿಂದ ಬಂದ ಬಳುವಳಿ. ಇನ್ನೂ ಚಿಕ್ಕವನಿದ್ದಾಗಲೇ ಸಾಹಿತ್ಯವನ್ನು ತನ್ನ ಕಾರ್ಯಕ್ಷೇತ್ರವಾಗಿ ಆರಿಸಿಕೊಂಡ. ಆಲ್ಫಾನ್ಸೊ ಲೆಮರ್ ಪ್ರಕಾಶನ ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿದ. ಅಲ್ಲಿ ದುಡಿಯುತ್ತ, ಬರೆಯತೊಡಗಿದ. ತನ್ನ ಬಾಲ್ಯ, ಆ ಕಾಲದ ಫ್ರಾನ್ಸ್, ಫ್ರಾನ್ಸಿನ ಮಹಾಕ್ರಾಂತಿ ಅವನ ಬರಹಕ್ಕೆ ವಸ್ತುಗಳಾದುವು. ವಯಸ್ಸಾದಂತೆ ಆತ ಜನಜೀವನದಲ್ಲಿ ಬೆರೆತುಹೋದ. 1921ರಲ್ಲಿ, 77ನೆಯ ವಯಸ್ಸಿನಲ್ಲಿ, ಸಾಹಿತ್ಯದ ನೊಬೆಲ್ ಬಹುಮಾನ ಅನತೋಲ್ ಫ್ರಾನ್ಸ್‌ಗೆ ದೊರೆಯಿತು. ಆತನ 80ನೆಯ ಹುಟ್ಟುಹಬ್ಬದಂದು ಸಾಹಿತ್ಯ ಪ್ರಪಂಚವೇ ಅವನಿಗೆ ಗೌರವ ಸಲ್ಲಿಸಿತು. ಸುಮಾರು 6 ತಿಂಗಳ ಅನಂತರ ಅನತೋಲ್ ಫ್ರಾನ್ಸ್, 1924ನೆಯ ಅಕ್ಟೋಬರ್ 13ರಂದು ನಿಧನನಾದ.

ಅನತೋಲ್‌ನ ಗದ್ಯ ಶೈಲಿ ಅಪೂರ್ವವಾದದ್ದು. ಶ್ರೇಷ್ಠ ಕಥೆಗಳನ್ನು ಲಲಿತ ಶೈಲಿಯಲ್ಲಿ ಆತ ಹೇಳುತ್ತಿದ್ದ. ಪ್ಯಾರಿಸ್ಸಿನ ಪರಿಸರ, ತನ್ನ ಜೀವನ ಇವೇ ಅವನ ಕಥೆಗಳಿಗೆ ವಸ್ತು.

ಜೀವನದ ಬಗೆಗೆ ತನಗಿದ್ದ ಭಾವನೆಗಳನ್ನು ವ್ಯಕ್ತಪಡಿಸಲು ಅನತೋಲ್ ಫ್ರಾನ್ಸ್ ಬಳಸಿಕೊಂಡ ಸಾಧನ ಕಾದಂಬರಿ. ಅವುಗಳ ರಚನೆಯಲ್ಲಿ ಆತ ಅಸಾಧಾರಣ ಪ್ರತಿಭೆಯನ್ನು ತೋರಿದ್ದಾನೆ. ಕೆಚ್ಚು, ಲಾಲಿತ್ಯ, ವ್ಯಂಗ್ಯಗಳು ಅವನ ಕಾದಂಬರಿಯಲ್ಲಿ ಹಾಸುಹೊಕ್ಕಾಗಿವೆ. ಆತನ ಚಾರಿತ್ರಿಕ ಕಾದಂಬರಿಗಳು, ವಿಡಂಬನಾತ್ಮಕ ಬರವಣಿಗೆಗಳು, ಸರಕಾರ ಮತ್ತು ಸಮಾಜಗಳನ್ನು ಟೀಕಿಸುವ ಆತನ ಕಾಲ್ಪನಿಕ ಬರಹಗಳು ಜನಪ್ರಿಯವಾದುವು.

'ಪೆಂಗ್ವಿನ್ ದ್ವೀಪ', 'ದೇವತೆಗಳ ಪ್ರತಿಭಟನೆ', 'ಸಿಲ್ವೆಸ್ಟರ್ ಬಾನಾರ್ದನ ಅಪರಾಧ', 'ಥಾಯ್ಸ್' ಹಾಗೂ 'ದೇವರುಗಳು ಬಾಯಾರಿದ್ದಾರೆ'—ಅನತೋಲ್ ಫ್ರಾನ್ಸ್‌ನ ಪ್ರಮುಖ ಕೃತಿಗಳು.

ಸಾಹಿತ್ಯ ವಿಮರ್ಶೆಯಲ್ಲಿ ಕೂಡ ಅನತೋಲ್ ಫ್ರಾನ್ಸ್ ಪ್ರಸಿದ್ಧನಾದವನು. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅವನ ಪ್ರಬಂಧಗಳು ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ಅವನು ಗ್ರಂಥಗಳನ್ನು ಕುರಿತು ಬರೆದಿರುವುದಲ್ಲದೆ ಆ ಗ್ರಂಥಗಳ ಬಗೆಗೆ ತನ್ನ ವೈಯಕ್ತಿಕ ಪ್ರತಿಕ್ರಿಯೆಯನ್ನೂ ಸೂಚಿಸಿದ್ದಾನೆ.

## ಅಪ್ಟನ್ ಸಿಂಕ್ಲೇರ್

1906ರಲ್ಲಿ ಪ್ರಕಟವಾದ ಅಪ್ಟನ್ ಸಿಂಕ್ಲೇರನ ಕಾದಂಬರಿ 'ದಿ ಜಂಗ್‌ಲ್'. ಷಿಕಾಗೋ ನಗರದ ಮಾಂಸ ಪ್ಯಾಕ್ ಮಾಡುವ ಕಾರಖಾನೆಗಳ ಸ್ಥಿತಿಗತಿಗಳ ನೈಜ ಚಿತ್ರಣವಿತ್ತು ಇದರಲ್ಲಿ. ಆ ಕಾರಖಾನೆಗಳಲ್ಲಿ ಅನುಸರಿಸುತ್ತಿದ್ದ ಅನಾರೋಗ್ಯಕರ ವಿಧಾನಗಳ ಹಾಗೂ ಕೆಲಸಗಾರರ ದಾರುಣ ಜೀವನದ ಸ್ಥಿತಿಗಳ ವಿವರವಿತ್ತು. ಈ ಕಾದಂಬರಿಯನ್ನು ಓದಿದ ಅಮೆರಿಕದ ಜನರಲ್ಲಿ ಹಾಹಾಕಾರವೆದ್ದಿತು. ಈ ಗುಲ್ಲು ಎಬ್ಬಿಸುವುದಕ್ಕೆ ಕಾರಣನಾದ ಸಿಂಕ್ಲೇರನನ್ನು ಅಧ್ಯಕ್ಷ ಥಿಯೊಡೊರ್ ರೂಸ್‌ವೆಲ್ಟ್ 'ಕೊಳಕು ಬಾಚುವ ವ್ಯಕ್ತಿ' ಎಂದು ಬೈದುಬಿಟ್ಟ. ಆದರೆ ಅವನೇ ಸೆನೆಟ್ ಸದಸ್ಯರ ಒತ್ತಾಯಕ್ಕೆ ಮಣಿದು, ಮಾಂಸದ ಉದ್ಯೋಗ ನಡೆಯುತ್ತಿರುವ ರೀತಿಯ ಬಗೆಗೆ ವಿಚಾರಣೆ ಮಾಡಲು ಒಂದು ಸಮಿತಿಯನ್ನು ನೇಮಿಸಬೇಕಾಯಿತು. ಪರಿಣಾಮವಾಗಿ, ಮೊದಲ ಬಾರಿಗೆ ಆಹಾರ ನಿಯಂತ್ರಣ ಕಾಯಿದೆ ಜಾರಿಗೆ ಬಂತು.

ಸಮಾಜವಾದಿ ಲೇಖಕ ಅಪ್ಟನ್ ಸಿಂಕ್ಲೇರನ ಹರಿತವಾದ ಲೇಖನಿಯಿಂದ ಮೂಡಿಬಂದ ಕಾದಂಬರಿಗಳ ಸಂಖ್ಯೆ ಒಂದು ನೂರಕ್ಕಿಂತ ಹೆಚ್ಚು. 'ದಿ ಜಂಗ್‌ಲ್' ಇವನ ಆರನೆಯ ಕಾದಂಬರಿ. ಅವನಿಗೆ ಪ್ರಸಿದ್ಧಿಯನ್ನು ತಂದು ಕೊಟ್ಟ ಪ್ರಥಮ ಪುಸ್ತಕ. ಸಿಂಕ್ಲೇರ್ ವಾರಪತ್ರಿಕೆಯೊಂದರ ವರದಿಗಾರನಾಗಿದ್ದಾಗ ಷಿಕಾಗೋ ನಗರದ ಮಾಂಸ ಸಂಸ್ಕರಣ ವಿಧಾನದ ಸ್ಥಿತಿಯನ್ನು ಅಧ್ಯಯನಮಾಡಿ ವರದಿಮಾಡಲು ನಿಯೋಜಿತನಾದ. ಆಗ ಕಲೆಹಾಕಿದ ವಿವರಗಳನ್ನು ಅವಲಂಬಿಸಿ ಈ ಕಾದಂಬರಿಯನ್ನು ಆತ ಬರೆದ. ಕೆಲಸ ಹುಡುಕುತ್ತ ಬಂದು ಷಿಕಾಗೋದಲ್ಲಿ ನೆಲೆಸಿದ್ದ ಕುಟುಂಬವೊಂದರ ಕಥೆಯೇ 'ದಿ ಜಂಗ್‌ಲ್' ಕಾದಂಬರಿಯ ಹಂದರ. ಇವರು ಪಡುವ ಬವಣೆಗಳನ್ನು ಬಣ್ಣಿಸಿ ಕೆಲಸಗಾರರ ಬಗೆಗೆ ಜನರಲ್ಲಿ ಕರುಣೆಯನ್ನು ಹುಟ್ಟಿಸುವುದೇ ಕಾದಂಬರಿಯ ಉದ್ದೇಶ. ಆದರೆ ಇದನ್ನು ಓದಿದ ಜನರಿಗೆ ಕರುಣೆ ಉಂಟಾಗುವ ಬದಲು ಮಾಂಸ ಸಂಸ್ಕರಣ ವಿಧಾನದ ಬಗೆಗೆ ವಿಪರೀತ ಕೋಪ ಹುಟ್ಟಿತು. "ಸಾರ್ವಜನಿಕರ ಹೃದಯವನ್ನು ಮುಟ್ಟುವುದು ನನ್ನ ಗುರಿಯಾಗಿತ್ತು. ಆದರೆ ಗುರಿತಪ್ಪಿ ಅವರ ಹೊಟ್ಟೆ ಮೇಲೆ ಹೊಡೆದಂತಾಯಿತು," ಎಂದು ಸಿಂಕ್ಲೇರ್ ಹೇಳಿದ.

ಯಾವಾಗಲೂ ಕೆಲಸಗಾರರ ಪರವಾಗಿ ವಾದಿಸುತ್ತಿದ್ದ ಸಿಂಕ್ಲೇರ್ ಹುಟ್ಟಿದ್ದು ಭಾರೀ ಶ್ರೀಮಂತ ವಂಶದಲ್ಲಿ (ಜನನ: ಸೆಪ್ಟೆಂಬರ್ 20, 1878). ತಂದೆ ಮದ್ಯದ ವ್ಯಾಪಾರಿ. ಅವನಿಗೆ ಕುಡಿತದ ಚಟ ಬೇರೆ. ಅಪ್ಟನ್ ತನ್ನ ತಾಯಿಯ ಆರೈಕೆಯಲ್ಲಿಯೇ ಬೆಳೆದ. ಹತ್ತು ವರ್ಷ ಆಗುವವರೆಗೂ ಮನೆಯಲ್ಲೇ ಶಿಕ್ಷಣ ಪಡೆದು ಅನಂತರ ಶಾಲೆಗೆ ಸೇರಿದ.



ಪ್ರಗತಿಶೀಲ ಕಹಳೆ :
ಅಪ್ಟನ್ ಸಿಂಕ್ಲೇರ್

ಉಪಾಧ್ಯಾಯರಿಗೆ ಆಶ್ಚರ್ಯ ಉಂಟುಮಾಡಿದಂಥ ಬುದ್ಧಿಶಕ್ತಿ ಅವನದು.

ಸಿಂಕ್ಲೇರ್ ಕಾಲೇಜಿನಲ್ಲಿದ್ದಾಗ ಅವನ ಸಹಪಾಠಿಯೊಬ್ಬ ಬರೆದ ಕಥೆ ಒಂದು ಪತ್ರಿಕೆಯಲ್ಲಿ ಅಚ್ಚಾಗಿತ್ತು. ಆತ ಕಥೆ ಬರೆಯಬಹುದಾದರೆ ತಾನೂ ಒಂದು ಕಥೆ ಬರೆಯಬಾರದೇಕೆ? ಎಂದುಕೊಂಡು ಸಿಂಕ್ಲೇರ್ ತಾನೂ ಕಥೆ ಬರೆದ. ಬರೆದ ಮೊದಲ ಕಥೆ ಪ್ರಕಟವಾಯಿತು ; ಸ್ವಲ್ಪ ದುಡ್ಡನ್ನೂ ತಂದಿತು. ಮನೆ ಖರ್ಚಿಗೆ ದುಡ್ಡು ಸಂಪಾದಿಸುವ ಈ ಹೊಸ ವಿಧಾನ ತಿಳಿದ ಮೇಲೆ ಸಿಂಕ್ಲೇರ್ ಹೆಚ್ಚು ಹೆಚ್ಚು ಬರೆಯತೊಡಗಿದ. ಕಾದಂಬರಿಗಳು ಜನಪ್ರಿಯಗೊಂಡು ಹಣದ ಹೊಳೆ ಹರಿದರೂ ಬರೆಯುವ ಹಂಬಲ ಹೆಚ್ಚಿತೇ ವಿನಹ ಕಡಮೆಯಾಗಲಿಲ್ಲ.

ಯಾವುದಾದರೊಂದು ಹೊಸ ಸ್ಥಳಕ್ಕೆ ಹೋಗಿ ಅಲ್ಲಿ ಕೆಲ ಕಾಲ ವಾಸವಾಗಿದ್ದು ಒಂದು ಉದ್ಯಮ, ಪ್ರದೇಶ ಅಥವಾ ಜನರ ಗುಂಪನ್ನು ಅಭ್ಯಾಸ ಮಾಡಿ ಅದರ ಸುತ್ತು ಕಥೆ ಹೆಣೆಯುವುದು ಸಿಂಕ್ಲೇರನ ವಿಧಾನ. ಧರ್ಮ, ಪತ್ರಿಕೋದ್ಯಮ, ಶಿಕ್ಷಣಕ್ಷೇತ್ರ, ಕಲಾರಂಗ, ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳನ್ನು ಕುರಿತ ಸಮಸ್ಯೆಗಳನ್ನು ಇವನು ತನ್ನ ಕೃತಿಗಳ ಮೂಲಕ ಬೆಳಕಿಗೆ ತಂದ. ಇವನ ಕೃತಿಗಳಲ್ಲಿ ಹೆಚ್ಚುಕಡಮೆ ಒಂದೇ ರೀತಿಯ ಪಾತ್ರಗಳ ಪುನರಾವರ್ತನೆ ಇದ್ದರೂ ಪ್ರತಿಯೊಂದು ಕೃತಿಯಲ್ಲೂ ಒಂದೊಂದು ಸಂದೇಶವಿರುತ್ತಿತ್ತು.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಸಿಂಕ್ಲೇರನ ಬರೆವಣಿಗೆ ಹೊಸ ದಿಕ್ಕಿನಲ್ಲಿ ಹರಿಯಿತು. ಯುದ್ಧದ ಕಾರಣ ಮತ್ತು ಪರಿಣಾಮಗಳನ್ನು ಕುರಿತಾಗಿ ಹತ್ತು ಕಾದಂಬರಿಗಳನ್ನು ಈತ ಬರೆದ. ಈ ಎಲ್ಲ ಕಾದಂಬರಿಗಳ ಮುಖ್ಯ ಪಾತ್ರ ಒಬ್ಬನೇ–ಲ್ಯಾನಿ ಬಡ್. ಯುದ್ಧದಲ್ಲಿ ಮುಖ್ಯ ನಿರ್ಧಾರಗಳನ್ನು ಕೈಗೊಳ್ಳುವಲ್ಲೆಲ್ಲ ಲ್ಯಾನಿ ಬಡ್ ಹಾಜರು. ಇಂಥ ಕಾದಂಬರಿಗಳಲ್ಲಿ ಒಂದಾದ 'ಡ್ರಾಗನ್ಸ್ ಟೀತ್' ಹಲ್ಲುಗಳು' 1943ರಲ್ಲಿ ಪುಲಿಟ್ಜರ್ ಬಹುಮಾನ ಪಡೆಯಿತು.

ಜಾಗತಿಕ ಪ್ರಗತಿಶೀಲ ಸಾಹಿತ್ಯ ಚಳವಳಿಯ ಪ್ರಮುಖರಲ್ಲಿ ಅಪ್ಟನ್ ಸಿಂಕ್ಲೇರ್ ಒಬ್ಬನಾಗಿದ್ದ.

ನಿರ್ಭೀತ ಸತ್ಯನಿಷ್ಠ ಸಿಂಕ್ಲೇರ್ ತೊಂಬತ್ತು ತುಂಬಿ ಎರಡು ತಿಂಗಳಾದ ಮೇಲೆ 1968ನೆಯ ನವೆಂಬರ್‌ನಲ್ಲಿ 25ರಂದು ತೀರಿಕೊಂಡ.

## ಅಪ್ಪಯ್ಯ ದೀಕ್ಷಿತ

ಸುಮಾರು ಒಂದು ನೂರ ನಾಲ್ಕು ಗ್ರಂಥಗಳನ್ನು ರಚಿಸಿದ ಮಹಾವಿದ್ವಾಂಸ, ಪಂಡಿತೋತ್ತಮ, ವಿಶಾಲ ಹೃದಯ ಎಂಬ ಹೊಗಳಿಕೆಗೆ ಪಾತ್ರರಾದ ವ್ಯಕ್ತಿ ಅಪ್ಪಯ್ಯ ದೀಕ್ಷಿತರು. ವಿಜಯನಗರ ಸಾಮ್ರಾಜ್ಯದ ಕೊನೆ ಕಾಲದಲ್ಲಿದ್ದ ಇವರು ದಕ್ಷಿಣದಲ್ಲಿ ಮಾತ್ರವಲ್ಲದೆ, ಇಡೀ ಭಾರತದಲ್ಲೇ ಪ್ರಸಿದ್ಧ ವಿದ್ವಾಂಸರೆಂದು ಹೆಸರು ಗಳಿಸಿದರು. ಷಹಜಹಾನ್, ಅವನ ಮಗ ದಾರಾ ಷುಕೋ ಮುಂತಾದವರಿಂದಲೂ ಮಾನ್ಯತೆ ಪಡೆದರು.

ಅಪ್ಪಯ್ಯ ದೀಕ್ಷಿತರ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಕೆಲವು ಗ್ರಂಥಗಳು ಮತ್ತು ಶಾಸನಗಳ ಆಧಾರದ ಮೇಲೆ ಇವರು 1554-1626ರ ಅವಧಿಯಲ್ಲಿದ್ದರೆಂದು ಹೇಳಬಹುದು. ತಮಿಳುನಾಡಿನ ಕಂಚಿ ಬಳಿ ಇರುವ ಅಡಯಪಾಲೆಯಂನಲ್ಲಿ ಇವರು ಜನಿಸಿದರು. ಇವರ ತಂದೆ, ನಟರಾಜನನ್ನು ಪ್ರಾರ್ಥಿಸಿ ಇವರನ್ನು ಪಡೆದರೆಂದು ಪ್ರತೀತಿ. ಮಹಾವಿದ್ವಾಂಸರ ವಂಶದಲ್ಲಿ ಜನಿಸಿದ ಅಪ್ಪಯ್ಯ ದೀಕ್ಷಿತರಿಗೆ ಬಾಲ್ಯದಲ್ಲಿಯೇ



ಉದ್ದಾಮ ಪಂಡಿತ : ಅಪ್ಪಯ್ಯ ದೀಕ್ಷಿತ

ಅವರ ತಂದೆಯಿಂದ ಅದ್ವೈತವೇ ಮೊದಲಾದ ಗಹನ ವಿಚಾರಗಳ ಬಗೆಗೆ ಶಿಕ್ಷಣ ದೊರೆಯಿತು. ಮೂಲತಃ ಅದ್ವೈತಿಯಾದರೂ ಇತರ ಧಾರ್ಮಿಕ ಪಂಥಗಳ ವಿಚಾರದಲ್ಲಿ ಅವರಿಗೆ ತಿರಸ್ಕಾರವಾಗಲೀ ದ್ವೇಷವಾಗಲೀ ಇರಲಿಲ್ಲ. ಶಿವಾದ್ವೈತಿಯಾದ ಶ್ರೀಕಂಠ ಶಿವಾಚಾರ್ಯನ ಬ್ರಹ್ಮಸೂತ್ರ ಭಾಷ್ಯಕ್ಕೆ ಸೊಗಸಾದ ವ್ಯಾಖ್ಯಾನವನ್ನು ಬರೆದ ದೀಕ್ಷಿತರೇ ರಾಮಾನುಜರ ಅನುಯಾಯಿಯಾದ ಶ್ರೀ ವೇದಾಂತ ದೇಶಿಕರ 'ಯಾದವಾಭ್ಯುದಯ' ಕಾವ್ಯಕ್ಕೂ ವ್ಯಾಖ್ಯಾನ ಬರೆದರು.

ಅಪ್ಪಯ್ಯ ದೀಕ್ಷಿತರ ದರ್ಶನಶಾಸ್ತ್ರ ಪಾಂಡಿತ್ಯ ಎಷ್ಟು ಹಿರಿದೋ ಅಷ್ಟೇ ದೊಡ್ಡದು. ಸಾಹಿತ್ಯಶಾಸ್ತ್ರಪ್ರಜ್ಞೆ. 'ಕುವಲಯಾನಂದ', 'ಚಿತ್ರ ಮೀಮಾಂಸಾ', 'ವೃತ್ತಿವಾರ್ತಿಕಾ', 'ಲಕ್ಷಣ ರತ್ನಾವಳೀ' ಎಂಬುದು ಇವರ ಪ್ರಮುಖ ಲಕ್ಷಣ ಗ್ರಂಥಗಳು. ಕಾವ್ಯದಲ್ಲಿ ಅಲಂಕಾರಗಳ ಸ್ಥಾನ ಹೆಚ್ಚುತ್ತ ಬಂದಂತೆ ಅವುಗಳ ಸಂಖ್ಯೆ ಹೆಚ್ಚಾಯಿತು. ಭರತ ನಾಲ್ಕು ಅಲಂಕಾರಗಳ ಪ್ರಸ್ತಾಪಮಾಡಿದರೆ ದಂಡಿ ಭಾಮಹರು 30ಕ್ಕೂ ಹೆಚ್ಚು ಅಲಂಕಾರಗಳನ್ನು ಹೇಳಿದರು. ಅಪ್ಪಯ್ಯ ದೀಕ್ಷಿತರ 'ಕುವಲಯಾನಂದ'ದಲ್ಲಿ ನೂರ ಹದಿನೈದು ಅಲಂಕಾರಗಳ ಪ್ರಸ್ತಾಪ ಬರುತ್ತದೆ. 'ಚಿತ್ರ ಮೀಮಾಂಸಾ' ಗ್ರಂಥ ಅಪೂರ್ಣವಾದದ್ದು. ಇದರಲ್ಲಿ ಧ್ವನಿ, ಗುಣೀಭೂತ ವ್ಯಂಗ್ಯ ಚಿತ್ರ ಎಂಬ ಕಾವ್ಯ ವಿಭಾಗಗಳನ್ನು ಸಂಗ್ರಹವಾಗಿ ವಿವೇಚಿಸಿದ್ದಾರೆ.

ಅಪ್ಪಯ್ಯ ದೀಕ್ಷಿತರು, ರತ್ನಖೇಟ ದೀಕ್ಷಿತರೆಂಬ ಸುಪ್ರಸಿದ್ಧ ಪಂಡಿತರ ಮಗಳಾದ ಮಂಗಳಾಂಬೆ (ಅಚ್ಚಮ್ಮ) ಎಂಬಾಕೆಯನ್ನು ಮದುವೆಯಾದರು. ಈಕೆಯೂ ವಿದ್ವಾಂಸಳೇ ಆಗಿದ್ದಳೆನ್ನುತ್ತಾರೆ. ಈ ದಂಪತಿ ಬಗೆಗೆ ಒಂದು ಕಥೆ ಇದೆ. ದೀಕ್ಷಿತರು ಮದುವೆಯಾದ ಅನಂತರ ದೇಶ ಪರ್ಯಟನೆ ಮಾಡಿ ಹೆಸರು ಸಂಪಾದಿಸಿ ಮಾವನ ಹಳ್ಳಿಗೆ ಬಂದರು. ನೂರಾರು ಶಿಷ್ಯರೊಂದಿಗೆ ಬರುತ್ತಿದ್ದ ಇವರನ್ನು ಕಂಡು ಆ ಗ್ರಾಮದ ಹೆಂಗಸೊಬ್ಬಳು ಪಕ್ಕದವಳನ್ನು "ಇವರು ಯಾರೇ?" ಎಂದಳಂತೆ. ಅವಳು "ನಮ್ಮ ಅಚ್ಚಳ ಯಜಮಾನರು" ಎಂದಳಂತೆ. ಆಗ ದೀಕ್ಷಿತರು "ನಾನು ಭರತ ಖಂಡದಲ್ಲೆಲ್ಲ ಪಂಡಿತನೆಂದು ಖ್ಯಾತಿ ಪಡೆದಿರಬಹುದು. ಆದರೆ ಇಲ್ಲಿ ನಾನು ಅಚ್ಚಳ ಗಂಡ ಮಾತ್ರ", ಎಂದು ನಗೆ ಮಾತಾಡಿದರಂತೆ.

ಇವರ ಕೃತಿಗಳ ಬಗೆಗೆ ಆ ಕಾಲದ ಖ್ಯಾತ ವಿದ್ವಾಂಸ ಜಗನ್ನಾಥ ಪಂಡಿತ ಕಟುವಾಗಿ ಟೀಕೆ ಮಾಡಿ, ಅವರನ್ನು ಲಘುವಾಗಿ ಕಂಡಿದ್ದಾನೆ. ಅವರ ಅಭಿಪ್ರಾಯಗಳನ್ನು ಖಂಡಿಸುವ ಸಲುವಾಗಿ 'ಚಿತ್ರಮೀಮಾಂಸಾ ಖಂಡನ' ಎಂಬ ಗ್ರಂಥವನ್ನೇ ಬರೆದಿದ್ದಾನೆ. ಜಗನ್ನಾಥನ ವಾದಶಕ್ತಿ ಅಪ್ರತಿಮ ಎಂದು ಒಪ್ಪಿದರೂ ಅವನು ಅಪ್ಪಯ್ಯ ದೀಕ್ಷಿತರ ಮೇಲೆ ಹೊರಿಸಿರುವ ದೋಷಗಳೆಲ್ಲ ನ್ಯಾಯವಾದುವೆಂದು ಒಪ್ಪುವುದು ಕಷ್ಟ.

ದೀಕ್ಷಿತರು ತಮ್ಮ ಹುಟ್ಟೂರಿನಲ್ಲಿ ಕಾಲಕಂಠೇಶ್ವರ ದೇವಾಲಯವನ್ನೂ ವಿರಿಂಚಿಪುರದಲ್ಲಿ ಮೀನಾಕ್ಷಿ ಸುಂದರೇಶ್ವರ ದೇವಾಲಯವನ್ನೂ ಸ್ಥಾಪಿಸಿದರೆಂದು ಶಾಸನ ಉಲ್ಲೇಖಿಸಿದೆ.

ಎಪ್ಪತ್ತೆರಡು ವರ್ಷ ಕಾಲ ಜೀವಿಸಿದ್ದ ದೀಕ್ಷಿತರ ಅವಸಾನ ಕಾಲದ ಬಗೆಗೆ ಪ್ರಚಲಿತವಿರುವ ಕಥೆ ಇದು:

ದೀಕ್ಷಿತರು ತಮ್ಮ ಒಂಬತ್ತು ಮಂದಿ ಗಂಡುಮಕ್ಕಳನ್ನು ಕರೆದು "ನಿಮಗೇನು ಬೇಕು ಕೇಳಿಕೊಳ್ಳಿ" ಎಂದರಂತೆ. ಒಬ್ಬರು ವೈರಾಗ್ಯ ಬೇಕು ಎಂದರು. ಅವರ ವಂಶಸ್ಥರೇ ಹೃಷಿಕೇಶದಲ್ಲಿ ಆಶ್ರಮ ಸ್ಥಾಪಿಸಿ ವಿಖ್ಯಾತರಾದ ಶಿವಾನಂದ ಸ್ವಾಮಿಗಳು. ಇನ್ನೊಬ್ಬರು ವಿದ್ಯೆ ಕೇಳಿದರು. ಇವರ ವಂಶದಲ್ಲಿ ಅನೇಕ ಮಂದಿ ವಿದ್ವಾಂಸರು ಜನಿಸಿದರು. ಧನವನ್ನು ಕೇಳಿದವರ ವಂಶಸ್ಥರು ಈಗಲೂ ಆಸ್ತಿಪಾಸ್ತಿಗಳನ್ನು ಹೊಂದಿರುವ ಶ್ರೀಮಂತರಾಗಿದ್ದಾರೆ. ನ್ಯಾಯಶಾಸ್ತ್ರ ಪಾಂಡಿತ್ಯ ಕೇಳಿಕೊಂಡ ಇನ್ನೊಬ್ಬರ ವಂಶದಲ್ಲಿ ಹುಟ್ಟಿದವರೇ ಖ್ಯಾತ ಆಡಳಿತಗಾರರಾಗಿದ್ದ ಸಿ. ಪಿ. ರಾಮಸ್ವಾಮಿ ಅಯ್ಯರ್.

ದೀಕ್ಷಿತರು ಚಿದಂಬರದ ನಟರಾಜ ದೇವಾಲಯದ ನಟರಾಜ ಮೂರ್ತಿಯ ಪಾದಗಳಲ್ಲಿ ತಲೆ ಇಟ್ಟು ಚರಮಶ್ಲೋಕ ಹೇಳುತ್ತ ದೇಹತ್ಯಾಗ ಮಾಡಿದರು.

## ಅಬನೀಂದ್ರನಾಥ ಠಾಕೂರ್

"ನನಗೆ ಚಿತ್ರದ ಹುಚ್ಚು ಹಿಡಿದಿದೆ. ತೋಪುಗಳ ಗರ್ಜನೆ ಕೇಳಿದೊಡನೆ ಯುದ್ಧದ ಕುದುರೆ ಕುತೂಹಲದಿಂದ ತನ್ನ ಕತ್ತನ್ನು ಎತ್ತುವಂತೆ, ಚಿತ್ರವನ್ನು ನೋಡಿದಾಗ ನನ್ನ ಹೃದಯ ಅದಕ್ಕೆ ಮಾರುಹೋಗುತ್ತದೆ."

—ಹೀಗೆ ನುಡಿದವರು ಅಬನೀಂದ್ರನಾಥ ಠಾಕೂರ್. ಈ ಶತಮಾನದ ಆದಿ ಭಾಗದಲ್ಲಿ ಭಾರತೀಯ ಚಿತ್ರಕಲೆಯ ಪುನರುಜ್ಜೀವನಕ್ಕೆ ಕಾರಣರಾದ ಅಪ್ರತಿಮ ಕಲಾವಿದರು ಇವರು. ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗದ ಭಾರತೀಯ ಚಿತ್ರಕಲೆಗೆ ಅವರು ಶ್ರೇಷ್ಠ ಸ್ಥಾನ ದೊರಕಿಸಿಕೊಟ್ಟರು.

1871ರ ಆಗಸ್ಟ್ 17ರಂದು ಜನಿಸಿದ ಅಬನೀಂದ್ರರು ಕವಿ ರವೀಂದ್ರರ ಅಣ್ಣನ ಮಗ. ಬಾಲ್ಯದಲ್ಲೇ ಅಬನೀಂದ್ರರಿಗೆ ಚಿತ್ರ ಬರೆಯುವುದರಲ್ಲಿ ಆಸಕ್ತಿ. ಅದಕ್ಕೆ ಪ್ರೋತ್ಸಾಹ ಲಭಿಸಿತು. ಅಬನೀಂದ್ರರು ಬುದ್ಧಿವಂತರಾದರೂ ಆಗಿನ ಕಾಲದ ಸಾಮಾನ್ಯ ವಿದ್ಯಾಭ್ಯಾಸದಲ್ಲಿ ಅವರು ಬೆಳಗಲಿಲ್ಲ. ಸಂಸ್ಕೃತವನ್ನು ಮಾತ್ರ ಕಲಿತರು. ಚಿತ್ರಕಲೆಯನ್ನು ಅಭ್ಯಾಸಮಾಡಿದರು. ಆಂಗ್ಲರ ಆಳ್ವಿಕೆ ನಡೆಯುತ್ತಿದ್ದ ಆ ಕಾಲದಲ್ಲಿ ಭಾರತೀಯ ಎನ್ನಬಹುದಾದ ಯಾವ ಕಲೆಗೂ ಪುರಸ್ಕಾರವಿರಲಿಲ್ಲ. ಅದನ್ನು ಅಭ್ಯಾಸ ಮಾಡಲು ಅವಕಾಶವೂ ಇರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಅಬನೀಂದ್ರರು ಸಹಜವಾಗಿ ಪಾಶ್ಚಾತ್ಯ ಶೈಲಿಯ ಚಿತ್ರಗಳತ್ತ ಒಲವು ತೋರಿದರು ಮತ್ತು ಕಲಾಶಿಕ್ಷಣ ಪಡೆದರು.

ಅಬನೀಂದ್ರರ ಮೊದಲ ಇಬ್ಬರು ಗುರುಗಳೂ ಪಾಶ್ಚಾತ್ಯರೇ. ಇಬ್ಬರು ಜಪಾನೀ ಕಲಾವಿದರ ಪರಿಚಯ ಪಡೆದು ಅವರ ರಚನಾತಂತ್ರವನ್ನೂ ಅಬನೀಂದ್ರರು ಕಲಿತುಕೊಂಡರು. ಮೊಗಲರ ಕಾಲದ ಚಿತ್ರಗಳ ಹಾಗೂ ರಜಪೂತ ಸಂಪ್ರದಾಯದ ಚಿತ್ರ ಕಲೆಯ ಅಭ್ಯಾಸವನ್ನೂ ಅವರು ಮಾಡಿದರು. ಈ ಮೂರು ಶೈಲಿಯ ತಂತ್ರಗಳನ್ನೆಲ್ಲ ಅವರು ಕರಗತ ಮಾಡಿಕೊಂಡಿದ್ದರು. ಅದನ್ನು ಅವರು ಅನುಕರಿಸಲಿಲ್ಲ. ಯಾವ ಸಂಪ್ರದಾಯಕ್ಕೂ ಕಟ್ಟು ಬೀಳದೆ ಸ್ವತಂತ್ರ ರೀತಿಯಲ್ಲಿ ಚಿತ್ರ ಬರೆಯುವ ಪ್ರವೃತ್ತಿ ತೋರಿದರು. ಬಂಗಾಳವನ್ನು ಬಿಟ್ಟು ಬಿಹಾರ, ಒರಿಸ್ಸಾಗಳಲ್ಲಿ ಸ್ವಲ್ಪ ಕಾಲ ಕಳೆದರು. ಅಲ್ಲಿನ ಪ್ರಕೃತಿ ಮತ್ತು ಜನಸಾಮಾನ್ಯರ ಜೀವನ ಅವರನ್ನು ಆಕರ್ಷಿಸಿದುವು. ಭುವನೇಶ್ವರ, ಪುರಿ, ಕೋಣಾರ್ಕ ಮುಂತಾದೆಡೆಗಳಲ್ಲಿ ನೋಡಿದ ಶಿಲ್ಪಗಳು ಅವರ ಕಲ್ಪನೆ ಗರಿಗೆದರುವಂತೆ ಮಾಡಿದುವು. ತಮ್ಮದೇ ವಿಶಿಷ್ಟವಾದ ಭಾರತೀಯ ಶೈಲಿಯಲ್ಲಿ ಚಿತ್ರಗಳನ್ನು ರಚಿಸಲು ಅಬನೀಂದ್ರರು ನಿರ್ಧರಿಸಿದರು. ತಮ್ಮ ಜಮೀನ್ದಾರಿಯ ಚಾಂಪ್ದಾನಿ ಎಂಬ ಗ್ರಾಮಕ್ಕೆ ಹಿಂದಿರುಗಿ ಚಿತ್ರ ರಚನೆಯಲ್ಲಿ ನಿರತರಾದರು.


ಅಬನೀಂದ್ರ : ಭಾರತೀಯ ಚಿತ್ರಕಲೆಯ ಪುನರುಜ್ಜೀವನ

ಅಬನೀಂದ್ರರ ಮೇಲೆ ರವೀಂದ್ರರ ಸಖ್ಯದ ಪ್ರಭಾವ ಅಪಾರ. ರವೀಂದ್ರರು ಹಾಡುತ್ತಿದ್ದಾಗ ಅಬನೀಂದ್ರರು ವಾದ್ಯ ಬಾರಿಸುತ್ತಿದ್ದುದುಂಟು. ಇಬ್ಬರೂ ಒಟ್ಟಿಗೇ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರು. ರವೀಂದ್ರರ ಕವಿತಾ ಸಂಕಲನಗಳಿಗೆ ಅಬನೀಂದ್ರರು ಚಿತ್ರಗಳನ್ನು ಬರೆದು ಕೊಡುತ್ತಿದ್ದರು.

1897ರಲ್ಲಿ ಅಬನೀಂದ್ರರಿಗೆ ಕಲ್ಕತ್ತೆಯ ಕಲಾಶಾಲೆಯ ಪ್ರಿನ್ಸಿಪಾಲ್ ಇ.ಬಿ. ಹ್ಯಾವೆಲ್‌ರ ಪರಿಚಯವಾದದ್ದು ಮಹತ್ವದ ಘಟನೆ. ಹ್ಯಾವೆಲ್ ಭಾರತೀಯ ಕಲಾಸಂಪ್ರದಾಯದ ಬಗೆಗೆ ಅಭಿಮಾನ ತಳೆದಿದ್ದರು. ಅಬನೀಂದ್ರರ ಕಲಾಶಕ್ತಿಗೂ ಪ್ರತಿಭೆಗೂ ಅವರು ಮಾರುಹೋದರು. ಕಲಕತ್ತೆಯ ತಮ್ಮ ಸರಕಾರೀ ಕಲಾಶಾಲೆಯಲ್ಲಿ ಶಿಕ್ಷಕರಾಗಲು ಅವರನ್ನು ಒತ್ತಾಯ ಮಾಡಿದರು. ಆ ಕಲಾಶಾಲೆ ಸೇರಿದ ಅಬನೀಂದ್ರರು 1905ರಲ್ಲಿ ಹ್ಯಾವೆಲ್ ನಿವೃತ್ತರಾದ ಮೇಲೆ ಅದರ ಪ್ರಿನ್ಸಿಪಾಲರಾದರು. ಅಲ್ಲಿ ಸುಮಾರು ಹನ್ನೊಂದು ವರ್ಷ ಸೇವೆ ಸಲ್ಲಿಸಿದರು. ಈ ಉದ್ಯೋಗ ತಮ್ಮ ಸ್ವತಂತ್ರ ಕಲಾರಚನೆಗೆ ಒಂದು ಅಡ್ಡಿ ಎಂದು ಮನವಟ್ಟಾಗಿ, ಅದಕ್ಕೆ ರಾಜೀನಾಮೆ ಇತ್ತರು. ಮುಂದೆ ಶಾಂತಿನಿಕೇತನದಲ್ಲಿ ಕಲೆಯ ಪ್ರಧಾನ ಆಚಾರ್ಯರಾದರು.

ನಿಮ್ಮ ಕಲೆಯ ಗುರಿಯನ್ನೂ ಪ್ರಕೃತಿಯ ವೈವಿಧ್ಯವನ್ನೂ ಅದರಂತೆ ಪ್ರಪಂಚವನ್ನೂ ನೀವು ಕಂಡುಕೊಳ್ಳಿ : ಮನಸ್ಸಿನಲ್ಲಿ ಸೌಂದರ್ಯವನ್ನೂ ಹಿರಿಯ ಕಲ್ಪನೆಗಳನ್ನೂ ಗಮ್ಯಗಳನ್ನೂ ರೂಪಿಸಿಕೊಳ್ಳಿ : ಮಹಾಕಾವ್ಯಗಳನ್ನು ಓದಿ ಈ ಸಂಸ್ಕೃತಿಯ ಘಟನೆಗಳನ್ನೂ ಸನ್ನಿವೇಶಗಳನ್ನೂ ನೆನಪಿಗೆ ತಂದುಕೊಂಡು ಅವುಗಳಿಂದ ಮನಸ್ಸು ತುಂಬಿಕೊಳ್ಳಿ-ಎಂದು ಅವರು ತಮ್ಮ ಶಿಷ್ಯರಿಗೆ ಉಪದೇಶಿಸುತ್ತಿದ್ದರು. ಕಲಾಶೈಲಿಯ ವಿಷಯದಲ್ಲಿ "ನಿಮ್ಮ ನಿಮ್ಮ ದಾರಿ ನೀವು ಅನುಸರಿಸಿ" ಎಂಬುದೇ ಅವರ ಹಿತೋಕ್ತಿಯಾಗಿತ್ತು.

ಕನ್ನಡ ನಾಡಿನ ವೆಂಕಟಪ್ಪ, ನಂದಲಾಲ ಬಸು, ಮುಕುಲ ಡೇ, ಪ್ರಮೋದ ಕುಮಾರ ಚಟರ್ಜಿ, ಅಸಿತಕುಮಾರ ಹಲಧರ ಮುಂತಾದವರು ಅಬನೀಂದ್ರರ ಪ್ರತಿಭಾವಂತ ಶಿಷ್ಯರು. ಮುಂದೆ ಇವರೆಲ್ಲ ಪ್ರಖ್ಯಾತ ಕಲಾವಿದರಾದರು. ಇವರಲ್ಲಿ ಯಾರೂ ತಮ್ಮ ಗುರುವಿನ ಜಾಡನ್ನೇ ಅನುಕರಿಸಿ ಹಿಡಿದು ಕಲೆಯನ್ನು ಬೆಳೆಸಿದವರಲ್ಲ. ಒಬ್ಬೊಬ್ಬರದೂ ಒಂದೊಂದು ಶೈಲಿ.

ಅಬನೀಂದ್ರರು ಇನ್ನೂರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದರು. 'ಭಾರತ ಮಾತಾ' (ಹಲವು ಕ್ರಾಂತಿ ವಲಯಗಳಲ್ಲಿ ಕಾಣಿಸುವ ತಪಸ್ವಿನಿ), 'ಗಣೇಶ ಜನನಿ' (ವಾತ್ಸಲ್ಯಮಯಿ ಪಾರ್ವತಿ ಆಡುತ್ತಿರುವ ಗಣೇಶನನ್ನು ಹಿಡಿದಿರುವ ಚಿತ್ರ), 'ಅಶೋಕನ ರಾಣಿ' (ಆಕೆ ಬೋಧಿವೃಕ್ಷವನ್ನು ನೆಟ್ಟ ನೋಟದಿಂದ ನೋಡುತ್ತಿದ್ದಾಳೆ), 'ಅಲಂಗೀರ್' (ವೃದ್ಧಚಕ್ರವರ್ತಿಯ ವ್ಯಕ್ತಿಚಿತ್ರ) ಮುಂತಾದ ಅವರ ಚಿತ್ರಗಳು ಮನೋಜ್ಞ. ಕೃಷ್ಣಲೀಲೆಯ ಚಿತ್ರಗಳು, ಉಮರ್ ಖಯಾಮನ ರುಬಾಯತ್ ಚಿತ್ರಗಳು, ಜಹಾಂಗೀರ್, ಸಿಂದಬಾದ ನಾವಿಕ, ಅಲಿಬಾಬ ಮತ್ತು ನಲ್ವತ್ತು ಮಂದಿ ಕಳ್ಳರು, ದೇಶಭ್ರಷ್ಟನಾದ ಯಕ್ಷ ಮುಂತಾದುವು ಅವರ ಸಾಧನೆಯ ವೈವಿಧ್ಯದ ಪ್ರತೀಕಗಳಾಗಿವೆ. ವರ್ಣ ಸಂಯೋಜನೆ, ರೂಪ ಮತ್ತು ರೇಖಾ ಲಾಲಿತ್ಯ ಅವರ ಕೃತಿಗಳ ಸೊಬಗಿಗೆ ಮುಖ್ಯ ಕಾರಣ.

ಅಬನೀಂದ್ರರು ಮಕ್ಕಳಿಗಾಗಿ ಕತೆ ಕವನಗಳನ್ನು ರಚಿಸಿದರು. ಚಿತ್ರಕಲೆಯ ಬಗೆಗೆ ಪುಸ್ತಕಗಳನ್ನೂ ಬರೆದರು. ಅವರ ರಾಷ್ಟ್ರಾಭಿಮಾನ ಅಸೀಮ. "ಚೆನ್ನಾಗಿ ಬಿಸಿಲುಬಿದ್ದ, ವಿಶೇಷ ನೆರಳು ಬೆಳಕು ಇದ್ದ ಚಿತ್ರಗಳನ್ನು ಭಾರತೀಯರು ರಚಿಸುವುದಿಲ್ಲ, ಏನು ಕಾರಣ ?" ಎಂದು ಪಾಶ್ಚಾತ್ಯರೊಬ್ಬರು ಒಮ್ಮೆ ಇವರನ್ನು ಪ್ರಶ್ನಿಸಿದರು. ಅಬನೀಂದ್ರರು "ನಮಗೆ ಇನ್ನೂ ಸ್ವಾತಂತ್ರ್ಯ ಸಿಕ್ಕಿಲ್ಲ. ನಮ್ಮ ಪಾಲಿಗೆ ಸೂರ್ಯ ಕಾಣಿಸುವುದಿಲ್ಲ. ನಮ್ಮ ಹೃದಯದೊಳಗೆ ಹರ್ಷವಿಲ್ಲ; ಶೋಕವೆಂಬ ಕತ್ತಲು ತುಂಬಿದೆ. ಆದರಿಂದ ನಮ್ಮ ಕೃತಿಗಳಲ್ಲಿ ಬಿಸಿಲು, ಪ್ರಕಾಶ ಕಡಮೆ" ಎಂದು ಉತ್ತರ ಕೊಟ್ಟರು.

1941ರಲ್ಲಿ ಕಲ್ಕತ್ತ ವಿಶ್ವವಿದ್ಯಾನಿಲಯ ಅವರಿಗೆ 'ಡಾಕ್ಟರ್ ಆಫ್ ಲೆಟರ್ಸ್' ಗೌರವ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು.

ಅಬನೀಂದ್ರರ ಕಡೆಯ ಚಿತ್ರ 'ಸ್ಮಶಾನ ಯಾತ್ರೆ'. ಕಲ್ಕತ್ತೆ ಬಳಿಯ ಬ್ಯಾರಕ್‌ಪುರದಲ್ಲಿ ಋಷಿ ಸಮಾನರಾಗಿ ಜೀವನ ನಡೆಸುತ್ತಿದ್ದ ಅಬನೀಂದ್ರರು ತಮ್ಮ 78ನೆಯ ವಯಸ್ಸಿನಲ್ಲಿ (1949) ಕೀರ್ತಿಶೇಷರಾದರು.

ನೋಡಿ : ಭಾರತೀಯ ಚಿತ್ರಕಲೆ

## ಅಭಿನಯ

ಒಳ್ಳೆಯ ನಾಟಕ, ಚಲಚ್ಚಿತ್ರ ಅಥವಾ ನಾಟ್ಯಪ್ರದರ್ಶನಗಳು ನಮ್ಮ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ. ಇದಕ್ಕೆ ಮುಖ್ಯ ಕಾರಣ ಅವುಗಳಲ್ಲಿ ಭಾಗವಹಿಸಿದವರ ಅಭಿನಯ. ನಾಟ್ಯದಲ್ಲಾಗಲೀ, ನಾಟಕದಲ್ಲಾಗಲೀ ಅಭಿನಯಕ್ಕೇ ಪ್ರಾಶಸ್ತ್ಯ. ಕರ್ತೃ ಕಲ್ಪಿಸಿರುವ ಸನ್ನಿವೇಶಗಳೂ ಪಾತ್ರಗಳೂ ಜೀವ ತಳೆಯುವಂತೆ ಮಾಡುವುದು ನಟರ ಅಥವಾ ನರ್ತಕರ ಹೊಣೆ. ಇದನ್ನು ಯಶಸ್ವಿಯಾಗಿ ನಿರ್ವಹಿಸಬೇಕಾದರೆ ಇವುಗಳಲ್ಲಿ ನಟನಟಿಯರಿಗೆ ಅಥವಾ ನರ್ತಕಿಯರಿಗೆ ಅಭಿನಯ ಕಲೆ ಸಾಧಿಸಿರಬೇಕು.





ಅಭಿನಯ ವೈವಿಧ್ಯ

ನಾಟಕ ನರ್ತನಗಳೆರಡಕ್ಕೂ ಅಭಿನಯ ಸಾಮಾನ್ಯ ಅಂಶವಾದರೂ ಅಭಿನಯದ ರೀತಿ ಮಾತ್ರ ಬೇರೆ ಬೇರೆ.

ನರ್ತನ ಅಥವಾ ನೃತ್ಯಕಲೆಯಲ್ಲಿ ನೃತ್ತ, ನೃತ್ಯ, ನಾಟ್ಯಗಳೆಂದು ಮೂರು ವಿಭಾಗಗಳು.

ಈ ಮೂರರಲ್ಲಿ ಅಭಿನಯಕ್ಕೆ ಹೆಚ್ಚಿನ ಅವಕಾಶ ದೊರೆಯುವುದು ನೃತ್ಯದಲ್ಲಿ. ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ತ್ವಿಕ ಎಂದು ಅಭಿನಯವನ್ನು ನಾಲ್ಕು ಭಾಗಗಳಾಗಿ ಮಾಡಿದ್ದಾರೆ.

ಆಂಗಿಕ ಅಭಿನಯದಲ್ಲಿ, ಕಣ್ಣು, ಬಾಯಿ, ಕೈಕಾಲು, ಪಾದ, ತೋಳು –ಹೀಗೆ ದೇಹದ ಪ್ರತಿ ಅಂಗ ಉಪಾಂಗಗಳನ್ನು ಅಭಿನಯ ಸೂಚಕವಾಗಿ ಬಳಸಬೇಕು. ಶಾರೀರ, ಮುಖಜ, ಚೇಷ್ಟಾಕೃತಿ ಎಂಬುವು ಆಂಗಿಕ ಅಭಿನಯದ ಉಪಭೇದಗಳು. ಈ ಅಂಗೋಪಾಂಗಗಳಿಂದ ಸೂಚಿಸುವ ನಾನಾ ಅಭಿನಯಗಳಿಗೆ ಬೇರೆ ಬೇರೆ ಹೆಸರುಗಳಿವೆ.

ಸೂಚ್ಯಾಭಿನಯ–ಜರ್ಮನ್ ನಾಟಕದಲ್ಲಿ

ಪಾಶ್ಚಾತ್ಯ ಪದ್ಧತಿಯ ನಾಟ್ಯದಲ್ಲಿ ಆಂಗಿಕ ಅಭಿನಯಕ್ಕೆ ಮೊದಲಿನಿಂದಲೂ ಪ್ರಾಧಾನ್ಯ. ಬ್ಯಾಲೆಗಳಲ್ಲಿ ಇಂದಿಗೂ ಇದನ್ನು ಕಾಣಬಹುದು.

ನಾಟ್ಯಕ್ಕೆ ಸಂಬಂಧಿಸಿದ ಸಾಹಿತ್ಯ, ಭಾಷೆ. ಅದರ ಶೈಲಿ. ಛಂದಸ್ಸು ಮುಂತಾದವು ವಾಚಿಕಾಭಿನಯಕ್ಕೆ ಸೇರಿದ ಅಂಶಗಳು.

ಆಹಾರ್ಯಾಭಿನಯ ವೇಷಭೂಷಣಗಳಿಗೆ ಸಂಬಂಧಿಸಿದ್ದು. ಆಭರಣಗಳು, ಹಣೆ, ಅಂಗೈ, ಮುಂಗೈ ಇತ್ಯಾದಿ ಸ್ಥಾನಗಳಲ್ಲಿ ರಚಿಸುವ ಆಲಂಕಾರಿಕ ಚಿಹ್ನೆಗಳು, ವಸ್ತ್ರದ ಬಣ್ಣ —ಈ ವಿವರಗಳು ಅಭಿನಯಿಸಬೇಕಾದ ಪಾತ್ರವನ್ನು ಅವಲಂಬಿಸಿವೆ. ಇದಕ್ಕೆ ಅನುಗುಣವಾಗಿ ವೇಷಭೂಷಣ.

ಪಾತ್ರದ ಮನಸ್ಸಿನ ವಿಶಿಷ್ಟ ಸ್ಥಿತಿಗಳನ್ನು ಅಭಿನಯಿಸಿ ತೋರಿಸುವ ಕಲೆ ಸಾತ್ವಿಕಾಭಿನಯ.

ಹೀಗೆ ನಾಟ್ಯಾಭಿನಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದರೂ ಅವು ಪರಸ್ಪರ ಪೂರಕವೇ ಹೊರತು ಪ್ರತ್ಯೇಕವಲ್ಲ. ರಸಪೂರ್ಣವಾದಾಗಲೇ ಈ ಅಭಿನಯ ಆಕರ್ಷಕವಾಗುತ್ತದೆ.

ನಾಟಕಾಭಿನಯದಲ್ಲಿ ಪಾತ್ರಧಾರಿ, ಪಾತ್ರದ ಸುಖ ದುಃಖ ಮುಂತಾದ ಅನುಭವಗಳನ್ನು ತನ್ನ ದೇಹ ಚಲನೆ ಮಾತುಗಾರಿಕೆಗಳ ಮೂಲಕ ಪರಿಣಾಮಕಾರಿಯಾಗಿ ವ್ಯಕ್ತಪಡಿಸುತ್ತಾನೆ. ಸನ್ನಿವೇಶಕ್ಕೆ ತಕ್ಕಂತೆ ತನ್ನ ದೇಹಭಾವ, ಮುಖಭಾವ, ಕಂಠಭಾವಗಳನ್ನು ಬದಲಿಸುವ ಸಾಮರ್ಥ್ಯ ಆತನಿಗಿರಬೇಕು. ಇಂಥ ಅಭಿನಯ ಪ್ರತಿಭೆಯನ್ನು ಮೈಗೂಡಿಸಿಕೊಂಡವರು ಶ್ರೇಷ್ಠ ಕಲಾವಿದರಾಗುತ್ತಾರೆ.

ನಾಟಕದ ಅಥವಾ ನಾಟ್ಯದ ರಚನಕಾರ ಒಂದು ಪಾತ್ರವನ್ನು ಸ್ಫುಟವಾಗಿಯೇ ವಿವರಿಸಿರಬಹುದು. ಆದರೂ ಆ ಪಾತ್ರಕ್ಕೆ ಜೀವಕಳೆ ತುಂಬಬೇಕಾದರೆ ಅದನ್ನು ಅಭಿನಯಿಸುವವನಿಗೆ ಕಲ್ಪನಾಶಕ್ತಿ ಇರಬೇಕಾಗುತ್ತದೆ. ಕೇವಲ ಅಣಕ, ಅನುಕರಣೆ, ತೋರಿಕೆಗಳಂಥ ಬಾಹ್ಯ ಪ್ರದರ್ಶನಗಳೇ ಅಭಿನಯವಲ್ಲ. ಒಂದು ಕಾಲ್ಪನಿಕ ಪ್ರಚೋದನೆಗೆ ಪ್ರತಿಕ್ರಿಯೆ ತೋರಿಸುವುದೇ ಸಮರ್ಥ ಅಭಿನಯ.

ದೇಹಭಂಗಿ. ಅವಯವಗಳ ಹಾವಭಾವ. ಮುಖಭಾವ. ನಡಿಗೆ. ಚಲನವಲನ, ಧ್ವನಿಯ ಸೂಕ್ತ ಏರಿಳಿತ, ಸರಿಯಾದ ಉಚ್ಚಾರಣೆ ಇವೆಲ್ಲವನ್ನೂ ನಾಟಕಾಭಿನಯ ಒಳಗೊಂಡಿದೆ. ಸತತ ಪ್ರಯತ್ನ ಹಾಗೂ ಅಭ್ಯಾಸಗಳಿಲ್ಲದೆ ಒಳ್ಳೆಯ ಅಭಿನಯ ಸಾಧ್ಯವಿಲ್ಲ.

ಅಭಿನಯ ಕಲೆಯ ಮೊದಲ ಪ್ರಸ್ತಾಪ ನಮ್ಮಲ್ಲಿ ಕಂಡುಬರುವುದು ಭರತನ 'ನಾಟ್ಯಶಾಸ್ತ್ರ'ದಲ್ಲಿ. ಇದರ ಪ್ರಕಾರ ಅಭಿನಯದ ಮೂಲ ಯಜುರ್ವೇದ. ಅಭಿನಯ ದೀರ್ಘಕಾಲದಿಂದ ಬೆಳೆದುಬಂದ ಕಲೆ ಎಂಬುದನ್ನು ಸಂಸ್ಕೃತ ನಾಟಕಗಳು ಸೂಚಿಸುತ್ತವೆ.

ಕನ್ನಡ ನಾಟಕ ಸಾಹಿತ್ಯ ಬೆಳೆಯಲಾರಂಭಿಸಿದ್ದು ಕಳೆದ ಶತಮಾನದ ಕೊನೆಯಲ್ಲಿ. ಅನಂತರವಷ್ಟೆ ವೃತ್ತಿ ನಟನಟಿಯರ ಹಾಗೂ ಹವ್ಯಾಸಿ ನಟನಟಿಯರ ಪರಂಪರೆಗಳು ಆರಂಭವಾದುವು.

ವರದಾಚಾರ್ಯರು, ಜಿ. ಎಚ್. ವೀರಣ್ಣ, ಗರೂಡ ಸದಾಶಿವರಾವ್, ಶಿರಹಟ್ಟಿ ವೆಂಕೋಬರಾವ್, ಹಂದಿಗನೂರು ಸಿದ್ಧರಾಮಪ್ಪ, ಬಳ್ಳಾರಿ ರಾಘವ, ಮಳವಳ್ಳಿ ಸುಂದರಮ್ಮ, ಬಿ. ಜಯಮ್ಮ, ಗುಬ್ಬಿ ಕಂಪನಿ ಸುಂದರಮ್ಮ, ಗಂಗೂಬಾಯಿ ಗುಳೇದಗುಡ್ಡ, ಸುಬ್ಬಯ್ಯನಾಯ್ಡು, ಮಹಮದ್ ಪೀರ್, ಹಿರಣ್ಣಯ್ಯ ಮುಂತಾದ ನಟನಟಿಯರು ಕರ್ನಾಟಕದಲ್ಲಿ ತಮ್ಮ ಶ್ರೀಮಂತ ಅಭಿನಯದಿಂದ ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡ ಕಲಾವಿದರು.



ಸುಹಾಸಿನಿ ಮುಳೆ, ಉತ್ಪಲ್ ದತ್ : 'ಭುವನ್ ಶೋಮ್' ಚಿತ್ರದಲ್ಲಿ

ಪಾಶ್ಚಾತ್ಯ ನಾಟಕಾಭಿನಯವನ್ನು ಪ್ರಾಚೀನ ಗ್ರೀಕ್‌ನಾಟಕಗಳ ಕಾಲದಿಂದ ಗುರುತಿಸಬಹುದು. ಗ್ರೀಕರು ಅಭಿನಯವನ್ನು ಕಲೆಯಂತೆ ಬೆಳೆಸಿದರು. ಕ್ರಿ. ಪೂ. 4-5ನೆಯ ಶತಮಾನಗಳಲ್ಲಿ ಉತ್ತಮ ಅಭಿನಯ ನೀಡುತ್ತಿದ್ದ ಪರಿಣತ ನಟರಿದ್ದರು. ಅವರು ಮುಖವಾಡ ಧರಿಸುತ್ತಿದ್ದುದೂ ಉಂಟು. 16ನೆಯ ಶತಮಾನದಲ್ಲಿ ಎಲಿಜಬೆತ್ ರಾಣಿಯ ಕಾಲದಲ್ಲಿ ವೃತ್ತಿನಾಟಕ ಮಂಡಲಿಗಳು ಇಂಗ್ಲೆಂಡಿನಲ್ಲಿ ಪ್ರಸಿದ್ಧಿಗೆ ಬಂದುವು. ಶೇಕ್ಸ್‌ಪಿಯರ್ ನಾಟಕ ರಚಿಸಿದ ಕಾಲ ಅದು. ಇತ್ತೀಚಿನ ಶತಮಾನಗಳಲ್ಲಿ ನಾಟಕಾಭಿನಯ ಚೆನ್ನಾಗಿ ವಿಕಾಸಗೊಂಡಿತು.



ಕ್ಲಿಯೋಪಾತ್ರ ಮತ್ತು ಆಂಟನಿ : ಶೇಕ್ಸ್‌ಪಿಯರ್ ಸೃಷ್ಟಿ, ರಷ್ಯದಲ್ಲಿ

ರಷ್ಯದ ಸ್ಟಾನಿಸ್ಲಾವ್‌ಸ್ಕಿ (1863–1936) ಅಭಿನಯಕ್ಕೂ ರಂಗಭೂಮಿಗೂ ಶಾಸ್ತ್ರೀಯ ರೂಪವನ್ನು ನೀಡಿದವರಲ್ಲಿ ಗಣ್ಯವ್ಯಕ್ತಿ.

ಈಗ ಅನೇಕ ರಾಷ್ಟ್ರಗಳಲ್ಲಿ ನಾಟಕ ಹಾಗೂ ಚಲಚ್ಚಿತ್ರ ಅಭಿನಯವನ್ನು ಕುರಿತು ತರಬೇತಿ ಕೊಡುವ ಶಾಲೆಗಳಿವೆ.

ನೋಡಿ : ಭರತನ ' ನಾಟ್ಯಶಾಸ್ತ್ರ '

## ಅಭಿವ್ಯಕ್ತಿ

ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ
ಕೈಹಿಡಿದು ನಡೆಸೆನ್ನನು
ಇರುಳು ಕತ್ತಲೆಯ ಗವಿ; ಮನೆ ದೂರ; ಕನಿಕರಿಸಿ
ಕೈಹಿಡಿದು ನಡೆಸೆನ್ನನು



ಆರ್. ಎಸ್. ಎನ್. ದೃಷ್ಟಿಯಲ್ಲಿ ಪಾ

—ಇದು ಬಿ ಎಂ ಶ್ರೀ ಅವರು ಅನುವಾದಿಸಿರುವ ಒಂದು ಭಾವಗೀತೆಯ ಸಾಲುಗಳು. ನಿರಾಶೆ, ದುಃಖ, ಅಸಹಾಯಕತೆಗಳಿಂದ ತುಂಬಿರುವ ಈ ಜೀವನದಲ್ಲಿ ತನ್ನ ಕೈಹಿಡಿದು ನಡೆಸಿಕೊಂಡು ಹೋಗುವಂತೆ ಕವಿ ಅವ್ಯಕ್ತ ಶಕ್ತಿಯೊಂದನ್ನು ಬೇಡುತ್ತಿದ್ದಾನೆ. ಈ ಭಾವನೆ ಈ ಕವನದಲ್ಲಿ ಸೊಗಸಾಗಿ ವ್ಯಕ್ತವಾಗಿದೆ. ಹೀಗೆ ಒಂದು ಭಾವನೆಯನ್ನು ಅತ್ಯಂತ ಯಶಸ್ವಿಯಾಗಿ ಬೇರೆಯವರಿಗೆ ತಿಳಿಸುವುದೇ ಅಭಿವ್ಯಕ್ತಿ.

ಕವಿ ಭಾಷೆಯ ಮೂಲಕ ತನ್ನ ಭಾವನೆಗಳನ್ನು, ಚಿಂತನೆಗಳನ್ನು ಅಭಿವ್ಯಕ್ತಿಗೊಳಿಸುತ್ತಾನೆ. ಅಂತೆಯೇ ಚಿತ್ರಕಾರ ಬಣ್ಣರೇಖೆಗಳ ಮೂಲಕ ; ಶಿಲ್ಪಿ ಕಲ್ಲು, ಮರ, ದಂತ ಮುಂತಾದುವುಗಳ ಕೆತ್ತನೆಯ ಮೂಲಕ ; ನಟ ಅಭಿನಯದ ಮೂಲಕ ; ಹಾಡುಗಾರ ಸಂಗೀತದ ಮೂಲಕ ತಮ್ಮ ತಮ್ಮ ಭಾವನೆಗಳಿಗೆ ಅಭಿವ್ಯಕ್ತಿ ನೀಡುತ್ತಾರೆ.

ನಮ್ಮ ಭಾವನೆಗಳು ಬೇರೆಯವರಿಗೆ ಅರ್ಥವಾಗುವಂತೆ ನಾವು ಮಾತನಾಡುತ್ತೇವೆ. ಇದೂ ಅಭಿವ್ಯಕ್ತಿಯೇ. ಆದರೆ ಕಲಾದೃಷ್ಟಿಯಿಂದ ಇದನ್ನು ಅಭಿವ್ಯಕ್ತಿ ಎನ್ನುವುದಿಲ್ಲ. ಏಕೆಂದರೆ ಇಲ್ಲಿ ಮಾತು ಕೇವಲ ವ್ಯವಹಾರ ಮಾಧ್ಯಮ. ಕಲಾದೃಷ್ಟಿ ಇದರ ಉದ್ದೇಶವಲ್ಲ. ನಾವು ತಿಳಿಸಬೇಕೆಂದಿರುವುದನ್ನು 'ಸುಂದರ'ವಾಗಿ ವ್ಯಕ್ತಪಡಿಸಿದಾಗ ಅದು ಕಲಾತ್ಮಕ ಅಭಿವ್ಯಕ್ತಿಯಾಗುತ್ತದೆ.

ಒಂದು ಕಲಾಸೃಷ್ಟಿ ಪೂರ್ಣಗೊಳ್ಳುವುದು ಮೂರು ಹಂತಗಳ ಸಮನ್ವಯದಿಂದ. ಮೊದಲನೆಯದಾಗಿ ಬಣ್ಣ, ಶಬ್ದ, ಅಭಿನಯ, ಧ್ವನಿ ಇತ್ಯಾದಿ. ಇವು ಕಲಾಕಾರನ ಸೃಷ್ಟಿಗೆ ಬೇಕಾದ ಮೂಲವಸ್ತುಗಳು ಎನ್ನಬಹುದು. ಎರಡನೆಯದಾಗಿ ಇವು ಆಹ್ಲಾದಕರವಾಗಿ, ಅಂದರೆ ಮನಸ್ಸಿಗೆ ಸಂತಸವನ್ನುಂಟುಮಾಡುವ ರೀತಿಯಲ್ಲಿ, ಆಕರ್ಷಕವಾದ 'ಆಕಾರ' ಅಥವಾ 'ರೂಪವ'ನ್ನು ಪಡೆಯಬೇಕು. ಇಂಥ 'ಆಕಾರ' ಯಾವುದೋ ಒಂದು ಭಾವನೆಯನ್ನು ಮೂಡಿಸಿದಾಗ ಅಥವಾ ತಿಳಿಯಪಡಿಸಿದಾಗ 'ಅಭಿವ್ಯಕ್ತಿ' ಉಂಟಾಗುತ್ತದೆ. ಈ ಅಭಿವ್ಯಕ್ತಿಯೇ ಮೂರನೆಯ ಹಾಗೂ ಕೊನೆಯ ಹಂತ. ಈ ಮೂರನೆಯ ಹಂತ ಸಮರ್ಪಕವಾಗಿ ಪರಿಣಾಮಕಾರಿಯಾಗಿ ರೂಪುಗೊಂಡಾಗ ಕಲಾವಿದ ಇಂಥ ಭಾವನೆಗೆ ಅಭಿವ್ಯಕ್ತಿ ನೀಡಿದ್ದಾನೆ ಎಂದು ನಮಗೆ ಹೊಳೆಯುತ್ತದೆ.



ಶ್ರೇಷ್ಠ ಅಭಿವ್ಯಕ್ತಿಯ ಚಿತ್ರಕಾರ, ಶಿಲ್ಪಿ : ಆರ್. ಎಸ್. ...

ಕೆಲವೊಮ್ಮೆ ಕಲಾಕೃತಿಯೊಂದರಲ್ಲಿ ಮೊದಲ ಎರಡು ಅಂಶಗಳು ಮಾತ್ರ ಇದ್ದು ಅಭಿವ್ಯಕ್ತಿ ಉಂಟಾಗದೆ ಇದ್ದರೆ, ಅಂಥ ಕೃತಿಯನ್ನು 'ಕಲೆ' ಎನ್ನಲಾಗುವುದಿಲ್ಲ ಎಂದು ಪ್ರಖ್ಯಾತ ಆಂಗ್ಲ ಕಲಾವಿಮರ್ಶಕ ಹರ್ಬರ್ಟ್ ರೀಡ್ ಹೇಳಿದ್ದಾನೆ. 'ಸುಂದರ' ಆಕಾರ ಮಾತ್ರ ಇರುವ ಕೃತಿಗಳು ಕಲಾದೃಷ್ಟಿಯಿಂದ ಯಾಕೆ ಯಶಸ್ವಿಯಾಗುವುದಿಲ್ಲ ಎಂಬುದನ್ನು ಇದರಿಂದ ಅರ್ಥಮಾಡಿಕೊಳ್ಳಬಹುದು. ಅತ್ಯಂತ ಸುಂದರ ಚಿತ್ರವಾಗಲೀ ಅತ್ಯಂತ ಸರಳ ಭಾಷೆಯಾಗಲೀ ಯಾವ ಭಾವನೆಗೂ ಅಭಿವ್ಯಕ್ತಿ ನೀಡದಿದ್ದರೆ, ಅವನ್ನು ಕಲೆ ಅಥವಾ ಕಾವ್ಯ ಎನ್ನಲಾಗುವುದಿಲ್ಲ : ಸುಂದರ ಕೃತಿ ಎನ್ನಬಹುದು, ಅಷ್ಟೆ.

ಒಂದು ಕಲಾಕೃತಿ ಅಥವಾ ಸಾಹಿತ್ಯಕೃತಿ ಏನನ್ನು ಎಷ್ಟರಮಟ್ಟಿಗೆ ಅಭಿವ್ಯಕ್ತಿಗೊಳಿಸುತ್ತದೆ ಎಂಬುದು ಸಹೃದಯನ ರಸಿಕತೆಯ ಮಟ್ಟವನ್ನು ಅವಲಂಬಿಸಿರುತ್ತದೆ. ಉದಾ : ಪ್ರತಿಮಾ ಪ್ರಧಾನವಾದ ಒಂದು ಕವನ ಪ್ರತಿಮಾ ವಿಧಾನವನ್ನು ಅರ್ಥಮಾಡಿಕೊಳ್ಳಲಾರದವನಿಗೆ ಅದು ಒಂದು ರೀತಿಯಲ್ಲಿ ಅರ್ಥವಾದರೆ, ಪ್ರತಿಮಾ ವಿಧಾನ ಅರ್ಥಮಾಡಿಕೊಳ್ಳುವವನಿಗೆ ಅದು ಮತ್ತೊಂದು ರೀತಿಯಲ್ಲಿ ಅರ್ಥವಾಗುತ್ತದೆ. ಇದೇ ರೀತಿಯಲ್ಲಿ ಪಿಕಾಸೋನ ಚಿತ್ರಗಳಾಗಲೀ ವೆಂಕಟಪ್ಪ ಅಥವಾ ಆರ್. ಎಸ್. ನಾಯ್ಡು ಅವರ ಶಿಲ್ಪಗಳಾಗಲೀ ಶಾಸ್ತ್ರೀಯ ಸಂಗೀತವಾಗಲೀ ಅಭಿವ್ಯಕ್ತಿಪಡಿಸುವುದನ್ನು ಸಹೃದಯನು ತನ್ನ ಕಲಾವಿವೇಚನೆಯ ಶಕ್ತಿಗೆ ಅನುಸಾರವಾಗಿ ಗುರುತಿಸುತ್ತಾನೆ.

ಸಾಹಿತ್ಯದಲ್ಲಿ ಛಂದಸ್ಸು ಅಭಿವ್ಯಕ್ತಿಗೆ ಪೂರಕ. ಕುವೆಂಪು ಅವರ ಕಥನ ಕವನಗಳು ಹಾಗೂ 'ಶ್ರೀರಾಮಾಯಣ ದರ್ಶನಂ' ಕಾವ್ಯದ ಛಂದಸ್ಸುಗಳು ಕೃತಿಗಳಲ್ಲಿ ಬರುವ ಅನುಭವಗಳಿಗೆ ಯಶಸ್ವಿಯಾಗಿ ಅಭಿವ್ಯಕ್ತಿ ನೀಡಲು ಸಹಾಯಕವಾಗುತ್ತವೆ. ಪಂಜೆಯವರ 'ತೆಂಕಣ ಗಾಳಿಯಾಟ', ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಕವನಗಳ ಛಂದಸ್ಸು ಆಯಾ ಕೃತಿಗಳ ವಸ್ತುಗಳ ಅಭಿವ್ಯಕ್ತಿಗೆ ಅತ್ಯಂತ ಸಹಾಯಕಾರಿ.

ನಾನಾಬಗೆಯ ಭಾವನೆ ಚಿಂತನೆಗಳು ಅವನಿಗೆ ಅರಿವಾಗುವ ಹೊತ್ತಿಗಾಗಲೇ ಭಾಷೆಯು ರೂಪ ತಾಳಿಬಿಟ್ಟಿರುತ್ತದೆ - ಎಂದು ಆಂಗ್ಲ ವಿಮರ್ಶಕ ಟಿ. ಎಸ್. ಎಲಿಯಟ್ ಹೇಳಿದ್ದಾನೆ. ಸಾಹಿತ್ಯ ಕೃತಿಯಲ್ಲಿ ಭಾವ-ಅಭಿವ್ಯಕ್ತಿಗಳು ಬೇರ್ಪಡಿಸಲಾಗದಷ್ಟು ಒಟ್ಟಿಗೆ ಬೆರೆತುಬಿಟ್ಟಿರುತ್ತವೆ.

ಸಂಗೀತದಲ್ಲಿ ರಾಗಗಳು ಅಭಿವ್ಯಕ್ತಿಗೆ ಪೂರಕ. ನವರಸಗಳಲ್ಲಿ ಒಂದೊಂದು ರಸಕ್ಕೂ ಒಂದೊಂದು ರಾಗ ನಿರ್ದಿಷ್ಟವಾಗಿರುವುದನ್ನು ಗಮನಿಸಿದಾಗ ಸಂಗೀತದ ಅಭಿವ್ಯಕ್ತಿಯಲ್ಲಿ ರಾಗ ನಾದಗಳು ವಹಿಸುವ ಪಾತ್ರದ ಅರಿವಾಗುತ್ತದೆ. ಚಲಚ್ಚಿತ್ರಗಳಲ್ಲಿ ಹಿನ್ನೆಲೆ ಸಂಗೀತ ಚಿತ್ರಿತ ಸನ್ನಿವೇಶದ ಅಭಿವ್ಯಕ್ತಿಗೆ ಪೂರಕವಾಗುತ್ತದೆ. ಹಾಗೆಯೇ ಚಿತ್ರಕಲೆಯಲ್ಲಿ ಬಣ್ಣಗಳು ಮತ್ತು ಅವುಗಳ ಸಂಯೋಜನೆ ಅಭಿವ್ಯಕ್ತಿ ಪೂರಕ.

ನವ್ಯ ಸಾಹಿತ್ಯ ಹಾಗೂ ಚಿತ್ರಕಲೆಗಳಲ್ಲಿ ಅಭಿವ್ಯಕ್ತಿ ಹಿಂದಿನಷ್ಟು ಸರಳವಾಗಿರದೆ ಸಂಕೀರ್ಣವಾಗಿರುತ್ತದೆ. ಈಗಿನ ಜೀವನದ ಮೇಲೆ ಆಗಿರುವ ಆಗುತ್ತಿರುವ ನಾನಾ ಪ್ರಭಾವಗಳು, ಶಿಥಿಲವಾಗುತ್ತಿರುವ ಹಿಂದಿನ ನಂಬಿಕೆಗಳು, ಇವಕ್ಕೆ ಕಾರಣವಾದ ವೈಚಾರಿಕ ದೃಷ್ಟಿ – ಇವುಗಳಿಂದಾಗಿ ಇಂದಿನ ಜೀವನದಲ್ಲೂ ಸಂಕೀರ್ಣತೆಯುಂಟಾಗಿದೆ. ಎಂದೇ ಆ ಜೀವನಕ್ಕೆ ಅಭಿವ್ಯಕ್ತಿ ನೀಡುವ ಸಾಹಿತ್ಯ, ಚಿತ್ರ ಮತ್ತಿತರ ಕಲೆಗಳಲ್ಲೂ ಅದೇ ರೀತಿಯ ಸಂಕೀರ್ಣತೆ ಏರ್ಪಟ್ಟಿದೆ.

## ‘ ಅಮರಕೋಶ ’

“ಅ ಆ ಬಾರದಿದ್ದರೂ ಅಮರವಾದರೂ ಹೇಳು” ಇದು ಕನ್ನಡದ ಒಂದು ಗಾದೆ. ಒಂದು ಕಾಲದಲ್ಲಿ ಜನಜೀವನದಲ್ಲಿ ‘ಅಮರಕೋಶ’ಕ್ಕೆ ಇದ್ದ ಪ್ರಾಮುಖ್ಯವನ್ನು ಇದು ಸೂಚಿಸುತ್ತದೆ. ಉಚ್ಚಾರಣಾ ಶುದ್ಧಿಗಾಗಿ, ಶಬ್ದ ಅರ್ಥಜ್ಞಾನವನ್ನು ಬೆಳೆಸುವುದಕ್ಕಾಗಿ, ಬಾಲ್ಯದಿಂದಲೇ ‘ಅಮರಕೋಶ’ವನ್ನು ಬಾಯಿಪಾಠ ಮಾಡಿಸುವ ಪದ್ಧತಿ ಹಿಂದೆ ರೂಢಿಯಲ್ಲಿತ್ತು.

ಸಂಸ್ಕೃತ ಭಾಷೆಯಲ್ಲಿ ಅನೇಕ ಕೋಶಗಳಿವೆ. ‘ಅಮರಕೋಶ’ ರಚಿತವಾಗುವುದಕ್ಕೆ ಮೊದಲೇ ಕೆಲವು ಕೋಶಗಳು ರೂಪುಗೊಂಡಿದ್ದುವು. ಆದರೂ ‘ಅಮರಕೋಶ’ ಸಂಸ್ಕೃತದ ಶಬ್ದಕೋಶಗಳಲ್ಲೆಲ್ಲ ಅತ್ಯಂತ ಪ್ರಸಿದ್ಧವೂ ಜನಪ್ರಿಯವೂ ಆಯಿತು. ಈ ಕೋಶವನ್ನು ರಚಿಸಿದವನು ಅಮರಸಿಂಹ ಎಂಬವನು.

ಈ ಗ್ರಂಥ ‘ಅಮರಕೋಶ’ವೆಂದು ಪ್ರಸಿದ್ಧವಾಗಿದ್ದರೂ ಕೋಶಕಾರ ಅದಕ್ಕೆ ಕೊಟ್ಟಿರುವ ಹೆಸರು ‘ನಾಮಲಿಂಗಾನುಶಾಸನ’ ಎಂದು. ಇದು ಕೆಲವು ಹೆಸರುಗಳ ಪಟ್ಟಿಯಲ್ಲ. ಅವನ್ನು ವ್ಯವಸ್ಥಿತವಾಗಿ ವರ್ಗೀಕರಿಸಿ, ಅವುಗಳ ಲಿಂಗ ವಚನಗಳನ್ನು ಕೂಡ ನಿರೂಪಿಸುವ ಹಾಗೂ ವ್ಯಾಕರಣಾಂಶಗಳನ್ನು ತಿಳಿಸುವ ಗ್ರಂಥ. ಸುಲಭವಾಗಿ ಬಾಯಿ ಪಾಠ ಮಾಡಿ ನೆನಪಿನಲ್ಲಿಡಲು ಅನುಕೂಲವಾಗುವಂತೆ ಈ ಕೃತಿ ಶ್ಲೋಕ ರೂಪದಲ್ಲಿ ರಚಿತವಾಗಿದೆ.

‘ಅಮರಕೋಶ’ದಲ್ಲಿ ಮೂರು ಕಾಂಡಗಳಿವೆ. ಇವುಗಳಲ್ಲಿ ಮೊದಲನೆಯದರಲ್ಲಿ ಸ್ವರ್ಗ, ನರಕ, ಆಕಾಶ, ದೇವತೆಗಳು ಮುಂತಾದುವುಗಳ ವಿಷಯವಿದೆ. ಎರಡನೆಯದರಲ್ಲಿ ಭೂಮಿ ಮತ್ತು ಅದರಲ್ಲಿರುವ ಜನ, ಸಸ್ಯಾದಿಗಳ ವಿಷಯ. ಮೂರನೆಯದು ಕೆಲವು ವ್ಯಾಕರಣಾಂಶಗಳನ್ನೂ ನಾನಾರ್ಥಗಳನ್ನೂ ಕುರಿತದ್ದು.

‘ಅಮರಕೋಶ’ದಲ್ಲಿ ಸುಮಾರು ಹನ್ನೆರಡು ಸಾವಿರ ಶಬ್ದಗಳು ಸೇರಿವೆ. ಇವುಗಳನ್ನು ಆ ಮೊದಲೇ ರಚಿತವಾಗಿದ್ದ ಕೋಶಗಳಿಂದ ತಾನು ಆಯ್ದು ವರ್ಗೀಕರಿಸಿರುವುದಾಗಿ ಕೋಶಕಾರನೇ ಹೇಳಿದ್ದಾನೆ. ಅಮರಸಿಂಹನಿಗೆ ಪೂರ್ವದಲ್ಲಿ ಕಾತ್ಯ, ವಾಚಸ್ಪತಿ, ವ್ಯಾಡಿ, ವರರುಚಿ ಭಾಗುರಿ ಮುಂತಾದವರು ಮೊದಲಾದವರಿಂದ ರಚಿತವಾದ ಕೋಶಗಳು ಇದ್ದುವೆಂದು ‘ಅಮರಕೋಶ’ದ ವ್ಯಾಖ್ಯಾನಕಾರರು ತಿಳಿಸಿದ್ದಾರೆ. ತನ್ನ ಕೋಶ ರಚನೆಯಲ್ಲಿ ಅಮರಸಿಂಹನು ಅನುಸರಿಸಿರುವ ವಿಧಾನ ಮುಂದಿನವರಿಗೆ ಮಾರ್ಗದರ್ಶಕವಾಯಿತು. ‘ಅಮರಕೋಶ’ ಸಾಹಿತ್ಯಾಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವಾದ ಗ್ರಂಥ. ಅಷ್ಟು ಮಾತ್ರವಲ್ಲ, ಈ ಕೋಶವನ್ನು ಚಾರಿತ್ರಿಕವಾಗಿ ಪರಿಶೀಲಿಸುವುದರಿಂದ ಅಂದಿನ ಕಾಲದ ಸಾಮಾಜಿಕ ವ್ಯವಸ್ಥೆ, ಸಂಸ್ಕೃತಿ, ಕಲೆ, ವಿಜ್ಞಾನ ಮತ್ತು ರಾಷ್ಟ್ರದ ನೈಸರ್ಗಿಕ ಸಂಪತ್ತು ಮುಂತಾದ ಅಂಶಗಳಿಗೆ ಸಂಬಂಧಿಸಿದ ಅನೇಕ ಅಂಶಗಳ ಪರಿಚಯವೂ ದೊರೆಯುತ್ತದೆ.

‘ಅಮರಕೋಶ’ದ ಮೇಲೆ ಅನೇಕ ವ್ಯಾಖ್ಯಾನಗಳಿವೆ. ಆ ವ್ಯಾಖ್ಯಾನಕಾರರಲ್ಲಿ 11ನೆಯ ಶತಮಾನದ ಕ್ಷೀರಸ್ವಾಮಿ, 12ನೆಯ ಶತಮಾನದ ಸರ್ವಾನಂದ, 17ನೆಯ ಶತಮಾನದ ಭಾನುಜಿ ದೀಕ್ಷಿತ ಪ್ರಮುಖರಾದವರು. ಹನ್ನೊಂದನೆಯ ಶತಮಾನಕ್ಕಿಂತಲೂ ಹಿಂದೆಯೇ ‘ಅಮರಕೋಶ’ದ ವ್ಯಾಖ್ಯಾನಗಳು ರಚಿತವಾಗಿದ್ದುವೆಂಬುದಕ್ಕೆ ಆಧಾರಗಳಿವೆ. ಆದರೆ ಈ ಗ್ರಂಥಗಳು ನಮಗೆ ದೊರೆತಿಲ್ಲ.

‘ಅಮರಕೋಶ’ವು ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಿತವಾಗಿದೆ. ಕ್ರಿ.ಶ. 6ನೆಯ ಶತಮಾನದಷ್ಟು ಹಿಂದೆಯೇ ಚೀಣೀ ಭಾಷೆಗೆ ಅದು ಅನುವಾದಿತವಾಯಿತು. ಇಂಗ್ಲಿಷಿನಲ್ಲಿ ಅನೇಕ ಅನುವಾದಗಳಿವೆ. 18-19ನೆಯ ಶತಮಾನಗಳಲ್ಲಿ ಲ್ಯಾಟಿನ್, ಫ್ರೆಂಚ್ ಭಾಷೆಗಳಿಗೂ ಹಲವಾರು ಭಾರತೀಯ ಭಾಷೆಗಳಿಗೂ ಅದು ಅನುವಾದಗೊಂಡಿದೆ.

ಕನ್ನಡದಲ್ಲೂ ‘ಅಮರಕೋಶ’ದ ಹಲವು ವ್ಯಾಖ್ಯಾನಗಳಿವೆ. ಸುಮಾರು 1300ರಲ್ಲಿ ನಾಚಿರಾಜನಿಂದ ರಚಿತವಾದ ವ್ಯಾಖ್ಯಾನ ಅತ್ಯಂತ ಪ್ರಾಚೀನವಾದದ್ದು. ಭಾರತದ ಬೇರೆ ಯಾವುದೇ ಭಾಷೆಯಲ್ಲಿ ಇದಕ್ಕಿಂತ ಹಿಂದಿನ ವ್ಯಾಖ್ಯಾನ ಕಾಣುವುದಿಲ್ಲ.

ಕನ್ನಡ ಲಿಪಿಯಲ್ಲಿ ಸಂಸ್ಕೃತ ಮೂಲವನ್ನೂ ಕನ್ನಡ ಇಂಗ್ಲಿಷ್ ಅರ್ಥಗಳನ್ನೂ ಒಳಗೊಂಡ ಪರಿಷ್ಕೃತ ‘ಅಮರಕೋಶ’ ಪ್ರಕಟವಾಗಿದೆ.

‘ನಾಮಲಿಂಗಾನುಶಾಸನ’ದ ಕರ್ತೃ ಅಮರಸಿಂಹನ ಕಾಲ, ಜೀವಿತಗಳ ಬಗೆಗೆ ನಮಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ದೊರೆತಿರುವಷ್ಟು ಆಧಾರಗಳು ಕೂಡ ಭಿನ್ನಾಭಿಪ್ರಾಯಗಳಿಗೆ ಎಡೆಗೊಟ್ಟಿವೆ. ಇವನು ಆರನೆಯ ಶತಮಾನಕ್ಕಿಂತಲೂ ಹಿಂದಿನವನೆಂದೂ ಪ್ರಾಯಶಃ ಐದನೆಯ ಶತಮಾನದ ಮಧ್ಯಭಾಗದಲ್ಲಿ ಜೀವಿಸಿದ್ದಿರಬಹುದೆಂದೂ ಅಭಿಪ್ರಾಯ.

‘ಅಮರಕೋಶ’ದ ಪ್ರಾರ್ಥನಾ ಶ್ಲೋಕದಲ್ಲಿ ಯಾವ ದೇವತೆಯ ಸ್ಪಷ್ಟ ಉಲ್ಲೇಖವೂ ಇಲ್ಲ. ಆದರೂ ವ್ಯಾಖ್ಯಾನಕಾರ ಕ್ಷೀರಸ್ವಾಮಿ ಅದು ಬುದ್ಧನ ಪ್ರಾರ್ಥನೆ ಎಂದು ಹೇಳಿದ್ದಾನೆ. ಅದ್ದರಿಂದಲೂ ಪ್ರಥಮ ಕಾಂಡದಲ್ಲಿ ಮೊದಲು ಬುದ್ಧನ ಹೆಸರುಗಳನ್ನು ಹೇಳಿ ಅನಂತರ ಬ್ರಹ್ಮಾದಿ ಇತರ ದೇವತೆಗಳನ್ನು ಹೆಸರಿಸಿರುವುದರಿಂದಲೂ ಅಮರಸಿಂಹ ಬೌದ್ಧನಾಗಿರಬೇಕೆಂದು ಊಹಿಸಬಹುದು.

‘ಅಮರಕೋಶ’ದ ರಚನೆಯಾಗಿ ಕೊನೆಯ ಪಕ್ಷ 14 ಶತಮಾನಗಳಾಗಿದ್ದರೂ ಅದನ್ನು ಸಂಸ್ಕೃತಾಭ್ಯಾಸಿಗಳು ಇಂದಿಗೂ ಒಂದು ಪ್ರಮಾಣ ಗ್ರಂಥವನ್ನಾಗಿ ಉಪಯೋಗಿಸುತ್ತಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿ ‘ಅಮರಕೋಶ’ ಒಂದು ಮಹತ್ವದ ಕೃತಿ ಎಂಬುದಕ್ಕೆ ಬೇರೆ ಸಾಕ್ಷಿಯೇ ಬೇಡ.

## ಅಮೂರ್ತ ಕಲೆ

ಒಂದು ಹೂಗಿಡ, ವೃಕ್ಷ, ಅಥವಾ ಮನುಷ್ಯನ ವಿಗ್ರಹವನ್ನು ಇದ್ದಂತೆಯೇ ಚಿತ್ರಿಸುವುದು ಅಥವಾ ಮಂದಿರದ ಕಲ್ಲಿನಲ್ಲೋ ಕೆತ್ತುವುದು ಹಿಂದಿನಿಂದ ನಡೆದುಬಂದ ಸಂಪ್ರದಾಯ. ಇರುವಂತೆಯೇ ಚಿತ್ರಿಸುವುದು ಏನು ಸಾಧನೆ? ಕ್ಯಾಮರಾ ಆ ಕೆಲಸ ಮಾಡುವುದಿಲ್ಲವೆ? ಜ್ಯಾಮಿತೀಯ ಆಕೃತಿಗಳು, ಬಣ್ಣ, ಗೆರೆಗಳಲ್ಲಿ ಭಾವಗಳನ್ನು ಚಿತ್ರಕಾರ ಸೆರೆಹಿಡಿಯಬೇಕು—ಎಂಬ ಹೊಸ ಬಗೆಯ ಅಭಿವ್ಯಕ್ತಿಯು ಶತಮಾನದ ಆದಿಯಲ್ಲಿ ರೂಪುಗೊಂಡಿತು.

ವಸ್ತುವನ್ನು ಅದು ಇರುವಂತೆ ಚಿತ್ರಿಸದೆ, ಬಣ್ಣ ಮತ್ತು ಆಕೃತಿಗಳನ್ನು ಹೊಂದಾಣಿಕೆಯಾಗುವಂತೆ, ಅಥವಾ ಪರಿಣಾಮಕಾರಿಯಾಗಿ ಮೇಳೈಸಿ, ಚಿತ್ರಿಸುವುದು ಅಮೂರ್ತ ಕಲೆ. ಸಂಗೀತ ಮತ್ತು ವಾಸ್ತುಶಿಲ್ಪಗಳನ್ನು ಅನುಕರಿಸುವ ಅಭಿಲಾಷೆಯಿಂದ, ತನ್ನದೇ ಆದ ಸ್ವಾತಂತ್ರ್ಯ ಮತ್ತು ನಿಯಮಗಳನ್ನು ರೂಢಿಸಿಕೊಂಡು ಹುಟ್ಟಿತು, ಅಮೂರ್ತ ಕಲೆ.

ರಷ್ಯದಲ್ಲಿ ಹುಟ್ಟಿದ ಚಿತ್ರಕಾರ ಕಾಂಡಿನ್ಸ್ಕಿ (1866–1944) ಅಮೂರ್ತ ಕಲೆಯ ಆದ್ಯಪ್ರವರ್ತಕ ಎನ್ನುತ್ತಾರೆ. ಹಾಗೆಯೇ ಹಾಲೆಂಡಿನ ಮಾಂಡ್ರಿಯೆನ (1872–1944) ಕೂಡ ಹೆಸರಾಂತ ಅಮೂರ್ತ ಕಲಾವಿದ. ಸಂಗೀತದಿಂದ ಭಾವ ಪ್ರೇರಣೆ ಪಡೆದ ಕಾಂಡಿನ್ಸ್ಕಿ ಮತ್ತು ವಾಸ್ತುಶಿಲ್ಪದ ಆದರ್ಶದಿಂದ ಪ್ರೇರೇಪಿತನಾದ ಮಾಂಡ್ರಿಯೆನ ಇವರ ಕೃತಿಗಳು ಅಮೂರ್ತ ಕಲೆಯ ಮಿತಿಯನ್ನು ಮಾತ್ರವಲ್ಲದೆ ಅದರ ಮಹತ್ಸಾಧನೆಯನ್ನು ಎತ್ತಿ ತೋರಿಸುತ್ತವೆ. ಅಮೂರ್ತ ಆಕಾರಗಳನ್ನು ಅಲಂಕಾರಕ್ಕಾಗಿ ಎಷ್ಟೋ ಕಾಲದಿಂದ ಉಪಯೋಗಿಸುತ್ತಿದ್ದರೂ, ಕಲಾಪ್ರಪಂಚ ಅದರ ಉಪಯೋಗ ಪಡೆದುಕೊಂಡದ್ದು ಇಪ್ಪತ್ತನೆಯ ಶತಮಾನದಲ್ಲಿ. ಯಾವ ಬಗೆಯ ನಿರ್ಬಂಧ, ಕಟ್ಟುಪಾಡುಗಳಿಗೂ ಒಳಗಾಗದ, ಕಲ್ಪನೆ ಸುಪ್ತಚೇತನಗಳಿಗೆ ಪ್ರಾಧಾನ್ಯ ಇರುವ, ಅಮೂರ್ತ ಕಲೆ ತನ್ನ ವೈಶಿಷ್ಟ್ಯದಿಂದ ಆಗ ಎಲ್ಲರ ಗಮನ ಸೆಳೆಯಿತು.

1920ರಲ್ಲಿ ಜರ್ಮನಿಯಲ್ಲಿ ಗ್ರೋಪಿಯಸ್ ಎಂಬವನು ಇದೇ ಬಗೆಯ ಪಂಥವನ್ನು ಆರಂಭಿಸಿದ. ದ್ವಿತೀಯ ಮಹಾಯುದ್ಧದ ತರುವಾಯ ಟಾಚಿಸ್ಮ್ ವಿಧಾನ ತಲೆದೋರಿತು. ಟಾಚಿಸ್ಮ್ ಎಂಬುದು ಚುಕ್ಕಿ ಎಂದರ್ಥ ಕೊಡುವ ಫ್ರೆಂಚ್ ಪದ. ಕ್ಯಾನ್‌ವಾಸಿನ ಮೇಲೆ ಬಣ್ಣವನ್ನು ರಾಚುವ ಅಥವಾ ತೊಟ್ಟಿಕ್ಕಿಸುವ ವಿಧಾನ ಇದು. ಶಾಯಿಯನ್ನು ಕಾಗದದ ಮೇಲೆ ಹಾಕಿದರೆ ತೋರಿಬರುವಂಥ ಪರಿಣಾಮವನ್ನೇ ಇಲ್ಲೂ ಕಾಣಬಹುದು. ಅಮೆರಿಕದ ಜಾಕ್‌ಸನ್ ಪಾಲಕ್ ಕ್ಯಾನ್‌ವಾಸನ್ನು ನೆಲದ ಮೇಲಿಟ್ಟು ಅದರ ಮೇಲೆ ಬಣ್ಣ ತೊಟ್ಟಿಕ್ಕುವಂತೆ ಮಾಡುತ್ತಿದ್ದ. ಆತನ ಚಿತ್ರಗಳೆಂದರೆ ಬಣ್ಣದ ಗೆರೆಗಳ, ತೊಟ್ಟುಗಳ ಜಾಲ. ಈ ಪಂಥದ ಕಲಾವಿದರು ಬೆಳಕು, ಹರವು, ವಾತಾವರಣಗಳ ಪ್ರಭಾವವನ್ನು ಪ್ರಕೃತಿ ಚಿತ್ರಗಳಲ್ಲಿ ಈ ವಿಧಾನದಿಂದ ಮೂಡಿಸುತ್ತಿದ್ದರು. ಅಮೂರ್ತ ಚಿತ್ರಕಲೆಯಲ್ಲಿ ಮುಖ್ಯವಾದದ್ದು, ಗೆರೆ ಬಣ್ಣ ಮೇಲ್ಮೈಗಳ ಮೂಲಕ ಭಾವನೆಗಳನ್ನು ವ್ಯಕ್ತಪಡಿಸುವ ಜಾಣ್ಮೆ.

ಅಮೂರ್ತ ಕಲೆಯನ್ನು ಅರ್ಥಮಾಡಿಕೊಳ್ಳಲು ತುಸು ಪರಿಶ್ರಮ ಪಡಬೇಕು. ಬರೀ ತ್ರಿಕೋನಗಳು, ಬಣ್ಣದ ಗೆರೆ–ಚುಕ್ಕೆಗಳ ಸಮೂಹವನ್ನು ನೋಡಿದಾಗ ಇದು ಯಾವುದರ ಚಿತ್ರ ಎಂಬುದೇ ಪತ್ತೆಯಾಗದಿರುವುದುಂಟು.

ಒಂದು ಅಮೂರ್ತ ಕಲಾಕೃತಿಯನ್ನು ನೋಡುವಾಗ ಉಂಟಾಗುವ ಸಂವೇದನೆ ಆ ಕೃತಿಯನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತದೆ.

ನೋಡಿ : ಆಧುನಿಕ ಚಿತ್ರಕಲೆ

## ಅಮೆರಿಕದ ಕಲೆ, ಸಾಹಿತ್ಯ

ಅಮೆರಿಕದ ಸಮಾಜ ರೂಪುಗೊಂಡದ್ದು ಮೂರು ಶತಮಾನಗಳ ಹಿಂದೆ, ಯೂರೋಪಿನ ನಾನಾ ರಾಷ್ಟ್ರಗಳಿಂದ ಬಂದು ನೆಲೆಸಿದ ಜನರಿಂದ. ಆರಂಭದಲ್ಲಿ ಅವರ ಕಲೆ, ಸಾಹಿತ್ಯಗಳಲ್ಲಿ ಯುರೋಪ್ಯ ಪರಂಪರೆ ಸ್ವಾಭಾವಿಕವಾಗಿ ಮೂಡಿಬಂತು. ಕ್ರಮೇಣ ಆ ಸಮಾಜ ತನ್ನ ವೈಶಿಷ್ಟ್ಯವನ್ನು ರೂಢಿಸಿಕೊಂಡಂತೆ, ಅಲ್ಲಿನ ಕಲೆ, ಸಾಹಿತ್ಯಗಳೂ ವಿಶಿಷ್ಟ ದಾರಿ ತುಳಿದುವು.

ಯೂರೋಪಿನವರು ಉತ್ತರ ಅಮೆರಿಕಕ್ಕೆ ಬಂದು ನೆಲೆಸುವ ಮೊದಲು ಅಲ್ಲಿದ್ದ ಮೂಲನಿವಾಸಿಗಳು ತಮ್ಮದೇ ಆದ ಕಲಾಶೈಲಿಯನ್ನು ಹೊಂದಿದ್ದರು. ಕಲ್ಲಿನ ಮೇಲೆ ಬರೆದ ಚಿತ್ರಗಳು, ಕಲ್ಲಿನ ಮತ್ತು ಮರದ ಕೆತ್ತನೆಗಳು, ಮಣ್ಣಿನ ಬೊಂಬೆಗಳು—ಇವುಗಳಲ್ಲಿ ಆ ಮೂಲನಿವಾಸಿಗಳ ಕಲಾಚೈತನ್ಯದ ಓಜಸ್ಸು, ವೈಯಕ್ತಿಕ ಪ್ರತಿಭೆ ಕಂಡುಬರುತ್ತವೆ. ಇಂದಿಗೂ ಕೆಲವೆಡೆ ಮೂಲನಿವಾಸಿಗಳ ಈ ಕಲೆ ಉಳಿದುಬಂದಿದೆ.

ಯೂರೋಪಿನ ಜನ[illegible] ಅಮೆರಿಕಕ್ಕೆ ಬರುವುದ[illegible] [illegible] ಓಜಸ್ಸಿನ ಮುಖವಾ[illegible] [illegible] ಶದ ಎಸ್ಕಿಮೋ ಜನರ[illegible] ಕೃತಿಗಳು

## ಕಲೆ, ಸಾಹಿತ್ಯ

ಅಮೆರಿಕದ ಪ್ರಾಚೀನ ಕಲೆಗಳಲ್ಲಿ ಗಮನಾರ್ಹವಾದದ್ದು ಮಾಯ ಜನರ ಕಲೆ. ಇವರು ನಿರ್ಮಿಸಿದ ಪಿರಮಿಡ್, ದೇವಾಲಯಗಳ ಉಬ್ಬುಶಿಲ್ಪ ಮತ್ತು ವರ್ಣಚಿತ್ರಗಳು ಇವರ ಅಪೂರ್ವ ಕಲಾಪ್ರತಿಭೆಗೆ ಸಾಕ್ಷಿ. ದಕ್ಷಿಣ ಅಮೆರಿಕದ ಚಿಮು, ನಾಜಿಕ, ತಿಯಾಹು, ವನಾಕೋ ಸಂಸ್ಕೃತಿಗಳಲ್ಲೂ ಪ್ರಾಚೀನ ಕಲೆ ಕಂಡುಬರುತ್ತದೆ. ಅಜ್‌ಟೆಕ್ ಸಂಸ್ಕೃತಿಯ ಭಾರಿ ಶಿರ ಶಿಲ್ಪಗಳು, ಇಂಕ ಸಂಸ್ಕೃತಿಯ ದೇವಾಲಯ, ಅರಮನೆಗಳು ಅಲ್ಲಿನ ಜನರ ಕಲಾಭಿರುಚಿಯನ್ನು ತೋರಿಸುತ್ತವೆ.

ಬದುಕಿನ ಹೋರಾಟವೇ ಅಮೆರಿಕಕ್ಕೆ ವಲಸೆ ಬಂದ ಯೂರೋಪಿನ ಜನರ ಮುಖ್ಯ ಚಟುವಟಿಕೆಯಾಗಿತ್ತು. ಅವರು ಸ್ವಾವಲಂಬಿಗಳಾದರು; ಪ್ರಾಯೋಗಿಕ ಮನೋಭಾವವನ್ನು ಬೆಳೆಸಿಕೊಂಡರು. ಇದು ಅವರ ಜೀವನ ದೃಷ್ಟಿ–ಕಲಾದೃಷ್ಟಿಗಳ ಮೇಲೆ ಪ್ರಭಾವ ಬೀರಿತು. ದಿನದಿನದ ಅಗತ್ಯಗಳಿಗೇ ಹೆಚ್ಚು ಗಮನ. ಕಲೆಯಲ್ಲಿಯೂ ಉಪಯುಕ್ತತೆಗೇ ಪ್ರಾಧಾನ್ಯ.

ವಲಸೆಬಂದವರಿಗೆ ವಸತಿ ನಿರ್ಮಾಣ ಮುಖ್ಯವಾಗಿತ್ತು. ಹೀಗಾಗಿ ವಾಸ್ತುಶಿಲ್ಪ ಇತರ ಕಲೆಗಳಿಗಿಂತ ಮೊದಲು ಪ್ರಾರಂಭವಾಯಿತು. ಮನೆ ಕಟ್ಟುವುದರಲ್ಲಿ ಪೀಠೋಪಕರಣಗಳ ತಯಾರಿಕೆಯಲ್ಲಿ ತಮ್ಮ ಕಲಾದೃಷ್ಟಿಯನ್ನು ಅವರು ವ್ಯಕ್ತಪಡಿಸಿದರು. ಮರ ತಕ್ಷಣ ಕೈಗೆ ಸಿಗುವಂತಿದ್ದುದರಿಂದ ಮರದ ಕೆತ್ತನೆ ಆಗ ಪ್ರಮುಖ ಕಲಾ ವಿಧಾನವಾಯಿತು.

1770ರಲ್ಲಿ ಇಟಲಿಯಲ್ಲಿ ಯೂರೋಪಿನ ಪ್ರಮುಖ ಕಲಾವಿದರೊಂದಿಗೆ ಅಧ್ಯಯನ ನಡೆಸುತ್ತಿದ್ದ ಅಮೆರಿಕದ ಚಿತ್ರಕಲಾವಿದರಾದ ಬೆಂಜಮಿನ್ ವೆಸ್ಟ್ (1738–1820) ಮತ್ತು ಜಾನ್ ಸಿಂಗ್‌ಲ್‌ಟನ್ ಕಾಪ್ಲಿ (1738–1815) ಅಮೆರಿಕಕ್ಕೆ ಮರಳಿ, ಇತರ ಕಲಾವಿದರ ಮೇಲೂ ಯೂರೋಪಿನ ಕಲೆಯ ಪ್ರಭಾವ ಬೀರಿದರು. ಮುಂದೆ ಫ್ರಾನ್ಸಿನ ಕೆತ್ತನೆ ಕಲಾವಿದ ಜೀನ್ ಅಂಟ್ವಾನ್ ಹೂಡಾನ್ (1740–1828) ಮತ್ತು ವಾಸ್ತುಶಿಲ್ಪಿ ಪಿಯರ್ ಚಾರ್ಲ್ಸ್ ಲಾನ್‌ಫಾನ್ ಅಮೆರಿಕಕ್ಕೆ ಬಂದರು. ಜಾರ್ಜ್ ವಾಷಿಂಗ್ಟನ್ ಮೊದಲಾದವರ ಭುಜ ಮೇಲ್ಭಾಗದ ಪ್ರತಿಮೆಗಳನ್ನು ಹೂಡಾನ್ ಮಾಡಿದ; ಲಾನ್‌ಫಾನ್ ವಾಷಿಂಗ್ಟನ್ ನಗರ ಯೋಜನೆ ರೂಪಿಸಿದ.

ಮುಂದೆ ಅನೇಕ ಕಲಾವಿದರು ತಮ್ಮ ಪರಿಸರವನ್ನು ಚಿತ್ರಿಸುವುದರಲ್ಲಿ ಮುಂದಾದರು. ಇವರಲ್ಲಿ ವಿನ್‌ಸ್ಲೋ ಹೋಮರ್ (1830–1910) ಪ್ರಮುಖ ಕಲಾವಿದ. ಸಾಗರದ ಹಿನ್ನೆಲೆಯಲ್ಲಿ ಬರೆದ ಇವನ ಚಿತ್ರಗಳು ಖ್ಯಾತಿಗಳಿಸಿವೆ. ಪ್ಯಾರಿಸಿನಲ್ಲಿ ಅಭ್ಯಾಸಮಾಡಿದ ಥಾಮಸ್ ಏಕಿನ್ಸ್‌ನ (1844–1916) ಚಿತ್ರಗಳಲ್ಲಿ ಸಹಜವಾಗಿಯೇ ಯೂರೋಪಿನ ವಾಸ್ತವವಾದದ ಪ್ರಭಾವವಿತ್ತು. ಅಮೆರಿಕದ ವ್ಹಿಸ್ಲರ್, ಸಾರ್ಜೆಂಟ್, ಮೇರಿ ಕಸ್ಸಾಟ್ ಮೊದಲಾದ ಕಲಾವಿದರು ಯೂರೋಪಿನಲ್ಲಿಯೇ ನೆಲಸಿಬಿಟ್ಟರು. ತಮ್ಮ ಕಲಾಕೃತಿಗಳಲ್ಲಿ ಶುದ್ಧ ಅಮೆರಿಕನ್ ಶೈಲಿ ಇರಬೇಕೆಂದು ಅಭಿಪ್ರಾಯಪಟ್ಟವನು ಜಾರ್ಜ್ ಬೆಲ್ಲೋಸ್ (1882–1925).

ಮೊದಲನೆಯ ಮತ್ತು ಎರಡನೆಯ ಮಹಾಯುದ್ಧಗಳ ನಡುವಣ ಸಮಯದಲ್ಲಿ ಅಮೆರಿಕದ ಕಲಾವಿದರ ಮೇಲೆ ಯೂರೋಪಿನ ಘನಾಕೃತಿ, ಅಮೂರ್ತ ಹಾಗೂ ವಾಸ್ತವವಾದದ ಕಲೆಗಳು ಪ್ರಭಾವ ಬೀರಿದುವು.

ಸದ್ದಿಲ್ಲದೆ ವಿಕಾಸಹೊಂದುತ್ತಿದ್ದ ವಾಸ್ತುಶಿಲ್ಪಕ್ಕೆ ಲೂಯಿ ಸಲಿವಾನನ (1856–1924) ಕೊಡುಗೆ ಮಹತ್ವದ್ದು. 'ಆಧುನಿಕ ವಾಸ್ತುಶಿಲ್ಪ ಪಿತಾಮಹ' ಎಂದು ಹೆಸರಾದ ಇವನ ಕಲ್ಪನೆಯ ಕೂಸು ಗಗನಚುಂಬಿ ಕಟ್ಟಡ. ಇವನ ಅನುಯಾಯಿ ಫ್ರಾಂಕ್ ಲಾಯ್ಡ್ ರೈಟ್ (1867–1959) ವಿಶ್ವದ ಪ್ರಮುಖ ವಾಸ್ತುಶಿಲ್ಪಿಗಳಲ್ಲೊಬ್ಬ.



ಅಮೆರಿಕದ ಮೂಲನಿವಾಸಿಗಳ ಕುಶಲಕಲೆ

19ನೆಯ ಶತಮಾನದ ಅಂತ್ಯದವರೆಗೆ ಯೂರೋಪಿನ ಸಂಗೀತವೇ ಅಮೆರಿಕದ ಸಂಗೀತವಾಗಿತ್ತು. ಅನಂತರ ಬಾಸ್ಟನಿನ ವಿಲಿಯಂ ಬಿಲಿಂಗ್ಸ್ ರಚಿಸಿದ ಸಂಗೀತ ಅಮೆರಿಕದ ಸಂಗೀತಕ್ಕೆ ನಾಂದಿಯಾಯಿತು. ಬಾಸ್ಟನಿನ ಎಡ್ವರ್ಡ್ ಮ್ಯಾಕ್‌ಡೊವೆಲ್ ಮೊದಲಾದವರು ಅಮೆರಿಕದ ಮೂಲ ನಿವಾಸಿಗಳಿಗೆ ಸಂಬಂಧಿಸಿದ ಸಂಗೀತ ರಚಿಸತೊಡಗಿದರು.

ನೀಗ್ರೊಗಳಿಂದ ಜಾಜ್ ಸಂಗೀತ ಬೆಳೆಯಿತು. ಈ ಸಂಗೀತದ ಪ್ರಭಾವ ಜಾರ್ಜ್ ಗೆರ್ಷ್ವಿನ್‌ನಂಥ ಸಂಗೀತಗಾರರ ಮೇಲೆ ಉಂಟಾಯಿತು.

ಹೊಸದಾಗಿ ರೂಪುಗೊಳ್ಳುತ್ತಿದ್ದ ಅಮೆರಿಕದ ಜನತೆಗೆ ಪರಂಪರಾಗತ ಸ್ವಂತ ಜಾನಪದ ಸಾಹಿತ್ಯ ಇರಲಿಲ್ಲ; 'ರಾಮಾಯಣ', 'ಇಲಿಯಡ್' 'ಬೆವೂಲ್ಫ್'ನಂಥ ಮಹಾಕಾವ್ಯಗಳೂ ಇರಲಿಲ್ಲ. ದುಡಿಮೆಯೇ ಬದುಕಿನ ಸರ್ವಸ್ವವಾಗಿದ್ದ ಅವರಿಗೆ ಓದಿನ ಹವ್ಯಾಸಕ್ಕೆ ಬಿಡುವೂ ಇರಲಿಲ್ಲ. ಮುದ್ರಣ ಸೌಲಭ್ಯಗಳೂ ಆಗ ಅಲ್ಲಿ ಇರಲಿಲ್ಲ.

ಅವರು ಚೆನ್ನಾಗಿ ಸ್ವಾವಲಂಬಿಗಳಾದ ಮೇಲೆ ವಾಚನ ಆರಂಭವಾಯಿತು. ಬರೆವಣಿಗೆಯೂ ಪ್ರಾರಂಭವಾಯಿತು. ಬರೆಯುತ್ತಿದ್ದವರು ಅಮೆರಿಕದಲ್ಲಿ ನೆಲೆಸಿದ ಯೂರೋಪಿನವರಾಗಿದ್ದರೇ ಹೊರತು ' ಅಮೆರಿಕನ ' ರಾಗಿರಲಿಲ್ಲ. ಇಂಥ ಸಮಯದಲ್ಲಿ ಬರೆಯುತ್ತಿದ್ದ ಲೇಖಕರಲ್ಲಿ ವಾಷಿಂಗ್ಟನ್ ಇರ್ವಿಂಗ್ (1783–1859) ಮತ್ತು ಜೇಮ್ಸ್ ಫೆನಿಮೋರ್ ಕೂಪರ್ (1789–1851) ಪ್ರಮುಖರು. ಇರ್ವಿಂಗನ ' ದಿ ಲೆಜೆಂಡ್ ಆಫ್ ಸ್ಲೀಪಿ ಹಾಲೊ ' ಮತ್ತು ' ರಿಪ್ ವಾನ್ ವಿಂಕ್‌ಲ್ ' ಗಮನಾರ್ಹ ಕೃತಿಗಳು.

ನಿಜವಾದ ಅಮೆರಿಕದ ಸಾಹಿತ್ಯ ಮೊದಲಾದದ್ದು ನಥಾನಿಯಲ್ ಹಾಥಾರ್ನ್ (1804–64) ನಿಂದ, 19ನೆಯ ಶತಮಾನದಲ್ಲಿ. ತೀವ್ರ ಹಾಗೂ ಪ್ರಬಲ ಶೈಲಿಯ ಇವನ ಕೃತಿಗಳಲ್ಲಿ 'ದಿ ಸ್ಕಾರ್ಲೆಟ್ ಲೆಟರ್' ಮತ್ತು 'ದಿ ಹೌಸ್ ಆಫ್ ದಿ ಸೆವೆನ್ ಗೇಬಲ್ಸ್' ಪ್ರಮುಖವಾದುವು. ವರ್ತಮಾನ ಕಾಲದ ಮೇಲೆ ಕರಾಳ ಹಾಗೂ ಪಾಪಪೂರಿತ ಭೂತಕಾಲ ಹೇಗೆ ಪರಿಣಾಮ ಬೀರುತ್ತದೆ ಎಂಬುದು ಈ ಕೃತಿಗಳಲ್ಲಿ ಚಿತ್ರಿತವಾಗಿದೆ. 1851ರಲ್ಲಿ ಪ್ರಕಟವಾದ ಹರ್ಮನ್ ಮೆಲ್‌ವಿಲನ (1819–91) 'ಮಾಬಿ ಡಿಕ್' ವಿಶ್ವದ ಅತ್ಯುತ್ತಮ ಕಾದಂಬರಿಗಳಲ್ಲೊಂದು.

ಕಾದಂಬರಿ ಕೇವಲ ಮನೋರಂಜನೆಗೆ ಮಾತ್ರವಲ್ಲ: ಅದು ಕಾವ್ಯದಷ್ಟೇ ಗಂಭೀರವಾದ ಕಲಾಸೃಷ್ಟಿಯಾಗಬೇಕೆಂದು ಅಭಿಪ್ರಾಯಪಟ್ಟ ಹೆನ್ರಿ ಜೇಮ್ಸ್ (1843–1916) ಹೊಸ ಕಾದಂಬರಿಗಳ



ಹೆನ್ರಿ ಜೇಮ್ಸ್

ಮೇಲೆ ಪ್ರಭಾವ ಬೀರಿದ ಲೇಖಕರಲ್ಲೊಬ್ಬ. 'ದಿ ಪೋರ್ಟ್ರೇಯ್ಟ್ ಆಫ್ ಎ ಲೇಡಿ' ಮತ್ತು 'ದಿ ವಿಂಗ್ಸ್ ಆಫ್ ದಿ ಡೋವ್' ಇವನ ಪ್ರಮುಖ ಕಾದಂಬರಿಗಳು. ಗೂಢ ಹಾಗೂ ಭಯಾನಕ ಕಥೆಗಳನ್ನು ತನ್ನದೇ ಆದ ವಿಶಿಷ್ಟ ಶೈಲಿಯಲ್ಲಿ ಬರೆದು ಪ್ರಖ್ಯಾತನಾದ ಕಥೆಗಾರ, ಎಡ್ಗರ್ ಅಲೆನ್ ಪೋ (1809–49). ಇವನು ಕವಿಯೂ ಆಗಿದ್ದ. ಇವನ ಕವನಗಳು 19ನೆಯ ಶತಮಾನದ ಕಾವ್ಯದ ಮೇಲೆ ಸಾಕಷ್ಟು ಪ್ರಭಾವ ಬೀರಿದುವು.

ಅಮೆರಿಕದ ಜೀವನದಲ್ಲೇ ಬೇರೂರಿಬಿಟ್ಟಂಥ ಕೃತಿಗಳನ್ನು ರಚಿಸಿದವರು ಮಾರ್ಕ್ ಟ್ವೇನ್ (1835–1910) ಮತ್ತು ವಾಲ್ಟ್ ವ್ಹಿಟ್‌ಮನ್ (1819–92). ಕಾದಂಬರಿಕಾರನಾದ ಟ್ವೇನ್‌ನ ಕೃತಿಗಳಲ್ಲಿ 'ಟಾಮ್ ಸಾಯರ್'



ಎಡ್ವರ್ಡ್ ಆಲ್ಬೀ



ಆರ್ಥರ್ ಮಿಲ್ಲರ್



ಟೆನೆಸಿ ವಿಲಿಯಮ್ಸ್

ಮತ್ತು 'ಹಕಲ್‌ಬೆರಿ ಫಿನ್' ಪ್ರಮುಖವಾದುವು. ಹೊಸ ಶೈಲಿಯಲ್ಲಿ ಬರೆದು ಮುಕ್ತಛಂದಸ್ಸನ್ನು ಪ್ರಾರಂಭಿಸಿದ ಕವಿ ವಾಲ್ಟ್ ವ್ಹಿಟ್‌ಮನ್. 'ಲೀವ್ಸ್ ಆಫ್ ಗ್ರಾಸ್' ಇವನ ಪ್ರಮುಖ ಕೃತಿ.

ಧಾರ್ಮಿಕ ಸಿದ್ಧಾಂತಗಳನ್ನು ವಿರೋಧಿಸಿ ತಾತ್ತ್ವಿಕ ಲೇಖನ, ಕವನಗಳನ್ನು ಬರೆದು ಉಪನ್ಯಾಸಗಳನ್ನಿತ್ತ ರಾಲ್ಫ್ ವಾಲ್ಡೋ ಎಮರ್‌ಸನ್ (1803–82) ಅಮೆರಿಕದ ಧೀಮಂತ ಲೇಖಕರಲ್ಲೊಬ್ಬ. ಅಧ್ಯಾತ್ಮ ವಿಚಾರಗಳ ಬಗೆಗೆ ಚಿಂತಿಸುವಾಗ ನಮ್ಮ ಪ್ರಜ್ಞೆಯೇ ನಮಗೆ ಮಾರ್ಗದರ್ಶಕವಾಗಬೇಕೆಂದು ಎಮರ್‌ಸನ್ ಹೇಳಿದ. ಇವನ ಆಪ್ತ ಗೆಳೆಯನಾಗಿದ್ದ ಹೆನ್ರಿ ಡೇವಿಡ್ ಥೋರೋ (1817–1862) ಮತ್ತೊಬ್ಬ ಪ್ರಮುಖ ತಾತ್ತ್ವಿಕ ಕವಿ. "ಪ್ರಕೃತಿಯ ಮಡಿಲೇ ಮಾನವನ ನಿಜವಾದ ಮನೆ", ಎಂದು ಹೇಳಿ, ಹಾಗೆ ನಡೆಸಿಕೊಳ್ಳುತ್ತಿದ್ದ ಇವನ ಜೀವನ ಅತ್ಯಂತ ಸರಳವಾಗಿತ್ತು. 'ವಾಲ್ಡನ್' ಇವನ ಪ್ರಮುಖ ಕೃತಿ.

20ನೆಯ ಶತಮಾನದ ಹೊತ್ತಿಗೆ ಅಮೆರಿಕ ತನ್ನದೇ ಆದ ಸಾಹಿತ್ಯವನ್ನು ಸೃಷ್ಟಿಸತೊಡಗಿತು. ಆಧುನಿಕ ಇಂಗ್ಲಿಷ್ ಸಾಹಿತ್ಯದ ಟಿ. ಎಸ್. ಎಲಿಯಟ್ ಮತ್ತು ಎಜ್ರಾ ಪೌಂಡ್ ಮೂಲತಃ ಅಮೆರಿಕದವರೇ.

ರಾಬರ್ಟ್ ಫ್ರಾಸ್ಟ್ (1874–1963) ಅಮೆರಿಕದ ಈ ಶತಮಾನದ ಅತ್ಯಂತ ಜನಪ್ರಿಯ ಮತ್ತು ಪ್ರಮುಖ ಕವಿ. ಅರ್ನೆಸ್ಟ್ ಹೆಮಿಂಗ್‌ವೇ (1899–1961), ವಿಲಿಯಂ ಫಾಕ್ನರ್ (1897–1962) ಮತ್ತು ಜೆ. ಡಿ. ಸ್ಯಾಲಿಂಜರ್ (1919— ) ಮೊದಲಾದವರು ಪ್ರಮುಖ ಕಾದಂಬರಿಕಾರರು. ಹೆಮಿಂಗ್‌ವೇನ 'ಫಾರ್ ಹೂಮ್ ದಿ ಬೆಲ್ ಟೋಲ್ಸ್' ಮತ್ತು 'ದಿ ಓಲ್ಡ್ ಮ್ಯಾನ್ ಅಂಡ್ ದಿ ಸೀ.' ಫಾಕ್ನರನ 'ದಿ ಸೌಂಡ್ ಅಂಡ್ ದಿ ಫ್ಯೂರಿ' ಪ್ರಮುಖ ಕೃತಿಗಳು. ಇವರಿಬ್ಬರಿಗೂ ನೊಬೆಲ್ ಪ್ರಶಸ್ತಿ ದೊರಕಿದೆ. ಸ್ಯಾಲಿಂಜರ್ ದ್ವಿತೀಯ ಮಹಾಯುದ್ಧದ ಅನಂತರದ ಪ್ರಭಾವಶಾಲಿ ಲೇಖಕ. ಈತನ ಪ್ರಮುಖ ಕೃತಿ 'ದಿ ಕ್ಯಾಚರ್ ಇನ್ ದಿ ರೈ.'

ನಾಟಕಕಾರರಲ್ಲಿ ಯೂಜೀನ್ ಓ' ನೀಲ್. ಆರ್ಥರ್ ಮಿಲ್ಲರ್. ಎಡ್ವರ್ಡ್ ಆಲ್ಬೀ. ಟೆನೆಸಿ ವಿಲಿಯಮ್ಸ್ ಮೊದಲಾದವರು ಗಮನಾರ್ಹರು. ಆಲ್ಬೀಯ ಅಸಂಗತ ನಾಟಕಗಳು ಪ್ರಸಿದ್ಧಿ ಪಡೆದಿವೆ.

ಅಮೆರಿಕ ಸಾಹಿತ್ಯದಲ್ಲಿ ವಿಮರ್ಶೆಯ ಪ್ರಕಾರವೂ ಪುಷ್ಟವಾಗಿ ಬೆಳೆದಿದೆ.

ನೋಡಿ : ಎಜ್ರಾ ಪೌಂಡ್; ಎಡ್ಗರ್ ಅಲೆನ್ ಪೋ ; ಕಾರ್ಲ್ ಸ್ಯಾಂಡ್ ಬರ್ಗ್ ; ಟಿ. ಎಸ್. ಎಲಿಯಟ್ ; ಥೋರೋ ; ನೆಥಾನಿಯಲ್ ಹಾಥಾರ್ನ್ ; ಮಾರ್ಕ್ ಟ್ವೇನ್ ; ಮೆಲ್ವಿಲ್ ; ಯೂಜೀನ್ ಓ'ನೀಲ್ ; 'ಓ' [illegible] ; ರಾಬರ್ಟ್ ಫ್ರಾಸ್ಟ್ ; ವಾಲ್ಟ್ ವ್ಹಿಟ್‌ಮನ್ ; ಹೆಮಿಂಗ್‌ವೇ

## ಅರಬಿ ಕಲೆ, ಸಾಹಿತ್ಯ

ಮರಳುಗಾಡಿನ ಅಲೆಮಾರಿ ಜೀವನ. ನೀರಿನ ಚಿಲುಮೆ ಇದ್ದಲ್ಲಿ ಜನ ನೆಲಸತೊಡಗಿ ಪಟ್ಟಣಗಳು ಹುಟ್ಟಿಕೊಂಡುವು. ವ್ಯಾಪಾರ ವಾಣಿಜ್ಯಗಳ ಮೂಲಕ ಪ್ರಪಂಚದ ಅನ್ಯದೇಶದ ಜನರೊಡನೆ ಸಂಪರ್ಕ ಬೆಳೆಯಿತು. ಸ್ಪೇನ್ ಮತ್ತಿತರ ಕೆಲ ದೇಶಗಳು ಅರಬರ ಆಕ್ರಮಣಕ್ಕೊಳಗಾದಾಗ ಕಲೆ ಸಾಹಿತ್ಯ ಪರಸ್ಪರ ಪ್ರಭಾವಕ್ಕೆ ಒಳಗಾದುವು.

7ನೆಯ ಶತಮಾನದಲ್ಲಿಯೇ ಅರಬರು ಸಂಗೀತ ಕ್ಷೇತ್ರದಲ್ಲಿ ಮುಂದು ವರಿದಿದ್ದರು. ಲೂಟ್, ಗಿಟಾರ್, ರಬಾಬ್ (ಒಂದು ಬಗೆಯ ಪಿಟೀಲು) ನಾಕರ್‌ಗಳಂಥ ಭೇರಿ ವಾದ್ಯಗಳು ಯೂರೋಪಿಗೆ ಬಂದದ್ದು ಅರಬರ ಮೂಲಕ. ನಿಧಾನವಾಗಿ, ಜಾರಿಸಿದಂತೆ ಹೇಳುವ ಅವರ ಸಂಗೀತವನ್ನು ಸುಲಭವಾಗಿ ಗುರುತಿಸಬಹುದು. ಲಯ ಭಾರತೀಯ ಸಂಗೀತದಂತೆ.

ಜೇಡಿಮಣ್ಣಿನಿಂದ ಮಾಡಿ ಸುಟ್ಟು ಮೆರುಗು ಕೊಟ್ಟ ಹಾಗೂ ಕಂಚಿನಿಂದ ಸಿಂಹ, ಆನೆ, ಹಕ್ಕಿಗಳನ್ನು ಅರಬರು ನಿರ್ಮಿಸುತ್ತಿದ್ದರು. ಮನೆಗಳಲ್ಲಿ, ಸ್ನಾನದ ಮನೆ, ಅಂತಃಪುರ, ಅರಮನೆಗಳಲ್ಲಿ ಚಿತ್ರಗಳನ್ನು ಬರೆಯುತ್ತಿದ್ದರು. ಪ್ರಾಣಿಗಳು ಸ್ತ್ರೀಯರು ಈ ಚಿತ್ರಗಳ ವಸ್ತುಗಳು. ಅಲಂಕರಣದಲ್ಲಿ ಅರಬರಿಗೆ ತುಂಬ ಆಸಕ್ತಿ. ಶ್ರೀಮಂತರ ಮನೆ ಮತ್ತು ಮಸೀದಿಗಳ ಗೋಡೆಗಳನ್ನು ಉತ್ತಮ ರೀತಿಯಲ್ಲಿ ಅಲಂಕರಿಸುತ್ತಿದ್ದರು. ಗಾಜಿನ ಹೂದಾನಿ, ಪೀಠೋಪಕರಣ, ಆಭರಣ, ಪುಸ್ತಕಗಳಿಗೆ ಕಟ್ಟುವ ರಟ್ಟು ಇವುಗಳಲ್ಲಿ ಅವರ ಕಲಾಭಿರುಚಿ ಕಲಾವಂತಿಕೆಗಳು ಎದ್ದು ಕಾಣುತ್ತಿದ್ದವು. ಪುಟ್ಟ ಆಯಾಕಾರದ ಅಥವಾ ದುಂಡು ಮೇಜುಗಳ ಮೇಲೆ ನಯವಾದ ಕೆತ್ತನೆ ಕೆಲಸವನ್ನೂ ದಂತದ ಒಳಕುಸುರಿ ಕೆಲಸವನ್ನೂ ಮಾಡಿ ಅವನ್ನು ಅಂದಗೊಳಿಸುತ್ತಿದ್ದರು. ಕಲ್ಲಿನಲ್ಲಿ ಮತ್ತು ಗಾಜಿನಲ್ಲಿ ಮೊಸೇಯ್ಕ್ ಕೆಲಸವನ್ನೂ ಅವರು ಅರಿತಿದ್ದರು. ಕಂಚಿನಲ್ಲಿ ಅವರು ರಚಿಸುತ್ತಿದ್ದ ಪ್ರಾಣಿಗಳು ಮೂರು ಆಯಾಮದವಾಗಿದ್ದು ಅವನ್ನು ಬೋಗುಣಿಗಳಂತೆ ಬಳಸುತ್ತಿದ್ದರು.

ಕಲೆಯಂತೆ ಸಾಹಿತ್ಯ ಪ್ರಪಂಚಕ್ಕೂ ಅರಬರು ಅಮೂಲ್ಯವಾದ ಕೊಡುಗೆ ನೀಡಿದ್ದಾರೆ. ಪ್ರಾಚೀನರಾದ ಬಿಡೂಯಿನ್ ಜನ ಹೇಳುತ್ತಿದ್ದ ಹಾಡುಗಳು,ಪದ್ಯಗಳು,ಬಾಯಿಂದ ಬಾಯಿಗೆ ಪ್ರಚಾರವಾಗಿ ಉಳಿದುಕೊಂಡಿದ್ದುವು. ಇದರಲ್ಲಿ 16 ಛಂದೋರೂಪಗಳನ್ನು ಗುರುತಿಸಿದ್ದಾರೆ. ಅರಬಿ ಪದ್ಯ ಪ್ರಕಾರಕ್ಕೆ ಇವೇ ಮೂಲ. ಸುಮಾರು ಕ್ರಿ.ಶ. 500ರಲ್ಲಿ ಪ್ರಚಲಿತವಿದ್ದ ಗೀತಗಳು ಲಿಖಿತ ರೂಪದಲ್ಲಿ ಸಂಕಲನಗೊಂಡುವು. ಅದೇ ಅರಬೀ ಸಾಹಿತ್ಯದ ಪ್ರಥಮ ಲಿಖಿತ ಸಾಹಿತ್ಯ. ಅರಬಿ ಸಾಹಿತ್ಯದಲ್ಲಿ ಕೊರಾನಿಗೆ ಮಹತ್ವದ ಸ್ಥಾನ. ಇದೇ ಮೊದಲ ಲಿಖಿತ ಗದ್ಯ ಸಾಹಿತ್ಯ. ಗದ್ಯರೂಪದಲ್ಲಿದ್ದರೂ ಇದರಲ್ಲಿ ಲಯವಿದೆ. ಇದರಲ್ಲಿ 114 ಸುರಾ (ಭಾಗಗಳು) ಇವೆ.

ಅರಬಿಗಳು ಸಾಹಸಿಗಳು. ಸ್ಪೇನ್, ಮಧ್ಯ ಪ್ರಾಚ್ಯಗಳನ್ನು ಜಯಿಸಿದರು. ಅವರ ಬರೆಹಗಾರರು ಈ ಹೊಸ ನಾಡುಗಳ ಪ್ರಭಾವಕ್ಕೆ ಒಳಗಾದರು. [illegible] ಸಾವಿರದ ಪ್ರಸಿದ್ಧ ಕವಿಗಳು. 16ನೆಯ ಶತಮಾನದಲ್ಲಿ ಅರಬರು [illegible] ಆಕ್ರಮಣಕ್ಕೊಳಗಾದರು. ಇದರಿಂದಾಗಿ ಅವರ ಸಾಹಿತ್ಯ ಕೃಷಿ ಕುಂಠಿತವಾಯಿತು. ಆಗ ಬಂದ ಮುಖ್ಯ ಗ್ರಂಥ [illegible] ಬರೆದ [illegible]. ಇದು ಅರಬರ [illegible] [illegible]. 'ಸಾವಿರದೊಂದು ರಾತ್ರಿಗಳು' ಅವರ ಜನಪ್ರಿಯ ಕಥಾಸಾಹಿತ್ಯ.

ನೆಪೋಲಿಯನನ ದಂಡಯಾತ್ರೆಯ ಬಳಿಕ ಅರಬಿ ಸಾಹಿತ್ಯ ಕ್ಷೇತ್ರ ಪಾಶ್ಚಾತ್ಯ ಸಾಹಿತ್ಯದಿಂದ ಪ್ರಭಾವಿತವಾಯಿತು. 20ನೆಯ ಶತಮಾನದಲ್ಲಿ ಅರಬಿ ಲೇಖಕರು ನಾಟಕ, ಕಾದಂಬರಿ ರಚನೆಗೂ ಕೈಹಾಕಿದರು. ಖಲೀಲ್ ಮಾತ್ರನ್, ಅಹಮದ್ ಶಾಕಿ, ತಹಾ ಹುಸೇನ್ ಖ್ಯಾತ ನಾಟಕಕಾರರು. ಉತ್ತರ ಹಾಗೂ ದಕ್ಷಿಣ ಅಮೆರಿಕಗಳಲ್ಲಿ ನೆಲಸಿದ ಅರಬರೂ ಸಾಹಿತ್ಯ ರಚನೆಗೆ ತೊಡಗಿದರು. ಕವಿ, ಕಾದಂಬರಿಕಾರ, ಚಿತ್ರಕಾರ ಖಲೀಲ್ ಗಿಬ್ರಾನ್ ಇವರಲ್ಲಿ ಮುಖ್ಯ. 1923ರಲ್ಲಿ ಆತ ಬರೆದ 'ಪ್ರವಾದಿ' ಅನೇಕ ಭಾಷೆಗಳಿಗೆ ಭಾಷಾಂತರಗೊಂಡಿದೆ. ಹಳೆ ಸಂಪ್ರದಾಯದ ಜಾಡನ್ನು ಕಿತ್ತೊಗೆದು ತಮ್ಮದೇ ವಾಕ್ಸರಣಿಯಲ್ಲಿ ಪದ್ಯ ರಚಿಸಿ ಖ್ಯಾತಿಗಳಿಸಿದವರು ಇಬ್ನರಶೀಕ್, ಸೆವಿಲ್‌ನ ದೊರೆ ಮೂತಾಮಿದ್ ಮತ್ತು ಇಬ್ನ ಹಮ್‌ದಿಸ್. ಚರಿತ್ರೆ, ಜೀವನಚರಿತ್ರೆ, ಭೂಗೋಳ ಪ್ರವಾಸ, ತತ್ತ್ವಶಾಸ್ತ್ರ, ಭಾಷಾಶಾಸ್ತ್ರ, ವಿಜ್ಞಾನಗಳ ಬಗೆಗೂ ಅರಬಿ ಭಾಷೆಯಲ್ಲಿ ಪುಸ್ತಕಗಳು ಬಂದಿವೆ.

ಯೂರೋಪು ಇನ್ನೂ ಅಜ್ಞಾನದ ಮಡಿಲಿನಲ್ಲಿ ಇದ್ದಾಗಲೇ ಅರಬರು ಅನೇಕ ಗ್ರಂಥಗಳನ್ನು ರಚಿಸಿದ್ದರು.

## ಅರಿಯಕ್ಕುಡಿ ರಾಮಾನುಜ ಅಯ್ಯಂಗಾರ್

ತ್ಯಾಗರಾಜರ ಪಂಚರತ್ನ ಕೃತಿಗಳಲ್ಲಿ ಒಂದಾದ 'ಎಂದರೋ ಮಹಾನು ಭಾವುಲು ಅಂದರಿಕಿ ವಂದನಮುಲು' ಕೃತಿಯನ್ನು ಹಾಡಿದರೇ ಅರಿಯಕ್ಕುಡಿಯವರ ಸಂಗೀತ ಕಚೇರಿ ಪೂರ್ಣವಾದಂತೆ. ಆ ಕೃತಿಯ ಗತ್ತು ಗಮಕಗಳು ಅಷ್ಟು ಚೆನ್ನಾಗಿ ಅವರ ಕಂಠದಿಂದ ಹೊರಹೊಮ್ಮುತ್ತಿದ್ದುವು. ಒಂದು ಸಂಗೀತ ಕಚೇರಿಯಲ್ಲಿ ಅವರು ಆರಿಸಿಕೊಂಡು ಹಾಡುತ್ತಿದ್ದ ರಚನೆಗಳೂ ರಾಗಗಳೂ ಒಟ್ಟಿನಲ್ಲಿ ಆ ದಿನದ ಸಭೆಗಾಗಿ ರಚಿಸಿದ ಒಂದು ಅಪೂರ್ವ ಚಿತ್ರದಂತಿರುತ್ತಿದ್ದುವು. ರಾಗವು ಪರಿಚಿತವಾದದ್ದಾಗಲೀ ಅಪೂರ್ವವಾದದ್ದಾಗಲೀ ಅದರ ಭಾವ ಎದ್ದು ತೋರುವಂತೆ ಹಾಡುವುದು ಅವರಿಗೆ ಸಿದ್ಧಿಸಿತ್ತು. ರಚನೆ ತೆಲುಗು, ಸಂಸ್ಕೃತ, ತಮಿಳು–ಯಾವ ಭಾಷೆಯಲ್ಲೇ ಇರಲಿ ಭಾವಪೂರ್ಣವಾಗಿ ಹಾಡುತ್ತಿದ್ದರು. ಮಧ್ಯಮ ಕಾಲದ ರಚನೆಗಳನ್ನು ಹಾಡುವುದರಲ್ಲಿ ಅರಿಯಕ್ಕುಡಿಯವರು ಅಪ್ರತಿಮರು. ಪಕ್ಕವಾದ್ಯದವರಿಗೆ ಇವರೊಡನೆ ನುಡಿಸುವುದೆಂದರೆ ಬಹಳ ಸಂತೋಷ.

ಅರಿಯಕ್ಕುಡಿ ರಾಮಾನುಜ ಅಯ್ಯಂಗಾರ್ಯರು ಹುಟ್ಟಿದ್ದು ಈಗಿನ ತಮಿಳು ನಾಡಿನ ರಾಮನಾಡ್ ಜಿಲ್ಲೆಯ ಅರಿಯಕ್ಕುಡಿಯಲ್ಲಿ, 1890ರ ಮೇ 18ರಂದು. ಮನೆತನ ಹೆಸರಾದ ಜೋಯಿಸರದು. ತಂದೆಯ ಹೆಸರು ತಿರುವೆಂಗಡಮ್ ಅಯ್ಯಂಗಾರ್. ಬಾಲ್ಯದಲ್ಲಿ ಪುದುಕೋಟೆಯ ಮಲಯಪ್ಪ ಅಯ್ಯರ್ ಬಳಿ ಸಂಗೀತ ಶಿಕ್ಷಣ ನಡೆಯಿತು. ಆಗ ನಾಮಕ್ಕಲ್ ನರಸಿಂಹ ಅಯ್ಯಂಗಾರ್ ಅವರು ವಿಖ್ಯಾತ ಪಲ್ಲವಿಗಾಯಕರಾಗಿದ್ದರು. ಮುಂದೆ ಅರಿಯಕ್ಕುಡಿಯವರಿಗೆ ಇವರಿಂದ ಸಂಗೀತ ಕಲಿ

ಯುವ ಅವಕಾಶ ದೊರೆಯಿತು. ಅನಂತರ ತ್ಯಾಗರಾಜರ ಶಿಷ್ಯ ಪರಂಪರೆಗೆ ಸೇರಿದ ಖ್ಯಾತ ಗಾಯಕ 'ಪೂಚಿ' (ಇವರ ನಾಮಧೇಯ ರಾಮನಾಥಪುರಂ ಶ್ರೀನಿವಾಸ ಅಯ್ಯಂಗಾರ್) ಅವರ ಬಳಿ ಶಿಷ್ಯವೃತ್ತಿ.

ಪಂಡಿತ ಪಾಮರರಿಬ್ಬರಿಗೂ ಇಷ್ಟ : ಅರಿಯಕ್ಕುಡಿ

ನೊಟ್ಟ ಮೊದಲು ಅರಿಯಕ್ಕುಡಿಯವರು ಹಾಡಿದ್ದು ಒಂದು ಮದುವೆಯ ಮನೆಯ ಸಂಗೀತ ಕಚೇರಿಯಲ್ಲಿ. ಕರ್ನಾಟಕ ಸಂಗೀತದ ಮಹಾ ವಾಗ್ಗೇಯಕಾರರಾದ ತ್ಯಾಗರಾಜ, ಪುರಂದರದಾಸ, ಶಾಮಾಶಾಸ್ತ್ರೀ, ತಮ್ಮ ಗುರು 'ಪೂಚಿ' – ಇವರೆಲ್ಲರ ಕೃತಿಗಳ ಭಂಡಾರ ಇವರ ನೆನಪಿನಲ್ಲಿದ್ದಿತು. ಯಾವ ಶ್ರೋತೃಗಳೆದುರು ಹೇಗೆ ಹಾಡಬೇಕು ಎಂಬುದನ್ನು ಅರಿಯಕ್ಕುಡಿಯವರು ತಿಳಿದಿದ್ದರು. ಪಂಡಿತರಾಗಲೀ ಪಾಮರರಾಗಲೀ ಅವರ ಸಂಗೀತ ಸುಧೆಯನ್ನು ಸವಿಯಲು ಹಾತೊರೆಯುತ್ತಿದ್ದುದಕ್ಕೆ ಇದೇ ಕಾರಣ. ಧ್ವನಿವರ್ಧಕಗಳ ನೆರವಿಲ್ಲದೆಯೇ ಹಾಡುತ್ತಿದ್ದ ಕಾಲದಲ್ಲೂ ಅವರ ಸಂಗೀತವೆಂದರೆ ಜನ ಕಿಕ್ಕಿರಿಯುತ್ತಿದ್ದರು. ಇದೇ ಜನಪ್ರಿಯತೆ ಅವರ ಕಡೆಗಾಲದವರೆಗೂ ಮಾಸದೆ ಉಳಿದಿತ್ತು. ಶುದ್ಧ ಶಾಸ್ತ್ರೀಯ ಸಂಗೀತವನ್ನು ಅದರ ಜಟಿಲ ಸ್ವರೂಪದ ಚೌಕಟ್ಟಿನಲ್ಲಿ ಉಳಿಸಿಕೊಂಡೇ ಜನಸಾಮಾನ್ಯರಿಗೂ ಅದು ಆದರಣೀಯವಾಗುವಂತೆ ಅರಿಯಕ್ಕುಡಿ ಹಾಡುತ್ತಿದ್ದರು.

ಮೈಸೂರಿನ ಟಿ. ಚೌಡಯ್ಯನವರ ಪಿಟೀಲು, ಪಾಲ್‌ಘಾಟ್ ಮಣಿ ಅಯ್ಯರ್ ಅವರ ಮೃದಂಗ. ಅರಿಯಕ್ಕುಡಿಯವರ ಹಾಡುಗಾರಿಕೆ – ಈ ಕೂಟ ಸುಮಾರು ಮೂರು ದಶಕಗಳ ಕಾಲ ಸಂಗೀತಪ್ರಿಯರಲ್ಲಿ ಮನೆ ಮಾತಾಗಿದ್ದಿತು. ಪ್ರಸಿದ್ಧರಾದ ದ್ವಾರಂ ವೆಂಕಟಸ್ವಾಮಿನಾಯ್ಡು, ತಿರುಕ್ಕೋಡಿ ಕಾವಲ್ ಕೃಷ್ಣಅಯ್ಯರ್, ಟಿ. ಚೌಡಯ್ಯ, ಲಾಲ್‌ಗುಡಿ ಜಯರಾಮನ್–ಈ ಎಲ್ಲ ಶ್ರೇಷ್ಠ ಪಿಟೀಲು ವಾದಕರೂ ಅವರಿಗೆ ಪಕ್ಕವಾದ್ಯ ನುಡಿಸಿದ್ದಾರೆ. ಹಿರಿಯ ಮೃದಂಗ ವಿದ್ವಾಂಸರಾದ ದಕ್ಷಿಣಾಮೂರ್ತಿ ಪಿಳ್ಳೈ, ಪಾಲ್‌ಘಾಟ್ ಮಣಿಅಯ್ಯರ್, ಪಳನಿ ಸುಬ್ರಹ್ಮಣ್ಯ ಪಿಳ್ಳೈ ಇವರೆಲ್ಲರೂ ಅರಿಯಕ್ಕುಡಿಯವರ ಘನ ಕಚೇರಿಗಳಲ್ಲಿ ಭಾಗ ವಹಿಸಿದ್ದಾರೆ.

1938ರಲ್ಲಿ ಮದರಾಸು ಸಂಗೀತ ಅಕಾಡಮಿಯ 'ಸಂಗೀತ ಕಲಾನಿಧಿ' ಬಿರುದು. 1946ರಲ್ಲಿ ಮೈಸೂರು ಅರಮನೆಯ 'ಗಾಯಕ ಶಿಖಾಮಣಿ' ಬಿರುದು, 1952ರಲ್ಲಿ ರಾಷ್ಟ್ರಪತಿಗಳ ಪ್ರಶಸ್ತಿ, 1960ರಲ್ಲಿ ತಮಿಳು ಇಸೈ ಸಂಘದ ಗೌರವ ಅರಿಯಕ್ಕುಡಿಯವರಿಗೆ ಸಂದುವು. ಅವರಿಗೆ ರಾಷ್ಟ್ರೀಯ ಸಂಗೀತ ನಾಟಕ ಅಕಾಡೆಮಿಯ ಗೌರವ ಸದಸ್ಯತ್ವ ಲಭಿಸಿತು. 'ಪದ್ಮಭೂಷಣ' ಪ್ರಶಸ್ತಿಯೂ ದೊರೆಯಿತು.

ಅರಿಯಕ್ಕುಡಿಯವರು ವಾಗ್ಗೇಯಕಾರರೂ ಆಗಿದ್ದರು. 1967ರ ಜನವರಿಯಲ್ಲಿ ಕಾಲವಶರಾದರು.

## ಅರಿಸ್ಟಾಟಲ್

'ನಮ್ಮ ಶಾಲೆಯ ಪ್ರಜ್ಞಾಶಕ್ತಿ'—ಎಂದು ಪ್ಲೇಟೋನಿಂದ ಮೆಚ್ಚುಗೆಯ ನುಡಿಗೆ ಪಾತ್ರನಾದ ಅರಿಸ್ಟಾಟಲ್ ಗುರುವಿಗೆ ತಕ್ಕ ಶಿಷ್ಯ. ಕಾವ್ಯ, ರಾಜಶಾಸ್ತ್ರ, ಭೌತವಿಜ್ಞಾನ, ಪ್ರಾಣಿವಿಜ್ಞಾನ, ಜೀವವಿಜ್ಞಾನ, ತರ್ಕಶಾಸ್ತ್ರ, ಭಾಷಣ ಕಲೆ, ನೀತಿಶಾಸ್ತ್ರ—ಹೀಗೆ ಜ್ಞಾನ ಭಂಡಾರದ ವಿವಿಧ ಸಿರಿಗಳನ್ನು ಸೂರೆಗೊಂಡವನು ಈತ. ಮೇಧಾವಿ ; ಮೇಲಾಗಿ ತತ್ತ್ವಜ್ಞಾನಿ.

ಸಾಹಿತ್ಯ ವಿಮರ್ಶೆಯ ಜನಕ—ಈ ಅರಿಸ್ಟಾಟಲ್.

ಗ್ರೀಸಿನ ಸ್ಟಗಿರ ಎಂಬಲ್ಲಿ ಕ್ರಿಸ್ತ ಪೂರ್ವ 384ರಲ್ಲಿ ಅರಿಸ್ಟಾಟಲ್ ಜನಿಸಿದ. ತಂದೆ ಆಸ್ಥಾನ ವೈದ್ಯ. ವಿಜ್ಞಾನದತ್ತ ಒಲವು ಅವನಿಗೆ ಆನುವಂಶಿಕವಾಗಿ ಬಂದಿತ್ತು. 17ನೆಯ ವಯಸ್ಸಿನಲ್ಲಿ ಅಥೆನ್ಸಿಗೆ ಹೋಗಿ ಪ್ಲೇಟೋನ ಶಿಷ್ಯನಾಗಿ ಇಪ್ಪತ್ತು ವರ್ಷಗಳ ಕಾಲ ಅವನೊಡನಿದ್ದ. ಮ್ಯಾಸಿಡೋನಿಯದ ಅರಸು ಫಿಲಿಪ್ ಅವನನ್ನು ತನ್ನ ರಾಜಧಾನಿಗೆ ಕರೆಸಿಕೊಂಡು, ತನ್ನ ಮಗ ಅಲೆಗ್ಸಾಂಡರನ ವಿದ್ಯಾಗುರುವನ್ನಾಗಿ ನಿಯಮಿಸಿದ. ಮುಂದೆ ಮಹಾಯೋಧನೆಂದು ಖ್ಯಾತಿ ಗಳಿಸಿ ಅಂದಿನ ಜಗತ್ತಿನ ಬಹುಭಾಗವನ್ನು ಗೆದ್ದು ಪ್ರಸಿದ್ಧನಾದವನು ಈ ಅಲೆಗ್ಸಾಂಡರನೇ.

ಮ್ಯಾಸಿಡೋನಿಯದಿಂದ ಹಿಂದಿರುಗಿದ ಮೇಲೆ ಅರಿಸ್ಟಾಟಲ್ ತನ್ನ ಗುರು ಪ್ಲೇಟೊ ನಡೆಸುತ್ತಿದ್ದ ವಿದ್ಯಾಕೇಂದ್ರ 'ಲೈಸಿಯಂ'ನಲ್ಲಿ ತನ್ನದೇ ಆದ ಅಕಾಡೆಮಿಯನ್ನು ಸ್ಥಾಪಿಸಿದ.

ಅರಿಸ್ಟಾಟಲ್ 400 ಪುಸ್ತಕಗಳನ್ನು ಬರೆದನೆಂದು ಹೇಳಿಕೆಯಿದೆ. ಆದರೆ ಈಗ ಉಳಿದಿರುವ ಹಾಗೂ ಅವನದೆಂದು ಪ್ರತೀತಿ ಇರುವ 50 ಪುಸ್ತಕಗಳಲ್ಲಿ ಅರ್ಧದಷ್ಟು ಆತನವೇ ಇರಬೇಕೆಂದೆನಿಸುತ್ತದೆ. ಪ್ಲೇಟೊನಂತೆ ಅರಿಸ್ಟಾಟಲ್ ಸಂವಾದದ ರೂಪದಲ್ಲಿ ಹಲವಾರು ಪ್ರಬಂಧಗಳನ್ನು ಬರೆದಿದ್ದ. ಆದರೆ ಈಗ ಅದರ ತುಣುಕುಗಳು ಮಾತ್ರ ಉಳಿದಿವೆ. ಅವನ ಪುಸ್ತಕಗಳು ಕ್ರಿ.ಪೂ. 4ನೆಯ ಶತಮಾನದ ಗ್ರೀಕ್‌ಜ್ಞಾನ, ವಿಜ್ಞಾನಗಳ ವಿಶ್ವಕೋಶ ಎಂಬ ಹೊಗಳಿಕೆ ಪಡೆದುವು. ಆದರೂ ಅರಿಸ್ಟಾಟಲನ ಪುಸ್ತಕಗಳನ್ನು ಇತರರು ಅಭ್ಯಸಿಸಿದ್ದು ಅವನ ಮರಣಾನಂತರವೇ. ಈಜಿಪ್ಟಿನ ಅಲೆಗ್ಸಾಂಡ್ರಿಯ ಮತ್ತು ರೋಮ್ ನಗರಗಳು ಗ್ರೀಕ್ ಸಂಸ್ಕೃತಿಯ ಪ್ರಭಾವಕ್ಕೊಳಗಾದ ಮೇಲೆ ಅಲ್ಲಿನ ಖ್ಯಾತ ವಿದ್ಯಾ ಕೇಂದ್ರಗಳಲ್ಲಿ ಅರಿಸ್ಟಾಟಲನ ಗ್ರಂಥಗಳನ್ನು ಪಠ್ಯ ಪುಸ್ತಕಗಳಾಗಿ ಉಪಯೋಗಿಸುತ್ತಿದ್ದರು. ಮಧ್ಯಯುಗದ ಯೂರೋಪಿನ ವಿಶ್ವವಿದ್ಯಾಲಯಗಳಲ್ಲಿ ಕೂಡ ಅರಿಸ್ಟಾಟಲನ ಗ್ರಂಥಗಳ ಅಧ್ಯಯನ ನಡೆಯುತ್ತಿತ್ತು.

ಅರಿಸ್ಟಾಟಲ್ ತನ್ನ 'ಆರ್ಗನಾನ್' ಗ್ರಂಥದಲ್ಲಿ ಕಾವ್ಯಮೀಮಾಂಸೆಯನ್ನು ಕುರಿತು ಬರೆದಿದ್ದಾನೆ. ಈ ಬಗೆಯ ಬರೆವಣಿಗೆ ಜಗತ್ತಿನಲ್ಲಿ ಇದೇ ಮೊದಲನೆಯದು. ಇದರಲ್ಲಿ ಪುರಾತನ ಗ್ರೀಕ್ ದುರಂತ ನಾಟಕಗಳ ವಿಶ್ಲೇಷಣೆಯನ್ನು ಅರಿಸ್ಟಾಟಲ್ ಬರೆದಿದ್ದಾನೆ. ದುರಂತ ನಾಟಕದಲ್ಲಿ ದುಃಖಮಯ ಸನ್ನಿವೇಶಗಳಿದ್ದರೂ ನೋಟಕರ ಮನಸ್ಸಿನ ಮೇಲೆ ಉತ್ತಮ ಪರಿಣಾಮ ಬೀರಲು ಅದು ಹೇಗೆ ಶಕ್ತವಾಗಿದ್ದುವು ಎಂಬುದನ್ನು ಈ ಕೃತಿಯಲ್ಲಿ ಅರಿಸ್ಟಾಟಲ್ ಚರ್ಚಿಸಿದ್ದಾನೆ. ಒಂದು ದುರಂತ ನಾಟಕ ಪ್ರಭಾವಶಾಲಿಯಾಗಬೇಕಾದರೆ ಅದರಲ್ಲಿ ಏನೇನು ಅಂಶಗಳಿರಬೇಕು ಎಂಬುದನ್ನು ವಿವರಿಸಿದ್ದಾನೆ. ದುರಂತ ನಾಟಕದ ಪರಿಣಾಮ ಹೃದಯವನ್ನು ಶುದ್ಧಿಗೊಳಿಸುವುದು ಎಂದು ಹೇಳಿದ್ದಾನೆ.



ಅರಿಸ್ಟಾಟಲ್ : ಪಾಶ್ಚಾತ್ಯ ಕಾವ್ಯಮೀಮಾಂಸೆಗೆ ತಳಹದಿ

ಅನುಕರಣೆಯಿಂದ ಕಲಿಯುವ ಸ್ವಾಭಾವಿಕ ಪ್ರವೃತ್ತಿ ಹಾಗೂ ಲಯದ ಬಗೆಗೆ ಒಲವು –ಇವು ಕಾವ್ಯರಚನೆಗೆ ಇರಬೇಕಾದ ಎರಡು ಪ್ರೇರಣೆಗಳು ಎಂದಿದ್ದಾನೆ. ಕಾವ್ಯವನ್ನು ಕುರಿತು ಪ್ಲೇಟೊ ಮಾಡಿದ್ದ ಕೆಲವು ಆರೋಪಣೆಗಳಿಗೆ ತನ್ನ ಕಾವ್ಯಮೀಮಾಂಸೆಯಲ್ಲಿ ಉತ್ತರನೀಡಿ ಕಾವ್ಯವನ್ನು ಸಮರ್ಥಿಸಿದ್ದಾನೆ.

ಗುರುವಿನ ಯಾವ ಮಾತನ್ನೂ ತರ್ಕಿಸದೆ ಒಪ್ಪಿಕೊಂಡವನಲ್ಲ ಅರಿಸ್ಟಾಟಲ್. ಜ್ಞಾನದೇಗುಲವನ್ನು ಪ್ರವೇಶಿಸಲು ತರ್ಕ ಒಂದು ದಾರಿ; ಎಲ್ಲ ವಿಚಾರಗಳನ್ನೂ ಗಮನಿಸಿ ನೋಡಿ. ವಾಸ್ತವಾಂಶವನ್ನು ಅವಲಂಬಿಸಿ ಮುಂದುವರಿಯುವುದು ಇನ್ನೊಂದು ದಾರಿ. ಈ ಎರಡೂ ದಾರಿಗಳಲ್ಲಿ ನಡೆದು ಅರಿಸ್ಟಾಟಲ್ ಜ್ಞಾನನಿಧಿ ಎನಿಸಿಕೊಂಡ.

2,000 ವರ್ಷಗಳಿಗೆ ಹಿಂದೆಯೇ ಕಾವ್ಯ ಮೀಮಾಂಸೆಯ ವಿಧಾನವನ್ನು ರೂಪಿಸಿದ ಅರಿಸ್ಟಾಟಲ್, ಸಾಹಿತ್ಯ ವಿದ್ಯಾರ್ಥಿಗಳಿಗೆ ಸದಾ ಸ್ಮರಣೀಯ.

**ನೋಡಿ :** ಅಕಾಡೆಮಿ ; ಅರಿಸ್ಟಾಟಲ್–ಸಂಪುಟ ೧

## ಅಲಂಕಾರಶಾಸ್ತ್ರ

ಅಲಂ ಎಂದರೆ ಮನಸ್ಸಿಗೆ ತೃಪ್ತಿಯಾಗುವ ಭಾವನೆ. ಚೆಲುವು, ಸೌಂದರ್ಯ. ನಮ್ಮ ವೇಷಭೂಷಣಗಳಿಗೆ ಉಡುಗೆ ತೊಡುಗೆ ಆಭರಣಗಳಿಗೆ 'ಅಲಂಕಾರ' ಎನ್ನುವ ಶಬ್ದವನ್ನು ಉಪಯೋಗಿಸುತ್ತೇವೆ. ಹಾಗೆಯೇ ನಾವು ಆಡುವ ಮಾತಿನಲ್ಲಿರುವ ವಿಶೇಷ ಸೌಂದರ್ಯವೂ 'ಅಲಂಕಾರ' ವೇ.

ಅಲಂಕಾರಶಾಸ್ತ್ರವು ಸುಂದರವಾದ ಕಾವ್ಯವನ್ನು ನಿರ್ಮಿಸುವುದಕ್ಕೆ ಸಹಾಯಕವಾದ ನಿಯಮಗಳನ್ನು ಪ್ರತಿಪಾದಿಸುವ ಉದ್ದೇಶದಿಂದ ಹುಟ್ಟಿರಬೇಕು. ಕೆಲವು ಪ್ರಾಚೀನ ಗ್ರಂಥಗಳ ವಿಷಯ ಸ್ವರೂಪದಿಂದ ಇದು ಸ್ಪಷ್ಟವಾಗುತ್ತದೆ. ಆಡುವ ಮಾತಿನ ಸೌಂದರ್ಯದ ಕಡೆಗೆ ನಮ್ಮ ಗಮನ ಹೆಚ್ಚು ಹೆಚ್ಚಾಗಿ ಹರಿದಂತೆಲ್ಲ 'ಅಲಂಕಾರ' ಭಾಷೆಯಲ್ಲಿ ಒಂದು ಭೂಷಣವಾಗಿ ಪರಿಣಮಿಸಿತು. ಸಂಸ್ಕೃತದಲ್ಲಿ ಕಾವ್ಯ ಮೀಮಾಂಸೆಯನ್ನು ಅಲಂಕಾರಶಾಸ್ತ್ರ ಎನ್ನುತ್ತಾರೆ.

ದಂಡಿ ಮತ್ತು ಭಾಮಹರೆನ್ನುವ ಪ್ರಸಿದ್ಧ ಸಂಸ್ಕೃತ ಆಲಂಕಾರಿಕರು, ಕಾವ್ಯದಲ್ಲಿ ಸೌಂದರ್ಯ ಮುಖ್ಯವಾದದ್ದು, ಅದನ್ನು ನಿರ್ಮಿಸುವ ಸಾಧನವೇ ಅಲಂಕಾರವೆನ್ನಿಸಿಕೊಳ್ಳುತ್ತದೆ' ಎಂದಿದ್ದಾರೆ. ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದಂತೆ ಭರತನ 'ನಾಟ್ಯಶಾಸ್ತ್ರ' ಗ್ರಂಥದಲ್ಲಿ ನಮಗೆ ಅತ್ಯಂತ ಪ್ರಾಚೀನವಾದ ಕೆಲವು ವಿವರಗಳು ತಿಳಿದುಬರುತ್ತವೆ. 'ನಾಟ್ಯಶಾಸ್ತ್ರ'ದಲ್ಲಿ ನಾಟ್ಯಾಲಂಕಾರ, ಕಾವ್ಯಾಲಂಕಾರ, ಸತ್ವಾಲಂಕಾರ, ವರ್ಣಾಲಂಕಾರ ಎನ್ನುವ ಶಬ್ದ ಪ್ರಯೋಗಗಳು ಬಂದಿವೆ. ಹಾಗೆಯೇ ಅಲ್ಲಿ ಹೇಳಿರುವ ಮೂವತ್ತು ಲಕ್ಷಣಗಳು ಮುಂದೆ ಪ್ರತ್ಯೇಕ ಅಲಂಕಾರಗಳಾಗಿ ಬೆಳೆದಂತೆ ತೋರುತ್ತದೆ.

ಕಾವ್ಯ ನಮಗೆ ಹೆಚ್ಚು ಪ್ರಿಯವಾಗುವುದು, ಹೆಚ್ಚು ಸ್ವಾರಸ್ಯಕರವಾಗಿ ಪರಿಣಮಿಸುವುದು ಈ ಅಲಂಕಾರಗಳಿಂದಲೇ. ಅಲಂಕಾರಶಾಸ್ತ್ರದ ಮುಖ್ಯ ಉದ್ದೇಶ ಕಾವ್ಯತತ್ತ್ವದ ಸಾಕ್ಷಾತ್ಕಾರ. ಕಾವ್ಯದಲ್ಲಿ ನಾವು ಬಳಸುವ ಶಬ್ದ ಮತ್ತು ಅರ್ಥಗಳು ಯೋಗ್ಯವಾದ ಗುಣ ಅಲಂಕಾರಗಳಿಂದ ಕೂಡಿದ್ದರೆ ಆ ಕಾವ್ಯ ಪರಿಣಾಮಕಾರಿಯಾಗುತ್ತದೆ, ಸುಂದರವಾಗುತ್ತದೆ. ಅಲಂಕಾರಗಳಲ್ಲಿ ಮುಖ್ಯವಾಗಿ 'ಶಬ್ದಾಲಂಕಾರಗಳು', 'ಅರ್ಥಾಲಂಕಾರಗಳು' ಎಂದು ಎರಡು ಮುಖ್ಯ ಪ್ರಭೇದಗಳಿವೆ. ಇವುಗಳಲ್ಲಿ ಅನುಪ್ರಾಸ ಶಬ್ದಾಲಂಕಾರ: ಉಪಮೆ ಮುಂತಾದುವು ಅರ್ಥಾಲಂಕಾರಗಳು. ಉಪಮಾಲಂಕಾರ ರೂಪಕಾಲಂಕಾರ ಮುಂತಾದುವನ್ನು ಪ್ರಾಚೀನ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಹೆಚ್ಚು ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಸಂಸ್ಕೃತ ಕವಿ–ನಾಟಕಕಾರ ಕಾಳಿದಾಸನೂ ಉಪಮಾಲಂಕಾರವನ್ನು ವಿಪುಲವಾಗಿ ಬಳಸಿದ್ದಾನೆ; ಕನ್ನಡ ಕವಿ ಕುಮಾರವ್ಯಾಸ ಕೂಡ. ಹಾಗೆಯೇ ಕನ್ನಡದ ಕವಿ ಲಕ್ಷ್ಮೀಶ ತನ್ನ 'ಜೈಮಿನಿ ಭಾರತ' ದಲ್ಲಿ ಉಪಮಾಲಂಕಾರವನ್ನು ಉಚಿತವಾದ ಸನ್ನಿವೇಶಗಳಲ್ಲಿ ಬಹಳ ಸಮರ್ಥವಾಗಿ ಬಳಸಿಕೊಂಡಿದ್ದಾನೆ. ಕನ್ನಡದ ಕವಿತೆಯಲ್ಲಿ ಎರಡನೆಯ ಅಕ್ಷರಕ್ಕೆ ವಿಶಿಷ್ಟ ಸ್ಥಾನ.

ಅರಿಸ್ಟಾಟಲನ ಕಾವ್ಯಮೀಮಾಂಸೆ ಪಾಶ್ಚಾತ್ಯರಲ್ಲಿ ಆಧಾರಭೂತ ಅಲಂಕಾರಶಾಸ್ತ್ರ. ಕಾವ್ಯಕ್ಕೆ ಸಂಬಂಧಿಸಿದ ಹಲವಾರು ವಿಚಾರಗಳನ್ನು ಇದರಲ್ಲಿ ಚರ್ಚಿಸಲಾಗಿದೆ. ಪ್ರಾಚೀನ ಗ್ರೀಸ್ ದೇಶದಲ್ಲಿ ಕವಿಗಳಲ್ಲದೆ, ವಾಗ್ಮಿಗಳು ಕೂಡ ತಮ್ಮ ಭಾಷಣಗಳಲ್ಲಿ ಅಲಂಕಾರಗಳನ್ನು ಬಳಸುತ್ತಿದ್ದರು.

ಭರತನ 'ನಾಟ್ಯಶಾಸ್ತ್ರ', ದಂಡಿಯ 'ಕಾವ್ಯಾದರ್ಶ', ಭಾಮಹನ 'ಕಾವ್ಯಾಲಂಕಾರ', ಮಮ್ಮಟನ 'ಕಾವ್ಯಪ್ರಕಾಶ', ಆನಂದವರ್ಧನನ 'ಧ್ವನ್ಯಾಲೋಕ', ಜಗನ್ನಾಥ 'ರಸಗಂಗಾಧರ' ,–ಇವು ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಅಲಂಕಾರಶಾಸ್ತ್ರ ಗ್ರಂಥಗಳು. ಕನ್ನಡದಲ್ಲಿ 'ಕವಿರಾಜಮಾರ್ಗ' ಹಾಗೂ ಎರಡನೆಯ ನಾಗವರ್ಮ ರಚಿಸಿದ 'ಕಾವ್ಯಾವಲೋಕನ' ಇವೆರಡೂ ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದ ಪ್ರಸಿದ್ಧ ಗ್ರಂಥಗಳು.

**ನೋಡಿ :** ಕಾವ್ಯಮೀಮಾಂಸೆ ; ಭಾರತೀಯ ಕಾವ್ಯಮೀಮಾಂಸೆ

## ಅಲ್ಲಾವುದ್ದೀನ್ ಖಾನ್

ಸಂಗೀತಕ್ಕಾಗಿಯೇ ಜೀವನವನ್ನು ತೇಯ್ದು ನೂರಹತ್ತು ವರ್ಷಗಳ ತುಂಬು ಬಾಳನ್ನು ಬಾಳಿದ, ವ್ಯಕ್ತಿಶಃ ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದ ವಿಖ್ಯಾತ ಸರೋದ್ ವಾದನಕಾರ—ಅಲ್ಲಾವುದ್ದೀನ್ ಖಾನ್. ಭಾರತೀಯ ಸಂಗೀತದೆಡೆಗೆ ಪಾಶ್ಚಾತ್ಯ ಲೋಕದ ಗಮನ ಸೆಳೆದವರಲ್ಲಿ ಇವರು ಮೊದಲಿಗರು. ಗೇಯಕಾರರು; ಹೆಸರಾಂತ ಸಂಗೀತ ಶಿಕ್ಷಕರು.

ತ್ರಿಪುರದ ಶಿವಪುರದಲ್ಲಿ 1862ರಲ್ಲಿ, ತೈತಮನೆತನದಲ್ಲಿ ಅಲ್ಲಾವುದ್ದೀನ್ ಖಾನ್ ಹುಟ್ಟಿದರು. ಹೆತ್ತವರು ಇಟ್ಟ ಹೆಸರು ಆಲಮ್. ತಂದೆ ಸಾಧು ಖಾನರಂತೆ ಆಲಮ್‌ಗೆ ಸಂಗೀತ ಎಂದರೆ ಪಂಚಪ್ರಾಣ. ತಾಯಿ ಹರಸುಂದರಿದೇವಿಗೆ ಈ ಬಗೆಗೆ ಅನಾದರ. ಮದುವೆಯಿಂದ ಹುಡುಗನ

[illegible] ಗಾಡಿಯೊಂದಿಗೆ ಆಲಮ್ ಕಲ್ಕತ್ತೆಗೆ ಓಡಿಹೋದ. ಕಲ್ಕತ್ತೆಯ ರಸ್ತೆಯ ಬದಿಯಲ್ಲಿ ನಿದ್ದೆಹೋದಾಗ [illegible] ಕಳುವಾಯಿತು. ಹುಡುಗ ದಕ್ಷಿಣೇಶ್ವರ ದೇವಾಲಯದವರೆಗೆ ನಡೆದು ದೇವಾಲಯದ ಬಾಗಿಲಿನಲ್ಲಿ ಕುಳಿತ. ಅರ್ಚಕ ಪಂಡಿತ ಗದಾಧರ ಭಟ್ಟರಿಗೆ ಹುಡುಗನನ್ನು ನೋಡಿ ಕನಿಕರವಾಯಿತು. ಅರ್ಚಕನ ಪತ್ನಿ ಹುಡುಗನಿಗೆ ಎರಡು ಪೂರಿ, ಸ್ವಲ್ಪ ಹಲ್ವವನ್ನು ಕೊಟ್ಟಳು. ಆ ದಂಪತಿಗಳೇ ಮುಂದೆ ಲೋಕವಿಖ್ಯಾತರಾದ ರಾಮಕೃಷ್ಣ ಪರಮಹಂಸರು ಹಾಗೂ ಶಾರದಾಮಣಿ ದೇವಿ

ಆಲಮನಿಗೆ ಸಂಗೀತಪ್ರಿಯನಾದ ನರೇಂದ್ರದತ್ತನ ಪರಿಚಯವೂ ಆಯಿತು. ನರೇಂದ್ರನೇ ಮುಂದೆ ಸ್ವಾಮಿ ವಿವೇಕಾನಂದನಾದ.

ಆಲಮ್ ಆಗಾಗ್ಗೆ ಹೆಸರು ಬದಲಿಸಿಕೊಂಡು ಅವರಿವರಲ್ಲಿ ಸಂಗೀತ ಕಲಿತ. ಮಿನರ್ವಾ ಥಿಯೇಟರಿನಲ್ಲಿ ಫಿಡಲ್ ಬಾರಿಸುವ ಕೆಲಸ ಸಿಕ್ಕಿತು. ತಿಂಗಳಿಗೆ ರೂ. 32 ಸಂಬಳ. ಆ ವೇಳೆಗೆ ಆಲಮ್ ಚೆನ್ನಾಗಿ ವೀಣೆ ಬಾರಿಸುತ್ತಿದ್ದ. ಒಂದು ದಿನ ಕಾಶೀಪುರದ ರಾಜಾ ಮಣೀಂದ್ರ ಪ್ರತಾಪನ ಆಸ್ಥಾನದಲ್ಲಿ ಅಹ್ಮದ್ ಅಲಿಖಾನ್ ಬೀನ್‌ಕಾರರ ಸರೋದ್ ವಾದನ ಕೇಳುವ ಅವಕಾಶ ಒದಗಿತು. ಆಲಮ್ ತನ್ನ ಕೆಲಸವನ್ನು ಬಿಟ್ಟು, ಅಹ್ಮದ್ ಅಲಿಖಾನರ ಶಿಷ್ಯನಾದ. ಗುರುವಿನ ವಾದನಕ್ಕೆ ಕಿವಿಗೊಡುವುದು, ತಬಲಾ ನುಡಿಸುವುದು–ಇಷ್ಟೇ ಆಲಮನಿಗೆ ದೊರೆತ ಅವಕಾಶ. ಅಡುಗೆ ಮಾಡುವುದು, ಬಟ್ಟೆಬರೆ ಒಗೆಯುವುದು–ಹೀಗೆ ಶಿಷ್ಯನಿಗೆ ಬಿಡುವಿಲ್ಲದ ಕೆಲಸ. ವೇತನ ತಿಂಗಳಿಗೆ ರೂ. 12. ಅದರಲ್ಲಿ ಹತ್ತು ರೂಪಾಯಿಗಳನ್ನು ಆಲಮ್ ಗುರುವಿಗೆ ಹಿಂದಿರುಗಿಸುತ್ತಿದ್ದ.

ದೇಶಿಕೋತ್ತಮ, ಸಂಗೀತಾಚಾರ್ಯ

ವಿದ್ಯಾರ್ಥಿಗಳಿಗೆ ಪಾಠ ಹೇಳಲೆಂದು ಉಸ್ತಾದರು ಹೊರಹೋದಾಗಲೆಲ್ಲ ಅವರ ಕೃತಿಗಳನ್ನು ಆಲಮ್ ಸರೋದ್ ಮೇಲೆ ಬಾರಿಸುತ್ತಿದ್ದ. ಸುಪ್ರೀತರಾದ ಉಸ್ತಾದರು ತನ್ನ ವಿದ್ಯೆಯನ್ನೆಲ್ಲ ಶಿಷ್ಯನಿಗೆ ಹೇಳಿಕೊಟ್ಟು, ಹೆಚ್ಚಿನ ಶಿಕ್ಷಣಕ್ಕಾಗಿ ರಾಮಪುರದ ಉಸ್ತಾದ್ ವಜೀರ್ ಖಾನರಲ್ಲಿ ಹೋಗುವುದು ಲೇಸು ಎಂದು ಸೂಚಿಸಿದರು.

ವಜೀರ್‌ಖಾನ್‌ರಲ್ಲಿ ಶಿಷ್ಯವೃತ್ತಿ ದೊರೆಯುವುದು ದುಸ್ಸಾಧ್ಯವಾಗಿತ್ತು. ಹತಾಶನಾದ ಯುವಕ ಒಂದು ದಿನ ತುಸು ಅಫೀಮನ್ನು ಮುಷ್ಟಿಯಲ್ಲಿ ಹಿಡಿದು ರಾಮಪುರದ ನವಾಬರ ಕಾರಿಗೆ ಅಡ್ಡ ಮಲಗಿದ. ಕಾರು ನಿಂತಿತು. ವಿಷಯ ತಿಳಿದ ನವಾಬರು, ಈತನನ್ನು ಶಿಷ್ಯನಾಗಿ ಸ್ವೀಕರಿಸಬೇಕೆಂದು ವಜೀರ್‌ಖಾನರಿಗೆ ತಿಳಿಸಿದರು. ಮನಸ್ಸಿಲ್ಲದಿದ್ದರೂ ಖಾನರು ಒಪ್ಪಿದರು.

"[illegible] ಸರೋದ್ ಬಾರಿಸಲು ಕಲಿ" ಎಂದರು ಗುರು. ಹಗಲು ಗುರುವಿನ ಸೇವೆ. ರಾತ್ರಿ ಸರೋದ್ ಅಭ್ಯಾಸ. ತಮಗೆ ವಿದ್ಯಾರ್ಥಿಗಳಾಗಿ [illegible] ಆಲಮನ ಕೊಠಡಿಯತ್ತ ಕಲ್ಲುಗಳನ್ನು ಎಸೆದರು. ಆಲಮ್ ಹೊರಗೆ ಸ್ವರ ಕೇಳಿಸದಂತೆ ಸರೋದ್‌ಗೆ ಕಂಬಳಿ ಸುತ್ತಿ ಅಭ್ಯಾಸ ಮಾಡಿದ. ವಜೀರ್ ಖಾನರಿಗೆ ಮೆಚ್ಚಿನ ಶಿಷ್ಯನಾದ.

ರಾಮಪುರದಲ್ಲಿ ಹಲವು ವರ್ಷಗಳ ಶಿಷ್ಯವೃತ್ತಿ ಮುಗಿಸಿದ ಆಲಮ್‌ಗೆ ಆದ ಹೊಸ ನಾಮಕರಣ–ಅಲ್ಲಾವುದ್ದೀನ್ ಖಾನ್. ಕಲ್ಕತ್ತೆಯಲ್ಲಿ ಆತನ ಕಚೇರಿ ಅತ್ಯಂತ ಯಶಸ್ವಿಯಾಯಿತು.

ಮೈಹಾರದ ಮಹಾರಾಜ ಬ್ರಿಜನಾಥ ಸಿಂಗರು. ಅಲ್ಲಾವುದ್ದೀನ್ ಖಾನರನ್ನು ತಮ್ಮ ಸಂಸ್ಥಾನಕ್ಕೆ ಆಹ್ವಾನಿಸಿ, ಎಲ್ಲ ಜೀವನ ಸೌಕರ್ಯಗಳನ್ನೂ ಒದಗಿಸಿಕೊಟ್ಟರು. ಸಾಯುವವರೆಗೂ ಅಲ್ಲಿಯೇ ಇರುವುದಾಗಿ ಅಲ್ಲಾವುದ್ದೀನ್ ಖಾನರು ವಚನವಿತ್ತರು.

ಮಹಾರಾಜರಿಗೂ ಸರೋದ್ ಕಲಿಯುವ ಆಸೆ. ಅಲ್ಲಾವುದ್ದೀನ್ ಖಾನರ ಶಿಷ್ಯರಾದರು. ಅಭ್ಯಾಸ ತೃಪ್ತಿಕರವಾಗಿರಲಿಲ್ಲ. ಒಮ್ಮೆ ಉಸ್ತಾದರು ಎಸೆದ ಸುತ್ತಿಗೆ ಶಿಷ್ಯನ ಬೆರಳುಗಳಿಗೆ ತಗಲಿತು. ತಾವು ಮಾಡಿದುದೇನು ಎಂಬುದು ಅರಿವಾದಾಗ, ಖಾನರು ಅಲ್ಲಿಂದ ಓಡಿಹೋಗಲು ಯತ್ನಿಸಿದರು. ಇನ್ನೇನು ಕಲ್ಕತ್ತೆಗೆ ಹೋಗುವ ರೈಲು ಹತ್ತಬೇಕು—ಅಷ್ಟರಲ್ಲಿ ನಿಲ್ದಾಣದಲ್ಲಿ ಕೈಜೋಡಿಸಿ ನಿಂತಿದ್ದ ಮಹಾರಾಜರು ಖಾನರ ಕಣ್ಣಿಗೆ ಬಿದ್ದರು. ಉಸ್ತಾದರು ನೀಡಿದ್ದ ವಚನವನ್ನು ಮಹಾರಾಜರು ವಿನಮ್ರರಾಗಿ ನೆನಪುಮಾಡಿಕೊಟ್ಟರು. ಖಾನರು ಮರುಮಾತಿಲ್ಲದೆ ಹಿಂದಿರುಗಿದರು.

ಮುಂದೆ ಮರಣದತನಕವೂ —ಐವತ್ತು ವರ್ಷಗಳ ಕಾಲ— ಮೈಹಾರ ಖಾನರ ಊರಾಯಿತು. ಪತ್ನಿಯ ಹೆಸರು ಹೊತ್ತ ಮದೀನಾ ಭವನ ಖಾನರ ಮನೆ. ಸಂಗೀತ ಕಲಿಯಲು ಅವರಲ್ಲಿಗೆ ಬಂದವರು ಹಲವರು. ಅವರ ಮಗ ಅಲಿ ಅಕ್ಬರ್ ಖಾನ್ ಖ್ಯಾತ ಸರೋದ್ ವಾದಕ. ಮಗಳು ಅನ್ನಪೂರ್ಣಾ ಹೆಸರಾಂತ ಸಂಗೀತಜ್ಞೆ. ಈಕೆಯ ಪತಿ, ಖಾನರ ಅಳಿಯ, ರವಿಶಂಕರ್ ಕೂಡಾ ಖಾನರ ಶಿಷ್ಯ. ದಿವಂಗತ ಪನ್ನಾಲಾಲ್ ಘೋಷರೂ ಉಸ್ತಾದರ ಶಿಷ್ಯರೇ. ಅವರ ಶಿಷ್ಯರ ಸಂಖ್ಯೆ ಸುಮಾರು 700.

ಸೂರ್ ಸಿತಾರ್, ಚಂದ್ರ ಸಾರಂಗ್ ಮತ್ತು ನಳ ತಾರಂಗ್ ಅವರು ಸಿದ್ಧಗೊಳಿಸಿದ ಹೊಸವಾದ್ಯಗಳು. ಹೊಸ ರಾಗಗಳನ್ನೂ ಅವರು ರೂಪಿಸಿದರು.

ಅಲ್ಲಾವುದ್ದೀನ್ ಖಾನರು ತಮ್ಮ ಕಲೆಯನ್ನು ಶಾರದಾಂಬೆಗೆ ಅರ್ಪಿಸಿದ್ದರು. ಮದೀನಾ ಭವನಕ್ಕೆ ಹೋಗುವ ದಾರಿಯಲ್ಲಿ ಗುಡ್ಡದ ತುದಿಯಲ್ಲಿರುವ ಶಾರದಾಂಬಾ ಮಂದಿರ ಖಾನರು ಕಟ್ಟಿಸಿದ್ದು. ತಾನು ಹುಟ್ಟಿದ ಹಳ್ಳಿಯಲ್ಲಿ ಒಂದು ಮಸೀದಿಯನ್ನೂ ಅವರು ಕಟ್ಟಿಸಿದರು.

ಬದರಿ, ರಾಮೇಶ್ವರ, ದ್ವಾರಕ, ಪುರಿಗಳಿಗೂ ಮೆಕ್ಕಾ, ಮದೀನಾಗಳಿಗೂ ಖಾನರು ಯಾತ್ರೆ ಹೋಗಿದ್ದರು.

ಮದೀನಾ ಭವನವನ್ನು ವಿದ್ಯುಚ್ಛಕ್ತಿಯಿಂದ ಬೆಳಗಲು ಖಾನರ ಮಗ ಅಲಿ ಅಕ್ಬರ್‌ಖಾನ್ ಮಾಡಿದ ಪ್ರಯತ್ನವನ್ನು ಖಾನರು ವಿರೋಧಿಸಿದರು. ಕೃತ್ರಿಮ ಬೆಳಕು ಬೇಡ —ಎಂದರು. ಹಕ್ಕಿಗಳು, ಹಸು ಕರುಗಳು —ಹಾವು ಕೂಡಾ— ಮದೀನಾ ಭವನದಲ್ಲಿ ಖಾನರಿಗೆ ಒಡನಾಡಿಗಳಾಗಿದ್ದುವು.

ಉದಯಶಂಕರರ ನಾಟ್ಯ ತಂಡದೊಡನೆ ವಾದ್ಯಮೇಳದ ನಿರ್ದೇಶಕರಾಗಿ ಹಲವಾರು ರಾಷ್ಟ್ರಗಳಲ್ಲಿ ಖಾನರು ಸಂಚಾರಮಾಡಿದರು. ಶಾಂತಿನಿಕೇತನ ಅವರನ್ನು 'ದೇಶಿಕೋತ್ತಮ' ಎಂದು ಕರೆಯಿತು. ತಾನ್‌ಸೇನ್ ಸಂಗೀತ ಸಮಿತಿ 'ಆಫ್ತಾಬ್–ಇ–ಹಿಂದ್' ಬಿರುದು ನೀಡಿತು. 'ಸಂಗೀತಾಚಾರ್ಯ'

ಬಂದಿತು, ಲಕ್ನೋದ ಹಿಂದೂಸ್ತಾನಿ ಸಂಗೀತದ ಭಾತ್‌ಖಂಡೆ ವಿಶ್ವವಿದ್ಯಾಲಯ. ಮೈಹಾರದ ಮಹಾರಾಜರು 'ಸಂಗೀತ ನಾಯಕ' ಎಂದು ಕರೆದರು. ಪ್ರಭುತ್ವ 'ಪದ್ಮಭೂಷಣ' ಪ್ರಶಸ್ತಿ ಸಲ್ಲಿಸಿತು.

1972 ಸೆಪ್ಟೆಂಬರ್ 6ರಂದು ಈ ವೃದ್ಧ ಸಂಗೀತಾಚಾರ್ಯನಿಗೆ ಸಾವು ಸಂಭವಿಸಿತು. ಅಲ್ಲಾವುದ್ದೀನ್ ಖಾನರ ಪಾರ್ಥಿವ ಶರೀರವನ್ನು ಮದೀನಾ ಭವನದಲ್ಲೇ ಸಮಾಧಿ ಮಾಡಿದರು.

## ಅಲೆಕ್ಸಿಸ್ ಕ್ಯಾರೆಲ್

ವೃತ್ತಿಯಿಂದ ವೈದ್ಯ. ಶಸ್ತ್ರಚಿಕಿತ್ಸೆಯಲ್ಲಿ ಜಾಣ. ಮೊದಲನೆಯ ಮಹಾಯುದ್ಧದಲ್ಲಿ ಗಾಯಾಳುಗಳ ಶುಶ್ರೂಷೆ. ಸಂಶೋಧನೆಗಳಲ್ಲಿ ನಿರತನಾಗಿದ್ದ. ನಡೆಸಿದ ವೈದ್ಯಕೀಯ ಸಂಶೋಧನೆಗಳಿಗಾಗಿ ನೊಬೆಲ್ ಬಹುಮಾನ (1912) ದೊರಕಿತು. ಒಳ್ಳೆಯ ಬರಹಗಾರ ಕೂಡ. ವೈದ್ಯಕೀಯ ಸಂಶೋಧನೆ. ಸಾಹಿತ್ಯರಚನೆ ಎರಡರಲ್ಲೂ ಮೇಲುಗೈ.

ಹೀಗೆ ಉತ್ತಮ ಸಾಧನೆಗಳನ್ನು ಕೈಗೂಡಿಸಿಕೊಂಡ ಮೇಧಾವಿ ಅಲೆಕ್ಸಿಸ್ ಕ್ಯಾರೆಲ್.

ಅಲೆಕ್ಸಿಸ್ ಕ್ಯಾರೆಲ್ ಫ್ರಾನ್ಸಿನಲ್ಲಿ 1873ನೆಯ ಜೂನ್ 28ರಂದು ಜನಿಸಿದ. 1900ರಲ್ಲಿ ಲಿಯೊನ್ಸ್ ವಿಶ್ವವಿದ್ಯಾಲಯದಿಂದ ಎಂ.ಡಿ. ಪದವಿ ಪಡೆದ. ಎರಡು ವರ್ಷಗಳ ಕಾಲ ಶವಛೇದನ ಕಾರ್ಯ ನಡೆಸಿ. ಶಸ್ತ್ರ ವೈದ್ಯದಲ್ಲಿ ತನ್ನ ಕೌಶಲಪಡೆದ.

ಆದರೆ ಈ ವೃತ್ತಿಯನ್ನು ಮುಂದುವರಿಸದೆ, ಪಶುಪಾಲನೆಯಲ್ಲಿ ಆಸಕ್ತಿ ವಹಿಸಿ ಆ ಕಸುಬನ್ನು ಕೈಗೊಳ್ಳಲು 1904ರಲ್ಲಿ ಕೆನಡಕ್ಕೆ ಹೋದ. ಆದರೆ ಪುನಃ 1905ರಲ್ಲಿ ಷಿಕಾಗೋದಲ್ಲಿನ 'ಹಲ್ ಶರೀರ ವಿಜ್ಞಾನ ಪ್ರಯೋಗಾಲಯ' ದಲ್ಲಿ ಕೆಲಸ ಮಾಡತೊಡಗಿದ. ಅಪಧಮನಿಗಳ ಎರಡು ತುದಿಗಳನ್ನು ಸೇರಿಸಿ ಹೊಲಿಯುವ ವಿಧಾನವನ್ನು ಕಂಡುಹಿಡಿದ. 1906ರಲ್ಲಿ ನ್ಯೂಯಾರ್ಕಿನ 'ರಾಕ್‌ಫೆಲರ್ ಇನ್‌ಸ್ಟಿಟ್ಯೂಟ್ ಫಾರ್ ಮೆಡಿಕಲ್ ರಿಸರ್ಚ್'ನಲ್ಲಿ ಕೆಲಸ ದೊರೆಯಿತು. ಬದಲಿ ಅಂಗ ಜೋಡಣೆಯ ವಿಧಾನ ಆತನ ಸಂಶೋಧನೆಯ ವಿಷಯವಾಗಿತ್ತು. ಬದಲಿ ಅಂಗಗಳನ್ನು ಕೂಡಿಸುವ ಸ್ಥಳದಲ್ಲಿ ರಕ್ತದ ಸರಬರಾಜು ಸರಿಯಾಗಿರುವಂತೆ ನೋಡಿಕೊಳ್ಳುವುದು ಮುಖ್ಯ. ಇದಕ್ಕಾಗಿ ಆತ ರಕ್ತನಾಳವನ್ನು ಸೂಕ್ಷ್ಮವಾದ ಸೂಜಿಗಳಿಂದ ಹೊಲಿಯುತ್ತಿದ್ದ. 1939ರಲ್ಲಿ ನಿವೃತ್ತನಾದ ಮೇಲೆ ಫ್ರಾನ್ಸಿಗೆ ಹಿಂದಿರುಗಿದ.

ಮೊದಲನೆಯ ಮಹಾಯುದ್ಧದಲ್ಲಿ ಫ್ರೆಂಚ್ ಸೇನೆಯಲ್ಲಿ ವೈದ್ಯಕೀಯ ಸೇವೆ ಸಲ್ಲಿಸಿದ. ಗಾಯಗಳಿಗೆ ಸೋಂಕು ತಗಲದಂತೆ ಮಾಡುವುದರಲ್ಲಿ ಸಹಾಯಕವಾದ ದ್ರವ ಪದಾರ್ಥವೊಂದನ್ನು ತಯಾರಿಸಿದ.

ದೇಹದಿಂದ ಒಂದು ಅಂಗವನ್ನು ಹೊರತೆಗೆದ ಮೇಲೆ ಅದನ್ನು ಕೆಲವು ಕಾಲ ಜೀವಂತವಾಗಿಡಲು ಸಾಧ್ಯವೇ ಎಂದು ಪ್ರಯೋಗ ನಡೆಸಿದ. ಹೊರತೆಗೆದ ಅಂಗಕ್ಕೆ ಅದರಲ್ಲಿನ ರಕ್ತನಾಳದ ಮೂಲಕ ರಕ್ತ ಅಥವಾ ರಕ್ತಕ್ಕೆ ಸಮಾನವಾದ ದ್ರವವನ್ನು ಸತತವಾಗಿ ಹರಿಸುತ್ತಿರುವುದರ ಮೂಲಕ ಇದನ್ನು ಸಾಧಿಸಬಹುದೆಂದು ತೋರಿಸಿದ. ಆತ 1944ರ ನವೆಂಬರ್ 5ರಂದು ಪ್ಯಾರಿಸಿನಲ್ಲಿ ನಿಧನನಾದ.

ಬರೆವಣಿಗೆಯ ಕ್ಷೇತ್ರದ ಅವನ ಮಹತ್ಸಾಧನೆ—1935ರಲ್ಲಿ ಪ್ರಕಟವಾದ ಆತನ ಪ್ರಖ್ಯಾತ ಗ್ರಂಥ 'ಮ್ಯಾನ್ ದಿ ಅನ್‌ನೋನ್' (ಅವ್ಯಕ್ತ ಮಾನವ). ಇದು ಜನಪ್ರಿಯತೆಯನ್ನು ಗಳಿಸಿತು. ಉನ್ನತ ಬೌದ್ಧಿಕ ಮಟ್ಟದ ವ್ಯಕ್ತಿಯೊಬ್ಬ ಪ್ರಪಂಚವನ್ನು ನಡೆಸಿದರೆ ಹೇಗಿರುತ್ತದೆ ಎಂಬುದರ ಚಿತ್ರ–ಈ ಗ್ರಂಥ. ಮಾನವ ಎಷ್ಟೇ ಬುದ್ಧಿವಂತನಾಗಿರಬಹುದು; ತನ್ನ ಅನುಕೂಲಕ್ಕೆ ಬೇಕು ಬೇಕಾದ ಸಲಕರಣೆಗಳನ್ನು ಸಿದ್ಧಪಡಿಸಿಕೊಳ್ಳಬಹುದು; ಏನೇ ಆದರೂ ಆತನ ಶಕ್ತಿಗೊಂದು ಮಿತಿಯಿದೆ – ಎಂಬುದನ್ನು ಕ್ಯಾರೆಲ್ ಈ ಕೃತಿಯಲ್ಲಿ ಸ್ಪಷ್ಟಪಡಿಸಿದ್ದಾನೆ. ಸರಳ ಶೈಲಿಯ ಈ ಗ್ರಂಥ ಪರಿಣತರು, ಜನಸಾಮಾನ್ಯರು ಇಬ್ಬರಿಗೂ ಅರ್ಥವಾಗುವಂತಿದೆ. ಬರೆಹಗಾರರು ಮತ್ತಿತರ ಜಗತ್ತಿನ ಬುದ್ಧಿಜೀವಿಗಳ ಮೇಲೆ ಇದು ಪ್ರಭಾವ ಬೀರಿದೆ.



'ಅವ್ಯಕ್ತಮಾನವ'ನ ಶೋಧ: ಅಲೆಕ್ಸಿಸ್ ಕ್ಯಾರೆಲ್

ಕ್ಯಾರೆಲನ ಇತರ ಕೆಲವು ಕೃತಿಗಳು : 'ದಿ ಮೇಕಿಂಗ್ ಆಫ್ ಸಿವಿಲೈಸ್ಡ್ ಮ್ಯಾನ್'. 'ದಿ ಪ್ರೇಯರ್'. 'ಜರ್ನಿ ಟು ಲೂರ್ಡ್ಸ್' ಹಾಗೂ 'ರಿಫ್ಲೆಕ್ಷನ್ಸ್ ಆನ್ ಲೈಫ್'.

## ಅಶ್ವಘೋಷ

ಅಶ್ವಘೋಷ —ಸಂಸ್ಕೃತ ಸಾಹಿತ್ಯದಲ್ಲಿ ತುಂಬ ಖ್ಯಾತವಾದ ಹೆಸರು. ಇದು ಒಬ್ಬ ವ್ಯಕ್ತಿಯ ಹೆಸರೋ ಅಥವಾ ಅವನಿಗೆ ಬಂದ ಬಿರುದೋ ಖಚಿತವಾಗಿ ತಿಳಿಯದು. ಈ ಮಹಾವ್ಯಕ್ತಿಗೆ ಅಶ್ವಘೋಷ ಎಂಬ ಹೆಸರು ಏಕೆ ಬಂದಿತೆಂಬುದಕ್ಕೆ ಒಂದು ದಂತಕಥೆ ಇದೆ. ಅವನು ಧರ್ಮೋಪದೇಶ ಮಾಡುತ್ತಿದ್ದಾಗ ಹಸಿದ ಕುದುರೆಗಳು ಕೂಡ ಮೇವು ತಿನ್ನುವುದನ್ನು ನಿಲ್ಲಿಸಿ, ಅವನ ಮಾತನ್ನು ಕಿವಿಗೊಟ್ಟು ಕೇಳುತ್ತಿದ್ದುವಂತೆ. ಇದರಿಂದಾಗಿ ಅಶ್ವಘೋಷನೆಂಬ ಹೆಸರು ಅವನಿಗೆ ಬಂದಿತಂತೆ.

ಇದನ್ನು ನಂಬಿದರೆ, ಅಶ್ವಘೋಷ ಎಂಬುದು ಆ ವ್ಯಕ್ತಿಯ ಹೆಸರಲ್ಲ, ಅವನಿಗೆ ಬಂದ ಬಿರುದು ಎಂದಾಯಿತು. ಅವನ ನಿಜವಾದ ಹೆಸರೇನು ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ.

ಅಶ್ವಘೋಷ ಎಂಬ ಮಾತಿನ ಅರ್ಥವಾದರೂ ಏನು ? ಅಶ್ವ ಎಂದರೆ ಕುದುರೆ. ಘೋಷ ಎಂಬ ಮಾತಿಗೆ ದೊಡ್ಡ ಶಬ್ದ, ಕೂಗು, ಗರ್ಜನೆ, ಡಂಗುರ ಸಾರುವುದು, ದನ ಕಾಯುವವರ ವಾಸಸ್ಥಾನ ಎಂಬ ಅರ್ಥಗಳಿವೆ. ಆದ್ದರಿಂದ ಅಶ್ವಘೋಷ ಎಂದರೆ ಕುದುರೆಯ ಹೇಷಾರವವಂತೆ, ಉಚ್ಚಸ್ವರವುಳ್ಳವನು. ದೊಡ್ಡ ಧ್ವನಿಯುಳ್ಳವನು ಎಂದು ಅರ್ಥಮಾಡಬಹುದು : ಅವನ ಗಂಭೀರವಾದ ಧ್ವನಿ ಅವನಿಗೆ ಈ ಬಿರುದನ್ನು ತಂದಿರಲೂಬಹುದು.

[illegible] ಕುದುರೆ. ಅಶ್ವಘೋಷ ಬ್ರಾಹ್ಮಣ ವಂಶದಲ್ಲಿ ಹುಟ್ಟಿ ಅನಂತರ ಬೌದ್ಧನಾದವನು. ಬೌದ್ಧಮತಕ್ಕೆ ಪರಿವರ್ತಿತನಾದ ಮೇಲೆ ಗೋವಿನ ಹಟ್ಟಿಯಲ್ಲಿ ವಾಸ ಮಾಡುತ್ತಿದ್ದು ಆ ಹೆಸರು ಅವನಿಗೆ ಅಂಟಿಕೊಂಡಿರಲೂ ಸಾಧ್ಯ. ಅಥವಾ ಅವನು ಬೌದ್ಧನಾದಾಗ ತನ್ನ ಪೂರ್ವಧರ್ಮದ ಹೆಸರನ್ನು ಬಿಟ್ಟಿರಬಹುದು; ಮತ್ತು [illegible] ಬೌದ್ಧ ಧರ್ಮೋಪದೇಶ ಮಾಡಲಾರಂಭಿಸಿ, ಆ ಪ್ರವೃತ್ತಿಸೂಚಕವಾಗಿ ತಾನೇ ಈ ಹೆಸರನ್ನು ಇಟ್ಟುಕೊಂಡಿರಲೂ ಬಹುದು. ಈ ಊಹೆ ಸರಿಯಾದರೆ ಅಶ್ವಘೋಷ ಎಂಬುದು ಅವನ ಅಂಕಿತನಾಮವೇ ಆಗುತ್ತದೆ.

ಅಶ್ವಘೋಷ ಸುಮಾರು ಕ್ರಿ. ಶ. 78ರಲ್ಲಿ ಇದ್ದನೆನ್ನಬಹುದು. ಪುರುಷಪುರದಲ್ಲಿ (ಈಗ ಪಾಕಿಸ್ತಾನದಲ್ಲಿರುವ ಪೇಷಾವರ್) ಆಳುತ್ತಿದ್ದ ಕುಶಾನ ವಂಶದ ಅರಸು ಕನಿಷ್ಕನಿಗೆ ಇವನು ಗುರುವಾಗಿದ್ದನೆಂದು ಒಂದು ಹೇಳಿಕೆ ಇದೆ. ಇವನು ಮಹಾಯಾನ ಪಂಥವನ್ನನುಸರಿಸುತ್ತಿದ್ದ ಬೌದ್ಧ. ಇವನ ತಾಯಿಯ ಹೆಸರು ಸುವರ್ಣಾಕ್ಷಿ. ಇವನ ಊರು ಸಾಕೇತ.

ಅಶ್ವಘೋಷನು ಪ್ರಭಾವಶಾಲಿಯಾದ ಕವಿ, ದಾರ್ಶನಿಕ ಎಂಬುದು ತುಂಬ ಹಿಂದಿನಿಂದ ಗೊತ್ತಾಗಿತ್ತಾದರೂ ಅವನು ನಾಟಕಗಳನ್ನು ಬರೆದಿದ್ದನೆಂಬುದು ತಿಳಿದುಬಂದದ್ದು ಮಧ್ಯ ಏಷ್ಯದ ಟುರ್ಫಾನ್ ಎಂಬಲ್ಲಿ 1911ರಲ್ಲಿ ದೊರೆತ 'ಶಾರದ್ವತೀ ಪುತ್ರ ಪ್ರಕರಣಮ್'—ನಾಟಕದ ತುಣುಕುಗಳಿಂದ. ಈ ಶೋಧನೆಯಿಂದಾಗಿ ಇವನು ನಮಗೆ ಈಗ ತಿಳಿದಿರುವ ಮಟ್ಟಿಗೆ—ಸಂಸ್ಕೃತದ ಮೊದಲನೆಯ ನಾಟಕಕಾರನಾಗುತ್ತಾನೆ. ಮೊದಲನೆಯವನಲ್ಲನಿದ್ದರೂ ತೀರ ಪ್ರಾಚೀನ ನಾಟಕಕಾರನಾಗುತ್ತಾನೆ. ಇವನಿಗಿಂತ ಭಾಸಕವಿ ಮುಂಚಿನವನೆಂದು ಅನೇಕರು ಹೇಳುತ್ತಾರೆ. ನಮಗೆ ದೊರೆತಿರುವ ನಾಟಕ ಖಂಡಗಳಿಂದ ಅಶ್ವಘೋಷ ಇನ್ನು ಕೆಲವು ನಾಟಕಗಳನ್ನೂ ಬರೆದಿದ್ದನೆಂದು ಊಹಿಸಬಹುದಾಗಿದೆ.

ಕೆಲವು ನಾಟಕಗಳನ್ನಲ್ಲದೆ ಸುಮಾರು ಏಳೆಂಟು ಗ್ರಂಥಗಳನ್ನೂ ಅಶ್ವಘೋಷ ಬರೆದಿರಬೇಕೆಂದು ತೋರುತ್ತದೆ. 'ಬುದ್ಧಚರಿತ' ಮತ್ತು 'ಸೌಂದರನಂದ' ಎರಡು ಕಾವ್ಯಗಳು. ಉಳಿದವು ಬೌದ್ಧ ಧರ್ಮ ಗ್ರಂಥಗಳು. ಅಶ್ವಘೋಷನದೆಂದು ಹೇಳುವ ಕೆಲವು ಸ್ತೋತ್ರಗಳೂ ನಮಗೆ ದೊರೆತಿವೆ.

ಬುದ್ಧನ ಜೀವನ ಮತ್ತು ಉಪದೇಶಗಳನ್ನು ರಮಣೀಯವಾಗಿ ನಿರೂಪಿಸುವ ಕಾವ್ಯ—'ಬುದ್ಧಚರಿತ'. ಈ ಗ್ರಂಥ 420ರಲ್ಲಿ ಚೀನೀಭಾಷೆಗೂ 8ನೆಯ ಶತಮಾನದಲ್ಲಿ ಟಿಬೆಟನ್ ಭಾಷೆಗೂ ಭಾಷಾಂತರವಾಯಿತು. ಈ ಕಾವ್ಯದ 3ನೆಯ ಸರ್ಗದ ಕೆಲವು ವರ್ಣನೆಯ ಶ್ಲೋಕಗಳಲ್ಲಿಯ ಕಲ್ಪನೆಯಲ್ಲದೆ ಪದಗಳು ಕೂಡ ಕಾಳಿದಾಸನ ರಘುವಂಶ ಕಾವ್ಯದ (ಸರ್ಗ 7) ಒಂದು ಸಂದರ್ಭದ ವರ್ಣನೆಯಲ್ಲಿ ಬರುತ್ತದೆ. ಕಾಳಿದಾಸನ ಮೇಲೆ ಅಶ್ವಘೋಷನ ಪ್ರಭಾವ ಬಿದ್ದಿದೆ ಎಂದು ಅನೇಕ ವಿದ್ವಾಂಸರು ಹೇಳುತ್ತಾರೆ.

'ಸೌಂದರನಂದ' 18 ಸರ್ಗಗಳ ಕಾವ್ಯ. ಬೌದ್ಧ ಗ್ರಂಥಗಳಲ್ಲಿ ಬರುವ ಬುದ್ಧನ ಬಲತಮ್ಮನಾದ ನಂದನ ರಸಿಕಜೀವನ ಮತ್ತು ಅವನು ಕೊನೆಯಲ್ಲಿ ಬೌದ್ಧಧರ್ಮವನ್ನು ಸ್ವೀಕರಿಸಿದ್ದು ಇದರ ಕಥಾವಸ್ತು. ಕಥಾನಾಯಕ ನಂದ; ನಾಯಕಿ ಸುಂದರಿ. ಸುಂದರಿಯ ಸೌಂದರ್ಯರಾಶಿಯಿಂದ ಮೋಹಿತನಾದ ನಂದ ಉಳಿದೆಲ್ಲವನ್ನೂ ಮರೆತಿದ್ದ. ತನ್ನ ತಮ್ಮನನ್ನೇ ತನ್ನ ಧರ್ಮಕ್ಕೆ ಒಲಿಸಿಕೊಳ್ಳದಿದ್ದರೆ, ತನ್ನ ಧರ್ಮದ ಬಗೆಗೆ ವಿಶ್ವಾಸ ತೃಪ್ತಿ ಹುಟ್ಟುವುದಾದರೂ ಹೇಗೆ—ಎಂದು ಯೋಚಿಸಿ ಬುದ್ಧ ನಂದನಿಗೆ ಸನ್ಯಾಸ ದೀಕ್ಷೆಕೊಡಲು ಯತ್ನಿಸಿ ಯಶಸ್ವಿಯಾಗುತ್ತಾನೆ—ಎಂಬುದು ಈ ಕಾವ್ಯದ ವಸ್ತು.

ಕಾವ್ಯ ರಚನೆಯಲ್ಲಿ ಅಶ್ವಘೋಷನ ಉದ್ದೇಶ ಬೌದ್ಧಧರ್ಮ ಪ್ರಸಾರವೇ ಆಗಿತ್ತು. ಆಕರ್ಷಕ ಶೈಲಿ ಆತನದು. ಗಾನಯೋಗ್ಯವಾದ ಮನೋಹರವಾದ ಪದ್ಯಗಳ ವಿನ್ಯಾಸವನ್ನು ಅವನ ಕೃತಿಯಲ್ಲಿ ಕಾಣಬಹುದು. ಅವನು ಸ್ವತಃ ಸಂಗೀತಗಾರನಾಗಿದ್ದು ಸೊಗಸಾಗಿ ಹಾಡುತ್ತಿದ್ದನೆಂಬುದಕ್ಕೆ ಆಧಾರಗಳಿವೆ. ವೇದ, ಶಾಸ್ತ್ರ, ಪುರಾಣ, ಇತಿಹಾಸ, ರಾಮಾಯಣ, ಮಹಾಭಾರತ ಮುಂತಾದ ಪ್ರಾಚೀನ ಮಹಾಕೃತಿಗಳ ಪರಿಚಯ ಅವನಿಗೆ ಚೆನ್ನಾಗಿತ್ತು ಎಂದು ಅವನ ಕೃತಿಗಳಿಂದ ವ್ಯಕ್ತವಾಗುತ್ತದೆ. ಬೌದ್ಧರು ಮಾತ್ರವಲ್ಲದೆ ಇತರ ಧರ್ಮಗಳವರಿಗೂ ಅವನ ಕೃತಿಗಳು ಮೆಚ್ಚುಗೆಯಾಗಿದ್ದುವು.

## ಅಸ್ಸೀರಿಯದ ಕಲೆ, ಸಾಹಿತ್ಯ

ಸುಮಾರು 6000 ವರ್ಷಗಳಿಗೆ ಹಿಂದೆ ಯೂಫ್ರೆಟೀಸ್ ಹಾಗೂ ಟೈಗ್ರಿಸ್ ಎಂಬ ಯಮಳ ನದಿಗಳ ಫಲವತ್ತಾದ ಬಯಲು ಪ್ರದೇಶದಲ್ಲಿ ಬಂದು ನೆಲೆಸಿದ ಜನಾಂಗ ಸುಮೇರಿಯನರು. ಮುಂದೆ ಇಲ್ಲಿ ಬ್ಯಾಬಿಲೋನಿಯ ಹಾಗೂ ಅಸ್ಸೀರಿಯ ನಾಗರಿಕತೆಗಳು ರೂಪುಗೊಂಡುವು. ಬ್ಯಾಬಿಲೋನಿಯ ಮತ್ತು ಅಸ್ಸೀರಿಯ ಪ್ರದೇಶಗಳೆರಡನ್ನೂ ಒಟ್ಟಾಗಿ ಮೆಸಪೊಟೇಮಿಯ ಎಂದು ಕರೆಯುವ ರೂಢಿ ಇತ್ತು. ಈಗ ಈ ಪ್ರದೇಶ ಇರಾಕ್ ರಾಷ್ಟ್ರಕ್ಕೆ ಸೇರಿದೆ.

ಅಸ್ಸೂರ್ ಎಂಬುದು ಟೈಗ್ರಿಸ್ ನದಿಯ ಪಶ್ಚಿಮ ಭಾಗದಲ್ಲಿದ್ದ ನಗರ. ಆ ನಗರವೇ ಕೇಂದ್ರವಾಗಿ ಅಸ್ಸೀರಿಯ ಸಾಮ್ರಾಜ್ಯ ಬೆಳೆಯಿತು. ಕ್ರಿ. ಪೂ. 2500 ವರ್ಷಗಳ ಹಿಂದೆಯೇ ಅಸ್ಸೀರಿಯ ಗಣನೀಯ ಪ್ರದೇಶವಾಗಿತ್ತು. ಆದರೆ ಆಗ ಅದು ಬ್ಯಾಬಿಲೋನಿಯದ ಆಡಳಿತಕ್ಕೆ ಒಳಪಟ್ಟಿತ್ತು. ಅನಂತರ ಕ್ರಿ. ಪೂ. 1400ರ ಹೊತ್ತಿಗೆ ಸ್ವತಂತ್ರವಾಯಿತು.

ಅಸ್ಸೀರಿಯನರು ಮೊದಲಿನಿಂದಲೂ ಅಪ್ರತಿಮ ಹೋರಾಟಗಾರರು. ತಮ್ಮ ಉಳಿವಿಗಾಗಿ ಅವರು ದೀರ್ಘ ಕಾಲ ತಮ್ಮ ಗಡಿ ಪ್ರದೇಶದ ಒರಟು ಜನರೊಡನೆ ಹೋರಾಟ ನಡೆಸಬೇಕಾಯಿತು. ಇದರಿಂದಾಗಿ ಅವರು ಯುದ್ಧವಿದ್ಯೆಯಲ್ಲಿ ನಿಪುಣರಾದರು. ಈ ಯೋಧ ಪ್ರವೃತ್ತಿಯ ಜೊತೆಗೆ ನಾಗರಿಕತೆಯನ್ನೂ ಅವರು ಬೆಳೆಸಿಕೊಂಡಿದ್ದರು. ವಾಸ್ತುಶಿಲ್ಪದಲ್ಲಿ, ನಗರ ನಿರ್ಮಾಣದಲ್ಲಿ ಅವರಿಗೆ ತುಂಬ ಆಸಕ್ತಿ ಇತ್ತು. ಬಹಳ ಆಳವಾಗಿ ಕೊರೆಯದ ಶಿಲ್ಪ ಕೃತಿಗಳು ಇವರ ವೈಶಿಷ್ಟ್ಯ. ಅವರು ದೊಡ್ಡ ದೊಡ್ಡ ಅರಮನೆಗಳನ್ನೂ ನಗರಗಳನ್ನೂ ಕಟ್ಟಿದರು. ನಿಜ ಪ್ರಮಾಣಕ್ಕಿಂತ ದೊಡ್ಡದಾದ ಮೂರ್ತಿಗಳನ್ನು ಅವರು ರಚಿಸಿದ್ದಾರೆ. ರಾಜನಾಗಲಿ, ಪ್ರಜೆಯಾಗಲಿ ಮೂರ್ತಿಯ ಮುಖದಲ್ಲಿ ಹೆಚ್ಚಿನ ವ್ಯತ್ಯಾಸ ಕಾಣದಿದ್ದರೂ ಉಡುಗೆ, ಗಿಡಮರಗಳು, ಪ್ರಾಣಿಗಳ ಚಿತ್ರಣದಲ್ಲಿ ಅವರು ಹೆಚ್ಚಿನ ವಿವರಗಳಿಗೆ ಲಕ್ಷ್ಯಕೊಟ್ಟಿರುವುದು ಕಂಡುಬರುತ್ತದೆ. ಸಾಧಾರಣವಾಗಿ ಯುದ್ಧದ ವಿವಿಧ ನೋಟಗಳೇ ಅಸ್ಸೀರಿಯನರ ಕಲೆಯ ಪ್ರಧಾನ ವಸ್ತುಗಳು. ಉದಾ: ಮುತ್ತಿಗೆ, ಯುದ್ಧ ಕೈದಿಗಳ ಸಾಲು, ಕೊಳ್ಳೆ ಹೊಡೆದ ಪದಾರ್ಥಗಳು, ಯುದ್ಧಾಸ್ತ್ರಗಳು, ಬೇಟೆಯ ದೃಶ್ಯಗಳು ಇಂಥವು. ಈ ಚಿತ್ರಣದಲ್ಲಿ ಬಳಸಿರುವ ಬಣ್ಣಗಳು ಕಪ್ಪು, ಕೆಂಪು ಮತ್ತು ಬಿಳಿ. ಇವು ಇಂದಿಗೂ ಉಳಿದಿವೆ. ಕಟ್ಟಡಗಳ ಛಾವಣಿಯ ಒಳಭಾಗಕ್ಕೆ ಗಾರೆಮೆತ್ತಿ ಅದರಲ್ಲಿ ರೇಖಾಕೃತಿಗಳನ್ನು ಕೂಡ ಅವರು ಬರೆಯುತ್ತಿದ್ದರು.

ಅರಮನೆ. ಸ್ವತಂತ್ರ ವಿಗ್ರಹಗಳು ಹಾಗೂ ಚತುಷ್ಕೋಣ ಕಂಬಗಳ ರಚನೆಯಲ್ಲಿ ಅವರು ಕಲ್ಲನ್ನು ಉಪಯೋಗಿಸುತ್ತಿದ್ದರು. ಕಂಚಿನ ಮಹಾ ದ್ವಾರದ ಮೇಲೆ ಅವನ ವಿಜಯಗಳ ನಿರೂಪಣೆಯಿದೆ. ಕಂಚಿನ ಉಪಯೋಗವೂ ಅವರಿಗೆ ಗೊತ್ತಿತ್ತು. ಮೂರನೆಯ ಶಾಲ್ಮಾನೀಸರ್ (ಕ್ರಿ. ಪೂ. 859) ಕಾಲದಲ್ಲಿ ನಿರ್ಮಿತವಾದ ಮನೋಹರ ಧಾರಕಗಳು, ದಂತದ ನಾಜೂಕು ಕೆಲಸ ಮಾಡಿದ ಪೀಠೋಪಕರಣಗಳು, ಚಿಕ್ಕ ಪ್ರಶಸ್ತಿ ಶಿಲೆಗಳ ಮೇಲೆ ದೃಶ್ಯ ಚಿತ್ರಣ, ಶ್ರೇಷ್ಠ ದರ್ಜೆಯ ಮಡಿಕೆ ಸಾಮಾನುಗಳು. ಕುಶಲ ಕೆಲಸದ ಆಭರಣಗಳು ಹಾಗೂ ಮುದ್ರಿಕೆಗಳು ಈ ನಾಗರಿಕತೆಯಲ್ಲಿ ಕಂಡುಬರುವ ಇತರ ಕಲಾವಸ್ತುಗಳು. ಅಷುರ್–ಬನಿ–ಪಾಲ್ (ಕ್ರಿ. ಪೂ. 669–626) ಹಾಗೂ ಸೆನಾಕರಿಬ್ (ಕ್ರಿ. ಪೂ. 705–681) ರಾಜರ ಆಶ್ರಯದಲ್ಲಿ ಶ್ರೇಷ್ಠ ಕಲಾಕೃತಿಗಳು ನಿರ್ಮಿಸಲ್ಪಟ್ಟುವು. ಅಷುರ್–ಬನಿ–ಪಾಲ್‌ನ ಅರಮನೆಯಲ್ಲಿ ಸಿಂಹದ ಬೇಟೆಯ ದೃಶ್ಯಗಳ ಮಾಲಿಕೆ ಉಬ್ಬು ಚಿತ್ರದಲ್ಲಿ ಮೂಡಿಸಲ್ಪಟ್ಟಿದೆ. ಈ ತನಕ ದೊರೆತಿರುವ ಅಸ್ಸೀರಿಯದ ಶಿಲ್ಪಗಳಲ್ಲಿ ಇದು ಅತ್ಯುತ್ತಮವಾದದ್ದು. ಆತನ ಕಾಲದಲ್ಲಿ ಅಸ್ಸೀರಿಯದ ಕಲೆ ಪರಾಕಾಷ್ಠೆ ತಲಪಿತು. ಯುದ್ಧವಲ್ಲದೆ ಬೇರೆ ವಿಷಯಗಳೂ ಕಲೆಗೆ ವಸ್ತುಗಳಾದುವು.

ಅಸ್ಸೀರಿಯದಲ್ಲಿ ಯುದ್ಧ ಸಾಧನಗಳಿಗೆ ಪ್ರಾಧಾನ್ಯ. ಹೀಗಾಗಿ ಅವರು ಸ್ವತಂತ್ರ ಸಾಹಿತ್ಯ ರಚನೆ ಮಾಡಲಿಲ್ಲ; ಬ್ಯಾಬಿಲೋನಿಯದವರ ಸಾಹಿತ್ಯವನ್ನು ಅನುಕರಿಸಿದರು. ಈಗ ದೊರೆತಿರುವ ಅಸ್ಸೀರಿಯದ ಸಾಹಿತ್ಯ ಹೀಗೆ ಅನುಕರಿಸಿದ್ದು ಅಥವಾ ಅಳವಡಿಸಿಕೊಂಡದ್ದು. ಅಸ್ಸೀರಿಯದವರು ಕಲ್ಲು, ಜೇಡಿಫಲಕ, ಸ್ತಂಭಾಕೃತಿಗಳ ಮೇಲೆ ಕೊರೆದಿರುವ ಬರಹಗಳು ದೊರೆತಿವೆ. ನಿನೆವೆಯ ಅರಮನೆಯಲ್ಲಿ ಜೇಡಿಫಲಕ ಲೇಖನಗಳ ದೊಡ್ಡ ಭಂಡಾರ ಇದ್ದಿತು. ಅಷುರ್–ಬನಿ–ಪಾಲ್ ಸ್ವಯಂ ವಿದ್ವಾಂಸನಾಗಿದ್ದ. ಈತ ದೇಶದ ದೇವಾಲಯಗಳ ಗ್ರಂಥ ಭಂಡಾರಗಳಲ್ಲಿದ್ದ ಸಾಹಿತ್ಯಗಳ ನಕಲು ತಯಾರಿಸಿ ಸಂಗ್ರಹಿಸಿದ. ಇವುಗಳಿಂದ ಅಸ್ಸೀರಿಯ ಜೀವನದ ಸಮಗ್ರ ಚಿತ್ರ ನಮಗೆ ದೊರೆಯುತ್ತದೆ. ವೈದ್ಯ, ಗಣಿತ, ಜ್ಯೋತಿಷ್ಯ, ನ್ಯಾಯ, ಖಗೋಲಶಾಸ್ತ್ರಗಳಿಗೆ ಸಂಬಂಧಪಟ್ಟ ಬರಹಗಳನ್ನು ಇಲ್ಲಿ ಕಾಣಬಹುದು. 'ಸೃಷ್ಟಿ' ಯನ್ನು ಕುರಿತ ಒಂದು ಮಹಾಕಾವ್ಯ ಈ ಸಂಗ್ರಹದಲ್ಲಿ ದೊರೆತಿದೆ.

ಯುದ್ಧ ರಾಜ್ಯಾಡಳಿತಗಳ ಪ್ರೌಢಿಮೆ ಯಷ್ಟೇ ಅಲ್ಲದೆ ಕಲಾಕೃತಿ ರಚನೆಯಲ್ಲಿ ಅಸ್ಸೀರಿಯದವರು ತೋರಿರುವ ಪರಿಶ್ರಮ, ಸಾಹಿತ್ಯ ವಿಷಯಗಳನ್ನು ಸುಭದ್ರವಾಗಿ ಸಂಗ್ರಹಿಸಿರುವ ರೀತಿ ಈ ನಾಗರಿಕತೆಯ ಉತ್ಕೃಷ್ಟತೆಯನ್ನು ಸಾರುತ್ತವೆ.

ಅಸ್ಸೀರಿಯದ ರಾಜಧಾನಿ ನಿನೆವೆಯನ್ನು ಬ್ಯಾಬಿಲೋನಿಯದವರು ಕ್ರಿ.ಪೂ. 612ರಲ್ಲಿ ವಶಪಡಿಸಿಕೊಂಡಾಗ ಅಸ್ಸೀರಿಯದ ಪತನವಾಯಿತು. ಆದರೆ ಬ್ಯಾಬಿಲೋನಿಯದವರು ಈ ಕಲೆಯ ಮಾದರಿಯನ್ನೇ ಅನುಸರಿಸಿದರು. ಮುಂದೆ ಇವರ ಮೂಲಕ ಅಸ್ಸೀರಿಯದ ಕಲೆ ಗ್ರೀಸಿಗೆ ಹರಿಯಿತು.

ನೋಡಿ : ಬ್ಯಾಬಿಲೋನಿಯದ ಕಲೆ

## ಆಂಗ್ಲ ಸಾಹಿತ್ಯ

ವಿಶ್ವಸಾಹಿತ್ಯಕ್ಕೆ ಆಂಗ್ಲರ ಕಾಣಿಕೆ ಅಪೂರ್ವವಾದದ್ದು. ಆಂಗ್ಲ ಸಾಹಿತ್ಯ ಸ್ವತಃ ಹಲವು ಪ್ರಭಾವಗಳಿಗೆ ಒಳಗಾಗಿ ಬೆಳೆದರೂ, ವಿಶ್ವದ ಅನೇಕ ಭಾಷೆಗಳ ಸಾಹಿತ್ಯದ ಮೇಲೆ ಅದು ತನ್ನ ಪ್ರಭಾವ ಬೀರಿದೆ.

ಕನ್ನಡವನ್ನೂ ಒಳಗೊಂಡು ಭಾರತದ ಎಲ್ಲ ಪ್ರಮುಖ ಭಾಷೆಗಳ ಸಾಹಿತ್ಯದ ಮೇಲೂ ಆಗಿರುವ ಆಂಗ್ಲ ಸಾಹಿತ್ಯದ ಪ್ರಭಾವ ಸ್ವಲ್ಪವಲ್ಲ.

ಆಂಗ್ಲ ಸಾಹಿತ್ಯ ಎಂದರೆ ಇಂಗ್ಲಿಷ್ ಭಾಷೆಯಲ್ಲಿ ಬ್ರಿಟಿಷರು ರಚಿಸಿರುವ ಸಾಹಿತ್ಯ. ಆಂಗ್ಲ ಸಾಹಿತ್ಯ ಅಭ್ಯಾಸವನ್ನು ಸಾಮಾನ್ಯವಾಗಿ 'ಬೀಓವುಲ್ಫ್' ಮಹಾಕಾವ್ಯದಿಂದ ಆರಂಭಿಸುವುದುಂಟು. ಇದರ ಲಿಖಿತ ಪ್ರತಿ 10ನೆಯ ಶತಮಾನದ್ದು. ಕಥೆ 6ನೆಯ ಶತಮಾನದಿಂದ ಬಂದದ್ದು. ಇದಕ್ಕಿಂತ ಹಳೆಯ ಕೆಲವು ಪದ್ಯಗಳಿದ್ದರೂ ಅವುಗಳನ್ನು ರಚಿಸಿದವರು ಯಾರೆಂಬುದು ತಿಳಿದಿಲ್ಲ.

'ಆಂಗ್ಲೊ–ಸ್ಯಾಕ್ಸನ್ ಚರಿತ್ರೆ' ಎಂಬ ಗ್ರಂಥ ಈ ಕಾಲದ ಗದ್ಯ ಸಾಹಿತ್ಯದ ಮುಖ್ಯ ಕೃತಿ. ಆಂಗ್ಲೊ ಸ್ಯಾಕ್ಸನರ ಆಳ್ವಿಕೆಯ ಈ ಚರಿತ್ರೆಯನ್ನು ಬರೆದವರು ಆಗಿನ ಕ್ರೈಸ್ತ ಸನ್ಯಾಸಿಗಳು.

ಸುಮಾರು 500ರಿಂದ 1150ರ ವರೆಗಿನ ಸಾಹಿತ್ಯವನ್ನು ಪ್ರಾಚೀನ ಆಂಗ್ಲ ಸಾಹಿತ್ಯ ಎನ್ನಬಹುದು. ಈ ಸಾಹಿತ್ಯದ ಭಾಷೆ ಈಗಿನ ಇಂಗ್ಲಿಷಿಗಿಂತ ತೀರ ಭಿನ್ನವಾದದ್ದು. ಅದರ ವಿಶೇಷ ಅಭ್ಯಾಸವಿಲ್ಲದೆ ಅದನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ.



ಗಲಿವರ್ :
ಆಂಗ್ಲಸಾಹಿತ್ಯದ ಕೊಡುಗೆ

1100ರಿಂದ 1500ರ ಅವಧಿಯ ಸಾಹಿತ್ಯವನ್ನು ಮಧ್ಯಕಾಲೀನ ಆಂಗ್ಲ ಸಾಹಿತ್ಯ ಎನ್ನುತ್ತಾರೆ. ಈ ಅವಧಿಯಲ್ಲಿ ಮೊದ ಮೊದಲು ಲ್ಯಾಟಿನ್, ಫ್ರೆಂಚ್ ಮತ್ತು ಇಂಗ್ಲಿಷ್ ಈ ಮೂರು ಭಾಷೆಗಳು ಬಳಕೆಯಲ್ಲಿದ್ದುವು. ಲ್ಯಾಟಿನ್ ವಿದ್ವಾಂಸರ ಭಾಷೆಯಾಗಿತ್ತು.

ಸಾಮಾನ್ಯರ ಭಾಷೆಯಾಗಿದ್ದ ಇಂಗ್ಲಿಷ್ ಮುಂದೆ ಪ್ರಾಧಾನ್ಯ ಪಡೆಯಿತು. ಮಧ್ಯಕಾಲೀನ ಆಂಗ್ಲ ಸಾಹಿತ್ಯದ ಆರಂಭಕಾಲದ ಕೆಲವು ಸಾಹಸಮಯ ಕಥೆ, ಕವನಗಳು ದೊರಕಿದ್ದರೂ ಅವುಗಳ ಕರ್ತೃಗಳು ಯಾರೆಂದು ತಿಳಿಯದು. ಇಂಗ್ಲಿಷನ್ನು ಸಾಮಾನ್ಯಜನರು ವಿದ್ವಾಂಸರು ಇಬ್ಬರೂ ಬಳಸತೊಡಗಿದಾಗ ಭಾಷೆ ಹೊಸ ಸ್ವರೂಪ ಪಡೆಯಿತು. ಆ ರೂಪ ಈಗಿನ ಇಂಗ್ಲಿಷಿಗೆ ಹತ್ತಿರವಾದದ್ದು.

ಆ ಕಾಲದ ಕೃತಿಗಳಲ್ಲಿ ಜಾನ್ ವಿಕ್ಲಿಫ್‌ನ ಶಿಷ್ಯರು ಬರೆದ 'ವಿಕ್ಲಿಫ್ ಬೈಬಲ್' ಪ್ರಮುಖವಾದದ್ದು. ವಿಲಿಯಂ ಲ್ಯಾಂಗ್ಲೆಂಡ್ ಎಂಬವನು ಬರೆದ 'ದಿ ವಿಷನ್ ಆಫ್ ಪಯರ್ಸ್ ಪ್ಲೋಮನ್' ಸರಕಾರದ ಹಾಗೂ ಕ್ರೈಸ್ತಮತದ ಒಳಹುಳುಕನ್ನು ಕಟುವಾಗಿ ಟೀಕಿಸುವ ಕೃತಿ.

ಈ ಯುಗದ ಅತಿ ಪ್ರಮುಖ ಕವಿ ಚಾಸರ್. ಇವನ 'ಕ್ಯಾಂಟರ್‌ಬರಿ ಕಥೆಗಳು' ಮತ್ತು 'ಟ್ರಾಯ್ಲಸ್ ಮತ್ತು ಕ್ರೆಸಿಡ' ಪ್ರಮುಖ ಕೃತಿಗಳು.

15ನೆಯ ಶತಮಾನದ ಹಾಡುಗಬ್ಬಗಳು ಯುದ್ಧ, ಪ್ರೇಮ, ಸಾವು ಮೊದಲಾದವನ್ನು ಕುರಿತವು. ಇವು ಲಿಖಿತರೂಪದಲ್ಲಿ ದೊರೆಯಲಿಲ್ಲ. ಹೀಗಾಗಿ ಕರ್ತೃಗಳು ಯಾರು ಎಂದು ಹೇಳುವಂತಿಲ್ಲ. ಬೈಬಲಿನ ಆಧಾರದ ಮೇಲೆ ರಚಿತವಾದ ನಾಟಕಗಳ ಅಭಿನಯವೂ ಈ ಸಮಯದಲ್ಲಿ ನಡೆಯುತ್ತಿತ್ತು. ಮೊದಲು ಕ್ರೈಸ್ತ ದೇವಾಲಯದಲ್ಲಿ ನಡೆಯುತ್ತಿದ್ದ ಈ ನಾಟಕಗಳು ಕ್ರಮೇಣ ಜನಸಂದಣಿ ಇದ್ದ ಚೌಕಗಳಲ್ಲಿ ಅಭಿನಯಿಸಲ್ಪಟ್ಟುವು.

ಮಾನವನ ಕೆಟ್ಟ ಒಳ್ಳೆಯ ಗುಣಗಳನ್ನು ವ್ಯಕ್ತಿರೂಪದಲ್ಲಿ ಸಂಕೇತಿಸಿದ ನೀತಿರೂಪಕ ನಾಟಕಗಳನ್ನೂ ಆಗ ಆಡುತ್ತಿದ್ದರು.

1476ರಲ್ಲಿ ಮುದ್ರಣ ಯಂತ್ರ ಉಪಯೋಗಕ್ಕೆ ಬಂದಮೇಲೆ ಗ್ರಂಥ ಪ್ರಕಟಣೆ ಸುಲಭವಾಯಿತು ; ಓದುಗರೂ ಹೆಚ್ಚಾದರು. ಸಾಹಿತ್ಯ ಜನಪ್ರಿಯವಾಯಿತು.

ಪುರಾತನ ಗ್ರೀಕ್ – ರೋಮನ್ ಸಾಹಿತ್ಯದ ಬಗೆಗೆ ಸಂಶೋಧನೆ ನಡೆಯಿತು. ಇಟಲಿಯ ಸಾಹಿತ್ಯ ಕಲೆಗಳಲ್ಲಿ ಪ್ರಾರಂಭವಾದ ನವೋದಯ ಕ್ರಾಂತಿ ಇಂಗ್ಲೆಂಡಿಗೂ ಮುಟ್ಟಿತು. 1500ರಿಂದ 1660ರ ವರೆಗಿನ ಇಂಗ್ಲೆಂಡಿನ ಸಾಹಿತ್ಯವನ್ನು ನವೋದಯ ಸಾಹಿತ್ಯ ಎನ್ನುತ್ತಾರೆ.

ಈ ಅವಧಿಯ ಆರಂಭ ಕಾಲದ ಕವಿಗಳಲ್ಲಿ ಪ್ರಮುಖನಾದವನು 'ಫೇರೀ ಕ್ವೀನ್' ಕಾವ್ಯ ರಚಿಸಿದ ಎಡ್ಮಂಡ್ ಸ್ಪೆನ್ಸರ್. ಥಾಮಸ್ ವ್ಯಾಟ್ ಮತ್ತು ಸರ್ರೆ ಅವರು ಸುನೀತ ಪ್ರಕಾರವನ್ನು ಇಂಗ್ಲಿಷ್ ಸಾಹಿತ್ಯದಲ್ಲಿ ಬಳಸಿದರು. ಸ್ಪೆನ್ಸರ್, ಶೇಕ್ಸ್‌ಪಿಯರ್, ಮಿಲ್ಟನ್, ಡನ್, ಜಾರ್ಜ್ ಹರ್ಬರ್ಟ್ ಮೊದಲಾದವರು ಅನೇಕ ಸುನೀತಗಳನ್ನು ಬರೆದರು. ವರ್ಜಿಲನ 'ಈನಿಯಡ್' ಕಾವ್ಯವನ್ನು ಸ್ವಚ್ಛಂದ ರಗಳೆಯಲ್ಲಿ ಸರ್ರೆ ಭಾಷಾಂತರಿಸಿದ. ಈ ಛಂದಸ್ಸು ಶೇಕ್ಸ್‌ಪಿಯರನ ನಾಟಕಗಳಲ್ಲೂ ಮಿಲ್ಟನನ ಕಾವ್ಯಗಳಲ್ಲೂ ಉತ್ತಮ ಮಾಧ್ಯಮವಾಯಿತು.

ಕ್ರಿಸ್ಟಫರ್ ಮಾರ್ಲೊ, ಬೆನ್ ಜಾನ್‌ಸನ್ ಮತ್ತು ಶೇಕ್ಸ್‌ಪಿಯರ್ ಈ ಕಾಲದ ಪ್ರಮುಖ ನಾಟಕಕಾರರು. 'ಡಾಕ್ಟರ್ ಫಾಸ್ಟಸ್', 'ದ್ವಿತೀಯ ಎಡ್ವರ್ಡ್' ಮೊದಲಾದುವು ಮಾರ್ಲೊನ ಪ್ರಮುಖ ಕೃತಿಗಳು. ಜಾನ್ಸನ್‌ನ 'ವೊಲ್ಪನಿ' ಮತ್ತು 'ಅಲ್ಕೆಮಿಸ್ಟ್' ವಿಡಂಬನಾತ್ಮಕ ಕಾಮೆಡಿಗಳು.

ಶ್ರೇಷ್ಠತಮ ಕವಿ–ನಾಟಕಕಾರನೆನಿಸಿದ ಶೇಕ್ಸ್‌ಪಿಯರ್ 'ಹ್ಯಾಮ್ಲೆಟ್', 'ಒಥೆಲೊ', 'ಮ್ಯಾಕ್‌ಬೆಥ್', 'ಕಿಂಗ್ ಲಿಯರ್' ಗಳಂಥ ಅತ್ಯುತ್ತಮ ಟ್ರಾಜಿಡಿಗಳನ್ನೂ 'ಟ್ವೆಲ್ಫ್ತ್ ನೈಟ್', 'ಆಸ್ ಯು ಲೈಕ್ ಇಟ್', 'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್', 'ಮರ್ಚೆಂಟ್ ಆಫ್ ವೆನಿಸ್' ನಂಥ ಕಾಮಿಡಿಗಳನ್ನೂ ಅನೇಕ ಸುನೀತಗಳನ್ನೂ ಬರೆದಿದ್ದಾನೆ. ವಿಶ್ವಸಾಹಿತ್ಯದ ಅಗ್ರಗಣ್ಯರಲ್ಲಿ ಇವನ ಹೆಸರು ಚಿರಸ್ಥಾಯಿಯಾಗಿ ನಿಲ್ಲುವಂಥದು.

ನವೋದಯ ಕಾಲದ ಗದ್ಯಸಾಹಿತ್ಯದಲ್ಲಿ ಪ್ರಮುಖವಾದದ್ದು ಮೊದಲನೆಯ ಜೇಮ್ಸ್ ದೊರೆಯ ನಿರ್ದೇಶನದಲ್ಲಿ ನಡೆದ ಬೈಬಲ್‌ನ ಭಾಷಾಂತರ.

ಧರ್ಮಶುದ್ಧಿವಾದಿ ಕವಿಗಳಲ್ಲಿ 'ಪಿಲ್ಗ್ರಿಮ್ಸ್ ಪ್ರೋಗ್ರೆಸ್' ಗದ್ಯಕೃತಿಯನ್ನು ಬರೆದ ಜಾನ್ ಬನ್ಯನ್ ಪ್ರಮುಖ. ದೇವಲೋಕವನ್ನು ಮುಟ್ಟಲು ಮಾನವ ಒಳ್ಳೆಯ ಜೀವನ ನಡೆಸುವಾಗ ಎದುರಿಸಬೇಕಾದ ಸಂಕಷ್ಟಗಳನ್ನು ಕಥೆಯ ಮೂಲಕ ಈ ಕೃತಿ ತಿಳಿಸುತ್ತದೆ.

ಶೇಕ್ಸ್‌ಪಿಯರ್‌ನ ಬಳಿಕ ಇಂಗ್ಲಿಷ್ ಸಾಹಿತ್ಯದಲ್ಲಿ ಅತ್ಯಂತ ಪ್ರಮುಖನಾದ ಕವಿ ಜಾನ್ ಮಿಲ್ಟನ್. 'ಪ್ಯಾರಡೈಸ್ ಲಾಸ್ಟ್' ನಂಥ ಮಹಾಕಾವ್ಯ ಬರೆದ ಇವನು, ಧರ್ಮಶುದ್ಧಿವಾದಿಯಾಗಿದ್ದ ಆಲಿವರ್ ಕ್ರಾಮ್‌ವೆಲ್‌ನನ್ನು ಬೆಂಬಲಿಸಿ ಅನೇಕ ಲೇಖನಗಳನ್ನು ಬರೆದ. 1660ರಲ್ಲಿ ಧರ್ಮಶುದ್ಧಿವಾದಿಗಳ ಆಳ್ವಿಕೆಯ ಅನಂತರ ಎರಡನೆಯ ಚಾರ್ಲ್ಸ್ ದೊರೆಯಾದ. ರಾಜಕೀಯದ ಈ ಪುನಸ್ಥಾಪನೆಯನ್ನು ಅನುಕರಿಸಿ 1660 ರಿಂದ ಆ ಶತಮಾನದ ಕೊನೆಯವರೆಗಿನ ಸಾಹಿತ್ಯವನ್ನು ಪುನಸ್ಥಾಪನೆ ಕಾಲದ ಸಾಹಿತ್ಯ ಎನ್ನುತ್ತಾರೆ.

ಡ್ರೈಡನ್ ಈ ಪುನಸ್ಥಾಪನಾ ಅವಧಿಯ ಪ್ರಮುಖ ಕವಿ, ನಾಟಕಕಾರ ಹಾಗೂ ವಿಮರ್ಶಕ. ಸಮಕಾಲೀನ ವ್ಯಕ್ತಿಗಳ ಬಗೆಗೆ ಇವನು ವಿಡಂಬನಾತ್ಮಕ ಕವನಗಳನ್ನು ಬರೆದ. ನಾಟಕಗಳಿಗೆ ಇವನು ಬರೆದ ಮುನ್ನುಡಿಗಳು ನಾಟಕ ಪ್ರಯೋಗದ ಹಾಗೂ ನಾಟಕಕಾರರ ಸಮಸ್ಯೆಗಳನ್ನು ವಿಶ್ಲೇಷಿಸುತ್ತವೆ. ಇವನ 'ಎಸ್ಸೆ ಆನ್ ಡ್ರಮಾಟಿಕ್ ಪೊಯಸಿ' ಎಂಬ ಗ್ರಂಥ ವಿಮರ್ಶೆಯ ಮಹತ್ವದ ಸಾಧನೆಯಾಗಿದೆ.

18ನೆಯ ಶತಮಾನವನ್ನು ನವ-ಅಭಿಜಾತ ಸಾಹಿತ್ಯ ಕಾಲ ಎನ್ನುತ್ತಾರೆ. ಈ ಕಾಲದ ಲೇಖಕರು, ಡ್ರೈಡನ್‌ನಂತೆ ಕಾವ್ಯದಲ್ಲಿ ಚಿಂತನೆಯ ಅಂಶಕ್ಕೆ ಹೆಚ್ಚು ಪ್ರಾಧಾನ್ಯಕೊಟ್ಟರು. ರೋಮಿನ ಅಗಸ್ಟಸ್ ಚಕ್ರವರ್ತಿಯ ಕಾಲದ ಲೇಖಕರು ಇವರ ಆದರ್ಶ. ಎಂದೇ ಈ ಶತಮಾನವನ್ನು ಸಾಹಿತ್ಯದಲ್ಲಿ ಅಗಸ್ಟಸ್‌ನ ಕಾಲ ಎಂದೆನ್ನುವುದೂ ಉಂಟು. ವಿಡಂಬನೆ ಈ ಕಾಲದ ಪ್ರಮುಖ ಸಾಹಿತ್ಯ ಪ್ರಕಾರ. ಜೊನಾಥನ್ ಸ್ವಿಫ್ಟ್‌ನ 'ಗಲಿವರನ ಪ್ರವಾಸಗಳು', ಸಾಹಿತ್ಯ ಸಮಾಜವನ್ನು ಎಷ್ಟು ಕಟುವಾದ ವಿಡಂಬನೆಗೆ ಗುರಿ ಮಾಡಬಹುದು ಎಂಬುದಕ್ಕೆ ಸಾಕ್ಷಿ. ಅಲೆಗ್ಸಾಂಡರ್ ಪೋಪನ 'ರೇಪ್ ಆಫ್ ದಿ ಲಾಕ್', 'ದ ಡನ್‌ಸಿಯಡ್' ಈ ಕಾಲದ ಕಾವ್ಯಗಳಲ್ಲಿ ಪ್ರಮುಖವಾದುವು. ಈ ಶತಮಾನದ ಕಾವ್ಯಮೀಮಾಂಸೆ ಹಾಗೂ ಮಾನವನ ಕಲ್ಪನೆಗಳನ್ನು ಪೋಪನ 'ವಿಮರ್ಶೆಯನ್ನು ಕುರಿತ ಪ್ರಬಂಧ' ಹಾಗೂ 'ಮಾನವನ ಬಗೆಗೆ ಪ್ರಬಂಧ' ಎಂಬ ಕಾವ್ಯದಲ್ಲಿ ಕಾಣಬಹುದು.



ಬಾಸ್‌ವೆಲ್, ಜಾನ್ಸನ್

ಕವಿಗಳಾದ ವಿಲಿಯಂ ಕಾಲಿನ್ಸ್, ಥಾಮಸ್ ಗ್ರೇ, ವಿಲಿಯಂ ಕೂಪರ್, ರಾಬರ್ಟ್ ಬರ್ನ್ಸ್ ಪ್ರಕೃತಿ ಹಾಗೂ ವ್ಯಕ್ತಿ ಇವೆರಡರ ಬಗೆಗೂ ಹೆಚ್ಚು ಹೆಚ್ಚು ಆಸಕ್ತಿ ತೋರಿದರು.

18ನೆಯ ಶತಮಾನದ ಗದ್ಯ ಸಾಹಿತ್ಯದಲ್ಲಿ ಪ್ರಮುಖ ಬದಲಾವಣೆಗಳಾದುವು. ಡೇನಿಯಲ್ ಡೆಫೋ 'ಮೋಲ್ ಫ್ಲ್ಯಾಂಡರ್ಸ್' ಮತ್ತು 'ರಾಬಿನ್‌ಸನ್ ಕ್ರೂಸೋ'ಗಳ ಮೂಲಕ ಆಂಗ್ಲ ಕಾದಂಬರಿಯ ಬೆಳವಣಿಗೆಗೆ ತಳಹದಿ ಹಾಕಿದ. ಸ್ಯಾಮುಯಲ್ ರಿಚರ್ಡ್‌ಸನನ 'ಪಾಮೆಲ' ಕಾದಂಬರಿಯನ್ನು ಅಣಕಿಸಿ ಬರೆಯಲೆಂದು ಹೊರಟ ಹೆನ್ರಿ ಫೀಲ್ಡಿಂಗನ 'ಜೋಸೆಫ್ ಆಂಡ್ರೂಸ್' ಶ್ರೇಷ್ಠ ಕಾದಂಬರಿಯೇ ಆಗಿಬಿಟ್ಟಿತು. 'ಟಾಮ್ ಜೋನ್ಸ್' ಫೀಲ್ಡಿಂಗನ ಮತ್ತು ಇಂಗ್ಲಿಷ್ ಕಾದಂಬರಿ ರಂಗದ ಅತಿ ಪ್ರಮುಖ ಕೃತಿ. ಟೋಬಿಯಾಸ್ ಸ್ಮಾಲೆಟ್ ಮತ್ತು ಲಾರೆನ್ಸ್ ಸ್ಟರ್ನ್ ಈ ಕಾಲದ ಮುಖ್ಯ ಕಾದಂಬರಿಕಾರರ ಸಾಲಿಗೆ ಸೇರಿದವರು. ಗೋಲ್ಡ್‌ಸ್ಮಿತ್ ಮತ್ತು ಶೆರಿಡನ್ ಜನಪ್ರಿಯ ಕಾಮೆಡಿಗಳನ್ನು ಬರೆದರು. ಗೋಲ್ಡ್‌ಸ್ಮಿತ್ ಪ್ರಮುಖ ಗದ್ಯ ಲೇಖಕನೂ ಆಗಿದ್ದ.

ಶ್ರೇಷ್ಠ ವಿದ್ವಾಂಸನಾದ ಸ್ಯಾಮುಯಲ್ ಜಾನ್ಸನ್ ಈ ಕಾಲಾವಧಿಯ ಅತ್ಯಂತ ಪ್ರಭಾವಶಾಲಿ ಲೇಖಕ. ಇವನ ಬಗೆಗೆ ಬಾಸ್‌ವೆಲ್ ಬರೆದ ಜೀವನ ಚರಿತ್ರೆ ವಿಶ್ವದ ಅತ್ಯುತ್ತಮ ಜೀವನ ಚರಿತ್ರೆಗಳಲ್ಲೊಂದು.

ಈ ಶತಮಾನದ ಕೊನೆಯ ಭಾಗದಲ್ಲಿ ಬದುಕಿದ ವಿಲಿಯಂ ಬ್ಲೇಕ್ ಶ್ರೇಷ್ಠ ಅನುಭಾವಿ ಕವಿಯಾಗಿದ್ದ. ಹೊಸ ಕಾವ್ಯ ಸಂಪ್ರದಾಯ ನಿರ್ಮಾಣವಾಗಲು ಬ್ಲೇಕ್ ಬಹುಮಟ್ಟಿಗೆ ಕಾರಣನಾದ.

ವ್ಯಕ್ತಿಯ ವೈಯಕ್ತಿಕ ಭಾವನೆ ಹಾಗೂ ಪ್ರಕೃತಿಯ ಸೌಂದರ್ಯಗಳ ಬಗೆಗೆ ಹೆಚ್ಚುತ್ತಿದ್ದ ಆಸಕ್ತಿ 1798ರ ವೇಳೆಗೆ ಹೊಸ ಸಾಹಿತ್ಯ ಯುಗವನ್ನೇ ಪ್ರಾರಂಭಿಸಿತು. 1798ರಲ್ಲಿ ಪ್ರಕಟವಾದ ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಜ್ ಅವರ 'ಲಿರಿಕಲ್ ಬ್ಯಾಲಡ್'ಗಳು ಇಂಗ್ಲಿಷ್ ಸಾಹಿತ್ಯದಲ್ಲಿ ರೊಮ್ಯಾಂಟಿಕ್ ಕಾವ್ಯ ಪರಂಪರೆಗೆ ನಾಂದಿ ಹಾಡಿದುವು. ಈ ಸಂಕಲನದ ಮುನ್ನುಡಿ ರೊಮ್ಯಾಂಟಿಕ್ ಕವಿಗಳ ಕಾವ್ಯದೃಷ್ಟಿಯನ್ನು ತೋರಿಸುತ್ತದೆ. ಈ ಕಾವ್ಯ ಪರಂಪರೆಯ ಉಳಿದ ಪ್ರಮುಖ ಕವಿಗಳೆಂದರೆ ಷೆಲ್ಲಿ, ಕೀಟ್ಸ್ ಮತ್ತು ಬೈರನ್.

ಚಾರ್ಲ್ಸ್ ಲ್ಯಾಮ್, ಥಾಮಸ್ ಡಿ ಕ್ವಿನ್ಸಿ, ಹ್ಯಾಜ್ಲಿಟ್, ಲೀ ಹಂಟ್ ಮೊದಲಾದ ಅನೇಕರು ನಿಯತಕಾಲಿಕಗಳಿಗೆ ಉತ್ತಮ ಲಲಿತ ಪ್ರಬಂಧಗಳನ್ನು ಬರೆದರು. ವಾಲ್ಟರ್ ಸ್ಕಾಟ್ ಮತ್ತು ಜೇನ್ ಆಸ್ಟಿನ್ 19ನೆಯ ಶತಮಾನದ ಮೊದಲನೆಯ ಭಾಗದ ಪ್ರಮುಖ ಕಾದಂಬರಿಕಾರರು. ಅನಂತರ ಚಾರ್ಲ್ಸ್ ಡಿಕನ್ಸ್ ಅತ್ಯಂತ ಪ್ರಮುಖ ಮತ್ತು ಜನಪ್ರಿಯ ಕಾದಂಬರಿಕಾರನಾದ. ಥ್ಯಾಕರೆ, ಚಾರ್ಲಟ್ ಬ್ರಾಂಟೆ ಮತ್ತು ಆಕೆಯ ತಂಗಿ ಎಮಿಲಿ, ಜಾರ್ಜ್ ಎಲಿಯಟ್, ಥಾಮಸ್ ಹಾರ್ಡಿ, ಮೆರಿಡೆತ್, ಸ್ಟೀವನ್‌ಸನ್ 19ನೆಯ ಶತಮಾನದ ಉತ್ತರಾರ್ಧದ ಪ್ರಮುಖ ಲೇಖಕರು.

ಸಾಹಿತ್ಯದ ಮೇಲೆ ಪ್ರಭಾವ ಬೀರಿದ ವಿಜ್ಞಾನ, ತತ್ತ್ವಜ್ಞಾನಗಳಿಗೆ ಸಂಬಂಧಿಸಿಯೂ ಅನೇಕ ಉತ್ತಮ ಕೃತಿಗಳು ಬಂದುವು. ಚಾರ್ಲ್ಸ್ ಡಾರ್ವಿನ್, ಟಿ. ಎಚ್. ಹಕ್ಸ್ಲಿ ಹೊಸ ಸಂಶೋಧನೆಗಳ ಬಗೆಗೆ ಕೃತಿ ರಚಿಸಿದರು. ಜೆ. ಎಸ್. ಮಿಲ್, ಕಾರ್ಲೈಲ್, ಮಾಥ್ಯೂ ಆರ್ನಾಲ್ಡ್ ಈ ಕಾಲದ ಅತ್ಯಂತ ಪ್ರಭಾವಶಾಲೀ ಗದ್ಯ ಲೇಖಕರು. ಟೆನಿಸನ್, ಬ್ರೌನಿಂಗ್ ಮತ್ತು ಆರ್ನಾಲ್ಡ್ 19ನೆಯ ಶತಮಾನದ ಉತ್ತರಾರ್ಧದ ಪ್ರಮುಖ ಕವಿಗಳು.

ಆ ಶತಮಾನದಲ್ಲಿ ನಾಟಕ ಅಷ್ಟು ಪ್ರಮುಖ ವಾಙ್ಮಯವಾಗಲಿಲ್ಲ. ಶತಮಾನದ ಕೊನೆಯಲ್ಲಿ ಆಸ್ಕರ್ ವೈಲ್ಡ್, ಗಾಲ್ಸ್‌ವರ್ದಿ, ಬರ್ನಾರ್ಡ್ ಷಾ ಪ್ರಮುಖ ನಾಟಕಕಾರರಾದರು. ಐರ್ಲೆಂಡಿನ ಸಾಹಿತ್ಯದ ಪುನರುದಯದ ಅನಂತರ ಜಾನ್ ಮಿಲಿಂಗ್ಟನ್ ಸಿಂಜ್ ಮತ್ತು ಡಬ್ಲ್ಯು. ಬಿ. ಯೇಟ್ಸ್ ಉತ್ತಮ ನಾಟಕಕಾರರೆನಿಸಿದರು.

20ನೆಯ ಶತಮಾನದಲ್ಲಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ನೂತನ ಪ್ರಯೋಗಗಳು ನಡೆದುವು. ಯಾಂತ್ರೀಕರಣ ಹಾಗೂ ಮಹಾಯುದ್ಧದ ಫಲವಾಗಿ ಈ ಯುಗದ ಕವಿಗಳ ಜೀವನ ದೃಷ್ಟಿ ಬೇರೆಯಾಯಿತು. ಇವರ ಕಾವ್ಯ ರೊಮ್ಯಾಂಟಿಕ್ ಕಾವ್ಯಕ್ಕೆ ಪ್ರತಿಕ್ರಿಯೆಯಾಯಿತು. ಆಂಗ್ಲ ಕಾವ್ಯದಲ್ಲಿ ಹೊಸ ಪ್ರಯೋಗ ನಡೆಸಿದವರಲ್ಲಿ ಟಿ.ಎಸ್. ಎಲಿಯಟ್ ಪ್ರಮುಖ. ಡಬ್ಲ್ಯು. ಎಚ್. ಆಡೆನ್, ಸೆಸಿಲ್ ಡೇ ಲೂಯಿಸ್, ಸ್ಟೀಫೆನ್ ಸ್ಪೆಂಡರ್, ಲೂಯಿ ಮೆಕ್‌ನೀಸ್, ಡಿಲನ್ ಥಾಮಸ್ ಡೈಲಾನ್ ಮೊದಲಾದವರು ಪ್ರಮುಖ ಕವಿಗಳು. ಜೇಮ್ಸ್ ಜಾಯ್ಸ್ ಕಾದಂಬರಿ ಕ್ಷೇತ್ರದಲ್ಲಿ ಹೊಸ ಪ್ರಯೋಗ ನಡೆಸಿದ. ವರ್ಜೀನಿಯಾ ವುಲ್ಫ್, ಡಿ. ಎಚ್. ಲಾರೆನ್ಸ್, ಆಲ್ಡಸ್ ಹಕ್ಸ್‌ಲಿ ಕಾದಂಬರಿಕಾರರು. ಅಪಾರ ಜನಪ್ರಿಯತೆ ಪಡೆದ ಕಾದಂಬರಿಗಳನ್ನು ರಚಿಸಿದವರು ಸಾಮರ್‌ಸೆಟ್ ಮಾಮ್, ಇ. ಎಂ. ಫಾರ್ಸ್ಟರ್ ಮತ್ತು ಗ್ರಹಾಂ ಗ್ರೀನ್. ಲಿಟನ್ ಸ್ಟ್ರಾಚಿ ಜೀವನ ಚರಿತ್ರೆಗಳಿಗೆ ಹೆಸರಾದವನು. ಟಿ. ಎಸ್. ಎಲಿಯಟ್, ಕ್ರಿಸ್ಟಫರ್ ಫ್ರ್ಯಾಯ್ಡ್, ಕಾವ್ಯ ನಾಟಕದ ಪುನರುದ್ಧಾರ ಮಾಡಿದರು. ಸಾಹಿತ್ಯ ವಿಮರ್ಶೆಯಲ್ಲಿಯೂ ಈ ಶತಮಾನದಲ್ಲಿ ಮಹತ್ವದ ಕೆಲಸ ನಡೆದಿದೆ. ಎಲಿಯಟ್, ರಿಚರ್ಡ್ಸ್, ಲೀವಿಸ್ ಮೊದ



ಆಡೆನ್ : ನೂತನ ದೃಷ್ಟಿ



ಕ್ರುದ್ಧ ಯುವಕ ಆಸ್ಬರ್ನ್    ಕಾದಂಬರಿಕಾರ ಗ್ರಹಾಂ ಗ್ರೀನ್

ಲಾದವರು ಪ್ರಭಾವಶಾಲಿ ಕೃತಿಗಳನ್ನು ರಚಿಸಿದ್ದಾರೆ. ವೆಸ್ಕರ್, ಆಸ್ಬರ್ನ್, ಪಿಂಟರ್ ಮೊದಲಾದವರು ಪ್ರಸಿದ್ಧ ತರುಣ ನಾಟಕಕಾರರು.

ನೋಡಿ : ಅಮೆರಿಕದ ಕಲೆ, ಸಾಹಿತ್ಯ ; ಆಲ್ಡಸ್ ಹಕ್ಸ್ಲಿ ; ಆಸ್ಕರ್ ವೈಲ್ಡ್ ; ಇ.ಎಂ. ಫಾರ್ಸ್ಟರ್; ಎಡ್ವರ್ಡ್ ಲಿಯರ್; ಕಾನನ್ ಡಾಯ್ಲ್; ಕಿಪ್ಲಿಂಗ್ ; ಕೀಟ್ಸ್ ; ಕೋಲ್ರಿಜ್ ; ಗಾಲ್ಸ್‌ವರ್ದಿ ; ಗೋಲ್ಡ್‌ಸ್ಮಿತ್ ; ಚಾರ್ಲ್ಸ್ ಲ್ಯಾಮ್ ; ಚರ್ಚಿಲ್ ; ಚಾಸರ್ ; ಜಾನ್ ಬನ್ಯನ್ ; ಜಾನ್ಸನ್ ; ಜೇನ್ ಆಸ್ಟಿನ್ : ಜೇಮ್ಸ್ ಜಾಯ್ಸ್; ಜೋಸೆಫ್ ಕಾನ್ರಾಡ್ ; ಟಿ. ಎಸ್. ಎಲಿಯಟ್ ; ಟೆನಿಸನ್ ; ಡಿ. ಎಚ್. ಲಾರೆನ್ಸ್; ಡಿಕನ್ಸ್ ; ಡಿಲಾನ್ ಥಾಮಸ್ ; ಡೆಫೊ ; ಪೋಪ್ ; ಫೀಲ್ಡಿಂಗ್ ; ಬರ್ನ್ಸ್; ಬರ್ನಾರ್ಡ್ ಷಾ ; ಬಾಸ್‌ವೆಲ್ ; ಬ್ರಾಂಟೆ ಸಹೋದರಿಯರು ; ಬ್ಲೇಕ್ ; ಬೈರನ್ ; ಬ್ರೌನಿಂಗ್ ದಂಪತಿ ; ಮ್ಯಾಥ್ಯೂ ಆರ್ನಾಲ್ಡ್ ; ಮಿಲ್ಟನ್ ; ಮೇಸ್‌ಫೀಲ್ಡ್ ; ಯೇಟ್ಸ್ ; ರಸ್ಕಿನ್ ; ಲೂಯಿಸ್ ಕ್ಯಾರಲ್ ; ವರ್ಜೀನಿಯಾ ವುಲ್ಫ್ ; ವರ್ಡ್ಸ್‌ವರ್ತ್ ; ಶೇಕ್ಸ್‌ಪಿಯರ್ ; ಷೆಲ್ಲಿ; ಸ್ಕಾಟ್ ; ಸ್ವಿಫ್ಟ್; ಸ್ಟೀವನ್‌ಸನ್ ; ಸೆಸಿಲ್ ಡೇ ಲೂಯಿಸ್; ಹಾರ್ಡಿ

## ಆಂದ್ರೆ ಜೀದ್

ಹೊರಗಿನ ಆರೋಪ, ನಿಂದನೆಗಳನ್ನೂ ಒಳಗಿನ ಘರ್ಷಣೆಯನ್ನೂ ಸಹಿಸಿಕೊಂಡು ತನ್ನ ಕಾಲದ ಅತಿ ಪ್ರಮುಖ ಲೇಖಕ ಎನಿಸಿಕೊಂಡವನು ಆಂದ್ರೆ ಜೀದ್. ಇವನ ಪ್ರಭಾವ ಫ್ರಾನ್ಸ್-ಯೂರೊಪುಗಳನ್ನು ದಾಟಿ ಜಪಾನಿನವರೆಗೂ ಮುಟ್ಟಿತು. ನಿರ್ಭಯ ಪ್ರಾಮಾಣಿಕತೆಯ, ಸಾಂಪ್ರದಾಯಿಕ ಪ್ರಜ್ಞೆಯ ಚಿಂತನಶೀಲ ವ್ಯಕ್ತಿ ಇವನು.

ಪ್ಯಾರಿಸ್ಸಿನಲ್ಲಿ 1869ರ ನವೆಂಬರ್ 22ರಂದು ಜೀದ್ ಜನಿಸಿದ. ಪ್ರಾಟೆಸ್ಟಂಟ್ ತಂದೆ, ಜನ್ಮತಃ ಕ್ಯಾಥೊಲಿಕ್ ಆದರೂ ಪ್ರಾಟೆಸ್ಟಂಟ್ ಆಗಿ ಬೆಳೆದ ತಾಯಿ. ಬಹು ಸಾಂಪ್ರದಾಯಿಕ ಮನೆಯ ಪರಿಸರದಲ್ಲಿ ಜೀದ್ ಬೆಳೆದ. ಆರೋಗ್ಯ ಚೆನ್ನಾಗಿರಲಿಲ್ಲ, ವಿದ್ಯಾಭ್ಯಾಸ ಕುಂಟುತ್ತ ಸಾಗಿತು. ರಜಾದಿನಗಳನ್ನು ತನ್ನ ಚಿಕ್ಕಪ್ಪ ಮೊದಲಾದವರಿದ್ದ ನಾರ್ಮಂಡಿಯಲ್ಲಿ ಕಳೆಯುತ್ತಿದ್ದ. ಇಲ್ಲಿಯ ಸವಿನೆನಪುಗಳು ಅವನ ಅನೇಕ ಕೃತಿಗಳಲ್ಲಿ ಬಂದಿವೆ.

ಇವನು 13 ವರ್ಷದವನಾಗಿದ್ದಾಗ ನಡೆದ ಘಟನೆಯೊಂದು ಇವನ ಜೀವನ ದೃಷ್ಟಿಯನ್ನೇ ಬದಲಿಸಿತು. ಇವನ ಸೋದರ ಸಂಬಂಧಿಯಾಗಿದ್ದ ಒಬ್ಬ ಹುಡುಗಿ ಗುಟ್ಟಾಗಿ ನಡೆಯುತ್ತಿದ್ದ ತನ್ನ ತಾಯಿಯ ದುರ್ನಡತೆಯಿಂದ ನೊಂದು, ಪ್ರಾರ್ಥನೆ ಮಾಡುವಾಗ ಅಳುತ್ತಿದ್ದಳು. ಇದನ್ನು ಕಂಡ ಜೀದ್‌ಗೆ ಜೀವನದ ಅನುಭವಗಳನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ ಧೈರ್ಯದ ಬಗೆಗೆ ಗೌರವವುಂಟಾಯಿತು. ಅವನ ಜೀವನಕ್ಕೆ ಹೊಸ ಅರ್ಥ ಬಂದಿತು. ಆ ಹುಡುಗಿಯನ್ನು ಅವನು ಪ್ರೀತಿಸಿದ. ಮುಂದೆ ಅವಳನ್ನೇ ಮದುವೆಯಾದ.

ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾದ ಜೀದ್ ತನ್ನ ಜೀವನವನ್ನು ಸಾಹಿತ್ಯಕ್ಕಾಗಿಯೇ ಮುಡಿಪಿಟ್ಟ. 1891ರಲ್ಲಿ ತನ್ನ ಹೆಸರು ಹಾಕದೆ ಪ್ರಕಟಿಸಿದ ಮೊದಲ ಕೃತಿ 'ಆಂದ್ರೆ ವಾಲ್ಟರನ ಟಿಪ್ಪಣಿ ಪುಸ್ತಕಗಳು'. ಮುಂದೆ ಇವನ ಪ್ರಮುಖ ಕೃತಿಗಳಲ್ಲಿ ಕಂಡುಬರುವ ಆತ್ಮಪರೀಕ್ಷೆಯ, ಸ್ವಯಂ ತಪ್ಪೊಪ್ಪಿಗೆಯ ಗುಣಗಳನ್ನು ತೋರಿಸುತ್ತದೆ. ಕೊಂಚ ಕಾಲ ಇವನ ಮೇಲೆ ಸಾಂಕೇತಿಕತೆಯ ಪ್ರಭಾವವಿತ್ತು.

1893ರಲ್ಲಿ ಉತ್ತರ ಆಫ್ರಿಕಕ್ಕೆ ಜೀದ್ ಮೊದಲ ಬಾರಿಗೆ ಭೇಟಿ ಇತ್ತ. ಅಲ್ಲಿ ಇವನು ರಚಿಸಿದ 'ಭೂಮಿಯ ಫಲಗಳು' ಎಂಬ ಕೃತಿಯಲ್ಲಿ ಜೀವನದಲ್ಲಿ ಅನುಭವಿಸಬಹುದಾದ ಸುಖಗಳ ಗುಣಗಾನ ಕಂಡುಬರುತ್ತದೆ. ಮತ್ತೊಮ್ಮೆ ಇವನು ಆಫ್ರಿಕಕ್ಕೆ ಬಂದಾಗ ಅಲ್ಲಿ ಭೇಟಿಯಾದ ಆಸ್ಕರ್ ವೈಲ್ಡ್, ಲಾರ್ಡ್ ಆಲ್ಫ್ರೆಡ್ ಡಗ್ಲಸ್ ಇವರ ಪ್ರಭಾವದಿಂದಾಗಿ ನೀತಿ ನಂಬಿಕೆಗಳ ವಿರುದ್ಧ ಬಂಡೆದ್ದ.

1902ರಲ್ಲಿ ಪ್ರಕಟವಾದ ಇವನ 'ದುಶ್ಶೀಲ' ಎಂಬ ಕೃತಿಯಲ್ಲಿ ಇವನ ವೈವಾಹಿಕ ಜೀವನದ ಕೆಲವು ಅನುಭವಗಳು ಚಿತ್ರಿತವಾಗಿವೆ.

1909ರಲ್ಲಿ 'ನ್ಯೂ ಫ್ರೆಂಚ್ ರಿವ್ಯೂ' ಎಂಬ ಸಾಹಿತ್ಯ ನಿಯತಕಾಲಿಕದ ಮಾರ್ಗದರ್ಶಕನಾದ. ಮೊದಲ ಮಹಾಯುದ್ಧ ಕಾಲದಲ್ಲಿ ಇದರ ಪ್ರಕಟಣೆ ನಿಲ್ಲಿಸಬೇಕಾಯಿತು. ಆಮೇಲೆ ಇದು ಬಹಳ ಪ್ರಭಾವಶಾಲಿಯಾಯಿತು. ಯುದ್ಧದ ಸಮಯದಲ್ಲಿ ಇವನು ಫ್ರಾಂಕೊ-ಬೆಲ್ಜಿಯಂ ನಿರಾಶ್ರಿತರ ಕೇಂದ್ರದಲ್ಲಿ ಕೆಲಸಮಾಡಿದ. ಈ ಕಾಲದಲ್ಲಿ ಇವನ ಮನಸ್ಸು ಭಾರಿ ತಳಮಳಕ್ಕೊಳಗಾಯಿತು. ಅವನ ಚಿಂತನೆಯಲ್ಲೂ ತುಂಬ ಬದಲಾವಣೆಯಾಯಿತು. ಹಳೆಯದೆಲ್ಲವನ್ನೂ ಮರೆತು ತನ್ನದೇ ಆದ ನೀತಿ-ನಿಯಮಗಳನ್ನು ರೂಪಿಸಿಕೊಂಡು ತನ್ನ ಮಾನಸಿಕ ಬಿಕ್ಕಟ್ಟಿನಿಂದ ಅವನು ಹೊರಬಂದ. 1926ರಲ್ಲಿ ಇವನ ಆತ್ಮವೃತ್ತ ಪ್ರಕಟವಾಯಿತು. ಅದರಲ್ಲಿ ಅವನು ಸತ್ಯಾಂಶಗಳನ್ನು



ರಾಷ್ಟ್ರದ ಆಚೆಗೂ ಪ್ರಭಾವ : ಆಂದ್ರೆ ಜೀದ್

ಅತ್ಯಂತ ಪ್ರಾಮಾಣಿಕ ಹಾಗೂ ಧೀರ ಮನೋಭಾವದಿಂದ ಒಪ್ಪಿಕೊಂಡಿರುವುದನ್ನು ಕಾಣಬಹುದು.

ಇವನ ಮುಂದಿನ ಕೃತಿಗಳು, ಸಮಾಜ ಒಪ್ಪಿದ ನೀತಿಯನ್ನು ಬಿಟ್ಟು, ತಮ್ಮದೇ ಆದ ವಿಶಿಷ್ಟ ಭಾವನೆಗಳನ್ನು ಸಮರ್ಥಿಸಿಕೊಂಡ. 1924ರಲ್ಲಿ ಪ್ರಕಟವಾದ 'ಕಾರಿಡನ್' ಕೃತಿಯಲ್ಲಿ ಇಂಥ ಸಮರ್ಥನೆಯನ್ನು ಕಾಣಬಹುದು. ಈ ಸಂದರ್ಭದಲ್ಲಿ ಅವನು ತನ್ನ ಆಪ್ತ ಮಿತ್ರರಿಂದಲೂ ನಿಂದನೆಗೆ ಗುರಿಯಾಗಬೇಕಾಯಿತು.

ಮತ್ತೊಮ್ಮೆ ಆಫ್ರಿಕಕ್ಕೆ ಪ್ರಯಾಣ ಮಾಡಿದ ಜೀದ್, ಫ್ರಾನ್ಸಿನ ವಸಾಹತುಶಾಹಿಯನ್ನು ಖಂಡಿಸಿದ, ಸಮಾಜ ಕೀಳೆಂದು ಎಣಿಸಿದ ಜನರಿಗಾಗಿ ಹೋರಾಡಿದ. ಇದು ಜೀದ್‌ನ ಮಾನವೀಯತೆಗೆ ಸಾಕ್ಷಿ. ಕಮ್ಯೂನಿಸಂನಿಂದ ಉತ್ಸಾಹಿತನಾಗಿ ರಷ್ಯಕ್ಕೆ ಹೋಗಿ ಬಂದ ಇವನು ತನಗಾದ ನಿರಾಶೆಯನ್ನು ಮುಂದಿನ ಕೃತಿಗಳಲ್ಲಿ ವಿವರಿಸಿದ. ದ್ವಿತೀಯ ಯುದ್ಧ ಪ್ರಾರಂಭವಾದ ಅನಂತರ ಇನ್ನೊಮ್ಮೆ ಆಫ್ರಿಕಕ್ಕೆ ಹೋದ ಜೀದ್ ಯುದ್ಧ ಮುಗಿಯುವವರೆಗೂ ಅಲ್ಲಿಯೇ ಇದ್ದು, ಸಾಹಿತ್ಯ ನಿಯತಕಾಲಿಕವೊಂದನ್ನು ಪ್ರಾರಂಭಿಸಿದ. 1946ರಲ್ಲಿ ಅವನ ಕೊನೆಯ ಪ್ರಮುಖ ಕೃತಿ 'ಥೆಸೆ ಈ' ಪ್ರಕಟವಾಯಿತು. ಮರುವರ್ಷ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪ್ರಶಸ್ತಿ ಮಾತ್ರವಲ್ಲದೆ ನೊಬೆಲ್ ಬಹುಮಾನವೂ ದೊರಕಿದುವು. 1951ರ ಫೆಬ್ರುವರಿ 19ರಂದು ಜೀದ್ ನಿಧನನಾದ.

ಶೇಕ್ಸ್‌ಪಿಯರನ ಕೃತಿಗಳನ್ನು ಫ್ರೆಂಚ್ ಭಾಷೆಗೆ ಜೀದ್ ಸೊಗಸಾಗಿ ಭಾಷಾಂತರ ಮಾಡಿದ. ವಿಶ್ವಸಾಹಿತ್ಯಕ್ಕೆ ಇವನ ಅತ್ಯಮೂಲ್ಯ ಕೊಡುಗೆ—ಟಿಪ್ಪಣಿಗಳ ರೂಪದಲ್ಲಿ ಬರೆದ ದಿನಚರಿ. 1889ರಿಂದ 1950ರ ವರೆಗಿನ ತನ್ನ ಚಿಂತನೆಯನ್ನೂ ಆಸಕ್ತಿಗಳನ್ನೂ ಪರಿಣಾಮಕಾರಿಯಾದ ಶೈಲಿಯಲ್ಲಿ ಇದರಲ್ಲಿ ನಿರೂಪಿಸಿದ್ದಾನೆ. ವ್ಯಕ್ತಿಗಿಂತ ಹೆಚ್ಚಾಗಿ ಮಾನವೀಯತೆಯಲ್ಲಿ ಇವನಿಗೆ ನಂಬಿಕೆ ಇದ್ದುದರಿಂದ ಇವನು ಕೇವಲ ಕಾದಂಬರಿಕಾರ, ನಾಟಕಕಾರನಾಗಿ ಉಳಿಯಲಿಲ್ಲ. ನೀತಿ ಹಾಗೂ ಮನೋವಿಜ್ಞಾನ ವಿಚಾರಗಳಲ್ಲಿಯೂ ಆಸಕ್ತಿವಹಿಸಿದ. ಒಂದು ವಿಧದಲ್ಲಿ ಸಾಂಪ್ರದಾಯಿಕ ನೀತಿಯ ಮನೋಭಾವದವನಾದರೂ ಬದುಕನ್ನು ಧೀರ ಪ್ರಾಮಾಣಿಕನಾಗಿ ಚಿತ್ರಿಸಿ ಕ್ರಾಂತಿಕಾರಿಯೂ ಆದ. ವಿಶಿಷ್ಟ ವ್ಯಕ್ತಿತ್ವ ಇವನದು.

## ಆಗ್ಡನ್ ನಾಶ್

ಹೇಳಬೇಕೆಂದಿರುವುದನ್ನು ಹಾಸ್ಯದಲ್ಲಿ ಅಡಗಿಸಿ, ಸೂಚ್ಯವಾಗಿ ಹೇಳುವುದು ಸಾಹಿತ್ಯದಲ್ಲಿ ಒಂದು ಬಗೆ. ನಾಶ್ ಈ ಮಾಧ್ಯಮವನ್ನು ಉಪಯೋಗಿಸಿಕೊಂಡ.

"ಪಶ್ಚಾತ್ತಾಪ ತೋರಿಕೆಯಲ್ಲಿ ಹಲಬರು
ಬಹು ಕುಶಲ ಮತಿಗಳಿಹರು.
ಏನಾದರೊಂದು ವಿಪರೀತವನೆಸಗಿ ಕ್ಷಮೆ ಕೋರಿ
ಗೆಳೆತನ ಬೆಳಸಬಹುದೆಂಬುದು ಅವರ ವೈಖರಿ"

ಇದು ಪಶ್ಚಾತ್ತಾಪ ತೋರುವವರ ಬಗೆಗೆ ನಾಶ್ ಹಾರಿಸುವ ವಾಗ್ಬಾಣ. ಇದಕ್ಕೂ ಮುಂದುವರಿದು, ಕೇವಲ ವಿರೋಧಾಭಾಸಗಳ ಊಹಿತ ವಿನೋದಗಳಿಂದ ಕೂಡಿದ ಅಸಂಬದ್ಧಾಲಾಪದ ಪದ್ಯಗಳನ್ನೂ ನಾಶ್ ಬರೆದಿದ್ದಾನೆ.

ಮಾನವ ಸ್ವಭಾವದ ಕುಂದು, ಕೊರತೆಗಳ ಬಗೆಗೆ ಅನುಕಂಪ ತಳೆದು ಕೆಡುಕಿಗೆ ಬದಲಾಗಿ ಮೃದುಹಾಸ್ಯದಿಂದ ಛೇಡಿಸುವ ಹೊಸ ಒಲವು ಅಮೆರಿಕದ ಈ ಶತಮಾನದ ಹಾಸ್ಯ ಬರಹಗಾರರಲ್ಲಿ ಮೊಳೆಯಿತು. ಇಂಥ ಹಾಸ್ಯ ಬರಹದ ಶ್ರೇಷ್ಠ ಪ್ರತಿನಿಧಿಗಳಲ್ಲಿ ಒಬ್ಬ ನಾಶ್.



ಚತುರೋಕ್ತಿ, ಹಾಸ್ಯ : ಆಗ್ಡನ್ ನಾಶ್

ಆಗ್ಡನ್ ನಾಶ್ ಅಮೆರಿಕದ ಕವಿ. 1902ರಲ್ಲಿ ನ್ಯೂಯಾರ್ಕಿನ ರೈ ಎಂಬಲ್ಲಿ ಹುಟ್ಟಿದ. ರೋಡ್ ದ್ವೀಪದಲ್ಲಿ ಶಾಲೆಯಲ್ಲಿ ಹಾಗೂ ಹಾರ್ವರ್ಡ್ ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾಭ್ಯಾಸ ಮಾಡಿದ. ಠಸೆ ಕಾಗದಗಳ ಮಾರಾಟಗಾರನಾಗಿ ಸ್ವಲ್ಪ ಕಾಲ ಕೆಲಸ ಮಾಡಿದ. ಅನಂತರ ಪ್ರಕಾಶನ ಮಂದಿರದಲ್ಲಿ ಕೆಲಸಕ್ಕೆ ಸೇರಿದ. ಅಲ್ಲಿ ಅವನ ಎರಡು ಕವಿತಾ ಸಂಕಲನಗಳು ಪ್ರಕಟವಾದುವು.

ಕೆಲವು ಬಾರಿ ತನ್ನ ಹಾಸ್ಯ ಹೆಣೆಯಲು ಪದಗಳನ್ನು ವಿರೂಪಗೊಳಿಸಿ ಜೋಡಿಸಿದ್ದಾನೆ ನಾಶ್. ಲಿಮರಿಕ್ ಬಗೆಯ ಬರಹದಲ್ಲಿ ಅಸಂಬದ್ಧತೆಗಳನ್ನು ಯಶಸ್ವಿಯಾಗಿ ಬಳಸಿರುವವರೆಂದರೆ ಎಡ್ವರ್ಡ್ ಲಿಯರ್ ಹಾಗೂ ನಾಶ್.

'ಕಿರಿಯರಿಗಾಗಿ ಬರೆದ ವಯಸ್ಕ ಪದ್ಯಗಳು ಮತ್ತು ಕೆಲವು ಎಳೆಯ ಪದ್ಯಗಳು' ಎಂದು ತನ್ನ ಒಂದು ಕವನ ಸಂಕಲನದ ಬಗೆಗೆ ನಾಶ್ ತಾನೇ ಹೇಳಿಕೊಂಡಿದ್ದಾನೆ. ನಾಶ್‌ನ ಕವನಗಳು ಹಿರಿಯರ ಮತ್ತು ಕಿರಿಯರ ವಯೋಮಾನ ಅನಂತರದ ನಡುವಣ ಸೇತುವೆಯಂತೆ ಇವೆ. ಇಬ್ಬರ ಹಾಸ್ಯ ಮನೋವೃತ್ತಿಯನ್ನೂ ಅವು ತಣಿಸಬಲ್ಲುವು. ಅತ್ಯಂತ ಚತುರೋಕ್ತಿ, ನವುರಾದ ನಿರೂಪಣೆ, ಹಾಸ್ಯ ಹಾಗೂ ನುಡಿಗಳ ಮಿತವಾದ ಬಳಕೆ ಇವು ನಾಶ್‌ನ ಕವಿತೆಯ ಗುಣಗಳು.

ನಾಶ್‌ನ ಮೊದಲ ಎರಡು ಪುಸ್ತಕಗಳು ಸತ್ಯದ ಬುನಾದಿಯ ಮೇಲೆ ಕಟ್ಟಲ್ಪಟ್ಟ ಅಸಂಬದ್ಧ ಹಾಸ್ಯದಿಂದಾಗಿ ಜನಪ್ರಿಯವಾದುವು. ಛಂದೋವಿನ್ಯಾಸದಲ್ಲಿ ಸ್ವಾತಂತ್ರ್ಯ ಮತ್ತು ವಿಚಿತ್ರ ಪ್ರಾಸಬದ್ಧತೆ ಕೂಡ ಅವನ ಕವಿತೆಯ ವಿಶೇಷ ಗುಣಗಳು. 'ಸದುದ್ದೇಶಗಳು' (1943), 'ಕುಟುಂಬದ ಪುನರ್ಮಿಲನ' (1951), 'ಅನೇಕ ವರ್ಷಗಳಿಗೆ ಹಿಂದೆ' (1954), 'ನಿನ್ನ—ನನ್ನನ್ನುಳಿದು ಮಿಕ್ಕೆಲ್ಲರೂ' (1963), 'ವಿವಾಹ ರೇಖೆಗಳು' (1964), ಮುಂತಾದುವು ನಾಶ್‌ನ ಕವಿತಾ ಸಂಕಲನಗಳು.

ನಾಶ್ ರಚಿಸಿರುವುದೆಲ್ಲ ಸಾಮಾನ್ಯವಾಗಿ ಪರ್ಯಾಯ ಚರಣಗಳಲ್ಲಿ ಪ್ರಾಸವಿರುವ ನಾಲ್ಕು ಸಾಲಿನ ಪದ್ಯಗಳು.

1972ರಲ್ಲಿ ತನ್ನ 70ನೆಯ ವಯಸ್ಸಿನಲ್ಲಿ ನಾಶ್ ನಿಧನನಾದ.

## ಆಗ್ನನ್

ಬೈಬಲಿನ ಕಾಲದ ಭಾಷೆಯಾದ ಹಿಬ್ರೂವನ್ನು ಹಲವಾರು ಶತಮಾನಗಳಿಂದ ಧಾರ್ಮಿಕ ಉದ್ದೇಶಗಳಿಗಾಗಿ ಮಾತ್ರ ಬಳಸುತ್ತಿದ್ದರು. ಅವರ



ಇಸ್ರೇಲಿ ಯುವಲೇಖಕರ ಮೇಲೆ ಪ್ರಭಾವ : ಆಗ್ನನ್

ಅದನ್ನು ಸಾಹಿತ್ಯ ರಚನೆಯ ಮಾಧ್ಯಮವನ್ನಾಗಿ ಮಾರ್ಪಡಿಸಿದವರಲ್ಲಿ ಆಗ್ನನ್ ಪ್ರಮುಖ. ಹಿಬ್ರೂ ಭಾಷೆಯ ಶ್ರೇಷ್ಠ ಕಥೆಗಾರ – ಕಾದಂಬರಿಕಾರನಾದ ಆಗ್ನನ್‌ಗೆ 1966ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು.

ಆಗ್ನನ್ ಹುಟ್ಟಿದ್ದು, ಈಗ ಉಕ್ರೇನ್ ಮತ್ತು ಪೋಲೆಂಡ್ ನಡುವೆ ಹಂಚಿಹೋಗಿರುವ ಗಲಿಸಿಯ ಪ್ರಾಂತದ ಬ್ಯೂಜಾಜ್ ಎಂಬಲ್ಲಿ, 1888ರ ಜುಲೈ 17ರಂದು ; ಒಂದು ಯೆಹೂದಿ ಕುಟುಂಬದಲ್ಲಿ. ಅವನಿಗೆ ಇಟ್ಟ ಹೆಸರು ಸ್ಯಾಮುಯಲ್ ಜೋಸೆಫ್ ಜಾಜೆಕ್ಸ್. ಅವನು ಜಾಜೆಕ್ಸ್ ಎಂಬುದನ್ನು ಆಗ್ನನ್ ಎಂದು ಬದಲಿಸಿಕೊಂಡ. ಆಗ್ನನನ ಹಲವು ಕಥೆಗಳು ಅವನ ಹುಟ್ಟಿದ ಪ್ರದೇಶದ ಹಿನ್ನೆಲೆಯಲ್ಲೇ ರಚಿಸಲ್ಪಟ್ಟಿವೆ. ತನ್ನ ಜೀವಮಾನದ ಅನೇಕ ವರ್ಷಗಳನ್ನು ಈತ ಯೆಹೂದಿಗಳ ಪವಿತ್ರ ನಗರ ಪ್ಯಾಲೆಸ್ಟೈನ್‌ನಲ್ಲೇ ಕಳೆದಿದ್ದಾನೆ. ಆತನ ಅನೇಕ ಕಥೆಗಳಲ್ಲಿ ಇಲ್ಲಿನ ಸನ್ನಿವೇಶಗಳು ಚಿತ್ರಿತವಾಗಿವೆ.

ಯೆಹೂದಿ ಜನರ ಜೀವನದ ಹಲವು ಮುಖಗಳ ಪರಿಚಯ ಮಾಡಿಕೊಳ್ಳಲು ಅತ್ಯುತ್ತಮ ಮಾಧ್ಯಮ. ಆಗ್ನನ್‌ನ ಸಣ್ಣ ಕಥೆ ಮತ್ತು ಕಾದಂಬರಿಗಳು. 1837ರಲ್ಲಿ ಅವನು ಬರೆದ 'ಮದುವೆ ಚಪ್ಪರ' ಯೆಹೂದಿ ಪಂಥದ ಸುವರ್ಣಯುಗವನ್ನು (1750—1850) ಕುರಿತದ್ದು. ಮೊದಲ ಮಹಾಯುದ್ಧದ ಕಾಲದಲ್ಲಿ ಉಂಟಾದ ಕೋಲಾಹಲದ ವರ್ಣನೆ 'ರಾತ್ರಿಯ ದಾರಿಗ' ಎಂಬ ಕೃತಿಯಲ್ಲಿದೆ. ಪ್ಯಾಲೆಸ್ಟೈನಿನ ಧಾರ್ಮಿಕ ವಾತಾವರಣದ ಮೇಲೆ ಬಿದ್ದಿರುವ ವೈಜ್ಞಾನಿಕ ಯುಗದ ಪ್ರಭಾವ ಇವನ ಹಲವು ಕಥೆಗಳಿಗೆ ಮೂಲವಸ್ತುವಾಗಿದೆ. 1945ರಲ್ಲಿ ಪ್ರಕಟಗೊಂಡ 'ನಿನ್ನೆ ಮತ್ತು ಮೊನ್ನೆ' ಎಂಬುದು ಆಗ್ನನನ ಅತಿ ಶ್ರೇಷ್ಠ ಕೃತಿಗಳಲ್ಲಿ ಒಂದು. ಯುದ್ಧದಿಂದ ಕಂಗೆಟ್ಟ ಜನರ ಜೀವನವನ್ನು ಕುರಿತಾದ ಈತನ ಇನ್ನೂ ಕೆಲವು ಗ್ರಂಥಗಳು ಇಸ್ರೇಲ್ ರಾಷ್ಟ್ರದಲ್ಲಿ ಬಹಳ ಜನಪ್ರಿಯವಾಗಿವೆ.

ಆಗ್ನನ್ ಪ್ರಯೋಗಶೀಲ. ಅವನ ಶೈಲಿ ಸರಳ. ಆದರೆ ಭಾಷೆ ಈಗ ಬಳಕೆಯಲ್ಲಿರುವ ಆಧುನಿಕ ಹಿಬ್ರೂವಲ್ಲ. ಮಧ್ಯಯುಗದ ಹಿಬ್ರೂ ಭಾಷೆ. ಅದನ್ನು ಬೇರೆ ಭಾಷೆಗಳಿಗೆ ಅನುವಾದ ಮಾಡುವುದೂ ಅಷ್ಟು ಸುಲಭವಲ್ಲ. ಅನೇಕ ಯುವಕ ಇಸ್ರೇಲಿ ಲೇಖಕರು ಅವನಿಂದ ಪ್ರಭಾವಿತರಾಗಿದ್ದಾರೆ.

## ಆತ್ಮಕಥೆ

ಅಪ್ಪ, ಅಜ್ಜ ಇವರಲ್ಲಿ ಯಾರಾದರೂ ತಮ್ಮ ಕಾಲದ ಘಟನೆಗಳನ್ನು ಮೆಲುಕುಹಾಕುತ್ತ ಕಥನವನ್ನು ಆರಂಭಿಸಿದರೆ ಅದನ್ನು ಕೇಳುವುದು ಎಷ್ಟೊಂದು ಚೆನ್ನ ! ಆ ಕಥನದಲ್ಲಿ ಬರುವುದು ಅವರ ವಿಚಾರ ಮಾತ್ರವಲ್ಲ. ಅವರ ಕಾಲದಲ್ಲಿ ಅವರ ಸುತ್ತಮುತ್ತ ನಡೆದ ಹಲವಾರು ಘಟನೆಗಳು, ಅವರು ಕಂಡ ಜನರ ವರ್ಣನೆಗಳು ಕೂಡ ಬರುತ್ತವೆ. ಹೀಗೆ ಆತ್ಮಕಥೆ ಕಟ್ಟುಕತೆಯಲ್ಲ. ಅದು ಅನುಭವದ ನಿರೂಪಣೆ ಸತ್ಯಾಂಶಗಳ ಘಟನೆಗಳ ಪರಿಣಾಮಕಾರಿ ವರ್ಣನೆ.

ಆತ್ಮಕಥೆ ಎಂದರೆ ಒಬ್ಬ ವ್ಯಕ್ತಿ ತಾನೇ ಬರೆದ ತನ್ನ ಜೀವನ ಚರಿತ್ರೆ ; ಮುಂದಿನ ಪೀಳಿಗೆಯವರು ಹಿಂದಿನ ಕಾಲದವರ ಜನಜೀವನವನ್ನು ಕಾಣಲು ಸಹಕಾರಿಯಾದ ಬೆಳಕು ಕಿಂಡಿ ; ಚರಿತ್ರಕಾರರ ಪಾಲಿಗೆ ಅದು ಅವರಿಗೆ ಬೇಕಾದ ಮೂಲ ಸಾಮಗ್ರಿಗಳ ಆಗರ. ಇಷ್ಟು ಮಾತ್ರವಲ್ಲ ; ಸತ್ವಶಾಲಿಯಾದ ವ್ಯಕ್ತಿಗಳ ಆತ್ಮಕಥೆ ಅದನ್ನೋದಿದವರಿಗೆ ಸ್ಫೂರ್ತಿದಾಯಕ ಕೂಡ.

ಆತ್ಮಕಥೆ ಬರೆಹಗಾರನ ವ್ಯಕ್ತಿತ್ವವನ್ನು ಬೆಳಕಿಗೆ ತರುತ್ತದೆ ; ಚರಿತ್ರೆಯ ನಿರ್ಮಾಣದಲ್ಲಿ ಆತನ ಪಾತ್ರ ಏನೆಂಬುದನ್ನೂ ವ್ಯಕ್ತಪಡಿಸುತ್ತದೆ. ಆತನ ಜೀವನ ಸಿದ್ಧಾಂತಗಳಿಗೆ ಪ್ರೇರಕವಾದ ಘಟನೆಗಳನ್ನೂ ಹಿನ್ನೆಲೆಯನ್ನೂ ನಿರೂಪಿಸುತ್ತವೆ. ಅಲ್ಲದೆ ಆಯಾ ಕಾಲಗಳಲ್ಲಿ ಜನರು ಅಂಗೀಕರಿಸಿದ್ದ ಧ್ಯೇಯಗಳನ್ನೂ ಅನುಸರಿಸಿದ ಧೋರಣೆಗಳನ್ನೂ ಆತ್ಮಕಥೆಗಳು ಪ್ರತಿಬಿಂಬಿಸುತ್ತವೆ.

ಆತ್ಮಕಥೆಯನ್ನು ಬರೆಯುವವನಿಗೆ ಸಿಗುವ ತೃಪ್ತಿಯಾದರೂ ಅಲ್ಪವಲ್ಲ. ತನ್ನ ಕಹಿ ಸಿಹಿ ನೆನಪುಗಳನ್ನು ಆತ ಮನಬಿಚ್ಚಿ ಹಂಚಿಕೊಳ್ಳಲು ಅವಕಾಶ ಲಭಿಸುತ್ತದೆ.

ಆತ್ಮಕಥೆಗಳಲ್ಲಿ ವಿವಿಧ ಮಾಹಿತಿ, ಅಂಕಿ ಅಂಶ, ಕಾಲಾವಧಿ ಇವೆಲ್ಲವನ್ನೂ ವಿವರವಾಗಿ ತಿಳಿಸುವುದು ಅತ್ಯಗತ್ಯ. ಆತ್ಮಕಥೆಗಳಲ್ಲಿ ನಾಯಕನ ವಂಶಾವಳಿ ಜನನದಿಂದ ಆರಂಭಮಾಡಿಕೊಂಡು ಅವನು ತನ್ನ ಆತ್ಮಕಥನವನ್ನು ಬರೆಯುವ ಕಾಲದವರೆಗಿನ ವಿವರಗಳಿರುತ್ತವೆ. ಇದು ಸಂಪೂರ್ಣ ಆತ್ಮಕಥೆ. ಹಲವರು ಆತ್ಮಕಥೆಯ ಬದಲು ಸ್ಮರಣೆಗಳನ್ನು ಬರೆಯುತ್ತಾರೆ. ಈ ಬಗೆಯ ಬರವಣಿಗೆಯಲ್ಲಿ ಕಾಲಾನುಕ್ರಮದಲ್ಲಿ ಘಟನೆಗಳನ್ನು ಒಂದಾದ ಮೇಲೊಂದರಂತೆ ನಿರೂಪಿಸಬೇಕಾಗಿಲ್ಲ. ತಮ್ಮ ಜೀವನದಲ್ಲಿ ಪ್ರಧಾನವಾಗಿ ಅಥವಾ ಸ್ವಾರಸ್ಯವಾಗಿ ತೋರುವ ಘಟನೆಗಳ, ಪ್ರಸಂಗಗಳನ್ನು ಬಿಡಿಬಿಡಿಯಾಗಿ ಹೇಳುವುದು ಇದರ ಕ್ರಮ. 'ರವೀಂದ್ರನಾಥ ಠಾಕೂರರ ನೆನಪಿಕೆಗಳು' ಇಂಥ ಒಂದು ಸ್ಮರಣಗ್ರಂಥ. 'ನನ್ನ ಉದ್ಯೋಗ ಜೀವನದ ಸ್ಮರಣೆಗಳು' ಎಂಬುದು ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಬರೆದ ಸ್ಮರಣ ಗ್ರಂಥ. ಇದರಲ್ಲಿ ಅವರ ವೃತ್ತಿಯ ನಿರ್ವಹಣೆಗೆ ಸಂಬಂಧಿಸಿದ ಸ್ಮೃತಿಗಳು ಮಾತ್ರ ಇವೆ. ಖಾಸಗಿ ಜೀವನದ ವಿಚಾರವಿಲ್ಲ.

ಆತ್ಮಕಥೆಯ ಪದ್ಧತಿ ಅಷ್ಟೇನೂ ಹಳೆಯದಲ್ಲ. ಐರೋಪ್ಯರು ಮೊದಲಿಗೆ ತಪ್ಪೊಪ್ಪಿಗೆ ಅಥವಾ ಅಪರಾಧ ಕಥನ ಗ್ರಂಥಗಳನ್ನು ಬರೆಯುತ್ತಿದ್ದರು. 18ನೆಯ ಶತಮಾನದ ಬುದ್ಧಿಜೀವಿ ಜೀನ್ ಜೆಕ್ವಿಸ್ ರೂಸೋ ಬರೆದ ಆತ್ಮವೃತ್ತಾಂತ ಪ್ರಖ್ಯಾತವಾದದ್ದು. 19ನೆಯ ಶತಮಾನದ ಆರಂಭದಿಂದೀಚೆಗೆ ಆತ್ಮಕಥೆಯ ಪ್ರಕಾರ ಬೆಳೆದಿದೆ.

ಜವಹರಲಾಲ ನೆಹರೂರವರು ತಮ್ಮ ಆತ್ಮಕಥೆಯನ್ನು ಕಾರಾಗೃಹವಾಸ ಅನುಭವಿಸುತ್ತಿದ್ದಾಗ ಬರೆದರು. ಸತ್ಯಾಗ್ರಹಿ ಗಾಂಧೀಜಿ ತಮ್ಮ ಕಥೆಯನ್ನು 'ಸತ್ಯಶೋಧನೆ' (ಸತ್ಯಾನ್ವೇಷಣೆ) ಎಂದು ಕರೆದರು. ಸರ್ವಾಧಿಕಾರಿ ಹಿಟ್ಲರ್, ಹಿರಿಯ ದಾರ್ಶನಿಕ ಬಟ್ರಾಂಡ್ ರಸಲ್, ಪ್ರಖ್ಯಾತ ನಟ ಚಾರ್ಲಿ ಚಾಪ್ಲಿನ್ ಮುಂತಾದ ಅನೇಕರು ಆತ್ಮಕಥೆಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ಕೂಡ ಆತ್ಮಕಥೆಗಳೂ ಸ್ಮೃತಿ ಅಥವಾ ಸ್ಮರಣೆಗಳೂ ಬಂದಿವೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ನವರತ್ನ ರಾಮರಾವ್, ಶಿವರಾಮ ಕಾರಂತ, ರಾಜರತ್ನಂ, ದೇ ಜ ಗೌ ಮುಂತಾದ ಹಲವರು ಬರೆದಿರುವ ಆತ್ಮಕಥೆಗಳೂ ನೆನಪುಗಳೂ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ.



ನವರತ್ನ ರಾಮರಾವ್ : 'ನೆನಪುಗಳು'

ಜಗತ್ತಿನ ಅನೇಕ ಪ್ರಮುಖ ವ್ಯಕ್ತಿಗಳು ಆತ್ಮಕಥೆಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಕೆಲವು ಹಲವಾರು ಭಾಷೆಗಳಿಗೆ ಅನುವಾದವಾಗಿ ಜಗತ್ಪ್ರಸಿದ್ಧವಾಗಿವೆ. ಈ ವರ್ಗಕ್ಕೆ ಸೇರಿದ ಗಣ್ಯ ಗ್ರಂಥಗಳಲ್ಲಿ ಗಾಂಧಿಜಿ ಮತ್ತು ಜವಹರಲಾಲರ ಆತ್ಮಚರಿತ್ರೆಗಳು ಗಮನಾರ್ಹವಾದುವು ಇವುಗಳಲ್ಲಿ ಸತ್ಯನಿಷ್ಠೆ, ಸುರಮ್ಯ ಕಥನ ಶೈಲಿ, ಹೃದಯಸ್ಪರ್ಶಿ ನಿರೂಪಣೆಗಳು ಪರಿಣಾಮಕಾರಿಯಾಗಿ ಬೆರೆತಿರುವುದನ್ನು ಕಾಣಬಹುದು.

ಆತ್ಮಕಥೆಯನ್ನು ಬರೆಯುವುದು ಸುಲಭವಾದ ಕೆಲಸವಲ್ಲ. ಆತ್ಮಕಥೆಯನ್ನು ಬರೆಯಲಪೇಕ್ಷಿಸುವವನಿಗೆ, ಬರೆಯುವ ಸಾಮರ್ಥ್ಯವಿರಬೇಕು : ತನ್ನ ಬೇಕು ಬೇಡಗಳಿಂದ ಪ್ರಭಾವಿತನಾಗದೆ, ವಿಶೇಷ ಭಾವೋದ್ರೇಕಕ್ಕೆ ಒಳಗಾಗದೆ, ತನ್ನ ಜೀವನಕ್ಕೆ ಸಂಬಂಧಿಸಿದ ಘಟನೆಗಳನ್ನು ನಿರೂಪಿಸುವ ಸಂಯಮ ಬೇಕು : ಸತ್ಯನಿಷ್ಠೆ, ವಿಮರ್ಶಾದೃಷ್ಟಿಗಳನ್ನೂ ಅವನು ರೂಢಿಸಿಕೊಂಡಿರಬೇಕು.

ಆತ್ಮಕಥೆ 'ಆತ್ಮಪ್ರಶಂಸೆ' ಆಗಬಾರದು. ಆದರೆ ಅದರಲ್ಲಿ ಅವನ ವ್ಯವಹಾರ, ಸಾಧನೆ, ಸಿದ್ಧಿಗಳು, ಜೊತೆಗಾರರು, ವಿರೋಧಿಗಳನ್ನು ಕುರಿತ ವಿವರಣೆ, ಅವುಗಳ ಮೌಲ್ಯಗಳ ಬಗೆಗೆ ಸಂದರ್ಭೋಚಿತ ವಸ್ತುನಿಷ್ಠೆ—ಇವು ಇರಬೇಕು. ಇವೆರಡರ ಸಮತೋಲನ ಆತ್ಮಚರಿತ್ರೆಗೆ ಗೌರವವನ್ನೂ ಬೆಲೆಯನ್ನೂ ದೊರಕಿಸುತ್ತವೆ. ಈ ಸಮರಸದೃಷ್ಟಿಯ ಜೊತೆಗೆ ಸಾಹಿತ್ಯಕವಾದ ಭಾಷೆ, ಒಳ್ಳೆ ನಿರೂಪಣೆಗಳು ಕೂಡಿದಾಗ ಅಂಥ ಆತ್ಮಕಥೆ ಉತ್ತಮ ಇತಿಹಾಸವೂ ಆಗುತ್ತದೆ ; ಉತ್ತಮ ಸಾಹಿತ್ಯವೂ ಆಗುತ್ತದೆ.

## ಆಧುನಿಕ ಕಾವ್ಯ

ಒಂದು ನಿರ್ದಿಷ್ಟ ಕಾಲದ ಕವಿಗಳ ಜೀವನದೃಷ್ಟಿ, ನಂಬಿಕೆ, ಮೌಲ್ಯಗಳು ಬಹುಮಟ್ಟಿಗೆ ಏಕರೀತಿಯಾಗಿರುತ್ತವೆ. ಸಾಹಿತ್ಯದ ಇತಿಹಾಸವನ್ನು ಅಭ್ಯಸಿಸುವಾಗ ಈ ಅಂಶವನ್ನು ನಾವು ಕಾಣುತ್ತೇವೆ. ಒಂದು ಕಾಲಾವಧಿಯ ಪ್ರಮುಖ ಕವಿಗಳ ಕಾವ್ಯವನ್ನು ಸ್ಥೂಲವಾಗಿ ಒಂದೇ ಗುಂಪಿಗೆ ಸೇರಿಸಬಹುದು. ಒಂದು ಕಾಲದ ಮೌಲ್ಯಗಳು ಮತ್ತು ಧ್ಯೇಯಗಳಲ್ಲಿ ಆ ಮುಂದಿನ ಕಾಲದ ಜನರಿಗೆ ನಂಬಿಕೆ ನಷ್ಟವಾಗಬಹುದು. ಆಗ ಜನರು ಹೊಸ ಬಗೆಯಾಗಿ ಚಿಂತಿಸತೊಡಗುತ್ತಾರೆ. ಅವರು ಸೃಷ್ಟಿಸುವ ಕಾವ್ಯ 'ಆಧುನಿಕ' ಎನಿಸುತ್ತದೆ. ಇದು ಹಳೆಯದಾಗಿ, ಮತ್ತೊಂದು ರೀತಿಯ ಹೊಸ ಚಿಂತನೆಯ ಜನರು ಸಾಹಿತ್ಯ ಸೃಷ್ಟಿಸಿದಾಗ ಆ ಸಾಹಿತ್ಯ ಅಂದಿಗೆ ಆಧುನಿಕವಾಗುತ್ತದೆ.

20ನೆಯ ಶತಮಾನದ ಅನಂತರ ಯೂರೋಪಿನಲ್ಲಿ ಮೊದಲು ಕಂಡುಬಂದ ಹೊಸ ಬಗೆಯ ಕಾವ್ಯವು 'ಆಧುನಿಕ ಕಾವ್ಯ' ಎಂದು ಕರೆಯಲ್ಪಟ್ಟಿದೆ. ಆ ಕಾವ್ಯಕ್ಕೆ ಮೂಲ ಯಾವುದೆಂದು ಹೇಳುವುದು ಕಷ್ಟವಾದರೂ ಅದರ ನೆಲೆಯನ್ನು 19ನೆಯ ಶತಮಾನದ ಫ್ರೆಂಚ್ ಸಾಂಕೇತಿಕತೆಯವರೆಗೆ ಗುರುತಿಸಬಹುದು. ಆ ಶತಮಾನದ ಆದಿಭಾಗದಲ್ಲಿ ಫ್ರಾನ್ಸಿನ ಕವಿಗಳು ತೀರ ಸರಳವಾದ ಅನುಭವಗಳನ್ನು ಬಹು ನಯವಾದ ಭಾಷೆಯಲ್ಲಿ ಅಥವಾ ಶೈಲಿಯಲ್ಲಿ ಹೇಳುತ್ತಿದ್ದರು. ಅದಕ್ಕೆ ಒಂದು ರೀತಿಯ ಪ್ರತಿಕ್ರಿಯೆಯಾಗಿ ಕಾವ್ಯರಚನೆಯಲ್ಲಿ ಸಾಂಕೇತಿಕತೆ ತಲೆ ಎತ್ತಿತ್ತು. ಪ್ರಕೃತಿಯ ಗೂಢತೆ, ಒಳ ಅರ್ಥಗಳನ್ನು ಸಂಕೇತಗಳ ಮೂಲಕ ಕಾವ್ಯದಲ್ಲಿ ಅಭಿವ್ಯಕ್ತಿಗೊಳಿಸುವ ಹೊಸ ಹಾದಿಯನ್ನು ಫ್ರಾನ್ಸಿನ ಚಾರ್ಲ್ಸ್ ಬೋದ್ಲೇರ್ (1821—67) ತೋರಿಸಿದ.

ಪ್ರಕೃತಿ ಸೌಂದರ್ಯ, ಆದರ್ಶಗಳನ್ನು ಸುಂದರವಾಗಿ ಚಿತ್ರಿಸುತ್ತಿದ್ದ ರೊಮ್ಯಾಂಟಿಕ್ ಕಾವ್ಯ ಮುಂದೆ ಎಲ್ಲ ಕಡೆಗಳಲ್ಲೂ ಟೀಕೆಗೆ ಒಳಗಾಯಿತು. ಔದ್ಯೋಗೀಕರಣದಿಂದ ಮಾನವನ ಜೀವನ ಯಾಂತ್ರಿಕವಾಗಿತ್ತು ; ರಾಜಕೀಯ ಅಸ್ಥಿರತೆ ಕ್ರಾಂತಿ ಯುದ್ಧಗಳಿಂದ ಮಾನವನ ಚಿಂತನೆ ಹೊಸ ರೂಪ ತಳೆದಿತ್ತು. ಜೀವನದ ಸಂಕೀರ್ಣ ಅನುಭವವನ್ನು ಸರಳಗೊಳಿಸದೆ ಹಾಗೆಯೇ ಸಂಕೀರ್ಣವಾಗಿಯೇ ಅಭಿವ್ಯಕ್ತಿಗೊಳಿಸುವ ಹೊಸ ಕಾವ್ಯಕ್ಕೆ ತಕ್ಕ ಪರಿಸರ ಉಂಟಾಗಿತ್ತು. ಆಂಗ್ಲ ಸಾಹಿತ್ಯದಲ್ಲಿ ಈ ಹೊಸ ಕಾವ್ಯದ ಮೂಲ ಪುರುಷರೆಂದು ಗುರುತಿಸಬಹುದಾದವರು ಎಜ್ರಾ ಪೌಂಡ್, ಟಿ.ಎಸ್. ಎಲಿಯಟ್ ಮತ್ತು ಡಬ್ಲ್ಯು.ಬಿ. ಯೇಟ್ಸ್. ಪೌಂಡ್ ಮತ್ತು ಎಲಿಯಟರ ಮೇಲೆ ಫ್ರೆಂಚ್ ಸಾಂಕೇತಿಕತೆ ಮಾತ್ರವಲ್ಲದೆ 17ನೆಯ ಶತಮಾನದ ಆಂಗ್ಲ ಗೂಢಾರ್ಥ ಕವಿತೆಗಳು, ಕೆಲ್ಟ್ ಜನಾಂಗದ ಪುರಾಣಗಳು, ಫ್ರಾಯ್ಡನ ಮನೋವೈಜ್ಞಾನಿಕ ಸಂಶೋಧನೆ, ಜಪಾನಿನ ಹಾಯಿಕು ಕವನಗಳು, ದಾಂತೆಯ ಕಾವ್ಯ, ಪ್ರಾಚ್ಯ ಸಂಸ್ಕೃತಿಗಳೇ ಮೊದಲಾದುವು ಪ್ರಭಾವ ಬೀರಿದ್ದುವು. ಈ ವಿಶಾಲಕ್ಷೇತ್ರದಿಂದ ಇವರು ತಮ್ಮ ಕಾವ್ಯಕ್ಕೆ ಸಂಕೇತಗಳನ್ನು ಆರಿಸಿಕೊಂಡರು. ಇವರ ಕಾವ್ಯ ಕೇವಲ ಭಾವುಕವಾಗಿರಲಿಲ್ಲ : ಅದರಲ್ಲಿ ಬೌದ್ಧಿಕ ಅಂಶಗಳ ಸಾಮರಸ್ಯ ಇರುತ್ತಿತ್ತು. ಜಿ. ಎಂ. ಹಾಪ್‌ಕಿನ್ಸ್, ವಾಲ್ಟ್ ವಿಟ್‌ಮನ್, ಡಬ್ಲ್ಯು. ಎಚ್. ಆಡೆನ್ ಡಿಲಾನ್ ಥಾಮಸ್, ಸೆಸಿಲ್ ಡೇ ಲೂಯಿಸ್, ಲೂಯಿ ಮ್ಯಾಕ್‌ನೀಸ್, ವ್ಯಾಲೆಸ್ ಸ್ಟೀವನ್ಸ್, ಸ್ಟೀಫೆನ್ ಸ್ಪೆಂಡರ್, ಟಾಮ್‌ಗನ್, ಫಿಲಿಪ್-ಲಾರ್ಕಿನ್ ಮೊದಲಾದವರು ಆಧುನಿಕ ಆಂಗ್ಲ ಕಾವ್ಯ ಕ್ಷೇತ್ರದಲ್ಲಿ ಪ್ರಮುಖರು.

ಜರ್ಮನಿಯ ಸ್ಟೀಫನ್ ಜಾರ್ಜ್, ಹ್ಯೂಗೊ ವಾನ್ ಹಾಫ್‌ಮನ್‌ಸ್ಟಾಲ್, ರಿಲ್ಕೆ ಮೊದಲಾದ ಕವಿಗಳ ಮೇಲೆಯೂ ಸಾಂಕೇತಿಕ ಕವಿಗಳ ಕೃತಿಗಳು ಪ್ರಭಾವ ಬೀರಿದುವು. ಸ್ಪೇನಿನ ಅಂಟೋನಿಯೊ ಮಚಾಡೊ ರೂಈತ್, ಯೂಜಿನಿಯೋ ಡಿ ಕಾಸ್ಟ್ರೊ ; ರಷ್ಯದ ಬ್ರಿಯುಸೋವ್, ಮಯಕೊವ್‌ಸ್ಕಿ ಮೊದಲಾದವರೂ ಈ ಪ್ರಭಾವಕ್ಕೊಳಗಾದವರು. ಫ್ರಾನ್ಸಿನ ಕ್ಲೋಡೆಲ್, ಅಪೋಲಿನೇರ್ ಮತ್ತು ವಾಲೆರಿ ಮತ್ತಿತರ ಕವಿಗಳು ಸಾಂಪ್ರದಾಯಿಕದೊಂದಿಗೆ ಸಾಂಕೇತಿಕತೆಯನ್ನು ಸೇರಿಸಿದರು. ಎಲುವಾರ್ಡ್, ಹೆನ್ರಿ ಮಿಷೋ, ಅಲೆನ್ ಬಾಸ್‌ಕ್ವೇ ಮತ್ತಿತರರು ಉಪವಾಸ್ತವವಾದದಿಂದ ಸ್ಫೂರ್ತಿ ಪಡೆದವರು. ಆರಗನ್, ಎಲುವಾರ್ಡ್ (ಭಾಷಾ ಉಚ್ಚಾರ:



ಸಾಂಕೇತಿಕತೆಯ ಪ್ರಭಾವ : ರಿಲ್ಕೆ

ಎಲ್ಲು ಅರ್) ಮತ್ತಿತರರ ಕೃತಿಗಳಲ್ಲಿ ತೀವ್ರ ಸಾಮಾಜಿಕ ಪ್ರಜ್ಞೆಯನ್ನು ಕಾಣುತ್ತೇವೆ. ದ್ವಿತೀಯ ಮಹಾ ಯುದ್ಧಾನಂತರದ ಕವಿಗಳು ಅಸ್ತಿತ್ವವಾದದಿಂದ ಪ್ರಭಾವಿತರಾದರು.

ಈಗಿನ ಗ್ರೀಕ್ ಕವಿ ಕಜಾಂಟ್ ಜಾಕಿಸ್', ಹೋಮರನ ಯೂಲಿಸಿಸ್ ಕಥೆಯನ್ನು ಮುಂದುವರಿಸಿ 'ಓಡಿಸ್ಸಿ' ಎಂಬ ಕಾವ್ಯ ರಚಿಸಿದ್ದಾರೆ. ಆಧುನಿಕ ಮಾನವನ ಆತ್ಮಶೋಧನೆ ಇದರಲ್ಲಿ ಕಂಡುಬರುತ್ತದೆ. 1959ರಲ್ಲಿ ಸಾಹಿತ್ಯಕ್ಕಾಗಿ ನೊಬೆಲ್ ಪ್ರಶಸ್ತಿ ಪಡೆದ ಇಟಲಿಯ ಕವಿ ಸಾಲ್‌ವತೋರ್ ಕ್ವಾಸಿಮಾದೂನ ಕೃತಿಗಳಲ್ಲಿ ಸಾಂಪ್ರದಾಯಿಕ ಮಾನವೀಯ ಹಿನ್ನೆಲೆ ಕಂಡುಬಂದರೂ, ವಿಜ್ಞಾನದ ಮಹತ್ಸಾಧನೆಗಳ ನಡುವೆ ಪ್ರತ್ಯೇಕವಾಗಿ ನಿರಾಶಾಭಾವದಿಂದ ನಿಂತ ಆಧುನಿಕ ಮಾನವನ ಚಿತ್ರವನ್ನು ಕಾಣಬಹುದು.

ಹಿಂದಿನ ಸಂಕೀರ್ಣ ಸಾಂಕೇತಿಕತೆ ಹಾಗೂ ಕ್ಲಿಷ್ಟ ಭಾಷೆಯ ಅಂಶಗಳನ್ನು ಕಡಮೆಮಾಡಿ ಆಡುಭಾಷೆಗೆ ಹತ್ತಿರದ ಭಾಷೆಯಲ್ಲಿ, ಪರಿಸರದ ವಾಸ್ತವ ಚಿತ್ರಣಗಳನ್ನು ಇತ್ತೀಚಿನ ಕೆಲವು ಆಂಗ್ಲ ಹಾಗೂ ಅಮೆರಿಕದ ಕವಿಗಳು ತಮ್ಮ ಕಾವ್ಯದಲ್ಲಿ ತರುತ್ತಿದ್ದಾರೆ. ಈ ಗುಂಪಿನ ಜಾನ್ ಬೆಟ್‌ಜಮನ್, ಫಿಲಿಪ್ ಲಾರ್ಕಿನ್ ಮೊದಲಾದವರ ಕಾವ್ಯಗಳಲ್ಲಿ ಭಾವನೆಗಳ ತೀವ್ರ ಸಂಘರ್ಷಣೆಯ ಬದಲು ಮಾನವ ಮನೋಭಾವದ ತಿಳಿಭಾಗದ ಚಿತ್ರಣ ಕಂಡುಬರುತ್ತದೆ.

ಭಾರತದಲ್ಲಿ ಈ ಶತಮಾನದ ಆರಂಭದ ಹೊತ್ತಿಗೆ ಹಿಂದಿನ ಕಾವ್ಯ ವಿಧಾನ ತನ್ನ ಸತ್ವ ಕಳೆದುಕೊಳ್ಳತೊಡಗಿತ್ತು. ಸ್ವಾತಂತ್ರ್ಯ ಹೋರಾಟ, ಕಲೆ, ಸಾಹಿತ್ಯಗಳಲ್ಲಿ ನವೋದಯಕ್ಕೆ ನಾಂದಿ ಹಾಡಿತು. ಆಗಿನ ಕಾಲದ ತರುಣ ಕವಿಗಳು ವರ್ಡ್ಸ್‌ವರ್ತ್, ಕೀಟ್ಸ್‌ರಂಥ ಕವಿಗಳನ್ನು ಓದಿದ್ದರು. ಹಿಂದಿನ ಛಂದಸ್ಸು, ಭಾಷೆಗಳಲ್ಲಿ ತಮ್ಮ ಹೊಸ ಭಾವನೆಗಳ ಅಭಿವ್ಯಕ್ತಿಗೊಳಿಸುವುದು ಇವರಿಂದ ಸಾಧ್ಯವಾಗಲಿಲ್ಲ. ಹೊಸ ಹಾದಿ ಹಿಡಿಯುವುದು ಅನಿವಾರ್ಯವಾಯಿತು.

ಕನ್ನಡದಲ್ಲಿ ಹೊಸ ಕಾವ್ಯ ಈ ಶತಮಾನದ ಆರಂಭದಿಂದಲೇ ಇದ್ದಿತಾದರೂ ಅದು ಅಷ್ಟು ಪ್ರಮುಖ ಧ್ವನಿ ಆಗಿರಲಿಲ್ಲ. ಅದಕ್ಕೆ ಗಣ್ಯತೆಯನ್ನು ಗಳಿಸಿ ಕೊಟ್ಟವರು ಬಿ. ಎಂ. ಶ್ರೀಕಂಠಯ್ಯನವರು. ಇವರು ಕನ್ನಡದ ಆಧುನಿಕ ಕಾವ್ಯದ ಮೂಲಪುರುಷರಾದರು.

ಹೊರ ದೇಶಗಳಲ್ಲಾದರೋ ರೊಮ್ಯಾಂಟಿಕ್ ಕಾವ್ಯಕ್ಕೆ ಪ್ರತಿಕ್ರಿಯೆಯಾಗಿ ಹುಟ್ಟಿದ್ದು ಆಧುನಿಕ ಕಾವ್ಯವಾಯಿತು. ನಮ್ಮಲ್ಲಿ ರೊಮ್ಯಾಂಟಿಕ್ ಕಾವ್ಯವೇ ಆಧುನಿಕ ಕಾವ್ಯ ಎನಿಸಿಕೊಂಡಿತು. ಅದಕ್ಕೆ ಪ್ರತಿಕ್ರಿಯೆಯಾಗಿ ನಮ್ಮ ದೇಶದಲ್ಲಿ ಮುಂದೆ ಹುಟ್ಟಿದ ಕಾವ್ಯರೂಪವನ್ನು ನವ್ಯಕಾವ್ಯ ಎಂದು ಕರೆದರು.



ಕೆ. ಎಸ್. ನರಸಿಂಹಸ್ವಾಮಿ



' ರಾಘವ '

ಆಧುನಿಕ ಕನ್ನಡ ಕಾವ್ಯದಲ್ಲಿ ಕುವೆಂಪು. ಬೇಂದ್ರೆ, ಪು ತಿ. ನರಸಿಂಹಚಾರ್, ಡಿ. ವಿ. ಗುಂಡಪ್ಪ, 'ಶ್ರೀನಿವಾಸ' (ಮಾಸ್ತಿ ವೆಂಕಟೇಶ ಅಯ್ಯಂಗಾರ್), ಗೋವಿಂದ ಪೈ, ಕಡೆಂಗೋಡ್ಲು ಶಂಕರಭಟ್ಟ, ವಿನಾಯಕ

' ಆನಂದಕಂದ '



ಪು. ತಿ. ನ.





ಕಾವ್ಯಾನಂದ



ಸು. ರಂ. ಎಕ್ಕುಂಡಿ — ಸುಬ್ಬಣ್ಣ ರಂಗನಾಥ ಎಕ್ಕುಂಡಿ



ನವ್ಯಪ್ರವಾಹ : ಅಡಿಗ

(ವಿ.ಕೃ. ಗೋಕಾಕ), ವಿ. ಸೀತಾರಾಮಯ್ಯ, ರಂ. ಶ್ರೀ. ಮುಗಳಿ, ಜಿ. ಪಿ. ರಾಜರತ್ನಂ, 'ಆನಂದ ಕಂದ' (ಬೆಟಗೇರಿ ಕೃಷ್ಣ ಶರ್ಮ), ಕೆ. ಎಸ್. ನರಸಿಂಹಸ್ವಾಮಿ, 'ರಾಘವ' (ಎಂ. ವಿ. ಸೀತಾರಾಮಯ್ಯ) ಜಿ. ಎಸ್. ಶಿವರುದ್ರಪ್ಪ, ಚನ್ನವೀರ ಕಣವಿ, ಕಾವ್ಯಾನಂದ (ಸಿದ್ಧಯ್ಯ ಪುರಾಣಿಕ), ಸು. ರಂ. ಎಕ್ಕುಂಡಿ — ಮೊದಲಾದವರು ಆಧುನಿಕ ಕಾವ್ಯ ಕ್ಷೇತ್ರದಲ್ಲಿ ಹೆಸರಾದವರು.

ಈ ಶತಮಾನದ ಐದನೆಯ ದಶಕದಿಂದೀಚೆಗೆ ಕನ್ನಡ ಆಧುನಿಕ ಕಾವ್ಯದಲ್ಲಿ ಹೊಸ ಧ್ವನಿಯೊಂದು ಹೆಚ್ಚು ಪ್ರಮುಖವಾಗಿ ಕೇಳಿಬಂತು. ಕನ್ನಡ ರೊಮ್ಯಾಂಟಿಕ್ ಕಾವ್ಯಕ್ಕೆ ಪ್ರತಿಕ್ರಿಯೆಯಾದ ಈ ಹೊಸ ಕಾವ್ಯ, ಆಧುನಿಕ ಕಾವ್ಯದ ಈಚಿನ ಬೆಳವಣಿಗೆಯಾಗಿ, ನವ್ಯಕಾವ್ಯವೆನಿಸಿತು. ಐತಿಹಾಸಿಕವಾಗಿ ಗೋಕಾಕರಿಂದ ಪ್ರಾರಂಭವಾದ ಈ ಕಾವ್ಯದ ಶ್ರೇಷ್ಠ ಪ್ರತಿನಿಧಿ ಗೋಪಾಲ ಕೃಷ್ಣ ಅಡಿಗರು.

ಕಾವ್ಯ ಹರಿಯುವ ನೀರಿನಂತೆ. ಹೊಸ ನೀರು ಬಂದಾಗ ಹಳೆಯದುಕೊಚ್ಚಿ ಹೋಗುತ್ತದೆ. ಈ ಹೊಸನೀರು ನಿಂತಾಗ ಮತ್ತೆ ಹೊಸ ನೀರುಬರುತ್ತದೆ.

**ನೋಡಿ :** ಎಜ್ರಾ ಪೌಂಡ್ ; ಕಡೆಂಗೋಡ್ಲು ಶಂಕರಭಟ್ಟ ; ಕುವೆಂಪು ; ಗೋಕಾಕ ; ಗೋವಿಂದ ಪೈ ; ಟಿ. ಎಸ್. ಎಲಿಯಟ್ ; ಡಿಲಾನ್ ಥಾಮಸ್ ; ನವ್ಯ ಸಾಹಿತ್ಯ ; ಬಿ ಎಂ ಶ್ರೀ ; ಬೋದ್ಲೇರ್ ; ಮಾಸ್ತಿ ವೆಂಕಟೇಶ ಅಯ್ಯಂಗಾರ್ ; ಮುಗಳಿ ; ಯೇಟ್ಸ್ ; ವಾಲ್ಟ್ ವ್ಹಿಟ್‌ಮನ್ ; ವಿ ಸೀ ; ಸೆಸಿಲ್ ಡೇ ಲೂಯಿಸ್

## ಆಧುನಿಕ ಚಿತ್ರಕಲೆ

ಅದೊಂದು ಚಿತ್ರಕಲಾ ಪ್ರದರ್ಶನ. ಸಂದರ್ಶಕರು ಕಲಾಕೃತಿಗಳ ಮುಂದೆ ಬೆರಗಾಗಿ ನಿಲ್ಲುತ್ತಾರೆ. ಒಂದು ಚಿತ್ರ ವಿವಿಧ ಜಾಮಿತೀಯ ಆಕೃತಿಗಳಿಂದ ತುಂಬಿದ್ದರೆ, ಇನ್ನೊಂದರಲ್ಲಿ ಬಣ್ಣಗಳನ್ನು ಮನಸ್ಸಿಗೆ ಎರಚಿದಂತಿದೆ. ಚೌಕಾಕಾರದ ಬಿಳಿ ಬಟ್ಟೆ. ಅದರಲ್ಲಿ ಬಿಳೀ ಚೌಕವೊಂದನ್ನು ಕೋನದ ಮೇಲೆ ಬಿಡಿಸಿದೆ. ಚಿತ್ರಗಳ ಅರ್ಥವಾದರೂ ಏನಿದ್ದೀತು ?

ವಸ್ತುವನ್ನು ಇದ್ದಂತೆಯೇ ಚಿತ್ರಿಸದೆ ಆ ವಸ್ತುವಿನಿಂದ ಚಿತ್ರಕಾರನ ಮನಸ್ಸಿನ ಮೇಲಾದ ಪರಿಣಾಮವನ್ನು ಪರ್ಯಾಯವಾಗಿ ಸೂಚಿಸುವುದು ಆಧುನಿಕ ಚಿತ್ರಕಲೆಯ ಲಕ್ಷಣ. ಆಧುನಿಕ ಚಿತ್ರಕಲೆಯ ಆರಂಭ ಯಾವಾಗ, ಎಲ್ಲಿಂದ ಎಂಬುದನ್ನು ನಿಖರವಾಗಿ ಹೇಳುವುದು ಕಷ್ಟ. ಈ ಶತಮಾನದ ಚಿತ್ರಕಲೆ ಹಿಂದಿನ ಶತಮಾನದ ಚಿತ್ರಕಲೆಯಿಂದ ಪ್ರೇರಿತ. ಮೇಲೆ ಅದಕ್ಕೆ ಇದು ಪ್ರತಿಕ್ರಿಯೆ. ಹೀಗೆ ಅರಸುತ್ತ ಗವಿಮಾನವ ಬಂಡೆಗಳ ಚಿತ್ರ ಬಿಡಿಸಿದ್ದರವರೆಗೂ ಹಿಂದಕ್ಕೆ ಹೋಗಬಹುದು. ವಸ್ತು ಇದ್ದಂತೆಯೇ ಚಿತ್ರ ಬರೆಯುತ್ತಿದ್ದ ಕಾಲವೊಂದಿತ್ತು. ಮುಂದೆ ಕ್ಯಾಮರಾಗಳು ಬಂದುವು. ಕಲಾವಿದರು ಮಾಡುತ್ತಿದ್ದ ಕೆಲಸವನ್ನು ಅವು ಮಾಡಿದುವು. ಕಲಾವಿದರು ತಮ್ಮ ಪ್ರತಿಭೆಯನ್ನು ತೋರಿಸಲು ಹೊಸ ಮಾರ್ಗಗಳನ್ನು ಹುಡುಕಬೇಕಾಯಿತು. 20ನೆಯ ಶತಮಾನದ ಆರಂಭದಲ್ಲಿ, ಇಂಥ ಕಾಲದ್ದು ಅಥವಾ ನಾಗರಿಕತೆಯದು ಎಂದು ನೋಡದೆ, ಎಲ್ಲ ಕಲಾಕೃತಿಗಳನ್ನೂ ಚಿತ್ರಕಾರರು ಅಭ್ಯಸಿಸತೊಡಗಿದರು. ಹೊಸ ಭಾವನೆಗಳನ್ನು ಸಮರ್ಥವಾಗಿ ವ್ಯಕ್ತಪಡಿಸಬಲ್ಲ ಮಾಧ್ಯಮವನ್ನು ಹುಡುಕಿದರು.

ವಸ್ತುನಿಷ್ಠವಾದ ಆಧುನಿಕ ಚಿತ್ರಕಲೆ ಹಲವಾರು ಪಂಥಗಳಿಗೆ ದಾರಿ ಮಾಡಿಕೊಟ್ಟಿದೆ. ಫ್ರಾನ್ಸಿನ ಕ್ಲಾಡ್ ಮೊನೆ (1840—1926) ಸೂರ್ಯೋದಯದ ಚಿತ್ರವೊಂದನ್ನು ರಚಿಸಿದ. ಅದೊಂದು ಬಗೆಯ ಅಣಕ ಚಿತ್ರ. 'ಸಮಷ್ಟಿ ಪರಿಣಾಮ: ಸೂರ್ಯೋದಯ' ಎಂದು ಶೀರ್ಷಿಕೆ ಕೊಟ್ಟಿದ್ದ. ಆ ಚಿತ್ರದ ಜೊತೆ ಪ್ರದರ್ಶನಕ್ಕಿಟ್ಟಿದ್ದ ಎಲ್ಲ ಚಿತ್ರಗಳನ್ನೂ 'ಸಮಷ್ಟಿ ಪರಿಣಾಮವಾದಿ ಚಿತ್ರಗಳು' ಎಂದು ಒಬ್ಬ ವಿಮರ್ಶಕ ಹೆಸರಿಸಿದ. ಆ ಹೆಸರೇ ಉಳಿದು ಹೋಯಿತು. ಅಂಥ ಚಿತ್ರಕಾರರ ದೃಷ್ಟಿಯಲ್ಲಿ ವಸ್ತು ಗೌಣ. ಚಿತ್ರದ ಮೇಲೆ ಬೀಳುವ ಬೆಳಕು. ನೆರಳಿನಲ್ಲಿ ಹುದುಗಿರುವ ಬಣ್ಣಗಳನ್ನು ಕಂಡುಕೊಳ್ಳುವುದು ಈ ಕಲಾವಿದರು ಆರಿಸಿಕೊಂಡ ವಿಧಾನಗಳು. ಬಣ್ಣಗಳ ಬಗೆಗೆ ಅವರು ವೈಜ್ಞಾನಿಕ ಅಧ್ಯಯನ ಮಾಡಿ ಆ ಜ್ಞಾನವನ್ನು ಚಿತ್ರಕಲೆಯಲ್ಲಿ ಬಳಸಿಕೊಂಡರು.

ಫಾವಿಸಂ ಪಂಥೀಯರಿಗೆ ಬಣ್ಣಗಳು, ಗೆರೆಗಳೇ ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಸುಲಭದ ದಾರಿ. ಫಾವಿಸಂ ಪದದ ಮೂಲ, ಕಾಡು ಮೃಗಗಳು ಎಂಬರ್ಥ ಕೊಡುವ ಫ್ರೆಂಚ್ ಪದ. ಹೆನ್ರಿ ಮಾಟಿಸ್, ದಗಾ ಫಾವಿಸಂನ ಪ್ರಮುಖ ಕಲಾವಿದರು. ಪೂರಕ ಬಣ್ಣಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಹಾಕಿ ಚಿತ್ರ ಸ್ಪಂದಿಸುತ್ತಿದೆಯೇನೋ ಎನಿಸುವಂತೆ ಅವರು ಮಾಡಿದರು.

ಈ ಜಗತ್ತನ್ನು ವಸ್ತುನಿಷ್ಠ ದೃಷ್ಟಿಯಿಂದ ನೋಡಬೇಕು ಎಂದು ಫ್ರೆಂಚ್ ಚಿತ್ರಕಾರ ಸೇಜಾನ್ ಮಾಡಿದ ದೃಢ ನಿರ್ಧಾರದಿಂದ ಮೂಡಿತು— 'ಆಧುನಿಕ ಕಲೆ' ಎಂದು ಕರೆಯಲ್ಪಡುವ ಕಲಾಪ್ರಕಾರ. 'ಆಧುನಿಕ ಕಲೆಯ ಜನಕ' ಎಂದು ಸೇಜಾನ್ ಪರಿಗಣಿಸಲ್ಪಟ್ಟಿದ್ದಾನೆ.

ಆಫ್ರಿಕನ್ ಶಿಲ್ಪಗಳಿಂದ ಪ್ರಭಾವಿತರಾದ ಪಾಬ್ಲೊ ಪಿಕಾಸೋ ಹಾಗೂ ಜಾರ್ಜ್ ಬ್ರಾಕ್ ಘನಾಕೃತಿ ಕಲೆಯ ಪ್ರವರ್ತಕರಾದರು. ಪ್ರಕೃತಿಯನ್ನು ಸ್ತಂಭಾಕೃತಿ. ಗೋಳ ಮತ್ತು ಶಂಖಾಕಾರಗಳಿಂದ ನಿರೂಪಿಸಬೇಕು ಎಂಬ ಸೇಜಾನನ ವಾಕ್ಯ ಅವರ ದಾರಿದೀಪ. ಜಾಮಿತೀಯ ಆಕೃತಿಗಳಲ್ಲಿ ಅವರು ಪ್ರಕೃತಿಯ ಸೌಂದರ್ಯವನ್ನು ಸೆರೆಹಿಡಿದಿದ್ದಾರೆ. ಈ ಪಂಥದ ಕಲಾವಿದ ಒಂದು ವಸ್ತುವಿನ ಎದುರಿಗೆ ಕಾಣುವ ಪಾರ್ಶ್ವವಷ್ಟೇ ಅಲ್ಲ ಅಗೋಚರ ಪಾರ್ಶ್ವಗಳೂ ಕಾಣುತ್ತಿವೆ ಎಂಬ ಭಾವನೆ ಮೂಡಿಸಲು ಯತ್ನಿಸುತ್ತಾನೆ.

ಸ್ವೇಚ್ಛಾಸಂಕೇತ ಕಲೆ ಇಟಲಿಯಲ್ಲಿ ಬೆಳಕು ಕಂಡ ಪಂಥ. ಇದರ ಪ್ರಭಾವ ಬಹಳ ಕಾಲ ಇರಲಿಲ್ಲ. ಆದರೂ ಇದೊಂದು ಪ್ರಮುಖ ಪಂಥ. ತಮ್ಮ ಕಾಲದ ಕ್ರೌರ್ಯ, ಆವೇಶ ವೇಗಗಳನ್ನು ತಮ್ಮ ಚಿತ್ರದಲ್ಲಿ ಸೆರೆ ಹಿಡಿಯಲು ಈ ವರ್ಗದ ಚಿತ್ರಕಾರರು ಯತ್ನಿಸಿದರು. ಬೆಳಕು ಸದಾ ಚಲನಶೀಲ. ಅದರಿಂದಾಗಿ ಆ ಬೆಳಕಿಗೆ ಒಳಗಾದ ವಸ್ತುವಿನಲ್ಲಿಯೂ ಚಲನೆ ಏರ್ಪಡುತ್ತದೆ —ಎಂಬುದು ಅವರ ಅಭಿಪ್ರಾಯ. ಆ ಅಭಿಪ್ರಾಯಕ್ಕೆ ಚಿತ್ರರೂಪವನ್ನು ಕೊಡಲು ಅವರು ಒಂದೇ ಆಕಾರದ ಗೆರೆಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಎಳೆಯುತ್ತಿದ್ದರು. ಸಂಪ್ರದಾಯ ವಿರೋಧಿಗಳಾಗಿದ್ದ ಇವರು ಹಳೆಯ ಜಾಡನ್ನು ಬಿಟ್ಟು ಹೊಸ ಜಾಡಿನಲ್ಲಿ ನಡೆದರು.

ಜರ್ಮನಿಯಲ್ಲಿ ಜನ್ಮ ತಳೆಯಿತು ಅಭಿವ್ಯಕ್ತಿವಾದ. ಈ ಪಂಥದ ಚಿತ್ರಕಾರರು ವಾನ್ ಗೋ (1853—90) ನಿಂದ ಪ್ರಭಾವಿತರಾದವರು. ಈ ಪಂಥದ ರೆನ್ವಾ ಎಂಬ ಕಲಾವಿದ ಮಧ್ಯಯುಗದ ಬಣ್ಣದ ಗಾಜಿನ ಕಿಟಕಿಗಳ ರಚನಾ ಶೈಲಿಯನ್ನು ಅನುಸರಿಸಿದ. ಬಲವಾದ ಕಪ್ಪು ಗೆರೆಗಳನ್ನೂ ಎದ್ದುಕಾಣುವ ಬಣ್ಣದ ವ್ಯತ್ಯಾಸಗಳನ್ನೂ ತನ್ನ ಚಿತ್ರಗಳಲ್ಲಿ ಬಳಕೆಗೆ ತಂದ. ತಾವು ಉಪಯೋಗಿಸುವ ಬಣ್ಣಗಳು, ಹೊಳಪು –ದಟ್ಟಣೆಗಳು ತಮ್ಮ ಭಾವನೆಗಳನ್ನು ಎತ್ತಿ ತೋರಿಸಲು ಸಮರ್ಥವಾಗಿವೆ ಎಂಬುದು ಈ ಪಂಥೀಯರ ನಂಬುಗೆ.

ಪಿಕಾಸೋವನ್ನು ಭೇಟಿಮಾಡಿ ಘನಾಕೃತಿ ಕಲೆಯ ಬಗ್ಗೆ ಅಭಿಮಾನ ತಾಳಿದವನು ರಷ್ಯದ ಕಾಜಿಮಿರ್ ಮೇಲ್‌ವಿಚ್. ಘನಾಕೃತಿ ಕಲೆಯ ಕಲಾವಿದರು ವಸ್ತುವನ್ನು ಬಿಡಿಬಿಡಿಯಾಗಿ ಒಡೆದುಕೊಂಡು ಜಾಮಿತೀಯ ಆಕೃತಿಗಳಲ್ಲಿ ಮೂಡಿಸಿದರೆ, ಈತ ಬರೇ ಜಾಮಿತಿಗೇ ಅಂಟಿಕೊಂಡ. ಅವನ ಅನುಯಾಯಿಗಳು ಅದನ್ನು ಕನ್ಸ್‌ಟ್ರಕ್ಟಿವಿಸಂ–ಸಂರಚನಾವಾದ–ಎಂದರು.

ಅಮೂರ್ತ ಅಭಿವ್ಯಕ್ತಿವಾದ, ಬಣ್ಣಗಳನ್ನು ಕ್ಯಾನ್ವಾಸಿನ ಮೇಲೆ ಎರಚಿ ತೇಪೆ ತೇಪೆಯಾದ ಚಿತ್ರ ರಚಿಸುವ ಪಂಥ. ತೇಪೆಗಳು ಯಾವ ಯಾವ ದಿಕ್ಕುಗಳಲ್ಲಿಯೋ ಚಲಿಸುತ್ತಿರುವಂತೆ ಭಾಸವಾಗುತ್ತದೆ. ಲಂಬ ಹಾಗೂ ಅಡ್ಡಗೆರೆಗಳನ್ನೂ ಬಳಸಿ ಸಮತೋಲ ಹಾಗೂ ಪ್ರಸನ್ನತೆಯ ಭಾವನೆಯನ್ನು ಮೂಡಿಸುವ ಪ್ರಯತ್ನ ಇದರಲ್ಲಿ ಕಾಣುತ್ತದೆ. ಅಮೆರಿಕದ ಜಾಕ್ಸನ್ ಪಾಲಕ್ ಈ ಪಂಥದ ಖ್ಯಾತ ಚಿತ್ರಕಾರ. ಕೆಂಪು, ಕಿತ್ತಳೆ. ಹಳದಿ ಬಣ್ಣಗಳು ತೀಕ್ಷ್ಣತೆಯನ್ನು ಸೂಚಿಸುತ್ತವೆ.



ಪ್ರಾಚೀನ ಕಲಾಕೃತಿ

ಯುದ್ಧ ಮತ್ತು ವ್ಯವಸ್ಥಿತ ಸಂಸ್ಥೆಗಳ ವಿರುದ್ಧವಾಗಿ ಕೆಲವು ಕವಿಗಳು, ಕಲಾವಿದರು 1916ರಲ್ಲಿ 'ದಾದಾ' ಎಂಬ ಘೋಷಣೆಯನ್ನಿಟ್ಟುಕೊಂಡು ಒಂದು ಚಳುವಳಿಯನ್ನು ಆರಂಭಿಸಿದರು. ಇವರು ರೂಪಿಸಿದ ಕಲಾಪಂಥ 'ದಾದಾಯಿಸಂ'. ಯಾವುದೇ ತಾರ್ಕಿಕ, ನೈತಿಕ, ಕಲಾತ್ಮಕ ಮೌಲ್ಯಗಳನ್ನು ಒಪ್ಪಿಕೊಂಡು ನಡೆಯುವುದರ ಬುಡಕ್ಕೆ ಕೊಡಲಿ ಹಾಕಿ, ಆ ಮನೋಭಾವವನ್ನು ನಾಶ ಮಾಡಬೇಕೆಂಬ ಉದ್ದೇಶದ ಚಳುವಳಿ ಇದು. ಹ್ಯಾನ್ಸ್ ಆರ್ಪ್ ಮತ್ತು ಮ್ಯಾನ್ ರೇ ದಾದಾಯಿಸಂ ಆರಂಭಿಸಿದವರು. ಇವರು ಕಲಾತ್ಮಕತಾ ವಿರೋಧಿ ಕೃತಿಗಳ ಸೃಷ್ಟಿಕರ್ತರು. ವಿಚಿತ್ರ ಕಲ್ಪನೆ ಮತ್ತು ಅಜಾಗೃತ ಪ್ರಜ್ಞೆಯಿಂದ ಪ್ರಚೋದಿತವಾದ ಸ್ವಚ್ಛಂದರೂಪಗಳನ್ನು ಇವರು ನಂಬಿದ್ದರು. ಇವು ಮೇಲುನೋಟಕ್ಕೆ ಅರ್ಥಹೀನ. ಆದರೆ ವಿಡಂಬನೆಯ ಭಾವ ತುಂಬಿರುತ್ತಿತ್ತು. ಇದು ಸರ್ರೀಯಲಿಸಮ್‌ಗೆ ದಾರಿ ಮಾಡಿಕೊಟ್ಟಿತು. ಫ್ರಾಯ್ಡನ ಮನೋವಿಜ್ಞಾನದ ಪ್ರಭಾವಕ್ಕೊಳಗಾದವರ ಪಂಥ ಸರ್ರೀಯಲಿಸಂ. ಭ್ರಾಂತಿ, ಕನಸು, ಆವೇಶಗಳು ಇವರ ಚಿತ್ರಗಳ ಪ್ರಧಾನ ವಸ್ತುಗಳು. ಈ ಪಂಥದಲ್ಲಿ ಚಿರಿಕೊ ಮತ್ತು ಡಾಲಿ ಪ್ರಮುಖರು.

ಮಾಂಡ್ರಿಯನ್, ಕಾಂಡಿನ್‌ಸ್ಕಿ ಅಮೂರ್ತ ಕಲಾ ಪಂಥದವರು. ವಸ್ತುವನ್ನು ಗೆರೆಗಳಲ್ಲಿ, ಕೆಲವೇ ಬಣ್ಣಗಳಲ್ಲಿ, ಸೂಚಿಸುವ ಯತ್ನ ಇವರದು.

ಈಗ ಯಾವುದೇ ಸಮಸ್ಯೆ ಒಂದು ದೇಶಕ್ಕಷ್ಟೇ ಸೀಮಿತವಾಗುವುದಿಲ್ಲ. ಹಾಗೆಯೇ ಕಲೆಯ ವ್ಯಾಪ್ತಿಯೂ ವಿಶಾಲ; ಅದು ಅಂತರರಾಷ್ಟ್ರೀಯ. ಹಿಂದಿನ ಎಲ್ಲ ಪದ್ಧತಿಗಳೂ ಎಲ್ಲ ರಾಷ್ಟ್ರೀಯ ವೈಶಿಷ್ಟ್ಯಗಳೂ ಇಂದಿನ ಕಲಾವಿದನ ಮೇಲೆ ಪ್ರಭಾವ ಬೀರುತ್ತವೆ.

ನೋಡಿ : ಅಮೂರ್ತ ಕಲೆ ; ಕ್ಲಾಡ್ ಮೊನೆ ; ಘನಾಕೃತಿ ಕಲೆ ; ಚರಿತ್ರಪೂರ್ವ ಕಲೆ ; ಪಾಶ್ಚಾತ್ಯ ಚಿತ್ರಕಲೆ ; ಮಾಟಿಸ್ ; ವಾನ್ ಗೋ ; ಸಮಷ್ಟಿ ಪರಿಣಾಮ ಕಲೆ ; ಸೇಜಾನ್ ; ಸ್ವೇಚ್ಛಾ ಸಂಕೇತ ಕಲೆ

## ಆಧುನಿಕ ಸಂಗೀತ

ಇಂದು ಸಿನೆಮಾ ಗೀತೆಗಳನ್ನು ಕೇಳುತ್ತೇವೆ. ಭಾವಗೀತೆಗಳನ್ನು ಮೆಚ್ಚುತ್ತೇವೆ. ವಾದ್ಯ ಮೇಳಗಳು. ಜಾನಪದ ಗೀತೆಗಳು. ಪಾಶ್ಚಾತ್ಯ ಬೀಟ್ಲ್ ಸಂಗೀತದ ಅನುಕರಣೆಗಳೂ ಕೇಳಿ ಬರುತ್ತವೆ.

ಇವೆಲ್ಲ ಆಧುನಿಕ ಸಂಗೀತದ ವಿವಿಧ ಬಗೆಗಳು.

'ಆಧುನಿಕ' ಎಂದರೆ ಇಷ್ಟೇ ಅಲ್ಲ, ಪ್ರಾಚೀನವಲ್ಲದ್ದೆಲ್ಲ ಆಧುನಿಕವೇ. ಭಾರತೀಯ ಶಾಸ್ತ್ರೀಯ ಸಂಗೀತ ಕಳೆದ ಒಂದೆರಡು ಶತಮಾನಗಳಿಂದ ಆಧುನಿಕ ಘಟ್ಟದಲ್ಲಿದೆ. ಸುಮಾರು 18ನೆಯ ಶತಮಾನದ ಮಧ್ಯದಲ್ಲಿ ಭಾರತೀಯ ಶಾಸ್ತ್ರೀಯ ಸಂಗೀತದ–ವಿಶೇಷವಾಗಿ ಕರ್ಣಾಟಕ ಸಂಗೀತದ– ಆಧುನಿಕ ಯುಗ ಆರಂಭವಾಯಿತು.

ಪಾಶ್ಚಾತ್ಯ ಸಂಗೀತದಲ್ಲಿ ಆಧುನಿಕ ಯುಗ ಆರಂಭವಾದದ್ದು ಈ ಶತಮಾನದಿಂದ. ನವ ನವೀನ ಸೃಷ್ಟಿಗಳು, ಹಳೆಯದನ್ನು ಹೊಸದಾಗಿಸುವ ಪ್ರಯತ್ನಗಳು ಈ ಸಂಗೀತದ ಇಂದಿನ ಒಲವುಗಳು. ಬಂಡಾಯ ಪ್ರವೃತ್ತಿ ಇದರ ವೈಶಿಷ್ಟ್ಯ.

ಕರ್ನಾಟಕ ಸಂಗೀತದ ಇಂದಿನ ರೂಪ ಸುಮಾರು 150 ವರ್ಷಗಳಿಗೆ ಹಿಂದೆ ಈ ಸಂಗೀತದ ಸುವರ್ಣ ಯುಗಕ್ಕೆ ಕಾರಣರಾದ ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತ ಹಾಗೂ ಶಾಮಶಾಸ್ತ್ರಿಗಳ ಕಾಲದಿಂದ ಆರಂಭ ವಾಯಿತು. ಕರ್ನಾಟಕ ಸಂಗೀತ ದಕ್ಷಿಣ ಭಾರತದಲ್ಲಿ ಇವರಿಂದ ವ್ಯಾಪಕ ವಾಗಿ ಪ್ರಚುರಗೊಂಡಿತು. ಜನಕ ಜನ್ಯರಾಗಗಳು, ತಾಳಗಳ ವಿಂಗಡಣೆ, ಅವುಗಳ ಉಪಭೇದಗಳು—ಇವನ್ನೆಲ್ಲ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಇರಿಸಿ, ಇದರ ಆಧಾರದ ಮೇಲೆ ರೂಪಿಸಿದ ರಚನೆಗಳು ಆಧುನಿಕ ಕರ್ನಾಟಕ ಸಂಗೀತದ ಒಂದು ಸ್ಥೂಲ ಪರಿಚಯ ನೀಡುತ್ತವೆ. ಸಂಗೀತಾಭ್ಯಾಸ ಮಾಡುವವರಿಗೆ ಆಧುನಿಕ ಕರ್ನಾಟಕ ಸಂಗೀತ ಪದ್ಧತಿಯಲ್ಲಿ ಸರಳೆ, ಜಂಟಿಸ್ವರ, ಅಲಂಕಾರ, ಸ್ವರಜತಿ, ಗೀತೆ, ವರ್ಣ ಹಾಗೂ ಕೃತಿ—ಇದು ಕ್ರಮ. ಕಛೇರಿಯಾದರೆ ವರ್ಣದಿಂದ ಆರಂಭ. ಸ್ವಲ್ಪವೇ ರಾಗ ಸ್ವರ ವಿನ್ಯಾಸ ದೊಡನೆ ಕೆಲವು ಕೃತಿಗಳ ಹಾಡಿಕೆ. ಅನಂತರ ಸವಿಸ್ತಾರವಾಗಿ ರಾಗ ಆಲಾಪನೆ, ತಾನ, ಪಲ್ಲವಿ ನಿರೂಪಣೆ; ಕೊನೆಗೆ ಲಘುಸಂಗೀತ. ಪಕ್ಕ ವಾದ್ಯಗಳೆಂದರೆ ಕನಿಷ್ಠ ಪಿಟೀಲು, ಮೃದಂಗಗಳು ಇರುತ್ತವೆ. ಕೆಲವು ನಿರ್ದಿಷ್ಟ ರಾಗಗಳಲ್ಲಿ ಮುಕ್ತಾಯ ಮಾಡುವುದು ಮಂಗಳಕರವೆಂದು ಕರ್ನಾಟಕ ಹಾಗೂ ಹಿಂದೂಸ್ತಾನಿ ಎರಡೂ ಪದ್ಧತಿಗಳವರು ಭಾವಿಸುತ್ತಾರೆ.

ಹಿಂದೂಸ್ತಾನಿ ಸಂಗೀತದಲ್ಲಿ ಸಂಗೀತಪಾಠ, ರಾಗಗಳ ಪರಿಚಯ ದೊಡನೆಯೇ ಆರಂಭ. ರಾಗಗಳ ಸ್ಥೂಲ ಪರಿಚಯ ಮೊದಲಿಗೆ. ಅನಂತರ ವಿಸ್ತಾರವಾಗಿ ರಾಗಗಳ ಅಭ್ಯಾಸ—ಧ್ರುಪದ್, ಧಮಾರ್, ಖ್ಯಾಲ್, ತರಾನಗಳ ಮೂಲಕ. ಭಜನೆಗಳು, ಘಜಲ್, ಠುಮರಿಗಳೂ ಕೊನೆಯ ಘಟ್ಟದಲ್ಲಿ ಪಾಠವಾಗಬಹುದು. ಘರಾಣೆ—ಒಂದೊಂದು ಮನೆತನ ಅಥವಾ ಖ್ಯಾತ ಗುರುವಿನ ಸಂಗೀತ ಶೈಲಿಯನ್ನು ಅನುಸರಿಸಿ ಹಾಡುವ ವಿಧಾನ. ಇದು ಹಿಂದೂಸ್ತಾನಿ ಸಂಗೀತಕ್ಕೆ ವಿಶಿಷ್ಟವಾದದ್ದು. ರಾಗದಲ್ಲಿ ವಿಸ್ತಾರವಾದ ಆಲಾಪನೆ, ಬೋಲ್‌ತಾನಗಳೂ ಕಚೇರಿಯ ಕೊನೆಯಲ್ಲಿ ಲಘು ಸಂಗೀತವೂ ಇದರ ಇಂದಿನ ಕಚೇರಿ ಪದ್ಧತಿ. ಈ ಎರಡು ಪದ್ಧತಿಗಳಲ್ಲಿ ರಾಗ, ಸ್ವರ ವಿನ್ಯಾಸ, ಸಂಗತಿ (ನೆರವಲ್) ಹಾಕುವುದು ಇವು ಸಂಗೀತಗಾರನ ಮನೋಧರ್ಮಕ್ಕೆ ಕನ್ನಡಿ ಹಿಡಿಯುತ್ತವೆ. ಇದರಿಂದಲೇ ಕೃತಿ ಮತ್ತೆ ಮತ್ತೆ ಹಾಡಲ್ಪಟ್ಟರೂ ವೈಯಕ್ತಿಕ ಕಲ್ಪನೆಗೆ ತಕ್ಕಂತೆ ಸಂಗೀತ ನಿರೂಪಣೆಯೂ ಬದಲುಗೊಂಡು ಒಂದೊಂದು ಬಾರಿ ಹಾಡಿದಾಗಲೂ ನಾವೀನ್ಯತೋರುತ್ತದೆ. ಈ ಎರಡು ಸಂಗೀತ ಪದ್ಧತಿಗಳೂ ತಮ್ಮಲ್ಲಿ ಈವರೆಗೆ ಬೋಧಿಯಲ್ಲಿಲ್ಲದ ರಾಗಗಳನ್ನು ಒಗ್ಗಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತವೆ.

ಹಿನ್ನೆಲೆ ವಾದ್ಯಸಂಗೀತ, ಸ್ವತಂತ್ರ ವಾದ್ಯಮೇಳ ನಮ್ಮ ಆಧುನಿಕ ಸಂಗೀತದಲ್ಲಿ ಜನಪ್ರಿಯವಾದ ಬಗೆಗಳು. ಸಿನೆಮಾ ಸಂಗೀತದಲ್ಲಿ ನೂರಾರು ವಾದ್ಯಗಳ ಹಿಮ್ಮೇಳವಿದೆ. ಇವು ಶಾಸ್ತ್ರೀಯ ರಾಗಗಳ ಆಧಾರದ ಮೇಲೆ ರಚಿಸಲ್ಪಟ್ಟಿರಬಹುದು ಅಥವಾ ಕೇವಲ ಮಾಧುರ್ಯವೇ ಅವುಗಳ ಗುರಿಯಾಗಿದ್ದು ರಾಗದ ಕಟ್ಟುನಿಟ್ಟಿನಿಂದ ಪಾರಾದ ಧಾಟಿಯ ಕೃತಿಗಳಿರಬಹುದು. ಪಾಶ್ಚಾತ್ಯ ಸಂಗೀತದಂತೆ ತೀವ್ರ ಲಯ ಈಗಿನ ಭಾರತೀಯ ಲಘುಸಂಗೀತಗಳಲ್ಲಿ ಹೆಚ್ಚು ಹೆಚ್ಚು ಬಳಕೆಗೆ ಬರುತ್ತಿದೆ.

ಸಾಂಪ್ರದಾಯಿಕವಾಗಿ ಬಂದ 'ಸಿ' ಪ್ರಧಾನ ಮುಂತಾಗಿ ಒಂದು ಸ್ವರ ಕೇಂದ್ರವುಳ್ಳ ಸಂಗೀತ ಪದ್ಧತಿ ಪಾಶ್ಚಾತ್ಯ ಸಂಗೀತದಲ್ಲಿ ಈಗ ಇಲ್ಲ. ಮೊದಲು ಏಳೇ ಸ್ವರಗಳಿದ್ದ ಪಾಶ್ಚಾತ್ಯ ಸಂಗೀತಕ್ಕೆ ಈಗ ಇನ್ನೂ ಐದು ಸೇರಿ ಹನ್ನೆರಡು ಸ್ವರಗಳಾಗಿವೆ. 'ಮೆಲೊಡಿ' (ಒಂದು ಬಾರಿಗೆ ಒಂದೇ ಸ್ವರವನ್ನು ಬಾರಿಸುವುದು) ಹಾಗೂ 'ಹಾರ್ಮೊನಿ'



ಶ್ರೋತೃಗಳ ಮುಂದೆ ಸಂಗೀತವಾದನ

(ಸ್ವರಗಳ ಮೇಳ)ಗಳನ್ನು ಉಂಟುಮಾಡುವುದರಲ್ಲಿ ಇಂದು ಅವರಲ್ಲಿ ಸ್ವಾತಂತ್ರ್ಯ ಹೆಚ್ಚು. ಮೊದಲಿನ ಪ್ರಧಾನ ಸ್ವರಪದ್ಧತಿ ಬಿಟ್ಟದ್ದರಿಂದ ಈಗ ಎಲ್ಲ ಹನ್ನೆರಡು ಸ್ವರಗಳಿಗೂ ಸಮಾನ ಪ್ರಾಶಸ್ತ್ಯ ದೊರೆತಿದೆ. ಹೀಗೆ ಸ್ವರಗಳನ್ನು ಮುಕ್ತವಾಗಿ ಬಳಸುವುದರಿಂದ ಇಂಥ ಸಂಗೀತವನ್ನು ಅಪಸ್ವರವೆಂದು ಕೆಲವರು ಕರೆಯುತ್ತಾರೆ. ಲಯದಲ್ಲಿಯೂ ಜಟಿಲತೆ ಹೆಚ್ಚು. ಆವರ್ತಕ್ಕೆ ಆಧುನಿಕ ಪಾಶ್ಚಾತ್ಯ ಸಂಗೀತದಲ್ಲಿ ಕಲ್ಪನಾ ರೂಪಗಳೂ ಮೊದಲಿನಂತಿಲ್ಲ, ಬೇಗ ಬೇಗ ಬದಲಾಗುತ್ತವೆ. ಈ ಹಿಂದೆ ಸಂಗೀತಗಾರರು ಸಾಧಿಸಿದ್ದ ರೂಪಕ್ಕೆ ವ್ಯತಿರಿಕ್ತವಾಗಿ ಅನಿರೀಕ್ಷಿತ ಬದಲಾವಣೆಗಳು ಆಗುತ್ತವೆ. ಇದರಿಂದ ಕೇಳುವವನ ಮನಸ್ಸು ಒಂದು ನೆಲೆಯಲ್ಲಿ ನಿಲ್ಲುವ ಮೊದಲೇ ಒಂದು ಮಾಧುರ್ಯವನ್ನು ಅನುಭವಿಸುವ ಮೊದಲೇ ಇನ್ನೊಂದು ಮತ್ತೊಂದು ಹೀಗೆ ತಟಪಟನೆ ರೂಪಗಳು ಮಿಂಚಿ ಮಾಯವಾಗಬಹುದು. ಇವು ಪುನರಾವರ್ತನೆಗೊಳ್ಳದಿರಲೂಬಹುದು. ಇದರಿಂದ, ಇಂಥ ಆಧುನಿಕ ಪಾಶ್ಚಾತ್ಯ ಸಂಗೀತ ಕೇಳುವವರಿಗೆ ಏಕಾಗ್ರತೆ ಅತ್ಯವಶ್ಯ. ಸಮಷ್ಟಿ ಪರಿಣಾಮವಾದ, ಪ್ರಧಾನಸ್ವರ ವರ್ಜ್ಯತೆ ಹಾಗೂ ನವ ಅಭಿಜಾತಪದ್ಧತಿ ಇವು ಆಧುನಿಕ ಪಾಶ್ಚಾತ್ಯ ಸಂಗೀತದ ಮೂರು ಮುಖ್ಯ ಶೈಲಿಗಳು.

ಪಶ್ಚಿಮದಲ್ಲೂ ಜಾನಪದ ಸಂಗೀತದೆಡೆಗೆ ಗಮನ ಹರಿದಿದೆ. ಅಲ್ಲಿ ಮನೋಧರ್ಮವನ್ನು ತೋಡಿಕೊಳ್ಳಲು ಅವಕಾಶವಿರುವ ಜಾಜ್ ಇಂದಿನ ಅತ್ಯಂತ ಜನಪ್ರಿಯ ಸಂಗೀತ. ಪಾಪ್ ಸಂಗೀತ, ಬೀಟ್ಲ್ ಸಂಗೀತಗಳೂ ಪ್ರಭಾವೀ ನವ್ಯ ಸಂಗೀತಗಳು. ಆರ್ನಾಲ್ಡ್ ಸ್ಕೋನ್‌ಬರ್ಗ್, ಇಗರ್ ಸ್ಟ್ರಾನ್‌ಸ್ಕಿ ಹಾಗೂ ಕ್ಲಾಡ್ ಡಿಬಸ್ಸಿ ಇವರು ಹೆಸರಿಸಬಹುದಾದ ನೂತನ ರಚನಕಾರರು. ಇತರ ಕೆಲವರು ಜಟಿಲ ಗಣಿತ ಸೂತ್ರಗಳು ಹಾಗೂ ಸಮೀಕರಣಗಳನ್ನು ಉಪಯೋಗಿಸಿ ಕೆಲ ರಚನೆಗಳನ್ನು ಸೃಷ್ಟಿಸಿದ್ದಾರೆ. ಕೆಲವರು ಗ್ರಾಫ್ ಕಾಗದದ ಮೇಲೆ ಗುರುತಿಸಿಯೂ ಸಂಗೀತ ರಚಿಸುತ್ತಾರೆ.

ಪಾಶ್ಚಾತ್ಯ ಸಂಗೀತದ ಅತಿ ಹೊಸ ಕ್ಷೇತ್ರ ಎಲೆಕ್ಟ್ರಾನಿಕ್ ಸಂಗೀತ—ಎಲೆಕ್ಟ್ರಾನಿಕ್ ವಾದ್ಯಗಳನ್ನು ಉಪಯೋಗಿಸಿ ರಚಿತವಾದದ್ದು. ಹಿಂದಿನಿಂದ ಪ್ರಚಾರದಲ್ಲಿದ್ದ ಸ್ವರ ಮೇಳಗಳು ಮುಂತಾದುವುಗಳಿಗೆ



ನೂತನ ರಚನೆ :
ಕ್ಲಾಡ್ ಡಿಬಸ್ಸಿ

[illegible] ಮೆಚ್ಚುವ ಟ್ಯೂನ್ [illegible] ಸಪ್ಪೆ. [illegible] ಟ್ಯೂನ್‌ಗಳನ್ನು ವಾದ್ಯಗಳಿಂದ [illegible]ತ್ತಾರೆ. ಇಂಥ ಕೆಲವು ಕೃತಕ ಟ್ಯೂನ್‌ಗಳನ್ನು ಒಂದು ಮಾದರಿಯಲ್ಲಿ ಒಟ್ಟುಗೂಡಿಸಿ ಮಿಶ್ರಿತವಾದ ಸಂಗೀತ ಉಂಟುಮಾಡುತ್ತಾರೆ.

ನೋಡಿ : ಜಾಜ್ ಸಂಗೀತ ; ಪಾಪ್ ಸಂಗೀತ ; ಪಾಶ್ಚಾತ್ಯ ಸಂಗೀತ ; ಭಾರತೀಯ ಸಂಗೀತ ; ಹಿನ್ನೆಲೆ ಸಂಗೀತ

## ಆನಂದವರ್ಧನ

" ಅಪಾರವಾದ ಕಾವ್ಯಜಗತ್ತಿನಲ್ಲಿ ಕವಿಯೇ ಸೃಷ್ಟಿಕರ್ತ. ತನಗೆ ಹೇಗೆ ರುಚಿಸುವುದೋ ಹಾಗೆ ಈ ವಿಶ್ವವನ್ನು ಆತ ಪರಿವರ್ತಿಸುತ್ತಾನೆ."

—ಸುಪ್ರಸಿದ್ಧ ವಿಮರ್ಶಕ ಆನಂದವರ್ಧನನು ಕವಿಯನ್ನು ಕುರಿತು ಆಡಿರುವ ಮಾತು ಇದು. ಸಾಹಿತ್ಯ ವಿಮರ್ಶೆಯ ಮೂಲ ವಿಚಾರಗಳ ನಿರೂಪಣೆಯಲ್ಲಿ, ವಿಶ್ಲೇಷಣೆಯಲ್ಲಿ ಈತ ಹೊಸ ಹೆಜ್ಜೆಗಳನ್ನಿಟ್ಟು ಅಂದಿನ ರಸಿಕರ ಮೆಚ್ಚುಗೆಗೆ ಪಾತ್ರನಾದ. ಆಧುನಿಕ ವಿಮರ್ಶಕರ ಪ್ರಶಂಸೆಗೂ ಈತ ಅರ್ಹ.

ಆನಂದವರ್ಧನನ ವಿಚಾರಗಳನ್ನು ಒಪ್ಪದವರೂ ಅವನನ್ನು ಗೌರವಿಸುತ್ತಾರೆ. ಅಷ್ಟು ದೊಡ್ಡ ವ್ಯಕ್ತಿತ್ವ ಅವನದು.

ಕಾವ್ಯದಲ್ಲಿ ರಸವೇ ಮುಖ್ಯ ; ಇವನ್ನು ಗುರಿಯಾಗಿಟ್ಟುಕೊಂಡೇ ಕವಿಗಳು ಕಾವ್ಯರಚನೆ ಮಾಡಬೇಕು ; ಇದರಲ್ಲಿ ಎಚ್ಚರ ತಪ್ಪಬಾರದು —ಎಂದು ಸಾರಿದವನು ಆನಂದವರ್ಧನ.

ಈತ ಕಾಶ್ಮೀರದವನು. ಕಾಲ ಸುಮಾರು ಕ್ರಿ.ಶ. 850. ಅವಂತಿವರ್ಮನೆಂಬ ಅರಸನ ಆಸ್ಥಾನದಲ್ಲಿ ಮನ್ನಣೆ ಪಡೆದಿದ್ದ. ' ಧ್ವನ್ಯಾಲೋಕ ' ವೆಂಬ ಮಹಾಗ್ರಂಥವನ್ನು ರಚಿಸಿ ಕೀರ್ತಿಶಾಲಿಯಾದ.

ಕಾವ್ಯದಲ್ಲಿ ' ಧ್ವನಿ ' ಎಂಬ ಒಂದು ಶಕ್ತಿ ಇದೆ ಎಂಬ ಅಭಿಪ್ರಾಯಕ್ಕೆ ಕಾರಣನಾದವನು ಆನಂದವರ್ಧನ. ಕವಿ ಉಪಯೋಗಿಸುವ ಶಬ್ದಗಳೂ ಅವು ಸ್ಪಷ್ಟವಾಗಿ ತಿಳಿಸುವ ಅರ್ಥವೂ ಕಾವ್ಯದ ಸಾರವಲ್ಲ. ಬಾಯಿಬಿಟ್ಟು ಹೇಳದಿರುವ ಇನ್ನೊಂದು ಅರ್ಥವೂ ಕಾವ್ಯದಲ್ಲಿ ಅಡಗಿರುತ್ತದೆ. ಇದು ಧ್ವನಿ. ಕಾವ್ಯದ ಆತ್ಮ ' ಧ್ವನಿ '. ಇದು ಮೇಲುನೋಟಕ್ಕೆ ಕಾಣಿಸುವುದಿಲ್ಲ. ಆದರೆ ರಸಿಕ ಇದನ್ನು ಅರಿತುಕೊಳ್ಳಬಲ್ಲ ; ಅದರಿಂದ ಆಹ್ಲಾದ ಪಡೆಯಬಲ್ಲ. ಯಾವುದು ರಸಿಕರ ಮನೋರಂಜನೆಯನ್ನು ಮಾಡುತ್ತದೋ ಅದು ಅತಿ ಮುಖ್ಯ ಕಾವ್ಯ ಲಕ್ಷಣ. 'ಕಾವ್ಯಸ್ಯಾತ್ಮಾ ಧ್ವನಿಃ'–ಧ್ವನಿಯೇ ಕಾವ್ಯದ ಆತ್ಮ -ಎಂಬುದು ಆನಂದವರ್ಧನನ ' ಧ್ವನ್ಯಾಲೋಕ ' ದಲ್ಲಿ ಪ್ರತಿಪಾದಿತವಾಗಿರುವ ಮುಖ್ಯ ಅಂಶ.

ಆನಂದವರ್ಧನನು ಇತರ ಕೆಲವು ಆಲಂಕಾರಿಕರಂತೆ ಕಾವ್ಯದ ಗುಣ, ದೋಷಗಳ ಪಟ್ಟಿಯನ್ನು ಬೆಳೆಸುತ್ತ ಹೋಗಿಲ್ಲ ; ಮಹಾಕವಿಗಳ ರಹಸ್ಯವೇನು, ಕವಿಯ ಪ್ರತಿಭೆಯನ್ನು ಗುರುತಿಸುವುದು ಯಾವುದರಿಂದ, ಹಿಂದಿನ ಕವಿಗಳ ಕಾವ್ಯಾರ್ಥವನ್ನು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಂಡರೆ ದೋಷಗಳು ತಪ್ಪುತ್ತವೆ, ಕಾವ್ಯದ ರಸಾಸ್ವಾದನೆಯ ನಿಯಮವೇನು, ವಿಮರ್ಶೆಯ ತತ್ತ್ವಗಳು ಯಾವುವು ಎಂಬಿತ್ಯಾದಿ ಪ್ರಶ್ನೆಗಳಿಗೆ ಖಚಿತವೂ ಯುಕ್ತಿಪೂರ್ಣವೂ ಆದ ಉತ್ತರಗಳನ್ನು ಕೊಟ್ಟಿದ್ದಾನೆ. ಕಾವ್ಯಗಳಲ್ಲಿ ಉತ್ತಮ, ಮಧ್ಯಮ, ಅಧಮ ಎಂಬ ಬಗೆಗಳಿವೆ ಎಂದು ವಿಂಗಡಿಸಿದ್ದಾನೆ. ರಾಮಾಯಣ, ಮಹಾಭಾರತಗಳಿಂದ ಹಿಡಿದು ಪ್ರಾಕೃತ ಭಾಷೆಯ ಕಾವ್ಯಗಳವರೆಗೆ ಸಿಂಹಾವಲೋಕನ ಮಾಡಿ ಅವುಗಳಿಂದ ಉದಾಹರಣೆಗಳನ್ನು ಆರಿಸಿಕೊಂಡಿದ್ದಾನೆ. ಪಂಡಿತರಿಗೂ ಅಷ್ಟು ಪರಿಣತರಲ್ಲದ ರಸಿಕರಿಗೂ ಒಂದೇ ರೀತಿ ಕುತೂಹಲಕಾರಿಯಾಗುವಂತೆ ವಿಷಯದ ವಿಶ್ಲೇಷಣೆಯನ್ನು ಮಾಡಿದ್ದಾನೆ. ಇವನ ಈ ಕೃತಿಗೆ 'ಕಾವ್ಯಾಲೋಕ', 'ಸಹೃದಯಾಲೋಕ' ಎಂಬ ಹೆಸರುಗಳೂ ಇವೆ. 'ಧ್ವನ್ಯಾಲೋಕ' ಸಂಸ್ಕೃತದ ಅಲಂಕಾರಶಾಸ್ತ್ರ ಕ್ಷೇತ್ರದ ಪ್ರಮುಖ ಗ್ರಂಥಗಳಲ್ಲೊಂದು. ಅನಂತರದ ಅನೇಕ ಆಲಂಕಾರಿಕರು ಆನಂದವರ್ಧನನ ಪ್ರಭಾವಕ್ಕೆ ಒಳಗಾಗಿದ್ದಾರೆ. ಪ್ರಸಿದ್ಧ ಪಂಡಿತ ಅಭಿನವಗುಪ್ತ 'ಧ್ವನ್ಯಾಲೋಕ' ಕ್ಕೆ 'ಲೋಚನ' ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

ತೀ. ನಂ. ಶ್ರೀ ಅವರು ಹೇಳಿರುವಂತೆ ಖಚಿತವೂ ತಲಸ್ಪರ್ಶಿಯೂ ಆದ ನಿರೂಪಣೆ, ವಿಚಾರವನ್ನು ಸ್ಪಷ್ಟಪಡಿಸಲು ಉದಾಹರಣೆಗಳನ್ನು ಆರಿಸಿಕೊಂಡಿರುವುದರಲ್ಲಿ ತೋರಿರುವ ರಸಜ್ಞತೆ—ಇವು 'ಧ್ವನ್ಯಾಲೋಕ'ದ ವಿಶಿಷ್ಟ ಗುಣಗಳು. ಇವುಗಳಿಂದಾಗಿ ಈ ಅಲಂಕಾರ ಗ್ರಂಥ ವಿದ್ವಾಂಸರಿಗೆ ಪ್ರಿಯವಾಗಿದೆ.

ಆನಂದವರ್ಧನ ವಿಮರ್ಶಕ ಮಾತ್ರವೇ ಅಲ್ಲ. ಕವಿಯೂ ಹೌದು. ಅವನು 'ದೇವೀಶತಕ' ವೆಂಬ ಕಾವ್ಯ ರಚಿಸಿದ್ದಾನೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. 'ಅರ್ಜುನ ಚರಿತ' ಎಂಬ ಮಹಾಕಾವ್ಯ, 'ವಿಷಮ ಬಾಣಲೀಲೆ' ಎಂಬ ಪ್ರಾಕೃತ ಕಾವ್ಯ ಹಾಗೂ 'ತತ್ತ್ವಾಲೋಕ' ಎಂಬ ಗ್ರಂಥ ಇವು ಆನಂದವರ್ಧನನ ಕೃತಿಗಳೆಂದು 'ಧ್ವನ್ಯಾಲೋಕ'ದಲ್ಲಿ ಉಲ್ಲೇಖವಿದೆ. ಆದರೆ ಇವು ಯಾವುವೂ ಈಗ ದೊರೆಯುವುದಿಲ್ಲ.

## ಅನ್ನಾ ಪಾವ್ಲೋವ

'ಗೋದಿಯ ಪೈರಿನ ಹೊಲದ ಮೇಲೆ ಬೀಸುವ ಮಾರುತ'ದಂತೆ ರಂಗಮಂಚದ ಮೇಲೆ ಹಾಯುತ್ತಿದ್ದ ಅನ್ನಾ ಪಾವ್ಲೋವಳನ್ನು ಕಂಡು ಭಾರತದ ಶ್ರೇಷ್ಠ ನೃತ್ಯ ಕಲಾವಿದ ಉದಯಶಂಕರ್ ತಾನೂ ಈ ನೃತ್ಯವನ್ನು ಕಲಿಯಬೇಕು ಎಂದುಕೊಂಡ. ಅವಳ ನೃತ್ಯ ತಂಡವನ್ನು ಸೇರಿ ಒಂಬತ್ತು ತಿಂಗಳ ಕಾಲ ಹಲವು ದೇಶಗಳಲ್ಲಿ ಸಂಚಾರಮಾಡಿದ. ಆಕೆಯನ್ನು 'ನನ್ನ ಜೀವನದ ಹಾದಿಯನ್ನೇ ಬದಲಿಸಿದ ವ್ಯಕ್ತಿ', ಎಂದು ಕರೆದ.

ಜಗತ್ತಿನ ಅತ್ಯಂತ ಶ್ರೇಷ್ಠ ಬ್ಯಾಲೆ ನರ್ತಕಿಯೆಂಬ ಮನ್ನಣೆಗೆ ಪಾತ್ರಳಾದ ಅನ್ನಾ ಪಾವ್ಲೋವ ಹುಟ್ಟಿದ್ದು ರಷ್ಯದ ಸೇಂಟ್ ಪೀಟರ್ಸ್‌ಬರ್ಗಿನಲ್ಲಿ, 1885 ಜನವರಿ 3 ರಂದು. ಮಗು ಎಷ್ಟು ಸಣಕಲಾಗಿತ್ತೆಂದರೆ, ಅದು ಬದುಕುವುದೇ ಕಷ್ಟ ಅನಿಸಿತ್ತು ; ಅನ್ನಾ ಇನ್ನೂ ಎರಡು ವರ್ಷದ ಮಗುವಾಗಿದ್ದಾಗ ತಂದೆ ಸತ್ತುಹೋದ. ತಾಯಿ–ಮಗಳಿಗೆ ದಿನ ಕಳೆಯುವುದೇ ಪ್ರಯಾಸವಾಯಿತು. ಕಿರಿಗೋಧಿಯ ಬ್ರೆಡ್ಡು, ಎಲೆಕೋಸಿನ ಸಾರು ಇವಿಷ್ಟೇ ಅವರ ಆಹಾರ.

ಎಂಟು ವರ್ಷ ವಯಸ್ಸಿನ ಅನ್ನಾ ಒಮ್ಮೆ ತಾಯಿಯೊಡನೆ ಒಂದು ಬ್ಯಾಲೆ ನೋಡಲು ಹೋದಳು. ತಾನೂ ಬ್ಯಾಲೆ ನರ್ತಕಿ ಆಗಬೇಕು ಎಂದು ಅದೇ ದಿನ ನಿಶ್ಚಯಿಸಿಬಿಟ್ಟಳು. ಎರಡು ವರ್ಷಗಳ ಬಳಿಕ ಅವಳಿಗೆ ಸೇಂಟ್ ಪೀಟರ್ಸ್‌ಬರ್ಗಿನ ರಾಯಲ್ ಬ್ಯಾಲೆ ಶಾಲೆಗೆ ಪ್ರವೇಶ ದೊರಕಿತು. ಈ ಪುಟ್ಟ ಹುಡುಗಿ ತುಸು ಮೈಕಟ್ಟಲೆಂದು, ಪ್ರತಿ ದಿನ ಕಾಡ್‌ಲಿವರ್ ಎಣ್ಣೆಯನ್ನು ಆಕೆಗೆ ಕೊಡುತ್ತಿದ್ದರು. ಇದನ್ನು ಕುಡಿಯುತ್ತಿದ್ದಾಗ ಅನ್ನಾಳಿಗೆ ಯಾಕಾದರೂ ಈ ಸ್ಕೂಲಿಗೆ ಸೇರಿದೆನೋ ಅನಿಸುತ್ತಿತ್ತು.

ಬ್ಯಾಲೆ ಸ್ಕೂಲಿನ ತರಬೇತಿ ತುಂಬ ದೀರ್ಘವೂ ಶ್ರಮದಾಯಕವೂ ಆಗಿರುತ್ತಿತ್ತು. ಆದರೆ ಒಂದು ಪಾಠವನ್ನೂ ತಪ್ಪಿಸಿಕೊಳ್ಳದ ಪಾವ್ಲೋವ 20ನೆಯ ವಯಸ್ಸಿಗೆ ತನ್ನ ಬ್ಯಾಲೆ ಶಿಕ್ಷಣವನ್ನು ಮುಗಿಸಿದಳು. ಶಾಲೆಯ

ನೃತ್ಯಮಂಡಲಿಯ ಪ್ರಮುಖ ನರ್ತಕಿಯಾಗಿದ್ದ ಈಕೆಗೆ, ಒಡನೆಯೇ ಇಂಪೀರಿಯಲ್ ಬ್ಯಾಲೆ ತಂಡದಲ್ಲಿಯೂ ಸೇರಲು ಆಹ್ವಾನ ಬಂತು. ಬ್ಯಾಲೆ ನೃತ್ಯಗಳಲ್ಲಿ ಬರುವ ಯಕ್ಷಿಣಿ ಕಥೆಗಳ ನಾಯಕಿಯಾಗಿ ನರ್ತಿಸಿ ಆನ್ನಾ ಖ್ಯಾತಳಾದಳು.

ಸರ್ಜ್ ದಯಾಘಿಲೆಫ್ ಎಂಬ ರಷ್ಯದ ಶ್ರೀಮಂತನೊಬ್ಬನು ಪ್ಯಾರಿಸಿನಲ್ಲಿ ನಡೆಸುತ್ತಿದ್ದ ಪ್ರಸಿದ್ಧ ಬ್ಯಾಲೆ ಸಂಸ್ಥೆಯನ್ನು ಸೇರಲು ಪಾವ್ಲೋವ 1909ರಲ್ಲಿ ಫ್ರಾನ್ಸಿಗೆ ಬಂದಳು. ಅತ್ಯಂತ ಶ್ರೇಷ್ಠ ಬ್ಯಾಲೆ ನರ್ತಕನೆನಿಸಿದ್ದ ವಾಸ್ಲಾವ್ ನಿಜ್‌ನ್‌ಸ್ಕಿಯೊಡನೆ ನೃತ್ಯಗಳಲ್ಲಿ ಭಾಗವಹಿಸುವ ಅವಕಾಶ ಪಾವ್ಲೋವಳಿಗೆ ದೊರೆಯಿತು. ಆದರೆ ಕಂಪೆನಿಯ ಮಾಲಿಕನೊಡನೆ ಆದ ಮನಸ್ತಾಪದಿಂದಾಗಿ ಪಾವ್ಲೋವ ಅಲ್ಲಿಂದ ಹೊರಬಂದು 1910ರಲ್ಲಿ ತನ್ನದೇ ಆದ ಸಂಸ್ಥೆಯನ್ನು ಸ್ಥಾಪಿಸಿದಳು.

ಅವಳ ನೃತ್ಯವನ್ನು ನೋಡಿ ಮೈಮರೆಯುತ್ತಿದ್ದ ಜನರಿಗೆ ಪಾವ್ಲೋವ ಸ್ವಪ್ನಲೋಕದ ವ್ಯಕ್ತಿಯಾಗಿ ತೋರುತ್ತಿದ್ದಳು. ಆದರೆ ಅವಳ ಈ ಮೋಹಕ ವ್ಯಕ್ತಿತ್ವದ ಹಿಂದೆ ಅಡಗಿದ್ದ ಸರಳ ಭಾವುಕ ಹೃದಯದ ಪರಿಚಯ ಇದ್ದವರು ಕಡಮೆ. ಕಠಿಣ ಪರಿಶ್ರಮಿ, ಪಾವ್ಲೋವಳಿಗೆ ಸೋಮಾರಿಗಳನ್ನು ಕಂಡರೆ ಆಗುತ್ತಿರಲಿಲ್ಲ. ತನ್ನ ಸಂಸ್ಥೆಯಲ್ಲಿದ್ದ ಯಾರೇ ಆಗಲಿ ಸರಿಯಾಗಿ ಕೆಲಸ ಮಾಡದಿದ್ದರೆ ಆಕೆ ತುಂಬ ಕೋಪಿಸಿಕೊಳ್ಳುತ್ತಿದ್ದಳು. ಆಗ ಅವರೇನಾದರೂ ಮಾತನಾಡಿದರೆ "ಮುಚ್ಚು ಬಾಯಿ! ನನ್ನ ಪ್ರಶ್ನೆಗೆ ಉತ್ತರ ಕೊಡು," ಎಂದು ಗದರುತ್ತಿದ್ದಳು. ರಷ್ಯನ್, ಪೋಲಿಷ್, ಫ್ರೆಂಚ್ ಮತ್ತು ಇಂಗ್ಲಿಷ್ ಭಾಷೆಗಳನ್ನು ಸರಾಗವಾಗಿ ಮಾತಾಡುತ್ತಿದ್ದ ಪಾವ್ಲೋವ ಕೋಪಗೊಂಡಾಗ, ಅವಳ ಬಾಯಿಯಿಂದ ರಷ್ಯನ್ ಮಾತುಗಳೇ ನಿರರ್ಗಳವಾಗಿ ಹರಿಯುತ್ತಿದ್ದುವು. ತನ್ನ ಮೇಲೆ ತನಗೇ ಕೋಪ ಬಂದಾಗ ಕೈಯಿಂದ ಶಿಲುಬೆಯ ಚಿಹ್ನೆಯನ್ನು ರಚಿಸಿ "ಚೋರ್ತ್" (ಸೈತಾನ) ಎಂದು ಗೊಣಗುತ್ತಿದ್ದಳು.

ಬ್ಯಾಲೆಯ ಹೆಸರೂ ಕೇಳದ ಪ್ರದೇಶಗಳ ಜನರಿಗೆಲ್ಲ ತನ್ನ ನೃತ್ಯವನ್ನು ಪರಿಚಯ ಮಾಡಿಕೊಡಬೇಕು ಎಂಬುದು ಪಾವ್ಲೋವಳ ಹಂಬಲವಾಗಿತ್ತು. ತನ್ನ ತಂಡದೊಂದಿಗೆ ಅವಳು ಜಗತ್ತಿನ ವಿವಿಧ ಭಾಗಗಳಲ್ಲಿ ಪ್ರವಾಸ ಮಾಡಿದಳು. ವಿಮಾನ ಇಲ್ಲದ ಆ ಕಾಲದಲ್ಲೂ ಎಂಟು ಲಕ್ಷ ಕಿಲೊಮೀಟರುಗಳಷ್ಟು ಸಂಚರಿಸಿದಳು. ಸರಿಯಾದ ರಂಗಮಂಚ ಇಲ್ಲದ ಕಡೆ, ಹೊಲಗದ್ದೆಗಳ ಬಯಲಿನಲ್ಲೇ ನರ್ತಿಸಿದಳು. ಒಂದು ಸಭಾಭವನದ ರಂಗಮಂಚದ ಮೇಲಿನ ಛಾವಣಿಯಲ್ಲಿ ಒಂದು ದೊಡ್ಡ ತೂತು ಇತ್ತು. ಮಳೆಯ ನೀರು ಒಳಕ್ಕಿಳಿದು ತನ್ನ ಬಟ್ಟೆಗಳು ತೊಯ್ದು ಹೋಗುತ್ತಿದ್ದರೂ ಪಾವ್ಲೋವ ನೃತ್ಯ ನಿಲ್ಲಿಸಲು ಒಪ್ಪಲಿಲ್ಲ. "ಇಲ್ಲಿ ದೀಪದ ವ್ಯವಸ್ಥೆಯೇ ಬೇಕಾಗಿಲ್ಲ. ಮಿಂಚಿನಿಂದಲೇ ಸಾಕಷ್ಟು ಬೆಳಕು ಬರುತ್ತಾ ಇದೆ!" ಎಂದು ಅವಳು ನುಡಿದಳು.

ರಷ್ಯದ ಶಾಸ್ತ್ರೀಯ ಬ್ಯಾಲೆಯನ್ನು ಸಂಪೂರ್ಣವಾಗಿ ಕರಗತಮಾಡಿಕೊಂಡಿದ್ದರೂ ಬೇರೆ ದೇಶಗಳ ನೃತ್ಯದಲ್ಲಿಯೂ ಅವಳಿಗೆ ವಿಶೇಷ ಆಸಕ್ತಿ ಇತ್ತು. ಭಾರತಕ್ಕೆ ಅನೇಕ ಬಾರಿ ಭೇಟಿಕೊಟ್ಟ ಪಾವ್ಲೋವ ಭಾರತೀಯ ನೃತ್ಯದ ಹಲವು ಅಂಶಗಳನ್ನು ತನ್ನ ನೃತ್ಯದಲ್ಲಿ ಅಳವಡಿಸಿಕೊಂಡಳು. ಮುಂಬಯಿ, ದೆಹಲಿ ಮತ್ತು ಕಲ್ಕತ್ತಾಗಳಲ್ಲಿ ಅವಳ ಮಂಡಲಿ ಪ್ರದರ್ಶಿಸಿದ 'ರಾಧಾಕೃಷ್ಣ' ಎಂಬ ಬ್ಯಾಲೆ ಬಹಳ ಜನಪ್ರಿಯವಾಯಿತು. ಪಾವ್ಲೋವ ರಾಧೆಯಾಗಿ ಉದಯಶಂಕರ ಕೃಷ್ಣನಾಗಿ ಪಾತ್ರವಹಿಸುತ್ತಿದ್ದರು.

ರಂಗಮಂಚದ ಮೇಲೆ ಪಾವ್ಲೋವ ಪತಂಗವಾಗಿ ಕುಣಿದಾಡುತ್ತಿದ್ದರೆ ಜಗತ್ತೆಲ್ಲ ಸಂತೋಷಭರಿತವಾಗಿರುವಂತೆ ತೋರುತ್ತಿತ್ತು. 'ಸಾಯುತ್ತಿರುವ ಹಂಸ' ಎಂಬ ನೃತ್ಯವನ್ನು ಆಕೆ [illegible] ತೋರಿಸುತ್ತಿದ್ದರೆ ಜಗತ್ತೆಲ್ಲ ದುಃಖಮಯವೆನಿಸುತ್ತಿತ್ತು. 'ಸಾಯುತ್ತಿರುವ ಹಂಸ' ಆಕೆಯ ಲೋಕ ವಿಖ್ಯಾತ ನೃತ್ಯ.



'ಗೋದಿಯ ಪೈರಿನ ಮೇಲಿನ ಮಾರುತ' ಅನ್ನಾ ಪಾವ್ಲೋವ

ಪಾವ್ಲೋವಳದು ಕಲೆಗೆ ಮುಡಿಪಾಗಿಟ್ಟ ಜೀವನ. ಮೊದಲ ಮಹಾಯುದ್ಧ ಆರಂಭವಾಗುವುದಕ್ಕೆ ಸ್ವಲ್ಪ ಮುಂಚೆ ಅವಳು ಲಂಡನಿನಲ್ಲಿ ಒಂದು ಮನೆಯನ್ನು ಕೊಂಡು ಅಲ್ಲಿ ಬ್ಯಾಲೆ ಪಾಠಗಳನ್ನು ಹೇಳಿಕೊಡುತ್ತಿದ್ದಳು. ಆ ಕಾಲದಲ್ಲಿ, ಅಂದರೆ 1914ರಲ್ಲಿ, ತನ್ನ ಸಂಸ್ಥೆಯ ವ್ಯವಸ್ಥಾಪಕನಾಗಿದ್ದ ರಷ್ಯದ ಲಾಯರ್ ಒಬ್ಬನನ್ನು ಮದುವೆಯಾದಳು. ಆದರೆ 17 ವರ್ಷಗಳ ಕಾಲ ಇದನ್ನು ಬಹಿರಂಗಪಡಿಸಲಿಲ್ಲ. ಪಾವ್ಲೋವಳಿಗೆ ಮಕ್ಕಳನ್ನು ಕಂಡರೆ ತುಂಬ ಪ್ರೀತಿ. ಸ್ವತಃ ಅವಳು ತಾಯಿಯಾಗಲಿಲ್ಲ. ಪ್ಯಾರಿಸಿನಲ್ಲಿ ಒಂದು ಮನೆಯನ್ನು ಕೊಂಡಳು. ಅಲ್ಲಿ, ರಷ್ಯದಿಂದ ವಲಸೆಬಂದ ಮೂವತ್ತು ಅನಾಥ ಮಕ್ಕಳನ್ನು ಸಾಕುತ್ತಿದ್ದಳು.

ನೆದರ್‌ಲೆಂಡ್ಸ್‌ನ ಪ್ರವಾಸದಲ್ಲಿದ್ದಾಗ ಆಕೆಗೆ ನ್ಯುಮೋನಿಯಾ ತಗಲಿತು. ಜ್ವರದ ಮಧ್ಯೆ ಎಚ್ಚರವಾದಾಗ, "ಹಂಸದ ಪೋಷಾಕನ್ನು ಹೊರತೆಗೆದು ಅಣಿಗೊಳಿಸು" ಎಂದು ಸೇವಕನಿಗೆ ಆಕೆ ತಿಳಿಸಿದಳು. ಒಂದೇ ಗಂಟೆಯಲ್ಲಿ ಸಾವು ಬಂತು (1931ರ ಜನವರಿ 23ರಂದು). ಆಗ ಅವಳಿಗೆ 46 ವರ್ಷ ವಯಸ್ಸು.

**ನೋಡಿ :** ಬ್ಯಾಲೆ

## ಆಪೆರಾ

ನಾಟಕದ ನುಡಿ ಹಾಗೂ ಅಭಿನಯ, ಸಂಗೀತದ ಮಾಧುರ್ಯ ಇವು ಮಿಳಿತವಾಗಿ ರಂಜಿಸುವ ಕಲೆ ಆಪೆರಾ. ಇದರ ವಿಕಾಸ ಆರಂಭವಾದದ್ದು ಕೇವಲ ಮುನ್ನೂರು ವರ್ಷಗಳಿಗೆ ಹಿಂದೆ, ಇಟಲಿಯಲ್ಲಿ. ಮೂಲ ಇನ್ನೂ ಹಿಂದಿನದು. ಗ್ರೀಕ್ ರಂಗಭೂಮಿಯಲ್ಲಿ ಅದರ ಅವತರಣ. ಆಪೆರಾದಲ್ಲಿ ಇಡೀ ನಾಟಕ ಹಾಡಿನ ರೂಪದಲ್ಲಿರಬಹುದು; ಇಲ್ಲವೆ ಅಲ್ಲಲ್ಲಿ ಸಂಭಾಷಣೆ ಗಳಿರಬಹುದು. ಸನ್ನಿವೇಶಕ್ಕೆ ತಕ್ಕಂತೆ ಒಬ್ಬರು, ಇಬ್ಬರು ಅಥವಾ ವೃಂದವೇ ಹಾಡುತ್ತ ವಸ್ತುನಿರೂಪಣೆ ಮಾಡಬಹುದು. ನಾಟಕ ಪ್ರದರ್ಶನಕ್ಕೆ ಅಗತ್ಯವಿರುವ ರಂಗಸಜ್ಜಿಕೆ ಇಲ್ಲಿಯೂ ಅವಶ್ಯ. ಹಿನ್ನೆಲೆ ವಾದ್ಯಸಂಗೀತಗಾರರು ವೇದಿಕೆಯ ಮುಂದೆ ಸಭಾಂಗಣದ ಮಟ್ಟಕ್ಕಿಂತ ತಗ್ಗಾದ ಕುಳಿಯಲ್ಲಿ ಕೂಡುತ್ತಾರೆ. ನಾಟಕ ಹಾಗೂ ಸಂಗೀತ ಈ ಎರಡು ಕಲೆಗಳನ್ನೂ ಒಗ್ಗಿಸಿಕೊಂಡಿರುವ ಆಪೆರಾದಲ್ಲಿ ಕೆಲವೊಮ್ಮೆ ಸಂಗೀತವೇ ಪ್ರಧಾನವಾಗಿ ಅಭಿನಯ



'ತಾಯಿ' : ಗಾರ್ಕಿ ಕೃತಿಯನ್ನು ಆಧರಿಸಿದ ನೃತ್ಯರೂಪಕ

ಗೌಣವಾಗುವುದೂ ಉಂಟು; ಅಥವಾ ಸಂಗೀತ ಪ್ರಾಸಂಗಿಕವಾಗಿ, ಅಭಿನಯಕಾರನಿಗೆ ಹಿಮ್ಮೇಳವಾಗಿರುವುದೂ ಉಂಟು.

16ನೆಯ ಶತಮಾನದ ಅಂತ್ಯಭಾಗದಲ್ಲಿ ಇಟಲಿಯ ಕೆಲವು ಧನಿಕ ಹವ್ಯಾಸಿ ಸಂಗೀತಗಾರರು, ಪ್ರಾಚೀನ ಗ್ರೀಕರು ನಾಟಕವನ್ನು ಯಾವ ರೀತಿ ಪ್ರಸ್ತುತಪಡಿಸುತ್ತಿದ್ದರು ಎಂಬುದನ್ನು ಅಭ್ಯಸಿಸಿ, ಆಪೆರಾ ಪ್ರದರ್ಶನಗಳಿಗೆ ಪೀಠಿಕೆ ಹಾಕಿದರು. ಸಂಗೀತ ಪ್ರಧಾನವಾಗಿರುವುದರ ಬದಲು ಕಥನದಂತೆ ನಾಟಕವನ್ನು ಅಭಿನಯಿಸುವುದು : ಸಂಗೀತದ ಮೂಲಕ ನಾಟಕೀಯ ಪರಿಣಾಮವನ್ನು ಬೆಳೆಸುವುದು –ಈ ಉದ್ದೇಶಗಳನ್ನಿಟ್ಟುಕೊಂಡು ಆಪೆರಾಗಳು ರೂಪುಗೊಂಡುವು.

'ಆರ್ಫಿಯೊ' ಎಂಬುದು 1607ರಲ್ಲಿ ಮೊಟ್ಟಮೊದಲು ಪ್ರದರ್ಶಿತವಾದ ಆಪೆರಾ. ಇದರ ಕರ್ತೃ ಕ್ಲಾಡಿಯೊ ಮಾಂಟೆವರ್ಡಿ. ಸರಿಸುಮಾರು ಸಾಧಾರಣ ಮಾತಿನಷ್ಟೇ ವೇಗ ಮಾತುಗಳನ್ನಾಡುವುದು. ಹಾಗೆಯೇ ಧ್ವನಿಯ ಪರಿಮಿತ, ಶಬ್ದ ಪ್ರಾಧಾನ್ಯ–ಇಷ್ಟೂ ಸಂಗೀತದ ಜೊತೆಯಲ್ಲಿ. ಈ ವಿಧಾನ ಸಂಗೀತದಲ್ಲಿ ಹೊಸ ಶೈಲಿಗೆ ಜನ್ಮ ಕೊಟ್ಟಿತು. ಒಂಟಿ ಗಾಯಕ ಕಥೆಯ ಪ್ರಧಾನ ವ್ಯಕ್ತಿಗಳ ಭಾವನೆಗಳನ್ನು ಹಾಡಿ ತೋರಿಸುತ್ತಾನೆ. ಇಲ್ಲಿನ ಹಾಡುಗಾರಿಕೆಯಲ್ಲಿ ಕೆಲವು ಬಾರಿ ಪದಗಳನ್ನು ಪುನರಾವರ್ತಿಸಬಹುದು. ಕೋಮಲ ಅಥವಾ ತೀವ್ರ ಭಾವನೆಗಳಿಗೆ ತಕ್ಕಂತೆ ಹಿನ್ನೆಲೆ ಸಂಗೀತ ಮೆಲುವಾಗಬಹುದು, ತೀವ್ರವಾಗಬಹುದು. 'ಆರ್ಫಿಯೊ' ಇಂಥ ಆಪೆರಾಗಳಿಗೆ ಮಾದರಿಯಾಯಿತು.

'ಆರ್ಫಿಯೊ' ಕರ್ತೃ : ಮಾಂಟೆವರ್ಡಿ

ಮಾಂಟೆವರ್ಡಿಯ ಅನಂತರದ 200 ವರ್ಷಗಳ ಅವಧಿ ಆಪೆರಾದ ಹಿರಿಮೆಯ ಅವಧಿ. ಈ ಕಾಲದಲ್ಲಿ ಮೊಜಾರ್ಟ್, ಹಾಂಡೆಲ್, ಪರ್ಸೆಲ್, ಗ್ಲಕ್ ಮುಂತಾದ ಮಹಾ ರಚನಕಾರರು ಆಪೆರಾ ಲೋಕಕ್ಕೆ ತಮ್ಮ ಅಮೂಲ್ಯ ಕೃತಿಗಳನ್ನು ನೀಡಿದರು.

ಈ ಎಲ್ಲ ಆಪೆರಾಗಳ ಕಥಾವಸ್ತು ಗ್ರೀಕ್, ರೋಮನ್ ಮೂಲಗಳಿಂದ ಬಂದುವು: ಬೈಬಲಿನ ವ್ಯಕ್ತಿಗಳು, ಅಪೊಲೊ, ವೀನಸ್ ಮುಂತಾದ ದೇವದೇವತೆಗಳ ಸುತ್ತ ಹೆಣೆಯಲ್ಪಟ್ಟುವು.

ಆದರೆ 18ನೆಯ ಶತಮಾನದಲ್ಲಿ ಆಪೆರಾ ನಿರೂಪಣೆಯಲ್ಲಿ ಹೊಸ ದಾರಿ ಆರಂಭವಾಯಿತು. ಸಾಂಪ್ರದಾಯಿಕ ವಸ್ತು, ವ್ಯಕ್ತಿಗಳ ಬದಲು ದಿನನಿತ್ಯ ಕಾಣಬರುವ ವ್ಯಕ್ತಿಗಳು, ಪ್ರಸಂಗಗಳು ಆಪೆರಾದ ವಸ್ತುಗಳಾದುವು. ಹೀಗೆ ಆಪೆರಾದ ರಮ್ಯ ಕಾಲಾವಧಿ ಆರಂಭವಾಯಿತು. ಇಂಥ ರಮ್ಯ ಆಪೆರಾ ಕರ್ತೃಗಳಲ್ಲಿ ಹೆಸರಾದ ಫಾನ್ ವೆಬರ್ (1786–1826) ಜರ್ಮನಿಯ ರಚನಕಾರ. ಇವನಿಂದ ಸ್ಫೂರ್ತಿ ಪಡೆದ ಆಪೆರಾ ರಚನಕಾರರು ಹಲವರು. ಆಪೆರಾ ಕ್ಷೇತ್ರದಲ್ಲಿ ಕೃಷಿಮಾಡಿದ ಇನ್ನೊಬ್ಬ ಶ್ರೇಷ್ಠ ಜರ್ಮನ್ ಸಂಗೀತಗಾರ ವಾಗ್ನರ್ (1813–83). ವಾಗ್ನರನ ಸಮಕಾಲೀನ ಇಟಲಿಯ ಗಿಸೆಪ್ಪಿ ವರ್ಡಿ (ಭಾಷಾ ಉಚ್ಚಾರ : ಜೂಸೆಪ್ಪೇ ವರ್ಡೀ). ಈ ಇಬ್ಬರೂ ಒಂದೇ ಕಾಲದಲ್ಲಿ ಪ್ರಸಿದ್ಧರಾಗಿದ್ದರೂ ಅವರ ಆಪೆರಾಗಳ ರೀತಿ ಮಾತ್ರ ಭಿನ್ನ ಭಿನ್ನ. ವಾಗ್ನರ್ ತನ್ನ ಆಪೆರಾಗಳಿಗೆ ಸಂಗೀತ, ಸಂಭಾಷಣೆಗಳೆಲ್ಲವನ್ನೂ ತಾನೇ ರಚಿಸುತ್ತಿದ್ದ. ಅವನ ಕೊನೆಯ ಆಪೆರಾ 'ಫಾಲ್‌ಸ್ಟಾಫ್'. ಪಕ್ಸಿನಿ (1858–1924), ವರ್ಡಿಯ ಅನಂತರ ಬಂದ ಇಟಲಿಯ ಮಹಾ ರಚನಕಾರ. ವಾಗ್ನರನ ಬಳಿಕ ಅತಿ ಪ್ರತಿಭಾಶಾಲಿಯಾದ ರಚನಾಕಾರನೆಂದರೆ ಜರ್ಮನಿಯ ಸ್ಟ್ರಾವ್‌ಸ್ (1864–1949).

19ನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಜಾನಪದ ಗೀತೆಗಳನ್ನೂ ಲಾವಣಿಗಳನ್ನೂ ಆಧರಿಸಿದ ವಿಶಿಷ್ಟ ಬಗೆಯ ಆಪೆರಾ ಆರಂಭವಾಯಿತು.

ಸಾಂಪ್ರದಾಯಿಕ ಸಂಗೀತವಿಲ್ಲದ ಆಧುನಿಕ ಆಪೆರಾ ಅನೇಕರಿಗೆ ಅರ್ಥವಾಗುವುದೂ ಕಷ್ಟ. ಜಾಸ್ ಸಂಗೀತವನ್ನು ಅಳವಡಿಸಿರುವ ಆಧುನಿಕ ಆಪೆರಾಗಳೂ ಇವೆ. ಅತ್ಯಾಧುನಿಕ ಆಪೆರಾದಲ್ಲಿ ರಚನಕಾರನ ವೈಯಕ್ತಿಕ ಭಾವನೆಗಳು ಹಾಗೂ ವಿಲಕ್ಷಣತೆಗಳಿಗೆ ಪ್ರಾಧಾನ್ಯ. ಇಂದಿನ ಆಪೆರಾಗಳನ್ನು ಕೇವಲ ಕೇಳಿನೋಡಿದರಷ್ಟೆ ಸಾಲದು ; ಅರ್ಥಯಿಸಲು ಮೆದುಳೂ ಕೆಲಸ ಮಾಡಬೇಕಾಗುತ್ತದೆ.

ಅಪೆರಾಗಳಲ್ಲಿ ಘನ, ಲಘು ಹಾಗೂ ಕಾಮಿಕ್ ಅಪೆರಾಗಳೆಂಬ ಬಗೆಗಳಿವೆ. ವಿದೇಶಗಳಲ್ಲಿ ಅಪೆರಾ ಸಂಪ್ರದಾಯದ ವಿಖ್ಯಾತ ನಾಟಕಶಾಲೆಗಳಿವೆ.

ಅಪೆರಾವನ್ನು ನಮ್ಮ ಗೀತನಾಟಕಗಳಿಗೆ ಹೋಲಿಸಬಹುದು. ಅಪೆರಾದಲ್ಲಿ ಸಂಗೀತದ ನೆರವಿನಿಂದ ಕಥೆ ಒಡಮೂಡುತ್ತದೆ. ಸಂಗೀತ ಪರಿಣಾಮಕಾರಿಯಾದಷ್ಟೂ ಅಪೆರಾ ಸತ್ವಶಾಲಿಯಾಗುತ್ತದೆ.

ಗಿಸೆಪ್ಪೆ ವರ್ಡಿಯ 'ಐಡ', ಮೊಜಾರ್ಟನ 'ಯಕ್ಷಿಣಿ ಕೊಳಲು', ವಾಗ್ನರ್ ವಿರಚಿತ 'ಹಾರಾಡುವ ಡಚ್‌ಮನ್', ಗ್ಲುಕ್ ಕೃತ 'ಅರ್ಫಿಯಸ್' ಮತ್ತು 'ಯೂರಿಡಿಸ್', ಸ್ಟ್ರಾಸನ 'ಸಲೋಮೆ' ಇವು ಕೆಲ ಸುಪ್ರಸಿದ್ಧ ಅಪೆರಾಗಳು.

ನೋಡಿ : ಗೀತನಾಟಕ ; ಮೊಜಾರ್ಟ್ ; ವಾಗ್ನರ್

## ಆಫ್ರಿಕದ ಕಲೆ

ಈ ಶತಮಾನದ ಆರಂಭದಲ್ಲಿ, ಪ್ರಸಿದ್ಧ ಚಿತ್ರಕಾರ ಪಿಕಾಸೋ ಇನ್ನೊಬ್ಬ ಖ್ಯಾತ ಚಿತ್ರಕಾರ ಹೆನ್ರಿ ಮಾಟಿಸ್‌ನನ್ನು ಕಾಣಲು ಹೋಗಿದ್ದ. ಇಬ್ಬರೂ ಊಟಕ್ಕೆ ಕುಳಿತಿದ್ದಾಗ ಅಲ್ಲೇ ಇದ್ದ ಆಫ್ರಿಕದ ಶಿಲ್ಪಕೃತಿಯೊಂದು ಪಿಕಾಸೋನ ಕಣ್ಣಿಗೆಬಿತ್ತು. ನೋಡಿದ್ದೇ ತಡ ಸಮ್ಮೋಹನಕ್ಕೊಳಗಾದ ಪನಂತೆ ಅದನ್ನು ಕೈಯಲ್ಲಿ ಹಿಡಿದುಕೊಂಡು ತುಂಬ ಹೊತ್ತಿನವರೆಗೆ ಅದನ್ನೇ ನೆಟ್ಟ ದೃಷ್ಟಿಯಿಂದ ನೋಡಿದ. ಮನೆಗೆ ಬಂದಮೇಲೆ ಒಂದು ವರ್ಣಚಿತ್ರವನ್ನು ಬರೆಯಲು ಕುಳಿತ. ಒಂದು ರಾತ್ರಿ ಒಂದು ಹಗಲು ಏಕಪ್ರಕಾರವಾಗಿ ಕುಳಿತು ಆ ಚಿತ್ರವನ್ನು ಬರೆದು ಮುಗಿಸಿದ. ಆ ವರ್ಣಚಿತ್ರದಲ್ಲಿ ಆಫ್ರಿಕದ ಶಿಲ್ಪಕಲೆಯ ಮೂಲತತ್ತ್ವಗಳನ್ನು ಉಪಯೋಗಕ್ಕೆ ತಂದುಕೊಂಡಿದ್ದ. ಅನಂತರ ಪಿಕಾಸೋ ಬರೆದ ಅನೇಕ ಚಿತ್ರಗಳಲ್ಲಿ ಆಫ್ರಿಕದ ಕಲೆಯ ಪ್ರಭಾವ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತಿತ್ತು.

ಆಫ್ರಿಕದ ಕಲೆ ಅತಿ ಪ್ರಾಚೀನವಾದದ್ದು. ಆದರೆ ಈ 'ಕತ್ತಲೆಯ ಖಂಡ'ದೊಳಗಿನ ಕಲೆ ಬೆಳಕಿಗೆ ಬಂದದ್ದು ಮಾತ್ರ ಈ ಶತಮಾನದ ಆರಂಭಕಾಲದಲ್ಲಿ. ಆಗ ಇದನ್ನು 'ಅನಾಗರಿಕ', 'ಹಳೇ ಕಾಲದ್ದು' ಎಂದು ಕಡೆಗಣಿಸುತ್ತಿದ್ದವರೇ ಹೆಚ್ಚು. ಉಗ್ರತೆ ಹಾಗೂ ಸರಳತೆಗಳಿಂದ ಕೂಡಿದ ಆಫ್ರಿಕದ ಕಲೆಯ ಚೈತನ್ಯವನ್ನು ಆಧುನಿಕ ಕಲಾವಿದರು ಕಂಡುಕೊಂಡ ಮೇಲೆ ಇದು ಅವರಿಗೆ ಸ್ಫೂರ್ತಿಯ ಮೂಲವಾಯಿತು.

ಆಫ್ರಿಕದ ಕಲೆ ಅಲ್ಲಿಯ ಜನಜೀವನದ ಅವಿಭಾಜ್ಯ ಅಂಗ. ಅವರು ಉಪಯೋಗಿಸುವ ಒಡವೆ, ಮಣಿ ಮುಂತಾದುವು ಮಾತ್ರವಲ್ಲದೆ ಪಾತ್ರೆ, ಸೌಟು, ಹಣಿಗೆ, ಕಾಲುಮಣೆಗಳಲ್ಲೂ ಕಲಾಕುಶಲತೆಯನ್ನು ಕಾಣಬಹುದು. ಅವರ ಬುಟ್ಟಿ, ಬಟ್ಟೆ, ಜಮಖಾನ, ಮಡಕೆಗಳಲ್ಲೂ ಚಿತ್ರಕಾರರ ನೈಪುಣ್ಯ ವ್ಯಕ್ತವಾಗುತ್ತದೆ. ಆಫ್ರಿಕದ ಆದಿವಾಸಿ ಪಂಗಡಗಳಲ್ಲಿ ಪ್ರಬಲವಾಗಿ ಬೇರೂರಿದ್ದ ಪೂರ್ವಜರ ಆರಾಧನೆ ಹಾಗೂ ಪ್ರಾಕೃತಿಕ ದೈವಗಳ ಪೂಜೆ ಮುಂತಾದುವುಗಳ ಪ್ರಭಾವ ಅವರ ಕಲೆಯಲ್ಲೂ ಪ್ರತಿಬಿಂಬಿತವಾಗಿದೆ. ಪೂರ್ವಜರು, ದೇವತೆಗಳು ಮತ್ತು ಅರಸರನ್ನು ಗೌರವಿಸುವ ಪ್ರತಿಮೆಗಳು, ಭೂತ ಪ್ರೇತಗಳನ್ನು ಬೆದರಿಸಲು ಧರಿಸುವ ಮುಖವಾಡಗಳು, ದೈವಿಕ ಮಹಿಮೆ ಇರುವುದಾಗಿ ಭಾವಿಸಿದ ಮಾಂತ್ರಿಕ ದಂಡಗಳು —ನೋಡಿದ ಚಿಕ್ಕ ಮಕ್ಕಳು ಬೆಚ್ಚಿಬೀಳುವಷ್ಟು ಭಯಂಕರ.

ಮರದ ಕೆತ್ತನೆ ಕೆಲಸಗಳೂ ಶಿಲ್ಪಕೃತಿಗಳೂ ಆಫ್ರಿಕದ ಕಲೆಯಲ್ಲಿ ಅತಿ ಮುಖ್ಯ. ಕೆತ್ತನೆಗಾರ ತನ್ನ ಕೃತಿಗೆ ಮೂಲವಾದ ರೂಪದ ನೈಜ ಚಿತ್ರಣಕ್ಕೆ ಹೆಚ್ಚಿನ ಗಮನಕೊಡುವುದಿಲ್ಲ. ದೇಹದ ಆಕಾರಗಳನ್ನು ವಿಚಿತ್ರ ರೀತಿಯಲ್ಲಿ ಮಾರ್ಪಡಿಸುವುದು ಇವರ ಪದ್ಧತಿ. ನೀಳವಾದ ಕೈಕಾಲುಗಳು, ಉದ್ದವಾದ ಕತ್ತು, [illegible] ದೊಡ್ಡ ಆಕಾರದ ಕಣ್ಣುಗಳು, ಮುಖಕ್ಕೆ [illegible] ಅಥವಾ [illegible] ಇವು ಅವರು ರೂಪಿಸುವ [illegible] ಸಾಮಾನ್ಯ ಲಕ್ಷಣಗಳು. ಅತಿ ಸೂಕ್ಷ್ಮ [illegible] ಆಫ್ರಿಕದ ಕಲಾಕೃತಿಗಳಲ್ಲಿ ಎದ್ದುಕಾಣುವಂಥದು. ಪ್ರತಿಯೊಬ್ಬ ಚಿತ್ರಕಾರನ ದೃಷ್ಟಿಯಲ್ಲಿ ಸೌಂದರ್ಯ ಹೇಗೆ ಕಾಣುತ್ತದೋ ಹಾಗೆ ಪ್ರತಿಮೆಗಳು ಬೇರೆ ಬೇರೆ ರೂಪ ಪಡೆಯುತ್ತವೆ. ಪ್ರತಿ ಕಲಾಕೃತಿಯೂ ಅದನ್ನು ರಚಿಸಿದ ಕಲಾವಿದನ ವೈಶಿಷ್ಟ್ಯದ ಪ್ರತೀಕ. ಇದರಿಂದಾಗಿ ಆಫ್ರಿಕದ ಕಲೆಯಲ್ಲಿ ಕಂಡುಬರುವ ವೈವಿಧ್ಯ ಅಪಾರ.

ಆಫ್ರಿಕದ ಗವಿಮಾನವರ ಕಲೆ ಬೇರೆ ಬಗೆಯ ಕಲೆಗಳಿಗಿಂತ ಬಹಳ ಭಿನ್ನ. ಇವರ ವರ್ಣಚಿತ್ರಗಳು ಆಶ್ಚರ್ಯವೆನಿಸುವಷ್ಟು ನೈಜ. ಜಿಂಕೆ, ಜೀಬ್ರಾ, ಖಡ್ಗಮೃಗ ಮುಂತಾದುವು ಗವಿಚಿತ್ರಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಾಣಿಗಳು. ಈ ಗವಿಮಾನವರು ಉತ್ತಮ ಬೇಟೆಗಾರರಾಗಿದ್ದರು. ಬೇಟೆಯ ದೃಶ್ಯಗಳು ಬಂಡೆಗಳ ಮೇಲೆ, ಗುಹೆಗಳ ಒಳಗೆ ಚಿತ್ರಿಸಲ್ಪಟ್ಟಿವೆ. ಅಲ್ಲದೆ ಅವರ ನೃತ್ಯಗಳೂ ಅವರ ಬೇರೆ ಬೇರೆ ಪಂಗಡಗಳ ಒಳಗೆ ನಡೆಯುವ ಕಲಹಗಳೂ ಅಲ್ಲಲ್ಲಿ ಚಿತ್ರಿತವಾಗಿವೆ. ಪ್ರಾಣಿಗಳ ಚಿತ್ರ ಅತಿ ಸಹಜವಾಗಿದ್ದರೂ ಮಾನವರ ಚಿತ್ರಗಳಲ್ಲಿ ತುಸು ವಿರೂಪವುಂಟು.

ಕಲ್ಲಿನ ಶಿಲ್ಪ, ಲೋಹದ ಕೆತ್ತನೆ ಮತ್ತು ಮಣ್ಣಿನ ಮೂರ್ತಿಗಳೂ ಆಫ್ರಿಕದ ಜನಾಂಗಗಳಲ್ಲಿ ಜನಪ್ರಿಯವಾಗಿದೆ.

ಆಫ್ರಿಕದ ಮೂಲಜನಾಂಗಗಳ ಜನರು ಯಾವುದೇ ಸಮಾರಂಭವನ್ನು ಆಚರಿಸುವುದು ಹುರುಪಿನ ನೃತ್ಯದೊಂದಿಗೆ. ಕಿವಿಗಡಚಿಕ್ಕುವ ತಮಟೆಯ ಧ್ವನಿ, ವಿಚಿತ್ರ ವೇಷಭೂಷಣಗಳು, ಮೈನವಿರೇಳಿಸುವ ನೃತ್ಯ—ಇಂಥದು ಬೇರೆ ಯಾವ ದೇಶದಲ್ಲೂ ಇಲ್ಲವೆನ್ನಬಹುದು. ಇವರಲ್ಲಿ ಮುಖ್ಯವಾಗಿ ಗೋಚರಿಸುವುದು ತಾಳಪ್ರಕಾರಗಳು. ಪ್ರಾಣಿಗಳನ್ನು ಅನುಕರಿಸುವ ಬೇಟೆಗೆ ಅಥವಾ ಯುದ್ಧಕ್ಕೆ ಸಿದ್ಧತೆಗಳನ್ನು ಮಾಡುವ ರೀತಿಗಳನ್ನು ಇಲ್ಲಿ ಆಡಿ ತೋರಿಸುತ್ತಾರೆ. ನರ್ತಕರು ಮೈಮೇಲೆಲ್ಲ ಬಣ್ಣ ಬಣ್ಣದ ಆಕೃತಿಗಳನ್ನು ಧರಿಸಿಕೊಳ್ಳುತ್ತಾರೆ.

ಜಗತ್ತಿನ ಹಲವು ದೇಶಗಳ ಸಂಗೀತದಲ್ಲಿ ಆಫ್ರಿಕದ ಸಂಗೀತದ ಪ್ರಭಾವವನ್ನು ಕಾಣಬಹುದು. ಅಮೆರಿಕದಲ್ಲಿ ಜನಪ್ರಿಯವಾಗಿರುವ ಜಾಸ್ ಸಂಗೀತ ಆಫ್ರಿಕನ್ ಮೂಲದ್ದು. ತಾಳಬದ್ಧವಾದ ತಮಟೆ ಸದ್ದು ಇವರ ಮುಖ್ಯ ಅಂಗ. ಪ್ರಾಣಿಗಳ ಕೂಗುಗಳಂಥ ಧ್ವನಿ, ಬೇಟೆಗಾರರ ವೀರ ಗರ್ಜನೆಯ ಆರ್ಭಟಗಳಿಂದ ಬೆಚ್ಚಿಬೀಳುವಂತಾಗುತ್ತದೆ. ಗುಲಾಮರಾಗಿ ಅಮೆರಿಕಕ್ಕೆ ಒಯ್ಯಲ್ಪಟ್ಟ ನೀಗ್ರೊಗಳ ಜೊತೆ ಅವರ ಸಂಗೀತವೂ ಅಲ್ಲಿಗೆ ಹೋಯಿತು. ಲಿಖಿತ ಭಾಷೆಯಿಲ್ಲದ ಆಫ್ರಿಕದ ಜನಾಂಗಗಳಲ್ಲಿ ಹುಟ್ಟಿದ ಈ ಸಂಗೀತ ಜಗತ್ತಿನಲ್ಲಿ ಅತಿ ಪ್ರಾಚೀನವಾದದ್ದು.

ಆಫ್ರಿಕ ಖಂಡದಲ್ಲಿ ಏಳುನೂರಕ್ಕೂ ಹೆಚ್ಚಿನ ಭಾಷೆಗಳಿವೆ. ಇವು ಒಂದಕ್ಕಿಂತ ಇನ್ನೊಂದು ವಿಚಿತ್ರವಾದವು. ಹೊರಗಿನವರಿಗೆ ಇವುಗಳ ಉಚ್ಚಾರ ಕೂಡ ಸುಲಭವಲ್ಲ.

ನೋಡಿ: ಜಾಸ್ ಸಂಗೀತ; ನೀಗ್ರೋ ಸಂಗೀತ

'ಉಲಿಯುವ ಡಮರು'; ಆಫ್ರಿಕದ ವಾದ್ಯ

ಆಭರಣ

ಆಭರಣಗಳನ್ನು ಧರಿಸುವುದರಿಂದ ವ್ಯಕ್ತಿಯ ಸೊಬಗು ಹೆಚ್ಚುತ್ತದೆ. ಬೊಂಬೆ, ಮನುಷ್ಯ, ದೇವರ ವಿಗ್ರಹ ಇವೆಲ್ಲವನ್ನು ಅಲಂಕರಿಸುವುದಕ್ಕೂ ಆಭರಣ ಬೇಕು.

ಪ್ರಶಸ್ತ ಲೋಹಗಳಿಂದ – ಮುಖ್ಯವಾಗಿ ಬೆಳ್ಳಿ ಮತ್ತು ಬಂಗಾರಗಳಿಂದ— ಆಭರಣಗಳನ್ನು ತಯಾರಿಸುತ್ತಾರೆ. ನವರತ್ನಗಳನ್ನೂ ಗಾಜಿನ ಕೃತಕ ಮಣಿಗಳನ್ನೂ ಜೋಡಿಸಿ ಅವುಗಳ ಶೋಭೆಯನ್ನು ಹೆಚ್ಚಿಸುತ್ತಾರೆ. ಆಭರಣಗಳ ಶೋಭೆಗೆ ಕಾರಣ ಅವುಗಳ ಮಿಂಚುವ ಗುಣ. ಬೇರೆ ಬೇರೆ ದಿಕ್ಕಿನಲ್ಲಿ ವಿಭಿನ್ನ ಬೆಳಕಿನ ಮೂಲಗಳಿಂದ ಬಂದ ಕಿರಣಗಳನ್ನು ಪ್ರತಿಫಲಿಸುವುದರಿಂದ, ಅವುಗಳ ಶೋಭೆ ಹೆಚ್ಚುತ್ತದೆ. ಅನೇಕ ವೇಳೆ ಆಭರಣಗಳನ್ನು ರಾಶಿ ಹಾಕಿದಾಗ, ಕೈಯಲ್ಲಿ ಹಿಡಿದು ನೋಡಿದಾಗ, ಅವು ಮನವನ್ನು ಆಕರ್ಷಿಸದೇ ಇರಬಹುದು. ಆದರೆ ಕಿವಿಯ, ಕಂಠದ ಆಭರಣಗಳ ವಜ್ರಗಳು ಕಪ್ಪು ಕೂದಲಿನ ಹಿನ್ನೆಲೆಯಲ್ಲಿ ಆಕರ್ಷಕವಾಗಿ ಕಾಣುತ್ತವೆ. ಹೀಗೆಯೇ ಮುತ್ತು ಹವಳಗಳುಳ್ಳ ಆಭರಣಗಳು ಕೂಡ.

ಸ್ತ್ರೀಯರ ಆಭರಣಗಳ ವೈವಿಧ್ಯವನ್ನು ವರ್ಣಿಸುವ ಕಾವ್ಯಭಾಗಗಳು ರಂಜನೀಯ. ಶಿಲ್ಪಗಳಲ್ಲಿ, ಚಿತ್ರಗಳಲ್ಲಿ ಕಾಣುವ ಆಭರಣಗಳ ವಿನ್ಯಾಸಗಳು ಮನೋಹರ. ಕಾಲಬೆರಳ ತುದಿಯಿಂದ ಹಿಡಿದು ನೆತ್ತಿಯವರೆಗೆ ವಿವಿಧ ಅಂಗಗಳನ್ನು ಅಲಂಕರಿಸುವ ಮಹಿಳೆಯರ ಆಭರಣಗಳಿವೆ. ಜೈತಲೆಮಣಿ ಮತ್ತು ಪದಕ, ಜಡೆಬಿಲ್ಲೆ, ರಾಗಟೆ –ತಲೆಯ ಆಭರಣಗಳು ; ಓಲೆ, ಜುಮುಕಿ, ಲೋಲಕು, ಬುಗುಡಿ, ಕೆನ್ನೆಸರಪಣಿ –ಕಿವಿಯನ್ನು ಅಲಂಕರಿಸುತ್ತವೆ. ನತ್ತು, ಮೂಗುತಿ, ಬುಲಾಕು –ಮೂಗಿಗೆ ಧರಿಸುವ ಆಭರಣಗಳು. ಚಂದ್ರಹಾರ, ಅಡ್ಡಿಕೆ, ಬಂದಿ, ಹವಳ ಮುತ್ತು ಚಿನ್ನದ ಕಾಸು ಅಥವಾ ಬಿಲ್ಲೆ ಮುಂತಾದುವನ್ನು ಪೋಣಿಸಿದ ಸರಗಳು, ಪದಕ ಕೂಡಿಸಿದ ಸರಗಳು –ಕತ್ತಿನ ಆಭರಣಗಳು. ಕಂಠಹಾರಗಳಲ್ಲಿ ನವರತ್ನಗಳನ್ನೂ ಕೃತಕ ಮಣಿಗಳನ್ನೂ ಹದ್ದಿರುವುದೂ ಉಂಟು. ತೋಳಿನ ಮೇಲೆ ಶೋಭಿಸುವ ಆಭರಣಗಳು ನಾಗಮುರಿಗೆ, ತೋಳಬಂಧ (ಬಾಜೋ ಬಂಧ) ; ಸೊಂಟದ ಮೇಲೆ ಧರಿಸುವುದು ಡಾಬು. ಮಣಿಕಟ್ಟಿನ ಸುತ್ತ ಶೋಭಿಸುತ್ತವೆ–ಬಳೆ, ಕಡಗ, ಕಂಕಣಗಳು. ಕಾಲ ಹರಡಿನ ಸುತ್ತ ಗೆಜ್ಜೆಸರ ರುಳಿ. ಕಾಲಬೆರಳುಗಳಿಗೆ ಕಾಲುಂಗುರ, ಪಿಲ್ಲಿಗಳು. ಇವೆಲ್ಲ ಸ್ತ್ರೀಯರ ಆಭರಣಗಳು. ತುಂಡುಸರ, ಉಡಿದಾರ, ಹಸ್ತಕಡಕು, ಕಾಪು, ಕಪ್ಪ ಮುಂತಾದುವು ಪುರುಷರ ಆಭರಣಗಳು.

ಆಭರಣಗಳು ಸಾಮಾನ್ಯವಾಗಿ ಅವುಗಳನ್ನು ಧರಿಸುವ ಅಂಗದ ಆಕಾರವನ್ನು ಹೊಂದಿರುತ್ತವೆ. ಹಾರಗಳು ನೀಳವಾದ ಕುಣಿಕೆಯಂತಿರುವ ಆಭರಣಗಳು. ಆಭರಣಗಳಲ್ಲಿ ಮಣಿಗಳನ್ನು ಹುದಗಿಸುವುದಕ್ಕಾಗಲೀ ಚಿತ್ತಾರಗಳನ್ನು ಬಿಡಿಸುವುದಕ್ಕಾಗಲೀ ಕುಶಲತೆ ಬೇಕು. ಹಾಗೆಯೇ ಆಭರಣಗಳ ಮೇಲೆ ಎನಾಮಲ್‌ನಿಂದ ವಿನ್ಯಾಸಗಳನ್ನು ಮೂಡಿಸುವುದೂ ಒಂದು ಕುಶಲ ಕಲೆ. ತಂತಿಗಳಿಂದ ಹೂವು ಬಳ್ಳಿಗಳ ವಿನ್ಯಾಸವುಳ್ಳ ಜಾಲರಿಗಳನ್ನು ನಿರ್ಮಿಸಿ ರೂಪಿಸಿದ ಆಭರಣಗಳೂ ಉಂಟು. ಚಿನ್ನ ಬೆಳ್ಳಿಗಳೂ ಪ್ಲಾಟಿನಂ ಪಲೇಡಿಯಮುಗಳೂ ಈ ಬಗೆಯ ಕೆಲಸಗಳಿಗೆ ತಕ್ಕವು. ಅವುಗಳಿಗೆ ಸುಲಭವಾಗಿ ಹೊಳಪನ್ನೂ ಕೊಡಬಹುದು.

ಆಭರಣಗಳಿಗೆ ಧಾರ್ಮಿಕ ಪ್ರಾಶಸ್ತ್ಯವೂ ಇದೆ. ಉಂಗುರ ವಿನಿಮಯ ಹಾಗೂ ಮಾಂಗಲ್ಯಧಾರಣೆ ವಿವಾಹವಿಧಿಯ ಪವಿತ್ರ ಸಂಕೇತಗಳು. ರತ್ನಾಭರಣಗಳನ್ನು ಧರಿಸುವುದರಿಂದ ದುಷ್ಟ ಶಕ್ತಿಗಳನ್ನು ದೂರವಿಡಬಹುದೆಂಬ ನಂಬಿಕೆ ಈಗಲೂ ಇದೆ.

ನೋಡಿ : ಆಭರಣ—ಸಂಪುಟ ೧

ಬಗೆಬಗೆಯ ಆಭರಣಗಳು

ಆರ್. ತಾತಾ

ಕನ್ನಡ ನಾಡಿನ ಹೊರಗೆ ಉದ್ಯೋಗದಲ್ಲಿದ್ದರೂ ಕನ್ನಡ ನಾಡುನುಡಿಗಳ ಬಗೆಗೆ ಅಪಾರ ಅಭಿಮಾನವನ್ನಿಟ್ಟಿದ್ದವರು ಆರ್. ತಾತಾ. ಪೂರ್ಣ ನಾಮಧೇಯ ಆರ್. ತಾತಾಚಾರ್ಯ.

ಆರ್. ತಾತಾ ಅವರು 1876ರಲ್ಲಿ ಜನಿಸಿದರು. ತಂದೆ ರಾಜಕವಿ ತಿರುಮಲೆ ವೆಂಕಟಾಚಾರ್ಯರು, ಮೈಸೂರಿನವರು. ವರದಾಚಾರ್ಯರ ಸಂಸ್ಥೆಗಾಗಿ ಇವರು ನಾಟಕಗಳನ್ನು ಬರೆದು ಕೊಡುತ್ತಿದ್ದರು. ಇದರಿಂದಾಗಿ ತಾತಾಚಾರ್ಯರಿಗೆ ಬಾಲ್ಯದಿಂದಲೂ ಕವಿಗಳ, ವಿದ್ವಾಂಸರ, ಕಲಾವಿದರ ಪರಿಚಯ ಬೆಳೆಯಿತು. ಜೊತೆಗೆ ವಂಶಪಾರಂಪರ್ಯವಾದ ವಿದ್ವತ್ ವಾತಾವರಣ. ಈ ಕಾರಣದಿಂದ ತಾತಾ ಅವರು ಸಾಂಪ್ರದಾಯಿಕ ವಿದ್ವತ್ತನ್ನು ಗಳಿಸಿಕೊಳ್ಳುವುದು ಸಾಧ್ಯವಾಯಿತು. ಆಧುನಿಕ ವಿದ್ಯಾಭ್ಯಾಸಕ್ಕೂ ಮನಸ್ಸು ಕೊಟ್ಟು ಎಂ. ಎ., ಎಲ್. ಟಿ. ಪರೀಕ್ಷೆಗಳಲ್ಲಿ ಉತ್ತೀರ್ಣರಾದರು.

ಅನಂತರ ಮದರಾಸಿನ ವಿದ್ಯಾ ಇಲಾಖೆಯಲ್ಲಿ ಕೆಲಸಕ್ಕೆ ಸೇರಿದರು : ರಾಜಮಹೇಂದ್ರಿಯ ಸರಕಾರೀ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು.

ಆಮೇಲೆ ಮದರಾಸಿನ ಟೀಚರ್ಸ್ ಟ್ರೇನಿಂಗ್ ಕಾಲೇಜಿನಲ್ಲಿ ವೈಸ್ ಪ್ರಿನ್ಸಿಪಾಲ್ ಆದರು. ಸುಮಾರು 1920ರಲ್ಲಿ ಪಶ್ಚಿಮ ಗೋದಾವರಿ ಜಿಲ್ಲೆಯ ವಿದ್ಯಾಧಿಕಾರಿಯಾಗಿ ನೇಮಕಗೊಂಡರು.

ತಾತಾ ಅವರಿಗೆ ಮೊದಲಿನಿಂದಲೂ ಕನ್ನಡದ ಬಗೆಗೆ ತುಂಬ ಅಭಿಮಾನ. ಉದ್ಯೋಗ ನಿಮಿತ್ತ ಅವರು ಬಹುಕಾಲ ಕನ್ನಡ ನಾಡಿನ ಹೊರಗೇ ಇರಬೇಕಾಗಿಬಂದರೂ ಅವರ ಕನ್ನಡಾಭಿಮಾನ ಕುಗ್ಗಲಿಲ್ಲ. ಅವರು ವಿನಯಶೀಲರು, ಶ್ರದ್ಧಾವಂತರು. ಕನ್ನಡದಲ್ಲಿ ಅವರಿಗೆ ಘನ ಪಾಂಡಿತ್ಯವಿತ್ತು. ವೀರಶೈವ, ಜೈನ ಸಿದ್ಧಾಂತಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು.

'ಕಿತ್ತೀಳೆಯೂ ಕನ್ನಡವೂ', 'ಕನ್ನಡ ಶಬ್ದದ ವ್ಯುತ್ಪತ್ತಿ' ಮುಂತಾದ ಲೇಖನಗಳು ಅವರ ಪಾಂಡಿತ್ಯಕ್ಕೆ ಸಾಕ್ಷಿಗಳಾಗಿವೆ.

ನಯಸೇನನ 'ಧರ್ಮಾಮೃತ' ದಲ್ಲಿ ಬರುವ ಒಂದು ಕಥೆಯನ್ನು ಆಧಾರವಾಗಿಸಿಕೊಂಡು ಅವರು 'ಗುರುದತ್ತರಾಯನ ಚರಿತ್ರೆ' ಯನ್ನು ರಚಿಸಿದ್ದಾರೆ.

ತಾತಾರವರು 'ಗಿರಿಮಲ್ಲಿಕಾರ್ಜುನ ಶತಕಂ' ಹಾಗೂ 'ಮರುರ್ನಂದನ ಶತಕಂ' ಎಂಬ ಎರಡು ಶತಕಗಳನ್ನು ಬರೆದಿದ್ದಾರೆ.

ಸಾಹಿತ್ಯ ಸಮ್ಮೇಳನ 1927ರಲ್ಲಿ ಮಂಗಳೂರಿನಲ್ಲಿ ನಡೆದಾಗ ತಾತಾರವರನ್ನು ಅದರ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಲಾಯಿತು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ನಾಡಿನ ಜನಜೀವನ, ಸಾಹಿತ್ಯಗಳ ಅಭಿವೃದ್ಧಿಗಾಗಿ ಕೊಟ್ಟ ಸಲಹೆಗಳು ಗಣನೀಯವಾದುವು.

ಕನ್ನಡ ದೇಶ, ಕನ್ನಡನಾಡಿನ ಚರಿತ್ರೆಗಳನ್ನು ಕನ್ನಡದ ಮಕ್ಕಳಿಗೆ ತಿಳಿಸುವಂಥ ಕೃತಿಗಳ ಅಭಾವ ಅವರಿಗೆ ನೋವುಂಟುಮಾಡಿತ್ತು. ವಿದ್ವಾಂಸರು ಇತ್ತ ಗಮನ ಹರಿಸಬೇಕೆಂದು ಹೇಳುತ್ತಿದ್ದರು. ಕನ್ನಡ ನಾಡಿನ ವೀರಪುರುಷರನ್ನು ಕುರಿತು ಮಕ್ಕಳಿಗೆ ರುಚಿಸುವಂಥ ಕಥೆಗಳನ್ನು ಬರೆಯಬೇಕೆಂಬುದೂ ಅವರ ಆಶಯವಾಗಿತ್ತು.

ಕನ್ನಡದ ಪುರಾತನ ಗ್ರಂಥಗಳು ಅಮೂಲ್ಯವಾದುವು. ಅವು ಕ್ರಿಮಿಕೀಟಗಳ ಆಹಾರವಾಗದಂತೆ ಕಾಪಾಡಬೇಕು ; ಅಲ್ಲದೆ ಅವುಗಳನ್ನು ಸಂಗ್ರಹಿಸಿ ಪ್ರಕಟಿಸುವುದು ಅವಶ್ಯ –ಎಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದ್ದರು.

ತಾತಾ ಅವರು 1932ನೆಯ ಡಿಸೆಂಬರ್ 30ರಂದು ತೀರಿಕೊಂಡರು.

## ಆರ್. ನರಸಿಂಹಾಚಾರ್ಯ

ಮೈಸೂರಿನ ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಒಮ್ಮೆ ತಮ್ಮ ಐರೋಪ್ಯ ದೇಶಗಳ ಪ್ರವಾಸದಲ್ಲಿದ್ದಾಗ ಜರ್ಮನಿಯ ಹೋಟೆಲೊಂದರಲ್ಲಿ ತಂಗಿದ್ದರು. ಅವರು ಮೈಸೂರಿನಿಂದ ಬಂದವರು ಎಂದು ಗೊತ್ತಾದಾಗ ಅಲ್ಲಿದ್ದ ವಿದ್ವಾಂಸರೊಬ್ಬರು "ಓ! ಮೈಸೂರು ಎಂದರೆ ಆರ್. ನರಸಿಂಹಾಚಾರ್ಯರ ಮೈಸೂರೇ ತಾನೇ?" ಎಂದು ಅವರನ್ನು ಕೇಳಿದರು. ಯುವರಾಜರಿಗೆ ಆಶ್ಚರ್ಯವಾಯಿತು. ತಮ್ಮ ಸಂಸ್ಥಾನದಲ್ಲಿರುವ ಇಂಥ ಜಗತ್ಪ್ರಸಿದ್ಧನ ಪರಿಚಯವನ್ನು ತಾವಿನ್ನೂ ಮಾಡಿಕೊಂಡಿಲ್ಲವಲ್ಲ ಎನಿಸಿತು ಅವರಿಗೆ. ಸ್ವದೇಶಕ್ಕೆ ಹಿಂತಿರುಗಿದ ಕೂಡಲೇ ಈ ನರಸಿಂಹಾಚಾರ್ಯರು ಯಾರೆಂಬುದನ್ನು ವಿಚಾರಿಸಿ, ಬೆಂಗಳೂರಲ್ಲಿದ್ದ ಅವರ ಮನೆಗೆ ಹೋಗಿ, ವಿದೇಶದಲ್ಲಿ ಅವರಿಗಿದ್ದ ಗೌರವದ ವಿಚಾರವನ್ನು ತಿಳಿಸಿ, ಅವರ ಬಗೆಗೆ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು.



ಸಾಗರದಾಚೆಗೂ ಖ್ಯಾತಿ : ಆರ್. ನರಸಿಂಹಾಚಾರ್ಯ

ಕನ್ನಡಕ್ಕೆ ಯಾವ ವಿಧವಾದ ಮನ್ನಣೆಯೂ ಇಲ್ಲದಿದ್ದ ಕಾಲದಲ್ಲಿ ಕನ್ನಡ ನಾಡಿನ ಸೇವೆಯಲ್ಲಿ ತಮ್ಮ ಜೀವಮಾನವನ್ನು ಕಳೆದ ಮಹಾನುಭಾವರು ರಾಮಾನುಜಪುರಂ ನರಸಿಂಹಾಚಾರ್ಯರು. ಸಂಶೋಧನೆ, ವಿಮರ್ಶೆ ಮುಂತಾದುವು ಪರದೇಶದ ವಿದ್ವಾಂಸರಿಂದ ಮಾತ್ರ ಸಾಧ್ಯ ಎಂಬ ಭಾವನೆಗೆ ಬಿಡದಿಲ್ಲ; ನಾವೂ ಅದನ್ನು ಸಾಧಿಸಬಹುದು–ಎಂಬುದನ್ನು ತೋರಿಸಿಕೊಟ್ಟವರು ಅವರು.

ನರಸಿಂಹಾಚಾರ್ಯರು 1860ರ ಏಪ್ರಿಲ್ ತಿಂಗಳಿನಲ್ಲಿ ಜನಿಸಿದರು. ತಂದೆ ತಿರುನಾರಾಯಣ ಪೆರುಮಾಳ್, ತಾಯಿ ಶಿಂಗಮ್ಮಾಳ್. ವಾಸಸ್ಥಳ ಶ್ರೀರಂಗಪಟ್ಟಣ ತಾಲ್ಲೂಕು ಮಂಡ್ಯದಕೊಪ್ಪಲು. ಆಚಾರ್ಯರ ಬಾಲ್ಯ ವಿದ್ಯಾಭ್ಯಾಸ ಅಲ್ಲಿಯ ಕೂಲಿಮಠದಲ್ಲಿ ನಡೆಯಿತು. ಅನಂತರ ಹೋಬಳಿ ಶಾಲೆಯಲ್ಲಿ ಕನ್ನಡವನ್ನೂ ತಮ್ಮ ತಂದೆಯವರಲ್ಲಿ ಸಂಸ್ಕೃತವನ್ನೂ ಅಭ್ಯಾಸ ಮಾಡಿದರು. ಅವರು 13 ವರ್ಷದವರಾಗಿದ್ದಾಗಲೇ ಮದುವೆಯಾಯಿತು. ಮದರಾಸಿಗೆ ಹೋಗಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತಮ ವರ್ಗದಲ್ಲಿ ತೇರ್ಗಡೆಹೊಂದಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಅನೇಕ ಪಾರಿತೋಷಕಗಳನ್ನು ಪಡೆದರು. ಅನಂತರ ಮೈಸೂರು ದೇಶದ ವಿವಿಧ ಪ್ರದೇಶಗಳಲ್ಲಿ ಉಪಾಧ್ಯಾಯರಾಗಿ ಸೇವೆ ಸಲ್ಲಿಸಿದರು. ಮೈಸೂರಿನ ಮಹಾರಾಜ ಮತ್ತು ಮಹಾರಾಣಿ ಕಾಲೇಜುಗಳಲ್ಲೂ ಅಧ್ಯಾಪಕರಾಗಿದ್ದರು. ಮಾತೃಭಾಷೆ ತಮಿಳಾದರೂ ಕನ್ನಡದಲ್ಲಿ ಅವರಿಗೆ ವಿಶೇಷ ಆಸಕ್ತಿ ಅಭಿಮಾನಗಳಿದ್ದುವು. ತಮ್ಮ ಮುಂದಿನ ಕಾರ್ಯಕ್ಕೆ ಹೆಚ್ಚು ಕನ್ನಡ ಭಾಷಾಜ್ಞಾನ ಅವಶ್ಯವೆಂದು ಮನಗಂಡ ಅವರು ಕನ್ನಡವನ್ನು ಪ್ರಧಾನ ವಿಷಯವಾಗಿ ಆರಿಸಿಕೊಂಡು, 1893ರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯದಲ್ಲಿ ಎಂ. ಎ. ಪರೀಕ್ಷೆಗೆ ಅಭ್ಯಾಸ ಮಾಡಿ, ಅದರಲ್ಲಿ ತೇರ್ಗಡೆಯಾದರು. ಆ ಸಂದರ್ಭದಲ್ಲಿ ಮೈಸೂರಿನ ದೇವರಾಜ ಬಹದ್ದೂರ್ ಸಹಾಯನಿಧಿಯಿಂದ ಅವರಿಗೆ ಪಾರಿತೋಷಕವೂ ಲಭಿಸಿತು.

ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗಲೇ ಆಚಾರ್ಯರು ಗ್ರಂಥ ಸಂಪಾದನಾ ಕಾರ್ಯವನ್ನು ಆರಂಭಿಸಿದರು. ಇವರ ವಿದ್ವತ್ತನ್ನೂ ಸಂಶೋಧನಾ ಶಕ್ತಿಯನ್ನೂ ಗಮನಿಸಿದ ಮೈಸೂರು ಸಂಸ್ಥಾನದ ಶಿಕ್ಷಣ ಶಾಖೆಯ ಮುಖ್ಯಸ್ಥರಾಗಿಯೂ ಶಾಸನ ಸಂಶೋಧಕರೂ ಆಗಿದ್ದ ಬಿ.ಎಲ್. ರೈಸ್ ಅವರು ಆಚಾರ್ಯರನ್ನು ತಮ್ಮ ಸಹಾಯಕರನ್ನಾಗಿ ನೇಮಿಸಿಕೊಂಡರು. ಆಚಾರ್ಯರು 'ಪಂಪ ಭಾರತ' ಪರಿಷ್ಕರಣ ಕಾರ್ಯದಲ್ಲೂ ತಮಿಳು ಶಾಸನಗಳ ಅಧ್ಯಯನದಲ್ಲೂ ರೈಸ್ ಅವರಿಗೆ ವಿಶೇಷ ಸಹಾಯ ನೀಡಿದರು. 1906ರಲ್ಲಿ ನರಸಿಂಹಾಚಾರ್ಯರು ಪ್ರಾಚ್ಯ ಸಂಶೋಧನಾ ಇಲಾಖೆಯ ಮುಖ್ಯಾಧಿಕಾರಿಗಳಾದರು. 16 ವರ್ಷಗಳ ಅನಂತರ ಆ ಅಧಿಕಾರದಿಂದ ನಿವೃತ್ತರಾದರು. ಈ ಅವಧಿಯಲ್ಲಿ ಅವರ ಸಾಧನೆ ಸ್ಮರಣೀಯವಾದದ್ದು. ಐತಿಹಾಸಿಕ ಮತ್ತು ಸಾಮಾಜಿಕ ಮಹತ್ವವುಳ್ಳ ಸಹಸ್ರಾರು ಶಾಸನಗಳನ್ನು ಸಂಗ್ರಹಿಸಿದರು, ಪ್ರಕಟಿಸಿದರು. ಭಟ್ಟಾಕಳಂಕನ 'ಶಬ್ದಾನುಶಾಸನ' ಇವರಿಂದ ಪರಿಷ್ಕೃತವಾಗಿ ಪುನರ್ಮುದ್ರಣಗೊಂಡಿತು. ಚಿತ್ರದುರ್ಗದ ಸಮೀಪದಲ್ಲಿರುವ ಚಂದವಳ್ಳಿಯ ಪ್ರದೇಶದಲ್ಲಿ ಮತ್ತು ಹಾಸನ ಜಿಲ್ಲೆಯ ಹಳೇಬೀಡಿನಲ್ಲಿ ಭೂ ಶೋಧನೆ ನಡೆಸಿ ಆಂಧ್ರರು, ರೋಮನರು, ಚೀನೀಯರ ನಾಣ್ಯಗಳನ್ನೂ ಹೊಯ್ಸಳರ ನಾಣ್ಯಗಳನ್ನೂ ಸಂಗ್ರಹಿಸಿದರು. ಇತಿಹಾಸ ದೃಷ್ಟಿಯಿಂದ ಇವು ಅಮೂಲ್ಯವಾದುವು.

ಅವರ ಕೃತಿಯಾದ 'ನಗೆಗಡಲು' ಹೆಸರೇ ಸೂಚಿಸುವಂತೆ ಹಾಸ್ಯ ಪ್ರಧಾನವಾದ ಸನ್ನಿವೇಶಗಳಿಂದ ಕೂಡಿದ ಕಥೆಯುಳ್ಳದ್ದು. ಈ ಗ್ರಂಥ ಜನಪ್ರಿಯತೆ ಗಳಿಸಿತು. ತಿರುವಳ್ಳುವರ್ ವಿರಚಿತ 'ಕುರುಳ್' ತಮಿಳು ಗ್ರಂಥವನ್ನು ಅನುಸರಿಸಿ ಬರೆದ 'ನೀತಿ ಮಂಜರಿ' ಒಂದು ಅಪೂರ್ವ ಕೃತಿ ; ಪ್ರಕಟವಾದಾಗ ವಿದ್ವಾಂಸರ ಪ್ರಶಂಸೆಗೆ ಪಾತ್ರವಾಯಿತು.

ಕನ್ನಡದ ಸಾಹಿತ್ಯ ಚರಿತ್ರೆಯಲ್ಲಿ ನರಸಿಂಹಾಚಾರ್ಯರ ಹೆಸರು ಮಾಸದೆ ಉಳಿಯುವುದು, ಮೂರು ಸಂಪುಟಗಳಲ್ಲಿ ಪ್ರಕಟವಾದ ಅವರ 'ಕರ್ಣಾಟಕ ಕವಿಚರಿತೆ' ಯಿಂದ. ಎಂಟನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದ ಅವಧಿಯಲ್ಲಿ ಬಾಳಿದ ಕನ್ನಡ ಕವಿಗಳನ್ನು ಕುರಿತ ವಿವರಗಳು ಈ ಸಂಪುಟಗಳಲ್ಲಿವೆ.

ಹೊಯ್ಸಳ ವಾಸ್ತುಶಿಲ್ಪ, ಶಿಲ್ಪಕಲೆಗಳ ಪರಿಚಯ ಮಾಡಿಕೊಡುವ ಕೆಲವು ಉತ್ತಮ ಗ್ರಂಥಗಳನ್ನು ನರಸಿಂಹಾಚಾರ್ಯರು ರಚಿಸಿದರು. ಅಲ್ಲದೆ ಕನ್ನಡ ಸಾಹಿತ್ಯ, ಇತಿಹಾಸ, ಶಾಸನ ಸಂಶೋಧನೆಗೆ ಸಂಬಂಧಿಸಿದ ಅವರ ವಿದ್ವತ್ಪೂರ್ಣ ಲೇಖನಗಳು 'ಇಂಡಿಯನ್ ಆಂಟಿಕ್ವೆರಿ', 'ಮಿಥಿಕ್ ಸೊಸೈಟಿ' ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕನ್ನಡ ಶಾಸನಗಳಿಂದ ಆರಿಸಿದ 1463 ಪದ್ಯಗಳಿಂದ ರೂಪಿಸಿದ 'ಶಾಸನ ಪದ್ಯ ಮಂಜರಿ' ಎಂಬ ಅವರ ಸಂಕಲನ ಕನ್ನಡ ಭಾಷಾಭ್ಯಾಸಕ್ಕೆ ಅತ್ಯುಪಯುಕ್ತ ಗ್ರಂಥವಾಗಿದೆ. ಕನ್ನಡ ಭಾಷೆ ಮತ್ತು ಕನ್ನಡ ಸಾಹಿತ್ಯಗಳನ್ನು ಕುರಿತು ಅವರು ಮಾಡಿದ ಭಾಷಣಗಳೂ ಅಮೂಲ್ಯವಾದುವು.

ಪ್ರಶಸ್ತಿಗಳು, ಸನ್ಮಾನಗಳು, ಬಿರುದುಗಳು ಆಚಾರ್ಯರನ್ನು ಹುಡುಕುತ್ತ ಬಂದುವು. 1907ರಲ್ಲಿ ಅವರು ರಾಯಲ್ ಏಷ್ಯಾಟಿಕ್ ಸೊಸೈಟಿಯ ಸದಸ್ಯರಾಗಿ ಆರಿಸಲ್ಪಟ್ಟರು. 1913ರಲ್ಲಿ ಮೈಸೂರು ಮಹಾರಾಜರು 'ಪ್ರಾಕ್ತನ ವಿಮರ್ಶ ವಿಚಕ್ಷಣ' ಎಂಬ ಪ್ರಶಸ್ತಿ ಕೊಟ್ಟು ಪುರಸ್ಕರಿಸಿದರು. 1916ರಲ್ಲಿ ಬ್ರಿಟಿಷ್ ಸರಕಾರ 'ರಾವ್ ಬಹದ್ದೂರ್' ಬಿರುದನ್ನು ನೀಡಿ ಗೌರವಿಸಿತು.

ಕನ್ನಡದ ಸಾಹಿತ್ಯ ಸಂಶೋಧನಾದಿ ರಂಗಗಳಲ್ಲಿ ಆಚಾರ್ಯರು ಸಲ್ಲಿಸಿದ ಅಮೂಲ್ಯ ಸೇವೆಯನ್ನು ಮನ್ನಿಸಿ ಕನ್ನಡ ಜನತೆ ಅವರನ್ನು 1918ರಲ್ಲಿ ಧಾರವಾಡದಲ್ಲಿ ನಡೆದ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. 1934ರಲ್ಲಿ ಕಲ್ಕತ್ತೆಯ ಅಖಿಲ ಭಾರತ ಸಾಹಿತ್ಯ ಸಂಘದಿಂದ 'ಪ್ರಾಚ್ಯವಿದ್ಯಾವೈಭವ' ಎಂಬ ಬಿರುದೂ ಭಾರತ ಸರಕಾರದಿಂದ 'ಮಹಾ ಮಹೋಪಾಧ್ಯಾಯ' ಎಂಬ ಪ್ರಶಸ್ತಿಯೂ ಅವರಿಗೆ ದೊರೆತುವು.

ಹೀಗೆ ದೇಶ ವಿದೇಶದಲ್ಲಿ ಖ್ಯಾತಿ ಗಳಿಸಿ ಕನ್ನಡ ನಾಡಿನ ಕೀರ್ತಿಯನ್ನು ಬೆಳಗಿಸಿದ ರಾಮಾನುಜಪುರಂ ನರಸಿಂಹಾಚಾರ್ಯರು 1936ರ ಡಿಸೆಂಬರ್ 6ನೆಯ ದಿನಾಂಕ ಕೀರ್ತಿಶೇಷರಾದರು.

## ಅರಿಸ್ಟಾಫನೀಸ್

ಎರಡು ಸಾವಿರ ವರ್ಷಗಳಿಗೆ ಹಿಂದೆ ಅರಿಸ್ಟಾಫನೀಸನ ಕಾಮಿಡಿಯನ್ನು ವೀಕ್ಷಿಸಿ ಜನ ನಗೆಗಡಲಿನಲ್ಲಿ ತೇಲುತ್ತಿದ್ದರಂತೆ. ಈಗಲೂ ಅವನ ನಾಟಕಗಳನ್ನು ನೋಡಿದವರಲ್ಲಿ ಇದೇ ಭಾವ ಉಂಟಾಗುತ್ತದೆ. ಇಷ್ಟು ಕಾಲದ ಅನಂತರವೂ ಅವನ ಕೃತಿಗಳ ಚುರುಕು ಮಾಸಿಲ್ಲ.

ಅರಿಸ್ಟಾಫನೀಸನ ಲೇಖನಿಯ ವಿಡಂಬನೆಗೆ ತುತ್ತಾಗದ ಸಮಕಾಲೀನರಿಲ್ಲ. ಆಗಿನ ರಾಜಕಾರಣಿಗಳು, ವೈಚಾರಿಕರು, ಬರೆಹಗಾರರು, ಇತರ ನಾನಾ ಬಗೆಯ ವ್ಯಕ್ತಿಗಳನ್ನು ಅವನು ಲೀಲಾಜಾಲವಾಗಿ ಟೀಕೆ, ಭರ್ತ್ಸನೆಗಳಿಗೆ ಒಳಪಡಿಸಿದ್ದಾನೆ. ಸತ್ಯವಾದಿಯಾಗಿದ್ದ ಮಹಾನುಭಾವ ಸಾಕ್ರಟೀಸನನ್ನು ಕೂಡ 'ಮೋಡಗಳು' ಎಂಬ ನಾಟಕದಲ್ಲಿ ಠಕ್ಕ ಎಂದು ಜರೆದಿದ್ದಾನೆ. ಕ್ಲಿಯಾನ್ ಎಂಬ ರಾಜಕಾರಣಿಯನ್ನು ತೆಗಳಿದಾಗ ರಾಜದ್ರೋಹದ ಆಪಾದನೆಗೆ ಅರಿಸ್ಟಾಫನೀಸ್ ಗುರಿಯಾಗಬೇಕಾಯಿತು.

ಅರಿಸ್ಟಾಫನೀಸನಿಗೆ ಗ್ರೀಸಿನ ಗತಕಾಲದ ಬಗೆಗೆ ಅಪಾರ ಗೌರವ. ಇದೇ ಅವನ ವಿಡಂಬನಾತ್ಮಕ ಸಾಹಿತ್ಯಕ್ಕೆ ಪ್ರೇರಣೆ. ಅವನ ಬರೆವಣಿಗೆಯ ಅವಧಿಯಲ್ಲೇ ಹಳೆಯ ಕಾಮಿಡಿ, ಮಧ್ಯಮ ಕಾಮಿಡಿ ಹಾಗೂ ನವ್ಯ ಕಾಮಿಡಿ ಎಂದು ಗ್ರೀಸಿನ ಕಾಮಿಡಿ ನಾಟಕ ಮೂರು ಬಗೆಯಾಗಿ ಬೆಳೆಯಿತು. ಅರಿಸ್ಟಾಫನೀಸ್ ಪ್ರಧಾನವಾಗಿ ಹಳೆಯ ಕಾಮಿಡಿ ನಾಟಕಗಳನ್ನೇ ಬರೆದ. ಮಧ್ಯಮ ಕಾಮಿಡಿಯಿಂದ ನವ್ಯತೆಗೆ ಸರಿಯುವ ವೇಳೆಗೆ ಕಾಮಿಡಿಗಳಲ್ಲಿ ವಿಡಂಬನೆಯ ಅಂಶ ಕಡಮೆಯಾಯಿತು.

ಮಹತ್ವದ ವ್ಯಕ್ತಿಗಳನ್ನು ಹಾಸ್ಯಾಸ್ಪದವಾಗಿ ತೋರಿಸುವುದು ಅರಿಸ್ಟಾಫನೀಸನ ರೀತಿ. ಆದರೆ ಜನರನ್ನು ನಗಿಸುವುದಷ್ಟೇ ಅವನ ಉದ್ದೇಶವಾಗಿರಲಿಲ್ಲ. ಈ ಘಟನೆಗಳ ಹಾಗೂ ವ್ಯಕ್ತಿಗಳ 'ನಿಜರೂಪ'ವನ್ನು ಪ್ರೇಕ್ಷಕರು ಅರ್ಥಮಾಡಿಕೊಳ್ಳಬೇಕು ಎಂಬುದು ಅವನ ಇಂಗಿತ. ಸರಕಾರದಲ್ಲಾಗಲೀ ಶಿಕ್ಷಣ ಪದ್ಧತಿಯಲ್ಲಾಗಲೀ ಕಂಡುಬಂದ ದೋಷಗಳನ್ನು ನಾಟಕಗಳಲ್ಲಿ ಚಿತ್ರಿಸಿಬಿಡುತ್ತಿದ್ದ. ಅರಿಸ್ಟಾಫನೀಸನಿಗೆ ಅಥೆನ್ಸಿನ ಬಗ್ಗೆ ಒಲವಿರಲಿಲ್ಲ ಎಂದಲ್ಲ. ಅವನ 'ಕಪ್ಪೆಗಳು' ಎಂಬ ಕಾಮಿಡಿ, ನೊಂದ ಜನರಿಗೆ ಸಾಂತ್ವನ, ಸ್ವಾಗತಗಳನ್ನೀಯುವ ಅದ್ಭುತ ಕಲ್ಪನೆಯ ಚಿತ್ರ.

ಅಥೆನ್ಸಿನಲ್ಲಿ ಆಗ ಸರಕಾರದ ಆಶ್ರಯದಲ್ಲಿ ಉತ್ಸವಗಳು ಜರಗುತ್ತಿದ್ದುವು. ಇದರ ಅಂಗವಾಗಿ ನಾಟಕ ಸ್ಪರ್ಧೆಗಳೂ ಏರ್ಪಡುತ್ತಿದ್ದುವು. ಈ ಸ್ಪರ್ಧೆಗಳಲ್ಲಿ ಅರಿಸ್ಟಾಫನೀಸನ ನಾಟಕಗಳಿಗೆ ಹಲವಾರು ಬಹುಮಾನಗಳು ದೊರೆತುದುಂಟು. ಅವನು ಸುಮಾರು ಐವತ್ತೈದಕ್ಕೂ ಹೆಚ್ಚು ಕಾಮಿಡಿಗಳನ್ನು ಬರೆದ ಎನ್ನುತ್ತಾರೆ. ಈಗ ನಮಗೆ ಅವನ ಹನ್ನೊಂದು ಕಾಮಿಡಿಗಳು

ಅರಿಸ್ಟಾಫನೀಸ್ : ಕಟು ವಿಡಂಬನೆ

ಮಾತ್ರ ದೊರೆತಿವೆ. ಇತರ ನಾಟಕಗಳ ಸುಮಾರು ಒಂದು ಸಾವಿರ ತುಣುಕುಗಳು ಲಭಿಸಿವೆ. ದೊರೆತಿರುವ ಕಾಮಿಡಿಗಳಲ್ಲಿ 'ಅಕಾರ್ನಿಯನ್ಸ್' ಮೊದಲನೆಯದು. 'ಮೋಡಗಳು', 'ಕಣಜಗಳು' (ನ್ಯಾಯಾಲಯದ ಬಗೆಗೆ ಅಣಕ). 'ಶಾಂತಿ'. 'ಹಕ್ಕಿಗಳು'—ಇವು ಅವನ ಇತರ ಕೆಲವು ನಾಟಕಗಳು. ಇವೆಲ್ಲ ರಚಿತವಾಗಿರುವುದು ಪದ್ಯರೂಪದಲ್ಲಿ. ಅವನದು ಭಾವಪೂರ್ಣ ರಮಣೀಯ ಪದ್ಯ ಸಾಹಿತ್ಯ. ಮಾತಿನ ಚಕಮಕಿ, ಅನಿರೀಕ್ಷಿತ ತಿರುವುಗಳು, ಪರಿಚಿತ ಘಟನೆಗಳ ಬಗೆಗಿನ ಸೂಚ್ಯ ಪ್ರಸ್ತಾಪ ಇವೆಲ್ಲವುಗಳಿಂದ ಅತ್ಯಂತ ಪರಿಣಾಮಕಾರಿಯಾದ ಸನ್ನಿವೇಶ ಸೃಷ್ಟಿಯಾಗುತ್ತಿತ್ತು. ಈಗಲೂ ಪ್ರಸಾರ ಹಾಗೂ ರಂಗ ನಾಟಕಗಳಾಗಿ ಅರಿಸ್ಟಾಫನೀಸನ ಕೃತಿಗಳು ಅಭಿನಯಿಸಲ್ಪಡುತ್ತವೆ.

ಅರಿಸ್ಟಾಫನೀಸ್, ಫೆಲಿಪಸ್ ಎಂಬ ಶ್ರೀಮಂತನ ಮಗ. ಜನನ ಸುಮಾರು ಕ್ರಿ.ಪೂ. 450. ಮರಣ ಕ್ರಿ.ಪೂ. 388.

## ಆಲ್ಡಸ್ ಹಕ್ಸ್ಲಿ

ಆಲ್ಡಸ್ ಹಕ್ಸ್ಲಿ ಹುಟ್ಟಿದ್ದು ವಿದ್ವಾಂಸರ ವಂಶದಲ್ಲಿ. ವಿಖ್ಯಾತ ವಿಜ್ಞಾನಿ ಟಿ. ಎಚ್. ಹಕ್ಸ್ಲಿ ಅವನ ಅಜ್ಜ. ಲೇಖಕ ಲಿಯೊನಾರ್ಡ್ ಹಕ್ಸ್ಲಿ ಅವನ ತಂದೆ. ವಿಜ್ಞಾನಿ ಮತ್ತು ದಾರ್ಶನಿಕ ಜೂಲಿಯನ್ ಹಕ್ಸ್ಲಿ ಅವನ ಸೋದರ. ಆಲ್ಡಸ್ ಲಿಯೊನಾರ್ಡ್ ಹಕ್ಸ್ಲಿಯ ತಾಯಿ ಕವಿ ಮಾಥ್ಯೂ ಆರ್ನಾಲ್ಡನ ಸೋದರ ಮಗಳು. ಆದರೆ ಆಲ್ಡಸ್ ಹಕ್ಸ್ಲಿಯ ಹೆಸರು ಇಂದು ಪ್ರಖ್ಯಾತವಾಗಿರುವುದು, ಅವನ ವಂಶದ ಹಿರಿಮೆಯಿಂದಲ್ಲ. ತನ್ನ ಅಪೂರ್ವ ಪ್ರತಿಭೆ, ಸ್ವೋಪಜ್ಞ ಚಿಂತನೆಗಳಿಂದಾಗಿ ಅವನು ಈ ಶತಮಾನದ ಆದಿಭಾಗದ ಅತ್ಯಂತ ಪ್ರಮುಖ ಲೇಖಕರಲ್ಲೊಬ್ಬ ಎನಿಸಿಕೊಂಡಿದ್ದಾನೆ. ಅವನ ಆನುವಂಶಿಕ ಗುಣಗಳೂ ಅವನ ಸಿದ್ಧಿಗೆ ಕಾರಣವಿರಬಹುದು. "ಹಕ್ಸ್ಲಿಯ ಕಾದಂಬರಿಗಳನ್ನೋದಿದ್ದೇನೆ" ಎಂದು ಯಾರಾದರೂ ಹೇಳಿದರೆ, ಹಾಗೆ ಹೇಳಿದವನು ಬುದ್ಧಿವಂತ. ಆಧುನಿಕ ಆಲೋಚನಾಪರ ಎಂದು ಜನರ ಭಾವನೆ.

ಇಂಗ್ಲೆಂಡಿನ ಸರ್ರೆಯ ಗೋಡಾಲ್ಮಿಂಗ್‌ನಲ್ಲಿ 1894ರ ಜುಲೈ 26ರಂದು ಹಕ್ಸ್ಲಿ ಜನಿಸಿದ. ಈಟನ್ ಶಾಲೆಯಲ್ಲೂ ಆಕ್ಸ್‌ಫರ್ಡಿನ ಬ್ಯಾಲಿಯಲ್ ಕಾಲೇಜಿನಲ್ಲೂ ಶಿಕ್ಷಣ ಪಡೆದ. ಕಾಲೇಜು ಸೇರುವ ಮೊದಲು ಕಣ್ಣಿನ ತೊಂದರೆಯಿಂದಾಗಿ ಅವನು ತಾತ್ಕಾಲಿಕವಾಗಿ ಓದನ್ನು ನಿಲ್ಲಿಸಬೇಕಾಯಿತು. ವರ್ಷಗಳ ಕಾಲ ಕಣ್ಣೇ ಕಾಣದಷ್ಟು ತೊಂದರೆಯಾಗಿತ್ತು. ಕೊಂಚ ಮಟ್ಟಿಗೆ ಓದುವಂತಾದ ಕೂಡಲೇ ಆಕ್ಸ್‌ಫರ್ಡಿನ ಬ್ಯಾಲಿಯಲ್ ಕಾಲೇಜಿಗೆ ಸೇರಿ ಆಂಗ್ಲ ಸಾಹಿತ್ಯದಲ್ಲಿ ಪ್ರಥಮ ದರ್ಜೆಯಲ್ಲಿ ಡಿಗ್ರಿ ಪಡೆದ.

ಇವನ ಮೊಟ್ಟಮೊದಲ ಸಾಹಿತ್ಯಕೃತಿ —'ದಿ ಬರ್ನಿಂಗ್ ವೀಲ್' ಎಂಬ ಕವನ ಸಂಕಲನ—1916ರಲ್ಲಿ ಪ್ರಕಟವಾಯಿತು. 1919ರಲ್ಲಿ ಮದುವೆ ಮಾಡಿಕೊಂಡ ; ಪತ್ರಿಕೋದ್ಯೋಗಿಯಾದ. ಸಂಗೀತ. ನಾಟಕ. ಸಾಹಿತ್ಯ ವಿಮರ್ಶೆಗಳನ್ನೂ, ಲೇಖನಗಳನ್ನೂ ಬರೆದ.

ಇವನ ಮೊಟ್ಟಮೊದಲ ಕಾದಂಬರಿ 'ಕ್ರೋಮ್ ಯೆಲ್ಲೊ' 1921ರಲ್ಲಿ ಪ್ರಕಟವಾಯಿತು. ಬುದ್ಧಿವಂತಿಕೆಯಿಂದ ಕೂಡಿದ ಚತುರ ಸಂಭಾಷಣೆ ಹಾಸ್ಯಮಯ ಸನ್ನಿವೇಶಗಳಿಂದಾಗಿ ಈ ಕೃತಿ ಕೂಡಲೇ ಜನಪ್ರಿಯವಾಯಿತು. ಇದೇ ಜಾಡಿನದಾದರೂ, ವಿಡಂಬನದ ಧ್ವನಿಯನ್ನುಳ್ಳದ್ದು 'ಆಂಟಿಕ್ ಹೇ' (1923), 'ಪಾಯಿಂಟ್ ಕೌಂಟರ್ ಪಾಯಿಂಟ್' (1928) ಮೊದಲಾದ ಕಾದಂಬರಿಗಳು ಅನಂತರ ಬಂದುವು. ಹಕ್ಸ್ಲಿಯ ವಿಡಂಬನ ದೃಷ್ಟಿ ಮತ್ತು ಶೈಲಿ ಅತ್ಯಂತ ಪ್ರಖರವಾಗಿ ಕಾಣುವುದು ಅವನ 'ಬ್ರೇವ್ ನ್ಯೂ ವರ್ಲ್ಡ್' (1932)ನಲ್ಲಿ. ನೈತಿಕ ಮೌಲ್ಯಗಳ ಹಿನ್ನೆಲೆ ಇಲ್ಲದೆ ವಿಜ್ಞಾನ–ನಾಗರಿಕತೆ ಮುಂದುವರಿದಾಗ ಯಾವರೀತಿಯ ಪ್ರಪಂಚ ಸೃಷ್ಟಿಯಾಗಬಹುದು ಎಂಬುವದನ್ನು ಹಕ್ಸ್ಲಿ ಇಲ್ಲಿ ಅದ್ಭುತವಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಅಪಾರ ಸಾಹಿತ್ಯ ಮೌಲ್ಯವಿರುವ ವೈಜ್ಞಾನಿಕ ಕಾದಂಬರಿ ಇದು.

ಇಪ್ಪತ್ತನೆಯ ಶತಮಾನದ 2—3ನೆಯ ದಶಕಗಳ ಮನೋಭಾವ, ಚಿಂತನೆಗಳು ಹಕ್ಸ್ಲಿಯ ಕಾದಂಬರಿಗಳಲ್ಲಿ ಚಿತ್ರಿತವಾಗಿವೆ. ಮೊದಲನೆಯ



ಆಲೋಚನಾಪರತೆ : ಆಲ್ಡಸ್ ಹಕ್ಸ್ಲಿ

ಮಹಾಯುದ್ಧದ ಕಾರಣದಿಂದಲೂ ವಿಜ್ಞಾನದ ಪ್ರಗತಿಯಿಂದಾಗಿಯೂ ಸಾಂಪ್ರದಾಯಿಕ, ಮಾನವೀಯ, ನೈತಿಕ ಮೌಲ್ಯಗಳು ಕುಸಿದು ಬೀಳುತ್ತಿದ್ದ ಕಾಲ ಅದು. ಹಳೆಯ ಮೌಲ್ಯಗಳಲ್ಲಿ ನಂಬಿಕೆ ತಪ್ಪಿ, ಹೊಸ ಮೌಲ್ಯಗಳಲ್ಲಿ ಸಂಪೂರ್ಣ ವಿಶ್ವಾಸ ಮೂಡದೆ ಇದ್ದ ಮನಸ್ಥಿತಿ ಹಕ್ಸ್ಲಿಯದು. ಇದರಿಂದಾಗಿಯೇ, ತನ್ನ ಸ್ವಂತ ಅನುಭವಗಳಿಂದ ಮೂಡಿಬಂದ ಮೌಲ್ಯಗಳನ್ನು ಅವನು ಪ್ರತಿಪಾದಿಸಿದ.

'ಸಾಹಿತ್ಯ ಸ್ನೇಹಿತರಿಗಿಂತ ಬಿಸಿಲನ್ನು ಬಯಸಿ' ಹಕ್ಸ್ಲಿ 1923ರಿಂದ 1930ರ ವರೆಗೆ ಇಟಲಿಯಲ್ಲಿದ್ದ. ಇಲ್ಲಿ ಡಿ. ಎಚ್. ಲಾರೆನ್ಸ್‌ನೊಂದಿಗೆ ಗೆಳೆತನ ಬೆಳೆಯಿತು. 1934ರಲ್ಲಿ ಅಮೆರಿಕದಲ್ಲಿ ಪ್ರವಾಸಮಾಡಿದ ಹಕ್ಸ್ಲಿ 1937ರಲ್ಲಿ ಕ್ಯಾಲಿಫೋರ್ನಿಯದಲ್ಲಿ ನೆಲೆಸಿದ.

ಈ ವೇಳೆಗೆ ಹಕ್ಸ್ಲಿಗೆ ಭಾರತೀಯ ತತ್ತ್ವಜ್ಞಾನ ಮತ್ತು ಆಧ್ಯಾತ್ಮಿಕತೆಗಳಲ್ಲಿ ಆಸಕ್ತಿ ಹುಟ್ಟಿತ್ತು. ಇದನ್ನು ಅವನ 'ಐಲೆಸ್ ಇನ್ ಗಾಜ' (1936), 'ದಿ ಪೆರಿನಿಯಲ್ ಫಿಲಾಸಫಿ' (1946) ಮೊದಲಾದ ಕೃತಿಗಳಲ್ಲಿ ಕಾಣಬಹುದು.

1962ರಲ್ಲಿ ಪ್ರಕಟವಾದ 'ಐಲೆಂಡ್' ಕಾದಂಬರಿಯಲ್ಲಿ ಹಕ್ಸ್ಲಿಯ ದೃಷ್ಟಿ ಅಂದಿಗೆ 30 ವರ್ಷಗಳ ಹಿಂದೆ ಪ್ರಕಟವಾದ ಅವನ 'ಬ್ರೇವ್ ನ್ಯೂ ವರ್ಲ್ಡ್'ನ ದೃಷ್ಟಿಗಿಂತ ತೀರ ಭಿನ್ನ.

ಕವನ, ಕಾದಂಬರಿ, ಪ್ರಬಂಧ, ವಿಮರ್ಶೆ ಮೊದಲಾದ ಕ್ಷೇತ್ರಗಳಿಗೆ ಅಮೂಲ್ಯ ಕಾಣಿಕೆ ಇತ್ತವನು ಅಲ್ಡಸ್ ಹಕ್ಸ್ಲಿ. ತನ್ನ ಅಭಿಪ್ರಾಯ, ನಂಬಿಕೆಗಳನ್ನು ವ್ಯಕ್ತಪಡಿಸಲು ತಕ್ಕ ಪಾತ್ರಗಳನ್ನು ಹಕ್ಸ್ಲಿ ಸೃಷ್ಟಿಸುತ್ತಿದ್ದ. ಇದರಿಂದಾಗಿ ಇವನ ಕಾದಂಬರಿಗಳಲ್ಲಿ ಸಾಹಿತ್ಯ ಮೌಲ್ಯ ಮಾತ್ರವಲ್ಲದೆ ತಾತ್ತ್ವಿಕ ಮೌಲ್ಯಗಳೂ ಉಂಟು. ಕೇವಲ ಚತುರ, ಬುದ್ಧಿವಂತಿಕೆಯ ಬರವಣಿಗೆಯಿಂದ ಹಿಡಿದು ನಿಗೂಢ, ಆಧ್ಯಾತ್ಮಿಕ ದೃಷ್ಟಿಯುಳ್ಳ ಕೃತಿಗಳವರೆಗೆ ಇವನ ಲೇಖನ ಶ್ರೇಣಿ ಬೆಳೆದಿದೆ. ಇವನ ಸಮಕಾಲೀನನಾದ ಸಿರಿಲ್ ಕಾನಲಿ ಎಂಬ ವಿಮರ್ಶಕ ಹಕ್ಸ್ಲಿಯನ್ನು ಕುರಿತು, ಅವನಷ್ಟು ಬುದ್ಧಿವಂತಿಕೆ, ಗಾಂಭೀರ್ಯ, ವಿದ್ವತ್ತು, ಸಂವೇದನಾಶೀಲತೆ, ತೀಕ್ಷ್ಣದೃಷ್ಟಿ ಉಳ್ಳಂಥ ಲೇಖಕರು ತುಂಬ ಅಪೂರ್ವ —ಎಂದು ಹೇಳಿದ್ದಾನೆ.

ಹಕ್ಸ್ಲಿ 1963ರ ನವೆಂಬರ್ 22ರಂದು ನಿಧನನಾದ.



'ಕುಲಪುರೋಹಿತ'

## ಆಲೂರ ವೆಂಕಟರಾಯರು

'ಕರ್ನಾಟಕವು ಮೃತರಾಷ್ಟ್ರವಲ್ಲ. ಅದು ಸ್ವಭಾವ ಚೈತನ್ಯಪೂರ್ಣವಾದ ರಾಷ್ಟ್ರವು. ಕಾಲಾನುಸಾರವಾಗಿ ಅದು ಮೇಲು ಕೀಳು ಸ್ಥಿತಿಗೆ ಈಡಾಗಿರಬಹುದು. ಆದರೆ ಅದರಲ್ಲಿರುವ ಚೈತನ್ಯಶಕ್ತಿಯು ಮಾತ್ರ ಯಾವ ಕೃತ್ರಿಮೋಪಾಯಗಳಿಂದಲೂ ಕುಂದಲಾರದು.'

—ಹೀಗೆ ನುಡಿದವರು 'ಕನ್ನಡ ಕುಲಪುರೋಹಿತ' ಎಂಬ ಪ್ರಶಂಸೆಗೆ ಪಾತ್ರರಾದ ಆಲೂರ ವೆಂಕಟರಾಯರು. ಕನ್ನಡಾಭಿಮಾನ, ದೇಶಾಭಿಮಾನಗಳು ಅವರಲ್ಲಿ ಅಪಾರ ಕ್ರಿಯಾಶಕ್ತಿಯನ್ನು ಮೂಡಿಸಿದ್ದುವು. ತಮ್ಮ ಧ್ಯೇಯಸಾಧನೆಗಾಗಿ ಜೀವನದುದ್ದಕ್ಕೂ ಅವರು ಚಟುವಟಿಕೆಯಿಂದ ದುಡಿದರು.

ಆಲೂರರು ಜನಿಸಿದ್ದು 1880ರ ಜುಲೈ 12ರಂದು, ಬಿಜಾಪುರದಲ್ಲಿ. ತಂದೆ ಭೀಮರಾಯರು ಮಾಮಲೇದಾರರು. ಭಾಗೀರಥೀಬಾಯಿ ತಾಯಿ. ತಂದೆ ಸರಕಾರಿ ಕೆಲಸದಲ್ಲಿದ್ದುದರಿಂದ ವೆಂಕಟರಾಯರ ವಿದ್ಯಾಭ್ಯಾಸ ಒಂದೊಂದು ಕಾಲಕ್ಕೆ ಒಂದೊಂದು ಕಡೆ ನಡೆಯಿತು. 5–6 ವರ್ಷದ ಬಾಲಕನಾಗಿದ್ದಾಗ ಆಲೂರರು ಮೂಗಿಗೆ ಹುಣಸೆಬೀಜ ಹಾಕಿಕೊಂಡುದರಿಂದ ನೆಗಡಿಯಿಂದ ಸರಾಗವಾಗಿ ಉಸಿರಾಡಲು ಆಗದೆ, ಮಾತಾಡುವಾಗ ಕೊಂಚ ತೊದಲುವಿಕೆಯೂ ಆಗುತ್ತಿತ್ತು. ಕೇವಲ 16ನೆಯ ವಯಸ್ಸಿನವರಾಗಿದ್ದಾಗಲೇ ಲಕ್ಷ್ಮೀಬಾಯಿಯೊಡನೆ ಇವರ ವಿವಾಹ ನಡೆಯಿತು. ಪುಣೆಯಲ್ಲಿ ಇವರ ಕಾಲೇಜು ವಿದ್ಯಾಭ್ಯಾಸ; 1903ರಲ್ಲಿ ಬಿ. ಎ. ಪದವಿ ಪಡೆದರು. ಆ ಹೊತ್ತಿಗೆ ಅವರ ತಾಯಿ, ಪತ್ನಿ ಇಬ್ಬರೂ ಮೃತರಾದರು. ಪುಣೆಯಲ್ಲಿದ್ದಾಗ ಲೋಕಮಾನ್ಯ ತಿಲಕರ ಪ್ರಭಾವಕ್ಕೊಳಗಾದ ಇವರಿಗೆ ರಾಜಕೀಯದಲ್ಲಿ ಆಸಕ್ತಿ ಮೊಳೆಯಿತು. ಮುಂಬಯಿಯಲ್ಲಿ ವ್ಯಾಸಂಗವನ್ನು ಮುಗಿಸಿದ ಮೇಲೆ 1905ರಲ್ಲಿ ಧಾರವಾಡದಲ್ಲಿ ವಕೀಲಿ ವೃತ್ತಿಯನ್ನವಲಂಬಿಸಿದರು. ಎರಡನೆಯ ಬಾರಿ ವಿವಾಹವಾಯಿತು. ಇವರ ಎರಡನೆಯ ಪತ್ನಿಯ ಹೆಸರೂ ಲಕ್ಷ್ಮೀಬಾಯಿ. ನಮ್ಮ ರಾಷ್ಟ್ರದಲ್ಲಿ ಸ್ವಾತಂತ್ರ್ಯಹೋರಾಟದ ಕಾವೇರಿದಾಗ ಕೆಲವು ಕಾಲ ವಕೀಲ ವೃತ್ತಿ ಬಿಟ್ಟರು. ಅಲ್ಲದೆ ತಂದೆ ಮನೆಯನ್ನೂ ಬಿಟ್ಟು ಸ್ವತಂತ್ರವಾಗಿ ಸಂಸಾರ ಹೂಡಿದರು. ವಕೀಲ ವೃತ್ತಿ ಕೈಗೊಂಡು ಸ್ವಾತಂತ್ರ್ಯ ಚಳುವಳಿಯ ಬಿರುಸು ತಗ್ಗಿದಮೇಲೆ ಪುನಃ ತಂದೆಯ ಮನೆಗೇ ಬಂದರು. ಧರ್ಮ ವೇದಾಂತಗಳತ್ತ ಮನಸ್ಸು ಹರಿಸಿ ಭಗವದ್ಗೀತೆಯ ಅಧ್ಯಯನ ನಡೆಸಿದರು. ಕನ್ನಡ ಆಲೂರರು ಸಂಶೋಧನೆಗಾಗಿ ಕರ್ನಾಟಕದಾದ್ಯಂತ ಪ್ರವಾಸ ಕೈಗೊಂಡರು.

ಕರ್ನಾಟಕದ ಹಿತಸಾಧನೆ ಹಾಗೂ ಕನ್ನಡ ಭಾಷೆಯ ಅಭಿವೃದ್ಧಿಯ ಸಾಧನೆಗಾಗಿ ಸ್ಥಾಪಿತವಾದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಚಟುವಟಿಕೆಗಳನ್ನು ಚುರುಕುಗೊಳಿಸುವ ಉದ್ದೇಶದಿಂದ 1905ರಲ್ಲಿ ಆಲೂರರು ಅದರ ಸೂತ್ರಧಾರರಾದರು. ಸಂಘದ ಗ್ರಂಥ ಭಂಡಾರವನ್ನು ಪುನರ್ವ್ಯವಸ್ಥೆಗೊಳಿಸಿದರು; ಭಾಷಣಗಳನ್ನೇರ್ಪಡಿಸಿದರು. ಕರ್ನಾಟಕ ವಿದ್ಯಾವರ್ಧಕ ಸಂಸ್ಥೆಯ ಮುಖಪತ್ರವಾದ 'ವಾಗ್ಭೂಷಣ' ಪತ್ರಿಕೆಯ ಸಂಪಾದಕತ್ವ ವಹಿಸಿಕೊಂಡರು. ವಂಗ ವಿಭಜನೆಯಿಂದಾಗಿ ದೇಶದಲ್ಲಿ ಪ್ರಕ್ಷುಬ್ಧತೆ ಉಂಟಾಗಿದ್ದ ಕಾಲ ಅದು. ಈ ಚಳುವಳಿ ಹರಿದುಹಂಚಿಹೋಗಿದ್ದ ಕನ್ನಡ ನಾಡಿನ ಐಕ್ಯವನ್ನು ಸಾಧಿಸುವ ಆಕಾಂಕ್ಷೆಯನ್ನು ಆಲೂರರಲ್ಲಿ ಮೂಡಿಸಿತು. ತಮ್ಮ ಈ ಅಭಿಪ್ರಾಯವನ್ನು ಲೇಖನಗಳ ಮೂಲಕ ಪ್ರಚುರಪಡಿಸಿದರು.

[illegible] ಕರ್ನಾಟಕದ ವಿವಿಧ ಭಾಗಗಳಿಂದ ಗ್ರಂಥಕರ್ತರು, ಶಿಕ್ಷಕರು, ವಿದ್ಯಾಧಿಕಾರಿಗಳನ್ನು ಬರಮಾಡಿಕೊಂಡು ಸಮ್ಮೇಳನವನ್ನು ನಡೆಸುವ ಯೋಜನೆಯನ್ನು ವೆಂಕಟರಾಯರು ರೂಪಿಸಿದರು.

ಬೆಂಗಳೂರು ಕರ್ನಾಟಕದ ಸಾಂಸ್ಕೃತಿಕ ಕೇಂದ್ರ ಆಗಬೇಕೆಂಬುದು ಅವರ ಕನಸು. ಬೆಂಗಳೂರಿನಲ್ಲಿ ಇಂಥ ಒಂದು ಸಮ್ಮೇಳನ ನಡೆಯಬೇಕೆಂಬ ಇಚ್ಛೆಯಿಂದ ಬೆಂಗಳೂರಿಗೆ ನಾಲ್ಕಾರು ಬಾರಿ ಬಂದು ಅನೇಕರನ್ನು ಭೇಟಿಯಾದರು, ಪತ್ರವ್ಯವಹಾರ ನಡೆಸಿದರು. 1914ರಲ್ಲಿ ಇವರ ಪ್ರಯತ್ನ ಫಲಿಸಿತು. ಅಖಿಲ ಕರ್ನಾಟಕ ಸಮ್ಮೇಳನ ಬೆಂಗಳೂರಿನಲ್ಲಿ ಜರಗಿತು. ಈ ಸಮ್ಮೇಳನದಲ್ಲಿ 'ಕರ್ನಾಟಕ ಸಾಹಿತ್ಯ ಪರಿಷತ್ತು' ರೂಪುಗೊಂಡಿತು.

ಹಾಳು ಹಂಪೆ. ಆಲೂರರಿಗೆ ಕರ್ನಾಟಕದ ವೈಭವದ ದಿನಗಳ ನೆನಪನ್ನು ಮಾಡಿಕೊಟ್ಟ ಪುಣ್ಯ ಸ್ಥಳ. ಆ ಸ್ಥಳವನ್ನು ಅನೇಕ ಬಾರಿ ಸಂದರ್ಶಿಸಿ ವಿದ್ಯಾರಣ್ಯರ ಚರಿತ್ರೆಯನ್ನು ಬರೆದರು.

ಕನ್ನಡ ಸಂಸ್ಕೃತಿಯ ಅಧ್ಯಯನಕ್ಕೆ ನಾಡಿನ ಚರಿತ್ರೆಯ ಪೂರ್ಣ ಪರಿಚಯ ಅಗತ್ಯವೆಂದು ಮನಗಂಡು ಆಲೂರರು ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿದರು. ಶಾಸನಗಳು, ಪುರಾತನ ಅವಶೇಷಗಳು, ಓಲೆಗರಿ ಗ್ರಂಥಗಳು ಮುಂತಾದುವನ್ನು ಪರಿಶೀಲಿಸಲು ತಮ್ಮ ಅಧ್ಯಕ್ಷತೆಯಲ್ಲಿ 1914ರಲ್ಲಿ ಕರ್ನಾಟಕ ಇತಿಹಾಸ ಸಂಶೋಧನ ಮಂಡಲವನ್ನು ಸ್ಥಾಪಿಸಿದರು. ಉತ್ತರ ಕರ್ನಾಟಕದಲ್ಲಿದ್ದ ಶಾಸನಗಳ ಪರಿಶೀಲನೆ ನಡೆಯಲು ಏರ್ಪಾಟು ಮಾಡಿದರು.

'ಪ್ರಾಚೀನ ಕರ್ನಾಟಕ' ಷಾಣ್ಮಾಸಿಕ ಪತ್ರಿಕೆಯನ್ನು ಆರಂಭಿಸಿದರು. 'ಕರ್ನಾಟಕದ ಗತವೈಭವ' ಎಂಬ ಅಮೂಲ್ಯ ಗ್ರಂಥವನ್ನು ರಚಿಸಿ ಪ್ರಕಟಿಸಿದರು.

ಐತಿಹಾಸಿಕ, ಸಾಂಸ್ಕೃತಿಕ, ರಾಜಕೀಯ ವಿಚಾರಗಳಲ್ಲಿ ಆಸಕ್ತಿಯಿದ್ದಂತೆ ಆಧ್ಯಾತ್ಮಿಕ ವಿಚಾರಗಳಲ್ಲೂ ಆಲೂರರಿಗೆ ಮೊದಲಿನಿಂದಲೂ ಶ್ರದ್ಧೆ ಇತ್ತು. ಅವರು ಭಗವದ್ಗೀತೆಯನ್ನೂ ವೇದಾಂತ ವಿಚಾರಗಳನ್ನೂ ಕುರಿತು ಹಲವು ಗ್ರಂಥಗಳನ್ನು ಬರೆದಿದ್ದಾರೆ. ಲೋಕಮಾನ್ಯ ತಿಲಕರ ಅಪೇಕ್ಷೆಯಂತೆ ಅವರ 'ಗೀತಾರಹಸ್ಯ'ವನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸಿದರು.

ಆಲೂರರ ಇನ್ನೊಂದು ಮಹತ್ವದ ಸಾಧನೆ: 'ಜಯ ಕರ್ನಾಟಕ' ಮಾಸ ಪತ್ರಿಕೆಯ ಸ್ಥಾಪನೆ ಮತ್ತು ಪ್ರಕಟಣೆ. ಕರ್ನಾಟಕದ ಜನತೆಯಲ್ಲಿ ಜಾಗೃತಿಯನ್ನುಂಟುಮಾಡಲು, ಅವರ ಭಾಷಾಭಿಮಾನವನ್ನೂ ಕೆಚ್ಚನ್ನೂ ಕೆರಳಿಸಲು, ಈ ಪತ್ರಿಕೆಯ ಮೂಲಕ ಅವರು ದೀರ್ಘ ಕಾಲ ಶ್ರಮಿಸಿದರು.

ಕನ್ನಡ ನಾಡು ನುಡಿಗಳಿಗಾಗಿ ಆಲೂರರು ಸಲ್ಲಿಸಿದ ಅಪೂರ್ವ ಸೇವೆಯನ್ನು ಗಮನಿಸಿ, 1930ರಲ್ಲಿ ಮೈಸೂರಿನಲ್ಲಿ ನಡೆದ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಅವರನ್ನು ಆರಿಸಲಾಯಿತು.

ಕನ್ನಡ ನಾಡಿನ ಏಕೀಕರಣಕ್ಕಾಗಿ ಮಾತ್ರವಲ್ಲದೆ, ಭಾರತ ಸ್ವಾತಂತ್ರ್ಯ ಸಾಧನೆಗಾಗಿ ಕೂಡ ಆಲೂರರು ತಮ್ಮ ಸರ್ವಸ್ವವನ್ನೂ ಧಾರೆ ಎರೆದು ದುಡಿದರು. ಭಾರತ ಸ್ವತಂತ್ರವಾದುದನ್ನೂ ಕನ್ನಡನಾಡು ಒಂದಾದುದನ್ನೂ ತಮ್ಮ ಜೀವಿತದಲ್ಲೇ ಆಲೂರರು ಕಂಡರು.

ಕೊನೆಯವರೆಗೂ ಕ್ರಿಯಾಶೀಲವಾಗಿದ್ದ ಈ ಹಿರಿಯ ಜೀವ 1964ನೆಯ ಫೆಬ್ರವರಿ 25ರಂದು ಚಿರ ವಿಶ್ರಾಂತಿ ಪಡೆಯಿತು.

## ಆಸ್ಕರ್ ವೈಲ್ಡ್

ಉದ್ದವಾದ ತಲೆಗೂದಲು, ಮೊಣಕಾಲಿನಿಂದ ಕೊಂಚ ಕೆಳಗೆ ಮಾತ್ರ ಇರುತ್ತಿದ್ದ ಬಿಗಿ ಷರಾಯಿ, ಹಳದಿ–ಹಸಿರಿನ ಅಂಗಿ ಹಾಕಿಕೊಂಡು ಕೈಯಲ್ಲೊಂದು ಹೂ ಹಿಡಿದ ಒಬ್ಬ ವ್ಯಕ್ತಿ ತನ್ನ ವಿಚಿತ್ರವೇಷದಿಂದ ಜನರ ಗಮನವನ್ನು ಸೆಳೆಯುತ್ತಿದ್ದ. ಬಾಯಿ ಬಿಟ್ಟು ಮಾತಾಡಲು ಪ್ರಾರಂಭಿಸಿದರಂತೂ [illegible] ಮೈಯೆಲ್ಲ ಕಿವಿಯಾಗುತ್ತಿತ್ತು.

ಈ ಮೋಡಿಗಾರನೇ ಆಸ್ಕರ್ ವೈಲ್ಡ್. ತನ್ನ ಮಾತಿನ ಬುದ್ಧಿವಂತಿಕೆಯನ್ನು ಇವನು ತನ್ನ ನಾಟಕಗಳಲ್ಲೂ ತಂದ. ಇದರಿಂದಾಗಿ, ಇಂಗ್ಲಿಷ್ ಸಾಹಿತ್ಯದ ಹಾಸ್ಯ ನಾಟಕ ಪ್ರಪಂಚದಲ್ಲಿ ಹೆಸರು [illegible].

ಆಸ್ಕರ್ ವೈಲ್ಡ್ ಐರ್ಲೆಂಡಿನ ಡಬ್ಲಿನ್ನಿನಲ್ಲಿ 18[illegible]ರ ಅಕ್ಟೋಬರ್ 16ರಂದು ಜನಿಸಿದ. ಇವನ ತಂದೆ ಡಾಕ್ಟರು; ತಾಯಿ ವಿಲಕ್ಷಣ ವ್ಯಕ್ತಿತ್ವದ ಲೇಖಕಿ. ವೈಲ್ಡ್ ಭಾರಿ ಬುದ್ಧಿವಂತ ಹುಡುಗನಾಗಿದ್ದರೂ ಅಷ್ಟೇ ಸೋಮಾರಿ. ಡಬ್ಲಿನ್ನಿನ ಟ್ರಿನಿಟಿ ಕಾಲೇಜು, ಆಕ್ಸ್‌ಫರ್ಡಿನ ಮ್ಯಾಗ್ಡಲೆನ್ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡಿದ. ಬೇರೆ ಹುಡುಗರೊಡನೆ ಬೆರೆಯದ ಇವನ ಬಗೆಗೆ ಕೋಪಗೊಂಡ ಕೆಲ ಸಹಪಾಠಿಗಳು ಒಮ್ಮೆ ಇವನನ್ನು ನದಿಯಲ್ಲಿ ಮುಳುಗಿಸಲು ಯತ್ನಿಸಿದ್ದುಂಟು!

ನೀಳಗೂದಲು, ಬಿಗಿ ಷರಾಯಿಯ...ವೈಲ್ಡ್

ವೈಲ್ಡ್ 25 ವರ್ಷದವನಾಗಿದ್ದಾಗ ಲಂಡನಿಗೆ ಬಂದು ನೆಲೆಸಿದ. 1881ರಲ್ಲಿ ಇವನ ಮೊದಲ ಕವನಸಂಗ್ರಹ ಪ್ರಕಟವಾಯಿತು. ಆದರೆ ಇವನು ಪ್ರಖ್ಯಾತನಾದದ್ದು ಅಮೆರಿಕದಲ್ಲಿ, ತಾನು ನೀಡಿದ ಉಪನ್ಯಾಸಗಳಿಂದ. 'ಕಲೆಗೆ ಉದ್ದೇಶವಿಲ್ಲ, ಕಲೆಗಾಗಿ ಕಲೆ' —ಎಂಬ ವಾದವನ್ನು ವೈಲ್ಡ್ ಪ್ರತಿಪಾದಿಸಿದ. ಕೊಂಚಕಾಲ ಇವನು ಪತ್ರಿಕೋದ್ಯಮಿಯಾಗಿ ಕೂಡ ಕೆಲಸ ಮಾಡಿದ.

1884ರಲ್ಲಿ ವೈಲ್ಡ್ ಮದುವೆಯಾದ. ಕುಟುಂಬ ಜೀವನ ಅಷ್ಟೇನೂ ಸುಖಕರವಾಗಿರಲಿಲ್ಲ.

ವೈಲ್ಡ್‌ನ ಕಾದಂಬರಿ 'ಪಿಕ್ಚರ್ ಆಫ್ ಡೋರಿಯನ್ ಗ್ರೇ' 1891ರಲ್ಲಿ ಪ್ರಕಟವಾಯಿತು. ಸಾಂಪ್ರದಾಯಿಕ ನೀತಿ ನಿಯಮಗಳನ್ನು ಉಲ್ಲಂಘಿಸಿದೆ ಎಂದು ಈ ಕಾದಂಬರಿ ಬಹಳ ವಿವಾದಗಳಿಗೆ ಎಡೆಕೊಟ್ಟಿತು. ಹಲವರು ಅದು ಅನೈತಿಕ ಎಂದರು. ವೈಲ್ಡ್, "ನೈತಿಕ ಅಥವಾ ಅನೈತಿಕ ಪುಸ್ತಕಗಳೆಂಬುದು ಇಲ್ಲ. ಪುಸ್ತಕವನ್ನು ಚೆನ್ನಾಗಿ ಬರೆಯಲಾಗಿದೆ ಅಥವಾ ಚೆನ್ನಾಗಿ ಬರೆದಿಲ್ಲ ಎನ್ನಬಹುದು ಅಷ್ಟೆ" ಎಂದು ಉತ್ತರಿಸಿದ.

ವೈಲ್ಡ್‌ನ ಕಾದಂಬರಿ ಪ್ರಕಟವಾದ ಮರುವರ್ಷ ಅವನ 'ಲೇಡಿ ವಿಂಡ್‌ಮಿಯರ್ಸ್ ಫ್ಯಾನ್' ಎಂಬ ನಾಟಕ ಪ್ರದರ್ಶಿತವಾಯಿತು. ಅನಂತರ 'ಎ ವುಮನ್ ಆಫ್ ನೋ ಇಂಪಾರ್ಟೆನ್ಸ್' ನಾಟಕವೂ 1895ರಲ್ಲಿ 'ಆನ್ ಐಡಿಯಲ್ ಹಸ್ಬೆಂಡ್' ಮತ್ತು 'ದಿ ಇಂಪಾರ್ಟೆನ್ಸ್ ಆಫ್ ಬೀಯಿಂಗ್ ಅರ್ನೆಸ್ಟ್' ಎಂಬ ನಾಟಕಗಳೂ ಪ್ರಕಟವಾದುವು. ಇವು ವೈಲ್ಡ್‌ನ ಜನಪ್ರಿಯತೆ ಖ್ಯಾತಿಗಳನ್ನು ಅತ್ಯುನ್ನತ ಮಟ್ಟಕ್ಕೆ ಕೊಂಡೊಯ್ದುವು. ಮೇಲಿನ ಮೊದಲ ಮೂರು ನಾಟಕಗಳಲ್ಲಿನ ಚತುರ ಸಂಭಾಷಣೆ ಎಲ್ಲರ ಮನ ಸೆಳೆಯಿತು. 'ದಿ ಇಂಪಾರ್ಟೆನ್ಸ್ ಆಫ್ ಬೀಯಿಂಗ್ ಅರ್ನೆಸ್ಟ್' ನಾಟಕದ ಕಥಾ ಸಂವಿಧಾನವೇ ತೀರ ವಿಚಿತ್ರ. ಸಂಭಾಷಣೆ ಇಡೀ ಆಂಗ್ಲ ಸಾಹಿತ್ಯದಲ್ಲೇ ಅಪೂರ್ವವಾದ ಬುದ್ಧಿವಂತಿಕೆ ಮತ್ತು ಚಾಕಚಕ್ಯತೆಯಿಂದ ಕೂಡಿದ್ದು.

ಈ ನಾಟಕಗಳು ನಡೆಯುತ್ತಿದ್ದಂತೆ ವೈಲ್ಡ್‌ನ ಕೀರ್ತಿ ಮಣ್ಣು ಪಾಲಾಗುವಂಥ ಘಟನೆಯೊಂದು ನಡೆಯಿತು. ಇವನು ಕ್ವೀನ್ಸ್‌ಬರಿಯ ಶ್ರೀಮಂತನೊಬ್ಬನ ಮಗನೊಂದಿಗೆ ಅನೈತಿಕ ಸಂಬಂಧ ಇಟ್ಟುಕೊಂಡಿದ್ದಾನೆಂಬ ಆರೋಪ ಬಂತು. ಆ ಸಂಬಂಧದಲ್ಲಿ ಇವನನ್ನು ಬಂಧಿಸಲಾಯಿತು. ನ್ಯಾಯಾಲಯದಲ್ಲಿ ಆರೋಪ ಸ್ಥಿರಪಟ್ಟು, ವೈಲ್ಡ್ ಎರಡು ವರ್ಷ ಜೈಲುವಾಸ ಅನುಭವಿಸಬೇಕಾಯಿತು. ಅವಮಾನ, ಅನಾರೋಗ್ಯಗಳಿಂದ ನರಳಿದ ವೈಲ್ಡ್ ತನ್ನ ಈ ಸಂಕಟಗಳನ್ನು 'ದಿ ಬ್ಯಾಲೆಡ್ ಆಫ್ ರೀಡಿಂಗ್ ಜೈಲ್' (1898) ಎಂಬ ಕವನದಲ್ಲಿ ಸೊಗಸಾಗಿ ಚಿತ್ರಿಸಿದ್ದಾನೆ.

1897ರಲ್ಲಿ ಜೈಲಿನಿಂದ ಬಿಡುಗಡೆ ಹೊಂದುವ ಹೊತ್ತಿಗೆ ವೈಲ್ಡ್‌ನ ಹೆಂಡತಿಯೂ ಇಬ್ಬರು ಮಕ್ಕಳೂ ಆತನಿಂದ ದೂರ ಸರಿದಿದ್ದರು, ಅವನ ಕೀರ್ತಿ ಜನಪ್ರಿಯತೆಗಳೂ ಮಾಯವಾಗಿದ್ದುವು. ವೈಲ್ಡ್ ಫ್ರಾನ್ಸಿಗೆ ಹೋಗಿ ಅಲ್ಲಿ ಸೆಬಾಸ್ಟಿಯನ್ ಮೆಲ್‌ಮಾತ್ ಎಂಬ ಹೊಸ ಹೆಸರಿಟ್ಟುಕೊಂಡು ಕಾಲಕಳೆದ. ಬಡತನ ಕಾಡಿತು, ಸಮಾಜದಿಂದ ಬಾಹಿರ ಬೇರೆ. ಆದರೂ ಇವನ ಬುದ್ಧಿ ಪ್ರಖರತೆ ಉಜ್ವಲವಾಗಿಯೇ ಇತ್ತು. ಇವನ ಅಗಾಧ ಪಾಂಡಿತ್ಯ, ಮಾನವೀಯತೆ ಮತ್ತು ದ್ವೇಷಮತ್ಸರಗಳಿಲ್ಲದ ವರ್ತನೆ, ಪ್ರಚಂಡ ವಾಕ್ಚಾತುರ್ಯ—ಈ ಗುಣಗಳಿಂದಾಗಿ ಫ್ರಾನ್ಸಿನಲ್ಲಿ ಇವನಿಗೆ ಅನೇಕ ಗೆಳೆಯರು ದೊರೆತರು.

ತನ್ನ ಕಾಲದ ಅತ್ಯುತ್ತಮ ಮಾತುಗಾರ ಎನಿಸಿಕೊಂಡ ವೈಲ್ಡ್ 1900ರ ನವೆಂಬರ್ 30ರಂದು ಪ್ಯಾರಿಸಿನಲ್ಲಿ ಕಣ್ಮುಚ್ಚಿದ.

ಹಿಂದೊಮ್ಮೆ ಅಮೆರಿಕದ ಆದಾಯ ತೆರಿಗೆ ಅಧಿಕಾರಿಗಳಿಗೆ ಆಸ್ಕರ್ ವೈಲ್ಡ್ 'ನನ್ನ ಪ್ರತಿಭೆಯೊಂದನ್ನು ಬಿಟ್ಟು ನನ್ನಲ್ಲಿ ಮತ್ತಿನ್ನಾವ ಆಸ್ತಿಯೂ ಇಲ್ಲ' ಎಂದು ಹೇಳಿದ್ದನಂತೆ. ಕೊನೆಯ ದಿನಗಳ ಮಟ್ಟಿಗಂತೂ ಆ ಮಾತು ಪರಿಸ್ಥಿತಿಯ ನೈಜವರ್ಣನೆಯೇ ಆಗಿತ್ತು.

## ಆಳ್ವಾರರು

ಆಳ್ವಾರರು ತಮಿಳುನಾಡಿನ ಪ್ರಸಿದ್ಧ ವಿಷ್ಣು ಭಕ್ತರು. ಆಳ್ವಾರ್ ಎಂಬ ಶಬ್ದಕ್ಕೆ ಭಗವಂತನಲ್ಲಿ ಗಾಢ ಭಕ್ತಿಯುಳ್ಳವರು ಎಂದು ಅರ್ಥ; ತಮ್ಮ ಆಧ್ಯಾತ್ಮಿಕ ಅನುಭವವನ್ನೂ ಆನಂದವನ್ನೂ ಮಧುರವಾದ ಗೀತೆಗಳ ರೂಪದಲ್ಲಿ ಹಾಡಿದವರು ಎಂದೂ ಅರ್ಥ. ಅವರ ಗೀತೆಗಳು ತಮಿಳಿನಲ್ಲಿ ರಚಿಸಲ್ಪಟ್ಟಿವೆ. ತಮಿಳಿನ ಧಾರ್ಮಿಕ ಸಾಹಿತ್ಯಕ್ಕೆ ಈ ಗೀತೆಗಳು ಒಂದು ಅಮೂಲ್ಯ ಕಾಣಿಕೆ.

ಆಳ್ವಾರರು 12 ಮಂದಿ. ಅವರು ಪಾಂಡ್ಯ, ಚೋಳ, ಕೇರಳ ನಾಡಿನಲ್ಲಿ ವಿಷ್ಣು ಭಕ್ತಿಯನ್ನು ಪ್ರಸಾರ ಮಾಡಿದರು. ಐತಿಹಾಸಿಕ ಆಧಾರದ ಪ್ರಕಾರ ಅವರೆಲ್ಲ ಒಟ್ಟಾಗಿ ಪಲ್ಲವರ ಕಾಲಕ್ಕೆ ಸೇರಿದವರು. ಕ್ರಿ.ಶ. 7ರಿಂದ 9ನೆಯ ಶತಮಾನದವರೆಗೂ ಆಳ್ವಾರರ ಕಾಲವೆನ್ನಬಹುದು. ಇವರೆಲ್ಲ ತಾಮ್ರಪರ್ಣಿ, ಪಯಸ್ವಿನೀ, ವೈಗೈನದಿಗಳ ತೀರ ಪ್ರದೇಶಗಳಲ್ಲಿ ಹುಟ್ಟಿದವರು. ಆಳ್ವಾರರನ್ನು ಕಾಲದ ದೃಷ್ಟಿಯಿಂದ ಮೂರು ಗುಂಪುಗಳಾಗಿ ವಿಂಗಡಿಸುತ್ತಾರೆ. ಪೊಯ್‌ಗೈ ಆಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್ ಮತ್ತು ತಿರುಮಳಿಶೈ ಆಳ್ವಾರ್ ಮೊದಲನೆಯ ಗುಂಪು. ನಮ್ಮಾಳ್ವಾರ್, ಮಧುರ ಕವಿ ಆಳ್ವಾರ್, ಕುಲಶೇಖರ ಆಳ್ವಾರ್, ಪೆರಿಯಾಳ್ವಾರ್ ಎರಡನೆಯ ಗುಂಪು. ತೊಂಡರಪ್ಪೊಡಿ ಆಳ್ವಾರ್, ತಿರುಪ್ಪಾಣಿ ಆಳ್ವಾರ್, ತಿರುಮಂಗೈ ಆಳ್ವಾರ್ ಮೂರನೆಯ ಗುಂಪು.

'ಶೂಡಿಕುಡುತ್ತ ನಾಚಿಯಾರ್'



ಈ ಆಳ್ವಾರುಗಳಲ್ಲಿ ಎಲ್ಲ ಜಾತಿಗಳಿಗೂ ಸೇರಿದವರುಂಟು. ಒಬ್ಬರು ರಾಜರಾಗಿದ್ದವರು, ಒಬ್ಬಾಕೆ ಸ್ತ್ರೀ, ಒಬ್ಬರು ಪಂಚಮರು, ಒಬ್ಬರು ಕಳ್ಳರ ಕುಲಕ್ಕೆ ಸೇರಿದವರು. ಇನ್ನೊಬ್ಬರು ಮ್ಲೇಚ್ಛಕುಲದವರು, ಮೂವರು ಬ್ರಾಹ್ಮಣರು. ಭಗವಂತನಲ್ಲಿ ಆತ್ಮಸಮರ್ಪಣೆಯೇ ಅವರ ಜೀವನದ ಪರಮ

ಉದ್ದೇಶವಾಗಿತ್ತು. ಇವರೆಲ್ಲರೂ ದೈವಭಕ್ತರೂ ಜ್ಞಾನಿಗಳೂ ಪ್ರತಿಭಾ ಸಂಪನ್ನರೂ ಆಗಿದ್ದರು. ಆಧ್ಯಾತ್ಮಿಕ ಜ್ಞಾನವನ್ನು ಕುರಿತು ಅವರು ತಮ್ಮ ಸುತ್ತಮುತ್ತಲಿನ ಜನರಿಗೆ ಅರ್ಥವಾಗುವಂತೆ ತಮಿಳಿನಲ್ಲಿ ಹಾಡಿದ್ದರಿಂದ ಅವರ ಸೂಕ್ತಿಗಳಿಗೆ 'ತಮಿಳು ವೇದ' ಎಂಬ ಹೆಸರು ಬಂದಿದೆ. ಶ್ರೀ ವೈಷ್ಣವ ದೇವಾಲಯಗಳಲ್ಲಿ ಆಳ್ವಾರರ ಮೂರ್ತಿಯನ್ನು ಸ್ಥಾಪಿಸಿ ಅವನ್ನು ಪೂಜಿಸುವ ಪದ್ಧತಿ ಇದೆ. ಆಳ್ವಾರರ ಜೀವನ ಚರಿತ್ರೆಯನ್ನು ಅರಿಯಲು ನಮಗೆ ದೊರಕಿರುವ ಆಧಾರ ಗ್ರಂಥಗಳಲ್ಲಿ ಪ್ರಮುಖವಾದುವು 'ದಿವ್ಯಸೂರಿ ಚರಿತ', 'ಪ್ರಸನ್ನಾಮೃತ' ಮತ್ತು 'ಗುರುಪರಂಪರಾ ಪ್ರಭಾವ' ಎಂಬ ಗ್ರಂಥಗಳು. ಆಳ್ವಾರರ ಉಪದೇಶಗಳನ್ನೊಳಗೊಂಡ ನಾಲಾಯಿರ (ನಾಲ್ಕು ಸಾವಿರ) ಪ್ರಬಂಧಗಳು ಅವರ ಬೋಧನೆಗಳನ್ನು ತಿಳಿಯಲು ಆಧಾರ.

ಅವರು ಏಕದೇವತಾ ಆರಾಧನೆಯನ್ನೂ ಭಕ್ತಿ ಧ್ಯಾನಗಳ ಮಹತ್ವವನ್ನೂ ಪ್ರತಿಪಾದಿಸಿದರು. ಭಗವಂತನು ಪ್ರೇಮಪೂರಿತನು. ಪರಿಪೂರ್ಣನು. ಸ್ತ್ರೀಪುರುಷರೆಂಬ ಭೇದವಿಲ್ಲದೆ ಯಾರು ಬೇಕಾದರೂ ದೃಢಭಕ್ತಿಯಿಂದ ಪರಮಾತ್ಮನ ಕೃಪೆಗೆ ಪಾತ್ರರಾಗಬಹುದು —ಎಂಬುದೇ ಆಳ್ವಾರರು ಬೋಧಿಸಿದ ತತ್ತ್ವಗಳು. ಆ ಕಾಲದ ಜನಸಾಮಾನ್ಯರಿಗೆ ಆಳ್ವಾರರ ಬಗೆಗೆ ಅಪಾರ ಭಕ್ತಿ ಗೌರವಗಳಿದ್ದುವು.

ಆಳ್ವಾರರುಗಳಲ್ಲಿ ಆಂಡಾಳ್ ಎಂದು ಪ್ರಖ್ಯಾತಳಾದ ಗೋದಾದೇವಿಯ ಜೀವನ ರೋಮಾಂಚಕಾರಿಯಾದದ್ದು. ಆಂಡಾಳ್ ಪೆರಿಯಾಳ್ವಾರರ ಸಾಕು ಮಗಳು. ಕೋಮಲ ಮನಸ್ಸಿನವಳೂ ಸುಂದರಿಯೂ ಆದ ಆಕೆ ಪರಮಾತ್ಮನೇ ತನ್ನ ಪತಿಯೆಂಬ ಭಾವನೆಯನ್ನು ಚಿಕ್ಕಂದಿನಿಂದ ರೂಢಿಸಿಕೊಂಡಳು. ಅವಳ ತಂದೆ ತೋಟದಿಂದ ಆರಿಸಿ ತಂದ ಹೂಗಳ ಮಾಲೆಕಟ್ಟಿ ಆ ಮಾಲೆ ದೇವರಿಗೆ ಒಪ್ಪಿಸುವಷ್ಟು ಸೊಗಸಾಗಿದೆಯೋ ಇಲ್ಲವೋ ಎಂಬುದನ್ನು ನಿರ್ಧರಿಸಲು ಮೊದಲು ಅದನ್ನು ತಾನೇ ಮುಡಿದು ಕನ್ನಡಿಯಲ್ಲಿ ನೋಡಿಕೊಂಡು ಪರೀಕ್ಷಿಸಿ ಅನಂತರ ದೇವರಿಗೆ ಅರ್ಪಿಸುತ್ತಿದ್ದಳು. ಒಂದು ದಿನ ಅವಳ ತಂದೆ ಇದನ್ನು ಕಂಡು. ಅವಳು ಮೊದಲು ಮುಡಿದ ಮಾಲೆ ಅಶುದ್ಧವಾಯಿತೆಂದು ದೇವರಿಗೆ ಅರ್ಪಿಸಲಿಲ್ಲ. ಅಂದು ದೇವರು ಕನಸಿನಲ್ಲಿ ಅವರಿಗೆ ಕಾಣಿಸಿಕೊಂಡು ಆಂಡಾಳ್ ತಾನು ಧರಿಸಿಕೊಂಡು ಅನಂತರ ಅರ್ಪಿಸಿದ ಹೂಮಾಲೆಯೇ ತನಗೆ ಇಷ್ಟವೆಂದು ನುಡಿದಾಗ, ತನ್ನ ಮಗಳ ನಿರ್ಮಲ ಭಕ್ತಿಗೆ ಆತ ಬೆರಗಾದ. ಈ ಘಟನೆಯಿಂದಾಗಿ ಆಂಡಾಳ್ 'ಶೂಡಿಕುಡುತ್ತ ನಾಚಿಯಾರ್' ಅಂದರೆ ತಾನು ಮುಡಿದುದ್ದನ್ನು ಅರ್ಪಿಸಿದ ದೇವಿ ಎಂದು ವಿಖ್ಯಾತಳಾದಳು. ಆಂಡಾಳ್ ತನ್ನ ಆರಾಧ್ಯ ದೈವ ಶ್ರೀರಂಗನಾಥನಿಗೆ ಹೂಮಾಲೆಯನ್ನು ಅರ್ಪಿಸಿ ಆತನ ಹೃದಯವನ್ನು ಹೊಕ್ಕು ಕಣ್ಮರೆಯಾದಳು ಎಂದು ಐತಿಹ್ಯವಿದೆ.

ಆಂಡಾಳ್ ರಚಿಸಿದ ತಿರುಪ್ಪಾವೈ ಎಂಬ ಮೂವತ್ತು ಗೀತೆಗಳು ಜನಪ್ರಿಯವಾಗಿವೆ. ಅವು ಭಗವತ್ ಪ್ರೇಮದಿಂದ ತುಂಬಿದ ಸ್ತ್ರೀಯ ಹೃದಯದಿಂದ ಹೊರಹೊಮ್ಮಿದ ಗೀತೆಗಳು.

ಈ ಭಕ್ತಳ ಪವಿತ್ರ ಜೀವನವನ್ನು ಕನ್ನಡ ನಾಡಿನ ಶಿವಶರಣೆ ಅಕ್ಕ ಮಹಾದೇವಿ, ಮೇವಾಡದ ರಾಜವಂಶಕ್ಕೆ ಸೇರಿದ ಕೃಷ್ಣಭಕ್ತೆ ಮೀರಾಬಾಯಿ ಇವರ ಜೀವನದೊಡನೆ ಹೋಲಿಸಬಹುದು.

ಆಳ್ವಾರರಲ್ಲಿ ಗಮನಾರ್ಹವಾದ ಇನ್ನೊಂದು ಹೆಸರು ಕುಲಶೇಖರ ಆಳ್ವಾರರದು. ಅವರ 'ಮುಕುಂದ ಮಾಲಾ' ಭಕ್ತಿ ಸಾಹಿತ್ಯದಲ್ಲಿ ಜನಪ್ರಿಯವಾಗಿರುವ ಅಪೂರ್ವ ಕೃತಿ. ಜಯದೇವ ಕವಿಯ 'ಗೀತಗೋವಿಂದ'ದಂತೆ ಸಂಗೀತಪ್ರಿಯರ ಮೆಚ್ಚುಗೆಗೆ ಇದು ಪಾತ್ರವಾಗಿದೆ. 'ಮುಕುಂದ ಮಾಲಾ'ದ ಒಂದೊಂದು ಶ್ಲೋಕವೂ ಭಾವಪೂರ್ಣವಾಗಿದ್ದು, ಭಕ್ತಿಯನ್ನು ಪ್ರತಿಬಿಂಬಿಸುತ್ತದೆ.

## ಇ. ಎಂ. ಫಾರ್ಸ್ಟರ್

ಇಂಗ್ಲಿಷ್ ಓದುಗರ ಹೃದಯದಲ್ಲಿ ಭಾರತಕ್ಕೊಂದು ಶಾಶ್ವತ ಸ್ಥಾನವನ್ನು ಕಲ್ಪಿಸಿದ ಕೃತಿಗಳಲ್ಲಿ 'ಎ ಪ್ಯಾಸೆಜ್ ಟು ಇಂಡಿಯಾ' ಒಂದು. ಈ ಕಾದಂಬರಿಯನ್ನು ರಚಿಸಿದಾತ ಇ. ಎಂ. ಫಾರ್ಸ್ಟರ್ –20ನೆಯ ಶತಮಾನದ ಪೂರ್ವಾರ್ಧದ ಖ್ಯಾತ ಆಂಗ್ಲ ಸಾಹಿತಿ.

ಎಡ್ವರ್ಡ್ ಮಾರ್ಗನ್ ಫಾರ್ಸ್ಟರ್ 1879ರ ಜನವರಿ 1ರಂದು ಲಂಡನ್ನಲ್ಲಿ ಜನಿಸಿದ. ಬಾಲ್ಯದಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡ. ಸ್ಥಿತಿವಂತ ಕುಟುಂಬಕ್ಕೆ ಸೇರಿದವನಾದ್ದರಿಂದ ಅನುಕೂಲವಂತರಿಗೆ ಮೀಸಲಾಗಿದ್ದ ಶಾಲೆಗಳಲ್ಲಿ ಅಭ್ಯಾಸ ಮಾಡುವುದು ಫಾರ್ಸ್ಟರ್‌ಗೆ ಸಾಧ್ಯವಾಯಿತು. ಆದರೆ ಅಲ್ಲಿನ ಕಠೋರ ಶಿಸ್ತು ಅವನಿಗೆ ಸರಿಬೀಳುತ್ತಿರಲಿಲ್ಲ. ಕೇಂಬ್ರಿಜ್ಜಿನ ಕಿಂಗ್ಸ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ಅನಂತರ. ನಿರಂತರ ಅಧ್ಯಯನ ಮತ್ತು ವಿದೇಶ ಸಂಚಾರದಿಂದ ತನ್ನ ಅನುಭವ ಕ್ಷೇತ್ರವನ್ನು ವಿಸ್ತರಿಸಿಕೊಂಡ. 1901ರಲ್ಲಿ ಗ್ರೀಸ್ ಮತ್ತು ಇಟಲಿಗೆ ಭೇಟಿ ಕೊಟ್ಟ.

ಫಾರ್ಸ್ಟರನ ಮೊದಲ ಕಾದಂಬರಿ 'ವೇರ್ ಏಂಜೆಲ್ಸ್ ಫಿಯರ್ ಟು ಟ್ರೆಡ್' 1905ರಲ್ಲಿ ಪ್ರಕಟವಾಯಿತು. ಮುಂದಿನ ಆರು ವರ್ಷಗಳ ಅವಧಿಯಲ್ಲಿ ಇನ್ನು ಮೂರು ಕಾದಂಬರಿಗಳೂ ಪ್ರಬಂಧಗಳೂ ಪ್ರಕಟವಾದುವು.

ಫಾರ್ಸ್ಟರ್ ಭಾರತಕ್ಕೆ ಮೊದಲನೆಯ ಸಲ ಭೇಟಿ ಕೊಟ್ಟದ್ದು 1912ರಲ್ಲಿ. 1921ರಲ್ಲಿ ಮತ್ತೊಮ್ಮೆ ಭಾರತಕ್ಕೆ ಬಂದು 7 ತಿಂಗಳು ಇಲ್ಲಿದ್ದು, ಇಲ್ಲಿನ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದ. ಆಗ ಹಿರಿಯ ದೇವಾಸ್ ಸಂಸ್ಥಾನದ ದೊರೆಯ ಆಪ್ತ ಕಾರ್ಯದರ್ಶಿಯಾಗಿದ್ದ. ಫಾಸ್ಟರ್‌ನ ಪ್ರಸಿದ್ಧ ಕಾದಂಬರಿ 'ಎ ಪ್ಯಾಸೆಜ್ ಟು ಇಂಡಿಯಾ'. ಭಾರತದಲ್ಲಿ ಆತನಿಗೆ ಆದ ಅನುಭವಗಳ ಹಿನ್ನೆಲೆಯಲ್ಲಿ ರಚಿತವಾಗಿದೆ. ಇಂಗ್ಲಿಷ್ ಜನರಿಗೆ ಸಾಮಾನ್ಯವಾಗಿ ಗೋಚರವಾಗದ ಭಾರತದ ಬದುಕಿನ ವಿವಿಧ ಮುಖಗಳನ್ನು ಫಾರ್ಸ್ಟರ್ ಈ ಕಾದಂಬರಿಯಲ್ಲಿ ಬಿಡಿಸಿ ತೋರಿಸಿದ್ದಾನೆ. ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿನ ಭಾರತೀಯರ ಸಾಮಾಜಿಕ ರಾಜಕೀಯ ಜೀವನವನ್ನು ಈ ಕಾದಂಬರಿಯಲ್ಲಿ ನಿರೂಪಿಸಿದ್ದಾನೆ. "ಇದೊಂದು ಶ್ರೇಷ್ಠ ಕಾದಂಬರಿ. ನಮ್ಮ ಯುಗದ ಮಹಾ



ಇ. ಎಂ. ಫಾರ್ಸ್ಟರ್ :
ಆಂಗ್ಲ ಸಾಹಿತ್ಯದಲ್ಲಿ ಭಾರತ



ಗಳಿಗೆ ವೈಯಕ್ತಿಕ ಪ್ರಾಶಸ್ತ್ಯ ಬಂದದ್ದು. ಕಾವಲಿನಿ, ಜಿಯತ್ತೊ, ಸಿಮಾಬು ಈ ಅವಧಿಯ ಖ್ಯಾತ ಚಿತ್ರಕಾರರು. ಆಗಿನ ಮಧ್ಯಯುಗದ ಸಾಂಪ್ರದಾಯಿಕ ಹಿಡಿತದಿಂದ ಕಲೆಯನ್ನು ಸಡಲಿಸಿದವನು ಜಿಯತ್ತೊ. 14 ನೆಯ ಶತಮಾನದಲ್ಲಿ ಎದ್ದು ನಿಲ್ಲುವ ಹೆಸರು ಮಾರ್ಟಿನಿ. ಮುಖಭಾವ, ಚಲನಶೀಲತೆ ಹಾಗೂ ಬಲಿತರೇಖೆಗಳು ಈತನ ಕೃತಿಗಳ ಅಪೂರ್ವ ಚೆಲುವಿಗೆ ಕಾರಣವಾಗಿವೆ.

ಫ್ಲಾರೆನ್ಸಿನ ಚಿತ್ರಕಾರರು ಸುಮಾರು ನೂರು ವರ್ಷಗಳ ಕಾಲ ಪ್ರತಿಭಾವಂತ ಜಿಯತ್ತೋನ ಜಾಡಿನಲ್ಲಿ ಚಿತ್ರಗಳನ್ನು ಬರೆದರು. ಅನಂತರ ಮಸಾಕಿಯೊ ತನ್ನ ಮೂರ್ತಿಗಳಲ್ಲಿ; ಚಲನಶೀಲತೆಯಲ್ಲಿ ಹೊಸ ಪರಿಣಾಮವನ್ನು ಸಾಧಿಸಿದ; ಹಿನ್ನೆಲೆಗೂ ಅವುಗಳಿಗೂ ಸಹಜ ಹೊಂದಾಣಿಕೆ ಬರುವಂತೆ ಮಾಡಿದ. ಧಾರ್ಮಿಕ ವಿಷಯಗಳಿಗೆ ಮಾತ್ರ ಸೀಮಿತವಾಗಿದ್ದ ಕಲೆ, ನವೋದಯದ ವೇಳೆಗೆ ಮೆಲ್ಲನೆ ದಂತಕಥೆಗಳು, ಪುರಾತನ ಸಾಹಿತ್ಯದ ಘಟನೆಗಳ ಕಡೆಗೆ ಸರಿಯಲಾರಂಭಿಸಿತು. ಧಾರ್ಮಿಕ ಮೂರ್ತಿಗಳಿಗೆ ಲೌಕಿಕ ಕಳೆಬಂದಿತು. 15ನೆಯ ಶತಮಾನದ ಆದಿಕಾಲದಲ್ಲಿ ನವೋದಯ ಆರಂಭವಾಯಿತು. ಆಲಂಕಾರಿಕ ಶೈಲಿಗೆ ಪ್ರಾಮುಖ್ಯವಿತ್ತ ಕಲಾವಿದ ಬಾಟಿಚೆಲ್ಲಿ, ಅಂಗರಚನೆಯನ್ನು ಹೆಚ್ಚು ಖಚಿತಗೊಳಿಸಿದ ಶಿಲ್ಪಿ ವೆರೊಕಿಯಾ, ಏಕಮೂರ್ತಿ ಶಿಲ್ಪದಲ್ಲಿ ಪರಿಣಿತನೆನಿಸಿದ ಡೋನಾಟೆಲೋ ಇವರು ನವೋದಯದ ಆರಂಭದಲ್ಲಿದ್ದ ಇಟಲಿಯ ಕಲಾವಿದರು. ಅನಂತರ ನವೋದಯ ಉಚ್ಛ್ರಾಯದ ಕಾಲವಾಯಿತು. 15ನೆಯ ಶತಮಾನದ ರಾಫೇಲ್, ಲಿಯೊನಾರ್ದೊ ದ ವಿಂಚಿ, ಮೈಕೆಲೆಂಜಲೋ ಇಟಲಿಯ ಕಲೆಯ ಗಣ್ಯ ಕಲಾವಿದರು. ಇವರು ಅಲ್ಲಿನ ಕಲೆಯಲ್ಲಿ ಸಾಧಿಸಿದ ಸಮನ್ವಯದಿಂದಾಗಿ, ಆಗಿನ ಇಡೀ ಯೂರೊಪು ಕಲೆಯ ಮಾರ್ಗದರ್ಶನಕ್ಕಾಗಿ ಇಟಲಿಯತ್ತ ನೋಡಿತು.

ಲಿಯೊನಾರ್ದೊ ದ ವಿಂಚಿ ಈ ವೈಭವಯುಗದ ಮೊದಲಿಗ. ತನ್ನದೇ ಆದ ನವೀನ ನಿರೂಪಣೆ, ಬೆಳಕು ನೆರಳುಗಳ ಪರಿಣಾಮದ ಅಸದೃಶ ಉಪಯೋಗ, ಭಾವನೆಗಳನ್ನು ಮನೋಹರವಾಗಿ ಮೂಡಿಸುವುದು ಇವನ ಕಲೆಯ ವೈಶಿಷ್ಟ್ಯ. ಇವನು ತನ್ನ ಮುಂದಿನ ಪೀಳಿಗೆಗೆ ಬಿಟ್ಟು ಹೋದ ಕಲಾಕೃತಿಗಳು, ರೇಖಾಕೃತಿಗಳು, ಬರಹಗಳೂ ಅನೇಕ. ಅವನ ಮೇಧಾವಿ ವ್ಯಕ್ತಿತ್ವ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಕೈಯಾಡಿಸಿದೆ. ಮೈಕೆಲೆಂಜಲೋ ಮಾನವ ಮೂರ್ತಿಗಳನ್ನೂ ವಿಶೇಷವಾಗಿ ನಗ್ನಮೂರ್ತಿಗಳನ್ನು ಸೃಷ್ಟಿಸುವುದರಲ್ಲಿ ಹೊಸತನವನ್ನು ತೋರಿದ. ಲಿಯೊನಾರ್ದೊನಂತೆ ಈತನೂ ಶಿಲ್ಪಿ, ಚಿತ್ರಕಾರ, ಕವಿ ಹಾಗೂ ವಾಸ್ತುಶಿಲ್ಪಿಯಾಗಿದ್ದ. ರಾಫೇಲ್‌ನ ಚಿತ್ರಕಲೆ ಪರಿಪೂರ್ಣವೆನ್ನುವಷ್ಟು ಸುಂದರ. ರೇಖೆ, ವಿನ್ಯಾಸಗಳಲ್ಲಿ ತಪ್ಪು ಕಂಡುಹಿಡಿಯುವುದೇ ಕಷ್ಟ. ಅವನ ಚಿತ್ರಗಳಲ್ಲಿ ಲಾಲಿತ್ಯ ಎದ್ದು ತೋರುತ್ತದೆ.

ಇವರ ಅನಂತರ ವೆನಿಸಿನ ಚಿತ್ರಕಾರರು ಪ್ರಖ್ಯಾತರಾದರು. ಟಿಷನ್ ಇಲ್ಲಿಯ ಪ್ರಮುಖ ಕಲಾವಿದ. ಪ್ರಪಂಚದ ಶ್ರೇಷ್ಠ ಚಿತ್ರಕಾರರಲ್ಲಿ ಒಬ್ಬ. ಇವನ ವಿನ್ಯಾಸಗಳು ಅತ್ಯಂತ ಮನೋಹರ. ರೂಪರೇಖೆಗಳು ಹಾಗೂ ಕೌಶಲಮಯ ಚಿತ್ರಗಳು ಇವನನ್ನು ಮಹಾಕಲಾವಿದರ ಪಟ್ಟಕ್ಕೆ ಏರಿಸಿವೆ.

16ನೆಯ ಶತಮಾನದಲ್ಲಿ ಇಟಲಿ ಕಾಳಗಗಳ ರಂಗವಾಯಿತು. ಇದರಿಂದಾಗಿ ಈ ಪ್ರಪಂಚವನ್ನು ರಮಣೀಯವೆಂದು ಚಿತ್ರಿಸಲು ಅಲ್ಲಿನ ಕಲಾವಿದರು ಹಿಂಜರಿದರು. ಮನುಷ್ಯನನ್ನು ಭವ್ಯತೆಗೇರಿಸುವುದು ತಪ್ಪಿ ಶೈಲಿಗೆ ಮಹತ್ವ ಬಂದಿತು. ಹೀಗೆ ಕಲೆಯ ವಸ್ತುವಿಗಿಂತ ಅದನ್ನು ನಿರೂಪಿಸುವ ರೀತಿ ಮುಖ್ಯವಾಯಿತು. ಈ ಶೈಲಿಯಲ್ಲಿ ಚೆಲ್ಲಿನಿ ಪ್ರಮುಖ.

17ನೆಯ ಶತಮಾನದ ಇಟಲಿಯ ಕಲೆ ಬಾರೋಕ್ ಕಲೆ, ಕ್ರೈಸ್ತಧರ್ಮ ಪೀಠದ ಪ್ರೇರಣೆಯಿಂದ ಮೂಡಿಬಂದದ್ದು. ಬಾರೋಕ್ ಕಲೆಯಲ್ಲಿ ಖ್ಯಾತಿಪಡೆದವನು ಬರ್ನಿನಿ. ಕಟ್ಟಡಗಳ ಛಾವಣಿ, ಗೋಡೆಗಳನ್ನೆಲ್ಲ ಚಿತ್ರಮಯವಾಗಿಸಿದ್ದು ಈ ಕಲೆಯ ವೈಶಿಷ್ಟ್ಯ.

1910ರಿಂದ 1914ರವರೆಗೆ ಗತಕಾಲದ ಜಡತೆಗೆ ಪ್ರತಿಯಾಗಿ ಚಲನೆಯನ್ನು ಪ್ರತಿಪಾದಿಸುವ ಪಂಥದ ಚಿತ್ರಕಾರರು ಅಂತರರಾಷ್ಟ್ರೀಯ ಕೀರ್ತಿಗಳಿಸಿದರು. ಭಾವನೆಗಳನ್ನು ಚಿತ್ರಿಸುವುದರಲ್ಲಿ ಅದರಲ್ಲಿಯೂ ಚಲನೆಯ ನಿರೂಪಣೆಯಲ್ಲಿ ಹಳೆಜಾಡನ್ನು ಬಿಟ್ಟು, ಹೊಸ ಮಾರ್ಗ ಹುಡುಕಿದರು. ತಮ್ಮ ಚಿತ್ರದಲ್ಲಿ ಲಯಭಂಗ ಉಂಟುಮಾಡುವುದು ಅವರ ಹೊಸ ರೀತಿ.



'ಬಯಲಿನಲ್ಲಿ ಮೆಡೋನ್ನ' : ಬೆಲ್ಲಿನಿ

ಸಾಹಿತ್ಯಕ್ಷೇತ್ರದಲ್ಲಿ ಇಟಲಿ ಹೆಸರಂಗಳಿಸಿದ್ದು ಸ್ವಲ್ಪ ತಡವಾಗಿಯೇ. ಇಟಲಿಯ ಸಾಹಿತ್ಯ, ಭಾಷೆ ಮೊದಲಿಗೆ ಪುರಾತನ ಲ್ಯಾಟಿನ್ ಭಾಷೆಯಾಗಿದ್ದುದೇ ಇದಕ್ಕೆ ಕಾರಣ. ಆಡು ಭಾಷೆಗೆ ಹತ್ತಿರವಾದ ನವ-ಲ್ಯಾಟಿನ್ ಅಂದರೆ ಇಟಾಲಿಯನ್ ಭಾಷೆ ಬೆಳೆಯುವವರೆಗೆ ಅದರ ಸಾಹಿತ್ಯ ವಿಕಾಸಗೊಳ್ಳಲಿಲ್ಲ. ಇಟಲಿಯ ಸಾಹಿತ್ಯಚರಿತ್ರೆ ಆರಂಭವಾದದ್ದೇ 13ನೆಯ ಶತಮಾನದಲ್ಲಿ. ಆದರ ಮಹೋನ್ನತ ಕೃತಿ ಮಾತ್ರ ಕ್ಷಿಪ್ರದಲ್ಲಿಯೇ ಹೊರಬಂದಿತು. ಅದು ದಾಂತೆ ಬರೆದ 'ಕಾಮಿಡಿ'. ಕವಿ ತಾನು ಪಾತಾಳಲೋಕದಲ್ಲಿ ಮಾಡಿದ ಸಂಚಾರದ ವರ್ಣನೆ ಇದರಲ್ಲಿದೆ. ಇವನ ಅನಂತರ ಪೆಟ್ರಾರ್ಕ್ ಬರೆದ ಮನೋಜ್ಞವಾದ ಪ್ರೇಮ ಸುನೀತಗಳು ಇಟಲಿಯ ಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿದುವು. ಆಮೇಲೆ ಬೊಕಾಚಿಯೊ ಅತ್ಯುತ್ತಮ ಕಥೆಗಳನ್ನು ಬರೆದ. ಇಟಲಿಯ ಸಾಹಿತ್ಯರೂಪ, ಭಾಷೆಗಳನ್ನು ನಿರ್ಧರಿಸಲು ಈ ಮೂವರು ಕಾರಣರಾದರು.

ಪಿರ್ಷ್ಣ ಕಥಾವಸ್ತು : ಪಿರಾಂಡೆಲೊ

ಬೊಕಾಚಿಯೋನ ಅನಂತರ ಸುಮಾರು 70 ವರ್ಷ ಕಾಲ ಹಿರಿಯ ಸಾಹಿತ್ಯ ಕೃತಿಗಳು ರಚಿತವಾಗಲಿಲ್ಲ. ಅನಂತರ ಕೆಲವು ಕವಿಗಳು ಪುರಾತನ ಮಹಾಸಾಹಿತ್ಯದಿಂದ ಸ್ಫೂರ್ತಿಗೊಂಡು ಕಾವ್ಯರಚನೆ ಮಾಡಿದರು. ನವೋದಯದ ಇಟಲಿಯ ಸಾಹಿತ್ಯ ರಾಜ್ಯಶಾಸ್ತ್ರ ಹಾಗೂ ಕಲೆಗಳ ಮೇಲೂ ಪ್ರಭಾವ ಬೀರಿತು. ಸಮಕಾಲೀನ ರೀತಿನೀತಿಗಳನ್ನು ಬಿವರಿಸಿತು. ರಾಜಕಾರಣಿ ಮೆಕಿಯವೆಲ್ಲಿಯ 'ರಾಜಕುಮಾರ' ಎಂಬ ಪುಸ್ತಕ ರಾಜ್ಯಶಾಸ್ತ್ರ ವಿಷಯವನ್ನು ಒಳಗೊಂಡರೂ ಉತ್ತಮ ಸಾಹಿತ್ಯಕೃತಿ ಎನಿಸಿಕೊಂಡಿತು.

ಇಟಲಿಯ ಸಾಹಿತ್ಯ ಮತ್ತೆ ಸ್ವಲ್ಪಕಾಲ ಸ್ಥಗಿತವಾಯಿತು. 18ನೆಯ ಶತಮಾನದಲ್ಲಿ ಹೊರಗಿನಿಂದ ಹರಿದುಬಂದ ಹೊಸ ಭಾವನೆಗಳ ಪುರುಷಿನಿಂದ ನಾಟಕಕಾರ ಗೋಲ್ಡೋನಿನ ಪರಿಸಿಯ ಆಹ್ಲಾದಕರ ವಿಡಂಬನೆ. ಇಟಲಿಯ ಸಂಪ್ರದಾಯದ ಉತ್ಕೃಷ್ಟ ಶೈಲಿಯಲ್ಲಿ ಬರೆದ ಫೋಸ್ಕೊಲೋನ ಪದ್ಯಗಳು ಇಟಲಿಯ ಸಾಹಿತ್ಯಕ್ಕೆ ಪುನಃ ಜೀವಕಳೆ ತುಂಬಿದುವು. ಈ ಕಾಲದಲ್ಲಿ ಕಾದಂಬರಿ ಜನಪ್ರಿಯವಾಯಿತು. ಆಧುನಿಕ ಬರೆಹಗಾರರಲ್ಲಿ ಹೆಸರಾದವನು ಪಿರಾಂಡೆಲೊ. ಜೀವನದ ಸಾಧಾರಣ ವಿಷಯ ಅವನ ಕಥೆ ಹಾಗೂ ನಾಟಕಗಳ ವಸ್ತು.

ಇಟಲಿಯಲ್ಲಿ ಸಂಗೀತಸೃಷ್ಟಿಯೂ ತಡವಾಗಿಯೇ ಆರಂಭವಾಯಿತು. ಧಾರ್ಮಿಕ ಗೀತೆಗಳು, ಭಕ್ತಿಭಾವ ಸೂಚಿಸುವ ಗೀತೆಗಳು –ಮೊದಲಿಗೆ ಒಂದೇ ಮಟ್ಟಿನಲ್ಲಿ ಹಾಡಲ್ಪಡುತ್ತಿದ್ದುವು. ಇವಕ್ಕೆ ಸಾದಾ ಹಾಡುಗಾರಿಕೆ ಎಂದು ಹೆಸರು. ಬರಬರುತ್ತ ಪರಸ್ಪರಹೊಂದುವ ಎರಡು ಮಟ್ಟುಗಳನ್ನು ಜೊತೆಜೊತೆಯಾಗಿ ಹಾಡಲು ಆರಂಭಿಸಿದರು. ಅನಂತರ ರೂಪುಗೊಂಡದ್ದು ಪಾಲಿಫೋನಿಕ್ ಸಂಗೀತ—ಹಲವು ಮಟ್ಟುಗಳನ್ನು ಹೊಸ ಪ್ರಾಮುಖ್ಯದೊಡನೆ ಹಾಡುವ ಅಥವಾ ಬಾರಿಸುವ ರೀತಿ. ಇದರಲ್ಲಿ ನೈಪುಣ್ಯತೋರಿ ಧಾಟಿಗಳನ್ನು ರಚಿಸಿದವನು ಪ್ಯಾಲೆಸ್ಟ್ರೀನ್. ಮರೆಂಜಿಯಾ, ಗೆಸು ಆಲ್ಡೊ, ಮಾಂಟೆವರ್ದಿಗಳು ಹೊಸ ಸಂಗೀತವನ್ನೂ, ಕೇವಲ ವಾದ್ಯಕ್ಕೆ ಮೀಸಲಾದ ಸಂಗೀತವನ್ನೂ ರಚಿಸಿದರು.

17ನೆಯ ಶತಮಾನದಲ್ಲಿ ಆಪೆರಾದ ಕಲೆ ಬಂದನಂತರ ಇಟಲಿಯ ಸಂಗೀತ ಹೊಸ ಮಜಲನ್ನು ಮುಟ್ಟಿತು. ರೊಸಿನಿ, ವರ್ಡಿ, ಪಕ್ಸಿನಿ–ಇವರೆಲ್ಲರ ಪ್ರಸಿದ್ಧ ಆಪೆರಾಗಳಿಂದ ಇಟಲಿಯ ಸಂಗೀತ ಎಲ್ಲೆಡೆಗೂ ಹರಡಿತು. ಅವರ ಕಲೆ ಯೂರೊಪು, ರಷ್ಯ, ಅಮೆರಿಕಗಳನ್ನೂ ಮುಟ್ಟಿತು. ಪಿಯಾನೋ ವಾದ್ಯ ರೂಪುಗೊಳಿಸುವುದರಲ್ಲಿ ಇಟಲಿ ಮುಖ್ಯಪಾತ್ರ ವಹಿಸಿತು. ಅತಿ ಮೆಲುದನಿಯಿಂದ ಅತಿ ಜೋರಿನ ದನಿಯವರಗೆ ಸಂಗೀತನಾದದ ವ್ಯಾಪ್ತಿ ಈ ವಾದ್ಯದ ವೈಶಿಷ್ಟ್ಯ. ಇದಲ್ಲದೆ ಇನ್ನೂ ಹಲವು ವಾದ್ಯಗಳು ಇಟಲಿಯಲ್ಲಿ ರೂಪುಗೊಂಡುವು.

18ನೆಯ ಶತಮಾನ ಇಟಲಿ ಆಪೆರಾದ ಉನ್ನತ ಕಾಲ. ಇದೇ ಸಮಯಕ್ಕೆ ವಾದ್ಯಕ್ಕೇ ಸೀಮಿತ ಧಾಟಿಗಳು ಹೆಚ್ಚುಹೆಚ್ಚು ರಚಿತವಾದುವು. ಈ ಶತಮಾನದ ಉತ್ತರಾರ್ಧದಲ್ಲಿ ಎರಡನೆಯ ಮಹಾಯುದ್ಧಾನಂತರದ ಪ್ರಯೋಗಾತ್ಮಕ ಸಂಗೀತಗಾರರಲ್ಲಿ ಇಟಲಿಯವರ ಹೆಸರುಗಳೇ ಕೇಳಿ ಬರುತ್ತವೆ. ಪಾಶ್ಚಾತ್ಯ ಸಂಗೀತವನ್ನು ಇತರ ಕಲೆಗಳ ಮಟ್ಟಕ್ಕೆ ಏರಿಸಿದ ಕೀರ್ತಿ ಉಳಿದೆಲ್ಲ ಐರೋಪ್ಯ ದೇಶಗಳಿಗಿಂತ ಹೆಚ್ಚಾಗಿ ಇಟಲಿಗೆ ಸಲ್ಲುತ್ತದೆ.

ನೋಡಿ : ಆಪೆರಾ ; ಗಾತಿಕ್ ಕಲೆ ; ಜಿಯತ್ತೊ ; ಟಿಷನ್ ; ದೊನಾಟೆಲೋ ; ದಾಂತೆ ; ಬಾಟಿಚೆಲ್ಲಿ ; ಬಾರೋಕ್ ಕಲೆ ; ಬೊಕಾಚಿಯೊ ; ಮೈಕೆಲೆಂಜಲೋ ; ರಾಫೇಲ್ ; ಲಿಯನಾರ್ಡೊ ದ ವಿಂಚಿ ; ಸುನೀತ

## ಇಬ್ಸೆನ್

ಇಬ್ಸೆನ್ ತನ್ನ ಬರೆಯುವ ಮೇಜಿನ ಮೇಲೆ ಖಾಲಿ ಬಾಟಲಿಯೊಂದರಲ್ಲಿ ಜೀವಂತ ಚೇಳನ್ನು ಇಟ್ಟಿರುತ್ತಿದ್ದ ; ಆ ಕ್ರೂರ ಜಂತು ಆಗಾಗ ನರಳಿದಾಗ ಕಳಿತ ಹಣ್ಣಿನ ಚೂರೊಂದನ್ನು ಬಾಟಲಿಯಲ್ಲಿ ಹಾಕುತ್ತಿದ್ದ. ಕೋಪೋದ್ರಿಕ್ತ ಚೇಳು ಆ ಹಣ್ಣಿನಚೂರಿನ ಮೇಲೆರಗಿ ವಿಷ ಕಾರಿ, ಅನಂತರ ಸುಮ್ಮನಾಗುತ್ತಿತ್ತು.

ಈ ಚೇಳಿನಂಥವನು ಇಬ್ಸೆನ್. ಸಮಾಜದ ಅನ್ಯಾಯ, ಮೂಢನಂಬಿಕೆಗಳನ್ನು ಕಂಡು ಕೋಪೋದ್ರಿಕ್ತನಾದ ಇಬ್ಸೆನ್ 19ನೆಯ ಶತಮಾನದ ಯೂರೊಪಿನ ಸಾಮಾಜಿಕ ಪ್ರಜ್ಞೆಯ ಮೇಲೆ ವಿಷ ಕಾರಿದ. ಇವನ ನಾಟಕಗಳು ನಾಟಕ ಸಾಹಿತ್ಯದಲ್ಲಿ ಅತ್ಯಂತ ಪ್ರಮುಖ ಹೆಗ್ಗುರುತುಗಳಾದುವು. ಇಬ್ಸೆನ್ ಆಧುನಿಕ ನಾಟಕಗಳ ಮೂಲ ಪುರುಷನೆನಿಸಿಕೊಂಡ.

ಹೆನ್ರಿಕ್ ಯೋಹಾನ್ ಇಬ್ಸೆನ್ ನಾರ್ವೆಯ ಸ್ಕೀಯೆನ್ ಎಂಬಲ್ಲಿ 1828ರ ಮಾರ್ಚ್ 20ರಂದು ಜನಿಸಿದ. ಇವನ ತಂದೆ ಮೊದಲಿಗೆ ಶ್ರೀಮಂತನಾಗಿದ್ದರೂ, ಇಬ್ಸೆನ್ 8 ವರ್ಷದವನಾಗಿದ್ದಾಗ ಭಾರಿ ನಷ್ಟವನ್ನು ಅನುಭವಿಸಿ ತನ್ನ ಊರನ್ನು ಬಿಟ್ಟು ಬೇರೆಡೆಗೆ ಸಂಸಾರವನ್ನು ಸಾಗಿಸಿದ. ಪುಟ್ಟ ಇಬ್ಸೆನನ ಮನಸ್ಸಿನ ಮೇಲೆ ಇದು ಗಾಢ ಪರಿಣಾಮ ಉಂಟುಮಾಡಿತು. ಬೇರೆ ಹುಡುಗರ ಜೊತೆ ಸೇರದೆ, ಮನೆಯಲ್ಲೇ ಕುಳಿತು ಓದುವ, ಚಿತ್ರ ಬರೆಯುವ, ಸೂತ್ರದ ಬೊಂಬೆ ಆಡಿಸುವ ಹವ್ಯಾಸ ಬೆಳೆಸಿಕೊಂಡ. 15 ವರ್ಷ ವಯಸ್ಸಾಗಿದ್ದಾಗ ಗ್ರಿಮ್‌ಸ್ಟಡ್ ಎಂಬಲ್ಲಿ ಔಷಧ ವ್ಯಾಪಾರಿಯ ಬಳಿ 'ಅಭ್ಯಾಸಿ ಕೆಲಸಗಾರ'ನಾಗಿ ಸೇರಿದ. ರಾತ್ರಿ ಹೊತ್ತು ಓದುತ್ತಿದ್ದ. ಕವನ ಬರೆಯುತ್ತಿದ್ದ. ಪರೀಕ್ಷೆಗೂ ಕಟ್ಟಿದ, ಆದರೆ ಉತ್ತೀರ್ಣನಾಗಲಿಲ್ಲ.

ಇವನು ಬರೆದ 'ದಿ ವಾರಿಯರ್ಸ್ ಬಾರೋ' ಎಂಬ ನಾಟಕ ಬರ್ಗೆನಿನಲ್ಲಿದ್ದ ರಂಗಮಂದಿರದ ಸಹಾಯಾರ್ಥ ಪ್ರದರ್ಶಿತವಾಗಿ ಯಶಸ್ಸು ಗಳಿಸಿತು.

ಒಮ್ಮೆ ಸಂಗೀತ ಸಮಾರಂಭ ಏರ್ಪಡಿಸಿದ್ದರು. ಆ ಸಮಾರಂಭಕ್ಕಾಗಿ ಪ್ರಸ್ತಾವನಾ ಕವನ ರಚಿಸುವ ಹೊಣೆ ಇಬ್ಸೆನನ ಮೇಲೆ ಬಿತ್ತು. ಆತ ರಚಿಸಿದ ಕವನವನ್ನು ಕೇಳಿದ ಆ ರಂಗಮಂದಿರದ ಸ್ಥಾಪಕ ಅವನನ್ನು ತನ್ನ ರಂಗಮಂದಿರದ ಕವಿ ಮತ್ತು ರಂಗ ವ್ಯವಸ್ಥಾಪಕನನ್ನಾಗಿ ನಿಯಮಿಸಿದ. ಇಬ್ಸೆನ್ ಇಲ್ಲಿ ಯಶಸ್ವಿಯಾಗದಿದ್ದರೂ ನಾಟಕ ಬರೆಯಲು ಬೇಕಾದ ರಂಗ ಭೂಮಿಯ ಅನುಭವ ಮಾತ್ರ ಚೆನ್ನಾಗಿಯೇ ಆಯಿತು. ಈ ವಿಷಯದಲ್ಲಿ ಇಬ್ಸೆನ್, ರಂಗಭೂಮಿಯ ಅತಿ ಹೆಚ್ಚಿನ ಪರಿಚಯವಿದ್ದ ಶೇಕ್ಸ್‌ಪಿಯರ್–ಮೋಲಿಯೇರರ ಸಾಲಿಗೆ ಸೇರುತ್ತಾನೆ.

1858 ರಲ್ಲಿ ತನ್ನ ಮೂವತ್ತನೆಯ ವಯಸ್ಸಿನಲ್ಲಿ ಇಬ್ಸೆನ್ ಸುಸಾನ್ ಥೊರೆಸನ್ ಎಂಬವಳನ್ನು ಮದುವೆಯಾದ. 1862 ರಲ್ಲಿ ಇವನು ನಿರ್ದೇಶಿಸುತ್ತಿದ್ದ ರಂಗಮಂದಿರ ನಷ್ಟಕ್ಕೊಳಗಾದಾಗ ಆತ್ಮಹತ್ಯೆಯ ಯೋಚನೆ ಮೂಡಿತು. ತೀರ ಬಡತನ ಅನುಭವಿಸಬೇಕಾಯಿತು. 1863ರಲ್ಲಿ ಪ್ರದರ್ಶಿತವಾದ ಇವನ 'ದಿ ಪ್ರಿಟೆಂಡರ್ಸ್' ನಾಟಕ ಯಶಸ್ಸು ಗಳಿಸಿತು.

ಈ ಯಶಸ್ಸಿನಿಂದಾಗಿ ಅವನಿಗೆ ಸರಕಾರ ವಿದೇಶ ಯಾತ್ರೆಗೆಂದು ಕೊಂಚ ಹಣವಿತ್ತಿತು. ಇಬ್ಸೆನ್ ಇಟಲಿ–ಜರ್ಮನಿಗಳಲ್ಲಿಯೇ ಓಡಾಡಿಕೊಂಡಿದ್ದು ಕೊನೆಗಾಲದಲ್ಲಿ ಮಾತ್ರ ತನ್ನ ದೇಶಕ್ಕೆ ಹಿಂದಿರುಗಿದ. 1866ರಲ್ಲಿ 'ಬ್ರಾಂಡ್' ನಾಟಕ ಪ್ರದರ್ಶಿತವಾದಾಗ ನಾರ್ವೆ ಸರಕಾರ ಇವನಿಗೆ ಜೀವಾವಧಿ ಗೌರವ ಮಾಸಾಶನ ಇತ್ತಿತು.

ಇಬ್ಸೆನನ ನಾಟಕಗಳನ್ನು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ಮೂರು ಗುಂಪುಗಳನ್ನಾಗಿ ವಿಂಗಡಿಸಬಹುದು. 'ಪೀರ್ ಗೈಂಟ್' (1867) ನಂಥ ಇವನ ಮೊದಲ ನಾಟಕಗಳಲ್ಲಿ ಕಾವ್ಯಾಂಶ, ಆದರ್ಶ ಹಾಗೂ ರಮ್ಯ ಭಾವನೆಗಳು ಹೆಚ್ಚು. ಇದು ಆರಂಭದ ಹಂತ. ಸಮಾಜದ ಮೂಢ ನಂಬಿಕೆಗಳ ವಿರುದ್ಧ ಬಂಡೆದ್ದು, ಆ ಸಮಸ್ಯೆಗಳನ್ನು ನಾಟಕದ ಇತಿಹಾಸದಲ್ಲೇ ಮೊದಲ ಬಾರಿಗೆ ಚಿತ್ರಿಸುವ 'ಪಿಲ್ಲರ್ಸ್ ಆಫ್ ಸೊಸೈಟಿ' (1871), 'ಎ ಡಾಲ್ಸ್ ಹೌಸ್' (1879). 'ಘೋಸ್ಟ್ಸ್' (1881) ನಂಥ ಕೃತಿಗಳು ಎರಡನೇ ಗುಂಪಿನವು. ಲೈಂಗಿಕ ರೋಗಗಳ ಬಗೆಗೆ ಬರೆದ 'ಘೋಸ್ಟ್ಸ್' ನಾಟಕದ ಪ್ರದರ್ಶನವನ್ನು ಜರ್ಮನಿಯಲ್ಲಿ ನಿಷೇಧಿಸಿದರು. ಇತರ ನಾಟಕಗಳು ಭಾರಿ ವಾದ ವಿವಾದ ಎಬ್ಬಿಸಿದುವು. ಇದರಿಂದ ಅಂದಿನ ತರುಣ ಲೇಖಕರಿಗೆ ಇಬ್ಸೆನ್ ಆದರ್ಶಪ್ರಾಯನಾದ.

ಮಾನಸಿಕ ಸ್ಥಿತಿಗಳನ್ನು ಚಿತ್ರಿಸುವ 'ದಿ ವೈಲ್ಡ್ ಡಕ್' (1884), 'ರಾಸ್‌ಮರ್‌ಶೋಮ್' (1886)ನಂಥ ನಾಟಕಗಳು ಮೂರನೆಯ ಗುಂಪಿನವು. ಒಬ್ಬ ವ್ಯಕ್ತಿಯ ಮಾನಸಿಕ ಸ್ಥಿತಿಯ ಅಧ್ಯಯನವೆನಿಸುವ ಈ ನಾಟಕಗಳು (ಮುಖ್ಯವಾಗಿ 'ದಿ ವೈಲ್ಡ್ ಡಕ್') ಆಧುನಿಕ ಸಾಂಕೇತಿಕ ನಾಟಕಗಳಿಗೆ ಮೂಲವೆನಿಸಿವೆ. ವ್ಯಕ್ತಿಯ ವೈಯಕ್ತಿಕ ನೈತಿಕ ಆದರ್ಶ ಹಾಗೂ ಸಮಾಜದ ಸಾಂಪ್ರದಾಯಿಕ ನೈತಿಕ ನಂಬಿಕೆಗಳ ನಡುವಣ ಘರ್ಷಣೆಯನ್ನು ಇಲ್ಲಿ ಚಿತ್ರಿಸಲಾಗಿದೆ. ವ್ಯಕ್ತಿ ತನ್ನ ಪ್ರಾಮಾಣಿಕ ನಂಬಿಕೆಗಳನ್ನು ಯಾವ ಸಂದರ್ಭದಲ್ಲೂ ಬಿಡಬಾರದು ಎಂಬುದೇ ಇಬ್ಸೆನನ ದೃಷ್ಟಿ.

ಇಬ್ಸೆನನ ಕೊನೆಯ ನಾಟಕಗಳ ಗುಂಪಿಗೆ ಸೇರುವ 'ಹೆಡ್ ಗ್ಯಾಂಬ್ಲರ್' ಮತ್ತು 'ರಾಸ್‌ಮರ್‌ಶೋಮ್' ನಾಟಕಗಳು ಅವನ ಕಾಲದ ಜನತೆಗೆ ಅರ್ಥವಾಗದೆ, ದಿಗ್ಭ್ರಮೆಯುಂಟುಮಾಡಿದುವು. ಆದರೆ ಇಂದಿನ ದೃಷ್ಟಿಯಿಂದ ನೋಡಿದಾಗ ಅವು ಅಂದಿಗೆ ತೀರ ಆಧುನಿಕ ನಾಟಕಗಳು. ಗದ್ಯದಲ್ಲಿ ಅಡಕವಾಗಿರುತ್ತಿದ್ದ ಕಾವ್ಯಾಂಶ, ಸಾಂಕೇತಿಕತೆ, ಮಾನವನ ಮನಸ್ಸಿನ ಆಳಕ್ಕೆ ಇಳಿಯಬಲ್ಲ ಶಕ್ತಿ, ರಂಗಭೂಮಿಯ ಬಗೆಗೆ ಇದ್ದ ಅತ್ಯುತ್ತಮ ಕಲ್ಪನೆಗಳು ಇಬ್ಸೆನ್‌ಗೆ ಇಂದಿಗೂ ಸಾಹಿತ್ಯದಲ್ಲಿ ಪ್ರಮುಖ ಸ್ಥಾನವನ್ನು ದೊರಕಿಸಿವೆ. ಬರ್ನಾರ್ಡ್ ಷಾ, ಆಂಟನ್ ಚೆಖಾವ್ ರಂಥ ನಾಟಕಕಾರರು ಇವನ ನಾಟಕಗಳ ಪ್ರಭಾವಕ್ಕೆ ಒಳಗಾಗಿದ್ದರೆಂಬುದು ಇಬ್ಸೆನನ ಹಿರಿಮೆಗೆ ಸಾಕ್ಷಿ.



ಇಬ್ಸೆನ್ : ಗಣಿತೋಡುವ ಉಪಕರಣ

ಇಬ್ಸೆನನು 61ವರ್ಷದವನಾಗಿದ್ದಾಗ 19 ವರ್ಷದ ಹುಡುಗಿಯೊಬ್ಬಳನ್ನು ಪ್ರೀತಿಸತೊಡಗಿದ. ಇದು ಭಗ್ನಪ್ರಣಯ. ಇಬ್ಸೆನನ ಮನಸ್ಸಿನ ಮೇಲೆ ಈ ಘಟನೆ ತೀವ್ರ ಆಘಾತವನ್ನು ಉಂಟುಮಾಡಿತು. ಅವನ ಕೊನೆಯ ಕೃತಿಗಳ ಮೇಲೆ ಇದರ ಪರಿಣಾಮ ಕಂಡುಬರುತ್ತದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

1891ರಲ್ಲಿ ನಾರ್ವೆಗೆ ಹಿಂತಿರುಗಿದ ಇಬ್ಸೆನ್ 'ದಿ ಮಾಸ್ಟರ್ ಬಿಲ್ಡರ್' (1892) ಮತ್ತು 'ವೆನ್ ದಿ ಡೆಡ್ ಅವೇಕನ್' (1899) ಕೃತಿಗಳನ್ನು ರಚಿಸಿದ. ಇವು ಬಹುಮಟ್ಟಿಗೆ ಆತ್ಮಕಥನಗಳಂತಿವೆ.

1906ರ ಮೇ 23ರಂದು ಈತ ನಿಧನನಾದ. ನಾರ್ವೆಯ ರಾಜಧಾನಿಯಾದ ಆಸ್ಲೋದಲ್ಲಿರುವ ಇವನ ಸ್ಮಾರಕದ ಮೇಲೆ. ಇವನ ಹೆಸರಾಗಲೀ ಇನ್ನಾವ ವಿವರಗಳಾಗಲೀ ಇಲ್ಲ. ಗಣಿ ತೋಡುವ ಉಪಕರಣವನ್ನು ಮಾತ್ರ ಅಲ್ಲಿ ಕೆತ್ತಲಾಗಿದೆ. ಮಾನವನ ಅನುಭವಗಳನ್ನು ಆಳವಾಗಿ ತೋಡಿ ಅಭ್ಯಸಿಸಿದ ಇಬ್ಸೆನನಿಗೆ ಇದು ಸಂಕೇತದಂತಿದೆ.

ಇವನ ನಾಟಕಗಳು ನಾರ್ವೀಜಿಯನ್ ಭಾಷೆಯಿಂದ ಕನ್ನಡವನ್ನೂ ಒಳಗೊಂಡು ವಿಶ್ವದ ಅನೇಕ ಭಾಷೆಗಳಿಗೆ ಭಾಷಾಂತರವಾಗಿವೆ.

## 'ಇಲಿಯಡ''

ಗ್ರೀಕರ ಮಹಾಕಾವ್ಯ 'ಇಲಿಯಡ್' ಹೋಮರ್ ಕವಿಯ ಕೃತಿ. ಇದು ಯುರೋಪಿನ ಅತ್ಯಂತ ಪ್ರಾಚೀನ ಕೃತಿ ಎಂದು ಪರಿಗಣಿಸಲ್ಪಟ್ಟಿದೆ. ಗ್ರೀಕ್ ವೀರರ ಸಾಹಸ ವರ್ಣನೆ ಇದರಲ್ಲಿದೆ. 15.500 ಸಾಲುಗಳ 14 ಕಾಂಡಗಳ ಕಾವ್ಯ ಇದು.

ಈ ಕಾವ್ಯದಲ್ಲಿ ನಿರೂಪಿತವಾಗಿರುವ ಘಟನೆಗಳಿಗೆ ಕೇಂದ್ರವಾದ ಟ್ರಾಯ್‌ಗೆ ಇನ್ನೊಂದು ಹೆಸರು ಇಲಿಯಂ. ಇಲಿಯಮಿಗೆ ಸಂಬಂಧಿಸಿದ ಕಥೆಯಾದ್ದರಿಂದ ಮಹಾಕಾವ್ಯದ ಹೆಸರು 'ಇಲಿಯಡ್'.



ಟ್ರಾಯ್ ನಗರದ ಮುತ್ತಿಗೆ

ಗ್ರೀಸಿನ ಸ್ಪಾರ್ಟಾ ದೇಶದ ಅರಸ ಮೆನ್‌ಲಾಸನ ಪತ್ನಿ ಹೆಲೆನ್ ರೂಪವತಿ. ಅತಿಥಿಯಾಗಿ ಬಂದಿದ್ದ ಟ್ರಾಯ್ ನಗರದ ರಾಜಕುಮಾರ ಪಾರಿಸ್ ಆಕೆಯನ್ನು ಒಪ್ಪಿಸಿ ತನ್ನ ದೇಶಕ್ಕೆ ಕರೆದೊಯ್ಯುತ್ತಾನೆ. ಇದರಿಂದ ಕುಪಿತನಾದ ಮೆನ್‌ಲಾಸ್ ಇತರ ಗ್ರೀಕ್ ಅರಸರ ಸಹಾಯ ಪಡೆದು ಟ್ರಾಯ್ ನಗರಕ್ಕೆ ಮುತ್ತಿಗೆ ಹಾಕುತ್ತಾನೆ. ಹತ್ತು ವರ್ಷಗಳ ಕಾಲ ಅವ್ಯಾಹತವಾಗಿ ಯುದ್ಧ ನಡೆಯುತ್ತದೆ. ಕೊನೆಯ ವರ್ಷದ 51 ದಿನಗಳ ಘಟನೆಗಳನ್ನು ಮಾತ್ರ ಈ ಮಹಾಕಾವ್ಯದಲ್ಲಿ ಹೋಮರ್ ಕವಿ ವರ್ಣಿಸಿದ್ದಾನೆ; ಹಿಂದೆ ನಡೆದ ಘಟನೆಗಳು ಪ್ರಾಸಂಗಿಕವಾಗಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ.

ಗ್ರೀಕರ ಕಡೆಯ ಮಹಾವೀರ ಅಕೀಲಿಸ್ ಯುದ್ಧಕಾಲದಲ್ಲಿ ತನಗೆ ಸಿಕ್ಕ ಹುಡುಗಿಯೊಬ್ಬಳನ್ನು ತನ್ನ ದಾಸಿಯನ್ನಾಗಿ ಮಾಡಿಕೊಂಡಿರುತ್ತಾನೆ. ಗ್ರೀಕ್ ಪಕ್ಷದ ಮಹಾ ಸೇನಾನಿ ಆಗಮೆಮ್ನಾನ್ ಈ ದಾಸಿಯನ್ನು ಬಲವಂತದಿಂದ ಕರೆದೊಯ್ಯುತ್ತಾನೆ. ಇದರಿಂದ ಕೋಪಗೊಂಡ ಅಕೀಲಿಸ್ ಯುದ್ಧದಲ್ಲಿ ಭಾಗವಹಿಸದೆ ನಿಂತು ಬಿಡುತ್ತಾನೆ. ಇದರ ಪರಿಣಾಮವಾಗಿ ಗ್ರೀಕರು ಸೋಲುಗಳನ್ನು ಅನುಭವಿಸಬೇಕಾಗುತ್ತದೆ. ಆಗಮೆಮ್ನಾನ್ ಕ್ಷಮಾಪಣೆ ಕೇಳಿದರೂ ಅಕೀಲಿಸ್ ಶಾಂತನಾಗಲಿಲ್ಲ. ಅಕೀಲಿಸನ ಕವಚವನ್ನು ಧರಿಸಿ ಯುದ್ಧಕ್ಕೆ ಹೋದ ಅವನ ಸ್ನೇಹಿತ ಪೆಟ್ರೋಕ್ಲೀಸನು ಪಾರಿಸನ ತಮ್ಮನಾದ ಹೆಕ್ಟರನಿಂದ ಹತನಾಗುತ್ತಾನೆ. ಕೋಪೋದ್ರಿಕ್ತನಾದ ಅಕೀಲಿಸ್ ಯುದ್ಧಕ್ಕೆ ಹೋಗಲು ದೇವತೆಗಳ ಕಮ್ಮಾರ ಹಿಫೀಸ್ಟಸ್ ಅವನಿಗೆ ಕವಚ, ಆಯುಧಗಳನ್ನು ಒದಗಿಸುತ್ತಾನೆ. ಅಕೀಲಿಸ್ ಹೆಕ್ಟರನನ್ನು ಕೊಂದು ಅವನ ದೇಹವನ್ನು ತನ್ನ ರಥಕ್ಕೆ ಕಟ್ಟಿ ಎಳೆಸಿಕೊಂಡು ಹೋಗುತ್ತಾನೆ. ಹೆಕ್ಟರನ ತಂದೆ ಪ್ರಿಯಮ್ ಬಂದು ತನ್ನ ಮಗನ ದೇಹವನ್ನು ಕೊಡಬೇಕೆಂದು ಅಕೀಲಿಸನನ್ನು ಕೇಳಿಕೊಳ್ಳುತ್ತಾನೆ. ಮನಕರಗಿದ ಅಕೀಲಿಸ್, ಹೆಕ್ಟರನ ದೇಹವನ್ನು ಅವನ ತಂದೆಗೆ ಒಪ್ಪಿಸುತ್ತಾನೆ. ಹೆಕ್ಟರನ ಉತ್ತರಕ್ರಿಯೆಗಳಿಗೋಸ್ಕರ ಕೆಲವು ದಿವಸಗಳವರೆಗೆ ಯುದ್ಧ ನಿಲ್ಲಿಸಿ ತನ್ನ ದೊಡ್ಡತನವನ್ನು ತೋರಿಸುತ್ತಾನೆ. ಇದಿಷ್ಟು ಈ ಮಹಾಕಾವ್ಯದ ಕಥೆ.

ಹೋಮರ್ 'ಇಲಿಯಡ್'ನ ಕರ್ತೃ ಎನ್ನುತ್ತಾರೆ. ಗ್ರೀಕ್ ಭಾಷೆಯಲ್ಲಿ 'ಹೋಮರ್' ಪದಕ್ಕೆ ಸಂಗ್ರಾಹಕ ಎಂಬ ಅರ್ಥವೂ ಇದೆ. ಆದ್ದರಿಂದ ಹೋಮರ್ ಎಂಬವನೇ ಇರಲಿಲ್ಲ ಎನ್ನುವವರೂ ಇದ್ದಾರೆ. ಹೋಮರನ ಕಾಲ ಕ್ರಿಸ್ತ ಪೂರ್ವ 8ನೆಯ ಶತಮಾನವಿರಬಹುದು. ಅವನು ಹುಟ್ಟಿದಸ್ಥಳವೆಂದು ಏಳು ಬೇರೆ ಬೇರೆ ಪಟ್ಟಣಗಳನ್ನು ಹೆಸರಿಸುತ್ತಾರೆ.

ಸುಮಾರು ಕ್ರಿ. ಪೂ. 12ನೆಯ ಶತಮಾನದಲ್ಲಿ ಗ್ರೀಕರಿಗೂ ಟ್ರಾಯ್‌ನವರಿಗೂ ಯುದ್ಧವೊಂದು ಆಗಿರಬೇಕೆಂಬುದು ಟ್ರಾಯ್‌ನಲ್ಲಿ ನಡೆದ ಭೂಸಂಶೋಧನೆಗಳಿಂದ ವ್ಯಕ್ತವಾಗುತ್ತದೆ. ಇದರಲ್ಲಿ ಭಾಗವಹಿಸಿದ ವೀರರ ಕಥೆಗಳು ಬಾಯಿಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಸಾಗಿಬಂದಿರಬೇಕು; ಕಾಲಾನಂತರ ಯಾವನೋ ಒಬ್ಬಾತ ಅವನ್ನು ಒಂದು ಮಹಾಕಾವ್ಯದ ಚೌಕಟ್ಟಿನಲ್ಲಿ ಅಳವಡಿಸಿರಬೇಕು.

'ಇಲಿಯಡ್' ಅನ್ನು ಅದು ಈಗಿರುವ ರೂಪದಲ್ಲಿ ಬರೆದವರು ಯಾರೇ ಆಗಲಿ ಕಥೆ ಹೇಳಿರುವ ರೀತಿ ಅತ್ಯಂತ ಮನೋಜ್ಞವಾಗಿದೆ; ಹೃದಯಸ್ಪರ್ಶಿಯಾಗಿದೆ.

'ಇಲಿಯಡ್' ಗ್ರೀಕ್ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಪ್ರಭಾವಶಾಲಿ ಮೂಲಗ್ರಂಥ. ಅನೇಕ ಗ್ರೀಕ್ ಟ್ರಾಜಿಡಿ ನಾಟಕಗಳಿಗೆ ಇದು ವಸ್ತು ಒದಗಿಸಿದೆ. ಲ್ಯಾಟಿನ್ ಖ್ಯಾತ ಕವಿ ವರ್ಜಿಲ್, ಇಂಗ್ಲಿಷಿನ ಮಿಲ್ಟನ್‌ರಂಥ ಶ್ರೇಷ್ಠ ಕವಿಗಳ ಮಹಾಕಾವ್ಯ ರಚನೆಗೆ ಕೂಡ ಇಲಿಯಡ್ ಪ್ರೇರಕ ಶಕ್ತಿ ನೀಡಿದೆ.

'ಇಲಿಯಡ್' ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ.

ಬರೆದು 2500 ವರ್ಷಗಳಾದರೂ ಓದುಗರ ಮನಸ್ಸನ್ನು ಸೆರೆಹಿಡಿದಿಡುವ ಮಹಾಕಾವ್ಯ 'ಇಲಿಯಡ್'.

ನೋಡಿ : ಹೋಮರ್

## ಇಸಡೊರ ಡಂಕನ್

ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಯೂರೊಪಿನಲ್ಲೆಲ್ಲ ಖ್ಯಾತಿ ಪಡೆದ ಇಸಡೊರ ಡಂಕನ್ ಕ್ರಾಂತಿಕಾರೀ ನೃತ್ಯ ಕಲಾವಿದೆ. ಈಕೆ ಪರಂಪರಾನುಗತ ಸೂತ್ರಗಳ ಹಾಗೂ ಜಡವಾಗಿದ್ದ ಕಟ್ಟುಪಾಡುಗಳ ವಿರುದ್ಧ ಬಂಡಾಯವೆದ್ದು, ಪಾಶ್ಚಾತ್ಯ ನಾಟ್ಯರಂಗದ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ತೆರೆದವಳು.

ಇಸಡೊರ ಡಂಕನ್ ಅಮೆರಿಕದ ಸಾನ್‌ಫ್ರಾನ್ಸಿಸ್ಕೋದ ಒಂದು ಬಡ ಕುಟುಂಬದಲ್ಲಿ 1878ರ ಮೇ 27ರಂದು ಜನಿಸಿದಳು. ತಂದೆ ತಾಯಿ ಬಡವರಾದರೂ ಕಲಾಪ್ರೇಮಿಗಳು. ಇಸಡೊರ ಆರು ವರ್ಷದವಳಿದ್ದಾಗಲೇ ನಾಟ್ಯಾರಂಭ ಮಾಡಿದಳು. ಬ್ಯಾಲೆ ನಾಟ್ಯದ ಹಲವು ಪಾಠಗಳನ್ನು ಆಕೆ ಕಲಿತ ಮೇಲೆ, ಅಂಗಾಂಗಗಳ ಚಲನವಲನ ಸಹಜವಾಗಿರುವಂಥ ನಾಟ್ಯವನ್ನೇ ಅಭ್ಯಸಿಸುವುದಾಗಿ ನಿರ್ಧರಿಸಿದಳು. ನಾಟ್ಯವೃತ್ತಿಯನ್ನು ಸೃಜನ ಕಲೆಯನ್ನಾಗಿ ಬದಲಿಸುವ ಪಣ ತೊಟ್ಟಳು.

ಮೊದಲಿಗೆ ಇಸಡೊರ ಷಿಕಾಗೊ ಮತ್ತು ನ್ಯೂಯಾರ್ಕ್‌ಗಳಲ್ಲಿ ಪ್ರದರ್ಶನಗಳನ್ನು ನೀಡಿದಳು. ಅನಂತರ ತನ್ನ ತಾಯಿ ಮತ್ತು ಸೋದರ ಸೋದರಿಯರೊಡಗೂಡಿ ಯೂರೊಪಿಗೆ ಬಂದಳು. ನಾಟ್ಯ ಪ್ರದರ್ಶನ ಆಕೆಯ ಉದ್ದೇಶವಾಗಿತ್ತು. 1902ರಲ್ಲಿ ಫ್ರಾನ್ಸಿನ ಪ್ಯಾರಿಸ್ಸಿನಲ್ಲಿ ಪ್ರದರ್ಶನ


ಇಸಡೊರ : ಬಂಡಾಯ

ನೀಡುವವರೆಗೆ ಅವಳ ವೈಶಿಷ್ಟ್ಯ ಜನರಿಗೆ ಮನವರಿಕೆ ಆಗಲಿಲ್ಲ. ಅನಂತರ ಹಂಗೆರಿ, ಜರ್ಮನಿ, ರಷ್ಯ ಮುಂತಾದ ದೇಶಗಳಲ್ಲೆಲ್ಲ ಸಂಚರಿಸಿದಳು.

ಇಸಡೊರ ಡಂಕನ್ ಸಂಗೀತಕ್ಕೆ ನಾಟ್ಯದ ಮೂಲಕ ವಿವಿಧ ವ್ಯಾಖ್ಯೆಗಳನ್ನು ನೀಡಿದಳು. ವಿವಿಧ ಸಂಗೀತವಾದ್ಯಗಳ ಮೇಳವಾಗಿದ್ದ ಸಿಂಫನಿಯು ಹತ್ತೊಂಬತ್ತನೆಯ ಶತಮಾನದಲ್ಲಿ ವಿಶೇಷ ಬೆಳವಣಿಗೆ ಕಂಡಿತು. ವ್ಯಕ್ತಿಗತ ಭಾವಗಳಿಗೆ ಹೆಚ್ಚು ಪ್ರಾಧಾನ್ಯ ಲಭಿಸಿತು. ಇಸಡೊರ ಡಂಕನ್ ಪ್ರಾಚೀನ ಗ್ರೀಕ್ ನಾಟ್ಯಪದ್ಧತಿಯಿಂದ ಸ್ಫೂರ್ತಿ ಪಡೆದು. ಸಿಂಫನಿಯ ಸಂಗೀತಕ್ಕೆ ಪ್ರತಿ ಬಾರಿಯೂ ಬೇರೆ ಬೇರೆ ರೀತಿಯ ಅಭಿನಯವನ್ನು ಅಳವಡಿಸುತ್ತ ಬಂದಳು. ಪಾದರಕ್ಷೆಯಿಲ್ಲದೆ ಬರಿಗಾಲಿನಲ್ಲಿ ನರ್ತಿಸುವುದು ; ಗ್ರೀಕ್ ಶಿಲ್ಪಗಳಲ್ಲಿರುವಂಥ ಅಳ್ಳಕವಾದ ನವುರು ಉಡುಪನ್ನು ಧರಿಸುವುದು— ಮುಂತಾದುವನ್ನು ಆಕೆ ಆಚರಣೆಗೆ ತಂದಳು ; ಆ ಕಾಲಕ್ಕೆ ಅವು ಕ್ರಾಂತಿಕಾರಕವಾಗಿದ್ದುವು.

ಇಸಡೊರ ಡಂಕನ್ ಜರ್ಮನಿ, ರಷ್ಯ. ಅಮೆರಿಕಗಳಲ್ಲಿ ನಾಟ್ಯಶಾಲೆಗಳನ್ನು ಸ್ಥಾಪಿಸಿ ನಡೆಸಿದಳಾದರೂ ಅವು ಬಹಳ ಕಾಲ ಬಾಳಲಿಲ್ಲ.

ಇಸಡೊರಳ ವೈಯಕ್ತಿಕ ಜೀವನ ಒಂದು ಗೋಳಿನ ಕಥೆ. ಆಕೆಯ ಇಬ್ಬರು ಪ್ರಿಯತಮರಿಗೆ ಜನಿಸಿದ ಇಬ್ಬರು ಮಕ್ಕಳು ಅಪಘಾತಕ್ಕೀಡಾಗಿ ಸತ್ತರು. ಇಸಡೊರ ಮುಂದೆ ರಷ್ಯದ ಕವಿ ಸ್ಯಿರ್‌ಗ್ಯೇ ಯಿಸ್ಯೇನೀನ್‌ನನ್ನು 1922ರಲ್ಲಿ ಮದುವೆಯಾದಳಾದರೂ ಈ ದಾಂಪತ್ಯ ಜೀವನ ಹೆಚ್ಚು ಕಾಲ ಬಾಳಲಿಲ್ಲ. ಇಸಡೊರ ಕಡೆಯ ದಿನಗಳಲ್ಲಿ ತೀವ್ರವಾದ ಹಣದ ಮುಗ್ಗಟ್ಟನ್ನು ಕಂಡಳು.

49ನೆಯ ವಯಸ್ಸಿನಲ್ಲಿ —1927ನೆಯ ಸೆಪ್ಟೆಂಬರ್ 14ರಂದು— ಇಸಡೊರಗೆ ದುರ್ಮರಣ ಪ್ರಾಪ್ತವಾಯಿತು ; ಅವಳು ಕತ್ತಿಗೆ ಸುತ್ತಿಕೊಂಡಿದ್ದ ಉದ್ದನೆಯ ವಸ್ತ್ರದ ಕೊನೆ ಆಕೆ ಕುಳಿತಿದ್ದ ಮೋಟಾರು ವಾಹನದ ಹೊರಗೆ ಹಾರಾಡುತ್ತ ಚಕ್ರಕ್ಕೆ ಸಿಲುಕಿ ಅವಳ ಕತ್ತನ್ನು ಬಿಗಿಯಾಗಿ ಸುತ್ತಿತು. ಉಸಿರು ಕಟ್ಟಿ, ಆಕೆ ಮೃತಳಾದಳು.

'ನನ್ನ ಜೀವನ' (1927) ಆಕೆಯ ಆತ್ಮಕಥೆ.

ನೋಡಿ : ಬ್ಯಾಲೆ

## 'ಈನಿಯಿಡ್'

ಇದು ಪ್ರಾಚೀನ ರೋಮಿನ ರಾಷ್ಟ್ರೀಯ ಮಹಾಕಾವ್ಯ. ಈನಿಯಸ್ ಎಂಬ ಗ್ರೀಕ್ ವೀರನ ಕಥೆಯೇ ಇದರ ವಸ್ತು. ಈನಿಯಸ್ ತಮ್ಮ ನಗರರಾಜ್ಯದ ಸ್ಥಾಪಕನೆಂದು ರೋಮಿನ ಪ್ರಜೆಗಳು ಪರಿಗಣಿಸಿದ್ದರು.

'ಈನಿಯಿಡ್'ನ ಕಥೆಯು ಹಂದರ ಇದು: ಗ್ರೀಕರು ಟ್ರಾಯ್ ಪಟ್ಟಣವನ್ನು ವಶಪಡಿಸಿಕೊಂಡ ಮೇಲೆ ಆ ಪಟ್ಟಣಕ್ಕೆ ಅಗ್ನಿಸ್ಪರ್ಶವಾಗಿ ಬೆಂಕಿಯ ನಾಲಗೆಗಳು ಚಿಮ್ಮುತ್ತವೆ. ಟ್ರಾಯ್ ಯುದ್ಧದಲ್ಲಿ ಭಾಗವಹಿಸಿದ ಗ್ರೀಕ್ ವೀರ ಈನಿಯಸ್‌ನಿಗೆ ವೀನಸ್ ದೇವತೆ ಕಾಣಿಸಿಕೊಂಡು, ಕೂಡಲೇ ಆ ಜಾಗವನ್ನು ತೊರೆಯಬೇಕೆಂದೂ ಟ್ರಾಯ್‌ಯ ಜನರಿಗಾಗಿ ಹೊಸ ವಸತಿ ಹುಡುಕಬೇಕೆಂದೂ ಆದೇಶ ನೀಡುತ್ತಾಳೆ. ತಂದೆಯನ್ನು ಬೆನ್ನ ಮೇಲೆ ಹೊತ್ತು ಚಿಕ್ಕ ಮಗನ ಕೈ ಹಿಡಿದು ಕೆಲವು ಸಂಗಡಿಗರೊಡನೆ ಈನಿಯಸ್ ಹೊರಡುತ್ತಾನೆ. ಹಲವು ವರ್ಷಗಳ ಕಾಲ ಸಮುದ್ರ ಪ್ರಯಾಣ ಮಾಡಿ, ಹಲವಾರು ಗಂಡಾಂತರಗಳನ್ನು ಇದಿರಿಸಿ, ಸಿಸಿಲಿಯಲ್ಲಿ ಈನಿಯಸ್ ಹಾಗೂ ಅವನ ಸಂಗಡಿಗರು ಇಳಿಯುತ್ತಾರೆ. ಇಲ್ಲಿ ಅವನ ತಂದೆ ಗತಿಸುತ್ತಾನೆ. ಮತ್ತೆ ಪ್ರಯಾಣ. ಸಮುದ್ರಯಾನ ಮಾಡುತ್ತಿದ್ದಾಗ ಬಿರುಗಾಳಿ ಎದ್ದು ಕೆಲವು ಹಡಗುಗಳು ನಾಶವಾಗುತ್ತವೆ. ಉಳಿದುವು ಆಫ್ರಿಕದ ಕರಾವಳಿಯಲ್ಲಿರುವ ಕಾರ್ಥೇಜ್ ಪಟ್ಟಣವನ್ನು ತಲಪುತ್ತವೆ. ಅಲ್ಲಿನ ರಾಣಿ ಡೀಡೋ ಈನಿಯಸ್‌ನಿಗೆ ಮನಸೋಲುತ್ತಾಳೆ. ಆದರೆ ಅವನು ಅಲ್ಲಿ ನಿಲ್ಲುವಂತಿಲ್ಲ : ದೇವತೆಗಳ ಆಣತಿಯನ್ನು ಪಾಲಿಸಬೇಕು. ಅದ್ದರಿಂದ ಪ್ರಯಾಣ ಮುಂದುವರಿಸುತ್ತಾನೆ. ಇಂದಿನ ಇಟಲಿಯ ದಕ್ಷಿಣ ಕರಾವಳಿಯನ್ನು ತಲುಪಿ. ಅಲ್ಲಿ ತನ್ನ ತಂದೆಯನ್ನು ಪಾತಾಳಲೋಕದಲ್ಲಿ ಸಂದರ್ಶಿಸಲು ಆಶಿಸುತ್ತಾನೆ. ಸತ್ತವರ ಈ ಪ್ರಪಂಚ ಕಂಡ ಬಳಿಕ. ಬರಲಿರುವ ರೋಮ್ ಸಾಮ್ರಾಜ್ಯದ ಭವ್ಯ ದೃಶ್ಯ ಅವನಿಗೆ ಗೋಚರಿಸುತ್ತದೆ.

ಅನಂತರ ಈನಿಯಸ್ ಇಟಲಿಯಲ್ಲಿ ಇನ್ನೂ ಉತ್ತರಕ್ಕೆ ತೆರಳುತ್ತಾನೆ ಇಲ್ಲಿ ದೊರೆ ಲಾಟಿನಸ್‌ನನ್ನು ಸಂಧಿಸಿದಾಗ ಅವನ ಮಗಳು ಲಾವಿನಿಯ ಳೊಡನೆ ವಿವಾಹ ನಿಶ್ಚಯವಾಗುತ್ತದೆ. ಇದರಿಂದ ಕುಪಿತನಾದ ಒಬ್ಬ ರಾಜಕುಮಾರ ಹಾಗೂ ಇತರರೊಡನೆ ಈನಿಯಸ್ ಹೋರಾಟ ನಡೆಸಬೇಕಾಗುತ್ತದೆ. ಅದರಲ್ಲಿ ಈನಿಯಸ್ ಜಯಶೀಲನಾಗುತ್ತಾನೆ.

'ಈನಿಯಿಡ್' ಮಹಾಕಾವ್ಯವನ್ನು ಬರೆದಾತ ಪಬ್ಲಿಯಸ್ ವರ್ಜಿಲಿಯಸ್ ಮಾರೋ. ಸಂಕ್ಷಿಪ್ತ ನಾಮ ವರ್ಜಿಲ್. ಗ್ರೀಕ್ ಮಹಾಕವಿ ಹೋಮರನ 'ಇಲಿಯಡ್' ಮಹಾಕಾವ್ಯಕ್ಕೆ ಸರಿಸಮಾನವಾದ ಒಂದು ಕಾವ್ಯ ರಚಿಸಬೇಕೆಂದು ರೋಮನ್ ಚಕ್ರವರ್ತಿ ಅಗಸ್ಟಸ್ ಈತನನ್ನು ಪ್ರೇರೇಪಿಸಿದ. ಹೀಗೆ ರಚಿತವಾಯಿತು ಲಾಟಿನ್ ಸಾಹಿತ್ಯದ ಖ್ಯಾತಿವೆತ್ತ ಕೃತಿ 'ಈನಿಯಿಡ್'. ಇದರ ನಾಯಕ ದೈಹಿಕ ಹಾಗೂ ಮಾನಸಿಕ ಹೋರಾಟಗಳನ್ನು ಎದುರಿಸಿದ ರೀತಿಯನ್ನು ವರ್ಜಿಲ್ ಸತ್ವಪೂರ್ಣವಾಗಿ ಸೊಗಸಾಗಿ ವರ್ಣಿಸಿದ್ದಾನೆ. ಈನಿಯಸ್ ವಿಧಿಯನ್ನು ಒಪ್ಪಿಕೊಂಡ ಮಾತ್ರಕ್ಕೆ ಬಲಹೀನನಲ್ಲ. ತನ್ನ

'ಈನಿಯಿಡ್' ಮಹಾಕಾವ್ಯದ ನಾಯಕ 'ಈನಿಯಸ್'



ಮಹಾ ಸಂಕ್ಷೋಭೆಗಳನ್ನು ಎದುರಿಸುತ್ತ, ದೇವತೆಗಳ ಆಜ್ಞೆಯನ್ನು ಪರಿಪಾಲಿಸುವವನು. ಇಲ್ಲಿ ನಾಯಕ ಒಬ್ಬ ವ್ಯಕ್ತಿಯಲ್ಲ. ಇಡೀ ರೋಮ್‌ನ ಪ್ರತೀಕ. ಇದು ಕೇವಲ ಈನಿಯಸ್ ಒಬ್ಬನ ಕಥೆಯಂತೆ ರಚಿತವಾಗಿಲ್ಲ. ರೋಮಿನ ವೈಭವಕ್ಕೆ ಸಾಧನವಾಗಿ ಅದರ ಧ್ಯೇಯಕ್ಕೆ ತನ್ನ ಜೀವನವನ್ನು ಈನಿಯಸ್ ಮುಡಿಪಿಡುತ್ತಾನೆ. ಡೈಡೋ ರಾಣಿಯಲ್ಲಿ ನೆಟ್ಟ ತನ್ನ ಮನವನ್ನು ಅವನು ಕಿತ್ತೊಗೆದಾಗ ಅವನಿಗಿದ್ದ ಕೊನೆಯ ವೈಯಕ್ತಿಕ ಆಸೆಯೂ ಕಮರಿಹೋಗುತ್ತದೆ. ಅನಂತರದ ಕಥೆಯೆಲ್ಲ ಅವನ ದುಡಿಮೆಯ ಜೀವನ. ಈನಿಯಸ್ ಪಾತಾಳದಲ್ಲಿ ರೋಮಿನ ಭವಿತವ್ಯವನ್ನು ಕಾಣುವಾಗ ಅಗಸ್ಟಸ್‌ನನ್ನು ಕಂಡಂತೆ, ತನ್ನ ಚಕ್ರವರ್ತಿಯನ್ನು ವರ್ಜಿಲ್ ಬಣ್ಣಿಸಿದ್ದಾನೆ.

ಪುರಾಣ ಕಥೆ, ಇತಿಹಾಸ, ಪುರಾತತ್ತ್ವ ವಿಷಯಗಳೆಲ್ಲ 'ಈನಿಯಿಡ್'ನಲ್ಲಿವೆ. ಸಾಹಸ, ಪ್ರಣಯ ಪ್ರಸಂಗಗಳಿವೆ. ಮನಸ್ಸಿನ ತುಮುಲಗಳ ಒಳ್ಳೆಯ ಚಿತ್ರಣವಿದೆ. ದೇಶಭಕ್ತಿ, ಧಾರ್ಮಿಕ ಭಾವನೆಗಳು ತುಂಬಿದ ಕರುಣಾರಸ ಹುಟ್ಟಿಸುವ ಕಾವ್ಯ 'ಈನಿಯಿಡ್'. ಇದು ಒಂದು ರಾಷ್ಟ್ರೀಯ ಮಹಾಕಾವ್ಯ ಮಾತ್ರವಲ್ಲ ; ಮಾನವನ ಬಾಳಿನ ಮಹಾಗ್ರಂಥ. ದೇವನಿಮಿತ್ತವಾದ ಸುವ್ಯವಸ್ಥಿತ ವಿಶ್ವವನ್ನೂ ನ್ಯಾಯನೀತಿಗಳನ್ನೂ ಪ್ರತಿಭಟಿಸಿದಾಗ ದೇವತೆಯಾಗಲೀ ಮಾನವನಾಗಲೀ ವಿಫಲನಾಗುತ್ತಾನೆ ಎಂಬುದು ಇದರ ಸಂದೇಶ.

ವರ್ಜಿಲ್ 'ಈನಿಯಿಡ್' ಕೃತಿಯನ್ನು 12 ಭಾಗಗಳಲ್ಲಿ ಬರೆದ. ಕ್ರಿ.ಪೂ. 30–19 ಅವಧಿಯಲ್ಲಿ ಇದರ ರಚನೆಯಲ್ಲಿ ತೊಡಗಿ, ಕೃತಿಯನ್ನು ಪೂರ್ಣಗೊಳಿಸಿದ. ಆದರೆ ಅದನ್ನು ಇನ್ನೂ ಪರಿಷ್ಕರಿಸಬೇಕಾದದ್ದು ಅವಶ್ಯ ಎಂದು ಅವನಿಗೆ ಅನಿಸಿತು. ಅಂಥ ಪರಿಷ್ಕರಣಕ್ಕೆ ಮೊದಲೇ ಅವನು ಕಾಲವಶನಾದ. ಸಾಯುವ ಮುನ್ನ ಈ ಅಪರಿಪೂರ್ಣ ಕೃತಿಯನ್ನು ಸುಟ್ಟುಹಾಕಬೇಕೆಂದು ತನ್ನ ಗೆಳೆಯರಿಗೆ ತಿಳಿಸಿ ಆ ಬಗೆಗೆ ಅವರಿಂದ ಮಾತು ತೆಗೆದುಕೊಂಡಿದ್ದ. ಆದರೆ ಅವರು ತಾವು ಕೊಟ್ಟ ಮಾತನ್ನು ಪಾಲಿಸಲಿಲ್ಲ. ಆ ಉತ್ಕೃಷ್ಟ ಕಾವ್ಯವನ್ನು ನಾಶಮಾಡದೆ ಉಳಿಸಿದರು.

ಕವಿತಾಶೈಲಿಗೆ, ಕಲ್ಪನೆಗೆ, ಪದ ಜೋಡಣೆಗೆ, ಲಯ ಮಾಧುರ್ಯಗಳಿಗೆ 'ಈನಿಯಿಡ್' ಹೆಸರಾಗಿದೆ.

'ಈನಿಯಿಡ್' ಲ್ಯಾಟಿನ್ ಸಾಹಿತ್ಯ ಸುವರ್ಣಯುಗದ ಮಹೋನ್ನತ ಕೃತಿ.

**ನೋಡಿ : ವರ್ಜಿಲ್**

## ಈಸೋಪ್

ಕುರಿಗಾಹಿ ಹುಡುಗನೊಬ್ಬನಿದ್ದ. ಬಯಲಿನಲ್ಲಿ ಕುರಿ ಕಾಯುತ್ತಿದ್ದಾಗ ತಮಾಷೆಗೆ ಒಮ್ಮೆ "ತೋಳ ಬಂತು ! ತೋಳ ಬಂತು !" ಎಂದು ಕೂಗಿಕೊಂಡ. ಅಕ್ಕಪಕ್ಕದಲ್ಲಿದ್ದವರೆಲ್ಲ ಓಡಿಬಂದರು. ಹುಡುಗ ಅವರನ್ನು ನೋಡಿ ಗಟ್ಟಿಯಾಗಿ ನಕ್ಕ. ಜನ ತಾವು ಮೋಸ ಹೋದದ್ದನ್ನು ತಿಳಿದರು. ಎರಡು ಮೂರು ಬಾರಿ ಹೀಗೇ ಆಯಿತು. ಜನರು ಹುಡುಗನಿಗೆ ಛೀಮಾರಿ ಹಾಕಿದರು. ಒಂದು ದಿನ ನಿಜವಾಗಿಯೂ ತೋಳ ಬಂತು. ಹುಡುಗ ಮೊದಲಿನಂತೆಯೇ ಕೂಗಿಕೊಂಡ. ಯಾರೂ ಬರಲಿಲ್ಲ. ಕುರಿಗಳು ತೋಳನ ಬಾಯಿಗೆ ಸಿಕ್ಕವು.

ನೀತಿ : ನಾವು ಸುಳ್ಳು ಹೇಳುತ್ತಿದ್ದರೆ, ಕೊನೆಗೆ ನಿಜ ಹೇಳಿದಾಗ ಕೂಡಾ ಯಾರೂ ನಂಬುವುದಿಲ್ಲ.

ಕಾಗೆ ತನ್ನ ಕೊಕ್ಕಿನಲ್ಲಿ ಮಾಂಸದ ತುಂಡೊಂದನ್ನು ಕಚ್ಚಿಕೊಂಡು ಮರದ ಮೇಲೆ ಕುಳಿತಿತ್ತು. ನೆಲದ ಮೇಲಿನ ನರಿಯೊಂದರ ಕಣ್ಣು ಅದರ ಮೇಲೆ ಬಿತ್ತು. ನರಿ ಕಾಗೆಗೆ ಹೇಳಿತು : "ನಿನ್ನ ಹಾಡು ಕೇಳಿ ಎಷ್ಟೊಂದು ದಿನಗಳಾದುವು! ಒಂದು ಹಾಡು ಹೇಳು". ಈ ಹೊಗಳಿಕೆಗೆ ಉಬ್ಬಿಹೋದ ಕಾಗೆ "ಕಾ ಕಾ" ಎಂದು ಬಾಯಿ ತೆರೆಯಿತು : ಅದರ ಬಾಯಿಯಲ್ಲಿದ್ದ ಮಾಂಸದ ತುಂಡು ಕೆಳಗೆಬಿತ್ತು. ನರಿ ಅದನ್ನು ಕಚ್ಚಿಕೊಂಡು ಓಡಿಹೋಯಿತು.

ನೀತಿ : ಹೊಗಳಿಕೆಗೆ ಮರುಳಾಗಿ ವಿವೇಕ ಕಳೆದುಕೊಳ್ಳಬಾರದು.

ಈಸೋಪನ ನೀತಿ ಕಥೆಗಳು ಎಂದು ಪ್ರಸಿದ್ಧವಾದ ಈ ಬಗೆಯ ಅನೇಕ ಕಥೆಗಳಿವೆ.

ಗ್ರೀಸಿನ ಈಸೋಪ್ ಎಂಬವನು ಇವನ್ನೆಲ್ಲ ಹೇಳಿದ ಎನ್ನುವುದು ರೂಢಿಯಲ್ಲಿರುವ ಅಭಿಪ್ರಾಯ. ಅವನು ಎಲ್ಲಿ, ಎಂದು ಜನಿಸಿದ ಎಂಬುದು ನಿಖರವಾಗಿ ತಿಳಿದಿಲ್ಲ. ಅವನ ಕಾಲ ಸುಮಾರು ಕ್ರಿಸ್ತ ಪೂರ್ವ 620--564.



ಕಥೆ ಹೇಳುತ್ತಿರುವ ಈಸೋಪ್—ಪ್ರಾಚೀನ ಗ್ರೀಕ್ ಚಿತ್ರ

ತನ್ನ ಕಥೆಗಳಿಂದ ಆತ ಅಥೆನ್ಸಿನಲ್ಲಿ ಎಷ್ಟು ಪ್ರಸಿದ್ಧನಾಗಿದ್ದ ಎಂದರೆ, ಪ್ರಖ್ಯಾತ ಶಿಲ್ಪಿಯೊಬ್ಬನಿಂದ ಅವನ ಶಿಲಾಮೂರ್ತಿಯನ್ನು ನಿರ್ಮಿಸಿದ ಗ್ರೀಕ್ ನಾಟಕಕಾರ ಅರಿಸ್ಟಾಫನೀಸ್ (ಕ್ರಿ.ಪೂ. ಸುಮಾರು 450—388) ತನ್ನ ನಾಟಕದ ಪಾತ್ರಗಳಿಂದ ಈಸೋಪನ ಕಥೆಗಳನ್ನು ಹೇಳಿಸುತ್ತಿದ್ದ. ಈಸೋಪನ ಹಲವು ಕಥೆಗಳನ್ನು ಸಾಕ್ರಟೀಸ್ ಪದ್ಯ ರೂಪದಲ್ಲಿ ಬರೆದದ್ದೂ ಉಂಟು. ಪ್ಲೇಟೊ ಕೂಡ ಈಸೋಪನ ಕಥೆಗಳನ್ನು ಕುರಿತು ಮಾತನಾಡಿದ್ದಾನೆ.

ಇಂಥ ಪ್ರಶಂಸೆಗೆ ಪಾತ್ರನಾದ ಈಸೋಪ್ ವಾಸ್ತವವಾಗಿ ಒಬ್ಬ ಗುಲಾಮ. ದಾಸನಾಗಿ ಅಥೆನ್ಸಿಗೆ ಬಂದ ಈತ ತನ್ನ ಬುದ್ಧಿ ಚಾತುರ್ಯಗಳಿಂದ ಸ್ವಾತಂತ್ರ್ಯವನ್ನು ಪಡೆದ; ಲಿಡಿಯಕ್ಕೆ ಹೋಗಿ ದೊರೆ ಕ್ರೀಸಸ್‌ನ ಕೃಪೆಗೆ ಪಾತ್ರನಾದ. ಜನರಿಗೆ ಹಣ ಹಂಚುವ ಕೆಲಸಕ್ಕಾಗಿ ಅರಸ ಆತನನ್ನು ಡೆಲ್ಫಿ ಪಟ್ಟಣಕ್ಕೆ ಕಳುಹಿಸಿದ. ಈ ಕೆಲಸ ಮಾಡುತ್ತಿದ್ದಾಗ ಡೆಲ್ಫಿ ಬಳಿಯ ಅಪೊಲೊ ದೇವತಾಮಂದಿರದ ಪೂಜಾರಿಗಳಿಗೂ

ಅವನಿಗೂ ಮರಣಪ್ರಾಪ್ತವಾಯಿತು. ಅವರು ಈಸೋಪನನ್ನು ಹಿಡಿದು ಒಂದು ಗುಡ್ಡದ ತುದಿಯಿಂದ ಪ್ರಪಾತಕ್ಕೆ ತಳ್ಳಿದರು. ಈಸೋಪ್ ಮರಣ ಹೊಂದಿದ್ದು ಹೀಗೆ. ಇದು ನಡೆದದ್ದು ಸುಮಾರು ಕ್ರಿಸ್ತಪೂರ್ವ 564ರಲ್ಲಿ.

ಈಸೋಪನ ಈ ಜೀವನ ವೃತ್ತಾಂತ ಒಂದು ಕಟ್ಟುಕಥೆ ಎಂದು ನಿರಾಕರಿಸುವವರೂ ಇದ್ದಾರೆ.

ಈಸೋಪನ ಕಥೆಗಳನ್ನು ಮೊದಲಿಗೆ ಗ್ರೀಕ್ ಭಾಷೆಯಲ್ಲಿ ಬರೆದಿಟ್ಟವನು, ಅಥೆನ್ಸಿನ ಫೇಲರ್ಯೂಸ್ ಎಂಬುವನು. ಇವನ ಕಾಲ ಸುಮಾರು ಕ್ರಿ.ಪೂ. 320. ಮ್ಯಾಸಿಡೋನಿಯದಿಂದ ಗುಲಾಮನಾಗಿ ರೋಮ್‌ಗೆ ತರಲ್ಪಟ್ಟು ಆಮೇಲೆ ಮುಕ್ತನಾದ ಫೇಡ್ರಸ್ ಎಂಬುವನು ಕ್ರಿ.ಶ. ಒಂದನೆಯ ಶತಮಾನದಲ್ಲಿ ಅವನ್ನು ಲ್ಯಾಟಿನ್ ಭಾಷೆಗೆ ಭಾಷಾಂತರಿಸಿದ. ಈಸೋಪನ ಕಥೆಗಳನ್ನು ಅವು ಈಗಿರುವ ರೂಪದಲ್ಲಿ ಸಿದ್ಧಗೊಳಿಸಿದವನು 14ನೆಯ ಶತಮಾನದ ಒಬ್ಬ ಕ್ರೈಸ್ತ ಸನ್ಯಾಸಿ. ಈಸೋಪನು ಕುರೂಪಿಯಾಗಿದ್ದ ಎಂಬುದು ಈ ಸನ್ಯಾಸಿಯ ಅಭಿಪ್ರಾಯ. ಆದರೆ ಇತರರು ಈ ಅಭಿಪ್ರಾಯವನ್ನು ಒಪ್ಪಿಲ್ಲ.

ಈಸೋಪನ ಅನೇಕ ಕಥೆಗಳಲ್ಲಿ ಪ್ರಾಣಿಗಳೇ ಪಾತ್ರಗಳು. ಆದರೆ ಇವು ಆಲೋಚನಾಶಕ್ತಿಯುಳ್ಳ, ಮಾತನಾಡಬಲ್ಲ ಪ್ರಾಣಿಗಳು. ಮನುಷ್ಯರ ಆಲೋಚನೆ ರೀತಿನೀತಿಗಳನ್ನು ಪ್ರಾಣಿಗಳಿಗೆ ಕಲ್ಪಿಸಿ ಪಾತ್ರಗಳು ಸೃಷ್ಟಿಸಲ್ಪಟ್ಟಿವೆ.

ಹಲವೆಡೆ ಈಸೋಪನ ಕಥೆಗಳಿಗೂ 'ಪಂಚತಂತ್ರ' ದ ಕಥೆಗಳಿಗೂ ಸಾಮ್ಯ ಕಂಡುಬರುತ್ತದೆ. ಇವಕ್ಕೆಲ್ಲ ಬಳಕೆಯಲ್ಲಿದ್ದ ಜಾನಪದ ಕಥೆಗಳೇ ಆಧಾರವಾಗಿದ್ದು ಇವುಗಳ ಮೂಲ ಒಂದೇ ಇರಬಹುದೆಂಬ ಅಭಿಪ್ರಾಯವಿದೆ.

ಈಸೋಪನ ಕಥೆಗಳು ಅನೇಕ ಭಾಷೆಗಳಿಗೆ ಅನುವಾದವಾಗಿವೆ. ಅವನ ಕಥೆಗಳೊಂದಿಗೆ ಆತನವಲ್ಲದ ಕಥೆಗಳೂ ನುಸುಳಿಕೊಂಡಿವೆ.

ಈಸೋಪನ ಜೀವನದ ಬಗೆಗೆ ಏನೇ ವಿವಾದವಿರಲಿ, ಲೋಕ ವಿಖ್ಯಾತ ನೀತಿ ಕಥೆಗಳ ಕರ್ತೃವೆಂದು ಈಸೋಪ್ ಅಮರ.

ನೋಡಿ : ನೀತಿ ಕಥೆ

## ಉಪನಿಷತ್

"ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ"

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವ ಈ ವಾಕ್ಯಗಳ ಭಾವ :

'ಅಸತ್ಯದಿಂದ ಸತ್ಯದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮೃತತ್ವದೆಡೆಗೆ ಓ ದೇವಾ ನನ್ನನ್ನು ಮುಟ್ಟಿಸು.'

ಉಪನಿಷತ್ ವೇದಸಾಹಿತ್ಯದ ಒಂದು ಭಾಗ. ವೇದಗಳನ್ನು ಮೂರು ಭಾಗಗಳಾಗಿ ವಿಂಗಡಿಸುತ್ತಾರೆ. ಒಂದು ಮಂತ್ರಭಾಗ; ಇನ್ನೊಂದು ಯಜ್ಞಯಾಗಾದಿಗಳ ಆಚರಣೆಗೆ ಸಂಬಂಧಿಸಿದ್ದು; ಮೂರನೆಯದು ಉಪನಿಷತ್. ಉಪನಿಷತ್ತನ್ನು ಆರಣ್ಯಕ, ವೇದಾಂತ ಎಂದು ಕೂಡ ಕರೆಯುತ್ತಾರೆ. ಅರಣ್ಯವಾಸಿಗಳಾಗಿದ್ದ ಋಷಿಗಳ ರಹಸ್ಯವಾದ ಬ್ರಹ್ಮತತ್ತ್ವವನ್ನು ಕುರಿತವಾದ್ದರಿಂದ ಇವು ಆರಣ್ಯಕಗಳು. ವೇದಗಳ ಕೊನೆಯ ಭಾಗವಾದ್ದರಿಂದ, ಅಥವಾ ವೇದದಿಂದ ಕಡೆಯದಾಗಿ ಅರಿತುಕೊಳ್ಳಬೇಕಾದ ಬಹುಮುಖ್ಯವಾದ ಬ್ರಹ್ಮಜ್ಞಾನದ ವಿಚಾರ ಇವುಗಳಲ್ಲಿ ಇರುವುದರಿಂದ, ಇವು ವೇದದ ಅಂತ — ವೇದಾಂತ.

ಉಪನಿಷತ್ ಎಂದರೆ, ಹತ್ತಿರ ಕುಳಿತುಕೊಳ್ಳುವುದು ಮತ್ತು ಶಿಷ್ಯನಿಗಾದ ಬೋಧನೆಯನ್ನು ಪಡೆಯುವುದು ಎಂದು ಅರ್ಥ. ಗುರುವಿನ ಸಮೀಪದಲ್ಲಿ ಕುಳಿತು ಶಿಷ್ಯನು ಗುರುವಿನಿಂದ ಅಂತ ರಹಸ್ಯಜ್ಞಾನದ ನಿರೂಪಣೆಯನ್ನು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಮೊದಲು ಗುರು ತನ್ನ ಶಿಷ್ಯನನ್ನು ನಾನಾ ವಿಧವಾಗಿ ಪರೀಕ್ಷಿಸುತ್ತಾನೆ. ಶಿಷ್ಯನು ಜ್ಞಾನಕ್ಕೆ 'ಅಧಿಕಾರಿ' — ಎಂದರೆ ಅದನ್ನು ತಿಳಿದುಕೊಳ್ಳುವ ಯೋಗ್ಯತೆ ಉಳ್ಳವನು — ಆಗಿದ್ದರೆ ಮಾತ್ರ, ಅವನಿಗೆ ಉಪದೇಶಿಸುತ್ತಾನೆ.

ಉಪನಿಷತ್ತುಗಳು ಭಾರತೀಯ ತತ್ತ್ವಜ್ಞಾನದ ಮೂಲ ಆಕರಗಳಾಗಿವೆ. ಭಗವದ್ಗೀತೆ, ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳನ್ನು ವೈದಿಕ ಧರ್ಮದ ಮೂರು 'ಪ್ರಸ್ಥಾನ'ಗಳು ಎನ್ನುತ್ತಾರೆ. ಭಗವದ್ಗೀತೆಯ ಧ್ಯಾನ ಶ್ಲೋಕದಲ್ಲಿ "ಉಪನಿಷತ್ತುಗಳೇ ಗೋವುಗಳು. ಅವುಗಳಿಂದ ಹಾಲು ಕರೆದ ಗೊಲ್ಲ ಕೃಷ್ಣ. ಹಾಲು ಕುಡಿದ ಕರು ಅರ್ಜುನ" ಎಂದು ಹೇಳಿದೆ. ಉಪನಿಷತ್ತುಗಳ



...ಆತ್ಮೀಯ ಬೋಧನೆ ಪಡೆಯುವುದು

ಸಾರವನ್ನು ಸುಲಭವಾದ ರೀತಿಯಲ್ಲಿ ಭಗವದ್ಗೀತೆಯಲ್ಲಿ ಹೇಳಿದೆ.

ಸುಮಾರು 108 ಉಪನಿಷತ್ತುಗಳು ಇವೆ ಎನ್ನುತ್ತಾರೆ. ಇವುಗಳಲ್ಲಿ ಹತ್ತು ಉಪನಿಷತ್ತುಗಳು ಪ್ರಧಾನವಾದುವೆಂದು ಪರಿಗಣಿಸಲ್ಪಟ್ಟಿವೆ. ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ—ಇವೇ ಆ ಹತ್ತು ಉಪನಿಷತ್ತುಗಳು. ಕೌಷೀತಕೀ, ಶ್ವೇತಾಶ್ವತರ, ಮೈತ್ರಾಯಣೀಯ ಹಾಗೂ ನಾರಾಯಣೀಯ ಉಪನಿಷತ್ತುಗಳೂ ಮುಖ್ಯವಾದುವೆಂದು ಭಾವಿಸುವುದುಂಟು.

ಉಪನಿಷತ್ತುಗಳ ಕಾಲದ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ. ಅತ್ಯಂತ ಪ್ರಾಚೀನವಾದ ಉಪನಿಷತ್ತುಗಳು ಬೌದ್ಧಧರ್ಮಕ್ಕಿಂತ ಹಿಂದಿನ ಕಾಲಕ್ಕೆ ಸೇರಿದುವು ಎನ್ನುತ್ತಾರೆ. ಪಾಶ್ಚಾತ್ಯ ವಿದ್ವಾಂಸರು ಕ್ರಿ. ಪೂ. 1200ನ್ನು ಋಗ್ವೇದ ಸಂಕಲನ ಕಾಲವೆಂದೂ ಉಪನಿಷತ್ತುಗಳು ಕ್ರಿ. ಪೂ. 1200 ಹಾಗೂ ಕ್ರಿ. ಪೂ. 600ರ ಮಧ್ಯಕಾಲಕ್ಕೆ ಸೇರುತ್ತವೆಂದೂ ಹೇಳಿದ್ದಾರೆ.

ಜ್ಯೋತಿಷಶಾಸ್ತ್ರದ ಆಧಾರದ ಮೇಲೆ ಡಾ. ಯಾಕೋಬಿ ಮತ್ತು ಬಾಲ ಗಂಗಾಧರ ತಿಲಕರು ಇವುಗಳ ಕಾಲ ಕ್ರಿ. ಪೂ. 1500 ಎನ್ನುತ್ತಾರೆ. ಇಂಥದೇ ಆಧಾರದ ಮೇಲೆ ಮೈತ್ರಾಯಣೀಯ ಉಪನಿಷತ್ತಿನ ಕಾಲ ಕ್ರಿ. ಪೂ. 1900 ಇರಬೇಕೆಂದು ತಿಲಕರ ಅಭಿಪ್ರಾಯ.

ಉಪನಿಷತ್ತುಗಳನ್ನು ಓದುವಾಗ ಮೊತ್ತಮೊದಲು ನಮ್ಮ ಮನಸ್ಸನ್ನು ಆಕರ್ಷಿಸುವುದು ಅವುಗಳಲ್ಲಿ ಕಂಡುಬರುವ ಸತ್ಯನಿಷ್ಠೆ, ಸ್ವತಂತ್ರ ವಿಚಾರ ಪ್ರವೃತ್ತಿ, ತ್ಯಾಗ. ಜಗತ್ತಿನ ಸೃಷ್ಟಿಯ ಕಾರಣವು ಏನು ? ನಾವು ಎಲ್ಲಿಂದ ಬಂದೆವು? ಯಾವ ಕಾರಣಕ್ಕಾಗಿ ಇಲ್ಲಿ ಸುಖದುಃಖಗಳನ್ನು ಅನುಭವಿಸುತ್ತ ತೊಳಲಾಡುತ್ತಿದ್ದೇವೆ ? ಇಲ್ಲಿಂದ ಮುಂದೆ ನಾವು ಹೋಗುವುದೆಲ್ಲಿಗೆ ? ಈ ಬಗೆಯ ಹಲವು ವಿಚಾರಗಳ ವಿವೇಚನೆ ಉಪನಿಷತ್ತುಗಳಲ್ಲಿದೆ.

ಉಪನಿಷತ್ತುಗಳಲ್ಲಿ ಜ್ಞಾನ ಪ್ರತಿಪಾದನೆಗಾಗಿ ಪ್ರಶ್ನೋತ್ತರ ವಿಧಾನವನ್ನು ಅನುಸರಿಸಲಾಗಿದೆ. ಉಪನಿಷತ್ತುಗಳು ಸುಂದರ, ನೀತಿಬೋಧಕ ಆದರ್ಶ ಪ್ರತಿಪಾದಕ ಕತೆಗಳನ್ನು ಒಳಗೊಂಡಿವೆ. ಕಠೋಪನಿಷತ್ತಿನಲ್ಲಿ ಬರುವ ನಚಿಕೇತನ ಕತೆ ಇದಕ್ಕೊಂದು ಉದಾಹರಣೆ. ಯಾಗ ಸಂದರ್ಭದಲ್ಲಿ ಕುಪಿತನಾದ ವಾಜಶ್ರವನು ತನ್ನ ಮಗ ನಚಿಕೇತನನ್ನು ಯಮನಿಗೆ ದಾನ ಮಾಡುತ್ತಾನೆ. ನಚಿಕೇತ ಧೈರ್ಯಗೆಡದೆ ಯಮನೊಡನೆ ವಾದಿಸಿ ಅವನಿಂದ ಅನುಗ್ರಹೀತನಾಗಿ ಅಮೃತತತ್ತ್ವವನ್ನು ಪಡೆಯುತ್ತಾನೆ.

ಮಾನವನ ಹುಟ್ಟು ಸಾವುಗಳ ಗಹನವಾದ ಚಿಂತನೆ ಇಲ್ಲಿ ಸರಳ ಸಂವಾದ ರೂಪದಲ್ಲಿ ಮೂಡಿದೆ.

ಗುರುಶಿಷ್ಯರ ಪವಿತ್ರ ಸಂಬಂಧ ಉಪನಿಷತ್ತುಗಳಲ್ಲಿ ಎದ್ದುಕಾಣುವ ಅಂಶ. ಬಡಬ್ರಾಹ್ಮಣನ ಮಗನಾಗಲೀ, ರಾಜನ ಮಗನಾಗಲೀ ಗುರುವಿನೆಡೆಯಲ್ಲಿ ಕುಳಿತು ಅಧ್ಯಯನ ಮಾಡುತ್ತಿದ್ದರು. ಶಿಷ್ಯ ಯಾವುದಾದರೂ ತತ್ತ್ವವಿಚಾರವಾಗಿ ಗುರುವನ್ನು ಪ್ರಶ್ನಿಸಿದರೆ ಗುರು ಆ ತತ್ತ್ವವನ್ನು ಸ್ವಾರಸ್ಯವಾದ ರೀತಿಯಲ್ಲಿ ತಿಳಿಸಿಕೊಡುವುದನ್ನು ನಾವು ಉಪನಿಷತ್ತುಗಳಲ್ಲಿ ಕಾಣಬಹುದು. ಉಪನಿಷತ್ತುಗಳಲ್ಲಿ ತತ್ತ್ವವಿವೇಚನೆ ಮುಖ್ಯವಾದರೂ ಸಾಹಿತ್ಯದೃಷ್ಟಿಯಿಂದಲೂ ಉತ್ತಮವೆನಿಸುವ ಅಂಶಗಳು ಕೂಡ ಇವೆ. ಉಪನಿಷತ್ತುಗಳಲ್ಲಿ ಜ್ಞಾನಾರ್ಜನೆಗೆ ಪ್ರಾಧಾನ್ಯ. ದುಃಖಮಯವಾದ ಸಂಸಾರಬಂಧನದಿಂದ ಬಿಡುಗಡೆಹೊಂದುವುದೇ ಮೋಕ್ಷ. ಮೋಕ್ಷ ಸಾಧನೆಯ ಮಾರ್ಗ ಯಾವುದು? ಈ ಪ್ರಶ್ನೆಯನ್ನು ಉಪನಿಷತ್ತುಗಳಲ್ಲಿ ಮತ್ತೆ ಮತ್ತೆ ವಿಮರ್ಶಿಸಲಾಗಿದೆ.

ಉಪನಿಷತ್ತುಗಳಲ್ಲಿ ಗದ್ಯ, ಪದ್ಯರೂಪಗಳೆರಡೂ ಬಳಸಲ್ಪಟ್ಟಿವೆ. ಅವುಗಳಲ್ಲಿ ಭಾಷೆ ಹಾಗೂ ಶೈಲಿ ಸರಳ, ಸುಂದರ. ಸಂಸ್ಕೃತಭಾಷೆಯನ್ನು ಗದ್ಯದಲ್ಲಿ ಎಷ್ಟು ಶಕ್ತಿಯುತವಾಗಿ ಬಳಸಬಹುದು ಎಂಬುದಕ್ಕೆ ಉತ್ತಮ ನಿದರ್ಶನವನ್ನು ಉಪನಿಷತ್ತುಗಳಲ್ಲಿ ಕಾಣಬಹುದು.

ಉಪನಿಷತ್ತುಗಳ ಇನ್ನೊಂದು ವೈಶಿಷ್ಟ್ಯ ಅದರಲ್ಲಿ ಸ್ತ್ರೀಯರಿಗೆ ದೊರೆತಿರುವ ಗೌರವದ ಸ್ಥಾನ. ಬೃಹದಾರಣ್ಯಕ ಉಪನಿಷತ್ತಿನಲ್ಲಿರುವ ಯಾಜ್ಞವಲ್ಕ್ಯ–ಮೈತ್ರೇಯಿ ಸಂವಾದ, ಜನಕ ಮಹಾರಾಜನ ಸಭೆಯಲ್ಲಿ ಯಾಜ್ಞವಲ್ಕ್ಯನಿಗೂ ಗಾರ್ಗಿ ವಾಚಕ್ನವಿ ಎಂಬ ಬ್ರಹ್ಮವಾದಿನಿಗೂ ನಡೆದ ಚರ್ಚೆ ಉಪನಿಷತ್ತುಗಳಲ್ಲಿ ಪ್ರಸಿದ್ಧವಾದುವು. ಯಾಜ್ಞವಲ್ಕ್ಯನಂಥ ಹಿರಿಯ ತತ್ತ್ವಜ್ಞಾನಿಯನ್ನು ವಾದದಲ್ಲಿ ಎದುರಿಸಬಲ್ಲ ಸ್ತ್ರೀಯರೂ ಆಗಿನ ಕಾಲದಲ್ಲಿದ್ದರು.

ಉಪನಿಷತ್ತುಗಳ ತತ್ತ್ವಜ್ಞಾನವನ್ನು ಮತ್ತು ಅವುಗಳ ರಚನಾ ಸೌಂದರ್ಯವನ್ನು ಭಾರತೀಯ ವಿದ್ವಾಂಸರಷ್ಟೇ ಅಲ್ಲ, ಪಾಶ್ಚಾತ್ಯ ವಿದ್ವಾಂಸರೂ ಮೆಚ್ಚಿಕೊಂಡಿದ್ದಾರೆ. ಜರ್ಮನಿಯ ಶೋಪೆನ್‌ಹಾವರ್, ಮ್ಯಾಕ್ಸ್‌ಮುಲ್ಲರ್ ಮೊದಲಾದ ವಿದ್ವಾಂಸರು ಉಪನಿಷತ್ತುಗಳನ್ನು ಮುಕ್ತ ಕಂಠದಿಂದ ಹೊಗಳಿದ್ದಾರೆ.

ನೋಡಿ : ವೇದ ; ಭಾರತೀಯ ಸಾಹಿತ್ಯ

## ಉಪಮೆ

"ನಾಗರಹಾವು ನಿಧಿಯನ್ನು ಕಾಪಾಡುವಂತೆ ರಾಣಿ ಮಾಲವಿಕೆಯನ್ನು ರಕ್ಷಿಸುತ್ತಿದ್ದಾಳೆ", "ಹೆಣ್ಣಿನ ಹೃದಯ ಹೂವಿನಂತೆ ಮೃದು"—ಇಂಥ ಹೇಳಿಕೆಗಳನ್ನು ಗಮನಿಸಿ ಇಲ್ಲಿ ಎರಡು ವಸ್ತುಗಳನ್ನು ಒಂದಕ್ಕೊಂದಕ್ಕೆ ಹೋಲಿಸಿದ್ದಾರೆ.

ಮೊದಲನೆಯ ವಾಕ್ಯದಲ್ಲಿ ರಾಣಿಯನ್ನು ನಾಗರಹಾವಿಗೂ ಮಾಲವಿಕೆಯನ್ನು ನಿಧಿಗೂ ಹೋಲಿಸಲಾಗಿದೆ. ಹೀಗೆ ಹೋಲಿಸಿ ಹೇಳುವುದನ್ನು ಉಪಮೆ, ಉಪಮಾಲಂಕಾರ ಎನ್ನುತ್ತಾರೆ.

ಸಾಹಿತ್ಯ ಕೃತಿಗಳಲ್ಲಿ ಉಪಮೆಗಳು ಸಾಮಾನ್ಯ ಬಳಕೆಯಲ್ಲಿವೆ. ತಾವು ಹೇಳಬೇಕಾದ ಅಂಶಗಳನ್ನು ರಮ್ಯವಾದ ರೀತಿಯಲ್ಲಿ ತಿಳಿಸುವುದರಲ್ಲಿ ಕವಿಗಳಿಗೆ ಉಪಮೆ ನೆರವಾಗುತ್ತದೆ.

'ಹೆಣ್ಣಿನ ಹೃದಯ ಮೃದು' ಎಂದು ಹೇಳುವುದರ ಬದಲು, 'ಹೆಣ್ಣಿನ ಹೃದಯ ಹೂವಿನಂತೆ ಮೃದು' ಎಂದರೆ ಅದು ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಉಂಟುಮಾಡುತ್ತದೆ. ಹೋಲಿಕೆಯಿಂದ ಹೇಳಿಕೆ ಚೆನ್ನಾಗಿ ಅರ್ಥವಾಗುವುದೇ ಇದಕ್ಕೆ ಕಾರಣ. ಉಪಮೆಗಳ ಬಳಕೆಯಿಂದ ಕವಿ ಬಿಡಿಸಿ ಹೇಳದೆ ಇದ್ದ ಸೌಂದರ್ಯದ ಹಲವಾರು ವಿವರಗಳು ನಮ್ಮ ಮನಸ್ಸಿನಲ್ಲಿ ಮೂಡುತ್ತವೆ.

'ರಾಣಿ, ಮಾಲವಿಕೆಯನ್ನು ರಕ್ಷಿಸುತ್ತಿದ್ದಾಳೆ' ಎಂದಿಷ್ಟೇ ಹೇಳಿದಾಗ, 'ಮಾಲವಿಕೆಯನ್ನು ತನ್ನ ಅರಮನೆಯಲ್ಲಿಟ್ಟುಕೊಂಡು ರಾಣಿ ಅವಳಿಗೆ ಅನ್ನ ಬಟ್ಟೆ ಕೊಟ್ಟು ಸಾಕುತ್ತಿದ್ದಾಳೆ' ಎಂದಿಷ್ಟು ಮಾತ್ರ ಅರ್ಥವಾಗುತ್ತದೆ. ಆದರೆ ಈ ಹೇಳಿಕೆಗೆ 'ನಾಗರಹಾವು ನಿಧಿಯನ್ನು ಕಾಪಾಡುವಂತೆ' ಎಂಬ ಉಪಮಾನವನ್ನು ಸೇರಿಸಿದಾಗ ನಮ್ಮ ಮನಸ್ಸಿನ ಮೇಲೆ ಆಗುವ ಪರಿಣಾಮವೇ ಬೇರೆ. ನಿಧಿಯನ್ನು ಕಾಯುವ ನಾಗರಹಾವು ಅದರ ಮೇಲೆ ಹಗಲಿರುಳೂ ಎಡಬಿಡದೆ ಕಣ್ಣಿಟ್ಟಿರುತ್ತದೆ. ಯಾರಿಗೂ ಆ ನಿಧಿಯನ್ನು ಮುಟ್ಟಲು ಅವಕಾಶ ಕೊಡುವುದಿಲ್ಲ –ಎಂಬ ಭಾವಗಳೂ ನಾಗರಹಾವು ಹೆಡೆ ಬಿಚ್ಚಿಕೊಂಡು ಭಯಂಕರವಾಗಿ ಕಾಣುತ್ತ ನಿಧಿಯನ್ನು ಕಾಯುತ್ತಿರುವ ಚಿತ್ರವೂ ನಮ್ಮ ಮನಸ್ಸಿನಲ್ಲಿ ಮೂಡುತ್ತವೆ. ಅಲ್ಲದೆ, ಮಾಲವಿಕೆ ನಿಧಿಯಷ್ಟು ಅಮೂಲ್ಯವಾದವಳು ; ಅಷ್ಟೇ ಆಕರ್ಷಕಳಾದವಳು ; 'ನಾಗರಹಾವು' ಎಷ್ಟು ಎಚ್ಚರಿಕೆಯಿಂದ ಕಾದರೂ, ಕೊನೆಗೆ ಅವಳು ಬೇರೆಯವರ ಪಾಲೇ ಎಂದೂ ಹೊಳೆಯುತ್ತದೆ.

ಉಪಮೆ ಒಂದು ಅಲಂಕಾರ. ಎರಡು ವಸ್ತುಗಳನ್ನು ಹೋಲಿಸುವುದರ ಮೂಲಕ ಅವುಗಳ ಗುಣಲಕ್ಷಣಗಳನ್ನು ಕುರಿತು ನಮ್ಮಲ್ಲಿ ಹೆಚ್ಚು ಸ್ಪಷ್ಟವಾದ ಪರಿಣಾಮ ಮೂಡುವಂತೆ ಮಾಡುವುದೇ ಈ ಅಲಂಕಾರದ ಉದ್ದೇಶ. ಹೋಲಿಸುವ ಮತ್ತು ಹೋಲಿಸಲ್ಪಡುವ ವಿಷಯಗಳಲ್ಲಿ ಸಂಪೂರ್ಣ ಸಾಮ್ಯ —ಪೂರ್ತಿ ಹೋಲಿಕೆ— ಇದ್ದಾಗ ಅದನ್ನು ಪೂರ್ಣೋಪಮೆ ಎನ್ನುತ್ತಾರೆ.

ಸಂಸ್ಕೃತ ಕವಿಗಳಲ್ಲಿ ಉಪಮೆಗಳನ್ನು ನಿರ್ಮಿಸುವುದರಲ್ಲಿ ಕಾಳಿದಾಸನು ಅಗ್ರಗಣ್ಯ. ಮೇಲೆ ವಿವರಿಸಿದ ರಾಣಿ–ನಾಗರ ಹಾವಿನ ಉಪಮೆ ಅವನ 'ಮಾಲವಿಕಾಗ್ನಿ ಮಿತ್ರ' ನಾಟಕದಲ್ಲಿದೆ.

ಸಾಮಾನ್ಯವಾಗಿ ಎಲ್ಲ ಕವಿಗಳೂ ಉಪಮಾಲಂಕಾರವನ್ನು ಬಳಸಿಯೇ ಬಳಸುತ್ತಾರೆ. ಕನ್ನಡ ಕವಿಗಳಲ್ಲಿ ಅನೇಕರು ಉತ್ತಮ ರೀತಿಯಲ್ಲಿ ಉಪಮೆಗಳನ್ನು ರಚಿಸಿದ್ದಾರೆ. ತಮ್ಮ ಭಾವನೆ ಅಥವಾ ಅಭಿಪ್ರಾಯವನ್ನು ಹೆಚ್ಚು ಹೆಚ್ಚಾಗಿ ಸ್ಪಷ್ಟಪಡಿಸುವ ಹಾಗೂ ಓದುಗರ ಮನರಂಜಿಸುವ ಉದ್ದೇಶದಿಂದ ಕವಿಗಳು ಒಂದಾದ ಮೇಲೊಂದರಂತೆ ಎರಡು ಮೂರು ಉಪಮೆಗಳನ್ನು ಒಟ್ಟಿಗೆ ಉಪಯೋಗಿಸುವುದೂ ಉಂಟು. ಒಂದೆರಡು ಉದಾಹರಣೆಗಳು : ಗದುಗಿನ ಭಾರತವನ್ನು ಬರೆದ ಕುಮಾರವ್ಯಾಸ ದ್ರೌಪದಿ ಸ್ವಯಂವರವನ್ನು ವರ್ಣಿಸುತ್ತ, ಮತ್ಸ್ಯಯಂತ್ರವನ್ನು ಭೇದಿಸಲು ಬಂದ ಬ್ರಾಹ್ಮಣ ವೇಷದ ಅರ್ಜುನನನ್ನು "ರಸದ ಹೊರಲೇಪದಲಿ ಹುದುಗಿದ ವಿಸುನಿಯಂದದಿ ಜೀವಭಾವ ಪ್ರಸರದೊಳಗವತರಿಸಿರ್ಪ ಪರಮಾತ್ಮನಂದದಲಿ" ಎಂದು ಜೋಡಿ ಉಪಮಾನಗಳಿಂದ ಚಿತ್ರಿಸಿದ್ದಾನೆ.

'ಉಪಮಾಲೋಲ'ನೆಂಬ ಹೊಗಳಿಕೆಗೆ ಪಾತ್ರನಾಗಿರುವ ಲಕ್ಷ್ಮೀಶ, ಮಕ್ಕಳಿಲ್ಲದ ಪುಲಿಂದ ರಾಜನಿಗೆ ಬಾಲಕ ಸಿಕ್ಕಿದ್ದು "ಕತ್ತಲೆಯ ಮನೆಗೆ ಮಣಿದೀಪಮಾದಂತೆ. ಸಲೆ ಬತ್ತಿದ ಸರೋವರಕೆ ನವಜಲವೊದಗಿದಂತೆ" ಆಯಿತು ಎಂದಿರುವುದು ಮನೋಜ್ಞವಾಗಿದೆ.

ಉಪಮೆಗಳು ಚಿಕ್ಕವಾಗಿರುವುದುಂಟು ; ದೀರ್ಘವಾಗಿರುವುದೂ ಉಂಟು. ಮಹಾ ಕಾವ್ಯಗಳಲ್ಲಿ ಇಂಥ ದೀರ್ಘ ಉಪಮೆಗಳನ್ನು ಕಾಣಬಹುದು.

ಸಮಯೋಚಿತವಾಗಿ ಉಪಮೆಗಳನ್ನು ಕಲ್ಪಿಸುವ ಶಕ್ತಿ ಕವಿಯಲ್ಲಿ ಮೂಡಬೇಕಾದರೆ ಅವನಿಗೆ ಅಪಾರವಾದ ಲೌಕಿಕಜ್ಞಾನ, ಮಾನವ ಮತ್ತು ಪ್ರಾಣಿವರ್ಗಗಳ ನಡವಳಿಕೆ, ಪೂರ್ವ ಸಾಹಿತ್ಯ, ಸಂಪ್ರದಾಯಾದಿಗಳ ಪರಿಚಯ ಅವಶ್ಯ.

ಉಪಮೆ ಕೇವಲ ಕವಿಗಳ ಸ್ವತ್ತಲ್ಲ. ಜನರ ಆಡುಮಾತಿನಲ್ಲಿಯೂ ಅದು ಹಾಸುಹೊಕ್ಕಾಗಿ ಬೆರೆತಿದೆ.

**ನೋಡಿ :** ಪ್ರತಿಮಾ ವಿಧಾನ ; ರೂಪಕಾಲಂಕಾರ

## ಉಪಾಧ್ಯೆ

ಆದಿನಾಥ ನೇಮಿನಾಥ ಉಪಾಧ್ಯೆ ಅವರು ರಾಷ್ಟ್ರೀಯ ಮನ್ನಣೆ ಪಡೆದಿರುವ ಘನ ವಿದ್ವಾಂಸರು. ಭಾರತದ ಪ್ರಾಚೀನ ಭಾಷಾಸಾಹಿತ್ಯಗಳ ಆಳ ಅಧ್ಯಯನ ಮತ್ತು ಆ ಸಂಬಂಧವಾದ ಗ್ರಂಥಗಳ ಸಂಪಾದನ ಪರಿಷ್ಕರಣ ಪ್ರಕಾಶನಗಳಿಗೆ ತಮ್ಮ ಬಾಳನ್ನೇ ಮುಡಿಪಿಟ್ಟವರು ಅವರು. ಈ ಕ್ಷೇತ್ರದಲ್ಲಿ ಅವರ ಸಾಧನೆಗಳು ಹಿರಿದಾದುವು. ಸುಮಾರು ಇಪ್ಪತ್ತೈದು ಬೃಹತ್ ಗ್ರಂಥಗಳನ್ನು ಪರಿಷ್ಕರಿಸಿದ್ದಾರೆ. ನೂರೈವತ್ತಕ್ಕೂ ಹೆಚ್ಚು ಪಾಂಡಿತ್ಯ ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಇವು ಇವರ ಪಾಂಡಿತ್ಯ. ಪ್ರತಿಭೆ. ನಿರಂತರ ಶ್ರಮ, ಶ್ರದ್ಧೆಗಳ ದ್ಯೋತಕ.

ಆದಿನಾಥ ನೇಮಿನಾಥ ಉಪಾಧ್ಯೆ ಅವರ ಜನ್ಮಸ್ಥಳ ಬೆಳಗಾವಿ ಜಿಲ್ಲೆಯ ಸಾದಲಗಿ. 1906 ಫೆಬ್ರುವರಿ 6ರಂದು ಅವರು ಜನಿಸಿದರು. ಇವರದು ಕನ್ನಡ ಮನೆತನ. ಆದರೆ ಬೆಳೆದದ್ದು ಮರಾಠಿಯ ಪರಿಸರದಲ್ಲಿ. ಪ್ರಥಮ ವಿದ್ಯಾಭ್ಯಾಸ ಸಾದಲಗಿಯಲ್ಲೇ ಆಯಿತು. ಅನಂತರ ಬೆಳಗಾವಿಯ ಜಿ. ಎಚ್. ಹೈಸ್ಕೂಲಿನಲ್ಲಿ; ಮುಂದೆ ಕೊಲ್ಲಾಪುರದ ರಾಜಾರಾಮ್ ಕಾಲೇಜು ಹಾಗೂ ಸಾಂಗ್ಲಿಯ ವಿಲಿಂಗ್ಡನ್ ಕಾಲೇಜುಗಳಲ್ಲಿ ಇವರು ವಿಶೇಷ ಅಧ್ಯಯನಕ್ಕಾಗಿ ಆರಿಸಿಕೊಂಡ ವಿಷಯಗಳು: ಸಂಸ್ಕೃತ, ಅರ್ಧಮಾಗಧೀ. ಪ್ರಾಕೃತ ಹಾಗೂ ಸಾಹಿತ್ಯ. 1928ರಲ್ಲಿ ಉಪಾಧ್ಯೆ ಬಿ.ಎ. ಪದವೀಧರರಾದರು. ಎರಡು ವರ್ಷಗಳ ಅನಂತರ ಪ್ರಾಚೀನ ಸಾಹಿತ್ಯ ವಿಷಯವನ್ನೇ ಆರಿಸಿಕೊಂಡು ಎಂ.ಎ. ಪರೀಕ್ಷೆಗೆ ಕುಳಿತು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಮುಂದೆ ಕೊಲ್ಲಾಪುರದ ರಾಜಾರಾಮ್ ಕಾಲೇಜಿನಲ್ಲಿ ಅರ್ಧಮಾಗಧೀ ಮತ್ತು ಪ್ರಾಕೃತ ಭಾಷಾ ವಿಷಯಗಳ ಪ್ರಾಧ್ಯಾಪಕರಾಗಿ ನಿಯಮಿತರಾದರು. 1962ರಲ್ಲಿ ನಿವೃತ್ತರಾಗುವವರೆಗೆ ಈ ಕೆಲಸದಲ್ಲೇ ಇದ್ದರು.



ಆ. ನೇ. ಉಪಾಧ್ಯೆ : ಪಾಂಡಿತ್ಯ, ಪ್ರತಿಭೆ, ನಿರಂತರ ಶ್ರಮ

ಅಪಭ್ರಂಶದಲ್ಲಿರುವ 'ಪರಮಾತ್ಮ ಪ್ರಕಾಶ', ಪ್ರಾಕೃತ ಭಾಷೆಯ 'ಪ್ರವಚನ ಸಾರ', 'ಪಂಚಸುತ್ತಂ ಕಂಸ ವ ಹೋ', ಸಂಸ್ಕೃತದಲ್ಲಿರುವ 'ವಾರಾಂಗಚರಿತ', 'ಬೃಹತ್ ಕಥಾಕೋಶ', 'ಆತ್ಮಾನುಶಾಸನ'–ಮುಂತಾದುವು ಉಪಾಧ್ಯೆ ಅವರು ಸಂಪಾದಿಸಿ ಪ್ರಕಟಿಸಿದ ಬೃಹತ್ ಗ್ರಂಥಗಳು. ಕನ್ನಡ, ಸಂಸ್ಕೃತ ಹಾಗೂ ಹಿಂದಿ ಈ ಮೂರು ಭಾಷೆಗಳಲ್ಲಿ ಇವರು ಪಾಂಡಿತ್ಯವನ್ನು ಪಡೆದಿದ್ದಾರೆ. ಇವರು ಕನ್ನಡದಲ್ಲಿ ಬರೆದ ಲೇಖನಗಳಲ್ಲಿ 'ಕವಿ ಪರಮೇಶ್ವರ' ಅಥವಾ 'ಪರಮೇಷ್ಠಿ', 'ದೇಶಿ ಕೋಶಗಳಲ್ಲಿನ ಕನ್ನಡ ಪದಗಳು' –ಇವನ್ನು ಹೆಸರಿಸಬಹುದು. 'ಪಾಲಿ ಮತ್ತು ಪ್ರಾಕೃತ' ಇವರಿಂದ ಕನ್ನಡಕ್ಕೆ ದೊರೆತಿರುವ ಅಮೂಲ್ಯ ಗ್ರಂಥ. ಹಲವಾರು ಕನ್ನಡ ಕಾವ್ಯಗಳ ಆಕರಗಳನ್ನು ಗೊತ್ತುಹಚ್ಚಿ ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ಮಹದುಪಕಾರ ಮಾಡಿದ್ದಾರೆ.

ಉಪಾಧ್ಯೆಯವರ ವಿದ್ವತ್ತು ಹಲವಾರು ರೀತಿಗಳಲ್ಲಿ ಮನ್ನಣೆಗೆ ಪಾತ್ರವಾಗಿದೆ. ಮುಂಬಯಿ ವಿಶ್ವವಿದ್ಯಾಲಯ 1939ರಲ್ಲಿ ಇವರಿಗೆ ಗೌರವ ಡಿ.ಲಿಟ್., ಪದವಿಯನ್ನು ಕೊಟ್ಟು ಗೌರವಿಸಿತು. ಅಲ್ಲದೆ 1939ರಿಂದ 42ರ ವರೆಗೆ ಸಂಶೋಧನಾ ವೇತನ ನೀಡಿ ಇವರ ಸಂಶೋಧನಾ ಕಾರ್ಯವನ್ನು ಪ್ರೋತ್ಸಾಹಿಸಿತು. 1941ರಲ್ಲಿ ಹೈದರಾಬಾದಿನಲ್ಲಿ ಜರಗಿದ ಅಖಿಲ ಭಾರತ ಪ್ರಾಚ್ಯ ವಿದ್ಯಾ ಸಮ್ಮೇಳನದ ಪ್ರಾಕೃತ ಪಾಳಿ ಮತ್ತು ಬೌದ್ಧ ಜೈನಧರ್ಮಗಳ ವಿಭಾಗಕ್ಕೆ ಅಧ್ಯಕ್ಷರಾಗಿ ಇವರು ಆಯ್ಕೆಗೊಂಡರು. 1966ರಲ್ಲಿ ಅಲಿಘಡದಲ್ಲಿ ನಡೆದ ಪ್ರಾಚ್ಯ ವಿದ್ಯಾಸಮ್ಮೇಳನದ ಅಧ್ಯಕ್ಷ

ಪದವಿ ಇವರಿಗೆ ದೊರೆಯಿತು. 1967ರಲ್ಲಿ ಶ್ರವಣಬೆಳಗೊಳದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಅವರಿಗೆ ಸಂದಿತು.

1970ರಲ್ಲಿ ಉಪಾಧ್ಯೆ ಅವರು ಮೈಸೂರು ವಿಶ್ವವಿದ್ಯಾನಿಲಯದ ಆಹ್ವಾನವನ್ನು ಅಂಗೀಕರಿಸಿ ಜೈನಾಧ್ಯಯನದ ಪ್ರಾಧ್ಯಾಪಕರಾದರು.

ಜೀವನದಲ್ಲಿ ನಿಷ್ಠೆ, ಒಳ್ಳೆಯ ಅಭಿರುಚಿ, ಧರ್ಮಶ್ರದ್ಧೆ, ಜ್ಞಾನೋಪಾಸನೆ –ಇಂಥ ಉದಾತ್ತ ಗುಣಗಳು ಉಪಾಧ್ಯೆ ಅವರ ವ್ಯಕ್ತಿತ್ವವನ್ನು ಉಜ್ವಲ ಗೊಳಿಸಿವೆ. ಜೈನ ಸಾಹಿತ್ಯದ ಪ್ರಾಚೀನ ಗ್ರಂಥಗಳನ್ನು ಆಧುನಿಕ ಕನ್ನಡ ಭಾಷೆಯಲ್ಲಿ ಅನುವಾದ ಮಾಡುವವರನ್ನು ಪುರಸ್ಕರಿಸುವ ಉದ್ದೇಶದಿಂದ, ದೊಡ್ಡ ನಿಧಿಯನ್ನು ಉಪಾಧ್ಯೆ ಅವರು ಸಂಗ್ರಹಿಸಿಕೊಟ್ಟಿದ್ದಾರೆ.

## ಉಮರ್ ಖಯಾಮ್

ಉಮರ್ ಖಯಾಮ್ ಜಗತ್ಪ್ರಸಿದ್ಧನಾಗಿರುವ ಪರ್ಷಿಯನ್ ಕವಿ. ಇವನ ಶ್ರೇಷ್ಠ ಕೃತಿ 'ರುಬಾಯತ್'. ರುಬಯ್ಯ ನಾಲ್ಕು ಸಾಲುಗಳ ಕವಿತೆ. ರುಬಯ್ಯದ ಬಹುವಚನ ರುಬಾಯತ್. ಜೀವನದ ಗಹನ ತತ್ತ್ವಗಳನ್ನು ನಿರೂಪಿಸಲು ರುಬಾಯತನ್ನು ಯಶಸ್ವಿಯಾಗಿ ಬಳಸಿಕೊಂಡು ಕೀರ್ತಿಶಾಲಿಯಾದ ಕವಿ, ಉಮರ್ ಖಯಾಮ್.

ಉಮರ್ ಜನಿಸಿದ್ದು ಈಗಿನ ಇರಾನಿನಲ್ಲಿ. ಸುಮಾರು ಹನ್ನೆರಡನೆಯ ಶತಮಾನದಲ್ಲಿ ಆತ ಜೀವಿಸಿದ್ದ. ಅವನು ಹುಟ್ಟಿದ್ದು ಯಾವಾಗ ಎಂಬುದು ಖಚಿತವಾಗಿ ಗೊತ್ತಿಲ್ಲ. ಪೂರ್ಣ ಹೆಸರು ಘಿಯಾತ್ ಉದ್ದೀನ್ ಅಬುಲ್ ಫಾತ್ ಒಮರ್ ಬಿನ್ ಇಬ್ರಾಹಿಂ ಆಲ್ ಖಯಾಮಿ. ಖಯಾಮ್ ಎಂದರೆ ಡೇರೆ ಮಾಡುವವನೆಂದು ಅರ್ಥ. ಬಹುಶಃ ಡೇರೆ ಮಾಡುವುದು ಅವನ ವಂಶದವರ ಕಸಬು ಆಗಿದ್ದಿರಬಹುದು.

ಉಮರ್ ಖಯಾಮ್ ಕವಿಯಷ್ಟೇ ಅಲ್ಲ; ತತ್ತ್ವಜ್ಞಾನಿ, ಖಗೋಳ ವಿಜ್ಞಾನಿ, ಗಣಿತಜ್ಞನೂ ಆಗಿದ್ದ. ಜ್ಯೋತಿಷ, ಭೌತವಿಜ್ಞಾನಗಳಲ್ಲೂ ಇವನಿಗೆ ಪಾಂಡಿತ್ಯವಿತ್ತು.

ಮನುಷ್ಯನ ಜೀವನ ನಶ್ವರ. ಯಾವಾಗ ಕಾಲನ ಕರೆ ಬರುವುದೋ ತಿಳಿಯದು. ಇರುವ ಅಲ್ಪ ಕಾಲದಲ್ಲಿ ಸುಖಪಡಬೇಕು ಎಂಬುದು ಆತನ ಸಿದ್ಧಾಂತ. ಹಾಗೆಂದು ದೇವರ ಅಸ್ತಿತ್ವದಲ್ಲಿ ಅವನಿಗೆ ನಂಬುಗೆ ಇಲ್ಲದಿರಲಿಲ್ಲ. ದೇವರು ನಮ್ಮ ಬದುಕಿನ ಸೂತ್ರಧಾರ; ಆತ ನಡೆಸಿದಂತೆ ನಮ್ಮ ಬದುಕು ಎನ್ನುತ್ತಾನೆ ಆತ. ತನ್ನ ಈ ಭಾವನೆಗಳನ್ನೆಲ್ಲ ನಾಲ್ಕು ಸಾಲಿನ ಪುಟ್ಟ ಕವಿತೆಗಳಲ್ಲಿ ಸಮರ್ಥವಾಗಿ ನಿರೂಪಿಸಿದ್ದಾನೆ. ಸಂಕೇತಗಳನ್ನು ಬಳಸಿಕೊಂಡಿದ್ದಾನೆ. ದೇವರು ಮಾನವರನ್ನು ನಿರ್ಮಿಸುವುದರ ಸಂಕೇತ ಮಡಕೆಮಾಡುತ್ತಿರುವ ಕುಂಬಾರ. ಆಗಿನ ಕಾಲದ ಸಮಾಜದಲ್ಲಿದ್ದ ಡಾಂಭಿಕರನ್ನು ಖಯಾಮ್ ಜರೆದಿದ್ದಾನೆ. ಇದರಿಂದ ಅವನು ಸಂಪ್ರದಾಯದ ಹಳೆಯ ಜಾಡು ಬಿಟ್ಟು ನಡೆದಿರಬೇಕೆಂದು ತೋರುತ್ತದೆ. ಸುಮಾರು 1000 ರುಬಾಯತ್‌ಗಳನ್ನು ಆತ ಬರೆದಿದ್ದಾನೆ. 'ಯೂಕ್ಲಿಡನ ನಿರೂಪಣೆಗಳಲ್ಲಿರುವ ಕಷ್ಟಗಳು' ಎಂಬುದು ರೇಖಾ ಗಣಿತವನ್ನು ಕುರಿತ ಇವನ ಗ್ರಂಥ. ಈತ ಖಗೋಳೀಯ ನಕ್ಷೆಗಳನ್ನೂ ಬರೆದಿದ್ದಾನೆ.

ಉಮರನ ವಿದ್ವತ್ತನ್ನೂ ಶಾಸ್ತ್ರಜ್ಞಾನವನ್ನೂ ಗಮನಿಸಿದ ಪರ್ಷಿಯದ ಅರಸ ಅವನ ಜೀವನ ನಿರ್ವಹಣೆಗೆ ಬೇಕಾದಷ್ಟು ಹಣಕೊಟ್ಟು, ಆತ ನಿಶ್ಚಿಂತೆಯಿಂದ ವ್ಯಾಸಂಗದಲ್ಲಿ ಮಗ್ನನಾಗಿರುವಂತೆ ನೋಡಿಕೊಂಡ. ಕ್ಯಾಲೆಂಡರ್ ಸುಧಾರಣೆಗೆ ರಚಿಸಿದ ಸಮಿತಿಯ ಸದಸ್ಯರಲ್ಲಿ ಉಮರನೂ ಒಬ್ಬ. 1123ರಲ್ಲಿ ಉಮರ್ ಖಯಾಮ್ ನಿಧನನಾದ.

ಪಾಶ್ಚಾತ್ಯ ಸಾಹಿತ್ಯ ಪ್ರಪಂಚಕ್ಕೆ ಉಮರ್ ಖಯಾಮನ ಪರಿಚಯವಾದದ್ದು ಅವನ ಮರಣಾನಂತರ ಏಳು–ಏಳೂವರೆ ಶತಮಾನಗಳ



ನಶ್ವರ ಬದುಕಿನಲ್ಲಿ...

ಬಳಿಕ. ಉಮರ್ ಖಯಾಮನ ಕವಿತೆಗಳು ಪಾಶ್ಚಾತ್ಯ ಜಗತ್ತಿನ ಗಮನಕ್ಕೆ ಬಂದದ್ದು ಎಡ್ವರ್ಡ್ ಫಿಟ್ಜೆರಾಲ್ಡನ ಮೂಲಕ.

ಎಡ್ವರ್ಡ್ ಫಿಟ್ಜೆರಾಲ್ಡ್ (1809—83) ಪರ್ಷಿಯನ್ ಭಾಷೆಯನ್ನು ಕಲಿತು ಉಮರ್ ಖಯಾಮನ ಕೆಲವು ಆಯ್ದ ಕವಿತೆಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿದ. ಭಾಷಾಂತರಕಾರ ಯಾರೆಂಬುದನ್ನು ತಿಳಿಸದೆ 1859ರಲ್ಲಿ ಅವನ್ನು ಪ್ರಕಟಿಸಿದ. ಪ್ರಕಟವಾದಾಗ ಪುಸ್ತಕ ಜನರ ಗಮನವನ್ನು ಸೆಳೆಯಲಿಲ್ಲ. ಕೆಲವು ತಿಂಗಳ ಅನಂತರ ಈ ಪುಸ್ತಕ ಕವಿ ರೊಸೆಟ್ಟಿಯ ಕಣ್ಣಿಗೆ ಬಿತ್ತು, ಒಂದು ಹಳೆಯ ಪುಸ್ತಕದ ಅಂಗಡಿಯಲ್ಲಿ. ಅದನ್ನು ಅವನು ತೆಗೆದುಕೊಂಡು ಹೋಗಿ ಓದಿದ. ಮೆಚ್ಚಿಕೊಂಡು ಕವಿ ಸ್ವಿನ್‌ಬರ್ನ್‌ಗೆ ಹೇಳಿದ. ಅವನೂ ಓದಿ ಸಂತೋಷಪಟ್ಟು, ಅದನ್ನೋದುವಂತೆ ತನ್ನ ಮಿತ್ರರಿಗೆ ಸೂಚಿಸಿದ. ಮೂಲೆಗುಂಪಾಗಿ ಬಿದ್ದಿದ್ದ ಪುಸ್ತಕಗಳೆಲ್ಲವೂ ಮಾರಾಟವಾಗಿ ಹೋದುವು. ಆ ಮೇಲೂ ಅದಕ್ಕಾಗಿ ಬೇಡಿಕೆಗಳು ಬರುತ್ತಿದ್ದುದರಿಂದ ಫಿಟ್ಜೆರಾಲ್ಡ್ ತನ್ನ ಮೊದಲ ಭಾಷಾಂತರವನ್ನು ಪರಿಷ್ಕರಿಸಿ, ಪುನರ್ಮುದ್ರಣಕ್ಕೆ ಏರ್ಪಾಟು ಮಾಡಿದ. ಮುಂದೆ ಅದು ಅನೇಕ ಆವೃತ್ತಿಗಳನ್ನು ಕಂಡಿತು.

ಕನ್ನಡವೂ ಸೇರಿದಂತೆ ಪ್ರಪಂಚದ ಅನೇಕ ಭಾಷೆಗಳಿಗೆ ಉಮರನ ರುಬಾಯತ್ ಭಾಷಾಂತರಗೊಂಡಿದೆ.

## ಎಂ. ಆರ್. ಶ್ರೀನಿವಾಸಮೂರ್ತಿ

ಕನ್ನಡನಾಡು ನುಡಿಗಳ ಸೇವೆಗಾಗಿ ನಿಷ್ಠೆಯಿಂದ ದುಡಿದ ಹಿರಿಯ ಜೀವ ಎಂ. ಆರ್. ಶ್ರೀನಿವಾಸಮೂರ್ತಿಯವರು.

ಶ್ರೀನಿವಾಸಮೂರ್ತಿಗಳು ತೆಳ್ಳಗೆ ಎತ್ತರವಾಗಿದ್ದರು. ಅವರದು ಸ್ಫುರದ್ರೂಪ, ಕೆಂಬಿಳುಪಿನ ಮೈಬಣ್ಣ, ನಗುಮುಖ, ಹೊಳೆಯುವ ಕಣ್ಣುಗಳು, ಮುಖದಲ್ಲಿ ನಿಷ್ಕಾಪಟ್ಯ, ನಿರಾಡಂಬರತೆ. ಅವರ ಮಾತಿನಲ್ಲಿ ಸಂದರ್ಭಕ್ಕೆ ತಕ್ಕಂತೆ ನಾಜೂಕು, ಹಾಸ್ಯ, ಗಾಂಭೀರ್ಯ ಬೆರೆತಿರುತ್ತಿದ್ದುವು.

ಜನನ 1892ರಲ್ಲಿ. ತಂದೆ ಅಮಲ್ದಾರ್ ಎಂ. ರಾಮಚಂದ್ರರಾಯರು. ಶ್ರೀನಿವಾಸಮೂರ್ತಿಗಳು ಸೆಂಟ್ರಲ್ ಕಾಲೇಜಿನಲ್ಲಿ ಓದಿ 1915ರಲ್ಲಿ ಬಿ.ಎ. ಪದವಿ ಪಡೆದರು. ಮೈಸೂರು ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯನ್ನು ಸೇರಿ ಉಪಾಧ್ಯಾಯರಾಗಿ, ಶಾಲಾ ಇನ್ಸ್‌ಪೆಕ್ಟರರಾಗಿ, 'ಉಪಾಧ್ಯಾಯರ ಉಪಾಧ್ಯಾಯ'ರಾಗಿ ಕೆಲಸಮಾಡಿ ತಮ್ಮ ಕಾರ್ಯದಕ್ಷತೆಯಿಂದ ಎಲ್ಲರ ಗೌರವಾದರಗಳಿಗೆ ಪಾತ್ರರಾದರು. 1939-43ರ ತನಕ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ – ಕನ್ನಡ ನಿಘಂಟಿನ ಸಹಾಯಕ ಸಂಪಾದಕರಾಗಿಯೂ ಅನಂತರ ಅದರ ಪ್ರಧಾನ ಸಂಪಾದಕರಾಗಿಯೂ ಸೇವೆ ಸಲ್ಲಿಸಿದರು. ಕೊನೆಗೆ ಜಿಲ್ಲಾ ವಿದ್ಯಾಧಿಕಾರಿ ಪದವಿಯಲ್ಲಿದ್ದು ನಿವೃತ್ತರಾದರು.

ಎಂ ಆರ್ ಶ್ರೀ ಅವರು ವಿಜ್ಞಾನದ ವಿದ್ಯಾರ್ಥಿ. ಆದರೂ ವಿದ್ಯಾರ್ಥಿಯಾಗಿದ್ದಾಗಲೇ ಪಂಪ, ರನ್ನ, ಹರಿಹರ ಮುಂತಾದ ಕವಿಗಳ ಕಾವ್ಯಗಳನ್ನು ಓದಿ ಮೆಚ್ಚಿಕೊಂಡಿದ್ದರು. ತಮ್ಮ ವಿದ್ಯಾರ್ಥಿಗಳಲ್ಲೂ ಸಾಹಿತ್ಯಪ್ರೇಮವನ್ನು ಬೆಳೆಸಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ತಾವು ಭೌತ. ರಸಾಯನಶಾಸ್ತ್ರಗಳ ಪಾಠ ಹೇಳುತ್ತಿದ್ದಾಗ ಕೂಡ. ಆಗಾಗ ಕನ್ನಡ ಮಹಾಕವಿಗಳ ಕಾವ್ಯಗಳ ವಿಚಾರವಾಗಿ ಮಾತನಾಡಿ. ಆ ಬಗೆಗೆ ತಮ್ಮ ವಿದ್ಯಾರ್ಥಿಗಳಲ್ಲಿ ಆಸಕ್ತಿ ಮೂಡಿಸುತ್ತಿದ್ದರು.

ಎಂ ಆರ್ ಶ್ರೀಯವರ ಸಾಹಿತ್ಯ ರಚನೆಗೆ ಬಿ. ವೆಂಕಟಾಚಾರ್ಯರ ಕಾದಂಬರಿಗಳು ಪ್ರೇರಕವೆನ್ನಬಹುದು. ಎಂ ಆರ್ ಶ್ರೀಯವರ ಮೊದಲ ಕಾದಂಬರಿ 'ಸಾವಿತ್ರಿ' ಕನ್ನಡ ಜನರ ಆಚಾರ ವಿಚಾರಗಳ ಹಿನ್ನೆಲೆಯಲ್ಲಿ ಸ್ವತಂತ್ರ ಕಥಾವಸ್ತುವನ್ನುಳ್ಳದ್ದು.

1915ರಲ್ಲಿ ಅವರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗಲೇ 'ಶ್ಯಾಮಲಾ' ಎಂಬ ಕಥೆಯನ್ನು ಬರೆದಿದ್ದರು. ಮಲತಾಯಿಯಿಂದ ಹೆಣ್ಣುಮಗಳೊಬ್ಬಳು ಅನುಭವಿಸಿದ ಕಿರುಕುಳ ಸಂಕಟಗಳ ಕರುಣಾಜನಕ ಕತೆ ಇದರ ವಸ್ತು.

ಶ್ರೀನಿವಾಸಮೂರ್ತಿಗಳ 'ಕಂಠೀರವ ವಿಜಯ' ಮೈಸೂರಿನ ಕಂಠೀರವ ನರಸರಾಜ ಒಡೆಯರು ತಿರುಚಿನಾಪಳ್ಳಿಯ ಜಟ್ಟಿಯೊಡನೆ ಕಾದು ಗೆದ್ದ ಕತೆಯನ್ನುಳ್ಳ ಚಾರಿತ್ರಿಕ ನಾಟಕ. ಟಿಪ್ಪುಸುಲ್ತಾನನಿಂದ ಮತಾಂತರಗೊಂಡ ಗಣ್ಯವ್ಯಕ್ತಿಯೊಬ್ಬನು ಸುಲ್ತಾನನ ಮರಣಾನಂತರ ಹಿಂದೂ ಧರ್ಮಕ್ಕೆ ಹಿಂದಿರುಗಲು ಪ್ರಯತ್ನಿಸಿ ವಿಫಲನಾಗಿ ಸಾವನ್ನಪ್ಪಿದ ಕಥಾವಸ್ತುವನ್ನು ಅವಲಂಬಿಸಿದ್ದು 'ಧರ್ಮ ದುರಂತ'.

ಎಂ ಆರ್ ಶ್ರೀಯವರ ನಾಟಕಗಳಲ್ಲಿ ಅತ್ಯಂತ ವಿಖ್ಯಾತವಾದದ್ದು. ಅನೇಕ ಬಾರಿ ರಂಗಭೂಮಿಯ ಮೇಲೆ ಯಶಸ್ವಿಯಾಗಿ ಮೆರೆದದ್ದು. ಅವರ 'ನಾಗರಿಕ'. ಹಾಳು ಹಂಪೆಯನ್ನು ನೋಡಿ ವಿಹ್ವಲಚಿತ್ತನಾದ ನಾಗರಿಕನೊಬ್ಬನ ಮನಸ್ಸಿನ ತಳಮಳ, ಭಾವೋದ್ರೇಕಗಳನ್ನು ಈ ನಾಟಕದಲ್ಲಿ ರಮ್ಯವಾಗಿ ಪರಿಣಾಮಕಾರಿಯಾಗಿ ಅವರು ಚಿತ್ರಿಸಿದ್ದಾರೆ. ಓದಿದವರಲ್ಲೂ ನೋಡಿದವರಲ್ಲೂ ಕಂಡ ಇಂಥ ಭಾವತರಂಗಗಳನ್ನು ಎಬ್ಬಿಸುವಷ್ಟು ಈ ನಾಟಕ ಶಕ್ತವಾಗಿದೆ. ಕನ್ನಡ ನಾಡಿನ ಬಗೆಗೆ ಎಂ ಆರ್ ಶ್ರೀ 'ಯವರಿಗಿದ್ದ ಅಪೂರ್ವ ಅಭಿಮಾನಕ್ಕೂ ವಿಚಾರಶೀಲತೆಗೂ ದ್ಯೋತಕ ಈ ಕೃತಿ.



ಅಗ್ರಪಂಕ್ತಿಯ ಸ್ಥಾನ : ಎಂ. ಆರ್. ಶ್ರೀನಿವಾಸಮೂರ್ತಿ

ಕನ್ನಡ ಸಾಹಿತ್ಯಪ್ರಪಂಚದಲ್ಲಿ ಎಂ ಆರ್ ಶ್ರೀಯವರಿಗೆ ಅಗ್ರ ಪಂಕ್ತಿಯ ಸ್ಥಾನ ಗಳಿಸಿಕೊಟ್ಟದ್ದು ಅವರ 'ವಚನ ಧರ್ಮಸಾರ' ಮತ್ತು 'ಭಕ್ತಿ ಭಂಡಾರಿ ಬಸವಣ್ಣ' ಕೃತಿಗಳು.

ಎಂ. ಆರ್. ಶ್ರೀನಿವಾಸ ಮೂರ್ತಿಯವರ ಇನ್ನೊಂದು ಶ್ರೇಷ್ಠಕೃತಿ 'ರಂಗಣ್ಣನ ಕನಸಿನ ದಿನಗಳು'. ಶಾಲಾ ಇನ್ಸ್‌ಪೆಕ್ಟರರಾಗಿದ್ದಾಗ ಅವರು ಪಡೆದ ವಿಶೇಷ ಅನುಭವಗಳ ಆಧಾರದ ಮೇಲೆ ರಚಿತವಾದ ಕೃತಿ ಇದು. ಅಂದಿನ ಕಾಲದ ಹಳ್ಳಿಯ ಶಾಲೆಗಳ ಉಪಾಧ್ಯಾಯರ ಸ್ಥಿತಿಗತಿಗಳು. ವಿಚಿತ್ರ ಸ್ವಭಾವಗಳು, ವ್ಯವಹಾರಗಳು ಇವುಗಳ ರಸಪೂರ್ಣ ಚಿತ್ರ ಇದರಲ್ಲಿ ಮೂಡಿದೆ. ಈ ನಿರೂಪಣೆಗಳಲ್ಲಿ ಮಿನುಗುವ ಹಾಸ್ಯದ ಹಿನ್ನೆಲೆಯಲ್ಲಿ ಇಣಕುವ ನೋವು ಹೃದಯಸ್ಪರ್ಶಿಯಾಗಿದೆ. ಜೀವನವನ್ನು ಅನುಕಂಪ ದೃಷ್ಟಿಯಿಂದ ಸಮಗ್ರವಾಗಿ ನೋಡುವ ಎಂ ಆರ್ ಶ್ರೀಯವರ ಕಲೆ ನಮ್ಮನ್ನು ಆಕರ್ಷಿಸುತ್ತದೆ. "ಆಧುನಿಕ ಕನ್ನಡ ಸಾಹಿತ್ಯದ ಜೀವಂತ ಗ್ರಂಥಗಳಲ್ಲಿ ಒಂದು" ಎಂದು ಡಿ ವಿ ಜಿ ಈ ಕೃತಿಯನ್ನು ಪ್ರಶಂಸಿದ್ದಾರೆ.

ಎಂ ಆರ್ ಶ್ರೀಯವರು ಕಥೆ, ಕಾದಂಬರಿ, ನಾಟಕಗಳನ್ನಲ್ಲದೆ ಕವನಗಳನ್ನೂ ರಚಿಸಿದ್ದಾರೆ. 'ಕವಿಯ ಸೋಲು' ಅವರ ಕವನಗಳ ಸಂಕಲನ.

ಹತ್ತು ಜನರೊಡನೆ ಬೆರೆತು ಸಂತೋಷವಾಗಿರುವುದು ಎಂ ಆರ್ ಶ್ರೀ ಅವರ ಹುಟ್ಟುಗುಣ. 'ಸ್ಕೌಟ್' ಸಮಾರಂಭಗಳಲ್ಲಿ ತಾವು ಮಕ್ಕಳಂತೆ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಸ್ಕೌಟ್ ಹುಡುಗರನ್ನು ಗುಂಪು ಕಟ್ಟಿಕೊಂಡು ಅವರೊಡನೆ ಸಂತೋಷ ಪ್ರವಾಸ ಕೈಗೊಳ್ಳುವುದು ಅವರಿಗೆ ಅತ್ಯಂತ ಪ್ರಿಯವಾದ ಕಾರ್ಯಕ್ರಮವಾಗಿತ್ತು.

ಎಂ ಆರ್ ಶ್ರೀ ಶ್ರೇಷ್ಠ ವಾಗ್ಮಿ ಕೂಡ. ಗಂಭೀರ ಪ್ರವಾಹದಂತೆ ಹರಿಯುತ್ತಿದ್ದ ಅವರ ಭಾಷಣ ವಸ್ತುನಿಷ್ಠವಾಗಿರುತ್ತಿತ್ತು, ಸರಳವಾಗಿರುತ್ತಿತ್ತು; ಉದಾಹರಣೆ. ಉಲ್ಲೇಖಗಳಿಂದ ಆಹ್ಲಾದಕರವಾಗಿರುತ್ತಿತ್ತು; ಆಗಾಗ ಹಾಸ್ಯದಿಂದಲೂ ಮಿನುಗುತ್ತಿತ್ತು. ವಚನ

[illegible] ಕನ್ನಡಿಗರಲ್ಲಿ ಜಾಗೃತಿ ಆಸಕ್ತಿಯನ್ನು ಮೂಡಿಸುವುದರಲ್ಲಿ ಅವರ ಭಾಷಣಗಳು ಪ್ರಧಾನ ಪಾತ್ರ ವಹಿಸಿದುವು.

ಕನ್ನಡಕ್ಕಾಗಿ ಸಲ್ಲಿಸಿದ ನಿಷ್ಠಾಪೂರ್ವ ಸೇವೆಗಾಗಿ ಎಂ. ಆರ್. ಶ್ರೀಯವರು 1950ರಲ್ಲಿ ಸೊಲ್ಲಾಪುರದಲ್ಲಿ ನಡೆದ 33ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡರು. ಅನಂತರ ಸುಮಾರು ಮೂರೂವರೆ ವರ್ಷಗಳ ಕಾಲ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ಬಲಪಡಿಸಲು ಶ್ರಮಿಸಿದರು. ಕೊನೆಯುವರೆಗೂ ಆರೋಗ್ಯ ದೃಢಕಾಯರಾಗಿಯೇ ಇದ್ದರು.

ಒಮ್ಮಿಂದಲೇ ಕಾಲರಾ ವ್ಯಾಧಿಗೀಡಾಗಿ ನರಳಿ, 1953ನೆಯ ಸೆಪ್ಟೆಂಬರ್ 16ರಂದು ಬೆಂಗಳೂರಿನಲ್ಲಿ ತೀರಿಕೊಂಡರು.

## ಎಂ. ಎ. ರಾಮಾನುಜಯ್ಯಂಗಾರ್

ಪ್ರಾಚೀನ ಕನ್ನಡ ಕಾವ್ಯಸಂಪತ್ತನ್ನು ಮುಂದಿನ ಪೀಳಿಗೆಯವರಿಗೆ ಉಳಿಸಿಕೊಡಲು ಅತ್ಯಂತ ಶ್ರದ್ಧೆಯಿಂದ ಶ್ರಮಿಸಿದವರಲ್ಲಿ ಎಂ. ಎ. ರಾಮಾನುಜ ಅಯ್ಯಂಗಾರ್ಯರು ಅಗ್ರಗಣ್ಯರು. ಅವರು ಹುಟ್ಟಿದ್ದು 1864ರಲ್ಲಿ. ವೃತ್ತಿಯಿಂದ ಉಪಾಧ್ಯಾಯರು: ಅನೇಕ ವರ್ಷಗಳ ಕಾಲ ಮೈಸೂರಿನ ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದರು. ಸ್ವಲ್ಪಕಾಲ ಮೈಸೂರು ವಿದ್ಯಾಭ್ಯಾಸದ ಇಲಾಖೆಯಲ್ಲೂ ಕೆಲಸಮಾಡಿದರು. ಇವರ ಅತ್ಯಮೂಲ್ಯ ಸಾಧನೆ ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ.

ಕಾಲೇಜು ವಿದ್ಯಾರ್ಥಿಗಳಿಗೆ ಪಾಠ ಹೇಳಲು ತಕ್ಕುದಾದ ಪ್ರೌಢಗ್ರಂಥಗಳೇ ಕನ್ನಡದಲ್ಲಿ ಇಲ್ಲ: ಆದ್ದರಿಂದ ಕಾಲೇಜುಗಳ ಪಾಠಕ್ರಮದಲ್ಲಿ ಕನ್ನಡವನ್ನು ಸೇರಿಸಲೇಬೇಕಾಗಿಲ್ಲ ಎಂಬ ವಾದ ಎದ್ದಿತಂತೆ ಒಮ್ಮೆ. ಇದರಿಂದ ರಾಮಾನುಜಯ್ಯಂಗಾರ್ಯರ ಮನಸ್ಸು ನೊಂದಿತು. ಕನ್ನಡದಲ್ಲಿರುವ ಉತ್ತಮ ಪ್ರಾಚೀನ ಗ್ರಂಥಗಳನ್ನು ಪತ್ತೆಹಚ್ಚಿ ಅವನ್ನು ಪ್ರಕಟಿಸಬೇಕು; ಕನ್ನಡದ ಗೌರವ ಉಳಿಯಬೇಕಾದರೆ ಇದು ಅವಶ್ಯ ಎನಿಸಿತು. ಅಯ್ಯಂಗಾರ್ಯರು ಹಳೆಯ ತಾಳೆಗರಿ ಪುಸ್ತಕಗಳಿದ್ದ ಗ್ರಂಥ ಭಂಡಾರಗಳಲ್ಲಿ ಪ್ರೌಢ ಪ್ರಾಚೀನ ಗ್ರಂಥಗಳಿಗಾಗಿ ಹುಡುಕಲಾರಂಭಿಸಿದರು. ಅವುಗಳನ್ನು ಸಂಗ್ರಹಿಸಿದರು. ಶ್ರಮವಹಿಸಿ ಎಚ್ಚರಿಕೆಯಿಂದ ಓದಿದರು; ಪರಿಶೀಲಿಸಿದರು; ಅಚ್ಚಿಗಾಗಿ ಅವುಗಳ ಶುದ್ಧ ಪ್ರತಿಗಳನ್ನು ಸಿದ್ಧಗೊಳಿಸಿದರು. ಅವನ್ನು ಪ್ರಕಟಿಸುವುದಕ್ಕಾಗಿ 'ಕರ್ಣಾಟಕ ಕಾವ್ಯಮಂಜರಿ' ಎಂಬ ನಿಯತ ಕಾಲಿಕವನ್ನು ಆರಂಭಿಸಿದರು. ಅವರು ಸಂಪಾದಿಸಿದ ಪ್ರಾಚೀನ ಕಾವ್ಯಗಳು ಈ ಪತ್ರಿಕೆಯಲ್ಲಿ ಕ್ರಮ ಕ್ರಮವಾಗಿ ಪ್ರಕಟವಾದುವು.



ಪ್ರಾಚೀನ ಕನ್ನಡ ಸಾಹಿತ್ಯ ರಕ್ಷಣೆ :
ಎಂ. ಎ. ರಾಮಾನುಜಯ್ಯಂಗಾರ್

ಸಾಮಾನ್ಯವಾಗಿ ಪ್ರೌಢಪ್ರಾಚೀನ ಗ್ರಂಥಗಳ ಪ್ರಕಟಣೆಗೆ ಮೀಸಲಾದ ಪತ್ರಿಕೆಯಲ್ಲಿ ಆಸಕ್ತಿ ತೋರುವವರು ವಿರಳ. ಐವತ್ತು ಅರವತ್ತು ವರ್ಷಗಳ ಹಿಂದೆಯಂತೂ ಅಂಥವರ ಸಂಖ್ಯೆ ತೀರಾ ಚಿಕ್ಕದು. ಆದರೂ ರಾಮಾನುಜಯ್ಯಂಗಾರ್ಯರು 'ಕರ್ಣಾಟಕ ಕಾವ್ಯಮಂಜರಿ' ಯನ್ನು ದೀರ್ಘ ಕಾಲ ನಡೆಸಿದರು: ಅದರ ಪ್ರಕಟಣೆಯಿಂದ ತಮಗೆ ಆಗುತ್ತಿದ್ದ ದೇಹಶ್ರಮ, ಧನವ್ಯಯಗಳನ್ನು ಲೆಕ್ಕಿಸದೆ ಅಪಾರಶ್ರದ್ಧೆಯಿಂದ ದುಡಿದರು. ಇದು ನಿಜವಾಗಿ ಸಾಹಸದ, ತ್ಯಾಗದ ಕೆಲಸ.

ಆದರೆ ರಾಮಾನುಜಯ್ಯಂಗಾರ್ಯರು ಇಷ್ಟರಿಂದಲೇ ತೃಪ್ತರಾಗಲಿಲ್ಲ. ತಮ್ಮ ಪತ್ರಿಕೆಯಲ್ಲಿ ಭಾಗಭಾಗವಾಗಿ ಬಂದ ಪ್ರಾಚೀನ ಕನ್ನಡ ಗ್ರಂಥಗಳನ್ನು ಕವಿ, ಕಾವ್ಯಗಳನ್ನು ಕುರಿತ ಮುನ್ನುಡಿಯೊಡನೆ ಗ್ರಂಥರೂಪದಲ್ಲಿ ಪ್ರಕಟಿಸಿದರು. ಇದರಿಂದಾಗಿ ಅನೇಕ ಉತ್ತಮ ಕನ್ನಡ ಕಾವ್ಯಗಳು ಸಮಗ್ರ ರೂಪದಲ್ಲಿ ಕನ್ನಡಿಗರ ಕೈಸೇರುವಂತೆ ಆಯಿತು. ಹೀಗೆ ಅವರ 'ಕರ್ಣಾಟಕ ಕಾವ್ಯಕಲಾನಿಧಿ' ಗ್ರಂಥಮಾಲೆಯಲ್ಲಿ ಸುಮಾರು ಎಪ್ಪತ್ತು, ಎಪ್ಪತ್ತೈದು ಉದ್ಗ್ರಂಥಗಳು ಪ್ರಕಟವಾದುವು. 'ರನ್ನನ ಗದಾಯುದ್ಧ' (ಸಾಹಸ ಭೀಮ ವಿಜಯ), ಹರಿಹರನ 'ಗಿರಿಜಾ ಕಲ್ಯಾಣ', ಆಂಡಯ್ಯನ 'ಕಬ್ಬಿಗರ ಕಾವ', ಜನ್ನನ 'ಯಶೋಧರ ಚರಿತೆ', ಕನಕದಾಸನ 'ನಳಚರಿತ್ರೆ', ರಾಘವಾಂಕನ 'ಹರಿಶ್ಚಂದ್ರ ಕಾವ್ಯ' –ಮುಂತಾದ ಅಪೂರ್ವ ಗ್ರಂಥಗಳು ಮೊಟ್ಟಮೊದಲು ಗ್ರಂಥರೂಪದಲ್ಲಿ ಪ್ರಕಟವಾದದ್ದು ಈ ಗ್ರಂಥಮಾಲೆಯಲ್ಲೇ.

ನಂದಳಿಕೆ ಲಕ್ಷ್ಮೀನಾರಣಪ್ಪನವರು 'ಮಹಾಲಕ್ಷ್ಮೀ' ಎಂಬ ಕವಯಿತ್ರಿಯ ಹೆಸರುಹಾಕಿ ತಾವೇ ಬರೆದ 'ಶ್ರೀರಾಮ ಪಟ್ಟಾಭಿಷೇಕ' ಹಾಗೂ "ಮುದ್ದಣ" ಎಂಬ ಹೆಸರಿಟ್ಟುಕೊಂಡು ಬರೆದ 'ರಾಮಾಶ್ವಮೇಧ' ಗಳು ಪ್ರಕಟವಾದದ್ದು ಕೂಡ 'ಕರ್ಣಾಟಕ ಕಾವ್ಯ ಕಲಾನಿಧಿ' ಗ್ರಂಥಮಾಲೆಯಲ್ಲೇ.

ರಾಮಾನುಜಯ್ಯಂಗಾರ್ಯರು ತಮ್ಮ ಗ್ರಂಥಮಾಲೆಯಲ್ಲಿ ಕಾವ್ಯಗಳನ್ನು ಮಾತ್ರವಲ್ಲದೆ ಛಂದಸ್ಸು, ನಿಘಂಟುಗಳನ್ನೂ ಅಲಂಕಾರ ಶಾಸ್ತ್ರ, ವೇದಾಂತಗಳಿಗೆ ಸಂಬಂಧಿಸಿದ ಗ್ರಂಥಗಳನ್ನೂ ಸಂಪಾದಿಸಿ ಪ್ರಕಟಿಸಿದರು.

ಕನ್ನಡದಲ್ಲಿ ಅಪೂರ್ವ ವಿದ್ವತ್ತನ್ನು ಗಳಿಸಿದ್ದ ರಾಮಾನುಜಯ್ಯಂಗಾರ್ಯರು ಕನ್ನಡ ಲೇಖನಾಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವಾದ 'ಪ್ರಬಂಧ ಮಂಜರಿ' ಯನ್ನೂ 'ಕವಿ ಸಮಯಂ' ಎಂಬ ಗ್ರಂಥವನ್ನೂ ಇದಲ್ಲದೆ ಕೆಲವು ನಾಟಕಗಳ ಗದ್ಯಾನುವಾದವನ್ನೂ ಬರೆದಿದ್ದಾರೆ.

ರಾಮಾನುಜಯ್ಯಂಗಾರ್ಯರು ಸ್ಫುರದ್ರೂಪಿ; ಮಟ್ಟಸ ಆಳು; ಅಚ್ಚುಕಟ್ಟಾದ ಸರಳ ಉಡುಗೆ ತೊಡುಗೆ; ಪ್ರಸನ್ನ ಮುಖಮುದ್ರೆ; ಗಂಭೀರವಾದರೂ ನಯವಾದ ಮಾತುಗಾರಿಕೆ; ಅವರನ್ನು ಒಮ್ಮೆ ಕಂಡವರು ಕೂಡ ಅವರಿಂದ ಆಕರ್ಷಿತರಾಗುತ್ತಿದ್ದರು. ರಾಮಾನುಜಯ್ಯಂಗಾರ್ಯರು ನಿಷ್ಠಾವಂತ ದೈವಭಕ್ತರು. ಪ್ರಾಚೀನ ಕನ್ನಡಸಾಹಿತ್ಯದಲ್ಲಿ ಆಸಕ್ತಿ ತೋರುತ್ತಿದ್ದ ತರುಣರನ್ನು ಕಂಡರೆ ಅವರಿಗೆ ತುಂಬ ಪ್ರೀತಿ. ಪ್ರಾಚೀನ ಕನ್ನಡ ಸಾಹಿತ್ಯರಕ್ಷಣೆ, ಪ್ರಚಾರಗಳಿಗೆ ಅವರು ಸಲ್ಲಿಸಿದ ಸೇವೆ ಘನವಾದ್ದಾದರೂ. 'ಈ ರಂಗದಲ್ಲಿ ಇನ್ನೂ ಆಗಬೇಕಾದ ಕೆಲಸ ತುಂಬ ಇದೆ; ಅದು ಆದಷ್ಟು ಶೀಘ್ರವಾಗಿ ನಡೆಯಬೇಕು' ಎಂದು ಅವರು ಹಂಬಲಿಸುತ್ತಿದ್ದರು.

ರಾಮಾನುಜಯ್ಯಂಗಾರ್ಯರದು ಸಾರ್ಥಕ ಜೀವನ. ಅವರು 7[illegible] ವರ್ಷಗಳ ತುಂಬು ಬಾಳು ನಡೆಸಿ 1937ರಲ್ಲಿ ತೀರಿಕೊಂಡರು.

## ಎಂ. ಎಸ್. ಪುಟ್ಟಣ್ಣ

ಹುಟ್ಟಿದ ಹತ್ತು ದಿನಗಳಲ್ಲೇ ತಾಯಿಯ ಮರಣ: ಈ ಎಳೆಯ ಮಗುವನ್ನು ಸಾಕಲು ತಂದೆಗೆ ತಕ್ಕ ಅನುಕೂಲಗಳಿಲ್ಲದಿದ್ದರಿಂದ ಮಗು ತನ್ನ ತಾಯಿಯ ಮನೆಯಲ್ಲೇ ಉಳಿದದ್ದು; ಅಲ್ಲೇ ಬೆಳೆದದ್ದು.

ಕನ್ನಡಿಗರಿಗೆ ಚಿರಪರಿಚಿತವಾದ. ಒಂದು ಕಾಲಕ್ಕೆ ಮನೆ ಮಾತಾಗಿದ್ದ. 'ಮಾಡಿದ್ದುಣ್ಣೋ ಮಹರಾಯ' ಕಾದಂಬರಿಯನ್ನು ಬರೆದು ಖ್ಯಾತರಾದ ಎಂ. ಎಸ್. ಪುಟ್ಟಣ್ಣನವರ ಜೀವನಯಾತ್ರೆ ಆರಂಭವಾದದ್ದು ಹೀಗೆ; ಅವರ ಸೋದರ ಮಾವ ಅಣ್ಣಯ್ಯಶಾಸ್ತ್ರಿಗಳ ಆಶ್ರಯದಲ್ಲಿ.

ಪುಟ್ಟಣ್ಣನವರ ತಂದೆ ಸೂರ್ಯನಾರಾಯಣಶಾಸ್ತ್ರಿಗಳು ಚೆನ್ನಪಟ್ಟಣದವರು. ಆದರೆ ತಾವು ಮೈಸೂರಿನಲ್ಲೇ ಹುಟ್ಟಿ ಬೆಳೆದದ್ದರಿಂದ ಪುಟ್ಟಣ್ಣನವರು ತಮ್ಮ ಹೆಸರಿನ ಹಿಂದೆ 'ಎಂ' ಎಂಬ ಆದ್ಯಕ್ಷರ ಸೇರಿಸಿಕೊಂಡು 'ಮೈಸೂರು' ಪುಟ್ಟಣ್ಣನವರಾದರು. ಪುಟ್ಟಣ್ಣನವರು ಹುಟ್ಟಿದ್ದು 1854ರ ಬಲಿಪಾಡ್ಯಮಿ ದಿನ. ಅವರ ವಿದ್ಯಾಭ್ಯಾಸ ಆರಂಭವಾದದ್ದು ಮರಾಠಿ ಪಂತೋಜಿಗಳ 'ಮಠ'ದಲ್ಲಿ. ಅವರು ಗಣಿತವನ್ನು ಕಲಿತದ್ದು ಮರಾಠಿಯಲ್ಲಿ. ದೊಡ್ಡವರಾದ ಮೇಲೂ ಮರಾಠಿಯಲ್ಲಿ ಮಗ್ಗಿ ಹೇಳಿಕೊಂಡು ಲೆಕ್ಕ ಮಾಡುತ್ತಿದ್ದರು. ಮೈಸೂರಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿ ಅವರು ಎಫ್. ಎ. ಪಾಸು ಮಾಡಿದರು.

ಅವರು ಬಿ.ಎ. ತರಗತಿಯಲ್ಲಿ ಓದುತ್ತಿದ್ದಾಗ ಭೀಕರ ಕ್ಷಾಮ ಮೈಸೂರು ಸಂಸ್ಥಾನವನ್ನು ಆವರಿಸಿತು. ಈ ಸ್ಥಿತಿಯಲ್ಲಿ ಪುಟ್ಟಣ್ಣನವರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗಲಿಲ್ಲ. 1878ರಲ್ಲಿ ಕೋಲಾರ ಹೈಸ್ಕೂಲಿನಲ್ಲಿ ಉಪಾಧ್ಯಾಯರ ವೃತ್ತಿ ಕೈಗೊಂಡರು. ಸುಮಾರು ಎಂಟು ವರ್ಷಗಳ ಕಾಲ ಈ ವೃತ್ತಿಯನ್ನೇ ನಡೆಸುತ್ತ ಮಧ್ಯೆ ಅವಕಾಶ ಮಾಡಿಕೊಂಡು ಮದರಾಸಿಗೆ ಹೋಗಿ 1883ರಲ್ಲಿ ಬಿ.ಎ. ಪರೀಕ್ಷೆ ಮಾಡಿಕೊಂಡರು. ಉಪಾಧ್ಯಾಯ ವೃತ್ತಿಯನ್ನು ಬಿಟ್ಟಮೇಲೆ ಸುಮಾರು ಒಂಬತ್ತು ವರ್ಷ ಕಾಲ ಮೈಸೂರು ಚೀಫ್ ಕೋರ್ಟಿನಲ್ಲಿ ಭಾಷಾಂತರಕಾರರಾಗಿ ಕೆಲಸಮಾಡಿ, ಅನಂತರ ಅಮಲ್ದಾರರಾದರು. 1908ರಲ್ಲಿ ನಿವೃತ್ತರಾಗುವವರೆಗೂ ಈ ಹುದ್ದೆಯಲ್ಲೇ ಇದ್ದು. ಮೈಸೂರು ಸಂಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಸೇವೆ ಸಲ್ಲಿಸಿದರು.

1881ರಲ್ಲಿ ಚಾಮರಾಜ ಒಡೆಯರವರು ಮೈಸೂರು ಸಂಸ್ಥಾನದ ರಾಜ್ಯಭಾರವನ್ನು ವಹಿಸಿಕೊಂಡ ಮೇಲೆ, ಅವರೂ ದಿವಾನರಾದ ರಂಗಾಚಾರ್ಲು ಅವರೂ ಕನ್ನಡ ಭಾಷೆ, ಸಾಹಿತ್ಯಗಳ ಅಭಿವೃದ್ಧಿಗೆ ತುಂಬ ಉತ್ತೇಜನ ಕೊಟ್ಟರು. ಇದರಿಂದ ಪ್ರಭಾವಿತರಾದವರಲ್ಲಿ ಪುಟ್ಟಣ್ಣನವರೂ ಒಬ್ಬರು. ಅವರ ಲೇಖನ ಚಟುವಟಿಕೆ ಆರಂಭವಾದದ್ದು ಅವರು ಉಪಾಧ್ಯಾಯರಾಗಿದ್ದ ಕಾಲದಲ್ಲಿ. ಆ ಅವಧಿಯಲ್ಲಿ ಅವರು ಶಾಲಾ ಪಠ್ಯ ಪುಸ್ತಕಗಳನ್ನು ಬರೆದರು. ಅಲ್ಲದೆ ಕಿರಿಯರಿಗೂ ಹಿರಿಯರಿಗೂ ಏಕ ಪ್ರಕಾರವಾಗಿ ಉಪಯುಕ್ತವಾದ ನೀತಿಬೋಧಕ ಸಾಹಿತ್ಯ 'ನೀತಿಚಿಂತಾಮಣಿ' ಯ ಮೂರು ಭಾಗಗಳನ್ನು ಬರೆದರು. ಅನೇಕ ವರ್ಷಗಳವರೆಗೆ ಅದು ಜನಪ್ರಿಯವಾಗಿತ್ತು.

ಪುಟ್ಟಣ್ಣನವರಿಗೆ [illegible] ವಾನದ್ದು ಅವರು ತಮ್ಮ ಹುದ್ದೆಯಿಂದ ನಿವೃತ್ತರಾದ ಮೇಲೆಯೇ. ತಮ್ಮ ಅಧಿಕಾರಾವಧಿಯಲ್ಲಿ ಜನಜೀವನವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ್ದ ಪುಟ್ಟಣ್ಣನವರು 'ಮಾಡಿದ್ದುಣ್ಣೋ ಮಹರಾಯ' ಮತ್ತು 'ಮುಸುಕು ತೆಗೆಯೇ ಮಾಯಾಂಗನೆ' ಎಂಬ ಸಾಮಾಜಿಕ ಕಾದಂಬರಿಗಳನ್ನು ಬರೆದರು. ಸಾಮಾನ್ಯ ಜನರ ಜೀವನದ ಬಗೆಗೆ ಅವರಿಗಿದ್ದ ಅಪಾರ [illegible] ಇವು ತೋರಿಸುತ್ತವೆ. ತಮ್ಮ ಕಾದಂಬರಿಯಲ್ಲಿ ನೈಜ ವಾತಾವರಣವನ್ನು ಸೃಷ್ಟಿಸಲು ಅವರು ಬಳಸಿದ ಆಡುಭಾಷೆ. ಸರಳ [illegible] ನಾವು ಓದುತ್ತಿರುವುದು ಕಥೆಯಲ್ಲ. ನೈಜ ಘಟನೆಗಳ ಚಿತ್ರ—ಎಂಬ ಭಾವನೆಯನ್ನು ಇವು ಮೂಡಿಸುತ್ತವೆ.

ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳು ವಿರಳವಾಗಿದ್ದ ಕಾಲದಲ್ಲಿ ಕನ್ನಡ ಜನಜೀವನವನ್ನು ರಮ್ಯ ಕಾದಂಬರಿಗಳಲ್ಲಿ ಚಿತ್ರಿಸಿದಂತೆ, ಜೀವನ ಚರಿತ್ರೆ ಬರೆಯುವುದರಲ್ಲೂ ಪುಟ್ಟಣ್ಣನವರು ಹೊಸ ಮಾರ್ಗದಲ್ಲಿ ಹೆಜ್ಜೆ ಹಾಕಿದರು. 'ಕುಣಿಗಲು ರಾಮಶಾಸ್ತ್ರಿ'ಗಳ ಜೀವನಚರಿತ್ರೆಯನ್ನು ಬರೆದು ರಾಮಶಾಸ್ತ್ರಿಗಳನ್ನು ಅಮರಗೊಳಿಸಿದರು. ಅದು ಕನ್ನಡದಲ್ಲಿಯೇ ಮೊದಲ ಜೀವನ ಚರಿತ್ರೆ. ಚಿಕ್ಕ ವಯಸ್ಸಿನಲ್ಲೇ ವೇದ ಶಾಸ್ತ್ರಾದಿಗಳಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿದ ಕುಣಿಗಲು ರಾಮಶಾಸ್ತ್ರಿಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ಪಂಡಿತರಾಗಿ ಮೆರೆದವರು. ಪುಟ್ಟಣ್ಣನವರು ರಚಿಸಿದ ಅವರ ಜೀವನ ಚರಿತ್ರೆ ಕಾದಂಬರಿಯಂತೆಯೇ ಸ್ವಾರಸ್ಯಕರವಾಗಿದೆ. ಮುಮ್ಮಡಿಯವರ ವಿದ್ಯಾ ಪಕ್ಷಪಾತ, ಅವರ ಆಸ್ಥಾನದಲ್ಲಿದ್ದ, ಅಲ್ಲಿಗೆ ಬರುತ್ತಿದ್ದ ಪಂಡಿತರ ಅಪಾರ ವೈದುಷ್ಯ, ಆ ಕಾಲದ ಜನಜೀವನ. ಮುಮ್ಮಡಿಯವರ ಮತ್ತು ರಾಮಶಾಸ್ತ್ರಿಗಳ ಅದ್ಭುತ ವ್ಯಕ್ತಿತ್ವ–ಮುಂತಾದ ಅಂಶಗಳ ರಸಪೂರ್ಣ ನಿರೂಪಣೆಯನ್ನು ಈ ಗ್ರಂಥದಲ್ಲಿ ಕಾಣಬಹುದು.

ಬೇರೆಯೂ ಮೂರು ಜೀವನಚರಿತ್ರೆಗಳನ್ನು ಪುಟ್ಟಣ್ಣನವರು ಬರೆದಿದ್ದಾರೆ. ಇವುಗಳಲ್ಲಿ ಒಂದು ಕ್ರಿ. ಪೂ. ಆರನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಚೀನದ ಧರ್ಮ ಸಂಸ್ಥಾಪಕ ಕನ್‌ಫ್ಯೂಷಿಯಸ್‌ನನ್ನು ಕುರಿತದ್ದು. ಇನ್ನೊಂದು ಕ್ರಿ. ಶ. ಹತ್ತೊಂಬತ್ತನೆಯ ಶತಮಾನದ ಮಧ್ಯ ಭಾಗದಲ್ಲಿ ಹೈದರಾಬಾದ್ ಸಂಸ್ಥಾನದ ಮಂತ್ರಿಯಾಗಿದ್ದ ಸಾಲಾರ್ ಜಂಗ್‌ನ ಜೀವನ ಚರಿತ್ರೆ. ಮೂರನೆಯದು ಬಹಮನಿ ರಾಜ್ಯದ ಸುಪ್ರಸಿದ್ಧ ಮಂತ್ರಿಯಾಗಿದ್ದ ಮಹಮೂದ್ ಗವಾನನ ಚರಿತ್ರೆ.



ಕಾದಂಬರಿಯಲ್ಲಿ ಜೀವನ ಚಿತ್ರಣ :
ಎಂ. ಎಸ್. ಪುಟ್ಟಣ್ಣ

ಪುಟ್ಟಣ್ಣನವರು ಷೇಕ್ಸ್‌ಪಿಯರನ 'ಸಿಂಬೆಲೈನ್' ಮತ್ತು 'ಕಿಂಗ ಲಿಯರ್' ನಾಟಕಗಳನ್ನು ಕ್ರಮವಾಗಿ 'ಜಯಸಿಂಹರಾಜ ಚರಿತ್ರೆ' ಮತ್ತು 'ಹೇಮಚಂದ್ರರಾಜ ವಿಲಾಸ' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. 'ಹ್ಯಾಮ್‌ಲೆಟ್' ನಾಟಕವನ್ನೂ ಅವರು ಅನುವಾದಿಸಿದ್ದರು. ಅದು ಪ್ರಕಟವಾಗಲಿಲ್ಲ.

ಇತಿಹಾಸ ಸಂಶೋಧನೆಯಲ್ಲೂ ಪುಟ್ಟಣ್ಣನವರಿಗೆ ಅಪಾರ ಆಸಕ್ತಿಯಿತ್ತು. ಅವರು ವಿವಿಧ ಸ್ಥಳಗಳಲ್ಲಿ ಅಮಲ್ದಾರರಾಗಿದ್ದಾಗ ಆಯಾ ಪ್ರದೇಶಗಳಲ್ಲಿ ಆಳಿ ಬಾಳಿದ ಪಾಳೆಯಗಾರರ ವಂಶಗಳ ಇತಿಹಾಸ, ಸಾಧನೆಗಳಿಗೆ ಸಂಬಂಧಿಸಿದ ಅಂಶಗಳನ್ನು ಸಂಗ್ರಹಿಸಿ ದೀರ್ಘವಾದ ಟಿಪ್ಪಣಿಗಳನ್ನು ಸಿದ್ಧಪಡಿಸಿ ಇಟ್ಟುಕೊಂಡರು. ನಿವೃತ್ತರಾಗಿ ಕಾಲಾವಕಾಶ ದೊರೆತೊಡನೆಯೇ ಚಿತ್ರದುರ್ಗ, ಹಾಗಲವಾಡಿ, ಗುಮ್ಮನಾಯಕನ ಪಾಳೆಯಗಳ ಪಾಳೇಗಾರರು ಮತ್ತು ಕೆಳದಿಯ ಅರಸರನ್ನು ಕುರಿತು ಗ್ರಂಥಗಳನ್ನು ಪ್ರಕಟಿಸಿದರು.

ಪುಟ್ಟಣ್ಣನವರು ವಿನಯಶೀಲರು, ಉದಾರಿಗಳು; ದೊಡ್ಡವರು ಚಿಕ್ಕವರು ಎಂಬ ಭೇದವಿಲ್ಲದೆ, ಕನ್ನಡಕ್ಕಾಗಿ ಕೆಲಸಮಾಡುತ್ತಿದ್ದ ಎಲ್ಲರಲ್ಲಿಯೂ ಇವರಿಗೆ ಗೌರವಾದರಗಳಿದ್ದುವು. ತಾವು ಬರೆದದ್ದನ್ನು ಎಚ್. ವಿ. ನಂಜುಂಡಯ್ಯನವರು, ಎಂ. ಶಾಮರಾಯರು ಮುಂತಾದ ಹಿರಿಯರ ಮುಂದೆ ಓದಿ ತೋರಿಸಿ ಅವರ ಅಭಿಪ್ರಾಯವನ್ನು ಪಡೆಯುತ್ತಿದ್ದಂತೆ, ತಮಗಿಂತ ಮೂವತ್ತು ವರ್ಷ ಚಿಕ್ಕವರಾದ ಬಿ. ಎಂ. ಶ್ರೀಯವರಿಗೂ ಓದಿ ತೋರಿಸಿ, ಅವರ ಅಭಿಪ್ರಾಯ ಕೇಳುತ್ತಿದ್ದರು.

ಕನ್ನಡದ ಏಳಿಗೆಗಾಗಿ ನಿರಂತರವಾಗಿ ಶ್ರಮಿಸಿದ ಎಂ. ಎಸ್. ಪುಟ್ಟಣ್ಣನವರು ತಮ್ಮ ಎಪ್ಪತ್ತಾರನೆಯ ವಯಸ್ಸಿನಲ್ಲಿ ದಿವಂಗತರಾದರು. ಬೆಂಗಳೂರು ಬಸವನಗುಡಿ ಪ್ರದೇಶದಲ್ಲಿ ಪುಟ್ಟಣ್ಣನವರು ವಾಸವಾಗಿದ್ದ ರಸ್ತೆಗೆ ಅವರ ಹೆಸರನ್ನು ಇಟ್ಟಿದ್ದಾರೆ.

## ಎಂ. ವೆಂಕಟಕೃಷ್ಣಯ್ಯ

ಶಿಕ್ಷಕ, ಪತ್ರಿಕೋದ್ಯಮಿ, ಸಮಾಜಸೇವಕ, ಲೇಖಕ ವೆಂಕಟಕೃಷ್ಣಯ್ಯನವರು ಕನ್ನಡ ನಾಡಿಗೆ, ನುಡಿಗೆ ಸಲ್ಲಿಸಿರುವ ಸೇವೆ ಮಹತ್ತರವಾದದ್ದು.

ಇವರು ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಮುಗ್ಗೆ ಗ್ರಾಮದಲ್ಲಿ 1844ರಲ್ಲಿ ಜನಿಸಿದರು. ತಂದೆ ಸುಬ್ಬಯ್ಯನವರು ಸಂಸ್ಕೃತ, ತೆಲುಗು ಭಾಷೆಗಳಲ್ಲಿ ವಿದ್ವಾಂಸರು. ಚಿಕ್ಕ ವಯಸ್ಸಿಗೇ ಮಗನಿಗೆ ಈ ಭಾಷಾ ಸಾಹಿತ್ಯಗಳಲ್ಲಿ ಶಿಕ್ಷಣ ಕೊಟ್ಟರು. ಅನಂತರ ವೆಂಕಟಕೃಷ್ಣಯ್ಯನವರ ವಿದ್ಯಾಭ್ಯಾಸ ಮೈಸೂರಿನ ರಾಜಾಸ್ ಫ್ರೀ ಸ್ಕೂಲ್, ವೆಸ್ಲಿ ಮಿಷನ್ ಹೈಸ್ಕೂಲುಗಳಲ್ಲಿ ನಡೆಯಿತು. ಮೆಟ್ರಿಕ್ಯುಲೇಷನ್ ಪರೀಕ್ಷೆ ಮಾಡಿಕೊಂಡ ಮೇಲೆ ಅವರು ಶಿಕ್ಷಕ ವೃತ್ತಿಗಿಳಿದರು. ಗಂಜಿ ನರಸಿಂಹಯ್ಯನವರ ಸದ್ವಿದ್ಯಾ ಪಾಠಶಾಲೆ, ಗುರುಕಾರ್ ಮಲ್ಲಪ್ಪನವರ ಹೈಸ್ಕೂಲು, ಮರಿಮಲ್ಲಪ್ಪ ಹೈಸ್ಕೂಲುಗಳಲ್ಲಿ ಸುಮಾರು 50 ವರ್ಷ ಮುಖ್ಯೋಪಾಧ್ಯಾಯರಾಗಿ ನಿಷ್ಠೆಯಿಂದ ಕೆಲಸಮಾಡಿದರು.

ಇದರ ಜೊತೆಜೊತೆಯಲ್ಲೇ ತಮ್ಮ ಸಮಾಜಸೇವೆಯ ಅಂಗವಾಗಿ ಪತ್ರಿಕೋದ್ಯಮವನ್ನೂ ಕೈಗೊಂಡರು. ಕನ್ನಡ, ಇಂಗ್ಲಿಷ್ ಭಾಷೆಗಳ ದಿನಪತ್ರಿಕೆ, ವಾರಪತ್ರಿಕೆಗಳನ್ನು ಸ್ಥಾಪಿಸಿ, ಅವುಗಳ ಸಂಪಾದಕರಾಗಿ ದುಡಿದರು. ದಿವಾನ್ ರಂಗಾಚಾರ್ಲು ಅವರ ಕಾಲದಲ್ಲಿ ಮೈಸೂರು ಪ್ರಜಾ ಪ್ರತಿನಿಧಿ ಸಭೆ ಪ್ರಾರಂಭವಾದಾಗ ಅದರ ಪ್ರತಿನಿಧಿಯಾಗಿ ಆರಿಸಲ್ಪಟ್ಟರು. ಮೈಸೂರು ನ್ಯಾಯವಿಧಾಯಕ ಸಭೆ, ಸಂಪದಭ್ಯುದಯ ಸಭೆ, ಮೈಸೂರು ಮುನಿಸಿಪಲ್ ಕೌನ್ಸಿಲ್, ಡಿಸ್ಟ್ರಿಕ್ಟ್ ಬೋರ್ಡ್ ಮೊದಲಾದ ಸಂಸ್ಥೆಗಳ ಸದಸ್ಯರಾಗಿದ್ದರು. ಬಡವಿದ್ಯಾರ್ಥಿಗಳಿಗಾಗಿ 'ಅನಾಥಾಲಯ' ವೆಂಬ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದವರಲ್ಲಿ ಇವರೂ ಒಬ್ಬರು. ಮೈಸೂರಿನ 'ಲಿಟರರಿ ಅಂಡ್ ಡ್ರಮಾಟಿಕ್ ಅಸೋಸಿಯೇಷನ್'ಗೆ ಅಧ್ಯಕ್ಷರಾಗಿದ್ದರು.


ತಾತಯ್ಯ : ಸರ್ವಾದರಣೀಯ

ಹೀಗೆ, ವೆಂಕಟಕೃಷ್ಣಯ್ಯನವರ ಸೇವಾರಂಗ ಬಹುಮುಖವಾದದ್ದು. ಇವರ ಪ್ರಾಮಾಣಿಕವಾದ ಜನಸೇವೆಯನ್ನು ಜನ ಮೆಚ್ಚಿಕೊಂಡರು, 'ದಯಾಸಾಗರ' ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ಮೈಸೂರಿನಲ್ಲಿ ಈ ಹಿರಿಯರನ್ನು ಹೆಸರಿಟ್ಟು ಕರೆಯುತ್ತಿದ್ದುದೇ ಅಪರೂಪ. ಚಿಕ್ಕವರು ದೊಡ್ಡವರು ಎಲ್ಲರೂ ಇವರನ್ನು ತಾತಯ್ಯ ಎಂದೇ ಕರೆಯುತ್ತಿದ್ದರು. ಇವರನ್ನು ಕಂಡರೆ ಜನರಿಗೆ ಅಷ್ಟು ಅಭಿಮಾನ, ಪ್ರೀತಿ.

ನ್ಯಾಯನಿಷ್ಠೆ, ವೆಂಕಟಕೃಷ್ಣಯ್ಯನವರ ಹುಟ್ಟುಗುಣ. ಜೊತೆಗೆ, ಅವರು ಖಂಡಿತವಾದಿ. ಇದರಿಂದಾಗಿ ಅವರು ಆಗಾಗ ಇತರರ ಕ್ರೋಧಕ್ಕೆ ಗುರಿಯಾಗಬೇಕಾಗುತ್ತಿತ್ತು. ಆದರೆ ಅವರು ಇಂಥ ವಿರೋಧವನ್ನು ಲೆಕ್ಕಿಸುತ್ತಲೇ ಇರಲಿಲ್ಲ. ತಮಗೆ ಸರಿಯೆಂದು ತೋರಿದ ಮಾರ್ಗದಲ್ಲಿ ಮುಂದುವರಿಯುತ್ತಿದ್ದರು. ಅದರಿಂದ ಉಂಟಾಗಬಹುದಾದ ಕಷ್ಟ ತೊಂದರೆಗಳನ್ನು ಸಹನೆಯಿಂದ ಅನುಭವಿಸುತ್ತಿದ್ದರು. ಇಂಥ ಒಂದು ಸಂದರ್ಭದಲ್ಲಿ ತಾವು ಅನೇಕ ವರ್ಷ ಸೇವೆ ಸಲ್ಲಿಸಿದ ಮರಿಮಲ್ಲಪ್ಪ ಹೈಸ್ಕೂಲಿನ ಸಂಬಂಧವನ್ನೂ ಕಡಿದುಕೊಂಡರು.

ನಿರಂಕುಶಾಧಿಕಾರ ಪ್ರಬಲವಾಗಿದ್ದ ಆ ಕಾಲದಲ್ಲಿ, ಅಂದರೆ ಸುಮಾರು ಒಂದು ಶತಮಾನದ ಹಿಂದೆಯೇ, ವೆಂಕಟಕೃಷ್ಣಯ್ಯನವರು ಪ್ರಜಾಪ್ರಭುತ್ವವಾದಿಗಳಾಗಿದ್ದರು. ಪ್ರಜಾಪ್ರಭುತ್ವ ಧ್ಯೇಯಕ್ಕಾಗಿ ಅವರು ನಿರಂತರವಾಗಿ ಶ್ರಮಿಸಿದರು. ಜನ ಕೇವಲ ಸಂಪ್ರದಾಯಗಳಿಗೆ ಶರಣಾಗದೆ ಕಾಲ ಬದಲಾದಂತೆ ತಮ್ಮ ನಡವಳಿಕೆಗಳನ್ನು ಮಾರ್ಪಡಿಸಿಕೊಳ್ಳಬೇಕಾದದ್ದು ಅತ್ಯವಶ್ಯ ಎಂಬುದು ಇವರ ಖಚಿತಾಭಿಪ್ರಾಯವಾಗಿತ್ತು. ತರುಣರಲ್ಲಿ ಈ ದೃಷ್ಟಿಯನ್ನು ಪ್ರಚೋದಿಸುವ ದೃಷ್ಟಿಯಿಂದ ಹಿಂದಿನವರ ಆಚಾರವಿಚಾರಗಳಲ್ಲಿದ್ದ ಲೋಪಗಳನ್ನೆತ್ತಿ ತೋರಿಸುವ ಸಣ್ಣ ಪ್ರಹಸನಗಳನ್ನು ಬರೆದು ಪ್ರಕಟಿಸಿದರು.

'ಕನ್ನಡ ಪತ್ರಿಕೋದ್ಯಮದ ಪಿತಾಮಹ' ಎಂಬ ಪ್ರಶಸ್ತಿಗೆ ಪಾತ್ರರಾದ ವೆಂಕಟಕೃಷ್ಣಯ್ಯನವರು ಅದರ ಅಸ್ತಿಭಾರವನ್ನು ಭದ್ರವಾಗಿ ಹಾಕಿದರು. 1885ರಲ್ಲಿ 'ವೃತ್ತಾಂತ ಚಿಂತಾಮಣಿ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಪತ್ರಿಕೆ ಚೆನ್ನಾಗಿ ನಡೆಯಿತು. 'ಹಿತಬೋಧಿನಿ', 'ಸಂಪದಭ್ಯುದಯ', 'ಪೌರ ಸಾಮಾಜಿಕ ಪತ್ರಿಕೆ' ಮುಂತಾದ ಪತ್ರಿಕೆಗಳನ್ನು ಕನ್ನಡದಲ್ಲೂ 'ಮೈಸೂರು ಪೇಟ್ರಿಯಟ್', 'ವೆಲ್ತ್ ಆಫ್ ಮೈಸೂರ್', 'ಮೈಸೂರು ಹೆರಾಲ್ಡ್' ಪತ್ರಿಕೆಗಳನ್ನು ಇಂಗ್ಲಿಷಿನಲ್ಲಿಯೂ ನಡೆಸಿಕೊಂಡು ಬಂದರು. ಇವೆಲ್ಲ ಆ ಕಾಲದಲ್ಲಿ ಜನಪ್ರಿಯವಾಗಿದ್ದುವು.

ಬೆಂಗಳೂರಿನ ಸುಲ್ತಾನ್ ಪೇಟೆಯಲ್ಲಿ ಗಣೇಶನ ಉತ್ಸವದ ಗಲಾಟೆಯ ಸಂದರ್ಭದಲ್ಲಿ ಇವರ ಕೆಲವು ಪತ್ರಿಕೆಗಳ ಮೇಲೆ ಸರಕಾರ ನಿಷೇಧಾಜ್ಞೆ ಹೊರಿಸಿತು. ಇದನ್ನು ಪ್ರತಿಭಟಿಸುವ ಉದ್ದೇಶದಿಂದ ಇವರ ನೇತೃತ್ವದಲ್ಲಿ ರಾಜ್ಯದ ಎಲ್ಲ ಪತ್ರಿಕೆಗಳೂ ಪ್ರಕಟಣೆ ನಿಲ್ಲಿಸಲು ನಿರ್ಧರಿಸಿದುವು. ಮುಂದೆ ಪತ್ರಿಕೆಗಳ ಮೇಲಿನ ನಿರ್ಬಂಧಗಳನ್ನು ತೆಗೆದುಹಾಕಿದಾಗ, 1911ರಲ್ಲಿ, 'ಸಾಧ್ವಿ' ಪತ್ರಿಕೆಯನ್ನು ಆರಂಭಿಸಿದರು. ನಿರ್ದಾಕ್ಷಿಣ್ಯ ಪತ್ರಿಕೋದ್ಯಮಿ ಎಂಬ ಖ್ಯಾತಿ ಇವರದಾಗಿತ್ತು.

ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮವನ್ನು ಅಧ್ಯಯನದ ವಿಷಯವನ್ನಾಗಿ ಮಾಡಬೇಕೆಂಬುದು ಇವರ ಅಭಿಪ್ರಾಯವಾಗಿತ್ತು. ಒಂದಲ್ಲ ಒಂದು ದಿನ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮ ಶಿಕ್ಷಣ ಆರಂಭವಾಗುವುದೆಂಬ ನಂಬುಗೆಯಿಂದ ಅವರು ಆ ವಿಶ್ವವಿದ್ಯಾನಿಲಯಕ್ಕೆ 2000ರೂ. ಗಳ ದತ್ತಿಕೊಟ್ಟು ಅದರಿಂದ ಪತ್ರಿಕೋದ್ಯಮದ ಶ್ರೇಷ್ಠ ವಿದ್ಯಾರ್ಥಿಗೆ ಬಹುಮಾನ ಕೊಡಬೇಕೆಂದು ಸೂಚಿಸಿದರು. ಈಗ ಪ್ರತಿ ವರ್ಷ ಪತ್ರಿಕೋದ್ಯಮ ವಿಭಾಗದ ಶ್ರೇಷ್ಠ ವಿದ್ಯಾರ್ಥಿಗೆ ಈ ಬಹುಮಾನ ಸಲ್ಲುತ್ತಿದೆ.

ಸಾಹಿತ್ಯ ಪರಿಷತ್ತು ಸ್ಥಾಪಿತವಾದಾಗಿನಿಂದ ಅದರ ಚಟುವಟಿಕೆಗಳಲ್ಲಿ ಆಸಕ್ತರಾಗಿದ್ದು, ಪತ್ರಿಕೋದ್ಯಮ ಗ್ರಂಥರಚನೆಗಳಿಂದ ಕನ್ನಡನಾಡು ನುಡಿಗಳಿಗೆ ಅಪೂರ್ವ ಸೇವೆ ಸಲ್ಲಿಸಿದ ವೆಂಕಟಕೃಷ್ಣಯ್ಯನವರಿಗೆ ದಾವಣಗೆರೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಸಂದಿತು.

ಶಿಕ್ಷಕರಾಗಿ, ಪತ್ರಿಕೋದ್ಯಮಿಯಾಗಿ, ರಾಜಕಾರಣಿಯಾಗಿ, ಸಮಾಜ ಸುಧಾರಕರಾಗಿ ದುಡಿಯುತ್ತಿದ್ದ ವೆಂಕಟಕೃಷ್ಣಯ್ಯನವರು ಗ್ರಂಥಕರ್ತರೂ ಆಗಿದ್ದರು. ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಇವರ ಒಂದು ಕೃತಿ 'ಅರ್ಥಸಾಧನ'. 'ಚೋರಗ್ರಹಣ ತಂತ್ರ', 'ಪರಂತಪ ವಿಜಯ'-ಇವರು ಬರೆದ ಕಾದಂಬರಿಗಳು. 'ಆರೋಗ್ಯ ಸಾಧನ ಪ್ರಕಾಶಿಕೆ', 'ಟೆಲಿಮಾಕ್ಸನ ಸಾಹಸ ಚರಿತ್ರೆ', 'ಹರಿಶ್ಚಂದ್ರ ಚರಿತ್ರೆ'—ಇವು ಇವರ ಇತರ ಗ್ರಂಥಗಳು. 'ಬೂಕರ್ ಟಿ. ವಾಷಿಂಗ್‌ಟನ್ ಚರಿತ್ರೆ'—ನೀಗ್ರೋ ನಾಯಕನನ್ನು ಕುರಿತ ಕೃತಿ.

ವೆಂಕಟಕೃಷ್ಣಯ್ಯನವರದು ಸರಳ, ನೇರ ಬರವಣಿಗೆ. ಅವರ ಲೇಖನಗಳು ಪ್ರಭಾವಶಾಲಿಯಾಗಿರುತ್ತಿದ್ದುವು. ಬುದ್ಧಿವಂತಿಕೆ, ದಕ್ಷತೆ, ಪ್ರಾಮಾಣಿಕತೆ, ವಿದ್ವತ್ತುಗಳಿಗೆ ಅವರು ಖ್ಯಾತರಾಗಿದ್ದರು. ಕೊನೆಗಾಲದವರೆಗೂ ಅವರು ಕ್ರಿಯಾಶೀಲರಾಗಿಯೇ ಇದ್ದು ತಮ್ಮ 88ನೆಯ ವಯಸ್ಸಿನಲ್ಲಿ, 1932ನೆಯ ನವೆಂಬರ್ 8ರಂದು ನಿಧನರಾದರು.

## ಎ. ಆರ್. ಕೃಷ್ಣಶಾಸ್ತ್ರಿ


ಕನ್ನಡಕ್ಕೆ ಕಾಯಕಲ್ಪ : ಎ. ಆರ್. ಕೃ.

'ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯಾ ದೇಶದ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ಅದನ್ನು ನೀವು ಅಲಕ್ಷ್ಯಮಾಡಿದರೆ ಮಿಕ್ಕ ಯಾವ ದೇಶದ ಜನರೂ ಅದನ್ನು ಎತ್ತಿ ಹಿಡಿಯಲಾರರು,' ಎಂದು ಘೋಷಿಸಿದ್ದು ಮಾತ್ರವಲ್ಲದೆ, ಕನ್ನಡಕ್ಕಾಗಿ ದುಡಿದು ಬಾಳಿದವರು ಎ.ಆರ್. ಕೃಷ್ಣಶಾಸ್ತ್ರಿಗಳು. ಕನ್ನಡದ ಅಶ್ವಿನಿ ದೇವತೆಗಳು ಎಂದು ಕರೆಸಿಕೊಂಡ ಇಬ್ಬರಲ್ಲಿ ಅವರು ಒಬ್ಬರು. (ಇನ್ನೊಬ್ಬರು ಟಿ.ಎಸ್. ವೆಂಕಣ್ಣಯ್ಯನವರು). ದುರ್ಬಲವಾಗಿದ್ದ ಕನ್ನಡಕ್ಕೆ, ಸಂಸ್ಕೃತ, ಕನ್ನಡ, ಇಂಗ್ಲಿಷ್, ಬಂಗಾಳಿ ಭಾಷೆಗಳಲ್ಲಿ ತಮಗಿದ್ದ ಅಗಾಧ ಪಾಂಡಿತ್ಯ ಬಲದಿಂದ ಕಾಯಕಲ್ಪ ಚಿಕಿತ್ಸೆ ಮಾಡಿ ಇವರು ಹೊಸ ಚೈತನ್ಯ ಬಿತ್ತರು. ಇವರ 'ವಚನ ಭಾರತ', 'ಕಥಾಮೃತ' ಗಳು ಕನ್ನಡ ಗದ್ಯ ಸಾಹಿತ್ಯದಲ್ಲೂ 'ಸಂಸ್ಕೃತ ನಾಟಕ', 'ಭಾಸ', 'ಬಂಕಿಮಚಂದ್ರ' ಗಳು ವಿಮರ್ಶೆಯ ಕ್ಷೇತ್ರದಲ್ಲೂ ಅಪೂರ್ವ ಕೃತಿಗಳು.

ಇವರು ಸಂಪಾದಕರಾಗಿದ್ದ 'ಪ್ರಬುದ್ಧ ಕರ್ಣಾಟಕ' ನಿಯತಕಾಲಿಕ ಆಧುನಿಕ ಕನ್ನಡ ಸಾಹಿತ್ಯ ರಂಗದಲ್ಲಿ ಒಂದು ಅಪೂರ್ವ ಸಾಧನೆ. 1919ರಲ್ಲಿ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ ಆರಂಭಿಸಿದ 'ಪ್ರಬುದ್ಧ ಕರ್ಣಾಟಕ' ಕನ್ನಡ ಸಾಹಿತ್ಯ ಕಲೆಗಳಿಗೆ ಸಂಬಂಧಿಸಿದ ವಿದ್ವತ್ ಲೇಖನಗಳು, ಕವನ, ಕಥೆ, ವಿಮರ್ಶೆಗಳನ್ನು ಪ್ರಕಟಿಸಿ, ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಹುರುಪನ್ನು ತಂದಿತು ; ಅನೇಕ ಮಂದಿ ಹೊಸ ಲೇಖಕರಿಗೆ ಪ್ರೋತ್ಸಾಹ ಕೊಟ್ಟಿತು.

ಮೈಸೂರು ಮಹಾರಾಜಾ ಸಂಸ್ಕೃತ ಪಾಠಶಾಲೆಯ ಪ್ರಾಧ್ಯಾಪಕರಾಗಿದ್ದ ವ್ಯಾಕರಣ ಮಹಾವಿದ್ವಾನ್ ಅಂಬಳೆ ರಾಮಕೃಷ್ಣಶಾಸ್ತ್ರಿಗಳ ಮಗ ಕೃಷ್ಣ ಶಾಸ್ತ್ರಿಗಳು. ಜನನ 1890ರ ಫೆಬ್ರವರಿ 12ರಂದು. ಬಾಲ್ಯದಲ್ಲೇ ತಂದೆಯೇ ಇವರಿಗೆ ಸಂಸ್ಕೃತಾಭ್ಯಾಸ ಮಾಡಿಸಿದರು. ಆ ಚಿಕ್ಕ ವಯಸ್ಸಿನಲ್ಲಿ ಪಾಣಿನಿಯ ಸೂತ್ರಗಳನ್ನೆಲ್ಲ ಇವರಿಗೆ ಬಾಯಿಪಾಠ ಮಾಡಿಸಿದ್ದರು. ಕೃಷ್ಣಶಾಸ್ತ್ರಿಗಳು ಮೊದಲಿನಿಂದಲೂ ಉತ್ತಮ ವಿದ್ಯಾರ್ಥಿ. ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅವರಿಗೆ ವಿದ್ಯಾರ್ಥಿವೇತನ ದೊರೆಯಿತು. ಅದನ್ನು ಅವರು ಪುಸ್ತಕಗಳನ್ನು ಕೊಳ್ಳಲು ಉಪಯೋಗಿಸುತ್ತಿದ್ದರೆಂಬುದು ಅವರ ಜ್ಞಾನತೃಷೆಗೆ ನಿದರ್ಶನ.

ಸುಮಾರು ಇಪ್ಪತ್ತೆರಡು ಇಪ್ಪತ್ತಮೂರು ವರ್ಷ ವಯಸ್ಸಾಗಿದ್ದಾಗ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದರು. ಎರಡು ವರ್ಷಗಳ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಕೊಂಚ ಕಾಲ ಮೈಸೂರಿನ ಓರಿಯೆಂಟಲ್ ಲೈಬ್ರರಿಯಲ್ಲಿ ಕೆಲಸ ಮಾಡಿದ್ದನ್ನು ಬಿಟ್ಟರೆ ಶಾಸ್ತ್ರಿಗಳು ಬೆಂಗಳೂರು ಸೆಂಟ್ರಲ್ ಕಾಲೇಜು ಮತ್ತು ಮೈಸೂರಿನ ಮಹಾರಾಜಾ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸ ಮಾಡಿದರು. ಮಹಾರಾಜಾ ಕಾಲೇಜಿನಲ್ಲಿ ಪ್ರೊಫೆಸರರಾಗಿದ್ದ ಟಿ. ಎಸ್.

ವೆಂಕಣ್ಣಯ್ಯನವರ ಮರಣಾನಂತರ 1939ರಲ್ಲಿ ಆ ಸ್ಥಾನಕ್ಕೆ ನಿಯಮಿತರಾಗಿ 1946ರಲ್ಲಿ ನಿವೃತ್ತರಾದರು. ಅನಂತರ ಬೆಂಗಳೂರಿನಲ್ಲಿ ನೆಲೆಸಿದರು.

[illegible] ಶಾಸ್ತ್ರಿಗಳು ಜೊತೆ ಜೊತೆಯಲ್ಲಿಯೇ [illegible] ಕೊಡುತ್ತಿದ್ದರು. 'ಭಾಸ ಕವಿ' (1933) ಮತ್ತು 'ಸಂಸ್ಕೃತ ನಾಟಕ' (1937) ಅವರ ಹತ್ತಾರು ವರ್ಷಗಳ ಅಧ್ಯಯನದಿಂದ ಮೂಡಿದ ಪಾಂಡಿತ್ಯ, ಸಹೃದಯತೆಗಳ ಫಲ. ಅವರ 'ಸಂಸ್ಕೃತ ನಾಟಕ'ದಂಥ ವಿಶಿಷ್ಟ ಗ್ರಂಥ ಬೇರೆ ಯಾವ ಭಾಷೆಯಲ್ಲೂ ಇಲ್ಲ—ಎಂದು ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸ ಪ್ರೊ. ಹಿರಿಯಣ್ಣ ಅವರು ಹೇಳಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಶಾಸ್ತ್ರಿಗಳು ಸಲ್ಲಿಸಿದ ಮಹತ್ವದ ಸೇವೆಗಾಗಿ ಅವರನ್ನು 1941ರಲ್ಲಿ ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಆ ಸ್ಥಾನದಿಂದ ಅವರು ಮಾಡಿದ ಭಾಷಣ, ಕನ್ನಡದ ಹಿತವೇ ಅವರ ಉಸಿರಾಗಿತ್ತೆಂಬುದನ್ನು ಎತ್ತಿ ತೋರಿಸುತ್ತದೆ.

ಎ.ಆರ್. ಕೃಷ್ಣಶಾಸ್ತ್ರಿಗಳು ಪ್ರಾಧ್ಯಾಪಕ ಹುದ್ದೆಯಿಂದ ನಿವೃತ್ತರಾದ ಮೇಲೆ ರಚಿಸಿದ ಕೃತಿಗಳಲ್ಲಿ ಮೂರು ಅತ್ಯಂತ ಮುಖ್ಯವಾದುವು: 'ವಚನ ಭಾರತ' (1950), 'ಕಥಾಮೃತ' (1952) ಮತ್ತು 'ಬಂಕಿಮ ಚಂದ್ರ' (1960). 'ವಚನ ಭಾರತ'ದ ರಚನೆಯನ್ನು ಕೃಷ್ಣಶಾಸ್ತ್ರಿಗಳು ಒಂದು ತಪಸ್ಸಿನಂತೆ ಸಾಧಿಸಿದರು. ಈ ಕೃತಿ ಕನ್ನಡ ಗದ್ಯಸಾಹಿತ್ಯಕ್ಕೆ ಅಪೂರ್ವ ಕಾಣಿಕೆ. ಇದರ ಕಥನ ರೀತಿ, ಭಾಷಾ ಶೈಲಿಗಳು ಅನುಪಮವಾದುವು. 'ಬಂಕಿಮ ಚಂದ್ರ' ಸುಪ್ರಸಿದ್ಧ ಬಂಗಾಳಿ ಕಾದಂಬರಿಕಾರನ ಜೀವನ, ಸಾಹಿತ್ಯ ಕೃತಿಗಳ ಪರಿಚಯ ಮಾಡಿಕೊಡುವ ವಿಮರ್ಶಾತ್ಮಕ ಗ್ರಂಥ. ಶಾಸ್ತ್ರಿಗಳು ಬಂಗಾಳಿ ಭಾಷೆಯನ್ನು ಚೆನ್ನಾಗಿ ಅರಿತಿದ್ದರು. ರಾಷ್ಟ್ರೀಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ಈ ಕೃತಿಗೆ ದೊರೆಯಿತು.

ಶಾಸ್ತ್ರಿಗಳ ಮಿಕ್ಕ ಕೃತಿಗಳಲ್ಲಿ 'ಶ್ರೀಪತಿಯ ಕಥೆಗಳು' ಮತ್ತು 'ನಿಬಂಧಮಾಲಾ' ಪ್ರಮುಖವಾದುವು.

ಶಾಸ್ತ್ರಿಗಳು ತಮ್ಮ ಮಗಳ ಅಕಾಲ ಮರಣದ 'ಕುದಿ ನೆನಪಿಗಾಗಿ' 'ಶ್ರೀಪತಿಯ ಕಥೆ'ಗಳ ಕಥಾ ಸಂಕಲನವನ್ನು ಪ್ರಕಟಿಸಿದರು. ಇಂಥ ಬಾಳ ಕುದಿ, ಜೀವನವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಎರಡೂ ಸೇರಿ ರೂಪುಗೊಂಡ ವಾಸ್ತವ ಮನೋಧರ್ಮ ಈ ಕಥೆಗಳಲ್ಲಿ ಕಂಡುಬರುತ್ತದೆ. 'ನಿಬಂಧಮಾಲಾ' ರವೀಂದ್ರನಾಥ ಠಾಕೂರರ ಲೇಖನಗಳ ಭಾಷಾಂತರ. ಅವರು ಅತ್ಯಂತ ಶ್ರಮವಹಿಸಿ ಬಹು ಸಮರ್ಪಕವಾಗಿ ಸಿದ್ಧಗೊಳಿಸಿರುವ ಗ್ರಂಥ ಇದು. ಮೂಲಕ್ಕೆ ಸರಿದೂಗುವಂಥ ಈ ಕೃತಿಯೇ ಶಾಸ್ತ್ರಿಗಳ ಕೊನೆಯ ಸಾಹಿತ್ಯ ಕಾಣಿಕೆ.

ಶಾಸ್ತ್ರಿಗಳ ಭಾಷಣಗಳು ಮತ್ತು ಬಿಡಿ ಲೇಖನಗಳು ಕೂಡ ಸಂಕಲನ ರೂಪದಲ್ಲಿ ಪ್ರಕಟವಾಗಿವೆ. ಮಕ್ಕಳಿಗಾಗಿ ಶಾಸ್ತ್ರಿಗಳು ಬರೆದ ಮಹಾಭಾರತದ ಕತೆ 'ನಿರ್ಮಲ ಭಾರತೀ'. ಉತ್ತಮ ಶಿಶು ಸಾಹಿತ್ಯಕ್ಕೆ ಇದು ಉದಾಹರಣೆಯಾಗಿದೆ.

ಕೊನೆಕೊನೆಗೆ ಶಾಸ್ತ್ರಿಗಳ ದೇಹಸ್ಥಿತಿ ಕೆಟ್ಟು ಅವರು ಹಾಸಿಗೆ ಹಿಡಿದರು. 1968ರ ಫೆಬ್ರವರಿ ಒಂದರಂದು ಅವರು ಕಣ್ಮುಚ್ಚಿದರು. ಗುಣವಾತ್ಸಲ್ಯ ಮತ್ತು ಗಾತ್ರಗಳೆರಡರಲ್ಲೂ ಹಿರಿದಾದ ಸಾಹಿತ್ಯ ಸೃಷ್ಟಿ ಎ. ಆರ್. ಕೃಷ್ಣ ಶಾಸ್ತ್ರಿಗಳದು. ಅವರಲ್ಲಿ ಕನ್ನಡವನ್ನು ಕಲಿತು ಸ್ಫೂರ್ತಿ ಪಡೆದ ಹಲವರು ಇಂದಿಗೂ ಸಾಹಿತ್ಯ ಚಟುವಟಿಕೆಯಲ್ಲಿ ನಿರತರಾಗಿದ್ದಾರೆ.

## ಎಚ್. ವಿ. ನಂಜುಂಡಯ್ಯ

1915ರ ಮೇ 3ರಂದು ಒಂದು ಸಮ್ಮೇಳನ ಬೆಂಗಳೂರಿನಲ್ಲಿ ಸಮಾವೇಶಗೊಂಡಿತು. ಉದ್ದೇಶ : ಕನ್ನಡ ಸಾಹಿತ್ಯದ ಪುರೋಭಿವೃದ್ಧಿಯನ್ನು ಸಾಧಿಸಲು ಒಂದು ಕೇಂದ್ರ ಸಂಸ್ಥೆಯ ಸ್ಥಾಪನೆ. ಕರ್ನಾಟಕದ ನಾನಾ ಪ್ರಾಂತಗಳಿಂದ ಪ್ರಮುಖರೂ ವಿದ್ವಾಂಸರೂ ಸಮ್ಮೇಳನಕ್ಕೆ ಆಗಮಿಸಿದ್ದರು. ಅಧ್ಯಕ್ಷರು, ರಾಜಮಂತ್ರ ಪ್ರವೀಣ ಎಚ್. ವಿ. ನಂಜುಂಡಯ್ಯನವರು. ಈ ಸಮ್ಮೇಳನದಲ್ಲಿ ಸಾಹಿತ್ಯ ಪರಿಷತ್ತು ಸ್ಥಾಪನೆಯಾದ ಮೇಲೆ, ಮೊದಲ ಐದು ವರ್ಷ ಕಾಲ ನಂಜುಂಡಯ್ಯನವರು ಅದರ ಅಧ್ಯಕ್ಷರಾಗಿದ್ದರು.



ರಾಜಮಾರ್ಗ : ಎಚ್. ವಿ. ನಂಜುಂಡಯ್ಯ

ನಂಜುಂಡಯ್ಯನವರ ಮನೆ ಮಾತು ತೆಲುಗು. ಅವರಿಗೆ ಇಂಗ್ಲಿಷಿನಲ್ಲಿ ಅಗಾಧ ಪಾಂಡಿತ್ಯವಿತ್ತು. ಆದರೆ ಕನ್ನಡ ಅವರ ಮೆಚ್ಚಿನ ಭಾಷೆ. ಕನ್ನಡ ನಾಡಿನಲ್ಲೇ ಕನ್ನಡಕ್ಕೆ ಮನ್ನಣೆ ಇಲ್ಲದಿದ್ದ ಕಾಲದಲ್ಲಿ ಆ ಭಾಷೆಯಲ್ಲಿ ವಿಚಾರ ಸಾಹಿತ್ಯವನ್ನು ಬರೆಯಲು ಆರಂಭಿಸಿದವರಲ್ಲಿ ಇವರೇ ಮೊದಲಿಗರೆನ್ನಬಹುದು. ಪತ್ರಲೇಖನದ ಸಂಪ್ರದಾಯಗಳನ್ನು ತಿಳಿಸಿಕೊಡುವ 'ಲೇಖ್ಯ ಬೋಧಿನಿ', ಕಾನೂನು ರಚನೆ, ಸರಕಾರದ ಆಡಳಿತ ವಿಧಾನ, ಕೋರ್ಟು ವ್ಯವಹಾರ ಇವುಗಳ ಕೈಪಿಡಿಯಾದ 'ವ್ಯವಹಾರ ದೀಪಿಕೆ' ಮತ್ತು ದೇಶ ಸಂಪತ್ತಿನ ಉತ್ಪತ್ತಿ, ಆಯವ್ಯಯ, ನಾಣ್ಯ ಚಲಾವಣೆ ಮುಂತಾದುವುಗಳ ವಿಮರ್ಶೆಯಾದ 'ಅರ್ಥಶಾಸ್ತ್ರ' ಪುಸ್ತಕಗಳನ್ನು ಇವರು ಬರೆದರು.

'ಎಚ್. ವಿ.' ಎಂಬುದು 'ಹೆಬ್ಬಳಲು' ಮತ್ತು 'ವೇಲ್ಪನೂರು' ಎಂಬುದರ ಹ್ರಸ್ವರೂಪ. ಇವು ಆಂಧ್ರ ಪ್ರದೇಶದ ಚಿಕ್ಕ ಊರುಗಳಿರಬೇಕು. ನಂಜುಂಡಯ್ಯನವರ ಹಿರಿಯರು ಬಹಳ ಹಿಂದೆ ಆ ಕಡೆಯಿಂದ ಬಂದು ಮೈಸೂರು ಸೀಮೆಯಲ್ಲಿ ನೆಲೆಸಿದವರು. ನಂಜುಂಡಯ್ಯನವರು 1860 ಅಕ್ಟೋಬರ್ 13ರಂದು ಹುಟ್ಟಿದರು. ಮನೆಯವರು ಸ್ಥಿತಿವಂತರಲ್ಲ.

ಭಿಕ್ಷಾನ್ನವುಂಡು, ಬೀದಿ ದೀಪದಲ್ಲಿ ಓದಿ ನಂಜುಂಡಯ್ಯ ವಿದ್ಯೆ ಕಲಿತರೆಂದು ಪ್ರತೀತಿ. ಬುದ್ಧಿವಂತ ವಿದ್ಯಾರ್ಥಿಯಾದ್ದರಿಂದ ಮೈಸೂರು ಅರಮನೆ ಆರು ರೂಪಾಯಿ ಮಾಸಾಶನ ಕೊಡುತ್ತಿತ್ತು. ವಿದ್ಯಾರ್ಥಿ ವೇತನವೂ ದೊರೆಯುತ್ತಿತ್ತು. ನಂಜುಂಡಯ್ಯನವರು ತಮ್ಮ ಇಪ್ಪತ್ತನೆಯ ವರ್ಷದಲ್ಲಿ ಬಿ. ಎ. ಪಾಸು ಮಾಡಿದರು. ಒಡನೆಯೇ ಉದ್ಯೋಗ ದೊರೆಯಿತು. ಆಗ ಮದರಾಸು ಪ್ರಾಂತಕ್ಕೆ ಸೇರಿದ್ದ ಕೊಳ್ಳೇಗಾಲದಲ್ಲಿ ಸಬ್ ರೆಜಿಸ್ಟ್ರಾರ್ ಆಗಿಯೂ ಮದರಾಸಿನ ಅಕೌಂಟೆಂಟ್‌ರ ಕಚೇರಿಯಲ್ಲಿ ಗುಮಾಸ್ತೆಯಾಗಿಯೂ ಕೆಲಸ ಮಾಡಿದರು. 1883ರಲ್ಲಿ ಬಿ. ಎಲ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರು ಸಂಸ್ಥಾನದ ಸರಕಾರದಲ್ಲಿ ಮುನ್ಸೀಫರಾದರು. ಎಂ. ಎ., ಎಂ.ಎಲ್. ಪರೀಕ್ಷೆಗಳಲ್ಲೂ ಉತ್ತೀರ್ಣರಾದರು. ನೌಕರಿಯಲ್ಲಿ ಮೇಲೆ ಮೇಲೆ ಏರುತ್ತ ಸರಕಾರದ ಪ್ರಧಾನ ಕಾರ್ಯದರ್ಶಿ, ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶ, ದಿವಾನರ ಮಂತ್ರಾಲೋಚನ ಮಂಡಲಿಯ ಸದಸ್ಯರಾಗಿ, ಕೊನೆಗೆ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ಕೆಲಸ ಮಾಡಿದರು. ತಮ್ಮ ಅವೋಘ ಸೇವೆಗಾಗಿ ಮೈಸೂರು ಮಹಾರಾಜರಿಂದ 'ರಾಜಮಂತ್ರ ಪ್ರವೀಣ', ಬ್ರಿಟಿಷ್ ಸರಕಾರದಿಂದ 'ಸಿ. ಐ. ಇ.' (ಕಂಪಾನಿಯನ್ ಆಫ್ ದಿ ಇಂಡಿಯನ್ ಎಂಪೈರ್) ಬಿರುದುಗಳನ್ನು ಪಡೆದರು.

ನಂಜುಂಡಯ್ಯನವರು ನ್ಯಾಯಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳಲ್ಲಿ ಪ್ರವೀಣರಾಗಿದ್ದುದಲ್ಲದೆ ಬಹು ಭಾಷಾ ಪಂಡಿತರೂ ಆಗಿದ್ದರು. ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತಗಳಲ್ಲದೆ ಫ್ರೆಂಚ್ ಭಾಷೆಯನ್ನೂ ಚೆನ್ನಾಗಿ ಬಲ್ಲವರಾಗಿದ್ದರು.

ಫ್ರೆಂಚ್ ಸಾಹಿತಿ ವಿಕ್ಟರ್ ಹ್ಯೂಗೋಗೆ ಪುತ್ರಿವಿಯೋಗದ ದುಃಖವನ್ನು ಅನುಭವಿಸಬೇಕಾಗಿ ಬಂದಂತೆ, ನಂಜುಂಡಯ್ಯನವರು ಪುತ್ರವಿಯೋಗವನ್ನು ಅನುಭವಿಸಬೇಕಾಯಿತು. ಹ್ಯೂಗೋನ ಮಗಳು ನೀರಿನಲ್ಲಿ ಮುಳುಗಿ ಸತ್ತಂತೆ ಇವರ ಮಗನೂ ನೀರಿನಲ್ಲಿ ಮುಳುಗಿ ಸತ್ತ. ಇಬ್ಬರದೂ ಸಮಾನ ದುಃಖ. ತನ್ನ ಮಗಳ ಮರಣದ ದುಃಖ ಭರದಲ್ಲಿ ಹ್ಯೂಗೋ ಬರೆದ ಕೆಲವು ಕವಿತೆಗಳನ್ನು ನಂಜುಂಡಯ್ಯನವರು ಫ್ರೆಂಚಿನಿಂದ ಇಂಗ್ಲಿಷಿಗೆ ಪರಿವರ್ತಿಸಿ ತಮ್ಮ ದುಃಖವನ್ನು ಶಮನ ಮಾಡಿಕೊಂಡರಂತೆ. ಇವರೇ ಇಂಗ್ಲಿಷಿನಲ್ಲಿ ಬರೆದ ಅಪೂರ್ಣ ಕಾದಂಬರಿಯೂ ಒಂದಿದೆ. ಬೇಕನ್, ಕಾರ್ಲೈಲ್, ಟೆನಿಸನ್ ಅಂಥವರ ಯಾವುದಾದರೊಂದು ಪುಸ್ತಕ ಯಾವಾಗಲೂ ಇವರೊಡನೆ ಇರುತ್ತಿತ್ತು. ಸರಕಾರದ ಕೆಲಸದ ಮೇಲೆ ಸುತ್ತಾಡುವಾಗ ಸ್ವಲ್ಪ ಬಿಡುವು ಸಿಕ್ಕಿದರೆ ಈ ಪುಸ್ತಕ ಹೊರಬರುತ್ತಿತ್ತು. ಭೇಟಿ ಮಾಡಿದ ಊರುಗಳಲ್ಲೆಲ್ಲ ಜನರೊಡನೆ ಬೆರೆತು ಸ್ಥಳ ಪುರಾಣಗಳನ್ನು ಆಸಕ್ತಿಯಿಂದ ಕೇಳಿ ತಿಳಿದು ಬರೆದಿಡುತ್ತಿದ್ದರು.

ಮೈಸೂರು ವಿಶ್ವವಿದ್ಯಾನಿಲಯ 1916ರಲ್ಲಿ ಆರಂಭವಾದಾಗಿನಿಂದ ಅದರ ಉಪಕುಲಪತಿಯಾಗಿದ್ದ ನಂಜುಂಡಯ್ಯನವರು ಆ ಸ್ಥಾನದಲ್ಲಿದ್ದಾಗಲೇ 1920ರ ಮೇ 7ರಂದು ಮೈಸೂರಿನಲ್ಲಿ ನಿಧನರಾದರು. ಅವರ ಸ್ಮಶಾನ ಯಾತ್ರೆ ಸಾಗುತ್ತಿದ್ದಾಗ ಯಾರೋ ಒಬ್ಬರು ಒಂದು ಅಡ್ಡದಾರಿಯನ್ನು ತೋರಿಸಿ "ಹೀಗೆ ಹೋದರೆ ಹತ್ತಿರವಾಗುತ್ತದೆ" ಎಂದರು. ಆಗ ಅಲ್ಲಿದ್ದವರೊಬ್ಬರು, "ಅಡ್ಡದಾರಿಯಲ್ಲಿ ಹೋಗುವುದು ಬೇಡ. ಅವರು ಯಾವಾಗಲೂ ರಾಜಮಾರ್ಗದಲ್ಲಿ ನಡೆದವರು. ಈ ಕೊನೆಯ ಪ್ರಯಾಣವೂ ಹಾಗೆಯೇ ಸಾಗಲಿ" ಎಂದರು.

ವೈದುಷ್ಯ, ಋಜುತ್ವ, ಜನಸೇವೆಗಳಿಂದಾಗಿ ಎಲ್ಲರಿಂದಲೂ ಮನ್ನಣೆ ಪಡೆದ ಮಹಾವ್ಯಕ್ತಿ ನಂಜುಂಡಯ್ಯನವರು.

## ಎಜ್ರಾ ಪೌಂಡ್

"ಈ ಶತಮಾನದಲ್ಲಿ ಅಥವಾ ಕಳೆದ ಶತಮಾನದ ಕೊನೆಯ ದಶಕದಲ್ಲಿ ಹುಟ್ಟಿದ ಯಾವನೇ ಸಾಹಿತಿ ತಾನು ಎಜ್ರಾ ಪೌಂಡ್‌ನಿಂದ ಪ್ರಭಾವಿತನಾಗದೆ ಇರುವನೆಂದಾಗಲೀ ಅಥವಾ ಅವನ ಕೃತಿಗಳಿಂದ ಏನನ್ನೂ ಕಲಿಯಲಿಲ್ಲ ಎಂದಾಗಲೀ ಪ್ರಾಮಾಣಿಕತೆಯಿಂದ ಒಪ್ಪಿಕೊಳ್ಳಬಲ್ಲವನಾದರೆ, ಖಂಡಿತ ಅವನು ಪ್ರಶಂಸೆಗಿಂತ ಮರುಕಕ್ಕೆ ಯೋಗ್ಯ."

–ಎಜ್ರಾ ಪೌಂಡ್‌ನನ್ನು ವಿಶೇಷ ಗೌರವದಿಂದ ಕಾಣುತ್ತಿದ್ದ ಸಾಹಿತಿ ಅರ್ನೆಸ್ಟ್ ಹೆಮಿಂಗ್‌ವೇ ಹೇಳಿದ ಮಾತುಗಳಿವು. 1954ರಲ್ಲಿ ತನಗೆ ನೊಬೆಲ್ ಪಾರಿತೋಷಕ ಬಂದಾಗ ಅದು ಪೌಂಡ್‌ನಿಗೆ ದೊರಕಿದ್ದರೆ ಹೆಚ್ಚಿನ ಸಂತೋಷವಾಗುತ್ತಿತ್ತೆಂದು ಹೆಮಿಂಗ್‌ವೇ ತನ್ನನ್ನು ಭೇಟಿ ಮಾಡಿದ ಪತ್ರಿಕಾಕರ್ತರಿಗೆ ತಿಳಿಸಿದ. 'ನನಗೆ ಬರೆಯುವುದನ್ನು ಕಲಿಸಿದವನೇ ಪೌಂಡ್' ಎಂದು ಅಭಿಮಾನದಿಂದ ಜ್ಞಾಪಿಸಿಕೊಂಡ.



'ಕವಿಗಳ ಕವಿ': ಎಜ್ರಾ ಪೌಂಡ್

1885ರ ಅಕ್ಟೋಬರ್ 30ರಂದು ಅಮೆರಿಕದ ಇಡಾಹೊ ಸಂಸ್ಥಾನದ ಹಾಯ್ಲಿ ಎಂಬಲ್ಲಿ ಪೌಂಡ್ ಹುಟ್ಟಿದ. ತಂದೆ ಸರಕಾರೀ ಅಧಿಕಾರಿ. ಎಜ್ರಾಪೌಂಡ್‌ನ ಕಾಲೇಜು ಶಿಕ್ಷಣ ಮೊದಲು ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯದಲ್ಲೂ ಅನಂತರ ಹ್ಯಾಮಿಲ್ಟನ್ ಕಾಲೇಜಿನಲ್ಲೂ ನಡೆಯಿತು. 1905ರಲ್ಲಿ ಪದವಿ ಪಡೆದ ಬಳಿಕ ಸಾಹಿತ್ಯದಲ್ಲಿ ಸಂಶೋಧನೆ ನಡೆಸಲು ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯಕ್ಕೆ ಹಿಂದಿರುಗಿದ. 1908ರಲ್ಲಿ ತನ್ನ ಅಭ್ಯಾಸವನ್ನು ಅರ್ಧದಲ್ಲೇ ನಿಲ್ಲಿಸಿ ಯೂರೋಪಿನ ಸಂಚಾರ ಆರಂಭಿಸಿದ.

ಸಂಚಾರದ ಕಾಲದಲ್ಲೂ ಪೌಂಡ್‌ನ ಹೆಚ್ಚಿನ ಸಮಯ ಓದುವುದರಲ್ಲೇ ಕಳೆಯುತ್ತಿತ್ತು. ಮಧ್ಯಕಾಲದ ಮತ್ತು ನವೋದಯ ಕಾಲದ ಸಾಹಿತ್ಯವನ್ನು ಆತ ಕರಗತಮಾಡಿಕೊಂಡ. 1909ರಲ್ಲಿ ಪ್ರಥಮ ಕವನ ಸಂಕಲನ 'ಲ್ಯೂಮಿವ್ ಸ್ಪೆಂಟೋ' ಪ್ರಕಟವಾಯಿತು. ಅನಂತರ ತುಸು ಸಮಯದಲ್ಲೇ 'ಎಕ್ಸಲ್ಟೇಷನ್ಸ್' ಮತ್ತು 'ಪರ್ಸೊನೇ'ಗಳು ಹೊರಬಂದುವು. ಹಿಂದಿನ ಸಂಪ್ರದಾಯಗಳಿಂದ ಇವು ಅಂಟಿಕೊಂಡಿದ್ದರೂ ಕವನಗಳಲ್ಲಿ ಹೊಸ ಬಗೆಯ ಸ್ವಾತಂತ್ರ್ಯ ಕಂಡುಬಂತು. ಇವು ಪ್ರಕಟವಾದಾಗ ವಿಮರ್ಶಕರು ಈ ತರುಣ ಕವಿಯನ್ನು ಮುಕ್ತಕಂಠದಿಂದ ಹೊಗಳಿದರು.

ಆದರೆ ಸ್ವತಃ ಎಜ್ರಾ ಪೌಂಡ್‌ನಿಗೆ ತನ್ನ ಈ ಕವಿತೆಗಳ ಬಗೆಗೆ ಏನೋ ಅಸಮಾಧಾನ. ಮುಂದೆ ಪೌಂಡ್ ತನ್ನ ಕವಿತಾರಚನೆಯ ವಿಧಾನವನ್ನೇ ಬದಲಿಸಿದ. ಜಡವಾಗಿದ್ದ ಕಲಾಸಂಪ್ರದಾಯವನ್ನು ಬಿಟ್ಟು, ನಿರ್ದಿಷ್ಟ ಕಲ್ಪನಾ ಚಿತ್ರಗಳ ಮೂಲಕ ಭಾವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಬೇಕು ಎಂಬ ಪಂಥಕ್ಕೆ ಅಸ್ತಿವಾರ ಹಾಕಿದ. ಪದಗಳ ಮಿತವ್ಯಯ ಇದರ ಉದ್ದೇಶ. ಬರವಣಿಗೆ ಮುಕ್ತಛಂದಸ್ಸಿನಲ್ಲಿ. ಸಹಜವಾಗಿಯೇ ಅವನ ಓದುಗರ ಸಂಖ್ಯೆ ಕಡಮೆಯಾಯಿತು. ವಿಮರ್ಶಕರ ಟೀಕೆ ಕಟುವಾಯಿತು.

ಸ್ವತಃ ಕವಿತೆಗಳ ರಚನೆ ಮಾತ್ರವಲ್ಲದೆ ಲ್ಯಾಟಿನ್, ಇಟಾಲಿಯನ್ ಮತ್ತು ಫ್ರೆಂಚ್ ಕವಿಗಳ ಶ್ರೇಷ್ಠ ಪುಸ್ತಕಗಳ ಉತ್ಕೃಷ್ಟ ಇಂಗ್ಲಿಷ್ ಭಾಷಾಂತರ ಮಾಡಿದ ಕೀರ್ತಿಯೂ ಪೌಂಡ್‌ನಿಗೆ ಸಲ್ಲಬೇಕು. ಚೀನೀ ಭಾಷೆಯಲ್ಲಿದ್ದ ಕನ್‌ಫ್ಯೂಷಿಯಸ್‌ನ ಕೃತಿಗಳನ್ನೂ ರವೀಂದ್ರನಾಥ ಠಾಕೂರರ 'ಗೀತಾಂಜಲಿ' ಮತ್ತಿತರ ಪುಸ್ತಕಗಳನ್ನೂ ಅಮೆರಿಕದ ಜನತೆಗೆ ಪರಿಚಯಮಾಡಿ ಕೊಟ್ಟವನೂ ಪೌಂಡ್.

ಸೋದರ ಕವಿಗಳನ್ನೂ ಕಿರಿಯರನ್ನೂ ಎಜ್ರಾ ಪೌಂಡ್ ಆತ್ಮೀಯತೆಯಿಂದ ಕಾಣುತ್ತಿದ್ದ. ಷಿಕಾಗೋದ 'ಪೊಯೆಟ್ರಿ' ಪತ್ರಿಕೆಯ ಸಂಪಾದಕನಾಗಿದ್ದಾಗ, ಆಗ ತಾನೇ ಕವಿತಾ ರಚನೆ ಆರಂಭಿಸಿದ್ದ ರಾಬರ್ಟ್ ಫ್ರಾಸ್ಟ್, ವೈ. ಬಿ. ಯೀಟ್ಸ್ ಮುಂತಾದವರ ಕವಿತೆಗಳು ಬೆಳಕು ಕಾಣುವಂತೆ ಮಾಡಿದ. ಐದು ವರ್ಷ ಪ್ರಕಾಶಕರು ದೊರೆಯದೆ ಮೂಲೆಗುಂಪಾಗಿದ್ದ ಟಿ. ಎಸ್. ಎಲಿಯಟ್‌ನ 'ವೇಸ್ಟ್ ಲ್ಯಾಂಡ'ನ್ನು ಪರಿಷ್ಕರಿಸಿ ಮುದ್ರಣದ ಜವಾಬ್ದಾರಿಯನ್ನು ತಾನೇ ವಹಿಸಿದ. ಉಡಲು ಬೇರೆ ಬಟ್ಟೆ ಇಲ್ಲದಿದ್ದರೂ ತನ್ನ ಪೋಷಾಕನ್ನು ಬಡ ಉಪಾಧ್ಯಾಯ ಜೇಮ್ಸ್ ಜಾಯ್ಸ್‌ನಿಗೆ ಕೊಟ್ಟು ಅವನ 'ಪೋರ್ಟ್ರೇಯ್ಟ್ ಆಫ್ ದಿ ಆರ್ಟಿಸ್ಟ್ ಆಸ್ ಎ ಯಂಗ್ ಮ್ಯಾನ್' ಮತ್ತು 'ಯೂಲಿಸಿಸ್'ಗಳ ಪ್ರಕಟಣೆಗೆ ಕಾರಣನಾದ.

ಯೂರೋಪಿನಲ್ಲಿ ಒಂದು ಕಡೆಯಿಂದ ಇನ್ನೊಂದಕ್ಕೆ ಸಂಚರಿಸುತ್ತಿದ್ದ ಪೌಂಡ್ 1924ರಲ್ಲಿ ಇಟಲಿಯಲ್ಲಿ ನೆಲೆಸಿದ. ಎರಡನೆಯ ಮಹಾಯುದ್ಧ ಮುಗಿಯುವವರೆಗೂ ಅಲ್ಲೇ ಇದ್ದ. ಯುದ್ಧದ ಸಮಯದಲ್ಲಿ ರೋಮ್ ರೇಡಿಯೋದಿಂದ ಅಮೆರಿಕಕ್ಕೆ ವಿರುದ್ಧವಾದ ಪ್ರಚಾರ ನಡೆಸಿದ. ಯುದ್ಧ ಮುಗಿದು ಮಿತ್ರಪಕ್ಷ ಮೇಲುಗೈಯಾದಾಗ ಅಮೆರಿಕನರು ಪೌಂಡ್‌ನನ್ನು ಬಂಧಿಸಿದರು. ರಾಜದ್ರೋಹದ ಅಪರಾಧ ಹೊರಿಸಿದರು. ಕೋರ್ಟಿನಲ್ಲಿ ವಿಚಾರಣೆಗೆ ಒಳಗಾಗಲು ಸಾಧ್ಯವಾಗದಷ್ಟು ಮಟ್ಟಿಗೆ ತಲೆ ಕೆಟ್ಟಿದೆ ಎಂದು ತೀರ್ಮಾನಿಸಿ ವಾಷಿಂಗ್ಟನಿನ ಹುಚ್ಚರ ಆಸ್ಪತ್ರೆಗೆ ಸೇರಿಸಿದರು. 12 ವರ್ಷಗಳ ಈ ಜೀವನದ ಬಳಿಕ 1958ರಲ್ಲಿ ಬಿಡುಗಡೆ ಪಡೆದ ಎಜ್ರಾಪೌಂಡ್ ಇಟಲಿಗೇ ಹಿಂದಿರುಗಿದ.

ಎಜ್ರಾ ಪೌಂಡ್‌ನ ಅತ್ಯಂತ ಶ್ರೇಷ್ಠ ಕೃತಿಗಳಲ್ಲಿ ಕೆಲವು, ಆತ ಹುಚ್ಚರ ಆಸ್ಪತ್ರೆಯಲ್ಲಿದ್ದಾಗ ಬರೆದವು. 'ಆಧುನಿಕ ಡಿವೈನ್ ಕಾಮಿಡಿ' ಅನಿಸಿದ 'ಕ್ಯಾಂಟೋ'ದ ಕೊನೆಯ ಭಾಗ ಪೂರ್ತಿಯಾದದ್ದು ಅಲ್ಲಿಯೇ.

ಎಜ್ರಾ ಪೌಂಡ್ ತನ್ನ 87ನೆಯ ವಯಸ್ಸಿನಲ್ಲಿ 1972 ನವೆಂಬರ್ 1ರಂದು ಇಟಲಿಯ ವೆನಿಸ್‌ನಲ್ಲಿ ನಿಧನನಾದ.

## ಎಡ್ಗರ್ ಅಲೆನ್ ಪೋ

'ಇವನಲ್ಲಿ ಮೂರು ಭಾಗ ಅಸಾಧಾರಣ ಪ್ರತಿಭೆ. ಉಳಿದ ಎರಡು ಭಾಗ ಶುದ್ಧ ಬುರುಡೆ'.

— ಎಡ್ಗರ್ ಅಲೆನ್ ಪೋನನ್ನು ಕುರಿತು ಸಮಕಾಲೀನ ಕವಿ ಜೇಮ್ಸ್‌ರಸೆಲ್ ಲೊವೆಲ್ ಸೂಚಿಸಿದ ಅಭಿಪ್ರಾಯ ಇದು. ಸಾಹಿತ್ಯದ ಚರಿತ್ರೆಯಲ್ಲಿ ಪೋನಂಥ ದುರಂತ ವ್ಯಕ್ತಿತ್ವ ಇನ್ನೊಂದಿಲ್ಲ. 40 ವರ್ಷಬದುಕಿದಈತನ ಜೀವನದ ಅಧಿಕವೇಳೆ ಕುಡಿತ, ಅಫೀಮು ಸೇವನೆಯಲ್ಲೇ ಅಂತ್ಯ. ಆದರೂ ಈತ ಅಮೆರಿಕದ ಪ್ರಸಿದ್ಧ ಸಾಹಿತಿಯಾದ.


ಅಸಾಧಾರಣ ಕಥಾಸೃಷ್ಟಿ : ಎಡ್ಗರ್ ಅಲೆನ್ ಪೋ

1809 ಜನವರಿ 19ರಂದು ಬಾಸ್ಟನಿನ ನಟನೊಬ್ಬನ ಮಗನಾಗಿ ಜನಿಸಿದ ಎಡ್ಗರ್ ಪೋ ಇನ್ನೂ ಮೂರು ವರ್ಷದ ಮಗುವಾಗಿದ್ದಾಗಲೇ ತಂದೆ ತಾಯಿ ಇಬ್ಬರನ್ನೂ ಕಳೆದುಕೊಂಡ. ಶ್ರೀಮಂತ ತಂಬಾಕು ವ್ಯಾಪಾರಿಯೊಬ್ಬನ ದತ್ತಕ ಪುತ್ರನಾದ. ಅವನ ಪೂರ್ಣ ಹೆಸರಿನ ಮಧ್ಯದಲ್ಲಿ ಬರುವ 'ಅಲೆನ್' ಎಂಬುದು ಅವನ ದತ್ತು ತಂದೆಯಿಂದ ಬಂದದ್ದು. ಹೊಸ ಮನೆಯಲ್ಲಿ ಅವನನ್ನು ನೋಡಿಕೊಳ್ಳಲು ಒಬ್ಬಳು ನೀಗ್ರೋ ದಾದಿಯಿದ್ದಳು. ಅವಳು ಬಾಲಕನಿಗೆ ಭೂತ–ಪ್ರೇತಗಳ ಕಥೆ ಹೇಳುತ್ತಿದ್ದಳು. ಮುಂದೆ ಆತನ ಕಥೆಗಳಿಗೆ ಇದೇ ತಳಹದಿಯಾಯಿತು.

ಎಡ್ಗರ್ ಅಲೆನ್ ಪೋನ ಪ್ರಾಥಮಿಕ ಶಿಕ್ಷಣ ಇಂಗ್ಲೆಂಡಿನಲ್ಲಿ ನಡೆಯಿತು. ಅಮೆರಿಕಕ್ಕೆ ಮರಳಿದ ಪೋ 17ನೆಯ ವಯಸ್ಸಿಗೆ ವರ್ಜೀನಿಯಾ ವಿಶ್ವವಿದ್ಯಾಲಯವನ್ನು ಸೇರಿದ ; ಜೂಜಾಟ, ಕುಡಿತ ಕಲಿತುಕೊಂಡು ಸಾಲಕ್ಕೆ ಬಿದ್ದ. ಮೂರೇ ತಿಂಗಳಲ್ಲಿ ಮನೆಬಿಟ್ಟು ಓಡಿಹೋದ. ಸೈನ್ಯಕ್ಕೆ ಸೇರಿಕೊಂಡರೂ ಅಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಮನೆಗೆ ಹಿಂದಿರುಗಿದಾಗ ದತ್ತು ತಂದೆ ಛೀಮಾರಿಹಾಕಿ ಹೊರಕ್ಕಟ್ಟಿಬಿಟ್ಟ. ಪೋ 1834ರಲ್ಲಿ ತನ ಬಡ ಸೋದರತ್ತೆಯೊಡನೆ ಬಾಲ್ಟಿಮೋರ್‌ನಲ್ಲಿ ವಾಸಿಸತೊಡಗಿದ.

ಕೆಲಸ ಹುಡುಕುತ್ತ ತಿರುಗಾಡುತ್ತಿದ್ದಾಗ ಪತ್ರಿಕೆಯೊಂದರ ಸಣ್ಣ ಕಥೆ ಸ್ಪರ್ಧೆಗೆ 'ಬಾಟಲಿಯಲ್ಲಿ ಸಿಕ್ಕಿದ ಹಸ್ತಪ್ರತಿ' ಎಂಬ ಕಥೆಯನ್ನು ಕಳುಹಿಸಿದ. ಇದು ಪ್ರಥಮ ಬಹುಮಾನ ಪಡೆಯಿತು. ಐವತ್ತು ಡಾಲರು ಹಣವೂ ಬಂತು. ಅಲ್ಲದೆ ಪತ್ರಿಕೆಯೊಂದರ ಸಂಪಾದಕೀಯ ವರ್ಗದಲ್ಲಿ ಕೆಲಸವೂ ಸಿಕ್ಕಿತು. ತನ್ನ ಕ್ರಮಬದ್ಧವಲ್ಲದ ಜೀವನ, ಸಿಡುಕು ಸ್ವಭಾವಗಳಿಂದ ಪೋ ಆ ಕೆಲಸವನ್ನು ಕಳೆದುಕೊಂಡ. ಅನಂತರ ಒಂದಾದ ಮೇಲೆ ಒಂದರಂತೆ ಅನೇಕ ಪತ್ರಿಕೆಗಳಲ್ಲಿ ದುಡಿದರೂ ಅಲ್ಲೆಲ್ಲ ಜಗಳ ಕಾದು ಆ ಕೆಲಸವನ್ನು ಬಿಡುತ್ತಿದ್ದ. ಕೊನೆಗೆ ಸ್ವತಂತ್ರ ಲೇಖಕನ ಜೀವನವೇ ತನಗೆ ಸರಿ ಎಂದುಕೊಂಡು ಕಥೆ, ಕವನ ರಚನೆಯಲ್ಲಿ ಮಗ್ನನಾದ.

ಇದೇ ಸಮಯದಲ್ಲಿ ತನ್ನ ಸೋದರತ್ತೆಯ ಮಗಳನ್ನು ಪ್ರೀತಿಸತೊಡಗಿದ. ಆಕೆಗೆ 14 ವರ್ಷ ತುಂಬುವುದಕ್ಕೆ ಮೊದಲೇ ಅವಳನ್ನು ವಿವಾಹ

ಪಾದ. ಆಗ ಪೋಗೆ 27 ವರ್ಷ. ವಿವಾಹಾನಂತರದ ಕೆಲವು ವರ್ಷಗಳು ಅವನ ಜೀವನದಲ್ಲಿ ಅತ್ಯಂತ ಸುಖದ ಕಾಲ. ಆತನ ಸಾಹಿತ್ಯ ರಚನೆಯಲ್ಲಿ ಕೂಡ ಅದು ಫಲಪ್ರದ ಅವಧಿ.

ಪೋ ರಚಿಸಿದ ಅದ್ಭುತ ಅಲೌಕಿಕ ಘಟನೆಗಳಿಂದ ತುಂಬಿದ 'ರೇವನ್' ನಂಥ ಪದ್ಯಗಳು ಎಷ್ಟು ಪ್ರಸಿದ್ಧವೋ ಅವನ ಪ್ರೇಮಕವನಗಳೂ ಅಷ್ಟೇ ಜನಪ್ರಿಯ. 'ಘಂಟೆಗಳು', 'ಸ್ವರ್ಗ' ಅಸಾಮಾನ್ಯ ರೀತಿಯ ತಾಳಬದ್ಧ ಸಂಗೀತಮಯ ಕವನಗಳು. ಇವು ಎಷ್ಟು ಸುಂದರವೋ ಸಣ್ಣ ಕಥೆಗಳು ಅಷ್ಟೇ ಭಯಂಕರ. ಅವನ 'ಕರಿಬೆಕ್ಕು', 'ಚಾಡಿಕೋರ ಹೃದಯ' ಇವು ಭೀಕರ ಕಲ್ಪನೆಗಳನ್ನು ಒಳಗೊಂಡಿವೆ. ಪತ್ತೇದಾರಿ ಕಥೆಗಳ ರಚನೆಗೆ ಅಡಿಪಾಯ ಹಾಕಿದವನೇ ಪೋ. 'ಚಿನ್ನದ ತಗಣೆ', 'ಹೆಣದ ಮನೆಯಲ್ಲಿ ಕೊಲೆ' ಮುಂತಾದುವುಗಳಲ್ಲಿ ಬರುವ ಪತ್ತೇದಾರ ಆಗಸ್ಟ್ ಡ್ಯೂಪಿನ್ ಪಾತ್ರ ಅನಂತರ ಬಂದ ಆರ್ಥರ್ ಕಾನನ್ ಡಾಯ್ಲನ ಷರ್ಲಾಕ್ ಹೋಮ್ಸ್ ಪಾತ್ರಕ್ಕೆ ರೂಪವರ್ಷಿ.

ಮದುವೆಯಾದ ಆರನೆಯ ವರ್ಷದಲ್ಲಿ ತನ್ನ ಪ್ರೀತಿಯ ಪತ್ನಿ ಕ್ಷಯ ದಿಂದ ನರಳುತ್ತ ಸಾವನ್ನು ಇದಿರುನೋಡುತ್ತಿರುವಳೆಂಬುದು ತಿಳಿದಾಗ ಪೋ ದಿಕ್ಕುತೋಚದೆ ಕುಳಿತುಬಿಟ್ಟ. ಬೆನ್ನು ಬಿಡದ ಬಡತನ, ದುಃಖಗಳಿಂದ ತಪ್ಪಿಸಿಕೊಳ್ಳಲು ಅವನು ಕುಡಿತಕ್ಕೆ, ಅಫೀಮು ಸೇವನೆಗೆ ಮೊರೆಹೊಕ್ಕ. ಬುದ್ಧಿಭ್ರಮಣೆಯಾಗುವ ಲಕ್ಷಣಗಳೂ ಕಾಣತೊಡಗಿದುವು. ಆದರೆ ಕವನ ರಚನೆಯಲ್ಲಿ ಮಾತ್ರ ಈ ಲಕ್ಷಣಗಳಿರಲಿಲ್ಲ.

1847ರಲ್ಲಿ ಅವನ ಹೆಂಡತಿ ತೀರಿಕೊಂಡಾಗ ಅವನು ಬರೆದ 'ಅನಾಬೆಲ್ ಲೀ' ಶ್ರೇಷ್ಠ ಪ್ರೇಮಕವನ.

ಹೆಂಡತಿಯ ಸಾವಿನ ಬಳಿಕ ಪೋ ಹೆಚ್ಚುಹೆಚ್ಚಾಗಿ ಈ ಪ್ರಪಂಚದಿಂದ ದೂರ ಸರಿದ. ತಾನು ಶ್ರೇಷ್ಠ ಕವಿ ಆಗಲಿಲ್ಲ ಎಂಬ ಭಾವನೆ ಅವನನ್ನು ಕಾಡತೊಡಗಿತು.

1849 ಅಕ್ಟೋಬರ್ 7ರಂದು ಬಾಲ್ಟಿಮೋರಿನ ಮದ್ಯದಂಗಡಿಯೊಂದ ರಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿ ಬಿದ್ದಿದ್ದ ಅವನನ್ನು ಯಾರೋ ಆಸ್ಪತ್ರೆಗೆ ಸೇರಿಸಿದರು. ಅದೇ ದಿನ ಅವನ ಬಾಳೂ ಮುಗಿಯಿತು.

ಜೀವಿತಕಾಲದಲ್ಲಿ ಇದ್ದುದಕ್ಕಿಂತ ಹೆಚ್ಚಾಗಿ ಮರಣಾನಂತರ ಪೋನ ಕೀರ್ತಿ ಹೆಚ್ಚಿತು. ಅಮೆರಿಕದ ಅತ್ಯಂತ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬ ಎಂದು ಜನ ಅವನನ್ನು ಗೌರವಿಸತೊಡಗಿದರು.

## ಎಡ್ವರ್ಡ್ ಮಾನೆ

ಮೂವತ್ತು ವರ್ಷದ ಎಡ್ವರ್ಡ್ ಮಾನೆ ತನ್ನ ಮಹಾಕೃತಿ 'ಹುಲ್ಲು ಬಯಲಿನ ಮೇಲೆ ಭೋಜನ' ಎಂಬ ಚಿತ್ರವನ್ನು ಪ್ಯಾರಿಸಿನ ಕಲಾಪ್ರದರ್ಶನಕ್ಕೆ ಕಳುಹಿಸಿದಾಗ, ಪ್ರದರ್ಶನ ವ್ಯವಸ್ಥಾಪಕರು ಅದನ್ನು ಪ್ರದರ್ಶಿಸಲು ತಿರಸ್ಕರಿಸಿದರು.

ಅನಂತರ ಈ ಪ್ರದರ್ಶನಕ್ಕೆ ವಿರುದ್ಧವಾಗಿ ತಿರಸ್ಕೃತ ಕಲಾಕೃತಿಗಳ ಬೇರೊಂದು ಪ್ರದರ್ಶನವೇ ನಡೆಯಿತು. ಮಾನೆ ವಿರಚಿತ 'ಹುಲ್ಲು ಬಯಲಿನ ಮೇಲೆ ಭೋಜನ' ಟೀಕೆಗೆ ಗುರಿಯಾಯಿತು. ನಗ್ನ ಸ್ತ್ರೀಯೊಬ್ಬಳು ಇಬ್ಬರು ಪುರುಷರೊಡನೆ ಹುಲ್ಲಿನ ಮೈದಾನದಲ್ಲಿ ಕುಳಿತಿದ್ದ ಚಿತ್ರವನ್ನು ನೋಡಿದ ಜನ, ಅದು 'ಅಸಭ್ಯ', 'ಅಸಹ್ಯ' ಎಂದು ಮೂಗು ಮುರಿದರು. ಚಿತ್ರದ ಅಂಚಿನಲ್ಲಿದ್ದ ಅರ್ಧ ತಿಂದು ಬಿಸುಟಿದ್ದ ಆಹಾರವನ್ನು ನೋಡಿ "ಕೆಲವರು, ಮಾನೆಗೆ ಸೌಂದರ್ಯ ಪ್ರಜ್ಞೆ ಇಲ್ಲ" ಎಂದರು. ಎರಡು ವರ್ಷಗಳ ಬಳಿಕ ಪ್ಯಾರಿಸಿನ ಕಲಾ ವಸ್ತುಸಂಗ್ರಹಾಲಯ ದಲ್ಲಿ ಪ್ರದರ್ಶಿಸಲ್ಪಟ್ಟ ಮಾನೆಯ 'ಒಲಿಂಪಿಯಾ' ಎಂಬ ನಗ್ನ ಸ್ತ್ರೀಯೊಬ್ಬಳ ವರ್ಣ ಚಿತ್ರವನ್ನು ಜನರ ಛತ್ರಿಗಳ ತಿವಿತದಿಂದ ರಕ್ಷಿಸಲು, ವಿಶೇಷ ಪಹರೆ ಏರ್ಪಡಿಸ ಬೇಕಾಯಿತು. ಜನರ ಕೋಪದಿಂದ ತಪ್ಪಿಸಿ ಕೊಳ್ಳಲು ಮಾನೆ ಸ್ವಲ್ಪ ಕಾಲ ದೇಶ ವನ್ನೇ ಬಿಟ್ಟುಹೋದ. ಆದರೆ ಇಪ್ಪತ್ತು ವರ್ಷಗಳಾದ ಮೇಲೆ, ಇವನನ್ನು ಹತ್ತೊಂಬತ್ತನೆಯ ಶತಮಾನದ ಅತ್ಯಂತ ಶ್ರೇಷ್ಠ ಚಿತ್ರಕಾರರಲ್ಲಿ ಒಬ್ಬ ಎಂದು ಜನ ಒಪ್ಪಿಕೊಂಡರು.



'ಪ್ರಕೃತಿಯಲ್ಲಿ ಸ್ಪಷ್ಟ ಗೆರೆಗಳಿಲ್ಲ'—ಎಡ್ವರ್ಡ್ ಮಾನೆ

ಕಂಡದ್ದನ್ನು ಕಂಡಂತೆ ಚಿತ್ರಿಸಬೇಕು ಎಂಬ ಮನೋಭಾವದ ಕಲಾವಿದ, ಮಾನೆ. ಇವನ ಚಿತ್ರಗಳಲ್ಲಿ ಉತ್ಪ್ರೇಕ್ಷೆಯಿಲ್ಲ. ಹಿಂದಿನ ಶ್ರೇಷ್ಠ ಚಿತ್ರಕಾರರು ಬರೆದ ನಗ್ನ ಚಿತ್ರಗಳನ್ನು ಜನ ಗೌರವದಿಂದ ನೋಡುತ್ತಿದ್ದರೂ ಮಾನೆ ಬರೆದ ಹೆಂಗಸರ ಮುಖದಲ್ಲಿನ ದಿಟ್ಟತನ ಅವರಲ್ಲಿ ದಿಗ್ಭ್ರಮೆ ಉಂಟು ಮಾಡಿತು.

ಎಡ್ವರ್ಡ್ ಮಾನೆ ಹುಟ್ಟಿದ್ದು 1832 ಜನವರಿ 23ರಂದು. ತಂದೆ ಪ್ಯಾರಿಸಿನ ಶ್ರೀಮಂತ ವಕೀಲ. ಮಗನೂ ತನ್ನಂತೆ ವಕೀಲಿವೃತ್ತಿ ಕೈಗೊಳ್ಳ ಬೇಕು ಎಂಬುದು ಅವನ ಆಸೆಯಾಗಿತ್ತು, ಆದರೆ ಚಿತ್ರಕಾರನಾಗಬೇಕೆಂದು ಹುಡುಗನ ಹಂಬಲ. ಕೊನೆಗೆ ತಂದೆ – ಮಗ ಒಂದು ಒಪ್ಪಂದಕ್ಕೆ ಬಂದರು. ಮಾನೆ ನೌಕಾದಳವನ್ನು ಸೇರಿದ. ಇವನಿದ್ದ ನೌಕೆ ರಿಯೋಡಿಜನೀರೋ ರೇವಿಗೆ ಭೇಟಿ ಕೊಟ್ಟಾಗ ಹದಿನೇಳು ವರ್ಷದ ಮಾನೆ ನೌಕೆಯಿಂದ ತಪ್ಪಿಸಿ ಕೊಂಡು ಮನೆಗೆ ಹಿಂದಿರುಗಿದ. ಈ ಬಾರಿ ಅವನ ತಂದೆ ತನ್ನ ಹಟವನ್ನು ಬಿಟ್ಟು, ಮಗ ಚಿತ್ರಕಾರನಾಗಿ ತರಬೇತಿ ಪಡೆಯಲು ಒಪ್ಪಿಗೆ ಕೊಟ್ಟ.

ಮಾನೆಯ ಗುರು ಪ್ರಸಿದ್ಧ ಚಿತ್ರಕಾರ ಥಾಮಸ್ ಕೂಟರ್. ತನ್ನ ಶಿಷ್ಯನ ಪ್ರತಿಭೆಯನ್ನು ಕಂಡು ಕೂಟರ್‌ಗೆ ಮೊದಮೊದಲು ಸಂತೋಷವೇ ಆಯಿತು. ಆದರೆ ಮಾನೆ ತನ್ನ ಚಿತ್ರಲೇಖನದಲ್ಲಿ ಸ್ವತಂತ್ರ ವಿಧಾನ ಗಳನ್ನು ಅನುಸರಿಸಿದಾಗ ಅವನು ಅಸಮಾಧಾನಗೊಂಡ. ಮಾನೆ ತನ್ನ ಮಾರ್ಗವನ್ನು ಬಿಡಲಿಲ್ಲ. ಹಲವು ಬಾರಿ ಇಟಲಿ, ಜರ್ಮನಿ, ಆಸ್ಟ್ರಿಯ, ಹಾಲೆಂಡ್‌ಗಳಲ್ಲಿ ಪ್ರವಾಸ ಕೈಗೊಂಡು ತನ್ನ ಚಿತ್ರ ಕಲಾಭ್ಯಾಸವನ್ನು ಮುಂದುವರಿಸಿದ.

ಇದೇ ಸಮಯದಲ್ಲಿ ಮಾನೆಗೂ ವಯಸ್ಸಿನಲ್ಲಿ ಅವನಿಗಿಂತ ತುಸು ಹಿರಿಯಳಾದ ಅವನ ಪಿಯಾನೋ ಅಧ್ಯಾಪಕಿಗೂ ಪ್ರಣಯ ಬೆಳೆಯಿತು. 1852ರಲ್ಲಿ ಅವರಿಗೊಂದು ಗಂಡುಮಗುವಾಯಿತು. ಹತ್ತು ವರ್ಷಗಳ ನಂತರ ಮಾನೆಯ ತಂದೆ ಸತ್ತಮೇಲೆ. ಅವನ ಆಸ್ತಿಯಲ್ಲಿ ಒಂದು ಪಾಲು ಮಾನೆಗೆ ದೊರೆಯಿತು. ಆಮೇಲೆ ಪ್ರೇಯಸಿಯನ್ನು ಆತ ಮದುವೆಯಾದ.

1861ರಲ್ಲಿ ಮಾನೆಯ ಕಲಾಕೃತಿ 'ಗಿಟಾರ್ ವಾದಕ' ಎಂಬ ಚಿತ್ರಕ್ಕೆ ಫ್ರಾನ್ಸಿನ ಕಲಾ ಅಕಾಡೆಮಿಯ ಕಲಾ ಪ್ರದರ್ಶನದಲ್ಲಿ ಎಡೆ ದೊರೆಯಿತು. ಆದರೆ ಅನಂತರವೂ ಅವನ ಹಲವು ಚಿತ್ರಗಳು ತಿರಸ್ಕೃತವಾದುವು. ಮಾನೆ ಇದರಿಂದ ಧೈರ್ಯಗೆಡದೆ ತನ್ನ ರೀತಿಯಲ್ಲೇ ಚಿತ್ರ ಬರೆಯುವುದನ್ನು ಮುಂದುವರಿಸಿದ. ಬಣ್ಣಗಳನ್ನು ವಿಶಿಷ್ಟ ರೀತಿಯಲ್ಲಿ ಬೆರೆಸಿ ಬೆಳಕಿನ ಪರಿಣಾಮವನ್ನು ಚಿತ್ರಿಸುವ ರೀತಿಯನ್ನು ಅವನು ಕಂಡುಕೊಂಡ. 'ಪ್ರಕೃತಿಯಲ್ಲಿ ಸ್ಪಷ್ಟ ಗೆರೆಗಳಿಲ್ಲ' ಅನ್ನುತ್ತಿದ್ದ ಈತ ತನ್ನ ಚಿತ್ರರಚನೆಯಲ್ಲಿ ಕೂಡ ಇದೇ ತತ್ತ್ವವನ್ನು ಅನುಸರಿಸಿದ.

ಯಾವುದೇ ಚಿತ್ರದಲ್ಲಿ ಬೆಳಕು ಅತ್ಯಂತ ಪ್ರಮುಖ ಅಂಶ ಎಂಬುದು ಮಾನೆಯ ಇನ್ನೊಂದು ಅಭಿಪ್ರಾಯ. ಯಾವುದೇ ವಸ್ತುವಿನ ಮೇಲೆ ಸರಿಯಾದ ರೀತಿಯಲ್ಲಿ ಬೆಳಕು ಬೀಳುತ್ತಿದ್ದರೆ ಮಾತ್ರ ಅದು ಚಿತ್ರಿಸಲು ಯೋಗ್ಯವಾಗುತ್ತದೆ ಎನ್ನುತ್ತಿದ್ದ. ಕಡು ಬಣ್ಣಗಳನ್ನು ಉಪಯೋಗಿಸುತ್ತಿದ್ದ ಮಾನೆಯ ಚಿತ್ರಣ ಪದ್ಧತಿ ಆಗಿನ ಕಾಲದಲ್ಲಿ ಒರಟು ಕೆಲಸ ಅನಿಸಿಕೊಂಡಿತು.

ಮಾನೆಗೆ ಮೊದಲಿನಿಂದಲೂ ಜನಪ್ರಿಯತೆ ಮತ್ತು ಸರಕಾರದ ಗೌರವಗಳಿಗಾಗಿ ವಿಶೇಷ ಹಂಬಲ. ವಿಮರ್ಶಕರ ಮೆಚ್ಚುಗೆ ಪಡೆಯಲು ಪ್ರಯತ್ನಿಸುತ್ತಲೇ ಇದ್ದ. 1883 ಏಪ್ರಿಲ್ 20ರಂದು ಅವನು ಸಾಯುವುದಕ್ಕೆ ಕೇವಲ ಎರಡು ವರ್ಷಗಳ ಮುಂಚೆ ಮಾತ್ರ ಜನತೆ ಮಾನೆಯ ಪ್ರತಿಭೆಯನ್ನು ಗುರುತಿಸಿತು. ಹಲವು ಗೌರವ ಪ್ರಶಸ್ತಿಗಳೂ ಅವನಿಗೆ ದೊರೆತುವು.

## ಎಡ್ವರ್ಡ್ ಲಿಯರ್

ಎಡ್ವರ್ಡ್ ಲಿಯರ್‌ನ ತಂದೆ ಶ್ರೀಮಂತ. ಅವನಿಗೆ ಇಪ್ಪತ್ತೊಂದು ಮಂದಿ ಮಕ್ಕಳು. ಇವರಲ್ಲಿ ಕೊನೆಯವನೇ ಎಡ್ವರ್ಡ್ ಲಿಯರ್. ತನ್ನ ಮಕ್ಕಳ ಉಪಯೋಗಕ್ಕೆಂದು ಆತ 12 ಗಾಡಿಗಳನ್ನೂ ಅನೇಕ ಮಂದಿ ಸೇವಕರನ್ನೂ ಇಟ್ಟಿದ್ದ. ಆತ ಒಂದು ದಿನ ಇದ್ದಕ್ಕಿದ್ದಂತೆಯೇ ಭಾರಿ ನಷ್ಟಕ್ಕೊಳಗಾಗಿ ಭಿಕಾರಿಯಾದ. ಶ್ರೀಮಂತ ಮನೆತನ ಒಮ್ಮಿಂದೊಮ್ಮೆಲೆ ಬಡತನದ ಬೇಗೆಯಲ್ಲಿ ಸಿಲುಕಿತು. ಎಲ್ಲರಿಗಿಂತಲೂ ಹಿರಿಯಳಾದ ಮಗಳು ಕಿರಿಯ ತಮ್ಮ ಲಿಯರ್‌ನನ್ನು ತನ್ನೊಡನೆ ಇಟ್ಟುಕೊಂಡು ಸಾಕಿದಳು.

ಈ ಲಿಯರ್ ಮುಂದೆ ಚಿತ್ರಕಾರನೆಂದೂ ಆಂಗ್ಲ ಸಾಹಿತ್ಯದ ಆದ್ಯ ಅಸಂಬದ್ಧ ಕವಿಯೆಂದೂ ಹೆಸರು ಪಡೆದ.

ಲಂಡನಿನ ಬಳಿ 1812ರ ಮೇ 12ರಂದು ಆತ ಜನಿಸಿದ. 15 ವರ್ಷದ ವಯಸ್ಸಿನಲ್ಲೇ ಚಿತ್ರ ಬರೆದು ಜೀವನ ಸಾಗಿಸಬೇಕಾಯಿತು. 19 ವರ್ಷವಾದಾಗ ಲಂಡನಿನ ಮೃಗಾಲಯದಲ್ಲಿ ಹಕ್ಕಿಗಳ ಚಿತ್ರ ಬರೆಯುವ ಕೆಲಸ ಸಿಕ್ಕಿತು. ಇವನು ಬರೆದ ಸೊಗಸಾದ ಹಾಗೂ ದೋಷರಹಿತವಾದ ಆ ಚಿತ್ರಗಳನ್ನು ಡರ್ಬಿಯ ಅರ್ಲ್ ಕಂಡು, ತಾನು ಸಂಗ್ರಹಿಸಿ ಸಾಕಿಕೊಂಡಿದ್ದ ಪ್ರಾಣಿಗಳ ಚಿತ್ರ ಬರೆಯುವ ಕೆಲಸವನ್ನು ಲಿಯರ್‌ಗೆ ಒಪ್ಪಿಸಿದ.

ಲಿಯರ್ ನಾಲ್ಕು ವರ್ಷಗಳ ಕಾಲ ಇವನ ಮನೆಯಲ್ಲಿಯೇ ಇದ್ದ. ಅರ್ಲ್‌ನ ಮೊಮ್ಮಕ್ಕಳೊಡನೆ ಆಡುತ್ತ, ಅವರನ್ನು ನಗಿಸಲು, ಅರ್ಥವಿಲ್ಲದ ಆದರೆ ಅತ್ಯಂತ ಸುಂದರವಾದ ಪ್ರಾಸ ಲಯಗಳಿಂದ ಕೂಡಿದ ಪದ್ಯಗಳನ್ನು ರಚಿಸಿ ಅವರಿಗೆ ಓದಿ ಹೇಳುತ್ತಿದ್ದ. ಅಲ್ಲದೆ ಪದ್ಯಗಳಿಗೆ ತಕ್ಕ ಚಿತ್ರಗಳನ್ನೂ ಲಿಯರ್ ಬರೆದು ತೋರಿಸುತ್ತಿದ್ದ.

ಲಿಯರ್‌ನ ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ. ಹವಾ ಬದಲಾವಣೆಗಾಗಿ ಅವನು ಇಟಲಿ, ಗ್ರೀಸ್, ಈಜಿಪ್ಟ್, ಭಾರತ ಮೊದಲಾದ ದೇಶಗಳಲ್ಲಿ ಪ್ರವಾಸ ಮಾಡಿದ.

1846ರಲ್ಲಿ ವಿಕ್ಟೋರಿಯಾ ರಾಣಿಗೆ ಚಿತ್ರಕಲೆಯನ್ನು ಕಲಿಸುವ ಕೆಲಸ ಇವನ ಪಾಲಿಗೆ ಬಂತು.

ಲಿಯರ್ ವೃತ್ತಿಯಲ್ಲಿ ಚಿತ್ರಕಾರನಾದರೂ ಅವನ ಸ್ವೈಜಪ್ರತಿಭೆ ಪ್ರಕಟವಾದದ್ದು ಅವನ 'ಅಸಂಬದ್ಧ ಕವನ'ಗಳಲ್ಲಿ. ಅತ್ಯಂತ ವಿಚಿತ್ರ ಕಲ್ಪನೆ. ಅದಕ್ಕೆ ತಕ್ಕ ಭಾಷೆ, ಅವಶ್ಯವಾದ ಕಡೆ ಹೊಸ ಹೊಸ ಸಂಯುಕ್ತ ಪದಗಳನ್ನು ಲೀಲಾಜಾಲವಾಗಿ ಸೃಷ್ಟಿಸುವ ಚಾತುರ್ಯ, ತನ್ನ ಹಾಸ್ಯ ಕವನಗಳಿಗೆ ತಕ್ಕ ಹಾಸ್ಯ ಚಿತ್ರ ರಚಿಸುವ ಶಕ್ತಿ –ಇವೆಲ್ಲ ಅವನಿಗೆ ಸಿದ್ಧಿಸಿದ್ದುವು. ಇವನ ಕವನಗಳ ವಸ್ತು ತೀರ ಸರಳ ಹಾಗೂ ಅಸಂಬದ್ಧ. ಕುಳಿತು ಕುಳಿತು ಬೇಸರವಾಗಿ ವಿಹಾರ ಹೊರಡುವ ಕುರ್ಚಿ ಟೇಬಲುಗಳು ದಾರಿ ತಪ್ಪುವುದು—ಇಂಥದು ಇವನ ಕವನ ವಸ್ತು. ಐದು ಸಾಲಿನ 'ಲಿಮರಿಕ್' (ಹಾಸ್ಯಪದ್ಯ) ಗಳನ್ನು ಅತ್ಯಂತ ಜನಪ್ರಿಯಗೊಳಿಸಿದ ಕವಿಗಳಲ್ಲಿ ಲಿಯರ್ ಪ್ರಮುಖ. ಇವನ ಲಿಮರಿಕ್‌ಗಳಲ್ಲಿ ಪರಿಚಿತವಾದ ಒಂದನ್ನು ಎಸ್. ವಿ. ರಂಗಣ್ಣನವರು ಹೀಗೆ ಕನ್ನಡಿಸಿದ್ದಾರೆ :



ಹಿಂದೆ ಅಲ್ಲೊಬ್ಬ ಮುದುಕಗಿತ್ತೊಂದು ದಾಡಿ  
ಅವನೆಂದ 'ನಾ ಭಯಪಟ್ಟಿದ್ದು ಸರಿ ನೋಡಿ  
ಎರಡು ಗೂಬೆ, ಕಾಡು ಹಕ್ಕಿಯೊಂದು  
ನಾಲ್ಕು ಬಾನಾಡಿ, ಕೋಳಿಯೊಂದು  
ಎಲ್ಲ ಗೂಡು ಕಟ್ಟಲು ತಾಣ ನನ್ನ ದಾಡಿ.'

ದೊಡ್ಡವರು ಕಾಲಹರಣಕ್ಕಾಗಿ, ಚಿಕ್ಕವರು ಕುತೂಹಲಕ್ಕಾಗಿ ಮತ್ತು ನಕ್ಕು ನಲಿಯುವುದಕ್ಕಾಗಿ ಓದುವ ಇವನ ಕವನಗಳು ಮಕ್ಕಳ ಸಾಹಿತ್ಯದಲ್ಲಿ ಒಂದು ಹೆಗ್ಗುರುತು.

ಜನರೊಡನೆ ಸುಲಭವಾಗಿ ಬೆರೆತು ನಲಿಯುವುದಕ್ಕೂ ಚೆನ್ನಾಗಿ ರೂಢಿಸಿಕೊಂಡಿದ್ದ ವ್ಯಕ್ತಿ ಲಿಯರ್. ಅವನು ಮದುವೆಯಾಗಲಿಲ್ಲ, ಕೊನೆಯ

ವರೆಗೂ ಅವಿವಾಹಿತನಾಗಿ ಉಳಿದ. ಇವನು ತನ್ನ ಜೀವನದಲ್ಲಿ ಅನುಭವಿಸಿದ ದುಃಖದ ನೆರಳು ಇವನ ಕೆಲವು ಹಾಸ್ಯಕವನಗಳಲ್ಲಿ ಕಂಡುಬರುತ್ತದೆ. 'ದಿ ಬುಕ್ ಆಫ್ ನಾನ್‌ಸೆನ್ಸ್' ಮುಂತಾದ ಅಸಂಬದ್ಧ ಕವನಗಳ ನಾಲ್ಕು ಸಂಕಲನಗಳನ್ನಲ್ಲದೆ 'ಜರ್ನಲ್ಸ್ ಆಫ್ ಎ ಲ್ಯಾಂಡ್‌ಸ್ಕೇಪ್ ಪೇಂಟರ್ ಇನ್ ಗ್ರೀಸ್ ಅಂಡ್ ಆಲ್ಬೇನಿಯ' ಮುಂತಾದ ಪ್ರವಾಸ ಸಾಹಿತ್ಯವನ್ನೂ ಇವನು ರಚಿಸಿದ್ದಾನೆ.

ತನ್ನ ಪ್ರಿಯ ಬೆಕ್ಕಿನೊಂದಿಗೆ ಲಿಯರ್ ಜೀವನದ ಕೊನೆಯ ದಿನಗಳನ್ನು ಇಟಲಿಯಲ್ಲಿ ಕಳೆದು, ಅಲ್ಲಿಯೇ 1888ರ ಜನವರಿ 29ರಂದು ನಿಧನನಾದ.

ಲೂಯಿಸ್ ಕ್ಯಾರಲ್‌ನೊಂದಿಗೆ ಇವನ ಹೆಸರೂ ಹಾಸ್ಯಸಾಹಿತ್ಯದಲ್ಲಿ ಚಿರಕಾಲ ನಿಲ್ಲುವಂಥದು.

**ನೋಡಿ :** ಲೂಯಿಸ್ ಕ್ಯಾರಲ್

## ಎನ್. ಎಸ್. ಸುಬ್ಬರಾವ

ಬಹುಮುಖ ಪ್ರತಿಭೆಯ ವ್ಯಕ್ತಿ ಎನ್. ಎಸ್. ಸುಬ್ಬರಾವ್. ತಂದೆ ನಂಜನಗೂಡು ಸುಬ್ಬರಾಯರು. ಓದಿದ್ದು—ಮೈಸೂರು, ಬೆಂಗಳೂರು, ಮದರಾಸುಗಳಲ್ಲಿ. ಕೇಂಬ್ರಿಜ್‌ನಲ್ಲಿ ಎಂ.ಎ., ಬಾರ್ ಅಟ್ ಲಾ ಪದವಿಗಳನ್ನು ಪಡೆದರು. ಅಸಾಮಾನ್ಯ ಬುದ್ಧಿವಂತರಾದ ಸುಬ್ಬರಾಯರಿಗೆ ಪ್ರತಿ ತರಗತಿಯಲ್ಲೂ ಮೊದಲ ದರ್ಜೆ ತಪ್ಪಿದ್ದೇ ಇಲ್ಲ. ಅವರು ಅರ್ಥಶಾಸ್ತ್ರದಲ್ಲಿ ಪ್ರವೀಣರು.

ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದ ಮೇಲೆ ಸುಬ್ಬರಾಯರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾದರು. ಅನಂತರ ಮೈಸೂರು ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರೂ ಆದರು. ಮುಂದೆ ಮೈಸೂರು ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿಯಾದಾಗ, ವಿದ್ಯಾರ್ಥಿಗಳಿಗೆ ಮಾತೃಭಾಷೆಯಾದ ಕನ್ನಡದಲ್ಲಿ ಶಿಕ್ಷಣ ಕೊಟ್ಟರೆ ಅವರು ಸುಲಭವಾಗಿ ವಿಷಯಗ್ರಹಣ ಮಾಡುತ್ತಾರೆ ಎಂಬುದನ್ನು ಮನಗಂಡರು. ಮಾಧ್ಯಮಿಕ ಹಾಗೂ ಹೈಸ್ಕೂಲು ತರಗತಿಗಳಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದರು. ಸುಬ್ಬರಾಯರು ಅಂತರರಾಷ್ಟ್ರೀಯ ಖ್ಯಾತಿಯ ವಿದ್ವಾಂಸರು ಮಾತ್ರವಲ್ಲದೆ ದಕ್ಷ ಆಡಳಿತಗಾರರೂ ಆಗಿದ್ದರು; ಉತ್ತಮ ಶಿಕ್ಷಕರೂ ಆಗಿದ್ದರು.

ವಿಶ್ವವಿದ್ಯಾಲಯಗಳು ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುವಷ್ಟರಿಂದಲೇ ತೃಪ್ತಿಹೊಂದದೆ, ಸಾಮಾನ್ಯಜನರ ಸಂಪರ್ಕವನ್ನು ಬೆಳೆಸಿಕೊಂಡು ಅವರ ಜ್ಞಾನಭಂಡಾರವನ್ನು ವಿಸ್ತರಿಸುವ ಕಾರ್ಯದಲ್ಲಿಯೂ ನೆರವಾಗಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಅವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ನೇಮಕಗೊಂಡ ಮೇಲೆ ಒಳನಾಡಿನ ಅನೇಕ ಸ್ಥಳಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿದರು. ಅಲ್ಲದೆ ಆ ಭಾಷಣಗಳನ್ನು ಬರೆಸಿ ಪುಸ್ತಕ ರೂಪದಲ್ಲಿ ಪ್ರಕಟಿಸುವ ವ್ಯವಸ್ಥೆ ಮಾಡಿದರು. ಸುಲಭ ಬೆಲೆಯ ಈ ವಿಚಾರಪೂರ್ಣ ಪುಸ್ತಕಗಳು ಜನಪ್ರಿಯವಾದುವು; ವಿಶ್ವವಿದ್ಯಾಲಯ ಶಿಕ್ಷಣ ದೊರೆಯದಿದ್ದವರಿಗೆ ಅನೇಕ ವಿಚಾರಗಳಲ್ಲಿ ಒಳ್ಳೆಯ ತಿಳಿವಳಿಕೆಯನ್ನು ಒದಗಿಸುವ ಉಪಕರಣಗಳಾದುವು. ಮೈಸೂರು ವಿಶ್ವವಿದ್ಯಾನಿಲಯ ಉಪಕುಲಪತಿಸ್ಥಾನದಿಂದ ನಿವೃತ್ತರಾದ ಮೇಲೆ ಅಲಹಾಬಾದ್ ವಿಶ್ವವಿದ್ಯಾನಿಲಯದ ಆಹ್ವಾನವನ್ನು ಅಂಗೀಕರಿಸಿ, ಅಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿ ಸ್ವಲ್ಪ ಕಾಲ ಕೆಲಸ ಮಾಡಿದರು.



ಬಹುಮುಖ ಪ್ರತಿಭೆ : ಎನ್. ಎಸ್. ಸುಬ್ಬರಾವ್

ಸುಬ್ಬರಾಯರು ಬಹುಭಾಷಾವಿದರು. ಕನ್ನಡ, ಇಂಗ್ಲಿಷ್, ಫ್ರೆಂಚ್, ಜರ್ಮನ್ ಭಾಷೆಗಳನ್ನು ಕಲಿತಿದ್ದರು. ಸಾಹಿತ್ಯ ಸಂಗೀತಗಳಲ್ಲಿ ಅವರಿಗೆ ಅಪಾರ ಆಸಕ್ತಿಯಿತ್ತು. ವಿದ್ವಾಂಸರನ್ನೂ ತರುಣ ಕವಿಗಳನ್ನೂ ಸಂಗೀತಗಾರರನ್ನೂ ಮನೆಗೆ ಕರೆಸಿಕೊಂಡು ಅವರನ್ನು ಆದರಿಸಿ ಪ್ರೋತ್ಸಾಹಿಸುತ್ತಿದ್ದರು. ನಾಟಕ ನೋಡುವುದು, ಕಾವ್ಯವಾಚನವನ್ನು ಕೇಳುವುದು ಅವರಿಗೆ ತುಂಬ ಪ್ರಿಯವಾಗಿದ್ದ ಕಾರ್ಯಕ್ರಮ.

ಸುಬ್ಬರಾಯರ ಜ್ಞಾಪಕಶಕ್ತಿ ಅದ್ಭುತವಾದದ್ದು. ಓದಿದ್ದು ಕೇಳಿದ್ದು ನೋಡಿದ್ದು ಅವರ ನೆನಪಿನಿಂದ ಮರೆಯಾದುದೇ ಇಲ್ಲ. ಒಮ್ಮೆ ಪರಿಚಯ ಮಾಡಿಕೊಂಡಿದ್ದರೂ ಸಾಕು, ಅವರನ್ನು ಅನೇಕ ವರ್ಷಗಳ ಮೇಲೆ ಕಂಡರೂ, ಹಿಂದೆ ಇಂಥ ವರ್ಷ ಇಂಥ ಸಂದರ್ಭದಲ್ಲಿ ನೋಡಿದ್ದೆ ಎಂದು ಹೇಳುತ್ತಿದ್ದರು. ಇದರಿಂದಾಗಿ ತಮ್ಮ ಸಹಸ್ರಾರು ವಿದ್ಯಾರ್ಥಿಗಳಲ್ಲಿ ಯಾರನ್ನು ಎಲ್ಲಿ ಕಂಡರೂ ಒಡನೆಯೇ ಗುರುತು ಹಿಡಿಯುವುದು ಅವರಿಗೆ ಸಾಧ್ಯವಾಗಿತ್ತು.

ಸುಬ್ಬರಾಯರದು ಸ್ವಚ್ಛ ನಡೆ, ದಿಟ್ಟ ನಿಲುವು, ಬಿಚ್ಚು ನುಡಿ, ತೀಕ್ಷ್ಣ ಬುದ್ಧಿ, ಧಾರಾಳ ಸ್ವಭಾವ. ಊಟ ಉಪಚಾರಗಳಲ್ಲಿ, ಬಟ್ಟೆ ಬರೆಯಲ್ಲಿ ಅವರು ಹುಟ್ಟು ಕಲಾವಿದರಂತೆ ಇರುತ್ತಿದ್ದರು. ಎಲ್ಲದರಲ್ಲೂ ಅಚ್ಚುಕಟ್ಟು. ಅವರು ಬರೆದರೆ ಅಕ್ಷರಗಳು ಮುತ್ತು ಪೋಣಿಸಿದಂತೆ ಅಂದವಾಗಿ ಸುಸ್ಪಷ್ಟವಾಗಿರುತ್ತಿದ್ದುವು. ಉಡುಗೆ ತೊಡುಗೆಗಳಲ್ಲೂ ಹಾಗೆಯೇ ಸಂಪನ್ನ, ಸುಂದರ. ಅವರ ಅಚ್ಚುಕಟ್ಟುತನವನ್ನು ಮೆಚ್ಚಿದವರು, 'ಸುಬ್ಬರಾಯರು ಇಸ್ತ್ರಿ ಮಾಡಿದ ಬಟ್ಟೆ ತೊಡುವುದಿಲ್ಲ, ಬಟ್ಟೆ ತೊಟ್ಟ ಮೇಲೆ

[illegible] ಎಂದು ಹೇಳಲಾಗುತ್ತಿದ್ದುದುಂಟು. ತಾವು ಸ್ವತಂತ್ರವಾಗಿದ್ದ ವೇಳೆಯಲ್ಲೂ ಬರುವವರನ್ನು ಕಂಡರೆ ಅವರಿಗೆ ತುಂಬ ಸಂತೋಷ; ಅವರನ್ನು ಸಹಾಯ ಮಾಡುತ್ತಿದ್ದರು. ಬುದ್ಧಿವಂತರಾದ ವಿದ್ಯಾರ್ಥಿಗಳಿಗೆ ತುಂಬ ಪ್ರೋತ್ಸಾಹ ಕೊಡುತ್ತಿದ್ದರು.

ಅರ್ಥಶಾಸ್ತ್ರದಲ್ಲಿ ಪಾರಂಗತರಾಗಿದ್ದರೂ ಸುಬ್ಬರಾಯರು ಬರೆದದ್ದು ಬಹಳ ಬಹು ಸ್ವಲ್ಪ. ಯಾವುದೇ ರಾಷ್ಟ್ರದ ಅಭಿವೃದ್ಧಿಗೆ ಯೋಜನೆ ಅವಶ್ಯ ಎಂಬುದು ಅವರ ಅಭಿಪ್ರಾಯ. ಮದರಾಸು ವಿಶ್ವವಿದ್ಯಾನಿಲಯದಲ್ಲಿ ಅವರು ಮಾಡಿದ 'ಸಮ್ ಆಸ್ಪೆಕ್ಟ್ಸ್ ಆಫ್ ಎಕನಾಮಿಕ್ ಪ್ಲಾನಿಂಗ್' ಉಪನ್ಯಾಸಗಳು ಯೋಜನಾ ಸಾಹಿತ್ಯಕ್ಕೆ ಒಂದು ಅಪೂರ್ವ ಕೊಡುಗೆ. ಈ ಭಾಷಣಗಳು ಪುಸ್ತಕರೂಪದಲ್ಲೂ ಪ್ರಕಟವಾಗಿವೆ. ಅರ್ಥಶಾಸ್ತ್ರದಲ್ಲಿ ಅವರಿಗಿದ್ದ ಪರಿಣತಿಯನ್ನು ಗಮನಿಸಿ ಇಂಡಿಯಾ ಸರಕಾರ ಅವರನ್ನು ಸುಂಕ ನಿರ್ಧಾರ ಮಂಡಲಿಯ ಸದಸ್ಯರನ್ನಾಗಿ ನಿಯಮಿಸಿತು. ಅಖಿಲ ಭಾರತ ಆರ್ಥಿಕ ಸಮ್ಮೇಳನದ ಅಧ್ಯಕ್ಷರಾಗುವ ಗೌರವವೂ ಇವರಿಗೆ ದೊರೆಯಿತು.

ಕನ್ನಡದ ಮೇಲೆ ಸುಬ್ಬರಾಯರಿಗಿದ್ದ ಅಭಿಮಾನ ಅಪಾರವಾದದ್ದು. ಕನ್ನಡ ಶಿಕ್ಷಣ ಮಾಧ್ಯಮವಾಗುವುದು ಮಾತ್ರವಲ್ಲದೆ ಅದು ಆಡಳಿತ ಭಾಷೆಯೂ ಆಗಬೇಕೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿಸಿದರು. ಕನ್ನಡದಲ್ಲಿ ವಿಚಾರ ಸಾಹಿತ್ಯ ಬೆಳೆಯಲು ಸುಬ್ಬರಾಯರು ಪ್ರೋತ್ಸಾಹ ಕೊಟ್ಟರು.

ಇವರ ಈ ಸೇವೆಯನ್ನು ಲಕ್ಷ್ಯಕ್ಕೆ ತಂದುಕೊಂಡು 1935ರಲ್ಲಿ ಮುಂಬಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಲಾಯಿತು. ಕನ್ನಡದ ಉನ್ನತಿಯನ್ನು ಸಾಧಿಸಲು ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಕೊಟ್ಟಿರುವ ಸಲಹೆಗಳು ಅಮೂಲ್ಯವಾದುವು.

ಮೈಸೂರು ಸಂಸ್ಥಾನಕ್ಕೂ ಕನ್ನಡ ಭಾಷಾಸಾಹಿತ್ಯಗಳ ಅಭಿವೃದ್ಧಿಗೂ ಸುಬ್ಬರಾಯರು ಸಲ್ಲಿಸಿದ ಸೇವೆಗಾಗಿ ಮೈಸೂರು ಮಹಾರಾಜರು ಇವರಿಗೆ 'ರಾಜಮಂತ್ರ ಪ್ರವೀಣ' ಎಂಬ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಿದರು.

ಸುಬ್ಬರಾಯರು ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ ಕೆಲ ಕಾಲ ಪ್ರಾಧ್ಯಾಪಕರಾಗಿದ್ದ ಮೇಲೆ, 1943ನೆಯ ಜೂನ್ 29ರಂದು ಹೃದಯಾಘಾತದಿಂದ ನಿಧನಹೊಂದಿದರು.

## ಎಪ್‌ಸ್ಟೈನ್

ಶಾಲೆಗೆ ಸೇರಿದ ಹುಡುಗನಿಗೆ ಪಾಠದ ವಿಷಯಕ್ಕಿಂತ ಅಧ್ಯಾಪಕರ ಚಿತ್ರ ಬರೆಯುವುದೇ ಹೆಚ್ಚು ಇಷ್ಟವಾಗಿತ್ತು. ಚಿತ್ರಕಲೆಯಲ್ಲಿ ಆತನಿಗೆ ಇದ್ದ ವಿಶೇಷ ಪ್ರತಿಭೆಯನ್ನು ಕಂಡು ಉಪಾಧ್ಯಾಯರು, ಅವನು ಇತರ ವಿಷಯಗಳಲ್ಲಿ ಅನುತ್ತೀರ್ಣನಾದಾಗಲೂ ಬಯ್ಯಲಿಲ್ಲ.

ಈ ಹುಡುಗನೇ ಖ್ಯಾತಶಿಲ್ಪಿ ಜೇಕಬ್ ಎಪ್‌ಸ್ಟೈನ್.

ಜೇಕಬ್ ಎಪ್‌ಸ್ಟೈನ್ ಹುಟ್ಟಿದ್ದು ನ್ಯೂಯಾರ್ಕಿನಲ್ಲಿ, 1880 ನವೆಂಬರ್ 10ರಂದು. ಇಪ್ಪತ್ತನೆಯ ವಯಸ್ಸಿನಲ್ಲಿ ಎಪ್‌ಸ್ಟೈನ್ ನ್ಯೂಯಾರ್ಕಿನ ಚಿತ್ರಕಲಾಸಂಸ್ಥೆಯೊಂದನ್ನು ಸೇರಿಕೊಂಡ. ಆಗಲೇ ಅವನಿಗೆ ಶಿಲ್ಪಕಲೆಯನ್ನು ಕುರಿತು ಆಸಕ್ತಿ ಹುಟ್ಟಿದ್ದು. ಶಿಕ್ಷಣ ಮುಗಿಸಿ, ಕಂಚಿನ ಮಾದರಿಗಳನ್ನು ತಯಾರಿಸುತ್ತಿದ್ದ ಎರಕಶಾಲೆಯಲ್ಲಿ ಕೆಲಸಕ್ಕೆ ಸೇರಿದ; ರಾತ್ರಿಹೊತ್ತು ಶಿಲ್ಪ ಮಾದರಿಗಳನ್ನು ಮಾಡುವುದನ್ನು ಕಲಿಯತೊಡಗಿದ. ಹೆಚ್ಚಿನ ಶಿಕ್ಷಣಕ್ಕೆಂದು ಪ್ಯಾರಿಸಿಗೆ ತೆರಳಿದಾಗ ಅಲ್ಲಿನ ಕಲಾಪ್ರದರ್ಶನ ಶಾಲೆಯ ಈಜಿಪ್ಟಿನ ವಿಗ್ರಹಗಳನ್ನು ಪರೀಕ್ಷಿಸುವ ಅವಕಾಶ ಅವನಿಗೆ ಲಭಿಸಿತು. 1905ರಲ್ಲಿ ಲಂಡನಿಗೆ ಬಂದ ಎಪ್‌ಸ್ಟೈನ್ ಅಲ್ಲೇ ನೆಲೆ ನಿಲ್ಲಲು ನಿರ್ಧರಿಸಿದ.

ಎಪ್‌ಸ್ಟೈನ್‌ನ ಶಿಲ್ಪಗಳು ಮುಖ್ಯವಾಗಿ ಎರಡು ರೀತಿಯುವು: ಪ್ರಸಿದ್ಧ ವ್ಯಕ್ತಿಗಳ ತಲೆ ಮತ್ತು ಎದೆಯ ಭಾಗಗಳನ್ನೊಳಗೊಂಡ ಕಂಚಿನ ಪ್ರತಿಮೆಗಳು; ಭಾರೀ ಆಕಾರದ ಕಲ್ಲಿನ ಆಕೃತಿಗಳು. ಅವನು ರಚಿಸಿದ ಮೂರ್ತಿ ಶಿಲ್ಪಕೃತಿಗಳು ಆಯಾ ವ್ಯಕ್ತಿಗಳನ್ನು ಬಹುಮಟ್ಟಿಗೆ ಹೋಲುತ್ತವೆ. ಆದರೆ ಕಲ್ಲಿನ ಆಕೃತಿಗಳಿಗೂ ಅವು ಸೂಚಿಸುವ ವಸ್ತುಗಳಿಗೂ ಸಂಬಂಧ ಕಲ್ಪಿಸುವುದು ಸ್ವಲ್ಪ ಕಷ್ಟ. ಇವು ತುಂಬ ಟೀಕೆಗೆ ಗುರಿಯಾದುವು.

ಎಪ್‌ಸ್ಟೈನ್ ಪ್ರಮುಖ ವ್ಯಕ್ತಿಗಳನ್ನು ಕುಳ್ಳಿರಿಸಿ ಜೇಡಿಮಣ್ಣಿನಿಂದ ಅವರ ಮಾದರಿಯನ್ನು ರಚಿಸುತ್ತಿದ್ದ. ಅನಂತರ ಇದರಿಂದ ಅಚ್ಚನ್ನು ತಯಾರಿಸಿ ಕಂಚಿನ ಎರಕ ಹುಯ್ಯುತ್ತಿದ್ದ. ಈ ರೀತಿಯಲ್ಲಿ ಬರ್ನಾರ್ಡ್ ಷಾ, ಆಲ್ಬರ್ಟ್ ಐನ್‌ಸ್ಟೀನ್, ವಿನ್‌ಸ್ಟನ್ ಚರ್ಚಿಲ್, ರವೀಂದ್ರನಾಥ ಠಾಕೂರ್, ಜವಾಹರಲಾಲ ನೆಹರೂ ಮುಂತಾದವರ ಪ್ರತಿಮೆಗಳನ್ನು ಆತ ರಚಿಸಿದ್ದಾನೆ. ಈ ಪ್ರತಿಮೆಗಳು ಆಯಾ ವ್ಯಕ್ತಿಗಳನ್ನು ಹೋಲುವುದು ಮಾತ್ರವಲ್ಲದೆ ಆಶ್ಚರ್ಯಕರವೆನಿಸುವಷ್ಟರ ಮಟ್ಟಿಗೆ ಜೀವಕಳೆಯಿಂದ ಕೂಡಿವೆ; ವ್ಯಕ್ತಿಗಳ ಗುಣವೈಶಿಷ್ಟ್ಯವನ್ನು ಪ್ರತಿಫಲಿಸುತ್ತವೆ. ಇಂಥ ಪ್ರತಿಯೊಂದು ಕೃತಿಯಲ್ಲೂ ಎಪ್‌ಸ್ಟೈನ್‌ನ ಪ್ರತಿಭೆ ಮಿಂಚುತ್ತದೆ.

ಎಪ್‌ಸ್ಟೈನನ ಶಿಲ್ಪಕೃತಿಗಳು ಮೊದಲು ಉಪೇಕ್ಷೆಗೆ ಗುರಿಯಾದರೂ ಕಾಲ ಕಳೆದಂತೆ ಜನ ಇವನ್ನು ನೋಡಿ ಮೆಚ್ಚಲು ಕಲಿತುಕೊಂಡರು. ಜೇಕಬ್ ಎಪ್‌ಸ್ಟೈನ್ 20ನೆಯ ಶತಮಾನದ ಅತಿ ಶ್ರೇಷ್ಠ ಶಿಲ್ಪಿಗಳಲ್ಲಿ ಒಬ್ಬ ಎಂದು ಹೊಗಳಿದರು.

ಎಪ್‌ಸ್ಟೈನನದು ಆಧುನಿಕ ಶಿಲ್ಪಕಲೆ. ಸೌಂದರ್ಯದ ಸಾಮಾನ್ಯ ಕಲ್ಪನೆಗಳಿಗಿಂತ ಬೇರೆಯಾದ ಭಾವನಾ ಪ್ರಧಾನ ರೀತಿಯದು. ಈಗ ಅವನ ಕೃತಿಗಳನ್ನು ಕುಶಲ ಕಲಾಕಾರನೊಬ್ಬನ ಮನಸ್ಸಿನ ಪ್ರಭಾವಶಾಲಿ ನಿರೂಪಣೆಗಳೆಂದು ವರ್ಣಿಸುತ್ತಾರೆ.

ಲಂಡನಿನ ಸಾರ್ವಜನಿಕ ಕಟ್ಟಡಗಳಲ್ಲಿ ಸ್ಥಾಪಿಸಲು ಹದಿನೆಂಟು ಆಕೃತಿಗಳನ್ನು ರಚಿಸುವ ಕೆಲಸವನ್ನು ಅವನಿಗೆ ವಹಿಸಿಕೊಟ್ಟರು. ದೈತ್ಯಾಕಾರದ, ನಯವಾದ ಮೇಲ್ಮೈನ ಈ ಕಲ್ಲಿನ ಆಕೃತಿಗಳು ಸಂಪೂರ್ಣವಾದಾಗ ಎಲ್ಲೆಲ್ಲೂ ವಿವಾದ ಆರಂಭವಾಯಿತು. 'ಹಗಲು' ಮತ್ತು 'ರಾತ್ರಿ' ಗಳನ್ನು ಪ್ರತಿನಿಧಿಸುವ ಮಂಗೋಲಿಯನ್ ಮುಖದ ಮನುಷ್ಯರ ಗುಂಪುಗಳು, ಲಂಡನಿನ ಕಾನ್ವೆಂಟ್ ಒಂದರಲ್ಲಿ ಇರಿಸಿದ ಸೀಸದ ಪ್ರತಿಮೆ 'ಕನ್ನೆ ಮತ್ತು ಮಗು', ಅಮೃತಶಿಲೆಯ ಕೆತ್ತನೆ 'ಸೃಷ್ಟಿ', ಹಾಲುಗಲ್ಲಿನಲ್ಲಿ ಕಡೆದ 'ಆಡಂ', 'ಸಾಮಾಜಿಕ ಪ್ರಜ್ಞೆ' ಎಂಬ ಕಂಚಿನ ಮೂರ್ತಿಗಳ ಗುಂಪು, ಅಲ್ಯೂಮಿನಿಯಂ ಮತ್ತು ಬೆಳ್ಳಿಗಳಿಂದ ಎರಕ ಹುಯ್ದ 'ವೈಭವೋಪೇತ ಕ್ರಿಸ್ತ' ಮುಂತಾದುವನ್ನು ಜನಸಾಮಾನ್ಯರೂ ವೃತ್ತಪತ್ರಿಕೆಗಳೂ ಸಾಕಷ್ಟು ಜರೆದುವು. ಇವನ ದೇವತಾ ವಿಗ್ರಹಗಳಿಗೆ ಕ್ರೈಸ್ತ ದೇವಾಲಯಗಳಲ್ಲಿ ಸ್ಥಾನ ಸಿಗಲಿಲ್ಲ.

ವಿಶ್ವವಿಖ್ಯಾತ ಶಿಲ್ಪಿ : ಎಪ್‌ಸ್ಟೈನ್


ವಿಜ್ಞಾನಿ ಐನ್‌ಸ್ಟೀನ್ : ಎಪ್‌ಸ್ಟೈನನ ಕೃತಿ

ಆದರೆ ಕೊನೆಗೆ ಇವು 'ಜೀವನದ ಬಗೆಗೆ ಕಲಾಕಾರನ ಆಳವಾದ ತಿಳಿವಳಿಕೆಯುಳ್ಳ ಕಲಾಕೃತಿಗಳು' ಎಂಬಪ್ರಶಂಸೆಗೆ ಪಾತ್ರವಾದುವು.

ಎಪ್‌ಸ್ಟೈನನ ಶಿಲ್ಪಗಳಲ್ಲಿ ಪ್ರಾಚೀನ ಆಫ್ರಿಕ ಮತ್ತು ಈಜಿಪ್ಟ್‌ಗಳ ಕಲೆಯ ಪ್ರಭಾವ ಕಾಣುತ್ತದೆ. ಮಹಾಶಿಲ್ಪಿ ರೊಡಿನನ ಪ್ರಭಾವವನ್ನು ಅವನ ಹಲವು ಕೃತಿಗಳಲ್ಲಿ ಗುರುತಿಸಬಹುದು.

ಎಪ್‌ಸ್ಟೈನನ ಕಲಾವಿಧಾನಕ್ಕೆ ಮಾನ್ಯತೆ ದೊರೆಯುವುದು ತಡವಾಯಿತಾದರೂ ಆಧುನಿಕ ಶಿಲ್ಪಕಲೆಯ ಅಭ್ಯಾಸಿಗಳಿಗೆ ಇವನು ಮಾದರಿಯಾದ. 1954ರಲ್ಲಿ ಇವನಿಗೆ 'ನೈಟ್ ಹುಡ್' ಗೌರವ ದೊರೆಯಿತು.

1959ರ ಆಗಸ್ಟ್ 19ರಂದು, ಜೇಕಬ್ ಎಪ್‌ಸ್ಟೈನ್ ನಿಧನಹೊಂದಿದ.

ಎಪ್‌ಸ್ಟೈನ್ ತನ್ನ ಆತ್ಮಕಥೆಯನ್ನು ಬರೆದಿದ್ದಾನೆ.

## ಎಲ್ ಗ್ರೆಕೋ

ಎಲ್ ಗ್ರೆಕೋ ಎಂದರೆ 'ದ ಗ್ರೀಕ್' 'ಗ್ರೀಸಿನವನು' ಎಂದರ್ಥ. ಈ ಅಡ್ಡ ಹೆಸರು ಪಡೆದ 16ನೆಯ ಶತಮಾನದ ಸ್ಪೇನಿನ ಮಹಾನ್ ಕಲಾವಿದನ ಪೂರ್ತಿ ಹೆಸರು ಡೊಮಿನಿಕೊಸ್ ಥೇಯೊಟೊಕೊಪೂಲಸ್. ಎಲ್ ಗ್ರೆಕೋ ಎಂದೇ ವಿಶ್ವವಿಖ್ಯಾತನಾಗಿದ್ದಾನೆ. ಅವನು ಹುಟ್ಟಿ ಬೆಳೆದ ಊರು ಗ್ರೀಸಿಗೆ ಸೇರಿತ್ತು. ನಾಲಗೆಗೆ ತೊಡಕಾದ ಇವನ ಹೆಸರನ್ನು ಉಚ್ಚರಿಸುವ ಬದಲಾಗಿ, ಜನ ಇವನನ್ನು 'ಗ್ರೀಸಿನವ' (ಎಲ್ ಗ್ರೆಕೋ) ಎಂದು ಕರೆದರು.

ಇವನು ಅತೀವ ಧಾರ್ಮಿಕ ಶ್ರದ್ಧೆಯುಳ್ಳವನು. ಇದು ಇವನ ಚಿತ್ರಗಳಲ್ಲೂ ಮೂಡಿದೆ. ಇವನು ಚಿತ್ರಿಸಿರುವ ವ್ಯಕ್ತಿಗಳ ಮುಖಗಳು, ಕಾಯಗಳು, ರೂಪವನ್ನು ಸ್ವಲ್ಪಮಟ್ಟಿಗೆ ವಿಕೃತಗೊಳಿಸುವ ಕನ್ನಡಿಯಲ್ಲಿ ಕಾಣುವ ಬಿಂಬದಂತೆ ತುಸು ನೀಳ. ಏನೋ ಒಂದು ಬಗೆಯ ಪರವಶತೆ, ಇಲ್ಲವೆ ಮನಸ್ಸನ್ನು ಕದಡುವ ಕನಸು ಕಂಡಂತೆ ಮುಖಭಾವ —ಇದು ಎಲ್ ಗ್ರೆಕೆ ಚಿತ್ರದ ಮಾದರಿ ಎನ್ನಬಹುದು.

ಬಣ್ಣ, ಬೆಳಕು ಹಾಗೂ ರೇಖೆಗಳನ್ನು ತನ್ನದೇ ಆದ ರೀತಿಯಲ್ಲಿ ಉಪಯೋಗಿಸಿ ಎಲ್ ಗ್ರೆಕೋ ತನ್ನ ಚಿತ್ರಗಳಲ್ಲಿ ವಿಶೇಷ ಪರಿಣಾಮಗಳನ್ನು ಸಾಧಿಸಿದ್ದಾನೆ. ಮೊದಮೊದಲು ಅವನು ಸೌಮ್ಯವಾದ ಬಣ್ಣಗಳನ್ನು ಉಪಯೋಗಿಸಿ ಚಿತ್ರರಚನೆ ಮಾಡಿದ. ಅನಂತರ ಈ ವಿಧಾನವನ್ನು ಬದಲಿಸಿ ಪ್ರತಿಯೊಂದು ಬಣ್ಣ ಬಳಸುವಾಗಲೂ ಬಿಳಿಯಿಂದ ಹಿಡಿದು ಆ ಬಣ್ಣದ ಅತ್ಯಂತ ಕಡುಛಾಯೆಯವರೆಗೆ ನಾನಾ ಛಾಯೆಗಳನ್ನು ಬಳಸಿದ್ದ. ಇದರಿಂದ ಚಿತ್ರ ಕ್ರಮಕ್ರಮವಾಗಿ ವಿಕಾಸಗೊಳ್ಳುತ್ತಿರುವಂತೆ ಕಾಣುತ್ತದೆ; ಅಪೂರ್ವ ಕಾಂತಿಯಿಂದ ಮಿನುಗುತ್ತದೆ; ಇಡೀ ದೃಶ್ಯ ಜೀವ ತಳೆಯುತ್ತದೆ. ಇದರಿಂದಾಗಿ ಅವನ ಧಾರ್ಮಿಕ ಚಿತ್ರಗಳು ಒಂದು ಘಟನೆ ನಡೆಯುತ್ತಿರುವ ನಾಟಕ ಸನ್ನಿವೇಶದ ಭಾವನೆಯನ್ನು ಉಂಟುಮಾಡುತ್ತವೆ. ತನ್ನ ಚಿತ್ರ ರಚನೆಯಲ್ಲಿ ಎಲ್ ಗ್ರೆಕೋ ಸಾಂಪ್ರದಾಯಿಕ ಹಾಗೂ ಸಮಕಾಲೀನ ಕಲೆಯಿಂದ ಹಿಡಿದು ತನ್ನದೇ ಆದ ಶೈಲಿಯವರೆಗೆ ನಾನಾ ವಿಧಾನಗಳನ್ನು ಬಳಸಿದ್ದಾನೆ. ಅವನಷ್ಟು ಭಾವಾವೇಶಪೂರಿತ ಚಿತ್ರಗಳನ್ನು ಇದುವರೆಗೆ ಬರೆದವರಿಲ್ಲ.

ಎಲ್ ಗ್ರೆಕೋ ತನ್ನ ಕಾಲದಲ್ಲಿ ಸಾಕಷ್ಟು ಹೆಸರು ಪಡೆದಿದ್ದ; ಕೇವಲ ಚಿತ್ರಗಳಿಗಷ್ಟೇ ಅಲ್ಲ, ಸ್ವಾಭಿಮಾನಕ್ಕೂ ಕೂಡ. ಚಿತ್ರ ರಚನೆಯಲ್ಲಿ ಅವನ ಭಿನ್ನ ಶೈಲಿಯನ್ನು ಮೆಚ್ಚಿದವರೂ ಇದ್ದರು; ಮೆಚ್ಚದವರೂ ಇದ್ದರು. ವಿಚಿತ್ರವೆಂದರೆ, 1614ರಲ್ಲಿ ಅವನ ಸಾವಿನ ಅನಂತರ ವಿವಾದಾಸ್ಪದವಾದ ಅವನ ಕಲಾಕೃತಿಗಳು ಸಂಪೂರ್ಣ ಮರೆಯಾದುವು. ಅಟ್ಟ, ನೆಲಮಾಳಿಗೆಗಳ ಪಾಲಾದುವು. ಕೆಲವು ಖಾಸಗಿ ಸಂಗ್ರಹಕಾರರ ಕೈ ಸೇರಿದುವು. ಸುಮಾರು ಮುನ್ನೂರು ವರ್ಷ ಕಾಲ ಅಜ್ಞಾತವಾಸ ಅನುಭವಿಸಿದುವು.

ಈ ಶತಮಾನದ ಆದಿಯಲ್ಲಿ ಪ್ಯಾರಿಸಿನ ಕಲಾ ಪ್ರಪಂಚ ಸಾಂಪ್ರದಾಯಿಕ ರೀತಿಯ ವಿರುದ್ಧ ಕೂಗು ಎಬ್ಬಿಸಿತು. ಬೆಳಕು, ಬಣ್ಣ ಹಾಗೂ ಆಕಾರಗಳನ್ನು ಬಳಸುವುದರಲ್ಲಿ ನಿರ್ಬಂಧ ಕೂಡದು ಎಂದು ಅಲ್ಲಿನ ಕೆಲವು ಪ್ರಮುಖ ಕಲಾವಿದರು ಪ್ರತಿಪಾದಿಸಿದರು. ಇವರು ಎಲ್ ಗ್ರೆಕೋನ ಕಲಾಕೃತಿಗಳಲ್ಲಿರುವ ಸ್ವಚ್ಛಂದ ಕಲೆಯನ್ನು ಗುರುತಿಸಿದರು. ಎಲ್ ಗ್ರೆಕೋ ಪ್ಯಾರಿಸಿನ ಈ ಹೊಸ ಪಂಥದವರಿಗೆ ಆಧುನಿಕ ಕಲಾವಿದನಾಗಿ, ಆ ಸಂಪ್ರದಾಯದ ಮೊದಲಿಗನಾಗಿ ಕಂಡ. ಹೀಗೆ ಎಲ್ ಗ್ರೆಕೋ ಪುನರುತ್ಥಾನಗೊಂಡ.

ಎಲ್ ಗ್ರೆಕೋನ ಜೀವನದ ವಿಷಯವಾಗಿ ಹೆಚ್ಚು ತಿಳಿದಿಲ್ಲ. ಸ್ವಾಭಾವಿಕವಾಗಿ ಅವನು ಜನ


ಎಲ್ ಗ್ರೆಕೋ :
ಮೂರು ಶತಮಾನಗಳ ಅನಂತರ ಪುನರುತ್ಥಾನ

[illegible] ಅಸ್ಪಷ್ಟ. [illegible] ಅವನ ಜೀವನವನ್ನು ಸಂಗ್ರಹಿಸಲಾಗಿದೆ.

ಇವನು 1541ರಲ್ಲಿ ಗ್ರೀಸಿಗೆ ಸೇರಿದ್ದ ಕ್ರೀಟ್‌ನಲ್ಲಿ ಜನಿಸಿದ. ಸುಮಾರು 25 ವರ್ಷಗಳ ಕಾಲ ಅಲ್ಲೇ ಇದ್ದ. ಕ್ರೈಸ್ತ ಮಠವೊಂದರಲ್ಲಿ ವಿದ್ಯಾಭ್ಯಾಸ ಪಡೆಯುತ್ತಿದ್ದಾಗಲೇ ಕೆಲವು ಚಿತ್ರಗಳನ್ನು ಬರೆದ. 18ನೆಯ ವಯಸ್ಸಿನ ವೇಳೆಗಾಗಲೇ ಒಳ್ಳೆಯ ಕಲಾವಿದನಾಗುವ ಲಕ್ಷಣಗಳನ್ನು ತೋರಿದ. ಈ ಕಾಲಕ್ಕೆ ಬೈಜಾಂಟೈನ್ ಶೈಲಿಯ ವಿಗ್ರಹಗಳು ಅವನ ಮೇಲೆ ಬಹಳ ಪ್ರಭಾವವನ್ನು ಬೀರಿದ್ದುವು. ಅನಂತರ ವೆನಿಸಿಗೆ ಪಯಣ. ಸುಪ್ರಸಿದ್ಧ ಕಲಾವಿದ ಟಿಷನ್ ಬಳಿ ಶಿಷ್ಯವೃತ್ತಿ. ಮುಂದೆ ರೋಮಿಗೆ ಹೋದ. ಕೆಲವು ದಶಕಗಳ ಹಿಂದೆ ಮಹಾಕಲಾವಿದ ಮೈಕೆಲೆಂಜಲೋ ರಚಿಸಿದ್ದ 'ಅಂತಿಮ ತೀರ್ಮಾನ' ಎಂಬ ಖ್ಯಾತ ಚಿತ್ರಮಾಲಿಕೆಯಲ್ಲಿದ್ದ ನಗ್ನಮೂರ್ತಿಗಳಿಗೆ ಉಡುಗೆ ಹಚ್ಚಬೇಕೆಂದು ಕ್ರೈಸ್ತ ಧರ್ಮಪೀಠ ಇವನಿಗೆ ಹೇಳಿತು. ಈ ವಿಷಯವಾಗಿ ವಿವಾದ ಉಟಾಯಿತು. ಆಗ ಎಲ್ ಗ್ರೆಕೋ, "ಅವೆಲ್ಲವನ್ನು ಅಳಿಸಿ ಹಾಕುವುದೆ ಅತ್ಯಂತ ಶ್ರೇಷ್ಠವಾದ. ಆದರೆ ಸಭ್ಯವಾದ ಚಿತ್ರಗಳನ್ನು ನಾನು ಬರೆಯಬಲ್ಲೆ" ಎಂದ. ಇದು ಕಾರ್ಯಗತವಾಗಲಿಲ್ಲ. ಎಲ್ ಗ್ರೆಕೋ "ಮೈಕೆಲೆಂಜಲೋ ಒಳ್ಳೆಯವನೇನೋ ಸರಿ. ಆದರೆ ಅವನಿಗೆ ಚಿತ್ರಕಲೆ ಬರದು" ಎಂದದ್ದೂ ಉಂಟು! ಹೀಗಿದ್ದರೂ ಇವನ ಕಲೆಯಲ್ಲಿ ಮೈಕೆಲೆಂಜಲೋನ ಪ್ರಭಾವ ಇಲ್ಲದಿಲ್ಲ.

ರೋಮಿನಲ್ಲಿ ಅವನು ನಡೆದುಕೊಂಡ ರೀತಿಯಿಂದ ಎಲ್ ಗ್ರೆಕೋಗೆ ಯಾವುದೇ ಚಿತ್ರ ಕೆಲಸ ದೊರೆಯುವುದು ಕಷ್ಟವಾಯಿತು. ಇದರಿಂದ ಸ್ಪೇನಿಗೆ ಹೋಗಿ, ಟೊಲೆಡೋ ಎಂಬಲ್ಲಿ ಅವನು ನೆಲೆಸಿದ. ದೀರ್ಘ ಇತಿಹಾಸವಿದ್ದ ಊರು ಟೊಲೆಡೋ. ಅವನ ಸುಪ್ತಭಾವನೆಗಳಿಗೆ ಪ್ರಚೋದನೆ ಕೊಟ್ಟಿತು. ಕಲ್ಪನೆಯನ್ನು ಕೆರಳಿಸಿತು. ಅದಕ್ಕೆ ರೂಪುಗೊಟ್ಟು 'ಟೊಲೆಡೋವಿನ ನೋಟ' ಎಂಬ ಒಂದು ಸ್ವಪ್ನರೂಪಿ ನಗರ ದೃಶ್ಯವನ್ನು ಚಿತ್ರಿಸಿದ. ಎಲ್ ಗ್ರೆಕೋನ ಇಲ್ಲಿನವರೆಗಿನ ಚಿತ್ರಗಳನ್ನು ಬೇರೆಯವರ ಚಿತ್ರಗಳೊಂದಿಗೆ ಹೋಲಿಸಬಹುದಿತ್ತು. ಸ್ಪೇನಿನಲ್ಲಿ ಅವನು ತನ್ನದೇ ಆದ ಶೈಲಿಯಲ್ಲಿ ಚಿತ್ರರಚನೆ ಮಾಡಿದ. ಅಲ್ಲಿನ ದೊರೆಗಾಗಿ ಅವನು ರಚಿಸಿದ ಚಿತ್ರಗಳು ದೊರೆಯ ಪ್ರೀತಿಗೆ ಪಾತ್ರವಾಗಲಿಲ್ಲ. ಕಾರಣ –ಇವನ ಚಿತ್ರಣ ಸಂಪ್ರದಾಯದೂರವಾಗಿದ್ದದ್ದು; ವಸ್ತುವಿಗಿಂತ ಅದನ್ನು ನಿರೂಪಿಸಿದ ರೀತಿಗೆ ಆತ ಮಹತ್ವ ಕೊಟ್ಟದ್ದು. ಇವನು ಕ್ರೈಸ್ತ ದೇವಾಲಯಕ್ಕಾಗಿ ಬರೆದ 'ಕ್ರಿಸ್ತನ ಉಡುಗೆ ಕಳಚುವುದು' ಎಂಬ ಚಿತ್ರ ಖಂಡನೆಗೊಳಗಾಯಿತು. ಪ್ರಶಾಂತತೆಯನ್ನು ಬಿಟ್ಟು ಭಾವೋದ್ವೇಗಭರಿತವಾಗಿದ್ದ ಈ ಚಿತ್ರವನ್ನು ಕ್ರೈಸ್ತ ಧರ್ಮಾಧಿಕಾರಿಗಳು ಸ್ವೀಕರಿಸಲು ನಿರಾಕರಿಸಿದರು. ಎಲ್ ಗ್ರೆಕೋ ಅವರ ಮೇಲೆ ದಾವೆ ಹೂಡಿದ. ಕೊನೆಗೆ ಚಿತ್ರಕ್ಕೆ ಗೊತ್ತಾಗಿದ್ದ ಮೌಲ್ಯದ ಮೂರರಲ್ಲಿ ಒಂದು ಭಾಗ ಪರಿಹಾರ ಮಾತ್ರ ಇವನಿಗೆ ದೊರೆಯಿತು.

ಒಂದು ಕಲಾಕೃತಿಯನ್ನು ಹಲವಾರು ಬಾರಿ ಮತ್ತೆ ಮತ್ತೆ ಚಿತ್ರಿಸುವುದು ಎಲ್ ಗ್ರೆಕೋನ ವಿಲಕ್ಷಣ ಗುಣಗಳಲ್ಲಿ ಒಂದು. 'ಆನಂದಪರವಶನಾದ ಸಂತ ಫ್ರಾನ್ಸಿಸ್' ಎಂಬುದನ್ನು ಒಂಬತ್ತು ಬಾರಿ ರಚಿಸಿದ.

'ಕೌಂಟ್ ಅರ್ಗಾಜನ ಶವಸಂಸ್ಕಾರ', 'ಸಂತ ಮಾರ್ಟಿನ್', 'ಕ್ರಿಸ್ತನ ಜ್ಞಾನಸ್ನಾನ', 'ಮೇರಿ ಕನ್ಯೆಯ ಸ್ವರ್ಗಾರೋಹಣ'—ಇವು ಅವನ ಕೆಲವು ಶ್ರೇಷ್ಠ ಕೃತಿಗಳು.

ಎಲ್ ಗ್ರೆಕೋ 1614ರ ಏಪ್ರಿಲ್‌ನಲ್ಲಿ ಗತಿಸಿದ.

ಟೊಲೆಡೋದಲ್ಲಿನ ಅವನ ಗೆಳೆಯರೆಲ್ಲ ಬಲ್ಲಿದರು. ಅವರಲ್ಲಿ ಕವಿ ಲೂಯಿಸ್ ಡಿ ಗಾಂಗೋರ, ಎಲ್ ಗ್ರೆಕೋ ಬಗೆಗೆ ಒಂದು ಶೋಕಗೀತೆಯನ್ನು ರಚಿಸಿದ್ದಾನೆ. ಟೊಲೆಡೋದಲ್ಲಿ ಎಲ್ ಗ್ರೆಕೋ ವಾಸಿಸುತ್ತಿದ್ದ ಮನೆಯ ಸ್ವಲ್ಪ ಭಾಗ ಈಗ ವಸ್ತುಸಂಗ್ರಹಾಲಯವಾಗಿದೆ.

## ಎಸ್ಕಿಮೋ ಕಲೆ

ಈಟಿ, ಗಾಳಗಳು, ಆಯುಧಗಳು, ಚಾಕುಗಳ ಹಿಡಿಗಳು, ಮೀನು ಹಿಡಿಯಲು ಬಳಸುವ ಬೆಂಡುಗಳು ಮುಂತಾದುವುಗಳ ಮೇಲೆ ಕೆತ್ತನೆ ಕೆಲಸಗಳು ಇವೆ ಎಂದರೆ ಆಶ್ಚರ್ಯಪಡಬಹುದು. ಎಸ್ಕಿಮೋ ಜನರ ಕಲೆಗಾರಿಕೆ ವ್ಯಕ್ತವಾಗುವುದು ಇಂಥ ವಸ್ತುಗಳ ಮೇಲೆ. ಉತ್ತರ ಧ್ರುವ ಪ್ರದೇಶದಲ್ಲಿ ಕಷ್ಟ ಜೀವನ ನಡೆಸುವ ಅವರ ಮುಖ್ಯ ಜೀವನೋಪಾಯ ಬೇಟೆ ಮತ್ತು ಮೀನುಗಾರಿಕೆ. ಆದ್ದರಿಂದಲೇ ಅವರು ಆಯುಧಗಳ ಮೇಲೆ ಕೆತ್ತನೆ ಕೆಲಸಮಾಡುತ್ತಾರೆ. ಸಾಮಾನ್ಯವಾಗಿ ಸೀಲ್ ಹಿಮಕರಡಿ, ಬಾತು ಮುಂತಾದ ಪಕ್ಷಿ ಮತ್ತು ಪ್ರಾಣಿಗಳೇ ಇವರ ಚಿತ್ರವಸ್ತುಗಳು.

ಮೀನು ಹಿಡಿಯುವ ಎಸ್ಕಿಮೋ ಕುಟುಂಬ : ಕಾಯ್ಯ್ಕು ವಿರಚಿತ ಆಧುನಿಕ ಕೃತಿ



ಕ್ರಿ. ಪೂ. 3,000 ವರ್ಷಗಳಷ್ಟು ಹಿಂದಿನ ಎಸ್ಕಿಮೋ ಚಿತ್ರಗಳಲ್ಲಿ ರೆಕ್ಕೆಗಳಿರುವ ಪ್ರಾಣಿಯೊಂದರ ಚಿತ್ರ ಪದೇ ಪದೇ ಕಾಣಸಿಗುತ್ತದೆ.

ಎಸ್ಕಿಮೋಗಳು ಸಾವಿರಾರು ವರ್ಷಗಳ ಹಿಂದಿನಿಂದ ಕಲಾಭಿರುಚಿಯನ್ನು ಬೆಳೆಸಿಕೊಂಡು ಬಂದವರು. ಪ್ರಾಚೀನ ಮಾನವನ ಕಲೆಯನ್ನು ಅಭ್ಯಾಸ ಮಾಡುವಲ್ಲಿ ಎಸ್ಕಿಮೋ ಕಲೆಗೆ ಪ್ರಾಶಸ್ತ್ಯವುಂಟು.

ಮರದ ಅಭಾವವಿರುವ ಉತ್ತರ ಧ್ರುವ ಪ್ರದೇಶದಲ್ಲಿ ವಾಸಿಸುವ ಎಸ್ಕಿಮೋಗಳು ತಮ್ಮ ಕೆತ್ತನೆ ಕೆಲಸವನ್ನು ಮೂಳೆಗಳು ಮತ್ತು ದಂತದ ಮೇಲೆ ಮಾಡುತ್ತಾರೆ. ಈ ಕಲೆಯಲ್ಲಿ ಅವರು ನಿಷ್ಣಾತರು. ಚಿತ್ರವನ್ನು ಕೊರೆದು ಆದ ಮೇಲೆ ಕಪ್ಪು ಬಳಿದು ದಟ್ಟವಾಗಿ ಕಾಣುವಂತೆ ಮಾಡುತ್ತಾರೆ. ಎಸ್ಕಿಮೋಗಳು ದಂತವನ್ನೂ ಶಿಲೆಯನ್ನೂ ಕೊರೆದು ಚಿತ್ರಕೃತಿಗಳನ್ನು ತಯಾರಿಸುವುದುಂಟು.

ಧಾರ್ಮಿಕ ವಿಧಿಗಳಲ್ಲಿ ನಿರತರಾಗುವ ಅವರು ಬಳಸುವ ಮುಖವಾಡ ಗಳು ಕಲಾತ್ಮಕವಾಗಿರುತ್ತವೆ. ತಿಮಿಂಗಲದ ಮೂಳೆ, ಮರ, ರೆಕ್ಕೆಪುಕ್ಕಗಳಿಂದ ಅವನ್ನು ತಯಾರುಮಾಡುತ್ತಾರೆ. ಅವುಗಳ ಮೇಲೂ ಕೆತ್ತನೆ ಕೆಲಸ ಮಾಡಿರುತ್ತಾರೆ; ಬಣ್ಣ ಬಳೆದಿರುತ್ತಾರೆ. ಆ ಮುಖವಾಡಗಳಲ್ಲಿ ತಿಳಿಹಾಸ್ಯ ಪ್ರವೃತ್ತಿ ಪ್ರತಿಬಿಂಬಿತವಾಗಿರುತ್ತದೆ.

ಎಸ್ಕಿಮೋ ಕಲಾಕೃತಿಗಳಿಗೆ ವಿಶ್ವದ ಆದ್ಯಂತ ಈಗ ಬೇಡಿಕೆ ಇದೆ.

## ಎಸ್ಕಿಲಸ್

ಎಸ್ಕಿಲಸ್, ಸಾಫೋಕ್ಲೀಸ್, ಯೂರಿಪಿಡೀಸ್—ಈ ಮೂವರು ಕ್ರಿಸ್ತ ಪೂರ್ವ 5ನೆಯ ಶತಮಾನದ ಗ್ರೀಕ್ ಸಾಹಿತ್ಯಾಕಾಶದ ಉಜ್ವಲ ತಾರೆಗಳು. ಈಗ ಲಭ್ಯವಾಗಿರುವ 33 ಗ್ರೀಕ್ ಟ್ರಾಜಿಡಿಗಳು –ರುದ್ರನಾಟಕಗಳು– ಇವರ ಕೃತಿಗಳು. ಗ್ರೀಕ್ ರುದ್ರನಾಟಕಗಳ ಜನಕ ಎನಿಸಿಕೊಂಡಿರುವ ಎಸ್ಕಿಲಸ್ ಇವರಲ್ಲಿ ಹಿರಿಯ. ಸುಮಾರು 70 ಟ್ರಾಜಿಡಿಗಳನ್ನು ಆತ ಬರೆದನೆಂದು ಹೇಳಿಕೆ. ದೊರೆತಿರುವುದು ಏಳು ಮಾತ್ರ.

ಗ್ರೀಕ್ ನಾಟಕಗಳ ರೂಪವನ್ನೇ ಮಾರ್ಪಡಿಸಿದ ಕೀರ್ತಿ ಎಸ್ಕಿಲಸ್‌ನದು. ಆ ತನಕ ನಾಟಕವೆಂದರೆ ಒಬ್ಬನೇ ಪಾತ್ರಧಾರಿ, ಜೊತೆಗೊಂದು ಮೇಳ. ಮೇಳದವರೊಡನೆ ಪಾತ್ರಧಾರಿಯ ಸಂಭಾಷಣೆ. ನಾಟಕಗಳಲ್ಲಿ ಬರುವ ವಿವಿಧ ಪಾತ್ರಗಳನ್ನು ಒಬ್ಬನೇ ನಿರ್ವಹಿಸಬೇಕಾಗುತ್ತಿತ್ತು. ಎಸ್ಕಿಲಸ್ ತನ್ನ ಟ್ರಾಜಿಡಿಗಳಲ್ಲಿ, ಎರಡನೆಯ ಪಾತ್ರವೊಂದಕ್ಕೆ ಸ್ಥಾನ ಕಲ್ಪಿಸಿದ. ಪಾತ್ರ ಗಳಿಗೆ ವೇಷಭೂಷಣ, ಮುಖವಾಡಗಳನ್ನು ಹಾಕಲು ಪ್ರಚೋದಿಸಿದ. ಇದರಿಂದ ನಾಟಕಗಳ ಸ್ವರೂಪವೇ ಬದಲಾಯಿಸಿತು. ಜನ ಹೆಚ್ಚು ಆಸಕ್ತಿ ಯಿಂದ ನಟರ ಸಂಭಾಷಣೆಗಳನ್ನು ಕೇಳಲಾರಂಭಿಸಿದರು.

ಎಸ್ಕಿಲಸ್‌ನ ಮೊದಲ ಕೃತಿಗಳಲ್ಲೊಂದು 'ಯಾಚಕರು'. 'ಥೀಬ್ಸ್‌ನ ವಿರುದ್ಧವಾಗಿ ಏಳು ಜನ', 'ಪರ್ಷಿಯನರು', 'ಪ್ರೊಮಿಥಿಯಸನ ಬಂಧನ' ಮತ್ತು 'ಒರಿಸ್ಟಿಯ —ಆತನ ಇತರ ಕೃತಿಗಳು. 'ಒರಿಸ್ಟಿಯ' ತ್ರೈನಾಟಕ ಚಕ್ರ. ಇದರಲ್ಲಿ 'ಅಗಮೆಮ್ನಾನ್', 'ಮದ್ಯ ಹಂಚುವವನು' ಮತ್ತು 'ಉಗ್ರ ಕನ್ಯೆಯರು' ಎಂಬ ಮೂರು ನಾಟಕಗಳಿವೆ. ಒಂದು ಪ್ರಸಂಗವನ್ನು ತೆಗೆದುಕೊಂಡು ಮೂರು ನಾಟಕಗಳಲ್ಲಿ ಬೆಳೆಸಿಕೊಂಡು ಬರುವುದು ತ್ರೈನಾಟಕ ಚಕ್ರ. ಎಸ್ಕಿಲಸ್‌ನ ಅನೇಕ ನಾಟಕಗಳು ಈ ಬಗೆಯವು.

ಭಾರಿ ಮೇಳ, ಮೇಳದವರಿಗೆ ವಿವಿಧ ಮುಖವಾಡಗಳು, ಅತ್ತಿಂದಿತ್ತ ಮೇಳದವರ ಹಾರಾಟ, ಹಾರಾಡುವ ಅಮಾನುಷ ವ್ಯಕ್ತಿಗಳು —ಇಂಥ



ಗ್ರೀಕ್ ನಾಟಕಗಳಿಗೆ ಹೊಸ ರೂಪ : ಎಸ್ಕಿಲಸ್

ಪ್ರಯೋಗಗಳಿಂದ ಎಸ್ಕಿಲಸ್ ರಂಗ ಮಂಟಪದಲ್ಲಿ ಅದ್ಭುತ ಪರಿಣಾಮ ಉಂಟುಮಾಡುತ್ತಿದ್ದ.

ಈತನ ನಾಟಕಗಳು ಅವನ ಕಾಲದ ಗ್ರೀಕ್ ಸಮಾಜಕ್ಕೆ ಕನ್ನಡಿ ಹಿಡಿಯುತ್ತವೆ. ಅದು ವೈಯಕ್ತಿಕ, ಸಾಮಾಜಿಕ ಹಾಗೂ ಧಾರ್ಮಿಕ ಭಾವನೆಗಳು ಹಾಸುಹೊಕ್ಕಾಗಿ ಜೀವನದಲ್ಲಿ ಬೆರೆತು ಇರುತ್ತಿದ್ದ ಕಾಲ. ಇವನ ನಾಟಕಗಳು ಆ ಕಾಲವನ್ನು ಪತಿಬಿಂಬಿಸುತ್ತವೆ.

ಅಥೆನ್ಸಿನ ಸಮೀಪವಿರುವ ಎಲ್ಯೂಸಿನ್ ಎಸ್ಕಿಲಸ್‌ನ ಜನ್ಮಸ್ಥಳ; ಜನನ ಕ್ರಿ. ಪೂ. 525. ಅನುಕೂಲವಂತರ ಮನೆಯಲ್ಲಿ ಹುಟ್ಟಿದ ಅವನು ಮ್ಯಾರಥಾನ್, ಸಲಾಮಿಸ್ ಮತ್ತು ಪ್ಲಾಟಿಯಗಳಲ್ಲಿ ನಡೆದ ಯುದ್ಧಗಳಲ್ಲಿ ಭಾಗವಹಿಸಿದ. ಮೊದಲನೆಯ ಹೈರಾನನ ಆಳ್ವಿಕೆಯಲ್ಲಿ – ಕ್ರಿ. ಪೂ. 472–468ರ ಅವಧಿಯಲ್ಲಿ – ಆತ ಸಿಸಿಲಿದ್ವೀಪದ ಸಿರಾಕ್ಯೂಸಿಗೆ ಭೇಟಿ ಕೊಟ್ಟಿದ್ದ. ಆಗ ಹೊಸದಾಗಿ ಕಟ್ಟಿದ್ದ ಎಟ್ನ ನಗರದ ಗೌರವಾರ್ಥ ಆತ ಒಂದು ನಾಟಕ ರಚಿಸಿದನೆಂದು ಹೇಳುತ್ತಾರೆ. ಕ್ರಿ. ಪೂ. 458 ಅಥವಾ ಅದರ ಸುಮಾರಿನಲ್ಲಿ ಸಿಸಿಲಿಗೆ ಹೋದ. 456ರಲ್ಲಿ ಅಲ್ಲೇ ಸಾವಿಗೀಡಾದ. ಆತನ ಸಾವಿನ ಬಗೆಗೆ ದಂತಕಥೆಯೊಂದಿದೆ : ಹಾರಿಹೋಗುತ್ತಿದ್ದ ಒಂದು ಗಿಡುಗ ತಾನು ಕಚ್ಚಿಕೊಂಡಿದ್ದ ಆಮೆಯನ್ನು ಎಸ್ಕಿಲಸ್‌ನ ತಲೆಯ ಮೇಲೆ ಎತ್ತಿಹಾಕಿತಂತೆ; ಈ ಅಪಘಾತದಿಂದ ಅವನು ಮೃತನಾದನಂತೆ. ಆತ ಸಮಾಧಿಯ ಮೇಲೆ ಕೆತ್ತಲು ಒಂದು ಚರಮಲೇಖವನ್ನೂ ಸಿದ್ಧಪಡಿಸಿದ್ದ. ಅದರಲ್ಲಿ ಅವನು ತನ್ನ ಕವಿತ್ವಶಕ್ತಿಯ ಬಗೆಗೆ ಏನೂ ಹೇಳಿಲ್ಲ; ತನ್ನ ಕಲಿತನ ವನ್ನು ಮಾತ್ರ ಪ್ರಶಂಸಿಸಿಕೊಂಡಿದ್ದಾನೆ.

20ನೆಯ ಶತಮಾನದಲ್ಲಿ ಶಾಲೆಯೊಂದರಲ್ಲಿ ಎಸ್ಕಿಲಸನ ನಾಟಕವನ್ನು ನೋಡಿ, ಅದು ತಮ್ಮ ಜೀವನಕ್ಕೆ ಸಂಬಂಧಿಸಿದಂತೆ ಇದ್ದುದನ್ನು ಕಂಡು ಜನ ಬೆರಗಾದರು. ಸರ್ವ ಕಾಲ ದೇಶಗಳಿಗೆ ಹೊಂದಿಕೊಳ್ಳುವಂಥ ಗುಣ ಎಸ್ಕಿಲಸನ ನಾಟಕಗಳಿಗಿದೆ.

**ನೋಡಿ :** ಟ್ರಾಜಿಡಿ ; ಯೂರಿಪಿಡೀಸ್ ; ಸಾಫೋಕ್ಲೀಸ್

## ಐಹೊಳೆ

ಬಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿ ಮಲಪ್ರಭಾ ನದೀ ತೀರದಲ್ಲಿರುವ ಐಹೊಳೆ ಈಗ ಒಂದು ಸಣ್ಣ ಹಳ್ಳಿ. ಆದರೆ ಆರನೆಯ ಶತಮಾನದಲ್ಲಿ ಅದು ದೊಡ್ಡ ಪಟ್ಟಣವಾಗಿತ್ತು. ಆಗ ತಾನೇ ಪ್ರಾಬಲ್ಯಕ್ಕೆ ಬರುತ್ತಿದ್ದ ಚಾಲುಕ್ಯ ಅರಸುಮನೆತನದ ರಾಜಧಾನಿಯೂ ಆಗಿತ್ತು.

ಒಂದನೆಯ ಪುಲಿಕೇಶಿ ತನ್ನ ರಾಜಧಾನಿಯನ್ನು ಐಹೊಳೆಯಿಂದ ಬಾದಾಮಿಗೆ ಬದಲಾಯಿಸಿದ ಮೇಲೆ ಐಹೊಳೆಯ ರಾಜಕೀಯ ಪ್ರಾಮುಖ್ಯ ಕಡಮೆಯಾಯಿತು.

ಐಹೊಳೆಗೆ ರಾಜಕೀಯ ಪ್ರಾಶಸ್ತ್ಯ ದೊರೆಯುವುದಕ್ಕಿಂತ ಮೊದಲೇ ಅದು ಒಂದು ಪುಣ್ಯಕ್ಷೇತ್ರವಾಗಿದ್ದಿರಬೇಕು. ಕ್ಷತ್ರಿಯ ವಂಶಗಳನ್ನು ನಿರ್ಮೂಲಮಾಡಿದ ಪರಶುರಾಮ ತನ್ನ ಗಂಡುಗೊಡಲಿಗೆ ಅಂಟಿದ್ದ ರಕ್ತವನ್ನು ಇಲ್ಲಿಯ ನದಿಯಲ್ಲಿ ತೊಳೆದನೆಂದೂ ಆದ್ದರಿಂದ ಇದು ಪರಶುರಾಮಕ್ಷೇತ್ರವೆಂದೂ ದಂತಕಥೆ ಇದೆ. ಐಹೊಳೆಯ ಪ್ರದೇಶದಲ್ಲಿ ಸುಮಾರು ಎಪ್ಪತ್ತು ದೇವಾಲಯಗಳಿದ್ದು, ಇವುಗಳಲ್ಲಿ ಮೂವತ್ತಕ್ಕಿಂತ ಹೆಚ್ಚು ದೇವಾಲಯಗಳು ಹಳ್ಳಿಯ ನಡುವಣ ಸುಮಾರು ಐವತ್ತು ಚದರ ಮೀಟರ್ ಪ್ರದೇಶದಲ್ಲಿ ಕೇಂದ್ರೀಕೃತವಾಗಿವೆ. ಈ ಸ್ಥಳದ ಪಾವಿತ್ರ್ಯ ಇದರಿಂದ ಸ್ಪಷ್ಟವಾಗುತ್ತದೆ.

ಐಹೊಳೆಗೆ ಆರ್ಯಪುರ ಅಥವಾ ಅಯ್ಯವಳೆ ಎಂಬ ಹೆಸರುಗಳೂ ಇದ್ದುವು. ಒಂದು ಕಾಲಕ್ಕೆ ಇದು ವಿದ್ವಾಂಸರ ಬೀಡಾಗಿದ್ದಿರಬೇಕು.

ಇದು ಸಾಂಸ್ಕೃತಿಕ ಕೇಂದ್ರವಾಗಿದ್ದುದಲ್ಲದೆ ವ್ಯಾಪಾರದ ಕೇಂದ್ರವೂ ಆಗಿತ್ತು. ಅಯ್ಯಾವಳೆಯ ಐನೂರ್ವರು ಎಂಬ ಮಾತು ಶಾಸನಗಳಲ್ಲಿದೆ. ಇಡೀ ದಕ್ಷಿಣ ಭಾರತದ ವ್ಯಾಪಾರವನ್ನೆಲ್ಲ ಈ ವರ್ತಕರು ನಿಯಂತ್ರಿಸುತ್ತಿದ್ದರು.

ದೇವಾಲಯ ವಾಸ್ತುಶಿಲ್ಪದ ವಿಕಾಸದ ದೃಷ್ಟಿಯಿಂದ ಐಹೊಳೆ ತುಂಬ ಗಣನೀಯವಾದದ್ದು. ಕಲ್ಲಿನಿಂದ ದೇವಾಲಯಗಳನ್ನು ಕಟ್ಟುವ ಕಲೆಯ ಮೊದಲ ಪ್ರಯೋಗಗಳು ಐಹೊಳೆಯ ಪ್ರದೇಶದಲ್ಲೇ ನಡೆದಿರಬೇಕೆಂಬ ಅಭಿಪ್ರಾಯವಿದೆ. ಈ ಪ್ರಯೋಗಗಳು ಸುಮಾರು ಮೂರು ಶತಮಾನಗಳ ಕಾಲ, ಅಂದರೆ 5ರಿಂದ 8ನೆಯ ಶತಮಾನದವರೆಗೆ, ನಡೆದಿರಬೇಕು.

ಗೌಡರ ಗುಡಿ ಈ ಪ್ರದೇಶದ ಅತ್ಯಂತ ಪ್ರಾಚೀನ ದೇವಾಲಯ. ಇದು ನಾಲ್ಕನೆಯ ಶತಮಾನದ ಕೊನೆಯ ಭಾಗದಲ್ಲಿ ಕಟ್ಟಿದ್ದು. ಅದರ ಪಕ್ಕದಲ್ಲಿರುವುದು 'ಲಾಡ್‌ಖಾನ್' ಮಂದಿರ. ಲಾಡ್‌ಖಾನ್ ಎಂಬ ಹೆಸರಿನ ಮುಸ್ಲಿಂ ಸಾಧುವೊಬ್ಬನು ಕೆಲ ಕಾಲ ವಾಸಮಾಡಿದ್ದರಿಂದ ಅದಕ್ಕೆ ಈ ಹೆಸರು ರೂಢಿಯಾಯಿತು. ಈ ಆಲಯ ಮೂಲತಃ ವಿಷ್ಣುದೇವಾಲಯ; ಸೂರ್ಯನಾರಾಯಣನ ದೇವಾಲಯ ಇದ್ದಿರಬೇಕೆಂಬ ಊಹೆಯೂ ಇದೆ. ಇದರ ರಚನೆಯ ಕಾಲ ಸುಮಾರು 450. ಈ ದೇವಾಲಯದ ರಚನೆಯಲ್ಲಿ ಗುಹಾಲಯಗಳ ಕೆಲವು ಲಕ್ಷಣಗಳು ಕಾಣುತ್ತವೆ. ಚಪ್ಪಟೆಯಾದ ಮೇಲ್ಛಾವಣಿ ದೊಡ್ಡ ಆಕಾರದ ಸ್ತಂಭಗಳು, ಆಲಯದೊಳಕ್ಕೆ ಬೆಳಕು ಗಾಳಿ ಬರುವುದಕ್ಕಾಗಿ ಗೋಡೆಯಲ್ಲಿ ರೂಪಿಸಿರುವ ಸುಂದರವಾದ ಜಾಲಂದ್ರಗಳು. ಇದೇ ವರ್ಗಕ್ಕೆ ಸೇರಿದ ಇನ್ನೊಂದು ರಚನೆಯನ್ನು ಕೊಂಟಗುಡಿ ಎನ್ನುತ್ತಾರೆ.





ದುರ್ಗಾ ದೇವಾಲಯ

ಮೇಗುತಿ ದೇವಾಲಯವೆಂದು ಕರೆಯಲಾಗುವ ಮಂದಿರ ಒಂದು ಜಿನಾಲಯ. ಇದು ಒಂದು ಸಣ್ಣ ಗುಡ್ಡದ ಮೇಲಿದೆ; ಇಮ್ಮಡಿ ಪುಲಿಕೇಶಿಯ ಆಸ್ಥಾನದಲ್ಲಿದ್ದ ರವಿಕೀರ್ತಿ ಎಂಬಾತ ಕಟ್ಟಿಸಿದ್ದು. ಕಾಲ 634. ಈ ಆಲಯದಲ್ಲಿ ಒಂದು ದೊಡ್ಡ ಜಿನವಿಗ್ರಹವಿದೆ. ಅದು ಯಾವ ತೀರ್ಥಂಕರನ ಮೂರ್ತಿ ಎಂಬುದು ಗೊತ್ತಿಲ್ಲ. ಈ ಕಟ್ಟಡದ ಪೂರ್ವದಿಕ್ಕಿನ ಗೋಡೆಯ ಮೇಲಿರುವ ಶಾಸನ ಮುಖ್ಯವಾದದ್ದು. ರವಿಕೀರ್ತಿಯೇ ರಚಿಸಿರುವ ಈ ಶಾಸನದಲ್ಲಿ ಚಾಲುಕ್ಯವಂಶಕ್ಕೆ ಸಂಬಂಧಿಸಿದ ವಿವರಗಳಿವೆ.

ಈ ಜಿನಾಲಯದಲ್ಲಿ ಆಯತಾಕಾರದ ಹಜಾರ ಮತ್ತು ಗರ್ಭಗುಡಿ ಇವೆ. ಗರ್ಭಗುಡಿಯ ಸುತ್ತ ಪ್ರದಕ್ಷಿಣ ಪಥವಿದೆ. ಜಾಲಂದ್ರಗಳಿಂದ ಈ ಪಥಕ್ಕೆ ಬೆಳಕು ಬರುತ್ತದೆ. ಗರ್ಭಗುಡಿಯ ಮೇಲೆ ಶಿಖರವಿದೆ. ದೇವಾಲಯದ ಗೋಡೆಗಳ ಹೊರಬದಿಗಳಲ್ಲಿ ಅಂದಿನ ಜನಜೀವನ ಸೂಚಕವಾದ ಮೂರ್ತಿಗಳ ಕೆತ್ತನೆಯಿದೆ.

ವಾಸ್ತುಶಿಲ್ಪದ ಇತಿಹಾಸದೃಷ್ಟಿಯಿಂದ ಗಮನಾರ್ಹವಾದ ಇನ್ನೆರಡು ಗುಡಿಗಳು ಐಹೊಳೆಯಲ್ಲಿವೆ. ಇವುಗಳಲ್ಲಿ ಒಂದು, ಐಹೊಳೆ ಗ್ರಾಮದ ಸಮೀಪದಲ್ಲಿರುವ ಹುಚ್ಚಿಮಲ್ಲಿ ಗುಡಿ; ಇನ್ನೊಂದು ದುರ್ಗಾ ದೇವಾಲಯ.

ಹುಚ್ಚಿಮಲ್ಲಿ ಗುಡಿಯಲ್ಲಿ ಗರ್ಭಗುಡಿಗೂ ಹೊರಮಂಟಪಕ್ಕೂ ನಡುವೆ 'ಅಂತರಾಳ'ವೆಂಬ ಭಾಗ ಕಂಡುಬರುತ್ತದೆ. ಕಾಲಕ್ರಮೇಣ ಈ ಅಂತರಾಳ ಚಾಲುಕ್ಯ ದೇವಾಲಯದ ಅಖಂಡ ಭಾಗವಾಗಿ ಉಳಿಯಿತು. ಭುವನೇಶ್ವರದ ಪರಶುರಾಮೇಶ್ವರ ದೇವಾಲಯವನ್ನು ಇದು ಬಹಳ ಮಟ್ಟಿಗೆ ಹೋಲುವುದು ಸೋಜಿಗದ ಸಂಗತಿ. ಭಾರತೀಯ ದೇವಾಲಯಗಳಲ್ಲಿ ಮೊಟ್ಟ



ರಾವಣ ಫಡಿ ಗುಹಾಲಯ

ಮೊದಲ ಬಾರಿಗೆ ಶಿಖರ ಕಂಡುಬರುವುದು ಈ ಗುಡಿಯಲ್ಲಿ. ಇದರ ಕಾಲ ಸುಮಾರು 6ನೆಯ ಶತಮಾನ.

ದುರ್ಗ ಗುಡಿ ಐಹೊಳೆಯ ಅತ್ಯಂತ ಸುಂದರ ದೇವಾಲಯ. ಇದಕ್ಕಿರುವ ಕೋಟೆಯ ಆವರಣದಿಂದಾಗಿ ಈ ಹೆಸರು ಬಂದಿತು. ಚೈತ್ಯ ಗುಹೆಗಳಂತೆ ಇದರ ರಚನೆ. ಕುದುರೆ ಲಾಳದಂತೆ ಆಕಾರ. ಚೈತ್ಯದಲ್ಲಿ ಧಾತು ಗರ್ಭವಿರುವ ಸ್ಥಳದಲ್ಲಿ ಈ ದೇವಾಲಯದ ಗರ್ಭಗುಡಿಯಿದೆ. ಮುಖಮಂಟಪದ ಕಂಬಗಳ ಮೇಲೆ ಚೆಲುವಾದ ಕೆತ್ತನೆ ಕೆಲಸವಿದೆ. ಇದರ ಗರ್ಭಗುಡಿಯ ಮೇಲೆ ಶಿಖರವಿದೆ. ದೇವಾಲಯವನ್ನು ಸ್ತಂಭಗಳುಳ್ಳ ಕೈಸಾಲೆ ಸುತ್ತುವರಿದಿದೆ. ಒಂದಕ್ಕಿರುವ ಸ್ತಂಭಗಳು ಸರಳವಾಗಿವೆ. ಮುಂದಿನ ಸ್ತಂಭಗಳಲ್ಲಿ ಸುಂದರ ಮೂರ್ತಿಗಳು ಸ್ಪಷ್ಟವಾಗಿ ಕೆತ್ತಲ್ಪಟ್ಟಿವೆ. ದೇವಾಲಯದ ಗೋಡೆಯ ಹೊರ ಪಾರ್ಶ್ವದಲ್ಲಿ ಶಿವ, ವಿಷ್ಣು, ವರಾಹ, ಅರ್ಧನಾರೀಶ್ವರ. ನರಸಿಂಹ ಮುಂತಾದ ದೇವತಾಮೂರ್ತಿಗಳಿವೆ. ಈ ಮೂರ್ತಿಶಿಲ್ಪಗಳು ಸುಂದರವಾದುವು. ಆರಂಭಕಾಲದ ಚಾಲುಕ್ಯ ಶಿಲ್ಪಗಳ ಕೈಚಳಕಕ್ಕೆ ಇವು ನಿದರ್ಶನಗಳು. ತಳವಿನ್ಯಾಸದಲ್ಲಿ ಕುದುರೆ ಲಾಳ ಅಥವಾ ಗಜಪೃಷ್ಠದ ಆಕಾರದಲ್ಲಿರುವ ಚೈತ್ಯಗಳಿವೆ. ಇಂಥ ದೇವಸ್ಥಾನ ಆ ಕಾಲದ ಭಾರತದಲ್ಲಿ ಇನ್ನೆಲ್ಲೂ ಕಂಡುಬಂದಿಲ್ಲ. ಸೂರ್ಯನಾರಾಯಣನಿಗೆ ಅಂಕಿತವಾಗಿರಬಹುದಾದ ಈ ದೇವಾಲಯ ಸುಮಾರು 500ರಲ್ಲಿ ರಚಿತವಾದದ್ದು.

'ಲಾಡ್‌ಖಾನ್' ದೇವಾಲಯದ ಮುಂದೆ ಸಾಲಾಗಿ ನಾಲ್ಕು ದೇವಾಲಯಗಳಿವೆ. ಮತ್ತೊಂದು ಅದರ ಪಕ್ಕದ ಕೊಳದ ಆಚೆ ಬದಿಗಿದೆ. ಊರಿನಿಂದ ಸ್ವಲ್ಪ ದೂರವಿರುವ ಹುಚ್ಚಿಮಲ್ಲಿ ಗುಡಿಯ ಬಳಿ ಎರಡು ಗುಂಪಿನ ದೇವಾಲಯಗಳು ಕಂಡುಬರುತ್ತವೆ.

ಈ ಸಂದರ್ಭದಲ್ಲಿ ಹೇಳಬಹುದಾದ ಇನ್ನೊಂದು ಅಂಶ ಐಹೊಳೆಯ ಊರ ಹೊರಭಾಗದಲ್ಲಿರುವ ಗುಹಾಲಯವನ್ನು ಕುರಿತದ್ದು. ಬಾದಾಮಿಯ ಗುಹಾಲಯಗಳ ರಚನೆಗಿಂತ ಮೊದಲು ಇದರ ನಿರ್ಮಾಣವಾಗಿರಬೇಕೆಂದು ತೋರುತ್ತದೆ. ಇಲ್ಲಿರುವ ಕೆಲವು ಸ್ತ್ರೀವಿಗ್ರಹಗಳು ಸುಂದರವಾಗಿವೆ. ಪ್ರಾಯಶಃ ಇದು ಚಾಲುಕ್ಯ ವಾಸ್ತುಶಿಲ್ಪಿಗಳು ರೂಪಿಸಿದ ಮೊದಲ ಗುಹಾಲಯ.

ಐಹೊಳೆ ಊರಿನ ಯಾವ ತಿರುವಿಗೆ ನಿಂತರೂ ಗುಡಿಗಳೇ. ವಾಸ್ತುಶಿಲ್ಪ ಹಾಗೂ ಚರಿತ್ರೆಯ ವಿದ್ಯಾರ್ಥಿಗಳ ಅಧ್ಯಯನಕ್ಕೆ ಇದೊಂದು ಆದರ್ಶ ಪ್ರದೇಶ. ಭಾರತದ ವಾಸ್ತುಶಿಲ್ಪದ ಬೆಳವಣಿಗೆಯ ಒಂದು ಸಮಗ್ರ ನೋಟ ಇಲ್ಲಿ ದೊರೆಯುತ್ತದೆಂಬುದು ತಜ್ಞರ ಅಭಿಪ್ರಾಯ.

ನೋಡಿ : ಚಾಲುಕ್ಯ ಶಿಲ್ಪ. ವಾಸ್ತುಶಿಲ್ಪ ; ಪಟ್ಟದಕಲ್ಲು ; ಬಾದಾಮಿ

## 'ಒಡಿಸ್ಸಿ'

ಹಣೆಯಲ್ಲಿ ಒಂದೇ ಕಣ್ಣಿದ್ದ ಮಹಾ ರಾಕ್ಷಸ ಪಾಲಿಫಿಮಸ್. ಇವನು ಒಡೀಸಿಯಸ್ ಮತ್ತು ಅವನ ಮಿತ್ರರನ್ನು ಹಿಡಿದು ತನ್ನ ಗುಹೆಯಲ್ಲಿ ಸೆರೆಯಲ್ಲಿಟ್ಟಿದ್ದ ; ಪ್ರತಿ ದಿನವೂ ನಾಲ್ಕು ಜನರನ್ನು ತಿಂದು ತೇಗುತ್ತಿದ್ದ. ಈ ದುರಂತವನ್ನು ತಪ್ಪಿಸಲು ಒಡೀಸಿಯಸ್ ಒಂದು ಉಪಾಯ ಹೂಡಿದ. ತನ್ನಲ್ಲಿದ್ದ ಮದ್ಯವನ್ನು ಪಾಲಿಫಿಮಸ್‌ಗೆ ಕಂಠ ಪೂರ್ತಿ ಕುಡಿಸಿ ಅವನು ಪ್ರಜ್ಞೆ ತಪ್ಪಿದಾಗ ಉರಿಯುತ್ತಿದ್ದ ಕೊಳ್ಳಿಯಿಂದ ಚುಚ್ಚಿ ಅವನ ಏಕೈಕ ಕಣ್ಣನ್ನು ಸುಟ್ಟು ಬಿಟ್ಟ. ಪಾಲಿಫಿಮಸ್ ಬೊಬ್ಬೆ ಹಾಕತೊಡಗಿದ. "ನನ್ನ ಕಣ್ಣನ್ನು ನಾಶಪಡಿಸಿದವರು ಯಾರು ?"–ಎಂದು ಕ್ರೋಧದಿಂದ ಕೇಳಿದ. ಒಡೀಸಿಯಸ್ "ಯಾರೂ ಇಲ್ಲ" ಎಂದ ; ಪಾಲಿಫಿಮಸ್ "ಯಾರೂ ಇಲ್ಲ ನನ್ನನ್ನು ಕೊಲ್ಲುತ್ತಿದ್ದಾನೆ" ಎಂದು ಕೂಗಾಡಿದ. ಜನರಿಗೆ ಈ ಮಾತು ಅರ್ಥವಾಗದೆ ನಕ್ಕು ಸುಮ್ಮನಾದರು. ಪಾಲಿಫಿಮಸನ ಬಳಿ ಇದ್ದ ಕುರಿಗಳ ಕೆಳಗೆ ಬಚ್ಚಿಟ್ಟುಕೊಂಡೇ ಅಪಾಗ ಒಡೀಸಿಯಸ್ ಮತ್ತು ಅವನ ಗೆಳೆಯರೆಲ್ಲರೂ ಗವಿಯಿಂದ ತಪ್ಪಿಸಿಕೊಂಡರು.

—ಇದು 'ಒಡಿಸ್ಸಿ' ಮಹಾಕಾವ್ಯದಲ್ಲಿ ಬರುವ ಒಂದು ಘಟನೆ. ಈ ಮಹಾ ಕಾವ್ಯದ ನಾಯಕ ಒಡೀಸಿಯಸ್. ಟ್ರೋಜನ್ ಯುದ್ಧದ ಅನಂತರ ಇವನು ತನ್ನ ನಾಡು ಇತಾಕಗೆ ಹಿಂತಿರುಗಿದ್ದನ್ನೂ ಹಾಗೆ ಬರುವಾಗ ದಾರಿಯಲ್ಲಿ ನಡೆದ ರೋಮಾಂಚಕಾರೀ ಸಾಹಸಗಳನ್ನೂ ಇತಾಕದಲ್ಲಿ ತನ್ನ ಹೆಂಡತಿಯನ್ನು ಭೇಟಿಯಾಗುವುದನ್ನೂ ಈ ಮಹಾಕಾವ್ಯ ನಿರೂಪಿಸುತ್ತದೆ.

ಈಗಿರುವ ನಂಬಿಕೆಯ ಪ್ರಕಾರ 'ಒಡಿಸ್ಸಿ' ಮಹಾಕಾವ್ಯವನ್ನು ಬರೆದವನು ಕ್ರಿ. ಪೂ. 9 ಅಥವಾ 8ನೆಯ ಶತಮಾನದಲ್ಲಿದ್ದ ಗ್ರೀಸಿನ ಮಹಾಕವಿ ಹೋಮರ್. ಅವನ ಮೊದಲ ಮಹಾಕಾವ್ಯ 'ಇಲಿಯಡ್'ನ ಕಥೆಯನ್ನೇ ಇಲ್ಲಿ ಮುಂದುವರಿಸಲಾಗಿದೆ.

ಒಡೀಸಿಯಸ್ ಊರು ಬಿಟ್ಟು 20 ವರ್ಷಗಳು ಕಳೆದಿದ್ದುವು. ಅವನ ಹೆಂಡತಿಯನ್ನು ಮರುಮದುವೆಯಾಗಲು ಅನೇಕರು ಹವಣಿಸುತ್ತಿದ್ದರು. ಅವಳು ತಾನು ನೇಯುತ್ತಿದ್ದ ಬಟ್ಟೆ ಪೂರ್ತಿಯಾದ ಮೇಲೆ ಮದುವೆಯಾಗುವುದಾಗಿ ಹೇಳಿ, ಹಗಲು ನೇಯ್ದುದ್ದನ್ನು ರಾತ್ರಿ ಹೊತ್ತು ಬಿಚ್ಚಿ, ಬಿಚ್ಚಿದ ಭಾಗದ ನೆಯ್ಗೆಯನ್ನು ಮತ್ತೆ ಬೆಳಗ್ಗೆ ಮುಂದುವರಿಸುತ್ತಿದ್ದಳು. ಹೀಗೆ ಒಡೀಸಿಯಸ್ ಬರುವವರೆಗೆ ಅವಳು ಕಾದಳು. ಒಡೀಸಿಯಸ್ ಹಿಂದಿರುಗಿ ಬಂದು, ತನ್ನ ಮಗನೊಂದಿಗೆ ಸೇರಿ ಅಲ್ಲಿದ್ದ ಶತ್ರುಗಳನ್ನೆಲ್ಲ ನಾಶಮಾಡಿ ಹೆಂಡತಿಯನ್ನು ರಕ್ಷಿಸಿ ಆಕೆಯೊಡನೆ ಬಾಳಿದ.

ಕಥಾದೃಷ್ಟಿಯಿಂದ ಇಲ್ಲಿ ಬರುವ ಘಟನೆಗಳು ಅತ್ಯಂತ ಅಪೂರ್ವ. ಈ ಘಟನೆಗಳನ್ನು ರೋಮಾಂಚಕಾರಿಯಾಗಿ. ನಾಟಕೀಯವಾಗಿ ಹೇಳಿರುವ ರೀತಿಯೂ ಅಪೂರ್ವ. ಕಥಾ ಸಂವಿಧಾನದ ದೃಷ್ಟಿಯಿಂದ ಈ ಕಾವ್ಯ 'ಇಲಿಯಡ್'ಗಿಂತ ಉತ್ತಮವಾದದ್ದೆಂದು ಕೆಲವು ವಿಮರ್ಶಕರ ಅಭಿಪ್ರಾಯ.

ಒಡೀಸಿಯಸ್‌ನ ಜೀವನದಲ್ಲಿ ಮಾನವನ ಎಲ್ಲ ಮೂಲಭೂತ ಆಸೆ-ಆಕಾಂಕ್ಷೆಗಳನ್ನೂ. ಮಾನವ ಸಹಜ ಸಂವೇದನೆಗಳನ್ನೂ ಕಾಣುತ್ತೇವೆ.

ಊರಿಗೆ ಮರಳುವ ದಾರಿಯಲ್ಲಿ ಒಡೀಸಿಯಸ್ ಮಾಯಾವಿನಿ ಸರ್ಸೀಯನ್ನು ಇದಿರಿಸಿದಾಗ

ಬುದ್ಧಿವಂತಿಕೆ, ಧೈರ್ಯ. ಅಪಾರ ತಾಳ್ಮೆಗಳ ಅಭಿವ್ಯಕ್ತರೂಪ ಒಡೀಸಿಯಸ್‌ನದು. ಅವನು ನಾನಾ ಕಷ್ಟಗಳಿಗೆ ಸಿಕ್ಕಿಕೊಂಡ ರೀತಿ ಈ ಕಾವ್ಯದಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ಇಲ್ಲಿಯ ಪಾತ್ರ ಘಟನೆಗಳಿಗೆ ಸಾಂಕೇತಿಕ ಅರ್ಥ ಇದೆಯೆಂದು ಕೆಲವು ವ್ಯಾಖ್ಯಾನಕಾರರು ಹೇಳಿದ್ದಾರೆ. ಅವರ ಅಭಿಪ್ರಾಯದಲ್ಲಿ ಒಡೀಸಿಯಸ್ ಸೂರ್ಯದೇವನ ಸಂಕೇತ. ಅವನ ಹೆಂಡತಿ ವಸಂತಕಾಲದ ಪ್ರತೀಕ. ಸೂರ್ಯದೇವನು ಶಿಶಿರ ಋತುವನ್ನು ಹಿಂದಕ್ಕೆ ತಳ್ಳಿ ವಸಂತವನ್ನು ಸೇರುವುದು ಈ ಕಾವ್ಯದ ಧ್ವನಿ.

ಈ ಕಾವ್ಯದಿಂದ ಪ್ರಭಾವಿತರಾದ ಕಲಾವಿದ–ಸಾಹಿತಿಗಳು ಅನೇಕ ಮಂದಿ. ದಾಂತೆ, ಟೆನಿಸನ್‌ರಂಥವರು ಈ ಮಹಾಕಾವ್ಯದ ಘಟನೆಗಳನ್ನು ಆಧರಿಸಿ ಕಾವ್ಯರಚನೆ ಮಾಡಿದ್ದಾರೆ. ಅನೇಕ ಕಲಾವಿದರು ಈ ಘಟನೆಗಳನ್ನು ಚಿತ್ರಿಸಿದ್ದಾರೆ.

**ನೋಡಿ :** ಹೋಮರ್

## ಓವಿಡ್

'ನಾನು ಏನು ಹೇಳಬೇಕೆಂದು ಪ್ರಯತ್ನಿಸುತ್ತೇನೋ ಅದೆಲ್ಲ ಪದ್ಯದ ರೂಪದಲ್ಲೇ ಹೊರಹೊಮ್ಮುತ್ತದೆ'–ಹೀಗೆಂದು ಸ್ವತಃ ಓವಿಡ್ ತನ್ನ ಬಗೆಗೆ ಹೇಳಿಕೊಂಡಿದ್ದಾನೆ. ಇದು ಬಡಾಯಿಯಲ್ಲ; ಅಕ್ಷರಶಃ ನಿಜ. ಓವಿಡ್‌ನ ಪದ್ಯಗಳು ಅಷ್ಟು ಲಲಿತ, ಉಲ್ಲಾಸಕರ, ನಿರರ್ಗಳ.

'ರೂಪಾಂತರ' ಎಂಬ ಅವನ ಶ್ರೇಷ್ಠ ರಚನೆ 15 ಭಾಗಗಳಲ್ಲಿ ಬರೆಯಲ್ಪಟ್ಟಿದೆ; 12,000 ಸಾಲುಗಳನ್ನು ಒಳಗೊಂಡಿದೆ. ಇದು ಇಷ್ಟು ದೀರ್ಘವಾದರೂ ಅದನ್ನು ಓದುವಾಗ ಬೇಸರವಾಗುವುದಿಲ್ಲ. ಎಣೆಯಿಲ್ಲದ ಕಥನಶೈಲಿ. ಕಣ್ಣಿಗೆ ಕಟ್ಟುವಂಥ ವರ್ಣನೆಗಳು. ಸುಂದರ ಕಲ್ಪನೆಗಳು —ಈ ವಿಶೇಷ ಗುಣಗಳಿಂದ ಓವಿಡ್ ಅವನ ಕಾಲದಲ್ಲೇ ಅಷ್ಟು ಮೆಚ್ಚಿನ ಕವಿಯಾದ. ಅಷ್ಟೇ ಅಲ್ಲ, ಯೂರೋಪಿನ ಮಧ್ಯಯುಗದ ನವೋದಯದ ಕವಿಗಳಿಗೆ, ಶಿಲ್ಪಿಗಳಿಗೆ, ಕಲಾವಿದರಿಗೆ ಸ್ಫೂರ್ತಿಯ ಸೆಲೆಯಾದ. ಓವಿಡನ ಶೈಲಿಯನ್ನು ಅನೇಕ ಲೇಖಕರು ಅನುಕರಿಸಿದರು. ಅವನು ಚಿರನೂತನಗೊಳಿಸಿದ ಗ್ರೀಕ್ ಪುರಾಣಕಥೆಗಳನ್ನು ಆಧರಿಸಿ ಹಲವಾರು ಮಂದಿ ಕಲಾವಿದರು ಕೃತಿ ರಚನೆ ಮಾಡಿದರು.

ಓವಿಡ್ ಬಾಳಿದ್ದು ಪ್ರಾಚೀನ ರೋಮಿನ ವೈಭವದ ಕಾಲದಲ್ಲಿ. ಒಂದು ನೂರು ವರ್ಷಗಳ ಕಾಲ ನಡೆದ ಅಂತರ್ಯುದ್ಧ ಮುಗಿದಿತ್ತು. ಅಗಸ್ಟಸ್ ಚಕ್ರವರ್ತಿಯ ಆಳ್ವಿಕೆಯಲ್ಲಿ ರೋಮಿನ ಚಕ್ರಾಧಿಪತ್ಯ ಶಾಂತಿ, ಸಂಪತ್ತುಗಳಿಂದ ಮೆರೆಯುತ್ತಿದ್ದಿತು. ರಾಜಾಶ್ರಯದಲ್ಲಿ ಕಲೆ, ಸಾಹಿತ್ಯಗಳಿಗೆ ಉತ್ತೇಜನ ದೊರೆಯಿತು. ಹಿಂದಿನ ಕಷ್ಟಗಳ ಅರಿವಿಲ್ಲದ ಶ್ರೀಮಂತ ಯುವಜನರು ವಿಲಾಸಪ್ರಿಯರಾಗಿದ್ದರು. ಈ ಬೆಡಗಿನ ಸಮಾಜದ ಜನಪ್ರಿಯ ಕವಿ ಓವಿಡ್. ಅವನ ತಂದೆಯೂ ಧನಿಕ. ಓವಿಡ್ ಹುಟ್ಟಿದ್ದು ಸಲ್ಮೊ (ಇಂದಿನ ಸಲ್ಮೋನ) ಎಂಬಲ್ಲಿ ಕ್ರಿ. ಪೂ. 43ರಲ್ಲಿ. ಚಿಕ್ಕಂದಿನಲ್ಲೇ ಆತ ವಿದ್ಯಾಭ್ಯಾಸಕ್ಕಾಗಿ ರೋಮಿಗೆ ಹೋದ. ಮಗ ವಾಗ್ಮಿಯಾಗಬೇಕು, ಒಳ್ಳೆಯ ಅಧಿಕಾರ ಪಡೆಯಬೇಕು ಎಂದು ತಂದೆಯ ಹಂಬಲ. ಅದಕ್ಕೆ ತಕ್ಕ ಶಿಕ್ಷಣ ಅವನಿಗೆ ದೊರೆಯಿತು. ಆದರೆ ಓವಿಡ್‌ನ ಒಲವು ಕಾವ್ಯ ರಚನೆಯ ಕಡೆಗೇ ಇದ್ದಿತು. ಬಾಲ್ಯದಿಂದಲೂ ಅವನ ಸಹವಾಸ ಕವಿಗಳೊಡನೆ. ಕವಿತೆಯೆಂದರೆ ಗೌರವ. ಕಾವ್ಯ ಅವನ ಅಭಿವ್ಯಕ್ತಿಗೆ ಮಾಧ್ಯಮವಾಯಿತು. ಅಷ್ಟೇ ಅಲ್ಲ, ಕಡೆಗಾಲದಲ್ಲಿ ಏಕಾಂಗಿಯಾಗಿದ್ದಾಗ ಅವನ ಅಳಲನ್ನು ಮರೆಯಿಸುವ ಸಾಧನವೂ ಆಯಿತು.

ಶಿಕ್ಷಣ ಮುಗಿದ ಬಳಿಕ ಓವಿಡ್ ಗ್ರೀಸ್, ಏಷ್ಯ ಮೈನರ್ ಹಾಗೂ ಸಿಸಿಲಿಗಳಲ್ಲಿ ಪ್ರವಾಸ ಮಾಡಿದ. ಕೆಲವು ಸರಕಾರೀ ಹುದ್ದೆಗಳ ಅನುಭವವೂ ಅವನಿಗೆ ಆಯಿತು. ಅನಂತರ ಪದ್ಯರಚನೆಯಲ್ಲಿ ತೊಡಗಿದ. ಪ್ರವಾಸದಲ್ಲಿ ಕಂಡ ಪ್ರಕೃತಿ ಸೌಂದರ್ಯ, ಕೇಳಿದ ದಂತಕಥೆಗಳು ಅವನಿಗೆ ಸ್ಫೂರ್ತಿ ನೀಡಿದುವು. ಅವನ ಕವಿತೆಯ ವಸ್ತು ಪ್ರಧಾನವಾಗಿ ಪ್ರಣಯ. ಸಭ್ಯವಲ್ಲದ ಕವಿತೆಗಳನ್ನು ಬರೆದನೆಂಬ ಆರೋಪ ಅವನ ಮೇಲೆ ಬಂತು. ಚಕ್ರವರ್ತಿಯ ಮೊಮ್ಮಗಳೊಡನೆ ಸಲಿಗೆಯಿಂದ ವರ್ತಿಸಿದನೆಂಬ ದೂರು ಕೇಳಿಸಿತು. ಈ ಕಾರಣಗಳಿಂದಲೋ ಅಥವಾ ಮತ್ತಿನ್ನಾವ

ಬಾಯಿ ತೆರೆದರೆ ಕಾವ್ಯ : ಓವಿಡ್

ಕಾರಣದಿಂದಲೋ ಅವನು ದೇಶಭ್ರಷ್ಟನಾಗಬೇಕಾಯಿತು. ರೋಮಿನ ಗಡಿಪ್ರದೇಶದಲ್ಲಿ ಕಪ್ಪು ಸಮುದ್ರ ತೀರದಲ್ಲಿ ತನ್ನ ಬಾಳಿನ ಉಳಿದ ಭಾಗವನ್ನು ಆತ ಕಳೆದ. ಕ್ರಿ. ಶ. 17ರಲ್ಲಿ ಕಾಲವಾದ. ಚಕ್ರವರ್ತಿಯ ಕ್ಷಮೆ ದೊರೆತು ತನ್ನ ವೈಭವದ ನಾಡಿಗೆ ಹಿಂದಿರುಗುವೆನೆಂಬ ಆಸೆ ಓವಿಡ್‌ಗೆ ಕೊನೆಯುವರೆಗೂ ಇತ್ತು.

'ಆರ್ಸ್ ಅಮೋರ್ಸ್' (ಪ್ರಣಯ ಕಲೆ), 'ಹಿರಾಯಿಡ್ಸ್' (ಪ್ರಣಯ ಪತ್ರಗಳು), 'ಟ್ರಿಸ್ಟಿಯ' (ದುಃಖ ಗೀತೆಗಳು), 'ರೆಮಿಡಿಯಾ ಅಮೋರ್ಸ್' (ವಿರಹತಾಪ ನಿವಾರಣೆ), 'ಮೆಟಮಾರ್ಫಸಿಸ್' (ರೂಪಾಂತರ)—ಇವು ದೇಶಾಂತರ ಹೊಂದುವ ಮೊದಲು ಓವಿಡ್ ರಚಿಸಿದ ಕೃತಿಗಳು. 'ಮಿಡಿಯಾ' ಎಂಬ ಅವನ ದುರಂತ ಕವಿತೆಯನ್ನು ಪ್ರಾಚೀನ ಬರೆಹಗಾರರು ಬಹಳ ಪ್ರಶಂಸಿಸಿದ್ದಾರೆ. ಆದರೆ ಇದು ದೊರೆತ್ತಿಲ್ಲ. 'ರೂಪಾಂತರ' ಪ್ರಾಚೀನ ಗ್ರೀಕ್ ಪುರಾಣಯುಗದಿಂದ ಅಗಸ್ಟಸ್ ಚಕ್ರವರ್ತಿಯ ವರೆಗಿನ ಕಾಲವನ್ನು ಚಿತ್ರಿಸುತ್ತದೆ. ಆದರೆ ಇದರಲ್ಲಿ ರೋಮಿನ ಪುರಾಣ ಕಥೆಗಿಂತ ಗ್ರೀಕ್ ಪುರಾಣ ಕಥೆಗಳೇ ಹೆಚ್ಚು. ಇದರಲ್ಲಿ ಭಾಷೆಯ ಆಡಂಬರವಿದೆ. ಅಲಂಕಾರಗಳಿಗೆ ಹೆಚ್ಚಿನ ಗಮನ. ಆದರೂ ಇದು ಒಂದು ಚೇತೋಹಾರಿ ಕೃತಿ.

ಪ್ರಪಂಚದ ಸೃಷ್ಟಿ, ವಿಕಾಸಗಳು ಇದರ ಕಥಾವಸ್ತು. ರೂಪಾಂತರಗಳೂ ಆಕೃತಿ ಬದಲಾವಣೆಗಳೂ ಇದರ ಕಥೆಗಳಲ್ಲಿ ತುಂಬಿವೆ. ಜೂಪಿಟರ್ ದೇವತೆ ಗೂಳಿಯಾದಂತೆ, ಹೊನ್ನಿನ ಮಳೆಯಾದಂತೆ ಒಂದು ಚಿತ್ರಣ. ಜೂಲಿಯಸ್ ಸೀಸರ್ ತಾರೆಯಾದಂತೆ ಇನ್ನೊಂದು—ಹೀಗೆ. ಕಾಲ ದೇಶಗಳನ್ನು ಮೀರಿ, ಅತಿಮಾನುಷ ಲೋಕದಲ್ಲಿ ಕವಿ ವಿಹರಿಸಿದ್ದಾನೆ.

'ಟ್ರಿಸ್ಟಿಯ' (ದುಃಖ ಗೀತೆಗಳು) ಕೊನೆಗಾಲದಲ್ಲಿ ಆತ ಬರೆದ ಕೃತಿ. 'ಕಪ್ಪು ಸಮುದ್ರದಿಂದ ಓಲೆಗಳು' ಎಂಬ ಕೃತಿಯೂ ರಚಿತವಾದದ್ದು ಆಗಲೇ. ಇವುಗಳಲ್ಲಿ ತನ್ನ ಆಸೆ, ನಿರಾಸೆ, ದುಃಖ, ಹಂಬಲಗಳೆಲ್ಲವನ್ನೂ ಕವಿ ತೋಡಿಕೊಂಡಿದ್ದಾನೆ.

ಜಗದ್ವಿಖ್ಯಾತರಾದ ಅನೇಕ ಐರೋಪ್ಯ ಕವಿಗಳು ಓವಿಡ್‌ನಿಂದ ಪ್ರಭಾವಿತರಾಗಿದ್ದಾರೆ.

## ಓ ಹೆನ್ರಿ

ಹೆನ್ರಿಯ ಸಣ್ಣ ಕಥೆ ಮೊಟ್ಟಮೊದಲಿಗೆ ಬೆಳಕು ಕಂಡದ್ದು 1902ರಲ್ಲಿ, ಒಂದು ಸಣ್ಣ ವೃತ್ತಪತ್ರಿಕೆಯಲ್ಲಿ. ಈ ಕಥೆಯ ಜನಪ್ರಿಯತೆಯನ್ನು ಕಂಡು ಇನ್ನೂ ಹಲವು ಪತ್ರಿಕೆಗಳು ಅವನಿಂದ ಕಥೆಗಳನ್ನು ಅಪೇಕ್ಷಿಸಿದುವು. ಓ ಹೆನ್ರಿಗೆ ಹಣದ ಅಡಚಣೆ ಬಹಳವಾಗಿತ್ತು. ಹೆಚ್ಚು ಹೆಚ್ಚು ಕಥೆಗಳನ್ನು ಬರೆದು ಕಳುಹಿಸಿಕೊಟ್ಟ. ಸುಮಾರು ಮೂವತ್ತು ಪತ್ರಿಕೆಗಳು ಅವನ ಕಥೆಗಳನ್ನು ಪ್ರಕಟಿಸಿದುವು. 1910ರಲ್ಲಿ ತೀರಿಕೊಳ್ಳುವ ಹೊತ್ತಿಗೆ–ಸುಮಾರು ಹತ್ತು ವರ್ಷಗಳ ಅವಧಿಯಲ್ಲಿ–ಅವನು ಆರುನೂರಕ್ಕೂ ಹೆಚ್ಚು ಸಣ್ಣಕಥೆಗಳನ್ನು ಬರೆದಿದ್ದ. ಓ ಹೆನ್ರಿಗೆ 'ಸಣ್ಣಕಥೆಗಳ ರಾಜ' ಎಂಬ ಖ್ಯಾತಿ ಬಂತು.

'ಓ ಹೆನ್ರಿ' ಎಂಬ ಕಾವ್ಯನಾಮದಿಂದ ಪ್ರಸಿದ್ಧನಾದ ವ್ಯಕ್ತಿ ವಿಲಿಯಂ ಸಿಡ್ನಿ ಪೋರ್ಟರ್. ಇವನು ಸಾಹಿತಿಯಾದದ್ದು ಒಂದು ಅಪೂರ್ವ ಘಟನೆ. ಪೋರ್ಟರ್ ಟೆಕ್ಸಾಸ್‌ನ ಪ್ರಾಂತದ ಒಂದು ಬ್ಯಾಂಕಿನಲ್ಲಿ ಉದ್ಯೋಗದಲ್ಲಿದ್ದಾಗ ಹಣದ ದುರುಪಯೋಗ ಮಾಡಿದನೆಂಬ ಆರೋಪಕ್ಕೆ ಆತ ಒಳಗಾದ. ಪೋಲೀಸರಿಗೆ ಹೆದರಿ ತಲೆಮರೆಸಿಕೊಂಡು ಪೋರ್ಟರ್ ಊರಿನಿಂದ ಊರಿಗೆ ಸುತ್ತತೊಡಗಿದ. ಪತ್ನಿಗೆ ತೀವ್ರ ಕಾಯಿಲೆ ಎಂದು ಕೇಳಿ ಊರಿಗೆ ಹಿಂದಿರುಗಿದಾಗ ಪೋಲೀಸರು ಪೋರ್ಟರನನ್ನು ಹಿಡಿದರು. ಅವನು ಸೆರೆಮನೆ ಸೇರಬೇಕಾಯಿತು. ಮೂರು ವರ್ಷ ಮೂರು ತಿಂಗಳ ಅನಂತರ ಅಲ್ಲಿಂದ ಹೊರಬಿದ್ದ ಪೋರ್ಟರ್ ಹೊಸ ಮನುಷ್ಯನಾಗಿದ್ದ. ಜೊತೆ ಖೈದಿಯಾಗಿದ್ದ ಒಬ್ಬನಿಂದ ಕೇಳಿದ ಘಟನೆ ಹೊಸ ಬಗೆಯ ಕಥೆಯನ್ನು ಹೆಣೆಯಲು ಸ್ಫೂರ್ತಿಕೊಟ್ಟಿತು. ಜೈಲಿನಲ್ಲಿ ಕಾವಲುಗಾರನಾಗಿದ್ದವನ ಹೆಸರನ್ನೇ ತನ್ನ ಕಾವ್ಯನಾಮವಾಗಿಟ್ಟುಕೊಂಡು ಪೋರ್ಟರ್ ಬರೆಯಲಾರಂಭಿಸಿದ.



'ಸಣ್ಣ ಕಥೆಗಳ ರಾಜ' : ಓ ಹೆನ್ರಿ

ಉತ್ತರ ಕರೋಲಿನದ ಗ್ರೀನ್ಸ್ ಬಾರೋ ಎಂಬಲ್ಲಿ ಪೋರ್ಟರ್ 1862 ಸೆಪ್ಟೆಂಬರ್ 11ರಂದು ಹುಟ್ಟಿದ. ಹದಿನೈದರ ಹುಡುಗನಾಗಿದ್ದಾಗಲೇ ಶಾಲೆ ಬಿಟ್ಟು ತನ್ನ ನೆಂಟರೊಬ್ಬರ ಔಷಧ ಅಂಗಡಿಯಲ್ಲಿ ಕೆಲಸಕ್ಕೆ ಸೇರಿಕೊಂಡ. ಅಂಗಡಿಗೆ ಬಂದು ಹೋಗುತ್ತಿದ್ದವರ ವ್ಯಂಗ್ಯಚಿತ್ರ ಬರೆಯುವುದು ಹವ್ಯಾಸವಾಯಿತು. ಐದು ವರ್ಷಗಳ ಬಳಿಕ ಗೆಳೆಯರ ಆಮಂತ್ರಣದ ಮೇಲೆ ಟೆಕ್ಸಾಸಿನ ಹುಲ್ಲುಗಾವಲುಗಳಲ್ಲಿ ವಾಸಮಾಡಲು ಹೋದ. ಕುರಿ ಕಾಯುವವನಾಗಿ, ಅಂಚೆ ಒಯ್ಯುವವನಾಗಿ ಕೆಲಸ ಮಾಡಿದ. ಕುದುರೆ ಸವಾರಿಯ ಜೊತೆಗೆ ಸ್ಪಾನಿಷ್ ಭಾಷೆಯನ್ನು ಕಲಿತು ಪುಸ್ತಕಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡ. ಜೊತೆಗೆ ವೆಬ್‌ಸ್ಟರ್ ನಿಘಂಟನ್ನೂ ತೀವ್ರವಾಗಿ ಅಭ್ಯಾಸ ಮಾಡಿದ.

1884ರಲ್ಲಿ ಪೋರ್ಟರ್ ಆಸ್ಟಿನ್ ಪಟ್ಟಣಕ್ಕೆ ಹೋಗಿ ದಲ್ಲಾಳಿ ಸಂತೆಯೊಂದರಲ್ಲಿ ಕೆಲಸ ದೊರಕಿಸಿಕೊಂಡ. ಅನಂತರ ಔಷಧ ವ್ಯಾಪಾರಿಯಾಗಿ, ಪುಸ್ತಕ ವ್ಯಾಪಾರಿಯಾಗಿ, ಉದ್ಯೋಗ ನಡೆಸಿದ. ಭೂಕಂದಾಯ ಕಛೇರಿಯಲ್ಲೂ ಬ್ಯಾಂಕಿನಲ್ಲೂ ಉದ್ಯೋಗಿಯಾದ. ಮುಂದೆ ತನ್ನದೇ ಆದ ವಾರಪತ್ರಿಕೆ 'ರೋಲಿಂಗ್ ಸ್ಟೋನ್' ಅನ್ನು ಕೆಲ ಕಾಲ ನಡೆಸಿದ. ಈ ಪತ್ರಿಕೆಗೆ ಹಲವಾರು ಲೇಖನಗಳನ್ನು ತಾನೇ ಬರೆಯುತ್ತಿದ್ದನಲ್ಲದೆ, ಲೇಖನಗಳಿಗೆ ಚಿತ್ರಗಳನ್ನೂ ಬರೆಯುತ್ತಿದ್ದ. ಪತ್ರಿಕೆ ನಡೆಸುವುದು ಸಾಧ್ಯವಿಲ್ಲವಾದಾಗ ಅದನ್ನು ಮುಚ್ಚಿ 'ಹ್ಯೂಸ್ಟನ್ ಡೈಲಿ ಪೋಸ್ಟ್' ಎಂಬ ಪತ್ರಿಕಾ ಕಛೇರಿ ಸೇರಿದ.

'ಎಲೆಕೋಸುಗಳು ಮತ್ತು ಅರಸರು' ಎಂಬ ಪುಸ್ತಕ ಓ ಹೆನ್ರಿಯ ಪ್ರಥಮ ಕಥಾಸಂಕಲನ. ಇದು ಪ್ರಕಟವಾದದ್ದು 1904ರಲ್ಲಿ. ಸಾಹಸ ಮತ್ತು ಕ್ರಾಂತಿಯ ಕಥೆಗಳೂ ಇದರಲ್ಲಿದ್ದುವು. ಎರಡು ವರ್ಷಗಳ ಬಳಿಕ ಹೊರಬಂದ ಕಥಾಸಂಕಲನ 'ನಾಲ್ಕು ಮಿಲಿಯ' ಸಣ್ಣಕಥೆಗಳ ರಚನೆಯಲ್ಲೇ ಕ್ರಾಂತಿ ಉಂಟುಮಾಡಿತು. ಈ ಎಲ್ಲ ಕಥೆಗಳ ವೈಶಿಷ್ಟ್ಯ –ಅವುಗಳ

ಅನಿರೀಕ್ಷಿತ ಮುಕ್ತಾಯ. ಅವನ ಹೆಚ್ಚಿನ ಕಥೆಗಳು ಕೊನೆಯ ವಾಕ್ಯದವರೆಗೂ ಕುತೂಹಲ ಕಾಯ್ದುಕೊಳ್ಳುತ್ತಿದ್ದುವು.

ಓ ಹೆನ್ರಿಯ ಅತ್ಯಂತ ಶ್ರೇಷ್ಠ ಕಥೆಗಳು ನ್ಯೂಯಾರ್ಕ್ ನಗರದ ಜನ ಜೀವನಕ್ಕೆ ಸಂಬಂಧಿಸಿದುವು. ಇವನ ಅಚ್ಚುಮೆಚ್ಚಿನ ನಗರ ನ್ಯೂಯಾರ್ಕ್. ಬಿಡುವಾದಾಗಲೆಲ್ಲ ಇವನು ಆ ನಗರದ ಉದ್ಯಾನಗಳಲ್ಲಿ, ರಸ್ತೆಗಳಲ್ಲಿ ಅಡ್ಡಾಡುತ್ತಿದ್ದ. ಸಣ್ಣ ಹೋಟೆಲುಗಳಿಗೆ ಭೇಟಿಕೊಟ್ಟು ಗಿರಾಕಿಗಳೊಡನೆ ಮಾತನಾಡುತ್ತಿದ್ದ. ಈ ಅನುಭವ ಅವನ ಹಲವಾರು ಕಥೆಗಳಿಗೆ ಪ್ರೇರಕ ವಾಯಿತು.

ಪದಗಳ ಮಿತಪ್ರಯೋಗ ಓ ಹೆನ್ರಿಯ ಇನ್ನೊಂದು ವೈಶಿಷ್ಟ್ಯ. ದೃಶ್ಯ ಗಳನ್ನೂ ವ್ಯಕ್ತಿಗಳನ್ನೂ ವಿವರಿಸುವಾಗ ಇವನು ಅನವಶ್ಯ ಪದಗಳನ್ನು ಉಪಯೋಗಿಸುವುದಿಲ್ಲ. ಪಾತ್ರಗಳ ಮಾತುಕತೆಗಳಿಂದಲೇ ಓದುಗ ಕಥಾ ಸರಣಿಯ ಸೂಕ್ಷ್ಮ ಅಂಶಗಳನ್ನು ಗ್ರಹಿಸಬೇಕಾಗುತ್ತದೆ.

ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಪ್ರಸಿದ್ಧನಾದ ಮೇಲೂ ಓ ಹೆನ್ರಿಯ ಹಣದ ಅಡಚಣೆ ಕಡಮೆಯಾಗಲಿಲ್ಲ. ಹೆಚ್ಚು ಸಂಪಾದಿಸುವ ಉದ್ದೇಶ ದಿಂದ ಇವನು ಹೆಚ್ಚು ಕಥೆಗಳನ್ನು ಬರೆಯತೊಡಗಿದ. ಇದರಿಂದ ಒಂದೇ ಕಥಾವಸ್ತು ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಂಡದ್ದೂ ಉಂಟು. ಹೀಗೆ ಕಥಾವಸ್ತುವನ್ನು ವಿವಿಧ ರೀತಿಗಳಲ್ಲಿ ಮಾರ್ಪಡಿಸಿ ನಿರೂಪಿಸುವುದರಲ್ಲಿ ಇವನು ಪ್ರವೀಣ.

ಓ ಹೆನ್ರಿಯ ಕೊನೆಯ ವರ್ಷಗಳು ವಿಪರೀತ ಕುಡಿತ, ಬೆಂಬಿಡದ ಅನಾ ರೋಗ್ಯಗಳಲ್ಲಿ ಕಳೆದುವು. ಕ್ಷಯರೋಗದಿಂದ ಪೀಡಿತನಾಗಿ ಓ ಹೆನ್ರಿ 1910ರ ಜೂನ್ 5ರಂದು ನಿಧನನಾದ. ಆಗ ಅವನಿಗೆ 48 ವರ್ಷ ವಯಸ್ಸು.

## ಕಡೆಂಗೋಡ್ಲು ಶಂಕರಭಟ್ಟ

"ಎಲೆಲೆ ಬೆಳಕಿನ ಚಿತ್ತೆ ಇರುಳ ಮೂಗಿನ ನತ್ತೆ  
ಮಿಳುಮಿಂಚು ಹೆಸರಿಟ್ಟು ಹಳಿಯುವರೆ ನಿನ್ನ ?  
ಹುಳುವಾಗಿ ಹುಟ್ಟಿ ಲೋಕವ ಬೆಳಗುತಿರಲಿಂತು  
ಒಳಮೆಯ್ಯೊಳಾವ ಮಾಯದ ಬೆಳಕೊ ನಿನಗೆ ?"

—ಮಿಂಚಿನ ಹುಳುವನ್ನು ಕುರಿತು ಈ ಸರಳ ಸುಂದರ ಸಾಲುಗಳನ್ನು ಬರೆದ ಕವಿ ಕಡೆಂಗೋಡ್ಲು ಶಂಕರಭಟ್ಟರು. ಕವಿತೆ, ಸಣ್ಣ ಕಥೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಈ ಎಲ್ಲ ಸಾಹಿತ್ಯ ಪ್ರಕಾರ ಗಳಲ್ಲಿ ಗಮನಾರ್ಹವಾದ ಕೃಷಿ ಮಾಡಿದವರು ಅವರು.

ಅವರ ಪ್ರತಿಭೆ ಎರಡು ಮುಖಗಳಲ್ಲಿ ಅಭಿವ್ಯಕ್ತಿ ಪಡೆಯಿತು. ಒಂದು ಸಾಹಿತ್ಯದಲ್ಲಿ. ಇನ್ನೊಂದು ಪತ್ರಿಕೋದ್ಯಮದಲ್ಲಿ. ಈ ಎರಡೂ ಕ್ಷೇತ್ರಗಳಲ್ಲಿ ಅವರು ಕೈಗೂಡಿಸಿಕೊಂಡ ಸಾಧನೆ ಮಹತ್ತರವಾದದ್ದು.

ಶಂಕರಭಟ್ಟರು ಹುಟ್ಟಿದ್ದು 1904ರ ಆಗಸ್ಟ್ 9ರಂದು, ದಕ್ಷಿಣ ಕನ್ನಡ ಜಿಲ್ಲೆಯ ಪೆರುವಾಯಿ ಗ್ರಾಮದ ಕಡೆಂಗೋಡ್ಲು ಎಂಬ ಸ್ಥಳದಲ್ಲಿ. ಶ್ರೀಮಂತರಲ್ಲದಿದ್ದರೂ ಉಂಡು ಉಡಲು ಅನುಕೂಲವಿದ್ದ ಕುಟುಂಬ. ತಂದೆ ಈಶ್ವರಭಟ್ಟರು ಜಮೀನು ವ್ಯವಸಾಯದಲ್ಲಿ ಆಸಕ್ತರಾಗಿದ್ದರು. ಅವರ ಮನೆಯ ಸಮೀಪದಲ್ಲಿ ಸುತ್ತಲೂ ಎತ್ತರವಾಗಿ ಎದ್ದುನಿಂತ ಬೆಟ್ಟಗುಡ್ಡಗಳು. ಕಣ್ಣೋಡುವ ತನಕ ಹಸಿರು ಹಬ್ಬಿರುವ ಹೊಲ, ಬಯಲುಗಳು. ನಿಸರ್ಗ ರಮಣೀಯವಾದ ಈ ಹಳ್ಳಿಯ ಪರಿಸರದಲ್ಲಿ ಶಂಕರಭಟ್ಟರ ಬಾಲ್ಯ ಕಳೆಯಿತು. ತಮ್ಮ ಸಮೀಪದ ಬಂಧು ಮುಳಿಯ ತಿಮ್ಮಪ್ಪಯ್ಯನವರ ಪ್ರೇರಣೆಯಿಂದ ಶಂಕರಭಟ್ಟರು ಮಂಗಳೂರಿಗೆ ಹೋಗಿ ವಿದ್ಯಾಭ್ಯಾಸ



ಅಂತರ್ಮುಖಿಯ ಅಭಿವ್ಯಕ್ತಿ : ಕಡೆಂಗೋಡ್ಲು

ಮುಂದುವರಿಸಿದರು. ಕಾಲೇಜು ಶಿಕ್ಷಣ ಪಡೆಯಬೇಕೆನ್ನುವಷ್ಟರಲ್ಲಿ ದೇಶದಾದ್ಯಂತ ಹಬ್ಬಿದ ಸ್ವಾತಂತ್ರ್ಯಚಳುವಳಿ ಅವರನ್ನು ಆಕರ್ಷಿಸಿತು. ಕಾರ್ನಾಡ್ ಸದಾಶಿವರಾಯರಂಥ ದೇಶಸೇವಕರ ಪ್ರಭಾವಕ್ಕೊಳಗಾಗಿ ಸತ್ಯಾಗ್ರಹ ಚಳುವಳಿಯಲ್ಲಿ ಭಾಗವಹಿಸಿದರು.

ಸ್ವಲ್ಪ ಕಾಲದ ಅನಂತರ ಶಂಕರಭಟ್ಟರು ಮತ್ತೆ ಅಧ್ಯಯನಕ್ಕೆ ಮನ ಗೊಟ್ಟರು. ಎರಡು ಬಾರಿ ಪರೀಕ್ಷೆಗೆ ಕುಳಿತು ಒಂದೊಂದು ಸಲ ನಾಲ್ಕು ಪ್ರಶ್ನೆಪತ್ರಿಕೆಗಳಿಗೆ ಉತ್ತರ ಬರೆಯುವ ಸೌಲಭ್ಯವಿದ್ದರೂ, ಶಂಕರಭಟ್ಟರು ಒಂದೇ ಬಾರಿಗೆ ಪರೀಕ್ಷೆಗೆ ಕುಳಿತು ಎಂಟು ಪ್ರಶ್ನೆಪತ್ರಿಕೆಗಳಿಗೂ ಉತ್ತರ ಬರೆದು ಉತ್ತಮ ಶ್ರೇಣಿಯಲ್ಲಿ ಮದರಾಸು ವಿಶ್ವವಿದ್ಯಾಲಯದ 'ವಿದ್ವಾನ್' ಪದವಿ ಪಡೆದರು. ಆ ಮಧ್ಯೆ ಅವರು 'ನವಯುಗ' ಪತ್ರಿಕೆಯಲ್ಲಿ ಕೊಂಚ ಕಾಲ ಕೆಲಸ ಮಾಡಿದರು. ಸುಮಾರು 1927ರ ಹೊತ್ತಿಗೆ ಮಂಗಳೂರಿನ ಸೇಂಟ್ ಆಗ್ನೆಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿ, ಅಲ್ಲೇ ಪ್ರಾಧ್ಯಾಪಕರಾಗಿ, 1964ನೆಯ ಆಗಸ್ಟ್ ತಿಂಗಳ ತನಕ ದೀರ್ಘಕಾಲ ಸೇವೆ ಸಲ್ಲಿಸಿ, ಎಲ್ಲರ ಗೌರವ ಮೆಚ್ಚುಗೆ ಅಭಿಮಾನ ಗಳಿಸಿದರು. ಜೊತೆಯಲ್ಲಿ ಮಂಗಳೂರಿನಿಂದ ಹೊರಡುತ್ತಿದ್ದ 'ರಾಷ್ಟ್ರಬಂಧು' ವಾರಪತ್ರಿಕೆಗೆ 25 ವರ್ಷ ಕಾಲ ಸಂಪಾದಕರಾಗಿದ್ದು, ಅನಂತರ 'ರಾಷ್ಟ್ರಮತ' ಪತ್ರಿಕೆಯ ಸಂಪಾದಕರಾಗಿ ಕೆಲಸ ಮಾಡಿದರು. ಅವರ ಅಗ್ರಲೇಖನಗಳೂ ಸ್ಥಿರ ಶೀರ್ಷಿಕೆಗಳೂ ಓದುಗರ ಮೆಚ್ಚುಗೆಗೆ ಪಾತ್ರವಾಗಿದ್ದುವು.

ಶಂಕರಭಟ್ಟರ ಸಾಹಿತ್ಯಸಾಧನೆಯಲ್ಲಿ ಪ್ರಭಾವ ಬೀರಿದವರು ಇಬ್ಬರು : ಮುಳಿಯ ತಿಮ್ಮಪ್ಪಯ್ಯನವರು ಮತ್ತು ಪಂಜೆ ಮಂಗೇಶರಾಯರು.

ಶಂಕರಭಟ್ಟರದು ಮುಖ್ಯವಾಗಿ ಕವಿಚೇತನ. ಕನ್ನಡ ಸಾಹಿತ್ಯಕ್ಕೆ ಅವರು ನೀಡಿದ ಶ್ರೇಷ್ಠ ಕಾಣಿಕೆಯಾದ 'ನಲ್ಮೆ' ಉತ್ತಮ ಕಥನ ಕವನಗಳ ಸಂಕಲನ. ಇದರಲ್ಲಿ 'ಹೊನ್ನಿಯ ಮದುವೆ', 'ಮಾದ್ರಿಯ ಚಿತೆ', 'ಮುರಲೀನಾದ' ಈ ಮೂರು ಖಂಡಕಾವ್ಯಗಳಿವೆ.

'ಹೊನ್ನಿಯ ಮದುವೆ'ಶರಷಟ್ಪದಿ ಛಂದಸ್ಸಿನಲ್ಲಿ ರಚಿತವಾದದ್ದು. ಇದು ದುರಂತ ಪ್ರಣಯವನ್ನು ನಿರೂಪಿಸುವ ಕರುಣಾಜನಕ ಕಥೆ.

'ಮಾದ್ರಿಯ ಚಿತೆ', ಮಹಾಭಾರತದಿಂದ ಆಯ್ದ ಕಥಾವಸ್ತು. ಪಾಂಡುವಿನ ಮರಣ, ಅವನೊಡನೆ ಮಾದ್ರಿಯ ಚಿತಾರೋಹಣ ಈ ಖಂಡಕಾವ್ಯದ ವಸ್ತು. ಪಾಂಡುವಿನ ಹೃದಯದಲ್ಲಿ ವಿರಹದ ಕಿಡಿ ಹೊತ್ತಿ ಬಯಕೆ ಬೆಂಕಿ ನಾಲಗೆ ಚಾಚಿದ ರೀತಿ, ವಸಂತ ಋತುವಿನ ಮೋಹಕ ವಾತಾವರಣ ಕಾಮದ ಬಯಕೆಯೊಡನೆ ಸಂಚುಹೂಡಿ ಈ ಎರಡು ಜೀವಗಳನ್ನೂ ಸಾವಿನ ಅಪ್ಪುಗೆಯಲ್ಲಿ ತಳ್ಳಿದ ದುರಂತ – ಇವು ಈ ಕಾವ್ಯದಲ್ಲಿ ಮನ ಕರಗುವಂತೆ ನಿರೂಪಿತವಾಗಿವೆ.

'ಮುರಲೀನಾದ' ಗ್ರೇ ಕವಿಯ 'ಎಲಿಜಿ'ಯ ಭಾವಾನುವಾದ. 1930ರಲ್ಲಿ 'ಪ್ರಬುದ್ಧ ಕರ್ಣಾಟಕ' ದಲ್ಲಿ ಪ್ರಕಟವಾಯಿತು.

'ಯಜ್ಞಕುಂಡ', 'ಗುರುದಕ್ಷಿಣೆ', 'ಮಹಾಯಾಗ', 'ಉಷಾ', –ಅವರ ಪ್ರಸಿದ್ಧ ನಾಟಕಗಳು. 'ಧೂಮಕೇತು', 'ದೇವತಾ ಮನುಷ್ಯ', 'ಲೋಕದ ಕಣ್ಣು'– ಅವರ ಸಾಮಾಜಿಕ ಕಾದಂಬರಿಗಳು. 'ಗಾಜಿನ ಬಳೆ', 'ಹಿಂದಿನ ಕತೆಗಳು', 'ದುಡಿಯುವ ಮಕ್ಕಳು' ಅವರ ಕಥಾಸಂಕಲನಗಳು. 'ನಮ್ಮ ಕಥೆಗಳು' ಎಂಬ ಕಥಾ ಸಂಕಲನದ 'ದೊಡ್ಡಣ್ಣ' ಎಂಬ ಕತೆ ತುಂಬ ಜನಪ್ರಿಯವೂ ಹೃದಯಸ್ಪರ್ಶಿಯೂ ಆಗಿದೆ. 'ವಾಙ್ಮಯ ತಪಸ್ಸು' ಅವರು ಬೇರೆ ಬೇರೆ ಕಾಲಗಳಲ್ಲಿ ಬರೆದ ಪ್ರಬಂಧಗಳ ಸಂಕಲನ.

ಶಂಕರಭಟ್ಟರ ಮನೋಧರ್ಮ ಅಂತರ್ಮುಖಿಯಾದದ್ದು, ಸರಳವಾದದ್ದು. ತಮ್ಮ ಕೆಲಸ ಕಾರ್ಯಗಳನ್ನೂ ಅಧ್ಯಯನವನ್ನೂ ವ್ಯವಸ್ಥಿತವಾಗಿ ನಡೆಸಿಕೊಂಡು ಬರುವ ಶಿಸ್ತಿನ ವ್ಯಕ್ತಿ ಅವರಾಗಿದ್ದರು. 1965ರಲ್ಲಿ ಕಾರವಾರದಲ್ಲಿ ನಡೆದ 45ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರು ಮಾಡಿದ ಭಾಷಣ ವಿದ್ವತ್ಪೂರ್ಣವಾಗಿತ್ತು.

1968ರ ಮೇ 17ರಂದು ಕಡೆಂಗೋಡ್ಲು ಶಂಕರಭಟ್ಟರು ಹೃದಯಾಘಾತದಿಂದ ನಿಧನರಾದರು.

## ಕರ್ಣಾಟಕ ಸಂಗೀತ

ಭಾರತೀಯ ಸಂಗೀತದ ಪರಂಪರೆ ದೀರ್ಘವಾದದ್ದು. ವೇದಕಾಲದಲ್ಲೇ ಸಾಮವೇದವನ್ನು ಹಾಡುತ್ತಿದ್ದರು. ಸಾಮವೇದದ ಘೋಷಣೆಯಲ್ಲಿ ಬಳಕೆಯಲ್ಲಿದ್ದ ಸ್ವರಶ್ರೇಣಿಯನ್ನು ಅಳವಡಿಸಿಕೊಂಡು ಸಂಗೀತದ ಸ್ವರಸಪ್ತಕವನ್ನು (ಸರಿಗಮಪದನಿ) ರಚಿಸಲಾಯಿತೆಂದು ನಂಬಲಾಗಿದೆ. ಮೊದಲನೆಯ – ಆಧಾರ – ಸ್ವರದಿಂದ ಅದರ ಆವರ್ತಕ ಸ್ವರದವರೆಗಿನ ಅಂತರವನ್ನು 22 ಸೂಕ್ಷ್ಮ ಸೋಪಾನಗಳಾಗಿ ಭಾವಿಸಿ ಇವುಗಳನ್ನು ಶ್ರುತಿ ಎಂದು ಕರೆಯುತ್ತಾರೆ. ಎಷ್ಟನೆಯ ಶ್ರುತಿಯಲ್ಲಿ ಮತ್ತು ಎಷ್ಟು ಶ್ರುತಿಗಳ ಪ್ರಮಾಣದಲ್ಲಿ ಸ್ವರವು ಗೋಚರಿಸುತ್ತದೆ ಎಂಬುದರ ಮೇಲೆ ಆ ಸ್ವರದ ಸ್ಥಾನ ಮತ್ತು ಸ್ವರೂಪಗಳು ನಿರ್ಧಾರವಾಗುತ್ತವೆ.



ಪಾಪನಾಶಂ ಶಿವನ್

ಈ ಏಳು ಸ್ವರಗಳ ವ್ಯವಸ್ಥಿತ ಸಮೂಹಕ್ಕೆ ಸ್ವರ ಗ್ರಾಮವೆಂದು ಪ್ರಾಚೀನ ಸಂಗೀತ ಶಾಸ್ತ್ರದಲ್ಲಿ ಸಂಜ್ಞೆಯಿತ್ತು.

—ಷಡ್ಜ, ಶುದ್ಧ ರಿಷಭ, ಚತುಃಶ್ರುತಿ ರಿಷಭ, ಸಾಧಾರಣ ಗಾಂಧಾರ, ಅಂತರ ಗಾಂಧಾರ, ಶುದ್ಧ ಮಧ್ಯಮ, ಪ್ರತಿ ಮಧ್ಯಮ, ಪಂಚಮ, ಶುದ್ಧ ದೈವತ, ಚತುಃಶ್ರುತಿ ದೈವತ, ಕೈಶಿಕಿನಿಷಾದ, ಕಾಕಲಿ ನಿಷಾದ. ಈ ಹನ್ನೆರಡು ಸ್ವರಸ್ಥಾನಗಳು ನಮ್ಮ ಸಂಗೀತದಲ್ಲಿ ಬಳಕೆಯಲ್ಲಿವೆ. ದಕ್ಷಿಣ ಭಾರತದಲ್ಲಿ ಹಿಂದಿನಿಂದ ಪ್ರಚಲಿತವಿದ್ದ ಶಾಸ್ತ್ರೀಯ ಸಂಗೀತದ ಶಾಸ್ತ್ರ ಭಾಗದ ಮುನ್ನಡೆಗೆ ಬಹುಮಟ್ಟಿಗೆ ಕಾರಣರಾದವರು ಕರ್ಣಾಟಕದವರು. ಆದ್ದರಿಂದ ಇದಕ್ಕೆ ಕರ್ಣಾಟಕ ಸಂಗೀತ ಎಂದು ಹೆಸರು ಬಂದಿತು.

ಕಾಲಕ್ರಮದಲ್ಲಿ ಭಾರತೀಯ ಸಂಗೀತದಲ್ಲಿ ಕರ್ಣಾಟಕ, ಹಿಂದೂಸ್ತಾನಿ ಎಂದು ಎರಡು ಪ್ರಕಾರಗಳಾದುವು.

ಭಾರತೀಯ ಸಂಗೀತದಲ್ಲಿ ರಾಗಕ್ಕೆ ಮಹತ್ವದ ಪಾತ್ರವಿದೆ. ಸ್ವರ ಎಂಬುದನ್ನು ಸ್ವ—ಸ್ವತಂತ್ರವಾಗಿ, ರ—ರಂಜನೆ ಈಯುವುದು ಎಂದು ವಿವರಿಸುವುದುಂಟು. ಇಂಥ ಸ್ವರಗಳ ಇಂಪಾದ ಕೂಟದಿಂದ ರೂಪುಗೊಳ್ಳುವ ಆಕಾರವೇ ರಾಗ. ರಾಗಗಳ ಪರಸ್ಪರ ವ್ಯತ್ಯಾಸ ಒಂದು ಸ್ವರಸಪ್ತಕದಲ್ಲಿ ಬರುವ ಸ್ವರಗಳು, ಅವುಗಳ ಆರೋಹಣ (ಏರು ಕ್ರಮ), ಅವರೋಹಣ (ಇಳಿಯುವ ಕ್ರಮ) ಮುಂತಾದುವುಗಳಿಂದ ಸ್ಪಷ್ಟವಾಗುತ್ತದೆ. ಶ್ರೋತೃಗಳು ಈ ವ್ಯತ್ಯಾಸವನ್ನು ಕೇಳಿಕೆಯಿಂದಲೇ ತಿಳಿಯಬಹುದು. ಪ್ರತಿಯೊಂದು ರಾಗಕ್ಕೂ ತನ್ನದೇ ಆದ ಭಾವವಿದೆ. ಭಾವ ರಾಗದ ಜೀವಾಳ; ರಾಗವನ್ನು ಹಾಡುವ ಬಗೆ. ಅದರಲ್ಲಿ ಬರುವ ಸ್ವರಸಮುದಾಯ. ಅವುಗಳ ವಿವಿಧ ಸಂಯೋಜನೆಯ ಜೀವಸ್ವರಗಳಾವುವು. ಯಾವುದರಿಂದ



ಚೆಂಬೈ ವೈದ್ಯನಾಥ ಭಾಗವತರ್



ಮಹಾ ವೈದ್ಯನಾಥ ಅಯ್ಯರ್



ಜಿ. ಎನ್. ಬಿ.

ಸ್ವರಕ್ಕೆ ಕೊಡುವ ಗಮಕಗಳಿಂದ ರಾಗಕ್ಕೆ ಹೆಚ್ಚಿನ ಇಂಪು ಬರುತ್ತದೆ. ಗಮಕವೆಂದರೆ ಸ್ವರವನ್ನು ಸುಂದರವಾಗಿ ಕಂಪಿಸುವುದು. ಗಮಕಗಳು ಅನೇಕ. ಸುಮಾರು 15ನ್ನು ಈಗ ಹೆಚ್ಚಾಗಿ ಬಳಸುತ್ತಾರೆ.

ಕರ್ಣಾಟಕ ಸಂಗೀತದಲ್ಲಿ ರಾಗಗಳನ್ನು ಜನಕ, ಜನ್ಯ ಎಂದು ವಿಂಗಡಿಸುತ್ತಾರೆ. ಜನಕರಾಗದಲ್ಲಿ ಏಳು ಸ್ವರಗಳೂ ಆರೋಹಣ ಹಾಗೂ ಅವರೋಹಣಗಳಲ್ಲಿ ಬರುತ್ತವೆ. ಹಾಗೂ ಪ್ರತಿಯೊಂದು ಸ್ವರದ ಒಂದೊಂದೇ ಬಗೆಯೂ ಬರುತ್ತದೆ. ಹನ್ನೆರಡು ಸ್ಥಾನಗಳಲ್ಲಿ ವಿವಿಧ ಸಂಯೋಜನೆಯಲ್ಲಿ ಸಪ್ತಸ್ವರಗಳು ಬರುವಂತೆ ಅಣಿಗೊಳಿಸಿದರೆ ಒಟ್ಟು 72 ಜನಕರಾಗಗಳು ರೂಪುಗೊಳ್ಳುತ್ತವೆ. ಇವುಗಳನ್ನು 'ಮೇಳಕರ್ತ ರಾಗ' ಗಳೆಂದೂ ಕರೆಯುವುದುಂಟು. ಈ 72 ಮೇಳಕರ್ತರಾಗಗಳ ಕ್ರಮ ವೆಂಕಟಮುಖಿಯಿಂದ 17ನೆಯ ಶತಮಾನದಲ್ಲಿ ರೂಪಿತವಾದದ್ದು. ಶಂಕರಾಭರಣ, ತೋಡಿ, ಕಲ್ಯಾಣಿ, ಮಾಯಾಮಾಳವಗೌಳ, ಭೈರವಿ, ಖರಹರಪ್ರಿಯ ಇತ್ಯಾದಿ–ಇವೆಲ್ಲ ಜನಕರಾಗಗಳು.

ಜನ್ಯದಲ್ಲಿಯೂ ಹಲವು ಪ್ರಭೇದಗಳಿವೆ. ಜನ್ಯವೆಂದರೆ ಹುಟ್ಟಿದ್ದು. ಇದರಲ್ಲಿ ಸ್ವರಗಳು ಜನಕರಾಗದಂತೆ ಕ್ರಮಬದ್ಧವಾಗಿಲ್ಲದಿರಬಹುದು, ಕೆಲವು ಲೋಪವಾಗಿರಬಹುದು, ಕೆಲವು ವಕ್ರಸಂಚಾರಗಳೂ ಬರಬಹುದು. ಕಾಂಬೋಧಿ, ಬಿಲಹರಿ, ಹಂಸಧ್ವನಿ, ಮೋಹನ, ಸಾವೇರಿ, ನೀಲಾಂಬರಿ, ಸಾರಂಗ, ಕದನ ಕುತೂಹಲ ಮುಂತಾದುವು ಜನ್ಯರಾಗಗಳು.

ಕರ್ಣಾಟಕ ಸಂಗೀತದಲ್ಲಿ ಇಂದು ರೂಢಿಯಲ್ಲಿರುವ ಗೇಯ (ಹಾಡಬಹುದಾದ) ರಚನೆಗಳು ಹಲವಾರು. ದೇವರ ನಾಮ, ಕೃತಿಗಳಂಥ ರಚನೆಗಳು ಭಕ್ತಿರಸಪ್ರಧಾನವಾದುವು. ಸಾಹಿತ್ಯಾರ್ಥಕ್ಕಿಂತ ಗೇಯಾರ್ಥವೇ ಪ್ರಧಾನವಾದ ಸಂಚಾರಿ ಗೀತೆಗಳು, ಲಕ್ಷಣ ಗೀತೆಗಳು, ಜತಿಸ್ವರ, ವರ್ಣ, ಕೃತಿ, ಪದ, ಜಾವಳಿ, ದರು, ತಿಲ್ಲಾನ, ರಾಗಮಾಲಿಕೆ ಮುಂತಾದುವು ಇನ್ನೊಂದು ಗುಂಪಿಗೆ ಸೇರಿದುವು.

ರಾಗಸಂಚಾರಕ್ಕೆ ಹೆಚ್ಚು ಕಳೆಕಟ್ಟುತ್ತದೆ ಎಂಬಿವೇ ಮೊದಲಾದ ಅನೇಕ ವಿವರಗಳು ಶಾಸ್ತ್ರೀಯ ಗ್ರಂಥಗಳಿಂದ ಸಂಗೀತಾಭ್ಯಾಸಿಗಳಿಗೆ ದೊರೆಯುತ್ತವೆ. ಆದರೆ ಇದನ್ನೆಲ್ಲ ತಿಳಿದ ಮೇಲೂ, ರಾಗದ ಅಭಿವ್ಯಕ್ತಿ, ಅನುಭವಿಸಿ ಹಾಡುವವರನ್ನು ಅವಲಂಬಿಸಿದೆ. ರಾಗಾಲಾಪ ಆಶುಪ್ರತಿಭೆಗೆ, ಆತ್ಮುತ್ತಮ ಕಲೆಗೆ ಮಾಧ್ಯಮವಾಗಿದೆ.



'ಎಂ. ಎಸ್.'



ಶಾ. ದೇವೇಂದ್ರಪ್ಪ

ದೊರೆಸ್ವಾಮಿ ಅಯ್ಯಂಗಾರ್





ಮಧುರೈ ಮಣಿ ಅಯ್ಯರ್



ಬಾಲಮುರಲೀಕೃಷ್ಣ



ಎಂ. ಡಿ. ರಾಮನಾಥನ್

ಸಂಗೀತಕ್ಕೆ ಶ್ರುತಿಯೇ ತಾಯಿ, ಲಯವೇ ತಂದೆ.

ಕರ್ಣಾಟಕ ಸಂಗೀತದಲ್ಲಿ ರಾಗದಷ್ಟೇ ಪ್ರಧಾನವಾದದ್ದು ತಾಳ. ತಾಳದ ಆಧಾರ ಅದರ ಲಯ. ಚೆನ್ನಾಗಿ ಪರಿಚಿತವಾದ ಹಾಗೂ ಉಪಯೋಗದಲ್ಲಿರುವ ತಾಳಗಳು ಐದಾರು : ಆದಿತಾಳ, ರೂಪಕತಾಳ, ತ್ರಿಪುಟ ತಾಳ, ಆಟ ತಾಳ, ಝಂಪೆ ತಾಳ, ಏಕತಾಳ.

ಕರ್ಣಾಟಕ ಸಂಗೀತದ ಶಿಕ್ಷಣ ಕ್ರಮವೂ ಕಛೇರಿಯ ಕ್ರಮವೂ ವೈಜ್ಞಾನಿಕವಾಗಿ ರೂಪುಗೊಂಡಿವೆ.

ಶಿಕ್ಷಣ ಕ್ರಮದಲ್ಲಿ, ಕೇವಲ ಸ್ವರಗಳಷ್ಟೇ ಇರುವ ಸರಳೆ (ಸ್ವರಾವಳಿ), ಜಂಟಿವರಸೆ, ಅಲಂಕಾರಗಳನ್ನು ಕಲಿತ ಅನಂತರ ಸ್ವರಸಾಹಿತ್ಯವುಳ್ಳ ಗೇಯ ರಚನೆಗಳ ಪಾಠ ನಡೆಯುತ್ತದೆ. ಈ ರೂಪದ ರಚನೆಗಳಲ್ಲಿ ಸರಳವಾದದ್ದು ಗೀತೆ. ಅನಂತರ ಸ್ವರಜತಿ, ವರ್ಣ. ಇದರಲ್ಲಿ ರಾಗ ಭಾವ, ಸಂಚಾರಗಳ ಪರಿಚಯ ಚೆನ್ನಾಗಿ ಆಗುತ್ತದೆ. ಬಳಿಕ ಕೃತಿ. ಇದರಲ್ಲಿ ರಾಗ ಭಾವ ಹಾಗೂ ಸಾಹಿತ್ಯ ಭಾವಗಳು ಪೂರ್ಣವಾಗಿ ಅಭಿವ್ಯಕ್ತವಾಗುತ್ತವೆ.

ಕಛೇರಿ ಆರಂಭವಾಗುವುದು ವರ್ಣದಿಂದ. ಅನಂತರ ಕೃತಿಗಳ ಹಾಡಿಕೆ. ಆಮೇಲೆ ರಾಗ. ತಾನ. ಪಲ್ಲವಿ. ಈಗ ಕಚೇರಿ ಪರಾಕಾಷ್ಠೆಯನ್ನು ಮುಟ್ಟುತ್ತದೆ. ಸ್ವತಂತ್ರ ಮನೋಧರ್ಮದ ಅಭಿವ್ಯಕ್ತಿ ಇಲ್ಲಿ ತುಂಬಿದ ಹೊನಲಾಗಿ ಹರಿಯುತ್ತದೆ. ಇದರ ಅನಂತರ ತಿಲ್ಲಾನ, ಪದ, ಜಾವಳಿ, ದೇವರನಾಮ, ಶ್ಲೋಕಗಳನ್ನು ಹಾಡುತ್ತಾರೆ. ಕರ್ಣಾಟಕ ಸಂಗೀತದ ಸಾಹಿತ್ಯಭಾಗ ಭಕ್ತಿಪ್ರಧಾನವಾದದ್ದು. ಭಗವಂತನ ಹಿರಿಮೆಯನ್ನು ಹೊಗಳುವ, ಅವನ ಕೃಪೆಯನ್ನು ಬಯಸುವ ಅವನ ಸಾನ್ನಿಧ್ಯಕ್ಕಾಗಿ ಹಂಬಲಿಸುವ ಭಕ್ತನ ಮನೋಭಾವದ ಪ್ರತಿಬಿಂಬಗಳಾಗಿವೆ–ಈ ಕೃತಿಗಳು. ರಾಗ, ತಾನ, ಪಲ್ಲವಿಯಲ್ಲಿ ಸಂಗೀತಗಾರ ತನ್ನ ಮನಸ್ಸಿನ ಭಾವ, ಕಲ್ಪನೆಗಳನ್ನು ನಾದ ಪ್ರಧಾನವಾದ ರೀತಿಯಲ್ಲಿ ತೋಡಿಕೊಳ್ಳುತ್ತಾನೆ. ಹೀಗೆ ನಾದ ಸೌಂದರ್ಯಾನುಭವದ ಜೊತೆಗೆ ದೇವರ ಸ್ಮರಣೆಯಿಂದ ದೊರೆಯುವ ಅಪೂರ್ವ ಆನಂದವೂ ಅವನದಾಗುತ್ತದೆ. ಶ್ರೋತೃಗಳೂ ಈ ಇಬ್ಬಗೆಯ ಆನಂದದಲ್ಲಿ ಭಾಗಿಗಳಾಗುತ್ತಾರೆ. ಮಂಗಳಗೀತೆಯೊಡನೆ ಕಛೇರಿ ಮುಕ್ತಾಯವಾಗುತ್ತದೆ. ವಾಗ್ಗೇಯಕಾರರು ಸೃಷ್ಟಿಸಿದ ಸಾಹಿತ್ಯದ ಚೌಕಟ್ಟಿನಲ್ಲೂ ಅದರಿಂದಾಚೆಗೂ ಸಂಗೀತ ಸೌಂದರ್ಯವನ್ನು ಬೆಳೆಸಲು ರಾಗ, ತಾನ, ಪಲ್ಲವಿಯಿಂದ ಅಪೂರ್ವ ಅವಕಾಶ ದೊರೆಯುತ್ತದೆ.

'ಸಂಗೀತ ರತ್ನಾಕರ' ಭಾರತೀಯ ಸಂಗೀತದ ಆಕರ ಗ್ರಂಥಗಳಲ್ಲಿ ಮುಖ್ಯವಾದದ್ದು. ಕರ್ಣಾಟಕ ಸಂಗೀತದ ಇಂದಿನ ಪಾಠ ಕ್ರಮಕ್ಕೂ ರೂಪಕ್ಕೂ ತಳಹದಿ ಹಾಕಿದವರು ಪುರಂದರದಾಸರು. ಇದಕ್ಕೆ ಮೊದಲೇ ವಿದ್ಯಾರಣ್ಯರು ಮೇಳರಾಗಗಳ ಸ್ವರೂಪವನ್ನು ಗುರುತಿಸಿದ್ದರು. ಅನಂತರ ಕಲ್ಲಿನಾಥ, ಪುಂಡರೀಕ ವಿಠಲ, ರಾಮಾಮಾತ್ಯ, ಸೋಮನಾಥ, ಗೋವಿಂದ ದೀಕ್ಷಿತ, ವೆಂಕಟಮಖಿ, ತುಳಜ ಇವರು ಸಂಗೀತಶಾಸ್ತ್ರ ಗ್ರಂಥಗಳನ್ನು ರಚಿಸಿ ಹಾದಿ ತೋರಿದವರಲ್ಲಿ ಪ್ರಮುಖರು. ಕರ್ಣಾಟಕ ಸಂಗೀತದಲ್ಲಿ ಇಂದು ಪಚ್ಚಿಮಿರಿಯಂ ಆದಿಪ್ಪಯ್ಯ, ರಾಮನಾಡು ಶ್ರೀನಿವಾಸ ಅಯ್ಯಂಗಾರ್, ವೀಣಾ ಕುಪ್ಪಯ್ಯ, ಪಲ್ಲವಿ ಗೋಪಾಲಯ್ಯ ಮುಂತಾದವರ ವರ್ಣಗಳೂ ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತ, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಮೈಸೂರು ಸದಾಶಿವರಾಯ, ಮೈಸೂರು ವಾಸುದೇವಾಚಾರ್ಯ ಮುಂತಾದವರ ಕೃತಿಗಳೂ ಶ್ರೀಪಾದರಾಯ, ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥದಾಸ ಮುಂತಾದವರ ದೇವರ ನಾಮಗಳೂ ಕ್ಷೇತ್ರಜ್ಞ, ಸಾರಂಗಪಾಣಿ, ಘನಂ ಸೀನಯ್ಯ ಮೊದಲಾದವರ ಪದಗಳೂ ಪಟ್ಟಾಭಿರಾಮಯ್ಯ, ಧರ್ಮಪುರಿವಾಸ ಮೊದಲಾದವರ ಜಾವಳಿಗಳೂ ವೀಣೆ ಶೇಷಣ್ಣ ಮುಂತಾದವರ



ಟಿ. ಆರ್. ಮಹಾಲಿಂಗಂ



ಡಿ. ಕೆ. ಪಟ್ಟಮ್ಮಾಳ್


ಚಿಟ್ಟಿ ಬಾಬು

ತಿಲ್ಲಾನಗಳೂ ಪ್ರಸಿದ್ಧವಾಗಿವೆ.

ಕರ್ನಾಟಕ ಸಂಗೀತವು ಇಂದು ಹಾಡುಗಾರಿಕೆ ಹಾಗೂ ವಾದ್ಯ ಸಂಗೀತ ಈ ಎರಡು ರೂಪಗಳಲ್ಲೂ ಬಳಕೆಯಲ್ಲಿದೆ. ನಾಟ್ಯ, ನಾಟಕ, ಲಘುಗೀತೆ, ಕಥಾಕಾಲಕ್ಷೇಪ, ಗೇಯ ನಾಟಕ,ಪ್ರಾಚೀನ ಕಾವ್ಯ ವಾಚನ, ಆಧುನಿಕ ಕನ್ನಡ ಕವನಗಳ ಹಾಡುಗಾರಿಕೆ–ಈ ಎಲ್ಲ ಕ್ಷೇತ್ರಗಳಲ್ಲಿ ಈ ಸಂಗೀತವನ್ನು ಯಶಸ್ವಿಯಾಗಿ ಅಳವಡಿಸಲಾಗಿದೆ.


ಪಾಲ್ಘಾಟ್ ಮಣಿ


ಎಸ್. ಬಾಲಚಂದರ್


ಲಾಲ್‌ಗುಡಿ ಜಯರಾಮನ್

**ನೋಡಿ :** ಕನಕದಾಸ; ತ್ಯಾಗರಾಜ; ಪಟ್ಣಂ ಸುಬ್ರಹ್ಮಣ್ಯ ಅಯ್ಯರ್; ಪುರಂದರದಾಸ; ಭಾರತೀಯ ಸಂಗೀತ; ಮುತ್ತುಸ್ವಾಮಿ ದೀಕ್ಷಿತ; ಮೈಸೂರು ವಾಸುದೇವಾಚಾರ್ಯ; ಮೈಸೂರು ಸದಾಶಿವರಾಯ; ವೀಣೆ ಶೇಷಣ್ಣ; ಶಾರ್ಙ್ಗದೇವ; ಸಂಗೀತವಾದ್ಯ

## ಕಥನ ಕವನ

" ಧರಣಿಮಂಡಲ ಮಧ್ಯದೊಳಗೆ
ಮೆರೆಯುತಿಹ ಕರ್ನಾಟ ದೇಶದೊಳ್
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು "

—ಎಂದು ಪ್ರಾರಂಭವಾಗುತ್ತದೆ ಗೋವಿನ ಕಥೆ. ಅದರಲ್ಲಿ ಗೋವಿನ ಕಥೆ ಸುಂದರವಾದ ಕವನ ರೂಪದಲ್ಲಿ ಮೂಡಿಬಂದಿದೆ. ಹೀಗೆ ಕವನದ ರೂಪದಲ್ಲಿ ಬರೆದ ಕಥೆಯೇ ಕಥನ ಕವನ.

ಗದ್ಯಕ್ಕಿಂತಲೂ ಪದ್ಯ ಹೆಚ್ಚು ಪರಿಣಾಮಕಾರಿ ಎಂದು ಭಾವಿಸಿ ಮಾನವ ಲಯಬದ್ಧವಾದ ಭಾಷೆಯಲ್ಲಿ ಕಥೆಯನ್ನು ಹೇಳತೊಡಗಿದ. ಕಂಠಪಾಠ ಮಾಡುವುದಕ್ಕೆ ಪದ್ಯ ಸುಲಭವಾಗಿತ್ತು. ಪ್ರಾಚೀನ ಗ್ರೀಸ್‌ನಲ್ಲಿ ಸುಗ್ಗಿಯ ಕಾಲದಲ್ಲಿ. ಸುಗ್ಗಿ ದೇವತೆ ಬ್ಯಾಕಸ್‌ನ ಪೂಜೆ ನಡೆಸಿ ಮನೋರಂಜನೆಗಾಗಿ ಗೀತ, ನೃತ್ಯಗಳಾದ ಬಳಿಕ ಕಥನ ಕವನಗಳನ್ನು ಹಾಡುತ್ತಿದ್ದರು. ಈ ಪದ್ಧತಿ ನಮ್ಮ ದೇಶಕ್ಕೂ ಹೊಸದಲ್ಲ. ಹಬ್ಬ ಹರಿದಿನಗಳಲ್ಲಿ ಅಥವಾ ಸುಗ್ಗಿಯ ಕಾಲದಲ್ಲಿ ಈಗಲೂ ರೈತರು ದೇವರ ಕಥೆಯನ್ನು, ಲಾವಣಿ, ಜನಪದ ಕಥೆಗಳನ್ನು ಹಾಡುವುದುಂಟು. ಕನ್ನಡಿಗರ ಯಕ್ಷಗಾನ ಪ್ರಸಂಗ, ತೆಲುಗರ ಬುರ್ರಕಥ, ಮರಾಠಿ ಜನರ ಪೊವಾಡಾ, ಲಾವಣಿ–ಇವೇ ಮೊದಲಾದುವು ಇಂಥ ಕಥನಕವನಗಳ ಆಧಾರದಿಂದ ಬೆಳೆದುವೆಂಬ ಅಭಿಪ್ರಾಯವಿದೆ.

ಅನೇಕ ಮಹಾಕಾವ್ಯಗಳು ಇರುವುದು ಕೂಡ ಪದ್ಯ ರೂಪದಲ್ಲೇ. ಇವು ಹೇಳುವುದಾದರೂ ಬಹುಮಟ್ಟಿಗೆ ಕಥೆಗಳನ್ನೇ. ಈ ದೃಷ್ಟಿಯಿಂದ ಸಂಸ್ಕೃತದ 'ರಾಮಾಯಣ', 'ಮಹಾಭಾರತ', ಗ್ರೀಕ್ ಭಾಷೆಯ 'ಒಡಿಸಿ' 'ಇಲಿಯಡ್', ಇಂಗ್ಲಿಷಿನ 'ಬೆವೂಲ್ಫ್' ಕೃತಿಗಳನ್ನು ಕಥನ ಕವನಗಳ ಗುಂಪಿಗೆ ಸೇರಿಸಬಹುದು.

ಕಥನ ಕವನಗಳಲ್ಲಿ ಛಂದಸ್ಸಿಗಿಂತ ಕಥೆಗೇ ಹೆಚ್ಚು ಮಹತ್ವ. ಛಂದಸ್ಸು ಹೀಗೆಯೇ ಇರಬೇಕೆಂಬ ನಿಯಮವಿಲ್ಲ. ಕಥೆಯ ವಸ್ತುವಿಗೆ ಅನುಗುಣವಾಗಿ, ಪರಿಣಾಮದ ಕಡೆಗೆ ಗಮನವಿಟ್ಟು ಛಂದಸ್ಸು ರೂಪಿತವಾಗುತ್ತದೆ.

'ಕ್ಯಾಂಟರ್‌ಬರಿ ಕಥೆಗಳ'ನ್ನು ರಚಿಸಿದ ಚಾಸರ್ ಕಥನ ಕವನ ಬರೆದ ಆಂಗ್ಲ ಕವಿಗಳಲ್ಲಿ ಮೊದಲಿಗ. ಕಥೆಗೆ ತಕ್ಕ ಶೈಲಿ–ಭಾಷೆ, ಕಥೆ ಹೇಳುವ ವಿಧಾನದಲ್ಲಿ ಲವಲವಿಕೆ, ನಾಟಕೀಯತೆ —ಈ ಗುಣಗಳಿದ್ದ ಅವನ ಕಥನ ಕವನಗಳು ಜನಪ್ರಿಯವಾದುವು. ಅವನ ಅನಂತರ ಎಡ್ಮಂಡ್ ಸ್ಪೆನ್ಸರ್, ಮಿಲ್ಟನ್, ಕೀಟ್ಸ್. ಬ್ರೌನಿಂಗ್. ಆರ್ನಾಲ್ಡ್, ಕೋಲ್ರಿಜ್. ಲಾಂಗ್‌ಫೆಲೋ ಮೊದಲಾದವರು ಅನೇಕ ಕಥನ ಕವನಗಳನ್ನು ರಚಿಸಿದರು.

ಕನ್ನಡದಲ್ಲಿ ತನ್ನ ಕಥೆಗಳನ್ನು ಚಂಪೂ ಶೈಲಿಯಲ್ಲಿ ಹೇಳಿದ ಹರಿಹರನ ರಗಳೆಗಳು ಒಳ್ಳೆಯ ಕಥನ ಕವನಗಳೆನಿಸಿಕೊಂಡಿವೆ. ರಾಘವಾಂಕ. ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದವರ ಕೃತಿಗಳಲ್ಲೂ ಕಥನವಿದೆ.

ಜಾನಪದ ಸಾಹಿತ್ಯದಲ್ಲಿ ಹಲವು ಅತ್ಯುತ್ತಮ ಕಥನ ಕವನಗಳುಂಟು. 18ನೆಯ ಶತಮಾನದ 'ಗೋವಿನ ಕಥೆ' ಇದಕ್ಕೊಂದು ಉತ್ತಮ ನಿದರ್ಶನ.



ಎಲ್ಲಮ್ಮನ ಪದ : ಕರ್ನಾಟಕದ ಜಾನಪದ ಗೀತೆ

ಸಾಮಾನ್ಯವಾಗಿ ಭಕ್ತಿ, ಶೃಂಗಾರ, ನೀತಿ, ಸಾಹಸ, ವೀರ ಚರಿತೆಗಳು ಈ ಕಥೆಗಳ ಚೌಕಟ್ಟಿನಲ್ಲಿ ಸೇರುತ್ತವೆ.

ಕನ್ನಡ ನವೋದಯ ಕವಿಗಳಲ್ಲಿ ಪಂಜೆ ಮಂಗೇಶರಾಯ, ಗೋವಿಂದ ಪೈ, ಕಡೆಂಗೋಡ್ಲು ಶಂಕರಭಟ್ಟ, ಪು. ತಿ. ನ.–ಮೊದಲಾದ ಅನೇಕರು ಉತ್ತಮ ಕಥನ ಕವನಗಳನ್ನು ಬರೆದಿದ್ದಾರೆ. ಮಾಸ್ತಿಯವರ 'ನವರಾತ್ರಿ' ಎಂಬ ಕಥನ ಕವನ ಸಂಕಲನದಲ್ಲಿ ಕನ್ನಡದ ಕೆಲವು ಅತ್ಯುತ್ತಮ ಕಥನ ಕವನಗಳಿವೆ. ಕುವೆಂಪುರವರ 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಅತ್ಯಂತ ಜನಪ್ರಿಯ ಕಥನ ಕವನ.

## ಕಥಾ ಕಾಲಕ್ಷೇಪ

ಸಂಗೀತ, ಕಥನ ಕಲೆ, ಅಭಿನಯ, ಒಳ್ಳೆಯ ಮಾತುಗಾರಿಕೆ, ಶಾಸ್ತ್ರ ಪುರಾಣೇತಿಹಾಸಗಳ ಅಪೂರ್ವ ಮೇಳದ ಫಲ—ಕಥಾ ಕಾಲಕ್ಷೇಪ.

ಕಥಾವಸ್ತುವನ್ನು ಅವಲಂಬಿಸಿ ಇದನ್ನು 'ಹರಿಕಥೆ' 'ಶಿವಕಥೆ' 'ಜಿನ ಕಥೆ' ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ಕಥಾಕಾಲಕ್ಷೇಪವನ್ನು ನಡೆಸುವ ಕಲಾವಿದರನ್ನು ಕೀರ್ತನಕಾರರು, ದಾಸರು, ಭಾಗವತರು ಎನ್ನುತ್ತಾರೆ. ಈ ಕಲೆ ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂದದ್ದು ಕಳೆದ ಶತಮಾನದಲ್ಲಿ ಎನ್ನಬಹುದು. ಕನ್ನಡ ದೇಶದಲ್ಲಿ ಮಾತ್ರವಲ್ಲದೆ ಆಂಧ್ರ, ಮಹಾರಾಷ್ಟ್ರಗಳಲ್ಲೂ ಕೆಲವು ವರ್ಗಗಳ ಜನರಲ್ಲಿ ಈ ಕಲೆ ಈಗಲೂ ಜನಪ್ರಿಯ ಕಲೆಯಾಗಿ ಉಳಿದಿದೆ.

ಕಥೆಯನ್ನು ಕೇಳುತ್ತ ಕಾಲವನ್ನು ಕಳೆಯುವುದೇ ಕಥಾ ಕಾಲಕ್ಷೇಪ ಎಂಬ ಮಾತಿನ ಅರ್ಥವಾದರೂ ಈ ಕಾರ್ಯಕ್ರಮದ ಪ್ರಧಾನ ಉದ್ದೇಶ-ಧಾರ್ಮಿಕ ವಿಚಾರಗಳನ್ನು, ನೀತಿ ಸಂಬಂಧವಾದ ವಿಷಯಗಳನ್ನು ಕಥೆಗಳ ಮೂಲಕ ಜನರಿಗೆ ತಿಳಿಸುವುದು; ಇಂಥ ಉಪದೇಶವನ್ನು ಆದಷ್ಟು ಕಲಾತ್ಮಕವಾಗಿ ಮನೋರಂಜಕವಾಗಿ ನೀಡುವುದು. ಈ ಮಾಧ್ಯಮದಲ್ಲಿ ಕಥನಕಾರ ಏಕಪಾತ್ರಾಭಿನಯ ತಂತ್ರವನ್ನು ಉಪಯೋಗಿಸಿ ಕಥಾಭಾಗಗಳನ್ನು ನಾಟಕೀಯವಾಗಿ ಹೇಳುವುದುಂಟು; ಆಗಾಗ ವರ್ಣನೆಗಳನ್ನು ಮಾಡುವುದುಂಟು; ರಸ ಪೋಷಣೆಗಾಗಿ ಮನೋರಂಜನೆಗಾಗಿ ಸಂಗೀತವನ್ನು ಬಳಸುವುದೂ ಉಂಟು. ಕಥಾ ಕಾಲಕ್ಷೇಪ ಮಾಡುವವನು ಒಳ್ಳೆ ಕತೆಗಾರನಾಗಿರಬೇಕು; ಅಭಿನಯದಲ್ಲಿ –ಅದರಲ್ಲೂ ವಾಚಿಕಾಭಿನಯದಲ್ಲಿ— ಪಳಗಿದವನಾಗಿರಬೇಕು; ಅತನಿಗೆ ಒಳ್ಳೆಯ ಸಂಗೀತಜ್ಞಾನವೂ ಇರಬೇಕು.

ಕಥಾ ಕಾಲಕ್ಷೇಪ ದೇವತಾ ಸ್ತುತಿಯೊಂದಿಗೆ ಆರಂಭವಾಗುತ್ತದೆ. ಅನಂತರ ಪೀಠಿಕೆ —ಅಂದರೆ ಅಂದಿನ ಕಥಾವಸ್ತುವಿನಲ್ಲಿ ಅಡಗಿರುವ ತಾತ್ತ್ವಿಕ ಅಂಶ, ನಮ್ಮ ಬಾಳುವೆಗೂ ಅದಕ್ಕೂ ಇರುವ ಸಂಬಂಧಗಳ ವಿವೇಚನೆ; ಬಳಿಕ ಕಥಾ ನಿರೂಪಣೆ. ನಿರೂಪಣೆ ಕಾಲದಲ್ಲಿ ಸಂದರ್ಭೋಚಿತವಾಗಿ ಸಂಗೀತ, ಹಾಸ್ಯ, ಉಪಕಥೆ, ಸಮಕಾಲೀನ ವಿಚಾರಗಳ ಮೇಲಿನ ಟೀಕೆ ಟಿಪ್ಪಣಿಗಳನ್ನು ಬಳಸುತ್ತಾನೆ. ಮಂಗಳದೊಡನೆ ಕಾರ್ಯಕ್ರಮ ಮುಕ್ತಾಯವಾಗುತ್ತದೆ. ಪ್ರತ್ಯೇಕವಾದ ಪೀಠಿಕೆ ಇಲ್ಲದೆ, ಕಥೆಯ ತಾತ್ತ್ವಿಕ ಅಂಶಗಳನ್ನು ಕಥೆಯೊಡನೆ ಬೆರಸಿಕೊಂಡು ಹೇಳುವುದೂ ಉಂಟು.

ಕಥಾ ಕಾಲಕ್ಷೇಪ ಸಾಮಾನ್ಯವಾಗಿ ಒಬ್ಬ ವ್ಯಕ್ತಿಯಿಂದ ನಿರ್ವಹಿಸಲ್ಪಡುವ ಕಲೆ. ಹಾಡುಗಾರಿಕೆಯ ನಿರ್ವಹಣಕ್ಕಾಗಿ ಕೆಲವೊಮ್ಮೆ ಬೇರೊಬ್ಬರ ಸಹಾಯ ಪಡೆಯುವುದೂ ಉಂಟು. ಪಕ್ಕವಾದ್ಯಗಳಂತೂ ಇದ್ದೇ ಇರುತ್ತವೆ. ಕಥಾಕಾಲಕ್ಷೇಪ ಮಾಡುವವರು ತಮ್ಮ ಕೈಯಲ್ಲಿ ತಾಳ ಅಥವಾ ಚಿಟಕಿಯನ್ನು ಹಿಡಿದು ಸಂದರ್ಭೋಚಿತವಾಗಿ ಅದನ್ನು ಉಪಯೋಗಿಸುತ್ತಲೇ ಇರುತ್ತಾರೆ. ಮಾತುಗಳನ್ನು ಶ್ರುತಿಬದ್ಧವಾಗಿ ಹೇಳಬೇಕೆಂಬುದು ಸಂಪ್ರದಾಯ. ಈ ಸಂಪ್ರದಾಯವನ್ನು ಕೈಬಿಟ್ಟವರೂ ಇದ್ದಾರೆ. ಹಿಂದೆ ಕೀರ್ತನಕಾರರು ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುವ ಸಂಪ್ರದಾಯವೂ ಇತ್ತು.

ಕಥೆಯನ್ನು ಬೆಳೆಸುವಾಗ ಮಧ್ಯೆ ಮಧ್ಯೆ ಹಾಡುತ್ತಾರೆ. ಹಾಡಿನ ಸಾಹಿತ್ಯ ಕಥಾಸನ್ನಿವೇಶಕ್ಕೆ ಹೊಂದಿಕೊಂಡಿರಬಹುದು. ಇಲ್ಲವೆ ಅದಕ್ಕೆ ಹೊರತಾಗಿರಬಹುದು. ಅಂದರೆ, ಹನುಮಂತ ರಾಮನನ್ನು ಪ್ರಾರ್ಥಿಸುವ ಕಥಾ ಸಂದರ್ಭದಲ್ಲಿ ತ್ಯಾಗರಾಜರ ಕೀರ್ತನೆಯನ್ನು ಹಾಡಬಹುದು. ಹಾಡು, ಕಥೆಯ ಒಂದು ಅಂಗವಾಗಿದ್ದರೆ ಹೆಚ್ಚು ಪರಿಣಾಮಕಾರಿ. ಇಂಥ ರಚನೆಗಳನ್ನು ಸುಶ್ರಾವ್ಯವಾಗಿ ಹಾಡುವುದು ಮುಖ್ಯ. ಅತಿಯಾಗಿ ಆಲಾಪನೆ ಮಾಡುವುದರಿಂದ, ಅನೇಕ ಉಪಕಥೆಗಳನ್ನು ಹೇಳುತ್ತ ಪ್ರಧಾನ ಕಥಾವಸ್ತುವಿನ ಏಳಿಗೆ ತುಂಡರಿಸುವುದರಿಂದ, ಕಥೆಯಲ್ಲಿ ಜನರ ಕುತೂಹಲ ತಗ್ಗುತ್ತದೆ. ಎಲ್ಲಿ ಭಾಷೆ ಕ್ಲಿಷ್ಟವಾಗಿದೆಯೋ, ಅಲ್ಲಿ ಮಾತ್ರ ಶ್ಲೋಕಾದಿಗಳಿಗೆ ಅರ್ಥ ಹೇಳಿದರೆ ಕಥೆ ಹೆಚ್ಚು ಬೋಧಪ್ರದವಾಗುತ್ತದೆ. ಕಥಾ ಕಾಲಕ್ಷೇಪದಲ್ಲಿ ಬರುವ ಗದ್ಯಭಾಗಗಳನ್ನು ಕೂಡ ಶ್ರುತಿಬದ್ಧವಾಗಿ ಹೇಳುವುದೂ ಪದ್ಧತಿ.

ಪೌರಾಣಿಕ ವಿಷಯಗಳಲ್ಲಿ ಮಾತ್ರ ನಡೆಯುತ್ತಿದ್ದ ಕಥಾ ಕಾಲಕ್ಷೇಪದ ವಿಷಯವ್ಯಾಪ್ತಿ ಕ್ರಮೇಣ ವಿಸ್ತರಿಸಿತು. ಪರಿಸ್ಥಿತಿಯ ಪ್ರಭಾವದಿಂದ

ರಾಜಕೀಯ ಸಾಮಾಜಿಕ ವಿಷಯದ ಮೇಲೂ ಕಥಾ ಕಾಲಕ್ಷೇಪ ನಡೆಯ ಲಾರಂಭವಾಯಿತು. ಕರ್ನಾಟಕದಲ್ಲಿ ಇಂಥ ಸಂಪ್ರದಾಯವನ್ನು ಬೆಳೆಸಿದವರು ಕೊಪ್ಪಳ ಜಯರಾಮಾಚಾರ್ಯರು. ಇವರು ತಮ್ಮ ಕೀರ್ತನೆಗಳಲ್ಲಿ ಭಾರತ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಅಂಶಗಳನ್ನು ನಿರೂಪಿಸುತ್ತಿದ್ದರು. ಲೋಕಮಾನ್ಯ ಬಾಲಗಂಗಾಧರ ತಿಲಕರು ದಿವಂಗತರಾದ ಕೆಲವೇ ದಿನಗಳಲ್ಲಿ ಅವರ ಜೀವನವನ್ನು ಕುರಿತು ಒಂದು ಕೀರ್ತನೆಯನ್ನು ರಚಿಸಿ ಅದನ್ನು ಪ್ರಚುರಪಡಿಸಿದರು.

ಕಥಾ ಕಾಲಕ್ಷೇಪ ಭಾರತೀಯ ಸಂಸ್ಕೃತಿಯಲ್ಲಿ ಒಂದು ಪ್ರತಿಷ್ಠಿತ ಕಲೆ. ಇದು ಒಂದು ಕಾಲಕ್ಕೆ ಸಮಾಜದ ಮೇಲೆ ತುಂಬ ಶುಭ ಪರಿಣಾಮವನ್ನುಂಟುಮಾಡಿತ್ತು; ಜನಪ್ರಿಯವೂ ಆಗಿತ್ತು. ಈಗಲೂ ಕೆಲವು ಪ್ರದೇಶಗಳಲ್ಲಿ ಒಂದು ಪ್ರಭಾವಶಾಲಿಯಾದ ಕಲಾಮಾಧ್ಯಮವಾಗಿದೆ. 19ನೆಯ ಶತಮಾನದಲ್ಲಿ ರಾಮಚಂದ್ರ ಬುವಾ ಎಂಬವರು ಮಹಾರಾಷ್ಟ್ರದಿಂದ ದಕ್ಷಿಣಕ್ಕೆ ಬಂದರು. ಇವರ ಕೀರ್ತನೆ ದಕ್ಷಿಣದವರಿಗೆ ಸ್ಫೂರ್ತಿ ನೀಡಿತು. ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲಿ ಕಥಾ ಕಾಲಕ್ಷೇಪ ರೂಢಿಗೆ ಬಂತು.

ಕೀರ್ತನಕಾರರಾಗಿ ತಮ್ಮ ವೃತ್ತಿಯನ್ನು ಆರಂಭಿಸಿದವರು ಕಾಲಕ್ರಮೇಣ ಶ್ರೇಷ್ಠ ಸಂಗೀತಗಾರರಾಗಿ, ವಾಗ್ಗೇಯಕಾರರಾಗಿ ಪ್ರಸಿದ್ಧರಾದದ್ದೂ ಉಂಟು. ಹಾಗೆಯೇ, ಸಂಗೀತಗಾರರಾಗಿದ್ದವರು ಕೀರ್ತನಕಾರರಾಗಿದ್ದುದೂ ಉಂಟು. ನಾಟಕರಂಗದಿಂದ ಕಥಾ ಕಾಲಕ್ಷೇಪದ ಕಡೆಗೆ ಸರಿದವರೂ ಇದ್ದಾರೆ.

ಇಂಗ್ಲಿಷ್ ಭಾಷೆಯಲ್ಲೂ ಕಥಾ ಕಾಲಕ್ಷೇಪ ನಡೆಸುವುದು ರೂಢಿಗೆ ಬಂದಿದೆ.

ಕಥಾ ಕಾಲಕ್ಷೇಪವನ್ನು ಕುರಿತು ಬೇಲೂರು ಕೇಶವದಾಸರು ಒಂದು ಲಕ್ಷಣಗ್ರಂಥವನ್ನೂ ಹೊಸಕೆರೆ ಚಿದಂಬರಯ್ಯನವರು ಒಂದು ಲಕ್ಷ್ಯಗ್ರಂಥವನ್ನೂ ಬರೆದಿದ್ದಾರೆ.

## ಕನಕದಾಸ

ಇಂದು ಹೀಗಾಯಿತು; ಮುಂದೆ ಏನಾಗುತ್ತದೆಯೋ? ಒಳ್ಳೆಯದಾಗುತ್ತದೋ ಕೆಟ್ಟದಾಗುತ್ತದೆಯೋ? ಸುಖವಾಗಿರುತ್ತೇವೋ? ಕಷ್ಟಕ್ಕೆ ಬೀಳುತ್ತೇವೋ? —ಎಂಬ ಯೋಚನೆ ಸಾಮಾನ್ಯ. ಹೀಗೆ ತಲ್ಲಣಗೊಳ್ಳುವುದು ಮನುಷ್ಯ ಸ್ವಭಾವ. ಈ ತಲ್ಲಣವನ್ನು ತಪ್ಪಿಸಿಕೊಂಡು ಸಮಾಧಾನದಿಂದಿರುವುದು ಹೇಗೆ? ಅಂಥ ಶಾಂತಿಯನ್ನು ದೊರಕಿಸಿಕೊಳ್ಳುವ ಬಗೆ ಯಾವುದು? ಅದಕ್ಕೆ ಕನಕದಾಸರ ಸಲಹೆ ಇದು:

“ತಲ್ಲಣಿಸದಿರು ಕಂಡ್ಯ ತಾಳು ಮನವೆ....
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ.”

—ದೇವರು ಈ ಸೃಷ್ಟಿಯನ್ನೆಲ್ಲ ರಕ್ಷಿಸುತ್ತಾನೆ ಎಂಬ ಭಾವನೆಯನ್ನು ಬೆಳೆಸಿಕೊಂಡರೆ ಈ ತಲ್ಲಣ ತಪ್ಪುತ್ತದೆ ಎಂಬುದು ಕನಕದಾಸರ ಅಭಿಪ್ರಾಯ.

ಕೀರ್ತನೆಗಳಲ್ಲದೆ ಹಲವು ಕಾವ್ಯಗಳನ್ನೂ ಕನಕದಾಸರು ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಕಾವ್ಯಗುಣವಿದೆ; ತಿಳಿಗನ್ನಡದಲ್ಲಿ ಜೀವನದರ್ಶನ ತತ್ತ್ವಜ್ಞಾನಗಳ ನಿರೂಪಣೆಯಿದೆ.' ನಳಚರಿತ್ರೆ', 'ರಾಮಧಾನ್ಯ ಚರಿತ್ರೆ', 'ಮೋಹನತರಂಗಿಣಿ' ಅವರ ಕಾವ್ಯಗಳು; ಸಂಖ್ಯೆಗಳ ದೃಷ್ಟಿಯಿಂದ ಇವು ವಿಪುಲವಲ್ಲದಿದ್ದರೂ ಗುಣದ ದೃಷ್ಟಿಯಿಂದ ಗಣನೀಯವಾದುವು.

ಕನಕದಾಸರಿಗೆ ಸಂಬಂಧಿಸಿದ ಎರಡು ಸುಪ್ರಸಿದ್ಧ ಕತೆಗಳಿವೆ.



ಸಾರಸ್ವತ ಸಂಪತ್ತು : ಕನಕದಾಸ

ಕನಕದಾಸರು ಯಾವಾಗಲೂ ದೇವರ ಧ್ಯಾನದಲ್ಲಿರುತ್ತ ಎಲ್ಲೆಲ್ಲೂ ದೇವನ ಸಾನ್ನಿಧ್ಯವನ್ನು ಕಂಡಿದ್ದಾರೆ– ಎಂದು ಕನಕದಾಸರ ಮೇಲೆ ಅವರ ಗುರು ವ್ಯಾಸರಾಯ ಸ್ವಾಮಿಗಳಿಗೆ ಅಭಿಮಾನ, ಪ್ರೀತಿ. ಗುರುಗಳು ತಮ್ಮ ಈ ಶಿಷ್ಯನಲ್ಲಿ ಇಷ್ಟೊಂದು ಅಭಿಮಾನವಿಟ್ಟಿರುವುದನ್ನು ಕಂಡು ಇತರ ಶಿಷ್ಯರಿಗೆ ಅಸಮಾಧಾನ. ಜಾತಿಯಲ್ಲೂ ವಿದ್ಯೆಯಲ್ಲೂ ತಮಗಿಂತಲೂ ಕಡಮೆ ಮಟ್ಟದ ಕನಕದಾಸನಿಗೆ ವ್ಯಾಸರಾಯಸ್ವಾಮಿಗಳು ತಮ್ಮೆಲ್ಲರಿಗಿಂತಲೂ ಮೊದಲು ತೀರ್ಥ ಕೊಡುತ್ತಿದ್ದುದು ಅವರಿಗೆ ಬೇಸರವನ್ನುಂಟುಮಾಡಿತು. ಇದು ಗುರುಗಳ ಗಮನಕ್ಕೆ ಬಂತು. ಒಂದು ದಿನ ಅವರು ಪೂಜೆಯಾದ ಬಳಿಕ ತಮ್ಮ ಶಿಷ್ಯರೆಲ್ಲರಿಗೂ ಒಂದೊಂದು ಬಾಳೆಯ ಹಣ್ಣಿನ ಪ್ರಸಾದ ಕೊಟ್ಟು "ಯಾರೂ ಇಲ್ಲದ ಕಡೆಯಲ್ಲಿ ಇದನ್ನು ತಿಂದು ಬನ್ನಿ" ಎಂದು ಆಜ್ಞೆ ಮಾಡಿದರು. ಒಬ್ಬೊಬ್ಬರು ಒಂದೊಂದು ಏಕಾಂತ ಸ್ಥಳ ಹುಡುಕಿ ಹಣ್ಣನ್ನು ತಿಂದುಬಂದರು. ಆದರೆ ಕನಕದಾಸರು ಮಾತ್ರ ಹಣ್ಣನ್ನು ತಿನ್ನದೆ ಅದನ್ನು ಹಿಂದಕ್ಕೆ ತಂದರು. ಇದಕ್ಕೆ ಕಾರಣ ಕೇಳಿದಾಗ ಅವರು 'ಯಾರೂ ಇಲ್ಲದ ಸ್ಥಳ ಯಾವುದುಂಟು? ದೇವರಿಲ್ಲದ ಸ್ಥಳವೇ ಇಲ್ಲವಲ್ಲ, ಆದ್ದರಿಂದ ಹಣ್ಣು ತಿನ್ನಲಾಗಲಿಲ್ಲ', ಎಂದು ಗುರುಗಳಲ್ಲಿ ಬಿನ್ನವಿಸಿಕೊಂಡರು. ಇದನ್ನು ಕೇಳಿ ಇತರ ಶಿಷ್ಯರಿಗೆ ಕನಕದಾಸರ ಹಿರಿಮೆ ಅರ್ಥವಾಯಿತು.

ಇನ್ನೊಂದು ಕಥೆ ಉಡುಪಿಯ ಕೃಷ್ಣದೇವಾಲಯದಲ್ಲಿ ನಡೆದ ಒಂದು ಘಟನೆಗೆ ಸಂಬಂಧಿಸಿದ್ದು. ಕೃಷ್ಣನ ದರ್ಶನಕ್ಕೆಂದು ಕನಕದಾಸರು ಗುಡಿಗೆ ಬಂದರು. ಆದರೆ ದೇವಾಲಯದ ಅಧಿಕಾರಿಗಳು ಒಳಕ್ಕೆ ಹೋಗಲು ಅವರಿಗೆ ಅವಕಾಶ ಕೊಡಲಿಲ್ಲ. ಕನಕದಾಸರು ಗುಡಿಯ ಹಿಂಭಾಗಕ್ಕೆ ಹೋಗಿ "ಕೃಷ್ಣಾ ನನಗೆ ದರ್ಶನ ಕೊಡು'' ಎಂದು ಭಕ್ತಿಯಿಂದ ಬೇಡಿಕೊಂಡರು. ಪೂರ್ವಾಭಿಮುಖವಾಗಿ ನಿಂತಿದ್ದ ಕೃಷ್ಣ ವಿಗ್ರಹ ಪಶ್ಚಿಮದ ಕಡೆಗೆ ತಿರುಗಿತು. ಗೋಡೆಯಲ್ಲಿ ಬಿರುಕು ಕಂಡಿತು. ಕನಕದಾಸರಿಗೆ ಶ್ರೀ ಕೃಷ್ಣನ ದರ್ಶನವಾಯಿತು. ಈ ಅದ್ಭುತವನ್ನು ಕಂಡು ಅಲ್ಲಿ ನೆರೆದವರೆಲ್ಲ ಚಕಿತ ಚಕಿತರಾದರು. ಅರ್ಚಕರಿಗೂ ದೇವಸ್ಥಾನದ ಅಧಿಕಾರಿಗಳಿಗೂ ತಮ್ಮ ತಪ್ಪು ಮನವರಿಕೆಯಾಗಿ ಕನಕದಾಸರಲ್ಲಿ ಕ್ಷಮೆಬೇಡಿದರು. ಕನಕದಾಸರಿಗೆ ದೇವರ ದರ್ಶನವನ್ನೊದಗಿಸಿದ ಬಿರುಕನ್ನು ಈಗ ಕನಕನ ಕಿಂಡಿ ಎನ್ನುತ್ತಾರೆ; ಅಲ್ಲಿ ಒಂದು ಕಿಟಕಿಯನ್ನಿಟ್ಟಿದ್ದಾರೆ.

ಕನಕದಾಸರು ಸುಮಾರು 1507ರಿಂದ 1609ರ ವರೆಗಿನ ಅವಧಿಯಲ್ಲಿ ಇದ್ದಿರಬಹುದೆಂಬ ಅಭಿಪ್ರಾಯವಿದೆ. ಸುಮಾರು ಒಂದು ಶತಮಾನದಷ್ಟು ದೀರ್ಘವಾದ ಪೂರ್ಣ ಜೀವನ ಅವರದು. ಅವರು ಹುಟ್ಟಿದ್ದು ಧಾರವಾಡ ಜಿಲ್ಲೆಯ ಬಾಡ ಎಂಬ ಗ್ರಾಮದಲ್ಲಿ. ತಂದೆ ಬೀರೇಗೌಡ, ತಾಯಿ ಬಚ್ಚಮ್ಮ. ಕನಕದಾಸರ ತಂದೆ ಬಾಡದಲ್ಲಿ ಪಾಳೆಯಪಟ್ಟಿನ ಅಧಿಕಾರಿಯಾಗಿದ್ದರು. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡ ಕನಕದಾಸರು ವಿಜಯನಗರದ ಅರಸರ ಸೇನೆಯನ್ನು ಸೇರಿಕೊಂಡರು. ಹಲವು ಸಮರಗಳಲ್ಲಿ ಭಾಗವಹಿಸಿ ವೀರಯೋಧನೆಂಬ ಪ್ರಶಸ್ತಿಗೆ ಪಾತ್ರರಾದರು.

ಈ ವೀರಯೋಧ ದೈವಭಕ್ತನಾಗಿ ಮಾರ್ಪಟ್ಟ ಕಥೆ ಹೀಗಿದೆ: ಒಮ್ಮೆ ನಡೆದ ಹೋರಾಟದಲ್ಲಿ ಅವರಿಗೆ ಬಲವಾದ ಗಾಯಗಳಾದುವು. ಆ ಸ್ಥಿತಿಯಲ್ಲಿ ಅವರಿಗೆ ಕನಸಿನಲ್ಲಿ ದೇವರ ದರ್ಶನವಾಯಿತು. "ನೀನು ದಾಸನಾಗುವೆಯಾ ?" ಎಂದು ಸ್ವಾಮಿ ಕೇಳಿದಂತಾಯಿತು. ನೋವನ್ನು ತಡೆಯಲಾಗದೆ "ದಾಸನಾಗುವೆ, ಈ ನೋವು ನಿವಾರಿಸು" ಎಂದು ಕೋರಿದರು. ಕೂಡಲೇ ಗಾಯಗಳೆಲ್ಲ ಮಾಯ್ದುವು. ಈ ಘಟನೆಯಿಂದಾಗಿ ಭಗವಂತನ ಹಿರಿಮೆಯನ್ನು ಕಂಡುಕೊಂಡ ಕನಕದಾಸರು ವೈರಾಗ್ಯ ತಳೆದರು.

ಮುಂದೆ ಅವರು ಗುರುವಿಗಾಗಿ ಅರಸಿದರು. ವಿಜಯನಗರದಲ್ಲಿದ್ದ ರಾಜಗುರು ತಿರುಮಲೆ ತಾತಾಚಾರ್ಯ ಎಂಬವರಲ್ಲಿ ಶ್ರೀವೈಷ್ಣವ ದೀಕ್ಷೆ ಪಡೆದರು. ಆಮೇಲೆ ಜ್ಞಾನಿಗಳಾದ ವ್ಯಾಸರಾಯ ಸ್ವಾಮಿಗಳ ಶಿಷ್ಯರಾಗಿ ವೇದಾಂತ ರಹಸ್ಯಗಳನ್ನು ತಿಳಿದುಕೊಂಡರು. ಅವರಿಂದ ದಾಸದೀಕ್ಷೆಯನ್ನು ಪಡೆದು ಹರಿದಾಸರಾದರು. ಅವರ ಬಳಿಯಲ್ಲೇ ಇದ್ದು ನೂರಾರು ದೇವರನಾಮಗಳನ್ನು ರಚಿಸಿದರು.

ಕನಕದಾಸರು ಶ್ರೇಷ್ಠ ಭಕ್ತರಲ್ಲದೆ ಉತ್ತಮ ಕವಿಗಳೂ ಆಗಿದ್ದರು. ಕೀರ್ತನೆಗಳನ್ನಲ್ಲದೆ ಅವರು ಕೆಲವು ಕವನಗಳನ್ನೂ ಬರೆದಿದ್ದಾರೆ. ಇವು ಷಟ್ಪದಿ ಮತ್ತು ಸಾಂಗತ್ಯ ರೂಪದಲ್ಲಿವೆ. 'ಮೋಹನ ತರಂಗಿಣಿ' ಅವರ ಕಾವ್ಯಶಕ್ತಿಯನ್ನು ಎತ್ತಿತೋರಿಸುವಂಥ ಗ್ರಂಥ. ಇದು ಸಾಂಗತ್ಯದಲ್ಲಿದೆ. ಭಾರತ, ಭಾಗವತಗಳಲ್ಲಿ ಬಂದಿರುವ ಕಾಮದಹನ, ಉಷಾ-ಅನಿರುದ್ಧ ಪ್ರಣಯ ಪ್ರಸಂಗ, ಕೃಷ್ಣ ಬಾಣಾಸುರ ಯುದ್ಧ —ಈ ಕಾವ್ಯದ ವಸ್ತು. ವಸ್ತು ಪೌರಾಣಿಕವಾದರೂ ಕಾವ್ಯದಲ್ಲಿ ಅಲ್ಲಲ್ಲಿ ಸಮಕಾಲೀನ ಜೀವನದ ವರ್ಣನೆ ಇದೆ. ಈ ಕಾವ್ಯವನ್ನು 'ಕೃಷ್ಣಚರಿತೆ' ಎಂದು ಕರೆದಿರುವುದರಿಂದಲೂ ಸಮಕಾಲೀನ ಜೀವನ ನಿರೂಪಣೆ ಇದರಲ್ಲಿರುವುದರಿಂದಲೂ ಇದು ವಿಜಯನಗರದ ಅರಸು ಕೃಷ್ಣದೇವರಾಯನನ್ನು ದೃಷ್ಟಿಯಲ್ಲಿಟ್ಟು ಕೊಂಡು ಬರೆದ ಕಾವ್ಯವಾಗಿರಬಹುದೆಂದೂ [illegible] [illegible] ಅಭಿಪ್ರಾಯವಿದೆ. ಇದರಲ್ಲಿನ [illegible] ಪರಿಶ್ರಮವಿದ್ದು ಕನಕದಾಸರಿಂದ ಬಹು ರಮಣೀಯವಾಗಿ ನಿರೂಪಿತವಾಗಿದೆ. ಇಲ್ಲಿಯೂ ಹರಿಭಕ್ತಿಯ ಹಿರಿಮೆ ಧ್ವನಿತವಾಗಿದೆ.

'ನಳ ಚರಿತ್ರೆ' ಭಾಮಿನಿ ಷಟ್ಪದಿಯಲ್ಲಿದೆ. ಒಂಬತ್ತು ಸಂಧಿಗಳಲ್ಲಿ ನಳನ ಕಥೆಯನ್ನು ಕಲಿಯುವರೆಲ್ಲರಿಗೂ ಮೆಚ್ಚುಗೆಯಾಗುವಂತೆ ನಿರೂಪಿಸಲಾಗಿದೆ. ಪಾತ್ರ ರಚನೆ ಸ್ಪಷ್ಟ. ರಸಪೋಷಣೆ ಚೆನ್ನಾಗಿದೆ. ಕನ್ನಡ ಸಂಸ್ಕೃತಗಳ ರಮ್ಯ ಮಿಶ್ರಣವುಳ್ಳ ಭಾಷೆ ಸರಳ, ಮೋಹಕ. ಕನ್ನಡಕ್ಕೆ ಇದೊಂದು ಉತ್ಕೃಷ್ಟ ಕೊಡುಗೆ. 'ಹರಿಭಕ್ತಿಸಾರ' ವೂ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಕೃತಿ. 'ರಕ್ಷಿಸು ನಮ್ಮನನವರತ' ಎಂಬ ಚರಣ ಪ್ರತಿ ಪದ್ಯದಲ್ಲಿಯೂ ಬರುತ್ತದೆ. ನೀತಿ ತತ್ತ್ವಗಳು ಬೆರೆತಿವೆಯಾದರೂ ಇದು ಪ್ರಧಾನವಾಗಿ ಭಕ್ತಿಕಾವ್ಯ.

'ರಾಮಧಾನ್ಯ ಚರಿತ್ರೆ' ಒಂದು ಅಪರೂಪ ಕಥಾ ವಸ್ತುವಿನ ಮೇಲೆ ಆಧಾರ ಪಟ್ಟದ್ದು. ಭತ್ತ, ರಾಗಿಗಳ ನಡುವೆ ತಮ್ಮಲ್ಲಿ ಯಾರು ಹೆಚ್ಚು ಎಂಬ ಬಗೆಗೆ ವಿವಾದವುಂಟಾಯಿತಂತೆ. ಶ್ರೀರಾಮನ ಸಮ್ಮುಖದಲ್ಲಿ ನಡೆದ ಈ ವಾದದಲ್ಲಿ ರಾಗಿಯೇ ಗೆದ್ದಿತಂತೆ. ಶ್ರೀರಾಮ ಅದಕ್ಕೆ 'ರಾಘವ' ಎಂಬ ತನ್ನ ಹೆಸರನ್ನೇ ಕೊಟ್ಟನಂತೆ. ಹೀಗೆ ರಾಗಿ ರಾಮಧಾನ್ಯವಾಯಿತು ಎನ್ನುತ್ತದೆ 'ರಾಮಧಾನ್ಯ ಚರಿತ್ರೆ'. ದೇವರು ಬಡವರ, ಭಕ್ತರ ಪಕ್ಷಪಾತಿ ಎಂಬ ಭಕ್ತ ಮನೋಭಾವ ಈ ಕಾವ್ಯದಲ್ಲಿ ಪ್ರತಿಪಾದಿತವಾಗಿದೆ.

ಕನಕದಾಸರ ಕೃತಿಗಳಲ್ಲಿ ಆಗಿನ ಸಮಾಜದರ್ಶನವನ್ನೂ ಕಾಣಬಹುದು. ಕುಲ ಕುಲವೆಂದು ಕೂಗಾಡುವುದರಲ್ಲಿ ಹುರುಳಿಲ್ಲವೆಂಬುದನ್ನು ಅವರು ಬಹು ಸ್ಪಷ್ಟವಾಗಿ ಹೇಳಿದ್ದಾರೆ. ಮಾಧ್ವ ಮತದಲ್ಲಿ ಕನಕದಾಸರಿಗೆ ನಂಬಿಕೆ ಇದ್ದಿತಾದರೂ ಅವರದು 'ಅಂತರಂಗ ಭಕ್ತಿ'. ಮತಪ್ರಚಾರದ ಬಿರುಸು ತೀವ್ರತೆಗಳು ಅವರ ಕೃತಿಗಳಲ್ಲಿಲ್ಲವೇ ಇಲ್ಲ ಎನ್ನಬಹುದು. ಅವರ ದೃಷ್ಟಿ ವಿಶಾಲವಾದದ್ದು. ಅವರು ತಮ್ಮ ಕೀರ್ತನೆಗಳಲ್ಲಿ ರಾಗಗಳ ಸೂಚನೆ ಮಾಡಿದ್ದಾರೆ. ಅವರಿಗೆ ಸಂಗೀತದ ಪರಿಚಯ ಚೆನ್ನಾಗಿದ್ದಿತೆಂದು ಇದರಿಂದ ಸ್ಪಷ್ಟವಾಗಿದೆ. ಪ್ರಪಂಚಾನುಭವ ಅವರ ರಚನೆಗಳಲ್ಲಿ ಪಕ್ವವಾಗಿ ಮೂಡಿದೆ. ಕೆಲವೆಡೆಗಳಲ್ಲಂತೂ ಅವರ ಕಲ್ಪನಾಶಕ್ತಿ ಅದ್ಭುತವಾಗಿದೆ. ಸಹಜ ಪ್ರತಿಭೆ, ಭವ್ಯಕಲ್ಪನೆ, ಭಾಷಾ ಪ್ರಭುತ್ವಗಳಿಂದ ಕನಕದಾಸರು ಶ್ರೇಷ್ಠ ಕವಿಯಾಗಿ ಬೆಳಗಿದ್ದಾರೆ. ಅವರ ಕೃತಿಗಳು ಉದಾತ್ತವಾದುವು. ಸತ್ವ ಹಾಗೂ ರಚನೆಯ ದೃಷ್ಟಿಯಿಂದ ಅವು ಕನ್ನಡ ಸಾರಸ್ವತ ಸಂಪತ್ತನ್ನು ಹೆಚ್ಚಿಸಿವೆ.

## ಕನ್ನಡ ಸಾಹಿತ್ಯ

ಕನ್ನಡ —ಭಾರತದ ಪ್ರಾಚೀನ ಭಾಷೆಗಳಲ್ಲೊಂದು; ದ್ರಾವಿಡ ಭಾಷಾವರ್ಗಕ್ಕೆ ಸೇರಿದ್ದು. ಕೇವಲ ಬಾಯಿ ಮಾತಾಗಿದ್ದ ಕನ್ನಡ ಬರಹದ ರೂಪಕ್ಕೆ ಇಳಿದದ್ದು ಸುಮಾರು ಕ್ರಿ.ಶ. 400ರಲ್ಲಿರಬಹುದೆಂದು ಹಲವಾರು ಮಂದಿ ವಿದ್ವಾಂಸರ ಅಭಿಪ್ರಾಯ. ಸರಿ —ಕನ್ನಡದಲ್ಲಿ ಸಾಹಿತ್ಯ ಸೃಷ್ಟಿ ಆರಂಭವಾದದ್ದು ಯಾವಾಗ ? ಈ ಪ್ರಶ್ನೆಗೆ ಖಚಿತವಾದ ಉತ್ತರ ಹೇಳುವುದು ಕಷ್ಟ. ಕನ್ನಡನಾಡಿನಲ್ಲಿ ದೊರೆತಿರುವ ಶಾಸನಗಳ ಆಧಾರದ ಮೇಲೆ ಕೆಲವು ಊಹೆಗಳನ್ನು ಮಾಡಬಹುದು —ಅಷ್ಟೆ.

[illegible] ಕ್ರಿ. ಪೂ. ಮೂರನೆಯ ಶತಮಾನಕ್ಕೆ– ಸೇರಿದುವು. [illegible] ಭಾಷೆ ಕನ್ನಡವಲ್ಲ; ಪ್ರಾಕೃತ. ಅಶೋಕನ ಅನಂತರ ಬಹುಕಾಲದವರೆಗೆ ಪ್ರಾಕೃತ ಅಥವಾ ಸಂಸ್ಕೃತದಲ್ಲಿ ಶಾಸನಗಳನ್ನು ಬರೆಯುವ ಪದ್ಧತಿ ನಮ್ಮ ನಾಡಿನಲ್ಲೆಲ್ಲ ಕಂಡುಬರುತ್ತದೆ.

**ಮೊದಲ ಬರಹ**

ನಮಗೆ ದೊರೆತಿರುವ ಕನ್ನಡ ಶಾಸನಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಹಲ್ಮಿಡಿ ಶಾಸನ. ಹಾಸನ ಜಿಲ್ಲೆಯ ಬೇಲೂರಿನ ಸಮೀಪದಲ್ಲಿರುವ ಹಲ್ಮಿಡಿ ಗ್ರಾಮದಲ್ಲಿ ಇದು ದೊರೆಯಿತು. ಹಲ್ಮಿಡಿ ಶಾಸನವೆಂದೇ ಇದನ್ನು ಕರೆಯುವ ವಾಡಿಕೆ ಇದೆ. ಈ ಶಾಸನ ರೂಪುಗೊಂಡ ಕಾಲ ಸುಮಾರು ಕ್ರಿ. ಶ. 450. ಇದು ಕನ್ನಡ ಶಾಸನವಾದರೂ ಇದರಲ್ಲಿ ಕನ್ನಡ ಮಾತುಗಳಿಗಿಂತ ಸಂಸ್ಕೃತ ಶಬ್ದಗಳೇ ಹೆಚ್ಚಾಗಿವೆ: ಇದು ರಚಿತವಾಗಿರುವುದು ಗದ್ಯರೂಪದಲ್ಲಿ. ಈ ಶಾಸನದ ಭಾಷಾ ಸ್ವರೂಪವನ್ನು ಅಭ್ಯಾಸ ಮಾಡಿರುವ ವಿದ್ವಾಂಸರು ಅದಕ್ಕೆ 'ಪೂರ್ವದ ಹಳಗನ್ನಡ' ಎಂದು ಹೆಸರು ಕೊಟ್ಟಿದ್ದಾರೆ.

**ಕಾವ್ಯೋದಯ**

ಹಲ್ಮಿಡಿ ಶಾಸನ ರಚಿತವಾದ ಎರಡೂವರೆ ಶತಮಾನಗಳ ಅನಂತರ ಕನ್ನಡ ಶಾಸನಗಳಲ್ಲಿ ಪದ್ಯಗಳು ಕಾಣಿಸಿಕೊಳ್ಳುತ್ತವೆ. ಇಂಥ ಶಾಸನಗಳಲ್ಲಿ ಬಿಜಾಪುರ ಜಿಲ್ಲೆಯ ಬಾದಾಮಿಯಲ್ಲಿ ದೊರೆತ ಕಪ್ಪೆ ಅರಭಟ್ಟನ ಶಾಸನ ಕೆಲವಾರು ದೃಷ್ಟಿಗಳಿಂದ ಅಮೂಲ್ಯವಾದದ್ದು. ಇದು ಪದ್ಯರೂಪದಲ್ಲಿದೆ. ಈ ಪದ್ಯಗಳು ಅಚ್ಚಗನ್ನಡ ಛಂದೋರೂಪವಾದ 'ತ್ರಿಪದಿ'ಯಲ್ಲಿವೆ. ಈ ಪದ್ಯಗಳಲ್ಲೂ ಕನ್ನಡ ಮಾತುಗಳೊಡನೆ ಸಂಸ್ಕೃತ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ಆದರೆ ಈ ಮಿಶ್ರಣ ಹಿತವಾಗಿದ್ದು ಸುಂದರವಾದ ಕಾವ್ಯಶೈಲಿಗೆ ಸಹಾಯಕವಾಗಿದೆ: ಪದ್ಯದ ಓಟಕ್ಕೆ ಯಾವ ರೀತಿಯಲ್ಲಿಯೂ ತೊಡಕನ್ನುಂಟುಮಾಡಿಲ್ಲ.

ಈ ಬಾದಾಮಿ ಶಾಸನ ರೂಪುಗೊಂಡ ಕಾಲದಲ್ಲೇ ರಚಿತವಾದ ಶ್ರವಣಬೆಳಗೊಳದ ಶಾಸನವೊಂದು ಕೂಡಾ ಗಮನಾರ್ಹವಾದದ್ದು. ಇದು ಸಂಸ್ಕೃತ ಛಂದಸ್ಸಿನಲ್ಲಿದೆ; ಸಂಸ್ಕೃತ ಪದಗಳ ಉಪಯೋಗ ಹೆಚ್ಚಾಗಿದ್ದು ಪ್ರೌಢ ಕಾವ್ಯ ಶೈಲಿಯಲ್ಲಿದೆ.

ಈ ಅಂಶಗಳನ್ನೆಲ್ಲ ಗಮನಕ್ಕೆ ತಂದುಕೊಂಡು, ಕೆಲವು ಊಹೆಗಳನ್ನು ಮಾಡಬಹುದು.

1 ಹಲ್ಮಿಡಿ ಶಾಸನ ರಚಿತವಾಗುವ ಕಾಲಕ್ಕೆ ಕನ್ನಡ ನಾಡಿನಲ್ಲಿ ಸಂಸ್ಕೃತದ ಪ್ರಭಾವ ಬಲವಾಗಿಯೇ ಇತ್ತು.

2 ಕ್ರಿ. ಶ. 700ರ ಹೊತ್ತಿಗೆ ಕನ್ನಡ, ಸಂಸ್ಕೃತ ಪದಗಳ ಹಿತವಾದ ಮಿಶ್ರಣವುಳ್ಳ ಕಾವ್ಯಶೈಲಿ ಬೆಳೆದಿತ್ತು. ಅದ್ದರಿಂದ ಈ ಕಾಲಕ್ಕೆ ಒಂದೆರಡು ಶತಮಾನಗಳಷ್ಟಾದರೂ ಹಿಂದೆಯೇ ಕನ್ನಡದಲ್ಲಿ ಸಾಹಿತ್ಯ ರಚನೆ ಆರಂಭವಾಗಿರಬಹುದು.

3 ಕನ್ನಡ ನಾಡಿನಲ್ಲಿ ಸಂಸ್ಕೃತ ಪ್ರಭಾವ ಬೆಳೆಯುವುದಕ್ಕೆ ಮೊದಲೇ ಕನ್ನಡ ನಾಡಿನಲ್ಲಿ ದೇಶೀಯ ಛಂದಸ್ಸಿನಲ್ಲಿ ರೂಪಿಸಲ್ಪಟ್ಟ ಜಾನಪದಸಾಹಿತ್ಯ ತಕ್ಕಮಟ್ಟಿಗೆ ಬೆಳೆದಿದ್ದಿರಬಹುದು. ಸಂಸ್ಕೃತದ ಪ್ರಭಾವದಿಂದಾಗಿ ಈ ಸಾಹಿತ್ಯ ಪ್ರಕಾರ ಹಿಂದೆ ಬಿದ್ದಿರಬಹುದು.

ಈ ಊಹೆಗಳಿಗೆ ಪೋಷಕವಾದ ಅಂಶಗಳು 'ಕವಿರಾಜಮಾರ್ಗಂ' ಎಂಬ ಕನ್ನಡ ಲಕ್ಷಣ ಗ್ರಂಥದಲ್ಲಿ ದೊರೆಯುತ್ತವೆ. ಒಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾದ ಈ ಗ್ರಂಥ. ನಮಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದು. ಇದರ ರಚನೆಗೆ ಮೊದಲು ಇದ್ದ ಕೆಲವು ಮಂದಿ ಕೀರ್ತಿಶಾಲಿ ಕವಿಗಳ ಉಲ್ಲೇಖ ಈ ಗ್ರಂಥದಲ್ಲಿ ದೊರೆಯುತ್ತದೆ. ಇವರು ಕನ್ನಡ ಗದ್ಯ ಪದ್ಯ ರಚನೆಯಲ್ಲಿ ಖ್ಯಾತರಾಗಿದ್ದರೆಂಬುದನ್ನು ಗಮನಿಸಿದರೆ, ಒಂಬತ್ತನೆಯ ಶತಮಾನಕ್ಕೆ ಎರಡು ಮೂರು ಶತಮಾನಗಳ ಹಿಂದೆಯೇ ಕನ್ನಡದಲ್ಲಿ ಪ್ರೌಢಕಾವ್ಯ ರಚನೆ ಆರಂಭವಾಗಿದ್ದಿರಬೇಕೆಂದು ಹೇಳಬಹುದು. ಆದರೂ ಈ ಕಾಲದ ಕಾವ್ಯಗಳು ಯಾವುವೂ ನಮಗೆ ಈವರೆಗೆ ದೊರೆತಿಲ್ಲ.

**ಹಳಗನ್ನಡ ಸಾಹಿತ್ಯಾರಂಭ**

ನಮಗೆ ದೊರೆತಿರುವ ಅತ್ಯಂತ ಪ್ರಾಚೀನ ಕಾವ್ಯಗ್ರಂಥಗಳು ಹತ್ತನೆಯ ಶತಮಾನಕ್ಕೆ ಸೇರಿದುವು. ನಮಗೆ ದೊರೆತಿರುವ ಅತಿ ಹಳೆಯ ಶಾಸನ ಗದ್ಯದಲ್ಲಿರುವಂತೆ, ನಮಗೆ ಸಿಕ್ಕಿರುವ ಅತಿ ಹಳೆಯ ಗ್ರಂಥ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ' ಕೂಡ ಗದ್ಯದಲ್ಲಿದೆ. ಜೈನ ಧಾರ್ಮಿಕ ಕತೆಗಳನ್ನುಳ್ಳ ಈ ಗ್ರಂಥ ಉತ್ತಮ ಸಾಹಿತ್ಯ ಕೃತಿ.

**ರತ್ನತ್ರಯ**

ಕಾಲಮಾನದ ದೃಷ್ಟಿಯಿಂದ ಶಿವಕೋಟ್ಯಾಚಾರ್ಯ, ಪಂಪನಿಗಿಂತ ಸ್ವಲ್ಪ ಹಿರಿಯನಾದರೂ, ಪಂಪನನ್ನು ಕನ್ನಡ ಆದಿಕವಿಯೆಂದು ಕರೆಯುವುದು ವಾಡಿಕೆ–ವಾಲ್ಮೀಕಿಯನ್ನು ಸಂಸ್ಕೃತದ ಆದಿಕವಿ ಎನ್ನುವಂತೆ. ವಾಲ್ಮೀಕಿಗೆ ಆದಿಕವಿ ಪಟ್ಟವನ್ನು ದೊರಕಿಸಿದ್ದು ರಾಮಾಯಣವಾದರೆ, ಪಂಪನಿಗೆ ಆ ಸ್ಥಾನವನ್ನು ಗಳಿಸಿಕೊಟ್ಟದ್ದು ಭಾರತ. ಇವನ 'ವಿಕ್ರಮಾರ್ಜುನ ವಿಜಯ' ಪಂಪ ಭಾರತವೆಂದೇ ಖ್ಯಾತವಾಗಿದೆ. ಇದು ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲ, ಜಗತ್ತಿನ ಅತ್ಯುತ್ತಮ ಕಾವ್ಯಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಪಂಪನ ಕಲ್ಪನಾವೈಖರಿ, ಪಾತ್ರಸೃಷ್ಟಿ, ರಚನಾಶೈಲಿ ಅದ್ವಿತೀಯವಾದುವು.

ಪಂಪನ ಕಾಲದಲ್ಲಿ ಇದ್ದ ಇನ್ನೊಬ್ಬ ಗಣ್ಯಕವಿ ಪೊನ್ನ. 'ಆದಿಪುರಾಣ'ವನ್ನು ರಚಿಸಿದ ಪಂಪನ ಮೇಲ್ಪಂಕ್ತಿಯನ್ನನುಸರಿಸಿ ಪೊನ್ನನು 'ಶಾಂತಿಪುರಾಣ'ವನ್ನು ಬರೆದಿದ್ದಾನೆ. ಕವಿತ್ವದಲ್ಲಿ ತಾನು ಕಾಳಿದಾಸನಿಗಿಂತ 'ನೂರ್ಮಡಿ' ಹೆಚ್ಚು ಎಂದು ಹೇಳಿಕೊಂಡಿದ್ದಾನೆ. ಇದು ಬಲು ದೊಡ್ಡ ಆತ್ಮಪ್ರಶಂಸೆ. ಆದರೂ ಆ ಕಾಲದ ಕನ್ನಡ ಕವಿಗಳು ತಾವು ಸಂಸ್ಕೃತ ಕವಿಗಳಿಗಿಂತ ಕಡಮೆಯಿಲ್ಲವೆಂಬ ಧೀರತನವುಳ್ಳವರಾಗಿದ್ದರೆಂದು ಇದರಿಂದ ಭಾವಿಸಬಹುದು.

ಪಂಪ, ಪೊನ್ನರ ಸಾಲಿನಲ್ಲಿ ಬರುವ ಇನ್ನೊಬ್ಬ ಮಹಾಕವಿ ರನ್ನ. 10ನೆಯ ಶತಮಾನದಲ್ಲಿದ್ದ ಈ ಮೂವರು ಕವಿಗಳನ್ನು ಕನ್ನಡ ಸಾಹಿತ್ಯದ 'ರತ್ನತ್ರಯ'ರೆಂದು ಕರೆಯುತ್ತಾರೆ. ರನ್ನನನ್ನು ಪಂಪನ ಸಾಹಿತ್ಯ ಸಾಮ್ರಾಜ್ಯದ ಉತ್ತರಾಧಿಕಾರಿ ಎನ್ನಬಹುದು. ಇವನ 'ಸಾಹಸಭೀಮ ವಿಜಯ' (ಗದಾಯುದ್ಧ)ದ ಮೇಲೆ ಪಂಪನ 'ವಿಕ್ರಮಾರ್ಜುನ ವಿಜಯ'ದ ಪ್ರಭಾವ ಬಿದ್ದಿದೆ. ಆದರೂ ಇದರಲ್ಲಿ, ರನ್ನನ ಉಜ್ವಲ ಕವಿತಾಶಕ್ತಿ, ಸಹೃದಯತೆ ಎದ್ದುಕಾಣುತ್ತವೆ. ಇವನ ದುರ್ಯೋಧನ ಪಾತ್ರಸೃಷ್ಟಿ ಅಪೂರ್ವವಾದದ್ದು: ಘನವಾದದ್ದು. ಅದರ ಬಹುಮುಖ ಸೌಂದರ್ಯವನ್ನು ಮನಗಂಡಾಗ, –'ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ' ಎನ್ನುವ ಅವನ ಆತ್ಮಸ್ತುತಿ ಕೇವಲ ಬಡಿವಾರವಲ್ಲ, ಅದು ನಿಜವಾದ ಮಾತು ಎನಿಸುತ್ತದೆ. ಪಂಪ, ಪೊನ್ನರಂತೆ ರನ್ನನೂ ಜೈನ ತೀರ್ಥಂಕರರಲ್ಲೊಬ್ಬನನ್ನು ಕುರಿತ 'ಅಜಿತಪುರಾಣ'ವನ್ನು ಬರೆದಿದ್ದಾನೆ.

'ಅಜಿತ ಪುರಾಣ'ವೆಂದೊಡನೆಯೇ ಅತ್ತಿಮಬ್ಬೆಯೆಂಬ ಶ್ರೀಮಂತ ಜೈನ ಮಹಿಳೆಯ ನೆನಪಾಗುತ್ತದೆ. 'ದಾನ ಚಿಂತಾಮಣಿ' ಎಂದು ಪ್ರಸಿದ್ಧಳಾಗಿದ್ದ ಈಕೆಗಾಗಿಯೇ ಅವನು 'ಅಜಿತ ಪುರಾಣ'ವನ್ನು ರಚಿಸಿದ್ದು.

ವಯಸ್ಸಿನಲ್ಲಿ ರನ್ನನಿಗಿಂತ ಕೊಂಚ ಹಿರಿಯನಾದ ಚಾವುಂಡರಾಯ ಹತ್ತನೆಯ ಶತಮಾನದ ಇನ್ನೊಬ್ಬ ಪ್ರಮುಖ ಲೇಖಕ. ಶಿವಕೋಟ್ಯಾಚಾರ್ಯನು ಗದ್ಯದಲ್ಲಿ 'ವಡ್ಡಾರಾಧನೆ'ಯನ್ನು ಬರೆದಂತೆ ಇವನು 'ತ್ರಿಷಷ್ಟಿ ಲಕ್ಷಣ ಮಹಾಪುರಾಣ'ವನ್ನು ಬರೆದಿದ್ದಾನೆ. ಇದರಲ್ಲಿ ಜೈನಧರ್ಮಕ್ಕೆ ಸೇರಿದ ತೀರ್ಥಂಕರರು, ಚಕ್ರವರ್ತಿಗಳು, ವಾಸುದೇವರು, ಪ್ರತಿವಾಸುದೇವರ ಚರಿತ್ರೆಗಳಿವೆ. ಇದು ಜೈನಧರ್ಮದ ಕೈಪಿಡಿ ಎನ್ನಬಹುದು. ಈ ಗ್ರಂಥವನ್ನು 'ಚಾವುಂಡರಾಯ ಪುರಾಣ'ಎಂದೂ ಕರೆಯುತ್ತಾರೆ. ಇದರಲ್ಲಿ 'ಕಥಾಗದ್ಯ ಮತ್ತು ಶಾಸ್ತ್ರಗದ್ಯ ಇವುಗಳ ಮೇಳವಿಕೆ'ಯಿದೆ. ಇದರಿಂದಾಗಿ ಹಳಗನ್ನಡ ಗದ್ಯಶೈಲಿಯಲ್ಲಿ ಇದಕ್ಕೆ ಒಂದು ವಿಶಿಷ್ಟ ಸ್ಥಾನವಿದೆ.

10ನೆಯ ಶತಮಾನದಲ್ಲಿ ಗದ್ಯ ಮತ್ತು ಚಂಪೂ ಕಾವ್ಯರಂಗಗಳಲ್ಲಿ ಕನ್ನಡ ಸಾಹಿತ್ಯ ಒಳ್ಳೆಯ ಬೆಳವಣಿಗೆಯನ್ನು ಕಂಡಿತು ; ಉತ್ತಮ ಸಾಧನೆಗಳನ್ನು ಕೈಗೂಡಿಸಿಕೊಂಡಿತು.

**ಶಾಸ್ತ್ರ ಸಾಹಿತ್ಯ ರಚನೆ**

11ನೆಯ ಶತಮಾನದಲ್ಲಿ ಈ ಪರಂಪರೆ ಮುಂದುವರಿಯಿತಾದರೂ ಶುದ್ಧ ಸಾಹಿತ್ಯಕ್ಕಿಂತ ಮಿಗಿಲಾಗಿ, ಶಾಸ್ತ್ರ ಸಾಹಿತ್ಯ ಬೆಳೆಯಿತು. ಬಾಣನ ಕಾದಂಬರಿಯನ್ನು ಚಂಪೂ ಕಾವ್ಯರೂಪದಲ್ಲಿ ರಚಿಸಿದ 1ನೆಯ ನಾಗವರ್ಮ 10ನೆಯ ಶತಮಾನದ ಕೊನೆಯಲ್ಲಿ 'ಛಂದೋಂಬುಧಿ'ಯನ್ನು ಬರೆದು ಶಾಸ್ತ್ರ ಸಾಹಿತ್ಯ ರಚನೆಯನ್ನಾರಂಭಿಸಿದ. ಛಂದಶ್ಶಾಸ್ತ್ರವನ್ನು ಕುರಿತ ಮೊದಲನೆಯ ಕನ್ನಡ ಗ್ರಂಥ ಇದು.

1025ರಲ್ಲಿ ರಚಿತವಾದ, ಎರಡನೆಯ ಚಾವುಂಡರಾಯನ 'ಲೋಕೋಪಕಾರ' ಒಂದು ಗಣನೀಯ ಶಾಸ್ತ್ರಗ್ರಂಥ. ಸಾಮಾನ್ಯ ಜನರಿಗೆ ಉಪಯುಕ್ತವಾದ ಖಗೋಳಶಾಸ್ತ್ರ, ಜ್ಯೋತಿಷ, ವ್ಯವಸಾಯ, ವಾಸ್ತುಶಿಲ್ಪ, ಜಲಶಿಲ್ಪ, ಸುಗಂಧವಸ್ತು ನಿರ್ಮಾಣ ಮುಂತಾದ ಅನೇಕ ವಿಚಾರಗಳು ಈ ಗ್ರಂಥದಲ್ಲಿ ಅಡಕವಾಗಿವೆ. ವಾತ್ಸಾಯನನ ಕಾಮಸೂತ್ರ ಮುಂತಾದ ಸಂಸ್ಕೃತ ಗ್ರಂಥಗಳನ್ನು ಆಧರಿಸಿದ ಚಂದ್ರರಾಜನ 'ಮದನತಿಲಕ', ಕನ್ನಡದ ಮೊಟ್ಟಮೊದಲ ಜ್ಯೋತಿಷ್ಯ ಗ್ರಂಥವನ್ನು ಬರೆದ ಶ್ರೀಧರಾಚಾರ್ಯನ 'ಜಾತಕ ತಿಲಕ'—ಇವು ಕೂಡ 11ನೆಯ ಶತಮಾನದ ಕೃತಿಗಳು.

ಶುದ್ಧ ಸಾಹಿತ್ಯರಂಗದಲ್ಲಿ 10ನೆಯ ಶತಮಾನದ ಕೃತಿಗಳಿಗೆ ಸಮಾನವಾದುವು 11ನೆಯ ಶತಮಾನದಲ್ಲಿ ಬರಲಿಲ್ಲವಾದರೂ ದುರ್ಗಸಿಂಹನ 'ಪಂಚತಂತ್ರ', ಶಾಂತಿನಾಥನ 'ಸುಕುಮಾರ ಚರಿತ' ಇವು ಹೆಸರಿಸಬಹುದಾದ ಕೃತಿಗಳು. ಶಾಂತಿನಾಥನ ಕೃತಿಯ ಕಥೆ ಈ ಮೊದಲೇ ವಡ್ಡಾರಾಧನೆಯಲ್ಲಿ ಬರುವ ಕಥೆಯಿಂದ ಪ್ರೇರೇಪಿತವಾದದ್ದೆನ್ನಬಹುದು. ಚಂಪೂ ರೂಪದಲ್ಲಿರುವ ಈ ಕೃತಿಯ ಮೇಲೆ 'ರತ್ನತ್ರಯ'ರ ಪ್ರಭಾವವನ್ನೂ ಕಾಣಬಹುದು.

ಈ ಶತಮಾನದ ಕೊನೆಯಲ್ಲೂ 12ನೆಯ ಶತಮಾನದ ಆದಿಭಾಗದಲ್ಲೂ ಇದ್ದ ನಾಗಚಂದ್ರ ಕೂಡ 10ನೆಯ ಶತಮಾನದ ಚಂಪೂ ಶೈಲಿಯನ್ನೇ ಅನುಸರಿಸಿದವನು. ಇವನು ತನ್ನನ್ನು 'ಅಭಿನವ ಪಂಪ'ನೆಂದು ಕರೆದುಕೊಂಡಿದ್ದಾನೆ. ಪಂಪ ಭಾರತವನ್ನು ಬರೆದಂತೆ ಇವನು ರಾಮಾಯಣದ ಕಥೆಯನ್ನು ಜೈನ ಸಂಪ್ರದಾಯವನ್ನನುಸರಿಸಿ ಬರೆದಿದ್ದಾನೆ. 'ಪಂಪ ರಾಮಾಯಣ'ವೆಂದು ಪ್ರಸಿದ್ಧವಾಗಿರುವ ಈ ಕಾವ್ಯಕ್ಕೆ ಇವನು ಕೊಟ್ಟ ಹೆಸರು 'ರಾಮಚಂದ್ರಚರಿತ ಪುರಾಣ'. ಪಂಪನಂತೆ ಅಭಿನವ ಪಂಪನೂ 'ಮಲ್ಲಿನಾಥ ಪುರಾಣ'ವೆಂಬ ತೀರ್ಥಂಕರ ಚರಿತ್ರೆಯನ್ನು ಬರೆದಿದ್ದಾನೆ. ರನ್ನನು ಸೃಷ್ಟಿಸಿದ ದುರ್ಯೋಧನನ ಪಾತ್ರದಂತೆ ನಾಗಚಂದ್ರನ ರಾವಣನ ಪಾತ್ರ ಅಪೂರ್ವವಾದದ್ದು. ಹಾಗೆಯೇ ಅವನ ಕೃತಿಯಲ್ಲಿ ಕಂಡುಬರುವ ಪದಲಾಲಿತ್ಯ, ಸೂಕ್ಷ್ಮ ಸಂವೇದನೆಗಳು ಗಮನಾರ್ಹವಾದುವು.

ನಾಗಚಂದ್ರನ ಕಾಲದಲ್ಲಿ ಕಂತಿಯೆಂಬ ಕವಯಿತ್ರಿಯಿದ್ದಳೆಂದೂ ಅವಳಿಗೂ ನಾಗಚಂದ್ರನಿಗೂ ಸಮಸ್ಯೆಪೂರ್ಣಮಾಡುವ ಸ್ಪರ್ಧೆ ನಡೆಯಿತೆಂದೂ ಹೇಳಿಕೆಯಿದೆ. ಈ ಪ್ರಸಂಗಕ್ಕೆ ಸಂಬಂಧಿಸಿದುವೆಂದು ಹೇಳುವ ಕೆಲವು ಪದ್ಯಗಳೂ ಇವೆ. ಆದರೆ ಈ ದಂತಕಥೆಯಲ್ಲಿ ಸತ್ಯಾಂಶ ಇದೆ ಎಂಬುದು ಅನುಮಾನಾಸ್ಪದವಾದ ವಿಚಾರ. ಕಂತಿಯೆಂಬ ಒಬ್ಬ ಕವಯಿತ್ರಿ ಇದ್ದಳೆಂಬುದನ್ನು ಅನೇಕ ಮಂದಿ ವಿದ್ವಾಂಸರು ಒಪ್ಪಿಲ್ಲ. ಇವಳ ಯಾವ ಕೃತಿಯೂ ಈವರೆಗೆ ದೊರೆತಿಲ್ಲ. ಕಂತಿಯೆಂಬ ಕವಯಿತ್ರಿಯೊಬ್ಬಳು ನಾಗಚಂದ್ರನ ಕಾಲದಲ್ಲಿ ಇದ್ದಳೆಂಬುದು ಸ್ಥಿರವಾದರೆ ಅವಳನ್ನು ಕನ್ನಡದ ಮೊದಲ ಕವಯಿತ್ರಿಯೆಂದು ಪರಿಗಣಿಸಬೇಕಾಗುತ್ತದೆ.

**ಆಡುಮಾತಿನ ಪ್ರಾಬಲ್ಯ**

12ನೆಯ ಶತಮಾನದ ಮಧ್ಯಭಾಗ ಕನ್ನಡ ಸಾಹಿತ್ಯದಲ್ಲಿ ಒಂದು ಪರ್ವಕಾಲ. ಈ ಹೊತ್ತಿಗೆ ಚಂಪೂಯುಗದ ಹಳಗನ್ನಡ ಗ್ರಾಂಥಿಕಭಾಷೆಯಾಗಿ ಉಳಿದು, ಅದು ಆಡುಮಾತಿನಿಂದ ದೂರವಾಗಿತ್ತು. ಆಡುಮಾತನ್ನು ಸಾಹಿತ್ಯದ ಮಾಧ್ಯಮವನ್ನಾಗಿ ರೂಪಿಸಿದ ಕೀರ್ತಿ ಬಸವೇಶ್ವರನೇ ಮುಂತಾದ ಶಿವಶರಣರಿಗೆ ಸಲ್ಲಬೇಕು. ಅವರು ತಮ್ಮ ಮತೀಯ ಭಾವನೆಗಳ ಅಭಿವ್ಯಕ್ತಿಗಾಗಿ ಸುಂದರವಾದ 'ವಚನ'ಗಳನ್ನು ರಚಿಸಿದರು. ವಚನರಚನೆ 11ನೆಯ ಶತಮಾನದ ಆದಿಕಾಲದಲ್ಲೇ ಆರಂಭವಾಗಿತ್ತಾದರೂ, ಆ ಸಾಹಿತ್ಯ ಪ್ರಕಾರವನ್ನು ಅತ್ಯಂತ ಪರಿಣಾಮಕಾರಿಯಾಗಿ ಉಪಯೋಗಕ್ಕೆ ತಂದುಕೊಂಡವರು 12ನೆಯ ಶತಮಾನದ ಶಿವಶರಣರು. ಅಲ್ಲಮಪ್ರಭು, ಬಸವೇಶ್ವರ, ಅಕ್ಕಮಹಾದೇವಿ, ಚೆನ್ನಬಸವ, ಸಿದ್ಧರಾಮ ಮುಂತಾದವರು ಇವರಲ್ಲಿ ಪ್ರಮುಖರು. ವಚನಗಳ ಪ್ರಧಾನ ಉದ್ದೇಶ ಧರ್ಮಬೋಧೆಯಾದರೂ ಅವುಗಳಲ್ಲಿ ಸಮಕಾಲೀನ ಜೀವನದ ಸಾಮಾಜಿಕ ನಂಬಿಕೆ, ನಡವಳಿಕೆಗಳ ಚಿತ್ರಣ, ವಿಮರ್ಶೆಗಳೂ ಇವೆ. ನಿರೂಪಣೆಯಲ್ಲಿ ಕಾವ್ಯದ ಕಾವು ಕೂಡ ಕಂಡುಬರುತ್ತದೆ. ಕಾವ್ಯದೃಷ್ಟಿಯಿಂದ ಅಕ್ಕಮಹಾದೇವಿಯ ವಚನಗಳು ಗಣನೀಯವಾದುವು. ಇವಳು ವಿರಾಗಿ ಮಾತ್ರವಲ್ಲ, ಉತ್ತಮ ಕವಯಿತ್ರಿಯೂ ಆಗಿದ್ದಳು. ದಂತಕಥೆಯ ಕಂತಿಯನ್ನು ಕೈಬಿಟ್ಟು, ಅಕ್ಕಮಹಾದೇವಿಯನ್ನು ಕನ್ನಡದ ಮೊದಲ ಕವಯಿತ್ರಿ ಎಂದರೆ ತಪ್ಪಲ್ಲ. ಅವಳ ವಚನಗಳ ಕಾವ್ಯಶೀಲತೆ ಉನ್ನತಮಟ್ಟದ್ದು.

**ಹಳಗನ್ನಡ**

12ನೆಯ ಶತಮಾನದಲ್ಲಿ ವಚನರಚನೆ ದೊಡ್ಡ ಪ್ರಮಾಣದಲ್ಲಿ ನಡೆಯಿತು. ಆಡುಮಾತಿಗೆ ಹತ್ತಿರವಾದ ಭಾಷೆಯನ್ನು ಸಾಹಿತ್ಯರಚನೆಯಲ್ಲಿ ಉಪಯೋಗಿಸುವ ಪದ್ಧತಿ ಆಚರಣೆಗೆ ಬಂದಿತು. ಆದರೂ ಅದರಿಂದಾಗಿ ಹಳಗನ್ನಡ ಶೈಲಿಯ ಬರವಣಿಗೆ ನಿಂತುಹೋಗಲಿಲ್ಲ. ಅದು 14ನೆಯ ಶತಮಾನದವರೆಗೂ ಗಣನೀಯ ಪ್ರಮಾಣದಲ್ಲಿ ಮುಂದುವರಿದುಕೊಂಡೇ ಬಂತು.

ಮಹತ್ವದ ಜೈನ ಗ್ರಂಥಗಳು ರಚಿತವಾದುವು. ಕರ್ಣಪಾರ್ಯ ಹಾಗೂ ನೇಮಿಚಂದ್ರರ 'ನೇಮಿನಾಥ ಪುರಾಣ'ಗಳು; ಅಗ್ಗಳನ 'ಚಂದ್ರಪ್ರಭ ಪುರಾಣ', ಪಾರ್ಶ್ವಪಂಡಿತ ಮತ್ತು ಮಧುರ ಇವರ 'ಧರ್ಮನಾಥ ಪುರಾಣ' ಮುಂತಾದ ಜೈನ ಪುರಾಣಗಳು ಕೆಲವು ಉದಾಹರಣೆಗಳು.

ಈ ಅವಧಿಯಲ್ಲಿ ಹಲವು ವೀರಶೈವ ಗ್ರಂಥಗಳು ರಚಿತವಾದಂತೆ, ಜೈನ ಧರ್ಮವನ್ನು ಕುರಿತ ಗ್ರಂಥಗಳೂ ಹೊರಬಿದ್ದುವು. ಇವುಗಳಲ್ಲಿ ನಯಸೇನನ 'ಧರ್ಮಾಮೃತ', ಬ್ರಹ್ಮಶಿವನ 'ಸಮಯ ಪರೀಕ್ಷೆ' ಮುಖ್ಯವಾದುವು. ತಮ್ಮ ಧರ್ಮದ ಹಿರಿಮೆಯ ಸಮರ್ಥನೆ ಇವರ ಕೃತಿಗಳ ಪ್ರಧಾನ ಉದ್ದೇಶವಾದರೂ ನಯಸೇನನ ಕಥಾ ನಿರೂಪಣಾಚಾತುರ್ಯ ಮೋಹಕವಾದದ್ದು; ಬ್ರಹ್ಮಶಿವನ ಹಾಸ್ಯ ಚರುಕಾದದ್ದು.

ಧಾರ್ಮಿಕ ಸಾಹಿತ್ಯವಲ್ಲದೆ ಶೃಂಗಾರ ಕಾವ್ಯಗಳೂ ಈ ಅವಧಿಯಲ್ಲಿ ರಚಿತವಾದುವು. 'ನೇಮಿನಾಥ ಪುರಾಣ'ವನ್ನು ಬರೆದ ನೇಮಿಚಂದ್ರ 'ಲೀಲಾವತಿ'ಯನ್ನು ಬರೆದನು. ದೇವ ಕವಿಯ 'ಕುಸುಮಾವಳಿ' ಕೂಡ ಇಂಥ ಶೃಂಗಾರರಸಪ್ರಧಾನವಾದ ಕೃತಿ.

12ರಿಂದ 14ನೆಯ ಶತಮಾನದ ಅವಧಿಯಲ್ಲಿ ಅನೇಕ ಶಾಸ್ತ್ರಗ್ರಂಥಗಳು ಕೂಡ ಪ್ರಕಟವಾದುವು. ಇವು ಸಾಹಿತ್ಯಶಾಸ್ತ್ರ ಹಾಗೂ ಇತರ ವಿಚಾರಗಳಿಗೆ ಸಂಬಂಧಿಸಿದುವು. 2ನೆಯ ನಾಗವರ್ಮನ 'ಕಾವ್ಯಾವಲೋಕನ' ಕನ್ನಡ ಭಾಷೆಯ ವ್ಯಾಕರಣಕ್ಕೆ ಸಂಬಂಧಿಸಿದ ಅಂಶಗಳನ್ನೂ ಅಲಂಕಾರಗಳನ್ನೂ ಕುರಿತ ಅಂಶಗಳನ್ನೂ ಒಳಗೊಂಡಿದೆ. ಹಳಗನ್ನಡ ಭಾಷೆಯ ವ್ಯಾಕರಣದ ಬಗೆಗೆ ಕನ್ನಡದಲ್ಲಿ ಮೊಟ್ಟಮೊದಲು ಬರೆದ ನಾಗವರ್ಮ, ಇದೇ ವಿಚಾರವನ್ನು ಕುರಿತು ಸಂಸ್ಕೃತದಲ್ಲಿ 'ಕರ್ಣಾಟಕ ಭಾಷಾ ಭೂಷಣ' ಎಂಬ ಗ್ರಂಥವನ್ನೂ ರಚಿಸಿದ್ದಾನೆ. ಇವೆರಡು ಗ್ರಂಥಗಳೂ ನಾಗವರ್ಮನ ವಿದ್ವತ್ತು, ಸಾಹಿತ್ಯಪ್ರಜ್ಞೆಗಳಿಗೆ ಉತ್ತಮ ನಿದರ್ಶನಗಳಾಗಿವೆ. ಇವನ ಇನ್ನೊಂದು ಗ್ರಂಥ 'ವಸ್ತುಕೋಶ'. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬರುವ ಸಂಸ್ಕೃತ ಪದಗಳಿಗೆ ಕನ್ನಡ ಅರ್ಥವನ್ನು ಇದರಲ್ಲಿ ಕೊಡಲಾಗಿದೆ. ಅಂದರೆ ಇದು ನಿಘಂಟಿನಂಥದು.

ಹಳಗನ್ನಡ ವ್ಯಾಕರಣವನ್ನು ಕುರಿತು ಕೇಶಿರಾಜನು ಬರೆದಿರುವ 'ಶಬ್ದ ಮಣಿದರ್ಪಣ' ಒಂದು ಅಮೂಲ್ಯಗ್ರಂಥ. ಹಳೆಗನ್ನಡ ಭಾಷೆ ಸಾಹಿತ್ಯಗಳ ಅಧ್ಯಯನ ನಡೆಸಲು ಈ ಮೂರು ಗ್ರಂಥಗಳೂ ತುಂಬ ಸಹಾಯಕವಾದುವು; ಹಾಗೆಯೇ ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ' ಎಂಬ ಹಳಗನ್ನಡ ಕಾವ್ಯ ಸಂಕಲನ ಗ್ರಂಥ ಕೂಡ.

ಈ ಅವಧಿಯಲ್ಲಿ ಗಣಿತ, ಆಯುರ್ವೇದ, ಪಶುವೈದ್ಯ, ಪವನಶಾಸ್ತ್ರ, ವಿಷ ವೈದ್ಯಗಳನ್ನು ಕುರಿತ ಶಾಸ್ತ್ರಗ್ರಂಥಗಳೂ ರಚಿಸಲ್ಪಟ್ಟುವೆಂಬುದು ಗಮನಾರ್ಹವಾದ ವಿಚಾರ.

**ಹೊಸ ಹಾದಿ**

ಶಿವಶರಣರ ವಚನರಚನೆ ಕನ್ನಡ ಸಾಹಿತ್ಯರಂಗದಲ್ಲಿ ಹೊಸ ಹಾದಿಯನ್ನು ತುಳಿದ ಅನಂತರ ಆ ಪದ್ಧತಿಯನ್ನು ಮುಂದರಿಸಿದವನೆಂದರೆ ಹಂಪೆಯ ಹರಿಹರ. ಇವನು ಚಂಪೂ ಸಂಪ್ರದಾಯವನ್ನನುಸರಿಸಿ 'ಗಿರಿಜಾ ಕಲ್ಯಾಣ' ವನ್ನೂ ವೃತ್ತಛಂದಸ್ಸಿನಲ್ಲಿ ಶತಕಗಳನ್ನೂ ಬರೆದಿದ್ದಾನಾದರೂ ಕನ್ನಡ ಸಾಹಿತ್ಯಕ್ಕೆ ಇವನ ವಿಶಿಷ್ಟ ಕೊಡುಗೆ—ಶಿವಶರಣರನ್ನು ಕುರಿತ ರಗಳೆಗಳು. ರಗಳೆ ಛಂದಸ್ಸಿಗೆ ರೂಪವನ್ನೂ ಪುಷ್ಟಿಯನ್ನೂ ಒದಗಿಸಿದವನು ಇವನು; ಅಲ್ಲದೆ, ಹಳಗನ್ನಡವನ್ನು ಹೊಸಗನ್ನಡದ ಜಾಡಿಗೆ ತಿರುಗಿಸಿದ ಕವಿ. ಶಿವಶರಣರನ್ನು ಕುರಿತ ಇವನ ರಗಳೆಗಳು ಉತ್ತಮ ಕಾವ್ಯ-ಜೀವನಚರಿತ್ರೆಗಳು. ಇವನು ರಗಳೆಯನ್ನು ಬೆಳೆಸಿದಂತೆ ಇವನ ಸೋದರಳಿಯ ರಾಘವಾಂಕ ಷಟ್ಪದಿ ಪ್ರಕಾರವನ್ನು ರೂಢಿಸಿದ. 'ಹರಿಶ್ಚಂದ್ರ ಕಾವ್ಯ' ಇವನ ಅಮೂಲ್ಯ ಕೃತಿ. ಈ ಕ್ರಾಂತಿಕಾರಿ ಕವಿಗಳ ಪಂಕ್ತಿಗೆ ಸೇರುವ ಇನ್ನೊಬ್ಬ ಕವಿ ಜನ್ನ. ಇವನ 'ಯಶೋಧರ ಚರಿತೆ' ಜೈನಧರ್ಮದ ಜೀವಾಳವಾದ ಅಹಿಂಸೆಯ ಪ್ರತಿಪಾದನೆಗಾಗಿ ಮೀಸಲಾದ ಗ್ರಂಥವಾದರೂ ಅದು ಉತ್ತಮ ಕಾವ್ಯಲಕ್ಷಣಗಳಿಂದ ಕೂಡಿದೆ. ಸರಳ ಕಂದಪದ್ಯಗಳ ಈ ಕೃತಿ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದಿದೆ. ಸಂದರ್ಭೋಚಿತವಾದ ವರ್ಣನೆ, ಪರಿಣಾಮಕಾರಿಯಾದ ಪಾತ್ರಸೃಷ್ಟಿ, ಕುತೂಹಲಕಾರಿಯಾದ ಕಥಾನಿರೂಪಣೆಗಳಿಂದಾಗಿ ಈ ಕೃತಿ ಆಕರ್ಷಕವಾಗಿದೆ.

ಪಂಪ, ಪೊನ್ನ, ರನ್ನರು ಹಳಗನ್ನಡ ಯುಗದ ಆದಿಭಾಗದ 'ರತ್ನತ್ರಯ' ರಾಗಿರುವಂತೆ ಹರಿಹರ, ರಾಘವಾಂಕ, ಜನ್ನರು ನಡುಗನ್ನಡದ ಆದಿಕಾಲದ 'ರತ್ನತ್ರಯ'ರು. ರಾಘವಾಂಕನು ಆರಂಭಿಸಿದ ಷಟ್ಪದಿ ಸಂಪ್ರದಾಯವನ್ನು ಮುಂದುವರಿಸಿದವರಲ್ಲಿ ಮಹಾಕವಿ ಕುಮಾರವ್ಯಾಸನು ತಿಲಕಪ್ರಾಯನು. ಇವನು ರಚಿಸಿದ ಕನ್ನಡ ಭಾರತದ ಹತ್ತು ಪರ್ವಗಳು ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆ. ಈ ಕಾಲದ ಅಂದರೆ 15ನೆಯ ಶತಮಾನದ ಇನ್ನೊಬ್ಬ ಪ್ರಮುಖ ಷಟ್ಪದಿ ಕವಿ ಚಾಮರಸ. ಇವನ 'ಪ್ರಭುಲಿಂಗ ಲೀಲೆ' ಅಲ್ಲಮಪ್ರಭುವಿನ ಜೀವನವನ್ನು ಕುರಿತ ಕೃತಿ. ಕಾವ್ಯ ದೃಷ್ಟಿಯಿಂದಲೂ ಉತ್ತಮವಾದ ಈ ಕನ್ನಡ ಗ್ರಂಥ ಕೆಲವಾರು ಭಾರತೀಯ ಭಾಷೆಗಳಿಗೆ ಅನುವಾದವಾಗಿದೆ. ಪ್ರಭುಲಿಂಗಲೀಲೆ ರಚನೆಯಾದ ಮೇಲೆ ಕನ್ನಡದಲ್ಲಿ ಹಲವಾರು ಶರಣರ ಚರಿತ್ರೆಗಳು ಬಂದುವು. ಈ ವರ್ಗದ ಕೃತಿಗಳಲ್ಲಿ 17ನೆಯ ಶತಮಾನದ ಷಡಕ್ಷರದೇವನ 'ರಾಜಶೇಖರ ವಿಳಾಸ' ತುಂಬ ಪ್ರಸಿದ್ಧವಾದದ್ದು.

ಷಟ್ಪದಿ ಕವಿಗಳಲ್ಲಿ ಲಕ್ಷ್ಮೀಶ ಅತ್ಯಂತ ಜನಪ್ರಿಯನಾದವನು. 16ನೆಯ ಶತಮಾನದ ಮಧ್ಯಭಾಗದಲ್ಲಿದ್ದ ಇವನು ಜೈಮಿನಿ ಭಾರತವನ್ನು ಬರೆದನು. ಇವನು 'ಉಪಮಾಲೋಲ'ನೆಂದು ಪ್ರಸಿದ್ಧನಾಗಿದ್ದಾನೆ.

ಲಕ್ಷ್ಮೀಶನ ಸಮಕಾಲೀನನಾದ ರತ್ನಾಕರವರ್ಣಿ ಸಾಂಗತ್ಯ ಛಂದೋರೂಪವನ್ನು ಕಾವ್ಯ ರಚನೆಯ ಮಾಧ್ಯಮವನ್ನಾಗಿ ಉಪಯೋಗಿಸಿ ಉತ್ತಮ ಸಾಧನೆಯನ್ನು ಕೈಗೂಡಿಸಿಕೊಂಡ ಕವಿ. ಇವನ 'ಭರತೇಶ ವೈಭವ' ಜೈನ ಪುರಾಣದಲ್ಲಿ ಬರುವ ಭರತಚಕ್ರವರ್ತಿಯ ಚರಿತ್ರೆಯನ್ನು ನಿರೂಪಿಸುತ್ತದೆ. ಶೈಲಿ, ಕವಿತಾಗುಣಗಳೆರಡರಲ್ಲೂ ಉತ್ತಮವರ್ಗಕ್ಕೆ ಸೇರಿದ ಕೃತಿ ಇದು.

ಹರಿಹರನ ಅನಂತರ ಸುಮಾರು ಎರಡು ಎರಡೂಕಾಲು ಶತಮಾನಗಳು ಕಳೆದ ಮೇಲೆ ವಿಜಯನಗರದ ಪ್ರೌಢದೇವರಾಯನ ಕಾಲ (15ನೆಯ ಶತಮಾನ) ದಲ್ಲಿ ಮತ್ತು ಅನಂತರ ಅನೇಕ ಮಂದಿ ಕವಿಗಳು ವೀರಶೈವ ಧರ್ಮಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಬರೆದರು. ಮಗ್ಗೆಯ ಮಾಯಿದೇವ, ತೋಂಟದ ಸಿದ್ಧಲಿಂಗೇಶ್ವರ ಮತ್ತು ಆತನ ಶಿಷ್ಯರು, ಬಸವೇಶ್ವರ ಮತ್ತು ಆತನ ಸಮಕಾಲೀನರಾದ ಶಿವಶರಣರು ವಚನರಚನೆಯ ಪರಂಪರೆಯನ್ನು ಮುಂದುವರಿಸಿದರು.

**ದಾಸ ಸಾಹಿತ್ಯ**

14ನೆಯ ಶತಮಾನದಲ್ಲಿ ನರಹರಿತೀರ್ಥರಿಂದ ಆರಂಭವಾದ ದಾಸ ಸಾಹಿತ್ಯ ರಚನೆ ವಿಜಯನಗರದ ಕೃಷ್ಣದೇವರಾಯನ ಕಾಲ (16ನೆಯ ಶತಮಾನ) ದಲ್ಲಿ ತುಂಬ ಅಭಿವೃದ್ಧಿಗೆ ಬಂತು. ವ್ಯಾಸರಾಯರೂ ಅವರ

ಶಿಷ್ಟವರ್ಗದವರಾದ ಪುರಂದರದಾಸ, ಕನಕದಾಸರೂ ಅನೇಕ ಕೀರ್ತನೆಗಳನ್ನು ರಚಿಸಿ ದಾಸಪಂಥವನ್ನು ಬೆಳೆಸಿದರು. ವಚನ ಸಾಹಿತ್ಯವು ಮಾರ್ಗ ಸಾಹಿತ್ಯದಿಂದ ಬೇರೆಯಾದ ಹಾದಿಯನ್ನು ಅನುಸರಿಸಿದಂತೆ, ದಾಸಪಂಥದವರು ಸುಲಭವಾದ, ಹಾಡಲು ಬರುವಂಥ ಪದಗಳನ್ನು ರಚಿಸಿ, ಧರ್ಮ ಪ್ರಚಾರ ಮಾಡಿದರು.

16ನೆಯ ಶತಮಾನದ ಮಧ್ಯಭಾಗದಲ್ಲಿದ್ದ ನಿಜಗುಣ ಶಿವಯೋಗಿ ಕೂಡ ಉತ್ತಮವಾದ ಹಾಡುಗಳನ್ನೂ ಶಾಸ್ತ್ರಗ್ರಂಥಗಳನ್ನೂ ಬರೆದಿದ್ದಾನೆ.

**ಮೊದಲ ನಾಟಕ**

17ನೆಯ ಶತಮಾನದ ಕೊನೆಯ ಮತ್ತು 18ನೆಯ ಶತಮಾನದ ಆದಿಭಾಗದಲ್ಲಿ ಮೈಸೂರು ಸಂಸ್ಥಾನವನ್ನಾಳಿದ ಚಿಕದೇವರಾಯನ ಕಾಲದಲ್ಲಿ ಕನ್ನಡದ ಸೇವೆ ಬಹುಮುಖವಾಗಿ ನಡೆಯಿತು. ಸ್ವತಃ ಕವಿಯಾಗಿದ್ದ ಈ ಅರಸು ತಾನೇ ಗದ್ಯಪದ್ಯ ಕೃತಿಗಳನ್ನು ರಚಿಸಿದ್ದಲ್ಲದೆ, ವಿದ್ವಾಂಸರಿಗೂ ಕವಿಗಳಿಗೂ ಆಶ್ರಯ ಕೊಟ್ಟನು.

ನಮಗೆ ಈವರೆಗೆ ದೊರೆತಿರುವ ಕನ್ನಡ ನಾಟಕಗಳಲ್ಲಿ ಅತ್ಯಂತ ಪ್ರಾಚೀನವಾದ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ' ರಚಿತವಾದದ್ದು ಈತನ ಕಾಲದಲ್ಲೇ. ಸಿಂಗರಾರ್ಯನಲ್ಲಿ ವಿದ್ಯಾಭ್ಯಾಸಮಾಡಿ 'ಹದಿಬದೆಯ ಧರ್ಮ' ವನ್ನು ಬರೆದ ಹೊನ್ನಮ್ಮ ಈ ಅರಸನ ಪೋಷಣೆಯಲ್ಲಿದ್ದವಳು. ಸ್ತ್ರೀಧರ್ಮವನ್ನು ತಿಳಿಯಾದ ಭಾಷೆಯಲ್ಲಿ ಸಾಂಗತ್ಯದಂಥ ಸರಳವಾದ ಛಂದಸ್ಸಿನಲ್ಲಿ ನಿರೂಪಿಸುವ ಈ ಕಾವ್ಯ ಸ್ತ್ರೀಯ ಹಿರಿಮೆಯನ್ನು ಕೂಡ ದಿಟ್ಟತನದಿಂದ ಪ್ರತಿಪಾದಿಸುತ್ತದೆ.

**ಮತ್ತೆ ಧರ್ಮಪ್ರಚಾರ**

ಕಳಚೂರಿ ವಂಶದ ಬಿಜ್ಜಳನ ಕಾಲದಲ್ಲಿ ವೀರಶೈವ ಧರ್ಮ, ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಮಧ್ವಾಚಾರ್ಯರ ದ್ವೈತಧರ್ಮಗಳು ವಚನ, ಕೀರ್ತನೆಗಳ ಮೂಲಕ ಜನರನ್ನು ಮುಟ್ಟಿದಂತೆ, ಚಿಕದೇವರಾಜನ ಕಾಲದಲ್ಲಿ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಧರ್ಮ, ಗದ್ಯ, ಹಾಡು, ಚಂಪೂ ಪ್ರಕಾರಗಳಲ್ಲಿ ಪ್ರಚಾರವಾಯಿತು. 'ಚಿಕದೇವರಾಜ ಬಿನ್ನಪ' 'ಗೀತಗೋಪಾಲ', 'ದಿವ್ಯಸೂರಿ ಚರಿತ್ರೆ', ಮುಂತಾದುವು ಈ ಕಾಲದಲ್ಲಿ ರಚಿತವಾದ ಗ್ರಂಥಗಳು.

ಚಿಕದೇವರಾಜನ ಸಮಕಾಲೀನನಾದ ಮಹಲಿಂಗರಂಗ ಭಾಮಿನೀ ಷಟ್ಪದಿಯಲ್ಲಿ ಬರೆದ 'ಅನುಭವಾಮೃತ' ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನು ಸರಳವಾದ ಭಾಷೆಯಲ್ಲಿ, ಸರಳವಾದ ರೀತಿಯಲ್ಲಿ ನಿರೂಪಿಸುವ ಗ್ರಂಥ. ದೃಷ್ಟಾಂತಗಳ ಮೂಲಕ ತತ್ತ್ವ ವಿವರಣೆ ಮಾಡುವ ಇದರ ರೀತಿ ಅಪೂರ್ವವಾದದ್ದು. ಯಾವುದೇ ವಿಚಾರವನ್ನಾಗಲೀ ಕನ್ನಡದ ಮೂಲಕ ಹೇಳಬಹುದೆಂಬ ಇವನ ಕೆಚ್ಚು ಗಮನಾರ್ಹವಾದದ್ದು.

**ಹೊಸ ಕನ್ನಡದ ಅರುಣೋದಯ**

ಸಂಚಿಯ ಹೊನ್ನಮ್ಮನ ಸಮಕಾಲೀನನಾದವನು ತ್ರಿಪದಿ ಚಕ್ರವರ್ತಿ ಎನ್ನಬಹುದಾದ ಸರ್ವಜ್ಞ. ವಿಶಾಲವಾದ ಮಾನವಧರ್ಮವನ್ನು ಎಲ್ಲರ ಮನಮುಟ್ಟುವಂತೆ ಮೂರು ಸಾಲಿನ ಪುಟ್ಟ ಪುಟ್ಟ ಪದ್ಯಗಳಲ್ಲಿ ಹಾಡಿದ ಹಿರಿಯ ಅನುಭಾವಿ ಇವನು. ಜೀವನಧರ್ಮವನ್ನು ನಿರೂಪಿಸುವುದರಲ್ಲಿಯೂ ಮಾನವನ ಓರೆಕೋರೆಗಳನ್ನು ಹಾಸ್ಯ, ವಿಡಂಬನೆಗಳಿಗೆ ಗುರಿಮಾಡಿ ಅವನನ್ನು ತಿದ್ದುವುದರಲ್ಲೂ ಸರ್ವಜ್ಞನ ಸಾಧನೆ ದೊಡ್ಡದು.

19ನೆಯ ಶತಮಾನದಲ್ಲಿ ಮೈಸೂರು ಸಂಸ್ಥಾನವನ್ನಾಳಿದ ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿ ಹೊಸಗನ್ನಡದ ಅರುಣೋದಯವಾಯಿತು. ಚಿಕದೇವರಾಜನಂತೆ ಮುಮ್ಮಡಿ ಕೃಷ್ಣರಾಜನೂ ಸ್ವತಃ ಲೇಖಕನೂ ಕವಿಜನ ಪೋಷಕನೂ ಆಗಿದ್ದನು. ಇವನು ಅನೇಕ ಗ್ರಂಥಗಳನ್ನುರಚಿಸಿದ್ದಾನೆ. ಇವುಗಳಲ್ಲಿ ಹೆಚ್ಚು ಸಂಖ್ಯೆಯವು ಗದ್ಯರಚನೆಗಳು. ಇದೇ ಕಾಲದಲ್ಲಿದ್ದ ಕೆಂಪುನಾರಾಯಣನ 'ಮುದ್ರಾಮಂಜೂಷ' ನಡುಗನ್ನಡ ಯುಗ ಕಳೆದು 'ಹೊಸಗನ್ನಡ ಗದ್ಯದ ನಸುಕು' ಮೂಡಿರುವುದನ್ನು ನಿಚ್ಚಳವಾಗಿ ತೋರಿಸುತ್ತದೆ.

ಮುಮ್ಮಡಿ ಕೃಷ್ಣರಾಜನ ಆಸ್ಥಾನದಲ್ಲಿದ್ದ ಅಳಿಯ ಲಿಂಗರಾಜನೂ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಚಂಪೂ, ಸಾಂಗತ್ಯ, ಪದ, ಲಾವಣಿ, ಯಕ್ಷಗಾನ, ಷಟ್ಪದಿ ಮುಂತಾದ ಅನೇಕ ಪ್ರಕಾರಗಳಲ್ಲಿ ಕೃತಿ ರಚನೆಮಾಡಿದ್ದಾನೆ.

**ಪಶ್ಚಿಮದ ಗಾಳಿ**

1868ರಲ್ಲಿ ಮುಮ್ಮಡಿ ಕೃಷ್ಣರಾಜನ ನಿಧನವಾಗುವ ಹೊತ್ತಿಗೆ ನಮ್ಮ ನಾಡಿನಲ್ಲಿ ಇಂಗ್ಲಿಷ್ ಭಾಷೆಯ ಅಧ್ಯಯನ ಆರಂಭವಾಗಿತ್ತು. ಮುಂದೆ ಚಾಮರಾಜ ರಾಜ್ಯಾಡಳಿತವನ್ನು ವಹಿಸಿಕೊಳ್ಳುವ ಹೊತ್ತಿಗೆ ಅದರ ಪ್ರಭಾವವೂ ಬೆಳೆದಿತ್ತು. ಇದರಿಂದಾಗಿ ಕನ್ನಡ ಲೇಖಕರ ದೃಷ್ಟಿ ಇಂಗ್ಲಿಷ್ ಸಾಹಿತ್ಯದ ಕಡೆಗೆ ತಿರುಗಿತು. ಆ ಸಾಹಿತ್ಯದ ಕೃತಿಗಳಿಂದ ವಸ್ತುಗಳನ್ನು ಆರಿಸಿಕೊಂಡು ಕನ್ನಡಕ್ಕೆ ಅನುವಾದಿಸುವ ಪ್ರಯತ್ನವೂ ನಡೆಯಿತು. ಆದರೂ ಈ ಪ್ರಯತ್ನಗಳೆಲ್ಲವರಲ್ಲೂ ಹಿಂದಿನ ಛಂದೋರೂಪಗಳ ಪ್ರಭಾವ, ಹಿಡಿತ ಬಿಗಿಯಾಗಿಯೇ ಇತ್ತೆಂಬುದನ್ನು ಮರೆಯುವಂತಿರಲಿಲ್ಲ.

ಕನ್ನಡದಲ್ಲಿ ನವೋದಯ ಹಲವು ಹಂತಗಳಲ್ಲಿ ಮೇಲಕ್ಕೇರಿತು. ಕಾಳಿದಾಸನ ಶಾಕುಂತಲವನ್ನು ಕನ್ನಡಕ್ಕೆ ಕೊಟ್ಟ ಬಸಪ್ಪ ಶಾಸ್ತ್ರಿಗಳು, ಶೇಕ್ಸ್‌ಪಿಯರನ 'ಒಥೆಲೊ' ನಾಟಕವನ್ನು 'ಶೂರಸೇನ ಚರಿತ್ರೆ' ಯೆಂದು ರೂಪಾಂತರಿಸಿದ್ದು ಒಂದು ಹಂತ. ಇಂಥದೇ ಕಾರ್ಯ ಎಂ. ಎಲ್. ಶ್ರೀಕಂಠೇಶಗೌಡ, ಕೆರೂರ ವಾಸುದೇವಾಚಾರ್ಯ ಮುಂತಾದವರಿಂದ ನಡೆಯಿತು. ಈ ಪ್ರಯತ್ನಗಳಲ್ಲಿ ನಾವು ಹೊಸವಸ್ತುವನ್ನು ಕಾಣುವೆವಾದರೂ ಜಾಡು ಮಾತ್ರ ಹಳೆಯದೇ.

**ನವೋದಯ**

ನವೋದಯ ಕಾವ್ಯವನ್ನು ಹಳೆಯ ಛಂದಸ್ಸಿನ ಬಂಧದಿಂದ ಮುಕ್ತಗೊಳಿಸುವ ದಿಟ್ಟ ಸಾಹಸವನ್ನು ಕೈಗೊಂಡವರು ಗೋವಿಂದಪೈಗಳು. 1911ರಲ್ಲಿ ಅವರು 'ಪ್ರಾಸತ್ಯಾಗ'ದ ಧೀರ ನಿರ್ಧಾರವನ್ನು ಕೈಗೊಂಡರು.

ಇಂಥದೇ ಪ್ರಯತ್ನವನ್ನು ದೊಡ್ಡ ಪ್ರಮಾಣದಲ್ಲಿ ನಡೆಸಿದವರು ಬಿ.ಎಂ.ಶ್ರೀ. ಅವರು. ಅವರ 'ಇಂಗ್ಲಿಷ್ ಗೀತಗಳು' ಕನ್ನಡಕ್ಕೆ ಹೊಸ ಛಂದೋರೂಪಗಳನ್ನು ಕೊಟ್ಟಿತು ; ಈ ಪ್ರಯತ್ನವನ್ನು ಅವರು 'ಅಶ್ವತ್ಥಾಮನ್' ನಾಟಕದಲ್ಲಿಯೂ ಮುಂದುವರಿಸಿದರು. ಈ ಪ್ರಯೋಗಗಳು ಅನೇಕ ಮಂದಿ ತರುಣ ಕವಿಗಳಿಗೆ ಮಾರ್ಗದರ್ಶಕವಾದುವು. ಕನ್ನಡದಲ್ಲಿ ನವೋದಯ ಕಾವ್ಯ ಬೆಳೆಯಿತು. ರಸಪೂರ್ಣವಾದ ಈ ಬೆಳವಣಿಗೆಗೆ ಕಾರಣರಾದವರು ಹಲವರು. ಪಂಜೆ ಮಂಗೇಶರಾಯ, ಡಿ.ವಿ.ಜಿ., ಮಾಸ್ತಿ (ಶ್ರೀನಿವಾಸ), ವಿ.ಸೀ., ಕುವೆಂಪು, ಬೇಂದ್ರೆ, ಮಧುರಚೆನ್ನ, ಕಡೆಂಗೋಡ್ಲು ಶಂಕರಭಟ್ಟ, ಕಯ್ಯಾರ ಕಿಞ್ಞಣ್ಣ ರೈ, ಪು. ತಿ. ನರಸಿಂಹಾಚಾರ್ಯ, ವಿನಾಯಕ (ವಿ. ಕೃ. ಗೋಕಾಕ), ರಸಿಕರಂಗ (ಮುಗಳಿ), ಜಿ. ಆರ್. ಪಾಂಡೇಶ್ವರ,

ಕನ್ನಡಿಗರ ತಾಯಿ : ಗೋವಿಂದ ಪೈ ಹಸ್ತಾಕ್ಷರದಲ್ಲಿ

ಜಿ. ಪಿ. ರಾಜರತ್ನಂ, ಕೆ. ಎಸ್. ನರಸಿಂಹಸ್ವಾಮಿ, ಕಾವ್ಯಾನಂದ (ಸಿದ್ಧಯ್ಯ ಪುರಾಣಿಕ) ಎಸ್. ಆರ್. ಎಕ್ಕುಂಡಿ, ಈಶ್ವರ ಸಣಕಲ್ಲ. ಎಸ್. ವಿ. ಪರಮೇಶ್ವರ ಭಟ್ಟ. ರಾಘವ (ಎಂ. ವಿ. ಸೀತಾರಾಮಯ್ಯ), ಗೋಪಾಲಕೃಷ್ಣ ಅಡಿಗ, ಚೆನ್ನವೀರ ಕಣವಿ. ಜಿ. ಎಸ್. ಶಿವರುದ್ರಪ್ಪ. ವಿ. ಜಿ. ಭಟ್ಟ. ಕರ್ಕಿ, ಜಿ. ವರದರಾಜರಾವ್, ..ಹೀಗೆ. ನಿಸಾರ್ ಅಹಮ್ಮದ್, ಅಮ್ಮೆಂಬಳ ಶಂಕರನಾರಾಯಣ, ರಾಘವೇಂದ್ರ ಇಟಗಿ. ಎಲ್.ಜಿ. ಸುಮಿತ್ರ. ಸಿ. ಪಿ. ಕೆ.. ಮರುಳಯ್ಯ. ಸಣ್ಣ ಗುಡ್ಡಯ್ಯ. 'ವೀಚಿ'. ಸಿದ್ಧಲಿಂಗಯ್ಯ. ಬುದ್ಧಣ್ಣ ಹಿಂಗಮಿರೆ. ರಾಮದಾಸ್ ಮುಂತಾದ ಹೊಸ ಪೀಳಿಗೆಯ ಕವಿಗಳೂ ಕನ್ನಡ ಕಾವ್ಯರಚನೆಯಲ್ಲಿ ನಿರತರಾಗಿದ್ದಾರೆ.

**ಹಳತು ಹೊಸತು**

ನವೋದಯ ಕಾವ್ಯಕ್ಕೆ ಪ್ರೇರಣೆ ಇಂಗ್ಲಿಷ್ ಸಾಹಿತ್ಯದಿಂದ ದೊರೆಯಿತಾದರೂ ಅದು ತನ್ನತನವನ್ನು ಕಳೆದುಕೊಳ್ಳಲಿಲ್ಲ ಎಂಬುದು ಗಮನಾರ್ಹವಾದ ಅಂಶ. ವಸ್ತು, ಛಂದೋವಿನ್ಯಾಸಗಳೆರಡರಲ್ಲೂ ತನ್ನದೇ ಆದ ಹೊಸ ಮಾರ್ಗವನ್ನು ಕಂಡುಕೊಂಡಿತು. ಹೊಸ ಮಾರ್ಗಗಳಲ್ಲಿ ಹಾಯ್ದರೂ ಹಳೆಯ ಜಾಡುಗಳನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿಲ್ಲವೆಂಬುದೂ ಗಮನಾರ್ಹ.

ಚಂಪೂ ಶೈಲಿ ನಮ್ಮ ಸಾಹಿತ್ಯದ ಆದಿಕಾವ್ಯರೂಪವಾದರೂ. ಹೊಸಗನ್ನಡದಲ್ಲೂ ಈ ಕಾವ್ಯರೂಪವನ್ನು ಯಶಸ್ವಿಯಾಗಿ ಬಳಸಿಕೊಂಡವರು ಇದ್ದಾರೆ : ಸೋಸಲೆ ಅಯ್ಯಾಶಾಸ್ತ್ರಿ, ಹೊಸಕೆರೆ ಚಿದಂಬರಯ್ಯ. ನಂಜನಗೂಡು ಶ್ರೀಕಂಠಶಾಸ್ತ್ರೀ. ಬಿ. ಶಿವಮೂರ್ತಿ ಶಾಸ್ತ್ರೀ. ಟಿ. ಕೇಶವಭಟ್ಟ.... ಡಿ.ವಿ.ಜಿ.ಯವರ 'ಶ್ರೀರಾಮ ಪರೀಕ್ಷಣಂ'. ವಿನಾಯಕರ 'ತ್ರಿವಿಕ್ರಮರ 'ಆಕಾಶಗಂಗೆ' ಇವು ಕೂಡ ಚಂಪೂಗಂಧವುಳ್ಳ ಕೃತಿಗಳೇ.

ನವೋದಯವಾದ ಮೇಲೆ ಕೂಡ. ಅಚ್ಚಗನ್ನಡ ಹಳೆಯ ಛಂದೋರೂಪಗಳಲ್ಲಿ—ಪ್ರಧಾನವಾಗಿ 'ಷಟ್ಪದಿ','ತ್ರಿಪದಿ'. 'ಸಾಂಗತ್ಯ' ರೂಪಗಳಲ್ಲಿ ಕಾವ್ಯರಚನೆ ನಡೆದಿದೆ ಎಂಬುದು ಗಮನಾರ್ಹವಾದ ಅಂಶ. ಎಸ್.ವಿ. ಪರಮೇಶ್ವರ ಭಟ್ಟ. ಮುಳಿಯ ತಿಮ್ಮಪ್ಪಯ್ಯ. ಸಾಲಿ ರಾಮಚಂದ್ರರಾಯ. ಜಯದೇವಿ ತಾಯಿ ಲಿಗಾಡೆ, ಈ ಮಾರ್ಗದಲ್ಲಿ ನಡೆದ ಪ್ರಮುಖರು.

ಷಟ್ಪದಿ ಮುಂತಾದ ಪೂರ್ವ ಛಂದೋರೂಪಗಳಂತೆ. 'ವಚನ'ವೂ ಹೊಸಗನ್ನಡ ಸಾಹಿತ್ಯದಲ್ಲಿ ಬಲವಾಗಿ ಬೇರು ಬಿಟ್ಟಿದೆಯೆಂದೇ ಹೇಳಬೇಕು. ಎಸ್.ಎ. [illegible]. [illegible]., ಎಸ್. ವಿ. ಪರಮೇಶ್ವರ ಭಟ್ಟ. [illegible] [illegible]. ಇವರು ಉತ್ತಮ ವಚನಗಳನ್ನು ಬರೆದಿದ್ದಾರೆ. ಅದರ ವ್ಯಾಪ್ತಿಯನ್ನು ವಿಸ್ತಾರಗೊಳಿಸಿದ್ದಾರೆ.

**ನವ್ಯರು**

ನವೋದಯದ ಜಾಡಿನಲ್ಲಿ ಕಾವ್ಯರಚನೆ ಇಂದಿಗೂ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದೆಯಾದರೂ. 'ಆ ಸಂಪ್ರದಾಯದ ಸತ್ವ ಈಗ ತೀರಿದೆ. ಅದಕ್ಕೆ ಅವನತಿ ಬಂದಿದೆ' ಎಂದು ಭಾವಿಸಿದ ಸಾಹಿತಿಗಳು ಕನ್ನಡದಲ್ಲಿ ನವ್ಯ ಪಂಥವನ್ನು ಬೆಳೆಸಲು ಪ್ರಯತ್ನಿಸಿದ್ದಾರೆ. ಆರಂಭದ ನವ್ಯ ಕವಿತೆಗಳು ಬಂದದ್ದು ಪೇಜಾವರ ಸದಾಶಿವರಾಯರಿಂದ. ನವ್ಯಕಾವ್ಯ ನಮ್ಮಲ್ಲಿ ಬೇರೂರಿದ್ದು ಗೋಕಾಕರ ಪರಿಶ್ರಮದಿಂದ ; ಅದನ್ನು ಬೆಳೆಸಿದವರು ಗೋಪಾಲಕೃಷ್ಣ ಅಡಿಗರು. ಕಾವ್ಯರಂಗದಲ್ಲಿ ಆರಂಭವಾದ ಈ ನವ್ಯತೆ ಬಹುಬೇಗ ಕಥೆ, ಕಾದಂಬರಿ, ನಾಟಕಗಳ ರಂಗವನ್ನು ಮುಟ್ಟಿ ಹಲವು ವಿಧವಾದ ಪ್ರಯೋಗಗಳಿಗೆ ಎಡೆಕೊಟ್ಟಿದೆ; ಈ ಪ್ರಯೋಗ ಬಂಧ, ಭಾಷೆ, ನಿರೂಪಣೆಗಳೆಲ್ಲದರ ಮೇಲೂ ತನ್ನ ಪ್ರಭಾವವನ್ನು ಬೀರಿದೆ. ಬಿ. ಸಿ. ರಾಮಚಂದ್ರಶರ್ಮ, ಗಂಗಾಧರ ಚಿತ್ತಾಲ, ಎಚ್. ಎಸ್. ಬಿಳಿಗಿರಿ, ಸುಮತೀಂದ್ರ ನಾಡಿಗ್, ಎ.ಕೆ. ರಾಮಾನುಜನ್. ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿ. ಚಂದ್ರಶೇಖರ ಕಂಬಾರ. ಗಿರಡ್ಡಿ ಗೋವಿಂದರಾಜ. ಕೆ. ಸದಾಶಿವ, ಪಿ. ಲಂಕೇಶ. ಪೂರ್ಣಚಂದ್ರ ತೇಜಸ್ವಿ, ಶ್ರೀಕೃಷ್ಣ ಆಲನಹಳ್ಳಿ, ಕೆ. ವಿ. ತಿರುಮಲೇಶ್ ಮುಂತಾದವರು ಈ ಮಾರ್ಗಕ್ಕೆ ಸೇರಿದವರು.

**ಕಥೆ-ಕಾದಂಬರಿ**

ಕಥಾಸಾಹಿತ್ಯ. ಕನ್ನಡದಲ್ಲಿ ವಿಪುಲವಾಗಿ ಬೆಳೆದಿದೆ. ನವೋದಯ ಕಾಲದಲ್ಲಿ ಸಣ್ಣ ಕಥೆ ಬಹುಬೇಗ ಜನಪ್ರಿಯತೆಯನ್ನು ಗಳಿಸಿತು. ಎಂ.ಎನ್. ಕಾಮತ್. ಕೆರೂರ ವಾಸುದೇವಾಚಾರ್ಯ, ಪಂಜೆ ಮಂಗೇಶರಾಯರು ಈ ಪ್ರಕಾರದ ರಚನೆಯಲ್ಲಿ ಮೊದಲಿಗರು. ಆದರೂ ಸಣ್ಣ ಕಥೆಗಳಿಗೆ ಒಂದು ರೂಪವನ್ನೂ ವಿಶಿಷ್ಟ ವ್ಯಕ್ತಿತ್ವವನ್ನೂ ಕಟ್ಟಿದವರು 'ಶ್ರೀನಿವಾಸ'ರು. ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲದಿಂದ ಅವರು ಸಣ್ಣ ಕಥೆಗಳನ್ನು ರಚಿಸಿದ್ದಾರೆ. ಅವರ ಪರಂಪರೆಯಲ್ಲೇ ನಡೆದು ಬಂದು ಖ್ಯಾತ ಕಥೆಗಾರರು ಆನಂದ (ಎ. ಸೀತಾರಾಮ್). ಕೆ. ಗೋಪಾಲಕೃಷ್ಣರಾವ್, ಅಶ್ವತ್ಥ, ಆನಂದಕಂದ (ಬೇಟಗೇರಿ ಕೃಷ್ಣಶರ್ಮ), ಎ. ಆರ್. ಕೃಷ್ಣಶಾಸ್ತ್ರಿ (ಶ್ರೀಪತಿ). ಭಾರತೀಪ್ರಿಯ. ದ.ಬಾ. ಕುಲಕರ್ಣಿ. ಮ.ನ. ಮೂರ್ತಿ ಮತ್ತಿತರರು.

ವಸ್ತು, ನಿರೂಪಣೆ, ರಚನಾತಂತ್ರಗಳಲ್ಲಿ ಮಾರ್ಪಾಟು ಹೊಂದುತ್ತ. ಸಣ್ಣ ಕಥಾವಾಹಿನಿ ನಿರಂತರವಾಗಿ ಹರಿದಿದೆ.

ಶ್ರೀಮತಿ ಬಿ. ಟಿ. ಜಿ. ಕೃಷ್ಣ (ಕೊಡಗಿನ ಗೌರಮ್ಮ). ಶ್ಯಾಮಲಾ ದೇವಿ, ಜಯಲಕ್ಷ್ಮಿ ಆರ್. ಶ್ರೀನಿವಾಸನ್, ರಾಜೇಶ್ವರಿ ನರಸಿಂಹ ಮೂರ್ತಿ, ಶಾಂತಾದೇವಿ ಮಾಳವಾಡ. ಶಾಂತಾದೇವಿ ಕಣವಿ, ಅನುಪಮಾ ನಿರಂಜನ, ಎಚ್. ಎಸ್. ಪಾರ್ವತಿ, ಸರೋಜಾ ನಾರಾಯಣರಾವ್, ಶ್ರೀಸ್ವಾಮಿ. ವೆಂ. ಮು. ಜೋಷಿ ಮುಂತಾದವರು ಈ ಕ್ಷೇತ್ರದಲ್ಲಿ ಸೇವೆಸಲ್ಲಿಸಿದ್ದಾರೆ.

ಕನ್ನಡ ಲೇಖಕ ಲೇಖಕಿಯರಲ್ಲಿ ಬಹುಮಂದಿ —ಸ್ವಲ್ಪ ಹೆಚ್ಚು ಕಡಮೆ ಎಲ್ಲರೂ ಅಂದರೂ ತಪ್ಪಲ್ಲ— ತಮ್ಮ ಸಾಹಿತ್ಯ ಪರಿಶ್ರಮ ಆರಂಭಿಸಿದ್ದು, ಆರಂಭಿಸುವುದು ಸಣ್ಣ ಕಥೆಗಳ ರಚನೆಯಿಂದಲೇ. ಸುಪ್ರಸಿದ್ಧ ಕಾದಂಬರಿಕಾರರಾಗಿ ಅರಳಿದ ಅನಕೃ. ತರಾಸು, ಬಸವರಾಜ ಕಟ್ಟೀಮನಿ, ಚದುರಂಗ, ವಾಣಿ, ತ್ರಿವೇಣಿ. ಯು. ಆರ್. ಅನಂತಮೂರ್ತಿ ಹೀಗೆ ಅನೇಕರು ಸಾಹಿತ್ಯ ಜೀವನವನ್ನು ಆರಂಭಿಸಿದ್ದು ಸಣ್ಣ ಕಥೆಗಾರರಾಗಿಯೇ.

ಕನ್ನಡದಲ್ಲಿ ಕಾದಂಬರಿ ಪ್ರಕಾರವೂ ಸಮೃದ್ಧವಾಗಿ ಬೆಳೆದಿದೆ. ಇಪ್ಪತ್ತನೆಯ ಶತಮಾನದ ಕೊನೆ ಎಂದರೆ ಶತಮಾನದ ಪ್ರಥಮದಿಂದ ಬಂದದ್ದು. ಈಗ ದೊರೆತಿರುವ ಕೃತಿಗಳಲ್ಲಿ ಕನ್ನಡದ ಮೊದಲ ಕಾದಂಬರಿ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ'. ಹೊರಬಂದಿತು. ಇದಾದನಂತರ 1900ರಲ್ಲಿ ಬೋಳಾರ ಬಾಬುರಾಯರ 'ವಾಗ್ದೇವಿ' ಬಂತು. ಹತ್ತು ವರ್ಷಗಳ ಅನಂತರ ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' ಪ್ರಕಟವಾಯಿತು. ಈ ಎಲ್ಲ ಕಾದಂಬರಿಗಳ ವಸ್ತು ಸಾಮಾಜಿಕ ಜೀವನಕ್ಕೆ ಸಂಬಂಧಿಸಿದುದು. ಇವು ಗಳಲ್ಲಿ ಅಂದಿನ ಕಾಲದ ಸಾಮಾಜಿಕ ಲೋಪದೋಷಗಳನ್ನು ಕುರಿತ ಟೀಕೆ ಇದ್ದಿತೆಂಬುದು ಗಮನಿಸಬೇಕಾದ ಅಂಶ.

ಇದಾದಮೇಲೆ ಐತಿಹಾಸಿಕ ಕಾದಂಬರಿಗಳ ಮಹಾಪೂರವೇ ಬಂತು– ಬಿ. ವೆಂಕಟಾಚಾರ್ಯ, ಗಳಗನಾಥರ ಲೇಖನಿಗಳಿಂದ. ಇವರ ಕೃತಿಗಳು ಪ್ರಧಾನವಾಗಿ ಅನುವಾದಗಳು–ಬಂಗಾಳಿಯಿಂದ, ಮರಾಠಿಯಿಂದ. ಆದರೆ, ಇವು ನಮ್ಮ ಜನರ ಮೇಲೆ ಬೀರಿದ ಪ್ರಭಾವವನ್ನು ಮರೆಯುವಂತಿಲ್ಲ. ಜನರ ವಾಚನಾಭಿರುಚಿಯನ್ನು ಬೆಳೆಸುವುದರಲ್ಲೂ ಅವರ ರಾಷ್ಟ್ರಾಭಿಮಾನ, ಜೀವನ ದರ್ಶನಗಳನ್ನು ರೂಪಿಸುವುದರಲ್ಲೂ ಈ ಇಬ್ಬರ ಕೃತಿಗಳ ಪಾತ್ರ ದೊಡ್ಡದು.

ಕಾದಂಬರಿಯಾಗಲೀ ಸಣ್ಣಕಥೆಯಾಗಲೀ ಅದು ಅತ್ಯಂತ ಜನಪ್ರಿಯ ವಾದ ಸಾಹಿತ್ಯ ಪ್ರಕಾರ. ಕಳೆದ ಅರ್ಧಶತಮಾನದ ಅವಧಿಯಲ್ಲಿ ನೂರಾರು ಸಣ್ಣಕಥೆಗಳ ಸಂಕಲನಗಳೂ ಸಹಸ್ರಾರು ಕಾದಂಬರಿಗಳೂ ಪ್ರಕಟವಾಗಿವೆ.

ಕನ್ನಡ ಕಥಾ ಸಾಹಿತ್ಯದ ಲೇಖಕರ ಸಂಖ್ಯೆ ದೊಡ್ಡದಾಗಿರುವಂತೆ, ಅವರ ವಸ್ತುವೈವಿಧ್ಯವೂ ಹಿರಿದಾದುದು. ಅದು ನಮ್ಮ ಜೀವನದ, ಸಂಸ್ಕೃತಿಯ ವಿವಿಧ ಮುಖಗಳನ್ನು ಮುಟ್ಟಿದೆ. ಸಣ್ಣಕಥೆ, ಕಾದಂಬರಿ ರಂಗದಲ್ಲಿ ಕನ್ನಡ ಲೇಖಕರು ಕೈಗೂಡಿಸಿಕೊಂಡಿರುವ ಸಾಧನೆ ಕೂಡ ಗಣನೀಯ ವಾದದ್ದು. ಕನ್ನಡದಲ್ಲಿ ಈವರೆಗೆ ಪ್ರಕಟವಾಗಿರುವ ಸಣ್ಣಕಥೆ, ಕಾದಂಬರಿ ಗಳಲ್ಲಿ ಹಲವಾರು ಶ್ರೇಷ್ಠಕೃತಿಗಳಿವೆ. ಇವು ಯಾವುದೇ ಭಾಷೆಯ ಕಥಾ ಸಾಹಿತ್ಯದ ಅತ್ಯುತ್ತಮ ಕೃತಿಗಳಿಗೆ ಸರಿಸಮವಾಗಿ ನಿಲ್ಲಬಲ್ಲುವು.

ನವೋದಯ ಕಾವ್ಯ ಆಂಗ್ಲ ಸಾಹಿತ್ಯದಿಂದ ಸ್ಫೂರ್ತಿಪಡೆದಂತೆ ಸಣ್ಣ ಕಥೆ, ಕಾದಂಬರಿ ರಚನೆಗೆ ಪ್ರಧಾನ ಪ್ರೇರಣೆ ಬಂದದ್ದು ಆಂಗ್ಲ ಸಾಹಿತ್ಯ ದಿಂದಲೇ. ಆದರೂ ನಮ್ಮ ನವೋದಯ ಕಾವ್ಯದಂತೆ, ಕಥೆ ಕಾದಂಬರಿಗಳೂ ಮೊದಲಿನಿಂದಲೂ ತಮ್ಮದೇ ಆದ ವ್ಯಕ್ತಿತ್ವವನ್ನು ರೂಢಿಸಿಕೊಂಡು ಬಂದುವು. ನಮ್ಮ ಜೀವನ, ಸಂಸ್ಕೃತಿಗಳಲ್ಲಿ ಬೇರುಬಿಟ್ಟು ನಿಂತುವು. 'ಶ್ರೀನಿವಾಸ', 'ಶ್ರೀಪತಿ' ಮುಂತಾದವರ ಕಥೆಗಳಲ್ಲೂ ದೇವುಡು, 'ಸತ್ಯ ಕಾಮ' ಮುಂತಾದವರ ಕಾದಂಬರಿಗಳಲ್ಲೂ ಈ ಲಕ್ಷಣವನ್ನು ಸುಲಭವಾಗಿ ಗುರುತಿಸಬಹುದು.

ಪ್ರಗತಿಶೀಲ ಚಳುವಳಿ ಆರಂಭವಾದ ಮೇಲೆ ಕಥೆ ಕಾದಂಬರಿಗಳ ವಸ್ತು ಗಳಲ್ಲಿ ವರ್ಣವೈವಿಧ್ಯ ಕಂಡು ಬಂತು,

ನವ್ಯಪಂಥ ಉದಯಿಸಿದ ಮೇಲೆ ಸಣ್ಣಕಥೆಗಳು ಮತ್ತೆ ಹೊರೆ ಕಳಚಿದುವು. ಬಿ. ಸಿ. ರಾಮಚಂದ್ರಶರ್ಮ, ಪೂರ್ಣಚಂದ್ರ ತೇಜಸ್ವಿ, ಯು. ಆರ್. ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಸದಾಶಿವ ದಾಸನೂರ, ರಾಜಲಕ್ಷ್ಮಿ ಎನ್. ರಾವ್, ವೀಣಾ ಯಲಬುರ್ಗಿ ಮುಂತಾದವರು ಈ ಬಗೆಯ ಕಥೆಗಾರರು.

ವೆಂಕಟಾಚಾರ್ಯರು, ಗಳಗನಾಥರ ಅನಂತರ ಕಾದಂಬರಿಯನ್ನು ಜನಪ್ರಿಯ ವಾಗಿ ಮಾಡಿದವರಲ್ಲಿ ಅನೇಕ ಪ್ರಮುಖರು. ತರಾಸು, ಕಟ್ಟೀಮನಿ, ಕೃಷ್ಣಮೂರ್ತಿ ಪುರಾಣಿಕ ಇವರೂ ಈ ವರ್ಗಕ್ಕೆ ಸೇರಿದವರು. ಕೊರಟಿ ಶ್ರೀನಿವಾಸರಾಯ, ವೀರಕೇಸರಿ ಸೀತಾರಾಮಶಾಸ್ತ್ರೀ ಐತಿಹಾಸಿಕ ಕಾದಂಬರಿ ರಂಗದಲ್ಲಿ ವಿಪುಲವಾಗಿ ಕೃಷಿ ನಡೆಸಿರುವ ಲೇಖಕರು. ವಿ.ಕೃ. ಗೋಕಾಕ, ವ್ಯಾಸರಾಯ ಬಲ್ಲಾಳ, ವಿ. ಎಂ. ಇನಾಂದಾರ್, ಚದುರಂಗ, ಮಿರ್ಜಿ ಅಣ್ಣಾರಾಯ. ತಿಪ್ಪೇರುದ್ರಸ್ವಾಮಿ, ಭಾರತೀಪ್ರಿಯ, ಭಾರತೀಸುತ, ಮ.ನ. ಮೂರ್ತಿ, ಎಸ್. ಎಲ್. ಭೈರಪ್ಪ. ಎಚ್. ಎಲ್. ನಾಗೇಗೌಡ. ಸೂರ್ಯ ನಾರಾಯಣ ಚಡಗ ಹೇಮಂತ, ಉಷಾದೇವಿ, ಅನುಪಮಾ ನಿರಂಜನ ಮುಂತಾದವರ ಕೃತಿಗಳು ಗಣನೀಯವಾದುವು.

ಮಾಸ್ತಿ, ಶಿವರಾಮ ಕಾರಂತ, ಕುವೆಂಪು, ಅನಕೃ, ದೇವುಡು, ಶ್ರೀರಂಗ, ಬಿ. ಪುಟ್ಟಸ್ವಾಮಯ್ಯ, ಕೆ. ವಿ. ಅಯ್ಯರ್, ರಾವ್‌ಬಹದ್ದೂರ, ಇವರೊಬ್ಬೊಬ್ಬರೂ ತಮ್ಮ ಕಾದಂಬರಿಗಳ ವಸ್ತುವಿನ ಆಯ್ಕೆ, ನಿರೂಪಣೆ, ರಚನಾತಂತ್ರಗಳಲ್ಲಿ ತಮ್ಮದೇ ಆದ ವೈಖರಿಯನ್ನು ತೋರಿದ್ದಾರೆ.

ನವ್ಯ ಪಂಥದಲ್ಲೂ ಪರಿಣಾಮಕಾರಿ ಕಾದಂಬರಿಗಳು ಬಂದಿವೆ. ಅನಂತ ಮೂರ್ತಿ, ಶಂಕರ ಮೊಕಾಶಿ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಲಂಕೇಶ ಇವರ ಕೃತಿಗಳು ಗಣನೀಯವಾದುವು.

ನಗೆಗೆ ಪ್ರಾಧಾನ್ಯ ಕೊಟ್ಟು ಕತೆ ಕಾದಂಬರಿಗಳನ್ನು ಬರೆದಿರುವವರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕಸ್ತೂರಿ, ಬೀಚಿ, ನಾಡಿಗೇರ ಕೃಷ್ಣರಾಯ ಮುಖ್ಯರು.

ನಮ್ಮ ಸಣ್ಣ ಕಥಾರಂಗಕ್ಕೆ ಮಹಿಳೆಯರಿಂದ ಒಳ್ಳೆಯ ಕಾಣಿಕೆ ಸಂದಿರು ವಂತೆ ಕಾದಂಬರಿ ಕ್ಷೇತ್ರಕ್ಕೂ ಸಂದಿದೆ. ನಂಜನಗೂಡು ತಿರುಮಲಾಂಬಾ, ಆರ್. ಕಲ್ಯಾಣಮ್ಮ ಈ ಪೀಳಿಗೆಯ ಹಿರಿಯರು. ತ್ರಿವೇಣಿ, ವಾಣಿ, ಎಂ. ಕೆ. ಇಂದಿರಾ, ಅನುಪಮಾ ನಿರಂಜನ, ಎಂ. ಕೆ. ಜಯಲಕ್ಷ್ಮಿ ಮುಂತಾದ ಲೇಖಕಿಯರು ಉತ್ತಮ ಕಾದಂಬರಿಗಳನ್ನು ಕೊಟ್ಟಿದ್ದಾರೆ.

ಬಾಲಸರಸ್ವತಿ, ಭಿ.ಪ. ಕಾಳೆ, ನಾಗೇಶ ಮುಂತಾದವರು ಆರಂಭಿಸಿದ ಪತ್ತೆ ದಾರಿ ಕಾದಂಬರಿ ಪ್ರಕಾರವನ್ನು ಮುಂದುವರಿಸಿ ಅದನ್ನು ಜನಪ್ರಿಯವನ್ನಾಗಿ ಮಾಡಿದವರು ಎಂ. ರಾಮಮೂರ್ತಿ, ಮುಂತಾದವರು.

**ನಾಟಕರಂಗ**

ಕನ್ನಡ ನಾಡಿನಲ್ಲಿ ರಂಗಭೂಮಿ ಒಂದು ಪ್ರಾಚೀನ ವ್ಯವಸ್ಥೆಯಾದರೂ ಪ್ರಾಚೀನ ಕನ್ನಡ ಸಾಹಿತ್ಯ ಯುಗದ ನಾಟಕಗಳು ಈವರೆಗೂ ದೊರೆತಿಲ್ಲ.

ಈವರೆಗೆ ದೊರೆತಿರುವ ಅತ್ಯಂತ ಹಿಂದಿನ ಕನ್ನಡ ನಾಟಕ ' ಮಿತ್ರವಿಂದಾ ಗೋವಿಂದ ', ಸುಮಾರು 1700ರಲ್ಲಿ ಮೈಸೂರು ಅರಸು ಚಿಕದೇವರಾಜನ ಆಸ್ಥಾನದಲ್ಲಿದ್ದ ಸಿಂಗರಾರ್ಯನ ಕೃತಿ ; ಸಂಸ್ಕೃತ ರತ್ನಾವಳಿ ನಾಟಕವನ್ನು ಅವಲಂಬಿಸಿದ್ದು.

ಬಹು ಹಿಂದಿನಿಂದಲೂ ಯಕ್ಷಗಾನ ಪ್ರಸಂಗಗಳು ರಚಿತವಾಗುತ್ತಿದ್ದು ಅವುಗಳ ಪ್ರದರ್ಶನ ನಡೆಯುತ್ತಿತ್ತು. ಆದರೆ ಈ ಪ್ರಕಾರದಲ್ಲಿ ವಿಪುಲವಾದ ಬೆಳೆಬಂದದ್ದು ಹತ್ತೊಂಬತ್ತನೆಯ ಶತಮಾನದ ಆದಿ ಭಾಗದಲ್ಲಿ ಮೈಸೂರನ್ನಾಳಿದ ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿ. ಈತನ ಆಸ್ಥಾನದಲ್ಲಿದ್ದ ಅಳಿಯ ಲಿಂಗರಾಜ ಸುಮಾರು 40 ಯಕ್ಷಗಾನ ಪ್ರಸಂಗ ಗಳನ್ನು ಬರೆದನೆಂದೂ ಆ ಕಾಲಕ್ಕೆ ಅವುಗಳ ಪ್ರದರ್ಶನ ಕೂಡ ನಡೆಯುತ್ತಿ ತ್ತೆಂದೂ ತಿಳಿದು ಬಂದಿದೆ.



ಚಂದ್ರಶೇಖರ ಪಾಟೀಲ



ಕಯ್ಯಾರ ಕಿಞ್ಞಣ್ಣ ರೈ



ಚೆನ್ನವೀರ ಕಣವಿ



ಚಂದ್ರಶೇಖರ ಕಂಬಾರ



ಹುಯಿಲಗೋಳ ನಾರಾಯಣರಾಯ



ಎಸ್ ವಿ ಪರಮೇಶ್ವರ ಭಟ್ಟ



ಸಿಂಪಿ ಲಿಂಗಣ್ಣ



ಜಿ ವರದರಾಜರಾವ್



ಈಶ್ವರ ಸಣಕಲ್ಲ

[illegible] ಕನ್ನಡದಲ್ಲಿ [illegible]. ಬಸವಪ್ಪ ಶಾಸ್ತ್ರೀ, ಸೋಸಲೆ ಅಯ್ಯಾಶಾಸ್ತ್ರೀ, ಕೆರೂರ ವಾಸುದೇವಾಚಾರ್ಯ [illegible] ಕನ್ನಡ [illegible] ಶಾಸ್ತ್ರೀ, ಸಲವಡಿ ಶ್ರೀಕಂಠಶಾಸ್ತ್ರೀ, ನಂಜನಗೂಡು ಶ್ರೀಕಂಠಶಾಸ್ತ್ರೀ, ಬಿ. ಪುಟ್ಟಸ್ವಾಮಯ್ಯ, ಎಂ. ಎಸ್. ರಾಮಸ್ವಾಮಿ ಮುಂತಾದವರು ವೃತ್ತಿರಂಗ ಭೂಮಿಗೆ ಅನುಕೂಲವಾದ ನಾಟಕಗಳನ್ನು ಬರೆದರು.

ಕನ್ನಡದಲ್ಲಿ ಸಾಮಾಜಿಕ ನಾಟಕಗಳ ಪರಂಪರೆ ಆರಂಭವಾದದ್ದು ಸೂರಿ ವೆಂಕಟರಮಣ ಶಾಸ್ತ್ರೀ ಅವರ 'ಇಗ್ಗಪ್ಪ ಹೆಗ್ಗಡೆ ವಿವಾಹ ಪ್ರಹಸನ'ದಿಂದ. ಈ ಪರಂಪರೆಗೆ ಭದ್ರವಾದ ತಳಹದಿ ಹಾಕಿದವರು ಟಿ. ಪಿ. ಕೈಲಾಸಂ. ಅವರು ತಮ್ಮ ಕಾಲದಲ್ಲಿ ಇಂಗ್ಲಿಷ್ ಬಲ್ಲ ಪಟ್ಟಣಿಗರು ಉಪಯೋಗಿಸುತ್ತಿದ್ದ ಭಾಷೆಯನ್ನು ಪ್ರಯೋಗಿಸಿ ಸಾಮಾಜಿಕ ನಾಟಕಗಳನ್ನು ಬರೆದರು. ಸಾಮಾಜಿಕ ನಾಟಕಗಳ ರಚನೆಯಲ್ಲಿ ಸಿದ್ಧಹಸ್ತರಾದವರು ಶ್ರೀರಂಗ. ಅವರು ಅನೇಕ ನಾಟಕಗಳನ್ನು ಬರೆದಿದ್ದಾರಲ್ಲದೆ, ತಂತ್ರದೃಷ್ಟಿಯಿಂದಲೂ ಗಮನಾರ್ಹವಾದ ನಾಟಕಗಳನ್ನು ಬರೆದಿದ್ದಾರೆ. ಪರ್ವತವಾಣಿ, ಎನ್ಕೆ, ಕೈವಾರ ರಾಜಾರಾವ್, ಎ. ಎಸ್. ಮೂರ್ತಿ, ಗುಂಡಣ್ಣ ಮುಂತಾದವರು ಈ ಕ್ಷೇತ್ರದಲ್ಲಿ ಕೃಷಿಮಾಡಿರುವ ಇತರರು.

ಗೀತನಾಟಕಗಳನ್ನು ಬರೆದಿರುವವರಲ್ಲಿ ಪುತಿನ ಪ್ರಸಿದ್ಧರು. ಕಾರಂತ, ಗೌರೀಶ ಕಾಯ್ಕಿಣಿ, ಸಿದ್ಧಯ್ಯ ಪುರಾಣಿಕ, ಕೀರ್ತಿನಾಥ ಕುರ್ತಕೋಟಿ ಮುಂತಾದವರೂ ಗೀತನಾಟಕಗಳನ್ನು ಬರೆದಿದ್ದಾರೆ.

ಛಂದಸ್ಸನ್ನುಪಯೋಗಿಸಿ ಬರೆದಿರುವ ನಾಟಕಗಳೂ ಗಣನೀಯ ಸಂಖ್ಯೆಯಲ್ಲಿ ಬಂದಿವೆ. ಈ ವರ್ಗದ ಬರವಣಿಗೆಯಲ್ಲಿ ಕುವೆಂಪು, ಗೋವಿಂದ ಪೈ, 'ಭಾರತಿ' ಪ್ರಖ್ಯಾತರಾದರು. ಎಲ್. ಗುಂಡಪ್ಪ ಛಂದಸ್ಸನ್ನುಪಯೋಗಿಸಿ ಭಾಸನ ಏಕಾಂಕ ನಾಟಕಗಳನ್ನು ಕನ್ನಡಿಸಿದ್ದಾರೆ.

ತಮ್ಮದೇ ಆದ ಭಾಷಾ ಶೈಲಿಯನ್ನು ರೂಪಿಸಿಕೊಂಡು ಸತ್ವಪೂರ್ಣ ಐತಿಹಾಸಿಕ ನಾಟಕಗಳನ್ನು ಬರೆದವರು 'ಸಂಸ'. ಇದೇ ಜಾಡಿನ ಕೃತಿಗಳನ್ನು ಸಮೇತನಹಳ್ಳಿ ರಾಮರಾಯರೂ ನೀಡಿದ್ದಾರೆ.

ನವ್ಯಪಂಥದವರಲ್ಲಿ ಲಂಕೇಶ, ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ, ಚಂದ್ರಕಾಂತ ಕುಸನೂರ ಮುಂತಾದವರು ಪರಿಣಾಮಕಾರಿಯಾದ ನಾಟಕಗಳನ್ನು ರಚಿಸಿದ್ದಾರೆ. ಗಿರೀಶ್ ಕಾರ್ನಾಡರು ನಾಟಕರಚನೆಯಲ್ಲಿ ಯಶಸ್ವಿ ಪ್ರಯೋಗಗಳನ್ನು ನಡೆಸಿದ್ದಾರೆ.

**ವ್ಯಕ್ತಿಚಿತ್ರ – ಪ್ರಬಂಧ – ಹರಟೆ**

ವ್ಯಕ್ತಿಚಿತ್ರ, ಪ್ರಬಂಧ, ಹರಟೆಗಳು ಕೂಡ ಗಮನೀಯ ಸಂಖ್ಯೆಯಲ್ಲಿ ರಚಿತವಾಗಿವೆ. ಸಿದ್ಧವನಹಳ್ಳಿ ಕೃಷ್ಣಶರ್ಮ, ಅ ನ ಕೃ, ದ. ಬಾ. ಕುಲಕರ್ಣಿ, ಕಾರಂತ, ವಿ. ಸೀ., ಗೊರೂರು ರಾಮಸ್ವಾಮಿ ಅಯ್ಯಂಗಾರ್, ರಾವ್‌ಬಹದ್ದೂರ್, ಎಚ್ಚೆಸ್ಕೆ, ಮುಂತಾದವರು ಬರೆದಿರುವ ವ್ಯಕ್ತಿಚಿತ್ರಗಳು ಪ್ರಸಿದ್ಧವಾದುವು.

ಪ್ರಬಂಧ ಕ್ಷೇತ್ರದಲ್ಲಿಯೂ ವೈವಿಧ್ಯಪೂರ್ಣ ಬೆಳೆ ಬಂದಿದೆ. ಎ.ಎನ್. ಮೂರ್ತಿರಾವ್, ಪು.ತಿ.ನ., ತೀ.ನಂ.ಶ್ರೀ., ವಿ.ಸೀ., ಹಿರೇ ಮಲ್ಲೂರು ಈಶ್ವರನ್, ದೇ.ಜ.ಗೌ., ಹಾ. ಮಾ. ನಾಯಕ, ರಾ.ಕು., ಎಸ್. ಪ್ರಹ್ಲಾದ ರಾವ್, ಎಂ. ವಿ. ಸೀತಾರಾಮಯ್ಯ, ವಿ. ಕೃ. ಗೋಕಾಕ ಮುಂತಾದವರು ಖ್ಯಾತ ಪ್ರಬಂಧಕಾರರು.

ವಿಚಾರದ ಒಸ್ಸೆಯುಳ್ಳ ಹಾಗೂ ಕೇವಲ ಮನೋರಂಜನೆಯನ್ನೇ ಮುಖ್ಯ ದೃಷ್ಟಿಯಾಗುಳ್ಳ ಹರಟೆಗಳು ಕೂಡ ಕನ್ನಡದಲ್ಲಿ ಬಂದಿವೆ. ಕಾರಂತ ಮತ್ತು ಶ್ರೀರಂಗ ಮೊದಲನೆಯ ವರ್ಗದ ಕೃತಿ ರಚನೆಯಲ್ಲಿ ಖ್ಯಾತರು. ಇವರ ಹರಟೆಗಳಲ್ಲಿ ವಿಡಂಬನೆಯೂ ಸೇರಿರುತ್ತದೆ.

ಬೀಚಿ, ನಾಡಿಗೇರ ಕೃಷ್ಣರಾಯ, ಲಾಂಗೂಲಾಚಾರ್ಯ (ಪಾ. ವೆಂ.) ಕಸ್ತೂರಿ, ದಾಶರಥಿ ದೀಕ್ಷಿತ, ಟಿ. ಸುನಂದಮ್ಮ ಮುಂತಾದವರ ಹರಟೆಗಳಂ ಹಾಸ್ಯ ಪ್ರಧಾನವಾದುವು. ರಾ.ಶಿ., ರಾಜರತ್ನಂ ಅವರ ಹರಟೆಗಳಲ್ಲಿ ವ್ಯಾಪಕವಾದ ಹಾಸ್ಯ ದೃಷ್ಟಿ, ಮೊನೆ ಇದೆ.

**ಜೀವನ ಚರಿತ್ರೆ**

ಎಂ. ಎಸ್. ಪುಟ್ಟಣ್ಣ, ಎಂ. ವೆಂಕಟಕೃಷ್ಣಯ್ಯ ಇವರಿಂದ ಆರಂಭವಾದ ಜೀವನ ಚರಿತ್ರೆ ರಚನೆ ಕೂಡ ವಿಶಾಲವಾಗಿ ಬೆಳೆದಿದೆ. ವಿಜ್ಞಾನಿಗಳು, ಸಾಧುಸಂತರು, ಸಾಹಿತಿಗಳು, ಕಲಾವಿದರು, ಪ್ರಸಿದ್ಧ ಪುರುಷರು, ರಾಜಕಾರಣಿಗಳು ಮುಂತಾದವರನ್ನು ಕುರಿತು ಹಲವಾರು ಜೀವನ ಚರಿತ್ರೆಗಳು ಕನ್ನಡದಲ್ಲಿ ಬಂದಿವೆ. ಚ. ವಾಸುದೇವಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಿ.ವಿ.ಜಿ., ಸಿ.ಕೆ. ವೆಂಕಟರಾಮಯ್ಯ, ರಂಗನಾಥ ದಿವಾಕರ, ಕುವೆಂಪು, ರಾಜರತ್ನಂ, ಅ ನ ಕೃ, ದೇ ಜ ಗೌ, ತ ರಾ ಸು, ಕೋ. ಚನ್ನಬಸಪ್ಪ, ಪ್ರಭುಶಂಕರ, ಹಾ.ಮಾ. ನಾಯಕ ಮುಂತಾದವರು ಈ ಪ್ರಕಾರದಲ್ಲಿ ಕೃಷಿ ನಡೆಸಿರುವ ಪ್ರಮುಖರು.

**ಪ್ರವಾಸ ಸಾಹಿತ್ಯ**

ಪ್ರವಾಸಕಥನ ಕನ್ನಡದಲ್ಲಿ ವೇಗವಾಗಿ ಬೆಳೆಯುತ್ತಿರುವ ಸಾಹಿತ್ಯ ಪ್ರಕಾರ. ಆದರೆ ಇದು ಕನ್ನಡದಲ್ಲಿ ಆರಂಭವಾದದ್ದು ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ—'ಇಗ್ಗಪ್ಪಹೆಗ್ಗಡೆ ವಿವಾಹ' ವನ್ನು ಬರೆದ ಸೂರಿ ವೆಂಕಟರಮಣ ಶಾಸ್ತ್ರೀ ಅವರು 'ದಕ್ಷಿಣ ಭಾರತ ಯಾತ್ರೆ' ಯನ್ನು ಬರೆದಾಗ. ಆಮೇಲೆ ಮೂರು ಮೂರೂವರೆ ದಶಕಗಳ ವರೆಗೆ, ಈ ಸಾಹಿತ್ಯ ಪ್ರಕಾರದಲ್ಲಿ ಕೆಲಸ ನಡೆಯಲೇ ಇಲ್ಲವೆನ್ನಬೇಕು.

ವಿ. ಸೀ., ಗೋಕಾಕ, ಕಾರಂತ, ಕೃಷ್ಣನಾರಾಯಣ ಗೋಸಾವಿ, ಮುಗಳಿ, ಶ್ರೀರಂಗ, ಕೃಷ್ಣಾನಂದ ಕಾಮತ್, ಬಸವರಾಜ ಕಟ್ಟೀಮನಿ, ನವರತ್ನರಾಮ್, ಎನ್. ಎಸ್. ಗದಗಕರ್, ಬಿ. ಜಿ. ಎಲ್. ಸ್ವಾಮಿ, ಎಂ. ವೀರಪ್ಪ, ಪ್ರಭುಪ್ರಸಾದ್, ಜಿ. ವೆಂಕಟಯ್ಯ ಮುಂತಾದವರು ಈ ಕ್ಷೇತ್ರಕ್ಕೆ ಗಮನಾರ್ಹವಾದ ಕೊಡುಗೆಗಳನ್ನು ಕೊಟ್ಟಿದ್ದಾರೆ.

**ಧಾರ್ಮಿಕ ಸಾಹಿತ್ಯ**

ಕನ್ನಡ ಸಾಹಿತ್ಯದ ಆದಿಕಾಲದಿಂದಲೂ ಧರ್ಮ ಅದರ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು. ಆ ಕಾಲಕ್ಕೂ ಅನಂತರವೂ ಪುರಾಣಗಳು ಇಂಥ ಸಾಹಿತ್ಯಕ್ಕೆ ಮೂಲ ಆಕರಗಳಾಗಿದ್ದುವು.

ಇತ್ತೀಚಿನ ಕಾಲದಲ್ಲಿ 'ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲೆ' ಯಲ್ಲಿ ಅನೇಕ ಧಾರ್ಮಿಕ ಗ್ರಂಥಗಳ ಕನ್ನಡ ಅನುವಾದಗಳು ಪ್ರಕಟವಾಗಿವೆ. ಸಚ್ಚಿದಾನಂದೇಂದ್ರ ಸರಸ್ವತಿ (ಪೂರ್ವಾಶ್ರಮದ ಹೆಸರು : ಯಳ್ಳಂಬೆಳಸೆ


ಬೋಳಾರ ಬಾಬುರಾಯ


ಬಿ ಪುಟ್ಟಸ್ವಾಮಯ್ಯ


ಗುಲವಾಡಿ ವೆಂಕಟರಾವ್


ಪಂಡಿತ ತಾರಾನಾಥ


ಗೊರೂರು ರಾಮಸ್ವಾಮಿ ಅಯ್ಯಂಗಾರ್


ಎಂ ಎನ್ ಕಾಮತ್


ವೀರಕೇಸರಿ ಸೀತಾರಾಮಶಾಸ್ತ್ರೀ


ಆನಂದ


ಚದುರಂಗ

ಸುಬ್ಬರಾಯ ಶರ್ಮ), ದೇವುಡು, ರಾಮಕೃಷ್ಣಾಶ್ರಮದ ಯತಿಗಳು, ಎಸ್. ಎಸ್. ವಾಸುದೇವಾಚಾರ್ಯ, ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ, ಬಂಗಳೂರು ಸೂರ್ಯನಾರಾಯಣ, ಎಸ್. ಕೆ. ರಾಮಚಂದ್ರರಾವ್, ಆದ್ಯ ರಂಗಾಚಾರ್ಯ (ಶ್ರೀರಂಗ), ಜಿ. ರುದ್ರಪ್ಪ ಮುಂತಾದವರು ವೈದಿಕ ಧರ್ಮ ಮತ್ತು ಸಿದ್ಧಾಂತಗಳನ್ನು ಕುರಿತು ಬರೆದಿದ್ದಾರೆ.

ವೀರಶೈವ ಸಾಹಿತ್ಯ ಸಿದ್ಧಾಂತವನ್ನು ಕುರಿತು ಫ. ಗು. ಹಳಕಟ್ಟಿ, ಎಂ. ಆರ್. ಶ್ರೀನಿವಾಸಮೂರ್ತಿ, ಹರ್ಡೇಕರ ಮಂಜಪ್ಪ, ಜ. ಚ. ನಿ., ಬಿ. ಶಿವಮೂರ್ತಿ ಶಾಸ್ತ್ರೀ ಮುಂತಾದವರು ಗ್ರಂಥರಚನೆ ಮಾಡಿದ್ದಾರೆ.

ದಾಸ ಸಾಹಿತ್ಯವನ್ನು ಕುರಿತು ಆರ್. ಎಸ್. ಪಂಚಮುಖಿ, ಕೆ. ಎಂ. ಕೃಷ್ಣರಾವ್, ಜಿ. ವರದರಾಜರಾವ್. ಜೈನಧರ್ಮವನ್ನು ಕುರಿತು ಶಾಂತರಾಜ ಶಾಸ್ತ್ರೀ, ಮಿರ್ಜಿ ಅಣ್ಣಾರಾಯ, ಕ್ರೈಸ್ತಧರ್ಮವನ್ನು ಕುರಿತು ಚೆನ್ನಪ್ಪ ಉತ್ತಂಗಿ. ಬೌದ್ಧ ಧರ್ಮವನ್ನು ಕುರಿತು ರಾಜರತ್ನಂ ಗ್ರಂಥಗಳನ್ನು ಬರೆದಿದ್ದಾರೆ.

**ಮಕ್ಕಳ ಸಾಹಿತ್ಯ**

ಮಕ್ಕಳಿಗಾಗಿ ಸಾಹಿತ್ಯವನ್ನು ನಿರ್ಮಿಸಲು ದೊಡ್ಡ ಪ್ರಮಾಣದಲ್ಲಿ ಪ್ರಯತ್ನ ನಡೆಸಿದವರು ಸುಬೋಧ ರಾಮರಾಯ, ಪಂಜೆ ಮಂಗೇಶ ರಾಯ, ಎಂ. ಎನ್. ಕಾಮತ್, ಕಾರಂತ, ದ. ಕೃ. ಭಾರದ್ವಾಜ, ದೇವುಡು, ರಾಜರತ್ನಂ, ಕಸ್ತೂರಿ, ಎಂ. ಆರ್. ಶ್ರೀನಿವಾಸಮೂರ್ತಿ, ಹೊಯ್ಸಳ, ಬಿ. ಎಸ್. ಪಾಂಡುರಂಗರಾವ್, ಬಿ. ಶಂಕರಭಟ್ಟ, 'ಸಿಸು' ಸಂಗಮೇಶ, ಟಿ. ಎಂ. ಆರ್. ಸ್ವಾಮಿ, ಚಿ. ಸದಾಶಿವಯ್ಯ, ಎನ್. ಪ್ರಹ್ಲಾದರಾವ್, ಜಿ. ಎನ್. ಕಮಲಾಪುರ, ಎಂ. ಎಸ್. ರಾಮರಾವ್ ಮುಂತಾದವರು ಮಕ್ಕಳ ಸಾಹಿತ್ಯವನ್ನು ನಿರ್ಮಿಸಿದ್ದಾರೆ.

**ವಿಜ್ಞಾನ ಸಾಹಿತ್ಯ**

ಕನ್ನಡ ಸಾಹಿತ್ಯದಲ್ಲಿ ಇನ್ನೂ ವಿಪುಲವಾಗಿ ಬೆಳೆಯಬೇಕಾಗಿರುವ ಸಾಹಿತ್ಯ ಪ್ರಕಾರ ವಿಜ್ಞಾನಕ್ಕೆ ಸಂಬಂಧಿಸಿದ್ದು. ಆರ್. ನರಸಿಂಹಾಚಾರ್ಯ, ಎಂ. ಎಸ್. ಪುಟ್ಟಣ್ಣ ಮುಂತಾದವರು ಕಳೆದ ಶತಮಾನದ ಕೊನೆಯ ಭಾಗದಲ್ಲಿ ವಿದ್ಯಾರ್ಥಿಗಳಿಗಾಗಿ ವಿಜ್ಞಾನ ವಿಷಯಗಳನ್ನುಳ್ಳ ಕೆಲವು ಪುಸ್ತಕಗಳನ್ನು ಬರೆದರು. ಕನ್ನಡದಲ್ಲಿ ವಿಜ್ಞಾನ ಸಾಹಿತ್ಯವನ್ನು ಬೆಳೆಸುವ ಉದ್ದೇಶದಿಂದ 'ವಿಜ್ಞಾನ'ವೆಂಬ ಮಾಸಪತ್ರಿಕೆಯನ್ನು ಕೆಲಕಾಲ ನಡೆಸಿದವರು ಬೆಳ್ಳಾವೆ ವೆಂಕಟನಾರಣಪ್ಪ. ನಂಗಪುರಂ ವೆಂಕಟೇಶ ಅಯ್ಯಂಗಾರ್ಯರ 'ಜ್ಯೋತಿರ್ವಿನೋದಿನಿ' 1931ರಲ್ಲಿ ಪ್ರಕಟವಾಯಿತು. ಎನ್. ಎಸ್. ನರಹರಯ್ಯ ಆಗಿನ ಇನ್ನೊಬ್ಬರು ಆರಂಭದ ವಿಜ್ಞಾನ ಲೇಖಕರು. ವಿಜ್ಞಾನ ತಿಳಿವಳಿಕೆಯ ಪ್ರಸಾರಕ್ಕಾಗಿ ಶಿವರಾಮ ಕಾರಂತರು ಅಪಾರವಾಗಿ ಶ್ರಮಿಸಿದ್ದಾರೆ. ಈ ದೆಸೆಯಲ್ಲಿ ಅವರ 'ಬಾಲ ಪ್ರಪಂಚ', 'ವಿಜ್ಞಾನ ಪ್ರಪಂಚ' ಕನ್ನಡ ವಿಜ್ಞಾನ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳು. ಆರ್. ಎಲ್. ನರಸಿಂಹಯ್ಯ, ಕೆ. ಎಸ್. ಸವಣೂರ, ಯು. ಎಲ್. ಆಚಾರ್, ಬಿ. ವಿ. ಸುಬ್ಬರಾಯಪ್ಪ, ಡಿ. ಎಸ್. ಶಿವಪ್ಪ ಅನುಪಮಾ ನಿರಂಜನ, ಜಿ. ಟಿ. ನಾರಾಯಣ ರಾವ್, ರಾಜಶೇಖರ ಭೂಸನೂರಮಠ, ನಾಗಭೂಷಣ ರಾವ್ ಸಿಂಧೆ, ಜೆ. ಆರ್. ಲಕ್ಷ್ಮಣರಾವ್, ಜಿ. ಎಸ್. ಪರಮಶಿವಯ್ಯ, ಎಚ್. ವಿ. ಶ್ರೀರಂಗರಾಜು, ಈ ರಂಗದ ಇತರ ಪ್ರಮುಖ ಲೇಖಕರು. ಕನ್ನಡದಲ್ಲಿ ವಿಜ್ಞಾನ ಸಾಹಿತ್ಯವನ್ನು ಬೆಳೆಸಲು ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳು ಪ್ರಬಲವಾದ ಪ್ರಯತ್ನವನ್ನು ನಡೆಸಿವೆ.

**ಸಾಹಿತ್ಯ ವಿಮರ್ಶೆ—ನವಸಂಶೋಧನೆ**

ಸಾಹಿತ್ಯ ವಿಮರ್ಶೆಯೂ ಕನ್ನಡದಲ್ಲಿ ಬೆಳೆದಿದೆ. ಕವಿ-ಕಾವ್ಯ ಪ್ರಶಸ್ತಿ ಗ್ರಂಥಗಳು ಪ್ರಕಟವಾಗಿವೆ. ನಮ್ಮ ಸಾಹಿತ್ಯರಾಶಿಯ ಜೊಳ್ಳನ್ನು ತೂರಿ ಕಾಳನ್ನು ವಿಂಗಡಿಸುವ ಪ್ರಯತ್ನ ನಡೆದಿದೆ, ಜೊತೆಗೆ ಸಾಹಿತ್ಯದ ಶಕ್ತಿ ಸೌಂದರ್ಯಗಳನ್ನು ಅರಿಯಲು ಸಹಾಯಕವಾದ ಗ್ರಂಥಗಳೂ ಬಂದಿವೆ. ಬಿ. ಎಂ. ಶ್ರೀ, ಡಿವಿಜಿ, ಎ. ಆರ್. ಕೃಷ್ಣಶಾಸ್ತ್ರೀ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ವಿ. ಎನ್. ಮೂರ್ತಿರಾವ್, ಎಸ್. ವಿ. ರಂಗಣ್ಣ, ಕುವೆಂಪು, ಬೇಂದ್ರೆ, ಗೋಕಾಕ, ಶ್ರೀರಂಗ, ತೀನಂಶ್ರೀ, ಡಿ. ಎಲ್. ಎನ್., ಜಿ. ಎಸ್. ಶಿವರುದ್ರಪ್ಪ, ಹಾ. ಮಾ. ನಾಯಕ, ಕೀರ್ತಿನಾಥ ಕುರ್ತಕೋಟಿ, ಡಾ|| ಕೆ. ಕೃಷ್ಣಮೂರ್ತಿ, ಎಲ್. ಎಸ್. ಶೇಷಗಿರಿರಾವ್, ಎಂ. ಜಿ. ಕೃಷ್ಣಮೂರ್ತಿ, ಜಿ. ಎಸ್. ಆಮೂರ, ಪ್ರಭುಶಂಕರ, ಎಸ್. ಅನಂತನಾರಾಯಣ, ತಿಪ್ಪೇರುದ್ರಸ್ವಾಮಿ, ಮತ್ತಿತರ ಅನೇಕರು ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆ.

ಸಂಶೋಧನೆಯ ರಂಗದಲ್ಲೂ ವಿಸ್ತಾರವಾಗಿ ಕೆಲಸ ನಡೆದಿದೆ. ಕನ್ನಡನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳನ್ನು ಕುರಿತು ಹಲವಾರು ವಿದ್ವಾಂಸರು ಸಂಶೋಧನೆ ನಡೆಸಿದ್ದಾರೆ. ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿದ್ದಾರೆ ; ಅವುಗಳ ವಿಮರ್ಶೆಯನ್ನೂ ನಡೆಸಿದ್ದಾರೆ.

ಆರ್. ನರಸಿಂಹಾಚಾರ್ಯ, ಎ. ವೆಂಕಟಸುಬ್ಬಯ್ಯ, ಟಿ. ಎಸ್. ವೆಂಕಣ್ಣಯ್ಯ, ಗೋವಿಂದಪೈ, ಡಿ. ಎಲ್. ಎನ್., ತಿ. ನಂ. ಶ್ರೀ, ಹಳಕಟ್ಟಿ, ಶಂಬಾಜೋಷಿ, ಬಿ. ಎ. ಸಾಲತೊರ್, ಶಿವರಾಮ ಕಾರಂತ, ನಂದೀಮಠ, ಎಸ್. ಎಸ್. ಮಾಳವಾಡ, ಪಾಂಡುರಂಗರಾವ್ ದೇಸಾಯಿ, ಎಸ್. ಎಸ್. ಭೂಸನೂರಮಠ, ಜಿ. ವೆಂಕಟಸುಬ್ಬಯ್ಯ, ಸೇಡಿಯಾಪು ಕೃಷ್ಣಭಟ್ಟ, ಬಿ. ಆರ್, ಗೋಪಾಲ್, ಎಂ. ಚಿದಾನಂದಮೂರ್ತಿ, ಹಂಪನಾಗರಾಜಯ್ಯ ಮುಂತಾದವರು ಸಂಶೋಧನೆಯ ಕ್ಷೇತ್ರದಲ್ಲಿ ನಡೆಸಿರುವ ಕೃಷಿ ಗಣನೀಯವಾದದ್ದು.

**ಜನಪದ ಸಾಹಿತ್ಯ**

ಜನಪದ ಸಾಹಿತ್ಯ ಕನ್ನಡದಲ್ಲಿ ವಿಪುಲವಾಗಿದೆ. ಜನಪದ ಸಾಹಿತ್ಯ ಎಂದರೆ –ಪರಂಪರೆಯಾಗಿ ಜನಸಾಮಾನ್ಯರಲ್ಲಿ ಬೆಳೆದು ಬಂದಿರುವ ಹಾಡು, ಪದ, ಕಥೆ, ಗಾದೆ ಮುಂತಾದುವು. ಇವುಗಳನ್ನು ಮೊದಲು ಕಟ್ಟಿದವರು, ಹಾಡಿದವರು ಯಾರು ಎಂಬುದು ತಿಳಿಯದು. ದೀರ್ಘಕಾಲದಿಂದ ನಮ್ಮಲ್ಲಿ ಪ್ರಚಾರದಲ್ಲಿದ್ದರೂ ಬಾಯಿ ಮಾತಿನಲ್ಲೇ ಉಳಿದಿದ್ದುವು. ಇವನ್ನು ಸಂಗ್ರಹಿಸಿ ಅಚ್ಚು ಮಾಡಿಸುವ ಮತ್ತು ಈ ವಿಧಾನದಿಂದ ಅವು ಮರೆಯಾಗಿ ಹೋಗದಂತೆ ಉಳಿಸುವ ಪ್ರಯತ್ನ ಈ ಶತಮಾನದ 2–3ನೆಯ ದಶಕಗಳಿಂದ ನಡೆದಿದೆ. ಅದಕ್ಕೆ ಹಿಂದೆ ಕೂಡ ಕ್ರೈಸ್ತ ಪಾದ್ರಿಗಳು ಈ ಕೆಲಸವನ್ನು ಸ್ವಲ್ಪಮಟ್ಟಿಗೆ ನಡೆಸಿದ್ದರು. 1919ರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಎಲ್ಲಮ್ಮನ ಹಾಡು, ಜೋಗಿಯ ಹಾಡು, ಕೋಲಾಟದ ಪದಗಳು ಮುಂತಾದುವನ್ನು ಸಂಗ್ರಹಿಸಿ 'ಕನ್ನಡ ಲಾವಣಿ ಸಾಹಿತ್ಯ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಇದರಿಂದಾಗಿ ವಿದ್ಯಾವಂತರಲ್ಲಿ ಜನಪದ ಸಾಹಿತ್ಯದ ಬಗೆಗೆ ಆಸಕ್ತಿ ಕೆರಳಿತು. ಬಿ. ಎಂ. ಶ್ರೀ., ಮಾಸ್ತಿ, ಬೇಂದ್ರೆ ಮುಂತಾದವರ ಪ್ರೇರಣೆಯಿಂದ ಜನಪದ ಸಾಹಿತ್ಯವನ್ನು ಸಂಗ್ರಹಿಸುವ, ಪ್ರಕಟಿಸುವ ಹಾಗೂ ಅವುಗಳ ಅಧ್ಯಯನ, ವಿಮರ್ಶೆಗಳ ಕಾರ್ಯ ಕೂಡ ಆರಂಭವಾಯಿತು. ಪತ್ರಿಕೆಗಳೂ ಈ ಕಾರ್ಯದಲ್ಲಿ ಪಾಲ್ಗೊಂಡುವು. ಗೆಳೆಯರ ಗುಂಪಿನಂಥ ಸಂಸ್ಥೆಗಳೂ ಪಿ. ಧೂಲಾ, ತೊರ್ಕೆ, ಬಿ. ಎಸ್. ರಂಗಸ್ವಾಮಿ, ತಾಪಸೆ ರೇವಪ್ಪ, ಸಿಂಪಿ ಲಿಂಗಣ್ಣ, ಗೊರೂರು ರಾಮಸ್ವಾಮಿ


ತ ರಾ ಸು


ಬಸವರಾಜ ಕಟ್ಟೀಮನಿ


ಯು ಆರ್ ಅನಂತಮೂರ್ತಿ


ರಾವ್ ಬಹದ್ದೂರ್


ಎಸ್ ಎಲ್ ಭೈರಪ್ಪ


ಕೆ ಸದಾಶಿವ


ಕೃಷ್ಣಮೂರ್ತಿ ಪುರಾಣಿಕ


ಪಿ ಲಂಕೇಶ


ಸೇಮಂತ



ಕೆ ವಿ ಅಯ್ಯರ್



ಎಚ್ ತಿಪ್ಪೇರುದ್ರಸ್ವಾಮಿ



ವ್ಯಾಸರಾಯ ಬಲ್ಲಾಳ



ವಿ ಎಂ ಇನಾಮದಾರ್



ವ ಬಾ ಕುಲಕರ್ಣಿ



ಭಾರತೀಸುತ



ಮಿರ್ಜಿ ಅಣ್ಣಾರಾಯ



ಕೊರಟಿ ಶ್ರೀನಿವಾಸರಾವ್



ಬೀಚಿ



ಪರ್ವತವಾಣಿ



ಎ ಎನ್ ಮೂರ್ತಿರಾವ್



ಎಸ್ ಎನ್ ಶಿವಸ್ವಾಮಿ



ಕೆ ವಿ ಸುಬ್ಬಣ್ಣ



ಗೌರೀಶ ಕಾಯ್ಕಿಣಿ



ಎಚ್ ಕೆ ರಂಗನಾಥ್



ಜಡಭರತ



ಎನ್ಕೆ ಕುಲಕರ್ಣಿ



ಸಮೇತನಹಳ್ಳಿ ರಾಮರಾಯ

ಅಯ್ಯಂಗಾರ್, ಎಲ್. ಗುಂಡಪ್ಪ ಮತ್ತು ಅವರ ಸೋದರ ಮತಿಘಟ್ಟ ಕೃಷ್ಣಮೂರ್ತಿ, ಬಿ. ಎಸ್. ಗದ್ದಗಿಮಠ, ಕೆ. ಎಸ್. ಕರೀಂಖಾನ್, ಕ.ರಾ.ಕೃ., ಕೆ. ಆರ್. ಲಿಂಗಪ್ಪ, ಕೆ. ಜಿ. ಸುಬ್ಬಣ್ಣ, ಎಚ್. ಎಲ್. ನಾಗೇಗೌಡ. ಬೆಟಗೇರಿ ಕೃಷ್ಣಶರ್ಮ, ಜೀ. ಶಂ. ಪರಮಶಿವಯ್ಯ, ಎಲ್. ಆರ್. ಹೆಗ್ಗಡೆ ಮುಂತಾದವರು ಈ ಕ್ಷೇತ್ರದಲ್ಲಿ ಆಸಕ್ತಿ ವಹಿಸಿ ಕೆಲಸಮಾಡಿದ್ದಾರೆ; ಜನಪದ ಸಾಹಿತ್ಯವನ್ನು ಸಂಗ್ರಹಿಸಿದ್ದಾರೆ, ಸಂಪಾದಿಸಿದ್ದಾರೆ.

**ನಿಘಂಟು ರಚನೆ**

ಸುಮಾರು ಸಾವಿರ ವರ್ಷಗಳ ಹಿಂದೆಯೇ ಕನ್ನಡದಲ್ಲಿ ನಿಘಂಟು ರಚನೆ ಆರಂಭವಾಯಿತು. ರನ್ನ ಕವಿ ರಚಿಸಿದ ಈ ನಿಘಂಟಿನ ಹೆಸರು 'ರನ್ನಕಂದ'. ಇದರ ಕೆಲವು ಭಾಗಗಳು ಮಾತ್ರ ದೊರೆತಿವೆ. ಅಲ್ಲಿಂದಾಚೆಗೆ ಕನ್ನಡದಲ್ಲಿ ಆಗಿಂದಾಗ್ಗೆ ಹಲವಾರು ಹಂತಗಳಲ್ಲಿ ಅನೇಕ ನಿಘಂಟುಗಳು ರಚಿತವಾದುವು. ಇವುಗಳಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದುವೂ ಉಂಟು. ವೈದ್ಯಕೆ ಮುಂತಾದ ವಿಚಾರಗಳಿಗೆ ಸಂಬಂಧಿಸಿದ ನಿಘಂಟುಗಳೂ ಉಂಟು. ಈ ನಿಘಂಟುಗಳಲ್ಲಿ ಕೆಲವು ಸಂಸ್ಕೃತ ನಿಘಂಟುಗಳ ಭಾಷಾಂತರಗಳು.

ಆಧುನಿಕ ಅರ್ಥದಲ್ಲಿ ಕನ್ನಡ ಭಾಷಾ ನಿಘಂಟು ರಚಿತವಾದದ್ದು 1832 ರಲ್ಲಿ; ಕ್ರೈಸ್ತಪಾದ್ರಿ ರೆವರೆಂಡ್ ರೀವ್ ಇದನ್ನು ಸಿದ್ಧಗೊಳಿಸಿದರು. ಇದರಲ್ಲಿ ಅಕಾರಾದಿ ಕ್ರಮದಲ್ಲಿ ಕನ್ನಡ, ಸಂಸ್ಕೃತ ಪದಗಳನ್ನು ಪಿಂಗಡಿಸಿ ಅವಕ್ಕೆ ಇಂಗ್ಲಿಷ್ ಅರ್ಥವನ್ನು ಕೊಟ್ಟಿದೆ. ಡ್ಯಾನಿಯಲ್ ಸ್ಯಾಂಡರ್ಸ್ 1858ರಲ್ಲಿ ರೀವ್ ಅವರ ನಿಘಂಟಿನ ಲೋಪದೋಷಗಳನ್ನು ಸ್ವಲ್ಪಮಟ್ಟಿಗೆ ನಿವಾರಿಸಿ ಪರಿಷ್ಕೃತ ಆವೃತ್ತಿಯನ್ನು ಹೊರತಂದರು.

ರೆವರೆಂಡ್ ಕಿಟ್ಟೆಲ್ ಅವರ ಸುಪ್ರಸಿದ್ಧ ಕನ್ನಡ–ಇಂಗ್ಲಿಷ್ ನಿಘಂಟು ಪ್ರಕಟವಾದದ್ದು 1893ರಲ್ಲಿ. ಎಂ. ಮರಿಯಪ್ಪ ಭಟ್ಟರು ಪರಿಷ್ಕರಿಸಿ ವಿಸ್ತರಿಸಿದ ಈ ನಿಘಂಟಿನ ಆವೃತ್ತಿಯನ್ನು ಮದರಾಸು ವಿಶ್ವವಿದ್ಯಾಲಯ 1968–71ರ ಅವಧಿಯಲ್ಲಿ ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿತು.

ಮೈಸೂರು ವಿಶ್ವವಿದ್ಯಾನಿಲಯದವರು 1936–46ರ ಅವಧಿಯಲ್ಲಿ ಪ್ರಕಟಿಸಿದ ಇಂಗ್ಲಿಷ್–ಕನ್ನಡ ನಿಘಂಟು ಒಂದು ಬೃಹತ್ ಕೋಶ. ಇದು 1965ರಲ್ಲಿ ಪುನರ್ಮುದ್ರಿತವಾಯಿತು. ಇದರ ಪರಿಷ್ಕೃತ ಆವೃತ್ತಿಯ ಪ್ರಕಟಣೆಯನ್ನು ಮೈಸೂರು ವಿಶ್ವವಿದ್ಯಾನಿಲಯ ಕೈಗೊಂಡಿದೆ. ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ ಕನ್ನಡ ನಿಘಂಟು ಭಾಷಾಶಾಸ್ತ್ರ ತತ್ತ್ವಗಳಿಗನುಸಾರವಾಗಿ ಚಾರಿತ್ರಿಕ ವಿವರಣೆಯಿಂದ ಕೂಡಿದೆ. ಇನ್ನೊಂದು ವಿಶಿಷ್ಟ ಸ್ವರೂಪದ ನಿಘಂಟು.

ಕಿಟ್ಟೆಲ್‌ರ ನಿಘಂಟು ರಚಿತವಾದ ಬಳಿಕ ಹಲವಾರು ಕನ್ನಡ ನಿಘಂಟುಗಳು ಪ್ರಕಟವಾಗಿವೆ.

ಕನ್ನಡ ನಿಘಂಟಿನ ರಂಗದಲ್ಲಿ ಅನೇಕ ಮಂದಿ ವಿದ್ವಾಂಸರು ದುಡಿದಿದ್ದಾರೆ. ಜೆಟ್ಟಾವೆ ವೆಂಕಟನಾರಣಪ್ಪ, ಎಂ. ಆರ್. ಶ್ರೀನಿವಾಸಮೂರ್ತಿ, ಎ. ಆರ್. ಕೃಷ್ಣಶಾಸ್ತ್ರೀ, ತೀ.ನಂ.ಶ್ರೀ., ಡಿ. ಎಲ್. ಎನ್., ಎಸ್. ವಿ. ರಂಗಣ್ಣ, ದ.ಕೃ. ಭಾರದ್ವಾಜ, ಕ. ವೆಂ. ರಾಘವಾಚಾರ್, ಎಲ್. ಗುಂಡಪ್ಪ, ಎಂ. ವಿ. ಸೀತಾರಾಮಯ್ಯ, ಶಿವರಾಮ ಕಾರಂತ, ಪಂಡಿತ ಕವಲಿ, ಸ.ಸ. ಮಾಳವಾಡ, ಮಟ್ಟಿಮನಿ ಶಂಕರನಾರಾಯಣರಾವ್, ಆರ್. ಎಸ್. ನಾವೂರ್‌ಕರ್, ಸೇಡಿಯಾಪು ಕೃಷ್ಣಭಟ್ಟ, ಎಂ. ರಾಮರಾವ್, ಜೆ. ಆರ್. ಲಕ್ಷ್ಮಣರಾವ್, ಎನ್. ಬಸವಾರಾಧ್ಯ ಮುಂತಾದವರು ಪ್ರಮುಖರು.

**ಭಾಷಾಂತರ**

ಭಾಷಾಂತರ ಕ್ಷೇತ್ರದಲ್ಲಿ ಉತ್ತಮ ಸೇವೆ ಸಲ್ಲಿಸಿರುವವರು ಹಲವರು. ಡಿ. ವಿ. ಜಿ., ಎ. ಎನ್. ಮೂರ್ತಿರಾವ್, ಪು. ತಿ. ನ., ಶ್ರೀರಂಗ., ಕ. ವೆಂ. ರಾಘವಾಚಾರ್, ಎಸ್. ವಿ. ಪರಮೇಶ್ವರ ಭಟ್ಟ, ದೇಜಗೌ, ಕು.ಶಿ. ಹರಿದಾಸಭಟ್ಟ, ನಾರಾಯಣ ಸಂಗಮ, ನರೇಗಲ್ಲ ಪ್ರಲ್ಹಾದರಾವ್, ಸ.ಪ. ಗಾಂವಕರ, ಸರೋಜಿನಿ ಮಹಿಷಿ, ಕೆ. ವಿ. ಸುಬ್ಬಣ್ಣ, ಅಮ್ಮೆಂಬಳ ಶಂಕರನಾರಾಯಣ, ಸಿ.ಪಿ.ಕೆ., ಎಚ್. ವಿ. ಸಾವಿತ್ರಮ್ಮ, ಚಿ. ನ. ಮಂಗಳಾ ಮುಂತಾದವರ ಸಾಧನೆ ಗಣನೀಯವಾದದ್ದು. ಗದ್ಯ ಪದ್ಯ ಮತ್ತಿತರ ಲಲಿತ ಸಾಹಿತ್ಯವೂ ವಿಚಾರ ಸಾಹಿತ್ಯವೂ ಕನ್ನಡಕ್ಕೆ ಅನುವಾದಗೊಂಡಿದೆ.

ಸಂಸ್ಕೃತ, ಪ್ರಾಕೃತ ಭಾಷೆಯ ಸಾಹಿತ್ಯದಿಂದ ಪ್ರೇರೇಪಣೆ ಪಡೆದು ಕನ್ನಡದಲ್ಲಿ ಸಾಹಿತ್ಯರಚನೆ ಮಾಡುವ ಸಂಪ್ರದಾಯ ಮೊದಲಿನಿಂದಲೂ ನಡೆದುಬಂದಿದೆಯಾದರೂ ಮೂಲ ಗ್ರಂಥಗಳಿಂದ ನೇರವಾಗಿ ಭಾಷಾಂತರ ಮಾಡುವ ಅಭ್ಯಾಸ ಬೆಳೆದದ್ದು ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಎನ್ನಬಹುದು. ಬಸವಪ್ಪಶಾಸ್ತ್ರೀ ಇವರು ರಚಿಸಿದ 'ಕರ್ಣಾಟಕ ಶಾಕುಂತಲ', ಕಾಳಿದಾಸನ 'ಶಾಕುಂತಲ' ದ ಕನ್ನಡ ರೂಪ. ಇದು ಕನ್ನಡದ ಮೊದಲ ಹಾಗೂ ಶ್ರೇಷ್ಠ ಭಾಷಾಂತರ ಕೃತಿ.

ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಪ್ರಭಾವ ಬೀರಿದ ಬಳಿಕ, ಆ ಭಾಷೆಯ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸುವ ಕೆಲಸ ನಡೆಯಿತು. ಇಂಥ ಅನುವಾದಗಳಲ್ಲಿ ಕಾವ್ಯ, ಕಾದಂಬರಿ, ಕಥೆ, ನಾಟಕ, ವಿಜ್ಞಾನಗ್ರಂಥ ಮುಂತಾದುವೆಲ್ಲವೂ ಸೇರಿವೆ. ಇಂಗ್ಲಿಷಲ್ಲದೆ ಇತರ ವಿದೇಶೀ ಭಾಷೆಗಳ ಕೃತಿಗಳೂ ಕನ್ನಡಕ್ಕೆ ಅನುವಾದಗೊಳ್ಳುತ್ತಿವೆ. ಆದರೆ ಇದು ಇಂಗ್ಲಿಷಿನ ಮೂಲಕ ನಡೆಯುವ ಭಾಷಾಂತರ. ಪರರಾಷ್ಟ್ರಗಳ ಹಾಗೂ ಭಾರತದ ವಿವಿಧ ಭಾಗಗಳ ಸಾಹಿತ್ಯ, ಸಂಸ್ಕೃತಿ, ವಿಚಾರಧಾರೆಗಳ ಪರಸ್ಪರ ಪರಿಚಯ ಸಾಧನೆಯ ದೃಷ್ಟಿಯಿಂದ ಇಂಥ ಅನುವಾದಗಳಿಗೆ ಮಹತ್ವವಿದೆ. ಆ ಬಗೆಯ ಪ್ರಕಟಣೆಯನ್ನು ಕೆಲವು ಸಂಸ್ಥೆಗಳು ತಮ್ಮ ಕಾರ್ಯಕ್ರಮದ ಪ್ರಧಾನಾಂಶವಾಗಿ ಅಂಗೀಕರಿಸಿವೆ.

ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದ ನಡೆದಿರುವುದಲ್ಲದೆ, ಕನ್ನಡದ ಕೃತಿಗಳು ಇತರ ಭಾಷೆಗಳಿಗೂ ಭಾಷಾಂತರವಾಗಿವೆ. ಕೆಲವಾರು ಉತ್ತಮ ಭಾಷಾಂತರಗಳು ಕನ್ನಡದಲ್ಲಿ ಬಂದಿವೆ. ಈ ಅನುವಾದ ಕಾರ್ಯದಲ್ಲಿ ಕನ್ನಡ ಪ್ರದೇಶದ ವಿಶ್ವವಿದ್ಯಾಲಯಗಳ ಪಾತ್ರ ಹಿರಿದಾಗಿದೆ.

ಕಳೆದ ನಾಲ್ಕು ದಶಕಗಳಿಂದ ಕನ್ನಡ ಸಾಹಿತ್ಯ ಬಹುಮುಖವಾಗಿ ಬೆಳೆದಿದೆ. ಇಂಥ ಪ್ರಮಾಣದ ಬೆಳವಣಿಗೆ ಹಿಂದೆಂದೂ ನಡೆದಿರಲಿಲ್ಲ. ಸಾಕ್ಷರರ ಸಂಖ್ಯೆ ನಮ್ಮಲ್ಲಿ ವೇಗವಾಗಿ ಬೆಳೆಯುತ್ತಿರುವುದೇ ಇದಕ್ಕೆ ಕಾರಣ.

ಮೈಸೂರು, ಕರ್ನಾಟಕ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳು ಕನ್ನಡ ಭಾಷೆ, ಸಾಹಿತ್ಯಗಳನ್ನು ಕುರಿತು ಸಂಶೋಧನೆ ನಡೆಸಿ ಅವನ್ನು ಶ್ರೀಮಂತಗೊಳಿಸುವ ವಿಶೇಷ ಉದ್ದೇಶದಿಂದ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಿವೆ. ಈ ಕೇಂದ್ರಗಳು ಕನ್ನಡ ಗ್ರಂಥಗಳ ಪುರಾತನ ಹಸ್ತಪ್ರತಿಗಳ ಸಂಗ್ರಹಣೆ, ರಕ್ಷಣೆ, ಸಂಪಾದನೆ, ಪ್ರಕಟಣೆಗಳನ್ನು ಕೈಗೊಂಡಿವೆ. ಅಲ್ಲದೆ, ಆಧುನಿಕ ವಿಚಾರಧಾರೆ, ವಿಜ್ಞಾನಗಳಿಗೆ ಸಂಬಂಧಿಸಿದ ಗ್ರಂಥಗಳ ಪ್ರಕಟಣೆಯಲ್ಲೂ ವಿಶೇಷ ಆಸಕ್ತಿವಹಿಸಿವೆ. ಉತ್ತಮ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸುತ್ತಿವೆ.



ಎಂ ಮರಿಯಪ್ಪ ಭಟ್



ಎಲ್ ಗುಂಡಪ್ಪ



ಶಂ ಬಾ ಜೋಶಿ



ಸಿದ್ಧವನಹಳ್ಳಿ ಕೃಷ್ಣಶರ್ಮ



ಕೀರ್ತಿನಾಥ ಕುರ್ತಕೋಟಿ



ಸೇಡಿಯಾಪು ಕೃಷ್ಣಭಟ್ಟ



ಎಚ್ ವಿ ಸಾವಿತ್ರಮ್ಮ



ಶಾಂತಾದೇವಿ ಮಾಳವಾಡ



ಸ ಸ ಮಾಳವಾಡ



ಸುಬೋಧ ರಾಮರಾಯ



ನಿಸಾರ್ ಅಹಮದ್



ಜ ಚ ನಿ



ಪಾಂಡುರಂಗರಾವ್



ಯಶವಂತ ಚಿತ್ತಾಲ



ನಾಡಿಗೇರ ಕೃಷ್ಣರಾಯ



ಬಿ ಶಂಕರಭಟ್ಟ



'ಸಿಸು' ಸಂಗಮೇಶ



ಪಾ ವೆಂಕಟರಮಣಾಚಾರ್ಯ



ಹಾ ಮಾ ನಾಯಕ



ಆರ್ ಸಿ ಹಿರೇಮಠ



ಜಿ ಎಸ್ ಶಿವರುದ್ರಪ್ಪ

ಅನುಕ್ರಮವಾಗಿ ಮೈಸೂರು, ಕರ್ನಾಟಕ, ಬೆಂಗಳೂರು ವಿಶ್ವವಿದ್ಯಾನಿಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳ ನಿರ್ದೇಶಕರಾಗಿರುವ ಹಾ.ಮಾ. ನಾಯಕರು ಖ್ಯಾತ ಲೇಖಕರು, ವಿಮರ್ಶಕರು; ಆರ್. ಸಿ. ಹಿರೇಮಠರು ಸುಪ್ರಸಿದ್ಧ ಸಂಶೋಧಕರು; ಜಿ. ಎಸ್. ಶಿವರುದ್ರಪ್ಪನವರು ಹೆಸರಾಂತ ಕವಿಗಳು. ಈ ಮೂವರು ಪ್ರಾಧ್ಯಾಪಕರ ಹಿರಿತನದಲ್ಲಿ ಆ ಸಂಸ್ಥೆಗಳು ಭಾಷೆ—ಸಾಹಿತ್ಯಗಳ ಕನ್ನಡದ ಯೋಜನಾಬದ್ಧ ಬೆಳೆವಣಿಗೆಯನ್ನು ಸಾಧ್ಯಗೊಳಿಸುತ್ತಿವೆ.

ಈವರೆಗೆ ಕನ್ನಡ ಸಾಹಿತ್ಯ ಕೈಗೂಡಿಸಿಕೊಂಡಿರುವ ಸಾಧನೆ ದೊಡ್ಡದು. ಜಗತ್ತಿನ ಯಾವುದೇ ಸಾಹಿತ್ಯಕ್ಕೆ ಭೂಷಣವಾಗುವಂಥ ಪ್ರಾಚೀನ ಮತ್ತು ಆಧುನಿಕ ಗ್ರಂಥಗಳು ಕನ್ನಡದಲ್ಲಿ ರಚಿತವಾಗಿವೆ.

ನೋಡಿ : ಅಕ್ಕಮಹಾದೇವಿ; ಅಣಕವಾಡು; ಅ.ನ.ಕೃ.; ಆತ್ಮಕಥೆ; ಆಧುನಿಕ ಕಾವ್ಯ; ಆರ್. ತಾತಾ; ಆರ್. ನರಸಿಂಹಾಚಾರ್ಯ; ಆಲೂರ ವೆಂಕಟರಾಯ; ಉಪಾಧ್ಯೆ; ಎಂ. ಆರ್. ಶ್ರೀನಿವಾಸಮೂರ್ತಿ; ಎಂ. ಎ. ರಾಮಾನುಜ ಅಯ್ಯಂಗಾರ್; ಎಂ. ಎಸ್. ಪುಟ್ಟಣ್ಣ; ಎಂ. ವೆಂಕಟಕೃಷ್ಣಯ್ಯ; ಎ. ಆರ್. ಕೃಷ್ಣಶಾಸ್ತ್ರೀ; ಎಚ್. ವಿ. ನಂಜುಂಡಯ್ಯ; ಎನ್. ಎಸ್. ಸುಬ್ಬರಾವ್; ಕಡೆಂಗೋಡ್ಲು ಶಂಕರಭಟ್ಟ; ಕಥನ ಕವನ; ಕನಕದಾಸ; ಕನ್ನಡ ಸಾಹಿತ್ಯ ಪರಿಷತ್ತು; ಕರ್ನಾಟಕ ವಿದ್ಯಾವರ್ಧಕ ಸಂಘ; ಕರ್ಪೂರ ಶ್ರೀನಿವಾಸರಾವ್; ಕವಿ; ಕವಿತೆ; 'ಕವಿರಾಜಮಾರ್ಗಂ'; ಕಾದಂಬರಿ; ಕಾವ್ಯಮಂಜರಿ; ಕುಂದಣಗಾರ; ಕುಮಾರವ್ಯಾಸ; ಕುವೆಂಪು; ಕೆರೂರ ವಾಸುದೇವಾಚಾರ್ಯ; ಕೈಲಾಸಂ; ಗಳಗನಾಥ; ಗೀತನಾಟಕ; ಗೋಕಾಕ; ಗೋವಿಂದ ಪೈ; ಚಿಕದೇವರಾಯ; ಚುಟುಕ; ಚೆನ್ನಪ್ಪ ಉತ್ತಂಗಿ; ಛಂದಸ್ಸು; ಜನ್ನ; ಜಾನಪದ; ಜೀವನ ಚರಿತ್ರೆ; ಟಿ. ಎಸ್. ವೆಂಕಣ್ಣಯ್ಯ; ಡಿಎಲ್ಎನ್; ಡಿವಿಜಿ; ತಿರುಮಲೆ ತಾತಾಚಾರ್ಯ ಶರ್ಮ; ತೀರ್ಥಂಕರರು; ತೀನಂಶ್ರೀ; ದಾಸಸಾಹಿತ್ಯ; ದೇಜಗೌ; ದೇವುಡು; ನಂದೀಮಠ; ನವ್ಯಸಾಹಿತ್ಯ; ನಾಟಕ; ನಿಜಗುಣ ಶಿವಯೋಗಿ; ನಿಯತಕಾಲಿಕ; ಪಂಜೆ ಮಂಗೇಶರಾಯ; ಪಂಪ; ಪ್ರಗತಿಶೀಲ ಸಾಹಿತ್ಯ; ಪ್ರಬಂಧ; ಪ್ರವಾಸ ಸಾಹಿತ್ಯ; ಪ್ರಸಾರ ನಾಟಕ; ಪಾರ್ತಿಸುಬ್ಬ; ಪುಟ್ಟಣ್ಣ ಚೆಟ್ಟಿ; ಪುರಂದರದಾಸ; ಬಸವನಾಳ; ಬಸವಪ್ಪ ಶಾಸ್ತ್ರೀ; ಬಿ ಎಂ ಶ್ರೀ; ಬೆನಗಲ್ ರಾಮರಾಯ; ಬೆಳ್ಳಾವೆ ವೆಂಕಟನಾರಣಪ್ಪ; ಬೇಂದ್ರೆ; ಭಾರತೀಯ ಸಾಹಿತ್ಯ; ಭಾವಗೀತೆ; ಭಾಷಾಂತರ; ಮಕ್ಕಳ ಸಾಹಿತ್ಯ; ಮಾಸ್ತಿ ವೆಂಕಟೇಶ ಅಯ್ಯಂಗಾರ್; ಮುಗಳಿ; ಮುದವೀಡು ಕೃಷ್ಣರಾಯ; ಮುದ್ದಣ; ಮುಮ್ಮಡಿ ಕೃಷ್ಣರಾಜ; ಮುಳಿಯ ತಿಮ್ಮಪ್ಪಯ್ಯ; ರಂಗನಾಥ ದಿವಾಕರ; ರತ್ನಾಕರವರ್ಣಿ; ರನ್ನ; ರಾಘವಾಂಕ; ರೊದ್ದ ಶ್ರೀನಿವಾಸರಾಯ; ಲಕ್ಷ್ಮೀಶ; ಲಾವಣಿ; ವಚನ ಸಾಹಿತ್ಯ; 'ವಡ್ಡಾರಾಧನೆ'; ವ್ಯಾಕರಣ ತೀರ್ಥ ಚಂದ್ರಶೇಖರಶಾಸ್ತ್ರೀ; ವಿಜ್ಞಾನಕಥಾ ಸಾಹಿತ್ಯ; ವಿಮರ್ಶೆ; ವಿ. ಸೀ; ವೆಂಕಟಾಚಾರ್ಯ; ವೈ. ನಾಗೇಶಶಾಸ್ತ್ರಿ; ಶಾಂತಕವಿ; ಶಿವರಾಮ ಕಾರಂತ; ಶ್ರೀರಂಗ; ಸಂಚಿಯ ಹೊನ್ನಮ್ಮ; ಸಂಸ; ಸಣ್ಣಕಥೆ; ಸರ್ವಜ್ಞ; ಸಿ. ಕೆ. ವೆಂಕಟರಾಮಯ್ಯ; ಸಿದ್ಧಾಂತಿ ಶಿವಶಂಕರಶಾಸ್ತ್ರೀ; ಹರಿಹರ; ಹಳಕಟ್ಟಿ; ಹೊಸಕೋಟೆ ಕೃಷ್ಣಶಾಸ್ತ್ರಿ

## ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡಿಗರ ಸಾಂಸ್ಕೃತಿಕ ಜೀವನದ ಉಸಿರು; 'ಕರ್ಣಾಟಕ ಭಾಷಾ ಪರಿಷ್ಕರಣ ಮತ್ತು ಕರ್ಣಾಟಕ ಗ್ರಂಥಾಭಿವೃದ್ಧಿ'ಗಾಗಿ, 'ಕನ್ನಡದ ಮನೆಯಲ್ಲಿ ಕನ್ನಡವು ಯಜಮಾನಿಯಾಗಿರಬೇಕು' ಎಂಬ ಗುರಿ ಸಾಧನೆಗಾಗಿ ಹುಟ್ಟಿದ ಸಂಸ್ಥೆ.

ಇಂಥ ಸಂಸ್ಥೆಯನ್ನು ಕಟ್ಟಲೆಂದು, 1915 ಮೇ 3ರಂದು ಬೆಂಗಳೂರಿನಲ್ಲಿ ಒಂದು ಸಮ್ಮೇಳನ ಸಮಾವೇಶಗೊಂಡಿತು. ಕನ್ನಡನಾಡಿನ ಎಲ್ಲೆಡೆಗಳಿಂದ ಪ್ರತಿನಿಧಿಗಳು ಬಂದಿದ್ದರು.

ಆ ಸಮ್ಮೇಳನದಲ್ಲಿ ಸ್ಥಾಪಿತವಾದ ಸಂಸ್ಥೆಯೇ ಈಗ ಕನ್ನಡ ಸಾಹಿತ್ಯ ಪರಿಷತ್ತು ಎಂಬ ಹೆಸರುಳ್ಳ ಕರ್ಣಾಟಕ ಸಾಹಿತ್ಯ ಪರಿಷತ್ತು.

ಕನ್ನಡದಲ್ಲಿ ಉತ್ತಮ, ಉಪಯುಕ್ತ ಸಾಹಿತ್ಯರಚನೆ, ಸಾಹಿತಿಗಳಿಗೆ ಸಹಾಯಮಾಡುವುದು, ಒಳ್ಳೆಯ ಗ್ರಂಥಗಳ ಪ್ರಕಟಣೆ, ಪ್ರಾಚೀನ ಸಾಹಿತ್ಯವನ್ನು ಕುರಿತು ಸಂಶೋಧನೆ, ಇತರ ಭಾಷೆಗಳ ಶ್ರೇಷ್ಠ ಕೃತಿಗಳ ಭಾಷಾಂತರ, ವಾಚನಾಲಯ–ಪುಸ್ತಕ ಭಂಡಾರಗಳನ್ನು ತೆರೆಯುವುದು, ಕನ್ನಡನಾಡಿನ ಪ್ರಮುಖ ನಗರಗಳಲ್ಲಿ ವರ್ಷಂಪ್ರತಿ ಸಾಹಿತ್ಯ ಸಮ್ಮೇಳನ ನಡೆಸುವುದು —ಇವು ಪರಿಷತ್ತಿನ ಮುಖ್ಯ ಚಟುವಟಿಕೆಗಳಾಗಿರಬೇಕೆಂದು ಈ ಸಭೆಯಲ್ಲಿ ನಿರ್ಧರಿಸಲಾಯಿತು. ಇವನ್ನು ಕಾರ್ಯಗತ ಮಾಡಲು ಕಾರ್ಯನಿರ್ವಾಹಕ ಮಂಡಲಿಯೊಂದು ರೂಪುಗೊಂಡಿತು.




ಕೃಷ್ಣರಾಜ ಪರಿಷನ್ಮಂದಿರ

ರಾಜಮಂತ್ರ ಪ್ರವೀಣ ಎಚ್. ವಿ. ನಂಜುಂಡಯ್ಯನವರು ಪರಿಷತ್ತಿನ ಅಧ್ಯಕ್ಷರಾಗಿಯೂ ರಾವ್‌ಬಹದ್ದೂರ್ ಎಂ. ಶಾಮರಾಯರು ಉಪಾಧ್ಯಕ್ಷರಾಗಿಯೂ ಆಯ್ಕೆಗೊಂಡರು. ವಿವಿಧ ಪ್ರದೇಶಗಳ ಪ್ರತಿನಿಧಿಗಳುಳ್ಳ 30 ಜನ ಸದಸ್ಯರ ಕಾರ್ಯನಿರ್ವಾಹಕ ಮಂಡಲಿಯೂ ಅಸ್ತಿತ್ವಕ್ಕೆ ಬಂತು.

ಕರ್ಣಾಟಕ ಸಾಹಿತ್ಯ ಪರಿಷತ್ತಿನ ನಿರ್ಮಾಣದಲ್ಲಿ ಸಾಹಿತಿಗಳ ಪಾತ್ರ ಎಷ್ಟಿತ್ತೋ ಅಷ್ಟೇ ಇತ್ತು ಮೈಸೂರು ಸಂಸ್ಥಾನದ ಸರಕಾರದ ಪಾತ್ರ. ಮೈಸೂರು ರಾಜಮನೆತನದವರಿಂದ ಪರಿಷತ್ತಿಗೆ ದೊರೆತ ಪ್ರೋತ್ಸಾಹವೂ ಗಮನಾರ್ಹವಾದದ್ದು.

ಸಾಹಿತ್ಯ ಪರಿಷತ್ತಿನ ಗೌರವ ಅಧ್ಯಕ್ಷ ಸ್ಥಾನದಲ್ಲಿ ಯಾರೇ ಇರಲಿ, ಉಪಾಧ್ಯಕ್ಷ ಸ್ಥಾನಕ್ಕೆ ಆರಿಸಲ್ಪಟ್ಟವರು ಪರಿಷತ್ತಿನ ಆಡಳಿತವನ್ನು ನಡೆಸುತ್ತಿದ್ದರು. ಸಾಮಾನ್ಯವಾಗಿ ಶ್ರೇಷ್ಠ ಸಾಹಿತಿಗಳಿಗೇ ಈ ಸ್ಥಾನ ದೊರೆಯುತ್ತಿತ್ತು. ಹೀಗೆ ಉಪಾಧ್ಯಕ್ಷ ಪದವಿಯನ್ನಲಂಕರಿಸಿ ಪರಿಷತ್ತಿಗೆ ಅಮೂಲ್ಯ ಸೇವೆ ಸಲ್ಲಿಸಿದವರು ಎಂ. ಶಾಮರಾಯರು, ಕರ್ಪೂರ ಶ್ರೀನಿವಾಸರಾಯರು, ಡಿವಿಜಿ, ಬಿಎಂಶ್ರೀ, ಮಾಸ್ತಿ ಮುತ್ತಿತರರು.

1947ರಲ್ಲಿ ಆದ ತಿದ್ದುಪಡಿಯಂತೆ ಸಮ್ಮೇಳನದ ಅಧ್ಯಕ್ಷರೇ ಪರಿಷತ್ತಿನ ಅಧ್ಯಕ್ಷರಾಗಿರುವಂತೆ ವ್ಯವಸ್ಥೆಯಾಯಿತು. ಸ್ವಲ್ಪ ಕಾಲಾನಂತರ ಈ ವ್ಯವಸ್ಥೆ ರದ್ದಾಗಿ ಅಧ್ಯಕ್ಷರನ್ನು ಪ್ರತ್ಯೇಕವಾಗಿ ಆರಿಸುವುದು ಮತ್ತು ಅವರೇ ಪರಿಷತ್ತಿನ ಆಡಳಿತವನ್ನು ನೋಡಿಕೊಳ್ಳುವುದು ಆಚರಣೆಗೆ ಬಂತು.

ಸಾಹಿತ್ಯ ಪರಿಷತ್ತು ದೊಡ್ಡ ಸಂಸ್ಥೆಯಾಗಿ ಬೆಳೆಯುತ್ತಿದ್ದರೂ ಅದಕ್ಕೆ ಸ್ವಂತ ಕಟ್ಟಡವಿರಲಿಲ್ಲ. ಮೈಸೂರು ಸರಕಾರ, ಮೈಸೂರು ಅರಮನೆ ಮತ್ತು ಸಾರ್ವಜನಿಕರಿಂದ ದೊರೆತ ಸಹಾಯದಿಂದ ಕಟ್ಟಡ ನಿರ್ಮಾಣಕ್ಕೆ ಅಗತ್ಯವಾದ ಹಣವನ್ನು ಶೇಖರಿಸಿ ಬೆಂಗಳೂರಿನಲ್ಲಿ ಕಟ್ಟಡ ಕಟ್ಟಿ 1933ರಲ್ಲಿ ಪರಿಷತ್ತಿನ ಕಛೇರಿಯನ್ನು ಆ ಕಟ್ಟಡಕ್ಕೆ ವರ್ಗಾಯಿಸಲಾಯಿತು.

ಈ ವ್ಯವಸ್ಥೆಯಾದ ಅನಂತರ ಪರಿಷತ್ತಿನ ಅಧ್ಯಕ್ಷರಾಗಿ ದುಡಿದವರು ತಿ. ತಾ. ಶರ್ಮ, ಎಂ. ಆರ್. ಶ್ರೀನಿವಾಸಮೂರ್ತಿ, ಎ. ಎನ್. ಮೂರ್ತಿರಾವ್, ಬಿ. ಶಿವಮೂರ್ತಿ ಶಾಸ್ತ್ರಿ ಮತ್ತು ಜಿ. ವೆಂಕಟಸುಬ್ಬಯ್ಯ –ಇವರು.

ಕನ್ನಡ ಸಾಹಿತ್ಯ ಪರಿಷತ್ತು ವರ್ಷಂಪ್ರತಿ ನಡೆಸಿಕೊಂಡು ಬರುತ್ತಿರುವ ಸಾಹಿತ್ಯ ಸಮ್ಮೇಳನ ಕನ್ನಡಿಗರಿಗೆಲ್ಲ ದೊಡ್ಡ ಹಬ್ಬ ಇದ್ದಂತೆ. ಕನ್ನಡ ನಾಡಿನ ಮುಖ್ಯ ಪಟ್ಟಣವೊಂದರಲ್ಲಿ ಸಾಮಾನ್ಯವಾಗಿ ವರ್ಷವರ್ಷವೂ ಕನ್ನಡ ಸಾಹಿತ್ಯ ಸಮ್ಮೇಳನದ ಅಧಿವೇಶನಗಳು ನಡೆದುವು.

ಗಮಕ ಕನ್ನಡದ ವಿಶೇಷ ಕೊಡುಗೆ. ಇದನ್ನು ಜನಪ್ರಿಯಗೊಳಿಸುವುದು ಮತ್ತು ಗಮಕಿಗಳನ್ನು ತರಬೇತುಗೊಳಿಸುವುದು ಕನ್ನಡ ಸಾಹಿತ್ಯ ಪರಿಷತ್ತಿನ ಮುಖ್ಯ ಚಟುವಟಿಕೆಗಳಲ್ಲೊಂದು. ಪರಿಷತ್ತು ಮಹಿಳಾ ಶಾಖೆಯನ್ನೂ ನಡೆಸಿಕೊಂಡು ಬರುತ್ತಿದೆ.

ಕನ್ನಡದ ಸಂದೇಶವನ್ನು ಮನೆಮನೆಗೆ ತಲಪಿಸಲು ಪರಿಷತ್ತು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', 'ಕನ್ನಡ ನುಡಿ' ನಿಯತ ಕಾಲಿಕಗಳನ್ನು ಪ್ರಕಟಿಸುತ್ತಿದೆ.

ಕನ್ನಡ ಸಾಹಿತ್ಯ ಪರಿಷತ್ತು ಗ್ರಂಥ ಪ್ರಕಟನ ಕಾರ್ಯವನ್ನೂ ಕೈಗೊಂಡಿದೆ. ಹಲವಾರು ಪ್ರಾಚೀನ ಉದ್ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದೆ. ಒಂದು ಉತ್ಕೃಷ್ಟ ಕನ್ನಡ ನಿಘಂಟನ್ನು ಸಿದ್ಧಗೊಳಿಸಿ ಪ್ರಕಟಿಸುವ ಜವಾಬ್ದಾರಿ ಹೊತ್ತಿದೆ. ಬಿ ಎಂ ಶ್ರೀ ಅವರ ಕೊಡುಗೆಯಿಂದ ಆರಂಭವಾದ 'ಬಿ ಎಂ ಶ್ರೀ ಅಚ್ಚುಕೂಟ'ವನ್ನು ಪರಿಷತ್ತು ಹೊಂದಿದೆ.

1969ರಲ್ಲಿ ಜಿ. ನಾರಾಯಣ ಅವರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾದರು. ಅನಂತರದ ಅವಧಿಯಲ್ಲಿ ಗ್ರಂಥ ಪ್ರಕಟಣೆ. ಕನ್ನಡ ಪುಸ್ತಕಗಳ ಮಾರಾಟ, ಜಿಲ್ಲಾ ಸಾಹಿತ್ಯ ಸಮ್ಮೇಳನ ಮುತ್ತಿತರ ಕಾರ್ಯಕ್ರಮಗಳು ಏರ್ಪಾಟಾದುವು.

1915ರಲ್ಲಿ ಹುಟ್ಟಿದ ಪರಿಷತ್ತಿಗೆ 1965ರಲ್ಲಿ 50 ವರ್ಷ ತುಂಬಿತು. 1970ರಲ್ಲಿ ಸುವರ್ಣ ಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿತು.

ಹಲವಾರು ಮಂದಿ ಕನ್ನಡ ಅಭಿಮಾನಿಗಳು ಕಾಲದಿಂದ ಕಾಲಕ್ಕೆ ಪರಿಷತ್ತಿಗೂ ತನ್ಮೂಲಕ ಕನ್ನಡ ನಾಡಿಗೂ ನುಡಿಗೂ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯ ಪರಿಷತ್ತಿಗೆ ಸ್ವಂತ ಕಟ್ಟಡವನ್ನು ನಿರ್ಮಿಸುವುದರಲ್ಲಿ ಕರ್ಪೂರ ಶ್ರೀನಿವಾಸರಾಯರು ಸಲ್ಲಿಸಿದ ಸೇವೆ ಹಾಗೂ ಪರಿಷತ್ತಿನ ಕಾರ್ಯಚಟುವಟಿಕೆಗಳನ್ನು ಬೆಳೆಸಲು ಬೆಳ್ಳಾವೆ ವೆಂಕಟನಾರಣಪ್ಪನವರು, ಬಿ ಎಂ ಶ್ರೀ, ಡಿ ವಿ ಜಿ ಮುಂತಾದವರ ಪ್ರಯತ್ನ ಸ್ಮರಣೀಯ.

## ಕರ್ನಾಟಕ ವಿದ್ಯಾವರ್ಧಕ ಸಂಘ

ಕನ್ನಡ ನಾಡು ನುಡಿಗಳ ಅಭಿಮಾನವನ್ನು ಜನರಲ್ಲಿ ಜಾಗೃತಗೊಳಿಸಲು ಶ್ರಮಿಸಿದ ಪ್ರಮುಖ ಸಂಸ್ಥೆ ಕರ್ನಾಟಕ ವಿದ್ಯಾವರ್ಧಕ ಸಂಘ. ಇದು ಸ್ಥಾಪಿತವಾದದ್ದು 1890ನೆಯ ಜೂಲೈ 20ರಂದು. ಧಾರವಾಡದಲ್ಲಿ. ಕನ್ನಡ ಗ್ರಂಥಕರ್ತರಿಗೆ ಪ್ರೋತ್ಸಾಹ ನೀಡುವುದು; ಕನ್ನಡ ಸಂಸ್ಕೃತಿ ಮತ್ತು ಇತಿಹಾಸಗಳ ಬಗೆಗೆ ಸಂಶೋಧನೆ —ಈ ಸಂಘದ ಮುಖ್ಯ ಉದ್ದೇಶ.

ಮುಂಬಯಿ. ಕಾರವಾರ, ಮದರಾಸು, ಪುಣೆ. ಹೈದರಾಬಾದ್. ಬೆಂಗಳೂರು. ಮೈಸೂರು, ಮಂಗಳೂರು, ಮಡಿಕೇರಿ ಮೊದಲಾದ ಕರ್ನಾಟಕದ ಒಳನಾಡಿನಲ್ಲಿದ್ದ ಹಾಗೂ ಕನ್ನಡ ನಾಡಿನ ಹೊರಗಿದ್ದ



ಕರ್ನಾಟಕ ವಿದ್ಯಾವರ್ಧಕ ಸಂಘ

ಹಲವಾರು ಮಂದಿ ಕನ್ನಡಾಭಿಮಾನಿಗಳು ಈ ಸಂಘದ ಸದಸ್ಯರಾದರು. ಕನ್ನಡ ಸಾಹಿತ್ಯ, ಇತಿಹಾಸ, ಸಂಶೋಧನೆಗಳಲ್ಲಿ ಅಸಾಧಾರಣ ಸಾಧನೆ ನಡೆಸಿದ ಬಿ. ಎಲ್. ರೈಸ್, ಜೆ. ಎಫ್. ಫ್ಲೀಟ್, ಭಂಡಾರ್‌ಕರ್ ಮುಂತಾದ ವಿದ್ವಾಂಸರು ಈ ಸಂಸ್ಥೆಯ ಗೌರವ ಸದಸ್ಯರಾದರು.

ಕರ್ನಾಟಕ ವಿದ್ಯಾವರ್ಧಕ ಸಂಘವು ಮೈಸೂರು ಅರಸರ, ಶಿರಸಂಗಿ ದೇಸಾಯರ ಹಾಗೂ ಕನ್ನಡ ಜನತೆಯ ಉದಾರ ಆಶ್ರಯದಲ್ಲಿ ಬೆಳೆಯಿತು. ಮೈಸೂರು ಮಹಾರಾಜರ ಸರಕಾರ ಈ ಸಂಘದ ಕಟ್ಟಡಕ್ಕಾಗಿ 6 ಸಾವಿರ ರೂಪಾಯಿ ಸಹಾಯಧನವನ್ನು ನೀಡಿತು. ಇವರ ಸ್ಮರಣೆಗಾಗಿ ಸಂಘದ ಕಟ್ಟಡಕ್ಕೆ 'ಶ್ರೀ ಚಾಮರಾಜ ಮಂದಿರ' ಎಂದು ಹೆಸರಿಡಲಾಯಿತು.

ಅಂದು ಮುಂಬಯಿ ಕರ್ನಾಟಕದಲ್ಲಿ ಮರಾಠಿ, ಹೈದರಾಬಾದ್ ಕರ್ನಾಟಕದಲ್ಲಿ ಉರ್ದು, ತೆಲುಗು ; ಮದ್ರಾಸು ಕರ್ನಾಟಕದಲ್ಲಿ ತಮಿಳು –ಈ ಭಾಷೆಗಳ ಪ್ರಭಾವ ಬಲವಾಗಿತ್ತು ; ಈ ಪ್ರದೇಶಗಳಲ್ಲಿ ಕನ್ನಡ ಕಡೆಗಣಿಸಲ್ಪಟ್ಟಿತ್ತು. ಈ ಪರಿಸ್ಥಿತಿಯಲ್ಲಿ ಕನ್ನಡದ ಪುನರುಜ್ಜೀವನಕ್ಕಾಗಿ ಈ ಸಂಸ್ಥೆ ನಡುಕಟ್ಟಿ ನಿಂತು ದುಡಿಯಿತು. ಕನ್ನಡ ವಿದ್ಯಾರ್ಥಿಗಳಲ್ಲಿ ಕನ್ನಡ ಭಾಷಾ ಪ್ರೇಮವನ್ನೂ ಭಾಷಾ ಪ್ರಭುತ್ವವನ್ನೂ ಬೆಳೆಸಲು ವಾಕ್‌ಸ್ಪರ್ಧೆಗಳನ್ನು ಏರ್ಪಡಿಸಿತು. 'ಲೋಕಮಾನ್ಯ ವಕ್ತೃತ್ವ ಸ್ಪರ್ಧೆ', 'ತಾರಾನಾಥ ವಕ್ತೃತ್ವ ಸ್ಪರ್ಧೆ' ಇಂಥವುಗಳಲ್ಲಿ ಮುಖ್ಯವಾದುವು. ಭಾಷೆ–ಸಾಹಿತ್ಯಗಳನ್ನು ಅಭಿವೃದ್ಧಿಪಡಿಸಲು ಹಳೆಗನ್ನಡ ಸಾಹಿತ್ಯಾಭ್ಯಾಸ ಅವಶ್ಯವೆಂದು ಮನಗಂಡು ಪ್ರಾಚೀನ ಕಾವ್ಯಭಾಗಗಳನ್ನು ಪಠ್ಯಪುಸ್ತಕವನ್ನಾಗಿಟ್ಟು ಪರೀಕ್ಷೆಗಳನ್ನು ನಡೆಸಲಾಗುತ್ತಿತ್ತು.

ಕನ್ನಡ ಭಾಷೆಯ ಪ್ರಚಾರ, ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ಉಪಯೋಗದಲ್ಲಿದ್ದ ಕನ್ನಡ ಭಾಷೆಯ ಏಕರೂಪತೆ ಸಾಧನೆ, ಸಾಹಿತಿಗಳ ಪರಸ್ಪರ ಸಂಪರ್ಕವನ್ನು ಬೆಳೆಸುವುದು –ಈ ಉದ್ದೇಶಗಳಿಗಾಗಿ ಅಖಿಲ ಕರ್ನಾಟಕ ಗ್ರಂಥಕರ್ತರ ಜಿಲ್ಲಾ ಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸಿತು.

1896ರಲ್ಲಿ ಈ ಸಂಸ್ಥೆ 'ವಾಗ್ಭೂಷಣ' ಎಂಬ ಮಾಸ ಪತ್ರಿಕೆಯನ್ನು ಸ್ಥಾಪಿಸಿ, ಅದರ ಮೂಲಕ ಅನೇಕ ಗ್ರಂಥಗಳನ್ನು ಪ್ರಕಟಿಸಿತು. ನಾಡಿನ ವಿವಿಧ ಭಾಗಗಳ ಗ್ರಂಥಸ್ಥ ಭಾಷೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ಏಕರೂಪಕ್ಕೆ ತರಲು ಈ ಪತ್ರಿಕೆ ಶ್ರಮಿಸಿತು.

'ಮಾಲವಿಕಾಗ್ನಿಮಿತ್ರ', 'ಉತ್ತರ ರಾಮ ಚರಿತ್ರೆ', 'ವೇಣೀ ಸಂಹಾರ', 'ಕಾದಂಬರಿ', 'ಕಾವ್ಯಾವಲೋಕನ', 'ಶಬ್ದಾನುಶಾಸನ', ಇವಲ್ಲದೆ ಕರ್ನಾಟಕ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಅಮೂಲ್ಯ ಗ್ರಂಥಗಳನ್ನು ಕರ್ನಾಟಕ ವಿದ್ಯಾವರ್ಧಕ ಸಂಘ ಪ್ರಕಟಿಸಿತು. ಕ್ರಿ.ಶ. 1900–1940ರ ಅವಧಿಯಲ್ಲಿ ಈ ಸಂಘ 175 ಗ್ರಂಥಕರ್ತರಿಗೆ 18,990 ರೂ.ಗಳ ಸಂಭಾವನೆ ನೀಡಿತು. ಕರ್ನಾಟಕದ ಏಕೀಕರಣಕ್ಕಾಗಿಯೂ ದುಡಿದ ಸಂಸ್ಥೆ ಇದು. ಬೆಂಗಳೂರಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಸಂಬಂಧದಲ್ಲಿ ಈ ಸಂಸ್ಥೆಯ ಕಾರ್ಯಕರ್ತರು ಗಣನೀಯ ಪಾತ್ರ ವಹಿಸಿದರು. ಹೀಗೆ ಕನ್ನಡ ನಾಡು ನುಡಿಗಳ ಪುನರುಜ್ಜೀವನದ ಇತಿಹಾಸದಲ್ಲಿ ಕರ್ನಾಟಕದ ವಿದ್ಯಾವರ್ಧಕ ಸಂಸ್ಥೆ ವಹಿಸಿದ ಪಾತ್ರ ಸ್ಮರಣೀಯವಾದದ್ದು.

## ಕರ್ಪೂರ ಶ್ರೀನಿವಾಸರಾವ್

ಶ್ರೀನಿವಾಸರಾಯರ ಪೂರ್ವಿಕರು ತಿರುಪತಿ ತಿಮ್ಮಪ್ಪನ ದರ್ಶನಕ್ಕೆಂದು ಮೊದಲು ಹೋದಾಗ ಕರ್ಪೂರದ ಉಂಡೆಯನ್ನು ಉರಿಸುತ್ತ ಬೆಟ್ಟ ಹತ್ತಿದರಂತೆ. ಇದರಿಂದಾಗಿ ಇವರ ವಂಶಕ್ಕೆ 'ಕರ್ಪೂರ' ಎಂಬ ಹೆಸರು ಸೇರಿಕೊಂಡಿತು ಎಂದು ಪ್ರತೀತಿ.

ಶ್ರೀನಿವಾಸರಾಯರು ಜನಿಸಿದ್ದು 1863ರಲ್ಲಿ. ಅವರ ತಂದೆ ಕರ್ಪೂರ ಸುಬ್ಬರಾಯರು. ತಾತನ ಕಾಲದಲ್ಲಿ ತುಂಬಾ ಶ್ರೀಮಂತವಾಗಿದ್ದ ಅವರ ಕುಟುಂಬ ತಂದೆಯ ಕಾಲದಲ್ಲಿ ಬಡತನವನ್ನು ಇದಿರಿಸಬೇಕಾಯಿತು. ಶ್ರೀನಿವಾಸರಾಯರ ಪ್ರಾಥಮಿಕ ವಿದ್ಯಾಭ್ಯಾಸ ಬೆಂಗಳೂರಿನಲ್ಲಿ ನಡೆಯಿತು. (ಗೆಳೆಯರೊಡನೆ ಹಣ್ಣು ತಿನ್ನಲೆಂದು ಹೋದಾಗ ತಮ್ಮ ಕನ್ನಡ ಪಠ್ಯ ಪುಸ್ತಕಗಳನ್ನೆಲ್ಲ ಕಳೆದುಕೊಂಡರಂತೆ; ಈ ಸಂದರ್ಭದಲ್ಲಿ ಅವರು ಕನ್ನಡವನ್ನು ಕೈಬಿಟ್ಟು ಇಂಗ್ಲಿಷ್ ಮಾಧ್ಯಮದಲ್ಲಿ ವಿದ್ಯಾಭ್ಯಾಸ ಮುಂದುವರಿಸಿದರಂತೆ). ಅವರು ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿದ್ದ ದಿನವೇ ಅವರ ತಂದೆ ತೀರಿಕೊಂಡರು. ಆದರೂ ಅವರು ಪರೀಕ್ಷೆಗೆ ಕುಳಿತು, ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿದರು.

ತಂದೆ ತೀರಿಕೊಂಡ ಬಳಿಕ ವಿದ್ಯಾಭ್ಯಾಸ ಮುಂದುವರಿಸುವುದು ಸಾಧ್ಯವಾಗದೆ ಹೋಯಿತು. ಹೀಗಾಗಿ ಅವರು ನೌಕರಿ ಹುಡುಕಿಕೊಂಡು ಪುಣೆಗೆ ಹೋದರು. ಅಲ್ಲಿ ಕೆಲಸ ದೊರಕಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ ವಕೀಲರೊಬ್ಬರ ಪರಿಚಯವಾಯಿತು. ಅವರು ಶ್ರೀನಿವಾಸರಾಯರ ಪ್ರತಿಭೆಯನ್ನು ಗುರುತಿಸಿ ಅವರ ಮುಂದಿನ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟರು. ಶ್ರೀನಿವಾಸರಾಯರು ಪುಣೆಯಲ್ಲೇ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿ ಬಿ.ಎಸ್‌ಸಿ. ಮತ್ತು ಎಲ್.ಸಿ.ಇ. ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಮುಂಬಯಿ ಪ್ರಾಂತದ ಪಿ.ಡಬ್ಲ್ಯು.ಡಿ. ಇಲಾಖೆಯಲ್ಲಿ ಕೆಲಸಕ್ಕೆ ಸೇರಿ 25 ವರ್ಷ ಸೇವೆ ಸಲ್ಲಿಸಿ ಆ ಪ್ರಾಂತದ ಚೀಫ್ ಎಂಜಿನಿಯರಾಗಿ ನಿವೃತ್ತರಾದರು. ಇವರ ಕಾರ್ಯದಕ್ಷತೆ, ಪ್ರತಿಭೆ ಪ್ರಾಮಾಣಿಕತೆಗಳನ್ನು ಅರಿತಿದ್ದ ಮೈಸೂರು ಸರಕಾರ ಇವರನ್ನು ತನ್ನ ಪ್ರಧಾನ ಎಂಜಿನಿಯರನ್ನಾಗಿ ನೇಮಿಸಿತು. ಮೈಸೂರು ಮಹಾರಾಜರಿಂದ 'ರಾಜಸಭಾ ಭೂಷಣ' ಎಂಬ ಬಿರುದೂ ದೊರೆಯಿತು.

ಕರ್ಪೂರ ಶ್ರೀನಿವಾಸರಾಯರು ಇಂಗ್ಲಿಷ್, ಕನ್ನಡ, ಮರಾಠಿ, ಸಂಸ್ಕೃತ ಭಾಷಾ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಸಂಸ್ಕೃತ ಅಭ್ಯಾಸವನ್ನು ಆರಂಭಿಸಿದ್ದು ತಮ್ಮ 35ನೆಯ ವಯಸ್ಸಿನಲ್ಲಾದರೂ ಆ ಭಾಷೆಯಲ್ಲಿ ಪಾಂಡಿತ್ಯವನ್ನು ಗಳಿಸಿ 'ಕಾವ್ಯಮೀಮಾಂಸೆಯ' ಅಧ್ಯಯನ ನಡೆಸಿದರು. ಈ ಅಧ್ಯಯನದ ಫಲವೇ ಅವರು ಕನ್ನಡದಲ್ಲಿ ರಚಿಸಿರುವ 'ಸಾಹಿತ್ಯಶಾಸ್ತ್ರ' ಎಂಬ ಗ್ರಂಥ.

ರಾಯರ ಕನ್ನಡ ಸೇವೆ ಆರಂಭವಾದದ್ದು ಧಾರವಾಡದ ಗೆಳೆಯರ ಬಳಗದ ಮೂಲಕ, ಮುಂಬಯಿ ಪ್ರಾಂತದಲ್ಲಿದ್ದ ಆ ಪ್ರದೇಶದಲ್ಲಿ



ಕರ್ಪೂರ ಶ್ರೀನಿವಾಸರಾವ್

ಅವರು ಉದ್ಯೋಗದಲ್ಲಿದ್ದಾಗ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಲ್ಲಿ ಅವರು ಕ್ರಿಯಾಶೀಲ ಪಾತ್ರ ವಹಿಸಿದರು. ಅದರ ಮೊದಲನೆಯ ಆಶ್ರಯದಾತರಾದರು. 13 ವರ್ಷಗಳ ಕಾಲ ಕರ್ನಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದರು.

ಸಾಹಿತ್ಯ ಪರಿಷತ್ತಿನ ಕಟ್ಟಡವನ್ನು ನಿರ್ಮಿಸಲು ಅವರು ವಿಶೇಷವಾಗಿ ಶ್ರಮ ವಹಿಸಿದರು. ತಾವೇ ಕಟ್ಟಡದ ನಕ್ಷೆಯನ್ನು ಸಿದ್ಧಗೊಳಿಸಿದರು. ಅದರ ನಿರ್ಮಾಣದ ಮೇಲ್ವಿಚಾರಣೆ ನಡೆಸಿದರು.

ಕರ್ಪೂರ ಶ್ರೀನಿವಾಸರಾಯರು ಧಾರ್ಮಿಕ ಮನೋವೃತ್ತಿಯವರಾಗಿದ್ದರು. ಸಂಪ್ರದಾಯಗಳಲ್ಲಿ, ಪೂರ್ವ ಮತಾಚಾರಗಳಲ್ಲಿ ಅವರಿಗೆ ತುಂಬ ನಿಷ್ಠೆ ಇತ್ತು. ಪ್ರತಿ ದಿನ ಬೆಳಗ್ಗೆ ಮಧ್ಯಾಹ್ನ ರಾತ್ರಿ ಮೂರು ಹೊತ್ತೂ ದೇವರ ಭಜನೆ ಮಾಡುತ್ತಿದ್ದರು. ಜೀವನದ ಕೊನೆಯ ತನಕವೂ ಅವರು ಇದನ್ನು ಪಾಲಿಸುತ್ತ ಬಂದರು. ಸುಧಾಮನ ಚರಿತ್ರೆಯಲ್ಲಿ ಅವರಿಗೆ ಪರಮ ಆಸಕ್ತಿ. ಹಬ್ಬ ಹರಿದಿನಗಳಲ್ಲಿ ಸುಧಾಮ ಚರಿತ್ರೆಯನ್ನು ಓದಿಸಿ, ಬಂದ ಅತಿಥಿಗಳಿಗೆ ಸಿಹಿ ಹಂಚುತ್ತಿದ್ದರು.

ರಾಯರು ತುಂಬಾ ಉದಾರಿಗಳು, ವಿದ್ಯಾಪಕ್ಷಪಾತಿಗಳು, ಬಡತನದ ಬೇಗೆಯಲ್ಲಿ ಬೆಂದಿದ್ದ ಅವರು ಬಡವರ ಕಷ್ಟವನ್ನು ಚೆನ್ನಾಗಿ ಅರಿತಿದ್ದರು. ಅನೇಕ ಬಡ ವಿದ್ಯಾರ್ಥಿಗಳಿಗೆ ಧನಸಹಾಯ ಮಾಡಿದರು. ಸಂಸ್ಕೃತ ವಿದ್ವಾಂಸರು ಯಾರು ಅವರ ಬಳಿಗೆ ಹೋದರೂ ಬರಿಗೈಯಿಂದ ಹಿಂತಿರುಗುತ್ತಿರಲಿಲ್ಲ. ಮಕ್ಕಳ ಉಪಯೋಗಕ್ಕೆಂದು ಸುಬೋಧ ರಾಮರಾಯರು 'ಸುಬೋಧ ಕುಸುಮಾಂಜಲಿ ಮಾಲಿಕೆ'ಯನ್ನು ಆರಂಭಿಸಲು ಕರ್ಪೂರ ಶ್ರೀನಿವಾಸರಾಯರು ಉದಾರವಾಗಿ ಧನಸಹಾಯ ಮಾಡಿದರು.

ಅವರ ಜೀವಿತಾವಧಿಯಲ್ಲಿ ಸ್ವಾತಂತ್ರ್ಯ ಚಳುವಳಿ ಬಿರುಸಿನಿಂದ ನಡೆಯುತ್ತಿತ್ತು. ಅವರು ಗಾಂಧಿಜಿಯವರ ಪ್ರಭಾವಕ್ಕೆ ಒಳಗಾಗಿ ಕರ್ಪೂರ ಶ್ರೀನಿವಾಸರಾಯರು ಖಾದಿ ಭಕ್ತರಾದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸದಿದ್ದರೂ ಪರೋಕ್ಷವಾಗಿ ಬೆಂಬಲ ಕೊಟ್ಟರು.

ಶ್ರೀನಿವಾಸರಾಯರು ಉತ್ತಮ ಲೇಖಕರೂ ವಾಗ್ಮಿಗಳೂ ಆಗಿದ್ದರು. 1919ರಲ್ಲಿ ಹಾಸನದಲ್ಲಿ ನಡೆದ 5ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಅವರನ್ನು ಗೌರವಿಸಲಾಯಿತು. ಅನ್ಯ ಭಾಷೆಗಳ ಅಭ್ಯಾಸದಿಂದ ಕನ್ನಡವನ್ನು ಶ್ರೀಮಂತಗೊಳಿಸಬೇಕು, ಕನ್ನಡದಲ್ಲಿ ಶಾಶ್ವತ ಕೃತಿಗಳು ಸೃಷ್ಟಿಯಾಗಬೇಕೆಂಬುದು ಅವರ ಹೆಬ್ಬಯಕೆಯಾಗಿತ್ತು.

ಸದಾ ಸಂತೋಷಚಿತ್ತರೂ ಧೀರ ಸ್ವಭಾವದವರೂ ಆಗಿದ್ದ ಶ್ರೀನಿವಾಸ ರಾಯರು ಕೊನೆಗಾಲದಲ್ಲಿ ಪಾರ್ಶ್ವವಾಯು ವ್ಯಾಧಿಗೊಳಗಾದರು. 1932 ಜೂನ್ 2ನೆಯ ತಾರೀಖು 'ಅಂಬಿಗಾ ನಾ ನಿನ್ನ ನಂಬಿದೆ' ಎಂಬ ಹಾಡನ್ನು ಕೇಳುತ್ತ ಶ್ರೀನಿವಾಸರಾಯರು ಪರಲೋಕವಾಸಿಗಳಾದರು.

## ಕಲೆ

ಮುಂಜಾನೆಯ ಮಂಜಿನ ಹಸಿಹೊತ್ತು ಎಳೆಬಿಸಿಲಿನಲ್ಲಿ ಮಿಂದು ನಸುಗಾಳಿಯಲ್ಲಿ ತೊನೆದಾಡುತ್ತಿರುವ ಗುಲಾಬಿ ಎಷ್ಟು ಚೆಂದ! ಮನಸ್ಸಿಗೆ ಎಷ್ಟು ಆನಂದ ಅದನ್ನು ನೋಡಿದಾಗ!

ಪ್ರಕೃತಿ ಸೌಂದರ್ಯವನ್ನು ಕಂಡಾಗ ನಮಗೆ ಆಗುವ ಸಂತೋಷ ಇದು. ಮಾನವನ ಸೃಷ್ಟಿಯಾದ ಉತ್ತಮ ಶಿಲ್ಪ, ಚಿತ್ರ, ಸಂಗೀತ ಮುಂತಾದುವು ಕೂಡ ನಮಗೆ ಇಂಥದೇ ಸಂತೋಷವನ್ನು ಕೊಡಬಲ್ಲುವು. ಇವನ್ನು ನಾವು ಕಲೆಗಳು ಎನ್ನುತ್ತೇವೆ. ಮಾನವನ ಕ್ರಿಯಾಶಕ್ತಿಯ ಕುಶಲ ಅಭಿವ್ಯಕ್ತಿಯೇ ಕಲೆ. ಈ ರೀತಿಯ ಅಭಿವ್ಯಕ್ತಿಯ ಹಂಬಲ ಮಾನವನ ಹುಟ್ಟುಗುಣ. ಇದು ನಾನಾ ರೀತಿಗಳಲ್ಲಿ ಪ್ರಕಟಗೊಂಡಿದೆ. ಹಲವಾರು ರೀತಿಯ ಪ್ರೇರಣೆಗಳಿಗೆ ಒಳಗಾಗಿ, ತನ್ನ ಸ್ವರೂಪದಲ್ಲಿ ಆಗಾಗ ಬದಲಾವಣೆಗಳನ್ನು ಕಂಡಿದೆ. ಆದರೂ ಅದು ಮಾನವನಿಗೆ ಸಂತೋಷ ಕೊಡುವ ಜೀವನದಿಯಾಗಿ ಅನಾದಿಕಾಲದಿಂದಲೂ ಹರಿಯುತ್ತಿದೆ.

ತನ್ನ ಸುತ್ತಮುತ್ತಲಿನ ಪರಿಸರ, ಘಟನೆಗಳು ಮಾನವನಲ್ಲಿ ಅಡಗಿರುವ ಕಲಾಪ್ರಜ್ಞೆ ಹೊರಹೊಮ್ಮಲು ಕಾರಣಗಳಾಗುತ್ತವೆ. ಇಂಥ ಪರಿಸರ ಘಟನೆಗಳಲ್ಲಿ ಯಾವುವು ತನ್ನ ಮನಸ್ಸಿನ ಮೇಲೆ ಪ್ರಬಲ ಪರಿಣಾಮ ಉಂಟುಮಾಡುತ್ತವೆಯೋ ಅವನ್ನು ಚಿತ್ರಿಸಲು ಅವನು ಪ್ರಯತ್ನಿಸುತ್ತಾನೆ. ಪ್ರಕೃತಿಯನ್ನು, ಅದು ಪ್ರಚೋದಿಸಿದ ಭಾವನೆಗಳನ್ನು ಅನುಕರಿಸಿ, ಅವುಗಳ ಪ್ರತಿಕೃತಿಗಳನ್ನು ಚಿತ್ರಿಸಲು. ರೂಪಿಸಲು ಪ್ರಯತ್ನಿಸುತ್ತಾನೆ, ಇಂಥ ಅನುಕರಣೆ ಕಲಾಕೃತಿ ಸೃಷ್ಟಿಯ ಒಂದು ಅವಿಭಾಜ್ಯ ಅಂಶ.

ಮಾನವನ ಕಲಾಸೃಷ್ಟಿ ಅನುಕರಣೆಯಿಂದಲೇ ಆರಂಭವಾಯಿತು. ಇಪ್ಪತ್ತೈದು ಮೂವತ್ತು ಸಾವಿರ ವರ್ಷಗಳ ಹಿಂದೆ ನಮ್ಮ ಈ ಭೂಮಿಯ ಮೇಲೆ ಬಾಳಿದ ಗವಿಮಾನವ ತನ್ನ ಪರಿಸರ, ತನ್ನ ಜೀವನಾನುಭವಗಳಿಂದ ಪ್ರೇರೇಪಿತನಾಗಿ ತಾನು ವಾಸಿಸುತ್ತಿದ್ದ ಗವಿಗಳ ಬಂಡೆಗಳ ಮೇಲೆ ಚಿತ್ರಗಳನ್ನು ಬರೆದ.

ನದಿಗಳ ಜಲಾಶಯದ ಪ್ರದೇಶಗಳಲ್ಲಿ ವಾಸಿಸಲು ಆರಂಭಿಸಿದಾಗ ಕೂಡ ಮಾನವ ತನ್ನ ಈ ಕಲಾಸಂಸ್ಕೃತಿ, ಕಲಾದೃಷ್ಟಿ, ಕಲಾಸೃಷ್ಟಿಗಳನ್ನು ಮುಂದುವರಿಸಿಕೊಂಡೇ ಬಂದ. ಸಿಂಧೂನದೀ ತೀರ, ಅಸ್ಸೀರಿಯ, ಈಜಿಪ್ಟ್‌ಗಳ ಪ್ರಾಚೀನ ನಾಗರಿಕತೆಗಳು ಮಾನವನ ಈ ಪ್ರಗತಿಗೆ ಕೆಲವು ನಿದರ್ಶನಗಳು. ತನ್ನ ಕಲಾತ್ಮಕತೆಯ ಅಭಿವ್ಯಕ್ತಿಗಾಗಿ ಅವನು ಚಿತ್ರ ಮಾಧ್ಯಮದ ಜೊತೆಗೆ ಇನ್ನೂ ಹಲವು ಮಾಧ್ಯಮಗಳನ್ನು–ಮಣ್ಣು, ಶಿಲೆ, ಲೋಹ –ಉಪಯೋಗಿಸಿಕೊಂಡು ಮೂರ್ತಿ ನಿರ್ಮಾಣ, ಮುದ್ರಿಕಾ



ಚರಿತ್ರಪೂರ್ವ ಕಾಲದ ಚಿತ್ರಕಾರರ ಸೃಷ್ಟಿ

[illegible] ನನ್ನು ಮಾನವ ಮುಟ್ಟಿದ್ದನ್ನೂ ಕಾಣುತ್ತೇವೆ.

[illegible] ವ್ಯಕ್ತವಾಗುತ್ತದೆ. ಮಾನವನ ವಿವಿಧ ಮಾನಸಿಕ ಶಕ್ತಿಗಳು ಕಾಲಕ್ರಮದಲ್ಲಿ ವಿಕಾಸಗೊಂಡಂತೆ ಅವನ ನೃತ್ಯ, ಗಾಯನ ಆಸಕ್ತಿಗಳೂ ಅಭಿವೃದ್ಧಿ ಹೊಂದಿದವೆನ್ನಬಹುದು. ಹೀಗೆ ನಾವು ಪ್ರಾಚೀನ ಸಂಸ್ಕೃತಿಗಳ ಕಾಲಕ್ಕೆ ಬರುವ ಹೊತ್ತಿಗೆ –ಅಂದರೆ ಕ್ರಿ. ಪೂ. ಎರಡು ಎರಡೂವರೆ ಸಾವಿರ ವರ್ಷಗಳ ಹಿಂದೆ– ಜಗತ್ತಿನ ವಿವಿಧ ಭಾಗಗಳ ಮಾನವರು ಚಿತ್ರ, ಶಿಲ್ಪ, ವಾಸ್ತುಶಿಲ್ಪ, ನೃತ್ಯ, ಸಂಗೀತಕಲೆಗಳಲ್ಲಿ ಗಣನೀಯ ಪ್ರಮಾಣದ ಪ್ರಗತಿ ಸಾಧಿಸಿದ್ದರೆಂಬುದು ವ್ಯಕ್ತವಾಗುತ್ತದೆ.

ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಮಾನವ ಜನಾಂಗಗಳ ನಡುವೆ ಸಂಪರ್ಕ ಬೆಳೆದಂತೆ ಒಂದೊಂದೂ ವರ್ಗದವರ ಕಲಾತ್ಮಕ ಸಾಧನೆಗಳು ಇತರ ಗುಂಪುಗಳ ಕಲಾಪ್ರವೃತ್ತಿಗಳ ಮೇಲೆ ಪ್ರಭಾವವನ್ನು ಬೀರಿದುವು. ಇದರಿಂದ ಹೊಸ ಹೊಸ ಕಲಾಸಂಪ್ರದಾಯಗಳು ಹುಟ್ಟಿಕೊಂಡುವು. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಗ್ರೀಕರು ರೂಪಿಸಿದ ಶಿಲ್ಪ, ವಾಸ್ತುಶಿಲ್ಪ, ಸಂಗೀತಗಳು ರೋಮನರ ಮೇಲೆ ಪ್ರಭಾವ ಬೀರಿದುವು. ಇವರಿಂದ ಸ್ಫೂರ್ತಿಗೊಂಡ ರೋಮನರು ಈ ಕಲೆಗಳಲ್ಲಿ ತಮ್ಮದೇ ಆದ ಬೆಳವಣಿಗೆಯನ್ನು ಸಾಧಿಸಿದರು. ನವೋದಯ ಕಾಲದಲ್ಲಿ ಇಟಲಿಯಲ್ಲಿ ರೂಪುಗೊಂಡ ಚಿತ್ರಕಲೆ ಇಡೀ ಯೂರೋಪಿನ ಚಿತ್ರಕಲೆಯ ಬೆಳವಣಿಗೆಗೆ ಮೂಲಾಧಾರವಾಯಿತು. ಭಾರತದ ಶಿಲ್ಪ, ನೃತ್ಯ, ಸಂಗೀತಗಳು ಏಷ್ಯಾಖಂಡದ ವಿವಿಧ ಪ್ರದೇಶಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು. ಹಾಗೆಯೇ ಭಾರತದ ಕಲೆಗಳ ಮೇಲೆ ಹೊರನಾಡುಗಳ ಕಲೆಗಳ ಪ್ರಭಾವ ಬಿದ್ದಿರುವುದನ್ನೂ ಗುರುತಿಸಬಹುದು.

ತನ್ನ ಹೃದಯ, ಮನಸ್ಸುಗಳನ್ನು ಕೆರಳಿಸಿದ, ಅರಳಿಸಿದ ಘಟನೆ, ಪರಿಸರಗಳನ್ನು ತನ್ನ ಅರಿವಿಗೆ ಅನುಸಾರವಾಗಿ ಅಭಿವ್ಯಕ್ತಿಗೊಳಿಸುವುದು ಮಾನವನ ಮೂಲ ಸ್ವಭಾವಗಳಲ್ಲೊಂದು. ಕುಶಲವಾದ ರೀತಿಯಲ್ಲಿ ಈ ಅಭಿವ್ಯಕ್ತಿಯನ್ನು ಬಹಿರಂಗಪಡಿಸಲು ಮಾನವನು ನಿರಂತರವಾಗಿ ಪ್ರಯತ್ನಿಸಿದ್ದಾನೆ. ಇನ್ನೂ ಪ್ರಯತ್ನಿಸುತ್ತಿದ್ದಾನೆ. ಇದಕ್ಕಾಗಿ ಹೊಸ ಹೊಸ ತಂತ್ರಗಳನ್ನೂ ವಿಧಾನಗಳನ್ನೂ ರೂಪಿಸಿಕೊಳ್ಳುತ್ತಲೇ ಇದ್ದಾನೆ.

ತನ್ನ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವ ಆಸಕ್ತಿ ಅವಶ್ಯತೆ ಎಲ್ಲಿಯವರೆಗೆ ಇರುತ್ತವೆಯೋ ಅಲ್ಲಿಯವರೆಗೆ ಮಾನವನ ಕಲಾಸೃಷ್ಟಿ ಒಂದಲ್ಲ ಒಂದು ರೂಪದಲ್ಲಿ ನಡೆಯುತ್ತಲೇ ಇರುತ್ತದೆ.

**ಹೀಗೆ, ಕಲೆ ಮಾನವ ಜೀವನದ ಒಂದು ಅಂಗ.**

## ಕವಿ

**" ಈ ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಕಾಣಬೀಳದ ಅನೇಕ ಆಕಾರ ವಿಕಾರ ಕವಿಯ ಅಂತಃಕರಣದ ಕನ್ನಡಿಯಲ್ಲಿ ಪ್ರತಿಬಿಂಬಿಸುತ್ತವೆ. ನಮ್ಮ ಕಿವಿಗೆ** ಕೇಳಿಬರದ ನಗು ಅಳು ಅವನ ಮನಸ್ಸಿನ ಗುಹೆಯಲ್ಲಿ ಪ್ರತಿಧ್ವನಿತವಾಗುತ್ತವೆ. ಹೀಗೆ ಸೂಕ್ಷ್ಮಾನುಭವ ಶಕ್ತಿಯನ್ನು ಪಡೆದಿರುವುದು ಮಾತ್ರವೇ ಅಲ್ಲ, ಈ ಅನುಭವಗಳಿಂದ ಕೆರಳಿ, ಆವೇಗದಲ್ಲಿ ತನ್ನೊಳಗೆ ಬೇರೊಂದು ಪ್ರಪಂಚವನ್ನು ಕಟ್ಟುವ ಶಕ್ತಿಯೂ ಅವನಿಗಿರುತ್ತದೆ. ಇದೇ ಕವಿ ಪ್ರತಿಭೆ " ಎನ್ನುತ್ತಾರೆ ಡಿ.ವಿ. ಗುಂಡಪ್ಪನವರು.

ಇಂಥ ಪ್ರತಿಭೆಯುಳ್ಳವನೇ ಕವಿ. ಆ ಪ್ರತಿಭೆಯಿಂದಾಗಿ ತನ್ನಲ್ಲಿ ಸ್ಫುರಿಸಿದ ಭಾವನೆಗಳಿಗೆ ಕವಿ ಪದಗಳ ಮೂಲಕ ಕಾವ್ಯರೂಪ ಕೊಡಬಲ್ಲ. ಓದುವವರ ಹೃದಯಕ್ಕೆ ನಾಟುವಂತೆ, ಮನಸ್ಸಿನ ಮೇಲೆ ಪರಿಣಾಮ ಬೀರುವಂತೆ ತನ್ನ ಭಾವನೆಗಳಿಗೆ ಅಭಿವ್ಯಕ್ತಿ ನೀಡಬಲ್ಲ.

ಒಂದು ವಿಚಾರ –ಒಂದು ಭಾವ– ಕವಿಯ ಮನಸ್ಸಿನಲ್ಲಿ ಕುದಿಕುದಿದು ಅಂತಿಮವಾಗಿ ಕಾವ್ಯರೂಪದಲ್ಲಿ ಹೊರಹೊಮ್ಮುತ್ತದೆ. ಕವಿಯ ಸಂವೇದನೆ ಇತರರಿಗಿಂತ ಸೂಕ್ಷ್ಮವಾದದ್ದು. ಅಂದರೆ ದುಃಖ, ಕರುಣೆ, ಭೀತಿ, ಚಿಂತೆ, ಆನಂದ, ರೋಷ, ವಿಷಣ್ಣತೆ ಮುಂತಾದ ಭಾವನೆಗಳನ್ನು ಅವನು ಇತರರಿಗಿಂತ ಹೆಚ್ಚು ಸೂಕ್ಷ್ಮವಾಗಿ ಅನುಭವಿಸಬಲ್ಲ, ಅರ್ಥಮಾಡಿಕೊಳ್ಳಬಲ್ಲ. ಅವನ ಎದೆಗುದಿ ಇತರರಿಗಿಂತ ತೀವ್ರತರ.

ಕವಿ ಸ್ಫೂರ್ತಿ ಬಂದಾಗ ಕಾವ್ಯ ನಿರ್ಮಿಸುತ್ತಾನೆ ಎಂಬುದು ಸಾಮಾನ್ಯ ಹೇಳಿಕೆ. ಮನದಲ್ಲಿ ಮಥನವಾದ ವಿಷಯ ಮಾತುಗಳ ರೂಪದಲ್ಲಿ ಹೊರಹೊಮ್ಮಲು ಉಂಟಾಗುವ ಕಾತರವೇ ಸ್ಫೂರ್ತಿ. ಸತತವಾದ ಆಲೋಚನೆ ಮಾತ್ರವಲ್ಲದೆ ಅಂತರ್ಬೋಧೆಯೂ ಕವಿಯ ಗುಣ.

ಡಿ ವಿ ಜಿ ಅವರು ಹೇಳುವಂತೆ ಕವಿಗಳಲ್ಲಿ ಎರಡು ಬಗೆ :

ತಮ್ಮ ಅಂತರಂಗದ ಭಾವಗಳನ್ನು – ಬಾಹ್ಯ ಪ್ರಪಂಚವನ್ನು ಗಣನೆಗೆ ತೆಗೆದುಕೊಳ್ಳದೆ– ಹೊರಪಡಿಸುವವರು ಒಂದು ಬಗೆ; ತಮ್ಮ ಆತ್ಮಸಂತುಷ್ಟಿಗಾಗಿ ತಮ್ಮೆದೆಯ ಹೊರೆಯನ್ನಿಳಿಸಿಕೊಳ್ಳುವುದಕ್ಕಾಗಿ ಹಾಡಿಕೊಳ್ಳುವವರು ಇವರು. ಆಂತರಿಕಾನುಭವ ಏನೆಂಬುವರ ಸೆಲೆಯನ್ನು ಅಷ್ಟಾಗಿ ತೋರದೆ, ಸಕಲ ಮಾನವರ ಅನುಭವಕ್ಕೂ ದೊರೆಯಬಹುದಾದ ಅಂಶಗಳನ್ನು ಚಿತ್ರಿಸುವವರು ಎರಡನೆಯ ಪಂಗಡದವರು.

ಕವಿ ಈ ಎರಡು ಪಂಗಡಗಳಲ್ಲಿ ಯಾವುದಕ್ಕೇ ಸೇರಿರಲಿ ಅವನು ಉತ್ತಮ ಕವಿಯಾಗಬೇಕಾದರೆ ಅವನಲ್ಲಿ ಪ್ರಜ್ಞೆ, ಪ್ರತಿಭೆ ಇವೆರಡೂ ಇದ್ದೇ ಇರಬೇಕು. ಕವಿ ಗಳಿಸಿದ ನಾನಾ ವಿಧದ ತಿಳಿವಳಿಕೆಯ ಸಾರಸರ್ವಸ್ವವಾದ ಪ್ರಜ್ಞೆ ಪ್ರತಿಭೆಯ ಮೂಲಕ ಹರಿದುಬಂದಾಗ, ಕವಿಕರ್ಮ ಅಂದರೆ ಕಾವ್ಯ ಆಕರ್ಷಕವಾಗುತ್ತದೆ. ಭಾರತದ ಪ್ರಾಚೀನ ಕಾವ್ಯಮೀಮಾಂಸಕರಲ್ಲೊಬ್ಬರ ಪ್ರಕಾರ—ಪ್ರಜ್ಞೆ ಸೂರ್ಯನ ಕಿರಣದಂತೆ, ಪ್ರತಿಭೆ ಚಂದ್ರನಂತೆ; ಸೂರ್ಯನ ಕಿರಣ ಚಂದ್ರ ಮಂಡಲದ ಮೇಲೆ ಬಿದ್ದು ಪ್ರತಿಫಲಿಸಿದಾಗ ರಮ್ಯವೂ ಆಹ್ಲಾದಕರವೂ ಆದ ಬೆಳದಿಂಗಳಾಗುತ್ತದೆ.

ಪ್ರಜ್ಞೆ, ಪ್ರತಿಭೆಗಳ ಸಾಮರಸ್ಯ ಸ್ವರೂಪನೇ ಕವಿ.

## ಕವಿತೆ

''ಕೋಳಿ ಕೂಗಿತೇಳು ಕಂದ
ಸೂರ್ಯ ಪೂರ್ವದಲ್ಲಿ ಬಂದ
ಹೆಚ್ಚು ಮಲಗಲೇನು ಚಂದ
ಬಾ ಕಂದ, ಟಿಕ್ ಟಾಕ್, ಟಿಕ್ ಟಿಕ್ ಟಿಕ್''

–ಇದೊಂದು ಶಿಶುಗೀತೆ. ಏಳು ಮಗು, ಸೂರ್ಯ ಹುಟ್ಟಿದ್ದಾನೆ: ಇನ್ನು ಮಲಗಬಾರದು ಎಂಬ ಮಾತುಗಳಿಗಿಂತ, ಈ ಪದ್ಯ ಚೆನ್ನಾಗಿ ಮನಸ್ಸಿನಲ್ಲಿ ನಾಟುತ್ತದೆ. ಮನಸ್ಸಿನಲ್ಲಿ ಕಲ್ಪನೆಗಳನ್ನು ಮೂಡಿಸುವ.

ಭಾವನೆಗಳನ್ನು ಪ್ರತಿಬಿಂಬಿಸುವ, ಮನಸ್ಸನ್ನು ಜಾಗೃತಗೊಳಿಸುವ ಸಾಮರ್ಥ್ಯವಿದೆ ಕವಿತೆಗೆ, ಕಾವ್ಯಕ್ಕೆ.

ಜೀವನದಲ್ಲಿ ತಾನು ಕಂಡ ಸತ್ಯಸೊಬಗುಗಳನ್ನು ತಾನುಂಡ ಸಿಹಿಕಹಿಗಳನ್ನು ಕವಿ ತನ್ನ ಕವಿತೆಗಳ ಮೂಲಕ ನಮಗೆ ತಿಳಿಸುತ್ತಾನೆ. ಸರ್ವಜ್ಞನ ಈ ಕವಿತೆಯನ್ನು ನೋಡಿ :

"ಡೊಂಕು ಫಲದೊಳಗೆಲ್ಲ ಡೊಂಕು ಬಾಳೆಯ ಹಣ್ಣು ;
ಡೊಂಕಾದರೊಳಗೆ ರುಚಿಯುಂಟು ಸಜ್ಜನರ
ಡೊಂಕು ಇಂತಿರ್ಪುದಯ್ಯ ಸರ್ವಜ್ಞ"

ತನ್ನ ಅನುಭವದಿಂದ ಕಂಡುಕೊಂಡ ಸತ್ಯವನ್ನು ಎಷ್ಟು ಸುಂದರವಾಗಿ ಹೇಳಿದ್ದಾನೆ ಕವಿ, ಈ ಚಿಕ್ಕ ಪದ್ಯದಲ್ಲಿ! ಕವಿ ತನ್ನ ಭಾವನೆಗಳನ್ನು, ದರ್ಶನವನ್ನು ಹೇಳುವುದು ಮಾತ್ರವಲ್ಲ; ಅವನ್ನು ರಮಣೀಯವಾಗಿಯೂ ಹೇಳುತ್ತಾನೆ. ಆಗಲೇ ಕವಿತೆ ಸತ್ವಪೂರ್ಣವಾಗುತ್ತದೆ.

ಸೃಷ್ಟಿಯಲ್ಲಿ ಸೊಬಗಿದೆ. ಅದನ್ನು ಕಂಡ ಕವಿಯ ಮನಸ್ಸು ಆ ಸೊಬಗಿನ ಹಿಂದಿನ ಸತ್ಯದ ಕಡೆಗೂ ತಿರುಗುತ್ತದೆ.

"ಮೇಲೆ ನೋಡೆ ಕಣ್ಣ ತಣಿಪ
ನೀಲಪಟದಿ ವಿವಿಧ ರೂಪ
ಜಾಲಗಳನು ಬಣ್ಣಿಸಿರ್ಪ ಚಿತ್ರಚತುರನಾರ್
ಕಾಲದಿಂದೆ ಮಾಸದಾ ವಿಚಿತ್ರವೆಸೆಪನಾರ್"

–ಎಂದು ತಮ್ಮನ್ನು ತಾವೇ ಪ್ರಶ್ನಿಸಿಕೊಂಡಿದ್ದಾರೆ, ಡಿ ವಿ ಜಿ. ಇದು ನಮಗೆ ಹಾಕಿದ, ನಾವೂ ಉತ್ತರ ಕಂಡುಕೊಳ್ಳ ಬೇಕಾದ ಪ್ರಶ್ನೆ.

ಪಂಪಾ ಸರೋವರದ ಸೊಬಗು ಕುವೆಂಪು ಅವರ ಬಗೆಗಣ್ಣಿಗೆ ಕಂಡದ್ದು ಹೀಗೆ :

"ಸಹ್ಯಾದ್ರಿ ಕಾನನ ಕ್ಲೇಶಯಾತ್ರೆಗೆ ದಣಿದ
ತುಂಗಭದ್ರೆಯ ನೀರ ನಿದ್ರೆಗೆ ನಿಸರ್ಗರಮೆ ತಾಂ
ಮಾರ್ಗಸತ್ರದಿ ಸಮೆದ ವಿಶ್ರಾಂತಿ ಮಂಚಮೆನೆ
ಶೋಭಿಸಿತು, ಬೆಟ್ಟದಡವಿಯ ಕಣಿವೆ ತಳ್ಪಲಿನ
ತುಂಬುಗಣ್ಣಿಂಬಿನಂ, ಕಣ್ಣುಂಬೆ ತುಂಬಿದಾ
ಪಂಪಾಸರೋವರದ ಸಲಿಲದರ್ಪಣ ದೀರ್ಘ
ವಿಸ್ತಾರ ಸರ್ಪಶೈಲಿ"

ಅರುಣೋದಯ ಬೇಂದ್ರೆಯವರಿಗೆ ಕಂಡದ್ದು ಈ ರೀತಿ :

" ಮೂಡಲ ಮನೆಯಾ ಮುತ್ತಿನ ನೀರಿನ
ಎರಕವ ಹೊಯ್ದಾ
ನುಣ್ಣ–ನ್ನೆರಕವ ಹೊಯಾ
ಬಾಗಿಲ ತೆರದೂ ಬೆಳಕು ಹರಿದು
ಜಗವೆಲ್ಲಾ ತೋಯ್ದಾ
ಹೋಯ್ತೊ–ಜಗವೆಲ್ಲಾ ತೋಯ್ದಾ"

ಕಾವ್ಯವಾಗಲೀ, ಕವಿತೆಯಾಗಲೀ ಇಂದಿನದಲ್ಲ. ಚರಿತ್ರ ಪೂರ್ವ ಮಾನವನ ಕಾಲದ ಮಡಿಲಿನಲ್ಲಿ ಇದರ ಮೂಲ ಅಡಗಿದೆ. ಅಂದಿನಿಂದಲೂ ಅವನು ತನ್ನ ಮೇಲೆ ಪರಿಣಾಮ ಬೀರಿದ ದೃಶ್ಯ, ಘಟನೆಗಳಿಗೆ ಕಲಾತ್ಮಕ ಅಭಿವ್ಯಕ್ತಿ ನೀಡಲು ಪ್ರಯತ್ನಿಸಿದ್ದುಂಟು. ಅವನು ಮಾತನಾಡುವುದನ್ನು ಕಲಿತು ಭಾಷೆಯನ್ನು ಬೆಳೆಸಿಕೊಂಡ ಮೇಲೆ ಮಾತುಗಳ ಮೂಲಕ ತನ್ನ ಭಾವನೆಗಳಿಗೆ ರೂಪುಕೊಟ್ಟ. ಈ [illegible] ಕವಿತೆಗಳ ಹುಟ್ಟಿಗೆ ದಾರಿಯಾಯಿತು. ಕ್ರಮವಾಗಿ ಅವನು ಮಾತುಗಳ ಮೂಲಕ ಭಾವ. ಪ್ರತಿಕ್ರಿಯೆಗಳನ್ನು [illegible] ಅವನು ಇತರರ ಮನ ಮುಟ್ಟುವಂತೆ, ರಮಣೀಯವಾದ ರೀತಿಯಲ್ಲಿ ಹೇಳುವುದನ್ನೂ ಕಲಿತ. ಹೀಗೆ ಸಾಹಿತ್ಯದ ಅತ್ಯಂತ ಕಲಾತ್ಮಕ ಪ್ರಕಾರವಾದ ಕವಿತೆ ರೂಪುಗೊಂಡಿತು. ಕವಿತೆ ಹೊಮ್ಮುವುದು ಕವಿಯ ಅಂತರಂಗದಿಂದ. ಸಹೃದಯನಾದ ಓದುಗನ ಬಗೆಗಣ್ಣನ್ನು ತೆರೆಯಬಲ್ಲ ಮಾಂತ್ರಿಕ ಶಕ್ತಿ ಅದಕ್ಕಿದೆ. ಓದುಗನ ಮುಂದೆ ಒಂದು ಹೊಸಲೋಕವನ್ನೇ ಅದು ಸೃಷ್ಟಿಸಬಲ್ಲುದು. ಅವನ ಮನವನ್ನು ತಣಿಸಬಲ್ಲುದು; ತಳಮಳ ಉಂಟು ಮಾಡಲೂ ಬಲ್ಲುದು.

ಯಾವುದೇ ಭಾಷೆಯ ಕವಿತೆಯಲ್ಲಿ ಕೆಲವು ಅವಶ್ಯ ಅಂಗಗಳಿದ್ದೇ ಇರುತ್ತವೆ. ಛಂದಸ್ಸು ಪ್ರಾಸ ಲಯ –ಹೀಗೆ. ಈ ಯಾವುದೇ ನಿಯಮಗಳಿಗೆ ಒಳಗಾಗದ, ಅವನ್ನು ಮೀರಿದ ಮುಕ್ತ ಕವನಗಳೂ ಇವೆ.

ಕವಿತೆಯ ಮೂಲ ಸಾಮಗ್ರಿ ಭಾಷೆ. ಇದನ್ನು ಆದಷ್ಟು ಮಿತವಾಗಿ ಬಳಸಿ, ಆದಷ್ಟು ಹೆಚ್ಚು ಅರ್ಥವನ್ನು ಸೂಚಿಸುವುದು ಒಳ್ಳೆಯ ಕವಿತೆಯ ಲಕ್ಷಣ. ಇದರ ಸಿದ್ಧಿ ಕವಿಯ ಪ್ರತಿಭೆಯನ್ನೂ ಅವನ ಭಾಷಾ ಸಂಪತ್ತನ್ನೂ ಅವಲಂಬಿಸಿದೆ.

ಕವಿತೆ, ಕಂಡದ್ದನ್ನು ಕಂಡಂತೆ ಹೇಳುವ ವರದಿಯಲ್ಲ, ಕವಿಯ ತಿಳಿವಳಿಕೆ ಜ್ಞಾನಗಳು ಪ್ರತಿಭೆಯ ಮೂಸೆಯಲ್ಲಿ ಬೆಂದು, ಪಕ್ವವಾಗಿ ಬರಬೇಕು. ಆಗ ರವಿ ಕಾಣದ್ದು ಕೂಡ ಕವಿಗೆ ಕಾಣುತ್ತದೆ. ಈ ದರ್ಶನದಿಂದ ಪ್ರೇರೇಪಿತವಾದ ಕವಿ ಕೃತಿ 'ಕವಿತೆ'ಯಾಗುತ್ತದೆ.

## 'ಕವಿರಾಜಮಾರ್ಗಂ'

"ಕಾವೇರಿಯಿಂದಮಾ ಗೋ
ದಾವರಿವರಮಿರ್ದ ನಾಡದಾ ಕನ್ನಡದೊಳ
ಭಾವಿಸಿದ ಜನಪದಂ ವಸು
ಧಾವಲಯವಿಲೀನ ವಿಶದ ವಿಷಯ ವಿಶೇಷಂ"

ಇದುವರೆಗೆ ನಮಗೆ ದೊರೆತಿರುವ ಅತ್ಯಂತ ಪ್ರಾಚೀನ ಕನ್ನಡ ಗ್ರಂಥ 'ಕವಿರಾಜಮಾರ್ಗಂ'. ಅದರಲ್ಲಿ ಕನ್ನಡ ನಾಡಿನ ವಿಸ್ತಾರವನ್ನು ಕುರಿತು ಹೇಳುವ ಪದ್ಯ ಮೇಲಿನದು.

'ಕವಿರಾಜಮಾರ್ಗ'ವು ಮುಖ್ಯವಾಗಿ ಒಂದು ಲಕ್ಷಣ ಗ್ರಂಥ. ಅಂದರೆ, ಸಾಹಿತ್ಯ ರಚನೆಯಲ್ಲಿ ಅನುಸರಿಸಬೇಕಾದ ಭಾಷೆ, ಶೈಲಿ, ಛಂದಸ್ಸು ಮುಂತಾದ ಲಕ್ಷಣಗಳನ್ನು ಕುರಿತ ಗ್ರಂಥ. ಆದರೂ ಇದರಲ್ಲಿ ಕನ್ನಡ ನಾಡಿನ ವಿಸ್ತಾರ ಮತ್ತು ಕನ್ನಡಿಗರ ವಿಚಾರವಾಗಿ ಕೆಲವು ಅಮೂಲ್ಯ ಸಂಗತಿಗಳಿವೆ. ಇವುಗಳಿಂದ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಬಗೆಗೆ ಗಮನಾರ್ಹವಾದ ಅಂಶಗಳು ತಿಳಿದುಬರುತ್ತವೆ. ಉದಾಹರಣೆಗೆ: ಕಿಸುವೊಳಲು (ಪಟ್ಟದಕಲ್ಲು) ಕೊಪಣನಗರ (ಕೊಪ್ಪಳ) ಪುಲಿಗೆರೆ (ಲಕ್ಷ್ಮೇಶ್ವರ) ಗಳ ನಡುವಣ ಪ್ರದೇಶವು ತಿರುಳ್ಗನ್ನಡ ನಾಡು. ಕನ್ನಡದ ಜನ 'ಚದುರರ್ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್'.

ಇದಲ್ಲದೆ, 9ನೆಯ ಶತಮಾನದಲ್ಲಿ 'ಕವಿರಾಜಮಾರ್ಗ' ರಚಿತವಾಗುವ ಹೊತ್ತಿಗೆ, ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆದಿತ್ತು. ವಿಮಳೋದಯ,

[illegible] ಎಂದು ಕವಿರಾಜಮಾರ್ಗದಲ್ಲಿ ಹೇಳಲಾಗಿದೆ. ಆದರೆ, ಇವು ಯಾವ ಗ್ರಂಥಗಳೂ ಈವರೆಗೆ ಲಭಿಸಿಲ್ಲ.

'ಕವಿರಾಜಮಾರ್ಗ'ದ ಕರ್ತೃ ಯಾರು? ರಾಷ್ಟ್ರಕೂಟ ದೊರೆ ನೃಪತುಂಗ ಇದನ್ನು ಬರೆದನೆಂಬುದು [illegible] ಅಭಿಪ್ರಾಯ. ಆದರೆ ನೃಪತುಂಗನ ಆಸ್ಥಾನದ ಪ್ರಾಜ್ಞಕವಿ ಶ್ರೀವಿಜಯನು ಇದನ್ನು ರಚಿಸಿದ್ದಾನೆ; ನೃಪತುಂಗನಲ್ಲ — ಎಂಬುದು ಇತ್ತೀಚಿನ ನಿಲುವು. ಡಾ. ಶ್ರೀ. ಮುಗಳಿಯವರು "ಕವಿರಾಜಮಾರ್ಗವು ನೃಪತುಂಗ ರಚಿತವಾದ ಗ್ರಂಥವಲ್ಲ ಎಂಬುದು ಗಟ್ಟಿ ಮಾತು" ಎಂದಿದ್ದಾರೆ. 'ಕವಿರಾಜಮಾರ್ಗ'ದಲ್ಲಿ ಮೂರು ಪರಿಚ್ಛೇದಗಳಿವೆ. ಮೂರರ ಅಂತ್ಯದಲ್ಲೂ 'ನೃಪತುಂಗ ದೇವಾನುಮತಮಪ್ಪ ಕವಿರಾಜಮಾರ್ಗ' ಎಂದು ಬರುತ್ತದೆ. ಬೇರೊಬ್ಬರು ಬರೆದದ್ದನ್ನು ನೃಪತುಂಗದೇವ ಒಪ್ಪಿದ ಎಂದು ಇದರ ಅರ್ಥ. ಅಲ್ಲದೆ ಕೃತಿಯಲ್ಲಿ ಅನೇಕ ಕಡೆ ನೃಪತುಂಗನ ಗುಣಗಾನ ಬಿರುದುಗಳ ವಿವರವಾದ ಪ್ರಸ್ತಾಪಗಳು ಬರುತ್ತವೆ. ಆದ್ದರಿಂದ ಕವಿರಾಜಮಾರ್ಗವನ್ನು ಬರೆದವನು ನೃಪತುಂಗನ ಒಬ್ಬ ಸಭಾಸದನೇ ಇರಬೇಕು. ನೃಪತುಂಗ ಬರೆದುದಲ್ಲ ಎನ್ನುವವರ ಜೊತೆಗೆ ಶ್ರೀವಿಜಯ ಎಂಬವನು ಬರೆದದ್ದು ಎಂಬ ಬಗೆಗೂ ಸುಳಿವು ಸಿಗುತ್ತದೆ. ಕನ್ನಡ 'ಪಂಚತಂತ್ರ'ವನ್ನು ಬರೆದ ದುರ್ಗಸಿಂಹನು ತನ್ನ ಕೃತಿಯಲ್ಲಿ "ಶ್ರೀವಿಜಯರ ಕವಿಮಾರ್ಗ ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕಯ್ದೀವಿಗೆಯುಂ" ಎಂದಿರುವುದು ಈ ಊಹೆಗೆ ಪೋಷಕವಾಗಿದೆ.

ಇವಲ್ಲದೆ ಇನ್ನೂ ಒಂದು ಊಹೆ ಇದೆ. ಅದೇನೆಂದರೆ, ಶ್ರೀವಿಜಯ ಎಂಬ ಪ್ರಾಚೀನ ಕವಿ 'ಕವಿಮಾರ್ಗ' ಎಂಬ ಲಕ್ಷಣ ಗ್ರಂಥ ಬರೆದ. ಅದನ್ನು ಕವೀಶ್ವರ ಎಂಬವನು ವಿಸ್ತರಿಸಿ 'ಕವಿರಾಜಮಾರ್ಗ' ವನ್ನು ರಚಿಸಿದ ಎಂಬುದು. ಇದು ಕವಿ ಚರಿತ್ರಕಾರ ಆರ್. ನರಸಿಂಹಾಚಾರ್ಯರ ಅಭಿಪ್ರಾಯ.

ಈ ಅಭಿಪ್ರಾಯಗಳೇನೇ ಇರಲಿ, 'ಕವಿರಾಜಮಾರ್ಗ'ವು ನೃಪತುಂಗನ ಕಾಲದಲ್ಲಿ ಅಂದರೆ 814—877ರ ಅವಧಿಯಲ್ಲಿ ರಚಿತವಾಗಿರಬೇಕೆಂಬ ಬಗೆಗೆ ಭಿನ್ನಾಭಿಪ್ರಾಯವಿಲ್ಲ.

'ಕವಿರಾಜಮಾರ್ಗ'ದಲ್ಲಿ ಛಂದಸ್ಸು, ಪ್ರಾಸಯೋಜನೆ, ಕನ್ನಡ–ಸಂಸ್ಕೃತ ಪದಗಳ ಉಪಯೋಗದಲ್ಲಿ ಸಾಮರಸ್ಯ ಸಾಧನೆ, ಕಾವ್ಯ ಶೈಲಿಗಳ ಬಗೆಗೆ ಅನುಸರಿಸಬೇಕಾದ ಕಟ್ಟುಪಾಡು ಮತ್ತು ನಿಯಮಗಳು ನಿರೂಪಿತವಾಗಿವೆ. ಸಂಸ್ಕೃತದ ಲಾಕ್ಷಣಿಕ ದಂಡಿಯ 'ಕಾವ್ಯಾದರ್ಶ'ದ ಪ್ರಭಾವವನ್ನು ಈ ಗ್ರಂಥದಲ್ಲಿ ಕಾಣಬಹುದು. ಆದರೂ ಇದು ಒಂದು ಸ್ವತಂತ್ರ ಕೃತಿ. ಈಗ ಗೊತ್ತಿರುವ ಮಟ್ಟಿಗೆ 'ಕವಿರಾಜಮಾರ್ಗ' ಕನ್ನಡದಲ್ಲಿ ರಚಿತವಾಗಿರುವ ಮೊಟ್ಟಮೊದಲನೆಯ ಅಲಂಕಾರ ಗ್ರಂಥ. ಆದ್ದರಿಂದ ಇದಕ್ಕಿಂತ ಹಿಂದೆ ಕನ್ನಡದಲ್ಲಿ ಸಾಹಿತ್ಯ ರಚನೆಯಾಗಿರಬೇಕೆಂಬುದು ನಿರ್ವಿವಾದದ ಅಂಶ.

**ನೋಡಿ : ದಂಡಿ**

## ಕಸೂತಿ ಕಲೆ

ಸೂಜಿ ಮತ್ತು ಬಣ್ಣಬಣ್ಣದ ದಾರಗಳ ನೆರವಿನಿಂದ ಬಟ್ಟೆಯ ಮೇಲೆ ಬಿಡಿಸಿದ ಚಿತ್ರ ಅಥವಾ ವಿನ್ಯಾಸವೇ ಕಸೂತಿ ಕಲೆ. ಕಸೂತಿ ಕಲೆ ಬಹಳ ಪ್ರಾಚೀನವಾದದ್ದು. ಇದು ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯಾಗಿ ಬೆಳೆದಿದೆ. ಆಯಾ ಪ್ರದೇಶಗಳಲ್ಲಿ ದೊರೆಯುವ ದಾರ ಮತ್ತಿತರ ಸಾಮಗ್ರಿಗಳು ಹಾಗೂ ಅಲ್ಲಿ ರೂಢಿಯಲ್ಲಿರುವ ಹೊಲಿಗೆ ವಿಧಾನ-ವಿನ್ಯಾಸಗಳು ಕಸೂತಿಗೆ ವೈವಿಧ್ಯವನ್ನು ಒದಗಿಸಿವೆ. ಪೌರಸ್ತ್ಯ ದೇಶಗಳಲ್ಲಿ ಬೆಲೆಬಾಳುವ ರೇಷ್ಮೆ ಹಾಗೂ ಹತ್ತಿಯ ಬಟ್ಟೆಗಳ ಮೇಲೆ ಕಸೂತಿ ಮಾಡುತ್ತಾರೆ: ಯೂರೋಪಿನಲ್ಲಿ ನಾರಗಸೆಯ ನಾರಿನಿಂದ ಮಾಡಿದ ಲಿನನ್ ಬಟ್ಟೆಯ ಮೇಲೆ ಕಸೂತಿ ಹಾಕುತ್ತಾರೆ.

ಶುಭ್ರವಾದ ಬಟ್ಟೆಯ ಮೇಲೆ ಹಿನ್ನೆಲೆಯ ಬಣ್ಣಕ್ಕೆ ಒಪ್ಪುವಂತೆ ನಯವಾದ, ಹೊಳಪಿನ ಬಣ್ಣಬಣ್ಣದ ದಾರಗಳಿಂದ ಹಾಕಿದ ಕಸೂತಿ ವಿನ್ಯಾಸಗಳು ಮನಮೋಹಕ. ಗಿಡಬಳ್ಳಿ, ಹೂ, ಪ್ರಾಣಿ ಪಕ್ಷಿಗಳ ಚಿತ್ರಗಳು, ಎಳೆಯರ ಮುಗ್ಧ ಮುಖಗಳು, ರಾಧಾಕೃಷ್ಣರಂಥ ಪೌರಾಣಿಕ ವ್ಯಕ್ತಿಗಳು—ಹೀಗೆ ಕಸೂತಿಯ ವಿಷಯವ್ಯಾಪ್ತಿ ದೊಡ್ಡದು.

ಮೊದಲ ನೋಟಕ್ಕೆ ಮನಸೆಳೆಯುವ ಇದರ ಚೆಲುವು ಸೌಂದರ್ಯೋಪಾಸಕರನ್ನು ತಣಿಸುತ್ತದೆ. ಸರಿಯಾದ ಹದವಾದ ಬಣ್ಣಗಳ ಮೇಳ, ಸೂಕ್ತ ಹಾಗೂ ನಾಜೂಕು ಹೊಲಿಗೆಗಳು —ಇವು ಕಸೂತಿಯ ಸೊಬಗಿಗೆ ಕಾರಣ. ವಸ್ತುವಿನ ಆಯ್ಕೆಯಲ್ಲಿ ಜಾಣ್ಮೆ ಹಾಗೂ ಕಸೂತಿ ಹಾಕುವ ಕೈಚಳಕ ಆ ಸೊಬಗನ್ನು ಇಮ್ಮಡಿಸುತ್ತವೆ.

ಕಸೂತಿಗೆ ಎಲ್ಲ ಬಗೆಯ ದಾರಗಳನ್ನು ಉಪಯೋಗಿಸಬಹುದಾದರೂ ರೇಷ್ಮೆ ಹಾಗೂ ಉಣ್ಣೆದಾರಗಳ ಬಳಕೆಯೇ ಹೆಚ್ಚು. ಇವಕ್ಕೆ ಸುಲಭವಾಗಿ ರಂಗು ಕೊಡಬಹುದೆನ್ನುವುದೇ ಇವುಗಳ ವ್ಯಾಪಕ ಬಳಕೆಗೆ ಕಾರಣ. ಚಿನ್ನ ಬೆಳ್ಳಿಯ ಸರಿಗೆಗಳಲ್ಲದೆ ಇತರ ಕೆಲವು ಲೋಹಗಳನ್ನು ಕಸೂತಿಯಲ್ಲಿ ಸೇರಿಸುವ ವಾಡಿಕೆ ಬಹಳ ಕಾಲದಿಂದಲೂ ಇದೆ. ಬರೀ ದಾರದಿಂದಲೇ ವಿನ್ಯಾಸವನ್ನು ತುಂಬಿಸಬಹುದು. ಅಥವಾ ಅದರಲ್ಲಿ ಬೀಜ, ಚಿಪ್ಪು, ಗುಂಡಿ, ಮಣಿ, ರಿಬ್ಬನ್, ರತ್ನಗಳು, ಲೋಹದ ತುಂಡುಗಳು, ಹೊಂದಿಕೆಯಾಗುವ ಬಣ್ಣದ ವಸ್ತ್ರಗಳು ಮುಂತಾದುವನ್ನು ಕಲಾತ್ಮಕವಾಗಿ ಜೋಡಿಸಬಹುದು.

ಅಸ್ಸೀರಿಯ, ಪರ್ಷಿಯಗಳ ಪ್ರಾಚೀನ ಸಂಸ್ಕೃತಿಗಳ ಅವಶೇಷಗಳಿಂದ ಆ ಕಾಲದ ಜನರಿಗೆ ಕಸೂತಿ ಕಲೆ ತಿಳಿದಿದ್ದಿತೆಂದು ಕಂಡುಬಂದಿದೆ. ಈಜಿಪ್ಟ್, ಗ್ರೀಸ್‌ಗಳಲ್ಲಿ ಕೂಡ ಕಸೂತಿ ಕಲೆ ಇದ್ದಿತು. ಸುಮಾರು ಕ್ರಿ. ಪೂ. 16ನೆಯ ಶತಮಾನದ ಈಜಿಪ್ಟಿನ ಕಸೂತಿಯ ತುಣುಕುಗಳು ದೊರೆತಿವೆ. ಕ್ರಿ. ಪೂ. 3ನೆಯ ಶತಮಾನದ ಚೀನೀ ಕಸೂತಿಯು ಇಂದಿನವರೆಗೆ ದೊರೆತ ಅಲ್ಲಿನ ಕಸೂತಿ ಕಲೆಗಾರಿಕೆಯಲ್ಲಿ ಅತಿ ಹಳೆಯದು. ಇಲ್ಲಿ ಇದಕ್ಕಿಂತಲೂ ಬಹಳ ಹಿಂದೆಯೇ ಈ ಕಲೆ ಇದ್ದು ಬಹುಶಃ ಆ ಕಾಲದ ಕೃತಿಗಳು ಜೀರ್ಣವಾಗಿ, ಈಗ ಲಭ್ಯವಿಲ್ಲದಿರಬಹುದು. ಒಟ್ಟಿನಲ್ಲಿ ಪ್ರಾಚೀನ ಕಸೂತಿಗಳು ನಾಜೂಕಾಗಿಯೂ ಆಲಂಕಾರಿಕವಾಗಿಯೂ ಇದ್ದುವು ಎಂಬುದರಲ್ಲಿ ಅನುಮಾನವಿಲ್ಲ. ಪ್ರಾಚೀನ ಚೀನದ ಕೆಲವು ಕಸೂತಿ ಕೆಲಸಗಳು ಅತ್ಯಂತ ಕಲಾತ್ಮಕವಾಗಿವೆ.

ಪ್ರಾಚೀನ ಭಾರತದಲ್ಲಿ ಪ್ರಚುರವಾಗಿದ್ದ ಕಸೂತಿ ಕಲೆ ಇಂದಿಗೂ ಜೀವಂತವಾಗಿದೆ. ಕನ್ನಡಿಯ ತುಣುಕು, ಕೆಲವು ಬೀಜಗಳು, ಮಿರುಗುವ ನೀಲ ಜೀರುಂಡೆಯ ರೆಕ್ಕೆ –ಇಂಥ ಹಲವು ಬಗೆಯ ವಸ್ತುಗಳನ್ನು ಸೇರಿಸಿ ವಿಶೇಷ ಪರಿಣಾಮ ಉಂಟುಮಾಡುವುದು ಭಾರತೀಯ ಕಸೂತಿಯ ವೈಶಿಷ್ಟ್ಯ.



ರಷ್ಯದ 17ನೆಯ ಶತಮಾನದ ಕಸೂತಿ ಕೆಲಸ ; ಹಾಸುಗೆ ಹೊದಿಕೆಯ ಅಂಚು : ಸ್ವರ್ಗದ ಚಿತ್ರ

ಚಾಲುಕ್ಯರು ಹಾಗೂ ವಿಜಯನಗರ ಅರಸರ ವೈಭವದ ಕಾಲಗಳಲ್ಲಿ ಅವರ ಆಡಳಿತಕ್ಕೆ ಸೇರಿದ ಕರ್ನಾಟಕ ಪ್ರದೇಶಗಳಲ್ಲಿ ಅತ್ಯಂತ ರಮಣೀಯ ಕಸೂತಿ ಕಲೆಗಳು ರಚಿಸಲ್ಪಟ್ಟುವು. ನವುರಾದ, ತೆಳು ಬಟ್ಟೆಯ ಮೇಲೆ ನೃತ್ಯಗಾರ್ತಿಯರಿಗಾಗಿ ಕಸೂತಿ ಮಾಡುವುದು 17, 18ನೆಯ ಶತಮಾನಗಳಲ್ಲಿ ನಮ್ಮಲ್ಲಿ ರೂಢಿಯಲ್ಲಿದ್ದಿತು. ದೇವಾಲಯ ವಾಸ್ತುಶಿಲ್ಪದಲ್ಲಿ ಬರುವ ಗೋಪುರ, ರಥ, ತೇರುಗಳು, ಹಾಗೂ ಸಹಜಜೀವನ ದೃಶ್ಯಗಳಾದ ತೊಟ್ಟಿಲು, ತುಲಸಿಕಟ್ಟೆ, ನಂದಿ, ಅಂಬಾರಿಯುಳ್ಳ ಆನೆ, ಗಿಣಿ, ನವಿಲು ಇವೆಲ್ಲ ಕಸೂತಿಯ ವಿಷಯಗಳಾದುವು. ಸಿಬಿರ ರಚನೆಯ ರೇಖಾಕೃತಿಗಳೂ ಹಿಂದಿನ ಕಸೂತಿಗಳಲ್ಲಿ ಕಂಡುಬಂದಿವೆ. ಭಾರತೀಯ ಸ್ತ್ರೀಯರ ಉಡುಗೆಯಾದ ಸೀರೆಯಲ್ಲಿ ಇಂದಿಗೂ ಕಸೂತಿ ವಿನ್ಯಾಸಗಳಿಗೆ ಸ್ಥಾನವಿದೆ.

ಯೂರೋಪಿನ ಎಲ್ಲ ರಾಷ್ಟ್ರಗಳಲ್ಲೂ ಕಸೂತಿಯ ದೀರ್ಘ ಸಂಪ್ರದಾಯವಿದೆ. ಮಧ್ಯಯುಗದಲ್ಲಿ ಕಸೂತಿ ಅಲ್ಲಿ ವೈಭವಯುಕ್ತ ಕಲೆಯಾಗಿ ಬೆಳಗಿತು. ಇಟಲಿಯವರೂ ಹಾಲೆಂಡಿನವರೂ ತಮ್ಮ ಅರಸರ ಕಿರೀಟಧಾರಣ ಮಹೋತ್ಸವಗಳಿಗಾಗಿ ಉತ್ಕೃಷ್ಟ ಕಸೂತಿ ಕೃತಿಗಳನ್ನು ಸೃಷ್ಟಿಸುತ್ತಿದ್ದರು. ಧನಿಕ ಮನೆತನದ ಸ್ತ್ರೀಯರು ಕಸೂತಿ ಹಾಕುವುದರಲ್ಲಿ ಕುಶಲತೆಯನ್ನು ಪಡೆಯುವುದೂ ಪ್ರತಿದಿನವೂ ಗಂಟೆಗಟ್ಟಲೆ ಕಸೂತಿ ಕೆಲಸದಲ್ಲಿ ನಿರತರಾಗಿರುವುದೂ ಒಂದು ಸಂಪ್ರದಾಯವೇ ಆಗಿತ್ತು.

ಯೂರೋಪಿನ ಕಸೂತಿ ಕಲೆಗೆ ಕ್ರೈಸ್ತ ಧರ್ಮಪೀಠಗಳು ಆಸರೆ ನೀಡಿವೆ. ಕ್ರೈಸ್ತ ಮಂದಿರದ ವೇದಿಕೆಯ ಮೇಲೆ ಹಾಕುವ ವಸ್ತ್ರ, ಪೀಠದ ಲಾಂಛನ, ಧರ್ಮಾಧಿಕಾರಿಗಳ ಉಡುಪು ಇವುಗಳಲ್ಲಿ ನಯವಾದ, ಸೂಕ್ಷ್ಮ ವಿನ್ಯಾಸಗಳ ಕಸೂತಿ ಕೆಲಸವನ್ನು ಕಾಣಬಹುದು.

ಹಳೆಯ ಕಾಲದ ಕಸೂತಿ ಕೃತಿಗಳನ್ನು ಇಂದು ವಸ್ತುಸಂಗ್ರಹಾಲಯಗಳಲ್ಲಿ ರಕ್ಷಿಸಲಾಗಿದೆ.

ಕಸೂತಿ ಕಲೆ ಹವ್ಯಾಸವಾಗಿರಬಹುದು. ವಾಣಿಜ್ಯ ಕಲೆಯೂ ಆಗಬಹುದು. ಈವರೆಗೆ ಹಸ್ತಕೌಶಲದಿಂದ ನಡೆಯುತ್ತಿದ್ದ ಕಸೂತಿ ಕೆಲಸ ಈಗ ಯಂತ್ರಗಳ ಮೂಲಕ ನಡೆಯುತ್ತದೆ. ಇದರಿಂದ ಕ್ಷಿಪ್ರವಾಗಿ ಹೆಚ್ಚು ಪರಿಮಾಣದಲ್ಲಿ ಕಸೂತಿ ಪದಾರ್ಥಗಳನ್ನು ಸೃಷ್ಟಿಸಬಹುದಾಗಿದೆ.

ಕಸೂತಿ ಉದ್ಯಮರಂಗವನ್ನು ಪ್ರವೇಶಿಸಿದ್ದರೂ ಕೈಕೆಲಸ ಇಂದಿಗೂ ಜೀವಂತವಾಗಿದೆ ; ಗೃಹಕೈಗಾರಿಕೆಯಾಗಿಯೂ ಮುಂದುವರೆಯುತ್ತಿದೆ. ಸ್ವಸಂತೋಷ, ತೃಪ್ತಿಗಳಿಗಾಗಿ ಕಸೂತಿ ಕೆಲಸ ಮಾಡುವವರೂ ತಕ್ಕಷ್ಟು ಸಂಖ್ಯೆಯಲ್ಲಿದ್ದಾರೆ.

**ನೋಡಿ : ಕಸೂತಿ –ಸಂಪುಟ ೪**

## ಕಾದಂಬರಿ

ಸುಮ್ಮನೆ ಕುಳಿತಿದ್ದಾಗ ಓದಲು ಒಂದು ಕಾದಂಬರಿಯಾದರೂ ಇದ್ದರೆ ಹೊತ್ತು ಹೋದೀತು ಎನಿಸುವುದುಂಟು. ಕಾದಂಬರಿ ಹುಟ್ಟಿದ್ದೇ ಇಂಥ ಅಪೇಕ್ಷೆಯ ಪೂರೈಕೆಗಾಗಿ.

ಬಿಡುವಿದ್ದವರಿಗೆ ಓದಲು ಕಥೆಗಳು ಬೇಕು; 'ಕಥೆ ಪುಸ್ತಕ'ಗಳು ಬೇಕು.

ಯೂರೋಪಿನಲ್ಲಿ 18ನೆಯ ಶತಮಾನದ ಕೈಗಾರಿಕಾ ಕ್ರಾಂತಿಯ ಕಾಲಾವಧಿಯಲ್ಲಿ, ದೊಡ್ಡ ಮುದ್ರಣ ಯಂತ್ರಗಳು ನಿರ್ಮಿಸಲ್ಪಟ್ಟಾಗ ಅವುಗಳಲ್ಲಿ ಮುದ್ರಿಸಲು ಹೆಚ್ಚು ಪುಟಗಳ ಹಸ್ತಪ್ರತಿಗಳು ಬೇಕಾದುವು. ಆಗ ರೂಪುಗೊಂಡಿತು ಸಾಹಿತ್ಯದ ಹೊಸ ಪ್ರಕಾರ ನಾವೆಲ್ –ಕಾದಂಬರಿ. ವಾಸ್ತವಿಕತೆಯೇ ಪ್ರಧಾನಗುಣವಾದ ಈ ಸಾಹಿತ್ಯ ಪ್ರಕಾರ ಆರ್ಥಿಕ ವ್ಯವಸ್ಥೆಯಲ್ಲಿ ತೀವ್ರ ಬದಲಾವಣೆಗಳಾಗುತ್ತಿದ್ದ 18ನೆಯ ಶತಮಾನದಲ್ಲಿ ಹುಟ್ಟಿತೆಂಬುದು ಗಮನಾರ್ಹ.

ಸಣ್ಣ ಕಥೆಗಿಂತ ದೊಡ್ಡದಾಗಿ, ಒಂದು ಸಾಮಾನ್ಯ ಪುಸ್ತಕದಷ್ಟು ಗಾತ್ರದ ಗದ್ಯರೂಪದ ಕಥೆಯೇ ಕಾದಂಬರಿ ಎಂದು ಸ್ಥೂಲವಾಗಿ ಹೇಳಬಹುದು. ಸಣ್ಣ ಕಥೆಗಿಂತ ಕಾದಂಬರಿಯಲ್ಲಿ ಚಿತ್ರಿತವಾಗುವ ಜೀವನದ ಕ್ಷೇತ್ರ ದೊಡ್ಡದು, ವಿವರವಾದದ್ದು, ಆಳವಾದದ್ದು. ತಂತ್ರ–ಶೈಲಿಗಳು ಲೇಖಕನನ್ನು ಅವಲಂಬಿಸಿರುತ್ತವೆ. ಸಣ್ಣ ಕಥೆ ಯಾವುದಾದರೊಂದು ಅನುಭವ ಅಥವಾ ಘಟನೆಯನ್ನು ಚಿತ್ರಿಸುತ್ತದೆ. ಒಳ್ಳೆಯ ಕಾದಂಬರಿ ಇಡೀ ಜೀವನದ ಗುರಿ, ಧೋರಣೆ, ಅನುಭವಗಳನ್ನು ಒಳಗೊಂಡಿರುತ್ತದೆ.

ಕಾದಂಬರಿಯ ಅನೇಕ ಲಕ್ಷಣಗಳನ್ನು ಪುರಾತನ ಗ್ರೀಕ್, ರೋಮನ್ ಗ್ರಂಥಗಳಲ್ಲೂ ಕಥನ ಕವನಗಳಲ್ಲೂ ಕಾಣಬಹುದಾದರೂ ಅವುಗಳನ್ನು ಕಾದಂಬರಿ ಎಂದು ಪರಿಗಣಿಸಲಾಗುವುದಿಲ್ಲ. 17ನೆಯ ಶತಮಾನದ ಮೊದಲಲ್ಲಿ ಸ್ಪೇನಿನ ಸರ್ವಾಂಟಿಸ್ ಬರೆದ 'ಡಾನ್ ಕ್ವಿಕ್ಸೋಟ್' ಕೃತಿಯನ್ನು ವಿಶ್ವದ ಮೊಟ್ಟಮೊದಲ ಕಾದಂಬರಿ ಎಂದು ಹೇಳಬಹುದು. 1719ರಲ್ಲಿ ಡೇನಿಯಲ್ ಡೆಫೊ ಬರೆದ 'ರಾಬಿನ್‌ಸನ್ ಕ್ರೂಸೋ' ಇಂಗ್ಲಿಷಿನ ಮೊದಲ ಕಾದಂಬರಿ ಎಂದು ಅನೇಕರು ಅಭಿಪ್ರಾಯಪಡುತ್ತಾರೆ.

'ಪಾಮೆಲ', 'ಕ್ಲಾರಿಸ' ಮೊದಲಾದ ಕಾದಂಬರಿಗಳನ್ನು ಬರೆದ ಸ್ಯಾಮುಯಲ್ ರಿಚರ್ಡ್‌ಸನ್ (1689—1761) ಆರಂಭದ ಆಂಗ್ಲ ಕಾದಂಬರಿಕಾರರಲ್ಲಿ ಪ್ರಮುಖ. 18ನೆಯ ಶತಮಾನದ ಉತ್ತರಾರ್ಧದ ಕಾದಂಬರಿಕಾರರಲ್ಲಿ ಹೆನ್ರಿ ಫೀಲ್ಡಿಂಗ್ (1707—54). ಐತಿಹಾಸಿಕ ಕಾದಂಬರಿಗಳ ಕರ್ತೃ ವಾಲ್ಟರ್ ಸ್ಕಾಟ್ (1771—1832) ಮತ್ತು ಜೇನ್ ಆಸ್ಟಿನ್ (1775—1817) ಪ್ರಮುಖರು. ಫೀಲ್ಡಿಂಗನ 'ಟಾಮ್ ಜೋನ್ಸ್' ಸ್ಕಾಟನ 'ಐವಾನ್ ಹೋ' ಆಸ್ಟಿನಳ 'ಪ್ರೈಡ್ ಅಂಡ್ ಪ್ರೆಜುಡೀಸ್' ಗಮನಾರ್ಹ ಕಾದಂಬರಿಗಳು. 19ನೆಯ ಶತಮಾನದಲ್ಲಿ ವಿಲಿಯಮ್ ಥ್ಯಾಕರೆ (1811—63 ; 'ವ್ಯಾನಿಟಿ ಫೇರ್'), ಚಾರ್ಲ್ಸ್ ಡಿಕೆನ್ಸ್ (1812—70 ; 'ಎ ಟೇಲ್ ಆಫ್ ಟೂ ಸಿಟೀಸ್'), ಜಾರ್ಜ್ ಎಲಿಯಟ್ (1819—80 ;



ಮ. ರಾಮಮೂರ್ತಿ



ಜಾನ್ ಡಾಸ್ ಪಾಸೊಸ್

'ಮಿಡ್ಲ್ ಮಾರ್ಚ್.) ಮತ್ತು ಥಾಮಸ್ ಹಾರ್ಡಿ (1840—1928 : 'ದಿ ರಿಟರ್ನ್ ಆಫ್ ದಿ ನೇಟಿವ್') ಅಗ್ರಗಣ್ಯರು.

ಕಾದಂಬರಿಯು ರಚನೆಯೂ ಕಾವ್ಯಸೃಷ್ಟಿಯಷ್ಟೇ ಮಹತ್ವಪೂರ್ಣವಾಗಿರಬೇಕು ಎಂದು 20ನೆಯ ಶತಮಾನದ ಅಮೆರಿಕದ ಕಾದಂಬರಿಕಾರ ಹೆನ್ರಿ ಜೇಮ್ಸ್ ಹೇಳಿದ.

20ನೆಯ ಶತಮಾನದ ಆಂಗ್ಲ ಕಾದಂಬರಿಕಾರರಲ್ಲಿ ಜೋಸೆಫ್ ಕಾನ್ರಾಡ್ ಜೇಮ್ಸ್ ಜಾಯ್ಸ್, ಡಿ. ಎಚ್. ಲಾರೆನ್ಸ್ ಮತ್ತು ಜಾರ್ಜ್ ಆರ್‌ವೆಲ್ ಅಗ್ರಗಣ್ಯರು. ಕಾನ್ರಾಡನ 'ಲಾರ್ಡ್ ಜಿಮ್' ಡಿ. ಎಚ್. ಲಾರೆನ್ಸನ 'ರೇಯ್ನ್‌ಬೋ', 'ವಿಮೆನ್ ಇನ್ ಲವ್' ; ಜೇಮ್ಸ್ ಜಾಯ್ಸನ 'ಯೂಲಿಸಿಸ್' ಪ್ರಮುಖ ಕಾದಂಬರಿಗಳು. ಗಾಲ್ಸ್‌ವರ್ದಿ, ಸಾಮರ್‌ಸೆಟ್ ಮಾಮ್, ಇ. ಎಂ. ಫಾರ್ಸ್ಟರ್, ವರ್ಜೀನಿಯಾ ವುಲ್ಫ್ ಇತರ ಪ್ರಮುಖ ಕಾದಂಬರಿಕಾರರು.

ಯೂರೋಪಿನ ರಾಷ್ಟ್ರಗಳು ವಿಶ್ವಸಾಹಿತ್ಯಕ್ಕೆ ಹಲವು ಅತ್ಯುತ್ತಮ ಕಾದಂಬರಿಗಳನ್ನಿತ್ತಿವೆ. ಸ್ಪೇನಿನ ಸರ್ವಾಂಟಿಸ್ ; ಜರ್ಮನಿಯ ಗಯಟೆ, ಫ್ರಾನ್ಜ್ ಕಾಫ್ಕ, ಥಾಮಸ್ ಮಾನ್ ; ಹೀನ್ರಿಕ್ ಬುಲ್ ; ಫ್ರಾನ್ಸಿನ ವಾಲ್ಟೇರ್, ಬಾಲ್ಜಾಕ್, ಹ್ಯೂಗೋ, ಮಾರ್ಸೆಲ್ ಪ್ರೌಸ್ಟ್, ಆಂದ್ರೆ ಜೀದ್, ಆಂದ್ರೆ ಮಾಲ್ರೋ, ಆಲ್ಬರ್ಟ್ ಕಾಮು ಮೊದಲಾದವರು ಪ್ರಮುಖ ಕಾದಂಬರಿಕಾರರು.

ರಷ್ಯದ ಲಿಯೊ ಟಾಲ್‌ಸ್ಟಾಯ್, ಡಾಸ್ಟಯೆವ್‌ಸ್ಕಿ, ಟುರ್ಗೆನ್ಯೆಫ್, ಗೊಗೊಲ್, ಪಾಸ್ಟರ್‌ನಾಕ್, ಷೊಲೊಖೋವ್ ಪ್ರಮುಖ ಕಾದಂಬರಿ, ಕಾರರು. ಟಾಲ್‌ಸ್ಟಾಯ್‌ಯ 'ಸಮರ ಮತ್ತು ಶಾಂತಿ', ಡಾಸ್ಟಯೆವ್‌ಸ್ಕಿಯ 'ಕರಮಜೋವ್ ಸೋದರರು', ಗಾರ್ಕಿಯ 'ತಾಯಿ' ಪ್ರಮುಖ ಕಾದಂಬರಿಗಳು. ಅಮೆರಿಕದಲ್ಲಿ ನೆಥಾನಿಯಲ್ ಹಾಥಾರ್ನ್, ಹೆರ್ಮನ್ ಮೆಲ್ವಿಲ್, ಮಾರ್ಕ್ ಟ್ವೇನ್, ಹೆನ್ರಿ ಜೇಮ್ಸ್, ಜಾನ್‌ಡಾಸ್ ಪಾಸೊಸ್, ಜಾನ್ ಸ್ಟೀನ್‌ಬೆಕ್, ಹೆಮಿಂಗ್‌ವೇ ಮೊದಲಾದವರು ಈ ಕ್ಷೇತ್ರದ ಪ್ರಮುಖರು. ಮಾರ್ಕ್ ಟ್ವೇನನನ್ನು 'ಅಮೆರಿಕದ ಕಾದಂಬರಿಯ ಜನಕ' ಎಂದು ಹೆಮಿಂಗ್‌ವೇ ಬಣ್ಣಿಸಿದ್ದಾನೆ. ಹೆರ್ಮನ್ ಮೆಲ್ವಿಲನ 'ಮಾಬಿ ಡಿಕ್' ಶ್ರೇಷ್ಠ ಕಾದಂಬರಿಗಳಲ್ಲೊಂದು ಎಂದು ಹೆಸರು ಪಡೆದಿದೆ.

ಭಾರತೀಯ ಸಾಹಿತ್ಯದಲ್ಲಿಯೂ ಕಾದಂಬರಿಯ ಪ್ರಕಾರ ಜನಪ್ರಿಯವಾಗಿದೆ. ಹಿಂದಿಯಲ್ಲಿ ಪ್ರೇಮ್‌ಚಂದ್, ಬಂಗಾಳದಲ್ಲಿ ಬಂಕಿಮಚಂದ್ರ ಚಟರ್ಜಿ. ಮಲಯಾಳಂನಲ್ಲಿ ತಗಳಿ ಶಿವಶಂಕರ ಪಿಳ್ಳೈ ಪ್ರಮುಖರು. ರಾಜಾರಾವ್, ಆರ್. ಕೆ. ನಾರಾಯಣ್, ಮುಲ್ಕ್‌ರಾಜ್ ಆನಂದ್, ಮನೋಹರ ಮಾಳಗಾಂವಕರ್ ಇಂಗ್ಲಿಷಿನಲ್ಲಿ ಕಾದಂಬರಿಗಳನ್ನು ಬರೆಯುತ್ತಿರುವ ಪ್ರಸಿದ್ಧ ಭಾರತೀಯ ಕಾದಂಬರಿಕಾರರು.

ಕನ್ನಡದಲ್ಲಿ ಕಾದಂಬರಿ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಮೊದಲ ಕಾದಂಬರಿ ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ'. ಬಂಗಾಳಿ ಮತ್ತು ಮರಾಠಿ ಭಾಷೆಗಳ ಕಾದಂಬರಿಗಳು ಭಾಷಾಂತರಗೊಂಡು ಹಾಗೂ ರೂಪಾಂತರ ಹೊಂದಿ ಕನ್ನಡಕ್ಕೆ ಬಂದುವು. ಎಂ.ಎಸ್.ಪುಟ್ಟಣ್ಣರ 'ಮಾಡಿದ್ದುಣ್ಣೊ ಮಹಾರಾಯ' ಕನ್ನಡದಲ್ಲಿ ಮೊದಮೊದಲು ಬಂದ ಗಣ್ಯ ಕಾದಂಬರಿಗಳಲ್ಲಿ ಒಂದು. ಆಸಿಧಕ ಕನ್ನಡ ಕಾದಂಬರಿಕಾರರ ಮೇಲೆ ಇದು ಪ್ರಭಾವ ಬೀರಿದೆ. ಅ ನ ಕೃ ಅವರ 'ಸಂಧ್ಯಾ ರಾಗ' ಕುವೆಂಪು ಅವರ 'ಕಾನೂರು ಹೆಗ್ಗಡತಿ', ಕಾರಂತರ 'ಮರಳಿ ಮಣ್ಣಿಗೆ', ಗೋಕಾಕರ 'ಸಮರಸವೇ ಜೀವನ', ಮಾಸ್ತಿ ಅವರ 'ಚೆನ್ನಬಸವ ನಾಯಕ', ತರಾಸು ಅವರ 'ಹಂಸಗೀತೆ', ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು', ಚದುರಂಗರ 'ಸರ್ವಮಂಗಳಾ', ಹೇಮಂತರ 'ಭಗ್ನಮಂದಿರ' ಮಿರ್ಜಿ ಅಣ್ಣಾರಾಯರ 'ನಿಸರ್ಗ', ದೇವುಡು ಅವರ 'ಮಹಾಬ್ರಾಹ್ಮಣ', ರಾವ್‌ಬಹದ್ದೂರರ 'ಗ್ರಾಮಾಯಣ', ತ್ರಿವೇಣಿಯವರ 'ಶರಪಂಜರ', ಮೊದಲಾದುವು ಕನ್ನಡದ ಪ್ರಖ್ಯಾತ ಕಾದಂಬರಿಗಳು. ವೀರಕೇಸರಿ ಸೀತಾರಾಮಶಾಸ್ತ್ರಿಯವರ ಐತಿಹಾಸಿಕ ಕಾದಂಬರಿಗಳು, ಮ. ರಾಮಮೂರ್ತಿಯವರ ಪತ್ತೇದಾರಿ ಕಾದಂಬರಿಗಳು, ನಾ ಕಸ್ತೂರಿ, ಬೀಚಿ, ನಾಡಿಗೇರರ ಹಾಸ್ಯಪ್ರಧಾನ ಕಾದಂಬರಿಗಳು ಜನಪ್ರಿಯವಾಗಿವೆ. 'ಸಂಸ್ಕಾರ' (ಡಾ॥ ಯು. ಆರ್. ಅನಂತಮೂರ್ತಿ) 'ವಂಶವೃಕ್ಷ' (ಡಾ॥ ಎಸ್. ಎಲ್. ಭೈರಪ್ಪ) 'ಗತಿಸ್ಥಿತಿ' (ಗಿರಿ) ಆರು-ಏಳನೆಯ ದಶಕಗಳ ಪ್ರಮುಖ ಕಾದಂಬರಿಗಳು.

ಕಾದಂಬರಿಯನ್ನು ಈಗ ಮನೋರಂಜನೆಗೆಂದೇ ಮೀಸಲಾಗಿರುವ ಸಾಹಿತ್ಯ ಪ್ರಕಾರವೆಂದು ಯಾರೂ ಪರಿಗಣಿಸುವುದಿಲ್ಲ; ಕಾವ್ಯದ ಗಾಂಭೀರ್ಯವನ್ನು ಕಾದಂಬರಿಯೂ ಪಡೆದಿದೆ.

## ಕಾನನ್ ಡಾಯ್ಲ್

ಶೆರ್ಲಾಕ್ ಹೋಮ್ಸ್ ಎಂಬ ಪತ್ತೇದಾರನ ಅಸಾಮಾನ್ಯ ಊಹಾಶಕ್ತಿ ರಹಸ್ಯಗಳನ್ನು ಭೇದಿಸುವ ಕುಶಲತಂತ್ರಗಳ ಬಗೆಗೆ ಓದಿದ ಕೆಲವರು ಅವನನ್ನು ನಿಜವಾಗಿ ಪತ್ತೇದಾರನೆಂದೇ ಭಾವಿಸಿದ್ದುಂಟು. ಜೀವಿಸಿರುವ ತಮ್ಮ ಸಮಸ್ಯೆಗಳನ್ನು ಪರಿಹರಿಸಲು ಸಹಾಯ ಅಪೇಕ್ಷಿಸಿ ಅವನ ಸಲಹಾ ಕಛೇರಿಗೆ ಕಾಗದ ಬರೆದದ್ದುಂಟು. ಅವನ ಸಾಹಸಗಳನ್ನು ವರ್ಣಿಸುವ ಪುಸ್ತಕಗಳಲ್ಲಿ ಕೊಟ್ಟಿದ್ದ ಅವನ ಕಛೇರಿಯ ವಿಳಾಸವನ್ನು ನಂಬಿ, '221 ಬಿ, ಬೇಕರ್ ರಸ್ತೆ, ಲಂಡನ್', ಎಲ್ಲಿದೆ ಎಂದು ಹುಡುಕಿಕೊಂಡು ಅಲೆದವರೂ ಅನೇಕರು. ಆದರೆ ಪಾಪ ಈ ವಿಳಾಸದ ಕೊಠಡಿ ಅವರಿಗೆ ಸಿಗಲಿಲ್ಲ. ಅವರು ಯಾರಿಗೂ ಶೆರ್ಲಾಕ್ ಹೋಮ್ಸ್ ಎಂಬ ವ್ಯಕ್ತಿಯ ದರ್ಶನವೂ ಆಗಲಿಲ್ಲ. ಕಾರಣ–ಇಂಥದ್ದೊಂದು ಕಟ್ಟಡವೂ ಇರಲಿಲ್ಲ; ವ್ಯಕ್ತಿಯೂ ಇರಲಿಲ್ಲ.

ಶೆರ್ಲಾಕ್ ಹೋಮ್ಸ್ ಎಂಬ ಪತ್ತೇದಾರನನ್ನು ಸೃಷ್ಟಿಸಿ ಜನಪ್ರಿಯ ಗೊಳಿಸಿದವನು, ಆಂಗ್ಲ ಸಾಹಿತಿ ಆರ್ಥರ್ ಕಾನನ್ ಡಾಯ್ಲ್. ಅವನು ಜೀವಂತವ್ಯಕ್ತಿಯೆಂದೇ ಭಾವಿಸುವಷ್ಟು ಸಹಜವಾಗಿತ್ತು ಆ ಚಿತ್ರಣ.

ಡಾಯ್ಲ್ ಹುಟ್ಟಿದ್ದು ಸ್ಕಾಟ್‌ಲೆಂಡಿನ ಎಡಿನ್‌ಬರೋದಲ್ಲಿ, 1859ನೆಯ ಮೇ 22 ರಂದು. ಅಷ್ಟೇನೂ ಆರ್ಥಿಕ ಅನುಕೂಲವಿಲ್ಲದಿದ್ದರೂ ಅವನು ಎಡಿನ್‌ಬರೋ ವಿಶ್ವವಿದ್ಯಾಲಯದಲ್ಲಿ ವೈದ್ಯಕೀಯ ಶಿಕ್ಷಣ ಪಡೆಯಲು ನಿರ್ಧರಿಸಿದ. ಮಧ್ಯಾಹ್ನದ ಊಟ ಮಾಡದೆ ದುಡ್ಡು ಉಳಿಸಿ, ಆ ಹಣ ದಿಂದ ಪುಸ್ತಕಗಳನ್ನು ಕೊಂಡು ಓದಿದ. ವೈದ್ಯಕೀಯ ಪದವಿ ಪಡೆದು 1882ರಲ್ಲಿ ಸೌತ್‌ಸೀ ಎಂಬಲ್ಲಿ ವೈದ್ಯವೃತ್ತಿ ಆರಂಭಿಸಿದ. ಪ್ರಾಮಾಣಿಕನಾದರೂ ಠೊಣಪನಂತಿದ್ದ ಈ ಡಾಕ್ಟರಲ್ಲಿಗೆ ಯಾರೂ ಚಿಕಿತ್ಸೆಗೆ ಬರಲಿಲ್ಲ. ಕೆಲಸವಿಲ್ಲದೆ ಕಾಲ ಕಳೆಯುವುದು ಕಷ್ಟವಾಗಿ ಕಾನನ್ ಡಾಯ್ಲ್ ಕಥೆಗಳನ್ನು ಬರೆಯಲಾರಂಭಿಸಿದ. 1887ರಲ್ಲಿ ಅವನ 'ಎ ಸ್ಟಡಿ ಇನ್ ಸ್ಕಾರ್ಲೆಟ್' ಹೊರಬಂತು. ಅದರಲ್ಲಿ ಖಾಸಗಿ ಪತ್ತೇದಾರ ಶೆರ್ಲಾಕ್ ಹೋಮ್ಸ್ ಡಾ. ವಾಟ್ಸನನ್ನು ಭೇಟಿಯಾಗುತ್ತಾನೆ ; ಅವರಿಬ್ಬರೂ ಸೇರಿ ಅಪರಾಧಿಗಳ ಗುಂಪೊಂದನ್ನು ಪತ್ತೆಹಚ್ಚುತ್ತಾರೆ. ಎರಡು ವರ್ಷಗಳ ಅನಂತರ ಪ್ರಕಟವಾದ 'ದಿ ಸೈನ್ ಆಫ್ ಫೋರ್' ನಲ್ಲೂ ಈ ಇಬ್ಬರು ಜೊತೆಯಾಗಿ ತಮ್ಮ ಪತ್ತೇದಾರಿ ಕೆಲಸವನ್ನು ಮುಂದುವರಿಸುತ್ತಾರೆ.

ಓದುಗರಿಗೆ ಶೆರ್ಲಾಕ್ ಹೋಮ್ಸ್‌ನ ಕಥೆಗಳು ರುಚಿಸಿದುವು. ಇದನ್ನು ಗಮನಿಸಿದ ಕಾನನ್ ಡಾಯ್ಲ್ 1890ರಲ್ಲಿ ವೈದ್ಯವೃತ್ತಿಯನ್ನು ಬಿಟ್ಟು ಬರವಣಿಗೆಗೆ ಇಳಿದ.

ಕಾನನ್ ಡಾಯ್ಲ್‌ಗೆ ಅವಿರತವಾಗಿ ಬರೆಯುವ ಸಾಮರ್ಥ್ಯವಿತ್ತು. ಚಾಣಾಕ್ಷಮತಿ ಶೆರ್ಲಾಕ್ ಹೋಮ್ಸ್‌ನನ್ನು ನಾಯಕನನ್ನಾಗಿ ಮಾಡಿ 60 ಕೃತಿಗಳನ್ನು ಆತ ರಚಿಸಿದ್ದಾನೆ. ಅವುಗಳಲ್ಲಿ ನಾಲ್ಕು ಕಾದಂಬರಿಗಳು: ಉಳಿದವು ಸಣ್ಣ ಕಥೆಗಳು.

ಮುಂದೆಯೂ ಹಿಂದೆಯೂ ಮೊನಚಾದ ಟೋಪಿ ಧರಿಸಿ ಭೂತಕನ್ನಡಿಯೊಂದನ್ನು ಹಿಡಿದುಕೊಂಡು ಪೈಪ್ ಸೇದುತ್ತ ಪತ್ತೆ ಮಾಡಲು ಹೊರಟ ಶೆರ್ಲಾಕ್ ಹೋಮ್ಸ್‌ಗೆ ಅಸಾಧ್ಯವಾದದ್ದು ಏನೂ ಇರಲಿಲ್ಲ. ಅವನ ಸಾಹಸಗಳಿಂದ ಓದುಗರ ಮೈ ಜುಮ್ ಎನ್ನುತ್ತಿತ್ತು. ಅವನ ಬುದ್ಧಿ ಶಕ್ತಿ ಅವರನ್ನು ಅಚ್ಚರಿಗೊಳಿಸುತ್ತಿತ್ತು.

ಹೋಮ್ಸ್‌ನ ಮಿತ್ರ ಡಾ. ವಾಟ್ಸನ್ ಸ್ವಲ್ಪ ಮಂದಬುದ್ಧಿಯವನು. ಆಗಾಗ್ಗೆ ಅವನು ಇದು ಯಾಕೆ? ಅದು ಹೇಗೆ? ಎಂದು ಪ್ರಶ್ನಿಸುತ್ತಾನೆ. ಅವನ ಮೂಲಕ ಶೆರ್ಲಾಕ್ ಹೋಮ್ಸ್‌ನ ತಂತ್ರಗಳ ಪರಿಚಯ ಓದುಗರಿಗೆ ಆಗುತ್ತದೆ. ಶೆರ್ಲಾಕ್ ಹೋಮ್ಸ್‌ನ ಜನಪ್ರಿಯತೆಯಿಂದ ಕಾನನ್ ಡಾಯ್ಲ್ ಬೇಸತ್ತುಹೋದ. ಕೊನೆಗೆ 'ಶೆರ್ಲಾಕ್ ಹೋಮ್ಸ್‌ನ ನೆನಪುಗಳು' ಎಂಬ ಕಥೆಯ ಕೊನೆಯಲ್ಲಿ. ಶೆರ್ಲಾಕ್ ಕುಪ್ರಸಿದ್ಧ ಕೇಡಿ ಪ್ರೊಫೆಸರ್ ಮಾರಿಯಾಟ್ರಿಯೊಡನೆ ಹೋರಾಡುತ್ತಾ ಭಾರೀ ಆಳದ ಪ್ರಪಾತಕ್ಕೆ ಕೆಳಕ್ಕುರುಳಿದಂತೆ ಚಿತ್ರಿಸಿದ. ಶೆರ್ಲಾಕ್ ಹೋಮ್ಸ್‌ನ ಕಥೆ ಮುಗಿಯಿತು ಎಂದು ಜನ ಗಾಬರಿಯಾದರು. ಮತ್ತೆ ಅವನ ಕಥೆಗಳನ್ನು ಬರೆಯಲು ಡಾಯ್ಲ್‌ನನ್ನು ಒತ್ತಾಯಪಡಿಸಲಾರಂಭಿಸಿದರು. ಪರಿಣಾಮವಾಗಿ ಶೆರ್ಲಾಕ್ ಹೋಮ್ಸ್ 'ಪುನರ್ಜನ್ಮ' ತಳೆಯಬೇಕಾಯಿತು. ಪ್ರಪಾತಕ್ಕೆ ಬಿದ್ದ ಶೆರ್ಲಾಕ್‌ಹೋಮ್ಸ್ ಅದ್ಭುತ ರೀತಿಯಲ್ಲಿ ಸಾವಿನ ದವಡೆಯಿಂದ ಪಾರಾಗಿ ಬಂದನೆಂದೂ ತನ್ನ ವೈರಿಗಳನ್ನು ಮೋಸಗೊಳಿಸಲು ಸತ್ತುಹೋದಂತೆ ನಟಿಸಿದನೆಂದೂ ಕಾನನ್ ಡಾಯ್ಲ್ ಕಲ್ಪಿಸಿ ಮುಂದುವರಿಸಬೇಕಾಯಿತು.

ಕಾನನ್ ಡಾಯ್ಲ್ ಬರೆದದ್ದು ಶೆರ್ಲಾಕ್ ಹೋಮ್ಸ್ ಕಥೆಗಳು ಮಾತ್ರವಲ್ಲ. ಚರಿತ್ರೆಗಳನ್ನೂ, ಸಾಹಸ ಕಥೆಗಳನ್ನೂ ಕೆಲ ನಾಟಕಗಳನ್ನೂ ಬರೆದಿದ್ದಾನೆ.

ವೃದ್ಧಾಪ್ಯ ಸಮೀಪಿಸುತ್ತಿದ್ದಂತೆ ಕಾನನ್ ಡಾಯ್ಲ್‌ನ ಒಲವು ಆಧ್ಯಾತ್ಮದ ಕಡೆಗೆ ಹರಿಯಿತು. ಆ ವಿಷಯದ ಕೆಲವು ಗ್ರಂಥಗಳನ್ನೂ ಅವನು ರಚಿಸಿದ್ದಾನೆ. 1924ರಲ್ಲಿ ಅವನ ಆತ್ಮಕಥೆ 'ನೆನಪುಗಳು ಮತ್ತು ಸಾಹಸಗಳು' ಪ್ರಕಟವಾಯಿತು. 1930ರ ಜುಲೈ 7 ರಂದು ಇಂಗ್ಲೆಂಡಿನ ಕ್ರಾಸ್‌ಬರೋ ಎಂಬಲ್ಲಿ ಕಾನನ್ ಡಾಯ್ಲ್ ನಿಧನನಾದ.

ಆಕರ್ಷಕ ಸೃಷ್ಟಿ : ಕಾನನ್ ಡಾಯ್ಲ್

1951ರಲ್ಲಿ ಲಂಡನ್ನಿನಲ್ಲಿ ಒಂದು ವಿಶೇಷ ಬಗೆಯ ವಸ್ತುಪ್ರದರ್ಶನ ಆರಂಭವಾಯಿತು. ಇಲ್ಲಿ ಪ್ರದರ್ಶನಕ್ಕಿಟ್ಟ ಎಲ್ಲ ವಸ್ತುಗಳು ಶೆರ್ಲಾಕ್ ಹೋಮ್ಸ್‌ಗೆ ಸಂಬಂಧಿಸಿದ್ದು. ಅಂದರೆ, ಅವನ ಕಥೆಗಳಿಗೆ ಸಂಬಂಧಿಸಿದ ಹಸ್ತಪ್ರತಿಗಳು, ಪತ್ರಗಳು, ಚಿತ್ರಗಳು, ವ್ಯಂಗ್ಯಚಿತ್ರಗಳು, ಭೂಪಟಗಳು ಮುಂತಾದುವು. ಶೆರ್ಲಾಕ್ ಹೋಮ್ಸ್‌ನ ಕಥೆಗಳಲ್ಲಿ ಬಂದಿದ್ದ ಬೇಕರ್ ರಸ್ತೆಯ ಪ್ರಸಿದ್ಧ 221ಬಿ. ಕೊಠಡಿಯ ವಿವರಗಳ ಆಧಾರದ ಮೇಲೆ ರಚಿಸಿದ ಕೊಠಡಿಯ ಮಾದರಿ ಈ ಪ್ರದರ್ಶನದ ವಿಶೇಷ ಆಕರ್ಷಣೆಯಾಗಿತ್ತು.

ತನ್ನ ಕತೆಗಳಲ್ಲಿ ಕಲ್ಪಿಸಿದ ವ್ಯಕ್ತಿಯೊಬ್ಬನನ್ನು ಜೀವಂತ ವ್ಯಕ್ತಿಯೆಂದು ಅನೇಕರು ನಂಬುವಂತೆ ಮಾಡಿದ ಅಪ್ರತಿಮ ಕಥೆಗಾರ ಕಾನನ್ ಡಾಯ್ಲ್.

## ಕಾಫ್ಕ

ಗ್ರೆಗರ್ ಸಾಂಸ ಒಂದು ದಿನ ಬೆಳಗ್ಗೆ ಎದ್ದಾಗ ದೊಡ್ಡ ಹುಳುವಾಗಿ ಬಿಟ್ಟಿರುತ್ತಾನೆ. ಗಾಳಿಯಲ್ಲಿ ತೇಲಾಡುವ ತನ್ನ ಕೈಕಾಲುಗಳನ್ನು ನೋಡಿ ಅವನಿಗೇ ಜುಗುಪ್ಸೆ. ಈ ದೊಡ್ಡ ಹುಳುವಿನ ಬಗೆಗೆ ಹೊರಗಿನ ಜನರು ಮಾತ್ರವಲ್ಲ, ಮನೆಯವರೇ ಅಸಹ್ಯಪಡುತ್ತಾರೆ. ಈ ಸ್ಥಿತಿಯಲ್ಲಿ ಇವನಿಗೆ ತಿಂಡಿ–ಊಟ ಕೊಟ್ಟು ಬಹುಕಾಲದವರೆಗೆ ನೋಡಿಕೊಂಡ ತಂಗಿಯೂ ಒಮ್ಮೆ ಅಸಹ್ಯ ವ್ಯಕ್ತಪಡಿಸಿದಾಗ ಇವನಿಗೆ ಅತಿ ದೊಡ್ಡ ಆಘಾತವಾಗುತ್ತದೆ. ಕೊನೆಗೆ ಅವನು ಸತ್ತಾಗ, ಕೆಲಸದಾಕೆ ಅವನನ್ನು (ಆ ಹುಳುವನ್ನು) ಎತ್ತಿ ಕಿಟಕಿಯಿಂದ ಹೊರಕ್ಕೆ ಎಸೆಯುತ್ತಾಳೆ.

—ಇದು ಫ್ರಾನ್ಜ್ ಕಾಫ್ಕನ ಅತಿ ಮುಖ್ಯ ಸಣ್ಣ ಕತೆಯೆನಿಸಿರುವ 'ಮೆಟಮಾರ್ಫಸಿಸ್' (ರೂಪ ಪರಿವರ್ತನೆ) ಕಥೆಯ ಸಾರಾಂಶ. ಹೀಗೆ ಪ್ರಕೃತಿ ಸಹಜ ವಾಸ್ತವಿಕತೆಯನ್ನು ಧಿಕ್ಕರಿಸಿ ಅನೇಕ ಗೂಢಾರ್ಥಗಳನ್ನುಳ್ಳ ಅತಿ ದೊಡ್ಡ ಪ್ರತಿಮೆಯನ್ನು ನಿರ್ಮಿಸುವ ಕಾಫ್ಕನ ಶೈಲಿ ತೀರಾ ವಿಶಿಷ್ಟವಾದದ್ದು. ಪ್ರಾಗ್‌ನಲ್ಲಿ 1883ರ ಜುಲೈ 3ರಂದು ಕಾಫ್ಕ ಜನಿಸಿದ. ಇವನ ತಂದೆ



ಕಾಫ್ಕ

ತಾಯಿಯೆ ಹೊದ್ಯರು. ತಂದೆಯ ಅತಿ ಗಂಭೀರ ವ್ಯಕ್ತಿತ್ವದಿಂದಾಗಿ ಕಾಫ್ಕ ಹಿಂಜರಿಯುವ, ಹೆದರಿಕೆಯ ಸ್ವಭಾವದವನಾಗಿ ಬೆಳೆದ. ತಂದೆಯ ಬಗೆಗೆ ಇವನಿಗೆ ಇದ್ದ ಅಪಾರ ಭಯ–ಭಕ್ತಿ, ಪ್ರೀತಿ–ದ್ವೇಷಗಳ ಘರ್ಷಣೆ ಇವನ ಅನೇಕ ಕೃತಿಗಳಲ್ಲಿ ಅಭಿವ್ಯಕ್ತವಾಗಿದೆ. 1906ರಲ್ಲಿ ಜರ್ಮನ್ ವಿಶ್ವವಿದ್ಯಾನಿಲಯದಿಂದ ನ್ಯಾಯಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದ ಕಾಫ್ಕ 'ಕಾರ್ಮಿಕರ ಅಪಘಾತ ವಿಮಾ ಸಂಸ್ಥೆ'ಯಲ್ಲಿ ಗುಮಾಸ್ತನಾಗಿ ಕೆಲಸಕ್ಕೆ ಸೇರಿದ. ತನಗೆ ಇಷ್ಟವಿಲ್ಲದಿದ್ದರೂ ಇಲ್ಲಿಯೇ ಬಹು ಕಾಲ ಇದ್ದ. ಧಾರ್ಮಿಕ ಪ್ರಜ್ಞೆಯುಳ್ಳ ಕಾಫ್ಕನಿಗೆ, ಬರೆವಣಿಗೆ 'ಒಂದು ವಿಧದ ಪ್ರಾರ್ಥನೆ'; ಅವನ ಹಲವಾರು ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರೂ ತನ್ನ ಬರೆವಣಿಗೆಯ ವಿಷಯದಲ್ಲಿ ಅವನಿಗೆ ಅತೃಪ್ತಿ.

ವಿಚಿತ್ರ ಮನಸ್ಥಿತಿಯಿಂದಾಗಿ ಮದುವೆಯೂ ಆಗದೆ ಒಂಟಿಯಾಗಿಯೇ ಉಳಿದ ಕಾಫ್ಕ, 1917ರಲ್ಲಿ ಕ್ಷಯರೋಗಕ್ಕೆ ತುತ್ತಾಗಿ, 1924ರಲ್ಲಿ ಕೀರ್ಲಿಂಗ್‌ನಲ್ಲಿದ್ದ ಆಸ್ಪತ್ರೆಯಲ್ಲಿ ನಿಧನನಾದ. ಮರಣಕ್ಕೆ ಮುನ್ನ ಮಿತ್ರ ಮ್ಯಾಕ್ಸ್ ಬ್ರಾಡ್‌ಗೆ ಬರೆದಿದ್ದ ಕಾಗದದಲ್ಲಿ, ಅಪೂರ್ಣವಾಗಿದ್ದ ತನ್ನ ಮೂರು ಕಾದಂಬರಿಗಳನ್ನು ಸುಟ್ಟುಬಿಡುವಂತೆ ತಿಳಿಸಿದ.

ಮ್ಯಾಕ್ಸ್ ಬ್ರಾಡ್ ತನ್ನ ಮಿತ್ರ ಕಾಫ್ಕನ ಬೇಡಿಕೆಯನ್ನು ಉಲ್ಲಂಘಿಸಿ, ಅವನ ಮೂರು ಕಾದಂಬರಿಗಳನ್ನು ಪ್ರಕಟಿಸಿದ. ತೀರ ವೈಯಕ್ತಿಕ ವಸ್ತುವನ್ನು ಅತ್ಯಂತ ಆತ್ಮೀಯ ವಿವರಗಳೊಡನೆ, ಹೇಳುತ್ತಿದ್ದ ಇವನ ಶೈಲಿ ಮೊದಲು ವಿಚಿತ್ರವೆನಿಸುತ್ತದೆಯಾದರೂ ಮತ್ತೆ ಮತ್ತೆ ಓದಿದಾಗ, ಕೃತಿ ಗೂಢಾರ್ಥದಿಂದ ಕೂಡಿದ್ದು ಎಂಬುದು ತಿಳಿಯುತ್ತದೆ. ಬದುಕನ್ನು ದುಃಸ್ವಪ್ನದಂತೆ ಚಿತ್ರಿಸಿದ ಇವನ ಕಥೆಗಳಲ್ಲಿನ ಪಾತ್ರಗಳು, ತಮ್ಮ ಅಸ್ತಿತ್ವವನ್ನು ಅರಸಿ, ಜೀವನವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತವೆ.

ತನ್ನ ಸತ್ತ್ವಹೀನ ಬದುಕನ್ನು ಕಂಡು ತನ್ನ ಬಗೆಗೆ ತಾನೇ ಜುಗುಪ್ಸೆ ಹೊಂದುವ ಚಿತ್ರವನ್ನು 'ರೂಪಪರಿವರ್ತನೆ'ಯಲ್ಲಿ ಕಾಣಬಹುದು. 'ಚೀನಾದ ಮಹಾಗೋಡೆ' ಎಂಬ ಕಥೆಯಲ್ಲಿ, ಚೀನದ ಗೋಡೆ ಕಟ್ಟುವುದನ್ನು ಅತಿಸಂಕೀರ್ಣ ಸಾಂಕೇತಿಕ ರೂಪದಲ್ಲಿ ಚಿತ್ರಿಸಿದ್ದಾನೆ. ಮಾನವನ ಐಕಮತ್ಯವನ್ನು ಈ ಗೋಡೆ ಸಂಕೇತಿಸಬಹುದು. ಆದರೂ ಮಾನವ ಸಂಪೂರ್ಣನಾಗಿರಲಾರ ಎಂಬುದನ್ನು ಈ ಗೋಡೆಯ ಉತ್ತರ ಭಾಗದಲ್ಲಿ ಬಿಟ್ಟಿರುವ ಸ್ಥಳ ಸೂಚಿಸಬಹುದು. ಹೀಗೆ ಇವನ ಕಥೆಗಳಿಗೆ ಅನೇಕ ವ್ಯಾಖ್ಯೆಗಳನ್ನು ಕೊಡಲಾಗಿದೆ.

ಬೆಕೆಟ್, ಕಾಮು ಇಂಥ ಅನೇಕ ಲೇಖಕರು ಕಾಫ್ಕನ ಕಥೆಗಳಿಂದ ಪ್ರಭಾವಿತರಾಗಿದ್ದಾರೆ. ದಶಕಗಳು ದಾಟಿದರೂ ಈ ಪ್ರಭಾವ ಮುಂದುವರಿದಿದೆ. ಅನೇಕ ಪಂಥಗಳ ವಿಮರ್ಶಕರು ಇವನ ಕೃತಿಗಳನ್ನು ತಮ್ಮ ತಮ್ಮ ದೃಷ್ಟಿಕೋನದಿಂದ ವಿಮರ್ಶಿಸಿದ್ದರೂ ಅಂತಿಮ ನಿರ್ಣಯ ಸಾಧ್ಯವಾಗಿಲ್ಲ. ಇವನ ಕೃತಿಗಳನ್ನು ಜರ್ಮನ್ ಭಾಷೆಯಿಂದ ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. 'ದಿ ಕ್ಯಾಸಲ್', 'ದಿ ಟ್ರಯಲ್' ಮತ್ತು 'ಅಮೆರಿಕ' —ಇಂಗ್ಲಿಷಿಗೆ ಭಾಷಾಂತರವಾಗಿರುವ ಇವನ ಮೂರು ಅಪೂರ್ಣ ಕಾದಂಬರಿಗಳು.

## ಕಾಮಿಕ್ ಪುಸ್ತಕ

ಮಕ್ಕಳ ಕೈಗೆ ಕಾಮಿಕ್ ಪುಸ್ತಕ ಸಿಕ್ಕಿದರೆ ಆಟ ಊಟ ಒಂದೂ ಬೇಡ. ಪ್ರತಿದಿನ ಬೆಳಗ್ಗೆ ವೃತ್ತಪತ್ರಿಕೆ ಬಂದೊಡನೆ ಹುಡುಗರು ತೆರೆದು ನೋಡುವುದು ಕಾಮಿಕ್ ಪಟ್ಟಿ ಇರುವ ಪುಟವನ್ನು. ಕಾಮಿಕ್ ರೂಪದಲ್ಲಿರುವ ಕಥೆಗಳು ಅಷ್ಟು ಕುತೂಹಲಕಾರಿ.

ತಮಾಷೆಯಾಗಿರುವ ಘಟನೆ ಅಥವಾ ಧಾರಾವಾಹಿ ಕಥೆಯ ಒಂದು ಅಂಶವನ್ನು ಒಳಗೊಂಡಿರುವುದು ಕಾಮಿಕ್ ಪಟ್ಟಿ. ಇದರಲ್ಲಿ ಕಥನಕ್ಕಿಂತ ಚಿತ್ರಗಳಿಗೇ ಹೆಚ್ಚು ಮಹತ್ವ. ಕಾಮಿಕ್ ಪಟ್ಟಿ ತಯಾರಾಗಲು, ಕತೆಗಾರ ಮತ್ತು ಚಿತ್ರಕಾರ ಇವರಿಬ್ಬರ ಸಂಯುಕ್ತ ಪ್ರಯತ್ನ ಬೇಕು.

ಕಾಮಿಕ್ ಪಟ್ಟಿಗಳನ್ನು ಚಿಕ್ಕ ಪುಸ್ತಕದ ರೂಪದಲ್ಲಿ ಪ್ರಕಟಿಸಿದಾಗ ಅದು ಕಾಮಿಕ್ ಪುಸ್ತಕ ಎನಿಸುತ್ತದೆ. ಇದು ಕೆಲವು ಪಾತ್ರಗಳ ಸುತ್ತು ಹೆಣೆದಿರುವ ಪೂರ್ತಿ ಕಥೆಯನ್ನು ಹೇಳುತ್ತದೆ. ಒಂದು ಪುಸ್ತಕದಲ್ಲಿ ಮೂರು ನಾಲ್ಕು ಚಿಕ್ಕ ಕಥೆಗಳಿರುವುದುಂಟು. ಬಣ್ಣ ಬಣ್ಣದ ಅಂದವಾದ ಮುದ್ರಣದಿಂದ ಕಾಮಿಕ್ ಪುಸ್ತಕಗಳು ಸಾಮಾನ್ಯವಾಗಿ ತುಂಬ ಆಕರ್ಷಕವಾಗಿರುತ್ತವೆ.

ಕಾಮಿಕ್ ಪಟ್ಟಿಗಳಲ್ಲಿ ಚಿತ್ರದಲ್ಲಿ ತೋರಿಸಿದಂಥ ಪಾತ್ರಗಳ ಚಟುವಟಿಕೆ ಮತ್ತು ಮಾತುಗಳಲ್ಲೇ ಹೆಚ್ಚಿನ ಕಥೆ ಹೇಳಲ್ಪಡುತ್ತದೆ. ಕಥೆಯಲ್ಲಿ ಬರುವ ಪಾತ್ರದ ತಲೆಯ ಮೇಲೆ ಚಿತ್ರಿಸಲ್ಪಟ್ಟ 'ಬಲೂನು'ಗಳಲ್ಲಿ ಸಂಭಾಷಣೆಯನ್ನು ಅಚ್ಚುಮಾಡಿರುತ್ತಾರೆ. ಅಗತ್ಯವೆನಿಸಿದಲ್ಲಿ ಕಥೆಯ ಚಿಕ್ಕ ಭಾಗವನ್ನು ಚಿತ್ರಗಳ ಕೆಳ ಅಥವಾ ಮೇಲ್ಭಾಗದಲ್ಲಿ ಮುದ್ರಿಸುತ್ತಾರೆ.

ಹೆಚ್ಚು ಕಡಮೆ ಎಲ್ಲ ವೃತ್ತಪತ್ರಿಕೆಗಳೂ ಪ್ರತಿ ದಿನ ಕಾಮಿಕ್ ಪಟ್ಟಿಯನ್ನು ಪ್ರಕಟಿಸುತ್ತವೆ. ನಾಲ್ಕು ಪ್ರತ್ಯೇಕ ಅಂಕಣಗಳಲ್ಲಿ ಚಿತ್ರವೂ ಕಥನವೂ ಇರುತ್ತವೆ. ಭಾನುವಾರದ ಪತ್ರಿಕೆಯಲ್ಲಿ ಹಲವು ಕಾಮಿಕ್ ಪಟ್ಟಿಗಳಿರುತ್ತವೆ. ಕೆಲವು ಎಂಟು ಅಂಕಣ ಉದ್ದವಿದ್ದರೆ ಇನ್ನು ಕೆಲವು ಒಂದೇ ಅಂಕಣದಲ್ಲಿ ವಿನೋದ ಸನ್ನಿವೇಶವೊಂದನ್ನು ಚಿತ್ರಿಸುತ್ತವೆ.

ಕಾಮಿಕ್ ಕಥೆಗಳು ಚಿತ್ರಕಥೆಗಳ ರೂಪದಲ್ಲಿರುವುದರಿಂದ ಅವನ್ನು ಓದಿ ತಿಳಿದುಕೊಳ್ಳುವುದು, ಸಂತೋಷಪಡುವುದು ಸುಲಭ. ಕಠಿಣ ಸಂಗತಿಗಳನ್ನು ಹೇಳಿಕೊಡುವುದಕ್ಕೂ ಈ ಸರಳ ಮಾಧ್ಯಮವನ್ನು ಉಪಯೋಗಿಸುವುದುಂಟು. ಮಹಾ ಸಾಹಿತ್ಯದ ಕೃತಿಗಳನ್ನೂ ವಿಜ್ಞಾನ ಸಂಗತಿಗಳನ್ನೂ ಈ ರೀತಿಯಿಂದ ಓದುಗರಿಗೆ ಸುಲಭವಾಗಿ ಪರಿಚಯಮಾಡಿಸಿಕೊಡಬಹುದು. ಹಲವು ವ್ಯಾಪಾರೀ ಸಂಸ್ಥೆಗಳು ತಮ್ಮ ಸಿದ್ಧವಸ್ತುಗಳ ಜಾಹಿರಾತಿನಲ್ಲಿ ಕೂಡ ಕಾಮಿಕ್ ತಂತ್ರವನ್ನು ಬಳಸುತ್ತವೆ.

ಕಾಮಿಕ್ ಪಟ್ಟಿಗಳು ಮೊಟ್ಟಮೊದಲು 1870ರ ಸುಮಾರಿಗೆ ಪಾಶ್ಚಾತ್ಯ ವೃತ್ತಪತ್ರಿಕೆಗಳಲ್ಲಿ ಗಮನಾರ್ಹವಾಗಿ ಕಾಣಿಸಿಕೊಂಡರೂ, ಕಾಮಿಕ್ ಕಲೆ ಮೂರು ಸಾವಿರ ವರ್ಷಗಳ ಹಿಂದೆಯೇ ಇದ್ದಿತು ಎಂಬುದಕ್ಕೆ ಸಾಕ್ಷ್ಯಗಳಿವೆ.

ಒಮ್ಮೆ ಪ್ರಕಟವಾಗಿದ್ದ ಕಾಮಿಕ್ ಪಟ್ಟಿಗಳನ್ನು ಒಟ್ಟುಗೂಡಿಸಿ ಪ್ರಕಟಿಸಿದ ಪ್ರಥಮ ಕಾಮಿಕ್ ಪುಸ್ತಕ 20ನೆಯ ಶತಮಾನದ ನಾಲ್ಕನೆಯ ದಶಕದಲ್ಲಿ ಹೊರಬಂತು.

ಕಾಮಿಕ್ ಪುಸ್ತಕಗಳನ್ನು ಓದಿ ಮಕ್ಕಳು ಹಾಳಾಗುತ್ತಾರೆ ಎಂದು ಭಾವಿಸುವವರುಂಟು. ಎಲ್ಲ ಕಾಮಿಕ್ ಪುಸ್ತಕಗಳೂ ಕೆಟ್ಟ ಪ್ರಭಾವ ಬೀರುವುದಿಲ್ಲ. ಉತ್ತಮ ಕಾಮಿಕ್ ಪುಸ್ತಕ ಒಳ್ಳೆಯ ಶೈಕ್ಷಣಿಕ ಸಾಧನವಾಗಬಲ್ಲುದು. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಕಾಮಿಕ್ ಪುಸ್ತಕಗಳ ಜನಪ್ರಿಯತೆಯಿಂದ ಉತ್ಸಾಹಿತರಾದ ಪ್ರಕಾಶಕರು ಕ್ರೌರ್ಯ, ಹಿಂಸೆಗಳೇ ವಸ್ತುವಾಗುಳ್ಳ ರೋಮಾಂಚಕಾರೀ ಕಥೆಗಳ ಕಾಮಿಕ್ ಪುಸ್ತಕಗಳನ್ನು ಪ್ರಕಟಿಸಲು ಆರಂಭಿಸಿದರು. ಅದನ್ನು ಗಮನಿಸಿ, ಕಾಮಿಕ್ ಪುಸ್ತಕಗಳ ಗುಣಮಟ್ಟದ ಪರಿಶೀಲನೆಗಾಗಿ ಕಾನೂನು ಮಂಡಲಿ ಸ್ಥಾಪಿತವಾಯಿತು. ಆ ದೇಶದಲ್ಲಿ ಈ ಮಂಡಲಿಯ ಅಂಗೀಕಾರ ಮುದ್ರೆ ಇರುವ ಕಾಮಿಕ್ ಪುಸ್ತಕ ಮಾತ್ರ ಕೊಂಡು ಓದಲು ಯೋಗ್ಯ ಎನಿಸಿದೆ.

ಎರಡು ಜೊತೆ ಅನುರೂಪ ಅವಳಿಜವಳಿ ಸಹೋದರರು. ಚಿಕ್ಕಂದಿನಲ್ಲಿ ಇವರು ಬೇರೆ ಬೇರೆಯಾಗಿಯೇ ಬೆಳೆದಿರುತ್ತಾರೆ. ಪ್ರಬುದ್ಧರಾದಾಗ ಸಂಧಿಸುತ್ತಾರೆ. ಅದರಲ್ಲಿ ಇಬ್ಬರ ಹೆಸರು ಆಂಟಿಫ್ರೋಸ್, ಇನ್ನಿಬ್ಬರ ಹೆಸರು ಡ್ರೊಮಿಯೋ. ಹೆಸರು, ರೂಪ ಎರಡರಲ್ಲೂ ಒಂದೇ ಸಮನಿರುವ ಈ ಎರಡು ಜೊತೆ ಸಹೋದರರಿಂದಾಗಿ ಗೊಂದಲಗಳೂ ವಿಪರ್ಯಾಸಗಳೂ ಉಂಟಾಗಿ ಹಾಸ್ಯಮಯ ಸನ್ನಿವೇಶಗಳು ಏರ್ಪಡುತ್ತವೆ. ಕೊನೆಗೆ ತಪ್ಪು ಗ್ರಹಿಕೆಗಳೆಲ್ಲ ಸರಿಪಟ್ಟು, ಎಲ್ಲರೂ ಹರ್ಷಗೊಳ್ಳುತ್ತಾರೆ.

ಇದು ಶೇಕ್ಸ್‌ಪಿಯರನ 'ಪ್ರಮಾದಗಳ ಪ್ರಹಸನ' ಎಂಬ ನಾಟಕದ ಕಥಾವಸ್ತು. ಇದೊಂದು ಕಾಮಿಡಿ.

ವಿನೋದಪ್ರಧಾನವಾದ ನಾಟಕ ಕಾಮಿಡಿ. ಇದರಲ್ಲಿ ಮಾನವ ದೌರ್ಬಲ್ಯ, ಸಮಾಜದ ರೀತಿನೀತಿ, ಜೀವನದ ಪರಿಹಾಸ್ಯಪೂರ್ಣ ಪ್ರಸಂಗಗಳು ಹಿತವೆನಿಸುವ ರೀತಿಯಲ್ಲಿ ನಗೆಗೀಡಾಗುತ್ತವೆ.



ಇಬ್ಬರು ನಗೆ ನಟರು : ಗ್ರೀಕ್ ಕಾಮಿಡಿಗಳಲ್ಲಿ

ನಾಟಕದ ಎರಡು ಪ್ರಧಾನ ಮುಖಗಳಲ್ಲಿ ಒಂದು ಕಾಮಿಡಿ; ಮತ್ತೊಂದು ಟ್ರಾಜಿಡಿ.

ಕಾಮಿಡಿ ಹುಟ್ಟಿದ್ದು ಪ್ರಾಚೀನ ಗ್ರೀಕರ ಕಾಲದಲ್ಲಿ. ಆಗ ಪ್ರತಿ ವರ್ಷ ಕಾಮಿಡಿಗಳು ಹಾಗೂ ಟ್ರಾಜಿಡಿಗಳ ಪ್ರದರ್ಶನಕ್ಕೆಂದು ಎರಡು ಉತ್ಸವಗಳು ಏರ್ಪಡುತ್ತಿದ್ದುವು. ಗ್ರೀಕ್ ಕಾಮಿಡಿಗಳಲ್ಲಿ ಹಳೆಯ, ಮಧ್ಯಸ್ಥ ಹಾಗೂ ಹೊಸ ಕಾಮಿಡಿಗಳೆಂದು ಮೂರು ಬಗೆ.

ರಂಗಭೂಮಿಯ ಮೇಲೆ ಮೋಲಿಯೇರ್

ಹಳೆಯ ಮತ್ತು ಮಧ್ಯಸ್ಥ ಬಗೆಗಳಲ್ಲಿ ವಿಡಂಬನೆ ಅತಿ ತೀಕ್ಷ್ಣ. ಮೂರನೆಯ ಬಗೆಯಲ್ಲಿ ವಿಡಂಬನೆಯ ತೀವ್ರತೆ ತಗ್ಗಿತು. ಚಮತ್ಕಾರದ ನುಡಿಗಳು, ಅಪಹಾಸ್ಯದ ಮೊನಚು ಮಾತುಗಳ ಬದಲು ಹಾಸ್ಯ ಮನೆ ಮಾಡಿತು. ಇದರಿಂದಾಗಿ ಸಾಧಾರಣವಾಗಿ ತೊಡಕಿನ, ಪ್ರೇಮದ ಕಥಾವಸ್ತುಗಳನ್ನು ಇಂಥ ನಾಟಕಗಳಿಗೆ ಬಳಸಲಾರಂಭಿಸಿದರು. ಅನೇಕ ಅಡಚಣೆಗಳನ್ನು ದಾಟಿದ ಅನಂತರವೇ ಪ್ರೇಮಿಗಳ ಸಮಾಗಮವಾಗುತ್ತಿತ್ತು. ಆರಿಸ್ಟಾಫನೀಸ್ (ಕ್ರಿ. ಪೂ. 445—348) ಗ್ರೀಕ್ ಕಾಮಿಡಿ ಬರೆದವರಲ್ಲಿ ಅಗ್ರಗಣ್ಯ. ಅವನು ಈ ಎಲ್ಲ ಬಗೆಯ ಕಾಮಿಡಿಗಳನ್ನು ಬರೆದಿದ್ದಾನೆ. ಗ್ರೀಕ್ ಕಾಮಿಡಿ ಬರೆದವರಲ್ಲಿ ಹೆಸರಾದ ಇನ್ನೊಬ್ಬ ಮೆನಾಂಡರ್ (ಸುಮಾರು ಕ್ರಿ. ಪೂ. 342–291).

ಈ ಇಬ್ಬರ ಮೇಲ್ಪಂಕ್ತಿಯನ್ನು ಅನುಸರಿಸಿ ನಡೆದವರು ಪ್ರಾಚೀನ ರೋಮಿನ ಪ್ಲಾಟಸ್ ಮತ್ತು ಟೆರೆನ್ಸ್. ಇವರ ಕಾಮಿಡಿಗಳು ಯೂರೋಪಿನ ನವೋದಯದ ಬರೆಹಗಾರರಿಗೆ ಮಾದರಿಗಳಾದುವು. ಇವರಲ್ಲಿ ಫ್ರೆಂಚ್ ನಾಟಕಕಾರ ಮೋಲಿಯೇರ್ (1622—73) ನನ್ನು ಹೆಸರಿಸಬಹುದು. ಒಟ್ಟಿನಲ್ಲಿ ಈ ವೇಳೆಗೆ ಪ್ರಣಯ, ಗೃಹಜೀವನ, ಭಾವಾತಿರೇಕ, ವಿಕಟ ಹಾಗೂ ಪ್ರಹಸನ ಕಾಮಿಡಿಗಳು ಹೊರಬಂದುವು. ಆಧುನಿಕ ಕಾಮಿಡಿಗಳೆಲ್ಲ ಒಂದಲ್ಲ ಒಂದು ಬಗೆಯಲ್ಲಿ ಈ ವಿವಿಧ ಕಾಮಿಡಿಗಳ ಮೂಲದಿಂದ ರೂಪುತಳೆದುವೇ.

ಕಾಮಿಡಿಗಳನ್ನು ವಿಡಂಬನ, ನಡವಳಿಕೆ, ಪ್ರಣಯ, ವಿಕಟ ಪ್ರಹಸನ ಪ್ರಧಾನ ಎಂದು ನಾಲ್ಕು ಬಗೆಗಳಾಗಿ ವಿಂಗಡಿಸುವುದುಂಟು. ಫ್ರಾನ್ಸಿನ ಮೋಲಿಯೇರ್, ಇಂಗ್ಲೆಂಡಿನ ಬೆನ್ ಜಾನ್‌ಸನ್, ಆಧುನಿಕ ನಾಟಕಕಾರ ಜಾರ್ಜ್ ಬರ್ನಾರ್ಡ್ ಷಾ ಇವರು ವಿಡಂಬನಾತ್ಮಕ ನಾಟಕಕಾರರಲ್ಲಿ ಪ್ರಸಿದ್ಧರಾದವರು. ಕನ್ನಡ ನಾಟಕರಂಗದಲ್ಲಿ ಟಿ.ಪಿ. ಕೈಲಾಸಂ ಹಾಗೂ ಶ್ರೀರಂಗರ ನಾಟಕಗಳು ವಿಡಂಬನೆಗೆ ಹೆಸರಾದುವು.

ನಡವಳಿಕೆ ಪ್ರಧಾನವಾದ ಕಾಮಿಡಿಯಲ್ಲಿ ಹಾಸ್ಯಕ್ಕಿಂತ ಚತುರೋಕ್ತಿಯ ಬಳಕೆ ಹೆಚ್ಚು. ಇಂಥ ನಾಟಕಗಳ ಪ್ರೇಕ್ಷಕ ಸೂಚ್ಯ ನುಡಿಗಳನ್ನು ತಕ್ಕಮಟ್ಟಿಗಾದರೂ ಅರ್ಥಮಾಡಿಕೊಳ್ಳಬಲ್ಲವನಾಗಿರಬೇಕು. ಮೋಲಿಯೇರ್, ಇಟಲಿಯ ಗೊಲ್ಡೊನಿ, ಇಂಗ್ಲೆಂಡಿನ ಆಲಿವರ್ ಗೋಲ್ಡ್‌ಸ್ಮಿತ್, ಷೆರಿಡನ್—ಇವರು ಇಂಥ ಚತುರೋಕ್ತಿಭರಿತ ನಾಟಕಗಳನ್ನು ಬರೆದಿದ್ದಾರೆ. ಕಥಾವಸ್ತು



ನಟ ನಾಟಕಕಾರ ನೋಯೆಲ್ ಕವರ್ಡ್

ವನ್ನು ಚುರುಕಾದ ಸಂಭಾಷಣೆಗಳಿಂದ ಬೆಳೆಸುತ್ತಾರೆ. ನಡವಳಿಕೆ ಪ್ರಧಾನವಾದ ಆಧುನಿಕ ನಾಟಕ ಬರೆದವರಲ್ಲಿ ಹೆಸರಾದವರು ಆಸ್ಕರ್ ವೈಲ್ಡ್ ಮತ್ತು ನೊಯೆಲ್ ಕವರ್ಡ್.

ಪ್ರಣಯ ಪ್ರಧಾನ ಕಾಮಿಡಿಗಳನ್ನು ರಚಿಸುವುದರಲ್ಲಿ ಶೇಕ್ಸ್‌ಪಿಯರನಷ್ಟು ಉನ್ನತಿಗೇರಿದವರು, ಬೇರೆಯಾರೂ ಇಲ್ಲ. ಕಥಾವಸ್ತು, ಕಾಮಿಡಿಯ ರೂಪ ಹಳೆಯದೇ. ಆದರೆ ಅವನ ನಾಟಕದ ಕಥೆ, ಪಾತ್ರ ರಚನೆ ಸಂಪೂರ್ಣವಾಗಿ ಅವನವೇ. ಶೇಕ್ಸ್‌ಪಿಯರ್ 13 ಕಾಮಿಡಿಗಳನ್ನು ಬರೆದಿದ್ದಾನೆ. ರಷ್ಯದ ಚೆಕಾಫನೂ ಪ್ರಣಯಪ್ರಧಾನ ಕಾಮಿಡಿ ಬರೆದಿದ್ದಾನೆ.

ವಿಕಟ ಮತ್ತು ಪ್ರಹಸನ ಕಾಮಿಡಿಗಳಲ್ಲಿ ಜೀವನದ ರೀತಿನೀತಿಗಳನ್ನು ಗೇಲಿಮಾಡುವುದೇ ಹೆಚ್ಚು. ಇಲ್ಲಿ ವಾಸ್ತವಿಕತೆ ಇದೆಯೆ. ವಿಷಯ ಸಮಂಜಸವೆ ಎಂಬುದರ ಕಡೆಗೆ ಅಷ್ಟು ಗಮನ ಕೊಡದಿರಲೂಬಹುದು. ಕೆಲವು ಪ್ರಹಸನಗಳಂತೂ ಕೇವಲ ನಗೆ ಎಬ್ಬಿಸುವುದಕ್ಕಾಗಿಯೇ ಸೇರಿಸಲ್ಪಟ್ಟ ಸನ್ನಿವೇಶಗಳಿಂದಲೂ ಪಾತ್ರಗಳಿಂದಲೂ ಕೂಡಿರುತ್ತವೆ.

20ನೆಯ ಶತಮಾನದಲ್ಲಿ ಕಾಮಿಡಿಗೆ ಲಘು ಹಾಗೂ ಹಾಸ್ಯಶೈಲಿಯ, ನಗಿಸುವ ಪಾತ್ರಗಳು ಹಾಗೂ ಸನ್ನಿವೇಶಗಳುಳ್ಳ ನಾಟಕ ಎಂಬ ಅರ್ಥ ರೂಢಿಯಲ್ಲಿವೆ.

## ಕಾಮು

ಯುವಕ ಮಾರ್‌ಸಾಲ್ಟ್. ಅಲ್ಜೀರ್ಸ್‌ನ ವ್ಯಾಪಾರಿ ಸಂಸ್ಥೆಯೊಂದರಲ್ಲಿ ಗುಮಾಸ್ತೆ. ಫ್ರೆಂಚ್–ಅಲ್ಜೀರಿಯನ್ ಮಧ್ಯಮವರ್ಗದ ಸಾಮಾನ್ಯ ಬ್ರಹ್ಮಚಾರಿಯಂತೆ ಅವನೂ ಒಂದು ಚಿಕ್ಕ ಮನೆಯಲ್ಲಿ ವಾಸಿಸುತ್ತ, ತಾನೇ ಅಡುಗೆ ಮಾಡಿಕೊಳ್ಳುತ್ತಿದ್ದ. ಆದರೆ ಸಾಮಾನ್ಯ ಜನರಲ್ಲಿರುವ ಭಾವಾವೇಶ, ಉದ್ರೇಕಗಳು ಮಾತ್ರ ಅವನಲ್ಲಿರಲಿಲ್ಲ. ಜೀವನ, ಮರಣ ಮತ್ತು ಲೈಂಗಿಕತೆಗಳ ವಾಸ್ತವತೆಯನ್ನು ನಿರ್ವಿಕಾರವಾಗಿ ಅವಕ್ಕೆ ಸಂಬಂಧಿಸದ ಅನ್ಯನಂತೆ ವಿಶ್ಲೇಷಿಸಲು ಅವನು ಶಕ್ತನಾಗಿದ್ದ. ಒಂದು ದಿನ ಆತ ಕೊಲೆಯ ಆಪಾದನೆಯ ಮೇಲೆ ಬಂಧನಕ್ಕೆ ಒಳಗಾದ. ಇದರ ಬಗೆಗೂ ಅವನಿಗೆ ಆತಂಕವಾಗಲಿಲ್ಲ. ನ್ಯಾಯಾಲಯದಲ್ಲಿ ಕೊಲೆ ಮೊಕದ್ದಮೆಯ ವಿಚಾರಣೆ ನಡೆದಾಗ ಅವನು ತನ್ನ ನಿರ್ದೋಷಿತ್ವದ ವಿಚಾರವಾಗಿ ಚಕಾರವೆತ್ತಲಿಲ್ಲ; ತನ್ನ ತಾಯಿ ತೀರಿಕೊಂಡಾಗಲೂ ಆತ ಕಣ್ಣೀರು ಸುರಿಸಲಿಲ್ಲ ಎಂಬುದು ಸರಕಾರೀ ವಕೀಲನ ಮುಖ್ಯ ವಾದ. ಸಹಜವಾಗಿಯೇ ಮಾರ್‌ಸಾಲ್ಟ್ ಮರಣದಂಡನೆಗೆ ಗುರಿಯಾದ.

ಇದು ಅಲ್ಬರ್ಟ್ ಕಾಮುವಿನ 'ಅನ್ಯ' ಕಾದಂಬರಿಯ ಸಾರಾಂಶ. ಗ್ರಂಥಕಾರನ ತತ್ತ್ವಜ್ಞಾನದ ಪಡಿಯಚ್ಚು ಈ ಕೃತಿ. ಮಾನವ ಜೀವನದ ಅರ್ಥಹೀನತೆ, ಜೀವನದ ಅಸಂಖ್ಯ ಅಡ್ಡಿ ಆತಂಕಗಳ ವಿರುದ್ಧ ವ್ಯಕ್ತಿಯೊಬ್ಬನ ನಿರಂತರ ಹೋರಾಟ, ಇವೆಲ್ಲ ಅವನ ಕೃತಿಗಳ ಕಥಾವಸ್ತುಗಳು.

ಕಾದಂಬರಿ. ಪ್ರಬಂಧ. ನಾಟಕ ಮತ್ತು ಸಣ್ಣಕತೆಗಳನ್ನು ಬರೆದ ಅಲ್ಬರ್ಟ್ ಕಾಮು ಹುಟ್ಟಿದ್ದು ಅಲ್ಜೀರಿಯದ ಮೊಂಡೋವಿ ಎಂಬಲ್ಲಿ. 1913ರ ನವೆಂಬರ್ 7ರಂದು. ಮೊದಲನೆಯ ಮಹಾಯುದ್ಧದಲ್ಲಿ ತಂದೆ



ಸಾಹಿತ್ಯ, ನೀತಿ, ತತ್ತ್ವಜ್ಞಾನ : ಕಾಮು

ಯನ್ನು ಕಳೆದುಕೊಂಡ ಕಾಮು ಕಷ್ಟಕಾರ್ಪಣ್ಯಗಳ ಮಧ್ಯೆ ಬೆಳೆದ. ಬಿಡುವಿನ ಸಮಯದಲ್ಲಿ ದುಡಿದು ಗಳಿಸುತ್ತ ಅಲ್ಜೀರ್ಸ್ ವಿಶ್ವವಿದ್ಯಾಲಯದಿಂದ ತತ್ತ್ವಜ್ಞಾನದ ಪದವಿ ಪಡೆದ. ಉದ್ಯೋಗಗಳನ್ನು ಬದಲಿಸುತ್ತ ಪವನವಿಜ್ಞಾನಿ, ಶೇರುಕಟ್ಟೆ ದಲ್ಲಾಳಿ, ಸರಕಾರೀ ಅಧಿಕಾರಿ, ಪತ್ರಿಕೋದ್ಯೋಗಿ. ನಾಟಕ ನಿರ್ದೇಶಕ ಹೀಗೆ ದುಡಿದ. ಉತ್ತರ ಆಫ್ರಿಕ. ಸ್ಪೇನ್. ಜೆಕೊಸ್ಲೊವಾಕಿಯ. ಇಟಲಿಗಳಲ್ಲಿ ವಾಸವಾಗಿದ್ದು ಅಲ್ಲಿನ ಜನರನ್ನು ಅರಿತ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಪ್ಯಾರಿಸಿಗೆ ತೆರಳಿ ಜರ್ಮನ್ ಆಕ್ರಮಣವನ್ನು ವಿರೋಧಿಸಿದ ಹೋರಾಟದಲ್ಲಿ ಪಾತ್ರ ವಹಿಸಿ. ಭೂಗತವಾಗಿದ್ದುಕೊಂಡೇ 'ಹೋರಾಟ' ಪತ್ರಿಕೆಯನ್ನು ನಡೆಸಿದ.

'ಅನ್ಯ' ಮಾತ್ರವಲ್ಲದೆ. ಅವನ 'ಪತನ' ಎಂಬ ಕಾದಂಬರಿ. 'ಸಿಸಿಫಸನ ವ್ಯಾಖ್ಯಾನ' ಮತ್ತು 'ಗಡೀಪಾರು ಮತ್ತು ರಾಜ್ಯ' ಎಂಬ ಸಣ್ಣ ಕಥೆಗಳ ಸಂಗ್ರಹಗಳು, 'ಕ್ರಾಂತಿಕಾರಿ' ಎಂಬ ತಾತ್ತ್ವಿಕ ಪ್ರಬಂಧ ಹಾಗೂ 'ಕಾಲಿಗುಲ' ಎಂಬ ನಾಟಕ ಅಂತರರಾಷ್ಟ್ರೀಯ ಪ್ರಸಿದ್ಧಿ ಪಡೆದಿವೆ. ಇವನ ಕೃತಿಗಳು ಫ್ರೆಂಚ್‌ನಿಂದ ಹಲವು ಭಾಷೆಗಳಿಗೆ ಭಾಷಾಂತರವಾಗಿವೆ.

ಪ್ರಾರಂಭದಲ್ಲಿ ಕಾಮು ಅಸ್ತಿತ್ವವಾದಿಯಾಗಿದ್ದ. ಧಾರ್ಮಿಕ. ನೈತಿಕ ವಿಚಾರಗಳನ್ನೆಲ್ಲ ಸಂಪೂರ್ಣವಾಗಿ ತಿರಸ್ಕರಿಸುತ್ತಿದ್ದ. ಆದರೆ ಕ್ರಮೇಣ ಅವನು ಮಾನವೀಯತೆಗೆ ಮತ್ತು ಧಾರ್ಮಿಕತೆಗೆ ಒಲಿದ. 20ನೆಯ ಶತಮಾನದ ವಿಚಾರವಾದಿ ಸಂಪ್ರದಾಯದಂತೆ ಸಾಹಿತ್ಯ. ನೈತಿಕತೆ ಮತ್ತು ತತ್ತ್ವಜ್ಞಾನಗಳ ಸಂಗಮ ಅವನ ಬರೆವಣಿಗೆಗಳಲ್ಲಿ ಕಂಡುಬರುತ್ತದೆ. ತನ್ನ 'ಸ್ಪಷ್ಟವಾದ, ಶ್ರದ್ಧಾಪೂರ್ವಕವಾದ ಕಥನದಿಂದ ಸಮಕಾಲೀನ ಮಾನವೀಯ ಆತ್ಮಸಾಕ್ಷಿಯ ಬಗೆಗೆ ಜ್ಞಾನೋದಯ'ವನ್ನು ಉಂಟುಮಾಡಿದುದಕ್ಕಾಗಿ ಈತನಿಗೆ 1957ರ ನೊಬೆಲ್ ಸಾಹಿತ್ಯ ಬಹುಮಾನ ಬಂತು. ಈ ತರುಣ 1960 ಜನವರಿ 4ರಂದು ವಾಹನ ಅಪಘಾತಕ್ಕೊಳಗಾಗಿ ಕಾಲವಾದ.

## ಕಾರ್ಲ್ ಸಾಂಡ್‌ಬರ್ಗ್

ಕಾರ್ಲ್ ಸಾಂಡ್‌ಬರ್ಗನ ತಂದೆ ಬಡ ಕಮ್ಮಾರ. ಮುಂದಕ್ಕೆ ಓದಲು ಅನುಕೂಲವಿಲ್ಲದೆ ಕಾರ್ಲ್ ಎಂಟನೆಯ ತರಗತಿಗೇ ವಿದ್ಯಾಭ್ಯಾಸ ನಿಲ್ಲಿಸಿ. ಚಿಕ್ಕ ಪುಟ್ಟ ಉದ್ಯೋಗಗಳಲ್ಲಿ ತೊಡಗಬೇಕಾಯಿತು. ಕ್ಷೌರಿಕನ



ಕವಿಯ ಹಾಡು : ಕಾರ್ಲ್ ಸಾಂಡ್‌ಬರ್ಗ್

ಅಂಗಡಿಯಲ್ಲಿ ಬೂಟ್ ಪಾಲಿಷ್ ಮಾಡುತ್ತಿದ್ದಾಗ, ಅಲ್ಲಿಗೆ ಬಂದ ಗಿರಾಕಿಗಳ ಹರಟೆ ಕೇಳಿ ಅವನಿಗೆ ರಾಜಕೀಯದಲ್ಲಿ ಕುತೂಹಲವುಂಟಾಯಿತು. ಬೀದಿ ಬದಿಯ ಅಂಗಡಿಗಳಲ್ಲಿ ಪುಸ್ತಕಗಳನ್ನು ತಿರುವಿ ಹಾಕಿ, ತನ್ನ ಅಕ್ಕನ ಪಠ್ಯಪುಸ್ತಕಗಳನ್ನು ಓದಿ, ಅವನು ಸಾಹಿತ್ಯದಲ್ಲಿ ಆಸಕ್ತನಾದ. ಹಾಲಿನ ಲಾರಿ ಡ್ರೈವರನಾಗಿದ್ದಾಗ, ತನ್ನ ಮೆಚ್ಚಿನ ಪದ್ಯಗಳನ್ನು ಹಾಡುವುದನ್ನು ಅಭ್ಯಾಸ ಮಾಡಿದ. ಕೆಲಸ ಹುಡುಕುತ್ತ ಊರೂರು ಅಲೆಯುತ್ತಿದ್ದಾಗ, ಸಾಮಾನ್ಯ ಜನರೊಡನೆ ಕಲೆತು ಜಾನಪದ ಗೀತೆಗಳನ್ನು ಕಲಿತ. ಸ್ವಪ್ರಯತ್ನದಿಂದ ಕವಿತೆ ಬರೆಯುವುದನ್ನು ರೂಢಿಸಿಕೊಂಡ; ಜನತೆಯ ಕವಿಯಾದ.

ಕಾರ್ಲ್ ಸಾಂಡ್‌ಬರ್ಗ್ ಹುಟ್ಟಿದ್ದು ಅಮೆರಿಕದ ಗಾಲ್ಸ್‌ಬರ್ಗ್ ಪಟ್ಟಣದಲ್ಲಿ, 1878 ಜನವರಿ 6ರಂದು. ಬಾಲ್ಯವನ್ನೆಲ್ಲ ಬಡತನದಲ್ಲೇ ಕಳೆದ ಮೇಲೆ ಇಪ್ಪತ್ತರ ತರುಣ ಸಾಂಡ್‌ಬರ್ಗ್ ಸ್ಪಾನಿಷ್—ಅಮೆರಿಕನ್ ಯುದ್ಧದ ಸಮಯದಲ್ಲಿ ಸೈನ್ಯಕ್ಕೆ ಸೇರಿದ. ಕೆಲವೇ ತಿಂಗಳಲ್ಲಿ ಯುದ್ಧ ಮುಗಿಯಿತು. ಸೈನಿಕರಾಗಿದ್ದವರಿಗೆ ಉಚಿತವಾಗಿ ಕಾಲೇಜು ಶಿಕ್ಷಣ ಸಿಗುತ್ತದೆ ಎಂದು ತಿಳಿದಾಗ ಸಾಂಡ್‌ಬರ್ಗ್ ಗಾಲ್ಸ್‌ಬರ್ಗಿನ ಲೊಂಬಾರ್ಡ್ ಕಾಲೇಜು ಸೇರಿದ. ಪಾಠಗಳಲ್ಲಿ ತರಗತಿಗೇ ಮೊದಲಿಗನಾದರೂ ಪರೀಕ್ಷೆ ಹತ್ತಿರಬಂತು ಎನ್ನುವಾಗ ಮನೆಬಿಟ್ಟು ಹೊರಟ. ಹೀಗಾಗಿ ಸಾಂಡ್‌ಬರ್ಗ್ ವಿಶ್ವವಿದ್ಯಾಲಯದ ಪದವಿ ಪಡೆಯಲಿಲ್ಲ.

ಆದರೆ ಸಾಂಡ್‌ಬರ್ಗನ ಪ್ರತಿಭೆಯನ್ನು ಗುರುತಿಸಿದ ಪ್ರಾಧ್ಯಾಪಕರೊಬ್ಬರು ಅವನ ಎರಡು ಕವನ ಸಂಕಲನಗಳನ್ನೂ ಪ್ರಬಂಧಗಳ ಪುಸ್ತಕವನ್ನೂ ಪ್ರಕಟಿಸಿದರು. ಕಾಲೇಜು ಬಿಟ್ಟ ಮೇಲೆ ಸಾಂಡ್‌ಬರ್ಗ್ ಮಿಲ್‌ವಾಕೀ ನಗರದಲ್ಲಿ ಮೊದಲು ಪತ್ರಿಕಾ ಪ್ರತಿನಿಧಿಯಾಗಿಯೂ ಆಮೇಲೆ ಆ ಊರಿನ ನಗರ ಸಭಾಧ್ಯಕ್ಷನ ಕಾರ್ಯದರ್ಶಿಯಾಗಿಯೂ ಕೆಲಸಮಾಡಿದ. 1912ರಲ್ಲಿ ಷಿಕಾಗೋ ನಗರಕ್ಕೆ ಬಂದು 'ಡೇಯ್ಲಿ ನ್ಯೂಸ್' ಪತ್ರಿಕೆಯನ್ನು ಸೇರಿದ. ಎರಡು ವರ್ಷಗಳ ಬಳಿಕ ಇವನ 'ಷಿಕಾಗೋ' ಎಂಬ ಕವನ 'ಪೊಯೆಟ್ರಿ' ಪತ್ರಿಕೆ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಬಹುಮಾನ ಪಡೆಯಿತು. 1916ರಲ್ಲಿ ಇವನ 'ಷಿಕಾಗೋ ಪೊಯೆಮ್ಸ್' ಪ್ರಕಟವಾಯಿತು. ಹಳ್ಳಿಯ ವಾತಾವರಣದ ಸೊಗಸು, ಸಾಮಾನ್ಯ ಜನರ ಜೀವನದ ವಿಶಿಷ್ಟತೆ ಸಾಂಡ್‌ಬರ್ಗನ ಕವಿತೆಗಳಲ್ಲಿ ಕಂಡುಬರುವ ಸಾಮಾನ್ಯ ಗುಣಗಳು. ಮುಕ್ತಛಂದಸ್ಸನ್ನು ಬಳಸಿ ಆಡುಭಾಷೆಯಲ್ಲಿ ಬರೆಯುವುದು ಇವನ ಕಾವ್ಯರಚನಾ ತಂತ್ರ. ಇವನ ಹಲವು ಕವಿತೆಗಳಲ್ಲಿ ಕೂಲಿಯಾಳುಗಳು ಮತ್ತು ಲಾರಿ ಡ್ರೈವರುಗಳ ಚಿತ್ರಣವನ್ನು ಕಾಣಬಹುದು.

ಬರೆಹದಿಂದ ಸಾಕಷ್ಟು ಆದಾಯ ದೊರೆಯದೆ ಇದ್ದಾಗ ಸಾಂಡ್‌ಬರ್ಗ್ ಸಾರ್ವಜನಿಕ ಕಚೇರಿಗಳಲ್ಲಿ ಹಾಡುತ್ತಿದ್ದ. ಒಂದು ಗಿಟಾರನ್ನು ನುಡಿಸುತ್ತ ಹಾಡುಗಳನ್ನು ಹೇಳುತ್ತಿದ್ದ. ಸಾಂಡ್‌ಬರ್ಗ್ ಬರೆದದ್ದು ಕವಿತೆ ಮಾತ್ರವಲ್ಲ; ಗದ್ಯರಚನೆಯಲ್ಲೂ ಅವನು ಪಳಗಿದ್ದ. ಷಿಕಾಗೋದಲ್ಲಿ 1919ರಲ್ಲಿ ನಡೆದ ವರ್ಣೀಯ ಗಲಭೆಯನ್ನು ಕುರಿತು 'ಡೇಯ್ಲಿ ನ್ಯೂಸ್' ಪತ್ರಿಕೆಗಾಗಿ ಅವನು ಬರೆದ ಲೇಖನಗಳು ಪುಸ್ತಕ ರೂಪದಲ್ಲಿ ಹೊರಬಂತು. ತನ್ನ ಮಕ್ಕಳಿಗೆ ಹೇಳಿದ ಯಕ್ಷಿಣಿ ಕಥೆಗಳು ಎರಡು ಪುಸ್ತಕಗಳಾಗಿ ಪ್ರಕಟವಾದುವು. ಈತ ಬರೆದ ಅಬ್ರಹಾಂ ಲಿಂಕನನ ಜೀವನಚರಿತ್ರೆಗೆ 1940ರಲ್ಲಿ ಪುಲಿಟ್ಜರ್ ಬಹುಮಾನ ದೊರೆಯಿತು. 'ರಿಮೆಂಬ್ರೆನ್ಸ್ ರಾಕ್' (1948) ಇವನು ಬರೆದ ಏಕಮಾತ್ರ ಕಾದಂಬರಿ. ಸಾಂಡ್‌ಬರ್ಗ್ ಸಂಗ್ರಹಿಸಿದ ಜಾನಪದ ಗೀತೆಗಳು ಎರಡು ಸಂಪುಟಗಳಲ್ಲಿ ಪ್ರಕಟವಾಗಿವೆ. 1950ರಲ್ಲಿ ಪ್ರಕಟವಾದ 'ಕಂಪ್ಲೀಟ್ ಪೋಯೆಮ್ಸ್' 1951ರ ಪುಲಿಟ್ಜರ್ ಬಹುಮಾನವನ್ನು ಗಳಿಸಿತು.

'ದ ಪೀಪಲ್, ಯೆಸ್' (1936) ಎಂಬುದು ಬಹುಶಃ ಸಾಂಡ್‌ಬರ್ಗ್‌ನ ಮೇರುಕೃತಿ. ಇದು ಅಮೆರಿಕದ ಜನರ ಜೀವನದ ಚಿಂತನೆಗಳನ್ನು ಕುರಿತ ದೀರ್ಘವಾದ ಚಾರಿತ್ರಿಕ ಕವಿತೆ.

ಸಾಂಡ್‌ಬರ್ಗ್‌ಗೆ ಮೊದಲಿನಿಂದಲೂ ಹಳ್ಳಿ ಜೀವನದ ಆಕರ್ಷಣೆ ಬಹಳ. 1945ರಲ್ಲಿ ಈತ ನ್ಯೂ ಕೆರೊಲಿನ್ ಸಂಸ್ಥಾನದ ಫ್ಲಾಟ್‌ರಾಕ್ ಎಂಬಲ್ಲಿ ದೊಡ್ಡ ಜಮೀನನ್ನು ಕೊಂಡು ಅಲ್ಲೇ ವಾಸಿಸತೊಡಗಿದ. 1967 ಜುಲೈ 22ರಂದು ಇಲ್ಲೇ ಇವನ ಅಂತ್ಯವಾಯಿತು.

ಸಾಮಾನ್ಯ ಜನರ ಜೀವನದ ಉದಾತ್ತತೆಯನ್ನು ಇವನು ಪರಿಣಾಮಕಾರಿಯಾಗಿ ತನ್ನ ಕವಿತೆಗಳಲ್ಲಿ ನಿರೂಪಿಸಿದ್ದಾನೆ. ಆಡುಭಾಷೆಯನ್ನು ಉಪಯೋಗಿಸಿ ಕಾವ್ಯವನ್ನು ಸಾಮಾನ್ಯ ಜನರ ಜೀವನದ ಹತ್ತಿರಕ್ಕೆ ತಂದಿದ್ದಾನೆ.

## ಕಾರ್ಲೈಲ್

ಥಾಮಸ್ ಕಾರ್ಲೈಲನ ಒಂದು ಪುಸ್ತಕವನ್ನು ಒಮ್ಮೆ ಓದಿದರೆ ಆ ಮೇಲೆ ಆತನನ್ನು ಮರೆಯುವುದು ಕಷ್ಟ. ಅಷ್ಟು ಪ್ರಭಾವಶಾಲಿ ಶೈಲಿ ಅವನದು. ಪ್ರತಿ ಪುಟದಲ್ಲೂ ಉದ್ರೇಕ, ರೋಷ ಎದ್ದುಕಾಣುತ್ತವೆ. ವಿಚಿತ್ರವಾದ ವಾಕ್ಯರಚನೆ, ವ್ಯಾಕರಣಬಂಧಗಳಿಂದಾಗಿ ಅವನ ಕೃತಿಗಳನ್ನು ಓದುವುದೂ ಪ್ರಯಾಸಕರವೇ. ಆದರೆ ಅವನು ತನ್ನ ಕಾಲದ ಅತಿ ಶ್ರೇಷ್ಠ ಚರಿತ್ರಕಾರ ಮತ್ತು ಪ್ರಬಂಧಕಾರ.

ಕಾರ್ಲೈಲನ ಪ್ರಕ್ಷುಬ್ಧ ಸಾಹಿತ್ಯ ಶೈಲಿಗೆ ಜೀವನದ ಉದ್ದಕ್ಕೂ ಅವನು ಅನುಭವಿಸಿದ ಕಷ್ಟ ಪರಂಪರೆಯೇ ಕಾರಣ. ಎಡೆಬಿಡದೆ ಕಾಡುತ್ತಿದ್ದ ಬಡತನ, ಆಗಾಗ ಉಂಟಾಗುತ್ತಿದ್ದ ಅನಾರೋಗ್ಯ, ಸುಖವಿಲ್ಲದ ಕುಟುಂಬ ಜೀವನ —ಇವು ಆತನ ವಿಲಕ್ಷಣ ವ್ಯಕ್ತಿತ್ವವನ್ನು ರೂಪಿಸಿದುವು. ಮಾತುಕತೆಯಲ್ಲಿ ಒರಟುತನ, ನಡತೆಯಲ್ಲಿ ನಿರ್ಲಕ್ಷ್ಯ, ಇವೆರಡೂ ಅವನ ಮನಸ್ಸನ್ನು ಅರಿತವರು, ವರ್ಚಸ್ಸನ್ನು ಕಂಡವರು ಅವನ ಗೆಳೆಯರಾಗುತ್ತಿದ್ದರು. ರಸ್ಕಿನ್, ಡಿಕೆನ್ಸ್ ಮತ್ತು ಬ್ರೌನಿಂಗ್ ಮುಂತಾದವರು ಕಾರ್ಲೈಲನ ಆಪ್ತರಾಗಿದ್ದರು.


ಪ್ರಭಾವಶಾಲಿ ಶೈಲಿ : ಕಾರ್ಲೈಲ್

ಥಾಮಸ್ ಕಾರ್ಲೈಲ್ ಸ್ಕಾಟ್‌ಲೆಂಡಿನ ಕಲ್ಲು ಕೆಲಸಗಾರನೊಬ್ಬನ ಮಗ. ಹುಟ್ಟಿದ್ದು ಎಕಲ್‌ಫೆಕ್ಯಾನ್ ಎಂಬಲ್ಲಿ, 1795ರ ಡಿಸೆಂಬರ್ 4 ರಂದು. ಅವನನ್ನು ಪಾದ್ರಿಯಾಗಿ ಮಾಡುವ ಉದ್ದೇಶದಿಂದ ಅವನಿಗೆ ಧಾರ್ಮಿಕ ಶಿಕ್ಷಣ ಕೊಡಿಸಲಾಯಿತು. ಆದರೆ ಶಿಕ್ಷಣ ಮುಗಿಸಿದ ಬಳಿಕ ಕಾರ್ಲೈಲ್ ಪಾದ್ರಿಯಾಗುವ ಯೋಚನೆ ಬಿಟ್ಟು, ಗಣಿತದ ಉಪಾಧ್ಯಾಯನಾದ. ಇದು ಸರಿಬೀಳದೆ, ಕಾಯಿದೆ ಕಲಿಯುವ ಹಂಚಿಕೆ ಹಾಕಿದ. ಕೆಲ ಸಮಯದಲ್ಲೇ ಈ ಯೋಜನೆಯನ್ನೂ ಕೈಬಿಟ್ಟು ಧನಿಕನೊಬ್ಬನ ಮಗನಿಗೆ ಪಾಠಹೇಳುತ್ತ ವೃತ್ತಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತ ಹೊಟ್ಟೆ ಹೊರೆಯಲಾರಂಭಿಸಿದ.

ಕಾರ್ಲೈಲ್‌ಗೆ ಜರ್ಮನ್ ಭಾಷೆಯಲ್ಲಿ ಆಸಕ್ತಿ ಹುಟ್ಟಿತು. ಕಷ್ಟಪಟ್ಟು ಅಭ್ಯಾಸಮಾಡಿ ಆ ಭಾಷೆಯನ್ನು ಚೆನ್ನಾಗಿ ಕಲಿತ. ಗಯಟೆಯಂಥ ಶ್ರೇಷ್ಠ ಲೇಖಕರ ಕೃತಿಗಳನ್ನು ಓದಿ ಅರ್ಥಮಾಡಿಕೊಂಡ. ಹಲವು ಕೃತಿಗಳ ಭಾಷಾಂತರವನ್ನೂ ಮಾಡಿದ.

1826ರಲ್ಲಿ ಜೇನ್ ವೆಲ್ಶ್ ಎಂಬ ಸುಂದರಿಯನ್ನು ಕಾರ್ಲೈಲ್ ಮದುವೆಯಾದ. ಎಲ್ಲರೊಡನೆ ನಗುನಗುತ್ತ ಮಾತನಾಡುವ ಬುದ್ಧಿವಂತೆ ಜೇನ್, ಕಾರ್ಲೈಲನಿಗೆ ಸ್ಫೂರ್ತಿಯ ಸೆಲೆಯಾದಳು ; ತನ್ನ ಗಂಡನ ಸಿಡುಕುತನದೊಡನೆ ಹೊಂದಿಕೊಂಡು ನಡೆದಳು.

1828ರಲ್ಲಿ ಕಾರ್ಲೈಲ್ ದಂಪತಿ ಸ್ಕಾಟ್‌ಲೆಂಡಿನ ಹಳ್ಳಿಮನೆಯೊಂದರಲ್ಲಿ ಇರತೊಡಗಿದರು. 1831ರಲ್ಲಿ ಕಾರ್ಲೈಲ್ ತನ್ನ ಮೊಟ್ಟಮೊದಲ ಮಹಾಕೃತಿ 'ಸಾರ್ಟರ್ ರಿಸಾರ್ಟಸ್' ಎಂಬುದನ್ನು ಬರೆದು ಮುಗಿಸಿದ. ಇದು ಬಟ್ಟೆಬರೆಗಳ ಬಗೆಗೆ ಬರೆದ ದೀರ್ಘ ಪ್ರಬಂಧದಂತಿದೆ. ವಾಸ್ತವವಾಗಿ ಇದೊಂದು ಆತ್ಮವೃತ್ತ. ಜೀವನದ ಸರಳ ಸತ್ಯಗಳ ಚಿತ್ರಣ. ಸುಳ್ಳು ಮೋಸಗಾರಿಕೆಗಳ ಖಂಡನೆ. ಈ ಪುಸ್ತಕವನ್ನು ಪ್ರಕಟಿಸಲು ಯಾರೂ ಮುಂದೆ ಬರಲಿಲ್ಲ. ಕೊನೆಗೆ ಇದು ಒಂದು ಮಾಸಪತ್ರಿಕೆಯ ಧಾರಾವಾಹಿಯಾಗಿ ಬೆಳಕು ಕಂಡಿತು.

ಕಾರ್ಲೈಲ್‌ಗೆ ಖ್ಯಾತಿ ದೊರಕಿಸಿಕೊಟ್ಟದ್ದು ಅವನ 'ಫ್ರೆಂಚ್ ಕ್ರಾಂತಿ'. ಹಲವು ಸಂಪುಟಗಳಲ್ಲಿರುವ ಚರಿತ್ರಾ ಗ್ರಂಥ ಇದು. ಇದರಲ್ಲಿ ಘಟನೆಗಳ ಕಥನಕ್ಕಿಂತ ಸನ್ನಿವೇಶಗಳ ಚಿತ್ರಣ, ಜನರ ಮನೋಭಾವ, ನಿರೂಪಣೆಗಳಿಗೆ ಹೆಚ್ಚು ಮಹತ್ವ. ಫ್ರಾನ್ಸಿನ ಕ್ರಾಂತಿಯ ಪೂರ್ಣ ವಿವರಕೊಡುವ ಪ್ರಮುಖ ಕೃತಿಯಿದು. ಹಸ್ತಪ್ರತಿ ಸಿದ್ಧವಾದಾಗ ಅಭಿಪ್ರಾಯ ತಿಳಿಯಲೆಂದು ಕಾರ್ಲೈಲ್ ಅದನ್ನು ಗೆಳೆಯನಾದ ತತ್ತ್ವಜ್ಞಾನಿ, ಜಾನ್ ಸ್ಟುವರ್ಟ್ ಮಿಲ್‌ಗೆ ಕಳುಹಿಸಿಕೊಟ್ಟ. ಆತನ ಕೆಲಸದ ಹುಡುಗಿ ಇದು ಯಾವುದೋ ಕೆಲಸಕ್ಕೆ ಬಾರದ ಪುಸ್ತಕವೆಂದುಕೊಂಡು ಗ್ರಂಥದ ಪ್ರಥಮ ಸಂಪುಟದ ಹಸ್ತಪ್ರತಿಯನ್ನು ಒಲೆಗಿಟ್ಟಳು. ಈ ಸುದ್ದಿ ಕೇಳಿ ಕಾರ್ಲೈಲ್ ತಲೆಕೆಡಿಸಿಕೊಳ್ಳಲಿಲ್ಲ. ಮತ್ತೆ ಪಟ್ಟು ಹಿಡಿದು ಕುಳಿತು ಆ ಸಂಪುಟವನ್ನು ಬರೆದುಮುಗಿಸಿದ. ಈ ಕೆಲಸಕ್ಕೆ ಒಂದು ವರ್ಷ ಹಿಡಿಯಿತು.

ಶ್ರಮವಹಿಸಿ ಕೆಲಸ ಮಾಡುವುದರಲ್ಲಿ ಥಾಮಸ್ ಕಾರ್ಲೈಲನನ್ನು ಮೀರಿಸಿದವರಿಲ್ಲ. ಚರಿತ್ರೆಯ ಅಧ್ಯಯನದ ಮಧ್ಯೆಯೂ ಅವನು ಅನೇಕ ಉಪನ್ಯಾಸಗಳನ್ನು ಮಾಡುತ್ತಿದ್ದ. ಈ ಉಪನ್ಯಾಸಗಳ ಸಂಕಲನವೇ 1841ರಲ್ಲಿ ಪ್ರಕಟವಾದ 'ನಾಯಕ ಮತ್ತು ನಾಯಕ ಪೂಜೆ'.

ನೆಪೋಲಿಯನ್, ಆಲಿವರ್ ಕ್ರಾಮ್‌ವೆಲ್, ಪ್ರಷಿಯದ ಫ್ರೆಡರಿಕ್–ಇಂಥ ವ್ಯಕ್ತಿಗಳು ಕಾರ್ಲೈಲನ ಮೆಚ್ಚುಗೆಗೆ ಪಾತ್ರರಾದವರು. 'ಆಲಿವರ್ ಕ್ರಾಮ್‌ವೆಲನ ಭಾಷಣಗಳು ಮತ್ತು ಪತ್ರಗಳು' ಎಂಬ ಪುಸ್ತಕವನ್ನು ಕಾರ್ಲೈಲ್ 1845ರಲ್ಲಿ ಪ್ರಕಟಿಸಿದ. ಹದಿನಾಲ್ಕು ವರ್ಷಗಳ ಸತತ ಪರಿಶ್ರಮದ ಬಳಿಕ 1865ರಲ್ಲಿ ಫ್ರೆಡರಿಕ್ ದೊರೆಯ ಜೀವನ ಚರಿತ್ರೆ ಹೊರಬಂತು.

ನಲವತ್ತು ವರ್ಷಗಳ ದಾಂಪತ್ಯ ಜೀವನದ ಬಳಿಕ 1866ರಲ್ಲಿ ಕಾರ್ಲೈಲನ ಹೆಂಡತಿ ಜೇನ್ ಕಾಲವಾದಳು. ಅವಳನ್ನು ಗಾಢವಾಗಿ ಪ್ರೀತಿಸುತ್ತಿದ್ದ ಕಾರ್ಲೈಲನಿಗೆ ಇದು ದೊಡ್ಡ ಹೊಡೆತವಾಯಿತು. ಅನಂತರ ಅವನು ಮಾಡಿದ ಸಾಹಿತ್ಯರಚನೆ ಅತ್ಯಲ್ಪ. ಜೇನಳು ಬರೆದಿದ್ದ ಕಾಗದಗಳನ್ನು ಮತ್ತೆಮತ್ತೆ ಓದುತ್ತ, ತನ್ನ ಹೆಚ್ಚಿನ ಸಮಯವನ್ನು ಆತ ಕಳೆಯುತ್ತಿದ್ದ. 1881ರ ಫೆಬ್ರುವರಿ 4ರಂದು ತನ್ನ 86ನೆಯ ವಯಸ್ಸಿನಲ್ಲಿ ಕಾರ್ಲೈಲ್ ಲಂಡನಿನಲ್ಲಿ ತೀರಿಕೊಂಡ. ಎರಡು ವರ್ಷಗಳ ಬಳಿಕ, ಜೇನ್ ಕಾರ್ಲೈಲಳ ಪತ್ರಗಳ ಸಂಕಲನ ಪ್ರಕಟವಾಯಿತು.

## ಕಾವ್ಯಮಂಜರಿ

'ಮಂಜರಿ' ಎಂದರೆ ಹೂಗೊಂಚಲು, ಹೂಮಾಲೆ, ಎಂದು ಅರ್ಥ. ಕಾವ್ಯಮಂಜರಿ ಎಂದರೆ ಕವನಗಳ ಹೂಗೊಂಚಲು ; ಮಾಲೆ.

ಬೇರೆ ಬೇರೆ ಕವಿಗಳು ಬರೆದ ಉತ್ತಮ ಕವನಗಳು, ಕವನ ಭಾಗಗಳನ್ನು ಕೂಡಿಸಿ ರೂಪಿಸುವ ಗ್ರಂಥ ಕಾವ್ಯಮಂಜರಿ.

ಕಾವ್ಯಮಂಜರಿಗಳಲ್ಲಿ ಹಲವು ಬಗೆಗಳಿವೆ. ಯಾವುದಾದರೂ ಒಂದು ಕಾಲವನ್ನು ಲಕ್ಷ್ಯದಲ್ಲಿಟ್ಟುಕೊಂಡು, ಆ ಅವಧಿಯಲ್ಲಿ ಇದ್ದ ಕವಿಗಳ ರಚನೆಯಲ್ಲಿ ಅತ್ಯುತ್ತಮವೆಂದು ಕಂಡುಬಂದ ಕವನಗಳನ್ನು ಆರಿಸಿ ಸಂಕಲನ ಮಾಡುವುದು ಒಂದು ರೀತಿ ; ಇಂಥ ಸಂಕಲನದಲ್ಲಿ ಆ ಅವಧಿಯ ಅತ್ಯುತ್ತಮ ಹಾಗೂ ಪ್ರಾತಿನಿಧಿಕ ಕವನಗಳು ಸೇರಿರುತ್ತವೆ. ಯಾವುದಾದರೂ ಒಂದು ವರ್ಗದ ಕವನಗಳನ್ನು —ಅಂದರೆ ಪ್ರಣಯಗೀತೆ, ಕಥನಕವನ, ಪ್ರಕೃತಿ ವರ್ಣನೆ ಹೀಗೆ ಆರಿಸಿಕೊಂಡು ಅವನ್ನು ಜೋಡಿಸುವುದು ಇನ್ನೊಂದು ಬಗೆ. ಅದೇ ರೀತಿ ಒಬ್ಬನೇ ಕವಿಯ ಕೃತಿಗಳನ್ನು ಆರಿಸಿಕೊಂಡೂ ಕಾವ್ಯಮಂಜರಿಯನ್ನು ರೂಪಿಸಬಹುದು.

ಆದ್ದರಿಂದ ಕಾವ್ಯಮಂಜರಿ ಎಂಬುದನ್ನು ಯಾವುದೇ ಸಾಹಿತ್ಯದ, ಒಂದು ಕಾಲದ, ಒಂದು ಪ್ರಕಾರದ ಅಥವಾ ಒಬ್ಬ ಕವಿಯ ಉತ್ತಮ ಹಾಗೂ ಪ್ರಾತಿನಿಧಿಕ ಕವನಸಂಕಲನ ಎನ್ನಬಹುದು.

ಕಾವ್ಯಮಂಜರಿಗಳ ರಚನೆ ಬಹು ಹಿಂದಿನಿಂದ ನಡೆದು ಬಂದಿದೆ. ಗ್ರೀಸಿನಲ್ಲಿ ಕ್ರಿ. ಪೂ. 1ನೆಯ ಶತಮಾನದ ಆದಿಭಾಗದಲ್ಲಿದ್ದ ಮೆಲಿಯೇಜರ್ ಸಿದ್ಧಗೊಳಿಸಿದ 'ಹೂಮಾಲೆ' ಅತ್ಯಂತ ಪ್ರಾಚೀನ ಕಾವ್ಯಮಂಜರಿ ಎನ್ನಬಹುದು. ಇದರಲ್ಲಿ ಮೆಲಿಯೇಜರನ ಕೃತಿಗಳಲ್ಲದೆ, ಪ್ರಾಚೀನ ಕಾಲದಿಂದ ಹಿಡಿದು ಅವನ ಕಾಲದವರಿಗೆ ಐವತ್ತಕ್ಕಿಂತಲೂ ಹೆಚ್ಚು ಮಂದಿ ಗ್ರೀಕ್ ಕವಿಗಳ ಕೃತಿಗಳಿವೆ. ಅನಂತರ ಬಂದ ಕವನ ಸಂಕಲನಕಾರರಿಗೆ ಈ ಕೃತಿ ಮಾರ್ಗದರ್ಶಕವಾಯಿತು.

19ನೆಯ ಶತಮಾನದ ವೇಳೆಗೆ ಕಾಲಾನುಕ್ರಮವಾದ ಕಾವ್ಯಮಂಜರಿಗಳು ಹೊರಬಿದ್ದುವು. ವಿಕ್ಟೋರಿಯಾ ರಾಣಿಯ ಆಳ್ವಿಕೆಯಲ್ಲಿ ಪ್ರಕಟವಾದ ಫ್ರಾನ್ಸಿಸ್ ಟರ್ನರ್ ಪಾಲ್‌ಗ್ರೇವನ ಇಂಗ್ಲಿಷ್ ಗೀತೆಗಳ ಮತ್ತು ಭಾವ ಗೀತೆಗಳ 'ಸುವರ್ಣ ಭಂಡಾರ', ಸುಪ್ರಸಿದ್ಧ ಮತ್ತು ಜನಪ್ರಿಯ ಕಾವ್ಯಮಂಜರಿ. ಇದರ ಬಳಿಕ ಇಂಗ್ಲಿಷಿನಲ್ಲಿ ಅನೇಕ ಕಾವ್ಯಮಂಜರಿಗಳು ಪ್ರಕಟವಾಗಿವೆ.

15–16ನೆಯ ಶತಮಾನಗಳಲ್ಲಿ ಯೂರೋಪಿನಲ್ಲಿ ನವೋದಯ ಉಂಟಾದಾಗ ಕಾವ್ಯಮಂಜರಿಗಳು ಹೆಚ್ಚು ಸಂಖ್ಯೆಯಲ್ಲಿ ಪ್ರಕಟವಾದುವು.

ನಮ್ಮ ರಾಷ್ಟ್ರದಲ್ಲೂ ಕಾಲದಿಂದ ಕಾಲಕ್ಕೆ ಸಂಸ್ಕೃತ, ದೇಶಭಾಷೆಗಳ ಕಾವ್ಯಮಂಜರಿಗಳು ಬಂದಿವೆ. ಸಂಸ್ಕೃತ ಸಾಹಿತ್ಯರಂಗದಲ್ಲಿ ಪ್ರಸಿದ್ಧವಾಗಿರುವ ಸುಭಾಷಿತಗಳು ಕೂಡ ಕಾವ್ಯಮಂಜರಿಗಳೇ.

ಮಲ್ಲಿಕಾರ್ಜುನನ (ಸು. 1250) 'ಸೂಕ್ತಿ ಸುಧಾರ್ಣವ' ಕನ್ನಡದ ಮೊದಲನೆಯ ಕಾವ್ಯಮಂಜರಿ. ಇದರಲ್ಲಿ ಅಷ್ಟಾದಶ ವರ್ಣನೆಗಳನ್ನು ಅಧ್ಯಾಯಗಳನ್ನಾಗಿ ಇಟ್ಟುಕೊಂಡು ಒಂದೊಂದು ಅಧ್ಯಾಯದಲ್ಲಿ ಆಯ್ದ ಪದ್ಯಗಳನ್ನು ಕೊಡಲಾಗಿದೆ. ಎರಡನೆಯದು ಅಭಿನವವಾದಿ ವಿದ್ಯಾನಂದನನ (ಸು. 1550) 'ಕಾವ್ಯಸಾರ'. ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಇವೆರಡಕ್ಕೂ ಮಹತ್ವವಿದೆ. ಆರ್. ನರಸಿಂಹಾಚಾರ್ಯರ 'ಕನ್ನಡ ಶಾಸನ ಪದ್ಯಮಂಜರಿ' ಯಲ್ಲಿ ಕನ್ನಡ ಶಾಸನಗಳಿಂದ ಆಯ್ದ ಉತ್ತಮ ಪದ್ಯಗಳಿವೆ.

'ಕನ್ನಡ ಬಾವುಟ' ದಿಂದ 'ಅಕ್ಷರ ಹೊಸ ಕಾವ್ಯ'-'ಹೊಸ ಜನಾಂಗದ ಕಾವ್ಯ'ಗಳವರೆಗೆ ಅನೇಕ ಕಾವ್ಯಮಂಜರಿಗಳು ಕನ್ನಡದಲ್ಲಿ ಪ್ರಕಟವಾಗಿವೆ. 'ಕನ್ನಡ ಕಾವ್ಯ ಪರಿಚಯ' ಕೇಂದ್ರ ಸಾಹಿತ್ಯ ಅಕಾದೆಮಿಯಿಂದ ಪ್ರಕಟವಾಗಿರುವ ಕಾವ್ಯಮಂಜರಿ.

ವಿಶಾಲ ಅರ್ಥದಲ್ಲಿ ಎಲ್ಲ ಬಗೆಯ ಸಾಹಿತ್ಯ ಸಂಗ್ರಹಗಳೂ ಕಾವ್ಯಮಂಜರಿಗಳೇ.

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ 'ಕನ್ನಡ ಕಾವ್ಯ ಪಲ್ಲರಿ', 'ಕಾವ್ಯ ಗಂಗೋತ್ರಿ', 'ಕನ್ನಡ ಕಾವ್ಯಾಂಜಲಿ' ಶೀರ್ಷಿಕೆಗಳುಳ್ಳ ಪುಸ್ತಕಗಳು ಹಳಗನ್ನಡ, ನಡುಗನ್ನಡ, ಹೊಸಗನ್ನಡ ಕಾವ್ಯಪ್ರಪಂಚದ ಕೆಲವು ಉತ್ಕೃಷ್ಟ ಕವನಗಳನ್ನು ಹೊಂದಿರುವ ಶ್ರೇಷ್ಠ ಮಟ್ಟದ ಕಾವ್ಯಮಂಜರಿಗಳು,

## ಕಾವ್ಯಮೀಮಾಂಸೆ

ಕವಿ ಮತ್ತು ಕಾವ್ಯದ ಲಕ್ಷಣಗಳು, ಕಾವ್ಯ ಪ್ರಭೇದಗಳು, ಕಾವ್ಯದಲ್ಲಿ ಅಲಂಕಾರ, ರೀತಿ, ರಸ, ಧ್ವನಿ ಮೊದಲಾದುವುಗಳ ಸ್ಥಾನ, ಮುಂತಾದ ಕಾವ್ಯವಿದ್ಯೆಗೆ ಸಂಬಂಧಿಸಿದ ವಿಷಯಗಳ ಶಾಸ್ತ್ರೀಯ ವಿವೇಚನೆ —ಕಾವ್ಯ ಮೀಮಾಂಸೆ. ಅಲಂಕಾರ ಶಾಸ್ತ್ರ, ಕಾವ್ಯಮೀಮಾಂಸೆ —ಈ ಎರಡೂ ಸಮ್ಮರ್ಥ ಸಮಾನಾರ್ಥಕ ಶಬ್ದಗಳಾಗಿ ಉಪಯೋಗದಲ್ಲಿವೆ. ಶಿಷ್ಟ ಭಾಷಾಕಾರಿಗಳ ಸ್ವರೂಪವನ್ನೂ ಅವುಗಳ ಗುಣ, ಚಮತ್ಕಾರವನ್ನೂ ನಿರೂಪಿಸುವುದು ಅಲಂಕಾರಶಾಸ್ತ್ರ. ಕಾವ್ಯದ ರಚನೆಯ, ಅದನ್ನು ಸಾಧಿಸುವ ಕ್ರಮವೇನು ಎಂಬುದನ್ನು ವಿವರಿಸುವುದು ಕಾವ್ಯ ಮೀಮಾಂಸೆ.

ಅಲಂಕಾರ ಅಥವಾ ಕಾವ್ಯಾಲಂಕಾರ ಎಂಬುದೇ ಈ ಶಾಸ್ತ್ರಕ್ಕೆ ಮೊದಲಿದ್ದ ಹೆಸರು. 10ನೆಯ ಶತಮಾನದ ಸಂಸ್ಕೃತ ಲಾಕ್ಷಣಿಕ ರಾಜಶೇಖರ 'ಕಾವ್ಯಮೀಮಾಂಸೆ' ಎಂಬ ಪದವನ್ನು ಮೊದಲು ಉಪಯೋಗಿಸಿದ ಅನಂತರ ಕಾವ್ಯಮೀಮಾಂಸೆ ಎಂಬ ಪದ ಪ್ರಚಾರದಲ್ಲಿ ಬಂತು. 17ನೆಯ ಶತಮಾನದ ಜಗನ್ನಾಥ ಪಂಡಿತನ 'ರಸ ಗಂಗಾಧರ' ಗ್ರಂಥದ ಆಧಾರದಿಂದ ಕಾವ್ಯಮೀಮಾಂಸೆ ಎಂಬುದು ಈ ಶಾಸ್ತ್ರದ ಬಳಕೆಯ ಹೆಸರಾಗಿತ್ತೆಂದು ಭಾವಿಸಬಹುದಾಗಿದೆ.

ಉತ್ತಮವಾದ ಸಾಹಿತ್ಯ ವಿಮರ್ಶೆಗೆ ಕಾವ್ಯಮೀಮಾಂಸೆ ಅತ್ಯಂತ ಅವಶ್ಯ. ಭಾರತೀಯ ಕಾವ್ಯಮೀಮಾಂಸೆ—ಕವಿ, ಸಹೃದಯ, ಕಾವ್ಯ ಸ್ವರೂಪ, ಕಾವ್ಯದ ಉದ್ದೇಶ, ಪ್ರಯೋಜನ, ಅಲಂಕಾರ, ರೀತಿ, ರಸ, ಧ್ವನಿ, ಇತ್ಯಾದಿಗಳ ಕೂಲಂಕಷ ವಿವೇಚನೆ ನಡೆಸುತ್ತದೆ.

ಸಂಸ್ಕೃತದಲ್ಲಿ ಕಾವ್ಯಮೀಮಾಂಸೆ ಕ್ರಿಸ್ತ ಶಕದ ಆರಂಭದ ವೇಳೆಗೆ ಸ್ವತಂತ್ರ ಶಾಸ್ತ್ರವಾಗಿ ಬೆಳೆದಿತ್ತು. ರುದ್ರದಾಮ ಶಿಲಾಲೇಖ, ಪತಂಜಲಿಯ 'ಮಹಾಭಾಷ್ಯ', ಭರತನ 'ನಾಟ್ಯಶಾಸ್ತ್ರ' ಮುಂತಾದುವು ಈ ಅಂಶವನ್ನು ಸೂಚಿಸುತ್ತವೆ. ಈಗ ನಮಗೆ ದೊರೆತಿರುವ ಪ್ರಾಚೀನ ಗ್ರಂಥಗಳೆಂದರೆ ಮೊದಲನೆಯ ಭಾಮಹನ 'ಕಾವ್ಯಾಲಂಕಾರ', ದಂಡಿಯ 'ಕಾವ್ಯಾದರ್ಶ'ಗಳು ಇವುಗಳಲ್ಲಿ ಅಲಂಕಾರ, ಗುಣ, ಮಾರ್ಗ, ದೋಷ ಮೊದಲಾದ ವಿಷಯಗಳ ಪ್ರಸ್ತಾಪವಿದೆ.

ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಗಮನಾರ್ಹವಾದ ಕೃತಿಗಳು ಎರಡು : ಆನಂದವರ್ಧನನ 'ಧ್ವನ್ಯಾಲೋಕ' ಮತ್ತು ರಾಜಶೇಖರನ 'ಕಾವ್ಯ ಮೀಮಾಂಸೆ'. ಕನ್ನಡದಲ್ಲಿ ಮೊಟ್ಟ ಮೊದಲು ಕಾವ್ಯಮೀಮಾಂಸೆಯನ್ನು ಕುರಿತು ಬರೆದವನು 12ನೆಯ ಶತಮಾನದಲ್ಲಿದ್ದ ಕವಿ –ಪಂಡಿತ ಎರಡನೆಯ ನಾಗವರ್ಮ. ಇವನ 'ಕಾವ್ಯಾವಲೋಕನ' ಮತ್ತು ಆಧುನಿಕರಾದ ತೀ. ನಂ. ಶ್ರೀ. ಅವರ 'ಭಾರತೀಯ ಕಾವ್ಯಮೀಮಾಂಸೆ' ಇವೆರಡೂ ಕನ್ನಡದಲ್ಲಿ ರಚಿತವಾಗಿರುವ ಪ್ರಖ್ಯಾತ ಗ್ರಂಥಗಳು. ಇವಲ್ಲದೆ ಸಂಸ್ಕೃತ ಆಲಂಕಾರಿಕರ ಗ್ರಂಥಗಳ ಅನುವಾದಗಳೂ ಕನ್ನಡಕ್ಕೆ ಬಂದಿವೆ.

'ಭಾರತೀಯ ಕಾವ್ಯಮೀಮಾಂಸೆ'ಯ ತಿರುಳೆಲ್ಲ ರಸ, ಧ್ವನಿ, ಔಚಿತ್ಯ ಎಂಬ ಮಾತುಗಳಲ್ಲಿ ಅಡಗಿದೆ. ಈ ತತ್ತ್ವಗಳು ತುಲನಾತ್ಮಕ ಮೀಮಾಂಸಾ ಶಾಸ್ತ್ರಕ್ಕೆ ಭರತಖಂಡದ ಕಾಣಿಕೆ.

ಇಂಗ್ಲಿಷಿನಲ್ಲಿ ಕಾವ್ಯ ಮೀಮಾಂಸೆಗೆ ಪೊಯೆಟಿಕ್ಸ್ ಎನ್ನುತ್ತಾರೆ. ಪ್ರಾಚೀನ ಗ್ರೀಸಿನ ತತ್ತ್ವಜ್ಞಾನಿ ಅರಿಸ್ಟಾಟಲನ ಕಾವ್ಯಮೀಮಾಂಸೆ ಪಾಶ್ಚಾತ್ಯ ಕಾವ್ಯನಾಟಕಗಳ ಮೂಲಭೂತ ತತ್ತ್ವಗಳನ್ನು ತಿಳಿಸುವ ಪ್ರಾಚೀನ ಗ್ರಂಥ. ಇದು ಆತನ ಗುರು ಪ್ಲೇಟೋನ ಉಪನ್ಯಾಸಗಳಿಂದ ಹುಟ್ಟಿಬಂದ ನೆನಪು ಟಿಪ್ಪಣಿಗಳ ಸಂಗ್ರಹ. ಅದರಲ್ಲಿ 26 ಅಧ್ಯಾಯಗಳಿವೆ. ಇಡೀ ಗ್ರಂಥದಲ್ಲಿ ಅವನ ಮೂಲಭೂತ ವಿಚಾರ ದಾರ್ಶನಿಕ ಸ್ವರೂಪದ್ದು. ಕಾವ್ಯತತ್ತ್ವ ಮತ್ತು ಸೌಂದರ್ಯಗಳ ಸ್ವರೂಪವನ್ನು 6ನೆಯ ಅಧ್ಯಾಯದಲ್ಲಿ ವಿವರವಾಗಿ ನಿರೂಪಿಸಿದ್ದಾನೆ.

ಪಾಶ್ಚಾತ್ಯ ವಿಮರ್ಶೆಗೆ ಅಂದಿನಿಂದ ಇಂದಿನ ತನಕವೂ ಅರಿಸ್ಟಾಟಲನ 'ಕಾವ್ಯಮೀಮಾಂಸೆ' ಒಂದು ಪ್ರಮಾಣಭೂತ ಆಧಾರಗ್ರಂಥ. ಲಲಿತ ಕಲೆಯ ಸ್ವರೂಪ ಅದರಲ್ಲಿ ಬಣ್ಣಿಸಲ್ಪಟ್ಟಿದೆ. ದುರಂತ ನಾಟಕದ ಉದ್ದೇಶ, ಗುಣಲಕ್ಷಣಗಳು, ನಾಯಕ–ನಾಯಕಿಯರ ಗುಣಸ್ವಭಾವಗಳು, ನಾಟಕದ ಪ್ರಮುಖ ಅಂಗಗಳು ಮುಂತಾದ ಜಟಿಲವಾದ ವಿಚಾರಗಳ ಮೇಲೆ ಆ ಗ್ರಂಥ ಬೆಳಕು ಚೆಲ್ಲುತ್ತದೆ. ಕಾವ್ಯವಿಮರ್ಶೆಗೆ ಅದು ಆಧಾರ ಗ್ರಂಥವಾಗಿದೆ.

ನೋಡಿ : ಅರಿಸ್ಟಾಟಲ್ : ಆನಂದವರ್ಧನ ; ಅಲಂಕಾರಶಾಸ್ತ್ರ ; ಜಗನ್ನಾಥ ಪಂಡಿತ; ದಂಡಿ ; ಭಾರತೀಯ ಕಾವ್ಯಮೀಮಾಂಸೆ ; ರಾಜಶೇಖರ

## ಕಾಳಿದಾಸ

"ಕವಿಕುಲ ಗುರುಃ ಕಾಳಿದಾಸೋ ವಿಲಾಸಃ"—ಕವಿತಾ ಕಾಮಿನಿಯ ವಿಲಾಸ ಕವಿಕುಲ ಗುರುವೆನಿಸಿದ ಕಾಳಿದಾಸ.

—ಕಾಳಿದಾಸನನ್ನು ಕುರಿತು ಜಯದೇವಕವಿಯ ಪ್ರಶಂಸೆ ಇದು.

"ಶೃಂಗಾರ, ಲಾಲಿತ್ಯಗಳಲ್ಲಿ ಕಾಳಿದಾಸನನ್ನು ಯಾರೂ ಗೆಲ್ಲಲು ಸಾಧ್ಯವಿಲ್ಲ."

—ಇದು ಅಲಂಕಾರಶಾಸ್ತ್ರಜ್ಞ ರಾಜಶೇಖರನ ಮೆಚ್ಚುಗೆ ನುಡಿ.

"ಕಾಳಿದಾಸನ ಪದಗಳ ರಸವನ್ನು ಕಾಳಿದಾಸ, ಸರಸ್ವತಿ, ಬ್ರಹ್ಮ ಇವರಲ್ಲದೆ ನನ್ನಂಥವರು ಅರ್ಥ ಮಾಡಿಕೊಳ್ಳಲಾರರು."

—ಕಾಳಿದಾಸನ ಗ್ರಂಥಗಳಿಗೆ ವ್ಯಾಖ್ಯಾನ ಬರೆದು ಸಾಮಾನ್ಯರಿಗೂ ಆತನ ಕಾವ್ಯ ಸೌಂದರ್ಯದ ಅರಿವುಂಟುಮಾಡಿದ ಮಲ್ಲಿನಾಥನ ಹೇಳಿಕೆ ಇದು.

ಕಾಳಿದಾಸನ ಪ್ರತಿಭೆ, ಕಾವ್ಯರಚನಾ ಚಾತುರ್ಯಗಳ ಹಿರಿಮೆಯನ್ನು ಎತ್ತಿ ತೋರಿಸುವ ಮಾತುಗಳಿವು.

ಕಾಳಿದಾಸನ ಕೃತಿಗಳು ಏಳು : 'ಋತು ಸಂಹಾರ', 'ಮೇಘದೂತ' 'ಕುಮಾರ ಸಂಭವ', 'ರಘುವಂಶ', 'ವಿಕ್ರಮೋರ್ವಶೀಯ', 'ಮಾಲವಿಕಾಗ್ನಿಮಿತ್ರ' ಹಾಗೂ 'ಅಭಿಜ್ಞಾನ ಶಾಕುಂತಲಂ'. ಮೊದಲನೆಯ ನಾಲ್ಕು ಕಾವ್ಯಗಳು : ಕೊನೆಯ ಮೂರು ನಾಟಕಗಳು. ಇವೆಲ್ಲವೂ ಸಂಸ್ಕೃತ ಭಾಷೆಯ ಕೃತಿಗಳು.

'ಋತು ಸಂಹಾರ' ಖಂಡಕಾವ್ಯ. ಇದರಲ್ಲಿ ಕವಿ ಆರು ಋತುಗಳನ್ನು ವರ್ಣಿಸಿದ್ದಾನೆ.

'ಮೇಘದೂತ' 110 ಶ್ಲೋಕಗಳನ್ನುಳ್ಳ ವರ್ಣನಾತ್ಮಕ ಖಂಡಕಾವ್ಯ. ಕುಬೇರನ ಶಾಪಕ್ಕೆ ಈಡಾದ ಯಕ್ಷನೊಬ್ಬ ತನ್ನ ಹೆಂಡತಿಯನ್ನು ಕುಬೇರನ ರಾಜಧಾನಿ ಅಲಕಾಪುರಿಯಲ್ಲಿ ಬಿಟ್ಟು ರಾಮಗಿರಿಯ ಆಶ್ರಮಕ್ಕೆ ಬರುತ್ತಾನೆ. ಹೀಗೆ ವಿರಹಿಯಾದ ಯಕ್ಷ, ಮೇಘವು ಅಲಕಾನಗರದೆಡೆ ಸಾಗುತ್ತಿದ್ದುದನ್ನು ಗಮನಿಸಿ, ಅದರೊಡನೆ ತನ್ನ ಹೆಂಡತಿಗೆ ಸಂದೇಶವನ್ನು ಕಳುಹಿಸುತ್ತಾನೆ. ಉಜ್ಜಯಿನಿ, ಹಿಮಾಲಯ, ಯಕ್ಷನ ಮನೆ, ಉತ್ತರ ಭಾರತದ ವಿವಿಧ ಪ್ರದೇಶಗಳು ಮುಂತಾದುವುಗಳ ಹಾಗೂ ಅವನ ಪತ್ನಿಯ ವರ್ಣನೆಯೇ ಈ ಕಾವ್ಯದ ಹೆಚ್ಚು ಭಾಗವನ್ನು ಆಕ್ರಮಿಸಿದೆ.

'ಕುಮಾರ ಸಂಭವ' ತಾರಕಾಸುರನ ಸಂಹಾರಕ್ಕಾಗಿ ಶಿವ–ಶಿವೆಯರ ಮಗ ಕಾರ್ತಿಕೇಯ ಜನಿಸುವ ವೃತ್ತಾಂತವನ್ನು ಕುರಿತ ಕಾವ್ಯ.

ದಿಲೀಪ, ರಘು, ಅಜ, ದಶರಥ, ಶ್ರೀರಾಮ ಮೊದಲಾದ ರಘುವಂಶ ಅರಸರ ಕಥೆ 'ರಘುವಂಶ'ದ ವಸ್ತು. 19 ಸರ್ಗಗಳನ್ನೊಳಗೊಂಡ ಕಾವ್ಯವಿದು.



ಕವಿತಾ ಕಾಮಿನಿಯ ವಿಲಾಸ ಕವಿಕುಲ ಗುರು

'ವಿಕ್ರಮೋರ್ವಶೀಯ' ಹೆಸರೇ ಸೂಚಿಸುವಂತೆ ಪುರೂರವಸ್ (ವಿಕ್ರಮ) ಹಾಗೂ ಊರ್ವಶಿಯರ ಪ್ರಣಯವನ್ನು ಕುರಿತಾದ ನಾಟಕ.

'ಮಾಲವಿಕಾಗ್ನಿಮಿತ್ರ' ದಾಸಿಯ ವೇಷ ಧರಿಸಿ ಕಾರಣಾಂತರಗಳಿಂದ ಅಗ್ನಿಮಿತ್ರನೆಂಬ ಅರಸನ ಅರಮನೆಯಲ್ಲಿದ್ದ ರಾಜಕುಮಾರಿ ಮಾಲವಿಕೆ ಮತ್ತು ಅಗ್ನಿಮಿತ್ರನ ಸಫಲ ಪ್ರೇಮವನ್ನು ನಿರೂಪಿಸಿರುವ ನಾಟಕ.

'ಅಭಿಜ್ಞಾನ ಶಾಕುಂತಲ' ಕಾಳಿದಾಸನ ಕೃತಿಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು. ದುಷ್ಯಂತ ಮಹಾರಾಜ ಮತ್ತು ಕಣ್ವ ಋಷಿಯ ಸಾಕುಮಗಳು ಶಕುಂತಲೆ, ಇವರ ಪ್ರೇಮವಿವಾಹದ ಮತ್ತು ಅದರ ಪರಿಣಾಮದ ಕಥೆ 'ಅಭಿಜ್ಞಾನ ಶಾಕುಂತಲ' ನಾಟಕದ ವಸ್ತು.

ಈ ನಾಟಕದ ಭಾಷಾಂತರವನ್ನು ಓದಿದ ಜರ್ಮನ್ ಕವಿ ಗಯಟೆ ಅದನ್ನು ತುಂಬ ಮೆಚ್ಚಿಕೊಂಡ. ಕಾಳಿದಾಸನ ಕವಿತಾಶಕ್ತಿ, ವರ್ಣನಾ ಚಾತುರ್ಯ, ರಸಪೋಷಣೆ ಅವನಿಗೆ ಸಂತೋಷ ಉಂಟುಮಾಡಿತು.

ಕಾಳಿದಾಸ ರಸಿಕ ಕವಿ, ಸಂಪ್ರದಾಯ ಶರಣ, ವಿನೋದಪ್ರಿಯ. ಹಿಮಾಲಯದ ನಿಸರ್ಗಸೌಂದರ್ಯ ಅವನ ಮನಸ್ಸನ್ನು ಸೂರೆಗೊಂಡಿತ್ತು. ಕಣ್ಣಿಗೆ ಕಟ್ಟುವಂಥ ಅವುಗಳ ವರ್ಣನೆ ಅವನ ಕಾವ್ಯಗಳಲ್ಲಿ ಉಜ್ವಲವಾಗಿ ಮೂಡಿದೆ. ಶಬ್ದಾಲಂಕಾರ, ಉಪಮಾಲಂಕಾರಗಳ ಪ್ರಯೋಗದಲ್ಲಿ ಅವನು ತೋರುವ ಜಾಣ್ಮೆ ಅಪೂರ್ವವಾದದ್ದು. ಅವನ ಪಾತ್ರ ಸೃಷ್ಟಿ ಅಸಾಧಾರಣವಾದದ್ದು. ಇದಲ್ಲದೆ ಅಂದಿನ ಎಲ್ಲ ಶಾಸ್ತ್ರಗಳಲ್ಲಿ, ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಅವನು ಗಳಿಸಿಕೊಂಡಿದ್ದ.

ಕಾಳಿದಾಸನ ಜೀವನದ ವಿಚಾರವಾಗಿ ನಮಗೆ ಹೆಚ್ಚು ವಿವರಗಳು ತಿಳಿದಿಲ್ಲ. ಅವನನ್ನು ಕುರಿತು ಅನೇಕ ದಂತಕಥೆಗಳಿವೆ. ಆದರೆ ಅವನ್ನು ನಂಬುವುದಕ್ಕೆ ತಕ್ಕಷ್ಟು ಇತಿಹಾಸದ ಆಧಾರಗಳು ದೊರೆತಿಲ್ಲ. ಆದರೆ ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ ಸಾಹಿತ್ಯ ಸಾರ್ವಭೌಮನಾದನು ಎಂಬುದು

ಈ ದಂತಕಥೆಗಳಿಂದ ಸೂಚಿತವಾಗುತ್ತದೆ. ಅವನ ಜೀವಿತಕಾಲದ ಬಗ್ಗೆ ಖಚಿತವಾಗಿ ಏನೂ ಹೇಳುವಂತಿಲ್ಲ. ಸುಮಾರು ಕ್ರಿಸ್ತಪೂರ್ವ 1ನೆಯ ಶತಮಾನದಿಂದ ಕ್ರಿಸ್ತ ಶಕ 634 ರವರೆಗಿನ ಅವಧಿಯಲ್ಲಿ ಅವನು ಜೀವಿಸಿದ್ದಿರಬೇಕೆಂಬ ಅಭಿಪ್ರಾಯವಿದೆ. ಭಾರತೀಯರೆಲ್ಲರೂ ಅವನು ತಮ್ಮ ರಾಷ್ಟ್ರದ ಶ್ರೇಷ್ಠ ಕವಿ ಎಂಬುದನ್ನು ಮೊದಲಿನಿಂದಲೂ ಒಪ್ಪಿಕೊಂಡಿದ್ದಾರೆ. ಅವನ ಬಗೆಗೂ ಅವನ ಕೃತಿಗಳ ಬಗೆಗೂ ಅಪೂರ್ವ ಗೌರವವನ್ನು ತೋರುತ್ತ ಬಂದಿದ್ದಾರೆ.

ಕಾಳಿದಾಸನ ಕೀರ್ತಿ ಭಾರತಕ್ಕೆ ಮಾತ್ರ ಸೀಮಿತವಲ್ಲ. 1789ರಲ್ಲಿ ವಿಲಿಯಂ ಜೋನ್ಸ್ 'ಶಾಕುಂತಲ' ನಾಟಕದ ಆಂಗ್ಲ ಭಾಷಾಂತರವನ್ನು ಹೊರತಂದು ಕಾಳಿದಾಸನ ಕೀರ್ತಿ ವಿದೇಶಗಳಲ್ಲೂ ಹರಡುವಂತೆ ಮಾಡಿದ. ಕಾಳಿದಾಸನ ನಾಟಕಗಳು ಹಲವಾರು ವಿದೇಶೀ ಭಾಷೆಗಳಿಗೆ ಅನುವಾದಿತವಾಗಿವೆ. ರಷ್ಯ, ಅಮೆರಿಕ, ಇಂಗ್ಲೆಂಡು ಮುಂತಾದ ರಾಷ್ಟ್ರಗಳಲ್ಲಿ ಪ್ರದರ್ಶಿತವಾಗಿವೆ.

ಕಾಲದ ಪರೀಕ್ಷೆಯಲ್ಲಿ ಗೆದ್ದುನಿಂತಿರುವ ಭಾರತೀಯ ನಾಟಕಕಾರ ಕಾಳಿದಾಸ.

**ನೋಡಿ : ಶಾಕುಂತಲ**

## ಕ್ಲಾಡ್ ಮೊನೆ

ಆತ ಪ್ರತಿ ದಿನ ಅದೇ ಸ್ಥಳಕ್ಕೆ ಬರುತ್ತಿದ್ದ. ಒಂದು ವಾತಾವರಣ ಇರುವವರೆಗೂ ತನ್ನ ಚಿತ್ರಲೇಖನವನ್ನು ಮುಂದುವರಿಸುತ್ತಿದ್ದ. ಅನಂತರ ಆ ಅಪೂರ್ಣ ಚಿತ್ರವನ್ನು ಎತ್ತಿಟ್ಟು ಬೇರೊಂದನ್ನು ತೆಗೆದುಕೊಂಡು ಅದರ ಕೆಲಸವನ್ನು ಮುಂದುವರಿಸುತ್ತಿದ್ದ. ಆ ಚಿತ್ರಕ್ಕೆ ಸಂಬಂಧಿಸಿದಂತೆ ಸೂರ್ಯನ ಬೆಳಕು ಬದಲಾಗದೆ ಇರುವವರೆಗೆ ಆ ಚಿತ್ರವನ್ನು ಬಿಡಿಸುತ್ತಿದ್ದ. ಅನಂತರ ಅದನ್ನೂ ನಿಲ್ಲಿಸಿಬಿಡುತ್ತಿದ್ದ. ಈ ರೀತಿ ಮಾಡಿ ಪ್ರಪಂಚದಲ್ಲೇ ಬೇರಾರೂ ತಮ್ಮ ಚಿತ್ರದಲ್ಲಿ ಮೂಡಿಸದೆ ಇದ್ದಂಥ ಪರಿಣಾಮವನ್ನು –ಅಂದರೆ ಸೂರ್ಯನ ಬೆಳಕು ಒಂದು ಪದಾರ್ಥದ ಮೇಲೆ ಸೂರ್ಯೋದಯದಿಂದ ಹಿಡಿದು ಸೂರ್ಯಾಸ್ತಮಾನದವರೆಗೆ ಹೇಗೆ ಬೇರೆ ಬೇರೆ ರೀತಿಯಲ್ಲಿ ತೋರಿಬರುತ್ತದೆ. ಪರಿಣಾಮ ಬೀರುತ್ತದೆ ಎಂಬುದನ್ನು– ಆತ ತನ್ನ ವಿವಿಧ ಚಿತ್ರಗಳಲ್ಲಿ ಸೆರೆಹಿಡಿದ. ಈ ಪ್ರಯೋಗಶೀಲ ಕಲಾವಿದನೇ ಫ್ರಾನ್ಸಿನ ವಿಖ್ಯಾತ ಚಿತ್ರಕಾರ ಕ್ಲಾಡ್ ಮೊನೆ. ಇವನು ಸಮಷ್ಟಿ ಪರಿಣಾಮವಾದಿ ಚಿತ್ರಕಾರರ ಪ್ರಮುಖರಲ್ಲೊಬ್ಬ.

ಕ್ಲಾಡ್ ಮೊನೆ ಪ್ಯಾರಿಸಿನಲ್ಲಿ 1840ರ ನವೆಂಬರ್ 14 ರಂದು ಜನಿಸಿದ. ತಂದೆ ಕಿರಾಣಿ ಅಂಗಡಿ ಇಟ್ಟುಕೊಂಡಿದ್ದ. ಮೊನೆಗೆ ಐದು ವರ್ಷ ವಯಸ್ಸಾದಾಗ ಅವರೆಲ್ಲ ಲೀ ಹಾರ್ವೆ ಎಂಬ ಸ್ಥಳಕ್ಕೆ ಬಂದುಬಿಟ್ಟರು. ಸಣ್ಣ ವಯಸ್ಸಿನಿಂದಲೇ ಸ್ನೇಹಿತರ, ಉಪಾಧ್ಯಾಯರ ಅಥವಾ ಬೀದಿಯಲ್ಲಿ ಕಂಡ ವ್ಯಕ್ತಿಗಳ ಚಿತ್ರವನ್ನು ಮೊನೆ ಬರೆಯುತ್ತಿದ್ದ. ಜನ ಇವನಿಗೆ ದುಡ್ಡು ಕೊಟ್ಟು ತಮ್ಮ ಚಿತ್ರಗಳನ್ನು ಕೊಂಡುಕೊಳ್ಳುತ್ತಿದ್ದರು. ಮೊನೆ ಬರೆದ ಕೆಲವು ಚಿತ್ರಗಳು ರೈತನೊಬ್ಬ ತನ್ನ ಮನೆಯ ಕಿಟಕಿಯಲ್ಲಿ ಇಟ್ಟಿದ್ದ. ಇವನ್ನು ನೋಡಿದ ಚಿತ್ರಕಾರ ಯೂಜಿನ್ ಬೂಡ್ಯಾನ್ ಮೊನೆಯ ಪ್ರತಿಭೆಯನ್ನು ಗುರುತಿಸಿ, ಹೊರಾಂಗಣಕ್ಕೆ ಹೋಗಿ ಚಿತ್ರ ರಚಿಸುವಂತೆ ಅವನನ್ನು ಪ್ರೋತ್ಸಾಹಿಸಿದ. ಚಿತ್ರ ಕಲೆಯಲ್ಲಿ ಇವನಿಗೆ ಶಿಕ್ಷಣ ದೊರೆತದ್ದು ಪ್ಯಾರಿಸ್ಸಿನಲ್ಲಿ. ಆಗಿನ ಬಂಡಾಯಗಾರ ಚಿತ್ರಕಾರರಾಗಿದ್ದ ಪಿಸಾರೋ, ರೆನ್ವಾ, ಸೆಜಾನ್ ಇವರ ಒಡನಾಡಿಗಳಾದರು. 1874ರಲ್ಲಿ ಈ ಕೆಲವು ಚಿತ್ರಕಾರರು ಸೇರಿ ಪ್ರದರ್ಶನವನ್ನು ಏರ್ಪಡಿಸಿದರು. ಅದರಲ್ಲಿ ಮೊನೆಯ 'ಸಮಷ್ಟಿಪರಿಣಾಮ : ಸೂರ್ಯೋದಯ' ಎನ್ನುವ ಚಿತ್ರದ ಹೆಸರು ವಿಮರ್ಶಕರಿಗೆ ಹಾಸ್ಯಾಸ್ಪದವಾಗಿ ತೋರಿತು. ಒಬ್ಬ ವಿಮರ್ಶಕ ಪ್ರದರ್ಶಿತವಾಗಿದ್ದ ಎಲ್ಲ ಚಿತ್ರಗಳನ್ನೂ "ಇವು ಸಮಷ್ಟಿಪರಿಣಾಮ ಶೈಲಿಯ ಚಿತ್ರಗಳು" ಎಂದು ಬಣ್ಣಿಸಿದ. ಆ ಪಂಥಕ್ಕೆ ಅದೇ ಹೆಸರು ಉಳಿಯಿತು.



ಸಮಷ್ಟಿಪರಿಣಾಮವಾದ : ಕ್ಲಾಡ್ ಮೊನೆ

ಮೊನೆಯ ಚಿತ್ರಗಳು ಜನಸಾಮಾನ್ಯರ ಮೆಚ್ಚುಗೆ ಗಳಿಸಿರಲಿಲ್ಲ. ಅವನ ಚಿತ್ರಗಳು ಮಾರಾಟವಾಗುತ್ತಿರಲಿಲ್ಲ. ಅವನ ಮೊದಲನೆಯ ಮಗು ಹುಟ್ಟಿದಾಗ, ತನ್ನ ಹೆಂಡತಿಯನ್ನೂ ಮಗುವನ್ನೂ ನೋಡಲು ಮೊನೆ ಬರಿಗೈಯಲ್ಲೇ ಹೋಗಬೇಕಾಯಿತು. ತೆಗೆದುಕೊಂಡ ಸಾಲವನ್ನು ತೀರಿಸಲು ಇವನಿಂದ ಸಾಧ್ಯವಾಗದೇ ಹೋದಾಗ, ಸಾಲಗಾರರು ಇವನ ಚಿತ್ರಗಳನ್ನು ಒಯ್ದು, ಮಾರಿ, ತಮ್ಮ ಹಣವನ್ನು ಪಡೆದದ್ದುಂಟು. ಮೊನೆ ಒಮ್ಮೆ ಆತ್ಮಹತ್ಯೆಗೂ ಯತ್ನಿಸಿದ. ಅವನಿಗೆ ಎರಡನೆಯ ಮಗುವಾದ ಮೇಲೆ ಆತನ ಪತ್ನಿ ಪೋಷಣೆ ಸಾಲದೆ ನಿತ್ರಾಣಳಾಗಿ, 1879ರಲ್ಲಿ ಕೊನೆಯುಸಿರೆಳೆದಳು. "ಕೈಯಲ್ಲೊಂದು ಕಾಸೂ ಇಲ್ಲದೆ ಒಬ್ಬಂಟಿಗನಾಗಿ, ಎರಡು ಮಕ್ಕಳೊಂದಿಗೆ ಇದ್ದೇನೆ " ಎಂದು ಮೊನೆ ಉದ್ಗರಿಸಿದ.

1880ರಲ್ಲಿ ಮೊನೆ ತನ್ನ ಚಿತ್ರಗಳ ಪ್ರದರ್ಶನ ಏರ್ಪಡಿಸಿದಾಗ ಅವನ ಚಿತ್ರಗಳಿಗೆ ಸ್ವಾಗತ ದೊರೆಯತೊಡಗಿತು. ಜನ ಗೌರವ ತೋರಿದರು. ಅವನು ಶ್ರೀಮಂತನಾದ.

1890ರಲ್ಲಿ ಮೊನೆಯ ದೃಷ್ಟಿ ಸೂರ್ಯನ ಬೆಳಕಿನ ವಿನ್ಯಾಸದ ಕಡೆಗೆ ತಿರುಗಿತು. ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಸೂರ್ಯನ ಬೆಳಕು ಪದಾರ್ಥದ ಮೇಲೆ ಯಾವ ರೀತಿ ಬೀಳುತ್ತದೆ, ಏನೇನು ಪರಿಣಾಮಬೀರುತ್ತದೆ–ಎಂಬುದನ್ನು ಕುರಿತು ಕ್ರಮವಾಗಿ ಅಧ್ಯಯನ ಮಾಡಲಾರಂಭಿಸಿದ.

ಎದುರಿಗೆ ಕಾಣುವ ವಸ್ತುವನ್ನು ಯಥಾವತ್ತಾಗಿ ಮೂಡಿಸಲು ಮೊನೆ ಹಾಗೂ ಅವನ ತಂಡದವರು ಕ್ರಾಂತಿಕಾರಿ ವಿಧಾನವನ್ನೇ ಬಳಸಿದರು. ಸೂರ್ಯನ ಬೆಳಕು ವ್ಯತ್ಯಾಸಹೊಂದಿದಂತೆ ಹೊರ ಪ್ರಪಂಚದ ವಸ್ತುಗಳು ಕಾಣಿಸುವ ವಿವಿಧ ರೂಪಗಳನ್ನು ಚಿತ್ರಿಸುವುದು ಇವನ ಮುಖ್ಯ ಉದ್ದೇಶ. ಕಣ್ಣು ಗ್ರಹಿಸಿದ್ದನ್ನು ಯಥಾವತ್ತಾಗಿ ಚಿತ್ರಿಸುವ ಪ್ರಯತ್ನ ಇವರದು.

ಪುಟ್ಟ ದೋಣಿಯಲ್ಲಿ ಎಲ್ಲಾ ಸೌಕರ್ಯಗಳನ್ನೂ ಮಾಡಿಕೊಂಡು ನದಿಯ ಮೇಲೆ ಸಂಚರಿಸುತ್ತಿದ್ದಂತೆ ತಾನು ಕಂಡ ದೃಶ್ಯಗಳನ್ನು ಮೊನೆ ಚಿತ್ರಿಸಿದ.

[illegible] ಒಂದೊಂದು ಬಣ್ಣ ಒಂದೊಂದು ಕಿರಣದ ಸೂಚಕ.

1900ರಲ್ಲಿ ಮೊನೆ ಮಹತ್ವದ ಕೃತಿ ರಚನೆಗೆ ಕೈಹಾಕಿದ. ವಾಟರ್ ಲಿಲಿ ಹೂವುಗಳ 60 ಚಿತ್ರಗಳನ್ನು ರಚಿಸಿದ. ಇದಕ್ಕೆ ಇಪ್ಪತ್ತೈದು ವರ್ಷ ಹಿಡಿಯಿತು. ಪ್ಯಾರಿಸಿನಲ್ಲಿರುವ ಮೊನೆ ಸ್ಮಾರಕ ಭವನದಲ್ಲಿ ಇವನ್ನು ಇಡಲಾಗಿದೆ.

1926ರ ಡಿಸೆಂಬರ್ 5ರಂದು ಮೊನೆ ನಿಧನನಾದ.

ಮೊನೆ ಪ್ರಕೃತಿಚಿತ್ರಗಳನ್ನಲ್ಲದೆ ಆಕೃತಿ, ನಿರ್ಜೀವ ವಸ್ತು ಚಿತ್ರಣದಲ್ಲೂ ಪರಿಣತನಾಗಿದ್ದ. ಅವನ ಚಿತ್ರಗಳನ್ನು ದೂರದಿಂದ ನೋಡಿದರೆ ಅವು ಪರಿಣಾಮಕಾರಿಯಾಗಿ ತೋರುತ್ತವೆ. 'ಕ್ರೈಸ್ತ ದೇವಾಲಯಗಳು' 'ವಾಟರ್‌ಲೂ ಸೇತುವೆ' ಅವನ ಪ್ರಸಿದ್ಧ ಚಿತ್ರಗಳಲ್ಲಿ ಎರಡು.

ತನ್ನ ಹೆಂಡತಿ ಬದುಕಿದ್ದಾಗ ಅವಳಿಗೆ ತಕ್ಕ ಪೋಷಣೆ ಕೊಡಲು ಮೊನೆಗೆ ಸಾಧ್ಯವಾಗದೆ ಅವಳು ಕೃಶಳಾಗಿ ಸತ್ತಳಾದರೂ ಅವನು ರಚಿಸಿದ ಹೆಂಡತಿ ಕೆಮಿಲಿ ಮತ್ತು ಮಗನ ಚಿತ್ರ ಅವಳು ಮೃತಳಾದ 86 ವರ್ಷಗಳ ಅನಂತರ, 1965ರಲ್ಲಿ, 504,000 ಡಾಲರುಗಳಿಗೆ ಮಾರಾಟವಾಯಿತು.

ಮೊನೆಯನ್ನು ಕುರಿತು ಚಿತ್ರಕಾರ ಸೇಜಾನ್ "ಅವನ ಕಣ್ಣು, ಬರೀ ಕಣ್ಣೇ —ಎಂಥ ಕಣ್ಣು!" ಎಂದಿದ್ದಾನೆ. ನಿಜ. ಮೈಯೆಲ್ಲ ಕಣ್ಣಾಗಿ, ಬೆಳಕಿನ ಪ್ರಭಾವವನ್ನು ಕೂಲಂಕಷವಾಗಿ ಅರಿತು, ಅದನ್ನು ತನ್ನ ಚಿತ್ರಗಳಲ್ಲಿ ಸೆರೆಹಿಡಿದ ಕಲಾವಿದ ಶ್ರೇಷ್ಠ — ಮೊನೆ.

ನೋಡಿ : ಸಮಷ್ಟಿಪರಿಣಾಮ ಕಲೆ

## ಕಿಪ್ಲಿಂಗ್

ಲಾಹೋರಿನ ಪತ್ರಿಕೆಯೊಂದರಲ್ಲಿ ಉಪಸಂಪಾದಕನಾಗಿದ್ದ ಯುವಕ ರಡ್ಯರ್ಡ್ ಕಿಪ್ಲಿಂಗ್, ಪತ್ರಿಕೆಯಲ್ಲಿ ಖಾಲಿ ಬಿದ್ದ ಸ್ಥಳವನ್ನು ತುಂಬಲು ಏನಾದರೂ ಬರೆದುಕೊಡಬೇಕಾಗುತ್ತಿತ್ತು. ಸಿಕ್ಕಿದ್ದೇ ಅವಕಾಶ ಎಂದು ಕೊಂಡು ಈತ ಬರೆದದ್ದೂ ಬರೆದದ್ದೇ. ಹೀಗೆ ಇವನ ಕಥೆ, ಕವನಗಳು ಒಂದೊಂದಾಗಿ ಹೊರಬಂದುವು; ಜನಪ್ರಿಯವೂ ಆದುವು.

ಭಾರತೀಯ ಕಥಾವಸ್ತುಗಳ ಮೇಲೆ ಪುಸ್ತಕಗಳನ್ನು ಬರೆದು ಇಂಗ್ಲಿಷ್ ಸಾಹಿತ್ಯದಲ್ಲಿ ಶಾಶ್ವತ ಸ್ಥಾನ ಪಡೆದ ಗಣ್ಯ ಲೇಖಕ ರಡ್ಯರ್ಡ್ ಕಿಪ್ಲಿಂಗ್.

ರಡ್ಯರ್ಡ್ ಎಂಬುದು ಇಂಗ್ಲೆಂಡಿನಲ್ಲಿರುವ ಒಂದು ಸರೋವರ. ಕಿಪ್ಲಿಂಗನ ತಂದೆತಾಯಿ ಮೊಟ್ಟಮೊದಲು ಒಬ್ಬರನ್ನೊಬ್ಬರು ಭೇಟಿ ಆದದ್ದು ಇಲ್ಲಿ. ಅವರು ತಮ್ಮ ಮಗನಿಗೆ 'ರಡ್ಯರ್ಡ್' ಎಂದೇ ನಾಮಕರಣ ಮಾಡಿದರು. ರಡ್ಯರ್ಡ್ ಕಿಪ್ಲಿಂಗ್ ಹುಟ್ಟಿದ್ದು ಮುಂಬಯಿಯಲ್ಲಿ. 1865 ಡಿಸೆಂಬರ್ 30ರಂದು. ಇವನ ಜೀವನದ ಹಲವು ವರ್ಷಗಳು ಭಾರತದಲ್ಲೇ ಕಳೆದದ್ದರಿಂದ ಇವನನ್ನು ಭಾರತೀಯನೆಂದು ಕರೆಯುವುದೂ ಉಂಟು.

ರಡ್ಯರ್ಡ್‌ಗೆ ಐದು ವರ್ಷವಾದಾಗ ಅವನ ತಂದೆ ತಾಯಿ ವಿದ್ಯಾಭ್ಯಾಸಕ್ಕಾಗಿ ತಮ್ಮ ಮಗನನ್ನು ಇಂಗ್ಲೆಂಡಿಗೆ ಕಳುಹಿಸಿದರು. ಶಾಲೆಯಲ್ಲಿದ್ದಾಗ ನಾಟಕಗಳಲ್ಲಿ ಭಾಗವಹಿಸುವುದು, ಪುಸ್ತಕಗಳನ್ನು ಓದುವುದು ಇವನ ಹವ್ಯಾಸಗಳಾದುವು. ಶಾಲೆಯ ಮುಖ್ಯೋಪಾಧ್ಯಾಯರು ತಮ್ಮ ಸ್ವಂತ ಗ್ರಂಥ ಭಂಡಾರದಿಂದ ಇವನಿಗೆ ಪುಸ್ತಕಗಳನ್ನು ಕೊಟ್ಟು ಇವನ ಈ ಆಸಕ್ತಿಯನ್ನು ಬೆಳೆಸಿದರು. ಅಮೆರಿಕದ ಮಾರ್ಕ್ ಟ್ವೇನ್, ಎಮರ್‌ಸನ್, ಪ್ರೊ. ಲಾಂಗ್‌ಫೆಲೋ, ವ್ಹಿಟ್‌ಮನ್ ಮುಂತಾದವರು ಇವನ ಮೆಚ್ಚಿನ ಸಾಹಿತಿಗಳು. ಆರಂಭದಲ್ಲಿ ಇವರ ಶೈಲಿಯನ್ನು ಅನುಸರಿಸಿ ಕಿಪ್ಲಿಂಗ್ ಸಾಹಿತ್ಯ ರಚಿಸಲು ಯತ್ನಿಸಿದ. ಇವನ 'ಸ್ಕೂಲ್ ಬಾಯ್ಸ್ ಲಿರಿಕ್ಸ್' ಎಂಬ ಕವನ ಸಂಗ್ರಹವನ್ನು ಇವನ ತಂದೆ 1881ರಲ್ಲಿ ಅಚ್ಚುಹಾಕಿಸಿದರು.

ಕಿಪ್ಲಿಂಗ್ 17ನೆಯ ವಯಸ್ಸಿಗೆ ಭಾರತಕ್ಕೆ ಹಿಂದಿರುಗಿದ. ಸೈನ್ಯಕ್ಕೆ ಸೇರಲು ಪ್ರಯತ್ನಿಸಿದರೂ ಕಣ್ಣಿನ ದೃಷ್ಟಿದೋಷದಿಂದ ಅದು ಸಾಧ್ಯವಾಗಲಿಲ್ಲ. ಲಾಹೋರಿನಿಂದ ಹೊರಡುತ್ತಿದ್ದ 'ಸಿವಿಲ್ ಅಂಡ್ ಮಿಲಿಟರಿ ಗೆಜೆಟ್' ಎಂಬ ಪತ್ರಿಕೆಯಲ್ಲಿ ಕೆಲಸಕ್ಕೆ ಸೇರಿದ. ರಾತ್ರಿಹೊತ್ತು ಪತ್ರಿಕೆಯ ಕೆಲಸ; ಹಳೆಯ ನಗರ ಲಾಹೋರಿನಲ್ಲೆಲ್ಲ ಸುತ್ತಾಡುವ ಕೆಲಸ ಹಗಲು ಹೊತ್ತಿನಲ್ಲಿ. ಜೊತೆಗೆ ಕಥೆ, ಕವನ ಬರೆಯುವ ಅಭ್ಯಾಸವೂ ಬೆಳೆಯಿತು. 1887ರಲ್ಲಿ ಅಲಹಾಬಾದಿನ 'ಪಯೊನಿಯರ್' ಪತ್ರಿಕೆಗೆ ಸೇರಿದಾಗಲೂ ಇದೇ ದಿನಚರಿ. ಈ ಪತ್ರಿಕೆಯಲ್ಲಿ ಇವನ ಸುಮಾರು ಎಪ್ಪತ್ತು ಸಣ್ಣಕಥೆಗಳು ಪ್ರಕಟವಾದುವು. ಇವು ಪುಸ್ತಕರೂಪದಲ್ಲೂ ಬಂದುವು.

ಅನಂತರ ಕಿಪ್ಲಿಂಗ್ ತನ್ನ ಕೆಲವು ಹಸ್ತಪ್ರತಿಗಳನ್ನು ಕಟ್ಟಿಕೊಂಡು ಪ್ರವಾಸ ಹೊರಟ. ಜಪಾನ್, ಅಮೆರಿಕಗಳಲ್ಲಿ ಸಂಚರಿಸಿದ. ತನ್ನ ಕವನಗಳನ್ನು ಅಮೆರಿಕದಲ್ಲಿ ಪ್ರಕಟಿಸಲು ಪ್ರಯತ್ನಿಸಿದ. ಅಮೆರಿಕದ ಯಾವ ಪ್ರಕಾಶಕನೂ ಈ ತರುಣ ಲೇಖಕನಲ್ಲಿ ಆಸಕ್ತಿ ತೋರಲಿಲ್ಲ. 1889ರಲ್ಲಿ ಇಂಗ್ಲೆಂಡಿಗೆ ಬಂದಮೇಲೆ ತನ್ನ ಕವನಗಳ ಕಟ್ಟೊಂದನ್ನು 'ಸ್ಕಾಟ್ಸ್ ಅಬ್ಸರ್ವರ್' ಪತ್ರಿಕೆಗೆ ಕಿಪ್ಲಿಂಗ್ ಕಳುಹಿಸಿದ. ಇದರ ಸಂಪಾದಕ ಕಿಪ್ಲಿಂಗನ ಪ್ರತಿಭೆಯನ್ನು ಸ್ಪಷ್ಟವಾಗಿ ಗುರುತಿಸಿದ. ಕಿಪ್ಲಿಂಗನ ಹಲವು ಕವನ ಸಂಗ್ರಹಗಳು ಹೊರಬರಲು ಕಾರಣನಾದ. ಆಗ ಕಿಪ್ಲಿಂಗ್‌ಗೆ 25 ವರ್ಷ ಕೂಡ ಆಗಿರಲಿಲ್ಲ. ಕಿಪ್ಲಿಂಗನ ಕವನಗಳು 'ಅಸಭ್ಯ' ಎಂದು ಕೆಲ ವಿಮರ್ಶಕರು ಮೂಗುಮುರಿದರು. ಆದರೂ ಅವನು ಕೆಲವೇ ವರ್ಷಗಳಲ್ಲಿ ಉತ್ತಮ ಲೇಖಕನೆಂಬ ಖ್ಯಾತಿ ಪಡೆದ.

ಕಿಪ್ಲಿಂಗ್ ಸಾಮಾನ್ಯ ಜನರ ಒರಟು ಭಾಷೆಯಲ್ಲೇ ಕವನ ರಚಿಸಿದ್ದಾನೆ. ಇವನ 'ಬ್ಯಾರಕ್ ರೂಮ್ ಬ್ಯಾಲಡ್ಸ್' ಎಂಬುದು ಸಾಮಾನ್ಯ ಸೈನಿಕ



ಸಾಮ್ರಾಜ್ಯ ಗಾನ : ಕಿಪ್ಲಿಂಗ್

ನೊಬ್ಬ ಹೇಳಿದ ಕಥೆಯಂತಿದೆ. ಆದರೂ ಸಂಗೀತಕ್ಕೆ ಅಳವಡಿಸಲು ತಕ್ಕುದಾಗಿದೆ. ವಿದ್ವಾಂಸರು ಮಾತ್ರವಲ್ಲದೆ ಸಾಮಾನ್ಯ ಜನರೂ ಓದಿ ಮೆಚ್ಚುವಂಥ ಕವನಗಳನ್ನು ನಿರ್ಮಿಸಿದ ಕೀರ್ತಿ ಕಿಪ್ಲಿಂಗನದು.

ಇದೇ ಸಮಯದಲ್ಲಿ ಈತ 'ದಿ ಲೈಟ್ ದಟ್ ಫೇಲ್ಡ್' ಕಾದಂಬರಿಯನ್ನು ಬರೆದ. ಅನಂತರ ದೀರ್ಘ ಪ್ರವಾಸವನ್ನು ಕೈಗೊಂಡು ಅಮೆರಿಕ, ದಕ್ಷಿಣ ಆಫ್ರಿಕಗಳಲ್ಲಿ ಸಂಚರಿಸಿದ. ಕಿಪ್ಲಿಂಗ್ ಮತ್ತು ಅಮೆರಿಕದವನಾದ ವಾಲ್ಕಾಟ್ ಬ್ಯಾಲೆಸ್ಟಿಯರ್ ಎಂಬಾತ ಸೇರಿ 'ನೌಲಾಕಾ' ಎಂಬ ಕಾದಂಬರಿಯನ್ನು ರಚಿಸಿದರು. 1892ರಲ್ಲಿ ಕಿಪ್ಲಿಂಗ್, ಬ್ಯಾಲೆ ಸ್ಟಿಯರನ ತಂಗಿಯನ್ನು ಮದುವೆಯಾಗಿ ಅಮೆರಿಕದಲ್ಲೇ ನೆಲೆಸಿದ. ತನ್ನ ಮೊದಲ ಮಗು ಹುಟ್ಟುವುದಕ್ಕೆ ಮೊದಲೇ ಕಿಪ್ಲಿಂಗ್ ಮಕ್ಕಳಿಗಾಗಿ ಕಥೆಗಳನ್ನು ಬರೆಯಲು ಆರಂಭಿಸಿದ್ದ. ತನ್ನ ಕೊನೆಯ ಮಗುವಿಗೆ ಕಥೆ ಹೇಳುವ ವಯಸ್ಸು ದಾಟುವವರೆಗೂ ಮಕ್ಕಳ ಪುಸ್ತಕಗಳನ್ನು ಇವನು ಬರೆದ.

'ಜಂಗ್ಲ್ ಬುಕ್' ಎಂಬುದು ಕಾಡಿನ ತೋಳಗಳು ಸಾಕಿದ ಬಾಲಕನ ಕಥೆ. ಪ್ರಾಣಿಗಳ ಭಾಷೆ ನಡೆವಳಿಕೆಗಳು ಹುಡುಗನಿಗೆ ರೂಢಿಯಾಗಿಬಿಡುತ್ತವೆ. ಓದುಗರ ಮನೋರಂಜನೆಗಾಗಿ ಕಿಪ್ಲಿಂಗ್ ಪ್ರಾಣಿಗಳಿಂದಲೂ ಮಾತನಾಡಿಸುತ್ತಾನೆ.

ಚಿರತೆಗೆ ಮೈಮೇಲೆಲ್ಲ ಮಚ್ಚೆಗಳಾದದ್ದು ಹೇಗೆ ? ಆನೆಗೆ ಅಷ್ಟು ಉದ್ದದ ಸೊಂಡಿಲು ಬಂದದ್ದು ಯಾವಾಗ ? ಒಂಟೆಯ ಬೆನ್ನಿನ ಮೇಲೆ ಡುಬ್ಬ ಹೇಗೆ ಬಂತು ?—ಇಂಥ ಪ್ರಶ್ನೆಗಳಿಗೆಲ್ಲ ಹಾಸ್ಯಮಯ ಉತ್ತರ ಸಿಗುವುದು 'ಜಸ್ಟ್ ಸೋ ಸ್ಟೋರೀಸ್' ನಲ್ಲಿ. 'ಕ್ಯಾಪ್ಟನ್ಸ್ ಕರೇಜಿಯಸ್' ಎಂಬುದು ನಾವಿಕರ ಸಾಹಸದ ಕಥೆಗಳ ಸಂಗ್ರಹ. ಭಾರತದ ಸನ್ನಿವೇಶಗಳನ್ನು ಆರಿಸಿಕೊಂಡು ಈತ ಬರೆದ 'ಕಿಮ್' ಎಂಬ ಸಾಹಸಕಥೆ ಕಿಪ್ಲಿಂಗನ ಅತ್ಯಂತ ಶ್ರೇಷ್ಠಕೃತಿ ಎನ್ನುವುದುಂಟು.

ಕವನ, ಕಾದಂಬರಿ ಮುಂತಾದುವನ್ನು ರಚಿಸಿದ್ದರೂ ಕಿಪ್ಲಿಂಗ್ ಹೆಚ್ಚಾಗಿ ಬರೆದದ್ದು ಸಣ್ಣ ಕಥೆಗಳನ್ನೇ. ಮಿತವಾದ ಪದಪ್ರಯೋಗದಿಂದಲೇ ಪರಿಣಾಮ ಸಾಧಿಸುತ್ತಿದ್ದ. ವಯಸ್ಸಾದ ಮೇಲೂ ಇವನ ಬರೆಹದ ನವೀನತೆ ಕುಗ್ಗಲಿಲ್ಲ. ಇವನ ಕಥೆಗಳನ್ನು ಓದಿ, 1890ರಲ್ಲಿ ಬರೆದದ್ದು ಯಾವುದು ? 1930ರಲ್ಲಿ ಬರೆದದ್ದು ಯಾವುದು ? ಎಂದು ಗುರುತಿಸುವುದು ಸಾಧ್ಯವಿಲ್ಲ.

1907ರಲ್ಲಿ ಕಿಪ್ಲಿಂಗ್‌ಗೆ ನೊಬೆಲ್ ಬಹುಮಾನ ಬಂತು. ಸಾಹಿತ್ಯದ ನೊಬೆಲ್ ಬಹುಮಾನ ಪಡೆದ ಆಂಗ್ಲ ಲೇಖಕರಲ್ಲಿ ಇವನು ಮೊದಲಿಗ. ಈತ ಸಾಮ್ರಾಜ್ಯವಾದಿ ಇಂಗ್ಲೆಂಡಿನ ಹಿರಿಮೆಯ ದ್ಯೋತಕ ಎನ್ನುವುದೂ ಉಂಟು. ಇಂಗ್ಲೆಂಡಿನ ಮೇಲೆ ಇವನಿಗೆ ಅಪಾರ ಮಮತೆ ಇದ್ದರೂ 1895ರಲ್ಲಿ ರಾಷ್ಟ್ರಕವಿ ಪದವಿಯನ್ನು ಸ್ವೀಕರಿಸಲು ಒಪ್ಪಲಿಲ್ಲ. ಸ್ವತಂತ್ರನಾಗಿದ್ದು ಬದುಕುವುದು, ಬರೆಯುವುದು ಇವನ ಧ್ಯೇಯವಾಗಿತ್ತು.

1936 ಜನವರಿ 18ರಲ್ಲಿ ತೀರಿಕೊಂಡಾಗ ವೆಸ್ಟ್‌ಮಿನ್‌ಸ್ಟರ್ ಅಬಿಯ ಕವಿಯ ಮೂಲೆಯಲ್ಲಿ ಇವನ ಸ್ಮಾರಕ ರಚಿಸಿದರು.

## ಕೀಟ್ಸ್

'ಸೌಂದರ್ಯವೇ ಸತ್ಯ, ಸತ್ಯವೇ ಸೌಂದರ್ಯ, ಬುವಿಯ ಬದುಕಿನಲಿ ಅರಿಯಬಹುದಾದದ್ದು ಇಷ್ಟೇ. ಅರಿಯಬೇಕಾಗಿರುವುದೆಲ್ಲ ಇಷ್ಟೆ' ಎಂದು ನುಡಿದ ಆಂಗ್ಲ ಕವಿಶ್ರೇಷ್ಠ ಜಾನ್ ಕೀಟ್ಸ್.

ಇಂಗ್ಲೆಂಡಿನ ಪತ್ರಿಕೋದ್ಯೋಗಿ ಲೇ ಹಂಟ್, 'ಎಕ್ಸಾಮಿನರ್' ಎಂಬ ಒಂದು ನಿಯತಕಾಲಿಕವನ್ನು ಪ್ರಕಟಿಸುತ್ತಿದ್ದ. ಪ್ರಖ್ಯಾತ ಕವಿಗಳಾದ ಷೆಲ್ಲಿ, ಬೈರನ್ ಅವನ ಸ್ನೇಹಿತರು. ಹಂಟ ತನ್ನ ಪ್ರಗತಿಶೀಲ ರಾಜಕೀಯ ದೃಷ್ಟಿಕೋನಕ್ಕಾಗಿ ಪ್ರಖ್ಯಾತನಾಗಿದ್ದ. ಆದ್ದರಿಂದ ಅವನ ಪತ್ರಿಕೆಯಲ್ಲಿ ಪ್ರಕಟವಾದದ್ದನ್ನೆಲ್ಲ 'ಕ್ವಾರ್ಟರ್ಲಿ ರೆವ್ಯೂ' ಮತ್ತಿತರ ಕೆಲವು ನಿಯತಕಾಲಿಕಗಳು ಟೀಕಿಸುತ್ತಿದ್ದುವು. 1818ರಲ್ಲಿ ಷೆಲ್ಲಿ, ಬೈರನರ ಜೊತೆಗೆ ಜಾನ್ ಕೀಟ್ಸನ ಮೇಲೂ ಆ ಪತ್ರಿಕೆಗಳ ದಾಳಿ ನಡೆಯಿತು.



ಸೌಂದರ್ಯ, ಸತ್ಯ : ಕೀಟ್ಸ್

ಕೀಟ್ಸ್ ಆ ವೇಳೆಗೆ ಎರಡು ಕವನ ಸಂಕಲನಗಳನ್ನು ಪ್ರಕಟಿಸಿದ್ದ. 1817ರ ಮೊದಲ ಸಂಕಲನ ಯಾರ ಗಮನವನ್ನೂ ಸೆಳೆದಿರಲಿಲ್ಲ. ಮಾರನೆಯ ವರ್ಷ 'ಎಂಡಿಮಿಯಾನ್' ಎಂಬ ಕಥನ ಕವನ ಪ್ರಕಟವಾದಾಗ ಅದು ತೀವ್ರ ಟೀಕೆಗೆ ಗುರಿಯಾಯಿತು. ಕೀಟ್ಸ್ ಈ ಟೀಕೆಯನ್ನು ಲೆಕ್ಕಿಸದೆ ಹ್ಯಾಂಪ್‌ಸ್ಟೆಡ್‌ನಲ್ಲಿ ಪ್ರಶಾಂತ ಗ್ರಾಮಜೀವನದಲ್ಲಿ ನಿರತನಾಗಿ ಕೃತಿ ರಚನೆ ಮುಂದುವರಿಸಿದ. ಆತ ಎಂಥ ಶ್ರೇಷ್ಠ ಕವಿ ಎಂಬುದನ್ನು ಅವನ ಮೂರನೆಯ ಸಂಕಲನ ಮನವಟ್ಟು ಮಾಡಿಕೊಟ್ಟಿತು. ಮಹಾಕವಿ ಮಿಲ್ಟನನ ಮಟ್ಟಕ್ಕೆ ಏರಬಲ್ಲವನೆಂಬ ಪ್ರಶಂಸೆಗೆ ಅವನು ಪಾತ್ರನಾದ.

ಕೀಟ್ಸ್ ಲಂಡನಿನಲ್ಲಿ 1795ರ ಅಕ್ಟೋಬರ್ 31ರಂದು ಜನಿಸಿದ. ಆತನ ತಂದೆ ಕುದುರೆ ಬಂಡಿ ಓಡಿಸಿ ಜೀವನ ನಡೆಸುತ್ತಿದ್ದ. ಕೀಟ್ಸ್‌ಗೆ 8 ವರ್ಷವಾಗಿದ್ದಾಗ ಅವನ ತಂದೆ ತೀರಿಕೊಂಡ. ಕೀಟ್ಸ್ ಶಾಲೆಗೆ ಹೋಗುತ್ತಿದ್ದನಾದರೂ ಓದಿಗಿಂತ ಆಟಗಳ ಕಡೆಗೇ ಹೆಚ್ಚು ಗಮನ. ಅವನು ಒಳ್ಳೆಯ ಮುಷ್ಟಿಯುದ್ಧಪಟು. ಇದರಿಂದಾಗಿ ಹುಡುಗರು ಅವನಿಗೆ ಹೆದರುತ್ತಿದ್ದರು. ಆದರೂ, ಸ್ನೇಹಪರನೂ ಸರಳಸ್ವಭಾವದವನೂ ಆದ ಆತ ಎಲ್ಲರಿಗೂ ಬೇಕಾದವನಾಗಿದ್ದ. ಕೀಟ್ಸ್ 14 ವರ್ಷದವನಾಗಿದ್ದಾಗ ಅವನ ತಾಯಿ ಕ್ಷಯದಿಂದ ಸತ್ತಳು. ಅವನ ಪಾಲಕರು ಅವನನ್ನು ವೈದ್ಯನೊಬ್ಬನ ಬಳಿ ನೌಕರಿಗೆ ಹಾಕಿದರು. ನೌಕರಿಗೆ ಸೇರಿದ ಮೇಲೂ ಅವನು ಆಗಾಗ ಶಾಲೆಗೆ ಹೋಗುತ್ತಿದ್ದು ಒಂದು ವರ್ಷ ಕಳೆದ ಮೇಲೆ ಆಸ್ಪತ್ರೆಯೊಂದರಲ್ಲಿ ವೈದ್ಯಕೀಯ ಅಭ್ಯಾಸಮಾಡತೊಡಗಿದ. ಆ ವೇಳೆಗೆ ಅವನಲ್ಲಿ ಸಾಹಿತ್ಯದ ಬಗೆಗೆ ಒಲವು ಮೂಡಿತ್ತು. ಮೊದಮೊದಲು ಕೆಲವು ಅನುಕರಣೀಯ ಪದ್ಯಗಳನ್ನು ಬರೆದು ಕೈಪಳಗಿಸಿಕೊಂಡ. ಅನಂತರ 21ನೆಯ ವಯಸ್ಸಿನಲ್ಲಿ ತನ್ನ ಸ್ವತಂತ್ರ ಕವನಗಳ ಮೊದಲ ಸಂಕಲನವನ್ನು ಪ್ರಕಟಿಸಿದ. ವೈದ್ಯಕೀಯ ತರಪೇತು ಮುಗಿಸಿದ ಮೇಲೆ ಅವನು ವೈದ್ಯನಾಗಲಿಲ್ಲ ; ಕವಿತಾರಚನೆಯಲ್ಲೇ ಆಸಕ್ತನಾದ. ಒಳ್ಳೆಯ ಕವಿಯೆಂದು ಕೀರ್ತಿಗಳಿಸಿದ ಮೇಲೆ ಕೂಡ ಅವನಿಗೆ ಹಣದ ತೊಂದರೆಯಿದ್ದೇ ಇತ್ತು.



ಕೀಟ್ಸ್ —ಸಮಕಾಲೀನ ಚಿತ್ರಕಾರ ಕಂಡಂತೆ

ತನ್ನ ಪ್ರೇಯಸಿ ಫಾನಿ ಬ್ರಾನೆಯನ್ನು ಮದುವೆಯಾಗಲು ಬೇಕಾದ ಹಣ ಕೊನೆಯವರೆಗೂ ದೊರೆಯಲಿಲ್ಲ. ಆರೋಗ್ಯ ಬೇರೆ ಹದಗೆಟ್ಟಿತು. ಹವೆ ಬದಲಾವಣೆಗೆಂದು ಇಟಲಿಗೆ ತೆರಳಿದ. ಅದರಿಂದೇನೂ ಪ್ರಯೋಜನವಾಗಲಿಲ್ಲ. 1821ರ ಫೆಬ್ರವರಿ 23ರಂದು ಕ್ಷಯರೋಗದಿಂದ ಮೃತಪಟ್ಟ. ರೋಮಿನ ಪ್ರಾಟೆಸ್ಟೆಂಟ್ ಸ್ಮಶಾನದಲ್ಲಿ ಅವನ ಸಮಾಧಿ ಮಾಡಿದರು.

ಅನಾರೋಗ್ಯ ಹಾಗೂ ಫಾನಿ ಬ್ರಾನೆಯನ್ನು ಮದುವೆಯಾಗಲು ಸಾಧ್ಯವಾಗದ ಕೊರಗು ಬಾಧಿಸುತ್ತಿದ್ದರೂ ಕೀಟ್ಸ್ ಶ್ರೇಷ್ಠ ಕೃತಿಗಳನ್ನು ರಚಿಸಿದ. ಇವು 'ಲ್ಯಾಮಿಯ', 'ಇಸಾಬೆಲ್ಲ', 'ದಿ ಈವ್ ಆಫ್ ಸೇಂಟ್ ಆಗ್ನೆಸ್'. ಜೊತೆಗೆ ಇತರ ಪ್ರಮುಖ ಕವನಗಳೂ ಪ್ರಕಟವಾದುವು. ಕೀಟ್ಸ್‌ನ ಪ್ರಗಾಥಗಳು ಹಾಡಲು ಯೋಗ್ಯವಾಗಿದ್ದುದರಿಂದ ಬಹಳ ಪ್ರಸಿದ್ಧಿಗೆ ಬಂದುವು. ನೈಟಿಂಗೇಲ್, ಶರತ್ಕಾಲ ಮುಂತಾದುವುಗಳನ್ನು ಕುರಿತ ಪ್ರಗಾಥಗಳು ಕ್ಷಣಿಕ ಸುಖ, ಸಂಕಟ ಪರಂಪರೆ, ಬದುಕಿನ ವಿಷಯಗಳಿಗೆ ಸಂಬಂಧಿಸಿದ ಅವನ ಪ್ರತಿಕ್ರಿಯೆಗಳನ್ನು ಸಾರುತ್ತವೆ.

ಕಷ್ಟ, ನಿರಾಸೆಗಳ ನಡುವೆಯೂ ಕೀಟ್ಸನ ಸೌಂದರ್ಯಪ್ರಜ್ಞೆ ಉಜ್ವಲವಾಗಿಯೇ ಇತ್ತು. ಅವನ ಮರಣಾನಂತರ ಪ್ರಕಟವಾದ ಕೃತಿ, ಅವನ 'ಪತ್ರಗಳು'. ಕಾವ್ಯದ ಬಗೆಗೆ ಅವನು ರೂಢಿಸಿಕೊಂಡಿದ್ದ ಭಾವನೆಗಳ ಮೇಲೆ ಇದು ಬೆಳಕು ಬೀರುತ್ತದೆ.

## ಕುಂದಣಗಾರ

ಬಾಲ್ಯದಿಂದಲೂ ನಿರಂತರ ಬಡತನದ ಬೇಗೆಗೆ ಒಳಗಾದರೂ ತಮ್ಮ ತತ್ತ್ವವನ್ನು ಉಳಿಸಿ, ಬೆಳೆಸಿಕೊಂಡು ಅಪರಂಜಿಯಾದವರು ಕಲ್ಲಪ್ಪ ಗಿರಿಯಪ್ಪ ಕುಂದಣಗಾರರು.

ಬೆಳಗಾವಿ ಜಿಲ್ಲೆ ಗೋಕಾಕ ತಾಲೂಕಿನ ಕೌಜಲಗಿಯಲ್ಲಿ 1892ನೆಯ ಆಗಸ್ಟ್ 14ರಂದು ಕುಂದಣಗಾರರು ಹುಟ್ಟಿದರು. ಅವರದು ಹೆಚ್ಚು ಆದಾಯವಿಲ್ಲದ ಅಕ್ಕಸಾಲಿಗ ಮನೆತನ. ಪ್ರಾಥಮಿಕ ವಿದ್ಯಾಭ್ಯಾಸ ಕೌಜಲಗಿಯಲ್ಲಿ ನಡೆಯಿತು. ಮುಂದಿನ ಶಿಕ್ಷಣಕ್ಕೆ ಬೆಳಗಾವಿಗೆ ಹೋಗಿ ಅಲ್ಲಿನ ಸರದಾರ ಹೈಸ್ಕೂಲು ಸೇರಿದರು. ಬಿಡುವಿನ ಹೊತ್ತಿನಲ್ಲಿ ಒಂದು ಸರಾಫ್ ಅಂಗಡಿಯಲ್ಲಿ ಲೆಕ್ಕ ಬರೆದು ತಮ್ಮ ಖರ್ಚಿಗೆ ಬೇಕಾದಷ್ಟು ಹಣ ಸಂಪಾದಿಸಿ ವಿದ್ಯಾಭ್ಯಾಸವನ್ನು ಕೆಲ ಕಾಲ ಮುಂದುವರಿಸಿದರು. ಅನಂತರ ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಓದಿ ಮೆಟ್ರಿಕ್ ಪರೀಕ್ಷೆಮಾಡಿಕೊಂಡರು. ಶಿಕ್ಷಣವನ್ನು ಮುಂದುವರಿಸಬೇಕೆಂಬ ಹಂಬಲ ಬೆಟ್ಟದಷ್ಟು ; ಆದರೆ ಅದಕ್ಕೆ ಹಣವಿರಲಿಲ್ಲ. ಬಾಲ್ಯದಿಂದಲೂ ಸ್ವಾವಲಂಬನದ ಪಾಠ ಕಲಿತಿದ್ದ ಕುಂದಣಗಾರರು ಅಳುಕಲಿಲ್ಲ. ಕೊಲ್ಲಾಪುರದ ರಾಜಾರಾಮ್ ಹೈಸ್ಕೂಲು, ಗೋಕಾಕದ ಆಂಗ್ಲೋ ವೆರ್ನಾಕ್ಯುಲರ್ ಹೈಸ್ಕೂಲುಗಳಲ್ಲಿ ಶಿಕ್ಷಕರಾಗಿ ಕೆಲಸ ಮಾಡುತ್ತ ಹಣಗಳಿಸಿ, ನಡುನಡುವೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಇದರಿಂದಾಗಿ ನಾಲ್ಕು ವರ್ಷಗಳ ಅವಧಿಯ ಕಾಲೇಜು ಶಿಕ್ಷಣವನ್ನು ಪೂರೈಸಲು ಹತ್ತು ವರ್ಷ ಬೇಕಾಯಿತು. ಹೀಗೆ ಪಟ್ಟುಹಿಡಿದು ವಿದ್ಯಾಭ್ಯಾಸ ಮುಂದುವರಿಸಿ ಬಿ.ಎ. ಪಾಸುಮಾಡಿದರು. ಅನಂತರ ಎಂ.ಎ. ಪದವಿ ಪಡೆದರು. ಕೆಲಸದಲ್ಲಿದ್ದುಕೊಂಡು ಹೀಗೆ ಕನ್ನಡ ಎಂ.ಎ. ಮಾಡಿಕೊಂಡಾಗ ಅವರಿಗೆ ಮೂವತ್ತು ವರ್ಷ.

ಕುಂದಣಗಾರರು 1925ರಿಂದ ಎರಡು ವರ್ಷಗಳ ಕಾಲ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಕೆಲಸಮಾಡಿ ಅನಂತರ ಕೊಲ್ಲಾಪುರದ ರಾಜಾರಾಮ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾದರು. 1948ರಲ್ಲಿ ಉದ್ಯೋಗದಿಂದ ನಿವೃತ್ತರಾಗುವವರೆಗೂ ಆ ಉದ್ಯೋಗದಲ್ಲೇ ಇದ್ದರು. ಅನಂತರ 1948ರಿಂದ 65ನೆಯ ಆಗಸ್ಟ್ 22ರಂದು ನಿಧನರಾಗುವವರೆಗೆ ಬೆಳಗಾವಿಯ ರಾಣಿ ಪಾರ್ವತಿದೇವಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕೆಲಸಮಾಡಿದರು.

ಧಾರವಾಡದ 'ವಾಗ್ಭೂಷಣ' ಮತ್ತು ಬೆಳಗಾವಿಯ 'ಜಿನ ವಿಜಯ' ಪತ್ರಿಕೆಗಳ ಸಂಪಾದಕರಾಗಿಯೂ ಅವರು ಸೇವೆ ಸಲ್ಲಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ಸಮಿತಿಗಳ ಸದಸ್ಯರಾಗಿದ್ದರು. 1961ರಲ್ಲಿ ಗದುಗಿನಲ್ಲಿ ನಡೆದ ಕನ್ನಡಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಇವರಿಗೆ ಸಂದಿತು.

ಕನ್ನಡಕ್ಕೆ ಮಹತ್ತರ ಸೇವೆಯನ್ನು ಸಲ್ಲಿಸಿದ ಮಹನೀಯರಲ್ಲಿಕುಂದಣಗಾರರೂ ಒಬ್ಬರು. ಸಾಧಾರಣ ಎತ್ತರ, ಮೃದುವಾದ ಮಾತು, ನಗುಮುಖ, ವಿನಯ, ತಾಳ್ಮೆ ಅವರ ವ್ಯಕ್ತಿತ್ವಕ್ಕೆ



ಅಪರಂಜಿ : ಕುಂದಣಗಾರ

ಮೆರುಗುಕೊಟ್ಟಿದ್ದುವು. ಕೊಲ್ಲಾಪುರದಲ್ಲಿ ಕನ್ನಡವನ್ನು ಭದ್ರ ತಳಹದಿಯ ಮೇಲೆ ನಿಲ್ಲಿಸಿದ ಕೀರ್ತಿ ಅವರದು.

ಕುಂದಣಗಾರರು ಉದ್ದಾಮ ಕನ್ನಡ ವಿದ್ವಾಂಸರಲ್ಲದೆ ಉತ್ತಮ ಸಂಶೋಧಕರೂ ಆಗಿದ್ದರು. ಸಂಶೋಧನೆಯಲ್ಲಿ ಅವರಿಗೆ ಮೊದಲಿನಿಂದಲೂ ಆಸಕ್ತಿಯಿತ್ತು. ಶಿಲಾಶಾಸನ, ತಾಮ್ರಶಾಸನ, ಪ್ರಾಚೀನ ಅವಶೇಷಗಳು–ಕಟ್ಟಡಗಳನ್ನು ಕುರಿತು ಕುಂದಣಗಾರರು ಸಂಶೋಧನೆಗಳನ್ನು ನಡೆಸಿದರು. ಇದರಿಂದ ಕನ್ನಡನಾಡು, ಸಂಸ್ಕೃತಿಗಳ ಬಗೆಗೆ ಹಲವಾರು ಮಹತ್ವದ ಸಂಗತಿಗಳು ಪ್ರಕಟಗೊಂಡುವು. 1929ರಲ್ಲಿ ಅವರು ಪ್ರಕಟಿಸಿದ 'ನೋಟ್ಸ್ ಆನ್ ಮಹಾಲಕ್ಷ್ಮಿ ಟೆಂಪಲ್' ಮತ್ತು 1937ರಲ್ಲಿ ಹೊರಬಂದ 'ಇನ್‌ಸ್ಕ್ರಿಪ್ಷನ್ಸ್ ಇನ್ ನಾರ್ದರ್ನ್ ಕರ್ನಾಟಕ ಅಂಡ್ ಕೊಲ್ಹಾಪುರ್ ಸ್ಟೇಟ್' ಅವರ ವಿದ್ವತ್ತಿಗೂ ಸಂಶೋಧನಾ ಮನೋವೃತ್ತಿಗೂ ಸಾಕ್ಷಿಯಾಗಿವೆ. ಇವಲ್ಲದೆ ಅವರು 25 ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ಇವು ಕೂಡ ಮಹತ್ವಪೂರ್ಣ ಲೇಖನಗಳು.

ಬ್ರಹ್ಮಗಿರಿಯಲ್ಲಿ ನಡೆದ ಭೂಸಂಶೋಧನೆಯಲ್ಲಿ ಅವರು ಹಿರಿದಾದ ಪಾತ್ರ ವಹಿಸಿದ್ದರು. ಕುಂದಣಗಾರರು ಬಹುಭಾಷಾ ವಿಶಾರದರು. ಕನ್ನಡ, ಇಂಗ್ಲಿಷ್, ಪಾಳಿ, ಅರ್ಧಮಾಗಧಿ ಮತ್ತು ಮರಾಠಿ ಈ ಎಲ್ಲ ಭಾಷೆಗಳಲ್ಲಿ ಅವರಿಗೆ ಪಾಂಡಿತ್ಯವಿತ್ತು.

ಪ್ರಾಚೀನ ಸಾಹಿತ್ಯಾಧ್ಯಯನ ಅವರ ಅಚ್ಚುಮೆಚ್ಚಿನ ವಿಷಯವಾಗಿತ್ತು. ಜೈನ, ವೀರಶೈವ ಸಾಹಿತ್ಯಗಳನ್ನು ಅವರು ಆಳವಾಗಿ ಅಭ್ಯಾಸಮಾಡಿ ಹಸ್ತಿಮಲ್ಲನ 'ಪೂರ್ವ ಪುರಾಣ', ಆದಿಪಂಪನ 'ಆದಿಪುರಾಣ' ಮೊದಲಾದ ಗ್ರಂಥಗಳನ್ನು ಸಂಸ್ಕರಿಸಿ ಸಂಪಾದಿಸಿದರು. ಇವರು ಸಂಪಾದಿಸಿದ ಇನ್ನೊಂದು ಗ್ರಂಥ 'ಹರಿಹರನ ಪ್ರಶಸ್ತಿ'. ಇವರ 'ಮಹಾದೇವಿಯಕ್ಕ' ವಿಮರ್ಶಕರ ಆಸಕ್ತಿಯನ್ನು ಕೆರಳಿಸಿದ ಗ್ರಂಥ.

ಕುಂದಣಗಾರರು 'ಕೇಶವ' ಎಂಬ ಕಾವ್ಯನಾಮದಲ್ಲಿ ಬರೆಯುತ್ತಿದ್ದರು. 1930ರಲ್ಲಿ 'ಸರಸ್ವತಿ' ಎಂಬ ಕಾದಂಬರಿಯನ್ನು ಬರೆದು ಪ್ರಕಟಿಸಿದರು.

ಇವರ ಸಂಶೋಧನಾತ್ಮಕ ಹಾಗೂ ಇತರ ಲೇಖನಗಳನ್ನು ಸೇರಿಸಿದ **'ಕುಂದಣ'** ಎಂಬ ಗ್ರಂಥ ಅವರಿಗೆ ಅರ್ಪಿತವಾಗಿದೆ.

"ಕನ್ನಡದ ಹೊಂಗುಡಿಯ ಬಡಗಣದ ಬಾಗಲಲಿ, ಸತ್ಯ ಸೌಂದರ್ಯ ಸಾಹಿತ್ಯ ಸಂಶೋಧನೆಯ ನಂದಾದೀಪ ಹೊತ್ತಿಸಿದ ಗುರುವರ" ಎಂಬ ಹೊಗಳಿಕೆಗೆ ಇವರು ಪಾತ್ರರಾಗಿದ್ದರು.

## ಕುಮಾರವ್ಯಾಸ

"ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲಿ ಕುಣಿಯುವುದು
ಮೈಯಲಿ ಮಿಂಚಿನ ಹೊಳೆ ತುಳುಕಾಡುವುದು"

—ಕವಿ ಕುವೆಂಪು ಕುಮಾರವ್ಯಾಸನನ್ನು ಕುರಿತು ಬರೆದ ಪಂಕ್ತಿಗಳಿವು. ಕವಿ ಕುಮಾರವ್ಯಾಸ ಪ್ರತಿದಿನವೂ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲೇ ಕುಳಿತು ಮನೆದೇವರಾದ ಗದುಗಿನ ವೀರನಾರಾಯಣನ ಸನ್ನಿಧಿಯಲ್ಲಿ ಭಕ್ತಿಯಿಂದ ಹಾಡುತ್ತಿದ್ದ; ಉಟ್ಟ ಬಟ್ಟೆಯ ತೇವ ಆರುವವರೆಗೆ ಮಾತ್ರ ಅವನು ಕಾವ್ಯರಚನೆ ಮಾಡುತ್ತಿದ್ದನೆಂದು ದಂತ ಕಥೆ. ಹಾಗೆ ಕುಮಾರವ್ಯಾಸ ಹಾಡಿದ ಮಹಾಭಾರತ ಸುಮಾರು 500 ವರ್ಷಗಳಿಂದ ಕನ್ನಡಿಗರಿಗೆ ತುಂಬ ಜನಪ್ರಿಯವಾದ ಕಾವ್ಯವಾಗಿದೆ. ಕನ್ನಡ ಸಾಹಿತ್ಯ-ಭಾಷೆಗಳ ಅಭ್ಯಾಸಿಗಳಿಗೆ ಅಮೂಲ್ಯವೆನಿಸಿದೆ.

ಕುಮಾರವ್ಯಾಸನೆಂದು ಪ್ರಸಿದ್ಧನಾದ ಕವಿಯ ಹೆಸರು ನಾರಣಪ್ಪ. ಗದುಗಿನ ಬಳಿಯ ಕೋಳಿವಾಡ ಅವನ ಊರು. ಕ್ರಿ.ಶ. 1406ರಿಂದ 22 ರವರೆಗೆ ವಿಜಯನಗರವನ್ನು ಆಳಿದ ದೊರೆ ಮೊದಲನೆಯ ದೇವರಾಯನ ಬಳಿ ನಾರಣಪ್ಪನ ತಂದೆ ಅಕ್ಕನರಸಯ್ಯ ಅಥವಾ ಲಕ್ಕಣದೇವ ಆತನ ಮಂತ್ರಿಯಾಗಿದ್ದ. ದೊರೆ ಗತಿಸಿದ ಮೇಲೆ ತನಗೆ ಬಳುವಳಿಯಾಗಿ ಬಂದಿದ್ದ ಕೋಳಿವಾಡಕ್ಕೆ 1424ರಲ್ಲಿ ಬಂದು ನೆಲೆಸಿದ. ಇವನ ಐವರು ಗಂಡು ಮಕ್ಕಳಲ್ಲಿ ಹಿರಿಯವನು ನಾರಣಪ್ಪ. ಕುಲದಿಂದ ಬಂದ ಕರಣಿಕ ವೃತ್ತಿಯನ್ನೇ, ಅಂದರೆ ಊರಿನ ಶಾನುಭೋಗಿಕೆಯನ್ನೇ, ನಾರಣಪ್ಪ ಮುಂದೆ ವಹಿಸಿಕೊಂಡ.


ಗದುಗಿನ ವೀರನಾರಾಯಣ

ಮಹಾಭಾರತವನ್ನು ರಚಿಸಬೇಕೆಂದು ಆತನಿಗೆ ತನ್ನ ಇಷ್ಟದೈವದಿಂದ ಪ್ರೇರಣೆ ಬಂತೆಂದೂ, ಆ ದೇವರ ಮುಂದೆಯೇ ಕುಳಿತು ಕಾವ್ಯ ರಚನೆ ಮಾಡಲು ಅದೇ ಕಾರಣವೆಂದೂ ಒಂದು ಹೇಳಿಕೆ ಇದೆ. 'ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ' ಎಂದು ನಾರಣಪ್ಪ ತನ್ನ ಬಗೆಗೆ ಹೇಳಿಕೊಂಡಿದ್ದಾನೆ.

ಕುಮಾರವ್ಯಾಸನ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ. 15ನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಅವನ ಕೃತಿ ಇತರ ಕವಿ ಕೃತಿಗಳ ಮೇಲೆ ಪ್ರಭಾವ ಬೀರಿದ್ದು ಮಾತ್ರ ಖಚಿತ.

ಕುಮಾರವ್ಯಾಸ ಕಥೆಗಾಗಿ ವ್ಯಾಸರನ್ನು ಆಶ್ರಯಿಸಿದ್ದಾನೆ. ಇವನಿಗಿಂತ ಮುಂಚೆ ಕನ್ನಡದಲ್ಲಿ 'ಭಾರತ'ವನ್ನು ಬರೆದ ಆದಿಕವಿ ಪಂಪ ಇವನ ಮೇಲೆ


"ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ"

[illegible] ಯುದ್ಧ ಪರ್ವಗಳು ಬಂದಾಗ ಕಾವ್ಯರಚನೆಯಲ್ಲಿ ಸ್ವತಂತ್ರನಾಗಿದ್ದಾನೆ.

ತನ್ನ ಕಾವ್ಯ [illegible] ಎಲ್ಲರಿಗೂ ಪ್ರಿಯವಾದದ್ದು, ಉಪಯುಕ್ತವಾದದ್ದು ಎಂಬುದು ಅವನ ಅಭಿಪ್ರಾಯ.

"ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ"

—ಎಂದು ಹೇಳಿಕೊಂಡಿದ್ದಾನೆ.

ಕುಮಾರವ್ಯಾಸನು ತನ್ನ ಭಾರತವನ್ನು ಬರೆದಿರುವುದು ಭಾಮಿನಿ ಷಟ್ಪದಿಯಲ್ಲಿ.

ಸಹೃದಯರು, ವಿಮರ್ಶಕರು, ಅವನನ್ನು ರೂಪಕ ಸಾಮ್ರಾಜ್ಯ ಚಕ್ರವರ್ತಿ ಎಂದು ಕರೆಯುತ್ತಾರೆ. ಕಥನಕ್ಕೆ ಮೆರುಗುಕೊಡುವಂತೆ ಅವನು ಬಳಸುವ ರೂಪಕಗಳು ಅಸಾಧಾರಣ. ಉದಾ: "ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯಮೃಗ". "ನಮ್ಮ ಭಾಗ್ಯದ ಬಾಣಸಿಗ ವಿಧಿ ವಿಷವ ಬೆರಸುವೊಡಾರು ಕಾವರು" (ಬಾಣಸಿಗ ವಿಧಿ—ವಿಧಿಯೆಂಬ ಅಡುಗೆಯವ) ಕುಮಾರವ್ಯಾಸನ ನುಡಿಗಟ್ಟುಗಳಲ್ಲಿ ಪದಗಳ ಜೋಡಣೆಯೇ ವಾಕ್ಯಾರ್ಥವನ್ನು ಧ ನಿಸುತ್ತದೆ. ಅದೇ ಅವನ ವಿಶೇಷ.

ಕುಮಾರವ್ಯಾಸನ 'ಭಾರತ'ದ ಉದ್ದಗಲಕ್ಕೂ ನಾವು ಕಾಣುವುದು ಕೃಷ್ಣನ ಮಹಿಮೆಯನ್ನೇ, ಎಲ್ಲದರಲ್ಲೂ ಅವನ ಕೈವಾಡ. ಕೃಷ್ಣನ ಮಹಿಮೆಯನ್ನು ವರ್ಣಿಸುವ ಕಡೆಗಳಲ್ಲೆಲ್ಲ ಆತ ಭಾವಾವೇಶಕ್ಕೆ ಒಳಗಾಗುತ್ತಾನೆ. ಮಹಾಭಾರತವನ್ನು ಆತ 'ಕೃಷ್ಣ ಕಥೆ' ಎಂದೇ ಕರೆದಿದ್ದಾನೆ. ಇವನ ಮಹಾಭಾರತಕ್ಕೆ ಕೃಷ್ಣನೇ ನಾಯಕ. ಆತ ನಾರಾಯಣನ ಅವತಾರ. ಹಾಗಿದ್ದರೂ ಮನುಷ್ಯಾಕೃತಿಯನ್ನು ತಾಳಿರುವುದರಿಂದ. ಲೋಕರೂಢಿಯನ್ನು ಅನುಸರಿಸಿ ವಿನಯಶೀಲನಾದ ಮನುಷ್ಯನಂತೆಯೇ ಶ್ರೀಕೃಷ್ಣ ನಡೆದುಕೊಳ್ಳುತ್ತಾನೆ.

ಕುಮಾರವ್ಯಾಸನ ಇತರ ಪಾತ್ರಗಳು ಭೀಮ, ದ್ರೌಪದಿ, ಕೀಚಕ, ಕರ್ಣ ಕೂಡ ಒಂದೊಂದೂ ವಿಶಿಷ್ಟವಾಗಿ ಮೂಡಿಬಂದಿವೆ. ವರ್ಣನೆಗಳಲ್ಲೂ ಅವನ ಪ್ರತಿಭೆಯನ್ನು ಕಾಣಬಹುದು.

ಕುಮಾರವ್ಯಾಸನ ಕವಿತಾ ಸಾಮರ್ಥ್ಯ ಹಿರಿದಾದದ್ದು. "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ; ಪದವಿಟ್ಟಳುಪದೊಂದಗ್ಗಳಿಕೆ; ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ; ಬಳಸಿ ಬರೆಯಲು ಕಂಠಪತ್ರದ ಉಲುಹು ಗೆಡದಗ್ಗಳಿಕೆ ಎಂಬೀ ಬಲುಹು" ತನ್ನದೆಂದಿದ್ದಾನೆ. ಆದರೆ ಈ ಬಲುಹು ತನಗೆ ಸಿದ್ಧಿಸಿದ್ದು 'ವೀರನಾರಾಯಣನ ಕಿಂಕರ' ಆಗಿದ್ದುದರಿಂದ ಎಂದು ಸಾರಿ, ತನ್ನ ಅಪ್ರತಿಮ ದೈವಭಕ್ತಿಯನ್ನು ಮೆರೆದಿದ್ದಾನೆ. ಕುಮಾರವ್ಯಾಸ ಕವಿ ಮಾತ್ರವಲ್ಲ; ಭಾಗವತೋತ್ತಮ ಕೂಡ. ಅವನ ಮಹಾ ಕೃತಿಯಲ್ಲಿ ಅಲ್ಲಲ್ಲಿ ಬರುವ ಉತ್ತಮ ಸ್ತೋತ್ರ ಭಾಗಗಳು ಇದಕ್ಕೆ ನಿದರ್ಶನ.

## ಕುವೆಂಪು

ಆ ತರುಣ ದಿನದ ಬಹುಭಾಗವನ್ನು ಸಾರ್ವಜನಿಕ ಪುಸ್ತಕ ಭಂಡಾರದಲ್ಲಿ ಕಳೆಯುತ್ತಿದ್ದ. ಆಂಗ್ಲ ಸಾಹಿತ್ಯ ಆತನ ಮನಸ್ಸನ್ನು ಸೂರೆಗೊಂಡಿತ್ತು. ಸತತ ಅಧ್ಯಯನದಿಂದ ಆಂಗ್ಲ ಸಾಹಿತ್ಯದ ಸವಿಯನ್ನುಂಡು, ಅರಗಿಸಿ ಕೊಂಡ. ಇಂಗ್ಲಿಷಿನಲ್ಲಿ ಕಾವ್ಯ ರಚನೆ ಮಾಡಿ ಆ ಕವನಗಳ ಒಂದು ಸಂಕಲನ ಪ್ರಕಟಿಸಿದ.

ಅವನ್ನು ಆತ ಆಗ ಶ್ರೀರಂಗಪಟ್ಟಣಕ್ಕೆ ಬಂದಿದ್ದ ಐರ್ಲೆಂಡಿನ ಸಾಹಿತಿ ಜೇಮ್ಸ್ ಎಚ್. ಕಸಿನ್ಸ್ ಅವರಿಗೆ ತೋರಿಸಿದ. ಕಸಿನ್ಸ್ ಮೆಚ್ಚುಗೆಯ ನುಡಿಗಳನ್ನಾಡಿ "ಕನ್ನಡದಲ್ಲೇಕೆ ಬರೆಯಬಾರದು" ಎಂದರು. "ಕನ್ನಡದಲ್ಲಿ ಸಾಕಷ್ಟು ಪದಸಂಪತ್ತಿಲ್ಲ" ಎಂದು ದಿಟ್ಟತನದ ಉತ್ತರ ಕೊಟ್ಟ ಆ ತರುಣ. ಆದರೆ ಕಸಿನ್ಸ್ "ಯಾವ ಭಾಷೆಯೂ ಇನ್ನೊಂದು ಭಾಷೆಗಿಂತ ಕೀಳಲ್ಲ. ಬುದ್ಧಿವಂತರು ಪದಸಂಪತ್ತನ್ನು ಬೆಳೆಸಬಲ್ಲರು" ಎಂದರು.

ಈ ಮಾತು ತರುಣನ ಆಲೋಚನೆಯನ್ನು ಕೆಣಕಿತು. ತಾನೇ ರಚಿಸಿದ್ದ ಒಂದು ಇಂಗ್ಲಿಷ್ ಕವನವನ್ನು ಕನ್ನಡಕ್ಕೆ ಭಾಷಾಂತರಿಸಿ ನೋಡಿದ. ಅದು ಇಂಗ್ಲಿಷಿನ ಕವನಕ್ಕಿಂತ ಸತ್ವಪೂರ್ಣವಾಗಿ, ನಾದಮಯವಾಗಿ ಕಂಡಿತು. ಅಂದಿನಿಂದ ಇಂಗ್ಲಿಷಿನಲ್ಲಿ ಕಾವ್ಯರಚನೆ ಮಾಡುವುದನ್ನು ಬಿಟ್ಟು ಕನ್ನಡದಲ್ಲಿ ಬರೆಯಲಾರಂಭಿಸಿದ. ಕನ್ನಡದಲ್ಲಿ ಕವನ, ಕಥೆ, ನಾಟಕ, ಮಹಾ ಕಾದಂಬರಿ, ವಿಮರ್ಶೆ ಈ ಎಲ್ಲ ರಂಗಗಳಲ್ಲೂ ವಿಪುಲ ಬರವಣಿಗೆ ನಡೆಸಿದ. ಮಹಾಕಾವ್ಯ ರಚಿಸಿದ. ಒಟ್ಟು ಅರವತ್ತಕ್ಕೂ ಹೆಚ್ಚು ಕೃತಿಗಳನ್ನು ಸೃಷ್ಟಿಸಿದ. ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಮತ್ತು ಭಾರತೀಯ ಜ್ಞಾನಪೀಠಗಳ ಪ್ರಶಸ್ತಿ ಈತನಿಗೆ ದೊರೆತುವು.

ಮೊದಲು ಇಂಗ್ಲಿಷಿನಲ್ಲಿ ಕಾವ್ಯರಚನೆಯನ್ನಾರಂಭಿಸಿದರೂ ಕನ್ನಡ ಸರಸ್ವತಿಯ ಸೇವೆಗೆ ತನ್ನನ್ನು ಮುಡಿಪುಮಾಡಿ,

"ಕನ್ನಡ ಎನೆ ಕುಣಿದಾಡುವುದೆನ್ನೆದೆ,
ಕನ್ನಡ ಎನೆ ಕಿವಿ ನಿಮಿರುವುದು !
ಕಾಮನ ಬಿಲ್ಲನು ಕಾಣುವ ಕವಿಯೊಲು
ತಕ್ಕನೆ ಮನ ಮೈ ಮರೆಯುವುದು"

—ಎಂದು ಹಾಡಿದ ಈ ಕವಿಯೇ ಮಹಾಕವಿ ಕುವೆಂಪು.

ಕುವೆಂಪು ಅವರು ಕನ್ನಡದಲ್ಲಿ ಬರೆದ ಕವನಗಳ ಪ್ರಥಮ ಸಂಕಲನ 'ಕೊಳಲು'. ಮಲೆನಾಡಿನ ನಿಸರ್ಗದ ಚೆಲುವು, ಶಿಲ್ಪವೈಭವ, ಸುಗ್ಗಿಯ ಹಿಗ್ಗು ಮುಂತಾದ ವಿವಿಧ ವಿಷಯಗಳು ಈ ಕವನದ ವಸ್ತುಗಳು. 'ಪಾಂಚಜನ್ಯ', 'ನವಿಲು', 'ಕಲಾಸುಂದರಿ', 'ಪಕ್ಷಿಕಾಶಿ', 'ಪ್ರೇಮ ಕಾಶ್ಮೀರ' ಮುಂತಾದುವು ಇವರ ಇತರ ಕವನ ಸಂಕಲನಗಳು.

'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ ಕುವೆಂಪು ಅವರ ಮೇರುಕೃತಿ. ಇದರದು ಮಹಾಛಂದಸ್ಸು. ಕವಿಯ ಪರಿಣತಮತಿ, ಅನುಭವ, ಅಧ್ಯಾತ್ಮ ಜ್ಞಾನ, ಜೀವನದ ಆಳವಾದ ತಿಳಿವಳಿಕೆ ಇವುಗಳಿಗೆಲ್ಲ ಸಾಕ್ಷಿಯಾಗಿದೆ ಈ ಮಹಾಕೃತಿ. ಕವಿ ಕುವೆಂಪು ಕಲ್ಪಿಸಿದ ಮಹಾಛಂದಸ್ಸೂ ಮಹೋಪಮೆಗಳೂ ಈ ಕಾವ್ಯದಿಂದ ಕನ್ನಡಕ್ಕೆ ದೊರೆತಿರುವ ಅಮೂಲ್ಯ ಕಾಣಿಕೆ.

ಇವರ 'ಚಿತ್ರಾಂಗದಾ' ಒಂದು ಅಪೂರ್ವ ಖಂಡಕಾವ್ಯ. ಅರ್ಜುನನಿಗೆ ಹೃದಯಾರ್ಪಣೆ ಮಾಡಿದ್ದ ಚಿತ್ರಾಂಗದೆ ಕೊನೆಯಲ್ಲಿ ತನ್ನ ಮಗ ಬಭ್ರುವಾಹನ–ಅರ್ಜುನರ ನಡುವೆ ಯುದ್ಧವಾಗುತ್ತಿರುವಾಗ ಮಧ್ಯೆ ಪ್ರವೇಶಿಸಿ ಹತಳಾಗುವ ಕಥೆ ಇದರಲ್ಲಿ ಕಾವ್ಯಮಯವಾಗಿ ರೂಪಿತವಾಗಿದೆ.

ಸರಳ ರಗಳೆಯನ್ನು ನಾಟಕಗಳಲ್ಲಿ ಸಮರ್ಥವಾಗಿ ಬಳಸಿದ ಪ್ರಯೋಗಶೀಲ ಕವಿ —ಕುವೆಂಪು. 'ಜಲಗಾರ' ಈ ಪ್ರಯೋಗದ ಮೊದಲ ಕೃತಿ. ವಸ್ತು ಸಾಮಾಜಿಕ. ಉತ್ತಮ ವರ್ಣದವರು ತಮ್ಮ ದೇವಸ್ಥಾನದಿಂದ ದೂರವಿಟ್ಟರೂ 'ಜಗದ ಜಲಗಾರ' ಶಿವ ಸಾಮಾನ್ಯ ಜಲಗಾರನೊಬ್ಬನಿಗೆ ದರ್ಶನ ಕೊಟ್ಟ ಕಥೆ ಇದರಲ್ಲಿದೆ.



ಸಾಹಿತ್ಯಶ್ರೀ : ಕುವೆಂಪು

'ಯಮನ ಸೋಲು' ಕೇವಲ 10-11 ಘಂಟೆಗಳ ಅವಧಿಯಲ್ಲಿ ರಚಿತವಾದ ಸರಳ ರಗಳೆಯ ನಾಟಕ. ಸಾವಿತ್ರಿ-ಸತ್ಯವಾನರ ಕಥೆ ಇದರ ವಸ್ತು.

'ರಕ್ತಾಕ್ಷಿ' ಬಿದನೂರಿನ ಚರಿತ್ರೆಯ ಒಂದು ಘಟ್ಟವನ್ನು ಅವಲಂಬಿಸಿ ಬರೆದ ನಾಟಕ. ಈ ಕೃತಿಗಳ ರಚನೆಯಲ್ಲಿ ಕುವೆಂಪು ಅವರು ಬೇರೆ ಬೇರೆ ಕೃತಿಗಳಿಂದ ಪ್ರಭಾವಿತರಾಗಿದ್ದಾರಾದರೂ ಅವರ ಕಲ್ಪನೆ, ಪ್ರತಿಭೆ, ರಚನಾ ಕೌಶಲಗಳು ಇವುಗಳಲ್ಲಿ ಎದ್ದುಕಾಣುತ್ತವೆ. 'ಬೆರಳ್ಗೆ ಕೊರಳ್' ಮತ್ತು 'ಸ್ಮಶಾನ ಕುರುಕ್ಷೇತ್ರಂ' ಅವರ ಶ್ರೇಷ್ಠ ನಾಟಕಗಳು.

'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ' ಮಕ್ಕಳಲ್ಲಿ ಉತ್ಸಾಹ ಚಿಮ್ಮಿಸುವ ಕವನ. 'ನನ್ನ ಗೋಪಾಲ' ಮನಮುಟ್ಟುವಂಥ ನಾಟಕ. 'ಮರಿ ವಿಜ್ಞಾನಿ', 'ಮೋಡಣ್ಣನ ತಮ್ಮ' ಶಿಶು ಸಾಹಿತ್ಯ ರಂಗಕ್ಕೆ ಇವರು ಕೊಟ್ಟ ಉತ್ತಮ ಕೊಡುಗೆಗಳು.

'ಕೃತ್ತಿಕೆ' ಸಾನೆಟ್ಟು (ಸುನೀತ)ಗಳ ಸಂಗ್ರಹ. ಇದು ಮಲೆನಾಡಿನ ಚಿತ್ರಣ. 'ತಾನಾಜಿ' ಕಥನ ಕವನ, ಒಂದು ವೀರಗಾಥೆ.

'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಒಂದು ಬೃಹತ್‌ಕಾದಂಬರಿ. ಇದನ್ನೋದಿದಾಗ ಮಲೆನಾಡಿನ ಜನಜೀವನ ನಮ್ಮ ಕಣ್ಣಿಗೆ ಕಟ್ಟುತ್ತದೆ. 'ಮಲೆಗಳಲ್ಲಿ ಮದುಮಗಳು' ಅವರ ಇನ್ನೊಂದು ಬೃಹತ್ ಕಾದಂಬರಿ.

ಕುವೆಂಪು ಅವರು ಅನೇಕ ಸಣ್ಣ ಕತೆಗಳನ್ನು ಬರೆದಿದ್ದಾರೆ. ವಸ್ತು ವೈವಿಧ್ಯ, ಶೈಲಿ, ನಿರೂಪಣೆಗಳ ದೃಷ್ಟಿಯಿಂದಲೂ ಇವು ಗಮನಾರ್ಹವಾದುವು.

ಸತ್ವಪೂರ್ಣವಾದ ಗಂಭೀರಶೈಲಿಯಲ್ಲಿ ಮನೋಜ್ಞವಾಗಿ ರಚಿಸಿರುವ ಜೀವನ ಚರಿತ್ರೆಗಳು —'ಶ್ರೀ ರಾಮಕೃಷ್ಣ ಪರಮಹಂಸ' ಮತ್ತು 'ಸ್ವಾಮಿ ವಿವೇಕಾನಂದ'.

'ಕಾವ್ಯ ವಿಹಾರ' ಮೂರು ವಿಮರ್ಶೆಗಳನ್ನೊಳಗೊಂಡ ಪುಸ್ತಕ. ಲಕ್ಷ್ಮೀಶನ ಸೀತಾವನವಾಸ, ಹರಿಶ್ಚಂದ್ರ ಕಾವ್ಯ, ಗದುಗಿನ ಭಾರತ ಈ ಕೃತಿಗಳ ವಿಮರ್ಶೆ ಈ ಗ್ರಂಥದಲ್ಲಿದೆ. 'ತಪೋನಂದನ', 'ದ್ರೌಪದಿಯ ಶ್ರೀಮುಡಿ' ಮುಂತಾದ ಗ್ರಂಥಗಳಲ್ಲೂ ಅತ್ಯುತ್ತಮ ವಿಮರ್ಶೆಯನ್ನು ಕಾಣಬಹುದು.

ಭಾವಕ್ಕೆ ತಕ್ಕ ಪದ ಜೋಡಣೆ, ನಾದಮಾಧುರ್ಯ, ಕಲ್ಪನೆಗಳ ವಿಲಾಸ, ಸಂಸ್ಕೃತ ಪದಗಳ ಸುಂದರಬಳಕೆ, ಕುವೆಂಪು ಅವರ ಕಾವ್ಯದಲ್ಲಿ ಕಂಡುಬರುವ ವಿಶೇಷಾಂಶಗಳು.

ಕನ್ನಡ ಶಿಕ್ಷಣ ಮಾಧ್ಯಮವಾಗಬೇಕು, ಆಗಲೇ ಕನ್ನಡದ ಮಕ್ಕಳ ಶಿಕ್ಷಣ ಯಶಸ್ವಿಯಾಗುತ್ತದೆಂದು ಅವರ ಸ್ಪಷ್ಟ ಅಭಿಪ್ರಾಯ.

'ಕುವೆಂಪು' ಎಂಬುದು ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ ಎಂಬ ಮೂರು ಪದಗಳ ಮೊದಲ ಅಕ್ಷರಗಳ ಸಂಕಲನ ರೂಪ. ಕುವೆಂಪು ತೀರ್ಥಹಳ್ಳಿ ತಾಲೂಕಿನ ಕುಪ್ಪಳಿಯಲ್ಲಿ 1904ನೆಯ ಡಿಸೆಂಬರ್ 29ರಂದು ಜನಿಸಿದರು. ತಂದೆ ವೆಂಕಟಪ್ಪ, ತಾಯಿ ಸೀತಮ್ಮ. ತೀರ್ಥಹಳ್ಳಿ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ನಡೆಯಿತು. ಅಲ್ಲಿಂದ ಮೈಸೂರಿಗೆ ಬಂದು ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲೂ ಮಹಾರಾಜಾ ಕಾಲೇಜಿನಲ್ಲೂ ಅಭ್ಯಾಸಮಾಡಿ 1927ರಲ್ಲಿ ಬಿ.ಎ. ಪರೀಕ್ಷೆಯಲ್ಲೂ 1929ರಲ್ಲಿ ಕನ್ನಡ ಎಂ.ಎ. ಪರೀಕ್ಷೆಯಲ್ಲೂ ಉತ್ತೀರ್ಣರಾದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾದರು. ಕ್ರಮೇಣ ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ 1955ರಲ್ಲಿ ಮೈಸೂರು ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾದರು. ಮಾರನೆಯ ವರ್ಷ ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ (ಉಪಕುಲಪತಿ) ಆದರು.

ವಿದ್ಯಾರ್ಥಿ ದೆಸೆಯಲ್ಲಿಯೇ —1928ರಲ್ಲಿ— ಬೆಂಗಳೂರಿನಲ್ಲಿ ನಡೆದ ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷತೆಯ ಗೌರವ ಇವರಿಗೆ ಸಂದಿತು. 1933ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾದ ಕವಿಸಮ್ಮೇಳನದ ಅಧ್ಯಕ್ಷರಾದರು. 1957ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡರು.

ಇವರ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ 1955ರಲ್ಲಿ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿಯ ಮತ್ತು 1969ರಲ್ಲಿ ಭಾರತೀಯ ಜ್ಞಾನಪೀಠದ ಪುರಸ್ಕಾರಗಳು ದೊರೆತುವು.

1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ, 1966ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಮತ್ತು 1969ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟರೇಟ್ ಪುರಸ್ಕಾರ ನೀಡಿದುವು. 'ಪದ್ಮಭೂಷಣ' ಪುರಸ್ಕಾರವೂ ಕುವೆಂಪು ಅವರಿಗೆ ದೊರೆತಿದೆ.

'ಕುವೆಂಪು' ಅವರ ಸಾಹಿತ್ಯಸೃಷ್ಟಿ ವೈವಿಧ್ಯಮಯವಾದದ್ದು. ಹಾಗೇ ಅದು ವಿಪುಲವಾದದ್ದು ಕೂಡ. ಅವರ ಗಾತ್ರ ಗುಣಗಳೆರಡೂ ಗಣನೀಯ.

'ಕುವೆಂಪು' ಕನ್ನಡದ ಮಹೋನ್ನತ ಕವಿಗಳಲ್ಲೊಬ್ಬರು.

## ಕುಶಲ ಕಲೆ

ಕಲೆ. ಜೀವನದ ಎಲ್ಲ ರಂಗಗಳನ್ನೂ ಆವರಿಸಿದೆ. ಯಾವುದೇ ಕೆಲಸವನ್ನು ನಯವಾಗಿ, ಚೊಕ್ಕಟವಾಗಿ ಮಾಡಿದರೆ ಅದು ಕಲಾತ್ಮಕವಾಗುತ್ತದೆ. ಪುಸ್ತಕಗಳನ್ನು ಓರಣವಾಗಿಡುವುದು, ಅವುಗಳಿಗೆ ಆಕರ್ಷಕವಾಗಿ ಹೊದಿಕೆ ಹಾಕುವುದು ಕೂಡ ಒಂದು ಬಗೆಯ ಕಲೆಯೇ. ಹಾಗೆಯೇ ಅಂದವಾಗಿ ಹೆರಳು ಹಾಕುವುದು, ಹೂ ಕಟ್ಟುವುದು, ಹೂ ಮುಡಿಯು

[illegible] ಒಂದು ಬಗೆಯ ಸಂತೋಷವನ್ನು ಕೊಡುತ್ತವೆ.

ಸೌಂದರ್ಯದ ಉಪಾಸನೆಯಿಂದ ಕಲೆ ಮೂಡುತ್ತದೆ.

ಕಲೆಯಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳನ್ನು ಗುರುತಿಸಬಹುದು. ಕೆಲವು ಪ್ರಧಾನ ಕಲೆಗಳು. ಇನ್ನು ಕೆಲವು ಉಪ ಕಲೆಗಳು. ವಾಸ್ತುಶಿಲ್ಪ, ಮೂರ್ತಿಶಿಲ್ಪ, ಸಂಗೀತ, ಚಿತ್ರ, ಸಾಹಿತ್ಯಗಳು ಪ್ರಧಾನ ಕಲೆಗಳು. ಕುಂಭ ರಚನೆ, ಪೀಠೋಪಕರಣ, ಆಭರಣ, ಬಿದಿರು–ಬೆತ್ತದ ಸಾಮಾನು, ಕಸೂತಿ, ಮರ ಹಾಗೂ ಲೋಹದ ಸಾಮಾನು ಮುಂತಾದ ಬಳಕೆಯ ಹಾಗೂ ಅಲಂಕಾರಿಕ ವಸ್ತುಗಳನ್ನು ಕಲಾತ್ಮಕವಾಗಿ ರೂಪಿಸುವುದು ಉಪ ಕಲೆಗಳು. ಕೌಶಲ, ಕಲೆ ಎರಡೂ ಇರುವುದೇ ಕುಶಲ ಕಲೆ. ಕೆಲಸಗಾರನ ಸೌಂದರ್ಯದೃಷ್ಟಿ, ಕೈಚಳಕಗಳು ಕೂಡಿದಾಗ ಉಪಯುಕ್ತ ವಸ್ತುಗಳಿಗೂ ಕಲಾರೂಪ ಬರುತ್ತದೆ.

ಭಾರತದಲ್ಲಿ ಅನೇಕ ರೀತಿಯ ಕುಶಲ ಕಲಾ ವಸ್ತುಗಳು ಸಿದ್ಧವಾಗುತ್ತವೆ. ದಕ್ಷಿಣದಲ್ಲಿ ದಂತ(ಕೊಂಬು), ಕರಿಮರ ಹಾಗೂ ಗಂಧದ ಮರದ ಕೆತ್ತನೆ ಕೆಲಸ, ಮೆರುಗಿನ ಸಾಮಾನುಗಳು, ಚಿತ್ರಾಲಂಕೃತ ಹಿತ್ತಾಳೆಯ ಪದಾರ್ಥಗಳು, ಉಜ್ವಲ ವರ್ಣಗಳಲ್ಲಿ ನೆಯ್ದ ಬಟ್ಟೆಗಳು, ಬೊಂಬು ಬಿದಿರಿನ ಸಾಮಾನುಗಳು ಪ್ರಸಿದ್ಧ : ತಮಿಳುನಾಡಿನ 'ನಿರ್ಮಲ'—ಎಂದರೆ ಮನೋಹರವಾಗಿ ಬಣ್ಣಗಳಿಂದ ಚಿತ್ರಿಸಿ ಮೆರುಗುಕೊಟ್ಟ–ಮರದ ಸಾಮಾನು ; ಕರ್ನಾಟಕದ ಬಿದ್ರಿ – ಎಂದರೆ ಸತುವಿನ ಮೇಲೆ ಕರಿಯ ಬಣ್ಣದ ನಕಾಸೆಗಳಿರುವ– ವಸ್ತುಗಳು ; ಭಾರತದ ಪೂರ್ವ ಪ್ರದೇಶದ ಮಣ್ಣಿನ ಆಟದ ಸಾಮಾನುಗಳು, ಬೊಂಬೆಗಳು, ಪ್ರಾಣಿ ರೂಪಗಳು : ಬೆಳ್ಳಿಯ ಕುಸುರಿ ಕೆಲಸ : ಅತಿ ಮನೋಹರವಾದ ಆಭರಣ ಕೆಲಸ : ಆಕರ್ಷಕ ಬಣ್ಣಗಳ ವಿನ್ಯಾಸಗಳ ಸೀರೆಗಳು ಹಾಗೂ ಇತರ ಬಟ್ಟೆಗಳು : ಪಶ್ಚಿಮ ಭಾರತದ ಸಾಂಪ್ರದಾಯಿಕ ಬೊಂಬೆ ಸಾಮಾನುಗಳು : 'ಜರಿ' ಕೆಲಸ —ಇತ್ಯಾದಿ ಕುಶಲ ಕಲಾಕೃತಿಗಳು ಲೋಕಪ್ರಿಯ.

ಕಾಶ್ಮೀರೀ ಶಾಲುಗಳು, ರತ್ನಗಂಬಳಿ, ರಮ್ಯವಾದ ಕೆತ್ತನೆ ಕೆಲಸ ಮಾಡಿದ ಮರದ ಸಾಮಾನುಗಳೂ ಕುಶಲ ಕಲೆಗಳೇ. ಅಲ್ಲಿ ಒಂದು ಬೆರಳುಂಗುರದೊಳಗೆ ಹಾದು ಬರುವಷ್ಟು ನಾಜೂಕಿನ ಶಾಲುಗಳನ್ನು ಕೂಡ ತಯಾರಿಸುತ್ತಾರೆ. ಪೇಪರ್ ಮಾಷೆ (ರುಬ್ಬಿದ ಕಾಗದದಿಂದ ತಯಾರಿಸಿ ಬಣ್ಣಕೊಟ್ಟ) ಪದಾರ್ಥಗಳು, ಮರದಿಂದ ಕೊರೆದ ಸಾಮಾನುಗಳು, ಜೇಡ್ ಎಂಬ ಜಾತಿಯ ಪಚ್ಚೆಕಲ್ಲಿನ ಆಭರಣಗಳು, ಹಲವು ಬಗೆಯ ನೂಲಿನ ಹಾಗೂ ರೇಷ್ಮೆ ಬಟ್ಟೆಗಳು, ಮರ ಮತ್ತು ಜೇಡಿ ಮಣ್ಣಿನ ಆಟದ ಸಾಮಾನುಗಳು, ಮೊರಾದಾಬಾದಿನ ಖ್ಯಾತ ಲೋಹ ವಸ್ತುಗಳು ಹಾಗೂ ರಾಜಸ್ಥಾನದ ವಿಶಿಷ್ಟ 'ಕಟ್ಟು–ಬಣ್ಣ' ಪ್ರಯೋಗಕ್ಕೆ ಅಚ್ಚ ನಕಾಶೆಗಳಿಗೆ ಹೆಸರಾದ ಬಟ್ಟೆಗಳು —ಇವೆಲ್ಲ ಉತ್ತರ ಭಾರತದಲ್ಲಿ ತಯಾರಾಗುತ್ತವೆ.

ಈ ಎಲ್ಲ ಕುಶಲ ಕಲಾ ತಯಾರಿಕೆಗಳಿಗೂ ಆಯಾ ಪ್ರದೇಶದ ಸಾಂಪ್ರದಾಯಿಕ ಕಲೆಯ ಹಿನ್ನೆಲೆ ಇದೆ. ತಂತ್ರದ ದೃಷ್ಟಿಯಿಂದ ಇವುಗಳಲ್ಲಿ ಜಟಿಲ ವಿನ್ಯಾಸಗಳು ಇಲ್ಲದಿರಬಹುದು. ಒಟ್ಟಿನಲ್ಲಿ ಅವು ಸರಳಕೃತಿಗಳಾದರೂ ಅವುಗಳಲ್ಲಿ ಆಕರ್ಷಕ ಗುಣವಿದೆ : ಮಾನವನ ಪರಂಪರಾಗತ ಕಲಾ ಕೌಶಲದ ಹೊಳಹು ಕಾಣಿಸುತ್ತದೆ. ಹಾಗೆಯೇ ಪ್ರಾದೇಶಿಕವಾಗಿ ಬೆಳೆದುಬಂದ ಕಲಾ ಕುಶಲತೆಯ ಸ್ವರೂಪವನ್ನು ಆಯಾ ವಸ್ತುಗಳು ಎತ್ತಿ ತೋರಿಸುತ್ತವೆ. ಪ್ರತಿ ತಲೆಮಾರಿನಲ್ಲೂ ಸಂಭವಿಸಿದ ಕಲಾಕೌಶಲದ ಉನ್ನತಿ ಅವನತಿಗಳನ್ನು, ವಿವಿಧ ಕಾಲಗಳಲ್ಲಿ ರಚಿತವಾದ ಆಯಾ ಪ್ರದೇಶದ ಕುಶಲ ಕಲಾವಸ್ತುಗಳ ಅಧ್ಯಯನದಿಂದ ಅರಿತುಕೊಳ್ಳಬಹುದು.

ಕುಸುರಿ ಮಾಡಿದ ಚಿಕ್ಕ ಪುಟ್ಟ ಪೆಟ್ಟಿಗೆಗಳು : ಕೊರೆದ, ಕೆತ್ತನೆ ಕೆಲಸ ಮಾಡಿದ ಸುಂದರ ಮೂರ್ತಿಗಳು ; ಬಳೆ, ಕರ್ಣಾಭರಣ —ಹೀಗೆ ಅನೇಕ ಬಗೆಯ ಪದಾರ್ಥಗಳನ್ನು ದಂತದಿಂದ ಮಾಡುತ್ತಾರೆ. ಗಂಧದ ಮರವೂ ಹಲವು ಬಗೆಯ ಅಲಂಕಾರಿಕ ಹಾಗೂ ಉಪಯುಕ್ತ ಸಾಮಗ್ರಿಗಳ ತಯಾರಿಕೆಗೆ ಒದಗುತ್ತದೆ. ಅತ್ಯಂತ ಹೊಳಪಾಗಿ ನಯ ಬರುವಂತೆ ಒಪ್ಪಹಾಕಿದ ಇತರ ಮರಗಳ ಸಾಮಾನುಗಳು ಕೂಡ ಆಕರ್ಷಕವಾಗಿದ್ದು ಇತ್ತೀಚೆಗೆ ಜನಪ್ರಿಯವಾಗಿವೆ. ಬೆಳ್ಳಿ, ತಾಮ್ರ, ಹಿತ್ತಾಳೆ, ಕಂಚು ಮುಂತಾದ ಲೋಹ ಅಥವಾ ಲೋಹ ಮಿಶ್ರಣಗಳಿಂದ ತಯಾರಿಸಿದ ಅಲಂಕಾರಿಕ ಮತ್ತು ಉಪಯುಕ್ತ ವಸ್ತುಗಳ ವೈವಿಧ್ಯ ಆಶ್ಚರ್ಯಗೊಳಿಸುವಂಥದು ಗೋಡೆಯ ಮೇಲೆ ನೇತು ಹಾಕಬಹುದಾದ, ಮೇಜಿನ ಮೇಲೆ ಇಡಬಹುದಾದ ಅನೇಕ ಬಗೆಯ ಸುಂದರ ವಸ್ತುಗಳಿಗೂ ವಿಗ್ರಹಗಳಿಗೂ ಭಾರತ ಹೆಸರಾಗಿದೆ.

ಸೋವಿಯೆತ್ ರಷ್ಯದಲ್ಲಿ ರತ್ನಗಂಬಳಿ ನೆಯ್ಗೆ



ಬಟ್ಟೆಗಳ ಮೇಲೆ ಕೈ ಅಚ್ಚು ಚಿತ್ರಗಳನ್ನು ಹಾಕುವುದರಲ್ಲಿಯೂ ಆಯಾ ದೇಶಕ್ಕೆ ವಿಶಿಷ್ಟವಾದ ವಿನ್ಯಾಸಗಳಿವೆ. ಭಾರತದಲ್ಲಿಯೂ ಮನೋಹರ ಸಾಂಪ್ರದಾಯಿಕ ನಮೂನೆಗಳಿವೆ. ಚೆಲುವಾದ ಉಪಯುಕ್ತ ಕುಂಭ ಕಲಾ ವಸ್ತುಗಳು ಈಗ ಹೆಚ್ಚು ಹೆಚ್ಚಾಗಿ ತಯಾರಾಗುತ್ತಿವೆ. ಸಾಂಪ್ರದಾಯಿಕ ಆಕಾರ, ವಿನ್ಯಾಸಗಳಲ್ಲದೆ ಈಗ ಇನ್ನೂ ಹೆಚ್ಚಿನ ವೈವಿಧ್ಯವುಳ್ಳ ಕುಂಭ ಪದಾರ್ಥಗಳು ತಯಾರಾಗುತ್ತಿವೆ. ಬೊಂಬೆ ತಯಾರಿಯ ವಿಧಾನಗಳೂ ಹಲವು ಬಗೆ. ಈ ಕುಶಲ ವಸ್ತು ತಯಾರಿಕೆಯಲ್ಲಿ ಒಂದೊಂದು ಪ್ರದೇಶವೂ ತನ್ನದೇ ಆದ ವೈಶಿಷ್ಟ್ಯವನ್ನು ಬೆಳೆಸಿಕೊಂಡಿರುವುದನ್ನು ಕಾಣಬಹುದು. ಹಾಗೆಯೇ ಆಯಾ ಪ್ರದೇಶದಲ್ಲಿ ದೊರೆಯುವ ಮರ, ಮಣ್ಣು, ಚಿಪ್ಪು, ಶಂಖ ಮುಂತಾದ ವಸ್ತುಗಳನ್ನು ಚತುರತೆಯಿಂದ ಉಪಯೋಗಿಸಿಕೊಂಡಿರುವುದನ್ನೂ ಕಾಣಬಹುದು. ಕುಶಲ ಕಲಾವಸ್ತುಗಳ ಅಲಂಕರಣದಲ್ಲಿ ಹೂವು ಬಳ್ಳಿ ಮತ್ತು ಸರಳ ರೇಖಾ ವಿನ್ಯಾಸಗಳ ಚಿತ್ರಣ ಪ್ರಧಾನವಾಗಿದೆ. ಹಕ್ಕಿ, ಪ್ರಾಣಿಗಳ ಚಿತ್ರಣಕ್ಕೂ ಇದರಲ್ಲಿ ಸ್ಥಾನ ದೊರೆತಿದೆ.

ಕುಶಲಕೆಲಸಗಳಲ್ಲಿ ವಿನ್ಯಾಸಕ್ಕೆ ಪ್ರಾಮುಖ್ಯವಿದೆ. ಯಾವ ವಸ್ತುಗಳಲ್ಲಿ ಎಂಥ ವಿನ್ಯಾಸಗಳನ್ನು ಮೂಡಿಸುವುದು ಸೂಕ್ತ, ಯಾವ ರೀತಿ ಒಪ್ಪಕೊಟ್ಟರೆ ಹೆಚ್ಚು ಶೋಭಿಸೀತು, ಯಾವ ಯಾವ ಮೂಲ ವಸ್ತುಗಳನ್ನು ಉಪಯೋಗಿಸಿ ಎಂಥೆಂಥ ವಸ್ತುಗಳನ್ನು ತಯಾರಿಸಬಹುದು —ಇವೆಲ್ಲ ಈ ವಸ್ತುಗಳನ್ನು ನಿರ್ಮಿಸುವವರಿಗೆ ಚೆನ್ನಾಗಿ ತಿಳಿದಿರಬೇಕು.

ಕುಶಲ ಕಲೆ ಅನುಭವದಿಂದ ವಿಕಾಸಗೊಳ್ಳುತ್ತಲೇ ಇರುವ ಕಲೆ. ಕೇವಲ ಒಂದು ಕೊರಡಿನಂತೆ ಕಾಣುವ ಮರ, ಮುದ್ದೆಯಂತೆ ಕಾಣುವ ಜೇಡಿಮಣ್ಣು ಮುಂತಾದ ಪದಾರ್ಥಗಳಿಂದ ಕಣ್ಮನ ಸೆಳೆಯುವ ಸೊಬಗಿನ ಕುಶಲ ಕಲಾವಸ್ತುಗಳ ರಚನೆ ನಿಜಕ್ಕೂ ಆಯಾ ದೇಶದ ಹೆಮ್ಮೆಯ ಸೃಷ್ಟಿಗಳೇ ಸರಿ. ಸಾರಿಗೆ ಸಂಪರ್ಕಗಳು ವಿಪುಲವಾಗಿ ಬೆಳೆದಿರುವ ಈ ಕಾಲದಲ್ಲಿ



ಕುಂಭಕಲೆ —15ನೆಯ ಶತಮಾನದ ರಚನೆಯಿಂದ ಸ್ಫೂರ್ತಿ



ಕೈ ಕಸುಬಿನ ಸೊಗಸುಗಾರಿಕೆ

ರೆಡ್ ಇಂಡಿಯನ್ ಕುಶಲ ಕಲೆ



'ಇನ್‌ಲೇ' ಕೆಲಸ : ಮೀರ್ ಶೌಕತ್ ಅಲಿ



ಒಂದು ದೇಶದ ಕುಶಲ ಕಲಾವಸ್ತುಗಳ ರಚನೆ ಮತ್ತು ವಿಧಾನಗಳು ಇನ್ನೊಂದು ದೇಶದ ಇಂಥ ತಯಾರಿಕೆಗಳ ಮೇಲೆ ತನ್ನ ಪ್ರಭಾವ ಬೀರುತ್ತವೆ. ಇಷ್ಟು ಮಾತ್ರವಲ್ಲ ಸ್ವದೇಶದಲ್ಲೂ ಪರದೇಶಗಳಲ್ಲೂ ತಯಾರಾದ ಕುಶಲ ಕಲಾವಸ್ತುಗಳನ್ನು ಸಂಗ್ರಹಿಸುವುದು, ಅವನ್ನು ತಮ್ಮ ಮನೆ, ಕಾರ್ಯಾಲಯಗಳಲ್ಲಿ ಅಲಂಕರಣದ ವಸ್ತುಗಳಾಗಿ ಉಪಯೋಗಿಸುವುದು ರೂಢಿಗೆ ಬಂದಿದೆ. ಕೆಲವು ದಶಕಗಳ ಹಿಂದೆ ಪ್ರೋತ್ಸಾಹವೇ ಇಲ್ಲದೆ ನಶಿಸುತ್ತಿದ್ದ ಕುಶಲ ಕಲೆಗಳು ಇಂದು ಸಂಪರ್ಕಸಾಧನೆಯಿಂದಾಗಿ ಪುನರುಜ್ಜೀವನ ಹೊಂದಿ ವಿಕಾಸಗೊಳ್ಳುತ್ತಿವೆ.

ನೋಡಿ : ಕಸೂತಿ ಕಲೆ ; ಬೊಂಬೆ ; ಕುಶಲ ಕೈಗಾರಿಕೆ–ಸಂಪುಟ ೪

## ಕೆತ್ತನೆಯ ಕೆಲಸ

ಕೆತ್ತನೆಯ ಕೆಲಸ ಎಂಬ ಮಾತು ತುಂಬ ವಿಶಾಲ ಅರ್ಥವುಳ್ಳದ್ದು. ಮೂರ್ತಿಶಿಲ್ಪ, ಅಲಂಕಾರ ಶಿಲ್ಪ–ಕೆತ್ತನೆಯ ಕೆಲಸಗಳು. ಹಾಗೆಯೇ ಒಂದು ಚಿತ್ರದ ನಕಾಸೆಯ ಪ್ರತಿಕೃತಿಗಳನ್ನು ರಚಿಸುವ ಸಂದರ್ಭದಲ್ಲಿಯೂ ಕೆತ್ತನೆ ಕೆಲಸ ಬಳಕೆಯಲ್ಲಿದೆ.

ಶಿಲ್ಪರಚನೆಯನ್ನು ಬಿಟ್ಟು ಪ್ರತಿಕೃತಿ ರಚನೆಗೆ ಸಂಬಂಧಿಸಿದಂತೆ ಹಲವಾರು ವಿಧಾನಗಳನ್ನು ಅನುಸರಿಸಿ ಕೆತ್ತನೆಯ ಕೆಲಸ ನಡೆಯುತ್ತದೆ.

ಪೆಟ್ಟಿಗೆಗಳ ಮೇಲೆ, ಬಾಗಿಲ ಚೌಕಟ್ಟು, ಕದಗಳ ಮೇಲೆ ನಾವು ಸುಂದರ ಚಿತ್ರಗಳನ್ನು ನೋಡುತ್ತೇವೆ. ಇವು ಕೆತ್ತನೆ ಕೆಲಸ ; ಉಬ್ಬುಚಿತ್ರ ವರ್ಗಕ್ಕೆ ಸೇರಿದುವು. ಮಟ್ಟಸವಾದ ಮೇಲ್ಮೈ ಉಳ್ಳ ಮರದ ತುಂಡಿನ ಅಥವಾ ಹಲಗೆಯ ಮೇಲೆ ಈ ಚಿತ್ರಗಳನ್ನು ಕೆತ್ತುತ್ತಾರೆ. ಮೇಲ್ಮೈ ಮೇಲೆ ಮೊದಲು ರೇಖಾಚಿತ್ರವನ್ನು ಮೂಡಿಸಿ, ಮೇಲಕ್ಕೆದ್ದು ಕಾಣಬೇಕಾದ ಆಕಾರದ ಪ್ರದೇಶವನ್ನು ಬಿಟ್ಟು ಉಳಿದ ಭಾಗವನ್ನು ಚಾಕು, ಉಳಿಗಳಂಥ ಆಯುಧಗಳಿಂದ ಕೆತ್ತಿಹಾಕಿಬಿಡುತ್ತಾರೆ. ಅನಂತರ ಉಬ್ಬು ಭಾಗಗಳ ಮೇಲೆ ಒಳನಕಾಸೆ ಕೆಲಸಮಾಡಿ ತಮಗೆ ಬೇಕಾದ ಮೂರ್ತಿಯನ್ನೋ ಅಲಂಕಾರವನ್ನೋ ರಚಿಸುತ್ತಾರೆ. ಮರದಲ್ಲಿ ಮಾತ್ರವಲ್ಲದೆ ಕಲ್ಲು, ಲೋಹ ಮುಂತಾದುವುಗಳಲ್ಲೂ ಉಬ್ಬುಕೆತ್ತನೆಗಳನ್ನು ಮೂಡಿಸಬಹುದು. ಆದರೆ ಇವನ್ನು ರೂಪಿಸಲು ಉಪಯೋಗಿಸುವ ಉಪಕರಣಗಳು ಮರದ ಕೆಲಸದಲ್ಲಿ ಉಪಯೋಗಿಸುವ ಉಪಕರಣಗಳಿಗಿಂತ ಭಿನ್ನವಾದುವು.

ಪ್ರತಿಕೃತಿ ಕಾರ್ಯಕ್ಕೆ ಸಂಬಂಧಿಸಿದ ಕೆತ್ತನೆಯ ಕೆಲಸವನ್ನು ರಾಸಾಯನಿಕ ವಸ್ತುಗಳನ್ನು ಉಪಯೋಗಿಸಿ ಸಾಧಿಸುವುದೂ ಉಂಟು ; ಕೈಕೆಲಸದಿಂದಲೇ ರೂಪಿಸುವುದೂ ಉಂಟು. ಹೀಗೆ ಕೊರೆ ಮರ ಅಥವಾ ಲೋಹದ ಫಲಕಗಳನ್ನು ಉಪಯೋಗಿಸಿ ಆ ಕೆತ್ತನೆಯ ಪ್ರತಿಕೃತಿಗಳನ್ನು ಮುದ್ರಿಸಿಕೊಳ್ಳುತ್ತಾರೆ. ರಾಸಾಯನಿಕ ದ್ರವ್ಯವನ್ನು ಉಪಯೋಗಿಸಿ ನಡೆಸುವ ಕೆತ್ತನೆಯನ್ನು ಕೊರೆತ ಎನ್ನಬಹುದು. ತೆಳುವೂ ನಯವೂ ಆದ ಸಮತಟ್ಟು ಲೋಹದ ತಗಡನ್ನು, ಸಾಮಾನ್ಯವಾಗಿ ತಾಮ್ರದ ತಗಡನ್ನು, ಈ ಕೆಲಸಕ್ಕಾಗಿ ಉಪಯೋಗಿಸುತ್ತಾರೆ.

ಡಚ್ ಚಿತ್ರಕಾರ ರೆಂಬ್ರಾಂಟ್ (1606—69) ಚಿತ್ರಕಲೆಯಂತೆಯೇ ಕೆತ್ತನೆ ಕೆಲಸದಲ್ಲೂ ಪ್ರಸಿದ್ಧಿ ಪಡೆದಿದ್ದ.

ಗಟ್ಟಿಯಾದ ಸಮತಟ್ಟಾದ ಮೇಲ್ಮೈಮೇಲೆ ಚಿತ್ರವನ್ನು ಕೆತ್ತಿ, ಅದರಿಂದ ಪ್ರತಿಕೃತಿಗಳನ್ನು ತೆಗೆಯುವುದು ನಕಾಸೆ ಕೆತ್ತನೆ ವಿಧಾನ. ನಾವು ಎತ್ತಿ ತೋರಿಸಬೇಕಾದ ಚಿತ್ರ ಕಾಗದದ ಬಣ್ಣದಲ್ಲಿ ಮೂಡಬೇಕಾದಾಗ, ಚಿತ್ರದ ನಕಾಸೆಯ ಇಳಿಕೆತ್ತನೆ ಮಾಡಬೇಕಾಗುತ್ತದೆ. ಹೀಗೆ ಕೆತ್ತಿದ ಫಲಕಕ್ಕೆ ಮಸಿ ಹಚ್ಚಿದಾಗ ಇಳಿಕೆತ್ತನೆ ಮಾಡಿದ ಭಾಗಗಳಿಗೆ ಮಸಿ ಹತ್ತುವುದಿಲ್ಲ. ಆದ್ದರಿಂದ ಈ ಫಲಕದಿಂದ ಪ್ರತಿಗಳನ್ನು ಮುದ್ರಿಸಿದಾಗ ಹಿನ್ನೆಲೆ ಮಸಿಯ ಬಣ್ಣದಲ್ಲೂ ಚಿತ್ರಕಾಗದದ ಬಣ್ಣದಲ್ಲೂ ಮೂಡುತ್ತದೆ.



ಕಲೆಯ ಜೇನುಗೂಡು : ಕಣ್ಣುಗಳ ಮೂಲಕ ದುಂಬಿಗಳ ಹಾರಾಟ



ಆಧುನಿಕ ತಾಮ್ರ ಚಿತ್ತಾರ

ನ್ಯೂಜಿಲೆಂಡಿನ ಮಾವೋರಿ ಜನಾಂಗದ ಮರಕೆತ್ತನೆ



ನಂತರ ಕೆತ್ತನೆ ಕೆಲಸ



ಡ್ಯೂರೆರ್ ಕೆತ್ತನೆ ಕೃತಿ : ' ಮೂವರು ಪಯಣಿಗರು '



[illegible] ಸುಬ್ರಹ್ಮಣ್ಯ

ಇಳಿಕೆತ್ತನೆಯ ಬದಲು ಉಬ್ಬುಕೆತ್ತನೆ ಮಾಡಿದರೆ ವಿರುದ್ಧ ಪರಿಣಾಮ ಉಂಟಾಗುತ್ತದೆ. ಇಂಥ ಕೆತ್ತನೆಗಳನ್ನು ಮರ ಹಾಗೂ ಲೋಹದ ಫಲಕಗಳ ಮೇಲೆ ನಡೆಸುತ್ತಾರೆ.

ನೂರಾರು ಚೂಪು ತುದಿಗಳನ್ನುಳ್ಳ ಉಪಕರಣದಿಂದ ತಾಮ್ರ ಅಥವಾ ಉಕ್ಕಿನ ಫಲಕದ ಮೇಲೆ ತರತರಕಲಾದ ಮೇಲ್ಮೈ ಉಂಟುಮಾಡುತ್ತಾರೆ. ಹೀಗೆ ಆಗುವ ಹಳ್ಳ ಉಬ್ಬುಗಳ ಏರಿಳಿತಗಳಲ್ಲಿರುವ ವ್ಯತ್ಯಾಸದ ಚಿತ್ರದಲ್ಲಿ ಬೆಳಕು-ಛಾಯೆಗಳ ಪರಿಣಾಮ ಮೂಡುತ್ತದೆ.

ವೈಜ್ಞಾನಿಕ ಪ್ರಗತಿಯಿಂದಾಗಿ ಒಂದು ಚಿತ್ರದ ಪ್ರತಿ ತಯಾರಿಸಲು ಬೇಕಾದ ಪಡಿಯಚ್ಚುಗಳನ್ನು ಕ್ಯಾಮರಾ ಮತ್ತು ರಾಸಾಯನಿಕ ವಸ್ತುಗಳ ಸಹಾಯದಿಂದ ವೇಗವಾಗಿಯೂ ಸಮರ್ಪಕವಾಗಿಯೂ ಸಿದ್ಧಗೊಳಿಸ ಬಹುದು. ಕೊರೆತ ಅಥವಾ ಕೆತ್ತನೆ ವಿಧಾನದಿಂದ ಪಡಿಯಚ್ಚುಗಳನ್ನು ಕಲಾವಿದರು ರಚಿಸಬೇಕಾಗಿಲ್ಲ.

ಈಗ ಕೆತ್ತನೆ ಕೆಲಸ ಕೇವಲ ಕಲಾಕೃತಿಗಳ ನಿರ್ಮಾಣಕ್ಕೆ ಮಾತ್ರ ಮೀಸಲಾಗಿದೆ. ಮರ, ಲೋಹ, ದಂತ ಮುಂತಾದ ವಸ್ತುಗಳನ್ನು ಉಪಯೋಗಿಸಿ ಉತ್ತಮ ಕಲಾಕೃತಿಗಳು ನಿರ್ಮಿತವಾಗಿವೆ.

**ನೋಡಿ :** ಕುಶಲ ಕಲೆ ; ಕುಶಲ ಕೈಗಾರಿಕೆ-ಸಂಪುಟ ೪

## ಕೆರೂರ ವಾಸುದೇವಾಚಾರ್ಯ

ಕೆರೂರ ವಾಸುದೇವಾಚಾರ್ಯರ ಸಾಹಿತ್ಯಸೇವೆ ಬಹುಮುಖವಾದದ್ದು. ಅವರು ಕಾದಂಬರಿ, ನಾಟಕ, ಸಣ್ಣಕಥೆ, ಪ್ರಬಂಧ, ಕವಿತೆಗಳನ್ನು ಬರೆ



ಸಹಸ್ರಾರು ಪುಟಗಳ ಸಾಹಿತ್ಯ : ಕೆರೂರ

ದಿದ್ದಾರೆ. ಸಮಕಾಲೀನರ ಮೇಲೆ ಅವರ ನಾಟಕಗಳು ಎಷ್ಟು ಪ್ರಭಾವ ಬೀರಿದ್ದುವೆಂದರೆ ಆಚಾರ್ಯರು ಕಾಲವಾಗಿ ಆರು ವರ್ಷಗಳ ಬಳಿಕ ಬಾಗಲಕೋಟೆಯ ಉತ್ಸಾಹಿಗಳು ಕೆರೂರರ ನಾಟಕಗಳನ್ನು ಆಡಲೆಂದೇ 'ವಾಸುದೇವ ವಿನೋದಿನಿ ಸಭಾ' ಎಂಬ ನಾಟಕಸಂಸ್ಥೆಯನ್ನು ಕಟ್ಟಿದರು.

ವಾಸುದೇವಾಚಾರ್ಯರು ಹುಟ್ಟಿದ್ದು ಬಿಜಾಪುರ ಜಿಲ್ಲೆಯ ಬಾಗಲಕೋಟೆಯ ಸಮೀಪ ಊರೊಂದರಲ್ಲಿ. 1886ರ ಅಕ್ಟೋಬರ್ 15 ರಂದು. ಮನೆತನದ ಪದ್ಧತಿಯಂತೆ ಅವರು ಸಂಸ್ಕೃತ ಅಧ್ಯಯನ ಮಾಡಿದರು. ಜೊತೆಗೆ ಇಂಗ್ಲಿಷನ್ನೂ ಕಲಿತು 1899ರಲ್ಲಿ ವಕೀಲಿ ಪರೀಕ್ಷೆಯಲ್ಲಿ ಪಾಸಾಗಿ, ವಕೀಲರಾದರು. ಆ ಹೊತ್ತಿಗೆ ದೇಶದಲ್ಲಿ ನಡೆಯುತ್ತಿದ್ದ ರಾಜಕೀಯ ಚಳುವಳಿಗಳಿಂದ ಪ್ರಭಾವಿತರಾಗಿ, ಪತ್ರಿಕೋದ್ಯಮವನ್ನು ಕೈಗೊಳ್ಳುವ ನಿರ್ಧಾರಮಾಡಿದರು. 1915ರಲ್ಲಿ ಧಾರವಾಡಕ್ಕೆ ಬಂದು 'ಸಚಿತ್ರ ಭಾರತ' ಎಂಬ ಮಾಸಪತ್ರಿಕೆಯ ಸಂಪಾದಕವರ್ಗವನ್ನು ಸೇರಿದರು. ಮುಂದೆ 1917ರಲ್ಲಿ 'ಶುಭೋದಯ' ವಾರಪತ್ರಿಕೆಯನ್ನು ತಾವೇ ಸ್ವತಂತ್ರವಾಗಿ ಪ್ರಾರಂಭಿಸಿದರು. ಪುಸ್ತಕ ಪ್ರಕಟಣೆ ಆಗ ರೂಢಿಯಲ್ಲಿರಲಿಲ್ಲ. ಪತ್ರಿಕೆಯ ಮೂಲಕವೇ ಕೆರೂರರು ಉತ್ತಮ ಸಾಹಿತ್ಯವನ್ನು ಜನತೆಗೆ ನೀಡಿದರು.

ಆಚಾರ್ಯರು ಧಾರವಾಡಕ್ಕೆ ಬರುವುದಕ್ಕೆ ಮೊದಲೇ 'ನಲದಮಯಂತಿ' ಎಂಬ ಪೌರಾಣಿಕ ನಾಟಕವನ್ನೂ 'ಇಂದಿರಾ' ಎಂಬ ಕಾದಂಬರಿಯನ್ನೂ ಬರೆದಿದ್ದರು.

ಕನ್ನಡಿಗರಿಗೆ ಒಳ್ಳೆಯ ನಾಟಕಗಳ ಪರಿಚಯ ಮಾಡಿಕೊಡಲು ಆಚಾರ್ಯರು ಶೇಕ್ಸ್‌ಪಿಯರ್, ಗೋಲ್ಡ್‌ಸ್ಮಿತ್ ಮುಂತಾದವರ ಕೃತಿಗಳನ್ನು ಆರಿಸಿಕೊಂಡು ಕನ್ನಡಕ್ಕೆ ರೂಪಾಂತರಗೊಳಿಸಿದರು. 'ವಸಂತಯಾಮಿನೀ ಸ್ವಪ್ನ ಚಮತ್ಕಾರ' (ಮಿಡ್ ಸಮ್ಮರ್ ನೈಟ್ಸ್ ಡ್ರೀಮ್), 'ಸುರತನಗರದ ಶ್ರೇಷ್ಠಿ' (ಮರ್ಚೆಂಟ್ ಆಫ್ ವೆನಿಸ್), 'ರಮೇಶ—ಲಲಿತ' (ರೋಮಿಯೊ ಅಂಡ್ ಜೂಲಿಯೆಟ್), 'ಪತಿವಶೀಕರಣ' (ಷಿ ಸ್ಟೂಪ್ಸ್ ಟು ಕಾಂಕರ್) ಮುಂತಾದುವು ಈ ಪ್ರಯತ್ನದ ಫಲಗಳು. ಈ ಕೃತಿಗಳು ನಾಟಕ ಸಾಹಿತ್ಯದ ಬಗೆಗೆ ಕನ್ನಡಿಗರಲ್ಲಿ ಆಸಕ್ತಿಯನ್ನು ಮೂಡಿಸಿದುವು.

ಪ್ರತಿ ಶುಕ್ರವಾರ ಸಾಯಂಕಾಲ ಹೊರಬರುತ್ತಿದ್ದ 'ಶುಭೋದಯ' ಆಚಾರ್ಯರ ಕೃತಿಗಳ ಪ್ರಕಟನೆಯ ಮಾಧ್ಯಮ ಮಾತ್ರವೇ ಅಲ್ಲದೆ, ಅವರ ಪ್ರಗತಿಪರ ವಿಚಾರಗಳ ವಾಹಕವೂ ಆಗಿತ್ತು. ಅವರ ಈ ಲೇಖನಗಳು ಜನಜಾಗೃತಿಯನ್ನುಂಟುಮಾಡಲು ಸಹಾಯಕವಾದುವು. ಸಮಾಜದ ಒಳಿತು ಕೆಡುಕುಗಳ ವಿವೇಚನೆ, ರಾಜಕೀಯ ಪರಿಸ್ಥಿತಿಯ ಪರಿಶೀಲನೆ, ದೇಶಪ್ರೇಮದ ಬೆಳವಣಿಗೆ—ಇವುಗಳಿಗೆಲ್ಲ 'ಶುಭೋದಯ' ಸಮರ್ಥ ಸಾಧನವಾಗಿತ್ತು. ಧಾರ್ಮಿಕ ವಿಷಯಗಳಲ್ಲಿ ಉದಾರ ಮತವಾದಿಗಳ ದೃಷ್ಟಿ ಮತ್ತು ನಿರ್ದಾಕ್ಷಿಣ್ಯ ಶೈಲಿ ಈ ಪತ್ರಿಕೆಯ ವೈಶಿಷ್ಟ್ಯವಾಗಿತ್ತು. ಪಾಂಡಿತ್ಯಪೂರ್ಣ ಲೇಖನಗಳ ಜೊತೆಗೆ ಸಾಕಷ್ಟು ವಿನೋದವೂ ಇರುತ್ತಿದ್ದುದರಿಂದ ಓದುಗರು ಪ್ರತಿವಾರ 'ಶುಭೋದಯ' ಹೊರಬೀಳುವುದನ್ನೇ ಕಾಯುತ್ತಿದ್ದರು.

ಆ ಪತ್ರಿಕೆ ನಡೆದದ್ದು ಕೇವಲ ನಾಲ್ಕು ವರ್ಷ. ಈ ಅವಧಿಯಲ್ಲಿ ಅವರು ಸುಮಾರು 3000 ಪುಟಗಳ ಸಾಹಿತ್ಯ ಸೃಷ್ಟಿಸಿದರು.

1921 ಜನವರಿ 21ರಂದು ವಾಸುದೇವಾಚಾರ್ಯರು ತೀರಿಕೊಂಡರು. ಈ ಅಲ್ಪ ಕಾಲದಲ್ಲಿ ಅವರು ಕನ್ನಡ ಜನತೆಯ ಮೇಲೆ ಬೀರಿದ ಪ್ರಭಾವ ಅಪಾರ.

## ಕೈಲಾಸಂ

"ನೀವೇನು ಹೇಳಿದ್ರೂನೂವೆ......ಹೆತ್ತವರಿಗೆ ಹೆಗ್ಣ ಮುದ್ದು''

"ಹೌದು. ಆದ್ರೆ......ಆ ಹೆಗ್ಣಕ್ಕೆ ಹೆತ್ತವ್ರು ಮುದ್ದೇ ? ಅದನ್ ಯೋಚಿಸ್ದ್ರಾ ? ಆ ಹೆಗ್ಣ ನನ್ನ ಹೀಗೆ ಹೆತ್ಬಿಟ್ರಲ್ಲಾಂತ ಎಷ್ಟು ಬೈಬೇಕು !......''

—ಇದೊಂದು ತುಣುಕು.

"ನಮ್ತಾತ ಮುತ್ತಾತನ್ ಕಾಲದಿಂದ ನಮ್ಮನೆವ್ರೆಲ್ಲಾ ಕಸಗುಡ್ಸೀ. ಗುಡ್ಸಿ, ಗುಡ್ಸೀ ...... ಈಗ್ನಮ್ಮಟ್ಟೀಲಿ ಉಟ್ಟೋ ಐಕ್ಳೆಲ್ಲಾ ಸೊಂಟ ಮುರ್ಕೊಂಡೇ ಉಟ್ತಾರೆ.''

—ಇನ್ನೊಂದು ತುಣುಕು.

ಈ ಎರಡೂ ಕೈಲಾಸಂ ಅವರ 'ಬಂಡ್ವಾಳ್‌ವಿಲ್ಲದ ಬಡಾಯಿ' ನಾಟಕದಲ್ಲಿ ಬರುವ ಹಾಸ್ಯದ ಬಾಣಗಳು.

'ಕನ್ನಡಕೊಬ್ಬನೇ ಕೈಲಾಸಂ' ಎಂಬ ಪ್ರಶಂಸೆ ಹುಟ್ಟಿಕೊಂಡದ್ದು ಅವರ ಇಂಥ ಮಾತುಗಾರಿಕೆಯಿಂದ. ಕನ್ನಡ ನಾಟಕ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಆರಂಭಿಸಿದವರು ತ್ಯಾಗರಾಜ ಪರಮಶಿವ ಕೈಲಾಸಂ. ಪ್ರೇಕ್ಷಕರ ಗಮನವನ್ನು ಹಿಡಿದು ನಿಲ್ಲಿಸಿ ಅವರ ಹೃದಯವನ್ನು ಮುಟ್ಟುವ ಮಾತುಗಾರಿಕೆ, ಕೈಲಾಸಂ ಅವರ ನಾಟಕಗಳ ವಿಶಿಷ್ಟ ಗುಣ. ಈ ಪರಿಣಾಮವನ್ನು ಸಾಧಿಸಲು ಅವರು ಉಪಯೋಗಿಸುತ್ತಿದ್ದ ಪ್ರಧಾನ ಉಪಕರಣ–ಹಾಸ್ಯ. ಅದು ತಿಳಿಹಾಸ್ಯವಾಗಿರುತ್ತಿತ್ತು ; ತೀವ್ರ ವಿಡಂಬನೆಯಾಗಿರುತ್ತಿತ್ತು. ನಗೆಯಮುಸುಕು ಹೊದೆದ ನೋವಾಗಿಯೂ ಇರುತ್ತಿತ್ತು.

ತ್ಯಾಗರಾಜ ಪರಮಶಿವ ಕೈಲಾಸಂ ಅವರು 1884ರ ಆಗಸ್ಟ್‌ನಲ್ಲಿ ಹುಟ್ಟಿದರು. ತಾಯ್ನುಡಿ ತಮಿಳು, ಹೆಸರಾಂತ ನ್ಯಾಯಾಧೀಶ ಪರಮಶಿವಯ್ಯರ್ ಇವರ ತಂದೆ. ಅನುಕೂಲಸ್ಥ ಮನೆತನ. ತತ್ತ್ವಶಾಸ್ತ್ರ, ಸಾಹಿತ್ಯ, ಪುರಾಣ, ರಾಜಕಾರಣಗಳನ್ನು ಚೆನ್ನಾಗಿ ಅಧ್ಯಯನ ಮಾಡಿದವರು. ದೊಡ್ಡಪ್ಪ ಸದಾಶಿವ ಅಯ್ಯರ್ ಅವರೂ ದೊಡ್ಡ ವಿದ್ವಾಂಸರು.

ಕೈಲಾಸಂ ಭೂವಿಜ್ಞಾನದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋದವರು ಸಂಬಂಧಪಟ್ಟ ಪರೀಕ್ಷೆಗಳಲ್ಲಿ ಏಳು ಪ್ರಥಮ ಶ್ರೇಣಿಗಳನ್ನು ಗಳಿಸಿದರು. ತಾವು ಇಂಗ್ಲೆಂಡಿನಲ್ಲಿದ್ದ ಏಳು ವರ್ಷಕಾಲ ಅನೇಕ ನಾಟಕ

ಗಳನ್ನು ಓದಿದರು, ನೋಡಿದರು. ಅವುಗಳಿಂದ ಪ್ರಭಾವಿತರಾದರು. ಹಿಂದಿರುಗಿ ಬಂದಮೇಲೆ ಮೈಸೂರು ಸರಕಾರದಲ್ಲಿ ಸ್ವಲ್ಪಕಾಲ ಭೂವಿಜ್ಞಾನಿಯಾಗಿ ಕೆಲಸಮಾಡಿ, ಆ ಉದ್ಯೋಗವನ್ನು ಬಿಟ್ಟರು. ತಮ್ಮನ್ನು ಪ್ರಬಲವಾಗಿ ಆಕರ್ಷಿಸಿದ್ದ ನಾಟಕ ಸೃಷ್ಟಿ, ಅಭಿನಯ, ಪ್ರಯೋಗಗಳ ಕಡೆಗೆ ತಿರುಗಿದರು.

ಕೈಲಾಸಂ ಪರಿಣತಿ ಪಡೆದದ್ದು ಭೂವಿಜ್ಞಾನದಲ್ಲಿ. ಆದರೆ ಅವರ ಇಡೀ ಜೀವನ ಮೀಸಲಾದದ್ದು ನಾಟಕ ಸಾಹಿತ್ಯದ ಸೃಷ್ಟಿಗೆ. ಸಿರಿವಂತಿಕೆಯ ಮಡಿಲಲ್ಲಿ ಹುಟ್ಟಿದವರು ಆರಾಮವಾಗಿ ಜೀವನ ನಡೆಸಬಹುದಾಗಿತ್ತು. ಆದರೆ ಸ್ವಂತ ಅಪೇಕ್ಷೆಯಿಂದ ಅತಿ ಸರಳಜೀವನ ನಡೆಸಿದರು; ಶ್ರೀಮಂತಿಕೆಯಿಂದ ದೂರವಾಗಿ ಇದ್ದಷ್ಟರಲ್ಲಿ, ಸಿಕ್ಕಿದಷ್ಟರಲ್ಲಿ ತೃಪ್ತರಾಗುವ ಜೀವನ ದೃಷ್ಟಿಯನ್ನು ಬೆಳೆಸಿಕೊಂಡರು.

ನಮ್ಮ ನಾಟಕರಂಗದಲ್ಲಿ ಸಾಮಾಜಿಕ ನಾಟಕಗಳಿಗೆ ಒಂದು ಗೌರವದ ಸ್ಥಾನ ಗಳಿಸಿಕೊಟ್ಟವರು ಕೈಲಾಸಂ ಎಂಬುದರಲ್ಲಿ ಸಂದೇಹವಿಲ್ಲ. ಅವರು ತಮ್ಮನ್ನು 'ಕರ್ಣಾಟಕ ಪ್ರಹಸನ ಪ್ರಪಿತಾಮಹ' ಎಂದು ರಂಗದ ಮೇಲೆ ಕರೆದುಕೊಂಡರು. ಅವರ ನಾಟಕಗಳ ಹಾಸ್ಯ ಅಶ್ಲೀಲತೆಯಿಂದ ದೂರವಾದದ್ದು, ಗಂಭೀರರೂಪದ್ದು. ಸಮಾಜದ ಲೋಪದೋಷಗಳನ್ನು ಎತ್ತಿ ತೋರಿಸಿ, ಅವುಗಳ ಕಡೆಗೆ ಜನರ ಲಕ್ಷ್ಯವನ್ನು ಎಳೆಯುವುದೇ ಅವರ ಉದ್ದೇಶ ಎಂಬುದು ಅವರ ಎಲ್ಲ ನಾಟಕಗಳಲ್ಲೂ ಸ್ಪಷ್ಟವಾಗುತ್ತಿತ್ತು.

ಕೈಲಾಸಂ ಅವರ ಲೇಖನಿಯಿಂದ ಹೊರಬಿದ್ದ ಮೊದಲ ನಾಟಕ 'ಟೊಳ್ಳುಗಟ್ಟಿ'. ಅದಕ್ಕೆ ಮೈಸೂರು ಯುವರಾಜರು ನರಸಿಂಹರಾಜ ಒಡೆಯರವರ ಪಾರಿತೋಷಕ ದೊರೆಯಿತು. ಜೀವನದಲ್ಲಿ ಯಾವುದಕ್ಕೆ ನಿಜವಾದ ಮೌಲ್ಯವಿದೆ, ಯಾವುದಕ್ಕಿಲ್ಲ ಎಂಬುದನ್ನು ಈ ನಾಟಕ ಬಹು ರಮ್ಯವಾಗಿ, ಸೂಚ್ಯವಾಗಿ ನಿರೂಪಿಸುತ್ತದೆ.

ಕೈಲಾಸಂ ಅವರು ಕನ್ನಡದಲ್ಲಿ ಅನೇಕ ನಾಟಕಗಳನ್ನು ಬರೆದಿದ್ದಾರೆ. ಅವೆಲ್ಲ ಸಮಕಾಲೀನ ಸಮಾಜದ ವಿವಿಧ ಮುಖಗಳ, ಸಮಸ್ಯೆಗಳ ಪರಿಣಾಮಕಾರಿಯಾದ ಚಿತ್ರಣ. ಅವರ ನಾಟಕದ ವಸ್ತು ವೈವಿಧ್ಯ ವಿಸ್ತಾರವಾದದ್ದು. ಟೊಳ್ಳು ಬ್ರಾಹ್ಮಣಿಕೆಯಿಂದ ಸೂಳೆಗಾರಿಕೆಯವರೆಗೆ, ಸಂಸಾರದ ಸಮಸ್ಯೆಗಳಿಂದ ಹಿಡಿದು ಸಮಾಜದ್ರೋಹಿಗಳವರೆಗೆ ಹಬ್ಬಿದೆ ಅವರ ನಾಟಕಗಳ ವಸ್ತುಶ್ರೇಣಿ. ಪಾತ್ರಸೃಷ್ಟಿಯೂ ವೈವಿಧ್ಯಪೂರ್ಣ.

ಕೈಲಾಸಂ ತಮ್ಮ ನಾಟಕಗಳಲ್ಲಿ ಉಪಯೋಗಿಸಿರುವ ಭಾಷೆ ಅವರ ಕಾಲದ ವಿದ್ಯಾವಂತ ನಗರವಾಸಿಗಳ ಇಂಗ್ಲಿಷ್ ಕನ್ನಡ ಮಿಶ್ರಭಾಷೆ. ತಮ್ಮ ನಾಟಕಗಳಲ್ಲಿ ಬಲವಾದ ಸಮಕಾಲೀನ ವಾತಾವರಣವನ್ನು ಕಲ್ಪಿಸುವುದೇ ಅವರು ಈ ಮಿಶ್ರಭಾಷೆಯನ್ನು ಉಪಯೋಗಿಸಿದುದರ ಉದ್ದೇಶ. ಇದರಿಂದ ಇಂಗ್ಲಿಷ್ ಬಾರದ ಪ್ರೇಕ್ಷಕರಿಗೆ ಸ್ವಲ್ಪಮಟ್ಟಿಗೆ ತೊಡಕಾಗುತ್ತಿದ್ದಿತಾದರೂ, ಒಟ್ಟಿನಲ್ಲಿ ನಾಟಕದ ಸ್ವಾರಸ್ಯಗ್ರಹಣ ಅವರಿಗೂ ಸಾಧ್ಯವಾಗುತ್ತಿತ್ತು.

ಕೈಲಾಸಂ ಕನ್ನಡದಲ್ಲಲ್ಲದೆ ಇಂಗ್ಲಿಷಿನಲ್ಲೂ ನಾಟಕಗಳನ್ನು ಬರೆದಿದ್ದಾರೆ. ಇವೆಲ್ಲ ಪೌರಾಣಿಕ ವ್ಯಕ್ತಿಗಳಿಗೆ ಸಂಬಂಧಿಸಿದುವು; ಕರ್ಣ, ಏಕಲವ್ಯ, ಭರತ ಮುಂತಾದ ಮಹಾವ್ಯಕ್ತಿಗಳ ಪರಿಣಾಮಕಾರಿ ಚಿತ್ರಣವನ್ನು ಈ ನಾಟಕಗಳಲ್ಲಿ ಕಾಣಬಹುದು.

ಕೈಲಾಸಂ ಅವರು ಇಂಗ್ಲಿಷಿನಲ್ಲಿ ಕೆಲವು ಕವನಗಳನ್ನು ರಚಿಸಿದ್ದಾರೆ. ಗಾಂಧಿಜಿಯವರ ಅಪೂರ್ವ ವ್ಯಕ್ತಿತ್ವವನ್ನು ನಿರೂಪಿಸುವ ಅವರ ಒಂದು ಕವನವಂತೂ ಅತ್ಯಂತ ಮನೋಜ್ಞವಾಗಿದೆ.

ಕೈಲಾಸಂ ಉತ್ತಮ ನಟರೂ ಆಗಿದ್ದರು. ತಮ್ಮ ನಾಟಕಗಳಲ್ಲಿ ತಾವೇ ಅಭಿನಯಿಸುತ್ತಿದ್ದರು.



' ಕರ್ಣಾಟಕ ಪ್ರಹಸನ ಪ್ರಪಿತಾಮಹ ' : ಕೈಲಾಸಂ

ಪಾಶ್ಚಾತ್ಯ ನಾಟಕಕಾರರಿಂದ ಪ್ರಭಾವಿತರಾಗಿದ್ದ ಕೈಲಾಸಂ, ಕನ್ನಡ ನಾಟಕರಚನೆಯನ್ನು ಹೊಸದೊಂದು ಮಾರ್ಗಕ್ಕೆ ತಿರುಗಿಸಿದರು. ಆ ಮಾರ್ಗವನ್ನು ಅನುಸರಿಸಿ ಹಲವಾರು ಮಂದಿ ಈಗಲೂ ಸಾಮಾಜಿಕ ನಾಟಕಗಳನ್ನು ಬರೆಯುತ್ತಿದ್ದಾರೆ.

1945ರಲ್ಲಿ ಮದರಾಸಿನಲ್ಲಿ ಜರಗಿದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕೈಲಾಸಂ ಅಧ್ಯಕ್ಷರಾಗಿದ್ದರು. ಕನ್ನಡನಾಡು ನುಡಿಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳನ್ನು ಅವರು ಎಷ್ಟು ಚೆನ್ನಾಗಿ ಅರಿತಿದ್ದರು ಎನ್ನುವುದಕ್ಕೆ ಅವರು ಅಲ್ಲಿ ಮಾಡಿದ ಭಾಷಣ ನಿದರ್ಶನ.

ಮಾರನೆಯ ವರ್ಷವೇ, 1946ರ ನವೆಂಬರ್ 24ರಂದು, ಕೈಲಾಸಂ ತೀರಿಕೊಂಡರು. ಆಗ ಅವರಿಗೆ 62 ವರ್ಷ ವಯಸ್ಸಾಗಿತ್ತು.

ಸದಾ ಚಿಂತನಶೀಲರಾಗಿದ್ದು, ತಮ್ಮ ಮನಸ್ಸಿನಲ್ಲೇ ಹೊಸ ಹೊಸ ನಾಟಕಗಳನ್ನು ರೂಪಿಸಿಕೊಳ್ಳುತ್ತ, ಅವನ್ನು ಮನಸ್ಸಿನಲ್ಲೇ ವಿಮರ್ಶಿಸಿ ಪುನರೂಪಿಸುವುದು ಕೈಲಾಸಂ ಅವರ ಅಭ್ಯಾಸ. ಅವರ ಭಾವನಾಲೋಕದಲ್ಲಿ ರೂಪುಗೊಂಡಿದ್ದ ಹಲವು ನಾಟಕಗಳು ಲಿಪಿರೂಪಕ್ಕಿಳಿಯದೆಯೇ ಅವರ ಮರಣದೊಂದಿಗೇ ಅದೃಶ್ಯವಾಗಿದ್ದರೆ ಆಶ್ಚರ್ಯವಿಲ್ಲ. 'ಟೊಳ್ಳುಗಟ್ಟಿ'ಯ ಅನಂತರ ಕೈಲಾಸಂ ಸ್ವತಃ ಲೇಖನಿ ಹಿಡಿದು ನಾಟಕ ಬರೆಯಲೇ ಇಲ್ಲ; ಅವರು ಹೇಳಿದ್ದನ್ನು ಇತರರು ಬರೆದುಕೊಂಡುದರಿಂದ, ಅವು

[illegible] ಮೇಲೆ ಪ್ರಕಟಿತವಾದುವು; ಪುಸ್ತಕ ರೂಪವಲ್ಲಿ ಪ್ರಕಟವಾದುವು.

## ಕೋಲ್ರಿಜ್

ದಟ್ಟವಾದ ಜನಸಂದಣಿಯಿದ್ದ ಲಂಡನ್ ರಸ್ತೆಯೊಂದರಲ್ಲಿ ಹೋಗುತ್ತಿದ್ದ ಸಂಭಾವಿತನೊಬ್ಬ ಇದ್ದಕ್ಕಿದ್ದಂತೆ "ಏ! ಕಳ್ಳ ಕಳ್ಳ, ನಿಲ್ಲು" ಎಂದು ಕೂಗಿದ; ತನ್ನ ಪಕ್ಕದಲ್ಲೇ ಇದ್ದ ಬಡಕಲು ಹುಡುಗನನ್ನು ಹಿಡಿದುಕೊಂಡ. ಆ ಹುಡುಗ ಗಾಢವಾದ ಕನಸಿನಿಂದ ಥಟ್ಟನೆ ಎದ್ದವನಂತೆ ಆಡುತ್ತಾ, ಮುಂದೆ ಚಾಚಿದ್ದ ತನ್ನ ಕೈಗಳನ್ನು ಕೆಳಕ್ಕಿಳಿಸಿ, ದೈನ್ಯದಿಂದ "ಕ್ಷಮಿಸಿ ; ಹೆಲೆಸ್‌ಪಾಂಟ್ ಕೊಲ್ಲಿಯನ್ನು ಈಜುತ್ತಿರುವ ಲಿಯಾಂಡರನೇ ನಾನು ಎಂದುಕೊಂಡು ಹಾಗೆ ಕೈಆಡಿಸುತ್ತಿದ್ದೆ. ನಿಮ್ಮ ಜೇಬನ್ನು ಮುಟ್ಟುವ ಉದ್ದೇಶವೇ ನನಗಿರಲಿಲ್ಲ ಸರ್," ಎಂದ. (ಲಿಯಾಂಡರ್ ಗ್ರೀಸಿನ ಪೌರಾಣಿಕ ವ್ಯಕ್ತಿ!)

ಹೀಗೆ ನಡುಬೀದಿಯಲ್ಲಿದ್ದಾಗಲೂ ಹಗಲುಗನಸು ಕಾಣುತ್ತಿದ್ದ ಬಾಲಕ,—ಅನಂತರ ಸ್ಯಾಮುಯಲ್ ಟೇಯ್‌ಲರ್ ಕೋಲ್ರಿಜ್ ಎಂದು ಪ್ರಸಿದ್ಧನಾದ ಆಂಗ್ಲಕವಿ. ಅವನ ಕವಿತೆಗಳಲ್ಲೂ ಇದೇ ರೀತಿಯ ವಿಚಿತ್ರ ಕಲ್ಪನೆಗಳಿವೆ; ಭಾವನಾರಾಜ್ಯದಲ್ಲಿ ಅಲೆದಾಡುವ ವ್ಯಕ್ತಿಗಳು ಕಂಡುಬರುತ್ತಾರೆ. ಇವನು ರೊಮ್ಯಾಂಟಿಕ್ ಪಂಥದ ಪ್ರಮುಖ ಕವಿಗಳಲ್ಲಿ ಒಬ್ಬ.

ಕೋಲ್ರಿಜ್ ಡೆವನ್‌ಶೈರ್ ಜಿಲ್ಲೆಯಲ್ಲಿದ್ದ ಪಾದ್ರಿಯೊಬ್ಬನ ಹದಿನಾಲ್ಕು ಮಕ್ಕಳಲ್ಲಿ ಕೊನೆಯವನು; ಹುಟ್ಟಿದ್ದು 1772ರ ಅಕ್ಟೋಬರ್ 21ರಂದು. ಚಿಕ್ಕವನಿದ್ದಾಗಲೇ ಅವನಿಗೆ ಪುಸ್ತಕಗಳ ಹುಚ್ಚು. ಸುತ್ತುಮುತ್ತಲ ಹೊಲಗಳಲ್ಲಿ ತಿರುಗಾಡುತ್ತ ಹೊತ್ತು ಕಳೆಯುವುದು ಅವನ ಹವ್ಯಾಸ. ಮಹಾ ಅಗ್ನಿಸರ್ಪ ನಾಶಗೊಳಿಸುತ್ತಿರುವ ಸಂತ ಜಾರ್ಜನೇ ತಾನು ಎಂದುಕೊಂಡು, ಕತ್ತಿಯಿಂದ ಸಿಕ್ಕಸಿಕ್ಕ ಗಿಡ ಪೊದೆಗಳನ್ನು ಹೊಡೆದು ಕತ್ತರಿಸುತ್ತಿದ್ದ. ಇಂಗ್ಲೆಂಡಿನ ಪ್ರಸಿದ್ಧ ಶಾಲೆ ಕ್ರೈಸ್ಟ್ ಹಾಸ್ಪಿಟಲಿನಲ್ಲೂ, ಕೇಂಬ್ರಿಜ್ ವಿಶ್ವ ವಿದ್ಯಾಲಯದಲ್ಲೂ ವಿದ್ಯಾಭ್ಯಾಸ ಪಡೆಯುತ್ತಿದ್ದಾಗ ಕೋಲ್ರಿಜ್ ಜಾಣ ಅನಿಸಿಕೊಂಡಿದ್ದ. ಆದರೆ, ವಿಪರೀತ ಸಾಲಕ್ಕೆ ತುತ್ತಾಗಿ ಊರುಬಿಟ್ಟು ಓಡಿಹೋಗಿ ರಕ್ಷಣಾದಳ ಸೇರಿಕೊಂಡ. ಸಾಲಗಾರರು ತನ್ನನ್ನು ಪತ್ತೆ ಹಚ್ಚದಿರಲೆಂದು 'ತನ್ನ ಹೆಸರನ್ನು ಸಿಲಾಸ್ ಟಾಮ್‌ಕಿನ್ ಕಾಂಬರ್‌ಬಾಕ್' ಎಂದು ಬದಲಾಯಿಸಿಕೊಂಡ. ಇದರ ಮೊದಲಕ್ಷರಗಳು ಎಸ್.ಟಿ.ಸಿ. ಮಾತ್ರ ನಿಜ ಹೆಸರಿನ ಮೊದಲಕ್ಷರಗಳು ! ಕುಟುಂಬದವರು ಇವನನ್ನು ಕಂಡುಹಿಡಿದು ಸೇನಾಧಿಕಾರಿಗಳಿಗೆ ದಂಡದ ಹಣಕೊಟ್ಟು, ಬಿಡಿಸಿಕೊಂಡು ಬಂದು, ಮತ್ತೆ ಕಾಲೇಜಿಗೆ ಸೇರಿಸಿದರು. ಆದರೂ ಕೋಲ್ರಿಜ್ ಪದವಿ ಪಡೆಯದೆಯೇ ಕಾಲೇಜು ಬಿಟ್ಟ.



ಪದ್ಯ, ಗದ್ಯ : ಕೋಲ್ರಿಜ್

ಕೇಂಬ್ರಿಜ್‌ನಲ್ಲಿದ್ದಾಗ ಕೋಲ್ರಿಜನಿಗೂ ರಾಬರ್ಟ್ ಸೌದೀ ಎಂಬ ಕಿರಿಯ ಕವಿಗೂ ಸ್ನೇಹವಾಯಿತು. ಇಬ್ಬರೂ ಸ್ವಾತಂತ್ರ್ಯಪ್ರಿಯರು; ಈ ಭೂಮಿಯನ್ನು ಸ್ವರ್ಗಸದೃಶವನ್ನಾಗಿ ಮಾಡಬೇಕೆಂಬ ಹಂಬಲವಿದ್ದವರು. ಇಂಥದೇ ಧ್ಯೇಯದ ಹಲವು ಯುವಕರು ಇವರ ಜೊತೆ ಸೇರಿದರು. ಅಮೆರಿಕಕ್ಕೆ ಹೋಗಿ ಸಸ್‌ಕ್ವೆಹಾನಾ ನದಿಯ ಬದಿಯಲ್ಲಿ ಆದರ್ಶ ರಾಜ್ಯವೊಂದನ್ನು ಸ್ಥಾಪಿಸಲು ನಿರ್ಧರಿಸಿದರು. ಆದರೆ ಆಗ, ಅಮೆರಿಕಕ್ಕೆ ವಲಸೆ ಹೋಗುವವರು ಮದುವೆಯಾಗಿರಬೇಕೆಂಬ ನಿಯಮವಿತ್ತು. ಅವರ ಗುಂಪಿನಲ್ಲಿ ಲೊವೆಲ್ ಎಂಬವನೊಬ್ಬನಿಗೆ ಮಾತ್ರ ಮದುವೆಯಾಗಿತ್ತು. ಅವನ ಹೆಂಡತಿಗೆ ಮದುವೆಯ ವಯಸ್ಸಿನ ಸಹೋದರಿಯರಿದ್ದರು. ಒಬ್ಬಳನ್ನು ಕೋಲ್ರಿಜನೂ ಇನ್ನೊಬ್ಬಳನ್ನು ಸೌದೇಯೂ ವಿವಾಹವಾದರು ; ಆದರೆ ಹಣದ ಅಡಚಣೆಯಿಂದ ಅಮೆರಿಕಕ್ಕೆ ವಲಸೆಹೋಗುವ ಹಂಚಿಕೆ ಮುರಿದು ಬಿತ್ತು.

ಕಾಲೇಜು ಬಿಟ್ಟ ಮೇಲೆ ಕೋಲ್ರಿಜ್ ಕೆಲ ಕಾಲ ಪತ್ರಿಕೆಗಳಿಗೆ ಲೇಖನ ಬರೆಯುತ್ತಿದ್ದ. ಸ್ವಂತ ವೃತ್ತಪತ್ರಿಕೆಯನ್ನು ಹೊರಡಿಸಲೂ ಪ್ರಯತ್ನಿಸಿದ. ಇದರಿಂದಾಗಿ ಇದ್ದ ದುಡ್ಡೂ ಕರಗಿತು. ಆದರೆ ಕೋಲ್ರಿಜನಿಗೆ ಗೆಳೆಯರ ಬೆಂಬಲ ಸಾಕಷ್ಟಿತ್ತು. ಪ್ರಸಿದ್ಧ ಸಾಹಿತಿ ಚಾರ್ಲ್ಸ್ ಲ್ಯಾಮ್ ಇವನ ಪರಮ ಮಿತ್ರ. 1797ರಲ್ಲಿ ಕೋಲ್ರಿಜನಿಗೆ ವಿಲಿಯಂ ವರ್ಡ್ಸ್‌ವರ್ತ್ ಮತ್ತು ಅವನ ತಂಗಿ ಡೊರೊಥಿಯ ಪರಿಚಯವಾಯಿತು. ಪರಿಚಯ ಗೆಳೆತನವಾಗಿ ಹಲವಾರು ವರ್ಷ ಮುಂದುವರಿಯಿತು. ಇದು ಕೋಲ್ರಿಜನ ಜೀವನದಲ್ಲಿ ಅತಿಫಲಪ್ರದ ಕಾಲ. ವರ್ಡ್ಸ್‌ವರ್ತ್ ಮತ್ತು ಕೋಲ್ರಿಜ್ ಇಬ್ಬರೂ ಸೇರಿ 1798ರಲ್ಲಿ 'ಲಿರಿಕಲ್ ಬ್ಯಾಲಡ್ಸ್' ಎಂಬ ಗೀತಾಸಂಕಲನವನ್ನು ಪ್ರಕಟಿಸಿದರು. ಇದು ಇಂಗ್ಲಿಷ್ ಕಾವ್ಯದ ಚರಿತ್ರೆಯಲ್ಲಿ ಹೊಸ ಯುಗವನ್ನೇ ಆರಂಭಿಸಿತು.

ಓದುವವರಿಗೆ ನಂಬಿಕೆ ಬರುವಂತೆ ಬರೆಯುವುದು ಕೋಲ್ರಿಜನ ರೀತಿ. 'ಲಿರಿಕಲ್ ಬ್ಯಾಲಡ್ಸ್' ನಲ್ಲಿ ಹಳೆಯ ಜಾನಪದ ಗೀತೆಯೊಂದನ್ನು ಆಧರಿಸಿ ಬರೆದ 'ಪುರಾತನ ನಾವಿಕನ ಹಾಡು, ಎಂಬುದೊಂದಿತ್ತು. ಮದುವೆ ಊಟಕ್ಕೆ ಹೊರಟಿದ್ದ ನೆಂಟನೊಬ್ಬನನ್ನು ಹಿಡಿದು ಕೂಡಿಸಿ, ನಾವಿಕ ತನ್ನ ಕಥೆಯನ್ನು ಕೇಳುವಂತೆ ಒತ್ತಾಯಪಡಿಸುತ್ತಾನೆ. ಹಿಂದೆ ಆ ನಾವಿಕ ಸಮುದ್ರ ಮಧ್ಯದಲ್ಲಿ ಪ್ರಯಾಣಮಾಡುತ್ತಿದ್ದಾಗ ಅವನ ಗೆಳೆಯರು ಹತ್ತಿರದಲ್ಲೇ ಹಾರಾಡುತ್ತಿದ್ದ ಆಲ್‌ಬಾಟ್ರಾಸ್ ಹಕ್ಕಿಯನ್ನು ಹೊಡೆದು ಬೀಳಿಸುತ್ತಾರೆ. ಆಲ್‌ಬಾಟ್ರಾಸ್ ನಾವಿಕರಿಗೆ ಶುಭಶಕುನದ ಹಕ್ಕಿ. ಇದನ್ನು ಕೊಂದದ್ದರಿಂದ ಅವರಿಗೆ ಹೇಳಿ ಕೇಳದ ಕಷ್ಟಗಳು ಬಂದೊದಗುತ್ತವೆ:

ಸುತ್ತಲು ಎಲ್ಲೆಡೆ ನೀರೇ ನೀರು
ಹರಿಯಿತು ಹಡಗಿನ ಮೇಲೆಲ್ಲ
ಸುತ್ತಲು ಎಲ್ಲೆಡೆ ನೀರೇ ನೀರು
ಕುಡಿಯಲು ತೊಟ್ಟೂ ನೀರಿಲ್ಲ...

ಈ ಕಥನ ಕಾವ್ಯದಲ್ಲಿ ಮಾಂತ್ರಿಕ ಶಕ್ತಿಯಿದೆ. ಭಯಾನಕ ಅದ್ಭುತ ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟುವಂತೆ ಹೇಳುವ ಕುಶಲತೆ ಇದೆ.

'ಕುಬ್ಲಾಖಾನ್' ಎಂಬುದು ಇಂಥದೇ ಇನ್ನೊಂದು ಆಕರ್ಷಕ ಕವನ. ಒಂದುರಾತ್ರಿ ಮಂಗೋಲಿಯದ ಮಹಾಚಕ್ರವರ್ತಿಯ ವೈಭವದ ಬಗೆಗೆ ಓದುತ್ತ ಕೋಲ್ರಿಜ್ ನಿದ್ದೆಹೋದ. ಕನಸಿನಲ್ಲಿ ಒಂದು ಹಾಡು ಮೂಡಿ ಬಂತು. ಥಟ್ಟನೆ ಎದ್ದು ಕನಸಿನಲ್ಲಿ ತೋರಿದ ಹಾಡನ್ನು ಬರೆಯ ಲಾರಂಭಿಸಿದ. ಅರ್ಧ ಬರೆಯುವಷ್ಟರಲ್ಲಿ ಯಾರೋ ಬಾಗಿಲು ಬಡಿದಂತಾಯಿತು. ಬರೆವಣಿಗೆಯನ್ನು ಅಷ್ಟಕ್ಕೇ ನಿಲ್ಲಿಸಿ, ಕೋಲ್ರಿಜ್ ಹೊರಬಂದ. ಸ್ವಲ್ಪ ಹೊತ್ತಿನ ಅನಂತರ ಮತ್ತೆ ಹಾಡನ್ನು ಮುಂದುವರಿಸಬೇಕೆಂದರೆ ನೆನಪೇ ಬರಲಿಲ್ಲ. ಹೀಗೆ 'ಕುಬ್ಲಾಖಾನ್' ಅರ್ಧಕ್ಕೇ ನಿಂತು ಹೋಯಿತು.

'ಕ್ರಿಸ್ಟಾಬೆಲ್' ಇಂಥದೇ ಇನ್ನೊಂದು ಅಪೂರ್ಣ-ಸುಂದರ ಕವನ.

ಕೋಲ್ರಿಜ್ ಕವಿಯೆಂದು ಖ್ಯಾತನಾಗಿದ್ದರೂ ಅವನು ಬರೆದದ್ದು ಪದ್ಯಕ್ಕಿಂತ ಹೆಚ್ಚಾಗಿ ಗದ್ಯವನ್ನೇ. 'ಬಯಾಗ್ರಫಿಯ ಲಿಟರೇರಿಯ' ಮತ್ತು 'ಲೆಕ್ಚರ್ಸ್ ಆನ್ ಶೇಕ್ಸ್‌ಪಿಯರ್' ಅವನು ಶ್ರೇಷ್ಠ ವಿಮರ್ಶಕ ಎಂಬುದನ್ನು ತೋರಿಸಿಕೊಟ್ಟುವು.

ಕಿರಿಯ ವಯಸ್ಸಿನಿಂದಲೂ ಕಾಡುತ್ತಿದ್ದ ನರಗಳ ವ್ಯಾಧಿಯ ಬಾಧೆ ಯನ್ನು ತಪ್ಪಿಸಿಕೊಳ್ಳಲು ಕೋಲ್ರಿಜ್ ಅಫೀಮು ಸೇವನೆ ಆರಂಭಿಸಿದ. ಬರಬರುತ್ತ ಇದು ಚಟವಾಯಿತು. ಅವನ ರಚನಾಶಕ್ತಿ ಕುಂಠಿತವಾಯಿತು. ಅಫೀಮಿನ ದಾಸ್ಯದಿಂದ ಹೊರಬರಲಾರದೆ ಕೊನೆಗೆ ಲಂಡನಿನ ವೈದ್ಯ ನೊಬ್ಬನ ಆರೈಕೆಯಲ್ಲಿ ಇರಲಾರಂಭಿಸಿದ. 1834ರ ಜೂಲೈ 25ರಂದು ಕಾಲವಾಗುವ ತನಕವೂ ಆ ವೈದ್ಯನೊಡನೆಯೇ ಇದ್ದ.

## ಖಲೀಲ್ ಗಿಬ್ರಾನ್

ಗಿಬ್ರಾನ್ ಹುಟ್ಟಿದ್ದು ಲೆಬನಾನಿನಲ್ಲಿ, ಶ್ರೀಮಂತ ಸುಸಂಸ್ಕೃತ ಕುಟುಂಬದಲ್ಲಿ. ಕೆಲವು ಕಾಲ ಅಮೆರಿಕದಲ್ಲಿ, ಕೆಲವು ಕಾಲ ಲೆಬನಾನಿನಲ್ಲಿ ಅವನ ವಾಸ. ಅರಬಿ ಹಾಗೂ ಇಂಗ್ಲಿಷ್ ಭಾಷೆಗಳ ಮೇಲೆ ಅವನಿಗೆ ಒಳ್ಳೆಯ ಪ್ರಭುತ್ವವಿತ್ತು. ಎರಡೂ ಭಾಷೆಗಳಲ್ಲಿ ಸಾಹಿತ್ಯ ರಚನೆಮಾಡಿ ಜಗದ್ವಿಖ್ಯಾತನಾದ. ಹುಟ್ಟೂರಿನ ಮೇಲೆ ಅವನಿಗೆ ಅಪಾರ ಅಭಿಮಾನ. ತನ್ನ ಪುಸ್ತಕಗಳಿಂದ ಬರುವ ಗೌರವಧನವನ್ನು ತನ್ನ ಜನ್ಮಸ್ಥಳಕ್ಕೆ ಕೊಡಬೇಕೆಂಬುದು ಅವನ ಉಯಿಲು. ಖಲೀಲ್ ಗಿಬ್ರಾನ್ ತಾತ್ತ್ವಿಕ ಪ್ರಬಂಧಕಾರ, ಕಾದಂಬರಿಕಾರ, ಕವಿ ಹಾಗೂ ಕಲಾವಿದ. ಅವನ ಅರಬಿ ಮತ್ತು ಇಂಗ್ಲಿಷ್ ಕೃತಿಗಳು ಅವನಿಗೆ ಸ್ವದೇಶ, ವಿದೇಶಗಳಲ್ಲಿ ಗೌರವ ಮಾನ್ಯತೆಗಳನ್ನು ತಂದುಕೊಟ್ಟುವು.

ಖಲೀಲ್ ಗಿಬ್ರಾನ್ ಲೆಬನಾನಿನ ಬಶೇರಿಯಲ್ಲಿ 1883ನೆಯ ಜನವರಿ 6ರಂದು ಜನಿಸಿದ. ಪ್ರಾಥಮಿಕ ವಿದ್ಯಾಭ್ಯಾಸ ಬೈರೂತಿನಲ್ಲಾಯಿತು. ತಂದೆ-ತಾಯಿ ಮಗನೊಡನೆ 1895ರಲ್ಲಿ ಅಮೆರಿಕಕ್ಕೆ ವಲಸೆಹೋಗಿ ಮೆಸಾಚುಸೆಟ್ಸ್‌ನ ಬಾಸ್ಟನ್‌ನಲ್ಲಿ ನೆಲೆಸಿದರು. ಆದರೆ 1898ರಲ್ಲಿ ಮತ್ತೆ ಲೆಬನಾನಿಗೇ ಹಿಂದಿರುಗಿದರು. ಗಿಬ್ರಾನ್ ಇಲ್ಲಿನ ವಿದ್ಯಾಸಂಸ್ಥೆಯೊಂದಕ್ಕೆ ಸೇರಿ ಅರಬಿ ಭಾಷೆಯಲ್ಲಿ ಪಾರಂಗತನಾದ. ಚಿಕ್ಕ ವಯಸ್ಸಿನಲ್ಲೇ ಗಿಬ್ರಾನ್ ಲೇಖನ, ರೇಖಾಚಿತ್ರ, ಶಿಲ್ಪಗಳಲ್ಲಿ ತನಗಿದ್ದ ಜಾಣ್ಮೆಯನ್ನು ತೋರ್ಪಡಿಸಿದ. ಇಪ್ಪತ್ತು ವರ್ಷ ತುಂಬುವ ಮೊದಲೇ ಗಿಬ್ರಾನ್ ತನ್ನ ಅರಬಿ ಭಾಷೆಯ ನಾಟಕಗಳು, ಗದ್ಯರೂಪದ ಕವನಗಳಿಗಾಗಿ ನಿಕಟ ಪ್ರಾಚ್ಯ ಪ್ರದೇಶದಲ್ಲೆಲ್ಲ ಖ್ಯಾತನಾದ.



ಲೆಬನಾನ್ ಧ್ವನಿ : ಗಿಬ್ರಾನ್

1903ರಲ್ಲಿ ಗಿಬ್ರಾನ್ ಕುಟುಂಬದವರು ಪುನಃ ಬಾಸ್ಟನ್‌ಗೆ ತೆರಳಿದರು. ಗಿಬ್ರಾನ್ 'ದಿ ಎಮಿಗ್ರೆಂಟ್' ಪತ್ರಿಕೆಯಲ್ಲಿ ಸಾಹಿತ್ಯ ಪ್ರಬಂಧಗಳನ್ನು ಪ್ರಕಟಿಸತೊಡಗಿದ. ಕಲೆಯಲ್ಲಿ ಆಸಕ್ತಿ ಇದ್ದ ಗಿಬ್ರಾನ್ 1909ರಲ್ಲಿ ಪ್ಯಾರಿಸಿಗೆ ಹೋದ. ಪ್ಯಾರಿಸಿನಲ್ಲಿ ಆಗಸ್ಟ್ ರೊಡಿನ್ (ಫ್ರೆಂಚ್ ಶಿಲ್ಪಿ, 1840—1917) ಬಳಿ ಮೂರು ವರ್ಷಗಳ ಕಾಲ ಚಿತ್ರಕಲೆ ಹಾಗೂ ಶಿಲ್ಪಕಲೆಗಳನ್ನು ಅಭ್ಯಾಸಮಾಡಿದ. ಅನಂತರ ಅಮೆರಿಕಕ್ಕೆ ಹಿಂದಿರುಗಿ ನ್ಯೂಯಾರ್ಕ್ ನಗರದಲ್ಲಿ ನೆಲೆಸಿದ. ಇಂಗ್ಲಿಷಿನಲ್ಲಿ ಕಥೆ, ಪ್ರಬಂಧಗಳನ್ನು ಬರೆಯುವುದು, ಚಿತ್ರಗಳನ್ನು ರಚಿಸುವುದು ಇವನ ಕೆಲಸವಾಯಿತು. 1920ರಲ್ಲಿ 'ದಿ ಪೆನ್ ಲೀಗ್' ಸಂಘವನ್ನು ಕಟ್ಟಿದ. ಗಿಬ್ರಾನ್ ತನ್ನ 48ನೆಯ ವಯಸ್ಸಿನಲ್ಲಿ, 1931ನೆಯ ಏಪ್ರಿಲ್ 10ರಂದು, ನ್ಯೂಯಾರ್ಕಿನಲ್ಲಿ ನಿಧನನಾದ. ಅವನ ಅಪೇಕ್ಷೆಯಂತೆ ಅವನ ದೇಹವನ್ನು ಹುಟ್ಟೂರಾದ ಬಶೇರಿಗೆ ಕಳುಹಿಸಲಾಯಿತು.

ಬಶೇರಿಯಲ್ಲಿ ಗಿಬ್ರಾನನ ಹೆಸರಿನಲ್ಲಿ ಒಂದು ವಸ್ತು ಸಂಗ್ರಹಾಲಯವನ್ನು ಏರ್ಪಡಿಸಿದ್ದಾರೆ. ಗಿಬ್ರಾನನ ನೆನಪಿಗಾಗಿ ಪ್ರತಿ ವರ್ಷ ಅಲ್ಲಿ ಒಂದು ಉತ್ಸವ ನಡೆಸುತ್ತಾರೆ.

ಗಿಬ್ರಾನ್ ವಿಪುಲವಾಗಿ ಸಾಹಿತ್ಯರಚನೆ ಮಾಡಿದ. ಅದರಲ್ಲಿ ಗದ್ಯ ರೂಪದ ಕವನ 'ದಿ ಪ್ರಾಫೆಟ್' ಸುಪ್ರಸಿದ್ಧವಾದದ್ದು. ಮತ, ಪ್ರೇಮ, ಒಳಿತು-ಕೆಡುಕು, ಸಂತೋಷ-ದುಃಖ ಮುಂತಾಗಿ ದೈನಂದಿನ ಜೀವನ ದಲ್ಲಿ ಕಾಣುವ ವಿಷಯಗಳನ್ನೆತ್ತಿಕೊಂಡು ಬರೆದಿರುವ 28 ಗದ್ಯರೂಪದ ಕವನಗಳು ಈ ಪುಸ್ತಕದಲ್ಲಿವೆ. ಸ್ವತಃ ಗಿಬ್ರಾನನೇ ಈ ಪುಸ್ತಕಕ್ಕೆ ಚಿತ್ರಗಳನ್ನು ಬರೆದಿದ್ದಾನೆ. 1923ರಲ್ಲಿ ಪ್ರಕಟವಾದ ಈ ಕೃತಿ ಗಿಬ್ರಾನ್‌ಗೆ ಖ್ಯಾತಿ ತಂದಿತು. ಇದರ ಜನಪ್ರಿಯತೆ ಬೆಳೆಯುತ್ತಲೇ ಇದೆ. 1960ರ ದಶಕದ ವೇಳೆಗೆ ಈ ಗ್ರಂಥದ 20 ಲಕ್ಷಕ್ಕಿಂತ ಹೆಚ್ಚು ಪ್ರತಿಗಳು ಅಚ್ಚಾದುವು.

ಈತನು ಅರಬಿ ಭಾಷೆಯಲ್ಲಿ ಬರೆದ 'ಹುಲ್ಲುಗಾವಲ ಮದುಮಗಳು', 'ಕಂಬನಿ ಮತ್ತು ಮಂದಹಾಸ', 'ಚಂಡಮಾರುತ' ಮುಖ್ಯವಾದ ಕೃತಿಗಳು. ಗಿಬ್ರಾನ್ ಅರಬಿ ಭಾಷೆಯ ಪುಸ್ತಕಗಳಲ್ಲಿ ಕೆಲವನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾನೆ. ಅವನ ಇಂಗ್ಲಿಷ್ ಭಾಷಾ ಕೃತಿಗಳಲ್ಲಿ 'ದಿ ಮ್ಯಾಡ್ ಮನ್', 'ದಿ ಫೋರ್‌ರನರ್', 'ಸ್ಯಾಂಡ್ ಅಂಡ್ ಫೋಮ್', 'ಜೀಸಸ್ ದಿ ಸನ್ ಆಫ್ ಮ್ಯಾನ್' ಹೆಸರಿಸುವಂಥವು.

ಗಿಬ್ರಾನ್ ತನ್ನ ಸಣ್ಣ ಕಥೆಗಳಲ್ಲಿ ಲೆಬನಾನಿನ ಜನಜೀವನದ ಅನೇಕ ಮುಖಗಳನ್ನು ಚಿತ್ರಿಸಿದ್ದಾನೆ. ಇವನ ಕಥೆಗಳನ್ನು ಸಾಮಾನ್ಯವಾಗಿ ದುಃಖ ಆವರಿಸಿರುತ್ತದೆ. ತನ್ನ ದೇಶದ ಜನತೆಯಲ್ಲಿ ಕಂಡುಬರುತ್ತಿದ್ದ

[illegible] ಹಾಗೂ ಸಾಮಾಜಿಕ ದುರಂತಗಳನ್ನು ಅವನು ತೀಕ್ಷ್ಣವಾಗಿ ವಿಮರ್ಶಿಸಿದ್ದಾನೆ.

ಅರಬಿ ಸಾಹಿತ್ಯದ ಸ್ವರ್ಣಯುಗದಲ್ಲಿದ್ದ ಖ್ಯಾತ ಬರಹಗಾರರ ವ್ಯಕ್ತಿ ಚಿತ್ರಗಳನ್ನು ತನ್ನ ಕಲ್ಪನಾಶಕ್ತಿಯಿಂದ ಬರೆದಿದ್ದಾನೆ. ಅವು ಮನ ಸೆಳೆಯುವಂತಿವೆ.

## ಖಳನಾಯಕ

'ಒಥೆಲ್ಲೋ' ನಾಟಕ ನಡೆಯುತ್ತಿತ್ತು. ಒಥೆಲ್ಲೋಗೆ ಕೆಡಕುಂಟಾಗುವಂಥ ಯಾವುದೋ ಕೆಲಸವನ್ನು ಇಯಾಗೋ ಮಾಡಿದ. ನಾಟಕ ನೋಡು ತ್ತಿದ್ದ ಮುದುಕಿಯೊಬ್ಬಳು ಎದ್ದು, ಇಯಾಗೋವನ್ನು ವಾಚಾಮ ಗೋಚರವಾಗಿ ಬಯ್ಯುತ್ತ ಅವನೆಡೆಗೆ ತನ್ನ ಚಪ್ಪಲಿ ಎಸೆದಳು.

ಇಯಾಗೋ 'ಒಥೆಲ್ಲೋ' ನಾಟಕದ ಖಳನಾಯಕ. ಆ ಖಳನಾಯಕನ ಅಭಿನಯ ಅತ್ಯುತ್ತಮವಾಗಿತ್ತು ಎನ್ನುವುದಕ್ಕೆ ಸಾಕ್ಷ್ಯ—ಚಪ್ಪಲಿ ಕಾಣಿಕೆ!

"ಓ ಖಳನಾಯಕ ಖಳನಾಯಕ, ನಸುನಗುವ ಅನಿಷ್ಟ ಖಳನಾಯಕ" ಎಂದು ಶೇಕ್ಸ್‌ಪಿಯರ್ ಹ್ಯಾಮ್ಲೆಟ್ ನಾಟಕದಲ್ಲಿ ಉದ್ಗರಿಸಿ ದ್ದಾನೆ. ಒಳ್ಳೆ ಕೆಲಸಗಳಿಗೆ ಅಡ್ಡಬಂದು ಇಡೀ ಕಥೆಯ ಅಥವಾ ನಾಟಕದ ಸಹಜಗತಿಯನ್ನು ವಕ್ರ ಮಾರ್ಗಕ್ಕೆ ತಿರುಗಿಸುವವನೇ ಖಳ ನಾಯಕ. ಆದರ್ಶಗಳ ಮೂರ್ತರೂಪವಾದ ನಾಯಕನಿಗೆ ಶತ್ರುವಾಗಿ ಬರುವ ದುಷ್ಟ ಪ್ರವೃತ್ತಿಯ ವ್ಯಕ್ತಿಯೇ ಖಳನಾಯಕ.

ರಾವಣ, ದುರ್ಯೋಧನ, ಶಕಾರ, ಇಯಾಗೋ, ಶೈಲಾಕ್ —ಇವರೆಲ್ಲ ಪ್ರಸಿದ್ಧ ಖಳನಾಯಕರು. ಕೇವಲ ನಾಟಕದಲ್ಲಿ ಮಾತ್ರವಲ್ಲ; ಮಹಾ ಕಾವ್ಯದಲ್ಲೂ ಖಳನಾಯಕ ಇರಬಹುದೆಂಬುದಕ್ಕೆ, ರಾವಣ, ದುರ್ಯೋ ಧನರೇ ಸಾಕ್ಷಿ. ನಾಟಕಗಳಲ್ಲಿ ನಾಟಕಕ್ರಿಯೆ ಖಳನಾಯಕರಿಂದ ತೀವ್ರ ಗೊಳ್ಳುತ್ತದೆ, ಜನರಲ್ಲಿ ಕುತೂಹಲವನ್ನು ಚುರುಕುಗೊಳಿಸುತ್ತದೆ. ಹೀಗಾಗಿ, ನಾಟಕಗಳಲ್ಲಿ ಖಳನಾಯಕನಿಗೆ ಗಣ್ಯಸ್ಥಾನ.

ಸಂಸ್ಕೃತ ನಾಟಕಗಳಲ್ಲಿ ಖಳನಾಯಕನಿಗೆ ಪ್ರತಿನಾಯಕ, ನಾಯಕ ಶತ್ರು ಎಂದು ಕರೆದಿದ್ದಾರೆ. ರಾಮಾಯಣ, ಮಹಾಭಾರತದಂಥ ಮಹಾ ಕಾವ್ಯಗಳ ಖಳನಾಯಕರು ವಿದ್ವಾಂಸರು, ವೀರರು, ಶಕ್ತಿಶಾಲಿಗಳು. ದುರ್ಯೋಧನನು ಖಳನಾಯಕನಾಗಲು ಕಾರಣ ಅವನಲ್ಲಿದ್ದ ವಿಪರೀತ ದುರಭಿಮಾನ; ಹಠ. ಹೀಗೆ ಹಿಂದಿನ ಕೃತಿಗಳಲ್ಲಿ ಖಳನಾಯಕನ ಪಾತ್ರ ಸತ್ವ ದೋಷಗಳೆರಡರಿಂದಲೂ ಕೂಡಿದ್ದು, ಆಕರ್ಷಕವಾಗಿ ರೂಪು ಗೊಂಡುವು ಎನ್ನಬಹುದು. ಮಾನವನಲ್ಲಿರುವ ಸುಗುಣಗಳ ಮೂರ್ತರೂಪ ನಾಯಕನದಾದರೆ, ದುರ್ಗುಣಗಳ ಮೂರ್ತರೂಪ ಖಳನಾಯಕನದು.

ಹಿಂದೆ ಇಂಗ್ಲಿಷ್ ನಾಟಕಗಳ ಆರಂಭ ಕಾಲದಲ್ಲಿ, ಖಳನಾಯಕ ಮಾನ ವನ ಒಂದು ಕೆಟ್ಟ ಗುಣವನ್ನು ಮಾತ್ರ ಪ್ರತಿನಿಧಿಸುತ್ತಿದ್ದ. ನಾಯಕ ತನ್ನ ಉದಾತ್ತಧ್ಯೇಯಕ್ಕಾಗಿ ಹೋರಾಡುವಾಗ ಅವನ ಸತ್ವಪರೀಕ್ಷೆ ಮಾಡುವಂಥ ಅಡಚಣೆಗಳನ್ನೊಡ್ಡುವವನು ಖಳನಾಯಕ. ಕ್ರಮೇಣ ಖಳನಾಯಕ ಈ ಸಾಂಕೇತಿಕ ಅರ್ಥ ಕಳೆದುಕೊಂಡು ಕೇವಲ ಕಥೆಯ ಕೀಲನ್ನು ತಿರುಗಿಸುವ ವ್ಯಕ್ತಿಯಾದ.

ಭಾರತೀಯ ಚಲಚ್ಚಿತ್ರಗಳಲ್ಲಿ ನಾಯಕ–ನಾಯಕಿಯರ ನಡುವೆ ಖಳ ನಾಯಕನ ಉಪದ್ರವ; ನಾಯಕ ಅವನನ್ನು ಕೊಂದು ನಾಯಕಿಯನ್ನು ಕೂಡುವುದು—ಇದು ಅತ್ಯಂತ ಜನಪ್ರಿಯ ಕಥಾಸೂತ್ರವಾಗಿಬಿಟ್ಟಿದೆ. ಕೆಲ ಮಂದಿ ನಟರಂತೂ ತಮ್ಮ ಜನಪ್ರಿಯ ಖಳನಾಯಕತ್ವಕ್ಕೆ ಪ್ರಸಿದ್ಧರಾಗಿದ್ದಾರೆ.

ಖಳನಾಯಕನ ಕಲ್ಪನೆ ಮಾನವನ ಜಟಿಲ ವ್ಯಕ್ತಿತ್ವವನ್ನು ಅನವಶ್ಯ ವಾಗಿ ಸರಳಗೊಳಿಸುತ್ತದೆಂಬ ಕಾರಣದಿಂದ ಮತ್ತು ಅದು ಅನೇಕ ವೇಳೆ ತೀರ ಅವಾಸ್ತವವಾಗಿರುವುದರಿಂದ, ಆಧುನಿಕ ಸಾಹಿತ್ಯದಲ್ಲಿ ಮಾಮೂಲು 'ಖಳನಾಯಕ' ಬರುವುದಿಲ್ಲ. ಹಾಗೆಯೇ 'ನಾಯಕ' 'ನಾಯಕಿ' ಯರನ್ನೂ ಹಿಂದಿನ ಅರ್ಥದಲ್ಲಿ ನಾವು ಇಂದು ಕಾಣುವುದಿಲ್ಲ.

**ನೋಡಿ :** ನಾಯಕ–ನಾಯಕಿ

## ಗಮಕ ಕಲೆ

ಗಮಕ ಎನ್ನುವ ಮಾತಿಗೆ ಹಲವಾರು ಅರ್ಥಗಳಿವೆ: ಸ್ಪಷ್ಟಪಡಿಸು; ನಡುವೆ ಭಂಗವಿಲ್ಲದಂತೆ ಕೂಡಿಕೊಂಡು ಹೋಗು; ಹಾಡುವ ಒಂದು ವಿಧಾನ —ಹೀಗೆ. ಗಮಕ ಕಲೆ ಎನ್ನುವಾಗ ಆ ಮಾತಿಗೇ ಈ ಎಲ್ಲ ಅರ್ಥ ಗಳೂ ಸೇರಿಕೊಳ್ಳುತ್ತವೆ. ಯಾವುದೇ ಕಾವ್ಯವನ್ನು ಅಥವಾ ಕವನವನ್ನು ಅದರ ಅರ್ಥ ಭಾವಗಳು ಸ್ಪಷ್ಟವಾಗುವಂತೆ, ನಡುವೆ ಭಂಗವಿಲ್ಲದಂತೆ ಏಕಪ್ರಕಾರವಾಗಿ ಹಾಡುವುದೇ ಗಮಕ ಕಲೆ.

ಗಮಕ ಕಲೆಯನ್ನು ಬಲ್ಲವನು ಗಮಕಿ. ಗಮಕಿ ಎಂಬ ಪದಕ್ಕೆ ಬರೆದದ್ದನ್ನು ಓದುವವನು ಎಂಬ ಅರ್ಥವೂ ಇವೆ. ಆದರೆ ಗಮಕಿ ಸಾಮಾನ್ಯ ವಾಚಕನಲ್ಲ. ಅವನ ವಾಚನ ಕಲಾತ್ಮಕವಾಗಿರುತ್ತದೆ, ರಮ್ಯ ವಾಗಿರುತ್ತದೆ.

ಗಮಕಿಗೆ, ಸಾಹಿತ್ಯ–ಸಂಗೀತ ಇವೆರಡರ ಪರಿಚಯವೂ ಚೆನ್ನಾಗಿಯೇ ಇರಬೇಕು. ಇದರ ಜೊತೆಗೆ ಅವನು ಸಹೃದಯನಾಗಿರಬೇಕು. ತಾನು ಓದುವ ಕಾವ್ಯದ ರಸಾನುಭವವನ್ನು ಪಡೆದವನಾಗಿರಬೇಕು. ತನ್ನ ಆ ಅನುಭವವನ್ನು ತನ್ನ ಓದುಗಾರಿಕೆಯ ಮೂಲಕ ಇತರರ ಹೃದಯಗಳಿಗೆ ಮುಟ್ಟಿಸಲು ಶಕ್ತನಾಗಿರಬೇಕು. ಗಮಕದ ಪರಮೋದ್ದೇಶವಾದರೂ ಅಷ್ಟೇ—ಕಾವ್ಯದ ಸ್ವಾರಸ್ಯವನ್ನು ಶ್ರೋತೃವಿಗೆ ಮುಟ್ಟಿಸುವುದು.

ಈ ಉದ್ದೇಶ ಸಾಧನೆಗಾಗಿ ಗಮಕ ಕಲೆ ತನ್ನದೇ ಆದ ಹಾಡುಗಾರಿಕೆಯ ಶೈಲಿಯನ್ನು ರೂಢಿಸಿಕೊಂಡಿದೆ.

ಸಂಗೀತದಲ್ಲಿ ತಾಳಕ್ಕೆ ಪ್ರಾಧಾನ್ಯವಿದೆ. ಆದರೆ ಗಮಕ ಕಲೆಯಲ್ಲಿ ತಾಳ ಗೌಣ. ಗಮಕ ಶೈಲಿಯ ಕಾವ್ಯವಾಚನದಲ್ಲಿ ರಾಗಗಳ ಉಪಯೋಗವಿದ್ದರೂ ಅದು ಕಾವ್ಯದ ಸನ್ನಿವೇಶದ ಭಾವವನ್ನು ಎತ್ತಿ ತೋರಿಸುವುದಕ್ಕಾಗಿ ಸಹಕಾರಿ —ಅಷ್ಟೇ.

ತಾನು ಓದುವುದು, ಕೇಳುಗರಿಗೆ ಸ್ಪಷ್ಟವಾಗಿ ಅರ್ಥವಾಗುವಂತೆ ಮಾಡ ಬೇಕಾದದ್ದು ಗಮಕಿಯ ಮುಖ್ಯ ಕರ್ತವ್ಯ. ಆದ್ದರಿಂದ ಅರ್ಥ ಸ್ಫುಟ ಮಾಡುವುದರ ಕಡೆಗೇ ಅವನ ದೃಷ್ಟಿ. ಇದಕ್ಕಾಗಿ ಅವನು ಒಂದು ಪದ್ಯ ವನ್ನಾಗಲಿ ಪದ್ಯಭಾಗವನ್ನಾಗಲಿ ಒಂದಕ್ಕಿಂತ ಹೆಚ್ಚು ಬಾರಿ ಪಠಿಸುತ್ತಾನೆ. ಪದ್ಯಪಾಠವನ್ನು ಮೊದಲಿಗೆ ಒಮ್ಮೆ ಕಾವ್ಯದ ಛಂದಸ್ಸಿಗೆ ಅನುಗುಣವಾಗಿ ಗತಿಬದ್ಧವಾಗಿ ಓದಿದ ಮೇಲೆ, ಅದನ್ನು ಅನ್ವಯಾನುಸಾರ ಮತ್ತೆ ಓದುತ್ತಾನೆ. ಓದಿದ್ದನ್ನು ಅರ್ಥಮಾಡಿಕೊಳ್ಳಲು ಅನುಕೂಲವಾಗುವಂತೆ, ಸೂಕ್ತವಾದ ಸ್ಥಳಗಳಲ್ಲಿ ನಿಲ್ಲಿಸುತ್ತಾನೆ; ಸಂಧಿ ಸಮಾಸಗಳಿಂದ ಕೂಡಿ ಕೊಂಡಿರುವ ಪದಗಳನ್ನು ಬಿಡಿಸುತ್ತಾನೆ; ಅರ್ಥಸ್ವಾರಸ್ಯದ ಕಡೆಗೆ ಓದುಗರ ಲಕ್ಷ್ಯವನ್ನೆಳೆಯಲು ಭಾವಗರ್ಭಿತವಾದ ಒಂದು ಮಾತನ್ನಾಗಲೀ, ಮಾತುಗಳ ನ್ನಾಗಲೀ ಎತ್ತಿ ಒತ್ತಿ ಹೇಳುತ್ತಾನೆ. ಪದ್ಯದ ಭಾವಕ್ಕೆ ಸರಿಹೊಂದುವಂಥ ರಾಗವನ್ನು ಅಳವಡಿಸಿಕೊಂಡು ಹಾಡುತ್ತಾನೆ. ಅರ್ಥಭಾವಗಳೆರಡರ ಮೇಲೂ ಗಮನವಿಟ್ಟು, ತನ್ನ ಕಂಠದ ಏರಿಳಿತಗಳನ್ನು ನಿಯಂತ್ರಿಸುತ್ತಾನೆ:



ಕನ್ನಡದ ಗಮಕಿ ಶ್ರೇಷ್ಠ : ಬಿಂದೂರಾಯ

ಓದಂಗಾರಿಕೆಯ ಧಾಟಿಯನ್ನು ಬದಲಾಯಿಸುತ್ತಾನೆ. ಈ ಎಲ್ಲ ತಂತ್ರಗಳ ಪರಿಣಾಮವಾಗಿ ಕಾವ್ಯ ಭಾವ ಸ್ಫುಟವಾಗುತ್ತದೆ, ಶ್ರೋತೃಗಳ ಮನಸ್ಸನ್ನು ಮುಟ್ಟುತ್ತದೆ, ಹೃದಯವನ್ನು ಮಿಡಿಯುತ್ತದೆ. ರಾಗದ ವಿಸ್ತಾರ ವಿನ್ಯಾಸದಿಂದ ಕಾವ್ಯಗುಣಕ್ಕೆ ಲೋಪ ಉಂಟಾಗಬಾರದು ಎಂಬುದು ಗಮಕದಲ್ಲಿ ಇರಬೇಕಾದ ಅಂಶ.

ಯಾವುದೇ ಕಾವ್ಯವನ್ನು ನಮ್ಮಷ್ಟಕ್ಕೆ ನಾವು ಓದಿಕೊಂಡಾಗ ಆಗುವ ಅನುಭವವೇ ಬೇರೆ; ಚತುರನಾದ ಗಮಕಿಯ ಬಾಯಿಯಿಂದ ಅದನ್ನು ಕೇಳಿದಾಗ ಆಗುವ ಆನಂದವೇ ಬೇರೆ.

ಗಮಕಿ. ಕಾವ್ಯದ ಕಲಾತ್ಮಕ ವ್ಯಾಖ್ಯಾನಕಾರ. ಕುಶಲನಾದ ಮೂರ್ತಿಶಿಲ್ಪಿ ಜೇಡಿಮಣ್ಣನ್ನೋ ಮೇಣವನ್ನೋ ಹಿಸುಕಿ ಅದಕ್ಕೆ ಸುಂದರವಾದ ರೂಪವನ್ನು ಕೊಟ್ಟು ಆಕರ್ಷಕ ವಸ್ತುವನ್ನಾಗಿ ಮಾಡುವಂತೆ, ಗಮಕಿ, ಕಾವ್ಯದ ಮಾತುಗಳನ್ನು ಉಪಯೋಗಿಸಿಕೊಂಡು ತನ್ನ ಕೌಶಲದಿಂದ ಶ್ರೋತೃವಿನ ಕಣ್ಣಿನ ಮುಂದೆ ಸುಂದರ ಚಿತ್ರವೊಂದನ್ನು ಕಟ್ಟುತ್ತಾನೆ. ಶ್ರೋತೃವಿನ ರಸಾಸ್ವಾದನೆಗೆ ಸಹಾಯ ಮಾಡುತ್ತಾನೆ.

ಗಮಕ ಕಲೆ ಅತ್ಯಂತ ಪ್ರಾಚೀನವಾದದ್ದು. ನಮಗೆ ಈಗ ದೊರೆತಿರುವ ಅತ್ಯಂತ ಪುರಾತನ ಕಾವ್ಯಗಳು ಉಳಿದು ಬಂದದ್ದು ಗಮಕಿಗಳ ಮೂಲಕವೇ. ಪರಂಪರಾನುಗತವಾಗಿ ಗಮಕಿಗಳ ಬಾಯಲ್ಲಿ ನಿಂತಿದ್ದ ಈ ಕಾವ್ಯಗಳು ಅನಂತರ ಗ್ರಂಥರೂಪಕ್ಕೆ ಬಂದುವು. ಜಗತ್ತಿನ ವಿವಿಧ ಸಾಹಿತ್ಯಗಳ ಇತಿಹಾಸದಿಂದ ಇದು ವ್ಯಕ್ತವಾಗುತ್ತದೆ.

ನಮ್ಮ ರಾಷ್ಟ್ರದ ಆದಿಕಾವ್ಯವೆಂದು ಪ್ರಸಿದ್ಧವಾದ ರಾಮಾಯಣವೂ ಅಷ್ಟೇ. ವಾಲ್ಮೀಕಿ ರಾಮಾಯಣವನ್ನು ಹೇಳಿದ; ಅವನ ಮುಖದಿಂದ ಅದನ್ನು ಕೇಳಿದ ಲವಕುಶರು ಅದನ್ನು ಸುಶ್ರಾವ್ಯವಾಗಿ ಹಾಡುವುದನ್ನು ಅಭ್ಯಾಸಮಾಡಿದರು. ಅವರು ಅದನ್ನು ರಾಮನ ಸಮ್ಮುಖದಲ್ಲಿ ಪರಿಣಾಮಕಾರಿಯಾಗಿ ಹಾಡಿದರು —ಎಂಬ ಐತಿಹ್ಯವಿದೆ.

ಗಮಕಿಗಳಿಂದ ಕಾವ್ಯಗಳನ್ನು ಓದಿಸಿ ಕೇಳುವುದು ರಾಜಾಸ್ಥಾನಗಳಲ್ಲಿ ಆಚರಣೆಯಲ್ಲಿದ್ದ ಕಾರ್ಯಕ್ರಮಗಳಲ್ಲಿ ಒಂದು.

ನಾನಾ ಐತಿಹಾಸಿಕ ಕಾರಣಗಳಿಂದಾಗಿ, ನಮ್ಮ ನಾಡಿನಲ್ಲಿ ಗಮಕ ಕಲೆ ಹಿಂದೆ ಬಿದ್ದಿತು. ಆದರೆ ಈ ಶತಮಾನದ ಮಧ್ಯಭಾಗದಲ್ಲಿ ಈ ಕಲೆಯ ಬಗೆಗೆ ಆಸಕ್ತಿ ಹುಟ್ಟಿ ಅದು ಪುನರುಜ್ಜೀವನಗೊಂಡಿತು. ಗಮಕ ಕಲೆಯಲ್ಲಿ ಕ್ರಮವಾದ ಶಿಕ್ಷಣವೂ ಏರ್ಪಟ್ಟಿತು.

## ಗಯಟೆ

ನವೋದಯ ಕಾಲದ ಜರ್ಮನಿಯಲ್ಲಿ ಉದಯಿಸಿದ ಸಾಹಿತ್ಯ ತಾರೆ ಗಯಟೆ. ಎಲ್ಲ ವಿಮರ್ಶಕರಿಂದಲೂ ವಿಶ್ವಸಾಹಿತಿ ಎಂಬ ಒಮ್ಮತದ ಮೆಚ್ಚುಗೆ ಪಡೆದ ಗಯಟೆ ಬಹುಮುಖ ಪ್ರತಿಭೆಯ ಮೇಧಾವಿ.

ಅವನ ಕಾವ್ಯಶೈಲಿ ಭಾವಪೂರ್ಣ. ಕಿನ್ನರ ಕತೆಗಳು,ಸಣ್ಣ ಕಾದಂಬರಿಗಳು, ಸಾಂಕೇತಿಕ ಕಾದಂಬರಿಗಳಲ್ಲಿ ಮನೋವಿಶ್ಲೇಷಕ ನಿರೂಪಣೆ; ಐತಿಹಾಸಿಕ, ರಾಜಕೀಯ ಹಾಗೂ ಮನೋವೈಜ್ಞಾನಿಕ ಗದ್ಯ ನಾಟಕಗಳು; ಸರಳ ರಗಳೆಯಲ್ಲಿ ರಚಿಸಿದ ನಾಟಕಗಳು ಹಾಗೂ ಆಧುನಿಕ ನಿಗೂಢ ಕೃತಿ ಎನಿಸಿದ ಬೃಹತ್ ನಾಟಕ 'ಫೌಸ್ಟ್' —ಇವೆಲ್ಲ ಅವನ ಸಾಧನೆಗಳು.

ನವೋದಯದ ಮೇಧಾವಿಗಳಂತೆ ಗಯಟೆ ಬಹುಮುಖ ಪ್ರತಿಭೆಯುಳ್ಳವನು. ವಿಮರ್ಶಕ, ಪತ್ರಿಕೋದ್ಯಮಿ, ಚಿತ್ರಕಾರ, ನಾಟಕಶಾಲೆಯ ವ್ಯವಸ್ಥಾಪಕ, ರಾಜನೀತಿಜ್ಞ, ಶಿಕ್ಷಣಶಾಸ್ತ್ರಜ್ಞ, ಪ್ರಕೃತಿವಿಜ್ಞಾನಿ. ಹೀಗೆ ಅವನಿಗೆ ಅನ್ವಯಿಸುವ ಗುಣವಾಚಕಗಳ ಪಟ್ಟಿ ದೊಡ್ಡದು. ವಿಜ್ಞಾನದ ಬಗೆಗೆ ಅವನು ಬರೆದ ಬರೆಹಗಳೇ 14 ಹೊತ್ತಗೆಗಳನ್ನು ತುಂಬಬಲ್ಲುವು. ತನ್ನ 82 ವರ್ಷಗಳ ದೀರ್ಘ ಜೀವನದಲ್ಲಿ ಒಬ್ಬ ಮನುಷ್ಯನಿಗೆ ಅಸಾಧ್ಯವೆನಿಸುವಷ್ಟು ಜ್ಞಾನವನ್ನು ಗಯಟೆ ಸಂಪಾದಿಸಿದ. ಈ ಹೊಸ ವಿಚಾರ ಧಾರೆಗೆ ತಲೆಯೊಡ್ಡಲು ಆತ ಸದಾ ಸಿದ್ಧನಾಗಿದ್ದ. ದಿನಚರಿಯಲ್ಲಿ ಶಿಸ್ತನ್ನು ರೂಢಿಸಿಕೊಂಡಿದ್ದ. ಆದರೂ ಮನುಷ್ಯನ ಬಾಳುವೆ. ಪ್ರೇಮ ವಿಚಾರಗಳನ್ನು ಕುರಿತು ಭಾವಪೂರಿತ ಕವನ ಬರೆಯಬಲ್ಲ ಗಾರುಡಿಗ ಕವಿಯಾಗಿದ್ದ.

ಯೋಹಾನ್ ವುಲ್ಫ್‌ಗಾಂಗ್ ವಾನ್ ಗಯಟೆ, 1749 ಆಗಸ್ಟ್ 28 ರಂದು ಜರ್ಮನಿಯ ಫ್ರಾಂಕ್‌ಫರ್ಟ್–ಆನ್–ಮೈನ್‌ನಲ್ಲಿ ಜನಿಸಿದ. ಧನಿಕ ತಂದೆಗೆ ಸಾಹಿತ್ಯ, ಕಲೆ ಹಾಗೂ ವಿಜ್ಞಾನಗಳಲ್ಲಿ ಆಸಕ್ತಿ. ಉಲ್ಲಾಸ ಮನೋಭಾವದ ತಾಯಿ ಕಥೆ ಹೇಳುವುದರಲ್ಲಿ ಬಹಳ ಜಾಣೆ. ಈ ಕಥೆಗಳೂ ಅಜ್ಜಿಯಿಂದ ದೊರೆತ ಸೂತ್ರದಬೊಂಬೆ ನಾಟಕ ಉಪಕರಣಗಳೂ ಅವನನ್ನು ಕಲ್ಪನೆಯ ಸೋಪಾನಗಳ ಮೇಲೆ ಅದ್ಭುತ ಲೋಕಕ್ಕೆ ಕರೆದೊಯ್ಯುತ್ತಿದ್ದುವು.

16ನೆಯ ವಯಸ್ಸಿಗೆ ಲೀಪ್ಸಿಗ್ ವಿಶ್ವವಿದ್ಯಾನಿಲಯದಲ್ಲಿ ನ್ಯಾಯಶಾಸ ಅಭ್ಯಸಿಸಿದ. ಆದರೆ ಅವನ ನೈಜ ಒಲವು ಸಾಹಿತ್ಯ ಹಾಗೂ ಕಲೆಯ ಕಡೆಗೆ. ವಿದ್ಯಾಭ್ಯಾಸ ಮುಗಿದ ಅನಂತರ ನಾಲ್ಕು ವರ್ಷಗಳೊಳಗೆ ಕೆಲವು ಪ್ರಧಾನ ಸಾಹಿತ್ಯ ಕೃತಿಗಳನ್ನು ಗಯಟೆ ಸೃಷ್ಟಿಸಿದ. ಇದರಲ್ಲಿ ಒಂದು—ಅವನ ಹೆಸರಾಂತ ಕಾದಂಬರಿ 'ಯುವಕ ವರ್ದರನ ವ್ಯಾಕುಲಗಳು'. ಹದಿವಯಸ್ಸಿನ ತಳಮಳಗಳ ಸೂಕ್ಷ್ಮ ಪರಿಚಯ ಈ ಕೃತಿಯಲ್ಲಿದೆ. ತನ್ನದೇ ಭಾವನೆಗಳಲ್ಲಿ ಮುಳುಗಿ ಏಳುವ ಯುವಕ ವರ್ದರ್; ಒಬ್ಬ ಹುಡುಗಿಯಲ್ಲಿ ಅನುರಕ್ತನಾಗುತ್ತಾನೆ. ಆದರೆ ಅವನು ಪಡೆಯಲಾಗದ ಹೆಣ್ಣು ಆಕೆ. ಗುರಿಯಿಲ್ಲದೆ ಅಲೆದಾಡಿ ವರ್ದರ್ ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇದರಲ್ಲಿ ಗಯಟೆಯ ಮನಸ್ಸಿನ ತೊಳಲಾಟದ ವರ್ಣನೆಯೇ ಇದೆ. ಈ ಗ್ರಂಥ ಎಷ್ಟು ಯಶಸ್ವಿಯಾಯಿತೆಂದರೆ ಜರ್ಮನಿಯ ಯುವಕರು ವರ್ದರನಂತೆ ತಿಳಿನೀಲಿ ಕೋಟು, ಹಳದಿ ಕಾಲುಡುಗೆ ಹಾಗೂ ಜಾಕ್ ಪಾದರಕ್ಷೆಗಳನ್ನು ತೊಡಲಾರಂಭಿಸಿದರು!

ಇದರ ಅನಂತರ ಎರಡು ದಶಕಗಳಾದ ಮೇಲೆ 'ವಿಲ್‌ಹೆಲ್ಮ್ ಮೈಸ್ಟರನ ಶಿಷ್ಯವೃತ್ತಿ' ಎಂಬ ಕೃತಿ ಗಯಟೆಯ ಖ್ಯಾತಿಯನ್ನು ಸ್ಥಿರಗೊಳಿಸಿತು. ವರ್ದರನಂತಲ್ಲ ಇದರ ನಾಯಕ. ಇವನಿಗೆ ವಾಸ್ತವ ಪ್ರಪಂಚ ಬೇಕು; ತನ್ನದೇ

ಅಂತರಂಗ ಪ್ರಪಂಚವೂ ಬೇಕು. ಹೀಗೆ ತನ್ನ ಹಾಗೂ ಸಮಾಜದ ಉದ್ದೇಶಗಳನ್ನು ನಾಯಕ ಸರಿಹೊಂದಿಸಲು ಯತ್ನಿಸುತ್ತಾನೆ. ಗಯಟೆಯ ಕೊನೆಯ ಶ್ರೇಷ್ಠ ಕಾದಂಬರಿ 'ಆಯ್ದ ಒಲವುಗಳು.' ಮಾನವ ಹೊರಿಸಿಕೊಂಡಿರುವ ದಾಂಪತ್ಯಜೀವನ ನಿಷ್ಠೆ ಹಾಗೂ ಪ್ರಕೃತಿಸಹಜವಾದ ಸ್ತ್ರೀ ಪುರುಷರ ನಡುವಿನ ಆಕರ್ಷಣೆ ಈ ಹಿನ್ನಲೆಯಲ್ಲಿ ಕಾದಂಬರಿಯ ಪಾತ್ರಗಳು ರೂಪಿಸಲ್ಪಟ್ಟಿವೆ.

1775ರಲ್ಲಿ ಗಯಟೆಯನ್ನು ವೈಮಾರ್ ಎಂಬಲ್ಲಿನ ಪಾಳೆಯಗಾರ ಪ್ರಭು ತನ್ನ ಆಸ್ಥಾನಕ್ಕೆ ಆಮಂತ್ರಿಸಿದ. ಗಯಟೆ ಇಲ್ಲಿ ಹಲವಾರು ಅಧಿಕಾರಗಳನ್ನು ಅಲಂಕರಿಸಿದ. ಜೀವಿತದ ಬಹುಭಾಗವನ್ನು ಇಲ್ಲಿಯೇ ಕಳೆದ. ಇಟಲಿಯ ಪ್ರವಾಸ ಕೈಗೊಳ್ಳಬೇಕೆಂಬ ಬಹು ಕಾಲದ ಆಸೆಯನ್ನು 1786ರಲ್ಲಿ ತಣಿಸಿಕೊಂಡ. ಇಟಲಿಯ ಪ್ರವಾಸ ಗಯಟೆಯ ಜೀವನದಲ್ಲಿ ಮಹತ್ವದ ಮೈಲಿಗಲ್ಲು. ಇದನ್ನು ಅವನ ಪುನರ್ಜನ್ಮವೆಂದೇ ಕರೆಯುತ್ತಾರೆ. ಈ ಪ್ರವಾಸದ ಫಲವಾಗಿ ಅವನಲ್ಲಿ ಆಂತರಿಕ ಬದಲಾವಣೆಗಳಾದುವು. ಇದು ಅವನ ಸಾಹಿತ್ಯ ಕೃತಿಗಳಲ್ಲೂ ಕಂಡುಬರುತ್ತದೆ. ಸ್ಪಷ್ಟವಾಗಿ ಎದ್ದುತೋರುವ ಪಾತ್ರ ಸೃಷ್ಟಿ, ಕಾಲದ ಸೀಮೆಯನ್ನು ದಾಟಿದ ಸಾರ್ವತ್ರಿಕ ವಿಷಯಗಳ ಚತುರ ನಿರೂಪಣೆ, ಸಂಪ್ರದಾಯಬದ್ಧವಾದರೂ ಭಾವಾವೇಶಗಳೊಡನೆ ಮಿಡಿಯುವ ಕಾವ್ಯರಚನೆ —ಈ ಅಪೂರ್ವ ಗುಣಗಳು ಗಯಟೆಯ ಸಾಹಿತ್ಯ ಸೃಷ್ಟಿಯನ್ನು ಹೊಸ ಮಾರ್ಗಕ್ಕೆ ತಿರುಗಿಸಿದುವು.

ಇಟಲಿಯ ಪ್ರವಾಸದಿಂದ ಮರಳಿದ ಮೇಲೆ ಗಯಟೆ ನಾಟಕ ಶಾಲೆಯ ನಿರ್ದೇಶಕನಾದ. 1794ರಲ್ಲಿ ಗಯಟೆ ಹಾಗೂ ಜರ್ಮನಿಯ ಮತ್ತೊಬ್ಬ ಖ್ಯಾತ ಕವಿ ಷಿಲ್ಲರನಿಗೂ ಗಾಢ ಸ್ನೇಹ ಬೆಳೆಯಿತು. ಇವರಿಬ್ಬರಿಂದಾಗಿ ವೈಮಾರ್ ಜರ್ಮನಿಯ ಸಾಹಿತ್ಯ ಕೇಂದ್ರವಾಯಿತು. ಗಯಟೆಯ ಮಹೋನ್ನತ ಕೃತಿ 'ಫೌಸ್ಟ್' ಅವನ 82ನೆಯ ವಯಸ್ಸಿನಲ್ಲಿ ಪೂರ್ಣಗೊಂಡಿತು. ಆದರೆ ಅದರ ರೂಪುರೇಷೆಗಳು 20–25ನೆಯ ವಯಸ್ಸಿನಲ್ಲಿಯೇ ಅವನಿಗೆ ಹೊಳೆದಿದ್ದುವು. ಒಂದು ವಿಧದಲ್ಲಿ ಇದನ್ನು ಅವನ ಜೀವನದ ಸಾಹಿತ್ಯ ಸಂಗಾತಿ ಎಂದು ಕರೆಯುತ್ತಾರೆ. ಸೌಂದರ್ಯದ ನೆಲೆಯೇನು ? ಮಾನವ–ಮಾನವರ, ಮಾನವ–ದೇವರ ನಡುವಿನ ಸಂಬಂಧವೇನು ? ಎಂಬ ವಿಚಾರಗಳು 'ಫೌಸ್ಟ್' ನಲ್ಲಿ ಚಿತ್ರಿತವಾಗಿವೆ.



'ಫೌಸ್ಟ್' ಕರ್ತೃ

ತಾರುಣ್ಯದಲ್ಲಿ ಗಯಟೆ ಶೇಕ್ಸ್‌ಪಿಯರನಿಂದ ಪ್ರಭಾವಿತನಾದ. ಎಲ್ಲ ಬಗೆಯ ನಾಟಕಗಳನ್ನು ಅಧ್ಯಯನಮಾಡಿ, ತನ್ನದೇ ಆದ ಹೊಸಬಗೆಯ ನಾಟಕಗಳನ್ನು ರೂಪಿಸಿದ. 'ಬರ್ಲಿಚಿಂಗೆನಿನ ಗಯಟಸ್' 1770ರ ಸಾಲಿನಲ್ಲಿ ಬೆಳಕು ಕಂಡ ಹೊಸ ಜಾಡಿನ ನಾಟಕ. ಗಯಟೆ ತೀರಿಕೊಂಡದ್ದು 1832. ಮಾರ್ಚ್ 22 ರಂದು, ವೈಮಾರ್‌ನಲ್ಲಿ.

ವಿಶ್ವಸಾಹಿತಿ ಎನಿಸಿಕೊಂಡವನು ಗಯಟೆ. ಪರ್ಷಿಯನ್, ಸಂಸ್ಕೃತ, ಚೀನೀ ಮುಂತಾದ ಹಲವು ಸಾಹಿತ್ಯ ಅನುವಾದಗಳನ್ನು ಆತ ಅಭ್ಯಾಸಮಾಡಿದ. ಅವುಗಳಲ್ಲಿ ತಾನು ಮೆಚ್ಚಿದ ಅಂಶಗಳನ್ನು ತನ್ನ ಸಾಹಿತ್ಯದಲ್ಲಿ ಅಳವಡಿಸಿದ. ಕಾಳಿದಾಸನ 'ಶಾಕುಂತಲ' ನಾಟಕದ ಭಾಷಾಂತರ ಓದಿದಾಗ ಅದರಲ್ಲಿ ಬರುವ ಪ್ರವೇಶ ರೂಪದ 'ಪ್ರಸ್ತಾವನೆ' ಅವನ ಮನಸ್ಸಿಗೆ ನಾಟಿತು. ತನ್ನ 'ಫೌಸ್ಟ್' ನಾಟಕಕ್ಕೆ ಈ ಬಗೆಯ ಪ್ರಸ್ತಾವನೆ ಬರೆದ.

ಗಯಟೆಯ ಜೀವನವನ್ನಾಗಲೀ, ವ್ಯಕ್ತಿತ್ವವನ್ನಾಗಲೀ ಒಂದು ಚೌಕಟ್ಟಿನಲ್ಲಿಟ್ಟು ನೋಡುವುದು ಕಷ್ಟ. ಒಬ್ಬ ಮನುಷ್ಯನಲ್ಲಿ ಏನೇನು ಗುಣಗಳು ಇರಬಹುದೋ ಅವೆಲ್ಲವೂ ಅವನಲ್ಲಿದ್ದುವು. ಅವನು ಸಮಚಿತ್ತನಂತೆ ಕಾಣುತ್ತಿದ್ದ. ಆದರೆ ಅದು ಅವನು ಶ್ರಮಪಟ್ಟು ಸಾಧಿಸಿದ ಮುಖವಾಡ. ಎಡೆತಡೆಯಿಲ್ಲದೆ ಕೆಲಸಮಾಡುತ್ತಿದ್ದ ; ಅನಂತರ ಸೋಮಾರಿಯಂತೆ ಕಾಲ ಕಳೆಯುತ್ತಿದ್ದ. ಹೀಗೆ ಅವನ ಇಡೀ ಜೀವನ ಖಿನ್ನತೆ, ಉತ್ಸಾಹಗಳ ನಡುವೆ ಓಲಾಡಿತು. ಮನುಷ್ಯ ತನ್ನ ಆತ್ಮವನ್ನು ಹೇಗೆ ಉದ್ಧಾರ ಮಾಡಿಕೊಳ್ಳಬೇಕು ಎಂಬುದು ಅವನ ಕಾಲದಲ್ಲಿ ಎಲ್ಲರನ್ನೂ ಪೀಡಿಸುತ್ತಿದ್ದ ಪ್ರಶ್ನೆ. ಇದಕ್ಕೆ ಗಯಟೆಯ ಉತ್ತರ ವಿಶಿಷ್ಟವಾದದ್ದು. ಪ್ರಯತ್ನಪಡುತ್ತಲೇ ಇದ್ದರೆ ಆತ್ಮವನ್ನು ಉಳಿಸಿಕೊಳ್ಳಬಹುದು — ಇದೇ ಅವನು ಕಂಡ ಪರಿಹಾರ. ಇದಕ್ಕಾಗಿ ತನ್ನನ್ನು ಪಳಗಿಸಿಕೊಳ್ಳುವ ಕಾರ್ಯವನ್ನು ಅವನು ಕೊನೆಯವರೆಗೂ ನಿಲ್ಲಿಸಲಿಲ್ಲ. ಸಾಹಿತ್ಯದ ಹಲವು ಪ್ರಕಾರಗಳಲ್ಲಿ ನಡೆಸಿದ ಕೃಷಿ,



ಗಯಟೆ : ರೋಮ್ ನಗರದ ಹೊರವಲಯದಲ್ಲಿ

ಕೈಗೂಡಿಸಿಕೊಂಡ ಸಾಧನೆ, ಅವುಗಳಲ್ಲಿ ಮಿಂಚುವ ಅಪೂರ್ವ ಪ್ರತಿಭೆ-ಇವುಗಳಿಂದಾಗಿ ಅವನ ಹೆಸರು ಜರ್ಮನ್ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿದೆ. ಅವನ ಕಾಲ 'ಗಯಟೆಯ ಯುಗ' ಎಂದೇ ಕರೆಯಲ್ಪಟ್ಟಿದೆ.

ನೋಡಿ : ಫೌಸ್ಟ್

## ಗರೂಡ ಸದಾಶಿವರಾಯ

ಪುಟಾಣಿ ಸದಯ್ಯನಿಗೆ ಶಾಲೆಗೆ ಹೋಗುವುದೆಂದರೆ ಅಸಾಧ್ಯ ತಲೆನೋವು. ಶಾಲೆ ತಪ್ಪಿಸಲು ಒಂದಲ್ಲ ಒಂದು ಉಪಾಯ ಹುಡುಕುತ್ತಿದ್ದ. ಬಿಸಿಲಿನಲ್ಲಿ ಚೆನ್ನಾಗಿ ಕಾದ ಹಾಸುಗಲ್ಲಿನ ಮೇಲೆ ಕೆಲಹೊತ್ತು ಬರಿಮೈಯಿಂದ ಜೋರಲಾಗಿ ಬಿದ್ದುಕೊಂಡು ಆಮೇಲೆ ಮನೆಯೊಳಗೆ ಹೋಗಿ ಜ್ವರಬಂದವರಂತೆ ನಡುಗುತ್ತ ಇದ್ದರೆ ಇವನನ್ನು ಶಾಲೆಗೆ ಅಟ್ಟಲು ಯಾರಿಗಾದರೂ ಮನಸ್ಸು ಬಂದೀತೆ? ಇಂಥ ಹುಡುಗ ದೊಡ್ಡವನಾಗಿ 'ಅಭಿನಯ ಕೇಸರಿ' ಎಂದು ಕರೆಸಿಕೊಂಡಿದ್ದರಲ್ಲಿ ಏನೂ ಆಶ್ಚರ್ಯವಿಲ್ಲ. ಆ ಹುಡುಗನೇ ಗರೂಡ ಸದಾಶಿವರಾಯರು.

ಗರೂಡ ಎಂಬುದು ಸದಾಶಿವರಾಯರ ಮನೆತನದ ಹೆಸರು. ತಂದೆ ಗುರುನಾಥ ಶಾಸ್ತ್ರಿಗಳು ಸಂಸ್ಕೃತ ವಿದ್ವಾಂಸರು, ಸಂಗೀತ ರಸಿಕರು. ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡ 'ಸದಯ್ಯ'ನನ್ನು ಸಾಕಿದ್ದು ಅಜ್ಜಿ.

ತಂದೆ ಅಮರಕೋಶ ಹೇಳಿಕೊಟ್ಟರು. ತಾತ ವೇದ ಮಂತ್ರಗಳನ್ನು ಕಲಿಸಿದರು. ಹೈದರಾಬಾದ್ ಕರ್ನಾಟಕದಲ್ಲಿಯ ಹುಟ್ಟೂರು ಕೌಲೂರಿನಲ್ಲಿ ಆಗ ಶಾಲೆಯಿರಲಿಲ್ಲ, ಆದ್ದರಿಂದ ಖಾಸಗಿ ಶಿಕ್ಷಕರನ್ನಿಟ್ಟೇ ವಿದ್ಯಾಭ್ಯಾಸ ನಡೆಯಿತು.

ಎಂಟನೆಯ ವಯಸ್ಸಿನ ಸದಾಶಿವರಾಯರು ಶಿಕ್ಷಣ ಮುಂದುವರಿಸಲು ರಾಯಚೂರಿನಲ್ಲಿದ್ದ ತನ್ನ ಸೋದರಮಾವನ ಮನೆಗೆ ಬಂದರು. ಇಲ್ಲೇ ಅವರಿಗೆ ನಾಟಕಗಳ ರುಚಿ ಹತ್ತಿದ್ದು.

ಮುಂದೆ ಕಲಬುರ್ಗಿಯ ಬ್ರಹ್ಮಪುರದಲ್ಲಿ ವಾಸಿಸತೊಡಗಿದ ಮೇಲೆ ಸ್ವತಃ ನಾಟಕಗಳಲ್ಲಿ ಭಾಗವಹಿಸಲೂ ಆರಂಭಿಸಿದರು. ಗಣೇಶೋತ್ಸವ, ಶಿವಾಜಿ ಜಯಂತಿಗಳ ಮನೋರಂಜನೆಯ ಕಾರ್ಯಕ್ರಮಗಳಲ್ಲಿ ಸದಾಶಿವ ರಾಯರದೇ ಮೇಲುಗೈಯಾಯಿತು.

ರಾಜಕೀಯ ಭಾಷಣಗಳನ್ನು ಕೇಳಿ ಇವರು ಉತ್ತೇಜಿತರಾದದ್ದೂ ಸುಮಾರು ಇದೇ ಸಮಯದಲ್ಲಿ. ಸ್ವಾತಂತ್ರ್ಯವನ್ನು ಕುರಿತು ಇವರಲ್ಲಿ ಕ್ರಾಂತಿಕಾರಿ ವಿಚಾರಗಳು ಬೆಳೆದುವು. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ 'ಬಂಧ ಮೋಚನೆ' ಎಂಬ ನಾಟಕವನ್ನು ಇವರು ಯಶಸ್ವಿಯಾಗಿ ಪ್ರಯೋಗಿಸಿದರು.

ಅಭಿನಯ ಕಲೆಯ ಅಭ್ಯಾಸಕ್ಕಾಗಿ ಸದಾಶಿವರಾಯರು ಸ್ವಲ್ಪ ಕಾಲ ಮರಾಠಿ ಕಂಪೆನಿಗಳಲ್ಲಿ ಕೆಲಸಮಾಡಿದರು. ಕೆಲವು ಕನ್ನಡ ನಾಟಕ ಕಂಪೆನಿಗಳಲ್ಲಿ ನಾಟ್ಯಗುರುಗಳಾಗಿ ಕೆಲಸಮಾಡಿ ಅನೇಕ ನಟರನ್ನು ತರಬೇತು ಮಾಡಿದರು. ಕೆಲವು ಕನ್ನಡಾಭಿಮಾನಿಗಳು ಕಟ್ಟಿದ ನಾಟಕ ಮಂಡಲಿಯೊಂದರ ಪ್ರಮುಖ ಸದಸ್ಯರೂ ಆದರು. ಆದರೆ ಸ್ವಂತ ನಾಟಕ ಕಂಪೆನಿಯನ್ನು ಆರಂಭಿಸುವ ವರೆಗೆ ಇವರಿಗೆ ಮನಶ್ಶಾಂತಿ ಇರಲಿಲ್ಲ. 1920ರಲ್ಲಿ ಇವರದ್ದೇ ಆದ 'ದತ್ತಾತ್ರೇಯ ನಾಟಕ ಮಂಡಲಿ' ಆರಂಭವಾಯಿತು.

ಕಂಪೆನಿಯ ಮೊದಲ ನಾಟಕ ಆರಂಭವಾಗುವುದಕ್ಕೆ ಮೊದಲೇ ಟಿಕೇಟುಗಳೆಲ್ಲ ಮಾರಾಟವಾಗಿ ಹೋಗಿದ್ದುವು. ಇವರ ಒಂದೊಂದು ಹೊಸ ನಾಟಕ ಪ್ರಯೋಗವನ್ನೂ ಪ್ರೇಕ್ಷಕರು ಪ್ರೋತ್ಸಾಹಿಸಿದರು.



ಗರೂಡ ಸದಾಶಿವರಾಯ

ಆದರೂ ಹಣಕಾಸಿನ ಮುಗ್ಗಟ್ಟು ಗರೂಡರನ್ನು ಕಾಡಿತು. ಇವರಿಂದ ತರಬೇತು ಪಡೆದ ನಟರು ರಂಗಭೂಮಿಯಲ್ಲಿ ಬೇರು ಬಿಡುತ್ತಲೇ ಹೆಚ್ಚಿನ ವೇತನದ ಆಕರ್ಷಣೆಯಿಂದ ಬೇರೆ ಕಂಪೆನಿಗಳನ್ನು ಸೇರಿಬಿಡುತ್ತಿದ್ದರು. ನಾಟಕ ಇನ್ನೇನು ಆರಂಭವಾಗಬೇಕು ಎನ್ನುವಷ್ಟರಲ್ಲಿ ಮುಖ್ಯ ಪಾತ್ರ ವಹಿಸುವವನೇ ಕಾಣೆ ಎನ್ನುವ ಪ್ರಸಂಗ ಬರುತ್ತಿತ್ತು. ಕಷ್ಟವೋ ಸುಖವೋ ಗರೂಡರಾಯರು ತಮ್ಮ ಪಟ್ಟು ಬಿಡಲಿಲ್ಲ. ನಾಟಕಕಾರ, ಮುಖ್ಯ ನಟ ಎಲ್ಲವೂ ಇವರೇ. ಡೇರೆಹಾಕಿ ಕುರ್ಚಿಗಳನ್ನು ಇಡುವುದರಿಂದ ಹಿಡಿದು ದಶರಥನಾಗಿ ಪ್ರೇಕ್ಷಕರು ಕಣ್ಣೀರಿಡುವಂತೆ ಮಾಡುವ, ಎಚ್ಚಮನಾಯಕನಾಗಿ ಸಭೆಯಲ್ಲೆಲ್ಲ ವೀರರಸ ಹರಿಯಿಸುವವರೆಗೆ ಸದಾಶಿವ ರಾಯರದೇ ಪಾತ್ರ.

ಇವರ 54 ನಾಟಕಗಳು ಹೆಚ್ಚು ಕಡಮೆ ವರ್ಷಕ್ಕೆ ಒಂದರಂತೆ ರಚಿತವಾದವು. ಇವುಗಳಲ್ಲಿ ಕೆಲವು ಮರಾಠಿ ನಾಟಕಗಳ ಅನುವಾದ ಅಥವಾ ರೂಪಾಂತರಗಳು. ಉಳಿದವು ರಾಯರ ಕಲ್ಪನೆಯ ಕೂಸುಗಳು.

ನಟನೆಯಲ್ಲೂ ಸದಾಶಿವರಾಯರು ತುಂಬ ಹೆಸರು ಗಳಿಸಿದರು. "ಗರೂಡರು ಕಾಲು ಸಮನಾಗಿಲ್ಲವೆಂದು ಕುಂಟುತ್ತಾರೆ. ಹಾಗೆಂದು ರಂಗಭೂಮಿಯ ಮೇಲೆ ಕುಂಟಿದವರೆಲ್ಲ ಗರೂಡರಾಗುವುದಿಲ್ಲ" ಎಂದು ಇವರೇ ಹಾಸ್ಯಮಾಡಿ ಹೇಳಿದ್ದುಂಟು. ಭರ್ಜರಿ ದೃಶ್ಯ-ಅಲಂಕಾರಗಳು ಇಲ್ಲದಿದ್ದರೂ ನೈಜ ಅಭಿನಯಕ್ಕೆ ಹೆಸರಾಗಿತ್ತು 'ದತ್ತಾತ್ರೇಯ ನಾಟಕ ಮಂಡಲಿ'.

ಸುಮಾರು ಮೂವತ್ತು ವರ್ಷಕಾಲ ಕರ್ನಾಟಕ ನಾಟಕರಂಗವಲ್ಲಿ ಮೆರೆದ ಮೇಲೆ ಸದಾಶಿವರಾಯರು ನಿವೃತ್ತರಾದರು.

ಇವರ ಕೊನೆಯ ನಾಟಕ 'ಉಗ್ರ ಕಲ್ಯಾಣ' ರಾಜ್ಯ ಸರಕಾರದ ಪ್ರಶಸ್ತಿ ಪಡೆಯಿತು. ದಿಲ್ಲಿಯಲ್ಲೂ ಈ ನಾಟಕ ಅಭಿನಯಿಸಲ್ಪಟ್ಟಿತು. 75ರ ವೃದ್ಧ ಗರೂಡ ಸದಾಶಿವರಾಯರು ಸ್ವತಃ ಇದರಲ್ಲಿ ಪ್ರಮುಖ ಪಾತ್ರ ವಹಿಸಿದರು. ಈ ವೇಳೆಗೆ ಅವರ ಮಕ್ಕಳೂ ಮೊಮ್ಮಕ್ಕಳೂ ರಂಗಭೂಮಿಯ ಅಭಿನಯಕ್ಕೆ ಖ್ಯಾತರಾಗಿದ್ದರು. ಅವರೆಲ್ಲರ ಜೊತೆಗೂಡಿ ಗರೂಡರು ರಂಗಮಂಚದ ಮೇಲೆ ಬೆಳಗಿದರು. ದಿಲ್ಲಿಯಿಂದ ಹಿಂದಿರುಗಿ ಕೆಲಕಾಲಾನಂತರ, 1955ರಲ್ಲಿ ಅವರು ನಿಧನರಾದರು.

## ಗಳಗನಾಥ

'ಕನ್ನಡದಲ್ಲಿ ಓದಲು ಯೋಗ್ಯವಾದದ್ದು ಏನಾದರೂ ಇದೆಯೇ ?' ಎಂದು ಕೇಳುತ್ತಿದ್ದ ಕಾಲದಲ್ಲಿ ರಮ್ಯ ಕೃತಿಗಳ ಮೂಲಕ ಅಪಾರ ಕನ್ನಡ ವಾಚಕವೃಂದವನ್ನು ನಿರ್ಮಿಸಿ ಕೃತಕೃತ್ಯರಾದವರು, ಗಳಗನಾಥರು. ಗಳಗನಾಥರು ಸ್ವತಂತ್ರ ಕೃತಿಗಳನ್ನು ರಚಿಸಿದರು. ಜೊತೆಗೆ ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ರೂಪಾಂತರಿಸಿದರು. ಅವರ ಬರಹ ಹೊಸಗನ್ನಡ ಲೇಖಕರಿಗೊಂದು ಮಾದರಿಯಾಯಿತು.

ವೆಂಕಟೇಶ ತಿರಕೋ ಕುಲಕರಣಿ ಜನಿಸಿದ್ದು 1869ರ ಜನವರಿ 5ರಂದು. ಧಾರವಾಡ ಜಿಲ್ಲೆಯ ಗಳಗನಾಥ ಗ್ರಾಮದಲ್ಲಿ. ಮುಂದೆ ಅವರು ಬರೆಹಗಾರರಾದ ಮೇಲೆ ಗಳಗನಾಥರೆಂದೇ ಪ್ರಸಿದ್ಧರಾದರು. ತಂದೆ ಶಾನುಭೋಗರು. ವೆಂಕಟೇಶ ತಿರಕೋ ಕುಲಕರಣಿ ಆಗಿನ ಮುಲ್ಕಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಮೇಲೆ ಧಾರವಾಡದ ಟ್ರೇನಿಂಗ್ ಕಾಲೇಜಿನಲ್ಲಿ ತರಬೇತಿ ಪಡೆದರು. ಅನಂತರ ಪ್ರಾಥಮಿಕ ಶಾಲೆಯ ಶಿಕ್ಷಕ ವೃತ್ತಿಯನ್ನು ಕೈಗೊಂಡರು. ಶಿಕ್ಷಕರಾಗಿ ಸುಮಾರು 20 ವರ್ಷ ಸೇವೆ ಸಲ್ಲಿಸಿದರು. ಆದರೆ ನೌಕರಿ ಅವರ ಸ್ವತಂತ್ರ ಪ್ರವೃತ್ತಿಗೆ ಸರಿಹೋಗಲಿಲ್ಲ. ಕೆಲಸವನ್ನು ಬಿಟ್ಟರು. ಹಾವೇರಿಯ ಸಮೀಪದ ಅಗಡಿಗೆ ಬಂದರು. ಅಲ್ಲಿ ಒಂದು ಮುದ್ರಣಾಲಯವನ್ನು ತೆರೆದರು; ಪಾಠಶಾಲೆಯನ್ನು ಸ್ಥಾಪಿಸಿದರು; 'ಸದ್ಬೋಧ ಚಂದ್ರಿಕೆ' ಎಂಬ ಮಾಸ ಪತ್ರಿಕೆಯನ್ನು ಆರಂಭಿಸಿದರು.



ಪ್ರಬುದ್ಧ ಕನ್ನಡ : ಗಳಗನಾಥ

ಗಳಗನಾಥರು ಬರೆದ ಐತಿಹಾಸಿಕ ಕಾದಂಬರಿಗಳು 'ಸದ್ಬೋಧ ಚಂದ್ರಿಕೆ'ಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗತೊಡಗಿದುವು. ಆ ಕಾಲದಲ್ಲಿ ಕನ್ನಡ ಪುಸ್ತಕ ಓದುತ್ತಿದ್ದವರ ಸಂಖ್ಯೆ ಬಹಳ ಕಡಮೆ. ಸ್ವತಂತ್ರ ಗದ್ಯಕೃತಿಗಳನ್ನು ರಚಿಸುವ ಸಾಹಸ ಕೈಗೊಳ್ಳುವವರಿಗೆ ಪ್ರೋತ್ಸಾಹವಿರಲಿಲ್ಲ. ಇಂಗ್ಲಿಷ್ ಬಲ್ಲವರು ಆಂಗ್ಲ ಸಾಹಿತ್ಯಕೃತಿಗಳನ್ನು ಓದುತ್ತಿದ್ದರು. ಗಳಗನಾಥರ ಕಾದಂಬರಿ ಧಾರಾವಾಹಿಯಾಗಿ ಪ್ರಸಾರವಾಗತೊಡಗಿದ್ದು, ಈ ಸನ್ನಿವೇಶದಲ್ಲಿ. ಮೊದಲಿಗೆ 'ಪ್ರಬುದ್ಧ ಪದ್ಮನಯನೆ' ಎಂಬ ಸ್ವತಂತ್ರ ರಮ್ಯ ಕಾದಂಬರಿಯನ್ನು ಪ್ರಕಟಿಸಿದರು. ಇವರ ಕಾದಂಬರಿಗಳು ಜನರ ಮೇಲೆ ಎಷ್ಟೊಂದು ಪ್ರಭಾವ ಬೀರಿದುವೆಂದರೆ ಹೆಣ್ಣುಮಕ್ಕಳು ಅಡುಗೆ ಮಾಡುವುದನ್ನು ಮರೆತು ಅಂಚೆಯವನು 'ಸದ್ಬೋಧ ಚಂದ್ರಿಕೆ' ತರುವುದನ್ನೇ ಆತುರದಿಂದ ಕಾಯುತ್ತಿದ್ದರು !

ಗಳಗನಾಥರ ಶೈಲಿ ಪಂಡಿತ ಪಾಮರರಿಬ್ಬರನ್ನೂ ರಂಜಿಸುತ್ತಿತ್ತು. ಅವರ ಕಾದಂಬರಿಗಳ ರಮ್ಯ ಕಥಾವಸ್ತು ಎಲ್ಲರ ಮನಸೆಳೆಯುತ್ತಿತ್ತು.

ಗಳಗನಾಥರು ಒಟ್ಟು 24 ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಹದಿಮೂರು 'ಸದ್ಬೋಧ ಚಂದ್ರಿಕೆ'ಯಲ್ಲಿ ಧಾರಾವಾಹಿಯಾಗಿ ಬೆಳಕು ಕಂಡು ಅನಂತರ ಪುಸ್ತಕಗಳಾದುವು. ಗಳಗನಾಥರಿಗೆ ಹಿಂದೂ ಸಂಸ್ಕೃತಿ, ವೈದಿಕ ಸಾಹಿತ್ಯ ಮುಂತಾದುವುಗಳಲ್ಲಿ ವಿಶೇಷ ಆಸಕ್ತಿ ಇತ್ತು. ಒಂಬತ್ತು ಪೌರಾಣಿಕ ಕಥೆಗಳನ್ನೂ ಮೂರು ಸತ್ಪುರುಷರ ಚರಿತ್ರೆಗಳನ್ನೂ ಅವರು ಬರೆದಿದ್ದಾರೆ.

'ಪ್ರಬುದ್ಧ ಪದ್ಮನಯನೆ', 'ಕುಮುದಿನಿ', 'ಮಾಧವ ಕರುಣಾವಿಲಾಸ', 'ದುರ್ಗದ ಬಿಚ್ಚುಗತ್ತಿ'–ಇವು ಅವರ ನಾಲ್ಕು ಸ್ವತಂತ್ರ ಕೃತಿಗಳು. 'ಪ್ರಬುದ್ಧ ಪದ್ಮನಯನೆ' ಒಂದು ಕಾಲ್ಪನಿಕ ರಮ್ಯ ಕಥಾನಕವನ್ನು ಒಳಗೊಂಡದ್ದು. ಇದೇ ಅವರ ಮೊದಲ ಕೃತಿ. ಎರಡನೆಯ ಕಾದಂಬರಿ 'ಕುಮುದಿನಿ' ಐತಿಹಾಸಿಕ. ವಿಜಯನಗರ ಅಳಿದುಹೋಗಿ 50 ವರ್ಷ ಸಂದ ಬಳಿಕ ಆ ಸಾಮ್ರಾಜ್ಯವನ್ನು ಮತ್ತೆ ಕಟ್ಟಲು ಪ್ರಯತ್ನಿಸಿದ ಸರದಾರರ ಪೈಕಿ ಒಬ್ಬನಾದ ಎಚ್ಚಮನಾಯಕ ಈ ಕಾದಂಬರಿಯ ಪ್ರಧಾನ ಪಾತ್ರ. ಹಕ್ಕಬುಕ್ಕರು ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿದ ಕಥೆ—'ಮಾಧವ ಕರುಣಾವಿಲಾಸ'. ಕನ್ನಡದ ಅಭಿಮಾನ ಕೆಚ್ಚು ತುಂಬಿಕೊಂಡ ಗಳಗನಾಥರ ಮೇರುಕೃತಿ ಇದು. ಇದರಲ್ಲಿರುವ ಐತಿಹಾಸಿಕ ಅಂಶಗಳ ಬಗೆಗೆ ಭಿನ್ನಾಭಿಪ್ರಾಯವಿದೆ. ಇನ್ನೊಂದು ಸ್ವತಂತ್ರ ಕೃತಿ 'ದುರ್ಗದ ಬಿಚ್ಚುಗತ್ತಿ' ಚಿತ್ರದುರ್ಗ ಪಾಳೆಯಗಾರ ಭರಮನಾಯಕನನ್ನು ಕುರಿತದ್ದು. ಮುದ್ದಣನೆಂಬ ಪ್ರಬಲ ದಳವಾಯಿಯ ಪಾತ್ರ ಇಲ್ಲಿ ಪ್ರಧಾನ. ಗಳಗನಾಥರು ಇದರ ಎರಡನೆಯ ಭಾಗವನ್ನು ಬರೆದಿರುವರಾದರೂ ಅದು ಅಚ್ಚಾಗಿಲ್ಲ. ಹಸ್ತಪ್ರತಿ ಕಳೆದುಹೋಗಿದೆ. ಗಳಗನಾಥರು ರೂಪಾಂತರ ಮಾಡಿದ ಕೃತಿಗಳಲ್ಲಿ ಹೆಚ್ಚಿನವು ಮರಾಠಿ ಮೂಲದಿಂದ ಬಂದವು; ಪ್ರಧಾನವಾಗಿ, ಮಹಾರಾಷ್ಟ್ರದ ಇತಿಹಾಸಕ್ಕೆ ಸಂಬಂಧಿಸಿದುವು. ಕೆಲವು ಬಂಗಾಲಿಗಳ ಮತ್ತು ರಜಪೂತರ ಇತಿಹಾಸಕ್ಕೆ ಸಂಬಂಧಿಸಿದುವು. ಮರಾಠೀ ಮೂಲದ ವಿಜಯನಗರ ವಿನಾಶ ಸಮಯದ ಕೃತಿ 'ಕನ್ನಡಿಗರ ಕರ್ಮಕಥೆ' ರೂಪಾಂತರವಾದರೂ ಸ್ವತಂತ್ರ ಕೃತಿಯ ಹಿರಿಮೆಯನ್ನು ಪಡೆದಿದೆ.

ಗಳಗನಾಥರು ಅಗಡಿಯಲ್ಲಿ ಹಲವು ವರ್ಷ ಕಳೆದ ಮೇಲೆ ಹಾವೇರಿಗೆ ಬಂದು ನೆಲೆಸಿದರು. ಅಲ್ಲಿ 'ಸದ್ಗುರು' ಪತ್ರಿಕೆಯನ್ನು ನಡೆಸಿದರು. ಅದರಲ್ಲಿಯೂ ಧಾರಾವಾಹಿಯಾಗಿ ಕಾದಂಬರಿಗಳನ್ನು ಪ್ರಕಟಿಸಿದರು. ಪುಸ್ತಕ ಪ್ರಕಟಣೆ, ಪತ್ರಿಕೋದ್ಯಮಗಳಲ್ಲಿ ಅವರು ಕಳೆದ ಕಾಲಾವಧಿ ಸುಮಾರು 30 ವರ್ಷ. ಸಾಹಿತ್ಯ ಸೃಷ್ಟಿಯ ದೃಷ್ಟಿಯಿಂದ ಈ ಅವಧಿ ಗಳಗನಾಥರ ಜೀವನದಲ್ಲಿ ತುಂಬ ಫಲಪ್ರದವಾಯಿತಾದರೂ ಗ್ರಂಥ ಪ್ರಕಟಣೆ ಅವರನ್ನು ಆರ್ಥಿಕ ಮುಗ್ಗಟ್ಟಿಗೆ ಗುರಿಮಾಡಿತು.

ಸಾಲದ ಹೊರೆಯಿಂದ ಮುಕ್ತರಾಗುವುದಕ್ಕೋಸ್ಕರವೆಂದು ಅವರು ತಮ್ಮ ಇಳಿವಯಸ್ಸಿನಲ್ಲಿ ಗ್ರಂಥ ಪ್ರತಿಗಳನ್ನು ಹೊತ್ತು ಮಾರಾಟಕ್ಕೆಂದು ಊರೂರು ಸುತ್ತಬೇಕಾಯಿತು. ಹಾಗೆ ಬೆಂಗಳೂರಿಗೆ ಬಂದಿದ್ದಾಗ 1942ರ ಏಪ್ರಿಲ್ 22ರಂದು ಕೊನೆಯುಸಿರೆಳೆದರು.

## ಗ್ರಂಥಕರ್ತ

ಯಾವುದೇ ಗ್ರಂಥದ ಕರ್ತೃ, ಗ್ರಂಥಕರ್ತ. ಪ್ರಕಟಿತ ಕೃತಿಗಳಿರುವ ಕವಿ, ಕಥೆಗಾರ, ಕಾದಂಬರಿಕಾರ, ನಾಟಕಕಾರ, ವಿಮರ್ಶಕ —ಇವರೆಲ್ಲರೂ ಗ್ರಂಥಕರ್ತರೇ.

ಗ್ರಂಥದ ಪ್ರಕಟಣೆಯಿಂದ ಬರೆದವನ ಕೃತಿ ಓದುಗರನ್ನು ಸೇರುತ್ತದೆ. ಗ್ರಂಥಕರ್ತನ ಜೀವನದೃಷ್ಟಿ, ಸಂದೇಶ, ಧ್ಯೇಯಧೋರಣೆಗಳೂ, ಇಂಗಿತಗಳೂ ಗ್ರಂಥದ ಮೂಲಕ ಓದುಗರನ್ನು ತಲುಪುತ್ತವೆ. ಹಾಗೆಯೇ ಅವನ ವಿದ್ವತ್ತು, ಪ್ರತಿಭೆಗಳ ಪರಿಚಯವೂ ಆಗುತ್ತದೆ. ಕೃತಿಯ ಹಿರಿಮೆ, ಲೋಪದೋಷಗಳು, ವಿಮರ್ಶೆಗೆ ಗುರಿಯಾಗಲು ಅವಕಾಶ ಏರ್ಪಡುತ್ತದೆ. ಭಾಷಾಂತರ, ರಂಗಪ್ರಯೋಗ, ಪ್ರಸಾರ ಚಿತ್ರೀಕರಣ —ಇವುಗಳಿಗೆ ಒಂದು ಗ್ರಂಥ ಮೂಲವಸ್ತುವಾಗಬಹುದು.

ಗ್ರಂಥಕರ್ತ ತನ್ನ ಕೃತಿಗಳನ್ನು ಪ್ರಕಾಶಕರಿಗೆ ಕೊಡಬಹುದು ; ಅಥವಾ ತಾನೇ ಪ್ರಕಟಿಸಬಹುದು. ಸಾಧಾರಣವಾಗಿ ಪ್ರಕಾಶನ ಉದ್ಯಮದಲ್ಲಿ ತೊಡಗಿರುವವರು ಗ್ರಂಥಕರ್ತನ ಕೃತಿಗಳನ್ನು ಅವನಿಂದ ಪಡೆದು ಅವನ್ನು ಪ್ರಕಟಿಸುತ್ತಾರೆ. ಗ್ರಂಥಕರ್ತ ತನ್ನ ಕೃತಿಯನ್ನು ಪ್ರಕಾಶನ ಸಂಸ್ಥೆಗೆ ಒಪ್ಪಿಸಿದರೂ ಆ ಕೃತಿಯ ಸ್ವಾಮ್ಯವನ್ನು ತಾನೇ ಇರಿಸಿಕೊಳ್ಳುವುದು ಪದ್ಧತಿ. ಒಂದೊಂದು ವೇಳೆ ಕೃತಿಯ ಮೇಲಿನ ಹಕ್ಕುಗಳೆಲ್ಲವನ್ನೂ ಪ್ರಕಾಶಕರಿಗೆ ಬಿಟ್ಟುಕೊಡುವುದೂ ಉಂಟು.

ಗ್ರಂಥಕರ್ತನಿಗೆ ಬರವಣಿಗೆಯೇ ಉದ್ಯೋಗವಾಗಿರಬಹುದು ; ಅಥವಾ ಬೇರೆ ಉದ್ಯೋಗದಲ್ಲಿದ್ದುಕೊಂಡು ಕೃತಿ ರಚನೆ ಮಾಡಬಹುದು.

ಜನತೆಯ ಅಭಿರುಚಿಗಳನ್ನೂ ವಿಚಾರದೃಷ್ಟಿಯನ್ನೂ ರೂಪಿಸುವಲ್ಲಿ ಗ್ರಂಥಕರ್ತನ ಪಾತ್ರ ದೊಡ್ಡದು. ಚಾರಿತ್ರಿಕ ದೃಷ್ಟಿಯಿಂದ ನೋಡಿದರೆ, ಕೆಲವು ಗ್ರಂಥಗಳು ಸಮಾಜದ ಚಿಂತನೆಯ ಪಥವನ್ನೇ ಬದಲಾಯಿಸಿದ್ದನ್ನು, ಕ್ರಾಂತಿಗೆ ಕಾರಣವಾದದ್ದನ್ನು ಕಾಣುತ್ತೇವೆ.

ಸಮಾಜದಲ್ಲಿ ಗ್ರಂಥಕರ್ತನಿಗೆ ವಿಶಿಷ್ಟ ಸ್ಥಾನವಿದೆ ; ಮಹತ್ವದ ಸ್ಥಾನವಿದೆ.

## ಗ್ರಂಥ ಸಂಪಾದನೆ

ಗ್ರಂಥ ಸಂಪಾದನೆ ಎಂದರೆ, ಪ್ರಾಚೀನ ಗ್ರಂಥಗಳನ್ನು ಶೋಧಿಸಿ ಅವುಗಳನ್ನು ಪರಿಷ್ಕರಿಸುವುದು. ಪೂರ್ವಕಾಲದಲ್ಲಿ ಮುದ್ರಣ ಸೌಲಭ್ಯ ಇರಲಿಲ್ಲ. ಭೂರ್ಜಪತ್ರ, ತಾಳೆಗರಿಗಳ ಮೇಲೆ 'ಕಂಠ'ದಿಂದ ಅಂದರೆ, ಚೂಪಾದ ಲೋಹದ ಕಡ್ಡಿಯಿಂದ, ಬರೆಯುತ್ತಿದ್ದರು. ಹೀಗೆ ಬರೆದ ಸಹಸ್ರಾರು ಕೃತಿಗಳು ನಮಗೆ ದೊರೆತಿವೆ. ಅಲ್ಲದೆ, ಕಾಗದದ ಮೇಲೆ ಬರೆದ ಪ್ರಾಚೀನ ಗ್ರಂಥಗಳೂ ಇವೆ. ಇವನ್ನೆಲ್ಲ ಹಸ್ತಪ್ರತಿಗಳು ಎನ್ನುತ್ತಾರೆ. ಏಕೆಂದರೆ ಇವು ಕೈಯಿಂದ ಬರೆದ ಗ್ರಂಥದ ಪ್ರತಿಗಳು.

ಪ್ರಾಚೀನ ಕವಿಗಳು, ಲೇಖಕರು ಬರೆದ ಮೂಲಪ್ರತಿಗಳು ನಮಗೆ ಈಗ ಸಿಗುತ್ತಿಲ್ಲ. ಕಾಲಕಳೆದಂತೆ ಅವು ಒಂದಲ್ಲ ಒಂದು ಕಾರಣದಿಂದ ಅಗ್ನಿಪ್ರಮಾದ, ನೆರೆ–ಹಾವಳಿ, ಸರಿಯಾದ ರಕ್ಷಣೆ ಇಲ್ಲದಿರುವುದು ಇಂಥ ಕಾರಣಗಳಿಂದ ನಾಶವಾಗಿರಬಹುದು. ಆ ಮೂಲಪ್ರತಿಗಳನ್ನು ಅನುಸರಿಸಿ ಬೇರೆಯವರು ಬರೆದ 'ಪ್ರತಿ'ಗಳು ಉಳಿದುಬಂದು ನಮಗೆ ಸಿಗಬಹುದು. ಆದರೆ ಇಂಥ ಪ್ರತಿಗಳಲ್ಲಿ ಕೆಲವು ದೋಷಗಳಿರುವುದು ಸಾಧ್ಯ. ಆದ್ದರಿಂದ ಇವನ್ನು ಮುದ್ರಿಸುವುದಕ್ಕೆ ಮೊದಲು ಈ ದೋಷಗಳನ್ನು ನಿವಾರಿಸುವುದು ಅವಶ್ಯ. ಈ ಕಾರ್ಯವನ್ನು ನಡೆಸುವವನು ಗ್ರಂಥ ಸಂಪಾದಕ. ಅವನ ಕೆಲಸ ತುಂಬ ಹೊಣೆಗಾರಿಕೆಯುದ್ದು ಮತ್ತು ಶ್ರಮಪೂರ್ಣವಾದದ್ದು. ಗ್ರಂಥ ಸಂಪಾದಕ ಮೊದಲು ಕೈಗೊಳ್ಳಬೇಕಾದ ಕೆಲಸ, ತಾನು ಸಂಪಾದಿಸಬಯಸುವ ಗ್ರಂಥದ ಹಸ್ತಪ್ರತಿಗಳನ್ನು ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಸಂಗ್ರಹಿಸುವುದು. ಬಳಿಕ ಹಸ್ತಪ್ರತಿಗಳನ್ನು ಪರಿಶೀಲಿಸಿ, ಅವನ್ನು ಬರೆದ ಕಾಲವನ್ನು ಪತ್ತೆಹಚ್ಚಬೇಕು. ಆಮೇಲೆ ಕಾಲಮಾನದ ದೃಷ್ಟಿಯಿಂದ ಕವಿಯ ಕಾಲಕ್ಕೆ ಆದಷ್ಟು ಹತ್ತಿರವಾದ ಅವಧಿಯಲ್ಲಿ ಪ್ರತಿಮಾಡಲ್ಪಟ್ಟ, ಕವಿಯ ವಾಸಸ್ಥಳಕ್ಕೆ ಸಮೀಪವಾದ ಹಾಗೂ ಹೆಚ್ಚು ಶುದ್ಧವಾಗಿರುವ ಹಸ್ತಪ್ರತಿಗಳನ್ನು ವಿಂಗಡಿಸಿಕೊಳ್ಳಬೇಕು. ಅನಂತರ ತಾನು ಸಂಗ್ರಹಿಸಿರುವ ಹಸ್ತಪ್ರತಿಗಳ ಪಾಠದಲ್ಲಿ ಇರುವ ವ್ಯತ್ಯಾಸಗಳನ್ನು ಗುರುತಿಸಬೇಕು. ಈ ಹಂತದ ಕೆಲಸ ಮುಗಿದ ಬಳಿಕ, ಗ್ರಂಥದ ಶುದ್ಧ ಪಾಠವನ್ನು ನಿರ್ಣಯಿಸುವ ಕೆಲಸದಲ್ಲಿ ತೊಡಗಬೇಕು.

ಈ ಕೆಲಸವನ್ನು ನಡೆಸುವಾಗ ಗ್ರಂಥ ಸಂಪಾದಕ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಮೂಲದಿಂದ ಪ್ರತಿಮಾಡುವಾಗ ಬರೆವಣಿಗೆಯಲ್ಲಿ ಕಾಗುಣಿತದ ತಪ್ಪುಗಳಾಗಿರಬಹುದು. ಮಾತುಗಳು ಬಿಟ್ಟುಹೋಗಿರಬಹುದು. ಗ್ರಂಥದಲ್ಲಿ ಕ್ಲಿಷ್ಟ ಪದವಿದ್ದರೆ ಲಿಪಿಕಾರ ಅದರ ಬದಲು ಸುಲಭವಾದ ಬೇರೆ ಮಾತನ್ನೇ ಬರೆದಿರಬಹುದು. ಇದಲ್ಲದೆ ಹಲವಾರು ಕಾರಣಗಳಿಂದ ಹಸ್ತಪ್ರತಿ ಕೆಟ್ಟು, ಬರೆವಣಿಗೆಯ ಕೆಲವು ಪದಗಳನ್ನು ಸರಿಯಾಗಿ ಓದಲು ಆಗದಿರಬಹುದು.

ಕೆಲವು ಸಂದರ್ಭಗಳಲ್ಲಿ ಲಿಪಿಕಾರ ಮೂಲಗ್ರಂಥದಲ್ಲಿ ಇಲ್ಲದೆ ಇದ್ದ ಭಾಗಗಳನ್ನು ತಾನೇ ಬರೆದು ಸೇರಿಸುವುದೂ ಉಂಟು. ಅಲ್ಲದೆ ತಾನು ಪ್ರತಿಮಾಡಲು ಆಧಾರವಾಗಿ ಇಟ್ಟುಕೊಂಡಿದ್ದ ಪ್ರತಿಯಲ್ಲಿ ಯಾರಾದರೂ ಬರೆದಿದ್ದ ಟಿಪ್ಪಣಿಯನ್ನೋ ಮತ್ತಿನ್ನಾವುದಾದರೂ ಬರೆವಣಿಗೆಯನ್ನೋ ಮೂಲ ಗ್ರಂಥದ ಭಾಗವೆಂದು ಭ್ರಮಿಸಿ ಅದನ್ನೂ ಗ್ರಂಥದಲ್ಲಿ ಲಿಪಿಕಾರ ಸೇರಿಸಿರಬಹುದು.

ಇಂಥ ಲೋಪದೋಷಗಳನ್ನೆಲ್ಲ ಗುರುತಿಸಿ ಅವನ್ನು ಸಾಧ್ಯವಾದಷ್ಟು ಮಟ್ಟಿಗೆ ಪರಿಹರಿಸುವುದು ಸಂಪಾದಕನ ಕರ್ತವ್ಯ. ಹಸ್ತಪ್ರತಿಯಲ್ಲಿರಬಹುದಾದ ಲೇಖನ ಸ್ಖಾಲಿತ್ಯಗಳನ್ನು ತಿದ್ದುವುದು ಅಷ್ಟೇನೂ ಕಷ್ಟದ ಕೆಲಸವಲ್ಲ. ವಿದ್ವಾಂಸನಾದ ಗ್ರಂಥ ಸಂಪಾದಕ ಈ ಕೆಲಸವನ್ನು ಸುಲಭವಾಗಿ ಮಾಡಬಲ್ಲ. ಸಂಗ್ರಹಿಸಿರುವ ಹಸ್ತಪ್ರತಿಗಳಲ್ಲಿ ಭಿನ್ನ ಪಾಠಗಳು ಇರುವ ಸಂದರ್ಭದಲ್ಲಿ ಯಾವುದು ಶುದ್ಧ ಪಾಠ ಎಂಬುದನ್ನು ನಿರ್ಣಯಿಸುವಾಗ ಸಂಪಾದಕ ತುಂಬ ಎಚ್ಚರಿಕೆಯಿಂದಿರಬೇಕಾಗುತ್ತದೆ. ಈ ಕಾರ್ಯವನ್ನು ನಿರ್ವಹಿಸಲು ಅವನಿಗೆ ಗ್ರಂಥ ರಚನೆಯಾದ ಕಾಲದ ಭಾಷೆ ಮತ್ತು ಪ್ರಯೋಗದ ಸ್ವರೂಪ ಚೆನ್ನಾಗಿ ಗೊತ್ತಿರಬೇಕಾಗುತ್ತದೆ. ಹಾಗೆಯೇ ಕವಿ ಹೃದಯವನ್ನು ಗುರುತಿಸುವಂಥ ಸಹೃದಯತೆ, ವಿಮರ್ಶಾ ಬುದ್ಧಿಗಳೂ ಇರಬೇಕಾಗುತ್ತದೆ. ಇವಿದ್ದರೆ ಮಾತ್ರ ಸಂಪಾದಕ ಶುದ್ಧ ಪಾಠವನ್ನು ನಿರ್ಣಯಿಸಲು ಸಾಧ್ಯ. ಪಾಠಾಂತರಗಳು ಕಂಡುಬಂದ ಸಂದರ್ಭದಲ್ಲಿ ಕವಿ ಮೂಲದಲ್ಲಿ ಯಾವ ಮಾತುಗಳನ್ನು ಉಪಯೋಗಿಸಿರಬಹುದು ಎಂಬುದನ್ನು ಔಚಿತ್ಯದೃಷ್ಟಿಯಿಂದ ನಿರ್ಣಯಿಸಬೇಕಾಗುತ್ತದೆ. ಗ್ರಂಥದ ಬರೆವಣಿಗೆಯ ಯಾವುದಾದರೂ ಭಾಗವನ್ನು ಸರಿಯಾಗಿ ಓದಲು ಸಾಧ್ಯವಿಲ್ಲದಿದ್ದಾಗ ಆ ಮಾತು ಯಾವುದಿದ್ದಿರಬಹುದು ಎಂಬುದನು ಸಂಪಾದಕ ಊಹಿಸಬೇಕಾಗುತ್ತದೆ. ಈ ಸಂದರ್ಭದಲ್ಲೂ ಅವನ ಪಾಂಡಿತ್ಯ ಸಹೃದಯತೆ, ಊಹಾಶಕ್ತಿಗಳು ಉಪಯೋಗಕ್ಕೆ ಬರುತ್ತವೆ.

ಮೂಲಗ್ರಂಥದಲ್ಲಿ ಇಲ್ಲದ ವಾಕ್ಯ ಅಥವಾ ಪ್ರಸಂಗಗಳನ್ನು ಲಿಪಿಕಾರ ತನ್ನ ಹಸ್ತಪ್ರತಿಯಲ್ಲಿ ಸೇರಿಸಿರುವ ಸಂದರ್ಭಗಳಲ್ಲಿ ಅವನ್ನು ಗೊತ್ತು ಪಚ್ಚಿ ತೆಗೆದುಹಾಕುವಾಗ ಕೂಡ ಸಂಪಾದಕ ಶ್ರಮವಹಿಸಿ ಕೆಲಸಮಾಡ ಬೇಕಾಗುತ್ತವೆ. ಉದಾ : ಮಹಾಭಾರತದಲ್ಲಿ ಬರುವ ಊರ್ವಶಿ – ಅರ್ಜುನರ ಪ್ರಸಂಗ. ಮೂಲ ಮಹಾಭಾರತದಲ್ಲಿ ಈ ಪ್ರಸಂಗದ ನಿರೂಪಣೆ ಇರಲಿಲ್ಲ. ಮಹಾಭಾರತದ ಪರಿಷ್ಕೃತ ಪಾಠವನ್ನು ಸಿದ್ಧಗೊಳಿಸಲು ಹೊರಟ ಡಾ॥ ಸುಕ್ತಂಕರ್ ಅವರು ಮಹಾಭಾರತದ ಹಲವಾರು ಹಸ್ತಪ್ರತಿಗಳನ್ನು ಪರಿಶೀಲಿಸಿ ಈ ಪ್ರಸಂಗ ಆಮೇಲೆ ಸೇರಿಕೊಂಡದ್ದು ಎಂದು ನಿರ್ಧರಿಸಿದರು.

ಗ್ರಂಥ ಪರಿಷ್ಕರಣದ ಅವಶ್ಯತೆ ಮಹತ್ವಗಳನ್ನು ನಮ್ಮ ರಾಷ್ಟ್ರದ ಪ್ರಾಚೀನ ಪಂಡಿತರು ಅರಿತಿದ್ದರೆಂಬುದಕ್ಕೆ ಆಧಾರಗಳಿವೆ.

ಪ್ರಾಚೀನ ಗ್ರಂಥಗಳ ಸಂಸ್ಕರಣ, ರಕ್ಷಣೆಯ ಕೆಲಸ ತುಂಬ ಹಿಂದಿನಿಂದ ನಡೆದುಬಂದಿದೆ. ಗ್ರೀಕ್ ಕವಿ ಹೋಮರನ 'ಇಲಿಯಡ್' ಮತ್ತು 'ಒಡೆಸ್ಸಿ' ಕಾವ್ಯಗಳನ್ನು ಲಭ್ಯ ಹಸ್ತಪ್ರತಿಗಳ ಸಹಾಯದಿಂದ, ಕ್ರಿ. ಪೂ. 274ರ ಸುಮಾರಿನಲ್ಲಿ ಪರಿಷ್ಕರಿಸಿದವನು, ಈಜಿಪ್ಟಿನ ಅರಸು ಟಾಲೆಮಿಯ ಆಸ್ಥಾನದಲ್ಲಿದ್ದ ಜೆನೋಡೋಟಸ್. ಇವನು ಗ್ರಂಥ ಸಂಪಾದನೆ ಕಾರ್ಯ ಕೈಗೊಂಡವರಲ್ಲಿ ಮೊದಲಿಗ. ಯೂರೋಪಿನಲ್ಲಿ ನಡೆದ ಗ್ರಂಥ ಸಂಪಾದನೆಯ ಆರಂಭದ ಹಂತವಿದು. ಯೂರೋಪಿನ ನವೋದಯ ಕಾಲದಲ್ಲಿ ಹಾಲೆಂಡ್, ಇಂಗ್ಲೆಂಡ್, ಜರ್ಮನಿಗಳಲ್ಲಿ ಗ್ರೀಕ್, ಲ್ಯಾಟಿನ್ ಗ್ರಂಥಗಳ ಪರಿಷ್ಕರಣ ಕಾರ್ಯ ನಡೆಯಿತು.

ಸಂಪಾದಿತ ಗ್ರಂಥಕ್ಕೆ ವಿಸ್ತಾರವಾದ ಪೀಠಿಕೆಗಳನ್ನು ಬರೆಯುವ ಪದ್ಧತಿಯೂ ಬೆಳೆದುಬಂದಿದೆ. ಪೀಠಿಕೆಯಲ್ಲಿ ಗ್ರಂಥಕರ್ತನ ಕಾಲ, ದೇಶ, ವಂಶ, ಜೀವನಚರಿತ್ರೆ, ಶೈಲಿ, ವ್ಯಾಕರಣ ಛಂದಸ್ಸುಗಳಿಗೆ ಸಂಬಂಧಿಸಿದ ಮುಖ್ಯಾಂಶಗಳು : ಪಾತ್ರರಚನೆಯ ಸ್ವರೂಪ; ಕೊನೆಯಲ್ಲಿ ಕಠಿಣ ಪದಗಳ ಶಬ್ದಕೋಶ ಹಾಗೂ ಅಗತ್ಯವಿದ್ದ ಸಂದರ್ಭಗಳಲ್ಲಿ ಟಿಪ್ಪಣಿಗಳು ಇಷ್ಟು ಮಾಡಿದಾಗ ಗ್ರಂಥಸಂಪಾದನೆ ಪೂರ್ಣವಾಗುತ್ತದೆ. ಕನ್ನಡದ ಶ್ರೇಷ್ಠ ಗ್ರಂಥ ಸಂಪಾದಕರಾದ ಡಿ. ಎಲ್. ನರಸಿಂಹಾಚಾರ್ಯರು "ಜೀರ್ಣವಾದ ಒಂದು ದೇವಾಲಯವನ್ನು ಉದ್ಧಾರಮಾಡುವ ಕಾರ್ಯದಂತೆ, ಸಂಸ್ಕೃತಿಯ ಆಕರವಾಗಿರುವ ಪ್ರಾಚೀನ ಗ್ರಂಥಗಳ ಪಾಠವನ್ನು ಪರಿಷ್ಕಾರಗೊಳಿಸುವುದು ಪುಣ್ಯಕರವಾದ ಕಾರ್ಯ" ಎಂದಿದ್ದಾರೆ. ಒಂದು ಜನಾಂಗದ ಸಾಂಸ್ಕೃತಿಕ ಸಂಪತ್ತನ್ನು ಉಳಿಸಿಕೊಳ್ಳುವುದರಲ್ಲಿ ಗ್ರಂಥ ಸಂಪಾದನೆಗೆ ಮಹತ್ವದ ಸ್ಥಾನವಿದೆ. ಉತ್ತಮರೀತಿಯಲ್ಲಿ ಪರಿಷ್ಕರಿಸಲ್ಪಟ್ಟ ಪ್ರಾಚೀನ ಗ್ರಂಥಗಳು ನಮ್ಮ ಜ್ಞಾನಭಂಡಾರಕ್ಕೆ ಅಮೂಲ್ಯ ಕೊಡುಗೆಗಳಾಗುತ್ತವೆ.

## ಗಾರ್ಕಿ

ರಷ್ಯದ ಕಾಜಾಂಕ ನದಿಯತ್ತ ಚಾಚಿಕೊಂಡು ನಿಂತ ಗುಡ್ಡದ ಮೇಲೊಂದು ಕೋಡುಗಲ್ಲು. ಅದರ ಮೇಲೆ 19ರ ಹರೆಯದ ಒಬ್ಬ ಹುಡುಗ. ಕೈಯಲ್ಲಿ ಪಿಸ್ತೂಲು. ಗುರಿ ಅವನ ಎದೆಯತ್ತ. ಪಿಸ್ತೂಲು ಹಾರಿಸಿದಾಗ ಗುಂಡು ಅವನ ಎದೆ ಹೊಕ್ಕರೂ ಗುಂಡಿಗೆಗೆ ತಾಕದೆ, ಶ್ವಾಸಕೋಶವನ್ನು ಛೇದಿಸಿತು. ಈ ಆತ್ಮಹತ್ಯೆಯ ಪ್ರಯತ್ನಾನಂತರ ಆಸ್ಪತ್ರೆಗೆ ಸೇರಿಸಲ್ಪಟ್ಟ ಆ ತರುಣ ಬದುಕಿಕೊಂಡ. ಅನಂತರ ಅವನು ಮುಮ್ಮುಲ ಮರುಗಿದ. ತಾನು ಉಳಿದುಕೊಂಡದ್ದಕ್ಕಲ್ಲ, ಆತ್ಮಹತ್ಯಾ ಪ್ರಯತ್ನ ವಿಫಲವಾದದ್ದಕ್ಕಲ್ಲ –ಗುಂಡಿಕ್ಕಿಕೊಳ್ಳುವಂತೆ ಪ್ರೇರೇಪಿಸಿದ ತನ್ನ ಮನಸ್ಸಿನ ಕ್ಷಣಿಕ ದೌರ್ಬಲ್ಯಕ್ಕಾಗಿ. ಅಲೆಕ್ಸಿ ಮಾಕ್ಸಿಮೋವಿಶ್ ಪೆಷ್ಕೋವನ ಜೀವನದ ಒಂದು ಘಟನೆ ಇದು.


ವಲಿತರವಾಣಿ : ಗಾರ್ಕಿ

ನಿಜ್ನಿ ನೊವ್ಗೊರೋದ್ ಎಂಬಲ್ಲಿ 1868ರ ಮಾರ್ಚ್ 28ರಂದು ಅಲೆಕ್ಸಿ ಜನಿಸಿದ. ಪೆಷ್ಕೋವನ ತಂದೆ ಪೀಠೋಪಕರಣಗಳಿಗೆ ಮೆತ್ತೆ ಹಾಕುವವನು ; ಸ್ವಲ್ಪ ಕಾಲ ಹಡಗು ಕಟ್ಟೆಯಲ್ಲಿ ದಳ್ಳಾಳಿಯಾಗಿ ದುಡಿದಿದ್ದ. ಪೆಷ್ಕೋವನ ಬಾಲ್ಯ ಅಸ್ತ್ರಖಾನ್ ಹಡಗು ಕಟ್ಟೆಯಲ್ಲೇ ಕಳೆಯಿತು. ಪೆಷ್ಕೋವನು ಐದು ವರ್ಷದವನಿದ್ದಾಗ ತಂದೆ ಸತ್ತ. ತಾಯಿ ಬೇರೊಬ್ಬನನ್ನು ಮದುವೆ ಆದಳು. ಆದ್ದರಿಂದ ಅವನು ತಾತನ ಪೋಷಣೆಯಲ್ಲಿ ಉಳಿದ. ತಾತ ವ್ಯಾಪಾರಿ. ಸಂಪಾದನೆ ಇಳಿಮುಖವಾಗಿತ್ತು. ಪೆಷ್ಕೋವನನ್ನು ಎಂದೂ ಪ್ರೀತಿಯಿಂದ ನಡೆಸಿಕೊಂಡವನಲ್ಲ. 8–9ರ ವಯಸ್ಸಿನಲ್ಲೇ ಅವನನ್ನು ಕೆಲಸಕ್ಕೆ ಹಚ್ಚಿದ. ಪೆಷ್ಕೋವ್ ಮೊದಲ ಒಂದೆರಡು ತರಗತಿಗಳನ್ನೂ ಓದದೆಯೇ ದುಡಿಮೆ ಆರಂಭಿಸಿದ. ಅವನು ಮಾಡಿದ ಕೆಲಸಗಳಾದರೂ ಎಂಥೆಂಥವು ! —ಚಿಂದಿ ಆಯುವ ದುಡಿಮೆ, ಬಾಣಸಿಗವೃತ್ತಿ, ಹಡಗುಕಟ್ಟೆ ಕೂಲಿ, ರಾತ್ರಿ ಕಾವಲುಗಾರನ ಕೆಲಸ. ಬಡ ಶ್ರಮಜೀವಿಗಳ ದುರ್ಭರ ಜೀವನದ ಅನುಭವ ಅವನಿಗಾಯಿತು. ಆ ಜೀವನದಲ್ಲಿ ಅಕ್ಷರ ಕಲಿತ ಅಲೆಕ್ಸಿಗೆ ಪುಸ್ತಕಗಳೇ ಸರ್ವಸ್ವವಾದುವು. ಬದುಕೇ ಅವನ ವಿಶ್ವವಿದ್ಯಾನಿಲಯವಾಯಿತು.

ಯುವಕ ಅಲೆಕ್ಸಿ ತಾನು ಕಂಡದುದನ್ನು ಬರೆವಣಿಗೆಯಲ್ಲಿ ಮೂಡಿಸತೊಡಗಿದ. ತಾನು ಬರೆದಿದ್ದ ಕಥೆಯೊಂದರ ಹಸ್ತಪ್ರತಿಯೊಡನೆ ಅಲೆಕ್ಸಿ ಒಂದು ಪತ್ರಿಕೆಯ ಸಂಪಾದಕನನ್ನು ಕಾಣಲು ಹೋದ. ಕಥೆಯನ್ನೋದಿದ ಸಂಪಾದಕ, "ಇದರಲ್ಲಿ ಬರೆದವನ ಹೆಸರಿಲ್ಲ" ಎಂದ. ಅಲೆಕ್ಸಿ ಸಂಪಾದಕನ ಮೇಜಿನ ಮೇಲಿದ್ದ ಲೇಖನಿಯನ್ನೆತ್ತಿಕೊಂಡು ಹಸ್ತಪ್ರತಿಯ ಕೊನೆಯಲ್ಲಿ ಮಾಕ್ಸಿಂ ಗಾರ್ಕಿ ಎಂದು ಬರೆದ. 'ಗಾರ್ಕಿ' ಎಂದರೆ ಕಹಿ. ಆಗ ಅವನಿಗೆ 24 ವರ್ಷ. ಅಂದಿನಿಂದ ಅವನಿಗೆ ಮಾಕ್ಸಿಂ ಗಾರ್ಕಿ ಎಂದೇ ಹೆಸರಾಯಿತು.

1892ರಲ್ಲಿ ಸಣ್ಣ ಪತ್ರಿಕೆಯೊಂದರಲ್ಲಿ ಪ್ರಕಟಿಸಿದ 'ಮಕರ್ ಚೂದ್ರ' ಗಾರ್ಕಿಯ ಮೊದಲ ಕಥೆಯ ಹೆಸರು.

ಅವನ ಪ್ರಥಮ ಕಥಾಸಂಕಲನ 1898ರಲ್ಲಿ ಪ್ರಕಟವಾದಾಗ ಅವನಿಗೆ ಅಪಾರ ಯಶಸ್ಸು ಲಭಿಸಿತು. ಮೊದಲ ಕಾದಂಬರಿ 'ಫೋಮಾ ಗಾರ್ದೆಯೆವ್' ಮರುವರ್ಷ ಪ್ರಕಟವಾಯಿತು. ಗಾರ್ಕಿ ಅನಂತರ ಅನೇಕ ಕಾದಂಬರಿಗಳನ್ನು ಬರೆದ. ಅವನಿಗೆ ಹೆಸರು ತಂದದ್ದು 'ತಾಯಿ'. ಕ್ರಾಂತಿಪೂರ್ವ ರಷ್ಯದ ಹಿನ್ನೆಲೆಯಲ್ಲಿ ಬರೆದ ದೀರ್ಘ ಕಾದಂಬರಿ ಇದು.

ವ್ಯಕ್ತಿಯು ತನ್ನದೆಲ್ಲವನ್ನೂ ಜನರ ಸುಖಸಂತೋಷ. ಹೋರಾಟಗಳಿಗಾಗಿ ಬಿಟ್ಟುಕೊಟ್ಟಾಗ ಆತ ಪುನರ್ಜನ್ಮ ಹೊಂದುತ್ತಾನೆಂಬುದು ಗಾರ್ಕಿಯ ಪ್ರತಿಪಾದನೆ. 'ತಾಯಿ' ಅನೇಕ ಭಾಷೆಗಳಿಗೆ ಅನುವಾದವಾಗಿದೆ. ನಾಟಕಗಳನ್ನೂ ಗಾರ್ಕಿ ಬರೆದ. 1902ರಲ್ಲಿ ಪ್ರಕಟವಾದ 'ಕೆಳ ಆಳ' ಅವುಗಳಲ್ಲಿ ಪ್ರಸಿದ್ಧವಾದದ್ದು. ಸಮಾಜದ ಕೆಳವರ್ಗದ ಜನರ ಜೀವನ ಇದರ ವಸ್ತು.

ಮೊದಲಿಗೆ ಕಾಜಾನ್‌ನಲ್ಲಿ ಶ್ರಮಜೀವಿಯಾಗಿದ್ದ ಗಾರ್ಕಿ. ಬರೆಹಗಾರನಾದ ಮೇಲೆ ಲೆನಿನ್‌ಗ್ರಾಡಿಗೆ ಬಂದ. ಜ಼ಾರ್ ದೊರೆಗಳ ಆಳ್ವಿಕೆಯಿಂದ ವಿಮೋಚನೆ ಪಡೆಯಲು ಚಳುವಳಿ ಹೂಡಿದ್ದ ಬಾಲ್ಷೆವಿಕ್ ಪಕ್ಷದ ಕಾರ್ಯಕರ್ತನಾದ. ಅದರ ಪ್ರಚಾರದ ಹೊಣೆ ಹೊತ್ತ.

1917ರ ಕ್ರಾಂತಿಗೆ ಮುನ್ನ ವಿದೇಶಗಳಲ್ಲಿ ಪ್ರವಾಸಮಾಡಿ ರಷ್ಯದ ಜ಼ಾರ್ ಶಾಹಿಯ ವಿರುದ್ಧ ಪ್ರಚಾರ ನಡೆಸಿದ. ಕ್ರಾಂತಿಯ ಅನಂತರ ರಷ್ಯಕ್ಕೆ ಹಿಂದಿರುಗಿದ. ಅವನ 'ನನ್ನ ಬಾಲ್ಯ', 'ಜನರ ನಡುವೆ' ಮತ್ತು 'ನನ್ನ ವಿಶ್ವವಿದ್ಯಾನಿಲಯಗಳು' ಎಂಬ ಮೂರು ಸಂಪುಟಗಳ ಆತ್ಮವೃತ್ತ 1913–23ರ ಅವಧಿಯಲ್ಲಿ ರಚಿತವಾಯಿತು.

ಸೋವಿಯೆತ್ ರಷ್ಯದ ನಾಯಕ ಲೆನಿನ್ ಮತ್ತು ಗಾರ್ಕಿ ಪರಮ ಮಿತ್ರರಾಗಿದ್ದರು. ಗಾರ್ಕಿ ಸೋವಿಯೆತ್ ಸಾಹಿತ್ಯದ ಆದ್ಯ ಪ್ರವರ್ತಕನೆಂಬ ಹೆಸರು ಗಳಿಸಿದ. ಅನೇಕ ಮಂದಿ ಯುವಕ ಬರಹಗಾರರು ಅವನ ಮಾರ್ಗದರ್ಶನ ಪಡೆದರು. ರಷ್ಯದ ಸಾಹಿತ್ಯದಲ್ಲಿ ಸಮಾಜವಾದೀ ವಾಸ್ತವವಾದ ಪಂಥವನ್ನು ಗಾರ್ಕಿ ಆರಂಭಿಸಿದ.

1935ರಲ್ಲಿ ಪ್ಯಾರಿಸಿನಲ್ಲಿ ಜರಗಿದ ಫ್ಯಾಸಿಸ್ಟ್ ವಿರೋಧಿ ಲೇಖಕರ ಸಮ್ಮೇಳನಕ್ಕೆ ಫ್ರೆಂಚ್ ಕಾದಂಬರಿಕಾರ ರೊಮಾ ರೊಲಾ ಮತ್ತು ಮಾಕ್ಸಿಂ ಗಾರ್ಕಿ ಜೊತೆ ನಾಯಕತ್ವ ನೀಡಿದರು.

1936ರಲ್ಲಿ ಅವನ ಮರಣ ಸಂಭವಿಸಿತು. ಆತನಿಗೆ ವಿಷ ಕೊಟ್ಟು ಕೊಂದರೆಂದು ಹೇಳುವುದುಂಟು.

ಸೋವಿಯೆತ್ ರಷ್ಯದಲ್ಲಿ ಮಾಕ್ಸಿಂ ಗಾರ್ಕಿ ಆರಾಧ್ಯಮೂರ್ತಿಯಾಗಿದ್ದಾನೆ. ಸೋವಿಯೆತ್ ರಷ್ಯದಲ್ಲೂ ಜಗತ್ತಿನ ಇತರ ಅನೇಕ ದೇಶಗಳಲ್ಲೂ ಗಾರ್ಕಿಯ ಸಾಹಿತ್ಯ ಕೃತಿಗಳು ಜನಪ್ರಿಯವಾಗಿವೆ.

## ಗಾತಿಕ್ ಕಲೆ

ಎತ್ತರವಾದ ಕ್ರೈಸ್ತ ಆರಾಧನಾ ಮಂದಿರ. ಆಕಾಶದತ್ತ ಮುಖಮಾಡಿರುವ ಕಮಾನುಗಳು. ಬಣ್ಣದ ಗಾಜಿನ ಕಿಟಕಿಯಿಂದ ತೂರಿಬಂದು ಒಳಭಾಗವನ್ನೆಲ್ಲ ಬೆಳಗುತ್ತಿರುವ ಸೂರ್ಯರಶ್ಮಿ. ಬೈಬಲಿನ ಘಟನೆಗಳು ಚಿತ್ರಿಸಲ್ಪಟ್ಟಿರುವ ಕಂಬ, ಗೋಡೆ, ಬಾಗಿಲುಗಳು. ಇದು ಗಾತಿಕ್ ಕಲೆ; 13, 14 ಹಾಗೂ 15ನೆಯ ಶತಮಾನಗಳಲ್ಲಿ ಯೂರೋಪಿನ ಉತ್ತರ ರಾಷ್ಟ್ರಗಳಲ್ಲಿ ಬೆಳಗಿದ ಕಲಾ ಪ್ರಕಾರ. ಆಗಿನ ವಾಸ್ತುಶಿಲ್ಪದಲ್ಲಿ ಚೂಪಾದ ಕಮಾನಿಗೆ ಪ್ರಾಶಸ್ತ್ಯವಿದ್ದುದರಿಂದ ಇದನ್ನು 'ಚೂಪುಕಮಾನಿನ ಕಲೆ' ಎಂದೂ ಬಣ್ಣಿಸುತ್ತಾರೆ. ನವೋದಯ ಕಾಲದ ವಾಸ್ತುಶಿಲ್ಪಿಗಳು ಮಧ್ಯಯುಗದ ಕಟ್ಟಡಗಳನ್ನು ನೋಡಿ ಅವು ಗಾತ್ ಜನರಂತೆಯೇ (ರೋಮನ್ನು ಗೆದ್ದ ಬುಡಕಟ್ಟು ಜನ) ಅನಾಗರಿಕವಾಗಿವೆಯೆಂದು ಆ ಕಲೆಯನ್ನು ಗಾತಿಕ್ ಕಲೆ ಎಂದು ಕರೆದರು.

ಗಾತಿಕ್ ಕಲೆ ಪರಿಪೂರ್ಣತೆ ಕಂಡದ್ದು ಫ್ರಾನ್ಸಿನಲ್ಲಿ. ಮುಂದೆ ಅದು ಯೂರೋಪಿನಲ್ಲೆಲ್ಲ ಹರಡಿತು. 13ನೆಯ ಶತಮಾನದ ಪೂರ್ವಾರ್ಧದಲ್ಲಿ ಇಂಗ್ಲೆಂಡಿನಲ್ಲಿ ಗಾತಿಕ್ ಕಲೆ ಸರಳವೂ ಪ್ರಮಾಣಬದ್ಧವೂ ಆಗಿತ್ತು. ಮೊನಚಾದ ಮೇಲ್ಭಾಗವುಳ್ಳ ಕಮಾನುಗಳು [illegible] ಆಕಾರಕ್ಕೆ ಪ್ರಾಧಾನ್ಯ ಇತ್ತು.

13ನೆಯ ಶತಮಾನದ ಅಂತ್ಯದ ವೇಳೆಗೆ [illegible] ಅಲಂಕರಣ ಶೈಲಿ ಬೆಳೆಯಿತು. ಸಾಮಗ್ರಿಗಳ ತೂಕವನ್ನಾಗಲೀ ಕಮಾನಿನ ಚಾಚಿನ ಲೆಕ್ಕವನ್ನಾಗಲೀ ಹಾಕಲು ಕೆಲಸಗಾರನಿಗೆ ತಿಳಿದಿರಲಿಲ್ಲ. ಪದ್ಧತಿಯ ಪ್ರಕಾರ ಕಟ್ಟಿಕೊಂಡು ಹೋಗುತ್ತಿದ್ದರು. [illegible] ಅನುಭವದಿಂದ ಕಂಡುಕೊಂಡ ಅಂಶಗಳು ಮಾತ್ರ ಅವರಿಗೆ ನೆರವಾಗುತ್ತಿದ್ದುವು. ಈ ಶತಮಾನದ ಕೊನೆಯ ವೇಳೆಗೆ ಗಾತಿಕ್ ಕಲೆ ಅತ್ಯುನ್ನತ ಸ್ಥಿತಿಯನ್ನು ತಲಪಿತು.

14ನೆಯ ಶತಮಾನದಲ್ಲಿ ಈ ಶೈಲಿಯು ವಾಸ್ತುಶಿಲ್ಪ, ಚಿತ್ರಕಲೆಗಳಲ್ಲಿ ವಿಸ್ತಾರಗೊಂಡುವು. ಕಿಟಕಿಗಳು ದೊಡ್ಡದಾದುವು; ಅವುಗಳಲ್ಲಿ ಕಲ್ಲಿನ ಜಾಲರಿಗಳನ್ನು ಉಪಯೋಗಿಸುವುದು ರೂಢಿಗೆ ಬಂತು. ಇದು ಬಣ್ಣದ ಗಾಜಿನ ಸೌಂದರ್ಯವನ್ನು ಎತ್ತಿ ತೋರಿಸಿತು. ಗೋಡೆಗಳ ಮೇಲ್ಭಾಗದಲ್ಲಿ ಕಿಟಕಿ ಸಾಲುಗಳನ್ನು ರಚಿಸುವುದು, ಛಾವಣಿಯಲ್ಲಿ ಕಮಾನುಗಳನ್ನು ನಿರ್ಮಿಸುವುದು —ಇವುಗಳಿಂದ ಹಾಗೂ ನಕ್ಷತ್ರಾಕಾರದ ಕಮಾನು ಛಾವಣಿಗಳಿಂದ ಕಟ್ಟಡದ ಸೌಂದರ್ಯ ಹೆಚ್ಚಿತು. ಕಟ್ಟಡದ ಒಳಭಾಗದಲ್ಲಿ ಹೆಚ್ಚು ಸಂಖ್ಯೆಯ ಶಿಲ್ಪಗಳನ್ನು ಉಪಯೋಗಿಸುವ ಪದ್ಧತಿ ಬಂತು. ಕೆತ್ತನೆ ಕೆಲಸಮಾಡಿದ ಗೋರಿಗಳೂ ಈ ಕಟ್ಟಡಗಳಲ್ಲಿರುತ್ತಿದ್ದುವು. 15ನೆಯ ಶತಮಾನದಲ್ಲಿ ಲಂಬಾಕಾರದ ನೇರ ಆಕೃತಿಯ ಕಟ್ಟಡಗಳು ರಚಿಸಲ್ಪಟ್ಟುವು. ಕಟ್ಟಡಗಳ ಎತ್ತರ ಹೆಚ್ಚಿತು. ಕಿಟಕಿಗಳ ಆಕಾರ ದೊಡ್ಡದಾಯಿತು. ಮನೆಗಳ ನಿರ್ಮಾಣದಲ್ಲೂ ಅನೇಕ ಬದಲಾವಣೆಗಳಾದುವು. 16ನೆಯ ಶತಮಾನದ ಆರಂಭದಲ್ಲಿ ಗಾತಿಕ್ ಕಲೆ ಹಿಂದೆ ಬಿತ್ತು.

ಗಾತಿಕ್ ವಿಧಾನದ ಕಟ್ಟಡದಲ್ಲಿ ಒಂದು ಕಡೆ ಒತ್ತಡ ಬಿದ್ದಿದ್ದರೆ, ಅಷ್ಟೇ ಒತ್ತಡವನ್ನು ಇನ್ನೊಂದು ಕಡೆ ಹೇರಿ ಒತ್ತಡಕ್ಕೆ ಪ್ರತಿ ಒತ್ತಡ ಉಂಟುಮಾಡುತ್ತಿದ್ದರು. ಈ ಸಮತೋಲನ ವಾಸ್ತುಶಿಲ್ಪದಲ್ಲಷ್ಟೇ ಅಲ್ಲ ಶಿಲ್ಪ ಹಾಗೂ ಚಿತ್ರಕಲೆಯಲ್ಲೂ ಆಚರಣೆಗೆ ಬಂತು. ಗಾತಿಕ್ ಶಿಲ್ಪದಲ್ಲಿ



ಗಾತಿಕ್ ಶಿಲ್ಪಾಲಂಕಾರ

[illegible] ಭಾರ ಬಿದ್ದಿರುತ್ತದೆ. ಭುಜ [illegible] ತಲೆ ಸ್ವಲ್ಪ ತಿರುಗಿರುತ್ತಿರುತ್ತದೆ. ಹೀಗೆ ಪ್ರತಿ ಸಮತೋಲನ ಸಾಧಿಸಲ್ಪಟ್ಟಿತು.

ಗಾತಿಕ್ ವಾಸ್ತುಶಿಲ್ಪ ಬೆಳೆದಂತೆ ಉದಯವಾದದ್ದು ಗಾತಿಕ್ ಚಿತ್ರಕಲೆ. ಕಿಟಕಿಗಳು ದೊಡ್ಡ ಜಾಗ ಆಕ್ರಮಿಸಿದಂತೆ ಅದಕ್ಕೆ ಬಣ್ಣಬಣ್ಣದ ಗಾಜನ್ನು ಬಳಸುವುದು ಆರಂಭವಾಯಿತು. ಇಂಥ ರಚನೆಗಳಲ್ಲಿ ನೀಲಿ, ಕೆಂಪು ಬಣ್ಣಗಳಿಗೆ ಪ್ರಾಧಾನ್ಯ. 14ನೆಯ ಶತಮಾನದಲ್ಲಿ ಇಟಲಿಯ ಚಿತ್ರಕಾರ ಜಿಯಾತ್ತೋ (1267–1337) ತ್ರಿ–ಆಯಾಮ ಪರಿಣಾಮವುಳ್ಳ ಮೂರ್ತಿಗಳನ್ನು ಇಗರ್ಜಿಗಳಲ್ಲಿ ಚಿತ್ರಿಸಿದ. ಲಯಬದ್ಧವಾಗಿ ಒಂದಕ್ಕೊಂದು ಸಂಬಂಧ ಹೊಂದಿದಂಥ ಮೂರ್ತಿಗಳನ್ನು ಚಿತ್ರಿಸುವುದು ಅಂತರರಾಷ್ಟ್ರೀಯ ಶೈಲಿ ಆಯಿತು. 15ನೆಯ ಶತಮಾನದಲ್ಲಿ, ಪರಿಸರದ ಮೇಲೆ ಪ್ರಭುತ್ವ ಸ್ಥಾಪಿಸುವ ಮಾನವ ಚಿತ್ರಕಾರನಿಗೆ ವಸ್ತುವಾದ. ಸರಳ ಹಾಗೂ ಜಾಮಿತೀಯ ಆಕೃತಿಗಳಲ್ಲಿ ಮೂರ್ತಿಗಳನ್ನು ಚಿತ್ರಿಸಿದ. ಪ್ರಮಾಣಬದ್ಧ ನಿಲುವು, ಸುಸಂಬದ್ಧ ಪರಿಸರಗಳಿಗೆ ಬೆಲೆ ಬಂತು.

ಗಾತಿಕ್ ಶಿಲ್ಪ ಅಸ್ತಿತ್ವಕ್ಕೆ ಬಂದದ್ದು ಸುಮಾರು 1140ರಲ್ಲಿ. ಗೋಡೆಗೆ ಸಮತಟ್ಟಾಗಿ ಮೂರ್ತಿಗಳನ್ನು ಕೆತ್ತುತ್ತಿದ್ದ ಕಾಲದಲ್ಲಿ ಆ ಪರಂಪರೆಯನ್ನು ಬದಿಗೊತ್ತಿ ಗೋಡೆಯಿಂದ ಹೊರಕ್ಕೆ ಮೂರ್ತಿ ಕಾಣುವಂತೆ ಕೆತ್ತಲಾರಂಭಿಸಿದರು. 13ನೆಯ ಶತಮಾನದಲ್ಲಿ ಕ್ರಿಸ್ತನಲ್ಲದೆ ಕನ್ಯೆ ಮೇರಿಯ ಮತ್ತು ಸಂತರ ಶಿಲ್ಪಗಳೂ ಸೃಷ್ಟಿಯಾದುವು. ಕಾಲಕಳೆದಂತೆ ಮೂರ್ತಿಗಳಲ್ಲಿ ಆಕರ್ಷಕ ನಿಲುವು, ಭವ್ಯತೆ ಮೂಡಿದುವು. ಕೆಲ ಗಾತಿಕ್ ಶಿಲ್ಪಗಳ ಕೃತಿಗಳಲ್ಲಿ ಭಾವಕ್ಕೂ ಸ್ಥಾನ ದೊರಕಿತು. ಮೂರ್ತಿಗಳ ಮುಖದಲ್ಲಿ ಭಾವಾವೇಶಗಳು ಸ್ಪಷ್ಟವಾಗಿರುತ್ತಿದ್ದುವು. 14ನೆಯ ಶತಮಾನದ ಮೂರ್ತಿಗಳು ಕೋಮಲ ಆಕಾರವಾಗಿದ್ದು, ಯುಕ್ತರೀತಿಯಲ್ಲಿ ಕೆತ್ತಲ್ಪಟ್ಟುವು. 15ನೆಯ ಶತಮಾನದಲ್ಲಿ ಮಾನವ ಮೂರ್ತಿಗಳಿಗೆ ಪ್ರಾಶಸ್ತ್ಯ ದೊರಕಿತು. ಬೃಹತ್ ಮೂರ್ತಿಗಳ ಕೆತ್ತನೆ ನಡೆಯಿತು.

ಮೂರು ಶತಮಾನಗಳ ಅವಧಿಯಲ್ಲಿ ಪಶ್ಚಿಮ ದೇಶಗಳಲ್ಲಿ ಗಾತಿಕ್ ಶೈಲಿಯ ಅನೇಕ ಆರಾಧನಾ ಮಂದಿರಗಳು ನಿರ್ಮಾಣಗೊಂಡುವು. ಮುಂದೆ ಬೆಂಕಿ, ಯುದ್ಧ, ಕ್ರಾಂತಿಗಳಿಂದಾಗಿ ಈ ಶೈಲಿಯ ಕಲಾಕೃತಿಗಳಲ್ಲಿ ಹಲವಾರು ನಷ್ಟಹೊಂದಿದುವು. ಆದರೂ ಈ ಶೈಲಿಯ ಉತ್ತಮ ಕಲಾಕೃತಿಗಳು ಇನ್ನೂ ಉಳಿದಿವೆ.

## ಗಾದೆಗಳು

'ಕಾರ್ಯವಾಸಿ ಕತ್ತೆ ಕಾಲು ಕಟ್ಟು' ಎಂಬುದು ಎಲ್ಲರಿಗೂ ಗೊತ್ತಿರುವ ಒಂದು ಗಾದೆ. ಈ ಗಾದೆ ರೂಪುಗೊಂಡದ್ದು ಹೇಗೆ? ಯಾವುದರ ಆಧಾರದ ಮೇಲೆ ?

ಈ ಬಗೆಗೆ ಒಂದು ದಂತಕಥೆ ಇದೆ :

ಹನುಮಂತ ವಾಯುದೇವನ ಮಗ. ಮಹಾಪರಾಕ್ರಮಿ. ಹುಟ್ಟಿದಾಗಿನಿಂದಲೇ. ಅವನಿನ್ನೂ ಚಿಕ್ಕಮಗುವಾಗಿದ್ದಾಗ ಆಕಾಶದಲ್ಲಿ ಸೂರ್ಯನನ್ನು ನೋಡಿದ. ಅದು ಅವನಿಗೆ ಸೊಗಸಾದ ಹಣ್ಣಿನಂತೆ ಕಾಣಿಸಿತು. ಸರಿ. ಅದನ್ನು ಹಿಡಿದು ನುಂಗಿಬಿಡಬೇಕೆಂದು ಆಕಾಶಕ್ಕೆ ಹಾರಿದ. ಅವನು ಸೂರ್ಯಮಂಡಲವನ್ನು ಸಮೀಪಿಸಿದಾಗ, ಸೂರ್ಯ ಅವನ ಉದ್ದೇಶವನ್ನು ತಿಳಿದು, ಕೋಪಗೊಂಡು ಅವನ ಕೆನ್ನೆಗೆ ಹೊಡೆದ. ಸೂರ್ಯನ ಹೊಡೆತವೆಂದರೆ ಸಾಮಾನ್ಯವೆ ? ಹನುಮಂತನ ಕತ್ತು ತಿರುಚಿಕೊಂಡಿತು. ಮುಖ ಡೊಂಕಾಯಿತು. ಅವನು ಮೂರ್ಛೆಗೊಂಡು ನೆಲಕ್ಕೆ ಬಿದ್ದ. ತನ್ನ ಮಗನಿಗಾದ ಈ ದುರವಸ್ಥೆಯನ್ನು ಕಂಡು ವಾಯುದೇವನಿಗೆ ತುಂಬ ಕೋಪ ಬಂತು. ವಾಯು (ಗಾಳಿ) ಇಲ್ಲದರಲ್ಲವೆ ಎಲ್ಲರೂ ಉಸಿರಾಡುವುದು ? ನನ್ನ ಶಕ್ತಿಯೇನು ಎಂಬುದನ್ನು ಇವರಿಗೆ ತೋರಿಸುತ್ತೇನೆ-ಎಂದುಕೊಂಡು, ಒಂದು ಗುಹೆಯೊಳಗೆ ಸೇರಿಬಿಟ್ಟ. ಜನರಿಗೆ ಉಸಿರಾಡಲು ಗಾಳಿ ಇಲ್ಲದೆ ಕಷ್ಟಕ್ಕಿಟ್ಟುಕೊಂಡಿತು. ತಮ್ಮನ್ನು ಈ ಕಷ್ಟದಿಂದ ಪಾರುಮಾಡಬೇಕೆಂದು ದೇವತೆಗಳನ್ನು ಬೇಡಿಕೊಂಡರು. ದೇವತೆಗಳ ರಾಜ ಇಂದ್ರನೇ ಹೊರಟ–ವಾಯುವನ್ನು ಪತ್ತೆಹಚ್ಚಿ. ಅವನನ್ನು ಸಮಾಧಾನಪಡಿಸಿ ಕರೆದುಕೊಂಡು ಬರಲು. ವಾಯು ಗುಹೆಯೊಳಗೆ ಅಡಗಿಕೊಂಡಿದ್ದ ಸುದ್ದಿ ತಿಳಿದು ಅಲ್ಲಿಗೆ ಬಂದ. ಆ ಗುಹೆಗೆ ಇದ್ದದ್ದು ಒಂದೇ ಒಂದು ಮಾರ್ಗ –ಅಂಗೈ ಅಗಲದ್ದು. ವಾಯುದೇವ ಆ ಗುಹೆಯಲ್ಲಿ ಅಡಗಿಕೊಂಡಿದ್ದುದನ್ನು ಒಂದು ಕತ್ತೆ ಹೇಗೋ ತಿಳಿದುಕೊಂಡು, ಉಸಿರಾಡಲು ಗಾಳಿ ಸಿಗಲೆಂದು ಆ ಗವಿಯ ಬಾಗಿಲಿಗೆ ತನ್ನ ಮೂತಿಯನ್ನು ಒತ್ತಿ ಹಿಡಿದು ನಿಂತಿತ್ತು. ಆ ಕತ್ತೆಯನ್ನು ಅಲ್ಲಿಂದ ಓಡಿಸಲು ಇಂದ್ರ ಅದನ್ನು ಹೆದರಿಸಿದ, ಬೆದರಿಸಿದ, ಹೊಡೆದ. ಆದರೂ ಕತ್ತೆ ಅಲ್ಲಿಂದ ಅಲುಗಲಿಲ್ಲ. ಗವಿಯ ಬಾಯಿಗೆ ಇಟ್ಟಿದ್ದ ತನ್ನ ಮೂತಿಯನ್ನು ತೆಗೆಯಲಿಲ್ಲ. ಪಾಪ, ಅದಕ್ಕೆ ಪ್ರಾಣದ ಆಸೆ ಇಲ್ಲವೆ ? ಉಸಿರಾಡಲು ಗಾಳಿಯಿಲ್ಲದೆ ಸತ್ತುಹೋದೇನೆಂಬ ಹೆದರಿಕೆಯಿಲ್ಲವೆ ?

ಏನು ಮಾಡಿದರೂ ಕತ್ತೆ ಅಲ್ಲಿಂದ ಸರಿಯಲಿಲ್ಲ : ತನ್ನ ಮೂತಿಯನ್ನು ಮೇಲಕ್ಕೆ ಎತ್ತಲಿಲ್ಲ. ಕೊನೆಗೊಂದು ಆಲೋಚನೆ ಹೊಳೆಯಿತು. ಇಂದ್ರ ತಾನು ದೇವತೆಗಳ ಅರಸ ಎಂಬುದನ್ನು ಗಣನೆಗೆ ತಂದುಕೊಳ್ಳದೆ ಕತ್ತೆಯ ಹಿಂಗಾಲುಗಳನ್ನು ಹಿಡಿದು ಥಟ್ಟನೆ ಕತ್ತೆಯನ್ನು ಎಳೆದು ಪಕ್ಕಕ್ಕೆ ಬಿಸಾಡಿದ. ಗವಿಯೊಳಕ್ಕೆ ನುಗ್ಗಿ ವಾಯುವನ್ನು ಕಂಡು ಅವನನ್ನು ಸಮಾಧಾನಗೊಳಿಸಿ ಹಿಂದಕ್ಕೆ ಕರೆದುಕೊಂಡುಬಂದ.

'ಕಾರ್ಯವಾಸಿ ಕತ್ತೆಕಾಲು ಕಟ್ಟು' ಎಂಬ ಗಾದೆಗೆ ಈ ಕಥೆ ಪ್ರೇರೇಪಕ ಎನ್ನುತ್ತಾರೆ. ಇದು ನಿಜವೋ ಸುಳ್ಳೋ–ಆ ಮಾತು ಬೇರೆ. ಇದರಿಂದ ನಮಗೆ ಗೊತ್ತಾಗುವ ಒಂದು ಅಂಶ —ಜನತೆಯಲ್ಲಿ ಪ್ರಚಲಿತವಿರುವ ಕಥೆಗಳು, ನೆನಪುಗಳು, ಅನುಭವದ ಮಾತುಗಳು ಗಾದೆಗಳಿಗೆ ಆಧಾರವಾಗುತ್ತವೆ ಎಂಬುದು.

'ಗಾದೆ ವೇದದ ಸಮಾನ' ಎಂಬ ಒಂದು ಗಾದೆ ಕನ್ನಡದಲ್ಲಿದೆ. ವೇದ ಎಂದರೆ ಜ್ಞಾನ. ಮಾನವ ತನ್ನ ತಿಳಿವಳಿಕೆಯಿಂದ ಅನುಭವದಿಂದ ಗಳಿಸಿಕೊಂಡ ಜ್ಞಾನ. ಗಾದೆಯೂ ಅಷ್ಟೆ.

ಗಾದೆ ಎಂದರೇನು ? ಅದನ್ನು ಹೀಗೆ ವಿವರಿಸಬಹುದು : ಜನರ ಅನುಭವದ ಸಾರವನ್ನು ಒಳಗೊಂಡಿರುವ, ಅಡಕವಾದ ಹೇಳಿಕೆ. ಆದಷ್ಟು ಕಡಮೆ ಮಾತುಗಳಲ್ಲಿ ಒಂದು ಅಭಿಪ್ರಾಯವನ್ನೂ ಭಾವವನ್ನೂ ತಿಳಿಸುವುದು ಗಾದೆಯ ಪ್ರಧಾನ ಗುಣ. ಹಾಗೆಯೇ, ಗಾದೆಯ ಮಾತುಗಳು ಮೊನಚಾದುವು; ಥಟ್ಟನೆ ಮನಸ್ಸನ್ನು ಹೊಕ್ಕು ಅಲ್ಲಿ ನೆಲೆಯಾಗಿ ನಿಲ್ಲತಕ್ಕಂಥವು. ಅರಿವು, ಸಂಕ್ಷಿಪ್ತತೆ, ಮೊನೆ –ಇವು ಮೂರು ಗಾದೆಯ ಲಕ್ಷಣಗಳು ಎನ್ನಬಹುದು.

ಆಂ[illegible] ತ[illegible]ವೇತ್ತ ಬರ್ಟ್ರೆಂಡ್ ರಸೆಲ್, "ಗಾದೆ, ಅನೇಕರ ಬುದ್ಧಿವಂತಿಕೆ ಮತ್ತು [illegible]ವೇಕ" ಎಂದಿದ್ದಾನೆ.

ಸಮಾಜದ ಅನುಭವ, ಚಿಂತನೆ–ಅಂದರೆ, ಅನೇಕರ ಬುದ್ಧಿವಂತಿಕೆ–ಸಮಾಜದ ಅಂತರಂಗದಲ್ಲಿ ಅಡಗಿರುತ್ತದೆ. ತಕ್ಕ ಸನ್ನಿವೇಶ ತೋರಿಬಂದಾಗ ಒಬ್ಬ ವಿವೇಕಿ ಅದಕ್ಕೆ ಗಾದೆಯ ರೂಪ ಕೊಡುತ್ತಾನೆ.

ಗಾದೆಗಳು ಹಿಂದಿನಿಂದಲೂ ಎಲ್ಲ ಸಮಾಜಗಳಲ್ಲೂ ಜನಾಂಗಗಳಲ್ಲೂ ಬಳಕೆಯಲ್ಲಿರುವುದು ಕಂಡುಬರುತ್ತದೆ. ಒಂದು ಸಮಾಜದಲ್ಲಿ ಪ್ರಚಲಿತ ವಿರುವ ಗಾದೆಗಳನ್ನು ಸಂಗ್ರಹಿಸಿ, ಅವನ್ನು ಭಾಷೆಯ ದೃಷ್ಟಿಯಿಂದ, ವಸ್ತುವಿನ ದೃಷ್ಟಿಯಿಂದ ವಿಂಗಡಿಸಿ ಅಭ್ಯಾಸ ಮಾಡಿದರೆ, ಆ ಸಮಾಜದ ನಡೆನುಡಿ, ನಯವಿನಯ, ಜೀವನದೃಷ್ಟಿ, ಸಂಸ್ಕೃತಿ ಇವನ್ನು ಕುರಿತ ಅನೇಕ ಅಂಶಗಳನ್ನು ಗ್ರಹಿಸಬಹುದು. ಚರಿತ್ರೆಗೆ ಸಂಬಂಧಿಸಿದ ಅಂಶಗಳು ಕೂಡ ಗಾದೆಯ ಮಾತುಗಳಲ್ಲಿ ಕಂಡುಬರಬಹುದು.

ಕಾವ್ಯಗಳಲ್ಲಿ ಗಾದೆಯಂತಿರುವ ಮಾತುಗಳೂ ಇರುವುದುಂಟು. ಉದಾಹರಣೆಗೆ, 'ಬಾಳ್ವ ಮನೆಗೊಂದು ಬೊಗಳ್ವನಾಯ್'. ಇದು ಜನರಲ್ಲಿ 'ಬಾಳೋ ಮನೆಗೊಂದು ಬೊಗಳೋ ನಾಯಿ' ಎಂದು ಬಳಕೆಯಲ್ಲಿದೆ. ಹಾಗೆಯೇ 'ನಡವರೆಡಹದೆ ಕುಳಿತರೆಡಹುವರೆ' ಎಂಬ ಕಾವ್ಯವಾಕ್ಯ ಜನರ ಬಾಯಲ್ಲಿ 'ನಡೆಯೋರೆಡವ್ದೆ ಕೂತೋರೆಡವ್ತಾರಾ ?' ಎಂದು ಪ್ರಚಲಿತ ವಾಗಿದೆ. ಇಂಥ ಗಾದೆಗಳು ಜನರ ಬಾಯಿಯಿಂದ ಕಾವ್ಯಕ್ಕೇರಿದುವೆ ? ಕಾವ್ಯದಿಂದ ಜನರ ಬಾಯಿಗೆ ಇಳಿದುವೆ ? ಇವು ಎರಡೂ ಸಾಧ್ಯ. ಜನರ ಬಾಯಿಯಲ್ಲಿದ್ದ ಗಾದೆಯನ್ನು ಕವಿ ತನ್ನ ಮೆರುಗುಕೊಟ್ಟು ಅಥವಾ ಕೊಡದೆ ಕಾವ್ಯದಲ್ಲಿ ಉಪಯೋಗಿಸಿರಬಹುದು. ಇಲ್ಲವೆ, ಸಮಾಜದ ಅಂತರಂಗವನ್ನು ಬಲ್ಲ ಕವಿ, ಸಮಾಜದ ಯಾವುದಾದರೊಂದು ಅಂತರಂಗದ ಭಾವನೆಯನ್ನು ತನ್ನ ಕಾವ್ಯದಲ್ಲಿ ಗಾದೆಯ ರೂಪದಲ್ಲಿ ವ್ಯಕ್ತಪಡಿಸಿರ ಬಹುದು. ಅದನ್ನು ಮೆಚ್ಚಿದ ಜನ ಅದನ್ನು ತಮ್ಮದನ್ನಾಗಿ ಮಾಡಿ ಕೊಂಡಿರಬಹುದು.

ಯಾವುದೇ ಹೇಳಿಕೆ ಎಷ್ಟೇ ಸುಂದರವಾಗಿರಲಿ, ಅದು ಗಾದೆಯಾಗು ವುದು ಅದಕ್ಕೆ ಜನ ಸಮ್ಮತಿಯ ಮುದ್ರೆ ಬಿದ್ದಾಗಲೇ. ಜನ ಸಮ್ಮತಿ ಪಡೆಯದ– ಅಂದರೆ ಜನರ ಬಾಯಿಯಲ್ಲಿ ನಲಿಯುವ ಪುಣ್ಯ ಪಡೆಯದೆಹೋದ - ಯಾವ ಬುದ್ಧಿವಂತಿಕೆಯ ಮಾತಿಗೂ ಗಾದೆಯ ಪಟ್ಟ ಸಿಗುವುದಿಲ್ಲ.

ಒಂದು ಸಮಾಜದಲ್ಲಿ ಚಲಾವಣೆಯಲ್ಲಿರುವ ಗಾದೆಗೆ ಸಮಾನವಾದ, ಒಂದೊಂದು ವೇಳೆ ಅದರ ಭಾಷಾಂತರವೇನೋ ಎಂಬಂತೆ ತೋರುವ, ಗಾದೆಗಳನ್ನು ಬೇರೊಂದು ಸಮಾಜದಲ್ಲಿ ನಾವು ಕಾಣಬಹುದು. ಇದು ಆಶ್ಚರ್ಯವಾಗಿ ಕಂಡರೂ ಇದರಲ್ಲಿ ಅಸಹಜವಾದದ್ದು ಏನೂ ಇಲ್ಲ; ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ವಾಸಿಸಿದರೂ, ಕೆಲವು ವಿಚಾರಗಳಲ್ಲಿ ಜನರ ಭಾವನೆ ಒಂದೇ ರೀತಿ ಇರುತ್ತದೆ. ಸಮಾನ ಭಾವನೆ, ಮತ್ತು ಅನುಭವ, ಸಮಾನ ಮಾತುಗಳಿಂದಲೇ ಹೊರಹೊಮ್ಮ ಬಹುದು.

ಜನರ ಬಾಯಿಯಲ್ಲಿ ಉಳಿದಿದ್ದ ಗಾದೆಗಳನ್ನು ಗ್ರಂಥರೂಪದಲ್ಲಿ ಸಂಗ್ರಹಿಸುವ ಕಾರ್ಯ ಎಲ್ಲ ದೇಶಗಳಲ್ಲೂ ಕಾಲ ಕಾಲಕ್ಕೆ ನಡೆದೇ ಇದೆ. ಬೈಬಲ್‌ನಲ್ಲಿ ಕಾಣುವ ಗಾದೆಗಳ ಸಂಕಲನ, ಗಾದೆಗಳ ಅತ್ಯಂತ ಪ್ರಾಚೀನ ಸಂಕಲನವೆಂದು ತೋರುತ್ತದೆ.

ಗಾದೆಗಳನ್ನು ಸಂಗ್ರಹಿಸಿ ಅವನ್ನು ಪ್ರಕಟಿಸಿರುವ ಕಾರ್ಯ ಭಾರತದ ವಿವಿಧ ಭಾಷೆಗಳಲ್ಲಿ ಮೊದಲ ಬಾರಿಗೆ ನಡೆದದ್ದು ಆಯಾಭಾಷೆಗಳ ಅಧ್ಯಯನದಲ್ಲಿ ಆಸಕ್ತಿ ತೋರಿಸಿದ ವಿದೇಶೀ ಕ್ರೈಸ್ತ ಧರ್ಮ ಪ್ರಚಾರಕರಿಂದ. ಜನಪದ ಸಾಹಿತ್ಯ ಕಲೆಗಳ ಬಗೆಗಿನ ಹಲವು ಗಾದೆಗಳ ಸಂಕಲನ – ಅಧ್ಯಯನಗಳಿಗೆ ಎಡೆಮಾಡಿದ.

## ಗಾಲ್ಸ್‌ವರ್ದಿ

ಗಾಲ್ಸ್‌ವರ್ದಿ ಆಂಗ್ಲ ಸಾಹಿತ್ಯದ ಪ್ರಖ್ಯಾತರಾದ ಬರೆಹಗಾರರಲ್ಲಿ ಒಬ್ಬ. ಅವನ ಕಾದಂಬರಿ ಹಾಗೂ ನಾಟಕಗಳು ಸಮಾನಕೀರ್ತಿಗೆ ಪಾತ್ರವಾಗಿವೆ. ಇತರ ಎಲ್ಲ ಬರೆಹಗಳಿಗಿಂತ 'ಫಾರ್‌ಸೈಟ್ ಸಾಗಾ' ಎಂಬ ಕಾದಂಬರಿ ಮಾಲಿಕೆ ಗಾಗಿಯೇ ಅವನು ಹೆಚ್ಚು ಪ್ರಸಿದ್ಧನಾಗಿದ್ದಾನೆ. (ಈ ಕೃತಿ ಇಂಗ್ಲೆಂಡಿನಲ್ಲಿ 20ನೆಯ ಶತಮಾನದ ಉತ್ತರಾರ್ಧದಲ್ಲಿ 24 ಗಂಟೆಗಳಷ್ಟು ದೀರ್ಘವಾದ ಚಲಚ್ಚಿತ್ರ ವಾಯಿತು.)

'ಫಾರ್‌ಸೈಟ್' ಒಂದು ಮನೆತನದ ಹೆಸರು. ಇದರ ಮೂರು ತಲೆ ಮಾರಿನ ಕಥೆಯೇ 'ಫಾರ್‌ಸೈಟ್ ಸಾಗಾ'. ಸಮಾಜದ ಭಾವನೆಗಳು ಹಾಗೂ ಮಾನದಂಡಗಳು ಕಾಲಕಾಲಕ್ಕೆ ಬದಲಾಗುವುದನ್ನೂ ಹಲವಾರು ಬಗೆಯ ವ್ಯಕ್ತಿ ಚಿತ್ರಣಗಳನ್ನೂ ಗಾಲ್ಸ್‌ವರ್ದಿ ಈ ಕಾದಂಬರಿಗಳಲ್ಲಿ ಮೂಡಿಸಿದ್ದಾನೆ. ಇಂಗ್ಲೆಂಡಿನ ಮಧ್ಯಮವರ್ಗದಲ್ಲಿ ಅನುಕೂಲಸ್ಥ ಮನೆತ ನದ ಜೀವನವನ್ನು ವಿವರವಾಗಿ ನಿರೂಪಿಸಿದ್ದಾನೆ. ವಿಕ್ಟೋರಿಯ ರಾಣಿಯ ಆಳ್ವಿಕೆಯ ಕಾಲದಲ್ಲಿ ಇಂಥ ಮಧ್ಯಮ ವರ್ಗದ ಕುಟುಂಬಗಳು ಆಸ್ತಿ ಗಳಿಸಿ ದುವು, ಸಮಾಜದ ಗೌರವ ಗಳಿಸಿದುವು. ಧನಾರ್ಜನೆ, ಅಧಿಕಾರೀ ಮನೋ ಭಾವವುಳ್ಳ ಈ ಜನರು ತಮ್ಮ ಅಂತಸ್ತಿಗೆ ಬಾರದ ನತದೃಷ್ಟರ ಬಗೆಗೆ ಅನುಕಂಪ ತೋರುತ್ತಿದ್ದುದು ಕಡಮೆ.

ಗಾಲ್ಸ್‌ವರ್ದಿಯೇ ಸ್ವತಃ ಈ ಮಧ್ಯಮ ತರಗತಿಯವನು. ಆದರೆ ಜೀವನ ದಲ್ಲಿ ಕೆಳಗೆಬಿದ್ದವರ ಬಗೆಗೆ ಅವನಿಗೆ ವಿಶೇಷ ಅನುಕಂಪ. ಅವನ ಬರೆಹಗಳಲ್ಲಿ ಬಡತನದಿಂದ ಉದ್ಭವಿಸುವ ಸಾಮಾಜಿಕ ಕೆಡುಕುಗಳು, ಬಡವರ ಯಾತನೆ, ವ್ಯಥೆಗಳ ಬಗೆಗೆ ಒಳನೋಟವಿದೆ. ಆದರೆ ಗಾಲ್ಸ್‌ವರ್ದಿಯದು ನಿಷ್ಪಕ್ಷಪಾತ ಮನೋವೃತ್ತಿ. ಒಂದು ಸಮಸ್ಯೆ ಅಥವಾ ವಿವಾದಾಸ್ಪದ ಪ್ರಶ್ನೆ ಬಂದಿತೆಂದರೆ ಅವನು ಅದರ ಎರಡೂ ಮುಖಗಳಿಗೂ ಸಮ ಪ್ರಾಶಸ್ತ್ಯ ಕೊಟ್ಟು ಚರ್ಚಿಸುತ್ತಾನೆ. ಎರಡೂ ಚಿತ್ರಗಳನ್ನು ನಮ್ಮ ಮುಂದಿಡುತ್ತಾನೆ. ಆದರೂ ಓದುಗನ ಅನುಕಂಪ ಸಾಮಾನ್ಯವಾಗಿ ಕಥೆಯಲ್ಲಿ ಬರುವ ನತದೃಷ್ಟರ ಕಡೆಗೇ ವಾಲುತ್ತದೆ. ಗಾಲ್ಸ್‌ವರ್ದಿಯ ಲೇಖಕ ಮಿತ್ರ ಜೋಸೆಫ್ ಕಾನ್ರಾಡ್ ಅವನನ್ನು "ಮಾನವ ಒತ್ತೈಷಿಯಾದ ನೀತಿವಾದಿ" ಎಂದು ಕರೆದಿದ್ದಾನೆ.



ಮಧ್ಯಮ ತರಗತಿ : ಗಾಲ್ಸ್‌ವರ್ದಿ

ಗಾಲ್ಸ್‌ವರ್ದಿ ತನ್ನ ನಾಟಕಗಳಲ್ಲೂ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿದ್ದಾನೆ. ಸಮಸ್ಯೆಯ ಎರಡೂ ಮುಖಗಳನ್ನೂ ನಿರೂಪಿಸುವಾಗ ನಾಟಕೀಯತೆಯನ್ನು ಪರಿಣಾಮಕಾರಿಯಾಗಿ ಸಾಧಿಸಿದ್ದಾನೆ. ಆದರೂ ಇವುಗಳಲ್ಲಿ ಭಾವುಕತೆ ಕಡಮೆಯೆಂದೇ ಹೇಳಬೇಕು. 'ರಜತ ಸಂಪುಟ' ಅವನ ನಾಟಕಗಳಲ್ಲಿ ಮುಖ್ಯವಾದದ್ದು. ಕಾನೂನು ಬಡವರನ್ನೂ ಉಳ್ಳವರನ್ನೂ ಬೇರೆ ಬೇರೆ ದೃಷ್ಟಿಯಿಂದ ಕಾಣುವುದೇ ಇದರ ಕಥಾವಸ್ತು. ಕೈಗಾರಿಕಾ ಬಾಂಧವ್ಯಗಳನ್ನು ವಿಮರ್ಶಿಸುವ ನಾಟಕ 'ಘರ್ಷಣೆ'. 'ನ್ಯಾಯ' ಕೃತಿ ಸೆರೆಮನೆವಾಸದ ಅತ್ಯಂತ ವಾಸ್ತವಿಕ ಚಿತ್ರಣವನ್ನು ಕೊಟ್ಟಿತು; ಆ ಪದ್ಧತಿಯಲ್ಲಿ ಸುಧಾರಣೆಯಾಗಲು ಪ್ರೇರಕವಾಯಿತು.

ನಾಟಕಗಳನ್ನಲ್ಲದೆ ಕವನಗಳನ್ನೂ ಗಾಲ್ಸ್‌ವರ್ದಿ ಬರೆದಿದ್ದಾನೆ.

ಜಾನ್ ಗಾಲ್ಸ್‌ವರ್ದಿ ಇಂಗ್ಲೆಂಡಿನ ಸರ್ರೆ ಪ್ರದೇಶದ ಕೂಂಬ್ ಎಂಬಲ್ಲಿ 1867 ಆಗಸ್ಟ್ 14ರಂದು ಹುಟ್ಟಿದ. ಹ್ಯಾರೋ ಹಾಗೂ ಆಕ್ಸ್‌ಫರ್ಡ್‌ಗಳಲ್ಲಿ ವಿದ್ಯಾಭ್ಯಾಸ ಮಾಡಿದ. ನ್ಯಾಯಶಾಸ್ತ್ರದಲ್ಲಿ ಪದವೀಧರನಾದ. ನೌಕಾ ವಿಷಯಕ ಕಾನೂನಿನಲ್ಲಿ ವಿಶೇಷ ಪರಿಣತಿ ಪಡೆಯುವುದಕ್ಕಾಗಿ ಸಮುದ್ರಯಾನಮಾಡಿದ. ಆದರೆ ನ್ಯಾಯಶಾಸ್ತ್ರ ಅವನಿಗೆ ಒಗ್ಗಲಿಲ್ಲ. ಬರೆಹಗಾರನಾಗಲು ಮನಸ್ಸು ಮಾಡಿದ. 'ಜಾನ್ ಸಿನ್‌ಜಾನ್' ಎಂಬ ಗುಪ್ತನಾಮದಲ್ಲಿ ಮೊದಲ ನಾಲ್ಕು ಕಾದಂಬರಿಗಳನ್ನು ಬರೆದ.

1932ರ ನೊಬೆಲ್ ಸಾಹಿತ್ಯ ಬಹುಮಾನ ಗಾಲ್ಸ್‌ವರ್ದಿಗೆ ದೊರೆಯಿತು.

1933 ಜನವರಿ 31ರಂದು ಹ್ಯಾಂಪ್‌ಸ್ಟೆಡ್ ಎಂಬಲ್ಲಿ ಗಾಲ್ಸ್‌ವರ್ದಿ ಗತಿಸಿದ. 'ಫ್ಲವರಿಂಗ್ ವಿಲ್ಡರ್‌ನೆಸ್' ಅವನ ಕೊನೆಯ ಕಾದಂಬರಿ.

## ಗ್ರಿಮ್ ಸಹೋದರರು

ಒಬ್ಬ ಮೋಚಿ, ಅವನು ತೀರಾ ಬಡವ. ಆ ದಿನ ಅವನ ಬಳಿ ಇದ್ದದ್ದು ಒಂದು ಜೊತೆ ಪಾದರಕ್ಷೆ ತಯಾರಿಸಲು ಬೇಕಾಗುವಷ್ಟು ತೊಗಲು ಮಾತ್ರ. ಆತ ಅದನ್ನು ತಾನು ಕೆಲಸಮಾಡುವ ಮೇಜಿನ ಮೇಲಿರಿಸಿ ಮಲಗಲು ಹೋದ. ಬೆಳಗ್ಗೆ ಪಾದರಕ್ಷೆ ಮಾಡಲೆಂದು ಮೇಜಿನ ಬಳಿ ಬಂದಾಗ, ಅಲ್ಲಿ ಸಿದ್ಧವಾಗಿದ್ದ ಪಾದರಕ್ಷೆಗಳಿದ್ದುವು. ಯಾರೋ ಆಗ ತಾನೇ ಕೆಲಸಮಾಡಿ ಹೋದಂತೆ ಹತಾರಗಳು ಮೇಜಿನ ಮೇಲೆ ಇದ್ದುವು.

ಅಂದವಾಗಿದ್ದ ಆ ಪಾದರಕ್ಷೆಗಳಿಗೆ ಎಂದಿಗಿಂತ ಹೆಚ್ಚು ಬೆಲೆ ದೊರಕಿತು. ಆತ ಎರಡು ಜೊತೆ ಪಾದರಕ್ಷೆಗಳಿಗೆ ಆಗುವಷ್ಟು ತೊಗಲು ತಂದಿರಿಸಿದ. ಮಾರನೆಯ ದಿನ ಎರಡು ಜೊತೆ ಪಾದರಕ್ಷೆಗಳು ಸಿದ್ಧವಾಗಿದ್ದುವು. ಹೀಗೇ ಪ್ರತಿ ದಿನ ನಡೆದು ಮೋಚಿ ಹಣಗಾರನಾದ.

ದಿನವೂ ಪಾದರಕ್ಷೆಗಳನ್ನು ತಯಾರಿಸಿಡುವವರು ಯಾರೆಂದು ತಿಳಿಯಲು ಆತನಿಗೆ ಕುತೂಹಲವಾಯಿತು. ರಾತ್ರೆ ಎಚ್ಚರವಾಗಿದ್ದು ಕಾಯಬೇಕು ಎನಿಸಿತು. ಅವನ ಹೆಂಡತಿಯೂ ಅದಕ್ಕೆ ಒಪ್ಪಿದಳು. ತೊಗಲನ್ನು ಮೇಜಿನ ಮೇಲಿರಿಸಿ ಮೋಂಬತ್ತಿ ಹಚ್ಚಿಟ್ಟು ಅವರಿಬ್ಬರೂ ತೆರೆಯಮರೆಯಲ್ಲಿ ಅಡಗಿ ಕುಳಿತರು. ಮಧ್ಯರಾತ್ರಿಯ ಹೊತ್ತಿನಲ್ಲಿ ನಗ್ನರಾಗಿದ್ದ ಇಬ್ಬರು ಕಿನ್ನರ ಹುಡುಗರು ಬಂದು ಮೇಜಿನ ಮುಂದೆ ಕುಳಿತರು. ಚುರುಕಾಗಿ ಕೆಲಸಮಾಡಿದರು. ಸ್ವಲ್ಪ ಹೊತ್ತಿನಲ್ಲಿಯೇ ಅವರು ಪಾದರಕ್ಷೆಗಳನ್ನು ಸಿದ್ಧಪಡಿಸಿ ಹೊರಟುಹೋದರು. ಆ ಮಕ್ಕಳಿಗೆ ಉಡುಪು, ಉಣ್ಣೆಕಾಲುಚೀಲ, ಪಾದರಕ್ಷೆಗಳನ್ನು ಕೊಡೋಣವೆಂದು ಆಕೆ ಸಲಹೆ ಮಾಡಿದಳು. ಅಂದು ರಾತ್ರೆ ಮೇಜಿನ ಮೇಲೆ ಸಿದ್ಧವಾಗಿದ್ದ ಉಡುಪು, ಕಾಲುಚೀಲ, ಪಾದರಕ್ಷೆಗಳನ್ನು ಜೋಡಿಸಿಟ್ಟು ಅವರಿಬ್ಬರೂ ಮೊದಲಿನಂತೆ ಅಡಗಿ ಕುಳಿತರು. ಕಿನ್ನರ ಮಕ್ಕಳು ಎಂದಿನಂತೆ ಬಂದಾಗ ಮೇಜಿನ ಮೇಲೆ ತೊಗಲು ಇರಲಿಲ್ಲ. ಬೇರೆ ವಸ್ತುಗಳನ್ನು ಯಾಕೆ ಇಟ್ಟಿದ್ದಾರೆಂಬುದು ಅವರಿಗೆ ಅರ್ಥವಾಗಲಿಲ್ಲ. ಅದು ತಮಗೋಸ್ಕರ ಇರಬಹುದು ಎಂದು ಹೊಳೆದಾಗ, ಸಂತೋಷದಿಂದ ಅವನ್ನು ಧರಿಸಿ, "ನಾವೀಗ ಸುಖವಾಗಿರುವ ದೊಡ್ಡ ಮನುಷ್ಯರು, ನಾವಿನ್ನೇಕೆ ಕೆಲಸ ಮಾಡಬೇಕು?'' ಎಂದು ಹಾಡುತ್ತ ಕುಣಿದಾಡಿ ಹೊರಟುಹೋದರು. ಅಂದು ಹೊರಟುಹೋದ ಕಿನ್ನರ ಮಕ್ಕಳು ಪುನಃ ಬರಲಿಲ್ಲ. ಮೋಚಿ ದುಡಿಯುತ್ತ ಚೆನ್ನಾಗಿ ಸಂಪಾದಿಸುತ್ತ ಸಂತೋಷದಿಂದಿದ್ದ.



ಆಡುಮಾತಿನ ಪಾಂಡಿತ್ಯ : ಗ್ರಿಮ್ ಸಹೋದರರು

ಇದು, ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಗ್ರಿಮ್ ಸಹೋದರರು ಬರೆದ ಕಿನ್ನರ ಕಥೆಗಳಲ್ಲೊಂದು.

ಗ್ರಿಮ್ ಸಹೋದರರು ಜರ್ಮನಿಯ ಫ್ರಾಂಕ್‌ಫರ್ಟ್ ಸಮೀಪದಲ್ಲಿರುವ ಹಾನೌನಲ್ಲಿ ಜನಿಸಿದರು. ಜೇಕಬ್ ಹುಟ್ಟಿದ್ದು, 1785ನೆಯ ಜನವರಿ 4ರಂದು ; ವಿಲ್‌ಹೆಲ್ಮ್, 1786ನೆಯ ಫೆಬ್ರುವರಿ 24ರಂದು. ಇಬ್ಬರೂ ಕಾನೂನು ಪದವೀಧರರಾದರು. ಸ್ವಲ್ಪ ಕಾಲ ಗ್ರಂಥಾಲಯದಲ್ಲಿ, ಗಾಂಟಿಜೆನ್ ವಿಶ್ವವಿದ್ಯಾನಿಲಯದಲ್ಲಿ ಕೆಲಸ ಮಾಡಿದ ಮೇಲೆ ಬರ್ಲಿನ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾದರು. ಚುರುಕು ಬುದ್ಧಿ, ಕರ್ಮನಿಷ್ಠೆ, ವಿದ್ಯಾಸಕ್ತಿ ಈ ಸೋದರರ ಗುಣಗಳು. ಕಷ್ಟಪಟ್ಟು ಕೆಲಸ ಮಾಡುತ್ತಿದ್ದರು. ಭಾಷೆಗಳ ಹುಟ್ಟು, ಬೆಳವಣಿಗೆ ಇವರ ಮೆಚ್ಚಿನ ವಿಷಯ. ಜರ್ಮನ್ ಭಾಷೆಯ ನಿಘಂಟಿನ ಕೆಲಸವನ್ನು ಇಬ್ಬರೂ ಸೇರಿ ಆರಂಭಿಸಿದರು, ಆದರೆ ಆ ಕೆಲಸ ಮುಗಿಯಲಿಲ್ಲ. ಅವರ ಮರಣಾನಂತರ ಅದನ್ನು ವಿದ್ವಾಂಸರು ಪೂರೈಸಿದರು. ಜೇಕಬ್ ಜರ್ಮನ್ ಭಾಷೆಯ ವ್ಯಾಕರಣ, ಜರ್ಮನ್ ಭಾಷೆಯ ಇತಿಹಾಸ, ಜರ್ಮನ್ ಪುರಾಣ ಸಾಹಿತ್ಯಗಳನ್ನು ಬರೆದ. ವಿಲ್‌ಹೆಲ್ಮ್ ಜರ್ಮನ್ ವೀರಗಾಥವನ್ನು ಬರೆದ.

ಭಾಷೆಯ ಬಗ್ಗೆ ಸಂಶೋಧನೆ ನಡೆಸುತ್ತಿದ್ದಾಗ ಹಳ್ಳಿಗರ ಮನವೊಲಿಸಿ ಅವರಿಗೆ ಅರಿತಿದ್ದ ಕಥೆಗಳನ್ನು ತಿಳಿದುಕೊಳ್ಳುತ್ತಿದ್ದರು. ಕಥೆಗಳು ಮನಸೆಳೆಯುವಂತಿದ್ದುವು. ಹೀಗೆ ಸುಮಾರು 13 ವರ್ಷಗಳ ಅವಧಿಯಲ್ಲಿ ಶೇಖರಿಸಿದ ಕಥೆಗಳನ್ನು ಈ ಸಹೋದರರು ಮೂರು ಸಂಪುಟಗಳಲ್ಲಿ ಬರೆದರು. ಕಥೆಗಳನ್ನು ತಾವು ಕೇಳಿದಂತೆಯೇ ಬರೆದಿರುವುದು ಇವರ ವೈಶಿಷ್ಟ್ಯ.

ಈ ಕಾರಣದಿಂದ ಜರ್ಮನಿಯ ಜನತೆಯ ಮನೋಧರ್ಮ ಈ ಕಥೆಗಳಲ್ಲಿ ಸೆರೆಯಾಗಿದೆ. ಮೊದಲ ಸಂಪುಟ 1812ರಲ್ಲೂ ಉಳಿದವು 1814. 1822ರಲ್ಲೂ ಪ್ರಕಟವಾದುವು.

ಆ ಕಿನ್ನರ ಕಥೆಗಳು ಅನೇಕ ಭಾಷೆಗಳಿಗೆ ಭಾಷಾಂತರವಾಗಿವೆ. ಇಂಗ್ಲಿಷ್‌ನಲ್ಲಿ. ಗ್ರಿಮ್ಮರ ಕಿನ್ನರ ಕಥೆಗಳೆಂದು ಅವು ಪ್ರಸಿದ್ಧವಾಗಿವೆ. ಈ ಕಥೆಗಳು ಅನೇಕ ಮಂದಿ ಲೇಖಕರು, ಕಲಾವಿದರು, ಸಂಗೀತಗಾರರಿಗೆ ಸ್ಫೂರ್ತಿ ನೀಡಿವೆ. ಹ್ಯಾನ್ಸೆಲ್ ಗ್ರೆಟಲ್ ಎಂಬ ಕಿನ್ನರ ಕಥೆ ಜರ್ಮನಿಯಲ್ಲಿ ಆಪೆರಾ ಆಗಿದೆ. ವಾಲ್ಟ್ ಡಿಸ್ನಿಯ 'ಸ್ನೋ ವೈಟ್' ಚಲಚ್ಚಿತ್ರಕ್ಕೆ ಗ್ರಿಮ್ ಸಹೋದರರ ಕಥೆಯೇ ಆಧಾರ.

ಮೊದಲಿನಿಂದಲೂ ದೈಹಿಕವಾಗಿ ದುರ್ಬಲನಾಗಿದ್ದ ವಿಲ್‌ಹೆಲ್ಮ್ 1859ರ ಡಿಸೆಂಬರ್ 16ರಂದು ಬರ್ಲಿನಿನಲ್ಲಿ ನಿಧನನಾದ. ಎಂದೂ ಅನಾರೋಗ್ಯಕ್ಕೆ ಬೀಳದೆ ತುಂಬ ಚಟುವಟಿಕೆಯಿಂದಿದ್ದ ಜೇಕಬ್ 1863ರ ಸೆಪ್ಟೆಂಬರ್ 20ರಂದು ಇದ್ದಕ್ಕಿದ್ದಂತೆ ನಿಧನನಾದ. ಸಣ್ಣ ಹುಡುಗರಾಗಿದ್ದಾಗ ಒಟ್ಟಿಗಿದ್ದು, ವಿದ್ವಾಂಸರಾಗಿ ಒಟ್ಟಿಗೇ ಕೆಲಸಮಾಡಿದ ಸಹೋದರರನ್ನು ಬರ್ಲಿನಿನಲ್ಲಿ ಪಕ್ಕಪಕ್ಕದಲ್ಲಿ ಸಮಾಧಿ ಮಾಡಿದ್ದಾರೆ.

## ಗೀತನಾಟಕ

ಗೀತನಾಟಕ —ಹೆಸರೇ ಸೂಚಿಸುವಂತೆ ಗೀತೆಯ ಹಾಗೂ ನಾಟಕದ ಎರಡೂ ಗುಣಗಳು ಮೇಳೈಸಿ ಹುಟ್ಟಿಕೊಂಡ ನಾಟಕ ಪ್ರಕಾರ. ಕನ್ನಡ ಸಾಹಿತ್ಯದಲ್ಲಿ ಇದು ಆಧುನಿಕ ಸೃಷ್ಟಿ. ಏಕೆಂದರೆ ಇಂದು ಪರಿಚಿತವಾಗಿರುವ ರೂಪದಲ್ಲಿ ಇದು ಆರಂಭವಾದದ್ದು ಈ ಶತಮಾನದ ಮೂರನೆಯ ದಶಕದಲ್ಲಿ. ಕನ್ನಡದಲ್ಲಿ ಗೀತನಾಟಕಗಳ ಸಂಖ್ಯೆ ಕಡಮೆಯಾದರೂ ಗುಣದ ದೃಷ್ಟಿಯಿಂದ ಅವು ಗಮನಾರ್ಹವಾದುವು.

ಒಂದು ಪ್ರಸಂಗವನ್ನೇ ಆಗಲಿ, ಕತೆಯನ್ನೇ ಆಗಲಿ, ವಿಚಾರವನ್ನೇ ಆಗಲಿ, ಅದನ್ನು ಗದ್ಯಪದ್ಯಾತ್ಮಕವಾದ ಅಥವಾ ಕೇವಲ ಗದ್ಯರೂಪದ ಸಂಭಾಷಣೆಗಳ ಮೂಲಕ ನಿರ್ವಹಿಸಿದಾಗ ಅದು ಸಾಮಾನ್ಯವಾಗಿ ನಾಟಕರೂಪವನ್ನು ತಾಳುತ್ತದೆ. ಅವನ್ನು ಗೇಯ ಪ್ರಧಾನವಾದ ಛಂದೋ ರೂಪದಲ್ಲಿ ರಚಿಸಿದಾಗ ಗೇಯನಾಟಕವಾಗುತ್ತದೆ. ಪಾಶ್ಚಾತ್ಯರ ಆಪೆರಾಕ್ಕೆ ಸಮಾನಪದವಾಗಿ ಗೀತನಾಟಕವನ್ನು ಬಳಸುವುದುಂಟು. ಆದರೆ ಇವೆರಡರ ಸ್ವರೂಪಗಳಲ್ಲಿ ವ್ಯತ್ಯಾಸವಿದೆ. ಆಪೆರಾದಲ್ಲಿ ಗಾಯನ ವಾದ್ಯಸಂಗೀತಗಳೆರಡೂ ಇರುತ್ತವೆ. ಇದರ ಕಥೆ ಸಾಧಾರಣವಾಗಿ ಕಾಲ್ಪನಿಕ; ಪ್ರಯೋಗದ ದೃಷ್ಟಿಯಿಂದ ರಂಗಸಜ್ಜಿಕೆ ಹೆಚ್ಚು ರಮ್ಯ. ನರ್ತನವೂ ಇದರಲ್ಲಿ ಸೇರಿಕೊಂಡಿರುತ್ತದೆ. ಗೀತನಾಟಕದಲ್ಲಿ ಸಂಗೀತದ ಪ್ರಾಬಲ್ಯ ಹೆಚ್ಚು.

ಸ್ವರೂಪದಲ್ಲಿ ಇದಕ್ಕಿಂತ ಸ್ವಲ್ಪ ಭಿನ್ನವಾದರೂ ಹೀಗೆಯೇ ಇರುವ ಸಂಗೀತ ನೃತ್ಯ ಪ್ರಧಾನವಾದ ಕೆಲವು ಸಂಸ್ಕೃತ ಸಂಗೀತ ನಾಟಕಗಳಿವೆ. ಹನ್ನೆರಡನೆಯ ಶತಮಾನದ ಜಯದೇವ ಕವಿ ರಚಿಸಿದ 'ಗೀತಗೋವಿಂದ' ಇವುಗಳಲ್ಲಿ ಹೆಚ್ಚು ಪ್ರಸಿದ್ಧವಾದದ್ದು. 16ನೆಯ ಶತಮಾನದ ನಾರಾಯಣ ತೀರ್ಥರ 'ಕೃಷ್ಣಲೀಲಾ ತರಂಗಿಣಿ' ಇಂಥದು. ಇದರಲ್ಲಿ ಕೀರ್ತನೆಗಳಿವೆ. ಸಂಗೀತಕ್ಕೆ ಅಳವಡಿಸಲ್ಪಟ್ಟ ಕೆಲವು ಸಂಭಾಷಣೆಗಳು ಚೆಲುವಾಗಿವೆ. ನಾದೋಪಾಸನೆಯಿಂದ ರಾಮನನ್ನು ಅರ್ಚಿಸಿದ ತ್ಯಾಗರಾಜರು 'ನೌಕಾಚರಿತ', 'ಪ್ರಹ್ಲಾದ ಭಕ್ತಿವಿಜಯ' ಹಾಗೂ 'ಸೀತಾರಾಮ ವಿಜಯ' ಎಂಬ ಮನೋಹರ ಗೇಯ ನಾಟಕಗಳನ್ನು ತೆಲುಗು ಭಾಷೆಯಲ್ಲಿ ಬರೆದಿದ್ದಾರೆ. ಗೋಪಾಲಕೃಷ್ಣ ಭಾರತಿಯವರು ತಮಿಳಿನಲ್ಲಿ ರಚಿಸಿರುವ 'ನಂದನಾರ್ ಚರಿತ್ರೆ' ಸುಪ್ರಸಿದ್ಧ ಗೀತನಾಟಕ.

ಕನ್ನಡದಲ್ಲಿ ಗೀತನಾಟಕಕ್ಕೆ ನಾಂದಿ ಹಾಡಿದವರು ಶಿವರಾಮ ಕಾರಂತರು. 1930ರಲ್ಲಿ ಇವರು ಬರೆದ 'ಮುಕ್ತದ್ವಾರ' ಕನ್ನಡದ ಮೊದಲ ಗೀತನಾಟಕ. ಶಿವರಾಮ ಕಾರಂತರ ಲೇಖನಿಯಿಂದ ಹೊರಬಿದ್ದ ಗೀತನಾಟಕಗಳು ಹಲವು. 'ಕಿಸಾಗೋತಮಿ', 'ಬಡಕುಮಾರ', 'ಸೋಮಿಯ ಸೌಭಾಗ್ಯ', 'ಯಾರೋ ಅಂದರು', 'ಬುದ್ಧೋದಯ', 'ಅವಕಾಶ', 'ಸಾವಿತ್ರಿ ಸತ್ಯವಾನ', 'ಋತುಯಾತ್ರೆ'. ಕೇವಲ ಈ ನಾಟಕಗಳನ್ನು ರಚಿಸಿದ್ದಷ್ಟೇ ಅಲ್ಲ, ಅವುಗಳಿಗೆ ಸಂಗೀತವನ್ನೂ ಅವರು ಹೊಂದಿಸಿದರು. ಅವುಗಳನ್ನು ರಂಗದ ಮೇಲೆ ಪ್ರಯೋಗಿಸಿ ಹವ್ಯಾಸಿ ರಂಗಭೂಮಿಗೆ ಇದೂ ಒಂದು ಉತ್ತಮ ಅಭಿವ್ಯಕ್ತಿ ಮಾಧ್ಯಮ ಎಂಬುದನ್ನು ಅವರು ತೋರಿಸಿಕೊಟ್ಟರು.

ಕನ್ನಡ ಗೀತನಾಟಕಗಳಿಗೆ ಪು. ತಿ. ನರಸಿಂಹಾಚಾರ್ಯರ ಕೊಡುಗೆ ವಿಶಿಷ್ಟವಾದದ್ದು. ಸಂಗೀತ ಮತ್ತು ನಾಟಕ ಲಕ್ಷಣಗಳು ಹಾಸುಹೊಕ್ಕಾಗಿರುವ ಇವರ ಗೀತನಾಟಕಗಳಲ್ಲಿ ಕೆಲವದರ ವಸ್ತುಗಳು ಮಹಾಕಾವ್ಯಗಳಿಂದ ಆರಿಸಿಕೊಂಡುವು. ಈ ವಸ್ತುಗಳು ಪು.ತಿ.ನ. ಅವರ ಪ್ರತಿಭೆಯ ಮೂಸೆಯಲ್ಲಿ ಪಕ್ವವಾಗಿ ಮನೋಜ್ಞ ಕಾವ್ಯರೂಪವನ್ನು ತಾಳಿವೆ. 'ಅಹಲ್ಯೆ', 'ಗೋಕುಲ ನಿರ್ಗಮನ', 'ಶಬರಿ' ಇವು ಪೌರಾಣಿಕ. ಭಾವಾವೇಶ ತುಂಬಿದ ಸುಂದರ ಕವಿತಾಗುಣವುಳ್ಳ ಇವರ ಇತರ ಗೀತನಾಟಕಗಳು 'ದೋಣಿಯ ಬಿನದ', 'ಕವಿ', 'ವಿಕಟಕವಿ'.

ಶಿವರಾಮ ಕಾರಂತ, ಪು.ತಿ.ನ., ಸಿದ್ಧಯ್ಯ ಪುರಾಣಿಕ ಮುಂತಾಗಿ ಇನ್ನೂ ಕೆಲವರು ಕನ್ನಡದಲ್ಲಿ ಗೀತನಾಟಕಗಳನ್ನು ರಚಿಸಿದ್ದಾರೆ. ಕನ್ನಡವಲ್ಲಿ ಕಣ್ಣು, ಕಿವಿಗಳೆರಡನ್ನೂ ತಣಿಸುವ ಗೀತನಾಟಕ ಕರ್ಣಾಟಕ ಜಾನಪದ ಕಲೆಯಾದ ಯಕ್ಷಗಾನ ಬಯಲಾಟಗಳ ಆಧುನಿಕ ಬಂಧು.

ಗೀತನಾಟಕ ಪ್ರದರ್ಶನಕ್ಕೆ ಅದರದೇ ವಿಶಿಷ್ಟ ರಂಗಭೂಮಿ ಇದ್ದರೆ ಉತ್ತಮ. ವಾಸ್ತವಿಕತೆಗಿಂತಲೂ ಕಲ್ಪನಾಂಶವೇ ಹೆಚ್ಚಾಗಿರುವ ಈ ಮಾಧ್ಯಮದ ರಂಗಸಜ್ಜಿಕೆ ನೂತನವಾಗಿ, ರಮಣೀಯವಾಗಿದ್ದರೆ ಪ್ರಯೋಗ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಗೀತನಾಟಕಗಳ ಅಭಿನಯದಲ್ಲಿ ನಟನಟಿಯರ ಚಲನೆ, ಹಾವಭಾವ ಪ್ರದರ್ಶನ, ಹಾಡುಗಾರಿಕೆ ಸಾಮರಸ್ಯ ಸಾಧಿಸಲ್ಪಟ್ಟಾಗ ಮಾತ್ರ ಗೀತನಾಟಕ ಯಶಸ್ವಿಯಾಗುತ್ತದೆ. ಗೀತನಾಟಕಕ್ಕೆ ಅಳವಡಿಸಿದ ಸಂಗೀತ ಶಾಸ್ತ್ರೀಯ ವರ್ಗದ್ದಿರಬಹುದು; ಇಲ್ಲವೆ, ಲಘು ಧಾಟಿಯದಿರಬಹುದು. ಆದರೆ ಅದು ಭಾವಪೂರ್ಣವೂ ಪರಿಣಾಮಕಾರಿಯೂ ಆಗಿರಬೇಕಾದದ್ದು ಅವಶ್ಯ. ಗೀತನಾಟಕ ಕರ್ತೃವೇ ಅದಕ್ಕೆ ಸಂಗೀತವನ್ನೂ ರಚಿಸಿದ್ದರೆ ಉತ್ತಮ. ಅದು ಸಾಧ್ಯವಿಲ್ಲದ ಸಂದರ್ಭಗಳಲ್ಲಿ ಕವಿಹೃದಯವನ್ನರಿತು ಅದಕ್ಕೆ ತಕ್ಕ ಸಂಗೀತವನ್ನು ರಚಿಸಬಲ್ಲ ಗೇಯಕಾರನ ನೆರವು ಅನಿವಾರ್ಯವಾಗುತ್ತದೆ.

ಗೀತನಾಟಕ ಪ್ರಯೋಗದಲ್ಲಿ ನಿರ್ದೇಶಕನ ಪಾತ್ರ ಮಹತ್ವದ್ದು. ಅದರ ಯಶಸ್ಸು ಅವನ ನಿಯೋಜನ ಕೌಶಲವನ್ನು ಅವಲಂಬಿಸಿದೆ. ಕೆಲವು ಗೀತನಾಟಕಗಳು ಶ್ರಾವ್ಯ ನಾಟಕಗಳಾಗಿದ್ದು ಪ್ರಸಾರಕ್ಕೆ ಹೆಚ್ಚು ಹೊಂದಿಕೊಳ್ಳುತ್ತವೆ. ಇನ್ನು ಕೆಲವು ನಾಟಕಗಳಲ್ಲಿ ದೃಶ್ಯಭಾಗಕ್ಕೆ ಪ್ರಾಧಾನ್ಯವಿದ್ದು ಅವು ರಂಗಪ್ರಯೋಗಕ್ಕೂ ಚೆನ್ನಾಗಿ ಒಗ್ಗಿಕೊಳ್ಳುತ್ತವೆ. ಒಟ್ಟಿನಲ್ಲಿ ನಾಟಕದ ಆಕರ್ಷಣೆ, ಕಾವ್ಯದ ಭಾವುಕತೆ, ಸಂಗೀತದ ಸೊಬಗು ಗೀತನಾಟಕದಲ್ಲಿ ಮೇಳೈಸಿರುತ್ತವೆ.

### 'ಗೀತಾಂಜಲಿ'

" ದೇವನ ಬರುವ ಹೆಜ್ಜೆ ದನಿಯನು ನೀವು ಕೇಳಿಲ್ಲವೇ ?
ಬರುತಿಹನು ಎಂದೆಂದಿಗೂ ದೇವ ಬರುತಿಹನು
ದಿನವೆಲ್ಲ, ರಾತ್ರಿಯೆಲ್ಲ, ಕ್ಷಣಕ್ಷಣಕೂ
ಬರುತಲಿರುವನು, ಬಂದೇ ಬರುವನು "

—ಇದು ವಿಶ್ವಕವಿ ರವೀಂದ್ರನಾಥ ಠಾಕೂರರ 'ಗೀತಾಂಜಲಿ' ಕವನ ಸಂಕಲನದಿಂದ ಆಯ್ದ ಸಾಲುಗಳು. ಸ. ಪ. ಗಾಂವಕರರ ಅನುವಾದದಿಂದ.

ಪ್ರಕೃತಿಯ ವಿವಿಧ ಲಾಸ್ಯಗಳು. ಹಿಮಾಚ್ಛಾದಿತ ಹಿಮಾಲಯದ ಚೆಲುವು ಕವಿಯ ಹೃದಯವನ್ನು ಕುಣಿಸುತ್ತಿದ್ದುವು. ಇದರಲ್ಲೆಲ್ಲ ಅವರು ಪರಮಾತ್ಮನ ಸಾನ್ನಿಧ್ಯವನ್ನು ಗುರುತಿಸಿದ್ದರು. ಮಂತ್ರಗಳಲ್ಲಾಗಲೀ, ಗುಡಿಯಲ್ಲಿರುವ ವಿಗ್ರಹದಲ್ಲಾಗಲೀ ಅರಸಿದರೆ ದೇವ ಸಿಗುವನೆ ? ಆತ ನಮ್ಮ ಮುಂದೆಯೇ ಇದ್ದಾನೆ. ಎಲ್ಲೆಲ್ಲೂ ಇದ್ದಾನೆ ಎಂಬುದನ್ನು ಅನುಭವದಿಂದ ಕಂಡು ಕೊಂಡವರು ರವೀಂದ್ರರು. ಸಣ್ಣ ಲಾಭಗಳಿಗಾಗಿ ದೇವರನ್ನು ಬೇಡ ಬಾರದು : ಆತ ನಮಗೆ ಕೊಟ್ಟಿರುವುದರಲ್ಲೇ ತೃಪ್ತರಾಗಬೇಕು ; ಮಕ್ಕಳಿಗಿರುವಂಥ ಮುಗ್ಧ ಮನಸ್ಸಿದ್ದಲ್ಲಿ ದೇವನನ್ನು ಕಾಣುವುದು ಸುಲಭ –ಎಂಬುದು ಅವರ ಅನುಭವ ವಾಣಿ. ಜೀವನದ ಸಿಹಿ ಕಹಿಗಳನ್ನು ಅನುಭವಿಸಲು ದೃಢ ಮನಸ್ಸು ಕೊಡು ದೇವ ಎಂದು ಮಾತ್ರ ಅವರು ದೇವರನ್ನು ಪ್ರಾರ್ಥಿಸಿದ್ದಾರೆ.

ರವೀಂದ್ರರು ಬಂಗಾಲಿ ಭಾಷೆಯಲ್ಲಿ ಕವನಗಳನ್ನು ರಚಿಸಿದರು. ಭಾರತದ ಸಂಸ್ಕೃತಿಯ ತಿರುಳನ್ನು ಅವುಗಳಲ್ಲಿ ಕಾಣಬಹುದು.

ವಿಶ್ರಾಂತಿ ತೆಗೆದುಕೊಳ್ಳುವಂತೆ ವೈದ್ಯರು ಒಮ್ಮೆ ಠಾಕೂರರಿಗೆ ಸಲಹೆ ಮಾಡಿದಾಗ ಅವರು ಬಂಗಾಲಿ 'ಗೀತಾಂಜಲಿ'ಯ 51 ಕವನಗಳನ್ನೂ ಬೇರೆ 52 ಕವನಗಳನ್ನೂ ಗದ್ಯರೂಪದಲ್ಲಿ ಇಂಗ್ಲಿಷಿಗೆ ಭಾಷಾಂತರ ಮಾಡಿದರು. ಇದೇ ವಿಶ್ವಮಾನ್ಯತೆ ಪಡೆದ 'ಗೀತಾಂಜಲಿ'. ಇದರಲ್ಲಿ 103 ಕವನಗಳಿವೆ. 1913ರಲ್ಲಿ ಪ್ರಕಟವಾದ 'ಗೀತಾಂಜಲಿ'ಯ ಈ ಅವತರಣಿಕೆಗಾಗಿ ಆ ವರ್ಷವೇ ರವೀಂದ್ರರಿಗೆ ನೊಬೆಲ್ ಸಾಹಿತ್ಯ ಬಹುಮಾನ ಲಭಿಸಿತು.

" ಮೂರ್ಖ ಮಾನವ, ನಿನ್ನ ತೋಳುಗಳ ಮೇಲೆಯೇ ಜೀವನದ ಎಲ್ಲ ಭಾರವನ್ನೂ ಹೊರಬೇಕೆನ್ನುವೆ ಏಕೆ ? ಸರ್ವಶಕ್ತಿ ಸಂಪನ್ನನಾದ ಪರಮಾತ್ಮನ ಬಾಹುಗಳ ಮೇಲೆ ನಿನ್ನ ಬಾಳಿನ ಭಾರವನ್ನೆಲ್ಲ ಹಾಕು."
—ಇದು 'ಗೀತಾಂಜಲಿ' ಯಲ್ಲಿ ಬರುವ ಒಂದು ಸುನೀತದ ಕರೆ.

**ನೋಡಿ:** ರವೀಂದ್ರನಾಥ ಠಾಕೂರ್

### ಗ್ರೀಕ್ ಕಲೆ, ಸಾಹಿತ್ಯ

ಪುರಾತನ ಪ್ರಪಂಚದ ಏಳು ಅದ್ಭುತ ಕೃತಿಗಳಲ್ಲಿ ಮೂರು ಕೃತಿಗಳು ಗ್ರೀಕ್ ನಾಗರಿಕತೆಯ ಸಾಧನೆ. ರೋಡ್ಸ್ ದ್ವೀಪದ ಅಪೊಲೊ ದೇವತೆಯ ಪ್ರತಿಮೆ, ಒಲಿಂಪಿಯ ನಗರದ ಜ್ಯೂಸ್ ದೇವತೆಯ ವಿಗ್ರಹ, ಎಫಿಸಸ್‌ನಲ್ಲಿ ಡಯಾನ ದೇವತೆಗಾಗಿ ಕಟ್ಟಿದ ಭವ್ಯದೇವಾಲಯಗಳೇ ಈ ಮೂರು ಅದ್ಭುತಗಳು. ಪ್ರಾಚೀನ ಗ್ರೀಸಿನ ಕಲೆ ಎಂಥ ಉಜ್ಜ್ವಲ ಸ್ಥಿತಿಯನ್ನು ಮುಟ್ಟಿತ್ತು ಎಂಬುದನ್ನು ಇದರಿಂದ ಸುಲಭವಾಗಿ ಊಹಿಸ ಬಹುದು. ಅಷ್ಟೇಕೆ ಪಾಶ್ಚಾತ್ಯ ಜಗತ್ತಿನ ಕಲೆ, ಸಾಹಿತ್ಯಗಳಿಗೆಲ್ಲ ಆಧಾರಭೂತವಾದದ್ದು ಗ್ರೀಕ್ ಕಲೆ, ಸಾಹಿತ್ಯ. ವರ್ಷದ ಬಹು ಕಾಲ ಸೂರ್ಯನ ಬೆಳಕಿನಲ್ಲಿ ಮಿಂದು ಬೆಳಗುವ ನಾಡು ಗ್ರೀಸ್. ಶುದ್ಧವಾದ ಗಾಳಿ, ಇದ್ದಕ್ಕಿದ್ದಂತೆ ನೆಲವನ್ನು ತೋಯಿಸುವ ಮಳೆ, ನಾಲ್ಕು ಗೋಡೆಗಳ ನಡುವಿನ ಸಂಕುಚಿತ ಜೀವನಕ್ಕೆ ಬದಲಾಗಿ ದಿನದ ಬಹುಕಾಲವನ್ನು ಬಯಲಿನಲ್ಲಿ ಹೊರಗಡೆ ಕಳೆಯುವುದಕ್ಕೆ ಸಹಕಾರಿಯಾದ ವಾತಾವರಣ. ಇದು ಗ್ರೀಕರ ಕಲೆ, ಸಾಹಿತ್ಯಗಳ ಮೇಲೆ ತುಂಬ ಪರಿಣಾಮ ಮಾಡಿದೆ. ಅವರ ವಾಸ್ತುಶಿಲ್ಪ ರಚನೆಗಳೆಂದರೆ ಸ್ತಂಭಗಳುಳ್ಳ, ತೆರೆದ ಮಂಟಪಗಳಂಥ ಆಹ್ಲಾದಕರ ನಿರ್ಮಾಣಗಳು. ದೇವಾಲಯಗಳೂ ಹೀಗೆಯೇ. ರಾಜಕೀಯವಾಗಲೀ, ದರ್ಶನವಾಗಲೀ, ಸಾಹಿತ್ಯವಾಗಲೀ, ಅದರ ಚರ್ಚೆ ಆಕಾಶದಡಿಯಲ್ಲಿ, ಗಿಡಮರಗಳ ನಡುವೆ, ಆಹ್ಲಾದಕರ ಗಾಳಿ ಬೀಸುವೆಡೆಯಲ್ಲಿ. ಅವರ ನಾಟಕಶಾಲೆಯೆಂದರೆ ಸೂರೇ ಇಲ್ಲದ, ಅನೇಕ ಸಾವಿರ ಮಂದಿ ಕೂಡಬಹುದಾದ, ಅಮೃತಶಿಲೆಯ ಪೀಠ–ಪಾವಟಿಗೆಗಳುಳ್ಳ ವರ್ತುಲಾಕಾರದ ಸಭಾಮಂಡಲದ ನಾಟಕರಂಗ—ಟ್ರಾಜಿಡಿ, ಕಾಮಿಡಿಗಳಿಗೆ ಪ್ರತ್ಯ–ಪ್ರತ್ಯೇಕವಾಗಿ ಸ್ಪರ್ಧೆಗಳು. ಇದು ಗ್ರೀಕರ ಜೀವನ ವೈಖರಿ.

ಗ್ರೀಕ್ ನಾಗರಿಕತೆ ರೂಪುಗೊಳ್ಳುವುದಕ್ಕೆ ಮೊದಲಿದ್ದ ಜನ ಮನುಷ್ಯ ರೂಪದ ಬಗೆಗೆ ಅಷ್ಟೇನೂ ಲಕ್ಷ್ಯಕೊಟ್ಟಿರಲಿಲ್ಲ. ಆದರೆ ಗ್ರೀಕರು ಮನುಷ್ಯ ರೂಪವನ್ನು ಭವ್ಯತೆಗೇರಿಸಿದರು. ದೇವತಾ ವಿಗ್ರಹಗಳಲ್ಲಿ ಮಾನವರ ಸಂಪೂರ್ಣತೆಯ ರೂಪ ಕೊಟ್ಟರು–ತಮ್ಮ ಶಿಲ್ಪಕಲೆಯಲ್ಲಿ ಸುಂದರ ಮಾನವಾಕೃತಿಗೆ ಅತ್ಯುನ್ನತ ಸ್ಥಾನವಿತ್ತರು.

ಗ್ರೀಕ್ ವಾಸ್ತುಶಿಲ್ಪ, ಶಿಲ್ಪಗಳ ಅನೇಕ ಅವಶೇಷಗಳು ದೊರೆತಿವೆ. ಲಭ್ಯವಿರುವ ಚಿತ್ರಗಳ ಸಂಖ್ಯೆ ಕಡಮೆ. ಅವುಗಳ ಕಲಾಮಟ್ಟವೂ ಅಷ್ಟೇನೂ ಹೆಚ್ಚಿನದಲ್ಲ. ಆದರೆ ಗ್ರೀಸಿನ ಕುಂಭಕಲಶಗಳು ಅಪ್ರತಿಮ ಸುಂದರ ವಸ್ತುಗಳಾಗಿವೆ. ಗ್ರೀಕ್ ಕಲೆಯ ಅತಿ ಪ್ರಾಚೀನ ವಸ್ತುಗಳೆಂದರೆ ಈ ವರ್ಣಮಯ ಕುಂಭಕಲಶಗಳು. ಈಜಿಪ್ಟಿನಿಂದ ಪ್ರಭಾವಿತವಾಗಿರುವ ಈ ಗ್ರೀಕ್ ಕುಂಭ ವಸ್ತುಗಳ ರಚನೆ ಮೊದಲಿಗೆ ಆರಂಭವಾದದ್ದು ಕ್ರೀಟ್ ದ್ವೀಪದಲ್ಲಿ. ರೇಖಾಗಣಿತ ಪ್ರಧಾನವಾದ ಅಥವಾ ಒರಟಾಗಿ ಬರೆದ ಮಾನವಾಕೃತಿಗಳು ಈ ಪ್ರಥಮ ಕಲಾಕೃತಿಗಳ ವೈಶಿಷ್ಟ್ಯ. ಅನಂತರ ಪ್ರಾಚ್ಯ ಸಂಸ್ಕೃತಿಯಿಂದ ಪ್ರಭಾವಿತರಾಗಿ ಪ್ರಾಣಿ, ಸಸ್ಯಗಳನ್ನು ಚಿತ್ರಿಸ ಲಾರಂಭಿಸಿದರು. ಮಾನವರ, ದೇವತೆಗಳ ಆಕೃತಿಗಳನ್ನು ಕುಂಭದ ಸಹಜ ಬಣ್ಣವಾದ ಕೆಂಪಿನ ಹಿನ್ನೆಲೆಯಲ್ಲಿ ಕಪ್ಪುಬಣ್ಣದಲ್ಲೂ ಅನಂತರ ಕುಂಭ ಪದಾರ್ಥಗಳ ಸಹಜ ಕರಿಬಣ್ಣದ ಹಿನ್ನೆಲೆಯಲ್ಲಿ ಕೆಂಪು ಬಣ್ಣದಲ್ಲೂ ಚಿತ್ರಿಸಿದರು. ಈ ಚಿತ್ರಗಳ ರೇಖೆಗಳು, ಆಕೃತಿಗಳು ಚಲನೆ ಸೂಚಿಸುವ ಭಂಗಿಗಳು ಅದ್ಭುತವಾಗಿವೆ.

ಅವುಗಳಿಗೆ ಹೊಂದಿಕೊಳ್ಳುವಂತೆ ಚಿತ್ರಿಸಿರುವ ವಿನ್ಯಾಸಗಳು ಮನೋಹರವಾಗಿವೆ ; ಪ್ರಮಾಣಬದ್ಧವಾಗಿವೆ.

ಗ್ರೀಕ್ ವಾಸ್ತುಶಿಲ್ಪ ಸೊಗಸಿಗೆ, ಗಾಂಭೀರ್ಯಕ್ಕೆ ಹೆಸರಾದದ್ದು. ಮೊದಮೊದಲು ಗ್ರೀಕರು ದೊಡ್ಡ ಅರಮನೆಗಳನ್ನು ಕಟ್ಟುವುದರಲ್ಲಿ ಆಸಕ್ತಿ ತಳೆದಂತೆ ತೋರುವುದಿಲ್ಲ. ಇಟ್ಟಿಗೆ, ಮರಗಳಿಂದ ದೇವಾಲಯ ಕಟ್ಟಿದರು. ಇವು ಸರಳವಾಗಿವೆ. ಆದರೆ ಅವರ ರೇಖಾಗಣಿತೀಯ ವಿನ್ಯಾಸದ ಒಲವು ಮಾತ್ರ ಸ್ಪಷ್ಟವಾಗಿದೆ. ಇವುಗಳಲ್ಲಿ ಡೋರಿಕ್, ಅಯೋನಿಕ್, ಕಾರಿಂಥಿಯನ್ ಎಂಬುವು ಬಗೆಗಳು. ಇಂಥ ಪ್ರಪ್ರಥಮ ಹಾಗೂ ಅತ್ಯಂತ ಸರಳ ಶೈಲಿ ಪ್ರಾಚೀನ ಗ್ರೀಸಿನ ಡೋರಿಸ್ ಪ್ರಾಂತದಲ್ಲಿ ಆರಂಭವಾಯಿತು. ಅದನ್ನು ಡೋರಿಕ್ ಶೈಲಿ ಎಂದರು. ಡೋರಿಕ್ ಶೈಲಿಯ ಕಟ್ಟಡ ಭಾಗಗಳಲ್ಲಿ ಇಂಥ ರೇಖಾಕೃತಿಗಳನ್ನು ಅವಲಂಬಿಸಿವೆ. ಈ

ಶೈಲಿಯ ಪ್ರಮುಖ ಉದಾಹರಣೆ ಅಥೆನ್ಸಿನಲ್ಲಿರುವ ಪಾರ್ಥಿನಾನ್. ಇದು ಡೋರಿಕ್ ಶೈಲಿಯ ಗಾಂಭೀರ್ಯವನ್ನೂ ಘನರಚನೆಯನ್ನೂ ಪ್ರದರ್ಶಿಸುತ್ತದೆ. ಚೈತನ್ಯಪೂರ್ಣವಾಗಿದೆ.

ಅನಂತರದ ಶೈಲಿ ಅಯೋನಿಕ್. ಇದು ಪ್ರಾಚೀನ ಗ್ರೀಸಿನ ಅಯೋನಿಯನ್ ದ್ವೀಪಗಳಲ್ಲಿ ರೂಪುತಳೆಯಿತು. ದೃಢವಾದ ಡೋರಿಕ್ ಶೈಲಿಗೆ ವಿರುದ್ಧವಾಗಿ ಇದು ನಾಜೂಕಾದ, ಅಲಂಕರಣ ಹೆಚ್ಚಿರುವ ವಾಸ್ತುಶಿಲ್ಪದ ಮಾದರಿ. ಅಯೋನಿಕ್ ಶೈಲಿಯ ಸ್ತಂಭಗಳು ಡೋರಿಕ್ ಸ್ತಂಭಗಳನ್ನು ಹೋಲುವುವಾದರೂ ಅಷ್ಟು ದಪ್ಪವಾಗಿರುವುದಿಲ್ಲ. ಗೋಡೆಗಳ ಮಂದ ಕಡಮೆ. ಇದರಲ್ಲಿ ಹಗುರತೆಯ ಮತ್ತು ಲಾಲಿತ್ಯದ ಹೊಳಹು ಕಾಣುತ್ತದೆ.

ಮುಂದಿನ ಬೆಳವಣಿಗೆ ಕಾರಿಂಥಿಯನ್ ಶೈಲಿಯದು. ಗ್ರೀಕ್ ಮತ್ತು ವಾಸ್ತು ಶೈಲಿಗಳಲ್ಲೆಲ್ಲ ಇದು ಉತ್ತಮ ಅಲಂಕರಣ ಉಳ್ಳದ್ದು.

ಗ್ರೀಕರ ಜೀವನದೃಷ್ಟಿ ಸರಳ, ಸ್ಪಷ್ಟ. ಅದೇ ದೃಷ್ಟಿ ಅವರ ಕಲೆಯಲ್ಲೂ ಕಂಡುಬರುತ್ತದೆ.

ದೇವದೇವತೆಗಳ ಕಲ್ಪನೆಯಿಂದ ಅವರ ಮೂರ್ತಿಶಿಲ್ಪ ಪ್ರಭಾವಿತವಾಯಿತು. ಈ ಮೂರ್ತಿಗಳ ರೂಪದ ಮಾದರಿ ಮಾತ್ರ ಅವರ ಗರಡಿಮನೆಯಿಂದ ಪಡೆದದ್ದು. ಮಲ್ಲ ಶಿಕ್ಷಣದ ಮೂಲಕ ಗ್ರೀಕರು ಶರೀರದ ಉತ್ಕೃಷ್ಟ ಸೌಷ್ಠವವನ್ನು ಸಾಧಿಸಿದರು. ಇಂಥ ಸುಂದರಾಂಗದ ಮಾದರಿಗಳು ಹಲವಾರು ರೀತಿಯ ಮೂರ್ತಿಶಿಲ್ಪಕ್ಕೆ ಪ್ರೇರಕವಾದುವು.

ಕ್ರಿ. ಪೂ. 5ನೆಯ ಶತಮಾನದಿಂದ ಕೆಲವು ಶತಮಾನಗಳವರೆಗೆ ಗ್ರೀಕ್ ಶಿಲ್ಪಕಲೆ ಬಹುವಾಗಿ ವಿಕಾಸಹೊಂದಿತು. ಈ ಕಾಲದಲ್ಲಿ ಎಲ್ಲ ಕಾಲಕ್ಕೂ ಅಮೂಲ್ಯವೆನಿಸುವಂಥ ಅಮೃತಶಿಲೆಯ ಹಾಗೂ ಕಂಚಿನ ವಿಗ್ರಹಗಳು ನಿರ್ಮಿತವಾದುವು. 5ನೆಯ ಶತಮಾನದ ಪೂರ್ವಭಾಗದಲ್ಲಿ ನಿರ್ಮಿತವಾದ 'ಡೆಲ್ಫಿಯ ಸಾರಥಿ'ಯೂ, ಸ್ವಲ್ಪ ಹೆಚ್ಚು ಕಡಮೆ ಅದೇ ಕಾಲದಲ್ಲಿ ರಚಿತವಾದ 'ಚಕ್ರ ಎಸೆಯುವವ'ನ ಕಂಚಿನ ಮೂರ್ತಿ ಇಂದಿನ ಭಗ್ನಸ್ಥಿತಿಯಲ್ಲಿಯೂ ಅತ್ಯಂತ ಪ್ರಭಾವಶಾಲಿಯಾಗಿ ತೋರುತ್ತವೆ; ಅಂದಿನ ಕಾಲದ ಶಿಲ್ಪಿಗಳ ಚಾತುರ್ಯಕ್ಕೆ ಇವು ನಿದರ್ಶನಗಳಾಗಿವೆ. ಆ ಶತಮಾನದಲ್ಲಿ ರಚಿತವಾದ ಅಮೃತಶಿಲೆಯ ಮೂರ್ತಿಗಳು ಮತ್ತು ಉಬ್ಬುಚಿತ್ರಗಳು ಕೂಡ ತುಂಬ ಆಕರ್ಷಣೀಯವಾಗಿವೆ. 'ಏಟು ತಿಂದ ಗಂಡುಬೀರಿ', 'ಪಾರಿವಾಳ ದೊಡನಿರುವ ಹುಡುಗಿ' ಇಂಥ ಶಿಲ್ಪಗಳು ಈ ವರ್ಗಕ್ಕೆ ಸೇರಿದುವು.

ಆಗಿನ ಪ್ರತಿಭಾಶಾಲಿ ಶಿಲ್ಪಿಗಳಲ್ಲಿ ಫಿಡಿಯಾಸ್, ಪಾಲಿಕ್ಲೈಟಸ್, ಮೈರಾನ್ ಇವರು ಪ್ರಮುಖರು. ಆ ಹೊತ್ತಿಗೆ ಗ್ರೀಕ್ ಶಿಲ್ಪಕಲೆ ಅತ್ಯುನ್ನತಸ್ಥಿತಿಯನ್ನು ಮುಟ್ಟಿತ್ತು. ಈ ಕಾಲದಲ್ಲಿ ರೂಪಿಸಲ್ಪಟ್ಟ ಜೂಸ್ ಮತ್ತು ಅಪೊಲೊ ದೇವಮೂರ್ತಿಗಳು ಗಮನಾರ್ಹವಾದುವು. ಕಲ್ಪನೆ ಹಾಗೂ ಸಹಜರೂಪಗಳ ಮೇಳವನ್ನು ಆ ಶಿಲ್ಪಿಗಳು ಚೆನ್ನಾಗಿ ಸಾಧಿಸಿದ್ದಾರೆ.

ಗ್ರೀಕ್ ಕಲೆಯ ಪ್ರಭಾವ ಇಂದಿಗೂ ಉಳಿದಿದೆ. ವಾಸ್ತುಶಿಲ್ಪದಲ್ಲಿ, ಅದರಲ್ಲಿಯೂ ವಿಶೇಷವಾಗಿ ಶಿಲ್ಪಕಲೆಯಲ್ಲಿ ಅನೇಕ ದೇಶಗಳಲ್ಲಿ ಗ್ರೀಕ್ ಶೈಲಿ ಕಂಡುಬರುತ್ತದೆ. ಗ್ರೀಕ್ ಶೈಲಿಯ ಪ್ರಭಾವವನ್ನು ಗಾಂಧಾರಶಿಲ್ಪ ಶೈಲಿಯ ಬುದ್ಧನ ಮೂರ್ತಿಗಳಲ್ಲೂ ಕಾಣಬಹುದು.

ಗ್ರೀಕ್ ಸಾಹಿತ್ಯ ಅದರ ಪ್ರಾಚೀನ ಕವಿ ಹೋಮರನೊಂದಿಗೆ ಆರಂಭವಾಗುತ್ತದೆ. ಪಾಶ್ಚಾತ್ಯವಲ್ಲಿ ಮೊದಲಿಗೆ ಸಾಹಿತ್ಯದಲ್ಲಿ ಪ್ರಥಮವಾಗಿ ಒಂದು ಕ್ರಮ. ಸಾಮರಸ್ಯಗಳನ್ನು ಸಾಧಿಸಿದ ಕೀರ್ತಿ ಗ್ರೀಕ್ ಸಾಹಿತ್ಯಕ್ಕೆ ಸಲ್ಲುತ್ತದೆ. ಪಾಶ್ಚಾತ್ಯ ಜಗತ್ತಿಗೆ ಗ್ರೀಕ್ ಸಾಹಿತ್ಯವೇ ತಳಹದಿ. ಸಾಹಿತ್ಯದ ಹಲವು ಪ್ರಕಾರಗಳನ್ನು ಕಂಡುಕೊಂಡು ಅವುಗಳಿಗೆ ಉತ್ತಮ ರೂಪಕೊಟ್ಟವರು ಗ್ರೀಕರು.



ಪ್ರಾಚೀನ ಗ್ರೀಸಿನ ಎಸೆಚಕ್ರ ಆಟಗಾರ : ಕಂಚಿನ ಪ್ರತಿಮೆ

ಹೋಮರ್. ಪೆರಿಕ್ಲೀಸ್ ಹಾಗೂ ಅಲೆಗ್ಸಾಂಡರರ ಕಾಲಾವಧಿಗಳು ಗ್ರೀಕ್ ಸಾಹಿತ್ಯದ ಮೂರು ಪ್ರಧಾನ ಘಟ್ಟಗಳು.

ಹೋಮರನ 'ಇಲಿಯಡ್', 'ಒಡಿಸ್ಸಿ'ಗಳಂಥ ಉದಾತ್ತ ಮಹಾಕಾವ್ಯಗಳು ಕ್ರಿ.ಪೂ. ೯ನೆಯ ಶತಮಾನದವು.

ಪೆರಿಕ್ಲೀಸನ ಕಾಲ (ಕ್ರಿ.ಪೂ. 5ನೆಯ ಶತಮಾನ). ಗ್ರೀಕ್ ಕಲೆ ಹಾಗೂ ಸಾಹಿತ್ಯಗಳ ಸುವರ್ಣಯುಗ. ಭಾವಗೀತೆಯ ರೂಪ ವಿಕಾಸಗೊಂಡ ಕಾಲ. ಕವಿ ಆಲ್‌ಸೀಯಸ್ ಮತ್ತು ಕವಯಿತ್ರಿ ಸಾಫೋ ಭಾವಗೀತೆಗೆ ಭದ್ರ ತಳಹದಿ ಹಾಕಿದರು. ಬಾಳಿನ ಸೊಗಸು, ಪ್ರೇಮ, ಸುಖ, ಪ್ರಕೃತಿ ದೇಶಭಕ್ತಿ ಮುಂತಾದುವು ಇವರ ವಸ್ತುಗಳು. ಪೆರಿಕ್ಲೀಸನ ಕಾಲದ ಸಾಹಿತ್ಯದಲ್ಲಿ ಪಿಂಡಾರನ ಕವಿತೆಗಳ ಮೂಲಕ ಗ್ರೀಕ್ ಕವಿತಾರಚನೆ ಉನ್ನತಿ ಪಡೆಯಿತು. ಕ್ರೀಡಾಸ್ಪರ್ಧೆಗಳಿಗೆ, ನಾಟಕಗಳಿಗೆ ಮೊದಲು ಹಾಡಲಾಗುತ್ತಿದ್ದ ವೃಂದಪ್ರಗಾಥರೂಪದ ಕವಿತೆಗಳಲ್ಲಿ ಗ್ರೀಸಿನ ಭವ್ಯತೆಯ ದರ್ಶನ ನಮಗೆ ದೊರೆಯುತ್ತದೆ. ಆ ಜನಜೀವನದ ಉಲ್ಲಾಸ ಉತ್ಕರ್ಷಗಳು ಪಿಂಡಾರನ ಕವಿತೆಗಳಲ್ಲಿ ಬಿಂಬಿತವಾಗಿವೆ. ಈಗಲೂ ಪಿಂಡಾರನ ಕವಿತೆಗಳನ್ನು ಓದಿದರೆ ಭಾವಾವೇಶ ಉಂಟಾಗುತ್ತದೆ.

ಹಿರಾಡಟಸ್, ಥುಸಿಡಿಡೇಸ್ ಮತ್ತು ಜೆನೋಫನ್—ಇವರು ಹೆಸರಾಂತ ಗ್ರೀಕ್ ಚರಿತ್ರಕಾರರು. ಹಿರಾಡಟಸನನ್ನು 'ಇತಿಹಾಸದ ಜನಕ' ಎನ್ನುತ್ತಾರೆ.

ಅಥೀನಿಯನ್ ಅವಧಿಯ ಶ್ರೇಷ್ಠ ಸಾಹಿತ್ಯ —ಗ್ರೀಕ್ ನಾಟಕಗಳು. ನಾಟಕದ ಎರಡು ಪ್ರಕಾರಗಳಾದ ಟ್ರಾಜಿಡಿ ಮತ್ತು ಕಾಮಿಡಿ ಬಲಗೊಂಡದ್ದು ಈ ಕಾಲದಲ್ಲೇ. ಟ್ರಾಜಿಡಿಗಳನ್ನು ಬರೆದವರಲ್ಲಿ ಏಸ್ಕಿಲಸ್, ಸಾಫೊಕ್ಲೀಸ್, ಯೂರಿಪಿಡೀಸ್ ಖ್ಯಾತರು. ಇವರ ನಾಟಕಗಳು ನಿತ್ಯನೂತನ. ಯಾವುದೇ ವಿಚಾರವನ್ನು ಸಮಗ್ರದೃಷ್ಟಿಯಿಂದ ವಿವೇಚಿಸುವುದು ಗ್ರೀಕ್‌ದರ್ಶನದ ಲಕ್ಷಣ. ಗ್ರೀಕ್ ನಾಟಕಗಳಲ್ಲಿಯೂ ಇದು ಕಂಡುಬರುತ್ತದೆ. ಇವು ಹೃದಯಸ್ಪರ್ಶಿಯೂ ಹೌದು : ಬುದ್ಧಿಜೀವಿಗಳನ್ನು ತಣಿಸುವಂಥವೂ ಹೌದು. ಗ್ರೀಕ್ ಕಾಮಿಡಿಗಳನ್ನು ಹಳೆಯದು, ನಡುಗಾಲದ್ದು, ಹೊಸದು ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ಈ ಮೂರು ಬಗೆಯ ಕಾಮಿಡಿಗಳನ್ನೂ ಬರೆದಿರುವಾತ ಆರಿಸ್ಟಾಫನೀಸ್.

ಗ್ರೀಕ್ ಭಾಷೆಯಲ್ಲಿ ದಾರ್ಶನಿಕ ಸಾಹಿತ್ಯವೂ ವಿಪುಲವಾಗಿದೆ. ಈ ವರ್ಗದಲ್ಲಿ ಸಾಕ್ರಟೀಸ್, ಪ್ಲೇಟೊ, ಅರಿಸ್ಟಾಟಲರು ಖ್ಯಾತ ಲೇಖಕರು. ಈ ಗ್ರೀಕ್‌ದರ್ಶನದ ವಿಚಾರಧಾರೆಗೆ ತಲೆದೂಗದ ದೇಶವಿಲ್ಲ. ಸಾಕ್ರಟೀಸ್ ಪರಮ ಜ್ಞಾನಿ. ವಿಚಾರಶೀಲತೆಗೆ ಆತನೇ ಮಾದರಿ. ಮಹಾನುಭಾವ ಸಾಕ್ರಟೀಸ್ ಒಂದೇ ಒಂದು ಅಕ್ಷರವನ್ನು ಬರೆದಿಡದಿದ್ದರೂ ಅವನ ಶಿಷ್ಯ ಪ್ಲೇಟೋನ ಮೂಲಕ ಸಾಕ್ರಟೀಸನ ದರ್ಶನದ ಸ್ವರೂಪ ತಿಳಿಯಬಹುದು. ಪ್ಲೇಟೋನ 'ಸಂಭಾಷಣೆಗಳು' ಹಾಗೂ 'ಗಣರಾಜ್ಯ' ಈಗಲೂ ಜೀವಂತ ಕೃತಿಗಳು. ಪ್ಲೇಟೋನ ಅನಂತರ ಅರಿಸ್ಟಾಟಲನ ಕಾಲ. ಇವನ ಬರೆವಣಿಗೆಗೆ ಒಳಗಾಗದ ಸಮಕಾಲೀನ ಜ್ಞಾನ ವಿಭಾಗವಿಲ್ಲ. ಗ್ರೀಕರು ಭಾಷಣ ಕಲೆಯನ್ನೂ ಬಲು ಚೆನ್ನಾಗಿ ಬೆಳೆಸಿದರು.

ಇಂಥ ಗ್ರೀಕ್ ಕಲೆ ಸಾಹಿತ್ಯಗಳು ಕೂಡ ಕ್ರಿ. ಪೂ. 3ನೆಯ ಶತಮಾನದ ಅನಂತರ ಇಳಿಮುಖವಾದುವು. ಇವು ಮತ್ತೆ ಪುನರುತ್ಥಾನ ಗೊಂಡದ್ದು ಬೈಜಾಂಟಿಯನ್ ಕಲೆ, ಸಾಹಿತ್ಯಗಳಲ್ಲಿ. ರೋಮನ್ ಆಳ್ವಿಕೆಯ ಕಾಲದಲ್ಲಿ ಇವು ಮುಂದುವರಿದುವು. ಇಂದಿನ ಗ್ರೀಕ್ ಭಾಷೆ ಪ್ರಾಚೀನ ಗ್ರೀಕ್ ಭಾಷೆಯನ್ನು ಸರಳಗೊಳಿಸಿದ ರೂಪ.

ಪ್ರಾಚೀನ ಗ್ರೀಕರ ಅಭಿರುಚಿ ಶುದ್ಧವಾದದ್ದು. ಅವರು ಸ್ವಾತಂತ್ರ್ಯ ಪ್ರಿಯರು, ಸರಳರು. ಅವರ ಈ ಗುಣಗಳು ಅವರ ಕಲೆ, ಸಾಹಿತ್ಯಗಳಲ್ಲಿ ಪ್ರತಿಬಿಂಬಿತವಾಗಿವೆ. ಎಲ್ಲದರಲ್ಲಿಯೂ ಚೆಲುವನ್ನು ಗುರುತಿಸುವುದು ಅವರ ವೈಶಿಷ್ಟ್ಯ. ಅವರ ಕುಶಲ ಕಲಾವಸ್ತುಗಳು ಕೂಡ ಸುಂದರ ವಾಗಿವೆ. ಮಣ್ಣಿನ ಜೋಡಿಗೆಗಳು, ದಂತದ ಕೆತ್ತನೆ ಕೆಲಸ, ಲಲಿತಾ ಕೃತಿಯ ಗಾಜಿನ ಧಾರಕಗಳ ನಿರ್ಮಾಣ, ರತ್ನಗಳ ಮೇಲೆ ಕೆತ್ತನೆಕೆಲಸ, ಆಭರಣ ರಚನೆ, ದಿನನಿತ್ಯ ಬಳಕೆಗೆ ಬೇಕಾದ ವಸ್ತುಗಳು, ನಾಣ್ಯ ಗಳು ಇವೆಲ್ಲ ಅವರ ಸೊಗಸಾದ ಕುಶಲಕಲಾ ಪ್ರೌಢಿಮೆಗೆ ನಿದರ್ಶನಗಳು.

"ಇಂದಿನವರು ಸೋಜಿಗ ಪಡುವಂತೆಯೇ ಮುಂದಿನವರೂ ನಮ್ಮ ಬಗೆಗೆ ಅಚ್ಚರಿಪಡುವರು" ಎಂದು ಪ್ರಾಚೀನ ಗ್ರೀಕ್ ಕಲಾಪ್ರೇಮಿ ರಾಜ ಕಾರಣಿ ಪೆರಿಕ್ಲೀಸ್ ಹೇಳಿದ ಆ ಮಾತುಗಳು ನಿತ್ಯಸತ್ಯ.

ನೋಡಿ : ಅರಿಸ್ಟಾಟಲ್ ; ಆರಿಸ್ಟಾಫನೀಸ್ ; ಈಸೋಪ್ : ಏಸ್ಕಿಲಸ್ ;
ಫಿಡಿಯಾಸ್ ; ಯೂರಿಪಿಡೀಸ್ ; ಸಾಫೋ ; ಸಾಫೋಕ್ಲೀಸ್ ; ಹೋಮರ್

## ಗುಬ್ಬಿ ವೀರಣ್ಣ

ನಾಟಕರತ್ನ, ವಿನೋದ ರತ್ನಾಕರ, ವರ್ಸಟೈಲ್ ಕಾಮಿಡಿಯನ್, ಕರ್ನಾಟಕ ನಾಟಕ ಕಂಠೀರವ, ಕರ್ನಾಟಕಾಂಧ್ರ ನಾಟಕ ಸಾರ್ವಭೌಮ ಮುಂತಾದುವು ಗುಬ್ಬಿ ವೀರಣ್ಣನವರಿಗೆ ದೊರೆತಿದ್ದ ಬಿರುದುಗಳು ; ರಾಜರು ಜನತೆ ಅವರಿಗೆ ತೋರಿದ ಗೌರವದ ಸಂಕೇತಗಳು. ಆರು ವರ್ಷದ ಬಾಲಕನಾಗಿದ್ದಾಗಲೇ ನಾಟಕ ರಂಗವನ್ನು ಪ್ರವೇಶಿಸಿದ ವೀರಣ್ಣ ನಾಟಕದ ಕಂಪೆನಿಯಲ್ಲಿ ಸೇವಕರಾಗಿ, ಅಡುಗೆಯವರಾಗಿ, ಬಣ್ಣ ಹಾಕುವವರಾಗಿ, ನಟರಾಗಿ, ಪ್ರಚಾರಕರಾಗಿ, ಟಿಕೇಟು ಕೊಡುವವರಾಗಿ, ಖಜಾಂಚಿಯಾಗಿ, ವ್ಯವಸ್ಥಾಪಕರಾಗಿ, ಪಾಲುದಾರರಾಗಿ, ಕೊನೆಗೆ ಮಾಲಿಕರಾಗಿ ಮುಕ್ಕಾಲು ಶತಮಾನ ಕಾಲ ಕನ್ನಡ ನಾಟಕ ರಂಗದಲ್ಲಿ ಬೆಳೆದು ಬಾಳಿದರು : ಕನ್ನಡ ರಂಗಭೂಮಿಯನ್ನು ಬೆಳಗಿದರು.

ವೀರಣ್ಣನವರು ಹುಟ್ಟಿದ್ದು 1888ರ ಸುಮಾರಿನಲ್ಲಿ. ತಂದೆ ತುಮಕೂರು ಜಿಲ್ಲೆಯ ಗುಬ್ಬಿಯ ಹಂಪಣ್ಣನವರು. ವೀರಣ್ಣನವರ ವಿದ್ಯಾಭ್ಯಾಸ ಆರಂಭವಾದದ್ದು ರಂಗಭೂಮಿಯಲ್ಲೇ. ಚಂದಣ್ಣ ಮತ್ತು ಅಬ್ದುಲ್ ಅಜೀಜ್ ಸಾಹೇಬರು ಸ್ಥಾಪಿಸಿದ್ದ ಗುಬ್ಬಿ ಕಂಪೆನಿಯನ್ನು ಅವರು 1896 ರಲ್ಲಿ ಸೇರಿದರು. ಸಿರಿಯಾಳಕುಮಾರ, ರೋಹಿತಾಶ್ವ ಮುಂತಾದ ಬಾಲಪಾತ್ರಗಳನ್ನು ಅಭಿನಯಿಸಿದರು. ಎಲ್ಲರ ಮೆಚ್ಚುಗೆ ಗಳಿಸಿದ ಕಾರಣ ಇವರಿಗೆ ತಿಂಗಳಿಗೆ ಐದು ರೂಪಾಯಿ ಸಂಬಳವೂ ಸಿಕ್ಕಿತು. ಸ್ವಲ್ಪ ಕಾಲಾ ನಂತರ ಸ್ತ್ರೀ ಪಾತ್ರಗಳನ್ನೂ ವಿದೂಷಕನ ಪಾತ್ರವನ್ನೂ ಅಭಿನಯಿಸಿದರು.

ನಾಟಕ ಕಂಪೆನಿಯಲ್ಲಿದ್ದಾಗ ವೀರಣ್ಣನವರು ಹಾಡುಗಾರಿಕೆಯನ್ನೂ ಪಿಟೀಲು, ತಬಲಾ ಹಾರ್ಮೋನಿಯಂ ವಾದ್ಯವಾದನವನ್ನೂ ಅಭ್ಯಾಸ ಮಾಡಿದರು.

ಒಮ್ಮೆ 'ಸದಾರಮೆ' ನಾಟಕ ಪ್ರದರ್ಶನ ಏರ್ಪಾಡಾಗಿತ್ತು. ನಾಟಕ ಆರಂಭಿಸುವ ವೇಳೆಯಾದರೂ ಆದಿಮೂರ್ತಿಯ ಮತ್ತು ಕಳ್ಳನ ಪಾತ್ರ ವಹಿಸಬೇಕಾಗಿದ್ದ ನಟ ಬರಲೇ ಇಲ್ಲ. ಕೊನೆಗೆ ವೀರಣ್ಣನವರೇ ಈ ಪಾತ್ರ ಗಳನ್ನು ವಹಿಸಬೇಕಾಗಿ ಬಂತು. ಅಂದು ಆ ಪಾತ್ರಗಳನ್ನು ಯಶಸ್ವಿಯಾಗಿ ಅಭಿನಯಿಸಿದ ಅವರು, ಅಂದಿನಿಂದ 'ಸಕಲಿ ವೀರಣ್ಣ' ಎಂದು ಹೆಸರು ಪಡೆದರು.

ಚಂದಣ್ಣನವರು ಕಾಲಾಧೀನರಾದ ಮೇಲೆ 1917ರಲ್ಲಿ ಗುಬ್ಬಿ ನಾಟಕ ಮಂಡಲಿಯ ಒಡೆತನ ವೀರಣ್ಣ ಮತ್ತು ನಾಗರಾಜಪ್ಪ ಎಂಬವರ ಪಾಲಿಗೆ ಬಂತು. ಆದರೆ ಈ ವ್ಯವಸ್ಥೆ ಸರಿಯಾಗಿ ಕೆಲಸ ಮಾಡಲಿಲ್ಲ. ವೀರಣ್ಣ ನವರು ಈ ಕಂಪೆನಿಯಿಂದ ದೂರಸರಿದರು. ಇತರ ನಟರೂ ಇವರನ್ನು ಹಿಂಬಾಲಿಸಿದರು. ವೀರಣ್ಣನವರ ನೇತೃತ್ವದಲ್ಲಿ ಹೊಸ ಕಂಪೆನಿ ಹುಟ್ಟಿ ಕೊಂಡಿತು.

ಆಗಿನ ನಾಟಕಗಳಲ್ಲಿ ಹಾಡುಗಾರಿಕೆಗೆ ಮುಖ್ಯ ಸ್ಥಾನವಿತ್ತು. ಆದರೆ ವೀರಣ್ಣನವರು ತಾವು ಆಡಲು ಸಿದ್ಧಮಾಡಿದ ನಾಟಕಗಳಲ್ಲಿ ಗದ್ಯಕ್ಕೆ ಪ್ರಾಧಾನ್ಯ ನೀಡಿದರು. ಹಾಡುಗಾರಿಕೆ ಎಷ್ಟು ಬೇಕೋ ಅಷ್ಟೇ ಇರುತ್ತಿತ್ತು. ಹಳೆಯ ನಾಟಕಗಳಿಗೆ ಬದಲಾಗಿ ಇವರು ಹೊಸ ನಾಟಕಗಳನ್ನು ಬರೆಯಿಸಿದರು. ಹಿಂದಿನಿಂದ ಖ್ಯಾತಿ ಪಡೆದಿದ್ದ ಸದಾರಮೆ ಮುಂತಾದ ನಾಟಕಗಳ ಜೊತೆಗೆ ಹೊಸವನ್ನೂ ರಂಗಭೂಮಿಯ ಮೇಲೆ ತಂದರು. ತಮ್ಮ ಅತ್ಯುತ್ತಮ ಹಾಸ್ಯಪಾತ್ರಾಭಿನಯದಿಂದ ಜನರ ವಿಶೇಷ ಮನ್ನಣೆಗೆ ಪಾತ್ರ ರಾದರು.



ನಾಟಕ : ವೀರಣ್ಣ

ಪ್ರತಿಯೊಂದು ನಾಟಕವೂ ಜಯಭೇರಿ ಹೊಡೆಯುತ್ತಿದ್ದರೂ. ಅಷ್ಟರಿಂದಲೇ ವೀರಣ್ಣನವರು ತೃಪ್ತರಾಗಲಿಲ್ಲ. ಬಾಲ ನಟನಟಿಯರನ್ನೇ ಒಳಗೊಂಡಿದ್ದ ಒಂದು ಕಂಪೆನಿಯನ್ನು ಸ್ಥಾಪಿಸಿದರು. ಈ ಬಾಲ ಕಲಾವರ್ಧಿನಿ ನಾಟಕ ಸಂಘ 'ಕೃಷ್ಣಲೀಲಾ', 'ಕಂಸವಧೆ', 'ರುಕ್ಮಿಣಿ ಸ್ವಯಂವರ' ಮೊದಲಾದ ನಾಟಕಗಳನ್ನು ಅಭಿನಯಿಸಿ ಕೀರ್ತಿ ಪಡೆಯಿತು.

ಗುಬ್ಬಿ ವೀರಣ್ಣನವರು ತಮ್ಮ ಕಂಪೆನಿ ಊರಿಂದೂರಿಗೆ ಹೋಗಲು ಕೆಲವೊಮ್ಮೆ ವಿಶೇಷ ರೈಲುಗಾಡಿಯನ್ನು ವ್ಯವಸ್ಥೆ ಮಾಡುತ್ತಿದ್ದರು.

ಕಲೆಯ ಪೋಷಣೆಯೇ ಗುರಿಯಾಗಿದ್ದ ಗುಬ್ಬಿ ವೀರಣ್ಣನವರು ತಮ್ಮ ಪ್ರತಿಸ್ಪರ್ಧಿ ನಾಟಕ ಸಂಸ್ಥೆಗಳಿಗೂ ನೆರವು ನೀಡಿದ್ದುಂಟು. ಸೋಲಿನ ಮೇಲೆ ಸೋಲು ಅನುಭವಿಸಿದ ಕಂಪೆನಿಯವರು ಕೊನೆಗೆ ಗುಬ್ಬಿ ಕಂಪೆನಿಯ 'ಸದಾರಮೆ', 'ಗುಲೇಬಕಾವಲಿ'ಗಳಂಥ ನಾಟಕಗಳನ್ನು ಆಡುತ್ತಿದ್ದರು. ಅವುಗಳಲ್ಲಿ ಅಭಿನಯಿಸಲು ವೀರಣ್ಣನವರನ್ನೇ ಕೇಳಿಕೊಳ್ಳುತ್ತಿದ್ದರು. ಗುಬ್ಬಿ ವೀರಣ್ಣನವರು ಅಭಿನಯಿಸಲಿದ್ದಾರೆ ಎಂದರೆ ಪ್ರವೇಶಧನ ಹೆಚ್ಚಿಸಿದಾಗಲೂ ಟಿಕೆಟುಗಳು ಬಿರುಸಾಗಿ ಖರ್ಚಾಗುತ್ತಿದ್ದುವು. ಹೀಗೆ ಆರ್ಥಿಕ ಕಷ್ಟಕ್ಕೊಳಗಾಗಿದ್ದ ನಾಟಕ ಕಂಪೆನಿಗಳ ಸ್ಥಿತಿ ಸುಧಾರಿಸುತ್ತಿತ್ತು.

ವೀರಣ್ಣನವರು ಉತ್ತಮ ನಟರು ಮಾತ್ರವಲ್ಲ ಉದಾರಿಗಳೂ ಕೂಡ. ಅವರಿಂದ ಧನ ಸಹಾಯ ಪಡೆದ ಸಂಸ್ಥೆಗಳೂ ವ್ಯಕ್ತಿಗಳೂ ಅಸಂಖ್ಯ.

ಗುಬ್ಬಿ ಕಂಪೆನಿಯ ಸುವರ್ಣಮಹೋತ್ಸವದ ವರ್ಷ 1934. ಇದಕ್ಕಾಗಿ ಹೊಸ ನಾಟಕವನ್ನು ಪ್ರಯೋಗಿಸುವ ನಿರ್ಧಾರವನ್ನು ವೀರಣ್ಣ ಮಾಡಿದರು. ಬಿ. ಪುಟ್ಟಸ್ವಾಮಯ್ಯನವರಿಂದ 'ಕುರುಕ್ಷೇತ್ರ' ನಾಟಕವನ್ನು ಬರೆಸಿ ಅಭ್ಯಾಸ ಮಾಡಿಸಿದರು. ಈ ನಾಟಕಕ್ಕಾಗಿಯೇ ಹೊಸ ರಂಗಸಜ್ಜಿಕೆ, ವೇಷಭೂಷಣಗಳನ್ನು ಸಿದ್ಧಗೊಳಿಸಿದರು. ವಿಶೇಷ ರಂಗಸಜ್ಜಿಕೆಯ ಜೊತೆಗೆ ಮೈಸೂರು ಮಹಾರಾಜರು ನೀಡಿದ ಆನೆಯೂ ಜಿಂಕೆ, ನವಿಲು, ಪಾರಿವಾಳಗಳೂ ರಂಗಭೂಮಿಯ ಮೇಲೆ ಬಂದುವು. ಈ ನಾಟಕ ಪ್ರಯೋಗ ಕನ್ನಡನಾಡಿನಲ್ಲೆಲ್ಲ ವಿಖ್ಯಾತವಾಯಿತು. ಅನಂತರ ವೀರಣ್ಣನವರು 'ಕುರುಕ್ಷೇತ್ರ' ನಾಟಕವನ್ನು ತೆಲುಗು ಭಾಷೆಗೆ ಅನುವಾದಮಾಡಿಸಿ, ಅದನ್ನು ಅಭ್ಯಾಸ ಮಾಡಿಸಿ ಆಂಧ್ರಪ್ರದೇಶದ ಅನೇಕ ಸ್ಥಳಗಳಲ್ಲಿ ಪ್ರದರ್ಶಿಸಿದರು ; ಅಪೂರ್ವ ಯಶಸ್ಸು ಪಡೆದರು. ಈ ನಾಟಕವನ್ನು ನೋಡಿ ಸಂತೋಷಿಸಿದ ತೆಲುಗು ಜನತೆ ವಿಜಯವಾಡದಲ್ಲಿ ವೀರಣ್ಣನವರನ್ನು ಗೌರವಿಸಿತು. 'ಕರ್ನಾಟಕಾಂಧ್ರ ನಾಟಕ ಸಾರ್ವಭೌಮ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿತು.

'ಗುಲೇಬಕಾವಲಿ', 'ಸಂಪೂರ್ಣ ಕೃಷ್ಣಲೀಲೆ', 'ಅಕ್ಕಮಹಾದೇವಿ', 'ಚಲ್ತೀ ದುನಿಯಾ', 'ಸುಭದ್ರಾ' ಮುಂತಾದುವು ಇವರ ಇತರ ಜನಪ್ರಿಯ ನಾಟಕಗಳು. 'ಕುರುಕ್ಷೇತ್ರ', 'ದಶಾವತಾರ' ನಾಟಕಗಳನ್ನು ಸಾವಿರಕ್ಕಿಂತಲೂ ಹೆಚ್ಚು ಬಾರಿ ಅಭಿನಯಿಸಿದರು.

ಕನ್ನಡ ನಾಟಕರಂಗದ ಆಧಾರಸ್ತಂಭವಾದ ವೀರಣ್ಣನವರು ನಮ್ಮ ರಾಜ್ಯದ ಚಲಚ್ಚಿತ್ರೋದ್ಯಮದಲ್ಲೂ ಮೊದಲಿಗರು. 'ಹರಿಮಾಯಾ' ಮತ್ತು 'ಹಿಸ್ ಲವ್ ಅಫೇರ್' ಎಂಬ ಮೂಕಚಿತ್ರಗಳನ್ನು ಇವರು ನಿರ್ಮಿಸಿದರು. ಸ್ವತಃ ಪಾತ್ರ ವಹಿಸಿದರು. ಸಂಸ್ಥೆಗೆ ಹೆಸರು ತಂದ ನಾಟಕ 'ಸದಾರಮೆ', ಚಲಚ್ಚಿತ್ರವಾಯಿತು. 'ಸುಭದ್ರಾ', 'ಜೀವನನಾಟಕ', 'ಹೇಮರೆಡ್ಡಿ ಮಲ್ಲಮ್ಮ', 'ಗುಣಸಾಗರಿ', 'ಬೇಡರ ಕಣ್ಣಪ್ಪ' ಇವು ವೀರಣ್ಣನವರ ನೇತೃತ್ವದಲ್ಲಿ ರೂಪುಗೊಂಡ ಕನ್ನಡ ಚಲಚ್ಚಿತ್ರಗಳು. ಚಲಚ್ಚಿತ್ರರಂಗದ ರಾಜಕುಮಾರ್, ನರಸಿಂಹರಾಜು, ಬಾಲಕೃಷ್ಣ ಮುಂತಾದವರು ವೀರಣ್ಣನವರ ಗರಡಿಯಲ್ಲೇ ಪಳಗಿದವರು. ಕೆ. ಹಿರಣ್ಣಯ್ಯ, ನಾಗೇಶರಾವ್, ಸುಬ್ಬಯ್ಯ ನಾಯ್ಡು, ಬಾಲಕೃಷ್ಣ, ಜಿ. ವಿ. ಅಯ್ಯರ್, ಸುಂದರಮ್ಮ, ಮಳವಳ್ಳಿ ಸುಂದರಮ್ಮ, ಜಯಮ್ಮ ಮುಂತಾದ ಪ್ರಖ್ಯಾತ ನಟನಟಿಯರು ಒಂದಲ್ಲ ಒಂದು ಕಾಲದಲ್ಲಿ ವೀರಣ್ಣನವರ ಸಂಸ್ಥೆಯಲ್ಲಿ ಅಭಿನಯಿಸುತ್ತಿದ್ದರು.

ವೈವಿಧ್ಯಮಯ ಬದುಕನ್ನು ಬಾಳಿದ ಗುಬ್ಬಿ ವೀರಣ್ಣನವರ ಆತ್ಮವೃತ್ತ 'ಕಲೆಯೇ ಕಾಯಕ' ಒಂದು ಉತ್ತಮ ಕೃತಿ. ನಾಟಕ ಕಲಾರಾಧನೆಗೆ ಜೀವವನ್ನು ಸವೆಸಿದ ವೀರಣ್ಣನವರಿಗೆ ಮೈಸೂರು ವಿಶ್ವವಿದ್ಯಾನಿಲಯ 1970ರಲ್ಲಿ ಗೌರವ ಡಾಕ್ಟರೇಟ್ ಕೊಟ್ಟು ಸತ್ಕರಿಸಿತು. ಕೇಂದ್ರ ಸಂಗೀತ ನಾಟಕ ಅಕಾಡೆಮಿ ಅವರಿಗೆ ಪ್ರಶಸ್ತಿ ಕೊಟ್ಟು ಗೌರವಿಸಿತು. ಭಾರತ ಸರಕಾರದ 'ಪದ್ಮಶ್ರೀ' ಪ್ರಶಸ್ತಿಯೂ ಬಂತು. ವೀರಣ್ಣನವರು ಮೈಸೂರು ರಾಜ್ಯದ ವಿಧಾನ ಪರಿಷತ್ತು, ಸಂಗೀತ ನಾಟಕ ಅಕಾಡೆಮಿಗಳ ಸದಸ್ಯರೂ ಆಗಿದ್ದರು.

ವಯಸ್ಸು ಎಂಬತ್ತರ ಗಡಿಯನ್ನು ದಾಟಿದರೂ ದೃಢಕಾಯರಾಗಿದ್ದ ವೀರಣ್ಣನವರು 1972ರ ಅಕ್ಟೋಬರ್ ತಿಂಗಳಲ್ಲಿ ಹೃದಯಬೇನೆ ತಲೆದೋರಿದಾಗ ಆಸ್ಪತ್ರೆ ಸೇರಿದರು. ಅದೇ ಆಸ್ಪತ್ರೆಯಲ್ಲಿ ಚಿಕಿತ್ಸೆಪಡೆಯುತ್ತಿದ್ದ ಡಾ.ಡಿ.ವಿ. ಗುಂಡಪ್ಪನವರು ತುಸು ಗುಣಮುಖರಾಗಿದ್ದ ವೀರಣ್ಣನವರನ್ನು ನೋಡಲು ಹೋದಾಗ "ನಮಸ್ಕಾರ ಗುಂಡಪ್ಪನವರೇ, ನನ್ನ ಟಿಕೆಟು ಬಂತು. ಕೆಲಸ ಮುಗೀತು. ನೀವು ಇನ್ನೂ ನಾಲ್ಕಾರು ದಿನ ಚೆನ್ನಾಗಿದ್ದು ಒಳ್ಳೇ ಕೆಲಸಗಳನ್ನು ಮುಂದುವರಿಸುತ್ತಾ ಇರಿ" ಎಂದರು. ಹಾಗೆ ಹೇಳಿದ ದಿನವೇ–18ನೆಯ ತಾರೀಖು ಸಂಜೆ 6 ಗಂಟೆಗೆ - ಗುಬ್ಬಿ ವೀರಣ್ಣನವರ ಜೀವನ ನಾಟಕದ ಕೊನೆಯ ಪರದೆ ಇಳಿಯಿತು.

## ಗುಸ್ತಾವ್ ಕೂರ್ಬೆ

ಕಂಡದ್ದನ್ನು ಕಂಡಂತೆ ಚಿತ್ರಿಸುವ ಪಂಥಕ್ಕೆ ಸೇರಿದವನು ಗುಸ್ತಾವ್ ಕೂರ್ಬೆ. ಬಂಡಾಯತನ ಇವನ ಹುಟ್ಟುಸ್ವಭಾವ. ಈ ಪ್ರವೃತ್ತಿಯೇ ಅವನನ್ನು ಚಿತ್ರಕಲೆಯಲ್ಲಿ ವಾಸ್ತವವಾದದ ಆದ್ಯ ಚಿತ್ರಕಾರನನ್ನಾಗಿ ಮಾಡಿತು. "ಪ್ರಕೃತಿಯಲ್ಲಿ ಚೆಲುವು ತಾನೇ ತಾನಾಗಿ ಮೆರೆಯುತ್ತಿದೆ, ಕಲೆಯಲ್ಲಿ, ಪ್ರಕೃತಿಯ ಈ ಅಭಿವ್ಯಕ್ತಿಗೆ ತನ್ನದೆಂಬುದನ್ನು ಸೇರಿಸುವುದಕ್ಕಾಗಲೀ, ಅದರ ಸ್ವರೂಪವನ್ನು ಬದಲಾಯಿಸಿ ಸತ್ವಹೀನ ಮಾಡುವುದಕ್ಕಾಗಲೀ ಚಿತ್ರಕಾರನಿಗೆ ಯಾವ ಹಕ್ಕೂ ಇಲ್ಲ," ಎಂದು ಗುಸ್ತಾವ್ ವಾದಿಸಿದ.



ಕೂರ್ಬೆ : ಕಲೆಗೆ ಎಡ ತಿರುವು

ಗುಸ್ಟಾವ್ ಕಲಹಪರ, ಕೆಣಕುವ ಸ್ವಭಾವದವನು. ಅವನು ಮಾಡಿಕೊಳ್ಳುತ್ತಿದ್ದ ಆತ್ಮಪ್ರಶಂಸೆಗೆ ಮಿತಿ ಇರಲಿಲ್ಲ. ತನ್ನ ವಾದ, ವಿಚಾರಗಳ ಬಗೆಗೆ ಆರ್ಭಟಿಸುತ್ತಿದ್ದ; ಇತರರಿಗೆ ಬೆದರಿಕೆ ಹಾಕುತ್ತಿದ್ದ.

ಅನೇಕ ಸಮಕಾಲೀನ ಯುವಕ ಕಲಾವಿದರು ಅವನ ರೀತಿ ನೀತಿ ಕಲಾಕೃತಿಗಳಿಂದ ಆಕರ್ಷಿತರಾದರು. ಸಾಂಪ್ರದಾಯಿಕತೆ, ಸಮಷ್ಟಿ ಪರಿಣಾಮವಾದಗಳನ್ನು ವಿರೋಧಿಸಿದ ಗುಸ್ಟಾವ್, ತನ್ನ ಚಿತ್ರ ರಚನೆಯಲ್ಲಿ ಕುಂಚವನ್ನು ಒರಟಾಗಿ ಎಳೆದು ಬಣ್ಣ ತುಂಬಿಸಿದ. ಅವನ ಸ್ವಭಾವದಂತೆಯೇ ಅವನ ವರ್ಣಗಳೂ ರಾಚಿದಂತೆ ಕಾಣುತ್ತಿದ್ದುವು. ನಯವೇ ಕಾಣದ, ಊರಿ ಎಳೆದ ಬಣ್ಣದ ಜಾಡು ಆಗಿನ ಸಾಂಪ್ರದಾಯಿಕರಿಗೆ ಏನೋ ಒಂದು ಬಗೆಯ ಉದ್ಧಟತನದಂತೆ ತೋರುತ್ತಿದ್ದುವು. ಹೊಂದಾಣಿಕೆಯೇ ಇಲ್ಲದ ವಿರುದ್ಧ ಬಣ್ಣಗಳನ್ನೂ ಸಾಕಷ್ಟು ಮಸುಕು ಛಾಯೆಗಳನ್ನೂ ಗುಸ್ಟಾವ್ ತನ್ನ ಚಿತ್ರಗಳಲ್ಲಿ ಧಾರಾಳವಾಗಿ ಬಳಸಿದ.

"ದೇವತೆಗಳನ್ನು ನಾನು ಕಂಡಿಲ್ಲ" ಎನ್ನುತ್ತಿದ್ದ ಗುಸ್ಟಾವ್ ತಾನು ಕಂಡ ದಿನನಿತ್ಯದ ಸನ್ನಿವೇಶಗಳನ್ನೂ ವ್ಯಕ್ತಿಗಳನ್ನೂ ತನ್ನ ಚಿತ್ರಗಳ ವಸ್ತುಗಳಾಗಿ ಆರಿಸಿಕೊಂಡ. ರೈತರು, ಕಾರ್ಮಿಕರು, ಗ್ರಾಮೀಣ ದೃಶ್ಯಗಳು ಅವನ ಕುಂಚದಿಂದ ಮೂಡಿಬಂದುವು. 'ಆರ್ನಾನ್ಸಿನಲ್ಲಿ ಶವಸಂಸ್ಕಾರ' 1850ರಲ್ಲಿ ಪ್ಯಾರಿಸಿನ ಖ್ಯಾತ ಪ್ರದರ್ಶನದಲ್ಲಿ ಇಡಲ್ಪಟ್ಟ ಅವನ ಪ್ರಥಮ ಚಿತ್ರ. ಅದಕ್ಕೆ ಮೊದಲು ವರ್ಷ ವರ್ಷವೂ ಹಲವಾರು ಬಾರಿ ಅವನ ಚಿತ್ರಗಳನ್ನು ಪ್ರದರ್ಶನದಲ್ಲಿಡಲು ಅವಕಾಶ ದೊರೆತಿರಲಿಲ್ಲ. ಉದಾತ್ತ ವಸ್ತುಗಳೇ ಚಿತ್ರಿಸಲ್ಪಡುತ್ತಿದ್ದ ಆ ಕಾಲದಲ್ಲಿ, ಅವನ 'ಶವಸಂಸ್ಕಾರ' ಚಿತ್ರ ಚಿತ್ರಕಲೆಗೆ ಅಪಚಾರವೆಸಗಿದೆ – ಎಂಬ ಕೂಗು ಎದ್ದಿತು. ಮುಂದಿನ ಐದು ವರ್ಷಗಳ ಕಾಲ ಗುಸ್ಟಾವ್ ತನ್ನ ಚಿತ್ರಗಳಿಂದಲೂ, ವಿಚಿತ್ರವರ್ತನೆ, ವಾದ ವೈಖರಿಗಳಿಂದಲೂ ಮತ್ತೆ ಮತ್ತೆ ಜನರನ್ನು ದಿಗ್ಭ್ರಾಂತಗೊಳಿಸಿದ. 1855ರಲ್ಲಿ ಫ್ರಾನ್ಸಿನಲ್ಲಿ ಜಾಗತಿಕ ಕಲಾಪ್ರದರ್ಶನ ಏರ್ಪಟ್ಟಾಗ, ಅದರ ವ್ಯವಸ್ಥಾಪಕರು ಗುಸ್ಟಾವ್‌ಗೆ ಪಾಠ ಕಲಿಸಬೇಕೆಂದೇ ಆತನ ಚಿತ್ರಗಳನ್ನು ಪ್ರದರ್ಶಿಸಲಿಲ್ಲ. ಆದರೆ ಅವರ ಎಣಿಕೆ ತಪ್ಪಾಯಿತು. ಗುಸ್ಟಾವ್ ಆ ಪ್ರದರ್ಶನದ ಎದುರಿಗೆ ತನ್ನದೇ ಚಿತ್ರಗಳ 'ಏಕ ಕಲಾವಿದ ಪ್ರದರ್ಶನ' ಏರ್ಪಡಿಸಿದ. ಪ್ರವೇಶದ್ವಾರದಲ್ಲಿ 'ಜಿ. ಕೂರ್ಬೆ : ವಾಸ್ತವವಾದ' ಎಂದು ಬರೆಸಿಟ್ಟ. ಇಲ್ಲಿಯೇ ಅವನ ಹೆಸರಾಂತ 'ಕಲಾವಿದನ ಚಿತ್ರಶಾಲೆ' ಮೊದಲ ಬಾರಿಗೆ ಪ್ರದರ್ಶಿತವಾಯಿತು. ಬೆತ್ತಲೆ ಸ್ತ್ರೀ ಚಿತ್ರಗಳನ್ನು ಅವನು ಚಿತ್ರಿಸಿದ ರೀತಿ ಔಚಿತ್ಯಭಂಗವೆಂಬ ಟೀಕೆ ಬಂತು. ಆದರೆ ಯುವಕ ಕಲಾವಿದರು, ಅಷ್ಟೇಕೆ ಎಮಿಲಿ ಜೋಲಾನಂಥ ವಾಸ್ತವವಾದಿ ಸಾಹಿತಿ ಕೂಡ – ಇವನನ್ನು ಮೆಚ್ಚಿಕೊಂಡರು.

ಗುಸ್ಟಾವ್ ಕೂರ್ಬೆ ಹುಟ್ಟಿದ್ದು 1819 ಜೂನ್ 10ರಂದು, ಫ್ರಾನ್ಸ್-ಸ್ವಿಟ್ಜರ್‌ಲೆಂಡ್‌ಗಳ ಗಡಿಯಲ್ಲಿರುವ ಆರ್ನಾನ್ಸ್ ಎಂಬಲ್ಲಿ. ತಂದೆ ಉಟ್ಟುಉಣ್ಣಲು ತಕ್ಕಮಟ್ಟಿಗಿದ್ದ ರೈತ. ನ್ಯಾಯವಾದಿಯ ವೃತ್ತಿ ಕೈಗೊಳ್ಳುವಷ್ಟು ಮಟ್ಟಿಗೆ ಮಗನಿಗೆ ವಿದ್ಯಾಭ್ಯಾಸ ಕೊಡಿಸಿದ. ಆದರೆ ಗುಸ್ಟಾವ್ ವೃತ್ತಿಯಾಗಿ ಆರಿಸಿದ್ದು ಕಲೆ. ಇದಕ್ಕಾಗಿ 1840ರಲ್ಲಿ ಪ್ಯಾರಿಸಿಗೆ ಬಂದ.

ಮುಂದಿನ 1850–60ರ ದಶಕದಲ್ಲಿ ಗುಸ್ಟಾವ್ ಚಿತ್ರಗಳಿಗೆ ಅಪಾರ ಹಣ ದೊರೆಯಿತು. 1870ರಲ್ಲಿ ಮೂರನೆಯ ನೆಪೋಲಿಯನ್ ಸೋತಮೇಲೆ ಸ್ಥಾಪಿತವಾದ ಪ್ರಜಾಸತ್ತಾತ್ಮಕ ಆಡಳಿತದಲ್ಲಿ ಕಲೆಯ ನಿರ್ದೇಶಕನ ಹುದ್ದೆ ಗುಸ್ಟಾವ್‌ಗೆ ದೊರೆಯಿತು. ಆದರೆ ಈ ಆಡಳಿತ ಹೆಚ್ಚು ಕಾಲ ನಡೆಯಲಿಲ್ಲ. ಅನಂತರ ಗುಸ್ಟಾವ್ ರಾಜಕೀಯದಲ್ಲಿ ಆಸಕ್ತಿ ವಹಿಸಿದ. ಸಾಂಪ್ರದಾಯಿಕ ಕಲಾವಿದರು ಈ ಸಂಧಿ ಸಾಧಿಸಿ, ಗುಸ್ಟಾವನನ್ನು ಸೆರೆಮನೆಗೆ ಹಾಕಿಸಿದರು. ಅವನು ತೆರಲಾರದಷ್ಟು ದಂಡ ಹೇರಿಸಿದರು. ಅವನ ಎಲ್ಲ ಚಿತ್ರಗಳೂ ವಸ್ತುಗಳೂ ಸರಕಾರದ ವಶವಾದುವು. ಬಿಡುಗಡೆಯಾದಾಗ ಗುಸ್ಟಾವ್ ಸ್ವಿಟ್ಜರ್‌ಲೆಂಡಿಗೆ ಓಡಿ ಹೋದ. ಬಡತನ, ಛಿದ್ರಮನಸ್ಸು, ಜೀವನದ ಕಹಿಗಳಲ್ಲಿ ತೊಳಲಾಡಿದ. 1877ರ ಡಿಸೆಂಬರ್ 12ರಂದು ಅಲ್ಲಿಯೇ ಕಾಲವಾದ.

'ಹಳ್ಳಿಯ ಬಾಲೆಯರು', 'ಸೀನ್ ದಂಡೆಯ ಮೇಲಿನ ತರಳೆಯರು' ಮುಂತಾದುವು ಅವನ ಮುಖ್ಯ ಕೃತಿಗಳು. ವಾಸ್ತವವಾದವನ್ನು ಎತ್ತಿಹಿಡಿದು ಧೀರ ಸ್ವತಂತ್ರ ಅಭಿವ್ಯಕ್ತಿಯನ್ನು ಬಯಸಿದ ವ್ಯಕ್ತಿ ಗುಸ್ಟಾವ್. ಆದರೆ ಈ ಪ್ರತಿಪಾದನೆಯ ಗದ್ದಲದಲ್ಲಿ ಅವನ ಕಲ್ಪನೆ ಸ್ಫೂರ್ತಿ ಕಾಣ್ಕೆಗಳು ನಷ್ಟವಾದುವು. ನೈಜವಾತಾವರಣವನ್ನು ಬಿಟ್ಟು ತನ್ನ ಚಿತ್ರಶಾಲೆಯಲ್ಲೇ ಕುಳಿತು ಬರೆದದ್ದರಿಂದ ಅವನನ್ನು ಅರೆ-ವಾಸ್ತವವಾದಿ ಎಂದವರೂ ಉಂಟು.

ಜೀವನದ ಅಹಿತ ಮುಖವೂ ಚಿತ್ರವಸ್ತುವಾಗಬಲ್ಲದೆಂದು ತೋರಿಸಿದ ಗುಸ್ಟಾವನ ಕೃತಿಗಳನ್ನು ಇಂದು ಮೆಚ್ಚುವುದು ಕಷ್ಟವಾಗುವುದಿಲ್ಲ. ಅವನ ಕಾಲದಲ್ಲಿ ಮಾತ್ರ ಸಂಪ್ರದಾಯವಾದಿಗಳಿಗೆ ಅವು ಪಥ್ಯವಾಗಲಿಲ್ಲ.

## ಗೊಗೋಲ್

ರಷ್ಯದ ಪ್ರಾಂತವೊಂದರ ಪಟ್ಟಣ. ಇನ್ಸ್‌ಪೆಕ್ಟರ್ ಜನರಲರು ಭೇಟಿ ಕೊಡುವ ನಿರೀಕ್ಷೆ. ಮೇಯರ್, ಪೋಸ್ಟ್ ಮಾಸ್ಟರ್, ನ್ಯಾಯಾಧಿಪತಿ, ಶಾಲೆಗಳ ಅಧಿಕಾರಿ ಮೊದಲಾದ ಸರಕಾರಿ ಉದ್ಯೋಗಸ್ಥರು ಒಂದೆಡೆ ಸೇರಿ ತಮ್ಮ ತಪ್ಪುಗಳು ಇನ್ಸ್‌ಪೆಕ್ಟರ್ ಜನರಲರ ಕಣ್ಣಿಗೆ ಬೀಳದಂತೆ ಮಾಡುವುದು ಹೇಗೆ ಎಂದು ಚರ್ಚಿಸುತ್ತಾರೆ.

**ಮೇಯರ್ :** ಓ ದೇವರೆ, ನನ್ನ ಸುತ್ತ ಇರುವವರೆಲ್ಲ ಮೂರ್ಖ ಶಿಖಾಮಣಿಗಳು. ಹಾಗೇ ಜ್ಞಾಪಕ ಬಂತು. ನನಗೆ ಗೊತ್ತು ಯಾವೊಬ್ಬ ಮನುಷ್ಯನೂ ಪಾಪ ಮಾಡದೆ ಇರಲು ಸಾಧ್ಯವಿಲ್ಲ. ದೇವರು ನಮ್ಮನ್ನು ನಿರ್ಮಿಸಿರುವುದೇ ಹಾಗೆ. ಇವತ್ತಿನಿಂದ ಯಾರೂ ಲಂಚ ತೆಗೆದುಕೊಳ್ಳಬಾರದು. ನಾನು ಹೇಳಿದ್ದು ಗೊತ್ತಾಯ್ತು ತಾನೇ ? ಯಾರೊಬ್ಬರೂ.

**ನ್ಯಾಯಾಧಿಪತಿ :** ಪಾಪವೆಂದರೆ ಏನು ಅರ್ಥ ? ಸಣ್ಣ ಪಾಪಗಳಿವೆ. ದೊಡ್ಡ ಪಾಪಗಳೂ ಇವೆ. ಅವರಿವರಿಂದ ಏನಾದರೂ ಬಹುಮಾನಗಳನ್ನು ತೆಗೆದುಕೊಳ್ಳುತ್ತಿರುತ್ತೇನೆ; ಅದೂ ಎಂಥದು ? ಗ್ರೇಹೌಂಡ್ ನಾಯಿ ಮರಿಗಳು. ಇದು ಬಹಳ ಸಣ್ಣ ಪಾಪ.

**ಮೇಯರ್ :** ಸಣ್ಣ ಮರಿಯೋ ದೊಡ್ಡ ನಾಯಿಯೋ ಏನಿದು ನನಗೆ ಬೇಕಾಗಿಲ್ಲ. ಅದು ಪಾಪ.



ಕಣ್ಣೀರನ್ನು ಹಾದುಬಂದ ನಗು : ಗೊಗೋಲ್

ತಂಗುಮನೆಯಲ್ಲಿ ಇಳಿದುಕೊಂಡಿದ್ದ ಒಬ್ಬ ಯುವಕನನ್ನು ಇನ್ಸ್‌ಪೆಕ್ಟರ್ ಜನರಲ್ ಎಂದು ಇವರು ತಪ್ಪು ಭಾವಿಸಿ ಅವನನ್ನು ಕರೆತಂದು ಮೇಯರರ ಮನೆಯಲ್ಲಿ ಇರಿಸಿಕೊಳ್ಳುತ್ತಾರೆ. ಅಧಿಕಾರಿಗಳು ಒಬ್ಬೊಬ್ಬರಾಗಿ ಆತನನ್ನು ಭೇಟಿಮಾಡಲು ಬರುತ್ತಾರೆ. ತಮ್ಮ ಅಸಮರ್ಥತೆ, ಲಂಚಗುಳಿತನ ಆತನಿಗೆಲ್ಲಿ ಗೊತ್ತಾಗಿಬಿಡುವುದೋ ಎಂಬ ಹೆದರಿಕೆ ಅವರಿಗೆ. ಆ ಯುವಕ ತಾನು ತಂದಿದ್ದ ದುಡ್ಡೆಲ್ಲ ಖರ್ಚಾಗಿ ಹೋಯಿತೆಂದು ಹೇಳಿ ಇವರೊಡನೆ ಸಾಲ ಕೇಳಿದಾಗ ಪ್ರತಿಯೊಬ್ಬರೂ ಸಂತೋಷದಿಂದ ದುಡ್ಡು ಕೊಟ್ಟು ತಾವು ಪಾರಾದೆವೆಂದು ಹರ್ಷಿಸುತ್ತಾರೆ. ಪಟ್ಟಣದ ವ್ಯಾಪಾರಸ್ಥರು ಯುವಕನನ್ನು ಭೇಟಿಮಾಡಲು ಬರುತ್ತಾರೆ. ವ್ಯಾಪಾರಿಗಳು ಮೇಯರರಿಂದ ತಮಗಾಗುತ್ತಿರುವ ಅನ್ಯಾಯವನ್ನು ವಿವರಿಸುತ್ತಾರೆ.

ಮೇಯರನ ಮಗಳನ್ನು ಮದುವೆಯಾಗುವ ಬಯಕೆಯನ್ನು ಯುವಕ ವ್ಯಕ್ತಪಡಿಸಿದಾಗ ಆ ಮೇಯರಿಗಾದ ಸಂತೋಷ ವರ್ಣನಾತೀತ. ಈ ವ್ಯವಹಾರಗಳನ್ನೆಲ್ಲ ನೋಡುತ್ತಿದ್ದ ಯುವಕನ ಸೇವಕ, ಪರಿಸ್ಥಿತಿ ಚೆನ್ನಾಗಿರುವಾಗಲೇ ಅಲ್ಲಿಂದ ಹೊರಟು ಹೋಗುವುದು ಉತ್ತಮ ಎಂದು ಸಲಹೆ ಮಾಡುತ್ತಾನೆ. ತನ್ನ ಚಿಕ್ಕಪ್ಪನ ಆಶೀರ್ವಾದ ಪಡೆದು ಬರುವುದಾಗಿ ಹೇಳಿ ಯುವಕ ಹೊರಟುಹೋಗುತ್ತಾನೆ. ಇನ್ಸ್‌ಪೆಕ್ಟರ್ ಜನರಲ್ ಮೇಯರನ ಅಳಿಯನಾಗುವ ಸಂಗತಿ ಪಟ್ಟಣವನ್ನೆಲ್ಲ ಆಶ್ಚರ್ಯದ ಕಡಲಿನಲ್ಲಿ ಮುಳುಗಿಸುತ್ತದೆ. ಜನ ಅವರನ್ನು ತಂಡೋಪತಂಡವಾಗಿ ಅಭಿನಂದಿಸಲು ಬರುತ್ತಿರುತ್ತಾರೆ.

ಈ ಸಂಭ್ರಮದ ಮಧ್ಯೆ ನಿಜವಾದ ಇನ್ಸ್‌ಪೆಕ್ಟರ್ ಜನರಲ್ ಆಗಮಿಸಿದಾಗ, ಎಲ್ಲರೂ ದಿಗ್ಭ್ರಾಂತರಾಗಿ ಪ್ರತಿಮೆಗಳಂತೆ ನಿಲ್ಲುತ್ತಾರೆ.

—ಇದು ರಷ್ಯದ ಖ್ಯಾತ ಸಾಹಿತಿ ನಿಕೊಲಾಯ್ ಗೊಗೋಲ್ ಬರೆದ 'ಇನ್ಸ್‌ಪೆಕ್ಟರ್ ಜನರಲ್' ಎಂಬ ನಾಟಕದ ಸಾರಾಂಶ. ಗೊಗೋಲ್ 1809ರ ಮಾರ್ಚ್ 31ರಂದು ಮಿರ್ಗೊರಾಡ್ ಬಳಿ ಜನಿಸಿದ. ಶಾಲೆಯ ನಾಟಕಗಳಲ್ಲಿ ಅಭಿನಯಿಸುತ್ತಿದ್ದ ಗೊಗೋಲ್ ನಟನಾಗಲು ಬಯಸಿ ವಿಫಲನಾದ. 19ನೆಯ ವಯಸ್ಸಿನಲ್ಲಿ ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ ಗುಮಾಸ್ತೆ ಕೆಲಸಕ್ಕೆ ಸೇರಿದ. ಮುಂದೆ ಅಲ್ಲೇ ವಿಶ್ವವಿದ್ಯಾನಿಲಯದಲ್ಲಿ ಚರಿತ್ರೆಯ ಪ್ರಾಧ್ಯಾಪಕನಾದ.

ಆತನ ಮೊದಲ ಕೃತಿ 'ಡಿಕಾಂಕ ಗ್ರಾಮದ ಬಳಿಯ ಸಂಜೆಗಳು'. ಅದು ಆಗಿನ ಕಾಲದ ಜನಜೀವನವನ್ನು ಬಿಂಬಿಸುತ್ತಿದ್ದ ಕಥೆಗಳ ಸಂಕಲನ. ಇದು ಪ್ರಕಟವಾದಾಗ ಜನರ ಗಮನ ಸೆಳೆಯಿತು.

1831ರ ಬೇಸಿಗೆಯಲ್ಲಿ ಒಂದು ದಿನ ಗೊಗೋಲ್ ಸೇಂಟ್ ಪೀಟರ್ಸ್‌ಬರ್ಗಿನ ಒಂದು ಮುದ್ರಣಾಲಯಕ್ಕೆ ಭೇಟಿ ನೀಡಿದ. ಮೊಳೆ ಜೋಡಿಸುವವರು ತಮ್ಮ ಎದುರಿಗಿದ್ದ ಹಸ್ತಪ್ರತಿಯನ್ನು ಓದುತ್ತ ಮೊಳೆ ಜೋಡಿಸುತ್ತ, ಕಿಲಕಿಲ ನಗುತ್ತಿದ್ದುದನ್ನು ಕಂಡ. ಆ ಹಸ್ತಪ್ರತಿ ತನ್ನ ಪುಸ್ತಕದ್ದೇ ಎಂದು ಅರಿತಾಗ ಗೊಗೋಲ್‌ಗೆ ಆನಂದವಾಯಿತು.

ಸರಕಾರೀ ಅಧಿಕಾರಿಗಳನ್ನು ಕುರಿತು ಆತ ರಚಿಸಿದ ಪ್ರಹಸನ 'ಇನ್ ಪೆಕ್ಟರ್ ಜನರಲ್'' 1836ರಲ್ಲಿ ಪ್ರಕಟವಾಯಿತು.

ಅನಾರೋಗ್ಯದ ದೆಸೆಯಿಂದ ಗೊಗೋಲ್ 1836ರಿಂದ 1848ರ ಅವಧಿಯನ್ನು ಹೆಚ್ಚಾಗಿ ರೋಮಿನಲ್ಲಿ ಕಳೆದ. ಈ ಅವಧಿಯಲ್ಲಿ ತನ್ನ ಮೇರು ಕೃತಿ 'ಮೃತ ಆತ್ಮಗಳು' ಕಾದಂಬರಿಯನ್ನು ಬರೆದ. ಇದರ ಮೊದಲನೆಯ ಭಾಗ 1842ರಲ್ಲಿ ಪ್ರಕಟವಾಯಿತು. ಇದರಲ್ಲಿ ಪಟ್ಟಣದ ಜನರ ಅನಾಗರಿಕತೆ ಹಾಗೂ ಸಾರ್ವಜನಿಕ ದುರಾಡಳಿತಗಳ ವಿಡಂಬನೆಯ ವಸ್ತುವಿದೆ. ಈ ವೇಳೆಗೆ ಗೊಗೋಲ್ ಭ್ರಾಂತಿ, ವ್ಯಾಧಿ, ವಿಷಣ್ಣತೆಗಳಿಗೆ ತುತ್ತಾಗಿದ್ದ. ಆಗ ಬರೆದ 'ಮೃತ ಆತ್ಮಗಳು' ಕಾದಂಬರಿಯ ಎರಡನೆಯ ಭಾಗವನ್ನು ತಾನೇ ಬೆಂಕಿಗೆ ಆಹುತಿಕೊಟ್ಟ. ವರ್ಷಗಳು ಕಳೆದಂತೆ ಗೊಗೋಲ್‌ಗೆ ಮತದಲ್ಲಿ ಆಸಕ್ತಿ ಹೆಚ್ಚಿತು. ಉಪವಾಸ, ಪ್ರಾರ್ಥನೆಗಳಲ್ಲಿ ನಿರತನಾಗಿ ತನ್ನ ದೇಹವನ್ನು ಸೊರಗಿಸಿ 1852ರಲ್ಲಿ ಮಾಸ್ಕೋದಲ್ಲಿ ಮೃತನಾದ.

ಗೊಗೋಲನ ವೀಕ್ಷಣಾ ಸಾಮರ್ಥ್ಯ ಅಸಾಧಾರಣವಾದದ್ದು. ನಿತ್ಯ ಜೀವನದ ವಿಲಕ್ಷಣ ಹಾಗೂ ಹಾಸ್ಯಾಸ್ಪದ ಪ್ರಸಂಗಗಳನ್ನೆಲ್ಲ ಆತನ ಸೂಕ್ಷ್ಮ ದೃಷ್ಟಿ ಸೆರೆಹಿಡಿಯುತ್ತಿತ್ತು.

ರಷ್ಯನ್ ಭಾಷೆಯಲ್ಲಿ ಅಸಾಮಾನ್ಯ ಪಾಂಡಿತ್ಯವಿತ್ತು ಗೊಗೋಲ್‌ಗೆ. "ಪ್ರಪಂಚಕ್ಕೆ ಕಾಣಿಸದ ಕಣ್ಣೀರನ್ನು ಹಾದುಬಂದ ನಗು ತನ್ನ ಕೃತಿಗಳಲ್ಲಿ ವ್ಯಾಪಿಸಿದೆ" ಎಂದು ಗೊಗೋಲ್ ಹೇಳಿದ್ದಾನೆ.

## ಗೊಮ್ಮಟೇಶ್ವರ

ಮೈಸೂರು ರಾಜ್ಯದ ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿರುವ ಗೊಮ್ಮಟೇಶ್ವರ ಮೂರ್ತಿ ಜಗತ್ಪ್ರಸಿದ್ಧವಾದದ್ದು. ಈ ಮೂರ್ತಿಯನ್ನು ಗೊಮ್ಮಟ, ಗೋಮಟೇಶ್ವರ, ಬಾಹುಬಲಿ ಎಂದು ಕೂಡ ಕರೆಯುತ್ತಾರೆ.

ಶ್ರವಣಬೆಳಗೊಳ ಎರಡು ಬೆಟ್ಟಗಳ ನಡುವೆ ಇದೆ. ಒಂದು ಗುಡ್ಡ ಸ್ವಲ್ಪ ದೊಡ್ಡದು, ಎತ್ತರವಾದದ್ದು. ಇನ್ನೊಂದು ಸ್ವಲ್ಪ ಚಿಕ್ಕದು, ಅಷ್ಟು ಎತ್ತರವಾದದ್ದಲ್ಲ. ದೊಡ್ಡ ಬೆಟ್ಟವನ್ನು ವಿಂಧ್ಯಗಿರಿ ಎನ್ನುತ್ತಾರೆ. ಚಿಕ್ಕಬೆಟ್ಟದ ಹೆಸರು ಚಂದ್ರಗಿರಿ. ಇವೆರಡು ಬೆಟ್ಟಗಳ ಮೇಲೂ ಜೈನ ಬಸದಿಗಳೂ ಇತರ ಜೈನ ಸ್ಮಾರಕಗಳೂ ಇವೆ. ಬೆಟ್ಟಗಳ ನಡುವಣ ಕಣಿವೆಯಲ್ಲಿ ಬೆಳ್ಗೊಳವೆಂಬ ದೊಡ್ಡ ಕಲ್ಯಾಣಿ ಇದೆ.

ವಿಂಧ್ಯಗಿರಿಯಿರುವುದು ಈ ಕಲ್ಯಾಣಿಯ ಪಕ್ಕದಲ್ಲೇ. ಇದರ ಪ್ರಧಾನ ಭಾಗ ಒಂದು ದೊಡ್ಡ ಗುಮ್ಮಟದಂತಿರುವ ಬಂಡೆ. ಈ ಬಂಡೆ ನೆಲಮಟ್ಟದಿಂದ ಸುಮಾರು 470 ಅಡಿಯಷ್ಟು ಎತ್ತರಕ್ಕೆ ಎದ್ದುನಿಂತಿದೆ; ಕಡಿದಾಗಿ ಕೂಡ ಇದೆ. ಗೊಮ್ಮಟೇಶ್ವರನ ಮೂರ್ತಿ ಇರುವುದು ಈ



ಶ್ರವಣಬೆಳಗೊಳದ ಗೊಮ್ಮಟೇಶ್ವರ

ಬೆಟ್ಟದ ತಂತ್ತತುದಿಯಲ್ಲಿ. ಬೆಟ್ಟವನ್ನು ಹತ್ತಲು, ಬಂಡೆಯಲ್ಲಿ ಕಡಿದಿರುವ ಮೆಟ್ಟಿಲುಗಳನ್ನು ಏರಿ ಹೋಗಬೇಕಾಗುತ್ತದೆ. ಬೆಟ್ಟದ ಶಿರೋಭಾಗದಲ್ಲಿರುವ ಬಂಡೆಯ ಬಯಲಿನಲ್ಲಿ ಕಟ್ಟಿರುವ ಸುತ್ತಾಲಯದ ಬಾಗಿಲನ್ನು ದಾಟಿ ಒಳಗೆ ಹೋದರೆ, ನಮಗೆ ಗೊಮ್ಮಟೇಶ್ವರ ಮೂರ್ತಿಯ ಪೂರ್ಣ ದರ್ಶನ ಆಗುತ್ತದೆ.

ಗೊಮ್ಮಟೇಶ್ವರನ ಮೂರ್ತಿ ಬೃಹದಾಕಾರದ್ದು. ಎತ್ತರ ಐವತ್ತೇಳು ಅಡಿ. ಆಡುಭಾಷೆಯಲ್ಲಿ ಹೇಳಬೇಕಾದರೆ ಸುಮಾರು ಹನ್ನೆರಡಾಳೆತ್ತರ. ಅಂದರೆ, ಹನ್ನೆರಡು ಜನರು ಒಬ್ಬರ ಭುಜದ ಮೇಲೊಬ್ಬರು ನಿಂತರೆ ಆಗುವಷ್ಟು ಎತ್ತರ.

ನಗ್ನರೂಪದಲ್ಲಿ ನೇರವಾಗಿ ನಿಂತಿರುವ ಈ ಮೂರ್ತಿಯ ಮುಖ್ಯ ಅದರ ಭಾವ ಅಪೂರ್ವವಾದದ್ದು. ನೆತ್ತಿಯ ತುಂಬ ಹರಡಿರುವ ಗುಂಗುರು ಕೂದಲ ಸುರುಳಿ, ವಿಶಾಲವಾದ ಮುಖ, ಅದರ ಮೇಲೆ ದಯಾಪೂರ್ಣವಾದ ಎಳೆನಗೆ ; ಪ್ರಶಾಂತ ಭಾವ. ಒಮ್ಮೆ ಈ ಮೂರ್ತಿಯ ಮುಖವನ್ನು ನೋಡಲಾರಂಭಿಸಿದರೆ ಅದರಿಂದ ಕಣ್ಣು ತೆಗೆಯಲು ಮನಸ್ಸು ಬರುವುದೇ ಇಲ್ಲ. ಅದು ಅಷ್ಟು ಸುಂದರ, ಆಕರ್ಷಕ.

ಇಷ್ಟು ಎತ್ತರದ ಈ ಮೂರ್ತಿಯನ್ನು ಎಲ್ಲಿ ಕೆತ್ತಿದರು ? ಆ ಬೆಟ್ಟದ ತುದಿಗೆ ಹೇಗೆ ಸಾಗಿಸಿದರು? ಎಂಬ ಪ್ರಶ್ನೆ ಏಳುವುದು ಸಹಜ. ಅತಿ ದೊಡ್ಡ ಆಕಾರದ ಈ ವಿಗ್ರಹ ಎಲ್ಲೋ ಕೆತ್ತಿ ಇಲ್ಲಿ ತಂದದ್ದಲ್ಲ ; ಬೆಟ್ಟದ ನೆತ್ತಿಯಲ್ಲಿದ್ದ ಎತ್ತರವಾದ ಕೋಡುಗಲ್ಲನ್ನು ಕೆತ್ತಿ ಅಲ್ಲಿಯೇ ನಿರ್ಮಿಸಿದ್ದು.

ಇಂಥ ಅದ್ಭುತ ಶಿಲ್ಪವನ್ನು ರಚಿಸಿದ ಮಹಾಶಿಲ್ಪಿ ಅರಿಷ್ಟನೇಮಿ. ಈತನನ್ನು ಈ ಕೆಲಸಕ್ಕೆ ನಿಯಮಿಸಿ, ಈ ಮಹಾಮೂರ್ತಿಯ ನಿರ್ಮಾಣದ ಹೊಣೆ ಹೊತ್ತವನು ಚಾವುಂಡರಾಯ. ಕನ್ನಡ ರಾಜವಂಶವಾದ ಗಂಗ ಮನೆತನದ ದೊರೆ ರಾಚಮಲ್ಲನಲ್ಲಿ ಇವನು ಸೇನಾಪತಿಯಾಗಿದ್ದ. ಗೊಮ್ಮಟೇಶ್ವರ ಮೂರ್ತಿ 968ರಲ್ಲಿ ರಚಿತವಾಗಿರಬೇಕೆಂದೂ ಆಗಲೇ ಅದಕ್ಕೆ ಮೊದಲನೆಯ ಮಹಾಮಸ್ತಕಾಭಿಷೇಕ ನಡೆದಿರಬೇಕೆಂದೂ ವಿದ್ವಾಂಸರ ಅಭಿಪ್ರಾಯ. ಗೊಮ್ಮಟೇಶ್ವರನನ್ನು ಕೆತ್ತಿರುವ ಬಂಡೆಯ ಒಂದು ಪಾರ್ಶ್ವದಲ್ಲಿ ಆ ಮೂರ್ತಿಯನ್ನು ಮಾಡಿಸಿದವನು ಚಾವುಂಡರಾಯ ಎಂಬ ಬಗೆಗೆ ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿ ಶಿಲಾ ಲೇಖವಿದೆ.

ಅವನು ಈ ಬೃಹತ್ ವಿಗ್ರಹವನ್ನು ಏಕೆ ನಿರ್ಮಿಸಿದ ಎಂಬುದಕ್ಕೆ ಒಂದು ಕಥೆಯಿದೆ. ಪೌದನಪುರದಲ್ಲಿ ಭರತ ಚಕ್ರವರ್ತಿಯು ನಿರ್ಮಿಸಿದ್ದ ಬಾಹುಬಲಿಯ ಚಿನ್ನದ ವಿಗ್ರಹದ ದರ್ಶನ ಪಡೆಯಬೇಕೆಂದು, ಚಾವುಂಡರಾಯನ ವೃದ್ಧಮಾತೆ ಯಾತ್ರೆ ಹೊರಟಿದ್ದಳಂತೆ. ಅವರು ಶ್ರವಣಬೆಳಗೊಳದಲ್ಲಿ ತಂಗಿದ್ದಾಗ, ಬಾಹುಬಲಿ, ಚಾವುಂಡರಾಯನ ಕನಸಿನಲ್ಲಿ ಕಾಣಿಸಿಕೊಂಡು, ಪೌದನಪುರ ಚಿನ್ನದ ವಿಗ್ರಹದ ಸುತ್ತ ಕಾಡು ಬೆಳೆದು, ಅಲ್ಲಿ ಘಟಸರ್ಪಗಳು ವಾಸಮಾಡಿಕೊಂಡಿರುವುದರಿಂದ ಅದರ ದರ್ಶನ ಆಗುವುದಿಲ್ಲ : ಮಾರನೆಯ ದಿನ ಬೆಳಗ್ಗೆ ಚಿಕ್ಕ ಬೆಟ್ಟದ ಮೇಲೆ ನಿಂತು ದೊಡ್ಡ ಬೆಟ್ಟದ ಕಡೆಗೆ ಒಂದು ಬಾಣವನ್ನು ಹೊಡೆ ; ಅದು ಬಿದ್ದೆಡೆಯಲ್ಲಿ ನನ್ನ ಸಾನ್ನಿಧ್ಯವಿರುತ್ತದೆ ಎಂದು ಚಾವುಂಡರಾಯನಿಗೆ ತಿಳಿಸಿದನಂತೆ. ಅದರಂತೆ ಮಾರನೆಯ ದಿನ ಅವರು ಬಾಣ ಎಸೆದಾಗ ಅದು ದೊಡ್ಡ ಬೆಟ್ಟದ ಕೋಡುಗಲ್ಲಿಗೆ ತಾಕಿ ಬಿದ್ದಿತಂತೆ. ಆ ಸೂಚನೆಯನ್ನು ಅನುಸರಿಸಿ ಚಾವುಂಡರಾಯಂ ಆ ಕೋಡುಗಲ್ಲಿನಲ್ಲಿ ಗೊಮ್ಮಟಸ್ವಾಮಿಯ ವಿಗ್ರಹವನ್ನು ಕೆತ್ತಿಸಿದನಂತೆ.

ಶಿಲ್ಪದ ದೃಷ್ಟಿಯಿಂದ ಗೊಮ್ಮಟೇಶ್ವರ ಜಗತ್ತಿನ ಒಂದು ಅದ್ಭುತವಾಗಿರುವಂತೆ, ಆಗಿಂದಾಗ್ಗೆ ಈ ಮಹಾಮೂರ್ತಿಗೆ ನಡೆಯುವ ಮಹಾಮಸ್ತಕಾಭಿಷೇಕ ಕೂಡ ಒಂದು ಅದ್ಭುತವೇ. ಈ ಉತ್ಸವವನ್ನು ನೋಡಲು, ಅದರಲ್ಲಿ ಭಾಗವಹಿಸಲು ಭಾರತದ ವಿವಿಧ ಪ್ರದೇಶಗಳಿಂದ ಅನೇಕ ಸಹಸ್ರ ಜನರು ಬರುತ್ತಾರೆ.

ಮಹಾಮಸ್ತಕಾಭಿಷೇಕ ನಡೆಯುವುದಕ್ಕೆ ಹಲವಾರು ತಿಂಗಳುಗಳ ಮೊದಲೇ ಅದಕ್ಕಾಗಿ ಸಿದ್ಧತೆಗಳು ಆರಂಭವಾಗುತ್ತವೆ. ಗೊಮ್ಮಟೇಶ್ವರನ ಮೂರ್ತಿಯ ತಲೆಯ ಮೇಲಿನಿಂದ ಅಭಿಷೇಕ ಮಾಡಲು ಅನುಕೂಲವಾಗುವಂತೆ, ಮೂರ್ತಿಯ ಹಿಂಬದಿಯಲ್ಲಿ ಅಟ್ಟಣಿಗೆಯನ್ನು ಕಟ್ಟುತ್ತಾರೆ. ಅಭಿಷೇಕ ಮಾಡುವ ವಸ್ತುಗಳೊಡನೆ ಅದರ ಮೇಲೆ ನಿಂತು ಅಭಿಷೇಕ ನಡೆಸುತ್ತಾರೆ. ಹಾಲು, ಮೊಸರು, ತುಪ್ಪ, ಗಂಧೋದಕ ಹಾಗೂ ನೀರಿನಿಂದ ಅಭಿಷೇಕ ನಡೆಯುತ್ತದೆ. ಇವಾದ ಮೇಲೆ ಫಲ, ಧಾನ್ಯಗಳ ಅಭಿಷೇಕವೂ ಆಗುತ್ತದೆ. ಮಹಾಮಸ್ತಕಾಭಿಷೇಕ ಕಣ್ಣಿಗೆ ಒಂದು ಹಬ್ಬ.

ಚಾವುಂಡರಾಯನು ಗೊಮ್ಮಟೇಶ್ವರ ಮೂರ್ತಿಯನ್ನು ನಿರ್ಮಿಸಿದ ಸಂದರ್ಭದಲ್ಲಿ ಮಹಾಮಸ್ತಕಾಭಿಷೇಕ ನಡೆದ ಮೇಲೆ ಮತ್ತೆ ಯಾವ ಯಾವಾಗ ಇದು ನಡೆಯಿತೆಂಬುದರ ಬಗೆಗೆ ಕ್ರಮವಾದ ದಾಖಲೆಗಳು ದೊರೆಯುವುದಿಲ್ಲ. 1390ರಲ್ಲಿ ಒಮ್ಮೆ ಮಸ್ತಕಾಭಿಷೇಕ ನಡೆಯಿತೆಂದು ಒಂದು ಶಿಲಾಲೇಖದಿಂದ ವ್ಯಕ್ತವಾಗುತ್ತದೆ. 1967ನೆಯ ಮಾರ್ಚ್ 30ನೆಯ ತಾರೀಖು ಮಹಾಮಸ್ತಕಾಭಿಷೇಕ ವಿಜೃಂಭಣೆಯಿಂದ ನಡೆಯಿತು.

ಕರ್ನಾಟಕ ರಾಜ್ಯದಲ್ಲಿ ಶ್ರವಣಬೆಳಗೊಳದ ಗೊಮ್ಮಟೇಶ್ವರನಲ್ಲದೆ, ಬೇರೆ ಕೆಲವು ಪ್ರಸಿದ್ಧ ಗೊಮ್ಮಟಮೂರ್ತಿಗಳೂ ಇವೆ. ಇಂಥದು ಒಂದು ದಕ್ಷಿಣ ಕನ್ನಡ ಜಿಲ್ಲೆಯ ವೇಣೂರಿನಲ್ಲಿದೆ ; ಇನ್ನೊಂದು ಕಾರ್ಕಳ ದಲ್ಲಿದೆ. ವೇಣೂರಿನ ಮೂರ್ತಿಯ ಎತ್ತರ 35 ಅಡಿ : ಕಾರ್ಕಳದ ಮೂರ್ತಿ ಇದಕ್ಕಿಂತ ಸ್ವಲ್ಪ ದೊಡ್ಡದು —41 ಅಡಿ 5 ಅಂಗುಲ.

ಬೃಹದಾಕಾರದ ಗೊಮ್ಮಟ ಮೂರ್ತಿಗಳ ನಿರ್ಮಾಣ ಇಂದಿಗೂ ನಡೆದಿದೆ. ಕಾರ್ಕಳದ ಖ್ಯಾತ ಶಿಲ್ಪಿ ರೆಂಜಾಳ ಗೋಪಾಲ ಶೆಣೈ ಅವರು ಗೊಮ್ಮಟನ ಹೊಸ ಮೂರ್ತಿಯನ್ನು ಕಡೆದಿದ್ದಾರೆ.

### ಗೋಕಾಕ

''—ನೀರು ನೀಲಗಂಬಳಿ ಹಾಸಿ
ಹಚ್ಚಪಚ್ಚನ್ನ ಹೊದಿಕೆ ಹೊಚ್ಚಿ
ಸೀರ್ಪನಿಗಳ ಸೆಂಡಾಡಿ
ತೆರೆಯ ತೊಟ್ಟಿಲಲಿ ತೂಗುತಿರುವೆ !

—ಯಂತ್ರವಿಲ್ಲದಲೆ ವಿಶ್ವದ ಅರಿವಿಲ್ಲ,
ಗೆಲುವಿಲ್ಲ.
ಯಂತ್ರವ ನಿಯಂತ್ರಿಸದೆಲೆ ಗತಿಯಿಲ್ಲ,
ಬಾಳಿಗೆ ದ್ಯುತಿಯಿಲ್ಲ.

—ಭಾರತದಲಿ ಜನಸಂಖ್ಯೆ ಬೆಳೆವುದೆಂದು
ಚಿಂತಿಸುವೆವು ನಾವು.
ಅಮೆರಿಕೆಯಲಿ ಯಂತ್ರ ಸಂಖ್ಯೆ ಮಿಕ್ಕಿ
ಹೊಸ ಮಾದರಿ ನೋವು''

ಇವು 'ವಿನಾಯಕ' ಎಂಬ ಕಾವ್ಯನಾಮದಿಂದ ಪರಿಚಿತರಾದ ಗೋಕಾಕರ ಕವನಗಳಿಂದ ಆಯ್ದ ಸಾಲುಗಳು. ಕವಿ, ವಿಮರ್ಶಕ, ಕಾದಂಬರಿಕಾರ, ಪ್ರಬಂಧಕಾರ, ನಾಟಕಕಾರ ಹಾಗೂ ವಾಗ್ಮಿಯಾಗಿ ಪ್ರಖ್ಯಾತರಾದವರು ವಿನಾಯಕ ಕೃಷ್ಣ ಗೋಕಾಕರು.

ಗೋಕಾಕರ ಕಾವ್ಯ ಹಳತು–ಹೊಸತುಗಳ ಹಿತವಾದ ಮಿಶ್ರಣ. ಸುಂದರ, ವಿಚಾರಪೂರ್ಣ ಪ್ರಬಂಧಗಳನ್ನು ಅವರು ಬರೆದಿದ್ದಾರೆ. ಸಮಗ್ರ ಸಾಹಿತ್ಯ ವಿಮರ್ಶೆಗಳಿಂದ ಮುಂದಿನ ಪೀಳಿಗೆಗೆ ದಾರಿತೋರಿದ್ದಾರೆ. ಪ್ರವಾಸ ಸಾಹಿತ್ಯದ ಮೂಲಕ ನಮ್ಮ ಜನರಿಗೆ ವಿದೇಶಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಕಾದಂಬರಿ, ನಾಟಕಗಳನ್ನು ಬರೆದಿದ್ದಾರೆ. ವಿವಿಧ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ಶಿಕ್ಷಣ ರಂಗಕ್ಕೆ ದೀರ್ಘಕಾಲ ಸೇವೆ ಸಲ್ಲಿಸಿದ್ದಾರೆ.

ಗೋಕಾಕರು, 1909ನೆಯ ಆಗಸ್ಟ್ 9ರಂದು ಧಾರವಾಡ ಜಿಲ್ಲೆಯ ಸವಣೂರಿನಲ್ಲಿ ಜನಿಸಿದರು. ತಂದೆ ಕೃಷ್ಣರಾಯರು ಜ್ಯೋತಿಷಿಗಳು ಹಾಗೂ ವಕೀಲರು. 1929ರಲ್ಲಿ ಬಿ. ಎ. ಪದವಿ ಗಳಿಸಿದ ಗೋಕಾಕರು ಮರುವರ್ಷ ವಿವಾಹವಾದರು. 1931ರಲ್ಲಿ ಎಂ. ಎ. ಪದವೀಧರರಾಗಿ ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಗೆ ಸೇರಿಕೊಂಡರು.

'ಇಜ್ಜೋಡು' ಕಾದಂಬರಿ ಇವರ ಮೊದಲ ಸಾಹಿತ್ಯ ಕೃತಿ. ಇದು ಪ್ರಕಟವಾದದ್ದು 1934ರಲ್ಲಿ. ಆ ವರ್ಷವೇ ಅವರು ರಾಯಚೂರಿನಲ್ಲಿ



ವಿನಾಯಕ : ಸಮನ್ವಯ

ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾದ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿದರು.

ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಕಡಲನ್ನು ದಾಟಿ ಇಂಗ್ಲೆಂಡಿಗೆ ಹೋದ ಗೋಕಾಕರು 1938ರಲ್ಲಿ 'ಸಮುದ್ರದಾಚೆಯಿಂದ' ಪ್ರಕಟಿಸಿದರು. ದಿನಚರಿಯಂತೆ ಬರೆದಿರುವ ಈ ಪುಸ್ತಕ ಒಳ್ಳೆಯ ಪ್ರವಾಸ ಸಾಹಿತ್ಯ ಎನಿಸಿದೆ. ಅವರ ' ಸಮುದ್ರ ಗೀತಗಳು ' 1940ರಲ್ಲಿ ಹೊರಬಂತು. ಅದು ಮೊದಲ ನವ್ಯಧ್ವನಿ. ಮತ್ತೆ 1950ರಲ್ಲಿ ಮುಂಬಯಿಯಲ್ಲಿ ಜರಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಗೂ ಗೋಕಾಕರೇ ಅಧ್ಯಕ್ಷತೆ ವಹಿಸಿದ್ದರು. ಅವರ ಅಧ್ಯಕ್ಷಭಾಷಣ ನವ್ಯಸಾಹಿತ್ಯದ ಆಹ್ವಾನವಾಯಿತು. 1957ರಲ್ಲಿ 'ದ್ಯಾವಾ ಪೃಥಿವೀ' ಎಂಬ ಇವರ ಖಂಡಕಾವ್ಯ ಪ್ರಕಟವಾಯಿತು. ಇದರಲ್ಲಿ ನೀರದ ಹಾಗೂ ಇಳಾಗೀತಗಳೆಂಬ ಎರಡು ಭಾಗಗಳಿವೆ. ಭೂಮಿಯ ಮೇಲಿಂದ ನಭದ ವೀಕ್ಷಣೆಯನ್ನು ಕುರಿತದ್ದು ನೀರದ; ಇಳಾಗೀತ ನಭದ ಎತ್ತರದಿಂದ ಭೂಮಿಯ ವೀಕ್ಷಣೆಯನ್ನು ಕುರಿತದ್ದು. ಇವು ಪರಸ್ಪರ ಪೂರಕ.

1960ರಲ್ಲಿ ಈ ಗ್ರಂಥಕ್ಕೆ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು.

1957ರಲ್ಲಿ ಅಂತರರಾಷ್ಟ್ರೀಯ ಪಿ. ಇ. ಎನ್. ಸಮ್ಮೇಳನಕ್ಕಾಗಿ ಟೋಕಿಯೋಗೆ ಹೋಗಿದ್ದಾಗ ಗೋಕಾಕರು ' ಸಮುದ್ರದೀಚೆಯಿಂದ ' ಬರೆದರು. ಇದೂ ದಿನಚರಿಯ ರೂಪದಲ್ಲಿದೆ.

1958ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾದರು. 1959ರಿಂದ ಕೆಲ ಕಾಲ ಹೈದರಾಬಾದಿನಲ್ಲಿರುವ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲಿಷಿನ ನಿರ್ದೇಶಕರಾಗಿದ್ದರು. 1966ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾದರು. ಕರ್ನಾಟಕ ವಿಶ್ವವಿದ್ಯಾನಿಲಯ 1967ರಲ್ಲಿ ಇವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿತು.

'ನವ್ಯಕಾವ್ಯ' ಆಧುನಿಕ ಅಥವಾ ರೊಮಾಂಟಿಕ್ ಕಾವ್ಯದ ಧಿಕ್ಕಾರವಲ್ಲ : ಅದರ ಸಹಜವಾದ ಹಾಗೂ ಅನಿವಾರ್ಯವಾದ ಬೆಳವಣಿಗೆ' ಎಂದ

ಗೋಕಾಕರು ನವ್ಯಕಾವ್ಯದ ಅಧ್ವರ್ಯುಗಳಲ್ಲೊಬ್ಬರಾದರು. ಪರಂಪರೆಯಲ್ಲಿ ಉತ್ತಮವಾದವನ್ನು ಉಳಿಸಿಕೊಂಡು ನವ್ಯತೆಯನ್ನು ಪ್ರತಿಪಾದಿಸಿದರು; ಸಮನ್ವಯ ಸಾಧಿಸಿದರು.

ಇವರ ಕೃತಿಯಾದ 'ತ್ರಿವಿಕ್ರಮರ ಆಕಾಶಗಂಗೆ', ಬಾಲ್ಯ, ಯೌವನ, ದೈವಭಕ್ತಿ – ಔದಾರ್ಯಗಳಿಂದ ವಿಕಸಿಸುವ ವ್ಯಕ್ತಿತ್ವ, ಸ್ನೇಹದ ಸವಿ, ಸೌಂದರ್ಯ ಬೋಧೆಗಳನ್ನು ವಿವರಿಸುವ ಕಾವ್ಯ.

ಪಾಶ್ಚಾತ್ಯ ದೇಶಗಳಲ್ಲಿ ಸಂಚರಿಸಿ ಅಲ್ಲಿನ ಸಂಸ್ಕೃತಿಯನ್ನು ಆಳವಾಗಿ ಅಭ್ಯಸಿಸಿದರ ಪರಿಣಾಮವಾಗಿ ಹೊರಬಂದ ಸೂಕ್ಷ್ಮ ವಿಮರ್ಶೆಯನ್ನೊಳಗೊಂಡಿರುವ ಕೃತಿ 'ಇಂದಲ್ಲ ನಾಳೆ'. ಇದರಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಗುಣ – ದೋಷಗಳನ್ನು ಬಿಡಿಸಿ ತೋರಿಸಿದ್ದಾರೆ. ವಿದೇಶ ಪ್ರವಾಸ ಮುಗಿಸಿ ತಾಯ್ನಾಡಿಗೆ ಮರಳಿದ ಕವಿಗೆ ಜನ್ಮಭೂಮಿಯ ಮೇಲಿನ ಮಮತೆ ಇಮ್ಮಡಿಸುತ್ತದೆ.

'ಇಂದಿನ ಕನ್ನಡ ಕಾವ್ಯದ ಗೊತ್ತು ಗುರಿಗಳು', 'ಸಾಹಿತ್ಯದಲ್ಲಿ ಪ್ರಗತಿ', 'ನವ್ಯತೆ ಹಾಗೂ ಕಾವ್ಯಜೀವನ' ವಿಮರ್ಶೆಗಳ ಸಂಕಲನಗಳು. ಇವರದು ಸ್ಪಷ್ಟ, ವಿಚಾರಪೂರ್ಣ ವಿಮರ್ಶೆ.

'ಕಾವ್ಯ ಮೀಮಾಂಸೆ' ಪ್ರಬಂಧಗಳ ಸಂಗ್ರಹ. ಇದರಲ್ಲಿ ಭಾರತೀಯರ ಸಮಗ್ರ ದೃಷ್ಟಿ, ಪಾಶ್ಚಾತ್ಯರ ವಿಚಾರ ಪ್ರವೃತ್ತಿಗಳ ನಿರೂಪಣೆ ಇದೆ.

'ಜನನಾಯಕ', 'ಯುಗಾಂತರ' ಹಾಗೂ 'ವಿಮರ್ಶಕ ವೈದ್ಯ' ಇವರು ಬರೆದಿರುವ ನಾಟಕಗಳು. 'ತುಳಸಿ' ಚಿಕ್ಕದೃಶ್ಯ. ಸಂಭಾಷಣೆಗಳ ರಚನೆಯಲ್ಲಿ ಇವರ ಕುಶಲತೆಯನ್ನು ಈ ಕೃತಿಗಳಲ್ಲಿ ಕಾಣಬಹುದು.

'ಇಜ್ಜೋಡು' ಕಾದಂಬರಿಯ ಮುಂದಿನ ಭಾಗಗಳನ್ನು ವಿನಾಯಕರು ಬರೆದು 'ಸಮರಸವೇ ಜೀವನ' ಎಂಬ ಬೃಹತ್ ಕಾದಂಬರಿಯನ್ನು ರೂಪಿಸಿದರು.

ಇವರು ಅನೇಕ ಮುನ್ನುಡಿಗಳನ್ನೂ ಬರೆದಿದ್ದಾರೆ.

ಗೋಕಾಕರು ಕನ್ನಡದಲ್ಲಿ ಮಾತ್ರವಲ್ಲದೆ ಇಂಗ್ಲಿಷಿನಲ್ಲಿಯೂ ಸಾಹಿತ್ಯ ರಚನೆಮಾಡಿದ್ದಾರೆ. 'ದಿ ಸಾಂಗ್ ಆಫ್ ಲೈಫ್' ಮತ್ತು 'ಇನ್ ಲೈಫ್ಸ್ ಟೆಂಪಲ್' ಇವರ ಇಂಗ್ಲಿಷ್ ಕವನ ಸಂಕಲನಗಳು. ಇವಲ್ಲದೆ ಭಾರತ ಸಂಸ್ಕೃತಿ, ಸೌಂದರ್ಯಮೀಮಾಂಸೆ, ಕನ್ನಡ ಸಾಹಿತ್ಯ ಚರಿತ್ರೆಗಳನ್ನು ಕುರಿತೂ ಸರ್ವಜ್ಞ–ಬೇಂದ್ರೆ ಮುಂತಾದ ಕನ್ನಡ ಕವಿಗಳ ವಿಚಾರವಾಗಿಯೂ ಇಂಗ್ಲಿಷಿನಲ್ಲಿ ಬರೆದಿದ್ದಾರೆ.

## ಗೋಗಿನ್

ಚಿತ್ರಗಳ ಹರಾಜು ನಡೆದಿತ್ತು. ಹರಾಜು ಹಾಕುತ್ತಿದ್ದವನಿಗೆ ಚಿತ್ರಗಳು ಹಾಸ್ಯಾಸ್ಪದವಾಗಿ ಕಂಡುವು. ಆತ ಒಂದು ಚಿತ್ರವನ್ನು ಹಿಡಿದುಕೊಂಡು ನೋಡಿ, 'ನಯಾಗರಾ ಜಲಪಾತ' ಎಂದು ಗೊಣಗಿಕೊಂಡು ನಕ್ಕ. ಚಿತ್ರಕ್ಕೆ ಮೂರು ಡಾಲರ್ ಬೆಲೆಯೂ ಸಿಗಲಿಲ್ಲ. ಚಿತ್ರವೊಂದಕ್ಕೆ ಒಂದು ಡಾಲರಿನಂತೆ ಏಳು ಚಿತ್ರಗಳು ಮಾರಾಟವಾದುವು. ಒಂದು ಚಿತ್ರಕ್ಕೆ ದೊರಕಿದ್ದಂತೂ ಕೇವಲ 35 ಸೆಂಟ್ಸ್.

—ಇದು ಪಾಲ್ ಗೋಗಿನನ ಚಿತ್ರಗಳಿಗೆ ದೊರೆತ ಮನ್ನಣೆ. ಗೋಗಿನ್ ತೀರಿಹೋದ ಮೇಲೆ ಅವನ ಸಾಲ ತೀರಿಸುವುದಕ್ಕಾಗಿ ಚಿತ್ರಗಳ ಹರಾಜು ನಡೆಯಿತು.



'ಸ್ವರ್ಗದ ಬೆಳಕು ಸೋಂಕಿದ ಹೃದಯ : ಗೋಗಿನ್

ಗೋಗಿನ್ ಸತ್ತಾಗ, ಅವನು ವಾಸವಾಗಿದ್ದ ಗುಡಿಸಿಲಿನಲ್ಲಿ ಮೂರು ಪೆಟ್ಟಿಗೆಗಳಿದ್ದುವು. ಪೆಟ್ಟಿಗೆಗಳ ತುಂಬ ಕ್ಯಾನ್ವಾಸ್‌ಗಳಲ್ಲಿ ರೇಖಾಕೃತಿಗಳು. ಬೆಸ್ತನೊಬ್ಬ ಆ ಪೆಟ್ಟಿಗೆಗಳನ್ನು ಸಮುದ್ರಕ್ಕೆ ಎಸೆದ. ಹಾಗೆ ಎಸೆದುದನ್ನು ಈಗ 'ಮಿಲಿಯ ಡಾಲರ್ ಪ್ರಮಾದ' ಎಂದು ಹೇಳುತ್ತಾರೆ. ಏಕೆಂದರೆ 1959ರಲ್ಲಿ ಗೋಗಿನ್‌ನ ಒಂದು ಕೃತಿ 369,000 ಡಾಲರ್‌ಗೆ ಮಾರಾಟವಾಯಿತು.

1848ರ ಜೂನ್ 7ರಂದು ಪಾಲ್ ಗೋಗಿನ್ ಪ್ಯಾರಿಸಿನಲ್ಲಿ ಜನಿಸಿದ. 17ನೆಯ ವರ್ಷದಲ್ಲಿ ವ್ಯಾಪಾರೀ ಹಡಗಿನಲ್ಲಿ ಕೆಲಸಕ್ಕೆ ಸೇರಿ ಪ್ರವಾಸಗಳಲ್ಲಿ ಆರು ವರ್ಷ ಕಳೆದ. ಈ ಅವಧಿಯಲ್ಲಿ ಗೋಗಿನ್ ಎತ್ತರವಾಗಿ, ದೃಢಕಾಯನಾಗಿ ಬೆಳೆದಿದ್ದ. ಪ್ಯಾರಿಸಿಗೆ ಹಿಂದಿರುಗಿದ ಗೋಗಿನ್ ದಳ್ಳಾಳಿ ಸಂಸ್ಥೆಯೊಂದರಲ್ಲಿ ಕೆಲಸಕ್ಕೆ ಸೇರಿದ. ಗಳಿಕೆಯೂ ಚೆನ್ನಾಗಿತ್ತು. 1873ರಲ್ಲಿ ಡೆನ್ಮಾರ್ಕಿನ ಹುಡುಗಿಯನ್ನು ಮದುವೆಯಾದ. ಆತನಿಗೆ ಚಿತ್ರಕಲೆಯಲ್ಲಿ ಆಸಕ್ತಿ ಮೂಡಲು ಕಾರಣನಾದವನು ಅವನ ಪಾಲಕ ಗುಸ್ಟಾವ್ ಆರೋಸಾ. ಸಮಷ್ಟಿಪರಿಣಾಮ ಪದ್ಧತಿ ಆತನ ಗಮನ ಸೆಳೆಯಿತು. ಒಂದು ವಸ್ತುವನ್ನು ನೋಡಿದಾಕ್ಷಣ ಆಗುವ ಪರಿಣಾಮವನ್ನು ಚಿತ್ರದಲ್ಲಿ ಮೂಡಿಸುವುದು ಆ ವಿಧಾನ. ವಿರಾಮವಿದ್ದಾಗಲೆಲ್ಲ ಚಿತ್ರ ಬರೆಯುವುದು ಆತನ ಹವ್ಯಾಸವಾಯಿತು. 1880ರಲ್ಲಿ ತನ್ನ ಚಿತ್ರಗಳ ಪ್ರದರ್ಶನ ಏರ್ಪಡಿಸಿದ. ಪಿಸಾರೊ (ಫ್ರೆಂಚ್ ಚಿತ್ರಕಾರ, 1830-1903), ಪಾಲಾ ಸೇಜಾನ್ (1839-1906)ಇವರ ಪರಿಚಯದಿಂದ ಆತನ ಸುಪ್ತ ಪ್ರತಿಭೆ ಹೊರಹೊಮ್ಮತೊಡಗಿತು. 1883ರಲ್ಲಿ ಕೆಲಸ ಬಿಟ್ಟು ಚಿತ್ರಕಲೆಯಲ್ಲಿ ಆಸಕ್ತನಾದ. ಬಡತನ ಬೆನ್ನುಹತ್ತಿತು. ಆತನ ಹೆಂಡತಿ ಮಕ್ಕಳನ್ನು ಕರೆದುಕೊಂಡು ತನ್ನ ಹುಟ್ಟೂರಿಗೆ ಹೊರಟುಹೋದಳು. ಪುನಃ ಅವರು ಒಂದಾಗಿ ಬಾಳಲಿಲ್ಲ. 1886ರಲ್ಲಿ ಆತ ಬ್ರಿಟನಿನ ಪಾಂಟ್-ಅವೆನ್‌ಗೆ ಹೋದ. ಅಲ್ಲಿ ಒಂದು ವರ್ಷಕಳೆದು ಅನಂತರ ಮಾರ್ಟಿನಿಕ್ ದ್ವೀಪ ಸೇರಿದ. ಅಲ್ಲೂ ಬಡತನ ತಪ್ಪಲಿಲ್ಲ. ಒಂದು ವರ್ಷದ ಅನಂತರ ಬ್ರಿಟನಿಗೆ ಹಿಂದಿರುಗಿದ. ಪ್ರವಾಸದ ಅನುಭವಗಳು, ನೋಡಿದ ಸ್ಥಳಗಳು ಅವನ ಮೇಲೆ ಪರಿಣಾಮ ಬೀರಿದುವು; ಆತ ತನ್ನದೇ ಆದ ಶೈಲಿ ಬೆಳೆಸಿಕೊಳ್ಳಲು ಅವು ಕಾರಣವಾದುವು. ತೀವ್ರ ಬಣ್ಣಗಳು, ಕಪ್ಪು ಹೊರಗೆರೆಗಳು ಅವನ ಚಿತ್ರಕ್ಕೆ ಸರಳತೆ, ಚಿತ್ತಾಕರ್ಷತೆ ತಂದುಕೊಟ್ಟುವು. 1891ರಲ್ಲಿ ಚಿತ್ರಗಳನ್ನು ಮಾರಿ, ಹಣ ಕೂಡಿಸಿಕೊಂಡು

ಫ್ರೆಂಚ್ ಪಾಲಿನೇಷಿಯದ ತಾಹಿತಿ ದ್ವೀಪಕ್ಕೆ ಪ್ರಯಾಣ ಬೆಳೆಸಿದ. 1888ರಲ್ಲಿಯೇ ಆತನಿಗೆ ಸಮಷ್ಟಿಪರಿಣಾಮ ಪದ್ಧತಿಯಲ್ಲಿ ಅತೃಪ್ತಿ ತೋರಿತ್ತು. ಆತ ಸಮಷ್ಟಿಪರಿಣಾಮೋತ್ತರ ಪದ್ಧತಿಯ ಆದ್ಯಪ್ರವರ್ತಕನಾದ. ತಾಹಿತಿಯಲ್ಲಿ ಅನೇಕ ಅಸಾಧಾರಣ ಚಿತ್ರಗಳು ಆತನ ಕುಂಚದಿಂದ ಮೂಡಿಬಂದುವು. ಆತ ಪ್ಯಾರಿಸಿಗೆ ಹಿಂದಿರುಗಿದ ಮೇಲೆ ಆತನ ಚಿತ್ರಗಳ ಪ್ರದರ್ಶನ ನಡೆಯಿತು. 'ಮಕ್ಕಳನ್ನು ನಗಿಸಬೇಕೆಂದಿದ್ದರೆ ಗೋಗಿನನ ಪ್ರದರ್ಶನಕ್ಕೆ ಅವರನ್ನು ಕರೆದುಕೊಂಡು ಹೋಗಿ' ಎಂದು ಒಬ್ಬ ವಿಮರ್ಶಕ ಲೇವಡಿಮಾಡಿದ. ನಿರಾಶನಾದ ಗೋಗಿನ್ ಮತ್ತೆ ತಾಹಿತಿಗೆ ಹೊರಟ. ಬಡತನ, ಕಾಹಿಲೆಗಳಿಂದ ಜರ್ಜರಿತನಾದ ಗೋಗಿನ್, ಚಿತ್ರಕಲಾ ಜಗತ್ತಿಗೆ ತಾನಿತ್ತ ಮಹತ್ತರ ಕೊಡುಗೆಯ ಅರಿವಿಲ್ಲದೆಯೇ 1903ರಲ್ಲಿ ನಿಧನನಾದ.

'ಹಳದಿ ಕ್ರಿಸ್ತ', 'ಆರ್ಲಿಸ್‌ನ ಆಸ್ಪತ್ರೆಯ ತೋಟ', 'ತಾಹಿತಿಯ ಸ್ತ್ರೀ' ಆತನ ಪ್ರಸಿದ್ಧ ಚಿತ್ರಗಳು. ಸರಳ ರಚನೆ, ವರ್ಣಸಂಯೋಜನೆ, ಬಣ್ಣಗಳ ಧಾರಾಳ ಉಪಯೋಗ ಆತನ ಚಿತ್ರಕ್ಕೆ ವಿಶಿಷ್ಟತೆ ತಂದುಕೊಟ್ಟಿವೆ. ಆತ ರಸ್ತೆಯನ್ನು ಕೆಂಪಾಗಿಯೂ ಮರದ ಬೊಡ್ಡೆಯನ್ನು ಹಸಿರಾಗಿಯೂ ಎಲೆಗಳನ್ನು ಹಳದಿಯಾಗಿಯೂ ಚಿತ್ರಿಸಿದರೆ ಅವು ನಿಜವಾಗಿಯೂ ಹೀಗೆಯೇ ಇರುವುವೇನೋ ಎಂಬ ಭಾವನೆ ಉಂಟಾಗುತ್ತದೆ.

"ಕಲೆಗೆ ದೈವಿಕ ಮೂಲವಿದೆಯೆಂದು ನಂಬುತ್ತೇನೆ. ಸ್ವರ್ಗದ ಬೆಳಕು ಸೋಂಕಿದ ಎಲ್ಲ ಮನುಷ್ಯರ ಹೃದಯಗಳಲ್ಲೂ ಕಲೆ ಇರುತ್ತದೆ. ಒಮ್ಮೆ ಉತ್ಕೃಷ್ಟ ಕಲೆಯ ಸವಿ ಉಂಡವರು ಯಾವ ಕಾಲಕ್ಕೂ ಜೀವನವನ್ನು ಕಲೆಗೆ ಸಮರ್ಪಿಸುತ್ತಾರೆ"—ಎಂದು ಗೋಗಿನ್ ಬರೆದಿದ್ದಾನೆ.

## ಗೋಯಾ

ಔಚಿತ್ಯಜ್ಞಾನವಿಲ್ಲದ, ಜಗಳಗಂಟಿ, ಹಳ್ಳಿಹುಡುಗ ಗೋಯಾ ಮಹೋನ್ನತ ಚಿತ್ರಕಾರನಾದ. ಅತಿ ದೀನ ಮನೆತನದಲ್ಲಿ ಹುಟ್ಟಿದ ಇವನು ಅಸಾಧಾರಣ ಪ್ರತಿಭಾವಂತನಾಗಿ ಕಲೆಯ ಲೋಕದಲ್ಲಿ ಉನ್ನತ ಮಟ್ಟಕ್ಕೇರಿದ.

ಸ್ಪೇನಿನ ಸರಗೋಸಾ ನಗರದ ಸಮೀಪದ ಹಳ್ಳಿಯೊಂದರಲ್ಲಿ 1746ನೆಯ ಮಾರ್ಚ್ 30ರಂದು ಫ್ರಾನ್ಸಿಸ್ಕೋ ಗೋಯಾನ ಜನನ. ತಂದೆ ಕೃಷಿಕ.

14 ವರ್ಷದ ಗೋಯಾ ಧಾನ್ಯ ತುಂಬಲು ಒಂದು ಕ್ರೈಸ್ತಮಠಕ್ಕೆ ಬಂದಿದ್ದ. ಆಗ ಇದ್ದಲು ತೆಗೆದುಕೊಂಡು ಸುಣ್ಣದ ಗೋಡೆಯ ಮೇಲೆ ಹಂದಿಯ ಚಿತ್ರ ರಚಿಸಿದ. ಆ ಚಿತ್ರ ನೋಡಿದ ಸನ್ಯಾಸಿ ಸಾಲ್ವಡಾರ್ ಅದರಿಂದ ಆಕರ್ಷಿತನಾಗಿ, "ಯಾರ ಬಳಿ ಚಿತ್ರ ಬರೆಯುವುದನ್ನು ಕಲಿತೆ?" ಎಂದು ಗೋಯಾನನ್ನು ವಿಚಾರಿಸಿದ. "ಯಾರ ಹತ್ತಿರವೂ ಕಲಿತಿಲ್ಲ. ಬರೆಯುವ ಆಸೆ ಬಲವಾದಾಗ ಬರೀತೇನೆ" ಎಂದ ಬಾಲಕ. ಸರಗೋಸದಲ್ಲಿ ಚಿತ್ರಕಲೆ ಅಭ್ಯಾಸಮಾಡಲು ಆ ಧರ್ಮಗುರು ಗೋಯಾಗೆ ನೆರವಾದ.

ಕೆಲ ವರ್ಷಗಳಲ್ಲೇ ಬೀದಿ ಜಗಳದ ಪರಿಣಾಮವಾಗಿ ಗೋಯಾ ತಲೆ ಮರೆಸಿಕೊಳ್ಳುವುದು ಅನಿವಾರ್ಯವಾಯಿತು. ಅವನು ಸ್ಪೇನಿನ ರಾಜಧಾನಿ ಮ್ಯಾಡ್ರಿಡ್‌ಗೆ ಓಡಿಹೋದ. 19 ವರ್ಷವಾದಾಗ ಗೋಯಾ ಗೂಳಿಕಾಳಗದವರೊಡನೆ ಸೇರಿಕೊಂಡು ರೋಮಿಗೆ ಬಂದ. ಕೈಯಲ್ಲಿ ಹಣವಿರಲಿಲ್ಲ. ಚಿತ್ರಕಲೆ ಕಲಿಯುವ ಆಸೆಯೇನೋ ಅದಮ್ಯವಾಗಿತ್ತು. ಇಟಲಿಯ ಚಿತ್ರಕಲೆಯ ಬಗ್ಗೆ ಅವನಿಗೆ ಗೌರವವಿರಲಿಲ್ಲ. ಹಣ ಸಂಪಾದನೆಗಾಗಿ ಚಿತ್ರ ರಚನೆ ಕೈಗೊಂಡ. ಇಟಲಿಯ ಮೆರವಣಿಗೆಗಳು, ವಿಹಾರೋತ್ಸವ, ವೇಶ್ಯೆಯರು, ಅಸಂಸ್ಕೃತ ಜನತೆ ಎಲ್ಲವೂ ಗೋಯಾಗೆ ವಸ್ತುಗಳಾದುವು. ಇಲ್ಲಿ ಎರಡು ವರ್ಷಗಳಿದ್ದು ಸ್ಪೇನಿಗೆ ಹಿಂದಿರುಗಿದ. ಗೋಯಾಗೆ ಮಾದರಿ ಚಿತ್ರಗಳನ್ನು ಬರೆಯುವ ಕೆಲಸ ಸಿಕ್ಕಿತು. ರಾಜಕುಮಾರನ ಅರಮನೆಯ ಅಲಂಕರಣಕ್ಕಾಗಿ ಜವನಿಕೆಗಳ ಮೇಲೆ ನೇಯಲು 20 ಮಾದರಿ ಚಿತ್ರಗಳನ್ನು ಬರೆದುಕೊಟ್ಟ. ಸ್ಪೇನಿನ ಹಳ್ಳಿ, ಹೊಲ, ರಸ್ತೆಗಳಲ್ಲಿ ತಾನು ಕಂಡ ಜೀವನವೇ ಆ ಚಿತ್ರಗಳ ವಸ್ತುಗಳಾಗಿದ್ದುವು. ಈ ಚಿತ್ರಗಳು ರಾಜಕುಮಾರನ ಮೆಚ್ಚುಗೆ ಪಡೆದುವು.



ಉದ್ವಿಗ್ನತೆ : ಗೋಯಾ

1786ರಲ್ಲಿ ಗೋಯಾ ಆಸ್ಥಾನದ ಚಿತ್ರಕಾರನಾಗಿ ನೇಮಿಸಲ್ಪಟ್ಟ. ಅವನು ಆಸ್ಥಾನ ಚಿತ್ರಕಾರನಾಗಿದ್ದ ಕಾಲಾವಧಿಯಲ್ಲಿ ಸ್ಪೇನಿನ ನಾಲ್ವರು ರಾಜರು, ಅವರ ಸಂಸಾರದವರು ಹಾಗೂ ಅನೇಕ ಶ್ರೀಮಂತರನ್ನು ಗೋಯಾ ಚಿತ್ರಿಸಿದ.

ಗೋಯಾ ಕುಂಚಹಿಡಿದರೆ ಬೇಗ ಬೇಗ ಕೆಲಸ ಮಾಡುತ್ತಿದ್ದ. ತಾನು ಬರೆಯಬೇಕಾಗಿದ್ದ ವ್ಯಕ್ತಿಯ ಗುಣಲಕ್ಷಣಗಳನ್ನು ಚೆನ್ನಾಗಿ ಲಕ್ಷ್ಯಿಸಿಯೇ ಚಿತ್ರರಚನೆ ಮಾಡುತ್ತಿದ್ದ. ಆದ್ದರಿಂದ ಅವನ ವ್ಯಕ್ತಿಚಿತ್ರಗಳು ಬಹಳ ಸ್ವಾಭಾವಿಕವಾಗಿ ಮೂಡಿಬರುತ್ತಿದ್ದುವು. ಗೋಯಾನ ಎರಡು 'ಮಾಜಾ' ಚಿತ್ರಗಳು ಪ್ರಸಿದ್ಧವಾಗಿವೆ. 'ಮಾಜಾ' ಎಂಬ ಪದಕ್ಕೆ ಉಲ್ಲಸಿತ ಹೆಂಗಸು, ಬೆಲೆವೆಣ್ಣು, ಶ್ರೀಮಂತವರ್ಗದ ಸ್ತ್ರೀ—ಈ ಮೂರು ಅರ್ಥಗಳೂ ಇವೆ. ಈ ಎರಡು ಚಿತ್ರಗಳಲ್ಲಿ ಒಂದು ನಗ್ನ.

1792ರಲ್ಲಿ ಬಂದ ಕಾಯಿಲೆಯಿಂದ ಗೋಯಾ ಕಿವುಡನಾದ. ಅನಂತರ ಅವನ ಸ್ವಭಾವ ಕಟುವಾಯಿತು.

ಸುಮಾರು 30ನೆಯ ವಯಸ್ಸಿನಲ್ಲಿ ಗೋಯಾ ಪ್ರಸಿದ್ಧ ಚಿತ್ರಕಾರನೊಬ್ಬನ ತಂಗಿ ಜೋಸೆಫಾ ಬೇಯೂಳನ್ನು ವಿವಾಹವಾದ. ಆಕೆಗೆ ಇಪ್ಪತ್ತು ಮಕ್ಕಳು ಹುಟ್ಟಿದರು. ಒಂದು ಮಗು ಮಾತ್ರ ಬದುಕಿತು. 1812ರಲ್ಲಿ ಅವನ ಪತ್ನಿ ಮರಣಹೊಂದಿದಳು.

ಫ್ರೆಂಚರು ಸ್ಪೇನನ್ನು ಮುತ್ತಿದಾಗ ಯುದ್ಧದ ದುಷ್ಪರಿಣಾಮಗಳನ್ನು ಗೋಯಾ ಕಣ್ಣಾರೆ ಕಂಡ 'ಯುದ್ಧದ ವಿಪತ್ತುಗಳು' ಎಂಬ ಚಿತ್ರಗಳ ಮಾಲೆಯನ್ನು ರಚಿಸಿದ. ಸತ್ತುಬಿದ್ದಿರುವ ಜನ, ಕೊಲ್ಲುವುದಾದರೆ ಬೇಗ ಕೊಲ್ಲು ಎಂದು ಬಂದೂಕಿನೆದುರು ಎದೆಸೆಟೆದು ನಿಂತಿರುವವರು, ಮುಖ ಮುಚ್ಚಿಕೊಂಡಿರುವವರು, ಹೆದರಿ ನಡುಗುತ್ತಿರುವವರು —ಹೀಗೆ ನಾನಾ ಬಗೆಯ ವ್ಯಕ್ತಿಗಳು ಇದರಲ್ಲಿ ಚಿತ್ರಿತರಾಗಿದ್ದಾರೆ.

ರಾಜರ ಆಸ್ಥಾನ ಜೀವನದ ಅಣಕವಿರುವ ಕೆಲವು ಕೆತ್ತನೆ ಚಿತ್ರಗಳನ್ನೂ ಗೋಯಾ ರೂಪಿಸಿದ್ದಾನೆ. ವಯಸ್ಸು ಹೆಚ್ಚಿ, ಆರೋಗ್ಯ ಕೆಟ್ಟು ಗೋಯಾ ಫ್ರಾನ್ಸಿಗೆ ಬಂದುಬಿಟ್ಟ. ಅಲ್ಲಿ ಸ್ನೇಹಿತರ ವ್ಯಕ್ತಿಚಿತ್ರಗಳು, 'ಹಾಲಿನವಳು', 'ನೀರು ಹೊರುವವ', ಮುಂತಾದ ಕೆಲವು ಪ್ರಖ್ಯಾತ ಚಿತ್ರಗಳನ್ನು ಬರೆದ. 1828ರ ಏಪ್ರಿಲ್ 16ರಂದು ಗೋಯಾ ಮೃತನಾದ.

ಗೋಯಾನ ಸುಮಾರು 700 ಚಿತ್ರಗಳು, 800 ರೇಖಾಚಿತ್ರಗಳು ಹಾಗೂ 290 ಕೊರೆದ ಚಿತ್ರಗಳು ಮತ್ತು ಕಲ್ಲಚ್ಚಿನ ಚಿತ್ರಗಳು ಈಗ ಉಳಿದಿವೆ.

ಗೋಯಾನ ಚಿತ್ರಕಲೆಗೆ ಸ್ಪೇನಿನಲ್ಲಿ ಯಾವ ಗಣನೀಯ ಅನುಯಾಯಿಗಳೂ ಇರಲಿಲ್ಲ. 19ನೆಯ ಶತಮಾನದ ಫ್ರಾನ್ಸಿನ ಚಿತ್ರಕಲೆ ಗೋಯಾನಿಂದ ಪ್ರಭಾವಿತವಾಯಿತು.

## ಗೋಲ್ಡ್‌ಸ್ಮಿತ್

ಹಲವು ಕ್ಷೇತ್ರಗಳನ್ನು ಬಳಸಿ ಸಾಹಿತ್ಯಕ್ಕೆ ಬಂದ ಆಂಗ್ಲ ಬರೆಹಗಾರ ಆಲಿವರ್ ಗೋಲ್ಡ್‌ಸ್ಮಿತ್.

ಅವನು ಪ್ರಬಂಧ, ಕವಿತೆ, ಕಾದಂಬರಿ, ನಾಟಕ, ಚರಿತ್ರೆಗಳನ್ನು ಬರೆದಿದ್ದಾನೆ. ಈ ಎಲ್ಲ ಕ್ಷೇತ್ರಗಳಲ್ಲೂ ಅವನ ಕೃತಿಗಳು ಅಸಾಮಾನ್ಯವೆನಿಸಿವೆ.

ಆತ ಬರೆದದ್ದು ಒಂದೇ ಕಾದಂಬರಿ 'ವೇಕ್‌ಫೀಲ್ಡಿನ ಪಾದ್ರಿ'. 1766ರಲ್ಲಿ ಪ್ರಕಟವಾದ ಈ ಕೃತಿ ಸಂಸಾರ ಜೀವನದ ಸಿಹಿಕಹಿಗಳನ್ನು ಚಿತ್ರಿಸಿದೆ. ಮನೆಯ ಯಜಮಾನ ಪಾದ್ರಿ. ಅವನಿಗೆ ಇಬ್ಬರು ವಿವಾಹಯೋಗ್ಯ ಹೆಣ್ಣು ಮಕ್ಕಳು; ನಾಲ್ಕುಜನ ಗಂಡುಮಕ್ಕಳು. ಮಕ್ಕಳ ತಾಯಿಗೆ ಮದುವೆಗಳನ್ನು ಕುದುರಿಸುವ ಚಪಲ. ಅವರ ದುರದೃಷ್ಟಗಳಿಗೆಲ್ಲ ಅವರ ಅವಿವೇಕವೇ ಕಾರಣ. ಹೊಗಳಿಕೆಗೆ ಮಾರುಹೋಗುವುದು, ಸುಲಭವಾಗಿ ಇನ್ನೊಬ್ಬರು ಬಯಸಿದಂತೆ ನಡೆದುಕೊಳ್ಳುವುದು ಅವರೆಲ್ಲರ ಸ್ವಭಾವ. ಕಾದಂಬರಿಯ ಉದ್ದಕ್ಕೂ ಇವರು ನಗೆಯ ತೆರೆಗಳನ್ನೆಬ್ಬಿಸುತ್ತಾರೆ. ಅವರು ಅನುಭವಿಸುವ ಕಷ್ಟ, ಕಾರ್ಪಣ್ಯಗಳು ಮರುಕ ಹುಟ್ಟಿಸುವಂಥವು.

ಆಂಗ್ಲ ಕಾದಂಬರಿಗಳಲ್ಲಿ 'ವೇಕ್‌ಫೀಲ್ಡಿನ ಪಾದ್ರಿ'ಗೆ ಉನ್ನತ ಸ್ಥಾನವಿದೆ.

'ನಿರ್ಜನವಾದ ಹಳ್ಳಿ' ಗೋಲ್ಡ್‌ಸ್ಮಿತ್‌ನ ಶ್ರೇಷ್ಠ ಕವಿತೆ; 1770ರಲ್ಲಿ ಪ್ರಕಟವಾಯಿತು. ಇದರಲ್ಲಿ ವ್ಯಕ್ತಿಗಳ ನಿರೂಪಣೆಯೂ ಭೂದೃಶ್ಯಗಳ ಚಿತ್ರಣವೂ ಸೊಗಸಾಗಿದೆ. ಹಳ್ಳಿಯ ಉಪಾಧ್ಯಾಯನ ಅರಮನೆ–ಅವನ ಶಾಲೆ. ಕಠಿಣವಾಗಿ ವರ್ತಿಸಿದರೂ ಅವನು ದಯಾಮಯ. ಆತನ ತಿಳಿವಳಿಕೆಯ ಬಗೆಗೆ ಹಳ್ಳಿಯವರಿಗೆ ಅಭಿಮಾನ. ಆ ಪುಟ್ಟ ತಲೆಯಲ್ಲಿ ಎಷ್ಟೆಲ್ಲ ವಿಚಾರಗಳನ್ನು ತುಂಬಿಕೊಂಡಿದ್ದಾನೆಂದು ಅವರಿಗೆ ಆಶ್ಚರ್ಯ. ಅನುಕಂಪ, ಮಾಧುರ್ಯ, ಮಾನವೀಯತೆ, ಲಾಲಿತ್ಯ ಕವಿತೆಯುದ್ದಕ್ಕೂ ಹರಿದುಬಂದಿದೆ.

ಗೋಲ್ಡ್‌ಸ್ಮಿತ್ ನಾಟಕಗಳನ್ನೂ ಬರೆದ. 1768ರಲ್ಲಿ ಬರೆದ 'ಸುಸ್ವಭಾವದ ಮನುಷ್ಯ' ಜನಪ್ರಿಯವಾಗಲಿಲ್ಲ. 'ಸೋತು ಗೆದ್ದವಳು' ಹಾಸ್ಯದ ಹೊನಲನ್ನು ಹರಿಸುವ ನಾಟಕ. ಇದು 1773ರಲ್ಲಿ ಪ್ರಕಟವಾಯಿತು. ಸಹಜವಾದ ಕಥಾನಕ, ಜೀವನದಲ್ಲಿ ಕಂಡು ಬರುವಂಥ ಪಾತ್ರಗಳು, ಪಾತ್ರಗಳ ವ್ಯಕ್ತಿತ್ವವನ್ನು ಎತ್ತಿಹಿಡಿಯುವ ಹಾಗೂ ಕಥೆಯ ಬೆಳವಣಿಗೆಗೂ ಸಹಾಯಕವಾಗಿರುವ ಸಂಭಾಷಣೆ–ಇವು ನಾಟಕವನ್ನು ಯಶಸ್ಸಿನ ಶಿಖರಕ್ಕೇರಿಸಿವೆ. ಅತಿ ಮುದ್ದಿನ ಟೋನಿ ಲಂಪ್‌ಕಿನ್ ತುಂಟ; ಹಾರ್ಡ್‌ಕ್ಯಾಸಲ್‌ರ ಮನೆ ಹುಡುಕಿಕೊಂಡು ಬಂದ ಆಗಂತುಕರಿಬ್ಬರಿಗೆ ಅವರ ಮನೆಯನ್ನೇ ತಂಗುದಾಣವೆಂದು ಹೇಳಿ ಅಲ್ಲಿ ಇಳಿದುಕೊಳ್ಳಲು ಕಳುಹಿಸುತ್ತಾನೆ. ಆಗಂತುಕರು ಹಾರ್ಡ್‌ಕ್ಯಾಸಲರನ್ನು ತಂಗುದಾಣದ ಮಾಲಿಕನೆಂದೂ ಅವರ ಮಗಳನ್ನು ಸೇವಕಿಯೆಂದೂ ಭಾವಿಸಿಕೊಂಡು ಅದಕ್ಕೆ ತಕ್ಕಂತೆ ನಡೆದುಕೊಳ್ಳುತ್ತಾರೆ. ಇದರಿಂದ ಆಗುವ ಗೊಂದಲ ಅಷ್ಟಿಷ್ಟಲ್ಲ.



ಮುಟ್ಟಿದ್ದು ಚಂದ: ಗೋಲ್ಡ್‌ಸ್ಮಿತ್

ಗೋಲ್ಡ್‌ಸ್ಮಿತ್‌ನ ಜನನ 1728ರ ನವೆಂಬರ್ 10ರಂದು, ಐರ್‌ಲೆಂಡಿನಲ್ಲಿ. ತಂದೆ ಪಾದ್ರಿ. ಬಾಲಕನಾಗಿದ್ದಾಗ ಗೋಲ್ಡ್‌ಸ್ಮಿತ್‌ನ ರೀತಿ ನಿರಾಶಾಜನಕವಾಗಿತ್ತು. ಓದಿನಲ್ಲಿ ಹಿಂದಿದ್ದ; ಅವಿವೇಕಗಳನ್ನೂ ಮಾಡುತ್ತಿದ್ದ. ಸಿಡುಬಿನ ಕಲೆಗಳು ಅವನ ಮುಖವನ್ನು ವಿಕಾರಗೊಳಿಸಿದ್ದುವು. ಟ್ರಿನಿಟಿ ಕಾಲೇಜಿನಲ್ಲಿ ಬಿ.ಎ. ಪದವಿ ಪಡೆದುಕೊಂಡ. ಪಾದ್ರಿಯಾಗಲು ಹೋದ; ಸಂದರ್ಶನದಲ್ಲಿ "ಅನರ್ಹ", ಎಂದರು. ಉದ್ಯೋಗ ದೊರಕಿಸಲು ಪ್ರಯತ್ನಿಸಿ ವಿಫಲನಾದ. ವೈದ್ಯನಾಗಬೇಕೆಂದು ಎಡಿನ್‌ಬರೋಗೆ ಹೋದ. ಎರಡು ವರ್ಷ ಕಲಿತ ಬಳಿಕ, ಹಾಲೆಂಡಿನ ಲೀಡನ್ ವಿಶ್ವವಿದ್ಯಾನಿಲಯ ಪ್ರವೇಶಿಸಿದ. 26 ವರ್ಷಗಳ ವಯಸ್ಸಿನ ಗೋಲ್ಡ್‌ಸ್ಮಿತ್ ವೈದ್ಯಕೀಯ ಪದವಿ ಪಡೆಯದೆ ಅಲ್ಲಿಂದ ಹೊರಬಿದ್ದ. ಮೂರು ವರ್ಷಗಳಕಾಲ ಯೂರೋಪಿನಲ್ಲಿ ಅಲೆದಾಡಿದ, ಕೊಳಲು ಬಾರಿಸಿ ಜೀವನ ನಡೆಸುತ್ತ 1756ರಲ್ಲಿ ಇಂಗ್ಲೆಂಡಿಗೆ ವಾಪಸು ಬಂದ. ನಟನಾಗಿ, ಔಷಧ ವ್ಯಾಪಾರಿಯ ಸಹಾಯಕನಾಗಿ, ಶಾಲೆಯಲ್ಲಿ ಶಿಕ್ಷಕನಾಗಿ, ಭಿಕ್ಷೆ ಬೇಡಿ ಜೀವನ ಸಾಗಿಸಲು ಯತ್ನಿಸಿದ.

ಎಲ್ಲ ಪ್ರಯತ್ನಗಳೂ ವಿಫಲವಾದಾಗ ಸಾಹಿತ್ಯರಂಗಕ್ಕೆ ಧುಮುಕಿದ. ಪತ್ರಿಕೆಗಳಿಗೆ ಬರೆಯುವುದರಿಂದ ಆರಂಭವಾಯಿತು ಅವನ ಸಾಹಿತ್ಯ ವ್ಯವಸಾಯ. 1762ರಲ್ಲಿ ಪ್ರಕಟವಾದ 'ಪ್ರಪಂಚದ ಪ್ರಜೆ' ಎಂಬ ಪ್ರಬಂಧ ಸಂಕಲನ ಅವನಿಗೆ ಮನ್ನಣೆ ಗಳಿಸಿಕೊಟ್ಟಿತು. ಅವನು 'ವಾಲ್ಟೇರನ ಜೀವನ'

ಮತ್ತಿತರ ಜೀವನಚರಿತ್ರೆಗಳನ್ನೂ ಬರೆದ. ಸುಪ್ರಸಿದ್ಧ ಪಂಡಿತ, ಕವಿ ಸ್ಯಾಮ್ಯುಯಲ್ ಜಾನ್‌ಸನನ ಮಿತ್ರಮಂಡಲಿಯಲ್ಲಿ ಗೋಲ್ಡ್‌ಸ್ಮಿತ್‌ನಿಗೂ ಸ್ಥಾನ ದೊರೆಯಿತು. ಮನೆ ಬಾಡಿಗೆ ಕೊಡಲು ಕೂಡ ಸಾಧ್ಯವಿಲ್ಲದ ಸಂದರ್ಭದಲ್ಲಿ ಗೋಲ್ಡ್‌ಸ್ಮಿತ್ ಸಿಕ್ಕಿಬಿದ್ದಿದ್ದಾಗ 'ವೇಕ್‌ಫೀಲ್ಡಿನ ಪಾದ್ರಿ' ಕಾದಂಬರಿಯನ್ನು 60 ಪೌಂಡುಗಳಿಗೆ ಮಾರಿ ಜಾನ್‌ಸನ್ ಹಣ ಒದಗಿಸಿ ಕೊಟ್ಟ.

ಸ್ವಭಾವತಃ ಗೋಲ್ಡ್‌ಸ್ಮಿತ್ ತುಂಬ ಉದಾರಿ. ತನ್ನ ಅವಶ್ಯತೆಗಳನ್ನೂ ಲಕ್ಷ್ಯಕ್ಕೆ ತಂದುಕೊಳ್ಳದೆ ಕೈಯಲ್ಲಿದ್ದುದನ್ನು ಅವರಿವರಿಗೆ ದಾನಮಾಡಿ ಬಿಡುತ್ತಿದ್ದ. ಜೊತೆಗೆ ಜೂಜಾಡುವ ಚಟ. ಹೀಗಾಗಿ ಕಷ್ಟಕ್ಕೆ ಸಿಕ್ಕಿಬೀಳುತ್ತಿದ್ದ.

ಸುಸ್ವಭಾವದ ಗೋಲ್ಡ್‌ಸ್ಮಿತ್ ಗೆಳೆಯರಿಗೆ ಆತ್ಮೀಯನಾಗಿದ್ದ. "ಅವನ ದೌರ್ಬಲ್ಯಗಳನ್ನು ಮರೆತುಬಿಡಿ; ಅವನೊಬ್ಬ ಮಹಾನ್ ವ್ಯಕ್ತಿ", ಎಂದಿದ್ದಾನೆ ಜಾನ್‌ಸನ್. ಗೋಲ್ಡ್‌ಸ್ಮಿತ್ ಉತ್ತಮ ಲೇಖಕನೆಂದು ಖ್ಯಾತನಾಗಿದ್ದರೂ ಮಾತುಗಾರಿಕೆಯಲ್ಲಿ ಅಷ್ಟೇನೂ ಜಾಣನಲ್ಲ. ಇದರಿಂದಾಗಿ ಹತ್ತು ಮಂದಿ ಮಿತ್ರರ ನಡುವೆ ಸಲ್ಲಾಪ ನಡೆಯುತ್ತಿದ್ದಾಗ ಗೋಲ್ಡ್‌ಸ್ಮಿತ್ ಅನೇಕಾವರ್ತಿ ನಗೆಪಾಟಲಾಗುತ್ತಿದ್ದ. ಗೋಲ್ಡ್‌ಸ್ಮಿತ್ 1774ನೆಯ ಏಪ್ರಿಲ್ 14ರಂದು ತನ್ನ 45ನೆಯ ವಯಸ್ಸಿನಲ್ಲಿ ನಿಧನನಾದ.

ಲಂಡನಿನ ವೆಸ್ಟ್ ಮಿನ್‌ಸ್ಟರ್ ಅಬೀಯಲ್ಲಿರುವ ಅವನ ಸ್ಮಾರಕ ಫಲಕದ ಮೇಲಣ ಚರಮವಾಕ್ಯ ಜಾನ್‌ಸನನೇ ರಚಿಸಿದ್ದು. ಲ್ಯಾಟಿನ್ ಭಾಷೆಯಲ್ಲಿರುವ ಆ ಚರಮವಾಕ್ಯದ ಅರ್ಥ: "ಅವನು ಕೈಯಾಡಿಸದ ಸಾಹಿತ್ಯ ಪ್ರಕಾರವೇ ಇಲ್ಲ: ತಾನು ಮುಟ್ಟಿದ್ದನ್ನೆಲ್ಲ ಅಂದಗೊಳಿಸಿದ್ದಾನೆ".

## ಗೋವಿಂದ ಪೈ

ದಕ್ಷಿಣ ಕನ್ನಡವನ್ನು ಸಂದರ್ಶಿಸಿದ ಸಾಹಿತಿಯಾಗಲೀ, ಸಂಶೋಧಕನಾಗಲೀ ಮಂಜೇಶ್ವರಕ್ಕೆ ಹೋಗದೆ ಹಿಂದಿರುಗುತ್ತಿರಲಿಲ್ಲ. ಮಂಗಳೂರಿಗೆ ಹದಿನಾರು ಕಿಲೊ ಮೀಟರ್ ದೂರದಲ್ಲಿರುವ ಮಂಜೇಶ್ವರ ಸಾಹಿತಿಗಳ, ಸಂಶೋಧಕರ ಯಾತ್ರಾಸ್ಥಳವಾಗಿ ಪರಿಣಮಿಸಿದ್ದು ಒಬ್ಬ ವ್ಯಕ್ತಿಯಿಂದ. ಅವರೇ ಗೋವಿಂದ ಪೈ.

ಅವರ ಹೆಸರಿಗೆ ಸೇರಿದ ಆದ್ಯಕ್ಷರ 'ಎಂ' ಎಂಬುದರ ಪೂರ್ಣರೂಪ ಮಾತ್ರ ಮಂಜೇಶ್ವರವಲ್ಲ, ಮಂಗಳೂರು.

ಗೋವಿಂದ ಪೈ ಅವರು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಹೆಸರಾದ ಬಾಪ್ಟೈ ಮನೆತನಕ್ಕೆ ಸೇರಿದವರು. ಜನನ 1883ನೆಯ ಮಾರ್ಚ್ 23ರಂದು. ಮಂಗಳೂರು, ಮದರಾಸುಗಳಲ್ಲಿ ವ್ಯಾಸಂಗಮಾಡಿ ಬಿ. ಎ. ಪರೀಕ್ಷೆಯಲ್ಲಿ ಇಂಗ್ಲಿಷಿನಲ್ಲಿ ಪ್ರಥಮಸ್ಥಾನ ಗಳಿಸಿದರು. ಗೋವಿಂದ ಪೈ ಅವರು ಸಂಸ್ಕೃತ, ಪಾಳಿ, ಪ್ರಾಕೃತ, ಮರಾಠಿ, ಕೊಂಕಣಿ, ಕನ್ನಡ, ತಮಿಳು, ಮಲೆಯಾಳ, ತುಳು, ಬಂಗಾಳಿ, ಜರ್ಮನ್, ಗ್ರೀಕ್, ಲ್ಯಾಟಿನ್ ಮುಂತಾದ ಹಲವು ಭಾಷೆಗಳನ್ನು ಅಭ್ಯಾಸ ಮಾಡಿದರು.

ಗೋವಿಂದ ಪೈಗಳದು ತುಂಬ ಕ್ರಮಬದ್ಧ ಜೀವನ. ದಿನ ಪತ್ರಿಕೆಯನ್ನು ಓದುವಾಗಲೂ ಅಚ್ಚಿನ ತಪ್ಪಿದ್ದಲ್ಲಿ, ವ್ಯಾಕರಣ ದೋಷವಿದ್ದಲ್ಲಿ ಪದ ಪ್ರಯೋಗ ಅಸಮರ್ಪಕವಾದಲ್ಲಿ, ಪೆನ್ನಿನಿಂದ ಗುರುತು ಮಾಡುತ್ತಿದ್ದರು. ಯಾವುದಾದರೂ ಅಪೂರ್ವವೆನಿಸಿದ ವಿಷಯ, ಘಟನೆ ಮನಸೆಳೆಯಿತೆಂದರೆ ಅವನ್ನು ಗುರುತಿಸಿ ಜೋಪಾನವಾಗಿ ತೆಗೆದಿಡುತ್ತಿದ್ದರು. ಸುವ್ಯವಸ್ಥಿತವಾದ ಪತ್ರವ್ಯವಹಾರ ಅವರ ವೈಶಿಷ್ಟ್ಯಗಳಲ್ಲಿ ಒಂದು ಅವರಿಗೆ ಪತ್ರ ಬರೆದ ವ್ಯಕ್ತಿ ಪರಿಚಿತನಾಗಲೀ, ಅಪರಿಚಿತನಾಗಲೀ ಪ್ರಮುಖ ವ್ಯಕ್ತಿಯಾಗಲೀ ಸಾಮಾನ್ಯನಾಗಲೀ, ತಕ್ಷಣವೇ ಉತ್ತರಿಸುವುದು ಅವರ ಸ್ವಭಾವ. ಅವರು ಬರೆಯುತ್ತಿದ್ದ ಮಸಿಯ ಬಣ್ಣ ಯಾವಾಗಲೂ ನೇರಳೆ.



"ಗೌರವ ಬೇಡ"–ಗೋವಿಂದ ಪೈ

ಗೋವಿಂದ ಪೈಗಳ ಪ್ರತಿಭೆ ಬಹುಮುಖವಾದದ್ದು. ಅವರು ಅಪ್ರತಿಮ ಸಂಶೋಧಕರೆಂದು ಹೆಸರಾಗಿದ್ದರೂ ಅವರು ಉತ್ತಮವಾದ ಕವಿತೆ ನಾಟಕಾದಿಗಳನ್ನೂ ಬರೆದಿದ್ದಾರೆ. ಅವರದು ಸೂಕ್ಷ್ಮದೃಷ್ಟಿ; ವಿಮರ್ಶಾತ್ಮಕ ದೃಷ್ಟಿ. ಇತಿಹಾಸ ಸಂಬಂಧದ ಕಾಲನಿರ್ಣಯಗಳಲ್ಲಿ ಅವರು ಅಪ್ರತಿಮರು. ಅನೇಕ ಆಧಾರಾಂಶಗಳನ್ನು ಹುಡುಕಿ ತೆಗೆದು ಅವನ್ನು ಪರೀಕ್ಷಿಸಿ ತಮ್ಮದೇ ಆದ ಸಿದ್ಧಾಂತವನ್ನು ಅತ್ಯಂತ ತರ್ಕಬದ್ಧವಾಗಿ ಪ್ರತಿಪಾದಿಸುತ್ತಿದ್ದರು. 'ನಯನದಿ ಭವಿಷ್ಯಮಂ ತಿವಿವ ಪುರುಷನ ದೃಷ್ಟಿ' ಅವರದಾಗಿತ್ತು. 'ದಿವ್ಯ ಜ್ಞಾನದೇಕಾಂತದಾಡುಂಬೊಲವೋ' ಎಂಬಂತಿದ್ದರು ಅವರು.

ಗೋವಿಂದ ಪೈಗಳ ಸಾಹಿತ್ಯ ಸೇವೆ ಪ್ರಾರಂಭವಾದದ್ದು 1900ರಲ್ಲಿ. ಅವರ ತಮ್ಮನ ಉಪನಯನದ ಸಂಭ್ರಮಕಾಲದಲ್ಲಿ ಮನೆಯ ಹೆಂಗಸರು ಹಾಡುತ್ತಿದ್ದ ಹಳೆಯ ಹಾಡೊಂದು ಅವರ ಸುಪ್ತ ಕಾವ್ಯರಚನಾಶಕ್ತಿಯನ್ನು ಎಚ್ಚರಿಸಿತು. ಮಂಗಳೂರಿನ 'ಸುವಾಸಿನಿ' ಮಾಸಪತ್ರಿಕೆಯನ್ನು ಕುರಿತು ಅವರು ಬರೆದ ಕವನಕ್ಕೆ. ಪತ್ರಿಕೆಯಲ್ಲಿ ಪ್ರಕಟಿಸಿದ ಶ್ರೇಷ್ಠ ಕವನಕ್ಕೆ ನೀಡುವ 5 ರೂ ಬಹುಮಾನ ಲಭಿಸಿತು. 1902–11ರೊಳಗೆ ಅವರು ಪ್ರಾಸಬದ್ಧವೂ ಪ್ರಾಸರಹಿತವೂ ಆದ ಅನೇಕ ಕವನಗಳನ್ನು ಬರೆದರು. 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಅವು ಪ್ರಕಟವಾದುವು. 1911ರಲ್ಲಿ ಅವರು ತುಂಬಾ ದಿಟ್ಟತನದಿಂದ 'ಪ್ರಾಸವನೀಗಲೆ ತೊರೆದು ಬಿಡುವುದು ನಿಶ್ಚಯ' ಎಂದು ನಿರ್ಧರಿಸಿದರು. ರವೀಂದ್ರನಾಥ ಠಾಕೂರರ ಮತ್ತು ಇಕ್ಬಾಲರ ಕವಿತೆಯನ್ನು ಪ್ರಾಸರಹಿತವಾಗಿ ಪದ್ಯರೂಪದಲ್ಲಿ ಅನುವಾದಿಸಿದರು. ಗೋವಿಂದ ಪೈಗಳ ಈ ಸಾಹಸ ಕನ್ನಡ ವಿದ್ವತ್ ಪ್ರಪಂಚದಲ್ಲಿ ಕ್ರಾಂತಿ ಎಬ್ಬಿಸಿತು. ಅವರ ಈ ಪ್ರಯೋಗವನ್ನು ಕುರಿತು ವಿಮರ್ಶೆ, ಟೀಕೆ, ವಾದವಿವಾದಗಳು ಅವ್ಯಾಹತವಾಗಿ ನಡೆದುವು. ಪೈಗಳು ಒಂದಿಷ್ಟೂ ವಿಚಲಿತರಾಗದೆ ತಮ್ಮ ನಿರ್ಧಾರವನ್ನು ಮುಂದುವರಿಸಿದರು. ಅನಂತರ ಇಂಗ್ಲಿಷ್ ಕಾವ್ಯದ 'ಸಾನೆಟ್' ಕವನರೂಪಕ್ಕೆ 'ಚತುರ್ದಶಪದಿ' ಎಂಬ ಹೆಸರುಕೊಟ್ಟು ಅಂಥ ಕವನಗಳನ್ನು ಕನ್ನಡದಲ್ಲಿ ರಚಿಸಿದರು. ಶೆಲ್ಲಿ ಕವಿಯ 'ಓಡ್ ಟು ಸ್ಕೈಲಾರ್ಕ್'

[illegible] ನೆನಪಿಗಾಗಿ 'ಗೊಮ್ಮಟ ಜಿನಸ್ತುತಿ' ಎಂಬ 'ಪ್ರಗಾಥ'ವನ್ನು ರಚಿಸಿದರು. ಶ್ರವಣಬೆಳಗೊಳ, ಕಾರ್ಕಳ, ವೇಣೂರು— ಈ ಮೂರು ಊರುಗಳಲ್ಲಿರುವ ಗೊಮ್ಮಟ ವಿಗ್ರಹಗಳನ್ನು ಕುರಿತ ಪ್ರಗಾಥವದು.

ಗೋವಿಂದ ಪೈ ಅವರ ಕವನ ಸಂಕಲನಗಳು, ನಾಟಕ, ಸಂಶೋಧನಾತ್ಮಕ ಕೃತಿಗಳು ಹಲವು. 'ಗಿಳಿವಿಂಡು', 'ನಂದಾದೀಪ', 'ಗೊಮ್ಮಟಸ್ತುತಿ', 'ಗೊಲ್ಗೊಥಾ', 'ವೈಶಾಖಿ', 'ಹೆಬ್ಬೆರಳು', 'ಚಿತ್ರಭಾನು ಅಥವಾ 1942', 'ಶ್ರೀ ಕೃಷ್ಣ ಚರಿತೆ', ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಕುರಿತ 'ಮೂರು ಉಪನ್ಯಾಸಗಳು' ಮೊದಲಾದುವು ಅವರ ಕೃತಿಗಳು.

'ಗಿಳಿವಿಂಡು' ಅನೇಕ ಪ್ರಾಸಬದ್ಧ ಹಾಗೂ ಪ್ರಾಸರಹಿತ ಕವನಗಳ ಚತುರ್ದಶಪದಿ (ಸಾನೀತ) ಗಳ ಮತ್ತು ಉಮರ ಖಯಾಮನ ರುಬಾಯತ್ ಕಾವ್ಯದ ಪದ್ಯಾನುವಾದದ ಸಂಕಲನ. ಇದು ಹಿರಿಯ ಕವಿಗಳ ಸಾಲಿನಲ್ಲಿ ಪೈಯವರನ್ನು ನಿಲ್ಲಿಸಿದ ಕವನ ಸಂಕಲನ. 'ಗೊಲ್ಗೊಥಾ', 'ವೈಶಾಖಿ' ಅವರು ರಚಿಸಿದ ಖಂಡಕಾವ್ಯಗಳು: ಸರಳರಗಳೆಯಲ್ಲಿ ರಚಿತವಾದುವು. 'ಗೊಲ್ಗೊಥಾ' ಏಸು ಕ್ರಿಸ್ತನ ಜೀವನದ ಕೊನೆಯ ದಿನದ ಕತೆ. ಶಿಲುಬೆಗೇರಿಸಲ್ಪಟ್ಟಿದ್ದ ಏಸುಮಹಾತ್ಮನನ್ನು ಅವರು 'ಹದ್ದು ಬಗಿವಿಡಿದ ಲಾವಿಗೆಯಂತೆ, ಪಡುವಣದ ಬಳಿಯ ಬಿದಿಗೆಯ ಚಂದ್ರನಂತೆ, ಬಿಲ್ಲಿಗೆ ತೊಟ್ಟ ಸರಳಂತೆ, ಮರಣ ವೃಕ್ಷದೊಳು ಅಮೃತಫಲದಂತೆ' ಎಂದು ವರ್ಣಿಸಿರುವುದು ಹೃದಯಸ್ಪರ್ಶಿಯಾಗಿದೆ. 'ವೈಶಾಖಿ' ಬುದ್ಧನು ಕುಶಿನಾರದಲ್ಲಿ ಪರಿನಿರ್ವಾಣ ಪಡೆದ ಕತೆ: ಪಾಲಿಭಾಷೆಯ 'ಮಹಾ ಪರಿ ನಿಬ್ಬಾನ ಸುತ್ತ' ಇದಕ್ಕೆ ಆಧಾರ. ಅವರ ಈ ಕವಿತೆಗಳಲ್ಲಿ ಆಳವಾದ ವಿದ್ವತ್ತು, ಪದಪ್ರಭುತ್ವ, ಭಾವನಾವಿಲಾಸ ದೈವಭಕ್ತಿ ಎದ್ದು ಕಾಣುತ್ತವೆ.

'ಹೆಬ್ಬೆರಳು' ಮಹಾಭಾರತದ ಏಕಲವ್ಯನನ್ನು ಕುರಿತ ನಾಟಕ. ಪೈ ಅವರು ಈ ನಾಟಕದಲ್ಲಿ ಮೇಳಗಾನವನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡಿದ್ದಾರೆ. 'ಚಿತ್ರಭಾನು ಅಥವಾ 1942' ಭಾರತದ ಸ್ವಾತಂತ್ರ್ಯ ಸಂಗ್ರಾಮಕಾಲದ ವೀರಯುವಕರ ಸಾಹಸದ ಕಥೆಯನ್ನು ನಿರೂಪಿಸುವ ಗದ್ಯನಾಟಕ. 1942ಕ್ಕೆ ಸಂವಾದಿಯಾದ ಚಿತ್ರಭಾನು ಸಂವತ್ಸರದಲ್ಲಿ ರಚಿತವಾದ ಕಾರಣ ಆ ಹೆಸರು ಬಂದಿತು.

'ಶ್ರೀಕೃಷ್ಣ ಚರಿತೆ' ನವೀನಚಂದ್ರರು ಬಂಗಾಳಿಯಲ್ಲಿ ರಚಿಸಿದ ಗ್ರಂಥದ ಕನ್ನಡ ಅನುವಾದ.

ಸಂಶೋಧಕರಾಗಿ ಪೈ ಅವರ ಸಾಧನೆ ಗಮನಾರ್ಹವಾದದ್ದು. ಅವರು ಅನೇಕ ಸಂಶೋಧನಾ ಲೇಖನಗಳನ್ನು ಬರೆದರು. ಇವುಗಳಲ್ಲಿ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದುವೇ ಹೆಚ್ಚು.

ಕನ್ನಡ ಸಾಹಿತ್ಯ ಪ್ರಾಚೀನತೆಯ ಬಗೆಗೆ ಅವರು ನೀಡಿದ ಮೂರು ಉಪನ್ಯಾಸಗಳು ಅವರ ಸಂಶೋಧನ ಪ್ರತಿಭೆಗೆ ನಿದರ್ಶನಗಳಾಗಿವೆ. ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದೆ. 'ಪ್ರಬುದ್ಧ ಕರ್ಣಾಟಕ', 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', 'ಇಂಡಿಯನ್ ಆಂಟಿಕ್ವೆರಿ' ಮುಂತಾದ ವಿದ್ವತ್ಪತ್ರಿಕೆಗಳಲ್ಲೂ ಸ್ಮರಣ ಗ್ರಂಥಗಳಲ್ಲೂ ಅವರ ಹಲವಾರು ಸಂಶೋಧನಾ ಲೇಖನಗಳು ಪ್ರಕಟವಾಗಿವೆ.

ಹೊಸ ಹೊಸ ಶಬ್ದಗಳನ್ನು ರೂಪಿಸುವುದರಲ್ಲಿ ನಿರಂತರ ಪ್ರಯತ್ನ ನಡೆಸಿದ್ದು ಗೋವಿಂದ ಪೈಯವರ ಇನ್ನೊಂದು ವೈಶಿಷ್ಟ್ಯ. 'ಇಸು', ಪ್ರತ್ಯಯಗಳನ್ನು ಸೇರಿಸಿ ಅವರು ಅನೇಕ ಹೊಸ ಪದಗಳನ್ನು ರಚಿಸಿದರು; ವಿಶ್ರಾಂತಿಸು, ಸನ್ನಾಹಿಸು, ಅರ್ಥಾಯಿಸು, ಕುತೂಹಲಿಸು, ಸ್ವಾರಸ್ಯಿಸು, ಕಥಿಸು, ಕವನಿಸು—ಹೀಗೆ.

ಸಾಹಿತ್ಯ ಮತ್ತು ಸಂಶೋಧನೆಗಳೆರಡರಲ್ಲೂ [illegible] ಸಾಧನೆ ನಡೆಸಿದ ಗೋವಿಂದ ಪೈ ಅವರಿಗೆ 1949ರಲ್ಲಿ ಮದರಾಸು ಸರಕಾರ 'ರಾಷ್ಟ್ರಕವಿ' ಪ್ರಶಸ್ತಿ ನೀಡಿ ಗೌರವಿಸಿತು. 1951ರಲ್ಲಿ ಮುಂಬಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರು ಆರಿಸಲ್ಪಟ್ಟರು.

ವೈಯಕ್ತಿಕ ಪ್ರಶಸ್ತಿಗಳನ್ನು ಅಂಗೀಕರಿಸುವುದು, ಸಭಾಧ್ಯಕ್ಷತೆಯನ್ನು ವಹಿಸುವುದು ಇಂಥವರಲ್ಲಿ ಪೈರವರಿಗೆ ಆಸಕ್ತ ಇರಲಿಲ್ಲ. ಮದರಾಸು ಸರಕಾರದ 'ರಾಷ್ಟ್ರಕವಿ' ಪ್ರಶಸ್ತಿಯನ್ನು ಅವರು ಅಂಗೀಕರಿಸಿದ್ದು ಕೂಡ ಕಾಯಿಲೆ ಬಿದ್ದಿದ್ದ ಆಪ್ತಮಿತ್ರರೊಬ್ಬರ ಒತ್ತಾಯಕ್ಕೆ ಮಣಿದು : ಅವರನ್ನು ಸಂತೋಷಗೊಳಿಸುವುದಕ್ಕಾಗಿ. ಮೈಸೂರು ವಿಶ್ವವಿದ್ಯಾನಿಲಯದವರು ಪೈಯವರಿಗೆ 81ನೆಯ ವಯಸ್ಸಿನಲ್ಲಿ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ಕೊಡಲು ಅಪೇಕ್ಷಿಸಿದಾಗ, ಅದನ್ನಾಗಲೀ ಬೇರೆ ಇನ್ನಾವ ರೀತಿಯ ವೈಯಕ್ತಿಕ ಗೌರವವನ್ನಾಗಲೀ ಅಂಗೀಕರಿಸುವುದಕ್ಕೆ ತಮ್ಮ ಮನಸ್ಸೊಪ್ಪುವುದಿಲ್ಲವೆಂದು ಅವರು ಹೇಳಿದರು. ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ, ತಮ್ಮ ಆತ್ಮತೃಪ್ತಿಗಾಗಿ ಅವರು ನಿರಂತರವಾಗಿ ಕನ್ನಡ ಸೇವೆ ನಡೆಸಿದರು.

ತುಂಬುಬಾಳನ್ನು ಬಾಳಿ ತಮ್ಮ 81ನೆಯ ವಯಸ್ಸಿನಲ್ಲಿ 1963ನೆಯ ಸೆಪ್ಟೆಂಬರ್ 6ರಂದು ನಿಧನರಾದರು. ಕನ್ನಡ ಸಾಹಿತ್ಯ ರಂಗದಲ್ಲಿ, ವಿದ್ವತ್ಪ್ರಪಂಚದಲ್ಲಿ ಸ್ಥಿರವಾಗಿ ನಿಲ್ಲುವ ಹೆಸರು ಗೋವಿಂದ ಪೈ ಅವರದು.

## ಗೋಳಗುಮ್ಮಟ

ಅದ್ಭುತ ಕಟ್ಟಡಗಳಲ್ಲಿ ಒಂದೆಂದು ಪ್ರಖ್ಯಾತವಾಗಿರುವ ಗೋಳಗುಮ್ಮಟ ಇರುವುದು ಕರ್ನಾಟಕ ರಾಜ್ಯದ ಬಿಜಾಪುರದಲ್ಲಿ. ಗೋಳಗುಮ್ಮಟ ಎಂದರೆ, ದುಂಡನೆಯ ಆಕಾರದ ಗುಮ್ಮಟ ಎಂದು ಅರ್ಥ. ಇದನ್ನು ಕಟ್ಟಿದವನು ಸುಲ್ತಾನ್ ಮಹಮ್ಮದ್ ಆದಿಲ್ ಷಾ (1626–56). ಆದಿಲ್‌ಷಾಹಿ ವಂಶದವರು ಬಿಜಾಪುರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಎರಡು ಶತಮಾನಗಳ ಅವಧಿಯಲ್ಲಿ, ಮುಸ್ಲಿಂ ಶೈಲಿಯ ಅನೇಕ ಕಟ್ಟಡಗಳು ಬಿಜಾಪುರದಲ್ಲಿ ನಿರ್ಮಿಸಲ್ಪಟ್ಟುವು. ಇವುಗಳಲ್ಲೆಲ್ಲ ಗೋಳಗುಮ್ಮಟ ಅತ್ಯಂತ ಗಂಭೀರವಾದ ಕಟ್ಟಡ. ಇಬ್ರಾಹಿಂ ರೋಜಾ ಮುಂತಾದ ಕಟ್ಟಡಗಳಲ್ಲಿ ಕಂಡುಬರುವ ಅಲಂಕರಣ ಕಾರ್ಯ ಇದರಲ್ಲಿ ಕಂಡುಬರುವುದಿಲ್ಲವಾದರೂ ಇದರ ಭವ್ಯತೆ ಯಾರನ್ನಾದರೂ ಮೋಹಗೊಳಿಸುವಂಥದು.



ಗೋಳಗುಮ್ಮಟ : ಅನಾದೃಶ

ಗೋಳಗುಮ್ಮಟ 600 ಅಡಿ ಚೌಕದ ಜಗಲಿಯ ಮೇಲೆ ಕಟ್ಟಿರುವ ಚಚ್ಚೌಕವಾದ ಕಟ್ಟಡ. ಇದು 156 ಘನ ಅಡಿಗಳಷ್ಟಿದೆ. ಚೌಕದ ನಾಲ್ಕು ಮೂಲೆಗಳಲ್ಲಿಯೂ ಅಷ್ಟಕೋನಾಕೃತಿಯ ಒಂದೊಂದು ಮಿನಾರ್ ಇದೆ. ಇವುಗಳಿಗೆ ಏಳು ಅಂತಸ್ತುಗಳಿದ್ದು ಮೇಲೆ ಒಂದೊಂದು ಸಣ್ಣ ಗುಮ್ಮಟವಿದೆ. ಇವುಗಳ ನಡುವೆ ಗೋಳಾಕಾರದ ದೊಡ್ಡ ಗುಮ್ಮಟ ಎದ್ದು ನಿಂತಿದೆ. ಈ ಗುಮ್ಮಟದ ಹೊರ ವ್ಯಾಸ 144 ಅಡಿ; ಒಳ ವ್ಯಾಸ 124 ಅಡಿ. ಗುಮ್ಮಟವೂ ಸೇರಿದಂತೆ ಇಡೀ ಕಟ್ಟಡ ಕಲ್ಲು, ಗಾರೆಯಿಂದ ನಿರ್ಮಿತವಾಗಿದೆ.

ಮಹಮ್ಮದ್ ಆದಿಲ್ ಷಾ ತಾನು ಪಟ್ಟಕ್ಕೆ ಬಂದೊಡನೆಯೇ ತನ್ನ ಸಮಾಧಿಸ್ಥಾನಕ್ಕಾಗಿ ಈ ಕಟ್ಟಡ ರಚನೆಯನ್ನು ಆರಂಭಿಸಿದ. ಇದನ್ನು ಕಟ್ಟಲು ಸುಮಾರು ಮೂವತ್ತು ವರ್ಷ ಕಾಲ ಹಿಡಿಯಿತು.

ಗುಮ್ಮಟ ಕಮಾನುಗಳನ್ನು ಆಧರಿಸಿ ನಿಂತಿದೆ. ಮಿನಾರ್‌ಗಳ ಒಳ ಭಾಗದಲ್ಲಿ ಗುಮ್ಮಟಕ್ಕೆ ಹೋಗಲು ಮೆಟ್ಟಿಲುಗಳಿವೆ. ಗುಮ್ಮಟದ ಒಳಭಾಗದಲ್ಲಿ ಸುತ್ತಲೂ ನೆಲದಿಂದ ಸುಮಾರು 110 ಅಡಿ ಎತ್ತರದಲ್ಲಿರುವ ಮೊಗಸಾಲೆಯಿದೆ. ಈ ಮೊಗಸಾಲೆಯ ನಾಲ್ಕು ದಿಕ್ಕುಗಳಲ್ಲೂ ಒಂದೊಂದು ಪೀಠವಿದೆ. ಅವುಗಳಲ್ಲೊಂದರಲ್ಲಿ ಕುಳಿತು ಪಿಸುಮಾತಾಡಿದರೆ ಸಾಕು, ಅದಕ್ಕೆ ಇದಿರಾಗಿ ಗುಮ್ಮಟದ ಆ ಬದಿಯಲ್ಲಿ ಅಂದರೆ ಸುಮಾರು 124 ಅಡಿ ದೂರದಲ್ಲಿರುವ ಪೀಠದ ಮೇಲೆ ಕುಳಿತಿರುವವರಿಗೆ ಆ ಮಾತು ತಮ್ಮ ಪಕ್ಕದಲ್ಲೇ ನಿಂತು ಮಾತನಾಡಿದಂತೆ ಸ್ಫುಟವಾಗಿ ಕೇಳಿಸುತ್ತದೆ. ಇದು ಗೋಳಗುಮ್ಮಟದ ಒಂದು ವಿಶೇಷ ಲಕ್ಷಣ. ಇದಲ್ಲದೆ, ಇಲ್ಲಿ ಇನ್ನೊಂದು ವಿಶೇಷವೂ ಉಂಟು. ಅದೇನೆಂದರೆ, ಈ ಗುಮ್ಮಟದಿಂದ ಹೊರಡುವ ಪ್ರತಿಧ್ವನಿ ತರಂಗಗಳು. ಹತ್ತಾರು ಮಂದಿ ಹೆಜ್ಜೆ ಸಪ್ಪಳ ಮಾಡುತ್ತ ಈ ಗುಮ್ಮಟದ ಮೊಗಸಾಲೆಯನ್ನು ಪ್ರವೇಶಿಸಿದರೆ ಸಾಕು ಅವರ ಕಾಲಿನ ಸದ್ದು ಅನೇಕಾವರ್ತಿ ಪ್ರತಿಧ್ವನಿಸಿ, ಒಂದು ಪದಾತಿ ಸೈನ್ಯವೇ ನಡೆದು ಬರುತ್ತಿರುವಂತೆ ಭಾಸವಾಗುತ್ತದೆ. ಹಾಗೆಯೇ ಗ್ಯಾಲರಿಯಲ್ಲಿ ನಿಂತು, ನಕ್ಕರೆ, ಸದ್ದುಮಾಡಿದರೆ ಅದು ಒಂಬತ್ತು ಸಾರಿ ಪ್ರತಿಧ್ವನಿಸುತ್ತದೆ.

ಈ ಕಟ್ಟಡಕ್ಕೆ ಸಂಬಂಧಿಸಿದಂತೆ ಒಂದು ದುರಂತದ ಕಥೆಯೂ ಇದೆ. ಇದರ ನಿರ್ಮಾಪಕನಾದ ಮಹಮ್ಮದ್ ಆದಿಲ್‌ಷಾನಿಗೆ ರಂಭಾ ಎಂಬ ಒಬ್ಬಳು ಪ್ರೇಯಸಿ ಇದ್ದಳು. ಗುಮ್ಮಟಕ್ಕೆ ಗಿಲಾವು ಮುಗಿದ ಮೇಲೆ, ಅವನು, ತನ್ನ ಈ ಪ್ರೇಯಸಿಯೊಡನೆ ಇಲ್ಲಿಯ ಮೊಗಸಾಲೆಗೆ ಬಂದು ತನ್ನ ಪ್ರೇಯಸಿಯನ್ನು ಒಂದು ಪೀಠದಲ್ಲಿ ಕೂರಿಸಿ ಅದರ ಇದಿರಿನ ಪೀಠಕ್ಕೆ ಬಂದು ಅವಳೊಡನೆ ಪ್ರತಿಧ್ವನಿಸುವ ಪ್ರೇಮಸಲ್ಲಾಪ ನಡೆಸಿ, ಕೊನೆಯಲ್ಲಿ, "ನೀನು ಹೇಳುವಷ್ಟು ಗಾಢವಾಗಿ ನನ್ನನ್ನು ಪ್ರೀತಿಸುವುದೇ ನಿಜವಾದರೆ ನೀನು ಮೊಗಸಾಲೆಯಿಂದ ಕೆಳಕ್ಕೆ ಹಾರುತ್ತೀಯ..." ಎಂದನಂತೆ. ಆ ಮಾತು ಕೇಳಿದೊಡನೆಯೇ ಅವಳು ಅಲ್ಲಿಂದ ಹಾರಿ ನೆಲಕ್ಕೆ ಬಿದ್ದಳಂತೆ. ಗಾಬರಿಗೊಂಡ ಸುಲ್ತಾನ ಸರ್‍ರನೆ ಕೆಳಕ್ಕಿಳಿದುಬಂದು, ಸಾಯುವ ಸ್ಥಿತಿಯಲ್ಲಿದ್ದ ತನ್ನ ಪ್ರೇಯಸಿಯನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು, ಶೋಕಿಸಿದನಂತೆ. ತನಗಾಗಿ ನಿರ್ಮಿತವಾಗಿದ್ದ ಸಮಾಧಿಸ್ಥಾನದ ಪಕ್ಕದಲ್ಲೇ ಅವಳನ್ನು ಸಮಾಧಿ ಮಾಡಿಸಿದನಂತೆ. ಗೋಳಗುಮ್ಮಟದ ಕಟ್ಟಡದಲ್ಲಿ ಸುಲ್ತಾನನ ಮತ್ತು ಅವನ ಸಂಸಾರದವರ ಗೋರಿಗಳಿವೆ.

ಗೋಳಗುಮ್ಮಟ ರಚಿತವಾದದ್ದು ಸುಪ್ರಸಿದ್ಧ ತಾಜ್‌ಮಹಲ್ ಕಟ್ಟುವುದಕ್ಕೆ ಕೆಲವು ವರ್ಷಗಳ ಮೊದಲು. ತಾಜ್‌ಮಹಲಿನ ವಿನ್ಯಾಸ ಗೋಳಗುಮ್ಮಟದಿಂದ ಪ್ರೇರಿತವಾದದ್ದು ಎಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಗೋಳಗುಮ್ಮಟದ ಛಾವಣಿಯಾಗಿ ಇರುವ ಸ್ಥಳದ ವಿಸ್ತೀರ್ಣ ಸುಮಾರು 18,300 ಚದರ ಅಡಿ. ಇಷ್ಟು ವಿಸ್ತಾರವಾದ ಕಮಾನು ಇರುವಂಥ ಗುಮ್ಮಟ ಈ ಜಗತ್ತಿನಲ್ಲಿ ಇನ್ನೆಲ್ಲೂ ಇಲ್ಲ.

## ಘಜಲ್

ಘಜಲ್ ಹಿಂದೂಸ್ತಾನಿ ಸಂಗೀತದ ಲಘುವಿಭಾಗ. ಈ ಗೇಯ ಪ್ರಕಾರದ ಸಾಹಿತ್ಯ ಉರ್ದು, ಹಿಂದಿ ಭಾಷೆಗಳಲ್ಲಿದೆ. 'ಘಜಲ್' ಎಂಬ ಮಾತಿನ ಅರ್ಥ 'ಹೆಂಗಸರೊಡನೆ ಮಾತನಾಡುವುದು' ಅಥವಾ 'ಪ್ರೇಮ ಸಲ್ಲಾಪ' ಎಂದು. ಸಾಮಾನ್ಯವಾಗಿ ಘಜಲ್‌ಗಳ ವಸ್ತು ಪ್ರೇಮ ಸಂಬಂಧದ್ದು ಅಥವಾ ತಾತ್ತ್ವಿಕ.

ಘಜಲ್ ದ್ವಿಪದಿ ರೂಪದ ಕವನ. ಈ ಛಂದೋಮಿತಿಯಿಂದಾಗಿ ದೀರ್ಘವಾದ ಸೌಂದರ್ಯ ವರ್ಣನೆಗಾಗಲೀ ಭಾವ ವಿಶ್ಲೇಷಣೆಗಾಗಲೀ ಘಜಲ್‌ನಲ್ಲಿ ಅವಕಾಶವಿಲ್ಲ. ಆದ್ದರಿಂದ ಘಜಲ್ ಬರೆಹಗಾರರು ತಾವು ಹೇಳಬೇಕಾದ್ದನ್ನು ಆದಷ್ಟು ಸಂಕ್ಷಿಪ್ತ ರೀತಿಯಲ್ಲಿ ವ್ಯಕ್ತಪಡಿಸಬೇಕಾಗುತ್ತದೆ. ಇದರಿಂದ ಘಜಲ್ ರಚನೆ ಸತ್ವಪೂರ್ಣವಾಗಿರುತ್ತದೆ. ಘಜಲ್ ಹಾಡುಗಾರಿಕೆಯಲ್ಲಿ ಸಾಹಿತ್ಯಕ್ಕೆ ಪ್ರಾಧಾನ್ಯವಿದೆ. ಈ ಕಾರಣದಿಂದ ಘಜಲ್ ಗಾಯಕರು ತಾವು ಹಾಡುವ ಕೃತಿಯ ಅರ್ಥವನ್ನು ಚೆನ್ನಾಗಿಬಲ್ಲವರೂ ಸ್ಪಷ್ಟವಾದ ಪದೋಚ್ಚಾರಣೆಯುಳ್ಳವರೂ ಆಗಿರಬೇಕಾದದ್ದು ಅವಶ್ಯ.

ಆರಂಭದ ದೆಸೆಯಲ್ಲಿ ಕೇವಲ ಶೃಂಗಾರ ಮತ್ತು ತಾತ್ತ್ವಿಕ ವಿಚಾರಗಳು ಮಾತ್ರ ಘಜಲ್‌ನ ವಸ್ತುಗಳಾಗಿದ್ದುವು. ಆದರೆ ಕ್ರಮೇಣ ರಾಷ್ಟ್ರಭಕ್ತಿ, ರಾಜಕೀಯ ವ್ಯವಹಾರ ಮುಂತಾದ ಇತರ ವಿಷಯಗಳ ನಿರೂಪಣೆಗೂ ಘಜಲ್ ಬಳಸಲ್ಪಟ್ಟಿತು.

ಘಜಲನ್ನು 'ಹೃದಯದ ಭಾಷೆ' ಎನ್ನುವುದುಂಟು.

ಘಜಲ್ ಭಾವೋದ್ದೀಪಕ ಮಾತ್ರವಲ್ಲದೆ, ಮಾನವ ತನ್ನ ಜೀವಿತದ ಸಂಕಷ್ಟಗಳನ್ನು ಹೇಗೆ ಇದಿರಿಸಬೇಕು, ಸಹಿಸಬೇಕು ಎಂಬ ಬಗೆಗೆ ಮಾರ್ಗದರ್ಶಕ ಕೂಡ.

'ಘಜಲ್'ಗೆ ಅತ್ಯಂತ ಹಿರಿಮೆಯ ಸ್ಥಾನವನ್ನು ಗಳಿಸಿಕೊಟ್ಟ ಕವಿ ಮಿರ್ಜಾ ಘಾಲಿಬ್.

**ನೋಡಿ :** ಘಾಲಿಬ್

## ನಾಕೃತಿ ಕಲೆ

ಹಣೆ, ಮೂಗಿನ ಪಕ್ಕ, ಕೆನ್ನೆ, ಮೂಳೆಗಳ ಭಾಗಗಳಿಗೆ ಬೇರೆ ಬೇರೆ ಬಣ್ಣ. ಒಂದು ಕೈ ತೊಡೆಯ ಮೇಲೆ, ಇನ್ನೊಂದು ಕೈ ಪಕ್ಕೆಯ ಮೇಲೆ. ಹಿನ್ನೆಲೆಯಲ್ಲೂ ಘನ ರೂಪಗಳು. ಚಿತ್ರದ ಹೆಸರು 'ಕುಳಿತಿರುವ ಸ್ತ್ರೀ'. ರಚಿಸಿದವನು ಪಾಬ್ಲೊ ಪಿಕಾಸೋ (1881—      ).

ಘನ ಆಕೃತಿಗಳೇ ಇರುವ ಇಂಥ ಚಿತ್ರ ಘನಾಕೃತಿ ಕಲೆಯ ಪಂಥಕ್ಕೆ ಸೇರಿದ್ದು.

ತಮ್ಮ ಚಿತ್ರಗಳಿಗೆ ಸತ್ತ್ವ, ನಿಷ್ಕೃಷ್ಟತೆ ತರುವ ವಿಧಾನವೊಂದನ್ನು ಕಂಡುಹಿಡಿಯಲು ಪಾಬ್ಲೊ ಪಿಕಾಸೊ ಹಾಗೂ ಜಾರ್ಜ್ ಬ್ರಾಕ್ (1882–1963) ಈ ಶತಮಾನದ ಆದಿಯಲ್ಲಿ ಪ್ಯಾರಿಸಿನಲ್ಲಿ ಯತ್ನಿಸುತ್ತಿದ್ದರು. 1907ರಲ್ಲಿ ಪಾಲ್ ಸೇಜ಼ಾನನ (1839–1906) ಚಿತ್ರಗಳ ಪ್ರದರ್ಶನ

[illegible] ಸಮಸ್ಯೆಗೆ ಉತ್ತರ ದೊರೆಯದು. ಚಿತ್ರದಲ್ಲಿ ಶಂಕುವಾಕೃತಿ, ವೃತ್ತ ಹಾಗೂ ಶಂಖಾಕೃತಿಗಳನ್ನು ಕಾಣಲೇಬೇಕು; ಈ ಮೂರು ಆಕೃತಿಗಳನ್ನೂ ಸರಿಯಾಗಿ ಚಿತ್ರಿಸಬಲ್ಲವನು ಯಾವ ಚಿತ್ರವನ್ನು ಬೇಕಾದರೂ ಬರೆಯಬಲ್ಲನು—ಇದು ಪಾಲ್ ಸೆಜಾನನ ನಿಲುವು. ಅದು ಪಿಕಾಸೋಗೂ ಬ್ರಾಕ್‌ಗೂ ಒಪ್ಪಿಗೆಯಾಯಿತು.

ಪಶ್ಚಿಮ ಆಫ್ರಿಕದ ಅನಾಗರಿಕರ ಆರ್ಷೇಯ ಶಿಲ್ಪವೂ ಪಿಕಾಸೋ ಮೆಚ್ಚುಗೆಯಾಯಿತು. ಆತ ಘನಾಕೃತಿ ಕಲೆಯ ಮೂಲಪುರುಷನಾದ. ಈ ಪಂಥವನ್ನು ತನ್ನದೇ ರೀತಿಯಲ್ಲಿ ಅನುಸರಿಸಿದವನು ಜಾರ್ಜ್ ಬ್ರಾಕ್. 1908 ರಲ್ಲಿ ಬ್ರಾಕ್‌ನ ಚಿತ್ರವನ್ನು ಬಣ್ಣಿಸುತ್ತ ಫ್ರೆಂಚ್ ಚಿತ್ರಕಾರ ಹೆನ್ರಿ ಮ್ಯಾಟಿಸ್ (1869–1954) 'ಕ್ಯೂಬಿಸಂ' ಎನ್ನುವ ಪದವನ್ನು ಮೊದಲ ಬಾರಿ ಬಳಸಿದ.

ಘನಾಕೃತಿ ಪಂಥ ಚಿತ್ರಕಲೆಯಲ್ಲಿ ಭಾರಿ ಬದಲಾವಣೆಯನ್ನುಂಟು ಮಾಡಿತು. ಈ ಹೊಸ ಕಲಾಪ್ರಕಾರಕ್ಕೆ ಮೊದಲು ಜನ ತೋರಿಸಿದ್ದು ತಿರಸ್ಕಾರ. ಆದರೂ ಕಲಾವಿದರು ಧೃತಿಗೆಡಲಿಲ್ಲ. 1911ರಲ್ಲಿ ಪ್ಯಾರಿಸ್, ಬ್ರಸೆಲ್ಸ್‌ಗಳಲ್ಲಿ ಘನಾಕೃತಿ ಚಿತ್ರಗಳ ಪ್ರದರ್ಶನ ನಡೆಯಿತು.

ಘನಾಕೃತಿ ಕಲೆ ಮೊದಲನೆಯ ಮಹಾಯುದ್ಧದ ಅನಂತರ ಬಹು ದಿನ ಬಾಳಲಿಲ್ಲ. ಆದರೆ ಹೊಸದೊಂದು ಪಂಥಕ್ಕೆ –ಅಮೂರ್ತ ಕಲೆಗೆ– ಅದು ಜನ್ಮ ನೀಡಿತು.

ಒಂದು ವಸ್ತುವನ್ನು ಚೂರುಚೂರಾಗಿ ಮಾಡಿ, ಆ ಚೂರುಗಳನ್ನು ಜೋಡಿಸಿದಂತೆ ಇರುತ್ತದೆ ಘನಾಕೃತಿ ಕಲೆಯ ಚಿತ್ರ. ಈ ಚಿತ್ರ ರಚನಾ ವಿಧಾನದಲ್ಲಿ ವಸ್ತುವಿನ ಎದುರಿಗೆ ಕಾಣುವ ಭಾಗವನ್ನಷ್ಟೇ ಅಲ್ಲ, ಅದರ ಹಿಂಬದಿಯನ್ನೂ ಚಿತ್ರಿಸುತ್ತಾರೆ. ಅಮೂರ್ತ ಕಲಾ ಪಂಥದ ಆ ಚಿತ್ರಕಾರ ಆಕೃತಿಯ ಒಳಗಿರಬಹುದಾದ ರಚನೆಯನ್ನು ತನ್ನ ಅಭಿಪ್ರಾಯಾನುಸಾರ ವ್ಯಕ್ತಪಡಿಸುತ್ತಾನೆ.

ಉದಾಹರಣೆಗೆ, ನಿರ್ಜೀವವಸ್ತು ಚಿತ್ರಣವನ್ನು ತೆಗೆದುಕೊಳ್ಳೋಣ. ಶೀಸೆಯ ಚಿತ್ರ ಬಿಡಿಸಬೇಕು; ಉದ್ದನೆಯ ಶೀಸೆ, ಮೇಲೆ ಹೋದಂತೆ ಚೂಪಾಗುತ್ತದೆ. ನಮ್ಮ ಕಣ್ಣಿನ ಮಟ್ಟದಲ್ಲಿ ನೋಡಿದಾಗ ಮೂತಿ ಹೇಗೆ ಕಾಣಿಸುವುದೋ ಹಾಗಿರದೆ. ಮೇಲಿನಿಂದ ನೋಡಿದಾಗ ಕಾಣುವಂತೆ ದುಂಡಗಿನ ಬಾಯಿ ಇರುತ್ತದೆ. ಚಿತ್ರವನ್ನು ತುಂಡು ತುಂಡಾಗಿ ಚಿತ್ರಿಸುವುದು – ವಿಭಜನೆ – ಘನಾಕೃತಿ ಚಿತ್ರ ಕಲಾ ವಿಧಾನ.

ಕೃತಕ ಘನಾಕೃತಿ ಕಲೆಯನ್ನು 1910ರಲ್ಲಿ ಆರಂಭಿಸಿದವನು ಬ್ರಾಕ್. ಅಮೃತ ಶಿಲೆಯ ಅಥವಾ ಮರದ ಕೃತ್ರಿಮ ಅಂಶಗಳು ತನ್ನ ಚಿತ್ರದಲ್ಲಿ ಸೇರಿರುವಂತೆ ಆತ ಮಾಡಿದ. ಮುಂದೆ ಪದಗಳು, ಅಕ್ಷರಗಳು, ಕಾಗದದ ಚೂರುಗಳು ಮತ್ತಿತರ ವಸ್ತುಗಳನ್ನು ಉಪಯೋಗಿಸಿ ಹೊಸ ಜಾಡನ್ನೇ ನಿರ್ಮಿಸಿದ. ಹೀಗೆ ಕೃತಕವಾದ ಹಾಗೂ ನೈಜವಾದ ಸಾಧನಗಳಿಂದ ರಚಿತವಾದ ಚಿತ್ರಗಳಲ್ಲಿ ಹೊಸ ಬಗೆಯ ವಾಸ್ತವತೆ ಕಂಡುಬಂತು.



ಪಿಕಾಸೋ : ಘನಾಕೃತಿ

ಶಿಲ್ಪಕಲೆಯಲ್ಲೂ ಘನಾಕೃತಿ ಶೈಲಿ ಬಳಕೆಗೆ ಬಂತು. ಪಾಬ್ಲೊ ಪಿಕಾಸೋನ 'ಹೆಂಗಸೊಬ್ಬಳ ತಲೆ' ಕೃತಿಯಲ್ಲಿ ತಲೆಯನ್ನು ವಿವಿಧ ಭಾಗಗಳನ್ನಾಗಿ ಆತ ಕೆತ್ತಿದ್ದಾನೆ.

ಆಧುನಿಕ ಕಲೆಯ ಮೂಲ ಮಂತ್ರ —ವಸ್ತುವಿಗೆ ನಿಷ್ಠೆ. ಆಧುನಿಕ ಕಲೆಯ ಒಂದು ಪ್ರಕಾರವಾದ ಘನಾಕೃತಿ ಕಲೆಯಲ್ಲೂ ಚಿತ್ರಕಾರ ವಸ್ತುನಿಷ್ಠನಾಗಿಯೇ ಇರುತ್ತಾನೆ.

ನೋಡಿ : ಆಧುನಿಕ ಚಿತ್ರಕಲೆ

## ಘಾಲಿಬ್

ಮಿರ್ಜಾ ಘಾಲಿಬನಿಗೆ ಮಾವಿನಹಣ್ಣೆಂದರೆ ಪ್ರಾಣ ; ಎಷ್ಟು ತಿಂದರೂ ತೃಪ್ತಿಯಿಲ್ಲ. ಮಾವಿನಹಣ್ಣಿನ ಸುಗ್ಗಿಯ ಕಾಲ ; ಮರಗಳೆಲ್ಲ ಆಕರ್ಷಕಹಣ್ಣುಗಳಿಂದ ತುಂಬಿದ್ದುವು. ಆ ತೋಟದಲ್ಲಿ ಗೆಳೆಯನೊಡನೆ ಸುತ್ತಾಡುತ್ತಿದ್ದ ಘಾಲಿಬ್ ಮತ್ತೆ ಮತ್ತೆ ಆ ಹಣ್ಣುಗಳನ್ನೇ ನೋಡುತ್ತಿದ್ದ. "ಅದೇನು ಹಾಗೆ ನೋಡುತ್ತಿದ್ದೀ? ಎಂದೂ ಮಾವಿನ ಹಣ್ಣುಗಳನ್ನು ನೋಡಿಯೇ ಇಲ್ಲವೆ" ಎಂದು ಗೆಳೆಯ ಕೇಳಿದ. "ಇಲ್ಲ, ಮಾವಿನಹಣ್ಣುಗಳಲ್ಲಿ ಬೇರೊಂದು ವಸ್ತುವನ್ನು ಹುಡುಕುತ್ತಿದ್ದೇನೆ. ಪ್ರತಿಯೊಂದು ಹಣ್ಣಿನ ಮೇಲೆಯೂ ಇದು ಇಂಥವನಿಗೆ, ಇಂಥವನ ಮಗನಿಗೆ, ಮೊಮ್ಮಗನಿಗೆ ಸೇರಿದ್ದು ಎಂದು ಬರೆದಿರುತ್ತದೆ ಅಂತ ಪೂಜ್ಯ ಕವಿಯೊಬ್ಬ ನುಡಿದಿದ್ದಾನೆ. ಆದ್ದರಿಂದ ಇವುಗಳಲ್ಲಿ ನನ್ನ ಹೆಸರು, ನನ್ನ ತಂದೆ, ತಾತಂದಿರ ಹೆಸರು ಎಲ್ಲಾದರೂ ಬರೆದಿದೆಯೇ ಎಂದು ಹುಡುಕ್ತಿದ್ದೇನೆ" ಎಂದ ಘಾಲಿಬ್. ಅವನ ಗೆಳೆಯ ನಕ್ಕು ಒಂದು ಬುಟ್ಟಿ ತುಂಬ ಒಳ್ಳೆಯ ಮಾವಿನಹಣ್ಣುಗಳನ್ನು ಕವಿಯ ಮನೆಗೆ ಕಳುಹಿಸಿಕೊಟ್ಟ.

ಉರ್ದು ಸಾಹಿತ್ಯದ ಅಗ್ರಗಣ್ಯ ಕವಿ ಘಾಲಿಬ್‌ನನ್ನು ಕುರಿತ ಒಂದು ದಂತಕಥೆ ಇದು.

ಉರ್ದು ಕಾವ್ಯ ಪ್ರಪಂಚದಲ್ಲಿ ಘಾಲಿಬ್ ತನ್ನ ಘಜಲ್‌ಗಳಿಂದ ಅತ್ಯಂತ ಹಿರಿಮೆಯ ಸ್ಥಾನವನ್ನು ಗಳಿಸಿದ್ದಾನೆ.

ಅವನ ಪೂರ್ಣ ಹೆಸರು ಮಿರ್ಜಾ ಅಸದುಲ್ಲಾಖಾನ್ ಘಾಲಿಬ್. 1796ರಲ್ಲಿ ಆಗ್ರಾದಲ್ಲಿ ಜನನ. ಚಿಕ್ಕಂದಿನಲ್ಲಿ ತಾಯಿ ತಂದೆ ಗತಿಸಿದರು ; ಚಿಕ್ಕಪ್ಪನೇ ಆಶ್ರಯದಾತನಾದ. ಬ್ರಿಟಿಷರಿಂದ ಪಡೆದ ವಿಸ್ತಾರ ಜಹಗೀರು ಅವನ ಚಿಕ್ಕಪ್ಪನ ಆಸ್ತಿ. ಘಾಲಿಬ್ ಒಂಬತ್ತು ವರ್ಷದವನಾಗಿದ್ದಾಗ ಅವನ ಚಿಕ್ಕಪ್ಪನೂ ನಿಧನ ಹೊಂದಿದ. ಹುಡುಗ ಅನಾಥನಾದ. ಬ್ರಿಟಿಷರು ಆಸ್ತಿಯನ್ನು ವಶಪಡಿಸಿಕೊಂಡರು. ಘಾಲಿಬ್‌ಗೆ ಪರಿಹಾರ ವೇತನ ಮಾತ್ರ ಲಭಿಸಿತು. 13ನೆಯ ವಯಸ್ಸಿನಲ್ಲಿ ಘಾಲಿಬ್ ನವಾಬ್ ಇಲಾಹಿ ಬಕ್ಷ್ ಖಾನರ ಮಗಳನ್ನು ವಿವಾಹವಾದ.

ದೆಹಲಿಯಲ್ಲಿ ಕವಿಮೇಳಗಳು ಜರಗುತ್ತಿದ್ದ ಕಾಲ ಅದು. ಘಾಲಿಬ್ ದೆಹಲಿಯನ್ನು ಸೇರಿದ ಮೇಲೆ, ಸಾಹಿತಿಗಳ ಸಂಪರ್ಕದಿಂದ, ಸ್ವತಃ ಪ್ರತಿಭಾವಂತ ಕವಿಯಾಗಿದ್ದ ಅವನ ಕವಿತಾ ರಚನೆಗೆ ಪ್ರೇರಣೆ ಒದಗಿತು. ಘಾಲಿಬ್

ಮೊದಲು ಪರ್ಷಿಯನ್ ಭಾಷೆಯಲ್ಲಿ ಕಾವ್ಯ ರಚಿಸಿದ. ಆದರೆ ಉರ್ದು ಭಾಷೆಗಿದ್ದ ಜನಪ್ರಿಯತೆಯನ್ನು ಲಕ್ಷಿಸಿ ಉರ್ದುವಿನಲ್ಲಿ ಶ್ರೇಷ್ಠ ಘಜಲ್‌ಗಳನ್ನು ಬರೆದ. ಅವನ ಕವಿತಾ ಕೌಶಲ ದೊರೆ ವಜೀದ್ ಅಲಿಖಾನನ ಮೆಚ್ಚುಗೆಗೆ ಪಾತ್ರವಾಯಿತು. ಆತ ಘಾಲಿಬನಿಗೆ 500 ರೂ. ವಾರ್ಷಿಕ ವೇತನ ನೀಡಿದ.

1842ರಲ್ಲಿ ಆಗ ತಾನೇ ದೆಹಲಿಯಲ್ಲಿ ಸ್ಥಾಪಿತವಾದ ವಿದ್ಯಾಲಯದಲ್ಲಿ ಪರ್ಷಿಯನ್ ಅಧ್ಯಾಪಕನ ಹುದ್ದೆಗೆ ಘಾಲಿಬ್ ಅಭ್ಯರ್ಥಿಯಾದ. ಸರಕಾರದ ಕಾರ್ಯದರ್ಶಿ ಥಾಂಪ್ಸನ್, ಆ ಕೆಲಸಕ್ಕೆ ಘಾಲಿಬನನ್ನು ಆರಿಸಿದ. ಘಾಲಿಬ್ ಕಾರ್ಯದರ್ಶಿಯನ್ನು ಭೇಟಿಮಾಡಲು, ಪಲ್ಲಕ್ಕಿಯಲ್ಲಿ ಹೋದ ; ಕಾರ್ಯದರ್ಶಿಯೇ ಬಂದು ತನ್ನನ್ನು ಸ್ವಾಗತಿಸಲಿ ಎಂದು ಹೊರಗಡೆ ಕಾದು ನಿಂತ. "ಘಾಲಿಬ್ ಬಂದಿರುವುದು ಕೆಲಸಕ್ಕೆ ಸೇರುವುದಕ್ಕೆ ; ದರ್ಬಾರಿನಲ್ಲಿ ಹಾಜರಾಗುವುದಕ್ಕಲ್ಲ," ಎಂದು ಒಳಗಿನಿಂದ ಉತ್ತರ ಬಂತು. ಹೊರಗೆ ತಾನಿದ್ದಲ್ಲಿಂದಲೇ ಘಾಲಿಬನೆಂದ: "ಇರುವ ಗೌರವವನ್ನು ಕಳೆದುಕೊಳ್ಳುವುದಕ್ಕಲ್ಲ ನಾನು ಬಂದಿರುವುದು; ಗೌರವವನ್ನು ಸಂಪಾದಿಸಲಿಕ್ಕೆ. " ತನಗೆ ತಕ್ಕ ಗೌರವ ದೊರೆಯಲಿಲ್ಲವೆಂಬ ಕಾರಣಕ್ಕಾಗಿ ಘಾಲಿಬ್ ಆ ಹುದ್ದೆಯನ್ನು ತಿರಸ್ಕರಿಸಿದ.

1849ರಲ್ಲಿ ಎರಡನೆಯ ಬಹದ್ದೂರ್ ಷಾ (ಮೊಗಲರ ಕೊನೆಯ ಬಾದಷಹ) ತುಂಬಿದ ಸಭೆಯಲ್ಲಿ ಘಾಲಿಬನಿಗೆ 'ನಜಮುದ್ ಉದ್‌ದೌಲಾ', 'ದಬೀರ್ ಉಲ್ ಮುಲ್ಕ್', 'ನಿಜಾಮ್ ಜಂಗ್' ಎಂಬ ಬಿರುದುಗಳನ್ನು ಕೊಟ್ಟ; ತಿಂಗಳಿಗೆ 500 ರೂ. ಗಳ ವೇತನವನ್ನೂ ಘೋಷಿಸಿದ. ತೈಮೂರನ ಸಂತತಿಯ ಇತಿಹಾಸವನ್ನು ಬರೆಯಬೇಕೆಂದು ಘಾಲಿಬನಿಗೆ ಆಜ್ಞಾಪಿಸಿದ.

ಘಾಲಿಬ್ ತನ್ನ ಕೃತಿಗಳ ಮೂಲಕ ಉರ್ದು ಕಾವ್ಯಪ್ರೇಮಿಗಳ ಹೃದಯದಲ್ಲಿ ಶಾಶ್ವತ ಸ್ಥಾನ ಪಡೆದಿದ್ದಾನೆ. "ನಾನು ಮರಣಹೊಂದಿದರೂ ನನ್ನ ಕವನಗಳು ನನ್ನನ್ನು ಚಿರಸ್ಮರಣೀಯವನ್ನಾಗಿ ಮಾಡುವುವು" ಎಂದು ಒಂದು ಘಜಲ್‌ನಲ್ಲಿ ಆತ ಹೇಳಿದ್ದಾನೆ.

ಇವು ಘಾಲಿಬನ ಕೆಲವು ಘಜಲ್‌ಗಳ ಅನುವಾದ :

"ಶೋಕ ಹೃದಯವನ್ನು ಹಿಂಡುತ್ತದೆ: ಹೃದಯವಿರುವ ವ್ಯಕ್ತಿ ಅದರಿಂದ ಹೇಗೆ ತಪ್ಪಿಸಿಕೊಳ್ಳಬಲ್ಲ?"

"ಎಲ್ಲ ಕೆಲಸಗಳೂ ಸುಲಭವಲ್ಲ: ಮನುಷ್ಯ ಮಾನವನಾಗಿರುವುದೂ ಸುಲಭವಲ್ಲ."

"(ದೇವದೇವನಿಗೆ) ನನ್ನ ಪ್ರಾಣವನ್ನು ಕಾಣಿಕೆಯಾಗಿ ನೀಡೋಣವೆಂದರೆ ಆ ಪ್ರಾಣವನ್ನು ಕೊಟ್ಟವನು ಅವನೇ. ಆದ್ದರಿಂದ ಹಾಗೆ ಮಾಡುವುದರಿಂದ ಕೃತಜ್ಞತೆ ಸೂಚಿಸಿದಂತಾಗುವುದಿಲ್ಲ"

"ಪ್ರೇಮವು ವೇದನೆಗೆ ಒಂದು ಕಾರಣವೆಂದು ಭಾವಿಸಿ ನಾನು ನನ್ನ ಪ್ರೇಯಸಿಯಲ್ಲಿ ನಂಬಿಕೆ ತೋರುವುದಿಲ್ಲ..."

ಘಾಲಿಬ್ ಅತ್ಯಂತ ವಿನಯಶೀಲ ; ಸ್ನೇಹಪರ. ಗೆಳೆಯರಿಂದ ಸೆಂಟರಿಷ್ಟರಿಂದ ಬಂದ ಕಾಗದಗಳಿಗೆ ತಪ್ಪದೆ ಸಕಾಲದಲ್ಲಿ ಪ್ರತ್ಯುತ್ತರ ಬರೆಯುತ್ತಿದುದ್ದು ಅವನ ಸ್ವಭಾವ.

ಘಾಲಿಬ್ ಎಂದೂ ಪುಸ್ತಕವನ್ನು ಬೆಲೆ ಕೊಟ್ಟು ಕೊಂಡವನಲ್ಲ; ಇನ್ನೊಬ್ಬರಿಂದ ಎರವಲಾಗಿ ತಂದು ಓದಿ, ಅದನ್ನು ತಪ್ಪದೆ ಹಿಂದಕ್ಕೆ ಕೊಡುತ್ತಿದ್ದ. ದೀರ್ಘವಾಗಿ ಆಲೋಚಿಸಿ ರಾತ್ರಿ ವೇಳೆಯಲ್ಲಿ ಕವನ ರಚನೆ ಮಾಡುತ್ತಿದ್ದ. ಆಗಾಗ ಮದ್ಯವನ್ನೂ ಕುಡಿಯುತ್ತಿದ್ದ.



ಘಾಲಿಬ್ : ಇಕ್ಬಾಲ್ ಫರೀದ್ ವಿರಚಿತ ವರ್ಣಚಿತ್ರ ಕಲಾಕೃತಿ

ಘಾಲಿಬನ ಪತ್ರಗಳು ಅವನಿಗೆ ಲೋಕಪ್ರಿಯತೆಯನ್ನು ಗಳಿಸಿಕೊಟ್ಟಿವೆ. ಸ್ನೇಹಿತರಿಗೂ ಶಿಷ್ಯರಿಗೂ ಬಂಧುಗಳಿಗೂ ಪತ್ರಿಕೆತರರಿಗೂ ಅವನು ಬರೆದ ಅನೇಕ ಪತ್ರಗಳು ಸಿಕ್ಕಿವೆ. ಆ ಪತ್ರಗಳಲ್ಲಿ ಘಾಲಿಬನ ಶೀಲ, ಕಾರ್ಯಚಟುವಟಿಕೆಗಳು, ವ್ಯಕ್ತಿತ್ವ, ಆಸೆ ಆಕಾಂಕ್ಷೆಗಳು ಸುಸ್ಪಷ್ಟವಾಗಿ ಕಂಡುಬರುತ್ತವೆ. ಮಿರ್ಜಾ ಹಾತಿಮ್ ಅಲಿ ಎಂಬ ಶ್ರೇಷ್ಠ ಲೇಖಕ "ಘಾಲಿಬನ ಹಾಸ್ಯ ಮತ್ತು ಆಹ್ಲಾದಕರ ಬರೆವಣಿಗೆಯ ಹದ ಅವನ ಪತ್ರಗಳನ್ನು ನಾಟಕ ಕಾದಂಬರಿಗಳಿಗಿಂತಲೂ ಸ್ವಾರಸ್ಯಪೂರ್ಣವನ್ನಾಗಿ ಮಾಡಿವೆ." ಎಂದಿದ್ದಾನೆ. ಸರಳ, ಸ್ವಚ್ಛ ಸಂಯಮಯುತ ಬರೆವಣಿಗೆಯಿಂದ ಘಾಲಿಬ್ ಉರ್ದು ಗದ್ಯ ಸಾಹಿತ್ಯದಲ್ಲಿ ಕ್ರಾಂತಿಯನ್ನೇ ಉಂಟುಮಾಡಿದ.

ತನ್ನ ಒಂದು ಪತ್ರದಲ್ಲಿ, ತಾನು ಮಾವಿನಹಣ್ಣು ತಿನ್ನುವ ವಿಧಾನವನ್ನು ಘಾಲಿಬ್ ಬಣ್ಣಿಸಿದ್ದಾನೆ: "ಪ್ರಾತಃಕಾಲದಲ್ಲಿ, ಊಟಕ್ಕೆ ಮೊದಲು, ಊಟಾನಂತರ ಮಾವಿನಹಣ್ಣು ತಿನ್ನುವುದಿಲ್ಲ. ಎರಡು ಊಟಗಳ ನಡುವೆ ತೆಗೆದುಕೊಳ್ಳುತ್ತೇನೆಂದೂ ಹೇಳಲಾರೆ. ತಿಂದದ್ದೆಲ್ಲ ಜೀರ್ಣವಾದ ಮೇಲೆ ಸಂಜೆ ಹೊತ್ತು ಮಾವಿನಹಣ್ಣು ತಿನ್ನುತ್ತೇನೆ. ಉಸಿರಾಡಲು ಕಷ್ಟವಾಗುವಷ್ಟು ಅತಿಯಾಗಿ ಮಾವಿನಹಣ್ಣು ತಿನ್ನುತ್ತೇನೆ. ಏಕೆಂದರೆ ರಾತ್ರಿ ನಾನು ಊಟಮಾಡುವುದಿಲ್ಲ. ತಿನ್ನುವುದು ಸಾಮಾನ್ಯವಾಗಿ ಹತ್ತು ಹನ್ನೆರಡು ಹಣ್ಣು ಮಾತ್ರ. ಕಸಿಮಾಡಿದ ದೊಡ್ಡಹಣ್ಣಾದರೆ ಐದಾರು, ಅಷ್ಟೆ."

ಘಾಲಿಬ್ ತನ್ನ 72ನೆಯ ವಯಸ್ಸಿನವರೆಗೂ ದೃಢಕಾಯನಾಗಿದ್ದ. ಕೊನೆಯ ವರ್ಷಗಳಲ್ಲಿ ಅವನ ಕವಿಚೇತನ ಪರಕೀಯರ ದಬ್ಬಾಳಿಕೆಯ ವಿರುದ್ಧ ಸಿಡಿದೆದ್ದಿತು.

ಮಿರ್ಜಾ ಘಾಲಿಬ್ ತನ್ನ 73ನೆಯ ವಯಸ್ಸಿನಲ್ಲಿ 1869 ಫೆಬ್ರವರಿ 15ರಂದು ದಿಲ್ಲಿಯಲ್ಲಿ ಮರಣಹೊಂದಿದ. 1969ರಲ್ಲಿ ಘಾಲಿಬನ ಶತಮಾನೋತ್ಸವ ಭಾರತದಾದ್ಯಂತ ಸಂಭ್ರಮದಿಂದ ಆಚರಿಸಲ್ಪಟ್ಟಿತು.

ನೋಡಿ : ಘಜಲ್

## ಚರ್ಚಿಲ

ದಿನಾಂಕ 1940, ಜೂನ್ 4 ; ಎರಡನೆಯ ಮಹಾಯುದ್ಧದಲ್ಲಿ ಜರ್ಮನಿ ಯೂರೊಪಿನ ರಾಷ್ಟ್ರಗಳನ್ನು ಒಂದೊಂದಾಗಿ ವಶಪಡಿಸಿಕೊಂಡು ಮುಂದುವರಿದಿತ್ತು. ಬ್ರಿಟನಿಗೆ ಎಂಥ ವಿಪತ್ತು ಒದಗುವುದೋ ಎಂದು ಕಾತರ, ಕಳವಳ. ಬ್ರಿಟಿಷ್ ಸೈನಿಕರು ಅಲ್ಲಿ ಇಲ್ಲಿ ಹಿಮ್ಮೆಟ್ಟಿಸಲ್ಪಟ್ಟ ಆತಂಕದ ಸನ್ನಿವೇಶ.

ಈ ಎಲ್ಲ ಗೊಂದಲ, ಅಧೈರ್ಯಗಳನ್ನು ಮೀರಿ, ಶಂಕೆಗಳನ್ನು ಮೂಲೆಗೊತ್ತರಿಸುವ ಒಂದು ವೀರ ವಾಣಿ ಮೊಳಗಿತು : "ನಾವು ಎಂದಿಗೂ ಶರಣಾಗತರಾಗೆವು, ಸಮುದ್ರ ದಂಡೆಯಲ್ಲಿ ನಾವು ಕಾದಾಡುವೆವು ; ವಿಮಾನಗಳ ಇಳಿದಾಣಗಳಲ್ಲಿ, ಹೊಲಗಳಲ್ಲಿ, ಹಾದಿಗಳಲ್ಲಿ ಹೋರಾಡುವೆವು : ಬೆಟ್ಟಗುಡ್ಡಗಳ ಮೇಲೆ ಕಾದುವೆವು" ಈ ವಾಣಿ ಬ್ರಿಟಿಷರಲ್ಲಿ ನವಚೇತನ ತುಂಬಿತು.

ಈ ಚಾರಿತ್ರಿಕ ಸಂದೇಶ ಕೊಟ್ಟಾತ ವಿನ್‌ಸ್ಟನ್ ಚರ್ಚಿಲ್, ಎರಡನೆಯ ಮಹಾಯುದ್ಧ ಕಾಲದಲ್ಲಿ ಬ್ರಿಟನಿಗೆ ಅಪ್ರತಿಮ ನಾಯಕತ್ವವನ್ನೊದಗಿಸಿ ಅಮೋಘ ಸೇವೆ ಸಲ್ಲಿಸಿದ ಬ್ರಿಟಿಷ್ ಪ್ರಧಾನ ಮಂತ್ರಿ.

ಮಹಾಯುದ್ಧದ ವಿಷಮ ಪರಿಸ್ಥಿತಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡು ತನ್ನ ಜನತೆಗೆ ಸೂಕ್ತ ಸಲಹೆ, ಎಚ್ಚರ, ಪ್ರೋತ್ಸಾಹಗಳನ್ನು ಕೊಟ್ಟ ಚರ್ಚಿಲನ ಹೆಸರು ಜಗತ್ತಿನ ಇತಿಹಾಸದಲ್ಲಿ ಸ್ಮರಣೀಯವಾದದ್ದು. ರಕ್ತ, ದುಡಿಮೆ, ಕಣ್ಣೀರು ಮತ್ತು ಬೆವರು ಇವೇ ನಮ್ಮ ಪಾಲಿಗಿರುವುದು –ಎಂದು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಯುದ್ಧ ಪರಿಸ್ಥಿತಿಯನ್ನು ವಿವರಿಸಿದ ಚರ್ಚಿಲನ ಮಾತು ಈಗ ಒಂದು ನಾಣ್ಣುಡಿಯೇ ಆಗಿದೆ.

ವಿನ್‌ಸ್ಟನ್ ಚರ್ಚಿಲ್ ಉತ್ತಮ ವಾಗ್ಮಿ ; ಆತ ಒಳ್ಳೆಯ ಲೇಖಕ ಕೂಡಾ. ಅವನ 'ಎರಡನೆಯ ಮಹಾಯುದ್ಧ' ಎಂಬ ಆರು ಬೃಹತ್ ಸಂಪುಟಗಳ ಗ್ರಂಥ ಆ ವರ್ಗದ ಕೃತಿಗಳಲ್ಲಿ ವಿಶ್ವಸಾಹಿತ್ಯದಲ್ಲೇ ಅದ್ವಿತೀಯವೆಂದು ಹೆಸರು ಪಡೆದಿದೆ. 1953ರ ನೊಬೆಲ್ ಸಾಹಿತ್ಯ ಬಹುಮಾನ ಚರ್ಚಿಲ್‌ಗೆ ದೊರೆತದ್ದು—ಆತನ ಸಾಹಿತ್ಯ ಸೃಷ್ಟಿ ಹಾಗೂ ವಾಗ್ಮಿತೆಗಳಿಗಾಗಿ.

ಚರ್ಚಿಲನ ಕ್ರಿಯಾಶಕ್ತಿ ಮಾತು–ಬರೆಹಗಳಿಗೇ ಸೀಮಿತವಾಗಿರಲಿಲ್ಲ. ಆತ ಒಳ್ಳೆಯ ಚಿತ್ರಕಾರನೂ ಆಗಿದ್ದ.

ವಿನ್‌ಸ್ಟನ್ ಲಿಯೊನಾರ್ಡ್ ಚರ್ಚಿಲ್ 1874 ನವಂಬರ್ 30ರಂದು ಆಕ್ಸ್‌ಫರ್ಡ್‌ನ ಬಳಿಯ ಬ್ಲೆನ್‌ಹೀಮ್ ಪ್ರಾಸಾದದಲ್ಲಿ ಹುಟ್ಟಿದ. ಜಾನ್ ಚರ್ಚಿಲ್ ಎಂಬ ವೀರ ಯೋಧನ ಮನೆತನ ಇವನದು. 18ನೆಯ ಶತಮಾನದಲ್ಲಿದ್ದ ಆ ಯೋಧನ ಜೀವನವನ್ನು ಕುರಿತು 'ಮಾರ್ಲ್‌ಬರೋ ಡ್ಯೂಕ್ ಜಾನ್ ಚರ್ಚಿಲನ ಜೀವನ ಮತ್ತು ಕಾಲ' ಎಂಬ ಐತಿಹಾಸಿಕ



ರಾಜನೀತಿಜ್ಞ, ಬರೆಹಗಾರ, ಚಿತ್ರಕಾರ : ಚರ್ಚಿಲ್

ಕೃತಿಯನ್ನು ವಿನ್‌ಸ್ಟನ್ ಚರ್ಚಿಲ್ ಬರೆದಿದ್ದಾನೆ. ವಿನ್‌ಸ್ಟನನ ತಂದೆ ರಾಂಡಾಲ್ಫ್ ಚರ್ಚಿಲ್, ಒಳ್ಳೆಯ ರಾಜಕಾರಣಿ.

ವಿನ್‌ಸ್ಟನನ ವಿದ್ಯಾಭ್ಯಾಸ ನಡೆದದ್ದು ಹ್ಯಾರೋದಲ್ಲಿ. ವಿದ್ಯಾಭ್ಯಾಸ ಪೂರ್ಣವಾಗುವ ಮೊದಲೇ ಆತ ಸೈನಿಕವೃತ್ತಿ ಕೈಗೊಂಡ. ಈ ವೇಳೆಗಾಗಲೇ ಇಂಗ್ಲಿಷಿನಲ್ಲಿ ಬರೆಯಲು ಬರೆಯಲಾರಂಭಿಸಿದ್ದ. ಚರ್ಚಿಲನ ಸೈನಿಕ ಜೀವನ ಆರಂಭವಾದದ್ದು ಬೆಂಗಳೂರಿನಲ್ಲಿ, 1897ರಲ್ಲಿ. ಆತ ಬರೆಹಗಾರನಾಗಿ ರೂಪುಗೊಂಡದ್ದೂ ಇಲ್ಲೇ. ಆತನ ಯೋಧ ಜೀವನದ ಅನುಭವದ ಫಲ 'ಮಾಲಕಂಡ್ ದಳದ ಕಥೆ'. ಅದು 1898ರಲ್ಲಿ ಪ್ರಕಟವಾಯಿತು. ಮುಂದಿನ ವರ್ಷ ದಕ್ಷಿಣ ಆಫ್ರಿಕದಲ್ಲಿ ಬೋಯೆರ್ ಯುದ್ಧ ಆರಂಭವಾದಾಗ ಚರ್ಚಿಲ್ ಯುದ್ಧ ವರದಿಗಾರನಾಗಿ ಅಲ್ಲಿಗೆ ಹೋದ. ಆ ಸಮಯದಲ್ಲಿ ಬೋಯೆರ್ ಪಕ್ಷದವರಿಗೆ ಆತ ಸೆರೆಸಿಕ್ಕಿದ. ಸೆರೆಯಿಂದ ಚರ್ಚಿಲ್ ತಪ್ಪಿಸಿಕೊಂಡದ್ದು ಒಂದು ಸಾಹಸದ ಕಥೆ. ಈ ಘಟನೆಯನ್ನು ಕುರಿತು ಆತ ಹಲವು ನಿಯತಕಾಲಿಕಗಳಲ್ಲಿ ಲೇಖನಗಳನ್ನು ಬರೆದ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಉಪನ್ಯಾಸ ಪ್ರವಾಸ ಕೈಗೊಂಡು ಹಿಂದಿರುಗಿದ ಮೇಲೆ ಚರ್ಚಿಲನ ರಾಜಕೀಯ ಜೀವನ 1900ರಲ್ಲಿ ಆರಂಭವಾಯಿತು. ಆತ ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯನಾದ. 1905ರಲ್ಲಿ ವಸಾಹತು ಶಾಖೆಯ ಉಪಕಾರ್ಯದರ್ಶಿಯಾದ. 1908ರಲ್ಲಿ ಅವನ ವಿವಾಹ ಜರಗಿತು.

ಮುಂದೆ ಒಂದಲ್ಲ ಒಂದು ಹೊಣೆ ಹೊತ್ತು ಸಚಿವ ಸಂಪುಟದಲ್ಲಿ 1929ರ ವರೆಗೆ ಚರ್ಚಿಲ್ ಕೆಲಸ ಮಾಡಿದ. 1923–29ರ ಅವಧಿಯಲ್ಲಿ ಐದು ಸಂಪುಟಗಳ 'ಜಗತ್ತಿನ ಸಂದಿಗ್ಧಕಾಲ' ಎಂಬ ಕೃತಿಯನ್ನು ಬರೆದ. 1929ರಿಂದ ಹತ್ತು ವರ್ಷ ಕಾಲ ಆತನ ರಾಜಕೀಯ ಜೀವನ ಸ್ಥಗಿತವಾಗಿತ್ತು. ಆದರೆ ಆ ಕಾಲವನ್ನು ಗ್ರಂಥರಚನೆಯಲ್ಲಿ ಕಳೆದ. ಜಾನ್ ಚರ್ಚಿಲನ ಬಗೆಗೆ ನಾಲ್ಕು ಸಂಪುಟಗಳ ಗ್ರಂಥ ಬರೆದದ್ದು ಈ ಕಾಲದಲ್ಲಿ. ಅಲ್ಲದೆ 'ಇಂಗ್ಲಿಷ್ ಆಡುವ ಜನರ ಇತಿಹಾಸ' (ನಾಲ್ಕು ಸಂಪುಟಗಳು), 'ನನ್ನ ಜೀವನದ ಆರಂಭಕಾಲ' ಎಂಬ ಆತ್ಮಚರಿತ್ರೆ, 'ವಿಚಾರಗಳು ಮತ್ತು ಸಾಹಸ

ಗಳು', ಉದಾರ ದೃಷ್ಟಿಯ ಉಜ್ವಲ ವ್ಯಕ್ತಿಚಿತ್ರಗಳಾದ 'ಮಹಾನ ಸಮಕಾಲೀನರು' —ಈ ಎಲ್ಲ ಬರೆಹಗಳು ಪ್ರಕಟಗೊಂಡುವು.

ಈ ಶತಮಾನದ ಮೂರನೆಯ ದಶಕದಲ್ಲಿ ಹಿಟ್ಲರ್ ಜರ್ಮನಿಯ ಸೇನಾ ಬಲವನ್ನು ಬೆಳೆಸುತ್ತಿದ್ದಾಗ, ಅದರಿಂದ ಅಪಾಯ ಉಂಟೆಂಬುದನ್ನು ಗ್ರಹಿಸಿದ ಚರ್ಚಿಲ್, ಆ ಬಗೆಗೆ ತನ್ನ ಜನಾಂಗಕ್ಕೆ ಹಲವಾರು ಬಾರಿ ಎಚ್ಚರಿಕೆ ಕೊಟ್ಟ. 1939ರಲ್ಲಿ ಎರಡನೆಯ ಮಹಾಯುದ್ಧ ಆರಂಭವಾಯಿತು. ಈ ಯುದ್ಧದಲ್ಲಿ ಬ್ರಿಟನ್ ಸೋಲುಗಳಿಗೆ ಗುರಿಯಾದಮೇಲೆ ಚರ್ಚಿಲ್‌ಗೆ ರಾಷ್ಟ್ರದ ನಾಯಕತ್ವವನ್ನು ವಹಿಸುವ ಕರೆ ಬಂತು. ಆ ವಿಷಮ ಪರಿಸ್ಥಿತಿಯಲ್ಲಿ ಆತ ಬ್ರಿಟನಿನ ಪ್ರಧಾನಿಯಾದ. ನಿರಂತರವಾಗಿ ದುಡಿದು, ಬ್ರಿಟನಿಗೆ ವಿಜಯ ಗಳಿಸಿಕೊಟ್ಟ.

ಮಹಾಯುದ್ಧಾನಂತರ 1945ರಲ್ಲಿ ಮಹಾಚುನಾವಣೆ ನಡೆದಾಗ ಚರ್ಚಿಲನ ಪಕ್ಷಕ್ಕೆ ಜಯ ದೊರೆಯಲಿಲ್ಲ. ಚರ್ಚಿಲನ ದೃಷ್ಟಿ ಮತ್ತೆ ಬರೆವಣಿಗೆಯ ಕಡೆಗೆ ತಿರುಗಿತು. 1948–54ರ ಅವಧಿಯಲ್ಲಿ ಆತ ಎರಡನೆಯ ಮಹಾಯುದ್ಧವನ್ನು ಕುರಿತ ತನ್ನ ಮೇರುಕೃತಿಯನ್ನು ರಚಿಸಿದ. ಚರ್ಚಿಲ್ 1951ರಲ್ಲಿ ಪುನಃ ಪ್ರಧಾನಿ ಪದವಿಗೆ ಆಯ್ಕೆಯಾದ. ಆದರೆ 1955ರಲ್ಲಿ ಅದಕ್ಕೆ ರಾಜೀನಾಮೆ ಇತ್ತ.

1965 ಜನವರಿ 24ರಂದು ಚರ್ಚಿಲ್ ನಿಧನನಾದ. ರಾಷ್ಟ್ರನಾಯಕನಿಗೆ ಒಪ್ಪುವ ಗೌರವಗಳೊಡನೆ ಅಂತಿಮಕ್ರಿಯೆ ನಡೆಯಿತು.

ಸ್ಫುಟವಾದ ಅಭಿವ್ಯಕ್ತಿ. ಕಸುವಿನ ಬರಹ, ಒಳ್ಳೆಯ ಪದಗಳ ಜೋಡಣೆ —ಚರ್ಚಿಲನ ಈ ಶೈಲಿ ಮೆಚ್ಚುವಂಥದ್ದು. ಚಿತ್ರಕಲೆಯಲ್ಲಿಯೂ ಆತನಿಗೆ ಆಸಕ್ತಿ ಇದ್ದಿತು.

ನೋಡಿ : ಚರ್ಚಿಲ್–ಸಂಪುಟ ೧

## ಚರಿತ್ರಪೂರ್ವ ಕಲೆ

"ಮಾನವ ಚಿತ್ರರಚನೆಯಲ್ಲಿ ತೊಡಗಿದ್ದು ಯಾವಾಗ?" "ಮೊದಲು ಮೊದಲು ಅವನು ರಚಿಸಿದ ಚಿತ್ರಗಳು ಯಾವುವು?" "ಅವು ಎಲ್ಲಿವೆ?"

ಈ ಜಗತ್ತಿನಲ್ಲಿ ಮೊಟ್ಟಮೊದಲು ಚಿತ್ರರಚನೆಯಲ್ಲಿ ತೊಡಗಿದವನು ಪುರಾತನ ಶಿಲಾಯುಗದ ಮಾನವ ಎನ್ನಬಹುದು. ಆಗ ಅವನು ಗವಿಗಳಲ್ಲಿ ವಾಸಿಸುತ್ತಿದ್ದ. ತಾನು ಬೇಟೆಯಾಡಿದ ಪ್ರಾಣಿಗಳನ್ನು ತಿಂದು ಜೀವಿಸುತ್ತಿದ್ದ. ಆ ಸ್ಥಿತಿಯಲ್ಲಿದ್ದಾಗಲೇ ಅವನು ಗವಿಗಳ ಬಂಡೆಗಳ ಮೇಲೆ ಚಿತ್ರಗಳನ್ನು ಬರೆದದ್ದು, ಕೊರೆದದ್ದು.

ಇದು ಸುಮಾರು ಇಪ್ಪತ್ತು ಸಾವಿರ ವರ್ಷಗಳು ಮತ್ತು ಅದಕ್ಕಿಂತ ಹಿಂದಿನ ಕಾಲದಲ್ಲಿ ನಡೆದಿರಬಹುದು. ಆ ಕಾಲದ ಮಾನವ ಚಿತ್ರಿಸಿದ್ದು ಪ್ರಧಾನವಾಗಿ ಅವನ ಸುತ್ತಮುತ್ತ ಇದ್ದ, ಅವನನ್ನು ಆಕರ್ಷಿಸಿದ್ದ ಪ್ರಾಣಿಗಳನ್ನು. ಇವಲ್ಲದೆ ಕೆಲವು ಇತರ ಚಿತ್ರಗಳನ್ನೂ —ಎಂದರೆ ತನ್ನ ಸಂಗಡಿಗರಾದ ಜನರ, ಚಿತ್ತಾರಗಳನ್ನೂ —ಆತ ಬರೆದಿದ್ದಾನೆ. ಆ ಚಿತ್ರಗಳನ್ನು ಜಗತ್ತಿನ ವಿವಿಧ ಭಾಗಗಳಲ್ಲಿರುವ ಕೆಲವು ಗುಹೆಗಳಲ್ಲಿ ನಾವು ಇಂದಿಗೂ ನೋಡಬಹುದಾಗಿದೆ. ಇಂಥ ಗುಹೆಗಳಲ್ಲಿ ಕೆಲವು ಫ್ರಾನ್ಸಿನಲ್ಲಿ, ಸ್ಪೇನಿನಲ್ಲಿ ಇವೆ. ಭಾರತ, ಆಫ್ರಿಕ ಮುಂತಾದ ಇತರ ಪ್ರದೇಶಗಳಲ್ಲೂ ಕಂಡುಬಂದಿವೆ.

ಫ್ರಾನ್ಸಿನ ದಕ್ಷಿಣ ಭಾಗದಲ್ಲಿರುವ ಲಾಸ್ಕೊ ಗವಿಗಳಲ್ಲಿರುವ ಚಿತ್ರಗಳು ಸುಮಾರು ಇಪ್ಪತ್ತು ಇಪ್ಪತ್ತೈದು ಸಾವಿರ ವರ್ಷಗಳ ಹಿಂದೆ ರಚಿಸಲ್ಪಟ್ಟಿರಬೇಕು ಎಂಬುದು ತಜ್ಞರ ಅಭಿಪ್ರಾಯ. ಈ ಗವಿಯೊಂದರ ಬಂಡೆಗಳ



20-25 ಸಾವಿರ ವರ್ಷಗಳಿಗೆ ಹಿಂದಿನ ಗವಿಚಿತ್ರ

ಮೇಲೆ ಸುಮಾರು 16 ಅಡಿ ಉದ್ದದ ಎತ್ತುಗಳ ಹಾಗೂ ಇತರ ಪ್ರಾಣಿಗಳ ಚಿತ್ರಣವಿದೆ. ಆದರೆ ಇತರ ಪ್ರಾಣಿಗಳ ಚಿತ್ರಗಳ ಆಕಾರ ಎತ್ತುಗಳ ಚಿತ್ರಗಳಷ್ಟು ದೊಡ್ಡದಲ್ಲ.

ಲಾಸ್ಕೊ ಗವಿಗಳಲ್ಲಿರುವ ಚಿತ್ರಗಳಷ್ಟು ಹಳೆಯವಲ್ಲದ ಗವಿ ಚಿತ್ರಗಳನ್ನು ಸ್ಪೇನ್ ದೇಶದ ಅಲ್ಟಮಾರಕ್ಕೆ ಸಮೀಪದಲ್ಲಿರುವ ಗುಹೆಗಳಲ್ಲಿ ಕಾಣಬಹುದು. ಇವು ಕೂಡ ಪುರಾತನ ಕಾಲಕ್ಕೆ ಸೇರಿದುವೇ.

ಈ ಗವಿ ಚಿತ್ರಗಳಲ್ಲಿ ಮೈಮೇಲೆ ಕೂದಲುಳ್ಳ ಘೇಂಡಾಮೃಗ, ಕರಡಿ, ಕಾಡುಹಂದಿ, ಕಾಡುಕುದುರೆ, ಜಿಂಕೆ ಬಹು ಹಿಂದಿನ ಕಾಲದಲ್ಲಿ ವಾಸಿಸುತ್ತಿದ್ದ ತುಂಬ ದೊಡ್ಡ ಆಕಾರದ ಒಂದು ಪ್ರಾಣಿ —ಇವೆಲ್ಲ ಇವೆ. ಈ ಚಿತ್ರಗಳಲ್ಲಿ ಆಯಾ ಪ್ರಾಣಿಗಳ ಅಪಾರ ಶಕ್ತಿ, ಅವುಗಳನ್ನು ಬೇಟೆಯಾಡುವುದರ ಅಪಾಯಗಳು ತುಂಬ ಪರಿಣಾಮಕಾರಿಯಾಗಿ ಮೂಡಿವೆ. ದೃಢವಾದ ರೇಖೆಗಳಲ್ಲಿ ಬರೆದಿರುವ ಚಿತ್ರಗಳಿವೆ.

ಗವಿಚಿತ್ರಗಳ ರಚನೆಗಾಗಿ ಉಪಯೋಗಿಸಿರುವ ಬಣ್ಣಗಳು ಕೆಲವೇ ಕೆಲವು. ಕಾವಿ, ಕಪ್ಪು, ನಸುಹಳದಿ. ಕಂದು ಬಣ್ಣದ ಮಣ್ಣನ್ನೂ ಇದ್ದಿಲನ್ನೂ ಪ್ರಾಣಿಗಳ ಕೊಬ್ಬಿನೊಡನೆ ಬೆರೆಸಿ ಈ ಬಣ್ಣಗಳನ್ನು ತಯಾರಿಸುತ್ತಿದ್ದರೆಂದು ತೋರುತ್ತದೆ. ಪ್ರಾಣಿಗಳ ಕೂದಲನ್ನು ಮೂಳೆಯ ನಾಳದಲ್ಲಿ ಸಿಕ್ಕಿಸಿ ಅದನ್ನು ಚಿತ್ರರಚನೆಯ ಕುಂಚವನ್ನಾಗಿ ಉಪಯೋಗಿಸುತ್ತಿದ್ದರು.

ಈ ಚಿತ್ರಗಳು ಉತ್ತಮ ಕಲಾಕೃತಿಗಳೆಂಬುದರಲ್ಲಿ ಅನುಮಾನವಿಲ್ಲ. ಏಕೆಂದರೆ ಅವು ಸತ್ವಪೂರ್ಣವಾಗಿ, ನೈಜವಾಗಿ ಕಾಣುತ್ತವೆ : ಜೀವಕಳೆಯಿಂದ ಕೂಡಿವೆ.

ಗುಹೆಗಳಲ್ಲಿ ಕಾಣುವ ಕೆಲವು ಸರಳವಾದ ಹಾಗೂ ಜಟಿಲವಾದ ರೇಖಾ ಚಿತ್ರಗಳು. ಚುಕ್ಕಿಗಳ ಸಮೂಹ ಮುಂತಾದುವು ಸಾಂಕೇತಿಕವಾದುವು. ಇವು ಆಗಿನ ಕಾಲದ ಮಾನವನ ಮಾಟಕ್ರಿಯೆಗಳಿಗೆ ಸಂಬಂಧಿಸಿದುವಾಗಿರಬಹುದು ಎಂಬ ಅಭಿಪ್ರಾಯವಿದೆ.

ಲಾಸ್ಕೊ ಗುಹೆಯೊಂದರಲ್ಲಿ ಗಮನಾರ್ಹವಾದ ಒಂದು ಸ್ತ್ರೀ ವಿಗ್ರಹ ಇದೆ. ಇದು ಸುಣ್ಣಕಲ್ಲಿನ ಮೇಲೆ ಉಬ್ಬು ಚಿತ್ರವಾಗಿ ಕೆತ್ತಲ್ಪಟ್ಟಿದೆ. ಬಲಗೈಯಲ್ಲಿ ಯಾವುದೋ ಪ್ರಾಣಿಯ ಕೊಂಬನ್ನು ಹಿಡಿದಿರುವಂತಿದೆ.

ಗುಹೆಗಳಲ್ಲಿ ಚಿತ್ರಗಳೂ ಶಿಲ್ಪಗಳೂ ಪ್ರಕೃತಿಯ ವಿಕೋಪದಿಂದ ಪಾರಾಗಿ ಸುರಕ್ಷಿತವಾಗಿದ್ದುದರಿಂದ, ಅವು ಉತ್ತಮ ಸ್ಥಿತಿಯಲ್ಲಿ ಉಳಿದಿವೆ. ಗುಹೆಗಳಿಂದ ಹೊರಗೆ ಶಿಲಾಯುಗದ ಮಾನವನ ಚಟುವಟಿಕೆಯ ಕ್ಷೇತ್ರವಾಗಿದ್ದ

[illegible] ನಮಗೆ [illegible] ಆಯುಧದ ಹಿಡಿಗಳು [illegible] ಈ ವರ್ಗಕ್ಕೆ ಸೇರಿದುವು. ಇವು ಕಾಲದ [illegible] ಆ ಕಾಲದ ಮಾನವನ ಕಲಾವಂತಿಕೆಗೆ ನಿದರ್ಶನಗಳಾಗಿವೆ.



9,000 ವರ್ಷಗಳಿಗೆ ಹಿಂದೆ ಕಲ್ಲಿನಲ್ಲಿ ಕೊರೆದ ಚಿತ್ರ
—ಪೂರ್ವ ಸ್ಪೇನಿನ ಕಣಿವೆಯಲ್ಲಿ

ಗವಿಚಿತ್ರಗಳು ಭಾರತದ ಕೆಲವು ಪ್ರದೇಶಗಳಲ್ಲೂ ಕಂಡುಬಂದಿವೆ. ಆಂಧ್ರದ ಕುಪ್ಪಗಲ್ಲಿನ ಸಮೀಪದ ಒಂದು ಗವಿಯಲ್ಲಿರುವ ಚಿತ್ರದಲ್ಲಿ ಇಬ್ಬರು ಒಂದು ಗೂಳಿಯನ್ನು ಪಾಶದಿಂದ ಹಿಡಿಯುತ್ತಿರುವುದನ್ನು ಚಿತ್ರಿಸಲಾಗಿದೆ. ಹಾಗೆಯೇ ಹುಲಿ, ಆರು ಕಿರಣಗಳ ನಕ್ಷತ್ರ, ಮುಖವಾಡ ಹಾಕಿಕೊಂಡು ಕುಣಿಯುತ್ತಿರುವ ಜನರ ಚಿತ್ರಗಳೂ ಅಲ್ಲಿವೆ.

ತನ್ನನ್ನು ಆಕರ್ಷಿಸಿದ ದೃಶ್ಯ ಸನ್ನಿವೇಶಗಳು, ತನ್ನ ಸಾಧನೆ ಚಟುವಟಿಕೆಗಳು, ಭಾವನೆಗಳು —ಇವಕ್ಕೆಲ್ಲ ಚಿತ್ರ ರೂಪದಲ್ಲೂ ಶಿಲ್ಪರೂಪದಲ್ಲೂ ಅಭಿವ್ಯಕ್ತಿ ನೀಡಲು ಮಾನವ ಎಂದಿನಿಂದಲೂ ಪ್ರಯತ್ನಿಸಿದ್ದಾನೆ. ಸೌಂದರ್ಯಪ್ರಜ್ಞೆ ಅವನ ಗುಣಗಳಲ್ಲೊಂದು. ಈ ಅಂಶ ಚರಿತ್ರಪೂರ್ವ ಕಾಲದ ಕಲಾಕೃತಿಗಳಿಂದ ವ್ಯಕ್ತವಾಗುತ್ತದೆ.

## ಚಲಚ್ಚಿತ್ರ

ಒಳ್ಳೆಯ ಚಲಚ್ಚಿತ್ರ ಒಳ್ಳೆಯ ಊಟದ ಹಾಗೆ. ಅದು ಸಿಕ್ಕುವುದು ಯಾವಾಗಲೋ ಒಮ್ಮೊಮ್ಮೆ. ಆದರೆ ಅದಕ್ಕಾಗಿ ಕಾದು ಊಟ ಮಾಡುವುದನ್ನು ನಿಲ್ಲಿಸುವಂತಿಲ್ಲವಲ್ಲ. ಪಟ್ಟಣವಾಸಿಗಳಿಗಂತೂ ಚಲಚ್ಚಿತ್ರ ಜೀವನದ ಒಂದು ಅಂಗವೇ ಆಗಿದೆ. ವಾರಕ್ಕೊಂದು ಅಲ್ಲದೆ ಹೋದರೂ ತಿಂಗಳಿಗೊಂದಾದರೂ ಚಲಚ್ಚಿತ್ರ ನೋಡದೆ ಹೋದರೆ ಹೇಗೆ ಹೇಗೋ ಆಗುತ್ತದೆ. ಅಲ್ಲದೆ ಎಲ್ಲ ವರ್ಗದ ಜನರ ಕೈಗೆ ಎಟಕುವಂಥ ಮನೋರಂಜನೆ ಇದೊಂದೇ. ಆದ್ದರಿಂದ ಈ ಮನೋರಂಜನೆಯನ್ನು ಪಡೆಯಲು ಜನರ ನೂಕುನುಗ್ಗಲು.

ಚಲಚ್ಚಿತ್ರ ಯಂತ್ರಯುಗದ ಮಗು. ಆದರೆ ಈಗ ಅದು ಒಂದು ಸ್ವತಂತ್ರ ಕಲೆ. ಮೊದಮೊದಲು ರಸ್ತೆಯ ದೃಶ್ಯ, ಉಗಿಬಂಡಿ ರೈಲು ನಿಲ್ದಾಣಕ್ಕೆ ಬರುವುದು, ಗಣ್ಯಮನುಷ್ಯರ ಭೇಟಿ —ಇಂಥ ಸಂದರ್ಭಗಳಲ್ಲಿ ಮಾತ್ರ ಚಲಚ್ಚಿತ್ರ ಕ್ಯಾಮೆರಾವನ್ನು ಉಪಯೋಗಿಸುತ್ತಿದ್ದರು. 19ನೆಯ ಶತಮಾನದ ಕೊನೆಯಲ್ಲಿ ಕಥಾವಸ್ತುವಿರುವ ಚಲಚ್ಚಿತ್ರ ನಿರ್ಮಾಣದ ಮೊದಲ ಪ್ರಯತ್ನ ನಡೆಯಿತು. 'ಸಿಂಡರೆಲ್ಲಾ' (1899) ಫ್ರಾನ್ಸಿನಲ್ಲಿ ತಯಾರಾದ ಪ್ರಥಮ ಕಥಾಚಿತ್ರ. ನಾಲ್ಕು ವರ್ಷಗಳ ಬಳಿಕ ಅಮೆರಿಕದಲ್ಲಿ ತಯಾರಾದ 'ದಿ ಗ್ರೇಟ್ ಟ್ರೇನ್ ರಾಬರಿ' ಕಥೆ ಹೇಳಲು ಚಲಚ್ಚಿತ್ರ ಎಷ್ಟು ಒಳ್ಳೆಯ ಮಾಧ್ಯಮ ಎಂಬುದನ್ನು ತೋರಿಸಿತು.

ಅಲ್ಲಿಂದ ಮುಂದೆ ಚಲಚ್ಚಿತ್ರದ್ದು ನಿರಂತರ ಅಭಿವೃದ್ಧಿಯ ಇತಿಹಾಸ. ಪ್ರತಿ ಪಟ್ಟಣದಲ್ಲೂ ಹಳೇ ಅಂಗಡಿಯೊಂದನ್ನು ಮಾರ್ಪಡಿಸಿ ಚಲಚ್ಚಿತ್ರ ಮಂದಿರವನ್ನಾಗಿ ಮಾಡಿದರು. ಒಂದು ನಿಕಲ್ ನಾಣ್ಯ (ಐದು ಸೆಂಟ್) ಕೊಟ್ಟು ಪ್ರವೇಶ ದೊರಕಿಸಿಕೊಳ್ಳುವ ಇಂಥ ಅಂಗಡಿಗಳಿಗೆ 'ನಿಕಲೋಡಿಯನ್' ಎನ್ನುತ್ತಿದ್ದರು. ಅದು ಮೂಕಚಿತ್ರಗಳ ಕಾಲ. ಆದ್ದರಿಂದ ಸಂಭಾಷಣೆ ಸನ್ನಿವೇಶಗಳನ್ನು ವಿವರಿಸುವುದಕ್ಕೆ ದೃಶ್ಯಗಳಿಗೆ ಅಲ್ಲಲ್ಲಿ ಶೀರ್ಷಿಕೆಗಳನ್ನು ಸೇರಿಸುತ್ತಿದ್ದರು. ಸಿನೆಮಾಮಂದಿರಗಳಲ್ಲಿ ಪಿಯಾನೋ ವಾದಕನೊಬ್ಬ ಎಡೆಬಿಡದೆ ಪಿಯಾನೋ ಬಾರಿಸುತ್ತ ಚಿತ್ರದ ಸನ್ನಿವೇಶಗಳಿಗೆ ತಕ್ಕಂತೆ 'ಹಿನ್ನೆಲೆ ಸಂಗೀತ' ಒದಗಿಸುತ್ತಿದ್ದ.

ಅಷ್ಟಿದ್ದರೂ ಆಗಿನ ಚಿತ್ರಗಳು ಇಪ್ಪತ್ತು–ಮೂವತ್ತು ಮಿನಿಟುಗಳಿಗಿಂತ ಹೆಚ್ಚಾಗುತ್ತಿರಲಿಲ್ಲ. ಪ್ರೇಕ್ಷಕರ 'ದುಡ್ಡಿಗೆ ತಕ್ಕ ಪ್ರತಿಫಲ' ಕೊಡಲು ಸಿನೆಮಾ ವ್ಯವಸ್ಥಾಪಕರು ಚಿತ್ರದ ಜೊತೆಗೆ ನರ್ತಕರ, ಜಾದೂಗಾರರ ಪ್ರದರ್ಶನವನ್ನೂ ಏರ್ಪಡಿಸುತ್ತಿದ್ದರು. 1915ರಲ್ಲಿ ಅಮೆರಿಕದ ಚಲಚ್ಚಿತ್ರ ನಿರ್ಮಾಪಕ ಡೇವಿಡ್ ವಾರ್ಕ್ ಗ್ರಿಫಿತ್ 'ದಿ ಬರ್ತ್ ಆಫ್ ಎ ನೇಷನ್' ಎಂಬ ಮೂರು ಗಂಟೆಗಳ ಚಿತ್ರವನ್ನು ತಯಾರಿಸಿ ಇತಿಹಾಸ ಪುರುಷನಾದ. ದೊಡ್ಡ ಪ್ರಮಾಣದಲ್ಲಿ ಹಣವನ್ನು ಖರ್ಚುಮಾಡಿ ಭವ್ಯವಾದ ಚಿತ್ರಗಳನ್ನು ತಯಾರಿಸಲು ಮುಂದಡಿ ಇಟ್ಟವನು ಈತ. 'ಜಗತ್ತಿನ ಪ್ರೇಯಸಿ' ಎನಿಸಿದ ತಾರೆ ಮೇರಿ ಪಿಕ್‌ಫರ್ಡನ್ನು ರಜತಪರದೆಗೆ ಕರೆತಂದವನೂ ಇವನೇ.

ತನ್ನ ಹಾಸ್ಯಾಭಿನಯದಿಂದ ಇಡೀ ಜಗತ್ತನ್ನೇ ಮರುಳುಗೊಳಿಸಿದ ನಟ ಚಾರ್ಲಿ ಚಾಪ್ಲಿನ್ ಚಲಚ್ಚಿತ್ರ ಪ್ರಪಂಚವನ್ನು ಪ್ರವೇಶಿಸಿದ್ದು 1913ರಲ್ಲಿ. ಒಂದೆರಡು ವರ್ಷಗಳಲ್ಲೇ ಈತ ಜಗತ್ಪ್ರಸಿದ್ಧನಾದ. ಮುಂದೆ ಹಲವು ದಶಕಗಳ ಕಾಲ ಚಾರ್ಲಿ ಚಾಪ್ಲಿನ್ ಚಿತ್ರರಂಗದ ಜನಪ್ರಿಯ ನಟನಾದ. ನಟನೆಯೊಂದಿಗೆ ನಿರ್ಮಾಪಕ ವೃತ್ತಿಯನ್ನು ಕೈಗೊಂಡು ಉತ್ತಮ ಕಲಾತ್ಮಕ ಚಿತ್ರಗಳನ್ನು ನಿರ್ಮಿಸಿದ.

ಜನರ ಕುತೂಹಲವನ್ನು ಕೆರಳಿಸಲು ಆ ಕಾಲದಲ್ಲಿ ಇದ್ದ ವ್ಯವಸ್ಥೆ ಎಂದರೆ ಧಾರಾವಾಹೀ ಚಿತ್ರಗಳು. ಈ ಧಾರಾವಾಹಿಗಳಲ್ಲಿ ಇಪ್ಪತ್ತು ಮಿನಿಟುಗಳ ನಾಲ್ಕಾರು ಭಾಗಗಳು. ಪ್ರತಿ ವಾರವೂ ಒಂದೊಂದು ಭಾಗದ ಪ್ರದರ್ಶನ. ಪ್ರತಿ ಭಾಗವೂ ಕುತೂಹಲಕಾರಿ ಸನ್ನಿವೇಶದಲ್ಲಿ ನಿಂತುಬಿಡುತ್ತಿತ್ತು. ನಾಯಕ ಅಥವಾ ನಾಯಕಿ ಭಾರೀ ಪ್ರಪಾತದ ತುದಿಯಲ್ಲಿ ಅಪಾಯಕರ ರೀತಿಯಲ್ಲಿ ತೂಗಾಡುತ್ತಿರುವ ಅಥವಾ ಪ್ರಪಾತದೊಳಕ್ಕೆ ಧುಮುಕುವಂಥ ದೃಶ್ಯ ಇರುತ್ತಿದ್ದುದರಿಂದ ಇಂಥ ಚಿತ್ರಗಳು 'ಪ್ರಪಾತದಲ್ಲಿ ತೂಗಾಡುವ ಚಿತ್ರ'ಗಳೆಂದು ಹೆಸರಾಗಿದ್ದುವು. ಮುಂದೇನಾಯಿತು ಎಂಬುದನ್ನು ತಿಳಿಯಲು ಪ್ರೇಕ್ಷಕರು ಒಂದು ವಾರ ಕಾಲ ಕಾಯುತ್ತಿದ್ದರು.

ಮೂಕಚಿತ್ರಗಳು ಆರಂಭವಾಗಿ, ಇಪ್ಪತ್ತು ವರ್ಷಗಳಲ್ಲಿ ಇವುಗಳ ತಯಾರಿ ಭಾರೀ ಉದ್ಯಮವಾಗಿ ಬೆಳೆಯಿತು. ಅಮೆರಿಕದ ಹಾಲಿವುಡ್, ಚಲಚ್ಚಿತ್ರಗಳನ್ನು ಉತ್ಪಾದಿಸುವ ಕ್ಷೇತ್ರವಾಯಿತು. ಭಾರತದಲ್ಲೂ ಮುಂಬಯಿ,

ಕಲ್ಕತ್ತಾ, ಮದರಾಸುಗಳು ಚಿತ್ರ ತಯಾರಿಕೆಯ ಕೇಂದ್ರಗಳಾದುವು. ಜನರು ಆಗ ತಮ್ಮ ಮನೋರಂಜನೆಗಾಗಿ ಖರ್ಚುಮಾಡುತ್ತಿದ್ದ ಪ್ರತಿ ಐದು ರೂಪಾಯಿಗಳಲ್ಲಿ, ನಾಲ್ಕು ರೂಪಾಯಿಗಳಷ್ಟು ಚಲಚ್ಚಿತ್ರಗಳಿಗಾಗಿಯೇ ವೆಚ್ಚವಾಗುತ್ತಿತ್ತು. 1920ರ ಅನಂತರದ ಒಂದು ದಶಕವನ್ನು 'ಮೂಕ ಚಿತ್ರಗಳ ಸುವರ್ಣ ಯುಗ' ಎನ್ನಬಹುದು.

1929ರಲ್ಲಿ ವಾಕ್ಚಿತ್ರಗಳ ಆಗಮನದಿಂದ ಚಲಚ್ಚಿತ್ರ ಕಲೆ ಕೆಲ ಕಾಲದವರೆಗೆ ಕುಂಠಿತವಾಯಿತೆನ್ನಬೇಕು. ಚಲಚ್ಚಿತ್ರಗಳಿಗಾಗಿ ಸಂಭಾಷಣೆ ಬರೆಯುವ, ಹಾಡುಗಳನ್ನು ಅಳವಡಿಸುವ ಸಮಸ್ಯೆಗಳು ಮೂಡಿದುವು. ನಟನೆ ಮಾಡುತ್ತ ಮಾತನ್ನೂ ಆಡುವುದು ಹೇಗೆ ಎಂಬುದು ಆಗಿನ ಚಿತ್ರತಾರೆಯರನೇಕರಿಗೆ ಸಮಸ್ಯೆಯಾಗಿತ್ತು. ವಾಕ್ಚಿತ್ರಗಳನ್ನು ನಿರ್ದೇಶಿಸಲು ಎಲ್ಲೆಲ್ಲಿಂದಲೋ ಅವಸರ ಅವಸರವಾಗಿ ನಾಟಕ ನಿರ್ದೇಶಕರನ್ನು ಕರೆಸಬೇಕಾಯಿತು. ಜನರ ಮೆಚ್ಚಿನ ಕೆಲ ನಾಯಕ ನಟರಿಗೆ ಕೀರಲು ಧ್ವನಿ ಇದ್ದು ಅವರು ನಾಯಕ ಪಾತ್ರಕ್ಕೇ ಅನರ್ಹರೆನಿಸಿಕೊಂಡರು. ಅಂತೂ ವಾಕ್ಚಿತ್ರಗಳ ಆರಂಭಕಾಲದಲ್ಲಿ ಆದ ಗೊಂದಲದಲ್ಲಿ ಎದ್ದವರೆಷ್ಟೋ ಬಿದ್ದವರೆಷ್ಟೋ.



ಚಾಪ್ಲಿನ್ : ನಟ, ನಿರ್ಮಾಪಕ

ಮಾತಿನ ಜೋಡಣೆಯಾದ ಮೇಲೆ ನಾಟಕ ರಂಗಕ್ಕೆ ಚಲಚ್ಚಿತ್ರ ಮತ್ತಷ್ಟು ಪ್ರಬಲ ಪ್ರತಿಸ್ಪರ್ಧಿಯಾಯಿತು. ಅಮೆರಿಕದಲ್ಲಿ ಒಂದು ಕಾಲಕ್ಕೆ ವೃತ್ತಿ ರಂಗಭೂಮಿಗಿಂತ ಐನೂರು ಪಟ್ಟು ಜನರು ಸಿನೆಮಾಗಳಿಗೆ ಹೋಗುತ್ತಿದ್ದರು. ವರ್ಣರಂಜಿತ ಚಿತ್ರಗಳ ತಯಾರಿಯ ತಂತ್ರ ರೂಪಿಸಲ್ಪಟ್ಟ ಮೇಲೆ, ವಾಕ್ಚಿತ್ರಗಳಿಗೆ ಮತ್ತಷ್ಟು ಸೊಗಸು ಬಂತು. 1939ರಲ್ಲಿ ರಚಿತವಾದ 'ಗಾನ್ ವಿದ್ ದಿ ವಿಂಡ್' ಒಂದು ಮಹಾನ್‌ಕೃತಿ. ಆಡಂಬರದ ವೇಷ ಭೂಷಣಗಳು, ಚಿತ್ರ ನಿರ್ಮಾಣದಲ್ಲಿ ಉಪಯೋಗಿಸಲೆಂದೇ ರಚಿತವಾದ ಮನೆ, ಹಳ್ಳಿಗಳು ಮುಂತಾದುವುಗಳಿಂದ ಕೂಡಿದ ಈ ಚಿತ್ರ 'ಬರ್ತ್ ಆಫ್ ಎ ನೇಷನ್' ನಂತೆಯೇ ಚಲಚ್ಚಿತ್ರದ ಚರಿತ್ರೆಯಲ್ಲೊಂದು ಹೆಗ್ಗುರುತು.

ಚಲಚ್ಚಿತ್ರ ಆರಂಭವಾದಂದಿನಿಂದಲೂ ಜನರಿಗೆ ಕೆಲವೇ ಪ್ರಮುಖ ನಾಯಕ, ನಾಯಕಿಯರೇದರೆ ಅಚ್ಚುಮೆಚ್ಚು. ಚಲಚ್ಚಿತ್ರ ಯಶಸ್ವಿಯಾಗಬೇಕಾದರೆ ಇಂಥವರು ಒಬ್ಬಿಬ್ಬರಾದರೂ ಚಿತ್ರದಲ್ಲಿ ಅಭಿನಯಿಸಲೇಬೇಕು. ಆದರೆ ಇಂಥ ಜನಪ್ರಿಯ ನಟ, ನಟಿಯರು ಒಂದು ಚಿತ್ರದಲ್ಲಿ ನಟಿಸಲು ಲಕ್ಷಾಂತರ ರೂಪಾಯಿ ಕೊಡಬೇಕು. ಗ್ರೆಟಾ ಗಾರ್ಬೊ, ಕ್ಲಾರ್ಕ್



ರೈಲು ನಿಲ್ದಾಣ : ಮೊದಲ ಸಾಕ್ಷ್ಯ ಚಲಚ್ಚಿತ್ರ

ಗೇಬ್‌ಲ್, ಗ್ರೆಗರಿ ಪೆಕ್, ಸಿಡ್ನಿ ಪಾಯ್‌ಟ್ಯರ್, ಕ್ಯಾಥರೀನ್ ಹೆಪ್‌ಬರ್ನ್, ವಿವಿಯನ್ ಲೀ, ಎಲಿಜಬೆತ್ ಟೇಲರ್, ರಿಚರ್ಡ್ ಬರ್ಟನ್, ರೆಕ್ಸ್ ಹ್ಯಾರಿಸನ್ ಮುಂತಾದವರು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿರುವ ನಟನಟಿಯರಲ್ಲಿ ಕೆಲವರು.

ಕಾರ್ಟೂನ್ ಚಿತ್ರಗಳು ಚಲಚ್ಚಿತ್ರದ ಒಂದು ಬಗೆ. ಸಾಮಾನ್ಯ ಚಲಚ್ಚಿತ್ರಗಳಲ್ಲಿ, ಚಿತ್ರಕಥೆಯ ಸನ್ನಿವೇಶಗಳನ್ನು ನಟ ನಟಿಯರು ಅಭಿನಯಿಸುತ್ತಾರಷ್ಟೆ ? ಕಾರ್ಟೂನ್ ಚಿತ್ರಗಳಲ್ಲಿ ನಟಿಸುವವರು ಮಿಕ್ಕಿ ಮೌಸ್, ಡೊನಾಲ್ಡ್ ಡಕ್‌ನಂಥ ಕಾಲ್ಪನಿಕ ಪ್ರಾಣಿಗಳು. ಕಥೆಯ ಸನ್ನಿವೇಶವನ್ನು ನೂರಾರು ಕ್ರಮಿಕ ರೇಖಾಚಿತ್ರಗಳಲ್ಲಿ ಬರೆದು ಅದನ್ನು ಚಲಚ್ಚಿತ್ರ ಕ್ಯಾಮೆರಾದ ಮೂಲಕ ಫೋಟೋ ಹಿಡಿದು ಅವು ಉಜ್ಜೀವನಗೊಳ್ಳುವಂತೆ ಮಾಡಿ ತೋರಿಸುವುದು ಕಾರ್ಟೂನ್ ಚಲಚ್ಚಿತ್ರ ತಯಾರಿಯ ವಿಧಾನ. ವಾಲ್ಟ್ ಡಿಸ್ನಿ ಇಂಥ ಚಿತ್ರಗಳನ್ನು ತಯಾರಿಸುವುದರಲ್ಲಿ ಪ್ರಖ್ಯಾತನಾಗಿದ್ದ.

ಕಥಾವಸ್ತುವಿರುವ ಚಲಚ್ಚಿತ್ರದಲ್ಲಿ ಕಾಲ್ಪನಿಕ ಅಂಶವಿದ್ದೇ ಇರುತ್ತದೆ. ಸಾಕ್ಷಿಚಿತ್ರಗಳಲ್ಲಿ—ಡಾಕ್ಯುಮೆಂಟರಿಗಳಲ್ಲಿ— ಇರುವುದು ವಾಸ್ತವಿಕ ಅಂಶಗಳ ಚಿತ್ರಣ. ಕಲ್ಲಿದ್ದಲು ಗಣಿಯ ಕೆಲಸಗಾರರ ಜೀವನ, ಉತ್ತರ ಧ್ರುವ ಪ್ರಯಾಣದ ವೈಶಿಷ್ಟ್ಯಗಳು, ಮಹಾಪುರುಷ



'ದಿ ಕಿಡ್' ಚಿತ್ರದಲ್ಲಿ ವಿಶ್ವವಿಖ್ಯಾತ ಚಾಪ್ಲಿನ್

[illegible] ಚಿತ್ರಗಳ ವಸ್ತು ಮಾಡುತ್ತವೆ. ವಿವಿಧ ದೇಶಗಳ, ಒಂದೇ ದೇಶದ ಬೇರೆ ಬೇರೆ ಭಾಗಗಳ ಜನಜೀವನದ ಪರಿಚಯ ಮಾಡಿಕೊಡುವ [illegible] ಚಿತ್ರಗಳು ತುಂಬ ಸಹಾಯಕವಾಗುತ್ತಿವೆ. ಶಿಕ್ಷಣದಲ್ಲಿ ಸಹಾಯಕ ಮಾಧ್ಯಮವಾಗಿ ಕೂಡ ಚಲಚ್ಚಿತ್ರಗಳನ್ನು ಬಳಸಿಕೊಳ್ಳುವ ಪದ್ಧತಿ ಈಗ ಬೆಳೆದಿದೆ. ಸಮಕಾಲೀನ ಘಟನೆಗಳನ್ನು ಜನರಿಗೆ ತಿಳಿಸಲು 'ನ್ಯೂಸ್ ರೀಲ್'ಗಳು —ವಾರ್ತಾಚಿತ್ರಗಳು— ತಯಾರಾಗುತ್ತಿವೆ.

ಮೂರು ಆಯಾಮಗಳ ಚಿತ್ರ, ಸ್ಟೀರಿಯೋಫೋನಿಕ್ ಧ್ವನಿವ್ಯವಸ್ಥೆ ಮೊದಲಾದ ತಾಂತ್ರಿಕ ಮುನ್ನಡೆಗಳು ಚಲಚ್ಚಿತ್ರದ ರಂಜಕಶಕ್ತಿಗೆ ಪೋಷಕವಾಗಿವೆ. ಆದರೆ ಇಂದಿನ ಎಲ್ಲ ಚಲಚ್ಚಿತ್ರಗಳೂ ಕಲಾದೃಷ್ಟಿಯಿಂದ ಉತ್ತಮವಾಗಿವೆ ಎನ್ನುವಂತಿಲ್ಲ. ಕೇವಲ ಆರ್ಥಿಕ ಲಾಭವನ್ನೇ ಧ್ಯೇಯವಾಗಿಟ್ಟುಕೊಂಡು ಚಲಚ್ಚಿತ್ರ ತಯಾರಿಕೆಗೆ ಕೈಹಾಕುವವರ ಸಂಖ್ಯೆಯೇ ಹೆಚ್ಚು. ಕಲಾತ್ಮಕ ಚಿತ್ರಗಳನ್ನು ತಯಾರಿಸುವ ಉತ್ಸಾಹಿಗಳೂ ಇದ್ದಾರೆ. ಇಂಥ ಚಿತ್ರಗಳಲ್ಲಿ ಖ್ಯಾತ ನಟ ನಟಿಯರಿಲ್ಲ. ಚಿತ್ರ ಹೆಚ್ಚು ವೆಚ್ಚದ್ದೂ ಅಲ್ಲ. ಆದರೆ ಇವರಲ್ಲಿ ಹೃದಯಸ್ಪರ್ಶಿ ಸಂದೇಶವಿರುತ್ತದೆ. ಜೀವನದ ನೈಜ ಚಿತ್ರಣ ಇರುತ್ತದೆ. ಲೋಕದಾದ್ಯಂತ ಇಂಥ ಚಿತ್ರಗಳನ್ನು ನಿರ್ಮಿಸುವವರು ಹೆಚ್ಚಾಗಿ ಹವ್ಯಾಸಿಗಳು.

ಚಲಚ್ಚಿತ್ರ ಜನಪ್ರಿಯವಾದ ಮೇಲೆ ಪ್ರಚಾರಕ್ಕೆ ಬಂದ ಟೆಲಿವಿಷನ್ ಚಲಚ್ಚಿತ್ರಕ್ಕೆ ಪ್ರತಿಸ್ಪರ್ಧಿಯಾಯಿತು. ಚಲಚ್ಚಿತ್ರದಂತೆ ಟೆಲಿವಿಷನ್ ಪ್ರದರ್ಶನಗಳಲ್ಲಿಯೂ ನಾಟಕೀಯ ಕಥಾನಕಗಳನ್ನು ಅಭಿನಯದ ಮೂಲಕ ತೋರಿಸಲಾರಂಭಿಸಿದರು. ಚಲಚ್ಚಿತ್ರಮಂದಿರಗಳಿಗೆ ಹೋಗದೆಯೇ ಮನೆಯಲ್ಲೇ ಕುಳಿತು ಇವನ್ನು ನೋಡಬಹುದೆಂಬುದು ಟೆಲಿವಿಷನ್‌ನ ವಿಶೇಷ ಆಕರ್ಷಣೆ. ಇದಲ್ಲದೆ ಟೆಲಿವಿಷನಿನ ನವೀನತೆಗೂ ಅನೇಕರು ಮಾರುಹೋದರು. ಚಲಚ್ಚಿತ್ರದ ಮೇಲಿದ್ದ ಮೋಹ ಕಡಮೆಯಾಯಿತು. ಇದರಿಂದಾಗಿ ಚಲಚ್ಚಿತ್ರ ಕಲೆ 'ಆತ್ಮ ಪರೀಕ್ಷೆ' ಮಾಡಿಕೊಂಡು ತನ್ನ ಶಕ್ತಿಯನ್ನು ವಿಶಿಷ್ಟ ಮಾರ್ಗದಲ್ಲಿ ಅಭಿವೃದ್ಧಿಪಡಿಸಿಕೊಳ್ಳಬೇಕಾದ ಪರಿಸ್ಥಿತಿ ಉಂಟಾಯಿತು. ಇದನ್ನು ಚಲಚ್ಚಿತ್ರ ಕಲೆ ದಿಟ್ಟತನದಿಂದಲೇ ಇದಿರಿಸುತ್ತಿದೆ ಎನ್ನಬಹುದು.

ಚಲಚ್ಚಿತ್ರ ಇಂದು ಜಗತ್ತಿನ ವಿವಿಧ ಭಾಗಗಳಲ್ಲಿ ಜನಪ್ರಿಯವಾಗಿರುವ ಮನೋರಂಜನೆಯ ಮಾಧ್ಯಮವಾಗಿದೆ. ಅತ್ಯಂತ ಶ್ರೇಷ್ಠ ಕಲಾವಿದರು, ತಾಂತ್ರಿಕರು ಎಷ್ಟೇ ದೂರದಲ್ಲಿರಲಿ, ಜನಸಾಮಾನ್ಯರೂ ಅವರ ಸೃಷ್ಟಿಯನ್ನು ಕಂಡು ಸಂತೋಷಿಸುವುದು ಇದರಿಂದ ಸಾಧ್ಯವಾಗಿದೆ. ಒಂದೆರಡು ಕೋಟಿ ರೂಪಾಯಿಗಳ ಖರ್ಚಿನಲ್ಲಿ ತಯಾರಿಸಿದ ಚಲಚ್ಚಿತ್ರವನ್ನು ನೋಡಲು ಪ್ರೇಕ್ಷಕ ಕೇವಲ ಒಂದೋ ಎರಡೋ ರೂಪಾಯಿ ಕೊಟ್ಟರೆ ಸಾಕು.

ನೋಡಿ : ಭಾರತೀಯ ಚಲಚ್ಚಿತ್ರ ಕಲೆ ; ಮಾರಿಸ್ ಷೆವಾಲಿಯರ್ ; ವಾಲ್ಟ್ ಡಿಸ್ನಿ, ಹಿನ್ನೆಲೆ ಗಾಯನ ; ಹಿನ್ನೆಲೆ ಸಂಗೀತ

## ಚಾಪೆಕ್

ರಾಸಮ್ ಎಂಬಾತ ರಾಬಟ್‌ಗಳನ್ನು (ಯಂತ್ರ ಮಾನವರನ್ನು) ಬೃಹತ್ ಪರಿಮಾಣದಲ್ಲಿ ತಯಾರಿಸುವ ಕಾರಖಾನೆಯ ಒಡೆಯ. ಮನುಷ್ಯನನ್ನು ಹೋಲುವ ಈ ರಾಬಟ್‌ಗಳಿಂದ ಎಲ್ಲ ಕೆಲಸಗಳೂ ಸಮರ್ಪಕವಾಗಿ ಜರಗುತ್ತವೆ. ಎಲ್ಲಿಯವರೆಗೆ ರಾಬಟ್‌ಗಳಿಗೆ ಸಂವೇದನೆ ಇರಲಿಲ್ಲವೋ ಅಲ್ಲಿಯವರೆಗೆ ಮನುಷ್ಯನ ಅವಶ್ಯತೆಗಳೂ ಸುಖ ಸಂತೋಷಗಳೂ ನಿರಾತಂಕವಾಗಿ ಅವುಗಳಿಂದ ನೆರವೇರಿದುವು. ಒಂದು ದಿನ, ಕಾರಖಾನೆಯ ವ್ಯವಸ್ಥಾಪಕ, ಮನುಷ್ಯರಂತೆಯೇ ಸಂವೇದನೆ ನೋವು ನಲಿವುಗಳನ್ನು ಅನುಭವಿಸಬಲ್ಲ ರಾಬಟ್‌ಗಳನ್ನು ತಯಾರಿಸಲು ನಿರ್ಧರಿಸಿದ; ಅವನ್ನು ಸೃಷ್ಟಿಸಿದ. ಇಂಥ ರಾಬಟ್‌ಗಳು ಕೂಡಲೇ ತಮ್ಮ ಮಾನವ ಮಾಲಿಕರ ಮೇಲೆ ದಂಗೆಯೆದ್ದು ಮನುಷ್ಯಕುಲವನ್ನೇ ನಿರ್ನಾಮ ಮಾಡಿದುವು.

ಇದು ಕಾರೆಲ್ ಚಾಪೆಕ್‌ನ ಹೆಸರಾಂತ ನಾಟಕ 'ಆರ್.ಯು.ಆರ್.' (ರಾಸಮ್ಸ್ ಯೂನಿವರ್ಸಲ್ ರಾಬಟ್ಸ್—ರಾಸಮನ ಸಾರ್ವತ್ರಿಕ ರಾಬಟ್‌ಗಳು) ಎಂಬ ನಾಟಕದ ಕಥಾವಸ್ತು. ಆಧುನಿಕ ಯಾಂತ್ರೀಕರಣ ಪ್ರವೃತ್ತಿಯನ್ನು ವಿಡಂಬನೆಗೆ ಗುರಿಮಾಡಿತು ಈ ನಾಟಕ.

ಈ ನಾಟಕದಿಂದಾಗಿ ರಾಬಟ್ ಎಂಬ ಹೊಸ ಪದ ಆಧುನಿಕ ಭಾಷೆಗೆ ಒದಗಿತು; 1922ರಿಂದ ರಾಬಟ್ ಶಬ್ದ ಪ್ರಚುರಗೊಂಡಿತು.

ನಾಟಕಕಾರ, ಕಾದಂಬರಿಕಾರ ಹಾಗೂ ಪ್ರಬಂಧಕಾರ ಎಂಬ ಖ್ಯಾತಿ ಚಾಪೆಕ್‌ಗೆ ಸಲ್ಲುತ್ತದೆ. ಚಾಪೆಕ್ ಬೊಹೀಮಿಯದ (ಇಂದಿನ ಚೆಕೊಸ್ಲೊವಾಕಿಯ) ಮಾಲೆ ಸ್ವಾಟೊನವಿಸ್ ಎಂಬಲ್ಲಿ, 1890 ಜನವರಿ 9ರಂದು ಜನಿಸಿದ. ಪ್ರಾಗ್, ಬರ್ಲಿನ್ ಹಾಗೂ ಪ್ಯಾರಿಸ್‌ಗಳಲ್ಲಿ ತತ್ತ್ವಜ್ಞಾನ ಅಭ್ಯಾಸ ಮಾಡಿದ. ಅನಂತರ ಪ್ರಾಗ್‌ನಲ್ಲಿ ನೆಲೆಸಿದ; ಬರೆಹಗಾರನಾದ. ಮೊದಲನೆಯ ಮಹಾಯುದ್ಧದಲ್ಲಿ ಪತ್ರಿಕೋದ್ಯಮಿಯಾದ.

ಕಾರೆಲ್ ಚಾಪೆಕ್ ಮೊದಲಿಗೆ ತನ್ನ ಸಹೋದರ ಜೋಸೆಫ್ ಚಾಪೆಕ್‌ನ (1887–1945) ಜೊತೆಗೂಡಿ ಪ್ರಬಂಧಗಳನ್ನು ರಚಿಸಿದ. 'ಆರ್.ಯು.ಆರ್.' ಅವನ ಮೊದಲ ನಾಟಕ. ಇದರಿಂದ ಅವನ ಕೀರ್ತಿ ಹರಡಿತು. 'ಸೃಷ್ಟಿಕರ್ತ ಆಡಮ್', 'ಕೀಟಗಳ ಜೀವನ' ಇವು ಸೋದರ ಜೋಸೆಫನ ಜೊತೆಗೂಡಿ ಬರೆದ ಎರಡು ನಾಟಕಗಳು. 'ಕೀಟಗಳ ಜೀವನ'ದಲ್ಲಿ ಆಧುನಿಕ ಲೌಕಿಕವಾದ ಪರಿಹಾಸ್ಯಕ್ಕೆ ಗುರಿಯಾಗಿದೆ. ಚಾಪೆಕ್‌ನ ಮತ್ತೊಂದು ಅರ್ಥಗರ್ಭಿತ ನಾಟಕ, 'ಮಾಕ್ರೊಪೌಲಸನ ರಹಸ್ಯ'. ಅದು ಅಮರತ್ವವನ್ನು ಅರಸುವ ಮನೋವೃತ್ತಿಯ ವಿಡಂಬನೆ. ಅವನ ಕೊನೆಯ ನಾಟಕ 'ಅಧಿಕಾರ ಹಾಗೂ ವೈಭವ' ಯುದ್ಧ ಪಿಪಾಸೆಯನ್ನೂ ಸರ್ವಾಧಿಕಾರವನ್ನೂ ಪ್ರತಿಭಟಿಸುತ್ತದೆ.

ಜೀವನದ ಕೊನೆಗಾಲದಲ್ಲಿ ಚಾಪೆಕ್ ಕಾದಂಬರಿಗಳನ್ನು ಬರೆದ. ಅವನ ಕಾದಂಬರಿಗಳು —ಅವುಗಳಲ್ಲೂ 'ಹೋರ್ಡುಬಲ್', 'ಉಲ್ಕೆ' ಹಾಗೂ 'ಒಂದು ಸಾಮಾನ್ಯ ಬಾಳ್ವೆ' ಎಂಬ ಕೃತಿತ್ರಯಗಳು— ಶ್ರೇಷ್ಠ ಮಟ್ಟದವು. ಇವು ತಾತ್ತ್ವಿಕ ಕಾದಂಬರಿಗಳು. ಕೊನೆಗೆ ಆಧ್ಯಾತ್ಮಿಕ ಚಿಂತನೆಡೆಗೆ ವಾಲುತ್ತವೆ. ಒಬ್ಬ ರೈತ, ವಿಮಾನಚಾಲಕ ಹಾಗೂ ರೈಲು ಖಾತೆಯ ಗುಮಾಸ್ತ ಇವರು ಕ್ರಮವಾಗಿ ಈ ಮೂರು ಕಾದಂಬರಿಗಳ ಕೇಂದ್ರ ವ್ಯಕ್ತಿಗಳು. ಮೂವರ ಉದ್ದೇಶವೂ ಒಂದೇ —ಮಾನವ ಜೀವನದ ಅಂತಿಮ ಅರ್ಥದ ವಿವೇಚನೆ. ಚಾಪೆಕ್ ಲಘು ಪ್ರವಾಸ ಸಾಹಿತ್ಯವನ್ನೂ ಬರೆದ. 'ಇಂಗ್ಲೆಂಡಿನಿಂದ ಬರೆದ ಓಲೆಗಳು'—ಇಂಥದು. 'ಮಸಾರಿಕ್‌ನ ವಿಚಾರ ಹಾಗೂ ಜೀವನ' ಚಾಪೆಕ್ ವಿರಚಿತ ಜೀವನ ಚರಿತ್ರೆ. ಯಶಸ್ವೀ ಕೃತಿ. ಇವನ ಕೃತಿಗಳು ಚೆಕ್ ಭಾಷೆಯಿಂದ ಇಂಗ್ಲಿಷಿಗೆ ಭಾಷಾಂತರಗೊಂಡಿವೆ.

1938 ಡಿಸೆಂಬರ್ 25ರಂದು ಪ್ರಾಗ್‌ನಲ್ಲಿ ಚಾಪೆಕ್ ಕಾಲವಾದ.

## ಚಾರ್ಲ್ಸ್ ಲ್ಯಾಮ್

ಹೋ ಟಿ ಎಂಬವನು ಚೀನಾದೇಶದವ, ಹಂದಿ ಸಾಕುವವ. ಮಗ ಬೋ–ಬೋ ನ ಅಜಾಗರೂಕತೆಯಿಂದ ಅವನ ಮನೆಗೆ ಬೆಂಕಿ ಬಿತ್ತು.

ಮನೆಯೇ ಅಲ್ಲದೆ ಅಲ್ಲಿದ್ದ ಹಲವಾರು ಹಂದಿಮರಿಗಳೂ ಉರಿಗೆ ಸಿಕ್ಕಿ ಬೆಂದುಹೋದುವು. ಬೋ–ಬೋ ಬೆಂದಿದ್ದ ಮರಿಯೊಂದನ್ನು ಮುಟ್ಟಿದ. ಬೆರಳಿಗೆ ಬಲವಾದ ಕಾವುಹತ್ತಿ, ಸುಟ್ಟ ಹಾಗಾಯಿತು. ಕಾವನ್ನಾರಿಸಿಕೊಳ್ಳಲು ಆ ಬೆರಳನ್ನು ಬಾಯಿಗಿಟ್ಟುಕೊಂಡು ಚೀಪಿದ. ಬೆರಳಿಗಂಟಿದ್ದ ಬೆಂದ ಹಂದಿಮಾಂಸದ ರುಚಿಗೆ ಮನಸೋತ. ಅಂದಿನಿಂದ ಚೀನದಲ್ಲಿ, ಹಂದಿಗಳನ್ನು ಕೂಡಿದ ಮನೆಗಳಿಗೆ ಬೆಂಕಿಹಚ್ಚಿ ಹಂದಿಗಳನ್ನು ಬೇಯಿಸಿ ತಿನ್ನುವುದು ಆರಂಭವಾಯಿತು. ಈ ಅಭ್ಯಾಸ ವಿಪರೀತವಾಗಿ ಬೆಳೆಯಿತು. ಪರಿಣಾಮವಾಗಿ ಹಂದಿಗಳ ಮತ್ತು ಸೌದೆಯ ಅಭಾವ ತಲೆದೋರಿತು.

ಆಂಗ್ಲ ಲೇಖಕ ಚಾರ್ಲ್ಸ್ ಲ್ಯಾಮನ 'ಕಿಚ್ಚಿಟ್ಟು ಬೇಯಿಸಿದ ಹಂದಿಯ ಬಗೆಗೆ ಪ್ರಬಂಧ'ದಲ್ಲಿ ಬರುವ ಪ್ರಸಂಗ ಇದು.

ಚಾರ್ಲ್ಸ್ ಲ್ಯಾಮ್ 1775ರ ಫೆಬ್ರವರಿ 10ರಂದು ಲಂಡನಿನಲ್ಲಿ ಜನಿಸಿದ. ತಂದೆ ನ್ಯಾಯಾಲಯದಲ್ಲಿ ಕಾರಕೂನನಾಗಿದ್ದ; ಬಡತನದ ಜೀವನ ಲ್ಯಾಮ್‌ನದು. ಹೀಗಾಗಿ, ಅವನು ಹದಿನಾಲ್ಕು ವರ್ಷದವನಾಗಿದ್ದಾಗಲೇ ಶಾಲೆಯನ್ನು ಬಿಟ್ಟು ಸೌತ್ ಸೀ ಹೌಸ್ ಎಂಬ ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿಕೊಂಡ. ಮೂರು ವರ್ಷಗಳ ಅನಂತರ ಇಂಡಿಯಾ ಹೌಸ್‌ನಲ್ಲಿ ಕಾರಕೂನನಾದ.

ಸುಮಾರು ಇಪ್ಪತ್ತು ವರ್ಷ ವಯಸ್ಸಿನವನಾಗಿದ್ದಾಗ ಪ್ರೇಮಭಂಗದ ಪರಿಣಾಮವಾಗಿ ಮನೋವೇದನೆಗೊಳಗಾದ. ಪರಿಣಾಮವಾಗಿ ಆರು ತಿಂಗಳ ಕಾಲ ಹುಚ್ಚಾಸ್ಪತ್ರೆಯಲ್ಲಿರಬೇಕಾಯಿತು. ಇದೇ ಸಮಯದಲ್ಲಿ ಇವನ ಅಕ್ಕ ಮೇರಿಗೂ ಬುದ್ಧಿಭ್ರಮಣೆಯಾಯಿತು. ಆ ಸ್ಥಿತಿಯಲ್ಲಿ ಅವಳು ತನ್ನ ತಾಯಿಯನ್ನೇ ಕೊಲೆಮಾಡಿದಳು. ಆಸ್ಪತ್ರೆಯಿಂದ ಹಿಂದಿರುಗಿದ ಲ್ಯಾಮ್ ಅಕ್ಕನ ರಕ್ಷಣೆಯ ಭಾರವನ್ನು ತಾನೇ ವಹಿಸಿಕೊಂಡ. ಅವಳಿಂದ ಯಾರಿಗೂ ತೊಂದರೆ ಆಗದಂತೆ ನೋಡಿಕೊಳ್ಳುವುದಾಗಿ ನಿರ್ಧರಿಸಿದ. ತಾನು ಅವಿವಾಹಿತನಾಗಿಯೇ ಉಳಿದು ಸಾಹಿತ್ಯ ವ್ಯವಸಾಯಿಯಾದ.

ಅನೇಕ ವರ್ಷಗಳ ಅನಂತರ 1823ರಲ್ಲಿ ಎಮ್ಮ ಇಸೊಲ ಎಂಬ ಅನಾಥ ಬಾಲಿಕೆಯನ್ನು ತನ್ನ ಮಗಳನ್ನಾಗಿ ದತ್ತು ತೆಗೆದುಕೊಂಡ; ಆ ಹುಡುಗಿ ಲ್ಯಾಮ್ ಮತ್ತು ಅವನ ಸೋದರಿಯ ಜೀವನದ ಬೆಳಕಾದಳು. 1825ರಲ್ಲಿ ಲ್ಯಾಮ್ ಇಂಡಿಯಾ ಹೌಸ್‌ನಿಂದ ನಿವೃತ್ತನಾದ. ಕೆಲಸದಲ್ಲಿದ್ದಾಗ ಲ್ಯಾಮ್ ಬಹಳ ಪುಸ್ತಕಗಳನ್ನು ಓದುತ್ತಿದ್ದ. ಹಳೆಯ ಪುಸ್ತಕಗಳನ್ನು ಮಾರುವ ಅಂಗಡಿಗಳಿಗೆ ಆಗಾಗ್ಗೆ ಹೋಗಿ ಉತ್ತಮ ಪುಸ್ತಕಗಳನ್ನು ಕೊಂಡು ತರುತ್ತಿದ್ದ. 1834ನೆಯ ಡಿಸೆಂಬರ್ 27ರಂದು ಆತ ಕಾಲವಾದ.

ಲ್ಯಾಮ್ ಖ್ಯಾತ ಲೇಖಕ. ಅವನು ಮೊದಲು ಬರೆದದ್ದು ಕವಿತೆಗಳನ್ನು. ಅವುಗಳಲ್ಲಿ ಹೆಚ್ಚು ಜನಪ್ರಿಯವಾದುವು: 'ಹಳೆಯ ಪಳಕೆಯ ಮುಖಗಳು' ಮತ್ತು 'ಹೆಸ್ಟರ್'. 'ಹಳೆಯ ಪಳಕೆಯ ಮುಖಗಳು' ಕವಿತೆಯ ಒಂದು ಪದ್ಯ ಹೀಗಿದೆ:

'ಕಂದ, ಬಿದ್ದೆಯ ಎಂದು ಮುದ್ದಿಸಿ ನನಗೆ ಮರುಗುವವರಿದ್ದರು:
ಅಂದಿನೋದಿನ ಸುಖದ ದಿನದಲಿ ಜತೆಗೆ ಕುಣಿಯುವರಿದ್ದರು
ಎಲ್ಲ, ಎಲ್ಲಾ ಮಾಯವಾದುವು ಹಳೆಯ ಪಳಕೆಯ ಮುಖಗಳು'

—ಬಿ. ಎಂ. ಶ್ರೀ. ಅನುವಾದ

ಲ್ಯಾಮ್‌ನ ಬರೆವಣಿಗೆ ಮೊದಲು ಅಚ್ಚುಕಂಡದ್ದು ಕೋಲ್ರಿಜ್‌ನ ಒಂದು ಕವನ ಸಂಕಲನದ ಮೂಲಕ. ಆ ಪುಸ್ತಕದಲ್ಲಿ ಲ್ಯಾಮ್‌ನ ನಾಲ್ಕು ಶೋಕಗೀತೆಗಳು ಸೇರಿದ್ದುವು. 1797ರಲ್ಲಿ ಪ್ರಕಟವಾದ ಅದರ ಎರಡನೆಯ ಸಂಪುಟದಲ್ಲಿ ಲ್ಯಾಮ್‌ನ ಇನ್ನೂ ಹಲವಾರು ಕವಿತೆಗಳು ಬಂದುವು. 1798ರಲ್ಲಿ ಲ್ಯಾಮ್ ಮತ್ತು ಚಾರ್ಲ್ಸ್ ಲಾಯ್ಡ್ ಜೊತೆ ಸೇರಿ, ಸರಳರಗಳೆಯಲ್ಲಿ ಬರೆದ ಪುಸ್ತಕ ಒಂದನ್ನು ಪ್ರಕಟಿಸಿದರು. 'ದಿ ಟೇಲ್ ಆಫ್ ರೋಸ್‌ಮಂಡ್ ಗ್ರೇ ಅಂಡ್ ಓಲ್ಡ್ ಮಾರ್ಗರೆಟ್' 1798ರಲ್ಲಿ ಪ್ರಕಟವಾದ ಸಣ್ಣ ಕಥೆ. ಆತ ಬರೆದದ್ದು ಇದೊಂದೇ ಸಣ್ಣ ಕಥೆ. ಆದರೂ ಇದು ಪ್ರಸಿದ್ಧಿ ಗಳಿಸಿತು.



ಲ್ಯಾಮ್: 'ಕಿಚ್ಚಿಟ್ಟು ಬೇಯಿಸಿದ...'

ನಾಟಕದ ರಚನೆಗೂ ಲ್ಯಾಮ್ ಕೈಹಾಕಿದ. ಐದು ಅಂಕಗಳುಳ್ಳ ಒಂದು ಟ್ರ್ಯಾಜಿಡಿ ಹಾಗೂ ಒಂದು ಪ್ರಹಸನವನ್ನು ಬರೆದ. 1805ರಲ್ಲಿ ರಂಗಭೂಮಿಯ ಮೇಲೆ ಪ್ರದರ್ಶಿತವಾದ ಈ ಪ್ರಹಸನ ಯಶಸ್ವಿಯಾಗಲಿಲ್ಲ.

ಅವನ ಅಕ್ಕ ಮೇರಿಯಲ್ಲೂ ಲೇಖನ ರಚನಾಶಕ್ತಿ ಇತ್ತು. ಆತ ಹಾಗೂ ಮೇರಿ ಖ್ಯಾತ ನಾಟಕಕಾರ ಶೇಕ್ಸ್‌ಪಿಯರನ ನಾಟಕಗಳ ಸಾರಾಂಶವನ್ನು ಮಕ್ಕಳಿಗಾಗಿ ಕಥೆಯ ರೂಪದಲ್ಲಿ ಬರೆದಿದ್ದಾರೆ. ಇವುಗಳನ್ನೊಳಗೊಂಡ 'ಟೇಲ್ಸ್ ಫ್ರಂ ಶೇಕ್ಸ್‌ಪಿಯರ್' ಪ್ರಕಟವಾದದ್ದು 1807ರಲ್ಲಿ. ಮೇರಿ ಕಾಮಿಡಿಗಳ ಕಥೆಗಳನ್ನೂ ಚಾರ್ಲ್ಸ್ ಟ್ರಾಜಿಡಿಗಳ ಕಥೆಗಳನ್ನೂ ಬರೆದರು. ಈ ಪುಸ್ತಕ ಅವರಿಬ್ಬರಿಗೂ ಕೀರ್ತಿ ತಂದಿತು.

1808ರಲ್ಲಿ ಪ್ರಕಟವಾದ 'ಸ್ಪೆಸಿಮನ್ಸ್ ಆಫ್ ಇಂಗ್ಲಿಷ್ ಡ್ರಮಾಟಿಕ್ ಪೊಯೆಟ್ಸ್ ಕಾಂಟೆಂಪರರಿ ವಿದ್ ಶೇಕ್ಸ್‌ಪಿಯರ್' ಲ್ಯಾಮ್‌ನ ವಿಮರ್ಶನಾ ಶಕ್ತಿಯ ದ್ಯೋತಕ.

1820ರಲ್ಲಿ ಆರಂಭವಾದ 'ಲಂಡನ್ ಮ್ಯಾಗಜೀನ್' ಪತ್ರಿಕೆಗೆ 'ಇಲಿಯಾ' ಎಂಬ ಅಂಕಿತದಲ್ಲಿ ಲ್ಯಾಮ್ ಪ್ರಬಂಧಗಳನ್ನು ಬರೆಯುತ್ತಿದ್ದ. ನೆನಪು, ಹುಡುಗಾಟಿಕೆ, ಗಾಢವಾದ ಆಲೋಚನೆ, ಹಾಸ್ಯಪ್ರಸಂಗಗಳು—ಈ ಪ್ರಬಂಧಗಳ ವಸ್ತುಗಳಾಗಿದ್ದುವು. ಇವುಗಳ ಒಂದು ಸಂಕಲನ 1823ರಲ್ಲೂ ಇನ್ನೊಂದು 1833ರಲ್ಲೂ 'ಎಸ್ಸೇಸ್ ಆಫ್ ಇಲಿಯಾ' ಎಂಬ ಹೆಸರಿನಲ್ಲಿ ಪ್ರಕಟವಾದುವು. ಈ ಪ್ರಬಂಧಗಳೆಲ್ಲ ಲ್ಯಾಮ್‌ನಿಗೆ ಆಂಗ್ಲ ಸಾಹಿತ್ಯ ರಂಗದಲ್ಲಿ ಉಚ್ಚ ಸ್ಥಾನವನ್ನು ಗಳಿಸಿಕೊಟ್ಟುವು. ಇಂದಿಗೂ ಜನ ಇವನ್ನು ಓದುತ್ತಾರೆ; ಮೆಚ್ಚುತ್ತಾರೆ.

ಪತ್ರ ಲೇಖನದಲ್ಲೂ ಲ್ಯಾಮ್ ಸಿದ್ಧಹಸ್ತ. ಆತ ವರ್ಡ್ಸ್‌ವರ್ತ್, ಕೋಲ್ರಿಜ್, ಲೀ ಹಂಟ್, ಹ್ಯಾಜ್‌ಲಿಟ್ ಮತ್ತಿತರ ಸ್ನೇಹಿತರಿಗೆ ಆತ್ಮೀಯ ಪತ್ರಗಳನ್ನು ಬರೆಯುತ್ತಿದ್ದ. ಲ್ಯಾಮ್‌ನ ಮರಣಾನಂತರ ಅವನ ಪತ್ರಗಳು ಪುಸ್ತಕರೂಪದಲ್ಲಿ ಪ್ರಕಟವಾದುವು.

## ಚಾಲುಕ್ಯ ಶಿಲ್ಪ, ವಾಸ್ತುಶಿಲ್ಪ

ಕರ್ನಾಟಕದ ಕೀರ್ತಿಯನ್ನು ಬೆಳಗಿಸಲು ಬಹುಮುಖವಾಗಿ ಶ್ರಮಿಸಿದ ರಾಜಮನೆತನಗಳಲ್ಲಿ ಚಾಲುಕ್ಯರು ಪ್ರಮುಖರು. ಇಂದಿನ ಕರ್ನಾಟಕ ಮಾತ್ರವಲ್ಲದೆ ಅದರ ನಾಲ್ಕೂ ದಿಕ್ಕುಗಳಲ್ಲೂ ಇವರ ರಾಜ್ಯ ವಿಸ್ತಾರವಾಗಿ ಬೆಳೆದಿತ್ತು. ಸುಮಾರು ಏಳೂವರೆ ಶತಮಾನಗಳ ಕಾಲ ರಾಜ್ಯಭಾರ ನಡೆಸಿದ ಈ ವಂಶ ಕಲೆ, ಸಾಹಿತ್ಯಗಳಿಗೆ ಉತ್ತಮ ರೀತಿಯಲ್ಲಿ ಪೋಷಣೆ ಕೊಟ್ಟಿತು.

ಭಾರತದಲ್ಲಿ ಕರ್ನಾಟಕ ಪ್ರದೇಶದ ಸ್ಥಾನ ಅಪೂರ್ವವಾದದ್ದು; ಭಾರತದ ಉತ್ತರ ಮತ್ತು ದಕ್ಷಿಣ ಭಾಗಗಳ ಸಂಧಿಸ್ಥಾನ ಕರ್ನಾಟಕ. ಆದ್ದರಿಂದ ಅವೆರಡು ಪ್ರದೇಶಗಳ ಪ್ರಭಾವವನ್ನು ಒಂದಲ್ಲ ಒಂದು ರೀತಿಯಲ್ಲಿ ಕರ್ನಾಟಕದಲ್ಲಿ ಕಾಣಬಹುದು. ಕರ್ನಾಟಕ ಈ ಎರಡೂ ಪ್ರಭಾವಗಳನ್ನು ಮೈಗೂಡಿಸಿಕೊಂಡು, ತನ್ನ ವೈಶಿಷ್ಟ್ಯವನ್ನೂ ರಕ್ಷಿಸಿಕೊಂಡು, ತನ್ನದೇ ಆದ ಶೈಲಿಗಳನ್ನೂ ಸಂಪ್ರದಾಯಗಳನ್ನೂ ಬೆಳೆಸಿಕೊಂಡು ಬಂದಿದೆ.

ಈ ಅಪೂರ್ವ ಸಾಧನೆಗೆ ಅತ್ಯುತ್ತಮ ಉದಾಹರಣೆ ಚಾಲುಕ್ಯ ಶಿಲ್ಪ ಮತ್ತು ವಾಸ್ತುಶಿಲ್ಪ. ಬೌದ್ಧರ ಗುಹಾಲಯ ಶಿಲ್ಪ, ಉತ್ತರದ ನಾಗರ ಶೈಲಿ, ದಕ್ಷಿಣದ ದ್ರಾವಿಡ ಸಂಪ್ರದಾಯ ಈ ಮೂರರ ಪ್ರಭಾವವನ್ನೂ ಚಾಲುಕ್ಯ ಶಿಲ್ಪ, ವಾಸ್ತುಶಿಲ್ಪಗಳಲ್ಲಿ ಕಾಣಬಹುದು. ಅದೇ ರೀತಿ ದೇವಾಲಯ ನಿರ್ಮಾಣದಲ್ಲಿ ಆರಂಭಿಕ ಪ್ರಯೋಗಗಳು ನಡೆದದ್ದು, ಅವುಗಳ ವಿಕಾಸಕ್ಕೆ ಇಂಬು ದೊರೆತದ್ದು ಚಾಲುಕ್ಯರ ಕಾಲದಲ್ಲೇ. ಈ ಪ್ರಯೋಗಗಳ ಪ್ರಸಿದ್ಧ ಕ್ಷೇತ್ರಗಳೆಂದರೆ—ಐಹೊಳೆ, ಬಾದಾಮಿ, ಪಟ್ಟದಕಲ್ಲು.

ಚಾಲುಕ್ಯರ ಆಳ್ವಿಕೆಯನ್ನು ಪ್ರಧಾನವಾಗಿ ಎರಡು ಘಟ್ಟಗಳಲ್ಲಿ ಗುರುತಿಸಬಹುದು. ಇವುಗಳಲ್ಲಿ ಮೊದಲನೆಯದು—ಚಾಲುಕ್ಯರು ಬಾದಾಮಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಕಾಲ; ಇನ್ನೊಂದು ಕಲ್ಯಾಣ ರಾಜಧಾನಿಯಾಗಿದ್ದ ಕಾಲ. ಚಾಲುಕ್ಯ ವಾಸ್ತುಶಿಲ್ಪ ಶೈಲಿ ಹುಟ್ಟಿದ್ದು, ಆರಂಭಕಾಲದ ಬೆಳವಣಿಗೆಯನ್ನು ಕಂಡದ್ದು ಮೊದಲನೆಯ ಅವಧಿಯಲ್ಲಿ. ಅಲ್ಲಿಂದ ಮುಂದೆ ಎರಡನೆಯ ಅವಧಿಯಲ್ಲಿಯೂ ಈ ಸಂಪ್ರದಾಯಕ್ಕನುಸಾರವಾಗಿ ಅನೇಕ ದೇವಾಲಯಗಳು ಕಟ್ಟಲ್ಪಟ್ಟುವು.

ಚಾಲುಕ್ಯರ ಕಾಲದಲ್ಲಿ ಕಟ್ಟಿದ ಅನೇಕ ದೇವಾಲಯಗಳು ನಮಗೆ ಈಗಲೂ ನೋಡಸಿಗುತ್ತವೆ. ಚಾಲುಕ್ಯರ ಕಾಲದಲ್ಲಿ ನಗರಗಳೂ ಕೋಟೆ ಕೊತ್ತಲಗಳೂ ಕಟ್ಟಲ್ಪಟ್ಟುವು. ಇವು ಕೂಡ ಅವರ ವಾಸ್ತುಶಿಲ್ಪ ಸಾಧನೆಗೆ ಸಂಬಂಧಿಸಿದ್ದೇ. ಚಾಲುಕ್ಯ ರಾಜವಂಶದ ಮೂಲ ಪುರುಷನಾದ ಒಂದನೆಯ ಪುಲಿಕೇಶಿಯು ಕಟ್ಟಿಸಿದ ಬಾದಾಮಿಯ ನಗರ ಮತ್ತು ಅದರ ಸುತ್ತಣ ಕೋಟೆ ಈ ಬಗೆಯ ನಿರ್ಮಾಣಕ್ಕೆ ಉತ್ತಮ ಉದಾಹರಣೆ.

ದೇವಾಲಯ ವಾಸ್ತುಶಿಲ್ಪದಲ್ಲಿ, ಗರ್ಭಗುಡಿಯ ಮೇಲೆ ಕಟ್ಟುವ ಶಿಖರ ಪ್ರಧಾನ ಅಂಶ. ಇಷ್ಟೇ ಅಲ್ಲ, ದೇವಾಲಯ ಯಾವ ಶೈಲಿಯಲ್ಲಿ ಕಟ್ಟಲ್ಪಟ್ಟಿದೆ ಎಂಬುದನ್ನು ನಿರ್ಧರಿಸಲು ಇದು ಮುಖ್ಯ ಆಧಾರವಾಗಿದೆ. ಭಾರತೀಯ ವಾಸ್ತುಶಿಲ್ಪದಲ್ಲಿ ಕಂಡುಬರುವ ಶಿಖರ ಶೈಲಿಗಳೆಂದರೆ ಒಂದು ಉತ್ತರ ಭಾರತದ್ದು; ಇನ್ನೊಂದು ದಕ್ಷಿಣ ಭಾರತದ್ದು. ಇವನ್ನು ಕ್ರಮವಾಗಿ ನಾಗರ, ದ್ರಾವಿಡ ಎಂದು ಕರೆಯುವುದು ವಾಡಿಕೆ. ಇವೆರಡರ ಸಮನ್ವಯ ಚಾಲುಕ್ಯ ಶೈಲಿಯ ಶಿಖರ. ಇದನ್ನು ವೇಸರ ಎನ್ನುತ್ತಾರೆ.



ಪಟ್ಟದಕಲ್ಲು ವಿರೂಪಾಕ್ಷ ದೇವಾಲಯದ ಕಂಬದಲ್ಲಿ ಕೆತ್ತನೆ

ಚಾಲುಕ್ಯ ಸಂಪ್ರದಾಯದ ದೇವಾಲಯಗಳಲ್ಲಿ ಸಾಮಾನ್ಯವಾಗಿ ಐದು ಅಂಗಗಳಿರುತ್ತವೆ: ಮಹಾದ್ವಾರ, ಇದರ ಮೇಲೆ ಗೋಪುರ, ಅನಂತರ ದ್ವಾರಮಂಟಪ, ಹಜಾರ, ಸುಕನಾಸಿ ಮತ್ತು ಗರ್ಭಗೃಹ, ಇದರ ಮೇಲೆ ಶಿಖರ. ದೇವಾಲಯದ ಸ್ತಂಭಗಳ ಮೇಲೆ, ಛಾವಣಿಯಲ್ಲಿ ಹಾಗೂ ಗೋಡೆಗಳ ಮೇಲೆ ಮೂರ್ತಿ ಹಾಗೂ ಅಲಂಕರಣ ಶಿಲ್ಪಗಳಿರುತ್ತವೆ. ಮೂರ್ತಿಶಿಲ್ಪದ ಬಹುಭಾಗ ದೇವದೇವತೆಗಳಿಗೆ ಮೀಸಲು. ಇವಲ್ಲದೆ, 'ರಾಮಾಯಣ' 'ಮಹಾಭಾರತ'ಗಳಿಂದ ಆರಿಸಿದ ಘಟನೆಗಳನ್ನು ಕೆತ್ತಿರುವ ಫಲಕಗಳನ್ನೂ ಕಾಣಬಹುದು. ಗಣನೀಯ ಅಂಶವೆಂದರೆ ಈ ದೇವಾಲಯಗಳ ಶಿಲ್ಪದಲ್ಲಿ ಸಮಕಾಲೀನ ಜೀವನದ ಚಿತ್ರಣವೂ ಇದೆ. ಚಾಲುಕ್ಯ ಶೈಲಿಯ ಕಟ್ಟಡಗಳು ಗಟ್ಟಿಮುಟ್ಟಾಗಿವೆ, ಸುಂದರವಾದ ಕೆತ್ತನೆಯ ಕೆಲಸಗಳಿಂದ ಕೂಡಿವೆ.

ಬಾದಾಮಿ ಚಾಲುಕ್ಯರ ಕಾಲದಲ್ಲಿ, ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳು ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳಾಗಿದ್ದುವು. ಬಾದಾಮಿಯಲ್ಲಿರುವ ಗುಹಾಲಯಗಳು ನಿರ್ಮಿತವಾದದ್ದು ಈ ಅವಧಿಯಲ್ಲೇ. ಬಾದಾಮಿಯ ಗುಹಾಲಯಗಳಲ್ಲಿ ಉತ್ತಮ ಶಿಲ್ಪ ಚಾತುರ್ಯವನ್ನೂ ಚಿತ್ರಕಲಾ ವೈಖರಿಯನ್ನೂ ಕಾಣಬಹುದು. ಒಂದನೆಯ ಪುಲಿಕೇಶಿಯ ಮಗ ಮಂಗಳೇಶನು ಈ ಗುಹಾಲಯವನ್ನು ನಿರ್ಮಿಸಿದ. ಐಹೊಳೆಯ

ದುರ್ಗ ದೇವಾಲಯದಲ್ಲಿ ಬೌದ್ಧರ ಚೈತ್ಯದ ತಲವಿನ್ಯಾಸದ ಪ್ರಭಾವವನ್ನು ಕಾಣಬಹುದು. ಭಾರತೀಯ ವಾಸ್ತುಶಿಲ್ಪದ ಇತಿಹಾಸ ದೃಷ್ಟಿಯಿಂದ ಈ ದೇವಾಲಯಕ್ಕೆ ಮಹತ್ವವಿದೆ. ಏಕೆಂದರೆ, ಭಾರತೀಯ ವಾಸ್ತುಶಿಲ್ಪ ಗುಹಾಲಯ ನಿರ್ಮಾಣದಿಂದ ಕಟ್ಟಿದ ದೇವಾಲಯಗಳ ರಚನೆಯ ಕಡೆಗೆ ಸರಿದದ್ದನ್ನು ಇದು ತೋರಿಸುತ್ತದೆ.

ಪಟ್ಟದಕಲ್ಲಿನಲ್ಲಿರುವ ದೇವಾಲಯಗಳು ವಿವಿಧ ಕಾಲಗಳಲ್ಲಿ ಕಟ್ಟಿದವಾಗಿದ್ದು ಚಾಲುಕ್ಯ ದೇವಾಲಯ ವಾಸ್ತುಶಿಲ್ಪದ ವಿಕಾಸವನ್ನು ಇವುಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಈ ದೇವಾಲಯಗಳೆಲ್ಲವೂ ಮರಳುಗಲ್ಲು ಹಾಗೂ ಕಣಶಿಲೆಗಳಂಥ ಕಠಿಣ ಸಾಮಗ್ರಿಯನ್ನು ಉಪಯೋಗಿಸಿಯೂ ಚಾಲುಕ್ಯ ಶಿಲ್ಪಿಗಳು ಉತ್ತಮ ಕೆತ್ತನೆಗಳನ್ನು ನಡೆಸಿದ್ದಾರೆಂಬುದು ಗಮನಾರ್ಹ.

ಬಾದಾಮಿ ಚಾಲುಕ್ಯರ ಕಾಲಕ್ಕಿಂತ, ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ಹೆಚ್ಚು ದೇವಾಲಯಗಳು ಕಟ್ಟಲ್ಪಟ್ಟುವು. ಇವುಗಳ ನಿರ್ಮಾಣದಲ್ಲಿ ಬಳಪದರ ಕಲ್ಲು ಉಪಯೋಗಿಸಲ್ಪಟ್ಟಿತು. ಇದರಿಂದಾಗಿ ಅಲಂಕರಣ ಹೆಚ್ಚಾಯಿತಲ್ಲದೆ ಕುಸುರಿ ಕೆಲಸವೂ ವಿಸ್ತಾರವಾಯಿತು. ಈ ಅವಧಿಗೆ ಸಂಬಂಧಿಸಿದ ಉತ್ತಮ ದೇವಾಲಯಗಳನ್ನು ಲಕ್ಕುಂಡಿ, ಗಳಗನಾಥ, ಹಾನಗಲ್, ಬಂಕಾಪುರ, ಡಂಬಳ, ಇಟಗಿ ಮುಂತಾದ ಸ್ಥಳಗಳಲ್ಲಿ ಕಾಣಬಹುದು.

ಭುವನೇಶ್ವರಿಗಳು ಚಾಲುಕ್ಯ ವಾಸ್ತುಶಿಲ್ಪದಲ್ಲಿ ಒಂದು ಗಣನೀಯ ಅಂಶ. ನವರಂಗದ ನಡುವಣ ಛಾವಣಿಯಲ್ಲಿರುವ ಈ ಭುವನೇಶ್ವರಿಗಳು ಗುಮ್ಮಟಾಕಾರದಲ್ಲಿವೆ ಇಲ್ಲವೆ, ಮಟ್ಟಸವಾಗಿವೆ. ಇವು ಯಾವ ರೂಪದಲ್ಲೇ ಇರಲಿ, ಉತ್ತಮ ಶಿಲ್ಪಗಳಿಂದ ಕೂಡಿದ್ದು ಆಕರ್ಷಕವಾಗಿವೆ. ಮೇಲು ನೋಟಕ್ಕೆ, ಅದೂ ದೂರದಿಂದ ನೋಡಿದಾಗ, ಅಷ್ಟೇನೂ ಭವ್ಯವಾಗಿ ಕಾಣುವುದಿಲ್ಲ. ಆದರೆ ಹತ್ತಿರದಿಂದ ನೋಡಿದಾಗ, ಅವುಗಳ ಶಿಲ್ಪ ಸೌಂದರ್ಯಕ್ಕೆ ನಾವು ಮಾರುಹೋಗುತ್ತೇವೆ.

ಚಾಲುಕ್ಯ ವಾಸ್ತುಶಿಲ್ಪ, ಆರಂಭವಾದ ಕಾಲದಲ್ಲಿ ರಚಿತವಾದ ಶಿಲ್ಪಗಳಲ್ಲಿ ಅದರಲ್ಲೂ ಪ್ರತಿಮಾಶಿಲ್ಪರಚನೆಯಲ್ಲಿ ಕಂಡುಬರುವ ಶಕ್ತಿ, ಸ್ವಾತಂತ್ರ್ಯ ಅನಂತರದ ಕಾಲದಲ್ಲಿ ಕಂಡುಬರುವುದಿಲ್ಲ. ಇದಕ್ಕೆ ಎರಡು ಕಾರಣಗಳುಂಟು. ಮೊದಲನೆಯ ಅವಧಿಯಲ್ಲಿ ಚಾಲುಕ್ಯ ಶಿಲ್ಪಿಗಳು ಗಟ್ಟಿಕಲ್ಲನ್ನು ಉಪಯೋಗಿಸಿದ್ದರಿಂದ, ಅವರು ಸಹಜವಾಗಿಯೇ ಕುಸುರಿ ಕೆಲಸಕ್ಕೆ ಕೈಹಾಕದೆ ಮೂರ್ತಿಯಲ್ಲೊಂದು ಶಕ್ತಿಯನ್ನು, ವ್ಯಕ್ತಿತ್ವವನ್ನು ಮೂಡಿಸಲು ಪ್ರಯತ್ನಿಸಿದರು. ಈ ಪ್ರಯತ್ನದಲ್ಲಿ ಅವರು ಜಯಶೀಲರೂ ಆದರು. ತಮ್ಮ ಕಲ್ಪನೆಗೆ ಪ್ರಭಾವಶಾಲಿಯಾದ ರೂಪುಕೊಟ್ಟರು. ಆದರೆ ಅನಂತರ ಬಂದ ಶಿಲ್ಪಿಗಳು ಮೃದುವಾದ ಬಳಪಕಲ್ಲನ್ನು ಉಪಯೋಗಿಸಿದ್ದರಿಂದ ಕುಸುರಿ ಕೆಲಸಮಾಡುವ ಚಪಲ ಅವರಲ್ಲಿ ಹುಟ್ಟಿದ್ದು ಸಹಜವೇ. ಇವರು ತಮ್ಮ ರಚನೆಗಳಲ್ಲಿ ತಮ್ಮ ಕಲ್ಪನೆಗಿಂತಲೂ ಶಿಲ್ಪಶಾಸ್ತ್ರದ ನಿಯಮಗಳನ್ನೂ ಅಳತೆಗಳನ್ನೂ ಹೆಚ್ಚಾಗಿ ಅವಲಂಬಿಸಿದ್ದಾರೆಂದು ತೋರುತ್ತದೆ. ಇದರ ಪರಿಣಾಮವಾಗಿ ಮೂರ್ತಿಗಳು ಸುಂದರವಾಗಿ ಕಂಡರೂ ಅವು ಅಷ್ಟು ಸತ್ತ್ವಪೂರ್ಣವಾಗಿ ಕಾಣುವುದಿಲ್ಲ.

ಚಾಲುಕ್ಯ ಸಾಮ್ರಾಜ್ಯ, ಕರ್ನಾಟಕದಿಂದ ಹೊರಗೆ ಈಗಿನ ಗುಜರಾತ್, ಆಂಧ್ರ ಮತ್ತು ತಮಿಳುನಾಡಿನ ಪ್ರದೇಶಗಳಿಗೂ ಹರಡಿದ್ದರಿಂದ ಆ ಪ್ರದೇಶಗಳ ಕೆಲವು ಭಾಗಗಳಲ್ಲಿ ಕೂಡ ಚಾಲುಕ್ಯ ಶಿಲ್ಪದ ಪ್ರಭಾವವನ್ನು ಕಾಣಬಹುದು.



ಹಾವೇರಿಯ ಸಿದ್ಧೇಶ್ವರ ದೇವಾಲಯ

ಉತ್ತರ ಮತ್ತು ದಕ್ಷಿಣ ಭಾರತಗಳ ವಾಸ್ತುಶಿಲ್ಪ ಹಾಗೂ ಶಿಲ್ಪಗಳಿಂದ ಸ್ಫೂರ್ತಿ ಪಡೆದಿದ್ದರೂ ಅನೇಕ ಅಂಶಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ರೂಢಿಸಿಕೊಂಡು ಭಾರತೀಯ ಶಿಲ್ಪ ವಾಸ್ತುಶಿಲ್ಪಗಳಿಗೆ ಚಾಲುಕ್ಯ ಸಂಪ್ರದಾಯ ಅಮೂಲ್ಯ ಸೇವೆ ಸಲ್ಲಿಸಿದೆ. ದೇವಾಲಯ ರಚನೆಯಲ್ಲಂತೂ ಅವರ ಪಾತ್ರ ಹಿರಿದಾದದ್ದು. ಈ ಸಂಬಂಧದಲ್ಲಿ ಐಹೊಳೆಯಲ್ಲಿ ಅನೇಕ ಪ್ರಯೋಗಗಳು ನಡೆದುವೆಂದೂ ಇವುಗಳಿಂದಾಗಿ ಭಾರತೀಯ ದೇವಾಲಯ ರಚನೆಯ ವಿಕಾಸಕ್ಕೆ ತುಂಬ ಸಹಾಯವಾಯಿತೆಂದೂ ತಜ್ಞರ ಅಭಿಪ್ರಾಯ. ಕರ್ನಾಟಕದ ಇನ್ನೊಂದು ಶಿಲ್ಪ ಮತ್ತು ವಾಸ್ತುಶಿಲ್ಪ ಶೈಲಿಯಾದ ಹೊಯ್ಸಳ ಸಂಪ್ರದಾಯಕ್ಕೆ ಬುನಾದಿಯಾಗಿ ಕೂಡಾ ಚಾಲುಕ್ಯ ಶೈಲಿ ಗಮನಾರ್ಹವಾದದ್ದು.

ನೋಡಿ : ಐಹೊಳೆ ; ಪಟ್ಟದಕಲ್ಲು ; ಬಾದಾಮಿ ; ಭಾರತೀಯ ಶಿಲ್ಪ, ವಾಸ್ತುಶಿಲ್ಪ ; ಹೊಯ್ಸಳ ಶಿಲ್ಪ, ವಾಸ್ತುಶಿಲ್ಪ

## ಚಾಸರ್

ಇಂಗ್ಲಿಷ್ ನಾಟಕಕ್ಕೆ ಶೇಕ್ಸ್‌ಪಿಯರ್ ಹೇಗೋ ಹಾಗೆಯೇ ಕಥನ ಕವನಕ್ಕೆ ಚಾಸರ್. ಚಾಸರನ ಕಥನ ಸರಳ ; ಶೈಲಿ ರಸಭರಿತ. ಈ ಅಂಶಗಳಲ್ಲಿ ಚಾಸರನನ್ನು ಮೀರಿಸಿದ ಕಥೆಗಾರರು ಕಡಮೆ. ತಿಳಿಹಾಸ್ಯದಿಂದ ಕೂಡಿದ ಇವನ ಹಾಡುಗಳನ್ನು ಓದುವುದೇ ಒಂದು ರಸಾನುಭವ. ಜೊತೆಗೆ, 14ನೆಯ ಶತಮಾನದ ಇಂಗ್ಲೆಂಡಿನ ಜನಜೀವನದ ನಿಕಟ ಪರಿಚಯವೂ ನಮಗೆ ಆಗುತ್ತದೆ.

ಜೆಫ್ರಿ ಚಾಸರನ ಬಾಲ್ಯವನ್ನು ಕುರಿತು ತಿಳಿದುಬಂದಿರುವುದು ಕಡಮೆ. ಅವನು ಹುಟ್ಟಿದ್ದು ಸುಮಾರು 1340ರಲ್ಲಿ. ತಂದೆ ಜಾನ್ ಚಾಸರ್ ಲಂಡನ್ನಿನ ಸಾರಾಯಿ ವ್ಯಾಪಾರಿ. ಚಾಸರ್ ಎಂಬ ಹೆಸರೇ ಸೂಚಿಸುವಂತೆ ಅವನ ಹಿರಿಯರು ಚಮ್ಮಾರ ವೃತ್ತಿಯವರು. ಹದಿನೇಳು ವಯಸ್ಸಿನ ಹುಡುಗನಾಗಿದ್ದಾಗ ಚಾಸರ್ ಅರಮನೆಯ ರಾಣೀವಾಸದಲ್ಲಿ ಸೇವಕನಾಗಿ ಸೇರಿದ; ಎರಡು ವರ್ಷಗಳ ಬಳಿಕ ಇಂಗ್ಲೆಂಡಿನ ಸೈನ್ಯದೊಡನೆ ಫ್ರಾನ್ಸಿಗೆ ಹೋಗಿ, 'ನೂರು ವರ್ಷಗಳ ಯುದ್ಧ'ವೆಂದು ಪ್ರಸಿದ್ಧಿಪಡೆದ ಹೋರಾಟದಲ್ಲಿ ಪಾಲುಗೊಂಡ. ಕೆಲ ಸಮಯದಲ್ಲೇ ಫ್ರೆಂಚರು ಚಾಸರನನ್ನು ಸೆರೆಹಿಡಿದರು. ಇಂಗ್ಲೆಂಡಿನ ರಾಜ 16 ಪೌಂಡ್ ತೆತ್ತು ಇವನ ಬಿಡುಗಡೆ ಪಡೆದ. ಚಾಸರ್ ರಾಜನ ಸೇವೆಗೆ ಹಿಂದಿರುಗಿದ.



ಚಾಸರ್ : ಶೋಕಗೀತೆಯಿಂದ ಕೀರ್ತಿಭವನಕ್ಕೆ

1366ರಲ್ಲಿ ರಾಣಿಯ ಪರಿವಾರದ ಪರಿಚಾರಿಕೆಯಾಗಿದ್ದ ಫಿಲಿಪಾ ರೋಯೆಟ್‌ಳನ್ನು ಚಾಸರ್ ಮದುವೆಯಾದ. ಮರುವರ್ಷ ಭಡ್ತಿ ಪಡೆದು ರಾಜನ ಅಂತರಂಗದ ಸೇವಕನಾದ. ಅರಸನ ಹಾಸಿಗೆಯನ್ನು ಸಿದ್ಧಮಾಡುವುದು, ಭೋಜನ ಬಡಿಸುವುದು ಮತ್ತಿತರ ಕೆಲಸಗಳನ್ನು ಮಾಡುತ್ತ ತಿಂದು ಉಂಡು ಸುಖವಾಗಿ ಕಾಲ ಕಳೆಯುತ್ತಿದ್ದಾಗಲೇ, ಚಾಸರನ ಮೊಟ್ಟಮೊದಲ ಹಾಡು ರಚಿತವಾಯಿತು. ಇಂಗ್ಲೆಂಡಿನ ರಾಜಕುಮಾರ ಡ್ಯೂಕ್ ಆಫ್ ಲಂಕಾಸ್ಟರನ ಪತ್ನಿ ಲೇಡಿ ಬ್ಲಾಂಕ್ ಅಕಸ್ಮಾತ್ತಾಗಿ ತೀರಿಕೊಂಡಾಗ ಚಾಸರ್ ಬರೆದ ಶೋಕಗೀತೆ ಇದು. ಹೆಸರು 'ರಾಜಕುಮಾರಿಯ ಪುಸ್ತಕ'. ಇದನ್ನು ಬರೆದ ಒಂದೆರಡು ವರ್ಷಗಳ ಅನಂತರ ಚಾಸರ್ ರಚಿಸಿದ ಇನ್ನೊಂದು ಕೃತಿ, 'ಕೀರ್ತಿ ಭವನ'. ಓದು ತಿಳಿವಿದ್ದ ಹದ್ದೊಂದು ಚಾಸರನನ್ನು ಎತ್ತಿಕೊಂಡು ಮೇಲಮೇಲಕ್ಕೆ ಹಾರುತ್ತದೆ; ದಾರಿಯಲ್ಲಿ ಚಾಸರನಿಗೆ ವೈಜ್ಞಾನಿಕ ಶಿಕ್ಷಣ ಕೊಡುತ್ತ ಕೀರ್ತಿಯ ವಾಸಸ್ಥಾನವಾದ ಸ್ವರ್ಗಕ್ಕೆ ಕೊಂಡೊಯ್ಯುತ್ತದೆ. ಇದು ಈ ಕೃತಿಯ ಕಥೆ. ಚಾಸರನ ಕನಸನ್ನು 'ಕೀರ್ತಿ ಭವನ' ಚಿತ್ರಿಸುತ್ತದೆ.

ಚಾಸರನ ಕಾಲದಲ್ಲಿ ರಾಜಾಸ್ಥಾನದ ಎಲ್ಲ ವ್ಯವಹಾರಗಳೂ ನಡೆಯುತ್ತಿದ್ದುದು ಫ್ರೆಂಚ್ ಭಾಷೆಯಲ್ಲಿ. ಚಾಸರನ ಮೊದಮೊದಲ ಹಾಡುಗಳು ಇಂಗ್ಲಿಷ್ ಭಾಷೆಯಲ್ಲಿದ್ದರೂ ಅವು ಹೆಚ್ಚು ಕಡಮೆ ಫ್ರೆಂಚ್ ಹಾಡಿನಂತೆಯೇ ಇರುತ್ತಿದ್ದುವು. ಬರಬರುತ್ತ ಅರಸರ ಮೆಚ್ಚುಗೆಗೆ ಪಾತ್ರನಾದ ಚಾಸರ್ ರಾಯಭಾರದ ಅಥವಾ ವ್ಯಾಪಾರಕ್ಕೆ ಸಂಬಂಧಿಸಿದ ಕೆಲಸಗಳಿಗಾಗಿ ವಿದೇಶಗಳಿಗೆ ಹೋಗಿ ಬರುತ್ತಲೂ ಇದ್ದ. ಇಟಲಿಯ ಸಂಚಾರದಲ್ಲಿದ್ದಾಗ ಅವನಿಗೆ ಪ್ರಸಿದ್ಧ ಸಾಹಿತಿಗಳಾದ ಪೆಟ್ರಾರ್ಕ್ ಮತ್ತು ಬೊಕಾಷಿಯೋ ಇವರ ಪರಿಚಯವಾಯಿತು. ಬೊಕಾಷಿಯೋನ 'ಇಲ್ ಫಿಲೋ ಸ್ಟ್ರಾಟೋ' ಎಂಬ ಕೃತಿಯನ್ನು ಆಧರಿಸಿ ಚಾಸರ್ ಬರೆದ 'ಟ್ರ್ರಾಯ್ಲಸ್ ಮತ್ತು ಕ್ರಿಸೀಡ್' ಎಂಬ ಪುಸ್ತಕ ಬಹಳ ಜನಪ್ರಿಯವಾಯಿತು. ಇದು ತರುಣ ಸೈನಿಕ ಟ್ರಾಯ್ಲಸ್ ಮತ್ತು ಅವನ ಪ್ರೇಯಸಿ ಕ್ರಿಸೀಡ್ ಇವರ ದುರಂತ ಪ್ರೇಮದ ಕಥೆ.

1374ರಲ್ಲಿ ಚಾಸರ್ ಸುಂಕದ ಅಧಿಕಾರಿಯಾಗಿ ನೇಮಿಸಲ್ಪಟ್ಟ. ಪರದೇಶಗಳಿಂದ ತರಲ್ಪಟ್ಟ ಮದ್ಯ, ಎಣ್ಣೆ ಮುಂತಾದುವುಗಳ ಮೇಲೆ ತೆರಿಗೆ ವಸೂಲುಮಾಡುವುದು ಅವನ ಕೆಲಸ. ಇಲ್ಲಿ ಅವನು ಎಲ್ಲ ಬಗೆಯ ಜನರನ್ನೂ ಭೇಟಿಯಾಗುತ್ತಿದ್ದ. ಇದರಿಂದ ನಾನಾ ವರ್ಗಗಳ ಜನರ ಮನೋಭಾವದ ಆಳವಾದ ಅಭ್ಯಾಸಕ್ಕೆ ಅವಕಾಶ ದೊರೆಯಿತು. ಈ ಜ್ಞಾನ ಚಾಸರನ ಅತಿ ಶ್ರೇಷ್ಠ ಕೃತಿಯಾದ 'ಕ್ಯಾಂಟರ್‌ಬರಿ ಕಥೆ'ಗಳಲ್ಲಿ ಚೆನ್ನಾಗಿ ಪ್ರತಿಬಿಂಬಿತವಾಗಿದೆ.

ಅಲ್ಲಿ ಇಲ್ಲಿ ಕೇಳಿದ್ದ ಜಾನಪದ ಕಥೆಗಳಿಗೆ ಬೇರೆ ರೂಪುಕೊಟ್ಟು ಅವನ್ನು ಅಮರವಾಗಿಸಿದ ಕೀರ್ತಿ ಚಾಸರನಿಗೆ ಸಲ್ಲಬೇಕು. ಅಸ್ಥಾನದ ಭಾಷೆಯಾದ ಫ್ರೆಂಚ್ ಮತ್ತು ಪಂಡಿತರ ಭಾಷೆಯಾದ ಲ್ಯಾಟಿನ್‌ಗಳಲ್ಲಿ ಮಾತ್ರ ಲಿಖಿತಕೃತಿಗಳು ಸಿಗುತ್ತಿದ್ದ ಕಾಲದಲ್ಲಿ ಇಂಗ್ಲೆಂಡಿನ ಸಾಮಾನ್ಯ ಜನರ ಭಾಷೆಯಲ್ಲಿ ಕಾವ್ಯರಚನೆಗೆ ತೊಡಗಿ ಹೊಸ ಹಾದಿಯನ್ನು ಹಿಡಿದವನು ಚಾಸರ್. ಅವನ ಭಾಷೆ ಇಂದಿನ ಇಂಗ್ಲಿಷಿಗಿಂತ ಬಹಳ ಭಿನ್ನವಾದದ್ದು; ಆದರೆ ಕಥನಶೈಲಿ ಇಂದಿಗೂ ಹೊಚ್ಚ ಹೊಸದು ಎನಿಸುವಂಥದು.

ಯೂರೋಪಿನ ಮಧ್ಯಯುಗದಲ್ಲಿ ಕ್ಯಾಂಟರ್‌ಬರಿ ಒಂದು ಪ್ರಸಿದ್ಧ ಯಾತ್ರಾಸ್ಥಳವಾಗಿತ್ತು. ಇಂಗ್ಲೆಂಡಿನ ಮೂಲೆಮೂಲೆಗಳಿಂದ ಜನ ಇಲ್ಲಿಗೆ ಬರುತ್ತಿದ್ದರು.

ಕುದುರೆಯ ಮೇಲೆ ಕುಳಿತು ಕ್ಯಾಂಟರ್‌ಬರಿಗೆ ಹೊರಟ 29 ಯಾತ್ರಿಕರು ರಾತ್ರಿಯನ್ನು ಕಳೆಯಲು ಒಂದು ವಸತಿಗೃಹದಲ್ಲಿ ತಂಗುತ್ತಾರೆ. ಮರುದಿನ ಆ ವಸತಿಗೃಹದ ಮಾಲಿಕನನ್ನು ಮಾರ್ಗದರ್ಶಿಯಾಗಿ ಮಾಡಿಕೊಂಡು ಹೊರಡುತ್ತಾರೆ. ಪ್ರಯಾಣದ ಆಯಾಸವನ್ನು ಕಳೆಯಲು ಆತ ಒಂದು ಉಪಾಯವನ್ನು ಸೂಚಿಸುತ್ತಾನೆ. "ಕ್ಯಾಂಟರ್‌ಬರಿಗೆ ಹೋಗುತ್ತ ಗುಂಪಿನ ಪ್ರತಿಯೊಬ್ಬನೂ ಎರಡೆರಡು ಕಥೆಗಳನ್ನೂ ಅಲ್ಲಿಂದ ಮರುಳುತ್ತ ಇನ್ನೆರಡೆರಡು ಕಥೆಗಳನ್ನೂ ಹೇಳಬೇಕು; ಈ ಕಥೆಗಳಲ್ಲಿ ಯಾರದು ಅತಿ ಸ್ವಾರಸ್ಯಭರಿತವಾಗಿರುತ್ತದೋ ಅವನಿಗೆ ಉಳಿದ ಇಪ್ಪತ್ತೆಂಟು ಜನ ತನ್ನ ಹೋಟೆಲಿನಲ್ಲಿ ಹಬ್ಬದೂಟ ಹಾಕಿಸಬೇಕು", ಎನ್ನುತ್ತಾನೆ. 'ಸೈ' ಎಂದು ಪ್ರಯಾಣಿಕರು ಒಂದಕ್ಕಿಂತ ಒಂದು ಹೆಚ್ಚು ಕುತೂಹಲಕಾರಿಯಾದ ಕಥೆಗಳನ್ನು ಹೇಳಲಾರಂಭಿಸುತ್ತಾರೆ. ಇವರು ಹೇಳಿದ ಕಥೆಗಳೇ 'ಕ್ಯಾಂಟರ್‌ಬರಿ ಕಥೆಗಳು'.

ಈ ಗುಂಪಿನಲ್ಲಿ ಇಪ್ಪತ್ತೆಂಟು ಜನರೂ ಕಾಲ್ಪನಿಕ ವ್ಯಕ್ತಿಗಳು. 29ನೆಯವನೇ ಕಥೆಗಳನ್ನು ಬರೆದವನು —ಜೆಫ್ರಿ ಚಾಸರ್. ಚಾಸರ್ ಇವನ್ನು 1386ರಲ್ಲಿ ಬರೆಯಲು ಆರಂಭಿಸಿದ. ಇಪ್ಪತ್ತು ಕಥೆಗಳನ್ನು ಪೂರ್ತಿಯಾಗಿ ಬರೆದು ಇನ್ನೂ ನಾಲ್ಕು ಕಥೆಗಳನ್ನು ಬರೆಯುತ್ತಿದ್ದಾಗಲೇ ಚಾಸರ್ ತೀರಿಕೊಂಡದ್ದರಿಂದ 'ಕ್ಯಾಂಟರ್‌ಬರಿ ಕಥೆಗಳು' ಕೃತಿ ಅಪೂರ್ಣವಾಯಿತು. ಆದರೂ ಇದೊಂದು ಅಪೂರ್ವ ಕಥಾಸಂಕಲನ. ಇದರ ಪ್ರಸ್ತಾವನೆಯಲ್ಲಿರುವ ಇಪ್ಪತ್ತೆಂಟು ಜನರ ವ್ಯಕ್ತಿಚಿತ್ರಗಳಂತೂ ಹಾಸ್ಯಭರಿತವಾದ, ರಸವತ್ತಾದ ಕಥನಕ್ಕೆ ಮಾದರಿ; ಆಗಿನ ಕಾಲದ ಜನರ ನಡವಳಿಕೆ, ಶಿಷ್ಟಾಚಾರಗಳ ಅಭ್ಯಾಸಕ್ಕೆ ಕೈಪಿಡಿ. 'ಕ್ಯಾಂಟರ್‌ಬರಿ ಕಥೆಗಳು' ಮಧ್ಯಯುಗೀನ ಜೀವನ ವಿಧಾನವನ್ನು ಕುರಿತ ಒಂದು ಬಗೆಯ ವಿಶ್ವಕೋಶ —ಎನ್ನುವುದುಂಟು.

1386ರಲ್ಲಿ ಚಾಸರ್ ಸುಂಕದ ಅಧಿಕಾರಿಯ ಹುದ್ದೆಯನ್ನು ಕಳೆದುಕೊಂಡ. ಬರೆವಣಿಗೆಗೆ ಧಾರಾಳ ಸಮಯ ಸಿಕ್ಕಿತಾದರೂ ಜೇಬು ಬರಿದಾಗತೊಡಗಿತು. ಇದೇ ಸಮಯದಲ್ಲಿ ಅವನು ಬರೆದ 'ಖಾಲಿ ಜೇಬಿನ ದೂರು' ಹೊಟ್ಟೆ ಹುಣ್ಣಾಗಿಸುವಂಥ ಹಾಸ್ಯದಿಂದಲೂ ಕಟುವಾದ ವಿಡಂಬನೆಯಿಂದಲೂ ಕೂಡಿದೆ. ಇದನ್ನು ಓದಿದ ಹೊಸ ಅರಸ ನಾಲ್ಕನೆಯ ಹೆನ್ರಿ, ಚಾಸರನಿಗೆ ವೃದ್ಧಾಪ್ಯ ವೇತನವೊಂದನ್ನು ಕೊಡಲು ಆಜ್ಞೆ ಮಾಡಿದ. 1399ರಲ್ಲಿ ಈ ದುಡ್ಡಿನಿಂದ ಚಾಸರ್ ವೆಸ್ಟ್‌ಮಿನ್‌ಸ್ಟರ್ ಅಬೀಯ ಸಮೀಪದಲ್ಲೇ ಮನೆಯೊಂದನ್ನು ಕೊಂಡುಕೊಂಡು ಅಲ್ಲಿಗೆ ಹೋಗಿ ವಾಸಮಾಡಲಾರಂಭಿಸಿದ. ಮರುವರ್ಷ, 1400ರ ಅಕ್ಟೋಬರ್ 25ರಂದು, ಚಾಸರ್ ಮೃತನಾದ. ವೆಸ್ಟ್‌ಮಿನ್‌ಸ್ಟರ್ ಅಬೀಯಲ್ಲಿ ಸಮಾಧಿ ಮಾಡಿದರು.

**ನೋಡಿ : ಆಂಗ್ಲ ಸಾಹಿತ್ಯ**

## ಚಿಕದೇವರಾಯ

ವಿಜಯನಗರ ಸಾಮ್ರಾಜ್ಯದ ಪತನಾನಂತರ ಪ್ರಾಬಲ್ಯಕ್ಕೆ ಬಂದ ರಾಜಮನೆತನಗಳಲ್ಲಿ ಮೈಸೂರಿನ ಒಡೆಯರ ಮನೆತನ ಪ್ರಸಿದ್ಧವಾದದ್ದು. ಅವರಲ್ಲಿ ಸಾಹಿತ್ಯ ಕಲಾಭಿಮಾನಿಯೂ ವಿದ್ವಾಂಸನೂ ರಾಜನೀತಿ ನಿಪುಣನೂ ಆಗಿ ಮೈಸೂರಿನ ಚರಿತ್ರೆಯಲ್ಲಿ ಬೆಳಗಿದಾತ ಚಿಕದೇವರಾಯ.

ಒಡೆಯರ ವಂಶದಲ್ಲಿ 14ನೆಯ ತಲೆಮಾರಿನ ಅರಸನಾಗಿ ಚಿಕದೇವರಾಯ ಪಟ್ಟವೇರಿದ. ಮರಾಠರ ಶಿವಾಜಿ, ಮಧುರೆಯ ನಾಯಕರು, ಮೊಗಲರ ಔರಂಗಜೇಬ, ಇವರ ಸಮಕಾಲೀನ ಅರಸು ಚಿಕದೇವರಾಯ ಒಡೆಯ.

'ಚಿಕದೇವರಾಯ ಬಿನ್ನಪ', 'ಗೀತಗೋಪಾಲ', 'ಭಾಗವತ', 'ಶೇಷಧರ್ಮ' ಇವು ಚಿಕದೇವರಾಯ ವಿರಚಿತ ಕೃತಿಗಳು. ಇವುಗಳಲ್ಲಿ 'ಚಿಕದೇವರಾಯ ಬಿನ್ನಪ' ಗದ್ಯಗ್ರಂಥ. ಮೇಲುಕೋಟೆಯ ನಾರಾಯಣಸ್ವಾಮಿ ದೇವರಿಗೆ ಸಲ್ಲಿಸಿದ ಈ ಮೂವತ್ತು ಬಿನ್ನಪಗಳಲ್ಲಿ ಶ್ರೀವೈಷ್ಣವ ಮತದ ತತ್ತ್ವಗಳನ್ನು ಸುಲಭವೂ ಮೋಹಕವೂ ಆದ ಸಾಹಿತ್ಯರೂಪದಲ್ಲಿ ವಿವರಿಸಲಾಗಿದೆ. 'ಗೀತಗೋಪಾಲ' ಗೋಪಾಲಕ ಕೃಷ್ಣನನ್ನು ಕುರಿತ ಸಂಕೀರ್ತನ ಗೀತೆಗಳ ಸಂಕಲನ.



ಕಲೆ, ಸಾಹಿತ್ಯಗಳಿಗೆ ಆಸರೆ : ಚಿಕದೇವರಾಯ

ಚಿಕದೇವರಾಯ ಸ್ವತಃ ಕವಿಯಾಗಿದ್ದುದಲ್ಲದೆ, ಕವಿಜನ ಪೋಷಕನೂ ಆಗಿದ್ದ. ಈತನ ಆಸ್ಥಾನದಲ್ಲಿ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಮಲ್ಲಿಕಾರ್ಜುನ, ವೇಣುಗೋಪಾಲರೆಂಬ ಪ್ರಸಿದ್ಧ ಕವಿಗಳೂ ಶೃಂಗಾರಮ್ಮ, ಹೊನ್ನಮ್ಮರೆಂಬ ಕವಯಿತ್ರಿಯರೂ ಇದ್ದರು.

ಚಿಕದೇವರಾಯನಿಗೆ ಸಂಗೀತದಲ್ಲಿ ಆಸಕ್ತಿ ಇತ್ತು. ಅವನು ವೀಣಾವಾದನದಲ್ಲಿ ಕುಶಲನಾಗಿದ್ದ.

ತಿರುಮಲಾರ್ಯನ ಸೋದರ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ' ನಾಟಕ ಕನ್ನಡದ ಅತ್ಯಂತ ಪ್ರಾಚೀನ ನಾಟಕ.

ಚಿಕದೇವರಾಯ ಮೃದು ಹೃದಯಿ, ಕೃಪಾಳು, ಮುಕ್ತಹಸ್ತ, ದಾನಿ. ಆತ ಸರಸ ಸಂಭಾಷಣಾಚತುರ. ಆತನ ಆಸ್ಥಾನ, ಸಾಹಿತ್ಯ ಸಂಗೀತ ನೃತ್ಯಕಲೆಗಳಿಗೆ ಆಸರೆಯಾಗಿತ್ತು.

ಚಿಕದೇವರಾಯ ಜನಿಸಿದ್ದು 1645ರಲ್ಲಿ. ದೀರ್ಘಕಾಲ ರಾಜ್ಯವಾಳಿದ ಮೇಲೆ 1704ರಲ್ಲಿ ನಿಧನಹೊಂದಿದ.

## ಚಿತ್ರಕಾರ

ಉದಿಸುತ್ತಿರುವ ಸೂರ್ಯ, ಅರಳುತ್ತಿರುವ ಹೂವು, ಅಳುತ್ತಿರುವ ಅಥವಾ ನಗುತ್ತಿರುವ ಮಗು, ಹರಿಯುತ್ತಿರುವ ಪ್ರವಾಹ — ಇಂಥ ನೋಟ ಕಂಡಾಗ, ಅದನ್ನು ಮನಸ್ಸು ಹೀರಿಕೊಳ್ಳುತ್ತದೆ. ಆ ದೃಶ್ಯವನ್ನು ಕಾಗದದ ಮೇಲೆ ಮೂಡಿಸಬಹುದು. ಆದರೆ ಎಲ್ಲರಿಂದಲೂ ಈ ಕೆಲಸ ಸಾಧ್ಯವಿಲ್ಲ.

ತಾನು ಕಂಡದ್ದನ್ನು, ಅನುಭವಿಸಿದ್ದನ್ನು, ತನ್ನ ಭಾವನೆಗಳನ್ನು ಈ ರೀತಿ ಚಿತ್ರಗಳ ಮೂಲಕ ತಿಳಿಸಬಲ್ಲವನೇ ಚಿತ್ರಕಾರ. ಅವನು ಯಾವಾಗಲೂ ಹೀಗೆ ಚೆಲುವಿನ ನೋಟಗಳನ್ನೇ ಚಿತ್ರಿಸಬೇಕೆಂದಿಲ್ಲ. ಹೃದಯ ಕಲಕುವ ದೃಶ್ಯವನ್ನು ನೋವಿನಿಂದ ನರಳುತ್ತಿರುವ ವ್ಯಕ್ತಿಯ ಚಿತ್ರವನ್ನೂ ಆತ ಬಿಡಿಸಬಹುದು.

ಚಿತ್ರಕಾರ ಬದುಕಿರುವಾಗಲೇ ಅವನ ಕಲಾಕೃತಿಗಳು ಜನಾದರಣೆಗೆ ಪಾತ್ರವಾಗಬಹುದು. ಸತ್ತು ನೂರಾರು ವರ್ಷಗಳು ಕಳೆದ ಬಳಿಕವೂ ಆತನ ಹೆಸರು ಪ್ರಸಿದ್ಧಿಗೆ ಬರಲೂ ಬಹುದು. ಲಿಯೊನಾರ್ಡೊ ದ ವಿಂಚಿಯಂತೆ ಬದುಕಿದ್ದಾಗಲೂ ಗತಿಸಿದ ಅನಂತರವೂ ಒಂದೇ ಸಮನಾದ ಖ್ಯಾತಿ ಪಡೆದವರೂ ಇದ್ದಾರೆ. ನಿಜವಾದ ಚಿತ್ರಕಾರ ಸೃಜನಶೀಲ. ಕಂಡ ಅಥವಾ ಭಾವಿಸಿಕೊಂಡ ದೃಶ್ಯಗಳನ್ನು ನೇರವಾಗಿ ಬರೆಯಲು ಶಕ್ತ.

ಒಂದು ಮರವನ್ನೋ ಪ್ರಾಣಿಯನ್ನೋ ಒಬ್ಬ ಚಿತ್ರಕಾರ ಬರೆಯ ಬಯಸುತ್ತಾನೆ ಎನ್ನೋಣ. ಆ ಗಿಡದ ಹೆಸರು ಅಥವಾ ವಯಸ್ಸಿನ ಬಗೆಗೆ ಅವನು ಯೋಚಿಸುವುದೇ ಇಲ್ಲ. ನೀಲಿಯ ಆಕಾಶದ ಅಥವಾ ಇನ್ನಾವುದೇ ಹಿನ್ನೆಲೆಯಲ್ಲಿ ಮರ ಕಡು ಹಸುರು ಬಣ್ಣದ ಒಂದು ರಾಶಿಯಂತೆ ಅವನಿಗೆ ಅನಿಸುತ್ತದೆ. ಅಷ್ಟೇ ಅಲ್ಲ, ಅನೇಕ ಭಾವನೆಗಳು ಅವನಲ್ಲಿ ಸ್ಫುರಿಸಲು ಆ ಮರ ಕಾರಣವಾಗಬಹುದು. ಅದು ಬಲಿಷ್ಠ ಅಥವಾ ದುರ್ಬಲವಾಗಿರುವಂತೆ, ಏನೋ ಒಂದು ಬಗೆಯ ನೆಮ್ಮದಿ ಹೊಂದಿರುವಂತೆ,

ಚಿತ್ರಕಲೆಯಲ್ಲಿ ದೂರನೋಟದ ತತ್ತ್ವ





ಚಿತ್ರಕಲೆಯಲ್ಲಿ ಜ್ಯಾಮಿತಿಯ ನೆರವು : 13ನೆಯ ಶತಮಾನದ ವಾಸ್ತುಶಿಲ್ಪಿ ವಿಲ್ಲಾರ್ಡ್ ದ ಹಾನ್‌ಕೋರ್ಟ್ ರಚಿಸಿದ ನಕಾಸೆಗಳು

ಇಲ್ಲವೆ ಯಾತನೆ ಪಡುತ್ತಿರುವಂತೆ ಅವನಿಗೆ ಕಾಣಬಹುದು. ಇದನ್ನು ಆಧರಿಸಿ ಚಿತ್ರದಲ್ಲಿ ಅವನು ಮರಕ್ಕೆ ಒಂದು ವ್ಯಕ್ತಿತ್ವವನ್ನು ಕೊಡುತ್ತಾನೆ. ಹೀಗೆ ಚಿತ್ರಕಾರನ ಕಲ್ಪನೆ ಹೊರ ಪ್ರಪಂಚದೊಡನೆ ಪ್ರತಿಕ್ರಿಯೆಗೊಂಡಾಗ ಚಿತ್ರಬರೆಯುವ ಕಾರ್ಯದಲ್ಲಿ ಅವನು ತೊಡಗುತ್ತಾನೆ.

ಒಳ್ಳೆಯ ಚಿತ್ರಕಾರನಿಗೆ ಪ್ರತಿಭೆ ಇರಬೇಕು ಮತ್ತು ಕಲೆಯ ಅವ್ಯಕ್ತ ಭಾವಗಳಿಗೆ ಅಭಿವ್ಯಕ್ತಿ ಕೊಡುವ ಸಾಮರ್ಥ್ಯ ಇರಬೇಕು. ಇವೆರಡೂ ಒಂದಕ್ಕೊಂದು ಪೂರಕ. ಚಿತ್ರಣ ತಂತ್ರಗಳ ಸರಿಯಾದ ಬಳಕೆಯಿಂದ ಅವನು ತನ್ನ ಕಲ್ಪನೆಗೆ ತಕ್ಕ ರೂಪ ಕೊಡಬಹುದು. ಕೇವಲ ತಂತ್ರದ ಪ್ರಭಾವ ಹೆಚ್ಚಾದರೂ ಚಿತ್ರ ಸರಿಯಾಗಿ ರೂಪುಗೊಳ್ಳುವುದಿಲ್ಲ. ಯಾವ ರೀತಿ ಚಿತ್ರಿಸಬೇಕು, ಯಾವ ಬಣ್ಣ ಬಳಸಬೇಕು ಎಂಬ ಬಗೆಗೆ ಪ್ರತಿಯೊಂದು ದೇಶದಲ್ಲೂ ಅಲ್ಲಿಯದೇ ಆದ ಸಂಪ್ರದಾಯವಿರುತ್ತದೆ. ಸಾಧಾರಣವಾಗಿ ಚಿತ್ರಕಾರ ಸಮಕಾಲೀನ ತಂತ್ರಗಳನ್ನೇ ಬಳಸಿ ಚಿತ್ರ ಬರೆಯುತ್ತಾನೆ.

ಚಿತ್ರರಚನೆಯಲ್ಲಿ ಮೊದಲ ಹೆಜ್ಜೆ—ಪ್ರಾಚೀನ ಈಜಿ...

ಚಿತ್ರಗಳನ್ನು ಬರೆಯಬೇಕಾದರೆ ಚಿತ್ರಕಾರ ಅನುಸರಿಸುವ ವಿಧಾನಗಳು ಮೂರು : 1 ಬರಿಯ ರೂಪುರೇಖೆಗಳಿಂದಲೇ ಚಿತ್ರ ನಿರ್ಮಿಸುವುದು. 2 ಬೇರೆ ಬೇರೆ ಬಣ್ಣಗಳಿಂದ ಚಿತ್ರ ರಚಿಸುವುದು. 3 ಒಂದೇ ಬಣ್ಣದಿಂದ ಚಿತ್ರ ಮೂಡಿಸುವುದು.



11ನೆಯ ಶತಮಾನದ ಚಿತ್ರಕಾರ

ಕರಿ ಹಾಗೂ ಬಣ್ಣದ ಪೆನ್ಸಿಲ್, ಪೆನ್, ಇದ್ದಿಲು ತೈಲ ಅಥವಾ ಜಲವರ್ಣಗಳು– ಹೀಗೆ ಚಿತ್ರ ಬರೆಯಲು ಅನೇಕ ಮಾಧ್ಯಮಗಳನ್ನು ಚಿತ್ರಕಾರ ಬಳಸುತ್ತಾನೆ.

ಚಿತ್ರಕಾರನ ಅಭಿವ್ಯಕ್ತಿ ವಿಧಾನ ಕಾಲಕಾಲಕ್ಕೆ ಬದಲಾಗುತ್ತ ಬಂದಿದೆ.



ಭಾರತೀಯ ಮಾರುಕಟ್ಟೆ : ರಷ್ಯದ ಕೊಕೊರಿನ್ ಕೃತಿ

## ಚಿತ್ರಶಾಲೆ


ಸಾಲಾರ್‌ಜಂಗ್ ಕಲಾವಸ್ತುಸಂಗ್ರಹಾಲಯ

ಮೈಸೂರಿನ ಜಗನ್ಮೋಹನ ಅರಮನೆಯ ಕಟ್ಟಡದಲ್ಲಿರುವ ಚಿತ್ರಶಾಲೆ ಪ್ರವಾಸಿಗರಿಗೆ ಒಂದು ಆಕರ್ಷಣೆ. ವಿವಿಧ ಶೈಲಿಯಲ್ಲಿ ರಚಿತವಾದ ಅನೇಕ ಚಿತ್ರಗಳೂ ಇತರ ಕಲಾ ಕೃತಿಗಳೂ ಸಂಗೀತವಾದ್ಯಾದಿಗಳೂ ಇಲ್ಲಿ ಪ್ರದರ್ಶಿಸಲ್ಪಟ್ಟಿವೆ.

ಕಲಾವಸ್ತುಗಳನ್ನು ಅದರಲ್ಲೂ ಕಲಾಪೂರ್ಣ ಚಿತ್ರಗಳನ್ನು ಪ್ರದರ್ಶಿಸಲು, ಉಪಯೋಗಿಸುವ ಕಟ್ಟಡಗಳನ್ನು 'ಚಿತ್ರಶಾಲೆ' ಎಂದು ಕರೆಯುವುದು ವಾಡಿಕೆ.

ಇಂಥ ಚಿತ್ರಶಾಲೆಗಳು. ಕಲಾವಸ್ತು ಸಂಗ್ರಹಾಲಯಗಳು ಯಾವುದಾದರೂ ಸರಕಾರ ಅಥವಾ ಸಾರ್ವಜನಿಕ ಸಂಸ್ಥೆಗೆ ಸೇರಿದುವಾಗಿರಬಹುದು. ಅಥವಾ ಖಾಸಗಿ ವ್ಯಕ್ತಿಗಳಿಗೆ ಸೇರಿರಬಹುದು ; ಚಿತ್ರಗಳು ಮತ್ತು ಇತರ ಕಲಾವಸ್ತುಗಳನ್ನು ಮಾರಾಟ ಮಾಡುವ ವ್ಯಾಪಾರಿಗಳಿಗೆ ಸೇರಿದ್ದಾಗಿರಬಹುದು. ಒಡೆತನ ಯಾರದೇ ಆಗಲಿ. ಇವೆಲ್ಲವೂ ಚಿತ್ರಶಾಲೆಗಳು.

ಬೇರೆ ಬೇರೆ ಸ್ಥಳಗಳಿಂದ ಬೇರೆ ಬೇರೆ ಕಾಲಗಳಲ್ಲಿ ಸಂಗ್ರಹಿಸಿದ ಚಿತ್ರಗಳನ್ನಾಗಲೀ ಇತರ ಕಲಾವಸ್ತುಗಳನ್ನಾಗಲೀ ಒಂದೆಡೆಯಲ್ಲಿ ಒಪ್ಪವಾಗಿ ಓರಣವಾಗಿ ಜೋಡಿಸಿ ಇಡುವ ಪದ್ಧತಿ ಹೊಸದೇನೂ ಅಲ್ಲ. ಪುರಾತನ ಅಥೆನ್ಸಿನಲ್ಲಿದ್ದ ಅಮೃತಶಿಲೆಯ ಮಂದಿರದಲ್ಲಿ ಪ್ರಖ್ಯಾತ ಚಿತ್ರಕಾರರು ರಚಿಸಿದ್ದ ಐತಿಹಾಸಿಕ ಮತ್ತು ಪೌರಾಣಿಕ ಚಿತ್ರಗಳನ್ನು ಓರಣವಾಗಿ ಜೋಡಿಸಿಟ್ಟಿದ್ದರು. ಇದನ್ನು 'ಪಿನಾಕೊಥೆಕಾ' ಎಂದರೆ ಚಿತ್ರಗಳ ಹಜಾರ, ಚಿತ್ರ ಮಂದಿರ ಎಂದು ಕರೆಯುತ್ತಿದ್ದರು.

ಗ್ರೀಕರ ಅನಂತರ ರೋಮನರೂ ಕಲಾವಸ್ತುಗಳನ್ನು ಸಂಗ್ರಹಿಸುವ ಪದ್ಧತಿಯನ್ನು ಮುಂದುವರಿಸಿದರು. ಇವರ ಸಂಕಲನಗಳು ಪ್ರಧಾನವಾಗಿ ಎರಡು ವರ್ಗದವು. ಒಂದು – ಇವರು ತಾವು ಗೆದ್ದ ಪ್ರದೇಶದಿಂದ ಲೂಟಿ ಮಾಡಿಕೊಂಡು ಬಂದ ವಸ್ತುಗಳ ಸಂಕಲನ; ಇನ್ನೊಂದು –ಹರಕೆಯ ರೂಪದಲ್ಲಿ ದೇವಮಂದಿರಗಳಿಗೆ ಕಾಣಿಕೆ ಕೊಟ್ಟ ವಸ್ತುಗಳ ಸಂಕಲನ. ಈ ವಸ್ತುಗಳನ್ನು ಅವರು ದೇವಾಲಯಗಳಲ್ಲೂ ಸಾರ್ವಜನಿಕ ಸ್ನಾನಗೃಹಗಳಲ್ಲೂ ಪ್ರದರ್ಶಿಸುತ್ತಿದ್ದರು.

ತಮಗೆ ಕಾಣಿಕೆಯಾಗಿ ಬಂದ ವಸ್ತುಗಳನ್ನು ಪ್ರದರ್ಶಿಸುವ ಪದ್ಧತಿ ಇಗರ್ಜಿಗಳಲ್ಲಿ ಬಹುಕಾಲದವರೆಗೂ ಇತ್ತು.

ಕ್ರೈಸ್ತಧರ್ಮ ಬೆಳೆದಂತೆ ಯೂರೋಪಿನಲ್ಲಿ ಚಿತ್ರಕಲೆಗೆ ಪ್ರೋತ್ಸಾಹ ದೊರೆಯಿತು. ಕ್ರೈಸ್ತಮಂದಿರಗಳಲ್ಲಿ, ಪೋಪನ ಭವನಗಳಲ್ಲಿ, ಅತ್ಯುತ್ತಮ ಭಿತ್ತಿಚಿತ್ರಗಳು ರಚಿಸಲ್ಪಟ್ಟುವು. ಈ ರಚನೆಗಳ ಉದ್ದೇಶ ಧಾರ್ಮಿಕವಾದರೂ ಕಲಾದೃಷ್ಟಿಯಿಂದ ಈ ಮಂದಿರಗಳೂ ಭವನಗಳೂ ಚಿತ್ರಶಾಲೆಗಳೆಂದೇ ಹೇಳಬಹುದು.

ಭಾರತದಲ್ಲಿ ಕೂಡ, ಪ್ರಧಾನವಾಗಿ ಧಾರ್ಮಿಕ ಉದ್ದೇಶದಿಂದ ರಚಿಸಿದ ಚಿತ್ರಗಳ ಭಂಡಾರವಾಗಿರುವ ಅಜಂತ ಗುಹೆಗಳು ಮುಂತಾದುವು ಒಂದು ದೃಷ್ಟಿಯಿಂದ ಚಿತ್ರಶಾಲೆಗಳೇ.

ಕ್ರಿಸ್ತ ಪೂರ್ವ ಕಾಲದಿಂದಲೂ ಭಾರತೀಯ ಅರಮನೆಗಳಲ್ಲಿ ಚಿತ್ರಗಳನ್ನುಳ್ಳ ಅಥವಾ ಚಿತ್ರಗಳನ್ನು ಇಡುತ್ತಿದ್ದ ಕೋಣೆಗಳು ಇರುತ್ತಿದ್ದುವೆಂಬುದಕ್ಕೆ ಸಾಹಿತ್ಯಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ.

ನವೋದಯ ಕಾಲದಲ್ಲಿ ಉತ್ತಮ ಚಿತ್ರಕಾರರ ಕೃತಿಗಳನ್ನು ಸಂಗ್ರಹಿಸುವ ಪ್ರಯತ್ನಗಳು ನಡೆದುವು. ಶ್ರೀಮಂತರು ಇಂಥ ಚಿತ್ರಗಳನ್ನು ಸಂಗ್ರಹಿಸಿ ಇಟ್ಟುಕೊಂಡು ಔತಣಾದಿ ವಿಶೇಷ ಸಂದರ್ಭಗಳಲ್ಲಿ ಅವನ್ನು ತಮ್ಮ ಅತಿಥಿಗಳಿಗೆ ತೋರಿಸುವ ಪದ್ಧತಿ ಬೆಳೆಯಿತು. ಖಾಸಗಿ ಚಿತ್ರಶಾಲೆಗಳಿಗೆ ಇದು ಎಡೆಗೊಟ್ಟಿತು.

ನಮ್ಮ ರಾಷ್ಟ್ರದಲ್ಲೂ ಅರಸರು ಮತ್ತು ಶ್ರೀಮಂತರು ಮೊದಲಿನಿಂದಲೂ ಚಿತ್ರಕಲೆಯ ಪೋಷಕರಾಗಿದ್ದು ಅನೇಕ ಉತ್ತಮ ಚಿತ್ರಗಳನ್ನು ಸಂಗ್ರಹಿಸಿದರು. ಇಂಥ ಚಿತ್ರಗಳಲ್ಲಿ ಸಮಕಾಲೀನವಾದುವೂ ಉಂಟು ; ಹಿಂದಿನ ಕಾಲದಲ್ಲಿ ರಚಿತವಾದ ಚಿತ್ರಗಳೂ ಉಂಟು.

ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಸರಕಾರ ಕೂಡ ಕಲಾರಂಗದಲ್ಲಿ ಆಸಕ್ತಿವಹಿಸಿತು. ಕಲಾತ್ಮಕ ಅಥವಾ ಐತಿಹಾಸಿಕ ಪ್ರಾಮುಖ್ಯವುಳ್ಳ ಚಿತ್ರಗಳನ್ನು ಕೊಂಡು ಅವನ್ನು ಚಿತ್ರಶಾಲೆಗಳಲ್ಲಿಟ್ಟು ಸಾರ್ವಜನಿಕರು ನೋಡಲು ಅವಕಾಶ ಕಲ್ಪಿಸಿತು.

'ಚಿತ್ರ' ಎನ್ನುವ ಮಾತಿಗೆ 'ಬಣ್ಣ ಬಣ್ಣದಿಂದ ಕೂಡಿದ' 'ಆಕರ್ಷಕವಾದ' ಎಂಬ ಅರ್ಥವೂ ಇದೆ. ಕೆಲವು ಚಿತ್ರಶಾಲೆಗಳಲ್ಲಿ ಚಿತ್ರಗಳು ಮಾತ್ರವಲ್ಲದೆ ಇನ್ನೂ ಹಲವಾರು ಆಕರ್ಷಕ ಹಾಗೂ ಕಲಾತ್ಮಕ ವಸ್ತುಗಳೂ ಇರುತ್ತವೆ. ಇವನ್ನು ಮ್ಯೂಸಿಯಂ ಎನ್ನುತ್ತಾರೆ. ಬೆಂಗಳೂರಿನಲ್ಲಿರುವ ಸರಕಾರೀ ಮ್ಯೂಸಿಯಂನಲ್ಲಿ ಚಿತ್ರಗಳನ್ನಲ್ಲದೆ ಹಲವಾರು ಆಕರ್ಷಕ ವಸ್ತುಗಳನ್ನೂ ನೋಡಬಹುದು.

ಮ್ಯೂಸಿಯಮ್‌ಗಳಲ್ಲಿ ಪ್ರದರ್ಶಿಸುವ ವಸ್ತುಗಳನ್ನು


ಸಾಲಾರ್‌ಜಂಗ್ ಕಲಾಸಂಗ್ರಹಾಲಯದಲ್ಲಿ ಗಾಜಿನ ಸಾಮಗ್ರಿಗಳು

ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಖ್ಯಾತ ಕಲಾವಿದ ವೆಂಕಟಪ್ಪನವರ ಹೆಸರು ಹೊತ್ತ ಚಿತ್ರಶಾಲೆ

ಯಾವುದಾದರೊಂದು ಕ್ರಮವನ್ನನುಸರಿಸಿ ವಿಂಗಡಿಸಿ ಜೋಡಿಸಿರುತ್ತಾರೆ. ಇದರಿಂದ ಆಯಾ ವರ್ಗದ ವಸ್ತು ಸಂಕಲನವನ್ನು ಒಂದು ಕ್ರಮದಲ್ಲಿ ವ್ಯಾಸಂಗ ಮಾಡಲು ಅನುಕೂಲವಾಗುತ್ತದೆ. ಇಂಥ ಕ್ರಮ ವಿಂಗಡಣೆಯಲ್ಲಿ ಚಿತ್ರಗಳಿಗೂ ಒಂದು ಸ್ಥಾನವಿದೆ. ಇದು ಮ್ಯೂಸಿಯಂನ ಒಂದು ವಿಭಾಗ. ಇಲ್ಲಿ ಹಲವಾರು ಕಲಾವಿದರ. ಬೇರೆ ಬೇರೆ ಕಾಲಗಳಲ್ಲಿ ರಚಿತವಾದ ಉತ್ತಮ ಚಿತ್ರಗಳನ್ನು ಕಾಣಬಹುದು.



ಶಾಂತ ಸಾಗರ ದ್ವೀಪದಲ್ಲಿ ದೊರೆತ ಶಿಲಾಕೃತಿ

ಇದಲ್ಲದೆ ಒಬ್ಬನೇ ಕಲಾವಿದನ ಕೃತಿಗಳಿಗೆ ಮೀಸಲಾದ ಸಂಗ್ರಹಾಲಯಗಳೂ ಇವೆ.

ಮೈಸೂರಿನ ಅಪ್ರತಿಮ ಕಲಾವಿದರಾದ ಕೆ. ವೆಂಕಟಪ್ಪನವರ ಚಿತ್ರಗಳಿಗೆ ಮತ್ತು ಇತರ ಕಲಾಕೃತಿಗಳಿಗೆ ಮೀಸಲಾದ ಒಂದು ಚಿತ್ರಶಾಲೆ ಬೆಂಗಳೂರಿನಲ್ಲಿ ರೂಪುಗೊಂಡಿದೆ. ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ವ್ಯಕ್ತಿಗಳು ಕಾಲದಿಂದ ಕಾಲಕ್ಕೆ ಸಂಗ್ರಹಿಸಿದ್ದ ಹಾಗೂ ವೆಂಕಟಪ್ಪನವರು ತಮ್ಮಲ್ಲಿಯೇ ಉಳಿಸಿಕೊಂಡಿದ್ದ ಕೃತಿಗಳು ಈ ಚಿತ್ರಶಾಲೆಯಲ್ಲಿ ನೋಡಲು ಸಿಗುತ್ತವೆ.

ಇಂಥ ಚಿತ್ರಶಾಲೆಗಳಲ್ಲಿ ಒಬ್ಬನೇ ಕಲಾವಿದನ ಹಲವಾರು ಕೃತಿಗಳನ್ನು ಒಂದೆಡೆಯಲ್ಲೇ ಕಾಣುವ ಅನುಕೂಲ ಇರುತ್ತದೆ. ಇದಲ್ಲದೆ. ಆತನ ಶೈಲಿ. ಕಲಾ ಕೌಶಲ, ಅಭಿವ್ಯಕ್ತಿ ವಿಧಾನ ಮುಂತಾದ ಅಂಶಗಳನ್ನು ಕುರಿತು ಅಧ್ಯಯನ ನಡೆಸಲು ಅವಕಾಶ ದೊರೆಯುತ್ತದೆ.

ಜಗತ್ತಿನ ವಿವಿಧ ರಾಷ್ಟ್ರಗಳಲ್ಲಿ ಸುಪ್ರಸಿದ್ಧ ಚಿತ್ರಶಾಲೆಗಳಿವೆ. ಭಾರತದಲ್ಲಿ 1949ರಲ್ಲಿ ಆರಂಭವಾದ 'ನ್ಯಾಷನಲ್ ಮ್ಯೂಸಿಯಂ ಆಫ್ ಇಂಡಿಯ' ಹಾಗೂ ಹೈದರಾಬಾದಿನಲ್ಲಿರುವ 'ಸಾಲಾರ್‌ಜಂಗ್ ಮ್ಯೂಸಿಯಂ' ಗಣನೀಯವಾದುವು. ಹಿಂದಿನ ಹೈದರಾಬಾದ್ ಸಂಸ್ಥಾನದ ಶ್ರೀಮಂತನಾಗಿದ್ದ ಸರ್ ಸಾಲಾರ್‌ಜಂಗ್ ಅವರು, ತಮ್ಮ ಜೀವಿತ ಕಾಲದಲ್ಲಿ ಜಗತ್ತಿನ ವಿವಿಧ ಭಾಗಗಳ ಹಾಗೂ ವಿವಿಧ ಪ್ರಕಾರಗಳ ಅಪೂರ್ವ ಕಲಾವಸ್ತುಗಳನ್ನು ಸಂಗ್ರಹಿಸಿದರು. ಆ ಸಂಗ್ರಹದಲ್ಲಿದ್ದ ವಸ್ತುಗಳನ್ನು ಕ್ರಮವಾಗಿ ವಿಂಗಡಿಸಿ ಸಾಲಾರ್‌ಜಂಗ್ ಮ್ಯೂಸಿಯಂನಲ್ಲಿ ಇಡಲಾಗಿದೆ.

### ಚೀನೀ ಕಲೆ, ಸಾಹಿತ್ಯ

ಚೀನೀ ಕಲೆ ಮತ್ತು ಸಾಹಿತ್ಯಗಳಿಗೆ 25 ಶತಮಾನಗಳಿಗಿಂತಲೂ ಹೆಚ್ಚಿನ ಪ್ರಾಚೀನತೆ ಇದೆ. ಆದರೆ ಇಂದಿಗೂ ಪ್ರಪಂಚಕ್ಕೆ ಬಹುಮಟ್ಟಿಗೆ ಅಪರಿಚಿತವಾಗಿಯೇ ಇವು ಉಳಿದಿವೆ. ಇದಕ್ಕೆ ಮೊದಲ ಕಾರಣ, ತಮ್ಮ ರಾಷ್ಟ್ರದ ಮೇಲೆ ಉತ್ತರ ಕಡೆಯಿಂದ ಹೂಣರು ನಡೆಸುತ್ತಿದ್ದ ದಾಳಿಯನ್ನು ತಡೆಗಟ್ಟಲು ಚೀನೀಯರು ಸುಮಾರು ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಕಟ್ಟಿದ 3200 ಕಿಲೊಮೀಟರುಗಳಷ್ಟು ಉದ್ದದ ದೊಡ್ಡ ಗೋಡೆ. ಇದರಿಂದ ವಿಶ್ವದೊಡನೆ ಚೀನದ ಸಂಪರ್ಕ ಕಡಮೆ. ಎರಡನೆಯದು, ಚೀನೀ ಭಾಷೆ ಕಲಿಯಲು ಸುಲಭವಲ್ಲದಿರುವುದು.

ದೇವಾಲಯಗಳ ರಚನೆ, ಅರಮನೆಗಳ ನಿರ್ಮಾಣ, ಚಿತ್ರ–ಶಿಲ್ಪಕಲೆಗಳು, ಬಳಕೆ ವಸ್ತುಗಳ ರಚನೆ ಇವುಗಳಲ್ಲೆಲ್ಲ ಚೀನೀಯರ ಕಲಾಭಿರುಚಿಯನ್ನು ಕಾಣಬಹುದು. ಚೀನದ ಕಲೆಯಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆ ಆದದ್ದೇನೋ ಉಂಟು. ಆದರೆ ಅವು ನಡೆದದ್ದು ಅತ್ಯಂತ ನಿಧಾನವಾಗಿ. ಇತರ ದೇಶಗಳ ಕಲಾಸಂಪ್ರದಾಯಗಳಲ್ಲಿ ಬದಲಾವಣೆಗಳಾಗಲು ಕೆಲವು ದಶಕಗಳು ಸಾಕಾದುವು. ಚೀನದಲ್ಲಿ ಅಂಥ ಬದಲಾವಣೆಯಾಗಲು ಕೆಲವು ಶತಮಾನಗಳೇ ಬೇಕಾದುವು.

ಚೀನೀ ಭಾಷೆ ಇತರ ಭಾಷೆಗಳಂತಲ್ಲ. ಇಲ್ಲಿಯ ಒಂದು ಅಕ್ಷರ, ಒಂದು ಧ್ವನಿಯನ್ನು ಸೂಚಿಸುವ ಬದಲು ಒಂದು ವಸ್ತು ಅಥವಾ ಒಂದು ಅಭಿಪ್ರಾಯವನ್ನೇ ಸೂಚಿಸಿಬಿಡುತ್ತದೆ. ಉದಾಹರಣೆಗೆ, ಒಂದು ಅಕ್ಷರ ಮರವೊಂದನ್ನು ಸೂಚಿಸಿದರೆ, ಅಂಥ ಎರಡು ಅಕ್ಷರಗಳನ್ನು ಒಂದರ ಪಕ್ಕದಲ್ಲೊಂದನ್ನು ಬರೆದಾಗ ಅವು ಕಾಡನ್ನು ಸೂಚಿಸುತ್ತವೆ. ಹೀಗೆ ಚಿತ್ರಮಯವಾದ ತಮ್ಮ ಭಾಷೆಯ ಬರವಣಿಗೆಗೆ ಚೀನೀಯರು ಅತ್ಯಂತ ಪ್ರಾಮುಖ್ಯ ಕೊಟ್ಟಿದ್ದರು. ಬರವಣಿಗೆಯನ್ನು ಕಲೆಯ ಅತ್ಯುತ್ತಮ ವಿಭಾಗವೆಂದು ಪರಿಗಣಿಸಿದ್ದರು. ಎಂದೇ ಕುಂಚ ಹಿಡಿದು ಅಕ್ಷರ ಬರೆಯುವುದು ಶಿಕ್ಷಣ ಕ್ರಮದ ಮುಖ್ಯ ಭಾಗವಾಗಿತ್ತು. ನಾವು ಪೆನ್ಸಿಲ್ ಹಿಡಿದು ಬರೆಯುವಷ್ಟೇ ಸುಲಭವಾಗಿ ಅವರು ಕುಂಚದಿಂದ ಬರೆಯುತ್ತಿದ್ದರು. ಕುಂಚ ಹಿಡಿಯುವುದರಲ್ಲಿ ಅವರು ಎಷ್ಟು ನೈಪುಣ್ಯ ಸಾಧಿಸಿದ್ದರೆಂದರೆ ಬರಿಯ ಕಪ್ಪು ಬಿಳಿ ಬಣ್ಣಗಳಿಂದ ವಿವಿಧ ಛಾಯೆಗಳನ್ನು ರೂಪಿಸಬಲ್ಲವರಾಗಿದ್ದರು. ಇದರಿಂದಾಗಿ ಅವರ ಚಿತ್ರಗಳಲ್ಲಿ ಗಾಢವರ್ಣಗಳನ್ನು ಕಾಣುವುದು ಅಪರೂಪ.

ಚಿತ್ರಕಲೆ ಮತ್ತು ಬರವಣಿಗೆ ಇವೆರಡನ್ನೇ ಚೀನೀಯರು ಲಲಿತಕಲೆಗಳೆಂದು ತಿಳಿದಿದ್ದರು. ಇವರು ಪ್ರಕೃತಿಯನ್ನು ಚಿತ್ರಿಸುವಾಗ ಅದರ ವಾಸ್ತವಿಕತೆಗಿಂತ ನಿಗೂಢತೆಯ ಕಡೆಗೆ ಹೆಚ್ಚು ಲಕ್ಷ್ಯಕೊಟ್ಟು ಅದನ್ನು ಚಿತ್ರಗಳಲ್ಲಿ ಮೂಡಿಸಲು ಪ್ರಯತ್ನಿಸಿದರು.

ಹ್ಯಾನ್ ರಾಜಸಂತತಿಯ (ಕ್ರಿ.ಪೂ. 202 ರಿಂದ ಕ್ರಿ.ಶ. 220ರವರೆಗೆ) ಕಾಲದ ಚಿತ್ರಗಳಲ್ಲಿ ಆಕೃತಿಗಳು ಎದ್ದು ಕಾಣುತ್ತವೆ. ಈ ಚಿತ್ರಗಳ ರೇಖಾ ರಚನೆಯಲ್ಲಿ ಅಪಾರ ನೈಪುಣ್ಯವಿದೆ. ಅಲ್ಲಿಂದೀಚಿನ ಚಿತ್ರಗಳಲ್ಲಿ ಈ ವಿಧಾನವೇ ಒಂದು ಸಂಪ್ರದಾಯವಾಯಿತು.

ಕ್ರಿ.ಶ. ಮೊದಲ ಶತಮಾನದ ಅನಂತರ ಚೀನದಲ್ಲಿ ಹರಡಿದ ಬೌದ್ಧ ಧರ್ಮ ಅಲ್ಲಿಯ ಕಲೆಯ ಮೇಲೆ ಪ್ರಬಲ ಪ್ರಭಾವ ಬೀರಿತು. ಟಾಂಗ್ ಸಂತತಿ (618–906)ಯ ಅನಂತರ ಕಲೆಯ ಎಲ್ಲ ಪ್ರಕಾರಗಳೂ ಸಮೃದ್ಧ ವಾಗಿ ಬೆಳೆದುವು. ಚಿತ್ರಕಲೆಯಲ್ಲಿ ಹೆಚ್ಚು ಬಣ್ಣಗಳ ಉಪಯೋಗವನ್ನು ಇಲ್ಲಿ ಕಾಣಬಹುದು. ಐತಿಹಾಸಿಕ ಘಟನೆಗಳು. ರಾಜರ ಆಸ್ಥಾನದ ವೈಭವಗಳು ಈ ಚಿತ್ರಗಳ ವಸ್ತುಗಳು.

10ನೆಯ ಶತಮಾನದ ಅನಂತರ ಇಲ್ಲಿನ ಕಲೆಗಳ ಪುನರುಜ್ಜೀವನ ವಾಯಿತು. ಅತ್ಯಂತ ಸುಂದರ ಹಾಗೂ ಅಪೂರ್ವವೆನಿಸುವ ಪ್ರಕೃತಿ ಚಿತ್ರ ಗಳನ್ನು ಈ ಕಾಲದ ಕಲಾವಿದರು ರಚಿಸಿದರು. ವಿವಿಧ ಬಣ್ಣಗಳನ್ನೂ ಬಳಸತೊಡಗಿದರು.

ಕಮ್ಯೂನಿಸ್ಟ್ ಆಡಳಿತದಲ್ಲಿರುವ ಆಧುನಿಕ ಚೀನದಲ್ಲಿ, ಸರಕಾರದ ಅಭಿಪ್ರಾಯಗಳನ್ನು ಪ್ರಚಾರ ಮಾಡುವ ಮಾಧ್ಯಮವನ್ನಾಗಿ ಚಿತ್ರ ಕಲೆ ಯನ್ನು ಬಳಸಿಕೊಳ್ಳಲಾಗುತ್ತಿದೆ. ಹೀಗಾಗಿ ಕಲಾವಿದರ ಮುಖ್ಯ ಕೆಲಸ ಪ್ರಚಾರ ಭಿತ್ತಿಚಿತ್ರಗಳನ್ನು ಬರೆಯು ವುದು. ಈಗ ತಮ್ಮ ಬಿಡುವಿನ ಕಾಲದಲ್ಲಿ ಅವರು ಸಾಂಪ್ರದಾಯಿಕ ಶೈಲಿಯ ಚಿತ್ರಗಳನ್ನು ಬರೆಯಲು ಅವಕಾಶ ಇದೆ.

ಶಿಲ್ಪಕಲೆ ಚೀನದ ಅತಿ ಪ್ರಾಚೀನ ಕಲಾ ಪ್ರಕಾರಗಳಲ್ಲೊಂದು. ಕಲ್ಲು, ಮರ, ಕಂಚು, ಪಿಂಗಾಣಿ ಮೊದ ಲಾದುವು ಶಿಲ್ಪದ ಮೂಲ ವಸ್ತುಗಳಾ ಗಿದ್ದುವು. ಶಾಂಗ್ ಸಂತತಿಯ — ಕ್ರಿ. ಪೂ. 1523ರಿಂದ 1028ರವರೆಗಿನ– ಕಾಲದಲ್ಲಿ ಶಿಲ್ಪಕಲೆಗೆ ಧಾರ್ಮಿಕ ಉದ್ದೇಶವಿದ್ದಿತು. ಆಗಿನ ಮಡಕೆ ಲೋಹದ ಪಾತ್ರೆಗಳ ಮೇಲೆ ಧಾರ್ಮಿಕ ಅರ್ಥವುಳ್ಳ ಚಿತ್ರಗಳನ್ನು ಕೆತ್ತಲಾಗಿದೆ. ಕೆಲವು ಪ್ರಾಣಿಗಳ ಕೆತ್ತನೆಗಳೂ ಕೊಂಡಿ ಆಕಾರದ ಕೆತ್ತನೆ ಗಳೂ ಇವುಗಳಲ್ಲಿವೆ. ಈ ಚಿಹ್ನೆ ಗಳಿಗೆ ಸಾಂಕೇತಿಕ ಅರ್ಥಗಳುಂಟು. ಜೇಡ್ ಎಂಬ ಹಸಿರು ಬಣ್ಣದ ಗಟ್ಟಿ ಕಲ್ಲಿನಲ್ಲಿ ಕೆತ್ತಿದ ಅಮೂಲ್ಯ ಕೆತ್ತನೆ ಗಳೂ ದೊರೆತಿವೆ. ಕ್ರಿಸ್ತ ಶಕದ ಆರಂಭ ಕಾಲದಲ್ಲಿ ಬೌದ್ಧಧರ್ಮ ಇಲ್ಲಿ ಹರಡಿದಾಗ ಬುದ್ಧನ ಪ್ರತಿಮೆಗಳು ನಿರ್ಮಿಸಲ್ಪಟ್ಟುವು. ಈ ಶಿಲ್ಪ ಗಳಲ್ಲಿಯೂ ಚೀನೀಯರು ರೇಖಾವಿನ್ಯಾಸದ ಕಡೆಗೆ ಹೆಚ್ಚು ಗಮನವಿತ್ತರು. 10ನೆಯ ಶತಮಾನದ ಅನಂತರ ಕುಂಭ ಕಲೆಯಲ್ಲಿ ಹೆಚ್ಚು ಆಲಂಕಾರಿಕ ವಿನ್ಯಾಸಗಳಿಲ್ಲದಿದ್ದರೂ ಅವುಗಳಲ್ಲಿ ನುಣುಪು. ಗಟ್ಟಿತನಗಳನ್ನು ಸ್ಪಷ್ಟವಾಗಿ ಕಾಣಬಹುದು. [illegible] ಬಂದಿತು.

ಚೀನೀಯರ ಪ್ರಾಚೀನ ವಾಸ್ತುಶಿಲ್ಪ ಹೇಗಿತ್ತೆಂಬುದಕ್ಕೆ ಸ್ಪಷ್ಟ ಉದಾಹರಣೆ ಗಳಿಲ್ಲ. ಚಿತ್ರ, ಶಿಲ್ಪಗಳಲ್ಲಿ ಕಾಣುವ, ಕಟ್ಟಡ ದೇವಾಲಯಗಳ ಪ್ರತಿರೂಪ ಗಳ ಆಧಾರದ ಮೇಲೆ ಹಿಂದಿನ ವಾಸ್ತುಶಿಲ್ಪ ಸ್ವರೂಪವನ್ನು ಊಹಿಸಬೇಕಾ ದಾಗಿದೆ. ಪಗೋಡಗಳು ಇಲ್ಲಿ ಉಳಿದಿರುವ ಪ್ರಾಚೀನ ವಾಸ್ತುಶಿಲ್ಪ ಅವ ಶೇಷಗಳು. ಸ್ತೂಪಗಳಂತಿರುವ ಪಗೋಡಗಳು ವೃತ್ತ ಅಥವಾ ಚೌಕ ಆಕಾರದಲ್ಲಿವೆ.

ಕ್ರಿಸ್ತ ಪೂರ್ವ ಮೂರನೆಯ ಶತಮಾನದ ಕೊನೆಯ ಹೊತ್ತಿಗೆ ಹುವಾಂಗ್ ಟಿ ಎಂಬಾತ ಚೀನದ ಮಹಾ ಗೋಡೆಯನ್ನು ಕಟ್ಟಿಸಿದ. ಇದು ಇಂದಿಗೆ ಕೂಡ ವಿಶ್ವದ ಕೌತುಕಗಳಲ್ಲೊಂದಾಗಿದೆ. ಚೀನದಲ್ಲಿ ದೇವಾಲಯ ಗಳನ್ನು ಕಟ್ಟಿದ್ದು ಬೌದ್ಧಧರ್ಮದ ಪ್ರಭಾವದಿಂದ. ಈ ಕಟ್ಟಡಗಳ ವಾಸ್ತುಶಿಲ್ಪ ಸೌಂದರ್ಯ ಅವುಗಳ ಸಮತೋಲವನ್ನು ಅವಲಂಬಿಸಿದೆ.

ಭಾಷೆಯ ತೊಡಕಿನಿಂದಾಗಿ ಚೀನೀ ಸಾಹಿತ್ಯ ಇತ್ತೀಚಿನವರೆಗೆ ಪ್ರಪಂಚಕ್ಕೆ ಪರಿಚಿತವಾಗಿರಲಿಲ್ಲ. 30 ಶತಮಾನಗಳಷ್ಟು ಹಿಂದಿನದು ಚೀನೀ ಸಾಹಿತ್ಯ. ಅತ್ಯಂತ ಪ್ರಾಚೀನ ಚೀನೀ ಕೃತಿ ಎಂದರೆ. ಸುಮಾರು 300 ಹಾಡುಗಳ ನ್ನೊಳಗೊಂಡ ಹಾಡುಗಳ ಪುಸ್ತಕ –'ಷಿ ಚಿಂಗ್'. ಕ್ರಿ.ಪೂ. 11ರಿಂದ 6ನೆಯ ಶತಮಾನಗಳ ನಡುವಣ ಕಾಲದಲ್ಲಿ ರೂಪುಗೊಂಡ ಈ ಹಾಡುಗಳು ಅನಂತರ ಲಿಖಿತರೂಪವನ್ನು ಪಡೆದವು. ಈ ಸಂಕಲನದಲ್ಲಿ ಧಾರ್ಮಿಕ ಸಂದರ್ಭಗಳಲ್ಲಿ ಹಾಡುವ ಹಾಡುಗಳಿಂದ ಹಿಡಿದು, ಪ್ರಣಯ ಗೀತೆಗಳವರೆಗೆ ಅನೇಕ ವಿಧವ ಕವನಗಳುಂಟು. ಆಗಿನ ಕಾಲದಲ್ಲಿ ವಿದ್ಯಾವಂತನೆನಿಸಿಕೊಳ್ಳಬೇಕಾದವನು ಈ ಪುಸ್ತಕವನ್ನು ಕಡ್ಡಾಯವಾಗಿ ಓದಬೇಕಾಗಿತ್ತು.



ಚೀನೀ ಪೋಲೋ ಪಂದ್ಯ : 16ನೆಯ ಶತಮಾನದ ಚಿತ್ರ



ಚೀನೀ ಬರಹದಂತೆ ಚೀನೀ ಚಿತ್ರ

ಅನಂತರ ಸಾಮಾಜಿಕ ಬದಲಾವಣೆಗಳ ಕಾಲ ಬಂದಿತು. ಆಗ ತತ್ತ್ವಜ್ಞಾನಿಗಳು ದೇಶ ಸಂಚಾರಮಾಡಿ, ತಮ್ಮ ಶಿಷ್ಯರೊಂದಿಗೆ ಹೊಸ ಪಂಥಗಳನ್ನು ಪ್ರಾರಂಭಿಸಿದರು. ಇಂಥವರಲ್ಲಿ ಕನ್‌ಫ್ಯೂಷಿಯಸ್ (ಕ್ರಿ. ಪೂ. 551–479) ಪ್ರಮುಖನಾದವನು. ಈತನ ಚಿಂತನೆ–ಬೋಧನೆಗಳು ಚೀನದ ಜನಜೀವನದಲ್ಲಿ ಸೇರಿಕೊಂಡುವು.

ಚೌ ಸಂತತಿಯ ಕೊನೆಗಾಲದ ಹೊತ್ತಿಗೆ (ಕ್ರಿ. ಪೂ. 256) ಚೀನದ ದಕ್ಷಿಣ ಭಾಗದಲ್ಲಿ ಹೊಸ ರೀತಿಯ ಕಾವ್ಯ ಸಂಪ್ರದಾಯ ಪ್ರಾರಂಭವಾಯಿತು. ಹಾಡುಗಳ ಪುಸ್ತಕದಲ್ಲಿದ್ದ ಯಾವುದೇ ಕವನಕ್ಕಿಂತಲೂ ಪ್ರಮಾಣದಲ್ಲಿ ಅತಿ ದೊಡ್ಡದೆನಿಸುವಂಥ ಕವನಗಳನ್ನು ಈ ಕಾಲದಲ್ಲಿ ರಚಿಸಿದರು. ಇವುಗಳ ಲಯ, ಭಾಷೆ, ಪ್ರತಿಮಾ ವಿಧಾನಗಳೆಲ್ಲವೂ ವಿಶಿಷ್ಟವಾಗಿದ್ದುವು, ಜಟಿಲವಾಗಿದ್ದುವು. ಇದೇ ಶೈಲಿಯ ಮೇಲೆ ಆಧಾರಿತವಾದ ಗದ್ಯಕಾವ್ಯ ಪ್ರಕಾರವೊಂದು ಪ್ರಾರಂಭವಾಯಿತು. ಕೊನೆಗೆ ಅದೇ ಒಂದು ಸಂಪ್ರದಾಯವಾಯಿತು. ಈ ಬಗೆಯ ಸಾಹಿತ್ಯ ಕೃತಿಗಳು ಪ್ರಖ್ಯಾತವಾಯಿತು.

ಹಾನ್ ಸಂತತಿ ಉರುಳಿದಾಗ (ಸುಮಾರು ಕ್ರಿ. ಶ. 220) ಉಂಟಾದ ಸಾಮಾಜಿಕ ಬದಲಾವಣೆಗಳು ಚೀನೀ ಸಾಹಿತ್ಯದ ಮೇಲೂ ಪ್ರಭಾವ ಬೀರಿದುವು. ಆಗಿನ ಗದ್ಯ ಕಾವ್ಯದ ಕೃತಕ ಅಂಶಗಳ ವಿರುದ್ಧ ಕವಿಗಳು ಬಂಡಾಯ ಹೂಡಿದರು. ಕಾವ್ಯ ತನ್ನ ಹಿಂದಿನ ಸರಳತೆಯನ್ನು ಮತ್ತೆ ಪಡೆಯಿತು. ಜಾನಪದ ಕವನಗಳ ಶೈಲಿಯನ್ನು ಕವಿಗಳು ಬಳಸತೊಡಗಿದರು.

ಇದೇ ಸಮಯದಲ್ಲಿ ಚೀನೀ ಸಾಹಿತ್ಯದ ಮೇಲೆ ಬೌದ್ಧಧರ್ಮ ಪ್ರಭಾವ ಬೀರಿತು. ಚೀನೀಯರು ಬೌದ್ಧ ಸಾಹಿತ್ಯವನ್ನು ತಮ್ಮ ಭಾಷೆಗೆ ಭಾಷಾಂತರ ಮಾಡತೊಡಗಿದರು. ಆಗ ಅವರ ಭಾಷೆಯ ಇತಿ–ಮಿತಿಗಳು ಅವರಿಗೆ ಅರಿವಾಗತೊಡಗಿದುವು. ಇದರಿಂದ ಭಾಷೆಯನ್ನು ಸರಳ ರೀತಿಯಲ್ಲಿ ಬಳಸಲು ಸಾಧ್ಯವಾಯಿತು.

ಅಸ್ಥಿರ ರಾಜಕೀಯ ಸನ್ನಿವೇಶದಲ್ಲಿ ಅನೇಕ ಕವಿಗಳು ವಾಸ್ತವವಾದಿ ಶೈಲಿಯನ್ನು ಕೈಬಿಟ್ಟು ತಾತ್ತ್ವಿಕ, ನಿಗೂಢ ಕವನಗಳನ್ನು ರಚಿಸಿದರು. ಇವರಲ್ಲಿ ಟಾವೋ ಚಿನ್ ಗಣ್ಯನಾದವನು.

ಚೀನೀ ಕಲೆ, ಸಾಹಿತ್ಯಗಳ ಸುವರ್ಣಯುಗವೆಂದು ಹೆಸರು ಪಡೆದದ್ದು ಟಾಂಗ್ ಸಂತತಿಯ (618–906) ಕಾಲ. ಟು ಫು, ಲೀ ಪೋ, ಪೋ ಚು–ಇ ಅವರಂಥ ಪ್ರಮುಖ ಕವಿಗಳಿದ್ದ ಕಾಲ ಇದು. ಸರಕಾರಿ ಕೆಲಸಗಳಿಗಾಗಿ ನಡೆಸುತ್ತಿದ್ದ ಪರೀಕ್ಷೆಗಳಿಗಾಗಿ ಓದಲೇಬೇಕಾದ ವಿಷಯಗಳಲ್ಲಿ ಕಾವ್ಯವೂ ಒಂದಾಗಿತ್ತು. ಅತ್ಯಂತ ಜಟಿಲವಾದ ಚೀನೀ ಭಾಷೆಯ ಛಂದಸ್ಸಿನ ನಾದ, ಲಯ, ಪ್ರಾಸಗಳ ಪರಿಪೂರ್ಣತೆಯನ್ನು ಈ ಕಾಲದ ಕಾವ್ಯದಲ್ಲಿ ಗುರುತಿಸಬಹುದು.

13–14ನೆಯ ಶತಮಾನದವರೆಗೆ, ಕಾದಂಬರಿ ನಾಟಕಗಳನ್ನು ಬರೆಯುವುದು–ಓದುವುದು ಸಭ್ಯ ಧೀಮಂತನಿಗೆ ಸಲ್ಲದು ಎಂಬ ಭಾವನೆ ಚೀನೀಯರಲ್ಲಿತ್ತು. ಅನಂತರ ಚೀನ ಪರದೇಶೀಯರ ಆಳ್ವಿಕೆಯಲ್ಲಿ ಇದ್ದಾಗ ಅನೇಕ ಸಾಹಿತಿಗಳಿಗೆ ರಾಜಾಶ್ರಯ ತಪ್ಪಿತು; ಅವರನ್ನು ನಿರುದ್ಯೋಗ ಬಾಧಿಸಿತು. ಈ ಕಾರಣಗಳಿಂದಾಗಿ ಅವರ ಗಮನ ಜನಪ್ರಿಯ ಸಾಹಿತ್ಯ ಪ್ರಕಾರಗಳಾದ ಕಥೆ ಕಾದಂಬರಿ ನಾಟಕಗಳ ರಚನೆಯ ಕಡೆಗೆ ತಿರುಗಿತು. ನಾಟಕಗಳಲ್ಲಿ ಹಾಡುಗಳೇ ಹೆಚ್ಚಿದ್ದು ಇಡೀ ನಾಟಕ ಯಾವುದಾದರೊಂದು ಘಟನೆಯನ್ನು ಚಿತ್ರಿಸುತ್ತಿತ್ತು. ಕೆಲವೊಮ್ಮೆ ನಾಟಕಗಳಲ್ಲಿ ಕ್ರಿಯೆಗಿಂತ ಭಾಷೆಯ ಶಬ್ದಸೌಂದರ್ಯವೇ ಹೆಚ್ಚಾಗಿರುತ್ತಿತ್ತು. ಕಾದಂಬರಿಗಳಲ್ಲಿ 18ನೆಯ ಶತಮಾನದ 'ಕೆಂಪು ಕೋಟೆಯ ಕನಸು' ಆಗಿನ ಕಾಲದ ಜನಜೀವನದ ಅತ್ಯಂತ ವಾಸ್ತವ ಚಿತ್ರಣವನ್ನು ಕೊಡುತ್ತದೆ.

ಪ್ರಾಚೀನ ಚೀನದ ಪುರಾಣ ದಂತಕಥೆಗಳು ಅಪಾರವಾಗಿವೆ, ಆದರೆ ಒಂದಾದರೂ ಮಹಾಕಾವ್ಯವಿಲ್ಲ. 1917ರವರಗಿನ ಸಾಹಿತ್ಯವೆಲ್ಲ ಸಾವಿರಾರು ವರ್ಷಗಳ ಹಿಂದಿನ ಶುದ್ಧ ಪ್ರಾಚೀನ ಚೀನೀ ಭಾಷೆಯಲ್ಲಿ ಇರುತ್ತಿತ್ತು. ಈ ಗ್ರಾಂಥಿಕ ಭಾಷೆ ಜನರು ಆಡುವ ಭಾಷೆಯಿಂದ ತುಂಬ ಭಿನ್ನವಾದದ್ದು. ಸಾಮಾನ್ಯ ಓದುಗನಿಗೆ ಅರ್ಥವೇ ಆಗದಷ್ಟು ಕಠಿಣ. ತಮ್ಮ ಜೀವಮಾನವಿಡೀ ಚೀನೀ ಭಾಷೆಯನ್ನು ಅಭ್ಯಸಿಸಿ, ಪಂಡಿತರಾಗಲು ಸಿದ್ಧರಿದ್ದವರು ಮಾತ್ರ ಈ ಸಾಹಿತ್ಯ ಓದಿ ಆನಂದಿಸಲು ಸಾಧ್ಯವಿತ್ತು.

ಇಂಥ ಪರಿಸ್ಥಿತಿಯಲ್ಲಿ ಅಮೆರಿಕದಲ್ಲಿ ವಿದ್ಯಾಭ್ಯಾಸ ಮಾಡಿದ ಚೀನೀ ಲೇಖಕ ಡಾ. ಹು ಷಿ ಚೀನಕ್ಕೆ ಹಿಂದಿರುಗಿ ತನ್ನ ನಾಡಿನ ಸಾಹಿತ್ಯರಂಗದಲ್ಲಿ ಕ್ರಾಂತಿಯನ್ನೇ ಎಬ್ಬಿಸಿದ. ಇವನು ಹೇಳಿದ್ದು ಇಷ್ಟು: 'ಮಾತನಾಡುವ ಭಾಷೆಯಲ್ಲೇ ಸಾಹಿತ್ಯ ರಚನೆ ಆಗಬೇಕು; ನಮ್ಮ ಭಾವನೆ, ಆಲೋಚನೆಗಳಿಗೆ ನಮ್ಮ ಸಾಹಿತ್ಯದಲ್ಲಿ ಸ್ಥಾನ ದೊರೆಯಬೇಕು; ಹಿಂದಿನವರನ್ನು ಅನುಕರಿಸುವುದು ಬೇಡ; ವ್ಯಾಕರಣವನ್ನು ತ್ಯಜಿಸುವುದೂ ಬೇಡ; ಅತಿರೇಕ ಭಾವ ಪ್ರದರ್ಶನ ಕವಿಸಮಯಗಳನ್ನು ಬಿಟ್ಟುಬಿಡೋಣ; ಜನ ಸಮುದಾಯಕ್ಕೆ ಪರಿಚಿತವಾಗಿರುವ ಭಾಷೆ, ನೈಜ ಚಿತ್ರಗಳೂ ಸಾಹಿತ್ಯದಲ್ಲಿ ಬರಬೇಕು.' ಈ ಅಭಿಪ್ರಾಯಗಳು ಚೀನೀ ಭಾಷೆಯ ಸಂಪ್ರದಾಯದಲ್ಲಿ ಅಪಾರ ನಿಷ್ಠೆ ಇದ್ದವರಿಗೆ ತುಂಬ ಕ್ರಾಂತಿಕಾರಿಯಾಗಿ ಕಂಡದ್ದು ಸಹಜವೇ. ಈ ಅಭಿಪ್ರಾಯಗಳಿಗೆ ಜನರ ಬೆಂಬಲ ಸಿಕ್ಕಿತು. ಕಥೆ, ಕವನ, ಕಾದಂಬರಿ,

ನಾಟಕಗಳ ರಚನೆಯಲ್ಲಿ, ವೃತ್ತಪತ್ರಿಕೆಗಳಲ್ಲಿ, ಮಾತನಾಡುವ ಭಾಷೆಯೇ ಬಳಕೆಗೆ ಬಂದಿತು.

ಚೀನೀ ಸಾಹಿತ್ಯದಲ್ಲಿ ಡಾ. ಹು ಷಿ ಪ್ರಾರಂಭಿಸಿದ ಈ ಕ್ರಾಂತಿಯ ಫಲವಾಗಿ ಹುಟ್ಟಿದ ಹೊಸ ಸಂಪ್ರದಾಯದಲ್ಲಿ ಅತ್ಯಂತ ಪ್ರಮುಖ ಸಾಹಿತಿ ಲು ಶೂನ್ (1881–1936) ; ಇವನ 'ಅಕ್ಯುವಿನ ನೈಜ ಚರಿತ್ರೆ' ಜನಪ್ರಿಯ ಕೃತಿ.

ಜನತಾ ಚೀನದಲ್ಲಿ ಪ್ರಚಾರ ಪ್ರಧಾನವಾದ ಸಾಹಿತ್ಯ ಬೆಳೆಯುತ್ತಿದೆ.

**ನೋಡಿ :** ಲೀ ಪೋ ; ಲು ಶೂನ್ ; ಹು ಷಿ

## ಚುಟಕ

ಸಾಮಾನ್ಯವಾಗಿ ನಾಲ್ಕೇ ಸಾಲು, ಸಾಲಿನ ಕೊನೆಗೆ ಪ್ರಾಸ ; ಮುಖ್ಯವಾಗಿ ಹಾಸ್ಯ, ಕೆಲವೊಮ್ಮೆ ವಿಡಂಬನೆ–ಟೀಕೆ. ಇದು ಚುಟಕ.

ಇಂಗ್ಲಿಷಿನಲ್ಲಿ ಐದು ಸಾಲಿನ 'ಲಿಮೆರಿಕ್' ಎಂದು ಕರೆಯಲ್ಪಡುವ ಕವನಗಳು ಹಾಸ್ಯ ಸಾಹಿತ್ಯ ಪ್ರಕಾರದಲ್ಲಿ ಪ್ರಖ್ಯಾತವಾಗಿವೆ. ಎಡ್ವರ್ಡ್ ಲಿಯರ್, ಲೂಯಿಸ್ ಕ್ಯಾರಲ್ ಈ ಪ್ರಕಾರದ ಪ್ರಮುಖ ಕವಿಗಳು. ಸಂಸ್ಕೃತದಲ್ಲೂ ಹಾಸ್ಯದಿಂದ ಕೂಡಿದ, ಭಕ್ತಿಪ್ರಧಾನವಾದ ಪುಟ್ಟ ಕವನಗಳುಂಟು; ಇವನ್ನು ಚಾಟುಪದ್ಯಗಳೆಂದು ಕರೆಯುತ್ತಾರೆ. ಇಂಥ ಹಲವನ್ನು ರಾಜರತ್ನಂ ತಮ್ಮ 'ನೂರು ಪುಟಾಣಿ' ಪುಸ್ತಕದಲ್ಲಿ ಕನ್ನಡಿಸಿದ್ದಾರೆ.

" ಕಮಲೆ ಮಲಗುವಳು ಕಮಲದಲಿ
ಹರ ಮಲಗುವನು ಹಿಮಾಲಯದಲ್ಲಿ ;
ಹರಿ ಮಲಗುವನಾ ಹಾಲ್ಗಡಲಲ್ಲಿ
ಏಕೆನೆ – ತಗಣೆಯ ಶಂಕೆಯಲಿ "

ಇಂಥ ಚಾಟುಪದ್ಯಗಳು ಸಂಸ್ಕೃತದಲ್ಲಿ ಅನೇಕ. ಕನ್ನಡ ಕವಿ ಸರ್ವಜ್ಞನ ವಚನಗಳಲ್ಲಿ ಚುಟಕದ ಮೊನಚನ್ನು ಕಾಣುತ್ತೇವೆ.

" ಒಲೆಗುಂಡನೊಬ್ಬನೆ ಮೆಲಬಹುದು ಎಂದಿಹರೆ
ಮೆಲಬಹುದು ಎಂಬವನೆ ಜಾಣ, ಮೂರ್ಖನ
ಗೆಲಲಾಗದಯ್ಯ ಸರ್ವಜ್ಞ "

ಜಾನಪದ ಸಾಹಿತ್ಯದಲ್ಲೂ ಅತ್ಯುತ್ತಮ ಚುಟಕಗಳೆಂದು ಪರಿಗಣಿಸಬಹುದಾದ ಸಾಲುಗಳು ಸಿಗುತ್ತವೆ. ಕೆಲವೊಮ್ಮೆ ಈ ಸಾಲುಗಳು ದೊಡ್ಡ ಕವನವೊಂದರ ನಡುವಣ ಸಾಲುಗಳಾದರೂ ಆಗಿರಬಹುದು. ಇಲ್ಲವೆ ತಮಾಷೆಗೆಂದು ಎರಡೇ ಸಾಲು ಹುಟ್ಟಿ ಮುಂದೆ ಬೆಳೆಯದೇ ಇರಬಹುದು.

" ಎಂಟು ಸುತ್ತಿನ ಕೋಂಟೆಯೊಳಗೆ ವೊಂಟರು ವುಸ್ತಾದರು
ಅತ್ತಗಲ್ಡೀಂದ್ ಇತ್ತ ಗಲ್ಡಿಗೆ ವೋಗಿಯೇ ಸುಸ್ತಾದರು "

–ಇದು ಹಳೆಯ ಲಾವಣಿ ಎಂದಿದ್ದಾರೆ ರಾಜರತ್ನಂ.

ಹೀಗೆಯೇ ಅತ್ಯಂತ ಕುತೂಹಲಕಾರಿಯಾಗಿ ಪ್ರಾರಂಭವಾಗಿ ಬೆಳೆಯದೆಯೇ ಸೂಚ್ಯವಾಗಿ ನಿಂತ ಕೈಲಾಸಂರ ಸಾಲುಗಳು ಇವು :

" ಕಾಶೀಗ್ಹೋದ ನಂಭಾವ ಕಬ್ಬಿಣದ್ಹೋಣೇಲೀ
ರಾಶಿರಾಶಿ ಗಂಗೇನ್ ತರೋಕ್ ಸೊಳ್ಳೆ ಪರದೇಲಿ "

ಇಂಗ್ಲಿಷಿನ 'ಲಿಮೆರಿಕ್'ಗಳಿಂದ ಪ್ರಭಾವಿತರಾಗಿ ಕನ್ನಡದಲ್ಲಿ ಆಧುನಿಕ ಚುಟಕ ಸಾಹಿತ್ಯವನ್ನು ಪ್ರಾರಂಭಿಸಿದವರು ಜಿ. ಪಿ. ರಾಜರತ್ನಂ ಅವರು. ಇವರ 'ಚುಟಕ' ಎಂಬ ಪುಸ್ತಕದಲ್ಲಿರುವ ಚುಟಕಗಳು ಐದು ಸಾಲಿನ ಲಿಮೆರಿಕ್‌ಗಳ ಛಂದಸ್ಸನ್ನೇ ಅನುಸರಿಸುತ್ತವೆ.

" ಮಾಸಿಗೊಬ್ಬ ಹದಿ
ಹಾಕಿ ಒಂದು ನದಿ
ನೀರನ್ನೆಲ್ಲ
ಕೆದಕಲಲ್ಲಿ
ಕೈಯ ತುಂಬ ಬದಿ "

ಇದೇ ಛಂದಸ್ಸಿನಲ್ಲಿ ಅನೇಕ ಚುಟಕಗಳು ಕನ್ನಡದಲ್ಲಿವೆ.

ವಿ.ಜಿ. ಭಟ್ಟರ 'ತುಂಟನ ಪದಗಳು' ಹೆಸರಾಂತ ಚುಟಕ ಸಂಗ್ರಹ.

" ಗುಲ್ಲುಗದ್ದಲದೊಳಗೆ ರಾಜಕಾರಣಿ ಶ್ರೇಷ್ಠ ;
ಗುಲ್ಲು ಅಡಗಿದ ಕ್ಷಣಕೆ ಆತನಾದನು ಭ್ರಷ್ಟ"

–ಇದು ದಿನಕರ ದೇಸಾಯಿ ಅವರ ಚುಟಕ. ರಾಜಕೀಯ, ಸಾಮಾಜಿಕ ವಿಡಂಬನೆಗಾಗಿ ನಾಲ್ಕು ಸಾಲಿನ ಚುಟಕವನ್ನು ಬಹು ಯಶಸ್ವಿಯಾಗಿ ಬಳಸಿಕೊಂಡವರು ದಿನಕರ ದೇಸಾಯಿ, ಅಕಬರ ಅಲಿ ಮೊದಲಾದವರು.

## ಚೆಕಾಫ್

" ಇಬ್ಸೆನನ ಅನಂತರ ಮೂಡಿದ ಐರೋಪ್ಯ ನಾಟಕಕಾರರ ನಕ್ಷತ್ರ ಪುಂಜದಲ್ಲಿ ಅತಿ ಪ್ರಕಾಶಮಾನ ನಕ್ಷತ್ರಗಳಿಗೆ ಸಮಾನನಾದವನು ಚೆಕಾಫ್ ".

–ಇದು ಖ್ಯಾತ ಆಂಗ್ಲ ನಾಟಕಕಾರ ಬರ್ನಾರ್ಡ್ ಷಾ. ರಷ್ಯದ ನಾಟಕಕಾರ ಚೆಕಾಫನನ್ನು ಕುರಿತು ಆಡಿದ ಮೆಚ್ಚುಗೆಯ ನುಡಿ.

ದಕ್ಷಿಣ ರಷ್ಯದ ಟ್ಯಾಗನ್‌ರಾಗ್ ಎಂಬಲ್ಲಿ 1860ರ ಜನವರಿ 16ರಂದು ಆಂಟನ್ ಚೆಕಾಫ್ ಜನಿಸಿದ. ಇವನ ತಂದೆ ಒಂದು ಅಂಗಡಿ ಇಟ್ಟಿದ್ದ; ಮಕ್ಕಳ ಪಾಲಿಗೆ ಆತ ಭಯಂಕರ ವ್ಯಕ್ತಿ. 17 ವರ್ಷದ ಚೆಕಾಫ್ ಒಮ್ಮೆ ಅನಾರೋಗ್ಯದಿಂದ ನರಳಿ, ತಾನು ಮುಂದೆ ಡಾಕ್ಟರಾಗಬೇಕೆಂದು ನಿರ್ಧರಿಸಿದ. 1879ರಲ್ಲಿ ಮಾಸ್ಕೋಗೆ ಹೋಗಿ ವೈದ್ಯಕೀಯ ಶಿಕ್ಷಣ ಪಡೆದ.

ಅವನು ಜೀವಿಸಿದ್ದು ಮಾತ್ರ ಬರೆಹಗಾರನಾಗಿ. ಆದರೆ, ವಿಶ್ವವಿಖ್ಯಾತ ಸಾಹಿತಿಯಾದ ಮೇಲೂ ವೈದ್ಯಕೀಯನ್ನು ಚೆಕಾಫ್ ಮರೆಯಲಿಲ್ಲ.

ತಂದೆಯ ಮರಣಾನಂತರ ಕುಟುಂಬದ ನಿರ್ವಹಣೆಗಾಗಿ ಚೆಕಾಫನೂ ದುಡಿಯಬೇಕಾಯಿತು. ವಿದ್ಯಾರ್ಥಿದೆಸೆಯಲ್ಲಿ ಅವನು ಸಣ್ಣ ಪುಟ್ಟ ಹಾಸ್ಯಲೇಖನ, ಹರಟೆಗಳನ್ನು ಬರೆದು ಚಿಲ್ಲರೆ ಹಣ ಸಂಪಾದಿಸಿದ್ದ. 1886ರಲ್ಲಿ ತನ್ನೆಲ್ಲ ಲೇಖನಗಳ ಸಂಕಲನವನ್ನು ಪ್ರಕಟಿಸಿದ. ಈ ಸಂಕಲನ, ರಷ್ಯದ ಅತಿ ದೊಡ್ಡ ಪತ್ರಿಕೆ 'ನ್ಯೂ ಟೈಮ್ಸ್'ನ ಪ್ರಕಾಶಕನ ಕಣ್ಣಿಗೆ ಬಿತ್ತು. ತನ್ನ ಪತ್ರಿಕೆಯಲ್ಲಿ ಲೇಖನ ಬರೆಯುವಂತೆ ಅವನು ಚೆಕಾಫನನ್ನು ಆಹ್ವಾನಿಸಿದ.

'ಇವನಾವ್‌ಫ್' ಚೆಕಾಫನ ಮೊದಲ ನಾಟಕ. ಇದು ರಂಗದ ಮೇಲೆ 1887ರಲ್ಲಿ ಯಶಸ್ವಿಯಾಗಿ ಅಭಿನಯಿಸಲ್ಪಟ್ಟಿತು. ಈ ನಾಟಕ ಚೆಕಾಫ್‌ಗೆ ಖ್ಯಾತಿ ತಂದಿತು; 'ಪುಷ್ಕಿನ್ ಪುರಸ್ಕಿ' ಆತನಿಗೆ ದೊರೆಯಿತು. ರಷ್ಯದ ಕವಿ ಶ್ರೇಷ್ಠ ಪುಷ್ಕಿನನ ಹೆಸರಲ್ಲಿ ನೀಡಲಾಗುತ್ತಿದ್ದ ಪುರಸ್ಕಿ ಇದು.

ಲಘುಲೇಖನ, ನಾಟಕಗಳ ಜೊತೆಗೆ ಸಣ್ಣ ಕತೆಗಳನ್ನೂ ಚೆಕಾಫ್ ಬರೆಯತೊಡಗಿದ.

ಈ ಸಮಯದಲ್ಲಿ ವಿಫಲ ಪ್ರಣಯದ ಘಟನೆ ನಡೆದು ಚೆಕಾಫ್ ನಿರಾಶನಾದ. ಮನಸ್ಸನ್ನು ಹಗುರಗೊಳಿಸಿಕೊಳ್ಳಲು ಸಖಾಲಿನ್ ದ್ವೀಪಕ್ಕೆ ಬಂದ. ಕೈದಿಗಳನ್ನು ಬಂಧನದಲ್ಲಿಡುತ್ತಿದ್ದ ಈ ಸ್ಥಳದಲ್ಲಿ ಚೆಕಾಫ್ ಸ್ವಲ್ಪ



ಪ್ರಕಾಶಮಾನ ನಕ್ಷತ್ರ : ಚೆಕಾಫ್

ಕಾಲವಿದ್ದು ಹಿಂದಿರುಗಿದ. ಅನಂತರ ಅಲ್ಲಿಯ ಜೀವನದ ಬಗೆಗೆ ಹೃದಯ ಕರಗುವಂಥ ಲೇಖನಗಳನ್ನು ಬರೆದ. ಇವರ ಪ್ರಯತ್ನದಿಂದಾಗಿ. ಕೈದಿಗಳನ್ನು ಬಂಧಿಸಿ ಇಡುತ್ತಿದ್ದ ರೀತಿಯಲ್ಲಿ ಸುಧಾರಣೆಗಳಾದುವು.

1899ರ ಸುಮಾರಿನಲ್ಲಿ ಚೆಕಾಫ್ ಕ್ಷಯರೋಗ ಪೀಡಿತನಾದ; ಕ್ರೈಮಿಯಾ ಮೊದಲಾದ ಆರೋಗ್ಯಧಾಮಗಳಲ್ಲಿ ಸ್ವಲ್ಪ ಕಾಲ ಕಳೆದ. 1890ರ ಅನಂತರ ಅವನು ಕೆಲವು ಅತ್ಯುತ್ತಮ ಸಣ್ಣ ಕಥೆಗಳನ್ನು ಬರೆದಿದ್ದ. 'ಕಡಲು ಹಕ್ಕಿ', 'ವೇಣು ಮಾವ'ದಂಥ ಗಂಭೀರ ನಾಟಕಗಳು, 'ವಾರ್ಡ್ ನಂ. 6' ನಂಥ ಕಥೆಗಳು ಈ ಸಮಯದ ರಚನೆ. 1898ರಲ್ಲಿ ಮಾಸ್ಕೋ ರಂಗಭೂಮಿಯಲ್ಲಿ ಇವನ 'ಕಡಲು ಹಕ್ಕಿ' ನಾಟಕ ಪ್ರದರ್ಶಿತವಾಯಿತು. ಇವನ 'ಮೂವರು ಸೋದರಿಯರು' ನಾಟಕದಲ್ಲಿ ನಟಿಸಿದ್ದ ಅಲ್ಗ ನಿಪರ್ ಎಂಬಾಕೆಯನ್ನು ಚೆಕಾಫ್ 1901ರಲ್ಲಿ ಮದುವೆಯಾದ.

ಚೆಕಾಫನ ಸಣ್ಣ ಕಥೆಗಳು ಸಾಮಾನ್ಯವಾಗಿ ಒಂದು ಪಾತ್ರದ ವಿಶಿಷ್ಟ ಮನಸ್ಥಿತಿಯೊಂದನ್ನು ಚಿತ್ರಿಸುತ್ತವೆ. ಇದಕ್ಕೆ ಪೂರಕವಾಗಿ ಕೆಲವು ಘಟನೆಗಳನ್ನೂ ಅವನು ಬಳಸಿಕೊಳ್ಳುತ್ತಾನೆ. ಇವನ ನಾಟಕಗಳಲ್ಲಿ ಕನಸಿನ ಲೋಕದಲ್ಲೇ ಕಾಲಕಳೆಯುವ ಜನರ ಮತ್ತು ಕಾರ್ಯಶೀಲ ಜನರ ನಡುವಿನ ಘರ್ಷಣೆ, ನಿರ್ಜೀವ ಸಂಪ್ರದಾಯಗಳಿಗೆ ಅಂಟಿದ ಜನ, ಪ್ರಗತಿಶೀಲ ಯುಗದ ಮೌಲ್ಯಗಳಿಗೆ ಹೊಂದಿಕೊಳ್ಳಲು ಸಾಧ್ಯವಾಗದ ಸ್ಥಿತಿಯ ಚಿತ್ರಣ ಇರುತ್ತವೆ. ಇವನ ಕೃತಿಗಳಲ್ಲಿ ನೇರ ಕ್ರಿಯೆಗಿಂತ, ಕ್ರಿಯೆಯ ಹಿಂದಿನ ಮನಸ್ಥಿತಿಗೆ ಮಹತ್ವ ಹೆಚ್ಚು. ಇವನ ನಾಟಕಗಳಲ್ಲಿ ನಾಟಕೀಯ ತೀವ್ರತೆ ಕ್ರಮೇಣ ಹೆಚ್ಚುತ್ತ ಹೋಗಿ. ನಾಟಕದ ವಸ್ತು–ಕ್ರಿಯೆಗಳಿಂದ ಪುಷ್ಟಿಗೊಂಡು ಒಂದು ಕಡೆ ತನ್ನ ಪರಾಕಾಷ್ಠೆಯನ್ನು ಮುಟ್ಟುತ್ತದೆ. ಕೆಲವು ಸಲ ಈ ನಾಟಕೀಯ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳದೆ. ತನ್ನ ನಾಟಕಗಳನ್ನು ಸಾಮಾನ್ಯ ರೀತಿಯಲ್ಲಿ ಕೆಲವರು ಪ್ರದರ್ಶಿಸಿದುದಕ್ಕಾಗಿ ಚೆಕಾಫ್ ತೀವ್ರ ಪ್ರತಿಭಟನೆ ವ್ಯಕ್ತಪಡಿಸಿದ್ದುಂಟು.

ಟಾಲ್‌ಸ್ಟಾಯ್. ಗಾರ್ಕಿಯರೊಡನೆ ಚೆಕಾಫ್ ಸಂಪರ್ಕ ಹೊಂದಿದ್ದ. 1899ರಲ್ಲಿ ಇವನು ರಷ್ಯನ್ ಅಕಾಡೆಮಿಯ ಸದಸ್ಯನಾಗಿ ಆಯ್ಕೆಗೊಂಡ. 1904ರ ಜೂಲೈಯಲ್ಲಿ ಚೆಕಾಫ್ ನಿಧನನಾದ.

ಇವನ ಕೃತಿಗಳು ಜಾರ್ಜ್ ಬರ್ನಾರ್ಡ್ ಷಾ. ಜೆ. ಬಿ. ಪ್ರೀಸ್ಟ್ಲಿ, ಅರ್ನೆಸ್ಟ್ ಹೆಮಿಂಗ್‌ವೇ ಮೊದಲಾದವರ ಮೇಲೆ ಪ್ರಭಾವ ಬೀರಿದುವು.

## ಚೆನ್ನಪ್ಪ ಉತ್ತಂಗಿ

ಸರ್ವಜ್ಞ ಕವಿಯ ಹೆಸರು ಕನ್ನಡ ನಾಡಿನಲ್ಲಿ ವಿಪುಲವಾಗಿ ಪ್ರಚಾರಕ್ಕೆ ಬಂದದ್ದು ಚೆನ್ನಪ್ಪ ಉತ್ತಂಗಿಯವರ ದೀರ್ಘ ಕಾಲದ ಪರಿಶ್ರಮದಿಂದ. ಹಾಗೆಯೇ ಉತ್ತಂಗಿಯವರ ಹೆಸರು ಕನ್ನಡ ನಾಡಿನಲ್ಲಿ ಮನೆಮಾತಾದದ್ದು ಕೂಡ ಸರ್ವಜ್ಞನಿಂದಲೇ.

ಚೆನ್ನಪ್ಪ ಉತ್ತಂಗಿಯವರ ಜೀವನದಲ್ಲಿ ಅವರ ಧರ್ಮಶ್ರದ್ಧೆ, ಸಾಹಿತ್ಯಶ್ರದ್ಧೆಗಳು ಹಾಸುಹೊಕ್ಕಾಗಿದ್ದುವು.

ಚೆನ್ನಪ್ಪನವರ ಹಿರಿಯರು ಬಾಳಿದ್ದು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನಲ್ಲಿರುವ ಉತ್ತಂಗಿ ಎಂಬ ಗ್ರಾಮದಲ್ಲಿ. ಅವರು ಆ ಹಳ್ಳಿಯ ಗೌಡರಾಗಿದ್ದರು. ಅವರ ವಂಶಕ್ಕೆ 'ಪಾರುಪತ್ಯಗಾರ ವಂಶ' ಎಂದು ಹೆಸರಿದ್ದಿತು. ವಿಜಯನಗರ ಸಾಮ್ರಾಜ್ಯದ ಸೇನೆಗೆ ಆಹಾರ ಪದಾರ್ಥಗಳ ಪೂರೈಕೆಯ ಹೊಣೆಯನ್ನು ಅವರು ನಿರ್ವಹಿಸುತ್ತಿದ್ದರು.

ಚೆನ್ನಪ್ಪ ಉತ್ತಂಗಿಯವರ ಅಜ್ಜನ ಹೆಸರು ಚೆನ್ನಪ್ಪಗೌಡರು. ಕೆಲವು ದುರ್ಘರ ಪ್ರಸಂಗಗಳಿಂದಾಗಿ ಜೀವನದಲ್ಲಿ ಅವರು ತುಂಬ ನೊಂದಿದ್ದಾಗ ಬೈಬಲ್ ವಾಚನ ಅವರ ಮನಸ್ಸಿಗೆ ಶಾಂತಿಯನ್ನು ತಂದಿತು; ಕ್ರಿಸ್ತನ ಬೋಧನೆಗಳಲ್ಲಿ ನಂಬಿಕೆ ಮೂಡಿತು. ಅನಂತರ ಅವರು ತಮ್ಮ ಪತ್ನಿಯೊಡನೆ ಕ್ರೈಸ್ತಧರ್ಮದೀಕ್ಷೆ ಪಡೆದರು. ಉತ್ತಂಗಿಯನ್ನು ಬಿಟ್ಟು ಧಾರವಾಡಕ್ಕೆ ಬಂದು ನೆಲೆಸಿದರು. ಅಲ್ಲಿ ಅವರಿಗೆ ಹುಟ್ಟಿದ ಎರಡು ಮಕ್ಕಳಲ್ಲಿ ದಾನಿಯೇಲಪ್ಪ ಎರಡನೆಯವರು. ಇವರ ಮಗನೇ ಚೆನ್ನಪ್ಪನವರು ; ಜನಿಸಿದ್ದು 1881ರ ಡಿಸೆಂಬರ್ 9ರಂದು.

ದಾನಿಯೇಲಪ್ಪನವರು ಉಪಾಧ್ಯಾಯರಾಗಿದ್ದರು. ಅವರು ಬೆಟಗೇರಿಯಲ್ಲಿದ್ದಾಗ ಚೆನ್ನಪ್ಪನವರ ವಿದ್ಯಾಭ್ಯಾಸ ಅಲ್ಲಿಯೇ ಆರಂಭವಾಯಿತು ; ಧಾರವಾಡದಲ್ಲಿ ಮುಂದುವರಿಯಿತು. ಚೆನ್ನಪ್ಪನವರು ಬುದ್ಧಿವಂತರಾದರೂ ಅಕ್ಷರವಿದ್ಯೆಯಲ್ಲಿ ಅವರಿಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಪರಿಣಾಮವಾಗಿ ಮೆಟ್ರಿಕ್ ಪರೀಕ್ಷೆಯಲ್ಲಿ ಫೇಲಾದರು. ಚೆನ್ನಪ್ಪನವರಿಗೆ ಯಂತ್ರವಿಜ್ಞಾನದಲ್ಲಿ ಆಸಕ್ತಿಯಿತ್ತು. ಆದರೆ ತಂದೆಯ ಬಡತನದಿಂದಾಗಿ ಅವರಿಗೆ ಆ ಶಿಕ್ಷಣ ದೊರೆಯಲಿಲ್ಲ. ತಾಯಿಯ ಅಪೇಕ್ಷೆಯ ಮೇರೆಗೆ ಮಂಗಳೂರಿನ ಕ್ರೈಸ್ತಧರ್ಮ ಪಾಠಶಾಲೆಗೆ ಸೇರಿ ತಮ್ಮ ಅಭ್ಯಾಸವನ್ನು ಮುಂದುವರಿಸಿದರು. ಅನಂತರ 1908ರಲ್ಲಿ ಬಾಸೆಲ್ ಮಿಶನ್ ಸಂಸ್ಥೆಯಲ್ಲಿ ಉಪದೇಶಕರಾಗಿ ನೇಮಿಸಲ್ಪಟ್ಟರು. ಧಾರವಾಡ ಜಿಲ್ಲೆಯ ಹುಬ್ಬಳ್ಳಿ, ಬೆಟಗೇರಿ, ಮುಂಡರಗಿ ಮುಂತಾದ ಕಡೆ ಕೆಲಸ ಮಾಡಿದರು.

ಮಂಗಳೂರಿನಲ್ಲಿ ಅಭ್ಯಾಸ ಮಾಡುತ್ತಿದ್ದಾಗಲೇ ಖಾಸಗೀ ತತ್ತ್ವಜ್ಞಾನದ ಅಧ್ಯಯನವನ್ನು ಆರಂಭಿಸಿದ ಚೆನ್ನಪ್ಪನವರು ತಾವು ಉಪದೇಶಕ ವೃತ್ತಿಯನ್ನು ಕೈಗೊಂಡಮೇಲೂ ಈ ಅಧ್ಯಯನವನ್ನು ಮುಂದುವರಿಸಿದರು. ಕ್ರೈಸ್ತಧರ್ಮ, ಪಾಶ್ಚಾತ್ಯ ಮತ್ತು ಭಾರತೀಯ ತತ್ತ್ವಜ್ಞಾನಗಳಲ್ಲಿ ಗಣನೀಯ ಪಾಂಡಿತ್ಯವನ್ನು ಗಳಿಸಿಕೊಂಡರು. ಈ ಪಾಂಡಿತ್ಯದ ಜೊತೆಜೊತೆಯಲ್ಲಿ ಅವರ ವಿಚಾರಶಕ್ತಿಯೂ ಬೆಳೆಯಿತು. ಹಾಗೆಯೇ ತಮ್ಮ ಉಪದೇಶವೃತ್ತಿಗೆ ಅವಶ್ಯವಾದ ಕನ್ನಡ ಭಾಷಣಕಲೆಯನ್ನೂ ಲೇಖನಕಲೆಯನ್ನೂ ಸಾಧಿಸಿಕೊಂಡರು.

ಕ್ರಿಸ್ತನ ಜೀವನ ತತ್ತ್ವಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿ ಅವರು 1918ರಲ್ಲಿ ರಾಣೆಬೆನ್ನೂರಿನಲ್ಲಿ ಮಾಡಿದ ಭಾಷಣ 'ಬಸವರಸಕ್ಕೆ ಚೆನ್ನಹೇಮಿನ ವಿನಂತಿ', ಅವರ ಪ್ರಸಿದ್ಧ ಉಪನ್ಯಾಸಗಳಲ್ಲೊಂದು. ಮೂರು ವರ್ಷಗಳ ಅನಂತರ ಚೆನ್ನಪ್ಪನವರು ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಇದೇ ಅವರ ಮೊದಲ ಗ್ರಂಥ. ಅನಂತರ ಅವರು ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ 'ಮಕ್ಕಳ ಶಿಕ್ಷಣ ಪಟು', ಜಾತೀಯತೆಯಿಂದ

ಭಾರತದ ಪ್ರಗತಿ ಹೇಗೆ ಕುಂಠಿತವಾಗಿದೆ ಎಂಬುದನ್ನು ವಿವೇಚಿಸುವ 'ಹಿಂದೂ ಸಮಾಜದ ಹಿತಚಿಂತಕ' ಗ್ರಂಥಗಳನ್ನು ರಚಿಸಿದರು.

1927ರಲ್ಲಿ ಪ್ರಕಟವಾದ ಅವರ 'ನಾರಾಯಣ ವಾಮನ ತಿಲಕರ ಜೀವನ ಚರಿತ್ರೆ', ದೇಶಾಭಿಮಾನಿಯಾದ ಮಹಾರಾಷ್ಟ್ರದ ಕ್ರೈಸ್ತ ಸಂತ ಕವಿಯನ್ನು ಕುರಿತು ಜೆ. ಸಿ. ವಿನ್ಸ್ಲೊ ಅವರು ಇಂಗ್ಲಿಷಿನಲ್ಲಿ ಬರೆದ ಕೃತಿಯ ಅನುವಾದ. 'ಭಾರತದ ಸಂತ ಪಾಲ್' ಎಂದು ಖ್ಯಾತರಾದ ಸಾಧು ಸುಂದರ ಸಿಂಗರನ್ನು ಕುರಿತು ಅವರು ಮಾಡಿದ ಉಪದೇಶ ಭಾಷಣಗಳು 'ದೃಷ್ಟಾಂತ ದರ್ಪಣ' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾದುವು.

ಚೆನ್ನಪ್ಪನವರ ಮಹತ್ಸಾಧನೆ ಅವರ ಸರ್ವಜ್ಞನ ವಚನಗಳ ಸಂಕಲನ. ಚೆನ್ನಪ್ಪನವರಲ್ಲಿ ಕನ್ನಡವನ್ನು ಕಲಿತಿದ್ದ ಐರ್ಲೆಂಡ್ ಪಾದ್ರಿಗಳು ಸರ್ವಜ್ಞನ ವಚನಗಳಲ್ಲಿ ತುಂಬ ಆಸಕ್ತಿ ತೋರಿದ್ದನ್ನು ಕಂಡು ಚೆನ್ನಪ್ಪನವರಿಗೆ ಸರ್ವಜ್ಞನ ವಚನಗಳನ್ನು ಇಂಗ್ಲಿಷ್ ಭಾಷೆಗೆ ಪರಿವರ್ತಿಸಬೇಕೆಂಬ ಆಸೆ ಉಂಟಾಯಿತು. ಆ ಸಂಬಂಧದಲ್ಲಿ ಅವರು ಸರ್ವಜ್ಞನ ವಚನಗಳ ಮುದ್ರಿತ ಪುಸ್ತಕಗಳನ್ನು ನೋಡಿದಾಗ ಅವು ದೋಷಪೂರ್ಣವಾಗಿದ್ದುದು ಕಂಡುಬಂತು. ಶುದ್ಧ ಪಾಠವನ್ನು ಪ್ರಕಟಿಸುವ ಅವಶ್ಯತೆ ತೋರಿತು. ಚೆನ್ನಪ್ಪನವರು ಸರ್ವಜ್ಞ ಪ್ರಪಂಚವನ್ನು ಪ್ರವೇಶಿಸಿದ್ದು ಹೀಗೆ. ಯಾವುದೇ ಕೆಲಸವನ್ನು ಕೈಗೊಂಡರೂ ಅದನ್ನು ಅತ್ಯಂತ ನಿಷ್ಠೆಯಿಂದ ಮಾಡುವ ಗುಣವನ್ನು ಬೆಳೆಸಿಕೊಂಡಿದ್ದ ಚೆನ್ನಪ್ಪನವರು ಹಲವಾರು ವೀರಶೈವ ಮಠಗಳಿಗೆ ಹೋಗಿ ಸರ್ವಜ್ಞನ ವಚನಗಳ ಹಳೆಯ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಸರ್ವಜ್ಞನ ವಚನಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿ ಸಿದ್ಧಪಡಿಸುವ ಕಾರ್ಯದಲ್ಲಿ, ಸುಶಿಕ್ಷಿತರೂ ಅಪಾರ ಜ್ಞಾನಶಕ್ತಿಯುಳ್ಳವರೂ ಆಗಿದ್ದ ಅವರ ಪತ್ನಿ ಸುಭಕ್ತಮ್ಮ ಅನೇಕ ಬಗೆಯಲ್ಲಿ ನೆರವು ನೀಡಿದರು. ಸುಮಾರು 3,000 ವಚನಗಳಿದ್ದ ಸರ್ವಜ್ಞನ ಸಂಕಲನ 1934ರಲ್ಲಿ ಪ್ರಕಟವಾಯಿತು. ಅನಂತರ ಆ ಗ್ರಂಥ ಅನೇಕ ಮುದ್ರಣಗಳನ್ನು ಕಂಡಿತು. ಕನ್ನಡಿಗರಿಗೆ ಸರ್ವಜ್ಞನ ಹಿರಿಮೆಯ ದರ್ಶನವಾಯಿತು.

ತಾವು ನಡೆಸಿದ ಸರ್ವಜ್ಞನ ವಚನಗಳ ಸಂಗ್ರಹಣ, ಸಂಪಾದನ ಕಾರ್ಯಗಳನ್ನು ಕುರಿತು ಚೆನ್ನಪ್ಪನವರು ಆಡಿರುವ ಮಾತುಗಳು ಮಾರ್ಮಿಕವಾಗಿವೆ ; ಕಾವ್ಯಮಯವಾಗಿವೆ : "ಸರ್ವಜ್ಞನ ವಚನಗಳೆಂಬ ಸುವಾಸನೆಯ ಸಣ್ಣಕ್ಕಿ ಕಾಳುಗಳು ಕನ್ನಡನಾಡಿನ ನಡುಬೀದಿಯ ಮಣ್ಣಿನಲ್ಲಿ ಬೆರೆತು ಬಿದ್ದಿದ್ದೇ ನನಗೊಂದು ಹಬ್ಬವಾಯಿತು. ದಿನಾಲು ಅದನ್ನು ಮಣ್ಣಿನೊಡನೆ ಕಟ್ಟಿತಂದು, ಹಸನುಮಾಡಿ ತೊಳೆದು, ಎಸರಿಟ್ಟು ಬಿಸಿ ಬೋನವನ್ನು ಬಸಿದಿಡಲು, ಕೇಳುವುದೇನಿದೆ ! ಬಡಿಸಿದರೆ ಮನೆಯಲ್ಲಿ ಗಮಗಮ ವಾಸನೆ. ಬಾಯಲ್ಲಿ ಹಾಕಿಕೊಂಡರೆ ಬಹು ರುಚಿ."

ವೀರಶೈವ ಧರ್ಮ, ಸಿದ್ಧಾಂತಗಳಲ್ಲೂ ಅವರಿಗೆ ಅಪಾರವಾದ ತಿಳಿವಳಿಕೆ, ಅಭಿಮಾನ ಇದ್ದುವು.

'ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯ ವಚನಗಳು', 'ಅನುಭವ ಮಂಟಪದ ಐತಿಹಾಸಿಕತೆ', 'ಆದಯ್ಯನ ವಚನಗಳು' 'ಸಿದ್ಧರಾಮ ಸಾಹಿತ್ಯ ಸಂಗ್ರಹ'—ಇವು ವೀರಶೈವ ಸಾಹಿತ್ಯರಾಶಿಗೆ ಅವರ ಕಾಣಿಕೆಗಳು.

'ಸಿದ್ಧರಾಮ ಸಾಹಿತ್ಯ ಸಂಗ್ರಹ'ವನ್ನು ಸಿದ್ಧಪಡಿಸುತ್ತಿದ್ದಾಗ ಅವರು ಅರ್ಧಾಂಗವಾಯು ವ್ಯಾಧಿಯಿಂದ ಹಾಸಿಗೆ ಹಿಡಿಯಬೇಕಾಯಿತು. ಅವರ ಸಾಹಿತ್ಯಸೇವೆಯಲ್ಲಿ ಅವರಿಗೆ ನೆರವಾಗುತ್ತಿದ್ದ ಅವರ ಪತ್ನಿ ಕೂಡ ತೀವ್ರ ಅನಾರೋಗ್ಯದಿಂದ ಹಾಸಿಗೆ ಹಿಡಿದರು. ಪುತ್ರಶೋಕ ಅವರಿಗೆ ಪ್ರಾಪ್ತವಾಗಿತ್ತು. ಬಾಳಿನುದ್ದಕ್ಕೂ ಅವರನ್ನು ಕಾಡುತ್ತಿದ್ದ ಬಡತನದ ಬೇಗೆಯೂ ತೀವ್ರವಾಗಿತ್ತು. ಇಂಥ ಸ್ಥಿತಿಯಲ್ಲಿ ಕೂಡ ಅವರು ಧೃತಿಗೆಡದೆ ಹಿಡಿದ ಕಾರ್ಯವನ್ನು ಕೈಬಿಡದೆ ಅದನ್ನು ಮಾಡಿ ಮುಗಿಸಿದ ರೀತಿಯು ಅವರ ಕಾರ್ಯನಿಷ್ಠೆ ಶ್ರದ್ಧೆಗಳಿಗೆ ಅತ್ಯಂತ ಉಜ್ವಲ ನಿದರ್ಶನವಾಗಿದೆ. ದೇವರಾಜ ಬಹದ್ದೂರ್ ನಿಧಿಯ ಬಹುಮಾನ ಈ ಗ್ರಂಥಕ್ಕೆ ಲಭಿಸಿತು.



ಸರ್ವಜ್ಞ : ಉತ್ತಂಗಿ

ಚೆನ್ನಪ್ಪನವರ ಅಪ್ರತಿಮ ಸಾಹಿತ್ಯಸೇವೆಯನ್ನು ಗುರುತಿಸಿ ಕನ್ನಡಿಗರು ಹಲವಾರು ಸಂದರ್ಭಗಳಲ್ಲಿ ಅವರನ್ನು ಗೌರವಿಸಿದರು. 1949ರಲ್ಲಿ ಕಲಬುರ್ಗಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಚೆನ್ನಪ್ಪ ಉತ್ತಂಗಿಯವರು ಅಧ್ಯಕ್ಷರಾಗಿದ್ದರು.

ಮಾನವೀಯತೆಯ ಮೂರ್ತಿಯಾಗಿದ್ದ ಚೆನ್ನಪ್ಪನವರು ಹರಿಜನೋದ್ಧಾರ ಕಾರ್ಯದಲ್ಲಿ ತುಂಬ ಆಸಕ್ತರಾಗಿದ್ದರು. ಗಾಂಧೀಜಿಯವರಿಗೆ ಅರ್ಪಿತವಾಗಿರುವ 'ಬಸವೇಶ್ವರರೂ ಅಸ್ಪೃಶ್ಯರ ಉದ್ಧಾರವೂ' ಎಂಬುದು ಅವರ ಒಂದು ಮನನೀಯ ಗ್ರಂಥ.

ಏಕಾಂತಪ್ರಿಯತೆ, ಸೌಜನ್ಯಯುತ ಹಾಸ್ಯಪ್ರವೃತ್ತಿ, ಧರ್ಮಜಿಜ್ಞಾಸೆ, ಹಿಡಿದ ಕಾರ್ಯವನ್ನು ಕೊನೆಮುಟ್ಟಿಸುವ ದೃಢ ನಿಶ್ಚಯ, ಕಷ್ಟಗಳನ್ನು ಸಹಿಸುವ ಆತ್ಮಸ್ಥೈರ್ಯ—ಚೆನ್ನಪ್ಪನವರ ಗುಣಗಳಾಗಿದ್ದುವು.

ಚೆನ್ನಪ್ಪನವರು 1962 ಆಗಸ್ಟ್ 28ರಂದು ನಿಧನರಾದರು.

## ಚೆಲ್ಲಿನಿ

"ಪ್ರಕೃತಿ ನನಗೆ ಕೊಟ್ಟಿರುವ ವಿಶೇಷ ಪ್ರತಿಭೆಯಿಂದಾಗಿ ಯಾವ ಕೆಲಸವಾದರೂ ನನ್ನ ವಶವಾಗುತ್ತದೆ".

ಹೀಗೆ ಹೇಳಿದ ಬೆನ್ವೆನುಟೊ ಚೆಲ್ಲಿನಿ ಜಗತ್ತಿನ ಅತ್ಯಂತ ಶ್ರೇಷ್ಠ ಲೋಹಶಿಲ್ಪಿ. ಹಾಗೆಯೇ ಪ್ರಖ್ಯಾತ ಬಡಾಯಿಕೋರನೂ ಆಗಿದ್ದ. ನಿರ್ಮಿಸಿದ ಸುಂದರ ವಿಗ್ರಹಗಳಿಗಿಂತ ಹೆಚ್ಚಾಗಿ ಅವನ ಆತ್ಮಚರಿತ್ರೆಯೇ ಪ್ರಸಿದ್ಧಿ ಪಡೆದಿದೆ.

ಇಟಲಿಯ ಫ್ಲಾರೆನ್ಸಿನಲ್ಲಿದ್ದ ಸಂಗೀತಗಾರನೊಬ್ಬನ ಮೂರನೆಯ ಮಗ, ಚೆಲ್ಲಿನಿ. ಜನನ 1500ರ ನವೆಂಬರ್ 3ರಂದು. ತನ್ನ ಮಗ ಕೊಳಲು ವಾದಕನಾಗಬೇಕೆಂದು ಆಶಿಸಿ ಚೆಲ್ಲಿನಿಯ ತಂದೆ ಅವನಿಗೆ ಸಂಗೀತ ಶಿಕ್ಷಣ ಆರಂಭಿಸಿದ. ಆದರೆ ಹುಡುಗನಿಗೆ ಮರದ ಕೊಳಲಿಗಿಂತ ಅಕ್ಕಸಾಲಿಗನ ಚಾಣವೇ ಹೆಚ್ಚು ಇಷ್ಟವಾಗಿತ್ತು. ತಂದೆಯನ್ನು ಒತ್ತಾಯಪಡಿಸಿ ಊರಿನ ಅಕ್ಕಸಾಲಿಗನೊಬ್ಬನ ಹತ್ತಿರ ತರಬೇತಿಗೆಂದು ಸೇರಿದ್ದೂ ಆಯಿತು. ಆದರೆ ಬೀದಿಕಲಹಗಳಲ್ಲಿ ಮುಂಚೂಣಿಯವನಾಗಿದ್ದ ಚೆಲ್ಲಿನಿ ಹದಿನಾರನೆ ವರ್ಷವೇ ಫ್ಲಾರೆನ್ಸಿನಿಂದ



ಲೋಹ ಶಿಲ್ಪಿ : ಚೆಲ್ಲಿನಿ

ಹೊರತಳ್ಳಲ್ಪಟ್ಟ. ಕೆಲವು ವರ್ಷಗಳಾದಮೇಲೆ ಅವನಿಗೆ ಫ್ಲಾರೆನ್ಸಿಗೆ ಬರಲು ಅನುಮತಿ ಸಿಕ್ಕಿತು. ಅಲ್ಲಿಗೆ ಬಂದ ಕೆಲವೇ ತಿಂಗಳ ಬಳಿಕ, ಚೆಲ್ಲಿನಿ ಯಾರಿಗೂ ಹೇಳದೆ ರೋಮಿಗೆ ಓಡಿಹೋದ. ಆಗ ಅವನಿಗೆ ಹತ್ತೊಂಬತ್ತು ವರ್ಷ ವಯಸ್ಸು.

ಅವನೇ ಹೇಳಿಕೊಳ್ಳುವಂತೆ ಕೆತ್ತನೆ ಕೆಲಸದಲ್ಲೂ ಅವನಿಗೆ ವಿಶೇಷ ಕುಶಲತೆ ಇತ್ತು. ಕತ್ತಿವರಸೆಯಲ್ಲೂ ಅಷ್ಟೆ. 1527ರಲ್ಲಿ ವೈರಿಗಳು ರೋಮನ್ನು ಮುತ್ತಿದಾಗ ಚೆಲ್ಲಿನಿ ಕಾದಾಟದಲ್ಲಿ ಅನೇಕರನ್ನು ಹೊಡೆದುರುಳಿಸಿದ. ಇದಕ್ಕಾಗಿ ಸಾರ್ವಜನಿಕ ಸಮಾರಂಭದಲ್ಲಿ ಅವನು ಪೋಪ್‌ನಿಂದ ಗೌರವಿಸಲ್ಪಟ್ಟ. ಅಲ್ಲದೆ ಎಲ್ಲಿ ಜಗಳವಾದರೂ ಚೆಲ್ಲಿನಿ ತಪ್ಪದೆ ತಲೆ ಹಾಕುತ್ತಿದ್ದ. ಇಂಥ ಒಂದು ಜಗಳದಲ್ಲಿ ಒಬ್ಬನನ್ನು ಕೊಲೆ ಮಾಡಿದ್ದಕ್ಕಾಗಿ, 1529ರಲ್ಲಿ ಅವನು ಪುನಃ ಗಡೀಪಾರು ಶಿಕ್ಷೆಗೆ ಗುರಿಯಾದ.

ಫ್ರಾನ್ಸಿಗೆ ಹೋದ ಚೆಲ್ಲಿನಿಗೆ ಅಲ್ಲಿ ಭವ್ಯ ಸ್ವಾಗತ ಲಭಿಸಿತು. ದೊರೆ ಒಂದನೆಯ ಫ್ರಾನ್ಸಿಸ್ ಆತನನ್ನು ತನ್ನ ಆಸ್ಥಾನಕ್ಕೆ ಆದರದಿಂದ ಬರಮಾಡಿಕೊಂಡ. ಅರಸ ಫ್ರಾನ್ಸಿಸ್‌ನ ಉಪಯೋಗಕ್ಕಾಗಿ ಚೆಲ್ಲಿನಿ ಚಿನ್ನದ ಉಪ್ಪಿನ ಕರಂಡಕವೊಂದನ್ನು ರಚಿಸಿದ. ಇದು ಅವನ ಅತ್ಯಂತ ಶ್ರೇಷ್ಠ ಕೃತಿಗಳಲ್ಲಿ ಒಂದು. ಹತ್ತು ಅಂಗುಲ ಎತ್ತರ, ಹದಿಮೂರು ಅಂಗುಲ ಅಗಲದ ಈ ಉಪ್ಪಿನ ಕರಂಡಕದ ಮೇಲೆ ಸಮುದ್ರದೇವತೆ ನೆಪ್ಚೂನ್ ಮತ್ತು ಭೂಮಿಯನ್ನು ಪ್ರತಿನಿಧಿಸುವ ಹೆಂಗಸಿನ ಪ್ರತಿಮೆಗಳಿವೆ. ಸುಂದರವಾದ ಹಡಗಿನ ಆಕಾರದ ಈ ಪಾತ್ರೆಯಲ್ಲಿ ಉಪ್ಪು ತುಂಬಿಸಲು ಜಾಗವಿದೆ. ಕಡಲಕುದುರೆ ಮತ್ತು ಅನೇಕ ಬಗೆಯ ಮೀನುಗಳು ನೀರಿನಲ್ಲಿ ಈಜಾಡುವುದರ ಚಿತ್ರಣವೂ ಇದೆ.

ಲೂಯಿ ದೊರೆಗಾಗಿ ಚೆಲ್ಲಿನಿ ನಿರ್ಮಿಸಿದ ಚಿನ್ನದ ಲವಣ ಕರಂಡಕ



ಕೆಲವು ವರ್ಷ ಫ್ರಾನ್ಸಿನಲ್ಲಿದ್ದು ಚೆಲ್ಲಿನಿ ಮತ್ತೆ ಇಟಲಿಗೆ ಹಿಂದಿರುಗಿದ. ಪೋಪನ ಕಿರೀಟವೊಂದನ್ನು ದುರಸ್ತಿಮಾಡುವ ಕೆಲಸ ಈತನಿಗೆ ಒಪ್ಪಿಸಲ್ಪಟ್ಟಿತು. ಆದರೆ ಆ ಕಿರೀಟದ ಕೆಲವು ರತ್ನಗಳನ್ನು ಕಳವು ಮಾಡಿದನೆಂಬ ಆರೋಪಕ್ಕೊಳಗಾಗಿ ಚೆಲ್ಲಿನಿ ಸೆರೆಮನೆ ಕಾಣಬೇಕಾಯಿತು. ಫ್ರಾನ್ಸಿನ ದೊರೆಯ ಕೋರಿಕೆಯಂತೆ ಇವನಿಗೆ ಬಿಡುಗಡೆಯಾಯಿತು. ಚೆಲ್ಲಿನಿ ಮತ್ತೆ ಫ್ರಾನ್ಸಿಗೆ ಹೋದ.

ಕತ್ತಿವರಸೆಯಲ್ಲಿ ಚೆಲ್ಲಿನಿ ಎಷ್ಟು ಭೀಕರನೋ ಕೆತ್ತನೆ ಕೆಲಸದಲ್ಲಿ ಅಷ್ಟೇ ಸೂಕ್ಷ್ಮ. ಹೂದಾನಿ, ಮದ್ಯಪಾತ್ರೆ, ಖಡ್ಗ, ಕಠಾರಿಗಳ ಹಿಡಿ, ಗುರಾಣಿ ಮುಂತಾದುವುಗಳ ಮೇಲೆ ಅವನು ಆಕರ್ಷಕ ಕೆತ್ತನೆ ಕೆಲಸಗಳನ್ನು ಮಾಡಿದ್ದಾನೆ. ಅವನ ಅತ್ಯಂತ ಶ್ರೇಷ್ಠ ರಚನೆ ಈಗ ಫ್ಲಾರೆನ್ಸಿನಲ್ಲಿರುವ ಕಂಚಿನ ವಿಗ್ರಹ ; ಪುರಾಣ ಪುರುಷನಾದ ಪರ್ಸಿಯಸ್, ಮೆಡುಸಾಳ ತಲೆಯನ್ನು ಕತ್ತರಿಸಿ ಎತ್ತಿಹಿಡಿದುಕೊಂಡಿರುವ ವಿಗ್ರಹ ಇದು. ಆಗಿನ ಕಾಲದ ಪದ್ಧತಿಯಂತೆ ಇದೂ ವಿಶೇಷ ಅಲಂಕಾರಗಳಿಂದ ಕೂಡಿದೆ.

ಮಧ್ಯವಯಸ್ಸನ್ನು ಸಮೀಪಿಸುತ್ತಿದ್ದ ಚೆಲ್ಲಿನಿಗೆ ಚಿನ್ನದ ಕೆಲಸಕ್ಕಿಂತ ಕೆತ್ತನೆ ಕೆಲಸದಲ್ಲಿ ಆಸಕ್ತಿ ಹೆಚ್ಚತೊಡಗಿತು. ವಾಸಕ್ಕಾಗಿ ಒಂದು ಅರಮನೆಯನ್ನೇ ಇವನಿಗೆ ಬಿಟ್ಟುಕೊಟ್ಟಿದ್ದ ಫ್ರಾನ್ಸಿನ ದೊರೆ ಬೆಂಬಲವಿತ್ತು ಪ್ರೋತ್ಸಾಹಿಸಿದ. ಎಷ್ಟು ಸೌಲಭ್ಯವಿದ್ದರೂ ಚೆಲ್ಲಿನಿಗೆ ಮನೆಯ ಗೀಳು ಹೆಚ್ಚತೊಡಗಿತು. 1545ರಲ್ಲಿ ಫ್ಲಾರೆನ್ಸಿಗೆ ಹಿಂದಿರುಗಿದ. ತನ್ನ ಜೀವನದ ಕೊನೆಯವರೆಗೂ ಅಲ್ಲೇ ಇದ್ದ.

ಯಾವುದೇ ನಿರ್ಧಾರವಿರಲಿ, ಅದನ್ನು ಒಡನೆಯೇ ಕಾರ್ಯರೂಪಕ್ಕೆ ತರಲು ಚೆಲ್ಲಿನಿ ಪ್ರಯತ್ನಿಸುತ್ತಿದ್ದ. 1558ರಲ್ಲಿ ಅವನು ಕ್ರೈಸ್ತಪಾದ್ರಿಯಾಗಿ ದೀಕ್ಷೆಪಡೆದುಕೊಂಡ. ಎರಡು ವರ್ಷಗಳ ಬಳಿಕ ಇದರಿಂದ ಬಿಡುಗಡೆ ಯಾಚಿಸಿ ಹೊರಬಂದ. ನಾಲ್ಕು ವರ್ಷಗಳ ಅನಂತರ ಚೆಲ್ಲಿನಿ ವಿವಾಹವಾದ. ಆಗ ಆತನ ವಯಸ್ಸು ಅರವತ್ತನಾಲ್ಕು.

ತನ್ನ ಆತ್ಮಚರಿತ್ರೆಯನ್ನು ಬರೆಯಲು ಆತ ಆರಂಭಿಸಿದ್ದು ಸುಮಾರು ಇದೇ ಸಮಯದಲ್ಲಿ. ಪುಸ್ತಕದ ಹೆಸರು 'ಜೀವನ' ('ವಿಟಾ'). ಇದರಲ್ಲಿ ಅರ್ಧಕ್ಕರ್ಧ ನಂಬಲು ಸಾಧ್ಯವಿಲ್ಲದ ಉತ್ಪ್ರೇಕ್ಷೆ, ಆತ್ಮಪ್ರಶಂಸೆ ; ಆದರೆ ಕಥನದ ರೀತಿ ಸುಂದರವಾದದ್ದು. ಆಂಗ್ಲ ಲೇಖಕ ಹೊರೇಸ್ ವಾಲ್‌ಪೋಲ್‌ನ (1717–97) ಅಭಿಪ್ರಾಯದಲ್ಲಿ ಇದು "ಒಂದು ಕಾದಂಬರಿಗಿಂತಲೂ ಹೆಚ್ಚು ಮನೋಹರ". ಚೆಲ್ಲಿನಿ ಕಾಲವಾಗಿ (1571ರ ಫೆಬ್ರುವರಿ 13) ಸುಮಾರು ನೂರೈವತ್ತು ವರ್ಷಗಳ ಬಳಿಕ ಇದು ಪ್ರಕಟವಾಯಿತು. ಈ ಪುಸ್ತಕ ಆಗಿನ ಕಾಲದ ಜನಜೀವನದ ಕೈಪಿಡಿ.

## ಚೈಕಾವ್‌ಸ್ಕಿ

ಪಾಶ್ಚಾತ್ಯ ಸಂಗೀತದಲ್ಲಿ ತನ್ನದೇ ಸ್ಥಾನ ಗಳಿಸಿದ ಚೈಕಾವ್‌ಸ್ಕಿ ರಷ್ಯದವನು. ಹುಟ್ಟಿದ್ದು ಯೂರಲ್ ಪರ್ವತಶ್ರೇಣಿಯ ತಪ್ಪಲಿನಲ್ಲಿರುವ ವಾಟ್‌ಕಿನ್ಸ್ಕ್ ಎಂಬಲ್ಲಿ, 1840 ಮೇ 7ರಂದು. ತಂದೆ ಗಣಿಯ ತನಿಖೆ



ತಳಮಳ : ಚೈಕಾವ್‌ಸ್ಕಿ

ಅಧಿಕಾರಿ. ತಾಯಿಯೆಂದರೆ ಚೈಕಾವ್‌ಸ್ಕಿಗೆ ಬಹಳ ಮಮತೆ. ಶಾಲೆಗೆ ಸೇರಿದಾಗ ಆಕೆಯನ್ನು ಬಿಟ್ಟಿರಬೇಕಾಯಿತು. ಇದರಿಂದ ಅವನಿಗೆ ಅತೀವ ದುಃಖವಾಯಿತು. ಚೈಕಾವ್‌ಸ್ಕಿಯ ಅಧ್ಯಯನದ ವಿಷಯ ನ್ಯಾಯಶಾಸ್ತ್ರ. ಆದರೆ ಮನಸ್ಸು ನೆಟ್ಟಿದ್ದುದು ಸಂಗೀತದಲ್ಲಿ. ಚಿಕ್ಕಂದಿನಲ್ಲೇ ಪಿಯಾನೋ ನುಡಿಸಲು ಕಲಿತಿದ್ದ. 10ನೆಯ ವಯಸ್ಸಿಗೆ ಸಂಗೀತ ರಚಿಸುವ ಪ್ರಯತ್ನ ಮಾಡಿದ. ಯಾರೂ ಉತ್ತೇಜನ ನೀಡಲಿಲ್ಲ. ನ್ಯಾಯಶಾಸ್ತ್ರ ಓದಿದ ಮೇಲೆ ಕೆಲಸಕ್ಕೂ ಸೇರಬೇಕಾಯಿತು. ಈ ವೇಳೆಗೆ ತಾಯಿ ತೀರಿಕೊಂಡಿದ್ದಳು. ಆ ಸಾವು ಅವನ ಜೀವನದಲ್ಲಿ ಮಾಯಲಾಗದ ನೋವಾಗಿ ನಿಂತಿತು. ಕೆಲಸಕ್ಕೆ ಸೇರಿದ ಚೈಕಾವ್‌ಸ್ಕಿ ಸಂಗೀತದಲ್ಲಿ ಕೈಯಾಡಿಸುತ್ತಲೇ ಇದ್ದ. 1861ರಲ್ಲಿ ಸ್ವರಮೇಳವನ್ನು ಅಭ್ಯಸಿಸಲು ಆರಂಭಿಸಿದ. 1862ರಲ್ಲಿ ನ್ಯಾಯಖಾತೆಯ ಹುದ್ದೆಯನ್ನು ಬಿಟ್ಟು, ಮಾಸ್ಕೋದ ಸಂಗೀತ ಶಿಕ್ಷಣಾಲಯದಲ್ಲಿ ಸ್ವರಮೇಳ ಪ್ರಾಧ್ಯಾಪಕನಾಗಿ ಸೇರಿಕೊಂಡ.

1864ರಲ್ಲಿ ಚೈಕಾವ್‌ಸ್ಕಿ 'ಬಿರುಗಾಳಿ' ಎಂಬ ನಾಟಕಕ್ಕೆ ಒಂದು ಆರಂಭ ಗೇಯವನ್ನು ರಚಿಸಿದ. ತನ್ನ ಮೊದಲ ಸಿಂಫನಿಯನ್ನು 1866ರಲ್ಲಿ ರೂಪಿಸಿದ. ಇದನ್ನು ರಚಿಸುವಾಗ ಭ್ರಾಂತಿ, ನರರೋಗಗಳ ಪೀಡನೆಗೆ ಗುರಿಯಾದ. ಈ ವ್ಯಾಧಿ ಅವನನ್ನು ಮುಂದೆಯೂ ಆಗಿಂದಾಗ್ಗೆ ಕಾಡಿಸುತ್ತಲೇ ಇದ್ದಿತು.

ಶೇಕ್ಸ್‌ಪಿಯರನ ನಾಟಕ 'ರೋಮಿಯೊ ಮತ್ತು ಜೂಲಿಯೆಟ್' ಆಧಾರಿತ ವಾದ್ಯಮೇಳ ಗೇಯಗಳನ್ನೂ ಚೈಕಾವ್‌ಸ್ಕಿ ರಚಿಸಿದ್ದಾನೆ. 1870ರಲ್ಲಿ ಇದನ್ನು ಮೊದಲ ಬಾರಿ ಪ್ರಸ್ತುತಪಡಿಸಿದರು. ಅಂದಿನಿಂದ ಇಂದಿನವರೆಗೂ ಈ ಕೃತಿಗಳು ಏಕಪ್ರಕಾರವಾಗಿ ಜನಪ್ರಿಯವಾಗಿವೆ. ಚೈಕಾವ್‌ಸ್ಕಿ ತನ್ನ ಎರಡನೆಯ ಸಿಂಫನಿಯನ್ನು 1872ರಲ್ಲಿ ರಚಿಸಿದ. ಅವನ 'ಹಂಸ ಸರೋವರ' 1876ರಲ್ಲಿ ರಚಿತವಾಯಿತು. ಅದರಲ್ಲಿ ನೃತ್ಯಕ್ಕೆ ಸಾಂಪ್ರದಾಯಿಕ ಸಂಗೀತವನ್ನು ಅತ ಯಶಸ್ವಿಯಾಗಿ ಅಳವಡಿಸಿದ.

ಚೈಕಾವ್‌ಸ್ಕಿಯ ಮನಸ್ಸು ಯಾವಾಗಲೂ ತಳಮಳದ ಆಗರ. ಅವನ ಜೀವನದ ಕೆಲವು ಘಟನೆಗಳು ಇದಕ್ಕೆ ಕಾರಣವಾದುವು. 1876ರಲ್ಲಿ ಶ್ರೀಮಂತ ವಿಧವೆಯೊಬ್ಬಳೊಡನೆ ಇವನ ಪತ್ರ ಸ್ನೇಹ ಆರಂಭವಾಯಿತು; ಕೊನೆಯವರೆಗೂ ಅವರು ಪರಸ್ಪರ ಭೇಟಿಯಾಗಲಿಲ್ಲ. 1890ರಲ್ಲಿ ಈ ಸ್ನೇಹ ಇದ್ದಕ್ಕಿದ್ದಂತೆಯೇ ಕಡಿದುಬಿದ್ದಿತು. ಆಕೆ ಅವರೆಗೆ ಚೈಕಾವ್‌ಸ್ಕಿಗೆ ನೀಡುತ್ತಿದ್ದ ಆರ್ಥಿಕ ನೆರವು ನಿಂತುಹೋಯಿತು.

ಆ ಅವಧಿಯಲ್ಲೇ ಅವನು ಪುಷ್ಕಿನನ 'ಯೂಜೀನ್ ಒನಿಜಿನ್'

ಚೈಕಾವ್‌ಸ್ಕಿಯ 'ಹಂಸ ಸರೋವರ' : 1000ನೆಯ ಪ್ರದರ್ಶನ

[illegible] ಯತ್ನಿಸಿದ. ಆದರೆ ಸಫಲನಾಗಲಿಲ್ಲ.

ಏನಾದರೋ, [illegible] ಕಾರಿ. ಅವನದು ಕೇಳಲು ಹಿತವಾದ [illegible] ಹೃದಯಕ್ಕೆ ತಾಗುವ ಆಕರ್ಷಕ ಸಂಗೀತ. ಈ ಸಂಗೀತ [illegible] ಅಭಿಪ್ರಾಯವನ್ನು ಅವನ ಕಾಲದಲ್ಲಿ ವ್ಯಕ್ತಪಡಿಸಿದವರೂ ಉಂಟು. ಅವನಿಗೆ ತನ್ನ ದೇಶಕ್ಕಿಂತ ಹೊರ ದೇಶಗಳಲ್ಲಿ ಹೆಚ್ಚು ಆದರ ದೊರೆಯಿತು. ಚೈಕಾವ್‌ಸ್ಕಿ ಒಮ್ಮೆ ಅಮೆರಿಕಕ್ಕೂ ಹೋಗಿಬಂದ. 1891ರಲ್ಲಿ ನ್ಯೂಯಾರ್ಕಿನ ಸಂಗೀತ ಭವನದ (ಈಗ ಕಾರ್ನಗೀ ಭವನ ಎಂಬ ಹೆಸರಿದೆ) ಉದ್ಘಾಟನೆ ಈತನ ಕೈಯಿಂದ ನೆರವೇರಿತು.

ಕೊನೆಯ ಹದಿನೈದು ವರ್ಷ ಚೈಕಾವ್‌ಸ್ಕಿ ವಾದ್ಯಮೇಳ ನಿರ್ದೇಶಕನಾದ. 1893 ನವೆಂಬರ್ ತಿಂಗಳ ಮೊದಲಲ್ಲಿ ಒಂದು ದಿನ, ಕುದಿಸದೆ ಇದ್ದ ನೀರನ್ನು ಕುಡಿದಾಗ ಇವನಿಗೆ ಕಾಲರಾ ತಗಲಿತು. ಅದೇ ತಿಂಗಳ 6ರಂದು ಚೈಕಾವ್‌ಸ್ಕಿ ಮರಣಹೊಂದಿದ. ಸಾವಿನ ಅನಂತರ ರಷ್ಯ ಅವನನ್ನು ಹಿರಿಯ ವ್ಯಕ್ತಿ ಎಂದು ಗೌರವಿಸಿತು. ಇಂದಿಗೂ ಅವನ ಸಂಗೀತದ ಬಗೆಗೆ ರಷ್ಯದಲ್ಲಿ ಗೌರವವಿದೆ.

'ನಿದ್ರಿಸುತ್ತಿರುವ ಚೆಲುವೆ', 'ಅಡಕತ್ತರಿ' ಇವು ಅವನ ಇತರ ಹೆಸರಾಂತ ಬ್ಯಾಲೆ ನೃತ್ಯ ಸಂಗೀತ ರಚನೆಗಳು. ಅವನು ರಚಿಸಿದ ಸಿಂಫನಿಗಳೂ ವಾದ್ಯಮೇಳಗಳೂ ಆರಂಭಮೇಳಗಳೂ ಹಲವಾರು. ಸಂಗೀತದಲ್ಲಿ ಚೈಕಾವ್‌ಸ್ಕಿಯಂತೆ ಭಾವಾವೇಶವನ್ನೂ ಅಂತರಂಗದ ಭಾವನೆಗಳನ್ನೂ ಹೊಮ್ಮಿಸಬಲ್ಲವರು ಇನ್ನೊಬ್ಬರಿಲ್ಲ. ಅವನ ಬ್ಯಾಲೆ ಸಂಗೀತದಲ್ಲಿ ಆಹ್ಲಾದಕರ ಭಾವವಿದೆ. ಆದರೆ ವಾಸ್ತವವಾಗಿ ಅವನು ಯಾವಾಗಲೂ ಖಿನ್ನಮನಸ್ಕನಾಗಿರುತ್ತಿದ್ದ. ತನ್ನ ಮನಸ್ಸಿನ ಭಾರವನ್ನೆಲ್ಲ ಅವನು ಸಂಗೀತ ರಚನೆಯಲ್ಲಿ ನೀಗಿಕೊಳ್ಳುತ್ತಿದ್ದ. ಅವನ ಕೊನೆ ಕೊನೆಯ ಸಿಂಫನಿಗಳು ಇದನ್ನು ಸೂಚಿಸುತ್ತವೆ.

ರಷ್ಯಕ್ಕೇ ವಿಶಿಷ್ಟವಾದದ್ದು, ಚೈಕಾವ್‌ಸ್ಕಿಯ ಶೈಲಿ.

## ಛಂದಸ್ಸು

'ಛದ್' 'ಛಂದ'ಗಳಿಂದ 'ಛಂದಸ್ಸು' ಎಂಬ ಮಾತು ಹುಟ್ಟಿದೆ. ಛದ್–ಛಂದ–ಎಂದರೆ ಆಚ್ಛಾದಿಸು, ಹೊದಿಸು ಎಂದರ್ಥ. ಆಹ್ಲಾದವನ್ನುಂಟುಮಾಡುವುದು ಯಾವುದೋ ಅದು 'ಛಂದ್' ಎನ್ನುವ ಅಭಿಪ್ರಾಯ ಛಂದಸ್ಸಿಗೆ ಒಪ್ಪುತ್ತದೆ. ಛಂದಸ್ಸು ಕಾವ್ಯದ ಸೌಂದರ್ಯಕ್ಕೆ ಕಳೆ ಕಟ್ಟುತ್ತದೆ. ಕೇಳುಗರಿಗೆ ಆನಂದವನ್ನುಂಟುಮಾಡುತ್ತದೆ.

ಲಯ, ಪ್ರಾಸ, ಯತಿ ಛಂದಸ್ಸಿನಲ್ಲಿ ಮೂರು ಮುಖ್ಯ ಅಂಗಗಳು. ಕವಿ ಕವನ ರಚನೆಯನ್ನಾರಂಭಿಸುವುದಕ್ಕೆ ಮುನ್ನ ಅವನ ಅಂತರಂಗದಲ್ಲಿ ಒಂದು ನಿರ್ದಿಷ್ಟವಾದ ರಾಗ ಸ್ಫುರಿಸುತ್ತದೆ. ಹೊರಹೊಮ್ಮುವಂತಹ ಧ್ವನಿಗೆ ಲಯದ ಅಂಗವೂ ಇದೆ. ಸಂಗೀತ, ನೃತ್ಯ, ಶಿಲ್ಪಗಳಲ್ಲಿ ಕೂಡ ಈ ಲಯದ ಪ್ರಭಾವವನ್ನು ಕಾಣಬಹುದು. ಯತಿ ಎಂದರೆ ಛಂದೋಬದ್ಧವಾದ ರಚನೆಯಲ್ಲಿ ಸ್ವಾಭಾವಿಕವಾಗಿ ಬರುವ ವಿರಾಮ.

"ಬಯಸು ಮೆಚ್ಚಿ: ನಡುಗೆ ಗೆಚ್ಚಿ: ಇತುತ ಸುಗ್ಗಿ ಬರುತಿದೆ".

ಅರ್ಥವಿರಾಮ ಗುರುತು ಮಾಡಿರುವ ಕಡೆ ಧ್ವನಿ ಸ್ವಾಭಾವಿಕವಾಗಿ ನಿಂತೂ ನಿಲ್ಲದೆ ಚರಣದ ಕೊನೆಯವರೆಗೂ ಸಮರಸಗೊಂಡು ಸಾಗುತ್ತದೆ. ಪದ್ಯದಲ್ಲಿ ಏಕಸೂತ್ರತೆಯನ್ನೂ ಪ್ರತ್ಯೇಕತೆಯನ್ನೂ ತುಂಬುವುದು ಪ್ರಾಸದ ಕೆಲಸ. ಪ್ರಾಚೀನ ಎಲ್ಲ ಭಾಷೆಗಳಲ್ಲೂ ಪ್ರಾಸ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತದೆ. ಅಕ್ಷರಗಳ ಉಚ್ಚಾರ, ಸ್ವರಗಳ ಆಂದೋಲನವೇ ಛಂದಸ್ಸು. ಸ್ವರಗಳ ಸಂಯೋಜನೆಗಳೇ ಗಣಗಳು. ಗಣಗಳ ಆವರ್ತನೆಯಿಂದ ಲಯ. ಲಯದ ವಿಭಾಗವಾಗಿ ಚರಣ. ಚರಣ ಆವರ್ತನೆಯಿಂದ ಪದ್ಯ. ಇದು ಛಂದಸ್ಸಿನ ಸಾಮಾನ್ಯ ಚೌಕಟ್ಟು ಎಂದು ಭಾವಿಸಬಹುದು.

ಛಂದಸ್ಸು ಭಾಷೆಯ ಸ್ವಭಾವವನ್ನು ಅವಲಂಬಿಸಿ ರೂಪುಗೊಳ್ಳುತ್ತದೆ. ವಿವಿಧ ಭಾಷೆಗಳ ಉಚ್ಚಾರಣಾ ವಿಧಾನ ಆಯಾ ಭಾಷೆಯ ಛಂದಸ್ಸಿನ ಸ್ವರೂಪವನ್ನು ಕುದುರಿಸುವ ಶಕ್ತಿಗಳಲ್ಲೊಂದು ಎನ್ನಬಹುದು.

ಪ್ರಾಚೀನ ಕನ್ನಡ ಕವಿಗಳಿಗೆ ಸಾಮಾನ್ಯವಾಗಿ ಸಂಸ್ಕೃತ ಭಾಷಾ ಪಾಂಡಿತ್ಯ ಇರುತ್ತಿತ್ತು. ಸಂಸ್ಕೃತದ ಮಹಾಕಾವ್ಯಗಳಿಂದ ಸ್ಫೂರ್ತಿಪಡೆದು ಅವರು ಕನ್ನಡದಲ್ಲಿ ಕಾವ್ಯರಚನೆ ಮಾಡುತ್ತಿದ್ದರು. ಕನ್ನಡ ಪದಗಳೊಡನೆ ಸಂಸ್ಕೃತ ಪದಗಳನ್ನು ಬೆರೆಸಿ ಬಳಸುವ ಸಂಪ್ರದಾಯವನ್ನು ಅವರು ಬೆಳೆಸಿಕೊಂಡರು. ಆದ್ದರಿಂದ ಅವರು ಸಂಸ್ಕೃತ ಛಂದಸ್ಸಿನ ಪ್ರಭಾವಕ್ಕೆ ಒಳಗಾದದ್ದರಲ್ಲಿ ಆಶ್ಚರ್ಯವಿಲ್ಲ. ಕನ್ನಡದ ಆದಿಕವಿ ಪಂಪನ 'ಆದಿಪುರಾಣ' 'ವಿಕ್ರಮಾರ್ಜುನ ವಿಜಯ' —ಈ ಎರಡು ಕಾವ್ಯಗಳಲ್ಲೂ ಸಂಸ್ಕೃತ ಛಂದಸ್ಸಿಗೇ ಪ್ರಾಧಾನ್ಯ ಇರುವುದನ್ನು ಕಾಣಬಹುದು. ಸಂಸ್ಕೃತ ಛಂದಸ್ಸಿನಲ್ಲಿ ವೈದಿಕ ಛಂದಸ್ಸು, ಲೌಕಿಕ ಛಂದಸ್ಸು ಎಂದು ಎರಡು ವಿಧ. ಹೆಸರೇ ಸೂಚಿಸುವಂತೆ, ವೈದಿಕ ಛಂದಸ್ಸು ಹೆಚ್ಚಾಗಿ ವೇದಗಳಿಗೆ ಸಂಬಂಧಿಸಿದ್ದು. ಶಾಸ್ತ್ರ, ಕಾವ್ಯ, ನಾಟಕಾದಿಗಳಲ್ಲಿ ಬಳಸಿರುವುದು ಲೌಕಿಕ ಛಂದಸ್ಸು. ಕಲಿತದ್ದನ್ನು ನೆನಪಿನಲ್ಲಿಡಲು ಗದ್ಯಕ್ಕಿಂತ ಪದ್ಯರೂಪ ಹೆಚ್ಚು ಅನುಕೂಲ. ವಿಸ್ತಾರವಾದ ವಿಷಯವನ್ನು ಸಂಗ್ರಹಿಸಿ ತಿಳಿಸಲು ಕಿವಿಗೆ ಇಂಪಾಗುವಂತೆ ಅದನ್ನು ಹೇಳಲು ಪದ್ಯ ಅನುಕೂಲ. ಪದ್ಯರಚನೆಗೆ ಸಹಾಯಕವಾದ ನಿಯಮಗಳನ್ನು ತಿಳಿಸಿಕೊಡುವ ಶಾಸ್ತ್ರ—ಛಂದಶ್ಶಾಸ್ತ್ರ.

ಕಾವ್ಯರಚನೆಗೆ ಮಾತ್ರವಲ್ಲದೆ ತರ್ಕ, ಮೀಮಾಂಸೆ, ವೈದ್ಯ, ಜ್ಯೋತಿಷ ಮೊದಲಾದ ಶಾಸ್ತ್ರ ವಿಚಾರಗಳನ್ನು ಕುರಿತ ಗ್ರಂಥಗಳನ್ನು ಕೂಡ ಛಂದೋಬದ್ಧವಾಗಿ ಬರೆಯುವುದು ಸಂಸ್ಕೃತದಲ್ಲಿ ಬೆಳೆದುಬಂದ ಸಂಪ್ರದಾಯ. ಸ್ಮರಣ ಸೌಲಭ್ಯಕ್ಕಾಗಿಯೇ ಅವರು ಈ ಹಾದಿ ತುಳಿದಿರಬೇಕು. ಛಂದಸ್ಸಿನ ನಿಯಮಕ್ಕೆ ಒಳಪಡದ ಗದ್ಯಕ್ಕಿಂತ, ಛಂದೋನಿಯಮಬದ್ಧವಾದ ಪದ್ಯವನ್ನು ನೆನಪಿನಲ್ಲಿಡುವುದು ಹೆಚ್ಚು ಸುಲಭ.

ತ್ರಿಪದಿ, ಷಟ್ಪದಿ, ರಗಳೆ, ಸಾಂಗತ್ಯಗಳು ಕನ್ನಡದಲ್ಲಿ ಅತ್ಯಂತ ಪ್ರಸಿದ್ಧವಾದ ಛಂದೋ ಪ್ರಕಾರಗಳು —ಸರ್ವಜ್ಞನ ತ್ರಿಪದಿಗಳು, ಕುಮಾರವ್ಯಾಸನ ಭಾಮಿನಿ ಷಟ್ಪದಿ, ಹರಿಹರನ ರಗಳೆ, ರತ್ನಾಕರವರ್ಣಿಯ ಸಾಂಗತ್ಯ ಕನ್ನಡ ಛಂದಸ್ಸಿನ ಶಕ್ತಿ, ವೈವಿಧ್ಯಗಳಿಗೆ ನಿದರ್ಶನ. ಕನ್ನಡದ ಅತ್ಯಂತ ಪ್ರಾಚೀನ

ಗ್ರಂಥವಾದ 'ಕವಿರಾಜಮಾರ್ಗ'ದಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಿಸಿದ ವಿಷಯಗಳು ನಿರೂಪಿತವಾಗಿದ್ದರೂ ಕ್ರಿ. ಶ. 990ರಲ್ಲಿ ಒಂದನೆಯ ನಾಗವರ್ಮ ರಚಿಸಿದ 'ಛಂದೋಂಬುಧಿ' ಕನ್ನಡದ ಅತ್ಯಂತ ಪ್ರಾಚೀನ ಹಾಗೂ ಪ್ರಮುಖ ಛಂದಶ್ಶಾಸ್ತ್ರ ಗ್ರಂಥವಾಗಿದೆ.

20ನೆಯ ಶತಮಾನದಲ್ಲಿ ಕನ್ನಡ ಕಾವ್ಯದ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ಬಿದ್ದು ಕನ್ನಡ ಛಂದಸ್ಸಿನ ರಂಗದಲ್ಲಿ ಹಲವು ಪ್ರಯೋಗಗಳಾದುವು. ಬ್ಲಾಂಕ್ ವರ್ಸ್, ಸಾನೆಟ್, ಓಡ್ ಮುಂತಾದುವು ಇಂಗ್ಲಿಷಿನ ಛಂದೋ ಪ್ರಕಾರಗಳು. ಸರಳ ರಗಳೆ, ಸುನೀತ, ಪ್ರಗಾಥ ಮುಂತಾದ ಹೊಸ ರೂಪಗಳಲ್ಲಿ ಇವು ಕನ್ನಡದಲ್ಲಿ ಕಾಣಿಸಿಕೊಂಡುವು. ಇವು ಇಂಗ್ಲಿಷ್ ಛಂದಸ್ಸಿನಿಂದ ಪ್ರೇರಿತವಾದುವಾದುದು ನಿಜವಾದರೂ ಇವುಗಳ ತಾಯಿಬೇರು ಕನ್ನಡದಲ್ಲಿದ್ದುದರಿಂದ ಇವು ಕನ್ನಡ ಸಾಹಿತ್ಯದಲ್ಲಿ ಗಟ್ಟಿಯಾಗಿ ನಿಂತುವು.

ಛಂದಸ್ಸಿನಲ್ಲಿ ಪ್ರಾಸದ ನಿಯಮವನ್ನು ಮೊತ್ತಮೊದಲ ಬಾರಿಗೆ ಉಲ್ಲಂಘಿಸಿ ಮುಕ್ತ ಛಂದಸ್ಸಿನಲ್ಲಿ ಕಾವ್ಯವನ್ನು ಬರೆಯಲು ಪ್ರಾರಂಭಿಸಿದವರು ಮಂಜೇಶ್ವರ ಗೋವಿಂದ ಪೈ ಅವರು. ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತೆಗಳು' ಕೃತಿ ಕನ್ನಡದಲ್ಲಿ ಹೊಸ ಹೊಸ ಛಂದೋರೂಪಗಳ ಸಾಧ್ಯತೆಯನ್ನು ಎತ್ತಿತೋರಿಸಿತಲ್ಲದೆ, ಆ ಮಾರ್ಗದಲ್ಲಿ ನಡೆಯುವಂತೆ ತರುಣ ಕವಿಗಳನ್ನು ಪ್ರೇರೇಪಿಸಿತು.

ಸುಮಾರು ಎರಡು ದಶಕಗಳಿಂದ ಹೊಸಗನ್ನಡ ಛಂದಸ್ಸು ಪಾಶ್ಚಾತ್ಯ ಕವಿಗಳ ಸ್ವಚ್ಛಂದ ಛಂದೋವಿಲಾಸದ ರೀತಿನೀತಿಗಳನ್ನು ರೂಢಿಸಿಕೊಂಡಿದೆ ; ಇನ್ನೂ ಹೊಸ ಹೊಸರೂಪಗಳಲ್ಲಿ ಪ್ರಕಟವಾಗುತ್ತಿದೆ.

ಮಹಾಕವಿ ಕುವೆಂಪುರವರು ಸರಳ ರಗಳೆಯನ್ನು ಸಮರ್ಥವಾಗಿ ಮಾರ್ಪಡಿಸಿಕೊಂಡು ತಮ್ಮ 'ಶ್ರೀ ರಾಮಾಯಣ ದರ್ಶನಂ' ಕಾವ್ಯದಲ್ಲಿ 'ಮಹಾಛಂದಸ್ಸ'ನ್ನಾಗಿ ಮಾಡಿಕೊಂಡಿದ್ದಾರೆ.

## ಛಾಯಾಚಿತ್ರ ಕಲೆ

ಕೊಳ, ದೋಣಿಯಲ್ಲಿ ಕುಳಿತು ಒಬ್ಬ ಹುಟ್ಟು ಹಿಡಿದಿದ್ದಾನೆ. ಇನ್ನೊಬ್ಬ ತಾವರೆ ಹೂವನ್ನು ಕೀಳುತ್ತಿದ್ದಾನೆ. ಅಲ್ಲಲ್ಲಿ ಜೊಂಡು, ಇತರ ಜಲಸಸ್ಯಗಳು. ಒಂದು ಛಾಯಾಚಿತ್ರದಲ್ಲಿ ಕಾಣುವ ದೃಶ್ಯ ಇದು.

ಪ್ರಭಾಸಂವೇದಿಯಾದ ರಾಸಾಯನಿಕ ಲೇಪನದ ಮೇಲೆ ಬೆಳಕು ಅಥವಾ ಇತರ ವಿಕಿರಣದ ಕ್ರಿಯೆಯಿಂದ ಚಿತ್ರವನ್ನು ಮೂಡಿಸುವುದೇ ಛಾಯಾಚಿತ್ರಣ. ಕ್ಯಾಮರಾ ಸಹಾಯದಿಂದ ಇಂಥ ಚಿತ್ರಗಳನ್ನು ತೆಗೆಯುತ್ತಾರೆ.

ಕ್ಯಾಮರಾದ ಸಹಾಯದಿಂದ ಸುಂದರ ದೃಶ್ಯಗಳನ್ನೂ ಚಿರ ಕಾಲ ನೆನಪಿನಲ್ಲಿಡಬೇಕಾದ ಘಟನೆಗಳನ್ನೂ ಚಿತ್ರರೂಪದಲ್ಲಿ ಹಿಡಿದಿಡಲು ಆರಂಭಿಸಿದಾಗ, ಚಿತ್ರಕಲೆಯ ಕ್ಷೇತ್ರದಲ್ಲಿ ಕೋಲಾಹಲ ಉಂಟಾಯಿತು. ಕ್ಯಾಮರಾದ ಸಂಶೋಧನೆಯಾಗುವುದಕ್ಕೆ ಮುಂಚೆ ಚಿತ್ರಕಾರ ಕುಂಚ ಹಿಡಿದು ಒಬ್ಬ ವ್ಯಕ್ತಿಯ ಅಥವಾ ದೃಶ್ಯದ ಚಿತ್ರವನ್ನು ಬಿಡಿಸುತ್ತಿದ್ದ. ಕ್ಯಾಮರಾ ಆ ಕೆಲಸ ಮಾಡಿಬಿಟ್ಟರೆ, ಚಿತ್ರಕಾರನ ಗತಿ ಏನು ? ಸಣ್ಣ ಪುಟ್ಟ ವಿವರಗಳನ್ನೂ ಕ್ಯಾಮರಾ ತಪ್ಪದೆ ಗ್ರಹಿಸಿತು. ಇದ್ದುದನ್ನು ಇದ್ದ ಹಾಗೆಯೇ ಚಿತ್ರಿಸಿಬಿಡುತ್ತಿತ್ತು. ಹೀಗೆ ಅತಿ ಸ್ವಲ್ಪ ಕಾಲದಲ್ಲಿ ಚಿತ್ರ ಕಲೆಗೂ ಛಾಯಾಚಿತ್ರಣಕ್ಕೂ ಪೈಪೋಟಿ ಹುಟ್ಟಿತು.

[illegible] ಬದಲು, ಭಾವನೆಗಳಿಗೆ ಅಭಿವ್ಯಕ್ತಿ ನೀಡಲು ಯತ್ನಿಸಿದರು. [illegible] ತೊಡಗಿದರು.

ಛಾಯಾಚಿತ್ರಗ್ರಹಣದಲ್ಲಿ [illegible] ಸಾಧ್ಯವಾಯಿತು. [illegible]

ಈ ದಿನ ನುರಿತ ಛಾಯಾಚಿತ್ರಗ್ರಾಹಿ ಕೇವಲ ಕ್ಯಾಮರಾಮನ್ ಅಲ್ಲ. ಅವನೂ ಕಲಾವಿದನೇ. ಕಲಾತ್ಮಕ ರೀತಿಯಲ್ಲಿ ಛಾಯಾಚಿತ್ರಗಳನ್ನು ತೆಗೆಯುವ ಸಂಪ್ರದಾಯ ಬೆಳೆಯುತ್ತಿದೆ. ಸೂಕ್ತ ರೀತಿಯಲ್ಲಿ ಬೆಳಕು ನೆರಳುಗಳನ್ನು ನಿಯೋಜಿಸಿ, ಚಿತ್ರಣಕ್ಕೊಳಗಾದ ವಸ್ತುವನ್ನು ಯಾವ ದೃಷ್ಟಿಕೋನದಿಂದ ಚಿತ್ರಿಸಿಕೊಂಡರೆ ಅದು ಕಲಾತ್ಮಕವಾಗಿ ಕಾಣುತ್ತದೆ ಎಂಬುದನ್ನು ನಿರ್ಧರಿಸಿ, ಛಾಯಾಚಿತ್ರಗಳನ್ನು ತೆಗೆದು, ಅವು ಸುಂದರವೂ ಆಹ್ಲಾದಕರವೂ ಭಾವಪೂರ್ಣವೂ ಆಗಿರುವಂತೆ ಮಾಡುವುದರಲ್ಲಿ ಅನೇಕ ಮಂದಿ ಛಾಯಾಚಿತ್ರಕಾರರು ಯಶಸ್ವಿಯಾಗಿದ್ದಾರೆ. ಹೀಗೆ ಈ ಛಾಯಾಚಿತ್ರಗ್ರಹಣ ಒಂದು ಕಲೆಯಾಗಿದೆ. ಈ ಕಲೆಯನ್ನು ಪ್ರೋತ್ಸಾಹಿಸುವುದಕ್ಕಾಗಿ, ರಾಜ್ಯ, ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟಗಳಲ್ಲಿ ಕಲಾತ್ಮಕ ಛಾಯಾಚಿತ್ರಗಳ ಪ್ರದರ್ಶನಗಳನ್ನು ನಡೆಸುವ ಮತ್ತು ಉತ್ತಮವರ್ಗದ ಕಲಾತ್ಮಕ ಛಾಯಾಚಿತ್ರಗಳಿಗೆ ಪ್ರಶಸ್ತಿಗಳನ್ನೂ ಬಹುಮಾನಗಳನ್ನೂ ಕೊಡುವ ಸಂಪ್ರದಾಯ ಬೆಳೆದಿದೆ.

## ಜಗನ್ನಾಥ ಪಂಡಿತ

ಕಾಶಿ 'ಮಂದಗಾಮಿಯಾದ ಗಂಗಾನದಿ' ಆತ್ಮವೀರೇಶ್ವರ ಘಾಟಿನ ಮೆಟ್ಟಲುಗಳ ಮೇಲೆ ಇಬ್ಬರು ಮಲಗಿದ್ದಾರೆ. ಅವರು ಗಂಡ, ಹೆಂಡತಿ. ಅವನು ಬ್ರಾಹ್ಮಣ, ಅವಳು ಯವನಸುಂದರಿ. ತನ್ನ ಜೀವಮಾನವನ್ನೆಲ್ಲ ಐಹಿಕ ಸುಖ ಸಾಧನೆಯಲ್ಲಿ ಕಳೆದ ಅವನು ವೃದ್ಧಾಪ್ಯವನ್ನು ಕಾಶಿಯಲ್ಲಿ ಕಳೆಯಲು ಬಂದಿದ್ದ. ಅಲ್ಲಿಗೆ ಬಂದ ಪ್ರಸಿದ್ಧ ಸಂಸ್ಕೃತ ವಿದ್ವಾಂಸ ಅಪ್ಪಯ್ಯ ದೀಕ್ಷಿತರು ಈ ಅಪೂರ್ವ ಜೋಡಿಯನ್ನು ನೋಡಿದರು. ಅವರು ಮಲಗಿದ್ದವನನ್ನು ಗುರುತಿಸಿದರು.—"ನಿನಗೆ ಮೃತ್ಯು ಸಮೀಪವಾಗಿದ್ದರೂ ಉಳಿದಿರುವ ಅಲ್ಪ ಆಯುಷ್ಯವನ್ನು ಹೀಗೆ ಸುಖ ನಿದ್ರೆಯಲ್ಲಿ ಕಳೆಯುತ್ತಿದ್ದೀಯಲ್ಲ ! ನಿನ್ನ ಹತ್ತಿರದಲ್ಲೇ ಗಂಗೆ ಎಚ್ಚರವಾಗಿದ್ದಾಳೆ" ಎಂದು ಅರ್ಥಬರುವ ಸಂಸ್ಕೃತ ಶ್ಲೋಕವೊಂದನ್ನು ಹೇಳಿದರು. ಮಲಗಿದ್ದ ಬ್ರಾಹ್ಮಣನಿಗೆ ಮಾತು ಕೇಳಿಸಿತು. ಅವನಿಗೆ ಪಶ್ಚಾತ್ತಾಪವಾಯಿತು. ಅವನ ಬಾಯಿಯಿಂದ ನಿರರ್ಗಳವಾಗಿ ಗಂಗಾ ಸ್ತೋತ್ರ ಹರಿಯಿತು. ಗಂಗಾದೇವಿ ಅವನ ಚಿತ್ತ ಏಕಾಗ್ರತೆಗೆ ಮೆಚ್ಚಿದಳು. ಅವನು ಒಂದೊಂದು ಶ್ಲೋಕ ಹೇಳಿದಾಗಲೂ ಗಂಗಾನದಿಯ ಪ್ರವಾಹ ಒಂದೊಂದೇ ಮೆಟ್ಟಲು ಏರಿಕೊಂಡು ಬಂತು. ಗಂಗಾದೇವಿ ಪ್ರತ್ಯಕ್ಷಳಾಗಿ ದರ್ಶನ ಕೊಟ್ಟಳು. ಅವರನ್ನು ತನ್ನ ಪ್ರವಾಹದ ಮಡಿಲಿನಲ್ಲಿ ಸೇರಿಸಿಕೊಂಡಳು.

ಈ ದಂತಕಥೆ ಜಗನ್ನಾಥ ಪಂಡಿತನನ್ನು ಕುರಿತದ್ದು. 52 ಶ್ಲೋಕಗಳ ಅವನ 'ಗಂಗಾಲಹರಿ' ಸುಪ್ರಸಿದ್ಧ ಕೃತಿ.

ಕ್ರಿ.ಶ. 16–17ನೆಯ ಶತಮಾನದಲ್ಲಿ ಬಾಳಿದ್ದ ಜಗನ್ನಾಥ ಪಂಡಿತನಿಗೆ ಅಸಾಧಾರಣ ಸಂಸ್ಕೃತ ಪಾಂಡಿತ್ಯವಿತ್ತು, ಉತ್ತಮ ಕವಿತಾಶಕ್ತಿಯಿತ್ತು. ಅವನು ವಾಗ್ಮಿಯೂ ಚತುರನೂ ಆಗಿದ್ದ. ನಿರ್ಮಲ ದೈವಭಕ್ತಿಯುಳ್ಳವನಾಗಿದ್ದ. ಅವನ ಜನ್ಮಸ್ಥಳ ಆಂಧ್ರದ ವೆಂಗಿನಾಡು. ತಂದೆ ಪೇರುಭಟ್ಟ, ತಾಯಿ ಲಕ್ಷ್ಮೀದೇವಿ. ಜನನ ಆಗಸ್ಟ್ 1550. ಚಿಕ್ಕ ಪ್ರಾಯದಲ್ಲೇ ಅವನ ತಾಯಿ ತೀರಿಕೊಂಡಳು. ಮಹಾವಿದ್ವಾಂಸನಾದ ತಂದೆಯಿಂದ ಸಕಲ ಶಾಸ್ತ್ರ ಕಾವ್ಯ ವೇದಾಂತಗಳ ಶಿಕ್ಷಣ ಅವನಿಗೆ ಲಭಿಸಿತು. ಯುವಕನಾಗುವ ಹೊತ್ತಿಗೆ ಅದ್ವಿತೀಯ ವಿದ್ವಾಂಸನಾದ.

ಜಗನ್ನಾಥ ಇಪ್ಪತ್ತು ವರ್ಷದವನಾಗಿದ್ದಾಗ ಸುಂದರಿಯೂ ಗುಣವತಿಯೂ ಆದ ಕನ್ಯೆಯೊಡನೆ ಅವನ ವಿವಾಹವಾಯಿತು. ಕೆಲವು ವರ್ಷಗಳಲ್ಲೇ ಆಕೆ ಕ್ಷಯರೋಗದಿಂದ ತೀರಿಕೊಂಡಳು. ಪತ್ನೀವಿಯೋಗದಿಂದ ದುಃಖಿತನಾದ ಜಗನ್ನಾಥ ಮನೆಬಿಟ್ಟು ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನಗಳಲ್ಲಿ ಸಂಚರಿಸಿ ಕೊನೆಗೆ ದೆಹಲಿಗೆ ಬಂದ. ಮೊಗಲ ಬಾದಶಹರ ವೈಭವದ ಕಾಲ ಅದು. ಅವರ ಆಸ್ಥಾನದಲ್ಲಿ ನಡೆದ ಶಾಸ್ತ್ರಾರ್ಥ ಚರ್ಚೆಯಲ್ಲಿ ಭಾಗವಹಿಸಿದ. ಉರ್ದು ಮತ್ತು ಸಂಸ್ಕೃತ ಭಾಷೆಯಲ್ಲಿ ಅಪಾರ ಪಾಂಡಿತ್ಯವಿದ್ದ ಜಗನ್ನಾಥ ಇದಿರಾಳಿಗಳನ್ನು ವಾದದಲ್ಲಿ ಸೋಲಿಸಿದ. ಬಾದಶಹನ ವಿಶೇಷ ಮೆಚ್ಚುಗೆಗೆ ಪಾತ್ರನಾಗಿ ಆ ಆಸ್ಥಾನದಲ್ಲೇ ನೆಲೆಸಿದ.

ಆ ಕಾಲಕ್ಕೆ ಸಂಬಂಧಿಸಿದಂತೆ ಒಂದು ದಂತಕಥೆ ಪ್ರಚಾರದಲ್ಲಿದೆ: ಅಲ್ಲಿ ರೂಪವತಿಯಾಗಿದ್ದ ಯವನ ಕನ್ಯೆಯೊಬ್ಬಳಿದ್ದಳು. ಅವಳು ಉರ್ದು ಸಂಸ್ಕೃತ ಭಾಷೆಗಳಲ್ಲಿ ಪ್ರವೀಣೆಯಾಗಿದ್ದಳು. ಜಗನ್ನಾಥನಿಗೂ ಆಕೆಗೂ ಆಗಾಗ ವಾದ ನಡೆಯುತ್ತಿತ್ತು. ಜಗನ್ನಾಥ ಅವಳನ್ನು ಪ್ರೀತಿಯಿಂದ ಲವಂಗಿ ಎಂದು ಕರೆಯುತ್ತಿದ್ದ. ಜಗನ್ನಾಥನ ರೂಪವನ್ನೂ ಪಾಂಡಿತ್ಯವನ್ನೂ ಆಕೆ ತುಂಬ ಮೆಚ್ಚಿಕೊಂಡಿದ್ದಳು. ಒಮ್ಮೆ ಆಕೆ ಅರ್ಧ ಪಾರಸೀ ಅರ್ಧ ಹಿಂದೂ ಸ್ತ್ರೀಯಂತೆ ಅಲಂಕರಿಸಿಕೊಂಡು, ಕುಡಿಯಲೆಂದು ಬಾದಶಹನಿಗೆ ನೀರು ತಂದುಕೊಟ್ಟಳು. ತಲೆಯ ಮೇಲೆ ನೀರು ತುಂಬಿದ ಚಿನ್ನದ ಬಿಂದಿಗೆ ಇಟ್ಟುಕೊಂಡು ಬಂದ ಆಕೆಯ ಅಪೂರ್ವ ಸೌಂದರ್ಯ ಜಗನ್ನಾಥನನ್ನು ಆಕರ್ಷಿಸಿತು. ಜಗನ್ನಾಥ ಆಕೆಯನ್ನು ವರ್ಣಿಸಿ ಒಂದು ಶ್ಲೋಕ ಹೇಳಿದ. ಸಂತುಷ್ಟನಾದ ಚಕ್ರವರ್ತಿ "ಏನನ್ನು ಬೇಕಾದರೂ ಕೇಳು" ಎಂದ. "ನನಗೆ ಲವಂಗಿಯನ್ನು ಕೊಟ್ಟು ಅನುಗ್ರಹಿಸಬೇಕು. ಬೇರೇನೂ ಬೇಡ" ಎಂದ ಜಗನ್ನಾಥ. ಹೀಗೆ ಲವಂಗಿ ಜಗನ್ನಾಥನ ಕೈಹಿಡಿದಳು. ಮುಸಲ್ಮಾನ ಕನ್ಯೆಯೊಬ್ಬಳನ್ನು ವರಿಸಿದ ಜಗನ್ನಾಥನಿಗೆ ಬ್ರಾಹ್ಮಣರು ಬಹಿಷ್ಕಾರ ಹಾಕಿದರು. ದೆಹಲಿಯ ಜೀವನ ಕಷ್ಟವಾಗಿ ಜಗನ್ನಾಥ ಅಲ್ಲಿಂದ ಹೊರಟು ಹೋಗಬೇಕಾಯಿತು. ಮುಂದೆ ಜಹಾಂಗೀರನ ಆಳ್ವಿಕೆಯಲ್ಲಿ ಅರಸನ ಆಹ್ವಾನವನ್ನು ಸ್ವೀಕರಿಸಿ ಮತ್ತೆ ದೆಹಲಿಗೆ ಆತ ಹಿಂದಿರುಗಿದ.

ಮೊಗಲರ ಚಕ್ರವರ್ತಿ ಷಹಜಹಾನ್ ಜಗನ್ನಾಥನ ವಿದ್ವತ್ತು, ಪಾಂಡಿತ್ಯವನ್ನು ಬಹಳವಾಗಿ ಮೆಚ್ಚಿಕೊಂಡ. ಅವನಿಗೆ ಬೆಳ್ಳಿಯ ತುಲಾಭಾರ ಮಾಡಿಸಿ ಆ ದ್ರವ್ಯವನ್ನೆಲ್ಲ ಅವನಿಗೇ ಕೊಟ್ಟುಬಿಟ್ಟ. ಕಿಕ್ಕಿರಿದು ನೆರೆದ ಸಭೆಯಲ್ಲಿ ಜಗನ್ನಾಥನಿಗೆ 'ಪಂಡಿತರಾಜ' ಎಂಬ ಬಿರುದನ್ನು ನೀಡಿದ. ಚಕ್ರವರ್ತಿ ಕುಮಾರ ದಾರಾ ಶಿಕೋನಿಗೆ ಜಗನ್ನಾಥ ಸಂಸ್ಕೃತದ ಅಧ್ಯಾಪಕಮಿತ್ರನಾದ.

ಜಗನ್ನಾಥ ನಿಜವಾಗಿಯೂ ಪಂಡಿತರಾಜ. ಅವನ 'ರಸಗಂಗಾಧರ' ಕಾವ್ಯಮೀಮಾಂಸೆಯನ್ನು ಕುರಿತ ಒಂದು ಪ್ರೌಢ ಸಂಸ್ಕೃತ ಗ್ರಂಥ. ಆತನ ತೀಕ್ಷ್ಣವಾದ ಬುದ್ಧಿಶಕ್ತಿ, ಸ್ವತಂತ್ರ ಮನೋಭಾವದ ಪಾಂಡಿತ್ಯ, ವಾದಸರಣಿಗಳು ಅದರಲ್ಲಿ ವ್ಯಕ್ತವಾಗಿವೆ. ಪ್ರಾಚೀನ ಆಲಂಕಾರಿಕ ಅಭಿಪ್ರಾಯಗಳನ್ನು ಒಪ್ಪದೆ ಅವನ್ನು ಸೂಕ್ಷ್ಮವಾದ ಪರಿಶೀಲನೆಗೆ ಗುರಿಮಾಡಿ, ತನ್ನ ಅಭಿಪ್ರಾಯಗಳನ್ನು ಅವನು ದಕ್ಷತೆಯಿಂದ ಮಂಡಿಸಿದ್ದಾನೆ. 'ರಸಗಂಗಾಧರ'ದ ಅಧ್ಯಾಯಗಳನ್ನು ಆನನಗಳೆಂದು ಕರೆಯಲಾಗಿದೆ. ಗ್ರಂಥದಲ್ಲಿ ಒಟ್ಟು ಐದು ಆನನಗಳನ್ನು ರಚಿಸಿರಬೇಕೆಂದು ತೋರುತ್ತದೆ. ಆದರೆ ದೊರೆತಿರುವುದು ಎರಡೇ; ಎರಡನೆಯದು ಕೂಡಾ ಪೂರ್ಣವಾಗಿಲ್ಲ. ಮೊದಲನೆಯ ಅಧ್ಯಾಯದಲ್ಲಿ ಕಾವ್ಯದ ಲಕ್ಷಣಗಳನ್ನು ವಿವರಿಸಲಾಗಿದೆ. ತನ್ನ ಹಿಂದಿನವರು ಕಾವ್ಯವನ್ನು ಕುರಿತು ಕೊಟ್ಟ ಲಕ್ಷಣಗಳನ್ನು ಅವನು ಖಂಡಿಸಿ, ತನ್ನದೇ ಆದ ಹೊಸ ಲಕ್ಷಣವನ್ನು ಕೊಟ್ಟಿದ್ದಾನೆ. 'ರಸಗಂಗಾಧರ'ದ ಮೊದಲನೆಯ ಅಧ್ಯಾಯದಲ್ಲಿ ರಸವನ್ನು ಕುರಿತು ವಿವರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಧ್ವನಿಪ್ರಭೇದಗಳೂ



ರಸಋಷಿ ಜಗನ್ನಾಥ – ಪ್ರೇಯಸಿ ಲವಂಗಿ

ಅಲಂಕಾರಗಳೂ ನಿರೂಪಿತವಾಗಿವೆ. ಅಲಂಕಾರ ವಿವೇಚನೆಯಲ್ಲಿ ಜಗನ್ನಾಥ ಪಂಡಿತನ ಕುಶಾಗ್ರ ಬುದ್ಧಿ ವಿಶೇಷವಾಗಿ ಪ್ರಕಟವಾಗಿದೆ. ಈ ಭಾಗದಲ್ಲಿ ಅಲಂಕಾರವನ್ನು ಕುರಿತು ರುಯ್ಯಕ, ಅಪ್ಪಯ್ಯ ದೀಕ್ಷಿತ ಮುಂತಾದ ಆಲಂಕಾರಿಕರ ಅಭಿಪ್ರಾಯಗಳನ್ನು ಕಟುವಾಗಿ ಟೀಕಿಸಿದ್ದಾನೆ. ರಮಣೀಯಾರ್ಥವನ್ನು ಪ್ರತಿಪಾದಿಸುವ ಶಬ್ದ ಕಾವ್ಯ ಎಂಬ ಅವನ ಕಾವ್ಯಲಕ್ಷಣ ನಿರೂಪಣೆ ಗಮನಾರ್ಹವಾದದ್ದು.

ಜಗನ್ನಾಥ 'ಗಂಗಾಲಹರಿ' ಯಲ್ಲದೆ ಕೆಲವು ಸ್ತೋತ್ರ ಕಾವ್ಯಗಳನ್ನೂ ಬರೆದಿದ್ದಾನೆ. ಅವನಿಗೆ ಜ್ಯೋತಿಶ್ಶಾಸ್ತ್ರದಲ್ಲೂ ಒಳ್ಳೆಯ ತಿಳಿವಳಿಕೆ ಇತ್ತು.

## ಜಟ್ಟಿ ತಾಯಮ್ಮ

ಮುಮ್ಮಡಿ ಕೃಷ್ಣರಾಜ ಒಡೆಯರಲ್ಲಿ ಖಾಸಾ ಊಳಿಗದಲ್ಲಿದ್ದ ಜಟ್ಟಿ ದಾಸಪ್ಪನವರ ಪುತ್ರಿ, ಜಟ್ಟಿ ತಾಯಮ್ಮ. ಹುಟ್ಟಿದ್ದು 1862. ಅಪರಮ



ತ್ರಿವೇಣೀ ಸಂಗಮ : ಜಟ್ಟಿ ತಾಯಮ್ಮ

ಚಿಕ್ಕಂದಿನಿಂದಲೂ ತೀಕ್ಷ್ಣವಾದ ಬುದ್ಧಿಶಕ್ತಿ. ಇನ್ನೂ ಆರು ವರ್ಷ ವಯಸ್ಸಿನ ಮಗುವಾಗಿದ್ದಾಗಲೇ ಸಂಗೀತ ಕಲಿಸಲು ತಂದೆ ಜಟ್ಟಿ ದಾಸಪ್ಪನವರು ಏರ್ಪಾಡು ಮಾಡಿದರು. ಅನಂತರ ಸುಬ್ಬರಾಯಪ್ಪನವರಲ್ಲಿ ಭರತನಾಟ್ಯ ಶಿಕ್ಷಣ ದೊರೆಯಿತು. ಜಟ್ಟಿ ತಾಯಮ್ಮನವರು ಕವಿ ಗಿರಿಯಪ್ಪನವರಿಂದ ಅಭಿನಯವನ್ನೂ ಚಂದ್ರಶೇಖರಶಾಸ್ತ್ರಿಗಳಿಂದ ತೆಲುಗು ಜಾವಡಿ ಮತ್ತು ಪದಗಳನ್ನೂ ಅಭಿನವ ಕಾಳಿದಾಸನೆಂದು ಪ್ರಖ್ಯಾತರಾಗಿದ್ದ ಬಸಪ್ಪಶಾಸ್ತ್ರಿಗಳಿಂದ ಕನ್ನಡ ಜಾವಡಿಗಳನ್ನು ಕಲಿತು ತಮ್ಮ ಕಲಾ ಭಂಡಾರವನ್ನು ಬೆಳೆಸಿಕೊಂಡರು.

ಕೇವಲ ಹದಿನೈದು ವರ್ಷ ವಯಸ್ಸಿನಲ್ಲೇ ಮೈಸೂರು ಆಸ್ಥಾನದಲ್ಲಿ ನಾಟ್ಯಪ್ರದರ್ಶನ ಮಾಡಿ ವಿದ್ವಾಂಸರ ಮೆಚ್ಚುಗೆಗೆ ಪಾತ್ರರಾದರು : ಮೈಸೂರು ಆಸ್ಥಾನದ ರಾಜನರ್ತಕಿಯಾಗಿಯೂ ನಿಯುಕ್ತರಾದರು. ಆದರೆ, ಭರತನಾಟ್ಯವನ್ನು ಪುನರುಜ್ಜೀವನಗೊಳಿಸಬೇಕೆಂಬ ಉತ್ಕಟೇಚ್ಛೆಯಿಂದ, ಅರಮನೆಯ ಉದ್ಯೋಗವನ್ನು ಬಿಟ್ಟರು. ನವ ವ್ಯಾಕರಣ ಪಂಡಿತ ಸುಬ್ರಹ್ಮಣ್ಯಶಾಸ್ತ್ರಿಗಳಲ್ಲಿ ದೀರ್ಘಕಾಲ ಸಂಸ್ಕೃತಾಭ್ಯಾಸ ಮಾಡಿ, ಅನೇಕ ಸಂಸ್ಕೃತ ಗ್ರಂಥಗಳ ಅಧ್ಯಯನ ನಡೆಸಿ, ನಾಟ್ಯಶಾಸ್ತ್ರದಲ್ಲಿಯೂ ಸಾಹಿತ್ಯದಲ್ಲಿಯೂ ತಮ್ಮ ತಿಳಿವಳಿಕೆಯನ್ನು ಬೆಳೆಸಿಕೊಂಡರು. ಇವರಿಂದಾಗಿ, ಕನ್ನಡ, ತೆಲುಗು ಭಾಷೆಯ ಜಾವಡಿಗಳು, ಪದಗಳು ಮಾತ್ರವಲ್ಲದೆ, 'ಗೀತಗೋವಿಂದ', 'ಅಮರುಕ ಶತಕ', 'ಕೃಷ್ಣಕರ್ಣಾಮೃತ' ಮುಂತಾದ ಸಂಸ್ಕೃತ ಗ್ರಂಥಗಳಿಂದ ಆರಿಸಿದ ಭಾಗಗಳನ್ನು ಕೂಡ ಪರಿಣಾಮಕಾರಿಯಾಗಿ ಅಭಿನಯಿಸುವ ಶಕ್ತಿ ಇವರಲ್ಲಿ ಬೆಳೆಯಿತು. ಈ ವರ್ಗದ ಅಭಿನಯದಲ್ಲಿ ಇವರು ತೋರುತ್ತಿದ್ದ ಕಲಾವಂತಿಕೆ ಅಪೂರ್ವವಾಗಿದ್ದು ಎಲ್ಲರ ಪ್ರಶಂಸೆಗೆ ಪಾತ್ರವಾಗಿತ್ತು.

ತಾಯಮ್ಮನವರು ಕರ್ಣಾಟಕ ಸಂಗೀತವನ್ನಲ್ಲದೆ, ಉತ್ತಮ ಗಾಯಕರಲ್ಲಿ ಹಿಂದೂಸ್ತಾನಿ ಸಂಗೀತವನ್ನೂ ಅಭ್ಯಾಸ ಮಾಡಿದ್ದರು. ಠುಮರಿ, ಘಜಲ್‌ಗಳನ್ನು ಕೂಡ ಮನಮೋಹಕ ರೀತಿಯಲ್ಲಿ ಅಭಿನಯಿಸುತ್ತಿದ್ದರು.

ತಾಯಮ್ಮನವರು ತಾವು ಉತ್ತಮ ನರ್ತಕಿಯಾಗಿದ್ದುದಲ್ಲದೆ, ನಟುವಾಂಗದಲ್ಲೂ— ನಾಟ್ಯಶಿಕ್ಷಣ ಕೊಡುವುದರಲ್ಲೂ— ದಕ್ಷರೆಂದು ಪ್ರಖ್ಯಾತರಾಗಿದ್ದರು. ಸಾಮಾನ್ಯವಾಗಿ ಗಂಡಸರಿಗೇ ಮೀಸಲಾಗಿದ್ದ ನಟುವಾಂಗದಲ್ಲಿ ಕೂಡ ಇವರು ಪಾಂಡಿತ್ಯವನ್ನು ಗಳಿಸಿ ಪ್ರಸಿದ್ಧಿ ಪಡೆದದ್ದು ಒಂದು ವಿಶೇಷ. ನಮ್ಮ ನಾಡಿನ ಹಲವರಲ್ಲದೆ, ವಿದೇಶೀಯರೂ ಇವರಲ್ಲಿ ನಾಟ್ಯ ಶಿಕ್ಷಣ ಪಡೆದು ಖ್ಯಾತ ನರ್ತಕಿಯರಾದರು. ತಾಯಮ್ಮನವರು ಕೆಲ ಕಾಲ ಸಿಂಹಳ(ಈಗಿನ ಶ್ರೀಲಂಕಾ) ದ್ವೀಪಕ್ಕೂ ಹೋಗಿ, ಅಲ್ಲಿ ಕೆಲವರಿಗೆ ಭರತನಾಟ್ಯ ಶಿಕ್ಷಣವನ್ನು ಕೊಟ್ಟರು.

ಜಟ್ಟಿ ತಾಯಮ್ಮನವರು ಸಂಗೀತ, ಸಾಹಿತ್ಯ, ನಾಟ್ಯ ವಿದ್ವತ್ತುಗಳ ತ್ರಿವೇಣೀ ಸಂಗಮವಾಗಿದ್ದರು. ತಮ್ಮ ಕೊನೆಕಾಲದವರೆಗೂ ತರುಣ ತರುಣಿಯರಿಗೆ ನಾಟ್ಯಶಿಕ್ಷಣ ಕೊಡುವುದರಲ್ಲಿ ಆಸಕ್ತರಾಗಿದ್ದರು.

1945ರಲ್ಲಿ — ತಮ್ಮ 83ನೆಯ ವಯಸ್ಸಿನಲ್ಲಿ— ಮೈಸೂರು ಮಹಾರಾಜಾ ಕಾಲೇಜಿನಲ್ಲಿ ನಡೆದ ಒಂದು ಸಮಾರಂಭದಲ್ಲಿ ಇವರು ಪ್ರದರ್ಶಿಸಿದ ಅಭಿನಯ ಕೌಶಲವನ್ನು ಮೆಚ್ಚಿದ ರಸಿಕರು, ಇವರಿಗೆ 'ನಾಟ್ಯಸರಸ್ವತಿ' ಎಂಬ ಬಿರುದನ್ನು ಡಾ. ಎಸ್. ರಾಧಾಕೃಷ್ಣನ್ ಅವರಿಂದ ಕೊಡಿಸಿ, ತಮ್ಮ ಕೃತಜ್ಞತೆಯನ್ನು ಸೂಚಿಸಿದರು. ಇದಾದ ಎರಡು ವರ್ಷಗಳ ಅನಂತರ ಜಟ್ಟಿ ತಾಯಮ್ಮನವರು ತೀರಿಕೊಂಡರು.

ಮೈಸೂರು ಸೀಮೆಯಲ್ಲಿ ಶಾಸ್ತ್ರೀಯ ಭರತನಾಟ್ಯ ಪರಂಪರೆಯನ್ನು– ಅದರಲ್ಲೂ ಮೈಸೂರಿಗೆ ವಿಶಿಷ್ಟವಾದ ಅಭಿನಯ ವಿಧಾನವನ್ನು– ಪೋಷಿಸಿ, ಬೆಳೆಸಿ, ಪ್ರಸಾರ ಮಾಡಿದವರಲ್ಲಿ ಜಟ್ಟಿ ತಾಯಮ್ಮನವರು ಅಗ್ರಗಣ್ಯರು.

## ಜನ್ನ

'ಯಶೋಧರ ಚರಿತೆ' ಕನ್ನಡ ಸಾಹಿತ್ಯದಲ್ಲಿ ಗೌರವ ಸ್ಥಾನವನ್ನು ಗಳಿಸಿಕೊಂಡಿರುವ ಕಾವ್ಯ. ಇದನ್ನು ರಚಿಸಿದ ಕವಿ ಜನ್ನ. ಇವನು 12ನೆಯ

[illegible] ಕವಿ. ಇವನು ಜೈನ, ಬ್ರಾಹ್ಮಣ. [illegible] ದೇಶ ಎಂಬ [illegible]. ಈತನ ತಂದೆ ಸುಮನೋಬಾಣ ಎಂಬ ಬಿರುದಿನ ಶಂಕರ. ಗುರು ಎರಡನೆಯ ನಾಗವರ್ಮ. 'ಸೂಕ್ತಿಸುಧಾರ್ಣವ' ಎಂಬ ಸಂಕಲನವನ್ನು ರಚಿಸಿದ ಮಲ್ಲಿಕಾರ್ಜುನ ಈತನ ಸೋದರಿಯ ಗಂಡ. 'ಶಬ್ದಮಣಿ ದರ್ಪಣ' ಎಂಬ ಪ್ರಸಿದ್ಧ ವ್ಯಾಕರಣ ಗ್ರಂಥವನ್ನು ರಚಿಸಿದ ಕೇಶೀರಾಜ ಈತನ ಸೋದರಳಿಯ.

'ಗಿರಿದುರ್ಗಮಲ್ಲ' ಎಂದು ಪ್ರಸಿದ್ಧನಾದ ವೀರಬಲ್ಲಾಳನ ಆಸ್ಥಾನ ಕವಿಯಾಗಿದ್ದವನು ಜನ್ನ. ಅವನಿಂದ ಆತನಿಗೆ 'ಕವಿಚಕ್ರವರ್ತಿ' ಎಂಬ ಬಿರುದು ದೊರೆಯಿತು. 'ಕವಿಫಾಳನೇತ್ರ', 'ಅಸಹಾಯ ಸುಕವಿ', 'ಸಾಹಿತ್ಯ ರತ್ನಾಕರ' ಎಂಬುವು ಅವನ ಬಿರುದುಗಳು. ಅವನ ಗುರು ರಾಮಚಂದ್ರದೇವ ಮುನೀಂದ್ರ. ಜನ್ನ ತ್ಯಾಗಶೀಲ. ಉದಾರಿ. ಕೆಲವು ಜೈನ ಮಂದಿರಗಳನ್ನು ಕಟ್ಟಿಸಿದ್ದಾನೆ. ಅವನದು ತೃಪ್ತಿಯ ಬಾಳು.

ಜನ್ನ ಬರೆದ ಎರಡು ಗ್ರಂಥಗಳು —'ಯಶೋಧರ ಚರಿತೆ', 'ಅನಂತನಾಥ ಪುರಾಣ'— ಲಭ್ಯವಿವೆ ; ಅಲ್ಲದೆ ಅವನು ಬರೆದ ಕೆಲವು ಕನ್ನಡ ಶಾಸನಗಳೂ ದೊರೆತಿವೆ. ಇವಲ್ಲದೆ ಕಾಮಶಾಸ್ತ್ರಕ್ಕೆ ಸಂಬಂಧಿಸಿದಂಥ 'ಸ್ಮರತಂತ್ರ' ಎಂಬ ಗ್ರಂಥವನ್ನೂ ಅವನು ಬರೆದಿದ್ದಾನೆ.

ಕನ್ನಡ ಸಾಹಿತ್ಯದಲ್ಲಿ ಜನ್ನನಿಗೆ ಗಣ್ಯಸ್ಥಾನವನ್ನು ಗಳಿಸಿಕೊಟ್ಟಿರುವ ಗ್ರಂಥ ಅವನ 'ಯಶೋಧರ ಚರಿತೆ.' ಪ್ರಧಾನವಾಗಿ ಕಂದ ಪದ್ಯಗಳಲ್ಲಿ ಬರೆದಿರುವ ಈ ಗ್ರಂಥಕ್ಕೆ ಮೂಲ, ಸಂಸ್ಕೃತದಲ್ಲಿರುವ ವಾದಿರಾಜನ ಕಾವ್ಯ. ಆದರೂ ಇದು ಅದರ ಕೇವಲ ಅನುವಾದವಲ್ಲ. ಮೂಲ ಕಾವ್ಯ ಜನ್ನನ ಪ್ರತಿಭೆಯಲ್ಲಿ ಪಕ್ವಹೊಂದಿ ಮೂಲಕ್ಕಿಂತ ಉತ್ತಮ ಕಾವ್ಯವಾಗಿದೆ.

ಯಶೋಧರ ಉಜ್ಜಯಿನಿಯ ಅರಸ. ಆತನ ಹೆಂಡತಿ ಅಮೃತಮತಿ. ಅವಳು ಅರಮನೆಯ ಮಾವುತ ಅಷ್ಟಾವಂಕನಿಗೆ ಮನಸೋತು ಅವನ ನಲ್ಲೆಯಾಗುತ್ತಾಳೆ. ಇದೇ ಕಾರಣವಾಗಿ ಯಶೋಧರನೂ ಅವನ ತಾಯಿ ಚಂದ್ರಮತಿಯೂ ಮಾಡಿದ ಸಂಕಲ್ಪ ಹಿಂಸೆಯ ಫಲವಾಗಿ ಅವರಿಬ್ಬರೂ ನಾನಾ ಜನ್ಮಗಳನ್ನೆತ್ತಿ ಕೊನೆಗೆ ಅಭಯರುಚಿ, ಅಭಯಮತಿ ಎಂಬ ಮಕ್ಕಳಾಗಿ ಜನಿಸುತ್ತಾರೆ. ಅಯೋಧ್ಯಾಪುರದ ಅರಸ ಮಾರಿದತ್ತ ತನ್ನ ಇಷ್ಟದೈವಕ್ಕೆ ನರಬಲಿ ಕೊಡಲೆಂದು ಈ ಮಕ್ಕಳನ್ನು ಹಿಡಿದು ತರುತ್ತಾನೆ. ಈ ಅಣ್ಣ ತಂಗಿಯರು ತಮ್ಮ ಪೂರ್ವಜನ್ಮ ಚರಿತ್ರೆಯನ್ನು ತಿಳಿಸಿ ಹಿಂಸೆಯ ದುಷ್ಫಲವನ್ನೂ ಅಹಿಂಸೆಯ ಸತ್ಫಲಗಳನ್ನೂ ಅರಸನ ಮನ ಕರಗುವಂತೆ ತಿಳಿಸಿಕೊಡುತ್ತಾರೆ. ಇದರಿಂದ ಪ್ರಭಾವಿತನಾದ ಮಾರಿದತ್ತ ಅವರನ್ನು ಕೊಲ್ಲದೆ, ಅಹಿಂಸಾ ವ್ರತವನ್ನು ಅವಲಂಬಿಸುತ್ತಾನೆ.

ಜನ್ನನ ಕಥನತಂತ್ರ ಆಕರ್ಷಕವಾದದ್ದು. ಅವನು ಪ್ರಣಯದ ವಿಕೃತ ರೂಪವನ್ನು ವರ್ಣಿಸಿರುವಂತೆಯೇ ಅಹಿಂಸೆ, ದಯೆಯ ಶುಭಪರಿಣಾಮಗಳನ್ನೂ ಮನಮುಟ್ಟುವಂತೆ ವರ್ಣಿಸಿದ್ದಾನೆ. ಕಾವ್ಯಧರ್ಮವನ್ನೂ ಧರ್ಮವನ್ನೂ ತನ್ನ ಕಾವ್ಯದಲ್ಲಿ ಸಮನ್ವಯ ಮಾಡುವುದರಲ್ಲಿ ಯಶಸ್ವಿಯಾಗಿದ್ದಾನೆ.

ಜನ್ನನ 'ಅನಂತನಾಥ ಪುರಾಣ' ಚಂಪೂಕಾವ್ಯ ಜೈನರ 14ನೆಯ ತೀರ್ಥಂಕರನಾದ ಅನಂತನಾಥನನ್ನು ಕುರಿತದ್ದು. ಈ ವಸ್ತುವನ್ನು ಕುರಿತು ಸಂಸ್ಕೃತ, ಕನ್ನಡಗಳಲ್ಲಿ ದೊರೆಯುವ ಕೆಲವೇ ಅಂಶಗಳಿಂದ ಸ್ಫೂರ್ತಿ ಪಡೆದು ಈ ಪುರಾಣವನ್ನು ಬರೆದಿದ್ದಾನೆ. ಇದರಲ್ಲಿ ಕೂಡ ಪ್ರಣಯ ಪ್ರಸಂಗವಿದೆ. ಆದರೆ ಈ ಪ್ರಣಯದ ಸ್ವರೂಪ ಯಶೋಧರ ಚರಿತ್ರೆಯಲ್ಲಿ ಬರುವಂಥ ವಿಕೃತ ಪ್ರಣಯವಲ್ಲ : ಅದರಿಂದ ಭಿನ್ನವಾದದ್ದು.

ಚಂಡಶಾಸನ ತನ್ನ ಗೆಳೆಯನಾದ ವಸುಷೇಣನ ಮನೆಗೆ ಅತಿಥಿಯಾಗಿ ಹೋದಾಗ ಅವನ ಚೆಲುವೆ ಹೆಂಡತಿ ಸುನಂದೆಯಲ್ಲಿ ಮೋಹಗೊಳ್ಳುತ್ತಾನೆ. ಅವಳನ್ನು ಒಲಿಸಿಕೊಳ್ಳಲು ಜೋಗಿಯ ನೆವದಿಂದ ಅವಳನ್ನು ಕದ್ದೊಯ್ಯುತ್ತಾನೆ. ನಾನಾ ವಿಧದಲ್ಲಿ ಅವಳನ್ನು ವಶಪಡಿಸಿಕೊಳ್ಳಲು ಯತ್ನಿಸಿ ವಿಫಲನಾಗಿ, ಕೊನೆಗೆ, ವಸುಷೇಣ ಸತ್ತುಹೋದನೆಂದು ಅವನ ಕೃತಕ ತಲೆಯನ್ನು ಸುನಂದೆಗೆ ತೋರಿಸುತ್ತಾನೆ. ತನ್ನ ಪತಿಯ ಮರಣಕ್ಕಾಗಿ ಶೋಕಿಸಿ ಆಕೆ ಸಾಯುತ್ತಾಳೆ. ಅವಳನ್ನಪ್ಪಿಕೊಂಡು ಚಂಡಶಾಸನನೂ ಸಾಯುತ್ತಾನೆ. ಇವನ್ನೆಲ್ಲ ನೋಡಿ ಪ್ರಾಪಂಚಿಕ ಜೀವನಕ್ಕೆ ಹೇಸಿ ವಸುಷೇಣ ತಪಸ್ಸಿಗೆಂದು ಹೊರಟು ಹೋಗುತ್ತಾನೆ.

ಹಿತಮಿತವಾದ ಪದಪ್ರಯೋಗದಲ್ಲಿ ಜನ್ನ ತುಂಬ ಚತುರ. ಅವನು ಉಪಯೋಗಿಸುವ ಅಲಂಕಾರಗಳೂ ಮಾಡುವ ವರ್ಣನೆಗಳೂ ಸಂದರ್ಭೋಚಿತ, ಪರಿಣಾಮಕಾರಿ. ಈ ದೃಷ್ಟಿಯಿಂದ ಜನ್ನನ ಕಾವ್ಯಶಕ್ತಿ ಅಪೂರ್ವವಾದದ್ದು. ಈ ಔಚಿತ್ಯ ಗುಣವೇ ಅವನ ಕೀರ್ತಿಗೆ ಕಾರಣ.

## ಜಪಾನೀ ಕಲೆ, ಸಾಹಿತ್ಯ

ಆಯಾಕಾರದ ಮರದ ತೊಗಟೆ. ಅದರ ಮೇಲೆ ಜೇಡಿಮಣ್ಣು. ಆ ಜೇಡಿಮಣ್ಣಿಗೆ ಚುಚ್ಚಿರುವ ಒಂದು ಜಾತಿಯ ಹುಲ್ಲು ; ಬಿಳಿ ಹೂ ಬಿಟ್ಟಿರುವ ಒಂದು ಮೂಲಿಕೆ. ಒಂದು ಗೊಂಚಲು ಗೋದಿ ಗಿಡ, ತೆನೆಗಳನ್ನೂ ಜೇಡಿಮಣ್ಣಿಗೆ ಚುಚ್ಚಿ ನಿಲ್ಲಿಸಿದ್ದಾರೆ. ಜೇಡಿಮಣ್ಣನ್ನು ಮುಚ್ಚಲು ಅಂಟಿಸಿರುವ ಸಣ್ಣ ಕಲ್ಲು ಹರಳುಗಳು. ಗೋದಿಗಿಡದ ಕಾಂಡವನ್ನು ತಂತಿಗೆ ಕಟ್ಟಿರುವುದರಿಂದ ಗಿಡದ ಕೆಲವು ರೆಂಬೆಗಳು ಗಾಳಿಗೆ ತೊನೆದಾಡುವಂತೆ ಕಾಣುತ್ತದೆ. ಇದು ವಿಶ್ವವಿಖ್ಯಾತ ಇಕೆಬಾನ ಪುಷ್ಪ ಜೋಡಣೆಯ ಒಂದು ಕಣ್ಸೆಳೆವ ಮಾದರಿ. ಜಪಾನೀಯರು ಪುಷ್ಪ ಜೋಡಣೆಯನ್ನು ಒಂದು ಕಲೆಯನ್ನಾಗಿ ಬೆಳೆಸಿದ್ದಾರೆ. ಇದು ಆರಂಭವಾದದ್ದು ಬೌದ್ಧದೇವಸ್ಥಾನದಲ್ಲಿ. 15ನೆಯ ಶತಮಾನದಿಂದೀಚೆಗೆ ಈ ಕಲೆ ಅಭಿವೃದ್ಧಿಗೊಂಡಿದೆ.

ಜಪಾನೀಯರು ಸ್ವಭಾವತಃ ಸೌಂದರ್ಯಾಭಿಮಾನಿಗಳು. ಅವರು ಪ್ರಕೃತಿಪೂಜಕರಾಗಿದ್ದುದು ಮಾತ್ರವಲ್ಲದೆ, ಪ್ರಕೃತಿಪ್ರೇಮಿಗಳೂ ಆಗಿದ್ದರು. ಜಪಾನಿನ ಪ್ರಾಚೀನ ಧರ್ಮವಾದ 'ಷಿಂಟೊ' ದೇವಾಲಯಗಳನ್ನು ಕಟ್ಟಲು ಅವರು ರಮ್ಯ ನಿಸರ್ಗಸ್ಥಾನಗಳನ್ನು ಆರಿಸಿರುವುದನ್ನು ನೋಡಿದರೆ ಅವರ ಕಲಾಭಿಜ್ಞತೆ ವ್ಯಕ್ತವಾಗುತ್ತದೆ.

ಜಪಾನ್ ಒಂದು ದ್ವೀಪಸಮುದಾಯವಾಗಿದ್ದು ಸುತ್ತಲೂ ವಿಶಾಲ ಸಮುದ್ರದಿಂದ ಆವರಿಸಲ್ಪಟ್ಟಿದೆ. ಪೂರ್ವ ಕಾಲದಲ್ಲಿ ಅದು ಪರಕೀಯರ ಪ್ರಭಾವಕ್ಕೆ ಅಷ್ಟಾಗಿ ಒಳಗಾಗಲಿಲ್ಲ. ಆದ್ದರಿಂದ

ಜಪಾನೀ ಸಂಗೀತಗಾರ

ಅದು ತನ್ನದೇ ಆದ ರೀತಿಯಲ್ಲಿ ವಿಕಾಸ ಹೊಂದುವುದು ಸಾಧ್ಯವಾಯಿತು. ಜಪಾನೀಯರು ತಮ್ಮ ಪರಿಸರದ ಆವಶ್ಯಕತೆಗಳನ್ನೂ ಅನುಕೂಲ್ಯಗಳನ್ನೂ ಅನುಸರಿಸಿ, ತಮ್ಮ ಜೀವನವಿಧಾನ ಕಲೆ ಸಾಹಿತ್ಯಗಳನ್ನು ತಮ್ಮದೇ ಆದ ರೀತಿಯಲ್ಲಿ ಬೆಳೆಸಿಕೊಂಡರು. ಆ ಪ್ರಭಾವವನ್ನು ಅವರ ಸಂಸ್ಕೃತಿಯಲ್ಲಿ ಇಂದಿಗೂ ಕಾಣಬಹುದು.

ಜಪಾನೀಯರ ಮೇಲೆ ಹೊರಗಿನ ಪ್ರಭಾವ ಮೊಟ್ಟಮೊದಲಿಗೆ ಬಿದ್ದದ್ದು, ಬೌದ್ಧಧರ್ಮವನ್ನು ಉಪದೇಶಿಸಲು ಚೀನೀಯರು ಜಪಾನಿಗೆ ಬಂದಾಗ—ಆರನೆಯ ಶತಮಾನದಲ್ಲಿ. ಆ ಶತಮಾನದ ಅನಂತರದ ರಚನೆಗಳಲ್ಲಿ ಚೀನೀಯರ ಪ್ರಭಾವವನ್ನು ಕಾಣಬಹುದಾದರೂ, ಅವುಗಳಲ್ಲಿ ಜಪಾನೀಯರ ಸ್ವಂತ ಕಲಾದೃಷ್ಟಿ ಪ್ರಬಲವಾಗಿ ಸೇರಿರುವುದನ್ನು ಮರೆಯುವಂತಿಲ್ಲ.

ತಮ್ಮ ಸಂಸ್ಕೃತಿಗೆ ಸಂಬಂಧಿಸಿದ ಪುರಾತನ ವಸ್ತುಗಳನ್ನು ರಕ್ಷಿಸುವುದರಲ್ಲಿ ಜಪಾನೀಯರಿಗೆ ತುಂಬ ಆಸಕ್ತಿ. ಅವರ ಈ ಆಸಕ್ತಿಯ ಫಲವಾಗಿ. ಹಳೆಯ ಕಾಲದ ಹಲವು ಕಟ್ಟಡಗಳು –ಅವು ಮರದ ಕಟ್ಟಡಗಳಾದರೂ– ಸಂರಕ್ಷಿಸಲ್ಪಟ್ಟಿವೆ.

ಜಪಾನೀ ಚಿತ್ರಕಲೆಗೆ 14ನೆಯ ಶತಮಾನಗಳಷ್ಟು ದೀರ್ಘ ಕಾಲದ ಇತಿಹಾಸವಿದೆ. ಹೋರ್‍ಯುಜಿ ದೇವಾಲಯದ ಹಜಾರದಲ್ಲಿದ್ದ 12 ಭಿತ್ತಿ ಚಿತ್ರಗಳೇ ಜಪಾನಿನ ಚಿತ್ರಕೃತಿಗಳಲ್ಲಿ ಅತ್ಯಂತ ಪ್ರಾಚೀನವಾದುವೆಂಬ ಅಭಿಪ್ರಾಯವಿದೆ. ಇವು 7ನೆಯ ಶತಮಾನದ ಆರಂಭಕಾಲದಲ್ಲಿ ನಿರ್ಮಿತವಾದದ್ದು. ಇವು 1949 ರವರೆಗೂ ಸುಸ್ಥಿತಿಯಲ್ಲಿದ್ದು ಆ ವರ್ಷ ನಡೆದ ಅಗ್ನಿಪ್ರಮಾದದ ಪರಿಣಾಮವಾಗಿ ನಷ್ಟವಾದುವು.

ಕೋಸ್–ನೊ–ಕನೌಕ ಪ್ರಥಮ ಸ್ಥಳೀಯ ಕಲಾವಿದ. ಈತ ಯಮಾಟೋ ಪ್ರದೇಶದ ಚಿತ್ರಶೈಲಿಯ ಆದ್ಯ ಪ್ರವರ್ತಕ. ಇಂದು ಇವನ ಕೃತಿಗಳಾವುವೂ ಲಭ್ಯವಿಲ್ಲ. ಇವನ ಮನೆತನದವರು 14ನೆಯ ಶತಮಾನದ ಪರ್ಯಂತ ಈತನ ಹೆಸರಿನ 'ಕೋಸ್ ಶೈಲಿ'ಯನ್ನು ಉಳಿಸಿಕೊಂಡು ಬಂದರು. ಇವರು ಜಪಾನಿನ ಚಕ್ರವರ್ತಿಗಳ ಆಸ್ಥಾನದ ಚಿತ್ರಕಲಾವಿದರಾಗಿದ್ದರು.

12ನೆಯ ಶತಮಾನದಲ್ಲಿ, ಸಾಹಿತ್ಯಕೃತಿಗಳಿಗೆ ಪೋಷಕವಾಗಿ ಚಿತ್ರಗಳನ್ನು ಬರೆಯುವ ಕಲೆ ಅಭಿವೃದ್ಧಿಗೆ ಬಂತು. ಉದ್ದಕ್ಕೆ ಬಿಚ್ಚಿಕೊಂಡು ಹೋಗಬಹುದಾದಂಥ ಸುರುಳಿಗಳಲ್ಲಿ ಈ ಚಿತ್ರಗಳನ್ನು ಬರೆಯುತ್ತಿದ್ದರು. ಇವುಗಳಲ್ಲಿ ಜಪಾನೀಯರ ಸೌಂದರ್ಯಪ್ರಜ್ಞೆಯನ್ನೂ ಅವರ ಚಿತ್ರಗಳಿಗೆ ವಿಶಿಷ್ಟವಾದ ಕಲಾತ್ಮಕ ಚಲನೆಯನ್ನೂ ಕಾಣಬಹುದು.

ಜಪಾನೀಯರ ಚಿತ್ರಕಲೆಯಲ್ಲಿ ಚೀನೀಯರ ಪ್ರಭಾವ ಸ್ಪಷ್ಟವಾಗಿ ಕಾಣುವುದು 14ನೆಯ ಶತಮಾನದ ಅವರ ಕೃತಿಗಳಲ್ಲಿ.

ಚೋಡನ್ನು ಮತ್ತು ನ್ಯೋಸೆಟ್ಸು ಎಂಬಿಬ್ಬರು ಬೌದ್ಧ ಭಿಕ್ಕುಗಳು 15ನೆಯ ಶತಮಾನದಲ್ಲಿ ಒಂದು ಹೊಸ ಚಿತ್ರಣಶೈಲಿಯನ್ನೇ ಆರಂಭಿಸಿದರು. ಇವರಿಬ್ಬರೂ ಕಪ್ಪುಮಸಿಯನ್ನು ಉಪಯೋಗಿಸಿ ಚಿತ್ರಗಳನ್ನು ಬರೆದರು. ನ್ಯೋಸೆಟ್ಸುವಿನ ಶಿಷ್ಯರು ಷುಬುನ್ ಹಾಗೂ ಸೇಷ್ಯು. ಷುಬುನ್‌ನ ಶಿಷ್ಯ ಕಾನೊಮೆಸಾನೋಬು 'ಕಾನೊ ಶೈಲಿ' ಆರಂಭಿಸಿದ. ಟೋಸಾ ಮಿಟ್ಸು ನೋಬು 'ಟೋಸಾ ಶೈಲಿ'ಯ ಪ್ರವರ್ತಕನಾದ. ಕಾನೊ ಶೈಲಿಯಲ್ಲಿ ವಿಶಾಲವಾದ ಭಾವನೆ, ಅತೀವ ಸರಳತೆ ಮತ್ತು ತೀಕ್ಷ್ಣ ವರ್ಣಸಂಯೋಜನೆ ಇರುತ್ತಿತ್ತು. ಸೂಕ್ಷ್ಮ ಕುಸುರಿ ಕೆಲಸಮಾಡಿ ಹೊಸ ಹಾದಿಯನ್ನೇ ಹಿಡಿದ ಹಿಷಿಕಾವಾ ಮೊರೋನವು. ಜಪಾನಿನಲ್ಲಿ ಮರದ ಕೆತ್ತನೆ ಹಾಗೂ ಪುಸ್ತಕಗಳಲ್ಲಿ ಚಿತ್ರರಚಿಸುವುದು ಈತನಿಂದಲೇ ಆರಂಭವಾದುದು.

ಸುಮಾರು 1775ರಲ್ಲಿದ್ದ ಓಕ್ಯೊ, ಪ್ರಾಣಿ ಜೀವನವನ್ನು ಚಿತ್ರಿಸುವುದರಲ್ಲಿ ಖ್ಯಾತಿಗಳಿಸಿದ. ಒಗಾಟಾ ಕೋರಿನ್ (1658—1743) ಅರಗು ಬಣ್ಣದ ಕೆಲಸದಲ್ಲಿ ಅದ್ವಿತೀಯನಾಗಿದ್ದ. ಪಶ್ಚಿಮದ ನಾಗರಿಕತೆ ಜಪಾನಿಗೂ ಹರಡಿ ಚಿತ್ರಕಲೆಯಲ್ಲೂ ಪಾಶ್ಚಾತ್ಯರ ಶೈಲಿ ಪ್ರಾಮುಖ್ಯ ಪಡೆದಿದೆ. ಸೊಟಾರೊ ಯಾಸುಯಿ ಈ ಶೈಲಿಯ ಪ್ರಮುಖ ಚಿತ್ರಕಾರರಲ್ಲೊಬ್ಬ.

ಚೀನೀಯರ ವಾಸ್ತುಶಿಲ್ಪವೇ ಜಪಾನೀಯರ ವಾಸ್ತುಶಿಲ್ಪದ ಮೂಲ ಪ್ರೇರಕ. ಇತ್ತೀಚಿನವರೆಗೂ ಜಪಾನಿನ ಬಹುತೇಕ ಕಟ್ಟಡಗಳನ್ನು ಮರದಲ್ಲಿ ನಿರ್ಮಿಸುತ್ತಿದ್ದರು. ಕಾಮಾಕುರಾ ಕಾಲದ (1186–1392) ಬೌದ್ಧ ದೇವಾಲಯಗಳು, ಮುರೊಮಾಚಿ ಕಾಲದ (1393–1572)ದೇವಾಲಯದ ಹೆಬ್ಬಾಗಿಲು ಮುಂತಾದುವುಗಳಲ್ಲಿ ಚೀನೀ ವಾಸ್ತುಶಿಲ್ಪದ ಪ್ರಭಾವ ಕಂಡು ಬರುತ್ತದೆ. ಈ ಮನೆಗಳನ್ನು ಬಿಟ್ಟು ಬಾಕಿ ಕಟ್ಟಡಗಳಿಗೆ ಮರದ ಬದಲು ಸಬಲ ಸಿಮೆಂಟ್ ಕಾಂಕ್ರೀಟನ್ನು ಉಪಯೋಗಿಸಲಾಗುತ್ತಿದೆ.

'ರೆಂಬೆಯ ಮೇಲೆ ಕಾಗೆ'
17ನೆಯ ಶತಮಾನದ ಜಪಾನೀ ಚಿತ್ರಕೃತಿ

ಚಿತ್ರಕಲೆ ಹಾಗೂ ಲೋಹದ ಕೆಲಸ, ಮರದ ಕೆತ್ತನೆ ಕೆಲಸಗಳು ಕೂಡ ಜಪಾನ್ ಕಳೆದ 12 ಶತಮಾನಗಳಿಂದ ಅದ್ಭುತ ಸಾಧನೆಗಳನ್ನು ಕೈಗೂಡಿಸಿಕೊಂಡಿದೆ. ಅನೇಕ ವಸ್ತುಸಂಗ್ರಹಾಲಯಗಳಲ್ಲಿ ಇಂಥ ಕೃತಿಗಳ ಉತ್ತಮ ಮಾದರಿಗಳನ್ನು ಸಂಗ್ರಹಿಸಿಟ್ಟಿದ್ದಾರೆ. ಪವಿತ್ರ ಮೂರ್ತಿಗಳು, ಗಂಟೆಗಳು, ಹೂದಾನಿಗಳು, ದೀಪಗಳು, ಶಸ್ತ್ರ ಹಾಗೂ ಕವಚಗಳು ಜಪಾನೀ ಕಲಾವಿದರ ಕುಶಲತೆಗೆ ಸಾಕ್ಷಿಯಾಗಿವೆ. ಕಂಚು, ದಂತ, ಮತ್ತು ಮರದ ವಸ್ತುಗಳ ರಚನೆಯಲ್ಲಿ ಉಪಯೋಗಿಸಿರುವ ವಸ್ತುಗಳು. ನಾರಾ (645–781) ಮತ್ತು ಕಾಮಾಕುರಾ ಅವಧಿ ಜಪಾನೀ ಶಿಲ್ಪಕಲೆಯ ಸ್ವರ್ಣಯುಗ. ನಾರಾ ಮತ್ತು ಕ್ಯೋಟೋಗಳಲ್ಲಿರುವ ದೇವಾಲಯಗಳು ಈ ಕಾಲಗಳು ಶಿಲ್ಪಕಲಾ ಮಹೋನ್ನತಿಯ ಕುರುಹುಗಳಾಗಿ ನಿಂತಿವೆ.

ಚಿನ್ನ ಬೆಳ್ಳಿಗಳಿಂದ ಹದಿ ಕೆಲಸ (ಒಳಕುಸುರಿ) ಮಾಡುವ ಕಲೆ ಜಪಾನೀಯರಿಗೆ ಬಹಳ ಹಿಂದಿನಿಂದ ತಿಳಿದಿತ್ತು. ಇವರಲ್ಲವರು ಬಹು ಹಿಂದೆಯೇ ನೈಪುಣ್ಯ ಪಡೆದಿದ್ದರು.

ಕಂಚಿನಲ್ಲಿ ಅಪೂರ್ವ ಕಲಾಕೃತಿಗಳನ್ನು ನಿರ್ಮಿಸುವುದರಲ್ಲಿ ಕೂಡ ಜಪಾನೀಯರು ಕುಶಲರು. ನಾರಾದಲ್ಲಿರುವ ಬೃಹತ್ ಬುದ್ಧ ಹಾಗೂ ಕಾಮಾಕುರಾದಲ್ಲಿರುವ ಅಮಿಡಾ ಮೂರ್ತಿಗಳು ಕಂಚಿನ ಮೂರ್ತಿರಚನಾ ಕಲೆಯಲ್ಲಿ ಜಪಾನೀಯರಿಗಿದ್ದ ಕುಶಲತೆಗೆ ನಿದರ್ಶನ. ಕತ್ತಿಯ ಹಿಡಿಗಳಿಗೆ ಮಾಡಿರುವ ಕೆತ್ತನೆ ಕೂಡ ಅದ್ಭುತವಾಗಿದೆ.

ಮರದ ಕೆತ್ತನೆ ಕೆಲಸದಲ್ಲೂ ಜಪಾನೀಯರು ಕುಶಲಿಗಳು. ಪೋಮೊಯಾಮ ಕಾಲದಲ್ಲಿ (1573–1614) ಇದು ಅಲಂಕರಣಕ್ಕಾಗಿ ವಿಶೇಷವಾಗಿ ಬಳಸಲ್ಪಡುತ್ತಿತ್ತು. ಅರಮನೆ, ಮಹಲು, ದೇವಸ್ಥಾನಗಳಲ್ಲಿ ಅಪೂರ್ವ ಕೆತ್ತನೆ ಕೆಲಸಗಳನ್ನು ಮಾಡುತ್ತಿದ್ದರು.

6ನೆಯ ಶತಮಾನದ ಆದಿಯಲ್ಲೇ ಜಪಾನೀಯರು ಚೀನದವರಿಂದ ಅರಗಿನ ಬಣ್ಣದ ಕೆಲಸವನ್ನು ತಮ್ಮದಾಗಿಸಿಕೊಂಡರು. ಮೊದಲು ಕರಿ ಅರಗಿನ ಬಣ್ಣವನ್ನು ಉಪಯೋಗಿಸುತ್ತಿದ್ದರು. ಅನಂತರ ಕಪ್ಪೆ ಚಿಪ್ಪು ಮತ್ತು ಚಿನ್ನದ ಪುಡಿಗಳನ್ನು ಅಲಂಕರಣದಲ್ಲಿ ಉಪಯೋಗಿಸತೊಡಗಿದರು. ಆಧುನಿಕ ಕಲಾವಿದರು ಎನಾಮಲ್ ಬಳಸುತ್ತಾರೆ.

712ರಲ್ಲಿ ರಚಿತವಾದ 'ಕೊಜ್ಕಿ' ಎಂಬ ಚರಿತ್ರೆ ಪುಸ್ತಕ ಅತ್ಯಂತ ಹಳೆಯ ಪುಸ್ತಕ. ಇದನ್ನು ರಕ್ಷಿಸಿಟ್ಟಿದ್ದಾರೆ. 9, 10, 11ನೆಯ ಶತಮಾನಗಳಲ್ಲಿ ರಾಜ ಆಸ್ಥಾನದಲ್ಲಿ ಸಾಹಿತ್ಯ ಹುಲುಸಾಗಿ ಬೆಳೆಯಿತು. ಶ್ರೀಮಂತರು ಹಾಗೂ ಚಕ್ರವರ್ತಿಯ ಆಸ್ಥಾನದ ಸ್ತ್ರೀಯರು ಪ್ರೇಮಗೀತೆಗಳನ್ನೂ ಭಾವಗೀತೆಗಳನ್ನೂ ಬರೆಯುತ್ತಿದ್ದರು. 'ದಿ ಟೇಲ್ ಆಫ್ ಗೆಂಜಿ' ಈ ಕಾಲದ ಉನ್ನತ ಕೃತಿ. ಇದನ್ನು ಬರೆದಾಕೆ ಚಕ್ರವರ್ತಿನಿಯ ಸಖಿಯಾಗಿದ್ದ ಮುರಸಾಕಿ ಷಿಕಿಬು. ಕಲ್ಪನೆಯ ರಾಜಕುಮಾರನೊಬ್ಬನ ಜೀವಿತ ಇದರಲ್ಲಿ ನಿರೂಪಿತವಾಗಿದೆ. ಇದರಲ್ಲಿ ಆಗಿನ ಕಾಲದ ಶ್ರೀಮಂತರ ಮತ್ತು ಚಕ್ರವರ್ತಿಯ ಆಸ್ಥಾನದ ಜೀವನ ಚಿತ್ರವನ್ನು ಕಾಣಬಹುದು. ಈ ಬೃಹತ್ ಕಾದಂಬರಿ ಜಪಾನೀ ಭಾಷೆಯ ಮಹಾಕಾವ್ಯವೆಂದೂ ಪ್ರಪ್ರಥಮ ಬೃಹತ್ ಕಾದಂಬರಿಯೆಂದೂ ಪರಿಗಣಿತವಾಗಿದೆ. ಈಕೆ 11ನೆಯ ಶತಮಾನದಲ್ಲಿದ್ದವಳು.

13ನೆಯ ಶತಮಾನದ ಆದಿ ಭಾಗದಲ್ಲಿ ಜಪಾನಿನಲ್ಲಿ ಯೋಧವರ್ಗದವರ ಪ್ರಭಾವ ವಿಶೇಷವಾಗಿತ್ತು. ಸಾಹಿತ್ಯ ಜನಜೀವನದ ಕನ್ನಡಿಯಾದ್ದರಿಂದ ಆಗಿನ ಕಾಲದ ಸಾಹಿತ್ಯದಲ್ಲಿ ಯುದ್ಧದ ಕಥೆಗಳೇ ಹೆಚ್ಚು. ಜಪಾನಿನ ಪ್ರಾಚೀನ ನಾಟಕ ಬಗೆಯಾದ 'ನೋ' ನಾಟಕ ಪ್ರಸಿದ್ಧಿ ಪಡೆಯಿತು. ಈ ಶತಮಾನದ ಉತ್ತರಾರ್ಧದಲ್ಲಿ ಕಾದಂಬರಿ, ದೆವ್ವದ ಕಥೆಗಳು, ನಗೆ ಕಥೆಗಳು, ಮುಂತಾದ ಜನಪ್ರಿಯ ಸಾಹಿತ್ಯ ಪ್ರಕಾರಗಳು ಉದಯವಾದುವು. ಪಾಶ್ಚಾತ್ಯ ನಾಗರಿಕತೆಯು ಪ್ರವೇಶವಾದ ಮೇಲೆ ಜಪಾನಿನ ಸಾಹಿತ್ಯವೂ ಪಾಶ್ಚಾತ್ಯ ಸಾಹಿತ್ಯದ ಹಾದಿಯಲ್ಲಿ ನಡೆಯಿತು.

ಇಪ್ಪತ್ತನೆಯ ಶತಮಾನದ ಜಪಾನೀ ಲೇಖಕರಲ್ಲಿ ಯಸುನರಿ ಕವಬಾಟ ಅತ್ಯಂತ ಪ್ರಮುಖ ಲೇಖಕ. ಸಾಂಪ್ರದಾಯಿಕ ದೃಷ್ಟಿಯಿಂದ ಸಮಕಾಲೀನ ಜೀವನವನ್ನು ನೋಡಿ, ಆಕರ್ಷಕ ಕಥಾರೂಪದಲ್ಲಿ ನಿರೂಪಿಸುವ ಇವನ ಜಾಣ್ಮೆ ಅಪೂರ್ವವಾದದ್ದು. 1968ರ ನೊಬೆಲ್ ಬಹುಮಾನ ಇವನಿಗೆ ದೊರೆಯಿತು. ಈ ಶತಮಾನದ ಇತರ ಹಲವು ಪ್ರಮುಖ ಜಪಾನೀ ಲೇಖಕರು, ಟನಿಜ಼ಾಕಿ ಜುನ್-ಇಛಿರೋ, ಕೊಬಾಯಾಷಿ ಟಕಿಜಿ, ಯೋಕೊಮಿಟ್ಸು ರಿಚಿ, ಷಿಗು ನಾಯೊಯ, ಮಿಷಿಮ ಯುಕಿಯೊ, ಮೊದಲಾದವರು.

ಸೂತ್ರದ ಗೊಂಬೆಯಾಟ, ಕಬೂಕಿ ನಾಟಕಗಳು 13ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಆರಂಭವಾದುವು. ನೋ ಮತ್ತು ಕಬೂಕಿ ನಾಟಕಗಳನ್ನು ಇಂದಿಗೂ ಆಡುತ್ತಾರೆ. ಕಬೂಕಿ ನಾಟಕ ಕ್ರಿಯಾಪ್ರಧಾನವಾದದ್ದು. ಅದರಲ್ಲಿ ಚಲನೆಯಿದೆ. 'ರಾಜನಿಷ್ಠರ ಸಂಘ' ಎಂಬ ಕಬೂಕಿ ನಾಟಕ ಊಳಿಗಮಾನ್ಯ ಪದ್ಧತಿಯ ಸ್ವರೂಪವನ್ನೂ ಆಗಿನ ವಾತಾವರಣ ಯಾವ ರೀತಿ ಇತ್ತು ಎಂಬುದನ್ನೂ ತೋರಿಸುವಂಥದು. 'ನೋ' ನಾಟಕಗಳಲ್ಲಿ ದೃಶ್ಯಗಳಿಲ್ಲ ; ಕ್ರಿಯೆಯೂ ಇಲ್ಲ. ಇವು ಹೆಚ್ಚು ಜನಪ್ರಿಯವಾಗಲಿಲ್ಲ.

ಜಪಾನಿನ ಶಾಸ್ತ್ರೀಯ ಸಂಗೀತವೂ ಚೀನದ ಸಂಗೀತದಿಂದ ಪ್ರೇರಿತವಾದದ್ದು. ಮಾಧುರ್ಯ ಹಾಗೂ ಲಯಗಳು ಜಪಾನೀ ಸಂಗೀತದಲ್ಲಿ ಪ್ರಮುಖವಾದುವು. ಪಾಶ್ಚಾತ್ಯ ಪ್ರಭಾವದಿಂದ ಈಗ ಸಿಂಫನಿ, ವಾದ್ಯಮೇಳ, ಜಾಸ್, ನೃತ್ಯ ಸಂಗೀತ ಇವು ಕೂಡ ಈಗ ಜಪಾನಿನಲ್ಲಿ ಪ್ರಚಾರಕ್ಕೆ ಬಂದಿವೆ. ರಾಕ್ ಅಂಡ್ ರೋಲ್ ಸಂಗೀತವೂ ಉಂಟು.

ಜಾಪನಿನ ಕಲೆ ಒಂದು ಮುಖ್ಯ ನಿಟ್ಟಿನಲ್ಲಿ ಪರಿಪೂರ್ಣತೆಯನ್ನು ಸಾಧಿಸುವ ಗುರಿ ಇಟ್ಟುಕೊಂಡಿದೆ. ಇದು ಅದರ ರಾಷ್ಟ್ರೀಯ ಗುಣ.

ನೋಡಿ : ಯಸುನರಿ ಕವಬಾಟ

## ಜರ್ಮನ್ ಕಲೆ, ಸಾಹಿತ್ಯ

ಜರ್ಮನಿ ಯೂರೋಪಿನ ಮಧ್ಯಭಾಗದಲ್ಲಿದೆ. 5ನೆಯ ಶತಮಾನದವರೆಗೆ ಜರ್ಮನಿಯ ಜನರು ಮಧ್ಯ ಮತ್ತು ಉತ್ತರ ಯೂರೋಪಿನ ಇತರ ಅಲೆಮಾರಿ ಜನಾಂಗಗಳಂತೆ ಒಂದು ಸಂಚಾರಿ ಜನಾಂಗವೇ ಆಗಿದ್ದರು. ರೋಮಿನ ಜನರೊಡನೆ ಹೋರಾಡುವುದರಲ್ಲಿ ನಿರತರಾಗಿದ್ದರು. ಕ್ರಿ. ಶ. 410ರಲ್ಲಿ ಅವರು ರೋಮನರನ್ನು ಸಂಪೂರ್ಣವಾಗಿ ಸೋಲಿಸಿದರು. ರೋಮನರನ್ನು ಗೆದ್ದರೂ ಅವರ ಕಲಾವೈಭವಕ್ಕೆ ಮಾರುಹೋದರು. ಅವರ ಶಿಲ್ಪ ವಾಸ್ತುಶಿಲ್ಪ ಫ್ರೆಂಚ್ ಶೈಲಿಗಳನ್ನು ಅನುಕರಿಸಲು ಪ್ರಯತ್ನಿಸಿದರು.

ಆಧುನಿಕ ಫ್ರೆಂಚ್ ಜನಾಂಗದ ಪೂರ್ವಜರಾದ ಫ್ರಾಂಕರು 8ನೆಯ ಶತಮಾನದಲ್ಲಿ ಯೂರೋಪಿನಲ್ಲಿ ಪ್ರಬಲರಾದರು. ಪಶ್ಚಿಮ ಯೂರೋಪಿನ ಅನೇಕ ಭಾಗಗಳನ್ನು ತಮ್ಮ ಆಡಳಿತದ ಬಿಗಿಮುಷ್ಟಿಯಲ್ಲಿ ಹಿಡಿದುಕೊಂಡರು. ಫ್ರಾಂಕರ ಅರಸರ ಕಾಲದಲ್ಲಿ ದಂತದ ಕೆತ್ತನೆ ಕೆಲಸವೂ ಪುಸ್ತಕ ಚಿತ್ರಾಲಂಕಾರವೂ ಜರ್ಮನ್ ಪ್ರದೇಶದ ಪ್ರಮುಖ ಕಲೆಗಳಾಗಿದ್ದುವು. ಬೈಬಲಿನ ಕತೆಗಳನ್ನು ಅಂದವಾದ ಅಕ್ಷರಗಳಲ್ಲಿ ಬರೆದು ಚಿತ್ರಗಳಿಂದ ಅಲಂಕರಿಸುವ ಕಲೆ ಕ್ರೈಸ್ತ ಮಠಗಳಲ್ಲಿ ಬೆಳೆಯಿತು. ಎಂಟನೆಯ ಶತಮಾನದಲ್ಲಿದ್ದ ಫ್ರಾಂಕರ ದೊರೆ ಷಾರ್ಲಮೇನ್ ರೋಮ್, ಬೈಜಾಂಟಿಯನ್ ನಗರಗಳಿಂದ ಶಿಲ್ಪಿಗಳನ್ನೂ

ಕವಿಗಳನ್ನೂ ಜರ್ಮನಿಗೆ ಸ್ವಾಗತಿಸಿ ಅವರಿಗೆ ಪ್ರೋತ್ಸಾಹ ನೀಡಿದ. ಅವನ ಕಾಲದಲ್ಲಿ ಕಟ್ಟಿದ ಅನೇಕ ಕಟ್ಟಡಗಳು ಈಗ ನಾಶವಾಗಿದ್ದರೂ ಬೈಜಾಂಟೈನ್ ಶೈಲಿಯಲ್ಲಿ ರಚಿಸಿರುವ ಕೆಲವು ಕಟ್ಟಡಗಳು ಉಳಿದಿವೆ.

10ನೆಯ ಶತಮಾನದ ಮಧ್ಯಭಾಗದಲ್ಲಿ ಜರ್ಮನಿಯ ಕಲೆ ಸ್ವತಂತ್ರ ಸ್ವರೂಪವನ್ನು ತಳೆಯಿತು. ಜರ್ಮನರ ಗಾಢ ಧಾರ್ಮಿಕ ಶ್ರದ್ಧೆ ಕಲೆಯಲ್ಲಿ ಅಭಿವ್ಯಕ್ತವಾಯಿತು. ನೋವಿನಿಂದ ತಿರುಚಿರುವ ವಿಕಾರವಾದ ಕೆಲವು ಪ್ರತಿಮೆಗಳು ಸಂತರ ಯಾತನೆ ಮತ್ತು ದುಃಖದ ಬದುಕಿನ ಚಿತ್ರಣವನ್ನು ಕೊಡುತ್ತವೆ. ಇದು ಆ ಕಾಲದ ಜರ್ಮನ್ ಕಲೆಯ ವಿಶಿಷ್ಟ ಗುಣ.

ರೋಮನರ ಪ್ರಭಾವಕ್ಕೆ ಒಳಪಟ್ಟ ಕಲೆಯೇ ರೋಮನೆಸ್ಕ್ ಕಲೆ. ಜರ್ಮನಿಯ ಕಲೆಯ ಇತಿಹಾಸದಲ್ಲಿ ರೋಮನೆಸ್ಕ್ ಯುಗ ಒಂದು ಮಹತ್ವದ ಕಾಲ. ಇದು ಪ್ರಾಚೀನ ಸಂಪ್ರದಾಯದ ಕಾಲಕ್ಕೂ ಗಾತಿಕ್ ಶೈಲಿ ಆಚರಣೆಗೆ ಬಂದ ಕಾಲಕ್ಕೂ ನಡುವೆ, ಯೂರೋಪಿನ ಕೆಲವು ಭಾಗ ಗಳಲ್ಲಿ ಪ್ರಚಾರದಲ್ಲಿದ್ದ ಕಟ್ಟಡ ಶೈಲಿ.

ರೈನ್ ನದೀತೀರ ಪ್ರದೇಶ ಜರ್ಮನಿಯ ಪ್ರಮುಖ ವಾಣಿಜ್ಯ ಕೇಂದ್ರ ವಾಗಿತ್ತು. ಅಲ್ಲಿ ವಾಸಿಸುತ್ತಿದ್ದ ಜನ ಲೊಂಬಾರ್ಡಿ ಇಟಲಿ, ಮಿಲಾನ್, ಮುಂತಾದ ನಗರಗಳ ವರ್ತಕರು ಕಲಾವಿದರೊಡನೆ ಸಂಪರ್ಕ ಬೆಳೆಸಿ ದರು. ಈ ನಗರಗಳಲ್ಲಿ ರೋಮನೆಸ್ಕ್ ಶೈಲಿ ಪ್ರಗತಿ ಸಾಧಿಸಿತು. ರೋಮನೆಸ್ಕ್ ಶೈಲಿಯಲ್ಲಿ ನಿರ್ಮಿತವಾದ ಇಗರ್ಜಿಗಳು ವಿಶಾಲವೂ ಭವ್ಯವೂ ಆಗಿದ್ದುವು.

ಗಾತಿಕ್ ಶೈಲಿಯ ಶಿಲ್ಪ ಫ್ರಾನ್ಸ್ ಇಂಗ್ಲೆಂಡ್ ದೇಶಗಳಿಗಿಂತ ಜರ್ಮನಿ ಯಲ್ಲಿ ಸ್ವಲ್ಪ ತಡವಾಗಿ ಆರಂಭವಾಯಿತು. ಜರ್ಮನಿಯ ಜನರ ಅಭಿ ರುಚಿಗೆ ತಕ್ಕುದಾದ ಕಲಾಶೈಲಿಯಾಗಿ ಅದು ಬೆಳೆಯಿತು.

18ನೆಯ ಶತಮಾನದಲ್ಲಿ ಕ್ರೈಸ್ತ ಧಾರ್ಮಿಕ ಸಂಸ್ಥೆಗಳ ಉಸ್ತುವಾರಿ ಯಲ್ಲಿ ಅನೇಕ ಭವ್ಯ ಇಗರ್ಜಿಗಳೂ ಸೌಧಗಳೂ ಜರ್ಮನಿಯಲ್ಲಿ ನಿರ್ಮಾಣ ವಾದುವು. ಬಾರೋಕ್ ಮತ್ತು ರೊಕೋಕೋ ಶೈಲಿಯ ಶಿಲ್ಪ ಈ ಕಾಲ ದಲ್ಲಿ ಅಭಿವೃದ್ಧಿ ಹೊಂದಿತು. ಇಟಲಿ, ಫ್ರಾನ್ಸ್, ಇಂಗ್ಲೆಂಡುಗಳಲ್ಲಿ ನಡೆದ ಸಾಹಿತ್ಯ ಮತ್ತು ಕಲೆಗಳ ನವೋದಯದ ಪ್ರಭಾವ ಜರ್ಮನಿಯಲ್ಲೂ ಕಂಡುಬರಲು ಸುಮಾರು ನೂರು ವರ್ಷ ಬೇಕಾಯಿತು.

ಚಿತ್ರಕಲೆಯಲ್ಲಿ ಜರ್ಮನಿಯ ಕಲಾವಿದರು ವಾಸ್ತವತೆಗೆ ಹೆಚ್ಚಿನ ಮಹತ್ವ ನೀಡಿದರು. ಮಧ್ಯಯುಗದ ಕಿನ್ನರ ಕತೆಗಳಿಂದ ಸ್ಫೂರ್ತಿ ಪಡೆದು ವಿಸ್ಮಯಕಾರಕ ಹಾಗೂ ಭಯಾನಕ ಚಿತ್ರಗಳನ್ನು ರಚಿಸಿದರು. ಚಿತ್ರಕಾರ ಆಲ್‌ಬ್ರೆಕ್ಟ್ ಡ್ಯೂರೆರ್ (1471–1528) ದೇಶ ಸಂಚಾರ ಮಾಡಿ ವಿಪುಲ ಲೋಕಾನುಭವ ಪಡೆದಿದ್ದ. ತನ್ನ ಚಿತ್ರಗಳಲ್ಲಿ ಗಾತಿಕ್ ಮತ್ತು ನವೋದಯ ಕಲೆಯ ಉತ್ತಮ ಅಂಶಗಳನ್ನು ಅಳವಡಿಸಿಕೊಂಡ.

15ನೆಯ ಶತಮಾನದಲ್ಲಿ ಕೊಲೋನ್ ಮತ್ತು ವೆಸ್ಟ್‌ಫೇಲಿಯಾಗಳಲ್ಲಿ ರೂಪುಗೊಂಡ ಚಿತ್ರಕಲಾ ಸಂಪ್ರದಾಯಗಳು ಗಮನೀಯವಾದುವು. ಕೊಲೋನ್ ಚಿತ್ರಕಲಾವಿದರಲ್ಲಿ ಪ್ರಮುಖ ಸ್ಟೀಫನ್ ಲಾಕ್‌ನರ್. ಭಾವಾ ವೇಶ ಮತ್ತು ಗಾಂಭೀರ್ಯ ಅವನ ಚಿತ್ರಗಳಲ್ಲಿ ಎದ್ದುಕಾಣುವ ಲಕ್ಷಣ.

ಇದೇ ಕಾಲದಲ್ಲಿ ನಡೆದ ಮುದ್ರಣ ಯಂತ್ರದ ಶೋಧನೆ ಕಲೆಯ ದೃಷ್ಟಿ ಯಿಂದ ತುಂಬ ಮಹತ್ವದ್ದು. ಮುದ್ರಣಕ್ಕಾಗಿ ಚಿತ್ರಗಳನ್ನು ಕೆತ್ತುವ ಕಲೆ ಬೆಳೆದದ್ದು ಅದರ ಪ್ರಭಾವದಿಂದಲೇ. 16ನೆಯ ಶತಮಾನದಲ್ಲಿ ಹಾನ್ಸ್ ಹೊಲೆಬೀನ್ ಎಂಬಾತ ಶ್ರೇಷ್ಠ ಚಿತ್ರಕಾರನಾಗಿದ್ದ.



ಡ್ಯೂರೆರನ ಕೈಹಿಡಿದ ಹುಡುಗಿ : ಅವಳ ಅರಿವಿಲ್ಲದೆ ರಚಿಸಿದ ಚಿತ್ರ

ಮೊದಲನೆಯ ಮಹಾಯುದ್ಧದ ವೇಳೆ ಜರ್ಮನಿಯಲ್ಲಿ ಕಲೆಯಲ್ಲಿ ಒಂದು ಹೊಸ ಶೈಲಿ ಬೆಳಕಿಗೆ ಬಂತು. ಅದು ಅಭಿವ್ಯಕ್ತಿವಾದ. ಈ ಸಂಪ್ರದಾಯದ ಕಲಾವಿದರ ಕೃತಿಗಳಲ್ಲಿ ವೈಯಕ್ತಿಕ ಭಾವನೆಗಳಿಗೆ ಹೆಚ್ಚಿನ ಪ್ರಾಮುಖ್ಯ. ಈ ಸಂಪ್ರದಾಯ ಜರ್ಮನಿಯಿಂದ ಅಮೆರಿಕ ಬ್ರಿಟನ್ ಗಳಿಗೂ ಹರಡಿತು.

ಸಂಗೀತ ಕಲೆಯಲ್ಲಿ ಜರ್ಮನಿಯದು ಅಸಾಧಾರಣ ಸಾಧನೆ. ಜರ್ಮನಿಯ ಆಪೆರಾಗಳು, ಸಿಂಫನಿ ಸಂಗೀತಗಳು, ಜಗತ್ತಿನಾದ್ಯಂತ ಗೌರವದ ಸ್ಥಾನ ಗಳಿಸಿವೆ. 12 ಮತ್ತು 13ನೆಯ ಶತಮಾನಗಳಲ್ಲಿ ಜಾನಪದ ಸಂಗೀತ ಜರ್ಮನಿಯಲ್ಲಿ ತುಂಬ ಜನಪ್ರಿಯವಾಗಿತ್ತು. ಪ್ರೇಮ ಆ ಗೀತೆಗಳ ಮುಖ್ಯ ವಸ್ತು. ಪ್ರಕೃತಿ ಸೌಂದರ್ಯವನ್ನೂ ಋತುಗಳ ಚೆಲುವನ್ನೂ ವರ್ಣಿಸಿ ಬರೆದ ಹಾಡುಗಳೂ ಇದ್ದುವು. ತಮ್ಮ ಬಿಡುವಿನ ಕಾಲದಲ್ಲಿ ಇಂಥ ಗೀತೆ ಗಳನ್ನು ರಚಿಸಿ, ಹಾಡುವುದು ಜನಸಾಮಾನ್ಯರ ಹವ್ಯಾಸವಾಗಿತ್ತು.

17ನೆಯ ಶತಮಾನದಲ್ಲಿ ಜರ್ಮನಿಯಲ್ಲಿ ಬಾರೋಕ್ ಸಂಗೀತ ಜನ ಪ್ರಿಯತೆ ಗಳಿಸಿತು. ಸೆಬಾಸ್ಟಿಯನ್ ಬಾಕ್, ಜಾರ್ಜ್ ಫ್ರೆಡರಿಕ್ ಹ್ಯಾಂಡೆಲ್ ಇವರ ಕಾಲದಲ್ಲಿ ಬಾರೋಕ್ ಸಂಗೀತ ಪರಾಕಾಷ್ಠೆ ಮುಟ್ಟಿತು. ಸೆಬಾಸ್ಟಿಯನ್ ಬಾಕ್, ಆಪೆರಾ ಒಂದರ ಹೊರತು ಉಳಿದ ಎಲ್ಲ ಬಗೆಯ ಸಂಗೀತ ರಚನೆಯಲ್ಲಿ ಅಪೂರ್ವ ಸಾಧನೆ ನಡೆಸಿದ. ಇದೇ ಕಾಲದಲ್ಲಿ


ಬಾಕ್ ನುಡಿಸುತ್ತಿದ್ದ ಆರ್ಗನ್‌ನ ಕೀಲಿ ಫಲಕ

ಪ್ರಚಾರಕ್ಕೆ ಬಂದ ರೊಕೋಕೋ ಸಂಗೀತ ಜರ್ಮನಿ ಮತ್ತು ಆಸ್ಟ್ರಿಯ ನಗರಗಳಲ್ಲಿ ಅಭಿವೃದ್ಧಿಗೆ ಬಂತು. ಇದು ಲಲಿತವೂ ಉತ್ಸಾಹಪೂರ್ಣವೂ ಆದ ಸಂಗೀತ. ಇಂಥ ಸಂಗೀತದ ರಚನೆಯಲ್ಲಿ ಖ್ಯಾತನಾದವನು ಬಾಕ್‌ನ ಮಗನಾದ ಕಾರ್ಲ್ ಬಾಕ್.

ಪಿಯಾನೋ ಸಂಗೀತ ರಚನೆಗಳನ್ನು ಮಾಡಿದ ಮೊಜಾರ್ಟ್ ಜರ್ಮನಿಯ ಸಂಗೀತ ಕ್ಷೇತ್ರದಲ್ಲಿ ಗಮನಾರ್ಹ ವ್ಯಕ್ತಿ. ಫ್ರಾನ್ಸ್ ಜೋಸೆಫ್ ಹೈಡನ್ ತಂತಿವಾದ್ಯ ಚತುಷ್ಟಯ ವಾದನವನ್ನು ಆಚರಣೆಗೆ ತಂದ. ಇಂಥ ಸಂಗೀತ ಮತ್ತು ಅಪೆರಾಗಳಿಗೆ ಅವನು ರಚಿಸಿದ ಗೇಯ ಕೃತಿಗಳು ಕೂಡ ಗಮನಾರ್ಹವಾದುವು. ಬಿಥೋವನ್ ಜರ್ಮನಿಯ ಸಂಗೀತ ಪ್ರಪಂಚದಲ್ಲಿ ಹೊಸ ದೃಷ್ಟಿಯನ್ನೂ ವೈಭವವನ್ನೂ ತಂದುಕೊಟ್ಟ ಮಹಾಪುರುಷ. ಪಾಶ್ಚಾತ್ಯ ಸಂಗೀತರಂಗದಲ್ಲಿ ಇವನ ಹೆಸರು ಚಿರಸ್ಥಾಯಿಯಾಗಿದೆ.

ವಿಯೆನ್ನಾ ನಗರ ಜರ್ಮನ್ ಸಂಗೀತದ ಒಂದು ಪ್ರಸಿದ್ಧ ಕೇಂದ್ರ. ಇವರ ಸುವರ್ಣಯುಗದ ಕೊನೆಯ ಕಾಲದ ಸುಪ್ರಸಿದ್ಧ ಸಂಗೀತ ಕಲಾವಿದ ಫ್ರಾನ್ಜ್ ಷೂಬರ್ಟ್. ಹಾಡಲು ಮತ್ತು ಪಿಯಾನೋದಲ್ಲಿ ನುಡಿಸಲು ತಕ್ಕ ಗೇಯಕೃತಿಗಳನ್ನು ಇವನು ರಚಿಸಿದ. ಜರ್ಮನಿಯ ರೊಮಾಂಟಿಕ್ ಯುಗದ ಸಂಗೀತದ ಅತ್ಯುತ್ತಮ ಲಕ್ಷಣಗಳು ಅಪೆರಾ ಸಂಗೀತದಲ್ಲಿ ಅಭಿವ್ಯಕ್ತವಾಗಿವೆ. ಜರ್ಮನಿಯ ಪುರಾಣಕಥೆಗಳು ಆಖ್ಯಾಯಿಕೆಯಲ್ಲಿ ಬರುವ ವ್ಯಕ್ತಿಗಳ ಸನ್ನಿವೇಶಗಳು ಅಪೆರಾಗಳ ವಸ್ತು. ರಿಚರ್ಡ್ ವಾಗ್ನರ್ ವಿಖ್ಯಾತ ಅಪೆರಾ ಗೇಯಕಾರ.

ಸುಮಾರು ನೂರು ವರ್ಷಗಳ ಹಿಂದೆ ಜರ್ಮನಿ ಒಂದು ಹೊಸ ರಾಷ್ಟ್ರವಾಗಿ ರೂಪುಗೊಂಡಿತು. ಜರ್ಮನ್ ಭಾಷೆಯನ್ನೇ ಆಡುತ್ತಿದ್ದ ಎರಡು ಪ್ರದೇಶಗಳು —ಆಸ್ಟ್ರಿಯ ಮತ್ತು ಸ್ವಿಟ್ಜರ್‌ಲೆಂಡ್— ಆ ರಾಷ್ಟ್ರದಿಂದ ಹೊರಗೆ ಉಳಿದುಬಿಟ್ಟುವು. ಈ ಎರಡು ದೇಶಗಳಿಗೆ ಸೇರಿದ ಹಲವಾರು ಲೇಖಕರು ಜರ್ಮನ್ ಭಾಷೆಯಲ್ಲೇ ಪ್ರಮುಖ ಕೃತಿಗಳನ್ನು ರಚಿಸಿದ್ದಾರೆ. ಇವರನ್ನೂ ಜರ್ಮನ್ ಲೇಖಕರೆಂದೇ ಪರಿಗಣಿಸಲಾಗುತ್ತದೆ.

ಜರ್ಮನಿಗೆ ಕ್ರೈಸ್ತಧರ್ಮ ಬರಡಿದ್ದು 800ರ ಹೊತ್ತಿಗೆ. ಆ ಕಾಲದ ವರೆಗೆ ಜರ್ಮನಿಯಲ್ಲಿ ಲಿಖಿತರೂಪದ ಸಾಹಿತ್ಯ ಇರಲಿಲ್ಲ. ದೇವತೆಗಳನ್ನು ಕುರಿತ, ರಾಕ್ಷಸರ ವಿರುದ್ಧ ಹೋರಾಡಿದ ವೀರರನ್ನು ಕುರಿತ ಹಾಡುಗಳು ಮಾತ್ರ ರೂಢಿಯಲ್ಲಿದ್ದುವು. 800ರ ವೇಳೆಗೆ ಇಂಥ ಒಂದು ಕಥನ ಕವನ 'ಹಿಲ್ಡ್‌ಬ್ರಾಂಡ್' ಹಾಡು ಲಿಖಿತರೂಪಕ್ಕೆ ಬಂತು. ಬಹು ಕಾಲದಿಂದ ತಂದೆಯನ್ನು ನೋಡದೆ, ಅವನನ್ನು ಮರೆತಿದ್ದ ಮಗ, ತಂದೆಯೊಡನೆಯೇ ಹೋರಾಡುವುದನ್ನು ಈ ಕವನ ಸೊಗಸಾಗಿ ಹೇಳುತ್ತದೆ. ಮುಂದೆ ಸುಮಾರು 1100ರ ವರೆಗಿನ ಜರ್ಮನ್ ಸಾಹಿತ್ಯ ಪ್ರಮುಖವಾಗಿ ಧಾರ್ಮಿಕವಾದದ್ದು. ಇಗರ್ಜಿಗಳಲ್ಲಿ ಹಾಡುವ ಹಾಡುಗಳು, ಬೈಬಲ್‌ನ ಭಾಷಾಂತರಗಳು ಈ ಕಾಲದಲ್ಲಿ ರಚಿತವಾದುವು.

ಇದೇ ಸಮಯದಲ್ಲಿ ಜರ್ಮನಿಯ ಶ್ರೀಮಂತ ಯೋಧರು ಯೂರೊಪಿನ ಹಲವಾರು ಕಡೆ ತಿರುಗಾಡಿ ಅಲ್ಲಿಯ ಕಥೆ, ಸಾಹಿತ್ಯಗಳ ಪರಿಚಯ ಮಾಡಿಕೊಂಡರು. ಗ್ರೀಕರ ಮತ್ತು ರೋಮನರ ಪುರಾಣಕಥೆಗಳು ಅವರನ್ನು ಆಕರ್ಷಿಸಿದುವು. ಫ್ರಾನ್ಸಿನ ಕಥೆಗಳು ಕೂಡ ಇವರ ಮೇಲೆ ಭಾರಿ ಪ್ರಭಾವ ಬೀರಿದುವು. ಜರ್ಮನಿಗೆ ಹಿಂದಿರುಗಿ ಬಂದ ಕೆಲ ಮಂದಿ ಯೋಧರು ತಾವು ಕೇಳಿದ್ದ ಕಥೆಗಳನ್ನು ಜರ್ಮನ್ ಭಾಷೆಯಲ್ಲಿ ಬರೆದರು. ಫ್ರಾನ್ಸಿನ ದಕ್ಷಿಣ ಭಾಗದಲ್ಲಿ ಪ್ರಚಲಿತವಾಗಿದ್ದ, ಪ್ರಕೃತಿ–ಪ್ರಣಯಗಳನ್ನು ಉನ್ನತ ಮಟ್ಟಕ್ಕೇರಿಸಿ ಹೊಗಳಿ ಹಾಡುತ್ತಿದ್ದ ಕಾವ್ಯ ಸಂಪ್ರದಾಯದಿಂದಲೂ ಜರ್ಮನರು, ಪ್ರಭಾವಿತರಾದರು. ಇದರಿಂದ ಜರ್ಮನಿಯಲ್ಲೂ ಪ್ರಣಯ–ಕವನಗಳು ಹುಟ್ಟಿದುವು. ಗಾಟ್‌ಫ್ರೈಡ್ ವಾನ್ ಸ್ಟ್ರಾಸ್‌ಬರ್ಗ್ (13ನೆಯ ಶತಮಾನ), ವಾಲ್‌ಫ್ರಾಮ್ ವಾನ್ ಎಷ್ಕಿನ್‌ಬಾಕ್ (1170—1220?) ಮೊದಲಾದವರು ಪ್ರೇಮ,—ಧೀರೋದಾತ್ತ, ಭಾವನಾಪ್ರಧಾನ ಕವನಗಳನ್ನು ಬರೆದರು. 'ಪ್ರಣಯಕವಿ' ಗಳೆಂದು ಹೆಸರಾಗಿದ್ದ ಕವಿಗಳಲ್ಲಿ ವಾಲ್ಟರ್‌ವಾನ್ ಡರ್ ವಾಗಲ್ ವೈಡ್ (1170 ?–1230 ?) ಅತ್ಯಂತ ಸುಂದರ ಭಾವಗೀತೆಗಳನ್ನು ಬರೆದವನು. ಸುಮಾರು 1180ರಿಂದ 1220ರ ವರೆಗೆ ಬಂದ ಇಂಥ ಬರೆವಣಿಗೆಗಳು ಜರ್ಮನ್ ಸಾಹಿತ್ಯವನ್ನು ಸಮೃದ್ಧಗೊಳಿಸಿದುವು. ಈ ಕಾಲವನ್ನು ಜರ್ಮನ್ ಸಾಹಿತ್ಯದ ಸುವರ್ಣಯುಗವೆಂದು ಕರೆಯುತ್ತಾರೆ.

14—15ನೆಯ ಶತಮಾನಗಳಲ್ಲಿ ಧಾರ್ಮಿಕ ಸಾಹಿತ್ಯ ಪ್ರಮುಖವಾಗಿ ಬೆಳೆಯಿತು. ಕ್ರೈಸ್ತಧರ್ಮ ಸುಧಾರಕನಾದ ಮಾರ್ಟಿನ್ ಲೂಥರ್ (1483—1546) ಬೈಬಲನ್ನು ತನ್ನ ಕಾಲದ ಜರ್ಮನ್ ಭಾಷೆಗೆ ಭಾಷಾಂತರಿಸಿದ.

17ನೆಯ ಶತಮಾನದ ಪೂರ್ವಾರ್ಧದಲ್ಲಿ ನಡೆದ ಮೂವತ್ತು ವರ್ಷಗಳ ಯುದ್ಧ (1618—48) ಜನಜೀವನವನ್ನು ಅಸ್ತವ್ಯಸ್ತಗೊಳಿಸಿತು. ಆದರೆ ರಾಜರು ಮತ್ತಷ್ಟು ಪ್ರಬಲರಾದರು. ಇವರು ಕವಿಗಳಿಗೆ ಲೇಖಕರಿಗೆ ಆಶ್ರಯಕೊಟ್ಟರು. ಆಂಡ್ರಿಯಾಸ್ ಗ್ರೈಫಿಯಸ್ (1616—39) ಬರೆದ ಕಾಮಿಡಿಗಳು, ಹಾನ್ಸ್‌ವಾನ್ ಗ್ರಿಮೆಲ್‌ಶೋಸೆನ್ (1620?—76) ರಚಿಸಿದ 'ಸಿಂಪ್ಲಿ ಸಿಸ್ಸಿಮಸ್' ಕಾದಂಬರಿ ಈ ಕಾಲದ ಪ್ರಮುಖ ಕೃತಿಗಳು.

18ನೆಯ ಶತಮಾನದ ಲೇಖಕನಾದ ಜೊಹ್ಯಾನ್ ಗಾಟ್‌ಸ್ಕೆಡ್ (1700—66) ಬರೆವಣಿಗೆಯಲ್ಲಿ ತರ್ಕಬದ್ಧತೆ, ಔಚಿತ್ಯಗಳನ್ನು ತರಬೇಕೆಂದು ಪ್ರತಿಪಾದಿಸಿದ. ಇಂಥ ಸಾಹಿತ್ಯ ರಚನೆಯಲ್ಲಿ ಅಪೂರ್ವ ಯಶಸ್ಸು ಪಡೆದವನು ಕ್ರಿಶ್ಚನ್ ಗಲರ್ಟ್ (1715—69) ಎಂಬ ಕತೆಗಾರ. ಆದರೆ ಮಿಲ್ಟನನ 'ಪ್ಯಾರಡೈಸ್ ಲಾಸ್ಟ್' ಓದಿದ್ದ ಜೊಹ್ಯಾನ್ ಬಾಡ್ಮರ್ (1698—1783) ಮತ್ತು ಯೊಹಾನ್ ಬ್ರೈಟಿಂಗರ್ (1701—76) ಎಂಬ ಇಬ್ಬರು ಸ್ವಿಸ್ ಲೇಖಕರು ಸಾಹಿತ್ಯದಲ್ಲಿ ಕಲ್ಪನಾಶಕ್ತಿ ಪ್ರಮುಖವೆಂದು ವಾದಿಸಿ ಗಾಟ್‌ಸ್ಕೆಡ್‌ನ ಪ್ರಭಾವವನ್ನು ತಗ್ಗಿಸಿದರು. ಫ್ರೆಡರಿಕ್ ಕ್ಲಾಪ್‌ಸ್ಟಾಕ್ (1724—1803) ಮಿಲ್ಟನನ ಕಾವ್ಯದಿಂದ ಪ್ರಭಾವಿತನಾಗಿ ಕ್ರಿಸ್ತನನ್ನು ಕುರಿತ 'ಮೆಸಿಯ' ಎಂಬ ಮಹಾಕಾವ್ಯವನ್ನು ರಚಿಸಿದ. ಗಾಥಾಲ್ಡ್ ಎಫ್ರೈಮ್ ಲೆಸ್ಸಿಂಗ್ (1729—81) ನೇಕ್



ಜರ್ಮನ್ ನಾಟಕಕಾರ ಷಿಲ್ಲರ್

ಪಿಯರಸಿಂದ ಪ್ರಭಾವಿತನಾದ ಲೇಖಕ. ಇವನ ನಾಟಕಗಳು ಇಂದಿಗೂ ಜರ್ಮನಿಯಲ್ಲಿ ಅಭಿನಯಿಸಲ್ಪಡುತ್ತವೆ.

ಜಾನಪದ ಕಾವ್ಯ ಜನತೆಯ ಆತ್ಮದ ನೇರ ಅಭಿವ್ಯಕ್ತಿ ಎಂದು ನಂಬಿದ್ದ ಯೊಹಾನ್ ವಾನ್ ಹರ್ಡರ್ (1724—1803) 18ನೆಯ ಶತಮಾನದ ಉತ್ತರಾರ್ಧದ ಅತ್ಯಂತ ಪ್ರಭಾವಶಾಲಿ ಲೇಖಕ. ಇವನ ಬರೆವಣಿಗೆಯು ಉತ್ತೇಜಿತರಾದ ಹಲವು ತರುಣ ಲೇಖಕರು ಜರ್ಮನ್ ಸಾಹಿತ್ಯ ರಂಗದಲ್ಲಿ ಕ್ರಾಂತಿ ಎಬ್ಬಿಸಿದರು. ಇವರು ಪ್ರತಿಪಾದಿಸಿದ ಸಂಪ್ರದಾಯಕ್ಕೆ 'ಬಿರುಗಾಳಿ ಮತ್ತು ಒತ್ತಡ' ಎಂದು ಹೆಸರು. ಈ ಪ್ರಪಂಚದಲ್ಲಿ ಒಬ್ಬ ಅಸಾಮಾನ್ಯ ವ್ಯಕ್ತಿ (ಅವನು ಮಹಾ ಧಾರ್ಮಿಕನೇ ಆಗಿರಲಿ ಮಹಾಪಾಪಿಯೇ ಆಗಿರಲಿ) ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು ಸಮಾಜದೊಡನೆ ಭಾರಿ ಹೋರಾಟ ನಡೆಸಬೇಕಾಗುತ್ತದೆ —ಎಂಬುದು ಈ ಪಂಥದವರ ನಂಬಿಕೆ.

ಈ ಸಂಪ್ರದಾಯದಲ್ಲಿ ಬೆಳೆದು ಜರ್ಮನ್ ಸಾಹಿತ್ಯದಲ್ಲೇ ಅತ್ಯುನ್ನತ ಸ್ಥಾನ ಗಳಿಸಿದವ ಗಯಟೆ (1749—1832). ಗಯಟೆಯ ಮಿತ್ರ ಫ್ರೆಡರಿಕ್ ಷಿಲ್ಲರ್ (1759—1805) ಜರ್ಮನ್ ನಾಟಕಕಾರರಲ್ಲಿ ಪ್ರಮುಖ. ಷಿಲ್ಲರ್ ಆದರ್ಶವಾದಿ ; ಆಸೆ–ಕರ್ತವ್ಯಗಳ ನಡುವಿನ ಘರ್ಷಣೆ ಇವನ ಕೃತಿಗಳಲ್ಲಿ ಕಂಡುಬರುತ್ತದೆ.

ಜರ್ಮನ್ ಸಾಹಿತ್ಯದಲ್ಲಿ ರೊಮ್ಯಾಂಟಿಕ್ ಸಂಪ್ರದಾಯ 19ನೆಯ ಶತಮಾನದ ಆದಿಯಿಂದ ಪ್ರಾರಂಭವಾಯಿತು. ನೊವಾಲಿಸ್ (1772–1801)ಬರೆದ ಸುಂದರ ಕವನಗಳು, ಲುಡ್‌ವಿಗ್ ಟೈಕ್ (1773—1853) ಮತ್ತು ಜಾನ್ ಪಾಲ್ ರಿಚರ್ಡ್ (1663—1825) ರಚಿಸಿದ ಕೃತಿಗಳು ರೊಮ್ಯಾಂಟಿಕ್ ಸಂಪ್ರದಾಯದ ಆರಂಭದ ಫಲಗಳು. ನೆಪೋಲಿಯನ್ 1806ರಲ್ಲಿ ಜರ್ಮನಿಗೆ ಸೇರಿದ್ದ ಪ್ರಷ್ಯದ ಮೇಲೆ ದಾಳಿಮಾಡಿದಾಗ ಜರ್ಮನ್ ಕವಿಗಳ ರಾಷ್ಟ್ರೀಯ ಭಾವನೆ ಉತ್ಕಟವಾಯಿತು. ಇದೇ ಸಮಯದಲ್ಲಿ ಜಾನಪದ ಗೀತೆಗಳ ಸಂಗ್ರಹ, ಗ್ರಿಮ್ ಸಹೋದರರ ಕಿನ್ನರಿ ಕಥೆಗಳು ಜನಪ್ರಿಯವಾದುವು. ಆಸ್ಟ್ರಿಯದ ಅತ್ಯಂತ ಪ್ರಮುಖ ನಾಟಕಕಾರ ಫ್ರಾನ್ಸ್ ಗ್ರಿಲ್‌ಪಾರ್ಜರ್‌ನ (1791—1872) ನಾಟಕಗಳಲ್ಲಿ ಭಾವಶೀಲತೆ ಉತ್ಕಟ ಪ್ರಕಟವಾಯಿತು.

ಇದೇ ಶತಮಾನದ ಮಧ್ಯಭಾಗದ ಹೊತ್ತಿಗೆ ಜರ್ಮನಿಯ ರಾಜಕಾರಣದಲ್ಲಿ ಕ್ರಾಂತಿಕಾರಕ ಬದಲಾವಣೆಗಳಾದುವು. ಲೇಖಕರು ಧೈರ್ಯವಾಗಿ ತಮ್ಮ ನಿಲುವನ್ನು ವ್ಯಕ್ತಪಡಿಸಲಾರಂಭಿಸಿದರು. ಹೇನ್ರಿಕ್ ಹೈನ್ (1797—1857 ಪ್ರತಿಭಾವಶಾಲಿಯಾದ ಕವಿ. ಇವನ ಹಾಗೂ ಇವನ ಸಮಕಾಲೀನರ ಬರೆವಣಿಗೆಯಲ್ಲಿ ವಾಸ್ತವಿಕತೆ ಎದ್ದು ಕಾಣುತ್ತದೆ.

ಫ್ರೆಡರಿಕ್ ಹೆಬ್ಬೆಲ್ (1813—63) ಮತ್ತು ಜಾರ್ಜ್ ಬ್ಯೂಕ್‌ನರ (1813—37) ಈ ಕಾಲದ ಪ್ರಮುಖ ನಾಟಕಕಾರರು, ಹಳೆಯ ಚಿಂತನೆ-ಜೀವನಗಳ ನಡುವಿನ ಘರ್ಷಣೆ ದುರಂತಕ್ಕೆ ದಾರಿಮಾಡುವುದನ್ನು ಹೆಬ್ಬೆಲ್ ತನ್ನ ಟ್ರಾಜಿಡಿಗಳಲ್ಲಿ ಚಿತ್ರಿಸಿದ, ಬ್ಯೂಕ್‌ನರನ ಕೆಲವು ನಾಟಕಗಳು ಆಧುನಿಕ ನಾಟಕಗಳಿಗೆ ದಾರಿತೋರಿದುವು. ಗೆರ್‌ಹಾಟ್ ಹಾಫ್ಮನ್ (1872—1946) ಮತ್ತೊಬ್ಬ ಗಮನಾರ್ಹ ನಾಟಕಕಾರ ಹಾಗೂ ಕಾದಂಬರಿಕಾರ.

19ನೆಯ ಶತಮಾನದ ಉತ್ತರಾರ್ಧದಲ್ಲಿ ಗಂಭೀರ ಸಮಸ್ಯೆಗಳನ್ನು ಒಳಗೊಂಡ ಕಾದಂಬರಿಗಳು ಬಂದುವು.

20ನೆಯ ಶತಮಾನದಲ್ಲಿ ಎರಡು ಮಹಾಯುದ್ಧಗಳಿಗೂ ನಾಜಿಗಳ ಕ್ರೂರ ಆಡಳಿತಕ್ಕೂ ಸಿಕ್ಕಿ ಜರ್ಮನ್ ಸಾಹಿತ್ಯ ನರಳಿತು.

ಜಾರ್ಜ್ ಕೈಸರ್(1878—1945), ಅರ್ನೆಸ್ಟ್ ಟಾಲರ್ (1893—1939) ಮೊದಲಾದವರು ಸಾಹಿತ್ಯದಲ್ಲಿ ಅಭಿವ್ಯಕ್ತಿವಾದವನ್ನು ಯಶಸ್ವಿಯಾಗಿ ಸ್ಥಾಪಿಸಿದರು.

ಥಾಮಸ್ ಮಾನ್ (1875—1955), ಫ್ರಾನ್ಸ್ ಕಾಫ್ಕ (1883—1924). ಹರ್ಮನ್ ಹೆಸ್ (1877—1962). ಮತ್ತು ಆಸ್ಟ್ರಿಯದ ರಾಬರ್ಟ್ ಮುಸಿಲ್ (1880—1942) ಈ ಶತಮಾನದ ಅತ್ಯಂತ ಪ್ರಮುಖ ಕಾದಂಬರಿಕಾರರು. ಹರ್ಮನ್ ಬ್ರಾಕ್‌ನ (1886—1951) 'ದಿ ಡೆತ್ ಆಫ್ ವರ್ಜಿಲ್' ಈ ಶತಮಾನದ ತುಂಬ ಅಸಾಮಾನ್ಯ ರೀತಿಯ ಕಾದಂಬರಿ ಎನಿಸಿಕೊಂಡಿದೆ.

ಬರ್ಟಾಲ್ಟ್ ಬ್ರೆಕ್ಟ್ (1898—1956) ಮತ್ತು ಆಸ್ಟ್ರಿಯದ ಹ್ಯೂಗೋ ವಾನ್ ಹಾಫ್‌ಮಾನ್‌ಸ್ಟಲ್ (1874—1929) ಈ ಶತಮಾನದ ನಾಟಕಕಾರರಲ್ಲಿ ಅತ್ಯಂತ ಪ್ರಮುಖರು. ಹಾಫ್‌ಮಾನ್‌ಸ್ಟಲ್ ಪ್ರತಿಭಾವಂತ ಕವಿ ಕೂಡ. ಕವಿಗಳಲ್ಲಿ ರೈನರ್ ಮಾರಿಯ ರಿಲ್ಕೆ (1875—1926). ಸ್ಟೀಫನ್ ಜಾರ್ಜ್ (1868—1933) ಗಮನಾರ್ಹರು.

ದ್ವಿತೀಯ ಮಹಾಯುದ್ಧದ ಅನಂತರ ಪ್ರಖ್ಯಾತರಾದವರು ಕಾದಂಬರಿಕಾರರಾದ ಹೇನ್ರಿಕ್ ಬುಲ್ ಮತ್ತು ಗಂಟರ್ ಗ್ರಾಸ್ (1927—.) ಬುಲ್ 1972ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು.

ನೋಡಿ : ಕಾಫ್ಕ ; ಗಾತಿಕ್ ಕಲೆ ; ಗ್ರಿಮ್ ಸಹೋದರರು ; ಡ್ಯೂರೆರ್ ; ಥಾಮಸ್ ಮಾನ್ ; ಬಾಕ್ ; ಬಾರೋಕ್ ಕಲೆ ; ಬಿಥೋವನ್ ; ಬುಲ್ ; ಬ್ರೆಕ್ಟ್ ; ಮೊಜಾರ್ಟ್ ; ವಾಗ್ನರ್ ; ಶೂಬರ್ಟ್ ; ಶೂಮನ್ ; ಹಾಪ್ಟ್‌ಮನ್ ; ಹೈನೆ

## ಜಯದೇವ

'ಗೀತ ಗೋವಿಂದ' ಸರ್ವರಿಗೂ ಮೆಚ್ಚುಗೆಯಾದ, ವಿದೇಶಗಳಲ್ಲೂ ಪ್ರಖ್ಯಾತವಾಗಿರುವ, ಅನೇಕ ಭಾಷೆಗಳಿಗೆ ಅನುವಾದಗೊಂಡಿರುವ ಶ್ರೇಷ್ಠ ಕೃತಿ. ಇದನ್ನು ರಚಿಸಿದವನು ಜಯದೇವ.

ಈತ 12ನೆಯ ಶತಮಾನದ ಕವಿ. ಕೆಲವು ಚಾರಿತ್ರಿಕ ಗ್ರಂಥಗಳು ಹಾಗೂ ಪ್ರಚಲಿತ ಕಥೆಗಳಿಂದ ಅವನ ಬಗೆಗೆ ಅಷ್ಟಿಷ್ಟು ತಿಳಿದುಬಂದಿದೆ. ಜಯದೇವನೇ ತನ್ನ ಕಾವ್ಯದಲ್ಲಿ ಹೇಳಿಕೊಂಡಿರುವಂತೆ: ಕವಿಯ ತಂದೆ ಭೋಜದೇವ ತಾಯಿ ರಮಾದೇವಿ. ಈಗಿನ ಬಿಹಾರ್, ಬಂಗಾಳದ ಪಶ್ಚಿಮ



ಜಯದೇವ–ಪದ್ಮಾವತಿ

ಹಾಗೂ ಉತ್ಕಲದ ಉತ್ತರ ಭಾಗವನ್ನು ಒಳಗೊಂಡ ವೀರಭೂಮಿ ಪ್ರದೇಶ ಜಯದೇವನ ಕಾರ್ಯಕ್ಷೇತ್ರ. ಅವನು ಹುಟ್ಟಿದ್ದು ಕಿಂದುಬಿಲ್ವ ಎಂಬಲ್ಲಿ. ಚಿಕ್ಕಂದಿನಲ್ಲಿಯೇ ಪಾಂಡಿತ್ಯಗಳಿಸಿದ ಜಯದೇವ, ಊರಹೊರಗೆ ಒಂದು ಗುಡಿಸಿಲಿನಲ್ಲಿ ಭಗವಂತನ ನಾಮಸ್ಮರಣೆ ಮಾಡಿಕೊಂಡು ಕಾಲ ಕಳೆಯ ಲಾರಂಭಿಸಿದ.

ಒಂದು ದಿನ ದೇವಶರ್ಮನೆಂಬ ಒಬ್ಬ ಬ್ರಾಹ್ಮಣ ತನ್ನ ಮಗಳು ಪದ್ಮಾವತಿ ಎಂಬ ಕನ್ಯೆಯನ್ನು ಜಯದೇವನಿಗೆ ವಿವಾಹಮಾಡಿಕೊಡಲು ಬಂದ. ಜಯದೇವ ಮೊದಲು ಈ ಸೂಚನೆಯನ್ನು ನಿರಾಕರಿಸಿದ. ಅನಂತರ ಪದ್ಮಾವತಿಯ ಶ್ರದ್ಧೆ, ಭಕ್ತಿಗಳಿಗೆ ಮನಸೋತು ಅವಳನ್ನು ಮದುವೆಯಾದ. ಜಯದೇವ ಪದ್ಮಾವತಿಯರದು ಅನ್ಯೋನ್ಯವಾದ, ಆದರ್ಶ ದಾಂಪತ್ಯ. ಇಬ್ಬರೂ ನಾಟ್ಯ ಹಾಗೂ ಸಂಗೀತ ಕಲಾ ಕೋವಿದರು. ಚೆಲುವೆಯಾದ ಪದ್ಮಾವತಿಯ ಕಲಾಭಿಜ್ಞತೆ ಜಯದೇವನಲ್ಲಿದ್ದ ಕವಿಚೇತನವನ್ನು ಜಾಗೃತಗೊಳಿಸಿ ಅವನ ಕಾವ್ಯರಚನೆಗೆ ಪ್ರೇರಕವಾಯಿತು. ಹೀಗೆ ಹೊರಹೊಮ್ಮಿದ ಕಾವ್ಯಧಾರೆಯೇ 'ಗೀತ ಗೋವಿಂದ'. ಅವನು ರಚಿಸಿದ ಈ ರಮ್ಯ ಕಾವ್ಯದ ಅರ್ಥ ಭಾವಗಳಿಗೆ ಅನುಗುಣವಾಗಿ ಪದ್ಮಾವತಿ ನರ್ತಿಸುತ್ತಿದ್ದಳು.

ಜಯದೇವ 'ಗೀತ ಗೋವಿಂದ'ದಲ್ಲಿ ಬಳಸಿರುವ ರಾಧಾಕೃಷ್ಣರ ಪ್ರಣಯ ಕಥಾವಸ್ತು 'ಭಾಗವತ' ದಿಂದ ಎತ್ತಿಕೊಂಡುದು. ಆದರೆ ಕವಿ ತನ್ನದೇ ಆದ ಬಗೆಯಲ್ಲಿ ಆ ಮೂಲವಸ್ತುವನ್ನು ಬಳಸಿದ್ದಾನೆ. ಭಾಗವತದಲ್ಲಿ ಇತರರಂತೆ ರಾಧೆಯೂ ಒಬ್ಬ ಗೋಪಿಕೆ. 'ಗೀತ ಗೋವಿಂದ'ದಲ್ಲಿ ಕೃಷ್ಣನ ಪ್ರೀತಿಗೆ ಅವಳೇ ಒಡತಿ. ಹೀಗೆ ರಾಧೆ 'ಗೀತ ಗೋವಿಂದ'ದ ನಾಯಿಕೆ.

ಮೇಲು ನೋಟಕ್ಕೆ 'ಗೀತ ಗೋವಿಂದ' ಶೃಂಗಾರಕಾವ್ಯವಾಗಿ ಕಂಡರೂ ಕೇವಲ ಕಾಮ ಅಥವಾ ಸಾಮಾನ್ಯ ಪ್ರೇಮದ ನಿರೂಪಣೆಯೇ ಕವಿಯ ಉದ್ದೇಶವಾಗಿಲ್ಲ. ಜೀವನದ ಇತರ ಸುಖ ಸೌಕರ್ಯಗಳನ್ನೆಲ್ಲ ನಿರಾಕರಿಸಿ ಕೃಷ್ಣನೆಡೆಗೆ ಸಾರುವ ನಾಯಿಕೆ ರಾಧೆ. ಜಗತ್ತಿಗೆ ಸಂಬಂಧಿಸಿದ್ದೆಲ್ಲವನ್ನೂ ತ್ಯಾಗಮಾಡಿ ಪರಮಾತ್ಮನಲ್ಲಿ ಸೇರಿಕೊಳ್ಳಲು ಹಾರೈಸುವ ಆತ್ಮದ ಕಾವ್ಯಮಯ ಸಂಕೇತ. ಕವಿ ತನ್ನ ಕಾವ್ಯದಲ್ಲಿ ಈ ಅರ್ಪಣಭಾವವನ್ನು ಅಲ್ಲಲ್ಲಿ ಸೂಚಿಸಿಕೊಂಡೇ ಹೋಗಿದ್ದಾನೆ.

ತನ್ನ ಕಾವ್ಯವನ್ನು ಕವಿ ಒಪ್ಪಿಸಿರುವುದು ಪರಿಸ್ಮರಣೆಯ ಅಭಿಲಾಷೆ ಇದ್ದವರಿಗೆ 'ಗೀತ ಗೋವಿಂದ'ದಲ್ಲಿ 24 ಅಷ್ಟಪದಿಗಳಿವೆ. ಅವನ್ನು ಹಾಡುವ ಹಾಗೂ ನಾಟ್ಯರೂಪದಲ್ಲಿ ಅಭಿನಯಿಸುವ ಪದ್ಧತಿ ಇಂದಿಗೂ ಉಳಿದಿದೆ.

ಬಂಗಾಳದ ನವದ್ವೀಪದ ರಾಜನಾಗಿದ್ದ ಲಕ್ಷ್ಮಣಸೇನನ ಆಸ್ಥಾನದಲ್ಲಿ ಜಯದೇವ ಮಹಾಕವಿಯಾಗಿದ್ದ. ಅವನು ಕಡೆಗಾಲದಲ್ಲಿ ಎಲ್ಲಿದ್ದನೆಂಬ ಬಗೆಗೆ ಒಮ್ಮತವಿಲ್ಲ. ಕಿಂದುಬಿಲ್ವದಲ್ಲಿದ್ದನೆಂದೂ, ಬೃಂದಾವನದಲ್ಲಿದ್ದನೆಂದೂ ಕಾಶಿ ಕ್ಷೇತ್ರದಲ್ಲಿ ಇರುತ್ತಿದ್ದನೆಂದೂ ವಿವಿಧ ಅಭಿಪ್ರಾಯಗಳಿವೆ. 1153ನೆಯ ಡಿಸೆಂಬರ್ 28ರಂದು ಪರಲೋಕವಾಸಿಯಾದನೆಂದು ಒಂದು ದಾಖಲೆ ತಿಳಿಸುತ್ತದೆ. ಮಕರಸಂಕ್ರಾಂತಿಯಂದು ಕಿಂದುಬಿಲ್ವದಲ್ಲಿ 'ಜಯದೇವಗೋಸ್ವಾಮಿ' ಮಹೋತ್ಸವ ನಡೆಯುತ್ತದೆ. ರಾಧಾಮಾಧವರ ವಿಲಾಸಗಳ ಬಗೆಗೆ ಜನ ಹಾಡಿ ತಣಿಯುತ್ತಾರೆ. ಈ ಪದ್ಧತಿಯ ಆಧಾರದಿಂದ ಅವನು ತನ್ನ ಕೊನೆಗಾಲದಲ್ಲಿ ಕಿಂದುಬಿಲ್ವದಲ್ಲಿದ್ದ ಎನ್ನಬಹುದು.

ಪುರಿ ಜಗನ್ನಾಥ ದೇವಾಲಯದಲ್ಲಿ ಪೂಜಾ ಸಮಯದಲ್ಲಿ ಪ್ರತಿ ದಿನವೂ ಜಯದೇವನ ಒಂದೆರಡು ಅಷ್ಟಪದಿಗಳನ್ನು ಹಾಡುವ ಪದ್ಧತಿಯೂ ಇದೆ.

ಜಯದೇವನನ್ನು ಕುರಿತು ಹಲವಾರು ದಂತಕಥೆಗಳಿವೆ. ಅವನಿಗೆ ಶ್ರೀಕೃಷ್ಣನ ಸಾಕ್ಷಾತ್ಕಾರವಾಗಿತ್ತೆಂಬುದು ಒಂದು ಕಥೆ. ಅವನ ಕಾವ್ಯ ಹಾಗೂ ಕವಿ ಲಕ್ಷ್ಮಣಸೇನನ ಕಾವ್ಯಗಳಲ್ಲಿ ಯಾವುದು ಉತ್ತಮವೆಂದು ಪರೀಕ್ಷಿಸಲು ಒಮ್ಮೆ ಎರಡು ಪ್ರತಿಗಳನ್ನು ದೇವರ ಸನ್ನಿಧಿಯಲ್ಲಿ ಇಟ್ಟ



'ಗೀತಗೋವಿಂದ' :
ಜಾರ್ಜ್ ಕಿಯೆತ್ ಚಿತ್ರ

ರೆಂದೂ ಬೆಳಗಾಗುವ ವೇಳೆಗೆ ಜಯದೇವನ ಕಾವ್ಯ ದೇವಮೂರ್ತಿಯ ಕೈಯಲ್ಲಿ ಇದ್ದಿತೆಂದೂ ಇನ್ನೊಂದು ಕಥೆ.

೮00 ವರ್ಷಗಳಾದರೂ ಜಯದೇವನ ಕಾವ್ಯಮಾಧುರ್ಯ ಮೊದಲಿನಂತೆಯೇ ಇದೆ.

## ಜಲವರ್ಣ ಚಿತ್ರ

ಸುಂದರವಾದ ಪ್ರಕೃತಿ ದೃಶ್ಯ ; ತಿಳಿನೀಲ ಆಗಸ; ಹಲವು ಛಾಯೆಯ ಹಸಿರಿನಿಂದ ಶೋಭಿಸುವ ಗಿಡಮರಗಳು ; ಗುಂಪು ಗುಂಪಾಗಿ ತೇಲುವ ಮೋಡಗಳು —ಇಂಥ ನೋಟವನ್ನು ಪರಿಣಾಮಕಾರಿಯಾಗಿ ಮೂಡಿಸಲು ಜಲವರ್ಣ ಸೂಕ್ತ ಮಾಧ್ಯಮ.

1750–1850ರ ಅವಧಿಯಲ್ಲಿ ಭೂದೃಶ್ಯ ಚಿತ್ರ ಮೂಡಿಸುವ ಆಸಕ್ತಿ ಇಂಗ್ಲೆಂಡಿನಲ್ಲಿ ಹೆಚ್ಚಿತು. ಪ್ರಕೃತಿಯ ನೂರಾರು ಭಾವಗಳನ್ನು ಚಿತ್ರದಲ್ಲಿ ಸೆರೆಹಿಡಿಯಲು ಆಂಗ್ಲ ಕಲಾವಿದರು ಜಲವರ್ಣವನ್ನು ಧಾರಾಳವಾಗಿ ಬಳಸಿದರು.

ಹೀಗೆ ತನ್ನ ಬಹುಪಾಲು ಚಿತ್ರಗಳಿಗೆ ಜಲವರ್ಣವನ್ನು ಉಪಯೋಗಿಸಿದವರಲ್ಲಿ ಮೊದಲಿಗ ಪಾಲ್ ಸ್ಯಾಂಡ್‌ಬಿ (1725–1809). ಅನಂತರ ಅನೇಕರು ಅವನನ್ನು ಅನುಕರಿಸಿದರು. ಜಲವರ್ಣ ಚಿತ್ರಣ. ಗ್ರಾಮೀಣ ನೋಟಗಳಿಂದ ಆಲ್ಪ್ಸ್ ಪರ್ವತದ ಹಿನ್ನೆಲೆಯ ರಮ್ಯದೃಶ್ಯಗಳ ಕಡೆಗೆ ಸರಿಯಿತು. ವಿಡಂಬನಾತ್ಮಕ ಹಾಗೂ ನಿಗೂಢ ಮತ್ತು ಸಾಂಕೇತಿಕ ಚಿತ್ರಗಳಿಗೂ ಜಲವರ್ಣ ಬಳಸಲ್ಪಟ್ಟಿತು.

ವಿಲಿಯಂ ಬ್ಲೇಕ್, ಜಾನ್ ಕೋಜೆನ್ಸ್, ಜೋಸೆಫ್ ಟರ್ನರ್ ಇವರು ಇಂಗ್ಲೆಂಡಿನ ಹೆಸರಾಂತ ಜಲವರ್ಣ ಚಿತ್ರಕಾರರು. ಆ ಕಾಲದಲ್ಲಿ ಹಾಲೆಂಡ್, ಫ್ರಾನ್ಸ್, ಇಟಲಿ ಮುಂತಾದ ಯೂರೋಪಿನ ಇತರ ದೇಶಗಳಲ್ಲಿಯೂ ಕಲಾವಿದರು ಜಲವರ್ಣ ಚಿತ್ರಗಳನ್ನು ಬರೆಯುತ್ತಿದ್ದರು. 19ನೆಯ ಶತಮಾನದ ಉತ್ತರಾರ್ಧದ ವೇಳೆಗೆ ಜಲವರ್ಣ ಚಿತ್ರಗಳಿಗೆ ಮನ್ನಣೆ ದೊರೆಯಲಾರಂಭಿಸಿತು.

ಭಾರತದಲ್ಲಿ ಅಬನೀಂದ್ರನಾಥ ಠಾಕೂರ. ನಂದಾಲಾಲ್ ಬಸು. ಪ್ರಮೋದಕುಮಾರ ಚಟರ್ಜಿ, ಕೆ. ವೆಂಕಟಪ್ಪ ಮತ್ತಿತರರು ಜಲವರ್ಣವನ್ನು ಯಶಸ್ವಿಯಾಗಿ ಬಳಸಿದವರಲ್ಲಿ ಪ್ರಮುಖರು.

ಅಭಿವ್ಯಕ್ತಿವಾದಿ ಕಲಾವಿದರು, ಸಮಷ್ಟಿಪರಿಣಾಮವಾದಿಗಳು. ಇವರ ಅನಂತರದವರು. ಅಮೂರ್ತಕಲೆ–ಘನಾಕೃತಿ ಕಲೆಗಳ ಪ್ರತಿಪಾದಕರು ಜಲವರ್ಣವನ್ನು ತಮ್ಮ ದೃಷ್ಟಿಗೆ ಅನುಗುಣವಾಗಿ ವಿಶಿಷ್ಟ ಅಭಿವ್ಯಕ್ತಿಗಾಗಿಯೇ ಬಳಸಿದ್ದಾರೆ.

ಜಲವರ್ಣ, ಸಾಮಾನ್ಯವಾಗಿ ಅರೇಬಿಯದ ಗೋಂದಿನೊಡನೆ ಅರೆದ ವರ್ಣದ್ರವ್ಯ. ನೀರು ಹಾಗೂ ಕುಂಚಗಳ ನೆರವಿನಿಂದ ಒಂದು ಹಾಸಿನ ಮೇಲೆ ಈ ಬಣ್ಣವನ್ನು ಹಾಕುತ್ತಾರೆ. ಸಾಮಾನ್ಯ ಬಳಕೆಯ ಇಂಥ ಹಾಸು –ಕಾಗದ. ಆದರೆ ಬಹಳ ಹಿಂದಿನ ಕಾಲದಿಂದಲೂ ಚೀನ ಹಾಗೂ ಜಪಾನುಗಳಲ್ಲಿ —ಭಾರತದಲ್ಲೂ— ರೇಷ್ಮೆಬಟ್ಟೆಯನ್ನು ಹಾಸಾಗಿ ಬಳಸಿದ್ದುಂಟು.

ಬಿಲ್ಲೆಗಳ ರೂಪದಲ್ಲಿಯೂ ಟ್ಯೂಬುಗಳಲ್ಲಿಯೂ ಈ ಬಣ್ಣವನ್ನು ಪಡೆಯಬಹುದು. ಇದನ್ನು ತೇವಗೊಳಿಸಿ ತೀಡಿದಾಗ ನೀರಿನಲ್ಲಿ ಬಣ್ಣ ಕರಗುತ್ತದೆ. ಅದನ್ನು ಹಾಸಿನ ಮೇಲೆ ಕುಂಚದಿಂದ ಲೇಪಿಸಿದಾಗ ಅದು ತೆಳುವಾದ ಪಾರದರ್ಶಕ ಪದರವಾಗಿ ಮಾಡುತ್ತದೆ. ಈ ಪದರದ [illegible]ಯಿಂದ ಕಾಗದದ ಬಿಳುಪು ಪ್ರತಿಫಲಿತವಾದಾಗ ಜಲವರ್ಣದ ವಿಶಿಷ್ಟ ಗುಣ ತೋರುತ್ತದೆ. ಬಣ್ಣದ ಮೇಲೆ ಮೇಲೆ ಛಾಯೆಗಳನ್ನು ದಟ್ಟ ಪದರವಾಗಿ ಬಳಿದಾಗ ಜಲವರ್ಣದ ಕಾಂತಿ, ಹೊಳಪು ಒಡೆದು ಕಾಣುತ್ತವೆ. ಬಣ್ಣದಲ್ಲಿ ಇಂಥ ಪಾರದರ್ಶಕತೆ ಬೇಕಿಲ್ಲದಿದ್ದರೆ ಒಂದು ಬಗೆಯ ಬಿಳಿಯ ವರ್ಣ ಪದಾರ್ಥವನ್ನು ಸೇರಿಸಿ ಅದನ್ನು ಬಳಿದು ಚಿತ್ರ ಅಪಾರದರ್ಶಕವಾಗುವಂತೆ ಮಾಡಬಹುದು.

ಅಜಂತದ ಭಿತ್ತಿಚಿತ್ರಗಳೂ ಇಟಲಿಯ ಹಳೆಯ ಭಿತ್ತಿಚಿತ್ರಗಳೂ ಟೆಂಪೆರ ವಿಧಾನದ ಚಿತ್ರಗಳೂ ಜಲವರ್ಣ ಚಿತ್ರಕಲೆಗೆ ಸಂಬಂಧಪಟ್ಟಿವೆ. ಆದ್ದರಿಂದ ಒಂದು ದೃಷ್ಟಿಯಲ್ಲಿ ಆಧುನಿಕ ಜಲವರ್ಣ ಚಿತ್ರಕಲೆ ಕೇವಲ 2–3ನೆಯ ಶತಮಾನಗಳಷ್ಟು ಹಿಂದಿನದಾದರೂ ವಾಸ್ತವವಾಗಿ ಅದು ಬಹಳ ಕಾಲದಿಂದ ನಡೆದುಬಂದದ್ದು ಎಂದು ಹೇಳಬಹುದು. 1940ರಿಂದ ಈಚೆಗೆ ಜಲವರ್ಣಕಲೆ ಮತ್ತೆ ಪುಷ್ಟಗೊಂಡಿದೆ. ಕಲಾವಿದರು ಸಾಂಪ್ರದಾಯಿಕ ರೀತಿಗಳನ್ನು ತೊರೆದು ಮಸಿ, ಪೆನ್ಸಿಲ್, ಕ್ರೇಯನ್, ಅಪಾರದರ್ಶಕ ಬಿಳಿ ಹಾಗೂ ಬಣ್ಣದ ಬಳಪಗಳನ್ನು ತಯಾರಿಸಲು ಬಳಸುವ ಪದಾರ್ಥ ಇವೆಲ್ಲವನ್ನೂ ಜಲವರ್ಣದೊಡನೆ ಬೆರೆಸಿ ಬಳಸುತ್ತಾರೆ. ನೀರು ಬೆರೆಸಿದಂತೆ ಜಲವರ್ಣದ ಗಾಢತೆ ಯಾವ ರೀತಿ ದುರ್ಬಲಗೊಳುತ್ತದೆ ಮತ್ತು ತೇವವಿದ್ದಾಗ ಎಷ್ಟು ಉಜ್ವಲವಾಗಿರುತ್ತದೆ, ಒಣಗಿದಾಗ ಈ ಅಂಶಗಳು ಎಷ್ಟು ಬದಲಾಗುತ್ತವೆ ಮುಂತಾದವನ್ನೆಲ್ಲ ಜಲವರ್ಣ ಚಿತ್ರಕಾರ ಅನುಭವದಿಂದ ತಿಳಿದುಕೊಳ್ಳಬೇಕಾಗುತ್ತದೆ. ಜಲವರ್ಣ ಚಿತ್ರವನ್ನು ಯಶಸ್ವಿಯಾಗಿ ರಚಿಸಬೇಕಾದರೆ ಈ ತಿಳಿವಳಿಕೆ ಅಗತ್ಯ. ಒಂದು ಬಣ್ಣ ಬಳಿದು ಅದರ ಮೇಲೆ ಮತ್ತೊಂದು ಬಣ್ಣ ಬಳಿಯಬೇಕಾದರೆ ನಡುವೆ ಎಷ್ಟು ಹೊತ್ತು ಬಿಡಬೇಕು ಎಂಬುದೂ ಅನುಭವದಿಂದ ಕಲಿಯಬೇಕಾದ ವಿಷಯ. ಮೊದಲು ಹಾಕಿದ ಬಣ್ಣ ಇನ್ನೂ ಹಸಿಯಾಗಿದ್ದರೆ ಆಗ ಅದು ಅನಂತರ ಬಳಿದ ಬಣ್ಣದೊಡನೆ ಸಂಪೂರ್ಣವಾಗಿ ಸೇರಿಕೊಳ್ಳುತ್ತದೆ. ತೇವ ಕಡಮೆಯಾಗಿದ್ದರೆ ಅಂಚಿನಲ್ಲಿ ಬಣ್ಣಗಳು ಅಷ್ಟು ಚೆನ್ನಾಗಿ ಸೇರಿಕೊಳ್ಳುವುದಿಲ್ಲ ; ಪೂರ್ಣವಾಗಿ ಒಣಗಿದ್ದರೆ ಎರಡನೆಯ ಬಣ್ಣ ಸ್ಫುಟವಾಗಿ. ಎದ್ದು ತೋರುತ್ತದೆ. ವಿಸ್ತಾರವಾಗಿ ಒಂದೇ ಸಮನಾಗಿ ಜಲವರ್ಣ ಹಾಕಬೇಕಿದ್ದರೆ, ಕೂರ್ಚಗಳ ಗೊಂಚಲು ಚಪ್ಪಟೆಯಾಗಿ ದಪ್ಪವಾಗಿರುವ ಕುಂಚದಿಂದ ಬೇಗಬೇಗ ಬಣ್ಣ ಬಳಿಯಬೇಕು. ತಿಳಿಯಿಂದ ಹಿಡಿದು ಕಡುಪಾದ ಬಣ್ಣದ ಛಾಯೆ ಬರಿಸಬೇಕಾದರೆ ಒಡಲಿನಲ್ಲಿ ತಿಳಿ ಬಣ್ಣ ಬರಬೇಕಾದೆಡೆಯಿಂದ ಆರಂಭಮಾಡಿಕೊಳ್ಳಬೇಕು. ಕ್ರಮೇಣ ಛಾಯೆಯ ಗಾಢತೆಯನ್ನು ಹೆಚ್ಚಿಸಬೇಕು.

ಒರಟಾದ ಮೇಲ್ಮೈಯ ಕಾಗದದ ಮೇಲೆ ಸ್ವಲ್ಪ ನೀರು ಸೋರಿಸಿ ಅದರ ಮೇಲೆ ಬಣ್ಣವನ್ನು ಬಳಿಯುವುದರಿಂದ ಬಗೆಬಗೆಯ ಮೇಲ್ಮೈ ಪರಿಣಾಮಗಳನ್ನು ಉಂಟುಮಾಡಬಹುದು.

ಜಲವರ್ಣವನ್ನು ಸುಮಾರು ಎಲ್ಲ ಬಗೆಯ ಕಾಗದಗಳ ಮೇಲೆ ಬಳಿಯಬಹುದು. ಇದಕ್ಕಾಗಿಯೇ ತಯಾರಾಗುವ ವಿಶಿಷ್ಟ ಕಾಗದದಲ್ಲಿ ಜಲವರ್ಣ ಉತ್ತಮ ಪರಿಣಾಮಗಳನ್ನು ಕೊಡುತ್ತದೆ.

ಜಲವರ್ಣ ಬಳಿಯುವುದರಲ್ಲಿ ಹಲವಾರು ವಿಧಾನಗಳಿವೆ. ಇದು ಕಲಾವಿದನ ವೈಯುಕ್ತಿಕ ಅಭಿರುಚಿಯನ್ನು ಅವಲಂಬಿಸಿದೆ.

## ಜಾಕ್ ಲಂಡನ್

'ದಿ ಕಾಲ್ ಆಫ್ ದಿ ವೈಲ್ಡ್'— ಒಂದು ಕಾದಂಬರಿಯ ಹೆಸರು. [illegible] ಬಕ್ ಎಂಬ ನಾಯಿ. ಕ್ಯಾಲಿಫೋರ್ನಿಯಾದ ತೋಟ ಒಂದರಲ್ಲಿ ಆರಂಭವಾದ ಅದರ ಬದುಕು, ತೋಳಗಳ ಮಂದೆಯೊಂದರ ನಾಯಕತ್ವ ವಹಿಸಿ ಹಿಮಾಚ್ಛಾದಿತ ಉತ್ತರ ಪ್ರದೇಶಕ್ಕೆ ಹೋಗುವುದರೊಡನೆ ಮುಕ್ತಾಯಗೊಳ್ಳುತ್ತದೆ. ಈ ಅಂತರದಲ್ಲಿ ನಾಯಿಗೆ ಹಲವಾರು ಮಂದಿ ಯಜಮಾನರಾಗುತ್ತಾರೆ. ಅವರಲ್ಲಿ ಕೊನೆಯವನೂ ಉತ್ತಮ ಮಾಲಿಕನೂ ಆಗಿದ್ದ ಜಾನ್ ಥಾರ್ನ್‌ಟನ್ ಕಾದಂಬರಿಯ ಪ್ರಮುಖ ವ್ಯಕ್ತಿ. ಸ್ಪಿಟ್ಸ್ ಎಂಬ ನಾಯಿಯೊಡನೆ ಬಕ್ ಕಾದಾಡಿದಾಗ, ಸ್ಪಿಟ್ಸ್ ಮರಣಹೊಂದುತ್ತದೆ. ನಾಗರಿಕ ಜೀವನ ನಡೆಸುತ್ತಿರುವ ಮಾನವನ ಅಂತರಂಗದಲ್ಲಿ ತುಂಬಿರುವುದು ಅನಾಗರಿಕ ಆಲೋಚನೆಗಳು ಎನ್ನುವ ಗೂಢಾರ್ಥ ಈ ಕೃತಿಯಲ್ಲಿ ಅಡಗಿದೆ. ರೋಗಗಳಂತೆ ಗುಣಗಳೂ ಅನುವಂಶಿಕವಾಗಿ ಹರಿದು ಬರುವುದೆಂಬುದು ಈ ಕಾದಂಬರಿಯ ಕರ್ತೃ ಜಾಕ್ ಲಂಡನ್‌ನ ನಂಬಿಕೆ. ಅವನ ಒಲವು ಸಮಾಜವಾದದ ಕಡೆಗೆ. ಇವನ್ನು ಮೇಳೈಸಿಕೊಂಡು ಆತ ಕಾದಂಬರಿಗಳನ್ನು ಬರೆದಿದ್ದಾನೆ.

ಜಾಕ್ ಲಂಡನ್ ಅಮೆರಿಕದ ಖ್ಯಾತ ಬರೆಹಗಾರ.

ಸಾಹಸಗಳಿಂದಲೂ ಅಸಾಧಾರಣ ಘಟನೆಗಳಿಂದಲೂ ಕೂಡಿದ್ದು, ಜಾಕ್ ಲಂಡನನ ಜೀವನ. ಆತ ಬರೆದ ಕಥೆ ಕಾದಂಬರಿಗಳಲ್ಲಿ ಅವು ನುಸುಳಿಬಂದಿವೆ. 'ಟೈಫೂನ್ ಆಫ್ ದಿ ಕೋಸ್ಟ್ ಆಫ್ ಜಪಾನ್' ಮುದ್ರಣ ಕಂಡ ಅವನ ಮೊದಲ ಕಥೆ. ಕಳ್ಳತನದಲ್ಲಿ ಮುತ್ತಿನ ಚಿಪ್ಪುಗಳನ್ನು ತೆಗೆಯಲು ಜಪಾನಿನವರೆಗೂ ಜಾಕ್ ಸಮುದ್ರಯಾನ ಮಾಡಿ ಬಂದಿದ್ದ. ಅಲ್ಲಿನ ತನ್ನ ಅನುಭವಗಳನ್ನು ಈ ಕಥೆಯಲ್ಲಿ ಹೇಳಿದ್ದಾನೆ. 'ಮಾರ್ಟಿನ್ ಈಡನ್' ಹಾಗೂ 'ಜಾನ್ ಬಾರ್ಲಿಕಾರ್ನ್'ಗಳು ಅವನ ಆತ್ಮಕಥಾವಲಂಬಿತ ಕಾದಂಬರಿಗಳು. 1893ರಲ್ಲಿ ಜಪಾನಿನ ಹತ್ತಿರ ನಡೆದ ತುಫಾನಿನ ಕುರಿತು ಜಾಕ್ ಬರೆದ ಅಮೋಘ ಪ್ರಬಂಧಕ್ಕೆ ಒಂದು ವೃತ್ತ ಪತ್ರಿಕೆಯ ಬಹುಮಾನ ದೊರೆಯಿತು.

ಬದುಕಿನ ಹೋರಾಟ : ಲಂಡನ್

1896ರಲ್ಲಿ ಅಲಾಸ್ಕದ ಕ್ಲಾನ್‌ಡೈಕ್ ಪ್ರದೇಶದಲ್ಲಿ ಚಿನ್ನವಿರುವುದು ಪತ್ತೆಯಾಗಿತ್ತು. ಜಾಕ್ ಲಂಡನ್ 1897ರಲ್ಲಿ ಅಲ್ಲಿಗೆ ಹೋಗಿ ಒಂದು ಚಳಿಗಾಲವನ್ನು ಅಲ್ಲಿ ಕಳೆದ. 'ದಿ ಕಾಲ್ ಆಫ್ ದಿ ವೈಲ್ಡ್' ಎಂಬ ಕಾದಂಬರಿಯನ್ನು 1903ರಲ್ಲಿ ಬರೆದ. ಈ ಕಾದಂಬರಿ ಆತನಿಗೆ ಕೀರ್ತಿ ತಂದಿತು.

1900ರಲ್ಲಿ 'ದಿ ಸನ್ ಆಫ್ ದಿ ವುಲ್ಫ್' ಕಥಾ ಸಂಕಲನ ಪ್ರಕಟವಾಯಿತು. ಮುಂದಿನ 16 ವರ್ಷಗಳಲ್ಲಿ ಜಾಕ್ 43 ಪುಸ್ತಕಗಳನ್ನು ಹೊರತಂದ. ಅವುಗಳಲ್ಲಿ ಕಾದಂಬರಿಗಳು, ಸಣ್ಣ ಕಥೆಗಳು, ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತಾದ ವಿಚಾರಾತ್ಮಕ ಲೇಖನಗಳು, ಪ್ರಬಂಧಗಳು, ಆತ್ಮಕಥೆ ಎಲ್ಲ ಇವೆ. ಆತನ ಮುಖ್ಯ ಕೃತಿಗಳು 'ಸೀ ವುಲ್ಫ್', 'ದಿ ಗೇಮ್', 'ಬಿಫೋರ್ ಆಡಂ', 'ಬರ್ನಿಂಗ್ ಡೇ ಲೈಟ್' ಮತ್ತು 'ವೈಟ್ ಫ್ಯಾಂಗ್'.

ಜಾಕ್ ಪ್ರಭಾವಶಾಲಿ ಗದ್ಯವನ್ನು ಬರೆದ ಶ್ರೇಷ್ಠ ಸಾಹಿತಿ ; 1913ರ ವೇಳೆಗೆ ವಿಶ್ವದ ಅತ್ಯಂತ ಜನಪ್ರಿಯ ಲೇಖಕ ಎನಿಸಿಕೊಂಡಿದ್ದ. ಆಗಿನ ಕಾಲದ ಜನರ ಆಕಾಂಕ್ಷೆಗಳು, ಮನಸ್ಸಿನ ಕಳವಳಗಳು, ಆಶಾಭಂಗಗಳು ಹಾಗೂ ರಮ್ಯ ಭಾವನೆಗಳನ್ನು ಜಾಕ್ ತನ್ನ ಕೃತಿಗಳಲ್ಲಿ ಪ್ರತಿಬಿಂಬಿಸಿದ್ದಾನೆ. ಕಾರ್ಲ್ ಮಾರ್ಕ್ಸ್, ಚಾರ್ಲ್ಸ್ ಡಾರ್ವಿನ್ ಮತ್ತು ರಡ್‌ಯಾರ್ಡ್ ಕಿಪ್ಲಿಂಗರ ಪ್ರಭಾವ ಜಾಕ್‌ನ ಮೇಲೆ ಆಗಿತ್ತು. ಜೀವನದಲ್ಲಿ ಅವನು ಗಳಿಸಿದ ಅನುಭವಗಳೂ ವಿಸ್ತಾರವಾಗಿದ್ದುವು.

ಜಾಕ್ 1876ರ ಜನವರಿ 12ರಂದು ಸಾನ್‌ಫ್ರಾನ್ಸಿಸ್ಕೋದಲ್ಲಿ ಜನಿಸಿದ. ಹೆಸರು ಜಾನ್ ಗ್ರಿಫಿತ್ ಲಂಡನ್. ಬರೆಯುವಾಗ ಆತ ಉಪಯೋಗಿಸಿದ ಹೆಸರು 'ಜಾಕ್ ಲಂಡನ್' ಎಂದು. ಅವನು ತಂದೆಯ ಮುಖವನ್ನೇ ಕಂಡವನಲ್ಲ. ಮಲತಂದೆ ಬಡವ. ಇದರಿಂದಾಗಿ ಸಂಸಾರಕ್ಕೆ ಸಹಾಯ ಮಾಡಲು ಹುಡುಗ ಜಾಕ್ ವೃತ್ತಪತ್ರಿಕೆಗಳನ್ನು ಮಾರುತ್ತಿದ್ದ ; ಚಿಕ್ಕ ಆಟದ ಮೈದಾನದಲ್ಲಿ, ಐಸ್ ಗಾಡಿಯಲ್ಲಿ ದುಡಿದು ಸಂಪಾದನೆ ಮಾಡುತ್ತಿದ್ದ. 10ನೆಯ ವಯಸ್ಸಿಗೆ ಪುಸ್ತಕಗಳನ್ನು ಓದುವ ಹಂಬಲ ಹೆಚ್ಚಿತು. ಗ್ರಂಥಾಲಯದಿಂದ ಪುಸ್ತಕಗಳನ್ನು ತಂದು ಓದುತ್ತಿದ್ದ. ಗ್ರಂಥಾಲಯದ ಅಧಿಕಾರಿಯೊಬ್ಬಳು ಇವನ ಈ ಆಸಕ್ತಿಯನ್ನು ಕಂಡು ತಾನು ಶೇಖರಿಸಿದ್ದ ಪುಸ್ತಕಗಳನ್ನು ಕೂಡ ಜಾಕ್‌ಗೆ ಓದಲು ಕೊಡುತ್ತಿದ್ದಳು. ಸಮುದ್ರವೆಂದರೆ ಜಾಕ್‌ಗೆ ಮೆಚ್ಚುಗೆ.

ಜಪಾನ್‌ನ ತೀರದಿಂದ ಹಿಂದಿರುಗಿದ ಮೇಲೆ ಸುಮ್ಮನೆ ಇರಲು ಬೇಸರವಾಗಿ ಸರಕು ಸಾಗಣೆ ರೈಲಿನಲ್ಲಿ ಪ್ರಯಾಣಕ್ಕೆ ಅವಕಾಶ ಮಾಡಿಕೊಂಡು, ಅವರಿವರಲ್ಲಿ ಬೇಡಿ ಆಹಾರವನ್ನು ಪಡೆಯುತ್ತ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲೆಲ್ಲ ಸಂಚರಿಸಿದ. ಅಲೆಮಾರಿ ಎಂಬ ಆಪಾದನೆಯ ಮೇಲೆ ಜಾಕ್‌ನನ್ನು ನಯಾಗರ ಜಲಪಾತದ ಬಳಿ ಸೆರೆಹಿಡಿದರು. 30 ದಿನಗಳ ಜೈಲುವಾಸವೂ ಆಯಿತು. ಅಲ್ಲಿಂದ ಬಿಡುಗಡೆಹೊಂದಿದ ಜಾಕ್ ವಿದ್ಯಾಭ್ಯಾಸ ಮಾಡುವ ನಿರ್ಧಾರ ಕೈಗೊಂಡ. ಅದರಂತೆ ತನ್ನ 19ನೆಯ ವಯಸಿನಲ್ಲಿ ಹೈಸ್ಕೂಲಿಗೆ ಸೇರಿದ: ಪ್ರತಿದಿನ 19 ಘಂಟೆಗಳ ಕಾಲ ಓದುತ್ತಿದ್ದ. ಜೊತೆಗೆ ಶಾಲೆಯ ಪೋರ್ಟರ್ ಕೆಲಸವನ್ನೂ ಮಾಡುತ್ತಿದ್ದ. ವಿದ್ಯಾರ್ಥಿ ದೆಸೆಯಲ್ಲೇ ಜಾಕ್ ಸಮಾಜವಾದದತ್ತ ಆಕರ್ಷಿತನಾದ. ಒಮ್ಮೆ ಬಂಡವಾಳವಾದವನ್ನು ಕಟುವಾಗಿ ಖಂಡಿಸಿದ್ದಕ್ಕಾಗಿ ಅವನು ಸೆರೆಮನೆ ಸೇರಬೇಕಾಗಿ ಬಂತು. ವೃತ್ತಪತ್ರಿಕೆಯವರು ಅವನನ್ನು 'ಬಾಲ ಸಮಾಜವಾದಿ' ಎಂದು ಕರೆದರು. ಕ್ಯಾಲಿಫೋರ್ನಿಯ ವಿಶ್ವವಿದ್ಯಾನಿಲಯದಲ್ಲಿ ಒಂದು ಷಾಣ್ಮಾಸಿಕ

ಲಕ್ಷ್ಯ ಅವಧಿಯನ್ನು ಕಳೆಯುವುದರಲ್ಲಿ. ಮಲತಂದೆಯ ಸಾಲದ ಹೊರೆಯನ್ನು ನಿವಾರಿಸುವುದಕ್ಕಾಗಿ ಜಾಕ್ ತನ್ನ ವಿದ್ಯಾಭ್ಯಾಸವನ್ನು ನಿಲ್ಲಿಸಬೇಕಾಯಿತು. ಬರೆವಣಿಗೆಯೇ ತನಗೆ ಸೂಕ್ತವಾದ ವೃತ್ತಿಯೆಂದು ಜಾಕ್ ನಿರ್ಧರಿಸಿ, ಆ ಕ್ಷೇತ್ರಕ್ಕೆ ಕಾಲಿರಿಸಿದ. ಯಶಸ್ಸು ಅವನದಾಯಿತು: ಧನವಂತನೂ ಆದ. ಆದರೆ ಕುಡಿತ. ಮಿತಿಮೀರಿದ ವೆಚ್ಚಗಳ ಪರಿಣಾಮವಾಗಿ ಸಾಲಗಾರನಾದ.

ಸಾಲಗಳ ಹೊರೆಯಿಂದ ಜರ್ಜರಿತನಾದ ಜಾಕ್ 1916ರ ನವೆಂಬರ್ 22ರಂದು ವಿಷ ತೆಗೆದುಕೊಂಡು ಮರಣವನ್ನಪ್ಪಿದ.

ತಾನು ಬರೆದದ್ದನ್ನು ಜಾಕ್ ತಾನೇ ಮೆಚ್ಚಿಕೊಂಡಿರಲಿಲ್ಲ. ಏನು ಬರೆಯಬೇಕೆಂದು ಅವನ ಮನಸ್ಸು ಕುದಿಯುತ್ತಿತ್ತೋ ಅದನ್ನು ಬರೆಯಲು ಅವನಿಗೆ ಆಗಲಿಲ್ಲ. "ಬರೆದದ್ದು ಆದ ಮೇಲೆ ನನ್ನ ಬರೆಹಗಳ ಬಗೆಗೆ ನನಗೆ ದ್ವೇಷ ಉಂಟಾಗುತ್ತದೆ. ನನಗೆ ದುಡ್ಡಿನ ಅಗತ್ಯವಿದೆ. ಅದಕ್ಕಾಗಿ ಬರೆಯುತ್ತೇನೆ. ಇದು ಹಣಗಳಿಸಲು ಸುಲಭದ ದಾರಿ. ಆದರೆ ನನ್ನಿಂದ ಸಾಧ್ಯವಿದ್ದಿದ್ದರೆ ಶ್ರೀಮಂತರ ಮೇಲಿನ ನನ್ನ ದ್ವೇಷ ವ್ಯಕ್ತಪಡಿಸುವ ಲೇಖನಗಳನ್ನು ಬಿಟ್ಟು ಮತ್ತೇನನ್ನೂ ನಾನು ಬರೆಯುತ್ತಿರಲಿಲ್ಲ." ಎಂದು ತನ್ನ ಅಸಹಾಯತೆಯನ್ನು ಜಾಕ್ ಹೇಳಿಕೊಂಡಿದ್ದಾನೆ.

ಜಾಕ್ ಲಂಡನ್‌ನ ಪುಸ್ತಕಗಳು ಪ್ರಪಂಚದ ಅನೇಕ ಭಾಷೆಗಳಿಗೆ ಅನುವಾದಗೊಂಡಿವೆ.

## ಜಾರ್ಜ್ ಸಾಂಡ್

ಆಕೆ ತನ್ನ ಬರೆಹಗಳಿಗಾಗಿ ಪ್ರಸಿದ್ಧಳಾಗಿದ್ದಂತೆ, ತನ್ನ ಸಂಪ್ರದಾಯ ವಿರುದ್ಧ ಜೀವನಕ್ಕೂ ಹೆಸರುವಾಸಿಯಾಗಿದ್ದಳು. ಆಗಿನ ಕಾಲದಲ್ಲಿ ಆಚರಣೆಯಲ್ಲಿದ್ದ ಸಂಪ್ರದಾಯಗಳು, ನಡೆವಳಿಕೆ, ಉಡುಪು ಹಾಗೂ ಶೀಲಗಳಿಗೆ ಆಕೆ ಗಮನಕೊಡದೆ ತನ್ನ ಮನಸ್ಸುಬಂದಂತೆ ಬಾಳುತ್ತಿದ್ದಳು.

ಇಂಥ ಅಪೂರ್ವ ವ್ಯಕ್ತಿ –ಫ್ರೆಂಚ್ ಕಾದಂಬರಿಕಾರ್ತಿ, ಜಾರ್ಜ್ ಸಾಂಡ್. ಆಕೆಯ ಹುಟ್ಟು ಹೆಸರು ಅಮಾನ್‌ಡಿನ್ ಅರೋರ್ ಲೂಸಿ ಡ್ಯೂಪಿನ್. ಸಾಹಿತ್ಯ ರಚನೆಯನ್ನು ಜೀವನೋಪಾಯಕ್ಕಾಗಿ ಅವಲಂಬಿಸಿದಾಗ ತನಗೆ ಸಹಾಯ ಮಾಡಿದಾತನ ಹೆಸರನ್ನು ಅವಲಂಬಿಸಿ, 'ಜಾರ್ಜ್ ಸಾಂಡ್' ಎಂಬ ಕಾವ್ಯನಾಮವನ್ನು ಇಟ್ಟುಕೊಂಡಳು.

ಜಾರ್ಜ್ ಸಾಂಡ್ ಸುಮಾರು ನೂರು ಕಾದಂಬರಿಗಳನ್ನು ಬರೆದಿದ್ದಾಳೆ. ಆರಂಭದಲ್ಲಿ ಬರೆದ ಕಾದಂಬರಿಗಳಲ್ಲಿ ಅವಳ ಜೀವನದ ಪಡಿನೆಳಲು ಮೂಡಿದೆ. ಮುಂದೆ ಸಾಮಾಜಿಕ, ಮಾನವೀಯ ಹಾಗೂ ಪ್ರವಾಸೀ ಕಾದಂಬರಿಗಳನ್ನು ಬರೆದಳು.

ಅವಳ ದಾಂಪತ್ಯ ಜೀವನ ಸುಖಮಯವಾಗಿರಲಿಲ್ಲ. ಭಾವೋದ್ರಿಕ್ತ ಪ್ರೇಮವೇ ಅವಳ ಕಾದಂಬರಿಗಳ ವಸ್ತು. ಗಂಡಸರ ದಬ್ಬಾಳಿಕೆಯ ಬಗೆಗೆ ಆಕೆಯ ಮನಸ್ಸಿನಲ್ಲೆದ್ದಿದ್ದ ತೀವ್ರ ಪ್ರತಿಕ್ರಿಯೆಗಳು ಅವಳ ಈ ಕೃತಿಗಳಲ್ಲಿ ವ್ಯಕ್ತವಾಗಿವೆ. 1832ರಲ್ಲಿ ಬರೆದ 'ವ್ಯಾಲೆಂಟೀನ್' ಇಂಥ ವಸ್ತುವುಳ್ಳ ಕಾದಂಬರಿಗಳಲ್ಲೊಂದು.

ಅನಂತರ ಸಾಂಡ್ ತನ್ನ ಕಾದಂಬರಿಗೆ ಸಾಮಾಜಿಕ ವಸ್ತುಗಳನ್ನು ಆರಿಸಿಕೊಂಡಳು. 'ಕಾನ್ಸುಲೊ' (1842) ಈ ಬಗೆಯ ಕಾದಂಬರಿ.

ಹಳ್ಳಿಯ ಜೀವನವನ್ನು ಕುರಿತ ಕೆಲವು ಕಾದಂಬರಿಗಳನ್ನೂ ಆಕೆ ಬರೆದಿದ್ದಾಳೆ.

'ಹಿಸ್ಟಾಯಿರ್ ದ ಮಾ ವೈ' ನಾಲ್ಕು ಸಂಪುಟಗಳ ಬೃಹತ್ ಕೃತಿ. ಇದರಲ್ಲಿ ಸಾಂಡ್ ತನ್ನ ವಂಶಾವಳಿಯ ವಿವರಗಳನ್ನೆಲ್ಲ ಕೊಟ್ಟಿದ್ದಾಳೆ.

ಜಾರ್ಜ್ ಸಾಂಡ್ 1804 ಜುಲೈ 1ರಂದು ಪ್ಯಾರಿಸ್ಸಿನಲ್ಲಿ ಜನಿಸಿದಳು. ಆಕೆಯ ತಂದೆ ಮಾರಿಸ್ ಸ್ಯಾಕ್ಸ್‌ಗೆ ಸೇರಿದವನು. ಕಳೆದುಹೋದ ರಾಜವಂಶದ ತನ್ನ ಸಂಬಂಧವಿದ್ದಿತು. ತಾಯಿ ಸಾಮಾನ್ಯ ಬಡ ಹುಡುಗಿ ಮಹಿಳೆ. 4ನೆಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡ ಸಾಂಡ್ ನೋಹಾಂಟ್‌ನಲ್ಲಿ ಅಜ್ಜಿಯ ಬಳಿ, ಶ್ರೀಮಂತ ವಾತಾವರಣದಲ್ಲಿ ಬೆಳೆದಳು.

ಸಾಂಡ್ 18ನೆಯ ವಯಸ್ಸಿನಲ್ಲಿ ಬ್ಯಾರನ್ ಕ್ಯಾಸಿಮಿರ್ ಡ್ಯೂಡೆವಾಂಟ್‌ನನ್ನು ಮದುವೆ ಆದಳು. ಹೊಸತರಲ್ಲಿ ಕೆಲ ಕಾಲ ಸುಖವಾಗಿಯೇ ಇದ್ದಳು. ಇಬ್ಬರು ಮಕ್ಕಳಾದರು. ಅವರ ಮೇಲೆ ಆಕೆಯ ಮಮತೆ ಅಪಾರ. ಒಂಬತ್ತು ವರ್ಷಗಳ ಅನಂತರ ಗಂಡನನ್ನು ತೊರೆದು ಪ್ಯಾರಿಸ್ಸಿಗೆ ಬಂದಳು. ಇಪ್ಪತ್ತು ವರ್ಷಗಳ ಕಾಲ ಪ್ರಮುಖ ಲೇಖಕರು, ಸಂಗೀತಗಾರರು, ರಾಜಕಾರಣಿಗಳು ಆಕೆಯ ಸ್ನೇಹಿತರಾಗಿದ್ದರು. ಖ್ಯಾತ ಗೇಯಕಾರ ಶೋಪಿನ್ ಆಕೆಯ ಆತ್ಮೀಯ ಮಿತ್ರನಾಗಿದ್ದ. ಅವನು ಕಾಯಿಲೆ ಬಿದ್ದಾಗ ಅವಳು ತುಂಬ ಶ್ರದ್ಧೆಯಿಂದ ಅವನ ಶುಶ್ರೂಷೆ ಮಾಡಿದಳು. ಆದರೆ ಕೊನೆಗೆ ಆ ಸ್ನೇಹ ಕಡಿದುಹೋಯಿತು.



ಸುಖಾಂತ ಕೃತಿಗಳು : ಜಾರ್ಜ್ ಸಾಂಡ್

ನೋಹಾಂಟ್‌ನಲ್ಲಿ 1876ನೆಯ ಜೂನ್ 8ರಂದು ಸಾಂಡ್ ನಿಧನಳಾದಳು.

"ಕಾದಂಬರಿ ನೈಜತೆಯ ಪ್ರತಿಬಿಂಬವಾಗಬೇಕಾಗಿಲ್ಲ." ಎಂದ ಸಾಂಡ್, ಹುಟ್ಟು ಕತೆಗಾರ್ತಿ. ಮಕ್ಕಳಂತೆ ಆಶಾವಾದಿ. ಜೀವನದಲ್ಲಿ ಅಪಾರ ನಂಬುಗೆಯುಳ್ಳವಳು. ಇದರಿಂದಾಗಿ ಅವಳ ಕಥೆಗಳು ಕಿನ್ನರ ಕಥೆಗಳಂತಿದ್ದುವು. ಅವಳು ಚಿತ್ರಿಸುತ್ತಿದ್ದ ರೈತರು ಒಳ್ಳೆಯವರು ಹಾಗೂ ದಯಾಪರರು. ಅವಳ ಕೃತಿಗಳೆಲ್ಲ ಸುಖಾಂತವಾಗಿರುತ್ತಿದ್ದುವು.

## ಜಾರ್ಜಿಯನ್ ವಾಸ್ತುಶಿಲ್ಪ

ಸರ್ವೋದಯ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿ, ವಿಕಾಸಗೊಂಡ ವಾಸ್ತುಶಿಲ್ಪವನ್ನು ಜಾರ್ಜಿಯನ್ ವಾಸ್ತುಶಿಲ್ಪ ಎಂದು ಕರೆಯುತ್ತಾರೆ.

18ನೆಯ ಶತಮಾನದಲ್ಲಿ ಇಂಗ್ಲೆಂಡನ್ನು ಅನುಕ್ರಮವಾಗಿ ಮೂವರು ಜಾರ್ಜ್ ದೊರೆಗಳು ಆಳಿದರು. ಆ ಅವಧಿಯಲ್ಲಿ ಇಂಗ್ಲೆಂಡಿನಲ್ಲಿ ಅಧಿಕ

[illegible] ಮಾದರಿಗಳಿಂದುದು. ಅಲ್ಲದೆ ದೊಡ್ಡ ಕಟ್ಟಡಗಳು, ಅರಮನೆಗಳು, ಮಹಲುಗಳು, ಸಾರ್ವಜನಿಕ ಭವನಗಳು ಇವೆಲ್ಲವೂ [illegible] ಮಾದರಿಯಲ್ಲಿ ಕಟ್ಟಲ್ಪಟ್ಟವು. ಈ ನಿರ್ಮಾಣ ಶೈಲಿಯನ್ನು ಜಾರ್ಜಿಯನ್ ವಾಸ್ತುಶಿಲ್ಪ ಎಂದು ಕರೆದರು. ಈ [illegible] ಚಚ್ಚೌಕವಾಗಿ ಕಾಣುವ ಹಾಗೆ ವಿಸ್ತಾರ ಮಾಡುತ್ತಿದ್ದರು. [illegible] ಛಾವಣಿ ಇರುತ್ತಿತ್ತು. ಮನೆಯ ಮುಂಭಾಗದಲ್ಲಿ ಕಂಬಗಳು, ಕಮಾನುಗಳು ಇರುತ್ತಿದ್ದುವು. ಇಗರ್ಜಿಗಳ ಮುಂಭಾಗ ವಿಶಾಲವಾಗಿದ್ದು, ಸಭೆ [illegible] ಅನುಕೂಲವಾಗಿರುತ್ತಿತ್ತು. ಈ ಕಟ್ಟಡಗಳಿಗೆ ಬಳಸುತ್ತಿದ್ದುದು ಕೆಂಪು ಇಟ್ಟಿಗೆಯನ್ನು. ಬಿಳಿಯ ಬಣ್ಣ ಬಳಿದ ಮರದ ಹಲಗೆಗಳನ್ನು ಜೋಡಿಸಿದ ಗೋಡೆಗಳೂ, ಚಿಕ್ಕದಾದ ಚೌಕಟ್ಟಿನ, ಬಿಳಿ ಬಣ್ಣ ಬಳಿದ ಕಿಟಕಿಗಳೂ ಇರುತ್ತಿದ್ದುವು. ಜಾರ್ಜಿಯನ್ ವಾಸ್ತುಶಿಲ್ಪ ಬೆಳವಣಿಗೆ ಹೊಂದುತ್ತ ಹೋದಂತೆ ಬಾಗಿಲು. ಕಿಟಕಿ ಹಾಗೂ ಗೋಡೆಗಳ ಮೇಲ್ಭಾಗದಲ್ಲಿ ಸೂಕ್ಷ್ಮಚಿತ್ತಾರಗಳನ್ನು ರಚಿಸುವ ಪದ್ಧತಿಯೂ ಬಂತು.

ಜಾರ್ಜಿಯನ್ ಶೈಲಿಯ ಶಿಲ್ಪಿಗಳು ತಮ್ಮ ಹಿಂದೆ ಆಗಿಹೋದ ಇಟಲಿಯ ಮಹಾನ್ ಶಿಲ್ಪಿಗಳ ರಚನೆಗಳಿಂದ ಸ್ಫೂರ್ತಿ ಪಡೆದರು.

ಲಂಡನ್ ನಗರದಲ್ಲಿರುವ ಅನೇಕ ಕಟ್ಟಡಗಳು ಜಾರ್ಜಿಯನ್ ಶಿಲ್ಪದಿಂದ ಪ್ರೇರಣೆ ಪಡೆದು ರಚಿತವಾಗಿವೆ.

ಇಂಗ್ಲೆಂಡಿನಲ್ಲಿ ಜಾರ್ಜಿಯನ್ ವಾಸ್ತುಶಿಲ್ಪ ಪ್ರಮುಖವಾಗಿದ್ದ ಅವಧಿಯಲ್ಲಿ ಇಂಗ್ಲೆಂಡಿನ ವಸಾಹತು ಆಗಿದ್ದ ಅಮೆರಿಕದಲ್ಲೂ ಹಲವೆಡೆ ಆ ಮಾದರಿಯ ಕಟ್ಟಡಗಳು ರಚಿತವಾದುವು.

## ಜಾರ್ಜೋನೀ

ಆತನ ಹೆಸರು ಜಾರ್ಜೋ ಬಾರ್ಬರೆಲ್ಲಿ. ಆತ ಎತ್ತರವಾಗಿದ್ದ ಆಕರ್ಷಕ ವ್ಯಕ್ತಿ. ಜನ ಅವನನ್ನು ಜಾರ್ಜ್ ಮಹಾಶಯ –ಜಾರ್ಜೋನೀ– ಎಂದು ಕರೆದರು. ಅವನು ಜೀವಿಸಿದ್ದು ಸ್ವಲ್ಪ ಕಾಲ ಮಾತ್ರ. ಆ ಅವಧಿಯಲ್ಲೇ ಅವನು ವೆನಿಸಿನ ಕಲೆಯನ್ನು ಪರಾಕಾಷ್ಠೆಗೆ ಏರಿಸಿದ.

ಜಾರ್ಜೋನೀ ಹುಟ್ಟಿದ್ದು ಕಾಸಲ್ ಫ್ರಾಂಕೊನಲ್ಲಿ, 1477ರಲ್ಲಿ, ಬಡ ಕುಟುಂಬದಲ್ಲಿ. ಬೆಳೆದದ್ದು ವೆನಿಸಿನಲ್ಲಿ. 1490ರಲ್ಲಿ ಇನ್ನೂ 13ನೆಯ ವಯಸ್ಸಿನಲ್ಲೇ ವೆನಿಸಿನ ಪ್ರಸಿದ್ಧ ಕಲಾವಿದ ಜೋವಾನೀ ಬೆಲ್ಲಿನಿಯ (ಸುಮಾರು 1430–1516) ಬಳಿ ಶಿಷ್ಯವೃತ್ತಿಯನ್ನು ಕೈಗೊಂಡ. ಶೀಘ್ರವಾಗಿ ಪ್ರಗತಿಹೊಂದಿದ. ಚೆನ್ನಾಗಿ ಸಂಪಾದಿಸಿ ಒಂದು ಮನೆ ಕೊಂಡುಕೊಂಡ. ಮನೆಯ ಮುಂಭಾಗವನ್ನು ಭಿತ್ತಿಚಿತ್ರಗಳಿಂದ ಅಲಂಕರಿಸಿ ಎಲ್ಲರ ಗಮನ ಸೆಳೆದ.

ವೆನಿಸಿನ ಸುಮಾರು ಆರು ಮನೆಗಳ ಮುಂಭಾಗದ ಅಲಂಕರಣವನ್ನು ಜಾರ್ಜೋನೀ ಮಾಡಿದ. ಆದರೆ ಈಗ ಅವು ವಿರೂಪಹೊಂದಿವೆ.

ಬೆಳಕು–ನೆರಳುಗಳ ಪರಿಣಾಮಕಾರಿ ವಿನ್ಯಾಸ ಜಾರ್ಜೋನೀ ಚಿತ್ರಗಳ ಪ್ರಮುಖ ಅಂಶ. ನೆರಳಿನಲ್ಲೂ ಬಣ್ಣ ಇರುತ್ತದೆಂದು ಅವನು ಕಂಡುಕೊಂಡ. ಸಮೃದ್ಧ ಬಣ್ಣ ಆತನ ಚಿತ್ರರಚನೆಯ ವೈಶಿಷ್ಟ್ಯ. ಬೆಳಕು–ನೆರಳುಗಳ ಪರಿಣಾಮದಿಂದ ಈ ವೈಶಿಷ್ಟ್ಯ ಮತ್ತಷ್ಟು ಎದ್ದು ಕಾಣಿಸಿತು.

ಜಾರ್ಜೋನೀಯ ಕಾಲಕ್ಕೆ ಮೊದಲಿನ ಚಿತ್ರಕಾರರ ಕೃತಿಗಳಲ್ಲಿ ವಸ್ತು ಅಥವಾ ವ್ಯಕ್ತಿಗಳೇ ಪ್ರಧಾನವಾಗಿರುತ್ತಿದ್ದುವು. ಭೂದೃಶ್ಯಗಳನ್ನು ಅವಕ್ಕೆ ಹಿನ್ನೆಲೆಯಾಗಿ ಮಾತ್ರ ಉಪಯೋಗಿಸುತ್ತಿದ್ದರು. ಅವರ ದೃಷ್ಟಿಯಲ್ಲಿ ಅದು ಗೌಣ. ಜಾರ್ಜೋನೀ ಈ ಸಂಪ್ರದಾಯವನ್ನು ಕೈಬಿಟ್ಟ. ಅವನು ರಚಿಸಿದ ಭೂದೃಶ್ಯ ಚಿತ್ರಗಳಲ್ಲಿ ವ್ಯಕ್ತಿಗಳಿಗೂ ಪ್ರಾಣಿಗಳಿಗೂ ಸ್ಥಾನ ದೊರೆಯಿತು. ಆದರೆ ಇವುಗಳಲ್ಲಿ ಯಾವುದೂ ಗೌಣವಲ್ಲ. ಎಲ್ಲವೂ ಗಣ್ಯವೇ.

ಜಾರ್ಜೋನೀ ಮೋಹಕ ವ್ಯಕ್ತಿ, ಸಂಗೀತಗಾರ, ರಸಿಕ. ಯೂರೊಪಿನ ಚಿತ್ರಶಾಲೆಗಳಲ್ಲಿರುವ ಸುಮಾರು 150 ಚಿತ್ರಗಳನ್ನು ಅವನವೆಂದು ಹೇಳುತ್ತಾರಾದರೂ, ಅವೆಲ್ಲವೂ ಅವನ ಕೃತಿಗಳೇ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಕೆಲವಂತೂ ನಿಸ್ಸಂದೇಹವಾಗಿ ಅವನವೇ. ಸಿಂಹಾಸನಾರೂಢಳಾಗಿರುವ 'ಮೆಡೋನ', 'ಬಿರುಗಾಳಿ', 'ಮೂರುಮಂದಿ ತಾತ್ತ್ವಿಕರು', 'ಮಾನವನ ಮೂರು ಅವಧಿಗಳು' ಮತ್ತು 'ಮಲಗಿರುವ ವೀನಸ್' —ಈ ಚಿತ್ರಗಳು ಜಾರ್ಜೋನೀಯದೆಂದು ಖಚಿತವಾಗಿ ಹೇಳಬಹುದು.

ಜಾರ್ಜೋನೀ ಬದುಕಿದ್ದು ಮೂವತ್ತಮೂರೇ ವರ್ಷ. ಸಂತೋಷವಾಗಿಯೇ ಕಾಲ ಕಳೆದ. 1511ರಲ್ಲಿ ಪ್ರಬಲವಾಗಿ ಹರಡಿದ ಪ್ಲೇಗ್ ಜಾರ್ಜೋನೀಯನ್ನೂ ಬಲಿ ತೆಗೆದುಕೊಂಡಿತು.

ಇವನ ಜೊತೆಗಾರ ಟಿಷನ್ (1477–1576) ಕೂಡ ಜಾರ್ಜೋನೀಯಂತೆ ಅತ್ಯುತ್ತಮ ಚಿತ್ರಕಾರನೆಂದು ಖ್ಯಾತಿ ಪಡೆದ. ಇವರಿಬ್ಬರೂ ಯೂರೊಪಿನ ನವೋದಯ ಕಾಲದ ಪ್ರತಿಭಾಶಾಲಿ ಕಲಾವಿದರು.

ನೋಡಿ : ಟಿಷನ್



ಕ್ರಿಸ್ತಕಂದನನ್ನು ಕಂಡ ಕುರಿಗಾಹಿಗಳು : ಜಾರ್ಜೋನೀ ಕೃತಿ

## ಜಾತಕ ಕಥೆ

ಚಂದ್ರನ ಮೈಮೇಲೆ ಮೊಲದಂತೆ ಕಾಣುವ ಕಪ್ಪನೆಯ ನೆರಳಿಗೆ ಸಂಬಂಧಿಸಿದ ಒಂದು ಕಥೆಯಿದೆ.

ಬೋಧಿಸತ್ವ ಒಂದು ಮೊಲವಾಗಿ ಹುಟ್ಟಿರುತ್ತಾನೆ. ಆ ಮೊಲಕ್ಕೆ ಮೂವರು ಸ್ನೇಹಿತರು –ಕೋತಿ, ನರಿ ಮತ್ತು ನೀರುನಾಯಿ. ಅವು ಮೊಲವನ್ನು ಗುರುವಾಗಿ ಒಪ್ಪಿಕೊಂಡು ಅದನ್ನು ಅನುಸರಿಸುತ್ತಿರುತ್ತವೆ. ಒಂದು ಹುಣ್ಣಿಮೆಯ ದಿನ ಅವು ಉಪವಾಸ ಆಚರಿಸಿದುವು. ಮಾರನೆಯ ದಿನ ಪಾರಣೆ. ಆ ದಿನ ಯಾರಾದರೂ ಬಂದು ಆಹಾರ ಬೇಡಿದರೆ ತಮ ತಮಗೆ ಲಭಿಸಿದ ಆಹಾರವನ್ನು ಅವರಿಗೆ ದಾನ ಮಾಡಬೇಕು-ಎಂದು ಮೊಲ ಸೂಚಿಸಿತು. ಶಿಷ್ಯ ಪ್ರಾಣಿಗಳು ಅದಕ್ಕೆ ಒಪ್ಪಿದುವು, ಅವೆಲ್ಲ ಆಹಾರ



ಅಜಂತದ ಗೋಡೆಯ ಮೇಲೆ ಜಾತಕ ಕಥೆ

ಸಂಪಾದಿಸಿಕೊಂಡುವು. ಮೊಲದ ಆಹಾರ ಒಂದೆರಡು ಗರಿಕೆ ಹುಲ್ಲು ತಾನೆ ? ಅದು ನಿಶ್ಚಿಂತವಾಗಿತ್ತು. ಇಂದ್ರನೇ ಈ ಪ್ರಾಣಿಗಳ ಪರೀಕ್ಷೆಗೆಂದು ವೃದ್ಧ ಯಾಚಕನಾಗಿ ಕಾಣಿಸಿಕೊಂಡ. ಮಿಕ್ಕ ಮೂರು ಪ್ರಾಣಿಗಳು ತಮ್ಮ ಆಹಾರವನ್ನು ದಾನ ನೀಡಲು ಒಪ್ಪಿದುವು. ಆದರೆ ಮೊಲವು ಹುಲ್ಲು ಗರಿಕೆಯನ್ನು ಎಂಥ ಆಹಾರವೆಂದು ದಾನಮಾಡಬೇಕು ? ಆದರೆ ಪಾರಣೆಯ ದಿನ ಯಾಚಕನನ್ನು ತೃಪ್ತಿಪಡಿಸುವುದು ತನ್ನ ಧರ್ಮ ಎಂದು ಮೊಲ ಭಾವಿಸಿತು. ತನ್ನ ಮೃದುವಾದ ಮೈ ಮಾಂಸವನ್ನೇ ಅರ್ಪಿಸಲು ಮುಂದಾಯಿತು. ಒಣ ಕಟ್ಟಿಗೆಯನ್ನು ರಾಶಿ ಹಾಕಿತು. ಯಾಚಕ ಬೆಂಕಿ ಹತ್ತಿಸುವಂತೆ ಮಾಡಿತು. ತಾನು ಉರಿಯುವ ಅಗ್ನಿಗೆ ಹಾರುವುದಾಗಿಯೂ ತನ್ನ ಮೈ ಮಾಂಸ ಬೆಂದ ಬಳಿಕ ಅದನ್ನು ಉಂಡು ತೃಪ್ತಿಪಡಬೇಕೆಂದೂ ಯಾಚಕನಿಗೆ ಹೇಳಿ ಬೆಂಕಿಗೆ ಹಾರಿತು. ಹಾರುವ ಮುನ್ನ ಮೈ ಒದರಿ ಕೊಡವಿತು ; ತನ್ನ ಮೈ ಮೇಲಿರಬಹುದಾದ ಕ್ರಿಮಿ ಕೀಟಗಳು ವೃಥಾ ಪ್ರಾಣ ಕಳೆದುಕೊಳ್ಳಬಾರದು ಎಂದು. ಮೊಲದ ಸ್ನೇಹಿತರೂ ಕೂಡ ಆಹಾರವನ್ನು ದಾನಮಾಡಲು ಸಿದ್ಧವಾಗಿದ್ದರೂ ಅತಿಥಿಗೆ ತನ್ನನ್ನೇ ಅರ್ಪಿಸಿಕೊಂಡ ಮೊಲದ ಸಮಕ್ಕೆ ಬರಲಿಲ್ಲ–ಅವುಗಳ ತ್ಯಾಗ.

ಸುಪ್ರೀತನಾದ ಇಂದ್ರ, ಮೊಲವನ್ನು ಬೆಂಕಿ ಸುಡದಂತೆ ಮಾಡಿ ಅದನ್ನು ಪಾರುಮಾಡಿದ ; ಅದರ ಲೋಕೋತ್ತರ ತ್ಯಾಗಬುದ್ಧಿಗೆ ಮೆಚ್ಚಿ ಕೈಗೆ ಸಿಕ್ಕಿದ ಗುಡ್ಡದ ಗಿಡಮರಗಳನ್ನು ಹಿಂಡಿ ರಸ ತೆಗೆದು ಚಂದ್ರನ ಮೇಲೆ ಮೊಲದ ಆಕಾರ ಬರುವಂತೆ ಬಳಿದು ಮೊಲದ ಕೀರ್ತಿ ಅಮರವಾಗುವಂತೆ ಮಾಡಿದ.

ಇದೊಂದು ಜಾತಕ ಕಥೆ. ತನ್ನ ಗತಜನ್ಮಗಳ ಬಗೆಗೆ ಗೌತಮ ಬುದ್ಧನು ಹೇಳಿದ ಕಥೆಗಳೇ ಜಾತಕ ಕಥೆಗಳು. ಬೋಧಿಸತ್ವ ಎಣಿಕೆಗೆ ಸಿಕ್ಕದಷ್ಟು ಸಲ ಹಲವು ರೂಪಗಳಲ್ಲಿ ಜನ್ಮ ತಳೆದು ಕಡೆಗೆ ಗೌತಮನಾಗಿ ಹುಟ್ಟಿ ಜ್ಞಾನೋದಯ ಪಡೆದು ನಿರ್ವಾಣಹೊಂದಿದ. ಆತ ಹೇಳಿದ ತನ್ನ ಪೂರ್ವ ಜನ್ಮಗಳ ವೃತ್ತಾಂತದ ಕತೆಗಳು ಜಾತಕಕಥೆಗಳೆನಿಸಿಕೊಂಡುವು.

ಪ್ರತಿ ಕಥೆಯೂ ಒಂದೇ ಚೇತನದ ಬೇರೆ ಬೇರೆ ಜನ್ಮಗಳ ಅವಸ್ಥೆಯನ್ನು ಸೂಚಿಸುತ್ತದೆ. ಒಂದೊಂದು ಜನ್ಮದಲ್ಲೂ ಉದಾತ್ತ ಗುಣ ಉದ್ದೇಶಗಳಿಗಾಗಿಯೇ ಬಾಳಿ ಆ ಜನ್ಮ ಕಳೆದುಕೊಂಡದ್ದು ತ್ಯಾಗ, ದಾನಗಳಿಂದಲೇ. ಜಾತಕ ಕತೆಗಳು ಅಂಥ ಜನ್ಮಾಂತರಗಳ ವೃತ್ತಾಂತವನ್ನು ಬಿಡಿಬಿಡಿಯಾಗಿ ಬಣ್ಣಿಸುತ್ತವೆ.

ಉತ್ತಮ ಜೀವನ ನಡೆಸಲು ಅವಶ್ಯವಾದ ಅಷ್ಟಾಂಗ ಮಾರ್ಗವನ್ನು ಗೌತಮ ಬುದ್ಧ ತನ್ನ ಶಿಷ್ಯರಿಗೆ ಮತ್ತು ಅನುಯಾಯಿಗಳಿಗೆ ಸುಮಾರು 45 ವರ್ಷಗಳ ಕಾಲ ಬೋಧಿಸಿದ. ಹಾಗೆ ಬೋಧಿಸುವಾಗ ಆತ ತನ್ನದೇ ಹಿಂದಣ ಜನ್ಮದ ಕತೆಗಳನ್ನು ಹೇಳಿದ. ಬುದ್ಧನ ಮರಣಾನಂತರ ಅವನ ಶಿಷ್ಯರೂ ಅನುಯಾಯಿಗಳೂ ಬುದ್ಧನ ಹಿರಿಮೆಯುನ್ನು ಸಾರುವ ಸಲುವಾಗಿಯೂ ಅವನ ನೀತಿತತ್ತ್ವಗಳನ್ನು ಬೋಧಿಸುವುದಕ್ಕೂ ಇವೇ ಕತೆಗಳನ್ನು ಬಾಯಿಯಿಂದ ಬಾಯಿಗೆ ದಾಟಿಸಿದರು ; ಅನಂತರ ಇವು ಬರೆಹದ ರೂಪಕ್ಕೆ ಇಳಿದುವು.

ಕ್ರಿ.ಪೂ. 380 ಸುಮಾರಿನಿಂದಲೂ ಬಳಕೆಯಲ್ಲಿರುವ 547 ಜಾತಕ ಕಥೆಗಳು ಪಾಲಿ ಭಾಷೆಯಲ್ಲಿ ಬರೆಯಲ್ಪಟ್ಟಿವೆ.

ಜಾತಕ ಕಥೆಗಳ ಮುಖ್ಯ ಪಾತ್ರಗಳು ನೀತಿಯನ್ನು ಸಾರುವ ಉದಾತ್ತ ಪಾತ್ರಗಳು. ಪಂಚತಂತ್ರದ ಹಾಗೂ ಈಸೋಪನ ಕಥೆಗಳಂತೆ ಮನುಷ್ಯೇತರ ಜೀವಿಗಳೂ ಜಾತಕ ಕಥೆಗಳಲ್ಲಿ ಪಾತ್ರ ವಹಿಸುತ್ತವೆ.

ಜಾತಕ ಕಥೆಗಳ ಪ್ರಸಂಗಗಳನ್ನು ಅಜಂತದ ಗುಹೆಗಳ ಗೋಡೆಗಳ ಮೇಲೆ ಚಿತ್ರಿಸಿದ್ದಾರೆ.

ನೋಡಿ : ಈಸೋಪ್ ; 'ಪಂಚತಂತ್ರ'

## ಜಾನ್ ಬನ್‌ಯನ್

"ಹೀಗೆಯೇ ಕಾಡುಮೇಡುಗಳಲ್ಲಿ ನಡೆಯುತ್ತ, ಒಂದು ಗುಹೆಯನ್ನು ತಲಪಿದೆ ; ಅಲ್ಲೇ ವಿಶ್ರಮಿಸಿದೆ. ಅಲ್ಲಿ ನಿದ್ರಿಸುತ್ತಿದ್ದಾಗ ಒಂದು ಕನಸು ಕಂಡೆ : ಚಿಂದಿಗಳನ್ನು ತೊಟ್ಟಿರುವ ಒಬ್ಬ ಮನುಷ್ಯ. ಅವನ ಕೈಯಲ್ಲಿ ಒಂದು ಪುಸ್ತಕ. ಅವನ ಬೆನ್ನಿಗೆ ಒಂದು ದೊಡ್ಡ ಹೊರೆ. ಆತ ಕೈಯಲ್ಲಿರುವ ಪುಸ್ತಕವನ್ನು ತೆರೆದು ಓದಲಾರಂಭಿಸಿದ. ಓದುತ್ತಿದ್ದಂತೆ ದುಃಖದಿಂದ ಕಂಪಿಸಿದ. ದುಃಖವನ್ನು ಸಹಿಸಲಾಗದೆ 'ಓ ನಾನೇನು ಮಾಡಲಿ ?' ಎಂದು ರೋದಿಸಿದ."

—ಇದು 'ಯಾತ್ರಿಕನ ಪಯಣ' ಎಂಬ ಪುಸ್ತಕದಲ್ಲಿ ಬರುವ ಕಥಾನಾಯಕ ಕ್ರಿಶ್ಚನ್‌ನ ಚಿತ್ರಣ. ಈ ಪುಸ್ತಕ ಜಾನ್ ಬನ್‌ಯನ ಕೃತಿಗಳಲ್ಲಿ ಅತ್ಯಂತ ಪ್ರಸಿದ್ಧ ಹಾಗೂ ಪ್ರಭಾವಶಾಲಿ.

'ಯಾತ್ರಿಕನ ಪಯಣ' ಒಂದು ಕಥೆಯಂತೆ ಸಾಗುತ್ತದೆ. 'ಪಂಚತಂತ್ರ' ಕತೆಗಳಂತ ಇದೊಂದು ಸಾಂಕೇತಿಕ ಕಥನ. ದೇವರನ್ನು ಅರಸಿಕೊಂಡು ಹೊರಡುವ ಮನುಷ್ಯನ ಪಯಣ ಇದರಲ್ಲಿ ಸೂಚಿತವಾಗಿದೆ. ಕಥಾನಾಯಕ ಕ್ರಿಶ್ಚನ್ 'ವಿನಾಶ ನಗರ'ದಿಂದ 'ಸ್ವರ್ಗ'ವೆಂಬ ಪವಿತ್ರ ನಗರದೆಡೆಗೆ ಪ್ರಯಾಣ ಮಾಡುತ್ತಾನೆ.

ಅವನ ಜೀವನವೇ ಈ ಪಯಣದ ಹಾದಿ. ತಾನಿರುವ ನೆಲೆಯಲ್ಲಿ ದುಷ್ಟತನ ಹೆಚ್ಚಿ. ವಿನಾಶ ಸಂಭವಿಸುವುದೆಂದು ತಿಳಿದಾಗ ಕ್ರಿಶ್ಚನ್



ಸದ್ಧರ್ಮನಿಷ್ಠ : ಬನ್‌ಯನ್

ತನ್ನ ಆತ್ಮವನ್ನು ಉಳಿಸಿಕೊಳ್ಳಲು ಅಲ್ಲಿಂದ ಕಾಲ್ತೆಗೆದ. 'ವಿಷಣ್ಣತೆಯ ಹೂಳು' ಎಂಬಲ್ಲಿ ಅವನು ಹೂತು ಹೋಗುವುದರಲ್ಲಿದ್ದ. ಹೇಗೋ ಪಾರಾಗಿ ಮುಂದುವರಿದ. ಮುಂದೆ ಒದಗಿದ ಗಂಡಾಂತರಗಳು ಹಲವಾರು. ಒಬ್ಬ ಮಾರಕ ಸೈತಾನನ ಹಿಡಿತಕ್ಕೆ ಸಿಕ್ಕಿಬಿದ್ದ; ಆಸೆಭೋಗಗಳ ಸಂತೆಯಲ್ಲಿ ಸೆರೆಯಾದ. ಒಬ್ಬ ರಾಕ್ಷಸ, ಅವನನ್ನು ಹಿಡಿದು 'ಸಂಶಯದ ಕೋಟೆ'ಯಲ್ಲಿ ಹಾಕಿದ; ಕೊನೆಯದಾಗಿ ಕ್ರಿಶ್ಚನ್ 'ಸಾವಿನ ಹೊಳೆ'ಯಲ್ಲಿ ಇನ್ನೇನು ಮುಳುಗಬೇಕು : ಆದರೆ ದೇವತೆಗಳು ಅವನನ್ನು ಉಳಿಸಿ, ಸ್ವರ್ಗದ ಬಾಗಿಲಿನ ಮೂಲಕ ಕರೆದೊಯ್ದರು.

ಮನುಷ್ಯ ತನ್ನ ಜೀವನದಲ್ಲಿ ಎದುರಿಸಬೇಕಾದ ಕಷ್ಟಗಳು. ಅವನ ದುಃಖ ಸಂತೋಷಗಳು, ಅವನು ಸಂಧಿಸುವ ಜನರು ಒದಗುವ ಪರಿಸ್ಥಿತಿಗಳು ಇಂಥ ವಾಸ್ತವ ಅಂಶಗಳನ್ನೆಲ್ಲ ಒಳಗೊಂಡಿದೆ 'ಯಾತ್ರಿಕನ ಪಯಣ'. ಬನ್‌ಯನ್ ಬದುಕಿದ ಕಾಲಕ್ಕೇ ಅತ್ಯಂತ ಜನಪ್ರಿಯವಾಗಿತ್ತು ಅವನ ಈ ಗ್ರಂಥ. ಇದರ ಭಾಷೆ ಬಹಳ ಸರಳ. ಮಾನವನ ಮತ. ನಂಬಿಕೆಗಳು ಬದಲಾಗುತ್ತಲೇ ಇರಬಹುದು. ಅದೇನಿದ್ದರೂ ಅವನ ಜೀವನ ಒಂದು ಯಾತ್ರೆಯೇ —ಇದು ಬನ್‌ಯನ್‌ನ ಗ್ರಂಥದ ನಿತ್ಯನೂತನ ಸಂದೇಶ.

ಬೆಡ್‌ಫರ್ಡ್ ಷೈರಿನ ಎಲ್ಸ್ಟೋ ಎಂಬಲ್ಲಿ 1628ರ ನವೆಂಬರ್ ತಿಂಗಳಿನಲ್ಲಿ ಬನ್‌ಯನ್ ಹುಟ್ಟಿದ. ತಂದೆಯ ವೃತ್ತಿ ಪಾತ್ರೆಪರಟೆಗಳ ರಿಪೇರಿ. ಬನ್‌ಯನ್ ಹೆಚ್ಚು ವಿದ್ಯಾಭ್ಯಾಸ ಪಡೆಯಲಿಲ್ಲ. ಚಿಕ್ಕಂದಿನಲ್ಲಿ ಎಲ್ಲ ಎಳೆಯರಂತೆ ಅವನಲ್ಲಿಯೂ ತುಂಟತನವಿದ್ದಿತು. (ಅದಕ್ಕಾಗಿ ಅವನು ಮುಂದೆ ಪಶ್ಚಾತ್ತಾಪಪಟ್ಟ). 16ನೆಯ ವಯಸ್ಸಿನಲ್ಲಿ ಬನ್‌ಯನ್ ಸೇನಾನಿ ಫೇರ್ ಫಾಕ್ಸ್ ಎಂಬವನ ನೇತೃತ್ವದಲ್ಲಿ ಇಂಗ್ಲೆಂಡಿನ ಅಂತರ್ಯುದ್ಧದಲ್ಲಿ ಸಂಸತ್ತಿನ ಪರವಾಗಿ ಹೋರಾಡಿದ. ಮೂರು ವರ್ಷಗಳ ಅನಂತರ ಸೈನ್ಯದಿಂದ ಹೊರಬಂದ.

ಒಂದು ದಿನ ಇಬ್ಬರು ಹೆಂಗಳೆಯರು ಧಾರ್ಮಿಕ ಜೀವನದಲ್ಲಿ ದೊರೆಯುವ ಸಮಾಧಾನ. ತೃಪ್ತಿಗಳನ್ನು ಕುರಿತು ಆಡಿದ ಮಾತುಗಳು ಬನ್‌ಯನ್‌ನ ಮನಸೆಳೆದವು. ಅದು ಅವನ ಜೀವನದ ಒಂದು ಮುಖ್ಯ ತಿರುವು. 20ನೆಯ ವಯಸ್ಸಿನಲ್ಲಿ ಇವನು ವಿವಾಹವಾದ. ಅವನ ಹೆಂಡತಿ ತನ್ನೊಡನೆ ಎರಡು ಧಾರ್ಮಿಕ ಗ್ರಂಥಗಳನ್ನು ತಂದಳು. ಬನ್‌ಯನ್ ಈ ಪುಸ್ತಕಗಳನ್ನೂ ಓದಿದ. ತಾನೇ ಒಂದು ಪುಸ್ತಕವನ್ನು ಬರೆಯಲು ಆಶಿಸಿದ.

ಮಗು ದೊಡ್ಡದಾಗಿ ದೇವರಲ್ಲಿ ನಂಬಿಕೆ ಮೂಡಿದ ಮೇಲೆಯೇ ದೀಕ್ಷಾ ಸ್ನಾನ ಮಾಡಿಸಬೇಕೆಂಬ ಬಾಪ್ಟಿಸ್ಟ್ ಪಂಥ ಆಗ ತಾನೇ ಹುಟ್ಟಿತ್ತು. ಬನ್‌ಯನ್ ಆ ಪಂಥವನ್ನು ಸೇರಿದ. ತನ್ನ ಊರಿನ ಸುತ್ತಮುತ್ತ ವಾಸಿಸುತ್ತಿದ್ದ ಬಡಜನರಿಗೆ ಧರ್ಮೋಪದೇಶ ಮಾಡಲಾರಂಭಿಸಿದ. ಆದರೆ ಬಾಪ್ಟಿಸ್ಟರು ಈ ರೀತಿ ಉಪದೇಶ ಮಾಡುವುದಕ್ಕೆ ಚರ್ಚ್ ಅಧಿಕಾರಿಗಳ ವಿರೋಧವಿತ್ತು. ಅನುಮತಿ ಪಡೆಯದೆ ಧರ್ಮೋಪದೇಶ ಮಾಡಿದ ತಪ್ಪಿಗಾಗಿ ಬನ್‌ಯನ್ ಜೈಲು ಸೇರಬೇಕಾಯಿತು. 1660ರಿಂದ 12 ವರ್ಷಗಳ ಕಾಲ ಅವನು ಸೆರೆಮನೆವಾಸ ಅನುಭವಿಸಿದ. ಆ ಅವಧಿಯಲ್ಲಿ ಪಾದರಕ್ಷೆಗಳಿಗೆ ಹಾಕುವ ದಾರವನ್ನು ಸಿದ್ಧಗೊಳಿಸಿ ಹಣ ಸಂಪಾದಿಸಿ ತನ್ನ ಸಂಸಾರವನ್ನು ಪೋಷಿಸಿದ. ಬರೆಯುತ್ತಲೂ ಇದ್ದ. ಅವನ 44ನೆಯ ವಯಸ್ಸಿನಲ್ಲಿ ಅವನಿಗೆ ಸೆರೆಮನೆಯಿಂದ ಬಿಡುಗಡೆ ದೊರೆಯಿತು. ಮತಬೋಧನೆ ಹಾಗೂ ಸಾಹಿತ್ಯರಚನೆ ಇವೆರಡರಲ್ಲೂ ಹೆಸರುವಾಸಿಯಾದ. ಮೂರು ವರ್ಷಗಳ ಅನಂತರ ಅವನು ಮತ್ತೆ ಆರು ತಿಂಗಳ ಸೆರೆಮನೆವಾಸ ಮಾಡಬೇಕಾಯಿತು. ಈ ಎರಡನೆಯ ಸೆರೆಮನೆವಾಸದ ಅವಧಿಯಲ್ಲಿ 'ಯಾತ್ರಿಕನ ಪಯಣ'ವನ್ನು ಬರೆಯಲಾರಂಭಿಸಿದ. ಪ್ರಕಟವಾದಾಗ. ಎಲ್ಲರ ಆದರಕ್ಕೆ ಅದು ಪಾತ್ರವಾಯಿತು. ಅವನ ಜೀವಿತ ಕಾಲದಲ್ಲಿಯೇ ಆ ಗ್ರಂಥದ ಒಂದು ಲಕ್ಷ ಪ್ರತಿಗಳು ಮಾರಾಟವಾದುವು. ಅನೇಕ ಭಾಷೆಗಳಿಗೆ ಈ ಕೃತಿ ಅನುವಾದಿಸಲ್ಪಟ್ಟಿದೆ.

'ಸುವಾರ್ತೆಯ ಕೆಲವು ಸತ್ಯಗಳ ಸ್ಪಷ್ಟನೆ'. 'ನರಕದಿಂದ ಬಂದ ನಿಟ್ಟುಸಿರುಗಳು'. 'ಶ್ರೀಮಾನ್ ದುಷ್ಟನ ಜೀವನ ಹಾಗೂ ಸಾವು'. 'ಪವಿತ್ರ ಸಮರ', 'ಅಪರಿಮಿತ ಅನುಗ್ರಹ' ಇವು ಬನ್‌ಯನ್‌ನ ಇತರ ಖ್ಯಾತ ಕೃತಿಗಳು. ಅವನದು ಸ್ವಧರ್ಮನಿಷ್ಠೆ ಅಚಲವಾದದ್ದು ಅವನು ಸೆರೆಮನೆಯಲ್ಲಿದ್ದಾಗ "ನೀನು ಮತ್ತೆ ನಿನ್ನ ಧರ್ಮಬೋಧನೆಯಲ್ಲಿ ತೊಡಗುವುದಿಲ್ಲ ಅಂತ ಮಾತು ಕೊಟ್ಟರೆ ನಿನ್ನನ್ನು ಬಿಡುಗಡೆ ಮಾಡ್ತೇವೆ"–ಎಂದು ಹೇಳಿದರು. "ಇವತ್ತು ನೀವು ನನ್ನನ್ನು ಬಿಡುಗಡೆ ಮಾಡಿದರೆ ಮತ್ತೆ ನಾಳೆಯಿಂದಲೇ ಬೋಧನೆ ಆರಂಭಿಸ್ತೇನೆ"– ಎಂದು ಅವನು ಹೇಳಿದ.

ಬನ್‌ಯನ್‌ನ ಜೀವನದ ಕೊನೆಯ ವರ್ಷಗಳು ಶಾಂತವಾಗಿದ್ದುವು. ಅವನ ಬೋಧನೆ ಹಾಗೂ ಬರೆಹಗಳ ಪ್ರಭಾವ ಬಹು ವ್ಯಾಪಕವಾಗಿತ್ತು.

1688 ಆಗಸ್ಟ್ 31ರಂದು ಲಂಡನಿನ ಸ್ನೋಹಿಲ್‌ನಲ್ಲಿ ತಂದೆ ಮಕ್ಕಳೊಳಗಿನ ಮನಸ್ತಾಪವನ್ನು ಬಗೆಹರಿಸಿ ಹಿಂದಿರುಗುತ್ತಿದ್ದಾಗ ಜಿರುಗಾಳಿಗೆ ಸಿಲುಕಿ ಮೃತನಾದ. ಆಗ ಅವನಿಗೆ 60 ವರ್ಷ ವಯಸ್ಸು.



'ಯಾತ್ರಿಕನ ಪಯಣ'

[illegible] ಒಂದು [illegible] ಹೆಸರಿಟ್ಟಿದ್ದಾರೆ.

## ಜಾನಪದ

ಸಂತೋಷವಾದಾಗ, ಹಬ್ಬ ಹುಣ್ಣಿಮೆಗಳ ಸಂದರ್ಭಗಳಲ್ಲಿ ಹಾಡಬೇಕು ಎನಿಸುತ್ತದೆ. ರಾಗ ಲಯಗಳಲ್ಲಿ ಹೊಂದಿಕೊಂಡಂತೆ ಮಾತುಗಳು ಮೂಡುತ್ತವೆ.

ಹೀಗೆ ಜನಸಾಮಾನ್ಯರಲ್ಲಿ ಜನಿಸಿದ್ದು ಜನಪದ ಸಾಹಿತ್ಯ; ಜನಪದ ಸಂಗೀತ. [illegible] ಗೊಂಡದ್ದು ಜನಪದ ನೃತ್ಯ. ವಾದ್ಯ. ಉಡುಗೆತೊಡುಗೆ. ಪಾತ್ರೆ ಪರಿಕರ; ಆಚಾರ ವ್ಯವಹಾರ ನಂಬಿಕೆ; ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಎಲ್ಲ ಸಹಜ ವಿದ್ಯಮಾನಗಳು—ಇವನ್ನು ಒಟ್ಟಿಗೆ ಒಂದು ಜನತೆಯ ಸಂಪ್ರದಾಯದ ಮೊತ್ತ ಎನ್ನಬಹುದು. ಗ್ರಂಥಸ್ಥವಲ್ಲದ ಅದೇ ಜಾನಪದ. ಜಾನಪದವನ್ನು—ಜನಪದ ಸಾಹಿತ್ಯ. ಜನಪದ ಸಂಗೀತ ಮುಂತಾದುವನ್ನು—ಅಧ್ಯಯಿಸುವುದೇ ಜಾನಪದ ಅಧ್ಯಯನ.

ಅಭ್ಯಾಸದ ದೃಷ್ಟಿಯಿಂದ ಜಾನಪದವನ್ನು ನಾಲ್ಕು ವರ್ಗಗಳಾಗಿ ವಿಂಗಡಿಸುವುದುಂಟು. ಪುರಾಣ, ಜನಪದ ಕಥೆ. ಹಾಡು ಮುಂತಾದುವು ಮೊದಲನೆಯ ವರ್ಗ: ಇದು ಸಾಹಿತ್ಯರೂಪದ್ದು. ಮಾತು ಸನ್ನೆ ಒಗಟು ಗಾದೆ ಮುಂತಾದುವು ಎರಡನೆಯ ವರ್ಗ—ಭಾಷಿಕ: ಮಾತಿನ ರೂಪದ್ದು. ಮೂರನೆಯದಾದ [illegible] ವರ್ಗದಲ್ಲಿ ಮದ್ದು. ಚಿತ್ರ. ಯುಕ್ತಿ. ಭವಿಷ್ಯ ಮುಂತಾದವು ಸೇರುತ್ತವೆ. ಉಳಿದ ನೃತ್ಯ. ಸಂಗೀತ, ಆಟ. ವಿನೋದ. ನಾಟಕ, ಉಡುಗೆ, ಅಡುಗೆ ಕಲೆ—ಇವೆಲ್ಲ ನಾಲ್ಕನೆಯ ಕ್ರಿಯಾತ್ಮಕ ವರ್ಗಕ್ಕೆ ಸೇರಿದವು. ಮೊದಲ ಎರಡು ವರ್ಗಗಳಲ್ಲಿ ಭಾಷೆಯೇ ಪ್ರಧಾನ. ಸಾಹಿತ್ಯವರ್ಗದ ಹಾಡು ಕಥೆ ಮುಂತಾದ ಅಂಶಗಳನ್ನು ಪ್ರಸ್ತಾಪಿಸುವಾಗ ಭಾಷೆ ಕಲಾತ್ಮಕವಾಗುತ್ತದೆ. ಆದರೆ ಗಾದೆ ಒಗಟು ಮುಂತಾದುವುಗಳಲ್ಲಿ ಅದರ ಸಾರವನ್ನು [illegible] ವರ್ಗ ಕಾರ್ಯ ಕಾರಣಗಳನ್ನು ವಿವರಿಸುವಂಥದು. ಮನಸ್ಸಿಗೆ [illegible]



ಜಾನಪದ ಕುಣಿತ – ಕ್ಯೂಬಾದಲ್ಲಿ

ಗೊಟ್ಟಂತೆ ನಡೆಯುವ ದೇಹದ ಕಲಾತ್ಮಕ ಚಲನವಲನ. ಗತಿ ಗಮನಗಳು ಕ್ರಿಯಾತ್ಮಕ ವರ್ಗದಲ್ಲಿ ಪ್ರಮುಖ.

ಜರ್ಮನಿಯ ರೈತ ನೃತ್ಯ



ಕನ್ನಡನಾಡಿನ ಬೀರೇದೇವರು ಕುಣಿತ

ಜನಪದ ಸಾಹಿತ್ಯ, ಸಂಗೀತ ಮತ್ತು ನೃತ್ಯ ಮುಂತಾದುವನ್ನು ಪ್ರಸ್ತಾಪಿಸುವಾಗ ಇವು ಪ್ರಸಾರದಲ್ಲಿರುವ ನಿರ್ದಿಷ್ಟ ಪ್ರದೇಶವನ್ನು ಗುರುತಿಸಿ ಹೇಳುವುದು ವಾಡಿಕೆ. ಏಕೆಂದರೆ ಜನಜೀವನ ಒಂದೊಂದು ಪ್ರದೇಶದಲ್ಲೂ ಬೇರೆ ಬೇರೆಯಾಗಿರುವುದರಿಂದ ಒಂದೊಂದು ಪ್ರದೇಶದ ಜಾನಪದದಲ್ಲೂ ವ್ಯತ್ಯಾಸಗಳು ಕಂಡುಬರುತ್ತವೆ; ಆದರೆ ಯಾವುದೇ ಪ್ರದೇಶದ ಜನಪದ ಕಲೆಯನ್ನು ತೆಗೆದುಕೊಂಡರೂ ಜನಪದ ಸಾಹಿತ್ಯ ಸಂಗೀತಗಳು ಒಂದಕ್ಕೊಂದು ಪೂರಕವಾಗಿರುವುದನ್ನು ಕಾಣಬಹುದು. ಎಷ್ಟೋ ವೇಳೆ ಜನಪದ ಸಾಹಿತ್ಯವನ್ನು ಅಚ್ಚಿನಲ್ಲಿ ಓದಿದಾಗ ಸ್ವಾರಸ್ಯಕರವಾಗಿ ಕಾಣದಿರಬಹುದು ; ಆದರೆ ಆ ಸಾಹಿತ್ಯ ಮೂಡಿಬಂದ ಪ್ರದೇಶದಲ್ಲಿ ಜನ ಅದನ್ನು ಹಾಡುವ ಮಟ್ಟಿನಲ್ಲೇ ಹಾಡಿದಾಗ, ಅದರ ಸೊಬಗು ಎದ್ದುಕಾಣುತ್ತದೆ. ಜನಪದ ಸಾಹಿತ್ಯ ಅಥವಾ ಜನಪದ ಸಂಗೀತ ಇಲ್ಲವೆ ಅವೆರಡಕ್ಕೂ ಸಹಜವಾಗಿ ಹೊಂದಿಕೊಂಡದ್ದು ಜನಪದ ನೃತ್ಯ.

ಶಾಸ್ತ್ರೀಯ ಸಂಗೀತದ ಗಂಧ ಇಲ್ಲದವರನ್ನೂ ಜನಪದ ಸಂಗೀತ ಆಕರ್ಷಿಸುತ್ತದೆ. ರಾಗದ ಸರಳತೆಯಿಂದಾಗಿ ಅದನ್ನು ಅನುಕರಿಸುವುದೂ ಸುಲಭ. ಶಾಸ್ತ್ರೀಯ ಸಂಗೀತಕ್ಕಿಂತ ಜನಪದ ಸಂಗೀತವೇ ಹಳೆಯದು.

ಗ್ರಾಮಜೀವನದಲ್ಲಿ ಜನಪದ ಸಂಗೀತ ಹಾಸುಹೊಕ್ಕಾಗಿದೆ. ಜೀವನದ ಒಂದೊಂದು ಸಂದರ್ಭಕ್ಕೆ ಸಂಬಂಧಿಸಿದಂತೆ ಜನಪದ ಗೀತೆಗಳಿವೆ. ದೋಣಿಯಲ್ಲಿ, ಗಾಡಿಯಲ್ಲಿ ಸಾಗಿ ಹೋಗುತ್ತಿರುವಾಗ, ವ್ಯವಸಾಯ ಕಾರ್ಯದಲ್ಲಿ ನಿರತರಾಗಿರುವಾಗ, ರಾಗಿ ಬೀಸುವಾಗ, ಭತ್ತ ಕುಟ್ಟುವಾಗ, ತೊಟ್ಟಿಲು ತೂಗುವಾಗ. ಹೊತ್ತು ಸುಲಭವಾಗಿ ಜಾರಿ ಶ್ರಮ ಕಾಣದಿರಲೆಂದು ಹಾಡುವುದುಂಟು. ಪೂಜೆ, ಮದುವೆ ಮುಂತಾದ ಸಂದರ್ಭಗಳಲ್ಲೂ ಹಾಡುತ್ತಾರೆ. ಮನಸ್ಸನ್ನು ರಂಜಿಸುವ ಸಲುವಾಗಿಯೇ ಕಥನ ಗೀತೆಗಳನ್ನೂ ಇತರ ಹಾಡುಗಳನ್ನೂ ಹಾಡುವುದುಂಟು. ಹೊತ್ತು ಕಳೆಯುವ ಸಲುವಾಗಿ ಹಾಡುವ ಗೀತೆಗಳೂ ವರ್ಣನೆಗಳಿಂದೊಡಗೂಡಿದ ದೀರ್ಘ ಹಾಡುಗಳೂ ಇವೆ. ಸಂದರ್ಭೋಚಿತವಾಗಿ ಬೇರೆ ಬೇರೆ ಮಟ್ಟುಗಳಲ್ಲಿ ಹಾಡಲು ಅನುಕೂಲವಾಗುವಂತೆ ಇವು ರಚಿತವಾಗಿವೆ.

ಜನಪದ ನೃತ್ಯಗಳೂ ವೈವಿಧ್ಯಮಯವಾದುವು. ಸುಗ್ಗಿ ಕುಣಿತ, ವೈದ್ಯರ ಕುಣಿತ—ಹೀಗೆ. ಯಕ್ಷಗಾನ ಬಯಲಾಟಗಳು ಜನಪದ ಸಂಗೀತ ನೃತ್ಯಗಳನ್ನು ಒಳಗೊಂಡ ಪ್ರಸಿದ್ಧ ನಾಟಕರೂಪಗಳು. ಸೂತ್ರದಗೊಂಬೆಯಾಟ, ತೊಗಲು ಗೊಂಬೆಯಾಟಗಳು ಜನಪದ ನಾಟಕದ ಇತರ ಪ್ರಕಾರಗಳು.

ಜಾನಪದವನ್ನು ವೈಜ್ಞಾನಿಕವಾಗಿ ಅಭ್ಯಾಸಮಾಡುವ ಪರಿಪಾಠ ಇದೀಗ ಎಲ್ಲೆಡೆ ಆಚರಣೆಗೆ ಬರುತ್ತಿದೆ.

ನೋಡಿ : ಯಕ್ಷಗಾನ ; ಸೂತ್ರದ ಗೊಂಬೆ ಆಟ

## ಜಾನ್ಸನ್

"ನೋಡು ದೊರೆ, ಅದು ಬರುತ್ತಿದೆ !"—ಹ್ಯಾಮ್ಲೆಟ್ ನಾಟಕದಲ್ಲಿ ಬರುವ ಮಾತಿದು. ಹ್ಯಾಮ್ಲೆಟನ ತಂದೆಯ ಭೂತ ಕಾಣಿಸಿಕೊಂಡಾಗ, ಹೊರಾಷಿಯೋ ತನ್ನ ಮಿತ್ರ ಹ್ಯಾಮ್ಲೆಟ್‌ಗೆ ಅದನ್ನು ತೋರಿಸುತ್ತ ಹೀಗೆ ಹೇಳುತ್ತಾನೆ. ಜಾನ್ಸನನ ಪರಿಚಯವಿಲ್ಲದ ಜೇಮ್ಸ್ ಬಾಸ್‌ವೆಲ್‌ಗೆ ಅವನ ಗೆಳೆಯನೊಬ್ಬ, ಜಾನ್ಸನನ ಬರವನ್ನು ತಿಳಿಸಿದ್ದೂ ಹೀಗೆಯೇ. ಜಾನ್ಸನ್ ಒಂದು ವಿಧದಲ್ಲಿ ಭೂತವೇ. ಅವನದು ಭಾರಿ ಶರೀರ, ಮಹಾ ವಿದ್ವತ್ತು, ಅಗಾಧ ಬುದ್ಧಿವಂತಿಕೆ. ಜೊತೆಗೆ ಒರಟುತನ. ಆದರೆ ಮಗುವಿನಂಥ ಮುಗ್ಧ ಮನಸ್ಸಿನ ಈ ಮಹಾಪುರುಷ ಅತಿ ಕುತೂಹಲಜನಕ ವ್ಯಕ್ತಿ. ಇತರ ಅನೇಕರಂತೆ ಈತನೂ ಕವನ, ನಾಟಕ, ಪ್ರಬಂಧಗಳನ್ನು ಬರೆದ. ಒಂದು ಉತ್ತಮ ನಿಘಂಟನ್ನೂ ರಚಿಸಿದ. ಆದರೆ ಇವನು ಇಂದೂ ಜೀವಂತವಾಗಿ ಉಳಿದಿರುವುದು ಅವನ ಮಾತುಗಾರಿಕೆಯ ಖ್ಯಾತಿಯಿಂದ.

ಸ್ಟಾಫರ್ಡ್‌ಷೈರ್‌ನಲ್ಲಿ, 1709ನೆಯ ಸೆಪ್ಟೆಂಬರ್ 18ರಂದು ಹುಟ್ಟಿದ ಸ್ಯಾಮುಯಲ್ ಜಾನ್ಸನ್ ಒಬ್ಬ ಪುಸ್ತಕ ವ್ಯಾಪಾರಿಯ ಮಗ. ಬಾಲ್ಯದಿಂದಲೂ ಅವನ ಆರೋಗ್ಯ ಅಷ್ಟಕಷ್ಟೆ. ತಂದೆಯ ಪುಸ್ತಕದ ಅಂಗಡಿಯಲ್ಲಿ ಕುಳಿತು ಪುಸ್ತಕಗಳನ್ನು ಓದಿದ್ದೂ ಓದಿದ್ದೇ. ಕ್ರಮೇಣ, ಒಂದು ಪುಸ್ತಕವನ್ನು ಅತಿ ಕಡಮೆ ಕಾಲದಲ್ಲಿ ಓದಿ, ಅದರ ನಿಜವಾದ ಸತ್ತ್ವವನ್ನು ಬಹುಬೇಗ ಗ್ರಹಿಸುವ ಸಾಮರ್ಥ್ಯ ಪಡೆದ. ಇವನ ಸ್ನೇಹಿತರ ಸಂಖ್ಯೆ ಮಾತ್ರ ಚಿಕ್ಕದು. ಅದಕ್ಕೆ ಕಾರಣ ಇವನ ಮುಂಗೋಪ.

ಹುಟ್ಟೂರಿನ ಶಾಲೆಯಲ್ಲಿ ಪಾಠ ಕಲಿತು ಸಿರಿವಂತ ನೆರೆಮನೆಯವನ ನೆರವನ್ನು ನಂಬಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯಕ್ಕೆ ಸೇರಿದ. ನೆರವು ಬರಲಿಲ್ಲ. ಎರಡು ವರ್ಷಗಳ ಅನಂತರ ಆಕ್ಸ್‌ಫರ್ಡ್‌ನಿಂದ ಹಿಂದಿರುಗಿದ.

ಮೊದಲು ಶಾಲೆಯೊಂದರಲ್ಲಿ ಉಪಾಧ್ಯಾಯನಾದ ; ಆದರೆ ಅದು ಸರಿ ಹೋಗಲಿಲ್ಲ. ತನ್ನ 26ನೆಯ ವಯಸ್ಸಿನಲ್ಲಿ ತನಗಿಂತ ಸುಮಾರು ಎರಡರಷ್ಟು ವಯಸ್ಸಾದ ವಿಧವೆಯೊಬ್ಬಳನ್ನು ಮದುವೆಯಾಗಿ, ತನ್ನದೇ ಶಾಲೆಯನ್ನು ಪ್ರಾರಂಭಿಸಿದ. ಅದೂ ಸರಿಹೋಗದೆ, ತನ್ನ ಶಿಷ್ಯ ಡೇವಿಡ್ ಗ್ಯಾರಿಕ್‌ನನ್ನು ಕರೆದುಕೊಂಡು ಹಣಗಳಿಸಲೆಂದು ಲಂಡನಿಗೆ ಹೊರಟ. ಅಲ್ಲಿ ಗ್ಯಾರಿಕ್ ಪ್ರಮುಖ ನಟನಾದ; ಜಾನ್ಸನ್ ತನ್ನ ಕಾಲದ ಅತಿ ಪ್ರಮುಖ ಸಾಹಿತಿ ಎನಿಸಿಕೊಂಡ.

ಮೊದಲಿಗೆ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತಿದ್ದ ಜಾನ್ಸನ್ 1750ರ ವೇಳೆಗೆ ತನ್ನದೇ ಆದ 'ದಿ ರ್‍ಯಾಂಬ್ಲರ್' ಎಂಬ ದ್ವಿವಾರ ಪತ್ರಿಕೆಯನ್ನು ಪ್ರಾರಂಭಿಸಿ, ಅದರಲ್ಲಿ ಲೇಖನಗಳನ್ನು ಬರೆದು ಪ್ರಖ್ಯಾತನಾದ. ಇದಕ್ಕೆ ಮೊದಲೇ 'ಐರೀನ್' (1737) ಎಂಬ ಟ್ರಾಜಿಡಿಯನ್ನೂ 'ಲಂಡನ್' (1738) ಎಂಬ ಕವನವನ್ನೂ ಬರೆದಿದ್ದ. 'ಐರೀನ್' ನಾಟಕವನ್ನು ಗ್ಯಾರಿಕ್ 1748ರಲ್ಲಿ ರಂಗದ ಮೇಲೆ ತಂದ. ಇದೇ ಹೊತ್ತಿಗೆ ಇವನ 'ದಿ ವ್ಯಾನಿಟಿ ಆಫ್ ಹ್ಯೂಮನ್ ವಿಷನ್' ಎಂಬ ಕವನವೂ ಪ್ರಕಟವಾಯಿತು. ಈ ಸಮಯದಲ್ಲೇ—ಒಂದು ನಿಘಂಟನ್ನು ತಯಾರಿಸುವ ಕಾರ್ಯವನ್ನು ಕೆಲವು ಪ್ರಕಾಶಕರು ಇವನಿಗೆ ಒಪ್ಪಿಸಿದರು.

ಎಂಟು ಮಂದಿ ಸಹಾಯಕರೊಂದಿಗೆ ಈ ನಿಘಂಟಿನ ರಚನೆಗಾಗಿ ಜಾನ್ಸನ್ ೮೧೦ ವರ್ಷ ದುಡಿದ. ಅನೇಕ ಕೃತಿಗಳಿಂದ ಆಯ್ದ ವಾಕ್ಯಗಳನ್ನು ಈ ನಿಘಂಟಿನಲ್ಲಿ ಉದಹರಿಸಿ, ಪದಗಳ ವಿವಿಧ ಅರ್ಥಗಳನ್ನು ಸ್ಪಷ್ಟಪಡಿಸಿದ. ಇದು ಜಾನ್ಸನನ ನಿಘಂಟಿನ ಅತ್ಯಂತ ಗಮನಾರ್ಹ ಅಂಶ. 1775ರಲ್ಲಿ ಈ ನಿಘಂಟು ಪ್ರಕಟವಾಯಿತು.

ಲಾರ್ಡ್ ಚೆಸ್ಟರ್‌ಫೀಲ್ಡ್ ಎಂಬವನಿಗೆ ತನ್ನ ನಿಘಂಟಿನ ವಿಷಯ ತಿಳಿಸಿ, ಹಣ ಸಹಾಯ ಕೇಳಿದಾಗ ಚೆಸ್ಟರ್‌ಫೀಲ್ಡ್ ಅದಕ್ಕೆ ಕಿವಿಗೊಡಲಿಲ್ಲ. ನಿಘಂಟು ಪ್ರಕಟವಾದ ಮೇಲೆ ಚೆಸ್ಟರ್‌ಫೀಲ್ಡ್ ಅದರ ಬಗೆಗೆ ಪತ್ರಿಕೆಯಲ್ಲಿ ಲೇಖನ ಬರೆದು ಹೊಗಳಿದ. ಜಾನ್ಸನ್ ಆ ಸಮಯದಲ್ಲಿ ಅವನಿಗೆ ಬರೆದ ಪತ್ರ ಖಾರವಾದ. ಆದರೂ ಗಂಭೀರವಾದ, ಶೈಲಿಗೆ ಸಾಕ್ಷಿ. ತನ್ನ ನಿಘಂಟಿನಲ್ಲಿ 'ಪೋಷಕ' ಎಂಬ ಪದಕ್ಕೆ ಜಾನ್ಸನ್ ಕೊಟ್ಟಿರುವ ಅರ್ಥ, ಪೋಷಕರ ಬಗೆಗೆ ಅವನಿಗುಂಟಾಗಿದ್ದ ತಿರಸ್ಕಾರ, ಕೋಪಗಳನ್ನು ತೋರಿಸುತ್ತದೆ–'ಪೋಷಕ: ದುರಹಂಕಾರದಿಂದ ಸಹಾಯಮಾಡಿ, ಹೊಗಳಿಕೆಯ ಸಂಬಳ ಪಡೆವ ನೀಚ'.

ಜಾನ್ಸನ್ ಬಡತನದಲ್ಲಿ ಬೆಳೆದವನು. ಅವನ ತಾಯಿ ಸತ್ತಾಗ ಶವ ಸಂಸ್ಕಾರಕ್ಕೆ ಕೂಡ ಅವನಲ್ಲಿ ಹಣವಿರಲಿಲ್ಲ. ಆಗ 'ರಾಸೆಲಸ್' ಎಂಬ ಕೃತಿ ರಚಿಸಿ ವೆಚ್ಚಕ್ಕೆ ಹಣ ಸಂಪಾದಿಸಿದ.

1762ರಲ್ಲಿ ಸರಕಾರ ಇವನಿಗೆ ವರ್ಷಕ್ಕೆ 300 ಪೌಂಡ್‌ಗಳ ನಿವೃತ್ತಿ ವೇತನವಿತ್ತಿತು. ಇವರಿಂದ ಜಾನ್ಸನನ ಹಣದ ತೊಂದರೆ ಬಗೆಹರಿಯಿತು. ನಟ ಗ್ಯಾರಿಕ್, ಕಲಾವಿದ ಜೋಷುವ ರೇನಾಲ್ಡ್ಸ್, ಚರಿತ್ರೆಕಾರ ಎಡ್ವರ್ಡ್ ಗಿಬ್ಬನ್, ರಾಜನೀತಿಜ್ಞ ಎಡ್ಮಂಡ್ ಬರ್ಕ್, ಲೇಖಕ ಆಲಿವರ್ ಗೋಲ್ಡ್‌ಸ್ಮಿತ್ ಮತ್ತು ಬಾಸ್‌ವೆಲ್‌ರೊಂದಿಗೆ ಒಂದೆಡೆ ಕುಳಿತು ಸಾಹಿತ್ಯ–ತತ್ತ್ವಜ್ಞಾನವೇ ಮೊದಲಾದ ಅನೇಕ ವಿಷಯಗಳ ಬಗೆಗೆ ಗಂಭೀರವಾಗಿ ಆದರೂ ಅತ್ಯಂತ ಕುತೂಹಲಕಾರಿಯಾಗಿ ಚರ್ಚೆ ಮಾಡುತ್ತಿದ್ದ. ಇವನ ಅಪ್ರತಿಮ ವಾಕ್ಚಾತುರ್ಯ, ಮಹಾ ವಿದ್ವತ್ತು, ಪ್ರಬಲ ವ್ಯಕ್ತಿತ್ವದಿಂದಾಗಿ ಆ ಮಾತುಕತೆಗಳಲ್ಲಿ ಇವನೇ ಎದ್ದುಕಾಣುತ್ತಿದ್ದ.

ಬಾಸ್‌ವೆಲ್ ತಾನು ಜಾನ್ಸನನೊಂದಿಗಿದ್ದಾಗ ನಡೆದ ಮಾತುಕತೆಗಳ ಟಿಪ್ಪಣಿ ಬರೆದಿಟ್ಟುಕೊಂಡಿದ್ದು ಅನಂತರ ಅದನ್ನು ಜಾನ್ಸನನ ಜೀವನ ಚರಿತ್ರೆಯ ರೂಪದಲ್ಲಿ ಪ್ರಕಟಿಸಿದ.

ಜಾನ್ಸನ್ ಶೇಕ್ಸ್‌ಪಿಯರನ ನಾಟಕಗಳನ್ನು ಸಂಪಾದಿಸಿದ. ಇದಕ್ಕೆ ಮುನ್ನುಡಿಯಾಗಿ ಬರೆದ ಇವನ ವಿಮರ್ಶೆ ಆಂಗ್ಲ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯಾಗಿದೆ. ಕೆಲವು ಕವಿಗಳನ್ನು ಕುರಿತು ಬರೆದ ಇವನ 'ಕವಿಗಳ ಜೀವನ' ಗಮನಾರ್ಹವಾದದ್ದು.

ಜಾನ್ಸನನ ಪ್ರತಿಯೊಂದು ಮಾತೂ ಅತಿ ಸ್ಪಷ್ಟ : ತುಂಬ ಅರ್ಥವತ್ತಾದದ್ದು. ಮೊದಲ ಬಾರಿಗೆ ಇವನ ಮಾತನ್ನು ಕೇಳಿದವನೊಬ್ಬ, ''ಜಾನ್ಸನನ ಮಾತು ದ್ವಿತೀಯ ಮುದ್ರಣದಂತೆ. ಒಂದೂ ತಪ್ಪಿಲ್ಲದ್ದು!'' ಎಂದು ಉದ್ಗರಿಸಿದನಂತೆ. ವಾದದಲ್ಲಿ ಎಂದೂ ಸೋತವನಲ್ಲ ಜಾನ್ಸನ್. ಅವನನ್ನು ಕುರಿತು ಗೋಲ್ಡ್‌ಸ್ಮಿತ್ ''ತನ್ನ ಪಿಸ್ತೂಲಿನಿಂದ ಗುಂಡು ಹಾರದಿದ್ದರೆ, ಪಿಸ್ತೂಲಿನ ಹಿಂಭಾಗದಿಂದಲಾದರೂ ಎದುರಾಳಿಯನ್ನು ಹೊಡೆದು ಉರುಳಿಸುತ್ತಿದ್ದ'' ಎಂದಿದ್ದಾನೆ. ತೀರ ವಿಮರ್ಶಾತ್ಮಕ ದೃಷ್ಟಿಯಿಂದ ಹೇಳುವುದಾದರೆ ಜಾನ್ಸನನಿಗಿಂತ ಉತ್ತಮ ಕವಿಗಳೂ ನಾಟಕಕಾರರೂ ಪ್ರಬಂಧಕಾರರೂ ಅವನ ಕಾಲದಲ್ಲೇ ಇದ್ದರು. ಆದರೆ ಯಾರೂ ಇವನಷ್ಟು ಪ್ರಭಾವಶಾಲಿಗಳಾಗಲಿಲ್ಲ. ಅಗಾಧ ಪಾಂಡಿತ್ಯ, ಬುದ್ಧಿಮತ್ತೆ, ತೀರ ವಿಚಿತ್ರವೆನಿಸುವ ಕೆಲವು ನಡೆವಳಿಕೆ, ಪ್ರಚಂಡ ಮಾತುಗಾರಿಕೆ—ಇವು ಅವನನ್ನು ಆ ಕಾಲದ 'ಸಾಹಿತ್ಯ ಸರ್ವಾಧಿಕಾರಿ' ಯನ್ನಾಗಿ ಮಾಡಿದ್ದುವು.

ಅಸಮಾನ ಜಾನ್ಸನ್

ತನ್ನ 76ನೆಯ ವಯಸ್ಸಿನಲ್ಲಿ (13ನೆಯ ಡಿಸೆಂಬರ್ 1784) ಜಾನ್ಸನ್ ನಿಧನನಾದ. ವೆಸ್ಟ್‌ಮಿನ್‌ಸ್ಟರ್ ಆಬೀಯಲ್ಲಿ ಅವನ ಸಮಾಧಿಯಾಯಿತು. ಇವನು ಹುಟ್ಟಿದೂರಿನಲ್ಲಿ ಮತ್ತು ಲಂಡನಿನಲ್ಲಿ ಇವನು ಜೀವಿಸಿದ್ದ ಮನೆಗಳು ಈಗ ಇವನನ್ನು ಕುರಿತ ವಸ್ತುಸಂಗ್ರಹಾಲಯಗಳಾಗಿವೆ. ಇವನ ಸಮಾಧಿಯ ಮೇಲಿರುವ ಚರಮವಾಕ್ಯದ ಕೆಲವು ಸಾಲುಗಳಿವು :

> ''ಓದುಗನೆ ಎಚ್ಚರವಿರಲಿ—ಇಲ್ಲಿ ಮಲಗಿಹನು ಜಾನ್ಸನ್
> ನಡೆ ಸದ್ದಿಲ್ಲದೆ; ಇಲ್ಲವೆ ನೀನೆಚ್ಚರಿಸುವೆ ಮಲಗಿರುವ ಕರಡಿಯನ್
> ..............................................................
> ಇವ ವಿದ್ವಾಂಸ, ಶ್ರದ್ಧಾಳು, ಜೊತೆಗೆ ಮಹಾ ಒರಟ''

**ನೋಡಿ :** ಗೋಲ್ಡ್‌ಸ್ಮಿತ್ ; ಬಾಸ್‌ವೆಲ್

## ಜಾಸ್ಜ್ ಸಂಗೀತ

'ಜಾಸ್ಜ್' ಎಂಬ ಪದದ ನಿಷ್ಕೃಷ್ಟ ನಿರೂಪಣೆ ಕಷ್ಟ. ಫ್ರೆಂಚ್ ಭಾಷೆಯಲ್ಲಿ 'ಜಾಸ್ಜ್' ಎಂದರೆ ಹರಟೆ. ವಾದ್ಯಗಳು ನಾನಾ ಬಗೆಯಾಗಿ ನುಡಿಯುತ್ತ ನಡೆಸುವ ಹರಟೆಯೇ ಜಾಸ್ಜ್ ಸಂಗೀತ. ಇದು ಜಗತ್ತಿನ ಅತ್ಯಂತ ಅಶುದ್ಧ ಸಂಗೀತ ಎಂದರೂ ಸರಿಯೇ. ಆಫ್ರಿಕದ ನೀಗ್ರೋಗಳ ಮತ್ತು ಅಮೆರಿಕದ ರೆಡ್ ಇಂಡಿಯನರ ಜಾನಪದ ಸಂಗೀತ, ಇಂಗ್ಲೆಂಡಿನ ಲಾವಣಿ, ಫ್ರಾನ್ಸ್ ಮತ್ತು ಸ್ಪೇನಿನ ನೃತ್ಯ ಸಂಗೀತ, ಹಾಗೂ ಅಮೆರಿಕದ ಸೈನ್ಯಗಳ ಮಾರ್ಚಿಂಗ್ ಟ್ಯೂನ್‌ಗಳೆಲ್ಲ ಬೆರೆತು ಜಾಸ್ಜ್ ಸಂಗೀತವಾಯಿತು. ನಿಯತಕ್ರಮದಲ್ಲಿ ಮಿಡಿಯುವ ಲಯ ಇದರ ವೈಶಿಷ್ಟ್ಯ. ಸರಳವಾದ



ನೂತನ ಸಂಗೀತ : ಡ್ಯೂಕ್

ರಚನೆ. ಉತ್ಸಾಹಕಾರಿ ಬೂದ ಲಯಬದ್ಧತೆ, ಎದ್ದು ತೋರುವ ಭಾವಾವೇಶ —ಇವು ಜಾಸ್ ಸಂಗೀತದ ಲಕ್ಷಣಗಳು.

ಅಮೆರಿಕದ ತೋಟಗಳಲ್ಲಿದ್ದ ನೀಗ್ರೊ ಗುಲಾಮರು ತಾವೇ ತಯಾರಿಸಿದ ಸಂಗೀತೋಪಕರಣಗಳಿಂದ ಬಾರಿಸುತ್ತಿದ್ದ ಒರಟು ಸಂಗೀತದಿಂದಲೇ ಜಾಸ್ ಬೆಳೆದು ಬಂದದ್ದು. ಮುಂದೆ ಉತ್ತಮ ಉಪಕರಣಗಳನ್ನು ಪಡೆಯಲು ಸಾಧ್ಯವಾದ ಬಳಿಕ ಇಂಥ ಸಂಗೀತಗಾರರ ಹಲವು ತಂಡಗಳು ರೂಪುಗೊಂಡುವು. ಇವು ವಿಶಿಷ್ಟ ನೃತ್ಯ ಸಂಗೀತವನ್ನು ಸೃಷ್ಟಿಸುತ್ತಿದ್ದುವು. ಮದುವೆ, ಚುನಾವಣೆ, ಸ್ಮಶಾನಯಾತ್ರೆಗಳಂಥ ಸಂದರ್ಭಗಳಲ್ಲೂ ಈ ತಂಡದವರು ಸಂಗೀತ ಒದಗಿಸುತ್ತಿದ್ದರು. ಇಂಥ ಪಂಗಡಗಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದದ್ದು ಅಮೆರಿಕದ ನ್ಯೂ ಆರ್ಲಿಯನ್ಸ್‌ನಲ್ಲಿ. ಆದರೆ ಅಲ್ಲೂ 'ಸುಶಿಕ್ಷಿತ' ವರ್ಗದ ಜನ ಈ ಸಂಗೀತವನ್ನು 'ಚರಂಡಿ ಸಂಗೀತ' ಎಂದು ಕರೆಯುತ್ತಿದ್ದರು.

ಜಾಸ್ ಸಂಗೀತದ ಹುಚ್ಚು ಇಡೀ ಅಮೆರಿಕವನ್ನು ವ್ಯಾಪಿಸಿದ್ದು 1917 ರಲ್ಲಿ —ಜಾಸ್‌ನ ಧ್ವನಿಮುದ್ರಿಕೆಗಳು ತಯಾರಾಗಿ ಮಾರಾಟಕ್ಕೆ ಬಂದಾಗ ನೀಗ್ರೋ ಜನರು ಮಾತ್ರವಲ್ಲದೆ ಬಿಳಿಯರೂ ಜಾಸ್ ಸಂಗೀತ ತಂಡಗಳನ್ನು ಕಟ್ಟಿಕೊಂಡು ಸಂಚರಿಸಲು ಆರಂಭಿಸಿದರು. ನೃತ್ಯ ಸಂಗೀತವಾಗಿ ಅಥವಾ ಸಾಮಾಜಿಕ ಕೂಟಗಳಲ್ಲಿ ಮಾತ್ರ ಕೇಳಿಬರುತ್ತಿದ್ದ ಈ ಸಂಗೀತ ಪ್ರತ್ಯೇಕ ಕಚೇರಿಗಳಲ್ಲೂ ಕೇಳಿಬರತೊಡಗಿತು. ವರ್ಷಗಳು ಕಳೆದಂತೆ ಜಾಸ್ ಹೆಚ್ಚು ಭಾವಪೂರಿತವಾಯಿತು. ಇದನ್ನು ಕೇಳಿ ಮೆಚ್ಚುವ ಜನರ ಸಂಖ್ಯೆಯೂ ಬೆಳೆಯಿತು.

ಜಾಸ್ ಸಂಗೀತದ ಅತ್ಯಂತ ಕುತೂಹಲಕಾರಿ ಅಂಶವೆಂದರೆ ಅದರಲ್ಲಿ ಆಗುತ್ತಿರುವ ನಿರಂತರ ಬದಲಾವಣೆ. ಜಾಸ್ ಸಂಗೀತಗಾರರು ಕಚೇರಿಯೊಂದರಲ್ಲಿ ಒಂದು ಸಂಗೀತ ರಚನೆಯನ್ನು ಬಾರಿಸುತ್ತಿರುವಾಗಲೇ ಅದರಲ್ಲಿ ಸುಧಾರಣೆಗಳನ್ನು ಮಾಡುತ್ತ ಹೋಗುತ್ತಾರೆ. ಒಳ್ಳೆಯ ಜಾಸ್ ಸಂಗೀತ ಕಚೇರಿಯೊಂದರಲ್ಲಿ ಭಾಗವಹಿಸುವವರಿಗೆ ತಾವು ಹಿಂದೊಮ್ಮೆ ಕೇಳಿದ ಸಂಗೀತವನ್ನು ಕೇಳುತ್ತಿರುವಂತೆ ಅನಿಸುವುದಿಲ್ಲ : ಹೊಮ್ಮುವ ಹೊಸ ಸಂಗೀತ ರಚಿಸಲ್ಪಡುತ್ತಿರುವಂತೆ ಭಾಸವಾಗುತ್ತದೆ.

ಜಾಸ್ ಸಂಗೀತ ಸದಾ ಹೊಸ ಹೊಸ ರೂಪ ಪಡೆಯುತ್ತಿರುವುದರಿಂದ, ಅದು ಲಿಖಿತ ರೂಪದಲ್ಲಿರುವುದು ಕಡಮೆ.

ಜಾಸ್ ವಾದ್ಯ ತಂಡದಲ್ಲಿ ಹತ್ತು–ಹದಿನೈದು ಸಂಗೀತಗಾರರಿರುವುದು ಸಾಮಾನ್ಯ. ಪಿಯಾನೋ, ಡ್ರಮ್ಸ್, ಬಾಂಜೋ, ಗಿಟಾರ್, ಕ್ಲಾರಿಯೊನೆಟ್ ಮತ್ತು ಇತರ ತುತ್ತೂರಿಗಳಂಥ ವಾದ್ಯಗಳಿರುತ್ತವೆ. ಪ್ರತಿ ವಾದ್ಯಗಾರನೂ ತನ್ನ ವಾದನದಲ್ಲಿ ಆಗಿಂದಾಗ ಬದಲಾವಣೆಗಳನ್ನು ಮಾಡುತ್ತ ಹೋಗುತ್ತಾನಾದರೂ ಅದರಿಂದ ವಾದ್ಯಮೇಳದಲ್ಲಿ ಅವ್ಯವಸ್ಥೆ ತಲೆದೋರುವುದಿಲ್ಲ. ಕೆಲವೊಮ್ಮೆ ಒಂಟಿ ಸಂಗೀತಗಾರನ ಕಚೇರಿಗಳೂ ಇರುತ್ತವೆ.

ಜಾಸ್ ಸಂಗೀತ ರಚನೆ ಮಾಡಿದವರಲ್ಲಿ ಫರ್ಡಿನಾಂಡ್ ಮಾರ್ಟನ್ ಮತ್ತು ಡ್ಯೂಕ್ ಎಲಿಂಗ್ಟನ್ ಪ್ರಮುಖರು. ಅತ್ಯಂತ ಸುಂದರ ರಚನೆಗಳನ್ನು ಬರೆದವನೆಂದು ಡ್ಯೂಕ್ ಹೆಸರುವಾಸಿಯಾಗಿದ್ದಾನೆ. ಅಲಿಖಿತ ಮತ್ತು ಆಶು ಸಂಗೀತಗಳನ್ನು ಸೊಗಸಾಗಿ ಕಲ್ಪಿಸಿದವನೆಂದು ಮಾರ್ಟನ್ ಪ್ರಖ್ಯಾತನಾಗಿದ್ದಾನೆ. ಲೂಯಿ ಆರ್ಮ್‌ಸ್ಟ್ರಾಂಗ್‌ನ ತುತ್ತೂರಿ ವಾದನದಿಂದ ಪ್ರಭಾವಿತನಾಗದ ಜಾಸ್ ಸಂಗೀತಗಾರನಿಲ್ಲ. ಸಾಮಾನ್ಯ ಗೀತೆಯನ್ನೂ ಈತ ಅತಿಪ್ರಭಾವಶಾಲಿ ರೀತಿಯಲ್ಲಿ ಬಾರಿಸಬಲ್ಲವನಾಗಿದ್ದ. ಜಾಸ್ ಬೆಳವಣಿಗೆಯ ಚರಿತ್ರೆಯಲ್ಲಿ ಇಂಥ ಸಂಗೀತಗಾರರ ಸಾಧನೆಗಳು ಪ್ರಮುಖ ಘಟನೆಗಳೆನಿಸಿವೆ.

ಜಾಸ್ ಸಂಗೀತಗಾರರು ಆಗಾಗ ಒಂದು ಕಡೆ ಸೇರಿ ತಾವು ಸಾಧಿಸಿದ ಸುಧಾರಣೆಗಳ ಬಗೆಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಾರೆ. ಇಂಥ ಸಂಗೀತಕೂಟಗಳಿಗೆ 'ಜಾಮ್ ಸೆಷನ್ಸ್' ಎನ್ನುತ್ತಾರೆ.

ಜನಪ್ರಿಯ ಸಂಗೀತ ಪ್ರಕಾರಗಳು, ನೃತ್ಯ ಸಂಗೀತ ಮುಂತಾದುವೆಲ್ಲ ಜಾಸ್‌ನಿಂದ ಪ್ರಭಾವಿತವಾಗಿವೆ.

ನೋಡಿ : ಆಧುನಿಕ ಸಂಗೀತ ; ನೀಗ್ರೊ ಸಂಗೀತ ; ಲೂಯಿ ಆರ್ಮ್‌ಸ್ಟ್ರಾಂಗ್

## ಜಿಯತ್ತೊ

ಕುರಿ ಕಾಯುತ್ತಿದ್ದ ಬಾಲಕನೊಬ್ಬ ಬಂಡೆಯ ಮೇಲೆ ಇದ್ದಿಲಿನಿಂದ ಕುರಿಯ ಚಿತ್ರವನ್ನು ಬರೆಯುತ್ತಿದ್ದ. ಆ ದಾರಿಯಲ್ಲಿ ಹೋಗುತ್ತಿದ್ದ ಆ ಕಾಲದ ಫ್ಲಾರೆನ್ಸಿನ ಸುಪ್ರಸಿದ್ಧ ಚಿತ್ರಕಾರ ಚೀಮಾಬೂಏ ಚಿತ್ರದ ವಾಸ್ತವಿಕತೆಯಿಂದ ಆಕರ್ಷಿತನಾದ. ಹುಡುಗನ ತಂದೆ ಜಮೀನುದಾರ. ಆತನನ್ನೊಪ್ಪಿಸಿ ಹುಡುಗನನ್ನು ತನ್ನೊಡನೆ ಫ್ಲಾರೆನ್ಸಿಗೆ ಕರೆದುಕೊಂಡು ಹೋಗಿ ಕಲಾ ಶಿಕ್ಷಣ ಕೊಡಲಾರಂಭಿಸಿದ.

ಆ ಬಾಲಕ– ತನ್ನ ಜೀವಿತಕಾಲದಲ್ಲಿಯೇ ಖ್ಯಾತಿಯ ಶಿಖರವನ್ನೇರಿದ ಮೊದಲ ಕಲಾವಿದ ಜಿಯತ್ತೊ.

ಚಿತ್ರಕಲೆಯಲ್ಲಿ ಅಲಂಕರಣಕ್ಕೆ ಪ್ರಾಧಾನ್ಯವಿದ್ದ ಕಾಲದಲ್ಲಿ ಜಿಯತ್ತೊ ಕಲಾಜಗತ್ತನ್ನು ಪ್ರವೇಶಿಸಿದ. ಸಂಪ್ರದಾಯಬದ್ಧ ಚಿತ್ರಣಕ್ಕೆ ಬೆಲೆ ಕೊಡದೆ ಕಂಡುದನ್ನು ಕಂಡ ಹಾಗೆ ಚಿತ್ರಿಸಿದ. ಆತ ಚಿತ್ರಿಸಿದ ವ್ಯಕ್ತಿಗಳ ಮುಖದಲ್ಲಿ ಸಿಟ್ಟು, ಹೆದರಿಕೆ, ಪ್ರೀತಿ ಮೊದಲಾದ ಭಾವಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿತ್ತು.

ಅಸಿಸಿಯ ಸಂತ ಫ್ರಾನ್ಸಿಸ್ ಮೃತನಾಗಿ ಐವತ್ತು ವರ್ಷ ಕಳೆದಿದ್ದರೂ ಜನ ಆತನ ಬೋಧನೆಯಲ್ಲಿ ಶ್ರದ್ಧೆ ಇಟ್ಟಿದ್ದರು. ಆತನ ಹೆಸರಿನಲ್ಲಿ ಕಟ್ಟಿಸಿದ ಕ್ರೈಸ್ತ ದೇವಾಲಯದ ಒಳಗೋಡೆಗಳಲ್ಲಿ ಚಿತ್ರಗಳನ್ನು ಬರೆಯಲು ಜಿಯತ್ತೋನ ಸಹಾಯವನ್ನು ಕೋರಿದರು. ಜಿಯತ್ತೊ ಆ ಇಗರ್ಜಿಯಲ್ಲಿ ಸಂತನ ಜೀವನಕ್ಕೆ ಸಂಬಂಧಿಸಿದ ೨೮ ಚಿತ್ರಗಳನ್ನು ರಚಿಸಿದ. ವಿವಿಧ



"ನಾನು ಜಿಯುತ್ತೊ"

ಬಣ್ಣಗಳ ನೆರವಿನಿಂದ ಚಿತ್ರಗಳನ್ನು ಭಾವಪೂರ್ಣವನ್ನಾಗಿ ರೂಪಿಸಿದ. ಏಳು ಶತಮಾನ ಕಳೆದಿದ್ದರೂ ಈ ಚಿತ್ರಗಳು ಈಗಲೂ ಜನರನ್ನು ಆಕರ್ಷಿಸುತ್ತಿವೆ.

ಜಿಯುತ್ತೊ ಪ್ರಸಿದ್ಧಿ ತಂದ ಇನ್ನೊಂದು ಸೃಷ್ಟಿ: ಉತ್ತರ ಇಟಲಿಯ ಪಾದುವಾ ನಗರದ ಕ್ರೈಸ್ತ ಆರಾಧನಾ ಮಂದಿರದಲ್ಲಿರುವ ಭಿತ್ತಿಚಿತ್ರಗಳು. ಆ ಚಿತ್ರಗಳಿಗೆ ಇಟಲಿಯ ಮಹಾಕವಿ ದಾಂತೆ ಮಾರುಹೋದ.

ಒಮ್ಮೆ ಚಿಮಾಬೂಏ ಒಂದು ಮುಖವನ್ನು ಚಿತ್ರಿಸುತ್ತಿದ್ದ. ಜಿಯುತ್ತೊ ಅಲ್ಲೇ ಕುಳಿತಿದ್ದವನು. ಗುರು ಏತಕ್ಕೋ ಆ ಕಡೆ ತಿರುಗಿದಾಗ ಚಿತ್ರಿತ ವ್ಯಕ್ತಿಯ ಮೂಗಿನ ಮೇಲೆ ಒಂದು ನೊಣವನ್ನು ಚಿತ್ರಿಸಿದ. ಚಿಮಾಬೂಏ ಅದನ್ನು ಜೀವಂತ ನೊಣವೆಂದೇ ತಿಳಿದು, ಕೈಬೀಸಿ ಓಡಿಸಲೆತ್ನಿಸಿ ವಿಫಲನಾದ, ಅದು ನೊಣದ ಚಿತ್ರ ಎಂದು ಬೆರಗಾದ!

ಜಿಯುತ್ತೊ ಹೆಚ್ಚಾಗಿ ಚಿತ್ರಿಸುತ್ತಿದ್ದುದು ವ್ಯಕ್ತಿಚಿತ್ರಗಳನ್ನು. ಅವಕ್ಕೆ ತ್ರಿ–ಆಯಾಮವಿರುತ್ತಿತ್ತು. ಪ್ರಾಮಾಣಿಕತೆಯಿಂದ ಜಾಣ್ಮೆಯಿಂದ ಚಿತ್ರಿಸುತ್ತಿದ್ದ. ರಾಫೇಲ್, ಲಿಯೊನಾರ್ದೊ ದ ವಿಂಚಿ, ಮೈಕೆಲೆಂಜಲೊ ಜಗತ್ತನ್ನು ಇದ್ದಂತೆಯೇ ಚಿತ್ರಿಸುವ ಆತನ ರೀತಿಯನ್ನು ತಾವೂ ಅನುಸರಿಸಿದರು.

ಜಿಯುತ್ತೋವಿನದು ಬಹುಮುಖ ಪ್ರತಿಭೆ. ಅವನು ಚಿತ್ರಕಲೆಯೊಂದರಲ್ಲಿ ಮಾತ್ರ ಪರಿಣತನಾಗಿರಲಿಲ್ಲ. ಅವನು ಶಿಲ್ಪಿ, ಕವಿ, ಸಂಗೀತ ರಚನಾಕಾರ ಹಾಗೂ ವಾಸ್ತುಶಿಲ್ಪಿ ಕೂಡ. ಫ್ಲಾರೆನ್ಸಿನ ಅಧಿಕಾರಿಗಳು ಆತನನ್ನು ತಮ್ಮ ಊರಿನಲ್ಲಿ ಬಂದು ನೆಲೆಸಬೇಕೆಂದು ಆಹ್ವಾನಿಸಿದರು. ಆತನಿಗೆ 'ನಗರ ವಾಸ್ತುಶಿಲ್ಪಿ' ಎಂಬ ಬಿರುದುಕೊಟ್ಟು ಗೌರವಿಸಿದರು. ಫ್ಲಾರೆನ್ಸಿನ ಆರಾಧನಾ ಮಂದಿರದ ಗಂಟೆ ಗೋಪುರವನ್ನು ನಿರ್ಮಿಸುವ ಹೊಣೆಗಾರಿಕೆಯನ್ನೂ ಆತನಿಗೆ ಒಪ್ಪಿಸಿದರು.

ಜಿಯುತ್ತೋನ ಜೀವಿತಾವಧಿಯಲ್ಲಿ ಆ ಗೋಪುರ ಪೂರ್ಣವಾಗಲಿಲ್ಲ. ಅದು ಇಂದಿಗೂ ಪ್ರಪಂಚದ ವಿಖ್ಯಾತ ಗೋಪುರಗಳಲ್ಲಿ ಒಂದಾಗಿದೆ.

ಜಿಯುತ್ತೊ ಫ್ಲಾರೆನ್ಸಿನ ಬಳಿ ಇರುವ ಹಳ್ಳಿಯೊಂದರಲ್ಲಿ ಸುಮಾರು 1267ರಲ್ಲಿ ಜನಿಸಿದ. ಆತನ ಕಲಾಪ್ರತಿಭೆಗೆ ಮನಸೋತು ಸುತ್ತಮುತ್ತಲ ದೊರೆಗಳು ಅವನನ್ನು ತಮ್ಮಲ್ಲಿಗೆ ಆಹ್ವಾನಿಸುತ್ತಿದ್ದರು. ಕೀರ್ತಿ ಶಿಖರವನ್ನೇರಿದ್ದರೂ ಆತನಲ್ಲಿ ಆಡಂಬರವಿರಲಿಲ್ಲ. ಈ ಖ್ಯಾತ ಕಲಾವಿದ 1337ರಲ್ಲಿ ಮರಣಹೊಂದಿದ. ಆತನ ಗೋರಿಯ ಮೇಲೆ "ಯಾರ ಬಲಗೈಗೆ ಎಲ್ಲವೂ ಸಾಧ್ಯವಿತ್ತೋ, ಯಾರಿಂದ ಮೃತ ಚಿತ್ರಕಲೆ ಪುನರ್ಜನ್ಮ ಪಡೆಯಿತೋ, ಯಾರಿಂದ ಕಲೆ ಪ್ರಕೃತಿಯೊಡನೆ ಒಂದಾಯಿತೋ ಅವನೇ ನಾನು. ಏಕೆಂದರೆ ನಾನು ಜಿಯುತ್ತೊ" ಎಂದು ಸಮಾಧಿ ಲೇಖವನ್ನು ಕೆತ್ತಲಾಗಿದೆ.

## ಜೀವನಚರಿತ್ರೆ

ಜೀವನಚರಿತ್ರೆ ಒಬ್ಬ ವ್ಯಕ್ತಿಯ ಚರಿತ್ರೆ. ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಜೀವನಚರಿತ್ರೆಗೂ ಒಂದು ಪ್ರಮುಖ ಸ್ಥಾನವಿದೆ. ಜೀವನಚರಿತ್ರೆಯ ಅಧ್ಯಯನದಿಂದ ಒಬ್ಬ ವ್ಯಕ್ತಿಯ ಜೀವನದ ಆದರ್ಶಗಳ ಹಾಗೂ ಲೋಕದ ಒಳಿತು ಕೆಡಕುಗಳ ಪರಿಚಯ ನಮಗೆ ಆಗುತ್ತದೆ.

ಜೀವನಚರಿತ್ರೆಗೂ ಆತ್ಮಕಥೆಗೂ ಇರುವ ಒಂದು ವ್ಯತ್ಯಾಸವನ್ನು ಗಮನಿಸುವುದು ಅಗತ್ಯ. ಒಬ್ಬ ವ್ಯಕ್ತಿಯ ಜೀವನಚರಿತ್ರೆಯನ್ನು ಆತನ ಬಗೆಗೆ ವಿಚಾರಸಂಗ್ರಹ ಮಾಡಿರುವ ಯಾರು ಬೇಕಾದರೂ ಬರೆಯಬಹುದು. ಆದರೆ ಆತ್ಮಕಥೆ ಎನ್ನುವುದು ಒಬ್ಬ ವ್ಯಕ್ತಿ ತನ್ನ ಜೀವನವನ್ನು ಕುರಿತು ತಾನೇ ಬರೆದ ಚರಿತ್ರೆ.

ಸಂಸ್ಕೃತ ಸಾಹಿತ್ಯದಲ್ಲಿ ಕೆಲವು ಜೀವನಚರಿತ್ರೆಗಳು ಇಂದಿನವರೆಗೂ ಉಳಿದುಕೊಂಡು ಬಂದಿವೆ—ಬಾಣಭಟ್ಟನ 'ಹರ್ಷ ಚರಿತೆ', ಬಿಲ್ಹಣನ 'ವಿಕ್ರಮಾಂಕ ದೇವಚರಿತೆ'.

ಜೀವನಚರಿತ್ರೆಗಳಾಗಲಿ ಆತ್ಮಕಥೆಗಳಾಗಲಿ, ಸ್ಥೂಲವಾಗಿ ಎರಡು ಗುಂಪುಗಳು. ಒಂದು ವಿಮರ್ಶಾ ಪ್ರಧಾನ; ಇನ್ನೊಂದು ಪ್ರಶಂಸಾಪ್ರಧಾನ.

ಈ ಮೊದಲು ಹೇಳಿದ ಎರಡು ಸಂಸ್ಕೃತ ಗ್ರಂಥಗಳೂ ಎರಡನೆಯ ವರ್ಗಕ್ಕೆ ಸೇರಿದುವು; ಇವುಗಳಲ್ಲಿ ಐತಿಹಾಸಿಕ ಅಂಶಗಳು ಇದ್ದರೂ ಇವು ಕಾವ್ಯಸ್ವರೂಪದವು; ಅದ್ದರಿಂದ ವಸ್ತುನಿಷ್ಠವಲ್ಲ.

ಬಾಸ್‌ವೆಲ್ ಇಂಗ್ಲಿಷಿನಲ್ಲಿ ಬರೆದ ಸ್ಯಾಮುಯಲ್ ಜಾನ್ಸನನ ಜೀವನಚರಿತ್ರೆ ಜಗತ್ಪ್ರಸಿದ್ಧವಾಗಿದೆ. ಇಲ್ಲಿ ಕೂಡ ಜಾನ್ಸನನ ವ್ಯಕ್ತಿತ್ವಕ್ಕೆ ಮಾರುಹೋಗಿದ್ದಾನೆ ಬಾಸ್‌ವೆಲ್.

ಎಮಿಲ್ ಲುಡ್ವಿಗ್, ಲಿಟ್ಟನ್ ಸ್ಟ್ರಾಚಿ, ರೊಮಾ ರೊಲಾ ಮುಂತಾದವರು ಬರೆದ ಜೀವನಚರಿತ್ರೆಗಳು ಶ್ರೇಷ್ಠ ಕೃತಿಗಳೆನಿಸಿವೆ.

ಜಗತ್ತಿನ ಎಲ್ಲ ಪ್ರಮುಖ ಭಾಷೆಗಳಲ್ಲೂ ಜೀವನಚರಿತ್ರೆಗಳು ಪ್ರಕಟವಾಗಿವೆ.

ಕನ್ನಡದಲ್ಲಿ ಪ್ರಕಟವಾದ ಹಲವಾರು ಜೀವನಚರಿತ್ರೆಗಳು ಅವುಗಳ ಅಂತಃಸತ್ವ, ಸಾಹಿತ್ಯ ಮೌಲ್ಯಗಳಿಂದ ಗಮನಾರ್ಹವಾಗಿವೆ. ಅವುಗಳಲ್ಲಿ ವಸ್ತುವೈವಿಧ್ಯವೂ ಉಂಟು. ಮಹಾಪುರುಷರು, ಕವಿಗಳು, ವಿಜ್ಞಾನಿಗಳು, ಭಕ್ತರು, ಸಾಹಿತಿಗಳು, ರಾಜಕಾರಣಿಗಳು, ಸ್ವಾತಂತ್ರ್ಯ ಹೋರಾಟಗಾರರು—ಹೀಗೆ. ಕನ್ನಡದಲ್ಲಿ ಪ್ರಕಟವಾದ ಗದ್ಯ ಜೀವನಚರಿತ್ರೆಗಳಲ್ಲಿ ಮೊದಲನೆಯದು ಕುಣಿಗಲು ರಾಮಶಾಸ್ತ್ರಿಗಳನ್ನು ಕುರಿತು ಎಂ. ಎಸ್. ಪುಟ್ಟಣ್ಣನವರು ಬರೆದ ಜೀವನಚರಿತ್ರೆ. ಡಿ. ವಿ. ಗುಂಡಪ್ಪನವರ 'ಗೋಪಾಲಕೃಷ್ಣ ಗೋಖಲೆ', 'ದಿವಾನ್ ರಂಗಾಚಾರ್ಲು', ಕುವೆಂಪು ಅವರು ಬರೆದ 'ಸ್ವಾಮಿ ವಿವೇಕಾನಂದ', 'ಶ್ರೀ ರಾಮಕೃಷ್ಣ ಪರಮಹಂಸ' ಉನ್ನತ ಮಟ್ಟದ ಜೀವನಚರಿತ್ರೆಗಳು. ಎಂ. ಆರ್. ಶ್ರೀ. ಅವರ 'ಭಕ್ತಿ ಭಂಡಾರಿ ಬಸವಣ್ಣ', ರಂಗನಾಥ ದಿವಾಕರರ 'ಮಹಾಯೋಗಿ ಅರವಿಂದ', ವಿ. ಸೀತಾರಾಮಯ್ಯ ಅವರ 'ಐವರು ಮಹನೀಯರು', ಶ್ರೀರಂಗರ 'ಕೆಮಾಲ್ ಪಾಷಾ', ತ.ರಾ.ಸು. ಬರೆದ 'ಅ.ನ.ಕೃ.', ಹಾ. ಮಾ. ನಾಯಕರ 'ರವೀಂದ್ರನಾಥ ಠಾಕೂರ್', ದೇಜಗೌ ಅವರ 'ರಾಷ್ಟ್ರಕವಿ ಕುವೆಂಪು' ಕನ್ನಡದಲ್ಲಿ ಪ್ರಕಟವಾಗಿರುವ ಕೆಲವು ಪ್ರಮುಖ ಜೀವನಚರಿತ್ರೆಗಳು.

ಜೀವನಚರಿತ್ರೆಗಳನ್ನು ಬರೆಯುವವರಲ್ಲಿ ಎರಡು ವರ್ಗಗಳು. ಒಂದು ವರ್ಗದವರು ತಮ್ಮ ಗ್ರಂಥದ ನಾಯಕನ ಸಮಕಾಲೀನರು. ಅವರು

ಅವನನ್ನು ಕಣ್ಣಾರೆ ಕಂಡಿರಬಹುದು. ಅವನ ಸ್ನೇಹ ಪರಿಚಯ ಉಳ್ಳವರಾಗಿಯೂ ಇರಬಹುದು. ಆತನ ಜೀವನ-ಕೃತಿಗಳು ಆ ಕಾಲದಲ್ಲಿ ಜನಜೀವನ-ಘಟನೆಗಳ ಮೇಲೆ ಹೇಗೆ, ಎಂಥ ಪ್ರಭಾವ ಬೀರಿದುವು ಎಂಬುದರ ಪರಿಚಯ ಅವರಿಗೆ ಇರಬಹುದು. ತೆಂಡೂಲ್ಕರ್ ಅವರು ಮಹಾತ್ಮಾ ಗಾಂಧಿಯವರನ್ನು ಕುರಿತು ಬರೆದಿರುವ ದೊಡ್ಡ ಜೀವನಚರಿತ್ರೆ ಇದಕ್ಕೊಂದು ಉದಾಹರಣೆ. ನಾಯಕನ ಸಮಕಾಲೀನರಲ್ಲದವರೂ ಆತನ ಜೀವನಚರಿತ್ರೆಯನ್ನು ಬರೆಯಬಹುದು. ಇಂಥ ಸಂದರ್ಭಗಳಲ್ಲಿ ಲೇಖಕ ತನ್ನ ಗ್ರಂಥದ ನಾಯಕನ ಬಗೆಗೆ ದೊರೆಯುವ ಲಿಖಿತ ದಾಖಲೆ, ದಂತಕಥೆ, ಅವನ ಸಮಕಾಲೀನರಾಗಿದ್ದವರು ಇನ್ನೂ ಬದುಕಿದ್ದರೆ ಅವರ ನಿರೂಪಣೆ, ವಿವರಣೆ ಇವನ್ನೆಲ್ಲ ಪರಿಶೀಲಿಸಿ, ನಾಯಕನ ವ್ಯಕ್ತಿತ್ವವನ್ನು ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಅದಕ್ಕನುಸಾರವಾಗಿ ಜೀವನಚರಿತ್ರೆ ಬರೆಯುತ್ತಾನೆ. ಇದು ಎರಡನೆಯ ವರ್ಗ.

ಜೀವನಚರಿತ್ರೆ ಬರೆಯುವವನಲ್ಲಿ ತನ್ನ ನಾಯಕನ ಬಗೆಗೆ ಶ್ರದ್ಧೆ, ವಿಶ್ವಾಸ, ಸಹಾನುಭೂತಿ ಇರಬೇಕಾದದ್ದು ಅವಶ್ಯ. ಹಾಗೆಯೇ ವಿಮರ್ಶಾತ್ಮಕ ದೃಷ್ಟಿಯೂ ಬೇಕು. ಇದು ನಾಯಕನ ಬಗೆಗೆ ದೊರೆತ ಸಾಮಗ್ರಿಗಳಿಂದ ತನಗೆ ಬೇಕಾದದ್ದನ್ನು ಆರಿಸಿಕೊಳ್ಳುವುದರಲ್ಲೂ ಅವನ ವ್ಯಕ್ತಿತ್ವವನ್ನು ರೂಪಿಸುವುದರಲ್ಲೂ ಅವನಿಗೆ ತುಂಬ ಸಹಾಯವಾಗುತ್ತದೆ.

ಭಾವಾವಿಕಾರಕ್ಕೆ ಈಡಾಗದ, ವಿವೇಚನೆಗೆ ಸ್ಥಾನಕೊಡುವ ಜೀವನಚರಿತ್ರೆ ಉತ್ತಮವಾದದ್ದು.

ಒಳ್ಳೆಯ ಜೀವನಚರಿತ್ರೆಗಳು ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತವೆ ; ಜನರ ಬಾಳಿಗೆ ಮಾರ್ಗದರ್ಶಕವಾಗುತ್ತವೆ.

ನೋಡಿ : ಆತ್ಮಕಥೆ

## ಜೂಲ್ಸ್ ವರ್ನ್

ರೋಮಾಂಚಕಾರಿಯಾದ, ಅದ್ಭುತ, ಸಾಹಸಮಯ ವೈಜ್ಞಾನಿಕ ಕಟ್ಟು ಕಥೆಗಳನ್ನು ಬರೆದವನು ಜೂಲ್ಸ್ ವರ್ನ್. ಫ್ರಾನ್ಸಿನ ವರ್ನ್ ತನ್ನ ಕಾದಂಬರಿಯಲ್ಲಿ ವರ್ಣಿಸಿದ್ದ ಕೆಲವು ವೈಜ್ಞಾನಿಕ ಘಟನೆಗಳು ಕೇವಲ ಕಟ್ಟು ಕಥೆಯಾಗಿ ಉಳಿಯದೆ ಇಂದು ಯಥಾವತ್ತಾಗಿ ನಡೆದಿವೆ. ವರ್ನನ ಕಲ್ಪನಾವೈಭವ ವೈಜ್ಞಾನಿಕ ಎಷ್ಟು ಎಂಬುದಕ್ಕೆ ಇದು ಸಾಕ್ಷಿ.

ವರ್ನ್ ಬರೆದ ಪುಸ್ತಕಗಳ ಶೀರ್ಷಿಕೆಗಳೇ ಮೈನವಿರೇಳುವಂಥವು. 'ಸಮುದ್ರ ಗರ್ಭದಲ್ಲಿ 20.000 ಹರದಾರಿ', 'ಭೂಮಿಯಿಂದ ಚಂದ್ರನೆಡೆಗೆ' 'ಭೂಮಿಯ ಸುತ್ತ 80 ದಿನಗಳಲ್ಲಿ', 'ಆಕಾಶ ಬುಟ್ಟಿಯಲ್ಲಿ ಐದು ವಾರಗಳು', 'ಭೂಕೇಂದ್ರದೆಡೆಗೆ ಒಂದು ಪಯಣ', 'ರಹಸ್ಯಮಯ ದ್ವೀಪ'—ಎಂಥ ಚಿತ್ತಾಕರ್ಷಕ ಹೆಸರುಗಳು ! ಒಳಗಿನ ಬರೆಹವಾದರೂ ಅಷ್ಟೇ. ಕುತೂಹಲ ಕೆರಳಿಸುವ ಕಥನಶೈಲಿ. ಕಣ್ಣಿಗೆ ಕಟ್ಟುವಂಥ ವರ್ಣನೆಗಳು. ಜೊತೆಗೆ ಹಾಸ್ಯಮಯ ಪ್ರಸಂಗಗಳು. ಎಲ್ಲಕ್ಕಿಂತ ಹೆಚ್ಚಾಗಿ ಅವನ ಬರೆಹದಲ್ಲಿ ಸೇರಿಕೊಂಡಿರುವ ವೈಜ್ಞಾನಿಕ ವಿವರಗಳು ಅವನು ಹೆಣೆದ ಕಥೆಗೆ ವಾಸ್ತವತೆಯ ಮೆರುಗು ತಂದುಕೊಡುತ್ತವೆ.

ಮಾನವರ ಚಂದ್ರಲೋಕಯಾತ್ರೆಗಾಗಿ ಉಡ್ಡಯನ ನಿಜವಾಗಿ ನಡೆದದ್ದು 1969ರ ಜುಲೈ 21ನೆಯ ತಾರೀಖು. ಆದರೆ 1865ರಲ್ಲೇ ಜೂಲ್ ವರ್ನ್ 'ಭೂಮಿಯಿಂದ ಚಂದ್ರನೆಡೆಗೆ' ಎಂಬ ತನ್ನಗ್ರಂಥದಲ್ಲಿ ಬರೆದ ಅಂಶಗಳಿಗೂ ನಿಜಯಾತ್ರೆಗೂ ಸಾಮ್ಯವಿದೆ. ಅವನ ವ್ಯೋಮ ನೌಕೆಯಲ್ಲಿಯೂ ಮೂರು ಮಂದಿ ವ್ಯೋಮಯಾತ್ರಿಗಳು. ಇಬ್ಬರು ಅಮೆರಿಕದವರು, ಒಬ್ಬ ಫ್ರೆಂಚರವನು (ನಿಜವಾದ ಯಾತ್ರೆಯಲ್ಲಿ ಮೂರು ಮಂದಿಯೂ ಅಮೆರಿಕದವರು). ನೌಕೆಯ ಆಕೃತಿ ಹಾಗೂ ಗಾತ್ರ ಇವೆರಡರಲ್ಲೂ ಸಾಮ್ಯವಿದೆ. 1969ರ ಉಡ್ಡಯನ ಕೆನೆಡಿ ಉಡ್ಡಯನ ನಿಲ್ದಾಣದಿಂದ ಆಯಿತು ; ವರ್ನನ ಬರಹದಲ್ಲಿ ಉಡ್ಡಯನ ಫ್ಲಾರಿಡಾದಿಂದ. ಕಥೆಯ ನೌಕೆಯೂ ಶಾಂತ ಸಾಗರದಲ್ಲಿ ಬಂದಿಳಿಯುತ್ತದೆ. ಚಂದ್ರನ ಸುತ್ತ ನೌಕೆ ಸುತ್ತುವುದು ಮುಂತಾದ ಇನ್ನೂ ಹಲವಾರು ವಿವರಗಳಲ್ಲಿ ಕೂಡ ಎರಡರಲ್ಲೂ ಬಹುಮಟ್ಟಿಗೆ ಸಾಮ್ಯವಿದೆ. ವರ್ನನ ಕಾಲದಲ್ಲಿ ರಾಕೆಟ್‌ಗಳಾಗಲೀ ಅವುಗಳಿಗೆ ಬೇಕಾದ ಅತ್ಯಂತ ಸುಧಾರಿತ ಇಂಧನಗಳಾಗಲೀ ತಿಳಿದಿರಲಿಲ್ಲ.



ಅದ್ಭುತ ರೋಮಾಂಚಕಾರಿ : ಜೂಲ್ಸ್ ವರ್ನ್

ಜೂಲ್ಸ್ ವರ್ನ್ ತನ್ನ ಮಾತೃನೌಕೆಗೆ ಕೊಲಂಬಿಯಾ ಎಂದೂ ಚಂದ್ರಕೋಶಕ್ಕೆ ಈಗ್‌ಲ್ ಎಂದೂ ಹೆಸರಿಟ್ಟಿದ್ದ. ಚಂದ್ರನೆಡೆಗೆ ಅಮೆರಿಕ ಹಾರಿಸಿದ ಮೊತ್ತಮೊದಲ ವ್ಯೋಮ ನೌಕೆ ಅಪೊಲೊ-11ರ ಭಾಗಗಳಿಗೆ ಜೂಲ್ಸ್ ವರ್ನನ ಗೌರವಾರ್ಥ ಆ ಹೆಸರುಗಳನ್ನಿಟ್ಟರು.

'ಸಮುದ್ರಗರ್ಭದಲ್ಲಿ 20.000 ಹರದಾರಿಗಳು' ಎಂಬುದು ಜಲಾಂತರ್ಗಾಮಿಯ ಆವಿಷ್ಕಾರವಾಗದಿದ್ದ ಕಾಲದಲ್ಲಿ ಬರೆದ ಪುಸ್ತಕ. ಜಲಾಂತರ್ಗಾಮಿಯ ನಿರ್ಮಾಣಕ್ಕೆ ಕಾಲುಶತಮಾನ ಮುಂದಾಗಿ, ಚಂದ್ರಲೋಕಯಾತ್ರೆ ಆರಂಭವಾಗುವುದಕ್ಕೆ ಸುಮಾರು ನೂರು ವರ್ಷಗಳಿಗೆ ಮೊದಲೇ ಈ ಸಂಶೋಧನೆ, ಸಾಧನೆಗಳನ್ನು ಕಲ್ಪಿಸಿಕೊಂಡು ಬರೆದಿದ್ದಾನೆ ವರ್ನ್. 'ಭೂಮಿಯ ಸುತ್ತ 80 ದಿನಗಳಲ್ಲಿ' ಎಂಬ ಪುಸ್ತಕ, ಆತನ ಕೃತಿಗಳಲ್ಲೆಲ್ಲ ಹೆಚ್ಚು ಜನಪ್ರಿಯವಾದದ್ದು. ಟೆಲಿವಿಷನ್ ಸಾಧನದ ಉಲ್ಲೇಖವೂ ವರ್ನನ ಬರೆಹದಲ್ಲಿ ಬಂದಿದೆ. ಸುಮಾರು ನಲವತ್ತು ವರ್ಷ ಕಾಲ ಅವ್ಯಾಹತವಾಗಿ ಜೂಲ್ಸ್ ವರ್ನ್ ಇಂಥ ವೈಜ್ಞಾನಿಕ ಕಥಾಸಾಹಿತ್ಯವನ್ನು ರಚಿಸುತ್ತಲೇ ಇದ್ದ.

ಜೂಲ್ಸ್‌ವರ್ನ್ 1828 ಫೆಬ್ರುವರಿ 8ರಂದು ಫ್ರಾನ್ಸಿನ ನಾಂಟೆಸ್ ಎಂಬಲ್ಲಿ ಹುಟ್ಟಿದ. ಹನ್ನೊಂದು ವರ್ಷದವನಿದ್ದಾಗ ಹಡಗಿನಲ್ಲಿ ಕೆಲಸಮಾಡಲು ಇಷ್ಟವಿಲ್ಲದ ಒಬ್ಬ ಹುಡುಗನಿಗೆ ಬದಲಾಗಿ ತಾನು ಹೋಗಲು ನಿರ್ಧರಿಸಿ, ಹಡಗು ಹೊರಡುವ ಮೊದಲೇ ವರ್ನನ ತಂದೆ ಮಗನನ್ನು ಹಿಂದಕ್ಕೆ ಕರೆದುಕೊಂಡು ಬಂದ. ಇನ್ನು ಮುಂದೆ ತಾನು ಹೀಗೆ ಮಾಡುವುದಿಲ್ಲವೆಂದೂ ಕೇವಲ ಕಲ್ಪನೆಯಲ್ಲಿ ತಾನು ಪ್ರಯಾಣ ಮಾಡುವುದಾಗಿಯೂ ತನ್ನ ತಾಯಿಗೆ ಜೂಲ್ಸ್ ವರ್ನ್ ಹೇಳಿದ. ಚಿಕ್ಕಂದಿನಲ್ಲೇ ಓರಗೆಯವರ ಮನೋರಂಜನೆಗಾಗಿ ವಿಚಿತ್ರ ವಾಹನಗಳ ಬಗೆಗೆ ವಿವರಿಸುತ್ತಿದ್ದ. ತರುಣನಾಗಿದ್ದಾಗ ಒಂದು ದುರಂತ ನಾಟಕ ಬರೆದ. ಅದು ಯಶಸ್ವಿ



ವರ್ನ್‌ನ ಚಂದ್ರಯಾತ್ರಿ ಮರಳಿಬಂದಾಗ
-ಕಾದಂಬರಿಯಲ್ಲಿ ಚಿತ್ರ

ಯಾಗಲಿಲ್ಲ. ಮುಂದೆ ನ್ಯಾಯಶಾಸ್ತ್ರ ಓದುವುದಕ್ಕಾಗಿ ಪ್ಯಾರಿಸಿಗೆ ಪ್ರಯಾಣ ಮಾಡಿದ. ಅಲ್ಲಿ ಅಲೆಗ್ಸಾಂಡರ್ ಡೂಮಾ ಇವನ ಗೆಳೆಯನಾದ: ವರ್ನನ ಗ್ರಂಥರಚನಾಶಕ್ತಿ ಮತ್ತೆ ಮೊಳೆಯಿತು. ಓದುವುದನ್ನು ಬಿಟ್ಟ. ಬರೆಯಲಾರಂಭಿಸಿದ. ಕವಿತಾ ಕಾಮಿಡಿಯೊಂದನ್ನು ಬರೆದ. ಆದರೆ ಅವನ ಈ ಬರೆವಣಿಗೆ ಮೊದಮೊದಲು ಜನಪ್ರಿಯವಾಗಲಿಲ್ಲ. ಅನಂತರ ಆಪೆರಾಗಳ ಪರಿಚಯ ಪುಸ್ತಕ ಬರೆದ. ಷೇರು ವ್ಯಾಪಾರದಲ್ಲಿ ಕೈಹಾಕಿದ. ಜೊತೆಯಾಗಿ ಬರವಣಿಗೆಯೂ ಸಾಗಿತ್ತು. ಸಂಪಾದಕನೊಬ್ಬನ ಸಲಹೆಯಂತೆ ತಿದ್ದಿ ಬರೆದ ಅವನ 'ಆಕಾಶ ಬುಟ್ಟಿಯಲ್ಲಿ ಐದು ವಾರಗಳು' 1863ರಲ್ಲಿ ಅಚ್ಚಾದಾಗ ವರ್ನನ ಖ್ಯಾತಿ ಮುಗಿಲಿಗೇರಿತು. ಮುಂದೆ ಒಬ್ಬ ಸಾಹಸಿ, ವೈಜ್ಞಾನಿಕ ಒಲವಿರುವ ಒಬ್ಬ ವ್ಯಕ್ತಿ, ಒಬ್ಬ ಹಾಸ್ಯಗಾರ ಈ ಮೂರು ಪಾತ್ರಗಳುಳ್ಳ ಒಂದು ಕೃತಿಯನ್ನು ರಚಿಸಿದ.

ಜೂಲ್ಸ್ ವರ್ನನ ಈ ಸಾಹಸ ಪ್ರಯಾಣದ ಕಥೆಗಳು ಚಿಕ್ಕರಿಯರೆಂಬ ಭೇದವಿಲ್ಲದೆ ಎಲ್ಲರ ಮೆಚ್ಚುಗೆ ಗಳಿಸಿದುವು.

ಆಧುನಿಕ ರಾಕೆಟ್ ಹಾಗೂ ವ್ಯೋಮಯಾತ್ರೆಗಳಿಗೆ ಸಂಬಂಧಿಸಿ ಕೆಲಸ ಮಾಡಿದವರೆಲ್ಲ ವರ್ನನ 'ಭೂಮಿಯಿಂದ ಚಂದ್ರನೆಡೆಗೆ' –ಕಾದಂಬರಿಯನ್ನು ಓದಿದ್ದಾರೆ. ಹಾಗೆಯೇ ಸಮುದ್ರಯಾನವನ್ನು ಕುರಿತ ಅವನ ಪುಸ್ತಕಗಳು ಸಾಗರವಿಜ್ಞಾನಿಗಳಿಗೂ ಸಾಗರ ಅನ್ವೇಷಕರಿಗೂ ಪರಿಚಿತವಾಗಿವೆ. ವರ್ನ್ ತನ್ನ ಜೀವಿತಕಾಲದಲ್ಲೇ ಅಂತರರಾಷ್ಟ್ರೀಯ ಗೌರವ ಪಡೆದ.

ಅವನ ಅನೇಕ ಪುಸ್ತಕಗಳು ಫ್ರೆಂಚಿನಿಂದ ಇಂಗ್ಲಿಷಿಗೂ ಜಗತ್ತಿನ ಇತರ ಭಾಷೆಗಳಿಗೂ ಭಾಷಾಂತರಗೊಂಡಿವೆ.

1905 ಮಾರ್ಚ್ 24ರಂದು ವರ್ನ್ ಕಾಲವಾದ.

ನೋಡಿ : ವಿಜ್ಞಾನ ಕಥಾ ಸಾಹಿತ್ಯ

## ಜೇನ್ ಆಸ್ಟಿನ್

ಆಕೆ ಉಚ್ಚ ಶಿಕ್ಷಣ ಪಡೆದವಳಲ್ಲ. ನಗರಗಳ ಬೆಡಗಿನ ಜೀವನದಲ್ಲಿ ಈಜಾಡಿದವಳಲ್ಲ. ನಿಧನಳಾಗಿ ನೂರೈವತ್ತು ವರ್ಷ ದಾಟಿದರೂ ಆಕೆಯ ಕೃತಿಗಳು ಇನ್ನೂ ಜನಪ್ರಿಯವಾಗಿವೆ: ಈ ಲೇಖಿಕಿ. ಆಂಗ್ಲ ಕಾದಂಬರಿಕಾರ್ತಿ ಜೇನ್ ಆಸ್ಟಿನ್.

ಜೇನ್ ಜನಿಸಿದ್ದು ಇಂಗ್ಲೆಂಡಿನ ಬಳಿ ಇರುವ ಸ್ಟೀವನ್‌ಟನ್‌ನಲ್ಲಿ; 1775ರ ಡಿಸೆಂಬರ್ 16ರಂದು. ಏಳು ಮಕ್ಕಳಲ್ಲಿ ಈಕೆ ಕೊನೆಯವಳು. ಶಾಲೆಗೆ ಹೋದಳಾದರೂ ಹೆಚ್ಚಿನ ವಿದ್ಯಾಭ್ಯಾಸ ನಡೆದದ್ದು ಮನೆಯಲ್ಲಿಯೇ. ಸಾಹಿತ್ಯವನ್ನು ಚೆನ್ನಾಗಿ ಓದಿಕೊಂಡಳು. ಜೇನ್‌ಗೆ ಆಕರ್ಷಕ ರೂಪವಿತ್ತು. ಕತೆ ಹೇಳುವ ಜಾಣ್ಮೆ ಅವಳಿಗೆ ಕರಗತವಾಗಿತ್ತು. ಎಳೆಯ ವಯಸ್ಸಿನಲ್ಲಿಯೇ ನಾಟಕ ಸಣ್ಣ ಕತೆಗಳನ್ನು ಬರೆಯಲಾರಂಭಿಸಿದಳು. ಅವಳ 42 ವರ್ಷಗಳ ಜೀವಮಾನದಲ್ಲಿ 25 ವರ್ಷ ಹುಟ್ಟಿದ ಊರಿನಲ್ಲಿಯೇ ಕಳೆಯಿತು. ಅವಿವಾಹಿತಳಾಗಿಯೇ ಉಳಿದಳು.



ಜೀವಂತ : ಜೇನ್ ಆಸ್ಟಿನ್

ಜೇನ್ ಆಸ್ಟಿನ್ ಆರು ಕಾದಂಬರಿಗಳ ಕರ್ತೃ. ಶ್ರೇಷ್ಠ ವಿಮರ್ಶಕರು ಆಕೆಯ ಕೃತಿಗಳನ್ನು ಮೆಚ್ಚಿದ್ದಾರೆ. ವಾಲ್ಟರ್ ಸ್ಕಾಟ್ ಅವಳ ಬುದ್ಧಿಮತ್ತೆಯನ್ನೂ ಕಲೆಗಾರಿಕೆಯನ್ನೂ ಹೊಗಳಿದ್ದಾನೆ.

ತನ್ನ ಅನುಭವಕ್ಕೆ ಹೊರತಾದುದನ್ನು ಜೇನ್ ಎಂದೂ ಚಿತ್ರಿಸಲಿಲ್ಲ. ಆಕೆಯ ಕಾದಂಬರಿಗಳಲ್ಲಿ ಬರುವ ವ್ಯಕ್ತಿಗಳು ನಿಜಜೀವನದಲ್ಲಿ ಕಾಣಸಿಗುವಂಥವರು. ಹಾಸ್ಯ, ಅಣಕ, ಜಾಣುಗಾರಿಕೆಯ ಹೊದಿಕೆಯಲ್ಲಿ ತಾನು ಕಂಡಿದ್ದ ವ್ಯಕ್ತಿಗಳನ್ನೇ ಆಕೆ ಚಿತ್ರಿಸುತ್ತಿದ್ದಳು. ಕತೆಯ ಓಟ ಸುಗಮ. ಅವಳ ಕೃತಿಗಳಲ್ಲಿ ವಿಶೇಷವಾದ, ಮೈನವಿರೇಳಿಸುವಂಥ ಘಟನೆಗಳಿಲ್ಲ. ಕಾದಂಬರಿಯಲ್ಲಿ ಬರುವ ವ್ಯಕ್ತಿಗಳೊಡನೆ ಓದುಗನೂ ಸಮರಸವಾಗಿ ಬೆರೆಯಬಹುದು.

18ನೆಯ ಶತಮಾನದಲ್ಲಿ ಸಾಹಸಮಯ ಕಥಾನಕವುಳ್ಳ ಕಾದಂಬರಿಗಳು ಅಧಿಕ ಸಂಖ್ಯೆಯಲ್ಲಿ ಪ್ರಕಟವಾಗುತ್ತಿದ್ದುವು. ಅಂಥ ಕೃತಿಗಳನ್ನು ಅಣಕಿಸುವ 'ನಾರ್ಥಾಂಜರ್ ಆಬೀ' ಎಂಬ ಕಾದಂಬರಿಯನ್ನು 1798ರಲ್ಲಿ ಜೇನ್ ಬರೆದಳು. ಒಬ್ಬ ಪ್ರಕಾಶಕ ಹಸ್ತಪ್ರತಿಯನ್ನು ಆಕೆಯಿಂದ ತೆಗೆದುಕೊಂಡ; ಆದರೆ ಪ್ರಕಟಿಸಲಿಲ್ಲ. ಜೇನ್ ಅದನ್ನು ಮರಳಿ ಪಡೆದಳು.

'ಸೆನ್ಸ್ ಅಂಡ್ ಸೆನ್ಸಿಬಿಲಿಟಿ' 1811ರಲ್ಲಿ ಪ್ರಕಟವಾಯಿತು. 1813ರಲ್ಲಿ ಹೊರಬಂದ 'ಪ್ರೈಡ್ ಅಂಡ್ ಪ್ರೆಜುಡಿಸ್' ಆಕೆಯ ಮಹಾನ್ ಕೃತಿ. ಇದು ಕೂಡ ಮೊದಲು ಪ್ರಕಾಶಕರಿಂದ ತಿರಸ್ಕೃತವಾಗಿತ್ತು. ಶ್ರೀಮಂತರ ಆಡಂಬರ, ಮಧ್ಯಮ ವರ್ಗದ ಜನರ ಜೀವನ, ವಿನೋದಕೂಟಗಳು ಇದರಲ್ಲಿ ಚಿತ್ರಿತವಾಗಿವೆ. ಈ ಕೃತಿ ಅನೇಕ ಭಾಷೆಗಳಿಗೆ ಅನುವಾದವಾಗಿದೆ. 1814ರಲ್ಲಿ 'ಮ್ಯಾನ್ಸ್‌ಫೀಲ್ಡ್ ಪಾರ್ಕ್', 1816ರಲ್ಲಿ 'ಎಮ್ಮ' ಪ್ರಕಟವಾದುವು.

ಆಕೆ 1817ರ ಜುಲೈ 18ರಂದು ಮೃತಳಾದಳು. ಮರಣಾನಂತರವೂ ಈಕೆಯ ಅಪ್ರಕಟಿತ ಕೃತಿಗಳೆರಡು ಬೆಳಕು ಕಂಡುವು.

## ಜೇಮ್ಸ್ ಜಾಯ್ಸ್

ಸುಮಾರು 800 ಪುಟಗಳ ಕಾದಂಬರಿ: ಇದರಲ್ಲಿ ಹೇಳಿರುವುದು ಒಂದೇ ಒಂದು ದಿನದ ಕಥೆ; ಪಾತ್ರಗಳು ಮೂರು. ಕಾದಂಬರಿಯ ಒಂದು ಭಾಗ ಶುದ್ಧ ನಾಟಕದ ಶೈಲಿಯಲ್ಲಿದ್ದರೆ, ಮತ್ತೊಂದು ಭಾಗ ಹುಡುಗರು ಪರೀಕ್ಷೆಯಲ್ಲಿ ಬರೆಯುವ ಪ್ರಶ್ನೆ–ಉತ್ತರ ಪತ್ರಿಕೆಯಂತಿವೆ.

ಕೆಲವು ಕಡೆ ಅತ್ಯುತ್ತಮ ಸಾಂಪ್ರದಾಯಿಕ ಶೈಲಿಯಿದ್ದರೆ ಮತ್ತೆ ಕೆಲವು ಕಡೆ ಕೀಳು ಅಭಿರುಚಿಯ ಬರವಣಿಗೆ. 2–3 ಪುಟಗಳ ಉದ್ದದ ವಾಕ್ಯಗಳೂ ಇವೆ. ಒಂದು ಕಡೆ 50 ಪುಟಗಳಲ್ಲಿ ವಿರಾಮಚಿಹ್ನೆ ಒಂದೂ ಇಲ್ಲ. 2-3 ಪದಗಳನ್ನು ಒಟ್ಟಿಗೆ ಬರೆದಾಗ ಉಂಟಾಗುವ ಗಡಿಬಿಡಿಯೂ ಉಂಟು.



ಅಸಮಾಧಾನ : ಜಾಯ್ಸ್

ಈ ಕಾದಂಬರಿಯೇ ಜೇಮ್ಸ್ ಜಾಯ್ಸ್‌ನ 'ಯೂಲಿಸಿಸ್'.

ಹಸ್ತಪ್ರತಿಯನ್ನು ಓದಿದ ಕೆಲವರು. ಮನಸ್ಸಿನಲ್ಲೆಲ್ಲ ಸ್ವಚ್ಛಂದವಾಗಿ ಓಡಾಡಿ ಅಲ್ಲಿ ಕಂಡದ್ದನ್ನು ಅತ್ಯಂತ ವಿವರವಾಗಿ ಚಿತ್ರಿಸುವ ಈ ಕೃತಿ ಇಂಗ್ಲಿಷಿನ ಅತ್ಯುತ್ತಮ ಕಾದಂಬರಿ. ಎಂದು ಹೇಳಿದರು. ಜಾಯ್ಸ್ 'ಕಾದಂಬರಿಕಾರರ ಕಾದಂಬರಿಕಾರ' ಎಂದು ಕೆಲ ವಿಮರ್ಶಕರು ಹೊಗಳಿದರು. ಆದರೂ ಈ ಕಾದಂಬರಿಯ ಪ್ರಕಟಣೆಗಾಗಿ ಜಾಯ್ಸ್ ಅಲ್ಲಲ್ಲಿ ಪರದಾಡಬೇಕಾಯಿತು.

ಜೇಮ್ಸ್ ಜಾಯ್ಸ್ ಐರ್‌ಲೆಂಡಿನ ಡಬ್ಲಿನ್‌ನಲ್ಲಿ 1882ರ ಫೆಬ್ರುವರಿ 2 ರಂದು ಜನಿಸಿದ. ಅವನ ತಂದೆಗೆ ಮಗನನ್ನು ಕ್ರೈಸ್ತ ಪಾದ್ರಿಯನ್ನಾಗಿ ಮಾಡಬೇಕೆಂಬ ಆಸೆ. ಆದರೆ ಅವನು ಕಂಡುಕೊಂಡದ್ದು ಬೇರೆಯೇ ದಾರಿ. ಚಿಕ್ಕ ಹುಡುಗನಾಗಿದ್ದಾಗಿನಿಂದಲೂ ಅವನಿಗೆ ಇಬ್ಸೆನನ ನಾಟಕಗಳಲ್ಲಿ ಅಪಾರ ಆಸಕ್ತಿ: ಇದಕ್ಕಾಗಿಯೇ ನಾರ್ವೀಜಿಯನ್ ಭಾಷೆ ಕಲಿತು ಇಬ್ಸೆನನ ಮೂಲ ನಾಟಕಗಳನ್ನೇ ಓದಿದ. ತನ್ನ 18ನೆಯ ವರ್ಷದಲ್ಲಿ ಇಬ್ಸೆನನ ಕೃತಿಗಳ ಬಗೆಗೆ ಒಂದು ವಿಮರ್ಶೆ ಬರೆದ. ಇದು ಅವನ ಬರೆವಣಿಗೆಗೆ ನಾಂದಿಯಾಯಿತು.

1902ರ ಹೊತ್ತಿಗೆ. ಪಾದ್ರಿಯಾಗುವುದು ಜಾಯ್ಸ್‌ಗೆ ತೀರ ಅಸಾಧ್ಯವಾಯಿತು. 1904ರಲ್ಲಿ ಇಂಗ್ಲೆಂಡನ್ನು ಬಿಟ್ಟು ಪ್ಯಾರಿಸಿನಲ್ಲಿ ಸ್ವಲ್ಪ ಕಾಲ ವೈದ್ಯಕೀಯ ಶಿಕ್ಷಣ ಪಡೆದ. ಮುಂದೆ ಯೂರೋಪಿನ ಟ್ರೈಸ್ಟಿ. ಜೂರಿಕ್, ಪ್ಯಾರಿಸ್‌ಗಳಲ್ಲೇ ತನ್ನ ಜೀವನ ಕಳೆದ.

1907ರಲ್ಲಿ ಜಾಯ್ಸ್ 'ಚೇಂಬರ್ ಮ್ಯೂಸಿಕ್' ಎಂಬ ತನ್ನ ಮೊದಲ ಕವನ ಸಂಗ್ರಹವನ್ನು ಪ್ರಕಟಿಸಿದ. ಸುಪ್ರಸಿದ್ಧ ಸಾಹಿತ್ಯ ವಿಮರ್ಶಕ ಎಜ್ರಾ ಪೌಂಡ್‌ನ 'ಇಗೊಯಿಸ್ಟ್' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬರುತ್ತಿದ್ದ ಇವನ 'ಡಬ್ಲಿನರ್ಸ್' ಕಥೆಯನ್ನು ಇಂಗ್ಲೆಂಡಿನ ಪ್ರಕಾಶಕರು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಿರಾಕರಿಸಿದರು. ಅದು ಅಸಭ್ಯ ಎಂದು ಅವರಿಗೆ ಕಂಡಿತು. 1916ರಲ್ಲಿ 'ಕಲಾವಿದನಂತೆ ಯುವಕನೊಬ್ಬನ ವ್ಯಕ್ತಿಚಿತ್ರ' ಪ್ರಕಟವಾಯಿತು. ಇದು ಸ್ವಲ್ಪಮಟ್ಟಿಗೆ ಆತ್ಮಕಥಾನಕ ಕೃತಿ. ಈ ಹೊತ್ತಿಗೆ ಇವನ ಹೆಸರು ಆಧುನಿಕ ಸಾಹಿತ್ಯರಂಗದಲ್ಲಿ ಪ್ರಮುಖವಾಗಿತ್ತು.

1922ರಲ್ಲಿ ಪ್ರಕಟವಾದ 'ಯೂಲಿಸಿಸ್' ಇವನ ಮಹಾ ಕೃತಿ. ಮನಸ್ಸಿನಲ್ಲಿ ನಡೆಯುವ ಮನೋವ್ಯಾಪಾರಗಳನ್ನು. ಹುಟ್ಟುವ ಭಾವನೆ ಯೋಚನೆಗಳನ್ನು. ಅತ್ಯಂತ ವಿವರವಾಗಿ ಅದೇ ರೂಪದಲ್ಲೇ ಚಿತ್ರಿಸುವ 'ಪ್ರಜ್ಞಾಪ್ರವಾಹ ತಂತ್ರ'ವನ್ನು ಜಾಯ್ಸ್ ಈ ಕೃತಿಯಲ್ಲಿ ಬಳಸಿದ್ದಾನೆ. ಆ ತಂತ್ರವನ್ನು ಅತ್ಯುನ್ನತ ಮಟ್ಟಕ್ಕೆ ಬೆಳೆಸಿದ್ದಾನೆ. ಲಿಯೊಪಾಲ್ಡ್ ಬ್ಲೂಮ್, ಅವನ ಹೆಂಡತಿ ಮಾಲಿ ಮತ್ತು (ಜಾಯ್ಸ್‌ನನ್ನೇ ಪ್ರತಿನಿಧಿಸುವ) ಸ್ಟೆಫೆನ್ ಡೆಡೆಲಸ್ –ಈ ಕೃತಿಯ ಮೂರು ಪಾತ್ರಗಳು. ಈ ಪಾತ್ರಗಳ ಚಿತ್ರಣ, ಸಾಹಿತ್ಯದಲ್ಲಿ ಹಿಂದೆಂದೂ ಇಲ್ಲದಷ್ಟು ಹೆಚ್ಚಿನ ವಿವರಗಳಿಂದ ಕೂಡಿದೆ. ಹೋಮರನ 'ಯೂಲಿಸಿಸ್' ಕೃತಿಯಲ್ಲಿ ಬರುವ ಪಾತ್ರ, ಸನ್ನಿವೇಶಗಳಿಗೆ ಸರಿಸಮನಾದ ಅನೇಕ ಸಂಗತಿಗಳು ಈ ಕಾದಂಬರಿಯಲ್ಲಿ ಬರುತ್ತವೆ. ಮಾನವನ ಉಪಜಾಗ್ರತಾವಸ್ಥೆ, ಜಾಗೃತಾವಸ್ಥೆಯಲ್ಲಿ ಬರುವ ಭಾವನೆಗಳು ಅತ್ಯಂತ ಪ್ರಾಮಾಣಿಕವಾದ ರೀತಿಯಲ್ಲಿ ಇದರಲ್ಲಿ ಚಿತ್ರಿತವಾಗಿವೆ. 1922ರಲ್ಲಿ ಇದು, ಸಾಕಷ್ಟು ಪರಿಶ್ರಮದ ಬಳಿಕ ಫ್ರಾನ್ಸಿನಲ್ಲಿ ಪ್ರಕಟವಾಯಿತು. ಅನಂತರ 10 ವರ್ಷ ಅಮೆರಿಕದಲ್ಲೂ ಇಂಗ್ಲೆಂಡುಗಳಲ್ಲೂ ಇದು ನಿಷಿದ್ಧವಾಗಿತ್ತು. ಕೊನೆಗೆ ಕೋರ್ಟು ಈ ಕೃತಿಯ ಮೇಲಿದ್ದ ಅಶ್ಲೀಲತೆಯ ಆರೋಪವನ್ನು ತಳ್ಳಿಹಾಕಿದ ಬಳಿಕ ಅದು ಎಲ್ಲೆಡೆಯಲ್ಲೂ ಪ್ರಕಟವಾಯಿತು.

ವ್ಯಕ್ತಿನಿಷ್ಠ ಕಾದಂಬರಿಗಳಲ್ಲಿ ಇವನ 'ಯೂಲಿಸಿಸ್' ಒಂದು ಮೈಲಿಗಲ್ಲು. ಭಾಷಾಶಾಸ್ತ್ರ ಮುಂತಾದುವನ್ನು ತುಂಬ ಆಳವಾಗಿ ಅಭ್ಯಸಿಸಿದ ಇವನು ತನ್ನ ಭಾಷೆಯನ್ನು ಅತಿ ಜಾಗರೂಕತೆಯಿಂದ ಬಳಸಿದ್ದಾನೆ. ವಾಸ್ತವವಾದಿ ಮತ್ತು ಸಂಕೇತವಾದಿಗಳಿಬ್ಬರ ಮನೋಧರ್ಮಗಳನ್ನೂ ಹೊಂದಿದ್ದ ಜಾಯ್ಸ್ ತನ್ನ ಕೃತಿಗಳಲ್ಲಿ ಈ ಎರಡೂ ದೃಷ್ಟಿಗಳ ಸಾಮರಸ್ಯವನ್ನು ಸಾಧಿಸಿದ. ಮಾನವರ ಸಣ್ಣಪುಟ್ಟ ಅಂಗಾಭಿನಯ. ಮಾತನಾಡುವ ಬಗೆಗಳನ್ನು ಅತಿ ಸೂಕ್ಷ್ಮವಾಗಿ ಅರಿತುಕೊಂಡಿದ್ದ ಇವನು ಇಂಥ ವಿವರಗಳನ್ನು ಅತ್ಯಂತ ಅರ್ಥಪೂರ್ಣವಾಗಿ ನಿರೂಪಿಸಿದ್ದಾನೆ.

'ಫಿನ್ನೆಗನ್ಸ್ ವೇಕ್' ಕಾದಂಬರಿ. 'ಯೂಲಿಸಿಸ್'ಗಿಂತ ಸಂಕೀರ್ಣವಾದದ್ದು. ಮಾನವನ ಅಜಾಗ್ರತಾವಸ್ಥೆಯ ಮನಸ್ಸಿನಲ್ಲಿದ್ದುದನ್ನು ಯಶಸ್ವಿಯಾಗಿ ಈ ಕೃತಿಯಲ್ಲಿ ಜಾಯ್ಸ್ ಚಿತ್ರಿಸುತ್ತಾನೆ. ಅವನು ಈ ಕೃತಿಯ ಪ್ರತಿ ಪುಟವನ್ನೂ ಮತ್ತೆ ಮತ್ತೆ ಓದಿ ಅನೇಕ ಬಾರಿ ತಿದ್ದಿದ: ಇದಕ್ಕೆ ತುಂಬ ಕಾಲವನ್ನೂ ತೆಗೆದುಕೊಂಡ. ಅನೇಕ ಹಂತಗಳಲ್ಲಿ ಅನೇಕಾರ್ಥ ಕೊಡುವ ಈ ಕೃತಿಯಲ್ಲಿ ಹಲವು ಭಾಷೆಗಳನ್ನು ಉಪಯೋಗಿಸಿದ್ದಾನೆ.

ಇವನ ಕೃತಿಗಳ ಅಧ್ಯಯನಕ್ಕೆಂದೇ ಪ್ರಕಟವಾಗುವ ಎರಡು ನಿಯತಕಾಲಿಕಗಳಿವೆ. ಅವುಗಳಲ್ಲಿ ಒಂದು ಈ ಕೃತಿಯನ್ನು ಮಾತ್ರ ಕುರಿತದ್ದು !

ಜಾಯ್ಸ್ ಬರೆದ ಸಣ್ಣ ಕಥೆಗಳಲ್ಲಿ 'ದಿ ಡೆಡ್' ಪ್ರಮುಖವಾದದ್ದು. ಇದನ್ನು ವಿಶ್ವದ ಅತ್ಯುತ್ತಮ ಕಥೆಗಳಲ್ಲೊಂದು ಎಂದು ಪರಿಗಣಿಸಲಾಗಿದೆ.

ಸ್ವಲ್ಪ ಕಾಲ ಬಡತನ ಅವನನ್ನು ಕಾಡಿತು. ಒಂದು ಕಣ್ಣು ತೊಂದರೆ ಕೊಟ್ಟಿತು. ಜಾಯ್ಸ್ 1941ರ ಜನವರಿ 13ರಂದು ನಿಧನನಾದ. ತನ್ನ ಕೊನೆಯ ಕಾದಂಬರಿ 'ಫಿನ್ನೆಗನ್ಸ್ ವೇಕ್' ಅನ್ನು ಜನ ಸೂಕ್ತರೀತಿಯಲ್ಲಿ ಗಮನಿಸಲಿಲ್ಲ ಎಂಬ ಅಸಮಾಧಾನ ಕೊನೆಯವರೆಗೂ ಅವನನ್ನು ಕಾಡುತ್ತಿತ್ತು.

## ಜೋಲಾ

"ನೀವು ಸತ್ಯವನ್ನು ಮುಚ್ಚಿಡಲು ಪ್ರಯತ್ನಿಸಿದರೆ. ಅದು ಒಳಗೇ ಬೆಳೆದು ಸ್ಫೋಟಿಸುತ್ತದೆ; ತನ್ನೆದುರು ಬಂದುದನ್ನೆಲ್ಲ ಚೂರು ಚೂರು ಮಾಡುವಂಥ



ವಾಸ್ತವವಾದ : ಜೋಲಾ

ಶಕ್ತಿಯನ್ನು ಗಳಿಸುತ್ತದೆ"— ಎಂದು ಜೋಲಾ ಒಮ್ಮೆ ಬರೆದ. ಸಂದರ್ಭ : ಸುಳ್ಳು ಆರೋಪದ ಮೇಲೆ ಆಲ್ಫ್ರೆಡ್ ಡ್ರೈಫಸ್ ಎಂಬ ಸೈನ್ಯಾಧಿಕಾರಿಯ ಬಂಧನ. ಅದನ್ನು ಖಂಡಿಸಿ ಬರೆದ ಪತ್ರಿಕಾ ಲೇಖನಕ್ಕಾಗಿ ಜೋಲಾ ಜೈಲಿಗೆ ಹೋಗಬೇಕಾಯಿತು. ಕೊನೆಗೆ ಜೋಲಾನ ಆ ಬರೆವಣಿಗೆಯ ಆಧಾರದ ಮೇಲೆಯೇ ಡ್ರೈಫಸನ ಬಿಡುಗಡೆಯಾಯಿತು. ತನ್ನ ಜೀವನದುದ್ದಕ್ಕೂ ಸತ್ಯಕ್ಕಾಗಿ ಹೋರಾಡಿದ ಎಮಿಲಿ ಜೋಲಾ ತುಂಬ ವಿವಾದಾಸ್ಪದ ವ್ಯಕ್ತಿಯಾಗಿದ್ದ. ಅವನು ಹುಟ್ಟಿದ್ದು 1840ರ ಏಪ್ರಿಲ್ 2ರಂದು, ಪ್ಯಾರಿಸಿನಲ್ಲಿ. ತಂದೆ ಇಟಲಿಯವನು : ತಾಯಿ ಫ್ರಾನ್ಸಿನವಳು. 1847ರಲ್ಲಿ ಇವನ ತಂದೆ ನಿಧನನಾದಾಗ ತೀರ ಬಡತನದ ಜೀವನ ನಡೆಸಬೇಕಾಯಿತು. 1856ರಲ್ಲಿ ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲ. ಯಾವುದಾದರೂ ಕೆಲಸ ದೊರಕಿಸಿಕೊಳ್ಳುವುದಕ್ಕಾಗಿ ಅವನು ಅಲೆಯುತ್ತಿದ್ದಾಗ, ಎರಡು ವರ್ಷಗಳ ಕಾಲ ತುಂಬ ಬಡತನ ಅನುಭವಿಸಿದ. ಕೊನೆಗೆ ಸುಂಕದ ಇಲಾಖೆಯಲ್ಲಿ ಎರಡು ತಿಂಗಳು ಗುಮಾಸ್ತೆಯಾಗಿದ್ದ. ಅನಂತರ ಒಂದು ಪ್ರಕಟಣಾಲಯದಲ್ಲಿ ಕೆಲಸಕ್ಕೆ ಸೇರಿದ. ತಾನು ಬರೆದ ಕವನವನ್ನು ಅಲ್ಲಿಯ ಸಂಪಾದಕರೊಬ್ಬರಿಗೆ ತೋರಿಸಿದಾಗ ಇವನಿಗೆ ಹೆಚ್ಚಿನ ಕೆಲಸವೂ ಹೆಚ್ಚು ವೇತನವೂ ದೊರೆತುವು.

ಆ ಪ್ರಕಟಣಾಲಯದಲ್ಲಿ ಕೆಲಸ ಮಾಡುತ್ತಿದ್ದಾಗ, ಹೆಚ್ಚು ಮಾರಾಟವಾಗಬಲ್ಲ ಬರೆವಣಿಗೆ ಯಾವ ರೀತಿ ಇರಬೇಕೆಂಬುದರ ಪರಿಚಯ ಅವನಿಗೆ ಆಯಿತು. ವೃತ್ತಪತ್ರಿಕೆಯೊಂದರಲ್ಲಿ ಲೇಖಿನ ವಿಮರ್ಶೆ ಬರೆಯುತ್ತಿದ್ದುದರಿಂದ, ಹರಿತ ಶೈಲಿ ರೂಢಿಸಿಕೊಳ್ಳಲು ಇವನಿಗೆ ಅವಕಾಶ ದೊರೆಯಿತು. 1864ರಲ್ಲಿ ಒಂದು ಕಥಾಸಂಕಲನವನ್ನು ಪ್ರಕಟಿಸಿದ.

1866ರಲ್ಲಿ ಜೋಲಾ ತನ್ನ ಕೆಲಸ ಬಿಟ್ಟುಕೊಟ್ಟು ಬರೆವಣಿಗೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡ. ಮೊದಲು ಅನೇಕ ಕಾದಂಬರಿಗಳನ್ನು ಬರೆದ. 1871ರಿಂದ 1893ರ ವರೆಗೆ ಪ್ರಕಟವಾದ ಇವನ 20 ಕಾದಂಬರಿಗಳ ಶ್ರೇಣಿಗೆ 'ಲೆ ರೂಗಾನ್ ಮಾರ್ಕಾರ್' ಎಂದು ಹೆಸರು. ಈ ಶ್ರೇಣಿಯ 9ನೆಯ ಕೃತಿ 'ನಾನಾ', ಮತ್ತು 13ನೆಯ 'ಜರ್ಮಿನಲ್' ಇವನನ್ನು ಅತ್ಯುತ್ತಮ ಲೇಖಕರ ಸಾಲಿಗೆ ಏರಿಸಿದುವು. 'ಜರ್ಮಿನಲ್' ಕೃತಿ ರಚಿಸುವ ಮುನ್ನ, ಜೋಲಾ ಗಣಿ ಪ್ರದೇಶವೊಂದರಲ್ಲಿ ಹಲವು ತಿಂಗಳ ಕಾಲ ಜೀವಿಸಿ ಅಲ್ಲಿಯ ಕಾರ್ಮಿಕರ ಜೀವನವನ್ನು ಹತ್ತಿರದಿಂದ ನೋಡಿದ್ದ.

ಜೋಲಾನ ಕೃತಿಗಳ ಹಿಂದೆ ಇದ್ದ ತತ್ತ್ವ—'ಸಹಜತೆ'. ಜೀವನವನ್ನು ಅತ್ಯಂತ ಸಹಜವಾಗಿ, ಪೂರ್ಣವಾಗಿ, ಸತ್ಯವಾಗಿ, ಸ್ಪಷ್ಟವಾಗಿ ಚಿತ್ರಿಸಬೇಕು ಎಂಬುದು ಈತನ ವಾದ. ಜೀವನವನ್ನು ಒಂದು ವಿಜ್ಞಾನದಂತೆ, ಶಾಸ್ತ್ರದಂತೆ, ಅತ್ಯಂತ ವಸ್ತುನಿಷ್ಠ ದೃಷ್ಟಿಯಿಂದ ಇವನು ಅಭ್ಯಸಿಸುತ್ತಿದ್ದ. ಕಾರ್ಮಿಕರ ಒಳಜೀವನದ ಚಿತ್ರವನ್ನು 1877ರಲ್ಲಿ ಪ್ರಕಟವಾದ ಇವನ 'ಕುಡಿತ' ಕೃತಿ ಚಿತ್ರಿಸಿದರೆ, ಪ್ಯಾರಿಸಿನ ಸಮಾಜದ ನಡತೆಗೆಟ್ಟ ಜನರ ಗುಂಪನ್ನು 'ನಾನಾ' (1880) ಚಿತ್ರಿಸುತ್ತದೆ. ಹೀಗೆ ಚಿತ್ರಿಸುವಾಗ ಅನೇಕ ಅಹಿತ–ಆದರೆ ಸತ್ಯ ಸಂಗತಿಗಳನ್ನು ವಿವರವಾಗಿ ಚಿತ್ರಿಸುವುದು ಜೋಲಾನ ಪದ್ಧತಿ. ಜನರ ಜೀವನದ ಮೇಲೆ ಅನುವಂಶತೆ ಹಾಗೂ ಪರಿಸರ ಬೀರುವ ಪ್ರಭಾವದ ಬಗೆಗೆ ಇವನು ಹೆಚ್ಚು ಆಸಕ್ತಿ ತೋರಿಸಿದ. ಇವನ ಕಾದಂಬರಿಗಳು 19ನೆಯ ಶತಮಾನದ ಫ್ರಾನ್ಸಿನ ಚಿತ್ರವನ್ನು ನೀಡುತ್ತವೆ.

ತಾನು ಕಂಡ ಸಮಾಜ ಚಿತ್ರಣವನ್ನು ಅತಿ ಸಹಜವಾಗಿ ನಿರ್ಭಯದಿಂದ ಚಿತ್ರಿಸಿದ ಜೋಲಾ ಸಾಹಿತ್ಯದಲ್ಲಿನ 'ವಾಸ್ತವವಾದ'ದ ಮೂಲಪುರುಷನಾದ.

1902ರ ಸೆಪ್ಟೆಂಬರ್ 29ರಂದು ಜೋಲಾ ತನ್ನ ಕೋಣೆಯ ಎಲ್ಲ ಕಿಟಕಿ ಬಾಗಿಲುಗಳನ್ನು ಮುಚ್ಚಿ ಮಲಗಿದ್ದ. ಹಚ್ಚಿದ್ದ ದೀಪದ ಹೊಗೆ ಹೊರಗೆ ಹೋಗಲಾರದೆ ಒಳಗೇ ಸುತ್ತಿಕೊಂಡಿತು. ಉಸಿರಾಟ ಕಷ್ಟವಾಗಿ ಬೆಳಗಾಗುವ ವೇಳೆಗೆ ಜೋಲಾ ಸತ್ತುಹೋದ.

## ಜೋಸೆಫ್ ಕಾನ್ರಾಡ್

ಇಪ್ಪತ್ತೊಂದು ವರ್ಷಗಳವರೆಗೆ ಕೇವಲ ಪೋಲಿಷ್ ಮತ್ತು ಫ್ರೆಂಚ್ ಭಾಷೆಗಳನ್ನು ಮಾತನಾಡುತ್ತಿದ್ದು, ಅನಂತರ ಎ ಬಿ ಸಿ ಡಿ ಕಲಿತು ಇಂಗ್ಲಿಷ್ ಭಾಷೆಯಲ್ಲಿ ಪ್ರಾವೀಣ್ಯ ಪಡೆದು, ಇಂಗ್ಲಿಷಿನಲ್ಲೇ ಕೃತಿಗಳನ್ನು ರಚಿಸಿ, ಈ ಶತಮಾನದ ಅತಿ ಪ್ರಮುಖ ಇಂಗ್ಲಿಷ್ ಕಾದಂಬರಿಕಾರರಲ್ಲೊಬ್ಬ ಎನಿಸಿಕೊಂಡವನು ಜೋಸೆಫ್ ಕಾನ್ರಾಡ್. ಇಂಗ್ಲಿಷರವನಲ್ಲದ 'ಹೊರಗಿನವನು' ಆದರೆ ಅತ್ಯಂತ ಸೊಗಸಾದ ಇಂಗ್ಲಿಷ್ ಶೈಲಿಯನ್ನೂ ಹೊಂದಿದ್ದ ಕಾನ್ರಾಡನ ವ್ಯಕ್ತಿತ್ವ ತೀರ ವಿಶಿಷ್ಟವಾದದ್ದು.

ಇವನು ಹುಟ್ಟಿದ್ದು ರಷ್ಯದ ಉಕ್ರೇನ್‌ನಲ್ಲಿ, [illegible]ರ ಡಿಸೆಂಬರ್ 3ರಂದು : ತಾಯಿತಂದೆ ಇಬ್ಬರೂ ಪೋಲಿಷ್ ಬುಡಕಟ್ಟಿನವರು. ಅವರು ಇವನಿಗೆ ಇಟ್ಟ ಹೆಸರು, ಥಿಯೊಡೋರ್ ಜೋಸೆಫ್ ಕಾನ್ರಾಡ್ ಕಾರ್ಜೆನಿಯೋವ್‌ಸ್ಕಿ. ಮುಂದೆ ಇಂಗ್ಲೆಂಡಿನ ನಾಗರಿಕನಾದಾಗ ಇವನು ತನ್ನ ಹೆಸರನ್ನು ಜೋಸೆಫ್ ಕಾನ್ರಾಡ್ ಎಂದು ಮೊಟಕುಮಾಡಿಕೊಂಡ. ಪೋಲೆಂಡಿನ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಕ್ಕಾಗಿ ಇವನ ತಂದೆಯನ್ನು 1863ರಲ್ಲಿ ಬಂಧಿಸಿದರು. ಕುಟುಂಬದ ಇತರರು ದೇಶಭ್ರಷ್ಟರಾಗಿ ಉತ್ತರ ರಷ್ಯದಲ್ಲಿ ನೆಲಸಿದರು. ಆಗ ಇವನು ಆರು ವರ್ಷದ ಹುಡುಗ. ಕಾನ್ರಾಡ್ 1865ರಲ್ಲಿ ತಾಯಿಯನ್ನೂ 1869ರಲ್ಲಿ ತಂದೆಯನ್ನೂ ಕಳೆದುಕೊಂಡ : ಅನಂತರ ಚಿಕ್ಕಪ್ಪನ ಆಶ್ರಯದಲ್ಲಿ ಪೋಲೆಂಡಿನ ಕ್ರಾಕಾವ್‌ನಲ್ಲಿ ವಿದ್ಯಾಭ್ಯಾಸ ಮಾಡಿದ. ಕಾನ್ರಾಡ್ ಓದುತ್ತಿದ್ದ ಪೋಲಿಷ್ ಮತ್ತು ಫ್ರೆಂಚ್ ಪುಸ್ತಕಗಳ ಪ್ರಭಾವದಿಂದ ಅವನ ಮನಸ್ಸು ಸಾಹಸಮಯ ಜೀವನದ ಕಡೆಗೆ ತಿರುಗಿತು. 1874ರಲ್ಲಿ ಪೋಲೆಂಡನ್ನು ಬಿಟ್ಟು ಫ್ರಾನ್ಸಿಗೆ ತೆರಳಿದ. ಸಮುದ್ರಯಾನದಲ್ಲಿ ತೊಡಗಿ ವೆಸ್ಟ್ ಇಂಡೀಸ್ ದ್ವೀಪಕ್ಕೆ ಹೋದ. ರಾಜಕೀಯ ಒಳಸಂಚುಗಳಲ್ಲೂ ಭಾಗವಹಿಸಿ ಸ್ಪೇನಿನ ಕರಾವಳಿಗೆ ಬಂದೂಕು ಮದ್ದುಗುಂಡುಗಳನ್ನು ಸಾಗಿಸುವ ಉದ್ಯೋಗ ಕೈಗೊಂಡ. ಮರುವರ್ಷ ಇಂಗ್ಲೆಂಡನ್ನು ಸೇರಿದ. ಆಗ ಇವನಿಗೆ ಇಂಗ್ಲಿಷಿನ ಒಂದಕ್ಷರವೂ ತಿಳಿದಿರಲಿಲ್ಲ. ಎಂಟು ವರ್ಷಗಳ ಅನಂತರ ಬ್ರಿಟಿಷ್ ಪೌರತ್ವವನ್ನು ಗಳಿಸಿಕೊಂಡ : ಕಠಿನ ಪರೀಕ್ಷೆಗಳಿಗೆ ಕುಳಿತು ಅವುಗಳಲ್ಲಿ



ಅಸ್ನಾದರೂ ಅಂಗ್ಲ : ಕಾನ್ರಾಡ್–ಶಿಲ್ಪಕೃತಿ

ಉತ್ತೀರ್ಣನಾಗಿ ವಾಣಿಜ್ಯನೌಕೆಯಲ್ಲಿ ಅಧಿಕಾರಿ ಸ್ಥಾನಗಳಿಸಿಕೊಂಡ.

1887ರಲ್ಲಿ ಕಾನ್ರಾಡ್ ಆಗ್ನೇಯ ಏಷ್ಯದ ಕಡೆಗೆ ಪ್ರಯಾಣ ಮಾಡುತ್ತಿದ್ದಾಗ ಸಿಂಗಪುರದ ಆಸ್ಪತ್ರೆಗೆ ದಾಖಲಾಗಬೇಕಾಯಿತು. ಅಲ್ಲಿದ್ದ ಕಾಲದಲ್ಲಿ ಬೇಸರ ಕಳೆಯಲು ಕಥೆಗಳನ್ನು ಬರೆಯತೊಡಗಿದ. ಮುಂದ ಆಸ್ಟ್ರೇಲಿಯ–ಇಂಗ್ಲೆಂಡುಗಳ ನಡುವೆ ನೌಕಾ ಪ್ರಯಾಣದಲ್ಲಿ ಸಮಯ ಸಿಕ್ಕಾಗಲೆಲ್ಲ ಅವನು ಬರೆಯುತ್ತಲೇ ಇದ್ದ. 1984ರಲ್ಲಿ ಸಮುದ್ರಯಾನವನ್ನು ಸಂಪೂರ್ಣವಾಗಿಬಿಟ್ಟು, ಇಂಗ್ಲೆಂಡಿನಲ್ಲಿ ನೆಲೆಸಿ ಲೇಖನ ವೃತ್ತಿ ಕೈಗೊಂಡ ; 1896ರಲ್ಲಿ ಮದುವೆಯಾದ. ಒಮ್ಮೆ ಅವನು ಆಫ್ರಿಕಕ್ಕೆ ಹೋಗಿದ್ದಾಗ ಅಂಟಿದ ವ್ಯಾಧಿಯೊಂದು ಅವನನ್ನು ಕಾಡುತ್ತಲೇ ಇತ್ತು ; ಜೊತೆಗೆ ಬಡತನವೂ ಸೇರಿ, ಅವನು ಕಷ್ಟದಿಂದಲೇ ಬಾಳಬೇಕಾಯಿತು. ಸ್ವಲ್ಪ ಕಾಲಾನಂತರ ಇವನ ಪುಸ್ತಕಗಳು ವಿಮರ್ಶಕರ ಮೆಚ್ಚುಗೆಯನ್ನೂ ಜನಪ್ರಿಯತೆಯನ್ನೂ ಗಳಿಸಿದುವು.

ತನ್ನ ಜೀವನದ ಮೊದಲ ಭಾಗವನ್ನು ಸಮುದ್ರದ ಮೇಲೆಯೇ ಕಳೆದಿದ್ದ ಅವನ ಅನೇಕ ಕೃತಿಗಳಲ್ಲಿ ನಾವಿಕ ಪ್ರಪಂಚ ಚಿತ್ರಿತವಾಗಿದೆ. ಇವನ 38ನೆಯ ವರ್ಷದಲ್ಲಿ 'ಆಲ್ಮೆಯರ್ಸ್ ಫಾಲಿ' ಎಂಬ ಮೊದಲ ಕಾದಂಬರಿ ಪ್ರಕಟವಾಯಿತು. 1894ರಿಂದ 1915ರ ಅವಧಿಯಲ್ಲಿ ಬರೆದ ಇವನ ಕೃತಿಗಳಲ್ಲಿ 'ದಿ ನಿಗ್ಗರ್ ಆಫ್ ದಿ ನಾರ್ಸಿಸಸ್' (1897), 'ಲಾರ್ಡ್ ಜಿಮ್' (1900), 'ಟೈಫೂನ್' (1903), 'ನೋಸ್ಟ್ರೋಮೋ' (1904), 'ದಿ ಸೀಕ್ರೇಟ್ ಏಜೆಂಟ್' (1907), 'ಅಂಡರ್ ವೆಸ್ಟರ್ನ್ ಐಸ್' (1911) ಮತ್ತು 'ವಿಕ್ಟರಿ' (1915) ಕಾದಂಬರಿಗಳೂ 'ಹಾರ್ಟ್ ಆಫ್ ಡಾರ್ಕ್‌ನೆಸ್', ಮತ್ತು 'ದಿ ಸೀಕ್ರೆಟ್ ಶೇರರ್' ಎಂಬ ಇವನ ಸಣ್ಣ ಕಥೆಗಳೂ ಪ್ರಮುಖವಾದುವು.

ತನ್ನ ಒಡನಾಡಿಗಳ ಬಗೆಗೆ ಕಾನ್ರಾಡ್‌ಗೆ ಅಪಾರ ಅನುಕಂಪ. ಅವರನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದ. ಕಾದಂಬರಿಗೆ ಕಲಾಕೃತಿಯಷ್ಟೇ ಗಾಂಭೀರ್ಯವೂ ಇರಬೇಕೆಂದು ಹೇಳಿದ ಹೆನ್ರಿ ಜೇಮ್ಸ್‌ನಿಂದ ಇವನು ಪ್ರಭಾವಿತನಾಗಿದ್ದ. ಫ್ರಾನ್ಸ್‌ನ ಫ್ಲಾಬೇರ್ ಮತ್ತು ಮೊಪಾಸಾ ತಮ್ಮ ಸುತ್ತಲಿನ ಜಗತ್ತನ್ನು ನಿರ್ಲಿಪ್ತ ಭಾವದಿಂದ ನೋಡುತ್ತಿದ್ದ ರೀತಿ ಇವನಿಗೆ ಪ್ರಿಯವಾಗಿತ್ತು. ರಷ್ಯದ ಟುರ್ಗೆನೈಫ್ ಮತ್ತು ಡಾಸ್ಟಯೆವ್‌ಸ್ಕಿ ಕೂಡ ಇವನ ಮೇಲೆ ಅಪಾರ ಪ್ರಭಾವ ಬೀರಿದ್ದರು. ಮೊದಲಿಗೆ ಸಮುದ್ರ ಕಥೆಗಳನ್ನು ಹೇಳುವ ಉತ್ತಮ ಕಥೆಗಾರ ಎಂದು ಮಾತ್ರ ಕಾನ್ರಾಡ್ ಹೆಸರು ಪಡೆದಿದ್ದರೂ, ಸಾಹಿತ್ಯದಲ್ಲಿ ಇವನ ಈಗಿನ ಸ್ಥಾನ ಅದಕ್ಕಿಂತ ಹೆಚ್ಚಿನದು. ಮಾನವನ ನಡತೆಯನ್ನು ಅತ್ಯಂತ ಆಳವಾಗಿ ಮತ್ತು ಸೂಕ್ಷ್ಮವಾಗಿ ಚಿತ್ರಿಸಿರುವ ಇವನ ಕೃತಿರಾಶಿ ವಿಶ್ವಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯಾಗಿದೆ.

ಜೋಸೆಫ್ ಕಾನ್ರಾಡ್ 1924ರ ಅಗಸ್ಟ್ 3ರಂದು ತನ್ನ 67ನೆಯ ವಯಸ್ಸಿನಲ್ಲಿ ನಿಧನನಾದ.

## ಟರ್ನರ್

ರೈಲು ಓಡುತ್ತಿತ್ತು. ಗಾಡಿಯಲ್ಲಿ ಕುಳಿತಿದ್ದ ಒಬ್ಬ, ಕಿಟಕಿಯಿಂದ ತಲೆ ಹೊರಗೆ ಹಾಕಿ ತನ್ಮಯನಾಗಿ ನೋಡುತ್ತಿದ್ದ. ರಭಸವಾಗಿ ಬೀಳುತ್ತಿತ್ತು ಮಳೆ. ಅದನ್ನು ಅವನು ಗಮನಿಸಿದಂತೆ ಕಾಣಲಿಲ್ಲ. ಅದೇ ಡಬ್ಬಿಯಲ್ಲಿ ಪ್ರಯಾಣಮಾಡುತ್ತಿದ್ದ ಒಬ್ಬಳು ಹೆಂಗಸಿಗೆ ಈತ ಏನು ನೋಡುತ್ತಿರಬಹುದು ಎಂದು ಕುತೂಹಲ. ಸ್ವಲ್ಪ ಸಮಯದ ಬಳಿಕ ನೀರು ಸೋರುತ್ತಿದ್ದ ತನ್ನ ತಲೆಯನ್ನು ಆತ ಒಳಕ್ಕೆಳೆದುಕೊಂಡು ಕಾಲು ಗಂಟೆಯ ಕಾಲ ಕಣ್ಮುಚ್ಚಿ ಕುಳಿತ. ಹೆಂಗಸೂ ಕಿಟಕಿಯಿಂದಾಚೆಗೆ ಬಗ್ಗಿ ನೋಡಿದಳು.

ಕೆಲ ದಿನಗಳ ತರುವಾಯ ರಾಯಲ್ ಅಕಾಡೆಮಿಯಲ್ಲಿ ನಡೆದ ಚಿತ್ರ ಪ್ರದರ್ಶನವನ್ನು ನೋಡಲು ಆ ಹೆಂಗಸು ಹೋದಳು. ಕಿಟಕಿಯಿಂದ ಆ ದಿನ ನೋಡಿದ್ದ ದೃಶ್ಯದ ಒಂದು ಮನೋಹರ ಚಿತ್ರ ಪ್ರದರ್ಶನದಲ್ಲಿತ್ತು.

ಚಿತ್ರದ ಹೆಸರು 'ಮಳೆ, ಉಗಿ, ವೇಗ'. ಚಿತ್ರಕಾರ, ಜೋಸೆಫ್ ಟರ್ನರ್. ಆಕೆಯ ಸಹ ಪ್ರಯಾಣಿಕನಾಗಿದ್ದ ವ್ಯಕ್ತಿ, ಆ ಕಲಾವಿದ.

ಟರ್ನರ್ 1775ನೆಯ ಏಪ್ರಿಲ್ 23ರಂದು ಲಂಡನಿನಲ್ಲಿ ಜನಿಸಿದ. ತಂದೆ ಕ್ಷೌರಿಕ. ವಿದ್ಯಾಭ್ಯಾಸ, ಶರೀರದ ಬೆಳವಣಿಗೆ ಎರಡೂ ಅಷ್ಟಕ್ಕಷ್ಟೆ. ಅವನಿಗೆ ಚೆನ್ನಾಗಿ ಬರುತ್ತಿದ್ದುದು ಒಂದೇ ಒಂದು : ಅದು ಚಿತ್ರಕಲೆ. ಆದರೆ ಚಿತ್ರಕಲೆಯ ಉಪಾಧ್ಯಾಯರಿಗೆ ಮಾತ್ರ ಆ ವಿಷಯದಲ್ಲಿ ಅಪನಂಬಿಕೆ. "ನಿನ್ನ ಮಗ ಎಂದಿಗೂ ಚಿತ್ರಕಾರನಾಗಲಾರ" ಎಂದು ಆತನ ತಂದೆಗೆ ಹೇಳಿಯೂ ಬಿಟ್ಟರು.

ತನ್ನ ತಂದೆ ಅಂಗಡಿಯಲ್ಲಿ ಮಾರಾಟಮಾಡಲೆಂದು ತೂಗಹಾಕುತ್ತಿದ್ದ ನಿಯತಕಾಲಿಕಗಳಲ್ಲಿದ್ದ ಚಿತ್ರಗಳನ್ನು ಟರ್ನರ್ ಚಿಕ್ಕ ಹುಡುಗನಾಗಿದ್ದಾಗಲೇ ನಕಲು ಮಾಡುತ್ತಿದ್ದ.

ರಾಯಲ್ ಅಕಾಡೆಮಿಯಲ್ಲಿ ಚಿತ್ರಕಲೆ ಕಲಿಯಲು ಸೇರಿದಾಗ ಅವನ ವಯಸ್ಸು 14 ವರ್ಷ; ಚುರುಕಾಗಿ ಕಲಿತ. 17ನೆಯ ವರ್ಷಕ್ಕೆ ತನ್ನ ಚಿತ್ರವನ್ನು ತಾನೇ ಬರೆಯುವಂತಾದ. ಆಗಿನ್ನೂ ಛಾಯಾಚಿತ್ರಣ ಬಳಕೆಗೆ ಬಂದಿರಲಿಲ್ಲ. ರೇಖಾಚಿತ್ರಗಳಿಗೆ ಬಹಳ ಬೇಡಿಕೆ ಇತ್ತು. ಯುವಕ ಟರ್ನರ್ ಚೀಲ ಹೆಗಲಿಗೇರಿಸಿಕೊಂಡು ಅಲೆಯಲು ಹೊರಡುತ್ತಿದ್ದ. ಅವನ ಜ್ಞಾಪಕಶಕ್ತಿ ಚೆನ್ನಾಗಿತ್ತು. ಒಮ್ಮೆ ನೋಡಿದ ದೃಶ್ಯವನ್ನು ಮರೆಯುತ್ತಲೇ ಇರಲಿಲ್ಲ. ಸ್ಕೆಚ್ ಪುಸ್ತಕದಲ್ಲಿ ಬೇಕಾದುದನ್ನು ಗುರುತಿಸಿಕೊಂಡರೆ ಸಾಕು ಅವನ ಮನಸ್ಸಿನಲ್ಲಿ ಆ ದೃಶ್ಯಗಳು ಅಚ್ಚೊತ್ತಿದಂತೆ ಸ್ಥಿರವಾಗಿ ನಿಲ್ಲುತ್ತಿದ್ದುವು. ಇಂಗ್ಲೆಂಡ್, ಸ್ಕಾಟ್‌ಲೆಂಡ್, ವೇಲ್ಸ್, ಇಟಲಿ, ಸ್ವಿಟ್ಜರ್‌ಲೆಂಡ್‌ಗಳಲ್ಲಿ ಟರ್ನರ್ ಸಂಚಾರಮಾಡಿದ.

ಅವನಿಗೆ ಚಿತ್ರಗಳನ್ನು ನಕಲುಮಾಡುವ ಕೆಲಸ ಸಿಕ್ಕಿತು. ವೇತನ ಒಂದು ಸಂಜೆಗೆ ಸುಮಾರು ಮೂರು ರೂಪಾಯಿ. ಕ್ರಮೇಣ, ಬೆಳಗಿನಿಂದ ರಾತ್ರಿಯವರೆಗೂ ಚಿತ್ರ ಬರೆಯುವಷ್ಟು ಕೆಲಸವಿರುತ್ತಿತ್ತು. ಬೈರನ್ ಹಾಗೂ ಸ್ಕಾಟ್ ಬರೆದ ಪುಸ್ತಕಗಳಿಗೆ ಇವನು ಚಿತ್ರಗಳನ್ನು ರಚಿಸಿಕೊಟ್ಟ. ಇವನ



ಟರ್ನರ್: ' ನನ್ನ ಚಿತ್ರಗಳು ನನ್ನ ಮಕ್ಕಳು '

ಚಿತ್ರಗಳು ಎಷ್ಟು ಜನಪ್ರಿಯವಾದುವೆಂದರೆ ಒಂದು ಕಾಲಕ್ಕೆ ಯಾವುದೇ ದಿವಾನಖಾನೆ, ತಂಗುದಾಣ ಅಥವಾ ಸಾರ್ವಜನಿಕ ಕಟ್ಟಡಗಳಲ್ಲಿ ಟರ್ನರನ ಒಂದು ಚಿತ್ರವಾದರೂ ಇರುತ್ತಿತ್ತು.

ತೀವ್ರ ಬಣ್ಣಗಳನ್ನು ಬಳಸತೊಡಗಿದ ಟರ್ನರ್ 21ನೆಯ ವಯಸ್ಸಿನವನಾಗಿದ್ದಾಗ, ಅವನ ಪ್ರಥಮ ತೈಲಚಿತ್ರ 'ಸಮುದ್ರದಲ್ಲಿ ಬೆಸ್ತರು' ರಾಯಲ್ ಅಕಾಡೆಮಿಯಲ್ಲಿ ಪ್ರದರ್ಶಿತವಾಯಿತು. 26ನೆಯ ವಯಸ್ಸಿಗೆ ಅಕಾಡೆಮಿಯ ಪೂರ್ಣ ಸದಸ್ಯತ್ವ ಅವನಿಗೆ ಲಭಿಸಿತು. ಅವನು ಅಕಾಡೆಮಿಯ ಕೆಲಸಕಾರ್ಯಗಳಲ್ಲಿ ತುಂಬ ಆಸಕ್ತಿ ವಹಿಸುತ್ತಿದ್ದುದಲ್ಲದೆ, ಆ ಸಂಸ್ಥೆಗೆ ಸುಮಾರು ಮೂರು ಲಕ್ಷ ರೂಪಾಯಿ ದಾನ ಮಾಡಿದ. 35ನೆಯ ವರ್ಷದ ವೇಳೆಗೆ ಇಂಗ್ಲೆಂಡಿನ ಪ್ರಖ್ಯಾತ ನಿಸರ್ಗ ಚಿತ್ರಕಾರನೆಂದು ಮನ್ನಣೆ ಗಳಿಸಿದ.

40 ವರ್ಷಗಳಾದಾಗ ತನಗೆ ಒಪ್ಪಿಗೆಯೊದುದನ್ನು ಮಾತ್ರ ಚಿತ್ರಿಸಲು ನಿರ್ಧರಿಸಿದ. ದಿನ ಕಳೆದಂತೆ ಚಿತ್ರಗಳು ಹೆಚ್ಚು ಸೂಕ್ಷ್ಮವಾದುವು, ಸ್ಪಷ್ಟವಾದುವು. 1819ರಲ್ಲಿ ಟರ್ನರ್ ಇಟಲಿಗೆ ಹೋಗಿ ಬಂದ. ಇಟಲಿಯ ಕಲೆ ಅವನ ಮೇಲೆ ಪ್ರಭಾವ ಬೀರಿತು.

"ಟರ್ನರ್ ಹಣ ತೆಗೆದುಕೊಳ್ಳದೆ ಏನೂ ಮಾಡುವುದಿಲ್ಲ, ಹಣಕ್ಕಾಗಿ ಏನು ಬೇಕಾದರೂ ಮಾಡುತ್ತಾನೆ"—ಎಂದಿದ್ದಾನೆ ವಾಲ್ಟರ್ ಸ್ಕಾಟ್. ಟರ್ನರ್‌ಗೆ ಹಣದ ಮೋಹವಿತ್ತಾದರೂ ತನ್ನ ಚಿತ್ರಗಳನ್ನು ಮಾರುವುದು ಅವನಿಗೆ ಪ್ರಿಯವಾಗಿರಲಿಲ್ಲ. "ನನ್ನ ಚಿತ್ರಗಳು ನನ್ನ ಮಕ್ಕಳು" ಎನ್ನುತ್ತಿದ್ದ. ತನ್ನ ಚಿತ್ರಗಳು ಹರಾಜಿಗೆ ಬಂದಾಗ ತಾನೇ ಹೋಗಿ ಅವನ್ನು ಕೊಂಡು ತರುತ್ತಿದ್ದ. ತನ್ನ ಚಿತ್ರಸಂಗ್ರಹವನ್ನು 500,000 ರೂಪಾಯಿಗಳಷ್ಟು ಬೆಲೆ ಕೊಟ್ಟು ಕೊಳ್ಳಲು ಗ್ರಾಹಕರು ಬಂದಾಗ ಆ ಬೇಡಿಕೆಯನ್ನು ನಿರಾಕರಿಸಿದ.

ಟರ್ನರ್ ರಚಿಸಿದ ಜಲವರ್ಣ ಚಿತ್ರಗಳು, ರೇಖಾಚಿತ್ರಗಳು, ಕೊರೆದ ಚಿತ್ರಗಳು 25,000. ಸಾಲಪತ್ರಗಳ ರೂಪದಲ್ಲಿ 630,000 ಡಾಲರುಗಳಷ್ಟು ಹಣ ಇರಿಸಿದ್ದ. ಲಂಡನಿನಲ್ಲಿ ಎರಡು ಮನೆಗಳಿದ್ದುವು.

ಎಲ್ಲ ಕಲಾವಿದರೂ ನಿವೃತ್ತರಾಗಬಯಸುವ ವಯಸ್ಸಿನಲ್ಲಿ (50ರಿಂದ 65ರ ಅವಧಿಯಲ್ಲಿ) ಟರ್ನರ್ ವಿಕಾಸಹೊಂದಿದ. ಆದರೆ ಆ ಹೊತ್ತಿಗೆ ಅವನಿಗೆ ಆಘಾತವನ್ನು ಉಂಟುಮಾಡುವ ಘಟನೆಗಳಾದುವು. ಅವನಿಗಿಂತ ಕಡಮೆ ಮಟ್ಟದ ಕಲಾವಿದರಿಗೆ 'ನೈಟ್' ಪ್ರಶಸ್ತಿಗಳು ದೊರೆತುವು. ಅವನ ಶ್ರೇಷ್ಠ ಕೃತಿಗಳನ್ನು ವಿಮರ್ಶಕರು ಪರಿಹಾಸ್ಯಮಾಡಿ ತೆಗಳಿದರು; ಸ್ನೇಹಿತರೂ ದೂರವಾಗತೊಡಗಿದರು.

ಆಗ ವಿಮರ್ಶಕರು ತೆಗಳಿದ ಚಿತ್ರಗಳೇ ಇಂದು ಟರ್ನರನ ಉತ್ತಮ ಕೃತಿಗಳೆಂದು ಮೆಚ್ಚುಗೆ ಗಳಿಸಿವೆ. 1851ರ ಡಿಸೆಂಬರ್ 19ರಂದು ಟರ್ನರ್ ಮೃತನಾದ. ಅವಿವಾಹಿತನಾಗಿದ್ದ ಟರ್ನರ್ ತನ್ನ ಚಿತ್ರಗಳನ್ನು ರಾಷ್ಟ್ರಕ್ಕೆ ಬಳುವಳಿಯಾಗಿ ಕೊಟ್ಟುಬಿಟ್ಟ.

ಟರ್ನರ್ ಬೆಳಕು, ಬಣ್ಣ ಮತ್ತು ವಾತಾವರಣಗಳ ಅಧ್ಯಯನದಲ್ಲಿ ಆದ್ಯ ಪ್ರವರ್ತಕ. ಆತನ ಸ್ಕೆಚ್‌ಪುಸ್ತಕ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿದೆ.

ಸಮುದ್ರವನ್ನು ಚಿತ್ರಿಸುವುದು ಅವನಿಗೆ ಬಹಳ ಪ್ರಿಯವಾಗಿತ್ತು. ಶಾಂತ ಹಾಗೂ ಪ್ರಕ್ಷುಬ್ಧ ಸಮುದ್ರದ ಅವನ ಚಿತ್ರಣಗಳು ಪರಿಣಾಮಕಾರಿಯಾಗಿವೆ.

ಚಿತ್ರಪ್ರದರ್ಶನವೊಂದರಲ್ಲಿ ಟರ್ನರನ ಒಂದು ಚಿತ್ರವನ್ನು ಅವನ ಸ್ನೇಹಿತ ಥಾಮಸ್ ಲಾರೆನ್ಸ್‌ನ ಚಿತ್ರಗಳೆರಡರ ನಡುವೆ ಇಟ್ಟಿದ್ದರು. ಟರ್ನರನ ಮಹತ್ಕೃತಿಯ ಎದುರು ತನ್ನ ಕೃತಿಗಳು ಗಣನೆಗೆ ಬರಲಾರವೆಂದು ಥಾಮಸ್ ಲಾರೆನ್ಸ್ ನೊಂದುಕೊಂಡ. ಮಾರನೆಯ ದಿನ ಲಾರೆನ್ಸ್ ಪ್ರದರ್ಶನಕ್ಕೆ ಹೋದಾಗ ಟರ್ನರನ ಚಿತ್ರ ಬೂದುಬೂದಾಗಿ ಕಾಣಿಸಿತು. ಸ್ನೇಹಿತನ ಚಿತ್ರಗಳು ಎದ್ದುಕಾಣಿಸಲೆಂದು ಟರ್ನರ್ ತನ್ನ ಚಿತ್ರವನ್ನು ವಿರೂಪಗೊಳಿಸಿದ್ದ. ಪ್ರದರ್ಶನ ಮುಗಿದ ಮೇಲೆ ತನ್ನ ಚಿತ್ರವನ್ನು ಸರಿಪಡಿಸಬಹುದು ಎಂದು, ಲಾರೆನ್ಸನನ್ನು ಟರ್ನರ್ ಸಮಾಧಾನಪಡಿಸಿದ.

ಆಧುನಿಕ ಚಿತ್ರಕಾರರಿಗೂ ಮಾರ್ಗದರ್ಶನ ನೀಡುವಂಥ ಚಿತ್ರಕಲೆ ಟರ್ನರನದು.

## ಟಾಲ್‌ಸ್ಟಾಯ್

ಲಿಯೊ ನಿಕೊಲಯೆವಿಚ್ ಟಾಲ್‌ಸ್ಟಾಯ್ ಜಗತ್ತಿನ ಅತ್ಯಂತ ಪ್ರಭಾವಶಾಲಿ ಲೇಖಕರ ಪಂಕ್ತಿಗೆ ಸೇರಿದ ಸಾಹಿತಿ. ಆತನ ಕಾಲದಲ್ಲಿ ಆತನಿಗೆ ಸಮನೆನಿಸುವ ಸಾಹಿತಿ ಯೂರೋಪಿನಲ್ಲಿ ಯಾರೂ ಇರಲಿಲ್ಲ. ಕಾದಂಬರಿ ಜಗತ್ತಿಗೆ ಅವನ ಕೊಡುಗೆ ಅಪೂರ್ವ.

ಟಾಲ್‌ಸ್ಟಾಯ್ ಹುಟ್ಟಿದ್ದು 1828ನೆಯ ಸೆಪ್ಟೆಂಬರ್ 9ರಂದು, ಶ್ರೀಮಂತ ಕುಟುಂಬದಲ್ಲಿ; ಮಾಸ್ಕೊ ನಗರದ ದಕ್ಷಿಣಕ್ಕೆ 160 ಕಿ.ಮೀ. ದೂರದಲ್ಲಿರುವ ಯಸ್ನಾಯಾ ಪೋಲ್ಯಾನದಲ್ಲಿ. ಅದು ಒಂದು ವ್ಯವಸಾಯ ಕ್ಷೇತ್ರ. ಆತ ಚಿಕ್ಕ ಮಗುವಾಗಿದ್ದಾಗಲೇ ತಂದೆ ತೀರಿಕೊಂಡ. ಬಂಧುಗಳು ಆತನನ್ನು ಬೆಳೆಸಿದರು; ಪ್ರಾಥಮಿಕ ವಿದ್ಯಾಭ್ಯಾಸದ ವ್ಯವಸ್ಥೆ ಮಾಡಿದರು. ಟಾಲ್‌ಸ್ಟಾಯ್ ಪ್ರೌಢ ವಿದ್ಯಾಭ್ಯಾಸಕ್ಕಾಗಿ ಕಾಜಾನ್ ವಿಶ್ವವಿದ್ಯಾಲಯಕ್ಕೆ ಹೋದ. 16ನೆಯ ವರ್ಷದಲ್ಲಿ ಅಲ್ಲಿನ ಶಿಕ್ಷಣ ವಿಧಾನ ಆತನಿಗೆ ಹಿಡಿಸಲಿಲ್ಲ. ಓದುವುದನ್ನು ಬಿಟ್ಟು 1847ರಲ್ಲಿ ತನ್ನ ವ್ಯವಸಾಯ ಕ್ಷೇತ್ರಕ್ಕೆ ಹಿಂದಿರುಗಿ ಅದರ ಆಡಳಿತವನ್ನು ವಹಿಸಿಕೊಂಡ. ಆದರೆ ಅದರಲ್ಲೂ ಆಸಕ್ತಿ ಕುದುರಲಿಲ್ಲ. ನಾಲ್ಕು ವರ್ಷಗಳ ಅನಂತರ ತನ್ನ ತಮ್ಮನಿದ್ದ ಕಾಕಸಸ್ ಪ್ರದೇಶಕ್ಕೆ ಹೋಗಿ ಸೈನ್ಯಾಧಿಕಾರಿಯಾಗಿ, ಇತಿಹಾಸ ಪ್ರಸಿದ್ಧವಾದ ಕ್ರೈಮಿಯಾ ಯುದ್ಧದಲ್ಲಿ ಸಬಾಸ್ಟಪೂಲ್ ನಗರದ ಮುತ್ತಿಗೆಯಲ್ಲಿ ಭಾಗವಹಿಸಿದ; ಅಸಾಧಾರಣ ಶೌರ್ಯ ತೋರಿದ. ಈ ಹೋರಾಟದ ಅನುಭವಗಳು ಟಾಲ್‌ಸ್ಟಾಯ್‌ಯಲ್ಲಿ ಸುಪ್ತವಾಗಿದ್ದ ಸಾಹಿತ್ಯ ರಚನಾಶಕ್ತಿಗೆ ಪ್ರಚೋದನೆ ಕೊಟ್ಟುವು; 'ಸಬಾಸ್ಟಪೂಲ್‌ನ ಚಿತ್ರಗಳು' ಎಂಬ ಕೃತಿ ಹೊರಬಂತು. ಯುದ್ಧರಂಗದ ತನ್ನ ಅನುಭವಗಳು, ಸೈನ್ಯಾಧಿಕಾರಿಗಳ ದರ್ಪದ ವರ್ತನೆ ಈ ಕೃತಿಯಲ್ಲಿ



ಬೋಧನ ಕಲೆ : ಟಾಲ್‌ಸ್ಟಾಯ್

ವರ್ಣಿಸಲ್ಪಟ್ಟಿವೆ. ಯುದ್ಧದ ಕೊನೆಯ ದಿನಗಳಲ್ಲಿ ಟಾಲ್‌ಸ್ಟಾಯ್ ಸೈನ್ಯವನ್ನು ಬಿಟ್ಟು ಪೀಟರ್ಸ್‌ಬರ್ಗ್‌ಗೆ ಹಿಂದಿರುಗಿದ. ಅಲ್ಲಿನ ಸಾಹಿತ್ಯ ಸಂಘಗಳಲ್ಲಿ ಸಕ್ರಿಯವಾದ ಪಾತ್ರ ವಹಿಸಿದ. 1857ರಲ್ಲಿ ಫ್ರಾನ್ಸ್, ಜರ್ಮನಿ, ಸ್ವಿಟ್ಜರ್‌ಲೆಂಡ್‌ಗಳಲ್ಲಿ ಪ್ರವಾಸ ಮಾಡಿ ಹಿಂದಿರುಗಿ ಬಂದ.

ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ವಿಸ್ತಾರವಾದ ಜಮೀನಿನ ಒಡೆಯನಾಗಿದ್ದರೂ ಟಾಲ್‌ಸ್ಟಾಯ್‌ಯ ಸಹಾನುಭೂತಿ ಅತ್ಯಂತ ಶೋಚನೀಯ ಪರಿಸ್ಥಿತಿಯಲ್ಲಿದ್ದ ರಷ್ಯದ ಶ್ರಮಜೀವಿಗಳ ಕಡೆಗಿತ್ತು. ತನ್ನ ಜಮೀನಿನಲ್ಲಿದ್ದ ರೈತರ ಮಕ್ಕಳ ಶಿಕ್ಷಣಕ್ಕಾಗಿ ಶಾಲೆಯೊಂದನ್ನು ತೆರೆದು ತಾನೇ ಶಿಕ್ಷಕನಾದ. ಪರದೇಶಗಳಲ್ಲಿ ಸಂಚರಿಸಿ ಶಿಕ್ಷಣ ವಿಧಾನಗಳ ಬಗೆಗೆ ತಾನು ಪಡೆದ ಅನುಭವದ ಲಾಭ ಆ ರೈತರ ಮಕ್ಕಳಿಗೆ ದೊರೆಯುವಂತೆ ಮಾಡಿದ.

1862ರಲ್ಲಿ ಟಾಲ್‌ಸ್ಟಾಯ್ ಸೋಫಿಯ ಅಂಡ್ರಿವ್‌ನಾ ಎಂಬಾಕೆಯನ್ನು ವಿವಾಹ ಮಾಡಿಕೊಂಡ. ಸುಖಜೀವನದ ಸೌಕರ್ಯಗಳೆಲ್ಲ ಇದ್ದರೂ ಟಾಲ್‌ಸ್ಟಾಯ್‌ಯ ಮನಸ್ಸಿಗೆ ಶಾಂತಿ ಇರಲಿಲ್ಲ. ಎಲ್ಲ ಜಮೀನನ್ನು ದೀನ ದರಿದ್ರರಿಗೆ ಹಂಚಿಬಿಡಲು ನಿರ್ಧರಿಸಿದ. ಆದರೆ ತನ್ನ ಕುಟುಂಬದ ವಿರೋಧದಿಂದಾಗಿ ಹಾಗೆ ಮಾಡಲಾಗಲಿಲ್ಲ. ಅತೃಪ್ತಿ, ನಿರುತ್ಸಾಹಗಳ ಒತ್ತಡಕ್ಕೆ ಸಿಕ್ಕಿ ಆತ್ಮಹತ್ಯೆಗೂ ಆತ ಪ್ರಯತ್ನಿಸಿದ್ದುಂಟು. ಕೊನೆಗೆ ಅವನ ದೃಷ್ಟಿ ಏಸು ಕ್ರಿಸ್ತನ ಬೋಧನೆಗಳ ಕಡೆಗೆ ಹರಿಯಿತು. ಅವನ್ನು ಚೆನ್ನಾಗಿ ಅಧ್ಯಯನಮಾಡಿ, ಅರ್ಥಮಾಡಿಕೊಂಡು ಅತ್ಯಂತ ಸರಳ ಜೀವನ ನಡೆಸಲು ಆರಂಭಿಸಿದ. ಧೂಮಪಾನವನ್ನು ಕೂಡ ತ್ಯಜಿಸಿ, ಸಾಮಾನ್ಯ ರೈತನಂತೆ ಬಟ್ಟೆಗಳನ್ನು ತೊಟ್ಟ. ತನ್ನ ಪಾದರಕ್ಷೆಗಳನ್ನು ತಾನೇ ಹೊಲಿದುಕೊಂಡ. ತನ್ನ ಬದುಕು ಎಲ್ಲ ರೀತಿಯಿಂದಲೂ ದೇವರಿಗೆ ಪ್ರಿಯವಾಗುವಂತೆ ಮಾಡಲು ಪ್ರಯತ್ನಿಸಿದ. ಟಾಲ್‌ಸ್ಟಾಯ್‌ಯ ಋಷಿಸದೃಶ ವ್ಯಕ್ತಿತ್ವ, ಸರಳ ಜೀವನ — ಇವುಗಳ ಪ್ರಭಾವ ಜಗತ್ತಿನ ವಿವಿಧ ಭಾಗಗಳಿಗೆ ಹರಡಿತು. ಅನೇಕರಿಗೆ ಆತ ಆದರ್ಶಪ್ರಾಯನಾದ. ಆದರೆ ಟಾಲ್‌ಸ್ಟಾಯ್‌ಯ ಸಂಸಾರದಲ್ಲಿ ಮಾತ್ರ ಅಶಾಂತಿ ಹೊಗೆಯಾಡುತ್ತಲೇ ಇತ್ತು. ಹೆಂಡತಿಗೂ ಹಿರಿಯ ಮಕ್ಕಳಿಗೂ ಆತನ ವಿಚಾರಧಾರೆಯ ಬಗೆಗೆ ಆಸಕ್ತಿ ಇರಲಿಲ್ಲ ; ಆತ ತನ್ನ ಶ್ರೀಮಂತಿಕೆಯನ್ನು ಬಿಟ್ಟುಕೊಟ್ಟು ಬಡತನವನ್ನು ಅಂಗೀಕರಿಸಿದ್ದಂತೂ ಯಾರಿಗೂ ಸರಿಬೀಳಲಿಲ್ಲ. ಇದು ಟಾಲ್‌ಸ್ಟಾಯ್‌ಯ ಕುಟುಂಬ ಜೀವನವನ್ನು ದುಃಖಮಯವನ್ನಾಗಿ ಮಾಡಿತು. ನಿರಂತರ ಘರ್ಷಣೆಗಳಿಗೆ ಎಡೆಕೊಟ್ಟಿತು. ಮನೆಯಲ್ಲಿ ಪರಿಸ್ಥಿತಿ ತೀರ ಹದಗೆಟ್ಟಾಗ ಆತ ತನ್ನ ಇಳಿವಯಸ್ಸನ್ನೂ ಲಕ್ಷಿಸದೆ ಮನೆ ಬಿಟ್ಟು ಹೊರಟ. ಅಸ್ಟೆಪ್ಟೆವಾ ರೈಲು ನಿಲ್ದಾಣದಲ್ಲಿ ನ್ಯುಮೋನಿಯಾ ಕಾಯಿಲೆಯಿಂದ ತೀರಿಕೊಂಡ.

ಟಾಲ್‌ಸ್ಟಾಯ್‌ಯಿಂದ ಪ್ರಭಾವಿತರಾದ ಮಹಾನ್ ವ್ಯಕ್ತಿಗಳಲ್ಲಿ ಗಾಂಧಿಜಿ ಒಬ್ಬರು.

ಜಗತ್ತಿನ ಶ್ರೇಷ್ಠ ಕಾದಂಬರಿಗಳಲ್ಲಿ ಒಂದು ಎಂದು ಪರಿಗಣಿತವಾಗಿರುವ 'ಯುದ್ಧ ಮತ್ತು ಶಾಂತಿ'ಯನ್ನು ಬರೆಯಲು ಟಾಲ್‌ಸ್ಟಾಯ್‌ಗೆ ಏಳು ವರ್ಷಗಳ ಕಾಲ ಹಿಡಿಯಿತು. 1200ಕ್ಕಿಂತಲೂ ಹೆಚ್ಚಿನ ಪುಟಗಳ ಆ ಬೃಹತ್ ಕಾದಂಬರಿಯಲ್ಲಿ ಬರುವ ಪಾತ್ರಗಳ ವೈವಿಧ್ಯ, ಸನ್ನಿವೇಶಗಳ ಗಾಂಭೀರ್ಯ, ನೈಜತೆ — ಇವು ಓದುಗರನ್ನು ಬೆರಗುಗೊಳಿಸುತ್ತವೆ. 'ಯುದ್ಧ ಮತ್ತು ಶಾಂತಿ' 1805–1814ರ ನಡುವಣ ಕಾಲದ ಘಟನೆಗಳನ್ನು ಒಳಗೊಂಡಿದೆ. ಆ ಕಾದಂಬರಿ ರಷ್ಯದ ರಾಜಮನೆತನಗಳು, ಶ್ರೀಮಂತವರ್ಗಗಳ ಜನಜೀವನದ ಹಿನ್ನೆಲೆಯಲ್ಲಿ, ಫ್ರಾನ್ಸಿನ ನೆಪೋಲಿಯನನು ರಷ್ಯದ ಮೇಲೆ ನಡೆಸಿದ ಆಕ್ರಮಣ ಕತೆಯನ್ನು ನಿರೂಪಿಸುತ್ತದೆ. 'ರಷ್ಯದ ಸಾಮಾಜಿಕ ಜೀವನದ ಮಹಾಕಾವ್ಯ'ವೆಂದು ಅದನ್ನು ಕರೆಯಲಾಗಿದೆ. ರಷ್ಯದ ಐದು ಶ್ರೀಮಂತ ಕುಟುಂಬಗಳ ಕತೆ ಅಲ್ಲಿ ಬರುತ್ತದೆ. ಯುದ್ಧ ಕಾಲದ ಸಾವುನೋವುಗಳ ದಾರುಣ ಚಿತ್ರಗಳನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಟಾಲ್‌ಸ್ಟಾಯ್‌ಯ ಇನ್ನೊಂದು ಕಾದಂಬರಿ 'ಅನ್ನಾ ಕರಿನೀನಾ' ಒಂದು ಕಲಾತ್ಮಕ ಕೃತಿ. ಅದು 1860ರ ರಷ್ಯದ ಸಮಾಜವನ್ನು ಚಿತ್ರಿಸುತ್ತದೆ. ಅಲ್ಲಿ ಬರುವ ಅನ್ನಾ ಕರಿನೀನಾ–ವ್ರೋನ್‌ಸ್ಕಿಯ ಪ್ರಣಯದ ದುರಂತ ಕಥೆ ಮನಕರಗಿಸುವಂಥದು. ಮೂರನೆಯ ಕಾದಂಬರಿಯಾದ 'ಪುನರುತ್ಥಾನ' ಕೂಡ ಪ್ರಸಿದ್ಧ ಕಾದಂಬರಿ. ಶ್ರೀಮಂತ ಯುವಕ ನೆಕ್ಲದೋವ್ ಮತ್ತು ಕಾತ್ಯೂಷ ಅವರಿಬ್ಬರ ಸಂಬಂಧವನ್ನು ಕುರಿತ ಹೃದಯಸ್ಪರ್ಶಿ ಕಥೆ ಇದು. ಕಾತ್ಯೂಷ ವೇಶ್ಯೆಯಾಗಿ ಕೊಲೆಯ ಅಪಾದನೆಗೆ ಗುರಿಯಾಗಿ ನ್ಯಾಯಾಲಯದಲ್ಲಿ ನಡೆಯುವ ವಿಚಾರಣೆ; ಸೈಬೀರಿಯಾದ ಸೆರೆಮನೆಯಲ್ಲಿ ಕೈದಿಗಳು ಅನುಭವಿಸುವ ಯಾತನೆಯ ವರ್ಣನೆ ಈ ಕಾದಂಬರಿಯಲ್ಲಿದೆ. ಇದು ಮಾರ್ಮಿಕ ಸನ್ನಿವೇಶಗಳಿಂದ ಕೂಡಿದ್ದು ಆಕರ್ಷಕವಾಗಿದೆ.

ಟಾಲ್‌ಸ್ಟಾಯ್ ಬರೆದ ಸಣ್ಣ ಕತೆಗಳೂ ತುಂಬ ಪ್ರಸಿದ್ಧವಾಗಿವೆ. ಈ ಎಲ್ಲ ಕತೆಗಳು 1881–86 ನಡುವಿನ ಅವಧಿಯಲ್ಲಿ ರಚಿತವಾದುವು.

ಆತ ಬರೆದ ಕತೆಗಳಲ್ಲಿ ಕ್ರಿಸ್ತನ ಬೋಧನೆಗಳ ತಿರುಳು ಕಾಣಿಸುತ್ತದೆ. ಕಷ್ಟದಲ್ಲಿರುವವರಿಗೆ ಕೈಲಾದ ಸಹಾಯಮಾಡು, ನೆರೆಯವನನ್ನು ನಿನ್ನ ಸ್ವಂತ ಮಕ್ಕಳಂತೆ ಪ್ರೀತಿಸು ; ಶತ್ರುವನ್ನು ನಿನ್ನ ನೆರೆಮನೆಯವನಂತೆ ಕಾಣು. ದ್ವೇಷದಿಂದ ಮತ್ಸರದಿಂದ ವರ್ತಿಸಬಾರದು — ಎನ್ನುವ ಕ್ರಿಸ್ತನ ಮಾನವೀಯ ನೈತಿಕ ಬೋಧನೆಗಳು ಈ ಕತೆಗಳಲ್ಲಿ ತುಂಬ ಸರಳವಾಗಿ ಹೃದಯಸ್ಪರ್ಶಿಯಾಗಿ ನಿರೂಪಿಸಲ್ಪಟ್ಟಿವೆ.

'ಜೀವನ ಮತ್ತು ಧರ್ಮ', 'ದೇವರ ರಾಜ್ಯ ನಿಮ್ಮೊಳಗೆ ಇದೆ' ಮುಂತಾದ ಧಾರ್ಮಿಕ ವಿಷಯಕ ಪ್ರಬಂಧಗಳನ್ನೂ ಕೆಲ ನಾಟಕಗಳನ್ನೂ ಟಾಲ್‌ಸ್ಟಾಯ್ ರಚಿಸಿದ್ದಾನೆ. 'ಕತ್ತಲೆಯ ಶಕ್ತಿ' ನಾಟಕದಲ್ಲಿ ನಿಕಿಟಾ ಎನ್ನುವ ರೈತನ ಜೀವನದ ಅತ್ಯಂತ ಮಾರ್ಮಿಕ ದುರಂತ ಕಥೆಯಿದೆ.

ಜಗತ್ತಿನ ಸಾಹಿತ್ಯದಲ್ಲಿ ಟಾಲ್‌ಸ್ಟಾಯ್ ಇಂದಿಗೂ ಜೀವಂತವಾಗಿದ್ದಾನೆ. ಅವನ ಕೃತಿಗಳು ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಿತವಾಗಿವೆ.

'ಟಾಲ್‌ಸ್ಟಾಯ್' ನಾಮಪದದ ಭಾಷಾ ಉಚ್ಚಾರ 'ತೋಲ್‌ಸ್ತೋಯ್'.

## ಟ್ರಾಜಿಡಿ

" ಓ ನನ್ನ ದೊರೆ ಮತ್ಸರದ ಬಗೆಗೆ ಎಚ್ಚರವಿರಲಿ,
ಅದೊಂದು ಹಸಿರುಗಣ್ಣಿನ ಪೆಡಂಭೂತ........."

—ಇದು 'ಒಥೆಲೊ' ನಾಟಕದಲ್ಲಿ ಬರುವ ಮಾತುಗಳು. ವಿಖ್ಯಾತ ನಾಟಕಕಾರ ಶೇಕ್ಸ್‌ಪಿಯರನ ನಾಲ್ಕು ಸುಪ್ರಸಿದ್ಧ ಟ್ರಾಜಿಡಿಗಳಲ್ಲೊಂದು 'ಒಥೆಲೊ'.

ಒಥೆಲೊ ವೆನಿಸಿನಲ್ಲಿ ಒಬ್ಬ ಸೇನಾಧಿಕಾರಿ. ಅವನ ಪತ್ನಿ ಡೆಸ್ಡಿಮೋನಾ. ಒಥೆಲೊ ಕ್ಯಾಸಿಯೋನಿಗೆ ಲೆಫ್ಟಿನೆಂಟ್ ಪದವಿ ಕೊಡುತ್ತಾನೆ. ಆ ಪದವಿಗಾಗಿ ಆಸೆಪಟ್ಟ ಅಯಾಗೊ, ಮತ್ಸರದಿಂದ ಸೇಡುತೀರಿಸಿಕೊಳ್ಳಲು ನಿರ್ಧರಿಸುತ್ತಾನೆ. ಡೆಸ್ಡಿಮೋನಾ – ಕ್ಯಾಸಿಯೋರ ಬಗೆಗೆ ಒಥೆಲೋಗೆ ಸಂಶಯಬರುವಂತೆ ಹವಣಿಸುತ್ತಾನೆ. ಡೆಸ್ಡಿಮೋನಾಳ ಕರವಸ್ತ್ರ ಕ್ಯಾಸಿಯೊ ಬಳಿ ಇರುವಂತೆ ಮಾಡುತ್ತಾನೆ. ಇದು ಗೊತ್ತಾದಾಗ ಸಂಶಯಗ್ರಸ್ತನಾದ ಒಥೆಲೊ ಪತ್ನಿಯನ್ನು ಕೊಲ್ಲುತ್ತಾನೆ. ಅನಂತರ ತನ್ನ ಪತ್ನಿ ನಿರ್ದೋಷಿಯೆಂದು ತಿಳಿದಾಗ, ಒಥೆಲೊ ಆತ್ಮಹತ್ಯೆಮಾಡಿಕೊಳ್ಳುತ್ತಾನೆ. ಇದು 'ಒಥೆಲೊ' ನಾಟಕದ ಸಾರಾಂಶ. ಹೀಗೆ ದುರಂತದಿಂದ ಕೂಡಿ ದುರಂತದಲ್ಲೇ ಕೊನೆಗಾಣುವ ನಾಟಕ ಟ್ರಾಜಿಡಿ. ಕನ್ನಡದಲ್ಲಿ ಟ್ರಾಜಿಡಿಯನ್ನು ರುದ್ರ ನಾಟಕ, ದುರಂತ ನಾಟಕ, ಗಂಭೀರ ನಾಟಕಗಳೆಂದು ಕರೆಯುವುದುಂಟು.

ಗ್ರೀಕ್ ದೇವತೆ ಡಯೋನಿಸಸ್‌ನ ಉತ್ಸವಗಳಲ್ಲಿ ಟ್ರಾಜಿಡಿಗಳ ಮೂಲವನ್ನು ಕಾಣುತ್ತೇವೆ. ಅಲ್ಲಿ ಅಭಿನಯಿಸಲ್ಪಡುತ್ತಿದ್ದ ನಾಟಕಗಳಲ್ಲಿ ಪಾತ್ರಗಳು ಉಚ್ಚ ಶೀಲ, ಧೈರ್ಯ, ವಿದ್ಯೆಗಳನ್ನು ಉಳ್ಳವರಾಗಿದ್ದು ಉತ್ತಮ ಕುಲದವರಾಗಿರುತ್ತಿದ್ದರು. ಹೀಗೆ ಗುಣವಂತನಾದ ವ್ಯಕ್ತಿಗೆ ಒಂದೇ ಒಂದು ದುರ್ಗುಣ. ವಿಧಿನಿಯಮದಂತೆ ಆ ದುರ್ಗುಣ ಅವನ ವಿನಾಶಕ್ಕೆ ಹೇತುವಾಗುತ್ತದೆ. ಕ್ರಿ. ಪೂ. 534ರಲ್ಲಿ ಅಥೆನ್ಸಿನ ಸರ್ವಾಧಿಕಾರಿ ಪಿಸಿಸ್‌ಟ್ರಾಟಸ್‌ನು ಡಯೋನಿಸಸ್ ಉತ್ಸವಕಾಲದಲ್ಲಿ ಟ್ರಾಜಿಡಿಗಳ ಸ್ಪರ್ಧೆಯನ್ನು ಏರ್ಪಡಿಸುತ್ತಿದ್ದ. ಆಗ, ಟ್ರಾಜಿಡಿ ಅಭಿನಯವೂ ಒಂದು ಕಲೆ ಎಂದು ಮೊದಲು ಗಣನೆಗೆ ಬಂತು. ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದ ಟ್ರಾಜಿಡಿ ನಾಲ್ಕು ನಾಟಕಗಳ ಚಕ್ರವಾಗಿರಬೇಕು ; ಅದರಲ್ಲಿ ಮೂರು ಟ್ರಾಜಿಡಿಗಳೂ ಕೊನೆಯದು ವಿಡಂಬನೆಯೂ (ಪ್ರಾಣಿಗಳ ಮುಖವಾಡ ಧರಿಸಿದ ಮೇಳದವರಿರುವ ನಾಟಕ) ಆಗಿರಬೇಕು ಎಂಬ ನಿಯಮವಿತ್ತು. ನಾಲ್ಕು ನಾಟಕಗಳ ವಿಷಯ ಬೇರೆ ಬೇರೆ ಆಗಿರಬಹುದು ಅಥವಾ ಒಂದೇ ವಿಷಯವನ್ನು ಎಲ್ಲ ನಾಟಕಗಳಲ್ಲೂ ಬೆಳೆಸಿಕೊಂಡು ಬಂದಿರಬಹುದು. ಮೇಳದಲ್ಲಿ ಹನ್ನೆರಡು ಜನರೂ ಇಬ್ಬರು ಪಾತ್ರಧಾರಿಗಳೂ ಇರಬೇಕು ; ಎಲ್ಲ ಪುರುಷ ಪಾತ್ರಗಳೇ ಆಗಿರಬೇಕು. ರಂಗದ ಮೇಲೆ ರಕ್ತಪಾತ ತೋರಿಸುವಂತಿರಲಿಲ್ಲ. ಪಾತ್ರಧಾರಿಯೊಬ್ಬ ಆ ಸನ್ನಿವೇಶದ ವರದಿ ಕೊಡಬೇಕಾಗುತ್ತಿತ್ತು. ಕ್ರಿ. ಪೂ. 472ರಲ್ಲಿ ಸ್ಪರ್ಧೆಯಲ್ಲಿ ಎಸ್ಕಿಲಸ್ ಮೊದಲ ಬಹುಮಾನ ಗಳಿಸಿದ. ಆ ಕಾಲದಲ್ಲಿ ಅನೇಕ ಟ್ರಾಜಿಡಿಗಳು ಬರೆಯಲ್ಪಟ್ಟುವು. ಇವುಗಳಲ್ಲಿ ಎಸ್ಕಿಲಸ್‌ನದು ಏಳು. ಅವನ ಸಮಕಾಲೀನರಾದ ಸಾಫೋಕ್ಲೀಸನದು ಏಳು ಹಾಗೂ ಯೂರಿಪಿಡೀಸನದು ಹತ್ತೊಂಬತ್ತು ನಾಟಕಗಳು ಮಾತ್ರ ಉಳಿದಿವೆ.

ಕ್ರಿ. ಪೂ. 5ನೆಯ ಶತಮಾನದ ಅನಂತರ 2,000 ವರ್ಷಗಳ ಕಾಲ ಯಾರೂ ಉತ್ತಮ ಟ್ರಾಜಿಡಿಗಳನ್ನು ಬರೆಯಲಿಲ್ಲ. ರೋಮನರು ಟ್ರಾಜಿಡಿಗಳನ್ನು ಬರೆದರೂ ಅವು ಅಷ್ಟು ಸಫಲವಾಗಲಿಲ್ಲ. 16ನೆಯ ಶತಮಾನದಲ್ಲಿ ಇಟಲಿಯಲ್ಲಿ ರಚಿತವಾದ ಟ್ರಾಜಿಡಿಗಳಲ್ಲಿ ಸರ್ವಾಧಿಕಾರಿಗಳು ದಯಾಹೀನರಾಗಿ ನಿರೂಪಿಸಲ್ಪಡುತ್ತಿದ್ದರು. ರಂಗದ ಮೇಲೆ ಕೊಲೆ ನಡೆಯುವ ದೃಶ್ಯವನ್ನೂ ಅಭಿನಯಿಸಲಾಗುತ್ತಿತ್ತು.

1592ರಲ್ಲಿ ಇಂಗ್ಲೆಂಡಿನ ಥಾಮಸ್ ಕಿಡ್, ಸ್ಪ್ಯಾನಿಷ್ ಭಾಷೆಯಲ್ಲಿ ಟ್ರಾಜಿಡಿಯನ್ನು ಬರೆದ. ಆತನ ಸಮಕಾಲೀನನಾದ ಕ್ರಿಸ್ಟಫರ್ ಮಾರ್ಲೊ ಟ್ರಾಜಿಡಿಗಳನ್ನು ಮುಕ್ತ ಛಂದಸ್ಸಿನಲ್ಲಿ ರಚಿಸಿ ಅವನ್ನು ರಸಭರಿತಗೊಳಿಸಿದ. ವ್ಯಕ್ತಿಯ ಹಿರಿಮೆ, ವ್ಯಕ್ತಿತ್ವದ ಬೆಳವಣಿಗೆಯತ್ತ ಗಮನ ಹರಿಯುವಂತೆ ಮಾಡಿದ. ಶೇಕ್ಸ್‌ಪಿಯರನ ಟ್ರಾಜಿಡಿಗಳಲ್ಲಿ ನಾಲ್ಕು ಪರಾಕಾಷ್ಠೆಯನ್ನು ಮುಟ್ಟಿವೆ: 'ಹ್ಯಾಮ್ಲೆಟ್', 'ಒಥೆಲೊ', 'ಮ್ಯಾಕ್‌ಬೆತ್' ಮತ್ತು 'ಕಿಂಗ್ ಲಿಯರ್'. ನಾಯಕ ಉದಾತ್ತ ಗುಣದವನು ; ಅವನಲ್ಲಿನ ಒಂದು ದೌರ್ಬಲ್ಯದಿಂದಾಗಿ ಆತ ದುರಂತ ಮರಣವನ್ನು ಅಪ್ಪುತ್ತಾನೆ. ಶೇಕ್ಸ್‌ಪಿಯರನ ಟ್ರಾಜಿಡಿಗಳಲ್ಲಿ ಪಾತ್ರಗಳ ಮಾನಸಿಕತೆ, ಕಲ್ಪನೆ, ವೈಭವ, ಕಾವ್ಯದ ಮಹೋನ್ನತಿ ಅಸದೃಶ.

19ನೆಯ ಶತಮಾನದ ಟ್ರಾಜಿಡಿಗಳಲ್ಲಿ ಪಾತ್ರಗಳು ಮಾನವ ಸಹಜ ಗುಣಗಳಿಂದ ಕೂಡಿದ್ದುವು. ನಾರ್ವೆಯ ಇಬ್ಸನ್ ಆರ್ಥಿಕ ಹಾಗೂ ಸಾಮಾಜಿಕ ಸಮಸ್ಯೆಗಳೊಡನೆ ಮಾನವನ ಹೋರಾಟವನ್ನು ಚಿತ್ರಿಸಿದ್ದಾನೆ.

ಜರ್ಮನಿಯ ಗಯಟೆ (1749—1832) 'ಎಗ್‌ಮಾಂಟ್' ಎಂಬ ಟ್ರಾಜಿಡಿ ಬರೆದಿದ್ದಾನೆ. ಈ ಕೃತಿಯಲ್ಲಿ ನೆದರ್‌ಲೆಂಡಿನ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮನಾದವನೊಬ್ಬನನ್ನು ಗಯಟೆ ಅಮರಗೊಳಿಸಿದ್ದಾನೆ.

ರಷ್ಯದ ಅಲೆಗ್ಸಾಂಡರ್ ಪುಷ್ಕಿನ್ (1799—1837) ರಚಿಸಿರುವ ಟ್ರಾಜಿಡಿ 'ಬೋರಿಸ್ ಗೊಡನೋವ್'.

ಈ ಶತಮಾನದಲ್ಲಿ ಇಂಗ್ಲಿಷಿನಲ್ಲಿ ಶ್ರೇಷ್ಠ ಟ್ರಾಜಿಡಿಗಳನ್ನು ರಚಿಸಿದವರುಂಟು. ಜೆ. ಎಂ. ಸಿಂಜ್, ಯೂಜೀನ್ ಓ'ನೀಲ್ ಹಾಗೂ ಟಿ. ಎಸ್. ಎಲಿಯಟ್ ಇವರಲ್ಲಿ ಮುಖ್ಯರು.

ಸಂಸ್ಕೃತದಲ್ಲಿ ಭವಭೂತಿಯ 'ಉತ್ತರ ರಾಮಚರಿತೆ', ಕನ್ನಡದಲ್ಲಿ ಬಿ. ಎಂ. ಶ್ರೀ. ಅವರ 'ಅಶ್ವತ್ಥಾಮನ್', ಕುವೆಂಪು ಅವರ 'ರಕ್ತಾಕ್ಷಿ' ಹೆಸರಾಂತ ಟ್ರಾಜಿಡಿಗಳು.

ನೋಡಿ : ಎಸ್ಕಿಲಸ್ ; ಕುವೆಂಪು ; ಗಯಟೆ ; ಬಿಎಂಶ್ರೀ ; ಯೂಜೀನ್ ಓ'ನೀಲ್ ; ಯೂರಿಪಿಡೀಸ್ ; ಶೇಕ್ಸ್‌ಪಿಯರ್ ; ಸಾಫೋಕ್ಲೀಸ್

## ಟಿ. ಎಸ್. ಎಲಿಯಟ್

ಕೇವಲ 43 ಸಾಲುಗಳಿದ್ದ ತನ್ನ ಕವಿತೆಯನ್ನು ಎಲಿಯಟ್ ಪ್ರಕಟನೆಗೆ ಸಿದ್ಧಪಡಿಸುತ್ತಿದ್ದಾಗ, ಅದು ತೀರ ಸಣ್ಣದಾಗುತ್ತದೆಂದು ಕಂಡಿತು. ಅದಕ್ಕೆ ಆತ ಸುಮಾರು 50 ವಿವರಣೆಗಳನ್ನು ಒಳಗೊಂಡ ಅಡಿ ಟಿಪ್ಪಣಿ ಕೊಟ್ಟ. ಸಂಸ್ಕೃತವೂ ಸೇರಿ ಐದು ಭಾಷೆಗಳ ವಾಕ್ಯಗಳು ಆ ಕಾವ್ಯದಲ್ಲಿ ಉದ್ಧೃತವಾಗಿದ್ದುವು. ಇತಿಹಾಸ, ಸಾಹಿತ್ಯ, ಮನೋವಿಜ್ಞಾನ ಮತ್ತಿತರ ಅನೇಕ ವಿಷಯಗಳನ್ನು ಉಪಯೋಗಿಸಿಕೊಂಡಿದ್ದ. ಈ ಕಾವ್ಯ ಹಿಂದಿನ ಕಾವ್ಯ ಲಕ್ಷಣಗಳನ್ನು ಸಂಪೂರ್ಣವಾಗಿ ತೊರೆದಿತ್ತು. ಅನೇಕರಿಗೆ ಈ ಕವಿತೆಯ ತಲೆ ಬುಡ ಅರ್ಥವಾಗಲಿಲ್ಲ. ಹೊಸ ಬಗೆಯ ಕಾವ್ಯಕ್ಕೆ ಹಾದಿ ತೋರಿಸಿದ ಈಕವಿತೆಯೇ ಟಿ. ಎಸ್. ಎಲಿಯಟ್‌ನ 'ದಿ ವೇಸ್ಟ್ ಲ್ಯಾಂಡ್'.

ಅಮೆರಿಕದ ಮಿಸೌರಿಯ ಸೇಂಟ್ ಲೂಯಿಯಲ್ಲಿ 1888ರ ಸೆಪ್ಟೆಂಬರ್ 26ರಂದು ಎಲಿಯಟ್ ಜನಿಸಿದ. 1906ರಿಂದ 1915ರ ವರೆಗೆ ಅಮೆರಿಕ



ಆಧುನಿಕ ಕಾವ್ಯದ ಮಾರ್ಗದರ್ಶನ : ಎಲಿಯಟ್

ಸಂಯುಕ್ತ ಸಂಸ್ಥಾನದ ಹಾರ್ವರ್ಡ್, ಫ್ರಾನ್ಸಿನ ಸಾರ್ಬರ್ನ್, ಜರ್ಮನಿಯ ಮಾರ್ಬುರ್ಗ್, ಇಂಗ್ಲೆಂಡಿನ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಗಳಲ್ಲಿ ಓದಿದ. ತತ್ತ್ವಜ್ಞಾನ ಮತ್ತು ಸಾಹಿತ್ಯ ಅವನ ಅಭ್ಯಾಸದ ವಿಷಯಗಳಾಗಿದ್ದುವು. ಈ ಸಂದರ್ಭದಲ್ಲಿ ಫ್ರಾನ್ಸಿನ ಸಾಂಕೇತಿಕ ಕವಿಗಳೊಡನೆ ಬೆರೆಯುವ ಅವಕಾಶ ಅವನಿಗೆ ದೊರೆಯಿತು. ಖ್ಯಾತ ಕವಿಯೂ ವಿಮರ್ಶಕನೂ ಆದ ಎಜ್ರಾ ಪೌಂಡ್‌ನನ್ನು ಅವನು ಭೇಟಿಯಾದದ್ದು ಆತನ ಕವಿಜೀವನದ ಒಂದು ಮುಖ್ಯ ಘಟನೆ. ಎಜ್ರಾ ಪೌಂಡ್ 'ದಿ ವೇಸ್ಟ್ ಲ್ಯಾಂಡ್' ಕೃತಿಯನ್ನು ಪರಿಷ್ಕರಿಸಿದ. ('ದಿ ವೇಸ್ಟ್ ಲ್ಯಾಂಡ್' ಆತನಿಗೆ ಅರ್ಪಿತವಾಗಿದೆ.) 1916ರಲ್ಲಿ ಎಲಿಯಟ್, ಲಾಯ್ಡ್ಸ್ ಬ್ಯಾಂಕ್‌ನಲ್ಲಿ ನೌಕರಿಗೆ ಸೇರಿದ. 1917ರಿಂದ 19ರವರೆಗೆ 'ದಿ ಇಗೊಯಿಸ್ಟ್'ನ ಸಹಾಯಕ ಸಂಪಾದಕನಾಗಿದ್ದ. ಅನಂತರ 1923ರಲ್ಲಿ 'ದಿ ಕ್ರೈಟೀರಿಯನ್'ನ ಸಂಪಾದಕನಾದ. ಬಳಿಕ ಫೇಬರ್ ಮತ್ತು ಫೇಬರ್ ಪ್ರಕಟನಾಲಯದ ಸಹನಿರ್ದೇಶಕನಾಗಿ ಬಹುಕಾಲ ಅದೇ ಉದ್ಯೋಗದಲ್ಲಿದ್ದ.

ಸಾಹಿತ್ಯ ಪತ್ರಿಕೆಗಳಿಗೆ ಕವನ, ವಿಮರ್ಶೆಗಳನ್ನು ಬರೆಯುತ್ತಿದ್ದ ಎಲಿಯಟನ ಮೇಲೆ ಫ್ರಾನ್ಸಿನ ಸಾಂಕೇತಿಕ ಕವಿಗಳು ಮತ್ತು ಇಂಗ್ಲಿಷಿನ ಆಧ್ಯಾತ್ಮಿಕ ಕವಿಗಳು ಭಾರೀ ಪ್ರಭಾವ ಬೀರಿದರು. ಬೂಟಾಟಿಕೆ, ಅಪ್ರಾಮಾಣಿಕತೆಗಳನ್ನು ವಿಡಂಬನೆಗೆ ಗುರಿಮಾಡಿದ ಇವನ ಕವನಗಳ ಸಂಕಲನ 'ಪ್ರುಫ್ರಾಕ್ ಮತ್ತು ಇತರ ಅವಲೋಕನಗಳು' 1917ರಲ್ಲಿ ಪ್ರಕಟವಾಯಿತು.

1922ರಲ್ಲಿ 'ದಿ ಕ್ರೈಟೀರಿಯನ್' ಪತ್ರಿಕೆಯಲ್ಲೇ ಪ್ರಕಟವಾದ ಇವನ 'ದಿ ವೇಸ್ಟ್ ಲ್ಯಾಂಡ್' ಇಂಗ್ಲಿಷ್ ಸಾಹಿತ್ಯದ ಅತ್ಯಂತ ಪ್ರಮುಖ ಕೃತಿಗಳಲ್ಲೊಂದು. ಮೊದಲನೆಯ ಮಹಾಯುದ್ಧಾನಂತರದ ಪೀಳಿಗೆಯಲ್ಲಿ ಕಂಡುಬಂದ ನಿರಾಸೆ, ಟೊಳ್ಳು ನಾಗರಿಕತೆ, ಧ್ಯೇಯರಹಿತ ಜೀವನವನ್ನು ವಿಡಂಬನಾತ್ಮಕವಾಗಿ, ಸಂಕೇತಗಳ ಮೂಲಕ ಚಿತ್ರಿಸುವ ಈ ಕಾವ್ಯಕ್ಕೆ ಎಲಿಯಟ್ ಹೊಸ ಮಾಧ್ಯಮವನ್ನೇ ಬಳಸಿದ. ಹಿಂದಿನ ಕವಿಗಳು ಬಳಸುತ್ತಿದ್ದ ನಯ ನಾಜೂಕಿನ ಭಾಷೆ ಲಯಗಳನ್ನು ಬಿಟ್ಟು, ಶಕ್ತಿಯುತವಾದ ಪ್ರತಿಮೆಗಳ ಮೂಲಕ ತನ್ನ ಅನುಭವವನ್ನು ವ್ಯಕ್ತಗೊಳಿಸಿದ. ಹೀಗಾಗಿ ಈ ಕೃತಿಯಿಂದ ಈತ ಹೊಸ ಕಾವ್ಯಮಾರ್ಗಕ್ಕೆ ದಾರಿ ತೋರಿಸಿಕೊಟ್ಟಂತಾಯಿತು.

1927ರಲ್ಲಿ ಎಲಿಯಟ್ ಬ್ರಿಟಿಷ್ ನಾಗರಿಕನಾದ. ಬ್ರಿಟನಿನ ಧಾರ್ಮಿಕ ಹಾಗೂ ಸಾಮಾಜಿಕ ವಿಷಯಗಳಲ್ಲಿ ಹೆಚ್ಚು ಆಸಕ್ತಿ ತೋರಿಸಿದ. ಇದೇ ವೇಳೆಗೆ ಅವನು 'ಚರ್ಚ್ ಆಫ್ ಇಂಗ್ಲೆಂಡ್'ಗೆ ಮತಾಂತರಹೊಂದಿದ. ಈ ಚಟುವಟಿಕೆಗಳಿಂದಾಗಿ ಅವನು ಪ್ರಗತಿವಿರೋಧಿ ಎಂಬ ಆರೋಪವನ್ನು ಎದುರಿಸಬೇಕಾಯಿತು. ಧಾರ್ಮಿಕ ನಂಬಿಕೆ, ಶಿಸ್ತುಗಳನ್ನು ಒಪ್ಪಿಕೊಳ್ಳುವುದರಲ್ಲಿ ಇರುವ ಯಾತನೆ ನೋವು 'ಆಶ್ ವೆನ್ಸ್‌ಡೇ' ಕವಿತೆಯಲ್ಲಿ ಚಿತ್ರಿತವಾಗಿದೆ.

ಈ ವೇಳೆಗೆ ಎಲಿಯಟ್ ನಾಟಕ ರಚನೆಯತ್ತ ಗಮನಹರಿಸಿದ. 'ಮರ್ಡರ್ ಇನ್ ದಿ ಕತೀಡ್ರಲ್' ಇವನ ಮೊದಲ ಪ್ರಮುಖ ಕಾವ್ಯನಾಟಕ. 'ದಿ ಫ್ಯಾಮಿಲಿ ರೀಯೂನಿಯನ್' ಎರಡನೆಯದು. ದ್ವಿತೀಯ ಮಹಾಯುದ್ಧದಿಂದಾಗಿ ನಾಟಕ ಪ್ರಯೋಗಗಳಿಗೆ ತಡೆಯುಂಟಾದಾಗ ಎಲಿಯಟ್ ಮತ್ತೆ ಕಾವ್ಯದತ್ತ ತಿರುಗಿದ. 1943ರಲ್ಲಿ ಬರೆದ 'ಫೋರ್ ಕ್ವಾರ್ಟೆಟ್ಸ್' ಎಲಿಯಟ್‌ನ ಪ್ರಮುಖ ಕೃತಿಗಳಲ್ಲೊಂದು. ಯುದ್ಧಾನಂತರ 'ದಿ ಕಾಕ್‌ಟೇಲ್ ಪಾರ್ಟಿ', 'ದಿ ಕಾನ್ಫಿಡೆನ್ಷಲ್ ಕ್ಲಾರ್ಕ್' ಮತ್ತು 'ದಿ ಎಲ್ಡರ್ ಸ್ಟೇಟ್ಸ್‌ಮನ್' ಎಂಬ ಮೂರು ನಾಟಕಗಳನ್ನು ಬರೆದ.

ವಿಮರ್ಶಕನಾಗಿ ಎಲಿಯಟ್ ಇಂಗ್ಲಿಷ್ ಸಾಹಿತ್ಯದಲ್ಲಿ ವಹಿಸಿದ ಪಾತ್ರ ಮಹತ್ವದ್ದು. 1920ರಲ್ಲಿ 'ದಿ ಸೇಕ್ರೆಡ್ ವುಡ್' ಎಂಬ ವಿಮರ್ಶಾತ್ಮಕ ಲೇಖನಗಳ ಸಂಕಲನ ಪ್ರಕಟವಾಯಿತು. 'ಸಂಪ್ರದಾಯ ಮತ್ತು ವೈಯಕ್ತಿಕ ಪ್ರತಿಭೆ'ಯಂಥ ಅತ್ಯುತ್ತಮ ವಿಮರ್ಶಾತ್ಮಕ ಲೇಖನಗಳನ್ನೊಳಗೊಂಡ 'ಆರಿಸಿದ ಲೇಖನಗಳ' ಗ್ರಂಥ 1932ರಲ್ಲಿ ಪ್ರಕಟವಾಯಿತು. 'ಕಾವ್ಯದ ಮತ್ತು ವಿಮರ್ಶೆಯ ಉಪಯೋಗ' 1934ರಲ್ಲಿ, 'ಕಾವ್ಯ ಮತ್ತು ಕವಿಗಳು' 1957ರಲ್ಲಿ ಬೆಳಕಿಗೆ ಬಂದುವು. ರೊಮ್ಯಾಂಟಿಕ್ ಕಾವ್ಯದ ಭಾವಾತಿರೇಕವನ್ನೂ ಕಾವ್ಯದಲ್ಲಿ ಪಾಂಡಿತ್ಯಮಯ ಕ್ಲಿಷ್ಟ ಪದಪ್ರಯೋಗಗಳನ್ನೂ ಎಲಿಯಟ್ ತೀವ್ರವಾಗಿ ಖಂಡಿಸಿದ. ಕಾವ್ಯದ ಭಾಷೆ ಆಡುಮಾತಿಗೆ ಹತ್ತಿರವಿರಬೇಕು; ಕಾವ್ಯದಲ್ಲಿ ಸಂವೇದನೆಗಳನ್ನು ವಿಭಜಿಸದೆ ಒಟ್ಟಾಗಿ ಅಭಿವ್ಯಕ್ತಗೊಳಿಸಬೇಕು —ಎಂಬ ಅಭಿಪ್ರಾಯಗಳನ್ನು ಮಂಡಿಸಿದ. ಈ ಧೋರಣೆಗಳನ್ನು ಅವನು ತನ್ನ ಕಾವ್ಯದಲ್ಲಿ ಕೃತಿರೂಪಕ್ಕಿಳಿಸಿದ.

'ಆಧುನಿಕ ಕಾವ್ಯದ ಮಾರ್ಗದರ್ಶಕ'ನೆಂದು ಎಲಿಯಟ್‌ಗೆ 1948ರಲ್ಲಿ ನೊಬೆಲ್ ಬಹುಮಾನ ದೊರೆಯಿತು. 1965ರ ಜನವರಿ 4ರಂದು ಈತ ನಿಧನಹೊಂದಿದ. ಪ್ರಭಾವಶಾಲಿ ಕವಿಯೆಂದು, ವಿಮರ್ಶಕನೆಂದು ಎಲಿಯಟ್‌ಗೆ ಆಂಗ್ಲ ಸಾಹಿತ್ಯದಲ್ಲಿ ಅಪ್ರತಿಮ ಸ್ಥಾನವಿದೆ.

ನೋಡಿ : ಆಂಗ್ಲ ಸಾಹಿತ್ಯ

## ಟಿ. ಎಸ್. ವೆಂಕಣ್ಣಯ್ಯ

" ಎನಿತು ನಿರ್ಮಲ, ಸರಳ
ವ್ಯಕ್ತಿತ್ವ, ಅತಿ ವಿರಳ
ಪರಿಪೂರ್ಣ ಪಾಂಡಿತ್ಯ
ಸೌಜನ್ಯನಿಧಿ, ತೃಪ್ತ "

ಟಿ. ಎಸ್. ವೆಂಕಣ್ಣಯ್ಯನವರನ್ನು ಕುರಿತು ಕವಿ ಅರ್ಚಿಕ ವೆಂಕಟೇಶರು ಬರೆದಿರುವ ಕವನದ ನಾಲ್ಕು ಸಾಲುಗಳಿವು. ಇದು ವೆಂಕಣ್ಣಯ್ಯನವರ ಉನ್ನತ ವ್ಯಕ್ತಿತ್ವದ ಯಥಾರ್ಥ, ಮಾರ್ಮಿಕ ಚಿತ್ರಣ.

ವೆಂಕಣ್ಣಯ್ಯನವರು ಮೇಧಾವಿ. ಪಾಂಡಿತ್ಯ, ಚಾತುರ್ಯ, ವಿವೇಕಗಳು ಅವರಲ್ಲಿ ಮುಪ್ಪುರಿಗೊಂಡಿದ್ದುವು. ಅವರ ಸೌಜನ್ಯ, ಕರುಣೆ ಅಪಾರ.

ವೆಂಕಣ್ಣಯ್ಯನವರು ಬಹುಭಾಷಾವಿದರು. ಅವರು ಕನ್ನಡ, ಇಂಗ್ಲಿಷ್ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸಮಾಡಿದ್ದರು. ತೆಲುಗು, ಬಂಗಾಳಿ ಭಾಷೆಗಳ ಪರಿಚಯವೂ ಅವರಿಗೆ ಚೆನ್ನಾಗಿತ್ತು. ತಮಿಳು, ಸಂಸ್ಕೃತಗಳನ್ನೂ ಕಲಿತಿದ್ದರು. ಬಂಗಾಳಿ ಗ್ರಂಥವನ್ನು ಓದಿ 'ಶ್ರೀ ರಾಮಕೃಷ್ಣ ಪರಮ ಹಂಸ' ಎಂಬ ಜೀವನಚರಿತ್ರೆಯನ್ನು ಬರೆದರು. 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ'ದ ಒಂದು ಭಾಗವನ್ನು ಬಂಗಾಳಿಯಿಂದ ಕನ್ನಡಕ್ಕೆ ಭಾಷಾಂತರ ಮಾಡಿದ್ದರು. ರವೀಂದ್ರನಾಥರು ಬರೆದ ಪ್ರಬಂಧಗಳಲ್ಲಿ ಕೆಲವನ್ನು ಅನುವಾದಿಸಿ 'ಪ್ರಾಚೀನ ಸಾಹಿತ್ಯ' ಎಂಬ ಹೆಸರಲ್ಲಿ ಪ್ರಕಟಿಸಿದರು.

ಹರಿಹರನ 'ಬಸವರಾಜ ದೇವರ ರಗಳೆ'ಯನ್ನು ಸಂಸ್ಕರಿಸಿ ಪ್ರಕಟಿಸಿದರು. 'ಸಿದ್ಧರಾಮ ಪುರಾಣ' —ಡಿ. ಎಲ್. ನರಸಿಂಹಾಚಾರ್ಯರೊಡಗೂಡಿ ಅವರು ಸಂಪಾದಿಸಿದ ಇನ್ನೊಂದು ಗ್ರಂಥ. 'ಕರ್ನಾಟಕ ಕಾದಂಬರಿ'ಯನ್ನು ಸಂಗ್ರಹಮಾಡಿ ಅದಕ್ಕೆ ರಸಪೂರ್ಣ ಉಪೋದ್ಘಾತ ಬರೆದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ಪಂಪ ಭಾರತ'ದ ಸಂಪಾದನ ಕಾರ್ಯದಲ್ಲಿ ನೆರವು ನೀಡಿದರು. ಅಲ್ಲದೆ ಮೈಸೂರು ಓರಿಯೆಂಟಲ್ ಲೈಬ್ರೆರಿಯವರು ಪ್ರಕಟಿಸಿದ 'ಕುಮಾರವ್ಯಾಸ ಭಾರತ'ದ ಸಂಪಾದನ ಕಾರ್ಯದಲ್ಲೂ ಸಹಕರಿಸಿದರು. ಎ. ಆರ್. ಕೃಷ್ಣಶಾಸ್ತ್ರಿಗಳ ಸಹಸಂಪಾದಕತ್ವದಲ್ಲಿ 'ಹರಿಶ್ಚಂದ್ರ ಕಾವ್ಯ ಸಂಗ್ರಹ' ವನ್ನು ಹೊರತಂದರು. 'ಕನ್ನಡ ಕೈಪಿಡಿ' ಯಲ್ಲಿ ವ್ಯಾಕರಣ ಕನ್ನಡ ಭಾಷಾ ಇತಿಹಾಸದ ಭಾಗಗಳನ್ನು ಬರೆದರು. 'ಕನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು' ಇವರ ಇತರ ಸಂಕಲನ.

ಬರೆಯಬೇಕೆಂದು ಚಟ ತೀರಿಸಿಕೊಳ್ಳುವುದಕ್ಕಾಗಿ ಬರೆಯಬಾರದು: ಬರೆದದ್ದು ಎಷ್ಟು ಚೊಕ್ಕವಾಗಿರಲು ಸಾಧ್ಯವೋ ಅಷ್ಟು ಚೊಕ್ಕವಾಗಿರಬೇಕು —ಎಂಬುದು ವೆಂಕಣ್ಣಯ್ಯನವರ ದೃಷ್ಟಿಯಾಗಿತ್ತು. ಇದಕ್ಕೆ ಅನುಸಾರವಾಗಿ ಅವರ ಕೃತಿಗಳು ವಿದ್ವತ್ಪೂರ್ಣವಾಗಿವೆ. ಆಳವಾದ ಸಂಶೋಧನೆಯ ಫಲಗಳಾಗಿವೆ; ಅವು ಗಂಭೀರವಾದ ಚಿಂತನೆಯಿಂದ, ಗಾಢವಾದ ವಿಮರ್ಶನಾಶಕ್ತಿಯಿಂದ ರೂಪುಗೊಂಡಿವೆ. ಅವರ ಶೈಲಿ ಸರಳ, ಸ್ಪಷ್ಟ. "ಪರಿಶೋಧನೆಯಲ್ಲಿ ಅವರು ಬಳ್ಳಿಯ ಪ್ರಮುಖತೆಯ ಪ್ರಶ್ನೆಗಳನ್ನೆತ್ತಿ ವಿಚಾರಮಾಡುತ್ತಿದ್ದರು. ಆದರೆ ಈ ಬಗೆಯ ಪ್ರಾಸ್ತಾವಿಕ ಲೇಖನಗಳು ಕೆಲವೇ ಆದರೂ ಅವರ ಆಧಾರಪೂರ್ವಕವಾದ ವಿಚಾರಸರಣಿಗೂ ತೂಕದ ಶೈಲಿಗೂ ನಿದರ್ಶನವಾಗಿವೆ"—ಎಂದು ಬಿ ಎಂ ಶ್ರೀ ಅವರು ವೆಂಕಣ್ಣಯ್ಯನವರ ಬರೆವಣಿಗೆಯ ಬಗೆಗೆ ಹೇಳಿದ್ದಾರೆ.

ವೆಂಕಣ್ಣಯ್ಯನವರು ಒಳ್ಳೆಯ ವಾಗ್ಮಿ. ಪ್ರಮಾಣ ಸಹಿತವಾಗಿ ವಾದಕ್ಕೆಡೆಗೊಡದಂತೆ ವಿಷಯಗಳನ್ನು ಮಂಡಿಸುತ್ತಿದ್ದುದರಿಂದ ಅವರ ಭಾಷಣಗಳು ಕೇಳುಗರ ಮನಸ್ಸಿನ ಮೇಲೆ ಪರಿಣಾಮ ಉಂಟುಮಾಡುತ್ತಿದ್ದುವು.

ವೆಂಕಣ್ಣಯ್ಯನವರ ಕಂಠ ಮಧುರ. ಅವರ ಕಾವ್ಯವಾಚನ ರಸದೌತಣವಾಗಿರುತ್ತಿತ್ತು. ಶಾಸ್ತ್ರೀಯವಾಗಿ ಸಂಗೀತ ಕಲಿತವರಲ್ಲವಾದರೂ ಅನುಭವದಿಂದ ರಾಗಗಳ ಸ್ವಭಾವಗಳನ್ನು ಅರಿತಿದ್ದರು. ಅವನ್ನು ಉಚಿತವಾಗಿ ಉಪಯೋಗಿಸಿ, ಸೊಗಸು ಬರುವಂತೆ ಕಾವ್ಯವನ್ನು ಓದುತ್ತಿದ್ದರು.

ಸುಬ್ಬಣ್ಣ –ಲಕ್ಷ್ಮೀದೇವಮ್ಮ ಇವರ ಹಿರಿಯ ಮಗನಾಗಿ ವೆಂಕಣ್ಣಯ್ಯನವರು ಹುಟ್ಟಿದ್ದು 1885ನೆಯ ಅಕ್ಟೋಬರ್ 1ರಂದು, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ತಳುಕು ಗ್ರಾಮದಲ್ಲಿ; ಸಾಹಿತ್ಯ ಕಲೆಗಳಲ್ಲಿ ತುಂಬ ಆಸಕ್ತಿಯಿದ್ದ ವಂಶದಲ್ಲಿ.

ವೆಂಕಣ್ಣಯ್ಯನವರ ವಿದ್ಯಾಭ್ಯಾಸ ಚಳ್ಳಕೆರೆಯಲ್ಲಿ ಆರಂಭವಾಯಿತು. ಅನಂತರ ಚಿತ್ರದುರ್ಗ ಹೈಸ್ಕೂಲಿನಲ್ಲಿ ಮೆಟ್ರಿಕ್ಯುಲೇಷನ್‌ಗೆ ಓದಿದರು. [illegible] ಎಫ್.ಎ. ಆದಮೇಲೆ ಮೈಸೂರಿಗೆ ಹೋಗಿ 1909ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಆಮೇಲೆ ಎಲ್‌ಎಲ್. ಬಿ. ಗೆ ಓದಲು ಮುಂಬಯಿ ಸೇರಿದರು. ಆದರೆ ನ್ಯಾಯಶಾಸ್ತ್ರ ವ್ಯಾಸಂಗವನ್ನು ಪೂರ್ಣ ಮಾಡಲಿಲ್ಲ. ಮುಂಬಯಿಯಲ್ಲಿದ್ದಾಗ ಕೆಲ ಕಾಲ ಪೋಸ್ಟಾಫೀಸಿನಲ್ಲಿ ಗುಮಾಸ್ತೆಯಾಗಿ ಕೆಲಸಮಾಡಿದರು. ಪುನಃ ಮೈಸೂರಿಗೆ ಬಂದು ಎಸ್. ತಿಮ್ಮಪ್ಪಯ್ಯ ಶಾಸ್ತ್ರಿಗಳ ಹತ್ತಿರ ಕನ್ನಡ ಸಾಹಿತ್ಯವನ್ನೂ ರಾ. ಅನಂತಕೃಷ್ಣ ಶರ್ಮರ ಬಳಿ ತೆಲುಗು ಸಾಹಿತ್ಯವನ್ನೂ ಅಭ್ಯಾಸಮಾಡಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಎಂ. ಎ. ಪರೀಕ್ಷೆಗೆ ಕುಳಿತು 1914ರಲ್ಲಿ ತೇರ್ಗಡೆಹೊಂದಿದರು. ಹೀಗೆ ವೆಂಕಣ್ಣಯ್ಯನವರ ವಿದ್ಯಾಭ್ಯಾಸ ನಡೆದದ್ದು ಅವರ ಚಿಕ್ಕಪ್ಪ ಟಿ. ಶ್ರೀನಿವಾಸರಾಯರ ನೆರವಿನಿಂದ.


ಪಾಂಡಿತ್ಯ, ಚಾತುರ್ಯ, ವಿವೇಕ : ಟಿ. ಎಸ್.ವೆಂಕಣ್ಣಯ್ಯ

ವೆಂಕಣ್ಣಯ್ಯನವರು ಉಪಾಧ್ಯಾಯರಾಗಿ ಕೆಲಸವನ್ನಾರಂಭಿಸಿದ್ದು ಧಾರವಾಡದ ಮಿಷನ್ ಸ್ಕೂಲಿನಲ್ಲಿ. ಅನಂತರ ಬೆಂಗಳೂರಿನ ಸೇಂಟ್ ಜೋಸೆಫ್ಸ್ ಕಾಲೇಜಿಗೆ ಬಂದರು. ಅವರಿಗೆ ಸರಕಾರೀ ನೌಕರಿ ದೊರೆತದ್ದು 1917ರಲ್ಲಿ, ದೊಡ್ಡಬಳ್ಳಾಪುರದ ಕನ್ನಡ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ. ಅಲ್ಲಿಂದ ಮುಂದೆ ಬೆಂಗಳೂರಿನ ಕೊಲಿಜಿಯೇಟ್ ಹೈಸ್ಕೂಲು, ಸೆಂಟ್ರಲ್ ಕಾಲೇಜುಗಳಲ್ಲಿ ಅಧ್ಯಾಪಕರಾಗಿದ್ದು, ಕೊನೆಗೆ 1927ರಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕನ್ನಡದ ಪ್ರಥಮ ಪ್ರಾಧ್ಯಾಪಕರಾದರು.

ಪಾಠ ಹೇಳುವ ಕಲೆ ವೆಂಕಣ್ಣಯ್ಯನವರಿಗೆ ಕರಗತವಾಗಿತ್ತು. ವಿದ್ಯಾರ್ಥಿಗಳಿಗೆ ಚೆನ್ನಾಗಿ ಪಾಠ ಹೇಳುತ್ತಿದ್ದುದು ಮಾತ್ರವಲ್ಲದೆ ಅವರನ್ನು ತಮ್ಮ ಮಕ್ಕಳಂತೆ ಕಾಣುತ್ತ ಅವರ ಶ್ರೇಯೋಭಿವೃದ್ಧಿಗೆ ಸಹಾಯಕವಾದ ಉತ್ತೇಜನ ಸಲಹೆಗಳನ್ನು ಕೊಡುತ್ತಿದ್ದರು. ಇದಕ್ಕೆ ಅತ್ಯುತ್ತಮ ನಿದರ್ಶನ ವೆಂಕಣ್ಣಯ್ಯನವರಿಗೂ ಕವಿ ಕುವೆಂಪು ಅವರಿಗೂ ಇದ್ದ ಅಪೂರ್ವ ಗುರು–ಶಿಷ್ಯ ಸಂಬಂಧ.

ವೆಂಕಣ್ಣಯ್ಯನವರಿಗೆ ದೇವರಲ್ಲಿ, ಧರ್ಮದಲ್ಲಿ ಅಪಾರ ಶ್ರದ್ಧೆ. ಈ ಗುಣ ಅವರಿಗೆ ಆನುವಂಶಿಕವಾಗಿ ಬಂದಿತ್ತು. ಅವರು ತಮ್ಮ ಜೀವನದುದ್ದಕ್ಕೂ ಪೂಜೆ ವ್ರತಾನುಷ್ಠಾನಗಳನ್ನಿಟ್ಟುಕೊಂಡಿದ್ದರು. ಪ್ರತಿ

ದಿನವೂ ರಾಮಾಯಣ, ಭಗವದ್ಗೀತೆಗಳ ಪಾರಾಯಣ ಮಾಡುತ್ತಿದ್ದರು. ಆಧ್ಯಾತ್ಮಿಕ ಸಾಧನೆಗೆ ಮನಸ್ಸು ಕೊಡುತ್ತಿದ್ದರು. ವೆಂಕಣ್ಣಯ್ಯನವರು ಧಾರವಾಡದಲ್ಲಿ ಇದ್ದಾಗ ಅವರಿಗೆ ಅಗಡಿಯ ಶೇಷಾಚಲಸ್ವಾಮಿಗಳ ಪರಿಚಯವಾಯಿತು. ಸ್ವಾಮಿಗಳು ಸಂಸಾರದಲ್ಲಿದ್ದರೂ ಅವರ ಮನಸ್ಸು ಸದಾ ಭಗವಂತನ ಧ್ಯಾನದಲ್ಲಿ ಮುಳುಗಿರುತ್ತಿತ್ತು. ಇವರಲ್ಲಿ ವೆಂಕಣ್ಣಯ್ಯನವರಿಗೆ ತುಂಬಾ ಪೂಜ್ಯಭಾವ. ಅವರ ವ್ಯಕ್ತಿತ್ವದ ಪರಿಣಾಮ ಇವರ ಮೇಲಾಯಿತು. ಅವರು ಈ ಗುರುಗಳ ಹಾದಿಯಲ್ಲಿ ನಡೆದು ತಮ್ಮ ವ್ಯಕ್ತಿತ್ವಕ್ಕೆ ತೇಜಸ್ಸನ್ನೂ ತಮ್ಮ ಮನಸ್ಸಿಗೆ ಶಾಂತಿಯನ್ನೂ ಸಾಧಿಸಿಕೊಂಡರು. ತಮ್ಮ ಜೀವನದಲ್ಲಿ ಎಷ್ಟೋ ಕಷ್ಟಕಾರ್ಪಣ್ಯ ಅನುಭವಿಸಬೇಕಾಗಿ ಬಂತು. ಅದರಿಂದ ಎದೆಗೆಡದೆ ಮೃದುಬಾಳು ನಡೆಸಿದರು. ಆಸಾಮಿ ಎಷ್ಟು ಎತ್ತರವೋ ಮನಸ್ಸೂ ಅಷ್ಟೇ ಎತ್ತರ.

ವೆಂಕಣ್ಣಯ್ಯನವರು ಯಾವ ಕೆಲಸವನ್ನೂ ದುಡುಕಿ ಮಾಡುತ್ತಿರಲಿಲ್ಲ. ಪೂರ್ವಾಪರಗಳನ್ನು ಯೋಚಿಸಿಯೇ ಮುಂದುವರಿಯುತ್ತಿದ್ದರು. ಎಂಥ ಸಂದರ್ಭದಲ್ಲೂ ಅವರು ತಮ್ಮ ಸಹನೆಯನ್ನು ಕಳೆದುಕೊಳ್ಳುತ್ತಿರಲಿಲ್ಲ. ಬೇರೆಯವರೊಡನೆ ಅವರ ಸಂಬಂಧ ಹಿತ–ಮಿತ; ಆತ್ಮೀಯತೆಯಿಂದ ಕೂಡಿದ್ದು.

ಅವರದು ಸುದೃಢ ದೇಹಪ್ರಕೃತಿಯಲ್ಲ; ಆದರೂ ಅವರು ಯಾವ ಕೆಲಸದಲ್ಲಿಯೂ ಆಲಸ್ಯ ತೋರುತ್ತಿರಲಿಲ್ಲ. ದೇಹಶ್ರಮವನ್ನು ಲೆಕ್ಕಿಸದೆ ತಮ್ಮ ಕರ್ತವ್ಯವನ್ನು ತಪ್ಪದೆ ನಡೆಸುತ್ತಿದ್ದರು. ಇದು ಅವರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟುಮಾಡಿತು. ಸ್ವಲ್ಪ ಕಾಲದ ಅನಾರೋಗ್ಯದ ಅನಂತರ ಅವರು 1939ನೆಯ ಫೆಬ್ರುವರಿ 24ರಂದು ಕೊನೆಯ ಉಸಿರೆಳೆದರು.

ವಿದ್ಯಾನಿಧಿಯಾಗಿದ್ದಂತೆ ಸೌಜನ್ಯನಿಧಿಯೂ ಆಗಿದ್ದ ವೆಂಕಣ್ಣಯ್ಯನವರ ದೇಹ ಅಳಿದರೂ ಅವರ ನೆನಪು ಚಿರಕಾಲ ಉಳಿಯುವಂಥದು.

## ಟಿ. ಚೌಡಯ್ಯ

ಹುಡುಗನಿಗೆ ಹತ್ತು ವರ್ಷ ವಯಸ್ಸಾಗಿದ್ದರೂ ಓದು ಬರಹ ಅಂದರೆ ತಲೆನೋವು. ನದಿಯ ಆಚೆ ಇದ್ದ ಶಾಲೆಗೆ ಹೋಗಲು ದೋಣಿಗೆ ಕಾಯುತ್ತ ನಿಂತಾಗ ಕೂಡ, ತರಗತಿಗೆ ಚಕ್ಕರ್ ಹೊಡೆಯಲು ಕಾರಣ ಏನಾದರೂ ಸಿಕ್ಕೀತೇ ಎಂದು ಹುಡುಕುವುದೇ ಅವನ ಸ್ವಭಾವ. ಒಮ್ಮೆ ಹೀಗೆ ನಿಂತಿದ್ದಾಗ ಒಬ್ಬ ಅಪರಿಚಿತರು ಅತ್ತ ಬಂದರು. ಹುಡುಗನ ಹೊಳೆಯುವ ಕಣ್ಣುಗಳಿಂದ ಆಕರ್ಷಿತರಾಗಿ ಹಾಗೆಯೇ ಅವನನ್ನು ನೋಡುತ್ತ ನಿಂತರು; ಅವನ ಹಸ್ತರೇಖೆಗಳನ್ನು ಪರೀಕ್ಷಿಸಿದರು. ಅನಂತರ "ಮಗೂ ನೀನು ಸಂಗೀತಗಾರನಾಗಲು ಹುಟ್ಟಿದವನು. ಅಕ್ಷರ ವಿದ್ಯೆ ನಿನ್ನ ತಲೆಗೆ ಹತ್ತುವುದಿಲ್ಲ. ಮನೆಗೆ ಹೋಗಿ ಸಂಗೀತ ಕಲಿ," ಎಂದು ಉಪದೇಶಿಸಿದರು. ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ. ಸಂಗೀತವೆಂದರೆ ಹುಡುಗನಿಗೆ ಪ್ರಾಣ. ಆದರೆ ಮನೆಯ ಹಿರಿಯರಿಗೆ ಮಗ ಓದಿ ಬುದ್ಧಿವಂತನಾಗಬೇಕೆಂಬ ಆಸೆ. ತನ್ನ ಈ ಅಳಲನ್ನು ಆ ಅಪರಿಚಿತರಲ್ಲಿ ಹುಡುಗ ತೋಡಿಕೊಂಡ. ಅವರು ಇದನ್ನು ಕೇಳಿ ಹುಡುಗನ ಮನೆಯತನಕ ಬಂದು, ಅವನ ಹಿರಿಯರಿಗೆ ತಿಳಿಯಹೇಳಿ, ಹುಡುಗನ ಸಂಗೀತ ಶಿಕ್ಷಣ ಆರಂಭವಾಗಲು ನೆರವಾದರು.

ಅದ್ಭುತ ಪಿಟೀಲುವಾದಕರೆಂದು ಖ್ಯಾತಿಗಳಿಸಿದ ಟಿ. ಚೌಡಯ್ಯನವರ ಸಂಗೀತ ವಿದ್ಯಾಭ್ಯಾಸ ಆರಂಭವಾದದ್ದು ಹೀಗೆ.



ಪಿಟೀಲು : ಚೌಡಯ್ಯ

ಚೌಡಯ್ಯನವರು ಹುಟ್ಟಿದ್ದು ಕಾವೇರಿ. ಕಪಿಲಾ ನದಿಗಳ ಸಂಗಮದ ಹತ್ತಿರ ಇರುವ ತಿರುಮಕೂಡಲು ನರಸೀಪುರ (ಟಿ. ನರಸೀಪುರ) ದಲ್ಲಿ, 1895 ಜನವರಿ 1ರಂದು. ತಂದೆ ಬೇಸಾಯಗಾರರು. ಅವರಿಗೆ ಸಂಗೀತದಲ್ಲೂ ಪರಿಶ್ರಮವಿತ್ತು. ಮಲ ಅಣ್ಣ ಪಕ್ಕಣ್ಣ ಪಿಟೀಲು ನುಡಿಸುತ್ತಿದ್ದ; ಈತನೇ ಚೌಡಯ್ಯನವರ ಮೊದಲ ಗುರು. ಆದರೆ ಇವರಿಬ್ಬರ ಸಂಬಂಧ ಅಷ್ಟೇನೂ ಹಿತಕರವಾಗಿರಲಿಲ್ಲ. ಕೊನೆಗೆ "ಸಂಗೀತ ನಿನಗೆ ಹೇಳಿದ್ದಲ್ಲ. ನಿನಗೆ ಸಂಗೀತ ಹೇಳಿಕೊಡಲು ನನ್ನಿಂದ ಸಾಧ್ಯವಿಲ್ಲ," ಎಂದು ಬಿಟ್ಟ ಪಕ್ಕಣ್ಣ. ಅಲ್ಲದೆ ಚೌಡಯ್ಯನವರ ಜಾತಕ ಪರೀಕ್ಷಿಸಿದ ಜ್ಯೋತಿಷಿಯೊಬ್ಬರು "ಚೌಡಯ್ಯನಿಗೆ ಸಂಗೀತ ಸಿದ್ಧಿಸಿದರೆ ನಾನು ಜ್ಯೋತಿಷ್ಯ ಹೇಳುವುದನ್ನೇ ಬಿಡ್ತೇನೆ" ಎಂದು ಸವಾಲು ಬೇರೆ ಹಾಕಿದರು. ಹೀಗಾಗಿ ಚೌಡಯ್ಯನವರ ಸಂಗೀತ ವಿದ್ಯಾಭ್ಯಾಸ ನಿಂತುಹೋಗುವಂಥ ಸ್ಥಿತಿ ಏರ್ಪಟ್ಟಿತು. ಆದರೆ ಚೌಡಯ್ಯನವರು ಹಿಡಿದ ಹಠ ಬಿಡುವವರಲ್ಲ. ಕೊನೆಗೆ ಮೈಸೂರಿನ ಪ್ರಸಿದ್ಧ ಸಂಗೀತಗಾರರಾದ ಬಿಡಾರಂ ಕೃಷ್ಣಪ್ಪನವರಿಂದ ಸಂಗೀತ ಪಾಠ ಹೇಳಿಸುವುದೆಂದು ನಿರ್ಧಾರವಾಯಿತು. ಕೃಷ್ಣಪ್ಪನವರು ಹದಿನಾರರ ಈ ತೇಜಸ್ವಿ ಯುವಕನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳಲು ಒಪ್ಪಿದರು. ಎಂಟು ವರ್ಷ ಅವರಲ್ಲಿ ಚೌಡಯ್ಯನವರಿಗೆ ಸಂಗೀತಾಭ್ಯಾಸವಾಯಿತು.

ಚೌಡಯ್ಯನವರು ಗುರುಗಳ ಪ್ರೀತಿಯ ಶಿಷ್ಯನಾದರು. ಗುರುಗಳ ಕಚೇರಿಗಳಲ್ಲಿ ಪಿಟೀಲು ನುಡಿಸುವ ಅವಕಾಶಗಳೂ ಅವರಿಗೆ ದೊರೆತುವು. ಆದರೆ ಪ್ರತಿ ಕಚೇರಿಯೂ ಅವರ ಪಾಲಿಗೆ ಒಂದೊಂದು ಸತ್ವಪರೀಕ್ಷೆಯೇ ಆಯಿತು. ಅಕಸ್ಮಾತ್ ಚಿಕ್ಕ ತಪ್ಪಾದರೂ ಸರಿ, ಎಲ್ಲರ ಎದುರಿನಲ್ಲಿ ಚೌಡಯ್ಯನವರ ಕೆನ್ನೆಗೆ ಗುರುಗಳ ಕೈಯಿಂದ ಹೊಡೆತ ಬೀಳುತ್ತಿತ್ತು. ಇಂಥ ಘಟನೆಗಳಿಂದ ಮನನೊಂದು ಚೌಡಯ್ಯನವರ ಮನಸು ಆತ್ಮಹತ್ಯೆಯ

ಕಡೆಗೆ ಹೊರಳಿದ್ದೂ ಉಂಟು. ಆದರೂ ಗುರುಗಳೆಂದರೆ ಚೌಡಯ್ಯನವರಿಗೆ ಅಚಲ ಭಕ್ತಿ. "ನಾನು ಮನುಷ್ಯನಾಗಿರುವುದು ಅವರಿಂದ" ಎಂದು ಕೃತಜ್ಞತೆ ವ್ಯಕ್ತಪಡಿಸುತ್ತಿದ್ದರು.

ಕಠಿಣ ಪರಿಶ್ರಮದಿಂದ ಪಿಟೀಲು ವಾದನವನ್ನು ಕರಗತಮಾಡಿಕೊಂಡ ಚೌಡಯ್ಯನವರು ಭಾರತದಾದ್ಯಂತ ನಡೆಸಿದ ಕಚೇರಿಗಳು ಸಹಸ್ರಾರು. ಅರಿಯಕ್ಕುಡಿ, ಮಹಾರಾಜಪುರಂ, ಚೆಂಬೈ, ಸೆಮ್ಮಂಗುಡಿ, ಮಧುರೈ ಮಣಿ, ಜಿ.ಎನ್.ಬಿ., ಅಲತ್ತೂರು ಸಹೋದರರಂಥ ಹೆಸರಾಂತ ವಿದ್ವಾಂಸರ ಕಚೇರಿಗಳಲ್ಲಿ ಅವರು ಪಕ್ಕವಾದ್ಯ ನುಡಿಸಿದ್ದಾರೆ. ಅವರ ಒಂಟಿ ಪಿಟೀಲು ಕಚೇರಿಗಳು ಅದೆಷ್ಟೋ! ಒಂದೇ ದಿನದಲ್ಲಿ ಮೂರು–ನಾಲ್ಕು ಕಚೇರಿಗಳನ್ನು ಮಾಡಿದ್ದೂ ಉಂಟು. ಪ್ರತಿಯೊಂದು ಕಚೇರಿಯಲ್ಲೂ ಒಂದಲ್ಲ ಒಂದು ರಸವಿಶೇಷವಿರುತ್ತಿತ್ತು.

ಪಿಟೀಲಿನಲ್ಲಿ ಸಾಮಾನ್ಯವಾಗಿರುವುದು ನಾಲ್ಕು ತಂತಿಗಳು ಮಾತ್ರ. ಇಂಥ ಪಿಟೀಲುವಾದನದಲ್ಲಿ ಪ್ರಭುತ್ವ ಪಡೆದ ಮೇಲೆ ಚೌಡಯ್ಯನವರು ಹೊಸ ಪ್ರಯೋಗಗಳನ್ನು ಮಾಡತೊಡಗಿದರು. ನಾಲ್ಕು ತಂತಿಗಳಿಗೆ ಇನ್ನೂ ಮೂರು ತಂತಿಗಳನ್ನು ಸೇರಿಸಿದರು. ಏಳು ತಂತಿಯ ಈ ಹೊಸ ಪಿಟೀಲಿನ ನಾದ ಮಾನವ ಧ್ವನಿಗೆ ಸಮೀಪವಾಗಿರುತ್ತಿತ್ತು. ಅವರು ವಾದ್ಯ ಬಾರಿಸುವುದನ್ನು ಚೆನ್ನಾಗಿ ಅಭ್ಯಾಸ ಮಾಡಿದರು. ಆದರೆ ಇದನ್ನು ಪಕ್ಕ ವಾದ್ಯವಾಗಿ ಉಪಯೋಗಿಸಿದರೆ ತಮ್ಮಿಂದ ಗಾಯಕರಿಗೆ ಅನನುಕೂಲ ಉಂಟಾದೀತೆಂಬ ಭಾವನೆಯಿಂದ ಮೊದಮೊದಲು ಮನೆಯಿಂದ ಹೊರಗೆ ಏಳು ತಂತಿಯ ಪಿಟೀಲನ್ನು ನುಡಿಸುತ್ತಿರಲಿಲ್ಲ.

ಈ ಹೊಸ ಪಿಟೀಲನ್ನು ಮೊಟ್ಟಮೊದಲು ಸಾರ್ವಜನಿಕವಾಗಿ ಅವರು ನುಡಿಸಿದ್ದು ಮೈಸೂರಿನಲ್ಲಿ, ಗುರು ಬಿಡಾರಂರವರ ಕಚೇರಿಯಲ್ಲಿ. ಪಕ್ಕ ವಾದ್ಯದಿಂದ ಏನೋ ವಿಚಿತ್ರ ಶಬ್ದ ಬರುತ್ತಿದೆಯೆಲ್ಲ ಎಂದುಕೊಂಡು ಗುರುಗಳು ಚೌಡಯ್ಯನವರ ಕಡೆ ನೋಡಿದರು, "ಏನಿದು ?" ಎಂದು ಕೇಳಿದರು. "ನಾಲ್ಕು ತಂತಿಗಳ ಜೊತೆಗೆ ಮತ್ತೆ ಮೂರನ್ನು ಅಳವಡಿಸಿದ್ದೇನೆ" ಎಂದು ಚೌಡಯ್ಯನವರು ಹೆದರಿಕೊಂಡೇ ಹೇಳಿದರು. ಹತ್ತಿರ ಇದ್ದವರಿಗೆ, ಮುಂದೇನಾಗುತ್ತದೋ ಎಂದು ದಿಗಿಲು. ಗುರುಗಳ ಕೈಯಿಂದ ಚೌಡಯ್ಯನವರಿಗೆ ಏಟು ಬಿದ್ದರೆ ಅದನ್ನು ತಡೆಯಲೂ ಸಿದ್ಧತೆ ಮಾಡಿಕೊಂಡರು. ಆದರೆ ಹಾಗೇನೂ ಆಗಲಿಲ್ಲ. ಚೌಡಯ್ಯನವರ ಈ ಪ್ರಯೋಗಕ್ಕೆ ಗುರುಗಳ ಸಮ್ಮತಿ ಸಿಕ್ಕಿತು. ಮುಂದೆ ಚೌಡಯ್ಯನವರು ಕಚೇರಿಗಳಲ್ಲಿ ಏಳು ತಂತಿಗಳ ಪಿಟೀಲನ್ನೇ ನುಡಿಸಿದರು.

ಸಂಗೀತದಿಂದ ಬೆಳೆ ಹೆಚ್ಚಿಸಬಹುದು ಎಂಬುದನ್ನು ಮೊದಲಿಗೆ ಕಂಡುಕೊಂಡವರು ಚೌಡಯ್ಯನವರು. ಅವರ ಈ ಹೇಳಿಕೆಯನ್ನು ಕೇಳಿ ಪರಿಹಾಸ್ಯ ಮಾಡಿ ನಕ್ಕವರೇ ಹೆಚ್ಚು. ಅಣ್ಣಾಮಲೈ ವಿಶ್ವವಿದ್ಯಾನಿಲಯದಲ್ಲಿ ನಡೆದ ಸಂಶೋಧನೆ ಅವರ ಸಿದ್ಧಾಂತಕ್ಕೆ ಪುಷ್ಟಿ ಕೊಟ್ಟಿತು.

ಸಂಗೀತ ಸಭಾ ಸಂಪ್ರದಾಯಗಳಲ್ಲಿ ಚೌಡಯ್ಯನವರಿಗೆ ವಿಶೇಷ ಶ್ರದ್ಧೆ. ಅವರ ಇಚ್ಛಾಶಕ್ತಿಯಂತೂ ಅದ್ಭುತವಾದದ್ದು. 1954ರಲ್ಲಿ ಸೇಲಂನಲ್ಲಿ ಅವರ ಒಂದು ಕಚೇರಿ ಏರ್ಪಾಟಾಗಿತ್ತು. ವೇದಿಕೆ ಹತ್ತುವಾಗ ಅವರು ಕೆಳಕ್ಕೆ ಬಿದ್ದರು ; ಕಾಲು ಮುರಿಯಿತು. ಇಷ್ಟಾದರೂ ಕಚೇರಿಯನ್ನು ರದ್ದುಗೊಳಿಸಲು ಅವರು ಸಮ್ಮತಿಸಲಿಲ್ಲ. ನಾಲ್ಕಾರು ಜನ ಸೇರಿ ಅವರನ್ನು ಎತ್ತಿದರು ; ವೇದಿಕೆಯ ಮೇಲೆ ಕುಳ್ಳಿರಿಸಿದರು. ನಾಲ್ಕು ಗಂಟೆಗಳ ಅಮೋಘ ಸಂಗೀತ ಲಹರಿ ಹರಿಯಿತು. ಕೇಳಿದವರೆಲ್ಲರೂ ಪರಮಾನಂದಭರಿತರಾದರು. ಕಾಲು ಸರಿಹೋಗಲು ಚೌಡಯ್ಯನವರು ಮೂರೆಂಟು ತಿಂಗಳ ಕಾಲ ನರಳಬೇಕಾಯಿತು.

ಚೌಡಯ್ಯನವರ ಹೆಸರು ಭಾರತದ ಮೂಲೆ ಮೂಲೆಗೂ ಹರಡಿತು. 'ಸಂಗೀತರತ್ನ', 'ಸಂಗೀತ ಕಲಾನಿಧಿ' ಮುಂತಾದ ಅನೇಕ ಬಿರುದುಗಳೂ ಪ್ರಶಸ್ತಿಗಳೂ ಅವರಿಗೆ ದೊರೆತುವು. ಸಂಗೀತ ರಸಿಕರೂ ಶ್ರೀಮಂತರೂ ಅವರಿಗೆ ಕೊಟ್ಟ ಅಮೂಲ್ಯ ಬಹುಮಾನಗಳು ಅನೇಕ. ಮೈಸೂರು ಸರಕಾರ ಅವರನ್ನು ಮೈಸೂರು ವಿಧಾನ ಪರಿಷತ್ತಿನ ಸದಸ್ಯರನ್ನಾಗಿ ನಾಮಕರಣ ಮಾಡಿ ಅವರ ಕಲಾಸೇವೆಯನ್ನು ಪುರಸ್ಕರಿಸಿತು.

ಚೌಡಯ್ಯನವರು ಸಂಗೀತ ತಪಸ್ವಿ. ಜೀವನಪೂರ್ತಿ ಕಲೋಪಾಸನೆ ಅವರದು. ಬೇರೆಯವರ ಸಾಧನೆ ಮೆಚ್ಚಿ ಪ್ರೋತ್ಸಾಹಿಸುವ ಉದಾರತೆ ಅವರಿಗಿತ್ತು.

ಎಂದೂ ಕಾಯಿಲೆ ಬೀಳದಿದ್ದ ಅವರು ಅನಿರೀಕ್ಷಿತವಾಗಿ ಹೃದಯಬೇನೆಗೊಳಗಾಗಿ ಆಸ್ಪತ್ರೆ ಸೇರಬೇಕಾಯಿತು. ಆಗಲೂ ಅವರಿಗೆ ತಾವು ಒಪ್ಪಿಕೊಂಡಿದ್ದ ಕಚೇರಿಗಳ ಚಿಂತೆ. ಪ್ರಜ್ಞಾಶೂನ್ಯರಾಗಿ ಮಲಗಿದ್ದಾಗಲೂ ಅವರ ಎಡ ಕೈ ಬೆರಳುಗಳು ತಮ್ಮಷ್ಟಕ್ಕೆ ತಾವೇ ಪಿಟೀಲು ನುಡಿಸುವಂತೆ ಮಿಡಿಯುತ್ತಿದ್ದುವು.

ಜನವರಿ 19, 1967ರ ಮಧ್ಯರಾತ್ರಿ ಹೊತ್ತಿಗೆ ಚೌಡಯ್ಯನವರು ಕಣ್ಮುಚ್ಚಿದರು.

## ಟಿಷನ್

ಬೃಹದಾಕಾರದ ವರ್ಣಚಿತ್ರ. ಅದರಲ್ಲಿ ಮೂಡಿಬಂದ ಭವ್ಯ ಪ್ರಕೃತಿ ಚಿತ್ರವನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತ ತೊಂಬತ್ತೆಂಟು ವರ್ಷ ವಯಸ್ಸಿನ, ಬಿಳಿಗಡ್ಡದ, ತೆಳ್ಳಗಿನ ಚಿತ್ರಕಾರ ಕುಳಿತಿದ್ದಾನೆ. ಹಲವು ಕ್ಷಣಗಳ ಬಳಿಕ ಸಮಾಧಾನದ ನಿಟ್ಟುಸಿರುಬಿಟ್ಟು ಬ್ರಷ್ ಕೆಳಗಿಳಿಸುತ್ತಾನೆ. "ಪರವಾಗಿಲ್ಲ. ಚಿತ್ರ ಬರೆಯೋದು ಹೇಗೆ ಅಂತ ಕಲಿಯಲು ಪ್ರಾರಂಭ ಮಾಡಿದ್ದೇನೆ !" ಎಂದು ತನ್ನ ಬಗೆಗೆ ತಾನೇ ಉದ್ಗರಿಸುತ್ತಾನೆ.

ಆತ ಟಿಷನ್. ಅವನು ಅಂಥಿಂಥ ಚಿತ್ರಗಾರನಲ್ಲ. ರೋಮನ್ ದೊರೆ ಐದನೆಯ ಚಾರ್ಲ್ಸ್ ಅವನನ್ನು ಅರಮನೆಗೆ ಬರಮಾಡಿಸಿಕೊಂಡು ಭಯಭಕ್ತಿಯಿಂದ ಅವನು ಚಿತ್ರ ಬರೆಯುವುದನ್ನೇ ನೋಡುತ್ತ ಕುಳಿತುಕೊಂಡಿದ್ದು, ಚಿತ್ರಕಾರ ಬ್ರಷ್ ಬೀಳಿಸಿದರೆ ಆತುರದಿಂದ ಓಡಿಬಂದು ಅದನ್ನು ಎತ್ತಿಕೊಡುತ್ತಿದ್ದ. ಚಾರ್ಲ್ಸ್ ಟಿಷನ್‌ಗೆ 'ಕೌಂಟ್', 'ನೈಟ್' ಇತ್ಯಾದಿ ಪದವಿಗಳನ್ನು ಕೊಟ್ಟು ಗೌರವಿಸಿದ. ಅವನ ಮಕ್ಕಳನ್ನು ಗೌರವದ ಅಂತಸ್ತಿಗೆ ಏರಿಸಿದ. ಆಸ್ಥಾನಿಕರು ಅಸಮಾಧಾನದಿಂದ ಗೊಣ



ಟಿಷನ್ :
'ಗುರುವನ್ನು ಮೀರಿಸಿದ ಶಿಷ್ಯ'

[illegible] ಇದರ [illegible] ಸಾಧ್ಯವೆ ?" ಎಂದು ಹೇಳಿ ಅವರ ಬಾಯಿ ಮುಚ್ಚಿಸುತ್ತಿದ್ದ.

[illegible] 1477ರಲ್ಲಿ ಹುಟ್ಟಿದ. ಕಡು ಬಡವ [illegible] ಶಾಲೆಗೆ ಹೋಗುವ ಅವಕಾಶವಿರಲಿಲ್ಲ. ಅವನ ತಂದೆ ಚಿತ್ರಕಲೆಯಲ್ಲಿ ಹುಡುಗನಿಗೆ ಇದ್ದ ವಿಶೇಷ ಪ್ರತಿಭೆಯನ್ನು ಗುರುತಿಸಿ, ಈ ಕಲೆಯನ್ನು ಕಲಿಯಲು ಇವನನ್ನು ವೆನಿಸಿಗೆ ಕಳುಹಿಸಿದ.

ಪ್ರಸಿದ್ಧ ಚಿತ್ರಕಾರ ಗ್ಲೊವಾನಿ ಬೆಲ್ಲಿನಿಯ ಬಳಿ ಶಿಕ್ಷಣ ಪಡೆಯುವ ಅವಕಾಶ ಟಿಷನ್‌ಗೆ ದೊರೆಯಿತು. ಬೆಲ್ಲಿನಿಯ ಬಳಿ ಚಿತ್ರಕಲೆಯನ್ನು ಕಲಿತು ಕೊಂಡು 'ಗುರುವನ್ನು ಮೀರಿಸಿದ ಶಿಷ್ಯ' ಎಂದು ಕರೆಸಿಕೊಂಡಿದ್ದ. ಜಾರ್ಜೋನೀ ಟಿಷನನ ಎರಡನೆಯ ಶಿಕ್ಷಕನಾದ. ಇವನ ಪ್ರಿಯ ಶಿಷ್ಯನಾಗಿ ಟಿಷನ್ ಹಲವು ವರ್ಷ ಕಳೆದ. ಟಿಷನ್ ಮತ್ತು ಜಾರ್ಜೋನೀ ಇವರ ಚಿತ್ರಗಳು ಒಂದನ್ನೊಂದು ಬಹಳ ಹೋಲುತ್ತವೆ. ಜಾರ್ಜೋನೀ ನಿಧನನಾದಾಗ ಅಪೂರ್ಣವಾಗಿದ್ದ ಅವನ ಅನೇಕ ವರ್ಣಚಿತ್ರಗಳನ್ನು ಟಿಷನ್ ಪೂರ್ತಿಗೊಳಿಸಿದ.

ಟಿಷನ್ ತನ್ನ 99 ವರ್ಷಗಳ ದೀರ್ಘ ಜೀವನದಲ್ಲಿ ನಿರ್ಮಿಸಿದ 600ಕ್ಕೂ ಹೆಚ್ಚು ವರ್ಣಚಿತ್ರಗಳು ಇಂದು ಯೂರೋಪಿನಲ್ಲಿ ನೂರಾರು ಅರಮನೆಗಳನ್ನು, ಭವ್ಯ ಭವನಗಳನ್ನು, ವಸ್ತು ಸಂಗ್ರಹಾಲಯಗಳನ್ನು ಅಲಂಕರಿಸಿವೆ. ಅರಮನೆಗಳ, ದೇವಸ್ಥಾನಗಳ ಗೋಡೆಗಳ ಮೇಲೂ ಅವನು ಮಹಾ ಕೃತಿಗಳನ್ನು ರಚಿಸಿದ್ದಾನೆ. ಟಿಷನನ ಇದಿರಿಗೆ ಕೂತು ತಮ್ಮ ಚಿತ್ರ ಬರೆಸಿಕೊಳ್ಳುವುದು ಆಗಿನ ಕಾಲದ ಚಕ್ರಾಧಿಪತಿಗಳಿಗೂ ಸುಂದರ ಮಹಿಳೆಯರಿಗೂ ಹೆಮ್ಮೆಯ ವಿಷಯವಾಗಿತ್ತು. ಏಬ್ಬ ಪೋಪ್ ಕೂಡ ಅವನಿಂದ ತನ್ನ ವರ್ಣಚಿತ್ರ ಬರೆಸಿಕೊಂಡಿದ್ದಾನೆ. ಪ್ರಕೃತಿ ಚಿತ್ರಗಳ ಮತ್ತು ಪೌರಾಣಿಕ ವ್ಯಕ್ತಿಗಳ ಚಿತ್ರಣದಲ್ಲಿ ಟಿಷನ್‌ಗೆ ವಿಶೇಷ ಪರಿಣತಿಯಿತ್ತು. ಟಿಷನ್ ರಚಿಸಿದ ನಗ್ನಚಿತ್ರಗಳೂ ವಿಖ್ಯಾತವಾಗಿವೆ. ಅನಂತರದ ಜಗತ್ಪ್ರಸಿದ್ಧ ಚಿತ್ರಕಾರರಾದ ವಾನ್ ಡೈಕ್, ರೂಬೆನ್ಸ್, ರೆಂಬ್ರಾಂಟ್ ಮುಂತಾದವರಿಗೆ ಟಿಷನ್ ಸ್ಫೂರ್ತಿಯ ಮೂಲವಾಗಿದ್ದ.

ಕುಂಚ ಹಿಡಿದು ಕುಳಿತನೆಂದರೆ ಟಿಷನ್‌ಗೆ ಸಮಯದ ಪರಿವೆಯೇ ಇರುತ್ತಿರಲಿಲ್ಲ. ಮೊದಲು ಕೆಂಪು ಬಣ್ಣದ ಅಡಿಲೇಪನದಿಂದ ಆರಂಭಿಸಿ ಅದರ ಮೇಲೆ ವಿವಿಧ ವರ್ಣಗಳ ಪದರಗಳನ್ನು ಸೇರಿಸುತ್ತಿದ್ದ. ತನಗೆ ಬೇಕಾದ ಪರಿಣಾಮ ಕಂಡುಬರುವವರೆಗೂ ಬಣ್ಣ ಪ್ರಯೋಗ ನಡೆಸುತ್ತಲೇ ಇರುತ್ತಿದ್ದ. ವಿಶಿಷ್ಟ ರೀತಿಯಲ್ಲಿ ಬೆಳಕನ್ನು ಹೀರುವಂತೆ, ಪ್ರತಿಫಲಿಸುವಂತೆ ಮಾಡಲು ಪಾರದರ್ಶಕ ಪದರಗಳನ್ನೂ ಕೂಡಿಸುತ್ತಿದ್ದ. ಟಿಷನನ ವರ್ಣಚಿತ್ರಗಳನ್ನು ವೀಕ್ಷಿಸುವಾಗ ಇವನೇ ಹೊಸ ಹೊಸ ಬಣ್ಣಗಳನ್ನು ಕಂಡು ಹಿಡಿದಿದ್ದಾನೆಂದು ಅನ್ನಿಸುವುದುಂಟು. ಒಂದು ಬಗೆಯ ವಿಶೇಷ ಕೆಂಪನ್ನು 'ಟಿಷನ್ ಕೆಂಪು' ಎಂದೇ ಕರೆಯುತ್ತಾರೆ. ಟಿಷನನ ಚಿತ್ರಗಳಲ್ಲಿ ಇರುವಂಥ ಚಿನ್ನದಂಥ ಕೆಂಪು ಬಣ್ಣದ ಕೂದಲುಳ್ಳ ರಮಣಿಯರನ್ನು 'ಟಿಷನ್ ಕೂದಲಿನವರು' ಎಂದು ಕರೆಯುವುದೂ ಉಂಟು.

ಹಲವು ಚಿತ್ರಕಾರರು ಮಾಡುವಂತೆ ಮೊದಲು ರೂಪುರೇಷೆಗಳನ್ನು ಬರೆದು ಅನಂತರ ಬಣ್ಣ ಬಳಿಯುವ ಪದ್ಧತಿಯನ್ನು ಟಿಷನ್ ಅನುಸರಿಸುತ್ತಿರಲಿಲ್ಲ. ನೇರವಾಗಿ ಬಣ್ಣವನ್ನು ಎತ್ತಿಕೊಂಡು ಬ್ರಷ್‌ನಿಂದ ಅದಕ್ಕೆ ರೂಪಗೊಡುತ್ತಿದ್ದ : ಚಿಕ್ಕ ಚಾಕುವಿನಿಂದ ಅದನ್ನು ಪರಾಮರ್ಶಿಸುತ್ತಿದ್ದ. ಕೊನೆಯದಾಗಿ ತನ್ನ ಬೆರಳುಗಳಿಂದ ಅದಕ್ಕೆ ಒಪ್ಪ ಕೊಡುತ್ತಿದ್ದ.

ಟಿಷನ್ ರಚಿಸಿದ ಚಿತ್ರಗಳಲ್ಲಿ ಮುಖಗಳು ಸಜೀವವಾಗಿ ಎದ್ದು ಬರುವಂತೆ ಕಾಣುತ್ತವೆ. ತಾನು ರಚಿಸಿದ ಮನುಷ್ಯರ ದೇಹದ ಚಿತ್ರಗಳಲ್ಲಿ ಉಬ್ಬಿ ಕಾಣುವ ರಕ್ತನಾಳ, ಚರ್ಮದ ಕಣ ವಿನ್ಯಾಸದ ವಿವರಗಳಿಗೆ ಟಿಷನ್ ಬಲು ಮಹತ್ವ ಕೊಡುತ್ತಿದ್ದ. ಆ ಚಿತ್ರಗಳನ್ನು ನೋಡಿದಾಗ, ಚೂರಿಯಿಂದ ಮುಟ್ಟಿದರೆ ಎಲ್ಲಿ ರಕ್ತ ಚಿಮ್ಮುವುದೋ ಅನಿಸುತ್ತದೆ.

ಟಿಷನನ ಕೊನೆಯ ವರ್ಷಗಳು ದೇಶದಿಂದ ದೇಶಕ್ಕೆ, ಅರಮನೆಯಿಂದ ಅರಮನೆಗೆ ಸುತ್ತಾಡುವುದರಲ್ಲೇ ಕಳೆದುವು. ನಿಂತು ಚಿತ್ರ ಬರೆಯುವುದು ಕಷ್ಟವಾದಾಗ ಅವನು ಕುರ್ಚಿಯಲ್ಲಿ ಕುಳಿತು ಚಿತ್ರಿಸುತ್ತಿದ್ದ. ತೊಂಬತ್ತು ದಾಟಿದ ಮೇಲೆ ಅವನು ಬರೆದ 'ಕುರುಬ ಮತ್ತು ಅಪ್ಸರೆ' ಎಂಬ ವರ್ಣಚಿತ್ರವನ್ನು ಅವನ ಅತಿ ಶ್ರೇಷ್ಠ ಕೃತಿಗಳಲ್ಲಿ ಒಂದು ಎಂದು ಪರಿಗಣಿಸುತ್ತಾರೆ.

1576ರಲ್ಲಿ ವೆನಿಸನ್ನು ಆವರಿಸಿದ ಪ್ಲೇಗ್ ಜ್ವರಕ್ಕೆ ಐವತ್ತು ಸಾವಿರ ಜನ –ವೆನಿಸಿನ ಜನಸಂಖ್ಯೆಯ ಕಾಲುಭಾಗ– ಬಲಿಯಾದರು. ಇದೇ ಜ್ವರಕ್ಕೆ ತುತ್ತಾಗಿ ಆಗಸ್ಟ್ 27ರಂದು ಟಿಷನ್ ಸತ್ತ. ಪ್ಲೇಗ್‌ನಿಂದಾಗಿ ಕ್ರೈಸ್ತ ದೇವಾಲಯಗಳೆಲ್ಲ ಮುಚ್ಚಿದ್ದುವು ; ಪ್ಲೇಗ್ ರೋಗಿಗಳ ಹೆಣಗಳನ್ನು ಹೂಳುವ ಸೌಲಭ್ಯವೂ ಇರಲಿಲ್ಲ. ಆದರೂ ಟಿಷನನ ಕಳೇಬರಕ್ಕೆ ವಿಜೃಂಭಣೆಯ ಅಂತ್ಯಸಂಸ್ಕಾರ ನಡೆಸಿ ಗೋರಿಯಲ್ಲಿಟ್ಟರು.

## ಟುರ್ಗೇನೈಫ್

ಶ್ರೀಮಂತ ಮನೆತನ. ಎಳೆ ಪರೆಯದಲ್ಲೇ ತಂದೆ ಇಲ್ಲವಾದ. ತಾಯಿಯ ದರ್ಪದ ಹಿಡಿತದಲ್ಲಿ ಹುಡುಗ ಬೆಳೆದ. ಮಕ್ಕಳ ಮೇಲೆ, ಗುಲಾಮರ ಮೇಲೆ ಆಕೆ ನಡೆಸುತ್ತಿದ್ದ ದಬ್ಬಾಳಿಕೆ ಈ ಕಿರಿಯನ ಮನಸ್ಸನ್ನು ನೋಯಿಸಿತು. ಮನೆಯಿಂದ ಹೊರಬಿದ್ದ. ತಾಯಿಯ ಮರಣಾನಂತರ ಶ್ರೀಮಂತಿಕೆ ಅವನದಾಯಿತು. ಹುಟ್ಟೂರಿಗೆ ಮರಳಿಬಂದು ಬರವಣಿಗೆ ಆರಂಭಿಸಿ.ರಷ್ಯದ ಖ್ಯಾತ ಲೇಖಕ ಎನಿಸಿಕೊಂಡ. ಆತನೇ ಟುರ್ಗೇನೈಫ್.

ರಷ್ಯದ ರೈತ ಜನರ ಜೀವನವನ್ನು ಬಿಂಬಿಸುವ ಇವನ ಕಥೆಗಳ ಸಂಗ್ರಹ 'ಕ್ರೀಡಾಪಟುವಿನ ಶಬ್ದ ಚಿತ್ರಗಳು'. ಇದರಲ್ಲಿ ಇವನ ಕರ್ತೃತ್ವಶಕ್ತಿ, ರೈತಾಪಿ ಜನರಲ್ಲಿ ಇವನಿಗಿರುವ ಅನುಕಂಪ ವ್ಯಕ್ತವಾಗಿವೆ. ಅವನ ಕಥೆಗಳು, ಕಾದಂಬರಿಗಳು, ಪ್ರಬಂಧಗಳು ಹಾಗೂ ನಾಟಕಗಳಲ್ಲಿ 19ನೆಯ ಶತಮಾನದ ಮಧ್ಯಕಾಲೀನ ರಷ್ಯದ ಜನಜೀವನದ ನೈಜಚಿತ್ರಣವನ್ನು ಕಾಣಬಹುದು ; ಈ ಕೆಲಸವನ್ನು ಟುರ್ಗೇನೈಫ್ ಅಪ್ರತಿಮವಾಗಿ ಮಾಡಿದ್ದಾನೆ. ಈತನ ಕೃತಿಗಳು ಫ್ರೆಂಚಿಗೆ ಭಾಷಾಂತರಗೊಂಡು ಪ್ರಪಂಚದಾದ್ಯಂತ ಹೆಸರುಗಳಿಸಿದುವು. ರಷ್ಯದ ಹೊರಗೆ ಓದುಗರನ್ನೂ ಖ್ಯಾತಿಯನ್ನೂ ಪಡೆದ ಪ್ರಥಮ ರಷ್ಯನ್ ಬರೆಹಗಾರ ಇವನೇ. ಈತನ ಪ್ರಸಿದ್ಧ ಕಾದಂಬರಿಗಳು ; 'ತಂದೆಯರು ಮತ್ತು ಪುತ್ರರು', 'ಹೊಗೆ', ಹಾಗೂ 'ಉಳುಮೆ ಮಾಡಿರದ ಭೂಮಿ'.

ಸರಳ, ನಿಷ್ಕೃಷ್ಟ ನಿರೂಪಣೆ, ಮನಸ್ಸಿನ ಸೂಕ್ಷ್ಮಭಾವನೆಗಳನ್ನು ಬಿಡಿದೆಬ್ಬಿಸುವಂಥ ಶೈಲಿ ಟುರ್ಗೇನೈಫ್‌ನದು. ಅವನ ಕಾದಂಬರಿಗಳಲ್ಲಿ ಶ್ರೀಮಂತ ವರ್ಗ, ದೀನದಲಿತರನ್ನು ಕುರಿತ ಮನಮುಟ್ಟುವ ಚಿತ್ರಣವಿದೆ. ಆಗಿನ ಸಾಮಾಜಿಕ ಹಾಗೂ ನೈತಿಕ ಸಮಸ್ಯೆಗಳನ್ನು ತೆಗೆದುಕೊಂಡು ಆತ ಕಾದಂಬರಿಗಳನ್ನು ರಚಿಸಿದ್ದಾನೆ. ಹಳೆಯ ಪೀಳಿಗೆಯವರ ಆದರ್ಶ



ಮನಮುಟ್ಟುವ ಚಿತ್ರಣ : ಟುರ್ಗೆನೈಫ್

ಮತ್ತು ಹೊಸ ಪೀಳಿಗೆಯವರ ವಿಚಾರಗಳ ನಡುವಣ ತಿಕ್ಕಾಟ 'ತಂದೆಯರು ಮತ್ತು ಪುತ್ರರು' ಎಂಬ ಕಾದಂಬರಿಯಲ್ಲಿ ಚಿತ್ರಿತವಾಗಿವೆ.

'ಊರಿನಲ್ಲಿ ಒಂದು ತಿಂಗಳು' ಎಂಬುದು ಟುರ್ಗೆನೈಫ್ ಬರೆದ ಯಶಸ್ವೀ ನಾಟಕ.

ಟುರ್ಗೆನೈಫ್ 1818ರಲ್ಲಿ ರಷ್ಯದ ಆರೆಲ್ ಎಂಬಲ್ಲಿ ಜನಿಸಿದ. 1837 ರಲ್ಲಿ ಪದವೀಧರನಾದ. ಅನಂತರ ಬರ್ಲಿನ್‌ನಲ್ಲಿ ತತ್ತ್ವಜ್ಞಾನದ ಅಧ್ಯಯನ ಕೈಗೊಂಡ. ಅಲ್ಲಿಯೇ ಆತ ಪಶ್ಚಿಮದ ನಾಗರಿಕತೆ ನಡವಳಿಕೆಗಳನ್ನು ಮೈಗೂಡಿಸಿಕೊಂಡ. ರಷ್ಯಕ್ಕೆ ಹಿಂದಿರುಗಿದ ಟುರ್ಗೆನೈಫ್ ಬರೆವಣಿಗೆಗೆ ಕೈ ಹಾಕಿದ ; ಯಶಸ್ವಿಯಾದ. ರಷ್ಯದ ಸಾಹಿತಿ ನಿಕೊಲಾಯ್ ಗೊಗೋಲ್‌ನ (1809–52) ಮರಣವನ್ನು ಕುರಿತು ಬರೆದ ಲೇಖನಕ್ಕಾಗಿ ಒಂದು ತಿಂಗಳು ಆತ ಕಾರಾಗೃಹದಲ್ಲಿರಬೇಕಾಯಿತು. ಅಲ್ಲಿಂದ ಬಿಡುಗಡೆ ಹೊಂದಿದ ಮೇಲೂ 2 ವರ್ಷಗಳ ಕಾಲ ತನ್ನ ತೋಟದಲ್ಲಿಯೇ ದಿಗ್ಬಂಧನದಲ್ಲಿ ಇರಬೇಕಾಗಿ ಬಂತು. ಟುರ್ಗೆನೈಫ್ 1865ರಲ್ಲಿ ತಾಯ್ನಾಡನ್ನು ಬಿಟ್ಟು ಜರ್ಮನಿ, ಫ್ರಾನ್ಸ್‌ಗಳಲ್ಲಿ ಇರತೊಡಗಿದ. ಪ್ಯಾರಿಸಿನಲ್ಲಿ ಹಲವಾರು ವರ್ಷಗಳನ್ನು ಕಳೆದ. ಇಲ್ಲಿ ಗುಸ್ತಾವ್ ಫ್ಲಾಬೇರ್, ಎಮಿಲಿ ಜೋಲಾರ ಗೆಳೆತನ ಲಭಿಸಿತು. 1883ರಲ್ಲಿ ಪ್ಯಾರಿಸಿನಲ್ಲಿ ನಿಧನನಾದ.

ಟುರ್ಗೆನೈಫ್‌ನನ್ನು ರಷ್ಯದ ಉತ್ಕೃಷ್ಟ ಲೇಖಕರಲ್ಲಿ ಒಬ್ಬನೆಂದು ಪರಿಗಣಿಸುತ್ತಾರೆ.

## ಟೆನಿಸನ್

ಅಜ್ಜಿ ಸಾಕಿದ ಮಗು, "ಪಾಠಬೇಡ, ಪದ್ಯ ಬರೀತೇನೆ" ಎಂದರೆ ಉಪಾಧ್ಯಾಯರು ಬಿಟ್ಟಾರೆ ? ಪೋಕರಿ ಹುಡುಗರಿಗೂ ಮರಿ ಕವಿಗಳಿಗೂ ಅವರದು ಒಂದೇ ಉತ್ತರ –ಬೆತ್ತ. ಹುಡುಗ ಶಾಲೆ ಬಿಟ್ಟು ಮನೆ ಸೇರಿದ. ದಿನಕ್ಕೆ ಒಂದೆರಡು ಗಂಟೆ ತಂದೆಯಿಂದ ಪಾಠ. ಉಳಿದ ಹೊತ್ತು ಬೆಟ್ಟ ಗುಡ್ಡಗಳಲ್ಲಿ ಸುತ್ತಾಟ. ಬೇಟೆಗಾರರ ಬೋನುಗಳಲ್ಲಿ ಬಿದ್ದ ಪ್ರಾಣಿಗಳನ್ನು ಮುಕ್ತಗೊಳಿಸುವ ಕೆಲಸ. ಇನ್ನೂ ಸಮಯ ಉಳಿದರೆ ಪದ್ಯ ಬರೆಯುವುದು.

ಹೀಗೆ ಬೆಳೆದ ಆಲ್ಫ್ರೆಡ್ ಟೆನಿಸನ್ ಇಂಗ್ಲೆಂಡಿನ ಆಸ್ಥಾನ ಕವಿಯಾದ. ಎಲ್ಲ ಗೌರವಗಳಿಗೂ ಪಾತ್ರನಾದ.

ತಂದೆ ಜಾರ್ಜ್ ಟೆನಿಸನ್, ಲಿಂಕನ್‌ಶೈರ್ ಪ್ರಾಂತದ ಸೋಮರ್‌ಸ್ಬಿ ಹಳ್ಳಿಯ ಇಗರ್ಜಿಯಲ್ಲಿ ಪಾದ್ರಿ. ಇವನ ಹನ್ನೆರಡು ಮಕ್ಕಳಲ್ಲಿ ಎಲ್ಲರೂ ಪ್ರತಿಭಾವಂತರೇ. 1809ರ ಆಗಸ್ಟ್ 6ರಂದು ಹುಟ್ಟಿದ ಆಲ್ಫ್ರೆಡ್ ಉಳಿದವರಿಗಿಂತ ಒಂದು ಕೈ ಮೇಲು. ಹನ್ನೆರಡು ತುಂಬುವ ಮೊದಲೇ 6000 ಸಾಲುಗಳ ವೀರಕವಿತೆ ಬರೆದ. ಹದಿನೆಂಟು ವರ್ಷದವನಾಗಿದ್ದಾಗ, ತನ್ನ ಸಹೋದರ ಚಾರ್ಲ್ಸ್ ಜೊತೆ ಸೇರಿ 'ಇಬ್ಬರು ಸಹೋದರರ ಕವನಗಳು' ಎಂಬ ಕಾವ್ಯಸಂಕಲನವನ್ನು ಪ್ರಕಟಿಸಿದ. ಕೆಲವು ನಾಟಕ, ಲಾವಣಿಗಳನ್ನೂ ರಚಿಸಿದ.

ಕೇಂಬ್ರಿಜಿನ ಟ್ರಿನಿಟಿ ಕಾಲೇಜನ್ನು ಸೇರಿದ ಟೆನಿಸನ್‌ಗೆ ಪ್ರಖ್ಯಾತ ಚರಿತ್ರಕಾರನ ಮಗ ಆರ್ಥರ್ ಹ್ಯಾಲಮ್ ಆಪ್ತಮಿತ್ರನಾದ. ಸಾಹಿತ್ಯವನ್ನು ಕುರಿತು ಚರ್ಚೆಮಾಡುವುದು ಇಬ್ಬರಿಗೂ ಇಷ್ಟವಾದ ಹವ್ಯಾಸ. ಟೆನಿಸನ್ ಕವಿತೆ ಬರೆಯುವುದನ್ನು ಬಿಡಲಿಲ್ಲ. ಇವನ ಕವಿತೆಗಳಿಗೆ ಕಾಲೇಜಿನಲ್ಲಿ ಬಹುಮಾನಗಳೂ ಬಂದುವು. ಆದರೆ 1831ರಲ್ಲಿ ತಂದೆಯ ತೀವ್ರ ಅಸ್ವಾಸ್ಥ್ಯದ ವಿಷಯ ಕೇಳಿ ಟೆನಿಸನ್ ಮನೆಗೆ ಧಾವಿಸಿಬಂದ. ತಂದೆ ತೀರಿಕೊಂಡಾಗ, ಕಾಲೇಜಿನ ಯೋಚನೆ ಬಿಟ್ಟು ಮನೆಯ ಜವಾಬ್ದಾರಿ ವಹಿಸಿಕೊಂಡ.

1832ರಲ್ಲಿ ಟೆನಿಸನ್ ಒಂದು ಕವನ ಸಂಗ್ರಹ ಪ್ರಕಟಿಸಿದ. ಇದರಲ್ಲಿದ್ದ 'ಸುಖಿ ಸೋಮಾರಿ', 'ಶಾಲಟ್‌ನ ಹೆಂಗಸು', 'ಸುಂದರಿಯರ ಸ್ವಪ್ನ', 'ಮಿಲ್ಲಿನವನ ಮಗಳು', ಮುಂತಾದುವು ಜನಪ್ರಿಯವಾದುವು. ತರುಣ ಸಾಹಿತಿಯೆಂದು ಟೆನಿಸನ್ ಹೆಸರಾದ. ಟೆನಿಸನ್‌ನ ಗೆಳೆಯ ಹ್ಯಾಲಮ್ 1833ರಲ್ಲಿ ಹಠಾತ್ತಾಗಿ ಸತ್ತುಹೋದ. ಈ ಆಘಾತ ಯುವಕ ಟೆನಿಸನನ ಮೇಲೆ ತೀವ್ರ ಪರಿಣಾಮ ಬೀರಿತು. ಮತ್ತೆ ಹತ್ತು ವರ್ಷ ಕಾಲ ಆತ ಒಂದು ಕವನವನ್ನೂ ಪ್ರಕಟಿಸಲಿಲ್ಲ. ಆದರೆ ಬರೆಯುವುದನ್ನು ಮಾತ್ರ ಬಿಟ್ಟಿರಲಿಲ್ಲ. ತನ್ನ ಕವಿತಾರಚನೆಯನ್ನು ಉತ್ತಮಗೊಳಿಸಲು ಅತ್ಯಂತ ಪರಿಶ್ರಮಪಟ್ಟ. ಬರೆದದ್ದನ್ನು ತಿದ್ದಿ ತಿದ್ದಿ ಮತ್ತೆ ಬರೆದ. ಕೊನೆಗೆ 1842ರಲ್ಲಿ ಅವನ ಬೃಹತ್ ಕವನಸಂಗ್ರಹವೊಂದು ಹೊರಬಂತು. 'ಯೂಲಿಸಿಸ್', 'ಲಾಕ್‌ಸ್ಲಿ ಹಾಲ್' ಇತ್ಯಾದಿ ಕವನಗಳು ಅದರಲ್ಲಿದ್ದುವು. ಇಂಗ್ಲಿಷ್ ಸಾಹಿತ್ಯ ಚರಿತ್ರೆಯಲ್ಲಿ ಟೆನಿಸನನ ಸ್ಥಾನ ಭದ್ರವಾಯಿತು.

ಹೆಸರು ಬಂದರೂ ಹಣ ಬರಲಿಲ್ಲ. ಆರ್ಥಿಕ ಮುಗ್ಗಟ್ಟಿನಿಂದಾಗಿ ಟೆನಿಸನ್ ತನ್ನ ಪ್ರೇಯಸಿಯೊಡನೆ ವಿವಾಹವಾಗುವುದನ್ನು ಕೂಡ ಮುಂದಕ್ಕೆ ಹಾಕಬೇಕಾಯಿತು. ಹೆಚ್ಚು ಹಣ ಗಳಿಸಬೇಕು ಎಂಬ ಅಭಿಲಾಷೆಯಿಂದ, ಸಾಲ ತೆಗೆದುಕೊಂಡು ಮರ ಕುಯ್ಯುವ ಯಂತ್ರವೊಂದನ್ನು ಟೆನಿಸನ್ ನಿರ್ಮಿಸತೊಡಗಿದ. ಇದರಿಂದಾಗಿ ಇದ್ದ ಸ್ವಲ್ಪ ಆಸ್ತಿಯೂ ಕರಗಿತು. ಸ್ನೇಹಿತರ ಸಹಾಯದಿಂದ ಹೇಗೋ ದಿನ ಕಳೆದ.

1850ರಲ್ಲಿ ಕವಿ ವರ್ಡ್ಸ್‌ವರ್ತ್ ತೀರಿಕೊಂಡಾಗ ಟೆನಿಸನ್ ಆಸ್ಥಾನ ಕವಿಯಾಗಿ ಆರಿಸಲ್ಪಟ್ಟ. ಗೌರವ ವೇತನವೂ ಬರತೊಡಗಿತು. ಅದೇ ವರ್ಷ ಆತ ಎಮಿಲಿ ಸೆಲ್‌ವುಡ್ಳನ್ನು ವಿವಾಹವಾದ. ಗೆಳೆಯ ಹ್ಯಾಲಮ್‌ನನ್ನು ಕುರಿತ ಶೋಕಗೀತೆ 'ಸ್ಮರಣೆ'ಯೂ ಆ ವರ್ಷ ಪ್ರಕಟವಾಯಿತು. ಇಂಗ್ಲಿಷ್ ಭಾಷೆಯ ಪ್ರಖ್ಯಾತ ಶೋಕಗೀತೆಗಳಲ್ಲಿ ಒಂದು ಈ ಕೃತಿ.

ದೊರೆ ಆರ್ಥರ್ ಮತ್ತು ಅವನ ಗುಂಡುಮೇಜಿನ ವೀರರ ಕಥೆಗಳಲ್ಲಿ ಟೆನಿಸನ್ ವಿಶೇಷವಾಗಿ ಆಸಕ್ತಿ ತಳೆದಿದ್ದ. ಇವರನ್ನು ಕುರಿತು ಆತ ಪದ್ಯರೂಪದ ಹಲವಾರು ಕಥನಗಳನ್ನು ರಚಿಸಿದ. ಈ ಕಥನ ಕವನಗಳ ಸಂಕಲನ 'ಐಡಿಲ್ಸ್ ಆಫ್ ದಿ ಕಿಂಗ್' ಎಂಬ ಶೀರ್ಷಿಕೆ ಹೊತ್ತು ಹೊರಬಂತು. 'ದಿ ಛಾರ್ಜ್ ಆಫ್ ದಿ ಲೈಟ್ ಬ್ರಿಗೇಡ್' ಎಂಬುದು ಅವನ ಇನ್ನೊಂದು ಜನಪ್ರಿಯ ಕಥೆ. ಸುಖಾಂತವಾಗಲೀ ದುರಂತವಾಗಲೀ ಟೆನಿಸನನ ಕವನಗಳು ಸುಂದರ ಪದವಿನ್ಯಾಸದಿಂದ ಕೂಡಿರುತ್ತವೆ; ಸಂಗೀತಕ್ಕೆ ಸೊಗಸಾಗಿ ಹೊಂದಿಕೊಳ್ಳುತ್ತವೆ; ಒಮ್ಮೆ ಓದಿದರೆ ಸಾಕು ಬಹಳ ಕಾಲ ಮನಸ್ಸಿನಲ್ಲಿ ಉಳಿದುಕೊಳ್ಳುತ್ತವೆ.

ಟೆನಿಸನ್‌ನನು ಎತ್ತರವಾದ ದೃಢಕಾಯ. ಅವನು ಹೋದಲ್ಲೆಲ್ಲ ಜನರು ಅವನ ಗುರುತು ಹಿಡಿದು ಮುತ್ತಿಕೊಳ್ಳುತ್ತಿದ್ದರು. ಜನಜಂಗುಳಿ, ಸನ್ಮಾನ ಸಮಾರಂಭಗಳಲ್ಲಿ ಆಸಕ್ತಿಯಿಲ್ಲದಿದ್ದ ಟೆನಿಸನ್ ತನ್ನ ಹೆಚ್ಚಿನ ಸಮಯವನ್ನು ಹಳ್ಳಿ ಮನೆಯಲ್ಲೇ ಕಳೆಯುತ್ತಿದ್ದ. ಕೊನೆಯ ವರ್ಷಗಳಲ್ಲಿ ಟೆನಿಸನ್ ಪದ್ಯನಾಟಕಗಳತ್ತ ತನ್ನ ಗಮನ ಹರಿಸಿದ. 'ಮೇರಿ ರಾಣಿ', 'ಹೆರಾಲ್ಡ್' ಮುಂತಾದ ಚಾರಿತ್ರಿಕ ನಾಟಕಗಳನ್ನು ಇವನು ಬರೆದರೂ ಇವಕ್ಕೆ ಸಾಕಷ್ಟು ಮನ್ನಣೆ ದೊರೆಯಲಿಲ್ಲ. 1880ರಲ್ಲಿ 'ಬೆಕೆಟ್' ಎಂಬ ದುರಂತ ನಾಟಕವನ್ನು ಬರೆದ ಬಳಿಕ, ನಾಟಕರಚನೆಯ ಯೋಚನೆಯನ್ನು ಟೆನಿಸನ್ ತ್ಯಜಿಸಿದ.

ತನ್ನ 81ನೆಯ ವಯಸ್ಸಿನಲ್ಲಿ ಟೆನಿಸನ್ 'ಗರೆ ದಾಟುವುದು' ಎಂಬ ಕವಿತೆಯನ್ನು ಬರೆದ. ಅದು ಪ್ರಖ್ಯಾತವಾಯಿತು. ತಾನು ಸತ್ತಾಗ ಯಾರೂ ಅಳಬಾರದೆಂದು ಅದರಲ್ಲಿ ಆತ ತಿಳಿಸಿದ್ದ.

ಆಂಗ್ಲ ಜನತೆಯಿಂದ ಅಪಾರ ಮಾನ್ಯತೆ ಪಡೆದಿದ್ದ ಟೆನಿಸನ್ 1892ರ ಅಕ್ಟೋಬರ್ 6ರಂದು ನಿಧನನಾದ. ವೆಸ್ಟ್‌ಮಿನ್‌ಸ್ಟರ್ ಅಬೀಯ 'ಕವಿಗಳ ಮೂಲೆ'ಯಲ್ಲಿ ಇವನ ಸಮಾಧಿಯನ್ನು ರಚಿಸಲಾಯಿತು.



'ನಾನು ಸತ್ತಾಗ ಅಳಬೇಡಿ '
ಟೆನಿಸನ್

## ಡಚ್ ಕಲೆ, ಸಾಹಿತ್ಯ

ಹಾಲೆಂಡಿನ ಡಚ್ ಜನಾಂಗ ಕಲಾಜಗತ್ತಿಗೆ ತನ್ನದೇ ಆದ ಶೈಲಿಯನ್ನೂ ಧೀಮಂತ ಕಲಾವಿದರನ್ನೂ ನೀಡಿದೆ. ಕಲೆಯ ವಿವಿಧ ರಂಗಗಳಿಗೆ ಡಚ್ಚರು ಸಲ್ಲಿಸಿರುವ ಕಾಣಿಕೆ ಗಮನಾರ್ಹ.

ಡಚ್ ಚಿತ್ರಕಲೆಯ ಇತಿಹಾಸ ದೀರ್ಘವಾದದ್ದಲ್ಲ. ಆ ಚಿತ್ರಕಲೆ ಹಠಾತ್ತನೆ ಹುಟ್ಟಿಬೆಳೆದು. ಸುಮಾರು 100 ವರ್ಷಗಳ ಕಾಲ ಬಾಳಿ ಇದ್ದಕ್ಕಿದ್ದಂತೆಯೇ ಮರೆಯಾಯಿತು. 17ನೆಯ ಶತಮಾನದಲ್ಲಿ ಅನೇಕ ಮಂದಿ ಡಚ್ ಚಿತ್ರಕಾರರು ತಮ್ಮ ವಿಶಿಷ್ಟ ಕಾಣಿಕೆಯಿಂದ ಚಿತ್ರಕಲೆಯನ್ನು ಪುಷ್ಟಗೊಳಿಸಿದರು. ಡಚ್ ಚಿತ್ರಕಲಾ ಪಂಥ ಪ್ರಪಂಚದ ಚಿತ್ರಕಲೆಗೆ ಭೂದೃಶ್ಯ ಚಿತ್ರ, ವ್ಯಕ್ತಿಚಿತ್ರ, ಜೀವನದ ಚಿತ್ರಗಳನ್ನು ಕೊಟ್ಟಿದೆ. ಈ ಕೊಡುಗೆಯಲ್ಲೂ ಹಾಲೆಂಡ್ ತನ್ನದೇ ಆದ ವೈಶಿಷ್ಟ್ಯವನ್ನು ಮೆರೆದಿದೆ.

ಬೆಳಕು, ನೆಳಲುಗಳ ಆಟಕ್ಕೆ ಇವರ ಚಿತ್ರಗಳಲ್ಲಿ ಪ್ರಾಧಾನ್ಯ. ಭೂದೃಶ್ಯ ಚಿತ್ರಗಳಲ್ಲೂ ಅಷ್ಟೆ. ಬೆಳಕು ಪ್ರಮುಖ. ಬಹುಶಃ ಬೆಳಕು, ಕತ್ತಲೆಗಳ ಸಹಜ ಜೋಡಣೆಯ ಬಗೆಗೆ ಚಿಂತಿಸಿದವರಲ್ಲಿ ಡಚ್ಚರೇ ಮೊದಲಿಗರು. ಭೂದೃಶ್ಯ ಹಾಗೂ ಗ್ರಾಮೀಣ ದೃಶ್ಯ ಚಿತ್ರಗಳಲ್ಲಿ ಹೆಸರಾಂತ ಜೇಕಬ್ ವಾನ್ ರಾಯಿಸ್‌ಡಾಲ್ (1625–82) ಮತ್ತು ಇತರರು ರೂಪಿಸಿದ ಶೈಲಿಯನ್ನು ಆಂಗ್ಲ ಚಿತ್ರಕಾರರು ಅನುಸರಿಸಿದರು. ವೆರ್ಮೀರ್ ದಿನನಿತ್ಯದ ಜೀವನವನ್ನು ರೂಪಿಸುವ ಚಿತ್ರಗಳ ರಚನೆಯಲ್ಲಿ ಖ್ಯಾತನಾದವನು. ಈತನ ಚಿತ್ರರಚನಾತಂತ್ರಗಳೂ ಗಣನೀಯ. ಸುಪ್ರಸಿದ್ಧ ಕಲಾವಿದ ರೆಂಬ್ರಾಂಟ್ ಕೂಡ ಡಚ್ ಚಿತ್ರಕಾರ. ಇವನು ರಚಿಸಿದ ವ್ಯಕ್ತಿಚಿತ್ರಗಳು ಜಗತ್ಪ್ರಸಿದ್ಧವಾಗಿವೆ.

18ನೆಯ ಶತಮಾನದಲ್ಲಿ ಭೂದೃಶ್ಯ ಚಿತ್ರ, ನೌಕಾಚಿತ್ರಗಳ ರಚನೆ ನಡೆಯುತ್ತಿದ್ದರೂ ಅದು ಡಚ್ ಚಿತ್ರಕಲೆ ಇಳಿಮುಖವಾದ ಕಾಲ. 19ನೆಯ ಶತಮಾನದಲ್ಲಿ ಈ ಕಲೆ ಕೊಂಚಮಟ್ಟಿಗೆ ಪುನರುಜ್ಜೀವನಗೊಂಡಿತು. ಈ ಕಾಲದ ಗಣ್ಯ ಚಿತ್ರಗಳಲ್ಲಿ ಅಂಟನ್ ಮಾವ್ (1838–88) ರಚಿಸಿದ ಭೂದೃಶ್ಯಚಿತ್ರಗಳನ್ನು ಹೆಸರಿಸಬಹುದು. ಈ ಶತಮಾನದಲ್ಲಿ ಪ್ರತಿಭಾವಂತ ಕಲಾವಿದ ವಾನ್‌ಗೋ ಉತ್ತಮ ಚಿತ್ರಗಳನ್ನು ಬರೆದಿದ್ದಾನೆ.

ಅಮೂರ್ತ ಕಲೆಯ ಪ್ರವರ್ತಕರಲ್ಲೊಬ್ಬನಾದ ಮಾಂಡ್ರಿಯನ್ ಹಾಲೆಂಡಿನವರು.

17ನೆಯ ಶತಮಾನದ ಡಚ್ ಕುಂಭಕಲೆ, ಚೀನದ ಪಿಂಗಾಣಿವಸ್ತುಗಳ ಅನುಕರಣ. ಬಿಳಿ ಭೂಮಿಕೆ ಅದರ ಮೇಲೆ ನೀಲಿ, ಊದಾಬಣ್ಣಗಳಲ್ಲಿ ಅಲಂಕರಣ, ಹೂವು, ಹಡಗುಗಳ ಚಿತ್ರ ಬಿಡಿಸುತ್ತಿದ್ದರು.

ವಾಸ್ತುಶಿಲ್ಪದಲ್ಲಿ ಬಾರೋಕ್ ಶೈಲಿ 17ನೆಯ ಶತಮಾನದಲ್ಲಿ ಅಪರೂಪವಾಗಿತ್ತು. ಆಮ್‌ಸ್ಟರ್‌ಡಾಮಿನ ನಗರದ ಬಾಗಿಲುಗಳು ಈ ಶೈಲಿಯಲ್ಲಿ ಕಟ್ಟಿದುವು. ಆಗ ಕಟ್ಟುತ್ತಿದ್ದುದು ಇಟ್ಟಿಗೆಯ ಮನೆಗಳನ್ನು. ಛಾವಣಿಗೆ ನೀಲಿ, ಕೆಂಪಿನ ಸ್ಲೇಟು. 17ನೆಯ ಶತಮಾನದ ಕೊನೆ ಹಾಗೂ 18ನೆಯ ಶತಮಾನದ ಆರಂಭದಲ್ಲಿ ಕಟ್ಟಡಗಳ ಮುಂಭಾಗದಲ್ಲಿ ಕಂಬಗಳ ಮೇಲೆ ಆಧರಿಸಿದ ಮುಖಮಂಟಪ, ಅದರ ಮೇಲ್ಭಾಗಗಳಲ್ಲಿ ತ್ರಿಕೋಣಾಕೃತಿಯ ಅಲಂಕರಣಗಳನ್ನು ಸೇರಿಸುವುದು ರೂಢಿಗೆ ಬಂತು. ಕಂಬಗಳಿಗೆ ಅಲಂಕೃತ ಬೋದಿಗೆಗಳೂ ಇರುತ್ತಿದ್ದುವು. 19ನೆಯ ಶತಮಾನದಲ್ಲಿ ವಾಸ್ತುಶಿಲ್ಪ ಹೆಚ್ಚು ಸರಳವಾಯಿತು. 20ನೆಯ ಶತಮಾನದಲ್ಲೂ ಈ ಪದ್ಧತಿಯೇ ಮುಂದುವರಿಯಿತು. ವರ್ತುಲಾಕಾರದ ಆಧುನಿಕ ಕಟ್ಟಡ

ಗಳೂ ನಿರ್ಮಿಸಲ್ಪಟ್ಟಿವೆ. ಇಡೀ ಗೋಡೆಗೆ ಇಟ್ಟಿಗೆಗೆ ಬದಲಾಗಿ ಗಾಜನ್ನು ಉಪಯೋಗಿಸುವ ಪದ್ಧತಿಯೂ ಇದೆ.

15–16ನೆಯ ಶತಮಾನಗಳಲ್ಲಿ ಡಚ್ ಸಂಗೀತಗಾರರು ಯೂರೋಪಿನ ಇತರ ರಾಷ್ಟ್ರಗಳ ಸಂಗೀತಗಾರರಿಂದ ಮುಂದಿದ್ದರು. ಬರ್ಗಂಡಿಯ ಡ್ಯೂಕ್ ಫಿಲಿಪ್ ಕಲಾಪ್ರೇಮಿ. ಅವನ ಬಳಿ ಉತ್ತಮ ಸಂಗೀತಗಾರರೂ ರಚನಕಾರರೂ ವಾದ್ಯಗಾರರೂ ಇದ್ದು ಅವನ ಪ್ರವಾಸಕಾಲದಲ್ಲಿ ಕೂಡ ಆತನನ್ನು ಅವರು ಹಿಂಬಾಲಿಸುತ್ತಿದ್ದರು. ಕ್ರೈಸ್ತದೇವಾಲಯಗಳು ಸಂಗೀತಕ್ಕೆ ಪ್ರೋತ್ಸಾಹ ಕೊಟ್ಟು ಅದರ ಬೆಳವಣಿಗೆಗೆ ಕಾರಣವಾದುವು. ಹಾಲೆಂಡಿನಲ್ಲಿ ಬೆಳೆದ ಸಂಗೀತದಲ್ಲಿ ಬಿಥೋವನ್, ಮೊಜಾರ್ಟ್ ಮುಂತಾದ ಐರೋಪ್ಯ ಗೇಯಗಾರರ ಪ್ರಭಾವವನ್ನು ಸ್ಪಷ್ಟವಾಗಿ ಕಾಣಬಹುದು.

ಮಧ್ಯಯುಗದ ಕೊನೆಯ ಭಾಗ ಡಚ್ ಸಾಹಿತ್ಯದ 'ಸ್ವರ್ಣಯುಗ' ಎಂದು ಪ್ರಖ್ಯಾತವಾಗಿದೆ. 16ನೆಯ ಶತಮಾನದ ಕೊನೆ ಮತ್ತು 17ನೆಯ ಶತಮಾನದ ಆರಂಭಕಾಲದಲ್ಲಿದ್ದ ವಾನ್ ಡೆನ್ ವಾಂಡೆಲ್ ಉತ್ತಮ ಟ್ರಾಜಿಡಿಗಳನ್ನು ಬರೆದ. ಜಿ.ಎ. ಬ್ರೆಡೆರೊ ಹಾಸ್ಯಪ್ರಧಾನ ಕಾಮಿಡಿಗಳನ್ನೂ ಪ್ರಹಸನಗಳನ್ನೂ ರಚಿಸಿದ. 18ನೆಯ ಶತಮಾನದಲ್ಲಿ ಫ್ರೆಂಚ್ ಸಾಹಿತ್ಯದ ಅನುಕರಣೆಯಿಂದಾಗಿ ಡಚ್ ಸಾಹಿತ್ಯ ಇಳಿಮುಖವಾಗ ತೊಡಗಿತು. ಉತ್ತಮ ಪ್ರಹಸನಾತ್ಮಕ ಕಾಮಿಡಿಗಳನ್ನು ಬರೆದ ಡಬ್ಲ್ಯು. ಲಾಂಜಿನ್‌ಡಿಜ್ಕ್ (1683–1756) ಇದಕ್ಕೆ ಅಪವಾದವಾಗಿದ್ದ.

19ನೆಯ ಶತಮಾನದ ಆದಿಭಾಗ ರೊಮ್ಯಾಂಟಿಕ್ ವಾದಕ್ಕೆ ಎಡೆ ಕೊಟ್ಟಿತು. 'ಮಾರ್ಗದರ್ಶಿ' ಎಂಬ ನಿಯತಕಾಲಿಕ ಈ ವಾದವನ್ನು ಪ್ರತಿಪಾದಿಸಿತು. ವಾಲ್ಟರ್ ಸ್ಕಾಟನ ಆಂಗ್ಲ ಕೃತಿಗಳನ್ನು ವಾನ್ ಲೆನೆಪ್ ಡಚ್ ಭಾಷೆಗೆ ಭಾಷಾಂತರಿಸಿದ್ದಲ್ಲದೆ, ತಾನೂ ಒಳ್ಳೆಯ ಚಾರಿತ್ರಿಕ ಕಾದಂಬರಿಗಳನ್ನು ಬರೆದ. ಎನ್ ಬೀಟ್ ಮೊದಲಾದವರು ಇಂಗ್ಲಿಷ್ ಲೇಖಕರನ್ನು ಅನುಸರಿಸಿದರೂ. ತಮ್ಮ ದೇಶೀಯತೆಯನ್ನು ಉಳಿಸಿಕೊಂಡು ಕೃತಿ ರಚನೆ ಮಾಡಿದರು. 19ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಸಾಹಿತ್ಯ ಕೃಷಿ ಹಾಲೆಂಡಿನಲ್ಲಿ ಹೇರಳವಾಗಿ ನಡೆಯಿತು. ಎಚ್. ಹೈಜರ್‌ಮ್ಯಾನ್ (1864–1924) ಈ ಕಾಲದ ಪ್ರಸಿದ್ಧ ನಾಟಕಕಾರ. ಎರಡನೆಯ ಮಹಾಯುದ್ಧದ ಅನಂತರ ಅನ್ನಾ ಬ್ಲಾಮನ್, ವೆಸ್ಟ್‌ಡಿಜ್ಕ್ ಮೊದಲಾದ ಯುವ ಲೇಖಕರು ಉತ್ತಮ ಕೃತಿಗಳನ್ನು ರಚಿಸಿದರು.. ಎರಡನೆಯ ಮಹಾಯುದ್ಧ ಕಾಲದಲ್ಲಿ ಜರ್ಮನರು ಹಾಲೆಂಡನ್ನು ಆಕ್ರಮಿಸಿಕೊಂಡಿದ್ದ ಅವಧಿಗೆ ಸಂಬಂಧಿಸಿದ ಘಟನೆಗಳು, ಅವರ ಕೆಲವಾರು ಕೃತಿಗಳಿಗೆ ವಸ್ತುಗಳಾಗಿವೆ. ಈ ಲೇಖಕರ ಅನೇಕ ಕೃತಿಗಳು ಇಂಗ್ಲಿಷಿಗೆ ಭಾಷಾಂತರವಾಗಿವೆ.

**ನೋಡಿ : ರೆಂಬ್ರಾಂಟ್ ; ವಾನ್ ಗೋ ; ವೆರ್ಮೀರ್**

## ಡವರ್‌ಜಾಕ್

ವಿಶ್ವದ ಎಲ್ಲ ಸಂಗೀತ ಪ್ರೇಮಿಗಳ ಗಮನವನ್ನು ತನ್ನತ್ತ, ತನ್ನ ದೇಶದ ಸಂಗೀತದತ್ತ ಸೆಳೆದ ಗೇಯಕಾರ, ಡವರ್‌ಜಾಕ್. ಹೆಚ್ಚು ಕಡಮೆ ಸಂಗೀತದ ಎಲ್ಲ ಪ್ರಕಾರಗಳಲ್ಲೂ ಕೃತಿರಚನೆ ಮಾಡಿದ ಪ್ರತಿಭಾವಂತ ಈತ. ಮೂರು ಮಕ್ಕಳನ್ನು ಕಳೆದುಕೊಂಡು ದುಃಖತಪ್ತನಾದ ಡವರ್‌ಜಾಕ್ ತನ್ನ ನೋವನ್ನು ಹಾಡಿನ ರೂಪದಲ್ಲಿ ವ್ಯಕ್ತಪಡಿಸಿದ. ಆ ವೇಳೆ ಸಂಗೀತ– 'ಸ್ಟಬಾಟ್‌ಮೇಟರ್', ಅಂದಿನ ಖ್ಯಾತರಚನೆ.

ಎರಡು ವರ್ಷ ಹಳ್ಳಿಯ ಶಾಲೆಯಲ್ಲಿ ಕಳೆಯುವ ಹೊತ್ತಿಗೆ ಹಳ್ಳಿಯ ವಾದ್ಯವೃಂದದಲ್ಲಿ ಪಿಟೀಲು ಬಾರಿಸುವಷ್ಟು ಕಲಿತಿದ್ದ—ಡವರ್‌ಜಾಕ್. ಜರ್ಮನ್ ಭಾಷೆ ಕಲಿಯಲು ಹೋದಾಗ ಮುಖ್ಯೋಪಾಧ್ಯಾಯರು ಇವನಿಗೆ ಆರ್ಗನ್ ಪಿಯಾನೋ ವಯೊಲಾ ವಾದ್ಯಗಳನ್ನು ಹೇಳಿಕೊಟ್ಟರು. ಇವನು 16ನೆಯ ವರ್ಷದವನಾಗಿದ್ದಾಗ ಪ್ರಾಗ್‌ನ ಇಗರ್ಜಿಯ ಸಂಗೀತಶಾಲೆಗೆ ಸೇರಿದ. ಮುಂದೆ ಈತ ವಯೊಲಾ ವಾದಕನಾಗಿ ಚೆಕ್‌ರಾಷ್ಟ್ರೀಯ ರಂಗಮಂದಿರದ ವಾದ್ಯವೃಂದದಲ್ಲಿ ದುಡಿದ. ಅಲ್ಲಿ ರಚನಕಾರ ಸ್ಮೆಟಾನಾ ನಿರ್ದೇಶಕನಾಗಿದ್ದ. ಈತನೊಡನೆ ಸೇರಿ ಡವರ್‌ಜಾಕ್ ಚೆಕ್ ರಾಷ್ಟ್ರೀಯ ಸಂಗೀತ ಪಂಥವನ್ನು ಸ್ಥಾಪಿಸಿದ. ಇದರ ಅವಲಂಬನೆಯಿಂದ ಆಧುನಿಕ ಚೆಕ್ ಸಂಗೀತ ಜನ್ಮ ತಳೆಯಿತು.



ಮಧುರ ಸಂಗೀತ : ಡವರ್‌ಜಾಕ್

ಡವರ್‌ಜಾಕ್‌ನ ಸಂಗೀತ ಮಾಧುರ್ಯಪೂರ್ಣವಾದದ್ದು. ತೊರೆಯಂತೆ ಸರಾಗವಾಗಿ ಹರಿಯುವಂಥದು. ಉತ್ಸಾಹ ತುಂಬುವ ರಾಗಗಳನ್ನು ಉಲ್ಲಾಸವಾಗಿ ತೊನೆದಾಡುವ ಹಳ್ಳಿಯ ನೃತ್ಯದ ಸಂಗೀತದ ಧಾಟಿಗಳನ್ನು ಅವನ ಸಂಗೀತದಲ್ಲಿ ಕಾಣಬಹುದು. ಕೆಲವೊಮ್ಮೆ ಈ ಅಂಶಗಳು ಅವನ ಸಿಂಫನಿ ಮತ್ತಿತರ ಪ್ರಮುಖ ರಚನೆಗಳಲ್ಲೂ ಕಂಡುಬರುತ್ತವೆ. ಆತನ ಜನ್ಮಪ್ರದೇಶವಾದ ಬೊಹೀಮಿಯದ ಜಾನಪದ ಸಂಗೀತ, ನೃತ್ಯಗಳು ಅವನ ಕೃತಿಗಳ ಮೇಲೆ ಪರಿಣಾಮ ಬೀರಿವೆ. ಹಾಗೆಯೇ ಅವನು ನ್ಯೂಯಾರ್ಕಿನ ರಾಷ್ಟ್ರೀಯ ಸಂಗೀತಶಾಲೆಯ ನಿರ್ದೇಶಕನಾಗಿ ಅಮೆರಿಕದಲ್ಲಿದ್ದಾಗ ರಚಿಸಿದ ಗೇಯಕೃತಿಗಳಲ್ಲಿ, ನೀಗ್ರೊ ಗೀತೆಗಳ ಛಾಯೆ ಕಂಡುಬರುತ್ತದೆ.

ಆತನ ಮೊದಲ ಪ್ರಕಟಿತ ಕೃತಿ 'ಸ್ಲಾವರ ನೃತ್ಯಗಳು' (ಜೆಕೊಸ್ಲೊವಾಕಿಯ 'ಸ್ಲಾವ್' ಮತ್ತು 'ಚೆಕ್' ಜನಾಂಗಗಳ ದೇಶ). ಡವರ್‌ಜಾಕ್ ತನ್ನ 50ನೆಯ ವಯಸ್ಸಿನಲ್ಲಿ ನ್ಯೂಯಾರ್ಕಿಗೆ ಹೋದಮೇಲೆ 'ಹೊಸ ಪ್ರಪಂಚದಿಂದ' ಕೃತಿಯನ್ನು ರೂಪಿಸಿದ. ಅಲ್ಲಿಂದ ಹಿಂದಿರುಗಿದ ಬಳಿಕ ತನ್ನ ಜನರ ಜೀವನವನ್ನು ಚಿತ್ರಿಸುವ ಹಲವಾರು ಕೃತಿಗಳನ್ನು —ಅಪೆರಾಗಳನ್ನು—ಆತ ರಚಿಸಿದ. ಆದರೆ ಅವು ಯಾವುವೂ ಯಶಸ್ವಿಯಾಗಲಿಲ್ಲ. ಅಪೆರಾಗಳು. ಸಿಂಫನಿಗಳು. ಹಾಡುಗಳು. ಮೇಳದ ಸಂಗೀತ. ಪಿಯಾನೊ ಸಂಗೀತ ಇವನ್ನೆಲ್ಲ ಅವನು ರಚಿಸಿದ. ಅವನ 'ಸ್ಲಾವರ ನೃತ್ಯಗಳು' ಕೃತಿಯಂತೆಯೇ 'ಜಿಪ್ಸಿ ಹಾಡುಗಳು' ಕೂಡಾ ಪ್ರಖ್ಯಾತವಾದದ್ದು.

ಆಂಟನ್ ಡವರ್‌ಜಾಕ್ 1841ನೆಯ ಸೆಪ್ಟೆಂಬರ್ 8ರಂದು ಜನಿಸಿದ. ಹೆಸರಾಂತ ಜರ್ಮನ್ ಗೇಯಕಾರ ಯೊಹಾನೆಸ್ ಬ್ರಾಮ್ಸ್. ಡವರ್‌ಜಾಕ್‌ನ ಸಂಗೀತದಿಂದ ಆಕರ್ಷಿತನಾದ. ಆತನ ರಚನೆಗಳನ್ನು ಪ್ರಕಟಿಸುವುದಕ್ಕೆ

[illegible] ಪಡೆದ. ಪ್ರಖ್ಯಾತ ಆತನ ರಚನೆಗಳು ವಿಶ್ವದಾದ್ಯಂತ ಜಕ್ಕಿ ಕೀರ್ತಿ ಗಳಿಸಿದವು. [illegible] ಡವರ್‌ಜಾಕ್ [illegible]. ಸಂಗೀತದ ಮೇಲೆ ಒಲವು. ಅವನ ಸಂಗೀತಕ್ಕೆ ಉತ್ಸಾಹದ ಪ್ರತಿಕ್ರಿಯೆ ತೋರುತ್ತಿದ್ದ ಇಂಗ್ಲೆಂಡಿಗೆ ಹಲವಾರು ಬಾರಿ ಭೇಟಿಕೊಟ್ಟ. 1891ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾನಿಲಯದವರು ಇವನಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನಿತ್ತರು. ಪ್ರಾಗ್ ವಿಶ್ವವಿದ್ಯಾನಿಲಯದವರೂ ಇದೇ ರೀತಿ ಗೌರವ ತೋರಿದರು. 1904ನೆಯ ಮೇ 1ರಂದು ತನ್ನ 62ನೆಯ ವಯಸ್ಸಿನಲ್ಲಿ ಡವರ್‌ಜಾಕ್ ಹಠಾತ್ತನೆ ನಿಧನನಾದ.

## ಡಾನ್ ಯೂಆನ್

ಚಿಕ್ಕ ಪ್ರದೇಶವೊಂದರ ದೊರೆಗೆ ಅಪೂರ್ವ ಸುಂದರಿಯಾದ ಮಗಳು ; ಆ ವೇಳೆಗೆ ಅನೇಕ ತರುಣಿಯರನ್ನು ತನ್ನ ಪ್ರಣಯಕ್ಕೆ ಸಿಲುಕಿಸಿಕೊಂಡಿದ್ದ ಡಾನ್ ಯೂಆನ್. ದೊರೆಯ ಮಗಳನ್ನು ಮರುಳುಗೊಳಿಸುತ್ತಾನೆ. ಕೊನೆಗೆ ಅವಳನ್ನು ವಂಚಿಸುತ್ತಾನೆ; ದುಃಖದಿಂದ ಆಕೆಯ ಎದೆ ಒಡೆಯುವಂತೆ ಮಾಡುತ್ತಾನೆ. ದೊರೆ ಸಿಟ್ಟಿಗೆದ್ದು ಡಾನ್ ಯೂಆನ್‌ನನ್ನು ದ್ವಂದ್ವ ಯುದ್ಧಕ್ಕೆ ಕರೆಯುತ್ತಾನೆ. ಚಾಣಾಕ್ಷನಾದ ಡಾನ್ ಯೂಆನ್ ದೊರೆಯನ್ನೇ ಇರಿಯುತ್ತಾನೆ. ಶವವನ್ನು ಹೂತು ಗೋರಿಯ ಮೇಲೆ ದೊರೆಯ ಮೂರ್ತಿಯನ್ನು ರಚಿಸುತ್ತಾನೆ. ತನಗೆ ಯಾವ ಭಯವೂ ಇಲ್ಲ ಎಂದು ತೋರಿಸಲು ಮೂರ್ತಿಯ ಹತ್ತಿರ ಹೋಗಿ, "ಇವೊತ್ತು ರಾತ್ರಿ ನನ್ನ ಮನೆಗೆ ಊಟಕ್ಕೆ ಬಾ" ಎನ್ನುತ್ತಾನೆ. ತಮಾಷೆಗೆ ಹೇಳಿದ್ದು ನಿಜವಾಗುತ್ತದೆ. ದೊರೆಯ ಭೂತ ಊಟದ ಸಮಯಕ್ಕೆ ಸರಿಯಾಗಿ ಡಾನ್ ಯೂಆನ್‌ನ ಮನೆಗೆ ಬರುತ್ತದೆ. ಈ ವಂಚಕನನ್ನು ತನ್ನೊಡನೆ ಎಳೆದೊಯ್ಯುತ್ತದೆ.



ಆದರೆ ಡಾನ್ ಯೂಆನ್ ಅಷ್ಟು ಸುಲಭವಾಗಿ ಸಾವನ್ನು ಒಪ್ಪುವವನಲ್ಲ. ಅವನಿಗೆ ಸಾವೇ ಇಲ್ಲ. ಡಾನ್ ಯೂಆನ್‌ನ ಹೆಸರು ಸಾಹಿತ್ಯ ಚರಿತ್ರೆಯಲ್ಲಿ ಅಮರವಾಗುವಂತೆ ಮಾಡಿದ್ದು 1630ರಲ್ಲಿ ಪ್ರದರ್ಶಿತವಾದ ಸ್ಪೇನಿನ ದುರಂತ ನಾಟಕವೊಂದು. ನೂರಾರು ವರ್ಷಗಳ ಹಿಂದೆ ಹುಟ್ಟಿ ಇಂದಿಗೂ 'ಜೀವಂತ' ವಾಗಿರುವ ಕಾಲ್ಪನಿಕ ವ್ಯಕ್ತಿ ಇವನು. ಪ್ರೇಮದಲ್ಲಿ ದುಷ್ಟನೂ ಯುದ್ಧದಲ್ಲಿ ತಂತ್ರಿಯೂ ಆದ ಡಾನ್ ಯೂಆನ್ ಹಲವು ದೇಶಗಳ ಜಾನಪದ ಸಾಹಿತ್ಯದಲ್ಲಿ ಕಾಣಿಸಿಕೊಂಡಿದ್ದಾನೆ. ಹಲವು ಭಾಷೆಗಳ ಲೇಖಕರು ಇವನನ್ನು ಕುರಿತು ನಾಟಕ, ಕಥೆ, ಕವನಗಳನ್ನು ರಚಿಸಿದ್ದಾರೆ. ಒಂದೊಂದು ಕೃತಿಯ ಕಥಾವಸ್ತು ಒಂದೊಂದು ರೀತಿ.

ಪ್ರಸಿದ್ಧ ಆಂಗ್ಲ ಕವಿ ಬೈರನ್ 'ಡಾನ್ ಯೂಆನ್' ಎಂಬ ದೀರ್ಘ ಕವನವನ್ನು ಬರೆದಿದ್ದಾನೆ. ಇದರ ಸ್ಫುರದ್ರೂಪಿ ನಾಯಕ ಬೇರೆ ಬೇರೆ ದೇಶಗಳಲ್ಲಿ ನಡೆಸಿದ ಅನೇಕ ಪ್ರೇಮ ಪ್ರಕರಣಗಳ ಪ್ರಸ್ತಾಪ ಈ ಕವನದಲ್ಲಿದೆ. ಇಂಗ್ಲೆಂಡಿನ ಬರ್ನಾರ್ಡ್ ಷಾ, ಫ್ರಾನ್ಸಿನ ಬಾಲ್ಜಾಕ್, ಮೋಲಿಯೇರ್ ಮತ್ತು ಡೂಮಾ, ಡಾನ್ ಯೂಆನ್‌ನನ್ನು ಕುರಿತು ಬರೆದ ಇತರ ಪ್ರಸಿದ್ಧ ಲೇಖಕರು. 20ನೆಯ ಶತಮಾನದ ಪ್ರಸಿದ್ಧ ಸಂಗೀತ ರಚನೆಗಾರ ರಿಚರ್ಡ್ ಸ್ಟ್ರಾಸ್‌ನ 'ಡಾನ್ ಯೂಆನ್' ಎಂಬ ಗೇಯಕೃತಿ ಜನಪ್ರಿಯತೆ ಗಳಿಸಿದೆ. ಸ್ವೀಡನಿನ ತಯಾರಕನೊಬ್ಬ ಡಾನ್ ಯೂಆನ್‌ನನ್ನು ಕುರಿತ ಚಲಚ್ಚಿತ್ರವನ್ನೂ ತಯಾರಿಸಿದ್ದಾನೆ.

ಹಲವು ತರುಣಿಯರೊಂದಿಗೆ ಚೆಲ್ಲಾಟ ನಡೆಸುವವನನ್ನು 'ಡಾನ್ ಯೂಆನ್' ಎಂದು ಕರೆಯುವುದುಂಟು. ಸ್ವಚ್ಛಂದ ವರ್ತನೆಗೆ ಡಾನ್ ಯೂಆನ್ ಎಂಬುದು ಇನ್ನೊಂದು ಹೆಸರು. ತನಗೆ ಬೇಕಾದ್ದನ್ನು ಯಾವ ರೀತಿಯಿಂದಾದರೂ ಇವನು ಪಡೆದೇ ತೀರುತ್ತಾನೆ.

ಬೇರೆ ಲೇಖಕರು ಈ ವ್ಯಕ್ತಿಯನ್ನು ದುರಹಂಕಾರಿಯೂ ನಾಸ್ತಿಕನೂ ಆಗಿರುವಂತೆ ಚಿತ್ರಿಸಿದ್ದಾರೆ. ಇತ್ತೀಚಿನ ಸ್ಪೇನಿನ ಕಥೆಗಳಲ್ಲಿ ಇವನು ತುಸು ಒಳ್ಳೆಯ ನಡತೆಯವನಾಗಿ ತೋರಿಬರುತ್ತಾನೆ.

## ಡಾಸ್ಟ್ಯೆಯೆವ್‌ಸ್ಕಿ

ಡಾಸ್ಟ್ಯೆಯೆವ್‌ಸ್ಕಿ ಫಿಯೊದೊರ್ ಮಿಖೆಲೋವಿಶ್ ರಷ್ಯದ ಪ್ರಸಿದ್ಧ ಕಾದಂಬರಿಕಾರ. ಇವನದು ರೋಮಾಂಚಕಾರಿ ಜೀವನ ಕಥೆ. 1821 ಅಕ್ಟೋಬರ್ 30 ರಂದು ಮಾಸ್ಕೋದಲ್ಲಿ ಜನಿಸಿದ. ಚಿಕ್ಕಂದಿನಲ್ಲಿ ತಾಯಿ ತೀರಿಕೊಂಡಳು. ಪೀಟರ್ಸ್‌ಬರ್ಗ್‌ನ ಮಿಲಿಟರಿ ಎಂಜಿನಿಯರಿಂಗ್ ಅಕಾಡೆಮಿಯಲ್ಲಿ ಇವನ ವಿದ್ಯಾಭ್ಯಾಸ ನಡೆಯಿತು. ಆಗ ರಷ್ಯದ ಕವಿ ಪುಷ್ಕಿನ್, ಫ್ರೆಂಚ್ ಸಾಹಿತಿಗಳಾದ ಬಾಲ್ಜಾಕ್, ಹ್ಯೂಗೋ ಇವರ ಕೃತಿಗಳನ್ನು ಓದಿ ಮೆಚ್ಚಿಕೊಂಡ.

ಅಂದಿನ ರಷ್ಯದ ಅನೇಕ ಕ್ರಾಂತಿಕಾರಿ ಗುಂಪುಗಳೊಂದಿಗೆ ಡಾಸ್ಟ್ಯೆಯೆವ್‌ಸ್ಕಿಗೆ ನಿಕಟ ಸಂಬಂಧವಿತ್ತು. ಸರಕಾರದ ನೀತಿಗಳನ್ನು ಖಂಡಿಸಿದ್ದಕ್ಕಾಗಿ 1849 ರಲ್ಲಿ ಬಂಧಿತನಾದ. 8 ತಿಂಗಳ ಸೆರೆಮನೆ ವಾಸದ ಬಳಿಕ ಮರಣದಂಡನೆ ವಿಧಿಸಲ್ಪಟ್ಟಿತು. ಜೀವನದ ಕೊನೆಯ ನಿಮಿಷ ಸಮೀಪಿಸಿತ್ತು. ಇನ್ನೇನು ತುಪಾಕಿಯಿಂದ ಗುಂಡು ಹಾರಬೇಕು ಎನ್ನುವಷ್ಟರಲ್ಲಿ ಮರಣದಂಡನೆ

ಸಾಹಿತ್ಯದಲ್ಲಿ ಅಮರ :
ಡಾನ್ ಯೂ ಆನ್



ಯಾತನೆಗೆ ಅಭಿವ್ಯಕ್ತಿ : ಡಾಸ್ಟಯೆವ್‌ಸ್ಕಿ

ರದ್ದಾಯಿತು. ಸೈಬೀರಿಯದಲ್ಲಿ ಕಠಿಣಶ್ರಮ ಶಿಕ್ಷೆ ಅನುಭವಿಸಬೇಕೆಂದು ಆಜ್ಞೆಯಾಯಿತು. ಒಂಬತ್ತು ವರ್ಷಗಳನ್ನು ಸೆರೆಮನೆಯಲ್ಲಿ ಕಳೆದ.

1859ರಲ್ಲಿ ಡಾಸ್ಟಯೆವ್‌ಸ್ಕಿ ರಷ್ಯಕ್ಕೆ ಹಿಂದಿರುಗಿದ. ಕಾದಂಬರಿ ರಚನೆಯೊಂದಿಗೆ ಬೇರೆ ಬೇರೆ ನಿಯತಕಾಲಿಕಗಳ ಸಂಪಾದನಾ ಕಾರ್ಯವನ್ನೂ ಕೈಗೊಂಡ. ಡಾಸ್ಟಯೆವ್‌ಸ್ಕಿಯ ಪ್ರಥಮ ಕಾದಂಬರಿ 'ಬಡಜನರು'. ಸೈಬೀರಿಯದ ಕ್ರೂರ ಜಗತ್ತಿನ ನಿರೂಪಣೆಯಾದ 'ಸಾವಿನ ಮನೆಯ ಟಿಪ್ಪಣಿ' 1861ರಲ್ಲಿ ಪ್ರಕಟವಾದೊಡನೆಯೇ ಡಾಸ್ಟಯೆವ್‌ಸ್ಕಿ ರಷ್ಯದಲ್ಲೆಲ್ಲ ಸುಪ್ರಸಿದ್ಧನಾದ. ಆತನ ಬರೆವಣಿಗೆಯ ಬದುಕನ್ನು ಬಡತನ, ಸಾಲ, ಅಪಸ್ಮಾರ ರೋಗಗಳು ಉದ್ದಕ್ಕೂ ಬಾಧಿಸಿದುವು. ಆದರೂ ಬರೆವಣಿಗೆಯ ಕೆಲಸ ಮಾತ್ರ ನಿರಂತರವಾಗಿ ನಡೆಯಿತು. ಆತ ರಚಿಸಿದ 'ಅಪರಾಧ ಮತ್ತು ಶಿಕ್ಷೆ' ಹಾಗೂ 'ಕರಮಜೋವ್ ಸಹೋದರರು' ಕಾದಂಬರಿಗಳು, ಜಗತ್ತಿನ ಸಾಹಿತ್ಯದಲ್ಲಿ ಎರಡು ಶ್ರೇಷ್ಠ ಕಾದಂಬರಿಗಳೆಂದು ಪರಿಗಣಿಸಲ್ಪಟ್ಟಿವೆ. ಮನುಷ್ಯನ ಜೀವನದಲ್ಲಿ ನಡೆಯುವ ಒಳಿತು ಕೆಡುಕುಗಳ ಸಂಘರ್ಷ 'ಕರಮಜೋವ್ ಸಹೋದರರು' ಕಾದಂಬರಿಯ ವಸ್ತು. ಡಾಸ್ಟಯೆವ್‌ಸ್ಕಿಯ ಎಲ್ಲ ಕಾದಂಬರಿಗಳೂ ಜೀವನದ ದುಃಖಮಯ ಚಿತ್ರವನ್ನು ಕೊಡುತ್ತವೆ. ಅವುಗಳಲ್ಲಿ ಬರುವ ವ್ಯಕ್ತಿಗಳು, ವಿಚಾರಗಳ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಒದ್ದಾಡುವ ದುರಂತ ಜೀವಿಗಳು. ಡಾಸ್ಟಯೆವ್‌ಸ್ಕಿ ಇನ್ನೂ ಕೆಲವು ಕಾದಂಬರಿಗಳನ್ನು ರಚಿಸಿದ್ದಾನೆ.

1864ರಲ್ಲಿ ತನ್ನ ಪತ್ನಿ ತೀರಿಕೊಂಡ ಬಳಿಕ ಡಾಸ್ಟಯೆವ್‌ಸ್ಕಿ 1867ರಲ್ಲಿ ಎರಡನೆಯ ಬಾರಿ ವಿವಾಹವಾದ. 'ಜೂಜುಗಾರ' ಎನ್ನುವ ಸಣ್ಣಕಥೆಗಳ ಸಂಕಲನ ಇದೇ ಸಮಯದಲ್ಲಿ ಪ್ರಕಟವಾಯಿತು.

ಪೀಟರ್ಸ್‌ಬರ್ಗಿನಲ್ಲಿ 1882ರ ಫೆಬ್ರವರಿ 9ರಂದು ಡಾಸ್ಟಯೆವ್‌ಸ್ಕಿಯ ಅವಸಾನವಾಯಿತು.

1972ರಲ್ಲಿ ಡಾಸ್ಟಯೆವ್‌ಸ್ಕಿಯ 150ನೆಯ ವರ್ಧಂತಿಯು ರಷ್ಯದಲ್ಲೂ ಇತರ ರಾಷ್ಟ್ರಗಳಲ್ಲೂ ಆಚರಿಸಲ್ಪಟ್ಟಿತು.

## ಡಿ. ಎಚ್. ಲಾರೆನ್ಸ್

"ಪೊಲೀಸರು ಬಹಿಷ್ಕಾರ ಹಾಕಲೇಬೇಕಾದ ಪುಸ್ತಕ ಇದು. ಲೈಂಗಿಕ ಭ್ರಷ್ಟತೆಯ ಅತ್ಯಂತ ಅಸಹ್ಯ ನಿರೂಪಣೆ. ಈ ಪುಸ್ತಕ ಯುವಜನಾಂಗವನ್ನು ಹೇಳಲಾರದಷ್ಟು ಅನರ್ಥಕ್ಕೆ ಗುರಿಮಾಡುತ್ತದೆ."

ಡಿ.ಎಚ್. ಲಾರೆನ್ಸ್ ಬರೆದ 'ದಿ ವುಮನ್ ಇನ್ ಲವ್' ಎಂಬ ಕಾದಂಬರಿಯನ್ನು ಕುರಿತು ಬಂದ ಅನೇಕ ಕಟು ಟೀಕೆ ವಿಮರ್ಶೆಗಳಲ್ಲಿ ಇದೊಂದು. ಈ ಶತಮಾನದ ಮಾನವ ಸ್ವಾಭಾವಿಕ ರೀತಿಯಲ್ಲಿ ಬಾಳುತ್ತಿಲ್ಲ; ನಾಗರಿಕತೆ ಇವನ ಸಹಜಜೀವನ ಸಾಧನೆಗೆ ತೊಡರಾಗಿದೆ ಎಂದು ತನ್ನ ಕಾದಂಬರಿಗಳ ಮೂಲಕ ಪ್ರತಿಪಾದಿಸಿದ ಡಿ. ಎಚ್. ಲಾರೆನ್ಸ್—ಈ ಶತಮಾನದ ಅತ್ಯಂತ ಪ್ರಮುಖ ಇಂಗ್ಲಿಷ್ ಕಾದಂಬರಿಕಾರ. ಆದರೂ ಆತನ ಕಾದಂಬರಿಗಳು ಅವನ ಕಾಲದಲ್ಲಿ ಅತ್ಯಂತ ವಾದಗ್ರಸ್ತವಾಗಿಯೇ ಇದ್ದುವು. ಇವನ 'ಲೇಡಿ ಚಾಟರ್ಲೀಸ್ ಲವರ್' ಕಾದಂಬರಿ ಪ್ರಕಟವಾದಾಗ ಕೆಲವರು 'ದುಷ್ಕೃತ್ಯಗಳಲ್ಲಿ ಇದೊಂದು ಹೆಗ್ಗುರುತು' ಎಂದು ಅದನ್ನು ಕರೆದರು.

ಇಂಗ್ಲೆಂಡಿನ ನಾಟಿಂಗ್ಹಾಮ್‌ನ ಕಲ್ಲಿದ್ದಲ ಗಣಿ ಪ್ರದೇಶದಲ್ಲಿದ್ದ ಒಂದು ಹಳ್ಳಿಯಲ್ಲಿ ಲಾರೆನ್ಸ್ 1885ರ ಸೆಪ್ಟೆಂಬರ್ 11ರಂದು ಜನಿಸಿದ. ಇವನ ತಾಯಿಯ ವ್ಯಕ್ತಿತ್ವ ಇವನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರಿತು. 18ನೆಯ ವರ್ಷದಲ್ಲಿ ವಿಶ್ವವಿದ್ಯಾಲಯವನ್ನು ಪ್ರವೇಶಿಸಿ ಅಧ್ಯಯನ ನಡೆಸಿ ಶಿಕ್ಷಕನಾಗುವ ಅರ್ಹತಾಪತ್ರ ಪಡೆದ.

ಲಂಡನಿನ ಬಳಿ ಶಾಲೆಯೊಂದರಲ್ಲಿ ಶಿಕ್ಷಕನಾಗಿ ಲಾರೆನ್ಸ್ ಕೊಂಚ ಕಾಲ ಕೆಲಸ ಮಾಡಿದ್ದ. ಆದರೂ ಲೇಖಕನಾಗಬೇಕೆಂಬ ಬಯಕೆ ಅವನಲ್ಲಿ ಬಲಗೊಂಡಿತ್ತು. ಈತನ ಮೊದಲ ಕೆಲವು ಕವನಗಳನ್ನು ಪ್ರಕಟಿಸಿದ ಪತ್ರಿಕೆಯ ಸಂಪಾದಕನ ನೆರವಿನಿಂದ, ಇವನ ಮೊದಲ ಕಾದಂಬರಿ 'ದಿ ವೈಟ್ ಪೀಕಾಕ್' 1911ರಲ್ಲಿ ಪ್ರಕಟವಾಯಿತು.

ಇದರಿಂದ ಹೆಚ್ಚು ಹಣ ಸಿಕ್ಕಲಿಲ್ಲವಾದರೂ ಲೇಖಕವೃತ್ತಿಯನ್ನೇ ಕೈಗೊಳ್ಳಲು ಲಾರೆನ್ಸ್ ನಿಶ್ಚಯಿಸಿದ. ಶಿಕ್ಷಕನ ಉದ್ಯೋಗಕ್ಕೆ ರಾಜೀನಾಮೆ ಕೊಟ್ಟ. 1913ರ ವೇಳೆಗೆ ಮೊದಲನೆಯ ಸಂಕಲನವನ್ನೂ 'ಸನ್ಸ್ ಅಂಡ್ ಲವರ್ಸ್' ಎಂಬ ಕಾದಂಬರಿಯನ್ನೂ ಪ್ರಕಟಿಸಿದ. ಈ ಕಾದಂಬರಿಯಲ್ಲಿ ಲಾರೆನ್ಸ್‌ನ ಬಾಲ್ಯದ ಚಿತ್ರಣವೂ ಇದೆ. ತಾಯಿಯ ಪ್ರೀತಿ ಮಕ್ಕಳ ಮೇಲೆ ಅತ್ಯಂತ ಪ್ರಬಲವಾದ ಪರಿಣಾಮ ಬೀರಿದಾಗ, ಬೆಳೆದ ಮೇಲೆ ಅವರ ಮಾನಸಿಕಸ್ಥಿತಿ ಹೇಗಿರುತ್ತದೆ ಎಂಬುದನ್ನು ಈ ಕಾದಂಬರಿಯಲ್ಲಿ ವಿವರಿಸಿದೆ. 1920ರಲ್ಲಿ 'ದಿ ವುಮನ್ ಇನ್ ಲವ್', 1928ರಲ್ಲಿ 'ಲೇಡಿ ಚಾಟರ್ಲೀಸ್ ಲವರ್' ಕಾದಂಬರಿಗಳು ಪ್ರಕಟವಾದುವು. ಇವುಗಳಲ್ಲದೆ 'ಬರ್ಡ್ಸ್, ಬೀಸ್ಟ್ಸ್ ಅಂಡ್ ಫ್ಲವರ್ಸ್' ಹಾಗೂ ಇತರ ಕವನ ಸಂಗ್ರಹಗಳನ್ನೂ ಕೆಲವು ನಾಟಕ ಕಥೆಗಳನ್ನೂ ಲಾರೆನ್ಸ್ ಬರೆದಿದ್ದಾನೆ. ಮುಂದೆ ದೀರ್ಘ ಪ್ರವಾಸಮಾಡಿದ ಲಾರೆನ್ಸ್ ಪ್ರವಾಸ ಸಾಹಿತ್ಯವನ್ನೂ ಬರೆದ.

ಲಾರೆನ್ಸ್‌ನ ಕೃತಿಗಳ ವಸ್ತು, ಶೈಲಿ, ಅವುಗಳ ಮೂಲಕ ವ್ಯಕ್ತವಾಗುವ ಇವನ ದೃಷ್ಟಿ ಅತ್ಯಂತ ವಿಶಿಷ್ಟವಾದುವು. ಮಾನವ ಪ್ರಕೃತಿಸಹಜವಾದ ಜೀವನ ನಡೆಸಬೇಕು, ದೈಹಿಕ ಹಾಗೂ ಮಾನಸಿಕ ಕ್ರಿಯೆಗಳು ಸಹಜ ರೀತಿಯಲ್ಲಿ ಹೊಂದಿಕೊಂಡಿರಬೇಕು ಎಂದು ಲಾರೆನ್ಸ್ ನಂಬಿದ್ದ. ಈ ಶತಮಾನದ ಆರಂಭ ಕಾಲದ ಇಂಗ್ಲೆಂಡಿನ ಸಾಮಾಜಿಕ ರೀತಿನೀತಿ ಲಾರೆನ್ಸನಿಗೆ ಸರಿಬೀಳಲಿಲ್ಲ. ಕೈಗಾರಿಕೆಗಳ ಬೆಳವಣಿಗೆಯಿಂದಾಗಿ ಪುರುಷರ



ಸಂಪ್ರದಾಯಕ್ಕೆ ಸವಾಲು : ಲಾರೆನ್ಸ್

ಹಾಗೂ ಸ್ತ್ರೀಯರ ನಡುವಣ ಸಂಬಂಧ ಅಸಹಜವಾಗುತ್ತಿದೆ —ಎಂದು ಲಾರೆನ್ಸ್‌ನಿಗೆ ಅನ್ನಿಸಿತು.

ಈ ಕಾರಣದಿಂದ ಲಾರೆನ್ಸ್ ಈ ಸಮಸ್ಯೆಗೆ ಸಂಬಂಧಿಸಿದ ವಸ್ತುಗಳನ್ನೇ ತನ್ನ ಕಾದಂಬರಿಗಳಿಗಾಗಿ ಆರಿಸಿಕೊಂಡ; ಯಾವ ಕಟ್ಟಿಗೂ ಒಳಗಾಗದ ಸಹಜವಾದ ಪ್ರೀತಿಯಿಂದ ಸಂತೋಷ, ಸಂತೃಪ್ತಿ ಸಿಗುತ್ತವೆ ಎಂದು ಲಾರೆನ್ಸ್ ಹೇಳಲು ಪ್ರಯತ್ನಿಸಿದ. ಆದರೆ 'ಲೇಡಿ ಚಾಟರ್ಲೀಸ್ ಲವರ್' ಕಾದಂಬರಿ ಪ್ರಕಟವಾದಾಗ ಅದು ಅಶ್ಲೀಲ ಸಾಹಿತ್ಯವೆಂಬ ಆಪಾದನೆಯ ಮೇಲೆ ನ್ಯಾಯಾಸ್ಥಾನದಲ್ಲಿ ವಿಚಾರಣೆ ನಡೆದು, ಕೃತಿ ಅಶ್ಲೀಲವಲ್ಲ ಎಂದು ತೀರ್ಮಾನವಾಯಿತು. ಅವನು ಸತ್ತ 30 ವರ್ಷಗಳ ಅನಂತರ, 1960ರಲ್ಲಿ, ಮೊಟ್ಟಮೊದಲ ಬಾರಿ ಈ ಕೃತಿ ಸಂಪೂರ್ಣ ರೂಪದಲ್ಲಿ ಪ್ರಕಟವಾಯಿತು.

ಲಾರೆನ್ಸ್ ನಡೆನುಡಿಗಳನ್ನು ಮನೋವಿಜ್ಞಾನಿಯ ದೃಷ್ಟಿಯಿಂದ ವಿಶ್ಲೇಷಿಸುತ್ತಿದ್ದ; ಮನಸ್ಸಿನ ಒಳಭಾವನೆಗಳನ್ನು ಅತ್ಯಂತ ವಾಸ್ತವವಾಗಿ ಬಿಚ್ಚಿ ತೋರಿಸುತ್ತಿದ್ದ. ಸಾಂಪ್ರದಾಯಿಕ ಕಟ್ಟಳೆಗಳನ್ನು ನಿರ್ಭಯವಾಗಿ ಧಿಕ್ಕರಿಸುತ್ತಿದ್ದ.

1914ರಲ್ಲಿ ಮದುವೆ ಮಾಡಿಕೊಂಡು ಲಾರೆನ್ಸ್ ಇಂಗ್ಲೆಂಡಿನ ಪೂರ್ವ ತೀರದಲ್ಲಿ ನೆಲೆಸಿದ. ಇವನು ತಕ್ಕಷ್ಟು ದೃಢಕಾಯನಲ್ಲವೆಂಬ ಕಾರಣದಿಂದ ಇವನನ್ನು ಮೊದಲ ಮಹಾಯುದ್ಧ ಕಾಲದಲ್ಲಿ ಸೈನ್ಯಕ್ಕೆ ಸೇರಿಸಿಕೊಳ್ಳಲಿಲ್ಲ. ಯುದ್ಧಾನಂತರ ಹವಾ ಬದಲಾವಣೆಗಾಗಿ ಇವನು ಫ್ರಾನ್ಸ್, ಇಟಲಿ, ಅಮೆರಿಕ ಮೊದಲಾದ ರಾಷ್ಟ್ರಗಳಲ್ಲಿ ಪ್ರವಾಸಮಾಡಿ ಬಂದ. 1930ರ ಮಾರ್ಚ್ 2ರಂದು ಫ್ರಾನ್ಸಿನ ನೀಸ್ ಎಂಬಲ್ಲಿ ಲಾರೆನ್ಸ್ ಕ್ಷಯ ರೋಗದಿಂದ ಕಣ್ಮುಚ್ಚಿದ.

ನೋಡಿ : ಕಾದಂಬರಿ

## ಡಿ ಎಲ್ ಎನ್

ಹಳ್ಳಿಯ ಸುತ್ತಲೂ ಇದ್ದ ಬೆಟ್ಟ ಕಣಿವೆಗಳಲ್ಲಿ ತಿರುಗಾಡಿ ಬರಲು ಕೆಲವರು ಹೊರಟರು. ದಾರಿಯಲ್ಲಿ ಅವರಲ್ಲೊಬ್ಬರು ತಮ್ಮ ಹಿಂದಿನ ಬೇಟೆಯ ಅನುಭವವನ್ನು ಹೇಳಲು ಪ್ರಾರಂಭಿಸಿದರು. ಅವರ ಅತ್ಯಂತ ರಸಮಯ ವರ್ಣನೆಗಳನ್ನು ಭಯಾಶ್ಚರ್ಯಗಳಿಂದ ಮೂಕರಾಗಿ ಮಿಕ್ಕವರು ಕೇಳುತ್ತಿದ್ದರು. ಹುಲಿಯ ಬೇಟೆ ವಿಷಯ ಹೇಳುತ್ತಿದ್ದವರು ಅಂಗಾಭಿನಯದಿಂದ "ಹುಲಿ ಕಿಗ್ಗಾಳಿಗೆ ಬಂತು", ಎಂದರು. ತತ್‌ಕ್ಷಣ ಕೇಳುತ್ತಿದ್ದವರಲ್ಲೊಬ್ಬರು ಅವರ ಮಾತಿಗೆ ಥಟ್ಟನೆ ಅಡ್ಡಬಂದು "ಸ್ವಾಮಿ ಕೊಂಚ ತಾಳಿ, 'ಕಿಗ್ಗಾಳಿ' ಎಂದರೇನು" ಎಂದರು. ರಸಮಯ, ಕುತೂಹಲಕಾರಿ ವರ್ಣನೆಯನ್ನು ಮುಂದಕ್ಕೆ ಹೇಳಲು ಬಿಡದೆ, 'ಕಿಗ್ಗಾಳಿ' ಎಂಬ ಮಾತಿನ ಅರ್ಥವನ್ನು ಸ್ಪಷ್ಟಪಡಿಸಿಕೊಂಡರು

ಇವರೇ 'ಕನ್ನಡ ಭಾಷೆಯ ಕಾಡು ಉದ್ಯಾನಗಳಲ್ಲಿ ನಿರ್ಭಯವಾಗಿ ಓಡಾಡುವ ಸಿಂಹ' ಎನಿಸಿಕೊಂಡ ಡಿ. ಎಲ್. ನರಸಿಂಹಾಚಾರ್ಯರು.

ಡಿ ಎಲ್ ಎನ್ ಅವರನ್ನು 'ಜಂಗಮ ಬೃಹತ್ಕೋಶ', 'ಚಲಿಸುವ ಕನ್ನಡ ನಿಘಂಟು' ಎಂದೆಲ್ಲ ಕರೆದಿರುವುದುಂಟು. ಅಂಥ ಮಹಾಪಾಂಡಿತ್ಯ ಇವರದು. ಎಲ್ಲೇ ಆಗಲಿ ಹೊಸ ಶಬ್ದ ಕಿವಿಗೆ ಬಿದ್ದರೆ ಇವರ ಕಿವಿ ನಿಮಿರುತ್ತಿತ್ತು. ಅದರ ಅರ್ಥ ನಿರ್ಣಯ ಮಾಡದೆ ಅವರ ಮನಸ್ಸಿಗೆ ಶಾಂತಿಯಿಲ್ಲ. ಯಾವ ಶಬ್ದವನ್ನು ಯಾವ ಪ್ರಾಚೀನ ಕವಿ ಹೇಗೆ ಉಪಯೋಗಿಸಿದ್ದಾನೆ ? ಎಂಬುದು ಇವರಿಗೆ ಕರತಲಾಮಲಕವಾಗಿದ್ದ ವಿಷಯ.

ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯರು 1906ರ ಅಕ್ಟೋಬರ್ 27 ರಂದು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯಲ್ಲಿ ಜನಿಸಿದರು. ಅಲ್ಲೇ ಸರಕಾರೀ ಉದ್ಯೋಗದಲ್ಲಿದ್ದ ಶಾಮಯ್ಯಂಗಾರ್ ಇವರ ತಂದೆ. ಚಿಕ್ಕಂದಿನಲ್ಲಿ ಡಿ ಎಲ್ ಎನ್ ಗೋಲಿ ಆಟದಲ್ಲಿ ಭಾರಿ ಪ್ರವೀಣರು. ಇವರು ಒಂದು ಗೋಲಿ ಹಿಡಿದು ಆಟಕ್ಕೆ ಇಳಿದರೆ ಮಿಕ್ಕ ಹುಡುಗರು ತಮ್ಮೆಲ್ಲ ಗೋಲಿಗಳನ್ನೂ ಕಳೆದುಕೊಂಡು ಬರಿಗೈಯಲ್ಲಿ ಮನೆಗೆ ಹೋಗಬೇಕಾಗುತ್ತಿತ್ತು.

ಗಣಿತ, ಭೌತವಿಜ್ಞಾನಗಳನ್ನು ತೆಗೆದುಕೊಂಡು ಡಿ ಎಲ್ ಎನ್ 1927 ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಡಿಗ್ರಿ ಪದವಿ ಪಡೆದರು. ಆಗ ತಾನೇ ಪ್ರಾರಂಭವಾಗಿದ್ದ ಮೈಸೂರು ಮಹಾರಾಜಾ ಕಾಲೇಜಿನ ಕನ್ನಡ ಎಂ.ಎ. ಗೆ ಸೇರಿ 1929ರಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿ ಚಿನ್ನದ ಪದಕ ಗಳಿಸಿಕೊಂಡರು. ಅನಂತರ ಕೊಂಚ ಕಾಲ ಮೈಸೂರಿನ ಓರಿಯೆಂಟಲ್ ಲೈಬ್ರೆರಿಯ ಕನ್ನಡ ಪಂಡಿತರಾಗಿಯೂ ಮಹಾರಾಜಾ ಕಾಲೇಜ್, ಇಂಟರ್ ಮೀಡಿಯೆಟ್ ಕಾಲೇಜುಗಳಲ್ಲಿ ಅಧ್ಯಾಪಕರಾಗಿಯೂ ಇದ್ದು 1945ರಲ್ಲಿ ಸೆಂಟ್ರಲ್ ಕಾಲೇಜಿನ ಕನ್ನಡ ಉಪಪ್ರಾಧ್ಯಾಪಕರಾದರು. ಮೂರು ವರ್ಷಗಳ ಅನಂತರ ಮಹಾರಾಜಾ ಕಾಲೇಜಿಗೆ ಹಿಂದಿರುಗಿದರು. ಮುಂದೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ಸಂಪಾದಕರಾದರು. ಅನಂತರ ಮೈಸೂರಿಗೆ ಮರಳಿ ಮಾನಸ ಗಂಗೋತ್ರಿಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತರಾದರು.

ಗ್ರಂಥ ಸಂಸ್ಕರಣೆ, ಸಂಪಾದನೆ, ಭಾಷಾಶಾಸ್ತ್ರ, ವಿಮರ್ಶೆಗಳು ಡಿ ಎಲ್ ಎನ್ ಅವರ ವಿಶೇಷ ಆಸಕ್ತಿಯ ಕ್ಷೇತ್ರ. ಅತ್ಯಂತ ಕಠಿನವಾದ ಪ್ರಾಚೀನ ಕಾವ್ಯ, ಶಾಸ್ತ್ರ ಗ್ರಂಥಗಳನ್ನು ಪರಿಶೋಧಿಸಿ ಸಂಪಾದಿಸಲು ಬೇಕಿದ್ದ ಅಗಾಧ ಪಾಂಡಿತ್ಯ, ತಾಳ್ಮೆ, ಸ್ಥೈರ್ಯ ಇವರಿಗಿದ್ದುವು. ಕವಿಗಳ ಕಾಲ, ವಿಚಾರ, ಕರ್ತೃತ್ವ ವಿಚಾರಗಳಲ್ಲಿ ಅತ್ಯಂತ ಸ್ಪಷ್ಟವಾಗಿ ನಿಖರವಾಗಿ ತಮ್ಮ ವಾದವನ್ನು ಮಂಡಿಸಬಲ್ಲ ವೈಜ್ಞಾನಿಕ ದೃಷ್ಟಿಯೂ ಅವರಿಗಿತ್ತು.

'ಪಂಪರಾಮಾಯಣ', 'ವಡ್ಡಾರಾಧನೆ', 'ಸುಕುಮಾರ ಚರಿತಂ', 'ಶಬ್ದಮಣಿ ದರ್ಪಣ', 'ಸಿದ್ಧರಾಮ ಚಾರಿತ್ರ'—ಮೊದಲಾದ ಗ್ರಂಥಗಳನ್ನು ಡಿ ಎಲ್ ಎನ್ ಉತ್ತಮ ರೀತಿಯಲ್ಲಿ ಸಂಪಾದಿಸಿದ್ದಾರೆ. ಇವರ 'ಕನ್ನಡ ಗ್ರಂಥ ಸಂಪಾದನೆ' ಕನ್ನಡದಲ್ಲೊಂದು ಅಮೂಲ್ಯ ಕೃತಿ. ಆ ವಿಷಯವನ್ನು ಕುರಿತ ಆಧಾರಗ್ರಂಥ. 'ಶಬ್ದವಿಹಾರ', 'ಹರಿಹರ', ಮೊದಲಾದ ಕೃತಿಗಳು ಗಾತ್ರದಲ್ಲಿ ಚಿಕ್ಕವಾದರೂ ನಮ್ಮ ಸಾಹಿತ್ಯಕ್ಕೆ ದೊಡ್ಡ ಕೊಡುಗೆಗಳಾಗಿವೆ.



ಪಾಂಡಿತ್ಯದ ಔನ್ನತ್ಯ : ಡಿ ಎಲ್ ಎನ್

ಇವರು ತಾವು ಸಂಪಾದಿಸಿದ ಕೃತಿಗಳಲ್ಲಿ ಬರೆದಿರುವ ಪೀಠಿಕೆಗಳು ಮತ್ತು ಪ್ರಬುದ್ಧ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ನುಡಿ, ಜಯ ಕರ್ನಾಟಕ ಮೊದಲಾದ ನಿಯತಕಾಲಿಕಗಳಲ್ಲಿ ಭಾಷೆ, ಸಾಹಿತ್ಯ, ಛಂದಸ್ಸು, ವ್ಯಾಕರಣಗಳ ಬಗೆಗೆ ಬರೆದಿರುವ ಅನೇಕ ಲೇಖನಗಳು ಇವರ ಗಂಭೀರ ಅಧ್ಯಯನದ ಫಲಗಳು. ಇವುಗಳನ್ನೆಲ್ಲ 'ಪೀಠಿಕೆಗಳು ಲೇಖನಗಳು' ಎಂಬ ಉದ್ಗ್ರಂಥವನ್ನಾಗಿ ಪ್ರಕಟಿಸಲಾಗಿದೆ.

ಕನ್ನಡ, ತಮಿಳು, ತೆಲುಗು, ಇಂಗ್ಲಿಷ್, ಸಂಸ್ಕೃತ ಮೊದಲಾದ ಭಾಷೆಗಳ ಬಗೆಗೆ ಡಿ ಎಲ್ ಎನ್ ಪಾಂಡಿತ್ಯ ಗಳಿಸಿದ್ದರು. 28ನೆಯ ವಯಸ್ಸಿನಲ್ಲಿ ಸೈಕಲ್ ಸವಾರಿಯನ್ನೂ 55ನೆಯ ವಯಸ್ಸಿನಲ್ಲಿ ಜರ್ಮನ್ ಭಾಷೆಯನ್ನೂ ಕಲಿತ ಡಿ ಎಲ್ ಎನ್ ಅವರಿಗೆ ಹೊಸತನ್ನು ಕಲಿಯಲು, ವಯಸ್ಸು ಎಂದೂ ಅಡ್ಡ ಬರಲಿಲ್ಲ. ಹೊಸತನ್ನು ಕಲಿಯಬೇಕೆಂಬ ಹುಮ್ಮಸ್ಸಿನಿಂದಾಗಿ, ತೀ ನಂ ಶ್ರೀ ಹೇಳಿದಂತೆ '...... ತಮ್ಮ ಪಾಂಡಿತ್ಯದ ಔನ್ನತ್ಯವೆಷ್ಟೆಂಬುದನ್ನು ಅವರೇ ತಿಳಿದಿರಲಿಲ್ಲ.'

ಆದರೆ ಅವರದು ಒಣಪಾಂಡಿತ್ಯವಲ್ಲ. ಕಾವ್ಯ ಸೌಂದರ್ಯವನ್ನು ಅನುಭವಿಸಲು ಬೇಕಾದ ಸಹೃದಯತೆ ಅವರಲ್ಲಿ ಅಪಾರವಾಗಿತ್ತು. 'ಶಾಕುಂತಲ', 'ಕಿಂಗ್ ಲಿಯರ್' ಓದುತ್ತಿದ್ದಾಗ ಅವರ ಕಣ್ಣಲ್ಲಿ ನೀರು ಬರುತ್ತಿದ್ದುದುಂಟು. ಪಂಪ, ರನ್ನ, ಹರಿಹರ, ಕುಮಾರವ್ಯಾಸರ ಕಾವ್ಯಗಳು ಇವರ ಬಾಯಿಯಲ್ಲಿ ನಲಿದಾಡುತ್ತಿದ್ದವು. ಇದರಿಂದಲೇ ರಂ. ಶ್ರೀ. ಮುಗಳಿ ಅವರನ್ನು 'ತಿರುಗಾಡುವ ಕನ್ನಡ ಕಾವ್ಯ' ಎಂದು ಕರೆದರು.

ಆದರೆ ಕಾವ್ಯರಚನೆಯೇ ಜೀವನದಲ್ಲಿ ಸಾಧಿಸಬಹುದಾದ ಉತ್ಕೃಷ್ಟ ಸಾಧನೆ ಎಂದು ಇವರು ಭಾವಿಸಿರಲಿಲ್ಲ. "ಒಂದು ಒಳ್ಳೆಯ ಕವಿತೆ ಬರೆದರೆ ಕವಿಗೆ ಹೇಗೆ ಆನಂದವಾಗುತ್ತೋ ಹಾಗೆಯೇ ಒಂದು ಜೊತೆ ಒಳ್ಳೆಯ ಜೋಡು ಹೊಲಿದಾಗ ಮೋಚಿಗೂ ಆನಂದವಾಗುತ್ತೆ. ಸುಮ್ಮ ಸುಮ್ಮನೆ ಕಾವ್ಯವೊಂದೇ ಸರ್ವಸ್ವ ಎಂದು ಕೂಗಾಡ್ತಾರೆ. ಜೀವನ ದೊಡ್ಡದಯ್ಯ ಎಲ್ಲಕ್ಕಿಂತ್ಲೂ; ಅದಕ್ಕಿಂತ್ಲೂ ಸೃಷ್ಟಿ ದೊಡ್ಡದು: ಸೃಷ್ಟಿ ಹಿಂದಿರೋ ಅಗೋಚರ ಶಕ್ತಿ ಅದಕ್ಕೂ ಹಿರಿಯದು ಎನ್ನೋ ಭಾವನೆ ಬೇಕಯ್ಯ" ಎನ್ನುತ್ತಿದ್ದರು.

1960ರಲ್ಲಿ ಬಿದರೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಡಿ ಎಲ್ ಎನ್ ಅಧ್ಯಕ್ಷರಾಗಿದ್ದರು. 1967ರಲ್ಲಿ ಮೈಸೂರು ಸಾಹಿತ್ಯ ಅಕಾಡೆಮಿ ಇವರನ್ನು ಬಹುಮಾನಿಸಿತು. 1970ರಲ್ಲಿ ಮೈಸೂರು ವಿಶ್ವ ವಿದ್ಯಾನಿಲಯ ಇವರಿಗೆ ಡಾಕ್ಟರೇಟ್ ಪ್ರಶಸ್ತಿ ನೀಡಿತು.

ಕನ್ನಡದ ಪ್ರಮುಖ ಸಾಹಿತ್ಯಾಚಾರ್ಯರಲ್ಲಿ ಒಬ್ಬರಾಗಿದ್ದ ಡಿ ಎಲ್ ಎನ್ 1971ರ ಮೇ 7ರಂದು ನಿಧನರಾದರು. ಆಚಾರ್ಯ ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯರು ಕನ್ನಡದಲ್ಲಿ ದೊಡ್ಡ ಬೆಲೆಯ ವ್ಯಕ್ತಿ.

## ಡಿಕೆನ್ಸ್

ಲಂಡನಿನಲ್ಲಿ 'ಸೇಲಮ್ ಹೌಸ್' ಎನ್ನುವ ಹೆಸರಿನ ಪಾಠಶಾಲೆ; ತುಂಬಾ ಕ್ರೂರ ಸ್ವಭಾವದ ಕ್ರೀಕ್‌ಲ್ ಅಲ್ಲಿನ ಮುಖ್ಯೋಪಾಧ್ಯಾಯ. ಪುಟ್ಟ ಬಾಲಕ ಡೇವಿಡನ ಹಟಮಾರಿತನ ಸಹಿಸಲಾರದೆ ಆತನ ಮಲತಂದೆ ಆ ಶಾಲೆಗೆ ಸೇರಿಸಿದ. ಅವನು ಶಾಲೆಗೆ ಬಂದ ದಿವಸವೇ "ಇವನ ವಿಷಯ ಹುಷಾರಾಗಿರಿ! ಕಚ್ಚುತ್ತಾನೆ", ಎಂದು ಬರೆದ ಫಲಕವನ್ನು ಕತ್ತಿನಲ್ಲಿ ತೂಗ ಹಾಕಿಕೊಂಡು ತಿರುಗಾಡುತ್ತಿದ್ದ ಒಬ್ಬ ಹುಡುಗನನ್ನು ಬಾಲಕ ಡೇವಿಡ್ ನೋಡಿದ. ಕುತೂಹಲ ತಡೆಯಲಾರದೆ ಅಧ್ಯಾಪಕರನ್ನು ಕೇಳಿಯೇ ಬಿಟ್ಟ: "ಸಾರ್ ಇಲ್ಲೆಲ್ಲಾದರೂ ಕಚ್ಚುವ ನಾಯಿ ಇದೆಯೇ?" "ಕಚ್ಚುವ ನಾಯಿ? ಇಲ್ಲಿ ಯಾವುದೂ ಇಲ್ಲವಲ್ಲ" ಎಂದು ಕ್ರೀಕ್‌ಲ್ ಉತ್ತರಿಸಿದರು.

"ಕಚ್ಚುವಂಥಾದ್ದು, ನಾವು ಎಚ್ಚರ ವಹಿಸಬೇಕಾಗಿರುವುದು, ನಾಯಿ ಅಲ್ಲವೇ?"

"ಅಲ್ಲ ಡೇವಿಡ್ ಕಾಪರ್‌ಫೀಲ್ಡ್, ನಾಯಿಯಲ್ಲ. ಆತ ಹುಡುಗ. ಇಲ್ಲಿ ಹಠಮಾರಿ ಹುಡುಗರು ಆ ಬೋರ್ಡನ್ನು ದಿನವಿಡೀ ಕುತ್ತಿಗೆಯಲ್ಲಿ ನೇತು ಹಾಕಿಕೊಂಡಿರಬೇಕಾಗ್ತದೆ. ಇವತ್ತಿನಿಂದ ನೀನೂ ಆ ಬೋರ್ಡು ತಗಲಿಸಿಕೋಬೇಕು."

ಈ ಸನ್ನಿವೇಶ ಜಗತ್ತಿನ ಹತ್ತು ಶ್ರೇಷ್ಠ ಕಾದಂಬರಿಗಳಲ್ಲಿ ಒಂದೆಂದು ಪರಿಗಣಿತವಾಗಿರುವ ಚಾರ್ಲ್ಸ್ ಡಿಕೆನ್ಸ್‌ನ 'ಡೇವಿಡ್ ಕಾಪರ್‌ಫೀಲ್ಡ್' ಕಾದಂಬರಿಯಲ್ಲಿ ನಿರೂಪಿತವಾಗಿದೆ. ಆ ಕಾಲದಲ್ಲಿ ಉತ್ತರ ಇಂಗ್ಲೆಂಡಿನ ಶಾಲೆಗಳಲ್ಲಿ ಬಾಲಕರನ್ನು ಕ್ರೂರವಾಗಿ ಹೊಡೆದು ಶಿಕ್ಷಿಸುತ್ತಿದ್ದರು. ತನ್ನ



ಕಾದಂಬರಿ ಶಿಲ್ಪಿ :
ಡಿಕೆನ್ಸ್

[illegible]

ಚಾರ್ಲ್ಸ್ ಡಿಕೆನ್ಸ್ ಇಂಗ್ಲೆಂಡಿನ ಶ್ರೇಷ್ಠ ಕಾದಂಬರಿಕಾರ; ವಾಲ್ಟರ್ ಸ್ಕಾಟ್, ಥ್ಯಾಕರೆಯಂಥ ಪ್ರಸಿದ್ಧ ಕಾದಂಬರಿಕಾರರ ಸಾಲಿನಲ್ಲಿ ಮೆರೆಯುವವನು. ಆತ ಬರೆದಿರುವ ಕಾದಂಬರಿಗಳ ಸಂಖ್ಯೆ 15. ಆತ ಮಾನವತಾವಾದಿ. ಸಮಾಜ ಸುಧಾರಣೆಯಲ್ಲಿ ಅವನಿಗೆ ಆಸಕ್ತಿ ಇತ್ತು. ಆತ ಪತ್ರಿಕೋದ್ಯಮಿಯೂ ಆಗಿದ್ದ.

ಚಾರ್ಲ್ಸ್ ಡಿಕೆನ್ಸ್ ಹುಟ್ಟಿದ್ದು 1812ರ ಫೆಬ್ರವರಿ 7ರಂದು. ಇಂಗ್ಲೆಂಡಿನ ಪೋರ್ಟ್ಸಿಯಲ್ಲಿ. ಅವನ ತಂದೆ ಸರಕಾರಿ ಗುಮಾಸ್ತೆಯಾಗಿದ್ದ. ಆತ ಜವಾಬ್ದಾರಿಯಿಲ್ಲದ ಮನುಷ್ಯ. ಸದಾ ಸಾಲದಲ್ಲಿ ಮುಳುಗಿರುತ್ತಿದ್ದ. ಸಾಲ ತೀರಿಸಲಾಗದೆ ತಂದೆ ಸೆರೆಮನೆ ಸೇರಿದ ಬಳಿಕ, ಬಾಲಕ ಡಿಕೆನ್ಸ್ ಬೂಟು ಚಪ್ಪಲಿ ತಯಾರಿಸುವ ಕಾರಖಾನೆಯಲ್ಲಿ ಹೊಟ್ಟೆಪಾಡಿಗಾಗಿ ದುಡಿಯಬೇಕಾಯಿತು. (ಈ ದಾರುಣ ಬದುಕಿನ ಹೃದಯಸ್ಪರ್ಶಿ ನಿರೂಪಣೆ 'ಡೇವಿಡ್ ಕಾಪರ್‌ಫೀಲ್ಡ್' ಕಾದಂಬರಿಯಲ್ಲಿದೆ.) ಸೆರೆಮನೆಯಿಂದ ಬಿಡುಗಡೆಯಾದ ಬಳಿಕ ತಂದೆ ತನ್ನ ಮಗನನ್ನು ಮತ್ತೆ ಶಾಲೆಗೆ ಸೇರಿಸಿದ. ಆದರೆ ಅವನಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿ ಹುಟ್ಟಲಿಲ್ಲ. ಶೀಘ್ರಲಿಪಿ ಕಲಿತ. ಪತ್ರಿಕೆಗಳಿಗೆ ಪಾರ್ಲಿಮೆಂಟಿನ ಕಾರ್ಯಕಲಾಪಗಳನ್ನು ವರದಿ ಮಾಡುವ ಉದ್ಯೋಗ ಕೈಕೊಂಡ. ಡೇನಿಯಲ್ ಡೆಫೋನ 'ರಾಬಿನ್‌ಸನ್ ಕ್ರೂಸೋ', ಗೋಲ್ಡ್‌ಸ್ಮಿತ್‌ನ 'ವಿಕಾರ್ ಆಫ್ ವೇಕ್‌ಫೀಲ್ಡ್' ಗ್ರಂಥಗಳು ಅವನ ಮೇಲೆ ಪ್ರಭಾವ ಬೀರಿದುವು.

ಡಿಕೆನ್ಸ್‌ನ ಮೊದಲ ಕೃತಿ 'ಸ್ಕೆಚಸ್ ಬೈ ಬಾಜ್' ಎಂಬ ವ್ಯಕ್ತಿಚಿತ್ರಗಳ ಸಂಕಲನ. 1836ರಲ್ಲಿ ಇದು ಬೆಳಕು ಕಂಡಿತು. (ತನ್ನ ಮೊದಲ ಬರೆವಣಿಗೆಗೆ ಆತ ಉಪಯೋಗಿಸಿದ ಕಾವ್ಯನಾಮ 'ಬಾಜ್') ಇದರಲ್ಲಿ ಆ ಕಾಲದ ಜನರ ನಡವಳಿಕೆಯ ಸುಂದರ ಚಿತ್ರಣವಿದೆ. ಅವನ ಪ್ರಸಿದ್ಧ ಕಾದಂಬರಿ 'ದಿ ಪಿಕ್‌ವಿಕ್ ಪೇಪರ್ಸ್' 1837ರಲ್ಲಿ ಪ್ರಕಟವಾಯಿತು. ಆ ಪುಸ್ತಕದ 10ನೆಯ ಭಾಗ ಅಚ್ಚಾದಾಗ 40,000 ಪ್ರತಿಗಳು ಮಾರಾಟವಾದುವು. ಚುರುಕಾದ ಹಾಸ್ಯ ಶೈಲಿಯ ಕೃತಿ 'ದಿ ಪಿಕ್‌ವಿಕ್ ಪೇಪರ್ಸ್'. ಇದು ಎಷ್ಟು ಪ್ರಸಿದ್ಧವಾಯಿತೆಂದರೆ ನ್ಯಾಯಾಲಯಗಳಲ್ಲಿ, ರಾಜಕಾರಣಿಗಳ ಕೂಟಗಳಲ್ಲಿ, ಹೋಟೆಲು, ಕ್ಲಬ್ಬುಗಳಲ್ಲಿ, 'ಪಿಕ್‌ವಿಕ್'ನ ಪ್ರಶಂಸೆಯೇ ಕೇಳಿಬರುತ್ತಿತ್ತು.

ಡಿಕೆನ್ಸ್‌ನ 'ಆಲಿವರ್ ಟ್ವಿಸ್ಟ್' ಕಾದಂಬರಿ 1838ರಲ್ಲಿ ಪ್ರಕಟವಾಯಿತು. ಕಳ್ಳರಲ್ಲೂ ದರೋಡೆಗಾರರಲ್ಲೂ ಮಾನವೀಯ ಅಂತಃಕರಣವಿರುತ್ತದೆ; ಅವರು ಕೆಟ್ಟವರಾಗಿಯೇ ಹುಟ್ಟಿರುವುದಿಲ್ಲ; ಸಮಾಜದ ಕೆಲವೊಂದು ವಿಚಿತ್ರ ಸನ್ನಿವೇಶಗಳು ಅವರನ್ನು ಕೆಟ್ಟವರನ್ನಾಗಿಸುತ್ತವೆ ಎನ್ನುವುದೇ ಚಾರ್ಲ್ಸ್ ಡಿಕೆನ್ಸ್‌ನ ಸಿದ್ಧಾಂತ. ಮನುಷ್ಯ ಸ್ವಭಾವದ ಎಳೆಎಳೆಯಾದ ವಿಶ್ಲೇಷಣೆ ಈ ಕಾದಂಬರಿಯಲ್ಲಿದೆ. ಈ ಕೃತಿ ಇಂಗ್ಲೆಂಡಿನಲ್ಲೂ ಜಗತ್ತಿನ ಇತರ ಕಡೆಗಳಲ್ಲೂ ಬಹಳ ಜನಪ್ರಿಯವಾಯಿತು. ಮಧ್ಯಮವರ್ಗದವರನ್ನು ಅನುಕಂಪದಿಂದ ನೋಡಿ ಕಣ್ಣಿಗೆ ಕಟ್ಟುವಂತೆ ಅವರ ಜೀವನವನ್ನು ಚಿತ್ರಿಸುವುದು ಡಿಕೆನ್ಸ್‌ನ ವೈಶಿಷ್ಟ್ಯ.

'ದಿ ಟೇಲ್ ಆಫ್ ಟು ಸಿಟೀಸ್' ಎನ್ನುವ ಕಾದಂಬರಿ 1859ರಲ್ಲಿ ಹೊರಬಿತ್ತು. ಫ್ರಾನ್ಸಿನ ಮಹಾಕ್ರಾಂತಿಯ ಹಿನ್ನೆಲೆಯಿರುವ ಈ ಕಾದಂಬರಿಯಲ್ಲಿ ದಬ್ಬಾಳಿಕೆ, ಶೋಷಣೆಗಳಿಗೆ ಗುರಿಯಾದ ಸಮಾಜದ ಚಿತ್ರಣವಿದೆ. ಕನ್ನಡವೂ ಸೇರಿ ಅನೇಕ ಭಾಷೆಗಳಿಗೆ ಡಿಕೆನ್ಸ್‌ನ ಹಲವಾರು ಕಾದಂಬರಿಗಳು ಭಾಷಾಂತರವಾಗಿವೆ.

ಬಹುಮುಖ ಪ್ರತಿಭೆಯ ಡಿಕೆನ್ಸ್ ಹವ್ಯಾಸಿ ನಾಟಕ ತಂಡಗಳನ್ನು ಸ್ಥಾಪಿಸಿ ಲಂಡನ್ ನಗರದಲ್ಲಿ 1847ರಿಂದ 57ರ ತನಕ ಮೂವತ್ತಕ್ಕೂ ಹೆಚ್ಚು ನಾಟಕಗಳನ್ನು ಆಡಿಸಿದ. ಅದರಿಂದ ಬಂದ ಹಣವನ್ನು ಸಂಕಷ್ಟ ಲೇಖಕರ ಸಹಾಯಕ್ಕೆ ವಿನಿಯೋಗಿಸಿದ.

ಡಿಕೆನ್ಸನ ಬದುಕಿನ ಕೊನೆಯ ದಿನಗಳು ಸುಖಮಯವಾಗಿರಲಿಲ್ಲ. ಜೀವನ ನಿರ್ವಹಣಕ್ಕಾಗಿ ತನ್ನ ಕಾದಂಬರಿಗಳನ್ನು ಸಾರ್ವಜನಿಕವಾಗಿ ಓದಿ ಹಣ ಸಂಪಾದಿಸಬೇಕಾಯಿತು. 1870ರ ಜೂನ್ 9ರಂದು 'ಎಡ್ವಿನ್ ಡ್ರೂಡ್' ಎಂಬ ಕಾದಂಬರಿಯನ್ನು ಬರೆಯುತ್ತಿದ್ದಾಗ ಸಾವು ಸಂಭವಿಸಿತು. ಅಳಿದ ಚಾರ್ಲ್ಸ್ ಡಿಕೆನ್ಸ್‌ಗಾಗಿ ಇಡೀ ರಾಷ್ಟ್ರವೇ ಕಣ್ಣೀರಿಟ್ಟಿತು. ಅವನ ಪಾರ್ಥಿವ ಶರೀರವನ್ನು ಲಂಡನಿನ ವೆಸ್ಟ್‌ಮಿನ್‌ಸ್ಟರ್ ಅಬೀಯ ಕವಿಗಳ ಮೂಲೆಯಲ್ಲಿ ಸಮಾಧಿ ಮಾಡಿದರು.

## ಡಿಲಾನ್ ಥಾಮಸ್

"ಇದು ನಮ್ಮ ಪಿತೃಗಳ ನಾಡು, ಇದನ್ನು ಆ ಪಿತೃಗಳೇ ಇಟ್ಟುಕೊಳ್ಳಲಿ" ಕೇವಲ ಇಪ್ಪತ್ತು ವರ್ಷದ ಯುವಕನೊಬ್ಬ ತನ್ನ ಜನ್ಮಭೂಮಿ ವೇಲ್ಸಿನಿಂದ ಲಂಡನಿಗೆ ಹೊರಟುಹೋದಾಗ ಆಡಿದ ಮಾತು ಇದು.

ಈ ಕಟುಮಾತನ್ನಾಡಿದವನು ಡಿಲಾನ್ ಥಾಮಸ್. ಇವನು ಹುಟ್ಟಿದ್ದು ವೇಲ್ಸಿನ ಸ್ವಾನ್‌ಸೀ ಎಂಬಲ್ಲಿ, 1914ನೆಯ ಅಕ್ಟೋಬರ್ 27ರಂದು. ತಂದೆ ಗ್ರಾಮರ್ ಸ್ಕೂಲಿನಲ್ಲಿ ಇಂಗ್ಲಿಷಿನ ಅಧ್ಯಾಪಕನಾಗಿದ್ದ. ಡಿಲಾನ್ ಇದೇ ಶಾಲೆಯಲ್ಲಿ ಕಲಿತ. ಶಾಲೆಯ ಪತ್ರಿಕೆಗೆ ಪದ್ಯ, ಗದ್ಯಲೇಖನಗಳನ್ನು ಬರೆಯುತ್ತಿದ್ದ. 16ನೆಯ ವಯಸ್ಸಿಗೇ ಶಾಲೆ ಬಿಟ್ಟು 'ಸೌತ್ ವೇಲ್ಸ್', 'ಈವಿನಿಂಗ್ ಪೋಸ್ಟ್' ಪತ್ರಿಕೆಗಳಲ್ಲಿ ಕೆಲಕಾಲ ವರದಿಗಾರನಾಗಿದ್ದ. ಆಗ ಕೂಡ ಕವನ ರಚಿಸಿ ಅವನ್ನು ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದ. 1938ರಲ್ಲಿ ಷಿಕಾಗೋದ 'ಪೊಯೆಟ್ರಿ' ಪತ್ರಿಕೆಯ ಬಹುಮಾನ ಇವನಿಗೆ ದೊರೆಯಿತು.

ಡಿಲಾನ್ ಥಾಮಸ್ ರೇಡಿಯೋ ಪ್ರಸಾರಕ್ಕಾಗಿಯೂ ಡಾಕ್ಯುಮೆಂಟರಿ ಫಿಲ್ಮುಗಳಿಗಾಗಿಯೂ ಸಾಹಿತ್ಯ ರಚನೆ ಮಾಡಿದ. ಎರಡನೆಯ ಮಹಾಯುದ್ಧ ಕಾಲದಲ್ಲಿ ಇವನು ಸೇನೆಗೆ ಸೇರಬೇಕಾಗಿತ್ತು. ಆದರೆ ತಕ್ಕಷ್ಟು ದೇಹದಾರ್ಢ್ಯವಿಲ್ಲವೆಂದು ಇವನನ್ನು ಭರತಿಮಾಡಿಕೊಳ್ಳಲಿಲ್ಲ. 1940ರಲ್ಲಿ ಇವನು ರೇಡಿಯೋ ಸಂಸ್ಥೆಯಲ್ಲಿ ಕೆಲಕಾಲ ಕೆಲಸ ಮಾಡಿದ. ನಾಲ್ಕು ಬಾರಿ ಅಮೆರಿಕ ಪ್ರವಾಸ ಕೈಗೊಂಡು, ಅನೇಕ ಕಡೆಗಳಲ್ಲಿ ಭಾಷಣ ಮಾಡಿದ. ನಾಲ್ಕನೆಯ ಬಾರಿ ಅವನು ಅಮೆರಿಕದಲ್ಲಿ ಪ್ರವಾಸ ಮಾಡುತ್ತಿದ್ದಾಗ, ಅನಿರೀಕ್ಷಿತವಾಗಿ 1953 ನವೆಂಬರ್ 9 ರಂದು ನ್ಯೂಯಾರ್ಕ್‌ನಲ್ಲಿ ತೀರಿಕೊಂಡ.



ಬೇರು ಕಿತ್ತ ಕವನ : ಡಿಲಾನ್ ಥಾಮಸ್

ಡಿಲಾನ್ ಥಾಮಸನ ಮೊದಲ ಕವನ ಸಂಗ್ರಹ 'ಏಯ್‌ಟೀನ್ ಪೊಯೆಮ್ಸ್' 1934ರಲ್ಲಿ ಪ್ರಕಟವಾದಾಗ ಆತನಿಗಿನ್ನೂ 20 ವರ್ಷ. ಅಷ್ಟು ಹೊತ್ತಿಗಾಗಲೇ ಅವನ ಅನೇಕ ಕವನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಅವನ ಇನ್ನೊಂದು ಕವನ ಸಂಕಲನ 'ಟ್ವೆಂಟಿಫೈವ್ ಪೊಯೆಮ್ಸ್' 1936ರಲ್ಲಿ ಪ್ರಕಟವಾಯಿತು. 'ಎ ಮ್ಯಾಪ್ ಆಫ್ ಲವ್' ಎಂಬುದು ಕಥೆ ಹಾಗೂ ಇತರ ಗದ್ಯಲೇಖನಗಳ ಸಂಕಲನ. 'ಪೋರ್‌ಟ್ರೇಯ್ಟ್ ಆಫ್ ದಿ ಆರ್ಟಿಸ್ಟ್ ಆಸ್ ಎ ಯಂಗ್ ಡಾಗ್' ತನ್ನನ್ನೇ ಕುರಿತ ಲೇಖನಗಳ ಸಂಕಲನ. ಇದರಲ್ಲಿ ಹಾಸ್ಯ ಮಿಂಚುತ್ತದೆ. ಆತನ ಅಭಿಮಾನಿಗಳಿಗೆ ಈ ಪುಸ್ತಕ ಬಹಳ ಮೆಚ್ಚು. 1946ರಲ್ಲಿ ಹೊರಬಿದ್ದ 'ಡೆತ್ಸ್ ಅಂಡ್ ಎಂಟ್ರೆನ್ಸಸ್' ಮತ್ತು 1952ರಲ್ಲಿ ಅಚ್ಚಾದ 'ಇನ್ ಕಂಟ್ರಿ ಸ್ಲೀಪ್'ಗಳು ಡಿಲಾನನ ಕವಿತಾಶಕ್ತಿಯ ಔನ್ನತ್ಯವನ್ನು ಸಾರುತ್ತವೆ.

'ಅಂಡರ್ ಮಿಲ್ಕ್‌ವುಡ್' ರೇಡಿಯೋಗಾಗಿ ಬರೆದ ನಾಟಕ. ಇದು 1954ರಲ್ಲಿ ಮೊದಲು ಪ್ರಸಾರವಾಯಿತು. ಅನಂತರ ಈ ನಾಟಕ ಲಂಡನ್, ನ್ಯೂಯಾರ್ಕ್‌ಗಳಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಆಮೇಲೆ ರಂಗಭೂಮಿಯಲ್ಲಿ ಪ್ರದರ್ಶಿಸಲ್ಪಟ್ಟಿತು. ಡಿಲಾನ್ ಥಾಮಸನ ಮರಣಾನಂತರ ಪ್ರಕಟವಾದುವು – ರೇಡಿಯೋಗಾಗಿ ಬರೆದ ಕೃತಿಗಳ ಸಂಕಲನ 'ಕ್ವೈಟ್ ಅರ್ಲಿ ಒನ್ ಮಾರ್ನಿಂಗ್', 'ಅಡ್ವೆಂಚರ್ಸ್ ಇನ್ ದಿ ಸ್ಕಿನ್ ಟ್ರೇಡ್' ಮತ್ತು 'ಎ ಪ್ರಾಸ್ಪೆಕ್ಟ್ ಆಫ್ ದಿ ಸೀ'.

ಈತ ಸಾಂಪ್ರದಾಯಿಕ ಲಯ ಹಾಗೂ ಛಂದಸ್ಸುಗಳಿಂದ ಸ್ವಚ್ಛಂದ ಕಾವ್ಯದವರೆಗೆ ನಾನಾ ಕಾವ್ಯರೂಪಗಳಲ್ಲಿ ಕೈ ಆಡಿಸಿದ್ದಾನೆ. 1939ರ ವರೆಗೆ ಇವನು ಬರೆದಿರುವ ಕವನಗಳಲ್ಲಿ ಆತ್ಮಶೋಧನೆ ಇದೆ. ಇವನ ಕೃತಿಗಳಲ್ಲಿ ಸಾವು, ಸೃಷ್ಟಿ, ಮುಂತಾದುವುಗಳ ಬಗೆಗೆ ತೀವ್ರ ಚಿಂತನೆ ಕಾಣುತ್ತದೆ. ಬರಹಗಳಲ್ಲಿ ಅಸಾಧಾರಣ ಚೈತನ್ಯ ತೋರಿಬರುತ್ತದೆ. ಮಾತುಗಾರಿಕೆಯ ಸೊಗಸು ಬೆಡಗುಗಳಿಗಾಗಿಯೇ ಅವನ ಕೃತಿಗಳನ್ನೋದ ಬೇಕು ಎನ್ನುವವರಿದ್ದಾರೆ.

ಹಲವರ ಗಣನೆಯಲ್ಲಿ ಡಿಲಾನ್ ಥಾಮಸ್, ತನ್ನ ಸಮಕಾಲೀನ ಕವಿಗಳಲ್ಲೆಲ್ಲ ಅತ್ಯಂತ ಮೇಧಾವಿ.

### ಡಿ ವಿ ಜಿ

"ಹೊಸ ಚಿಗುರು ಹಳೆ ಬೇರು ಕೂಡಿರಲು ಮರ ಸೊಬಗು
ಹೊಸಯುಕ್ತಿ ಹಳೆತತ್ತ್ವದೊಡಗೂಡೆ ಧರ್ಮ
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನಜೀವನಕೆ —ಮಂಕುತಿಮ್ಮ"

ಈ ಕವನದ ಕರ್ತೃ ಡಿ. ವಿ. ಗುಂಡಪ್ಪನವರು ಪತ್ರಿಕೋದ್ಯಮಿ, ಸಾಹಿತಿ, ಹಾಗೂ ರಾಜ್ಯಶಾಸ್ತ್ರಜ್ಞ. ಅವರೊಂದು ಜ್ಞಾನನಿಧಿ.

ಗುಂಡಪ್ಪನವರು ಜನಿಸಿದ್ದು 1888ರಲ್ಲಿ. ತಂದೆ ದೇವನಹಳ್ಳಿ ವೆಂಕಟ ರಮಣಯ್ಯನವರು ಶಿಕ್ಷಕರಾಗಿದ್ದರು. ಹೆಚ್ಚು ಅನುಕೂಲವಿರದಿದ್ದ ಕಾರಣ ಇವರ ಶಿಕ್ಷಣ ಮುಂದುವರಿಯಲಿಲ್ಲ. 1906ರ ಸುಮಾರಿನಲ್ಲಿ ಬೆಂಗಳೂರಿಗೆ ಬಂದು ಪತ್ರಿಕೋದ್ಯಮ ವೃತ್ತಿಯಲ್ಲಿ ತೊಡಗಿದರು. ಪತ್ರಿಕೋದ್ಯಮಿ ಯಾಗಿ ಉಚ್ಚ ಆದರ್ಶಗಳನ್ನು ಪಾಲಿಸಿಕೊಂಡು ಬಂದರು. ಸ್ವಪ್ರಯತ್ನ ದಿಂದ ಸಂಸ್ಕೃತ, ಕನ್ನಡ, ಇಂಗ್ಲಿಷ್ ಭಾಷೆಗಳಲ್ಲಿ ಅಸಾಧಾರಣ ಪಾಂಡಿತ್ಯ ಪಡೆದರು. ತೆಲುಗು, ತಮಿಳು ಭಾಷಾಜ್ಞಾನವನ್ನೂ ಬೆಳೆಸಿಕೊಂಡರು.

ಗುಂಡಪ್ಪನವರು, ಚಿರಕಾಲ ಉಳಿಯು ವಂಥ ಗ್ರಂಥಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಇವರು ಬರೆದ 'ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ ಜೀವನ ಧರ್ಮ ಯೋಗ' ಗ್ರಂಥಕ್ಕೆ 1969ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತು. ಮೈಸೂರು ವಿಶ್ವವಿದ್ಯಾನಿಲಯದವರು 1961ರಲ್ಲಿ ಗೌರವ ಡಾಕ್ಟರೇಟ್ ಪ್ರಶಸ್ತಿ ಕೊಟ್ಟು ಗೌರವಿಸಿದರು.



'ಗೌರವಿಸು ಜೀವನವ, ಚೇತನವ' : ಡಿ ವಿ ಜಿ

ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಡಿ ವಿ ಜಿ ಅವರ ಸಂಬಂಧ ತುಂಬ ನಿಕಟವಾದದ್ದು. ಪರಿಷತ್ತು ಹುಟ್ಟಿದಾಗಿನಿಂದ ಅವರು ಅದರ ಕಾರ್ಯ ಕಲಾಪಗಳಲ್ಲಿ ಆಸಕ್ತಿವಹಿಸಿ ಅದರ ಕಾರ್ಯಚಟುವಟಿಕೆಗಳ ವಿಸ್ತರಣಕ್ಕಾಗಿ ತುಂಬ ಶ್ರಮವಹಿಸಿ ದುಡಿದಿದ್ದಾರೆ. ಮೂರು ವರ್ಷ ಪರಿಷತ್ತಿನ ಉಪಾಧ್ಯಕ್ಷರಾಗಿ ಅವರು ಸಲ್ಲಿಸಿದ ಸೇವೆ ಮಹತ್ತರವಾದದ್ದು. 1932ರಲ್ಲಿ ಮಡಿಕೇರಿಯಲ್ಲಿ ನಡೆದ 18ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು.

ಡಿ ವಿ ಜಿ ಅವರು ಕವನ, ಸಾಹಿತ್ಯ ವಿಮರ್ಶೆ, ಜೀವನಚರಿತ್ರೆ ಮುಂತಾಗಿ ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ಕೃಷಿ ನಡೆಸಿ ಉತ್ತಮ ಫಲವನ್ನು ಕೈಗೂಡಿಸಿ ಕೊಂಡಿದ್ದಾರೆ. 'ವಸಂತ ಕುಸುಮಾಂಜಲಿ', 'ನಿವೇದನ', 'ಅಂತಃಪುರಗೀತೆ' ಇವು ಅವರ ಕವಿತಾಶಕ್ತಿಗೆ ನಿದರ್ಶನಗಳಾಗಿವೆ. ವಿಶ್ವವಿಖ್ಯಾತ ಉಮರ್ ಖಯಾಮನ ರುಬಾಯತ್‌ನ ಭಾಷಾಂತರ 'ಉಮರನ ಒಸಗೆ'. 'ಮಂಕು ತಿಮ್ಮನ ಕಗ್ಗ' ಅವರ ಜೀವನದರ್ಶನ–ತತ್ತ್ವಗಳನ್ನು ಮಾರ್ಮಿಕವಾಗಿ ನಿರೂಪಿಸಿರುವ ಕಾವ್ಯ. ಈ ಸಂಕಲನದ ಒಂದೊಂದು ಪದ್ಯವೂ ಒಂದೊಂದು ಮುಕ್ತಕ:

"ಬದುಕು ಜಟಕಾಬಂಡಿ, ವಿಧಿಯದರ ಸಾಹೇಬ,
ಕುದುರೆ ನೀನ್, ಅವನು ಪೇಳ್ದಂತೆ ಪಯಣಿಗರು
ಮದುವೆಗೋ ಮಸಣಕೋ ಹೋಗೆಂದ ಕಡೆಗೋಡು
ಪದ ಕುಸಿಯೆ ನೆಲವಿಹುದು—ಮಂಕುತಿಮ್ಮ"

..............................

"ಹಳೆಯ ಭಕ್ತಿಶ್ರದ್ಧೆಯಳಿಸಿಹೋಗಿವೆ ಮಾಸಿ
ಸುಳಿದಿಲ್ಲವಾವ ಹೊಸದರ್ಶನದ ಹೊಳಪುಂ
ಪಳಗಿದ್ದ ಮನೆ ಬಿದ್ದು ಕುಂಟ ಕುರುಡನ ತೆರದಿ
ತಳಮಳಿಸುತಿದೆ ಲೋಕ—ಮಂಕುತಿಮ್ಮ"

—ಇವು [illegible] ಡಿ ವಿ ಜಿ ಯವರ ಅಪಾರ ಜ್ಞಾನಕ್ಕೆ ನಿದರ್ಶನ. [illegible] ಮತ್ತು [illegible]', 'ಕಾವ್ಯಶಕ್ತಿ' ಇವರ ಸಾಹಿತ್ಯ ವಿಮರ್ಶನ ಗ್ರಂಥಗಳು. 'ಗೋಪಾಲಕೃಷ್ಣ ಗೋಖಲೆ', 'ದಿವಾನ್ ರಂಗಾಚಾರ್ಲು' ಜೀವನಚರಿತ್ರೆಗಳು.

'ಶ್ರೀಮದ್ಭಗವದ್ಗೀತಾ ತಾತ್ಪರ್ಯ'–ಭಗವದ್ಗೀತೆಯ ಹಲವು ವರ್ಷಗಳ ವ್ಯಾಸಂಗ, ಚಿಂತನ–ಮಂಥನಗಳ ಫಲ. ತಾವು ಹೇಳುವ ವಿಷಯಗಳಿಗೆ ಹೊಂದಿಕೊಳ್ಳುವಂತೆ ಅವರು ಈ ಗ್ರಂಥದ ಅಧ್ಯಾಯಗಳಿಗೆ ಹೊಸ ಹೆಸರುಗಳನ್ನು ಇಟ್ಟಿದ್ದಾರೆ. 3ನೆಯ ಅಧ್ಯಾಯವಾದ 'ಕರ್ಮಯೋಗ'ಕ್ಕೆ ಇವರು ಕೊಟ್ಟಿರುವ ಹೊಸ ಹೆಸರು 'ಸ್ವಧರ್ಮಯೋಗ'. ಪ್ರಾಚೀನ ಮತ್ತು ಆಧುನಿಕ ವಿಚಾರಗಳನ್ನು ವಿಮರ್ಶಕ ದೃಷ್ಟಿಯಿಂದ ನೋಡಿ, ತಮ್ಮ ತಿಳಿವಳಿಕೆಯ ಬೆಳಕಿನಲ್ಲಿ ಈ ಗ್ರಂಥವನ್ನು ಬರೆದಿದ್ದಾರೆ.

ಸಾರ್ವಜನಿಕ ಚಟುವಟಿಕೆಗಳಲ್ಲಿ ಪೂರ್ಣ ಆಸಕ್ತಿಯಿಂದ ಕೆಲಸ ಮಾಡಿದವರು ಡಿ ವಿ ಜಿ. ಬೆಂಗಳೂರಿನಲ್ಲಿರುವ 'ಗೋಖಲೆ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಫೇರ್ಸ್' ಹುಟ್ಟಿ ಬೆಳೆದದ್ದು ಇವರ ನಿರಂತರ ಶ್ರಮದ ಫಲವಾಗಿ. 1945ರಿಂದ ಸಾರ್ವಜನಿಕ ಸೇವೆ ನಡೆಸುತ್ತಿರುವ ಸಂಸ್ಥೆ ಇದು. ಗೋಪಾಲಕೃಷ್ಣ ಗೋಖಲೆಯವರು ಪ್ರತಿಪಾದಿಸಿದ ಸಾರ್ವಜನಿಕ ಜೀವನ ಶುದ್ಧವಾಗಿರಬೇಕು, ಎನ್ನುವ ತತ್ತ್ವವನ್ನು ಜನತೆಯ ಗಮನಕ್ಕೆ ತರಲು, ಜನಜೀವನದಲ್ಲಿ ಅದನ್ನು ಕಾರ್ಯಗತಮಾಡಲು ಈ ಸಂಸ್ಥೆ ಶ್ರಮಿಸುತ್ತಿದೆ. ಡಿ ವಿ ಜಿ ಯವರು ಮೈಸೂರು ನ್ಯಾಯವಿಧಾಯಕ ಸಭೆ, ಮೈಸೂರು ರಾಜ್ಯಾಂಗ ಸುಧಾರಣಾ ಸಮಿತಿ, ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್, ಬೆಂಗಳೂರು ಪೌರಸಭೆ, ಮೈಸೂರು ಪತ್ರಕರ್ತರ ಸಂಘ, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟಿನ ಸಂಪಾದಕ ಮಂಡಳಿಗಳಲ್ಲಿ ಅತ್ಯಂತ ಶ್ರದ್ಧೆಯಿಂದ ಕೆಲಸಮಾಡಿ ಜನಮನ್ನಣೆಗೆ ಪಾತ್ರರಾಗಿದ್ದಾರೆ.

ಡಿ ವಿ ಜಿ ಅವರು 1907ರಲ್ಲಿ 'ಭಾರತಿ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಈ ದಿನಪತ್ರಿಕೆ ಸ್ವಲ್ಪ ಕಾಲಾನಂತರ ನಿಂತುಹೋಯಿತು. ಇಂಗ್ಲಿಷಿನಲ್ಲಿ 'ಕರ್ನಾಟಕ' ಎಂಬ ದ್ವಿಸಾಪ್ತಾಹಿಕ ಪತ್ರಿಕೆಯನ್ನು ಅವರು ಪ್ರಾರಂಭಿಸಿದರು. ಪತ್ರಿಕೆ ಮನ್ನಣೆ ಗಳಿಸಿತು. ಆದರೆ ಅದರ ಆರ್ಥಿಕ ಸ್ಥಿತಿ ಉತ್ತಮಗೊಳ್ಳದಿದ್ದುದರಿಂದ 1926ರಲ್ಲಿ ಅದನ್ನು ನಿಲ್ಲಿಸಿಬಿಡಬೇಕಾಯಿತು. 1916ರಲ್ಲಿ ಪ್ರಕಟಿಸಲಾರಂಭಿಸಿದ 'ಕರ್ನಾಟಕ ಜೀವನ ಹಾಗೂ ಅರ್ಥಸಾಧಕ ಪತ್ರಿಕೆ' ಯನ್ನೂ ಮುಂದೆ ಆರ್ಥಿಕ ಮುಗ್ಗಟ್ಟಿನಿಂದಾಗಿ ನಿಲ್ಲಿಸಬೇಕಾಯಿತು. ಕನ್ನಡ ನಾಡಿನ ಪತ್ರಿಕೋದ್ಯಮ ರಂಗದಲ್ಲಿ ಡಿ ವಿ ಜಿ ಯವರ ಸಾಧನೆ, ಸ್ಥಾನಗಳೆರಡೂ ದೊಡ್ಡವು. 1928ರಲ್ಲಿ ಬಾಗಲಕೋಟೆಯಲ್ಲಿ ನಡೆದ ಕರ್ನಾಟಕ ಪತ್ರಕರ್ತರ ಸಮ್ಮೇಳನ, 1960ರಲ್ಲಿ ಬೆಂಗಳೂರಿನಲ್ಲಿ ನಡೆದ ಮೈಸೂರು ಪತ್ರಕರ್ತರ ಸಮ್ಮೇಳನಗಳಿಗೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಕನ್ನಡ ನಾಡಿನ ಪ್ರತಿಕೋದ್ಯಮಿಗಳು ಡಿ ವಿ ಜಿ ಯವರಿಗೆ ತಮ್ಮ ಗೌರವವನ್ನು ಸಲ್ಲಿಸಿದ್ದಾರೆ.

ಗುಂಡಪ್ಪನವರ ಪೂರ್ವಜರು ತಮಿಳುನಾಡಿನಲ್ಲಿ ನೆಲೆಸಿದ್ದವರು. ಇವರ ಹಿರಿಯರೊಬ್ಬರು ಕೋಲಾರ ಜಿಲ್ಲೆಯ ಒಂದು ಹಳ್ಳಿಗೆ ವಲಸೆ ಬಂದರು; ಅಲ್ಲಿ ಸ್ಥಿತಿವಂತರಾಗಿ ಬಾಳುತ್ತಿದ್ದರು. ಮನೆಯಲ್ಲಿದ್ದ ಐಶ್ವರ್ಯವನ್ನೆಲ್ಲ ಕಳ್ಳರು ದೋಚಿಕೊಂಡು ಹೋದರು; ನೀರು ಫಲವತ್ತಾದ ಜಮೀನಿಗೆ ನುಗ್ಗಿ ಅದನ್ನು ಹಾಳುಗೆಡವಿತು. ಇದರಿಂದಾಗಿ ಮನೆತನ ಕಷ್ಟಸ್ಥಿತಿಗೆ ಸಿಕ್ಕಿತು. ಯುವಕರಾಗಿದ್ದ ಗುಂಡಪ್ಪನವರ ಮೇಲೆ ಮನೆತನ ನಡೆಸುವ ಭಾರ ಬಿದ್ದಿತು. ಅದರಿಂದಾಗಿ ಅವರು ಯಾವ್ಯಾವುದೋ ವೃತ್ತಿಯನ್ನು ಅವಲಂಬಿಸಬೇಕಾಯಿತು. ಸ್ವತಂತ್ರ ಪ್ರವೃತ್ತಿಯ ಡಿ ವಿ ಜಿ ತಾವೇ ಏನಾದರೊಂದು ಉದ್ಯಮವನ್ನು ಕೈಗೊಳ್ಳಬೇಕೆಂದು ನಿರ್ಧರಿಸಿದರು. ಸ್ವಪ್ರಯತ್ನದಿಂದ ಹೇಗೆ ಗಣ್ಯತೆಯನ್ನೂ ಗೌರವವನ್ನೂ ಗಳಿಸಬಹುದೆಂಬುದನ್ನು ತೋರಿಸಿಕೊಟ್ಟರು.

ಲಲಿತಕಲೆಗಳಲ್ಲಿ ಡಿ ವಿ ಜಿ ಯವರ ಆಸಕ್ತಿ ಹಿರಿದಾದದ್ದು. ಸಂಗೀತ, ನಾಟ್ಯಾದಿಗಳಲ್ಲಿ ಅವರ ತಿಳಿವಳಿಕೆ ಅಪಾರ. ಗುಂಡಪ್ಪನವರು ಉತ್ತಮ ವಾಗ್ಮಿ ಕೂಡ.

ಡಿ ವಿ ಜಿ ಯವರು ವಿಶ್ವಭ್ರಾತೃತ್ವದಲ್ಲಿ ನಂಬುಗೆಯುಳ್ಳವರು. "ಉತ್ತಮ ಜೀವನವೇ ನಾವು ದೇವರಿಗೆ ಸಲ್ಲಿಸಬಹುದಾದ ಉತ್ಕೃಷ್ಟ ಪೂಜೆ ಎಂಬುದು ನನ್ನ ನಂಬಿಕೆ" ಎಂದಿದ್ದಾರೆ.

"ಗೌರವಿಸು ಜೀವನವ, ಗೌರವಿಸು ಚೇತನವ
ಆರದೋ ಜಗವೆಂದು ಭೇದವೆಣಿಸದಿರು
ಹೋರುವುದೆ ಜೀವನ ಸಮೃದ್ಧಿಗೋಸುಗ ನಿನಗೆ
ದಾರಿಯಾತ್ಮೋನ್ನತಿಗೆ—ಮಂಕುತಿಮ್ಮ"

ಮಂಕುತಿಮ್ಮನ ಬಾಯಿಯಲ್ಲಿ ಹೇಳಿಸಿದ ಜೀವನಧ್ಯೇಯವನ್ನು ಅನುಸರಿಸಿ ನಡೆಯುತ್ತಿರುವ ಹಿರಿಯಜೀವ ಡಿ ವಿ ಜಿ.

## ಡೀಡಿರೊ

ಡೆನಿಸ್ ಡೀಡಿರೋನ 35 ಸಂಪುಟಗಳ ಫ್ರೆಂಚ್ ವಿಶ್ವಕೋಶ, ವಿಶ್ವಕೋಶಗಳ ಚರಿತ್ರೆಯಲ್ಲೇ ಅದ್ವಿತೀಯ ಸ್ಥಾನ ಪಡೆದಿದೆ. ಅದೊಂದು ಅಪೂರ್ವ ಜ್ಞಾನಭಂಡಾರವಾಗಿದ್ದುದು ಮಾತ್ರವಲ್ಲದೆ ಫ್ರೆಂಚ್ ಜನಾಭಿಪ್ರಾಯವನ್ನು ರೂಪಿಸುವ ಶ್ರೇಷ್ಠ ಸಾಧನವಾಯಿತು. ಧರ್ಮಪೀಠದ ಧೋರಣೆ, ಸರಕಾರದ ಅಧಿಕಾರ ಇತ್ಯಾದಿಗಳಿಗೆ ಇದು ಸವಾಲಾಗಿದ್ದಿತು. ಈ ವಿಶ್ವಕೋಶದ ಕೆಲಸ ಅರ್ಧಕ್ಕೆ ಬಂದಿದ್ದಾಗಲೇ ಸರಕಾರದ ವಕ್ರದೃಷ್ಟಿ ಅದರ ಮೇಲೆ ಬಿತ್ತು. ಕಾರಾಗೃಹ ಸೇರಬೇಕಾಗಬಹುದೆಂಬ ಭಯದಿಂದ ಡೀಡಿರೋನ ಸಹಾಯಕರು ಒಬ್ಬೊಬ್ಬರಾಗಿ ಅವನಿಂದ ದೂರವಾದರು. ಡೀಡಿರೋ ಹೆಚ್ಚು ಕಡಮೆ ಒಬ್ಬಂಟಿಗನಾಗಿ ಇಪ್ಪತ್ತು ವರ್ಷಗಳ ಪರಿಶ್ರಮದ ಬಳಿಕ ಎಲ್ಲ ಸಂಪುಟಗಳನ್ನು ಹೊರತಂದಾಗ ಜಗತ್ತಿನ ವಿದ್ಯಾವಂತವರ್ಗ ಡೀಡಿರೋವನ್ನು ಕುರಿತು ಗೌರವದಿಂದ ಮಾತನಾಡಿತು.



ವಿಶ್ವಕೋಶ : ಡೀಡಿರೋ

ಡೆನಿಸ್ ಡೀಡಿರೋ ಫ್ರಾನ್ಸಿನ ಲ್ಯಾಂಗ್ರೆಸ್ ಎಂಬಲ್ಲಿ 1713ರ ಅಕ್ಟೋಬರ್ 5ರಂದು ಹುಟ್ಟಿದ. ಅವನ ಶಿಕ್ಷಣವೆಲ್ಲ ಕ್ರೈಸ್ತಶಾಲೆಯೊಂದರಲ್ಲಿ ನಡೆಯಿತು. 1732ರಲ್ಲಿ ಎಂ. ಎ. ಪದವಿ ಗಳಿಸಿದ. ಬಳಿಕ ಸ್ವಲ್ಪ ಕಾಲ ವೈದ್ಯ ಶಿಕ್ಷಣ ಪಡೆದ. ಮತ್ತೆ ಸ್ವಲ್ಪಕಾಲ ನ್ಯಾಯಶಾಸ್ತ್ರದ ಅಧ್ಯಯನದಲ್ಲಿ ಕಳೆದ. ಇದೊಂದೂ ಸರಿಬರದೆ ಕೊನೆಗೆ ಬರೆವಣಿಗೆಗೆ ಇಳಿದ. ಕಾದಂಬರಿ, ನಾಟಕ, ಪ್ರಬಂಧ, ತಾತ್ತ್ವಿಕ ವಿಚಾರ ಎಲ್ಲದರಲ್ಲೂ ಕೈಯಾಡಿಸಿದ. ತುರ್ತಾಗಿ ದುಡ್ಡು ಬೇಕಾದಾಗ ಇಂಗ್ಲಿಷ್ ಕಥೆಗಳನ್ನು ಭಾಷಾಂತರಿಸಿ ಪತ್ರಿಕೆಗಳಿಗೆ ಕಳುಹಿಸಿದ. ತತ್ತ್ವಜ್ಞಾನ, ಗಣಿತ, ಸಾಹಿತ್ಯ, ವಿಜ್ಞಾನಗಳ ಅಧ್ಯಯನಕ್ಕೂ ಸಾಕಷ್ಟು ಸಮಯವನ್ನು ವಿನಿಯೋಗಿಸಿದ.

ಧಾರ್ಮಿಕ ವಾತಾವರಣದಲ್ಲಿ ಶಿಕ್ಷಣ ಪಡೆದಿದ್ದರೂ ಬರಬರುತ್ತ ಡೀಡಿರೋ ನಾಸ್ತಿಕನಾದ. ಈ ಬದಲಾವಣೆ ಅವನ ಬರೆವಣಿಗೆಯಲ್ಲೂ ಕಂಡುಬರಲಾರಂಭಿಸಿತು. ಅವನ ಲೇಖನಗಳು ವೈಜ್ಞಾನಿಕ ದೃಷ್ಟಿಯಿಂದ ಕೂಡಿರುತ್ತಿದ್ದುವು. ಜೀವವಿಕಾಸವನ್ನು ಕುರಿತು ಆತ ಬರೆದ ಒಂದು ಲೇಖನದಲ್ಲಿ ಹೆಚ್ಚು ಕಡಮೆ ನೂರು ವರ್ಷಗಳ ಅನಂತರ ಪ್ರತಿಪಾದಿಸಲ್ಪಟ್ಟ ಡಾರ್ವಿನನ 'ಪ್ರಕೃತಿ ಆಯ್ಕೆ'ಯ ವಾದದ ಸುಳುಹು ಇತ್ತೆಂಬುದು ಗಮನಾರ್ಹ. 1749ರಲ್ಲಿ ಅದು ಪ್ರಕಟವಾದಾಗ ಡೀಡಿರೋ ಮೂರು ತಿಂಗಳ ಕಾಲ ಕಾರಾಗೃಹವಾಸ ಅನುಭವಿಸಬೇಕಾಯಿತು.

ಸೆರೆಮನೆಯಿಂದ ಹೊರಬಂದ ಡೀಡಿರೋಗೆ ಹೊಸ ಅವಕಾಶವೊಂದು ಒದಗಿಬಂತು. ಪುಸ್ತಕ ಪ್ರಕಾಶಕನೊಬ್ಬ ಡೀಡಿರೋನನ್ನು ಸಂಧಿಸಿ ಇಂಗ್ಲಿಷ್ ವಿಶ್ವಕೋಶದ ಫ್ರೆಂಚ್ ರೂಪಾಂತರವನ್ನು ತಯಾರಿಸುವ ಹಂಚಿಕೆಯನ್ನು ಮುಂದಿಟ್ಟ. ಭಾಷಾಂತರ ಮಾಡುವುದರ ಬದಲು ಹೊಸ ವಿಶ್ವಕೋಶವನ್ನೇ ಸಿದ್ಧಗೊಳಿಸಬೇಕೆಂದು ಡೀಡಿರೋ ಸೂಚಿಸಿದ. ಫ್ರಾನ್ಸಿನ ಶ್ರೇಷ್ಠ ವಿದ್ವಾಂಸರಿಂದ ಲೇಖನಗಳನ್ನು ಆಹ್ವಾನಿಸಬೇಕೆಂದು ನಿರ್ಧಾರವಾಯಿತು. ಪ್ರಸಿದ್ಧ ಗಣಿತಜ್ಞ ಆಲೆಂಬರ್ ನೆರವು ನೀಡಲು ಮುಂದೆ ಬಂದ. ವಾಲ್ಟೇರ್, ರೂಸೋ ಮುಂತಾದವರು ಲೇಖನಗಳನ್ನು ಕಳುಹಿಸಿದರು. ಸಾವಿರಾರು ಲೇಖಕರು ಬರೆದದ್ದನ್ನು ಪರಿಷ್ಕರಿಸಿದ್ದು ಮಾತ್ರವಲ್ಲದೆ ಡೀಡಿರೋ ಸ್ವತಃ 1000 ಲೇಖನಗಳನ್ನು –ಮುಖ್ಯವಾಗಿ ಕಲೆ ಮತ್ತು ಉದ್ಯಮಗಳಿಗೆ ಸಂಬಂಧಿಸಿದ್ದನ್ನು– ಬರೆದ. ಈ ವಿಶ್ವಕೋಶದಿಂದ 'ವೈಚಾರಿಕ ಯುಗ'ದ ವೈಜ್ಞಾನಿಕ ವಿಚಾರಗಳನ್ನು ಸಾಮಾನ್ಯ ಜನತೆಯೂ ತಿಳಿದುಕೊಳ್ಳುವುದು ಸಾಧ್ಯವಾಯಿತು. ಆದರೆ ದೊರೆಯ ವಿರೋಧ ಕಟ್ಟಿಕೊಳ್ಳಲು ಇಷ್ಟವಿಲ್ಲದ ಪ್ರಕಾಶಕರು ಮೂಲಲೇಖನಗಳಲ್ಲಿನ ಕೆಲವು ಅಂಶಗಳನ್ನು ಕತ್ತರಿಸಿಹಾಕಿ ಉಳಿದುದನ್ನು ಪ್ರಕಟಿಸಿದರು. 1772ರ ಹೊತ್ತಿಗೆ ಎಲ್ಲ ಸಂಪುಟಗಳೂ ಹೊರಬಂದುವು.

ವಿಶ್ವಕೋಶದ ಪ್ರಕಟಣೆ ಡೀಡಿರೋನಿಗೆ ಕೀರ್ತಿಯನ್ನೇನೋ ತಂದಿತು. ಆದರೆ ಆ ಹೊತ್ತಿಗೆ ಅವನಲ್ಲಿ ಪುಡಿಕಾಸೂ ಉಳಿದಿರಲಿಲ್ಲ. ಡೀಡಿರೋ ತನ್ನ ಅಮೂಲ್ಯ ಗ್ರಂಥಭಂಡಾರವನ್ನು ಮಾರಾಟಕ್ಕಿಟ್ಟ. ಆಗ ರಷ್ಯದ ಸಮ್ರಾಜ್ಞಿ ಎರಡನೆಯ ಕ್ಯಾಥರಿನ್ (1729–96) ಅವನ ಸಹಾಯಕ್ಕೆ ಬಂದಳು. ದೊಡ್ಡ ಮೊತ್ತಕ್ಕೆ ಆ ಗ್ರಂಥಭಂಡಾರವನ್ನು ಕೊಂಡುಕೊಂಡಳು. ಪ್ಯಾರಿಸಿನಲ್ಲಿ ಇದ್ದ ಈ ಗ್ರಂಥಭಂಡಾರವನ್ನು ನೋಡಿಕೊಳ್ಳಲು ಡೀಡಿರೋನನ್ನೇ ನೇಮಿಸಿದಳು: ಅದಕ್ಕಾಗಿ ಅವನಿಗೆ ವೇತನವನ್ನೂ ಗೊತ್ತುಮಾಡಿದಳು.

ಡೀಡಿರೋನ ವಿಶ್ವಕೋಶದಿಂದಾಗಿ ಫ್ರಾನ್ಸಿನ ಸುಶಿಕ್ಷಿತ ಸಮಾಜದ ದೃಷ್ಟಿಕೋನ ವಿಶಾಲವಾಯಿತು. ಅಂಧವಿಶ್ವಾಸ, ನಿರಂಕುಶಪ್ರಭುತ್ವಗಳ ವಿರುದ್ಧ ಜನತೆ ದಂಗೆ ಏಳಲು ಅದು ಪ್ರಚೋದನೆ ನೀಡಿತು. ಫ್ರಾನ್ಸಿನ ಮಹಾಕ್ರಾಂತಿಗೆ ನಾಂದಿ ಹಾಡಿತು. —1784ರ ಜುಲೈ 31ರಂದು— ಡೀಡಿರೋ ಪ್ಯಾರಿಸಿನಲ್ಲಿ ನಿಧನನಾದ.

## ಡೂಮಾ

"ನಡುರಾತ್ರಿಯ ನಿಶ್ಯಬ್ದ ವಾತಾವರಣದಲ್ಲಿ ಡೂಮಾನ ಪುಸ್ತಕ ಓದಲು ಕುಳಿತರೆ ದೂರದಲ್ಲಿ ಕುದುರೆಗಳ ಖುರಪುಟ ಧ್ವನಿ, ಖಡ್ಗಗಳ ಝಣತ್ಕಾರ ಕೇಳಿಸತೊಡಗುತ್ತವೆ."

ಪ್ರಸಿದ್ಧ ಇಂಗ್ಲಿಷ್ ಲೇಖಕ ಆರ್. ಎಲ್. ಸ್ಟೀವನ್‌ಸನನ ಈ ಮಾತುಗಳಲ್ಲಿ ಉತ್ಪ್ರೇಕ್ಷೆ ಇಲ್ಲ. ಅಲೆಗ್ಸಾಂಡರ್ ಡೂಮಾ ಬರೆದ ಶೌರ್ಯ–ಸಾಹಸದ ಕಥೆಗಳು 19ನೆಯ ಶತಮಾನದ ಜನರಿಗೆ ಎಷ್ಟು ಪ್ರಿಯವಾಗಿದ್ದುವೋ 20ನೆಯ ಶತಮಾನದ ಓದುಗರಿಗೂ ಅಷ್ಟೇ ಪ್ರಿಯವಾಗಿವೆ.

ನಿಜಜೀವನದಲ್ಲಿ ಕೂಡ ಡೂಮಾನ ವ್ಯಕ್ತಿತ್ವ ಅಷ್ಟೇ ವರ್ಣಮಯ. ಅವನ ಪುಸ್ತಕಗಳು ಸಹಸ್ರ ಸಂಖ್ಯೆಯಲ್ಲಿ ಮಾರಾಟವಾಗಿ ಅವನಿಗೆ ಅಪಾರ ಹಣವನ್ನು ತಂದುವು. ಆದರೆ ಇವನು ತನ್ನ ಆದಾಯಕ್ಕಿಂತ ಹೆಚ್ಚಾಗಿ ಖರ್ಚು ಮಾಡುತ್ತಿದ್ದ. ಅರಮನೆಯಂಥ ಬಂಗಲೆ ಕಟ್ಟಿಸಿಕೊಂಡ. ದಿನದ ಉಷ್ಣತೆ ಎಷ್ಟು ಎಂದು ಉಷ್ಣತಾಮಾಪಕ ನೋಡಿ ಹೇಳಲು ಒಬ್ಬನನ್ನು ಡೂಮಾ ನೇಮಿಸಿದ. ಇಂಥ ಶ್ರೀಮಂತನಿಗೆ ನಂಟರು, ಗೆಳೆಯರು ಕಡಮೆಯೆ ?



1200 ಗ್ರಂಥಗಳ ಕರ್ತೃ ! : ಡೂಮಾ

ಡೂಮಾ ಪ್ಯಾರಿಸಿನ ಹತ್ತಿರದ ಚಿಕ್ಕ ಊರು ವಿಲರ್ಸ್ ಕಾಟರೆಟ್ಸ್ ಎಂಬಲ್ಲಿ 1802ರ ಜೂಲೈ 24ರಂದು ಹುಟ್ಟಿದ. ಅವನ ದಪ್ಪ ತುಟಿಗಳು, ಗುಂಗುರು ಕೂದಲುಗಳು ಅವನ ನೀಗ್ರೊ ಅಜ್ಜಿಯಿಂದ ಆನುವಂಶಿಕವಾಗಿ ಬಂದದ್ದು. ಡೂಮಾ ಇನ್ನೂ ನಾಲ್ಕು ವರ್ಷದವನಾಗಿದ್ದಾಗಲೇ ಫ್ರೆಂಚ್ ಸೈನ್ಯದಲ್ಲಿ ಅಧಿಕಾರಿಯಾಗಿದ್ದ ಆತನ ತಂದೆ ತೀರಿಕೊಂಡ. ಬಾಲಕನಿಗೆ ಎರಡು ಹೊತ್ತು ಹೊಟ್ಟೆ ತುಂಬ ಊಟ ಸಿಗುವುದು ಕಷ್ಟವಾಗಿತ್ತು. ಅಂದ ಮೇಲೆ ವಿದ್ಯಾಭ್ಯಾಸ ಎಲ್ಲಿಯದು ? ವಕೀಲನೊಬ್ಬನ ಕಚೇರಿಯಲ್ಲಿ ಇವನು ಗುಮಾಸ್ತನಾಗಿ ಸೇರಿದ. ಹದಿನಾರರ ಹುಡುಗನಿಗೆ ತನ್ನ ಊರು ಬಿಟ್ಟು ಪ್ಯಾರಿಸಿಗೆ ಹೋಗುವ ಹಂಬಲವಾಯಿತು. ಅವನೊಡನೆ ಇದ್ದ ಆಸ್ತಿ ಒಂದೇ –ಒಳ್ಳೆಯ ಕೈಬರಹ. ಇದರಿಂದಾಗಿ ಪ್ಯಾರಿಸಿನಲ್ಲಿ ಅವನಿಗೆ ಕೆಲಸ ಸಿಗಲು ಕಷ್ಟವಾಗಲಿಲ್ಲ.

ಪ್ಯಾರಿಸ್‌ನಲ್ಲಿ ಕಚೇರಿ ಉದ್ಯೋಗಿಗೆ ಕೊಡುವ ಸಂಬಳ. ಡೂಮಾನಿಗೆ ನಾಟಕಗಳನ್ನು ನೋಡುವುದರಲ್ಲಿ ಬಹಳ ಆಸಕ್ತಿ. ಒಂದು ದಿನ, ತಾನೂ ನಾಟಕ ಬರೆಯಲು ಏಕೆ ಪ್ರಯತ್ನಿಸಬಾರದು ಎಂದುಕೊಂಡ. ಬರೆದೂ ಬಿಟ್ಟ. 1829ರಲ್ಲಿ ಅವನ 'ಮೂರನೆಯ ಹೆನ್ರಿ' ನಾಟಕ ಪ್ಯಾರಿಸ್‌ನಲ್ಲಿ ಪ್ರದರ್ಶಿತವಾಯಿತು. ಆ ಬಳಿಕ ಇನ್ನೂ ಕೆಲವು ನಾಟಕಗಳನ್ನು ಬರೆದ.

ಸಾಮಾನ್ಯ ನಾಟಕಕಾರನಾಗಿದ್ದ ಡೂಮಾ ಜಗತ್ತಿನ ಅತ್ಯಂತ ಪ್ರಮುಖ ಕಾದಂಬರಿಕಾರರಲ್ಲಿ ಒಬ್ಬನೆನಿಸಿದ್ದು ಒಂದು ಆಕಸ್ಮಿಕವೇ. ಒಂದು ದಿನ ಡೂಮಾ ಅಗಸ್ಟ್ ಮ್ಯಾಕೆಟ್ ಎಂಬೊಬ್ಬ ಚರಿತ್ರೆಯ ಪ್ರಾಧ್ಯಾಪಕನನ್ನು ಭೇಟಿಯಾದ. 'ಫ್ರೆಂಚ್ ಚರಿತ್ರೆ ಜನಸಾಮಾನ್ಯರಿಗೆ ಸಾಕಷ್ಟು ತಿಳಿದಿಲ್ಲ; ಇದನ್ನು ಜನಪ್ರಿಯಗೊಳಿಸಲು ಏನಾದರೊಂದು ಕ್ರಮ ಕೈಗೊಳ್ಳಬೇಕು ಎಂದು ಅವರಿಬ್ಬರೂ ನಿರ್ಧರಿಸಿದರು. ಚರಿತ್ರೆಯ ವಿಶೇಷ ಘಟನೆಗಳನ್ನು ಮ್ಯಾಕೆಟ್ ಹುಡುಕಿ ತೆಗೆಯಬೇಕೆಂದೂ ಈ ಘಟನೆಗಳ ಸುತ್ತ ಡೂಮಾ ಕಥೆ ಹೆಣೆಯಬೇಕೆಂದೂ ನಿರ್ಧಾರವಾಯಿತು. ಡೂಮಾನ ಲೇಖನಿಯಿಂದ ಒಂದಕ್ಕಿಂತ ಒಂದು ಹೆಚ್ಚು ಆಕರ್ಷಕವಾದ ಕಾದಂಬರಿಗಳು ಹೊರಬರಲಾರಂಭಿಸಿದುವು.

ಡೂಮಾನ ಮೊದಲ ಕಾದಂಬರಿ 'ಮೂವರು ಬಂದೂಕು ಸಿಪಾಯಿಗಳು' ಅವನ ಕೃತಿಗಳಲ್ಲೆಲ್ಲ ಅತ್ಯಂತ ಜನಪ್ರಿಯವಾದದ್ದು. ಮೂವರು ಬಂದೂಕು ಸಿಪಾಯಿಗಳೂ ಅವರ ಮತ್ತೊಬ್ಬ ಶೂರ ಸ್ನೇಹಿತನೂ ಸಾಹಸ ಕೃತ್ಯಗಳನ್ನು ಹುಡುಕಿಕೊಂಡು ಹೊರಡುತ್ತಾರೆ. ಒಂದಾದ ಮೇಲೆ ಒಂದು ಸಾಹಸಕೃತ್ಯಗಳನ್ನು ಎಸಗುತ್ತಾರೆ. ಅವರ ಕಥೆ, ಸುಮಾರು ಐವತ್ತು ವರ್ಷಗಳ ಅವಧಿಯ ಫ್ರಾನ್ಸಿನ ಚರಿತ್ರೆಯೊಡನೆ ಹೆಣೆದುಕೊಂಡು ಸಾಗುತ್ತದೆ.

'ಇಪ್ಪತ್ತು ವರ್ಷಗಳ ಬಳಿಕ' ಮತ್ತು 'ಕಬ್ಬಿಣದ ಮುಖವಾಡದ ಮನುಷ್ಯ' ಎಂಬ ಕಾದಂಬರಿಗಳು 'ಮೂವರು ಬಂದೂಕು ಸಿಪಾಯಿಗಳ' ಮುಂದಿನ ಭಾಗಗಳು. 'ಮಾಂಟೆಕ್ರಿಸ್ಟೋದ ಕೌಂಟ್' ಎಂಬುದೂ ಉಳಿದವುಗಳಷ್ಟೇ ಪ್ರಸಿದ್ಧವಾದ ಕೃತಿ. ಕಾರಣವಿಲ್ಲದೆ ಸೆರೆಮನೆಗೆ ತಳ್ಳಲ್ಪಟ್ಟ ಈ ಸರದಾರ ಸೆರೆಯಿಂದ ತಪ್ಪಿಸಿಕೊಂಡು ತನ್ನ ವೈರಿಗಳ ಮೇಲಿನ ಸೇಡು ತೀರಿಸಿಕೊಳ್ಳಲು ಹೊರಡುತ್ತಾನೆ. ಅವನು ಈ ವೈರಿಗಳನ್ನು ಪತ್ತೆಹಚ್ಚಿ ಕೊಲ್ಲುವುದರೊಡನೆ ಕಥೆ ಮುಕ್ತಾಯವಾಗುತ್ತದೆ.

ಕಾದಂಬರಿಕಾರನೆಂದು ಡೂಮಾ ಪ್ರಖ್ಯಾತನಾದ ಮೇಲೆ ಪುಸ್ತಕ ಪ್ರಕಾಶಕರು ತಮಗೆ ಹೊಸ ಹೊಸ ಕಾದಂಬರಿಗಳನ್ನು ಬರೆದುಕೊಡುವಂತೆ ಅವನನ್ನು ಒತ್ತಾಯಪಡಿಸತೊಡಗಿದರು. ತಾನೇ ಈ ಎಲ್ಲ ಬೇಡಿಕೆಗಳನ್ನೂ ಪೂರೈಸುವುದು ಕಷ್ಟವಾದಾಗ ಡೂಮಾ, ಇತರ ಲೇಖಕರನ್ನು ಸಹಾಯಕ್ಕೆ ನೇಮಿಸಿಕೊಂಡ. ಚಾರಿತ್ರಿಕ ವಿವರಗಳನ್ನು ಕಲೆಹಾಕಿ ಡೂಮಾನ ನಿರ್ದೇಶನದಲ್ಲಿ ಅವರು ಬರೆಯುತ್ತಿದ್ದರು. ಡೂಮಾ ಹಸ್ತಪ್ರತಿಯನ್ನು ಪರಿಷ್ಕರಿಸಿ ಪ್ರಕಾಶಕರಿಗೆ ಕಳುಹಿಸಿಕೊಡುತ್ತಿದ್ದ. ಡೂಮಾನೇ ಹೇಳಿಕೊಂಡಿರುವಂತೆ ಆತನ ಕೃತಿಗಳ ಸಂಖ್ಯೆ 1200.

ಬೇರೆಯವರು ಬರೆದುದಕ್ಕೆ ಡೂಮಾ ತನ್ನ ಅಂಕಿತ ಹಾಕುತ್ತಿದ್ದ ಎಂಬುದರ ಬಗೆಗೆ ಸ್ವಾರಸ್ಯವಾದ ಒಂದು ಹೇಳಿಕೆ ಇದೆ. ಒಮ್ಮೆ ತನ್ನ ಮಗನನ್ನು ಡೂಮಾ ಕೇಳಿದನಂತೆ: "ನನ್ನ ಹೊಸ ಕಾದಂಬರಿ ಓದಿದೀಯಾ?" ಎಂದು. ಅದಕ್ಕೆ ಅವನ ಮಗ, "ಇಲ್ಲ, ನೀನು ಓದಿದೀಯಾ?" ಎಂದು ಮರುಪ್ರಶ್ನೆ ಹಾಕಿದನಂತೆ!

ಡೂಮಾ ತನ್ನ ನಾಟಕಗಳನ್ನು ಪ್ರದರ್ಶಿಸಲೆಂದು ನಾಟಕ ಗೃಹಗಳನ್ನು ಕಟ್ಟಿಸಿದ. ಆದರೆ ಅವನ ರಾಜಕೀಯ ಅಭಿಪ್ರಾಯಗಳಿಂದಾಗಿ ಅವನು ಫ್ರಾನ್ಸಿನಲ್ಲಿ ಇರುವುದೇ ಕಷ್ಟವಾಯಿತು. 1858ರಿಂದ 1864ರ ವರೆಗಿನ ಕಾಲವನ್ನು ವಿದೇಶಯಾತ್ರೆಯಲ್ಲಿ ಕಳೆದ. ಪುನಃ ಪ್ಯಾರಿಸಿಗೆ ಮರಳಿದ ಹೊತ್ತಿಗೆ ಅವನ ಹಣವೆಲ್ಲ ಕರಗಿತ್ತು. 1870ರ ಡಿಸೆಂಬರ್ 5ರಂದು ಅವನು ಮೃತನಾದಾಗ, ಪುಡಿಕಾಸೂ ಉಳಿದಿರಲಿಲ್ಲ.

ಡೂಮಾ ಸತ್ತರೂ ಅವನ ಸಾಹಿತ್ಯ ಅಳಿಯಲಿಲ್ಲ. ಅವನ ಪುಸ್ತಕಗಳಿಗೆ ಬೇಡಿಕೆ ಕಡಮೆಯಾಗಲಿಲ್ಲ. 20ನೆಯ ಶತಮಾನದಲ್ಲಿ ಅವನ ಅನೇಕ ಕೃತಿಗಳು ಚಲಚ್ಚಿತ್ರ ರೂಪದಲ್ಲಿ ಬಂದುವು. 'ಮೂವರು ಬಂದೂಕು ಸಿಪಾಯಿಗಳು' ಕಥೆಯನ್ನಂತೂ ನಾಲ್ವರು ಬೇರೆ ಬೇರೆ ನಿರ್ಮಾಪಕರು ಚಿತ್ರೀಕರಿಸಿದ್ದಾರೆ.

ಡೂಮಾನ ವಿವಾಹಬಾಹಿರ ಸಂಬಂಧದಿಂದ ಒಬ್ಬ ಮಗ ಹುಟ್ಟಿದ. ಅವನ ಹೆಸರೂ ಅಲೆಗ್ಸಾಂಡರ್ ಡೂಮಾ (1824–95). ನಾಟಕಕಾರನಾಗಿ ಆತ ಪ್ರಖ್ಯಾತನಾದ. ಆರಂಭ ಕಾಲದಲ್ಲಿ ಕವನಗಳನ್ನೂ ಬರೆದ. ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಗಳು ಇವನ ನಾಟಕಗಳ ವಸ್ತುಗಳು. 1848ರಲ್ಲಿ ಬರೆದ 'ಕ್ಯಾಮೆಲಿಯದ ಹೆಂಗಸು' ಕಾದಂಬರಿಯನ್ನು ನಾಟಕವಾಗಿ ಇವನೇ ರೂಪಾಂತರಿಸಿದ. 1852ರಲ್ಲಿ ಪ್ರದರ್ಶಿತವಾದ ಈ ನಾಟಕದಲ್ಲಿ ಪ್ರಮುಖ ಪಾತ್ರ ವಹಿಸಿದವಳು ಪ್ರಸಿದ್ಧ ನಟಿ ಸಾರಾ ಬರ್ನ್ಹಾರ್ಟ್. "ಅದು ನನ್ನ ಅತ್ಯಂತ ಮೆಚ್ಚಿನ ಪಾತ್ರ" ಎಂದು ಅವಳು ಹೇಳುತ್ತಿದ್ದಳು.

## ಡ್ಯೂರೆರ್

ಇನ್ನೂರು ಡಾಲರ್ ಕೊಟ್ಟು ಕೊಂಡುಕೊಂಡಿದ್ದ ಎರಡು ಚಿಕ್ಕ ವ್ಯಕ್ತಿ ಚಿತ್ರಗಳನ್ನು ನ್ಯೂಯಾರ್ಕಿನ ಮನೆಯೊಂದರ ಗೋಡೆಯ ಮೇಲೆ ನೇತು ಹಾಕಿದ್ದರು. ತಜ್ಞರು ಅವನ್ನು ಪರೀಕ್ಷಿಸಿ ಅವು ಆಲ್‌ಬ್ರೆಕ್ಟ್ ಡ್ಯೂರೆರನ



ಕೆತ್ತನೆಯ ಪರಿಪೂರ್ಣತೆ : ಡ್ಯೂರೆರ್

ಚಿತ್ರಗಳು ಎಂದು ಕಂಡುಹಿಡಿದರು. ಕೂಡಲೇ ಇವುಗಳ ಬೆಲೆ 400,000 ಡಾಲರುಗಳಿಗೆ ಏರಿತು!

ಡ್ಯೂರೆರನೇ ಹೇಳಿಕೊಂಡಂತೆ ಅವನು ಸೃಷ್ಟಿಸಿದ ಚಿತ್ರಗಳ ಸಂಖ್ಯೆ ಸುಮಾರು 1250. ವ್ಯಕ್ತಿಚಿತ್ರ, ಪ್ರಕೃತಿ ಚಿತ್ರಗಳನ್ನು ಜಲವರ್ಣದಲ್ಲಿ ರಚಿಸುವುದಕ್ಕೆ ಇವನು ಹೆಸರಾಗಿದ್ದರೂ ಮರದ ಕೆತ್ತನೆ ಮತ್ತು ತಾಮ್ರ ಫಲಕದ ಕೊರೆತದ ಕೆಲಸಗಳಲ್ಲಿ ಡ್ಯೂರೆರ್ ಇತರರಿಗಿಂತ ಒಂದು ಕೈ ಮೇಲು ಎನಿಸಿಕೊಂಡಿದ್ದ.

ಜರ್ಮನಿಯ ನ್ಯೂರೆನ್‌ಬರ್ಗ್ ನಗರದಲ್ಲಿ ಬಂದು ನೆಲಸಿದ ಹಂಗೇರಿಯ ಅಕ್ಕಸಾಲಿಗನೊಬ್ಬನ ಹದಿನೆಂಟು ಮಂದಿ ಮಕ್ಕಳಲ್ಲಿ ಎರಡನೆಯವನು ಆಲ್‌ಬ್ರೆಕ್ಟ್ ಡ್ಯೂರೆರ್. ಹುಟ್ಟಿದ್ದು 1471ರ ಮೇ 21ರಂದು. ಕಲಿಯುವುದರಲ್ಲೂ ಕೆಲಸದಲ್ಲೂ ಇತರ ಮಕ್ಕಳಿಗಿಂತ ಜಾಣನಾಗಿದ್ದ ಇವನ ಮೇಲೆ ತಂದೆಗೆ ಹೆಚ್ಚಿನ ಮಮತೆ. ಮಗನನ್ನು ಶಾಲೆಗೆ ಹಾಕಿದ. ಓದು ಬರಹ ಕಲಿತ ಬಳಿಕ ಶಾಲೆಯಿಂದ ಬಿಡಿಸಿ ತನ್ನ ಅಂಗಡಿಯಲ್ಲಿ ಕೂಡಿಸಿಕೊಂಡು ಚಿನ್ನದ ಕೆಲಸ ಕಲಿಸತೊಡಗಿದ. ಬಾಲಕನಿಗೆ ಚಿತ್ರಕಲೆಯಲ್ಲಿ ಇದ್ದ ಪ್ರತಿಭೆ ಮಮತೆಗಳನ್ನು ಗಮನಿಸಿ, ಮೈಕೆಲ್ ವೋಲ್ಗೆಮೂಟ್ ಎಂಬ ಚಿತ್ರಕಾರನ ಬಳಿಗೆ ಕಳುಹಿಸಿದ. ಶಿಷ್ಯವೃತ್ತಿ ಪೂರ್ತಿಯಾದ ಮೇಲೆ ಹದಿನೆಂಟರ ಹರೆಯದ ಡ್ಯೂರೆರ್ ಆಗಿನ ತರುಣ ಚಿತ್ರಕಾರರ ಸಂಪ್ರದಾಯದಂತೆ ದೇಶ ಸಂಚಾರದಲ್ಲಿ ತೊಡಗಿದ. ತನ್ನ ಪ್ರವಾಸ ಕಾಲದಲ್ಲಿ ಪ್ರಮುಖ ಕಲಾಕೇಂದ್ರಗಳನ್ನು ಸಂದರ್ಶಿಸಿ ನಾಲ್ಕು ವರ್ಷಗಳ ಅನಂತರ ನ್ಯೂರೆನ್‌ಬರ್ಗ್‌ಗೆ ಹಿಂದಿರುಗಿದ. ಮನೆಯವರು ತನಗಾಗಿ ನೋಡಿ ಇಟ್ಟಿದ್ದ ಹುಡುಗಿಯನ್ನು ಲಗ್ನವಾದ. ಈ ಹೆಂಡತಿ ಮಹಾ ಗಯ್ಯಾಳಿ. ಹಾಗಿದ್ದರೂ ಡ್ಯೂರೆರನ ಕಲಾಸೇವೆಗೆ ಏನೂ ತೊಂದರೆಯಾಗಲಿಲ್ಲ.

ಆಗ ಇಟಲಿಯಲ್ಲಿ ಚಿತ್ರಕಲೆಯ ಸುವರ್ಣಯುಗ. ಜರ್ಮನಿಯ ಚಿತ್ರಕಾರರು ಮಾತ್ರ ಇನ್ನೂ ಮಧ್ಯಯುಗದ ಜಾಡನ್ನೇ ಹಿಡಿದು ಸಾಗಿದ್ದರು. ಇಟಲಿಯನ್ನು ನೋಡಬೇಕೆನ್ನುವ ಆಸೆಯಿಂದ 1494ರಲ್ಲಿ ಡ್ಯೂರೆರ್ ತನ್ನ ಹೆಂಡತಿಯೊಡನೆ ವೆನಿಸಿಗೆ ಬಂದು ಇಳಿದ. ಇಲ್ಲಿನ ವರ್ಣಮಯ ಜಗತ್ತನ್ನು ಕಣ್ಣರಳಿಸಿ ನೋಡಿದ. ಪ್ರಸಿದ್ಧ ಚಿತ್ರಕಾರರನ್ನು ಕಂಡು ಪರಿಚಯ ಮಾಡಿಕೊಂಡ. ಸುಂದರ ದೃಶ್ಯಗಳನ್ನು ಗುರುತಿಸಿಕೊಂಡ. ಇಟಲಿಯ ಕಲೆಯಿಂದ ಪ್ರಭಾವಿತನಾಗಿ ತನ್ನ ಮುಂದಿನ ಕೃತಿಗಳನ್ನು ರಚಿಸಿದ.

ವರ್ಣಚಿತ್ರಗಳ ಬೆಲೆ ದುಬಾರಿ. ಶ್ರೀಮಂತರು ಮಾತ್ರ ಇವನ್ನು ಕೊಂಡುಕೊಳ್ಳಬಲ್ಲರು. ಸಾಮಾನ್ಯಜನರೂ ಕೊಂಡು ಆನಂದಿಸುವ ರೀತಿಯ ಚಿತ್ರ ನಿರ್ಮಿಸಬೇಕು ಎಂದುಕೊಂಡು ಡ್ಯೂರೆರ್ ಕೆತ್ತನೆ ಕೆಲಸಕ್ಕೆ ತೊಡಗಿದ. ಆಗ ಮುದ್ರಣದ ತಂತ್ರ ರೂಪುಗೊಂಡಿತ್ತು. ಮರದಲ್ಲಿ ಕೆತ್ತನೆ ಕೆಲಸ ಮಾಡಿದರೆ ಅದರ ಅಚ್ಚಿನಿಂದ ಬೇಕಾದಷ್ಟು ಪ್ರತಿಗಳನ್ನು ಪಡೆಯುವುದು ಸಾಧ್ಯವಿತ್ತು. ಡ್ಯೂರೆರ್ ತನ್ನ ಗಮನವನ್ನೆಲ್ಲ ಕೆತ್ತನೆ ಕೆಲಸದೆಡೆಗೆ ಹರಿಸಿದ. ಇಟಲಿಯ ಕಲೆಯ ಭವ್ಯತೆಯನ್ನೂ ಜರ್ಮನ್ ಕೆತ್ತನೆ ಕೆಲಸಗಾರರ ವೈಶಿಷ್ಟ್ಯವಾದ ಸೂಕ್ಷ್ಮತೆಯನ್ನೂ ತನ್ನ ಕೆತ್ತನೆಯಲ್ಲಿ ಉಪಯೋಗಿಸಿಕೊಂಡ. ಯೂರೋಪಿನ ಉತ್ತರ ದೇಶಗಳಿಗೆ ಡ್ಯೂರೆರ್ ಇಟಲಿಯ ನವೋದಯದ ಸಂದೇಶವಾಹಕನಾದ. ಕೆತ್ತನೆ ಕೆಲಸವನ್ನು ಪರಿಪೂರ್ಣತೆಯ ಪರಾಕಾಷ್ಠೆಗೆ ಏರಿಸಿದ ಕೀರ್ತಿ ಡ್ಯೂರೆರನಿಗೆ ಸಲ್ಲಬೇಕು. ಅದೇ ರೀತಿ ತಾಮ್ರಫಲಕಗಳ ಮೇಲೆ ಅವನು ಕೊರೆದ ಚಿತ್ರಗಳು ಕೂಡ ಅಮೂಲ್ಯವಾದುವು. ಆ ಚಿತ್ರ ರಚನೆಯಲ್ಲಿ ಅವನು ಪ್ರದರ್ಶಿಸಿರುವ ಕಲ್ಪನಾಶಕ್ತಿ, ಸೂಕ್ಷ್ಮ ವಿವರಗಳ ಸಾಧನೆ ಗಮನಾರ್ಹವಾದದ್ದು.

ಡ್ಯೂರೆರ್ 1500ರ [illegible] ಯೂರೋಪಿನ ಪ್ರಮಾಣದಿಗೆ [illegible] ಭಾಷೆಯನ್ನು ಗಳಿಸಿ. [illegible] ಹೊಸ ಹೊಸ ವಿಧಾನಗಳನ್ನು ಕಂಡುಹಿಡಿದ [illegible] ಕುಂದಲೇ ಇಲ್ಲ. ಯಾರೋ ಒಬ್ಬ ಇಟಲಿಯ ಚಿತ್ರಕಾರ ರೇಖಾಗಣಿತದ ವಿಧಾನವನ್ನು ಮಾತ್ರ ಉಪಯೋಗಿಸಿ ಮಾನವ ಶರೀರದ ಚಿತ್ರವನ್ನು ಬರೆಯುತ್ತಾನೆ ಎಂದು ಕೇಳಿ ಡ್ಯೂರೆರ್ ಅವನಲ್ಲಿಗೆ ಹೋದ. ಆದರೆ ಆ ಚಿತ್ರಕಾರನಿಗೆ ಈ ತಂತ್ರ ತಿಳಿದಿರಲಿಲ್ಲ. ಕೊನೆಗೆ ಡ್ಯೂರೆರನೇ ಪ್ರಯತ್ನಪಟ್ಟು, ನೇರಗೆರೆ ಎಳೆಯುವ ಸಾಧನ ಮತ್ತು ಕೈವಾರಗಳನ್ನು ಮಾತ್ರ ಉಪಯೋಗಿಸಿ ಸರಳರೇಖೆ—ವಕ್ರರೇಖೆಗಳಿಂದ ಮಾನವ ಶರೀರವನ್ನು ರಚಿಸುವ ರೀತಿಯನ್ನು ಕಂಡುಹಿಡಿದ.

ಡ್ಯೂರೆರ್ ತನ್ನ ಜೀವನದ ಕೊನೆಯ ಹಂತದಲ್ಲಿ ನೆದರ್‌ಲೆಂಡ್ಸ್‌ಗೆ ಹೋದ. ಅಲ್ಲಿನ ದೊರೆ ಐದನೆಯ ಚಾರ್ಲ್ಸ್ ಇವನನ್ನು ತನ್ನ ಆಸ್ಥಾನದ ಚಿತ್ರಕಾರನನ್ನಾಗಿ ಮಾಡಿ ಗೌರವಿಸಿದ.

ಡ್ಯೂರೆರನ ಚಿತ್ರಕಲೆಯ ಅತ್ಯುತ್ತಮ ವಸ್ತು ಸ್ವತಃ ಡ್ಯೂರೆರನೇ ಎನ್ನುವುದುಂಟು. ಅವನ ಸ್ವಚಿತ್ರವನ್ನು ಶ್ರೇಷ್ಠ ಕೃತಿಗಳಲ್ಲಿ ಒಂದೆಂದು ಪರಿಗಣಿಸುತ್ತಾರೆ. ಡ್ಯೂರೆರ್ ಇನ್ನೂ ಹದಿಮೂರು ವಯಸ್ಸಿನವನಾಗಿದ್ದಾಗ ಅವನು ಬರೆದ ಒಂದು ಸ್ವಚಿತ್ರವನ್ನು ಕಂಡು ದೊಡ್ಡ ದೊಡ್ಡ ಚಿತ್ರಕಾರರೂ ಬೆರಗಾಗಿದ್ದಾರೆ.

ಡ್ಯೂರೆರ್ 'ಪ್ರಕೃತಿಯ ಚಿತ್ರಕಾರ'. ತನ್ನ ಸುತ್ತುಮುತ್ತು ಕಂಡು ಬರುವ ಎಲ್ಲ ವಸ್ತುಗಳನ್ನೂ ಅವನು ಚಿತ್ರಿಸಿದ್ದಾನೆ. ಹೊರಗೆ ತಿರುಗಾಟಕ್ಕೆ ಹೋದಾಗ ಜೊತೆಯಲ್ಲಿ ಒಂದು ಸ್ಕೆಚ್ ಪುಸ್ತಕ ಇದ್ದೇ ಇರುತ್ತಿತ್ತು. ಸುಂದರವಾದ ಹೂ, ಕಳೆ ಗಿಡ, ವಿಚಿತ್ರವಾದ ಕೀಟ ಕಂಡುಬಂದರೆ ಅಲ್ಲೇ ನಿಂತು ಅವುಗಳ ಚಿತ್ರ ಗುರುತಿಸಿಕೊಳ್ಳುತ್ತಿದ್ದ. ಆ ಕೆಲಸ ಆದ



ಡ್ಯೂರೆರ್ : ಸ್ವಚಿತ್ರ

ಬಂದಿದ್ದ ಪಾಪದಕ್ಕೆ ಹೋಗಿ. ಒಮ್ಮೆ ನೆದರ್‌ಲ್ಯಾಂಡ್ಸ್ ಪ್ರವಾಸದಿಂದ ಹಿಂದಿರುಗುತ್ತಿದ್ದಾಗ ಜೀಲ್ಯಾಂಡ್ ಪ್ರಾಂತದ ಜೌಗುಪ್ರದೇಶದಲ್ಲಿ ಒಂದು ತಿಮಿಂಗಿಲ ಬಂದು ಸಿಕ್ಕಿಬಿದ್ದುದು ಕೇಳಿ ಅಲ್ಲಿಗೆ ಹೋದ. ಅಲ್ಲಿ ಅವನನ್ನು ಹಿಡಿದುಕೊಂಡ ಜ್ವರ ಕೊನೆಯವರೆಗೂ ಕಾಡಿತು. 1528ರ ಏಪ್ರಿಲ್ 6ರಂದು ಡ್ಯೂರೆರ್ ನಿಧನಹೊಂದಿದ.

## ಡೆಫೋ

"ತಪ್ಪಿಸಿಕೊಂಡಿದ್ದಾನೆ :

ಮಧ್ಯಮ ಪ್ರಮಾಣದ ನಸುಕಂದುಬಣ್ಣದ ವ್ಯಕ್ತಿ. ಕಡು ಕಂದು ಬಣ್ಣದ ಕೂದಲಿನ, ಬಾಗಿದ ಮೂಗಿನ, ಚೂಪು ಗಲ್ಲದ, ಚಿಕ್ಕನ ಕಣ್ಣುಗಳ ಬಾಯಿಯ ಸಮೀಪದಲ್ಲಿ ಅಗಲವಾದ ಮಚ್ಚೆಯಿರುವ. ಸುಮಾರು 40 ವರ್ಷ ಪ್ರಾಯದ ವ್ಯಕ್ತಿ ತಪ್ಪಿಸಿಕೊಂಡಿದ್ದಾನೆ."



'ಕ್ರೂಸೋ' : ಡೆಫೋ

—ಇದು ಲಂಡನಿನ ಪತ್ರಿಕೆಯೊಂದರಲ್ಲಿ ಬಂದ ಪ್ರಕಟಣೆ. ಇದರಲ್ಲಿದ್ದುದು ಬ್ರಿಟಿಷ್ ಸರಕಾರದ ನೀತಿಗಳನ್ನು ಅವಹೇಳನಕ್ಕೆ ಗುರಿಮಾಡಿದನೆಂದು ಶಿಕ್ಷೆಗೆ ಒಳಗಾಗಿ ಅದರಿಂದ ತಪ್ಪಿಸಿಕೊಳ್ಳಲೆಂದು ತಲೆಮರೆಸಿಕೊಂಡ ಡೇನಿಯಲ್ ಡೆಫೋನ ಬಣ್ಣನೆ.

ಡೇನಿಯಲ್ ಡೆಫೋ 1660ರಲ್ಲಿ ಲಂಡನಿನಲ್ಲಿ ಜನಿಸಿದ. ಅವನ ತಂದೆ ಜೇಮ್ಸ್ ಡು-ಫೋ ಮಾಂಸದ ಅಂಗಡಿಯೊಂದರಲ್ಲಿ ಕೆಲಸ ಮಾಡುತ್ತಿದ್ದ. ಮಗ ತಂದೆಗಿಂತಲೂ ಹೆಚ್ಚು ಮಹತ್ವಾಕಾಂಕ್ಷಿ. ಡು-ಫೋ ಎಂದಿದ್ದ ತನ್ನ ಕುಟುಂಬದ ಹೆಸರನ್ನು ಡೆಫೋ ಎಂದು ಬದಲಾಯಿಸಿದ. ಜೀವನೋಪಾಯಕ್ಕಾಗಿ ನಾನಾ ಬಗೆಯ ಉದ್ಯಮಗಳಲ್ಲಿ ತೊಡಗಿ, ಎಲ್ಲದರಲ್ಲೂ ಕೈಸುಟ್ಟುಕೊಂಡು ಕೊನೆಗೆ ಲೇಖನ ವ್ಯವಸಾಯ ಪ್ರಾರಂಭಿಸಿದ. ಸ್ವಾತಂತ್ರ್ಯ ಪ್ರೇಮಿಯೂ ಧಾರ್ಮಿಕನೂ ಆಗಿದ್ದ ಡೆಫೋ ಅಂದಿನ ರಾಜಕಾರಣದಲ್ಲಿ ಉತ್ಸಾಹದಿಂದ ಭಾಗವಹಿಸಿದ. ನಾನಾ ವಿಷಯಗಳಿಗೆ ಸಂಬಂಧಿಸಿದಂತೆ ಕರಪತ್ರಗಳನ್ನು ಪ್ರಕಟಿಸುವುದು ಅವನ ಕೆಲಸವಾಗಿತ್ತು. ಆದರೆ ಆ್ಯನ್ ರಾಣಿಯ ಸರಕಾರ ಅವನನ್ನಾಗಲೀ ಅವನ ಬರೆವಣಿಗೆಯನ್ನಾಗಲೀ ಮೆಚ್ಚಲಿಲ್ಲ. ಇಂಗ್ಲೆಂಡಿನ ಟೋರಿ ರಾಜಕೀಯ ಪಕ್ಷದ ನೀತಿಗಳನ್ನು ಕರಪತ್ರದಲ್ಲಿ ವ್ಯಂಗ್ಯವಾಗಿ ಅವಹೇಳನ ಮಾಡಿದ ಕಾರಣ ಸರಕಾರದ ಕ್ರೂರ ದೃಷ್ಟಿ ಅವನ ಮೇಲೆ ಬಿತ್ತು. ಬಹಿರಂಗವಾದ ಸ್ಥಳದ ಹಲಗೆಯಲ್ಲಿ ಕೈ ಮತ್ತು ತಲೆಗಳನ್ನು ಸಿಕ್ಕಿಸಿಕೊಂಡು ಮೂರು ದಿವಸ ಬಹಿರಂಗವಾಗಿ ಅಪಮಾನ ಅನುಭವಿಸಬೇಕೆಂದೂ ಜೊತೆಗೆ ದಂಡವನ್ನು ತೆರಬೇಕೆಂದೂ ಸರಕಾರ ಶಿಕ್ಷೆ ವಿಧಿಸಿತು. ಡೇನಿಯಲ್ ಡೆಫೋ ತಲೆಮರೆಸಿಕೊಂಡ. ಕೊನೆಗೆ ಒತ್ತಾಯಕ್ಕೆ ಕಟ್ಟುಬಿದ್ದು ತಪ್ಪೊಪ್ಪಿಗೆ ನೀಡಿದ. ಅವನಿಗೆ ವಿಧಿಸಿದ ಶಿಕ್ಷೆ ಜನರ ಮೇಲೆ ಬೇರೆಯೇ ಪರಿಣಾಮ ಉಂಟುಮಾಡಿತು. ಬಹಿರಂಗವಾಗಿ ಅಪಮಾನದ ಶಿಕ್ಷೆಗೆ ಗುರಿಯಾದ ಅವನತ್ತ ಕಲ್ಲುಗಳನ್ನು ಎಸೆಯುವ ಬದಲು ಜನರು ಹೂಗಳನ್ನು ಎರಚಿದರು.

ತನ್ನ 40ನೆಯ ವಯಸ್ಸಿನಲ್ಲಿ ಡೆಫೋ ತುಂಬ ಉತ್ಸಾಹದಿಂದ ಪತ್ರಿಕೋದ್ಯಮಿಯಾಗಿ ಕೆಲಸಮಾಡಿದ. ಆ್ಯನ್ ರಾಣಿಯ ಆಡಳಿತ ಕಾಲದಲ್ಲಿ ಅವನು ವಾರಕ್ಕೆ ಮೂರು ಬಾರಿ ಪ್ರಕಟಿಸುತ್ತಿದ್ದ ನಿಯತಕಾಲಿಕ—'ದಿ ರೆವ್ಯೂ'. ಇದು ಅವನ ಜೀವನದ ಒಂದು ಮಹತ್ವದ ಸಾಧನೆ. 1704ರಿಂದ 1713ರ ತನಕ ಅದು ನಿರಾತಂಕವಾಗಿ ಪ್ರಕಟವಾಗುತ್ತಿತ್ತು. ಆಮೇಲೆ ಸರಕಾರ ಅದರ ಪ್ರಕಟಣೆಯನ್ನು ನಿಷೇಧಿಸಿತು. ಅದರಲ್ಲಿ ಪ್ರಕಟವಾಗುತ್ತಿದ್ದ ವ್ಯಂಗ್ಯ ಲೇಖನಗಳು, ಸಾಹಸ ಕತೆಗಳು ತುಂಬ ಪ್ರಸಿದ್ಧವಾದುವು.

ಡೆಫೋ ತನ್ನ ಪ್ರಥಮ ಕಾದಂಬರಿ 'ರಾಬಿನ್‌ಸನ್ ಕ್ರೂಸೋ' (1719) ಬರೆದಾಗ ಅವನಿಗೆ 60 ವರ್ಷ. ಈ ಕೃತಿಯಿಂದ ಅವನ ಹೆಸರು ಜಾಗತಿಕ ಸಾಹಿತ್ಯಕ್ಷೇತ್ರದಲ್ಲಿ ಅಮರವಾಯಿತು.

'ರಾಬಿನ್‌ಸನ್ ಕ್ರೂಸೋ' ತುಂಬ ಸೊಗಸಾದ ಕತೆ. ಹಡಗು ಒಡೆದುಹೋಗಿ ಒಬ್ಬಂಟಿಗನಾಗಿ ಒಂದು ದ್ವೀಪ ಸೇರಿ ತನ್ನ ಸ್ವಂತ ಬುದ್ಧಿ, ಬಲ, ಶ್ರಮಗಳಿಂದ ತಿಂಗಳುಗಟ್ಟಲೆ ಅಲ್ಲಿ ವಾಸಮಾಡಿದ ಧೀರ ಇದರ ಕಥಾನಾಯಕ. ಸ್ಕಾಟ್ಲೆಂಡಿನ ಅಲೆಗ್ಸಾಂಡರ್ ಸಲ್‌ಕರ್ಕ್ ಎಂಬ ನಾವಿಕನ ಹಡಗು ಒಡೆದುಹೋಗಿ ಅವನು ನಾಲ್ಕು ವರ್ಷ ನಾಲ್ಕು ತಿಂಗಳು ಕಾಲ ಚಿಲಿ ಕರಾವಳಿಯ ಸಮೀಪದ ಒಂದು ದ್ವೀಪದಲ್ಲಿ ವಾಸವಾಗಿದ್ದ. ಅವನ ಸಮುದ್ರಯಾನದ ಸಾಹಸ ಕತೆಗಳಿಂದ ಸ್ಫೂರ್ತಿ ಪಡೆದು ಡೆಫೋ ತನ್ನ ಕಾದಂಬರಿ 'ರಾಬಿನ್‌ಸನ್ ಕ್ರೂಸೋ' ಸೃಷ್ಟಿಸಿದ. ಪ್ರಕಟವಾದೊಡನೆಯೇ ಅದು ಅಪೂರ್ವ ಜನಪ್ರಿಯತೆ ಗಳಿಸಿತು. ಜನರಿಗೆ ಬೇಕಾದಷ್ಟು ಪ್ರತಿಗಳನ್ನು ಒದಗಿಸುವುದು ಪುಸ್ತಕ ವ್ಯಾಪಾರಿಗಳಿಗೆ ಸಾಧ್ಯವಾಗಲಿಲ್ಲ. ಕೊನೆಗಂತೂ ನಾವಿಕರು ಮರದ ತುಂಡೊಂದನ್ನು "ಇದು ಕ್ರೂಸೋವಿನ ಮುರಿದ ದೋಣಿಯ ಹಲಗೆಯ ತುಂಡು" ಎಂದೂ, ಚರ್ಮದ ಒಂದು ತುಂಡನ್ನು "ಇದು ಕ್ರೂಸೋ ಬೂಟಿನ ಚರ್ಮ" ಎಂದೂ ಜನರಿಗೆ ನಂಬಿಕೆ ಹುಟ್ಟಿಸಿ ಮಾರಾಟಮಾಡತೊಡಗಿದರು. ಬಾಲಕರು ಕ್ರೂಸೋವಿನ ಸಾಹಸಕತೆಗಳನ್ನು ಆಸಕ್ತಿಯಿಂದ ಅನ್ನ ನಿದ್ದೆ ಬಿಟ್ಟು ಓದುತ್ತಿದ್ದರು. ಕ್ರೂಸೋ ಹೇಗೆ ಕ್ರೂರ ಆಡುಗಳನ್ನು ಪಳಗಿಸುತ್ತಿದ್ದ, ಮಣ್ಣಿನ ಪಾತ್ರೆಗಳನ್ನು ತಯಾರಿಸುತ್ತಿದ್ದ, ಕೊಡೆಯನ್ನು ಹೇಗೆ ಮಾಡಿಕೊಂಡ, ಫ್ರೈಡೇ ಎನ್ನುವ ಕಾಡು ಮನುಷ್ಯನ ಹಜ್ಜೆಗುರುತುಗಳನ್ನು ಹೇಗೆ ಕಂಡುಹಿಡಿದ ಎಂಬುದನ್ನೆಲ್ಲ ತಿಳಿದುಕೊಂಡಿದ್ದರು.

ಒಬ್ಬಂಟಿಗನಾಗಿ ದ್ವೀಪದಲ್ಲಿ ಕಾಲ ಕಳೆಯಬೇಕಾಗಿ ಬಂದ ನಿರಾಶೆ ಮುಸುಕಿದ ಆ ಜೀವದ ಕಥೆ ಹೃದಯಸ್ಪರ್ಶಿಯಾಗಿದೆ.

'ರಾಬಿನ್‌ಸನ್ ಕ್ರೂಸೋ' ಕೃತಿಯ ಅನಂತರ ಡೆಫೋ ಬರೆದ ಕಾದಂಬರಿಗಳಲ್ಲಿ 'ಕ್ಯಾಪ್ಟನ್ ಸಿಂಗಲ್‌ಟನ್', 'ಡಂಕನ್ ಕ್ಯಾಂಪ್‌ಬೆಲ್‌ನ ಜೀವನ

ಮತ್ತು 'ಇತಿಹಾಸ', 'ಕ್ಯಾವಲಿಯರ್‌ನ ಸ್ಮರಣ ಚಿತ್ರಗಳು' ಮುದ್ರಿತ ವಾದುವು.

ಜೀವನದ ಕೊನೆಯ ದಿನಗಳಲ್ಲಿ ಡೆಫ್ಹೋನ ಆರೋಗ್ಯ ತುಂಬ ಕೆಟ್ಟಿತು. ಅವನ ಕೊನೆಯ ಕೃತಿಗಳಲ್ಲಿ 'ಸಂಪೂರ್ಣ ಇಂಗ್ಲಿಷ್ ವರ್ತಕ', 'ನಾವಿಕ ವರ್ತಕರ [illegible]', 'ದೆವ್ವದ ರಾಜಕೀಯ ಚರಿತ್ರೆ', 'ಆಂಗ್ಲ ವಾಣಿಜ್ಯದ ರೂಪುರೇಷೆ' ಇವು ಪ್ರಧಾನವಾದುವು.

ಕೊನೆಗಾಲದಲ್ಲಿ ಡೆಫ್ಹೋ ಸ್ವಲ್ಪ ಕಾಲ ಮತ್ತೊಮ್ಮೆ ತಲೆಮರೆಸಿಕೊಂಡು ಇರಬೇಕಾಯಿತು. ಅವನು 1731ರ ಏಪ್ರಿಲ್ 24ರಂದು ಲಂಡನಿನಲ್ಲಿ ತೀರಿಕೊಂಡ.

ಲಂಡನ್ ನಗರದಲ್ಲಿ ಬನ್‌ಹಿಲ್ ಹೊಲ ಎನ್ನುವ ಪುರಾತನ ಸ್ಮಶಾನವಿದೆ. ಅಲ್ಲಿ ಡೆಫ್ಹೋನ ಸಮಾಧಿ ಇದೆ. 1870ರಲ್ಲಿ ಬ್ರಿಟನಿನ ಬಾಲಕರು ಸಂಗ್ರಹಿಸಿದ ವಂತಿಗೆ ಹಣದಿಂದ ಈ ಸಮಾಧಿಯ ಸುತ್ತಲೂ ಅಮೃತಶಿಲೆಯ ಸ್ತಂಭಗಳು ನೆಡಲ್ಪಟ್ಟುವು!

## ಡೊನಾಟೆಲೊ

ಯುದ್ಧ ಸನ್ನದ್ಧವಾಗಿ ನಿಂತಿರುವ ಮೂರ್ತಿಯನ್ನು ಮೊದಲ ಬಾರಿಗೆ ಕಂಡಾಗ ಮೈಕೆಲೆಂಜೆಲೋ "ನಡೆ ಮುಂದೆ" ಎಂದನಂತೆ. ಅಷ್ಟು ಸಜೀವ ವಾಗಿ ಕಂಡಿತು ಡೊನಟೆಲೋ ರಚಿಸಿದ್ದ ಶಿಲ್ಪಕೃತಿ.

ನವೋನಯ ಭಾವನೆಗಳು ಇಟಲಿಯಲ್ಲಿ ಪೂರ್ಣವಾಗಿ ವಿಕಾಸಗೊಂಡ ಕಾಲದಲ್ಲಿದ್ದವನು ಡೊನಾಟೆಲೋ. ಈತನು 15ನೆಯ ಶತಮಾನದ ಅತಿ ಶ್ರೇಷ್ಠ ಶಿಲ್ಪಿ. ಪ್ರಾಚೀನ ಶಿಲ್ಪಗಳನ್ನು ಬಿಟ್ಟರೆ ಬಿಡಿಯಾಗಿ ನಿಂತ ವಿಗ್ರಹ ವನ್ನೂ, ನಗ್ನ ಮೂರ್ತಿಗಳನ್ನೂ ನಿರ್ಮಿಸಿದವರಲ್ಲಿ ಡೊನಾಟೆಲೋ ಮೊದಲಿಗ. ಇವನನ್ನು ಆಧುನಿಕ ಶಿಲ್ಪದ ಆದ್ಯಪ್ರವರ್ತಕ ಎಂದು ಕರೆಯು ತ್ತಾರೆ.

ಡೊನಾಟೆಲೋ ಹುಟ್ಟಿದ್ದು ಫ್ಲಾರೆನ್ಸಿನಲ್ಲಿ, 1386ರಲ್ಲಿ; ಪೂರ್ಣ ಹೆಸರು ಡೊನಾಟೊ ಡಿ ಟಟೋಬಾರ್ಡಿ. ತಂದೆ ಉಣ್ಣೆ ಕೆಲಸದಲ್ಲಿದ್ದ. ಚಿಕ್ಕಂದಿನಲ್ಲಿ ಡೊನಾಟೆಲೋ ಅಕ್ಕಸಾಲಿಗನ ಬಳಿ ಅಂಗಡಿಯಲ್ಲಿ ದುಡಿದ. ಅನಂತರ ಹೆಸರಾಂತ ಶಿಲ್ಪಿ ಘಿಬರ್ಟಿ ಬಳಿ ಶಿಷ್ಯವೃತ್ತಿಮಾಡಿದ. ತನ್ನ 20ನೆಯ ವಯಸ್ಸಿನ ವೇಳೆಗೆ ಫ್ಲಾರೆನ್ಸಿನ ಒಂದು ಇಗರ್ಜಿಗೆ ಅಮೃತ ಶಿಲೆಯ ವಿಗ್ರಹಗಳ ನಿರ್ಮಾಣ ಕೈಗೊಂಡ. ಜೀವ ತಳೆದಂತೆ ತೋರುವ ಅವನ ಮೂರ್ತಿಗಳು ಎಲ್ಲರ ಗಮನ ಸೆಳೆದುವು. ಡೊನಾಟೆಲೋನ ಶಿಲ್ಪ ಇತರ ಕಲಾವಿದರಿಗೆ ಮೇಲ್ಪಂಕ್ತಿಯಾಯಿತು. ಚಿತ್ರಕಾರರು ಅವನ ರೀತಿಯನ್ನಷ್ಟೇ ಅಲ್ಲ, ಅವನ ವಿಗ್ರಹದ ಪ್ರತಿರೂಪವನ್ನೇ ತಮ್ಮ ಚಿತ್ರಗಳಲ್ಲಿ ಸೇರಿಸುತ್ತಿದ್ದುದುಂಟು.

ಡೊನಾಟೆಲೋನ ಕಲ್ಪನಾಶಕ್ತಿ ಅದ್ಭುತ; ಶೈಲಿ ಸ್ವತಂತ್ರ. ತನ್ನ ಕಾಲದ ತದ್ರೂಪ ನಿರೂಪಣೆಯ ವಿಧಾನದಿಂದ ಅವನು ಪ್ರಭಾವಿತನಾಗಿದ್ದ. ಎರಡು ವರ್ಷ ಕಾಲ ರೋಮಿನಲ್ಲಿ ಪ್ರವಾಸಮಾಡಿ ಅಲ್ಲಿನ ಪ್ರಾಚೀನ ಶಿಲ್ಪ ಕೃತಿಗಳನ್ನು ಅಧ್ಯಯನಮಾಡಿದ. ಆದರೆ ಅಂಧಾನುಕರಣೆ ಮಾತ್ರ ಅವನ ಯಾವ ಶಿಲ್ಪದಲ್ಲಿಯೂ ಕಾಣಬರುವುದಿಲ್ಲ. ಸೌಂದರ್ಯವೊಂದೇ ಅವನ ಗುರಿಯಾಗಿರಲಿಲ್ಲ. ಅವನ ಶಿಲ್ಪಗಳಲ್ಲಿ ವಾಸ್ತವಿಕತೆಗೂ ಮುಖ್ಯ ಸ್ಥಾನ ವಿತ್ತು. ಮುಖ, ಕೈಕಾಲು ಕತ್ತುಗಳನ್ನು ಹಾವಭಾವಗಳನ್ನು ತಾನು ಕಂಡಂತೆ ತನ್ನ ಕೃತಿಗಳಲ್ಲಿ ಅವನು ಒಡಮೂಡಿಸಿದ. ಹೀಗೆ ಅವನದೇ ಆದ ಶೈಲಿಯಲ್ಲಿ [illegible] ಮಾರ್ಕನದು. ಅವನ ಅನೇಕ ಶಿಲ್ಪಗಳು ಇಗರ್ಜಿಗಳಿಗಾಗಿ ತಯಾರಾದುವು. 'ಸಂತ ಜಾನ್', 'ಸಂತ ಮಾರ್ಕ್', [illegible] ಮುಂತಾದುವು ಅವನ ಕೆಲವು ಹೆಸರಾಂತ ಶಿಲ್ಪಗಳು. [illegible] ಶಿಲ್ಪದ ಎದುರುನಿಂತು "ಮಾತನಾಡು, ಆಡಲೊಲ್ಲೆಯೇಕೆ ?" ಎಂದು ಕೇಳುತ್ತಿದ್ದನಂತೆ. ಕಂಚು ಹಾಗೂ ಜೇಡಿಮಣ್ಣಿನ ವಿಗ್ರಹಗಳನ್ನು ಕೂಡ ಡೊನಾಟೆಲೋ ರೂಪಿಸಿದ. ಕಂಚಿನಲ್ಲಿ ಎರಕಹುಯ್ದ 'ಡೇವಿಡ್' ವಿಗ್ರಹ ಅವನ ಮೂರ್ತಿಶಿಲ್ಪಗಳಲ್ಲಿ ಅತ್ಯಂತ ಸುಂದರವಾದದ್ದು. ತನ್ನ ಜೀವನದ ಕೊನೆಯ 13 ವರ್ಷಗಳಲ್ಲಿ ಅವನು ಕೇವಲ ಕಂಚಿನ ವಿಗ್ರಹಗಳನ್ನೇ ರಚಿಸಿದ. ಡೊನಾಟೆಲೋ ನಿರ್ಮಿಸಿದ ಕುದುರೆ ಸವಾರ 'ಗಟಾಮಲಾಟೊ' ಸೇನಾನಿಯೊಬ್ಬನ ಪ್ರತಿಮೆ. ಇದು ಜಗತ್ಪ್ರಸಿದ್ಧ ಕಂಚಿನ ಕಲಾಕೃತಿ.

ಡೊನಾಟೆಲೋ ಉಲ್ಲಾಸಪೂರಿತ ಶಿಲ್ಪಗಳನ್ನೂ ಕಡೆದಿದ್ದಾನೆ. ಒಂದು ಆರಾಧನಾಮಂದಿರದಲ್ಲಿ ಅವನು ಕೆತ್ತಿರುವ ಮಕ್ಕಳ ಶಿಲ್ಪ ಬಹಳ ಜನಪ್ರಿಯ ವಾಗಿದೆ. ಈ ಕೃತಿಯಲ್ಲಿ ಮಕ್ಕಳು ಆನಂದದ ಬುಗ್ಗೆಗಳಂತೆ, ಉತ್ಸಾಹ ತುಂಬಿ ತುಳುಕುತ್ತಿರುವಂತೆ ತೋರುತ್ತಾರೆ. ಇಂಥ ಕೃತಿಗಳನ್ನು ರಚಿಸಿದ ಡೊನಾಟೆಲೋ ಮಾನವೀಯ ಹೃದಯದ ವ್ಯಕ್ತಿಯಾಗಿದ್ದುದು ಸ್ವಾಭಾವಿಕವೇ.

ಫ್ಲಾರೆನ್ಸ್, ಸಿಯೆನಾ, ಪ್ರಾಟೊ ಹಾಗೂ ಪಾದುವ ಈ ಸ್ಥಳಗಳಲ್ಲಿ ಡೊನಾಟೆಲೋ ಕೆಲಸ ಮಾಡಿದ. 500 ವರ್ಷಗಳ ಅನಂತರ–ಇಂದಿಗೂ–ಅವನ ಸುಂದರ ಕಲಾಕೃತಿಗಳು ಇಟಲಿಯಲ್ಲಿ ಕಾಣಲು ದೊರೆಯುತ್ತವೆ. ಪ್ರತಿಭಾವಂತ ಕಲಾವಿದರಾದ ಮೈಕೆಲೆಂಜಲೋ ಹಾಗೂ ರಾಫೇಲ್‌ರಂಥವರು ತಾವು ಅವನಿಂದ ಪ್ರಭಾವಿತರಾದುದಾಗಿ ಹೇಳಿಕೊಂಡಿದ್ದಾರೆ.



ಅದ್ಭುತ ಕಲ್ಪನಾಶಕ್ತಿ : ಡೊನಾಟೆಲೋ

ತನ್ನ ಸಮಕಾಲೀನರ ವಿಮರ್ಶೆ, ಟೀಕೆಗಳಿಗೆ ಡೊನಾಟೆಲೋ ತುಂಬ ಬೆಲೆ ಕೊಡುತ್ತಿದ್ದ. ಇದು ಅಪೂರ್ವ ಗುಣವೇ ಆಗಿತ್ತು. ಇಂಥ ವಿಮರ್ಶೆ ಟೀಕೆಗಳಿಂದ ತನ್ನ ಕಲೆ ಉತ್ತಮಗೊಳ್ಳಲು ಅನುಕೂಲವಾಗುತ್ತದೆ ಎಂಬುದು ಅವನ ಅಭಿಪ್ರಾಯವಾಗಿತ್ತು. ಇಂಥವನನ್ನು ಅವನ ಸಮ ಕಾಲೀನರು ಸಹೃದಯಿ ಹಾಗೂ ವಿಶ್ವಾಸಪರನೆಂದು ಹೊಗಳಿರುವುದು ಸಹಜವೇ ಆಗಿದೆ.

ಡೊನಾಟೆಲೋ 1466 ಡಿಸೆಂಬರ್ 13ರಂದು ಕಾಲವಾದ.



## ತಾಜ್‌ಮಹಲ್

ಅಪಾರ ವೆಚ್ಚದಿಂದ ಕಟ್ಟಿದ ತಾಜ್‌ಮಹಲ್ ಜಗತ್ತಿನ ಅತ್ಯಂತ ಸುಂದರ ಸ್ಮಾರಕ ಕಟ್ಟಡಗಳಲ್ಲಿ ಒಂದು. ಮೊಗಲ್ ಚಕ್ರವರ್ತಿ ಷಹಜಹಾನ್ ತನ್ನ ಪ್ರೀತಿಯ ಪತ್ನಿ ಮುಮ್ತಾಜಳ ನೆನಪಿಗಾಗಿ ತಾಜ್‌ಮಹಲನ್ನು ಕಟ್ಟಿ ಅವಳ ಹೆಸರು ಅಮರವಾಗುವಂತೆ ಮಾಡಿದ.

ಷಹಜಹಾನನಿಗೆ ಮೂವರು ಪತ್ನಿಯರು. ಆದರೆ ಅಪೂರ್ವ ಸುಂದರಿ ಮುಮ್ತಾಜಳ ಮೇಲೆ ಅವನಿಗೆ ವಿಶೇಷ ಮಮತೆ. 1631ರಲ್ಲಿ ಅವಳು ಅನಿರೀಕ್ಷಿತವಾಗಿ ಮರಣಹೊಂದಿದಾಗ ಅವನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಸಾಯುವ ಕೆಲವು ವರ್ಷಗಳ ಮೊದಲು ಮುಮ್ತಾಜಳಿಗೆ ಒಂದು ಕನಸು ಬಿದ್ದಿತ್ತು. ಅದರಲ್ಲಿ ಒಂದು ಭವ್ಯ ಭವನ ಅವಳಿಗೆ ಕಾಣಿಸಿತು. ಇದರ ವಿಷಯ ಆಕೆ ತನ್ನ ಪತಿಗೆ ಹೇಳಿದಳು. ಅದನ್ನು ಸ್ಮರಿಸಿಕೊಂಡು ಷಹಜಹಾನನು ಅಂಥದೇ ಭವನವನ್ನು ಅವಳ ಸ್ಮಾರಕವಾಗಿ ನಿರ್ಮಿಸಲು ನಿರ್ಧರಿಸಿದ. ಲಾಹೋರಿನ ಪ್ರಸಿದ್ಧ ವಾಸ್ತುಶಿಲ್ಪಿ ಉಸ್ತಾದ್ ಅಹಮದ್‌ನನ್ನು ಕರೆಯಿಸಿದ. ಕೆತ್ತನೆ, ಕಲ್ಲು ಕೆಲಸಗಳಿಗಾಗಿ ಕುಶಲ ಕೆಲಸಗಾರರು ಭಾರತದ ಬೇರೆ ಬೇರೆ ಸ್ಥಳಗಳಿಂದ ಮಾತ್ರವಲ್ಲದೆ, ವಿದೇಶಗಳಿಂದಲೂ ಬಂದರು. ಕಲ್ಲಿನಲ್ಲಿ ಹೂಗಳನ್ನು ಕೆತ್ತುವುದರಲ್ಲಿ ಪ್ರಸಿದ್ಧನಾಗಿದ್ದ ಬುಖಾರಾ ಎಂಬುವನು ಮಧ್ಯ ಏಷ್ಯದಿಂದ ಕರೆಸಲ್ಪಟ್ಟ. ಗುಮ್ಮಟ ರಚನೆಯಲ್ಲಿ ಪಳಗಿದ್ದ ಶಿಲ್ಪಿಯನ್ನು ಕರೆತರಲು ಕಾನ್‌ಸ್ಟಾಂಟಿನೋಪಲ್‌ಗೆ ದೂತರು ಹೋದರು. ಅಚ್ಚ ಬಿಳಿಯ ಅಮೃತಶಿಲೆಯನ್ನು ರಾಜಸ್ಥಾನದಿಂದ ಸಾಗಿಸಿಕೊಂಡು ಬಂದರು. ಅಫ್‌ಘಾನಿಸ್ಥಾನ ಮತ್ತು ಟಿಬೆಟ್‌ಗಳಿಂದ ಬೆಲೆಬಾಳುವ ಪ್ರಶಸ್ತ ಶಿಲೆಗಳನ್ನು ತರಿಸಿದರು. ಕಟ್ಟಡದ ರಚನೆ 1632ರಲ್ಲಿ ಆರಂಭವಾಯಿತು. ಇಪ್ಪತ್ತು ಸಾವಿರ ಕೆಲಸಗಾರರು ಇಪ್ಪತ್ತೆರಡು ವರ್ಷ ದುಡಿದು ತಾಜ್‌ಮಹಲಿನ ಕೆಲಸವನ್ನು ಪೂರ್ತಿ ಮಾಡಿದರು. ಒಟ್ಟು ಖರ್ಚು ಸುಮಾರು ನಾಲ್ಕು ಕೋಟಿ ರೂಪಾಯಿ. ಹೀಗೆ ಮುಮ್ತಾಜಳ ಸುಂದರ ಸ್ವಪ್ನ ಹೊಳೆಯುವ ಅಮೃತಶಿಲೆಯಲ್ಲಿ ಮೂಡಿತು.

ಯಮುನಾ ನದಿ ಆಗ್ರಾ ನಗರದ ಬಳಿ ಶಾಂತವಾಗಿ ಹರಿಯುತ್ತದೆ. ಇದರ ಬಲದಂಡೆಯ ಮೇಲೆ ಚಚ್ಚೌಕ ವೇದಿಕೆಯ ಮೇಲೆ ತಾಜ್‌ಮಹಲ್ ನಿರ್ಮಿತವಾಗಿದೆ. ಮುಖ್ಯಗುಮ್ಮಟ ನೆಲದಿಂದ 67 ಮೀಟರು ಎತ್ತರವಿದೆ. ಇದರ ನಾಲ್ಕು ಬದಿಗಳಲ್ಲಿ ನಾಲ್ಕು ಚಿಕ್ಕ ಗುಮ್ಮಟಗಳು; ವೇದಿಕೆಯ ನಾಲ್ಕು ಮೂಲೆಗಳಲ್ಲಿ 42 ಮೀಟರಿನ ಒಂದೊಂದು ಗೋಪುರಸ್ತಂಭಗಳು; ಎಡಬದಿಗೆ ಒಂದು ಪ್ರಾರ್ಥನಾ ಮಂದಿರ. ರಚನೆಯ ಸಮತೋಲನವನ್ನು ಉಳಿಸಿಕೊಳ್ಳಲು ಬಲ ಬದಿಯಲ್ಲಿ ತದ್ರೂಪದ ಇನ್ನೊಂದು ಕಟ್ಟಡ.

ತಾಜ್‌ಮಹಲಿನ ಒಳಭಾಗದ ನಡುವೆ ಮುಖ್ಯ ಗುಮ್ಮಟದ ಕೆಳಗೆ ಮುಮ್ತಾಜಳ ಸ್ಮಾರಕ ಸಮಾಧಿಯಿದೆ. ಇದನ್ನು ಸೂಕ್ಷ್ಮವಾದ ಕೆತ್ತನೆ ಕೆಲಸದಿಂದ ಅಲಂಕರಿಸಲಾಗಿದೆ. ಅನೇಕ ಬಗೆಯ ಅಮೂಲ್ಯ ಲೋಹಗಳು ಇದಕ್ಕೆ ಮೆರುಗನ್ನು ಕೊಟ್ಟಿವೆ. ಪಕ್ಕದಲ್ಲಿ ಷಹಜಹಾನನ ದೊಡ್ಡ ಸ್ಮಾರಕ ಸಮಾಧಿ. ಸಮಾಧಿಗಳ ಸುತ್ತಲಿನ ಗೋಡೆಯಲ್ಲಿ ಸುಂದರವಾದ ಹೂವುಬಳ್ಳಿಗಳನ್ನು ತೋರಿಸುವ ಸೂಕ್ಷ್ಮ ಕೆತ್ತನೆ ಕೆಲಸವಿದೆ. ಅಮೃತಶಿಲೆಯಲ್ಲಿ ಕೊರೆದ ಜಾಲಂದ್ರದಿಂದ ಬೆಳಕು ಒಳಬಂದು ಸ್ಮಾರಕಗಳನ್ನು ಬೆಳಗುತ್ತದೆ.

ಈ ಕೋಣೆಯ ಕೆಳಭಾಗದಲ್ಲಿ ನೆಲಮಾಳಿಗೆ ಇದೆ. ಮುಮ್ತಾಜ್ ಮತ್ತು ಷಹಜಹಾನರ ನಿಜವಾದ ಸಮಾಧಿಗಳಿರುವುದು ಇಲ್ಲೇ. ಮೇಲಿನ ಕೋಣೆಯಲ್ಲಿರುವಂಥ ಶಿಲ್ಪವೈಭವ ಇಲ್ಲಿಲ್ಲ.

ತಾಜ್‌ಮಹಲಿನ ಸುತ್ತು ಪರ್ಷಿಯದ ಮಾದರಿಯ ಸುಂದರ ತೋಟವಿದೆ. ಎದುರು ಭಾಗದಲ್ಲಿರುವ ಕೊಳದಲ್ಲಿ ತಾಜ್‌ಮಹಲ್ ಪ್ರತಿಬಿಂಬಿತವಾಗುತ್ತದೆ; ಕಟ್ಟಡ ಭಾರೀ ಆಕಾರದ್ದಾದರೂ ಪ್ರಮಾಣಬದ್ಧವಾಗಿದ್ದು ತುಂಬ ಮೋಹಕವಾಗಿ ಕಾಣುತ್ತದೆ. ಇಲ್ಲಿ ಪರ್ಷಿಯದ ಮತ್ತು ಭಾರತೀಯ ಕಲೆಗಳ ಸೊಗಸಾದ ಮಿಲನ ಕಂಡುಬರುತ್ತದೆ.

ವಿಲಾಸಪ್ರಿಯ ಷಹಜಹಾನ್ ತನ್ನ ಸ್ಮಾರಕವಾಗಿ ಯಮುನಾ ನದಿಯ ಎಡದಂಡೆಯಲ್ಲಿ ತಾಜ್‌ಮಹಲಿನಂಥದೇ ಒಂದು ಕಟ್ಟಡವನ್ನು ಕಪ್ಪುಶಿಲೆಯಲ್ಲಿ ಕಟ್ಟಿಸಬೇಕೆಂದಿದ್ದ; ಈ ಎರಡೂ ಸ್ಮಾರಕಗಳನ್ನು ಒಂದು ಬೆಳ್ಳಿಯ ಸೇತುವೆಯಿಂದ ಜೋಡಿಸಬೇಕೆಂದುಕೊಂಡಿದ್ದ. ಆದರೆ ಅವನ ಅನಂತರ ಪಟ್ಟವೇರಿದ ಔರಂಗಜೇಬ ತನ್ನ ಸಹೋದರರನ್ನು ಕೊಂದದ್ದಲ್ಲದೆ, ತಂದೆ ಷಹಜಹಾನನನ್ನು ಸೆರೆಯಲ್ಲಿಟ್ಟ. "ತಂದೆಗೆ ನನ್ನ ತಾಯಿ ಎಂದರೆ ತುಂಬ ಪ್ರೀತಿ. ಸತ್ತಮೇಲೂ ಅವರಿಬ್ಬರೂ ಒಟ್ಟಿಗೇ ಇರಲಿ" ಎಂದು ಮುಮ್ತಾಜಳ ಸಮಾಧಿಯ ಪಕ್ಕದಲ್ಲೇ ಷಹಜಹಾನನ ಸಮಾಧಿಯನ್ನು ನಿರ್ಮಿಸಿದ —ಎಂದು ಒಂದು ಕಥೆ ಪ್ರಚಲಿತವಿದೆ.

ತಾಜ್‌ಮಹಲು ಷಹಜಹಾನನಿಂದ ನಿರ್ಮಿತವಾಗಲಿಲ್ಲ; ಮೊದಲು ಅದೊಂದು ದೇವಾಲಯವೋ ಅರಮನೆಯೋ ಆಗಿತ್ತು; ಷಹಜಹಾನ್ ಅದನ್ನು ಸಮಾಧಿಯನ್ನಾಗಿ ಬಳಸಿಕೊಂಡ ಎಂದು ವಾದಿಸುವ ಇತಿಹಾಸ ಸಂಶೋಧಕರೂ ಇದ್ದಾರೆ.

ತಾಜ್‌ಮಹಲ್ ಜಗತ್ತಿನ ಆಕರ್ಷಕ ಕಟ್ಟಡಗಳಲ್ಲೊಂದು ಎಂಬ ಬಗೆಗೆ ಮಾತ್ರ ಭಿನ್ನಾಭಿಪ್ರಾಯವಿಲ್ಲ.

**ನೋಡಿ :** ತಾಜ್‌ಮಹಲ್—ಸಂಪುಟ-೧

## ತಾನ್‌ಸೇನ್

ಸಂಗೀತದ ಸಮ್ರಾಟ. ಈ ಸಮ್ರಾಟನಿಗೆ ಅನೇಕ ಅನುಯಾಯಿಗಳು ಇದ್ದದ್ದು ಮಾತ್ರವಲ್ಲದೆ ನಿರ್ಜೀವ ವಸ್ತುಗಳೂ ಇವನ ಇಚ್ಛೆಗೆ ಮಣಿಯುತ್ತಿದ್ದುವಂತೆ! ಇವನು 'ದೀಪಕರಾಗ'ದಲ್ಲಿ ಹಾಡಿದರೆ ದೀಪಗಳೆಲ್ಲ ತಮ್ಮಿಂದ ತಾವೇ ಹೊತ್ತಿಕೊಳ್ಳುತ್ತಿದ್ದುವಂತೆ. ಇವನು 'ಮೇಘ ಮಲ್ಹಾರ್'



ರಾಮ್‌ತನು : ತಾನ್‌ಸೇನ್

ಹಾಡಿದಾಗ ಮೋಡಗಳು ಕವಿದು ಮಳೆ ಸುರಿಸುತ್ತಿದ್ದುವಂತೆ. ಬರಿಯ ಹಾಡಿನಿಂದಲೇ ಮರಗಳನ್ನು ಓಲಾಡಿಸುವ, ಬಂಡೆಗಳನ್ನು ಬಗ್ಗಿಸುವ ಶಕ್ತಿ ಇವನಲ್ಲಿದ್ದಿತಂತೆ. ಹೀಗೆಲ್ಲ ಕಥೆ ಇದೆ.

ಅಕ್ಬರನ ಆಸ್ಥಾನದಲ್ಲಿದ್ದ 'ನವರತ್ನ'ಗಳಲ್ಲಿ ಒಬ್ಬನಾಗಿದ ತಾನ್‌ಸೇನ್ ಹಿಂದೂಸ್ತಾನಿ ಸಂಗೀತದ ಪಿತಾಮಹ. 'ಧ್ರುಪದ್' ಶೈಲಿಯ ಹಾಡುಗಾರಿಕೆಯನ್ನು ರೂಢಿಗೆ ತಂದದ್ದೇ ಅವನು. ತೋಡಿ, ದರ್ಬಾರಿ, ದರ್ಬಾರಿ ಕಾನಡ, ಮೇಘಮಲ್ಹಾರ್, ಸಾರಂಗ್ ಮುಂತಾದ ರಾಗಗಳಲ್ಲಿ ಈತ ರಚಿಸಿದ ಕೃತಿಗಳು ನಾಲ್ಕು ಶತಮಾನಗಳ ಬಳಿಕ ಇಂದಿಗೂ ಜನಪ್ರಿಯವಾಗಿವೆ. ಇವನು ಬರೆದ ಸಂಗೀತ ಗ್ರಂಥಗಳಾದ 'ಸಂಗೀತ ಸಾರ' ಮತ್ತು 'ರಾಗಮಾಲಾ'ಗಳು ಅಮೂಲ್ಯ ಗ್ರಂಥಗಳೆನಿಸಿವೆ. ತಾನ್‌ಸೇನ್ ಶ್ರೇಷ್ಠ ಕೊಳಲು ವಾದಕನೂ ಆಗಿದ್ದ. ಅವನ ಮರಣಾನಂತರ ಅವನ ಮಗಳು ವೇಣುವಾದನದಲ್ಲಿ ಒಂದು ಘರಾಣವನ್ನೇ ರೂಪಿಸಿದಳು.

ಗ್ವಾಲಿಯರ್ ನಗರದಿಂದ ತುಸು ದೂರದಲ್ಲಿದ್ದ ಬೇಹರ್ ಪಟ್ಟಣದಲ್ಲಿ 1506ರಲ್ಲಿ ತಾನ್‌ಸೇನನ ಜನನ. ತಂದೆ ಮಕರಂದ ಪಾಂಡೆ ಪುರೋಹಿತನಾಗಿದ್ದ. ಮಗನ ಚಿಕ್ಕಂದಿನ ಹೆಸರು ರಾಮ್‌ತನು. ತಾನ್‌ಸೇನ್—ಮುಂದೆ ಇವನು ಅಕ್ಬರನ ಆಸ್ಥಾನದ ಸಂಗೀತಗಾರನಾದಾಗ ಚಕ್ರವರ್ತಿ ಮಾಡಿದ ನಾಮಧೇಯ.

ಚಿಕ್ಕಂದಿನಲ್ಲೇ ತಂದೆತಾಯಿಯರನ್ನು ಕಳೆದುಕೊಂಡ ಮೇಲೆ ತಾನ್‌ಸೇನ್ ಮಹಮ್ಮದ್ ಗೌಸ್ ಎಂಬ ಮೌಲ್ವಿಯೊಡನೆ ಗ್ವಾಲಿಯರ್ ನಗರಕ್ಕೆ ಬಂದ. ತಾನ್‌ಸೇನ್‌ಗೆ ಚಿಕ್ಕಂದಿನಿಂದಲೇ ಒಳ್ಳೆಯ ಶಾರೀರವಿತ್ತು. ಅವನು ಸುಮಧುರವಾಗಿ ಹಾಡುತ್ತಿದ್ದ. ಬೃಂದಾವನದ ಸ್ವಾಮಿ ಹರಿದಾಸರಲ್ಲಿ ಶಿಷ್ಯವೃತ್ತಿ ನಡೆಸಿ ತಾನ್‌ಸೇನ್ ಸಂಗೀತ ವಿದ್ಯೆಯಲ್ಲಿ ಪಾರಂಗತನಾದ. ಕರ್ನಾಟಕದಿಂದ ಉತ್ತರಕ್ಕೆ ಬಂದಿದ್ದ ಸಂಗೀತಶಾಸ್ತ್ರಜ್ಞ ಹಾಗೂ ವಾಗ್ಗೇಯಕಾರ ಪುಂಡರೀಕ ವಿಠಲನಲ್ಲೂ ಈತ ಸಂಗೀತಾಭ್ಯಾಸ ಮಾಡಿದನೆಂಬ ಹೇಳಿಕೆಯಿದೆ. ಇವನ ಕಂಠಮಾಧುರ್ಯಕ್ಕೆ ಮಾರುಹೋಗಿ ರೇವಾದ ಮಹಾರಾಜ ಈತನನ್ನು ತನ್ನ ಆಸ್ಥಾನ ಸಂಗೀತಗಾರನಾಗಿ ಮಾಡಿಕೊಂಡ. ಅನಂತರ ಅಕ್ಬರ ಚಕ್ರವರ್ತಿ ಇವನನ್ನು ಆಹ್ವಾನಿಸಿ, ತನ್ನ ಆಸ್ಥಾನದ ಪ್ರಮುಖ ಸಂಗೀತ ವಿದ್ವಾಂಸನನ್ನಾಗಿ ಮಾಡಿದ. ತನಗೆ ಆಶ್ರಯನೀಡಿ, ಪ್ರೋತ್ಸಾಹಿಸಿದ ರೇವಾ ಮಹಾರಾಜನನ್ನೂ ಅಕ್ಬರನನ್ನೂ ಕುರಿತು ತಾನ್‌ಸೇನ್‌ಗೆ ತುಂಬ ಗೌರವ. ಇವರನ್ನು ಪ್ರಶಂಸಿಸಿ ತಾನ್‌ಸೇನ್ ಹಾಡುಗಳನ್ನು ರಚಿಸಿದ್ದಾನೆ. ಇವನ ಉಳಿದ ರಚನೆಗಳು ಶಿವ, ಕೃಷ್ಣ ಮತ್ತು ಗಂಗಾದೇವಿಯರನ್ನು ಕುರಿತ ಭಕ್ತಿಗೀತೆಗಳು.

ಸೂರದಾಸ, ತುಳಸೀದಾಸ, ಮೀರಾಬಾಯಿ, ಬೈಜು ಮತ್ತು ರಾಮದಾಸ್ ಮುಂತಾದವರು ತಾನ್‌ಸೇನನ ಸಮಕಾಲೀನರು. ಕೀರ್ತಿಯ ಶಿಖರದಲ್ಲಿದ್ದಾಗಲೇ –1587ರಲ್ಲಿ– ತಾನ್‌ಸೇನನ ದೇಹಾಂತವಾಯಿತು. ಗ್ವಾಲಿಯರ್‌ನಲ್ಲಿ ಇವನ ಸಮಾಧಿ ಇದೆ. ಪ್ರತಿ ವರ್ಷ ಗ್ವಾಲಿಯರ್‌ನಲ್ಲಿ 'ತಾನ್‌ಸೇನ್ ಉತ್ಸವ' ನಡೆಯುತ್ತದೆ. ಭಾರತದ ಎಲ್ಲೆಡೆಗಳ ಸಂಗೀತಗಾರರು ಇಲ್ಲಿ ಕಲೆತು ಈ ಮಹಾಗಾಯಕನಿಗೆ ಗೌರವ ಅರ್ಪಿಸುತ್ತಾರೆ.

## ತ್ಯಾಗರಾಜ

ಚಿಕ್ಕಂದಿನಲ್ಲೇ ಮನೆಯ ಗೋಡೆಗಳ ಮೇಲೆ, ನಾಮಾವಳಿಗಳನ್ನು ಸೇರಿಸಿ ಭಜನೆಗಳನ್ನು ಬರೆಯುತ್ತಿದ್ದ ಬಾಲಕನಿಗೆ ಆಗಲೇ ಕವಿತಾಶಕ್ತಿ ಪ್ರಾಪ್ತವಾಗಿತ್ತು. ಮುಂದೆ ಸಾಹಿತ್ಯ ಸಂಗೀತಗಳ ಅಭ್ಯಾಸ, ಅವರ ಪ್ರತಿಭೆಗೆ ಅಪೂರ್ವ ಸೊಬಗನ್ನಿತ್ತಿತ್ತು. ಕೃತಿಗಳನ್ನು ಬರೆಯುವ ಬದಲು ಉಸಿರಾಡುವಷ್ಟು ಸಹಜವಾಗಿ ಒಮ್ಮೆಗೇ ಹಾಡಿದ ಈ ವ್ಯಕ್ತಿಯೇ ತ್ಯಾಗರಾಜರು. ಇವರು ಕರ್ಣಾಟಕ ಸಂಗೀತದ ಜೀವಾಳ.

'ಅಕಟಕಟ, ನನ್ನ ಚರಿತ್ರೆ ಕರ್ಣಕಠೋರವಾದದ್ದಯ್ಯ ನನ್ನನ್ನು ಯಾವ ರೀತಿ ಕಾಪಾಡುವೆಯೋ ಕಾಣೆ', (ಕಟಕಟನಾ ಚರಿತಮು ಕರ್ಣಕಠೋರಮಯ್ಯ ಎಟುಲ ಬ್రోతುವೊ ತೆಲಿಯು) ; 'ನಮ್ಮ ಜಾನಕಿ ಕೈ ಹಿಡಿದು ತಾನೇ ನೀನು ಮಹಾಪುರುಷನಾದೆ' (ಮಾ ಜಾನಕಿ ಚೆಟ್ಟಬಟ್ಟಗ ಮಹಾರಾಜುವೈತಿವಿ) ; 'ರಘು ವಂಶೋದ್ಧಾರಕನಾದ ರಾಮಾ, ನಿನ್ನ ಸಮಾನರಾರಯ್ಯ' (ರಾಮು ನೀ ಸಮಾನಮೆವರು ರಘುವಂಶೋದ್ಧಾರಕ) –ಹೀಗೆಲ್ಲ ಪರಿಪರಿಯಾಗಿ ರಾಮನನ್ನು ಬೇಡಿ, ಕಾಡಿ, ಪ್ರೀತಿಯಿಂದ ಹಳಿದು, ನಿಂದಾಸ್ತೋತ್ರಮಾಡಿ, ತಮ್ಮ ಮುಕ್ತಿಮಾರ್ಗವನ್ನು ಕಂಡುಕೊಂಡರು ತ್ಯಾಗರಾಜರು. ಅವರು ತಮ್ಮ ಭಕ್ತಿಯನ್ನು 'ನಾದಸುಧಾರಸ'ದಲ್ಲಿ ಮಿಾಯಿಸಿ, ಲಲಿತ ಸಾಹಿತ್ಯ ಹಾಗೂ ಮಾಧುರ್ಯಗಳು ತೀವಿದ ಸುಂದರ ಕೃತಿಗಳನ್ನು ರಚಿಸಿ ಶ್ರೀರಾಮನಿಗೆ ಅರ್ಪಿಸಿದರು. ಒಳ್ಳೆಯ ಕವಿತಾಶಕ್ತಿ, ವಿವಿಧ ತಾಳಗಳ ಜ್ಞಾನ ಹಾಗೂ ಕೃತಿಯ ನಡೆ ಅಥವಾ ಗತಿಯಲ್ಲಿ ವ್ಯತ್ಯಾಸ, ಭಾವಪೂರ್ಣತೆ ಇವುಗಳಿಂದ ಅವರ ಕೃತಿಗಳು ಶೋಭಿಸುತ್ತವೆ.

ತ್ಯಾಗರಾಜರು ಬದುಕಿದ್ದ ಕಾಲ ಕರ್ಣಾಟಕ ಸಂಗೀತದ ಹೆಮ್ಮೆಯ ಕಾಲ. ತ್ಯಾಗರಾಜರು, ಶಾಮಶಾಸ್ತ್ರಿಯವರು, ಮುತ್ತುಸ್ವಾಮಿ ದೀಕ್ಷಿತರು—ಈ ಮೂವರು ಆಗಿನ ಶ್ರೇಷ್ಠ ವಾಗ್ಗೇಯಕಾರರು. ಇವರು ಕರ್ಣಾಟಕ ಸಂಗೀತದ ಸಂಪತ್ತನ್ನು ಬೆಳೆಸಿ ಸುವರ್ಣಯುಗವನ್ನೇ ನಿರ್ಮಿಸಿದರು. ಈ ಮೂವರಲ್ಲಿ ಪ್ರಮುಖರು ತ್ಯಾಗರಾಜರು. ಕೃತಿಗಳ ವೈವಿಧ್ಯ, ಸಂಖ್ಯೆ ಹಾಗೂ ಹಿರಿಮೆಯಲ್ಲಿ ಯಾರೂ ಇವರ ಸಮನಿಲ್ಲ. ಅವರ ಪಾಲಿಗೆ ಇಷ್ಟದೈವ ಶ್ರೀರಾಮ ; ಆತ ಅವರೊಡನೆ ಸದಾ ವಿಹರಿಸುತ್ತಿದ್ದ ಸಂಗಾತಿ.

ಸಾವಿರಾರು ಕೃತಿಗಳನ್ನು ತ್ಯಾಗರಾಜರು ರಚಿಸಿದ್ದಾರೆಂದು ಪ್ರತೀತಿ. ಆದರೆ ನಮಗೆ ಲಭಿಸಿರುವುದು ಸುಮಾರು ಎಂಟು ನೂರು ಮಾತ್ರ. ತೆಲುಗು ಹಾಗೂ ಸಂಸ್ಕೃತ ಎರಡು ಭಾಷೆಗಳಲ್ಲಿಯೂ ಅವರು ಕೃತಿರಚನೆ ಮಾಡಿದ್ದಾರೆ. ಹೆಚ್ಚಿನ ಕೃತಿಗಳು ತೆಲುಗಿನಲ್ಲಿವೆ.

ತ್ಯಾಗರಾಜರು ತಂಜಾವೂರು ಜಿಲ್ಲೆಯ ತಿರುವಾರೂರಿನಲ್ಲಿ 1767ರ ಮೇ 4ರಂದು ಜನಿಸಿದರು. ತೆಲುಗು ಮುಲಿಕಿನಾಡು ಮನೆತನ. ತಾತ ಗಿರಿರಾಜರು ಕವಿ. ತಂದೆ ರಾಮಬ್ರಹ್ಮರಿಗೆ ಸಂಸ್ಕೃತ ಪಾಂಡಿತ್ಯವಿದ್ದಿತು. ತಾಯಿ ಪುರಂದರದಾಸರ ಪದಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು.

[illegible] 'ರಾಮತಾರಕ' ಮಂತ್ರದ ಉಪದೇಶ ದೊರೆಯಿತು.

ವಿವಾಹವಾದ ಮೇಲೆ ತ್ಯಾಗರಾಜರಿಗೆ ಗೃಹಸ್ಥ ಜೀವನದ ಸಮಸ್ಯೆಗಳನ್ನು ಎದುರಿಸುವುದು ಕಷ್ಟವಾಯಿತು. ಅವರೂ ಆಸ್ಥಾನ ವಿದ್ವಾಂಸರಾಗಲು ಕರೆಬಂದಾಗ ಅದನ್ನು ನಿರಾಕರಿಸಿದರು. ಒಪ್ಪುವುದೆಂದರೆ ತಮ್ಮ ಕಲೆಯನ್ನು ಬೆಲೆಗೆ ಮಾರಿಕೊಂಡಂತೆ ಎಂಬುದು ಅವರ ಅಭಿಪ್ರಾಯವಾಗಿತ್ತು. ತಮ್ಮ ಕುಟುಂಬ ಮತ್ತು ಶಿಷ್ಯರ ಪೋಷಣೆಗಾಗಿ ಉಂಛವೃತ್ತಿ ಅವಲಂಬಿಸಿದರು.

ತ್ಯಾಗರಾಜರಿಗೆ ನಾರದ ಮಹರ್ಷಿಗಳೆಂದರೆ ತುಂಬ ಗೌರವ, ಅಭಿಮಾನ. 'ಈ ದೈವಿಕಚಾರಣ ಕವಿಯ ಸಂದರ್ಶನ ಅವರಿಗಾಗಿದ್ದಿತು ; ನಾರದರಿಂದ ಸ್ವರಾರ್ಣವ ಎಂಬ ಸಂಗೀತಶಾಸ್ತ್ರ ಕೃತಿ ಅವರಿಗೆ ಲಭ್ಯವಾಯಿತು –ಎಂಬ ದಂತಕಥೆ ಇದೆ. ನಾರದರನ್ನು ಹೊಗಳಿ ಹಾಡಿದ ಇವರ ಪಲವಾರು ಕೀರ್ತನೆಗಳಿವೆ.

ಸಂಗೀತವು ಕೀರ್ತನೆಗಳ ರೂಪದಲ್ಲಿ ಹೆಚ್ಚು ಪ್ರಚಾರಗೊಂಡದ್ದು ತ್ಯಾಗರಾಜರಿಂದ. ಕೀರ್ತನೆ ಎಂಬುದು ಭಕ್ತಿರಸ ಪ್ರಧಾನವಾದ ರಚನೆ. ಸಾಮಾನ್ಯವಾಗಿ ಪಲ್ಲವಿ, ಅನುಪಲ್ಲವಿ, ಚರಣಗಳು ಇದರ ಅಂಗಗಳು. ವಿಲಂಬ, ಮಧ್ಯಮ ಹಾಗೂ ದ್ರುತ ಈ ಮೂರು ಗತಿಗಳಲ್ಲೂ ತ್ಯಾಗರಾಜರ ರಚನೆಗಳಿವೆ. ಇವರದು ಆಡುಮಾತಿಗೆ ಅತಿ ಸಮೀಪವಾದ ಸಾಹಿತ್ಯಭಾಷೆ. ಆಡಂಬರದ ಪದಗಳಿಲ್ಲ. ಹೀಗಾಗಿ, ಸಾಮಾನ್ಯ ಜನತೆಯನ್ನೂ ಅವರ ಕೀರ್ತನೆಗಳು ರಂಜಿಸುತ್ತವೆ.

ಒಮ್ಮೆ ಇವರ ಆರಾಧ್ಯದೈವವಾದ ಶ್ರೀರಾಮನ ಮೂರ್ತಿ ಕಳವಾಯಿತು. ತ್ಯಾಗರಾಜರ ಶೋಕ ಹೇಳತೀರದು. 'ಹರಿಯೇ ನಾನು (ನಿನ್ನನ್ನು) ಎಲ್ಲಿ ಹುಡುಕಲಿ' (ನೇನೆಂದು ವೆದಕುದುರಾ ಹರಿ) ಎಂದು ಚಡಪಡಿಸಿದರು, ಕಣ್ಣೀರಿಟ್ಟರು. ಕಡೆಗೆ ಅವರು ನದಿಯಲ್ಲಿ ಸ್ನಾನಮಾಡುತ್ತಿದ್ದಾಗ ಶ್ರೀರಾಮ ಮೂರ್ತಿ ನದಿಯ ನೀರಿನಲ್ಲಿ ದೊರಕಿತು. 'ಕನುಕೊಂಟಿನೀ ಶ್ರೀರಾಮುನಿ' (ಶ್ರೀರಾಮನನ್ನು ಕಂಡುಕೊಂಡೆ) ಎಂದು ಹರ್ಷಪುಲಕಿತರಾದರು.

ತಮ್ಮ ಶಿಷ್ಯರೊಡನೆ ತ್ಯಾಗರಾಜರು ದೊಡ್ಡ ತೀರ್ಥಯಾತ್ರೆ ಕೈಗೊಂಡರು. ತಾವು ಸಂದರ್ಶಿಸಿದ ದೇವರುಗಳನ್ನು ಪ್ರಾರ್ಥಿಸುವ ಪಲವಾರು ಕೃತಿಗಳನ್ನು ರಚಿಸಿ ಹಾಡಿದರು.

ತ್ಯಾಗರಾಜರು ನಿಧನರಾದದ್ದು 1847ನೆಯ ಜನವರಿ 6ರಂದು. ಇದಕ್ಕೆ ಮೊದಲು ಶ್ರೀರಾಮನೇ ತಮ್ಮನ್ನು ಕನಸಿನಲ್ಲಿ ಕರೆದಂತಾಗಲು ಸನ್ಯಾಸ ಸ್ವೀಕರಿಸಿದರು. ಜನವರಿ 5ರಂದು, ಮಾರನೆಯ ದಿನ ತಾವು ಶ್ರೀರಾಮನ ಬಳಿಗೆ ತೆರಳುವುದಾಗಿ ತಿಳಿಸಿ, ಅವ್ಯಾಹತವಾಗಿ ಭಜನೆ ಮಾಡಬೇಕೆಂದು, ಭಕ್ತವೃಂದದವರನ್ನು ಕೋರಿದರು. 6ನೆಯ ದಿನಾಂಕ 11 ಗಂಟೆಗೆ ಸರಿಯಾಗಿ ಸ್ವರ್ಗಸ್ಥರಾದರು. ಕಾವೇರಿ ತೀರದಲ್ಲಿರುವ ತಿರುವಯ್ಯಾರಿನಲ್ಲಿ ತಮ್ಮ ಗುರುಗಳ ಶವಸಂಸ್ಕಾರವಾದ ಬನದ ಬಳಿಯೇ ತಮ್ಮ ದೇಹಕ್ಕೂ ಸಂಸ್ಕಾರ ಮಾಡಬೇಕೆಂದು ಕೇಳಿಕೊಂಡಿದ್ದರು. ಅದಕ್ಕೆ ಅನುಸಾರವಾಗಿ ಅವರ ಶವಸಂಸ್ಕಾರ ಜರುಗಿತು. ಪ್ರತಿ ವರ್ಷ ಪುಷ್ಯ ಬಹುಳ ಪಂಚಮಿಯಂದು ತಿರುವಯ್ಯಾರಿನಲ್ಲಿ ತ್ಯಾಗರಾಜರ ಆರಾಧನೆ ನಡೆಯುತ್ತದೆ.

'ಎಂದರೋ ಮಹಾನುಭಾವುಲು ಅಂದರಿಕಿ ವಂದನಮುಲು' (ಎಷ್ಟು ಮಹಾನುಭಾವರಿರುವರೋ ಅವರೆಲ್ಲ ವಂದನೆಗಳು) ಎಂಬ ಶ್ರೀ ರಾಗದ ಜನಪ್ರಿಯ ಕೃತಿ ತ್ಯಾಗರಾಜರ ಪಂಚರತ್ನಗಳಲ್ಲಿ ಒಂದು. ಇವಲ್ಲದೆ. 'ಜಗದಾನಂದಕಾರಕ' (ನಾಟರಾಗ). 'ದುಡುಕುಗಲ' (ಗೌಳರಾಗ). 'ಸಾಧಿಂಚನೆ' (ಆರಭಿ ರಾಗ). 'ಕನಕನರುಚಿರಾ' (ವರಾಳಿರಾಗ) ಎಂಬ ಘನ ರಾಗದಲ್ಲಿ ರಚಿಸಿರುವ ನಾಲ್ಕು ಕೃತಿಗಳು ಕಾಣಬರುತ್ತವೆ, ರಾಗ. ಭಾವ. ಸಾಹಿತ್ಯ, ಸ್ವರಸಂಯೋಜನೆಗಳಲ್ಲಿ ಅವರ ಕೌಶಲ್ಯವನ್ನು ಎತ್ತಿಹಿಡಿದಿವೆ. ಒಮ್ಮೆ ಪಾಶ್ಚಾತ್ಯ ಸಂಗೀತದ ಬ್ಯಾಂಡ್ ಧಾಟಿ ಕೇಳಿ, ಕೂಡಲೇ ಕರ್ಣಾಟಕ ಸಂಗೀತದಲ್ಲಿ ಆ ಬಗೆಯ ಧಾಟಿಯೊಂದನ್ನು ರಚಿಸಿದರು. ಕೇವಲ ಸಂಪ್ರದಾಯಕ್ಕೆ ಬಲಿಯಾದವರಲ್ಲ ತ್ಯಾಗರಾಜರು. ಅವರದು ಚಿತ್ತಶುದ್ಧಿ ಮಾರ್ಗ.



"ನೇನೆಂದು ವೆದಕುದುರಾ ಹರಿ"

'ಮನಸು ನಿಲ್ಪ ಶಕ್ತಿಲೇಕ ಪೋತೆ ಮಧುರ ಘಂಟ ಪೂಜೆ ವಿರುಲ ಏಮಿ ಜೇಸುನು' (ಮನಸ್ಸನ್ನು ದೃಢಗೊಳಿಸದಿದ್ದ ಮೇಲೆ ಕೇವಲ ಪೂಜೆ ಏನು ಮಾಡೀತು), 'ಚಕ್ಕನಿ ರಾಜಮಾರ್ಗಮುಲುಂಡಗ ಸಂದುಲ ದೂರನೇಲ ಓ ಮನಸಾ' (ನಿನ್ನೆದುರು ಪ್ರಶಸ್ತವಾದ ಹೆದ್ದಾರಿಯಿರುವಾಗ ಸಂದುಗೊಂದುಗಳಲ್ಲಿ ದೂರಲೇಕೆ ಮನಸ್ಸೆ), 'ನಿಧಿ ಚಾಲಸುಖಮಾ ರಾಮು ನಿ ಸನ್ನಿಧಿ ಸೇವ ಸುಖಮಾ' (ರಾಮನಾಮವೆಂಬ ನಿಧಿಗಿಂತ ದೊರೆ ಕೊಡುವ ಕಾಂಚಾಣ ಹೆಚ್ಚೇ ?)-ಇದು ಅವರ ತತ್ತ್ವ ವೈಖರಿ. ಕೇಳುವವರ ಮನಸ್ಸು, ಹೃದಯಗಳು, ಈ ತತ್ತ್ವಕ್ಕೆ ಸೋಲುವಂತೆ ಸಾಹಿತ್ಯ ನಿರೂಪಣೆ. ಅವರ

ಬೋಧಪ್ರದವಾದ, ತತ್ತ್ವಪೂರಿತ ಕೃತಿಸಮೂಹ 'ತ್ಯಾಗರಾಜೋಪನಿಷತ್ತು' ಎಂದು ಕರೆಯಲ್ಪಟ್ಟಿದೆ.

ಇವರ ಮುಖ್ಯ ಶಿಷ್ಯರಲ್ಲಿ ವೀಣಾ ಕುಪ್ಪಯ್ಯರ್, ವಾಲಾಜಾಪೇಟೆ ವೆಂಕಟರಮಣ ಭಾಗವತರನ್ನು ಹೆಸರಿಸಬಹುದು. ಅವರ ಶಿಷ್ಯವೃಂದ ಶ್ರದ್ಧೆಯಿಂದ ತ್ಯಾಗರಾಜರ ರಚನೆಗಳ ತಾಳ, ರಾಗ ಹಾಗೂ ಸ್ವರ ಸಂಯೋಜನೆಗಳನ್ನು ಕಾಪಾಡಿಕೊಂಡು ಬಂದುದರಿಂದ ಇಂದು ಕೂಡ ಅವು ಬಹುಮಟ್ಟಿಗೆ ಮೂಲರೂಪದಲ್ಲಿ ಲಭಿಸಿವೆ.

ತ್ಯಾಗರಾಜರು ಗೇಯ ನಾಟಕಗಳನ್ನೂ ರಚಿಸಿದ್ದಾರೆ. 'ಪ್ರಹ್ಲಾದ ಭಕ್ತಿ ವಿಜಯ', 'ನೌಕಾ ಚರಿತ್ರೆ', 'ಸೀತಾರಾಮ ವಿಜಯ' ಇವು ಅವರ ಗೇಯ ನಾಟಕಗಳು. ಇವು, ಹಲವಾರು ಸುಂದರ ಕೃತಿಗಳನ್ನೇ ಸೇರಿಸಿ ಮಾಲೆಯಾಗಿ ಹೆಣೆದಂತಿವೆ. ಇವುಗಳಲ್ಲಿನ ಹಲವು ಭಾಗಗಳನ್ನು ಬಿಡಿ ಕೀರ್ತನೆಗಳಾಗಿಯೂ ಹಾಡಬಹುದು. ಇವರ ಕೃತಿಗಳಲ್ಲೆಲ್ಲ 'ತ್ಯಾಗರಾಜ' ಎಂಬ ಅಂಕಿತ ಇದೆ.

## 'ತಿರುಕ್ಕುರಳ್'

'ಕುರಳ್' ತಮಿಳು ಸಾಹಿತ್ಯದಲ್ಲಿ ತುಂಬ ಪ್ರಸಿದ್ಧವಾದ ಪ್ರಾಚೀನ ಗ್ರಂಥ. ಈ ಗ್ರಂಥವು ಕ್ರಿಸ್ತ ಶಕ ಆರಂಭದಲ್ಲಿಯೋ ಅದಕ್ಕೆ ಸ್ವಲ್ಪ ಮುಂಚೆಯೋ ರಚಿತವಾಗಿರಬೇಕು ಎಂದು ಕೆಲವು ವಿದ್ವಾಂಸರ ಅಭಿಪ್ರಾಯ.



ಕರ್ತೃ : ತಿರುವಳ್ಳುವರ್

ಈ ಗ್ರಂಥವನ್ನು ಬರೆದವನು 'ತಿರುವಳ್ಳುವರ್'. 'ತಿರು' ಎಂದರೆ 'ಶ್ರೀ'ಯನ್ನು ಸೂಚಿಸುವ ಪದ. ಕುರಳ್ ಗ್ರಂಥಕರ್ತನ ಸ್ಥಳ, ಕಾಲ, ಮತಗಳನ್ನು ಕುರಿತ ವಿವರಗಳು ಸ್ಪಷ್ಟವಿಲ್ಲ. ಈ ಬಗೆಗೆ ಅವನ ಗ್ರಂಥದಲ್ಲೂ ಸೂಚನೆಗಳಿಲ್ಲ. ತಿರುವಳ್ಳುವರ್ ಶೈವನೆಂದು ಕೆಲವರು, ಜೈನನೆಂದು ಮತ್ತೆ ಕೆಲವರು ವಾದಿಸುತ್ತಾರೆ. ಕುರಳ್ ಎಂಬ ಮಾತಿನ ಅರ್ಥ ಚಿಕ್ಕದು, ಕುಳ್ಳಾದ್ದು ಎಂದು. ಈ ಗ್ರಂಥದಲ್ಲಿ ಉಪಯೋಗಿಸಿರುವ ಛಂದಸ್ಸಿನ ಹೆಸರು ಕೂಡ 'ಕುರಳ್ ವೆಣ್ಬಾ' ಎಂದು. ಇದು ತಮಿಳು ಛಂದಸ್ಸುಗಳಲ್ಲೆಲ್ಲ ಅತ್ಯಂತ ಚಿಕ್ಕದು. ಕುರಳ್ ಕೇವಲ ಒಂದೂವರೆ ಸಾಲಿನ ಪದ್ಯ. ಕುರಳ್ ಪದ್ಯಗಳು ಸರ್ವಜ್ಞನ ತ್ರಿಪದಿಗಳ ಅರ್ಧದಷ್ಟು ಕಿರಿದಾದರೂ ಅವುಗಳಲ್ಲಿ ಅಡಗಿರುವ ಅರ್ಥ ಹಿರಿದಾದದ್ದು. "ಸಾಸಿವೆಯನ್ನು ಕೊರೆದು ಟೊಳ್ಳು ಮಾಡಿ ಅದರೊಳಗೆ ಸಪ್ತ ಸಾಗರಗಳನ್ನು ಅಡಗಿಸಿದಂತೆ. ಮಹಾವಿಷ್ಣುವು ಕುರಳ್ ಆಗಿ (ವಾಮನನಾಗಿ) ತನ್ನ ಎರಡು ಹೆಜ್ಜೆಗಳಿಂದ ಭೂಮಿ, ಆಕಾಶಗಳನ್ನು ಅಳೆದಂತೆ, ಸತ್ಯಜ್ಞಾನಿ ತಿರುವಳ್ಳುವರ್ ಅವರು, 'ಕುರಳ್ ವೆಣ್ಬಾ' ಪಾದದಿಂದ ಲೋಕದ ಮಾನವನ ಮನಸ್ಸಿನಲ್ಲಿರುವ ಭಾವನೆಗಳನ್ನೆಲ್ಲ ಅಳೆದುಬಿಟ್ಟಿದ್ದಾರೆ" ಎಂದು ಪುರಾತನ ವಿಮರ್ಶಕರೊಬ್ಬರು ಹೇಳಿದ್ದಾರೆ.

ಈ ಗ್ರಂಥದಲ್ಲಿ ಧರ್ಮ, ಅರ್ಥ, ಕಾಮಗಳನ್ನು ಕುರಿತ (ಅರಮ್, ಪೊರುಳ್, ಇನ್ಬಮ್) ಮೂರು ಭಾಗಗಳಿವೆ. ಆದುದರಿಂದ ಇದಕ್ಕೆ 'ಮುಪ್ಪಾರ್' (ಮೂರು ಭಾಗಗಳುಳ್ಳದ್ದು) ಎಂಬ ಹೆಸರು ಬಂದಿದೆ. ಇದರಲ್ಲಿ ಹತ್ತು ಹತ್ತು ಪದ್ಯಗಳ 133 'ಅಧಿಕಾರ'ಗಳಿವೆ. ಮೊದಲನೆಯ 'ಧರ್ಮ' ಭಾಗದಲ್ಲಿ 38, ಎರಡನೆಯ 'ಅರ್ಥ' ಭಾಗದಲ್ಲಿ 70, ಮೂರನೆಯ 'ಕಾಮ' ಭಾಗದಲ್ಲಿ 25. ಒಟ್ಟು 1330 ಪದ್ಯಗಳು.

ಮೊದಲನೆಯ ಭಾಗ ತುಂಬ ಪ್ರಸಿದ್ಧವಾದದ್ದು. ಇದರಲ್ಲಿ ಗೃಹಸ್ಥನ ಮತ್ತು ಸನ್ಯಾಸಿಯ ಕರ್ತವ್ಯಗಳನ್ನು ಹೇಳಲಾಗಿದೆ. ಅಹಿಂಸಾಧರ್ಮವೇ ಜೀವನದ ತಳಹದಿ ; ಸಮಾಜದ ರಚನೆಯ ಸುಭದ್ರ ಆಧಾರ ಜಾತಿರಾಹಿತ್ಯ –ಎಂಬ ಎರಡು ಮುಖ್ಯ ತತ್ತ್ವಗಳು 'ತಿರುಕ್ಕುರಳ್' ಗ್ರಂಥದಲ್ಲಿ ಪ್ರಧಾನವಾಗಿ ನಿರೂಪಿತವಾಗಿವೆ.

ತಾಳ್ಮೆ, ಕರುಣೆ, ಅನುಕಂಪ, ಕೃತಜ್ಞತೆ, ದ್ವೇಷ ಮಾಡದಿರುವುದು, ಕ್ರೋಧವನ್ನು ಜಯಿಸುವುದು, ಅಸೆಯನ್ನು ತ್ಯಜಿಸುವುದು, ವೈರಾಗ್ಯ, ಪ್ರೇಮ, ಜೀವನ ಸಂಗಾತಿ ಮುಂತಾದ ಎಷ್ಟೋ ವಿಷಯಗಳನ್ನು ಕುರಿತ ನಿರೂಪಣೆ 'ತಿರುಕ್ಕುರಳ್' ಗ್ರಂಥದಲ್ಲಿದೆ. ಮನುಷ್ಯನ ಸ್ವಭಾವ ಪ್ರವೃತ್ತಿಗಳನ್ನು ಆಳವಾಗಿ ಅಭ್ಯಾಸಮಾಡಿ, ಅತ್ಯಂತ ಮಾನವೀಯ ವಿಚಾರಗಳನ್ನು ನಿರೂಪಿಸಿದ್ದಾರೆ ತಿರುವಳ್ಳುವರ್.

'ತಿರುಕ್ಕುರಳ್' ಗ್ರಂಥದ ವಿಷಯ ನಿರೂಪಣಾ ಶೈಲಿಯನ್ನು ಈ ಒಂದೆರಡು ಪದ್ಯಗಳಿಂದ ಮನಗಾಣಬಹುದು :

"ಮಗನನ್ನು ಹೆತ್ತಾಗ ತಾಯಿಗೆ ಆಗುವ ಸಂತೋಷಕ್ಕಿಂತ ಮಿಗಿಲಾದ ಸಂತೋಷ ತನ್ನ ಮಗ ಸಂಪನ್ನನೆಂದು ಕೇಳಿದಾಗ ಆಕೆಗೆ ಉಂಟಾಗುತ್ತದೆ."

"ಕೆಟ್ಟ ಕೆಲಸದಿಂದ ಕೆಟ್ಟದಾಗುತ್ತಲೇ ಹೋಗುವುದರಿಂದ, ದುಷ್ಕೃತ್ಯಕ್ಕೆ ಬೆಂಕಿಗಿಂತಲೂ ಹೆಚ್ಚಾಗಿ ಹೆದರಬೇಕು."

## ತಿರುಮಲೆ ತಾತಾಚಾರ್ಯ ಶರ್ಮ

ಮಹಾಸಂಸ್ಕೃತ ಪಂಡಿತರಾಗಿ ಕೀರ್ತಿ ಗಳಿಸಬೇಕೆಂದು ತಿ. ತಾ. ಶರ್ಮರಿಗೆ ಚಿಕ್ಕಂದಿನಲ್ಲಿ ಆಸೆ ಇದ್ದಿತಂತೆ. ತೆಲುಗು ಅವರ ಮಾತೃಭಾಷೆ. ಕನ್ನಡ, ಸಂಸ್ಕೃತ, ಪ್ರಾಕೃತಗಳಲ್ಲಿ ವಿದ್ವಾಂಸರಾದರೂ ಅವರು ಹೆಚ್ಚು ಪ್ರಸಿದ್ಧರಾದದ್ದು ಶಾಸನ ಸಂಶೋಧಕರಾಗಿ, ಪತ್ರಕರ್ತರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ.

ತಿರುಮಲೆ ತಾತಾಚಾರ್ಯ ಶರ್ಮರು 1896ರಲ್ಲಿ ಜನಿಸಿದರು. ಅವರದು ವೇದಾಧ್ಯಯನ ಮತ್ತು ಸಂಸ್ಕೃತ ವಿದ್ವತ್ತಿಗೆ ಹೆಸರಾದ ಮನೆತನ. ಆ ವಾತಾವರಣದಲ್ಲಿ ಬೆಳೆದ ಶರ್ಮರು ಮುಂದೆ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಎಫ್. ಎ. ತನಕ ಶಿಕ್ಷಣ ಪಡೆದರು. ಆಗ ಭಾರತ ಸರಕಾರದ ಪುರಾತತ್ತ್ವ ಇಲಾಖೆಯ ಶಾಸನ ವಿಭಾಗದ ಮುಖ್ಯಾಧಿಕಾರಿಯಾಗಿ ಉದಕಮಂಡಲದಲ್ಲಿದ್ದ ಹೊಸಕೋಟೆ ಕೃಷ್ಣಶಾಸ್ತ್ರಿಗಳು ಶರ್ಮರ ಹಿರಿಯರ ಸ್ನೇಹಿತರಾಗಿದ್ದರು. ಪಾಂಡಿತ್ಯದ ಕಡೆಗೆ ಒಲವು ಉಳ್ಳವರಾದ ಶರ್ಮರನ್ನು ಶಾಸನ ಸಂಶೋಧನೆಯ ಕೆಲಸಕ್ಕೆ ಸೇರುವಂತೆ ಅವರು ಪ್ರೋತ್ಸಾಹಿಸಿದರು. ಅಂತೆಯೇ ಶರ್ಮರು ಕೃಷ್ಣಶಾಸ್ತ್ರಿಗಳ ಕಾರ್ಯಾಲಯದಲ್ಲಿ ತೆಲುಗು–ಕನ್ನಡ

ಶಾಸನ ಸಂಶೋಧಕ, ಪತ್ರಕರ್ತ, ಹೋರಾಟಗಾರ

ಸಹಾಯಕರಾಗಿ 1919ರಲ್ಲಿ ಸೇರಿದರು. ಆ ವೇಳೆಗಾಗಲೇ 1914ರಲ್ಲಿ ರಾಜಮ್ಮನವರೊಡನೆ ಶರ್ಮರ ವಿವಾಹವಾಗಿತ್ತು. ಸಾಹಿತ್ಯವು ದಂಪತಿಗಳ ಸಮಾನ ಆಸಕ್ತಿಯ ವಿಷಯವಾಗಿತ್ತು ; ಅಲ್ಲದೆ, ಸ್ವಾತಂತ್ರ್ಯ ಚಳುವಳಿ ಬಗೆಗೆ ಇಬ್ಬರಿಗೂ ಒಲವು ಇದ್ದಿತು.

ಶಾಸನ ಇಲಾಖೆಯಲ್ಲಿದ್ದಾಗ ಶರ್ಮರು ಬ್ರಿಟಿಷರ ಆಧಿಪತ್ಯದಲ್ಲಿದ್ದ ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ಸಂಚರಿಸಿ ಶಾಸನಗಳ ಅಧ್ಯಯನ ನಡೆಸಿದರು. ತಮ್ಮ ಸಂಸ್ಕೃತ, ಪ್ರಾಕೃತಜ್ಞಾನವನ್ನು ಹೆಚ್ಚಿಸಿಕೊಂಡರು. ಶಾಸನಗಳಿಗೆ ಸಂಬಂಧಿಸಿದಂತೆ ಕೆಲವು ಲೇಖನಗಳನ್ನು ಬರೆದರು. 'ಶಾಸನಗಳಲ್ಲಿನ ಕೆಲವು ಕನ್ನಡ ಕವಿಗಳು' ಎಂಬುದು ಅಂಥ ಅಧ್ಯಯನಪೂರ್ಣ ಲೇಖನಗಳಲ್ಲಿ ಒಂದು.

ದೇಶೀಯ ಇತಿಹಾಸದ ಸಂಶೋಧನೆಯ ಕೆಲಸವಾದರೂ ತಮ್ಮದು ಬ್ರಿಟಿಷ್ ಸರಕಾರದ ಚಾಕರಿ ಎಂಬ ಭಾವನೆ ಶರ್ಮರನ್ನು ಕೊರೆಯುತ್ತಿತ್ತು. ಸ್ವಾತಂತ್ರ್ಯ ಚಳುವಳಿಯೊಡನೆ ಸಂಪರ್ಕವಿಟ್ಟುಕೊಂಡಿದ್ದರು. ತಾವು ಸರಕಾರೀ ಕೆಲಸದಲ್ಲಿರುವುದನ್ನು ಲಕ್ಷಿಸದೆ ಪತ್ನಿ ತಿರುಮಲೆ ರಾಜಮ್ಮನವರನ್ನೂ ಕರೆದುಕೊಂಡು ಅಹ್ಮದಾಬಾದ್ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ, ಭಾಗವಹಿಸಿ ಬಂದರು. 1924ರಲ್ಲಿ ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನ ಕೂಡುವುದಕ್ಕೆ ಕೆಲವು ತಿಂಗಳ ಮೊದಲೇ ಶರ್ಮರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಊರಿಗೆ ಮರಳಿದ ಶರ್ಮರು ಬೆಳಗಾವಿ ಕಾಂಗ್ರೆಸ್ ಅಧಿವೇಶನವನ್ನು ಯಶಸ್ವಿಗೊಳಿಸುವುದಕ್ಕಾಗಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಸಂಚರಿಸಿ ಪ್ರಚಾರಮಾಡಿದರು.

ಬೆಳಗಾವಿ ಕಾಂಗ್ರೆಸ್ ಅಧಿವೇಶನ ಮಹತ್ವಪೂರ್ಣವಾದದ್ದು. ಅದು ಮಹಾತ್ಮಾಗಾಂಧಿಯವರೇ ಅಧ್ಯಕ್ಷತೆ ವಹಿಸಿದ್ದ ಕಾಂಗ್ರೆಸ್ ಅಧಿವೇಶನ. ಸ್ವದೇಶೀ ಚಳುವಳಿಯ ಪ್ರಚಾರ ಮತ್ತು ಆಳರಸರ ವಿರುದ್ಧ ಹೋರಾಟಕ್ಕಾಗಿ ಪತ್ರಿಕೆಯೊಂದನ್ನು ಪ್ರಾರಂಭಿಸಬೇಕೆಂದು ಶರ್ಮರು ಆಗಲೇ ನಿರ್ಧರಿಸಿದ್ದರು. ಅವರು ತಮ್ಮ ವಿಚಾರವನ್ನು ಗಾಂಧಿಜಿಗೆ ತಿಳಿಸಿ ಅವರ ಆಶೀರ್ವಾದವನ್ನು ಕೋರಿದರು. "ಪತ್ರಕರ್ತನಿಗೆ ಶೀಲ ಮತ್ತು ಶೌರ್ಯ ಎರಡೂ ಇರಬೇಕು. ಅದು ಸಿದ್ಧಿಸಲಿ" ಎಂದು ಗಾಂಧಿಜಿ ಅವರನ್ನು ಆಶೀರ್ವದಿಸಿದರು. ಈ ಆದರ್ಶವನ್ನು ಶರ್ಮರು ಸಾಧಿಸಿದರು. 1925ರಲ್ಲಿ ಅವರ 'ವಿಶ್ವ ಕರ್ನಾಟಕ' ವಾರಪತ್ರಿಕೆ ಆರಂಭವಾಯಿತು. ಹಲವಾರು ವಿಪರೀತ ತೊಡರುಗಳನ್ನು ಎದುರಿಸಿ ಅದನ್ನು ನಡೆಸಿಕೊಂಡು ಬಂದರು. ಕೆಲ ಕಾಲ 'ವಿಶ್ವ ಕರ್ನಾಟಕ' ದಿನಪತ್ರಿಕೆಯನ್ನೂ ನಡೆಸಿದರು. ಪತ್ರಿಕೆ ಅವರಿಗೆ ಉದ್ಯಮವಾಗಿರದೆ ಒಂದು ಆದರ್ಶದ ಸಾಧನೆಯ ಮಾಧ್ಯಮವಾಗಿತ್ತು. 'ವಿಶ್ವ ಕರ್ನಾಟಕ'ದಲ್ಲಿ ಆಗಿನ ರಾಜಕೀಯ ವಿಚಾರಗಳಿಗೆ ಹೇಗೋ ಹಾಗೆಯೇ ನಾಡಿನ ಸಾಹಿತ್ಯ, ಸಂಸ್ಕೃತಿ ವಿಚಾರಗಳಿಗೂ ತಕ್ಕ ಸ್ಥಾನ ದೊರಕಿತು. ಸಾಹಿತ್ಯಕ್ಕೇ ಮೀಸಲಾದ ಸಾಹಿತ್ಯ ಸಂಚಿಕೆಯನ್ನು ಆ ಪತ್ರಿಕೆ ಹೊರಡಿಸತೊಡಗಿತು. ಕನ್ನಡದಲ್ಲಿ ವೈಜ್ಞಾನಿಕ ವಿಚಾರ ಪ್ರಚಾರಕ್ಕಾಗಿ ವೈಜ್ಞಾನಿಕ ವಿಷಯಗಳ ಬರಹಗಳುಳ್ಳ ವಿಶೇಷ ಸಂಚಿಕೆಯೊಂದನ್ನೂ 'ವಿಶ್ವ ಕರ್ನಾಟಕ' ಹೊರತಂದಿತು. ತನ್ನ ಸ್ವತಂತ್ರ ಧೋರಣೆಯಿಂದಾಗಿ, ಸ್ವಾತಂತ್ರ್ಯ ಚಳುವಳಿಗೆ ಅದು ಕೊಡುತ್ತಿದ್ದ ಬೆಂಬಲದಿಂದಾಗಿ 'ವಿಶ್ವ ಕರ್ನಾಟಕ' ಸರಕಾರದ ಕೋಪಕ್ಕೆ ಗುರಿಯಾಗಿ, ಪ್ರಕಟಣೆಯನ್ನು ನಿಲ್ಲಿಸಬೇಕಾಯಿತು.

ಶಾಸನ ಇಲಾಖೆಯ ಉದ್ಯೋಗವನ್ನು ಬಿಟ್ಟಮೇಲೂ ತಾತಾಚಾರ್ಯ ಶರ್ಮರು ಶಾಸನ ಅಧ್ಯಯನ ಸಂಶೋಧನೆಗಳನ್ನು ನಿಲ್ಲಿಸಲಿಲ್ಲ. ಇಂದಿಗೂ ಆ ಕಾರ್ಯದಲ್ಲಿ ಆಸಕ್ತರಾಗಿಯೇ ಇದ್ದಾರೆ.

ಕನ್ನಡಿಗರಲ್ಲಿ ಕನ್ನಡ ಸಾಹಿತ್ಯ, ಸಂಸ್ಕೃತಿಗಳ ಬಗೆಗೆ ಅಭಿಮಾನ ಬೆಳೆಸುವುದಕ್ಕಾಗಿ ಸ್ಥಾಪಿತವಾದ ಕರ್ನಾಟಕ ಸಾಹಿತ್ಯ ಪರಿಷತ್ತಿನೊಂದಿಗೆ ಶರ್ಮರ ಸಂಬಂಧ ದೀರ್ಘಕಾಲದ್ದು. 1947ರ ಡಿಸೆಂಬರ್‌ನಲ್ಲಿ ಕಾಸರಗೋಡಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಲ್ಪಟ್ಟರು ; ಮತ್ತು ಪರಿಷತ್ತಿನ ಅಧ್ಯಕ್ಷರಾದರು. 1949ರ ಮಾರ್ಚ್‌ವರೆಗೆ ಆ ಸ್ಥಾನದಲ್ಲಿದ್ದು ಪರಿಷತ್ತಿಗೆ ಸೇವೆ ಸಲ್ಲಿಸಿದರು. ಅವರು ಕಾಸರಗೋಡು ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡಾಗ, ಮೈಸೂರಿನಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಗೆ ಸಂಬಂಧಿಸಿದ ಹೋರಾಟದಲ್ಲಿ ಭಾಗವಹಿಸಿದ್ದಕ್ಕಾಗಿ ಕಾರಾಗೃಹ ವಾಸವನ್ನು ಅನುಭವಿಸುತ್ತಿದ್ದರು. ಕೆಲವು ತಿಂಗಳ ಕಾರಾಗೃಹ ವಾಸದಿಂದ ಬಿಡುಗಡೆಯಾದದ್ದರಿಂದ ಅವರು ಸಮ್ಮೇಳನದ ಅಧ್ಯಕ್ಷತೆ ವಹಿಸುವುದು ಸಾಧ್ಯವಾಯಿತು.

'ವಿಕ್ರಾಂತ ಭಾರತ', 'ಮಾಸ್ತಿಯವರ ಮನೋಧರ್ಮ' ಮುಂತಾದ ಗ್ರಂಥಗಳನ್ನು ತಿ. ತಾ. ಶರ್ಮರು ಬರೆದಿದ್ದಾರೆ. 'ವಿಚಾರ ಕರ್ನಾಟಕ', ಅವರ ಲೇಖನಗಳ ಸಂಗ್ರಹ. ಮೈಸೂರು ಸರಕಾರ ನೇಮಿಸಿದ ಮೈಸೂರಿನ ಸ್ವಾತಂತ್ರ್ಯ ಚಳುವಳಿಯ ಇತಿಹಾಸ ರಚನಾ ಸಮಿತಿ, ಕನ್ನಡ ಟೈಪ್‌ರೈಟರ್ ಸಮಿತಿ ಮೊದಲಾದ ಸಮಿತಿಗಳ ಅಧ್ಯಕ್ಷರಾಗಿ ಅವರು ಸೇವೆ ಸಲ್ಲಿಸಿದ್ದಾರೆ. ಶರ್ಮರು ಕೆಲಕಾಲ ರಾಜ್ಯದ ಪತ್ರಕರ್ತರ ಸಂಘದ ಕಾರ್ಯದರ್ಶಿಯಾಗಿದ್ದರು; ಅನಂತರ ಅಧ್ಯಕ್ಷರೂ ಆಗಿದ್ದರು.

ನಾಡಿನ ಸಂಸ್ಕೃತಿ, ಸಾರ್ವಜನಿಕ ಜೀವನಗಳಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುತ್ತಾರೆ. ಇತಿಹಾಸ, ಸಂಸ್ಕೃತಿಗಳ ಬಗೆಗೆ ಅಧ್ಯಯನ, ಸಂಶೋಧನೆಗಳನ್ನು ಗುರಿಯಾಗುಳ್ಳ ಮಿಥಿಕ್ ಸೊಸೈಟಿಗೆ ಅವರು ಅಧ್ಯಕ್ಷರು.

## ತೀರ್ಥಂಕರರು

ಜೈನಧರ್ಮ ಜಗತ್ತಿನ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದು. ಧಾರ್ಮಿಕಪರಂಪರೆಯಲ್ಲಿ ಮೂಡಿಬಂದವರು 'ತ್ರಿಷಷ್ಟಿ ಶಲಾಕಾಪುರುಷರು'. ಅಂದರೆ ಅರವತ್ತಮೂರು ಮಂದಿ ಮಹಾಪುರುಷರು. ಇವರಲ್ಲಿ 24 ಮಂದಿಯನ್ನು ತೀರ್ಥಂಕರರು ಎಂದು ಕರೆಯುತ್ತಾರೆ. ಸಂಸಾರ ಸಮುದ್ರವನ್ನು ದಾಟುವ ವಿಧಾನಮಾರ್ಗವನ್ನು ತೋರಿಸಿಕೊಟ್ಟವರು ಇವರಾದ್ದರಿಂದ ಇವರಿಗೆ ತೀರ್ಥಂಕರರು ಎಂದು ಹೆಸರಾಯಿತು.

ತೀರ್ಥಂಕರರು ಜಿನರು. ಅಂದರೆ ಈ ಜಗತ್ತಿನ ಪ್ರಭಾವಗಳನ್ನು ಮೀರಿದವರು. ಸಂಸಾರ ತ್ಯಾಗಮಾಡಿ, ತಪಸ್ಸನ್ನಾಚರಿಸಿ ಕರ್ಮಗಳನ್ನು ಜಯಿಸಿ ಮುಕ್ತಜೀವರಾದವರು. ಇವರಿಗೆ ರಾಗದ್ವೇಷಗಳಿಲ್ಲ; ಇವರು ಸಮಸ್ತ ಪ್ರಾಣಿಗಳ ಹಿತವನ್ನೇ ಬಯಸುವವರು; ಸರ್ವಜ್ಞರು; ಹಿತೋಪದೇಶಕರು. ಅನಂತಜ್ಞಾನ, ದರ್ಶನ ಸುಖಗಳನ್ನು ಪಡೆದವರು. ಹಸಿವು, ಬಾಯಾರಿಕೆ, ಭಯ, ದ್ವೇಷ, ಮೋಹ, ಚಿಂತೆ, ರೋಗ, ಮೃತ್ಯು, ಖೇದ, ಮದ, ವಿಸ್ಮಯ, ವಿಷಾದ, ನಿದ್ರೆ ಮುಂತಾದ ಯಾವ ದೋಷಗಳೂ ಇವರಲ್ಲಿ ಇರುವುದಿಲ್ಲ. ಜೈನ ಪುರಾಣಗಳಲ್ಲಿ 24 ಮಂದಿ ತೀರ್ಥಂಕರರ ಪ್ರಸ್ತಾಪವಿದೆ. ಇವರು ವರ್ತಮಾನ ಕಾಲದವರು. ಭಗವಾನ್ ವೃಷಭನಾಥನು ಆದಿ ತೀರ್ಥಂಕರ. ಭಗವಾನ್ ಮಹಾವೀರ ಕೊನೆಯ ತೀರ್ಥಂಕರ. ಕೊನೆಯ ಮೂರು ಮಂದಿ ತೀರ್ಥಂಕರರು –ನೇಮಿನಾಥ, ಪಾರ್ಶ್ವನಾಥ, ವರ್ಧಮಾನ ಮಹಾವೀರ– ಐತಿಹಾಸಿಕ ವ್ಯಕ್ತಿಗಳು.

ಆದಿತೀರ್ಥಂಕರ ವೃಷಭನಾಥನ ಆಸ್ಥಾನದಲ್ಲಿ ಒಮ್ಮೆ ನೀಲಾಂಜನೆಯೆಂಬ ಅಪೂರ್ವ ಲಾವಣ್ಯವತಿ ನರ್ತನಮಾಡುತ್ತ ಇದ್ದಕ್ಕಿದ್ದಂತೆಯೇ ಮರಣ ಹೊಂದುತ್ತಾಳೆ. ಇದನ್ನು ಕಂಡು ವೃಷಭನಾಥನಲ್ಲಿ ಗಾಢ ವೈರಾಗ್ಯ ಉತ್ಪನ್ನವಾಗುತ್ತದೆ. ಆತ ಮುಕ್ತಿಸಾಧನೆಗಾಗಿ ರಾಜ್ಯವನ್ನು ತ್ಯಜಿಸಿ ಘೋರ ತಪಸ್ಸುಮಾಡಿ ಜ್ಞಾನಿಯಾಗಿ ಧರ್ಮೋಪದೇಶವನ್ನು ಮಾಡುತ್ತ ದೇಶದ ವಿವಿಧ ಭಾಗಗಳಲ್ಲಿ ಸಂಚರಿಸುತ್ತಾನೆ. ಇತರ ತೀರ್ಥಂಕರರ ಜೀವನವೂ ಇದೇ ರೀತಿಯದು.

ವರ್ಧಮಾನ ಮಹಾವೀರ ಕೌಂಡಿನ್ಯಪುರದಲ್ಲಿ ಸಿದ್ಧಾರ್ಥ ಮತ್ತು ತ್ರಿಶಲಾದೇವಿಯರಿಗೆ ಜನಿಸಿದವನು. ಅವನು ಜನಿಸಿದೊಡನೆಯೇ ಮನೆಯಲ್ಲಿ ಸಿರಿಸಂಪತ್ತು ಹೆಚ್ಚತೊಡಗಿತು. ಇದರಿಂದಾಗಿ ತಂದೆ ತಾಯಿ ಅವನಿಗೆ ವರ್ಧಮಾನ ಎಂದು ಹೆಸರಿಟ್ಟರು. ಮುಂದೆ ಅವನಲ್ಲಿರುವ ವೀರತ್ವವನ್ನು ಕಂಡು ಜನರು ಅವನನ್ನು ಮಹಾವೀರ ಎಂದು ಕರೆದರು. ಮಹಾವೀರನು ಹನ್ನೆರಡು ವರ್ಷ ಕಾಲ ದೀರ್ಘ ತಪಸ್ಸುಮಾಡಿ, ಆ ಮೇಲೆ ಮೂವತ್ತು ವರ್ಷ ಲೋಕ ಕಲ್ಯಾಣಕ್ಕಾಗಿ ಧರ್ಮೋಪದೇಶ ಮಾಡುತ್ತ ಬಿಹಾರದ ಪಾವಪುರಿಯಲ್ಲಿ ನಿರ್ವಾಣಹೊಂದಿದ.

ಕರ್ನಾಟಕದ ಕಲೆ, ಸಾಹಿತ್ಯಗಳ ಮೇಲೆ ಜೈನ ತೀರ್ಥಂಕರರ ಮಹಿಮಾನ್ವಿತ ಜೀವನಚರಿತ್ರೆ ಪರಿಣಾಮ ಬೀರಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿರುವ ಶ್ರವಣಬೆಳಗೊಳ ಜೈನ ಸಂಸ್ಕೃತಿಯ ಪ್ರಮುಖ ಕೇಂದ್ರಗಳಲ್ಲೊಂದು. ಅಲ್ಲಿರುವ ಜಗದ್ವಿಖ್ಯಾತ ಗೊಮ್ಮಟೇಶ್ವರ ವಿಗ್ರಹ ತೀರ್ಥಂಕರ ಬಾಹುಬಲಿಯದು. ಇವಲ್ಲದೆ ಕರ್ನಾಟಕ ರಾಜ್ಯದ ಕಾರ್ಕಳ, ವೇಣೂರು, ಶ್ರವಣಗಿರಿಗಳಲ್ಲಿ ಕೂಡ ಬೃಹದಾಕಾರದ ಗೊಮ್ಮಟೇಶ್ವರ ವಿಗ್ರಹಗಳಿವೆ.

ಶಿಲ್ಪದಲ್ಲಿ ಜಿನಮೂರ್ತಿಗಳು ಸಾಮಾನ್ಯವಾಗಿ ಒಂದೇ ರೀತಿ ಇರುತ್ತವೆ. ಆದರೆ ಒಬ್ಬೊಬ್ಬ ತೀರ್ಥಂಕರನಿಗೂ ಸಂಬಂಧಿಸಿದ ಲಾಂಛನದಿಂದ ಆ ಮೂರ್ತಿ ಯಾವ ತೀರ್ಥಂಕರನದು ಎಂಬುದನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ ವೃಷಭದೇವನ ಲಾಂಛನ ಎತ್ತು; ನೇಮಿನಾಥನದು ಶಂಖ; ಪಾರ್ಶ್ವನಾಥನದು ಸರ್ಪ; ವರ್ಧಮಾನ ಮಹಾವೀರನದು ಸಿಂಹ.

ತೀರ್ಥಂಕರರ ಜೀವನವನ್ನು ಕುರಿತು ಗ್ರಂಥ ರಚನೆ ಮಾಡುವ ಸಂಪ್ರದಾಯ ಕನ್ನಡದಲ್ಲಿ ಬಹಳ ಹಿಂದಿನದು. ಆದಿ ಕವಿ ಪಂಪ ತನ್ನ ಆದಿ ಪುರಾಣದಲ್ಲಿ 'ಕಾವ್ಯಧರ್ಮಮುಂ, ಧರ್ಮಮುಂ' ಸಮರಸಗೊಳಿಸುವುದಾಗಿ ಹೇಳಿದ್ದಾನೆ. ಪೊನ್ನ, ರನ್ನ, ಚಾವುಂಡರಾಯ ಮುಂತಾದವರು ತೀರ್ಥಂಕರರ ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ಇವಲ್ಲದೆ, ಕರ್ಣಪಾರ್ಯನ 'ನೇಮಿನಾಥ ಪುರಾಣ', ಅಗ್ಗಳನ 'ಚಂದ್ರಪ್ರಭ ಪುರಾಣ', ಆಚಣ್ಣನ 'ವರ್ಧಮಾನ ಪುರಾಣ' ಸಾಂಗತ್ಯರೂಪದಲ್ಲಿರುವ ಮಂಗರಸನ 'ನೇಮಿನಾಥ ಸಂಗತಿ' ಮುಂತಾದುವು ಗಮನಾರ್ಹವಾದುವು. ಈ ಪುರಾಣಗಳೆಲ್ಲ ಹೆಚ್ಚುಕಡಮೆ ಒಂದೇ ಮಾದರಿಯವು. ಪ್ರತಿಯೊಬ್ಬ ತೀರ್ಥಂಕರನೂ ಪೂರ್ವಜನ್ಮಗಳಲ್ಲಿ ತಪಸ್ಸುಮಾಡುತ್ತ ಕೊನೆಯ ಜನ್ಮದಲ್ಲಿ ಹೇಗೆ ಮೋಕ್ಷ ಪಡೆದ ಎಂಬ ವಿವರಗಳು ಇವುಗಳಲ್ಲಿವೆ.



ತೀರ್ಥಂಕರ

ಕನ್ನಡ ನಾಡಿನ ಸಾಹಿತ್ಯ ಮತ್ತು ಕಲೆಗಳಿಗೆ ಜೈನ ತೀರ್ಥಂಕರರ ಜೀವನ ವಿಪುಲ ಸಾಮಗ್ರಿ ಒದಗಿಸಿದೆ.

## ತೀ. ನಂ. ಶ್ರೀ.

"ಇನ್ನಾರು ಬೆಳದಾರು ನಿಮ್ಮ ಎತ್ತರಕೆ ?
ಕನ್ನಡದ ಕೊರಳಲ್ಲಿ ಶ್ರೀಕಂಠಿಕೆ"

—ಮಹಾವಿದ್ವಾಂಸರಾದ ತೀ. ನಂ. ಶ್ರೀಕಂಠಯ್ಯನವರ ಬಗೆಗೆ ಕನ್ನಡ ಜನತೆಗೆ ಇರುವ ಅಭಿಮಾನವನ್ನು ಡಾ. ಜಿ. ಎಸ್. ಶಿವರುದ್ರಪ್ಪ



ನೇರ ನಿಲುವು, ಸ್ಪಷ್ಟ ಮಾತು : ತೀ ನಂ ಶ್ರೀ

ನವರು ಈ ಎರಡು ಸಾಲುಗಳಲ್ಲಿ ಹೇಳಿದ್ದಾರೆ. ಅಮಲ್ದಾರಿಕೆಯಂಥ ಅಧಿಕಾರ ಕೈಗೆ ಬಂದಿದ್ದರೂ ಅದನ್ನು ಬಿಟ್ಟು ಕಾಲೇಜಿನಲ್ಲಿ ಪಾಠ ಹೇಳಲು ಬಂದ 'ಟಿ ಎನ್ ಎಸ್' ಎಂದರೆ ವಿದ್ಯಾರ್ಥಿಗಳಿಗೆಲ್ಲ ಕುತೂಹಲ, ಗೌರವ. ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ವಿಭಾಗದ ಪ್ರಮುಖರಾಗಿದ್ದು ನಿವೃತ್ತರಾದ ಇವರು ಕನ್ನಡದ ಕಿರಿಯರಿಗೆಲ್ಲ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಗುರುವಾಗಿದ್ದರು. ಕವಿಯಾಗಿ, ಆಚಾರ್ಯರಾಗಿ ಜನತೆಗೆ ಸಾಹಿತ್ಯದ ರಸದೌತಣ ಉಣಿಸಿದರು. ತಮ್ಮ ಮಾತುಗಾರಿಕೆಯಿಂದ ರಸಿಕರ ಮನಸ್ಸನ್ನು ತಣಿಸಿದರು.

'ತೀ' ಎಂದರೆ ತೀರ್ಥಪುರ—ಚಿಕ್ಕನಾಯಕನಹಳ್ಳಿಯ ಹತ್ತಿರವಿರುವ ಒಂದು ಗ್ರಾಮ. 'ನಂ' ಎಂದರೆ ನಂಜುಂಡಯ್ಯ—ಶ್ರೀಕಂಠಯ್ಯನವರ ತೀರ್ಥರೂಪರು. ತೀ ನಂ ಶ್ರೀ ಹುಟ್ಟಿದ್ದು 1906ನೆಯ ನವಂಬರ್ 26ರಂದು. "ಬೆನ್ನು ಬಗ್ಗಿಸಿ ನಡೆಯಬೇಡ : ಅಸ್ಪಷ್ಟವಾಗಿ ಮಾತನಾಡಬೇಡ" ಎಂಬ ತಮ್ಮ ತಂದೆಯ ಬುದ್ಧಿವಾದವನ್ನು ಅವರೆಂದೂ ಮರೆಯಲಿಲ್ಲ. ತೀರ್ಥಪುರದಲ್ಲೇ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿ ಹೈಸ್ಕೂಲು ಸೇರಲು ತುಮಕೂರಿಗೆ ಬಂದರು.

ಕೈಗೆ ಸಿಕ್ಕ ಇಂಗ್ಲಿಷ್ ಕನ್ನಡ ಪುಸ್ತಕಗಳನ್ನೆಲ್ಲ ಓದುವುದು ಶ್ರೀಕಂಠಯ್ಯನವರಿಗೆ ಮೊದಲಿನಿಂದಲೂ ಅಂಟಿಕೊಂಡ ಅಭ್ಯಾಸ. ಹೈಸ್ಕೂಲಿನಲ್ಲಿದ್ದಾಗ ಆಂಗ್ಲ ಕವಿ ಅಡಿಸನನ ಪದ್ಯವೊಂದನ್ನು ಭಾಷಾಂತರಿಸಿದ್ದು, ಇವರು ಕವಿಯಾಗಲು ಮಾಡಿದ ಮೊದಲ ಪ್ರಯತ್ನ. ನೆಚ್ಚಿನ ಗೆಳೆಯನೊಬ್ಬ ಪ್ಲೇಗಿನಿಂದ ತೀರಿಕೊಂಡಾಗ ಬರೆದ 'ಮಿತ್ರವಿಲಾಪಂ' (1922) ಇವರ ಪ್ರಥಮ ಸ್ವತಂತ್ರ ಕೃತಿ. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ವಿದ್ಯಾರ್ಥಿ ದೆಸೆಯಲ್ಲಿ ಇವರು ಅನುವಾದಿಸಿದ ಕವನಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದುವು.

ತೀ ನಂ ಶ್ರೀ ಆದರ್ಶ ವಿದ್ಯಾರ್ಥಿ ; ಜೊತೆಗೆ ತುಂಬ ಬುದ್ಧಿಶಾಲಿ. ಬಿ.ಎ. ಪರೀಕ್ಷೆಯಲ್ಲಿ ಇವರಿಗೆ ಆರು ಪದಕಗಳೂ ಬಹುಮಾನಗಳೂ ದೊರಕಿದ್ದು ಮೈಸೂರಿನಲ್ಲಿ ಅನೇಕ ವರ್ಷಗಳವರೆಗೆ ಮನೆಮಾತಾಗಿತ್ತು.

ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ಪಾಸುಮಾಡಿದ ತೀ ನಂ ಶ್ರೀ ಅಮಲ್ದಾರ್ ಹುದ್ದೆಯಲ್ಲಿ ಇದ್ದದ್ದು ಕೇವಲ ಒಂದೂವರೆ ತಿಂಗಳು. ಅನಂತರ ಅದನ್ನು ಬಿಟ್ಟು ಮೈಸೂರು ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾದರು. 1929ರಲ್ಲಿ ಅವರು ಇಂಗ್ಲಿಷ್ ಎಂ.ಎ. ಪರೀಕ್ಷೆಯಲ್ಲಿ ಮೊದಲ ಸ್ಥಾನದಲ್ಲಿ ಉತ್ತೀರ್ಣರಾಗಿ ಸುವರ್ಣ ಪದಕ ಪಡೆದರು.

1932ರಲ್ಲಿ ಪ್ರಕಟವಾದ ಅವರ 'ಒಲುಮೆ' ಹೊಸಗನ್ನಡದ ಮೊಟ್ಟಮೊದಲ ಪ್ರೇಮಗೀತೆಗಳ ಸಂಕಲನ. ಇದರಲ್ಲಿ ಮನೋಜ್ಞವಾದ, ಹೃದಯಸ್ಪರ್ಶಿಯಾದ ಹಲವಾರು ಕವನಗಳಿವೆ.

" ಚೆಲುವೆಯೆಂದು ನುಡಿಯಲಾರೆ ;
ಚದುರೆಯೇನೋ ತಿಳಿಯೆನು.
ಒಲಿದು ನನ್ನ ಹೃದಯವೆಂತು
'ಇವಳೆ ಸಾಕು' ಎಂದಿತು ! "

ತೀ ನಂ ಶ್ರೀ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರಾಗಿದ್ದಷ್ಟು ಕಾಲ ಬೋಧನೆಯ ಜೊತೆಗೆ ಸಂಶೋಧನೆ, ಗ್ರಂಥ ಸಂಪಾದನೆಗಳು ಬಿಡುವಿಲ್ಲದೆ ಸಾಗಿದುವು. ಯಾವುದಾದರೂ ವಿಷಯವನ್ನು ಕುರಿತು ಸಾಕಷ್ಟು ಸಾಮಗ್ರಿಯನ್ನು ಸಂಗ್ರಹಿಸಿ, ಆಳವಾಗಿ ಅಭ್ಯಾಸಮಾಡಿ, ಅನ್ವೇಷಣೆ ನಡೆಸಿದ ಬಳಿಕವೇ ಇವರು ಅದಕ್ಕೆ ಪುಸ್ತಕರೂಪ ಕೊಡುತ್ತಿದ್ದರು. 'ಪಂಪ' ಎಂಬ ಕಿರುಹೊತ್ತಗೆ ಇವರ ಇಂಥ ಪರಿಶ್ರಮಕ್ಕೆ ಸಾಕ್ಷಿ. 'ನಂಬಿಯಣ್ಣನ ರಗಳೆ' ಮತ್ತು 'ರನ್ನನ ಗದಾಯುದ್ಧ ಸಂಗ್ರಹ' ತೀ ನಂ ಶ್ರೀ ಸಂಪಾದಿಸಿ ಪ್ರಕಟಿಸಿದ ಪುಸ್ತಕಗಳು.

ತೀ ನಂ ಶ್ರೀಯವರ ದೀರ್ಘಕಾಲದ ಅಧ್ಯಯನ ಪರಿಶ್ರಮಗಳ ಫಲ 'ಭಾರತೀಯ ಕಾವ್ಯಮೀಮಾಂಸೆ'. ಒಂದು ದೃಷ್ಟಿಯಿಂದ ಇದು ಕನ್ನಡ ಕಾವ್ಯ ಮೀಮಾಂಸೆಯೂ ಹೌದು. ಸಂಸ್ಕೃತದ ಕೆಲವು ಗ್ರಂಥಗಳಿಗೆ ಇದು ಋಣಿಯಾಗಿದ್ದರೂ ಅನೇಕ ಉದಾಹರಣೆಗಳು ಕನ್ನಡ ಕಾವ್ಯಗಳಿಂದ ತೆಗೆದುವು.

ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗಳಿಗೆಂದು ತೀ ನಂ ಶ್ರೀ ಬರೆದ 'ಕನ್ನಡ ಮಾಧ್ಯಮ ವ್ಯಾಕರಣ' ಸರಳವಾದ, ಆಕರ್ಷಕ ಗ್ರಂಥ. ಆದರೆ ಅತ್ಯುನ್ನತ ತರಗತಿಗಳ ವಿದ್ಯಾರ್ಥಿಗಳಿಗೂ ಕೂಡ ಉಪಯುಕ್ತವಾಗಬಹುದಾದಂಥ ಅಮೂಲ್ಯ ಕೃತಿ.

ತೀ ನಂ ಶ್ರೀ ಯವರ ಕಾವ್ಯಶಕ್ತಿಯ ವಿಶೇಷ ಗುಣ ಕಂಡುಬರುವುದು ಅವರ ಮುಕ್ತಕಗಳಲ್ಲಿ. ಇವು ಸಂಸ್ಕೃತ ಮೂಲಗಳನ್ನು ಆಧರಿಸಿ ಬರೆದುವು. ಇವುಗಳಲ್ಲಿ ವಸ್ತು ಮತ್ತು ಭಾವ ವೈವಿಧ್ಯವಿದೆ ; ಮಾರ್ದವವಿದೆ ; ಚುಟುಕು ಮಾತಿದೆ : ಕಟೂಕ್ತಿಯೂ ಇದೆ ; ಕೊನೆಯದಕ್ಕೆ ಇದೊಂದು ಉದಾಹರಣೆ :

" ಎಲೆಲೆ ಗಾರ್ದಭ, ಏಕೆ ಹೊರೆಹೊರೆಯ ಬಟ್ಟೆಯನು
ಹೊತ್ತು ಕುಗ್ರಾಸವನ್ನು ಮೇಯುತಿರುವೆ?
ಹೋಗು ನೆಟ್ಟನೆ ದೊರೆಯ ಕುದುರೆಲಾಯಕೆ ನೀನು,
ಭುಜಿಸು ಹಾಯಾಗಿ ಕಡಲೆ ಗುಗ್ಗರಿಯನು,
ಬಲವುಳ್ಳವರನೆಲ್ಲ ಕುದುರೆಯೆಂದೇ ಕರೆವ—
ರಲ್ಲಿ ಅಧಿಕಾರವನು ನಡೆಸುವವರು
ಅವರು ಹೇಳಿದುದೆ ದಿಟ ದೊರೆಗೆ, ಮಿಕ್ಕವರಿದರ
ಗೋಜೇಕೆ ತಮಗೆಂದು ಸುಮ್ಮನಿಹರು. "

ವಿಶಾಖದತ್ತನ 'ಮುದ್ರಾರಾಕ್ಷಸ'ದ ಕನ್ನಡ ರೂಪವಾದ 'ರಾಕ್ಷಸನ ಮುದ್ರಿಕೆ' ನಾಟಕ ತೀ ನಂ ಶ್ರೀಯವರ ಒಂದು ಅಮೂಲ್ಯ ಕೃತಿ.

ಶ್ರೀಕಂಠಯ್ಯನವರ ಪ್ರತಿಭೆ ಪ್ರಬಂಧ ಸಾಹಿತ್ಯದ ಕಡೆಗೂ ಹರಿದಿದೆ. 'ನಂಟರು' ಎಂಬ ಸಂಕಲನದಲ್ಲಿ ಅವರು 1925ರಿಂದ 1965ರ ವರೆಗೆ ಬರೆದ ಹದಿನೇಳು ಪ್ರಬಂಧಗಳಿವೆ. ಆಳವಾದ ಪಾಂಡಿತ್ಯದಿಂದಲೂ ಲೋಕಾನುಭವದಿಂದಲೂ ಹುಟ್ಟಿಕೊಂಡ ಈ ಪ್ರಬಂಧಗಳು ತಿಳಿಹಾಸ್ಯದಿಂದ ಕೂಡಿ ಆಕರ್ಷಕವಾಗಿವೆ.

ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಯಾದಾಗ ತೀ ನಂ ಶ್ರೀ ಅಲ್ಲಿಗೆ ಕನ್ನಡ ಇಲಾಖೆಯ ಪ್ರಥಮ ಪ್ರಾಧ್ಯಾಪಕರಾಗಿ ತೆರಳಿದರು. ಆಗಾಗ ಪುಣೆಗೆ ಹೋಗಿ ಭಾಷಾಶಾಸ್ತ್ರ ಸಂಬಂಧವಾದ ವಿಚಾರಗೋಷ್ಠಿ ಮತ್ತು ಬೇಸಿಗೆ ಶಾಲೆಗಳಲ್ಲಿ ಭಾಗವಹಿಸುತ್ತಿದ್ದರು. ಇವರ ಉಪನ್ಯಾಸಗಳು ರಾಕ್‌ಫೆಲರ್ ನಿಧಿಯ ಆಡಳಿತಗಾರರ ಗಮನ ಸೆಳೆದುವು. ಶ್ರೀಕಂಠಯ್ಯನವರ ಅಮೆರಿಕ ಪ್ರವಾಸಕ್ಕೆ ಇದು ಕಾರಣವಾಯಿತು. ಅಲ್ಲಿಯ ಹತ್ತಾರು ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರೊಡನೆ ಭಾಷಾಶಾಸ್ತ್ರವನ್ನು ಕುರಿತು ವಿಚಾರ ವಿನಿಮಯ ಸಾಧ್ಯವಾಯಿತು. ಅಲ್ಲಿ ಇವರ ಉಪನ್ಯಾಸಗಳನ್ನೂ ಏರ್ಪಡಿಸಲಾಗಿತ್ತು.

ತೀ ನಂ ಶ್ರೀಯವರು ಹುಟ್ಟು ಬೋಧಕರು. ಸ್ವಾರಸ್ಯಕರವಾದ ಇವರ ಕನ್ನಡ ಪಾಠಗಳನ್ನು ಕೇಳಲು ಬೇರೆ ತರಗತಿಗಳ ವಿದ್ಯಾರ್ಥಿಗಳು ತಮ್ಮ ಇತರ ಪಾಠಗಳಿಗೆ ಚಕ್ಕರ್ ಹೊಡೆದು ಬರುತ್ತಿದ್ದುದೂ ಉಂಟು. ಭಾಷಣವೆಂದರೆ ಇವರ ಉತ್ಸಾಹ ಗರಿಗಟ್ಟುತ್ತಿತ್ತು. ದೈಹಿಕ ಯಾತನೆ ಕೂಡ ಅವರಿಗೆ ಮರೆತುಹೋಗುತ್ತಿತ್ತು. ಮುಂದೆ ಭಾಷಣಗಳನ್ನು ಕಡಮೆಮಾಡಬೇಕೆಂದು ವೈದ್ಯರು ತಿಳಿಸಿದರು. ಉಪನ್ಯಾಸಕ್ಕೆ ಆಮಂತ್ರಣ ಬಂದಾಗ ಬಿಟ್ಟುಬಿಡಬೇಕಾದರೆ ಅವರಿಗೆ ಕೆಡುಕೆನಿಸುತ್ತಿತ್ತು.

ಶ್ರೀಕಂಠಯ್ಯನವರಿಗೆ ಜೀವನದ ಅಡೆತಡೆಗಳನ್ನು ಎದುರಿಸುವುದರಲ್ಲೇ ಆನಂದ. ದೇಹವನ್ನು ಅನಾರೋಗ್ಯ ಕಾಡುತ್ತಿದ್ದರೂ ಜೀವನದಲ್ಲಿ ಅಳಿಯದ ಆಸ್ಥೆ. ''ದೇವರೇ ನನಗೆ ಮೋಕ್ಷವನ್ನು ಕೊಡು ; ಆದರೆ ಇನ್ನೆರಡು ಜನ್ಮ ಬಿಟ್ಟು ಆಮೇಲೆ ಕೊಡು'' ಎಂದು ಅವರು ಹೇಳಿದ್ದುಂಟು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ನಿವೃತ್ತರಾದ ಮೇಲೆ ಇವರು ದೆಹಲಿ, ಆಗ್ರಾ ಮೊದಲಾದ ಸ್ಥಳಗಳನ್ನು ತಮ್ಮ ಹೆಂಡತಿಗೆ ತೋರಿಸುವ ಹಂಬಲದಿಂದ ಹೊರಟರು. ವಿವಾಹವಾದ ನಲವತ್ತು ವರ್ಷಗಳ ಅನಂತರ ತಾವು 'ಹನಿ ಮೂನಿ'ಗೆ ಹೊರಟಿರುವುದಾಗಿ ಹಾಸ್ಯಮಾಡುತ್ತಿದ್ದರು. ಪೆಟ್ಟಿಗೆಯಲ್ಲಿ ಸಾಕಷ್ಟು ಔಷಧಿಗಳನ್ನು ತುಂಬಿಕೊಂಡು ದೆಹಲಿಗೆ ಬಂದಿಳಿದರು. ದೆಹಲಿಯಿಂದ ರಾಂಚಿ, ರಾಂಚಿಯಿಂದ ಕಲ್ಕತ್ತಾ ತಲಪಿದರು. ಇಲ್ಲಿಗೆ ಬಂದಮೇಲೆ ಅವರ ಆರೋಗ್ಯ ಮತ್ತಷ್ಟು ಕೆಟ್ಟಿತು. ಆ ನಗರ ತಲಪಿದ ಕೆಲವೇ ಗಂಟೆಗಳಲ್ಲಿ, 1966ರ ಸೆಪ್ಟೆಂಬರ್ 7ರಂದು, ನಿಧನರಾದರು.

ತಮ್ಮ ಚರಮಗೀತೆಯನ್ನು ತೀ ನಂ ಶ್ರೀ ತಾವೇ ರಚಿಸಿದ್ದರು ಎನ್ನಬಹುದು. ಮರಣಕ್ಕೆ ಕೆಲವು ದಿನಗಳ ಮೊದಲು ದಿನಚರಿಯಲ್ಲಿ ಅವರು ಹೀಗೆ ಬರೆದಿದ್ದರು :

''ಪದ್ಯಹೋಯ್ತು ಗದ್ಯಬಂತು ಢುಂ ಢುಂ
ಗದ್ಯಹೋಯ್ತು ಮಾತು ಬಂತು ಢುಂ ಢುಂ
ಮಾತುಹೋಯ್ತು ಮೌನ ಬಂತು ಢುಂ ಢುಂ''

## ತೈಲಚಿತ್ರ

[illegible]

ಇದೊಂದು ತೈಲಚಿತ್ರ. ಈ ಚಿತ್ರವನ್ನು ರಚಿಸಿರುವುದು, ವರ್ಣದ್ರವವನ್ನು ತೈಲದೊಂದಿಗೆ ಬೆರೆಸಿ ಸಿದ್ಧಪಡಿಸಿದ ಬಣ್ಣಗಳಿಂದ.

ತೈಲಚಿತ್ರರಚನೆ ಆರಂಭವಾದದ್ದು 15ನೆಯ ಶತಮಾನದ ಆದಿಭಾಗದಲ್ಲಿ. ಆಗ ಕ್ಯಾನ್ವಾಸಿನ – ರಟ್ಟು ಬಟ್ಟೆಯ – ಮೇಲೆ ಸುಣ್ಣ ಅಥವಾ ಪ್ಲಾಸ್ಟರ್ ಆಫ್ ಪ್ಯಾರಿಸ್ (ಜೆಸೋ) ಅನ್ನು ಲೇಪಿಸುತ್ತಿದ್ದರು. ಮೊಟ್ಟೆಯ ಬಿಳಿಭಾಗದೊಂದಿಗೆ ಬಣ್ಣವನ್ನು ಬೆರೆಸಿ ಚಿತ್ರ ರಚಿಸುತ್ತಿದ್ದರು. ಇದನ್ನು ಟೆಂಪೆರ ಎಂದು ಕರೆಯುತ್ತಿದ್ದರು. ಇದರ ಮೇಲೆ ಹುರುಗೆಣ್ಣೆಯ ಲೇಪವಿತ್ತರೆ ತೈಲಚಿತ್ರ ಸಿದ್ಧವಾದಂತೆ. ಬೆಲ್ಜಿಯಮಿನ ವಾನ್ ಐಕ್ ಸಹೋದರರನ್ನು (15ನೆಯ ಶತಮಾನ) ಈ ಪದ್ಧತಿಯ ಆದ್ಯಪ್ರವರ್ತಕರೆಂದು ಹೇಳುತ್ತಾರಾದರೂ, ಅವರ ಕಾಲಕ್ಕೂ ಪೂರ್ವದಲ್ಲಿಯೇ ಈ ಪದ್ಧತಿ ಇತ್ತೆಂಬುದಕ್ಕೆ ಆಧಾರಗಳಿವೆ. 19ನೆಯ ಶತಮಾನದವರೆಗೆ ಚಿತ್ರವನ್ನು ಒಂದು ಬಣ್ಣದಲ್ಲಿ ರಚಿಸಿ ಅದರ ಮೇಲೆ ಪಾರದರ್ಶಕ ಹೊಳಪು ಕೊಡುವ ಬಣ್ಣವನ್ನು ಲೇಪಿಸುತ್ತಿದ್ದರು. ಸ್ಕಾಟ್ಲೆಂಡಿನ ರೇಬರ್ನ್ (1756–1823) ನಂಥ ಚಿತ್ರಕಾರರು ಕೆಲವರು ಆರಂಭದಿಂದಲೇ ಅರೆಪಾರದರ್ಶಕವನ್ನು ಉಪಯೋಗಿಸಿಕೊಂಡು ಚಿತ್ರ ರಚಿಸುತ್ತಿದ್ದರು. ಇದರಿಂದ ಚಿತ್ರ ಸತ್ವಪೂರ್ಣವಾಗಿರುತ್ತಿತ್ತು.

ತೈಲಚಿತ್ರ ರಚನೆ ಆರಂಭವಾದ ಕಾಲದಲ್ಲಿ ವರ್ಣದ್ರವ್ಯದ ಪುಡಿಯನ್ನು ಅಮೃತಶಿಲೆಯ ಹಾಸುಗಲ್ಲಿನ ಮೇಲೆ ಅರೆಯುತ್ತ ಅರೆಯುತ್ತ ಅದಕ್ಕೆ ಸ್ವಲ್ಪ ಸ್ವಲ್ಪವಾಗಿ ತೈಲವನ್ನು ಸೇರಿಸಿ ತನಗೆ ಬೇಕಾದ ತೈಲವರ್ಣವನ್ನು ಕಲಾವಿದ ತಯಾರಿಸಿಕೊಳ್ಳುತ್ತಿದ್ದ. ಈಗ ಸಿದ್ಧ ಬಣ್ಣದ ಜಾಡಿ, ಟ್ಯೂಬುಗಳಲ್ಲಿ ಸಿಗುತ್ತದೆ.

ಮೊದಮೊದಲು ತೈಲಚಿತ್ರವನ್ನು ಮರದ ಹಲಗೆಯ ಮೇಲೆ ರಚಿಸುತ್ತಿದ್ದರು. 16ನೆಯ ಶತಮಾನದ ತರುವಾಯ ಕ್ಯಾನ್ವಾಸನ್ನು ಉಪಯೋಗಿಸತೊಡಗಿದರು. ಮರದ ಚೌಕಟ್ಟಿನಲ್ಲಿ ಬಂಧಿಸಿದ ಕ್ಯಾನ್ವಾಸ್ ತೈಲಚಿತ್ರ ರಚನೆಗೆ ಅನುಕೂಲವಾಗಿತ್ತು : ಮರದ ಹಲಗೆಯ ಮೇಲೆ ರಚಿಸಿದ ಚಿತ್ರಕ್ಕಿಂತ ಇದು ಹೆಚ್ಚು ಪರಿಣಾಮಕಾರಿಯಾಗಿ ಕಾಣುತ್ತಿತ್ತು. ಕ್ಯಾನ್ವಾಸಿನ ಮೇಲೆ ಚಿತ್ರಣ ಮಾಡುವುದಕ್ಕೆ ಮೊದಲು ಸಾಮಾನ್ಯವಾಗಿ ಅದಕ್ಕೆ ಸುಣ್ಣದ ಲೇಪ ಕೊಡುತ್ತಿದ್ದರು. ಆದರೆ ಆಧುನಿಕ ಕಲಾವಿದರು ಕ್ಯಾನ್ವಾಸಿಗೆ ಇಂಥ ಲೇಪನ ಕೊಡುವುದಿಲ್ಲ ; ಕ್ಯಾನ್ವಾಸಿನ ಮೇಲೆ ನೇರವಾಗಿಯೇ ತೈಲಚಿತ್ರವನ್ನು ರಚಿಸುತ್ತಾರೆ. ಇದರಿಂದಾಗಿ ಕ್ಯಾನ್ವಾಸ್ ಬಟ್ಟೆಯ ಎಳೆಗಳು ತೈಲವರ್ಣವನ್ನು ಹೀರಿಕೊಂಡುಬಿಡುತ್ತವೆ. ಚಿತ್ರಣಕ್ಕೆ ಹೆಚ್ಚು ಪ್ರಮಾಣದಲ್ಲಿ ಬಣ್ಣವನ್ನು ಬಳಸಬೇಕಾಗುತ್ತದೆ. ಅಲ್ಲದೆ ಬಣ್ಣಗಳೂ ಎದ್ದುಕಾಣುವುದಿಲ್ಲ. ಈ ಕಾರಣದಿಂದ ಕ್ಯಾನ್ವಾಸಿನ ಮೇಲೆ ಮೊದಲು ಲೇಪನ ಬಳಿದು ಅದು ಗಟ್ಟಿಯಾದ ಮೇಲೆ ಚಿತ್ರ ರಚಿಸಲಾಗುತ್ತದೆ. ಆಗ ಬಣ್ಣವನ್ನು ಕ್ಯಾನ್ವಾಸ್ ಹೀರಿಕೊಳ್ಳುವುದಿಲ್ಲ. ಲೇಪನ ಬಿಳಿ, ಹಸುರು, ಕೆಂಪಿನಂಥ ಯಾವುದಾದರೂ ಬಣ್ಣದ್ದಾಗಿರಬಹುದು.

ಚಿತ್ರ ರಚನೆಗೆ ಉಪಯೋಗಿಸುವ ಬಣ್ಣ ಸಾಮಾನ್ಯವಾಗಿ ಮಂದವು ಹರಡುವಂಥದು. ಇದು ದಪ್ಪವಾಗಿ, ತೆಳುವಾಗಿ ಅಥವಾ ದಟ್ಟವಾಗಿ ಇರಬಹುದು.

ತೈಲಚಿತ್ರವನ್ನು ರಚಿಸುವ ವಿಧಾನ. ಅದಕ್ಕಾಗಿ ಬಳಸುವ ಬಣ್ಣದ ತೈಲ ಮಿಶ್ರಣಗಳ ಬಗೆಗೆ ಬರೆದಿಟ್ಟ ದಾಖಲೆಗಳು ಒಂದೊಂದು ರೀತಿ. ನಾನಾ ಬಗೆ ತೈಲಗಳ ಉಪಯೋಗವಿದೆಯಾದರೂ ಹೆಚ್ಚು ಬಳಕೆಯಲ್ಲಿ ಇರುವುದು ಗಸಗಸೆ, ಅಕ್ರೋಟು ಬೀಜ ಹಾಗೂ ಲಿನ್ ಬೀಜದ ಎಣ್ಣೆಗಳು. ಬಣ್ಣವನ್ನು ತೆಳುಗೊಳಿಸುವುದಕ್ಕೋಸ್ಕರ ಟರ್ಪೆಂಟೈನ್ ಉಪಯೋಗಿಸುತ್ತಾರೆ.

ತೈಲಚಿತ್ರ ಚಿತ್ರಕಲೆಯ ಇತರ ವಿಧಾನಗಳನ್ನು ಹಿಂದೆ ಹಾಕಿದೆ. ತೈಲ ಚಿತ್ರ ರಚನೆಯಲ್ಲಿ ಹಲವಾರು ಅನುಕೂಲಗಳಿವೆ. ತೈಲವರ್ಣ ಲೇಪನ ಆರುವುದು ನಿಧಾನ. ಬೇಡವಾದ ಬಣ್ಣವನ್ನು ಒರೆಸಿ ತೆಗೆದು ಬಿಡಬಹುದು. ಅಗತ್ಯವೆನಿಸಿದರೆ ಯಾವುದಾದರೊಂದು ಚಿತ್ರ ಭಾಗದ ಮೇಲೆ ಪುನಃ ಬಣ್ಣ ಹಚ್ಚಬಹುದು. ತೈಲವರ್ಣವನ್ನು ಚಿತ್ರಕಾರ ತನಗೆ ಬೇಕಾದಂತೆ ತೆಳುವಾಗಿಯೋ ಮಂದವಾಗಿಯೋ ಲೇಪಿಸಬಹುದು. ಅವನು ಉಪಯೋಗಿಸುವ ಬಣ್ಣ ಪಾರದರ್ಶಕ ಆಗಿರಬಹುದು; ಅಥವಾ ಅರೆಪಾರದರ್ಶಕವಾಗಿ ಬೇಕಾದರೂ ಇರಬಹುದು.

ಗೆರೆಗಳನ್ನು ಎಳೆಯದೆಯೇ ಚಿತ್ರಕಾರ ಆಕೃತಿಯನ್ನು ಮೂಡಿಸುವುದು ಇಲ್ಲಿ ಸಾಧ್ಯ. ಬಣ್ಣಕ್ಕೆ ಸೇರಿಸಿದ ತೈಲವು ಬಣ್ಣದ ಕಣಗಳನ್ನು ಬಂಧಿಸಿ ಹಿಡಿಯುವುದರಿಂದ ತೈಲಚಿತ್ರಗಳು ದೀರ್ಘಕಾಲದವರೆಗೆ ಕೆಡದೆ ಚೆನ್ನಾಗಿರುತ್ತವೆ.

ಇಟಲಿಯ ಪ್ರಖ್ಯಾತನಾದ ಕಲಾವಿದ ಟಿಷನ್ (1477–1576) ಬಣ್ಣಗಳನ್ನು ಸಮೃದ್ಧವಾಗಿ ಉಪಯೋಗಿಸುತ್ತಿದ್ದ. ಬೃಹತ್ ಕುಂಚದಿಂದ ಮೂಡಿಸುತ್ತಿದ್ದ ದೊಡ್ಡ ಎಳೆತಗಳಿಂದ, ವಿರೋಧ ಬಣ್ಣಗಳನ್ನು ಒಂದರ ಮೇಲೊಂದು ಬರುವಂತೆ ಮಾಡಿ ಹೊಳಪು ಕೊಡುತ್ತಿದ್ದ ವಿಧಾನದಿಂದ ಆತನ ಚಿತ್ರಗಳು ವಿಶಿಷ್ಟವೆನಿಸಿದುವು.

## ತೊಗಲುಗೊಂಬೆ ಆಟ

ಜಾನಪದ ಚಿತ್ರಕಲೆ ವಿಶಿಷ್ಟ ರೀತಿಯಲ್ಲಿ ಅಭಿವ್ಯಕ್ತವಾಗಿರುವುದು ತೊಗಲುಗೊಂಬೆ ಚಿತ್ರಣದಲ್ಲಿ. ತೊಗಲುಗೊಂಬೆಯಾಟದ ಉದ್ದೇಶ ಮನೋರಂಜನೆ. ಆದರೂ ತೊಗಲುಗೊಂಬೆಗಳ ಚಿತ್ರಣ ಮತ್ತು ಅವುಗಳನ್ನು ಆಡಿಸುವ ರೀತಿ ಕಲಾತ್ಮಕವಾದದ್ದು.

ಕರ್ನಾಟಕ, ಕೇರಳ, ಆಂಧ್ರ ಹಾಗೂ ಒರಿಸ್ಸದ ಕೆಲವು ಭಾಗಗಳಲ್ಲಿ ಬೆಳೆದು ಬಂದ ಈ ಜಾನಪದ ಕಲೆ ಪುರಾತನವಾದದ್ದು. ಆಂಧ್ರದಲ್ಲಿ ಈ ಕಲೆಗೆ 'ತೋಲು ಬೊಮ್ಮಲಾಟ' ಎಂದು ಹೆಸರು. ಉತ್ತರ ಭಾರತದಲ್ಲಿ 'ಕಟ್ ಪುತ್ಲಿ' ಎಂದು ಕರೆಯುತ್ತಾರೆ. ಚೀನ, ಥೈಲಾಂಡ್, ಜಾವಾ ಮೊದಲಾದ ಪರರಾಷ್ಟ್ರಗಳಲ್ಲೂ ಈ ಕಲೆ ಬೆಳೆದು ಬಂದಿರುವುದನ್ನು ಕಾಣಬಹುದು. ಕೆಲವು ಪರರಾಷ್ಟ್ರಗಳಲ್ಲಿ ಈ ಕಲೆ ಈಗಲೂ ಜೀವಂತವಾಗಿದೆ.

ನಮ್ಮಲ್ಲಿ ಗೊಂಬೆಯಾಟದವರು ಗೊಂಬೆರಾಮರು, ಶಿಳ್ಳೆಕ್ಯಾತರು, ಕಿಳ್ಳೆಕ್ಯಾತರು ಎಂಬ ಹೆಸರುಗಳಿಂದ ಕರೆಯಲ್ಪಡುತ್ತಿದ್ದರು. ಈ ವರ್ಗದವರು ತೊಗಲುಗೊಂಬೆಗಳನ್ನು ಆಡಿಸುತ್ತಿದ್ದರು. ಇವರು ತೊಗಲುಗೊಂಬೆಗಳನ್ನು ಮರದ ಪೆಟ್ಟಿಗೆಗಳಲ್ಲಿ ತುಂಬಿಕೊಂಡು ಹಳ್ಳಿ ಹಳ್ಳಿಗೂ ಹೋಗಿ ಪ್ರದರ್ಶನಗಳನ್ನು ಕೊಡುತ್ತಿದ್ದರು. ತೊಗಲುಗೊಂಬೆ ಆಟವನ್ನು ಪ್ರದರ್ಶಿಸುವುದರಿಂದ ಮಳೆ ಬರುತ್ತದೆ ಎಂಬ ನಂಬಿಕೆ ಇದ್ದುದರಿಂದ ಈ ಕಲೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ತುಂಬ ಪ್ರೋತ್ಸಾಹ ಸಿಗುತ್ತಿತ್ತು.

ತೊಗಲುಗೊಂಬೆಗಳ ರಚನೆ ವಿಶಿಷ್ಟ ರೀತಿಯದು. ಪ್ರಾಣಿಗಳ ಚರ್ಮದಿಂದ ಇವನ್ನು ತಯಾರಿಸುತ್ತಿದ್ದರು. ತೊಗಲುಗೊಂಬೆ ಆಟಗಳಲ್ಲಿ ದೇವತೆಗಳ ಪಾತ್ರವನ್ನೂ ಪ್ರದರ್ಶಿಸುತ್ತಿದ್ದುದರಿಂದ, ಪವಿತ್ರವೆಂದು ಗಣಿಸಲಾಗಿದ್ದ ತೊಗಲುಗೊಂಬೆಗಳನ್ನು ಜಿಂಕೆಯ ಚರ್ಮದಿಂದ ರೂಪಿಸುತ್ತಿದ್ದುದುಂಟು; ಇವುಗಳ ತಯಾರಿಕೆಯಲ್ಲಿ ಮೇಕೆ, ಹಸು, ಎಮ್ಮೆಗಳ ಚರ್ಮಗಳ ಉಪಯೋಗವೂ ಇತ್ತು. ಈ ಚರ್ಮವನ್ನು ಮೊದಲು ಸೂಕ್ತ ರೀತಿಯಲ್ಲಿ ಹದಗೊಳಿಸಿ, ವಿಶೇಷವಾದ ಉಪಕರಣದ ಸಹಾಯದಿಂದ ಅದರ ಮೇಲಿನ ಮಾಂಸದ ಕೇಖರಣೆ, ಕೂದಲು ಮೊದಲಾದವುಗಳನ್ನು ಕೆರೆದು ಹಾಕುವುದು ಮೊದಲ ಕೆಲಸ. ಚರ್ಮವನ್ನು ಹೀಗೆ ಕೆರೆದು ಅದನ್ನು ಅರೆಪಾರದರ್ಶಕವಾಗುವಷ್ಟು ತೆಳುವಾಗಿ ಮಾಡುತ್ತಾರೆ, ಅನಂತರ ಅದನ್ನು ಬೇಕಾದ ಆಕಾರಕ್ಕೆ ಕತ್ತರಿಸಿಕೊಂಡು, ಅದರ ಮೇಲೆ ಚೂಪಾದ ಉಪಕರಣದಿಂದ ಚಿತ್ರದ ಹೊರರೇಖೆಗಳನ್ನು ಗುರುತು ಹಾಕುತ್ತಾರೆ. ಆಮೇಲೆ ಈ ರೇಖೆಗಳನ್ನು ಅನುಸರಿಸಿ ಚರ್ಮವನ್ನು ಕತ್ತರಿಸಿಕೊಳ್ಳುತ್ತಾರೆ. ಪ್ರದರ್ಶನ ಕಾಲದಲ್ಲಿ ಚಲಿಸಬೇಕಾಗುವಂಥ ಅಂಗಗಳನ್ನು ಪ್ರತ್ಯೇಕವಾಗಿಯೇ ಚಿತ್ರಿಸಿ, ಅವನ್ನು ಗೊಂಬೆಗೆ ಹೊಲಿಯುತ್ತಾರೆ. ಅನಂತರ ಚಿತ್ರಕ್ಕೆ ಎದ್ದು ಕಾಣುವ ಬಣ್ಣಗಳನ್ನೂ ಹಾಕುತ್ತಾರೆ. ಆಭರಣಗಳಿರಬೇಕಾದ ಕಡೆ ರಂಧ್ರಗಳನ್ನು ಮಾಡುತ್ತಾರೆ. ಇದರಿಂದ, ಪ್ರದರ್ಶನ ಕಾಲದಲ್ಲಿ ಬೆಳಕು ಅವುಗಳ ಮೂಲಕ ಹಾಯ್ದು ಆ ರಂಧ್ರಗಳು ಮುತ್ತು–ರತ್ನಗಳಂತೆ ಹೊಳೆಯುತ್ತವೆ.

ಈ ಗೊಂಬೆಗಳು 2ರಿಂದ 5–6 ಅಡಿಗಳಷ್ಟು ಎತ್ತರ ಇರುವುದುಂಟು. ಪ್ರಮುಖ ಪಾತ್ರಗಳು ಆಕಾರದಲ್ಲಿ ಇತರ ಪಾತ್ರಗಳಿಗಿಂತ ದೊಡ್ಡದಾಗಿರುತ್ತವೆ. ಗೊಂಬೆಗಳು ನೆಟ್ಟಗೆ ನಿಲ್ಲುವಂತೆ ಮಾಡಲು ಅವುಗಳಿಗೆ ಈಚಲು ಅಥವಾ ಬಿದಿರು ಕಡ್ಡಿಗಳನ್ನು ಕಟ್ಟಿರುತ್ತಾರೆ.

ತೊಗಲುಗೊಂಬೆಗಳನ್ನು ಆಡಿಸುವ ರಂಗಭೂಮಿಯ ನಿರ್ಮಾಣವೂ ವಿಶಿಷ್ಟವಾದದ್ದು. ಎರಡು ಬೊಂಬಿನ ಕಂಬಗಳನ್ನು ನಿಲ್ಲಿಸಿ, ಅವುಗಳ ನಡುವೆ ಬಿಳಿ ಪಂಚೆಯೊಂದನ್ನು ಬಿಗಿಯಾಗಿ ಎಳೆದು ಕಟ್ಟುತ್ತಾರೆ. ಇದರ ಸುತ್ತ ತಡಿಕೆಗಳು ಇರುವುದರಿಂದ ಆ ಪಂಚೆಯ ತೆರೆಯ ಹಿಂದೆ ಕುಳಿತವರು ಪ್ರೇಕ್ಷಕರಿಗೆ ಕಾಣುವುದಿಲ್ಲ. ಪಂಚೆಯ ಹಿಂಬದಿಯಲ್ಲಿ ದೊಡ್ಡ ಎಣ್ಣೆಯ ದೀಪವೊಂದನ್ನು ಹಚ್ಚಿಡುತ್ತಾರೆ. ಪ್ರೇಕ್ಷಕರು ಕೂರುವ ಸ್ಥಳದಲ್ಲಿ ಕತ್ತಲು ಆವರಿಸಿರುವುದರಿಂದ ಪಂಚೆಯ ಮೇಲೆ ಬಿದ್ದ ಬೆಳಕು, ಪಂಚೆಯನ್ನು ಬೆಳಕಿನ ತೆರೆಯಂತೆ ಮಾಡುತ್ತದೆ.

ದೀಪಕ್ಕೆ ಕೊಂಚ ಹಿಂದೆ ಕುಳಿತ ಆಟಗಾರರು ತೊಗಲು ಬೊಂಬೆಗಳಿಗೆ ಸಿಕ್ಕಿಸಿದ ಉದ್ದದ ಬಿದಿರಿನ ಕಡ್ಡಿಗಳನ್ನು ಹಿಡಿದು ಬೊಂಬೆಗಳನ್ನು ಆಡಿಸುತ್ತಾರೆ. ಈ ಬೊಂಬೆಗಳನ್ನು ತೆರೆಗೆ ಒತ್ತಿ ಹಿಡಿದಾಗ ಅವುಗಳ ಬಿಂಬ ತೆರೆಯ ಆಚೆಗೆ



ತೊಗಲುಗೊಂಬೆ : ಚಲಿಸುವ ಅವಯವ

ಕುಳಿತ ಜನರಿಗೆ ಕಾಣುತ್ತದೆ. ಬಣ್ಣಗಳೂ ಸ್ಪಷ್ಟವಾಗಿ ಕಂಡು ಬಂದು ರೀತಿಯ ಬಣ್ಣದ ಸಿನಿಮಾ ಚಿತ್ರದಂತೆ ತೋರಿಬರುತ್ತದೆ.

ತೆರೆಯ ಮೇಲೆ ವ್ಯಕ್ತಿಗಳನ್ನು ಮಾತ್ರವಲ್ಲದೆ ದೃಶ್ಯದ ಹಿನ್ನೆಲೆಯಾಗಿ ಮರ, ಗಿಡ, ಪ್ರಾಣಿಗಳನ್ನೂ ತೋರಿಸುವುದುಂಟು. ಈ ಹಿನ್ನೆಲೆ ದೃಶ್ಯ



ತೊಗಲುಗೊಂಬೆಗಳು

ಗಳನ್ನು ಕಲಾತ್ಮಕವಾಗಿ ಚಿತ್ರಿಸಿರುತ್ತಾರೆ. ರಾಕ್ಷಸ ಅಥವಾ ಆವೇಶ ಪ್ರಧಾನವಾದ ಪಾತ್ರವನ್ನು ಚಿತ್ರಿಸಲು, ಪಾತ್ರದ ಮುಖ ಪಕ್ಕಕ್ಕೆ ತಿರುಗಿದ್ದರೂ ಎರಡೂ ಕಣ್ಣುಗಳನ್ನು ಒಂದೇ ಪಾರ್ಶ್ವದಲ್ಲಿ ತೋರಿಸುವುದುಂಟು. ಇದರಿಂದ ಮುಖಭಾವವನ್ನು ಅತ್ಯಂತ ಪ್ರಬಲವಾಗಿ ವ್ಯಕ್ತಪಡಿಸಲು ಅನುಕೂಲವಾಗುತ್ತದೆ. ಆಧುನಿಕ 'ಕ್ಯೂಬಿಸಂ' ವಿಧಾನ ಇಂಥದೇ ಎಂಬುದು ಗಮನಾರ್ಹ.

ಗೊಂಬೆಗಳನ್ನು ಆಡಿಸುವವರ ಕಡೆಯವರೇ ಕಥಾಸಂದರ್ಭವನ್ನು ಹಾಡು–ಮಾತುಗಳಿಂದ ವಿವರಿಸುತ್ತಾರೆ. ಇದಕ್ಕೆ ಸೂಕ್ತ ವಾದ್ಯ ಹಿಮ್ಮೇಳ ಸೇರಿಸುವುದೂ ಉಂಟು.

ರಾಮಾಯಣ, ಮಹಾಭಾರತಗಳ ಕಥಾಸನ್ನಿವೇಶಗಳನ್ನು ಗೊಂಬೆಯಾಟಕ್ಕೆ ವಸ್ತುವಾಗಿ ಬಳಸುವುದು ವಾಡಿಕೆ. 16ನೆಯ ಶತಮಾನದಲ್ಲಿ ತೊಗಲುಗೊಂಬೆಯಾಟಕ್ಕೆಂದೇ ವಿಶೇಷವಾಗಿ ರಚಿತವಾದ ತೆಲುಗು ಸಾಹಿತ್ಯ ಕೃತಿ ಇದ್ದಿತು.

ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಈ ಕಲೆ ಉಚ್ಛ್ರಾಯ ಸ್ಥಿತಿಗೆ ಬಂದಿತ್ತು. ಅನಂತಪುರ ಜಿಲ್ಲೆಯ 'ಬೊಮ್ಮಲಾಟಪಲ್ಲಿ' (ಬೊಂಬೆಯಾಟದ ಪಲ್ಲಿ) ಯಲ್ಲಿ ಈ ಕಲೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿದ್ದ ಹಲವಾರು ಕುಟುಂಬಗಳು ವಾಸಿಸುತ್ತಿದ್ದುವೆಂದು ಹೇಳುತ್ತಾರೆ.

ಹಿಂದೆ ಈ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದ ಸಂಸಾರಗಳೆಷ್ಟೋ; ಈಗ ಇಂಥವು ಇಲ್ಲವೇ ಇಲ್ಲ ಎನ್ನಬಹುದು. ಈ



ಆಂಧ್ರದ ಗಂಭೀರ ಧೀರ ತೊಗಲುಗೊಂಬೆ ರಾಮ

ಪರಂಪರಾಗತ ಕಲೆ ಈಗ ಕಣ್ಮರೆಯಾಗುತ್ತಿದೆ. ಅಲ್ಲಲ್ಲಿ ಈಗಲೂ ದೊರೆಯುತ್ತಿರುವ ತೊಗಲುಗೊಂಬೆಗಳನ್ನು ಲಲಿತ ಕಲಾ ಅಕಾಡೆಮಿ ಹಾಗೂ ಜಾನಪದ ವಸ್ತುಸಂಗ್ರಹಾಲಯಗಳು ಸಂಗ್ರಹಿಸಿ ಇಟ್ಟಿವೆ.

## ಥಾಮಸ್ ಪೇನ್

"ವಿಶ್ವದಾದ್ಯಂತ ಸ್ವಾತಂತ್ರ್ಯದ ಬೇಟೆ ನಡೆದಿದೆ. ಏಷ್ಯ, ಆಫ್ರಿಕಗಳಲ್ಲಿ ಅದನ್ನು ಬಹಳ ಹಿಂದೆಯೇ ಹೊರದೂಡಿದ್ದಾರೆ. ಯೂರೋಪ್ ಅದನ್ನು ಪರಕೀಯ ಎಂಬಂತೆ ಕಾಣುತ್ತಿದೆ. ಇಂಗ್ಲೆಂಡಾದರೋ ತನ್ನ ರಾಷ್ಟ್ರದಿಂದ ಹೊರಟುಹೋಗಬೇಕೆಂದು ಅದಕ್ಕೆ ಎಚ್ಚರಿಕೆ ಕೊಟ್ಟಿದೆ. ಈ ದೇಶಭ್ರಷ್ಟನನ್ನು ಬರಮಾಡಿಕೊಳ್ಳಿ. ಅಲ್ಲದೆ ಮಾನವ ಜನಾಂಗಕ್ಕಾಗಿ ಸಕಾಲದಲ್ಲಿ ಒಂದು ಆಶ್ರಯಸ್ಥಾನವನ್ನು ನಿರ್ಮಿಸಿ.''

—ಅಮೆರಿಕದ ವಸಾಹತುಗಳ ಜನರಿಗೆ ಥಾಮಸ್ ಪೇನ್ ಕೊಟ್ಟ ಕರೆ ಇದು.

ಥಾಮಸ್ ಪೇನ್ ಇಂಗ್ಲೆಂಡಿನ ಥೆಟ್‌ಫೋರ್ಡ್‌ನಲ್ಲಿ 1737ನೆಯ ಜನವರಿ 29ರಂದು ಜನಿಸಿದ. ಬಡತನದ ದೆಸೆಯಿಂದಾಗಿ 13ನೆಯ ವಯಸ್ಸಿಗೇ ಶಾಲೆ ಬಿಟ್ಟ ಪೇನ್, ನಾವಿಕನಾಗಬೇಕೆಂದು ಪ್ರಯತ್ನಿಸಿದ. ಆ ಜೀವನ ಅವನಿಗೆ ಒಗ್ಗಲಿಲ್ಲ. ಮೊದಲನೆಯ ಯಾನಕ್ಕೇ ಅದನ್ನು ಕೈಬಿಟ್ಟು ಉಪಾಧ್ಯಾಯನಾದ. ತೆರಿಗೆ ವಸೂಲಿಗಾರನಾಗಿಯೂ ಕೆಲಸಮಾಡಿದ. ಸುಮಾರು 20 ವರ್ಷಗಳ ಈ ಅವಧಿಯಲ್ಲಿ ಆತ ಅನೇಕ ಪುಸ್ತಕಗಳನ್ನು ಓದಿದ. ಅಮೆರಿಕದ ರಾಜನೀತಿಜ್ಞ, ವಿಜ್ಞಾನಿ ಹಾಗೂ ಪತ್ರಿಕೋದ್ಯಮಿ ಬೆಂಜಮಿನ್ ಫ್ರಾಂಕ್ಲಿನ್ ಲಂಡನಿಗೆ ಬಂದಾಗ, ಅಲ್ಲಿ ಅವನನ್ನು ಪೇನ್ ಭೇಟಿಯಾದ. ಪೇನ್‌ನ ಜೀವನದಲ್ಲಿ ಇದೊಂದು ಮಹತ್ವದ ಘಟನೆಯಾಯಿತು. ಅಮೆರಿಕದ ವಸಾಹತುಗಳಿಗೆ ಹೋಗುವಂತೆ ಬೆಂಜಮಿನ್ ಫ್ರಾಂಕ್ಲಿನ್ ಸಲಹೆ ಕೊಟ್ಟ. ಆತನಿಂದ ಪರಿಚಯ ಪತ್ರ ತೆಗೆದುಕೊಂಡು ಪೇನ್ ಫಿಲಾಡೆಲ್ಫಿಯಾಕ್ಕೆ ಹೋಗಿ ಅಲ್ಲಿ ಒಂದು ಪತ್ರಿಕೆಯ ಸಂಪಾದಕನಾದ.

1776ರಲ್ಲಿ ಪೇನ್ ಅಮೆರಿಕದ ಸ್ವಾತಂತ್ರ್ಯ ಚಳುವಳಿಯನ್ನು ಸೇರಿದ. 'ಕಾಮನ್ ಸೆನ್ಸ್' ಎಂಬ ಪುಸ್ತಿಕೆಯನ್ನು ಪ್ರಕಟಿಸಿದ. ಆಗ ಅಮೆರಿಕದ ವಸಾಹತುಗಳು ಇಂಗ್ಲೆಂಡಿನ ಅರಸ ಮೂರನೆಯ ಜಾರ್ಜನ ಅಧಿಪತ್ಯಕ್ಕೆ ಒಳಪಟ್ಟಿದ್ದುವು. ಪೇನ್‌ನ ಪುಸ್ತಿಕೆಯಲ್ಲಿ ಮೂರನೆಯ ಜಾರ್ಜನ ವಿರುದ್ಧ ಹೇಳಿಕೆಗಳಿದ್ದುವಲ್ಲದೆ, ವಸಾಹತಗಳ ಜನರು ಬ್ರಿಟಿಷ್ ಅರಸನ ಮೇಲೆ ದಂಗೆ ಎದ್ದು ತಮ್ಮ ದೇಶದ ಪ್ರಜಾಪ್ರಭುತ್ವ ಸರಕಾರ ಸ್ಥಾಪಿಸಕೊಳ್ಳಬೇಕೆಂಬ ಕರೆಯೂ ಇತ್ತು. ಪುಸ್ತಿಕೆ ಎಷ್ಟು ಪ್ರಭಾವಶಾಲಿಯಾಗಿತ್ತೆಂದರೆ, ಅಮೆರಿಕದಲ್ಲಿ ಸ್ವಾತಂತ್ರ್ಯಯುದ್ಧ ಆರಂಭವಾಗಿದ್ದರೂ ಅದರಲ್ಲಿ ಭಾಗವಹಿಸಲು ಇನ್ನೂ ಮನಸ್ಸು ಮಾಡಿರದಿದ್ದ ವಸಾಹತುಗಾರರು ಕೂಡ ಪೇನ್‌ನ ಪುಸ್ತಿಕೆಯನ್ನೋದಿದ ಮೇಲೆ ಯುದ್ಧಕ್ಕೆ ಸೇರಲು ಮುಂದೆ ಬಂದರು. ಅಮೆರಿಕದಲ್ಲಿ ಈ ಮಹಾ ಕ್ರಾಂತಿ ನಡೆಯುತ್ತಿದ್ದ ಕಾಲದಲ್ಲಿ ಪೇನ್ ತಾನೂ ಶಸ್ತ್ರಧಾರಿಯಾಗಿ ಹೋರಾಟದಲ್ಲಿ ಭಾಗಿಯಾದ; ಲೇಖನಿಯನ್ನೂ ಹಿಡಿದು ಪುಸ್ತಿಕೆಗಳನ್ನು ಪ್ರಕಟಿಸಿ, ಯುದ್ಧನಿರತ ಜನತೆಯಲ್ಲಿ ಧೈರ್ಯ ತುಂಬಿದ. 1780ರಲ್ಲಿ ಕೇಂದ್ರ ಸರಕಾರದ ರಚನೆಗಾಗಿ ವಿಧ್ಯುಕ್ತ ಸಭೆ ಸೇರಿಸಲು ಶ್ರಮಿಸಿದ.

ಯುದ್ಧ ಮುಗಿದ ತರುವಾಯ ನ್ಯೂಯಾರ್ಕ್ ಸಂಸ್ಥಾನದವರು ಪೇನ್‌ನ ಸೇವೆಯನ್ನು ಸ್ಮರಿಸಿ ನ್ಯೂ ರಾಕೆಟ್ ಎಂಬಲ್ಲಿ ಅವನಿಗೊಂದು ವ್ಯವಸಾಯ ಕ್ಷೇತ್ರವನ್ನು ಕೊಟ್ಟರು. 1787ರಲ್ಲಿ ಪೇನ್ ಇಂಗ್ಲೆಂಡಿಗೆ ಹಿಂದಿರುಗಿದ. ಇಂಗ್ಲೆಂಡ್ – ಫ್ರಾನ್ಸುಗಳ ಜನತೆಯನ್ನು ಪ್ರಜಾಪ್ರಭುತ್ವ ಸರಕಾರ ರಚಿಸಿಕೊಳ್ಳುವಂತೆ ಮನವೊಲಿಸಲು ದುಡಿದ. ಬ್ರಿಟಿಷ್ ರಾಜಕಾರಣಿ ಎಡ್ಮಂಡ್ ಬರ್ಕ್ ಫ್ರಾನ್ಸಿನ ಮಹಾಕ್ರಾಂತಿಯ ವಿರುದ್ಧವಾಗಿ ಬರೆದ ಪುಸ್ತಕಕ್ಕೆ ಉತ್ತರವೆಂಬಂತೆ ಪೇನ್ 'ರೈಟ್ಸ್ ಆಫ್ ಮ್ಯಾನ್' ಎಂಬ ಗ್ರಂಥವನ್ನು ಬರೆದ. ಇದರಿಂದಾಗಿ ಇಂಗ್ಲೆಂಡಿನಲ್ಲಿ ಅವನಿಗೆ ವಿರೋಧಿಗಳು ಹೆಚ್ಚಿದರು; ಆತ ಫ್ರಾನ್ಸಿಗೆ ಪಲಾಯನ ಮಾಡಬೇಕಾಯಿತು.

ಫ್ರಾನ್ಸಿನಲ್ಲಿ ಪೇನ್‌ಗೆ ಗೌರವ ಪೌರತ್ವ ನೀಡಿದರು. 1792ರಲ್ಲಿ ಫ್ರೆಂಚರ ರಾಜಕೀಯ ಮಹಾಸಭಾ ಸದಸ್ಯನಾಗಿ ಆಯ್ಕೆಗೊಂಡ. ಆದರೆ ಫ್ರಾನ್ಸಿನ ಅರಸ 16ನೆಯ ಲೂಯಿಯ ಮರಣದಂಡನೆಯನ್ನು ಟೀಕಿಸಿದನೆಂದು ಪೇನ್‌ನನ್ನು ಸೆರೆಮನೆಯಲ್ಲಿ ಇರಿಸಿದರು. ಅಲ್ಲಿ ಪೇನ್ 'ಏಜ್ ಆಫ್ ರೀಸನ್' ಎನ್ನುವ ಪುಸ್ತಕವನ್ನು ಬರೆದ.

1794ರಲ್ಲಿ ಫ್ರಾನ್ಸಿಗೆ ಅಮೆರಿಕದ ರಾಯಭಾರಿಯಾಗಿ ಬಂದ ಜೇಮ್ಸ್ ಮನ್ರೋ ಪೇನ್‌ನ ಬಿಡುಗಡೆಗಾಗಿ ಪ್ರಯತ್ನಮಾಡಿದ. 1802ರಲ್ಲಿ ಪೇನ್



ವಿಶ್ವ ಮಾನವ : ಪೇನ್

ಅಮೆರಿಕಕ್ಕೆ ಹಿಂದಿರುಗುವುದು ಸಾಧ್ಯವಾಯಿತು. ಈ ವೇಳೆಗೆ ಪೇನ್‌ನ ಬಗೆಗೆ ಅಮೆರಿಕದ ಜನರ ಮನೋಭಾವ ಬದಲಾಗಿತ್ತು. ಅವನ ವಿಷಯದಲ್ಲಿ ಅವರು ಅಸಂತುಷ್ಟರಾಗಿದ್ದರು. ಬಡತನ ಬೇರೆ ಅವನನ್ನು ಕಾಡುತ್ತಿತ್ತು. ಪೇನ್ 1809ರಲ್ಲಿ ಜೂನ್ 8ರಂದು ನ್ಯೂಯಾರ್ಕ್ ನಗರದಲ್ಲಿ ಮರಣ ಹೊಂದಿದ. ನ್ಯೂ ರಾಕೆಟ್‌ನಲ್ಲಿದ್ದ ಪೇನ್‌ನ ವ್ಯವಸಾಯಕ್ಷೇತ್ರದಲ್ಲಿ ಅವನ ದೇಹವನ್ನು ಸಮಾಧಿ ಮಾಡಿದರು. ಹತ್ತು ವರ್ಷಗಳ ಅನಂತರ ಅವನ ಅಸ್ಥಿಗಳನ್ನು ಇಂಗ್ಲೆಂಡಿಗೆ ತೆಗೆದುಕೊಂಡು ಹೋದರು.

"ಇಡೀ ಪ್ರಪಂಚವೇ ನನ್ನ ದೇಶ, ಒಳ್ಳೆಯದನ್ನು ಮಾಡುವುದೇ ನನ್ನ ಧರ್ಮ" ಎನ್ನುವುದು ಪೇನ್‌ನ ಧ್ಯೇಯವಾಗಿತ್ತು.

## ಥಾಮಸ್ ಮಾನ್

ಇಪ್ಪತ್ತನೆಯ ಶತಮಾನದ ಅತ್ಯಂತ ಪ್ರಮುಖ ಕಾದಂಬರಿಕಾರರಲ್ಲಿ ಒಬ್ಬ ಜರ್ಮನಿಯ ಥಾಮಸ್ ಮಾನ್. ಬದುಕಿನ ಬಗೆಗೆ ಆಳವಾಗಿ ಚಿಂತಿಸಿ ಉತ್ತಮ ಕಾದಂಬರಿಗಳನ್ನೂ ಲೇಖನಗಳನ್ನೂ ಬರೆದ ಮಾನ್‌ನ ಗದ್ಯಶೈಲಿ ಅತ್ಯಂತ ಪರಿಣಾಮಕಾರಿಯಾದದ್ದು. ಈತನ ಸಾಹಿತ್ಯ ಸಾಧನೆಗಾಗಿ ನೊಬೆಲ್ ಪ್ರಶಸ್ತಿ ದೊರೆಯಿತು.

ಜರ್ಮನಿಯ ಲ್ಯೂಬೆಕ್‌ನಲ್ಲಿ 1875ನೆಯ ಜೂನ್ 6ರಂದು ಮಾನ್ ಜನಿಸಿದ. ಹುಡುಗನಿಗೆ ಓದಿನಲ್ಲಿ ಆಸಕ್ತಿ ಇರಲಿಲ್ಲ. 15 ವರ್ಷದವನಾಗಿದ್ದಾಗ ತಂದೆಯನ್ನು ಕಳೆದುಕೊಂಡ. ತಾಯಿಯೊಂದಿಗೆ ಮ್ಯೂನಿಕ್‌ಗೆ ಹೋಗಿ, ಅಲ್ಲಿ ಅಗ್ನಿ ವಿಮಾ ಸಂಸ್ಥೆಯೊಂದರಲ್ಲಿ ಕೆಲಸಕ್ಕೆ ಸೇರಿದ. ಸಂಬಳವೇ ಇಲ್ಲದೆ ಅಲ್ಲಿ ಕೆಲಸ ಮಾಡುತ್ತಿದ್ದಾಗ, ಒಬ್ಬರಿಗೂ ಗೊತ್ತಾಗದಂತೆ 'ಪವಿತ್ರ ಪಾಪಿ' ಎಂಬ ಕಥೆಯನ್ನು ಬರೆದ. ಅಲ್ಲಿಂದಾಚೆಗೆ ಬರೆಹಗಾರನಾಗಬೇಕೆಂಬ ಆಸೆ ಬಲವಾಗುತ್ತ ಹೋಯಿತು.

ಮುಂದೆ ಪತ್ರಿಕೆಯೊಂದರ ಸಂಪಾದಕವರ್ಗದಲ್ಲಿ ಕೆಲಸಮಾಡಿದ. ಭವಿಷ್ಯದ ಅನಿಶ್ಚಿತ ಸ್ಥಿತಿಯಿಂದಾಗಿ ಮನಸ್ಸು ಆತ್ಮಹತ್ಯೆಯ ಕಡೆಗೂ



ಆಳ ಚಿಂತನೆ : ಮಾನ್

ವಾಲಿದ್ದುಂಟು. ಈ ಸ್ಥಿತಿಯಲ್ಲೂ ತನ್ನ ಮನೆತನದ ಪೂರ್ವ ಶ್ರೀಮಂತಿಕೆ, ಕೀರ್ತಿಗಳ ಏರಿಳಿತಗಳ ವಸ್ತು ಉಳ್ಳ 'ಬುಡ್ಡನ್ ಬ್ರೂಕ್ಸ್' ಎಂಬ ಕಾದಂಬರಿಯನ್ನು ಅವನು ರಚಿಸಿದ. 1900ರಲ್ಲಿ ಪ್ರಕಟವಾದ ಈ ಕೃತಿ ಇವನನ್ನು ಆ ಕಾಲದ ಅತ್ಯಂತ ಪ್ರಮುಖ ಲೇಖಕನ ಪಟ್ಟಕ್ಕೇರಿಸಿತು.ಇವನ ಖ್ಯಾತಿ ಯೂರೋಪಿನಲ್ಲೆಲ್ಲ ಹರಡಿತು. ಇವನ ಮೊದಲ ಕಾದಂಬರಿ 150 ಸಲ ಪ್ರಕಟವಾಗಿ, ಅನೇಕ ಭಾಷೆಗಳಿಗೆ ಅನುವಾದಗೊಂಡಿತು.

ಶೋಪನ್‌ಹೋವರ್, ನೀಷೆ, ವ್ಯಾಗ್ನೆರ್, ಗಯಟೆ, ಫ್ರಾಯ್ಡ್ ಮೊದಲಾದ ವಿಚಾರವಂತ ಲೇಖಕರಿಂದ ಮಾನ್ ಪ್ರಭಾವಿತನಾಗಿದ್ದ. ನಮ್ಮ ಕಾಲದಲ್ಲಿ ಮಾನವನ ಭವಿಷ್ಯ ರಾಜಕೀಯದ ಮೂಲಕ ವ್ಯಕ್ತವಾಗುತ್ತಿದೆ; ಜೀವನವನ್ನು ಅರ್ಥಮಾಡಿಕೊಳ್ಳುವ ಆಸಕ್ತಿಯೇ ಇಲ್ಲದ ಈ ಪ್ರಪಂಚದಲ್ಲಿ ಮೌಲ್ಯಗಳನ್ನು ಕಲೆ ಸೃಷ್ಟಿಸುತ್ತದೆ –ಎಂಬುದು ಮಾನ್‌ನ ವಿಚಾರಧಾರೆ. ವ್ಯಾಪಾರೀ ಮನೋಧರ್ಮದ ಈ ಪ್ರಪಂಚದಲ್ಲಿ ಕಲಾವಿದ ಎದುರಿಸಬೇಕಾದ ಸಮಸ್ಯೆಗಳು ಇವನ ಕಾದಂಬರಿಗಳಲ್ಲಿ ವ್ಯಕ್ತವಾಗಿವೆ.

'ಮಾಯಾ ಪರ್ವತ' (1924) ಇವನ ಮತ್ತೊಂದು ಪ್ರಮುಖ ಕೃತಿ. ಕ್ಷಯರೋಗದ ಆಸ್ಪತ್ರೆಯಲ್ಲಿ ತರುಣ ರೋಗಿಯೊಬ್ಬ ಇರುತ್ತಾನೆ; ಅವನು ತನ್ನ ಸುತ್ತಮುತ್ತಲಿನ ರೋಗಿಗಳ ನಂಬಿಕೆಗಳು, ಸಮಕಾಲೀನ ಸಮಸ್ಯೆಗಳು ಮೊದಲಾದುವುಗಳ ಬಗೆಗೆ ಮಾತನಾಡುತ್ತ, ತನ್ನ ನಂಬಿಕೆ ಮೌಲ್ಯಗಳನ್ನು ರೂಪಿಸಿಕೊಳ್ಳುತ್ತ ಹೋಗುತ್ತಾನೆ; ಈ ತರುಣ ರೋಗಿಯ ಆಧ್ಯಾತ್ಮಿಕ ಚಿಂತನೆ ಬೆಳೆಯುತ್ತ ಸಾಗುತ್ತದೆ. ಇದರ ಚಿತ್ರಣವೇ 'ಮಾಯಾ ಪರ್ವತ'. ಈ ಶತಮಾನದ ಅಮೂಲ್ಯ ಕೃತಿ ಇದು.

ಬೈಬಲಿನ ವ್ಯಕ್ತಿ ಜೋಸೆಫ್‌ನ ಕಥೆಯ ಮೇಲೆ ಆಧರಿತವಾದ ಕಾದಂಬರಿಗಳು 1933–44ರ ಅವಧಿಯಲ್ಲಿ ನಾಲ್ಕು ಸಂಪುಟಗಳಲ್ಲಿ ಪ್ರಕಟವಾದುವು. ಇವು ಕೂಡ ಮಾನ್‌ನ ಪ್ರಮುಖ ಕೃತಿಗಳು. 'ಜೋಸೆಫ್ ಮತ್ತು ಅವರ ಸೋದರರು' ಈ ಶ್ರೇಣಿಯ ಪ್ರಥಮ ಸಂಪುಟದ ಹೆಸರು. 'ಡಾಕ್ಟರ್ ಫಾಸ್ಟಸ್' ಎರಡನೆಯ ಮಹಾಯುದ್ಧದ ಅನಂತರ ಪ್ರಕಟವಾದ ಇವನ ಕೃತಿಗಳಲ್ಲಿ ಗಣನೀಯವಾದದ್ದು. ಇವಲ್ಲದೆ ಇನ್ನೂ ಅನೇಕ ಕಿರು ಕಾದಂಬರಿ –ಸಣ್ಣ ಕಥೆಗಳನ್ನೂ, ರಾಜಕೀಯ ಮತ್ತು ಇತಿಹಾಸ ವಸ್ತುವಾಗುಳ್ಳ ಕೃತಿಗಳನ್ನೂ ಇವನು ರಚಿಸಿದ.

ತನ್ನ 30ನೆಯ ವಯಸ್ಸಿನಲ್ಲಿ ಮಾನ್ ಮದುವೆಯಾಗಿ ಆರು ಮಕ್ಕಳ ತಂದೆಯಾದ. ಸ್ವಿಟ್ಜರ್‌ಲೆಂಡಿನಲ್ಲಿ ಭಾಷಣ ಮಾಡುತ್ತ ಇವನು ನಾಜಿಗಳ ವಿರುದ್ಧ ಮಾತನಾಡಿದ. ಈ ವೇಳೆಗೆ ನಾಜಿಗಳು ಜರ್ಮನಿಯಲ್ಲಿ ಅಧಿಕಾರಕ್ಕೆ ಬಂದಿದ್ದರು. ಅವನು ಜರ್ಮನಿಗೆ ಹಿಂದಿರುಗಿದರೆ ಕೇಡಾಗುವುದೆಂದು ಅವನ ಮಕ್ಕಳು ಸ್ವಿಟ್ಜರ್‌ಲೆಂಡಿನಲ್ಲಿದ್ದ ಅವನಿಗೆ ತಿಳಿಸಿದರು. ಮಾನ್ 1938ರ ವರೆಗೆ ಆ ದೇಶದಲ್ಲಿಯೇ ಉಳಿದುಕೊಂಡ. ಅನಂತರ ಅಮೆರಿಕಕ್ಕೆ ಹೋಗಿ 1944ರಲ್ಲಿ ಅಲ್ಲಿಯ ಪೌರತ್ವವನ್ನು ಪಡೆದ. ಐದು ವರ್ಷಗಳಾದ ಮೇಲೆ ಜರ್ಮನಿಗೆ ಒಮ್ಮೆ ಭೇಟಿ ನೀಡಿ ಮತ್ತೆ ಸ್ವಿಟ್ಜರ್‌ಲೆಂಡಿನ ಜ್ಯೂರಿಕ್‌ನಲ್ಲಿ ನೆಲೆಸಿದ. 1955ರ ಆಗಸ್ಟ್ 12ರಂದು ಅಲ್ಲಿಯೇ ನಿಧನನಾದ.

ಇವನ ಸಹೋದರ ಹೇನ್ರಿಕ್ ಮಾನ್ ಕೂಡ ಖ್ಯಾತ ಕಾದಂಬರಿಕಾರ. ಥಾಮಸ್ ಮಾನನ ಮಕ್ಕಳಲ್ಲಿ ಹಿರಿಯವನಾದ ಕ್ಲಾಸ್ ಮಾನ್ ಖ್ಯಾತ ಲೇಖಕನಾಗಿ ನಾಜಿಗಳ ವಿರುದ್ಧ ಸೆಣಸಿದ; ಹಿರಿಯ ಮಗಳು ಎರಿಕ ಪ್ರಖ್ಯಾತ ಇಂಗ್ಲಿಷ್ ಕವಿ ಆಡೆನ್‌ನನ್ನು ಮದುವೆಯಾದಳು. ಇವಳು ತನ್ನ ತಂದೆಯನ್ನು ಕುರಿತು ಒಂದು ಪುಸ್ತಕ ಬರೆದಿದ್ದಾಳೆ.

1969ರಲ್ಲಿ ಗಯಟೆಯ ದ್ವಿಶತಮಾನೋತ್ಸವ ಸಂದರ್ಭದಲ್ಲಿ, ಪೂರ್ವ ಹಾಗೂ ಪಶ್ಚಿಮ ಜರ್ಮನಿಗಳೆರಡೂ ಮಾನ್‌ಗೆ 'ಗಯಟೆ ಬಹುಮಾನ' ನೀಡಿ ಗೌರವಿಸಿದುವು.

## ಥೋರೋ

ಹೆನ್ರಿ ಡೇವಿಡ್ ಥೋರೋನ ಕಾರ್ಯ ಧೋರಣೆಯನ್ನು 'ಒಂಟಿ ಮನುಷ್ಯನ ಕ್ರಾಂತಿ' ಎನ್ನಬಹುದು. ಪ್ರಪಂಚವನ್ನು ಬದಲಿಸುವ ತನ್ನ ಪ್ರಯತ್ನದ ಮೊದಲ ಅಂಗವಾಗಿ ತಾನೇ ಬದಲಾಗಬೇಕು –ಎಂದುಕೊಂಡ. ಸರಳ, ಉದಾತ್ತ ಜೀವನದ ಧ್ಯೇಯವನ್ನು ಕಾರ್ಯಗತ ಮಾಡಲು ಅವನು ತನ್ನ ಊರಿನ ಹೊರಗಿರುವ ಕಾಡಿನಲ್ಲಿ ವಾಸಿಸಲು ನಿರ್ಧರಿಸಿದ. 1845ರ ವಸಂತಕಾಲದ ಒಂದು ಬೆಳಗ್ಗೆ ನೆರೆಯವನಿಂದ ಒಂದು ಕೊಡಲಿ ಕೇಳಿ ತಂದು ಕಾಡಿನ ಕಡೆಗೆ ಹೊರಟ. ಮರ ಕಡಿದು ಅದರಿಂದಲೇ ಒಂದು ಕೊಠಡಿಯನ್ನು ಕಟ್ಟಿದ. ಹತ್ತಿರದ ಹಳ್ಳದಲ್ಲಿ ಮೀನು ಹಿಡಿಯುತ್ತ, ಕೊಂಚ ವ್ಯವಸಾಯ ಮಾಡುತ್ತ ಅಲ್ಲೇ ವಾಸಿಸತೊಡಗಿದ.

1846 ಜೂಲೈಯಲ್ಲಿ ಒಂದು ದಿನ ಥೋರೋ ದುರಸ್ತಿಗೆ ಕೊಟ್ಟಿದ್ದ ತನ್ನ ಪಾದರಕ್ಷೆಯನ್ನು ತರಲು ಮೂರು ಕಿಲೊಮೀಟರು ದೂರದ ಕಾನ್‌ಕಾರ್ಡ್ ಪಟ್ಟಣಕ್ಕೆ ಹೊರಟ. ಪಟ್ಟಣದ ಸೆರೆಮನೆಯ ಮುಂದೆ ಹೋಗುತ್ತಿದ್ದಾಗ ಸೆರೆಮನೆಯ ಅಧಿಕಾರಿ ಇವನನ್ನು ಹೆಸರು ಹಿಡಿದು ಕರೆದ.

"ಹೇಳಲು ದುಃಖವೆನಿಸುತ್ತದೆ. ಆದರೆ ಏನು ಮಾಡಲಿ? ನಿನ್ನನ್ನು ಹಿಡಿದು ಜೈಲಿಗೆ ಹಾಕಲು ಹುಕುಂ ಬಂದಿದೆ," ಎಂದ ಆತ.

"ಜೈಲಿಗೆ? ನನ್ನನ್ನು? ಯಾಕಪ್ಪಾ?" ಥೋರೋ ಕೇಳಿದ.

"ನಿನಗೂ ಗೊತ್ತಿದೆ —ನಾಲ್ಕು ವರ್ಷಗಳಿಂದ ನೀನು ತೆರಿಗೆ ಕೊಟ್ಟಿಲ್ಲ. ಹೂಂ. ಹೀಗೆ ಬಾ."

ಇನ್ನೂ ಗುಲಾಮಗಿರಿಯನ್ನು ರದ್ದುಮಾಡದ, ಹಾಗೂ ನೆರೆಯ ಮೆಕ್ಸಿಕೊದೊಡನೆ ಯುದ್ಧಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದ ಮ್ಯಾಸಚುಸಟ್ಸ್ ಪ್ರಭುತ್ವಕ್ಕೆ ತೆರಿಗೆ ಕೊಡುವುದನ್ನು ಥೋರೋ ವಿರೋಧಿಸಿದ್ದ. "ಅನ್ಯಾಯ

ನಾಗಿ ಯಾರನ್ನಾದರೂ ಸೆರೆಮನೆಗೆ ಕಳುಹಿಸುವ ಸರಕಾರವಿರುವಾಗ ಈ ಗುಲಾಮ ರಾಜ್ಯದಲ್ಲಿ ನ್ಯಾಯವಂತನ ಸ್ಥಾನ ಸೆರೆಮನೆಯೇ. ಸ್ವತಂತ್ರ ಮನುಷ್ಯನೊಬ್ಬ ಮರ್ಯಾದೆಯಿಂದ ಬದುಕಬಹುದಾದ ಸ್ಥಳವೆಂದರೆ ಇದೆ," ಎಂದು ಥೋರೋ ಧೀರತನದಿಂದ ಸೆರೆಮನೆಗೆ ನಡೆದ. "ಯಾವ ರೀತಿಯಲ್ಲಿ ನೋಡಿದರೂ ಇಂಥ ಸರಕಾರಕ್ಕೆ ವಿಧೇಯನಾಗಿರುವುದಕ್ಕಿಂತ ಅಸಹಕಾರ ತೋರುವುದೇ ಕಡಮೆ ಖರ್ಚಿನ ವ್ಯವಹಾರ," ಎಂದ.

ಕಾರಾಗೃಹ ಸೇರಿದ ಆ ರಾತ್ರಿ ಥೋರೋ 'ಆನ್ ದಿ ಡ್ಯೂಟಿ ಆಫ್ ಡಿಸ್‌ಒಬೀಡಿಯೆನ್ಸ್' ಎಂಬ ಪ್ರಬಂಧ ಬರೆದ. ಸರಕಾರ ಅಡ್ಡದಾರಿ ಹಿಡಿದಾಗ ಅದನ್ನು ವಿರೋಧಿಸುವುದು ಪ್ರಾಮಾಣಿಕ ನಾಗರಿಕನ ಕರ್ತವ್ಯ ಎಂಬುದೇ ಇದರಲ್ಲಿ ಪ್ರತಿಪಾದಿತವಾದ ತತ್ತ್ವ. ಟಾಲ್‌ಸ್ಟಾಯ್, ಮಹಾತ್ಮಾ ಗಾಂಧಿ ಮತ್ತು ಮಾರ್ಟಿನ್ ಲೂಥರ್ ಕಿಂಗ್‌ರಂಥವರ ಮೇಲೆ ಪ್ರಭಾವ ಬೀರಿದ ಪ್ರಬಂಧ ಇದು. "ಥೋರೋ ನನ್ನ ಗುರು. ನಾನು ಮಾಡುತ್ತಿರುವ ಅಸಹಕಾರ ಚಳುವಳಿಯನ್ನು ಈ ಪ್ರಬಂಧ ಶಾಸ್ತ್ರೀಯವಾಗಿ ದೃಢಪಡಿಸಿದೆ" ಎಂದು ಗಾಂಧಿಜಿ ಹೇಳಿದ್ದುಂಟು. ಈ ಪ್ರಬಂಧ ಪ್ರಕಟವಾಗಿ ನೂರಕ್ಕಿಂತ ಹೆಚ್ಚು ವರ್ಷಗಳಾಗಿದ್ದರೂ ಇದರ ಪ್ರಭಾವ ಇನ್ನೂ ಕಡಮೆಯಾಗಿಲ್ಲ.

ಮ್ಯಾಸಚುಸೆಟ್ಸ್ ಸಂಸ್ಥಾನದ ಕಾನ್‌ಕಾರ್ಡ್ ಪಟ್ಟಣದಲ್ಲಿ ಹೆನ್ರಿ ಡೇವಿಡ್ ಥೋರೋ 1817, ಜುಲೈ 12ರಂದು ಹುಟ್ಟಿದ. ಮನೆಯಲ್ಲಿ ಕಡು ಬಡತನ. ಆದರೂ ಬುದ್ಧಿವಂತ ಹುಡುಗನನ್ನು ಕಾಲೇಜಿಗೆ ಕಳುಹಿಸುವ ಏರ್ಪಾಡಾಯಿತು. ಹಾರ್ವರ್ಡ್ ವಿಶ್ವವಿದ್ಯಾಲಯದಿಂದ ಪದವಿ ಪಡೆದು ಬಂದ ಹೆನ್ರಿ. ತನ್ನ ಸಹೋದರ ಜಾನ್‌ನೊಡನೆ ಸೇರಿ, ಮನೆಯಲ್ಲೇ ಒಂದು ಶಾಲೆಯನ್ನು ತೆರೆದ. ಎಲ್ಲ ವಿಧದಲ್ಲೂ ಪ್ರಗತಿಪರ ಶಾಲೆ ಎಂದು ಕರೆಸಿಕೊಳ್ಳಬಹುದಾದ ಸಂಸ್ಥೆಯಿದು. ಲ್ಯಾಟಿನ್, ಗ್ರೀಕ್, ಗಣಿತಗಳ ಪಾಠದ ಜೊತೆಗೆ ಸ್ವಂತ ಪ್ರಯೋಗಗಳಿಂದ ಜ್ಞಾನಾರ್ಜನೆ ಮಾಡುವ ಅವಕಾಶ ಈ ಶಾಲೆಯ ವಿದ್ಯಾರ್ಥಿಗಳಿಗೆ ದೊರಕಿತ್ತು. ತರಗತಿಯಲ್ಲಿ ಕುಳಿತು ಕಲಿತುಕೊಳ್ಳುವುದು ಮಾತ್ರವಲ್ಲದೆ, ಮಕ್ಕಳಿಗೆ ನಿಸರ್ಗದ ಪರಿಚಯ ಮಾಡಿಕೊಡಲು ಆಗಾಗ ಪ್ರವಾಸಗಳನ್ನು ಏರ್ಪಾಟು ಮಾಡುವ ಪದ್ಧತಿಯೂ ಇತ್ತು. ಈ ಶಾಲೆ ನಾಲ್ಕು ವರ್ಷಗಳ ಕಾಲ ನಡೆಯಿತು. 1841ರಲ್ಲಿ ಜಾನ್‌ನ ಅನಾರೋಗ್ಯದಿಂದಾಗಿ ಇದನ್ನು ಮುಚ್ಚಬೇಕಾಯಿತು.

ಥೋರೋನ ತಂದೆ ಪೆನ್ಸಿಲ್ ತಯಾರಿ ಅಂಗಡಿ ಇಟ್ಟಿದ್ದ. ಸ್ವಲ್ಪ ಕಾಲ ಥೋರೋ ಆ ಅಂಗಡಿಯಲ್ಲಿ ಕೆಲಸ ಮಾಡಿದ. ಪೆನ್ಸಿಲ್ ತಯಾರಿಯ ಹೊಸ ವಿಧಾನವೊಂದನ್ನು ಈತ ಕಂಡುಹಿಡಿದ. ಆಗಾಗ ಪ್ರಬಂಧ, ಪದ್ಯ ಬರೆದು ಪತ್ರಿಕೆಗಳಿಗೆ ಕಳುಹಿಸುತ್ತಿದ್ದ.

ಕಾನ್‌ಕಾರ್ಡ್‌ನಲ್ಲಿದ್ದ ಸಾಹಿತಿ ರಾಲ್ಫ್ ವಾಲ್ಡೋ ಎಮರ್‌ಸನ್ ಲೇಖಕನಾಗುವಂತೆ ಇವನನ್ನು ಪ್ರೋತ್ಸಾಹಿಸಿದ. 1841ರಿಂದ 1843ರವರೆಗೆ ಥೋರೋ ಎಮರ್‌ಸನ್‌ನ ಮನೆಯಲ್ಲೇ ವಾಸವಾಗಿದ್ದ.

ಒಮ್ಮೆ ಥೋರೋ, ಮನೆಯಲ್ಲೇ ತಯಾರಿಸಿದ ದೋಣಿಯಲ್ಲಿ ಕುಳಿತು ಕಾನ್‌ಕಾರ್ಡಿನಿಂದ ಹೊರಟು ನ್ಯೂಹ್ಯಾಂಪ್‌ಶೈರ್‌ಗೆ ತನ್ನ ಸಹೋದರನೊಡನೆ ಪ್ರಯಾಣ ಮಾಡಿದ. ಈ ಪ್ರವಾಸದ ಕಥನ 'ಎ ವೀಕ್ ಆನ್ ದಿ ಕಾನ್‌ಕಾರ್ಡ್ ಅಂಡ್ ಮೆರಿಮ್ಯಾಕ್ ರಿವರ್ಸ್' 1849ರಲ್ಲಿ ಪ್ರಕಟವಾಯಿತು. ಇದರ ಖರ್ಚಾದದ್ದು ನೂರಿನ್ನೂರು ಪ್ರತಿಗಳು ಮಾತ್ರ. ಮುದ್ರಣದ ಖರ್ಚೂ ಹುಟ್ಟಲಿಲ್ಲ. ಲೇಖಕನೇ ಅದರ ಭಾರ ಹೊರಬೇಕಾಯಿತು. ಸುಣ್ಣ ಬಳಿಯುವುದು, ತೋಟ ಅಗೆಯುವುದು, ಬೇಲಿ ಸರಿಮಾಡುವುದು ಮುಂತಾದ ಸಣ್ಣ ಪುಟ್ಟ ಕೆಲಸಮಾಡಿ ಈತ ಹಣ ಕೂಡಿಸಬೇಕಾಯಿತು.



ಅಸಹಕಾರ : ಥೋರೋ

ಎರಡು ವರ್ಷಗಳ ಅರಣ್ಯಜೀವನದ ಚಿತ್ರಣವೇ 'ವಾಲ್ಡೆನ್' (1854). ಇದು ಪ್ರಕೃತಿ ಸೌಂದರ್ಯದ ಸ್ತುತಿ. ಸರಳ ಜೀವನದ ಶ್ಲಾಘನೆ. "ಪ್ರತಿ ಮುಂಜಾನೆಯೂ ಪ್ರಕೃತಿ ತನ್ನ ಜೀವನದಲ್ಲಿ ಪಾಲುಗೊಳ್ಳಲು ನನ್ನನ್ನು ಆಹ್ವಾನಿಸುವಂತಿತ್ತು" ಎಂದಿದ್ದಾನೆ ಥೋರೋ. ಬಾಹ್ಯ ಪ್ರಪಂಚವನ್ನು ಇವನು ಬಹಳವಾಗಿ ಮೆಚ್ಚುತ್ತಿದ್ದರೂ 'ವಾಲ್ಡೆನ್'ನಲ್ಲಿ ಪ್ರಕೃತಿಯ ವರ್ಣನೆಗಿಂತ ಮನೋವ್ಯಾಪಾರದ ನಿರೂಪಣೆಯೇ ಹೆಚ್ಚಾಗಿದೆ. ಸಾಮಾಜಿಕ ಮತ್ತು ಆರ್ಥಿಕ ಅನ್ಯಾಯಗಳ ವಿರುದ್ಧ ವಿಡಂಬನೆಯಿದೆ. "ಇಂದಿನ ನಾಗರಿಕತೆಯು ನಾವು ವಾಸಿಸುವ ಮನೆಗಳನ್ನು ಸುಧಾರಿಸಿದರೂ ಅವುಗಳಲ್ಲಿ ವಾಸಿಸುವವರನ್ನು ಸುಧಾರಿಸಿಲ್ಲ. ಮನುಷ್ಯ ಲೌಕಿಕವಸ್ತುಗಳನ್ನು ದೂರ ವಿರಿಸಿದಷ್ಟೂ ಶ್ರೀಮಂತನಾಗುತ್ತಾನೆ. ಕಾಲ್ನಡೆಯಲ್ಲಿ ಹೋಗುವವನೇ ಅತ್ಯಂತ ವೇಗವಾಗಿ ಹೋಗುವವನೆಂದು ನಾನು ಕಂಡುಕೊಂಡಿದ್ದೇನೆ." —ಇಂಥ ಹೇಳಿಕೆಗಳು ಥೋರೋ ಬೆಳೆಸಿಕೊಂಡಿದ್ದ ಜೀವನ ದೃಷ್ಟಿ ಏನೆಂಬುದನ್ನು ತೋರಿಸುತ್ತವೆ.

'ವಾಲ್ಡೆನ್'ನ ಪ್ರಥಮ ಆವೃತ್ತಿಯ 2,000 ಪ್ರತಿಗಳು ಮಾರಾಟವಾಗಬೇಕಾದರೆ ಎಂಟು ವರ್ಷ ಹಿಡಿಯಿತು. ಈಗ ಬಹುಶಃ ಪ್ರತಿ ವಾರವೂ 2000 ಪ್ರತಿಗಳು ಖರ್ಚಾಗುತ್ತವೆ. ಈ ಪುಸ್ತಕ 150 ಆವೃತ್ತಿಗಳನ್ನು ಕಂಡಿದೆ. ಹದಿನೈದಕ್ಕಿಂತ ಹೆಚ್ಚು ಭಾಷೆಗಳಿಗೆ ಭಾಷಾಂತರವಾಗಿದೆ.

1862, ಮೇ 6ರಂದು ತನ್ನ ನಲವತ್ತನಾಲ್ಕನೆಯ ವಯಸ್ಸಿನಲ್ಲಿ ಥೋರೋನ ಅಂತ್ಯವಾಯಿತು.

ಥೋರೋವಿನ ಮರಣ ಸಂದರ್ಭದಲ್ಲಿ ಮಾತನಾಡುತ್ತ, ಎಮರ್‌ಸನ್, "ಎಂಥ ಮಹಾ ಪುತ್ರನನ್ನು ಕಳೆದುಕೊಂಡೆವೆಂಬುದರ ಅರಿವು ಇನ್ನೂ ಆಗಿಲ್ಲ", ಎಂದು ಹೇಳಿದ್ದು ನಿಜವಾದ ಮಾತು. ಥೋರೋ ಬದುಕಿದ್ದಾಗ, ಅವನ ಹೆಸರನ್ನು ಕೂಡ ಅನೇಕರು ಕೇಳಿರಲಿಲ್ಲ.

## ದಂಡಿ

ಸುಮಾರು ಕ್ರಿ. ಶ. 7ನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಜೀವಿಸಿದವನು ದಂಡಿ. ಮೂಲತಃ ಗುಜರಾತಿಗೆ ಸೇರಿದವನು. ಜನ್ಮಸ್ಥಳ ಕಾಂಚೀನಗರ. ತಂದೆ ವೀರಸಿಂಹ ಅಥವಾ ವೀರದತ್ತ. ತಾಯಿಯ ಹೆಸರು ಗೌರಿ. ಆ ಕಾಲದಲ್ಲಿ ಪಲ್ಲವ ಅರಸರು ಕಾಂಚಿಯಲ್ಲಿ ಆಳುತ್ತಿದ್ದರು. ಇಮ್ಮಡಿ ಪುಲಿಕೇಶಿ ಪಲ್ಲವರನ್ನು ಸೋಲಿಸಿ ಕಾಂಚಿಯನ್ನು ವಶಪಡಿಸಿಕೊಂಡಾಗ ದಂಡಿ ಕಾಂಚಿಯನ್ನು ಬಿಟ್ಟು ಹೊರಡಬೇಕಾಯಿತು. ಪಲ್ಲವರ ಒಂದನೆಯ ನರಸಿಂಹವರ್ಮ (630–668) ಚಾಲುಕ್ಯರನ್ನು ಸೋಲಿಸಿ ಕಾಂಚಿಯನ್ನು ವಶಪಡಿಸಿಕೊಂಡಾಗ, ದಂಡಿ ಮತ್ತೆ ಪಲ್ಲವ ರಾಜರ ಆಶ್ರಯದಲ್ಲಿ ಬಂದು ನೆಲೆಸಿದ.

'ಅವಂತಿ ಸುಂದರಿ', 'ದಶಕುಮಾರ ಚರಿತೆ', 'ಕಾವ್ಯಾದರ್ಶ'—ಇವು ದಂಡಿಯ ಮೂರು ಕೃತಿಗಳೆಂದು ವಿದ್ವಾಂಸರ ಅಭಿಪ್ರಾಯ. 'ಕಾವ್ಯಾದರ್ಶ'ವನ್ನು ರಚಿಸಿದ ದಂಡಿ ಬೇರೆ, 'ದಶಕುಮಾರ ಚರಿತೆ' ಯನ್ನು ಬರೆದ ದಂಡಿ ಬೇರೆ –ಎಂಬ ಅಭಿಪ್ರಾಯವೂ ಇದೆ.

ದಂಡಿಯ 'ಅವಂತಿ ಸುಂದರಿ' ಸಂಸ್ಕೃತ ಗದ್ಯ ಗ್ರಂಥ. ಪದರಚನೆ ಮತ್ತು ಶೈಲಿಯಲ್ಲಿ ಇದು ಬಾಣಭಟ್ಟನ 'ಕಾದಂಬರಿ'ಯನ್ನು ಬಹುಮಟ್ಟಿಗೆ ಹೋಲುತ್ತದೆ. ಪದಲಾಲಿತ್ಯ ದಂಡಿಯ ಕೃತಿಗಳಲ್ಲಿ ಕಂಡುಬರುವ ವಿಶಿಷ್ಟತೆ. ಸೋಮದೇವನ 'ಕಥಾಸರಿತ್ಸಾಗರ'ದಲ್ಲಿ ಬರುವ ವರರುಚಿ ಶೂದ್ರಕ, ವ್ಯಾಡಿ—ಮುಂತಾದವರ ಕತೆಗಳು ಈ ಗ್ರಂಥದಲ್ಲೂ ಬರುತ್ತವೆ. ಆದರೆ ಇವು 'ಕಥಾಸರಿತ್ಸಾಗರ'ದಲ್ಲಿ ಇರುವುದಕ್ಕಿಂತ ಸ್ವಲ್ಪ ಭಿನ್ನ ರೂಪದಲ್ಲಿವೆ.

'ದಶಕುಮಾರ ಚರಿತೆ'ಯು 'ಅವಂತಿ ಸುಂದರಿ' ಕಥೆಯ ಮುಂದಿನ ಭಾಗದಂತಿದೆ. ರಾಜಕುಮಾರ ರಾಜವಾಹನ ಮತ್ತು ಅವನ ಒಂಬತ್ತು ಮಂದಿ ಗೆಳೆಯರ ಸಾಹಸದ ಕಥೆ ಇದರ ವಸ್ತು. ವಿಧಿವಿಲಾಸದಿಂದ ಅವರೆಲ್ಲರೂ ಬೇರ್ಪಟ್ಟು ಕೊನೆಗೆ ಎಲ್ಲರೂ ಒಟ್ಟಾಗಿ ಸೇರಿ ತಮ್ಮ ಚಿತ್ರವಿಚಿತ್ರ ಅನುಭವಗಳನ್ನು ಪರಸ್ಪರ ಹೇಳಿಕೊಳ್ಳುವಂತೆ ಇದರ ನಿರೂಪಣೆಯಿದೆ. ಈ ಗ್ರಂಥದಲ್ಲಿ ಸಮಕಾಲೀನ ಜೀವನ ಜಾಣ್ಮೆಯಿಂದ ವರ್ಣಿಸಲ್ಪಟ್ಟಿದೆ. ಶೃಂಗಾರಮಯ ಸನ್ನಿವೇಶಗಳಿಂದ ಕೂಡಿದ ಕೃತಿ ಇದು. ಇದರ ಶೈಲಿ ಸರಳವೂ ಆಕರ್ಷಕವೂ ಆಗಿದೆ.

ದಂಡಿಯ 'ಕಾವ್ಯಾದರ್ಶ' ಸಂಸ್ಕೃತದ ಒಂದು ಲಕ್ಷಣಗ್ರಂಥ. ಅದು ಶಾಸ್ತ್ರಗ್ರಂಥವಾದರೂ ಅದರ ಶ್ಲೋಕಗಳು ಮೋಹಕವಾದ ಕಾವ್ಯ ಶೈಲಿಯಲ್ಲಿವೆ. ಇದಕ್ಕೆ ಒಂದು ಉದಾಹರಣೆ :

"ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಂ।
ಯದಿ ಶಬ್ದಾಹ್ವಯಂ ಜ್ಯೋತಿ। ಸಂಸಾರಾನ್ನ ದೀಪ್ಯತೇ ॥"

—'ಮಾತೆಂಬ ಜ್ಯೋತಿಯು ಸಂಸಾರದ ಉದ್ದಕ್ಕೂ ಬೆಳಗದೆ ಇದ್ದರೆ ಮೂರು ಲೋಕಗಳಲ್ಲೂ ಕಗ್ಗತ್ತಲು ಮುಸುಕೀತು.'

ಕ್ರಿ. ಶ. ಸುಮಾರು 12ನೆಯ ಶತಮಾನದಲ್ಲಿ ತಮಿಳಿನಲ್ಲಿ ರಚಿತವಾದ 'ದಂಡಿಯಲಂಕಾರಂ' ಎಂಬ ಒಂದು ಗ್ರಂಥವಿದೆ. 'ಕಾವ್ಯಾದರ್ಶ'ದ ಕೆಲವು ಭಾಗಗಳು ಸಿಂಹಳೀ ಭಾಷೆಗೂ ಪರಿವರ್ತಿತವಾಗಿವೆ. ಸಿಂಹಳ ಭಾಷೆಯಲ್ಲಿ 'ಸಿಯ–ಬಸ್–ಲಕರ್' (ಸ್ವಭಾಷಾಲಂಕಾರ) ಎಂದು ಇದರ ಹೆಸರು. ಈ ಗ್ರಂಥ ರಚಿತವಾದ ಕಾಲ 10ನೆಯ ಶತಮಾನದ ಮಧ್ಯಭಾಗ. ಇದು 'ಕಾವ್ಯಾದರ್ಶ'ದ ಬಹುಭಾಗವನ್ನು ಅಳವಡಿಸಿಕೊಂಡು ಸೂಕ್ತವಾದ ಮಾರ್ಪಾಡುಗಳೊಡನೆ ರೂಪಿಸಲಾದ ಗ್ರಂಥ. ಕನ್ನಡದ 'ಕವಿರಾಜಮಾರ್ಗ'ದ ಕರ್ತೃ (ಕ್ರಿ. ಶ. 9ನೆಯ ಶತಮಾನ) 'ಕಾವ್ಯಾದರ್ಶ'ದಿಂದ ಪ್ರಭಾವಿತನಾಗಿದ್ದಾನೆ.

## ದಗಾ

ತನ್ನ ವರ್ಣಚಿತ್ರಗಳನ್ನು ಪೂರ್ಣಗೊಳಿಸಿ ಎಷ್ಟೋ ವರ್ಷಗಳಾಗಿದ್ದರೂ ಅವನ್ನು ಮಾರುವುದು ಅಥವಾ ಬೇರೆಯವರಿಗೆ ಕೊಡುವುದು ಎಂದರೆ ದಗಾನಿಗೆ ಬಹಳ ಕಷ್ಟ. ಸ್ನೇಹಿತರಲ್ಲಿ ಇದ್ದರೆ ಅವನ್ನು ಯಾವಾಗಲೋ ಅವರ ಮೇಲೆ ಮತ್ತೆ ತುಸು ಕುಂಚ ಆಡಿಸಿ ಅವನ್ನು ಇನ್ನೂ ಉತ್ತಮಗೊಳಿಸಬಹುದೇನೋ ಎಂಬ ಆಸೆ ಅವನಿಗೆ. ಜಗತ್ತಿನ ಜನರೆಲ್ಲ ಅವನ ವರ್ಣ ಚಿತ್ರಗಳನ್ನು ಹೊಗಳುತ್ತಿದ್ದರೂ ಅವನು ಮಾತ್ರ "ಏನೋ ಸುಮಾರಾಗಿದೆ, ಇನ್ನೂ ತಿದ್ದಿಕೊಳ್ಳಬೇಕು" ಎನ್ನುತ್ತಿದ್ದ. ಇದು ಎಡ್ಗರ್ ದಗಾನ ಹುಟ್ಟುಗುಣ.

ಚಿತ್ರಕಲೆಯಲ್ಲಿ ಪರಿಣತನಾಗಬೇಕು ಎಂಬ ಇಚ್ಛೆಯಿಂದ ಓದಿಗೆ ಶರಣುಹೊಡೆದು, ಚಿತ್ರಕಲೆಯಲ್ಲಿ ಶಾಸ್ತ್ರೀಯ ರೀತಿಯ ತರಬೇತು ಪಡೆದ. ಪ್ಯಾರಿಸಿನಲ್ಲಿ ಕಲಿಯುವುದೆಲ್ಲ ಮುಗಿದ ಮೇಲೆ ವರ್ಣಚಿತ್ರಕಲೆಯ ತವರು



ದಗಾ ಕಂಡ ನೃತ್ಯರೂಪಕ



ಬೆಳಕಿನ ವೈಖರಿ : ದಗಾ

ಮನೆಯಾದ ಇಟಲಿಗೆ ಹೋದ. ಇತರರಿಂದ ಕಲಿಯುವುದು ಪೂರ್ತಿಯಾಯಿತು ಎಂಬುದು ಖಚಿತವಾದ ಬಳಿಕ ಹೊಸ ಪ್ರಯೋಗಗಳನ್ನು ನಡೆಸಿ ತನ್ನದೇ ಆದ ಶೈಲಿಯನ್ನೂ ರೂಪಿಸಿಕೊಂಡ.

ದಗಾ ಹುಟ್ಟಿದ್ದು ಪ್ಯಾರಿಸಿನ ಒಂದು ಶ್ರೀಮಂತ ಕುಟುಂಬದಲ್ಲಿ. ಜನನ 1834ರ ಜೂಲೈ 19ರಂದು. ಇಟಲಿಯಲ್ಲಿ ಶಿಕ್ಷಣ ಮುಗಿಸಿ ಹಿಂದಿರುಗಿ ಬಂದ ದಗಾ ಪ್ಯಾರಿಸಿನಲ್ಲಿ 'ಸಮಷ್ಟಿ ಪರಿಣಾಮವಾದಿಗಳು' ಎಂದು ಕರೆಯಲ್ಪಡುತ್ತಿದ್ದ ಚಿತ್ರಕಾರರ ಗುಂಪಿನಿಂದ ಆಕರ್ಷಿತನಾದ. ಇವರು ಪ್ರತಿ ದಿನ ಪ್ಯಾರಿಸಿನ ಒಂದು ಚಿಕ್ಕ ಉಪಾಹಾರ ಮಂದಿರದಲ್ಲಿ ಸೇರಿ ಕಲೆಯ ವಿಷಯ ಚರ್ಚಿಸುತ್ತಿದ್ದರು. ವಸ್ತು ಯಾವುದೇ ಆಗಿರಲಿ, ಅವರ ಮೇಲೆ ಸರಿಯಾದ ರೀತಿಯಲ್ಲಿ ಬೆಳಕು ಬೀಳುತ್ತಿದ್ದರೆ ಅದು ಚಿತ್ರರಚನೆಗೆ ಯೋಗ್ಯವಾಗುತ್ತದೆ; ಇಲ್ಲಿ ವಸ್ತು ಮುಖ್ಯವಲ್ಲ. ಬೆಳಕಿನ ವೈಖರಿಯೇ ಹೆಚ್ಚು ಮಹತ್ವದ್ದು— ಎಂಬುದು ಇವರ ಅಭಿಪ್ರಾಯವಾಗಿತ್ತು. ಇದು ದಗಾಗೂ ಮೆಚ್ಚುಗೆಯಾಯಿತು. ರಂಗಪೀಠದ ಮೇಲೆ ನರ್ತಿಸುತ್ತಿರುವ ಬ್ಯಾಲೆ ಕಲಾವಿದೆಯರು, ಹೊಳೆಹೊಳೆಯುವ ಮೈಕಟ್ಟಿನ ಕುದುರೆಗಳು, ಮುಂತಾದುವನ್ನು ದಗಾ ತನ್ನ ಚಿತ್ರದ ವಸ್ತುಗಳನ್ನಾಗಿ ಆರಿಸಿಕೊಂಡ. ಇಂಥ ಚಿತ್ರಗಳಿಂದ ಅವನು ಜಗತ್ಪ್ರಸಿದ್ಧನಾದ.

ತೀವ್ರವಾದ ಚಟುವಟಿಕೆಯ ಚಿತ್ರಣದಲ್ಲಿ ದಗಾನ ಕುಂಚ ಅತಿ ಸಮರ್ಥವಾಗಿ ಕೆಲಸ ಮಾಡುತ್ತಿತ್ತು. ಅವನ ವರ್ಣಚಿತ್ರಗಳನ್ನು ನೋಡಿದಾಗ ಅದರಲ್ಲಿ ಚಟುವಟಿಕೆಯನ್ನು ಹಿಡಿದಿಟ್ಟಂತೆ ತೋರುತ್ತದೆ. ಕ್ಷಣಿಕ ಚಲನೆಗಳಿಗೆ ಅವನ ಚಿತ್ರಣದಲ್ಲಿ ಮಹತ್ವದ ಸ್ಥಾನ. ಇಂಥ ಚಲನೆಯನ್ನು ಸೆರೆಹಿಡಿದಿರುವಂಥ ಚಿತ್ರಗಳನ್ನು ರಚಿಸುತ್ತಿದ್ದದ್ದು ತನ್ನ ಸ್ಟುಡಿಯೋದಲ್ಲೇ; ಅದಕ್ಕಾಗಿ ಹಲವು ದಿನಗಳ ಕಾಲ ಶ್ರಮಿಸುತ್ತಿದ್ದ. ಅದಕ್ಕೆ ಮೊದಲು ಚಿತ್ರದ ವಸ್ತುವನ್ನೂ ಅದರ ಚಲನೆಯ ಸನ್ನಿವೇಶವನ್ನೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದ. ಒಂದು ಬ್ಯಾಲೆಯ ಚಿತ್ರ ರಚಿಸಲು ಮೊದಲು ನಾಟ್ಯಶಾಲೆಗೆ ಹೋಗಿ, ಅವರ ನರ್ತನವನ್ನು ನೋಡಿ, ತನಗೆ ಬೇಕಾದ ಭಂಗಿಯ ರೂಪರೇಷೆಗಳನ್ನು ಬರೆದುಕೊಳ್ಳುತ್ತಿದ್ದ. ಈ ರೇಖಾಚಿತ್ರಕ್ಕೆ ಬಣ್ಣ ತುಂಬುವುದು, ಕೊನೆಯ ಪರಿಷ್ಕರಣ ಎಲ್ಲ ಸ್ಟುಡಿಯೋದಲ್ಲೇ. ತನ್ನ ಸ್ಕೆಚ್ ಪುಸ್ತಕವನ್ನು ಹಿಡಿದುಕೊಂಡು ದಗಾ ಕುದುರೆ ಪಂದ್ಯಕ್ಕೆ ಹೋಗುತ್ತಿದ್ದುದೇನೋ ನಿಜ. ಇಲ್ಲಿ ಅವನು ಕೇವಲ ಟಿಪ್ಪಣಿ ಮಾತ್ರ ಮಾಡಿಕೊಳ್ಳುತ್ತಿದ್ದ. ಆದರೆ ಕುದುರೆಯನ್ನು ಚಿತ್ರಿಸುತ್ತಿದ್ದುದು ತನ್ನ ಸ್ಟುಡಿಯೋದಲ್ಲಿದ್ದ ಮರದ ಕುದುರೆಯ ಮಾದರಿಯನ್ನು ನೋಡಿಯೇ.

ಗೆಳೆಯರ, ನೆಂಟರ ಒತ್ತಾಯಕ್ಕೆ ಕಟ್ಟುಬಿದ್ದು ದಗಾ ಅನೇಕರ ವ್ಯಕ್ತಿಚಿತ್ರಗಳನ್ನು ರಚಿಸಿದ್ದುಂಟು. ಆದರೆ ಅವನ ನಿಜವಾದ ಆಸಕ್ತಿ ಇದ್ದುದು ಬ್ಯಾಲೆ ನರ್ತಕಿಯರು, ಕುದುರೆಗಳು ಮತ್ತು ಹೆಂಗಸರ ವಿವಿಧ ಭಂಗಿಗಳ ಚಿತ್ರಣದಲ್ಲಿ. ಅಭ್ಯಾಸ ಮಾಡುತ್ತಿರುವ, ಅಥವಾ ದೀರ್ಘಾವಧಿಯ ನರ್ತನಾಭ್ಯಾಸದ ಬಳಿಕ ಬಳಲಿದ ಕಾಲಿನ ಹರಡನ್ನು ತಿಕ್ಕುತ್ತಿರುವ ನರ್ತಕಿ, ಬಟ್ಟೆಯನ್ನು ಇಸ್ತ್ರಿ ಮಾಡುತ್ತಿರುವ ಅಗಸರವಳು, ಸ್ನಾನಮಾಡಿದ ಮೇಲೆ ಬಾಗಿ ಮೈ ಒರೆಸಿಕೊಳ್ಳುವ ತರುಣಿ, ತುಸು ಬಾಗಿ ತನ್ನ ಕೂದಲನ್ನು ಬಾಚಿಕೊಳ್ಳುತ್ತಿರುವ ರಮಣಿ—ಇವೇ ವಿಷಯಗಳನ್ನು ದಗಾ ತನ್ನ ಚಿತ್ರದ ವಸ್ತುಗಳಾಗಿ ಮತ್ತೆ ಮತ್ತೆ ಉಪಯೋಗಿಸಿಕೊಂಡ. ಸ್ನಾನ ಗೃಹದಲ್ಲಿರುವ ಹೆಂಗಸರನ್ನು ಚಿತ್ರಿಸಲೆಂದೇ ದಗಾ ತನ್ನ ಸ್ಟುಡಿಯೋದಲ್ಲಿ ಒಂದು ತೊಟ್ಟಿಯನ್ನು ತಂದಿಟ್ಟಿದ್ದ.

ಬಣ್ಣದ ಕಡ್ಡಿ, ಇದ್ದಲು, ತೈಲವರ್ಣ ಯಾವುದೇ ಇರಲಿ, ದಗಾಗೆ ಅವುಗಳ ಮೇಲೆ ಸಂಪೂರ್ಣ ಪ್ರಭುತ್ವವಿತ್ತು. ಅವನ ಕಲೆ ಸಮಷ್ಟಿ ಪರಿಣಾಮ ಪ್ರಧಾನವಾಗಿದ್ದರೂ ಅವನು ಚಿತ್ರಗಳಲ್ಲಿನ ವಸ್ತುಗಳಿಗೂ ಸಾಕಷ್ಟು ಮಹತ್ವಕೊಡುತ್ತಿದ್ದ. ವಿಶಿಷ್ಟ ರೀತಿಯ ತಂತ್ರಗಳನ್ನು ಒಳಗೊಂಡ ಜಪಾನೀ ಕೆತ್ತನೆ ಕೆಲಸದ ಕಲೆಯಿಂದಲೂ ಅವನು ಪ್ರಭಾವಿತನಾಗಿದ್ದ.

ದಗಾನ ಕಾಲದ ವಿಮರ್ಶಕರು ಅವನ ಕಲೆಯನ್ನು 'ಸಂಪ್ರದಾಯ ವಿರೋಧಿ' ಎಂದು ಕರೆಯುತ್ತಿದ್ದರು.

ದಗಾನ ವರ್ಣಚಿತ್ರಗಳಿಗೆ ಹೆಂಗಸರೇ ಚಿತ್ರಿತ ವಸ್ತು ಆಗಿದ್ದರೂ ಹೆಂಗಸರಲ್ಲಿ ಒಬ್ಬರಾದರೂ ಅಂದವಾಗಿದ್ದಾರೆ ಎನ್ನುವಂತಿಲ್ಲ. ಅವನು ಕಟ್ಟುನಿಟ್ಟಾದ ಬ್ರಹ್ಮಚಾರಿ. ಮಾತುಕತೆಯೂ ಎಷ್ಟು ಬೇಕೋ ಅಷ್ಟೆ. ಗೆಳೆಯರೂ ಕಡಮೆ. ವರ್ಣಚಿತ್ರಗಳನ್ನು ಶೇಖರಿಸುವುದು ಅವನ ಹವ್ಯಾಸ—ಪ್ರದರ್ಶನಕ್ಕಲ್ಲ, ಕೂಡಿಸಿ ಇಡಲು. ತನ್ನ ಮನೆಯ ಉಗ್ರಾಣದ ಗೋಡೆಯ ಮೇಲೆ ಅನೇಕ ವರ್ಣಚಿತ್ರಗಳನ್ನು ತೂಗಹಾಕಿದ್ದ.

ದಗಾ ಮಧ್ಯವಯಸ್ಸನ್ನು ದಾಟುತ್ತಲೇ ದೃಷ್ಟಿಮಾಂದ್ಯ ಅವನನ್ನು ಕಾಡತೊಡಗಿತು. ಹೆಚ್ಚು ಹೆಚ್ಚು ಕಡುಬಣ್ಣಗಳನ್ನು ಉಪಯೋಗಿಸಲು ಅವನು ಆರಂಭಿಸಿದ.

ಚಿತ್ರ ಬರೆಯಲು ಆಗದಷ್ಟು ಕುರುಡುತನ ಆವರಿಸಿದಾಗ ಶಿಲ್ಪಕಲೆಯ ಕಡೆಗೆ ತಿರುಗಿದ. ಜೇಡಿಮಣ್ಣು ಅಥವಾ ಜೇನುಮೇಣದಲ್ಲಿ ಮಾದರಿಗಳನ್ನು ಮಾಡಿ ಅವುಗಳಿಂದ ಕಂಚಿನ ವಿಗ್ರಹಗಳನ್ನು ತಯಾರಿಸುತ್ತಿದ್ದ.

ತನ್ನ ಜೀವನದ ಕೊನೆಯ ವರ್ಷಗಳಲ್ಲಿ ದಗಾನಿಗೆ ಈ ಕೆಲಸವೂ ಪ್ರಯಾಸದ್ದಾಯಿತು. ಪ್ಯಾರಿಸಿನ ರಸ್ತೆಗಳಲ್ಲಿ ಗೊತ್ತುಗುರಿಯಿಲ್ಲದೆ ತಿರುಗುವುದು ಅವನ ಉದ್ಯೋಗವಾಯಿತು.

83ರ ಮುದುಕ ದಗಾ 1917ರ ಸೆಪ್ಟೆಂಬರ್ 17ರಂದು ತೀರಿಕೊಂಡ.

ನೋಡಿ : ಸಮಷ್ಟಿಪರಿಣಾಮ ಕಲೆ

## ದಾಂತೆ

ಇಟಲಿಯಲ್ಲಿ ಸಹಸ್ರಾರು ಜನರಿಗೆ 14,000 ಸಾಲು ಉದ್ದದ ಮಹಾಕಾವ್ಯ 'ಡಿವೈನ್ ಕಾಮಿಡಿ' ಕಂಠಪಾಠವಾಗಿರುತ್ತದೆ. ಪ್ರತಿ ವರ್ಷ ಈ ಕೃತಿಯ 80,000ಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗುತ್ತವೆ. 50ಕ್ಕೂ ಹೆಚ್ಚು ಭಾಷೆಗಳಿಗೆ ಇದು ಭಾಷಾಂತರವಾಗಿದೆ. ಪ್ರಸಿದ್ಧ ಚಿತ್ರಕಾರ ಮೈಕೆಲೇಂಜಲೋ 'ಡಿವೈನ್ ಕಾಮಿಡಿ'ಯನ್ನು ಓದಿ 'ಕೊನೆಯ ತೀರ್ಪು' ಎಂಬ ತನ್ನ ಮಹಾ ಕಲಾಕೃತಿಯನ್ನು ರಚಿಸಿದ.

ಇಂಥ ಪ್ರಭಾವಶಾಲಿ ಗ್ರಂಥದ ಲೇಖಕ —ದಾಂತೆ.

"ದಾಂತೆಯ ಕವನ ಪುರಾತನ ಮತ್ತು ಆಧುನಿಕ ಕಾಲಗಳಿಗೆ ಸಂಬಂಧ ವನ್ನು ಕಲ್ಪಿಸಿದ ಸೇತುವೆ" ಎಂದು ಕವಿ ಷೆಲ್ಲಿ ಹೇಳಿದ್ದಾನೆ. ಇಟಲಿಯ 'ಕತ್ತಲೆಯ ಯುಗ'ದಲ್ಲಿ ಎದ್ದುತೋರುವ ಈ ವ್ಯಕ್ತಿ ಆ ದೇಶದ ರಾಷ್ಟ್ರಕವಿ.

1965ರಲ್ಲಿ ಜಗತ್ತಿನಾದ್ಯಂತ ದಾಂತೆಯ ಏಳನೆಯ ಶತಾಬ್ದಿ ಆಚರಿಸ ಲ್ಪಟ್ಟಿತು. ಇಟಲಿಯ ಜನ ಸಾರ್ವಜನಿಕ ಸಭೆ, ಟೆಲಿವಿಷನ್ ಕಾರ್ಯ ಕ್ರಮ, ವಸ್ತುಪ್ರದರ್ಶನಗಳನ್ನು ಏರ್ಪಡಿಸಿ ತಮ್ಮ ರಾಷ್ಟ್ರಕವಿಯನ್ನು ಗೌರವಿಸಿದರು. ದಾಂತೆಯ ಸಾಹಿತ್ಯ ಕೃತಿಗಳನ್ನು ಅಭ್ಯಸಿಸುವ ವಿದ್ವಾಂಸರು, ದಾಂತೆಯ ಜನ್ಮಸ್ಥಳವಾದ ಫ್ಲಾರೆನ್ಸಿನಿಂದ ಹೊರಟು ದಾಂತೆ ಬದುಕಿದ್ದಾಗ ಅವನ ಸಂಪರ್ಕಹೊಂದಿದ್ದ ವೆರೋನಾ, ರಾವೆನಾ ನಗರಗಳ ತೀರ್ಥಯಾತ್ರೆ ಕೈಗೊಂಡರು. ಪ್ರತಿ ವರ್ಷ ಮೇ 22ರಂದು ಇಟಲಿಯ ಶಾಲಾ ವಿದ್ಯಾರ್ಥಿಗಳು 'ದಾಂತೆ ದಿನ'ವನ್ನು ಆಚರಿಸುತ್ತಾರೆ.

ದಾಂತೆ 1265ರಲ್ಲಿ ಫ್ಲಾರೆನ್ಸ್‌ನಲ್ಲಿ ಜನಿಸಿದ. ಅವನದು ಹಿರಿಯ ಮನೆತನ. ಚಿಕ್ಕವನಾಗಿದ್ದಾಗಲೇ ಪಾಠ ಹೇಳಲು ಶಿಕ್ಷಕರು ಮನೆಗೆ ಬರು ತ್ತಿದ್ದರು. ಬಾಲಕ ದಾಂತೆ ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲ ಓದುತ್ತಿದ್ದ. ಪ್ರಾಚೀನ ಮಹಾಕಾವ್ಯಗಳೂ ವೈಜ್ಞಾನಿಕ ಗ್ರಂಥಗಳೂ ಅವನಿಗೆ ಪರಿಚಿತ ವಾಗಿದ್ದುವು. ಪ್ರಾಸಬದ್ಧವಾಗಿ ಮಾತುಕತೆಯಾಡುವುದನ್ನೂ ಅವನು ಕಲಿತುಕೊಂಡಿದ್ದ.

ದಾಂತೆ ಒಂಬತ್ತು ವರ್ಷದವನಾಗಿದ್ದಾಗ ಒಂದು ಸಮಾರಂಭದಲ್ಲಿ ತನ್ನ ವಯಸ್ಸಿನ, ನಾಚಿಕೆ ಸ್ವಭಾವದ ಚೆಲುವೆ ಬಿಯಾಟ್ರಿಸಳನ್ನು ಕಂಡು ಆಕರ್ಷಿತನಾದ. ಬಿಯಾಟ್ರಿಸ್ ದಾಂತೆಯ ಆದರ್ಶಮೂರ್ತಿಯಾದಳು. ಅವನು ಅವಳನ್ನು ಮಾತನಾಡಿಸಿದ್ದು ಬಹುಶಃ ಒಂದೇ ಸಲ. ದೂರದಿಂದ ನೋಡುತ್ತ ಅವಳನ್ನು ಆರಾಧಿಸುತ್ತಿದ್ದ. ಬಿಯಾಟ್ರಿಸ್ ಬೇರೊಬ್ಬನನ್ನು ವಿವಾಹವಾದಳು. ತನ್ನ 23ನೆಯ ವಯಸ್ಸಿನಲ್ಲಿ ಸತ್ತುಹೋದಳು. ಆದರೆ ಅವಳ ಬಗೆಗೆ ದಾಂತೆಯದು ಸಾವಿಲ್ಲದ ಪ್ರೇಮ. ತನ್ನ ಜೀವನದ ಕೊನೆಯವರೆಗೂ ದಾಂತೆ ಅವಳ ನೆನಪಿನಿಂದ ಪ್ರಭಾವಿತನಾಗಿದ್ದ. ಅವಳನ್ನು ಕುರಿತು ಅನೇಕ ಪ್ರೇಮಗೀತೆಗಳನ್ನು ಬರೆದ. ಅವಳ ಮರಣಾ ನಂತರ ದಾಂತೆ ಬರೆದ 'ಹೊಸ ಜೀವನ' ಎಂಬ ಗ್ರಂಥದಲ್ಲಿ ತನ್ನ ಬಾಲ್ಯ ಯೌವನಗಳ ಪ್ರೇಮಭಾವವನ್ನು ನಿರೂಪಿಸಿದ್ದಾನೆ. ಅದನ್ನು ರಚಿಸಿದಾಗ ದಾಂತೆಗಿನ್ನೂ ಮೂವತ್ತು ತುಂಬಿರಲಿಲ್ಲ. ಈ ಪುಸ್ತಕ ಇಟಲಿಯಾದ್ಯಂತ ಜನಪ್ರಿಯವಾಯಿತು.

ದಾಂತೆ ಕವಿ, ತತ್ತ್ವಜ್ಞಾನಿ, ಧರ್ಮಶಾಸ್ತ್ರಜ್ಞ, ಅಲ್ಲದೆ ರಾಜಕಾರಣಿಯೂ ಆಗಿದ್ದ. ಯೂರೋಪಿನಲ್ಲಿ ತೀವ್ರ ಬದಲಾವಣೆಗಳಾಗುತ್ತಿದ್ದ ಕಾಲ ಅದು. ಅಲ್ಲದೆ ಧರ್ಮಾಧಿಕಾರಿಗಳಿಗೂ ಚಕ್ರವರ್ತಿಗಳಿಗೂ ವಿರಸ ಉಂಟಾಗಿತ್ತು. ಪೋಪನ ಕಡೆಯವರೂ ರಾಜವಂಶದ ಕಡೆಯವರೂ ಬೇರೆ ಬೇರೆ ಪಂಗಡಗಳಾಗಿ ಕಚ್ಚಾಡುತ್ತಿದ್ದರು, ಹೊಡೆದಾಡುತ್ತಿದ್ದರು. ದಾಂತೆ ಧರ್ಮಾಧಿಕಾರಿಗಳ ಪಕ್ಷ ವಹಿಸಿದ. ಪ್ರಜಾಪ್ರಭುತ್ವ ಮಾದರಿಯ ಸರಕಾರವಿದ್ದ ಫ್ಲಾರೆನ್ಸಿನಲ್ಲಿ ಉನ್ನತ ಸ್ಥಾನಕ್ಕೆ ಆಯ್ಕೆಗೊಂಡ. ಆದರೆ ದಾಂತೆಯ ಮೇಲೆ ಹಲವಾರು ಆರೋಪಗಳು ಬಂದದ್ದರಿಂದ ಅವನನ್ನು ಗಡೀಪಾರು ಮಾಡಿದರು. ಪುನಃ ಫ್ಲಾರೆನ್ಸಿಗೆ ಬಂದರೆ ತಲೆದಂಡ ವಿಧಿಸ ಲಾಗುವುದೆಂದು ಬೆದರಿಕೆ ಹಾಕಿದರು. 1302ರಲ್ಲಿ ಫ್ಲಾರೆನ್ಸ್ ಬಿಟ್ಟ ದಾಂತೆ ಮತ್ತೆ ಅಲ್ಲಿಗೆ ಹಿಂದಿರುಗಲಿಲ್ಲ.

ಮುಂದಿನ ಹದಿನೆಂಟು ವರ್ಷಗಳ ಕಾಲ ದಾಂತೆ ಊರಿಂದ ಊರಿಗೆ ತಿರು ಗುತ್ತ ಕಳೆದ. ಅವನ ಮಹಾ ಕೃತಿ ನಿರ್ಮಾಣ ವಾದದ್ದು ಈ ಕಾಲಾ ವಧಿಯಲ್ಲಿ. ಅವನು ಹೋದಲ್ಲೆಲ್ಲ ವಿದ್ವಾಂ ಸರೂ ಪ್ರಮುಖ ನಾಗರಿ ಕರೂ ಅವನನ್ನು ಅತ್ಯಂತ ಆದರದಿಂದ ಸ್ವಾಗತಿಸಿ ಆತಿಥ್ಯ ನೀಡುತ್ತಿದ್ದರು. ಆದರೆ ದ್ವೇಷ, ದುರಾಸೆ, ಹಿಂಸೆಗಳ ಪರಿಚಯವೂ ಸಾಕಷ್ಟು ಆಯಿತು.



ಆತ್ಮದ ಅಲೆದಾಟ : ದಾಂತೆ

1310ರಿಂದ 1313ರ ವರೆಗಿನ ಅವಧಿಯಲ್ಲಿ ದಾಂತೆ ಮೂರು ಸಂಪುಟಗಳ 'ರಾಜಪ್ರಭುತ್ವ' ಎಂಬ ಪುಸ್ತಕವನ್ನು ಬರೆದ. ಇದರಲ್ಲಿ ಅವನ ರಾಜಕೀಯ ಅಭಿಪ್ರಾಯಗಳ ವಿವರಣೆ ಇವೆ. ಯೂರೋಪನ್ನು ಇತ್ತಂಡ ಮಾಡಿದ್ದ ಚಕ್ರವರ್ತಿಗಳ ಮತ್ತು ಮಠಾಧಿಕಾರಿಗಳ ಮಧ್ಯೆ ನಡೆಯುತ್ತಿದ್ದ ಯುದ್ಧವನ್ನು ದಾಂತೆ ಆ ಕೃತಿಯಲ್ಲಿ ಖಂಡಿಸಿದ್ದಾನೆ. 'ಔತಣ' ಎಂಬುದು ದಾಂತೆಯ ಮತ್ತೊಂದು ಶ್ರೇಷ್ಠ ಕೃತಿ. ಇದು ವಿಜ್ಞಾನ ಮತ್ತು ಬೌದ್ಧಿಕತೆಗಳನ್ನು ಕುರಿತ ವ್ಯಾಖ್ಯಾನ. ದಾಂತೆ ಕವಿತಿಲಕ ಎನಿಸಿದ್ದು ಅವನ 'ಡಿವೈನ್ ಕಾಮಿಡಿ' ಎಂಬ ಮಹಾಕೃತಿಯಿಂದಾಗಿ. ಇದು ಸ್ವರ್ಗ, ಶುದ್ಧಿ ಲೋಕ, ನರಕಗಳಲ್ಲಿ ತಾನು ನಡೆಸಿದ ಕಾಲ್ಪನಿಕ ಸಂಚಾರದ ವಿವರಣೆಯನ್ನು ಒಳಗೊಂಡ ಕಥನ ಕವನ.

'ಡಿವೈನ್ ಕಾಮಿಡಿ'ಯ ವಸ್ತು ಇದು: ಆ ದಿನ ಗುಡ್ ಫ್ರೈಡೆ. ಮಂಜು ಮುಸುಕಿತ್ತು. ತಿರುಗಾಟಕ್ಕೆ ಹೊರಟ ದಾಂತೆ ಸನ್ಮಾರ್ಗದಿಂದ ದೂರಹೋಗಿ ಕಗ್ಗತ್ತಲು ತುಂಬಿದ ಕಾಡಿನಲ್ಲಿ ದಾರಿ ತಪ್ಪುತ್ತಾನೆ. ಬಹಳ ಹಿಂದೆ ಸತ್ತುಹೋಗಿದ್ದ ರೋಮಿನ ಕವಿ ವರ್ಜಿಲನ ಆತ್ಮ ಅವನ ರಕ್ಷಣೆಗೆ ಬರುತ್ತದೆ. "ನಿನಗೆ ಹೊಸ ಜಗತ್ತನ್ನು ತೋರಿಸಲು ದೇವತೆಗಳು ನನ್ನನ್ನು ಕಳುಹಿಸಿದ್ದಾರೆ" ಎನ್ನುತ್ತದೆ.

ಅದರ ಜೊತೆಯಲ್ಲಿ ಸಂಚಾರಕ್ಕೆ ಹೊರಟಾಗ ಮೊದಲು ಸಿಗುವುದು ನರಕ. ಹೆಚ್ಚಿನ ಭಾಗ ಕತ್ತಲು. ಅಲ್ಲಿ ಇಲ್ಲಿ ಬೆಂಕಿ ಹತ್ತಿದ್ದು ಕಂಡು ಬರುತ್ತದೆ. ಒಂದು ದೊಡ್ಡ ನಗರವೇ ಹೊತ್ತಿಕೊಂಡು ಉರಿಯುತ್ತಿರು ತ್ತದೆ. ಯಾವ ಕಡೆಗೆ ತಿರುಗಿದರೂ ಪಾಪಾತ್ಮಗಳ ನಿಟ್ಟುಸಿರು, ಹಾಹಾ ಕಾರ, ಕರುಣಾಜನಕ ಕೂಗು. ಯಾವ ದಿಕ್ಕಿನಲ್ಲಿ ನೋಡಿದರೂ ಚಿತ್ರಹಿಂಸೆ ಯಾತನೆ.

ನರಕದ ಕೊನೆಯಲ್ಲಿ ಒಂದು ಚಿಕ್ಕ ಬಾಗಿಲು ದಾಟಿದರೆ ಅದು ಶುದ್ಧಿ ಲೋಕ. ಆದರೆ ಬಾಗಿಲಿನ ಎದುರು ದೈತ್ಯಾಕಾರದ ಶನಿ ತೂಕಡಿಸುತ್ತ ಕುಳಿತಿದ್ದಾನೆ. ದಾಂತೆ ಮತ್ತು ವರ್ಜಿಲರು ಧೈರ್ಯಮಾಡಿ ಶನಿಯ ದೇಹ ವನ್ನು ಹತ್ತಿ ಆ ಬದಿಗೆ ಹಾರಿ ಶುದ್ಧಿಲೋಕದತ್ತ ಓಡುತ್ತಾರೆ.

ಶುದ್ಧಿಲೋಕದ ವರ್ಣನೆಯೂ ಕಣ್ಣಿಗೆ ಕಟ್ಟುವಂಥದ್ದು. ಆದರೆ ಇದು ನರಕದಷ್ಟು ಪರಿಣಾಮಕಾರಿಯಲ್ಲ. ಪಶ್ಚಾತ್ತಾಪದ ಬಳಿಕ ಈ ಆತ್ಮಗಳು ಸ್ವರ್ಗಕ್ಕೆ ಏರುವ ಅವಕಾಶ ಉಂಟು. ಶುದ್ಧಿಲೋಕ ಒಂದು ಪರ್ವತದ ಆಕಾರದ್ದು. ಏರುತ್ತ ಏರುತ್ತ ದಾಂತೆ ಇದರ ತುದಿಗೆ ಬರುತ್ತಾನೆ.

ಅಷ್ಟರಲ್ಲಿ ಒಂದು ಹೆಣ್ಣು ದನಿ ದಾಂತೆಯನ್ನು ಹೆಸರು ಹಿಡಿದು ಕರೆದದ್ದು ಕೇಳಿಸುತ್ತದೆ. ಮೇಲೆ ನೋಡುತ್ತಾನೆ. ಅವನ ಬಾಲ್ಯದ ಸಖಿ ಬಿಯಾಟ್ರಿಸ್. ದಾಂತೆಗೆ ಸ್ವರ್ಗದರ್ಶನ ಮಾಡಿಸಲು ಆಕೆ ಬಂದಿದ್ದಳು. ಸ್ವರ್ಗದಲ್ಲಿ ಎತ್ತರ ಎತ್ತರ ಹೋದಂತೆ ಇಂಪಾದ ಸಂಗೀತ ಕಿವಿಯ ಮೇಲೆ ಬೀಳುತ್ತಿರುತ್ತದೆ. ಎತ್ತರಕ್ಕೆ ಹೋಗುತ್ತ ದೇವರು ಇದ್ದಲ್ಲಿಗೆ ಇವರು ಬರುತ್ತಾರೆ. ಈ ಆನಂದ ಸ್ವಪ್ನದರ್ಶನದೊಂದಿಗೆ ಹತ್ತು ದಿನಗಳ ಸಂಚಾರ ಕೊನೆಗಾಣುತ್ತದೆ.

ದಾಂತೆಗೆ ಈ ಮಹಾಕಾವ್ಯವನ್ನು ಬರೆಯಲು ಇಪ್ಪತ್ತು ವರ್ಷ ಹಿಡಿಯಿತು. ಕಾವ್ಯದಲ್ಲಿ ಒಟ್ಟು ಮೂರು ಭಾಗಗಳು: ನೂರು ಅಧ್ಯಾಯಗಳು. ಆಗಿನ ವಿದ್ವಾಂಸರೆಲ್ಲ ಲ್ಯಾಟಿನ್ ಭಾಷೆಯಲ್ಲಿ ಬರೆಯುತ್ತಿದ್ದರೂ ಜನಸಾಮಾನ್ಯರ ಕವಿ ದಾಂತೆ ಇಟಾಲಿಯನ್ ಭಾಷೆಯನ್ನು ಉಪಯೋಗಿಸಿದ. ತಾನೇ ಹೊಸದಾಗಿ ರಚಿಸಿದ 'ಟೆರ್ಜಾ ರಿಮಾ' ಎಂಬ ಪ್ರಾಸದಲ್ಲಿ ಬರೆದ. ಈ ಕಾವ್ಯ ಪ್ರಕಟವಾದೊಡನೆಯೇ ಜನಪ್ರಿಯವಾಯಿತು. ಅತಿ ನೈಜ ವಿವರಗಳಿಂದ ಕೂಡಿದ್ದ ಈ ಕಥೆ ನಿಜವಾಗಿಯೂ ನಡೆದದ್ದೇ ಎಂದು ಭಾವಿಸಿದವರು ಎಷ್ಟೋ ಮಂದಿ.

ದಾಂತೆಯ ಈ ಕೃತಿ ಅತಿ ಶ್ರೇಷ್ಠ ನೀತಿ ಕಥೆ. ಜಗತ್ತಿನಲ್ಲಿ ನಡೆಯುವ ಅನ್ಯಾಯ ದಬ್ಬಾಳಿಕೆಗಳ ಖಂಡನೆ. ಜನ ತಮ್ಮ ಆತ್ಮವನ್ನು ಪರೀಕ್ಷಿಸಿಕೊಂಡು ಪರಿಶುದ್ಧರಾಗಲು ಸಂದೇಶ. ಕಥೆ ಸುಖಾಂತವಾದ್ದರಿಂದ ದಾಂತೆ ಇದನ್ನು 'ಕಮಿಡಿಯಾ' (ಕಾಮಿಡಿ) ಎಂದು ಕರೆದ. ಅವನ ಮರಣದ 234 ವರ್ಷಗಳ ಬಳಿಕ ಪುಸ್ತಕ ಪ್ರಕಾಶಕನೊಬ್ಬ ಹೊಸ ಆವೃತ್ತಿಯನ್ನು ಪ್ರಕಟಿಸುವಾಗ ಇದಕ್ಕೆ 'ಡಿವೈನ್' ಎಂಬ ಪದ ಸೇರಿಸಿದ. ಅಂದಿನಿಂದ ಈ ಕಾವ್ಯ 'ಡಿವೈನ್ ಕಾಮಿಡಿ' ಎಂದು ಪ್ರಸಿದ್ಧವಾಗಿದೆ.

ದಾಂತೆ ತನ್ನ ಕೊನೆಯ ವರ್ಷಗಳನ್ನು ರಾವೆನಾ ನಗರದಲ್ಲಿ ಕಳೆದ. ಆದರೆ ತನ್ನನ್ನು ಬಹಿಷ್ಕರಿಸಿದ ಫ್ಲಾರೆನ್ಸನ್ನು ಅವನು ಎಂದೂ ಮರೆಯಲಿಲ್ಲ. ಒಮ್ಮೆ ಮನೆಯ ಹಂಬಲದ ಮನೋವ್ಯಥೆಯಿಂದ ಬರೆದರೆ ಇನ್ನೊಮ್ಮೆ ಫ್ಲಾರೆನ್ಸನ್ನು ಜರೆದು ಬರೆಯುತ್ತಿದ್ದ. ಕೊನೆಗೊಮ್ಮೆ ಫ್ಲಾರೆನ್ಸ್ ಸರಕಾರ ಈ ಮಹಾಕವಿಯನ್ನು 'ಮನ್ನಿಸಿ', ದಂಡವನ್ನು ಕೊಟ್ಟರೆ ಪುನಃ ಅಲ್ಲಿಗೆ ಬರಬಹುದು ಎಂದು ಹೇಳಿತು. ಆದರೆ ಆ ನಗರದ ಶ್ರೇಷ್ಠ ಪುತ್ರನಾದ ದಾಂತೆ ಇದಕ್ಕೊಪ್ಪಲಿಲ್ಲ. 1321ರ ಸೆಪ್ಟೆಂಬರ್ 14 ರಂದು ರಾವೆನಾದಲ್ಲಿ ನಿಧನನಾದ.

ದಾಂತೆ ಸತ್ತಮೇಲೆ ಫ್ಲಾರೆನ್ಸಿನ ಜನ ಅವನ ಮೃತದೇಹ ತಮಗೆ ಸಲ್ಲಬೇಕು ಎಂದು ವಾದಿಸಿದರು. ಊರಿನ ಪ್ರಮುಖ ಇಗರ್ಜಿಯಲ್ಲಿ ಒಂದು ಭವ್ಯ ಸಮಾಧಿಯನ್ನೂ ಕಟ್ಟಿಸಿದರು. ರಾವೆನಾದ ಜನ ದಾಂತೆಯ ದೇಹವನ್ನು ಬಿಟ್ಟುಕೊಡಲು ಒಪ್ಪಲಿಲ್ಲ. "ಜೀವಂತವಾಗಿರುವಾಗ ನಿಮಗೆ ಬೇಡವಾದವನು ಸತ್ತಮೇಲೆ ಏಕೆ ಬೇಕು?" ಎಂದು ಕೇಳಿದರು. ಇಂದಿಗೂ ಫ್ಲಾರೆನ್ಸಿನಲ್ಲಿರುವ ದಾಂತೆಯ ಸ್ಮಾರಕ ಬರಿದಾಗಿಯೇ ಇದೆ.

## 'ದಾನ್ ಕ್ವಿವೊತ್'

"ಮಕ್ಕಳು ಇದರ ಪುಟ ಮಗುಚುತ್ತಾರೆ. ಯುವಕರು ಓದುತ್ತಾರೆ, ವಯಸ್ಕರು ಗ್ರಹಿಸಿಕೊಳ್ಳುತ್ತಾರೆ: ಮುದುಕರು ಇದನ್ನು ಹೊಗಳುತ್ತಾರೆ." —ಇದು ಒಂದು ಕಾದಂಬರಿಯನ್ನು ಕುರಿತ ಪ್ರಶಂಸೆ.

ಜಗತ್ತಿನ ಸಾಹಿತ್ಯದಲ್ಲಿ ಶ್ರೇಷ್ಠ ಹಾಸ್ಯ ಕಾದಂಬರಿಯೆನಿಸಿದ 'ದಾನ್ ಕ್ವಿವೊತ್' (ಇಂಗ್ಲಿಷ್ ಉಚ್ಚಾರ: ಡಾನ್ ಕ್ವಿಕ್ಸೋಟ್) ಎಲ್ಲ ಪ್ರಮುಖ ಭಾಷೆಗಳಿಗೂ ಭಾಷಾಂತರಗೊಂಡಿದೆ. ಕಥೆಯ ಮುಖ್ಯ ಪಾತ್ರಗಳೂ ಘಟನೆಗಳೂ ದಿನಬಳಕೆಯ ಮಾತುಕತೆಯಲ್ಲಿ ಕಾಣಿಸಿಕೊಳ್ಳುತ್ತವೆ. ಅತಿ ಅವಿವೇಕಿಯೂ ಉಪಕಾರಶೀಲನೂ ಆದವನ ನಡತೆಯನ್ನು 'ಕ್ವಿಕ್ಸಾಟಿಕ್ ವರ್ತನೆ' ಎನ್ನುವುದುಂಟು. ಅನಗತ್ಯವಾದ ತಿಳಿಗೇಡಿತನದ ಕೆಲಸವನ್ನು 'ಗಾಳಿ ಗಿರಣಿಯೊಡನೆ ಗುದ್ದಾಡಿದಂತೆ' ಎಂದು ಬಣ್ಣಿಸುವುದುಂಟು.

ಕಥಾನಾಯಕ ದಾನ್ ಕ್ವಿವೊತ್ ಸ್ಪೇನಿನ ಲಾ ಮಾಂಚಾ ಪ್ರಾಂತದ ಒಂದು ಹಳ್ಳಿಯವನು. ಹಿಂದಿನ ವೀರಪುರುಷರ ಕಥೆಗಳೆಂದರೆ ಅವನಿಗೆ ಪ್ರಾಣ. ಇದ್ದ ಅಲ್ಪಸ್ವಲ್ಪ ಜಮೀನನ್ನು ಮಾರಿ ರೋಮಾಂಚಕಾರಿ ಕಥೆ ಪುಸ್ತಕಗಳನ್ನು ಕೊಂಡು ಓದುತ್ತಿದ್ದ. ಹಗಲು ರಾತ್ರಿ ಇಂಥ ಸಾಹಸ ಕಥೆಗಳನ್ನು ಓದಿ ಅವನಿಗೆ ಬುದ್ಧಿಭ್ರಮಣೆಯಾದಂತಾಯಿತು. ತಾನು ಒಬ್ಬ ಮಹಾವೀರ; ಪ್ರಪಂಚದ ಪ್ರದಕ್ಷಿಣೆ ಮಾಡಿ ದೀನರ ರಕ್ಷಣೆ ಮಾಡುವುದು, ದುಷ್ಟರನ್ನು ಸಂಹರಿಸುವುದು ತನ್ನ ಕರ್ತವ್ಯ–ಎಂದು ಅಂದುಕೊಳ್ಳತೊಡಗಿದ. ಸರಿ, ದಿಗ್ವಿಜಯಕ್ಕೆ ಸಿದ್ಧತೆಗಳನ್ನು ಮಾಡಿದ.

ಮುತ್ತಾತನ ಕಾಲದ ತುಕ್ಕುಹಿಡಿದ ಯುದ್ಧ ಕವಚವನ್ನು ಹೊರತೆಗೆದು ಉಜ್ಜಿ ತೊಳೆದು ಮೆರುಗುಕೊಟ್ಟ. ದಾನ್ ಕ್ವಿವೊತ್ ಡಿ ಲಾ ಮಾಂಚಾ ಎಂದು ತನ್ನ ಹೆಸರನ್ನು ನೀಳಗೊಳಿಸಿದ.

ಎಲುಬುಗೂಡಾಗಿದ್ದ ಮುದಿ ಕುದುರೆಯೊಂದನ್ನು ಕೊಂಡು ಅದಕ್ಕೆ ರೊಸಿನಾಂಟೆ ಎಂದು ನಾಮಕರಣ ಮಾಡಿದ. ನಿಜವಾದ ವೀರನೊಬ್ಬನ ಜೊತೆಗಾರನಿಗೆ ಒಬ್ಬ ಅನುಚರ ಬೇಕಲ್ಲ? "ನಾನು ವಶಪಡಿಸಿಕೊಳ್ಳುವ ಮೊದಲ ರಾಜ್ಯಕ್ಕೆ ನಿನ್ನನ್ನೇ ಪಾಲಕನಾಗಿ ಮಾಡುತ್ತೇನೆ." ಎಂದು ಆಸೆ ತೋರಿಸಿ ಕುಳ್ಳಗೆ ದಪ್ಪನೆ ಇದ್ದ ಹೊಲ ಕೆಲಸಗಾರ ಸಾಂಕೊ ಪಾಂಜಾನನ್ನು ತನ್ನೊಡನೆ ಬರುವಂತೆ ಒಪ್ಪಿಸಿದ. ಇಷ್ಟೆಲ್ಲ ಇದ್ದ ಮೇಲೆ ಒಬ್ಬಳು ಪ್ರೇಯಸಿ ಇಲ್ಲದಿದ್ದರೆ ಹೇಗೆ? ಆದರೆ ದಾನ್ ಕ್ವಿವೊತ್‌ಗೆ ಪರಿಚಯವಿದ್ದ ಹೆಂಗಸರೇ ಕಡಮೆ. ಕೊನೆಗೆ ನೆರೆಯ ರೈತನೊಬ್ಬನ ಮಗಳೇ ತನ್ನ ಕಲ್ಪನೆಯ ರಾಣಿ ಎಂದು ನಿರ್ಧರಿಸಿಕೊಂಡ.

ಮಧ್ಯಮ ವಯಸ್ಸು ದಾಟಿದ, ಬಡಕಲಾದ ಎತ್ತರ ದೇಹದ ದಾನ್ ಕ್ವಿವೊತ್ ಭಾರವಾದ ತನ್ನ ಯುದ್ಧ ಕವಚವನ್ನು ಧರಿಸಿಕೊಂಡ. ಮುದಿ ಕುದುರೆ ಅವನನ್ನು ಹೊತ್ತು, ಜೋಲು ಮೋರೆ ಹಾಕಿಕೊಂಡು ನಿಧಾನವಾಗಿ ಹೊರಟಿತು. ಬೊಜ್ಜು ದೇಹದ ಸಾಂಕೊ ಪಾಂಜಾ ಒಂದು ಕತ್ತೆಯ ಮೇಲೆ ಕುಳಿತು ತನ್ನ ಯಜಮಾನನನ್ನು ಹಿಂಬಾಲಿಸಿದ. ಸಾಹಸ ಕಾರ್ಯವನ್ನು ಹುಡುಕಿಕೊಂಡು ಅವರು ಸ್ವಲ್ಪದೂರ ಹೋಗುವಷ್ಟರಲ್ಲಿ 30–40 ಗಾಳಿ ಗಿರಣಿಗಳು ಕಾಣಿಸಿದುವು.

"ಹೋ! ಇವತ್ತು ನಮ್ಮ ಅದೃಷ್ಟ ಚೆನ್ನಾಗಿದೆ," ಎಂದು ದಾನ್ ಕ್ವಿವೊತ್ ಉತ್ಸಾಹದಿಂದ ಕೂಗಿದ. "ನೋಡಲ್ಲಿ, ಮೂವತ್ತಕ್ಕೂ ಹೆಚ್ಚು ರಾಕ್ಷಸರು. ಅವರಿಗೆ ಶಾಸ್ತಿ ಮಾಡ್ತೇನೆ," ಎಂದ.

"ರಾಕ್ಷಸರೇ? ಅವು ಗಾಳಿ ಗಿರಣಿಗಳಲ್ಲವೆ?" ಎಂದು ಸಾಂಕೊ ಪಾಂಜಾ ಆಶ್ಚರ್ಯದಿಂದ ಕೇಳಿದ.

"ನಿನಗೆ ಹಾಗೆ ತೋರುವುದು ಸಹಜ. ಸಾಹಸ ಜೀವನಕ್ಕೆ ನೀನಿನ್ನೂ ಹೊಸಬ. ಈ ರಾಕ್ಷಸರು ಒಬ್ಬೊಬ್ಬರನ್ನೂ ಹೇಗೆ ಕೊಲ್ತೇನೋ ನೀನೇ

ನೋಡು," ಎಂದು ದಾನ್ ಕ್ವಿಪೊತ್ ಉತ್ತರಿಸಿದ. ತನ್ನ [illegible] ಮನದಲ್ಲೇ ನೆನೆದು, ಬಡಕಲು ಕುದುರೆಗೆ ಚುಚ್ಚಿ ಸಮೀಪದ ಗಾಳಿ ಗಿರಣಿಯೆಡೆಗೆ ಧಾವಿಸಿದ. ವೇಗವಾಗಿ ಬಂದು ತನ್ನ ಈಟಿಯನ್ನು ತಿರುಗುತ್ತಿದ್ದ ಗಾಳಿ ಗಿರಣಿಯ ಅಲಗುಗಳೆಡೆಗೆ ಎಸೆದ. ಅಲಗು ತಿರುಗುತ್ತಿದ್ದ ರಭಸಕ್ಕೆ ಈಟಿ ಚೂರು ಚೂರಾಯಿತು. ಅಲಗು ಬಡಿದದ್ದರಿಂದ ಕುದುರೆಯೊಂದಿಗೆ ಕ್ವಿಪೊತ್ ದೂರಕ್ಕೆ ಹಾರಿಬಿದ್ದ. ತನ್ನ ಕತ್ತೆಯನ್ನು ವೇಗವಾಗಿ ಓಡಿಸಿಕೊಂಡು ಬಂದ ಸಾಂಕೊ ಪಾಂಜಾ ಕೆಳಗೆ ಬಿದ್ದಿದ್ದ ದಾನ್ ಕ್ವಿಪೊತ್‌ನನ್ನು ಮೇಲೆತ್ತಿದ.

"ಗೆಳೆಯ ಸಾಂಕೊ, ನನ್ನ ಖಡ್ಗದಿಂದ ತಪ್ಪಿಸಿಕೊಳ್ಳಲು ಈ ರಾಕ್ಷಸರು ಗಾಳಿಗಿರಣಿಯ ರೂಪ ಧರಿಸಿದ್ದಾರೆ. ಅವರ ಮಂತ್ರಶಕ್ತಿಯ ಎದುರು ನನ್ನ ಬಾಹುಬಲದಿಂದ ಏನು ನಡೆದೀತು?" ಎನ್ನುತ್ತ ದಾನ್ ಕ್ವಿಪೊತ್ ನಿಧಾನವಾಗಿ ಎದ್ದುನಿಂತ. ಗಾಳಿ ಗಿರಣಿಯ ಅಲಗು ಹೊಡೆದ ರಭಸಕ್ಕೆ ಅವನ ಕುದುರೆಯ ಕಾಲು ಕುಂಟಾಗಿತ್ತು. ಸಾಂಕೊ ಪಾಂಜಾನ ಸಹಾಯದಿಂದ ದಾನ್ ಕ್ವಿಪೊತ್ ಹಾಗೂಹೀಗೂ ಮಾಡಿ ಕುದುರೆಯನ್ನೇರಿದ. ಪ್ರಯಾಣ ಕುಂಟುತ್ತ ಮುಂದುವರಿಯಿತು.

ದಾರಿ ಬದಿಯಲ್ಲಿದ್ದ ಹೋಟಲು ಒಂದನ್ನು ಕೋಟೆ ಎಂದು ಭ್ರಮಿಸಿ, ಅದರ ಮೇಲೆ ದಾನ್ ಕ್ವಿಪೊತ್ ದಾಳಿ ಮಾಡಿದ. ಹೆಂಗಸರು ಕಂಡಲ್ಲೆಲ್ಲ ಅವರು ಅಪಾಯದಲ್ಲಿರುವ ಅಬಲೆಯರು ಎಂದುಕೊಂಡು ಅವರ ರಕ್ಷಣೆಗೆ ಧಾವಿಸಿದ. ತಮ್ಮ ಪಾಡಿಗೆ ತಾವು ಹೋಗುತ್ತಿದ್ದ ಪ್ರಯಾಣಿಕರನ್ನು ದರೋಡೆಕೋರರು ಎಂದು ಕಲ್ಪಿಸಿ ಯುದ್ಧಕ್ಕೆ ಆಹ್ವಾನಿಸಿದ.

ಕೊನೆಗೆ ಮಾರುವೇಷದಲ್ಲಿ ಇವನನ್ನು ಹುಡುಕುತ್ತ ಹೊರಟಿದ್ದ ಗೆಳೆಯನೊಬ್ಬ ದ್ವಂದ್ವಯುದ್ಧದಲ್ಲಿ ಇವನನ್ನು ಸೋಲಿಸಿದ. ಮುಂದೆ ಒಂದು ವರ್ಷ ಈ 'ವೀರ ಜೀವನ'ವನ್ನು ತ್ಯಜಿಸಬೇಕು ಎಂದು ಕರಾರುಹಾಕಿ ಅವನನ್ನು ಬಿಟ್ಟುಬಿಟ್ಟ.

ಊರಿಗೆ ಮರಳಿ ತನ್ನ ಮನೆಯಲ್ಲಿ ನರಳುತ್ತ ಮಲಗಿದ್ದ ದಾನ್ ಕ್ವಿಪೊತ್‌ಗೆ ತನ್ನ ಅವಿವೇಕವೆಲ್ಲ ಸ್ಪಷ್ಟವಾಗಿ ಕಾಣಿಸತೊಡಗಿತು. ಪಶ್ಚಾತ್ತಾಪ ಪಡುತ್ತ ತನಗೆ ತಪ್ಪುದಾರಿ ಹಿಡಿಸಿದ ಕಥೆಯ ಪುಸ್ತಕಗಳನ್ನು ಬಯ್ಯುತ್ತ ಸತ್ತುಹೋದ.

'ದಾನ್ ಕ್ವಿಪೊತ್' ಜಗತ್ತಿನ ಪ್ರಮುಖ ಕಾದಂಬರಿಗಳಲ್ಲೊಂದು. ಸ್ಪೇನಿನ ಅತ್ಯಂತ ಪ್ರಖ್ಯಾತ ಸಾಹಿತಿ ಸರ್ವಾಂಟಿಸ್ 1605ರಲ್ಲಿ ಇದರ ಮೊದಲ ಭಾಗವನ್ನು ಪ್ರಕಟಿಸಿದ. ಮತ್ತೆ ಹತ್ತು ವರ್ಷಗಳ ಬಳಿಕ ಎರಡನೆಯ ಭಾಗ ಹೊರಬಂತು. ಇದರಲ್ಲಿ ಬರುವ ಪಾತ್ರಗಳ ಸಂಖ್ಯೆ 670ಕ್ಕೆ ಕಡಮೆಯಿಲ್ಲ. ಎಲ್ಲ ಬಗೆಯ ಜನರೂ ಇದ್ದಾರೆ ಇದರಲ್ಲಿ. ದಾನ್ ಕ್ವಿಪೊತ್ ಒಬ್ಬ ಅವಿವೇಕಿಯಾದರೂ ಓದುಗನಿಗೆ ಪ್ರಿಯನಾದ ಅವಿವೇಕಿ. ಶೌರ್ಯ ಸಾಹಸಗಳನ್ನು ಕುರಿತು, ಸ್ಪೇನಿನ ಜನರಿಗಿದ್ದ ಭಾವುಕ ಕಲ್ಪನೆಯನ್ನು ಕಾದಂಬರಿಕಾರ ಇಲ್ಲಿ ಪರಿಹಾಸ್ಯ ಮಾಡಿದ್ದಾನೆ. ಕವಿ ಬೈರನ್ ಹೇಳಿರುವಂತೆ, "ಸರ್ವಾಂಟಿಸ್ ಮುಗುಳುನಗುತ್ತ ಸ್ಪೇನಿನ ಶೌರ್ಯದ ಹುಚ್ಚನ್ನು ಹೊಡೆದಟ್ಟಿದ."

## ದಾಸ ಸಾಹಿತ್ಯ

'ದಾಸ ಸಾಹಿತ್ಯ' ಅಥವಾ 'ದಾಸ ವಾಙ್ಮಯ' ಎಂಬ ಮಾತಿಗೆ ಕನ್ನಡದಲ್ಲಿ ವಿಶಿಷ್ಟ ಅರ್ಥವಿದೆ. ಕನ್ನಡ ನಾಡಿನ ಹರಿದಾಸರು ರಚಿಸಿದ ಹಾಡುಗಳನ್ನು ಈ ಹೆಸರುಗಳಿಂದ ಕರೆಯುವುದು ವಾಡಿಕೆ.

[illegible] ಬಾಳುವೆಯ ಕ್ರಮ.

ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ, ನಮ್ಮ ರಾಷ್ಟ್ರದ ಹಾಗೂ ಜಗತ್ತಿನ ಹಲವು ಭಾಗಗಳಲ್ಲಿ ಕಾಲದಿಂದ ಕಾಲಕ್ಕೆ 'ದಾಸರು' ಹುಟ್ಟಿಬಂದು ಜನರ ಉದ್ಧಾರಕ್ಕಾಗಿ ಪ್ರಯತ್ನಪಟ್ಟಿದ್ದಾರೆ. ವೈರಾಗ್ಯವನ್ನು, [illegible] ಶ್ರಮಿಸಿದ್ದಾರೆ.

ಕನ್ನಡನಾಡಿನಲ್ಲಿ 'ದಾಸಪಂಥ' ಅಥವಾ 'ದಾಸಕೂಟ' ಆರಂಭವಾದದ್ದು ದ್ವೈತ ಸಿದ್ಧಾಂತ ಪ್ರವರ್ತಕರಾದ ಮಧ್ವಾಚಾರ್ಯರ ಕಾಲದಲ್ಲಿ, ಅವರ ಶಿಷ್ಯರಾದ ನರಹರಿ ತೀರ್ಥರ ನೇತೃತ್ವದಲ್ಲಿ. ಮಧ್ವಾಚಾರ್ಯರ ಇನ್ನೊಬ್ಬ ಶಿಷ್ಯರಾದ ಪದ್ಮನಾಭ ತೀರ್ಥರ ಪರಂಪರೆಯಲ್ಲಿ ಬಂದ ಶ್ರೀಪಾದರಾಯರು ದಾಸ ಸಾಹಿತ್ಯರಂಗದ ಇನ್ನೊಬ್ಬ ಗಣನೀಯ ವ್ಯಕ್ತಿ. 'ರಂಗವಿಠಲ' ಎಂಬುದು ಇವರ ಮುದ್ರಿಕೆ. ಶ್ರೀಪಾದರಾಯರ ಶಿಷ್ಯರೇ ವ್ಯಾಸರಾಯರು.

16ನೆಯ ಶತಮಾನದ ಪ್ರಥಮಾರ್ಧದಲ್ಲಿ ವ್ಯಾಸರಾಯರ ಆಶ್ರಯದಲ್ಲಿ ಪುರಂದರದಾಸರು, ಕನಕದಾಸರು ಮುಂತಾದವರು ದಾಸ ಸಾಹಿತ್ಯವನ್ನು ಅಪಾರವಾಗಿ ಬೆಳೆಸಿದರು. ವಿಜಯನಗರ ಇವರ ಪ್ರಧಾನ ಕಾರ್ಯಕ್ಷೇತ್ರವಾಗಿತ್ತು.

ದಾಸ ಸಾಹಿತ್ಯವನ್ನು ವಿಷಯಾನುಗುಣವಾಗಿ, ಹರಿಗುರುಗಳ ಸ್ತುತಿ, ಅಂತರಂಗದ ನಿವೇದನೆ, ಕೃಷ್ಣನ ಲೀಲೆಗಳ ವರ್ಣನೆ, ಸಮಾಜದ ನಡವಳಿಕೆಗಳ ವಿಮರ್ಶೆ, ಸಮಾಜ ಬೋಧನೆ ಎಂದು ವಿಂಗಡಿಸಬಹುದು. ದಾಸ ಸಾಹಿತ್ಯ ಹಾಡಿನ ರೂಪದಲ್ಲಿ ಇದೆ; ಇದರ ಭಾಷೆ ಸಾಮಾನ್ಯ ಜನರಿಗೆ ಅರ್ಥವಾಗುವ ಸರಳ ಸ್ವರೂಪದ್ದು. ಈ ಕೃತಿರಚನೆಯ ಮುಖ್ಯ ದೃಷ್ಟಿ ಏನು ಹೇಳಬೇಕು ಎನ್ನುವುದರ ಕಡೆಗೆ; ಹೇಳಿದ್ದು ಸುಲಭವಾಗಿ ಅರ್ಥವಾಗಬೇಕು ಎಂಬುದರ ಕಡೆಗೆ. ಇಂಥ ನಿರೂಪಣೆಯಲ್ಲಿ ಸಾಹಿತ್ಯಾಂಶ ತಾನಾಗಿ ಸೇರಿರಬಹುದು, ಅಷ್ಟೆ. ದಾಸ ಸಾಹಿತ್ಯವನ್ನು ಬರೆದವರಲ್ಲಿ ಸಾಹಿತ್ಯ ಪ್ರತಿಭೆ ಹೆಚ್ಚಾಗಿದ್ದ ಸಂದರ್ಭಗಳಲ್ಲಿ ಅವರ ಕೃತಿಗಳಲ್ಲಿ ಸಾಹಿತ್ಯಾಂಶ ಹೆಚ್ಚಾಗಿ ಕಂಡುಬಂದಿರುವುದು ಸಹಜ. ನಾದಮಾಧುರ್ಯ ಈ ರಚನೆಗಳ ಪ್ರಧಾನ ಗುಣ. ಪುರಂದರದಾಸರ 'ಭಾಗ್ಯದ ಲಕ್ಷ್ಮಿ ಬಾರಮ್ಮ' ದಂಥ ಕೃತಿಗಳಲ್ಲಿ ಭಾವನೆಯ ಸೊಗಸನ್ನೂ ನಾದದ ಸೊಬಗನ್ನೂ ಏಕಕಾಲದಲ್ಲಿ ಕಾಣಬಹುದು.

ಸ್ತುತಿಗೀತೆಗಳಿಗಿಂತ, ಅಂತರಂಗ ಗೀತೆಗಳು ಹೆಚ್ಚು ಭಾವಪ್ರಧಾನವಾದುವು. ಇವುಗಳಲ್ಲಿ ಭಗವಂತನ ದರ್ಶನಕ್ಕಾಗಿ ಹಂಬಲಿಸುವ ಭಕ್ತನ ಹೃದಯದ ಕಳವಳ, ಅವನ ಸಮಗ್ರ ಅರ್ಪಣಾಭಾವ, ಸ್ಥೈರ್ಯಗಳ ಪ್ರತಿಬಿಂಬವಿದೆ. ಇದರಿಂದಾಗಿ ಇಂಥ ಗೀತೆಗಳಲ್ಲಿ ಭಾವಗೀತೆಯ ಕಾವ್ಯ ಉತ್ಕಟತೆಗಳನ್ನೂ ಸೌಂದರ್ಯವನ್ನೂ ಕಾಣಬಹುದು. 'ಕಂಡು ಕಂಡು ಕೈಬಿಡುವರೆ', 'ಬದುಕಿದೆನು, ಬದುಕಿದೆನು, ಭವ ಹಿಂಗಿತು', 'ಬಿನ್ನಹಕೆ ಬಾಯಿಲ್ಲವಯ್ಯ', 'ಅಪರಾಧಿ ನಾನಲ್ಲ, ಅಪರಾಧವೆನದಲ್ಲ'—ಇಂಥ ಕೀರ್ತನೆಗಳಲ್ಲಿ ಭಕ್ತನ ನಾನಾ ಮನೋವೇದನೆಗಳೂ ಸಂತೋಷ, ನಿಷ್ಠೆಗಳೂ ಚಿತ್ರಿತವಾಗಿವೆ.

ಸಮಾಜವನ್ನು ಉದ್ಧರಿಸುವುದೂ, ಜನರನ್ನು ಸನ್ಮಾರ್ಗಕ್ಕೆ ತರುವುದೂ ದಾಸರ ಉದ್ದೇಶಗಳಲ್ಲಿ ಒಂದಾದ್ದರಿಂದ ಅವರು ಸಮಾಜದಲ್ಲಿ, ಜನರ

ನಡವಳಿಕೆಯಲ್ಲಿ ಕಂಡ ಲೋಪದೋಷಗಳನ್ನು ಎತ್ತಿತೋರಿಸಿರುವುದು ಮಾತ್ರವಲ್ಲದೆ, ಅವನ್ನು ಹಲವಾರು ಬಾರಿ ಕಟುವಾಗಿ ಖಂಡಿಸಿಯೂ ಇದ್ದಾರೆ; ಅನೀತಿ, ಡಾಂಭಿಕತೆಗಳನ್ನು ತೀವ್ರವಾಗಿಯೇ ಪ್ರತಿಭಟಿಸಿದ್ದಾರೆ: ಸಣ್ಣತನವನ್ನು ಹಳಿದಿದ್ದಾರೆ. ಹೀಗೆ ಮಾಡುವಾಗ ಅವರು ವ್ಯಂಗ್ಯ, ಹಾಸ್ಯ, ಕಟಕಿ ಮುಂತಾದ ವಿಧಾನಗಳನ್ನು ಬಳಸಿಕೊಂಡಿದ್ದಾರೆ. 'ಮಡಿ ಮಡಿ ಮಡಿಯೆಂದು ಅಡಿಗಡಿಗೆ ಹಾರುವಿ', 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ', 'ಜಾಲಿಯ ಮರದಂತೆ ಧರೆಯೊಳು ದುರ್ಜನರು'—ಇಂಥ ಕೃತಿಗಳು ಇವಕ್ಕೆ ಉದಾಹರಣೆಗಳು.

ಜೀವನ ಕಷ್ಟ ಕಾರ್ಪಣ್ಯಗಳಿಗೆ ಸಿಕ್ಕಿ ನರಳುತ್ತಿರುವ ಜನರನ್ನು ಸಮಾಧಾನಗೊಳಿಸುವ, ಅವರಲ್ಲಿ ಸತ್ಯ, ಧರ್ಮ, ನೀತಿ, ಜೀವನನಿಷ್ಠೆಗಳನ್ನು ಬೆಳೆಸುವ ಉಪದೇಶಗಳನ್ನು ಸಮಾಜ ಬೋಧನೆಯ ಕೃತಿಗಳಲ್ಲಿ ಕಾಣಬಹುದು. 'ಈಸಬೇಕು, ಇದ್ದು ಜೈಸಬೇಕು', 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ', 'ಸಕಲವೆಲ್ಲವು ಹರಿಸೇವೆಯೆನ್ನಿ', 'ಕಲ್ಲು ಸಕ್ಕರೆ ಕೊಳ್ಳಿರೊ'—ಇವು ಮನೋಹರ ಬೋಧಗೀತೆಗಳು.

ದಾಸರ ಇಷ್ಟದೈವ ಯಾವುದೇ ಇರಲಿ, ಅವರು ಯಾವುದೇ ಮತಧರ್ಮವನ್ನವಲಂಬಿಸಲಿ, ಅವರ ಕೃತಿಗಳಲ್ಲಿ ದೈವಭಕ್ತಿ, ಸಮಾಜ ಹಿತಾಕಾಂಕ್ಷೆಗಳನ್ನು ಸ್ಪಷ್ಟವಾಗಿ ಕಾಣಬಹುದು.

ಕಬೀರದಾಸ ಉತ್ತರ ಭಾರತದಲ್ಲಿ ತನ್ನ ಹಾಡುಗಳಿಂದ ಭಕ್ತಿಯನ್ನೂ, ಭಾವೈಕ್ಯವನ್ನೂ ಬೆಳೆಸಿದ.

ಶ್ರೀರಾಮನ ಅಪ್ರತಿಮ ಭಕ್ತನಾಗಿದ್ದ ಸೂರದಾಸ ಮುಂತಾದವರು ಉತ್ತರ ಭಾರತದ ದಾಸವೃಂದದಲ್ಲಿ ಖ್ಯಾತರಾದವರು.

ನಮ್ಮ ರಾಷ್ಟ್ರದ ವಿವಿಧ ಭಾಷೆಗಳಲ್ಲಿ ಕಾಲದಿಂದ ಕಾಲಕ್ಕೆ ದಾಸ ಸಾಹಿತ್ಯ ನಿರ್ಮಾಣವಾಯಿತು. ಜನರ ಜೀವನದೃಷ್ಟಿಯನ್ನೂ ಸಮಾಜ ಜೀವನವನ್ನೂ ಉತ್ತಮಗೊಳಿಸಲು, ಅವರ ಮನಸ್ಸಿನಲ್ಲಿ ದೈವಭಕ್ತಿಯನ್ನು ಪ್ರಚೋದಿಸಲು ಸಹಾಯಕವಾಯಿತು.

## ದ್ವಾರಂ ವೆಂಕಟಸ್ವಾಮಿ ನಾಯ್ಡು

ಕರ್ಣಾಟಕ ಸಂಗೀತರಂಗದ ವಿಖ್ಯಾತ ಪಿಟೀಲುವಾದಕರಾದ ದ್ವಾರಂ ವೆಂಕಟಸ್ವಾಮಿ ನಾಯ್ಡು ಹುಟ್ಟಿದ್ದು ಬೆಂಗಳೂರಿನಲ್ಲಿ; 1893 ನವಂಬರ್ 3ರಂದು. ಆಗ ಅವರ ತಂದೆ ಬೆಂಗಳೂರಿನಲ್ಲಿ ಉದ್ಯೋಗದಲ್ಲಿದ್ದರು. ಆಂಧ್ರ ಪ್ರದೇಶದ ಕಾಶಿಮ್‌ಕೋಟ ಮತ್ತು ವಿಶಾಖಪಟ್ಟಣಗಳಲ್ಲಿ ಅವರ ವಿದ್ಯಾಭ್ಯಾಸ ನಡೆಯಿತು. ಬಾಲ್ಯದಿಂದಲೂ ಸಂಗೀತದಲ್ಲಿ ಆಸಕ್ತರಾಗಿದ್ದ ವೆಂಕಟಸ್ವಾಮಿಯವರಿಗೆ ಅವರ ಅಣ್ಣ ಕೃಷ್ಣಯ್ಯ ನಾಯ್ಡು ಅವರೇ ಮನೆಯಲ್ಲಿ ಸಂಗೀತಪಾಠ ಹೇಳಿದರು. ಸುಪ್ರಸಿದ್ಧ ವೀಣಾ ವಿದ್ವಾಂಸರಾದ ಸಂಗಮೇಶ್ವರ ಶಾಸ್ತ್ರಿಗಳಲ್ಲಿ ಸಂಗೀತಾಭ್ಯಾಸಮಾಡಿದ್ದ ಕೃಷ್ಣಯ್ಯ ನಾಯ್ಡು ಉತ್ತಮವರ್ಗದ ಪಿಟೀಲು ವಾದಕರಾಗಿದ್ದರು. ತಮ್ಮ ಅಣ್ಣನ ನಿರ್ದೇಶನದಲ್ಲಿ ವೆಂಕಟಸ್ವಾಮಿಯವರು ಬಹು ಬೇಗ ಪಿಟೀಲು ವಾದನದಲ್ಲಿ ಪರಿಣತಿ ಪಡೆದರು. ಇನ್ನೂ 36 ವರ್ಷ ವಯಸ್ಸಿನವರಾಗಿದ್ದಾಗಲೇ ಆಂಧ್ರಪ್ರದೇಶದ ವಿಜಯನಗರಂ ಮಹಾರಾಜರ ಸಂಗೀತ ಕಾಲೇಜಿನ ಪ್ರಿನ್ಸಿಪಾಲರಾದರು. ಅಲ್ಲಿ ಅನೇಕ ಮಂದಿ ವಿದ್ಯಾರ್ಥಿಗಳು ದ್ವಾರಂ ವೆಂಕಟಸ್ವಾಮಿ ನಾಯ್ಡು ಅವರಿಂದ ಪಿಟೀಲು ವಾದನದಲ್ಲಿ ಶಿಕ್ಷಣ ಪಡೆದರು. ಇವರ ಶಿಷ್ಯವರ್ಗ ಆಂಧ್ರಪ್ರದೇಶದಲ್ಲೆಲ್ಲ ಹರಡಿ ತನ್ಮೂಲಕ ಪಿಟೀಲು ವಾದನ ಆ ಪ್ರದೇಶದಲ್ಲಿ ವಿಸ್ತಾರಗೊಂಡಿತು.



ಪಿಟೀಲು ದ್ವಾರಂ: ಪುರಸ್ಕೃತ ಪಾಂಡಿತ್ಯ

ದ್ವಾರಂ ಅವರು ಮೊದಲು ಪಕ್ಕವಾದ್ಯಗಾರರಾಗಿ ಪಿಟೀಲು ನುಡಿಸಿದರು. ಅನಂತರ ತನ್ನದೇ ವಾದನಕ್ಕೆ ತೊಡಗಿದರು. ಪಿಟೀಲು ವಾದ್ಯದ ವೈಶಿಷ್ಟ್ಯವನ್ನು ಎತ್ತಿತೋರಿಸುವಂಥ ವಾದನ ವೈಖರಿಯನ್ನು ಬೆಳೆಸಿಕೊಂಡರು. ರಾಗ ಮತ್ತು ಕೃತಿಗಳ ಭಾವವನ್ನು ಪರಿಣಾಮಕಾರಿಯಾಗಿ ರೂಪಿಸುವ ವಾದನ ತಂತ್ರ ಅವರಿಗೆ ಕರಗತವಾಯಿತು. ಕರ್ಣಾಟಕ ಸಂಗೀತರಂಗದಲ್ಲಿ. ಈ ಶತಮಾನದ ಪ್ರಮುಖ ತನಿವಾದನಕಾರ ಎಂಬ ಖ್ಯಾತಿಯನ್ನೂ ಗೌರವವನ್ನೂ ಅವರು ಗಳಿಸಿದರು.

ದ್ವಾರಂ ಅವರಿಗೆ ದೊರೆತ ಪ್ರಶಸ್ತಿಗಳು ಹಲವಾರು. 1941ರಲ್ಲಿ ಮದರಾಸಿನ ಸಂಗೀತ ಅಕಾಡೆಮಿ ಅವರಿಗೆ 'ಸಂಗೀತ ಕಲಾನಿಧಿ' ಎಂಬ ಪ್ರಶಸ್ತಿಯನ್ನು ಕೊಟ್ಟಿತು; ಮೈಸೂರು ಮಹಾರಾಜರು 1946ರಲ್ಲಿ 'ಸಂಗೀತ ರತ್ನಾಕರ' ಎಂಬ ಬಿರುದನ್ನು ನೀಡಿ ಅವರನ್ನು ಸನ್ಮಾನಿಸಿದರು; 1953ರಲ್ಲಿ ರಾಷ್ಟ್ರೀಯ ಪ್ರಶಸ್ತಿಯೂ 1959ರಲ್ಲಿ 'ಪದ್ಮಶ್ರೀ' ಪ್ರಶಸ್ತಿಯೂ ದೊರೆತುವು. 1962ರಲ್ಲಿ ತಿರುಪತಿಯ ವೆಂಕಟೇಶ್ವರ ವಿಶ್ವವಿದ್ಯಾಲಯ ಅವರಿಗೆ ಗೌರವ ಡಾಕ್ಟರೇಟ್ ಕೊಟ್ಟು ಅವರ ಅಪಾರ ವಿದ್ವತ್ತನ್ನು ಪುರಸ್ಕರಿಸಿತು. ಮಾರನೆಯ ವರ್ಷ ಅವರು ಆಂಧ್ರಪ್ರದೇಶದ ಆಸ್ಥಾನ ವಿದ್ವಾಂಸರಾಗಿ ನಿಯಮಿಸಲ್ಪಟ್ಟರು.

ಸುಮಾರು ಅರ್ಧಶತಮಾನದ ಕಾಲ ಕರ್ಣಾಟಕ ಸಂಗೀತ ಕ್ಷೇತ್ರಕ್ಕೆ ಅಮೂಲ್ಯ ಸೇವೆ ಸಲ್ಲಿಸಿದ ದ್ವಾರಂ ವೆಂಕಟಸ್ವಾಮಿ ನಾಯ್ಡು ಅವರು ತಮ್ಮ 71ನೆಯ ವಯಸ್ಸಿನಲ್ಲಿ 1964 ನವೆಂಬರ್ 25ರಂದು ಹೈದರಾಬಾದಿನಲ್ಲಿ ದಿವಂಗತರಾದರು.

## ದೇಜಗೌ

ಆಡು ಮೇಯಿಸುವ ಕೆಲಸಕ್ಕೆ ಹಾಕಿದ್ದ ಹುಡುಗ ಆಡುಗಳನ್ನು ಅವುಗಳ ಪಾಲಿಗೆ ಬಿಟ್ಟು ಶಾಲೆಗೆ ಹೋದ. ಓದು ಕಲಿಯುವುದಕ್ಕೆ. ಇದನ್ನು ಕಂಡು ತಂದೆಗೆ ಕೋಪ ಬಂತು; ಹುಡುಗನಿಗೆ ಪೆಟ್ಟೂ ಬಿತ್ತು. ಓದಲು

ಹಂಬಲಿಸುತ್ತಿದ್ದ ಹುಡುಗನ ವಿಚಾರದಲ್ಲಿ ಉಪಾಧ್ಯಾಯರಿಗೆ ಆಸಕ್ತಿ ಮೂಡಿತು. ಅವರು ಹುಡುಗನ ತಂದೆಯೊಡನೆ ಮಾತನಾಡಿದರು ; ಆಡು ಕಾಯುವ ಕೆಲಸದಿಂದ ಬಿಡಿಸಿ ಶಾಲೆಗೆ ಸೇರಿಸಿಕೊಂಡರು. ಹುಡುಗ ಶ್ರದ್ಧೆಯಿಂದ ಅಭ್ಯಾಸಮಾಡಿ ಮುಂದೆ ಬಂದ. ಅಧ್ಯಾಪಕನಾದ ; ವಿಶ್ವ ವಿದ್ಯಾನಿಲಯದ ಪ್ರಾಧ್ಯಾಪಕ ಪದವಿಗೇರಿದ ; ಕುಲಪತಿಯಾದ.

ಈ ಮಹತ್ ಸಾಧನೆಯನ್ನು ಕೈಗೂಡಿಸಿಕೊಂಡ ವ್ಯಕ್ತಿಯೇ ಪ್ರಾಧ್ಯಾಪಕ ದೇಜಗೌ.

ದೇವೇಗೌಡ ಜವರೇಗೌಡರು ಚೆನ್ನಪಟ್ಟಣ ತಾಲ್ಲೂಕು ಚಕ್ಕರೆಗ್ರಾಮದವರು. ಅವರು ಹುಟ್ಟಿದ್ದು ಅದೇ ತಾಲೂಕಿನ ಮುದಿಗೆರೆಯಲ್ಲಿ, ತಮ್ಮ ಅಜ್ಜನ ಮನೆಯಲ್ಲಿ, 1918ನೆಯ ಜೂಲೈ 6ರಂದು. ದೇಜಗೌ ಅವರು ಚಕ್ಕರೆಗ್ರಾಮದಲ್ಲಿ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿ ಚನ್ನಪಟ್ಟಣದ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಮಾಡಿದರು. ವಿದ್ಯಾರ್ಥಿ ವೇತನದ ನೆರವಿನಿಂದ ವಿದ್ಯಾಭ್ಯಾಸ ಮುಂದುವರಿಯಿತು. ಬೆಂಗಳೂರಿನಲ್ಲಿ ಇಂಟರ್‌ಮಿಡಿಯೆಟ್ ಮುಗಿಸಿ ಇಂಗ್ಲಿಷ್ ಆನರ್ಸ್‌ಗೆ ಸೇರಬೇಕೆಂದು 1938ರಲ್ಲಿ ಮೈಸೂರಿಗೆ ಬಂದರು. ಕನ್ನಡ ಆನರ್ಸ್‌ಗೆ ಸೇರಿದರೆ ವೆಂಕಣ್ಣಯ್ಯನವರಂಥ ಪ್ರಾಧ್ಯಾಪಕರಿದ್ದಾರೆ ; ಕೆ. ವಿ. ಪುಟ್ಟಪ್ಪನವರ ಬಳಿ ಕಲಿಯುವ ಅವಕಾಶ ದೊರೆಯುತ್ತದೆ ಎಂದು ತಿಳಿದಾಗ ಕನ್ನಡ ಆನರ್ಸ್‌ಗೆ ಸೇರಲು ದೇಜಗೌ ನಿಶ್ಚಯಿಸಿದರು.

ಶ್ರೀ ರಾಮಕೃಷ್ಣಾಶ್ರಮದ ವಿದ್ಯಾರ್ಥಿನಿಲಯದಲ್ಲಿದ್ದುಕೊಂಡು ಆನರ್ಸ್ ಮುಗಿಸಿದರು. ಅನಂತರ ಕೊಲ್ಲಾಪುರಕ್ಕೆ ಹೋಗಿ ನ್ಯಾಯಶಾಸ್ತ್ರ ಕಲಿಯಬೇಕೆಂಬ ಆಸೆ ನೆರವೇರದಿರಲು ಬೆಂಗಳೂರಿಗೆ ಬಂದು ವಿದ್ಯಾ ಇಲಾಖೆಯ ಪರೀಕ್ಷಾ ವಿಭಾಗದಲ್ಲಿ ಗುಮಾಸ್ತೆಯಾದರು. ಸ್ವಲ್ಪ ಕಾಲಾನಂತರ ಮೈಸೂರಿಗೆ ಬಂದು ಕನ್ನಡ ಎಂ.ಎ. ತರಗತಿಗೆ ಸೇರಿದರು. 1943ರಲ್ಲಿ ಎಂ. ಎ. ಪದವಿಯನ್ನು ಪಡೆದು ಮೈಸೂರು ಸರಕಾರದ ಕಾರ್ಯಸೌಧದಲ್ಲಿ ಕೆಲಸಕ್ಕೆ ಸೇರಿದರು. ಅಕೌಂಟ್ಸ್ ಪರೀಕ್ಷೆ ಮಾಡಿಕೊಂಡರು. 1945ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾದರು. ಇದರ ಜೊತೆಗೆ ಬಿಡುವಿನ ಕಾಲದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಶಬ್ದ ಸಂಗ್ರಹ ಕಾರ್ಯವನ್ನೂ ಮಾಡತೊಡಗಿದರು. ಅವರ ಕನ್ನಡಸೇವೆ ಆರಂಭವಾದದ್ದು ಹೀಗೆ. 1949ರಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿಗೆ ಅವರಿಗೆ ವರ್ಗವಾಯಿತು. ಅಲ್ಲಿ ಕೆಲ ಕಾಲ ಸಂಶೋಧನಾ ಶಾಖೆಯಲ್ಲಿ ಕೆಲಸ ಮಾಡಿದರು. 'ಪ್ರಬುದ್ಧ ಕರ್ಣಾಟಕ'ದ ಸಂಪಾದಕರಾದರು. ಅನಂತರ 1955ರಲ್ಲಿ ಉಪಪ್ರಾಧ್ಯಾಪಕರಾದರು. ಕೆಲ ಕಾಲ ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣ ಶಾಖೆಯ ಕಾರ್ಯದರ್ಶಿಯಾಗಿದ್ದರು. 1957ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪರೀಕ್ಷಾಧಿಕಾರಿಯಾದರು. 1960ರಲ್ಲಿ ಶಿವಮೊಗ್ಗೆಯ ಸಹ್ಯಾದ್ರಿ ಕಾಲೇಜಿನ ಪ್ರಿನ್ಸಿಪಾಲರಾದರು. 1964ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರೂ ಕನ್ನಡ ವಿಭಾಗದ ಮುಖ್ಯಸ್ಥರೂ ಆದರು. ಮಾರನೆಯ ವರ್ಷವೇ ಕಲಾ ವಿಭಾಗದ ಡೀನ್ ಆಗುವ ಗೌರವ ದೊರೆಯಿತು. ವೃತ್ತಿ ಸಂಬಂಧ ಪದಗಳ ಸಂಗ್ರಹಕ್ಕಾಗಿ ಉತ್ತರ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡರು.

1966ರಲ್ಲಿ ಆರಂಭವಾದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ದುಡಿದು ಸಂಸ್ಥೆಯ ಏಳಿಗೆಗೆ ಕಾರಣರಾದರು. ಭಾಷಾಂತರ ವಿಭಾಗ, ಜಾನಪದ ವಸ್ತು ಸಂಗ್ರಹಾಲಯಗಳನ್ನು ಪ್ರಾರಂಭಿಸುವ ದಿಟ್ಟ ಹೆಜ್ಜೆ ಇಟ್ಟರು. ಆ ಅವಧಿಯಲ್ಲೇ ವಿಶ್ವಕೋಶ ರಚನೆಯ ಹೊಣೆಯನ್ನು ರಾಜ್ಯ ಸರಕಾರ ಮೈಸೂರು ವಿಶ್ವವಿದ್ಯಾನಿಲಯದ ಮೂಲಕ ಕನ್ನಡ ಅಧ್ಯಯನ ಸಂಸ್ಥೆಗೆ ವಹಿಸಿಕೊಟ್ಟಿತು.

1969ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ಪಟ್ಟ ಇವರಿಗೆ ದೊರೆಯಿತು. 1970ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಇವರ ಅಧ್ಯಕ್ಷತೆಯಲ್ಲಿ ಜರುಗಿತು.



ಕನ್ನಡ ಕವಿ : ದೇಜಗೌ

ದೇಜಗೌ ಹಲವಾರು ಜೀವನ ಚರಿತ್ರೆಗಳನ್ನೂ ವಿಮರ್ಶಾಗ್ರಂಥಗಳನ್ನೂ ಬರೆದಿದ್ದಾರೆ. 'ಆಲ್ಬರ್ಟ್ ಐನ್‌ಸ್ಟೀನ್', 'ತೀ ನಂ ಶ್ರೀ', 'ನಂಜುಂಡ ಕವಿ', 'ರಾಷ್ಟ್ರಕವಿ ಕುವೆಂಪು', 'ಬೆಂಗಳೂರು ಕೆಂಪೇಗೌಡ', 'ಕಡುಗಲಿ ಕುಮಾರ ರಾಮ', 'ಮೋತಿಲಾಲ್ ನೆಹರು', 'ಶ್ರೀ ರಾಮಾಯಣ ದರ್ಶನಂ ವಚನ ಚಂದ್ರಿಕೆ', 'ಷಡಕ್ಷರ ದೇವ', 'ಸಾಹಿತಿಗಳ ಸಂಗದಲ್ಲಿ', ಮೊದಲಾದುವು ಇವರ ಕೃತಿಗಳು. 'ಬೆರಕೆಸೊಪ್ಪು' ನೂರೆಂಟು ಪುಸ್ತಕಗಳ ಮುನ್ನುಡಿಗಳು. 'ಕುಲಪತಿಯ ಭಾಷಣಗಳು' ಇವರ ಉಪನ್ಯಾಸಗಳ ಸಂಗ್ರಹ. ಇವಲ್ಲದೆ ದೇಜಗೌ ಕೆಲವು ಶ್ರೇಷ್ಠ ಕೃತಿಗಳನ್ನು ಭಾಷಾಂತರಿಸಿದ್ದಾರೆ. ಇವುಗಳಲ್ಲಿ ಕೃಷ್ಣಾ ಹತೀಸಿಂಗರ 'ನೆನಪು ಕಹಿಯಲ್ಲ', ಟಾಲ್‌ಸ್ಟಾಯರ 'ಪುನರುತ್ಥಾನ', ಜೇನ್ ಆಸ್ಟಿನ್ ಕೃತಿ 'ಹಮ್ಮು ಬಿಮ್ಮು' ಗಮನಾರ್ಹವಾದುವು.

'ಕಬ್ಬಿಗರ ಕಾವ', 'ಜೈಮಿನಿ ಭಾರತ ಸಂಗ್ರಹ', 'ಶ್ರೀರಾಮಯಣ ದರ್ಶನಂ ಉಪನ್ಯಾಸ ಮಾಲೆ', 'ಹೊಸಗನ್ನಡ ಕಥಾಸಂಗ್ರಹ' ಮುಂತಾದುವನ್ನು ದೇಜಗೌ ಅವರು ಸಂಪಾದಿಸಿದ್ದಾರೆ.

'ಹೋರಾಟದ ಬದುಕು' ಅವರ ಆತ್ಮಕಥೆ. ಇದು 1968ರಲ್ಲಿ ಪ್ರಕಟವಾಯಿತು.

ಕನ್ನಡ ನಾಡಿನ ಎಲ್ಲ ವ್ಯವಹಾರರಂಗಗಳಲ್ಲೂ ಕನ್ನಡಕ್ಕೆ ಆದ್ಯತೆ ದೊರೆಯಬೇಕು ; ಕನ್ನಡಕ್ಕೆ ಗೌರವ ಸ್ಥಾನ ದೊರೆಯಬೇಕು ಎಂಬುದು ದೇಜಗೌ ಅವರ ನಿಲುವು. ಯಾವುದೇ ರೀತಿಯಲ್ಲಿ ಕನ್ನಡದ ಹಿತಕ್ಕೆ ಧಕ್ಕೆ ಬಂದರೆ ಅದನ್ನು ಅವರು ಸಹಿಸರು ; ತಮ್ಮ ಪೂರ್ಣ ಶಕ್ತಿಯನ್ನು ವಿನಿಯೋಗಿಸಿ ಅದನ್ನು ಇದಿರಿಸಿ ಹೋರಾಡುತ್ತಾರೆ. ಇದರಿಂದಾಗಿ ಅವರು ಕನ್ನಡ ಜನತೆಗೆ ಪ್ರಿಯರಾಗಿದ್ದಾರೆ.

ಕನ್ನಡದ ಅಭಿವೃದ್ಧಿಗೆ ಅಪಾರವಾಗಿ, ನಾನಾಮುಖವಾಗಿ ದೇಜಗೌ ಶ್ರಮಿಸಿದ್ದಾರೆ. ಈ ಸೇವೆಯನ್ನು ಗಮನಿಸಿದ ಕನ್ನಡ ಜನತೆ ದೇಜಗೌ ಅವರ ಐವತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಸಾರ್ವಜನಿಕವಾಗಿ

[illegible] ಸಂಭಾವನಾ ಗ್ರಂಥವೂ ಅರ್ಪಿಸಲ್ಪಟ್ಟಿತು.

ಈ ಶತಮಾನದ [illegible] ಕನ್ನಡದ ಏಳ್ಗೆಗಾಗಿ ನಿಷ್ಠೆಯಿಂದ ಶ್ರಮಿಸಿದವರ ಅಗ್ರ ಪಂಕ್ತಿಯಲ್ಲಿ ವೇಜಗೌ ಗಣ್ಯರು.

## ದೇವುಡು

ಮಹಾರಾಜರ [illegible] ಒಮ್ಮೆ ದೇವುಡು ತಾವು ಕೋರ್ಟಿಗೆ ಹೋಗಿದ್ದರು. ಅಲ್ಲಿನ ನ್ಯಾಯಾಧೀಶರು "ನಿಮ್ಮ ಯಾರು ? ನಿಮ್ಮ ಕೆಲಸವೇನು ?" ಎಂದು ಕೇಳಿದರು. ದೇವುಡು ಗತ್ತಿನಿಂದ "ಮಹಾರಾಜರೇ [illegible] ಮುನ್ನ ನಮಗೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ !" ಎಂದರು. ಅಷ್ಟಾಗಿ ಪಂಡಿತ, ರಾಜ ಪುರೋಹಿತರ ವಂಶದಲ್ಲಿ ಜನಿಸಿದವರು ದೇವುಡು. ಅವರದು ಅಪಾರ ಪಾಂಡಿತ್ಯ, ಪ್ರಚಂಡ ಪ್ರತಿಭೆ, ಅಪೂರ್ವ ವ್ಯಕ್ತಿತ್ವ.

ಮೈಸೂರಿನಲ್ಲಿ ಜನಿಸಿದ ದೇವುಡು ನರಸಿಂಹಶಾಸ್ತ್ರಿ ಬಾಲ್ಯದಿಂದಲೂ ತುಂಬ ಬುದ್ಧಿವಂತ ಹುಡುಗನೆಂದು ಹೆಸರು ಪಡೆದಿದ್ದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಎಂ.ಎ. ಪಡೆದ ದೇವುಡು ಬೆಂಗಳೂರಿಗೆ ಬಂದು ನೆಲೆಸಿದರು. ತುಂಬ ಸ್ವತಂತ್ರ ಮನೋವೃತ್ತಿಯ ಇವರು ಯಾವ ಸರಕಾರೀ ಕೆಲಸಕ್ಕೂ ಕೈ ಒಡ್ಡಲಿಲ್ಲ.

ಸಂಸ್ಕೃತದಲ್ಲಿ ಆಳವಾದ ಪಾಂಡಿತ್ಯವಿದ್ದ ದೇವುಡು ಬೆಂಗಳೂರಿಗೆ ಬಂದ ಅನಂತರ ಸಾಂಪ್ರದಾಯಿಕ ರೀತಿಯಲ್ಲಿ ನಿಯಮ ನಿಷ್ಠೆಯಿಂದ ಗುರುಗಳ ಬಳಿ ವೇದಾಂತ, ಪೂರ್ವ ಮೀಮಾಂಸಶಾಸ್ತ್ರಗಳನ್ನು ಅಭ್ಯಸಿಸಿದರು. ಈ ಅಭ್ಯಾಸ, ಅನಂತರದ ಚಿಂತನೆಗಳ ಫಲವೇ 'ಮೀಮಾಂಸಾ ದರ್ಪಣ' ಎಂಬ ಅಪೂರ್ವ ಕೃತಿ.

ದೇವುಡು ಅವರ ಆಸಕ್ತಿಗಳು ಅನೇಕ. ನಾಟಕದಲ್ಲಿ ಆಸಕ್ತಿ ಇದ್ದ ಕಾರಣ ಬೆಂಗಳೂರು ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್ (ಎಡಿಎ) ಸದಸ್ಯರಾದರು. ಆ ಸಂಸ್ಥೆ ಪ್ರಕಟಿಸುತ್ತಿದ್ದ 'ರಂಗಭೂಮಿ', ನಿಯತಕಾಲಿಕದ ಪ್ರಕಟಣೆಯನ್ನು ವಹಿಸಿಕೊಂಡು ಅದರ ಸಂಪಾದಕರಾದರು. ನಟನೆಯಲ್ಲಿ ಇದ್ದ ಆಸಕ್ತಿ ಚಿತ್ರರಂಗಕ್ಕೂ ಅವರನ್ನು ಕೊಂಡೊಯ್ದಿತು. 'ಮಾರ್ಕಂಡೇಯ' ಕನ್ನಡ ಚಿತ್ರದಲ್ಲಿ ನಟಿಸಿದರು. 'ಆರ್ಯ



[illegible] ಇವರು ಅನಂತರ ಗಾಂಧಿನಗರ ಹೈಸ್ಕೂಲನ್ನು ಸ್ಥಾಪಿಸಿದರು. ಶಿಕ್ಷಣದಲ್ಲಿದ್ದ ಆಸಕ್ತಿಯಿಂದ ಚಿಕ್ಕ ಮಕ್ಕಳಿಗಾಗಿ ಅನೇಕ ಪುಸ್ತಕಗಳನ್ನು ಬರೆದು ಪ್ರಕಟಿಸಿದರು. 'ನಮ್ಮ ಪುಸ್ತಕ' ಎಂಬ ಮಕ್ಕಳ ಮಾಸಪತ್ರಿಕೆಯನ್ನು ಆರಂಭಿಸಿ ಕೆಲ ಕಾಲ ನಡೆಸಿದರು. ಹೆಚ್ಚು ಜನ ಸಂಸ್ಕೃತ ಕಲಿಯಬೇಕೆಂದು ಆಶಿಸಿ 'ಮೂಲ ಸಂಸ್ಕೃತ' ಎಂಬ ವಿಶಿಷ್ಟ ರೀತಿಯ ಕೃತಿಯನ್ನು ರಚಿಸಿದರು. ಸಂಗೀತದ ಬಗೆಗೆ ಭಾರಿ ಆಸಕ್ತಿ ಇದ್ದು ವೀಣೆಯನ್ನೂ ಅಭ್ಯಾಸಮಾಡಿದರು.

ನೋಡಿದರೆ ಗೌರವ ಹುಟ್ಟಿಸುವಂಥ ವ್ಯಕ್ತಿತ್ವಹೊಂದಿದ್ದ ದೇವುಡು ಮೂಲತಃ ಧೀಮಂತರು. ಈ ಪ್ರಚಂಡ ಧೀಶಕ್ತಿಯೊಂದಿಗೆ ಕವಿ ಪ್ರತಿಭೆಯೂ ಸೇರಿತ್ತು. ವೇದ, ಉಪನಿಷತ್ತುಗಳ ವಿಷಯದಲ್ಲಿ ಅಪಾರ ಪಾಂಡಿತ್ಯವಿದ್ದಂತೆ ಆಧುನಿಕ ಜೀವನದೃಷ್ಟಿಯೂ ಇತ್ತು. ಪಾಠ ಕಲಿಯಲು ಶಿಷ್ಯ ಗುರುವಿದ್ದ ಕಡೆಗೆ ಹೋಗಬೇಕು ಎಂಬ ಭಾರತೀಯ ಸಂಪ್ರದಾಯದಲ್ಲಿ ನಂಬಿಕೆ ಇದ್ದ ಇವರು, ಭಾರತೀಯ ತತ್ತ್ವಶಾಸ್ತ್ರ ವಿಚಾರ ಕಲಿಯಬಯಸಿ ಬೆಂಗಳೂರಿಗೆ ಬಂದಿದ್ದ ವಿದೇಶೀಯರನ್ನು ಪಾಠಕ್ಕಾಗಿ ತಮ್ಮ ಮನೆ ಬಾಗಿಲಿಗೆ ಬರಮಾಡಿಕೊಂಡರು. ಆದರೆ ಚೆನ್ನಪ್ಪ ಉತ್ತಂಗಿಯವರನ್ನು ಕಂಡಾಗ ಅವರಲ್ಲಿ ಕ್ರಿಸ್ತನ ಪ್ರಭೆಯನ್ನು ಗುರುತಿಸಿದ ಈ ವೈದಿಕ ಸಂಪ್ರದಾಯದ ವ್ಯಕ್ತಿ, ಅವರ ಕಾಲ್ತೊಳೆದು ಜೊತೆಯಲ್ಲೇ ಊಟಕ್ಕೆ ಕುಳ್ಳಿರಿಸಿಕೊಂಡರು !

ಇಂಥ ವಿಶಾಲ ಮನೋಭಾವದ ವ್ಯಕ್ತಿ ಮಾತ್ರವೇ ಸೃಷ್ಟಿಸಲು ಸಾಧ್ಯವಾದ ಕೃತಿಗಳನ್ನು ದೇವುಡು ಬರೆದರು. 'ಮಹಾಬ್ರಾಹ್ಮಣ', 'ಮಹಾಕ್ಷತ್ರಿಯ', 'ಮಹಾದರ್ಶನ'ಗಳು ಇವರ ಮೂರು ಮಹಾ ಕಾದಂಬರಿಗಳು. ವೈದಿಕ ಸಾಹಿತ್ಯವನ್ನು ಕರತಲಾಮಲಕ ಮಾಡಿಕೊಂಡಿದ್ದ ದೇವುಡು ಅವರು ಆ ಕಾಲದ ಜನಜೀವನ, ಸಂಸ್ಕೃತಿ, ರೀತಿನೀತಿಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಪುರಾಣ ಕಾಲದ ಪ್ರಚಂಡ ವ್ಯಕ್ತಿಗಳ ವ್ಯಕ್ತಿತ್ವವನ್ನು ಇವರ ವೈದಿಕ ಪ್ರಜ್ಞೆ, ಪಾಂಡಿತ್ಯ, ಪ್ರತಿಭೆಗಳು ಸೊಗಸಾಗಿ ಚಿತ್ರಿಸಿವೆ. 'ಮಹಾಬ್ರಾಹ್ಮಣ'ದಲ್ಲಿ ವಿಶ್ವಾಮಿತ್ರನ ಮಹಾತಪಸ್ಸು ಸಾಧನೆಗಳ ಕಥೆಯನ್ನೂ 'ಮಹಾಕ್ಷತ್ರಿಯ'ದಲ್ಲಿ ನಹುಷನ ಕಥೆಯನ್ನೂ 'ಮಹಾದರ್ಶನ'ದಲ್ಲಿ ಯಾಜ್ಞವಲ್ಕ್ಯರ ಕಥೆಯನ್ನೂ ದೇವುಡು ಹೃದಯಂಗಮವಾಗಿ ಹೇಳುತ್ತಾರೆ.

'ಅಂತರಂಗ' ಇವರ ಮತ್ತೊಂದು ಪ್ರಮುಖ ಕೃತಿ. ಈ ಕಾದಂಬರಿ ಮನಸ್ಸಿನ ಸೂಕ್ಷ್ಮ ವ್ಯಾಪಾರಗಳನ್ನು ಚಿತ್ರಿಸುತ್ತದೆ. 'ಎರಡನೆಯ ಜನ್ಮ' ಮೊದಲಾದ ಕಾದಂಬರಿಗಳಲ್ಲಿ, ಲೈಂಗಿಕ ಸಮಸ್ಯೆಗಳನ್ನು ದೇವುಡು ಚಿತ್ರಿಸಿದ್ದಾರೆ.

'ಗೆದ್ದವರು ಯಾರು ?', 'ಕಳ್ಳರ ಕೂಟ', 'ಮಯೂರ' ಮೊದಲಾದುವು ಇವರ ಇತರ ಕೃತಿಗಳು. ವಿವೇಕಾನಂದರ ಭಾಷಣಗಳನ್ನೂ ಜಾನ್ ಮೇಸ್‌ಫೀಲ್ಡ್‌ನ 'ದಿ ಟ್ರಯಲ್ ಆಫ್ ಜೀಸಸ್' ನಾಟಕವನ್ನೂ ದೇವುಡು ಭಾಷಾಂತರಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ದೇವುಡು ಮಾಡಿದ ಭಾಷಣಗಳ ಸಂಗ್ರಹವಾದ 'ಕರ್ನಾಟಕ ಸಂಸ್ಕೃತಿ ದರ್ಶನ' ಕನ್ನಡ ಸಾಹಿತ್ಯದಲ್ಲೇ ಒಂದು ಅಮೂಲ್ಯ ಕೃತಿ. ಇದು ದೇವುಡು ಅವರ ವಿಮರ್ಶಾ ಶಕ್ತಿ, ವೈಜ್ಞಾನಿಕ ದೃಷ್ಟಿ, ಸಂಶೋಧನಾ ಶಕ್ತಿಗಳಿಗೆ ಹೆಗ್ಗುರುತಾಗಿದೆ. ಇವರು ಮೈಸೂರು ರಾಜ್ಯದ ಪ್ರತಿನಿಧಿಯಾಗಿ ಅಖಿಲ ಭಾರತ ಸಂಸ್ಕೃತ ಸಮ್ಮೇಳನಗಳಲ್ಲಿ ಭಾಗವಹಿಸಿದ್ದರು.

ಧೀಶಕ್ತಿ, ಕವಿಪ್ರತಿಭೆ :
ದೇವುಡು

ದೇವ್ರಾಯ. ಉತ್ತಮ ಛಾಯಾಗ್ರಾಹಕರು. ಸರಸ ಸಂಭಾಷಣಾ ಚತುರರು ಕೂಡ. ಕೊನೆಗಾಲದಲ್ಲಿ ಕಷ್ಟ, ಅನಾರೋಗ್ಯಗಳನ್ನು ಅನುಭವಿಸಬೇಕಾಯಿತಾದರೂ ದೇವುಡು ಹಸನ್ಮುಖರಾಗಿಯೇ ಅವನ್ನು ಎದುರಿಸಿದರು. 1962ನೆಯ ಅಕ್ಟೋಬರ್ 24ರಂದು ನಿಧನರಾದರು.

ಇವರ ಮರಣಾನಂತರ 'ಮಹಾಕ್ಷತ್ರಿಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ 1962ರ ಪ್ರಶಸ್ತಿ ದೊರೆಯಿತು. ಇವರ ವ್ಯಕ್ತಿತ್ವ ಎಷ್ಟು ವಿಶಿಷ್ಟವೋ ಇವರ ಕೃತಿಗಳೂ ಕನ್ನಡ ಸಾಹಿತ್ಯದಲ್ಲಿ ಅಷ್ಟೇ ವಿಶಿಷ್ಟ ಹಾಗೂ ಅಪೂರ್ವ.

## ಧಾರ್ಮಿಕ ಸಾಹಿತ್ಯ

ಪ್ರಪಂಚದಲ್ಲಿ ಅನೇಕ ಧರ್ಮಗಳು ಹುಟ್ಟಿಬೆಳೆದಿವೆ. ಒಂದೊಂದು ಧರ್ಮಕ್ಕೆ ಸಂಬಂಧಿಸಿದಂತೆಯೂ ಪವಿತ್ರ ಗ್ರಂಥಗಳಿವೆ. ಮನುಷ್ಯನ ನಂಬಿಕೆಗಳನ್ನು, ದೇವರು ಮತ್ತು ಮಾನವ ಹಾಗೂ ಮಾನವ-ಮಾನವರ ಪರಸ್ಪರ ಸಂಬಂಧಗಳನ್ನು ನಿರೂಪಿಸುವುದು ಧಾರ್ಮಿಕ ಸಾಹಿತ್ಯದ ಗುರಿ. ಕೆಲವು ಧಾರ್ಮಿಕ ಸಾಹಿತ್ಯ ಕೃತಿಗಳಲ್ಲಿ ಉತ್ತಮ ಕಾವ್ಯಾಂಶಗಳನ್ನು ಕಾಣಬಹುದು.

ಅತ್ಯಂತ ಪ್ರಾಚೀನ ಧಾರ್ಮಿಕ ಸಾಹಿತ್ಯದ ಸುಳುಹು ಈಜಿಪ್ಟಿನ ಸಮಾಧಿಗಳಾದ ಪಿರಮಿಡ್‌ಗಳಲ್ಲಿ ದೊರಕುತ್ತವೆ. ಕ್ರಿ. ಪೂ. 2,600 ವರ್ಷಗಳ ಹಿಂದೆ ರಚಿತವಾದ ಈ ಪಿರಮಿಡ್‌ಗಳ ಒಳಗೋಡೆ, ಶವದ ಪೆಟ್ಟಿಗೆಗಳ ಮುಚ್ಚಳ ಮತ್ತು ಬದಿಗಳಲ್ಲಿ ಪ್ರಾರ್ಥನಾ ಶ್ಲೋಕಗಳನ್ನು ಕೆತ್ತಿರುವುದು ಕಂಡುಬರುತ್ತದೆ.

ಹಿಂದೂಗಳಿಗೆ ಅತ್ಯಂತ ಪವಿತ್ರವೂ ಪ್ರಾಚೀನವೂ ಆದ ವೇದಗಳು ಜಗತ್ತಿನ ಮೊಟ್ಟಮೊದಲನೆಯ ಧಾರ್ಮಿಕ ಸಾಹಿತ್ಯ ಸಂಕಲನ ಎನ್ನಬಹುದು. ವೇದ ಎಂದರೆ ತಿಳಿವಳಿಕೆ, ಜ್ಞಾನ ಎಂದರ್ಥ. ವೇದಗಳಲ್ಲಿ ಸ್ತೋತ್ರ, ಆರಾಧನಾ ವಿಧಾನ, ಮಂತ್ರ, ಹಾಡುಗಳಿವೆ. ವೇದಗಳ ಒಂದು ಭಾಗವಾದ ಉಪನಿಷತ್ತುಗಳಲ್ಲಿ ತತ್ತ್ವವಿವೇಚನೆಯಿದೆ. ಈ ಸಂಬಂಧದಲ್ಲಿ ಬರುವ ಕಥೆಗಳು ಮೋಹಕವಾಗಿವೆ. ಪ್ರಾಚೀನ ಭಾರತದ ಜನರ ಧಾರ್ಮಿಕ ನಂಬಿಕೆಗಳ ಮೇಲೆ ಬೆಳಕು ಚೆಲ್ಲುವ ವೇದಗಳು ಪ್ರಪಂಚದ ಧಾರ್ಮಿಕ ಸಾಹಿತ್ಯದಲ್ಲಿ ಮಹತ್ವದ ಸ್ಥಾನ ಗಳಿಸಿವೆ.

ಧಾರ್ಮಿಕ ಸಾಹಿತ್ಯವಾದ ಭಗವದ್ಗೀತೆ ಹಿಂದೂಧರ್ಮದ ಆಧಾರ ಗ್ರಂಥಗಳಲ್ಲೊಂದು. ಇದು ಮಹಾಕಾವ್ಯವಾದ ಮಹಾಭಾರತದ ಒಂದು ಭಾಗ. ತನ್ನ ಗುರುಗಳು, ಹಿರಿಯರು, ಬಂಧುಗಳ ಮೇಲೆ ಯುದ್ಧ ಮಾಡಿ, ಅವರನ್ನು ಕೊಲ್ಲುವುದು ಅಧರ್ಮವೆಂದು ಭಾವಿಸಿದ ಅರ್ಜುನ ಯುದ್ಧ ಮಾಡುವುದಿಲ್ಲವೆಂದು ಹಟ ಹಿಡಿಯುತ್ತಾನೆ. ಆಗ ನಿಜವಾದ ಧರ್ಮ ಯಾವುದು ಎಂಬುದನ್ನು ತಿಳಿಸಲು ಶ್ರೀಕೃಷ್ಣ ಅವನಿಗೆ ಮಾಡಿದ ಉಪದೇಶವೇ ಭಗವದ್ಗೀತೆ.

ಬೌದ್ಧರ ಧರ್ಮಗ್ರಂಥಗಳಾದ ತ್ರಿಪಿಟಿಕಗಳು, ಬೌದ್ಧರ ಧಾರ್ಮಿಕ ಸಾಹಿತ್ಯದಲ್ಲಿ ಪ್ರಧಾನವಾದುವು. ಇವು ಬುದ್ಧನು ತನ್ನ ಶಿಷ್ಯರಿಗೆ ಮಾಡಿದ ಉಪದೇಶ. ಬೌದ್ಧಭಿಕ್ಷುಗಳು ಅನುಸರಿಸಬೇಕಾದ ಧಾರ್ಮಿಕ ವಿಧಿಗಳು, ಮತ್ತು ಬೌದ್ಧಧರ್ಮದ ಸಿದ್ಧಾಂತಗಳನ್ನು ತ್ರಿಪಿಟಿಕಗಳು ಒಳಗೊಂಡಿವೆ. ಇವು ಬೌದ್ಧಧರ್ಮ ಆಧಾರಗ್ರಂಥಗಳು. 'ಧಮ್ಮಪದ' ಬೌದ್ಧರ ಇನ್ನೊಂದು ಧಾರ್ಮಿಕ ಗ್ರಂಥ.

[illegible] ಭಕ್ತಿಗೀತೆಗಳು ಮತ್ತು [illegible] ವಾದುವು. ಕರ್ನಾಟಕದ ದಾಸರ ಪದಗಳು, ಶಿವಶರಣ ಶರಣೆಯರ ವಚನಗಳು, ತಮಿಳುನಾಡಿನ ನಾಯನಾರರು, ಆಳ್ವಾರರ ಕೃತಿಗಳು [illegible] ಧಾರ್ಮಿಕ ಸಾಹಿತ್ಯ. 'ಗ್ರಂಥ್ ಸಾಹೇಬ್' ಸಿಖ್ಖರ ಧಾರ್ಮಿಕ ಗ್ರಂಥ. ಜೈನಧರ್ಮದಲ್ಲೂ ಧಾರ್ಮಿಕ ಸಾಹಿತ್ಯವಿದೆ.

'ಬೈಬಲ್' ಜಗತ್ತಿನ ಧಾರ್ಮಿಕ ಸಾಹಿತ್ಯದಲ್ಲಿ ಗಣ್ಯಸ್ಥಾನ ಪಡೆದಿರುವ ಗ್ರಂಥ. ಇದರಲ್ಲಿ ಹಳೆಯ ಒಡಂಬಡಿಕೆ, ಹೊಸ ಒಡಂಬಡಿಕೆ ಎಂದು ಎರಡು ಭಾಗಗಳು. ಹಳೆಯ ಒಡಂಬಡಿಕೆ ಯೆಹೂದಿಗಳ ಧರ್ಮಕ್ಕೆ ಸಂಬಂಧಿಸಿದ್ದು ; ಹೊಸ ಒಡಂಬಡಿಕೆ ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ್ದು. ಬೈಬಲ್‌ನಲ್ಲಿ ಕ್ರೈಸ್ತರ ಧಾರ್ಮಿಕ ವಿಚಾರಗಳಲ್ಲದೆ ಐತಿಹಾಸಿಕ ಅಂಶಗಳೂ ಇವೆ. ಈ ಗ್ರಂಥದ ಹಲವು ಭಾಗಗಳು ಉತ್ತಮ ಸಾಹಿತ್ಯಾಂಶದಿಂದ ಕೂಡಿವೆ.

ಮಹಮ್ಮದೀಯರ ಪ್ರಧಾನ ಧಾರ್ಮಿಕ ಗ್ರಂಥ 'ಕುರಾನ್'. ಕುರಾನ್ ಎಂದರೆ ನಿರೂಪಣೆ, ಕಥನ. ಉಪದೇಶಗಳು ಇದರಲ್ಲಿವೆ.

'ಜೆಂಡ ಅವೆಸ್ತಾ' ಪಾರಸೀಕರ ಧರ್ಮಗ್ರಂಥ. ಅವೆಸ್ತಾ ಎಂದರೆ ಜ್ಞಾನ. ಜರಾತುಷ್ಟ್ರ ಬೋಧಿಸಿದ ಧಾರ್ಮಿಕ ತತ್ತ್ವಗಳು ಇದರಲ್ಲಿವೆ.

'ಟಾಲ್ಮೂಡ್' ಯೆಹೂದಿಗಳ ಪವಿತ್ರಗ್ರಂಥ. ಟಾಲ್ಮೂಡ್ ಎಂದರೆ ಹಿಬ್ರೂಭಾಷೆಯಲ್ಲಿ ಶಿಕ್ಷಣ ಅಥವಾ ಅಧ್ಯಯನ. ಟಾಲ್ಮೂಡ್‌ನಲ್ಲಿ ಮಿಶ್‌ನಾ ಮತ್ತು ಗೆಮಾರ ಎಂದು ಎರಡು ಭಾಗಗಳು. ಇವುಗಳಲ್ಲಿ ಮೊದಲನೆಯದರಲ್ಲಿ ಪರಂಪರಾಗತ ಧಾರ್ಮಿಕ ಕರ್ತವ್ಯಗಳು ಮತ್ತು ಕಾನೂನುಗಳು ಇವೆ. ಎರಡನೆಯ ಭಾಗದಲ್ಲಿ ವ್ಯಾಖ್ಯಾನಗಳಿವೆ. ಇದು ಯೆಹೂದಿಯರ ಧರ್ಮವನ್ನೂ ಅದರ ಆಚರಣೆಯನ್ನೂ ಇತಿಹಾಸವನ್ನೂ ಒಳಗೊಂಡಿದೆ.

ಚೀನ ದೇಶದಲ್ಲಿ ಪರಂಪರಾಗತವಾಗಿ ಬಂದ ಧಾರ್ಮಿಕ ವಿಚಾರಗಳನ್ನು ಕನ್‌ಫ್ಯೂಷಿಯಸನು ರೂಪಿಸಿದ ಗ್ರಂಥದಲ್ಲಿ ಕಾಣಬಹುದು. ಚೀನದ ಇನ್ನೊಬ್ಬ ಧೀಮಂತ ವ್ಯಕ್ತಿ ಲಾವೊ ತ್ಸೆ ರಚಿಸಿದ 'ತಾವೊ ಚಿಯಾಂಗಾ' ಚೀನದ ಇನ್ನೊಂದು ಧಾರ್ಮಿಕ ಸಾಹಿತ್ಯ ಗ್ರಂಥ.

ಜಗತ್ತಿನ ಎಲ್ಲ ಜನಾಂಗಗಳಲ್ಲೂ ಒಂದಲ್ಲ ಒಂದು ರೀತಿಯ ಧಾರ್ಮಿಕ ಸಾಹಿತ್ಯವಿದ್ದೇ ಇದೆ. ಇದು ಆ ಪ್ರದೇಶಗಳ ಜನರ ಮೇಲೆ ಮಾತ್ರವಲ್ಲದೆ, ಆ ಧರ್ಮವನ್ನು ಅವಲಂಬಿಸಿದ ಇತರ ಪ್ರದೇಶಗಳವರ ಮೇಲೂ ಪರಿಣಾಮ ಉಂಟುಮಾಡುತ್ತದೆ.

ಒಟ್ಟಿನಲ್ಲಿ ಧಾರ್ಮಿಕ ಸಾಹಿತ್ಯ, ಅದರಲ್ಲಿ ಶ್ರದ್ಧೆಯಿರುವ ಜನರ ಜೀವನವನ್ನು ಸನ್ಮಾರ್ಗದಲ್ಲಿ ನಡೆಸಲು ಸಹಕಾರಿಯಾಗುತ್ತದೆ.

ಒಂದು ಧರ್ಮದ ತತ್ತ್ವಗಳು ಆಚರಣೆಗಳು, ಆ ಧರ್ಮಕ್ಕೆ ಸಂಬಂಧಿಸಿದ ಮಹಾಪುರುಷರು, ಆ ಧರ್ಮವನ್ನು ಅವಲಂಬಿಸಿದ ಸಮಾಜದ ಸ್ಥಿತಿಗಳು ಮುಂತಾದ ಅಂಶಗಳನ್ನು ಧಾರ್ಮಿಕ ಸಾಹಿತ್ಯದ ಅಧ್ಯಯನದಿಂದ ತಿಳಿದುಕೊಳ್ಳಬಹುದು.

ನೋಡಿ : ದಾಸ ಸಾಹಿತ್ಯ ; ಮಹಾತ್ಮ್ಯ ಸಾಹಿತ್ಯ ; ವಚನ ಸಾಹಿತ್ಯ ; ಸ್ತೋತ್ರ ಸಾಹಿತ್ಯ

## ನಂದಲಾಲ ಬಸು

ಚಿತ್ರಲೇಖನದಲ್ಲಿ ಭಾರತೀಯ ಪರಂಪರೆ ಬಂದಿದೆ ; ಅದನ್ನು ಉಳಿಸಿ, ಬೆಳೆಸಿಕೊಂಡು ಹೋಗುವುದು ಅವಶ್ಯ ; ಈ ಸಂಬಂಧದಲ್ಲಿ ಪಾಶ್ಚಾತ್ಯ

[illegible]—[illegible] ಪ್ರಮುಖ ಕಲಾವಿದರು. [illegible] ಇವರು ಅಬನೀಂದ್ರನಾಥ ಠಾಕೂರರ ಶಿಷ್ಯರಲ್ಲಿ ಮುಖ್ಯರಾದವರು.

ನಂದಲಾಲ ಬಸು ಬಿಹಾರದ ಮೊಂಘೀರ್ ಜಿಲ್ಲೆಯ ಖರಗಪ್ಪುರದಲ್ಲಿ ೧೮೮೨ನೆಯ ಡಿಸೆಂಬರ್ ೩ರಂದು ಜನಿಸಿದರು. ಇವರು ಚಿಕ್ಕವರಾಗಿದ್ದಾಗಲೇ ತಂದೆ ತಾಯಿ ಕಳೆದುಕೊಂಡರು. 19ನೆಯ ವಯಸ್ಸಿನಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಕಾಲೇಜು ಸೇರಿದರು. ಆದರೆ ಆ ವಿದ್ಯಾಭ್ಯಾಸದಲ್ಲಿ ಅವರಿಗೆ ಆಸಕ್ತಿ ಮೂಡಲಿಲ್ಲ. ಕಾಲೇಜನ್ನು ಬಿಟ್ಟು ಬಾಲ್ಯದಿಂದಲೂ ತಮ್ಮನ್ನು ಆಕರ್ಷಿಸುತ್ತಿದ್ದ ಚಿತ್ರಕಲೆಯ ಕಡೆಗೆ ತಿರುಗಿದರು. ಕಲಕತ್ತೆಗೆ ಹೋಗಿ ಕಲಾಶಾಲೆಯನ್ನು ಸೇರಿದರು. ಅಲ್ಲಿ ಅಬನೀಂದ್ರರು ಅವರ ಗುರುಗಳು. ಕಲಾಶಾಲೆಯಲ್ಲಿ ಶಿಕ್ಷಣ ಮುಗಿದ ಮೇಲೂ ನಂದಲಾಲರು ಅಬನೀಂದ್ರರ ಮಾರ್ಗದರ್ಶನದಲ್ಲಿ ತಮ್ಮ ಕಲಾಭ್ಯಾಸವನ್ನು ಮುಂದುವರಿಸಿದರು.

ನಂದಲಾಲರು ಮಿತಭಾಷಿ. ಶಾಂತಿಪ್ರಿಯರು. ಯಾವಾಗಲೂ ಕಲೆಯ ವಿಚಾರದಲ್ಲಿ ಯೋಚಿಸುತ್ತಿರುವುದು. ಎಡೆಬಿಡದೆ ಅಭ್ಯಾಸ ಮಾಡುವುದು ಅವರ ಸ್ವಭಾವ. ಪ್ರಕೃತಿಯಿಂದಲೂ ಪ್ರಾಚೀನ ಚಿತ್ರಶಿಲ್ಪಗಳಿಂದಲೂ ಸಾಹಿತ್ಯದಿಂದಲೂ ಅವರು ಸ್ಫೂರ್ತಿ ಪಡೆಯುತ್ತಿದ್ದರು. ಅಜಂತಾಕ್ಕೆ ಹೋಗಿ ಅಲ್ಲಿನ ಚಿತ್ರಕಲೆಯನ್ನು ಲಕ್ಷ್ಯಪೂರ್ಣವಾಗಿ ಅಧ್ಯಯನ ಮಾಡಿದರು. ಆ ಚಿತ್ರಗಳು ಅವರ ಕಲಾದೃಷ್ಟಿಯ ಮೇಲೆ ಪ್ರಭಾವ ಬೀರಿದುವು. ಸಾವಿರಾರು ವರ್ಷ ಕಳೆದ ಮೇಲೂ ಆ ಚಿತ್ರಗಳು ಉಳಿದುದನ್ನು ಗಮನಿಸಿದರು. ನಮ್ಮ ದೇಶದಲ್ಲೇ ಸಿಗುವ ಕಚ್ಚಾ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ತಮ್ಮ ಚಿತ್ರರಚನೆಗೆ ಬೇಕಾದ ಬಣ್ಣಗಳನ್ನು ಒಮ್ಮೊಮ್ಮೆ ಅವರು ತಯಾರಿಸಿಕೊಳ್ಳುತ್ತಿದ್ದರು.

ಅಬನೀಂದ್ರರ ಅನಂತರ ನಂದಲಾಲರು ಶಾಂತಿನಿಕೇತನದ ಕಲಾವಿಭಾಗದ ಮುಖ್ಯ ಆಚಾರ್ಯರಾದರು. ಆಗ ಅವರ ವಯಸ್ಸು 36. ಕಲಾ ಶಿಕ್ಷಣದಲ್ಲಿ ಅಬನೀಂದ್ರರು ರೂಪಿಸಿದ್ದ ಮಾರ್ಗವನ್ನೇ ಅನುಸರಿಸಿ ಮುಂದುವರಿದರು.

1924ರಲ್ಲಿ ರವೀಂದ್ರರೊಡನೆ ನಾನಾ ದೇಶಗಳನ್ನು ಸುತ್ತಿ ಬಂದರು. ಚೀನ, ಜಪಾನ್, ಮಲಯಾ, ಬರ್ಮಾ ದೇಶಗಳ ಕಲೆಯನ್ನು ಅಭ್ಯಾಸ ಮಾಡುವುದಕ್ಕೆ ಇದರಿಂದ ಅನುಕೂಲವಾಯಿತು. ಚೀನ ಮತ್ತು ಜಪಾನ್ ಕಲಾವಿದರು ಬಣ್ಣಗಳನ್ನು ಮಿತವಾಗಿ ಬಳಸಿ ಶ್ರೇಷ್ಠ ಚಿತ್ರಗಳನ್ನು ರಚಿಸುವುದನ್ನು ಕಂಡರು. ಆ ತಂತ್ರವನ್ನು ತಾವೂ ಬಳಸಿಕೊಂಡು ಉತ್ತಮ ಕಲಾಕೃತಿಗಳನ್ನು ರಚಿಸಿದರು.

ನಂದಲಾಲರದು ಬಹುಮುಖ ಪ್ರತಿಭೆ. ಕಲಾಪ್ರಜ್ಞೆಯನ್ನು ಅವಲಂಬಿಸಿದ್ದ ಯಾವ ಕೆಲಸವನ್ನಾದರೂ ಅವರು ಸಂತೋಷದಿಂದ ಕೈಗೊಳ್ಳುತ್ತಿದ್ದರು. ರವೀಂದ್ರರ ಅಪೇಕ್ಷೆಯಂತೆ ಅವರು ರಂಗಭೂಮಿಯ ಕಲಾವಂತಿಕೆಯನ್ನು ಉತ್ತಮಗೊಳಿಸಲು ಶ್ರಮಿಸಿದರು. ನಾಟಕದ ವೇಷಭೂಷಣಗಳನ್ನು ಕಲಾತ್ಮಕವಾಗಿ ತಯಾರಿಸಿದರು. ರಂಗಮಂಟಪಕ್ಕಾಗಿ ರಮ್ಯ ಪರಿಕರಗಳನ್ನು ರೂಪಿಸಿದರು. ಇದರಿಂದ ರವೀಂದ್ರರ ನಾಟಕ ಪ್ರದರ್ಶನಗಳ ಶೋಭೆ ಹೆಚ್ಚಿತು. ಗಾಂಧಿಜಿಯ ಕೋರಿಕೆಯಂತೆ ನಂದಲಾಲರು 1936ರಲ್ಲಿ ನಡೆದ ಲಕ್ನೋದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಸಭಾಮಂಟಪವನ್ನು ರಚಿಸಿದರು. ಮುಂದೆ ಫೈಜಪುರ, ಹರಿಪುರಗಳ ಅಧಿವೇಶನಗಳಲ್ಲೂ ಇದೇ ರೀತಿ ಸಹಕರಿಸಿದರು. ನಂದಲಾಲರ ದೇಶಪ್ರೇಮ ಉಜ್ವಲವಾದದ್ದು. ಗಾಂಧಿಜಿಯಲ್ಲಿ ಅವರಿಗೆ ಅಪಾರ ಗೌರವ. ಗಾಂಧಿಜಿ ದಂಡಿಯಾತ್ರೆ ಹೊರಟಿರುವುದನ್ನು ಚಿತ್ರಿಸುವ ನಂದಲಾಲರ ರೇಖಾಚಿತ್ರ ಜಗತ್ಪ್ರಸಿದ್ಧವಾಗಿದೆ.

ನಂದಲಾಲರು ಚರಿತ್ರೆ, ಪುರಾಣ, ಕಾವ್ಯ ಮುಂತಾದುವುಗಳಿಂದ ಅಲ್ಲದೆ ನಿತ್ಯ ಜೀವನದಿಂದಲೂ ವಸ್ತುಗಳನ್ನು ಆರಿಸಿಕೊಂಡು ಉತ್ತಮ ಚಿತ್ರಗಳನ್ನು ರಚಿಸಿದ್ದಾರೆ. ವರ್ಣಲೇಪನದ ನಯ. ಸೂಕ್ಷ್ಮತೆಗಳು ಅವರ ವೈಶಿಷ್ಟ್ಯ. ಹಾಗೆಯೇ ಕುಂಚ ಪ್ರಯೋಗದಲ್ಲಿ ಅವರು ತೋರುತ್ತಿದ್ದ ಎಚ್ಚರಿಕೆ, ಕೈಚಳಕಗಳೂ ಅದ್ಭುತವಾದುವು. ರೇಖಾಬಲ ಎಂದರೇನು ಎಂಬುದನ್ನು ತಿಳಿಯಬೇಕಿದ್ದರೆ ನಂದಲಾಲರ ರೇಖಾಚಿತ್ರಗಳನ್ನು ನೋಡಬೇಕು. ಅವರ ರೇಖೆಗಳು ಅಷ್ಟು ಜೀವಂತ. ಅಷ್ಟು ಚಲಿತ!

ನಂದಲಾಲರು ಸಂಪ್ರದಾಯಪ್ರಿಯರು. ಆದರೆ ಅವರದು ವಿಮರ್ಶಾತ್ಮಕವಾದ ಸಂಪ್ರದಾಯ ಪ್ರೇಮ. "ಕಲೆಯಲ್ಲಿ ಸಂಪ್ರದಾಯ ಎಂಬುದು ವ್ಯಾಪಾರದಲ್ಲಿ ಬಂಡವಾಳ ಇದ್ದ ಹಾಗೆ. ಅದನ್ನು ನ್ಯಾಯವಾದ ರೀತಿಯಲ್ಲಿ ಉಪಯೋಗಿಸಿದರೆ ಒಳ್ಳೆಯ ಲಾಭ ಪಡೆಯಬಹುದು; ಸಂಪ್ರದಾಯ ಪರಿಪೂರ್ಣವಾಗಲೇಬೇಕಾದರೆ ಅದರ ಜೊತೆಗೆ ಇನ್ನೆರಡು ಅಂಶಗಳೂ ಸೇರಬೇಕು —ಪ್ರಕೃತಿಯ ಅರಿವು ಮತ್ತು ಸ್ವೋಪಜ್ಞತೆ," ಎಂಬುದು ನಂದಲಾಲ ಬಸು ಅವರ ಅಭಿಪ್ರಾಯವಾಗಿತ್ತು.

ಭಾರತೀಯ ಕಲಾ ಸಂಪ್ರದಾಯದ ಪುನರುಜ್ಜೀವನಕ್ಕೆ ನಂದಲಾಲರ ಕೊಡುಗೆ ಮಹತ್ತರವಾದದ್ದು. ಅವರ ಈ ಸೇವೆಯನ್ನು ಗಮನಿಸಿ ರಾಷ್ಟ್ರ ಅವರನ್ನು ಹಲವಾರು ರೀತಿಗಳಲ್ಲಿ ಗೌರವಿಸಿತು. ಬನಾರಸ್ ಹಿಂದೂ ವಿಶ್ವವಿದ್ಯಾಲಯ 1950ರಲ್ಲಿ ಅವರಿಗೆ 'ಡಾಕ್ಟರ್ ಆಫ್ ಲೆಟರ್ಸ್' ಪ್ರಶಸ್ತಿಯನ್ನು ಕೊಟ್ಟಿತು. ಭಾರತ ಸರಕಾರ 1955ರಲ್ಲಿ ಅವರಿಗೆ ಪದ್ಮವಿಭೂಷಣ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ವಿಶ್ವಭಾರತಿ ವಿಶ್ವವಿದ್ಯಾಲಯದ ಕಲಾಚಾರ್ಯ ಸ್ಥಾನದಿಂದ ನಿವೃತ್ತರಾದ ಮೇಲೂ ಆ ವಿಶ್ವವಿದ್ಯಾಲಯ ಅವರನ್ನು ತಮ್ಮ ಗೌರವ ಪ್ರಾಧ್ಯಾಪಕರಾಗಿರುವಂತೆ ಕೇಳಿಕೊಂಡಿತು.



ಭಾರತೀಯ ಕಲಾ ಪುನರುಜ್ಜೀವನ :
ನಂದಲಾಲ ಬಸು

ನಂದಲಾಲರು ತಮ್ಮ ಕೊನೆಯ ದಿನಗಳನ್ನು ಶಾಂತಿನಿಕೇತನದಲ್ಲಿಯೇ ಕಳೆದರು. ತಮ್ಮ 83ನೆಯ ವಯಸ್ಸಿನಲ್ಲಿ 1966ರ ಏಪ್ರಿಲ್ 16ರಂದು ಅಲ್ಲೇ ಕೊನೆಯುಸಿರೆಳೆದರು.

## ನಂದೀಮಠ

ಸರಳವಾದ ಉಡುಗೆ ತೊಡುಗೆ. ಆದರ್ಶ ವ್ಯಕ್ತಿತ್ವ ಇವುಗಳಿಂದ ವಿಶಿಷ್ಟ ವಾಗಿ ತೋರುವವರು ಡಾ. ಶಿವಲಿಂಗಯ್ಯ ನಂದೀಮಠ. ವಿದ್ಯಾ ಸಂಸ್ಥೆಗಳ ಸ್ಥಾಪನೆಗಾಗಿ. ಅವುಗಳ ನಿರ್ವಹಣೆಗಾಗಿ ನಿರಂತರವಾಗಿ ಅವರು ಪಟ್ಟಿರುವ ಶ್ರಮ. ಸಲ್ಲಿಸಿರುವ ಸೇವೆ ಅಪಾರ. ವಿದ್ಯಾರ್ಥಿಗಳೆಂದರೆ ಅವರಿಗೆ ಬಹಳ ಮಮತೆ. ಕನ್ನಡ ಸಾಹಿತ್ಯಕ್ಕೆ ವಿದ್ವತ್ಪೂರ್ಣ ಬರೆಹಗಳನ್ನು ನೀಡಿದ್ದಾರೆ. 1952ರಲ್ಲಿ ಬೇಲೂರಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಡಾ. ನಂದೀಮಠರ ಅಧ್ಯಕ್ಷತೆಯಲ್ಲಿ ಜರಗಿತು.

ನಂದೀಮಠರು 1900ನೆಯ ಇಸವಿ ಡಿಸೆಂಬರ್ 12ರಂದು ಗೋಕಾಕದಲ್ಲಿ ಹುಟ್ಟಿದರು. ಕಾಲೇಜು ವಿದ್ಯಾಭ್ಯಾಸ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ನಡೆಯಿತು. ಅನಂತರ ಸ್ನಾತಕೋತ್ತರ ಪದವಿ ಮುಂಬಯಿ ವಿಶ್ವವಿದ್ಯಾನಿಲಯದಿಂದ. ಪಿ.ಎಚ್‌ಡಿ. ಗಾಗಿ ಇಂಗ್ಲೆಂಡಿಗೆ ತೆರಳಿದರು. ಸ್ವದೇಶಕ್ಕೆ ಮರಳಿದ ಮೇಲೆ, ಮುಂಬಯಿ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ ವೃತ್ತಿ ಕೈಗೊಂಡರು.

ಮುಂದೆ ಬೆಳಗಾಂವಿಯ ಗಿಲಗಂಚಿ ಅರ್ಟಾಳ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದರು. ಬೆಳಗಾಂವಿಯ ಲಿಂಗರಾಜ ಕಾಲೇಜಿನ ಸ್ಥಾಪನೆಗಾಗಿ ವಿಶೇಷ ಆಸಕ್ತಿ ವಹಿಸಿ ಕೆಲಸ ಮಾಡಿದರು. ಅದು ಸ್ಥಾಪನೆಯಾದ ಮೇಲೆ ಅದೇ ಕಾಲೇಜಿನ ಪ್ರಿನ್ಸಿಪಾಲರಾಗಿ ಹನ್ನೊಂದು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಆಮೇಲೆ ಬಾಗಲಕೋಟೆಯಲ್ಲಿ ಬಸವೇಶ್ವರ ಕಾಲೇಜಿನ ಸ್ಥಾಪನೆಯ ಕಾರ್ಯದಲ್ಲಿ ನೆರವಾದರು. ಅದರ ಪ್ರಿನ್ಸಿಪಾಲರಾಗಿಯೂ ಕೆಲಸಮಾಡಿದರು. ಸಿಂಡಿಕೇಟ್ ಸದಸ್ಯರಾಗಿ. ರೆಜಿಸ್ಟ್ರಾರರಾಗಿ ಹಾಗೂ ಉಪಕುಲಪತಿಯಾಗಿ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಹಲವು ಬಗೆಯ ಸೇವೆಯನ್ನು ಅವರು ಸಲ್ಲಿಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆಯಾದ 'ಕನ್ನಡ ನಾಡಿನ ಚರಿತ್ರೆ' ಮಾಲೆಯಲ್ಲಿ ಇವರು ಬರೆದಿರುವ 'ಕರ್ನಾಟಕ ಧರ್ಮಗಳು' ಒಂದು ಅಮೂಲ್ಯ ಗ್ರಂಥ. ಇತಿಹಾಸ ಸಂಶೋಧನಾ ಕ್ಷೇತ್ರಕ್ಕೆ ಅವರು ನೀಡಿರುವ ಕೊಡುಗೆ ಗಣನೀಯವಾದದ್ದು. ಅವರ 'ಹ್ಯಾಂಡ್ ಬುಕ್ ಆಫ್ ವೀರಶೈವಿಸಂ' ಒಂದು ಮಹತ್ವಪೂರ್ಣ ಗ್ರಂಥ. ಡಾ. ನಂದೀಮಠರಿಗೆ ಹಲವು ಭಾಷೆಗಳಲ್ಲಿ ಪರಿಣತಿ ಇದೆ. ಸಂಸ್ಕೃತ. ಪಾಲಿ. ಪ್ರಾಕೃತ. ಕನ್ನಡ. ಇಂಗ್ಲಿಷ್ ಭಾಷಾ ಸಾಹಿತ್ಯಗಳನ್ನು ಅವರು ಚೆನ್ನಾಗಿ ಅಧ್ಯಯನ ಮಾಡಿದ್ದಾರೆ. ಒಳ್ಳೆಯ ಶಿಕ್ಷಕರೆಂಬ ಗೌರವಕ್ಕೆ ಪಾತ್ರರಾಗಿದ್ದಾರೆ. ಉದಾರ ಹೃದಯ. ಒಂದಿಷ್ಟೂ ಹೆಮ್ಮೆಯಿಲ್ಲದ ಗಂಭೀರವಾದ ವ್ಯಕ್ತಿತ್ವ ಅವರದು. ಸರಳತೆ ಅವರ ನಡೆನುಡಿಗಳಲ್ಲಿ ಎದ್ದು ಕಾಣುತ್ತದೆ. ಅಧ್ಯಯನಶೀಲತೆ ಅವರ ಹುಟ್ಟುಗುಣ.

ಯಾವುದೇ ಅಲ್ಪ ಆಸೆಗಳಿಗೆ ಒಳಗಾಗದೆ ಶಿಕ್ಷಣರಂಗಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಅನೇಕರಿಗೆ ವಿದ್ಯಾದಾನ ಮಾಡಿದ್ದಾರೆ.



ಅಧ್ಯಯನ ಶೀಲತೆ :
ನಂದೀಮಠ

## ನಟ, ನಟಿ

ನಾಟಕಕಾರ ಮತ್ತು ಪ್ರೇಕ್ಷಕರ ನಡುವೆ ಸಂಬಂಧವನ್ನು ಸಾಧಿಸುವ ವ್ಯಕ್ತಿಗಳೆಂ ನಟ ನಟಿಯರು. ನಾಟಕಕಾರ ತನ್ನ ಕೃತಿಯಲ್ಲಿ ಸೂಚಿಸಿರುವ ಭಾವಗಳನ್ನು ಪರಿಣಾಮಕಾರಿಯಾಗಿ ಅಭಿನಯಿಸಿ ನಾಟಕದ ಕತೆ. ಭೂಮಿಕೆಗಳು, ಹಾಗೂ ಪಾತ್ರಗಳು ಪ್ರೇಕ್ಷಕರ ಕಣ್ಣಿಗೆ ಕಟ್ಟುವಂತೆ ಮಾಡುವ ಕಲಾವಿದರು ಇವರು. ಒಂದು ಒಳ್ಳೆಯ ನಾಟಕ ಅಸಮರ್ಪಕ ಅಭಿನಯದಿಂದ ತನ್ನ ಮೌಲ್ಯವನ್ನು ಕಳೆದುಕೊಳ್ಳಬಹುದು. ಹಾಗೆಯೇ ಒಂದು ಸಾಮಾನ್ಯ ನಾಟಕ. ನಟ ನಟಿಯರ ಅತ್ಯುತ್ತಮ ಅಭಿನಯದಿಂದ ಸಾಕಷ್ಟು ಪ್ರಭಾವಶಾಲಿಯಾಗಬಲ್ಲುದು. ಆದ್ದರಿಂದ ರಂಗ ಮಾಧ್ಯಮದಲ್ಲಿ ನಾಟಕದ ಯಶಸ್ಸಿಗೆ ನಟ ನಟಿಯರು ಕೂಡ ನಾಟಕಕಾರನಷ್ಟೇ ಹೊಣೆಗಾರರು.

ನಟ ಅಥವಾ ನಟಿ ನಾಟಕದಲ್ಲಿ ಬರುವ ಪಾತ್ರಗಳನ್ನು ಅಭಿನಯಿಸುತ್ತಾರೆ. ಒಳ್ಳೆಯ ಕಲ್ಪನಾಶಕ್ತಿ ನಟ ನಟಿಯರಲ್ಲಿ ಇರಬೇಕಾದ ಅವಶ್ಯ ಗುಣ. ಇದರಿಂದ ನಾಟಕಕಾರನ ಉದ್ದೇಶವನ್ನು ಗ್ರಹಿಸಿ ಪಾತ್ರದ ಅತಿ ಸೂಕ್ಷ್ಮಭಾವ, ಭಾವನೆಗಳನ್ನು ಅಭಿನಯಿಸಲು ಅವರಿಗೆ ಸಾಧ್ಯವಾಗುತ್ತದೆ. ಅಭಿನಯ ಕಲೆ ನಟ ಅಥವಾ ನಟಿಗೆ ಸಹಜಗುಣವೇ ಆಗಿರಬಹುದು. ಆದರೂ ತನ್ನ ಈ ಪ್ರತಿಭೆ ಪೂರ್ಣವಾಗಿ ವಿಕಸಿಸಬೇಕಾದರೆ ನಟನಾಗಲೀ, ನಟಿಯಾಗಲೀ ದೀರ್ಘ ಕಾಲ ಶ್ರಮಿಸಬೇಕಾಗುತ್ತದೆ. ತಮ್ಮ ಅಭಿನಯದಲ್ಲಿರುವ ಲೋಪದೋಷಗಳನ್ನು ತಾಳ್ಮೆಯಿಂದ ತಿದ್ದಿಕೊಳ್ಳಬೇಕಾಗುತ್ತದೆ. ರಂಗಭೂಮಿಯಲ್ಲಾಗಲೀ ಚಲಚಿತ್ರದಲ್ಲಾಗಲೀ ನಟ ನಟಿಯರು ಕೀರ್ತಿಶಾಲಿಗಳಾಗಿರುವುದು ಸತತ ದುಡಿಮೆ, ಪರಿಶ್ರಮಗಳಿಂದಲೇ.

ನಿಜಜೀವನಕ್ಕೆ ಕನ್ನಡಿ ಹಿಡಿಯುವುದೇ ನಾಟಕದ ಉದ್ದೇಶ ಎಂಬುದು ಶೇಕ್ಸ್‌ಪಿಯರನ ಅಭಿಪ್ರಾಯ. ಹೀಗೆಂದ ಮಾತ್ರಕ್ಕೆ ನಟ ನಿತ್ಯ ಜೀವನದಲ್ಲಿರುವಂತೆ ಕೇವಲ ಸ್ವಾಭಾವಿಕವಾಗಿ ಅಭಿನಯಿಸಿದರೆ ಸಾಲದು. ಜೀವನವನ್ನು ನಾಟಕ ಪ್ರತಿಬಿಂಬಿಸುತ್ತದೆನ್ನುವುದು ನಿಜವಾದರೂ ಅದು ನಿಜಜೀವನವೇ ಆಗುವುದು ಸಾಧ್ಯವಿಲ್ಲ. ದಿನದಿನವೂ ನಾವು ಕಾಣುವ ಜೀವನ ಪರಿಸ್ಥಿತಿಗಳನ್ನು ನಾಟಕೀಯವಾಗಿ ಸೃಷ್ಟಿಸಿ ಅಭಿನಯಿಸಬೇಕಾಗುತ್ತದೆ. ಅಲ್ಲಿನ ಘಟನೆಗಳೂ ಭಾವನೆಗಳೂ ವಾಸ್ತವ ಸನ್ನಿವೇಶಗಳಿಗಿಂತ ತ್ವರಿತವಾಗಿ


ಸ್ತಪನೋವಾ–ಕ್ರೊರೋವ್ : ರಷ್ಯನ್ ನಾಟಕದಲ್ಲಿ


ಸಹಜತೆಯ ಪರಾಕಾಷ್ಠೆ

ಒಂದಾದ ಮೇಲೆ ಒಂದು ಬಂದು ಹೋಗುತ್ತವೆ. ಪ್ರೇಕ್ಷಕನ ಕುತೂಹಲವನ್ನು ಮೊದಲಿನಿಂದ ಕೊನೆಯವರೆಗೆ ಹಿಡಿದಿಡುವಂಥ ಸತ್ವವನ್ನು ನಾಟಕ ಒಳಗೊಂಡಿರಬೇಕಾದದ್ದು ಅವಶ್ಯ. ನಾಟಕ ಯಶಸ್ವಿಯಾಗಬೇಕಾದರೆ ನಾಟಕದ ಈ ಸತ್ವದ ಅರಿವು ಪ್ರೇಕ್ಷಕನಿಗೆ ಉಂಟಾಗುವುದು ನಟ ನಟಿಯರ ಅಭಿನಯ, ಸಂಭಾಷಣೆಗಳ ಮೂಲಕವೇ. ಅವರ ಮಾತು–ಮೌನ. ಚಲನೆ–ನಿಶ್ಚಲತೆ ಈ ಪ್ರತಿಯೊಂದರಿಂದಲೂ ಅವರ ಅಭಿನಯ ಅರ್ಥಪೂರ್ಣವಾಗಬಲ್ಲುದು.

ಭರತನ 'ನಾಟ್ಯಶಾಸ್ತ್ರ'ದ ಮೇರೆಗೆ ಸೂತ್ರಧಾರನೂ ಒಬ್ಬ ನಟ. ಅವನೇ ನಟರ ಮುಖ್ಯಸ್ಥ. ನಟರಿಗೆ ಭರತರು, ಶೈಲೂಷರು ಎಂಬ ಹೆಸರುಗಳೂ ಇದ್ದುವು. ಸಂಸ್ಕೃತ ನಾಟಕಗಳ ಕಾಲದಲ್ಲಿ ಸ್ತ್ರೀಪಾತ್ರವನ್ನು ಸ್ತ್ರೀಯರಾಗಲೀ ಪುರುಷರಾಗಲೀ ವಹಿಸುತ್ತಿದ್ದರು. ಸಾಧಾರಣವಾಗಿ ನಟ ನಟಿಯರ ಶೀಲದ ಬಗೆಗೆ ಸದಭಿಪ್ರಾಯ ವಿರಲಿಲ್ಲ. ಪಾಶ್ಚಾತ್ಯ ದೇಶದಲ್ಲಿಯ ನಟ ಪರಂಪರೆ ಹಳೆಯದು. ರಂಗಕಲೆಗೆ ಹೆಸರಾದ ಗ್ರೀಕ್ ಸಂಸ್ಕೃತಿಯಲ್ಲಿ ಕಾಮಿಡಿ, ಟ್ರಾಜಿಡಿ ನಾಟಕಗಳ ಉತ್ಸವ ನಡೆಯುತ್ತಿತ್ತು.

ಭಾರತದಲ್ಲಿ ಬಹುಕಾಲದವರೆಗೆ, ಕಳೆದ ಶತಮಾನದ ಅಂತ್ಯದವರೆಗೆ, ನಟನೆ ಒಂದು ವೃತ್ತಿಯೇ ಆಗಿದ್ದಿತು. ನಟನ ತರಬೇತಿ ನಾಟಕಶಾಲೆಯಲ್ಲಿ ನಡೆಯುತ್ತಿತ್ತು. ನಾಟಕ ಮಾಧ್ಯಮಕ್ಕೆ ಹೆಚ್ಚು ಹೆಚ್ಚು ಜನಪ್ರಿಯತೆ ದೊರೆತದ್ದು, ನಟನ ವೃತ್ತಿಯ ಬಗೆಗಿದ್ದ ತಿರಸ್ಕಾರ ಭಾವನೆ ತಗ್ಗಿ ನಾಟಕದ ವಿಚಾರವಾಗಿ ಸಮಾಜದಲ್ಲಿ ಒಳ್ಳೆಯ ಭಾವನೆ ಬೇರೂರಲಾರಂಭಿಸಿದ ಮೇಲೆ. ಕಾಲಕಳೆದಂತೆ, ವೃತ್ತಿ ನಾಟಕ ಸಂಸ್ಥೆಗಳಿಗೆ ಬೇಕಾದುದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಉತ್ಸಾಹಶಾಲಿ, ತರುಣ ನಟ ನಟಿಯರು ನಾಟಕಗಳಲ್ಲಿ ಪಾತ್ರವಹಿಸಲು ಮುಂದೆ ಬಂದರು. ಅವರ ಅಭಿನಯಶಕ್ತಿಯೇ ಹವ್ಯಾಸಿ ರಂಗಭೂಮಿಯ ಉದಯಕ್ಕೆ ಕಾರಣವಾಯಿತು. ಹವ್ಯಾಸಿ ಕಲಾವಿದರು ತಮ್ಮ ಜೀವನಕ್ಕಾಗಿ ಬೇರೆ ಇನ್ನಾವುದಾದರೂ ವೃತ್ತಿಯನ್ನು ಅವಲಂಬಿಸಿರುತ್ತಾರೆ. ಅಭಿನಯ ಅವರ ಹವ್ಯಾಸ ಮಾತ್ರ. ಇಂದು ಸಾಮಾನ್ಯವಾಗಿ ಹವ್ಯಾಸಿ ನಾಟಕ ಕಲಾವಿದರನ್ನು ಎಲ್ಲೆಲ್ಲಿಯೂ ಕಾಣಬಹುದು.

ನಟ ನಟಿಯರಿಗೆ ಅವರ ವೃತ್ತಿಸಂಬಂಧ ವಿಚಾರಗಳಲ್ಲಿ ಕ್ರಮಬದ್ಧ ಶಿಕ್ಷಣ ಕೊಡುವ ಶಾಲೆಗಳಿವೆ. ಇಲ್ಲಿ ಸ್ಪಷ್ಟವಾದ ಉಚ್ಚಾರಣೆ, ಸಂದರ್ಭ ಸೂಚಿತವಾದ ಧ್ವನಿಸಾಧನೆ, ಪಾತ್ರದ ಸ್ವಭಾವ ನಿರೂಪಣೆ, ಚಲನ ವಲನಗಳು ಮುಂತಾದ ವಿಷಯಗಳಲ್ಲಿ ಅವರಿಗೆ ಶಿಕ್ಷಣ ದೊರೆಯುತ್ತದೆ. ನಟ ನಟಿಯರಿಗೆ ಅತ್ಯವಶ್ಯವಾದ ದೇಹಸೌಷ್ಠವವನ್ನು ಗಳಿಸಲು ಅವಶ್ಯವಾದ ವ್ಯಾಯಾಮಾದಿಗಳನ್ನೂ ಹೇಳಿಕೊಡುತ್ತಾರೆ. ಸಂಗೀತ, ನಾಟ್ಯಗಳಲ್ಲೂ ಅಲ್ಲಿ ತರಬೇತಿ ಹೊಂದಬಹುದಾಗಿದೆ. ಹೀಗೆ ನಟ ನಟಿಯರು ತಮ್ಮ ವೃತ್ತಿ ನಿರ್ವಹಣೆಗೆ ಬೇಕಾದ ಅಂಶಗಳನ್ನು ಕಲಿಯಲು ಸಾಧಾರಣವಾಗಿ ಎರಡು ವರ್ಷಗಳಾದರೂ ಅಗತ್ಯ. ಅಭಿನಯವನ್ನು ವೃತ್ತಿಯಾಗಿ ಕೈಗೊಳ್ಳುವ ನಟ ನಟಿಯರು ಯಾವುದೇ ರೀತಿಯ ಪಾತ್ರವನ್ನಾದರೂ ಅಭಿನಯಿಸಲು ಸಮರ್ಥರಾಗಿರಬೇಕು. ಅಂಥ ಕೌಶಲ ಅವರಿಗೆ ಕೈಗೂಡಬೇಕಾದರೆ ಕಲಿಕೆಯ ಜೊತೆಗೆ ಅನುಭವ ಅವಶ್ಯ. ಪ್ರತಿಭಾವಂತರಾದ ನಟ ನಟಿಯರಿಗೆ ಕೂಡ ಇದರಿಂದ ಲಾಭವುಂಟು. ಅವರ ಪ್ರತಿಭೆಯ ಪೂರ್ಣ ವಿಕಾಸಕ್ಕೆ ಇದು ಸಹಾಯಕ.

ಸುಮಾರು 200 ವರ್ಷಗಳಿಂದ ನಟರಿಗೆ ತರಬೇತಿ ಕೊಡುತ್ತಿರುವ ಪ್ರಖ್ಯಾತ ಶಾಲೆಯೊಂದು ಫ್ರಾನ್ಸಿನಲ್ಲಿದೆ. ಹೆಸರಾಂತ ನಟಿ ಸಾರಾಬರ್ನ್ಹಾರ್ಟ್

ಕೈಲಾಸಂ


ಶಕಾರ : 'ವಸಂತ ಸೇನಾ' ಮೂಕ ಚಿತ್ರದಲ್ಲಿ, ವಾಕ್ಚಿತ್ರದಲ್ಲಿ

ನಾಗೇಂದ್ರರಾವ್




ರಾಜಕುಮಾರ್ : ಚಲಚ್ಚಿತ್ರ


ನರಸಿಂಹಮೂರ್ತಿ : ರಂಗಭೂಮಿ

ಕಲಿತದ್ದು ಇಲ್ಲೇ. ರಷ್ಯದ ಪ್ರತಿಯೊಂದು ನಾಟಕಶಾಲೆಯೂ ತನ್ನದೇ ಶಿಕ್ಷಣ ಕೇಂದ್ರವನ್ನು ಒಳಗೊಂಡಿದೆ. ಇದು ಅನಿವಾರ್ಯ ಅಂಗವಾಗಿ ಬೆಳೆದಿದೆ.

ಭಾರತದಲ್ಲಿ ಯಕ್ಷಗಾನ ಬಯಲಾಟದಂಥ ಜಾನಪದ ಅಭಿನಯ ಕಲೆ ಪ್ರಾಚೀನ ಕಾಲದಿಂದ ಬೆಳೆದುಬಂದಿದೆ. ಇದರಲ್ಲಿ ಬೆಳಗಿಹೋದ ಶ್ರೇಷ್ಠ ನಟ ನಟಿಯರು ಎಷ್ಟೋ ಮಂದಿ. ಇವರೆಲ್ಲ ಪ್ರಾಚೀನ ಪದ್ಧತಿಯಂತೆ ಪರಂಪರಾಗತ ಅಭಿನಯ ಶಿಕ್ಷಣವನ್ನು ಪಡೆದವರು. ಕಳೆದ ಶತಮಾನದಲ್ಲಷ್ಟೇ ನಾಟ್ಯದಿಂದ ಬೇರೆಯಾದ, ಅಭಿನಯ ಹಾಗೂ ಮಾತುಗಳುಳ್ಳ ನಾಟಕ ಕಲೆ ಬೆಳೆಯಲಾರಂಭಿಸಿತು.

ಇಂದು ಭಾರತದಲ್ಲಿ ವೃತ್ತಿ ಹಾಗೂ ಹವ್ಯಾಸಿ ನಟ ನಟಿಯರ ಗುಂಪುಗಳೆರಡೂ ಇವೆ. ಚಲಚ್ಚಿತ್ರ, ರಂಗಭೂಮಿ, ರೇಡಿಯೋ ಈ ಮೂರು ಬಗೆಯ ಮಾಧ್ಯಮಗಳ ನಟ ನಟಿಯರೂ ಇದ್ದಾರೆ. ನವದೆಹಲಿಯಲ್ಲಿ ನಟ ನಟಿಯರಿಗೆ ತರಬೇತಿ ಕೊಡುವ ರಾಷ್ಟ್ರೀಯ ನಾಟಕಶಾಲೆಯೊಂದಿದೆ. ಪುಣೆಯಲ್ಲಿರುವ ಚಲಚ್ಚಿತ್ರ ಶಿಕ್ಷಣ ಸಂಸ್ಥೆ, ಚಲಚ್ಚಿತ್ರ ನಟ ನಟಿಯರಾಗಲು ಬಯಸುವವರಿಗೆ ಶಿಕ್ಷಣ ನೀಡುತ್ತದೆ.

**ನೋಡಿ :** ಭಾರತೀಯ ಚಲಚ್ಚಿತ್ರ ಕಲೆ; ಭಾರತೀಯ ರಂಗಭೂಮಿ

## ನಟರಾಜ

ಅನೇಕರ ಮನೆಗಳಲ್ಲಿ ಅಲಂಕಾರಕ್ಕಾಗಿ ನಟರಾಜನ ಕಂಚಿನ ವಿಗ್ರಹವನ್ನೋ ಮಣ್ಣಿನ ವಿಗ್ರಹವನ್ನೋ ಇಟ್ಟುಕೊಂಡಿರುವುದುಂಟು.

ಯಾವುದೇ ಅಂತರರಾಷ್ಟ್ರೀಯ ವಸ್ತುಪ್ರದರ್ಶನದಲ್ಲಿ ಭಾರತೀಯ ಕಲಾವಿಭಾಗದಲ್ಲಿ ಇರಲೇಬೇಕಾದ ಒಂದು ಕಲಾಕೃತಿ ನಟರಾಜನ ವಿಗ್ರಹ.

ಹೀಗೆ ಮನೆ ಮನೆಗಳಿಂದ ಹಿಡಿದು ಅಂತರರಾಷ್ಟ್ರೀಯ ಮಟ್ಟದವರೆಗೆ ನಟರಾಜ ಜನಪ್ರಿಯನಾಗಿದ್ದಾನೆ.

ನಟರಾಜ ಭಾರತದ ಕಲೆ ತತ್ತ್ವಗಳ ಗೂಢಾರ್ಥಗಳ ಸಂಕೇತ.

ಭರತನ 'ನಾಟ್ಯಶಾಸ್ತ್ರ'ದಲ್ಲಿ 108 ನಾಟ್ಯ ವಿಧಿಗಳು ವಿವರಿಸಲ್ಪಟ್ಟಿವೆ. ಶೈವಾಗಮಗಳಲ್ಲಿ ಶಿವ 108 ವಿಧಗಳಲ್ಲಿ ನಾಟ್ಯವಾಡಿದ ಎನ್ನಲಾಗಿದೆ. ಶಿವನ ಈ 108 ನಾಟ್ಯವಿಧಗಳೂ 'ನಾಟ್ಯಶಾಸ್ತ್ರ'ದ 108 ವಿಧಗಳೂ ಒಂದೇ ಇರಬಹುದೆಂಬ ಅಭಿಪ್ರಾಯವಿದೆ. ಇದುವರೆಗೆ ಒಂಬತ್ತು ಪ್ರಮುಖ ರೀತಿಯ ನಟರಾಜ ವಿಗ್ರಹಗಳು ದೊರೆತಿವೆ. ಎಲಿಫೆಂಟಾ ಗುಹೆಗಳಲ್ಲಿ ಇರುವ ಭಗ್ನವಾದ ನಟರಾಜ ವಿಗ್ರಹವನ್ನು ಕಲಾವಿಮರ್ಶಕರೊಬ್ಬರು, "ಗಂಭೀರ ಕಲ್ಪನೆ ಮತ್ತು ಪ್ರಚಂಡ ಶಕ್ತಿಯ ಮೂರ್ತರೂಪ,"


ಮುಳಬಾಗಲಿನ ನಟರಾಜ–11ನೆಯ ಶತಮಾನ


ಅರಳಗುಪ್ಪೆ ನಟರಾಜ –10ನೆಯ ಶತಮಾನ

[illegible] ನಟರಾಜನ ಶಿಲ್ಪಗಳು ಕಂಡು ಬಂದವು. ಇವುಗಳಲ್ಲಿ ಒಂದು ಕಟಕಮುಖ ಭಂಗಿಯಲ್ಲಿದೆ. ಮತ್ತೊಂದಕ್ಕೆ ಎರಡು ಕೈಗಳನ್ನು ಕಳೆದು ಮುರಿದುಹೋಗಿವೆ. ಬಾದಾಮಿಯಲ್ಲಿನ ನಟರಾಜ ವಿಗ್ರಹವೊಂದಕ್ಕೆ 16 ಕೈಗಳುಂಟು. ಬ್ರಿಟಿಷ್ ಮ್ಯೂಸಿಯಂನಲ್ಲಿರುವ ನಟರಾಜ ವಿಗ್ರಹದ ಬಗೆಗೆ ಆಧುನಿಕ ಶಿಲ್ಪಿ ಎಪ್‌ಸ್ಟೈನ್. "ಜಗತ್ತಿನ ಸೃಷ್ಟಿ ಲಯಗಳನ್ನು ನಡೆಸುತ್ತ ಶಿವ ನಾಟ್ಯವಾಡುತ್ತಾನೆ. ಅವನ ನಾಟ್ಯದ ಲಯ, ಅನಂತ ಕಾಲದ ಕಲ್ಪನೆ ನಮ್ಮ ಕಣ್ಣಿಗೆ ಕಟ್ಟುವಂತೆ ಮಾಡುತ್ತದೆ. ಅವನ ಚಲನೆಗಳಲ್ಲಿ ಅವಿರತ ಮಾಂತ್ರಿಕ ಶಕ್ತಿ ಇದೆ," ಎಂದಿದ್ದಾನೆ.

ಶಿವ ಎಷ್ಟು ವಿಧದಲ್ಲಿ ಮತ್ತು ಯಾವ ಸಂದರ್ಭದಲ್ಲಿ ನಾಟ್ಯವಾಡಿದ ಎಂಬ ಬಗೆಗೆ ಸಂಸ್ಕೃತ ಸಾಹಿತ್ಯದಲ್ಲಿ ಅನೇಕ ಕಡೆ ಪ್ರಸ್ತಾಪ ಬಂದಿದೆ. ಆದರೆ ಶಿವ ಅಪಸ್ಮಾರ ಪುರುಷನನ್ನು ಬಲಗಾಲಿಂದ ತುಳಿದು ಆಡಿದ ನಾಟ್ಯದ ಪ್ರಸಂಗ ಶಿಲ್ಪದಲ್ಲಿ ಪ್ರಮುಖವಾಗಿ ಅಭಿವ್ಯಕ್ತಿ ಪಡೆದಿದೆ. ನಾವು ಬಹುಮಟ್ಟಿಗೆ ನೋಡುವ ನಟರಾಜ ವಿಗ್ರಹಗಳು ಇಂಥವೇ. ಚಿದಂಬರ ನಟರಾಜ ವಿಗ್ರಹ ಇದೇ ವರ್ಗಕ್ಕೆ ಸೇರಿದ್ದು.

ತಿರುವಾಲಂಗಾಡು ಎಂಬಲ್ಲಿ ದೊರೆತ 11ನೆಯ ಶತಮಾನದ ಕಂಚಿನ ಎರಕದ ನಟರಾಜ ವಿಗ್ರಹ ದಕ್ಷಿಣ ಭಾರತದ ಅತ್ಯುತ್ತಮ ನಟರಾಜ ವಿಗ್ರಹಗಳಲ್ಲೊಂದು. ಸುಮಾರು ಇದೇ ಕಾಲದಲ್ಲಿ ನಿರ್ಮಿತವಾದ ಕೋಲಾರ ಜಿಲ್ಲೆ ಮುಳಬಾಗಿಲಿನ ಕಂಚಿನ ಎರಕದ ನಟರಾಜ ವಿಗ್ರಹ ಕೂಡ ಉತ್ತಮ ವರ್ಗದ್ದು. ಆದರೆ ಈ ಮೂರ್ತಿಯ ಪ್ರಭಾಮಂಡಲ, ಜಟೆ, ಡಮರು ಮುರಿದುಹೋಗಿವೆ. ಇದು ಈಗ ಮದರಾಸು ವಸ್ತು ಸಂಗ್ರಹಾಲಯದಲ್ಲಿದೆ.

ತಮಿಳುನಾಡಿನ ಪ್ರಮುಖ ಕ್ಷೇತ್ರವಾದ ಚಿದಂಬರದ ದೇವಾಲಯ ನಟರಾಜನಿಗೇ ಮೀಸಲು.

ನಟರಾಜ ವಿಗ್ರಹದ ಗೂಢಾರ್ಥಗಳು, ಸಂಕೇತಗಳ ಬಗೆಗೆ ಕಲಾ ವಿಮರ್ಶಕರು, ಸೌಂದರ್ಯಮೀಮಾಂಸಕರು ಅನೇಕ ವ್ಯಾಖ್ಯೆಗಳನ್ನಿತ್ತಿದ್ದಾರೆ. ಶಿವನ ಪಂಚಕೃತ್ಯಗಳನ್ನು ಈ ನೃತ್ಯ ಪ್ರತಿನಿಧಿಸುತ್ತದೆ. ಅಂದರೆ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ ಮತ್ತು ಸದಾಶಿವರ ಚಟುವಟಿಕೆಗಳಾದ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಅನುಗ್ರಹಗಳ ಸಂಕೇತ. ಮೇಲ್ಭಾಗದ ಬಲಗೈಯಲ್ಲಿ ಹಿಡಿದಿರುವ ಡಮರು ಸೃಷ್ಟಿಯನ್ನೂ ಅಭಯಹಸ್ತವಿರುವ ಕೆಳಬಲಗೈ ರಕ್ಷಣೆಯನ್ನೂ ಎಡ ಮೇಲ್ಗೈಯಲ್ಲಿರುವ ಅಗ್ನಿ ನಾಶವನ್ನೂ ಸೂಚಿಸುತ್ತವೆ. ಎತ್ತಿದ ಎಡ ಕಾಲನ್ನು ತೋರಿಸುತ್ತಿರುವ ಎಡಗೈ ಮುಕ್ತಿಯನ್ನು ಸಂಕೇತಿಸುತ್ತದೆ. ನಟರಾಜನ ಸುತ್ತಲಿರುವ ಪ್ರಭಾವಳಿ ವಿಶ್ವದ ಸಂಕೇತ.

ಖ್ಯಾತ ಪ್ರಾಚ್ಯಕಲಾವಿಚಕ್ಷಣ ಡಾ. ಆನಂದ ಕುಮಾರಸ್ವಾಮಿಯವರು ಈ ವಿವಿಧಾರ್ಥಗಳನ್ನು ಕ್ರೋಢೀಕರಿಸಿ. "ಶಿವನ ನೃತ್ಯದ ಮಹತ್ವ ಮೂರು ಅರ್ಥವುಳ್ಳದ್ದು. ಮೊದಲನೆಯದಾಗಿ ಪ್ರಭಾವಳಿಯಿಂದ ಸಂಕೇತಿಸಿದ ವಿಶ್ವದ ಎಲ್ಲ ಚಲನೆಗಳಿಗೂ ಇವನ ಲಯಬದ್ಧ ನಾಟ್ಯವೇ ಮೂಲ ಎಂಬುದನ್ನು ಸೂಚಿಸುತ್ತದೆ. ಎರಡನೆಯದಾಗಿ ಮಾಯೆಯ ಬಲೆಯಿಂದ ಮಾನವ ಆತ್ಮಗಳನ್ನು ಸ್ವತಂತ್ರಗೊಳಿಸುವುದೇ ಈ ನೃತ್ಯದ ಉದ್ದೇಶ. ಮೂರನೆಯದಾಗಿ, ಈ ನೃತ್ಯ ನಡೆಯುತ್ತಿರುವ ಜಾಗ – 'ಚಿದಂಬರ' ಎಂದರೆ ವಿಶ್ವದ ಕೇಂದ್ರ ಅಥವಾ ಹೃದಯ," ಎಂದು ಹೇಳಿದ್ದಾರೆ. ಹೃದಯದೊಳಗೇ ಈ ಶಿವನೃತ್ಯ ನಡೆಯುತ್ತಿದೆ ಎಂಬುದು ಅತ್ಯಂತ ಅರ್ಥಗರ್ಭಿತವಾದ ತತ್ತ್ವ.

ಕಲೆಯಲ್ಲಿ ನಟರಾಜನ ಕಲ್ಪನೆ ಯಾವಾಗ ಹೇಗೆ ಪ್ರಾರಂಭವಾಯಿತೆಂಬುದು ಸ್ಪಷ್ಟವಿಲ್ಲ. ಕುಮಾರಸ್ವಾಮಿಯವರು ಹೇಳುವಂತೆ, "ನಟರಾಜ ವಿಗ್ರಹದ ಮೂಲ ಏನೇ ಆಗಿದ್ದರೂ ಕಾಲಕ್ರಮೇಣ ಅದು ಪರಮಾತ್ಮನ ಚಟುವಟಿಕೆಯ ಅತ್ಯಂತ ಸ್ಪಷ್ಟ ಪ್ರತೀಕವೆನಿಸಿತು. ಈ ಬಗೆಗೆ ಯಾವ ಕಲೆ ಅಥವಾ ಧರ್ಮವಾದರೂ ಹೆಮ್ಮೆಪಟ್ಟುಕೊಳ್ಳಬಹುದು."

## ನವರಸ

" ಉಬ್ಬಿದನು ಹರುಷದಲಿ ಕಂಗಳ
ಗಬ್ಬ ಮುರಿದುದು ಮದದ ನಿಗುರಿನ
ಹಬ್ಬುಗೆಯ ಹೊಲಬಳಿಯೆ ನಾಲಗೆಯುಡುಗೆ ಹೆಡತಲೆಗೆ
ಸಬ್ಬಗತನ್ಯೆ ಶಿವಶಿವಾ ಬಲು
ಮಬ್ಬಿನಲಿ ಮುಂದರಿಯದೆನ್ನಯ
ಕೊಬ್ಬನೇವಣ್ಣಿಸುವೆನೆನುತಡಿಗಡಿಗೆ ಬೆರಗಾದ "

—ಮಹಾಭಾರತದಲ್ಲಿ ಶ್ರೀಕೃಷ್ಣ ವಿಶ್ವರೂಪದರ್ಶನವನ್ನು ತೋರಿಸಿದಾಗ ಅರ್ಜುನನಲ್ಲಿ ಉಂಟಾದ ಅದ್ಭುತ ಭಾವನೆಯನ್ನು ಕುಮಾರವ್ಯಾಸನ ಈ ಪದ್ಯ ಹೇಳುತ್ತದೆ. ಇದನ್ನು ಓದಿದಾಗ ನಮಗೂ ಆ ಅನುಭವವಾಗುತ್ತದೆ. ಅಂಥ ಅನುಭವವೇ ರಸಾನುಭವ.

ಭಯ, ಸಂತೋಷ, ಕೋಪ, ಗರ್ವ, ಲಜ್ಜೆ ಮೊದಲಾದುವು ನಮ್ಮ ಮನಸ್ಸಿನಲ್ಲಿ ನಡೆಯುವ ಕ್ರಿಯೆಗಳು. ಕಾವ್ಯಮೀಮಾಂಸೆಯಲ್ಲಿ ಇಂಥವುಗಳಿಗೆ ಚಿತ್ತವೃತ್ತಿಗಳೆಂದು ಆಲಂಕಾರಿಕರು ಹೇಳುತ್ತಾರೆ. ಕವಿ, ನಟ ಅಥವಾ ಸಂಗೀತಗಾರ ತಮ್ಮ ಪ್ರತಿಭೆಯಿಂದ, ಇವನ್ನು ನಾವು ತೀವ್ರವಾಗಿ ಅನುಭವಿಸುವಂತೆ ಮಾಡುತ್ತಾರೆ. ಉದ್ರಿಕ್ತ ಚಿತ್ತವೃತ್ತಿಗಳೇ ರಸಕ್ಕೆ ಕಾರಣವೆಂದೂ ರಸಾನುಭವವೇ ಆನಂದವೆಂದೂ ಕಾವ್ಯಮೀಮಾಂಸಕರ ಸಿದ್ಧಾಂತ.

ಮಾನವನ ನೂರಾರು ಚಿತ್ತವೃತ್ತಿಗಳಲ್ಲಿ ಕಾವ್ಯರಸ ಅಭಿವ್ಯಕ್ತಿಗೆ ಪೂರಕವಾದವು ಮುಖ್ಯವಾಗಿ 49 ಮಾತ್ರ. ಇವುಗಳಲ್ಲಿ 8ನ್ನು ಸ್ಥಾಯಿ ಭಾವಗಳೆಂದೂ 33ನ್ನು ಸಂಚಾರಿ ಭಾವಗಳೆಂದೂ ಇನ್ನು 8ನ್ನು ಸಾತ್ವಿಕ ಭಾವಗಳೆಂದೂ ಕರೆಯುತ್ತಾರೆ.

ಎಂಟು ಸ್ಥಾಯಿ ಭಾವಗಳನ್ನು ಭರತಮುನಿ ಹೀಗೆ ಗುರುತಿಸುತ್ತಾನೆ :

ರತಿರ್ಹಾಸಸ್ಚ ಶೋಕಶ್ಚ ಕ್ರೋಧೋತ್ಸಾಹೌ ಭಯಂ ತಥಾ
ಜುಗುಪ್ಸಾ ವಿಸ್ಮಯಶ್ಚೇತಿ ಸ್ಥಾಯಿಭಾವಾಃ ಪ್ರಕೀರ್ತಿತಾಃ

—ಎಂದರೆ ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸೆ, ವಿಸ್ಮಯಗಳೇ ಸ್ಥಾಯಿ ಅಥವಾ ಸ್ಥಿರವಾದ ಭಾವಗಳು. ಇವುಗಳಿಂದ ಹುಟ್ಟುವುದೇ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ ಮತ್ತು ಅದ್ಭುತಗಳೆಂಬ ಎಂಟು ರಸಗಳು. ಮೊದಲಿಗೆ ಈ ಅಷ್ಟ ರಸಗಳನ್ನು ಮಾತ್ರ ಗಮನಿಸಲಾಗಿತ್ತು. ಅನಂತರ ಅಭಿನವಗುಪ್ತ, ಮಮ್ಮಟ, ಜಗನ್ನಾಥ ಮೊದಲಾದ ಮೀಮಾಂಸಕರು ಅದಕ್ಕೆ ಶಾಂತ ರಸವನ್ನೂ ಸೇರಿಸಿದರು. ಹೀಗೆ 'ನವರಸ'ಗಳು ಗಣನೆಗೆ ಬಂದುವು.

ಈ ನವರಸಗಳು ಭಾರತೀಯ ಸಾಹಿತ್ಯ ಮತ್ತು ಕಲೆಗಳೆರಡಲ್ಲೂ ಅಭಿವ್ಯಕ್ತಿ ಪಡೆದಿವೆ. ಸಂಗೀತದಲ್ಲಿ ಕೆಲವು ವಿಶಿಷ್ಟ ರಾಗಗಳು, ವಿಶಿಷ್ಟ ರಸವನ್ನು ವ್ಯಕ್ತಪಡಿಸುತ್ತವೆ. ಹಾಗೆಯೇ ನಾಟಕ, ನೃತ್ಯಗಳಲ್ಲಿ ಅಭಿನಯ, ಹಸ್ತ ಮೊದಲಾದುವುಗಳಿಂದ ನವರಸಗಳು ಸೂಚಿಸಲ್ಪಡುತ್ತವೆ.











ಎಡದಿಂದ ಬಲಕ್ಕೆ : ಶೃಂಗಾರ ವೀರ ಕರುಣ ; ಹಾಸ್ಯ ಅದ್ಭುತ ಭಯಾನಕ ; ಬೀಭತ್ಸ ರೌದ್ರ ಶಾಂತ

ನವರಸಗಳಲ್ಲಿ ಶೃಂಗಾರರಸ ಮೊದಲನೆಯದು. ಉಪವನ. ಪುಷ್ಪ. ಸುಗಂಧ. ಗೀತಗಾಯನಗಳಿಂದ ಪೋಷಣೆ ಪಡೆದು ಈ ರಸ ಅಭಿವ್ಯಕ್ತ ವಾಗುತ್ತದೆ.

ಹಾಸ್ಯರಸದಲ್ಲಿ ಅನೇಕ ವಿಧಗಳುಂಟು. 'ಅನುಚಿತ ಪ್ರವೃತ್ತಿಯು ಹಾಸ್ಯಕ್ಕೆ ಕಾರಣವಾಗಬಲ್ಲುದು' ಎಂದು ಲಾಕ್ಷಣಿಕ ಅಭಿನವಗುಪ್ತ ಹೇಳಿದ್ದಾನೆ. ಕುಮಾರವ್ಯಾಸನ ಭಾರತದಲ್ಲಿ ಉತ್ತರ ಕುಮಾರನು ತನ್ನ ಪೌರುಷ ಪ್ರದರ್ಶನ ಮಾಡಿಕೊಳ್ಳುತ್ತ ಹೇಳುವ ಈ ಪದ್ಯ ಹಾಸ್ಯರಸಕ್ಕೆ ಉತ್ತಮ ಉದಾಹರಣೆ :

" ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ಸರೆ
ಯೂರವರು ಕೆಲರಧಮಕುಲದಲಿ ಸಂದು ಬಂದವರು
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳೆಂದು ಕು
ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ "

ಪ್ರಿಯಜನರ ಮರಣ, ಬಂಧನ, ಶಾಪಗ್ರಸ್ತತೆಯಂಥ ಸನ್ನಿವೇಶದಲ್ಲಿ ಉಂಟಾಗುವ ಶೋಕವೇ ಕರುಣರಸದ ಸ್ಥಾಯಿ. 'ಹರಿಶ್ಚಂದ್ರ ಕಾವ್ಯ'ದಲ್ಲಿ, ಚಂದ್ರಮತಿ ತನ್ನ ಮಗನ ಶವವನ್ನು ಚಿತೆಯ ಮೇಲಿಡುವ ಸಮಯ. ಅಲ್ಲಿ ಕಾವಲುಗಾರನಾಗಿದ್ದ ಹರಿಶ್ಚಂದ್ರ ಬಂದು, ಬಾಡಿಗೆ ಕೊಡದ ಕಾರಣಕ್ಕಾಗಿ ಶವವನ್ನೇ ದೂರಕ್ಕೆಸೆಯುತ್ತಾನೆ. ಆಗ ಚಂದ್ರಮತಿ ಹೇಳುತ್ತಾಳೆ :

"ಬಿಸುಡದಿರು ಬಿಸುಡದಿರು ಬೇಡ ಬೇಡಕಟಕಟ
ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತ
ಕ್ಕೈಸಿಕೊಂಡು ಕುಲವ ನೋಡದೆ ಬೇಡಿಕೊಂಬೆನಿವನೆನ್ನ ಮಗನಲ್ಲ ನಿನ್ನ
ಸಿಸುವಿನೋಪಾದಿ ಸುಡಲನುಮತವನಿತ್ತು ರ
ಕ್ಷಿಸು ಕರುಣಿ ಎಂದಡೆಲೆ ಮರುಳೆ ಹೆಣನುಟ್ಟುದಂ
ಮಸಣವಾಡಗೆಯ ಹಾಗವನು ಕೊಟ್ಟಲ್ಲದೇನೆಂದಡಂ ಬಿಡೆನೆಂದನು."

ಇದನ್ನೋದಿದ ಯಾರ ಮನಸ್ಸಿನಲ್ಲಾದರೂ ಚಂದ್ರಮತಿಯ ಸ್ಥಿತಿಯ ಬಗೆಗೆ ಕರುಣೆ ಮೂಡದಿರದು.

ಕ್ರೋಧದಿಂದ ಹುಟ್ಟಿದ ರಸವೇ ರೌದ್ರ. ಯುದ್ಧ ಸನ್ನಿವೇಶದಲ್ಲಿ ಈ ರಸಾಭಿವ್ಯಕ್ತಿಗೆ ವಿಶೇಷ ಅವಕಾಶ ಉಂಟು. ಕುಮಾರವ್ಯಾಸ ಭಾರತದಲ್ಲಿ ಭೀಮ ರೌದ್ರಾವೇಶದಿಂದ ದ್ರೌಪದಿಗೆ ಹೀಗೆ ಹೇಳುತ್ತಾನೆ:

"ತರುಣಿ ದುಶ್ಯಾಸನನ ನೊರೆ ನೆ
ತ್ತರಲಿ ನಾದುವೆ ನಿನ್ನ ಮಂಡೆಯ
ಕುರುಳ ಬಾಚುವೆನಿವನ ದಂತದ ಹಣಿಗೆಯಲಿ ಖಳನ
ಕರುಳ ದಂಡೆಯ ಮುಡಿಸಿ ಶಾಕಿನಿ
ಯರನು ಕರೆಯಿಂಸಿ ನಿನ್ನ ಕಯ್ಯಲಿ
ಧುರದೊಳಗೆ ಬಾಯಿನವ ಕೊಡಿಸುವೆನಬಲೆ ಕೇಳೆಂದ"

ಇಂಥದೇ ಸನ್ನಿವೇಶದಲ್ಲಿ ವ್ಯಕ್ತವಾಗುವ ಮತ್ತೊಂದು ರಸ ವೀರ, ಉತ್ಸಾಹ ಇದರ ಸ್ಥಾಯಿ. ದ್ರೋಣರ ಪದ್ಮವ್ಯೂಹ ಭೇದಿಸಲು ಅನುಜ್ಞೆ ನೀಡಬೇಕೆಂದು ಅಭಿಮನ್ಯು ಧರ್ಮರಾಯನನ್ನು ಹೀಗೆ ಕೇಳುತ್ತಾನೆ:

" ಬಿಡು ಮರೀಚಿಯ ತೊರೆಗೆ ಹರಿಗೋ
ಲಿಡುವರುಂಟೇ ಲೆಪ್ಪದುರಗನ
ಹಿಡಿವಡೇತಕೆ ಗರುಡಮಂತ್ರವು ಚಪಲನೆನ್ನದಿರು
ಕೊಡನ ಮಗನ ಕುಮಂತ್ರದೊಡ್ಡಿನ
ಕಡಿತಕಾನಂಜುವೆನೆ ವೆಗ್ಗಳ
ನುಡಿಯಲಮ್ಮೆನು ತನ್ನ ನೀಗಳೆ ಬಿಟ್ಟು ನೋಡೆಂದ"

ಭಯ ಸ್ಥಾಯಿ ಭಾವದಿಂದ ಹುಟ್ಟಿದ ರಸ, ಭಯಾನಕ.

ಜುಗುಪ್ಸಾ ಭಾವದಿಂದ ಹುಟ್ಟುವುದು ಭೀಭತ್ಸ ರಸ. ಭೀಮ ಕೀಚಕನನ್ನು ಕೊಂದು ಸೇಡು ತೀರಿಸಿಕೊಂಡ ರೀತಿಯನ್ನು ಭೀಭತ್ಸರಸಕ್ಕೆ ಸ್ಥಾಯಿ ಭಾವವನ್ನಾಗಿಟ್ಟುಕೊಂಡು ಕುಮಾರವ್ಯಾಸ ಹೀಗೆ ನಿರೂಪಿಸುತ್ತಾನೆ:

" ತಲೆಯುನೆದೆಯೊಳಗಿಕ್ಕಿ ಕೈಕಾ
ಲ್ಗಳನು ಬಸುರೊಳು ಸಿಕ್ಕಿ ದೂರಕೆ
ತೊಲಗಿದನು ತೋರಿದನು ರಮಣಿಗೆ ಕೀಚಕನ ಹದನ
ಖಳನು ಕಾಲನ ಕೋಣ ತುಳಿದಂ
ತಿಳೆಯೊಳರಗಿರೆ ಕಂಡು ಕಾಮಿನಿ
ಕಳಕಳಿಸಿದಳು ಭೀಮಸೇನನನಪ್ಪಿ ಮುಂಡಾಡಿ"

ಅತ್ಯಾಶ್ಚರ್ಯಕರವಾದ ಭಯ ಭಕ್ತಿ ಗೌರವಗಳನ್ನು ನಮ್ಮಲ್ಲಿ ಉಂಟು ಮಾಡುವ ರಸವೇ ಅದ್ಭುತ ರಸ. ಇದಕ್ಕೆ ಸ್ಥಾಯಿ ಭಾವ ವಿಸ್ಮಯ. ಶ್ರೀಕೃಷ್ಣನ ವಿಶ್ವರೂಪದರ್ಶನ ಇಂಥ ಅನುಭವವನ್ನು ಅರ್ಜುನನಲ್ಲಿ ಉಂಟುಮಾಡಿತು.

ಯೋಗಿ, ತಪಸ್ವಿಗಳ ನಿರ್ಲಿಪ್ತ ಭಾವ, ಪ್ರಶಾಂತ ನಿರಾಕುಲ ಮನಸ್ಸು, ಸನ್ನಿವೇಶಗಳನ್ನು ಅಭಿವ್ಯಕ್ತಿಸುವ ರಸವೇ ಶಾಂತರಸ.

ಕೆಲವು ಕವಿಗಳು ತಮಗಿಷ್ಟ ಬಂದ ಒಂದೇ ಒಂದು ರಸವನ್ನು ಪ್ರಧಾನ ರಸವನ್ನಾಗಿ ಮಾಡಿಕೊಂಡು ಉಳಿದುವನ್ನು ಅದರಲ್ಲೇ ಸೇರಿಸಲು ಪ್ರಯತ್ನಿಸಿದ್ದಾರೆ. ಅವರ ಪ್ರಕಾರ ಪ್ರಧಾನ ರಸ ಪ್ರಕೃತಿ; ಮಿಕ್ಕವು ವಿಕೃತಿ. ಭೋಜರಾಜ, ನೇಮಿಚಂದ್ರರು, ಶೃಂಗಾರರಸವೇ ಪ್ರಧಾನ ರಸ ಎಂದರು. ಭವಭೂತಿ " ಏಕೋರಸಃ ಕರುಣ ಏವ " ಎಂದ. " ಅದ್ಭುತವೇ ಪ್ರಕೃತಿ " ಎಂದ ನಾರಾಯಣ ಪಂಡಿತ.

'ಭಕ್ತಿ' ಎಂಬ ರಸವನ್ನು ನವರಸಗಳಿಗೆ ಸೇರಿಸಿ. ರಸಗಳು ಹತ್ತು ಎಂದವರುಂಟು. ಬೇರೆಯವರು ಇನ್ನೂ ಕೆಲ ರಸಗಳನ್ನು ಹೆಸರಿಸಿದ್ದಾರೆ. ವಾತ್ಸಲ್ಯ, ಸ್ನೇಹ, ಮೃಗಯಾ, ಮಾಯಾ ಇತ್ಯಾದಿ ರಸಗಳನ್ನು ಒಪ್ಪಿದವರುಂಟು. ಆದರೂ ನವರಸಗಳ ಕಲ್ಪನೆ ಇಂದು ಹೆಚ್ಚು ಕಡಮೆ ಅಂಗೀಕೃತವಾಗಿದ್ದು ಸಂಗೀತ, ಸಾಹಿತ್ಯ, ನಾಟ್ಯಗಳಲ್ಲಿ ಈ ರಸಗಳನ್ನು ಗುರುತಿಸಲಾಗುತ್ತಿದೆ.

ಸಂಗೀತ ಮತ್ತು ನವರಸ ಪ್ರತಿಪಾದನೆಯನ್ನು ಕುರಿತು ವಿವೇಚಿಸುವಾಗ ಕೆಲವು ರಾಗಗಳು ಕೆಲವು ರಸಗಳನ್ನು ಪ್ರಚೋದಿಸುತ್ತವೆ ಎಂದು ಹೇಳುವುದುಂಟು. ಉದಾಹರಣೆಗೆ ಕಮಾಚು, ಹುಸೇನಿ ರಾಗಗಳು ಶೃಂಗಾರವನ್ನೂ ಶಾಹನ, ಪುನ್ನಾಗವರಾಳಿ, ನಾದನಾಮಕ್ರಿಯೆಗಳು ಕರುಣರಸವನ್ನೂ ಪ್ರಚೋದಿಸುತ್ತವೆ ಎನ್ನುತ್ತಾರೆ. ಆದರೆ ಈ ಅಭಿಪ್ರಾಯದ ಬಗೆಗೆ ಒಮ್ಮತವಿಲ್ಲ.

## ನವ್ಯ ಸಾಹಿತ್ಯ

ಮಾನವನ ಬದುಕಿನ ಹಾಗೂ ಚಿಂತನೆಯ ರೀತಿ ನೀತಿಗಳು ಕಾಲಕಾಲಕ್ಕೆ ಬದಲಾಗುವಂತೆ ಕಾವ್ಯದ ರೂಪವೂ ಬದಲಾಗುತ್ತದೆ. ಹೊಸದಾಗಿ ಬದಲಾದ ಕಾವ್ಯಸ್ವರೂಪ ಕ್ರಮೇಣ ಸಂಪ್ರದಾಯವಾಗುತ್ತದೆ; ಜಡ ವಾಗುತ್ತದೆ. ಇಂಥ ಜಡ ಕಾವ್ಯಸಂಪ್ರದಾಯದಲ್ಲಿ ಭಾಷೆ ತನ್ನ ತೀವ್ರತೆ

ನವ್ಯ ಆಂದೋಲನ ಪ್ರಾರಂಭವಾಗುತ್ತದೆ. ಹೀಗೆ ಒಂದು ಕಾಲಕ್ಕೆ ಕ್ರಾಂತಿಕಾರಿ ಕೃತಿಗಳನ್ನು ಕೊಟ್ಟ ಕಾವ್ಯ ಸಂಪ್ರದಾಯ ತನ್ನ ಕಾವು ಕಳೆದು ಕೊಂಡ ಮೇಲೆ ಹೊಸ ಸಾಹಿತ್ಯಕ್ಕೆ ಹಾದಿ ಮಾಡಿಕೊಡುತ್ತದೆ.

ನಮ್ಮ ನಾಡಿನಲ್ಲಿ ಹಿಂದೆ ರಾಜಾಶ್ರಯದಲ್ಲಿ ಬೆಳೆದ ಕವಿಗಳ ಸಂಪ್ರದಾಯ ಭಕ್ತಿಪಂಥ ಬರಬರುತ್ತಾ ತನ್ನ ಸತ್ವ ಕಳೆದುಕೊಂಡಿತ್ತು. ನಮ್ಮ ಸ್ವಾತಂತ್ರ್ಯ ಹೋರಾಟ ತೀವ್ರವಾಗುತ್ತಿದ್ದಂತೆ ಭಕ್ತಿಪಂಥದ ಕಾವ್ಯ ಹಿಂದಕ್ಕೆ ಸರಿಯಿತು.

ಸಮಾಜದ ವಿವಿಧ ಕಾಲಗಳ ಸಮಷ್ಟಿ ದೃಷ್ಟಿಗೆ ಅನುಗುಣವಾಗಿ ಕವಿಯ ಮನೋಧರ್ಮ ಬದಲಾದಂತೆ ಸಾಹಿತ್ಯದ ವಸ್ತು, ಭಾಷೆ, ಶೈಲಿ, ತಂತ್ರಗಳೂ ಬದಲಾಗುತ್ತವೆ. ಚಂಪೂ, ವಚನ, ರಗಳೆ, ಷಟ್ಪದಿ, ಮುಕ್ತ ಛಂದಸ್ಸುಗಳು ಇಂಥ ಬದಲಾವಣೆಯನ್ನು ಸೂಚಿಸುತ್ತವೆ.

ಕನ್ನಡ ಸಾಹಿತ್ಯದಲ್ಲಿ 1950ರ ಬಳಿಕ ಬಂದ ಹೊಸ ಬಗೆಯ ಬರವಣಿಗೆಯನ್ನು ನವ್ಯಸಾಹಿತ್ಯ ಎನ್ನುತ್ತಾರೆ. ಈ ನವ್ಯ ಸಾಹಿತ್ಯ ಹುಟ್ಟಲು ಆ ಕಾಲದ ಪರಿಸರದ ಅನೇಕ ಪ್ರಭಾವಗಳೇ ಕಾರಣ. ಸ್ವಾತಂತ್ರ್ಯ ಹೋರಾಟದ ಕಾಲಕ್ಕೆ ಇದ್ದ ಕಾವು ಇಳಿದು ತಣ್ಣಗಾಗುತ್ತಿದ್ದಂತೆ ಬಡತನ, ನಿರುದ್ಯೋಗ, ಅಶಾಂತಿ, ಕಪಟ –ಇವು ಸ್ಪಷ್ಟವಾಗಿ ಗೋಚರಿಸತೊಡಗಿದವು. ಸ್ವಾತಂತ್ರ್ಯ ಹೋರಾಟದ ಭಾವೋದ್ರೇಕದ ದೃಷ್ಟಿ ವಾಸ್ತವಿಕ ದೃಷ್ಟಿಗೆ ಎಡೆಕೊಟ್ಟಿತು.

ಪ್ರಕೃತಿ ಸೌಂದರ್ಯ, ಪ್ರೇಮ, ಆದರ್ಶಗಳೇ ಪ್ರಧಾನ ವಸ್ತುಗಳಾಗಿದ್ದ ಸಾಂಪ್ರದಾಯಿಕ ಕವಿಗಳು, ತಮ್ಮ ಅನುಭವಗಳನ್ನು ಸರಳಗೊಳಿಸಿ, ಸುಂದರವಾದ ಭಾಷೆಯ ಮೆರುಗುಕೊಟ್ಟು ಕಾವ್ಯ ರಚಿಸುತ್ತಿದ್ದರು. ಈ ಧೋರಣೆ ಮತ್ತು ತಂತ್ರಗಳೆರಡಕ್ಕೂ ಪ್ರತಿಕ್ರಿಯೆಯಾಗಿ ನವ್ಯ ಕಾವ್ಯ ಹುಟ್ಟಿಕೊಂಡಿತು.

ನಮ್ಮ ಆಧುನಿಕ ಕಾವ್ಯದ ಮೇಲೆ ವರ್ಡ್ಸ್‌ವರ್ತ್, ಕೀಟ್ಸ್, ಷೆಲ್ಲಿ, ಬೈರನ್‌ರಂಥ ಆಂಗ್ಲಕವಿಗಳು ಪ್ರಭಾವ ಬೀರಿದ ಹಾಗೆ, ನವ್ಯ ಸಾಹಿತ್ಯದ ಮೇಲೆ ಎಲಿಯಟ್, ಎಜ್ರಾ ಪೌಂಡ್ ಪ್ರಭಾವ ಬೀರಿದರು. ಹೀಗೆ ಆಂತರಿಕ ಹಾಗೂ ಬಾಹ್ಯ ಪ್ರಭಾವಗಳಿಂದಾಗಿ ಕನ್ನಡದಲ್ಲಿ ನವ್ಯ ಕಾವ್ಯ ಬಂದಿತು.

ಪದ್ಯದಂತೆಯೇ ಗದ್ಯವನ್ನೂ ನವ್ಯತೆ ಕ್ರಮೇಣ ಆವರಿಸಿತು. ನವ್ಯ ಸಾಹಿತ್ಯದ ಲಕ್ಷಣಗಳನ್ನು ಹೀಗೆ ಗುರುತಿಸಬಹುದು: ಜೀವನದ ಸಂಕೀರ್ಣ ಅನುಭವಗಳನ್ನು ಬಿಡಿಸಿ, ಬಿಡಿಸಿ ಬೇರೆಯಾಗಿ ಹೇಳದೆ ಅಷ್ಟೇ ಸಂಕೀರ್ಣವಾಗಿ ಹೇಳುವುದು ; ಹೀಗೆ ಮಾಡುವಾಗ ಹಿಂದಿನ ಕವಿಗಳು ಬಳಸುತ್ತಿದ್ದ ಛಂದಸ್ಸು, ತಂತ್ರಗಳನ್ನು ಬಿಟ್ಟು ಹೊಸ ತಂತ್ರಗಳನ್ನು ರೂಪಿಸುವುದು. ಹೇಳುವ ಅನುಭವ ಸಂಕೀರ್ಣವಾದುದರಿಂದ, ಛಂದಸ್ಸು, ತಂತ್ರಗಳೂ ಸಂಕೀರ್ಣವಾಗಿರುತ್ತವೆ. ತಮ್ಮ ಅನುಭವಗಳನ್ನು ಓದುಗರು ಅಷ್ಟೇ ತೀವ್ರವಾಗಿ ಅನುಭವಿಸುವಂತೆ ಮಾಡಲು ನವ್ಯ ಸಾಹಿತಿಗಳು ಪ್ರತಿಮೆ, ಸಂಕೇತಗಳನ್ನೂ ಆಡುಭಾಷೆಯನ್ನೂ ಬಳಸುತ್ತಾರೆ.

ನಮ್ಮಲ್ಲಿ ನವ್ಯ ಸಾಹಿತ್ಯ ಪ್ರಾರಂಭವಾದದ್ದು ಪೇಜಾವರ ಸದಾಶಿವ ರಾಯ ಮತ್ತು ವಿ. ಕೃ. ಗೋಕಾಕರಿಂದ. ಸದಾಶಿವರಾಯರ 'ವರುಣ' ಎಂಬ ಕವನ ಸಂಗ್ರಹದಲ್ಲಿಯ ಕೆಲವು ಕವನಗಳು ಮತ್ತು 'ನಾಟ್ಯೋತ್ಸವ' ಎಂಬ ಕವನ ನವ್ಯ ರೀತಿಯ ಆರಂಭದ ಕವನಗಳು. 'ನವ್ಯ ಕಾವ್ಯ' ಎಂಬ ಪದವನ್ನು ಈಗಿನ ಅರ್ಥದಲ್ಲಿ ಮೊದಲು ಬಳಸಿದವರು ಗೋಕಾಕರು.

1956ರಲ್ಲಿ ಪ್ರಕಟವಾದ 'ನವ್ಯಧ್ವನಿ' ಎಂಬ ಕವನ ಸಂಕಲನದಲ್ಲಿ ಗಂಗಾಧರ ಚಿತ್ತಾಲ, ಗೋಪಾಲಕೃಷ್ಣ ಅಡಿಗ, ಬೇಂದ್ರೆ, ವಿನಾಯಕ, ಚೆನ್ನವೀರ ಕಣವಿ, ರಾಮಚಂದ್ರ ಶರ್ಮ, ಮೊಕಾಶಿ, ಶಾಂತಿನಾಥ ದೇಸಾಯಿ, ಕ. ವೆಂ. ರಾಜಗೋಪಾಲ, ಮೊದಲಾದವರ ಕವನಗಳಿವೆ. ಗೋಕಾಕರ 'ಸಮುದ್ರ ಗೀತೆಗಳು'. ಅಡಿಗರ 'ಚಂಡೆ ಮದ್ದಲೆ', 'ಭೂಮಿಗೀತ'; ಗಂಗಾಧರ ಚಿತ್ತಾಲರ 'ಹರಿವ ನೀರಿದು', ನಿಸಾರ್ ಅಹಮದ್‌ರ 'ಸಂಜೆ ಐದರ ಮಳೆ', ಶರ್ಮರ 'ಹೇಸರಗತ್ತೆ', ಚಂದ್ರಶೇಖರ ಕಂಬಾರರ 'ತಕರಾರಿನವರು', ಎ. ಕೆ. ರಾಮಾನುಜನ್‌ರ 'ಹೊಕ್ಕುಳಲ್ಲಿ ಹೂವಿಲ್ಲ', ಚಂದ್ರಶೇಖರ ಪಾಟೀಲರ 'ಮಧ್ಯಬಿಂದು', ಲಂಕೇಶರ 'ಬಿಚ್ಚು', ಆಲನಹಳ್ಳಿ ಶ್ರೀಕೃಷ್ಣ ಅವರ 'ಮಣ್ಣಿನ ಹಾಡು', ತಿರುಮಲೇಶರ 'ಮಹಾಪ್ರಸ್ಥಾನ'. ಮೊದಲಾದುವು ನವ್ಯಕಾವ್ಯದ ಪ್ರಮುಖ ಕೃತಿಗಳು. 1970ರಲ್ಲಿ ಪ್ರಕಟವಾದ, ಪಿ. ಲಂಕೇಶ್ ಸಂಪಾದಿಸಿದ ' ಅಕ್ಷರ ಹೊಸ ಕಾವ್ಯ'ದಲ್ಲಿ 34 ನವ್ಯ ಕವಿಗಳ 196 ಕವನಗಳಿವೆ. 1972ರಲ್ಲಿ ಹೊರಬಿದ್ದ ಬುದ್ಧಣ್ಣ ಹಿಂಗಮಿರೆ ಸಂಪಾದಿಸಿದ ' ಹೊಸಜನಾಂಗದ ಕಾವ್ಯ ' ನವ್ಯ ಕವನಗಳ ಇನ್ನೊಂದು ಸಂಕಲನ.

ನವ್ಯ ಕಾವ್ಯ ಸಂಪ್ರದಾಯದ ಅತ್ಯಂತ ಪ್ರಮುಖ ಕವಿ ಗೋಪಾಲಕೃಷ್ಣ ಅಡಿಗರು. 'ನಡೆದು ಬಂದ ದಾರಿ', 'ಚಂಡೆ ಮದ್ದಲೆ' ಮೊದಲಾದುವು ಇವರ ಪ್ರಮುಖ ಕವನ ಸಂಕಲನಗಳು. 'ಭೂಮಿಗೀತ', 'ಭೂತ', 'ಪ್ರಾರ್ಥನೆ', 'ಶ್ರೀರಾಮ ನವಮಿಯ ದಿವಸ', 'ಕೂಪಮಂಡೂಕ', 'ವರ್ಧಮಾನ' ಮೊದಲಾದುವು ನವ್ಯ ಕಾವ್ಯದ ಅತ್ಯುತ್ತಮ ಕವನಗಳ ಗುಂಪಿಗೆ ಸೇರುತ್ತವೆ.

ಕಥೆ ಕಾದಂಬರಿ ಪ್ರಕಾರಗಳಲ್ಲೂ ನವ್ಯಶೈಲಿಯ ಕೃತಿಗಳು ರಚಿತವಾಗಿವೆ. ಸಮಾಜ ನಂಬಿದ್ದ ಮೌಲ್ಯಗಳಲ್ಲಿ ವ್ಯಕ್ತಿ ತನ್ನ ನಂಬಿಕೆ ಕಳೆದುಕೊಂಡಾಗ ಅವನು ಮಾನಸಿಕವಾಗಿ ಅನುಭವಿಸುವ ಏಕಾಕಿತನ, ಇಂದಿನ ಜೀವನದ ಯಾಂತ್ರಿಕತೆ, ನಮ್ಮ ಅನೇಕ ನಡೆನುಡಿಗಳಲ್ಲಿನ ಅರ್ಥಹೀನತೆಗಳನ್ನು ಈ ವರ್ಗದ ಕಾದಂಬರಿಕಾರರು, ಕಥೆಗಾರರು ಚಿತ್ರಿಸುತ್ತಾರೆ. ಯಶವಂತ ಚಿತ್ತಾಲರ 'ಮೂರು ದಾರಿಗಳು', ಅನಂತಮೂರ್ತಿಯವರ 'ಸಂಸ್ಕಾರ', ಲಂಕೇಶರ 'ಬಿರುಕು', ಶೌರಿಯವರ 'ಹಳದಿ ಮೀನು', ಶಾಂತಿನಾಥ ದೇಸಾಯರ 'ಮುಕ್ತಿ' —ಇವು ಹೊಸ ಬಗೆಯ ಕಾದಂಬರಿಗಳು. ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಕೆ. ಸದಾಶಿವ. ರಾಜಲಕ್ಷ್ಮಿ ಎನ್ ರಾವ್, ವೀಣಾ ಯಲಬುರ್ಗಿ. ಪೂರ್ಣಚಂದ್ರ ತೇಜಸ್ವಿ ಮೊದಲಾದವರು ಒಳ್ಳೆಯ ನವ್ಯಕಥೆಗಳನ್ನು ಬರೆದಿದ್ದಾರೆ.

ನವ್ಯ ಸಾಹಿತ್ಯದ ನಾಟಕ ಪ್ರಕಾರದಲ್ಲಿ ಪ್ರಮುಖವಾದುವು ಅಸಂಗತ ನಾಟಕಗಳು. ಗುರಿ ಆದರ್ಶಗಳಾಗಲೀ ಹಿಂದಿನ ಮೌಲ್ಯಗಳಲ್ಲಿ ನಂಬಿಕೆಯಾಗಲೀ ಇಲ್ಲದ ಇಂದಿನ ಜೀವನವನ್ನು ಎದುರಿಸುವಾಗ ಕಾಣುವ ಅರ್ಥಹೀನತೆ, ಅಸಂಬದ್ಧತೆಗಳನ್ನು ಪ್ರತಿಮೆ, ಸಂಕೇತಗಳ ಮೂಲಕ ಚಿತ್ರಿಸುವುದೇ ಅಸಂಗತ ನಾಟಕ. ಪಿ. ಲಂಕೇಶರ 'ಟಿ ಪ್ರಸನ್ನನ ಗೃಹಸ್ಥಾಶ್ರಮ'. ಚಂದ್ರಶೇಖರ ಪಾಟೀಲರ 'ಕೊಡೆಗಳು', ಕಂಬಾರರ 'ಜಾಳೇಶ', ನ. ರತ್ನ ಅವರ 'ಎಲ್ಲಿಗೆ' ಮೊದಲಾದುವು ಅಸಂಗತ ನಾಟಕಗಳಲ್ಲಿ ಪ್ರಮುಖವಾದುವು. ಶ್ರೀರಂಗರ 'ಸ್ವರ್ಗಕ್ಕೆ ಮೂರೇ ಬಾಗಿಲು' ಹೊಸ ರೀತಿಯ ಉತ್ತಮ ನಾಟಕ.

ಗಿರೀಶ ಕಾರ್ನಾಡರ 'ತುಘಲಕ್'. 'ಯಯಾತಿ'. 'ಹಯವದನ' ನಾಟಕಗಳಲ್ಲಿ ನೂತನ ಸಂವಿಧಾನವಿದೆ, ಅತ್ಯಂತ ಸಂಕೀರ್ಣ ಪ್ರತಿಮೆಗಳಿವೆ.

ನೂತನ ಮಾರ್ಗವಾಗಿ ಆರಂಭವಾದ ನವ್ಯ ಸಾಹಿತ್ಯ ಪ್ರಪಂಚದ ಅನೇಕ ಭಾಷೆಗಳಲ್ಲಿ ಈಗಾಗಲೇ ಸಂಪ್ರದಾಯವಾಗಿದೆ ಎಂಬುದು ಗಮನಿಸಬೇಕಾದ ಸಂಗತಿ.

ನೋಡಿ: ಆಧುನಿಕ ಕಾವ್ಯ

## ನವೋದಯ ಕಲೆ

ರೂಢಮೂಲವಾಗಿದ್ದುದನ್ನು ಬದಿಗೆ ಸರಿಸಿ ಹೊಸ ಪಂಥಗಳು, ವಿಚಾರಗಳು ತಲೆ ಎತ್ತಿದಾಗಲೆಲ್ಲ ಆ ಕಾಲಾವಧಿ ನವೋದಯ ಯುಗ ಎನಿಸಿಕೊಳ್ಳುತ್ತದೆ. ಸುಮಾರು 1400ರಿಂದ ಆರಂಭವಾಗಿ ಯೂರೋಪಿನಲ್ಲೆಲ್ಲ ಪ್ರಭಾವ ಬೀರಿದ ನವೋದಯ ಯುಗ ಆರಂಭವಾದದ್ದು ಇಟಲಿಯಲ್ಲಿ. ಕಲೆಯಲ್ಲಷ್ಟೇ ಅಲ್ಲ, ಜೀವನದ ಎಲ್ಲ ಕ್ಷೇತ್ರಗಳ ಮೇಲೂ ನವೋದಯದ ಪರಿಣಾಮ ಕಂಡುಬಂದಿತು.

ರಿನೈಸಾನ್ಸ್ –ನವೋದಯ– ಮೂಲದಲ್ಲಿ ಫ್ರೆಂಚ್ ಪದ. ಇದರ ಅರ್ಥ ಪುನರುಜ್ಜೀವನ. ಶ್ರೀಮಂತರು ದೊಡ್ಡ ಮನೆಗಳಲ್ಲಿರುತ್ತಿದ್ದರು. ಸಾಮಾಜಿಕ ಜೀವನ ಶ್ರೀಮಂತರ ಮನೆಗಳಿಗೆ ಸೀಮಿತವಾಗಿತ್ತು. ನಗರಗಳು ಕಡಮೆ. ವ್ಯಾಪಾರ, ವಾಣಿಜ್ಯ ಬೆಳೆದಿರಲಿಲ್ಲ. ಏನಾದರೂ ಪದಾರ್ಥ ಬೇಕಾದರೆ ತನ್ನಲ್ಲಿದ್ದ ಬೇರೊಂದು ಪದಾರ್ಥವನ್ನು ಕೊಟ್ಟು ವಿನಿಮಯ ಮಾಡಿಕೊಳ್ಳಬೇಕಾಗಿತ್ತು. ಯೂರೋಪಿನಾದ್ಯಂತ ಸಣ್ಣ ಸಣ್ಣ ಸಂಸ್ಥಾನಗಳಿದ್ದುವು. ಒಂದೊಂದನ್ನೂ ಅರಸ ಅಥವಾ ಶ್ರೀಮಂತ ಆಳುತ್ತಿದ್ದ. ಕ್ರಮೇಣ ಪರಿಸ್ಥಿತಿ ಬದಲಾಯಿತು. ನಗರಗಳು ಬೆಳೆದುವು. ವ್ಯಾಪಾರ, ವಾಣಿಜ್ಯ ಹೆಚ್ಚಿ ವರ್ತಕ ವೃಂದದವರು ಸಮಾಜದ ಮುಂದಾಳುಗಳಾದರು. ಹಣ ಚಲಾವಣೆಗೆ ಬಂತು. ಮರಣಾನಂತರದ ಬದುಕಿಗೆ ಹೆಚ್ಚು ಮಹತ್ವ ಕೊಡುತ್ತಿದ್ದ ಕಾಲ ಕಳೆದುಹೋಗಿ, ಬದುಕಿರುವಾಗಲೇ ಸುಖಪಡಬೇಕೆಂಬ ಭಾವನೆ ಜನರಲ್ಲಿ ಮೂಡತೊಡಗಿತು. ಮಧ್ಯಯುಗದ ಅಂಧಕಾರವನ್ನು ತೊಡೆದುಹಾಕುವ ಪ್ರವೃತ್ತಿ ಉಂಟಾಯಿತು. ಜನ ತಮ್ಮದೇ ಗುಣ ನಿರ್ಣಯ ಸಾಮರ್ಥ್ಯ, ವೈಯಕ್ತಿಕ ಮಹತ್ವಗಳಿಗೆ ಬೆಲೆ ಕೊಡತೊಡಗಿದರು.

ಜನಾಂಗಗಳಲ್ಲಿ ಬದಲಾದ ಮನೋಭಾವ ಕಲಾವಿದರನ್ನೂ ಬಿಡಲಿಲ್ಲ. ಇಟಲಿಯ ಕಲಾವಿದರು ಪ್ರಾಚೀನ ಗ್ರೀಕ್ ಹಾಗೂ ರೋಮನ್ ಕಲೆಗಳನ್ನು ಅಭ್ಯಸಿಸಿದರು. ಅದರಲ್ಲಡಗಿದ್ದ ಅಸಾಧಾರಣ ಪ್ರತಿಭೆ, ಮಹೋನ್ನತಿಗಳನ್ನು ಪುನರುಜ್ಜೀವನಗೊಳಿಸಲು ಅವರು ಮುಂದಾದರು. ವಾಸ್ತುಶಿಲ್ಪ ಶಿಲ್ಪ, ಚಿತ್ರಕಲೆ, ಸಾಹಿತ್ಯ, ಸಂಗೀತಗಳೇ ಅಲ್ಲದೆ ನವೋದಯ ಕಾಲದಲ್ಲಿ ಹೊಸ ಭೂಭಾಗಗಳ ಅನ್ವೇಷಣೆಗಳೂ ಆದುವು. ನೂತನ ಆವಿಷ್ಕಾರಗಳಾದುವು. ವಿಜ್ಞಾನದಲ್ಲಿ ಸಂಶೋಧನೆಗಳಾದುವು. ಈ ಹೊಸ ಪ್ರವಾಹ 15, 16ನೆಯ ಶತಮಾನಗಳಲ್ಲೂ ಮುಂದುವರಿಯಿತು.

ಸಾಹಿತ್ಯದಲ್ಲಿ ನವೋದಯರಂಗಕ್ಕೆ ಮೊದಲು ಪದಾರ್ಪಣ ಮಾಡಿದವನು ದಾಂತೆ. ಅವನ ಕೊಡುಗೆ, ಮಹಾಕಾವ್ಯ 'ಕಾಮಿಡಿ'. (ಮುಂದೆ ಪ್ರಕಾಶನೊಬ್ಬ ಅದಕ್ಕೆ 'ಡಿವೈನ್ ಕಾಮಿಡಿ' ಎಂದು ಹೆಸರಿಟ್ಟ.) ಇಂಗ್ಲೆಂಡಿನ ಚಾಸರ್, ಇಟಲಿಯ ಪೆಟ್ರಾರ್ಕ್ ಪ್ರಾಚೀನ ಸಾಹಿತ್ಯಗಳನ್ನು ಅಭ್ಯಸಿಸಿ ತಮ್ಮ ಕೃತಿಗಳಲ್ಲಿ ತಮ್ಮ ಕಾಲದ ಜನಜೀವನವನ್ನು ಬಿಂಬಿಸಿದರು. ಥಾಮಸ್ ಮೋರ್, 'ಯುಟೋಪಿಯ'ದಲ್ಲಿ ಮಾನವ ಭೂಮಿಯ ಮೇಲಿನ ತನ್ನ ಬದುಕನ್ನು ಸುಖಮಯವಾಗಿ ಮಾಡಿಕೊಳ್ಳಬಹುದೆಂದು ಸೂಚಿಸಿದ.

ಲಿಯೊನಾರ್ಡೊ ದ ವಿಂಚಿ, ಮೈಕೆಲೆಂಜಲೋರಂಥ ಕಲಾವಿದರು ವಾಸ್ತುಶಿಲ್ಪದಲ್ಲಿ ಅದ್ಭುತ ವಿನ್ಯಾಸಗಳನ್ನು ತೋರಿದರು. ಇಟಲಿಯಂತೂ ವಾಸ್ತುಶಿಲ್ಪದಲ್ಲಿ ಇತರ ಯೂರೋಪಿನ ರಾಷ್ಟ್ರಗಳಿಗೆ ಮಾರ್ಗದರ್ಶನ ಮಾಡುತ್ತಿತ್ತು. ಉತ್ತರ ಇಟಲಿಯ ಆಂಡ್ರಿಯ ಪಲಾಡಿಯೊ (1508–80) ರೋಮನ್ ವಾಸ್ತುಶಿಲ್ಪವನ್ನು ಅನುಸರಿಸಿದ.

ಚಿತ್ರಕಲೆಯಲ್ಲಿ ನವೋದಯದ ನಾಂದಿ ಹಾಡಿದವನು ಜಿಯಾತ್ತೊ. ನವೋದಯ ಕಾಲದಲ್ಲಿ ಚಿತ್ರಕಲೆ ಉಚ್ಚಾಯ ಸ್ಥಿತಿಗೆ ಏರಿತು. ಕೆಲವರು ಹೊಸ ತಂತ್ರಗಳನ್ನು ಅಳವಡಿಸಿಕೊಂಡು ಚಿತ್ರ ರಚಿಸಿದರು. ರಾಫೇಲ್, ಟಿಷನ್, ಬಾಟಿಚೆಲ್ಲಿ ಉತ್ತಮ ಚಿತ್ರಗಳನ್ನು ನೀಡಿದರು. ವೆನಿಸ್ಸಿನಲ್ಲಿ ತೈಲಚಿತ್ರ ಜನಪ್ರಿಯವಾಯಿತು. ತ್ರಿ-ಆಯಾಮ ಪರಿಣಾಮ ಬರುವಂತೆ ಯಥಾವತ್ತಾಗಿ ರೂಪಣ ಮತ್ತು ಬೆಳಕು-ನೆರಳುಗಳ ವಿಪರೀತ ವಿವರ ನೀಡಿ ಚಿತ್ರಕೃತಿ ನಿಸರ್ಗಕ್ಕೆ ಹೆಚ್ಚು ಸಮೀಪವಾಗುವಂತೆ ಮಾಡಿದರು.

ಬರ್ಗಂಡಿಯ ಡ್ಯೂಕರ ಆಶ್ರಯದಲ್ಲಿ ನವೋದಯ ಸಂಗೀತ ಹೊಸ ಹೆಜ್ಜೆಗಳನ್ನಿಟ್ಟಿತು. ವಾದ್ಯಗಳ ಹಿಮ್ಮೇಳವಿಲ್ಲದೆ ಹೇಳುವಂಥ ಮ್ಯಾಡ್ರಿಗಲ್ ಎಂಬ ಲೌಕಿಕ ಹಾಡುಗಳು ಜನಪ್ರಿಯವಾದುವು. ಇಂಗ್ಲೆಂಡಿನ ವಿಲಿಯಂ ಬರ್ಡ್, ಇಟಲಿಯ ಗಿಯೊವಾನಿ —ಇವರಂಥ ರಚನಕಾರರು ಶ್ರೇಷ್ಠ ಕೃತಿಗಳನ್ನು ನೀಡಿದರು. ನಾಟಕಗಳಿಗಾಗಿ, ಆಸ್ಥಾನದ ಮನೋರಂಜನೆಗಾಗಿ ಸಂಗೀತ ರಚಿಸಲ್ಪಟ್ಟಿತು.

ಇಟಲಿಯಿಂದ ನವೋದಯ ಕಲೆ ಯೂರೋಪಿನಲ್ಲೆಲ್ಲ ಹರಡಿಕೊಂಡಿತು. ಮುಂದೆ ನಿಧಾನವಾಗಿ ಪ್ರಪಂಚದ ವಿವಿಧ ರಾಷ್ಟ್ರಗಳಿಗೂ ವ್ಯಾಪಿಸಿತು.

ನವೋದಯ ಕಾಲದಲ್ಲಾದ ಆವಿಷ್ಕಾರಗಳು, ಉದಾತ್ತ ಭಾವನೆಗಳು ಇಂದಿಗೂ ಪರಂಪರಾಗತವಾಗಿ ಉಳಿದುಬಂದಿವೆ.

## ನಾಟಕ

"ಕಾವ್ಯೇಷು ನಾಟಕಂ ರಮ್ಯಂ"—ಕಾವ್ಯ ಪ್ರಕಾರಗಳಲ್ಲಿ ನಾಟಕವೇ ಅತ್ಯಂತ ರಮ್ಯವಾದದ್ದು ; "ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ"—ಬೇರೆ ಬೇರೆ ಅಭಿರುಚಿಗಳುಳ್ಳ ಜನರಿಗೆ ನಾಟಕ ಏಕಕಾಲದಲ್ಲಿ ತೃಪ್ತಿಯನ್ನು ಕೊಡುತ್ತದೆ.

ಈ ಹೇಳಿಕೆಗಳು ಪ್ರಾಚೀನವಾದುವು.

ನಾಟಕವು ಸಂಗೀತ, ಸಾಹಿತ್ಯ, ಅಭಿನಯ, ನೃತ್ಯಗಳ ಸಮನ್ವಯದಿಂದ ರೂಪುಗೊಳ್ಳುವ ಸಂಕೀರ್ಣ ಕಲೆ ಇದು ದೃಶ್ಯ ಕಾವ್ಯವೆಂದೂ ಪ್ರಸಿದ್ಧವಾಗಿದೆ. ಸನ್ನಿವೇಶ, ಅಭಿನಯ, ಸಂಭಾಷಣೆ, ಸಂಗೀತ ಇವು ನಾಟಕದ ಪ್ರಧಾನ ಅಂಶಗಳು. ವೇಷಭೂಷಣ, ರಂಗಸಜ್ಜಿಕೆಗಳು ಇವಕ್ಕೆ ಪೋಷಕಗಳು.



ನಾಟಕ ನೋಡುತ್ತಿರುವ ಪ್ರೇಕ್ಷಕ ಗಣ : ಜರ್ಮನಿಯ ಗೊಂಬೆ ನಾಟಕ



ಮಾಸ್ಕೋ ಮಕ್ಕಳ ರಂಗಮಂದಿರ : ಕಿರಿಯರ ನಾಟಕ

ಜಗತ್ತಿನಲ್ಲಿ ನಾಟಕ ಎಂದು ಹುಟ್ಟಿ ಬೆಳೆಯಿತು ಎಂಬುದು ಖಚಿತವಿಲ್ಲ. ಪ್ರಾಚೀನ ಅನಾಗರಿಕ ಜನಾಂಗಗಳಲ್ಲಿ ಪ್ರಚಲಿತವಾಗಿದ್ದ ಧಾರ್ಮಿಕ ಕ್ರಿಯೆಗಳಿಗೆ ಸಂಬಂಧಿಸಿದ ಕುಣಿತಗಳಲ್ಲಿ ನಾಟಕದ ಮೂಲವನ್ನು ಕಾಣಬಹುದೆಂಬ ಒಂದು ಅಭಿಪ್ರಾಯವಿದೆ. ಗೊಂಬೆ ಆಟದಿಂದ ನಾಟಕ ಮೊದಲು ಹುಟ್ಟಿರಬೇಕೆಂದು ಕೆಲವು ತಜ್ಞರು ಊಹಿಸುತ್ತಾರೆ.

ಕ್ರಿ. ಪೂ. 2,000 ವರ್ಷಗಳ ಹಿಂದೆ ಈಜಿಪ್ಟಿನಲ್ಲಿ ಒಸೈರಸ್ ದೇವತೆಯ ಉತ್ಸವ ಕಾಲದಲ್ಲಿ ನಡೆಸುತ್ತಿದ್ದ ಚಟುವಟಿಕೆಯೇ ನಾಟಕಕಲೆಗೆ ಮೂಲ ಎನ್ನುತ್ತಾರೆ. ನಾಟಕಕ್ಕೆ ಸಂಬಂಧಿಸಿದಂತೆ ಅತ್ಯಂತ ಪ್ರಾಚೀನ ಉಲ್ಲೇಖಗಳು ಬೈಬಲಿನಲ್ಲಿ ಸಿಗುತ್ತವೆ. ಋಗ್ವೇದದಲ್ಲಿ ಸಂವಾದ ಸೂಕ್ತಗಳಿವೆ. ಆದರೆ ಪುರಾಣ, ಇತಿಹಾಸಗಳ ಕಾಲಗಳಲ್ಲಿ ನಾಟಕವಿತ್ತೆ ಎಂಬುದು ಸ್ಪಷ್ಟವಾಗಿಲ್ಲ. ಗ್ರೀಸ್ ದೇಶದಲ್ಲಿ ನಾಟಕ ಒಂದು ರಮ್ಯ ಕಲೆಯಾಗಿ ಅರಳಿದ್ದು ಧಾರ್ಮಿಕ ಉತ್ಸವಗಳ ಸಂಬಂಧದಲ್ಲೇ. ಡಯೊನಿಸಸ್ ಎನ್ನುವ ದ್ರಾಕ್ಷಾರಸದ ದೇವತೆಯ ಪ್ರೀತ್ಯರ್ಥವಾಗಿ ನಡೆಯುತ್ತಿದ್ದ ಉತ್ಸವದಲ್ಲಿ ಸುಮಾರು 50 ಜನರ ಮೇಳ ಆ ದೇವತೆಯ ಚರಿತ್ರೆಯನ್ನು ಹಾಡುತ್ತ ಕುಣಿಯುತ್ತಿತ್ತು. ಮೇಳದಲ್ಲಿ ನಾಯಕ ವೇದಿಕೆಯ ಮೇಲೆ ನಿಂತು ದೇವತಾ ಕಥೆಯನ್ನು ಕುರಿತು ಸಂವಾದ ನಡೆಸುತ್ತಿದ್ದ. ಥೆಸ್‌ಪಿಸ್ (ಕ್ರಿ. ಪೂ. 6ನೆಯ ಶತಮಾನ) ಈ ಮೇಳದ ಪ್ರಮುಖ ನಾಯಕನಾಗಿ ಗ್ರೀಕ್ ರಂಗಭೂಮಿಯ ಪ್ರಥಮ ನಟನಾದ. ಗ್ರೀಕ್ ನಾಟಕಗಳು ಪದ್ಯರೂಪದಲ್ಲಿದ್ದುವು. ಮೇಳಗೀತವನ್ನು ಅಭಿನಯದೊಡನೆ ಹಾಡುತ್ತ ಕುಣಿಯುತ್ತಿದ್ದರು.

ಧಾರ್ಮಿಕ ಉತ್ಸವಗಳ ಆವರಣದಲ್ಲಿ ಬೆಳೆದು ವಿಕಾಸಗೊಂಡ ನಾಟಕ ಕಲೆಗೆ ದೇವತೆಗಳ, ಮಹಾಪುರುಷರ ಜೀವನ ಕತೆ ವಸ್ತುವಾಗಿತ್ತು. ಮಧ್ಯಯುಗದಲ್ಲಿ ಯೂರೊಪಿನಲ್ಲಿ ಕೂಡ ನಾಟಕ ಧಾರ್ಮಿಕ ಪ್ರಭಾವಕ್ಕೆ ಒಳಗಾಗಿತ್ತು. ಇದರಿಂದ ನೀತಿಬೋಧಕ ನಾಟಕಗಳೂ ಬಂದುವು. ಕ್ರಮೇಣ ನಾಟಕದ ಸ್ವರೂಪ ಬದಲಾಯಿತು. ಶೃಂಗಾರ, ಹಾಸ್ಯಪ್ರಧಾನ ನಾಟಕಗಳು ಹುಟ್ಟಿದುವು.

ಬುದ್ಧಿಜೀವಿಗಳು ಹಾಗೂ ಸಮಾಜ ಸುಧಾರಕರು ತಮ್ಮ ಅಭಿಪ್ರಾಯಗಳನ್ನೂ ಸಮಾಜದ ಸಮಸ್ಯೆಗಳನ್ನೂ ನಾಟಕದಲ್ಲಿ ತಂದರು. ವಾಸ್ತವಿಕತೆ, ವಿಡಂಬನೆಯ ಅಂಶಗಳು ನಾಟಕದಲ್ಲಿ ಕಾಣಿಸಿದುವು.

ಎಲಿಜಬೆತ್ ರಾಣಿಯ (1533–1603) ಆಡಳಿತ ಕಾಲ ಇಂಗ್ಲಿಷ್ ನಾಟಕದ ಚರಿತ್ರೆಯಲ್ಲಿ ಸುವರ್ಣ ಯುಗವೆಂದು ಪರಿಗಣಿಸಲ್ಪಟ್ಟಿದೆ. ಪ್ರತಿಭಾನ್ವಿತ ನಾಟಕಕಾರ ಶೇಕ್ಸ್‌ಪಿಯರ್ ಈ ಕಾಲದವನು. ಜಗತ್ತಿನ ನಾಟಕ ಸಾಹಿತ್ಯಕ್ಕೆ ಅಮೂಲ್ಯ ಕೃತಿಗಳನ್ನು

ಸಿಯಾನ್ ಒಕ್ಯಾಸಿ : ಐರಿಷ್ ನಾಟಕಕಾರ



ಬರ್ಲಿನ್ ರಂಗಮಂಟಪದಲ್ಲಿ



ವಿಸ್ತಾರ ರಂಗಮಂಟಪ : 'ನವಜಗತ್ತಿನೆಡೆಗೆ' ರಷ್ಯನ್ ನಾಟಕದ ಆರಂಭ ದೃಶ್ಯ





ಲಾಸ್ ಎಂಜೆಲ್ಸ್ ರಂಗಮಂಟಪದಲ್ಲಿ ಅಮೆರಿಕನ್ ಅಭಿನೇತೃಗಳು : ಚೆಕಾಫನ 'ಕಡಲ ಹಕ್ಕಿ' ನಾಟಕ



ಜರ್ಮನ್ ನಟ ಜೂರ್ಗೆನ್ಸ್, ಫ್ರೆಂಚ್ ನಟ ಇವಾ



ಜೀನ್ ಅನೂಯಿಯಾ : ಫ್ರೆಂಚ್ ನಾಟಕಕಾರ

ಈತ ನೀಡಿದ. ಸರಳ ರಗಳೆಯ ಛಂದಸ್ಸು ಆಗಿನ ನಾಟಕಗಳಲ್ಲಿ ಉಪಯೋಗಿಸಲ್ಪಟ್ಟಿತು.

19ನೆಯ ಶತಮಾನದ ಉತ್ತರಾರ್ಧ 20ನೆಯ ಶತಮಾನದ ಪೂರ್ವಾರ್ಧದಲ್ಲಿ ಯೂರೋಪಿನಲ್ಲಿ ರೊಮ್ಯಾಂಟಿಕ್ ನಾಟಕಗಳು, ಅತಿಕಾಲ್ಪನಿಕ ನಾಟಕಗಳು ಜನಪ್ರಿಯವಾದುವು. ಸಾಂಕೇತಿಕ ಅಭಿವ್ಯಕ್ತಿ ಪ್ರಧಾನ ನಾಟಕಗಳೂ ರಂಗಭೂಮಿಯ ಮೇಲೆ ಬಂದುವು. ಎರಡನೆಯ ಮಹಾಯುದ್ಧದ ಅನಂತರ ಸಮಷ್ಟಿಪರಿಣಾಮ ಕಲೆ ನಾಟಕತಂತ್ರದ ಮೇಲೆ ಗಾಢ ಪ್ರಭಾವ ಬೀರಿತು. ಅಸಂಗತ ನಾಟಕಗಳು ಐರೋಪ್ಯ ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟುವು.



ಡ್ರೆಸ್ಡೆನ್‌ನಲ್ಲಿ 'ಡೆರ್ ಜುಂಗ್ ಲಾರ್ಡ್' ನಾಟಕದ ದೃಶ್ಯ

ಜಪಾನಿನ ಕಬೂಕಿ ಶೈಲಿಯ ನಾಟಕ : ಶತಮಾನಗಳು ಕಳೆದ ಮೇಲೂ ಜನಪ್ರಿಯ





'ಯಮನ ಸೋಲು' ಸಾಟಕದಲ್ಲಿ ಸಾವಿತ್ರಿ–ಬಿ. ಕೃಷ್ಣ, ಸತ್ಯವಾನ–ತರುಣ ಕುವೆಂಪು,
ಯಕ್ಷ–ಬಿ. ಆರ್. ಪುಟ್ಟನಂಜಪ್ಪ, ಯಮದೂತ–ಎನ್. ಅನಂತರಂಗಾಚಾರ್



ನೃತ್ಯನಾಟಕವಾಗಿ ಕುವೆಂಪು ಕೃತಿ 'ಕಿಂದರಿ ಜೋಗಿ' : ಬೆಂಗಳೂರು ಪ್ರಭಾತ ಶಿಶುವಿಹಾರದ ರಚನೆ



'ವಿವೇಕಿಯೂ ಎಡವುತ್ತಾನೆ'
ಸೋವಿಯೆತ್ ನಾಟಕದಲ್ಲಿ



ಅಮೆರಿಕನ್ ನಾಟಕಕಾರ ಥಾರ್ನ್‌ಟನ್ ವೈಲ್ಡರ್



ಜಪಾನೀ ಸೋ ಶೈಲಿಯ ಖ್ಯಾತ ನಟ ಡೆಂಜುರ


ಮರಾಠಿ ರಂಗಭೂಮಿಯ ಆರಂಭ ದೆಸೆಯ ಖ್ಯಾತ ನಟ ಬಾಲಗಂಧರ್ವ


ಪು. ಲ. ದೇಶಪಾಂಡೆ : ಆಧುನಿಕ ಮರಾಠಿ ನಾಟಕಕಾರ


ನೃತ್ಯನಾಟಕವಾಗಿ 'ಗೋವಿನ ಕಥೆ' –ಪ್ರಭಾತ ಶಿಶುವಿಹಾರದ ಮಕ್ಕಳು

ಭಾರತದಲ್ಲಿ ನಾಟಕ ಮೊದಲು ರೂಪುಗೊಂಡದ್ದು ಸಂಸ್ಕೃತದಲ್ಲಿ. ಸುಮಾರು ಒಂದನೆಯ ಶತಮಾನದ್ದೆಂದು ಪರಿಗಣಿಸಲಾಗಿರುವ ಭರತನ 'ನಾಟ್ಯಶಾಸ್ತ್ರ'ದಲ್ಲಿ ನಾಟಕದ ವಿವಿಧ ಅಂಗಗಳನ್ನು ಗುರುತಿಸಿರುವುದರಿಂದ ಆ ಕಾಲಕ್ಕೆ ಹಿಂದೆಯೇ ನಮ್ಮಲ್ಲಿ ನಾಟಕ ಕಲೆ ಸಾಕಷ್ಟು ಬೆಳೆದಿತ್ತು –ಎಂದು ಭಾವಿಸಬಹುದು. ಸಂಸ್ಕೃತ ನಾಟಕಗಳಲ್ಲಿ ಗದ್ಯಪದ್ಯಗಳೆರಡನ್ನೂ ಉಪಯೋಗಿಸಿದ್ದಾರೆ ; ಇವುಗಳಲ್ಲಿ ಸಂಸ್ಕೃತ ಭಾಷೆಯ ಜೊತೆಗೆ ಪ್ರಾಕೃತವೂ ಕಂಡುಬರುತ್ತದೆ. ಅಶ್ವಘೋಷ, ಭಾಸ, ಕಾಳಿದಾಸ, ವಿಶಾಖದತ್ತ ಮುಂತಾದವರು ಪ್ರಮುಖ ಸಂಸ್ಕೃತ ನಾಟಕಕಾರರು. ರಾಮಾಯಣ ಮಹಾಭಾರತಗಳ ಪ್ರಸಂಗಗಳೇ ಸಂಸ್ಕೃತ ನಾಟಕಗಳ ಪ್ರಧಾನ ಕಥಾವಸ್ತುಗಳು.

ಕನ್ನಡದಲ್ಲಿ 8–9ನೆಯ ಶತಮಾನದಿಂದ ನಾಟಕಪ್ರದರ್ಶನಗಳು ನಡೆಯುತ್ತಿದ್ದಿರಬೇಕು ಎನ್ನಲು ಆಧಾರಗಳಿವೆ. ಲಿಖಿತ ನಾಟಕವಿಲ್ಲದೆಯೇ ಕಾವ್ಯವನ್ನೇ ರಂಗದ ಮೇಲೆ ನಾಟಕಕ್ಕೆ ಅಳವಡಿಸಿಕೊಂಡು ಪ್ರದರ್ಶಿಸುವ ಪದ್ಧತಿ ನಮ್ಮಲ್ಲಿ ಇದ್ದಿರಬೇಕು. ಈಗಲೂ ಉಳಿದಿರುವ ಯಕ್ಷಗಾನದ ಮಾದರಿ ಇದನ್ನು ಸೂಚಿಸುತ್ತದೆ.

ಕನ್ನಡದಲ್ಲಿ ನಮಗೆ ದೊರೆತಿರುವ ಮೊದಲ ಲಿಖಿತ ನಾಟಕ

ಪ್ರೇಮನಾಥ್–ಪೃಥ್ವೀರಾಜ್ ಕಪೂರ್ : 'ಪಠಾಣ' ನಾಟಕದಲ್ಲಿ




ಕಂಬಾರರ 'ಜೋಕುಮಾರ ಸ್ವಾಮಿ'ಯಲ್ಲಿ ಗಿರೀಶ್ ಕಾರ್ನಾಡ್



ಮಿಂಚಿ ಮರೆಯಾದ
ಹಿಂದಿ ನಾಟಕಕಾರ ಮೋಹನ್ ರಾಕೇಶ್

ಸಿಂಗರಾರ್ಯರ 'ಮಿತ್ರವಿಂದಾ ಗೋವಿಂದ'. ಇದು ಸಂಸ್ಕೃತ 'ರತ್ನಾವಳಿ'ಯ ನಾಟಕದ ರೂಪಾಂತರ. ಅನಂತರ ಕನ್ನಡದಲ್ಲಿ ನಾಟಕರಚನೆ ನಡೆದದ್ದು 19ನೆಯ ಶತಮಾನದ ಕೊನೆಯ ಭಾಗದಲ್ಲಿ. ಈ ಕಾಲದಲ್ಲಿ ಸಂಸ್ಕೃತ ನಾಟಕಗಳ ಅನುವಾದಗಳೂ ಇಂಗ್ಲಿಷ್ ನಾಟಕಗಳ ರೂಪಾಂತರಗಳೂ ಕನ್ನಡದಲ್ಲಿ ಬಂದುವು. 1887ರಲ್ಲಿ ಪ್ರಕಟವಾದ, ಆಡುಮಾತಿನಲ್ಲೇ ಇರುವ ಸೂರಿ ವೆಂಕಟರಮಣ ಶಾಸ್ತ್ರಿಯವರ 'ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನ' ಕನ್ನಡದ ಪ್ರಥಮ ಸಾಮಾಜಿಕ ನಾಟಕ. 20ನೆಯ ಶತಮಾನದ ಆರಂಭದಲ್ಲಿ ಸ್ವತಂತ್ರ ಕನ್ನಡ ನಾಟಕಗಳು ಪ್ರಕಟವಾದುವು. ಇವೆಲ್ಲ ವೃತ್ತಿನಾಟಕ ಸಂಸ್ಥೆಗಳಿಗಾಗಿ ಬರೆದ ನಾಟಕಗಳು. ಇವುಗಳ ವಸ್ತು ಪ್ರಧಾನವಾಗಿ ಪೌರಾಣಿಕ. ಅನಂತರ ಸಾಮಾಜಿಕ ನಾಟಕಗಳು ಬಂದುವು. ಪಾಶ್ಚಾತ್ಯ ರಂಗಭೂಮಿಯ ಪ್ರಭಾವ ಈ ಹೊಸ ರಚನೆಗೆ ಪ್ರೇರಕ. ಇವಲ್ಲದೆ ಗೀತನಾಟಕಗಳು, ಮಕ್ಕಳ ನಾಟಕಗಳು, ಐತಿಹಾಸಿಕ ನಾಟಕಗಳು ಕನ್ನಡದಲ್ಲಿ ರಚಿತವಾಗಿವೆ.

ರೇಡಿಯೋ ಅಥವಾ ಪ್ರಸಾರ ನಾಟಕಗಳು ಇತ್ತೀಚೆಗೆ ಹೆಚ್ಚು ಜನಪ್ರಿಯವಾಗಿವೆ. ರೇಡಿಯೋ ನಾಟಕ ನೋಡುವ ನಾಟಕವಲ್ಲ ; ಕೇಳುವ ನಾಟಕ. ಆದ್ದರಿಂದ ಇದರಲ್ಲಿ, ಕೇವಲ ಮಾತು, ಶಬ್ದಗಳಿಂದ ನಾಟಕದ ಪ್ರಭಾವವನ್ನು ಸಾಧಿಸಬೇಕಾಗುತ್ತದೆ.

ಅಸಂಗತ ನಾಟಕಗಳು ಕೂಡ ಇತ್ತೀಚೆಗೆ ಕನ್ನಡ ರಂಗಭೂಮಿಯ ಮೇಲೆ ಪ್ರದರ್ಶನಕ್ಕೆ ಬಂದಿವೆ. ನಾಟಕದ ಪಾತ್ರಗಳು ಆಡುವ ಮಾತು, ಸೃಷ್ಟಿಸಿದ ಸನ್ನಿವೇಶಗಳು ಮೇಲುನೋಟಕ್ಕೆ ಪರಸ್ಪರ ಹೊಂದಾಣಿಕೆ ಇಲ್ಲದಂತೆ ಕಂಡರೂ ಇವುಗಳಲ್ಲಿ ಜೀವನ, ಪರಿಸ್ಥಿತಿಗಳ ಚುರುಕಾದ ವಿಡಂಬನೆ ಇರುವುದು ಯಾರಿಗಾದರೂ ಸ್ಪಷ್ಟವಾಗುತ್ತದೆ. ಆದರೂ ಸಾಮಾನ್ಯ ಪ್ರೇಕ್ಷಕರಿಗೆ ಈ ನಾಟಕಗಳು ಅರ್ಥವಾಗುವುದು ಕಷ್ಟವೇ. ಅದಕ್ಕೆ ದೀರ್ಘ ವಿವರಣೆ ಅವಶ್ಯವಾಗುತ್ತದೆ.

ನೋಡಿ : ಕಾಮಿಡಿ : ಟ್ರಾಜಿಡಿ ; ನಾಟಕಶಾಲೆ ; ಭಾರತೀಯ ರಂಗಭೂಮಿ ; ರಂಗಸಜ್ಜಿಕೆ I5

## ನಾಟಕಶಾಲೆ

ಬಿಸಿಲು ಮಳೆಗಳ ಕೋಟಲೆಯಿಲ್ಲ. ರಂಗಮಂಚದಿಂದ ಎಷ್ಟು ದೂರದಲ್ಲಿ ಕುಳಿತರೂ ಪ್ರತಿ ಪಾತ್ರಧಾರಿ ಆಡುವ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತವೆ. ಆಸನಗಳಲ್ಲಿ ಒರಗಿಕೊಂಡು ಆರಾಮವಾಗಿ ಕೂಡಬಹುದು. ನಾಟಕ ಪ್ರದರ್ಶನದ ಮಧ್ಯಂತರ ವಿರಾಮಕಾಲದಲ್ಲಿ ಸಭಾಂಗಣದ ಹೊರಗೆ ಫಲಾಹಾರ, ಪಾನೀಯಗಳು ದೊರೆಯುತ್ತವೆ.

ಹೀಗೆ ಆಧುನಿಕ ನಾಟಕಶಾಲೆಗಳ ಸೌಲಭ್ಯಗಳು ಹಲವಾರು. ಅಲ್ಲದೆ ರಂಗಸಜ್ಜಿಕೆ ಮೊದಲುಗೊಂಡು ನಟರ ಅಭಿನಯಕ್ಕೆ ಪೋಷಕವಾದ ಸಕಲ ಸೌಕರ್ಯಗಳನ್ನೂ ಇಂದಿನ ನಾಟಕಶಾಲೆ ಪೂರೈಸುತ್ತದೆ. ಪ್ರೇಕ್ಷಕರು ಕೆಲವೇ ಮಂದಿಯಿರಲಿ, ಇಲ್ಲವೆ ಸಾವಿರ ಸಂಖ್ಯೆಯಲ್ಲಿರಲಿ, ನಾಟಕಶಾಲೆಯಲ್ಲಿ ಅವರಿಗೆ ಹೆಚ್ಚಿನ ಮಹತ್ವ. ನಾಟಕಕಾರ ನಾಟಕ ಬರೆಯುವುದು, ನಟ ನಟಿಯರು ಅದನ್ನು ಅಭಿನಯಿಸುವುದು ಪ್ರೇಕ್ಷಕನಿಗಾಗಿ. ನಾಟಕಾಭ್ಯಾಸ ಕಾಲದಲ್ಲಿ ಮಾತ್ರ ಪ್ರೇಕ್ಷಕನಿಲ್ಲದೆಯೇ ರಂಗಮಂಚದ ಮೇಲೆ ಅಭಿನಯ ನಡೆಯುತ್ತದೆ.

ನಾಟಕಶಾಲೆಯ ಹುಟ್ಟಿಗೆ ಕಾರಣವಾದ ರಂಗಕಲೆಯ ಆರಂಭವನ್ನು ಮಾನವನ ಪ್ರಾಚೀನ ಧಾರ್ಮಿಕ ಆಚರಣೆಗಳಲ್ಲಿ ಗುರುತಿಸಬಹುದು. ದುಷ್ಟ ಶಕ್ತಿಗಳನ್ನು ಎದುರಿಸಲು ಹಿರಿಯ ಶಕ್ತಿಗಳನ್ನು ಮೆಚ್ಚಿಸಲು ಆಚರಿಸುತ್ತಿದ್ದ ನೃತ್ಯ ಹಾಗೂ ಗಾಯನಗಳನ್ನು ನೋಡಲು ಜನರು ನಿಶ್ಚಿತವಾದ ಒಂದು ಕಡೆ ನೆರೆಯುತ್ತಿದ್ದರು. ಈ ನೃತ್ಯದಲ್ಲಿ ಭಾಗವಹಿಸುವಾತ ಬಣ್ಣಗಳಿಂದ ವಿಜೃಂಭಿಸುತ್ತಿದ್ದ. ತಲೆ ಭುಜ ಮುಂತಾದ ಅವಯವಗಳಿಗೆ ಹಲವು ವಿಶೇಷ ಅಲಂಕಾರಗಳನ್ನು ತೊಡುತ್ತಿದ್ದ. ಇದು ಈಗಲೂ ನಮ್ಮ ದೇಶದಲ್ಲಿ ಯಕ್ಷಗಾನಾದಿ ಕಲಾಪ್ರಕಾರಗಳಲ್ಲಿ ಕಂಡುಬರುವ ಪದ್ಧತಿ.

ಪಾಶ್ಚಾತ್ಯ ಜಗತ್ತಿನ ಪ್ರಾಚೀನ ನಾಟಕಶಾಲೆಯ ಮೂಲವನ್ನು ಗ್ರೀಸಿನ ನಾಟಕಶಾಲೆಯಲ್ಲಿ ಕಾಣಬಹುದು. ತನ್ನ ಮುನ್ನಡೆಯ ಹಾದಿಯಲ್ಲಿ ಅದು ಹಲವಾರು ಘಟ್ಟಗಳನ್ನು ಹಾಯ್ದು, ವಿಕಾಸಗೊಂಡು, ಅತ್ಯಂತ ಸುಸಜ್ಜಿತ ನಾಟಕಶಾಲೆಯಾಗಿ ಮಾರ್ಪಾಟಾಯಿತು.

ಗ್ರೀಕರ ನಾಟಕಶಾಲೆಯೆಂದರೆ ಬಯಲು ನಾಟ್ಯಮಂದಿರ. ಸುತ್ತಲೂ ಗುಡ್ಡಗಳು ; ಮಧ್ಯದಲ್ಲಿ ರಂಗಭೂಮಿ. ಪ್ರೇಕ್ಷಕರು ಗುಡ್ಡದ ಇಳಿಜಾರಿನ ಮೇಲೆ ಕೂಡುವುದರಿಂದ ಪ್ರದರ್ಶನ ಎಲ್ಲರಿಗೂ ಚೆನ್ನಾಗಿ ಕಾಣುತ್ತಿತ್ತು. ನೃತ್ಯಗಳಿಗೆ ಕಥೆ ಸೇರಿಸಿ ಬೆಳೆಸಿದಾಗ ನಾಟಕ ಹುಟ್ಟಿತು. ಗುಡ್ಡಗಳ ಇಳಿಜಾರಿನ ಅನುಕೂಲಗಳಿಲ್ಲದ ಕಡೆ ನಾಟಕ ಶಾಲೆಗಳನ್ನು ವಿಶಿಷ್ಟವಾಗಿ



ಮಾಸ್ಕೋದಲ್ಲಿ
ಮಾಕ್ಸಿಂ ಗಾರ್ಕಿ ರಂಗಮಂದಿರ

ನಿರ್ಮಿಸುವ ಆಲೋಚನೆ ಬಂದಿರಬೇಕು. ವರ್ತುಲಾಕೃತಿಯ ನಾಟಕ ಶಾಲೆಗಳು ಹೀಗೆ ಹುಟ್ಟಿಕೊಂಡಿರಬೇಕು. ಆದರೆ ಈ ಬಗೆಯ ನಾಟಕ ಶಾಲೆಗಳಿಗೆ ಸೂರು ಮಾತ್ರ ಇರಲಿಲ್ಲ. ಮಧ್ಯದಲ್ಲಿದ್ದ ವೇದಿಕೆಯ ಹಿಂಭಾಗದಲ್ಲಿ ನಟ ನಟಿಯರು ವೇಷ ಧರಿಸುವ ಸ್ಥಳವಿರುತ್ತಿತ್ತು. ಹಲವಾರು ಸಾವಿರ ಜನರು ಕೂಡಬಹುದಾದ ಇಂಥ ಬಯಲು ನಾಟ್ಯ ಮಂದಿರಗಳನ್ನು ಪ್ರಾಚೀನ ಗ್ರೀಕರೂ ರೋಮನರೂ ಕಟ್ಟಿದರು. ಅವುಗಳ ಅವಶೇಷಗಳು ಇಂದಿಗೂ ಉಳಿದಿವೆ. ಮೇಲೆ ಛಾವಣಿಯಿಲ್ಲದ ಈ ನಾಟಕಶಾಲೆಗಳಲ್ಲಿ ಹಗಲಿನಲ್ಲಿ ಮಾತ್ರ ನಾಟಕವಾಡಲು ಸಾಧ್ಯವಿದ್ದಿತು. ಗ್ರೀಕರ ಕಾಲದಲ್ಲಂತೂ ಪ್ರತಿ ವರ್ಷಕ್ಕೆ ಎರಡು ಬಾರಿ ನಾಟಕೋತ್ಸವಗಳು ಜರುಗುತ್ತಿದ್ದುವು. ಒಂದೇ ಕಥಾವಸ್ತು ಮೂರು ನಾಟಕಗಳಿಗೂ ಹೆಣೆಯಲ್ಪಟ್ಟಿತೆಂದರೆ, ಬೆಳಗಿನಿಂದ ಸಂಜೆಯವರೆಗೆ ಜನರು ನಾಟಕಶಾಲೆಯಲ್ಲೇ ಇದ್ದು ನಾಟಕಗಳನ್ನು ನೋಡುತ್ತಿದ್ದರು.

ರೋಮನರು ತಮ್ಮ ನಾಟಕಶಾಲೆಗಳನ್ನು ಮಟ್ಟಸ ಭೂಮಿಯ ಮೇಲೆ ಕಟ್ಟಿದರು. ಕ್ರಿ. ಪೂ. 61ರಲ್ಲಿ ಕಲ್ಲಿನಿಂದ ನಾಟಕಶಾಲೆಯನ್ನು ಅವರು ನಿರ್ಮಿಸಿದರು. ವೇದಿಕೆಯ ಎತ್ತರವನ್ನು ಕಡಮೆ ಮಾಡಿದರು. ಅಂಕದ ಪರದೆಯನ್ನು ಬಳಸುತ್ತಿದ್ದುದೂ ಉಂಟು.

ನಾಟಕಶಾಲೆಯ ರಚನೆಯಲ್ಲಿ ರೋಮನರ ಅನಂತರ ಸುಮಾರು ಹತ್ತು ಶತಮಾನಗಳ ಕಾಲ ಯಾವುದೇ ದೊಡ್ಡ ಬದಲಾವಣೆಗಳೂ ಆಗಲಿಲ್ಲ. ಏಕೆಂದರೆ ಈ ಕಾಲದಲ್ಲಿ ನಾಟಕಕಲೆಗೆ ಅಷ್ಟಾಗಿ ಉತ್ತೇಜನವಿರಲಿಲ್ಲ. ಕ್ರೈಸ್ತ ಧರ್ಮಗುರುಗಳು ನಾಟಕವು ಸೈತಾನನ ಸೃಷ್ಟಿಕಲೆ ಎಂದು ಸಾರಿದರು. ಆದರೆ ಧಾರ್ಮಿಕ ವಿಚಾರಗಳನ್ನು ತಿಳಿಸಿಕೊಡಲು ನಾಟಕ ಒಳ್ಳೆಯ ಮಾಧ್ಯಮ ಎಂಬುದು ಅವರಿಗೆ ಮನದಟ್ಟಾದಾಗ ಅವರು ನಾಟಕಕಲೆಯಲ್ಲಿ ಆಸಕ್ತರಾದರು. ನಾಟಕ ಕಲೆಗೆ ಮತ್ತೆ ಪೋಷಣೆ ದೊರೆಯಿತು.

16ನೆಯ ಶತಮಾನದಲ್ಲಿ ಲಂಡನಿನಲ್ಲಿ ಕಟ್ಟಲ್ಪಟ್ಟ ಮೊಟ್ಟಮೊದಲ ನಾಟಕಶಾಲೆ ಎಲಿಜಬೆತ್ ರಾಣಿಯ ಆಳ್ವಿಕೆಯ ಅವಧಿಯದು. ಅದೇ ಕಾಲಕ್ಕೆ ನಿರ್ಮಿತವಾದ ಮತ್ತೊಂದು ಪ್ರಖ್ಯಾತ ನಾಟಕಶಾಲೆಯಲ್ಲಿ ಶೇಕ್ಸ್‌ಪಿಯರನ ಅನೇಕ ನಾಟಕಗಳು ಪ್ರದರ್ಶನಗೊಂಡುವು. ಈ ನಾಟಕಶಾಲೆಯ ನಿರ್ಮಾಣಕ್ಕೆ ಶೇಕ್ಸ್‌ಪಿಯರನೂ ಹಣ ಹಾಕಿದ್ದ. ವರ್ತುಲಾಕಾರದ, ಮರದಿಂದ ಕಟ್ಟಲ್ಪಟ್ಟ ನಾಟಕಶಾಲೆ ಇದು. ಮಧ್ಯೆ ಚೌಕವಾದ ರಂಗಸ್ಥಳ. ಮುಂಭಾಗದಲ್ಲಿ ಕುಣಿ. ಇದು ಸೂರಿಲ್ಲದ ತೆರಪಾದ ಜಾಗ. ಅನಂತರ ಗ್ಯಾಲರಿಗಳು, ಪ್ರೇಕ್ಷಕರಿಗಾಗಿ. ಇದು ಆ ಕಾಲದ ನಾಟಕಶಾಲೆಯ ಸ್ವರೂಪ.

ನವೋದಯ ಕಾಲದಲ್ಲಿ ಇಟಲಿಯಲ್ಲಿ ಇತರ ಎಲ್ಲ ಕಲೆಗಳು ಜಾಗೃತಗೊಂಡಂತೆ ನಾಟಕ ಕಲೆಯೂ ವೃದ್ಧಿಗೊಂಡಿತು. ರೋಮನ್ ನಾಟಕಶಾಲೆಯನ್ನು ಅನುಸರಿಸಿ ಇಟಲಿಯ ನಾಟಕ ಕಲೆ ರೂಪುಗೊಂಡಿತು. ರೋಮನ್ ನಾಟಕಶಾಲೆಯನ್ನು ಅನುಸರಿಸಿ ನಾಟಕಶಾಲೆಗಳು ಕಟ್ಟಲ್ಪಟ್ಟುವು. ಸ್ಥಳ ವಿಸ್ತಾರದ ಭಾವನೆಯನ್ನು ಮೂಡಿಸುವಂಥ ಚಿತ್ರದ ಪರದೆ, ಗುಡುಗು ಮಿಂಚು ಬರಿಸುವಂಥ ಯಂತ್ರಗಳು ರಂಗಸ್ಥಳಗಳಲ್ಲಿ ಬಳಕೆಗೆ ಬಂದುವು. ಈ ನಾಟಕ ಶಾಲೆಯ ರೀತಿ ಕ್ರಮೇಣ ಇತರ ಪ್ರದೇಶಗಳಿಗೂ ಹರಡಲಾರಂಭಿಸಿತು.

19ನೆಯ ಶತಮಾನದ ಮಧ್ಯದ ವೇಳೆಗೆ ರಂಗಮಂಚದ ಮುಖಭಾಗವನ್ನು ಚಿತ್ರರಂಜಿತ ಚೌಕಟ್ಟಿನಿಂದ ಅಲಂಕರಿಸುವ ಪದ್ಧತಿ ಆಚರಣೆಗೆ ಬಂತು. ನಾಟಕದ ಬಹುಭಾಗ ಅಂಕದ ಪರದೆಯ ಇಳಿಯುವ ಸ್ಥಾನದಿಂದ ಒಂದಕ್ಕೆ ನಡೆಯುವ ಸಂಪ್ರದಾಯ ಆಚರಣೆಗೆ ಬಂದಿತು. ಈ ನಾಟಕ ಶಾಲೆಗಳಿಗೂ ಇಂದಿನ ನಾಟಕಶಾಲೆಗಳಿಗೂ ಹೆಚ್ಚು ಸಾಮ್ಯವಿದೆ.



ಪ್ರಾಚೀನ ಗ್ರೀಸಿನ ಬಯಲು ನಾಟ್ಯಮಂದಿರದಲ್ಲಿ ಅಮೃತಶಿಲೆಯ ಪೀಠಗಳು

ಯಂತ್ರಜ್ಞಾನ ಬೆಳೆದಂತೆ ರಂಗಸ್ಥಳದಲ್ಲಿ ಹಲವು ಬಗೆಯ ಬದಲಾವಣೆಗಳಾದುವು. ಜರ್ಮನಿ, ರಷ್ಯ, ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಅತ್ಯಾಧುನಿಕ ಉಪಕರಣಗಳನ್ನು ಅಳವಡಿಸಿದ ನಾಟಕ ಶಾಲೆಗಳು ನಿರ್ಮಿಸಲ್ಪಟ್ಟುವು. ನಾಟಕಗೃಹ ನಿರ್ಮಾಣ, ರಂಗಸಜ್ಜಿಕೆ, ದೃಶ್ಯ ಪರಿವರ್ತನೆ, ರಂಗಪ್ರಕಾಶನ, ಧ್ವನಿ ನಿಯೋಜನೆಗಳಲ್ಲಿ ಹೊಸ ವ್ಯವಸ್ಥೆಗಳು ರೂಪುಗೊಂಡುವು. ರಂಗಸ್ಥಳದ ಮಗ್ಗುಲಲ್ಲಿ ಪಾತ್ರಗಳ ಮೇಕಪ್‌ಗಾಗಿಯೇ ಕೊಠಡಿಗಳು ಸಿದ್ಧವಾದುವು. ಇವುಗಳಿಂದಾಗಿ ದೃಶ್ಯ ಪರಿವರ್ತನೆಯ ದೀರ್ಘಕಾಲಹರಣ ತಪ್ಪುತ್ತಲ್ಲದೆ, ಪ್ರೇಕ್ಷಕರು ಮಂದಿರದ ಯಾವ ಭಾಗದಲ್ಲೇ ಕುಳಿತಿರಲಿ ನಾಟಕದ ಎಲ್ಲ ದೃಶ್ಯಗಳನ್ನೂ ಸ್ಪಷ್ಟವಾಗಿ ಕಾಣುವಂತಾಯಿತು. ನಟರು ಆಡಿದ ಎಲ್ಲ ಮಾತುಗಳು ಸ್ಪಷ್ಟವಾಗಿ ಕೇಳಿಸುವುದೂ ಸಾಧ್ಯವಾಯಿತು. ಅಪೆರಾ ಹಾಗೂ ನಾಟಕ ಪ್ರದರ್ಶನಗಳಿಗೆಂದೇ ಮೀಸಲಾದ ವಿಶಿಷ್ಟ ಸಂಪ್ರದಾಯವಿರುವ, ಹಲವು ನೂರು ವರ್ಷಗಳಿಂದ ಇನ್ನೂ ನಡೆಯುತ್ತಿರುವ ನಾಟಕಶಾಲೆಗಳೂ ಇವೆ.

ನಾಟಕ ಶಾಲೆ ನಾಗರಿಕ ಜೀವನದ ಅನಿವಾರ್ಯ ಅಂಗ, ಜನತೆಯ ಮನೋರಂಜನೆಯ ಕೇಂದ್ರ.

## ನಾಯಕ, ನಾಯಕಿ

ಒಂದೂರಿನಲ್ಲಿ ಒಬ್ಬ ರಾಜಕುಮಾರನಿದ್ದ. ಅವನು ಬಹಳ ಶೂರ, ಧೀರ, ಸುಂದರ. ನೆರೆರಾಜ್ಯದಲ್ಲಿ ಒಬ್ಬ ರಾಜನಿದ್ದ. ಅವನಿಗೆ ಒಬ್ಬಳು ಮಗಳು. ಅವಳು ಬಹಳ ಚೆಲುವೆ; ಗುಣವಂತೆ–ಹೀಗೆ ಸಾಗುತ್ತದೆ ಒಂದು ಕಟ್ಟುಕಥೆ. ಮುಂದೆ ಈ ರಾಜಕುಮಾರ ಸಾಹಸದಿಂದ ಭಯಂಕರ ಪರಿಸ್ಥಿತಿಗಳನ್ನು ಎದುರಿಸಿ ನೆರೆರಾಜ್ಯದ ರಾಜಕುಮಾರಿಯನ್ನು ಮದುವೆಯಾಗುತ್ತಾನೆ—ಎನ್ನುವುದನ್ನು ಸುಲಭವಾಗಿ ಊಹಿಸಬಹುದು. ಇದರಲ್ಲಿ ಬರುವ ರಾಜಕುಮಾರನೇ ನಾಯಕ, ರಾಜಕುಮಾರಿಯೇ ನಾಯಕಿ. ಹೀಗೆ ನಾಯಕ ನಾಯಕಿ ಒಂದು ಕಥೆ ಇಲ್ಲವೆ ನಾಟಕದಲ್ಲಿ ಪ್ರಧಾನ ವ್ಯಕ್ತಿಗಳು.

ಕಥೆಯೇ ಆಗಲಿ, ನಾಟಕವೇ ಆಗಲಿ ನಾಯಕ–ನಾಯಕಿ ಪಾತ್ರಗಳನ್ನು ಒಳಗೊಂಡಿರುವುದು ಸಾಂಪ್ರದಾಯಿಕವಾಗಿ ಬಂದಿರುವ ಪದ್ಧತಿ.

ಜನಸಾಮಾನ್ಯರಿಗೆ ನಾಯಕ–ನಾಯಕಿಯರಿದ್ದರೇನೇ ಕಥೆ, ನಾಟಕಗಳು ರಂಜಿಸುತ್ತವೆ. ಇದರಿಂದಲೇ ಈ ರಚನೆಗಳಲ್ಲಿ, ಈ ಪಾತ್ರಗಳ ಸೃಷ್ಟಿ

[illegible] ಕಾಣುತ್ತೇವೆ. [illegible] ಕಥೆಯ ನಾಯಕ [illegible] ಅವನಿಗೆ ಪ್ರಾಣಿ [illegible] ಪ್ರಾಣಿಗಳು ಅವನಿಗೆ ನೆರವಾಗುವುದೂ ಉಂಟು. ದೇವತೆಗಳಿಗೂ ಅವನು ಮೆಚ್ಚು. ಈ ಅತಿಮಾನುಷ ಕಲ್ಪನೆಯ ವ್ಯಕ್ತಿ ಕಥೆ ಕೇಳುವ, ನಾಟಕ ನೋಡುವ ಬಾಲಕರ ಮನಸ್ಸಿನಲ್ಲಿ ವಿಶೇಷ ಪರಿಣಾಮ ಉಂಟುಮಾಡುವುದು ಸಹಜವೇ. ಅವನ ದೇಶಪ್ರೇಮ, ನ್ಯಾಯಸತ್ಯಗಳ ಪಕ್ಷಪಾತ, ಪರಸ್ತ್ರೀ ರಕ್ಷಣೆ ಸ್ಫೂರ್ತಿದಾಯಕವಾಗುತ್ತವೆ.

ನಾಯಕಿಯ ಬಗೆಗಿರುವ ಸಾಂಪ್ರದಾಯಿಕ ಭಾವನೆಗಳಂತೆ ಅವಳು ಲಲಿತಕಾಯಳು, ರೂಪವತಿ, ಶೀಲವಂತೆ, ಕಷ್ಟಗಳನ್ನು ತಾಳ್ಮೆಯಿಂದ ಸಹಿಸುವಳು. ನಾಯಕನಂತೆ ಈಕೆಯದೂ ಸ್ಫೂರ್ತಿದಾಯಕ ಪಾತ್ರ.

'ಸಾಹಿತ್ಯ ದರ್ಪಣ'ವೆಂಬ ಗ್ರಂಥದಲ್ಲಿ ಸಂಸ್ಕೃತ ನಾಟಕಗಳಲ್ಲಿ ಬರುವ ನಾಯಕ –ನಾಯಕಿಯರ ಲಕ್ಷಣಗಳು ಹೀಗೆ ವರ್ಣಿತವಾಗಿವೆ: ನಾಯಕ ಮಹಾಪುರುಷರ ಗುಣಗಳನ್ನು ಉಳ್ಳವನು. ನಾಯಕರಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರಶಾಂತ ಎಂದು ನಾಲ್ಕು ಬಗೆ. ದುಷ್ಯಂತ, ಹರಿಶ್ಚಂದ್ರನಂಥವರು, ಅವಿಚಲಿತರು, ಕ್ಷಮ, ವಿನಯ, ಸ್ಥೈರ್ಯ ಗುಣವುಳ್ಳವರು. ಧೀರೋದಾತ್ತರು. ಸಂಗೀತ ಸಾಹಿತ್ಯಗಳ ಒಲವಿರುವ, ಮೃದುಸ್ವಭಾವದ ನಾಯಕರು ಧೀರಲಲಿತರು. ಭಾಸನ 'ಸ್ವಪ್ನವಾಸವದತ್ತ' ನಾಟಕದ ನಾಯಕ ವತ್ಸರಾಜ ಇಂಥವನು. ಧೀರೋದ್ಧತರು–ಉದ್ಧಟರು, ದರ್ಪ, ಅಸೂಯೆ, ಅಹಂಕಾರವುಳ್ಳವರು. ಅವರು ಮಾಯೆ ಮೋಸಗಳ ಮೊರೆಹೊಗಬಹುದು—ರಾವಣ, ದುರ್ಯೋಧನರಂತೆ. ವಿಶೇಷ ಗುಣಗಳಿಲ್ಲದ ನಾಯಕರು ಧೀರಶಾಂತರು; 'ಮೃಚ್ಛಕಟಿಕ'ದ ಚಾರುದತ್ತ. ಇನ್ನೂ ಕೆಲ ಪ್ರಭೇದಗಳೆಂದು ಒಟ್ಟು ನಲವತ್ತೆಂಟು ಬಗೆಯ ನಾಯಕರನ್ನು ಗುರುತಿಸಲಾಗಿದೆ. ಇವನಿಗೆ ವಿಟ, ವಿದೂಷಕನಂಥ ಸಹಾಯಕರಿರುತ್ತಾರೆ.

ನಾಯಿಕೆ ಉತ್ತಮ ಗುಣಗಳುಳ್ಳವಳು. ಇವಳಲ್ಲಿಯೂ ಭೇದ, ಉಪಭೇದಗಳೆಂದು ಒಟ್ಟು 381 ಬಗೆಗಳನ್ನು ಲೆಕ್ಕಹಾಕಿದ್ದಾರೆ. ಒಂದನ್ನೊಂದು ನಿಕಟವಾಗಿ ಹೋಲುವ ನಾಟಕಗಳನ್ನು ನಿವಾರಿಸುವುದೇ ಇವುಗಳ ಉದ್ದೇಶ. ನಾಯಿಕೆಗೂ ಸಖಿ, ದಾಸಿ, ಸನ್ಯಾಸಿನಿಯರಂಥ ಸಹಾಯಕರಿರುತ್ತಾರೆ.

ಗ್ರೀಕ್ ಟ್ರಾಜಿಡಿಗಳಲ್ಲಿ ಸಾಮಾನ್ಯವಾಗಿ ನಾಯಕ ಸಾವಿಗೆ ತುತ್ತಾಗುತ್ತಾನೆ. ಯೂರೋಪಿನ ಮಧ್ಯಯುಗದ ಕಾಲದಲ್ಲಿ ಬಂದ ನೀತಿ ನಾಟಕಗಳಲ್ಲಿ ನಾಟಕವಸ್ತು ಕರ್ತೃವಿನ ಕಲ್ಪನೆ. ಆದರೆ ಅವರ ನಾಯಕ ಮಾತ್ರ ಯಾವಾಗಲೂ ಒಂದೇ ಬಗೆಯವನು. ಅವನು ಎಲ್ಲರ ಪ್ರತಿನಿಧಿ. ನಾಟಕದ ಇತರ ಪಾತ್ರಗಳು ಸದ್ಗುಣ ಹಾಗೂ ದುರ್ಗುಣಗಳು; ಸತ್ಯ ಸುಳ್ಳು ಮುಂತಾದವುಗಳ ಪ್ರತೀಕಗಳು. ಶೇಕ್ಸ್‌ಪಿಯರನ ಟ್ರಾಜಿಡಿಗಳಲ್ಲಿಯೂ ನಾಯಕ–ನಾಯಕಿಯರ ಬಾಳು ಸಾವಿನಲ್ಲಿ ಕೊನೆಗಾಣುತ್ತದೆ. ಒಥೆಲೊ, ಹ್ಯಾಮ್ಲೆಟ್, ಮ್ಯಾಕ್‌ಬೆತ್ ಈ ಎಲ್ಲ ನಾಟಕಗಳ ನಾಯಕರು ಸಾವನ್ನಪ್ಪುತ್ತಾರೆ. ಆದರೆ ಕಾಮಿಡಿಗಳಲ್ಲಿ ನಾಯಕ ನಾಯಕಿಯರ ಮಿಲನವಾಗುತ್ತದೆ. ಇದಕ್ಕೆ ಅಪವಾದಗಳೂ ಇವೆ.

ಆಧುನಿಕ ನಾಟಕಗಳಲ್ಲಿ ನಾಯಕ–ನಾಯಕಿಯರ ಲಕ್ಷಣಗಳು ಬದಲಾಗುತ್ತಿವೆ. ಅವರಿಗೆ ಸದ್ಗುಣ ಇರಬೇಕೆಂದಿಲ್ಲ. ಅವರಿಗೆ ಮೋಹಕ ರೂಪ ಇರಬೇಕಾಗಿಲ್ಲ. ಕೃತಿಯ ಪ್ರಧಾನ ಪಾತ್ರಗಳಾಗಿದ್ದರಾಯಿತು. ಕರ್ತೃವಿನ ಕೌಶಲದಿಂದ ಪಾತ್ರಗಳು ಓದುಗರ ಪ್ರೇಕ್ಷಕರ ಅನುಕಂಪ, ಸಹಾನುಭೂತಿಗಳನ್ನು ಸೆಳೆಯಬಲ್ಲುವು. ಮಹಾಭಾರತದಲ್ಲಿ ಧೂರ್ತನಂತೆ ತೋರುವ ದುರ್ಯೋಧನ ರನ್ನನ 'ಗದಾಯುದ್ಧ'ದಲ್ಲಿ ಅಭಿಮಾನಧನನಾಗಿ ಮೆರೆಯುತ್ತಾನೆ. ಓದುಗರ ಹೃದಯ ಅವನಿಗಾಗಿ ಮಿಡಿಯುತ್ತದೆ.

ಮತ್ತೊಂದು ನವೀನ ಪ್ರಯೋಗವೆಂದರೆ ಎಲ್ಲ ಪಾತ್ರಗಳಿಗೂ ಸಮಾನ ಪ್ರಾಧಾನ್ಯವಿರುವ, ಎಂದರೆ ನಾಯಕ ನಾಯಕಿಯರೇ ಇಲ್ಲದ, ನಾಟಕಗಳು ಹಾಗೂ ಕಥೆ ಕಾದಂಬರಿಗಳು.

ನೋಡಿ : ಖಳನಾಯಕ : ವಿದೂಷಕ

## ನಿಘಂಟು

ನೋಡಿ : ಸಂಪುಟ-೧

## ನಿಜಗುಣ ಶಿವಯೋಗಿ

ವಿಶ್ವಕೋಶದಂಥ ಕೃತಿ ಎಂದು ಪ್ರಶಂಸೆಗೆ ಪಾತ್ರವಾದ, ಹಲವಾರು ದೃಷ್ಟಿಗಳಿಂದ ಕನ್ನಡದಲ್ಲಿ ಆದ್ಯ ಎನಿಸಿದ 'ವಿವೇಕ ಚಿಂತಾಮಣಿ'ಯನ್ನು ಬರೆದವರು ನಿಜಗುಣ ಶಿವಯೋಗಿ. ನಮಗೆ ಗೊತ್ತಿರುವ ಅವರ ಏಳು ಗ್ರಂಥಗಳಲ್ಲಿ ಇದೂ ಒಂದು. ಅಷ್ಟು ಮಾತ್ರವಲ್ಲ, ಇದು ನಿಜಗುಣರ ಮೇರುಕೃತಿ.

'ವಿವೇಕ ಚಿಂತಾಮಣಿ' ಕನ್ನಡ ಭಾಷೆಯಲ್ಲಿರುವ ಒಂದು ಅಮೂಲ್ಯ ಜ್ಞಾನಭಂಡಾರ. ವೇದ ಶಾಸ್ತ್ರ ಪುರಾಣಗಳಲ್ಲಿ ಕಂಡುಬರುವ ಅನೇಕ ಅಂಶಗಳು ಇದರಲ್ಲಿ ಸಂಗ್ರಹಿಸಲ್ಪಟ್ಟಿವೆ. ಈ ಜಗತ್ತಿನ ಚೇತನರೂಪಿಯಾದ ಈಶ್ವರನ ಸ್ವರೂಪ, ತತ್ತ್ವಜ್ಞಾನಗಳ ಬಗೆಗೆ ವಿಶದ ನಿರೂಪಣೆ, ಸಾಧಕರು ಪರತತ್ತ್ವವನ್ನು ಉಪಾಸನೆ ಮಾಡುವ ರೀತಿ, ಶಿವಪೂಜಾ ವಿಧಾನ ಇತ್ಯಾದಿ ವಿವರಗಳು, ಈ ಜಗತ್ತಿನ ವರ್ಣನೆ, ಭೂಮಿಯ ವೈಶಿಷ್ಟ್ಯ, ಭರತವರ್ಷದ ಹಿರಿಮೆ, ಸಮುದ್ರ–ದ್ವೀಪಗಳ ವಿವರಣೆ, ಸುರಲೋಕ ವಿಷಯ, ಪಂಚ ಮಹಾಭೂತಗಳ ತತ್ತ್ವ ನಿರೂಪಣೆ, ವಿದ್ಯೆ ಮುಂತಾದ ವಿಷಯಗಳನ್ನು ಇದು ಒಳಗೊಂಡಿದೆ. ಹತ್ತು ಪ್ರಕರಣಗಳಲ್ಲಿ 765 ವಿಷಯಗಳ ಪ್ರತಿಪಾದನೆ ಇದೆ. ಈ ಗ್ರಂಥವನ್ನು ಸುಪ್ರಸಿದ್ಧ ಕನ್ನಡ ವಿದ್ವಾಂಸರಾದ ಇ. ಪಿ. ರೈಸ್ 'ವಿಶ್ವಕೋಶ'ವೆಂದು ಕರೆದಿರುವುದು ಅತಿಶಯೋಕ್ತಿಯೇನಲ್ಲ.

ವೇದಾಂತಿ–ಸಿದ್ಧಾಂತಿ–ಯೋಗಿಗಳಿಗೆ ಇದೊಂದು ಜ್ಞಾನಕೋಶದಂತಿದೆಯಾದರೂ ಇದರಲ್ಲಿ ಅನೇಕ ಲೌಕಿಕ ವಿಚಾರಗಳೂ ಅಡಕವಾಗಿವೆ. ಉದಾಹರಣೆಗೆ ನಿಜಗುಣರು ಸಂಗೀತವನ್ನು ಯೋಗದ ಒಂದು ಅಂಗವೆಂದು ಪರಿಗಣಿಸಿ ತಮ್ಮ ಈ ಕೃತಿಯಲ್ಲಿ ಅದಕ್ಕೂ ಒಂದು ಸ್ಥಾನ ಕೊಟ್ಟಿದ್ದಾರೆ. ನಾದ, ಶ್ರುತಿ, ಗಮಕ, ರಾಗಗಳ ಬಗೆಗೆ ಹಲವಾರು ವಿಚಾರಗಳನ್ನು ಅವರು ವಿವರಿಸಿದ್ದಾರೆ. ಸಂಗೀತ ವಾದ್ಯಗಳನ್ನು ಕುರಿತು, ವಿಶೇಷವಾಗಿ ವೀಣೆಯನ್ನು ಕುರಿತು, ಬರೆದಿದ್ದಾರೆ. ಅಲ್ಲದೆ ಒಳ್ಳೆಯ ಗಾಯಕ ಅಥವಾ ಗಾಯಕಿಯರಾಗಬೇಕಾದರೆ ಅವಶ್ಯ ಗುಣಗಳೂ, ದೋಷಗಳನ್ನು ನಿವಾರಿಸಬಹುದಾದ ರೀತಿಗಳೂ ಈ ಗ್ರಂಥದಲ್ಲಿ ಉಕ್ತವಾಗಿವೆ. ಸಂಗೀತದ ಬಗೆಗೆ ಶಾಸ್ತ್ರೀಯವಾಗಿ ವಿಚಾರ ಮಾಡಿರುವುದು ಈ ಕೃತಿಯ ಒಂದು ಮಹತ್ವದ ಸಾಧನೆ ಎನ್ನಬಹುದು. ಸಂಗೀತ ವಿಷಯಕ ನಿರೂಪಣೆ, 'ವಿವೇಕ ಚಿಂತಾಮಣಿ'ಯ ಒಂದು ಭಾಗ ಮಾತ್ರ. ಭೂಗೋಳ, ವೈದ್ಯ ಮುಂತಾದವುಗಳನ್ನು ಕುರಿತು ಕೂಡ ಈ ಗ್ರಂಥದಲ್ಲಿ ಬರೆಯಲಾಗಿದೆ.

ನಿಜಗುಣ ಶಿವಯೋಗಿಗಳು ಗದ್ಯಗ್ರಂಥ 'ವಿವೇಕ ಚಿಂತಾಮಣಿ'ಯಲ್ಲದೆ ತ್ರಿಪದಿಯಲ್ಲಿ ಅರವತ್ತು ಮೂರು ಪುರಾತನರನ್ನು ಕುರಿತು ಸ್ತುತಿಸಿದ್ದಾರೆ. ತ್ರಿಪದಿ ಛಂದಸ್ಸಿನಲ್ಲಿರುವ ಅವರ ಇನ್ನೊಂದು ಗ್ರಂಥ 'ಅನುಭವ ಸಾರ'. 'ಸಕಲ ವೇದಾಂತ ಸಾರವನು ತಿಳಿವಂತೆ' ಸಾಧಕರಿಗಾಗಿ ಬರೆದ ಗ್ರಂಥ ಇದು. ಲಲಿತ ರಗಳೆಯಲ್ಲಿ ಬರೆದಿರುವ 'ಪರಮಾರ್ಥ ಗೀತೆ' ಕೂಡ ಇಂಥದೇ ಆಧ್ಯಾತ್ಮಿಕ ಗ್ರಂಥ. ಇವೆರಡೂ ಗುರು ಶಿಷ್ಯ ಸಂವಾದರೂಪದಲ್ಲಿವೆ. 'ಪರಮಾರ್ಥ ಪ್ರಕಾಶಿಕೆ' ಗದ್ಯ ಗ್ರಂಥ. 'ಪರಮಾನುಭವ ಬೋಧೆ' ಸಾಂಗತ್ಯದಲ್ಲಿ ಬರೆದದ್ದು. 'ಕೈವಲ್ಯ ಪದ್ಧತಿ' ಹಾಡುಗಳ ಸಂಕಲನ. ಇದರಲ್ಲಿ ತತ್ತ್ವೋಪದೇಶಪರವಾದ ಹಾಗೂ ಶಿವಸ್ತುತಿ ರೂಪವಾದ ಹಾಡುಗಳಿವೆ. ಇವು ಹೆಣ್ಣುಮಕ್ಕಳಿಗೂ ಸಂಗೀತಗಾರರಿಗೂ ಪ್ರಿಯವಾದ ಕೃತಿಗಳಾಗಿವೆ. ಇವುಗಳ ಭಾಷೆ ಮೃದುಮಧುರ : ಎಲ್ಲರಿಗೂ ಸುಲಭವಾಗಿ ಅರ್ಥವಾಗಲಿ ಎಂಬ ಉದ್ದೇಶದಿಂದಲೇ ಬರೆದುವು. ಇವು ಮನೋಜ್ಞವಾಗಿವೆ.

ನಿಜಗುಣರ ಕೃತಿಗಳು ಆಧ್ಯಾತ್ಮಿಕವಾದುವಾದರೂ ಕಾವ್ಯದ ಹೊಳಹೂ ಅವುಗಳಲ್ಲಿವೆ. ಹರನ ಕೃಪಾದೃಷ್ಟಿಯನ್ನು ಬೇಡುವಾಗ "ಕಲುಷ ತಿಮಿರ ಮುಸುಗಿ ಮುಗಿದ ಹೃದನಳಿನವಲರೆ ನಿನ್ನ ಬಲವ ಭಾನು ನಯನದಿಂದ ನೋಡು" ಎನ್ನುತ್ತಾರೆ. "ವಿಮಲ ಮಾನಸದಿಂದ ಶುಭ ತೀರ್ಥಮುಂಟೇ" "ಎನ್ನ ಪರಿಭವದ ದುಃಖ ಸಮುದ್ರುವೆನಿಸುವ ಸಾಯುಸವ ನೆನೆನೆನೆದು ನಿದ್ರೆಬಾರದು". "ಮತಿಗೆ ಮಂಗಳವಾವುದು—ಉತ್ತಮ ಸಂಗ". "ಕಡು ಲೋಭದಿಂದೆ ದುರ್ಗುಣಮನ್ಯವುಂಟೆ"–ಇಂಥ ನುಡಿಮುತ್ತುಗಳು ಅವರ ಕೃತಿಗಳಲ್ಲಿ ದೊರೆಯುತ್ತವೆ. ಕೈವಲ್ಯ ಪದ್ಧತಿಯಲ್ಲಿ ಬರುವ ಅವರ ಗೀತೆಗಳೆಲ್ಲ ಗೇಯಗುಣವುಳ್ಳವು; ಹಾಡಬಹುದಾದಂಥವು. ಅಂತರಂಗ ಶುದ್ಧಿ ಅವರ ಎಲ್ಲ ವಿವೇಕ ನುಡಿಗಳ ಸಾರ.

ನಿಜಗುಣರ ವೈಯಕ್ತಿಕ ಜೀವನದ ಬಗೆಗೆ ತಿಳಿದಿರುವುದು ಅತ್ಯಲ್ಪ. ಅವರ ಕಾಲವನ್ನು ಕೆಲವು ಆಧಾರಗಳ ಮೇಲೆ ಸುಮಾರು 1500 ಎಂದು ಊಹಿಸಲಾಗಿದೆ. ನಿಜಗುಣ ಶಿವಯೋಗಿ ಎಂಬುದು ಅವರ ಅಂಕಿತ ನಾಮವೇ ಅನ್ವರ್ಥನಾಮವೇ ಅಥವಾ ವಿರಾಗಿಯಾದಾಗ ಅವರಿಗೆ ಸಂದ ಹೆಸರೇ ಎಂಬ ಬಗೆಗೆ ಏಕಾಭಿಪ್ರಾಯವಿಲ್ಲ. ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶಂಭುಲಿಂಗ ಬೆಟ್ಟದ ಸುತ್ತಮುತ್ತಿನ ಸೀಮೆಗೆ ಅವರು ಅರಸರಾಗಿದ್ದರೆಂದೂ ಅನಂತರ ವಿರಾಗಿಗಳಾಗಿ ದೀಕ್ಷೆ ಪಡೆದು ಬೆಟ್ಟದ ಗುಹೆಯೊಂದರಲ್ಲಿ ವಾಸಿಸಿದರೆಂದೂ ಐತಿಹ್ಯವಿದೆ. ಇವರು ತಮ್ಮ ಕೃತಿಗಳಲ್ಲಿ 'ಶಂಭುಲಿಂಗ' ಎಂಬ ಅಂಕಿತವನ್ನು ಬಳಸಿದ್ದಾರೆ.

ನಿಜಗುಣರದ್ದು ವಿಶಾಲ ದೃಷ್ಟಿ. ಅವರು ವೀರಶೈವ ಧರ್ಮಾವಲಂಬಿಗಳಾಗಿದ್ದರು. ಇತರ ಧರ್ಮ, ವೇದಾಂತಾದಿಗಳನ್ನೂ ಅಭ್ಯಾಸಮಾಡಿ ಅವುಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದರು ; ಇದು ಅವರ ಕೃತಿಗಳಿಂದ ವ್ಯಕ್ತವಾಗುತ್ತದೆ. ಅವರ 'ವಿವೇಕ ಚಿಂತಾಮಣಿ' ಮೌಲಿಕ ಕೃತಿ. ತಮಿಳು, ಮರಾಠಿ, ಸಂಸ್ಕೃತಗಳಿಗೆ ಅದು ಭಾಷಾಂತರಗೊಂಡಿದೆ.

ಕನ್ನಡದಲ್ಲಿ ಬರೆವಣಿಗೆಯ ಮೂಲಕ ಆಧ್ಯಾತ್ಮ ಜ್ಞಾನವನ್ನು ಪಸರಿಸಿದ ಮಹಾನುಭಾವರಲ್ಲಿ ನಿಜಗುಣ ಶಿವಯೋಗಿಗಳದು ಅಗ್ರಪಂಕ್ತಿಯ ಸ್ಥಾನ.

## ನಿರ್ದೇಶಕ

ನಿರ್ದೇಶನ–ಎಂದರೆ ತೋರಿಸುವುದು ; ಹೀಗೆ ಮಾಡಬೇಕು ಎಂದು ಹೇಳುವುದು. ನಿರ್ದೇಶಕ ಎಂದರೆ 'ಹೀಗೆ ಮಾಡಬೇಕು' ಎಂದು ಹೇಳುವವನು : ಯಾವುದಾದರೊಂದು ಕೆಲಸವನ್ನು ಹೀಗೆ ಹೀಗೆ ಮಾಡಬೇಕು ಎಂದು ತಿಳಿಸುವವನು. ನಾಟಕ ಪ್ರಯೋಗ, ಚಲಚ್ಚಿತ್ರ ನಿರ್ಮಾಣ, ಸಂಗೀತ ಮೇಳ ಮುಂತಾದ ಕಲಾರಂಗಗಳಲ್ಲೂ ಈಗ ನಿರ್ದೇಶಕರಿರುತ್ತಾರೆ. ನಿರ್ದೇಶಕ ಎಂಬ ಮಾತನ್ನು ಡೈರೆಕ್ಟರ್ ಎಂಬುದಕ್ಕೆ ಸಮಾನಾರ್ಥವಾಗಿ ಉಪಯೋಗಿಸುವುದು ವಾಡಿಕೆ.

ಭಾರತೀಯ ರಂಗಭೂಮಿಯ ಸಂಪ್ರದಾಯದಲ್ಲಿ 'ಸೂತ್ರಧಾರ' ಎಂಬ ವ್ಯಕ್ತಿಯ ಉಲ್ಲೇಖವಿದೆ. ಇವನೂ ನಟಿಯೂ ಇನ್ನೊಬ್ಬನೂ ನಾಟಕಾರಂಭದಲ್ಲಿ ಕಾಣಿಸಿಕೊಳ್ಳುತ್ತಾರೆ. ನಾಟಕಕಾರ–ನಟ–ಪ್ರೇಕ್ಷಕ–ವಿಮರ್ಶಕ ಇವರಲ್ಲಿ ಇರಬೇಕಾದ ಗುಣಗಳೆಲ್ಲ 'ಸೂತ್ರಧಾರ'ನಲ್ಲಿ ಇರಬೇಕು ಎಂಬುದು ಪ್ರಾಚೀನರ ಅಭಿಪ್ರಾಯ. ಸಂಸ್ಕೃತ ನಾಟಕಗಳ ಅಚ್ಚುಕಟ್ಟನ್ನು ಅನುಸರಿಸಿದ ಭಾರತೀಯ ನಾಟಕಗಳಲ್ಲೆಲ್ಲ ಸೂತ್ರಧಾರ ಬಂದೇ ಬರುತ್ತಾನೆ. ಸಂಸ್ಕೃತ ನಾಟಕಗಳ ರಂಗಪ್ರಯೋಗ ನಡೆಯುತ್ತಿದ್ದ ಹಿಂದಿನ ಕಾಲದಲ್ಲಿ ಅದರ ಹೊಣೆಗಾರಿಕೆಯೆಲ್ಲ ಸೂತ್ರಧಾರನದೇ ಆಗಿತ್ತೆಂದು ತೋರುತ್ತದೆ.

ಸಾಮಾನ್ಯವಾಗಿ ಆಧುನಿಕ ನಾಟಕಗಳಲ್ಲಿ ಸೂತ್ರಧಾರ ಪಾತ್ರವಿಲ್ಲ. ಆದರೆ ನಾಟಕ ಪ್ರಯೋಗದ ಹೊಣೆಗಾರಿಕೆ ಹೊತ್ತ ಒಬ್ಬ ವ್ಯಕ್ತಿ ಇದ್ದೇ ಇರುತ್ತಾನೆ. ಇವನೇ ನಿರ್ದೇಶಕ —ಡೈರೆಕ್ಟರ್. ಹಿಂದೆ ಈ ಕರ್ತವ್ಯ ನಿರ್ವಹಿಸುತ್ತಿದ್ದವನನ್ನು 'ಸ್ಟೇಜ್ ಮ್ಯಾನೇಜರ್' ಎನ್ನುತ್ತಿದ್ದರು. ನಮ್ಮ ನಾಟಕ ಸಂಸ್ಥೆಗಳಲ್ಲೂ ಇಂಥವರು ಇದ್ದರು. ಸಾಮಾನ್ಯವಾಗಿ ಸಂಸ್ಥೆಯ ನಟವರ್ಗದಲ್ಲಿ ದಕ್ಷರೂ ಹಿರಿಯರೂ ಆದವರಿಗೆ ಈ ಅಧಿಕಾರ ದೊರೆಯುತ್ತಿತ್ತು. ನಿರ್ದೇಶಕನಾಗುವವನಿಗೆ ಅಭಿನಯದ ಜೊತೆಗೆ ಒಳ್ಳೆಯ ಸಾಹಿತ್ಯದ ಜ್ಞಾನವೂ ಸಂಗೀತಾದಿ ಕಲೆಗಳ ಪರಿಚಯವೂ ಅವಶ್ಯ. ಒಟ್ಟಿನಲ್ಲಿ ಅವನು ಕಲಾಭಿಜ್ಞನೂ ರಸಿಕನೂ ನಾಟಕ ಪ್ರಯೋಗ ತಂತ್ರಜ್ಞನೂ ಆಗಿರಬೇಕು. ತನ್ನ ಅಪೇಕ್ಷೆಯನ್ನನುಸರಿಸಿ ನಡೆಯುವಂತೆ ನಟನಟಿಯರನ್ನೂ ರಂಗಭೂಮಿಯ ತಾಂತ್ರಿಕ ವರ್ಗದವರನ್ನೂ ಪ್ರೇರಿಸ ಬಲ್ಲ ವ್ಯಕ್ತಿತ್ವ, ನಾಯಕ ಗುಣ ಅವನಲ್ಲಿರಬೇಕು.



ಚಲಚ್ಚಿತ್ರ ನಿರ್ದೇಶಕ :
ಸತ್ಯಜಿತ್ ರೇ



ಬಿ. ವಿ. ಕಾರಂತ : ನಾಟಕ ನಿರ್ದೇಶನ

ನಿರ್ದೇಶಕ ತಾನು ಮೆಚ್ಚಿದ, ಅಥವಾ ತನಗೆ ಬೇಕಾದ ನಾಟಕವನ್ನು ಆರಿಸಿಕೊಂಡು ಅದರ ರಂಗ ಪ್ರಯೋಗ ಮಾಡಬಹುದು; ಅಥವಾ ಬೇರೆಯವರು ಆರಿಸಿದ ನಾಟಕವನ್ನು ಪ್ರಯೋಗ ಮಾಡಬಹುದು. ಈ ಎರಡು ಸಂದರ್ಭಗಳಲ್ಲೂ ಮೊದಲು ಅವನು ಆ ನಾಟಕವನ್ನು ಶ್ರದ್ಧೆಯಿಂದ ಎಚ್ಚರಿಕೆಯಿಂದ ಓದಿ ಅದರ ಶಕ್ತಿ, ಸ್ವಾರಸ್ಯಗಳನ್ನು ಗ್ರಹಿಸುವುದು ಅಗತ್ಯ. ಆ ನಾಟಕವನ್ನು ಯಾವ ಶೈಲಿಯಲ್ಲಿ ಯಾವ ತಂತ್ರವನ್ನು ಅನುಸರಿಸಿ ಪ್ರಯೋಗಿಸಬೇಕೆಂಬುದನ್ನು ನಿರ್ಧರಿಸಲು ಇಂಥ ಅಧ್ಯಯನ ಆತನಿಗೆ ನೆರವಾಗುತ್ತದೆ. ಅಲ್ಲದೆ ನಾಟಕದಲ್ಲಿ ಬರುವ ಯಾವ ಪಾತ್ರವನ್ನು ಯಾವ ರೀತಿಯಲ್ಲಿ ರೂಪಿಸಬೇಕು, ಒಟ್ಟಿನಲ್ಲಿ ಪರಿಣಾಮವನ್ನು ಹೇಗೆ ಸಾಧಿಸಬೇಕು, ಎಂಬುದರ ಅರಿವೂ ಅವನಿಗೆ ಉಂಟಾಗುತ್ತದೆ.

ನಾಟಕವನ್ನು ಆರಿಸಿಕೊಂಡ ಮೇಲೆ ಅದರಲ್ಲಿ ಬರುವ ಪಾತ್ರಗಳಿಗೆ ತಕ್ಕ ನಟನಟಿಯರನ್ನು ಆಯ್ಕೆಮಾಡುವುದು ನಿರ್ದೇಶಕನ ಮುಖ್ಯ ಕೆಲಸ. ಇದು ಕಷ್ಟದ್ದೂ ಹೌದು. ತಾನು ನಿರ್ದೇಶಿಸಲಿರುವ ನಟ-ನಟಿ ವರ್ಗದಲ್ಲಿ ಪರಸ್ಪರ ಅಸಮಾಧಾನ, ಘರ್ಷಣೆ ಏರ್ಪಡದಂತೆ ಅವನು ಈ ಆಯ್ಕೆಯನ್ನು ಮಾಡಬೇಕಾಗುತ್ತದೆ. ಪ್ರಯೋಗ ಸಸೂತ್ರವಾಗಿ ನಡೆಯಲು ಇದು ಅವಶ್ಯ. ಹಲವಾರು ಸಂದರ್ಭಗಳಲ್ಲಿ ನಿರ್ದೇಶಕ ಅಪೇಕ್ಷಿಸುವ ನಟನಟಿಯರು ಅವನಿಗೆ ದೊರಕದೆ ಹೋಗಬಹುದು. ಆಗ ಅವನು ಬೇಸರಪಡದೆ ತನಗೆ ದೊರೆತ ನಟನಟಿಯರ ಕಲಾವಂತಿಕೆಯ ಪೂರ್ಣೋಪಯೋಗ ಮಾಡಿಕೊಂಡು ನಾಟಕ ಪ್ರಯೋಗವನ್ನು ಆದಷ್ಟು ಯಶಸ್ವಿಗೊಳಿಸಬೇಕಾಗುತ್ತದೆ.

ನಿರ್ದೇಶಕನ ಮುಂದಿನ ಕೆಲಸ —ನಾಟಕವನ್ನು ಅಭ್ಯಾಸ ಮಾಡಿಸುವುದು. ಅಂದರೆ ಪಾತ್ರವರ್ಗದವರು, ತಮ್ಮ ತಮ್ಮ ಪಾತ್ರಗಳನ್ನು ಯಾವ ರೀತಿಯಲ್ಲಿ ಅಭಿನಯಿಸಬೇಕು ಎಂಬುದನ್ನು ಅವರಿಗೆ ಹೇಳಿಕೊಡುವುದು. ಇದರಲ್ಲಿ ಪಾತ್ರಗಳು ಯಾವ ಸಂದರ್ಭದಲ್ಲಿ ಹೇಗೆ ಮಾತನಾಡಬೇಕು; ಶರೀರದ ವಿವಿಧ ಅಂಗಗಳ ಮೂಲಕ ಹೇಗೆ ಭಾವ ಪ್ರದರ್ಶನ ಮಾಡಬೇಕು : ಯಾವ ಪಾತ್ರ ರಂಗಭೂಮಿಯ ಮೇಲೆ ಯಾವ ಸಂದರ್ಭದಲ್ಲಿ ಎಲ್ಲಿ ಹೇಗೆ ನಿಲ್ಲಬೇಕು, ಹೇಗೆ ಚಲಿಸಬೇಕು, ಮುಂತಾದ ಅಂಶಗಳೆಲ್ಲವೂ ಬರುತ್ತವೆ. ಇವೆಲ್ಲವೂ ಸಮರ್ಪಕವಾಗಿ ರೂಪುಗೊಂಡಾಗಲೇ ನಾಟಕಕಾರನ ಮಾತುಗಳಿಗೆ, ನಾಟಕಕ್ಕೆ ಪುಷ್ಟಿಬರುತ್ತದೆ.

ಅಭಿನಯ ನಾಟಕದ ಮುಖ್ಯಾಂಶವಾದರೂ ನಾಟಕ ಕಳೆಗಟ್ಟಬೇಕಾದರೆ ಅಭಿನಯಕ್ಕೆ ಪೋಷಕವಾದ ಇನ್ನೂ ಹಲವಾರು ಅಂಶಗಳು ಸೇರಬೇಕಾಗುತ್ತದೆ. ಸಂಗೀತ, ಪಾತ್ರಗಳ ಉಡುಗೆ ತೊಡುಗೆಗಳು, ವರ್ಣಾಲಂಕಾರ ರಂಗಸಜ್ಜಿಕೆ, ಬೆಳಕು ವ್ಯವಸ್ಥೆ–ಹೀಗೆ. ಇವುಗಳ ಸ್ವರೂಪ ಹೇಗಿರಬೇಕೆಂಬುದನ್ನು ನಿರ್ಣಯಿಸಬೇಕಾದವನೂ ನಿರ್ದೇಶಕನೇ. ಈ ಕಾರ್ಯಗಳ ನಿರ್ವಹಣೆಯಲ್ಲಿ ಅವನು ಆಯಾ ವಿಭಾಗಗಳಲ್ಲಿ ತಜ್ಞರಾದವರ ನೆರವು ಪಡೆಯುತ್ತಾನೆ. ಆತನ ನಿರ್ದೇಶನಕ್ಕೆ ಅನುಸಾರವಾಗಿಯೇ ಇವರ ಕೆಲಸ ನಡೆಯುತ್ತದೆ. ಏಕೆಂದರೆ ನಾಟಕ ಪ್ರಯೋಗಕ್ಕೆ ಸಂಬಂಧಿಸಿದ ಹಲವಾರು ಅಂಗಗಳಲ್ಲಿ ಪರಸ್ಪರ ಸಾಮರಸ್ಯ ಏರ್ಪಟ್ಟು ನಾಟಕ ಪ್ರಯೋಗ ಸಮರ್ಪಕವಾಗುವಂತೆ ಮಾಡಬೇಕಾದ್ದು ಅವನ ಕರ್ತವ್ಯ.

ಈ ಶತಮಾನದ ಆರಂಭ ಕಾಲದಿಂದ ಪಾಶ್ಚಾತ್ಯ ರಂಗಭೂಮಿಯಲ್ಲಿ ನಿರ್ದೇಶಕನ ಸ್ಥಾನದ ಮಹತ್ವ ಹೆಚ್ಚುತ್ತಿದೆ. ದಕ್ಷರಾದ ನಿರ್ದೇಶಕರು ನಾಟಕ ಪ್ರಯೋಗದಲ್ಲಿ ತಮ್ಮ ವಿಶಿಷ್ಟ ಶೈಲಿಗಳನ್ನೂ ರೂಪಿಸಿಕೊಳ್ಳುತ್ತಿದ್ದಾರೆ.

ನಾಟಕ ರಂಗವಲ್ಲದೆ ಚಲಚ್ಚಿತ್ರ ರಂಗದಲ್ಲೂ ನಿರ್ದೇಶಕ ಪ್ರಮುಖ ವ್ಯಕ್ತಿ. ಆದರೆ ಇವನ ಹೊಣೆ ನಾಟಕ ನಿರ್ದೇಶಕನದಕ್ಕಿಂತ ಹೆಚ್ಚಿನದು, ವಿಶಿಷ್ಟವಾದದ್ದು. ನಾಟಕದಲ್ಲಿ ಯೋಜನೆ ತರಬೇತಿ ಎಲ್ಲ ನಿರ್ದೇಶಕನದೇ ಆದರೂ ಅಂತಿಮವಾಗಿ ನಾಟಕ ರಂಗಭೂಮಿಯ ಮೇಲೆ ಪ್ರದರ್ಶಿಸಲ್ಪಡುವಾಗ ನಟರೇ ಮುಖ್ಯರು. ಆದರೆ ಚಲಚ್ಚಿತ್ರದಲ್ಲಿ ಚಿತ್ರೀಕರಣ ಆದಮೇಲೂ ಅದು ಕಚ್ಚಾಮಾಲೇ. ನಿಜವಾಗಿ ಚಿತ್ರನಿರ್ಮಾಣವಾಗುವುದು 'ಸಂಕಲನ' ವಾದಾಗ. ಸಂಕಲನಕಾರ ಸಹಾಯಕ್ಕೆ ಇದ್ದರೂ ಈ ನಿರ್ಮಾಣದ ಹೊಣೆ ನಿರ್ದೇಶಕನದೇ. ಚಲಚ್ಚಿತ್ರದ ಅಂತಿಮ ಅಭಿವ್ಯಕ್ತಿಯನ್ನು ನಿಯಂತ್ರಿಸಿ, ಅದಕ್ಕೆ ಅಂತಿಮ ರೂಪಕೊಡುವವನು ನಿರ್ದೇಶಕನೇ.

ಚಲಚ್ಚಿತ್ರ ನಿರ್ದೇಶಕನ ಕರ್ತವ್ಯ ನಿರ್ವಹಣೆಯಲ್ಲಿ ಇವನಿಗೆ ಸಹಾಯಕರಾಗಿ ಸಂಗೀತ ನಿರ್ದೇಶಕ, ನಾಟ್ಯ ನಿರ್ದೇಶಕ, ಕಲಾ ನಿರ್ದೇಶಕ ಮುಂತಾದವರು ಇರುತ್ತಾರೆ. ಚಿತ್ರ ನಿರ್ಮಾಣಕ್ಕೆ ಸಂಬಂಧಿಸಿದ ವ್ಯವಹಾರ ಭಾಗವನ್ನು ನೋಡಿಕೊಳ್ಳಲು ಬೇರೆ ಅಧಿಕಾರಿ ವರ್ಗವಿರುತ್ತದೆ.

ನಿರ್ದೇಶನ ಒಂದು ಸೃಜನಾತ್ಮಕ ಕಲೆ. ಸೃಜನಶೀಲ ನಿರ್ದೇಶಕ, ದಕ್ಷರಾದ ನಟನಟಿಯರು, ಒಳ್ಳೆಯ ನಾಟಕಕಾರ ಇವರು ಪರಸ್ಪರ ಸಹಕರಿಸಿ ರೂಪಿಸಿದ ನಾಟಕಪ್ರಯೋಗವಾಗಲೀ, ಚಲಚ್ಚಿತ್ರವಾಗಲೀ ರಸಿಕರ ಚಿತ್ತವನ್ನು ಸೆರೆಹಿಡಿಯುವ ಕಲಾಕೃತಿಯಾಗುತ್ತದೆ.

### ನಿಯತಕಾಲಿಕ

ವೇಷ, ಭೂಷಣಗಳಿಂದ ಅಲಂಕೃತವಾಗಿರುವ ಬೊಂಬೆಯೊಂದನ್ನು ಕೈಯಲ್ಲಿ ಹಿಡಿದೆತ್ತಿ ನಿಂತಿರುವ ನಗುಮೊಗದ ಹೆಂಗಸು, ಕಾಲುಬಳೆ ತೊಟ್ಟಿದ್ದಾಳೆ, ತುರುಬು ಹಾಕಿಕೊಂಡಿದ್ದಾಳೆ, ಇನ್ನೊಂದು ಕೈಯನ್ನು ಸೊಂಟದ ಮೇಲಿಟ್ಟುಕೊಂಡು ಠೀವಿಯಿಂದ ನಿಂತಿದ್ದಾಳೆ—ಇದು 25 ವರ್ಷಗಳ ಕಾಲ ಕನ್ನಡದ ಮನೆಗಳಲ್ಲಿ ಹಾಸ್ಯದ ಹೊನಲು ಹರಿಸಿದ 'ಕೊರವಂಜಿ' ಮಾಸಪತ್ರಿಕೆಯ ಮೇಲುಹೊದಿಕೆಯ ಚಿತ್ರ. ಪತ್ರಿಕೆಯ ಒಳಗೆ ವ್ಯಂಗ್ಯಚಿತ್ರಗಳು, ತಿಳಿಹಾಸ್ಯ ಚಿಮ್ಮಿಸುವ ಲೇಖನಗಳು. 'ಕೊರವಂಜಿ' ಒಂದು ನಿಯತಕಾಲಿಕ.

ನಿಶ್ಚಿತವಾದ ಅವಧಿಗೊಮ್ಮೆ ಪ್ರಕಟವಾಗುವ ಪತ್ರಿಕೆ ನಿಯತಕಾಲಿಕ. ವಿಶಿಷ್ಟ ವಿಷಯಗಳಿಗೆ—ಅಂದರೆ ಸಾಹಿತ್ಯ, ವಿಜ್ಞಾನ, ವೃತ್ತಿಗಳು ಹೀಗೆ —ಮೀಸಲಾದ ನಿಯತಕಾಲಿಕಗಳು ಉಂಟು. ಹೀಗೆ ನಿಯತಕಾಲಿಕಗಳು ತಮ್ಮದೇ ಆದ ವ್ಯಾಪ್ತಿಯನ್ನು ಹೊಂದಿರುತ್ತವೆ.

ಐರ್ಲೆಂಡಿನ ರಿಚರ್ಡ್ ಸ್ಟೀಲ್ (1672—1729) ಹಾಗೂ ಬ್ರಿಟಿನಿನ ಜೋಸೆಫ್ ಅಡಿಸನ್ (1672–1719) ಸೇರಿ 1711ರಲ್ಲಿ 'ಸ್ಪೆಕ್ಟೇಟರ್' ಎಂಬ ಪತ್ರಿಕೆಯನ್ನು ಆರಂಭಿಸಿದರು. ಇದರಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ಪ್ರಬಂಧಗಳೇ ಹೆಚ್ಚಾಗಿರುತ್ತಿದ್ದುವು. ಖ್ಯಾತ ಬ್ರಿಟಿಷ್ ಸಾಹಿತಿ ಸ್ಯಾಮುಅಲ್ ಜಾನ್‌ಸನ್ (1709—84) 'ಜಂಟಲ್‌ಮನ್ಸ್ ಮ್ಯಾಗಜಿನ್' ಎಂಬ ಪತ್ರಿಕೆಗೆ ಬರೆಯುತ್ತಿದ್ದ. ಅನಂತರ ತಾನೇ 'ರ್‍ಯಾಂಬ್ಲರ್' ಎಂಬ ಪತ್ರಿಕೆಯನ್ನೂ ನಡೆಸಿದ. 1741ರಲ್ಲಿ ಅಮೆರಿಕದಲ್ಲಿ 'ಅಮೆರಿಕನ್ ಮ್ಯಾಗಜಿನ್' ಎಂಬ ಪತ್ರಿಕೆ ಪ್ರಕಟವಾಯಿತು.




ಕಾಡಿಗೆ ಹೋದ ಕೊರವಂಜಿ




ನಿಯತಕಾಲಿಕಗಳು

19ನೆಯ ಶತಮಾನದಲ್ಲಿ ನಿಯತ ಕಾಲಿಕಗಳ ಸಂಖ್ಯೆ ಹೆಚ್ಚಿತು. ಎಡಿನ್‌ಬರೋದಿಂದಲೇ ಎರಡು ಪತ್ರಿಕೆಗಳು ಬರುತ್ತಿದ್ದುವು– 'ಎಡಿನ್‌ಬರೋ ರಿವ್ಯೂ' ಮತ್ತು 'ಕ್ವಾರ್ಟರ್ಲಿ ರಿವ್ಯೂ'. ಎರಡರ ಧ್ಯೇಯವೂ ಸಾಹಿತ್ಯ, ಕಲೆ, ರಾಜಕಾರಣ, ವಿಜ್ಞಾನಗಳ ಸಮೀಕ್ಷೆ ಮಾಡುವುದೇ ಆಗಿದ್ದರೂ ಒಂದಕ್ಕೊಂದು ವಿರೋಧವಾಗಿದ್ದುವು. 1880ರಲ್ಲಿ ವಾರಪತ್ರಿಕೆಗಳು ವಿಪುಲವಾದುವು. ಅಮೆರಿಕದ 'ಸದರ್ನ್ ಲಿಟರರಿ ಮೆಸೆಂಜರ್', 'ಹಾರ್ಪರ್ಸ್ ವೀಕ್ಲಿ' ಈ ಶತಕದವು. ಫ್ರಾನ್ಸಿನಲ್ಲಿ 'ರಿವ್ಯೂ ದ ಪ್ಯಾರಿಸ್', 'ಕ್ರಿಟಿಕ್'ಗಳಂಥ ನಿಯತಕಾಲಿಕಗಳು ಬಂದುವು. ಮೊದಲಿನದರಲ್ಲಿ ಹ್ಯೂಗೋ, ಅಲೆಗ್ಸಾಂಡರ್ ಡ್ಯೂಮಾ, ಬಾಲ್ಜಾಕರ ಕೃತಿಗಳು ಪ್ರಕಟವಾಗುತ್ತಿದ್ದುವು.

20ನೆಯ ಶತಮಾನದಲ್ಲಿ ಬ್ರಿಟನಿನಲ್ಲಿ ಟಿ.ಎಸ್. ಎಲಿಯಟ್ (1888—1965) 'ಕ್ರೈಟೀರಿಯನ್' ಪತ್ರಿಕೆಗೆ ಸಂಪಾದಕನಾಗಿದ್ದ. ಇದರಲ್ಲಿ ಹೊಸ ಸಣ್ಣ ಕಥೆ, ಕವಿತೆಗಳು ಬರುತ್ತಿದ್ದುವು. 'ಸ್ಕ್ರೂಟಿನಿ' ಸಾಹಿತ್ಯ ಕೃತಿಗಳ ವಿಮರ್ಶೆಗೆಂದು ಹೊರಟ ಪತ್ರಿಕೆ. 19ನೆಯ ಶತಮಾನದಲ್ಲೇ ಪ್ರಾರಂಭವಾದ ಖ್ಯಾತ ಪತ್ರಿಕೆಗಳು: 'ಪಂಚ್' ಮತ್ತು 'ಅಟ್ಲಾಂಟಿಕ್ ಮಂಂತ್ಲಿ'. ಸ್ತ್ರೀಯರಿಗಾಗಿಯೇ ಅಮೆರಿಕದಿಂದ 'ಲೇಡೀಸ್ ಹೋಂ ಜರ್ನಲ್', 'ಗುಡ್ ಹೌಸ್‌ಕೀಪಿಂಗ್ ಫಾರ್ ವಿಮೆನ್' ಬರಲಾರಂಭಿಸಿದುವು. 'ಟೈಮ್', 'ಲೈಫ್', 'ಲುಕ್' ಹೆಸರಾಂತ ನಿಯತಕಾಲಿಕಗಳು. 1972 ರಲ್ಲಿ ಲೈಫ್ ಪ್ರಕಟಣೆ ನಿಲ್ಲಿಸಿತು.

ಭಾರತದಲ್ಲಿ ಪ್ರಕಟವಾಗುತ್ತಿದ್ದು ಅಂತರರಾಷ್ಟ್ರೀಯ ವ್ಯಾಪ್ತಿಯನ್ನು ಪಡೆದಿದ್ದ ಇಂಗ್ಲಿಷ್ ಮಾಸಪತ್ರಿಕೆ 'ಮಾಡರ್ನ್ ರಿವ್ಯೂ' (1907). ರಮಾನಂದ ಚಟರ್ಜಿಯವರು ಇದರ ಸಂಪಾದಕರಾಗಿದ್ದರು.

ರಾಮಕೋಟೀಶ್ವರ ರಾಯರ ಇಂಗ್ಲಿಷ್ ನಿಯತಕಾಲಿಕ 'ತ್ರಿವೇಣಿ' ಕೂಡ ಸಾಂಸ್ಕೃತಿಕ ದೃಷ್ಟಿಯಿಂದ ಪ್ರಭಾವಶಾಲಿಯಾಗಿದ್ದ ಪತ್ರಿಕೆ.

ಸುಪ್ರಸಿದ್ಧ ವಿಜ್ಞಾನಿ ಸಿ. ವಿ. ರಾಮನ್‌ರವರು ಇಂಗ್ಲಿಷಿನಲ್ಲಿ ಪ್ರಕಟಿಸುತ್ತಿದ್ದ 'ಜರ್ನಲ್ ಆಫ್ ಇಂಡಿಯನ್ ಫಿಸಿಕ್ಸ್', 'ಕರೆಂಟ್ ಸೈನ್ಸ್' ಪತ್ರಿಕೆಗಳು ಅಂತರರಾಷ್ಟ್ರೀಯ ಖ್ಯಾತಿಗಳಿಸಿದ ವಿಜ್ಞಾನ ನಿಯತಕಾಲಿಕಗಳು.

ಸಾಹಿತ್ಯಕ್ಕೆ ಮೀಸಲಾದ 'ವಾಗ್ಭೂಷಣ' ಮಾಸಪತ್ರಿಕೆ ಧಾರವಾಡದಲ್ಲಿ 1896ರಲ್ಲಿ ಪ್ರಕಟವಾಯಿತು. ಈ ಬಗೆಯ ಕನ್ನಡ ಪತ್ರಿಕೆಗಳಲ್ಲಿ ಇದೇ ಮೊತ್ತಮೊದಲನೆಯದು. ಸುಮಾರು 85 ಕನ್ನಡ ಗ್ರಂಥಗಳು ಈ ನಿಯತಕಾಲಿಕದ ಮೂಲಕ ಪ್ರಕಟವಾದುವು. ಬೆನಗಲ್ ರಾಮರಾಯರ 'ಸುವಾಸಿನಿ' (1900), ರಾಜಗೋಪಾಲಕೃಷ್ಣರಾಯರ 'ಕೃಷ್ಣಸೂಕ್ತಿ' (1905)—ಇದನ್ನು ಅನುಸರಿಸಿ ಬಂದ ಕನ್ನಡ ನಿಯತ ಕಾಲಿಕಗಳು.

'ಕಾವ್ಯಮಂಜರಿ', 'ಕಾವ್ಯಕಲಾನಿಧಿ'ಗಳು 19ನೆಯ ಶತಮಾನದ ಅಂತ್ಯ ಭಾಗದಲ್ಲಿ ಪ್ರಕಟವಾಗುತ್ತಿದ್ದುವು. ಈ ಎರಡೂ ಪತ್ರಿಕೆಗಳು ಪ್ರಾಚೀನ ಕಾವ್ಯಗಳನ್ನು ಭಾಗಭಾಗವಾಗಿ ಪ್ರಕಟಿಸಿದ ಕೀರ್ತಿಗೆ ಪಾತ್ರವಾಗಿವೆ.

1924ರಲ್ಲಿ ಡಿ. ವಿ. ಗುಂಡಪ್ಪನವರು ಸಂಪಾದಕರಾಗಿದ್ದ 'ಕರ್ಣಾಟಕ ಜನಜೀವನ'ದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಭಾಷಾಂತರಿಸಿದ್ದ ಇಂಗ್ಲಿಷ್ ಭಾವಗೀತೆಗಳು ಪ್ರಕಟವಾದುವು.

1915ರಲ್ಲಿ ಪ್ರಾರಂಭವಾದ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸುತ್ತಿದೆ. 'ಪ್ರಬುದ್ಧ ಕರ್ಣಾಟಕ', 'ವಿಜ್ಞಾನ ಕರ್ಣಾಟಕ' ಮತ್ತು 'ಮಾನವಿಕ ಕರ್ಣಾಟಕ' ಇವು ಮೈಸೂರು ವಿಶ್ವವಿದ್ಯಾನಿಲಯದವರು ಹೊರಡಿಸುತ್ತಿರುವ ನಿಯತಕಾಲಿಕಗಳು. ಕರ್ನಾಟಕ ವಿಶ್ವವಿದ್ಯಾಲಯ 'ಕರ್ನಾಟಕ ಭಾರತಿ', 'ವಿಜ್ಞಾನ ಭಾರತಿ'ಗಳನ್ನು ಹೊರಡಿಸುತ್ತಿದೆ. 'ಸಾಧನಾ' ಬೆಂಗಳೂರು ವಿಶ್ವವಿದ್ಯಾಲಯದ ನಿಯತಕಾಲಿಕ. 'ಜೀವನ' ಧಾರವಾಡದಲ್ಲಿ ಬೆಳಕು ಕಂಡು ಮಾಸ್ತಿಯವರ ಸಂಪಾದಕತ್ವದಲ್ಲಿ ಬೆಂಗಳೂರಿನಲ್ಲಿ ದೀರ್ಘ ಕಾಲ ಮೆರೆದ ನಿಯತಕಾಲಿಕ. 'ವಿಜ್ಞಾನ' ಪ್ರೊ. ಬೆಳ್ಳಾವೆ ವೆಂಕಟರಮಣಪ್ಪನವರು ನಡೆಸಿದ ವಿಜ್ಞಾನ ಪತ್ರಿಕೆ.

ಇಂಗ್ಲಿಷಿನಲ್ಲಿ 'ಸೈನ್ಸ್ ಟುಡೇ', 'ಸೈನ್ಸ್ ರಿಪೋರ್ಟರ್', ಕನ್ನಡದಲ್ಲಿ 'ವಿಜ್ಞಾನ ಲೋಕ', ಹಿಂದಿಯಲ್ಲಿ 'ವಿಜ್ಞಾನ ಪ್ರಗತಿ' ವಿಜ್ಞಾನ ಲೇಖನಗಳನ್ನು ಪ್ರಕಟಿಸುತ್ತವೆ. 'ಆಹಾರ ವಿಜ್ಞಾನ' ತ್ರೈಮಾಸಿಕ ಪತ್ರಿಕೆ—ಮೈಸೂರಿನ ಕೇಂದ್ರ ಆಹಾರ ಸಂಶೋಧನಾ ಸಂಸ್ಥೆಯವರು ಹೊರಡಿಸುತ್ತಿದ್ದಾರೆ.

[illegible] ‘ರಂಗಭೂಮಿ’ ನಾಟಕರಂಗಕ್ಕೆ ಮೀಸಲಾಗಿದ್ದ ನಿಯತಕಾಲಿಕ.

ಧಾರ್ಮಿಕ ಸಾಹಿತ್ಯ ಪ್ರಕಟಣೆಯನ್ನು ಮುಖ್ಯವಾಗಿ ಮಾಡುವುವು ‘ಶಿವಾನುಭವ’ ಹಾಗೂ ‘ಶರಣ ಸಾಹಿತ್ಯ’ ಪತ್ರಿಕೆಗಳು. ‘ಶರಣ ಸಾಹಿತ್ಯ’ ಬೆಳ್ಳಿಹಬ್ಬ ಆಚರಿಸಿದೆ.

‘ಕಥಾವಳಿ’, ‘ಕತೆಗಾರ’ ಸಣ್ಣಕಥೆಗಳಿಗೇ ಮೀಸಲಾಗಿದ್ದ ಪತ್ರಿಕೆಗಳು.

ವಿಮರ್ಶಾಪ್ರಧಾನ ಪತ್ರಿಕೆಗಳಲ್ಲಿ ಪ್ರಮುಖವಾದುವು —ಗೋಪಾಲಕೃಷ್ಣ ಅಡಿಗರ ಸಂಪಾದಕತ್ವದ ‘ಸಾಕ್ಷಿ’; ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿ, ಗಿರಡ್ಡಿ ಗೋವಿಂದರಾಜರ ‘ಸಂಕ್ರಮಣ’, ಕೀರ್ತಿನಾಥ ಕುರ್ತಕೋಟಿ, ಮತ್ತು ಗೆಳೆಯರ ‘ಮನ್ವಂತರ’. ಜನಪದ ಸಾಹಿತ್ಯಕ್ಕೆಂದೇ ಮೈಸೂರಿನಿಂದ ಹೊರಡುವುದು ‘ಜಾನಪದ’. ಸಾಹಿತ್ಯ ವಿಷಯಗಳಿಗೆ ಮೀಸಲಾಗಿದ್ದ ವಿನಾಯಕರ ‘ಸಮನ್ವಯ’ ಸ್ವಲ್ಪಕಾಲದ ಬಳಿಕ ನಿಂತುಹೋಯಿತು.

‘ರೀಡರ್ಸ್ ಡೈಜೆಸ್ಟ್’ ಅಂತರರಾಷ್ಟ್ರೀಯ ವ್ಯಾಪ್ತಿಯುಳ್ಳ ಮಾಸಿಕ. 1970ರಲ್ಲಿ 2.9 ಕೋಟಿಗೂ ಅಧಿಕ ಪ್ರಸಾರವಿದ್ದಿತು. ಇದು 13 ಭಾಷೆಗಳಲ್ಲಿ ಪ್ರಕಟವಾಗುತ್ತದೆ. ‘ಸೋವಿಯೆತ್ ಯೂನಿಯನ್’, ‘ಸ್ಪುಟ್ನಿಕ್’, ‘ಸೋವಿಯೆತ್ ಲಿಟರೇಚರ್’, ‘ಸೋವಿಯೆತ್ ವೂಮನ್’ ಇವು ರಷ್ಯದಿಂದ ಆಂಗ್ಲ ಭಾಷೆಯಲ್ಲಿ ಪ್ರಕಟವಾಗುತ್ತಿರುವ ನಿಯತಕಾಲಿಕಗಳು. ವಿದೇಶೀ ನೇತೃತ್ವದಲ್ಲಿ ಕನ್ನಡದಲ್ಲಿ ಪ್ರಕಟವಾಗುತ್ತಿರುವ ನಿಯತಕಾಲಿಕಗಳು ‘ಸೋವಿಯೆತ್ ದೇಶ’ ಮತ್ತು ‘ಅಮೆರಿಕನ್ ರಿಪೋರ್ಟರ್’.

ಭಾರತದಲ್ಲಿ ‘ಚಂದಮಾಮ’ ಮಕ್ಕಳ ಪ್ರಮುಖ ಮಾಸಿಕ. ಇದು ಆರು ಭಾಷೆಗಳಲ್ಲಿ ಅಚ್ಚಾಗುತ್ತಿದೆ. ಇಂಗ್ಲಿಷಿನಲ್ಲಿ ‘ಚಿಲ್ಡ್ರನ್ಸ್ ವರ್ಲ್ಡ್’ ದೆಹಲಿಯಿಂದ ಪ್ರಕಟವಾಗುತ್ತಿರುವ ಆಂಗ್ಲ ಮಾಸಪತ್ರಿಕೆ. ‘ಸುಧಾ’, ‘ಪ್ರಜಾಮತ’, ‘ಕರ್ಮವೀರ’ ವಾರ ಪತ್ರಿಕೆಗಳು, ‘ಕಸ್ತೂರಿ’, ‘ಮಯೂರ’ ಮಾಸಪತ್ರಿಕೆಗಳು ಕನ್ನಡದ ಜನಪ್ರಿಯ ನಿಯತಕಾಲಿಕಗಳು.

ಭಾರತದ ವಿವಿಧ ಭಾಷೆಗಳಲ್ಲಿ ಈ ಶತಮಾನದ ಆದಿಭಾಗದಿಂದ ಹಲವಾರು ಉತ್ತಮ ನಿಯತಕಾಲಿಕಗಳು ಪ್ರಕಟವಾಗುತ್ತಿವೆ. ತೆಲುಗಿನ ‘ಭಾರತಿ’, ತಮಿಳಿನ ‘ಆನಂದ ವಿಗಡನ್’, ‘ಕಲ್ಕಿ’, ಮರಾಠಿಯ ‘ಕಿರ್ಲೋಸ್ಕರ್’, ‘ಸ್ತ್ರೀ’, ಹಿಂದಿಯ ‘ಕಲ್ಯಾಣ’ ಬಂಗಾಳಿಯ ‘ಪ್ರವಾಸಿ’ ಮುಂತಾದುವು ಗಣನೀಯವಾದುವು.

## ನೀಗ್ರೊ ಸಂಗೀತ

ಅಮೆರಿಕದ ನೀಗ್ರೊ ಸಂಗೀತದಲ್ಲಿ ಹಲವು ಬಗೆಗಳಿವೆ. ಇದರಲ್ಲಿ ಧಾರ್ಮಿಕ ಸಂಗೀತ, ಕೆಲಸಮಾಡುವಾಗ ಹೇಳುವ ಹಾಡುಗಳು, ಸೆರೆಮನೆವಾಸ ಅಥವಾ ಕಥನ ಲಾವಣಿಗಳಿಗೆ ಸಂಬಂಧಪಟ್ಟಂಥ ಹಲವು ಬಗೆಯ ಲೌಕಿಕ ಗೀತೆಗಳು ಮತ್ತು ವ್ಯಾಕುಲ ಗೀತೆಗಳು ಎಂಬುವು ಪ್ರಧಾನ ಗುಂಪುಗಳು. ವ್ಯಾಕುಲ ಗೀತೆಗಳ ಸಂಗೀತ ವಿಶಿಷ್ಟವಾದದ್ದು.

ನೀಗ್ರೊಗಳು ಅಮೆರಿಕಕ್ಕೆ ಬಂದದ್ದು 16ನೆಯ ಶತಮಾನದ ಉತ್ತರಾರ್ಧದಲ್ಲಿ.

ಆ ಕಾಲದಲ್ಲಿ ಸುಧಾರಿತ ಕ್ರೈಸ್ತ ಪಂಥಗಳ ಸಭೆಗಳು ಬಯಲಿನಲ್ಲಿ ಅಥವಾ ಡೇರೆಗಳಲ್ಲಿ ನಡೆಯುತ್ತಿದ್ದುವು. ಇವುಗಳಲ್ಲಿ ಭಾವಾವೇಶಪೂರಿತವಾಗಿ ಹಾಡಲ್ಪಡುತ್ತಿದ್ದ ಸ್ತೋತ್ರಗೀತೆಗಳು ನೀಗ್ರೊ ಜನ ಮನಸ್ಸಿಗೆ ಹಾಡಿದುವು. ಬಿಳಿಗೆ-ಬಿಳಿಗೆಗಳೇ ಗುಲಾಮಗಿರಿಯಲ್ಲಿ ಬಿಕ್ಕಟ್ಟಿನಿಂದ ನೊಂದು, ಅಸಂತುಷ್ಟಿಗಳನ್ನು ಅನುಭವಿಸುತ್ತಿದ್ದ ನೀಗ್ರೊ ಜನ ಈ ಸಭೆಗಳ ಸ್ತೋತ್ರ ಗೀತೆಗಳಷ್ಟರಿಂದಲೇ ತೃಪ್ತರಾಗದೆ, ತಮ್ಮ ಆತ್ಮಸಂತೋಷಕ್ಕಾಗಿ ಬೇರೆ ಗೀತೆಗಳನ್ನೂ ಹಾಡಲು ಆರಂಭಿಸಿದರು. ಹೀಗೆ ನೀಗ್ರೊ ಧಾರ್ಮಿಕ ಸಂಗೀತ ಹುಟ್ಟಿತು.

ಈ ಸಂಗೀತದ ವ್ಯಕ್ತಿ, ಘಟನೆ ಹಾಗೂ ಗೀತಾಂಗ ಭಾಗಗಳು ಬೈಬಲ್ಲಿನ ಆಧಾರ ಪಡೆದಿವೆ. ಇಂಥ ಕೆಲವು ಧಾರ್ಮಿಕ ಗೀತೆಗಳು ಸಾಂಕೇತಿಕವೂ ಹೌದು. ‘ಯೇಸುವಿನ ಬಳಿಗೆ ಕದ್ದು ಹೋಗು’ ಎಂಬುದು ಇಂಥ ಒಂದು ಗೀತೆ. ಮೇಲುನೋಟಕ್ಕೆ ಇದು ಮುಕ್ತಿಯನ್ನು ಬಯಸುವ ಆತ್ಮದ ಕರೆಯುಂತಿದೆ. ಆದರೆ ದಾಸ್ಯದಲ್ಲಿ ನರಳುತ್ತಿರುವ ನೀಗ್ರೊಗಳ ಸ್ವಾತಂತ್ರ್ಯ ಸಾಧನೆಯನ್ನು ಉದ್ದೇಶವಾಗುಳ್ಳ ಗುಪ್ತ ಸಂಘದ ಕರೆಯ ಧ್ವನಿಯೂ ಇದರಲ್ಲಿದೆ. ‘ಹೊಳೆಯನ್ನು ದಾಟು’ ಎಂಬುದು ಕೂಡ ಇಂಥದೇ ಗೀತೆ. ಇದು ತಮ್ಮ ವಿಮೋಚನೆಗಾಗಿ ನೀಗ್ರೊಗಳು ಅನುಸರಿಸಬಹುದಾದ ಒಂದು ನಿರ್ದಿಷ್ಟ ಮಾರ್ಗದ ಸೂಚನೆ. ಅಮೆರಿಕದಲ್ಲಿ ನೀಗ್ರೊಗಳ ದಾಸ್ಯ ವಿಮೋಚನೆಗಾಗಿ 19ನೆಯ ಶತಮಾನದಲ್ಲಿ ನಡೆದ ಯುದ್ಧ ಕಾಲದಲ್ಲಿ ಇಂಥ ಅನೇಕ ಗೀತೆಗಳು ರಚಿತವಾದುವು.

ನೀಗ್ರೊಗಳ ಧಾರ್ಮಿಕ ಗೀತೆಗಳು ಶ್ವೇತವರ್ಣೀಯರ ಧಾರ್ಮಿಕ ಗೀತೆಗಳಿಂದ ಪ್ರೇರೇಪಿತವಾಗಿವೆ ಎನ್ನುವುದು ಒಂದು ಅಭಿಪ್ರಾಯ. ಪಶ್ಚಿಮ ಆಫ್ರಿಕದ ಗೀತೆಗಳಿಗೂ ಇವಕ್ಕೂ ನಿಕಟ ಸಾಮ್ಯವಿದೆ ಎನ್ನುವುದು ಇನ್ನೊಂದು ಅಭಿಪ್ರಾಯ.

ನೀಗ್ರೊ ಧಾರ್ಮಿಕ ಗೀತೆಗಳು ಐದು ಸ್ವರಗಳಿರುವ ರಾಗ ಪ್ರಧಾನವಾದ, ನಾಲ್ಕು ಆವರ್ತಗಳ ಗೀತೆಗಳು. ಆದರೆ ಹಾಡುಗಾರಿಕೆಯಲ್ಲಿ ಮಾತ್ರ ಇವು ಬೇರೆಯೇ ಜಾಡು ಹಿಡಿಯುತ್ತವೆ. ಧ್ವನಿ ಪ್ರತಿಧ್ವನಿ ಅಂದರೆ ಪ್ರಧಾನ ಗಾಯಕನನ್ನು ಅನುಸರಿಸಿ ವೃಂದದವರು ಹಾಡುವುದು, ಲಯಬದ್ಧವಾದ ಚಪ್ಪಾಳೆ ಹಾಗೂ ಪಾದ ಬಡಿತ, ತಾಳಗತಿಗೆ ಹೊರತಾಗಿರುವ ಲಯಗಳನ್ನು ಗುರುತಿಸುವುದು, ಗೀತೆಗಳಲ್ಲಿ ಆಗಾಗ್ಗೆ ಆಶು ಸುಧಾರಣೆಗಳನ್ನು ಮಾಡುವುದು ಮತ್ತು ಪದಗಳ ಉಚ್ಚಾರಣೆಯಲ್ಲಿ ಅಕ್ಷರಲೋಪ –ಇವು ನೀಗ್ರೊ ಧಾರ್ಮಿಕ ಗೀತೆಗಳ ವೈಶಿಷ್ಟ್ಯ. ಜಟಿಲ ಲಯ ಹಾಗೂ ಪಂಚಸ್ವರಗಳ ಬಳಕೆ ಆಫ್ರಿಕ ಮೂಲದ್ದು. ಬಹುತರ ಜಾನಪದ ಸಂಗೀತಗಳಲ್ಲಿ ಇದು ವಿಶಿಷ್ಟವಾಗಿದೆ. 1870–80ರ ಅವಧಿಯಲ್ಲಿ ನೀಗ್ರೊ ಧಾರ್ಮಿಕ ಗೀತೆಗಳು ವ್ಯಾಪಕವಾಗಿ ಬೆಳಕಿಗೆ ಬಂದುವು. 1895ರಲ್ಲಿ ಆಂಟನ್ ಡವರ್‌ಜಾಕ್ ಈ ಗೀತೆಗಳ ರಾಗವನ್ನು ಎರವಲು ಪಡೆದು ಕೆಲವು ಸಿಂಫನಿಗಳನ್ನು ರಚಿಸಿದ. ಅಲ್ಲಿಂದ ಮುಂದೆ ಅನೇಕರು ಈ ಮಾರ್ಗ ಅನುಸರಿಸಿದರು.

20ನೆಯ ಶತಮಾನದಲ್ಲಷ್ಟೇ ನೀಗ್ರೊ ಲೌಕಿಕ ಗೀತೆಗಳು ಆರಂಭವಾದುವು. ದೋಣಿ ನಡೆಸುವುದು, ಗಣಿ ಕೆಲಸ, ಹತ್ತಿ ಕಟಾವು, ಸೆರೆಯಾಳುಗಳ ದುಡಿಮೆ ಮುಂತಾದ್ದು ಈ ಗೀತೆಗಳ ವಸ್ತು.

ವ್ಯಾಕುಲ ಗೀತೆಗಳಲ್ಲಿ ಸ್ವಾನುಕಂಪ ಹೆಚ್ಚಿಗೆ ಕಂಡುಬಂದರೂ ಒಂದು ಬಗೆಯ ನಿಶ್ಚಿಂತ ಭಾವವೂ ಎದ್ದುತೋರುತ್ತದೆ. ತೃತೀಯ ಹಾಗೂ ಸಪ್ತಮ ಸ್ವರಗಳ ನೈಜ ನಾದಕ್ಕಿಂತ ಅರ್ಧ ಇಳಿಸಿದ ಸ್ವರಗಳಿಗೆ ಈ ಗೀತೆಗಳ ಸಂಗೀತವನ್ನು ಅಳವಡಿಸಲಾಗಿದೆ. ಈ ಸ್ವರಗಳನ್ನು ‘ನೀಲಸ್ವರ’ಗಳೆಂದು ಕರೆಯುತ್ತಾರೆ. ವಿಲಿಯಂ ಕ್ರಿಸ್ಟಫರ್ ಹ್ಯಾಂಡಿ ಎಂಬ ನೀಗ್ರೊ ಈ ಬಗೆಯ ಗೀತೆಗಳನ್ನು 1912ರಲ್ಲಿ ಜನಪ್ರಿಯಗೊಳಿಸಿದ.

ಜಾಸ್ ಸಹ ನೀಗ್ರೊ ಸಂಗೀತವೇ. ಇದು ಇಂದು ಅಮೆರಿಕದ ಸಂಗೀತದ ಮೇಲೆ ಬಹಳ ಪ್ರಭಾವ ಬೀರಿದೆ. ಇದರಲ್ಲಿನ ಲಯಬದ್ಧತೆ [illegible] ಕೂಡಿರುತ್ತದೆ. ಬಿಳಿಯರ ಸಂಗೀತ ವಾದ್ಯಗಳನ್ನು ನೀಗ್ರೊಗಳು ಹಾಸ್ಯವಾಗಿ ಬಾರಿಸಿದ ಭಾವನೆ ಬರುವಂತೆ ತೋರುತ್ತದೆ. ಆಫ್ರಿಕದ ಲಯವನ್ನು ನೀಗ್ರೊಗಳು ಇದಕ್ಕೆ ಅಳವಡಿಸಿದ್ದಾರೆ. ಜಾಸ್ ಸಂಗೀತದ ಪರಂಪರೆ ಆರಂಭಿಸಿದವರು ಇವರೇ.

ಜಾಸ್‌ಗೆ ಸ್ಥಿರಸ್ಥಾನ ದೊರಕಿಸಿಕೊಟ್ಟವರು ಲೂಯಿ ಆರ್ಮ್‌ಸ್ಟ್ರಾಂಗ್ ಮತ್ತು ಡ್ಯೂಕ್ ಎಲಿಂಗ್ಟನ್.

ಮಹಾಲಿಯ ಜಾಕ್ಸನ್ ಖ್ಯಾತ ನೀಗ್ರೊ ಹಾಡುಗಾರ್ತಿ. ಪಾಲ್ ರೋಬ್‌ಸನ್ ಹಿರಿಯ ನೀಗ್ರೊ ಹಾಡುಗಾರ.

ನೋಡಿ : ಪಾಲ್ ರೋಬ್‌ಸನ್ ; ಲೂಯಿ ಆರ್ಮ್‌ಸ್ಟ್ರಾಂಗ್

## ನೀತಿಕಥೆ

ಮಧ್ಯಾಹ್ನದ ಬಿಸಿಲಿನ ಝಳ. ಆಗ ತಾನೇ ಬೇಟೆಯಾಡಿ ಹೊಟ್ಟೆ ತುಂಬಿಸಿಕೊಂಡಿದ್ದ ಸಿಂಹ ಮರದ ನೆರಳಲ್ಲಿ ಮಲಗಿ ಗಾಢವಾಗಿ ನಿದ್ರಿಸುತ್ತಿತ್ತು. ಆಗ ಆ ದಾರಿಯಲ್ಲಿ ಬರುತ್ತಿದ್ದ ಇಲಿಯೊಂದು ಇದನ್ನು ಬಂಡೆಯೆಂದು ಭ್ರಮಿಸಿ ಅದರ ಮೇಲೆಲ್ಲ ಓಡಾಡಿತು. ಅದು ಸಿಂಹದ ಮೂಗಿನ ಹತ್ತಿರ ಬಂದಾಗ ಸಿಂಹಕ್ಕೆ ಎಚ್ಚರವಾಗಿಬಿಟ್ಟಿತು. ತನ್ನ ನಿದ್ರೆಯನ್ನು ಕೆಡಿಸಿದವರು ಯಾರು ಎಂದು ಅದು ಕೋಪದಿಂದ ಗರ್ಜಿಸಿತು. ಇದರಿಂದ ಭಯಗೊಂಡು ನಡುಗುತ್ತ ನಿಂತಿದ್ದ ಇಲಿಯನ್ನು ಕಂಡು "ಈ ಚೋಟುದ್ದದ ಪ್ರಾಣಿಗೆ ಎಷ್ಟು ಧೈರ್ಯ ನನ್ನ ನಿದ್ರೆ ಕೆಡಿಸಲು !" ಎಂದು ಕೂಗಾಡಿತು. ಅದನ್ನು ಒಂದೇ ಏಟಿಗೆ ಅರೆದು ಬಿಡಬೇಕೆಂದು ತನ್ನ ದೊಡ್ಡ ಪಂಜನ್ನು ಮೇಲಕ್ಕೆತ್ತಿತು. ಆಗ ಇಲಿ ದೀನತೆಯಿಂದ ಬೇಡಿಕೊಂಡಿತು ; "ಮೃಗರಾಜ, ಕ್ಷಮಿಸು, ತಿಳಿಯದೆ ಅಪರಾಧ ಮಾಡಿದೆ. ಈ ಬಾರಿ ಬಿಟ್ಟುಬಿಟ್ಟರೆ ಮುಂದೆ ನನ್ನಿಂದ ನಿನಗೆ ಏನಾದರೂ ಪ್ರಯೋಜನ ವಾದೀತು." ಇದನ್ನು ಕೇಳಿ ಸಿಂಹಕ್ಕೆ ನಗುವೇ ಬಂತು. ನನ್ನ ಕಾಲಿನ ಪಂಜದಷ್ಟು ಕೂಡ ಇಲ್ಲದ ಇಲಿ ತನಗೇನ ಉಪಕಾರ ಮಾಡೀತು ಎಂದುಕೊಂಡಿತು. ಆದರೂ "ಹೂಂ, ಈ ಸಲಕ್ಕೆ ಕ್ಷಮಿಸಿದ್ದೇನೆ, ಇನ್ನು ಮುಂದೆ ಎಚ್ಚರದಿಂದಿರು !" ಎಂದು ಗದರಿಸಿತು. ಇಲಿ 'ಬದುಕಿದೆಯಾ ಬಡಜೀವವೇ' ಎಂದುಕೊಂಡು ಅಲ್ಲಿಂದ ಕಾಲುಕಿತ್ತಿತು.

ಕೆಲವು ದಿನಗಳ ಬಳಿಕ ಕಾಡಿನಲ್ಲಿ ಓಡಾಡುತ್ತಿದ್ದ ಸಿಂಹ ಬೇಡನ ಬಲೆಯಲ್ಲಿ ಸಿಕ್ಕಿಬಿದ್ದಿತು. ಎಷ್ಟು ಜಗ್ಗಿ ಎಳೆದು ಹೊರಳಾಡಿದರೂ ಬಲೆಯಿಂದ ಬಿಡಿಸಿಕೊಳ್ಳಲು ಆಗಲಿಲ್ಲ. ಕೊನೆಗೆ ಏನು ಮಾಡಲೂ ತೋರದೆ, ಕರ್ಕಶವಾಗಿ ಕೂಗಿಕೊಂಡಿತು. ದೂರದಲ್ಲಿದ್ದ ಇಲಿ ಈ ಧ್ವನಿಯನ್ನು ಕೇಳಿ ಅಲ್ಲಿಗೆ ಓಡಿಬಂತು. ತನಗೆ ಸಹಾಯಮಾಡಿದ್ದ ಸಿಂಹ ಬಲೆಯಲ್ಲಿ ಸಿಕ್ಕು ಬಿದ್ದದ್ದನ್ನು ಕಂಡು, ಬಲೆಯ ದಾರಗಳನ್ನು ಇಲಿ ತನ್ನ ಚೂಪಾದ ಹಲ್ಲುಗಳಿಂದ ಕಚ್ಚಿ ಕತ್ತರಿಸಿತು. ಸಿಂಹ ಬಲೆಯಿಂದ ಪಾರಾಯಿತು. ತನ್ನನ್ನು ಬೇಡನಿಂದ ಉಳಿಸಿದ ಇಲಿಯ ಕಡೆಗೆ ಕೃತಜ್ಞತೆಯಿಂದ ನೋಡಿ ಅಂದುಕೊಂಡಿತು : "ಚಿಕ್ಕ ಪುಟ್ಟ ಗೆಳೆಯರೂ ಕೆಲವೊಮ್ಮೆ ಅತಿ ಮಹತ್ವದ ಮಿತ್ರರಾಗಬಲ್ಲರು".

...ಸಿಂಹ, ಇಲಿಗಳಿಗೆ ಮನುಷ್ಯರಂತೆ ಮಾತನಾಡಲು ಬರುವುದುಂಟೆ ? ಇದು ಬರಿಯ ಕಟ್ಟುಕಥೆ ಇರಬೇಕು ಅನಿಸೀತು. ಕಟ್ಟುಕಥೆಯಾದರೂ ಅದರ ಕೊನೆಯಲ್ಲಿರುವ ನೀತಿವಾಕ್ಯ ಉದಾತ್ತವಾದದ್ದು. ಕಥೆಯೊಂದನ್ನು ಹೇಳಿ ಅದರ ಮೂಲಕ ನೀತಿಯ ಪಾಠವನ್ನು ಬೋಧಿಸುವುದೇ ಇಂಥ ನೀತಿಕಥೆಗಳ ಉದ್ದೇಶ.

ನೀತಿಕಥೆಯು [illegible] ಸಾಹಿತ್ಯದ ಒಂದು ಅಂಗ. ಭಾರತದ ನೀತಿಕಥೆಗಳು [illegible] ಬುದ್ಧನ ಗತಜೀವನವನ್ನು ಚಿತ್ರಿಸುವ ಜಾತಕಕಥೆಗಳು ಕ್ರಿ.ಪೂ. [illegible] ಶತಮಾನದ್ದು. 'ಪಂಚತಂತ್ರ'ದ ಕಥೆಗಳು ಮೂಲದಲ್ಲಿ ಸಂಸ್ಕೃತದಲ್ಲಿ [illegible] ಕ್ರಮೇಣ ಅನೇಕ ಭಾಷೆಗಳಿಗೆ ಭಾಷಾಂತರಗೊಂಡವು.

ಕ್ರಿ.ಪೂ. 6ನೆಯ ಶತಮಾನದ ಗ್ರೀಸಿನಲ್ಲಿದ್ದ ಈಸೋಪನ ನೀತಿಕಥೆಗಳನ್ನು ಕೇಳದ ಕಿರಿಯರು ಇಲ್ಲವೇ ಇಲ್ಲ ಎನ್ನಬಹುದು. ಎತ್ತರದ ಚಪ್ಪರದ ಮೇಲಿರುವ ದ್ರಾಕ್ಷಿಹಣ್ಣಿಗಾಗಿ ಎಷ್ಟು ನೆಗೆದರೂ ಅದು ಸಿಗದೆ ಹೋದಾಗ, ಕೊನೆಗೆ "ಥೂ, ಈ ಹಣ್ಣುಗಳು ಬಹಳ ಹುಳಿಯಾಗಿರುವ ಹಾಗಿದೆ. ಇಂಥವನ್ನು ಯಾರು ತಿನ್ನುತ್ತಾರೆ ?" ಎಂದು ಶಪಿಸುತ್ತ ತನ್ನ ದಾರಿ ಹಿಡಿದ ನರಿ ; ಇನ್ನೊಂದು ಕೋಳಿಯನ್ನು ಕಾಳಗದಲ್ಲಿ ಸೋಲಿಸಿದೆ ಎಂದು ಸಂತೋಷದಿಂದ ಕೂಗಾಡತೊಡಗಿ, ಹದ್ದಿನ ಕಣ್ಣಿಗೆ ಬಿದ್ದು ಅದಕ್ಕೆ ಆಹಾರವಾದ ಜಂಭದ ಕೋಳಿ ; ಇನ್ನೂ ಹೆಚ್ಚು ಮೊಟ್ಟೆಬೇಕು ಎಂಬ ದುರಾಸೆಯಿಂದ ಬಾತಿನ ಹೊಟ್ಟೆಯನ್ನು ಸೀಳಿ ಬಾತನ್ನೇ ಕಳೆದುಕೊಂಡ ಅವಿವೇಕಿ —ಈ ಪಾತ್ರಗಳು ಜಗತ್ತಿನ ವಿವಿಧ ದೇಶಗಳ ಮಕ್ಕಳಿಗೆ ಪರಿಚಿತವಾಗಿವೆ.

ಈಸೋಪನ ಬಳಿಕ ನೀತಿಕಥೆಗಳನ್ನು ರಚಿಸಿದವರಲ್ಲಿ ಫ್ರಾನ್ಸಿನ ಲಾ ಫಾಂಟೇನ್ (17ನೆಯ ಶತಮಾನ) ಅತ್ಯಂತ ಪ್ರಮುಖ. ಸರಳವೂ ಸುಂದರವೂ ಆದ ಪದ್ಯಗಳ ಮೂಲಕ ಅವನು ಕಥೆ ಬರೆದ. ಇವನ ಕಥೆಗಳನ್ನು ಇಂಗ್ಲಿಷಿಗೆ ಭಾಷಾಂತರಮಾಡಿದ ಅಮೆರಿಕದ ಕವಯಿತ್ರಿ ಮಾರಿಯನ್ ಮೂರ್‌ಗೆ 1952ರಲ್ಲಿ ಪುಲಿಟ್ಜರ್ ಬಹುಮಾನ ಬಂತು.

ಜರ್ಮನಿಯ ಗ್ರಿಮ್ ಸಹೋದರರು (19ನೆಯ ಶತಮಾನ) ಕಿರಿಯರಿಗಾಗಿ ರಚಿಸಿದ ಕಥೆಗಳಲ್ಲಿ ಹಲವು, ನೀತಿಬೋಧಕ ಕಥೆಗಳು.

ಬುದ್ಧಿವಂತ ಕೋಳಿಯೊಂದು ನರಿಯ ಬಾಯಿಗೆ ಸಿಕ್ಕಿಬಿಟ್ಟಿತು. ಕೋಳಿ ಮಾತಿನಲ್ಲಿ ಚತುರ. ಅದೂ ಇದೂ ಆಡುತ್ತ ನರಿಯೂ ಮಾತನಾಡಲು ಬಾಯಿ ತೆರೆಯುವಂತೆ ಮಾಡಿತು. ನರಿ ಬಾಯಿ ತೆರೆದದ್ದೇ ಸರಿ, ಕೋಳಿ ಓಡಿಹೋಯಿತು. ಇದು ಆಧುನಿಕ ಆಂಗ್ಲ ಸಾಹಿತ್ಯದಲ್ಲಿ ಮೊದಲ ಕವಿ ಜೆಫ್ರಿ ಚಾಸರನ 'ಕ್ಯಾಂಟರ್‌ಬರಿ ಕಥೆ' ಯಲ್ಲಿರುವ ನೀತಿಕಥೆ. ಪದ್ಯರೂಪದಲ್ಲಿರುವ 'ಐವತ್ತೊಂದು ನೀತಿಕಥೆಗಳು' ಜಾನ್ ಗೇ (1685–1732) ಸೃಷ್ಟಿ. ಈತನನ್ನು 'ಇಂಗ್ಲೆಂಡಿನ ಈಸೋಪ್' ಎಂದು ಕರೆಯುವುದುಂಟು. 1907ರಲ್ಲಿ ನೊಬೆಲ್ ಬಹುಮಾನ ಪಡೆದ ಆಂಗ್ಲ ಬರೆಹಗಾರ ರಡ್‌ಯರ್ಡ್ ಕಿಪ್ಲಿಂಗ್ ಕೂಡ ನೀತಿಕಥೆಗಳನ್ನು ರಚಿಸಿದ್ದಾನೆ.

ಪುರಾಣ, ಇತಿಹಾಸ, ಜಾನಪದ ಮೂಲಗಳಿಂದ ಕಥಾವಸ್ತುಗಳನ್ನು ಆರಿಸಿಕೊಂಡು ಎಂ. ಎಸ್. ಪುಟ್ಟಣ್ಣನವರು ರಚಿಸಿದ 'ನೀತಿ ಚಿಂತಾಮಣಿ' ಒಂದು ಕಾಲಕ್ಕೆ ತುಂಬ ಜನಪ್ರಿಯವಾಗಿದ್ದ ನೀತಿಕಥಾ ಸಂಕಲನ. ಮಕ್ಕಳ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆ ನೀಡಿದ ಜಿ. ಪಿ. ರಾಜರತ್ನಂ ಹಲವಾರು ನೀತಿಕಥೆಗಳನ್ನು ಕನ್ನಡದಲ್ಲಿ ಬರೆದಿದ್ದಾರೆ.

ನೋಡಿ : ಈಸೋಪ್ ; ಕಿಪ್ಲಿಂಗ್ ; ಗ್ರಿಮ್ ಸಹೋದರರು ; ಚಾಸರ್ ; 'ಪಂಚತಂತ್ರ'

## ನೃತ್ಯ

ಒಮ್ಮೆಯಾದರೂ ಕುಣಿಯದ ಮಾನವನೇ ಇಲ್ಲ ಎಂದರೆ ತಪ್ಪಾಗದು. ಪ್ರತಿಯೊಬ್ಬ ವ್ಯಕ್ತಿಯೂ ಎಳೆಯ ವಯಸ್ಸಿನಲ್ಲಿಯಾದರೂ ಅತ್ಯಂತ ಸಂತೋಷವಾದಾಗ ಒಮ್ಮೆಯಾದರೂ ಕುಣಿದೇ ಇರುತ್ತಾನೆ. ನೃತ್ಯ, ಮಾನವ ಸಹಜಧರ್ಮ.

ತೆನೆಯಿಂದ ತುಂಬಿದ ಭತ್ತದ ಹೊಲ. ಪ್ರಕೃತಿಯ ಈ ವರದಾನದಿಂದ ರೈತನಿಗೆ ಹಿಗ್ಗು. ಕುಣಿಯುವಂತೆ ಪ್ರೇರೇಪಿಸುವ ವೈಮನಸಗಳು. ಪ್ರಕೃತಿಯ ಮಡಿಲಲ್ಲಿ ಬೆಳೆದ ಪ್ರಾಚೀನ ಮಾನವ ತನ್ನ ಎಲ್ಲ ಅವಶ್ಯತೆಗಳಿಗೂ ಪ್ರಕೃತಿಯನ್ನೇ ಅವಲಂಬಿಸಿದ್ದ. ಮಳೆ ಬಾರದೆ, ಭೂಮಿಯೆಲ್ಲ ಒಣಗಿ ಬಿರುಕು ಬಿಟ್ಟಾಗ ಮಾನವ ಮಳೆಗಾಗಿ ಹಂಬಲಿಸಿದ; ಮೋಡ ತನ್ನಲ್ಲಿರುವ ಮಳೆಯನ್ನು ಸುರಿಸಿ ಭೂಮಿಯನ್ನು ತಣಿಸಿದಾಗ, ಹೃದಯ ತುಂಬಿಬಂದು ಅವನು ಹಾಡಿದ, ಕುಣಿದ.

ಹೀಗೆ ಪ್ರಾಚೀನ ಕಾಲದಿಂದ ನೃತ್ಯ ಅವನ ಭಾವನೆಗಳನ್ನು ಹೊರಗೆಡಹುವ ಮಾಧ್ಯಮವಾಯಿತು. ಇದಕ್ಕೆ ಬೇಕಾದ ಲಯವೂ ಮಾನವನ ಜೀವನದಲ್ಲಿ ಹಾಸುಹೊಕ್ಕಾಗಿ ಬೆರೆತಿರುವ ಅಂಶ. ದೈಹಿಕ ಚಲನವಲನಗಳುಳ್ಳ ಅವನ ಹಲವಾರು ಕಾರ್ಯಗಳಲ್ಲಿ, ಒಂದು ಲಯ ಇದ್ದೇ ಇರುತ್ತದೆ. ಗಾಳಿಗೆ ತೂಗಾಡುವ ಗಿಡ ರೆಂಬೆಗಳನ್ನು, ಬಾಗಿ ಬಳುಕುವ ಹುಲ್ಲಿನ ಗರಿಕೆಗಳನ್ನು, ಹೀಗೆಯೇ ಪ್ರಕೃತಿಯ ಹಲವಾರು ಚಲನೆಗಳನ್ನು ನೋಡಿ ಅವುಗಳನ್ನು ಹಾವಭಾವಗಳಲ್ಲಿ ಮಾನವ ಅನುಕರಿಸಿದ್ದರಿಂದ ನೃತ್ಯ ಹುಟ್ಟಿತು ಎನ್ನಬಹುದು.

ಮನಸ್ಸಿನ ಭಾವನೆಗಳನ್ನು ತಿಳಿಸುವ ಕಲೆಯಾಗಿ ಹುಟ್ಟಿದ ನೃತ್ಯದಲ್ಲಿ ಮೈ ಹಾಗೂ ಕೈ ಕಾಲುಗಳ ಲಯಬದ್ಧ ಚಲನೆಗಳು ಮೊದಲಿಗೆ ಆರಂಭವಾದುವು. ಅನಂತರ ಕೈಗಳನ್ನು ತಟ್ಟುವುದು ಅಥವಾ ಸಂಗೀತದೊಡನೆ ಮೇಳೈಸಿ ನರ್ತಿಸುವುದು ಆಚರಣೆಗೆ ಬಂದಿರಬಹುದು. ಹಾಗೆಯೇ ಲಯಬದ್ಧ ಚಲನೆಗಳನ್ನು ಪುನರಾವರ್ತಿಸಿ ನರ್ತಿಸುವುದನ್ನು ಕಲಿಸುವ ಪದ್ಧತಿ ರೂಪುಗೊಂಡಿರಬಹುದು. ಬರಬರುತ್ತ ದುಷ್ಟಶಕ್ತಿಗಳನ್ನು ಸೋಲಿಸಲು, ದೇವರು ಪ್ರಸನ್ನನಾಗುವಂತೆ ಮಾಡಲು, ಯುದ್ಧದಲ್ಲಿ ವಿಜಯ ಪಡೆಯಲು–ಹೀಗೆ ನೃತ್ಯ ಹಲವು ಉದ್ದೇಶಗಳ ಸಾಧನೆಯ ಮಾಧ್ಯಮವಾಯಿತು; ಹಲವು ಬಗೆಯಲ್ಲಿ ಬೆಳೆಯಿತು. ಪ್ರತಿಯೊಂದು ರಾಷ್ಟ್ರಕ್ಕೂ ವಿಶಿಷ್ಟವಾದ ನೃತ್ಯಗಳೂ ಆ ರಾಷ್ಟ್ರದ ವಿವಿಧ ಭಾಗಗಳಿಗೆ ವಿಶಿಷ್ಟವಾದ ಸುಸ್ಪಷ್ಟ ನೃತ್ಯ ಪ್ರಕಾರಗಳೂ ಹುಟ್ಟಿಕೊಂಡುವು. ಎಲ್ಲ ರಾಷ್ಟ್ರಗಳ ನೃತ್ಯಗಳನ್ನು ಸಾಮಾನ್ಯವಾಗಿ ಮೂಲನಿವಾಸಿ ನೃತ್ಯ, ಜಾನಪದ ನೃತ್ಯ ಹಾಗೂ ಶಾಸ್ತ್ರೀಯ ನೃತ್ಯಗಳೆಂದು ವಿಂಗಡಿಸಬಹುದು. ಆಯಾ ಬುಡಕಟ್ಟಿಗೆ ಸಂಬಂಧಪಟ್ಟಂತೆ ವಿವಿಧ ಮೂಲನಿವಾಸಿ ನೃತ್ಯಗಳಿವೆ. ಭಾರತದಲ್ಲಿ ಪಂಜಾಬಿನ ಬಾಂಗ್ರಾ, ರಾಜಸ್ಥಾನದ ಘೂಮರ, ಮಹಾರಾಷ್ಟ್ರದ ಕೋಲೆ, ಗುಜರಾತದ ಗರ್ಭಾ, ಕೊಡಗಿನ ಹುತ್ತರಿ ಮುಂತಾಗಿ ಅನೇಕ ಜಾನಪದ ನೃತ್ಯಗಳಿವೆ. ಶಾಸ್ತ್ರೀಯ ನೃತ್ಯದಲ್ಲಿ ಭರತನಾಟ್ಯ, ಕಥಕ್ಕಳಿ, ಕಥಕ್, ಮಣಿಪುರಿ ಇವು ಮುಖ್ಯ ವಿಧಗಳು. ಎಲ್ಲ ದೇಶದ ಹಾಗೆ ನಮ್ಮ ರಾಷ್ಟ್ರದ ನೃತ್ಯಗಳ ಮೇಲೂ ಆಧುನಿಕ ಜೀವನ ಪ್ರಭಾವ ಬೀರಿದೆ. ಶಾಸ್ತ್ರೀಯ ನೃತ್ಯದ ನಿರ್ಬಂಧನೆಗಳಿಂದ ಮುಕ್ತಗೊಂಡು ಸುಲಭ ಶೈಲಿಯ ನೃತ್ಯ ಪ್ರಕಾರಗಳು ಈಗ ಪ್ರಚಾರಕ್ಕೆ ಬಂದಿವೆ.

ವಿದೇಶಗಳ ಸಂಸ್ಕೃತಿಯಲ್ಲಿ ನಮಗೆ ತಿಳಿದಿರುವಂತೆ ಅತಿ ಪ್ರಾಚೀನ ನೃತ್ಯರೂಪ ಪುರಾತನ ಈಜಿಪ್ಟಿನದು. ಆಗಿನದು ನೈಲ್ ನದಿಯ ಏಳಿತಗಳನ್ನು ಆಧರಿಸಿದ ಜೀವನಧಾರಣೆ. ಪ್ರತಿ ವರ್ಷ ಓಸೈರಸ್ ದೇವತೆಯ ಅಳಿವು, ಪುನರುತ್ಥಾನಗಳನ್ನು ಆ ಜನರು ನೃತ್ಯ ರೂಪದಲ್ಲಿ ಆಚರಿಸುತ್ತಿದ್ದರು. ಈ ಬಗೆಯ ಆರಾಧನೆ ದೇಗುಲಗಳಲ್ಲಿ ಆಗಿನ ಪ್ರಾಚೀನ ವೈದ್ಯನಿಂದ, ಮಾಂತ್ರಿಕನಿಂದ ನಡೆಯುತ್ತಿತ್ತು. 'ತಾರೆಗಳ ನೃತ್ಯ' ಎಂಬ ಒಂದು ನೃತ್ಯವನ್ನು ದೇಗುಲದ ವೇದಿಕೆಯ ಸುತ್ತಲೂ ನಡೆಸುತ್ತಿದ್ದರು. ಫೆರೋ ದೊರೆಯೇ ಸ್ವತಃ ಆರಾಧನಾ ದೀಕ್ಷೆ ಪಡೆಯುವ ಮೊದಲು ನರ್ತಿಸುತ್ತಿದ್ದ. ತನ್ನ ಅತಿಥಿಗಳ ಮನೋರಂಜನೆಗಾಗಿ ಆತ ನೃತ್ಯಗಳನ್ನು ಏರ್ಪಡಿಸುತ್ತಿದ್ದ.

ಬೈಬಲ್‌ನ ಹಳೆಯ ಒಡಂಬಡಿಕೆಯಲ್ಲಿ ನೃತ್ಯದ ಉಲ್ಲೇಖವಿದೆ. ಆದರೆ ಅದು ಯಾವ ಬಗೆಯ ನೃತ್ಯವೆಂಬುದು ಸ್ಪಷ್ಟವಿಲ್ಲ.

ಪ್ರಾಚೀನ ಗ್ರೀಸಿನ ವಿಶಿಷ್ಟ ನೃತ್ಯ ಪಾಶ್ಚಾತ್ಯ ನೃತ್ಯದ ತಳಹದಿ. ನೃತ್ಯ ಧಾರ್ಮಿಕಾಚರಣೆಗೆಂದು ಮಾತ್ರವೇ ಅಲ್ಲ ಒಂದು ಒಳ್ಳೆಯ ಹವ್ಯಾಸದಂತೆಯೂ ಬೆಳೆಯಿತು. ಚಿಕ್ಕಂದಿನಿಂದ ಹುಡುಗ ಹುಡುಗಿಯರಿಗೆ ನರ್ತನ ಹೇಳಿಕೊಡುತ್ತಿದ್ದರು. ಇದರಿಂದ ಅವರ ದೇಹ ಮನಸ್ಸುಗಳ ಸಾಮರಸ್ಯ ಸಾಧಿಸಬಹುದೆಂಬುದು ಅವರ ಅಭಿಪ್ರಾಯವಾಗಿತ್ತು. ಮದುವೆಯ ಸಮಾರಂಭಗಳಲ್ಲಿ, ದ್ರಾಕ್ಷಿಯ ಕುಯ್ಲು ಕಾಲದಲ್ಲಿ ಹಾಗೂ ತಮ್ಮ ಮನಸ್ಸಂತೋಷಕ್ಕಾಗಿ ಗ್ರೀಸಿನ ಯುವಕ ಯುವತಿಯರು ನರ್ತಿಸುತ್ತಿದ್ದರು. ಪ್ರಾಚೀನ ರೋಮನರು ಗ್ರೀಕರ ದೇವರುಗಳನ್ನು ಅಂಗೀಕರಿಸಿದಂತೆ ಅವರ ನೃತ್ಯಗಳನ್ನೂ ತಮ್ಮದಾಗಿಸಿಕೊಂಡರು. ಬೆಳೆಯನ್ನು ಬಿತ್ತುವಾಗ, ಅಂತಿಮ ಕ್ರಿಯೆಯ ಸಮಯದಲ್ಲಿ ಅವರು ನರ್ತನಗಳನ್ನು ನಡೆಸುತ್ತಿದ್ದರು.

ಮಧ್ಯಯುಗದ ಯೂರೋಪಿನಲ್ಲಿ ಯಾವುದೇ ಕಲೆ ಬೆಳೆಯಲು ತಕ್ಕ ವಾತಾವರಣವಿರಲಿಲ್ಲ. ಯುದ್ಧ, ಕ್ಷಾಮ, ಡಾಮರಗಳ ತಾಂಡವ ನಡೆದಿತ್ತು. ಈ ಕಾಲದ ಒಂದು ವಿಚಿತ್ರ ಬಗೆಯ ನರ್ತನವೆಂದರೆ 'ಕೋರಿಯಾ ಮೇಜರ್' ಎಂಬುದು. ಅನೇಕರು, ಕೆಲವೊಮ್ಮೆ ಸಹಸ್ರಾರು ಮಂದಿ,

ನೃತ್ಯ ವೈವಿಧ್ಯ

ಎಂದು ಬಗೆಯ ವಿಚಿತ್ರ ಕುಣಿತದಲ್ಲಿ ಭಾಗವಹಿಸುತ್ತಿದ್ದರು. ಕೆಲವರಂತೂ ಕುಣಿದು ಕುಣಿದು ಬಳಲಿ ಪ್ರಾಣ ನೀಗುತ್ತಿದ್ದರು. ಕೆಟ್ಟುಹೋದ ರೈ ಧಾನ್ಯದಿಂದ ಮಾಡಿದ ಬ್ರೆಡ್ ತಿಂದುದರಿಂದ ಇಂಥದೊಂದು ಕುಣಿಯುವ ಕಾಯಿಲೆ ಹುಟ್ಟಿರಬಹುದೆಂಬ ಅಭಿಪ್ರಾಯವಿದೆ.

ಮೊದಮೊದಲು ಕ್ರೈಸ್ತಧರ್ಮಾಧಿಕಾರಿಗಳು ನರ್ತನವನ್ನು ವಿರೋಧಿಸಿದರೂ ಸುಮಾರು 13ನೆಯ ಶತಮಾನದಲ್ಲಿ ನಿಗೂಢ ನಾಟಕಗಳ ಅಂಗವಾಗಿ ಇದನ್ನು ಸ್ವೀಕರಿಸಿದರು. ಹೀಗೆ ನರ್ತನಕ್ಕೆ ಪೋಷಣೆ ದೊರೆತು ನವೋದಯ ಕಾಲದಲ್ಲಿ ಅದು ಬೆಳೆಯಲಾರಂಭಿಸಿತು. ಈ ವೇಳೆಗೆ ನೃತ್ಯ ಸಾಮಾಜಿಕ ಚಟುವಟಿಕೆಯಾಗಿತ್ತು. ಇಂಗ್ಲೆಂಡಿನಲ್ಲಿ ಔಪಚಾರಿಕ ಸಮಾರಂಭಗಳಲ್ಲಿ ರಾಜಮನೆತನದವರೂ ನರ್ತಿಸುತ್ತಿದ್ದರು. ಗಂಡು ಹೆಣ್ಣು ಇಬ್ಬರಿಗಾಗಿ ರಚಿತವಾದ, ಇಂದು 'ಸೊಸೈಟಿ ಡಾನ್ಸ್' ಎಂದು ಕರೆಯಲ್ಪಡುವ ನೃತ್ಯ ವಿಶೇಷಗಳು ಹುಟ್ಟಿಕೊಂಡುವು. ಐತಿಹಾಸಿಕ ಅಥವಾ ಪೌರಾಣಿಕ ವ್ಯಕ್ತಿಗಳ ವೇಷ ಹಾಗೂ ಮುಖವಾಡಗಳನ್ನು ಧರಿಸಿ ನರ್ತಿಸುವುದೂ ಆರಂಭವಾಯಿತು. ವೈವಿಧ್ಯಪೂರ್ಣವಾದ ಈ ನೃತ್ಯವನ್ನು 'ಮಾಸ್ಕರೇಡ್' ಎಂದು ಕರೆಯುತ್ತಾರೆ. ಇದೇ ಇಂದಿನ 'ಬ್ಯಾಲೆ' ನೃತ್ಯದ ಉಗಮಕ್ಕೆ ಕಾರಣವಾಯಿತು. ಬ್ಯಾಲೆಯಂತೆ ಮಾಸ್ಕರೇಡ್ ಮೂಕಾಭಿನಯ ಪ್ರಧಾನ ನೃತ್ಯ.

ಇದಲ್ಲದೆ ಎಲ್ಲ ದೇಶಗಳಲ್ಲೂ ತಮ್ಮದೇ ಆದ ಜಾನಪದ ನೃತ್ಯಗಳಿವೆಯಷ್ಟೆ. ಕತ್ತಿ ನೃತ್ಯ, ಮಾರಿಸ್ ನೃತ್ಯ ಮುಂತಾದ ಜಾನಪದ ಕುಣಿತ ಇಂಗ್ಲೆಂಡಿನವು. ಗವಾಟ್ ಎಂಬ ಉಲ್ಲಾಸಪೂರಿತ ನೃತ್ಯ ಫ್ರಾನ್ಸಿನದು. ಹಾಗೆಯೇ ಟಾರಂಟೆಲ ಇಟಲಿಯದು. ಸ್ಪೇನಿನ ಜೋಟ, ಬೊಲೆರೊ, ಹಂಗೆರಿಯ ಚಾರ್ಡ್ಸ್, ಐರ್ಲೆಂಡಿನ ಜಿಗ್ಸ್, ಸ್ಕಾಟ್ಲೆಂಡಿನ ರೀಲ್, ಡೆನ್ಮಾರ್ಕಿನ ಕ್ರೆಸ್ಟೆಡ್ ಹೆನ್, ಜರ್ಮನಿಯ ಷೀಬೆನ್‍ಸ್ಕ್ರಿಟ್, ಪೋಲೆಂಡಿನ ಮಜೂರ್ಕ ಯೂರೋಪಿನ ರಾಷ್ಟ್ರಗಳಲ್ಲಿ ಹೆಸರಾದುವು. ರಷ್ಯದಲ್ಲಿ ಯುಕ್ರೇನಿನ ಗೋಪಕ್, ಕಾಕಸಿಸ್‍ನ ಲೆಜಿಂಕಗಳು ಪ್ರಖ್ಯಾತವಾದುವು. ಲ್ಯಾಟಿನ್ ಅಮೆರಿಕ ಕ್ಯಾರಿಬಿಯನ್ ದ್ವೀಪಗಳಲ್ಲೂ ಉತ್ತರ ಅಮೆರಿಕದಲ್ಲೂ ಪ್ರತಿಯೊಂದು ಪ್ರದೇಶಕ್ಕೂ ವಿಶಿಷ್ಟವಾದ ನೃತ್ಯಗಳಿವೆ. ಏಷ್ಯದಲ್ಲಿ ಶ್ರೀಲಂಕಾ ದ್ವೀಪದವರು ಬುದ್ಧನ ಉತ್ಸವ ಆಚರಿಸುವಾಗ ನಡೆಸುವ ನೃತ್ಯ ಅವರಿಗೆ ವಿಶಿಷ್ಟವಾದದ್ದು. ಬರ್ಮಿಯರ ನತ್‍ಪ್ವೆ, ಥಾಯ್‍ಲೆಂಡಿನ ಖಾನ್, ಲಾಕನ್, ಫಿಲಿಪ್ಪೀನಿನ ಮೇಣಬತ್ತಿ ನೃತ್ಯಗಳನ್ನೂ ಇಲ್ಲಿ ಹೆಸರಿಸಬಹುದು. ಕಾಂಬೋಡಿಯದ ನೃತ್ಯ ಸಂಪ್ರದಾಯ ದೀರ್ಘ ಕಾಲದಿಂದ ನಡೆದುಬಂದದ್ದು. ಇಲ್ಲಿನ ಹುಡುಗಿಯರು ಎಳೆಯ ವಯಸ್ಸಿನಲ್ಲೇ ನೃತ್ಯ ಕಲಿಯಲು ಆರಂಭಿಸುತ್ತಾರೆ. ಬಾಲಿ ದ್ವೀಪದ ನೃತ್ಯಸಂಪ್ರದಾಯವೂ ಪ್ರಾಚೀನವಾದದ್ದು, ಅಂತರರಾಷ್ಟ್ರೀಯ ಖ್ಯಾತಿಯುಳ್ಳದ್ದು. ಇಲ್ಲಿನ ಅತ್ಯಂತ ಪ್ರಸಿದ್ಧ ನೃತ್ಯ ಲೆಗಾಂಗ್ ದೇವಾಲಯಗಳಲ್ಲಿ ಕನ್ಯೆಯರು ಮಾಡುವಂಥದ್ದು. ಚೀನದ ಚಕ್ರವರ್ತಿಗಳ ಆಡಳಿತ ಕೊನೆಗಂಡಾಗ ಅಲ್ಲಿನ ವಿಧಿವತ್ತಾದ ಹಳೆಯ ನೃತ್ಯರೂಪಗಳು ಮೂಲೆಪಾಲಾದುವು. ಆದರೆ ಚೀನದ ನಾಟಕರಂಗದಲ್ಲಿ ನೃತ್ಯ ಒಂದು ಅನಿವಾರ್ಯ ಅಂಶ. ಇತ್ತೀಚಿನ ಕಾಲದಲ್ಲಿ ಪ್ರಾಚೀನ ನೃತ್ಯ ವಿಧಾನಗಳ ಪುನರುಜ್ಜೀವನ ನಡೆದಿದೆ. ಜಪಾನಿನ ಅತ್ಯಂತ ಹಳೆಯ ನರ್ತನ ಪ್ರಕಾರ ಬುಗಾಕು. ಅಲ್ಲಿನ 'ನೋ' ನಾಟಕ ಹಾಗೂ 'ಕಬೂಕಿ' ನಾಟಕಗಳಲ್ಲಿ ಈ ಶೈಲಿ ಉಳಿದುಕೊಂಡಿದೆ.

ಆಧುನಿಕ ಪಾಶ್ಚಾತ್ಯ ನೃತ್ಯಗಳಲ್ಲಿ 'ಬಾಲ್ ರೂಮ್' ನೃತ್ಯ ಬಹಳ ಜನಪ್ರಿಯವಾದದ್ದು. ಅರಮನೆಗಳಲ್ಲಿ, ಶ್ರೀಮಂತರ ಭವನಗಳಲ್ಲಿ ಇದು ಆರಂಭವಾಯಿತು. ನಡಿಗೆಯನ್ನು ಹೋಲುವ ಹೆಜ್ಜೆಯ ಸರಳ ಚಲನೆಯಂತೆ ಇದು ಬೆಳೆಯಿತು. ಇದು ಕ್ಷಿಪ್ರವಾದ ಮಧ್ಯಮ ಗತಿ ಇದರ ಅಂಗವಾಗಿದೆ. ವಾಲ್ಟ್ಜ್, ಫಾಕ್ಸ್ ಟ್ರಾಟ್, ರುಂಬಾ, ಟ್ಯಾಂಗೊ, ರಾಕ್ ಅಂಡ್ ರೋಲ್ ಮುಂತಾದವು ಬಾಲ್ ರೂಮ್ ನೃತ್ಯದ ಹಲವಾರು ಬಗೆಗಳು. ಈ ಶತಮಾನದಲ್ಲಿ ಸಾಮಾಜಿಕ ಮನೋರಂಜನೆಗಾಗಿ ಈ ನೃತ್ಯಗಳು ರೂಪುಗೊಂಡವು. ಟ್ವಿಸ್ಟ್ ಹಾಗೂ ಜೈವ್ ನೃತ್ಯಗಳು ಆಧುನಿಕ ಆಕರ್ಷಕ ನೃತ್ಯ ಮಾದರಿಗಳು.

ನೃತ್ಯವೆಂದರೆ ಅದರ ಹಿನ್ನೆಲೆಯಾದ ಸಂಗೀತದ ಆವರ್ತನಗಳಿಗೆ ಸರಿಯಾಗಿ ನಮ್ಮ ಚಲನೆಯನ್ನು ಅಳವಡಿಸಿಕೊಂಡರಾಯಿತು ಎಂಬ ಭಾವನೆ ಜನಸಾಮಾನ್ಯರಲ್ಲಿದೆ. ಆದರೆ ನರ್ತಿಸುವವನಿಗೆ ಒಳ್ಳೆಯ ಅಂಗನ್ಯಾಸ ಇರಬೇಕು. ಈ ಅರಿವು ಎಲ್ಲರಿಗೂ ಸಹಜವಾಗಿ ಅನುಭವಕ್ಕೆ ಬರುವಂಥದು.

ಮನುಷ್ಯನಿಗೂ ಪ್ರಕೃತಿಗೂ ಇರುವ ಬಾಂಧವ್ಯವನ್ನೂ ಅವನ ಬೌದ್ಧಿಕ ಅನುಭವಗಳನ್ನೂ ನೃತ್ಯ ಸೂಚಿಸುತ್ತದೆ.

ಕುಣಿತ, ನರ್ತನ ಎಂಬ ಮಾತುಗಳಿಗೆ ಸಮಾನಾರ್ಥವಾಗಿ 'ನೃತ್ಯ' ಎಂಬ ಮಾತನ್ನು ಈ ಲೇಖನದಲ್ಲಿ ಉಪಯೋಗಿಸಿದೆ.

ನೋಡಿ : ಬ್ಯಾಲೆ ; ಭಾರತೀಯ ನೃತ್ಯಕಲೆ

## ನೆಥಾನಿಯಲ್ ಹಾಥಾರ್ನ್

ಅವನು ಹುಟ್ಟಿದ್ದು ಬೆಳೆದದ್ದು ಭೀಕರವನ್ನುಂಟುಮಾಡುವ ಸನ್ನಿವೇಶದಲ್ಲಿ. ಅವರ ಮನೆಗೆ 'ಭೀಕರ ಭವನ' ಎಂದೇ ಹೆಸರು ಬಂದಿತ್ತು.

ಅವನು ನಾಲ್ಕು ವರ್ಷವಯಸ್ಸಿನವನಾಗಿದ್ದಾಗ ತಂದೆ ತೀರಿಕೊಂಡ ; ತಾಯಿ ಯಾವಾಗಲೂ ಒಂದು ಕತ್ತಲು ಕೋಣೆಯಲ್ಲಿ ಇರುತ್ತಿದ್ದಳು. ಅವಳು ಅದರಿಂದ ಹೊರಕ್ಕೆ ಬಂದದ್ದನ್ನೇ ಅವನು ಕಂಡಿರಲಿಲ್ಲ. ಅಕ್ಕನ ದರ್ಪ, ನಿರ್ದಾಕ್ಷಿಣ್ಯ ಗುಣಗಳಿಂದಾಗಿ ಅವರ ಬಂಧುಗಳಾಗಲೀ ನೆರೆಹೊರೆಯವರಾಗಲೀ ಮನೆಯೊಳಗೆ ಕಾಲಿಡುವಂತಿರಲಿಲ್ಲ. ಕತ್ತಲಾದ ಮೇಲೆ ಆಕೆ ಮನೆಯಿಂದ ಹೊರಬಿದ್ದು, ಒಂಟಿಯಾಗಿ, ದೀಪಗಳಿಲ್ಲದ ರಸ್ತೆಗಳಲ್ಲಿ ಮಾತ್ರ ತಿರುಗಾಡುತ್ತಿದ್ದಳು. ಮನೆಯಲ್ಲೂ ಕಪ್ಪು ಮುಸುಕು ಧರಿಸಿ ಓಡಾಡುತ್ತಿದ್ದ ಮುದಿ ಸೋದರತ್ತೆ ಇದ್ದಳು. ಅವಳಿಗೊಂದು ಕರಿಬೆಕ್ಕು. ಇವನ್ನು ನೋಡಿದರೆ ಈ ಹುಡುಗನಿಗೆ ನಡುಕ ಹುಟ್ಟುತ್ತಿತ್ತು. ಇಂಥ ಭೀಕರ ವಾತಾವರಣ ಮುಸುಕಿದ್ದ ಮನೆಯ ಒಂದು ಕೋಣೆಯಲ್ಲಿ ಕದಹಾಕಿ ಕುಳಿತುಕೊಂಡು ಅವನು ಲೇಖಕನಾಗಲು ಹೆಣಗಿದ.

ಆತ ನೆಥಾನಿಯಲ್ ಹಾಥಾರ್ನ್.

"ಈ ಅಯೋಗ್ಯ ನಮ್ಮ ಕುಟುಂಬದಲ್ಲಿ ಹುಟ್ಟಬಾರದಿತ್ತು; ಈ ಮೂರ್ಖ ಸಾಹಿತಿಯಾಗಬೇಕಂತೆ" ಎಂದು ತನ್ನ ಹಿರಿಯರು ಮಾತನಾಡಿಕೊಳ್ಳುತ್ತಿರಬೇಕು ಎಂದು ಇವನು ಊಹಿಸಿಕೊಳ್ಳುತ್ತಿದ್ದ. "ನಾನು ಬರೆದ ಕಥೆಗಳು ಬರೀ ಅಜ್ಜಿ ಕಥೆಗಳಂತಿವೆ. ಜೀವನದ ಆಳವಾದ, ಗಂಭೀರವಾದ ವಾಸ್ತವತೆಗಳೊಂದೂ ಇದರಲ್ಲಿಲ್ಲ" ಎಂದುಕೊಳ್ಳುತ್ತಿದ್ದ. ಹೀಗೆ ಮಾನಸಿಕ ವೇದನೆಗಳಿಗೆ ಒಳಗಾಗಿ ನರಳುತ್ತಿದ್ದ.

ನೆಥಾನಿಯಲ್ ಹಾಥಾರ್ನ್ ಹುಟ್ಟಿದ್ದು 1804ನೆಯ ಜೂಲೈ 4ರಂದು, ಅಮೆರಿಕದ ಮೆಸಾಚುಸೆಟ್ಸ್ ಪ್ರಾಂತಕ್ಕೆ ಸೇರಿದ ಸಾಲೆಮ್ ಎಂಬಲ್ಲಿ. ಹುಟ್ಟೂರಿನಲ್ಲಿ ಹೈಸ್ಕೂಲು ಮುಗಿಸಿ ಬ್ರನ್ಸ್‌ವಿಕ್ ಎಂಬಲ್ಲಿ ಬೋಡೋಯಿನ್ ಕಾಲೇಜು ಸೇರಿದ. ಉದಯೋನ್ಮುಖ ಕವಿ ಲಾಂಗ್‌ಫೆಲೋ, ಮುಂದೆ ಅಮೆರಿಕದ ಅಧ್ಯಕ್ಷನಾಗಲಿದ್ದ ಫ್ರಾಂಕ್ಲಿನ್ ಪಿಯರ್ಸ್ ಮತ್ತು ಜೀವನ



ಪರ್ಯಂತ ಆಪ್ತಗೆಳೆಯನಾಗಿದ್ದ ಹೊರಾಷಿಯೋ ಬ್ರಿಜ್ ಕಾಲೇಜಿನಲ್ಲಿ ಇವನ ಸಹಪಾಠಿಗಳಾಗಿದ್ದರು. 19ನೆಯ ವಯಸ್ಸಿನಲ್ಲಿ ಪದವಿ ಪಡೆದು ಹಾಥಾರ್ನ್ ಹೊರಬರುತ್ತಲೇ ಸಾಹಿತಿಯಾಗಬೇಕೆಂಬ ಏಕಮಾತ್ರ ಧ್ಯೇಯದಿಂದ ಮನೆಯಲ್ಲಿ ಏಕಾಂತವಾಸಕ್ಕೆ ತೊಡಗಿದ. ಸುಮಾರು ಹನ್ನೆರಡು ವರ್ಷಗಳ ಕಾಲ ನಿರಾಶೆಯಿಂದ ನರಳಿದ.

ಮಾನಸಿಕ ವೇದನೆ : ನೆಥಾನಿಯಲ್ ಹಾಥಾರ್ನ್

ಹಾಥಾರ್ನ್ ಜೀವನದಲ್ಲಿ ಹೊಸ ಬೆಳಕು ಕಂಡದ್ದು ಅವನ ತಂಗಿಯ ಗೆಳತಿ ಸೋಫಿಯಾ ಪೀಬಾಡಿಯ ಪರಿಚಯವಾದ ಮೇಲೆ. ಸೋಫಿಯಾ ಸುಂದರ ಯುವತಿ. ಆದರೆ ನಿತ್ಯರೋಗಿ. ಇವಳು ಚಿಕ್ಕವಳಿದ್ದಾಗ ವೈದ್ಯನೊಬ್ಬ ಯಾವುದೋ ಔಷಧವನ್ನು ಮಿತಿಮೀರಿ ಕೊಟ್ಟುಬಿಟ್ಟಿದ್ದ. ಅಂದಿನಿಂದ ವ್ಯಸನೋವು ಇವಳನ್ನು ಬಿಟ್ಟದ್ದೇ ಇಲ್ಲ. ಇವಳಿಗೆ ಇಪ್ಪತ್ತೈದು ವರ್ಷವಾಗಿದ್ದರೂ ಮದುವೆಯಾಗುವ ಯೋಚನೆಯೇ ಬಂದಿರಲಿಲ್ಲ. ಒಂದು ದಿನ ಇವಳ ಅಕ್ಕ ಇವಳಿದ್ದ ಮಹಡಿಯ ಕೋಣೆಗೆ ಓಡಿಬಂದು "ಸೋಫಿಯಾ, ಬಟ್ಟೆ ಬದಲಿಸಿ ಬೇಗನೆ ಕೆಳಕ್ಕೆ ಬಾ. ಹಾಥಾರ್ನ್ ಮನೆಯವರು ಅಪರೂಪವಾಗಿ ಇಂದು ನಮ್ಮ ಮನೆಗೆ ಬಂದಿದ್ದಾರೆ; ಆ ನೆಥಾನಿಯಲ್ ಅಂತೂ ಲಾರ್ಡ್ ಬೈರನನಿಗಿಂತಲೂ ಸುಂದರನಾಗಿದ್ದಾನೆ" ಎಂದು ಉದ್ವೇಗದಿಂದ ಅಂದಳು. ಆದರೂ ಸೋಫಿಯಾ ಕುಳಿತಲ್ಲಿಂದ ಮಿಸುಕಾಡಲಿಲ್ಲ. ಕೊನೆಗೆ ಅಕ್ಕನ ಒತ್ತಾಯಕ್ಕೆ ಮಣಿದು, ಹಾಥಾರ್ನ್‌ನನ್ನು ಮಾತನಾಡಿಸಲೆಂದು ಬಂದಳು. ಪ್ರಥಮ ದರ್ಶನದಲ್ಲೇ ಅವನಲ್ಲಿ ಅನುರಕ್ತಳಾದಳು. ಆದರೂ ತನ್ನ ಕಾಯಿಲೆ ಪೂರ್ತಿಯಾಗಿ ವಾಸಿಯಾಗುವ ತನಕ ಮದುವೆಯಾಗಲು ಒಪ್ಪಲಿಲ್ಲ. ಇವರ ವಿವಾಹ ನೆರವೇರಿದ್ದು ಐದು ವರ್ಷಗಳ ಬಳಿಕವೇ. ನಲವತ್ತನ್ನು ಸಮೀಪಿಸುತ್ತಿದ್ದ ಹಾಥಾರ್ನ್, ಮದುವೆಯ ಬಳಿಕ ಹೊಸ ಜೀವನ ಆರಂಭಿಸಿದ.

ಆಗ ಇನ್ನೂ ಹಾಥಾರ್ನ್ ಅನಾಮಧೇಯ ಸಾಹಿತಿ. 1828ರಲ್ಲಿ ಅವನ ಒಂದು ಕಾದಂಬರಿ ಪ್ರಕಟವಾಗಿದ್ದರೂ ಅದು ಜನಪ್ರಿಯವಾಗಿರಲಿಲ್ಲ. ಅವನ ಸಣ್ಣಕಥೆಗಳು ಅಮೆರಿಕ ಮತ್ತು ಇಂಗ್ಲೆಂಡಿನ ಕೆಲವು ಪತ್ರಿಕೆಗಳಲ್ಲಿ ಅಚ್ಚಾಗಿದ್ದರೂ ಇದರಿಂದ ಹಾಥಾರ್ನ್‌ಗೆ ಹಣಸಂಪಾದನೆ ಆಗಿರಲಿಲ್ಲ. ಪತ್ರಿಕೆಗಳಲ್ಲಿ ಬಂದಿದ್ದ ತನ್ನ ಕಥೆಗಳನ್ನು ಅವನು 1837ರಲ್ಲಿ 'ಟ್ವೈಸ್ ಟೋಲ್ಡ್ ಟೇಲ್ಸ್' ಎಂಬ ಹೆಸರಿನಿಂದ ಗ್ರಂಥರೂಪದಲ್ಲಿ ಪ್ರಕಟಿಸಿದ. ಆದರೆ ಇದರಿಂದ ಹಾಥಾರ್ನ್‌ನ ಸಾಲದ ಹೊರೆ ಹಗುರವಾಗಲಿಲ್ಲ. ಆದರೂ ಹಾಥಾರ್ನ್ ಹಲವಾರು ಅಡೆತಡೆಗಳನ್ನೆದುರಿಸಿ ಹೊಸ ಕಾದಂಬರಿಯನ್ನು ರಚಿಸತೊಡಗಿದ. 1850ರಲ್ಲಿ 'ಸ್ಕಾರ್ಲೆಟ್ ಲೆಟರ್' ಪ್ರಕಟವಾದೊಡನೆ ಅದು ಜನಪ್ರಿಯವಾಯಿತು. ಯೂರೋಪಿನಲ್ಲಿ ಕೂಡ ಇವನ ಹೆಸರು ಕೇಳಿಬರುವಂತಾಯಿತು. ನೆಥಾನಿಯಲ್ ಹಾಥಾರ್ನನ ಕಷ್ಟದ ದಿನಗಳು ದೂರವಾದುವು.

ಹಾಥಾರ್ನನ ಕಾದಂಬರಿಗಳಲ್ಲಿ ಅಲ್ಲಲ್ಲಿ ಹಾಸ್ಯ ಜಿನುಗುತ್ತದೆಯಾದರೂ ಒಟ್ಟಿನಲ್ಲಿ ಇವು ಗಂಭೀರ ಕಥೆಗಳು. ಕೆಲವೊಮ್ಮೆ ಇವು ಭಯಾನಕವಾಗಿಯೂ ಇರುವುದುಂಟು. ಉದಾಹರಣೆಗಾಗಿ ಇವನ 'ದಿ ಹೌಸ್ ಆಫ್ ದಿ ಸೆವೆನ್ ಗೇಬಲ್ಸ್'. ಅದ್ಭುತ ಕಲ್ಪನೆಗಳು, ಭಯಾನಕ ವರ್ಣನೆಗಳು ಇದರಲ್ಲಿವೆ. ಭಯ ಹುಟ್ಟಿಸುವ ಕಥೆಗಳನ್ನು ಬರೆದಷ್ಟೇ ಕೌಶಲ್ಯದಿಂದ ಮಕ್ಕಳ ಕಥೆಗಳನ್ನೂ ಆತ ಬರೆಯುತ್ತಿದ್ದ. ಪ್ರಾಚೀನ ಗ್ರೀಸ್ ಮತ್ತು ರೋಮಿನ ಕಥೆಗಳಿಗೆ ಹೊಸ ರೂಪವನ್ನು ಕೊಟ್ಟು ಈತ 'ವಂಡರ್ ಬುಕ್' ಮತ್ತು 'ಟ್ಯಾಂಗ್‌ಲ್‌ವುಡ್ ಟೇಲ್ಸ್' ಬರೆದ. ಈ ಹಳೆಯ ಕಥೆ ಇಂಗ್ಲಿಷ್ ಭಾಷೆಯಲ್ಲಿ ಮೋಹಕ ಶೈಲಿಯಲ್ಲಿ ರಚಿತವಾದದ್ದು ಇದೇ ಮೊದಲು.

ಕಾಲೇಜಿನ ಗೆಳೆಯ ಫ್ರಾಂಕ್ಲಿನ್ ಪಿಯರ್ಸ್ 1852ರಲ್ಲಿ ಅಮೆರಿಕದ ಅಧ್ಯಕ್ಷ ಚುನಾವಣೆಯಲ್ಲಿ ಸ್ಪರ್ಧಿಸಿದಾಗ, ಚುನಾವಣಾ ಪ್ರಚಾರಕ್ಕಾಗಿ ತನ್ನ ಜೀವನಚರಿತ್ರೆಯನ್ನು ಬರೆದುಕೊಡುವಂತೆ ಹಾಥಾರ್ನನನ್ನು ಕೇಳಿದ. ಚುನಾವಣೆಯಲ್ಲಿ ತಾನು ಗೆದ್ದು ಬಂದಮೇಲೆ ಇವನನ್ನು ರಾಯಭಾರಿಯ ಸಹಾಯಕ ಅಧಿಕಾರಿಯನ್ನಾಗಿ ನಿಯಮಿಸಿ, ಇಂಗ್ಲೆಂಡಿನ ಲಿವರ್‌ಪೂಲಿಗೆ ಕಳುಹಿಸಿದ. ಆ ಊರು ಹಾಥಾರ್ನ್‌ಗೆ ಹಿಡಿಸಲಿಲ್ಲ. ಅಲ್ಲಿದ್ದ ನಾಲ್ಕು ವರ್ಷಗಳಲ್ಲೂ ಹಾಥಾರ್ನ್‌ಗೆ ವಿಪರೀತ ಅಸಮಾಧಾನ. ರಜಾ ಸಿಕ್ಕಿದಾಗಲೆಲ್ಲ ಫ್ರಾನ್ಸ್, ಇಟಲಿಗಳ ಪ್ರವಾಸ ಕೈಗೊಳ್ಳುತ್ತಿದ್ದ. ಮುಂದೆ ಆತ ಬರೆದ ಒಂದು ಕಾದಂಬರಿ ರೂಪಾಂತರಕ್ಕೆ ಇಟಲಿ ಹಿನ್ನೆಲೆಯಾಯಿತು.

1860ರಲ್ಲಿ ತನ್ನ ಹುಟ್ಟೂರಿನ ಹತ್ತಿರದ ಕಾನ್‌ಕಾರ್ಡಿಗೆ ಹಿಂದಿರುಗುವ ಹೊತ್ತಿಗೆ ಹಾಥಾರ್ನನ ಆರೋಗ್ಯ ಕೆಟ್ಟಿತ್ತು. ಹಲವು ತಿಂಗಳ ಶುಶ್ರೂಷೆಯಿಂದಲೂ ಇವನ ಆರೋಗ್ಯ ಸುಧಾರಿಸಲಿಲ್ಲ. ಎತ್ತರ ಪ್ರದೇಶದ ಹವೆ ಇವನಿಗೆ ಹಿಡಿಸಬಹುದೋ ನೋಡೋಣವೆಂದು ಹಾಥಾರ್ನನನ್ನು ಕರೆದುಕೊಂಡು ಫ್ರಾಂಕ್ಲಿನ್ ಪಿಯರ್ಸ್ ಪ್ರಯಾಣ ಹೊರಟ. ಆದರೆ ಅರ್ಧ ದಾರಿಯಲ್ಲೇ 1864ನೆಯ ಮೇ 19ರಂದು ಹಾಥಾರ್ನನ ಕೊನೆಯಾಯಿತು.

ಇಂಗ್ಲಿಷ್ ಕಥಾಸಾಹಿತ್ಯಕ್ಕೆ ಹಾಥಾರ್ನನ ಕೊಡುಗೆ ಗಮನಾರ್ಹ.

## ನೊಬೆಲ್ ಸಾಹಿತ್ಯ ಬಹುಮಾನ

ರವೀಂದ್ರನಾಥ ಠಾಕೂರರ ಕವನ ಸಂಕಲನ 'ಗೀತಾಂಜಲಿ'ಗೆ 1913ರ ನೊಬೆಲ್‌ಸಾಹಿತ್ಯ ಬಹುಮಾನಬಂತು. ಇದು ಪ್ರಪಂಚದ ಅತ್ಯುನ್ನತ ಸಾಹಿತ್ಯ ಬಹುಮಾನ ಒಂದು ಚಿನ್ನದ ಪದಕ ; ಒಂದು ಸನ್ಮಾನ ಪತ್ರ ; ಸುಮಾರು 2,25,000ರೂಪಾಯಿಗಳಿಂದ 3,65,000 ರೂ.ಗಳಷ್ಟು ಹಣ— ಇವು ನೊಬೆಲ್ ಬಹುಮಾನಿತರಿಗೆ ದೊರೆಯುವ ಗೌರವ. ಇಷ್ಟುದೊಡ್ಡ ಮೊತ್ತ ಪ್ರಪಂಚದ ಉಳಿದ ಯಾವ ಬಹುಮಾನದಿಂದಲೂ ಲಭ್ಯವಾಗುವುದಿಲ್ಲ.



ದುಃಖಿಯ ಕನಸು : ನೊಬೆಲ್

ಮಾನವ ಜನಾಂಗದ ಹಿತಕ್ಕಾಗಿ ಶ್ರಮಿಸಿದವರಿಗೆ ಬಹುಮಾನಗಳನ್ನು ಕೊಡಲು ಸುಮಾರು 90 ಲಕ್ಷ ಡಾಲರು (ಅರವತ್ತೈದು ಕೋಟಿ ರೂ.) ಹಣವನ್ನು ಬಿಟ್ಟುಹೋದ ಸ್ವೀಡನಿನ ಆಲ್ಫ್ರೆಡ್ ಬರ್ನಾರ್ಡ್ ನೊಬೆಲ್ ಶ್ರೀಮಂತನಾದದ್ದು ಸ್ಫೋಟಕ ವಸ್ತುಗಳನ್ನು ತಯಾರಿಸಿ. ಆ ಸ್ಫೋಟಕ ವಸ್ತುಗಳನ್ನು ಮಾರಾಟ ಮಾಡಿದ್ದರಿಂದ.

ಆಲ್ಫ್ರೆಡ್ ನೊಬೆಲ್ 1833 ಅಕ್ಟೋಬರ್ 21ರಂದು ಸ್ವೀಡನಿನಲ್ಲಿ ಜನಿಸಿದ. ಆತನ ತಂದೆ ಇಮಾನ್ಯುಯಲ್ ನೊಬೆಲ್ ಒಬ್ಬ ವಾಸ್ತುಶಿಲ್ಪಿ. ನೊಬೆಲ್ ಹುಟ್ಟುವ ಹೊತ್ತಿಗೆ ಅವನು ದಿವಾಳಿಯಾಗಿದ್ದ. ನೊಬೆಲ್ ಚಿಕ್ಕಂದಿನಿಂದಲೇ ಚುರುಕು ಬುದ್ಧಿಯ ಹುಡುಗ. ಪುಸ್ತಕ ಪ್ರೇಮಿ. ಆದರೆ ಯಾವ ವಿಶ್ವವಿದ್ಯಾನಿಲಯದಲ್ಲೂ ಅಧ್ಯಯನ ಮಾಡಲಿಲ್ಲ. ಮನೆಯಲ್ಲೇ ಖಾಸಗಿ ಉಪಾಧ್ಯಾಯರಿಂದ ಶಿಕ್ಷಣ ಪಡೆದ.

1867ರಲ್ಲಿ ಸಂಶೋಧನೆಯನ್ನು ಕೈಗೊಂಡು ಒಂದು ಸ್ಫೋಟಕ ವಸ್ತುವನ್ನು ಕಂಡುಹಿಡಿದ : ಈ ಬಗೆಗೆ ತನ್ನ ಶೋಧನೆಯನ್ನು ಮುಂದುವರಿಸಿ 13 ವರ್ಷಗಳ ಅನಂತರ ಇನ್ನೂ ಹೆಚ್ಚು ಸ್ಫೋಟಕಶಕ್ತಿ ಹೊಂದಿದ ಬ್ಲಾಸ್ಟಿಕ್ ಜೆಲಟಿನ್ ಎಂಬುದನ್ನು ಕಂಡುಹಿಡಿದ. ಈ ಸಂಶೋಧನೆಗಳನ್ನು ಉಪಯೋಗಕ್ಕೆ ತಂದುಕೊಂಡು ದೊಡ್ಡ ಉದ್ಯಮವನ್ನು ಬೆಳೆಸಿದ. ಆದರಿಂದ ಅಪಾರ ಹಣವನ್ನೂ ಗಳಿಸಿದ.

ನೊಬೆಲ್ ಶ್ರೀಮಂತನಾದರೂ ಜೀವನದಲ್ಲಿ ಅವನು ಸುಖಿಯಾಗಿರಲಿಲ್ಲ. ಬಾಳಿನ ಬಹುಭಾಗ ಕಾಯಿಲೆಯಲ್ಲಿ ಕಳೆಯಿತು. ಮದುವೆ ಮಾಡಿಕೊಳ್ಳಲಿಲ್ಲ. ಅವನು ತಯಾರಿಸಿದ ಸ್ಫೋಟಕ ವಸ್ತುಗಳು ಅನೇಕರ ಸಾವು ನೋವುಗಳಿಗೆ ಕಾರಣವಾದುದನ್ನು ಕಂಡು ಅವನಿಗೆ ಖೇದವೆನಿಸಿತು. 1896 ಡಿಸೆಂಬರ್ 10ರಂದು ಇಟಲಿಯ ಸಾನ್ ರೆಮೋ ಎಂಬಲ್ಲಿ ಆತ ತೀರಿಕೊಂಡ. ತಾನು ಸಾಯುವ ಮೊದಲು ತಾನು ಸಂಪಾದಿಸಿದ್ದ ಐಶ್ವರ್ಯದಲ್ಲಿ 90 ಲಕ್ಷ ಡಾಲರನ್ನು ಒಂದು ನಿಧಿಯಾಗಿ ತೆಗೆದಿರಿಸಿದ್ದ. ಅದರಿಂದ ಬರುವ ಆದಾಯದಲ್ಲಿ ಪ್ರತಿವರ್ಷವೂ ತನ್ನ ಹೆಸರಿನಲ್ಲಿ ಭೌತವಿಜ್ಞಾನ, ರಸಾಯನವಿಜ್ಞಾನ, ವೈದ್ಯ ಅಥವಾ ಶರೀರವಿಜ್ಞಾನ, ಸಾಹಿತ್ಯ, ಶಾಂತಿ ಸಾಧನೆ —ಈ ಕ್ಷೇತ್ರಗಳಲ್ಲಿ ಶ್ರೇಷ್ಠವಾದ ಸಾಧನೆ ನಡೆಸಿದವರಿಗೆ ಬಹುಮಾನ ಕೊಡಬೇಕೆಂದು ತನ್ನ ಉಯಿಲಿನಲ್ಲಿ ಬರೆದಿಟ್ಟ. ಅದೇ ರೀತಿ ಪ್ರತಿ ವರ್ಷ ನೊಬೆಲ್ ಬಹುಮಾನಗಳನ್ನು ನೀಡಲಾಗುತ್ತಿದೆ.

ಸಾಹಿತ್ಯ ಸಂಬಂಧದಲ್ಲಿ ನೊಬೆಲ್ ಬಹುಮಾನ ಯಾರಿಗೆ ಸಲ್ಲಬೇಕೆಂಬುದನ್ನು ಸ್ಟಾಕ್‌ಹೋಂನಲ್ಲಿರುವ ಸ್ವೀಡಿಷ್ ಅಕಾಡೆಮಿಯು ಪ್ರತಿ ವರ್ಷ ನಿರ್ಣಯಿಸುತ್ತದೆ.

ನೊಬೆಲ್ ಸಾಹಿತ್ಯ ಬಹುಮಾನ ನೀಡುವ ಕ್ರಮ ಹೀಗಿದೆ: ಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದ ಗಣ್ಯ ಸಂಸ್ಥೆಗಳಾಗಲೀ ವ್ಯಕ್ತಿಗಳಾಗಲೀ ಬಹುಮಾನಾರ್ಹರೆನಿಸಿದವರ ಹೆಸರನ್ನು ಸೂಚಿಸುತ್ತಾರೆ. ಪ್ರಕಟವಾಗಿರುವ ಕೃತಿಗಳನ್ನು ಮಾತ್ರವೇ ಪರಿಶೀಲನೆಗೆ ತೆಗೆದುಕೊಳ್ಳಲಾಗುತ್ತದೆ. ಒಂದು ವಿಶಿಷ್ಟ ಗ್ರಂಥಕ್ಕಾಗಲೀ ಅಥವಾ ಒಬ್ಬರ ಇಡೀ ಸಾಹಿತ್ಯ ಸೃಷ್ಟಿಗೆಂದಾಗಲೀ ಸಾಹಿತ್ಯ ಬಹುಮಾನ ಕೊಡಬಹುದು. ಬಹುಮಾನವನ್ನು ಪ್ರಕಟಿಸಿದ ಮೇಲೆ ಅದನ್ನು ಸ್ವೀಕರಿಸಬಾರದೆಂದು, ಬಹುಮಾನಿತರ ರಾಷ್ಟ್ರದ ಸರಕಾರ ಸೂಚಿಸಿದ ಸಂದರ್ಭಗಳೂ ಉಂಟು. 'ಡಾ. ಜಿವಾಗೋ' ಕಾದಂಬರಿಗಾಗಿ ರಷ್ಯದ ಬೋರಿಸ್ ಪಾಸ್ಟರ್‌ನಾಕ್‌ಗೆ 1958ರಲ್ಲಿ ನೊಬೆಲ್ ಬಹುಮಾನ ಬಂದಾಗ ಅದನ್ನು ಸ್ವೀಕರಿಸಕೂಡದು ಎಂದು ಸೋವಿಯೆತ್ ಸರಕಾರ ಆಜ್ಞಾಪಿಸಿತು. ರಷ್ಯದ ಅಲೆಗ್ಸಾಂಡರ್ ಸೋಲ್‌ಜೆನಿಟ್ಸಿನ್‌ಗೆ 1970ರಲ್ಲಿ ನೊಬೆಲ್ ಬಹುಮಾನ ದೊರೆತಾಗ ಅದನ್ನು ಸ್ವೀಕರಿಸುವುದಕ್ಕೋಸ್ಕರ ಸ್ವೀಡನಿಗೆ ಹೋಗಲು ಅವರಿಗೆ ಅನುಮತಿ ಸಿಗಲಿಲ್ಲ.

1964ರ ನೊಬೆಲ್ ಸಾಹಿತ್ಯ ಬಹುಮಾನ ಫ್ರಾನ್ಸಿನ ಜೀನ್ ಪಾಲ್ ಸಾರ್ತ್ರ್‌ಗೆ ದೊರೆತಾಗ ಅದನ್ನು ಸ್ವೀಕರಿಸಲು ಆತ ನಿರಾಕರಿಸಿದ.

ಬಹುಮಾನವನ್ನು ಪಡೆದವರು ಅದನ್ನು ತಿರಸ್ಕರಿಸಿದರೆ, ಆ ಬಹುಮಾನದ ಹಣವನ್ನು ನೊಬೆಲ್ ಬಹುಮಾನ ನಿಧಿಗೇ ಸೇರಿಸುತ್ತಾರೆ.

ಸಾಹಿತ್ಯಕ್ಕಾಗಿ ಪ್ರಥಮ ನೊಬೆಲ್ ಬಹುಮಾನ ದೊರೆತದ್ದು ಫ್ರೆಂಚ್ ಕವಿ ಸೂಲಿ ಪ್ರೂದಾಮ್‌ಗೆ, 1901ರಲ್ಲಿ.

ನೊಬೆಲ್ ಬಹುಮಾನ ಪಡೆಯಲು ಅರ್ಹರಾದವರನ್ನು ಆರಿಸುವ ಕಾರ್ಯ ಪ್ರತಿ ವರ್ಷ ಫೆಬ್ರವರಿ 1ನೆಯ ತಾರೀಖು ಪ್ರಾರಂಭವಾಗುತ್ತದೆ. ಸೆಪ್ಟೆಂಬರ್ ಕೊನೆಗೆ ಅಥವಾ ಅಕ್ಟೋಬರ್ ಪ್ರಾರಂಭದಲ್ಲಿ ಬಹುಮಾನ ಸಮಿತಿ ತನ್ನ ನಿರ್ಧಾರವನ್ನು ಬಹುಮಾನ ಕೊಡುವ ಸಂಸ್ಥೆಗೆ ತಿಳಿಸುತ್ತದೆ.

ನೊಬೆಲ್ ಬಹುಮಾನದ ವಿತರಣೆ ಪ್ರಾರಂಭವಾದದ್ದು 1901 ಡಿಸೆಂಬರ್ 10ನೆಯ ದಿನಾಂಕ. ಅದು ಆ ಬಹುಮಾನದ ಜನಕ ಆಲ್ಫ್ರೆಡ್ ನೊಬೆಲ್‌ನ ನಿಧನದ ಐದನೆಯ ವಾರ್ಷಿಕ ದಿನವಾಗಿತ್ತು.

ನೊಬೆಲ್ ಬಹುಮಾನ ಪ್ರಶಸ್ತಿ ಪ್ರದಾನ ಸಮಾರಂಭ ಪ್ರತಿ ವರ್ಷ ಡಿಸೆಂಬರ್ 10ರಂದು ಸ್ವೀಡನಿನ ಸ್ಟಾಕ್‌ಹೋಮ್‌ನಲ್ಲಿ ನಡೆಯುತ್ತದೆ.

ರವೀಂದ್ರನಾಥ ಠಾಕೂರ್, ರೋಮಾ ರೋಲಾ, ಬರ್ನಾರ್ಡ್ ಷಾ, ಟಿ. ಎಸ್. ಎಲಿಯಟ್, ಪರ್ಲ್ ಬಕ್, ಬರ್ಟ್ರಂಡ್ ರಸೆಲ್, ಅರ್ನೆಸ್ಟ್ ಹೆಮಿಂಗ್‌ವೇ, ಕಾಮು, ಷೊಲೊಖೋವ್, ಯಸುನಾರಿ ಕವಾಬಾಟ ಸಾಹಿತ್ಯದಲ್ಲಿ ನೊಬೆಲ್ ಬಹುಮಾನ ಗಳಿಸಿದ ಕೆಲವರು ಖ್ಯಾತ ಲೇಖಕರು.

**ನೋಡಿ :** ನೊಬೆಲ್ ಬಹುಮಾನ–ಸಂಪುಟ ೧

## 'ಪಂಚತಂತ್ರ'

'ಪಂಚತಂತ್ರ' ಸ್ವಾರಸ್ಯಪೂರ್ಣ ನೀತಿಕತೆಗಳ ಗೊಂಚಲು.

ಮಹಿಳಾರೋಪ್ಯವೆಂಬ ನಗರದ ಅಮರಶಕ್ತಿ ಎಂಬ ರಾಜನಿಗೆ ಬ್ರಹ್ಮಶಕ್ತಿ, ಉಗ್ರಶಕ್ತಿ, ಅನಂತಶಕ್ತಿ —ಎಂಬ ಮೂವರು ಮಕ್ಕಳು. ಅವರೆಲ್ಲರೂ ಶಾಸ್ತ್ರವಿದ್ಯೆಯಲ್ಲಿ ಆಸಕ್ತಿ ಇಲ್ಲದೆ ವಿವೇಕಶೂನ್ಯವಾಗಿ ಬೆಳೆಯುತ್ತಿದ್ದರು. ಮಕ್ಕಳು ಬುದ್ಧಿವಂತರಾಗುವಂತೆ ಏನಾದರೂ ಮಾಡಬೇಕೆಂದು ಆಲೋಚಿಸಿ ಅರಸು ತನ್ನ ವಿದ್ವನ್ಮಂಡಲಿಯ ಪ್ರಸಿದ್ಧ ವಿದ್ವಾಂಸ ವಿಷ್ಣುಶರ್ಮನ ವಶಕ್ಕೆ ಮಕ್ಕಳನ್ನು ಒಪ್ಪಿಸಿದ. ವಿಷ್ಣುಶರ್ಮ, ದ್ರವ್ಯದ ಆಸೆಗಲ್ಲ —ಸರಸ್ವತೀದೇವಿಯ ಮೇಲಿನ ಭಕ್ತಿಯಿಂದ ಈ ಕಾರ್ಯವನ್ನೊಪ್ಪಿಕೊಂಡ. ಅರಸರ ಮಕ್ಕಳು ಆರು ತಿಂಗಳಲ್ಲಿ ನೀತಿಶಾಸ್ತ್ರ ನಿಪುಣರಾಗುವಂತೆ ಮಾಡದಿದ್ದರೆ ತನ್ನ ಹೆಸರನ್ನೇ ತೊರೆದುಬಿಡುತ್ತೇನೆ ಎಂದು ಪ್ರತಿಜ್ಞೆಯನ್ನೂ ಮಾಡಿದ. ಅರಸನಿಗೆ ವಿಷ್ಣುಶರ್ಮನ ಮಾತು ಕೇಳಿ ಸಂತೋಷವಾಯಿತು.


ಸ್ವಾರಸ್ಯ ಮತ್ತು ನೀತಿ : 'ಪಂಚತಂತ್ರ'

ವಿಷ್ಣುಶರ್ಮನು ಅವರಿಗೆ ಶಾಸ್ತ್ರಗಳನ್ನು ಬೋಧಿಸಬೇಕಾಯಿತು. ಮಿತ್ರಭೇದ —ಸ್ನೇಹಿತರಲ್ಲಿ ಭಿನ್ನಾಭಿಪ್ರಾಯ ಹುಟ್ಟಿಸುವುದು. ಮಿತ್ರಸಂಪ್ರಾಪ್ತಿ —ಸ್ನೇಹಿತರನ್ನು ಸಂಪಾದಿಸುವುದು. ಕಾಕೋಲೂಕೀಯ—ಕಾಗೆ ಗೂಬೆಗಳ ವೈರತ್ವ. ಲಬ್ಧ ಪ್ರಣಾಶ —ದೊರೆತದ್ದನ್ನು ಕಳೆದುಕೊಳ್ಳುವುದು. ಅಪರೀಕ್ಷಿತ ಕಾರಕತ್ವ—ಪರೀಕ್ಷಿಸದೆ ಕೆಲಸ ಮಾಡುವುದು ಎಂಬ ಐದು ತಂತ್ರಗಳನ್ನು ನೀತಿಕಥೆಗಳ ರೂಪದಲ್ಲಿ ಹೇಳಿದ.

ಆ ಕಥೆಗಳನ್ನು ಕೇಳಿದ ರಾಜಪುತ್ರರು ಬುದ್ಧಿವಂತರಾದರು.

ಈ ನೀತಿ ಕಥೆಗಳು 'ಪಂಚತಂತ್ರ' ಕಥೆಗಳು ಎಂದು ಪ್ರಸಿದ್ಧವಾದುವು. ಇದೊಂದು ಉದಾಹರಣೆ :

ಒಬ್ಬ ವರ್ತಕ ಪುತ್ರನು ನಗರದ ಹೊರಭಾಗದಲ್ಲಿ ಒಂದು ದೇವಾಲಯವನ್ನು ನಿರ್ಮಿಸತೊಡಗಿದ. ಆ ದೇವಾಲಯದ ಮರದ ಕೆಲಸ ಮಾಡುತ್ತಿದ್ದ ಬಡಗಿಗಳು ಮಧ್ಯಾಹ್ನದ ವೇಳೆ ಊಟಕ್ಕಾಗಿ ಹಳ್ಳಿಗೆ ಹೋಗುತ್ತಿದ್ದರು. ಒಂದು ದಿನ ಸ್ವಾಭಾವಿಕವಾಗಿ ಅಲ್ಲಲ್ಲಿ ಸಂಚರಿಸುತ್ತಿದ್ದ ಕೋತಿಗಳ ಹಿಂಡು ದೇವಾಲಯದ ಬಳಿಗೆ ಬಂದಿತು. ಅಲ್ಲಿ ಬಡಗಿಯೊಬ್ಬ ಮರದ ದಿಮ್ಮಿಯೊಂದನ್ನು ಅರ್ಧ ಸೀಳಿ ಅದರ ನಡುವಿನಲ್ಲಿ ಬೆಣೆಯೊಂದನ್ನು ಬಲವಾಗಿ ಜಡಿದು ಹೊರಟುಹೋಗಿದ್ದ. ಎಲ್ಲೆಂದರಲ್ಲಿ ಚೇಷ್ಟೆಮಾಡುತ್ತ ಬಂದ ಒಂದು ಕೋತಿ ಆ ಮರದ ದಿಮ್ಮಿಯನ್ನೇರಿತು. ಬೆಣೆಯನ್ನು ಹಿಡಿದು ಜೋರಾಗಿ ಎಳೆಯಿತು. ಬೆಣೆ ಹಠಾತ್ತಾಗಿ ಮೇಲೆ ಬಂದಿತು. ಅರ್ಧಕುಯ್ದಿದ್ದ ದಿಮ್ಮಿಯ ಎರಡು ಭಾಗಗಳು ಥಟ್ಟನೆ ಸೇರಿಕೊಂಡಾಗ ಸೀಳಿನ ನಡುವೆ ಜೋಲುತ್ತಿದ್ದ ಕೋತಿಯ ಬೀಜಗಳು ಅಪ್ಪಚ್ಚಿಯಾದುವು. ಕೋತಿ ಅಲ್ಲಿಯೇ ಪ್ರಾಣ ಬಿಟ್ಟಿತು.

ಅಧಿಕ ಪ್ರಸಂಗತನ ಮಾಡಿದರೆ ಬೆಣೆಯನ್ನು ಕೀಳಲುಹೋದ ಕಪಿಯಂತಾಗಬೇಕಾಗುತ್ತದೆ —ಇದು ಈ ಕಥೆ ಸಾರುವ ನೀತಿ.

ಕಪಿಗೆ ಬುದ್ಧಿ ಹೇಳಿ ಗೂಡು ಪುಡಿಯಾದ ಗುಬ್ಬಿಯ ಕಥೆ; ಕುಂಬಾರ, ಯುದಿಷ್ಠಿರನ ಕಥೆ ; ವಿದೇಶಕ್ಕೆ ಹೋಗಿಬಂದ ನಾಯಿಯ ಕಥೆ; ಬ್ರಾಹ್ಮಣ ಮುಂಗುಸಿಯ ಕಥೆ; ತರುಣಿಯನ್ನು ಮದುವೆಯಾದ ವೃದ್ಧ ಪತಿಯ ಕಥೆ —ಇಂಥ 73 ಕಥೆಗಳು 'ಪಂಚತಂತ್ರ'ದಲ್ಲಿವೆ.

ವಿಶ್ವದ ಐವತ್ತಕ್ಕಿಂತಲೂ ಹೆಚ್ಚು ಭಾಷೆಗಳಿಗೆ 'ಪಂಚತಂತ್ರ' ಅನುವಾದಗೊಂಡಿದೆ. 'ಪಂಚತಂತ್ರ' ಕಥೆಗಳಲ್ಲಿ ಧರ್ಮನೀತಿಯನ್ನು ಪ್ರತಿಪಾದಿಸುವ ಒಂದು ಸಾವಿರಕ್ಕೂ ಮೇಲ್ಪಟ್ಟ ಪದ್ಯಗಳು ಅಡಕವಾಗಿವೆ; ಅವು ಶ್ಲೋಕ ರೂಪದಲ್ಲಿವೆ. ಈ ಶ್ಲೋಕಗಳನ್ನು ಅತ್ಯಂತ ಜಾಣ್ಮೆಯಿಂದ ಕಥೆಗಳಲ್ಲಿ ಅಳವಡಿಸಲಾಗಿದೆ.

'ಪಂಚತಂತ್ರ' ಕಥೆಗಳಲ್ಲಿ ಮಾನವರು ಮಾತ್ರವಲ್ಲದೆ ಹುಲಿ, ಸಿಂಹ, ಆನೆ, ಎತ್ತು, ನರಿ, ಕಪಿ, ಬೆಕ್ಕು, ನಾಯಿ, ಕಾಗೆ, ಗೂಬೆ ಮೊದಲಾದ ಮೃಗ, ಪಕ್ಷಿಗಳೂ ಬರುತ್ತವೆ. ಅವು ಮನುಷ್ಯರಂತೆ ನಡೆದುಕೊಳ್ಳುತ್ತವೆ, ಮಾತನಾಡುತ್ತವೆ. ನೀತಿಬೋಧೆಯಿಂದ ಜನರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುವುದೇ ಈ ಕಥೆಗಳ ಮುಖ್ಯ ಉದ್ದೇಶ. ಮೃದು ಹಾಸ್ಯದಿಂದಲೂ ವಿಡಂಬನೆಯಿಂದಲೂ ಮಾನವನನ್ನು ಟೀಕಿಸಲು ಪ್ರಾಣಿವರ್ಗದಿಂದ ಪಾತ್ರಗಳನ್ನು ಆರಿಸಲಾಗಿದೆ.

"ಸಕಲ ಅರ್ಥಶಾಸ್ತ್ರ ಸಾರವನ್ನು ವಿಚಾರಮಾಡಿ ವಿಷ್ಣುಶರ್ಮನು, 'ಪಂಚತಂತ್ರ'ಗಳಿಂದ ಕೂಡಿದ ಈ ಸುಮನೋಹರ ಗ್ರಂಥವನ್ನು ರಚಿಸಿದನು" ಎಂದು 'ಪಂಚತಂತ್ರ' ಗ್ರಂಥದ ಆರಂಭದಲ್ಲಿ ಹೇಳಿದೆ.

ಅರ್ಥಶಾಸ್ತ್ರವನ್ನು ರಚಿಸಿದ ಕೌಟಿಲ್ಯನ ಹೆಸರುಗಳಲ್ಲಿ ವಿಷ್ಣುಶರ್ಮನೆಂಬುದೂ ಒಂದು; ಅದ್ದರಿಂದ ಈ ಗ್ರಂಥ ಅವನಿಂದಲೇ ರಚಿತವಾಗಿರಬೇಕೆಂಬುದು ಅಭಿಪ್ರಾಯವಿದೆ. 'ಪಂಚತಂತ್ರ'ಕ್ಕೆ ಮೂಲ ಆಕರ. ಗುಣಾಢ್ಯನು ಪೈಶಾಚೀ ಭಾಷೆಯಲ್ಲಿ ಬರೆದ 'ಬೃಹತ್ಕಥೆ'. ಕನ್ನಡದ ಪ್ರಸಿದ್ಧ ಕವಿ ದುರ್ಗಸಿಂಹ (ಕಾಲ: ಸುಮಾರು ಕ್ರಿ. ಶ. 1130) ಈ ವಿಚಾರವನ್ನು ತನ್ನ 'ಕರ್ಣಾಟಕ ಪಂಚತಂತ್ರ'ದಲ್ಲಿ ಸೂಚಿಸಿದ್ದಾನೆ. ಆದರೆ ಕನ್ನಡ 'ಪಂಚತಂತ್ರ'ಕ್ಕೆ ಮೂಲ ವಿಷ್ಣುಶರ್ಮನ ಕೃತಿಯಲ್ಲ. ವಸುಭಾಗ ಭಟ್ಟನೆಂಬುವನ ಕೃತಿಯನ್ನು ಕನ್ನಡದಲ್ಲಿ ಹೊಸದಾಗಿ 'ಪಂಚತಂತ್ರ'ವೆಂದು ರಚಿಸಿರುವುದಾಗಿ ದುರ್ಗಸಿಂಹ ತನ್ನ 'ಕರ್ಣಾಟಕ ಪಂಚತಂತ್ರ'ದಲ್ಲಿ ಹೇಳಿದ್ದಾನೆ. ವಸುಭಾಗ ಭಟ್ಟನ ಕೃತಿ ಈಗ ದೊರಕುವುದಿಲ್ಲ. ವಿಷ್ಣುಶರ್ಮನ ಸಂಸ್ಕೃತ ಕೃತಿಗೂ ದುರ್ಗಸಿಂಹನ ಕನ್ನಡ 'ಪಂಚತಂತ್ರ'ಕ್ಕೂ ಹೆಸರು – ಕಥೆಗಳಲ್ಲಿ ಕೆಲವು ಹೋಲಿಕೆಗಳು ಕಂಡುಬರುತ್ತವೆ.

'ಪಂಚತಂತ್ರ'ದ ಕಥೆಗಳು ಸಹಸ್ರಾರು ವರ್ಷಗಳಿಂದ ಭಾರತೀಯ ಜೀವನದೊಡನೆ ಹೆಣೆದುಕೊಂಡಿವೆ.

ಜಗದ್ವಿಖ್ಯಾತವಾದ ಈಸೋಪನ ಕೆಲವು ನೀತಿಕತೆಗಳಿಗೂ 'ಪಂಚತಂತ್ರ'ದ ಕೆಲವು ಕಥೆಗಳಿಗೂ ಹೋಲಿಕೆ ಇವೆ. ಉದಾಹರಣೆಗಾಗಿ, ರೋಗಿ ಸಿಂಹ, ಅದಕ್ಕೆ ಆಹಾರ ತಂದುಕೊಡುತ್ತಿದ್ದ ಕುಯುಕ್ತಿ ನರಿಯ ಕಥೆ. ಬೆಕ್ಕು, ಸುಂದರ ಹುಡುಗಿಯಾಗಿ ರೂಪಾಂತರಗೊಂಡರೂ ಇಲಿಗಳ ಮೇಲಿನ ಆಸೆಯನ್ನು ಉಳಿಸಿಕೊಂಡಿರುವ ಈಸೋಪನ ನೀತಿಕಥೆಗೂ ಹೆಣ್ಣು ಬೆಕ್ಕು ಸ್ತ್ರೀಯಾಗಿ ಪರಿವರ್ತನೆಗೊಂಡರೂ ಸ್ವಜಾತಿಯ ಗುಣವನ್ನು ಉಳಿಸಿಕೊಂಡ 'ಪಂಚತಂತ್ರ'ದ ಕಥೆಗೂ ಹೋಲಿಕೆ ಕಂಡುಬರುತ್ತದೆ.

## ಪಂಚಾಕ್ಷರಿ ಗವಾಯಿ

1940ರಲ್ಲಿ ಭೀಕರ ಕ್ಷಾಮ ತಲೆದೋರಿತು. ಆಹಾರ ಪದಾರ್ಥಗಳ ಅಭಾವ ದಿನದಿನಕ್ಕೆ ಹೆಚ್ಚಾಗುತ್ತಿತ್ತು. ಈ ಸ್ಥಿತಿಯಲ್ಲಿ ನೂರಾರು ಮಂದಿ ವಿದ್ಯಾರ್ಥಿಗಳಿರುವ ವಸತಿಗೃಹ ಶಾಲೆಯ ಊಟ–ತಿಂಡಿ ವ್ಯವಸ್ಥೆ ಮಾಡುವುದೆಂದರೆ ಸಾಮಾನ್ಯವೇ ? ಈ ಹೊಣೆಗಾರಿಕೆ ಹೊತ್ತ ಉಪಾಧ್ಯಾಯನ ಮೇಲೆ ಎಂಥ ಜವಾಬ್ದಾರಿ! ಅದನ್ನು ನಿರ್ವಹಿಸುವುದಾದರೂ ಹೇಗೆ? ಶಾಲೆಯನ್ನು ಮುಚ್ಚಿ ವಿದ್ಯಾರ್ಥಿಗಳನ್ನು ಊರಿಗೆ ಕಳುಹಿಸಬೇಕೆಂದು ಕೆಲವರು ಹಿತಚಿಂತಕರು ಆ ಉಪಾಧ್ಯಾಯನಿಗೆ ಸಲಹೆ ಮಾಡಿದರು. ಆದರೆ ಶಿಷ್ಯಪ್ರೇಮಿಯಾಗಿದ್ದ ಆತನಿಗೆ ಅದು ಒಪ್ಪಿಗೆಯಾಗಲಿಲ್ಲ. ತಾನೇ ಒಂದು ನಾಟಕ ಸಂಘ ಸ್ಥಾಪಿಸಿ, ಭಕ್ತಿಪ್ರಧಾನವಾದ ನಾಟಕಗಳನ್ನು ವಿದ್ಯಾರ್ಥಿಗಳಿಗೆ ಕಲಿಸಿ, ಪ್ರದರ್ಶನಕ್ಕೆ ಏರ್ಪಾಡು ಮಾಡಿದರು. ನಾಟಕ ಪ್ರದರ್ಶನದಿಂದ ಧನ ಸಂಗ್ರಹ ಮಾಡಿದರು. ಇದರಿಂದಾಗಿ ಅವರ ವಸತಿಗೃಹ ಶಾಲೆಯ ಆರ್ಥಿಕ ಬಿಕ್ಕಟ್ಟು ಸ್ವಲ್ಪ ಕಡಮೆಯಾಯಿತು ; ಹಾಗೂ ಹೀಗೂ ಅದನ್ನು ನಡೆಸುವುದು ಸಾಧ್ಯವಾಯಿತು. ಆ ಶಾಲೆಯಲ್ಲಿ ಕುರುಡ, ಕುಂಟ ಹುಡುಗರೂ ಇದ್ದರು. ಅವರಿಗೆ ಆಶ್ರಯಕೊಟ್ಟು ವಿದ್ಯೆ ಕಲಿಸಿ, ಅವರ ಬಾಳಿಗೆ ಬೆಳಕು ನೀಡಿದ ಈ ಉಪಾಧ್ಯಾಯ ಬೆಳಕು ಕಂಡವನೇ ಅಲ್ಲ; ಆತ ಹುಟ್ಟು ಕುರುಡ.

ಇವರೇ ಪಂಚಾಕ್ಷರಿ ಗವಾಯಿ. ಈ ಅಪೂರ್ವ ವ್ಯಕ್ತಿ ಗುರುಪಾದಯ್ಯ –ನೀಲಮ್ಮ ಎಂಬ ದಂಪತಿಯ ಪುತ್ರ. ಹುಟ್ಟಿದ್ದು ಹಾನಗಲ್ಲು ತಾಲ್ಲೂಕು ಕಾಡಸೆಟ್ಟಿ ಹಳ್ಳಿಯಲ್ಲಿ, 1892ನೆಯ ಫೆಬ್ರುವರಿ 2ರಂದು. ತಂದೆತಾಯಿ

## ಪಂಜೆ ಮಂಗೇಶರಾಯ

ಪಂಜೆ ಮಂಗೇಶರಾಯರು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಬಂಟವಾಳದಲ್ಲಿ, ದಿನಾಂಕ 22, ಫೆಬ್ರುವರಿ 1874ರಂದು ; ಬಡ ಕುಟುಂಬದಲ್ಲಿ. ಅವರ ಪೂರ್ವಜರು ಸುಬ್ರಹ್ಮಣ್ಯಕ್ಕೆ ಹತ್ತಿರವಾದ ಪಂಜ ಗ್ರಾಮದಲ್ಲಿ ವಾಸಿಸುತ್ತಿದ್ದರು. ಆದ್ದರಿಂದ ಅವರ ಕುಟುಂಬಕ್ಕೆ 'ಪಂಜೆ' ಎಂದು ಹೆಸರಾಯಿತು. ತಂದೆ ರಾಮಪ್ಪಯ್ಯ ; ತಾಯಿ ಶಾಂತಾ ಅಥವಾ ಸೀತಮ್ಮ. ಇವರಿಬ್ಬರೂ ಸರಳಜೀವಿಗಳು, ದೈವಭಕ್ತರು, ಶೀಲವಂತರು. ಮಂಗೇಶರಾಯರು ಅವರ ಏಕಮಾತ್ರ ಮಗ. ದಕ್ಷಿಣ ಕನ್ನಡದ ನೇತ್ರಾವತಿ ನದಿ ದಡದಲ್ಲಿ ಕಾಡು, ತೋಟ, ಬಯಲುಗಳ ರಮ್ಯ ವಾತಾವರಣದಲ್ಲಿ ಪಂಜೆಯವರ ಬಾಲ್ಯದ ದಿನಗಳು ಕಳೆದುವು. ಬಾಲ್ಯದಿಂದಲೂ ಅವರು ತುಂಬಾ ಚುರುಕು ; ಕನ್ನಡದಲ್ಲೊ ಕೊಂಕಣಿಯಲ್ಲೊ ಪ್ರಾಸಬದ್ಧವಾದ ಗಾದೆಯನ್ನೋ ಪದ್ಯವನ್ನೋ ರಚಿಸಿ ಅವನ್ನು ತಾಯಿಯ ಮುಂದೆ ಹೆಮ್ಮೆಯಿಂದ ಹೇಳುತ್ತಿದ್ದರು. ಪಂಜೆಯವರು ಚಿಕ್ಕ ವಯಸ್ಸಿನವರಿದ್ದಾಗಲೇ ಅವರ ತಂದೆ ತೀರಿಕೊಂಡರು. ಕಷ್ಟ ಕಾರ್ಪಣ್ಯ ಅನುಭವಿಸುತ್ತ, ಪರರ ಅವಲಂಬನೆ ಪಡೆದು, ಶ್ರಮವಹಿಸಿ ಬಿ. ಎ. ಪದವೀಧರರಾದರು. ಅನಂತರ ಮಂಗಳೂರಿನ ಸರಕಾರೀ ಕಾಲೇಜಿನಲ್ಲಿ 30 ರೂ. ಸಂಬಳಕ್ಕೆ ಕನ್ನಡ ಪಂಡಿತರಾದರು. ಬಳಿಕ ಸೈದಾಪೇಟೆಯ ಟ್ರೇನಿಂಗ್ ಕಾಲೇಜಿನಲ್ಲಿ ಅಭ್ಯಸಿಸಿ ಎಲ್. ಟಿ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮಂಗಳೂರಿನ ಸಬ್–ಅಸಿಸ್ಟೆಂಟ್ ಶಾಲಾ ಇನ್ಸ್‌ಪೆಕ್ಟರರಾಗಿ ನೇಮಕಗೊಂಡರು. ಅದೇ ಕಾಲದಲ್ಲಿ ಅವರ ಪ್ರೀತಿಯ ಸಹೋದರ ರಾಘವೇಂದ್ರ ತೀರಿಕೊಂಡರು. ಸೋದರನ ಸಾವಿನ ನೋವು 'ಅಣ್ಣನ ವಿಲಾಪ' ಎಂಬ ಪದ್ಯದ ರೂಪದಲ್ಲಿ ಹರಿಯಿತು.



ಕಡೆ ಗಳಿಗೆಯಲ್ಲೂ ಕನ್ನಡ : ಪಂಜೆ

ಆರಂಭದಲ್ಲಿ ಪಂಜೆಯವರು ಬೇರೆ ಬೇರೆ ಕಾವ್ಯನಾಮಗಳಲ್ಲಿ—'ಹರಟೆಯ ಮಲ್ಲ', 'ರಾ. ಮ. ಪಂ.', 'ಕವಿಶಿಷ್ಯ'—ಎಂಬ ಹೆಸರುಗಳಲ್ಲಿ ತಮ್ಮ ಕೃತಿಗಳನ್ನು ಮಂಗಳೂರಿನ 'ಸುವಾಸಿನಿ' ಮತ್ತು 'ಸತ್ಯದೀಪಿಕೆ' ಪತ್ರಿಕೆಗಳಲ್ಲಿ ಪ್ರಕಟಿಸಿದರು.

ಪಂಜೆಯವರು ಕಾಸರಗೋಡಿನಲ್ಲಿ ಮತ್ತು ಕೊಡಗಿನಲ್ಲಿ ಶಾಲಾ ಇನ್ಸ್‌ಪೆಕ್ಟರರಾಗಿಯೂ ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿಯೂ ಕೆಲಸ ಮಾಡಿದರು. ಕೊಡಗಿನಲ್ಲಿದ್ದಾಗ ಅವರು ರಚಿಸಿದ 'ಹುತ್ತರಿ ಹಾಡು' ಕವಿತೆಯನ್ನು ಕೊಡಗಿನ ನಾಡಗೀತೆ ಎನ್ನಬಹುದು.

"ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ
ಹೊಳೆವಳೋ
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆ ಕಳೆ ಕಳೆವಳೋ
ಅಲ್ಲಿ ಆ ಕಡೆ ನೋಡಲಾ!
ಅಲ್ಲಿ ಕೊಡವರ ನಾಡಲಾ!
ಅಲ್ಲಿ ಕೊಡವರ ಬೀಡಲಾ!"

ಮಕ್ಕಳಿಗಾಗಿ ಬರೆಯುವುದರಲ್ಲಿ ಪಂಜೆಯವರಿಗೆ ತುಂಬ ಆಸಕ್ತಿ. 1918ರಲ್ಲಿ ಪಂಜೆಯವರು ಬರೆದ 'ಅಜ್ಜಿ ಕಥೆಗಳು' ಬಾಲಕ ಬಾಲಕಿಯರಿಗೆ ಬಹಳ ಪ್ರಿಯವಾದುವು. ಮುಂದೆ ಅವರು 1921ರಲ್ಲಿ ಮಂಗಳೂರಿನಲ್ಲಿ 'ಬಾಲ ಸಾಹಿತ್ಯ ಮಂಡಲ'ವೆಂಬ ಪ್ರಕಟಣ ಸಂಸ್ಥೆಯನ್ನು ಸ್ಥಾಪಿಸಿ ಮಕ್ಕಳಿಗಾಗಿ ಅನೇಕ ಪುಸ್ತಕಗಳು ಪ್ರಕಟವಾಗಲು ಕಾರಣರಾದರು.

ಹೀಗೆ ಪಂಜೆ ಮಂಗೇಶರಾಯರ ಆಯುಷ್ಯದ ಬಹುಭಾಗ ಶಿಕ್ಷಣ ಕ್ಷೇತ್ರದಲ್ಲಿ ಕಳೆಯಿತು. ಮಕ್ಕಳ ಶಿಕ್ಷಣ ವಿಚಾರದಲ್ಲಿ ಅವರ ದೃಷ್ಟಿ ಆಧುನಿಕವಾಗಿತ್ತು. ಆಟ ಪಾಟ ಕುಣಿತ ಚಿತ್ರ ಸಂಗೀತ —ಇವುಗಳ ಸಹಾಯದಿಂದ ಮಕ್ಕಳಿಗೆ ವಿದ್ಯೆ ಕಲಿಸುವುದು ಉತ್ತಮ ಎಂದು ಅವರು ಭಾವಿಸಿದ್ದರು. ಅಂತೆಯೇ ಕಾರ್ಯತಃ ದುಡಿದರು. ತಾವು ಹೋದಲ್ಲಿ ಕುಳಿತಲ್ಲಿ ನಿಂತಲ್ಲಿ ಮಕ್ಕಳೊಡನೆ ಬೆರೆತು ಹಾಸ್ಯದ ಚಟಾಕಿಗಳನ್ನು ಹಾರಿಸಿ, ಹಾಡು ಹೇಳಿ ಅವರು ನಕ್ಕು ನಲಿವಂತೆ ಮಾಡುತ್ತಿದ್ದರು.

ಪಂಜೆ ಮಂಗೇಶರಾಯರು ಮಕ್ಕಳಿಗಾಗಿ ಅನೇಕ ಕವನಗಳನ್ನೂ ಬರೆದಿದ್ದಾರೆ. ಇವುಗಳಲ್ಲಿ ಭಾಷಾಂತರ, ರೂಪಾಂತರಗಳೂ ಸ್ವಂತ ಕೃತಿಗಳೂ ಸೇರಿವೆ. ಮಕ್ಕಳ ಕವನಗಳಲ್ಲದೆ ಹಲವು ಶ್ರೇಷ್ಠ ಕಥೆಗಳನ್ನೂ ಬರೆದಿದ್ದಾರೆ. ಕನ್ನಡದ ಸಣ್ಣ ಕಥೆಗಳ ಆದ್ಯ ಪ್ರವರ್ತಕರಲ್ಲೊಬ್ಬರೆಂದು ಖ್ಯಾತರಾಗಿದ್ದಾರೆ. 'ಕೋಟಿ ಚೆನ್ನಯ' ಕಥೆ ತುಳುನಾಡಿನ ಸಂಸ್ಕೃತಿಯನ್ನೂ ಅಲ್ಲಿನ ಜೀವನ ಸೌಂದರ್ಯವನ್ನೂ ಎತ್ತಿತೋರಿಸುತ್ತದೆ.

ಪಂಜೆಯವರು ಆಧುನಿಕ ಕನ್ನಡ ಸಾಹಿತ್ಯದ ಆಚಾರ್ಯಪುರುಷರಲ್ಲಿ ಒಬ್ಬರೆನಿಸಿದರು. ಶಾಲಾ ಇನ್ಸ್‌ಪೆಕ್ಟರರಾಗಿದ್ದಾಗ ಸಂಚಾರ ಇರುತ್ತಿತ್ತು. ಹಳ್ಳಿಯಲ್ಲಿ ರೂಢಿಯಾಗಿದ್ದ ಜಾನಪದ ಸಾಹಿತ್ಯ, ತುಳು, ಕನ್ನಡ, ಕೊಂಕಣಿ ಅದು ಯಾವುದೇ ಭಾಷೆಯಲ್ಲಿದ್ದರೂ ಆಸಕ್ತಿಯಿಂದ ಶ್ರದ್ಧೆಯಿಂದ ಸಂಗ್ರಹಿಸುತ್ತಿದ್ದರು. ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ಅಭ್ಯಾಸ ಸಮಿತಿಯ ಸದಸ್ಯರಾಗಿದ್ದರು. ಅನೇಕ ಹಳೆಗನ್ನಡ ಕಾವ್ಯಗಳು ಪಠ್ಯಪುಸ್ತಕವಾಗುವಂತೆ ಶ್ರಮಿಸಿದರು.

ಪಂಜೆಯವರು ಕವಿ, ಕಥೆಗಾರ, ಹಾಸ್ಯಪಟು, ಶಿಕ್ಷಣತಜ್ಞ. ತಮ್ಮ ಬಹುಮುಖ ಪ್ರತಿಭೆಯಿಂದ ಅವರು ಕನ್ನಡಿಗರ ಮೆಚ್ಚುಗೆಗೆ ಪಾತ್ರರಾದರು.

1934ರಲ್ಲಿ ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದರು. ಅಧ್ಯಕ್ಷ ಭಾಷಣ ವಿಚಾರಪೂರ್ಣವೂ ಬೋಧಪ್ರದವೂ ಆಗಿತ್ತು. "ನನ್ನ ಕಡೆಯ ಗಳಿಗೆಯಲ್ಲಿ ನನ್ನ

ನಾಲಿಗೆ ಕೃಷ್ಣ ಕೃಷ್ಣ ಎಂದು ನುಡಿಯುವಂತೆ ಕನ್ನಡ ಕನ್ನಡ ಎಂದು ನುಡಿಯುತ್ತಿರಲಿ" ಎನ್ನುತ್ತ ತಮ್ಮ ಭಾಷಣವನ್ನು ಮುಗಿಸಿದರು.

ಪಂಜೆಯವರು 1937 ಅಕ್ಟೋಬರ್ 25ರಂದು ತೀರಿಕೊಂಡರು.

## ಪಂಪ

ಪಂಪ ಮಹಾಕವಿ. ಅವನನ್ನು ಕನ್ನಡದ ಆದಿಕವಿಯೆಂದು ಕರೆಯುವುದು ವಾಡಿಕೆ. ಅಂದರ ಪಂಪನ ಕಾಲಕ್ಕೆ ಹಿಂದೆ ಕನ್ನಡದಲ್ಲಿ ಕಾವ್ಯರಚನೆಯೇ ಆಗಿರಲಿಲ್ಲವೆಂದಲ್ಲ : ಆಗಿತ್ತು. ಈ ಅಂಶವನ್ನು ಪಂಪನೇ ಒಪ್ಪಿಕೊಂಡಿದ್ದಾನೆಂಬುದಕ್ಕೆ. 'ಮುನ್ನಿನ ಕಬ್ಬಮನೆಲ್ಲಮನಿಕ್ಕಿಮುಟ್ಟಿದುವು' ತನ್ನ ಕಾವ್ಯಗಳು –ಎಂಬ ಹೇಳಿಕೆಯೇ ಸಾಕ್ಷಿ.

ಪಂಪನ ಕಾಲಕ್ಕೆ ಹಿಂದೆ ಇದ್ದ ಕಾವ್ಯಗಳು ಅವುಗಳ ಪೂರ್ಣರೂಪದಲ್ಲಿ ನಮಗೆ ದೊರೆತಿಲ್ಲ. ಅವುಗಳ ಹಲಕೆಲವು ಉದ್ಧರಣಗಳು ಮಾತ್ರ ದೊರೆತಿವೆ. ಅವುಗಳ ಆಧಾರದ ಮೇಲಿನಿಂದ, ಪಂಪನ ಕವಿತಾಶಕ್ತಿ ಅವೆಲ್ಲಕ್ಕಿಂತಲೂ ಮೇಲ್ಮಟ್ಟದ್ದು ಎಂದು ಧಾರಾಳವಾಗಿ ಹೇಳಬಹುದು.

ಪ್ರಕೃತ ನಮಗೆ ದೊರೆತಿರುವ ಕನ್ನಡ ಕಾವ್ಯಗಳಲ್ಲಿ ಅತ್ಯಂತ ಪ್ರಾಚೀನವಾದುವು ಪಂಪನ ಗ್ರಂಥಗಳು. ಇವುಗಳಲ್ಲಿ ಒಂದು 'ಆದಿಪುರಾಣ'. ಇದು ಜೈನಧರ್ಮದ ಪ್ರಥಮ ತೀರ್ಥಂಕರ ಪುರುದೇವನ ಚರಿತ್ರೆಯನ್ನೊಳಗೊಂಡಿರುವ ಪುರಾಣ. ಪಂಪನ ಇನ್ನೊಂದು ಗ್ರಂಥ 'ಪಂಪ ಭಾರತ' ಎಂದು ವಿಖ್ಯಾತವಾಗಿರುವ 'ವಿಕ್ರಮಾರ್ಜುನ ವಿಜಯ'. ಇದರಲ್ಲಿ ಮಹಾಭಾರತದ ಕಥೆಯಿದೆ. ಇದು ವ್ಯಾಸರ ಮಹಾಭಾರತದ ಅನುವಾದವಲ್ಲ ; ಅದರಿಂದ ಪ್ರೇರಿತವಾದದ್ದು. ಪಂಪ ತನ್ನ ಪೋಷಕನಾಗಿದ್ದ ಅರಿಕೇಸರಿಯನ್ನು ಪರ್ಯಾಯವಾಗಿ ಅರ್ಜುನನಿಗೆ ಹೋಲಿಸಿ ಈ ಕಾವ್ಯವನ್ನು ಬರೆದಿದ್ದಾನೆ.

ಪಂಪ ತನ್ನ ಗ್ರಂಥಗಳಲ್ಲಿ ತನ್ನ ವಿಚಾರವನ್ನು ಸ್ವಲ್ಪಮಟ್ಟಿಗೆ ಹೇಳಿಕೊಂಡಿದ್ದಾನೆ. ಇದರಿಂದಾಗಿ ಇವನ ಬಗೆಗೆ ನಮಗೆ ತಕ್ಕಮಟ್ಟಿನ ತಿಳಿವಳಿಕೆ ದೊರೆಯುತ್ತದೆ.

ಪಂಪ ಹುಟ್ಟಿದ್ದು 902ಕ್ಕೆ ಸರಿಹೋಗುವ ದುಂದುಭಿ ಸಂವತ್ಸರದಲ್ಲಿ. ಅವನದು ವೈದಿಕ ಪಂಡಿತರ ವಂಶ. ಅನೇಕ ಯಜ್ಞಗಳನ್ನು ಮಾಡಿ ಪ್ರಸಿದ್ಧನಾಗಿದ್ದ ವತ್ಸಗೋತ್ರದ ಮಾಧವ ಸೋಮಯಾಜಿಯ ಮೊಮ್ಮಗ, ಭೀಮಪಯ್ಯ. ವೈದಿಕ ಸಂಪ್ರದಾಯದಲ್ಲಿ ಬೆಳೆದುಬಂದವನಾದರೂ ಪ್ರಾಣಿಹಿಂಸೆಗೆ ಕಾರಣವಾದ ಯಜ್ಞಯಾಗಾದಿಗಳು ಭೀಮಪಯ್ಯನಿಗೆ ಒಪ್ಪಿತವಾಗಲಿಲ್ಲ. 'ಜಿನೇಂದ್ರಧರ್ಮಮೆ ವಲಂ ದೊರೆ ಧರ್ಮದೊಳೆಂದು ನಂಬಿ' ಜಿನಧರ್ಮಾವಲಂಬಿಯಾದ. ಈ ಭೀಮಪಯ್ಯನ ಮಗನೇ ಪಂಪ.

ಪಂಪನ ಪೂರ್ವಜರು ವೆಂಗಿಮಂಡಲದ ವೆಂಗಿಪಳು ಎಂಬ ಸ್ಥಳದವರು. ಅಲ್ಲಿನ ಅಗ್ರಹಾರಗಳಲ್ಲಿ ಗಣ್ಯರಾದವರು. ವೆಂಗಿಮಂಡಲವೆಂದರೆ, ಗೋದಾವರಿ–ಕೃಷ್ಣಾ ನದಿಗಳ ನಡುವೆ ಹಾಗೂ ಪೂರ್ವಕರಾವಳಿಗೆ ಸಮೀಪವಾಗಿರುವ ಪ್ರದೇಶ. ವೈದಿಕಧರ್ಮವನ್ನು ಬಿಟ್ಟು ಜೈನನಾದ ಮೇಲೆ ಭೀಮಪಯ್ಯ ವೆಂಗಿಮಂಡಲವನ್ನು ಬಿಟ್ಟು ಜೈನಧರ್ಮ ಪ್ರಬಲವಾಗಿದ್ದ ಕರ್ನಾಟಕದ ಒಳನಾಡಿಗೆ ಬಂದಿರಬೇಕೆಂದು ಊಹೆ. ಪಂಪನ ತಾಯಿ ಧಾರವಾಡ ಜಿಲ್ಲೆಯ ಅಣ್ಣಿಗೇರಿಯ ಅಬ್ಬಣಬ್ಬೆ ಎಂಬುದು ಈ ಊಹೆಗೆ ಪುಟಕೊಡುತ್ತದೆ. ಪಂಪ ಹುಟ್ಟಿದ್ದು ಅಣ್ಣಿಗೇರಿಯಲ್ಲೇ ಇರಬೇಕು ಎಂಬುದು ಕೆಲ ಮಂದಿ ವಿದ್ವಾಂಸರ ಅಭಿಪ್ರಾಯ. ಅದೇ ರೀತಿ ಬಾಲ್ಯದಲ್ಲಿ ಪಂಪನು ಬನವಾಸಿ ನಾಡಿನಲ್ಲಿದ್ದಿರಬೇಕೆಂದೂ ಊಹೆ.

ಪಂಪ ಉತ್ತಮ [illegible] ಚಾರ್ಯರಲ್ಲಿ ಜೈನಶಾಸ್ತ್ರವನ್ನು ಅಭ್ಯಾಸ ಮಾಡಿದವನು. [illegible] ಶಾಸ್ತ್ರಗಳನ್ನು ಚೆನ್ನಾಗಿ ಅರಿತುಕೊಂಡಿದ್ದರೂ ಅವನಿಗೆ ಕನ್ನಡದ ಅಭಿಮಾನಕ್ಕೆ ಕುಂದುಬರಲಿಲ್ಲ. ಅವನು ಕನ್ನಡದಲ್ಲಿ ಕಾವ್ಯ ರಚನೆ ಮಾಡಿದ: ತಾನು ಉಪಯೋಗಿಸಿರುವ ಕನ್ನಡ ಭಾಷೆ 'ಸಾಜದ ಪುಲಿಗೆರೆಯ ತಿರುಳ್ಗನ್ನಡ' ಎಂದಿದ್ದಾನೆ. ಪುಲಿಗೆರೆ ಇಂದಿನ ಧಾರವಾಡ ಜಿಲ್ಲೆಯಲ್ಲಿರುವ ಲಕ್ಷ್ಮೇಶ್ವರ. ಅಲ್ಲಿ ಆಗ ಪ್ರಚಾರದಲ್ಲಿದ್ದ ಕನ್ನಡ ಭಾಷೆ [illegible] : ಅದನ್ನು ಅವನು ಚೆನ್ನಾಗಿ ಅರಿತವನಾಗಿದ್ದ ಎಂದ ಮೇಲೆ ಅವನು ಆ ಪ್ರದೇಶದಲ್ಲಿ ಸಾಕಷ್ಟು ಕಾಲ ವಾಸಿಸಿರಬೇಕೆಂಬುದು ಸ್ಪಷ್ಟ. 'ಪಂಪ ಭಾರತ'ದಲ್ಲಿ ಅರ್ಜುನನ ತೀರ್ಥಯಾತ್ರೆಯ ನೆಪಮಾಡಿಕೊಂಡು, ಅವನು ಅತ್ಯಂತ ಆದರಪರನಾಗಿ ಬನವಾಸಿ ನಾಡನ್ನು ವರ್ಣಿಸಿದ್ದಾನೆ. ಬನವಾಸಿ ನಾಡಿನಲ್ಲಿ ಮಾನವನಾಗಿ ಹುಟ್ಟದಿದ್ದರೆ, ಒಂದು ಮರಿದುಂಬಿಯಾಗಿ



ಕನ್ನಡದ ಆದಿ ಕವಿ : ಬಾಯಿರಿ ಕಲ್ಪನೆ

ಅಥವಾ ಕೋಗಿಲೆಯಾಗಿ ಆದರೂ ಹುಟ್ಟಬೇಕೆಂದು ಹಂಬಲಿಸಿದ್ದಾನೆ. ಇದರಿಂದ, ಪಂಪನು ಬನವಾಸಿ ನಾಡಿನಲ್ಲಿ ತಕ್ಕಷ್ಟು ಕಾಲ ಇದ್ದನೆಂದು ಊಹಿಸಬಹುದು.

ಪಂಪನ ರೂಪು ಎಂಥದು? ತನ್ನ ವಂಶದ ಬಗೆಗೆ ಅವನು ತನ್ನ ಕಾವ್ಯದಲ್ಲಿ ಸೂಚನೆ ಕೊಟ್ಟಿರುವಂತೆ, ತನ್ನ ರೂಪದ ಬಗೆಗೂ ಅವನು ವಿವರಗಳನ್ನು ಕೊಟ್ಟಿದ್ದಾನೆ. ಅವನು 'ಕದಲೀ ಗರ್ಭಶ್ಯಾಮಂ'. ಅಂದರೆ,

[illegible] 'ಮೃದು ಕುಟಿಲ ಶಿರೋರುಹಂ' –ಮೃದು ಗುಂಗುರು ಕೂದಲು ಅವನ ತಲೆಯನ್ನು ಅಲಂಕರಿಸಿತ್ತು; 'ಸರಸಿಜದಳ ವದನ' ತಾವರೆದಳದಂತೆ [illegible] ಮುಖವುಳ್ಳವನು; 'ಮೃದುಮಧ್ಯಮ ತನು' –ತೀರ ಎತ್ತರವೂ ಅಲ್ಲದ ಕುಳ್ಳನೂ ಅಲ್ಲದ ಮಧ್ಯಮ ಶರೀರ. ಅವನ ಮಾತುಗಳು [illegible] ಮಾಡಿಕೊಳ್ಳುತ್ತಿದ್ದ. ಅವನು ಅತಿ ಮಧುರ ಸುಂದರ ವ್ಯಕ್ತಿಯಾಗಿದ್ದ. ಅಷ್ಟು ಮಾತ್ರವಲ್ಲ, ಕವಿಯಾಗಿದ್ದಂತೆ ಕಲಿಯೂ ಆಗಿದ್ದ. ಹಿಂದಿನಿಂದ ತನ್ನ ಮನೆತನದಲ್ಲಿ ನಡೆದುಬಂದ ವೈದಿಕ ಸಂಪ್ರದಾಯ, ಅವನ ತಂದೆಯ ಕಾಲಕ್ಕೆ ಅಂಗೀಕರಿಸಿದ ಜೈನಧರ್ಮ ಇವೆರಡರ ಪ್ರಭಾವವೂ ಅವನ ಮೇಲಿತ್ತು : ಒಂದು ದೃಷ್ಟಿಯಿಂದ ಅವನು ಈ ಎರಡೂ ಪರಂಪರೆಗಳ ಉತ್ತಮಾಂಶಗಳ ಸಂಗಮ.

ಜಿನಭಕ್ತನಾಗಿದ್ದರೂ ಪಂಪನದು ಬಹು ಸ್ವತಂತ್ರ ಮನೋವೃತ್ತಿ – 'ಪರರಿಂ ಪೊಗಳ್ವೆನೇ. ಪರರ್ಗೆ ಪಾಡುವೆನೇ. ಪರರಿಂದಮೆಳ್ಚುವೆನೇ' ಎಂದಿದ್ದಾನೆ.

ಭಾರತದ ಮಹಾವ್ಯಕ್ತಿಗಳಲ್ಲಿ ಪಂಪನಿಗೆ ಅತ್ಯಂತ ಮೆಚ್ಚುಗೆಯಾದವನು ಕರ್ಣ. ಅವನನ್ನು ಕುರಿತು ಹೇಳುತ್ತ "ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನ್, ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ" ಎಂದಿದ್ದಾನೆ. ಭಾರತ 'ಕರ್ಣರಸಾಯನ'ವಾದದ್ದು ಕರ್ಣನ ವಿಶ್ವಾಸಶೀಲತೆ, ತ್ಯಾಗಗಳ ವರ್ಣನೆಯಿಂದ ಎನ್ನುತ್ತಾನೆ.

ಪಂಪ ವಿಶಾಲ ಮನೋಭಾವದ ಕವಿ. ತಾನು ಜೈನನಾಗಿದ್ದರೂ ಇತರ ಮತಗಳ ಬಗೆಗೆ ಅವನಿಗೆ ತಿರಸ್ಕಾರವಿರಲಿಲ್ಲ. 'ಆದಿ ಪುರಾಣ'ದಲ್ಲಿ ಬರುವ ವಿವಿಧ ಮತಗಳನ್ನು ಕುರಿತ ವಾದದ ಪ್ರಸಂಗದಲ್ಲಿ ಅವನ ಈ ಮನೋಭಾವ ಎದ್ದುಕಾಣುತ್ತದೆ. ಯಾವುದೇ ಆವೇಶಕ್ಕೆ ಒಳಗಾಗದೆ, ಆಯಾ ಮತಗಳನ್ನು ದಕ್ಷ ರೀತಿಯಿಂದ ಮಂಡನೆ ಮಾಡುತ್ತಾನೆ. ಇದು ಪಂಪನ ವಿಶಾಲ ವಿದ್ವತ್ತಿಗೂ ಸಾಕ್ಷಿ. ಸಂದರ್ಭೋಚಿತವಾಗಿ ಯಾವುದೇ ದೇವಸ್ತುತಿ ಬಂದಾಗ, ಅದನ್ನು –ಅದು ಜಿನಸ್ತುತಿಯಾಗಲೀ ಹರಿ ಹರ ಸ್ತುತಿಯಾಗಲೀ ಚೆನ್ನಾಗಿಯೇ ಮಾಡಿದ್ದಾನೆ. ಯಾವುದೇ ಧರ್ಮದ ಕರ್ಮಕಾಂಡಕ್ಕಿಂತ ಮಾನವೀಯ ಗುಣಗಳಲ್ಲಿ ಶೀಲದಲ್ಲಿ ಪಂಪನಿಗೆ ಹೆಚ್ಚಿನ ಗೌರವವಿದ್ದಿತೆಂದು ಕಾಣುತ್ತದೆ. ಏಕೆಂದರೆ ಅವನು ಒಂದೆಡೆ "ಕುಲಂ ಕುಲಮಲ್ತು ; ಚಲಂ ಕುಲಂ ; ಗುಣಂ ಕುಲಂ ; ಅಭಿಮಾನವೊಂದೆ ಕುಲಂ" ಎಂದಿದ್ದಾನೆ.

ಪಂಪನ ಕವಿತಾಶಕ್ತಿ ಅಪ್ರತಿಮವಾದದ್ದು. ಅವನ ಅನಂತರ ಬಂದ ಅನೇಕ ಕವಿಗಳು ಅವನನ್ನು ಅತ್ಯಂತ ಗೌರವದಿಂದ ಸ್ಮರಿಸಿದ್ದಾರೆ. ರನ್ನ ಮಹಾಕವಿ ಹಲವಾರು ಅಂಶಗಳಲ್ಲಿ ಪಂಪನನ್ನು ಅನುಸರಿಸಿರುವುದಲ್ಲದೆ "ಸುಭಗಕವಿ ಪಂಪನಿಂ ವಾಗ್ವಿಭವೋನ್ನತಿ ನೆಗಳ್ದುದು" ಎಂದಿದ್ದಾನೆ. ರನ್ನನಿಂದ ಸುಮಾರು ನಾಲ್ಕು ಶತಮಾನಗಳ ಈಚೆಯವನಾದ ನಾಗರಾಜ ಕವಿ 'ಹಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನಾವಗಂ' ಎಂದು ಹೇಳಿ ಪಂಪನನ್ನು ಆದರಿಸಿದ್ದಾನೆ. ಪಂಪನ ಕಾವ್ಯಗಳನ್ನೋದಿದವರು, ಇಂದಿಗೂ ಈ ಮಾತನ್ನು ಒಪ್ಪಿಕೊಳ್ಳಬಹುದು.

ಪಂಪನಿಗೆ ಅವನ ಕಾಲದಲ್ಲೇ ಅನೇಕ ಪ್ರಶಸ್ತಿಗಳು ದೊರೆತಿದ್ದುವು. ಅವನು 'ಸುಕವಿಜನ ಮನೋಮಾನ ಸೋತ್ತ್ರಂಸ ಹಂಸ', 'ಕವಿತಾ ಗುಣಾರ್ಣವ', 'ಸರಸ್ವತೀ ಮಣಿಹಾರ'. ಅವನಿಗೆ ದೊರೆತಿದ್ದ ಹಲವಾರು ಬಿರುದುಗಳಲ್ಲಿ 'ಕವಿತಾ ಗುಣಾರ್ಣವ' ಎಂಬ ಬಿರುದೇ ಅವನಿಗೆ ಹೆಚ್ಚು ಮೆಚ್ಚುಗೆಯಾಗಿದ್ದಂತೆ ಕಾಣುತ್ತದೆ. ತನ್ನ ಕೃತಿಗಳಲ್ಲಿ ಅನೇಕ ಕಡೆಗಳಲ್ಲಿ ಈ ಬಿರುದನ್ನೇ ಅವನು ಉಪಯೋಗಿಸಿದ್ದಾನೆ.

ಕನ್ನಡದ ಪ್ರಮುಖ ಕವಿಗಳ ಮೇಲೆ ಪಂಪ ಬೀರಿರುವ ಪ್ರಭಾವ ಗಣನೀಯವಾದದ್ದು. ಈ ದೃಷ್ಟಿಯಿಂದಲೂ ಪಂಪ ಕನ್ನಡದ ಆದಿಕವಿ; ಜಗತ್ತಿನ ಸಾಹಿತ್ಯಪ್ರಪಂಚದ ಯಾವುದೇ ಮಹಾಕಾವ್ಯಕ್ಕೆ ಸರಿಸಮಾನವಾದ ಕೃತಿಯನ್ನು ರಚಿಸಿ ಕನ್ನಡದ ಕೀರ್ತಿಯನ್ನು ಅಮರವಾಗಿಸಿರುವ ಕವಿ.

## ಪಗೋಡ

ಹಲವಾರು ಮಹಡಿಯ ಮನೆಗಳನ್ನು ಒಂದರ ಮೇಲೆ ಇನ್ನೊಂದರಂತೆ ಪೇರಿಸಿ ಇಟ್ಟಂಥ ಕಟ್ಟಡ. ತುದಿಯಲ್ಲಿ ಚೂಪಾದ, ನೀಳವಾದ ಶೃಂಗ. ನೆಲದಿಂದ ಸುಮಾರು 110 ಮೀಟರ್ ಎತ್ತರದ ಈ ಭವನಕ್ಕೆ ಚಿನ್ನದ ಮುಲಾಮಿನ ಛಾವಣಿ. ಒಳಗೆ ಹೊರಗೆ ಹೋಗುವ ಬರುವ ಬಕ್ಕತಲೆಯ ಬೌದ್ಧ ಸನ್ಯಾಸಿಗಳು. ಸುಂದರ, ಶಾಂತ ವಾತಾವರಣ. ಬಿಸಿಲಿನಲ್ಲಿ ಥಳಥಳನೆ ಹೊಳೆಯುವ ಈ ಕಟ್ಟಡವನ್ನು ನೋಡಿ ಆಂಗ್ಲ ಕವಿ ಕಿಪ್ಲಿಂಗ್ ಇದನ್ನು "ಒಂದು ಸುವರ್ಣ ರಹಸ್ಯ ; ಮಿನುಗುವ ಅದ್ಭುತ" ಎಂದು ಕರೆದ.

ರಂಗೂನಿನಲ್ಲಿರುವ ಷ್ವೇ ಡೆಗಾನ್ ಪಗೋಡ ಬರ್ಮದ ಮುಖ್ಯ ಪ್ರವಾಸಿ ಆಕರ್ಷಣೆ. ಪ್ರಕೃತಿ ಸೌಂದರ್ಯದ ಬೀಡಾದ ಬರ್ಮದ ಪ್ರತಿ ಹಳ್ಳಿ ಪಟ್ಟಣಗಳಲ್ಲೂ ಪಗೋಡಗಳಿರುತ್ತವೆ. ಹೆಚ್ಚು ಕಡಮೆ ಪ್ರತಿ ಹಳ್ಳಿಯಲ್ಲೂ ಒಂದೊಂದು ಪಗೋಡ. ಆದ್ದರಿಂದಲೇ ಬರ್ಮಕ್ಕೆ 'ಪಗೋಡಗಳ ರಾಷ್ಟ್ರ' ಎಂದು ಹೆಸರು. ಪಗೋಡಗಳು ಬರ್ಮದಲ್ಲಿ ಮಾತ್ರವೇ ಅಲ್ಲ; ಬೌದ್ಧಮತದ ಪ್ರಭಾವ ಇದ್ದಲ್ಲೆಲ್ಲ ಇವೆ. ಚೀನದಲ್ಲಿ ಸುಮಾರು 2,000 ಪಗೋಡಗಳಿವೆ. ಜಪಾನ್, ಥಾಯ್‌ಲೆಂಡ್, ಜಾವಾಗಳಲ್ಲೂ ಪಗೋಡಗಳನ್ನು ಕಾಣಬಹುದು.

'ಪಗೋಡ' ಪದದ ಮೂಲ ಏನೆಂಬುದು ಅಸ್ಪಷ್ಟ. ಮೊದಮೊದಲಿನ ಪಗೋಡಗಳು ಬುದ್ಧನ ಅವಶೇಷಗಳ ಮೇಲೆ ನಿರ್ಮಿಸಿದ ಪ್ರಾರ್ಥನಾ ಮಂದಿರಗಳು. ಪುಣ್ಯ ಸಂಪಾದನೆಗೋಸ್ಕರ ಅರಸರೂ ಶ್ರೀಮಂತರೂ ಪಗೋಡಗಳನ್ನು ಕಟ್ಟಿಸಲು ಆರಂಭಿಸಿದರು. ಇವು ಸುತ್ತುಮುತ್ತಲ ಪ್ರದೇಶಗಳಿಗೆ ಶುಭವನ್ನು ತರುತ್ತವೆ ಎಂಬ ನಂಬಿಕೆಯೂ ಇತ್ತು. ಜಪಾನಿನ ನಾರಾದಲ್ಲಿರುವ ಪಗೋಡದ ಐದು ಅಂತಸ್ತುಗಳು ಪಂಚಭೂತಗಳನ್ನು (ಭೂಮಿ, ನೀರು, ಬೆಂಕಿ, ಗಾಳಿ ಮತ್ತು ಆಕಾಶ) ಪ್ರತಿನಿಧಿಸುತ್ತವೆ.

ಭಾರತ, ಸಿಂಹಳ, ಜಾವಾ ಮತ್ತು ಸಯಾಮ್‌ಗಳಲ್ಲಿ ಕಂಡುಬರುವ ಸ್ತೂಪಗಳು ಪಗೋಡಗಳ ಮೊದಲ ರೂಪ. ದೊಡ್ಡ ಕಲ್ಲಿನ ಛತ್ರಿಯಂತೆ ಇದರ ಆಕಾರ. ಅತಿ ಪುರಾತನ ಪಗೋಡಗಳು

ಪಗೋಡ : ಮಿನುಗುವ ಅದ್ಭುತ

ಬರ್ಮದಲ್ಲಿವೆ. ಚೌಕ ಅಥವಾ ಬಹುಭುಜಾಕೃತಿಯ ಅಡಿಪಾಯದ ಮೇಲೆ ಕಲ್ಲು ಇಟ್ಟಿಗೆ ಅಥವಾ ಮರದ ಕಟ್ಟಡ ಇರುತ್ತದೆ. ಇಳಿಜಾರಾದ ಹಂಚಿನ ಮಾಡುಗಳು, ಕೆಲವಕ್ಕೆ ಚಿನ್ನದ ಮುಲಾಮಿನ ಹೊದಿಕೆ, ಹೆಚ್ಚಿನ ಕಟ್ಟಡಗಳ ಒಳಗೆ ಒಂದು ಅಥವಾ ಹೆಚ್ಚು ಬುದ್ಧನ ವಿಗ್ರಹಗಳು. ಕ್ರಿಸ್ತ ಪೂರ್ವ ಕಾಲದಲ್ಲಿ ಕಟ್ಟಿದ ಹಲವು ಪಗೋಡಗಳು ಇನ್ನೂ ಉಳಿದಿವೆ.

ಚೀನ ಮತ್ತು ಜಪಾನಿನ ಪಗೋಡಗಳಲ್ಲಿ ಒಳಗೆ ವಿಗ್ರಹವಿರುವುದು ಅಪರೂಪ. ಇವು ಹಬ್ಬದ ದಿನಗಳಲ್ಲಿ ಜನರು ಕಲೆಯುವ ಸ್ಥಳಗಳು. ಎಲೆಗಳಂತೆ ಮೇಲಕ್ಕೆ ಬಗ್ಗಿಕೊಂಡಿರುವ ಛಾವಣಿ. ಅಧಿಕ ಅಲಂಕಾರಗಳಿಂದ ಕೂಡಿದ ಇವು ಮೂರರಿಂದ ಹದಿಮೂರು ಅಂತಸ್ತುಗಳನ್ನು ಒಳಗೊಂಡಿರಬಹುದು. ಜಪಾನಿನಲ್ಲಿ ಭೂಕಂಪಗಳಿಂದ ನಾಶವಾಗದಂತೆ ಮರದಿಂದ ಕಟ್ಟಿದ ಪಗೋಡಗಳಿರುತ್ತವೆ. ಕೆಲವು ಪಗೋಡಗಳ ಪ್ರವೇಶ ದ್ವಾರದಲ್ಲಿ 'ಪ್ರಾರ್ಥನಾ ಚಕ್ರ'ಗಳಿರುತ್ತವೆ. ಭಾರತೀಯ ದೇವಸ್ಥಾನಗಳಲ್ಲಿ ಗಂಟೆ ಬಾರಿಸುವಂತೆ ಇಲ್ಲಿ ಈ ಚಕ್ರಗಳನ್ನು ತಿರುಗಿಸುತ್ತಾರೆ.

ಚೀನೀ ಪಗೋಡಗಳಲ್ಲಿ ನಾನ್‌ಕಿಂಗ್‌ನಲ್ಲಿದ್ದ ಪಿಂಗಾಣಿ ಪಗೋಡ ಅತ್ಯಂತ ಪ್ರಸಿದ್ಧವಾದದ್ದು. ಇಟ್ಟಿಗೆಯ ಗೋಡೆಯನ್ನು ಪೂರ್ತಿಯಾಗಿ ಪಿಂಗಾಣಿಯ ಫಲಕಗಳಿಂದ ಮುಚ್ಚಿದ್ದರು. ಇದರ ಒಂಬತ್ತು ಅಂತಸ್ತು ಛಾವಣಿಯೂ ಪಿಂಗಾಣಿಯಿಂದ ರಚಿತವಾಗಿತ್ತು. 1853ರ ರಾಜಕೀಯಗಳ ಪ್ರಕ್ಷೋಭೆಯ ವೇಳೆಯಲ್ಲಿ ಈ ಪಗೋಡ ನೆಲಸಮವಾಯಿತು. ಥಾಯ್‌ಲೆಂಡಿನಲ್ಲಿ ಸುಮಾರು 73 ಮೀಟರ್ ಎತ್ತರದ ಪಿಂಗಾಣಿ ಪಗೋಡ ಈಗಲೂ ಇದೆ.

ಪೂರ್ವ ರಾಷ್ಟ್ರಗಳ ಸಂಸ್ಕೃತಿಯ ಪ್ರಭಾವದಿಂದ ಯೂರೋಪಿನ ಹಲವೆಡೆ ಪಗೋಡಗಳು ನಿರ್ಮಿತವಾಗಿವೆ. ಲಂಡನಿನ ಸಮೀಪದ ಕ್ಯೂ ಉದ್ಯಾನದಲ್ಲಿ ಇಂಥದೊಂದು ಪಗೋಡ 1761ರಲ್ಲಿ ಕಟ್ಟಲ್ಪಟ್ಟಿತು.

**ನೋಡಿ :** ಚೀನೀ ಕಲೆ, ಸಾಹಿತ್ಯ ; ಭಾರತೀಯ ಶಿಲ್ಪ, ವಾಸ್ತುಶಿಲ್ಪ

## ಪಟ್ಟದಕಲ್ಲು

ಕರ್ನಾಟಕದ ವಾಸ್ತುಶಿಲ್ಪಕ್ಕೆ ಮೂಲಭೂತ ಕೊಡುಗೆ ನೀಡಿದವರು ಬಾದಾಮಿಯ ಚಾಲುಕ್ಯರು. ಬಿಜಾಪುರ ಜಿಲ್ಲೆಯ ಬಾದಾಮಿ ತಾಲೂಕಿನಲ್ಲಿ ಮಲಪ್ರಭಾ ನದಿಯ ದಂಡೆಯಲ್ಲಿರುವ ಪಟ್ಟದಕಲ್ಲು ಚಾಲುಕ್ಯರ ಉಪರಾಜಧಾನಿಯಾಗಿದ್ದಿತು. ಈ ಊರಿನಲ್ಲಿ ಚಾಲುಕ್ಯ ಅರಸರ ಪಟ್ಟಾಭಿಷೇಕ ನಡೆಯುತ್ತಿದ್ದುದರಿಂದ ಅದಕ್ಕೆ ಈ ಹೆಸರು ಬಂದಿತೆಂಬ ಊಹೆಯಿದೆ. ಚಾಲುಕ್ಯರ ಆಳ್ವಿಕೆಯ ಮೊದಲ ಘಟ್ಟದಲ್ಲಿ ಪಟ್ಟದಕಲ್ಲಿನಲ್ಲಿ ಹಲವಾರು ದೇವಾಲಯಗಳು ಕಟ್ಟಲ್ಪಟ್ಟುವು.

ಪಟ್ಟದಕಲ್ಲು ಒಂದು ಒಂದೂವರೆ ಸಾವಿರ ಜನರಿರುವ ಹಳ್ಳಿಯಾದರೂ ಒಂದು ಕಾಲಕ್ಕೆ ಅದು ದೊಡ್ಡ ಪಟ್ಟಣವಾಗಿತ್ತು ; ವಿದ್ಯೆ, ಕಲಾಸಂಸ್ಕೃತಿಗಳ ಕೇಂದ್ರವಾಗಿತ್ತು. ಗಮನಾರ್ಹವಾದ ಅಂಶವೆಂದರೆ ಇಲ್ಲಿರುವ ದೇವಾಲಯಗಳಲ್ಲಿ, ಉತ್ತರ ಮತ್ತು ದಕ್ಷಿಣ ಭಾರತದ ದೇವಾಲಯ ರಚನಾ ಶೈಲಿಯ ಪ್ರಭಾವ ಕಂಡುಬರುತ್ತದೆ. ಈ ಎರಡು ರಚನಾಶೈಲಿಗಳ ಸಂಗಮಸ್ಥಾನ ಪಟ್ಟದಕಲ್ಲು.

ಪಾಪನಾಥ, ವಿರೂಪಾಕ್ಷ, ಕಾಶಿ ವಿಶ್ವೇಶ್ವರ, ಸಂಗಮೇಶ್ವರ, ಚಂದ್ರಶೇಖರ, ಜಂಬುಲಿಂಗ, ಗಳಗನಾಥ, ಮಲ್ಲಿಕಾರ್ಜುನ ಮಂದಿರಗಳು ಇಲ್ಲಿರುವ ಮುಖ್ಯ ದೇವಾಲಯಗಳು.

ಶಿಖರ ನಿರ್ಮಾಣದಲ್ಲಿ ಉತ್ತರ ಭಾರತದ ರಚನಾ ಶೈಲಿಯ ಪ್ರಭಾವ ಎದ್ದು ಕಾಣುವ ಪಾಪನಾಥ ದೇವಾಲಯ ನಿರ್ಮಿತವಾದದ್ದು 680ರಲ್ಲಿ. ಆದರೆ ವಾಸ್ತುಶಿಲ್ಪ ದೃಷ್ಟಿಯಿಂದ ಇದು ಉತ್ತಮ ರಚನೆಯಲ್ಲ. ಇದರ ಉದ್ದ ಎತ್ತರಗಳಲ್ಲಿ ಸಾಮರಸ್ಯವಿಲ್ಲ. ಸುಮಾರು 90 ಅಡಿ ಉದ್ದವಿರುವ ಈ ದೇವಾಲಯ ತಕ್ಕಷ್ಟು ಎತ್ತರವಿಲ್ಲದಿರುವುದರಿಂದ ಅಂದವಾಗಿ ಕಾಣುವುದಿಲ್ಲ.

ಆದರೆ ಇದರ ಗೋಡೆ, ಕಂಬ, ಛಾವಣಿ ಮುಂತಾದವೆಲ್ಲ ಕೆತ್ತನೆ ಕೆಲಸದಿಂದ ತುಂಬಿವೆ.

ವಿರೂಪಾಕ್ಷ ದೇವಾಲಯದ ನಟರಾಜ

ವಿರೂಪಾಕ್ಷ ಅಥವಾ ಲೋಕೇಶ್ವರ ದೇವಾಲಯ ಪಟ್ಟದಕಲ್ಲಿನಲ್ಲಿ ಅತ್ಯಂತ ಚೆಲುವಾದ ದೊಡ್ಡ ದೇವಾಲಯ. ಇದು ದಕ್ಷಿಣ ಭಾರತದ ವಾಸ್ತುಶಿಲ್ಪ ಶೈಲಿಗೆ ಸೇರಿದ್ದು. ಚಾಲುಕ್ಯ ವಂಶದ ಎರಡನೆಯ ವಿಕ್ರಮಾದಿತ್ಯನ ಹಿರಿಯ ರಾಣಿ ಲೋಕಮಹಾದೇವಿಯು ಇದನ್ನು ಕಟ್ಟಿಸಿದಳು. ಇದರ ಪಕ್ಕದಲ್ಲಿಯೇ ಇರುವ ಮಲ್ಲಿಕಾರ್ಜುನ ಅಥವಾ ತ್ರೈಲೋಕೇಶ್ವರ ದೇವಾಲಯವನ್ನು ಅವನ ಕಿರಿಯ ರಾಣಿ ತ್ರೈಲೋಕ್ಯ ಮಹಾದೇವಿ ಕಟ್ಟಿಸಿದಳು. ಈ ಅಕ್ಕ ತಂಗಿಯರು ಕಟ್ಟಿಸಿದ ಈ ಎರಡು ದೇವಾಲಯಗಳು ಅವಳಿ ಕೃತಿಗಳಂತೆ ಕಾಣುತ್ತವೆ. ವಿರೂಪಾಕ್ಷ ದೇವಾಲಯವು ಪ್ರಮಾಣಬದ್ಧವಾಗಿದೆ. ದೇವಾಲಯದ ಪ್ರಧಾನ ಭಾಗಗಳ ಹೊಂದಾಣಿಕೆ ಹಿತವಾಗಿದೆ, ಸಮತೂಕವಾಗಿದೆ. ಈ ದೇವಾಲಯದ ನಂದಿಮಂಟಪ ಕೂಡ ಸುಂದರವಾಗಿದೆ. ಈ ದೇವಾಲಯದ ಕಟ್ಟಣೆಕೆ ದಷ್ಟಪುಷ್ಟವಾಗಿ



ಗಳಗನಾಥ ದೇವಾಲಯ



ವಿರೂಪಾಕ್ಷ ದೇವಾಲಯ

ವ್ವದರೂ ಇದರಲ್ಲಿ ಕಂಡುಬರುವ ಅಲಂಕರಣ ಶಿಲ್ಪದ ಸೊಗಸು, ನಾಜೂಕು ಆಕರ್ಷಕವಾದದ್ದು ; ಚೆಲುವಾದದ್ದು. ಚಾಲುಕ್ಯರ ಕಾಲದ ಶಿಲ್ಪಿಗಳು ಶಿಲ್ಪ ವಾಸ್ತುಶಿಲ್ಪಗಳ ನಡುವೆ ಸಾಧಿಸಿರುವ ಸಾಮರಸ್ಯ ಗಮನಾರ್ಹವಾದದ್ದು. ಅಲಂಕರಣ ಅತಿಯಾಯಿತು ಎನಿಸುವುದಿಲ್ಲ. ಈ ಸಂಯಮ ಇಡೀ ಕಟ್ಟಡಕ್ಕೆ ಗಾಂಭೀರ್ಯವನ್ನು ಒದಗಿಸಿದೆ.

ಸುಮಾರು 725ರಲ್ಲಿ ಕಟ್ಟಿದ ಸಂಗಮೇಶ್ವರ ದೇವಾಲಯ ವಿರೂಪಾಕ್ಷ ದೇವಾಲಯಕ್ಕಿಂತ ಸ್ವಲ್ಪ ಕಾಲ ಮುಂಚೆ ನಿರ್ಮಿತವಾದದ್ದು. ಪಟ್ಟದ ಕಲ್ಲಿನಲ್ಲಿರುವ ದಾಕ್ಷಿಣಾತ್ಯಶೈಲಿ ಪ್ರಧಾನವಾದ ಕಟ್ಟಡಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದದ್ದು.

ಬಾದಾಮಿಯ ಚಾಲುಕ್ಯರ ಕಾಲದಲ್ಲಿ ರೂಪುಗೊಂಡ ಚಾಲುಕ್ಯ ವಾಸ್ತುಶಿಲ್ಪ ಕೃತಿಗಳು, ಚಾಲುಕ್ಯರ ಆಳ್ವಿಕೆಯ ಸಂಸ್ಕೃತಿ, ಶಕ್ತಿ ಸಂಪತ್ತುಗಳ ಪ್ರತೀಕಗಳಾಗಿ ನಿಂತಿವೆ. ಪಟ್ಟದಕಲ್ಲು ಈ ಸಿರಿಯ ಭಂಡಾರ. ಈ ದೇವಾಲಯಗಳ ಶಿಲ್ಪಗಳಲ್ಲಿ ಪುರಾಣ ಕಥಾ ಸನ್ನಿವೇಶಗಳು, ದೇವದೇವತಾ ಮೂರ್ತಿಗಳನ್ನಲ್ಲದೆ ಆಗಿನ ಸಾಮಾಜಿಕ ಜೀವನದ ಚಿತ್ರವನ್ನೂ ಕಾಣಬಹುದಾಗಿದೆ. ಆಗಿನ ಕಾಲದಲ್ಲಿ ಪ್ರಚಲಿತವಿದ್ದ ಹಲವು ಬಗೆಯ ಸಂಗೀತ ವಾದ್ಯಗಳು, ಉಡುಗೆ ತೊಡುಗೆಗಳು, ಕೇಶ ವಿನ್ಯಾಸ, ಗ್ರಾಮ ಜೀವನ ದೃಶ್ಯಗಳು —ಇವೆಲ್ಲ ಅಲ್ಲಿ ಮೂಡಿವೆ.

ನರಸಿಂಹ



ಭಾರತೀಯ ಶಿಲ್ಪಕಲೆಯ ಇತಿಹಾಸಾಭ್ಯಾಸಿಗಳಿಗೆ ಪಟ್ಟದ ಕಲ್ಲು ಒಂದು ವಿದ್ಯಾಲಯ. ನಮ್ಮ ಶಿಲ್ಪಕಲೆಯ ವಿಕಾಸಕ್ಕೆ ಸಂಬಂಧಿಸಿದ ಹಲವಾರು ಅಂಶಗಳನ್ನು ಇಲ್ಲಿ ಗುರುತಿಸ ಬಹುದಾಗಿದೆ.

ನೋಡಿ : ಚಾಲುಕ್ಯ ಶಿಲ್ಪ, ವಾಸ್ತುಶಿಲ್ಪ

## ಪಟ್ಣಂ ಸುಬ್ರಹ್ಮಣ್ಯ ಅಯ್ಯರ್

'ವಿರಾ ನಾಪ್ಪೈ' ತೋಡಿರಾಗದ ವರ್ಣ ; ಕರ್ನಾಟಕ ಸಂಗೀತ ಕಲಿಯುವವರಿಗೆ, ಅಭಿಮಾನಿಗಳಿಗೆ ಅತ್ಯಂತ ಪರಿಚಿತವಾದ ತಾನವರ್ಣ. ಇದರ ರಚನಕಾರರು ಪಟ್ಣಂ ಸುಬ್ರಹ್ಮಣ್ಯಅಯ್ಯರ್.



ಬೇಗಡೆ : ಪಟ್ಣಂ

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರದು ಸರಳವಾದ ವ್ಯಕ್ತಿತ್ವ ; ಘನವಾದ ಶಾರೀರ. ತಾಳದ ಎಲ್ಲ ಭೇದ ಪ್ರಭೇದಗಳನ್ನು ಅವರು ಅರಿತಿದ್ದರು. 108 ತಾಳಗಳನ್ನೂ ನಡೆಗಳನ್ನೂ ಬಲ್ಲವರಾದರೂ ಕಚೇರಿಗಳಲ್ಲಿ ಸರ್ವರಿಗೆ ಅರ್ಥವಾಗುವ ಸುಲಭ ತಾಳದ ಪಲ್ಲವಿಯನ್ನೇ ಹಾಡುತ್ತಿದ್ದರು. ಪ್ರತಿಯೊಬ್ಬರೂ ಹಾಡುವ ರಾಗವನ್ನೇ, ಕೃತಿಯನ್ನೇ ಹಾಡಿ, ಯಾರೂ ತೋರದೆ ಇದ್ದ ಒಂದು ವೈಶಿಷ್ಟ್ಯವನ್ನೂ ಸೊಬಗನ್ನೂ ತೋರಿಸುವುದು ವಿದ್ವತ್ತಿನ ಹಿರಿಮೆ ಎಂಬುದು ಅವರ ಅಭಿಪ್ರಾಯವಾಗಿತ್ತು.

ಇವರ ಪ್ರೀತಿಯ ರಾಗ ಬೇಗಡೆ. ಇದರಿಂದಾಗಿ ಬೇಗಡೆ ಸುಬ್ರಹ್ಮಣ್ಯ ಅಯ್ಯರ್ ಎಂಬ ಹೆಸರಿನಿಂದಲೇ ಅವರು ಪ್ರಸಿದ್ಧರಾಗಿದ್ದರು. ಈ ರಾಗದಲ್ಲಿ ಅವರು ರಚಿಸಿರುವ ಕೃತಿಗಳ ಸಂಖ್ಯೆಯೂ ಹೆಚ್ಚು. ಅಪರೂಪ ರಾಗಗಳನ್ನು ಹಾಡಿದರೂ ಅದು ಶ್ರೋತೃಗಳಿಗೆ ಗ್ರಾಹ್ಯವಾಗುವಂತೆ ಸರಳವಾಗಿ ಹಾಡುತ್ತಿದ್ದರು. ಅವರ 'ಅನುದಿನಮು', 'ಅಭಿಮಾನಮೆನಡುಗಲ್ಗು ರಾಮ' ಬೇಗಡೆ ರಾಗದಲ್ಲಿ ಎಲ್ಲರಿಗೂ ಪರಿಚಿತವಾದ ಕೃತಿಗಳು. 'ರಘುವಂಶ ಸುಧಾಂಬುಧಿ ಚಂದ್ರಶ್ರೀ' (ಕದನ ಕುತೂಹಲ ರಾಗ), 'ನೀ ಪಾದಮುಲೆ' (ಭೈರವಿ ರಾಗ), 'ಎಟ್ಟನಮ್ಮಿನ ಓ ಮನಸಾ' (ಸಾವೇರಿ)— ಇವು ಇವರ ಇನ್ನಿತರ ಖ್ಯಾತ ಕೃತಿಗಳು. ಇವರ ರಚನಾಶೈಲಿ ತ್ಯಾಗರಾಜರ ಕೃತಿಗಳನ್ನು ಹೋಲುತ್ತದೆ. ಸಂಸ್ಕೃತ, ತೆಲುಗು, ತಮಿಳು ಈ ಮೂರು ಭಾಷೆಗಳಲ್ಲಿಯೂ ಹಲವಾರು ಬಗೆಯ ತಾಳಗಳಲ್ಲಿಯೂ ಇವರು

ಕೃತಿಗಳನ್ನು ರಚಿಸಿದ್ದಾರೆ. ಕೃತಿಗಳಲ್ಲಿ ಕಂಡುಬರುವ ವೆಂಕಟೇಶ ಎಂಬುದು ಇವರ ಅಂಕಿತ. [illegible] ಇವರ ಕೃತಿಗಳು. ಇವರು ಅನೇಕ ವರ್ಣ, ಜಾವಳಿ, ತಿಲ್ಲಾನಗಳನ್ನೂ ರಚಿಸಿದ್ದಾರೆ.

ಶಿಷ್ಯರೆಂದರೆ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರಿಗೆ ಬಹಳ ಮಮತೆ. ಮೈಸೂರಿನ ಪ್ರಸಿದ್ಧ ವಾಗ್ಗೇಯಕಾರ ವಾಸುದೇವಾಚಾರ್ಯರೂ ಟೈಗರ್ ವರದಾಚಾರ್ಯರೂ ಇವರ ಶಿಷ್ಯರು. ಭೈರವಿ ಕೆಂಪೇಗೌಡ, ಪರಮೇಶ್ವರ ಅಯ್ಯರ್, ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ ಮುಂತಾದವರು ಇವರ ಇತರ ಶಿಷ್ಯರಲ್ಲಿ ಪ್ರಮುಖರು. ಗುರುವಿನ ಬಳಿ ಕಲಿಯುವಾಗ ಶಿಷ್ಯ ಏಕಮುಖ ಉಪಾಸನೆ ಮಾಡಬೇಕು: ಮನಸ್ಸು ಆಚೀಚೆ ವಾಲಿದರೆ ಕಲಿಕೆ ಬರಿಕೆಯ ಪದಾರ್ಥವಾಗುತ್ತದೆ —ಎನ್ನುತ್ತಿದ್ದರು. ಇಬ್ಬರ ಶಾರೀರಗಳು ಒಂದೇ ಸಮವಿರುವುದಿಲ್ಲ; ಆದ್ದರಿಂದ ತನ್ನ ಶಾರೀರಕ್ಕೆ ಅನುಗುಣವಾಗಿ, ಅದರ ಮಿತಿ, ಸಾಮರ್ಥ್ಯಗಳನ್ನು ತಿಳಿದು ತನ್ನ ಸಂಗೀತದ ಅಭಿವ್ಯಕ್ತಿ ಬೆಳೆಸಿಕೊಳ್ಳುವುದು ಒಳ್ಳೆಯ ಸಂಗೀತಗಾರನ ಲಕ್ಷಣ ಎಂಬುದು ಅವರ ಅಭಿಪ್ರಾಯವಾಗಿತ್ತು.

ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಜನಿಸಿದ್ದು 1845ರಲ್ಲಿ. ತಂದೆ ಭರತ ವೈದ್ಯನಾಥ ಅಯ್ಯರ್. ಇವರ ಮನೆತನ ಸಂಗೀತದ ನೆಲೆಯಾಗಿತ್ತು. ಮೊದಲು ಸೋದರ ಮಾವಂದಿರಿಂದ ಶಿಕ್ಷಣ. ಅನಂತರ ತ್ಯಾಗರಾಜರ ಶಿಷ್ಯರಲ್ಲಿ ಮುಖ್ಯರಾದ ಮಾನಂಬುಚ್ಚವಾಡಿ ವೆಂಕಟಸುಬ್ಬಯ್ಯನವರಲ್ಲಿ ಪಾಠ. ತಮ್ಮ ಕಂಠ ಚೆನ್ನಾಗಿ ನುಡಿಯುವುದಿಲ್ಲವೆಂದು ಬೆಳಗಿನ ಜಾವ ಕುತ್ತಿಗೆಯವರೆಗೆ ತಣ್ಣೀರಿನಲ್ಲಿ ನಿಂತು ಹಾಡುವುದನ್ನು ಅಭ್ಯಾಸ ಮಾಡುತ್ತಿದ್ದರು. ಕಲಿಕೆ ಮುಗಿದ ಅನಂತರ ತಿರುವಯ್ಯಾರ್‌ನಲ್ಲಿ ನೆಲೆಸಿದರು. ಉತ್ತಮ ಸಂಗೀತಗಾರರೆಂದೂ ವಾಗ್ಗೇಯಕಾರರೆಂದೂ ಪ್ರಸಿದ್ಧರಾದರು. ರಾಜಮನ್ನಣೆಗೆ ಪಾತ್ರರಾದರು. ಅವರು ಮೈಸೂರಿಗೂ ಬಂದಿದ್ದು, ಮೈಸೂರಿನ ಅರಮನೆಯಲ್ಲಿ ಮನ್ನಣೆಗೆ ಪಾತ್ರರಾದರು. 1902ನೆಯ ಜುಲೈ 31ರಂದು ಕಾಲವಾದರು.

## ಪತ್ರಿಕೋದ್ಯಮ

ನೋಡಿ : ವೃತ್ತಪತ್ರಿಕೆ : ಸಂಪುಟ–೧ ; ಪತ್ರಿಕೋದ್ಯಮ : ಸಂಪುಟ–೪

## ಪನ್ನಾಲಾಲ್ ಘೋಷ್

ಕೊಳವೆಬಾವಿಗಳನ್ನು ಕೊರೆಯುವ ತಂಡದಲ್ಲಿ ಉದ್ಯೋಗ ಮಾಡುತ್ತಿದ್ದ ಯುವಕ ಪನ್ನಾಲಾಲ್ ಘೋಷ್; ಕೆಲಸದ ಮೇಲೆ ದೂರದ ಹಳ್ಳಿ-ಗುಡ್ಡಗಳಲ್ಲಿ ಸಂಚರಿಸಬೇಕಾಗಿತ್ತು. ಒಂದು ಪ್ರದೇಶದ ಗುಡ್ಡಗಾಡು ಜನರು ತಮ್ಮ ಉದ್ದವಾದ ಬಿದಿರಿನ ಕೊಳಲನ್ನು ಬಾರಿಸುವುದನ್ನು ಕೇಳಿ ಘೋಷ್ ಆಕರ್ಷಿತರಾದರು. ಬಿಡುವಿನ ಸಮಯದಲ್ಲೆಲ್ಲ ಆ ಕೊಳಲಿನ ವಾದನವನ್ನು ಅಭ್ಯಸಿಸುವುದು, ಹೊಸ ಪ್ರಯೋಗಗಳನ್ನು ಮಾಡುವುದು ಇವರ ಕೆಲಸವಾಯಿತು. ತಮ್ಮ ಉದ್ಯೋಗವನ್ನು ಬಿಟ್ಟು ಪೂರ್ಣಾವಧಿ ಸಂಗೀತಗಾರನಾಗುವಷ್ಟು ಬಲವಾಯಿತು, ಈ ಚಟ. ಸ್ವಲ್ಪ ಸಮಯದಲ್ಲೇ ಘೋಷ್ ಈ ಕ್ಷೇತ್ರದಲ್ಲಿ ಸುಪ್ರಸಿದ್ಧರೂ ಆದರು. ಹಿಂದೂಸ್ತಾನಿ ಸಂಗೀತದಲ್ಲಿ ಕೊಳಲಿಗೆ ಪ್ರಮುಖ ಸ್ಥಾನ ಒದಗಿಸಲು ಕಾರಣರಾದರು.

ಈಗ ಬಾಂಗ್ಲಾ ದೇಶದಲ್ಲಿರುವ ಬರಿಸಾಲ್‌ನಲ್ಲಿ ಪನ್ನಾಲಾಲ್ 1911ರ ಜುಲೈ 31ರಂದು ಹುಟ್ಟಿದರು. ಚಿಕ್ಕಂದಿನಲ್ಲಿ ಇವರಿಗೆ ಸಂಗೀತಾಭ್ಯಾಸ ಕ್ರಮ ತಪ್ಪದೆ [illegible] ತಂದೆಗೆ [illegible] ಹೃದಯವೂ ಸಂಗೀತದ ಕಡೆಗೆ ಒಲಿಯತೊಡಗಿತು. ಇವರಿಗೆ ವಿಶೇಷ ಮಮತೆ ಇದ್ದದ್ದು ಕೊಳಲಿನ ಮೇಲೆ.

ಉದ್ಯೋಗ [illegible] ಕಲ್ಕತ್ತೆಗೆ ಬಂದ ಪನ್ನಾಲಾಲರಿಗೆ [illegible] ಚಿತ್ರ ತೆಗೆಯುವ ಕಂಪೆನಿಯಲ್ಲಿ ಕೆಲಸ ಸಿಕ್ಕಿತು. ಅನಂತರ ಇವರು ಕಲ್ಕತ್ತಾದ ಪ್ರಸಿದ್ಧ ಚಲಚ್ಚಿತ್ರ ಸಂಸ್ಥೆಯಾದ ನ್ಯೂ ಥಿಯೇಟರ್ಸ್ ಸೇರಿದರು. ಅನೇಕ ಸಂಗೀತ ಸಮ್ಮೇಳನಗಳಲ್ಲಿ ಪಕ್ಕವಾದ್ಯ ನುಡಿಸಿ ಪ್ರಸಿದ್ಧರೂ ಆದರು. 1938ರಲ್ಲಿ ನಾಟ್ಯ ತಂಡವೊಂದರೊಡನೆ ಯೂರೋಪಿನ ಸಂಚಾರ ಮುಗಿಸಿ ಬಂದಮೇಲೆ 1940ರಲ್ಲಿ ಮತ್ತೆ ಮುಂಬಯಿಗೆ ಪ್ರವೇಶಿಸಿದರು.

ಪ್ರಸಿದ್ಧ ಚಿತ್ರ ಸಂಸ್ಥೆ ಬಾಂಬೆ ಟಾಕೀಸ್‌ನ ಚಲಚ್ಚಿತ್ರಗಳಿಂದ ಪನ್ನಾಲಾಲ್ ಘೋಷ್ ಇವರ ಸಂಗೀತ ಜನಪ್ರಿಯವಾಯಿತು. ಉಸ್ತಾದ್ ಅಲ್ಲಾವುದ್ದೀನ್ ಖಾನರ ಪ್ರಭಾವಕ್ಕೆ ಒಳಗಾಗಿ ಪನ್ನಾಲಾಲ್ ಅವರಲ್ಲಿ ಶಿಷ್ಯವೃತ್ತಿ ಕೈಗೊಂಡರು. 1955ರಲ್ಲಿ ಆಕಾಶವಾಣಿಯ ವಾದ್ಯವೃಂದದಲ್ಲಿ ಸಂಗೀತ ನಿರ್ದೇಶಕರಾದರು. ಇವರ ಸಂಗೀತ ರಚನೆಗಳು ಅನೇಕ. ಗಾಯನ ಮತ್ತು ಬೀನ್



ಗಾತ್ರದ ಕೊಳಲು : ಪನ್ನಾಲಾಲ್ ಘೋಷ್

ಶೈಲಿಗಳನ್ನು ಕೊಳಲಿನಿಂದಲೂ ಬಾರಿಸಬಹುದು ಎಂದು ತೋರಿಸಿಕೊಟ್ಟವರು ಪನ್ನಾಲಾಲ್ ಘೋಷ್. ಕೊಳಲಿನ ನಾದವ್ಯಾಪ್ತಿಯನ್ನು ಹೆಚ್ಚಿಸಲು ಇವರು ತಮ್ಮ ಸಂಗೀತ ಕಚೇರಿಗಳಲ್ಲಿ ಬೇರೆ ಬೇರೆ ಗಾತ್ರದ ಕೊಳಲುಗಳನ್ನು ಉಪಯೋಗಿಸುತ್ತಿದ್ದರು. ಕೊಳಲಿನ ಕ್ಷೇತ್ರದಲ್ಲಿ ಹಲವು ಯಶಸ್ವೀ ಪ್ರಯೋಗಗಳನ್ನು ಹಿಂದೂಸ್ತಾನೀ ಸಂಗೀತದಲ್ಲಿ ಅವರು ಅಳವಡಿಸಿದರು.

ಪನ್ನಾಲಾಲ್ ಘೋಷ್ ಮಧ್ಯವಯಸ್ಸಿನಲ್ಲೇ–1960ರ ಏಪ್ರಿಲ್ ತಿಂಗಳಲ್ಲಿ– ಮರಣವನ್ನಪ್ಪಿದರು.

## ಪರಂಪರೆ

ಪೂರ್ವಿಕರಿಂದ ಕಾಲಾನುಗತವಾಗಿ ಬಂದಿರುವ ಅಭಿಪ್ರಾಯ. ನಂಬಿಕೆ, ಆಚಾರ. ರೂಢಪದ್ಧತಿ ಎನ್ನುವ ಅರ್ಥಗಳನ್ನು 'ಪರಂಪರೆ' ಪದ ಒಳಗೊಳ್ಳುತ್ತದೆ. ಲಿಖಿತರೂಪದಲ್ಲಿಲ್ಲದ ಆದರೆ ಕಟ್ಟಳೆಯ ಹಿರಿತನ ಗಳಿಸಿರುವ ತತ್ತ್ವಬೋಧೆ, ಉಪದೇಶ. ಪರಂಪರಾಗತ ಬೋಧೆ ಎಂದೂ ಅರ್ಥವಾಗುತ್ತದೆ. ಮಾನವ ಜನಾಂಗದಲ್ಲಿ 'ಪರಂಪರೆ' ಬಹಳ ಹಿಂದಿನಿಂದಲೂ ಹಾಸುಹೊಕ್ಕಾಗಿ ಬೆರೆತುಕೊಂಡು ಬಂದಿದೆ.

ಅರ್ಥಪೂರ್ಣ ಧಾರ್ಮಿಕ ವಿಧಿಯಿಂದ ಹಿಡಿದು ಒಬ್ಬ ಆಗಂತುಕನನ್ನು ಸ್ವಾಗತಿಸುವ ಪದ್ಧತಿಯ ಕ್ರಮದವರೆಗಿನ ಎಲ್ಲ ಕ್ರಿಯೆ, ಆಚಾರ, ವ್ಯವಹಾರಗಳನ್ನು ಪರಂಪರೆ ಒಳಗೊಳ್ಳುತ್ತದೆ. ಐತಿಹಾಸಿಕ ಪರಂಪರೆ ಭದ್ರವಾದ ಬುನಾದಿಯ ಮೇಲೆ ನಿಂತಿದೆ. ಮನುಷ್ಯನ ಬೆಳವಣಿಗೆಯ ಕಥೆಯನ್ನು ನಿರೂಪಿಸುವಲ್ಲಿ ಪರಂಪರೆಗೆ ಮಹತ್ವದ ಸ್ಥಾನವಿದೆ.

ಪರಂಪರೆಗೂ ಪುರಾಣ ಕಥೆಗೂ ಇರುವ ವ್ಯತ್ಯಾಸವನ್ನು ಖಚಿತವಾಗಿ ಗೆರೆ ಎಳೆದು ವಿಭಾಗಿಸಿ ತೋರಿಸುವುದು ಕಷ್ಟ. ಅತ್ಯುತ್ತಮ ಜೀವಂತ ಪರಂಪರೆಯುಲ್ಲೂ ಒಳ್ಳೆಯದರ, ಕೆಟ್ಟದರ ಮಿಶ್ರಣವಿರುತ್ತದೆ. ಸಮಾಜದ ಮೇಲೆ ಪರಂಪರೆಯ ಪ್ರಭಾವ ಬಲವಾಗಿ ಇರುತ್ತದೆಂಬುದು ನಿಜ. ಆದರೆ ಅದು ಮೀರಲಾಗದ, ಮೀರಬಾರದ ಕಟ್ಟಲ್ಲ. ಅದನ್ನು ವಿಮರ್ಶೆಗೆ ಒಳಗುಮಾಡಿ ಬದಲಾಯಿಸುವುದು ಹಿಂದಿನಿಂದಲೂ ನಡೆದುಬಂದಿದೆ. ಹೀಗೆ ಕಾಲಕಾಲಕ್ಕೆ ಬದಲಾಗುವಂಥದನ್ನು ಸಂಪ್ರದಾಯವೆಂದೂ ಈ ಎಲ್ಲ ಬದಲಾವಣೆಗಳ ಹಿಂದಿರುವ ಸನಾತನ ಸತ್ಯವನ್ನು ಪರಂಪರೆ ಎಂದೂ ಕರೆಯಬಹುದು.



ಮೀನಾಕ್ಷಿ ಸುಂದರಂ ಪಿಳ್ಳೈ ಮತ್ತು ಕಿರಿಯ ಶಿಷ್ಯೆ



ಶಂಭು ಮಹಾರಾಜ್
ಶಿಷ್ಯೆ-ಮಾಯಾರಾವ್

ಇತಿಹಾಸಪೂರ್ವ ನಾಗರಿಕತೆಯಲ್ಲಿ ಪರಂಪರೆ ಎನ್ನುವುದು ಬಲು ಶಕ್ತಿಯುತವಾದ ಅಂಶವಾಗಿತ್ತು. ಶೀಘ್ರವಾಗಿ ಬದಲಾವಣೆ ಹೊಂದುತ್ತಿರುವ ಇಂದಿನ ಆಧುನಿಕ ಸಮಾಜದಲ್ಲಿ ಕೂಡ ಮಾನವನ ಧಾರ್ಮಿಕ, ನೈತಿಕ, ಸಾಮಾಜಿಕ ನಡವಳಿಕೆಗಳ ಮೇಲೆ ಪರಂಪರೆ ತನ್ನ ಪ್ರಭಾವವನ್ನು ಇನ್ನೂ ತಕ್ಕಮಟ್ಟಿಗೆ ಉಳಿಸಿಕೊಂಡಿದೆ.

ಸಾಹಿತ್ಯ, ಕಲೆಗಳಲ್ಲಿ ಪರಂಪರೆಯ ಪಾತ್ರ ಅಮೂಲ್ಯವಾದದ್ದು, ಈ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ರಾಷ್ಟ್ರ, ಪ್ರದೇಶಗಳಿಗೆ ತಮ್ಮವೇ ಆದ ಪರಂಪರೆಗಳಿವೆ.

'ರಾಮಾಯಣ' 'ಮಹಾಭಾರತ'ಗಳಲ್ಲಿ ಸೂಚಿತವಾಗಿರುವ ಪರಂಪರೆ— ಸತ್ಯ, ಧರ್ಮ, ವೈರಾಗ್ಯ. ತ್ಯಾಗ, ಶೌರ್ಯ ಮುಂತಾದ ಶ್ರೇಷ್ಠ ಮೌಲ್ಯಗಳು— ಭಾರತೀಯ ಜನಜೀವನದಲ್ಲಿ ಬೇರೂರಿವೆ.

ಪರಂಪರೆಯನ್ನು ಧಾರ್ಮಿಕ, ಸಾಮಾಜಿಕ ಎಂದು ವಿಭಾಗಿಸಬಹುದಾದರೂ ಇವೆರಡೂ ಪರಸ್ಪರ ಪೂರಕ. ಒಂದು ಇನ್ನೊಂದರ ಮೇಲೆ ಪರಿಣಾಮ ಬೀರುತ್ತದೆ. ಉದಾಹರಣೆಗಾಗಿ ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಶರಣ ಪರಂಪರೆ, ದಾಸ ಪರಂಪರೆಗಳನ್ನು ತೆಗೆದುಕೊಳ್ಳಬಹುದು. ಈ ಪರಂಪರೆಗಳಲ್ಲಿ ಧರ್ಮತತ್ತ್ವ ಸಾಮಾಜಿಕ ಜೀವನದ ಮೇಲೆ ಪರಿಣಾಮ ಉಂಟುಮಾಡಿದುದನ್ನು ಕಾಣಬಹುದು.

ಜಾನಪದ ಸಂಸ್ಕೃತಿಯ ಗಮನಾರ್ಹವಾದ ಅಂಶ, ಅದರ ಪರಂಪರೆ. ಜಾನಪದ ಕಥೆ, ಸಂಗೀತಗಳು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಪರಂಪರಾಗತವಾಗಿ ಬಂದುವು. ಕರ್ನಾಟಕದ ಯಕ್ಷಗಾನ ಕಲೆ ಇದಕ್ಕೊಂದು

ಸೊಗಸಾದ ಉದಾಹರಣೆ. ಜಾನಪದ ನೃತ್ಯಗಳು. ಆಟಗಳು. ಗುಡಿ ಕೈಗಾರಿಕೆಗಳು. ಕುಶಲ ಕಲೆಗಳು. ವೃತ್ತಿಗಳು ಇದ್ದ ಪರಂಪರೆಯಾಗಿ ನಡೆದು ಬಂದುವೇ ಆಗಿವೆ. ಭಾರತದಲ್ಲಿ ಮಾತ್ರವಲ್ಲ. ಜಗತ್ತಿನ ಎಲ್ಲ ರಾಷ್ಟ್ರ ಜನಾಂಗಗಳಲ್ಲೂ ಸಂಗೀತ. ಶಿಲ್ಪ. ವಾಸ್ತುಶಿಲ್ಪ ಮುಂತಾದುವು ಪರಂಪರಾಗತವಾಗಿ ನಡೆದುಕೊಂಡು ಬಂದುದನ್ನು ಕಾಣಬಹುದು.

ಯಾವುದೇ ಪರಂಪರೆಗೆ ಧಕ್ಕೆಯುಂಟಾಗುವುದು, ದೀರ್ಘಕಾಲದ ಅನುಸರಣೆಯ ಫಲವಾಗಿ. ತನ್ನ ಸತ್ವವನ್ನು ಕಳೆದುಕೊಂಡು ಅದು ಶುಷ್ಕವಾದಾಗ. ಅರ್ಥಹೀನ ಆಚರಣೆಯಾದಾಗ. ಸಾಮಾಜಿಕ ಕ್ರಾಂತಿ ಮತ್ತಿತರ ಅಲ್ಲೋಲ ಕಲ್ಲೋಲಗಳಾದಾಗ. ಅಂಥ ಸಂದರ್ಭಗಳಲ್ಲಿ ಹೊಸ ವಿಚಾರಸರಣಿ ಹುಟ್ಟಿಕೊಳ್ಳುತ್ತದೆ. ಈ ವಿಚಾರಸರಣಿಗೆ ವೃದ್ಧಿ ಪ್ರಾಬಲ್ಯ ದೊರೆತಾಗ ಹಿಂದಿನ ಸಂಪ್ರದಾಯಗಳು ಬದಲಾಗಿ ಹೊಸ ಪರಂಪರೆ ಆರಂಭವಾಗುತ್ತದೆ. ಹೊಸದಾಗಿ ಆರಂಭವಾದದ್ದು ಪೂರ್ಣವಾಗಿ ಹೊಸದೇ ಆಗಬೇಕಾಗಿಲ್ಲ. ಹಳೆಯ ಪರಂಪರೆಯ ಉತ್ತಮಾಂಶಗಳನ್ನು ಅಳವಡಿಸಿಕೊಂಡು. ಹೊಸ ಅಂಶಗಳನ್ನು ಸೇರಿಸಿಕೊಂಡು ಅದು ಮುಂದುವರಿಯಬಹುದು. ಈ ದೃಷ್ಟಿಯಿಂದ ನೋಡಿದರೆ. ಪರಂಪರೆ ಪೂರ್ಣವಾಗಿ ನಾಶವಾಗುವುದಿಲ್ಲ: ಅದು ಕಾಲಕಾಲಕ್ಕೆ ಹೊಸ ಹೊಸ ರೂಪದಲ್ಲಿ ಬೆಳೆಯುತ್ತ ಹೋಗುತ್ತದೆ ಎನ್ನಬಹುದು.

## ಪರ್ಲ್ ಬಕ್

ಅಮೆರಿಕದ ಖ್ಯಾತ ಕಾದಂಬರಿ ಲೇಖಕಿ ಪರ್ಲ್ ಬಕ್. ಹುಟ್ಟಿದ್ದು ಅಮೆರಿಕದಲ್ಲಾದರೂ ತನ್ನ ಜೀವನದ ನಲವತ್ತೆರಡು ವರ್ಷಗಳನ್ನು ಆಕೆ ಕಳೆದದ್ದು ಚೀನದಲ್ಲಿ. ಮಾತೃಭಾಷೆ ಇಂಗ್ಲಿಷನ್ನು ಕಲಿಯುವುದಕ್ಕೆ ಮೊದಲೇ ಅವಳು ಚೀನೀ ಭಾಷೆಯಲ್ಲಿ ಮಾತನಾಡುತ್ತಿದ್ದಳು. ಇವಳ ಗೆಳೆಯರೆಲ್ಲ ಚೀನೀಯರೇ. ಇವಳ ಅತಿ ಶ್ರೇಷ್ಠ ಕಾದಂಬರಿ 'ದಿ ಗುಡ್ ಅರ್ಥ್'.–ಒಂದು ಚೀನೀ ರೈತ ಕುಟುಂಬದ ಕಥೆ. ತಾನು ಅಮೆರಿಕದಲ್ಲಿ ಜನಿಸಿದ್ದು 'ಕೇವಲ ಆಕಸ್ಮಿಕ' ಎನ್ನುತ್ತಾಳೆ ಪರ್ಲ್ ಬಕ್. ಚೀನದಲ್ಲಿ ಕ್ರೈಸ್ತ ಧರ್ಮಪ್ರಚಾರಕರಾಗಿದ್ದ ಅವಳ ತಂದೆ–ತಾಯಿ ರಜೆಯ ಮೇಲೆ ವರ್ಜೀನಿಯಾದ ಹಿಲ್ ಬರೋಗೆ ಬಂದಿದ್ದಾಗ ಅಲ್ಲಿ, 1892 ಜೂನ್ 26ರಂದು ಪರ್ಲ್ ಬಕ್ ಹುಟ್ಟಿದಳು. ಹುಟ್ಟಿದ ಐದು ತಿಂಗಳಿಗೇ ತಾಯಿ ತಂದೆಯೊಡನೆ ಚೀನಾ ಸೇರಿದಳು. ಇವಳ ಪ್ರಾಥಮಿಕ ವಿದ್ಯಾಭ್ಯಾಸ ನಡೆದದ್ದು ಯಾಂಗ್‌ಟ್ಸಿ ನದಿಯ ದಡದಲ್ಲಿನ ಚಿಂಕಿಯಾಂಗ್ ಹಾಗೂ ಷಾಂಘಾಯ್‌ಗಳಲ್ಲಿ. ಶಾಲೆಯಲ್ಲಿ ಚೀನೀ ಭಾಷೆಯ ಶಿಕ್ಷಣ. ಮನೆಯಲ್ಲಿ ತಾಯಿಯಿಂ ಮನೆ ಪಾಠಶಾಲೆಯಲ್ಲಿ ಇಂಗ್ಲಿಷ್ ಅಭ್ಯಾಸ. ಅನಂತರ ವರ್ಜೀನಿಯ ಕಾಲೇಜಿನಲ್ಲಿ ಧರ್ಮಗಳನ್ನು ಕುರಿತಾಗಿ ಕಲಿತಳು. ಪದವೀಧರೆಯಾಗಿ ಚೀನಕ್ಕೆ ಮರಳಿದ ಮೇಲೆ. 1917ರಲ್ಲಿ ಚೀನಕ್ಕೆ ಬಂದಿದ್ದ ಕೃಷಿ ಅರ್ಥಶಾಸ್ತ್ರಜ್ಞ ಡಾ. ಜಾನ್ ಬಕ್‌ನನ್ನು ಮದುವೆಯಾದಳು. ಉತ್ತರ ಚೀನದ ಸಣ್ಣ ಪಟ್ಟಣವೊಂದರಲ್ಲಿ ಇವರು ಮನೆ ಮಾಡಿದರು. ಈ ಪ್ರದೇಶದ ಜನಜೀವನವೇ ಅವಳ 'ದಿ ಗುಡ್ ಅರ್ಥ್' ಕಾದಂಬರಿಯ ವಸ್ತು.


ಅವಿಶ್ರಾಂತ ಪರ್ಲ್ ಬಕ್

1921ರಿಂದ ಹತ್ತು ವರ್ಷ ಕಾಲ ಈಕೆ ನಾನ್‌ಕಿಂಗ್ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಾಧ್ಯಾಪಕಳಾಗಿದ್ದಳು. 1927ರಲ್ಲಿ ಕಮ್ಯೂನಿಸ್ಟ್ ಕ್ರಾಂತಿಯ ಸೈನಿಕರು ನಾನ್‌ಕಿಂಗ್ ಮೇಲೆ ದಾಳಿಮಾಡಿದಾಗ ಇವರು ತಲೆ ಮರೆಸಿಕೊಂಡು ಜಪಾನಿಗೆ ಹೋಗಬೇಕಾಯಿತು. ಮರುವರ್ಷವೆ ಹಿಂದಿರುಗಿದರೂ 1934ರ ಹೊತ್ತಿಗೆ ಚೀನದಲ್ಲಿ ವಿದೇಶೀಯರು ಇರುವುದು ಅಪಾಯಕಾರಿಯಾಗಿ ಕಂಡುಬಂದದ್ದರಿಂದ ಅಮೆರಿಕದ ಪೆನ್ಸಿಲ್ವೇನಿಯಾಕ್ಕೆ ಬಂದುಬಿಟ್ಟಳು. ತನ್ನ ಮೊದಲನೆಯ ಪತಿಯೊಡನೆ ವಿವಾಹ ವಿಚ್ಛೇದನ ಪಡೆದಳು. ಸುಮಾರು ಎರಡು ವರ್ಷಗಳ ಅನಂತರ. ತನ್ನ ಪುಸ್ತಕಗಳ ಪ್ರಕಾಶಕನಾಗಿದ್ದ ರಿಚರ್ಡ್ ವಾಲ್ಷ್ ಎಂಬುವನನ್ನು ಮದುವೆಯಾದಳು. ಪರ್ಲ್ ಬಕ್ ನಾನ್‌ಕಿಂಗ್‌ನಲ್ಲಿದ್ದಾಗಲೇ ಲೇಖನ. ಕಥೆಗಳನ್ನು ಬರೆದು ಪ್ರಕಟಿಸಿದ್ದಳು. 1930ರಲ್ಲಿ ಅವಳ 'ಈಸ್ಟ್ ವಿಂಡ್, ವೆಸ್ಟ್ ವಿಂಡ್' ಎಂಬ ಕಾದಂಬರಿ ಹೊರಬಂತು. ಆದರೆ ಅವಳಿಗೆ ಅಂತರರಾಷ್ಟ್ರೀಯ ಕೀರ್ತಿ ದೊರಕಿಸಿಕೊಟ್ಟ ಕೃತಿ 'ದಿ ಗುಡ್ ಅರ್ಥ್' (1931). ಮರುವರ್ಷ ಇದಕ್ಕೆ ಪುಲಿಟ್ಜರ್ ಬಹುಮಾನ ಬಂತು. ಚೀನೀ ರೈತ ಜೀವನದ ನೈಜಮನೋಜ್ಞ ಚಿತ್ರಣಕ್ಕಾಗಿ ಹಾಗೂ ಅಮೋಘ ಜೀವನಚಿತ್ರಗಳಿಗಾಗಿ. 1938ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ಆಕೆಗೆ ದೊರೆಯಿತು. ಈ ಗೌರವ ಪಡೆದ ಪ್ರಥಮ ಅಮೆರಿಕನ್ ಮಹಿಳೆ ಪರ್ಲ್ ಬಕ್.

'ಸನ್ಸ್' (1932). 'ಎ ಹೌಸ್ ಡಿವೈಡೆಡ್' (1935). 'ಅದರ್ ಗಾಡ್ಸ್' (1940). 'ಡ್ರ್ಯಾಗನ್ ಸೀಡ್' (1942) ಮುಂತಾದುವು ಇವಳ ಇತರ ಜನಪ್ರಿಯ ಕಾದಂಬರಿಗಳು. ತನ್ನ ತಂದೆಯ ಹಾಗೂ ತಾಯಿಯ ಜೀವನ ಚರಿತ್ರೆಗಳನ್ನೂ ('ಫೈಟಿಂಗ್ ಏಂಜೆಲ್' ಮತ್ತು 'ದಿ ಎಕ್ಸೈಲ್') ಈಕೆ ಬರೆದಿದ್ದಾಳೆ. 'ಮೈ ಸೆವರಲ್ ವರ್ಲ್ಡ್ಸ್' ಈಕೆಯ ಆತ್ಮಕಥೆ.

ಪರ್ಲ್ ಬಕ್‌ದು ದೊಡ್ಡ ಕುಟುಂಬ ; 1949ರಲ್ಲಿ ಈಕೆ ಸ್ಥಾಪಿಸಿದ 'ಸುಸ್ವಾಗತ ಭವನ' ಒಂದು ಅಮೂಲ್ಯ ಸೇವಾ ಸಂಸ್ಥೆ. ಏಷ್ಯದ ಜನರ ವಂಶೀಯರಾಗಿದ್ದು ಇನ್ನೂ ಪೋಷಕರು ದೊರೆಯದೆ ಇರುವ ಹಲವಾರು ಅನಾಥ ಅಮೆರಿಕನ್ ಮಕ್ಕಳಿಗೆ ಈ ಭವನದಲ್ಲಿ ಆಶ್ರಯ ಸಿಕ್ಕಿದೆ. ಪೆನ್ಸಿಲ್ವೇನಿಯಾದ ರಮಣೀಯ ಬಳನಾಡಿನಲ್ಲಿ ಇವಳ ವಿಶಾಲವಾದ ಹೊಲ, ಮನೆ ಇವೆ. ಪರ್ಲ್ ಬಕ್ ಎಂಬತ್ತು ವರ್ಷ ದಾಟಿದ ವೃದ್ಧೆ. ಆದರೂ ತನ್ನ ಲೇಖನವೃತ್ತಿಯಿಂದ ವಿಶ್ರಾಂತಳಾಗಿಲ್ಲ.

## ಪರ್ಷಿಯದ ಕಲೆ, ಸಾಹಿತ್ಯ

ತುಂಬ ಹಿಂದಿನ ಕಾಲದಿಂದಲೂ ಪರ್ಷಿಯದ ಜನ ಕಲೆಯಲ್ಲಿ ಆಸಕ್ತರಾಗಿದ್ದರು. ಅವರ ರಾಷ್ಟ್ರದ ಮೇಲೆ ಹಲವಾರು ವಿದೇಶೀ ದಾಳಿಗಳು ನಡೆದುವಾದರೂ ಅವರು ತಮ್ಮ ಕಲಾತ್ಮಕ ದೃಷ್ಟಿಯನ್ನು ಕಳೆದುಕೊಳ್ಳದೆ ಅದನ್ನು ರೂಢಿಸಿಕೊಂಡು, ಬೆಳೆಸಿಕೊಂಡು ಬಂದರು.

ಪ್ರಾಚೀನ ಕಾಲದಲ್ಲೇ ಸಾಮ್ರಾಜ್ಯವೊಂದರ ಕೇಂದ್ರವಾಗಿ ಪರ್ಷಿಯ ರೂಪುಗೊಂಡಿತು. ಕ್ರಿ. ಪೂ. 550ರ ಸುಮಾರಿನಲ್ಲಿ ಅಧಿಕಾರಕ್ಕೆ ಬಂದ

[illegible] ಗೊಂಡಿತು. ಭಾರತದ ವಾಯುವ್ಯ ಭಾಗದ ಕೆಲವು ಪ್ರದೇಶಗಳು ಕೂಡ [illegible] ಕಾಲದಲ್ಲಿ [illegible] ಅರಮನೆಗಳು [illegible] ಪರ್ಷಿಯದ [illegible] ಪರ್ಷಿಯದ ಕಲೆಗೆ ಮೂಲಾಧಾರ [illegible] ಕಲೆ. ಮಾನವನ ತಲೆಯುಳ್ಳ ವೃಷಭಗಳು. ರೆಕ್ಕೆಗಳುಳ್ಳ ಸಿಂಹಗಳು ಇವು ಅಸ್ಸೀರಿಯದ ಕಲೆಯಿಂದ ಪರ್ಷಿಯನ್ ಕಲೆಗೆ ದೊರೆತ ಕೊಡುಗೆಗಳು.

ಪರ್ಷಿಯದ ಸಾಮ್ರಾಜ್ಯ ಸ್ಥಾಪಿತವಾದ ಎರಡು ಶತಮಾನಗಳ ಅನಂತರ ಗ್ರೀಕ್ ವೀರ ಅಲೆಗ್ಸಾಂಡರ್ ಪರ್ಷಿಯದ ಮೇಲೆ ದಾಳಿಮಾಡಿ ಅದನ್ನು ಆಕ್ರಮಿಸಿಕೊಂಡ. ಈ ಘಟನೆಯಿಂದಾಗಿ ಪರ್ಷಿಯದ ಕಲೆ ಗ್ರೀಕರ ಪ್ರಭಾವಕ್ಕೆ ಒಳಗಾಯಿತು.

ಸೆರೆಹಿಡಿದ ಸಿಂಹ : ಬೆಹ್‌ಜಾದ್ ರಚನೆ

ಕ್ರಿ. ಶ. 7ನೆಯ ಶತಮಾನದಲ್ಲಿ ಅರಬರು ಪರ್ಷಿಯವನ್ನು ವಶಪಡಿಸಿಕೊಂಡರು. 9ನೆಯ ಶತಮಾನದಲ್ಲಿ ಪರ್ಷಿಯದ ಮೇಲೆ ತುರ್ಕಿಯವರ ದಾಳಿ ನಡೆಯಿತು. 14ನೆಯ ಶತಮಾನದವರೆಗೆ ಇಂಥದೇ ಹಲವಾರು ಆಕ್ರಮಣಗಳು ನಡೆದುವು. ಇವು ಕೂಡ ಪರ್ಷಿಯದ ಕಲೆಯ ಮೇಲೆ ಪರಿಣಾಮ ಬೀರಿದುವು. ಪರ್ಷಿಯ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಸುಂದರ ಮಸೀದಿಗಳು ನಿರ್ಮಾಣವಾದದ್ದು ಈ ಪ್ರಭಾವದ ಪರಿಣಾಮವಾಗಿಯೇ. ಹೀಗೆ ಹಲವಾರು ಪ್ರಭಾವಗಳಿಂದಾಗಿ, ಬಣ್ಣಬಣ್ಣದ ಕಲ್ಲು ಹೊದಿಕೆಯ ಚಿತ್ತಾರ, ಅಮೃತಶಿಲೆಯ ಕೆತ್ತನೆ, ಗೋಡೆಗಳ ವರ್ಣಾಲಂಕಾರ ಮುಂತಾದ ಅಂಶಗಳು ಪರ್ಷಿಯದ ಕಲೆಯಲ್ಲಿ ಸೇರಿಕೊಂಡುವು. ಉದ್ಯಾನ ರಚನೆಯಲ್ಲೂ ಪರ್ಷಿಯದವರು ಆಸಕ್ತರಾದರು.

ಲೋಹದ ಮತ್ತು ಗಾಜಿನ ಪಾತ್ರೆಗಳು ಮತ್ತು ಮಡಿಕೆ ಕುಡಿಕೆಗಳ ನಿರ್ಮಾಣ ಮುಂತಾದ ಉಪಕಲೆಗಳಲ್ಲೂ ಪರ್ಷಿಯದವರು ನಿಪುಣರು. [illegible] ಸೂಕ್ಷ್ಮ ಚಿತ್ರಗಳಿಂದ ಅಲಂಕರಿಸುವುದನ್ನು ಕಾಣಬಹುದು.

ಪರ್ಷಿಯದ ಶಿಲ್ಪ ಮತ್ತು ವಾಸ್ತುಶಿಲ್ಪ ಭಾರತದ ಮೊಗಲ್ ಶೈಲಿಯ ಮೇಲೆ ಅಪಾರ ಪ್ರಭಾವ ಬೀರಿದೆ. ಮೊಗಲ್ ಸಮ್ರಾಟರು ಪರ್ಷಿಯದ ಕುಶಲ ಕಲೆಗಾರರನ್ನೂ ಶಿಲ್ಪಿಗಳನ್ನೂ ತಮ್ಮ ದೇಶಕ್ಕೆ ಬರಮಾಡಿಕೊಂಡು ಅವರಿಂದ ಅರಮನೆ, ಮಸೀದಿ, ಗುಂಬಜ್‌ಗಳನ್ನು ಕಟ್ಟಿಸಿದರು. ತಾಜ್ ಮಹಲ್ ನಿರ್ಮಾಣದಲ್ಲಿ ಪರ್ಷಿಯನ್ ಶಿಲ್ಪಿಗಳು ಭಾಗವಹಿಸಿದ್ದರೆಂಬ ಹೇಳಿಕೆಯಿದೆ.

ಬುರುಡೆಯಾಕಾರದ ಗುಮ್ಮಟ, ಕಮಾನು ಗೋಪುರ, ಲಿಪಿ ರೇಖಾಚಿತ್ರ ಇವೇ ಮೊದಲಾದುವು ಪರ್ಷಿಯದ ವಾಸ್ತುಶಿಲ್ಪ ಭಾರತೀಯ ವಾಸ್ತುಶಿಲ್ಪಕ್ಕೆ ನೀಡಿದ ಕಾಣಿಕೆಗಳಾಗಿವೆ.

ಪರ್ಷಿಯದ ಕಲೆ ಜಗತ್ತಿಗೆ ನೀಡಿದ ಸರ್ವಶ್ರೇಷ್ಠ ಕಾಣಿಕೆ ಎರಡು : ರೇಷ್ಮೆಬಟ್ಟೆ ಮತ್ತು ರತ್ನಗಂಬಳಿ. 16, 17ನೆಯ ಶತಮಾನದಲ್ಲಿ ಅತ್ಯಂತ ಸೊಬಗಿನ ರತ್ನಗಂಬಳಿಗಳು ನೇಯಲ್ಪಟ್ಟುವು. ಇವುಗಳ ಅಲಂಕಾರಾಂಶಗಳಾಗಿ ರೇಖಾಚಿತ್ರಗಳು, ಬೇಟೆಯ ಚಿತ್ರಗಳು, ಹೂವು, ಪ್ರಾಣಿ, ಪಕ್ಷಿಗಳ ಚಿತ್ರಗಳು, ನೀರಿನ ಕಾರಂಜಿಗಳು, ಪೌರಾಣಿಕ ವೀರರು ಮತ್ತು ದೊರೆಗಳ ಚಿತ್ರಗಳನ್ನು ನೇಯುತ್ತಿದ್ದರು. 1540ರಲ್ಲಿ ತಯಾರಾದ ಒಂದು ರತ್ನಗಂಬಳಿಯನ್ನು ಭವ್ಯತೆ ಸೌಂದರ್ಯಗಳಲ್ಲಿ ಮೀರಿಸುವ ರತ್ನಗಂಬಳಿ ಈ ಜಗತ್ತಿನಲ್ಲಿಯೇ ಇಲ್ಲ ಎನ್ನುತ್ತಾರೆ. ಇದು ಪರ್ಷಿಯದಲ್ಲಿ ಸಿದ್ಧವಾದದ್ದು. ಇದು 34 ಅಡಿ 4 ಅಂಗುಲ ಉದ್ದವಾಗಿಯೂ 17 ಅಡಿ 6 ಅಂಗುಲ ಅಗಲವಾಗಿಯೂ ಇದೆ. ಪರ್ಷಿಯನರ ರೇಷ್ಮೆಬಟ್ಟೆಗಳು ಕೂಡ ಅಂದವಾದ ಚಿತ್ರಗಳಿಂದ ಕೂಡಿರುತ್ತಿದ್ದುವು. ಅವುಗಳ ಹಲವು ಮಾದರಿಗಳನ್ನು ಯೂರೋಪಿನ ವಸ್ತು ಸಂಗ್ರಹಾಲಯಗಳಲ್ಲಿ ಈಗಲೂ ಕಾಣಬಹುದು.

ಪರ್ಷಿಯದ ಚಿತ್ರಕಲೆಯೂ ಪ್ರಸಿದ್ಧವಾದದ್ದು. ತೈಮೂರನ ಸಂತತಿಯ ಕೊನೆಯ ಷಾಹನ ಆಸ್ಥಾನದಲ್ಲಿ ಬಹ್‌ಜಾ಼ದ್ ಎಂಬ ಪ್ರಸಿದ್ಧ ಚಿತ್ರಕಾರನಿದ್ದ. ಅವನು ಚಿತ್ರಗಳಿಗೆ ವಸ್ತುವನ್ನು ಆಯ್ದುಕೊಳ್ಳುತ್ತಿದ್ದ. ಪ್ರಸಿದ್ಧ ಕಾವ್ಯಗಳಿಂದ ಮನುಷ್ಯನ ಮನಸ್ಸಿನ ರಾಗಭಾವಗಳ ನಿರೂಪಣೆಯನ್ನೂ ಬೇಟೆಯ ದೃಶ್ಯ, ಪ್ರಕೃತಿ ಸೌಂದರ್ಯದ ದೃಶ್ಯಗಳನ್ನೂ ಅವನ ಚಿತ್ರಗಳಲ್ಲಿ ಕಾಣುತ್ತೇವೆ. ಜುಳು ಜುಳು ಹರಿಯುವ ಹೊನಲುಗಳು, ನೀರು ಚಿಮ್ಮುವ ಕಾರಂಜಿಗಳು, ಹಣ್ಣು ತುಂಬಿದ ಮರಗಳ ನೆರಳಿನಲ್ಲಿ ನೆರೆದ ಸುಂದರ ಯುವಕ ಯುವತಿಯರ ಚಿತ್ರಗಳನ್ನು ರಚಿಸುವುದರಲ್ಲಿ ಆತ ನಿಪುಣನಾಗಿದ್ದ.

ಪರ್ಷಿಯದ ಸಂಗೀತದ ಪ್ರಾಚೀನ ಉಲ್ಲೇಖಗಳು ಅವರ ಧರ್ಮಗ್ರಂಥ ಅವೆಸ್ತಾದಲ್ಲಿವೆ. ಡೇರಿಯಸ್ಸನ ಆಸ್ಥಾನದಲ್ಲಿ 329 ಗಾಯಕಿಯರಿದ್ದರಂತೆ. ಸಸಾನಿಯನ್ ದೊರೆಗಳು ಸಂಗೀತ ಕಲೆಗೆ ಪ್ರೋತ್ಸಾಹ ನೀಡಿದರು. ಸಸಾನಿಯನ್ ಶಿಲ್ಪದಲ್ಲಿ ವೀಣೆ ವಾದ್ಯವನ್ನು ನುಡಿಸುವ ಹಲವು ಗಾಯಕಿಯರ ಚಿತ್ರಣವಿದೆ. ರಾಜರಲ್ಲದೆ ಶ್ರೀಮಂತರೂ ಸ್ವಂತ ಸಂಗೀತಗಾರರನ್ನು ಇಟ್ಟುಕೊಂಡಿದ್ದರು. ಕೊಳಲು, ತಂಬೂರಿ ಅವರ ಪ್ರಿಯವಾದ ಸಂಗೀತ ವಾದ್ಯಗಳು. ಬಾಗ್‌ದಾದ್, ಕೈರೋ, ಡಮಾಸ್ಕಸ್ ಮುಂತಾದೆಡೆಗಳಲ್ಲಿ ಸಂಗೀತಶಾಲೆಗಳಿದ್ದುವು. ಕೃತಿರಚನೆ, ರಾಗಲಕ್ಷಣಗಳು, ವಾದ್ಯಗಳು, ಸಂಗೀತದ ಮೂಲತತ್ತ್ವಗಳು, ಇವೇ ಮೊದಲಾದ ವಿಷಯಗಳ ಮೇಲೆ ಗ್ರಂಥಗಳು ರಚಿತವಾಗಿವೆ.

ಪರ್ಷಿಯದ ಸಾಹಿತ್ಯವನ್ನು ಇಸ್ಲಾಂ ಪೂರ್ವದ್ದು, ಇಸ್ಲಾಂನ ಅನಂತರದ್ದು ಎಂದು ಎರಡು ವಿಭಾಗ ಮಾಡಬಹುದು.

ಇಸ್ಲಾಂ ಪೂರ್ವದ್ದಾದ ಅವೆಸ್ತಾ ಪ್ರಾಚೀನ ಪರ್ಷಿಯದ ಭಾಷೆಯ ಪ್ರಮುಖ ಗ್ರಂಥ. ಅವೆಸ್ತಾದ ಭಾಷೆ ಬಹುಮಟ್ಟಿಗೆ ವೇದದ ಭಾಷೆಯನ್ನು ಹೋಲುತ್ತದೆ. ಪರ್ಷಿಯನರು ಅಲುಗಿನ ರೂಪದ ಮತ್ತು ಆಯತಾಕಾರದ ಲಿಪಿಯನ್ನು ಬ್ಯಾಬಿಲೋನಿಯರಿಂದ ಕಲಿತರು. ಪ್ರಾಚೀನ ಪಾರಸೀ ಭಾಷೆಗೂ ಸಂಸ್ಕೃತ, ಗ್ರೀಕ್, ಲ್ಯಾಟಿನ್, ಜರ್ಮನ್ ಭಾಷೆಗಳಿಗೂ ಹೋಲಿಕೆ ಇದೆ. ಪಹ್ಲವಿ ಪುರಾತನ ಪಾರಸೀ ಭಾಷೆಯ ಒಂದು ರೂಪಾಂತರ.

7ನೆಯ ಶತಮಾನದ ವೇಳೆಗೆ ಪಾರಸೀ ಭಾಷೆಯ ಮೇಲೆ ಇಸ್ಲಾಮಿನ ಪ್ರಭಾವ ಉಂಟಾಯಿತು. ಬಹಳ ಮಂದಿ ಪರ್ಷಿಯ ದೇಶೀಯರು ಇಸ್ಲಾಂ ಧರ್ಮ ಸ್ವೀಕರಿಸಿದರು. ಅರಬೀ ಭಾಷೆಯನ್ನು ಕಲಿತರು. ದೇಶೀಯ ಅರಸುಮನೆತನಗಳವರು ಪಾರಸೀ ಭಾಷೆಗೆ ಉತ್ತೇಜನ ಕೊಟ್ಟರು; ಪುರಾತನ ಪಾರಸೀ ಭಾಷೆಯನ್ನು ಪುನರುಜ್ಜೀವನಗೊಳಿಸಿದರು.

ರೂದಕೀ ಎಂಬವನು ಪುರಾತನ ಪರ್ಷಿಯನ್ ಭಾಷೆಯ ಪ್ರಸಿದ್ಧ ಕವಿ. ಘಜನಿ ಮಹಮ್ಮದನ ಆಸ್ಥಾನದಲ್ಲಿದ್ದ ಕವಿ ಫಿರ್ದೂಸಿಯ 'ಶಾಹನಾಮ' ಒಂದು ಮಹಾಕಾವ್ಯ. ಪರ್ಷಿಯದ ಇತಿಹಾಸ, ಧರ್ಮ, ನೀತಿ, ಸಮಾಜ ಜೀವನ, ನಿರೂಪಣೆ ಅದರಲ್ಲಿದೆ. ಜಗತ್ಪ್ರಸಿದ್ಧವಾದ ಸೊಹ್ರಾಬ್–ರುಸ್ತುಂ ಕತೆ ಆ ಕಾವ್ಯದಲ್ಲಿ ಬರುತ್ತದೆ. ಸಾದಿ ಪರ್ಷಿಯದ ಇನ್ನೊಬ್ಬ ಶ್ರೇಷ್ಠ ಕವಿ. ಅವನ 'ಗುಲಿಸ್ತಾನ್' (ಹೂಗಳ ತೋಟ) 'ಬೊಸ್ತಾನ್' (ಹಣ್ಣಿನ ತೋಟ) ಎರಡು ಪ್ರಮುಖ ಕೃತಿಗಳು. ಗುಲಿಸ್ತಾನ್ ಎಂಬುದು ನೀತಿಕಥೆಗಳ ಸಂಕಲನ. ಪರ್ಷಿಯದ ಕವಿಗಳಲ್ಲೆಲ್ಲ ಹೆಸರುವಾಸಿಯಾದ ನೀತಿಕವಿ ಹಾಫೀಜ್ ಯಥೇಚ್ಛವಾಗಿ ಘಜಲ್‌ಗಳನ್ನೂ ಇತರ ಪದ್ಯಗಳನ್ನೂ ಬರೆದ. ಪರ್ಷಿಯದ ಕವಿಶ್ರೇಣಿಯಲ್ಲಿ ಇವನಿಗೆ ಗಣ್ಯಸ್ಥಾನವಿದೆ.

ಉಮರ್ ಖಯಾಮ್ ಪಾರಸೀ ಸಾಹಿತ್ಯದ ಇನ್ನೊಬ್ಬ ಖ್ಯಾತ ಕವಿ. ಇವನು ಬರೆದ ರುಬಯ್ಯಗಳೆಂಬ ನಾಲ್ಕು ಸಾಲಿನ ಪದ್ಯಗಳು ಜಗತ್ಪ್ರಸಿದ್ಧವಾಗಿವೆ.

ಪಾರಸೀ ಭಾಷೆಯ ಸಾಹಿತ್ಯ ಇತರ ದೇಶಗಳಲ್ಲೂ ಬೆಳೆಯಿತು. ಮೊಗಲ ಸಮ್ರಾಟರು ಕೆಲವರು ಸ್ವತಃ ಪಾರಸೀ ಭಾಷೆಯಲ್ಲಿ ವಿದ್ವಾಂಸರಾಗಿದ್ದು ಕೃತಿರಚನೆ ಮಾಡಿದರು; ಇವರು ಕವಿಗಳಿಗೆ ಆಶ್ರಯವಿತ್ತರು. ಅಕ್ಬರನ ಮಂತ್ರಿಯಾದ ಅಬುಲ್ ಫಜಲನ 'ಅಕ್ಬರ್ ನಾಮಾ' ಮತ್ತು 'ಆಯಿನ್–ಎ–ಅಕ್ಬರಿ' ಎರಡು ಶ್ರೇಷ್ಠ ಗ್ರಂಥಗಳು. ಇವು ಪಾರಸೀ ಭಾಷೆಯಲ್ಲಿವೆ. ಪಾರಸೀ ಸಾಹಿತಿಗಳಲ್ಲಿ ಹೆಚ್ಚಿನವರು ಗದ್ಯಕ್ಕಿಂತ ಪದ್ಯವನ್ನೇ ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಬಳಸಿಕೊಂಡಿದ್ದಾರೆ. ಕಾಲಕಾಲಕ್ಕೆ ಅನೇಕ ಪ್ರಸಿದ್ಧ ಸಂಸ್ಕೃತ ಗ್ರಂಥಗಳು ಕೂಡ ಪಾರಸೀ ಭಾಷೆಗೆ ಪರಿವರ್ತಿತವಾದುವು ಎಂಬುದೂ ಗಣನೀಯ ಅಂಶ.

## ಪ್ರಗತಿಶೀಲ ಸಾಹಿತ್ಯ

"ಸಾಹಿತ್ಯ ಮತ್ತು ಕಲಾರಂಗ ನಿತ್ಯಜೀವನದ ಅಂಗವಾಗಬೇಕು; ಕಲೆಗಾಗಿ ಕಲೆ, ಕಲೆ ದೈವಿಕವಾದದ್ದು, ಅದು ಮನಸ್ಸಿಗೆ ನೆಮ್ಮದಿ ತರುವ ಸಾಧನ –ಎಂಬ ಕಲ್ಪನೆಗಳನ್ನು ನಾವು ಒಪ್ಪುವುದಿಲ್ಲ; ಕೃತಿಯಲ್ಲಿ ವ್ಯಕ್ತವಾಗುವ ಅಭಿಮತಕ್ಕೆ ಅಧಿಕ ಪ್ರಾಧಾನ್ಯ; ಮಹಾರಾಜರ ಮೇಲಿನ ಮಹಾಕಾವ್ಯಕ್ಕಿಂತ [illegible] ಕೃತಿಯಲ್ಲಿ ಶ್ರೇಷ್ಠವಾದದ್ದು."

–ಇದು ಪ್ರಗತಿಶೀಲ ಸಾಹಿತ್ಯ ಸಿದ್ಧಾಂತದಲ್ಲಿ ನಂಬಿಕೆಯಿಟ್ಟವರು ವ್ಯಕ್ತಪಡಿಸಿದ ಅಭಿಪ್ರಾಯ. ಈ ಶತಮಾನದ ಮೂರು ನಾಲ್ಕನೆಯ ದಶಕಗಳಲ್ಲಿ ಪ್ರಗತಿಶೀಲ ಸಾಹಿತ್ಯ ನಿರ್ಮಾಣದ ಪ್ರಯತ್ನ ಭಾರತದಲ್ಲಿ ಭರದಿಂದ ನಡೆಯಿತು.

ಪ್ರಗತಿಶೀಲ ಎಂದರೆ ಪ್ರಗತಿಯ ಲಕ್ಷಣವಾಗಿ ಉಳ್ಳದ್ದು. ಎಂದರೆ ಹಿಂದಿನ ಸಂಪ್ರದಾಯಗಳು ಸಾಹಿತ್ಯದ ಸುಳಿಯಲ್ಲೇ ಸುತ್ತುತ್ತ ಇವೆ. ಆ ವಿಷವೃತ್ತವನ್ನೊಡೆದು ಹೊರಬಂದು ಹೊಸ ಹಾದಿಯನ್ನು ತುಳಿಯಲು ಯತ್ನಿಸಿದ ಸಾಹಿತ್ಯವೇ ಪ್ರಗತಿಶೀಲ ಸಾಹಿತ್ಯ. ವಸ್ತು, ನಿರೂಪಣೆ, ಶೈಲಿ ಎಲ್ಲದರಲ್ಲೂ ಹೊಸ ಜಾಡನ್ನು ಹಿಡಿಯಲು ಪ್ರಗತಿಶೀಲರು ಪ್ರಯತ್ನಿಸಿದರು. ಬಡವರ, ಶ್ರಮಜೀವಿಗಳ ಬಗೆಗೆ ಸಹಾನುಭೂತಿ, ಶೋಷಣೆಗೆ ವಿರೋಧ, ಸಾಮಾಜಿಕ ವೈಷಮ್ಯಗಳ ಬಗೆಗೆ ಅಸಮಾಧಾನ– ಇವು ಪ್ರಗತಿಶೀಲ ಸಾಹಿತ್ಯದ ಮೂಲ ನಿಲುವುಗಳು. ವಾಸ್ತವಿಕ ಜೀವನವನ್ನು ಚಿತ್ರಿಸುವುದರಲ್ಲಿ ಪ್ರಗತಿಶೀಲರಿಗೆ ಹೆಚ್ಚು ಆಸಕ್ತಿ.

1936ರಿಂದ 1942ರ ಅವಧಿಯಲ್ಲಿ ಭಾರತದಲ್ಲಿ ನಡೆದ ರಾಜಕೀಯ ಆಂದೋಲನ, ಮಾರ್ಕ್ಸ್ ಮತ್ತು ಲೆನಿನರ ತತ್ತ್ವಜ್ಞಾನಗಳು ಇವೆಲ್ಲ ಪ್ರಗತಿಶೀಲ ಸಾಹಿತ್ಯ ರಚನೆಗೆ ಪ್ರೇರಕವಾದುವು. ನಮ್ಮ ರಾಷ್ಟ್ರದ ಸಾಹಿತ್ಯರಂಗದಲ್ಲಿ ಪ್ರಗತಿಶೀಲತೆ ಮೊದಲು ತಲೆದೋರಿದ್ದು ಹಿಂದಿ-ಬಂಗಾಳಿಗಳಲ್ಲಿ. ಅನಂತರ ಇದು ಇತರ ಭಾರತೀಯ ಭಾಷೆಗಳಲ್ಲಿಯೂ ಕಾಣಿಸಿಕೊಂಡಿತು. ಅಖಿಲ ಭಾರತ ಮಟ್ಟ ಮತ್ತು ಪ್ರಾದೇಶಿಕ ಮಟ್ಟಗಳಲ್ಲಿ ಪ್ರಗತಿಶೀಲ ಲೇಖಕರ ಸಂಘಗಳು ಸ್ಥಾಪಿತವಾದುವು. ಫ್ಯಾಸಿಸ್ಟ್ ವಿರೋಧಿ ಭಾವನೆಯನ್ನು ಬೆಳೆಸುವಂಥ ಸಾಹಿತ್ಯದ ರಚನೆ, ಪ್ರಸಾರ; ರಷ್ಯನ್ ಮತ್ತಿತರ ಭಾಷೆಗಳ ಪ್ರಗತಿಶೀಲ ಸಾಹಿತ್ಯದ ಅನುವಾದ ಮತ್ತು ಪ್ರಕಟಣೆ; ಶ್ರಮಜೀವಿಗಳು ಮತ್ತು ರೈತರಲ್ಲಿ ಸಾಹಿತ್ಯಾಭಿರುಚಿ ಮೂಡಿಸುವುದು; ಪ್ರಗತಿಶೀಲ ಭಾವನೆಗಳನ್ನು ಹರಡಲು ರಂಗಭೂಮಿಯ ಉಪಯೋಗ –ಇವು ಪ್ರಗತಿಶೀಲರ ಕಾರ್ಯಚಟುವಟಿಕೆಗಳಲ್ಲಿ ಮುಖ್ಯವಾದುವು.

ಈ ಚಳುವಳಿ ಕನ್ನಡನಾಡಿನಲ್ಲಿ ವ್ಯವಸ್ಥಿತ ರೀತಿಯಲ್ಲಿ ಆರಂಭವಾದದ್ದು 1943ರಲ್ಲಿ, ಅ. ನ. ಕೃಷ್ಣರಾಯರ ನಾಯಕತ್ವದಲ್ಲಿ. ವೀರಕೇಸರಿ ಸೀತಾರಾಮಶಾಸ್ತ್ರೀ, ದ. ಕೃ. ಭಾರದ್ವಾಜ ಮುಂತಾದ ಹಿರಿಯ ಸಾಹಿತಿಗಳು ಈ ಚಳುವಳಿಗೆ ಬೆಂಬಲ ಕೊಟ್ಟರು. ಆದ್ಯ ರಂಗಾಚಾರ್ಯ, ವಿ. ಕೃ. ಗೋಕಾಕ ಮತ್ತಿತರರೂ ಈ ಚಳುವಳಿಯಲ್ಲಿ ಆಸ್ಥೆ ವಹಿಸಿದರು. ಬೆಂಗಳೂರು, ಮಂಗಳೂರು, ಧಾರವಾಡಗಳಲ್ಲಿ ಪ್ರಗತಿಶೀಲ ಲೇಖಕರ ಸಂಘಗಳು ಸ್ಥಾಪಿತವಾದುವು.

ಪ್ರಗತಿಶೀಲ ದೃಷ್ಟಿಕೋನ ಪ್ರಧಾನವಾಗಿ ಕಾಣಿಸಿಕೊಂಡದ್ದು ಸಣ್ಣ ಕಥೆಗಳ ರಂಗದಲ್ಲಿ. ಅ. ನ.



ಕೃಷನ್ ಚಂದರ್ : ಪ್ರಗತಿಶೀಲತೆ

ಕೃಷ್ಣರಾಯ, ತ ರಾ ಸು, ಬಸವರಾಜ ಕಟ್ಟೀಮನಿ, ಚದುರಂಗ ಮತ್ತಿತರರು ಪ್ರಗತಿಶೀಲ ಕಥೆಗಳನ್ನು ಬರೆದರು. ಇತರ ಸಾಹಿತ್ಯ ಪ್ರಕಾರಗಳಲ್ಲೂ ಪ್ರಗತಿಶೀಲತೆಯನ್ನು ಸಾಧಿಸುವ ಪ್ರಯತ್ನಗಳು ನಡೆದುವು.

ಕೇವಲ ಭಾವನಾ ಪ್ರಪಂಚದಲ್ಲೇ ವಿಹರಿಸುತ್ತ ಇರದೆ, ನಿಜಜೀವನವನ್ನು ತೆರೆದ ಕಣ್ಣಿನಿಂದ ನೋಡಿ, ಅದನ್ನು ವಾಸ್ತವಿಕ ರೀತಿಯಲ್ಲಿ ಚಿತ್ರಿಸಲು ಪ್ರಬಲ ಪ್ರಯತ್ನಗಳನ್ನು ನಡೆಸಿದ ಪ್ರಗತಿಶೀಲರ ಚಳುವಳಿ, ಅವರ ಧೋರಣೆಯನ್ನು ಒಪ್ಪದವರಿಂದ ಖಂಡನೆಗೆ ಗುರಿಯಾಯಿತು.

ಪ್ರಗತಿಶೀಲ ಚಳುವಳಿಯಿಂದ ನಮ್ಮ ಸಾಹಿತ್ಯದ ಮೇಲೆ ಆದ ಪರಿಣಾಮ ಗಣನೀಯವಾದದ್ದು. ಸಾಹಿತ್ಯರಚನೆಯ ದೃಷ್ಟಿ ಸ್ವರೂಪಗಳಲ್ಲಿ ಬದಲಾವಣೆಯನ್ನು ಅದು ಪ್ರಚೋದಿಸಿತು. ಸಾಹಿತ್ಯದ ವಸ್ತು ನಿಜಜೀವನಕ್ಕೆ ಸಮೀಪವಾಯಿತು. ಸಂಭಾಷಣೆಗಳಲ್ಲಿ ಆಡುಮಾತಿನ ಬಳಕೆ ಹೆಚ್ಚಿತು. ಬರೆವಣಿಗೆ ಚುರುಕಾಯಿತು. ನಿರೂಪಣೆಯಲ್ಲಿ ವಾಸ್ತವಿಕತೆಗೆ ಮಾನ್ಯತೆ ದೊರೆಯಿತು. ದೇಶದಲ್ಲಿದ್ದ ಅತೃಪ್ತ ವಾತಾವರಣ ಸಾಹಿತ್ಯದಲ್ಲಿ ಮೂಡಿಬಂತು. ಆವರೆಗೆ ಸ್ಥಳ ಕಾಣದಿದ್ದ ಹೊಸ ಹೊಸ ಸಮಸ್ಯೆಗಳ ವಿವೇಚನೆಗೆ ಪ್ರಾಧಾನ್ಯ ದೊರೆಯಿತು.

ಪ್ರಗತಿಶೀಲ ಸಾಹಿತ್ಯ ಎಂಬ ಮಾತಿನ ಬಳಕೆ ಕ್ರಮೇಣ ಕಡಮೆಯಾಯಿತಾದರೂ ಅದು ಪ್ರಚೋದಿಸಿದ ದೃಷ್ಟಿ, ನಿಲುವು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಇಂದಿಗೂ ಉಳಿದಿವೆ.

ನೋಡಿ : ಅ ನ ಕೃ

## ಪ್ರತಿಕೃತಿ

ಪ್ರತಿಕೃತಿ ಎಂದರೆ, ಒಂದರಂತೆಯೇ ಇರುವ ಇನ್ನೊಂದು ಕೃತಿ, ಒಬ್ಬ ಚಿತ್ರಕಾರ ಒಂದು ಚಿತ್ರವನ್ನು ರಚಿಸುತ್ತಾನೆ. ಇನ್ನೊಬ್ಬ ಚಿತ್ರಕಾರ ಆ ಚಿತ್ರವನ್ನು ತನ್ನ ಮುಂದಿಟ್ಟುಕೊಂಡು, ಎಲ್ಲ ವಿವರಗಳಲ್ಲೂ ಅದರಂತೆಯೇ ಇರುವ ಇನ್ನೊಂದು ಚಿತ್ರವನ್ನು ಬರೆಯುತ್ತಾನೆ. ಮೊದಲನೆಯ ಚಿತ್ರ ಮೂಲ ಕೃತಿ; ಅದನ್ನು ಅನುಸರಿಸಿ ಬರೆದ ಎರಡನೆಯ ಚಿತ್ರ, ಪ್ರತಿಕೃತಿ.

ಪ್ರತಿಕೃತಿ, ಕಲಾಪ್ರಪಂಚಕ್ಕೆ ಒಂದು ವರ; ಹಾಗೆಯೇ ಅದು ಒಂದು ಶಾಪ ಕೂಡ. ತುಂಬ ಹಿಂದಿನ ಕಾಲದಲ್ಲಿ ರಚಿತವಾದ ಚಿತ್ರಗಳು ಎಲ್ಲ ದೇಶಗಳಲ್ಲೂ ಇವೆ. ನಮ್ಮ ರಾಷ್ಟ್ರದ ಅಜಂತ ಗುಹೆಗಳಲ್ಲಿರುವ ಭಿತ್ತಿಚಿತ್ರಗಳು ಅತ್ಯಂತ ಸುಂದರವಾದುವು. ಇವುಗಳಲ್ಲಿ ಕೆಲವು ಇಪ್ಪತ್ತು ಇಪ್ಪತ್ತೆರಡು ಶತಮಾನಗಳ ಹಿಂದೆ ರಚಿತವಾದುವು. ಆ ಗುಹೆಗಳಲ್ಲಿ ಈ ಚಿತ್ರಗಳನ್ನು ರಚಿಸಿದಾಗ ಅಲ್ಲಿ ಬೌದ್ಧಭಿಕ್ಷುಗಳು ವಾಸಿಸುತ್ತಿದ್ದರು; ಅವರು ಈ ಚಿತ್ರಗಳು ಕೆಡದಂತೆ, ಅವಕ್ಕೆ ಅಪಾಯವಾಗದಂತೆ ನೋಡಿಕೊಳ್ಳುತ್ತಿದ್ದರು. ಕಾರಣಾಂತರಗಳಿಂದ, ಭಿಕ್ಷುಗಳು ಅಲ್ಲಿ ವಾಸಿಸುವುದು ನಿಂತು ಹೋಯಿತು. ಚಿತ್ರಮಯವಾದ ಈ ಗುಹೆಗಳು ನೋಡಿಕೊಳ್ಳುವವರಿಲ್ಲದೆ ಹಾಳುಬಿದ್ದುವು.

ಈ ಗುಹೆಗಳಿವೆ, ಅವುಗಳಲ್ಲಿ ಸುಂದರ ಚಿತ್ರಗಳಿವೆ ಎಂಬುದು ನಮಗೆ ತಿಳಿದದ್ದು ಇತ್ತೀಚೆಗೆ. ಆ ಹೊತ್ತಿಗಾಗಲೇ ಅಜಂತದ ಈ ಭಿತ್ತಿಚಿತ್ರಗಳು ನಾನಾ ಕಾರಣಗಳಿಂದಾಗಿ ಶಿಥಿಲವಾಗಿದ್ದುವು. ಅವನ್ನು ಉಳಿಸಲು ಪ್ರಯತ್ನ ಎಷ್ಟರಮಟ್ಟಿಗೆ ಫಲಕಾರಿಯಾಗಬಹುದು ಎಂದು ಹೇಳುವಂತಿರಲಿಲ್ಲ.

ಇನ್ನೊಂದು ಮಾತು. ಈ ಗುಹೆಗಳನ್ನೂ ಅವುಗಳಲ್ಲಿದ್ದ ಚಿತ್ರಗಳನ್ನೂ ಪತ್ತೆಹಚ್ಚಿದ ಮೇಲೆ ಅನೇಕ ಮಂದಿ ಕಲಾವಿಮರ್ಶಕರು ಅವುಗಳ ಸೌಂದರ್ಯವನ್ನು ಕುರಿತು ದೇಶ ವಿದೇಶಗಳಲ್ಲಿ ಭಾಷಣ ಮಾಡಿದರು, ಲೇಖನಗಳನ್ನು ಬರೆದರು. ಇದರ ಪರಿಣಾಮವಾಗಿ, ಈ ಚಿತ್ರಗಳ ವಿಚಾರವಾಗಿ ತುಂಬ ಆಸಕ್ತಿ ಬೆಳೆಯಿತು. ಅವನ್ನು ನೋಡಬೇಕೆಂಬ ಆಸೆ ಅನೇಕರಲ್ಲಿ ಮೂಡಿತು. ನೂರಾರು ಮೈಲುಗಳಾದರೆ ಚಿಂತೆಯಿಲ್ಲ; ಸಾವಿರಾರು ಮೈಲುಗಳ ದೂರದಿಂದ ಬಂದು ಈ ಚಿತ್ರಗಳನ್ನು ನೋಡಬೇಕಾದರೆ ಎಷ್ಟು ಶ್ರಮ, ಕಾಲ ಮತ್ತು ಹಣದ ಖರ್ಚು! ಇವನ್ನು ಭರಿಸಲು ಶಕ್ತಿ ಇಲ್ಲದವರೇನು ಮಾಡಬೇಕು? ಅವರಿಗೆ ಈ ಚಿತ್ರಗಳ ದರ್ಶನವಾಗುವುದು ಹೇಗೆ?

—ಇದು ಪ್ರತಿಕೃತಿಯಿಂದ ಸಾಧ್ಯವಾಯಿತು. ಹ್ಯಾರಿಂಗ್‌ಹ್ಯಾಮ್ ಎಂಬ ಕಲಾಪ್ರೇಮಿ ಇಂಗ್ಲೆಂಡಿನಿಂದ ಇಲ್ಲಿಗೆ ಬಂದಳು. ಉತ್ತಮ ಚಿತ್ರ ಕಲಾವಿದರಾಗಿದ್ದ ಕಲ್ಕತ್ತಾದ ಅಬನೀಂದ್ರನಾಥ ಠಾಕೂರ್ ಮತ್ತು ಮೈಸೂರಿನ ಕೆ. ವೆಂಕಟಪ್ಪ — ಇವರಿಬ್ಬರನ್ನೂ ಅಜಂತದ ಗವಿಗಳಿಗೆ ಕರೆದುಕೊಂಡು ಹೋದಳು. ಅವರಿಬ್ಬರಿಂದ ಅಲ್ಲಿದ್ದ ಚಿತ್ರಗಳ ಪ್ರತಿಕೃತಿ ಮಾಡಿಸಿದಳು. ಅವನ್ನು ತೆಗೆದುಕೊಂಡು ಹೋಗಿ ಮುದ್ರಿಸಿ, ದೊಡ್ಡ ಆಕಾರದ ಪುಸ್ತಕ ರೂಪದಲ್ಲಿ ಪ್ರಕಟಿಸಿದಳು. ಇವು ಆಕಾರದಲ್ಲಿ ಮೂಲ ಭಿತ್ತಿಚಿತ್ರಗಳಷ್ಟು ದೊಡ್ಡವಾಗಿರಲಿಲ್ಲ—ಆದರೂ ಇವು ಬಣ್ಣ, ರೇಖಾವಿನ್ಯಾಸ, ಭಾವ ಎಲ್ಲದರಲ್ಲಿಯೂ ಮೂಲಚಿತ್ರದಂತೆಯೇ ಇದ್ದುದರಿಂದ, ದೇಶವಿದೇಶಗಳ ಲಕ್ಷಾಂತರ ಜನ ಅಜಂತಕ್ಕೆ ಬರದೆ ತಾವು ಇದ್ದ ಸ್ಥಳದಲ್ಲಿಯೇ ಈ ಚಿತ್ರಗಳ ಸೊಬಗನ್ನು ಕಂಡು ಆನಂದಿಸುವುದು ಸಾಧ್ಯವಾಯಿತು. ಈ ಸೌಲಭ್ಯ, ಆನಂದ ಅವರಿಗೆ ದೊರೆತದ್ದು 'ಪ್ರತಿಕೃತಿ'ಗಳಿಂದ.



ಪ್ರಾಚೀನ ಗ್ರೀಕ್ ಶಿಲ್ಪದ ರೋಮನ್ ಪ್ರ

ಭಾರತ ಸರಕಾರ, ನಾಡಿನ ಹೆಸರಾಂತ ಕಲಾವಿದರನ್ನು ಆಯ್ಕೆಮಾಡಿ ಪ್ರತಿಕೃತಿಗಳನ್ನು ರಚಿಸಲು ವ್ಯವಸ್ಥೆ ಮಾಡಿದೆ. ಮೂಲಕೃತಿಗಳ ಆಕಾರದಲ್ಲಿ ರಚಿತವಾಗಿರುವ ಇವುಗಳಲ್ಲಿ ಕೆಲವನ್ನು ದೆಹಲಿಯ ರಾಷ್ಟ್ರೀಯ ವಸ್ತುಸಂಗ್ರಹಾಲಯದಲ್ಲಿ ನೋಡಬಹುದು.

'ಪ್ರತಿಕೃತಿ' ರಚನೆಯಿಂದ ಇನ್ನೊಂದು ಅನುಕೂಲವೂ ಇದೆ. ಇದು ಪ್ರಧಾನವಾಗಿ ಕಲಾಭ್ಯಾಸಿಗಳಿಗೆ ಸಂಬಂಧಿಸಿದ್ದು: ಚಿತ್ರಕಲೆಯನ್ನಾಗಲೀ ಶಿಲ್ಪಕಲೆಯನ್ನಾಗಲೀ ಕಲಿಯುವವರು ತಮ್ಮ ಕೌಶಲವನ್ನು ಉತ್ತಮಗೊಳಿಸಿಕೊಳ್ಳುವುದಕ್ಕಾಗಿ ಪ್ರಖ್ಯಾತ ಕಲಾವಿದರ ಕೃತಿಗಳನ್ನು ಮಾದರಿಯಾಗಿಟ್ಟುಕೊಂಡು ಅವುಗಳ ಪ್ರತಿಕೃತಿ ಮಾಡುವುದುಂಟು. ಒಂದೊಂದು ವೇಳೆ ಇವು ಸಮರ್ಪಕವಾದ ಪ್ರತಿಕೃತಿಗಳಾಗದೆ ಇರಬಹುದು: ಮೂಲದಷ್ಟೇ ಉತ್ತಮವಾದ ಕಲಾಕೃತಿಗಳಾಗಬಹುದು. ಪ್ರಾಚೀನ ಗ್ರೀಕ್ ಶಿಲ್ಪ


...ೀಕ್ ಮೂಲಕೃತಿಯನ್ನು ಆಧರಿಸಿ ರಚಿತವಾದ ಪ್ರತಿಕೃತಿ

ಗಳ ಕೆಲವು ಮೂಲ ಕೃತಿಗಳು ನಾಶವಾಗಿ ಹೋಗಿದ್ದರೂ ಅವರ ಶಿಷ್ಯರು ಮಾಡಿದ ಪ್ರತಿಕೃತಿಗಳಿಂದ ಅವುಗಳ ಸ್ವರೂಪ ನಮಗೆ ಉಳಿದು ಬಂದಿದೆ. ಹೀಗೆ ಇತಿಹಾಸದ ದೃಷ್ಟಿಯಿಂದಲೂ ಪ್ರತಿಕೃತಿಗಳು ಅಮೂಲ್ಯ ವಸ್ತುಗಳಾಗಿ ಪರಿಣಮಿಸುವುದುಂಟು.

ಪ್ರತಿಕೃತಿಗಳಿಂದ ಹಲವಾರು ಲಾಭಗಳಿರುವುವಾದರೂ ಸ್ವಲಾಭದ ದೃಷ್ಟಿಯಿಂದ 'ಪ್ರತಿಕೃತಿ ಕಲೆ'ಯನ್ನು ದುರುಪಯೋಗಿಸುವವರೂ ಇಲ್ಲದಿಲ್ಲ. ಜನರನ್ನು ಮೋಸಗೊಳಿಸಿ ಹೇರಳವಾಗಿ ಹಣ ಸಂಪಾದಿಸಬೇಕೆಂಬುದೇ ಇವರ ಉದ್ದೇಶ. ಇಂಥ ಜನ ಹಿಂದಿನ ಖ್ಯಾತ ಕಲಾವಿದರ ಸುಪ್ರಸಿದ್ಧ ಚಿತ್ರಗಳನ್ನೋ ಅವುಗಳ ಶೈಲಿಯನ್ನು ಅನುಕರಿಸಿದ ಚಿತ್ರವನ್ನೋ ರಚಿಸಿ, ಅವಕ್ಕೆ ಆ ಹಳೆಯ ಕಲಾವಿದರ ಅಂಕಿತವನ್ನೇ ಹಾಕುತ್ತಾರೆ. ಅವು ಆ ಕಲಾವಿದರ ಖ್ಯಾತ ಕೃತಿಗಳೆಂದೋ ಅಪೂರ್ವ ಕೃತಿಗಳೆಂದೋ ಹೇಳಿ ಜನರನ್ನು ಮರುಳುಗೊಳಿಸಿ, ಅವನ್ನು ಹೆಚ್ಚು ಬೆಲೆಗೆ ಮಾರಿಬಿಡುತ್ತಾರೆ. ಹೀಗೆ ಪ್ರತಿಕೃತಿಗಳನ್ನು ಮೂಲಕೃತಿಗಳೆಂದು ಹೇಳಿ ಮಾರಿದವರ ಮೋಸ ಬಯಲಾಗಿ ಅವರು ಸೆರೆಮನೆ ಕಂಡದ್ದೂ ಉಂಟು.

ಪ್ರತಿಕೃತಿಗಳ ಸಂಬಂಧದಲ್ಲಿ ನಡೆಯುತ್ತಿದ್ದ ಈ ಮೋಸವನ್ನು ಪತ್ತೆ ಹಚ್ಚಲು ಅನುಕೂಲ ಸಾಧನಗಳು ಹಿಂದೆ ಇರಲಿಲ್ಲ. 1940ರ ಸುಮಾರಿನಲ್ಲಿ ಅಮೆರಿಕದ ವಿಜ್ಞಾನಿ ಲಿಬ್ಬಿ 'ಕಾರ್ಬನ್-14' ಪರೀಕ್ಷಾವಿಧಾನವನ್ನು ಕಂಡುಹಿಡಿದಾಗಿನಿಂದ, ಯಾವುದೇ ಕೃತಿ ರಚಿತವಾದ ಕಾಲವನ್ನು ನಿರ್ದಿಷ್ಟವಾಗಿ ಪತ್ತೆಹಚ್ಚಬಹುದಾಗಿದೆ. ಇದರಿಂದಾಗಿ, ಈಗ 'ಪ್ರತಿಕೃತಿ ಮೋಸ' ನಡೆಸುವುದು ಕಷ್ಟವಾಗಿದೆ.

ಪ್ರತಿಕೃತಿ ರಚನೆಯಲ್ಲಿ ವಿಜ್ಞಾನದ ಕೊಡುಗೆ ಅಪಾರ. ಗ್ರಾಮಫೋನ್ ಮತ್ತು ಟೇಪ್ ರೆಕಾರ್ಡಿಂಗ್‌ಗಳು ಸಂಗೀತದ ರಂಗದಲ್ಲಿ ಪ್ರತಿಕೃತಿ ಕಾರ್ಯವನ್ನು ಸುಲಭಗೊಳಿಸಿವೆ. ಹಾಗೆಯೇ ಫೋಟೊಗ್ರಫಿ. ಬಣ್ಣದ ಫೋಟೊಗ್ರಫಿ ಶಿಲ್ಪ ಚಿತ್ರಗಳ ಪ್ರತಿಕೃತಿ ರಚನೆಗೆ ಸಹಾಯವಾಗಿದೆ.

ವರ್ಣಮುದ್ರಣದ ಹೊಸ ತಂತ್ರಗಳು, ಚಿತ್ರಗಳ ಪ್ರತಿಕೃತಿಗಳನ್ನು ಸುಲಭ ವೆಚ್ಚದಲ್ಲಿ ಮನೆ ಮನೆಗೂ ಮುಟ್ಟಿಸುತ್ತವೆ. ಹೀಗೆ ಪ್ರತಿಕೃತಿಗೆ ಕಲಾ ಪ್ರಚಾರದಲ್ಲಿ ಒಂದು ಮುಖ್ಯ ಸ್ಥಾನ ದೊರೆತಿದೆ.

## ಪ್ರತಿಮಾ ವಿಧಾನ

"ಯುಗ ಯುಗಗಳ ಹಣೆಬರಹವ ಬರೆ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯು ಬೀಸುತ ಚೇತನಗೊಳಿ
ಹೊಸಗಾಲದ ಹಸುಮಕ್ಕಳ ಹರಸಿ
ಹಕ್ಕಿ ಹಾರುತಿದೆ ನೋಡಿದಿರಾ ?"

—ಇವು ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ ?' ಕವನದ ಸಾಲುಗಳು. ಹಾರುತ್ತಿರುವ ಹಕ್ಕಿಯೊಂದನ್ನು ಈ ಕವನದ ಉದ್ದಕ್ಕೂ ಚಿತ್ರಿಸಿದಂತಿದೆ. ಆದರೆ ಸೂಕ್ಷ್ಮವಾಗಿ ನೋಡಿದಾಗ, ಇಲ್ಲಿಯ 'ಹಕ್ಕಿ' ಕೇವಲ ಒಂದು ಹಕ್ಕಿಯಲ್ಲ, ಅದು ಮತ್ತೇನನ್ನೋ ಪ್ರತಿನಿಧಿಸುತ್ತದೆ – ಎಂಬುದು ಗೊತ್ತಾಗುತ್ತದೆ. ಇದೇ ಕವನದ "ಮುಗಿಲಿಗೆ ರೆಕ್ಕೆಗಳೊಡೆದವೋ ಅಣ್ಣಾ.........ಸೂರ್ಯ ಚಂದಿರನು ಮಾಡಿದೆ ಕಣ್ಣಾ" ಎಂಬ ಸಾಲುಗಳನ್ನೂ, "ರಾಜ್ಯ ಸಾಮ್ರಾಜ್ಯದ ತೆನೆ ಒಕ್ಕಿ...ತೇಲಿಸಿ ಮುಳುಗಿಸಿ ಖಂಡ ಖಂಡಗಳ, ಸಾರ್ವಭೌಮರಾ ನೆತ್ತಿಯ ಕುಕ್ಕಿ ಹಕ್ಕಿ ಹಾರುತಿದೆ..." ಎಂಬ ಸಾಲುಗಳನ್ನೂ ಓದಿದಾಗ ಇಲ್ಲಿ ಹಕ್ಕಿ 'ಕಾಲ'ದ ಪ್ರತಿಮೆ ಎಂದು ಸ್ಪಷ್ಟವಾಗುತ್ತದೆ.

ಕಾವ್ಯದಲ್ಲಿ ಇಂಥ ಗಹನ ಹೋಲಿಕೆಗಳನ್ನು ತರುವುದಕ್ಕೆ ಪ್ರತಿಮಾ ವಿಧಾನ ಎಂದು ಹೆಸರು.

ಪ್ರತಿಮಾ ವಿಧಾನದಲ್ಲಿ ಉಪಮೆ, ರೂಪಕ, ಸಂಕೇತ ಮತ್ತು ಪ್ರತಿಮೆಗಳು ಬರುತ್ತವೆ. ಎರಡು ವಸ್ತು ಅಥವಾ ವಿಷಯಗಳನ್ನು ಹೋಲಿಸುವಾಗ 'ಇಂಥ' 'ಅಂಥ' ಮೊದಲಾದ ಪದಗಳು ಬಂದರೆ ಅವು ಉಪಮೆಗಳು. ಉದಾಹರಣೆಗಾಗಿ 'ಚಂದ್ರನಂಥ ಮುಖವುಳ್ಳವಳು', 'ಸೂಜಿಯ ತುದಿಯಂತೆ ಚೂಪಾದದ್ದು' ಮುಂತಾದುವು ಉಪಮೆಗಳು. ಈ ಉಪಮೆಗಳು ಅತಿ ದೊಡ್ಡವಾಗಿ ಹೆಚ್ಚು ಅರ್ಥ ಒಳಗೊಂಡಾಗ ಅವು ಮಹೋಪಮೆಗಳಾಗುತ್ತವೆ; ಹೋಲಿಕೆಗಳಲ್ಲಿ 'ಇಂಥ–ಅಂಥ' ಮೊದಲಾದ ಪದಗಳಿಲ್ಲದಿದ್ದರೆ ಅವು ರೂಪಕಗಳು–'ಚಂದ್ರಮುಖಿ', 'ಕಲ್ಲು ಹೃದಯ' ಇತ್ಯಾದಿ.

ಕನ್ನಡ ಕವಿ ಕುಮಾರವ್ಯಾಸ ರೂಪಕ ಚಕ್ರವರ್ತಿ ಎಂದು ಹೆಸರು ಪಡೆದಿದ್ದಾನೆ. 'ಸಿಡಿಲ ಪೊಟ್ಟಣ ಕಟ್ಟಿ ಸೇಕವ ಕುಡುವರೆ ?', 'ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯ ಮೃಗ', 'ಖಳರು ಎಮ್ಮ ಮನ್ನಿತಿಯ ಕೀಲನು ಕಳಚಿ ಕಳೆವರು' ಇಂಥ ಅನೇಕ ರೂಪಕಗಳು ಅವನ ಕಾವ್ಯದಲ್ಲಿವೆ.

ಸಂಕೇತಗಳು ರೂಪಕ ವಿಧಾನವನ್ನು ಮತ್ತಷ್ಟು ಮುಂದಕ್ಕೆ ಒಯ್ಯುತ್ತವೆ. ರೂಪಕ ಉಪಮೆಗಳಲ್ಲಿ ಕವಿ ಯಾವುದನ್ನು ಹೋಲಿಸುತ್ತಿದ್ದಾನೋ ಆ ವಸ್ತು ಮತ್ತು ಹೋಲಿಕೆಗಳೆರಡೂ ಇದ್ದರೆ, ಸಂಕೇತಗಳಲ್ಲಿ ಹೋಲಿಕೆಯೊಂದೇ ಬಹಳ ಅರ್ಥಪೂರ್ಣವಾಗಿರುತ್ತದೆ. 'ಹುಲಿ' ಎಂಬ ಕವನದಲ್ಲಿ ಆಂಗ್ಲ ಕವಿ ಬ್ಲೇಕ್ ಹುಲಿಗೆ ಹೀಗೆ ಕೇಳುತ್ತಾನೆ : "ಕುರಿ ಮರಿಯನ್ನು ಮಾಡಿದವನೇ ನಿನ್ನನ್ನೂ ಮಾಡಿದನೇ ?" ಇಲ್ಲಿ ಕುರಿ ಮರಿ ಒಳ್ಳೆಯದರ, ಸಾತ್ವಿಕತೆಯ ಸಂಕೇತ. ಹುಲಿ ಕೆಟ್ಟದರ ಸಂಕೇತ. ಒಳ್ಳೆಯದನ್ನು ಸೃಷ್ಟಿಸಿದ ದೇವರೇ ಕೆಟ್ಟದನ್ನೂ ಸೃಷ್ಟಿಸಿದನೆ ? ಎಂದು ಅರ್ಥ.

ಇಂಥ ಅನೇಕ ಸಂಕೇತಗಳನ್ನು ಒಳಗೊಂಡು ಅಪೂರ್ವವಾದ ಒಂದು ಮಹತ್ವದ ಹೋಲಿಕೆಯನ್ನು ಓದುಗನ ಮುಂದಿಡುವುದು ಪ್ರತಿಮೆ. ಬೇಂದ್ರೆಯವರ 'ಹಕ್ಕಿ ಹಾರುತಿದೆ ನೋಡಿದಿರಾ' ಕವನದಲ್ಲಿ ಹಕ್ಕಿ 'ಕಾಲ'ದ

ಪ್ರತಿಮೆಯಾಗಿ ಬೆಳೆಯುತ್ತ ಹೋಗುತ್ತದೆ. ಯುಗ ಯುಗಗಳ ಹಣೆ ಬರೆಹ ಬರೆಸುವುದು, ಸೂರ್ಯ ಚಂದ್ರರನ್ನು ಕಣ್ಣನ್ನಾಗಿ ಮಾಡಿಕೊಳ್ಳುವುದು, ಸಾರ್ವಭೌಮರ ನೆತ್ತಿಯನ್ನು ಕುಕ್ಕುವುದು —ಇಲ್ಲಿಯ ವಿವಿಧ ಸಂಕೇತಗಳು.

ಕಾಫ್ಕನ ಕಥೆಗಳಲ್ಲಿ ಇಂಥ ಪ್ರತಿಮೆಗಳು ಅನೇಕ. 'ಕೋಟೆ', 'ಚೀನದ ಭಾರಿ ಗೋಡೆ'ಗಳು ವಿಶಿಷ್ಟ ಪ್ರತಿಮೆಗಳಾಗುತ್ತವೆ.

ಮೇಲ್ನೋಟಕ್ಕೆ ಸಂಬಂಧವಿಲ್ಲದ ಸಂಗತಿ–ವಸ್ತುಗಳಲ್ಲಿ ಇರುವ ಒಂದು ವಿಧದ ಸಂಬಂಧವನ್ನೂ ವಿವಿಧತೆಯಲ್ಲಿ ಏಕತೆಯನ್ನೂ ಕವಿ ಪ್ರತಿಮಾ ವಿಧಾನದ ಮೂಲಕ ಗುರುತಿಸುತ್ತಾನೆ. ಸಂಕೇತ, ಪ್ರತಿಮೆಗಳ ಮೂಲಕ ಕವಿ ಕೆಲವೊಮ್ಮೆ ನೇರವಾದ ಭಾಷೆಯಲ್ಲಿ ಹೇಳಲಾಗದ ಭಾವಗಳಿಗೆ ಅಭಿವ್ಯಕ್ತಿ ನೀಡುತ್ತಾನೆ. ಪುರಾಣ, ಹಿಂದಿನ ಮಹಾಕಾವ್ಯಗಳಿಂದ ಎತ್ತಿಕೊಂಡ ಅಂಶಗಳಿಂದಲೂ ತನ್ನ ಪ್ರತಿಮೆಗೆ ಹೆಚ್ಚು ಅರ್ಥ ಬರುವಂತೆ ಮಾಡುತ್ತಾನೆ. ಮನೋವಿಜ್ಞಾನ, ಮಾನವವಿಜ್ಞಾನ ಮತ್ತಿತರ ವಿಜ್ಞಾನಗಳ ಅರಿವು ಕೆಲವು ಕವಿಗಳು ಬಳಸುವ ಪ್ರತಿಮೆಗಳನ್ನು ಅರ್ಥ ಮಾಡಿಕೊಳ್ಳಲು ನೆರವಾಗುತ್ತದೆ.

ಎರಡು ಹೋಲಿಕೆಗಳ ನಡುವಣ ಅಂತರ ಸರಿಯಾಗಿಲ್ಲದಿದ್ದರೆ ಕೆಲವು ಸಮಸ್ಯೆಗಳೇಳುತ್ತವೆ. ಆ ಅಂತರ ತೀರ ಸಮೀಪವಾದರೆ, ಎಂದರೆ ನಮ್ಮ ಕಲ್ಪನೆಗೆ ಕೆಲಸವನ್ನೇ ಕೊಡದಿದ್ದರೆ, ಅಂಥ ರೂಪಕ–ಸಂಕೇತಗಳು ಕಾವ್ಯಾಂಶ ಕಳೆದುಕೊಳ್ಳುತ್ತವೆ. ಪ್ರತಿಯಾಗಿ ಹೋಲಿಕೆಗಳ 'ಅಂತರ' ಬಹಳ ದೂರವಾದರೆ ಅವು ಅರ್ಥವಾಗುವುದೇ ಕಷ್ಟವಾಗಿ, ಕವಿ–ಓದುಗರ ನಡುವಣ ಮಾಧ್ಯಮ ಕುಸಿದಂತಾಗುತ್ತದೆ. ಅಧ್ಯಾತ್ಮಶೀಲರಾದ ಕೆಲವು ಕವಿಗಳ, ಕೆಲವು ನವ್ಯ ಕವಿತೆಗಳ ಪ್ರತಿಮಾ ವಿಧಾನ ಇಂಥದು. ಟಿ. ಎಸ್. ಎಲಿಯಟ್‌ನ ಕಾವ್ಯ ಅರ್ಥವಾಗಲು ಕಷ್ಟವಾಗುವುದೂ ಇದರಿಂದಲೇ.

ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕೆಲವು ಅಲಂಕಾರಗಳಲ್ಲಿ ಪ್ರತಿಮಾ ವಿಧಾನದ ಛಾಯೆಯನ್ನು ಕಾಣಬಹುದು. ಉಪಮಾಲಂಕಾರ, ರೂಪಕಾಲಂಕಾರಗಳೇ ಮೊದಲಾದುವು ಇಂಥವು. ಅರಿಸ್ಟಾಟಲ್, "ರೂಪಕಗಳನ್ನು ಹೇಳುವುದು ಉತ್ತಮ ಕವಿಯ ಗುಣ" —ಎಂದ. "ಕಾವ್ಯದ ಭಾಷೆ ಅವಶ್ಯವಾಗಿ ರೂಪಕವಿಧಾನ" –ಎಂದು ಷೆಲ್ಲಿ ಹೇಳಿದ. ಕಾವ್ಯಸೃಷ್ಟಿಯಲ್ಲಿ ಪ್ರತಿಮಾ ವಿಧಾನ ವಹಿಸುವ ಪಾತ್ರದ ಬಗೆಗೆ ಮನೋವಿಜ್ಞಾನ, ಭಾಷಾವಿಜ್ಞಾನಗಳು ಸಾಕಷ್ಟು ಅಧ್ಯಯನ ನಡೆಸಿವೆ. ಶಿಲ್ಪ, ಚಿತ್ರಕಲೆಗಳಲ್ಲೂ ಪ್ರತಿಮಾ ವಿಧಾನ ಮಹತ್ವದ ಪಾತ್ರ ವಹಿಸಿದೆ.

## ಪ್ರಬಂಧ

"ನಿಜವಾಗಿಯೂ ಮಸಾಲೆದೋಸೆ ಕ್ರಾಂತಿಕಾರಕ ವಸ್ತುವೇನೋ ಹೌದು. ಅದು ಹಿಟ್ಟಿನ ಮುದ್ದೆಯಂಥ ಸರಳವಾದ ವಸ್ತುವಲ್ಲ. ಪ್ರವೀಣನಾದ ಬಾಣಸಿಗ ಹದವರಿತು, ನಿರ್ಮಿಸಿದ ಮಸಾಲೆ ದೋಸೆಯ ಮೊದಲನೆ ತುಣುಕು ರಸನೆಗೆ ಸೋಕಿಸಿದಾಗ ಕಾಂತೆಯ ಪ್ರಣಯ ಕೋಪದಂತೆ ಅದು ಹೊರಗೆ ಕಟು ಒಳಗೆ ಮೃದು. ಆ ಇಂಗಿನ ಕಂಪು, ಮೆಂತ್ಯದ ಒಗರು, ಹಸಿ ಶುಂಠಿ, ಮೆಣಸಿನಕಾಯಿಗಳ ವಿಶಿಷ್ಟವಾದ ಖಾರ, ತುಪ್ಪದ ಕಂಪು, ಬೆಣ್ಣೆಯ ವಿಪುಲಾರ್ದ್ರತೆ......ಒಂದು ಕ್ಷಣವೂ ಹಿಂಜುಮುಂಜಾಗದೆ ಸಿದ್ಧ ಕ್ಷಣದಲ್ಲಿ ಎಲೆಗಿಳಿಸುವ ಕುಶಲ ಬಾಣಸಿಗನ ಕುಶಲಕೃತಿ ಈ ಮಸಾಲೆ ದೋಸೆ........" ಪುತಿನ ಅವರ 'ಮಸಾಲೆ ದೋಸೆ' ಪ್ರಬಂಧದ ಒಂದು ತುಣುಕು ಇದು.

"ಏನು ಬರಗೆಟ್ಟಂತೆ ಹರಿದು ಕೊಂಡು ತಿನ್ನುವ ಸೊಳ್ಳೆಗಳಿವು! ...ಅದೇಕೆ ಹೀಗೆ ಬಡಿದು ಕೊಂಡು ಸಾಯುತ್ತವೆ!...ಈ ದೋಷಪೂರ್ಣ ಜಗತ್ತಿನಲ್ಲಿ ಸೊಳ್ಳೆಯೊಂದು ಸಣ್ಣ ಪಿಳ್ಳೆ ಇರುವವರೆಗೆ ಸುಖನಿದ್ರೆ ಎಂಬುದು ಸ್ವಪ್ನ ಮಾತ್ರ... ಮುಟ್ಟಿದರೆ ಮರಣ ಹೊಂದುವ ಸೂಜಿಮೊನೆಯಂತಹ ಸೊಳ್ಳೆಗೆ ಅದೆಂತಹ ರಾಕ್ಷಸೀ ಕ್ರೌರ್ಯವನ್ನು ಕೊಟ್ಟಿದ್ದಾನೆ!...ಸೊಳ್ಳೆಯಂಥ ದುರಾತ್ಮರು ಈ ಜಗದಲ್ಲಿ ಇರುವವರೆಗೆ ನಮ್ಮಂತಹ ಬಡಪಾಯಿಗಳು ಆಕಾಶವನ್ನೂ ಅಂಗಳವನ್ನೂ ತೊರೆದು ಗುಹಾಪ್ರವೇಶ ಮಾಡುವುದೇ ಲೇಸು. ಕಾವ್ಯವನ್ನು ಕವಿಗಳಿಗೆ ಬಿಟ್ಟುಬಿಡೋಣ; ನಿದ್ರಾಸುಖ ಮಾತ್ರ ನಮಗೆ ದಕ್ಕಿದರೆ ಸಾಕು...ಪ್ರಿಯ ಸೊಳ್ಳೆಯೆ ನಿನ್ನ ಸಂತಾನ ಸಾವಿರವಾಗಲಿ. ನೀನು ಇರು. ನಿನ್ನ ಸಂಗೀತ ನನಗೆ ಬೇಕು. ನಿನ್ನ ಕೊಂಡಿ ಮಾತ್ರ ಬೇಡ ಕಂಡೆಯಾ" — ರಾ ಕು ಅವರ 'ಸೊಳ್ಳೆಯ ಸರಸ'ದಲ್ಲಿ ಬರುವ ವಾಕ್ಯಗಳಿವು.

'ಗಾಳಿಪಟ ಕರ್ತೃ' ರಾ. ಕು.

ಸೊಗಸಾದ ಕನ್ನಡ ಪ್ರಬಂಧಕ್ಕೆ ಇವು ಉದಾಹರಣೆಗಳು. 'ಪ್ರಬಂಧ' ನಮ್ಮಲ್ಲಿ ಒಂದು ಆಧುನಿಕ ಸಾಹಿತ್ಯದ ಪ್ರಭಾವದಿಂದ ಹುಟ್ಟಿದ್ದು. ಇಂಗ್ಲಿಷಿನಲ್ಲಿ 'ಎಸ್ಸೆ' ಎಂಬುದನ್ನೇ ಕನ್ನಡದಲ್ಲಿ 'ಪ್ರಬಂಧ' ಎನ್ನುತ್ತೇವೆ. ಪ್ರಬಂಧ, ಲಘು ಪ್ರಬಂಧ, ನಿಬಂಧ, ಹರಟೆ, ಲಲಿತ ಪ್ರಬಂಧ —ಈ ಎಲ್ಲವನ್ನೂ ಸಮಾನಾರ್ಥ ಪದಗಳಾಗಿ ಬಳಸುವ ರೂಢಿ ಇದೆ.

ಪ್ರಬಂಧಕ್ಕೆ ವಿಷಯ ಇಂಥದ್ದೇ ಇರಬೇಕು ಎಂದಿಲ್ಲ. ಲೇಖಕ ತನ್ನ ಮನಸ್ಸನ್ನು ಅದು ಹೋದಂತೆ ಹರಿಯಬಿಡುತ್ತಾನೆ.

ಪ್ರಬಂಧ ಅಥವಾ 'ಎಸ್ಸೆ' ಎನ್ನುವ ಸಾಹಿತ್ಯ ಪ್ರಕಾರ ಮೊದಲು ರೂಪು ತಳೆದದ್ದು ಫ್ರಾನ್ಸ್‌ನಲ್ಲಿ: 16ನೆಯ ಶತಮಾನದಲ್ಲಿ. ಇಂಥ ವಿಶಿಷ್ಟ ಸಾಹಿತ್ಯ ಸೃಷ್ಟಿಸಿದ ಶ್ರೇಯಸ್ಸು ಮಾಂಟೇನ್‌ಗೆ ಸಲ್ಲುತ್ತದೆ. 1580ರಲ್ಲಿ ತೋಟದ ಮನೆಯ ಪ್ರಶಾಂತ ಸ್ಥಳದಲ್ಲಿ ತಾನು ನಡೆಸಿದ ದೀರ್ಘ ಫಲವಾದ 'ಎಸ್ಸೆ' ಎಂಬ ಹೆಸರಿನ ಎರಡು ಸಂಕಲನಗಳನ್ನು ಆತ ಪ್ರಕಟಿಸಿದ. ಆಗ ಆತನ ವಯಸ್ಸು 47. 'ಎಸ್ಸೆ' ಎಂದರೆ ಒಂದು ಪ್ರಯೋಗ, ಪ್ರಯತ್ನ, ಉದ್ಯಮ ಎಂದು ಅರ್ಥ; 1603ರಲ್ಲಿ ಅದು ಇಂಗ್ಲಿಷಿಗೆ ಅನುವಾದವಾಯಿತು. ಮಾಂಟೇನ್ ತೋರಿದ ಮಾರ್ಗವನ್ನು ಅನುಸರಿಸಿ ಆಂಗ್ಲ ಭಾಷೆಯಲ್ಲಿ ಮೊದಲು ಪ್ರಯೋಗ ನಡೆಸಿದವನು ಏಬ್ರಾಹಾಂ ಕೌಲಿ.

ಪ್ರಬಂಧಕಾರ
ಸದಾಶಿವ ಒಡೆಯರ್

1709ರಲ್ಲಿ 'ಟ್ಯಾಟ್ಲರ್' ಮತ್ತು 'ಸ್ಪೆಕ್ಟೇಟರ್' ಎನ್ನುವ ಇಂಗ್ಲೆಂಡಿನ ನಿಯತಕಾಲಿಕಗಳಲ್ಲಿ ರಿಚರ್ಡ್ ಸ್ಟೀಲ್ ಮತ್ತು ಜೋಸೆಫ್ ಅಡಿಸನ್‌ರ ಪ್ರಬಂಧಗಳು ಅನುಕ್ರಮವಾಗಿ ಪ್ರಕಟವಾದುವು. ಜನಜೀವನದ ಸಾಮಾನ್ಯ ವಸ್ತುಗಳನ್ನೂ ಜನರ ಸಾಮಾನ್ಯ ನಡವಳಿಕೆಗಳನ್ನೂ ಕುರಿತು ಅವರು ಸ್ವಾರಸ್ಯಕರವಾಗಿ ಬರೆದರು. ಇವು ಅತ್ಯಂತ ಸಮರ್ಪಕ ಪ್ರಬಂಧ ರೂಪಗಳೆಂದು ಪರಿಗಣಿಸಲ್ಪಟ್ಟುವು. ಅಡಿಸನನ ಪ್ರಬಂಧಗಳು ರಷ್ಯನ್ ಭಾಷೆಗೆ ಅನುವಾದಗೊಂಡು ಅಲ್ಲಿಯೂ ಪ್ರಸಿದ್ಧಿ ಪಡೆದುವು. 19ನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರಕಟವಾದ ಚಾರ್ಲ್ಸ್ ಲ್ಯಾಂಬ್‌ನ 'ಎಸ್ಸೇಸ್ ಆಫ್ ಎಲಿಯ' ಜಗತ್ತಿನ ಸಾಹಿತ್ಯದಲ್ಲೇ ಶ್ರೇಷ್ಠ ಕೃತಿ ಎಂಬ ಪ್ರಶಂಸೆಗೆ ಪಾತ್ರವಾಗಿದೆ. ಅನಂತರ ಇಂಗ್ಲಿಷ್ ಸಾಹಿತ್ಯದಲ್ಲಿ ಪ್ರತಿಭಾವಂತ ಪ್ರಬಂಧಕಾರರು ಕಂಡುಬಂದರು. ಅವರಲ್ಲಿ ಫ್ರಾನ್ಸಿಸ್ ಬೇಕನ್. ಗೋಲ್ಡ್‌ಸ್ಮಿತ್, ಜಾನ್ಸನ್. ಮ್ಯಾಥ್ಯೂ ಅರ್ನಾಲ್ಡ್. ಚೆಸ್ಟರ್‌ಟನ್. ಗಾರ್ಡಿನರ್. ರಾಬರ್ಟ್ ಲೂಯಿ ಸ್ಟೀವನ್‌ಸನ್. ಜಾನ್ ರಸ್ಕಿನ್. ಜೆ. ಬಿ. ಪ್ರೀಸ್ಟ್ಲಿ ಪ್ರಮುಖರಾದವರು. ಅಮೆರಿಕದಲ್ಲಿ ರಾಲ್ಫ್ ವಾಲ್ಡೋ ಎಮರ್‌ಸನ್, ಹೆನ್ರಿ ಡೇವಿಡ್ ಥೋರೋ ಪ್ರಬಂಧ ಸಾಹಿತ್ಯ ರಚನೆಯಲ್ಲಿ ಪ್ರಮುಖರು. ಸ್ಮರಣೀಯರು.

ಕನ್ನಡದಲ್ಲಿ ಮೊದಲನೆಯ ಪ್ರಬಂಧ ಸಂಕಲನ ಪ್ರಕಟವಾದದ್ದು 1898ರಲ್ಲಿ. ಅದು 'ಲೋಕ ರಹಸ್ಯ'. ಬಂಕಿಮಚಂದ್ರರ ಈ ಬಂಗಾಳಿ ಪ್ರಬಂಧಗಳನ್ನು ಬಿ. ವೆಂಕಟಾಚಾರ್ಯರು ಕನ್ನಡಕ್ಕೆ ಅನುವಾದಿಸಿದರು. 1913ರಲ್ಲಿ ಕನ್ನಡದ ಮೊಟ್ಟಮೊದಲ ಸ್ವತಂತ್ರ ಪ್ರಬಂಧ ಬಿ. ವೆಂಕಟಾಚಾರ್ಯರ 'ದಾಡಿಯ ಹೇಳಿಕೆ'–ಪ್ರಕಟವಾಯಿತು.

ಕನ್ನಡದ ಪ್ರಬಂಧಗಳ ಪಂಕ್ತಿಯಲ್ಲಿ ಅಗ್ರಶ್ರೇಣಿಯಲ್ಲಿ ನಿಲ್ಲುವ ಕೆಲವು ಕೃತಿಗಳು ಪ್ರಕಟವಾಗಿವೆ. ಎ. ಎನ್. ಮೂರ್ತಿರಾಯರ 'ಹಗಲುಗನಸುಗಳು', 'ಆಲೆಯುವ ಮನ'; ವಿ ಸೀ ಅವರ 'ಮೈಸೂರು ರುಮಾಲು'; ಪು ತಿ ನ ಅವರ 'ರಾಮಾಚಾರಿಯ ನೆನಪು', 'ಈಚಲು ಮರದ ಕೆಳಗೆ'; ಕುವೆಂಪು ಅವರ 'ಮಲೆನಾಡಿನ ಚಿತ್ರಗಳು'; ತೀ ನಂ ಶ್ರೀ ಅವರ 'ನಂಟರು'; ರಾ. ಕು. ಅವರ 'ಗಾಳಿಪಟ'; ಎಂ. ವಿ. ಸೀತಾರಾಮಯ್ಯನವರ 'ಮುಗಿಲುಗಳು'; ಶಿವರಾಮ ಕಾರಂತರ 'ಮೈಲಿಗಲ್ಲಿನೊಡನೆ ಮಾತುಕತೆಗಳು', 'ಹಳ್ಳಿಯ ಹತ್ತು ಸಮಸ್ತರು'; ಎಚ್ಚೆಸ್ಕೆ ಅವರ 'ಜೇಡನ ಬಲೆ'; —ಇವು ಗಮನಾರ್ಹ ಕನ್ನಡ ಪ್ರಬಂಧ ಸಂಕಲನಗಳು.

'ಅಷ್ಟಾವಕ್ರ' ಸೊಗಸಾದ ಹಾಸ್ಯ ಪ್ರಬಂಧಗಳನ್ನು ಬರೆದರು. ಹಿರೇಮಲ್ಲೂರ ಈಶ್ವರನ್, ಸದಾಶಿವ ಒಡೆಯರ್, ಎನ್. ಎಸ್. ಗದಗಕರ, ಬಿ. ಆರ್. ವಾಡಪ್ಪಿ, ಶಾಂತರಸ —ಇವರೆಲ್ಲ ಒಳ್ಳೆಯ ಪ್ರಬಂಧಕಾರರು.

ನೋಡಿ : ಗೋಲ್ಡ್‌ಸ್ಮಿತ್ ; ಚಾರ್ಲ್ಸ್ ಲ್ಯಾಮ್ ; ಜಾನ್ಸನ್ ; ಥೋರೋ ; ಮ್ಯಾಥ್ಯೂ ಅರ್ನಾಲ್ಡ್ ; ರಸ್ಕಿನ್ ; ಸ್ಟೀವನ್‌ಸನ್

## ಪ್ರವಾಸ ಸಾಹಿತ್ಯ

''ನಾನು ಗ್ಲಾಸ್‌ಗೋ ಬಂದರಿನಿಂದ ಲಂಡನಿಗೆ ಪ್ರವಾಸ ಮಾಡುತ್ತಿದ್ದಾಗ ಒಂದು ರೈಲ್ವೆ ನಿಲ್ದಾಣದಲ್ಲಿ ವೈಶಿಷ್ಟ್ಯಪೂರ್ಣವಾದ ಜನರ ಗುಂಪೊಂದನ್ನು ನೋಡಿದೆ. ಐದಾರು ಮಂದಿಯ ಆ ಗುಂಪು ಬಲು ವಿಚಿತ್ರವಾಗಿ ಕಂಡಿತು. ಅವರ ಮೈಬಣ್ಣವನ್ನೂ ಉಡುಪನ್ನೂ ನೋಡಿದಾಗ ಅವರು ಸಾಮಾನ್ಯ ಬ್ರಿಟಿಷ್ ಜನರಿಗಿಂತ ತೀರ ಭಿನ್ನವಾಗಿ ಕಂಡರು. ಒಬ್ಬನಂತೂ ನಿಲುವಂಗಿಯ ಮಾದರಿಯಲ್ಲಿ ಬಣ್ಣದ ಉಡುಪನ್ನು ತೊಟ್ಟುಕೊಂಡಿದ್ದ. ಜತೆಯಲ್ಲಿ ಕಟ್ಟಿಕೊಂಡ ಸಾಮಾನನ್ನು [illegible] ಅವರು [illegible] [illegible] ಆತ ಹೇಳಿದ".

—ಇದು ದಿನಕರ ದೇಸಾಯಿಯವರು ಬರೆದಿರುವ 'ನಾ ಕಂಡ ಪಡುವಣ' ಎಂಬ ಪ್ರವಾಸ ಕಥನದಿಂದ.

ಹೊಸ ರಾಷ್ಟ್ರಗಳನ್ನು ಸಂದರ್ಶಿಸುವ, ಅಲ್ಲಿನ ಜನರ ನಡೆನುಡಿಗಳನ್ನು ಅರಿಯುವ ಅವರ ಇತಿಹಾಸ, ಕಲೆ, ಸಾಹಿತ್ಯ, ವಿಜ್ಞಾನಗಳನ್ನು ಅಭ್ಯಸಿಸುವ ಕುತೂಹಲ ಮಾನವನಲ್ಲಿ ಸಹಜವಾಗಿಯೇ ಇರುತ್ತದೆ. ಇದರಿಂದ ಪ್ರೇರಿತರಾಗಿ ಅನೇಕರು ದೂರ ಪ್ರವಾಸ ಕೈಗೊಳ್ಳುತ್ತಾರೆ. ಉನ್ನತ ವ್ಯಾಸಂಗ, ವ್ಯಾಪಾರ, ತೀರ್ಥಯಾತ್ರೆ, ಸ್ವಂತ ಅಥವಾ ಉದ್ಯೋಗ ಸಂಬಂಧದ ಕೆಲಸ ಅಥವಾ ಸುತ್ತಾಡುವ ಕುತೂಹಲ—ಹೀಗೆ ಹಲವಾರು ಕಾರಣಗಳಿಂದ ಜನ ಪ್ರವಾಸ ಕೈಗೊಳ್ಳುತ್ತಾರೆ. ಪ್ರವಾಸ ಕಾಲದಲ್ಲಿ ಅನುಭವಿಸಿದ ಸುಖ ಸಂತೋಷಗಳು, ಸಂಕಟಗಳು, ವಿನೋದ ಪ್ರಸಂಗಗಳು, ಕಂಡ ಸುಂದರ ದೃಶ್ಯಗಳು, ವಿಚಿತ್ರ ನಡವಳಿಕೆಗಳು ಎಲ್ಲವನ್ನೂ ಪ್ರತಿಯೊಬ್ಬ ಪ್ರವಾಸಿಯೂ ತನ್ನದೇ ಆದ ದೃಷ್ಟಿಯಿಂದ ನೋಡುತ್ತಾನೆ. ತಾನು ಅನುಭವಿಸಿದ್ದನ್ನು ಬರೆಯಬೇಕೆಂಬ ಅಪೇಕ್ಷೆ ಎಲ್ಲರಲ್ಲೂ ಇಲ್ಲದಿರುವುದರಿಂದ ಪ್ರವಾಸಾನುಭವ ಪಡೆದವರೆಲ್ಲ ಪ್ರವಾಸ ಸಾಹಿತ್ಯವನ್ನು ರಚಿಸುವುದಿಲ್ಲ. ಅದರೆ ಪ್ರವಾಸ ಸಾಹಿತ್ಯವನ್ನು ಬರೆಯುವವರೆಲ್ಲರೂ ಸಾಹಿತಿಗಳೇ ಆಗಿರಬೇಕೆಂದೂ ಇಲ್ಲ. ವಿಶ್ವದ ಪ್ರಸಿದ್ಧ ಪ್ರವಾಸ ಸಾಹಿತ್ಯ ಗ್ರಂಥಗಳನ್ನು ಸೃಷ್ಟಿಸಿದವರಲ್ಲಿ ನಾವಿಕರು, ಸಂಶೋಧಕರು ಹಾಗೂ ವಿಜ್ಞಾನಿಗಳು ಇದ್ದಾರೆ.

ಪ್ರವಾಸ ಸಾಹಿತ್ಯ ರಚಿಸಿದವರಲ್ಲಿ ಪಾಶ್ಚಾತ್ಯರು ಮೊದಲಿಗರು. ಆಂಗ್ಲ ಸಾಹಿತಿ ರಾಬರ್ಟ್ ಲೂಯಿ ಸ್ಟೀವನ್‌ಸನ್ (1850–94) 'ಕತ್ತೆಯೊಡನೆ ಪ್ರವಾಸಗಳು' ಎನ್ನುವ ಪುಸ್ತಕದಲ್ಲಿ, ಫ್ರಾನ್ಸಿನಲ್ಲಿ ತಾನು ಮಾಡಿದ ಪ್ರವಾಸವನ್ನು ವರ್ಣಿಸಿದ್ದಾನೆ. ಪ್ರವಾಸ ಸಾಹಿತ್ಯದಿಂದ ಪ್ರೇರಿತವಾದ ಕಾದಂಬರಿಗಳೂ ಇವೆ. 'ಗಲಿವರನ ಪ್ರವಾಸಗಳು' ಇಂಥ ಒಂದು ಕೃತಿ.

ಸೂರಿ ವೆಂಕಟರಮಣಶಾಸ್ತ್ರೀ ಅವರು ಬರೆದ 'ದಕ್ಷಿಣ ಭಾರತ ಯಾತ್ರೆ' ಈಗ ತಿಳಿದಿರುವಂತೆ ಕನ್ನಡದ ಪ್ರಥಮ ಪ್ರವಾಸ ಸಾಹಿತ್ಯ. ಪ್ರಕಟವಾದದ್ದು ಸುಮಾರು 1890ರಲ್ಲಿ. ಇದರ ತರುವಾಯ 35 ವರ್ಷಗಳ ಕಾಲ ಉಲ್ಲೇಖಾರ್ಹವಾದ ಯಾವ ಪ್ರವಾಸ ಕಥನಗಳೂ ಕನ್ನಡದಲ್ಲಿ ಬರಲಿಲ್ಲ.

1926ರಲ್ಲಿ ವಿ. ಸೀತಾರಾಮಯ್ಯನವರ 'ಪಂಪಾ ಯಾತ್ರೆ' ಪ್ರಕಟವಾಯಿತು. ನವಿರಾದ ಹಾಸ್ಯ ಮನೋಜ್ಞ ವರ್ಣನೆಗಳಿಂದ ಈ ಕೃತಿ ಮೋಹಕವಾಗಿದೆ. ಗೋಕಾಕರ 'ಸಮುದ್ರದಾಚೆಯಿಂದ' ಅವರ ವಿದೇಶ ಯಾತ್ರೆಯಿಂದ ಪ್ರೇರಿತವಾದದ್ದು. ಅವರ 'ಸಮುದ್ರದಾಚೆಯಿಂದ' ಹಾಗೂ 'ಸಮುದ್ರದೀಚೆಯಿಂದ' ದಿನಚರಿಯಂತೆ ಬರೆಯಲ್ಪಟ್ಟಿವೆ. ಶಿವರಾಮ ಕಾರಂತರ 'ಅಬೂವಿನಿಂದ ಬರಾಮಕ್ಕೆ', 'ಅಪೂರ್ವ ಪಶ್ಚಿಮ', ಉತ್ತಮ ಪ್ರವಾಸಸಾಹಿತ್ಯ. ಶ್ರೀಕೃಷ್ಣ ನಾರಾಯಣ ಗೋಸಾವಿ ತೀರ್ಥಯಾತ್ರೆ ಮಾಡಿ, 'ಕೈಲಾಸ–ಮಾನಸ ಸರೋವರ ಯಾತ್ರೆ', 'ಹಿಮಾಲಯ ದರ್ಶನ' ಮುಂತಾದ ಪುಸ್ತಕಗಳನ್ನು ಬರೆದಿದ್ದಾರೆ. ಕೃಷ್ಣಾನಂದ ಕಾಮತರ 'ನಾನೂ ಅಮೇರಿಕೆಗೆ ಹೋಗಿದ್ದೆ' ಒಂದು ಗಣನೀಯ ಕೃತಿ. ಲೂಯಿಸ್ ಅವರ 'ನಾ ಕಂಡ ಅಮೆರಿಕ'ವೂ ಇಂಥದು. ಎಚ್. ವಿ. ಶ್ರೀರಂಗರಾಜ್ ಅವರ 'ಸೋವಿಯೆಟ್ ದಿನಚರಿ' ಮತ್ತು ದೇಜಗೌ ಅವರ 'ವಿದೇಶದಲ್ಲಿ ನಾಲ್ಕು ವಾರ' ದಿನಚರಿ ರೂಪದ ಶ್ರೇಷ್ಠ ಪ್ರವಾಸ ಸಾಹಿತ್ಯ.

ಕನ್ನಡದ ಪ್ರಸಾರವಾದ ನಾಟಕಗಳಲ್ಲಿ ಎಸ್. ಎನ್. ಶಿವಸ್ವಾಮಿಯವರ 'ಹೃದಯಾಂತರಾಳ', ಜಮರಂಗರ 'ಶವದ ಮನೆ', ಎಚ್. ಕೆ. ರಂಗನಾಥರ '[illegible]', [illegible] 'ಸರಸ ಕೇಂದ್ರ', ಶ್ರೀರಂಗರ 'ಪ್ರಾರಬ್ಧ', ಪರ್ವತವಾಣಿಯವರ 'ಇಷ್ಟಾರ್ಥ', ಎ. ಕೆ. ರಾಮಾನುಜನ್ ಅವರ '[illegible]', ಕೆ. ವಿ. ಸುಬ್ಬಣ್ಣನವರ '[illegible] ಗುಡುಗಳು', ಬಿ. ಜಿ. [illegible]ಯವರ '[illegible]', [illegible] 'ಜೋನ್ ಆಫ್ ಆರ್ಕ್', [illegible]ಯವರ 'ಕನ್ನಡವು ಕಣ್ಣು ತೆರೆಯಿತು' ಮೊದಲಾದುವು ಗಮನಾರ್ಹ ಕೃತಿಗಳು. ಅ. ನ. ಕೃ., ಟಿ. [illegible], ಕೆ. ವಿ. [illegible] ಕೃತಿಗಳನ್ನು ಆಧರಿಸಿದ ಪ್ರಸಾರ ನಾಟಕಗಳು ರಚಿತವಾಗಿವೆ. ಇತರ ಭಾರತೀಯ ಭಾಷೆಯ ಕಥೆ ಕಾದಂಬರಿಗಳೂ ಅನ್ಯ ದೇಶದ ಕೃತಿಗಳೂ ಪ್ರಸಾರ ನಾಟಕಗಳಾಗಿ ಬಿತ್ತರಗೊಳ್ಳುತ್ತವೆ.

ಗೀತ ನಾಟಕ, ಗದ್ಯ ಪದ್ಯ ನಾಟಕ, ಜಾನಪದ ನಾಟಕ, ಅನೂದಿತ ಅಥವಾ ಕಾಲ್ಪನಿಕ ನಾಟಕ, [illegible]ನಾಟಕಗಳೆಲ್ಲವನ್ನು ಪ್ರಸಾರ ಮಾಧ್ಯಮದಲ್ಲಿ ನಿರೂಪಿಸುವುದು ಸಾಧ್ಯ.

ಶಬ್ದಚಿತ್ರ, ಪ್ರಸಾರ ನಾಟಕದ ಒಂದು ಮುಖ್ಯ ರೂಪ. ನಿಜವಾಗಿ ನಡೆದ ಘಟನೆ ಅಥವಾ ವಿಷಯಗಳು ಸಾಮಾನ್ಯವಾಗಿ ಪ್ರಸಾರದ ಕೇಂದ್ರಬಿಂದುವಾಗುತ್ತವೆ. ರಂಗಭೂಮಿಯ ಮೇಲೆ ಮೂಡಿಸಲಾಗದ ಒಂದು ಭಾವನೆ ಅಥವಾ ಅನುಭವವನ್ನು ಕೂಡ ಶಬ್ದಚಿತ್ರದಲ್ಲಿ ಮೂಡಿಸಬಹುದು. ಇದು ಪ್ರಸಾರ ಮಾಧ್ಯಮದಲ್ಲಿಷ್ಟೇ ಸಾಧ್ಯ. ಒಂದು ಪ್ರದೇಶವನ್ನೋ ಕಾರಖಾನೆಯನ್ನೋ ಸಂದರ್ಶಿಸಿ ಅಲ್ಲಿ ನೋಡತಕ್ಕದ್ದನ್ನೆಲ್ಲ ಕೇವಲ ಮಾತು, ಶಬ್ದ ವಿಶೇಷಗಳ ಮೂಲಕ ಶ್ರೋತೃವಿನ ಮನಸ್ಸಿಗೆ ಮುಟ್ಟುವಂತೆ ಚಿತ್ರಿಸುವ 'ಶಬ್ದ ಚಿತ್ರ' ಇದಕ್ಕೆ ಒಂದು ಉದಾಹರಣೆ. ಕುಮಾರವ್ಯಾಸನ ಜೀವನ, ಸಾಧನೆಗಳನ್ನು ಕುರಿತು ಪ್ರಸಾರಗೊಂಡ ಸಂಶೋಧನ ಸಾಕ್ಷ್ಯಚಿತ್ರ, ತುಂಗಭದ್ರಾ ಅಣೆಕಟ್ಟನ್ನು ಕುರಿತು ಕಟ್ಟಿದ ಶಬ್ದ ಚಿತ್ರ, ವಾದ್ಯಗಳ ಗುಣಧರ್ಮಗಳನ್ನು ಕುರಿತು ರಚಿಸಿದ ವಸಂತಕವಲಿಯವರ 'ನಾದ ಪ್ರಪಂಚ', ಷರೀಫ್ ಸಾಹೇಬರ ಬಗೆಗೆ ಎಸ್. ಆರ್. ಮಳಗಿಯವರ ಶಬ್ದ ಚಿತ್ರ – ಈ ಹಲವು ಉತ್ತಮ ಉದಾಹರಣೆಗಳು.

ಯಕ್ಷಗಾನವನ್ನೂ ಈಗ ಪ್ರಸಾರ ರೂಪಕ್ಕೆ ಹೊಂದಿಸಲಾಗುತ್ತಿದೆ. ಚಲಚ್ಚಿತ್ರಗಳ ಮೂಲ ಧ್ವನಿಚಿತ್ರವನ್ನೇ ಪ್ರಸಾರಕ್ಕಾಗಿ ಅಳವಡಿಸುವುದು ಈಗ ರೂಢಿಯಲ್ಲಿದೆ. ಪ್ರಸಾರಕ್ಕಾಗಿ ಬರೆದ ಸಂಗೀತ ನಾಟಕಗಳೂ ಜನಪ್ರಿಯವಾಗಿವೆ. ಪು. ತಿ. ನ. ಅವರ 'ವಸಂತ ಚಂದನ', 'ಸೀತಾ ಕಲ್ಯಾಣ' ಸಿದ್ಧಯ್ಯ ಪುರಾಣಿಕರ 'ಗಿರಿಜಾ ಕಲ್ಯಾಣ', ನಾರಾಯಣ ಸಂಗಮರ 'ಪುರಂದರ ದಾಸ' ಇವು ಈ ಪ್ರಕಾರಕ್ಕೆ ಸೇರಿದ ಖ್ಯಾತ ಕೃತಿಗಳು.

ಕನ್ನಡದಲ್ಲಿ ಪ್ರಸಾರ ನಾಟಕಕ್ಕೆ ಈಗ ಸ್ಫುಟವಾದ ರೂಪ ಒದಗಿದೆ. ಪ್ರಸಾರ ನಾಟಕದಿಂದ ರಂಗನಾಟಕವೂ ಪ್ರಭಾವಿತವಾಗಿದೆ.

## ಪಾರ್ತಿ ಸುಬ್ಬ

'ಯಕ್ಷಗಾನಾಚಾರ್ಯ', 'ಯಕ್ಷಗಾನ ಕವಿಶ್ರೇಷ್ಠ', 'ಯಕ್ಷಗಾನ ವಾಲ್ಮೀಕಿ' —ಮುಂತಾದ ಪ್ರಶಂಸೆಗೆ ಒಳಗಾಗಿದ್ದಾನೆ ಪಾರ್ತಿ ಸುಬ್ಬ. ಈತನ ಸ್ಥಳ, ಜೀವನ ವಿವರಗಳನ್ನು ಕುರಿತು ದೀರ್ಘಕಾಲದವರೆಗೆ ತೀವ್ರ ಭಿನ್ನಾಭಿಪ್ರಾಯಗಳಿದ್ದುವು. ಹಲವಾರು ಮಂದಿ ವಿದ್ವಾಂಸರು ಅಭಿಪ್ರಾಯಪಟ್ಟಿರುವಂತೆ ಇವನು ಕಾಸರಗೋಡು ತಾಲೂಕು ಕುಂಬಳೆಯವನಾಗಿದ್ದಿರಬೇಕೆಂಬ ವಾದಕ್ಕೆ ಪುಷ್ಟಿ ದೊರೆತಿದೆ. ಇವನ ಕಾಲದ ಬಗೆಗೂ ಹಿಂದೆ ಭಿನ್ನಾಭಿಪ್ರಾಯಗಳಿದ್ದುವು. [illegible]ಯಲ್ಲಿರಬಹುದೆಂಬ ಅಭಿಪ್ರಾಯ ಬಲಗೊಂಡಿದೆ.

'ಪುತ್ರಕಾಮೇಷ್ಟಿ', 'ಪಟ್ಟಾಭಿಷೇಕ', 'ಪಂಚವಟಿ', [illegible] ಕಾಳಗ', 'ಚೂಡಾಮಣಿ', 'ಸೇತುಬಂಧನ', 'ಅಂಗದ ಸಂಧಾನ', 'ಕುಂಭಕರ್ಣ ಕಾಳಗ', 'ಇಂದ್ರಜಿತು ಕಾಳಗ', '[illegible] ಕಾಳಗ', '[illegible]', 'ಐರಾವತ'ದಂಥ ಉತ್ತಮ ಯಕ್ಷಗಾನ ಪ್ರಸಂಗಗಳನ್ನು ಬರೆದ ಕವಿ ಪಾರ್ತಿ ಸುಬ್ಬನದು. ಇವುಗಳಲ್ಲಿ ಮೊದಲಿನ ಹತ್ತು ಕೃತಿಗಳ ವಸ್ತುಗಳು 'ರಾಮಾಯಣ'ದಿಂದ ಆರಿಸಿಕೊಂಡವು. 'ಐರಾವತ' ಮಹಾಭಾರತದಿಂದಲೂ 'ಬಾಲಲೀಲೆ' ಭಾಗವತದಿಂದಲೂ ಎತ್ತಿಕೊಂಡ ವಸ್ತುಗಳು. ಇವಲ್ಲದೆ 'ಸಭಾಲಕ್ಷಣ' ಎಂಬ ಗ್ರಂಥವನ್ನೂ ಅವನು ರಚಿಸಿದ್ದಾನೆ.

ಪಾರ್ತಿ ಸುಬ್ಬ ಯಕ್ಷಗಾನಗಳ ರಚನೆಯಲ್ಲಿ ಸಿದ್ಧಹಸ್ತ. ಜೊತೆಗೆ ಶ್ರೀರಾಮನ ಅಪ್ರತಿಮ ಭಕ್ತ. ಕಣ್ವಪುರದ ಅಂದರೆ ಕುಂಬಳೆಯ ಗೋಪಾಲಕೃಷ್ಣನಂತೂ ಅವನ ಆರಾಧ್ಯದೈವ. ಗೋಪಾಲಕೃಷ್ಣನ ಮೋಹಕ ಸ್ತುತಿ ಅವನ ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತಲೇ ಇರುತ್ತದೆ. ಪಾರ್ತಿ ಸುಬ್ಬನ ಪ್ರಸಂಗಗಳು ಶೈಲಿ ಸುಭಗ : ಕವಿತಾಶಕ್ತಿ ಗಮನಾರ್ಹ.

ಅವನ ಪ್ರಸಂಗಗಳಲ್ಲಿ ಬರುವ ಕೆಲವು ಹಾಡುಗಳಂತೂ ತೀರಾ ಸರಳ. ಒಂದೆರಡು ಬಾರಿ ಕೇಳಿದ ಸಾಮಾನ್ಯರೂ ನೆನಪಿನಲ್ಲಿಟ್ಟುಕೊಳ್ಳಬಹುದು. ಪಾರ್ತಿ ಸುಬ್ಬ ಗಾದೆಗಳನ್ನೂ ಜಾಣ್ನುಡಿಗಳನ್ನೂ ತನ್ನ ಪ್ರಸಂಗಗಳಲ್ಲಿ ಧಾರಾಳವಾಗಿ ಉಪಯೋಗಿಸಿದ್ದಾನೆ. ಸೂಕ್ತ ರಾಗ ತಾಳಗಳ ಯೋಜನೆ, ಆಕರ್ಷಕ ಪದಜೋಡಣೆಗಳು ಪಾರ್ತಿಸುಬ್ಬನ ಕೃತಿಗಳ ಗುಣಾಂಶಗಳು.

'ತನ್ನ ಮುಂಡೆ ಗಟ್ಟಿಹುದೆಂದು ಮರಕೆ ಜಪ್ಪುವುದುಂಟೆ ?'
'ಕಿಚ್ಚಿಗಿರುವೆ ಮುತ್ತಲುಂಟೆ ?'
'ಕಲ್ಲೊಳಂಬುಜವರಳಿತಾವರು......ರಾಮನಾ ಸತಿ ಸಿಕ್ಕಳಯ್ಯ'
'ಹುಟ್ಟಿದ ಕೂಡಲೇ ಮರಣವ ಕಟ್ಟಿರಿಸಿದ ವಿಧಿ ಫಣೆಯಲ್ಲಿ'.
'ಕೆಟ್ಟ ಮೇಲಲ್ಲದೆ ಮತಿ ಪುಟ್ಟದು ಜೀವರಿಗೆ'

—ಇಂಥ ಮಾತುಗಳು ತುಂಬ ಸತ್ವಪೂರ್ಣ, ಅರ್ಥಪೂರ್ಣ.

"ಪುಟ್ಟಿದನು ಪಗೆಯೆಂದು ಮನದಲಿ ಬಿಟ್ಟಮುಂಡೆಯೊಳೊದರಿ ಬಲು ಬುಸುಗುಟ್ಟುತೇಳುತ ಬೀಳುತಲೆ ಕಂಗೆಟ್ಟು ಭರದಿಂದ ತಡೆವುತೆಡವುತ ಬಂದು ಬಾಗಿಲನೊದೆದು ಹುಂಕರಿಸುತ್ತ ಶಿಶುವನು ಕೊಡುಕೊಡೆನುತಾ ರ್ಭಟಿಸಿ ನಿಂದನು".

—ತನ್ನ ತಂಗಿ ದೇವಕಿಯ ಎಂಟನೆಯ ಮಗು ಹುಟ್ಟಿದಾಗ ಕಂಸನ ಸ್ಥಿತಿಯ ವರ್ಣನೆ ಇದು.

ಪಾರ್ತಿಸುಬ್ಬ ತನಗೆ ಹೃದ್ಯವಾಗಿ ತೋರಿದ ಪುರಾಣ ಕಥಾಭಾಗಗಳನ್ನು ತನ್ನ ಪ್ರಸಂಗಗಳ ವಸ್ತುವಾಗಿ ಆಯ್ದುಕೊಂಡಿದ್ದರೂ ಅವುಗಳಲ್ಲಿ ಅಲ್ಲಲ್ಲಿ ಬದಲಾವಣೆಗಳನ್ನು ಮಾಡಿರುವುದೂ ಉಂಟು.

ಪಾರ್ತಿ ಸುಬ್ಬ ಬಿಟ್ಟುಹೋದ ಯಕ್ಷಗಾನ ಸಂಪತ್ತು ಅಮೂಲ್ಯವಾದದ್ದು. ಯಕ್ಷಗಾನಕ್ಕೆ ಹೊಸ ಮೆರುಗನ್ನು ಕೊಟ್ಟು ಅದರ ಘನತೆಯನ್ನು ಆತ ಮೆರೆಯಿಸಿದ. ಯಕ್ಷಗಾನ ಪ್ರಸಂಗ ಸಾಹಿತ್ಯದ ಆದ್ಯ ಪ್ರವರ್ತಕನಾಗಿಯೂ ಬಯಲಾಟ ಭಾಗವತನಾಗಿಯೂ ಆ ಕಲೆಗೆ ನೂತನ ಸಂಸ್ಕಾರವನ್ನು ಒದಗಿಸಿದ ಸೀಮಾಪುರುಷನಾಗಿಯೂ ಆತ ಖ್ಯಾತನಾಗಿದ್ದಾನೆ. ಕನ್ನಡ ಜಾನಪದ ಕಲೆಯ ಕಿರೀಟದಂತಿರುವ ಯಕ್ಷಗಾನ ಕಲಾಪ್ರಕಾರದ ಉನ್ನತಿಗಾಗಿ ಅವನು ಪಟ್ಟ ಪರಿಶ್ರಮ ಸಾಟಿಯಿಲ್ಲದ್ದು.

**ನೋಡಿ : ಯಕ್ಷಗಾನ**

## ಪಾಪ್ ಸಂಗೀತ

ಮುಸಕು. ಮುಸಕಾದ ರಂಗಭೂಮಿ, ಸಂಗೀತ ವಾದ್ಯಗಳೂ, ಧ್ವನಿವರ್ಧಕಗಳೂ ಅಣಿಗೊಳಿಸಲ್ಪಟ್ಟಿವೆ. ಸಂಗೀತಗಾರರು ವೇದಿಕೆಗೆ ಬಂದು ತಮ್ಮ ತಮ್ಮ ವಾದ್ಯಗಳನ್ನು ಬಾರಿಸುತ್ತಾರೆ. ಕಡೆಯದಾಗಿ ಬರುವವನು ವೇದಿಕೆಯ ಮಧ್ಯೆ ಧ್ವನಿವರ್ಧಕದ ಮುಂದೆ ನಿಲ್ಲುತ್ತಾನೆ.

ಅನಂತರ ಇದ್ದಕ್ಕಿದ್ದಂತೆ ಸಭಾಂಗಣವೆಲ್ಲ ತುಂಬಿ ಅದರ ಎಲ್ಲೆಗಳು ಬಿರಿಯುವುವೇನೋ ಎನ್ನುವಷ್ಟು ಓರಿದಾಗಿ ಸಂಗೀತನಾದ ಹೊರಹೊಮ್ಮುತ್ತದೆ. ವೇದಿಕೆಯನ್ನು ಬೆಳಕು ಆವರಿಸುತ್ತದೆ. ಉಜ್ವಲ ಬಣ್ಣಗಳಿಂದ ವೇದಿಕೆ ಹೊಳೆಯುತ್ತದೆ. ಸಾಂಕೇತಿಕ ಆಕೃತಿಗಳು, ನಿಂತಲ್ಲಿ ನಿಲ್ಲದೆ ಸರಿದಾಡುವ ಸಂಗೀತಗಾರರು, ಬದಲಾಗುತ್ತಲೇ ಇರುವ ಸಂಗೀತದ ಲಯ; ಕಿಕ್ಕಿರಿದ ಸಭಾಂಗಣದಲ್ಲಿ ಪ್ರೇಕ್ಷಕರು ಈ ಲಯಗಳಿಗೆ ಸರಿಯಾಗಿ ಬಾಗುತ್ತಾರೆ, ಬಳುಕುತ್ತಾರೆ, ಓಲಾಡುತ್ತಾರೆ. ಕಡೆಗೆ ಆವೇಶಗೊಂಡು ಅತ್ತು, ಕರೆದು ತಮ್ಮ ಆರಾಧ್ಯಮೂರ್ತಿಗಳಾದ ಸಂಗೀತಗಾರರನ್ನು ಸ್ಪರ್ಶಿಸುವುದಕ್ಕಾಗಿ ಮುನ್ನುಗ್ಗುತ್ತಾರೆ. ಈ ಸಂಗೀತದ ಗತಿ ತೀವ್ರ. ತೀವ್ರತೆ ಹೆಚ್ಚಾದಂತೆ ಭಾವುಕತೆಯೂ ಹೆಚ್ಚುತ್ತದೆ. ಸಂಗೀತಗಾರರು, ಶ್ರೋತೃಗಳು, ವಾದ್ಯಗಳು, ದೀಪಗಳು, ಕಟ್ಟಡ, ಆಕಾಶ, ಭೂಮಿ, ಮನಸ್ಸು, ಮೈ ಇವು ಬೇರೆ ಬೇರೆ ಎಂಬ ಅರಿವು ಕೂಡ ಉಳಿಯುವುದಿಲ್ಲ.

ಇದು ಇಂದಿನ ಅಮೆರಿಕದ ಪಾಪ್ ಸಂಗೀತ. 1966–67ರಿಂದೀಚೆಗೆ ಹೆಚ್ಚು ಜನಪ್ರಿಯಗೊಳ್ಳುತ್ತಿರುವ ಸಂಗೀತ ಪ್ರಕಾರ.

ಪಾಪ್ ಎಂಬುದು ಪಾಪ್ಯುಲರ್ ಎಂಬುದರ ಹ್ರಸ್ವರೂಪ. ಪಾಪ್ಯುಲರ್ ಎಂದರೆ ಜನಪ್ರಿಯವಾದದ್ದು.

ಪಾಪ್ ಸಂಗೀತ ಕಾಲಕಾಲಕ್ಕೆ ಅಂದಂದಿನ ಅಭಿರುಚಿಗಳಿಗೆ ಅನುಗುಣವಾಗಿ ಬದಲಾಗುವ ಸಂಗೀತ. ಪಾಪ್ ಸಂಗೀತ ಎಂಬ ಹೆಸರು ಮಾತ್ರ ನಿರ್ದಿಷ್ಟವಾಗಿ ಅಮೆರಿಕದ ಪ್ರಚಲಿತ ಜನಪ್ರಿಯ ಸಂಗೀತಕ್ಕೆ ಅನ್ವಯಿಸುತ್ತದೆ. ಕಳೆದ ಕೆಲವು ದಶಕಗಳಿಂದ ಸರಳ ರಾಗದಿಂದ ಕೂಡಿದ 32 ಆವರ್ತಗಳನ್ನೂ ಲಾವಣಿಯ ನುಡಿಗಟ್ಟಿನಂತೆ ಸಾಹಿತ್ಯವನ್ನೂ ಉಳ್ಳ ಸಂಗೀತ ರೂಪುಗೊಂಡು, ಪಾಪ್ ಸಂಗೀತವೆಂದು ಕರೆಯಲ್ಪಟ್ಟಿತು.

ಸುಮಾರು 1880ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನದ ಸಂಗೀತಗಾರರು ಈ ಹಾಡುಗಳಿಂದ ಹಣ ಸಂಪಾದನೆ ಸಾಧ್ಯ ಎಂದು ಮನಗಂಡರು. ಆಗಿನ ಜನರ ಸಂಗೀತದ ಬೇಕು ಬೇಡಗಳಿಗೆ ತಕ್ಕಂತೆ ಸಾರ್ವಜನಿಕ ಸಭೆಗಳಲ್ಲಿ ಹಾಡಿ ಹಣ ಪಡೆಯತೊಡಗಿದರು. ರೇಡಿಯೋ, ವಾಕ್‌ಚಿತ್ರ, ಧ್ವನಿಮುದ್ರಿಕೆಗಳು ಬಂದ ಮೇಲಂತೂ ಇಂಥ ಗೀತೆಗಳು ಹೆಚ್ಚು ಹೆಚ್ಚು ಜನರ ಲಕ್ಷ್ಯಕ್ಕೆ ಬಂದುವು. ಈ ಸಂಗೀತದಲ್ಲಿ ಮೇಲುಗೈ ಎನಿಸಬೇಕೆಂಬ ಸ್ಪರ್ಧಾ ಮನೋಭಾವ ಸಾರ್ವತ್ರಿಕವಾಯಿತು. ಈ ಸಂಗೀತದಲ್ಲಿ ಆಸಕ್ತಿಯುಳ್ಳ ಅನೇಕ ಸಂಘಸಂಸ್ಥೆಗಳು ತಲೆಯೆತ್ತಿದುವು. ಬೇರೆ ಬೇರೆ ಬಗೆಯ ಸಂಗೀತಗಳನ್ನು ಪಾಪ್ ಸಂಗೀತದ ಜಾಡಿಗೆ ತರುವ ಪ್ರಯತ್ನಗಳೂ ನಡೆದುವು.



ಪಾಪ್ ಖ್ಯಾತಿ : ಉಷಾ ಆಯ್ಯರ್



ಸಂಗೀತ ರಚಿಸುತ್ತಿರುವ ಬೀಟ್ಲ್‌ಗಳು

ಮೊದಲನೆಯ ಜಾಗತಿಕ ಯುದ್ಧದ ಅನಂತರ ಜಾಸ್ ಸಂಗೀತ ಅಮೆರಿಕದಲ್ಲಿ ಜನಪ್ರಿಯವಾಗಿ ಪ್ರಪಂಚದ ಎಲ್ಲೆಡೆಗೂ ಹಬ್ಬಿತು. ಆಫ್ರಿಕ, ಕ್ಯೂಬ, ಲ್ಯಾಟಿನ್ ಅಮೆರಿಕಗಳು ಜನಪ್ರಿಯ ಲಯಗಳಿಗೆ ಸಂಬಂಧಪಟ್ಟಂತೆ ಚಾಚಾ, ರುಂಬಾ, ಸಾಂಬಾ ಸಂಗೀತಗಳು ಪಾಪ್ ಸಂಗೀತಗಳಾದುವು. ಬಿಂಗ್ ಕ್ರಾಸ್‌ಬಿ, ಫ್ರಾಂಕ್ ಸಿನಾತ್ರ, ಇವರು ಈ ಶತಮಾನದ ಐದು ಆರನೆಯ ದಶಕಗಳ ಪಾಪ್ ಸಂಗೀತದ ಖ್ಯಾತ ಗಾಯಕರು. ಅನಂತರ ರಾಕ್ ಸಂಗೀತ, ಎಲ್ವಿಸ್ ಪ್ರೆಸ್ಲಿಯ ಸಂಗೀತ, ಬೀಟ್ಲ್ ಸಂಗೀತಗಳು ಪಾಪ್ ಸಂಗೀತಗಳಾದುವು. ಡಿಲಾನ್‌ನ ಗೀತೆಗಳು ಅತ್ಯಂತ ಜನಪ್ರಿಯ ಪಾಪ್ ಗೀತೆಗಳು. ನೀಗ್ರೊ ಸಂಗೀತವನ್ನಳವಡಿಸಿಕೊಂಡ 'ನವ ರಾಕ್' ಸಂಗೀತ ಇಂದಿನ ಪಾಪ್ ಸಂಗೀತವಾಗಿದೆ. ಬಹುಮಟ್ಟಿಗೆ ಇದು ಜಾಸ್‌ನಿಂದ ಸ್ಫೂರ್ತಿ ಪಡೆದಿದೆ. ಜಾನಪದ ಸಂಗೀತವೂ ಇದರಲ್ಲಿ ಸೇರಿದೆ. ಹಳೆಯ ಸಾಂಪ್ರದಾಯಿಕ ಜಾನಪದ ಮಟ್ಟುಗಳಿಗೆ ಪ್ರಚಾರದಲ್ಲಿರುವ ಲಯಗಳನ್ನು ಜೋಡಿಸಿ, ನೂತನ ಜಾನಪದ ಸಂಗೀತವನ್ನು ರೂಪಿಸಲಾಗುತ್ತಿದೆ.

ಸಂಗೀತದ ಅಭಿರುಚಿ ಒಂದೊಂದು ದೇಶ, ಕಾಲಗಳಲ್ಲಿ ಒಂದೊಂದು ಬಗೆ. ಕೆಲ ಬಗೆಯ ಹಳೆಯ ಆಪೆರಾ ಸಂಗೀತ ಇಂದಿಗೂ ಇಟಲಿಯಲ್ಲಿ ಜನಪ್ರಿಯವಾಗಿದೆ. ಇದು ಒಂದು ದೃಷ್ಟಿಯಿಂದ ಪಾಪ್ ಸಂಗೀತವೇ. ಇಂಗ್ಲೆಂಡಿನಲ್ಲಿ 19ನೆಯ ಶತಮಾನದಲ್ಲಿ ಸ್ಟ್ರಾಸ್ ರಚಿಸಿದ ವಾಲ್ಟ್ಸ್ ಸಂಗೀತ ಆ ಕಾಲಕ್ಕೆ ಪಾಪ್ ಸಂಗೀತವೇ ಆಗಿತ್ತು. ಭಾರತದಲ್ಲಿ ಇಂದಿನ ಪಾಪ್ ಸಂಗೀತವೆಂದರೆ ಲಘು ಸಂಗೀತ, ಭಾವಗೀತೆ ಹಾಗೂ ಚಲಚ್ಚಿತ್ರ ಗೀತೆಗಳು. ಇವು ಅಲ್ಪಾವಧಿಯಲ್ಲಿ ಅತ್ಯಂತ ಜನಪ್ರಿಯವಾಗಿವೆ. ಭಾರತದ ಸಿತಾರ್ ಇಂದು ಅಮೆರಿಕದ ಪಾಪ್ ಸಂಗೀತದ ಒಂದು ವಾದ್ಯವಾಗಿದೆ. ಪಾಪ್ ಸಂಗೀತದ ಆರಾಧಕರು ಬಹುಮಟ್ಟಿಗೆ 16ರಿಂದ 30ರ ವಯೋಮಾನದವರು. ಅಮೆರಿಕದಲ್ಲಿ ಹೊರಾಂಗಣದಲ್ಲಿ ಪಾಪ್ ಸಂಗೀತ ಕಾರ್ಯಕ್ರಮ ನಡೆದಾಗ ಲಕ್ಷೋಪಲಕ್ಷ ಯುವಶ್ರೋತೃಗಳು ಅಲ್ಲಿ ನೆರೆಯುತ್ತಾರೆ. ಆ ಕಾರ್ಯಕ್ರಮದಲ್ಲಿ ಮೈ ಮರೆತು ಭಾಗವಹಿಸುತ್ತಾರೆ.

## ಪಾಬ್ಲೊ ನೆರೂದಾ

1971 ಅಕ್ಟೋಬರ್ ಒಂದು ದಿನ ಆ ವರ್ಷದ ನೊಬೆಲ್ ಬಹುಮಾನ ಯಾರಿಗೆ ಎಂದು ತಿಳಿಯಲು ಸುದ್ದಿಗಾರರನ್ನೂ ಒಳಗೊಂಡು ಅನೇಕ ಜನ



ಮೂಕರವಾಣಿ : ನೆರೂದಾ

ಸ್ಟಾಕ್ ಹೋಮಿನಲ್ಲಿರುವ ಸ್ವೀಡಿಷ್ ಅಕಾಡೆಮಿಯ ಕಾರ್ಯಾಲಯದ ಹೊರಗೆ ಸೇರಿದ್ದರು. ಸಮಯಕ್ಕೆಸರಿಯಾಗಿ ಅಕಾಡೆಮಿಯ ಕಾರ್ಯದರ್ಶಿ ಕಾಣಿಸಿಕೊಂಡ.

ಆತನೆಂದ : "ಈ ಬಾರಿ ನೊಬೆಲ್ ಸಾಹಿತ್ಯ ಬಹುಮಾನ ಒಬ್ಬ ರಾಯಭಾರಿಗೆ ಹೋಗುತ್ತದೆ. ಅವನ ಹೆಸರು ರಿಕಾರ್ಡೋ ಎಲಿಜರ್ ನೆಫ್ತಾಲಿ ರೇಯಸ್ ಇ ಬಸೊವಾಲ್ತೋ".

ಅನಂತರ ಕ್ಷಣ ಕಾಲ ನಾಟಕೀಯ ಮೌನ. ಯಾರೀತ ಇಷ್ಟುದ್ದ ಹೆಸರಿನ ಅನಾಮಧೇಯ ಸಾಹಿತಿ! ಎಂದು ಜನ ಕಣ್ಣು ಬಿಡಲಾರಂಭಿಸಿದಾಗ ಕಾರ್ಯದರ್ಶಿ ತನ್ನ ಮಾತನ್ನು ಮುಂದುವರಿಸಿ, "ಅವನಿಗೆ ಪಾಬ್ಲೋ ನೆರೂದಾ ಎಂಬ ಹೆಸರೂ ಇದೆ!" ಎಂದ.

ಜನಪ್ರಿಯ ಕವಿ ಪಾಬ್ಲೋ ನೆರೂದಾನ ಬೆಂಬಲಿಗರು ಇಪ್ಪತ್ತು ವರ್ಷಗಳಿಂದ ಅವನ ಹೆಸರನ್ನು ನೊಬೆಲ್ ಸಾಹಿತ್ಯ ಬಹುಮಾನಕ್ಕೆ ಸೂಚಿಸುತ್ತ ಬಂದಿದ್ದರು. ಈ ಬಹುಮಾನವನ್ನು ಪಡೆದ ಚಿಲಿ ರಾಷ್ಟ್ರೀಯರಲ್ಲಿ ನೆರೂದಾ ಎರಡನೆಯವನು. ಇವನ ಅಧ್ಯಾಪಕ ಗೇಬ್ರಿಯೆಲ್ ಮಿಸ್ಟ್ರಾಲ್‌ಗೆ 1945ರಲ್ಲಿ ಈ ಬಹುಮಾನ ದೊರೆತಿತ್ತು.

ಸ್ಪಾನಿಷ್ ಭಾಷೆ ಮಾತನಾಡುವ ಜನರಿರುವೆಡೆಯಲ್ಲೆಲ್ಲ ನೆರೂದಾ ಹೆಸರು ಮನೆಮಾತು.

ಪಾಬ್ಲೋ ನೆರೂದಾ ಹುಟ್ಟಿದ್ದು 1904ರ ಜುಲೈ 12ರಂದು. ಜನ್ಮಸ್ಥಳ ದಕ್ಷಿಣ ಚಿಲಿಯಲ್ಲಿರುವ ಪರಾಲ್. ಎಂಟು ವರ್ಷದ ಹುಡುಗನಾಗಿದ್ದಾಗಲೇ ಹಾಡು ಬರೆಯಲು ಆರಂಭಿಸಿದ. ಅವನ ತಂದೆ ರೈಲು ಎಂಜಿನ್ ಚಾಲಕ. ಕವಿ ಎಂದರೆ ಕೆಲಸಕ್ಕೆ ಬಾರದ ಹರಟೆಯಲ್ಲಿ ತೊಡಗಿರುವವನು ಎಂಬ ಅಭಿಪ್ರಾಯ ಅವನದು. ಮಗ ಹಾಡು ಬರೆದಿದ್ದ ನೋಟ್ಸ್ ಪುಸ್ತಕ ಇವನ ಕಣ್ಣಿಗೆ ಬಿದ್ದರೆ ಅದು ನೇರವಾಗಿ ಒಲೆ ಸೇರುತ್ತಿತ್ತು. ತಂದೆಯ ಕೋಪಕ್ಕೆ ಹೆದರಿಯೇ, 'ಪಾಬ್ಲೋ ನೆರೂದಾ' ಎಂಬ ಕಾವ್ಯನಾಮ ಇಟ್ಟುಕೊಂಡು ಹದಿನೈದು ವರ್ಷದ ಕಿರಿಯ ಪದ್ಯಗಳನ್ನು ಪ್ರಕಟಿಸಿದ. ಈ ಹೆಸರಿನ ಎರಡನೆಯ ಪದ ಚೆಕೊಸ್ಲೊವಾಕಿಯದ ಲೇಖಕ ಜಾನ್ ನೆರೂದಾನ (1834–91) ಹೆಸರಿನಿಂದ ಆರಿಸಿಕೊಂಡದ್ದು.

19ನೆಯ ವಯಸ್ಸಿಗೆ ನೆರೂದಾ ಮೊದಲ ಕವನ ಸಂಕಲನ 'ಮುಚ್ಚಂಜೆ' ಹೊರಬಂತು. ಮರುವರ್ಷ 'ಇಪ್ಪತ್ತು ಪ್ರೇಮ ಕವನಗಳು ಮತ್ತು ಒಂದು ನಿರಾಶಾ ಗೀತೆ' ಪ್ರಕಟವಾಯಿತು. ಇಂದಿಗೂ ಇದು ನೆರೂದಾನ ಅತಿ ಜನಪ್ರಿಯ ಗ್ರಂಥ ; ಹತ್ತು ಲಕ್ಷಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗಿವೆ.

ನೆರೂದಾ ಜನತೆಯ ಕವಿ. "ಮುಚ್ಚಿದ ಬಾಯಿಗಳ ಪರವಾಗಿ ಮಾತನಾಡಲು ನಾನು ಬಂದಿದ್ದೇನೆ" ಎಂದಿದ್ದಾನೆ ಅವನು. ಇವನ ಕವಿತೆಯ ಮೇಲೆ ಅಮೆರಿಕದ ಪ್ರಸಿದ್ಧ ಕವಿ ವಾಲ್ಟ್ ವ್ಹಿಟ್‌ಮನ್‌ನ ಪ್ರಭಾವ ಬಿದ್ದಿದೆ. ನಿರಾಶಾಪೂರ್ಣ, ದುಃಖಭರಿತ ಕವಿತೆಗಳಿಂದ, ಬವಣೆಪಡುತ್ತಿರುವ ಜನಸಾಮಾನ್ಯರನ್ನು ಮತ್ತಷ್ಟು ದುಃಖಿತರಾಗಿ ಮಾಡುವುದಕ್ಕೆ ಕವಿಗೆ ಯಾವ ಹಕ್ಕೂ ಇಲ್ಲ—ಎಂಬುದು ಇವನ ಹೇಳಿಕೆ.

ನೆರೂದಾ ಕಮ್ಯೂನಿಸಮಿನ ಪಕ್ಷಪಾತಿ. ಅವನ ಕ್ರಾಂತಿಕಾರಿ ವ್ಯಕ್ತಿತ್ವ ಕವಿತೆಗಳಲ್ಲಿ ವ್ಯಕ್ತವಾಗುತ್ತದೆ. ತನ್ನ ದೇಶದಲ್ಲಿ ಕಾರ್ಮಿಕರ ಬಡತನವನ್ನು ಕಣ್ಣಾರೆ ಕಂಡ ನೆರೂದಾನ ಮನಸ್ಸು ಕಮ್ಯೂನಿಸಮಿಗೆ ಒಲಿಯಿತು. 1945ರಲ್ಲಿ ಕಮ್ಯೂನಿಸ್ಟ್ ಪಕ್ಷದ ಅಭ್ಯರ್ಥಿಯಾಗಿ ಚಿಲಿಯ ಶಾಸನಸಭೆಗೆ ಆರಿಸಿಬಂದ. ಸರ್ವಾಧಿಕಾರಿ ಗೊನ್ಸಾಲೆಜ್ ವಿಡೆಲಾ ತಮ್ಮ ದೇಶವನ್ನು ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ಮಾರುತ್ತಿದ್ದಾನೆ ಎಂದು ಆರೋಪಿಸಿದ. ನೆರೂದಾ ತಲೆಮರೆಸಿಕೊಂಡು ಜೀವಿಸಬೇಕಾಯಿತು. 1948ರಲ್ಲಿ ದೇಶತ್ಯಾಗಮಾಡಿ ಆ ಬಳಿಕ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಅಲೆದ. ತನಗೆ ಆಶ್ರಯ ನೀಡಿದ ರಾಷ್ಟ್ರಗಳಿಗೆ ತನ್ನ ಕವಿತೆಗಳಿಂದಲೇ ಧನ್ಯವಾದ ಅರ್ಪಿಸಿದ. ಈ ಕಾಲದಲ್ಲಿ ಅವನು ಬರೆದ 'ಕ್ಯಾಂಟೋ ಜನರಲ್' ಅವನ ಶ್ರೇಷ್ಠ ಕೃತಿಗಳಲ್ಲಿ ಒಂದು.

ನೆರೂದಾ 'ಅಶುದ್ಧ' ಕವನದ ಪ್ರತಿಪಾದಕ. ಈ ಭೌತಿಕ ಜಗತ್ತಿನಲ್ಲಿ ವಾಸಿಸುವ ಕವಿಯ ಬರೆಹವೂ ಭೌತಿಕವಾಗಿರಬೇಕೆಂದು ಅವನ ವಾದ. "ಬೆವರು ಮತ್ತು ಹೊಗೆಯಿಂದ ತುಂಬಿದ. ಹೂ ಮತ್ತು ಮೂತ್ರದ ವಾಸನೆ ಹೊಡೆಯುವ ಈ ಜಗತ್ತಿನಲ್ಲಿ ಕವಿತೆಯೂ ತೊಟ್ಟ ಬಟ್ಟೆಯಂತೆ, ಸಾರು ಚೆಲ್ಲಿದ ಮೈಯಂತೆ ಅಶುದ್ಧವಾಗಿ ನಾರುವಂತಿರಬೇಕು," ಎಂಬ ಅಭಿಪ್ರಾಯ ಅವನದು.

ನೆರೂದಾ ಸುಮಾರು ಏಳು ಸಾವಿರ ಪುಟಗಳ ಕಾವ್ಯ ರಚಿಸಿದ್ದಾನೆ.

ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಸಾಹಿತಿಗಳನ್ನು ರಾಯಭಾರಿಗಳಾಗಿ ನೇಮಿಸಿ ಗೌರವಿಸುವುದು ಸಂಪ್ರದಾಯ. ಪಾಬ್ಲೋ ನೆರೂದಾ ರಾಯಭಾರಿಯಾಗಿ ಬರ್ಮ, ಸಿಂಹಳ, ಜಾವಾ, ಸಿಂಗಾಪುರ, ಅರ್ಜೆಂಟೀನಾ ಮತ್ತು ಸ್ಪೇನ್‌ಗಳಲ್ಲಿ ವಾಸವಾಗಿದ್ದ; ಭಾರತಕ್ಕೂ ಭೇಟಿ ಕೊಟ್ಟಿದ್ದ.

ರಾಯಭಾರಿಯಾಗಿ ಎಲ್ಲಿಯೇ ಇರಲಿ. ನೆರೂದಾ ಅವಕಾಶ ಸಿಕ್ಕಿದಾಗಲೆಲ್ಲ ಚಿಲಿ ಕರಾವಳಿಯ ಇಸ್ಲಾನೆಗ್ರಾಕ್ಕೆ ಬಂದು ತಂಗುತ್ತಾನೆ. ತನ್ನ ತಾಯ್ನಾಡು ಎಲ್ಲಕ್ಕಿಂತ ಸುಂದರ ಎನ್ನುತ್ತಾನೆ. ತನ್ನ ತಾಯ್ನಾಡಿನ ಮೇಲೆ ಅವನಿಗೆ ಅಪಾರ ಅಭಿಮಾನ.

"ನನ್ನ ಪುಟ್ಟ ಶೀತಳ ರಾಷ್ಟ್ರದ
ನಾರುಬೇರುಗಳನೂ ಪ್ರೀತಿಸುವೆ ನಾನು
ಸಾವಿರ ಬಾರಿ ಸಾಯಬೇಕಾದರೂ
ಸತ್ತೇನು ಆ ನಾಡಿನಲ್ಲೇ
ಸಾವಿರ ಬಾರಿ ಹುಟ್ಟಬೇಕಾದರೂ
ಹುಟ್ಟೇನು ಆ ನಾಡಿನಲ್ಲೇ"

## ಪಾಶ್ಚಾತ್ಯ ಚಿತ್ರಕಲೆ

ಬಣ್ಣಗಳಿಂದ. ರೇಖೆಗಳಿಂದ. ಆಕೃತಿಗಳಿಂದ. ರೂಪುಗೊಳ್ಳುವ ಚಿತ್ರಕಲೆ ನಮ್ಮ ಮನಸ್ಸನ್ನು ರಂಜಿಸುತ್ತದೆ.



'ಶ್ರೀಮತಿ ಶಾರ್ಪೆಂಟಿಯರ್ ಮತ್ತು ಮಕ್ಕಳು' – ರೆನ್ವಾ ರಚಿಸಿದ ಚಿತ್ರ



ಎಡ್ವರ್ಡ್ ಮಾನೆ ರಚನೆ – 'ಎಳೆಯ ಹುಡುಗಿ'

ಚಿತ್ರಕಲೆ ಮಾನವ ಕುಲದಷ್ಟೇ ಪ್ರಾಚೀನವಾದದ್ದು. ಸುಮಾರು 20 ಸಾವಿರ ವರ್ಷಗಳಿಗೂ ಹಿಂದೆ ಗವಿಗಳಲ್ಲಿ ವಾಸಮಾಡುತ್ತಿದ್ದ ಆದಿ ಮಾನವ ಗವಿಗಳಲ್ಲಿ ಬರೆದ ಚಿತ್ರಗಳು ಅತ್ಯಂತ ಪ್ರಾಚೀನ ಚಿತ್ರಕಲೆಯ ನಿದರ್ಶನಗಳು.

'ಮೀನು ಮಾರುವ ಹುಡುಗಿ' – ಹೊಗಾರ್ತ್ ರಚನೆ



'ಇಸ್ತ್ರಿಯವಳು' – ಲಾತ್ರೆಕ್ ಕೃತಿ



ಪಾಶ್ಚಾತ್ಯ ಚಿತ್ರಕಲೆಯ ಇತಿಹಾಸದಲ್ಲಿ ಗ್ರೀಕ್ ಮತ್ತು ರೋಮನ್ ಚಿತ್ರಕಲೆಗಳು ಮಹತ್ವದ ಘಟ್ಟಗಳು. ಗ್ರೀಕರು ಮತ್ತು ರೋಮನರು ತಮ್ಮ ಸೌಧಗಳನ್ನೂ ಗೋರಿಗಳನ್ನೂ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ನಾನಾ ಬಣ್ಣದ ಸಣ್ಣ ಸಣ್ಣ ಗಾಜಿನ ಚೂರು, ಅಥವಾ ಕಲ್ಲಿನ ಚೂರು ಜೋಡಿಸಿ ಮಾಡಿದ ಚಿತ್ರಗಳು ಗ್ರೀಕರ ವೈಶಿಷ್ಟ್ಯವಾಗಿತ್ತು. ರೋಮನರು ಈ ಕಲೆಯಲ್ಲಿ ನಿಪುಣರಾಗಿದ್ದರು. ಅವರು ಹೂದಾನಿಗಳನ್ನು ಹೂಬಳ್ಳಿಗಳ ಸುಂದರ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ರೋಮನರಿಗೆ ಭಿತ್ತಿಚಿತ್ರ ರಚನೆಯೂ ಗೊತ್ತಿತ್ತು. ರೋಮನ್ ಕಲಾವಿದರು ಅಮೃತಶಿಲೆಯ ನುಣುಪಾದ ಪುಡಿಯನ್ನು ಬಂಧಕ ವಸ್ತುವಿನೊಡನೆ ಸೇರಿಸಿ, ಗೋಡೆಯ ಮೇಲ್ಮೈಯನ್ನು ನಯಗೊಳಿಸಿ ಅದರ ಮೇಲೆ ಚಿತ್ರಗಳನ್ನು ಬಿಡಿಸುತ್ತಿದ್ದರು. ವ್ಯಕ್ತಿಚಿತ್ರಣ ಕಲೆಯಲ್ಲಿ ಗ್ರೀಕರೂ ರೋಮನರೂ ಚತುರರಾಗಿದ್ದರು.



ಪಾಲ್ ಗೋಗಿನ್ ಕೃತಿ – ಚಿತ್ರದಲ್ಲಿರುವುದು ತಾಹಿತಿಯಲ್ಲಿ ಆತ ವಾಸಿಸಿದ ಗುಡಿಸಲು

ನಾಲ್ಕನೆಯ ಶತಮಾನದಲ್ಲಿ ರೂಪುಗೊಂಡ ರೋಮನರ ಪೌರಸ್ತ್ಯ ಸಾಮ್ರಾಜ್ಯದ ಮುಖ್ಯ ಪಟ್ಟಣವಾದ ಬೈಜಾಂಟಿಯಮ್ ನಗರ ಒಂದು ವಿಶಿಷ್ಟ ಕಲಾ–ಸಂಸ್ಕೃತಿ ಕೇಂದ್ರವಾಗಿ ವಿಕಾಸಗೊಂಡಿತು. ಇಲ್ಲಿ ಬೆಳೆದ ಚಿತ್ರಕಲೆಯಲ್ಲಿ ಗ್ರೀಕ್, ರೋಮನ್ ಮತ್ತು ಪರ್ಷಿಯನ್ ಕಲಾ ಪ್ರಭಾವವನ್ನೂ ಈ ಕಲೆಗಳ ಸುಂದರ ಸಮ್ಮಿಶ್ರಣವನ್ನೂ ಕಾಣಬಹುದು. ಹದಿನೈದನೆಯ ಶತಮಾನದಲ್ಲಿ ತುರ್ಕರು ಈ ನಗರವನ್ನು ಆಕ್ರಮಿಸಿಕೊಂಡ ಮೇಲೆ ಇಲ್ಲಿನ ಕಲಾವಿದರೂ ವಿದ್ವಾಂಸರೂ ಯೂರೋಪಿನ ಪ್ರದೇಶಗಳಿಗೆ ವಲಸೆಹೋದರು. ಅಲ್ಲಿ ಇವರು ಬೀರಿದ ಪ್ರಭಾವ ಯೂರೋಪಿನ 'ನವೋದಯ'ಕ್ಕೆ ಕಾರಣವಾಯಿತು. ಹೀಗೆ ಬೈಜಾಂಟೈನ್ ಚಿತ್ರಕಲೆಗೂ ಐರೋಪ್ಯ ಚಿತ್ರಕಲೆಗೂ ನಿಕಟ ಸಂಬಂಧವಿದೆ. ಬೈಜಾಂಟೈನ್ ಕಲಾವಿದರು ಚಿತ್ತಾರ ಕಲೆಯಲ್ಲೂ ಭಿತ್ತಿಚಿತ್ರ ರಚನೆಯಲ್ಲೂ ಅಪೂರ್ವ ಸಿದ್ಧಿ ಪಡೆದರು. ಧಾರ್ಮಿಕ ವಸ್ತುಗಳ ಚಿತ್ರಣ ಬೈಜಾಂಟೈನ್ ಶೈಲಿಯ ವೈಶಿಷ್ಟ್ಯ. ಈ ಕಾಲದ ಇನ್ನೊಂದು ಉತ್ತಮ ಸಾಧನೆ, ಚಿತ್ರರಂಜಿತ ಗ್ರಂಥ ರಚನೆ. ಹಳಗಿನ ಲಿಪಿಕಾರರು ಗ್ರಂಥದ ಪುಟಗಳ ಅಂಚಿನಲ್ಲಿ

'ವಿಚಾರಣೆ, ತೀರ್ಪು' – ಜಿಯತ್ತೊ ಕೃತಿ



'ಅಥೆನ್ಸ್ ಶಾಲ್' ಚಿತ್ರದಲ್ಲಿ ಪ್ಲೇಟೊ, ಅರಿಸ್ಟಾಟಲ್ – ರಾಫೇಲ್ ರಚನೆ



[illegible] ಚಿತ್ರಗಳನ್ನು [illegible] ಅವುಗಳಲ್ಲಿ [illegible] ರವು [illegible] ಗಳನ್ನು [illegible] ಅಂದವಾದ ಚಿತ್ರಗಳಿರುತ್ತಿದ್ದುವು.

[illegible] ಪೂರ್ವಾರ್ಧದಿಂದ 11ನೆಯ ಶತಮಾನದ ಕಾಲ—ಯೂರೋಪಿನ ಕತ್ತಲೆಯ ಯುಗ ಎನಿಸಿಕೊಂಡಿತ್ತು. ಆಗ ಕ್ರೈಸ್ತ ಮಠಗಳಲ್ಲಿ ಮಾತ್ರ ಕಲೆ ಸ್ವಲ್ಪಮಟ್ಟಿಗೆ ಬಳಕೆಯಲ್ಲಿತ್ತು.

15—16ನೆಯ ಶತಮಾನದ ಅವಧಿಯಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಕಲೆ, ಸಾಹಿತ್ಯ, ಧರ್ಮ ಮುಂತಾದ ಎಲ್ಲ ಕ್ಷೇತ್ರಗಳಲ್ಲಿ ಒಂದು ಬಗೆಯ ನವಚೈತನ್ಯ ಉಂಟಾಯಿತು. ಇದನ್ನು ನವೋದಯ ಎನ್ನುವುದು ವಾಡಿಕೆ. ಈ ನವೋದಯ ಕಾಲದಲ್ಲಿ ಪ್ರಾಚೀನ ಕಲಾ ಸಂಪ್ರದಾಯಗಳ ಆಧಾರದ ಮೇಲೆ ಲುಪ್ತವಾಗಿ ಹೋಗುತ್ತಿದ್ದ ಕಲೆಗಳನ್ನು ಪುನರುಜ್ಜೀವನಗೊಳಿಸಲು ಪ್ರಬಲ ಪ್ರಯತ್ನಗಳು ನಡೆದು ಫಲಕಾರಿಯಾದುವು.

ಪಾಶ್ಚಾತ್ಯ ಚಿತ್ರಕಲೆಯ ಇತಿಹಾಸದಲ್ಲಂತೂ ಇದು ಸ್ಮರಣೀಯ ಕಾಲ. ನವೋದಯ ವಾತಾವರಣದಿಂದ ಸ್ಫೂರ್ತಿ ಪಡೆದ ಇಟಲಿಯ ಕಲಾವಿದರು ಧಾರ್ಮಿಕ ವಿಷಯಗಳ ಚಿತ್ರಗಳನ್ನು ಪ್ರಧಾನವಾಗಿ ಭಿತ್ತಿಚಿತ್ರಗಳ ರೂಪದಲ್ಲಿ ಅಧಿಕ ಸಂಖ್ಯೆಯಲ್ಲಿ ರಚಿಸಿದರು. ಇಂಥ ಚಿತ್ರಕಲೆಯು ಒಂದು ಪ್ರಕಾರವೇ ಬೆಳೆಯಿತು. ಮೆಸ್ಸಾಚಿಯೊ ಮತ್ತು ಜಿಯತ್ತೊ ರೂಪಿಸಿದ ಭಿತ್ತಿಚಿತ್ರಣ ಶೈಲಿ 15ನೆಯ ಶತಮಾನದ ಪ್ರಗತಿಪರ ಪ್ರವೃತ್ತಿಯ ಒಂದು ಮುಖ್ಯ ಲಕ್ಷಣವಾಗಿತ್ತು. ವರ್ಣಚಿತ್ರಗಳಲ್ಲಿ ಉಪಯೋಗಿಸುತ್ತಿದ್ದ ಬಣ್ಣಗಳು ಚಿತ್ರದ ವಿಷಯಕ್ಕನುಗುಣವಾಗಿ ಬದಲಾಗುತ್ತಿದ್ದುವು. ಬಾಟಿಚೆಲ್ಲಿ, ಮೈಕೆಲೆಂಜಲೋ, ಲಿಯೊನಾರ್ದೊ ದ ವಿಂಚಿ—ಈ ಕಾಲದ ಮಹೋನ್ನತ ಚಿತ್ರಕಾರರು. ಮೈಕೆಲೆಂಜಲೋ ನಾಲ್ಕು ವರ್ಷ ಅವಿಶ್ರಾಂತವಾಗಿ ದುಡಿದು ರೋಮಿನ ಸಿಸ್ಟಿನ್ ಕ್ರೈಸ್ತ ದೇವಾಲಯದ ಒಳಾಂಗಣದ ಛಾವಣಿಯಲ್ಲಿ ಬೈಬಲಿನಿಂದ ಆರಿಸಿದ ಕಥಾವಸ್ತುಗಳನ್ನು ಚಿತ್ರಿಸಿದ. ನವೋದಯ ಚಿತ್ರ ಕಲೆಯ ಮಹೋನ್ನತಿಗೆ ಅದು ಶ್ರೇಷ್ಠ ನಿದರ್ಶನ.



'ಶಿಲುಬೆಯಿಂದ ಅವರೋಹಣ' : ರೂಬೆನ್ಸ್ ಕೃತಿ

ನವೋದಯ ಕಾಲದ ಪಾಶ್ಚಾತ್ಯ ಚಿತ್ರಕಲೆಯ ಎರಡು ಪ್ರಮುಖ ಲಕ್ಷಣಗಳು: ತೈಲ ಚಿತ್ರಗಳ ರಚನೆ ಮತ್ತು ರಾಷ್ಟ್ರೀಯ ಚಿತ್ರ ಕಲಾಶೈಲಿಗಳ ಬೆಳವಣಿಗೆ.

ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ಬಾರೋಕ್ ಮತ್ತು ರೊಕೋಕೋ ಕಲಾಶೈಲಿಗಳು ವಿಕಾಸಗೊಂಡುವು. ಇವುಗಳೂ ಪ್ರಾದೇಶಿಕ ವೈಶಿಷ್ಟ್ಯ [illegible] ಗಳಿಸಿದ್ದುವು. ಇಟಲಿ ನವೋದಯ ಕಲೆಯ ಪ್ರಮುಖ ವಿಕಾಸ ಕ್ಷೇತ್ರ, ಯೂರೋಪಿನ ಉತ್ತರ, ಪಶ್ಚಿಮ ಭಾಗಗಳಲ್ಲಿ ಅಂದರೆ ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್ ಮುಂತಾದ ಪ್ರದೇಶಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಇದೇ ಕಾಲದಲ್ಲಿ ನವೋದಯ ಉಂಟಾಯಿತು.

ನವೋದಯ ಯುಗ ಆರಂಭವಾದ ಮೇಲೆ, ಇಟಲಿಯ ಕಲಾವಿದರಲ್ಲಿ ಕೆಲವರು ಫ್ರಾನ್ಸಿಗೆ ಆಹ್ವಾನಿತರಾದರು. ಅಲ್ಲಿನ ರಾಜಾಶ್ರಯದಲ್ಲಿ ಅವರ ಉತ್ತಮ ಕೃತಿಗಳನ್ನು ರಚಿಸಿದರು. ಅವರ ಕೃತಿಗಳು ಫ್ರೆಂಚ್ ಕಲಾವಿದರ ಮೇಲೆ ಪರಿಣಾಮ ಬೀರಿದುವು. ಫ್ರಾನ್ಸಿನ ಚರಿತ್ರೆಯಲ್ಲಿ ಹಲವಾರು ಏರಿಳಿತಗಳಾದರೂ ಚಿತ್ರಕಲೆಯನ್ನು ಕುರಿತು ಅಲ್ಲಿ ಯಾವಾಗಲೂ ಆಸಕ್ತಿ ಇದ್ದೇ ಇರುತ್ತಿತ್ತು.

ಜರ್ಮನಿಯಲ್ಲೂ ಚಿತ್ರಕಲೆ, ಹದಿನೈದನೆಯ ಶತಮಾನದಲ್ಲಿ ಕೊಲೋನ್ ಮತ್ತು ವೆಸ್ಟ್‌ಫಾಲಿಯ ಪ್ರದೇಶಗಳಲ್ಲಿ ವಿಕಾಸಗೊಂಡಿತು. ಕೊಲೋನ್ ಪ್ರದೇಶದಲ್ಲಿ ರೂಪುಗೊಂಡ ಕಲೆ ಅದೇ ಕಾಲದಲ್ಲಿ ಜರ್ಮನಿಯಲ್ಲಿ ಬೆಳೆದ ಶೈಲಿಗಳಿಗಿಂತ ಬೇರೆಯಾಗಿತ್ತು. ಫ್ರಾನ್ಸಿನಲ್ಲಾದಂತೆ, ಜರ್ಮನಿಯಲ್ಲೂ ಇಟಲಿಯ ನವೋದಯ ಕಲೆಯ ಪ್ರಭಾವ ಹರಡಿತು. 17ನೆಯ ಶತಮಾನದಲ್ಲಿ ಜರ್ಮನಿ ಬಾರೋಕ್ ಕಲೆಯನ್ನು ಬೆಳೆಸಿತು.

ಹದಿನೆಂಟನೆಯ ಶತಮಾನದಲ್ಲಿ ರೂಪಚಿತ್ರಣ ಕಲೆ ಎಂಬ ವಿಶಿಷ್ಟ ಪ್ರಕಾರ ಬೆಳೆಯಿತು. ಸ್ವಪ್ರಯತ್ನದಿಂದ ತನ್ನ ಚಿತ್ರಣ ಶೈಲಿಯನ್ನು ವೃದ್ಧಿಪಡಿಸಿಕೊಂಡು ಶ್ರೇಷ್ಠ ರೂಪ ಚಿತ್ರಗಳನ್ನು ರಚಿಸಿದ. ಜೋಷುವಾ ರೇನಾಲ್ಡ್ಸ್ ಈ ವರ್ಗದ ಚಿತ್ರಕಾರರಲ್ಲಿ ಪ್ರಮುಖ.

19ನೆಯ ಶತಮಾನದಲ್ಲಿ ಚಿತ್ರಕಲೆಯ ಇನ್ನೊಂದು ಶಕೆ ಆರಂಭವಾಯಿತು. ಕ್ಯಾಮರಾದ ಸಂಶೋಧನೆಯಿಂದಾಗಿ, ಚಿತ್ರಕಲೆಯ ಉದ್ದೇಶವನ್ನು ಕುರಿತು ಚಿತ್ರಕಾರರು ತೀವ್ರವಾಗಿ ಚಿಂತಿಸುವಂತಾಯಿತು. ವೈಜ್ಞಾನಿಕ ಸಂಶೋಧನೆಗಳಿಂದ ಬಗೆಬಗೆಯ ಬಣ್ಣಗಳು ತಯಾರಾಗಿ ಕಲಾವಿದನ ಉಪಯೋಗಕ್ಕೆ ದೊರೆತುವು. ಇವೆಲ್ಲ ಚಿತ್ರಕಲೆಯ ರಚನಾತಂತ್ರಗಳ ಮೇಲೆ ಪರಿಣಾಮ ಬೀರಿದುವು.

ಅಮೆರಿಕದ ಚಿತ್ರಕಲೆಗೆ ಪ್ರಧಾನ ಪ್ರೇರಣೆ ದೊರೆತದ್ದು ಯೂರೋಪಿನಿಂದಲೇ. ಈ ಬುನಾದಿಯ ಮೇಲೆ ಅಮೆರಿಕ ತನ್ನ ಕಲೆಯನ್ನು ರೂಢಿಸಿಕೊಂಡು ಮುಂದುವರಿಯುತ್ತಿದೆ.

20ನೆಯ ಶತಮಾನದಲ್ಲಿ ನಡೆದ ಎರಡು ಜಾಗತಿಕ ಯುದ್ಧಗಳು ಯೂರೋಪು, ಅಮೆರಿಕಗಳ ಜೀವನದಲ್ಲಿ ಜಟಿಲತೆಯನ್ನು ಉಂಟುಮಾಡಿದುವು. ಇದರ ಪರಿಣಾಮವನ್ನು ಈ ರಾಷ್ಟ್ರಗಳ ಚಿತ್ರಕಲೆಯಲ್ಲೂ ಕಾಣಬಹುದು.

**ನೋಡಿ :** ಅಮೂರ್ತ–ಕಲೆ ; ಅಮೆರಿಕದ ಕಲೆ, ಸಾಹಿತ್ಯ ; ಆಧುನಿಕ ಚಿತ್ರಕಲೆ ; ಆಫ್ರಿಕದ ಕಲೆ; ಇಟಲಿಯ ಕಲೆ, ಸಾಹಿತ್ಯ ; ಎಡ್ವರ್ಡ್ ಮಾನೆ ; ಎಪ್‌ಸ್ಟೈನ್; ಎಲ್ ಗ್ರೆಕೋ ; ಗಾತಿಕ್ ಕಲೆ ; ಗ್ರೀಕ್ ಕಲೆ, ಸಾಹಿತ್ಯ ; ಗುಸ್ತಾವ್ ಕೂರ್ಬೆ ; ಗೋಗಿನ್ ; ಗೋಯಾ ; ಘನಾಕೃತಿ ಕಲೆ ; ಚೆಲ್ಲಿನಿ ; ಜರ್ಮನ್ ಕಲೆ, ಸಾಹಿತ್ಯ ; ಜಿಯತ್ತೊ ; ಟರ್ನರ್ ; ಟಿಷನ್; ಡಚ್ ಕಲೆ, ಸಾಹಿತ್ಯ ; ಡವರ್‌ಜಾಕ್ ; ಡ್ಯೂರೆರ್; ಡೊನಾಟೆಲೋ ; ತೈಲಚಿತ್ರ ; ದಗಾ ; ನವೋದಯ ಕಲೆ ; ಪ್ಯಾರೋ ; ಪಿಂಗಾಣಿ ಚಿತ್ರ ; ಫ್ರೆಂಚ್ ಕಲೆ, ಸಾಹಿತ್ಯ ; ಬಾಟಿಚೆಲ್ಲಿ ; ಬಾರೋಕ್ ಕಲೆ ; ಮಾಟಿಸ್; ಮೈಕೆಲೆಂಜಲೋ; ಮೋಡಿಗ್ಲ್ಯಾನೀ; ರೂಬೆನ್ಸ್; ರಷ್ಯನ್ ಕಲೆ, ಸಾಹಿತ್ಯ ; ರೆಂಬ್ರಾಂಟ್;

ರೆಂಬ್ರಾಂಟ್ ; ರೊಕೊಕೊ ಕಲೆ ; ರಾಫೆಲ್ ; ರೆನಾಯರ್ ; ರೋಮನ್ ಕಲೆ ; [illegible] ; ಲಿಯೊನಾರ್ಡೊ ದ ವಿಂಚಿ ; ವರ್ಮೀರ್ ; ವಾನ್ ಗೋ ; ವಾಸ್ತವವಾದ ; [illegible] ; ಸಮ್ಮಿಶ್ರಮಾಧ್ಯಮ ಕಲೆ ; ಸಾರ್ಟೊ ; ಸೆಜಾನ್ ; ಸ್ಪೇನ್ ಕಲೆ ; ಸಾಹಿತ್ಯ ; ಸ್ವೇಚ್ಛಾಸಂಕೇತ ಕಲೆ ; ಹೋಗಾರ್ತ್

## ಪಾಶ್ಚಾತ್ಯ ಸಂಗೀತ

ಶಾಸ್ತ್ರೀಯ ಸಂಗೀತದಲ್ಲಿ ಎರಡು ಪ್ರಮುಖ ಸಂಪ್ರದಾಯಗಳಿವೆ: ಭಾರತೀಯ ಹಾಗೂ ಪಾಶ್ಚಾತ್ಯ. ಪುರಾತನ ಕಾಲದಲ್ಲಿ ಪೂರ್ವ ಏಶ್ಯಾದಿಂದ ಸಂಗೀತವು ಈಜಿಪ್ಟನ್ನು ತಲುಪಿತೆಂದೂ ಇದು ಗ್ರೀಕ್ ಸಂಗೀತದ ಮೇಲೆ ಪ್ರಭಾವ ಬೀರಿತೆಂದೂ ನಂಬಿಕೆಯಿದೆ. ಪಾಶ್ಚಾತ್ಯ ಸಂಗೀತದ ಆದಿಯನ್ನು ಗುರುತಿಸುವುದು ಈ ಮೂಲಗಳಲ್ಲಿ. ಪ್ರಾಚೀನ ಈಜಿಪ್ಟಿನ ಭಗ್ನಾವಶೇಷಗಳಲ್ಲಿ ಅನೇಕ ಬಗೆಯ ಸಂಗೀತ ವಾದ್ಯಗಳು ದೊರೆತಿವೆ. ಹೀಬ್ರೂಗಳು ಈಜಿಪ್ಟಿನ ಸಂಗೀತದಿಂದ ತಮ್ಮ ಸಂಗೀತವನ್ನು ರೂಪಿಸಿಕೊಂಡರು.

ಗ್ರೀಕ್ ಸಂಗೀತ ಕ್ರಿ.ಪೂ. 1000ದಿಂದ 400ರ ವರೆಗೆ ಲಲಿತಕಲೆಯಂತೆ ಅಭ್ಯಸಿಸಲ್ಪಡುತ್ತಿದ್ದಿತು. ಈ ಅವಧಿಯಲ್ಲಿ ಅದು ಚೆನ್ನಾಗಿ ವಿಕಾಸ ಹೊಂದಿತು. ಸಂಗೀತದ ಬಗೆಗೆ ಈಜಿಪ್ಟಿನಿಂದ ಸ್ಫೂರ್ತಿಪಡೆದರೂ ಗ್ರೀಕರು ಸಂಗೀತ, ನೃತ್ಯ, ಕವಿತೆ ಈ ಮೂರು ಕಲೆಗಳನ್ನೂ ಮೇಳೈಸಿ ನಿರ್ದಿಷ್ಟ ರಾಗದ ಸಂಗೀತ ರಚನೆಗಳನ್ನು ಮಾಡಿದರು.

ಗ್ರೀಕರ ಜೀವನದಲ್ಲಿ ಸಂಗೀತಕ್ಕೆ ಮಹತ್ವದ ಸ್ಥಾನವಿದ್ದಿತು. ವೃಂದಗಾನ ರೂಪದಲ್ಲಿ ದೇವರ ಸ್ತುತಿ ಮಾಡುವುದು ಗ್ರೀಕ್ ಸಂಗೀತಕೆ ವಿಶಿಷ್ಟವಾದದ್ದು. ಅವರಲ್ಲಿ ಲಯಕ್ಕೆ ಹೆಚ್ಚು ಪ್ರಾಧಾನ್ಯ ಇರಲಿಲ್ಲ. ಪ್ರಾಚೀನ ಗ್ರೀಸಿನಲ್ಲಿ ಸಂಗೀತ ಸ್ಪರ್ಧೆಗಳು ಏರ್ಪಡುತ್ತಿದ್ದುವು. ಆರ್ಫಿಯಸ್ ಮುಂತಾದ ಗ್ರೀಕ್ ಕಥೆಗಳು ಗ್ರೀಕರಿಗೆ ಸಂಗೀತದ ಬಗೆಗಿದ್ದ ಗಾಢ ಅಭಿಮಾನವನ್ನು ಸೂಚಿಸುತ್ತವೆ. ಪಾಶ್ಚಾತ್ಯ ಸಂಗೀತದ ಪ್ರಾಚೀನ ಕ್ಷೇತ್ರಗಳಲ್ಲಿ ಗ್ರೀಸ್ ದೇಶ ಮಾತ್ರ ಸ್ವರಪ್ರಸ್ತಾರ ಹಾಕುವ ಕ್ರಮವನ್ನು ರೂಢಿಸಿತು. ಇಲ್ಲಿ ಕಾಲಪ್ರಮಾಣ ಸೂಚನೆ ಅಷ್ಟಾಗಿ ಇರುತ್ತಿರಲಿಲ್ಲ. ಆದರೆ ಹಾಡನ್ನು ಯಾವ ಶ್ರುತಿಯಲ್ಲಿ ಹಾಡಬೇಕು ಎಂದು ನಿರ್ದೇಶಿಸುವುದೇ ಈ ಸ್ವರ ಪ್ರಸ್ತಾರದ ಉದ್ದೇಶ. ಸಂಗೀತದ ಕಾಲಪ್ರಮಾಣವನ್ನೂ ನಿರ್ದೇಶಿಸುವಂಥ ಸ್ವರಪ್ರಸ್ತಾರ ಕ್ರಮ ರೂಢಿಗೆ ಬಂದದ್ದು 11ನೆಯ ಶತಮಾನದ ಅನಂತರ.

ಪ್ರಾಚೀನ ರೋಮನರು ಗ್ರೀಕ್ ಸಂಗೀತವನ್ನೇ ತಮ್ಮ ಅವಶ್ಯತೆಗಳಿಗೆ ತಕ್ಕಂತೆ ಅಳವಡಿಸಿಕೊಂಡರು. ಪಿಯಾನೋವನ್ನು ಹೋಲುವ ಆರ್ಗನ್ ವಾದ್ಯವನ್ನು ರೂಪಿಸಿದರು.

ಈ ವಾದ್ಯ ಪಾಶ್ಚಾತ್ಯ ಸಂಗೀತದಲ್ಲಿ ಬಹು ಕಾಲ ಪ್ರಧಾನ ಪಾತ್ರ ವಹಿಸಿತು. 350ರ ವೇಳೆಗೆ ಯುರೋಪಿನ ಮೊಟ್ಟಮೊದಲ ಸಂಗೀತ ಶಾಲೆಗಳು ಆರಂಭವಾದುವು. ಕ್ರೈಸ್ತಮಂದಿರಗಳಲ್ಲಿ ಹಾಡುವವರಿಗೆ ತರಬೇತಿ ಕೊಡುವುದು ಈ ಶಾಲೆಗಳ ಉದ್ದೇಶವಾಗಿತ್ತು. ಆರ್ಗನ್ ವಾದ್ಯ ಇಲ್ಲಿ ಮುಖ್ಯವಾಗಿ ಬಳಸಲ್ಪಡುತ್ತಿದ್ದಿತು. ಸಂತ ಆಂಬ್ರೋಸ್ ಎಂಬವನು 4ನೆಯ ಶತಮಾನದಲ್ಲಿ ಉತ್ತಮ ಸ್ತೋತ್ರಗೀತೆಗಳನ್ನು ಸಂಗ್ರಹಿಸಿದ; ಮತ್ತು ಇಂಥ ಹೊಸ ರಚನೆಗಳನ್ನು ಕೈಗೊಳ್ಳಲು ಪ್ರೋತ್ಸಾಹ ನೀಡಿದ. ಇದರಿಂದ ಸರಳ, ಸುಲಭ ಸಂಗೀತ ರಚನೆಗಳು ಹುಟ್ಟಿಕೊಂಡುವು. ಇವು ಗಳಲ್ಲಿ ಕಲೆಗಾರಿಕೆಯಿಂದ ಧಾರ್ಮಿಕ ಭಾವನೆ [illegible] ಸರಳಗೀತೆಗಳೆನಿಸಿದುವು.

ಅನಂತರ ಒಂದು ಪ್ರಧಾನ ಘಾಟಿಯಲ್ಲಿ ಧ್ವನಿಸ್ವರಗಳನ್ನು [illegible]ವುದು ರೂಢಿಗೆ ಬಂದಿತು. ಹಾಡುವವರು ತಾವು ಹಾಡುವ ಗೀತೆಯ ಘಾಟಿಯನ್ನು ಸರಿಯಾಗಿ ನೆನಪಿಟ್ಟುಕೊಳ್ಳುವುದಕ್ಕಾಗಿ ಒಂದು ವಿಶಿಷ್ಟ ಸಂಗೀತ ಬರಹವನ್ನು ರೂಢಿಸಿಕೊಳ್ಳಲಾರಂಭಿಸಿದರು. ಚಿಕ್ಕ ಪುಟ್ಟ ಗೆರೆಗಳು, ಅರ್ಧವಿರಾಮ ಸೂಚಿಸುವ ಅಡ್ಡಗೆರೆಗಳು, ತರಂಗರೇಖೆಗಳು ಮುಂತಾದ ಚಿಹ್ನೆಗಳು ಬಳಕೆಗೆ ಬಂದುವು. 7ನೆಯ ಶತಮಾನದಲ್ಲಿ ಚರ್ಚ್ ಸಂಗೀತದಲ್ಲಿ ಸಂತ ಗ್ರೆಗೊರಿ ಸಾಕಷ್ಟು ಸುಧಾರಣೆ ಮಾಡಿದ. ಇಂದಿಗೂ ಗ್ರೆಗೊರಿಯನ್ ಗಾನ ಎಂಬುದು ಬಳಕೆಯಲ್ಲಿರುವ ಚರ್ಚ್ ಸಂಗೀತವಿಧಾನ. ಗ್ರೆಗೊರಿಯನ್ ಶೈಲಿ ಹೀಗೆ ಸಂರಕ್ಷಿಸಲ್ಪಟ್ಟದ್ದರಿಂದ 16ನೆಯ ಶತಮಾನದಲ್ಲಿ ಅದರ ಆಧಾರದ ಮೇಲೆ 'ಪಾಲಿಫನಿ'—ರಾಗಗಳ ಒಂದು ಜಟಿಲ ಸಮ್ಮಿಳಿತ ರೂಪ—ಹುಟ್ಟಿತು. ಇದರಲ್ಲಿ ಒಂದು ರಾಗದೊಡನೆ ಮೇಳೈಸುವ ಮತ್ತೊಂದು ರಾಗ ಸಂವಾದಿ ರೂಪದಲ್ಲಿರುತ್ತದೆ.

ಸುಮಾರು 9ನೆಯ ಶತಮಾನದ ವೇಳೆಗೆ ಪಾಶಾತ್ಯ ಸಂಗೀತದಲ್ಲಿ ಸುಪ್ರಸಿದ್ಧವಾದ 'ಹಾರ್ಮನಿ' ಪ್ರಕಾರ ಆರಂಭವಾಯಿತು. ಇದರ ತಳಪಾಯ ರಾಗ ಅಥವಾ ಮೆಲಡಿ. ಅವರೆಗೆ ಒಂದೇ ಸ್ಥಾಯಿಯಲ್ಲಿ ಅಥವಾ ಒಂದು ಸ್ಥಾಯಿಯ ಅಂತರದಲ್ಲಿ ಎರಡು ರಾಗಗಳನ್ನು ಹಾಡಲಾಗುತ್ತಿತ್ತು. ಒಂದು ಸ್ಥಾಯಿಯ ಅಂತರವಲ್ಲದೆ, ಒಂದು ಸ್ಥಾಯಿಯ 1/4 ಭಾಗದ, 1/5 ಭಾಗದ ಅಂತರಗಳಲ್ಲಿ ಎರಡು ಕಂಠಗಳನ್ನು ಮೇಳೈಸುವ ಸಾಧ್ಯತೆಗಳನ್ನು ಉಪಯೋಗಿಸಿಕೊಂಡರು. ಏಕಕಾಲದಲ್ಲಿ ವಿವಿಧ ಸ್ವರಗಳನ್ನು ಹಾಡಿದರೆ ಅಥವಾ ವಾದ್ಯದಲ್ಲಿ ನುಡಿಸಿದರೆ ಅದು 'ಹಾರ್ಮನಿ' ಎನಿಸುತ್ತದೆ.

ಕ್ರಿ.ಶ.ದ ಅನಂತರದ ಪಾಶ್ಚಾತ್ಯ ಸಂಗೀತದಲ್ಲಿ ಎರಡು ಸ್ಥೂಲ ವಿಭಾಗಗಳನ್ನು ಗುರುತಿಸಬಹುದು. ಒಂದು ನವೋದಯದವರೆಗಿನ ಅವಧಿ; ಎರಡನೆಯದು ಅನಂತರದ ಅವಧಿ. ಇದೂ ಈಗ ಒಂದು ಮುಕ್ತಾಯ ಹಂತಕ್ಕೆ ಬರುತ್ತಿದೆ ಎನ್ನಬಹುದು.

ಮೊದಲನೆಯ ಅವಧಿ ರೋಮನ್ ಮಾದರಿಯ ಹಾಗೂ ಗಾತಿಕ್ ಸ್ವರೂಪದ ಸಂಗೀತ ಶೈಲಿಗಳನ್ನು ಒಳಗೊಂಡಿದೆ. ಮಾನವ ಮತ್ತು ದೇವರ ನಡುವಣ ಸಂಬಂಧದ ಅಭಿವ್ಯಕ್ತಿ ಈ ಸಂಗೀತ ವಿಧಾನಗಳ ಮುಖ್ಯ ಲಕ್ಷಣ. ರೋಮನ್



ಖ್ಯಾತ ಸಂಗೀತಗಾರ ಗಿಸೆಪ್ಪಿ ವರ್ಡಿ



ವಾರ್ಸಾದಲ್ಲಿ ಷೋಪಿನ್ ಸಂಗೀತವನ್ನು ಸವಿಯುತ್ತಿರುವ ರಸಿಕರು



ಹಂಗೆರಿಯ ಫ್ರಾನ್ಸ್ ಲಿಸ್ಟ್–ಹೆಸರಾಂತ ಸಂಗೀತಜ್ಞ

ರಾಗಗಳ ವಿಶಾಲ ಮಾದರಿಯ ಶೈಲಿಯಲ್ಲಿ ಆವರ್ತನಗಳು. ಅಲಂಕರಣ ಅಭಿವ್ಯಕ್ತಿ ಇವು ಕಡಮೆ. ಗಾತಿಕ್ ಸಂಗೀತದಲ್ಲಿ ರೊಮಾನೆಸ್ಕ್‌ನ ಅಂಶಗಳಿದ್ದರೂ ಪಾಶ್ಚಾತ್ಯ ಸಂಗೀತಕ್ಕೆ ಇಲ್ಲಿ ಹೊಸದೊಂದು ವ್ಯಕ್ತಿ ಮೂಡಿತು. ಆತ್ಮ ಹಾಗೂ ಪ್ರಕೃತಿ, ಭಗವಂತ ಹಾಗೂ ಮಾನವರು — ಇವುಗಳ ನಡುವಣ ಐಕ್ಯದ ಭಾವ ಸ್ಪಷ್ಟ ಸಹಿತವಾಗತೊಡಗಿತು. ಗಾತಿಕ್ ಶೈಲಿಯ ಸಂಗೀತದಲ್ಲಿ ಅಲಂಕರಣ ಅಭಿವ್ಯಕ್ತಿ ಹೆಚ್ಚಿದ್ದು ಹೀಗೆ.

ನವೋದಯ, ಬಾರೋಕ್, ರಮ್ಯ, ಸಮಷ್ಟಿ ಪರಿಣಾಮ ಹಾಗೂ ಅಭಿವ್ಯಕ್ತವಾದ ಈ ಎಲ್ಲ ಶೈಲಿಗಳನ್ನೂ ಒಳಗೊಂಡದ್ದು ಎರಡನೆಯ ಅವಧಿ.

ನವೋದಯ ಶೈಲಿ ಮೊದಲು ಕಾಣಿಸಿಕೊಂಡದ್ದು ಸಂಗೀತದಲ್ಲಿ. ಜಡತತ್ತ್ವಗಳಿಂದ ಮನುಷ್ಯನ ವಿಚಾರಸರಣಿ ಬಿಡುಗಡೆ ಹೊಂದಿತು. ವೈಚಾರಿಕ ಹಾಗೂ ಲೌಕಿಕ ವಸ್ತುಗಳನ್ನು ಸಂಗೀತದಲ್ಲೂ ಅಳವಡಿಸುವುದು ಆರಂಭವಾಯಿತು. ಸಾರ್ವತ್ರಿಕವಾಗಿ ಅನ್ವಯಿಸಬಹುದಾದ ಸಂಗೀತಗಳಿಗೆ ಬದಲಾಗಿ ಕೇವಲ ಒಬ್ಬ ವ್ಯಕ್ತಿ ತನ್ನ ಭಾವನೆಗಳನ್ನು—ತನ್ನ ಹರ್ಷ ದುಃಖಗಳನ್ನು—ತೋಡಿಕೊಳ್ಳುವ ಮಾಧ್ಯಮವಾಯಿತು. ಇಟಲಿಯ 'ಮ್ಯಾಡ್ರಿಗಲ್' ರಚನೆಗಳು ಈ ಗುಂಪಿಗೆ ಸೇರುತ್ತವೆ. ಸುಮಾರು 12ನೆಯ ಶತಮಾನದಿಂದ ಲೌಕಿಕ ಸಂಗೀತ ಹೆಚ್ಚು ಜನಪ್ರಿಯವಾಗತೊಡಗಿತು. ಪ್ರಣಯ, ದೇಶಭಕ್ತಿ, ಪ್ರಕೃತಿ ವಿಷಯಕವಾದ ರಚನೆಗಳು ಹೆಚ್ಚು ಹೆಚ್ಚಾಗಿ ಹೊರಬಂದುವು. ಇದು 13–14ನೆಯ ಶತಮಾನಗಳಲ್ಲಿ ಮುಂದುವರಿಯಿತು. ಚರ್ಚ್ ಸಂಗೀತಕ್ಕೆ ಮಾತ್ರ ಮೀಸಲಿದ್ದ ಪಾಲಿಫನಿ ಲೌಕಿಕ ಸಂಗೀತಕ್ಕೂ ಒದಗಿಬಂತು. ಮೊದಮೊದಲು ಸಂಗೀತದಲ್ಲಿ ಪ್ರಧಾನವಾಗಿದ್ದ ಗಾಯಕನಿಗೆ ಪಿಯಾನೋ ಮುಂತಾದ ಹಲವಾರು ವಾದ್ಯಗಳು ಪಕ್ಕವಾದ್ಯದಂತೆ ನೆರವು ನೀಡುತ್ತಿದ್ದುವು. ಆದರೆ ಈ ವೇಳೆಗೆ ಕೆಲವು ರಚನಕಾರರು ಕೇವಲ ವಾದ್ಯಸಂಗೀತವನ್ನೇ ರೂಪಿಸತೊಡಗಿದರು. 16ನೆಯ ಶತಮಾನದ ಅಂತ್ಯಭಾಗದಲ್ಲಿದ್ದ ಇಟಲಿಯ ಪ್ಯಾಲೆಸ್ಟ್ರಿನ ಗೇಯ ರಚನಕಾರರಲ್ಲಿ ಮೊಟ್ಟಮೊದಲಿಗ. ಅವನು ತನ್ನ ಕಾಲದ ಅಪ್ರತಿಮ ಆರ್ಗನ್ ವಾದ್ಯಗಾರನಾಗಿದ್ದ. ಆತ ಬರೆದ 'ಮಾಸ್' ಎಂಬ ಕ್ರೈಸ್ತ ಆರಾಧನಾ ಸಂಗೀತ ರಚನೆಗಳು ಇಂದಿಗೂ ಅಸಮಾನವಾಗಿವೆ.



ವಿಕ್ಟರ್ ಪರಂಜ್ಯೋತಿ:
ಭಾರತೀಯ ವಾದ್ಯಮೇಳ ಸಂಘಟನೆ

ಬರಬರುತ್ತ ವಾದ್ಯಸಂಗೀತ ಹೆಚ್ಚು ಜನಪ್ರಿಯವಾಗತೊಡಗಿತು. ವಾದ್ಯಗಳೂ ಸಾಕಷ್ಟು ಸುಧಾರಿಸಲ್ಪಟ್ಟುವು. ಆರ್ಗನ್ ವಾದ್ಯ ಎಷ್ಟುಮಟ್ಟಿಗೆ ಸುಧಾರಣೆ ಹೊಂದಿತೆಂದರೆ ಈ ವಾದ್ಯದಲ್ಲಿ ನುಡಿಸುವುದಕ್ಕಾಗಿಯೇ ಗೀತೆರಚನೆಗಳು ಹುಟ್ಟಿಕೊಂಡುವು. ಇದೂ ಇದರಂಥ ಧ್ವನಿ ಕೀಲಿಕೈ ಉಳ್ಳ ಇತರ ವಾದ್ಯಗಳೂ ಹಾರ್ಮನಿ ಸಂಗೀತಕ್ಕೆ ಬಹಳ ಉಪಯುಕ್ತವಾದುವು. ವಯೊಲಾ ವಾದ್ಯದಿಂದ ಪಿಟೀಲು ವಿಕಾಸಗೊಂಡಿತು. ಇತರ ಗಾಳಿ ವಾದ್ಯಗಳೂ ಸುಧಾರಿಸಲ್ಪಟ್ಟುವು. ಮುಖ್ಯವಾಗಿ ಪಿಯಾನೋವಿಗೆ ಅಲ್ಲದೆ ಇತರ ವಾದ್ಯಗಳಿಗೂ ಸಂಬಂಧಪಟ್ಟ ಸಂಗೀತ ರಚನೆಗಳಿಗೆ ಸೊನಾಟಗಳೆಂದೂ ಹಾಡುಗಾರಿಕೆಗೆ ಸಂಬಂಧಪಟ್ಟುವು ಕ್ಯಾಂಟಟಗಳೆಂದೂ ಹೆಸರು.

16, 17ನೆಯ ಶತಮಾನ ಪಾಶ್ಚಾತ್ಯ ಸಂಗೀತದ ಸುವರ್ಣಯುಗ. ಇಂದಿನ ಆಧುನಿಕ ಪಾಶ್ಚಾತ್ಯ ಸಂಗೀತ ರೂಪವು ಆ ಕಾಲದಲ್ಲಿ ಬೇರೂರಲಾರಂಭಿಸಿತು. ಅಪೆರಾ ಮೊದಲ ಬಾರಿಗೆ ಪ್ರದರ್ಶಿಸಲ್ಪಟ್ಟಿತು. ಈಗಿನ ರೂಪವನ್ನು ಹೋಲುವ 'ಆರ್ಕೆಸ್ಟ್ರಾ' (ವಾದ್ಯಮೇಳ ಸಂಗೀತ) ಸಹ ಆರಂಭವಾಯಿತು. ಬಾಕ್, ಅನಂತರ ಹಾಂಡೆಲ್‌ರಂಥ ಮೇಧಾವಿ ರಚನಕಾರರು ತಮ್ಮ ಕೊಡುಗೆಗಳನ್ನು ನೀಡಿದರು. 'ಹಾರ್ಮನಿ' ಉತ್ತರೋತ್ತರವಾಗಿ ಬೆಳೆಯಿತು. ಸೊನಾಟ, ಸಿಂಫನಿ, ಕಾನ್ಸರ್ಟೊ,



ಯೆಹೂದಿ ಮೆನುಹಿನ್ : ಪಿಟೀಲು ಖ್ಯಾತಿ

ಓವರ್‌ಚರ್‌ಗಳೆಂಬ ವಾದ್ಯ ಸಂಗೀತದ ದೀರ್ಘ ರಚನೆಗಳು ಪ್ರಚಾರಕ್ಕೆ ಬಂದುವು. 18–19ನೆಯ ಶತಮಾನಗಳಲ್ಲಿ ಮೊಜಾರ್ಟ್, ಬಿಥೋವನ್ ಮುಂತಾದವರು ಭವ್ಯ ಸಾಂಪ್ರದಾಯಿಕ ಸಂಗೀತವನ್ನು ಬೆಳೆಸಿದರು. ಸಿಂಫನಿ ಎಂಬ ಸಂಗೀತ ರಚನೆಗೆ ಹೊಸ ಭಾವ ಪುಷ್ಟಿ ದೊರೆಯಿತು. ಈ ರಚನಕಾರರೆಲ್ಲ ಭವ್ಯ ಸಿಂಫನಿ ರಚನೆಗಳನ್ನು ಮಾಡಿದ್ದಾರೆ. ಅನಂತರ ವಾಗ್ನರ್ (19ನೆಯ ಶತಮಾನ) ಆಪೆರಾಗಳಿಗೆ ಹೆಚ್ಚು ಮನ್ನಣೆ ದೊರಕಿಸಿಕೊಟ್ಟ. ಷೂಬರ್ಟ್, ಬ್ರಾಮ್ಸ್, ಗಿಸೆಪ್ಪಿ ವರ್ಡಿ, ಪ್ಯೂಚಿನಿ ಇವರು 19ನೆಯ ಶತಮಾನದ ಪಾಶ್ಚಾತ್ಯ ಸಂಗೀತ ಸಾಮ್ರಾಜ್ಯವನ್ನು ಆಳಿದರು. ಸ್ಟ್ರಾಸ್, ಸಿಬೇಲಿಯುಸ್, ಸಲಿವನ್, ಫ್ರಾನ್ಜ್ ಲಿಸ್ಟ್, ಡಿಬುಸ್ಸಿ, ಚೈಕಾವ್‌ಸ್ಕಿ-ಪಾಶ್ಚಾತ್ಯ ಸಂಗೀತ ಸಿರಿಯನ್ನು ಹೆಚ್ಚಿಸಿದ ಮೇಧಾವಿಗಳಲ್ಲಿ ಗಣ್ಯರು. ಆಧುನಿಕ ಪಾಶ್ಚಾತ್ಯ ಸಂಗೀತಗಾರರಲ್ಲಿ ಹೆಸರಾಂತ ವ್ಯಕ್ತಿ -ಯೆಹೂದಿ ಮೆನುಹಿನ್.

20ನೆಯ ಶತಮಾನದಲ್ಲಿ ಪಾಶ್ಚಾತ್ಯ ಸಂಗೀತಗಾರರು ಮುಖ್ಯವಾಗಿ ದೊಡ್ಡ ಮೇಳಗಳು, ವೃಂದಗಾನ ಹಾಗೂ ಆರ್ಗನ್ ಸಂಗೀತಗಳಿಗೆ ಹಿಂದಿನ ಮನ್ನಣೆ ನೀಡುವುದನ್ನು ಬಿಟ್ಟುಬಿಟ್ಟರು. ರೊಮ್ಯಾಂಟಿಕ್ ಅವಧಿಯ ಭಾವಾವೇಶ ಅಭಿವ್ಯಕ್ತಿಗಳನ್ನು ತಿರಸ್ಕರಿಸಿದರು. ಮೊದಲನೆಯ ಮಹಾಯುದ್ಧಾನಂತರ ಅಮೆರಿಕದಿಂದ ಯೂರೋಪ್ ತಲಪಿದ ಜಾಸ್ ಸಂಗೀತಕ್ಕೆ ಪುರಸ್ಕಾರ ದೊರೆತದ್ದು ಹೀಗೆ. ಹೆಸರಾಂತ ಸ್ಟ್ರಾವಿನ್‌ಸ್ಕಿ ಭಾವಾವೇಶಗಳಿಲ್ಲದ ರಚನೆಗಳನ್ನು ರೂಪಿಸಿದ. ಸಮಷ್ಟಿ ಪರಿಣಾಮ ಕಲೆಗೆ ಸಮಾನಾಂತರವಾಗಿ ಆ ಹೆಸರಿನ ಸಂಗೀತವೂ ಹುಟ್ಟಿಕೊಂಡಿತು.

ಧ್ವನಿಮುದ್ರಿಕೆಗಳು ಹಾಗೂ ಪ್ರಸಾರ ಸಂಗೀತಗಳು, ಎಲ್ಲ ಬಗೆಯ ಸಂಗೀತಗಳನ್ನೂ ಹೆಚ್ಚು ಜನಪ್ರಿಯಗೊಳಿಸಿವೆ. ಚಲಚ್ಚಿತ್ರ, ರೇಡಿಯೋ, ಟೆಲಿವಿಷನ್‌ಗಳ ಮೂಲಕ ಗಂಭೀರ ರಚನೆಗಳನ್ನು ಪ್ರಯೋಗ ಮಾಡುವುದರಲ್ಲಿ ಕೆಲವು ರಚನಕಾರರು ಆಸಕ್ತಿವಹಿಸಿದ್ದಾರೆ.

ಪಾಶ್ಚಾತ್ಯ ಸಂಗೀತ ವಾದ್ಯಮೇಳದಲ್ಲಿ, ವೃಂದಗಾನದಲ್ಲಿ 'ಕಂಡಕ್ಟರ್' ಎಂಬ ಮೇಳ ನಿರ್ದೇಶಕನ ಪಾತ್ರ ಹಿರಿದು. ರಚನಕಾರನ ಕೃತಿಯ ಯಶಸ್ಸು ಈತನ ನಿರ್ವಹಣೆಯನ್ನು ಅವಲಂಬಿಸಿದೆ ಎನ್ನಬಹುದು.

ನಮ್ಮ ಲಘುಸಂಗೀತದ ಮೇಲೆ ಪಾಶ್ಚಾತ್ಯಸಂಗೀತ ಪ್ರಭಾವ ಬೀರಿದೆ.

**ನೋಡಿ :** ಅಮೆರಿಕದ ಕಲೆ, ಸಾಹಿತ್ಯ ; ಅರಬೀ ಕಲೆ, ಸಾಹಿತ್ಯ ; ಆಧುನಿಕ ಸಂಗೀತ ; ಆಪೆರಾ ; ಆಫ್ರಿಕದ ಕಲೆ ; ಇಟಲಿಯ ಕಲೆ ಸಾಹಿತ್ಯ ; ಗ್ರೀಕ್ ಕಲೆ, ಸಾಹಿತ್ಯ ; ಚೈಕಾವ್‌ಸ್ಕಿ ; ಜರ್ಮನ್ ಕಲೆ, ಸಾಹಿತ್ಯ ; ಜಾಸ್ ಸಂಗೀತ ; ಡಚ್ ಕಲೆ, ಸಾಹಿತ್ಯ ; ನೀಗ್ರೊ ಸಂಗೀತ ; ಪಾಪ್ ಸಂಗೀತ ; ಫ್ರೆಂಚ್ ಕಲೆ, ಸಾಹಿತ್ಯ ; ಬಾಕ್ ; ಬ್ರಾಮ್ಸ್ ; ಬಿಥೋವನ್ ; ಮೊಜಾರ್ಟ್; ರಷ್ಯದ ಕಲೆ, ಸಾಹಿತ್ಯ; ವಾಗ್ನರ್ ; ವೇದನಾ ಸಂಗೀತ ; ಷೂಬರ್ಟ್; ಷೂಮನ್ ; ಸಂಗೀತ ವಾದ್ಯ ; ಸಿಬೇಲಿಯುಸ್ ;

## ಪಾಸ್ಟರ್‌ನಾಕ್

"ಚಳಿಗಾಲದಲ್ಲಿ ಇಕ್ಕೆಲದಲ್ಲೂ ಹಿಮಬಿದ್ದು ಜೋಳಾದ ಮರಗಳು ಮಾಸ್ಕೋ ನಗರವನ್ನು ಛೇದಿಸುವಂತೆ ಕಾಣುತ್ತವೆ. ವರ್ತುಲಾಕಾರದ ನಿಂಬೆ ತುಣುಕುಗಳಂತೆ ಮನೆ ಮನೆಯಲ್ಲೂ ದೀಪ ಹಳದಿಯಾಗಿ ಹೊಳೆಯುತ್ತದೆ. ಹಿಮದಿಂದ ತುಂಬಿ ಭಾರವಾದ ಆಗಸ ಮರಗಳ ಮೇಲೆಯೇ ತಂಗಿರುವಂತೆ ಕಾಣುತ್ತದೆ. ಸುತ್ತಲ ಪ್ರಕೃತಿ ಧವಳವಿರುವೆಡೆಯೆಲ್ಲ ನೀಲದ ಛಾಯೆ ತೋರುತ್ತದೆ.

"...ಹೊರಗೆ ಸೂರ್ಯ ಬೆಳಕಿನಲ್ಲಿ, ವನಗಳು ನಿಧಾನವಾಗಿ ಕಾವುಗೊಂಡು ತಮ್ಮ ಮೇಲೆ ಕೂತಿದ್ದ ಮಂಜನ್ನೆಲ್ಲ ಕಳೆದುಕೊಳ್ಳುತ್ತವೆ. ಈ ಮಂಜು ಕರಗಿ, ಸ್ಫಟಿಕದಷ್ಟು ಸ್ವಚ್ಛವಾದ ನೀರಾಗಿ ವನವೆಲ್ಲ ತುಂಬಿ ಕನ್ನಡಿಯಂತೆ ಥಳಥಳಿಸುತ್ತದೆ."

—ಮೇಲಿನದು ಸೋವಿಯೆತ್ ರಷ್ಯದ ಕವಿ, ಕಾದಂಬರಿಕಾರ ಪಾಸ್ಟರ್‌ನಾಕನ ಒಂದು ಗೀತೆಯ ಗದ್ಯ ಸಂವಾದ. ಆತನವು ಚೆಲುವಾದ ಅಭಿವ್ಯಕ್ತಿಯುಳ್ಳ ಅತ್ಯಂತ ಭಾವಪೂರ್ಣ ಗೀತೆಗಳು. ಅವನು ಬರೆದ ಕಾದಂಬರಿ ಒಂದೇ ಒಂದು –'ಡಾಕ್ಟರ್ ಜಿವಾಗೊ'. ಇದಕ್ಕೆ ನೊಬೆಲ್ ಸಾಹಿತ್ಯ ಬಹುಮಾನ ದೊರೆತು ಪಾಸ್ಟರ್‌ನಾಕ್‌ಗೆ ಅಂತರರಾಷ್ಟ್ರೀಯ ಖ್ಯಾತಿ ಲಭಿಸಿತು.

ಪಾಸ್ಟರ್‌ನಾಕ್‌ಗೆ, ಈ ಪ್ರಪಂಚ ಎಡೆಬಿಡದೆ ಮುಂದುವರಿಯುತ್ತಿರುವ ಒಂದು ಕ್ರಿಯೆ. ಇದರಲ್ಲಿನ ಭೌತಿಕ ಘಟನೆಗಳನ್ನು, ಭಾವನೆಗಳ ಸಹಾಯದಿಂದ ತನ್ನ ಒಳಗಣ್ಣು ಕಂಡಂತೆ ರೂಪಿಸಬಲ್ಲವನು ಕಲಾವಿದ. ಕವಿಯಾದರೂ ಒಬ್ಬ ಕಲಾಕಾರನೇ. ಪಾಸ್ಟರ್‌ನಾಕನ ಕವಿತೆಗಳ ವಿಷಯ ಅತಿ ಸರಳ ವಸ್ತುವಾಗಿರಬಹುದು. ಎರಡು ಪುಷ್ಪಗಳ ನಡುವೆ ಆತುಕೊಂಡ ಮಳೆ ಹನಿ, ಸಿಡಿಲು ಗುಡುಗುಗಳಿಂದ ಕೂಡಿದ ಮಳೆ ಆರಂಭಿಸುವ ಮುಂಚಿನ ಘಳಿಗೆಯ ಸುತ್ತಲ ಸನ್ನಿವೇಶ, ಗಂಭೀರ ಭವ್ಯ ಪರ್ವತದ ಮೊದಲ ನೋಟ, ಅಗಲಿಕೆ–ಇಂಥ ಅತಿ ಸಾಮಾನ್ಯ ವಿಷಯಗಳು ಕೂಡ, ಅವನ ಕವಿತೆಯಲ್ಲಿ ಗಹನವಾಗಿ, ಹೃದಯವನ್ನು ನೇರವಾಗಿ ತಾಗುವ ವಸ್ತುಗಳಾಗಿ ಪರಿಣಮಿಸುತ್ತವೆ. ಸೂರ್ಯೋದಯ ಅತಿ ಪ್ರಾಚೀನವೂ ಹೌದು : ನಿತ್ಯ ನೂತನವೂ ಹೌದು. ಹೀಗೆಯೇ ತನ್ನ ಅನುಭವದಲ್ಲಿ ಹಳತನ್ನೂ ಹೊಸತನ್ನೂ ಮೇಳವಿಸಿ ಕವಿತೆಯ ಹೊನಲಾಗಿ ಹರಿಯಿಸಿದ್ದಾನೆ— ಪಾಸ್ಟರ್‌ನಾಕ್. ಅವನ ಅಭಿಮತದಂತೆ ಚಿತ್ರಕಲೆಯಾಗಲೀ, ಸಂಗೀತವಾಗಲೀ, ಕವಿತೆಯಾಗಲೀ ಈ ರೀತಿ ಹಿಂದಿನದನ್ನೂ ಮುಂದಿನದನ್ನೂ ಬೆಸೆಯುವ ಕಲೆಯಾಗಿರಬೇಕು.

ಪಾಸ್ಟರ್‌ನಾಕ್ ಹುಟ್ಟಿದ್ದು ಮಾಸ್ಕೋದಲ್ಲಿ, 1890 ಫೆಬ್ರವರಿ 10ರಂದು. ಜೀವನವನ್ನು ಕಲಾವಿದನಂತೆ ಕಾಣುವ ದೃಷ್ಟಿಗೆ ಹುಟ್ಟಿನಿಂದಲೇ ಪ್ರೇರಣೆ ದೊರೆಯಿತು. ತಂದೆ ಲಿಯೊನಿಡ್ ಪಾಸ್ಟರ್‌ನಾಕ್ ಹೆಸರಾದ ಚಿತ್ರಕಾರ. ತಾಯಿ ರೋಸ ಕಾಫ್‌ಮನ್, ಸಂಗೀತಗಾರ್ತಿ. ತಂದೆ ಟಾಲ್‌ಸ್ಟಾಯ್, ರಿಲ್ಕೆಯಂಥವರ ವ್ಯಕ್ತಿಚಿತ್ರಗಳನ್ನು ಬಿಡಿಸುತ್ತಿದ್ದ. ಪಾಸ್ಟರ್‌ನಾಕನ ಮೇಲೆ ಇವರಿಬ್ಬರ ಪ್ರಭಾವ ಗಾಢವಾದದ್ದು. ಮೊದಲಿಗೆ ಸಂಗೀತಾಭ್ಯಾಸ ನಡೆಯಿತು. ಆದರೆ ಪರಿಶುದ್ಧ ಶ್ರುತಿ ಹಿಡಿಯಲಾಗುವುದಿಲ್ಲವೆಂದು ಸಂಗೀತಾಭ್ಯಾಸವನ್ನು ಪಾಸ್ಟರ್‌ನಾಕ್ ಬಿಟ್ಟುಬಿಟ್ಟ. ಅನಂತರ ತತ್ತ್ವಶಾಸ್ತ್ರ ಅವನ ಅಧ್ಯಯನದ ವಿಷಯವಾಯಿತು. ವಿಜ್ಞಾನ, ಸಾಮಾಜಿಕ ರೀತಿಗಳನ್ನು ರೂಪಿಸುವ ನೀತಿ ನಿಯಮಗಳು, ವಿಸ್ತಾರವಾದ ಆದರ್ಶಗಳು ಅವನ ಮನಸ್ಸನ್ನು ಆವರಿಸಿದುವು.



ತಪ್ಪುಗ್ರಹಿಕೆಯ ಗೊಂದಲ : ಪಾಸ್ಟರ್‌ನಾಕ್

ಬಾಲಕನಿದ್ದಾಗಲೇ ಕುದುರೆಯಿಂದ ಬಿದ್ದು ಒಂದು ಕಾಲು ಊನವಾದ ಕಾರಣ ಪಾಸ್ಟರ್‌ನಾಕ್‌ಗೆ ಯೋಧ ಜೀವನ ತಪ್ಪಿತು. ರಷ್ಯದ ಕ್ರಾಂತಿಯಲ್ಲಿ ಭಾಗವಹಿಸುವ ಅವಕಾಶವೂ ಅವನಿಗಿರಲಿಲ್ಲ. ಈ ವೇಳೆಗೆ ಪಾಸ್ಟರ್‌ನಾಕನ ಕವಿತಾ ಸಂಕಲನಗಳು ಹೊರಬರಲಾರಂಭಿಸಿದುವು. 'ಎಲ್ಲೆಗಳಾಚೆಯಿಂದ' 1917ರಲ್ಲಿ ಪ್ರಕಟವಾಯಿತು.

ಛಂದಸ್ಸು, ಲಯ, ಶಬ್ದಭಂಡಾರ, ಪದಜೋಡಣೆಗಳ ಬಗೆಗೆ ರಷ್ಯದ 'ಸ್ವೇಚ್ಛಾ ಸಂಕೇತವಾದಿ' ಕವಿಗಳು ಅಸಮ್ಮತಿ ಸೂಚಿಸಿದರು. ಅಂಥ ಸಂಪ್ರದಾಯವನ್ನು ತಳ್ಳಿಹಾಕಿ ತಮ್ಮದೇ ಪಂಥ ಸ್ಥಾಪಿಸಲು ಸೆಣಸಿದರು. ಇಂಥ ಭವಿಷ್ಯವಾದಿ ಕವಿಗಳಲ್ಲಿ ಪಾಸ್ಟರ್‌ನಾಕನೂ ಒಬ್ಬ.

ಪಾಸ್ಟರ್‌ನಾಕನ ಸಾಹಿತ್ಯ ಜೀವನವನ್ನು ಮೂರು ಹಂತಗಳಲ್ಲಿ ಗುರುತಿಸಬಹುದು. ಮೊದಲಿನದು ಪ್ರಾಯೋಗಿಕ ಹಂತ. ತಾನು ಮೆಚ್ಚಿದ ಶೈಲಿಯನ್ನು ಅನುಸರಿಸಿದ. ಸೃಜನಾತ್ಮಕ ಬರಹಗಳನ್ನು ಆತ ಹೊರತಂದ: 'ಎಲ್ಲೆಗಳಾಚೆಯಿಂದ', 'ವಸ್ತು, ವೈವಿಧ್ಯಗಳು', 'ಮರುಜನ್ಮ', ಇವು ಅವನ ಕೃತಿಗಳು. ನೆನಪಿನ ರೂಪದ ಆತ್ಮವೃತ್ತವನ್ನೂ ಅವನು ಬರೆದ.

ಸ್ಟಾಲಿನನ ಆಳ್ವಿಕೆಯ ಉಚ್ಛ್ರಾಯ ಕಾಲದಲ್ಲಿ, ವೈಯಕ್ತಿಕತೆಯಿಂದ ತುಂಬಿರುತ್ತಿದ್ದ ಪಾಸ್ಟರ್‌ನಾಕನ ರಚನೆಗಳು ನಿರಾಕರಿಸಲ್ಪಟ್ಟುವು, ಪ್ರಕಟವಾಗಲಿಲ್ಲ. ಭಾಷಾಂತರ ಕಾರ್ಯದಲ್ಲಿ ಪಾಸ್ಟರ್‌ನಾಕ್ ಮಗ್ನನಾದ. ಇದರ ಫಲ ಶೇಕ್ಸ್‌ಪಿಯರನ ಟ್ರಾಜಿಡಿ ಹಾಗೂ ಗಯಟೆಯ 'ಫೌಸ್ಟ್'ಗಳ ಉತ್ಕೃಷ್ಟ ಅನುವಾದಗಳು. ಈ ಕೃತಿಗಳಲ್ಲಿ ಕಂಡುಬರುವ ಕವಿತಾ ಶಕ್ತಿಯೂ ಭಾಷೆಯ ಆಂತರಿಕ ಭಾವವನ್ನು ಬಳಸಿಕೊಂಡಿರುವ ರೀತಿಯೂ ಪ್ರಶಂಸನೀಯ.

1953–60ರ ವರೆಗಿನ ಅವಧಿಯಲ್ಲಿ ಇವನ ಅತಿ ಸುಂದರ ಕವಿತೆಗಳು ರಚಿತವಾದುವು. ಸೋವಿಯೆತ್ ರಷ್ಯದಲ್ಲೂ ಮೊದಲಿನ ನಿಷ್ಠುರ ಹಿಡಿತ ಕಡಮೆಯಾಗತೊಡಗಿತು. ಪಾಸ್ಟರ್‌ನಾಕನ ಕವಿತೆಗಳು ಮತ್ತೆ ಪ್ರಕಟವಾದುವು. 'ಡಾಕ್ಟರ್ ಜಿವಾಗೊ' ಆಗ ಆತ ಬರೆದ ಕಾದಂಬರಿ. ಇದರಲ್ಲಿ ರಷ್ಯದ ಕ್ರಾಂತಿಯನ್ನೂ ಅದರ ಪರಿಣಾಮಗಳನ್ನೂ ನಿರ್ಲಿಪ್ತವಾಗಿ ವಸ್ತುನಿಷ್ಠವಾಗಿ ಕಾಣುವ ದೃಷ್ಟಿಯಿದೆ. ರಷ್ಯದಲ್ಲಿ ಇದರ ಪ್ರಕಟಣೆ ನಿಷೇಧಿಸಲ್ಪಟ್ಟಿತು. ಆದರೆ ಅದು ಇಟಲಿಯಲ್ಲಿ ಪ್ರಕಟವಾಗಿ ಇಂಗ್ಲಿಷಿಗೂ ಭಾಷಾಂತರಗೊಂಡಿತು. ಇತರ ಭಾಷೆಗಳಿಗೂ ಅದು ತರ್ಜುಮೆಯಾಯಿತು. ಈ ಕೃತಿಗಾಗಿ ಪಾಸ್ಟರ್‌ನಾಕ್‌ಗೆ 1958ರ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು.

ಆದರೆ ಸೋವಿಯೆತ್ ಬರೆಹಗಾರರ ಒಕ್ಕೂಟವು ಪಾಸ್ಟರ್‌ನಾಕನನ್ನು ತನ್ನ ಸದಸ್ಯತ್ವದಿಂದ ತೆಗೆದುಹಾಕಿತು. ದೇಶಾಭಿಮಾನಿಯಲ್ಲವೆಂಬ ಆರೋಪಕ್ಕೆ ಆತ ಗುರಿಯಾದ. ಮನನೊಂದ ಪಾಸ್ಟರ್‌ನಾಕ್ ಆ ಬಹುಮಾನವನ್ನು ನಿರಾಕರಿಸಿದ. ತನ್ನವರ ಒಲುಮೆಯನ್ನು ಮತ್ತೆ ಪಡೆಯುವೆನೆಂಬ ಆಸೆಯಿಂದಲೇ ದಿನ ಕಳೆದ. ಇದು ಕೈಗೂಡುವುದಕ್ಕೆ ಮೊದಲೇ 1960 ಮೇ 30ರಂದು ಗತಿಸಿದ.

ಅವನ ಮರಣಾನಂತರ ರಷ್ಯದಲ್ಲೂ 'ಡಾಕ್ಟರ್ ಜಿವಾಗೋ' ಪ್ರಕಟವಾಯಿತು.

## ಪ್ಯಾರೋ

16ನೆಯ ಶತಮಾನ ಆರಂಭವಾಗುತ್ತಿದ್ದಂತೆ ಕ್ರೈಸ್ತರ ರೋಮನ್ ಕ್ಯಾಥೊಲಿಕ್ ಪಂಗಡದ ಗುರುಶ್ರೇಷ್ಠ ಪೋಪ್‌ನ ಮಹಾಭವನ ವ್ಯಾಟಿಕನ್‌ನಲ್ಲಿ ಒಂದು ವಿಚಿತ್ರ ಘಟನೆ ಸಂಭವಿಸಿತು. ಅದು ಚಿತ್ರಕಲಾ ಪ್ರಪಂಚದ ಒಂದು ದುರ್ಘಟನೆ ಎಂದರೂ ತಪ್ಪಲ್ಲ.

ಪ್ಯಾರೋ ಒಬ್ಬ ಉತ್ತಮ ಚಿತ್ರಕಾರ. ಪೋಪ್ 2ನೆಯ ಪಯಸ್ ಅವನನ್ನು ಕರೆಸಿಕೊಂಡು, ತನ್ನ ಭವನದ ಕೆಲವು ಕೋಣೆಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುವಂತೆ ಹೇಳಿದ. ಪ್ಯಾರೋ ಆ ಆದೇಶವನ್ನು ಮನ್ನಿಸಿ ಕೆಲವು ಚಿತ್ರಗಳನ್ನು ರಚಿಸಿದ. ಎರಡನೆಯ ಪಯಸ್‌ನ ಅನಂತರ ಅಧಿಕಾರಕ್ಕೆ ಬಂದ ಎರಡನೆಯ ಜೂಲಿಯಸ್ ತಾನೂ ಕೆಲವು ಭಿತ್ತಿಚಿತ್ರಗಳನ್ನು ಬರೆಸಬೇಕೆಂದು ಅಪೇಕ್ಷಿಸಿ, ಆಗಿನ್ನೂ ಕೇವಲ 24 ವರ್ಷ ವಯಸ್ಸಿನ ತರುಣನಾಗಿದ್ದ ರಾಫೇಲ್‌ಗೆ ಹೇಳಿಕಳುಹಿಸಿದ. ವಾಟಿಕನ್ ಭವನದ ಮುಖ್ಯ ಕೊಠಡಿಗಳೆಲ್ಲವೂ ಆ ಹೊತ್ತಿಗೆ ಚಿತ್ರಗಳಿಂದ ತುಂಬಿಹೋಗಿದ್ದುದರಿಂದ ಹಿಂದಿನ ಕೆಲವು ಚಿತ್ರಗಳನ್ನು ಅಳಿಸಿ ಅವಿದ್ದ ಸ್ಥಳಗಳಲ್ಲಿ ರಾಫೇಲ್‌ನಿಂದ ಹೊಸ ಚಿತ್ರಗಳನ್ನು ಬರೆಸಬೇಕೆಂದು ಪೋಪ್ ಜೂಲಿಯಸ್ ತೀರ್ಮಾನಿಸಿದ.

ಅವನ ಆಜ್ಞೆಯಂತೆ ಅಳಿಸಲ್ಪಟ್ಟ ಚಿತ್ರಗಳಲ್ಲಿ ಪ್ಯಾರೋ ರಚಿಸಿದ ಚಿತ್ರಗಳಿದ್ದುವು. ವಾಸ್ತವವಾಗಿ ಪ್ಯಾರೋ ವ್ಯಾಟಿಕನ್‌ನಲ್ಲಿ ಬರೆದಿದ್ದ ಒಂದು ಚಿತ್ರ ವಿನಾ ಅವನ ಉಳಿದ ಚಿತ್ರಗಳೆಲ್ಲವೂ ನಾಶವಾದುವು. ಹೀಗೆ ಉತ್ತಮ ಕಲಾಕೃತಿಗಳು ನಾಶವಾಗುತ್ತಿದ್ದುದನ್ನು ಕಂಡು ರಾಫೇಲ್‌ಗೆ ತುಂಬ ದುಃಖವಾಯಿತು. ಅವನು ಅತ್ತುಬಿಟ್ಟ.

ತನ್ನ ಕೃತಿಗಳು ಹೀಗೆ ನಾಶವಾದುದ್ದನ್ನು ನೋಡಿಯೋ ಕೇಳಿಯೋ ಸಂಕಟಪಡುವ ದುರವಸ್ಥೆ ಪ್ಯಾರೋಗೆ ಬರಲಿಲ್ಲವೆಂಬುದು ಒಂದು ಸಮಾಧಾನದ ಸಂಗತಿ. ಏಕೆಂದರೆ ಈ ದುರಂತ ನಡೆಯುವುದಕ್ಕೆ ಹದಿನೆಂಟು ವರ್ಷಗಳ ಹಿಂದೆಯೇ ಪ್ಯಾರೋ ತೀರಿಕೊಂಡಿದ್ದ.

ಪ್ಯಾರೋ ಹುಟ್ಟಿದ್ದು ಸುಮಾರು 1416ರಲ್ಲಿ. ಮಧ್ಯ ಇಟಲಿಯ ಬೋರ್ಗೊ ಸಾನ್ ಸೆಪೋಲ್‌ಕ್ರೋದಲ್ಲಿ. ಚಿಕ್ಕ ವಯಸ್ಸಿನಿಂದಲೂ ಅವನ ಗ್ರಹಣಶಕ್ತಿ ತೀವ್ರವಾಗಿತ್ತು. ಲ್ಯಾಟಿನ್, ಗಣಿತ ಈತನ ಮೆಚ್ಚಿನ ವಿಷಯಗಳು. ಸುಮಾರು 20 ವರ್ಷದವನಾಗಿದ್ದಾಗ ಪ್ಯಾರೋ ಹತ್ತಿರದ ಪಟ್ಟಣವಾದ ಫ್ಲಾರೆನ್ಸಿಗೆ ಬಂದ. ಅಲ್ಲಿ ಡೊಮೆನಿಕೊ ವೆನಿಜಿಯಾನೋನ ಬಳಿ ಚಿತ್ರಕಲೆಯನ್ನು ಅಭ್ಯಾಸಮಾಡಿದ. ಇವನು ರೋಮಿಗೆ ಭೇಟಿ ಕೊಟ್ಟಾಗ ವ್ಯಾಟಿಕನ್‌ನಲ್ಲಿ ಭಿತ್ತಿಚಿತ್ರಗಳನ್ನು ರಚಿಸಲು ಆಹ್ವಾನ ಬಂತು.

ಪ್ಯಾರೋ 1452ರಲ್ಲಿ ಅರಜೋದಲ್ಲಿರುವ ಸಂತ ಫ್ರಾನ್ಸಿಸ್ಕೋ ಚರ್ಚಿನಲ್ಲಿ ಫ್ರೆಸ್ಕೋಗಳನ್ನು ರಚಿಸಲಾರಂಭಿಸಿದ. ಏಸು ಕ್ರಿಸ್ತನ ಜೀವನ ಘಟನೆಗಳು ಈ ಚಿತ್ರಗಳ ವಸ್ತುಗಳಾಗಿದ್ದುವು. ಚಿತ್ರಗಳನ್ನು ರಚಿಸಲು 14 ವರ್ಷ ತೆಗೆದುಕೊಂಡ. ಈ ಕೆಲಸದ ನಡುವೆ ಬಿಡುವುಮಾಡಿಕೊಂಡು ಇತರ ಎಡೆಗಳಲ್ಲೂ ಕೆಲಸ ಮಾಡುತ್ತಿದ್ದ.

ಪ್ಯಾರೋಗೆ ತನ್ನ ಹುಟ್ಟೂರೆಂದರೆ ತುಂಬ ಅಭಿಮಾನ. ತಾನು ಫ್ಲಾರೆನ್ಸ್‌ನಲ್ಲಿದ್ದರೂ ಊರಿಗೆ ಆಗಾಗ್ಗೆ ಹೋಗಿಬರುತ್ತಿದ್ದ. ಅವನ ಜನರಿಗೂ ಕಲಾವಿದ ಪ್ಯಾರೋ ತಮ್ಮವನೆಂಬ ಹೆಮ್ಮೆ. 1478ರಲ್ಲಿ ಪ್ಯಾರೋ ತನ್ನ ಹುಟ್ಟೂರಿಗೆ ಹಿಂದಿರುಗಿದ. ಆ ಹೊತ್ತಿಗೆ ದೃಷ್ಟಿ ಮಂದವಾಗಿದ್ದರೂ ತನ್ನ ಅಧ್ಯಯನವನ್ನು ಮುಂದುವರಿಸಿದ. ಕಲೆಯಲ್ಲಿ ಮಾತ್ರವಲ್ಲದೆ ಶಾಸ್ತ್ರ ವಿಚಾರಗಳಲ್ಲೂ ಪ್ಯಾರೋಗೆ ಆಸಕ್ತಿಯೂ ತಿಳಿವಳಿಕೆಯೂ ಇದ್ದುವು. ಚಿತ್ರಕಲೆಯ ವಿಷಯದಲ್ಲಿ ತನ್ನ ಅಭಿಪ್ರಾಯಗಳನ್ನು ನಿರೂಪಿಸುವ ಪುಸ್ತಕಗಳನ್ನು ಆತ ಬರೆದ. 1492ನೆಯ ಅಕ್ಟೋಬರ್ 12ರಂದು ನಿಧನನಾದ.

ಪ್ಯಾರೋ ತನ್ನ ಕಾಲದ ಅಸದೃಶ ಕಲಾವಿದನೆನಿಸಿಕೊಂಡಿದ್ದರೂ ಅವನ ಕೀರ್ತಿ ಬಹು ಬೇಗ ಹಾಸಿತು. ದೊಡ್ಡ ನಗರಗಳಿಂದ ದೂರವಾದ, ಸುಲಭವಾಗಿ ಸಂದರ್ಶಿಸಲು ಸಾಧ್ಯವಿಲ್ಲದ ಊರುಗಳಲ್ಲಿ ಈತ ಚಿತ್ರ ರಚಿಸಿದ್ದು ಇದಕ್ಕೆ ಕಾರಣವಿರಬಹುದು.

ಈ ಕಲಾವಿದನ ಬಗೆಗೆ ಆಸಕ್ತಿಮೂಡಿದ್ದು, ಅವನ ಕೃತಿಗಳಿಗೆ ಮನ್ನಣೆ ದೊರೆತದ್ದು, 19ನೆಯ ಶತಮಾನದ ಕೊನೆಯಲ್ಲಿ.

ಸಮಾಂಗತೆ, ಜಾಮಿತೀಯ ಸರಳತೆ, ಸೌಮ್ಯ ಶೀತಲ ವಾತಾವರಣ –ಇವನ್ನು ಆತನ ಚಿತ್ರಕೃತಿಗಳಲ್ಲಿ ಕಾಣಬಹುದು. ನಿಖರತೆ ಅವುಗಳ ವಿಶೇಷ ಗುಣ. ವ್ಯಕ್ತಿರೂಪಗಳಲ್ಲಿ ಗ್ರೀಕರ ಶರೀರಸೌಷ್ಠವ ಎದ್ದುಕಾಣುತ್ತದೆ.

ಅರಜೋದಲ್ಲಿನ ಸಂತ ಫ್ರಾನ್ಸಿಸ್ಕೋ ದೇವಾಲಯದಲ್ಲಿ ಪ್ಯಾರೋ ನಿರ್ಮಿಸಿದ ಭಿತ್ತಿಚಿತ್ರಗಳು ಆತನ ಮೇರುಕೃತಿಗಳೆನಿಸಿವೆ. ಜಗತ್ತಿನ ಭಿತ್ತಿ ಚಿತ್ರಗಳಲ್ಲಿ ಅತ್ಯುತ್ತಮ ಎಂದು ಪರಿಗಣಿಸಲ್ಪಟ್ಟಿರುವ ಕೆಲವೇ ಕೃತಿಗಳಲ್ಲಿ ಇದೂ ಒಂದು. ಇವನು ರಚಿಸಿದ ಅರ್ಬಿನೋ ಡ್ಯೂಕನ ರೂಪಚಿತ್ರ ಪ್ರಪಂಚದ ಮಹಾನ್ ರೂಪಚಿತ್ರಗಳಲ್ಲಿ ಒಂದೆಂದು ಗಣಿಸಲ್ಪಟ್ಟಿದೆ.

ಲಂಡನಿನ ನ್ಯಾಷನಲ್ ಗ್ಯಾಲರಿಯಲ್ಲಿ ಪ್ಯಾರೋ ವಿರಚಿತ ಎರಡು ಚಿತ್ರಗಳಿವೆ– 'ನೇಟಿವಿಟಿ' ಹಾಗೂ 'ಬ್ಯಾಪ್ಟಿಸಂ ಆಫ್ ಕ್ರೈಸ್ಟ್'. ಇವುಗಳಲ್ಲಿ ಬೆಳಕು ಮತ್ತು ಬಣ್ಣಗಳ ವಿನ್ಯಾಸ ಮನಮೋಹಕವಾಗಿವೆ. ಹಿನ್ನೆಲೆ ಪ್ರಸನ್ನವಾಗಿ, ನಯವಾಗಿದೆ.

'ಫೆಡರಿಗೊ', 'ಕ್ವೀನ್ ಆಫ್ ಶೀಬಾ', 'ರಿಸರೆಕ್ಷನ್' ಮುಂತಾದುವು ಇವನ ಇತರ ಪ್ರಖ್ಯಾತ ಚಿತ್ರಗಳು.

ಕಲಾವಿಮರ್ಶಕರು ಪ್ಯಾರೋವನ್ನು ನವೋದಯ ಕಾಲದ ಅತ್ಯಂತ ಮೇಧಾವಿ ಕಲಾವಿದರಲ್ಲಿ ಒಬ್ಬ ಎಂದು ಪ್ರಶಂಸಿಸಿದ್ದಾರೆ.

## ಪಿಂಗಾಣಿ ಚಿತ್ರಕಲೆ

ಚೀನ ದೇಶದ ಕಲೆಯಲ್ಲಿ ಪಿಂಗಾಣಿ ತಯಾರಿಕೆ ಮಹತ್ವದ ಸ್ಥಾನ ಪಡೆದಿದೆ. ಪಿಂಗಾಣಿಯಂಥ ಅದ್ಭುತ ವಸ್ತುವನ್ನು ಉಪಯೋಗಕ್ಕೆ ತಂದವರೂ ಚೀನೀಯರೇ. ಕುಂಭಕಲೆಗೆ ಇದೊಂದು ವಿಸ್ಮಯಕಾರಕ ಕೊಡುಗೆ. ಪಿಂಗಾಣಿಯ ವಸ್ತುಗಳ ಅಲಂಕರಣ ಹೇಗೆ ಮಾಡ ಬೇಕೆಂಬುದನ್ನು ಪ್ರಪಂಚಕ್ಕೆ ತೋರಿಸಿಕೊಟ್ಟವರು ಚೀನೀಯರು. ಚೀನದ

ಮೈಸೂರು ಜಗನ್ಮೋಹನ ಚಿತ್ರಶಾಲೆಯಲ್ಲಿ ಚಿತ್ರಿತ ಪಿಂಗಾಣಿ

ಪಿಂಗಾಣಿ ಕೆಲಸಗಾರರೂ ಚಿತ್ರಕಲಾವಿದರೂ ವಿಶ್ವದಾದ್ಯಂತ ತಮ್ಮ ತಾಂತ್ರಿಕ ಮೇಲ್ಮೆ ಹಾಗೂ ಕಲಾ ಉತ್ಕೃಷ್ಟತೆಗಳಿಗೆ ಖ್ಯಾತರಾಗಿದ್ದಾರೆ.

ನಮಗೆ ದೊರೆಯುವ ಅತ್ಯಂತ ಪ್ರಾಚೀನ ಪಿಂಗಾಣಿ ವಸ್ತು ಟಾಂಗ್ ವಂಶದ (618–906) ಕಾಲದ್ದು. ಯೂರೋಪಿನ ಕೆಲವು ವಸ್ತು ಸಂಗ್ರಹಾಲಯಗಳಲ್ಲಿ ಈ ವಸ್ತುಗಳಿವೆ. ಅಂದಿನ ಚೀನೀ ಕಲಾವಿದರ ಸದಭಿರುಚಿಗೆ ಇವು ನಿದರ್ಶನಗಳು.

ಸೂಂಗ್ ಅವಧಿ(960–1279)ಯಲ್ಲಿ ಫೆಲ್‌ಸ್ಪಾರ್ ಎಂಬ ಖನಿಜದ ಪುಡಿಯನ್ನು ಉಪಯೋಗಿಸಿ ಪಿಂಗಾಣಿ ವಸ್ತುಗಳಿಗೆ ಏಕವರ್ಣದ ಮೆರುಗು ಕೊಡುವ ವಿಧಾನ ರೂಪುಗೊಂಡಿತು. ಗಟ್ಟಿ ಮೈ, ಹೊಳಪು ಮತ್ತು ಲಲಿತ ವಿನ್ಯಾಸ ಈ ಪಿಂಗಾಣಿ ವಸ್ತುಗಳ ವಿಶಿಷ್ಟತೆ. ಬಿಳಿ ಹಾಗೂ ಮಾಸಲು ಹಳದಿ ಬಣ್ಣದ ಜೇಡಿಮಣ್ಣಿಗೆ ಬಿಳಿ, ಕಂದು ಅಥವಾ ಕಪ್ಪು ಬಣ್ಣ ಮತ್ತು ಮೆರುಗು ಕೊಡುವ ವಸ್ತುಗಳನ್ನು ವಿವಿಧ ಪ್ರಮಾಣದಲ್ಲಿ ಬೆರೆಸಿ ಬಣ್ಣಬಣ್ಣದ ಪಿಂಗಾಣಿ ವಸ್ತುಗಳನ್ನು ನಿರ್ಮಿಸುವುದೂ ಈ ಕಾಲದಲ್ಲಿ ಆರಂಭವಾಯಿತು. ಹಾಗೆಯೇ ಅವುಗಳ ಮೇಲೆ ಚಿತ್ರಗಳನ್ನು ಬರೆಯುವುದೂ ಆಚರಣೆಗೆ ಬಂತು. ಅಷ್ಟೇನೂ ಮೆರುಗು ಇಲ್ಲದೆ ಕಂದು ಬಣ್ಣದ ಪಿಂಗಾಣಿ ವಸ್ತುಗಳನ್ನೇ ಸಾಮಾನ್ಯವಾಗಿ ಚಿತ್ರರಚನೆಗಾಗಿ ಆರಿಸುತ್ತಿದ್ದರು. ಬಳ್ಳಿ, ಹಕ್ಕಿ, ತಾವರೆ ಹಾಗೂ ನಾನಾ ಪ್ರಾಣಿಗಳು ಈ ಚಿತ್ರಣದ ವಸ್ತುಗಳಾಗಿರುತ್ತಿದ್ದುವು. ಹೂಜಾಡಿಗಳು, ಧೂಪದಾನಿ, ಹೂದಾನಿ ಮುಂತಾದುವುಗಳ ಮೇಲೆ ಚಿತ್ರಣ ಇರುತ್ತಿತ್ತು. ಹಾಗೆಯೇ ಪಾತ್ರೆ, ತಟ್ಟೆಗಳಿಗೂ ಇಂಥ ಶೃಂಗಾರ ನಡೆಯುತ್ತಿತ್ತು.

ಚೀಣೀ ಪಿಂಗಾಣಿ ವಸ್ತುಗಳ ತಯಾರಿಕೆಯ ಇತಿಹಾಸದಲ್ಲಿ ಮಿಂಗ್ ಚಕ್ರವರ್ತಿಗಳ ಆಳ್ವಿಕೆಯ ಕಾಲ (1368–1644) ಮುಖ್ಯವಾದದ್ದು. ಈ ಕಾಲದ ತಯಾರಿಕೆಗಳಲ್ಲಿ ನಯ ಹಾಗೂ ಸೊಗಸು ಅಪೂರ್ವ. ಈ ಕಾಲದಲ್ಲಿ ಮೂರು ಬಣ್ಣಗಳ ಹಾಗೂ ಐದು ಬಣ್ಣಗಳ ವಸ್ತುಗಳನ್ನು ತಯಾರಿಸಲಾರಂಭಿಸಿದರು. ಮೆರುಗುಕೊಟ್ಟ ಹೊರ ಮೈಯಲ್ಲಿ ಗಾಜು ಲೇಪ –ಎನಾಮೆಲ್– ದಿಂದ ಚಿತ್ರಗಳನ್ನು ಮೂಡಿಸತೊಡಗಿದರು. ಕೇವಲ ಹೂ, ಬಳ್ಳಿ, ಪ್ರಾಣಿ ಮುಂತಾದುವನ್ನು ಚಿತ್ರಿಸುವುದರ ಜೊತೆಗೆ ಧಾರ್ಮಿಕ ವ್ಯಕ್ತಿಗಳು, ಪುರಾಣ ಕಥೆಗಳು ಹಾಗೂ ಜಾನಪದ ಕಥೆಯ ಪಾತ್ರಗಳು ಇವನ್ನು ಚಿತ್ರಿಸುವುದೂ ಆರಂಭವಾಯಿತು. ಪ್ರಕೃತಿ ಚಿತ್ರದಲ್ಲಂತೂ

ಪುರಾಣಗಳು ಭಾರತೀಯರ ಪವಿತ್ರಗ್ರಂಥಗಳು. ಧಾರ್ಮಿಕ ಗ್ರಂಥಗಳಲ್ಲಿ ವೇದಗಳ ಅನಂತರ ಅವುಗಳಿಗೆ ಹೆಚ್ಚಿನ ಪ್ರಾಧಾನ್ಯವಿದೆ. ಇವನ್ನು ಹಿಂದೂಧರ್ಮ ಮತ್ತು ಸಂಸ್ಕೃತಿಯ ವಿಶ್ವಕೋಶಗಳು ಎನ್ನಬಹುದು. ಇವುಗಳಲ್ಲಿ ಚಾರಿತ್ರಿಕ ಅಂಶಗಳೂ ಸೇರಿವೆ.

ಹದಿನೆಂಟು ಮಹಾಪುರಾಣಗಳೂ ಅಷ್ಟೇ ಸಂಖ್ಯೆಯ ಉಪಪುರಾಣಗಳೂ ಇವೆ. ಇವುಗಳನ್ನು ವೇದವ್ಯಾಸರು ರಚಿಸಿದರೆಂಬುದು ಒಂದು ಐತಿಹ್ಯ. ಬೇರೆ ಬೇರೆ ಯುಗದಲ್ಲಿ ಬೇರೆ ಬೇರೆಯವರು ಇವನ್ನು ರಚಿಸಿದರು ಎಂಬ ಅಭಿಪ್ರಾಯವೂ ಇದೆ.

'ಪುರಾಣ' ಎಂಬ ಮಾತನ್ನು 'ಪುರ ಅಪಿ ನವೀನಂ' ಎಂದು ವಿವರಿಸುವರೆಂಬುದು ಗಮನಿಸಬೇಕಾದ ವಿಚಾರ. 'ಪುರ ಅಪಿ ನವೀನಂ' ಅಂದರೆ 'ಹಳೆಯದಾದರೂ ಹೊಸದು'.

ಪುರಾಣಗಳು ಕಾಲಕಾಲಕ್ಕೆ ಪರಿಷ್ಕರಿಸಲ್ಪಟ್ಟಿವೆ ಎಂಬುದಕ್ಕೆ ಆಧಾರಗಳಿವೆ. ಈಗ ಪ್ರಚಾರದಲ್ಲಿರುವ ಪುರಾಣಗಳು ಗುಪ್ತ ಸಮ್ರಾಟರ ಕಾಲದಲ್ಲಿ ಅಂದರೆ 4ನೆಯ ಶತಮಾನದಲ್ಲಿ ಪುನರ್ರಚಿತವಾದುವೆಂದು ಕೆಲ ಮಂದಿ ವಿದ್ವಾಂಸರ ಅಭಿಪ್ರಾಯ.

ಒಂದು ಲೆಕ್ಕಾಚಾರದ ಪ್ರಕಾರ, ಮಹಾಪುರಾಣಗಳ ಒಟ್ಟು ವಿಸ್ತಾರ ನಾಲ್ಕು ಲಕ್ಷ 'ಗ್ರಂಥ'ಗಳು. 'ಗ್ರಂಥ' 32 ಅಕ್ಷರಗಳ ಕೂಟ. ಪುರಾಣಗಳ ಐದು ಮುಖ್ಯ ಲಕ್ಷಣಗಳಲ್ಲಿ ವಂಶಾನುಚರಿತ ಒಂದು. ಇದು ರಾಜರ ವಂಶಗಳ ವಿವರಣೆಗೆ ಸಂಬಂಧಿಸಿದ್ದು. ಗುಪ್ತರ ಕಾಲದಲ್ಲಿ ಪುನರ್ರಚಿತವಾದ ಪುರಾಣಗಳಲ್ಲಿ ಹರ್ಷವರ್ಧನನ ಕಾಲದವರೆಗೆ ಭಾರತೀಯ ರಾಜವಂಶಗಳ ವಿವರಗಳಿವೆ. ಇದಲ್ಲದೆ, ಆಗಿನ ಕಾಲದಲ್ಲಿ ಪ್ರಚಲಿತವಾಗಿದ್ದ ನಂಬಿಕೆಗಳನ್ನು ಅನುಸರಿಸಿ ಪ್ರಪಂಚದ ಸೃಷ್ಟಿಯ ವಿವರವೂ ಪುರಾಣದಲ್ಲಿದೆ. ಇದಲ್ಲದೆ ವೇದಾಂತ ವಿಚಾರಗಳೂ ಇವೆ.

ಪುರಾಣಗಳಲ್ಲಿ ದೊರೆಯುವ ಇನ್ನೊಂದು ತಿಳಿವಳಿಕೆ ಕ್ಷೇತ್ರ ಮತ್ತು ತೀರ್ಥಗಳಿಗೆ ಸಂಬಂಧಿಸಿದ ವಿವರಗಳು. ಸ್ಕಂದಪುರಾಣದಲ್ಲಿ ಕ್ಷೇತ್ರ ತೀರ್ಥಗಳ ಬಗೆಗೆ ಹಲವಾರು ವಿವರಗಳೂ ಅವುಗಳ ಮಹಾತ್ಮೆಗೆ ಸಂಬಂಧಿಸಿದ ಐತಿಹ್ಯಗಳೂ ಇವೆ. ವಂಶಾನುಚರಿತವೂ ಕ್ಷೇತ್ರತೀರ್ಥವರ್ಣನೆಯೂ ಐತಿಹಾಸಿಕ ಮತ್ತು ಭೌಗೋಳಿಕ ವಿಚಾರಗಳನ್ನು ತಿಳಿದುಕೊಳ್ಳಲು ಸಹಕಾರಿಯಾಗಿವೆ. ಪುರಾಣಗಳಲ್ಲಿ ಬರುವ ರಾಜವಂಶಾದಿಗಳ ವಿವರಗಳು ಕಟ್ಟುಕಥೆಗಳೆಂದು ವಿದ್ವಾಂಸರು ಹೇಳುತ್ತಿದ್ದುದುಂಟು. ಆದರೆ ಇತ್ತೀಚಿನ ಪರಿಶೀಲನೆಗಳಿಂದ, ಇವುಗಳಲ್ಲಿ ಗಣನೀಯ ಚರಿತ್ರಾಂಶಗಳಿವೆ ಎಂದು ತಿಳಿದುಬಂದಿದೆ.

ಪುರಾಣಗಳು ಸಂಸ್ಕೃತ ಸಾಹಿತ್ಯ ರಾಶಿಯಲ್ಲಿ ಪ್ರಧಾನವಾಗಿವೆ. ಇವುಗಳ ಭಾಷೆ ಸರಳ, ಸುಂದರ. ಅಲ್ಲಲ್ಲಿ ಸಾಹಿತ್ಯ ಗುಣವೂ ಕಂಡುಬರುತ್ತದೆ. ಪುರಾಣಗಳಲ್ಲಿ ಬರುವ ಸ್ತೋತ್ರ ಭಾಗಗಳೂ ಆಕರ್ಷಕವಾದುವು.

ಹಲವಾರು ಪುರಾಣಗಳು ಕನ್ನಡಕ್ಕೂ ಭಾಷಾಂತರವಾಗಿವೆ.

**ನೋಡಿ :** ಧಾರ್ಮಿಕ ಸಾಹಿತ್ಯ; ಮಹಾತ್ಮೆ ಸಾಹಿತ್ಯ; ವ್ಯಾಸ; ಸ್ತೋತ್ರಸಾಹಿತ್ಯ

## ಪುರಾತನರು

ಅರವತ್ತಮೂರು ಪುರಾತನರು ತಮಿಳುನಾಡಿನ ಶಿವಭಕ್ತರು. 'ಪೆರಿಯ ಪುರಾಣಂ' ಎಂಬ ತಮಿಳು ಕೃತಿಯಲ್ಲಿ ಇವರ ಜೀವಿತವನ್ನು ಕುರಿತ ವಿವರಗಳು ದೊರೆಯುತ್ತವೆ. ಕನ್ನಡ ನಾಡಿನ ವಚನಕಾರರು ಇವರನ್ನು ಪುರಾತನರು, ಪ್ರಮಥರು ಎಂಬ ಹೆಸರಿನಿಂದ ಕರೆದಿದ್ದಾರೆ.



ಶಿವಭಕ್ತ : ಬೇಡರ ಕಣ್ಣಪ್ಪ

ತಮಿಳಿನಲ್ಲಿ ಪುರಾತನರನ್ನು ನಾಯನ್ಮಾರರು ಎನ್ನುತ್ತಾರೆ. ತಮಿಳುನಾಡಿನ ಶಿವದೇವಾಲಯಗಳಲ್ಲಿ ಹಾಗೂ ಕರ್ನಾಟಕದಲ್ಲಿರುವ ಕೆಲವು ಶಿವಾಲಯಗಳಲ್ಲಿ ಅರವತ್ತಮೂರು ಭಕ್ತರ ವಿಗ್ರಹಗಳನ್ನು ಕಾಣಬಹುದು. ತಮಿಳು, ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಇವರನ್ನು ಕುರಿತ ಗ್ರಂಥಗಳು ರಚಿತವಾಗಿವೆ. ಕನ್ನಡದಲ್ಲಿ ಹಂಪೆಯ ಹರಿಹರ ಈ ಅರವತ್ತಮೂರು ಪುರಾತನರ ಶಿವಭಕ್ತಿ ಪಾರಮ್ಯವನ್ನು ವರ್ಣಿಸಿ ರಗಳೆ ಛಂದಸ್ಸಿನಲ್ಲಿ ಕಾವ್ಯರಚನೆಮಾಡಿದ್ದಾನೆ. ಇವನಲ್ಲದೆ, ಸುರಂಗ ಕವಿ, ಗುಬ್ಬಿಯ ಮಲ್ಲಣಾರ್ಯ, ವೀರಭದ್ರ, ಚತುರ್ಮುಖ ಬೊಮ್ಮರಸ, ನಿಜಗುಣ ಶಿವಯೋಗಿಗಳೂ ಇತ್ತೀಚಿನವರಾದ ಬಸವಪ್ಪಶಾಸ್ತ್ರಿಗಳೂ ಪುರಾತನರನ್ನು ಕುರಿತು ಕೃತಿರಚನೆ ಮಾಡಿದ್ದಾರೆ.

ತನ್ನ ಕಣ್ಣುಗಳನ್ನೇ ಕಿತ್ತು ಶಿವನಿಗೆ ಅರ್ಪಿಸಿದ ಮಹಾಶಿವಭಕ್ತ 'ಬೇಡರ ಕಣ್ಣಪ್ಪ'ನೂ ಈ ಪುರಾತನರ ಗುಂಪಿಗೆ ಸೇರಿದವನು. ಇವನ ಕಥೆ ಕನ್ನಡ ನಾಡಿನಲ್ಲಿ ಜನಪ್ರಿಯವಾಗಿದೆ.

ಪುರಾತನರು 5ನೆಯ ಶತಮಾನದಿಂದ 9ನೆಯ ಶತಮಾನದ ಅವಧಿಯಲ್ಲಿದ್ದರು –ಎನ್ನಲಾಗಿದೆ.

ಪುರಾತನರಲ್ಲಿ ಜಾತಿಭೇದವಿಲ್ಲ. ಇವರಲ್ಲಿ ಎಲ್ಲ ಜಾತಿಯವರೂ ಇದ್ದಾರೆ. ಇವರಲ್ಲಿ ಇಬ್ಬರು ಸ್ತ್ರೀಯರು : ಕಾರೈಕ್ಕಾಲ್ ಅಮ್ಮೆಯಾರ್ ಮತ್ತು ಇಶೈನಿಯಾರ್.

ಅರವತ್ತಮೂರು ಪುರಾತನರ ಜೀವನ ಕಥೆಯುಳ್ಳ 'ಪೆರಿಯ ಪುರಾಣ'ವನ್ನು ಬರೆದ ಕವಿಯ ಹೆಸರು ಶೆಕ್ಕಿಳಾರ್. 12ನೆಯ ಶತಮಾನದಲ್ಲಿ ಇದು ರಚಿತವಾಯಿತು. ಇವನು ತನ್ನ ಈ ಗ್ರಂಥವನ್ನು ಸುಪ್ರಸಿದ್ಧ ಶೈವಕ್ಷೇತ್ರವಾದ ಚಿದಂಬರದಲ್ಲಿ ಬರೆದನೆಂಬ ಐತಿಹ್ಯವಿದೆ. ಈತ ಚೋಳ ಅರಸ ಕುಲೋತ್ತುಂಗ (ಅನಪಾಯ) ಚೋಳನ ಕಾಲದವನು.

ಶೆಕ್ಕಿಳಾರ್ ವೆಳ್ಳಾಳ ಕುಲದಲ್ಲಿ ಜನಿಸಿದ. (ಜನ್ಮಸ್ಥಳ ಮದರಾಸಿನ ಸಮೀಪದ ಕುನ್ರತ್ತೂರು.) ಅರುಣ್ಮೊಳಿತ್ತೇವರ್ ಎಂಬುದು ಇವನಿಗೆ ಮೊದಲಿದ್ದ ಹೆಸರು. ಇವನ ಹಿರಿಮೆ, ಪ್ರತಿಭೆಯನ್ನು ಕಂಡ ಎರಡನೆಯ ಕುಲೋತ್ತುಂಗ ಚೋಳನು ಇವನನ್ನು ತನ್ನ ಪ್ರಧಾನಿಯನ್ನಾಗಿ ನೇಮಿಸಿದ. 'ಉತ್ತಮ ಚೋಳ ಪುಲವರ್' ಎಂಬ ಬಿರುದನ್ನೂ ಕೊಟ್ಟ. ಜೈನ ಮತೀಯನಾದ ರಾಜನನ್ನು ಶೈವನನ್ನಾಗಿಸಲು ಶಿವಭಕ್ತರ ಅಪೂರ್ವ ಜೀವನ ಸಾಧನೆಗಳನ್ನು ವರ್ಣಿಸುವ ಈ ಗ್ರಂಥವನ್ನು ಇವನು ಬರೆದಿರಬೇಕೆಂಬ ಅಭಿಪ್ರಾಯವಿದೆ. ಕವಿ ಈ ಗ್ರಂಥಕ್ಕೆ ಕೊಟ್ಟ ಹೆಸರು 'ತಿರುತ್ತೊಂಡರ್ ಪುರಾಣಮ್'. 4288 ಪದ್ಯಗಳುಳ್ಳ ಮಹಾಗ್ರಂಥ ಇದಾದ್ದರಿಂದ ಇದಕ್ಕೆ 'ಪೆರಿಯ ಪುರಾಣಮ್' ಎಂಬ ಹೆಸರು ರೂಢಿಗೆ ಬಂದಿದೆ. ತಮಿಳು ಭಾಷೆಯಲ್ಲಿ ಇದೊಂದು ಮಹಾಗ್ರಂಥ.

14ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಭೀಮಕವಿ ಬರೆದ ಕನ್ನಡ 'ಬಸವ ಪುರಾಣ'ದಲ್ಲಿ ಅರವತ್ತಮೂರು ಪುರಾತನರ ಉಲ್ಲೇಖವಿದೆ.

**ನೋಡಿ:** ನಿಜಗುಣ ಶಿವಯೋಗಿ; ಬಸವಪ್ಪಶಾಸ್ತ್ರೀ; ಹರಿಹರ

## ಪುಲಿಟ್ಜರ್ ಬಹುಮಾನ

ಜೋಸೆಫ್ ಪುಲಿಟ್ಜರ್ ಅಮೆರಿಕದ ಸಂಯುಕ್ತ ಸಂಸ್ಥಾನದ ಪ್ರಖ್ಯಾತ ವೃತ್ತಪತ್ರಿಕಾ ಸಂಪಾದಕ ಮತ್ತು ಮಾಲಿಕ. ವೃತ್ತಪತ್ರಿಕೆಗಳನ್ನು ನಡೆಸಿ ಸಂಪಾದಿಸಿದ ಹಣದಿಂದ ಕೋಟ್ಯಧೀಶನಾದ. ಅಮೆರಿಕದ ಉತ್ತಮ ಪತ್ರಿಕಾಕರ್ತರಿಗೆ ಪ್ರತಿ ವರ್ಷವೂ ಹನ್ನೆರಡು ಬಹುಮಾನಗಳನ್ನು ಕೊಡುವ ವ್ಯವಸ್ಥೆ ಮಾಡಿದ. ಇದಲ್ಲದೆ ಅಮೆರಿಕದ ಸಾಹಿತ್ಯ ಮತ್ತು ಸಂಗೀತ ಕ್ಷೇತ್ರಗಳಲ್ಲೂ ಬಹುಮಾನಗಳನ್ನು ಯೋಜಿಸಿದ. ಇವನ್ನು ಪುಲಿಟ್ಜರ್ ಬಹುಮಾನ ಎಂದು ಕರೆಯುತ್ತಾರೆ.

ಜೋಸೆಫ್ ಪುಲಿಟ್ಜರ್ 1847ರ ಏಪ್ರಿಲ್ 10ರಂದು ಹಂಗೆರಿಯಲ್ಲಿ ಜನಿಸಿದ. ಯುವಕನಾಗಿದ್ದಾಗಲೇ ಅಮೆರಿಕಕ್ಕೆ ಬಂದು ಸೈನ್ಯಕ್ಕೆ ಸೇರಿದ. ಒಂದೂವರೆ ವರ್ಷ ಸೇನೆಯಲ್ಲಿ ಸೇವೆ ಸಲ್ಲಿಸಿದ ಮೇಲೆ ಆ ವೃತ್ತಿಯನ್ನು ಬಿಟ್ಟು ಜರ್ಮನ್ ಪತ್ರಿಕೆಯೊಂದಕ್ಕೆ ವರದಿಗಾರನಾದ, ಸ್ವಲ್ಪ ಕಾಲಾನಂತರ ಅದೇ ಪತ್ರಿಕೆಯ ಪಾಲುದಾರನಾದ. ಮುಂದೆ ಆ ಪಾಲನ್ನು ಅತಿ ಲಾಭಕ್ಕೆ ಮಾರಿದ. ಅನಂತರ ಯೂರೋಪಿನಲ್ಲಿ ಕೆಲ ಕಾಲ ಸಂಚಾರ ಮಾಡಿ ಮತ್ತೆ ಅಮೆರಿಕಕ್ಕೆ ಬಂದು ಒಂದು ಪತ್ರಿಕೆಯನ್ನು ಕೊಂಡ; ಅದನ್ನೂ ಮಾರಿದ; ಲಾಭ ಗಳಿಸಿದ. ಈ ನಡುವೆ ಆತ ರಾಜಕೀಯಕ್ಕಿಳಿದ, ಶಾಸನಸಭಾ ಸದಸ್ಯನಾದ. ಮಿಸ್ಸೋರಿಯ ಲಿಬರಲ್ ರಿಪಬ್ಲಿಕನ್ ಪಕ್ಷದ ಸಕ್ರಿಯ ಸದಸ್ಯನಾದ.

ಸೇಂಟ್ ಲೂಯಿಯಲ್ಲಿ ನಡೆಯುತ್ತಿದ್ದ 'ಡಿಸ್‌ಪ್ಯಾಚ್ ಪತ್ರಿಕೆ' 1878 ರಲ್ಲಿ ದಿವಾಳಿ ಎದ್ದಾಗ ಹರಾಜಿನಲ್ಲಿ ಪುಲಿಟ್ಜರ್ ಅದನ್ನು ಕೊಂಡುಕೊಂಡ. ಅಲ್ಲಿಯದೇ ಇನ್ನೊಂದು ಪತ್ರಿಕೆ 'ಈವಿನಿಂಗ್ ಪೋಸ್ಟ್' ಜೊತೆ ಅದನ್ನು ವಿಲೀನಗೊಳಿಸಿದ; ಅದನ್ನು 'ಪೋಸ್ಟ್ ಡಿಸ್ಪ್ಯಾಚ್' ಎಂದು ಕರೆದ. ಈ ಪತ್ರಿಕೆ ಜನಪ್ರಿಯವಾಯಿತು. ಆದರೆ 1882ರಲ್ಲಿ ಅವನ ಆಪ್ತ ಬೆಂಬಲಿಗನೊಬ್ಬ ತನ್ನ ರಾಜಕೀಯ ವಿರೋಧಿಯೊಡನೆ ಹಣಾಹಣಿ ನಡೆಸಿ ಆತನನ್ನು ಗುಂಡಿಟ್ಟು ಕೊಂದ. ಅದರ ಬಿಸಿ ಈ ಪತ್ರಿಕೆಗೂ ತಟ್ಟಿತು. ಪತ್ರಿಕೆ ಕುಂಟತೊಡಗಿತು. ಆಗ ಪುಲಿಟ್ಜರ್ ನ್ಯೂಯಾರ್ಕ್‌ಗೆ ಬಂದು 1883ರಲ್ಲಿ 'ವರ್ಲ್ಡ್' ಪತ್ರಿಕೆಯನ್ನು ಕೊಂಡು, ಅದನ್ನು ನಡೆಸತೊಡಗಿದ. ನಾಲ್ಕು ವರ್ಷಗಳ ಅನಂತರ 'ಈವಿನಿಂಗ್ ವರ್ಲ್ಡ್' ಪತ್ರಿಕೆಯನ್ನು ಸ್ಥಾಪಿಸಿದ.

ನಿರಂತರ ಓದುಗಾರಿಕೆಯಿಂದ ಪುಲಿಟ್ಜರನ ದೃಷ್ಟಿ ಮಂಜಾಯಿತು. ಸ್ವತಃ ಓದಲು ಅಶಕ್ತನಾದ. ಆದರೂ 'ವರ್ಲ್ಡ್' ಪತ್ರಿಕೆ ನಡೆಸುತ್ತಿದ್ದಾಗ ಉಸ್ತುವಾರಿ ಆತನದೇ. ಅವನದು ಅಪೂರ್ವ ಜ್ಞಾಪಕಶಕ್ತಿ, ಕಾರ್ಯಸಾಧನಾಶಕ್ತಿ.



ಬಹುಮಾನ ಮಾಲಿಕ: ಪುಲಿಟ್ಜರ್

ಪುಲಿಟ್ಜರ್ ಕಾರ್ಮಿಕರ, ಬಡವರ ಪಕ್ಷಪಾತಿಯಾಗಿದ್ದ. ಅವನ ಪತ್ರಿಕೆಯ ಸಂಪಾದಕೀಯ ಲೇಖನಗಳು ಪ್ರಖ್ಯಾತವಾಗಿದ್ದುವು. ಅವನ ಪತ್ರಿಕೆಗಳೆಂದರೆ ಅಸಂಬದ್ಧತೆಗಳ ಕಂತೆ ಎಂದು ದೂಷಿಸುತ್ತಿದ್ದವರೂ "ಸಂಪಾದಕೀಯ ಪುಟದಲ್ಲಿ ಮಾತ್ರ ವರ್ಲ್ಡ್ ಪತ್ರಿಕೆಯನ್ನು ಮೀರಿಸಿದ ಪತ್ರಿಕೆಯಿಲ್ಲ" ಎಂದು ಒಪ್ಪುತ್ತಿದ್ದರು.

ಪುಲಿಟ್ಜರ್ 1911ರಲ್ಲಿ ಸತ್ತಾಗ, ಕೋಟ್ಯಂತರ ಡಾಲರು ಆಸ್ತಿವಂತ. ಅವನ ಉಯಿಲಿನ ಪ್ರಕಾರ ಕೊಲಂಬಿಯ ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮ ಕಾಲೇಜನ್ನು ತೆರೆಯಲಾಯಿತು; 1917ರಿಂದ ಪುಲಿಟ್ಜರ್ ಬಹುಮಾನಗಳನ್ನು ನೀಡುವುದು ಮೊದಲಾಯಿತು.

ಕೊಲಂಬಿಯಾ ವಿಶ್ವವಿದ್ಯಾನಿಲಯ ನಿಯೋಜಿಸಿದ ತಜ್ಞರು ಮಾಡಿದ ಶಿಫಾರಸುಗಳನ್ನು ಈ ಬಹುಮಾನಗಳನ್ನು ನೀಡುವ ಸಮಿತಿ ಪರಿಶೀಲಿಸುತ್ತದೆ. ಅದರ ನಿರ್ಣಯದಂತೆ ಬಹುಮಾನಗಳು ಕೊಡಲ್ಪಡುತ್ತವೆ. ಬಹುಮಾನ ಅಮೆರಿಕನರಿಗೆ ಅಥವಾ ಅಮೆರಿಕದಲ್ಲಿ ಶಾಶ್ವತವಾಗಿ ನೆಲೆಸಿದವರಿಗೆ ಮಾತ್ರ ಮೀಸಲು.

ಪತ್ರಿಕೋದ್ಯಮ ಬಹುಮಾನಗಳು ಒಟ್ಟು ಎಂಟು. ಯಾವ ಹಿತಾಸಕ್ತಿಗಳನ್ನೂ ಹೊಂದಿರದೆ ಅತ್ಯುತ್ತಮ ಸಮಾಜಸೇವೆ ಸಲ್ಲಿಸಿರುವ ಅಮೆರಿಕದ ಪತ್ರಿಕೆಗೆ ಚಿನ್ನದ ಪದಕ, ಬಹುಮಾನ. ಇನ್ನುಳಿದ ಏಳು ಬಹುಮಾನಗಳು, ಪತ್ರಿಕೆ ಅಚ್ಚಾಗುತ್ತಿರುವ ಅವಸರದ ಸಮಯದಲ್ಲಿ ಬರೆದ ಸ್ಥಳೀಯ ವಿದ್ಯಮಾನದ ವರದಿ; ಅವಸರದಲ್ಲಿ ಬರೆಯದ, ಸದುದ್ದೇಶ ಹೊಂದಿದ ಲೇಖನ ಅಥವಾ ಲೇಖನಸರಣಿಯ ರೂಪದ ವರದಿ; ರಾಷ್ಟ್ರೀಯ ವಿದ್ಯಮಾನದ ವರದಿ; ವಿಶ್ವಸಂಸ್ಥೆ ಅಥವಾ ಅಂತರರಾಷ್ಟ್ರೀಯ ವಿದ್ಯಮಾನಗಳ ವರದಿ; ಉತ್ತಮವಾದ ಶೈಲಿ, ಸದುದ್ದೇಶ, ಸ್ಪಷ್ಟ ವಿಚಾರಸರಣಿ, ಸಾರ್ವಜನಿಕ ಅಭಿಪ್ರಾಯದ ಮೇಲೆ ಬೀರುವ ಪ್ರಭಾವ ಇವುಗಳಿಂದ ಸುಪುಷ್ಟವಾದ ಸಂಪಾದಕೀಯ ಬರೆಹ, ಸಾರ್ವಜನಿಕ ಪ್ರಾಮುಖ್ಯವುಳ್ಳ ವಿಚಾರವನ್ನು ಕುರಿತು ಶ್ರೇಷ್ಠ ವ್ಯಂಗ್ಯ ಚಿತ್ರ, ಅಪೂರ್ವ ವಾರ್ತಾ ಛಾಯಾಚಿತ್ರ—ಇವುಗಳಿಗಾಗಿ. ಈ ಪ್ರಕಾರಗಳಲ್ಲಿ ಆಯಾ ವರ್ಷದಲ್ಲೇ ಅತ್ಯುತ್ತಮವಾದದ್ದನ್ನು ಆರಿಸಿ ಬಹುಮಾನ

[illegible] ಇವರು ಪಾತ್ರರಾಗಿದ್ದರು. ಬೆಂಗಳೂರಿನಲ್ಲಿ 1921ರಲ್ಲಿ [illegible] ಸಮ್ಮೇಳನಕ್ಕೆ ಅಧ್ಯಕ್ಷರಾಗುವ ಗೌರವವೂ ಇವರಿಗೆ ದೊರೆಯಿತು.

ಪುಟ್ಟಣ್ಣ ಚೆಟ್ಟರು ಸಾರ್ವಜನಿಕ ಏಳಿಗೆಗಾಗಿ ಕೊಟ್ಟ ದತ್ತಿಗಳ ಮೌಲ್ಯ ಸುಮಾರು 3–4 ಲಕ್ಷ ರೂಪಾಯಿಗಳಷ್ಟಾಗುತ್ತದೆ. 1938ರಲ್ಲಿ ಬೆಂಗಳೂರು ನಿರಾಶ್ರಿತ ವಿದ್ಯಾರ್ಥಿನಿಲಯವನ್ನು ಇವರು ಸ್ಥಾಪಿಸಿದರು. ಸಮಾಜದ ಎಲ್ಲ ಹಂತಗಳಲ್ಲೂ ಕನ್ನಡದ ಮೂಲಕ ಜ್ಞಾನ ವಿತರಣೆ ಆಗಲೆಂಬ ಉದ್ದೇಶದಿಂದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಇಪ್ಪತ್ತು ಸಾವಿರ ರೂಪಾಯಿಗಳ ಶಾಶ್ವತ ನಿಧಿ ಕೊಟ್ಟು ಆಧುನಿಕ ವಿಚಾರಗಳನ್ನು ಕುರಿತು ಕನ್ನಡ ಪುಸ್ತಕಗಳ ಪ್ರಕಟಣೆಗೆ ನೆರವಾದರು.

ಅಚ್ಚುಕಟ್ಟು, ಶಿಸ್ತಿನ ಜೀವನ ನಡೆಸಿದ ಪುಟ್ಟಣ್ಣ ಚೆಟ್ಟರು ಮಿತಭಾಷಿ. ಜನಪ್ರಿಯರು. ಇವರು ಕೊಟ್ಟ ದತ್ತಿಯಿಂದಾಗಿ ಬೆಂಗಳೂರು ಪುರಭವನ ನಿರ್ಮಾಣವಾಯಿತು. ಇದನ್ನು ಇವರ ನೆನಪಿಗಾಗಿ, 'ಪುಟ್ಟಣ್ಣ ಚೆಟ್ಟಿ ಟೌನ್‌ಹಾಲ್' ಎಂದು ಕರೆಯಲಾಗಿದೆ: ಚಾಮರಾಜಪೇಟೆಯ ಒಂದು ರಸ್ತೆಗೆ ಅವರ ಹೆಸರನ್ನು ಇಡಲಾಗಿದೆ.

1938ರ ಜೂಲೈ 23ರಂದು ಇವರು ನಿಧನರಾದರು.

## ಪುರಂದರದಾಸ

"ಅಮ್ಮಾ ನಿಮ್ಮ ಮನೆಗಳಲ್ಲಿ ನಮ್ಮ
ರಂಗನ ಕಂಡಿರೇನಮ್ಮ ॥
ಕಾಶಿ ಪೀತಾಂಬರ ಕೈಯಲ್ಲಿ ಕೊಳಲು
ಪೂಸಿದ ಶ್ರಿಗಂಧ ಮೈಯೊಳಗಮ್ಮ
ದೇಶ ದೇಶದ ಪುಷ್ಪಮಾಲೆಯ ಧರಿಸಿದ
ವಾಸುದೇವ ಬಂದ ಕಂಡಿರೇನಮ್ಮ ॥
॥ ಅಮ್ಮಾ ॥ "

ಪುರಂದರದಾಸರ ಈ ಹಾಡನ್ನು ಕೇಳದವರಾರು ? ಇದನ್ನು ನೃತ್ಯಕ್ಕೆ ಅಳವಡಿಸಿ ಚಿಕ್ಕವರೇ ಆಗಲಿ ದೊಡ್ಡವರೇ ಆಗಲಿ ಅಭಿನಯಿಂಸಿದಾಗ ಅದರ ಭಾವಕ್ಕೆ ಮರುಳಾಗದೆ ಇರುವವರು ವಿರಳ. ಪುರಂದರದಾಸರು ರಚಿಸಿದ ಪದಗಳು ನಾಲ್ಕು ಲಕ್ಷ ಎಪ್ಪತ್ತೈದುಸಾವಿರ ಎಂದು ಪ್ರತೀತಿ. ಆದರೆ ನಮಗೆ ದೊರೆತಿರುವುದು ಕೆಲವು ನೂರು ಮಾತ್ರ. ಪುರಂದರದಾಸರ ಕೀರ್ತನೆಗಳು ಭಕ್ತಿಭಾವಪೂರ್ಣ, ಅರ್ಥಪೂರ್ಣ. ಕನಕದಾಸರೊಬ್ಬರನ್ನು ಬಿಟ್ಟು ಉಳಿದೆಲ್ಲ ದಾಸರ ಪದಗಳಿಗಿಂತ ಪುರಂದರರ ಪದಗಳು ಹೆಚ್ಚು ಜನ ಪ್ರಿಯವಾಗಿವೆ. ಕರ್ನಾಟಕ ಸಂಗೀತಕ್ಕೆ ಪುರಂದರದಾಸರ ಸೇವೆ ಮೂಲ ಭೂತವಾದದ್ದು. ಅವರು ಮೇಲ್ಪಂಕ್ತಿಯಾಗಿ ಹಾಕಿಕೊಟ್ಟಿರುವ ಆರಂಭ ಪಾಠಗಳು ನಾಲ್ಕು ನೂರು ವರ್ಷಗಳ ಅನಂತರ ಕೂಡ ಇಂದಿಗೂ ಕರ್ನಾಟಕ ಸಂಗೀತಾಭ್ಯಾಸಕ್ಕೆ ಮೂಲಭೂತವಾಗಿವೆ. ಹೀಗೆ ಸಂಗೀತಾಭ್ಯಾಸಕ್ಕೆ ಏಕ ರೂಪತೆ ಕೊಟ್ಟಿರುವುದು ಅವರ ಸಂಗೀತಜ್ಞಾನವನ್ನೂ ಸೂಚಿಸುತ್ತದೆ.

ಪುರಂದರದಾಸರ ಜೀವನ ಕಥೆ ಸ್ವಾರಸ್ಯವಾದದ್ದು. ವ್ಯಾಸರಾಯರಿಂದ ಸ್ಥಾಪಿತವಾದ ದಾಸ ಕೂಟಕ್ಕೆ ಪುರಂದರದಾಸರು ಸೇರಿದ್ದೂ ಒಂದು ಪವಾಡವೇ. ದಾಸರ ನಿಜನಾಮ ಶೀನಪ್ಪನಾಯಕ. ಹುಟ್ಟಿದ್ದು ಪುಣೆಯ ಬಳಿಯ, ಪುರಂದರಗಡದಲ್ಲಿ, 1484ರಲ್ಲಿ. ಆಗ ಅಲ್ಲಿ ಕನ್ನಡ ಬಳಕೆಯಲ್ಲಿತ್ತು. ತಂದೆಯ ಹೆಸರು ವರದಪ್ಪನಾಯಕ. ಶೀನಪ್ಪನಾಯಕನದು ಆನುವಂಶಿಕವಾಗಿ ಸಾಲಕೊಟ್ಟು ಬಡ್ಡಿ ಪಡೆಯುವ, ಚಿನ್ನರನ್ನದ ವ್ಯಾಪಾರ ಮಾಡುವ ವೃತ್ತಿ. ಆತ ಪರಮ ಲೋಭಿ. ಕಿಲುಬು ಕಾಸೂ ದಾನ ಮಾಡುವವನಲ್ಲ. ಹೆಂಡತಿ ಸರಸ್ವತಿ ಬಾಯಿ ಮಹಾ ಸಾಧ್ವಿ, ಉದಾರಿ, ದೈವಭಕ್ತೆ, ವ್ರತನೇಮಗಳೆಂದರೆ ಅತೀವ ಶ್ರದ್ಧೆ. ನಾಯಕನಿಗೆ ಇದು ಹಿಡಿಸುತ್ತಿರಲಿಲ್ಲ.

ಇಂಥ ಜಿಪುಣನ ಬಳಿ ಒಂದು ದಿನ ಒಬ್ಬ ಬ್ರಾಹ್ಮಣ ಬಂದು ಮಗನ ಉಪನಯನಕ್ಕಾಗಿ ಧನ ಸಹಾಯ ಬೇಡಿದ. ಅವನನ್ನು ಅಲೆಸಿ, ಅಲೆಸಿ, ಕಡೆಗೆ ಒಂದು ಕುರುಡು ಕಾಸು ನೀಡಿದ ನಾಯಕ. ಬ್ರಾಹ್ಮಣ ನಲ್ಲಿಂದ ನಾಯಕನ ಮನೆಗೆ ಹೋಗಿ ಸರಸ್ವತಿಬಾಯಿಯ ಬಳಿ ಭಿಕ್ಷೆ ಬೇಡಿದ. ತನ್ನ ಬಳಿ ಹಣವಿಲ್ಲದಿದ್ದ ಕಾರಣ, ತನ್ನ ಮೂಗುತಿಯನ್ನೇ ಆಕೆ ದಾನವಾಗಿ ಕೊಟ್ಟಳು. ದಾನ ಪಡೆದ ಬ್ರಾಹ್ಮಣ ಇದನ್ನು ನಾಯಕನಲ್ಲಿಗೇ ಮಾರಲೆಂದು ತೆಗೆದುಕೊಂಡು ಹೋದ. ಅವನು ಹೆಂಡತಿಯ ಮೂಗುತಿ ಯನ್ನು ಗುರುತಿಸಿ ಕೂಡಲೇ ತನ್ನ ಮನೆಗೆ ಬಂದು, ಮೂಗುತಿಯನ್ನು ತಂದು ತೋರಿಸೆಂದು ಹೆಂಡತಿಯನ್ನು ಕೇಳಿದ. ಆಕೆ ನಿಜಸಂಗತಿ ಹೇಳಿ ಗಂಡನನ್ನು ಎದುರಿಸುವುದಕ್ಕಿಂತ ಪ್ರಾಣಬಿಡುವುದು ಲೇಸೆಂದು ವಿಷ ಕುಡಿಯಲು ನಿರ್ಧರಿಸಿದಳು. ಇದಕ್ಕಾಗಿ ವಿಷದ ಬಟ್ಟಲನ್ನೆತ್ತಿಕೊಂಡಾಗ ಅದರಲ್ಲಿ ಮೂಗುತಿ ಹೊಳೆಯುವುದು ಕಂಡುಬಂದಿತು. ಅದನ್ನು ತಂದು ಗಂಡನ ಕೈಗಿತ್ತಳು. ನಾಯಕನಿಗೆ ಇದರಿಂದ ಪರಮಾಶ್ಚರ್ಯ ವಾಯಿತು. ಅಂಗಡಿಯಲ್ಲಿ ತಾನು ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರಪಡಿಸಿದ ಮೂಗುತಿಯು ಹೀಗೆ ಇಲ್ಲಿ ದೊರೆಯಬೇಕಾದರೆ ಇದರಲ್ಲಿ ತನ್ನನ್ನು ಮೀರಿದ ಶಕ್ತಿಯ ಕೈವಾಡವಿದೆಯೆಂಬ ಅರಿವು ಮೂಡಿತು. ಪರಿಣಾಮವಾಗಿ



'ದಾಸರೆಂದರೆ...':
ಪುರಂದರದಾಸರು

ಕಡು ಲೋಭಿ ಶೀನಪ್ಪನಾಯಕ ಪರಮ ವೈರಾಗ್ಯಮೂರ್ತಿಯಾದ. ತನ್ನ ಐಶ್ವರ್ಯವನ್ನೆಲ್ಲ ದಾನಮಾಡಿ ಉಂಛವೃತ್ತಿ ಕೈಗೊಂಡ. ತನಗೆ ಸನ್ಮಾರ್ಗ ತೋರಿದ ಪತ್ನಿಯನ್ನು ಕೊಂಡಾಡಿದ.

ಹರಿದಾಸ ದೀಕ್ಷೆಯನ್ನು ಪಡೆಯಬೇಕೆಂದೆನಿಸಿ ಹಂಪೆಯಲ್ಲಿದ್ದ ವ್ಯಾಸ ತೀರ್ಥರಲ್ಲಿಗೆ ತೆರಳಿದ. ನಾಯಕನಿಗೆ ದೊರೆತ ದೀಕ್ಷಾ ನಾಮವೇ 'ಪುರಂದರ ವಿಟ್ಠಲ'. ಮುಂದೆ ಅವರು ಪುರಂದರದಾಸರೆಂದೇ ಪ್ರಖ್ಯಾತರಾದರು. ತಮ್ಮ ಗುರುಗಳಿಂದಲೆ "ದಾಸರೆಂದರೆ ಪುರಂದರದಾಸರಯ್ಯ" ಎನ್ನಿಸಿಕೊಂಡ ಹೆಗ್ಗಳಿಕೆ ಇವರದು. ನಿರರ್ಗಳವಾಗಿ, ಸುಲಲಿತವಾಗಿ ಅವರ ಮುಖದಿಂದ ಭಗವನ್ನಾಮ ಸಂಕೀರ್ತನೆ ಹೊರಹೊಮ್ಮಿತು. ಹೀಗೆ ಪುರಂದರದಾಸರು ಪ್ರಸಿದ್ಧ ವಾಗ್ಗೇಯಕಾರರಾದರು. ಭಾರತದ ಅನೇಕ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದರು. ಆ ಕ್ಷೇತ್ರಗಳ ದೇವರುಗಳನ್ನು ಕುರಿತು ಹಾಡಿದರು. ಕೈಯಲ್ಲಿ ತಂಬೂರಿ, ಕಾಲಿಗೆ ಗೆಜ್ಜೆ, ವರ್ಚಸ್ವೀ ಮುಖ ಮನದ ಮಾಲಿನ್ಯ ಕಳೆಯುವ ಬಗೆಯನ್ನು ಜನತೆಗೆ ಅವರು ಬೋಧಿಸಿದರು. ಅನುಭವ, ಅನುಭಾವಗಳು ಹಾಡಿನಲ್ಲಿ ಆಣಿಮುತ್ತುಗಳಾಗಿ ಹೊರಬಿದ್ದುವು. ಹಾಡಿದ್ದೆಲ್ಲ ಗೀತೆಯಾಯಿತು. ಅವರ ಈ ನುಡಿಗಳು ಇಂದಿಗೂ ನಾಣ್ನುಡಿ ಗಳೂ ಹೌದು ; ಜಾಣ್ನುಡಿಗಳೂ ಹೌದು. 1564ರಲ್ಲಿ ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆಯಂದು ಅವರು ಹಂಪೆಯಲ್ಲೇ ದೈವಾಧೀನ ರಾದರು. ಹಂಪೆಯಲ್ಲಿ ಅವರು ತುಂಗಭದ್ರಾ ತೀರದಲ್ಲಿ ವಾಸಿಸುತ್ತಿದ್ದ ಸ್ಥಳ ಪುರಂದರ ಮಂಟಪವೆಂದು ಪ್ರಸಿದ್ಧವಾಗಿದೆ.

ಪುರಂದರದಾಸರ ಕೊಡುಗೆ ಎರಡು ಬಗೆಯದು : ಕಾವ್ಯರೂಪದಲ್ಲಿ, ಸಂಗೀತರೂಪದಲ್ಲಿ. ಅವರ ಕೀರ್ತನೆಗಳಲ್ಲಿ ಬರುವ ವಿಷಯಗಳಿಗೆ ಅನು ಗುಣವಾಗಿ ಅವನ್ನು ಐದು ಗುಂಪುಗಳಾಗಿ ವಿಂಗಡಿಸಬಹುದು: ದೇವರ, ಗುರುವಿನ ಸ್ಮರಣೆ, ಸ್ತುತಿ; ಅಂತರಂಗವನ್ನು ನಿವೇದಿಸುವುದು ; ಕೃಷ್ಣನ ಲೀಲಾಮಯ ಜೀವನದ ವರ್ಣನೆ ; ಸಮಾಜ ವಿಮರ್ಶೆ; ಬೋಧನೆ.

"ವ್ಯಾಸರಾಯರ ಚರಣಕಮಲ ದರುಶನವೆನಗೆ
ಏಸು ಜನ್ಮದ ಸಂಕೃತ ಫಲದಿ ದೊರಕಿತೋ ಎನ್ನ"
............
"ಕಲಿಯುಗದಲಿ ಹರಿನಾಮವ ನೆನೆದರೆ, ಕುಲಕೋಟಿಗಳು
ಉದ್ಧರಿಸುವುವೊ ರಂಗಾ"

—ಇವು ಮೊದಲನೆಯ ಗುಂಪಿಗೆ ಉದಾಹರಣೆಯಾದರೆ, ಅಂತರಂಗ ನಿವೇದನೆಯ ಅವರ ರಚನೆಗಳಿಗೆ :

"ನಾನಿನ್ನ ಧ್ಯಾನದೊಳಿರಲು ಹೀನ ಮಾನವರೇನ ಮಾಡಬಲ್ಲರೊ
ರಂಗ"
............
"ನೀನೇಕೆ ಕಡೆಗಣ್ಣೊಳೆನ್ನ ನೋಳ್ಪೆ, ಕರುಣಾಕರನಲ್ಲವೆ"
"ಅತ್ಯಂತ ಅಪರಾಧಿ ನಾನಾದರೇನಯ್ಯ, ಇತ್ತ ಬಾರೆನಬಾರದೆ"

—ಈ ನುಡಿಗಳು ಎಷ್ಟು ಹೃದಯಂಗಮ!

ಕೃಷ್ಣಲೀಲೆಯ ಬಗೆಗೆ ನಾನಾ ಕೀರ್ತನೆಗಳಿವೆ. 'ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ' 'ಗುಮ್ಮನ ಕರೆಯದಿರೆ ಅಮ್ಮಯ್ಯ' —ಇಂಥವು.

ಇನ್ನು ಸಮಾಜಜೀವನವನ್ನು ವಿಮರ್ಶಿಸುವ ರಚನೆಗಳೂ ಹಲವಾರು ಇವೆ. "ನಗೆಯು ಬರುತಿದೆ ಎನಗೆ ನಗೆಯು ಬರುತಿದೆ, ಜಗದೊಳಿರುವ ಮನುಜರೆಲ್ಲ ಹಗರಣ ಮಾಡುವುದು ಕಂಡು", "ಜಾಲಿಯ ಮರದಂತೆ ಧರೆಯೊಳು [illegible] ಈ ಬಗೆಯಂವು.

ಜೀವನವನ್ನು ಕುರಿತ ಬೋಧನೆಯಂತಿರುವ ಅವರ ಕೀರ್ತನೆಗಳಾದರೂ ವೈವಿಧ್ಯಪೂರ್ಣವಾಗಿವೆ. "ಕಲ್ಲಾಗಿ ಇರಬೇಕು [illegible] ಬೆಲ್ಲವಾಗಿ ಇರಬೇಕು ಬಲ್ಲವರೊಳಗೆ, [illegible] ಬೇಕು; ಬೆಲ್ಲವಾಗಿ ಇರಬೇಕು ಬಂಧುಜನರೊಳಗೆ"—ಇದು ಬಾಳುವ ಬಗೆ. "ಈಸಬೇಕು, ಇದ್ದು ಜಯಿಸಬೇಕು" ಎಂಬ [illegible] ಅವರದು. "ಕಾಶಿಗೆ ಹೋಗಲೇಕೆ ಕಾವಿಯನುಟ್ಟು ಪೊತ್ತು ಇದ್ದಲ್ಲೇ ಭಗವಂತನ ನೆನೆದರೆ ಸಾಕು" ಇದು ಅವರು ತೋರಿದ ಸುಲಭ ಸರಳಮಾರ್ಗ.

ಕೀರ್ತನೆಗಳಲ್ಲದೆ ಪುರಂದರದಾಸರು ಸುಳಾದಿಗಳನ್ನೂ ಉಗಾಭೋಗ ಗಳನ್ನೂ ರಚಿಸಿದ್ದಾರೆ. ಸುಳಾದಿಗಳು ತಾಳಪ್ರಧಾನ ರಚನೆಗಳು : ಉಗಾಭೋಗಗಳೆಂದರೆ ಬೇರೆಬೇರೆ ರಾಗ ತಾಳಗಳಲ್ಲಿ ಹಾಡಬಹು ದಾದ ಪಲ್ಲವಿ, ಚರಣಗಳೆಂಬ ವಿಭಾಗಗಳಿಲ್ಲದ ರಚನೆಗಳು. ಅವರ ರಚನೆಗಳಲ್ಲಿ ಹಲವಾರು ಸಂಗೀತ ವಾದ್ಯಗಳ ಅನೇಕ ರಾಗಗಳ ಉಲ್ಲೇಖ ವಿದೆ. ಅವರಿಗೆ ಸಂಗೀತದ ಪರಿಚಯವಾದದ್ದು ಹೇಗೆ ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ. ಶ್ರೀಮಂತ ಮನೆತನದಲ್ಲಿ ಹುಟ್ಟಿದ ಅವರಿಗೆ ಬಾಲ್ಯದಲ್ಲಿಯೇ ಸಾಹಿತ್ಯ ಸಂಗೀತ ಶಿಕ್ಷಣ ದೊರೆತಿರಬಹುದು.

ಪುರಂದರದಾಸರ ಕಾಲದ ತನಕ, ಎಂದರೆ 15ನೆಯ ಶತಮಾನದವರೆಗೆ ಕರ್ಣಾಟಕ ಸಂಗೀತ ಪ್ರಧಾನವಾಗಿ ವಿದ್ವಾಂಸರ ಮತ್ತು ಪಂಡಿತರ ಸ್ವತ್ತಾಗಿತ್ತು. ಜನಸಾಮಾನ್ಯರಿಗೂ ಇದು ಲಭ್ಯವಾಗುವಂತೆ ಮಾಡಲು ಪುರಂದರದಾಸರು ಸುಲಭವಾದ ಸಂಗೀತ ಶಿಕ್ಷಣ ಕ್ರಮವನ್ನು ರೂಪಿಸಿ ದರು ; ಆ ವರೆಗೆ ಮೂಲ ರಾಗವಾಗಿದ್ದ ಖರಹರಪ್ರಿಯ ರಾಗದ ಬದಲು ಮಾಯಾಮಾಳವಗೌಳ ರಾಗವನ್ನು ಮೂಲರಾಗವನ್ನಾಗಿ ಇಟ್ಟು ನೂರೆಂಟು ತಾಳಗಳಲ್ಲಿ ಏಳನ್ನು ಮಾತ್ರ ಉಳಿಸಿಕೊಂಡು ಸಂಗೀತಾಭ್ಯಾಸವನ್ನು ಸರಳ ಗೊಳಿಸಿದರು. ಅಭ್ಯಾಸಿಗಳಿಗೆ ಉಪಯುಕ್ತವಾದ ಅಲಂಕಾರಗಳನ್ನೂ ಗೀತೆಗಳನ್ನೂ ಹಾಡುಗಳನ್ನೂ ರಚಿಸಿದರು. ಕರ್ಣಾಟಕ ಸಂಗೀತಾಭ್ಯಾಸಿ ಗಳು ಯಾವ ಭಾಷೆಯನ್ನಾಡುವವರೇ ಆಗಲಿ ಪುರಂದರದಾಸರು ರೂಪಿಸಿದ ಈ ವಿಧಾನವನ್ನೇ ಅನುಸರಿಸುತ್ತಾರೆ. ಆರಂಭದಲ್ಲಿ 'ಶ್ರೀಗಣನಾಥ' ಮುಂತಾದ ಅವರ ಗೀತೆಗಳನ್ನೇ ಅಭ್ಯಾಸಮಾಡುತ್ತಾರೆ. ಹೀಗೆ ಪುರಂದರದಾಸರು ಕರ್ಣಾಟಕ ಸಂಗೀತದ ಆದಿಗುರುಗಳಾಗಿದ್ದಾರೆ.

ಸಹಜ ಪ್ರಾಸ, ಒಳ್ಳೆಯ ಚಿತ್ರಣಗಳಿಂದ ತುಂಬಿದ ಪುರಂದರದಾಸರ ರಚನೆಗಳಲ್ಲಿ ಅಲ್ಲಲ್ಲಿ ಸಾಹಿತ್ಯ ದೋಷಗಳಿಲ್ಲದಿಲ್ಲ. ಆದರೆ ಇತರ ಹಿರಿಯ ಗುಣಗಳ ದೃಷ್ಟಿಯಿಂದ ಇವು ಗೌಣ.

ಸಂಗೀತ ದೃಷ್ಟಿಯಿಂದಲ್ಲದೆ, ತತ್ತ್ವಪ್ರತಿಪಾದನೆಯ ದೃಷ್ಟಿಯಿಂದಲೂ ದಾಸರ ಕೃತಿಗಳಲ್ಲಿ ಪುರಂದರದಾಸರ ರಚನೆಗಳು ಅಮೂಲ್ಯವಾದುವು. ಗುರುಗಳಾದ ವ್ಯಾಸತೀರ್ಥರು ಅವನ್ನು 'ಪುರಂದರೋಪನಿಷತ್' ಎಂದು ಕರೆದು ಗೌರವಿಸಿದ್ದಾರೆ.

## ಪುರಾಣ

ಪ್ರಾಚೀನ ಕಾಲದಿಂದ ಜೀವಂತವಾಗಿ ಯಾವುದು ಬೆಳೆದು ಬಂದಿರು ವುದೋ ಅದು ಪುರಾಣ. ಪ್ರಾಚೀನ ಕಥೆ, ಹಳೆಯ ಕಥನ ಎಂಬ ಅರ್ಥಗಳೂ ಇದಕ್ಕೆ ಇವೆ. ವೇದಗಳಲ್ಲಿ ಪ್ರತಿಪಾದಿತವಾಗಿರುವ ಹಲವಾರು ಅಂಶ ಗಳನ್ನು ಕಥೆಯ ಚೌಕಟ್ಟಿನಲ್ಲಿ ವಿವರಿಸುವುದು ಪುರಾಣಗಳ ವೈಶಿಷ್ಟ್ಯ.

ಇವರದು ಶ್ರೇಷ್ಠ ಸಾಧನೆ. ಹೂವುಗಳು, ಹೂಬಿಟ್ಟ ಮರಗಳ ಚಿತ್ರಣದಲ್ಲಿ ಇವರು ಬಹಳ ಆಸಕ್ತಿ ತೋರಿದರು. ಇವುಗಳಲ್ಲಿ ಕೆಲವು ಸಂಕೇತಗಳನ್ನೂ ಸಾಧಿಸಿದರು. ಅಲಂಕರಣಕ್ಕೆ ಅತಿಯಾದ ಪ್ರಾಶಸ್ತ್ಯ ಕೊಟ್ಟರು.

ಮಿಂಗ್ ಚಕ್ರವರ್ತಿಗಳು ನೀಲಿ ಮತ್ತು ಬಿಳಿ ಪಿಂಗಾಣಿಯ ಪಕ್ಷಪಾತಿಗಳಾಗಿದ್ದರು. ಇವರ ಪ್ರೀತಿಗೆ ಪಾತ್ರವಾಗಿದ್ದ ವಸ್ತುಗಳ ಮೇಲೆ ಹೂ, ಬಳ್ಳಿ, ಮಾನವ, ಕಥಾಸನ್ನಿವೇಶಗಳು, ಐದು ಉಗುರುಗಳುಳ್ಳ ಡ್ರೇಗನ್‌ಗಳನ್ನು ಚಿತ್ರಿಸುವುದು ಸಾಮಾನ್ಯವಾಗಿತ್ತು. ಮೆರುಗಿನ ಮೇಲ್ಮೈ ಉಳ್ಳ ಬಿಳಿ ಪಿಂಗಾಣಿಯ ಮೇಲೆ ಹಳದಿ ಮೆರುಗನ್ನು ಲೇಪಿಸುವುದು; ಕಪ್ಪು ಮೆರುಗು ಹಚ್ಚಿದ ಮೇಲ್ಮೈ ಮೇಲೆ ತಾಮ್ರಛಾಯೆಯ ಕೆಂಪು, ನವಿಲು ಕೊರಳಿನ ನೀಲಿ, ಸೇಬು ಹಸಿರು ಬಣ್ಣಗಳನ್ನು ಹಚ್ಚುವುದು – ಈ ವಿಧಾನಗಳು ಮಿಂಗ್ ಕಾಲದ ಪಿಂಗಾಣಿ ಚಿತ್ರಕಲೆಯಲ್ಲಿ ಕಂಡುಬರುವ ಸಾಧನೆಗಳು. ಹಸಿರು, ಹಳದಿ, ದಟ್ಟನೀಲಿ, ಆಕಾಶನೀಲಿ ಮುಂತಾದವುಗಳಲ್ಲಿ ಯಾವುದಾದರೂ ಮೂರು ಬಣ್ಣಗಳನ್ನು ಬಳಸಿ ಮಡಕೆಗೆ ಅಲಂಕರಣ ಮಾಡುತ್ತಿದ್ದುದೂ ಉಂಟು. ವಿವಿಧ ಬಣ್ಣಗಳ ಗಾಜುಲೇಪ ವಿಧಾನದಿಂದ ನಡೆಸುವ ಚಿತ್ರಣವನ್ನು 'ಪಂಚವರ್ಣ ಶೈಲಿ' ಎನ್ನುತ್ತಾರೆ. ಕುಶಲ ತಾಂತ್ರಿಕ ಸಾಧನಗಳನ್ನು ಉಪಯೋಗಿಸಿ ಈ ವರ್ಗದ ಕಲೆಯಲ್ಲಿ ಇವರು ಸಾಧಿಸಿದ ಚಿತ್ರಣ ಹೂದೋಟವನ್ನೋ ಉತ್ತಮ ಕಸೂತಿಯನ್ನೋ ನೆನಪಿಗೆ ತರುತ್ತದೆ.

ಪಿಂಗಾಣಿ ವಸ್ತುಗಳ ಮೇಲೆ ಕಲಾವಿದರು ಚಿತ್ರಗಳನ್ನು ಬರೆಯುವುದು ಅಥವಾ ಅವರು ಬರೆದ ಚಿತ್ರಗಳನ್ನು ಪಿಂಗಾಣಿ ವಸ್ತುಗಳ ಮೇಲೆ ಮೂಡಿಸುವುದು ಹಿಂದಿನಿಂದ ನಡೆದು ಬಂದ ಪದ್ಧತಿ. ಆದರೆ ಈ ಪದ್ಧತಿಯನ್ನು ಅನುಸರಿಸಿ ಚಿತ್ರಿಸಿದ ಪಿಂಗಾಣಿ ವಸ್ತುಗಳ ಬೆಲೆ ಮಾತ್ರ ತುಂಬ ಹೆಚ್ಚು. ಆದ್ದರಿಂದ ಯಾಂತ್ರಿಕ ವಿಧಾನಗಳನ್ನು ಅನುಸರಿಸಿ ಪಿಂಗಾಣಿ ವಸ್ತುಗಳ ಮೇಲೆ ಕಲಾತ್ಮಕವಾದ, ಆಕರ್ಷಕವಾದ ಚಿತ್ರಗಳನ್ನು ಮೂಡಿಸುವುದು ಆಚರಣೆಗೆ ಬಂದಿದೆ. ಈ ವಿಧಾನದಿಂದ ತಯಾರಿಸಿದ ಚಿತ್ರಿತ ಪಿಂಗಾಣಿ ವಸ್ತುಗಳ ಬೆಲೆ ಅಷ್ಟು ಹೆಚ್ಚಲ್ಲ.

ಈಗ ಪಿಂಗಾಣಿ ಉಪಯೋಗ ಹೆಚ್ಚಾಗಿರುವುದರಿಂದ ರಬ್ಬರ್ ಮುದ್ರೆ ಉಪಯೋಗಿಸಿ ಪಿಂಗಾಣಿ ವಸ್ತುವಿನ ಮೇಲೆ ಚಿತ್ರಮೂಡಿಸುವುದೂ ನಡೆದಿದೆ. ಹೀಗೆ ಮೂಡಿಸಿದ ಚಿತ್ರಗಳಲ್ಲಿ ಸೂಕ್ಷ್ಮತೆಯಾಗಲೀ ಸೊಬಗಾಗಲೀ ಕಡಮೆ. ಇವನ್ನು ಕಲಾವಸ್ತುಗಳೆನ್ನಲೂ ಸಾಧ್ಯವಿಲ್ಲ.

ಚಿತ್ರಿತ ಪಿಂಗಾಣಿ ವಸ್ತುಗಳು ಈಗ ಅಮೆರಿಕ, ಭಾರತ ಮುಂತಾದ ಹಲವಾರು ರಾಷ್ಟ್ರಗಳಲ್ಲಿ ತಯಾರಾಗುತ್ತಿದ್ದರೂ ಮಿಂಗ್ ಅಥವಾ ಸುಂಗ್ ಅವಧಿಯಲ್ಲಿ ತಯಾರಾದ ಚೀನೀ ಪಿಂಗಾಣಿ ವಸ್ತುಗಳಿಗೆ ಈಗಲೂ ಬೇಡಿಕೆ ಇದೆ. ಉತ್ತಮ ಪಿಂಗಾಣಿ ವಸ್ತುಗಳನ್ನು ಸಂಗ್ರಹಿಸಲು ಬಯಸುವವರು ತುಂಬ ಬೆಲೆ ಕೊಟ್ಟು ಇವನ್ನು ಕೊಳ್ಳುತ್ತಾರೆ.

ಭಾರತದ ಹೈದರಾಬಾದಿನಲ್ಲಿರುವ ಸಾಲಾರ್‌ಜಂಗ್ ವಸ್ತುಸಂಗ್ರಹಾಲಯದಲ್ಲಿ ವಿವಿಧ ಪ್ರಾಚೀನ ರಾಜವಂಶಗಳ ಕಾಲದ ಅನೇಕ ಪಿಂಗಾಣಿ ವಸ್ತುಗಳನ್ನು ನೋಡಬಹುದು.

## ಪಿ ಇ ಎನ್

ಕವಿಗಳು, ನಾಟಕಕಾರರು, ಪ್ರಬಂಧಕಾರರು, ಸಂಪಾದಕರು, ಕಾದಂಬರಿಕಾರರ ಅಂತರರಾಷ್ಟ್ರೀಯ ಕೂಟ ಪಿ ಇ ಎನ್. ಇದರ ಸಂಸ್ಥಾಪಕ ಆಂಗ್ಲ ಕಾದಂಬರಿಕಾರ ಸಿ. ಎ. ಡಾಸನ್ ಸ್ಕಾಟ್; ಇದು ಆರಂಭವಾದದ್ದು 1921ರಲ್ಲಿ. ಜಾನ್ ಗಾಲ್ಸ್‌ವರ್ದಿ ಈ ಕೂಟದ ಪ್ರಥಮ ಅಧ್ಯಕ್ಷ.

ಈ ಸಂಸ್ಥೆಯ ಕೇಂದ್ರಗಳು ಅನೇಕ ರಾಷ್ಟ್ರಗಳಲ್ಲಿವೆ. ಸಾಮಾನ್ಯವಾಗಿ ಪ್ರತಿ ವರ್ಷವೂ ಈ ಸಂಸ್ಥೆಯ ಅಂತರರಾಷ್ಟ್ರೀಯ ಕಾಂಗ್ರೆಸ್ ಸಮಾವೇಶಗೊಳ್ಳುತ್ತದೆ. ಇಂಥ ಮಹಾಸಭೆಯ ಮೊದಲ ಅಧಿವೇಶನ 1923ರಲ್ಲಿ ಲಂಡನ್‌ನಲ್ಲಿ ನಡೆಯಿತು.

ಸಾಹಿತ್ಯದ ಹಿತಸಾಧನೆಯ ದೃಷ್ಟಿಯಿಂದ ಅಭಿವ್ಯಕ್ತಿ, ಸ್ವಾತಂತ್ರ್ಯ ಹಾಗೂ ಅಂತರರಾಷ್ಟ್ರೀಯ ಸೌಹಾರ್ದಗಳನ್ನು ಘೋಷಿಸಿ, ಜಗತ್ತಿನ ವಿವಿಧ ರಾಷ್ಟ್ರಗಳ ಲೇಖಕರ ನಡುವೆ ಸ್ನೇಹವನ್ನೂ ಬೌದ್ಧಿಕ ಸಹಕಾರವನ್ನೂ ಬೆಳೆಸಿ, ರೂಢಿಸಿಕೊಂಡು ಬರುವುದು ಈ ಸಂಸ್ಥೆಯ ಉದ್ದೇಶ.

ಭಾಷಾಂತರ ಕಾರ್ಯಕ್ರಮದಲ್ಲಿ ಯುನೆಸ್ಕೋಗೆ (ವಿಶ್ವಸಂಸ್ಥೆಯ ಶೈಕ್ಷಣಿಕ ಸಾಂಸ್ಕೃತಿಕ ಅಂಗ ಸಂಸ್ಥೆ) ಈ ಸಂಸ್ಥೆ ಸಹಾಯವಮಾಡುತ್ತದೆ.

ಮುಂಬಯಿಯಲ್ಲಿ ಭಾರತೀಯ ಪಿ ಇ ಎನ್ ಸಂಸ್ಥೆಯ ಕೇಂದ್ರವಿದೆ. ಕೇಂದ್ರದ ಸ್ಥಾಪಿಕೆ ಸೋಫಿಯಾ ವಾಡಿಯಾ. ಒಂದೊಂದು ರಾಷ್ಟ್ರದ ಪಿ ಇ ಎನ್ ಶಾಖೆಯನ್ನು ಸಂಪುಟ ಎನ್ನುತ್ತಾರೆ. ಸೋಫಿಯಾ ವಾಡಿಯಾ 35ನೆಯ ಸಂಪುಟದ – ಅಂದರೆ ಭಾರತೀಯ ಪಿ ಇ ಎನ್ ನ – ಸಂಪಾದಕಿ.

## ಪುಂಡರೀಕ ವಿಠಲ

ಕರ್ಣಾಟಕ ಸಂಗೀತದ ಅಭ್ಯಾಸಕ್ಕೆ ಸರಳವೂ ಸುಭದ್ರವೂ ಆದ ತಳಹದಿ ಹಾಕಿದವರು ಪುರಂದರದಾಸರಾದರೆ, ಆಧುನಿಕ ಭಾರತೀಯ ಸಂಗೀತಕ್ಕೆ ಶಾಸ್ತ್ರದ ಅಡಿಪಾಯ ನಿರ್ಮಿಸಿಕೊಟ್ಟವನು, ಉತ್ತಮ ಲಕ್ಷಣ ಗ್ರಂಥವನ್ನು ಬರೆದವನು, ಪುಂಡರೀಕ ವಿಠಲ. 90 ಮೇಳರಾಗಗಳ ಪ್ರಸ್ತಾಪವನ್ನೊಳಗೊಂಡ ಇವನ 'ಸದ್ರಾಗ ಚಂದ್ರೋದಯ'ವೆಂಬ ಗ್ರಂಥ ಬೆಳಕಿಗೆ ಬರುವವರೆಗೆ, 17ನೆಯ ಶತಮಾನದಲ್ಲಿ ತಂಜಾವೂರಿನಲ್ಲಿದ್ದ ವೆಂಕಟಮುಖಿಯ 'ಚತುರ್ದಂಡಿ ಪ್ರಕಾಶಿಕಾ' ಎಂಬ ಗ್ರಂಥವೇ ಕರ್ಣಾಟಕ ಸಂಗೀತಕ್ಕೆ ಒಂದು ವ್ಯವಸ್ಥಿತ ರೂಪಕೊಟ್ಟ ಲಕ್ಷಣ ಗ್ರಂಥ ಎಂಬ ಭಾವನೆಯಿತ್ತು.

ಪುಂಡರೀಕ ವಿಠಲನ ಕಾಲ 16ನೆಯ ಶತಮಾನ. ಇವನು ತನ್ನ ಗ್ರಂಥಗಳಲ್ಲಿ ತಾನು ಕನ್ನಡನಾಡಿನವನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ; ತನ್ನ ಬಗೆಗೆ ಕೆಲವು ವಿವರಗಳನ್ನೂ ಕೊಟ್ಟಿದ್ದಾನೆ. ಇವನು ಬೆಂಗಳೂರು ಜಿಲ್ಲೆಯ ಶಿವಗಂಗಾ ಕ್ಷೇತ್ರಕ್ಕೆ ಸಮೀಪವಾದ ಸಾತನೂರಿನವನು. ಇವನ ತಂದೆಯ ಹೆಸರು ವಿಠಲಾರ್ಯ; ತಾಯಿ ದೇವಕಿ. ಇವನದು ಶ್ರೇಷ್ಠ ವಿದ್ವಾಂಸರ ಮನೆತನ. ಬಾಲ್ಯದಲ್ಲಿಯೇ ಇವನಿಗೆ ಸಂಸ್ಕೃತ, ಸಂಗೀತ, ನಾಟ್ಯಾದಿ ಶಾಸ್ತ್ರಗಳಲ್ಲಿ ಉತ್ತಮ ಶಿಕ್ಷಣ ದೊರೆತಿರಬೇಕು. ಇವನು ಯಾವ ಕಾರಣಕ್ಕಾಗಿ ತನ್ನ ತಾಯ್ನಾಡನ್ನು ಬಿಟ್ಟು ಉತ್ತರಕ್ಕೆ ಹೋದನೆಂಬುದು ತಿಳಿದಿಲ್ಲ. ಇವನು ಉತ್ತರ ಭಾರತಕ್ಕೆ ಹೋಗಿ ಅಲ್ಲಿನ ರಾಜ ಮಹಾರಾಜರುಗಳ ಆಹ್ವಾನದಂತೆ ಅವರ ಆಸ್ಥಾನ ವಿದ್ವಾಂಸನಾಗಿ ಗೌರವ ಗಳಿಸಿಕೊಂಡ. ಈ ಬಗೆಗೆ ಇವನ ಗ್ರಂಥಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ.

ಪುಂಡರೀಕ ವಿಠಲನು ನಾಲ್ಕು ಗ್ರಂಥಗಳನ್ನು ಬರೆದಿದ್ದಾನೆ. ಈ ನಾಲ್ಕು ಗ್ರಂಥಗಳೂ ದೊರೆತಿವೆ. ಇವುಗಳಲ್ಲಿ 'ಸದ್ರಾಗ ಚಂದ್ರೋದಯ' ಇವನ ಮೊದಲ ಗ್ರಂಥ. ಇದನ್ನು ಸುಮಾರು 1530ರಲ್ಲಿ ಅಥವಾ ಅದಕ್ಕೂ ಸ್ವಲ್ಪ ಕಾಲ ಹಿಂದೆ ರಚಿಸಿರಬೇಕೆಂದು ತೋರುತ್ತದೆ.

ಪುಂಡರೀಕ ವಿಠಲನ 2ನೆಯ ಗ್ರಂಥ 'ರಾಗಮಂಜರಿ'. ಮೊಗಲ ಚಕ್ರವರ್ತಿ ಅಕ್ಬರನ ಸೇನಾನಿಯಾಗಿದ್ದ ಮಾಧವಸಿಂಹನ ಬಳಿ ಇದ್ದಾಗ ಇವನು



'ಅಕಬರೀಯ ಕಾಲಿದಾಸ' : ಕನ್ನಡನಾಡಿನಿಂದ ಉತ್ತರಕ್ಕೆ ತೆರಳಿದ ಪುಂಡರೀಕ ವಿಠಲ

ಬರೆದಿರಬೇಕೆಂದೂ ಅನಂತರ ಅಕ್ಬರನ ಆಸ್ಥಾನದಲ್ಲಿದ್ದಾಗ 'ರಾಗಮಾಲಾ' ಹಾಗೂ 'ನರ್ತನ ನಿರ್ಣಯ'ಗಳನ್ನು ರಚಿಸಿರಬೇಕೆಂದೂ ಊಹಿಸಲಾಗಿದೆ.

ಪುಂಡರೀಕ ವಿಠಲನ ಗ್ರಂಥಗಳಲ್ಲಿ ಮೊದಲನೆಯ ಮೂರು ಅಚ್ಚಾಗಿವೆ. ಕರ್ನಾಟಕ ಸಂಗೀತದಲ್ಲಿ ಸ್ವರ ಮೇಳಗಳ ಪ್ರಸ್ತಾರವನ್ನು ಮೊದಲಿಗೆ ಬರೆದ ಪ್ರಶಸ್ತಿ ಪುಂಡರೀಕ ವಿಠಲನಿಗೆ ಸಲ್ಲುತ್ತದೆ. ಜನಕ ರಾಗಗಳನ್ನು ಕುರಿತು ಅವನ ಗ್ರಂಥದಲ್ಲಿರುವ ನಿರೂಪಣೆ ಇಂದು ಪ್ರಚಲಿತವಿರುವ ಅಭಿಪ್ರಾಯಗಳಿಗೆ ಮೂಲಭೂತವಾಗಿದೆ. ಮೇಳ ರಾಗ ವರ್ಗೀಕರಣ, ಜನಕ ಜನ್ಯ ನಿರೂಪಣೆ ಮೊದಲಾದ ಹಲವು ವಿಷಯ ಗಳಲ್ಲಿ ಅವನು ಕ್ರಾಂತಿಕಾರಕ ಸುಧಾರಣೆಗಳನ್ನು ಮಾಡಿದ್ದಾನೆ. ಶ್ರುತಿಯ ಬಗೆಗಿನ ಅವನ ವಿಚಾರಗಳು ಮೌಲಿಕ ಪ್ರಾಮುಖ್ಯವನ್ನು ಪಡೆದಿವೆ; ಆಧುನಿಕ ಸ್ವರಸಪ್ತಕ ನಿರ್ಮಾಣಕ್ಕೆ ದಾರಿಮಾಡಿಕೊಟ್ಟಿವೆ.

ಪುಂಡರೀಕ ವಿಠಲನಿಗೆ ಅಕ್ಬರನಿಂದ ಆಹ್ವಾನ ಬಂದಿತೆಂದೂ ಅವನ ಆಶ್ರಯದಲ್ಲಿದ್ದಾಗ ಹಿಂದೂಸ್ತಾನಿ ಸಂಗೀತದ ಶ್ರೇಷ್ಠ ಗಾಯಕ ತಾನ್‌ಸೇನನಿಗೆ ಇವನೂ ಒಬ್ಬ ಗುರುವಾಗಿದ್ದನೆಂದೂ ಕೆಲವು ಮಂದಿ ವಿದ್ವಾಂಸರ ಅಭಿಪ್ರಾಯ. ಪುಂಡರೀಕ ವಿಠಲ ಉದ್ಗ್ರಂಥಗಳನ್ನು ರಚಿಸಿದ್ದರಿಂದ ಅವನಿಗೆ 'ಅಕಬರೀಯ ಕಾಲಿದಾಸ' ಎಂಬ ಬಿರುದು ದೊರೆಯಿತು. ಹಿಂದೂಸ್ತಾನಿ ಸಂಗೀತ ಪದ್ಧತಿಯ 'ಧ್ರುಪದ್' ವಿಧಾನ ಇವನ ಕಲ್ಪನೆಯೆಂಬ ಹೇಳಿಕೆಯೂ ಇದೆ. ಇವನು ಪರ್ಷಿಯನ್ ಸಂಗೀತವನ್ನೂ ಚೆನ್ನಾಗಿ ಅಭ್ಯಾಸ ಮಾಡಿದ್ದನೆಂದು ತಿಳಿದುಬಂದಿದೆ.

ಹೀಗೆ, ಕರ್ನಾಟಕ ಹಾಗೂ ಹಿಂದೂಸ್ತಾನಿ ಸಂಗೀತ ಪ್ರಕಾರಗಳೆರಡಕ್ಕೂ ಅಮೂಲ್ಯ ಸೇವೆ ಸಲ್ಲಿಸಿದ ಕಲಾವಿದ, ಲಾಕ್ಷಣಿಕ ಪುಂಡರೀಕ ವಿಠಲ.

## ಪುಟ್ಟಣ್ಣ ಚೆಟ್ಟಿ

"ಇಟ್ಟಿಗೆಗಳನ್ನು ಒಂದಕ್ಕೊಂದನ್ನಂಟಿಸಿ ಭದ್ರಪಡಿಸುವ ಗಾರೆಯಂತೆ ಭಾಷೆಯೂ ಜನರನ್ನು ಸೇರಿಸತಕ್ಕ ಒಂದು ಅಂಟು. ಮಂಗಳೂರಿನವರಿಗೂ ಧಾರವಾಡದವರಿಗೂ ಮೈಸೂರಿನವರಿಗೂ ಸಂಬಂಧವೇನು ? ಅವರನ್ನು ಇಲ್ಲಿ ಸೇರುವಂತೆ ಮಾಡಿದುದಾವುದು ? ಕನ್ನಡನುಡಿಯಲ್ಲವೆ ? ಇಟ್ಟಿಗೆಯ ಬಲವೂ ಗಾರೆಯ ಅಂಟೂ ಹೆಚ್ಚಿದಷ್ಟೂ ಗೋಡೆಯ ಬಲವೂ ಹೆಚ್ಚುವುದಷ್ಟೆ ? ಕನ್ನಡ ನುಡಿಯು ಅಭಿವೃದ್ಧಿಯಾದಷ್ಟು ಕನ್ನಡಿಗರ ಬಲವೂ ಅಧಿಕವಾಗುವುದರಲ್ಲಿ ಸಂದೇಹವೇಕೆ ?"

—ಹೀಗೆ ಹೇಳಿದವರು ರಾಜಸಭಾ ಭೂಷಣ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣಚೆಟ್ಟರು. ಸಾರ್ವಜನಿಕ ಸೇವಕರಾಗಿ, ಕನ್ನಡ ಪ್ರಚಾರಕರಾಗಿ ಇವರು ಮಾಡಿದ ಸೇವೆ ಅಪೂರ್ವವಾದದ್ದು.

ಬೆಂಗಳೂರಿನ ಹತ್ತಿರದ ಕೃಷ್ಣರಾಜಪುರದಲ್ಲಿ ಪುಟ್ಟಣ್ಣ ಚೆಟ್ಟಿಯವರು 1856ರ ಏಪ್ರಿಲ್ 29ರಂದು ಜನಿಸಿದರು. 1875ರಲ್ಲಿ ಸರಕಾರದ ಸಣ್ಣ ಕೆಲಸವೊಂದರಲ್ಲಿ ಸೇರಿ 86ರ ಹೊತ್ತಿಗೆ ಅಸಿಸ್ಟೆಂಟ್ ಕಮಿಷನರ್ ಆದರು. ಮುಂದೆ 1898ರ ವೇಳೆಗೆ ಡೆಪ್ಯುಟಿ ಕಮಿಷನರ್ ಆಗಿ 1912ರಲ್ಲಿ ನಿವೃತ್ತರಾದರು.

ಆ ಬಳಿಕ ಪುಟ್ಟಣ್ಣ ಚೆಟ್ಟರು ಸಾರ್ವಜನಿಕ ಕ್ಷೇತ್ರದಲ್ಲಿ ತುಂಬ ಚಟುವಟಿಕೆಯಿಂದ ಕಾರ್ಯೋನ್ಮುಖರಾದರು. ಕೊಂಚ ಕಾಲ ಮೈಸೂರು ಬ್ಯಾಂಕಿನ ಅಧ್ಯಕ್ಷರಾಗಿದ್ದ ಇವರು ಸರ್ ಎಂ. ವಿಶ್ವೇಶ್ವರಯ್ಯನವರ ಅಪೇಕ್ಷೆಯ ಮೇರೆಗೆ ಬೆಂಗಳೂರಿನ ಪೌರಸಭಾಧ್ಯಕ್ಷರಾಗಿ 1913ರಿಂದ ಸುಮಾರು ಏಳು ವರ್ಷಗಳ ಕಾಲ ಸೇವೆ ಸಲ್ಲಿಸಿದರು. 1915ರಿಂದ ಏಳು ವರ್ಷ ಕಾಲ ಬೆಂಗಳೂರಿನ ನಗರಾಭಿವೃದ್ಧಿ ಸಮಿತಿಯ ಅಧ್ಯಕ್ಷರಾಗಿದ್ದರು; 1924ರಲ್ಲಿ ಮೈಸೂರು ನ್ಯಾಯ ವಿಧಾಯಕ ಸಭೆಯ ಅಧ್ಯಕ್ಷರಾದರು.

1905 ಮತ್ತು 27ರಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ, 1936ರಲ್ಲಿ ಹಂಪೆಯಲ್ಲಿ ನಡೆದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಆರನೆಯ ಶತಮಾನೋತ್ಸವದ ಅಧ್ಯಕ್ಷರಾಗಿ ಆಯ್ಕೆಯಾದರು. 1919ರಲ್ಲಿ ಭಾರತ ಸರಕಾರದಿಂದ 'ದಿವಾನ್ ಬಹದ್ದೂರ್', ನಾಲ್ವಡಿ ಕೃಷ್ಣರಾಜ ಒಡೆಯರಿಂದ 'ರಾಜಸಭಾ ಭೂಷಣ', 1914ರಲ್ಲಿ 'ಕೈಸರ್ ಎ ಹಿಂದ್', 1917ರಲ್ಲಿ 'ಸಿ ಐ ಇ', 1927ರಲ್ಲಿ 'ಸರ್' ಪ್ರಶಸ್ತಿಗಳು ಇವರಿಗೆ ದೊರೆತುವು. ಮೈಸೂರು ವಿಶ್ವವಿದ್ಯಾನಿಲಯ 1936ರಲ್ಲಿ ಇವರಿಗೆ ಗೌರವ ಎಲ್‌ಎಲ್‌ಡಿ ಪ್ರಶಸ್ತಿ ನೀಡಿತು.

ಕನ್ನಡ ಸಾಹಿತ್ಯ ಪರಿಷತ್ತು ಆರಂಭವಾದಾಗಿನಿಂದ ಅದರೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದವರಲ್ಲಿ ಪುಟ್ಟಣ್ಣ ಚೆಟ್ಟರೂ ಒಬ್ಬರು. ಪರಿಷತ್ತಿನ ಮೊದಲನೆಯ ಸಮ್ಮೇಳನದ ಎರಡನೆಯ ದಿನದ



ಸೇವೆ : ಪುಟ್ಟಣ್ಣ ಚೆಟ್ಟಿ

[illegible] ಇವನ್ನು ಬರೆದವರಿಗೆ [illegible] ತ್ತಾರೆ.

ಅಮೆರಿಕದ ಗ್ರಂಥಕರ್ತನೊಬ್ಬ ಬರೆದ ಕಥಾಸಾಹಿತ್ಯ, ಅಮೆರಿಕ ಜನ ಜೀವನಕ್ಕೆ ಸಂಬಂಧಿಸಿದ ನಾಟಕ; ಅಮೆರಿಕದ ಇತಿಹಾಸವನ್ನು ಕುರಿತ ಕೃತಿ, ಅಮೆರಿಕದ ಯಾವುದೇ ವ್ಯಕ್ತಿಯ ಜೀವನಚರಿತ್ರೆ ಅಥವಾ ಆತ್ಮ ಕಥೆ, ಕವಿತಾ ಸಂಕಲನ — ಇವುಗಳಲ್ಲಿ ಅತ್ಯುತ್ತಮವಾದವುಗಳಿಗೆ ಪ್ರತಿ ವರ್ಷ ಪುಲಿಟ್ಜರ್ ಬಹುಮಾನಗಳನ್ನು ನೀಡಲಾಗುತ್ತದೆ. ತಲಾ 500 ಡಾಲರುಗಳ ಒಟ್ಟು ಸಾಹಿತ್ಯ ಬಹುಮಾನಗಳು ಐದು. ಪ್ರತಿ ಬಾರಿ ಸಂಗೀತ ಕ್ಷೇತ್ರದ ಶ್ರೇಷ್ಠರೊಬ್ಬರಿಗೆ 500 ಡಾಲರುಗಳ ಒಂದು ಬಹುಮಾನವನ್ನು ನೀಡಲಾಗುತ್ತದೆ.

## ಪುಷ್ಕಿನ್

'ರಷ್ಯದ ಮಹಾಕವಿ', 'ಆಧುನಿಕ ರಷ್ಯನ್ ಸಾಹಿತ್ಯದ ಪ್ರವರ್ತಕ', 'ರಷ್ಯನ್ ಕಾವ್ಯಲೋಕದ ರವಿ' ಎನಿಸಿಕೊಂಡ ಅಲೆಗ್ಸಾಂಡರ್ ಸೆರ್ಗೆಯೆವಿಚ್ ಪುಷ್ಕಿನ್ (ಭಾಷಾ ಉಚ್ಚಾರ: ಪೂಷ್ಕಿನ್) ಬದುಕಿದ್ದು ಕೇವಲ ಮೂವತ್ತೇಳು ವರ್ಷ ಮಾತ್ರ. ಅವನು ರಚಿಸಿದ ಕಾವ್ಯ ಅವನ ಜೀವಿತಾವಧಿಯಲ್ಲೇ ಜನಪ್ರಿಯವಾದುವು. ಪುಷ್ಕಿನ್ ರಚಿಸಿದ ಕೃತಿಗಳ ಸಂಖ್ಯೆ ಮೂವತ್ತಕ್ಕೂ ಹೆಚ್ಚು.

ಅವನು ಸಣ್ಣ ಜಮೀನುದಾರನೊಬ್ಬನ ಮಗ. 1799ರ ಜೂನ್ 6ರಂದು ಮಾಸ್ಕೋದಲ್ಲಿ ಹುಟ್ಟಿದ. ಪುಷ್ಕಿನನ ತಂದೆಯ ಬಳಿ ಅಮೂಲ್ಯ ಪುಸ್ತಕಭಂಡಾರವಿತ್ತು; ಕವಿಗಳು ಅವನ ಮನೆಗೆ ಪದೇ ಪದೇ ಬರುತ್ತಿದ್ದರು. ಇಂಥ ಸುಸಂಸ್ಕೃತ ವಾತಾವರಣದಲ್ಲಿ ಬೆಳೆದ ಪುಷ್ಕಿನನ ಮನಸ್ಸು ಕಾವ್ಯ ರಚನೆಯತ್ತ ಹರಿಯಿತು. ಅವನು ತನ್ನ 12ನೆಯ ವಯಸ್ಸಿನಲ್ಲಿ ಸೇಂಟ್ ಪೀಟರ್ಸ್‌ಬರ್ಗ್‌ಗೆ (ಈಗಿನ ಲೆನಿನ್‌ಗ್ರಾಡ್) ಹೋದ. ಆರು ವರ್ಷ ಕಟ್ಟುನಿಟ್ಟಿನ ವಿದ್ಯಾಭ್ಯಾಸ ಮಾಡಿದ. ಅವನ ಮೊದಲ ಕವನ ಪ್ರಕಟವಾದಾಗ ಅವನ ವಯಸ್ಸು ಇನ್ನೂ 15; ವಿದ್ಯಾರ್ಥಿಯಾಗಿದ್ದ. ಹದಿನೆಂಟು ವರ್ಷದವನಾಗಿದ್ದಾಗ ವಿದೇಶಾಂಗ ಕಚೇರಿಯಲ್ಲೊಂದು ಹುದ್ದೆ ದೊರೆಯಿತು. ಅದೇ ವರ್ಷ ಪ್ರಕಟವಾದ ಅವನ 'ರಸ್ಲಾನ್ ಮತ್ತು ಲುಡ್ಮಿಲಾ' ಎಂಬ ನೀಳ್ಗವನ ಅವನನ್ನು ಪ್ರಸಿದ್ಧನನ್ನಾಗಿ ಮಾಡಿತು.



ಕ್ರಾಂತಿಯ ಆದಿ ಕವಿ : ಪುಷ್ಕಿನ್

ರಸ್ಲಾನ್ ಮತ್ತು ಲುಡ್ಮಿಲಾ ಎಂಬ ನಾಯಕ– ನಾಯಕಿ ಇರುವ ಅವನ ಕಾವ್ಯ ಜನಪದ ಶೈಲಿಯಲ್ಲಿ ರಚಿತವಾದದ್ದು. ಈ ಹೊತ್ತಿಗಾಗಲೇ ತನ್ನ ಕ್ರಾಂತಿಕಾರಿ ಕವನಗಳಿಂದ ತೀವ್ರವಾದಿಗಳಿಗೆ ಆತ ಪ್ರಿಯನಾಗಿದ್ದ. ಜಾರ್ ಚಕ್ರವರ್ತಿಗಳ ದಬ್ಬಾಳಿಕೆಯ ವಿರುದ್ಧ ಬಂಡಾಯವೇಳಲು ಬಯಸಿದ್ದವರಿಗೆ ಅವನ ಕವನಗಳು ಸ್ಫೂರ್ತಿನೀಡಿದುವು. ಅವನ ಕ್ರಾಂತಿಕಾರಕ ಮನೋವೃತ್ತಿಯನ್ನೂ ಜನಪ್ರಿಯತೆಯನ್ನೂ ಗಮನಿಸಿದ ಸರಕಾರ ಅವನು ರಾಜಧಾನಿಯಲ್ಲಿದ್ದರೆ ಅಪಾಯವೆಂದು ಭಾವಿಸಿ ದಕ್ಷಿಣ ರಷ್ಯದ ದೂರ ಪ್ರದೇಶವೊಂದಕ್ಕೆ ಅವನನ್ನು ವರ್ಗಾಯಿಸಿತು; ಆದರೆ ಇದರಿಂದ ಅವನ ಬಾಯಿ ಕಟ್ಟಲಾಗಲಿಲ್ಲ. ಅವನ ಕವನಗಳಿಂದ ರಾಜಕೀಯ ವಿಚಾರಧಾರೆ ಹರಿಯುವುದು ನಿಲ್ಲಲಿಲ್ಲ. ಇದರಿಂದ ಕೆರಳಿದ ಸರಕಾರ ನಾಲ್ಕು ವರ್ಷಗಳ ಅನಂತರ ಅವನನ್ನು ಕೆಲಸದಿಂದ ತೆಗೆದುಹಾಕಿತು. ಆಮೇಲೆ ಎರಡು ವರ್ಷಗಳ ಕಾಲ ಅವನು ತನ್ನ ಪೂರ್ವಿಕರ ಸಾಗುವಳಿ ಕ್ಷೇತ್ರದಲ್ಲಿ, ಸಮಾಜದಿಂದ ದೂರವಾಗಿ, ಜೀವನ ನಡೆಸಬೇಕಾಯಿತು.

ಹೊಸ ಜಾರ್ ಚಕ್ರವರ್ತಿ ಮೊದಲನೆಯ ನಿಕೊಲಸ್ ಆಳ್ವಿಕೆಗೆ ಬಂದಾಗ, ಆತ ಪುಷ್ಕಿನ್‌ನನ್ನು ಸೇಂಟ್ ಪೀಟರ್ಸ್‌ಬರ್ಗ್‌ಗೆ ಹಿಂದಕ್ಕೆ ಕರೆಸಿಕೊಂಡ. ಕ್ರಾಂತಿಕಾರ ಮನೋಭಾವದ ಖ್ಯಾತ ಕವಿಯನ್ನು ಅಂಕೆಯಲ್ಲಿಟ್ಟುಕೊಳ್ಳುವ ಹವಣಿಕೆ ಅವನದು. ಪುಷ್ಕಿನ್‌ಗೆ ಚಕ್ರವರ್ತಿಯ ಪರಿಚಯವಾದ ಮೇಲೆ, ಸರಕಾರ ಸಾಹಿತ್ಯ ರಚನೆಯ ಮೇಲೆ ಹೇರಿದ್ದ ನಿಯಂತ್ರಣವನ್ನು ಕುರಿತು ಅವರಿಬ್ಬರ ನಡುವೆ ಚರ್ಚೆ ನಡೆಯಿತು. ಪುಷ್ಕಿನನ ಕೃತಿಗಳ ಪರಿಶೀಲನೆಯ ಕೆಲಸವನ್ನು ಸ್ವತಃ ಚಕ್ರವರ್ತಿಯೇ ವಹಿಸಿಕೊಂಡ. ಆದರೆ ಚಕ್ರವರ್ತಿ ಸಾಹಿತ್ಯಜ್ಞಾನವಿಲ್ಲದ ಅರಸಿಕ. ಇದರಿಂದಾಗಿ ಪುಷ್ಕಿನ್ ಪೇಚಿಗೆ ಸಿಕ್ಕಂತಾಯಿತು.

ಪುಷ್ಕಿನ್ ತನ್ನ 32ನೆಯ ವಯಸ್ಸಿನಲ್ಲಿ 18 ವರ್ಷದ ಸುಂದರ ತರುಣಿ ನಟಾಲಿಯ ಗಾನ್‌ಕರೋವಾಳನ್ನು ಮದುವೆಯಾದ. ಅವಳು ಸ್ವಲ್ಪ ಚೆಲ್ಲು ಸ್ವಭಾವದವಳು, ಗಾಂಭೀರ್ಯವಿಲ್ಲದವಳು. ದುಂದುಗಾರಿಕೆ ಬೇರೆ. ಅವಳು ಯಾರದೇ ಹೆಂಡತಿಯಾಗಿರುವುದಕ್ಕಿಂತ, ಆ ಕಾಲದ ಯಾವನಾದರೊಬ್ಬ ದೊರೆಯ ಆಸ್ಥಾನದ ಕಣ್ಮಣಿಯಾಗಿ ಬಾಳಲು ತಕ್ಕವಳಾಗಿದ್ದಳು. ಅವಳ ಅತಿ ದುಂದುಗಾರಿಕೆಯ ಪರಿಣಾಮವಾಗಿ ಪುಷ್ಕಿನ್ ಸಾಲಗಾರನಾಗುವುದು, ಅವನು ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿಬಿದ್ದಾಗಲೆಲ್ಲ ಚಕ್ರವರ್ತಿ ಅವನಿಗೆ ನೆರವು ಬರುವುದು — ಅನೇಕ ಬಾರಿ ನಡೆಯಿತು. ಇದರಿಂದಾಗಿ ಅವನು ಚಕ್ರವರ್ತಿಯ ದಾಕ್ಷಿಣ್ಯಕ್ಕೆ ಕಟ್ಟುಬಿದ್ದ. ಅಷ್ಟೇ ಅಲ್ಲ ವಾಸ್ತವವಾಗಿ ಒಂದು ರೀತಿಯ ಬಂಧನಕ್ಕೆ ಒಳಗಾದ. ಗುಪ್ತಚಾರರು ಅವನ ಮೇಲೆ ಕಣ್ಣಿಟ್ಟಿರುತ್ತಿದ್ದರು. ಚಕ್ರವರ್ತಿಯ ಅನುಮತಿಯಿಲ್ಲದೆ ಅವನು ರಾಜಧಾನಿಯನ್ನು ಬಿಟ್ಟು ಹೋಗುವಂತೆಯೂ ಇರಲಿಲ್ಲ. ಇಂಥ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದುದಕ್ಕಾಗಿ ಪುಷ್ಕಿನ್ ನೊಂದುಕೊಂಡ.

ಈ ಸ್ಥಿತಿಯಲ್ಲಿ ಅವನ ಹೆಂಡತಿ ಒಬ್ಬ ಫ್ರೆಂಚನ ಜೊತೆ ಸರಸ ಆಡಲಾರಂಭಿಸಿದಳು. ಪುಷ್ಕಿನ್ ತನ್ನ ಅಸಮಾಧಾನ ತೋರಿದ. ಪರಿಣಾಮ

ವಾಗಿ ಆ ಫ್ರೆಂಚ್ ಮನುಷ್ಯ ಮತ್ತು ಪುಷ್ಕಿನನ ನಡುವೆ ದ್ವಂದ್ವಯುದ್ಧ ನಡೆಯಿತು. ಈ ಹೋರಾಟದಲ್ಲಿ ಪುಷ್ಕಿನ್ ತೀವ್ರವಾಗಿ ಗಾಯಗೊಂಡ; ಎರಡು ದಿನಗಳ ಅನಂತರ 1837ರ ಫೆಬ್ರವರಿ 10ರಂದು ಮರಣಹೊಂದಿದ.

ಪುಷ್ಕಿನನ ಹಲವಾರು ಕೃತಿಗಳು ಪ್ರಸಿದ್ಧವಾಗಿವೆ. 'ರಸ್ಲಾನ್ ಮತ್ತು ಲುಡ್ಮಿಲಾ' ಅವನ ಅತ್ಯಂತ ಜನಪ್ರಿಯ ಕೃತಿ. ಇದರ ನಾಯಕ ಎಲ್ಲ ದಂತ ಕಥೆಗಳ ನಾಯಕರಂತೆ ಮಹಾ ಸಾಹಸಿ. ಅವನ ಮದುವೆಯ ದಿನ ಒಬ್ಬ ಖಳ ಮದುಮಗಳನ್ನು ಅಪಹರಿಸಿಕೊಂಡು ಹೋಗುತ್ತಾನೆ. ಸಾಹಸಿಯಾದ ನಾಯಕ ನಾನಾ ಅಡ್ಡಿ ಅಡಚಣೆಗಳನ್ನು ನಿವಾರಿಸಿಕೊಂಡು ತನ್ನ ಪ್ರೇಯಸಿಯನ್ನು ಸೆರೆಯಿಂದ ಬಿಡಿಸಿಕೊಂಡು ಬಂದು ಅವಳನ್ನು ಮದುವೆಯಾಗುತ್ತಾನೆ. ಇದು ಈ ಕೃತಿಯ ಕಥಾವಸ್ತು.

ಪುಷ್ಕಿನನ ಇನ್ನೊಂದು ಜನಪ್ರಿಯ ಕೃತಿ 'ಯೂಜಿನ್ ಬಿನಿಜಿನ್'. ಇದು ಕೂಡ ಪದ್ಯರೂಪದಲ್ಲಿರುವ ಕಾದಂಬರಿ. ಇದರಲ್ಲಿ ಪುಷ್ಕಿನನ ಆತ್ಮ ಕಥಾಂಶಗಳು ಸೇರಿಕೊಂಡಿವೆ.

ಭಿನ್ನಭಿನ್ನ ಪ್ರವೃತ್ತಿಯುಳ್ಳ ಪಾತ್ರಗಳ ಮೂಲಕ ಪುಷ್ಕಿನ್ ತನ್ನ ಈ ಕೃತಿಯಲ್ಲಿ ಸಮಕಾಲೀನ ರಷ್ಯನ್ ಸಮಾಜದ ಚಿತ್ರವನ್ನು ಅತ್ಯಂತ ಪರಿಣಾಮಕಾರಿಯಾಗಿ ರೂಪಿಸಿದ್ದಾನೆ. ಸಮಕಾಲೀನ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿತವಾದ ರಷ್ಯನ್‌ಗಳಲ್ಲಿ ಇದು ಕೃತಿ ಮೊಟ್ಟಮೊದಲನೆಯದು. 19ನೆಯ ಶತಮಾನದಲ್ಲಿ ಹೊರಬಂದ ವಾಸ್ತವಿಕ ಕಾದಂಬರಿಗಳಿಗೆ ಇದು ಮಾರ್ಗದರ್ಶಕವಾಯಿತು. ಕ್ರಾಂತಿಕಾರೀ ರಷ್ಯದ ಸುಪ್ರಸಿದ್ಧ ಲೇಖಕ ಮ್ಯಾಕ್ಸಿಂ ಗಾರ್ಕಿ, ಪುಷ್ಕಿನನನ್ನು 'ಮೊದಲಿಗರಲ್ಲಿ ಮೊದಲಿಗ' ಎಂದು ಕರೆದಿದ್ದಾನೆ. ಮೊದಲು ಪುಷ್ಕಿನ್‌ಗೆ ಗುರುಸ್ಥಾನದಲ್ಲಿದ್ದ ಹಿರಿಯ ಕವಿಯೊಬ್ಬನು, ಅವನನ್ನು ಹರಸಿ, 'ಸೋತ ಗುರುವಿನ ವಿಜಯೀ ಶಿಷ್ಯ' ಎಂದು ವರ್ಣಿಸಿದ್ದಾನೆ.

ರಷ್ಯದ ಮಹಾಕ್ರಾಂತಿಯ ಆದಿ ಕವಿ ಪುಷ್ಕಿನ್.

## ಪುಸ್ತಕ

'ವೀಣಾ ಪುಸ್ತಕ ಪಾಣಿ' ಎಂದು ಸರಸ್ವತಿಯನ್ನು ಸ್ತುತಿಸುವುದು ವಾಡಿಕೆ. ಸರಸ್ವತಿ ಹಿಡಿದಿರುವ 'ಪುಸ್ತಕ', ಲಿಖಿತ ಓಲೆಗರಿಗಳ ಕಟ್ಟು.

ಓಲೆಗರಿಗಳ ಬದಲಿಗೆ ಈಗ ಕಾಗದದ ಹಾಳೆಗಳನ್ನು ಕಟ್ಟುಕಟ್ಟಿ ಪುಸ್ತಕ ಗಳನ್ನು ನಿರ್ಮಿಸುತ್ತೇವೆ.

ತಾನು ಗಳಿಸಿಕೊಂಡ ಜ್ಞಾನವನ್ನು ಮುಂದಿನ ಪೀಳಿಗೆಗಳವರ ಉಪ ಯೋಗಕ್ಕಾಗಿ ಬರೆದಿಡಬೇಕು ಎಂಬ ಪ್ರವೃತ್ತಿ ಮನುಷ್ಯನಿಗೆ ಬಂದಾಗಲೇ ಪುಸ್ತಕ ಹುಟ್ಟಿತು ಎನ್ನಬಹುದು.

ಮುದ್ರಣ ಪ್ರಚಾರಕ್ಕೆ ಬರುವ ಮೊದಲು ಪುಸ್ತಕಗಳನ್ನು ಕೈಯಿಂದ ಬರೆಯಲಾಗುತ್ತಿತ್ತು. ಇದರಿಂದಾಗಿ, ಜ್ಞಾನಪ್ರಸಾರ ಈಗಿನಷ್ಟು ವಿಸ್ತಾರ ಗೊಂಡಿರಲಿಲ್ಲ.

ಕೈಯಿಂದ ಗ್ರಂಥಗಳ ಪ್ರತಿಮಾಡುವುದು ತುಂಬ ಶ್ರಮದಾಯಕವಾದ ಮತ್ತು ಹೆಚ್ಚು ಕಾಲ ಹಿಡಿಯುವ ಕೆಲಸ. ಪುಸ್ತಕಗಳು ಸುಲಭ ಬೆಲೆಗೆ ಸಿಗುತ್ತಿರಲಿಲ್ಲ. ಆದ್ದರಿಂದ 'ಗ್ರಂಥದಾನ' ಶ್ರೀಮಂತರಿಗೆ ಮಾತ್ರ ಸಾಧ್ಯ ವಿತ್ತು. ಪವಿತ್ರ ಗ್ರಂಥಗಳನ್ನು ಪ್ರತಿಮಾಡಿಸಿ ಅವನ್ನು ವಿದ್ವಾಂಸರಿಗೆ ದಾನ ಮಾಡುವುದು ಒಂದು ಪುಣ್ಯಕಾರ್ಯವೆಂಬ ಭಾವನೆ ಇತ್ತು.



ಮುದ್ರಣಾಲಯ. ಪುಸ್ತಕ ವ್ಯಾಪಾರಿ : ಮೊಟ್ಟಮೊದಲ ಚಿತ್ರ –15ನೆಯ ಶತಮಾನದ ಫ್ರಾನ್ಸಿನಲ್ಲಿ ಮುದ್ರಿತ

ಮುದ್ರಣ ಸೌಲಭ್ಯಗಳು ಹೆಚ್ಚಿದ ಅನಂತರ ಕಲೆ ಮತ್ತು ಸಾಹಿತ್ಯಗಳ ಪ್ರಸಾರ ಸುಲಭವಾಯಿತು.

ಬೃಹತ್ ಕೃತಿಯನ್ನು ಒಂದೇ ಸಂಪುಟದಲ್ಲಿ ಅಥವಾ ಸಂಪುಟಗಳಲ್ಲಿ ಪ್ರಕಟಿಸುವುದು ರೂಢಿಗೆ ಬಂತು. ಕೃತಿಕಾರನ ಎಲ್ಲ ಕೃತಿಗಳನ್ನು ಒಟ್ಟಿಗೆ ಒಂದೇ ಸಂಪುಟದಲ್ಲಿ, ಅಥವಾ ಹಲವು ಸಂಪುಟಗಳಲ್ಲಿ. ಮುದ್ರಿಸುವುದೂ ಆರಂಭವಾಯಿತು.

ವರ್ಣಮಯ ಚಿತ್ರಗಳ ಕಲಾಕೃತಿಗಳನ್ನು ತದ್ರೂಪದಲ್ಲಿ ಮುದ್ರಿ ಸುವುದು ಕೂಡ ಯಂತ್ರಯುಗದಲ್ಲಿ ಸಾಧ್ಯವಾಯಿತು. ಪ್ರಸಿದ್ಧ ಚಿತ್ರಕಾರರ ಹಲವಾರು ಚಿತ್ರಗಳನ್ನೊಳಗೊಂಡ ಚಿತ್ರ ಸಂಪುಟಗಳು ಪ್ರಕಟವಾದುವು. ದೂರದ ಯಾವುದೋ ಚಿತ್ರ ಸಂಗ್ರಹಾಲಯದಲ್ಲಿ ಅಥವಾ ಚಿತ್ರ ಸಂಗ್ರಹಕಾರರಲ್ಲಿ ಇರುವ ಚಿತ್ರವನ್ನು ಜನ ತಮ್ಮ ಮನೆ ಯಲ್ಲಿಯೇ ಕುಳಿತು ನೋಡಿ ಸಂತೋಷಪಡುವ ಅನುಕೂಲ ಏರ್ಪಟ್ಟಿತು.

ಒಂದು ಕಾಲಕ್ಕೆ ಕೈಬರಹದ ಪುಸ್ತಕಗಳನ್ನು ಚಿತ್ರಗಳಿಂದ ಅಲಂಕರಿಸುವ ಪದ್ಧತಿ ಆಚರಣೆಗೆ ಬಂತು. ಹೀಗೆ ಅಲಂಕೃತವಾದ ಹಲವಾರು ಹಸ್ತಪ್ರತಿ ಗಳು ಈಗಲೂ ನೋಡಲು ಸಿಗುತ್ತವೆ. ಮುದ್ರಣ ಸೌಕರ್ಯ ಬೆಳೆದಿರುವ ಈ ಕಾಲದಲ್ಲಿ ಪುಸ್ತಕಗಳ ಹೊರಮೈಯನ್ನೂ ಒಳಭಾಗವನ್ನೂ ಚಿತ್ರ ಗಳಿಂದ ಅಲಂಕರಿಸುವುದು ಸರ್ವಸಾಮಾನ್ಯವಾಗಿದೆ.

ಪುಸ್ತಕಗಳನ್ನು ಬರೆದವರೇ ತಮ್ಮ ಪುಸ್ತಕಗಳಿಗೆ ಚಿತ್ರಬರೆಯು ವುದೂ ಉಂಟು.

## ಪೃಥ್ವೀರಾಜ್ ಕಪೂರ್

ಹಲವಾರು ಕಲೆ, ವೃತ್ತಿಗಳಲ್ಲಿ ಪ್ರೌಢಿಮೆ ವಂಶಪಾರಂಪರ್ಯವಾಗಿ ಬರು ವಂತೆ ಚಲಚ್ಚಿತ್ರ ನಟನ ಕಲೆಯೂ ವಂಶಪಾರಂಪರ್ಯವಾಗಿ ಬರುವುದುಂಟೆ ? ಈ ಪ್ರಶ್ನೆಗೆ ಉತ್ತರ ದೊರೆಯುವುದು ಕಪೂರ್ ಕುಟುಂಬದ ಇತಿಹಾಸದಲ್ಲಿ. ರಾಜ್‌ಕಪೂರ್, ಶಮ್ಮಿಕಪೂರ್, ಶಶಿಕಪೂರ್, ರಣಧೀರ ಕಪೂರ್, ಋಷಿ ಕಪೂರ್ ಇವರ ಹೆಸರುಗಳು ಭಾರತದಲ್ಲೆಲ್ಲ ಮನೆಮಾತು. ಈ ಕಪೂರ್ ನಟ ವಂಶದ ಮೂಲಪುರುಷ ಪೃಥ್ವೀರಾಜ್ ಕಪೂರ್.

ಈಗ ಪಾಕಿಸ್ತಾನದಲ್ಲಿರುವ ಲೈಯೆಲ್‌ಪುರ ಜಿಲ್ಲೆಯಲ್ಲಿ ಸಮುಂದ್ರಿ ಒಂದು ಸಣ್ಣ ಊರು. ದಿವಾನ್ ಸಾಹೇಬ್ ಕೇರೋಮಲ್ ಕಪೂರ್ ಇಲ್ಲಿ

## ಫಾಲ್ಕೆ

"ಕೇವಲ ಎರಡು ಆಣೆಗೆ 50,000 ಚಿತ್ರಗಳನ್ನು ನೋಡಿ ! ಚಿತ್ರಗಳ ಅಗಲ ಮುಕ್ಕಾಲು ಇಂಚು; ಉದ್ದ ಎರಡು ಮೈಲಿ !"

ಈ ಜಾಹೀರಾತು ಕಂಡು ಅಚ್ಚರಿಗೊಂಡ ಮುಂಬಯಿಯ ಜನರು 'ಸತ್ಯಹರಿಶ್ಚಂದ್ರ' ಚಿತ್ರ ಪ್ರದರ್ಶನ ನಡೆಯುತ್ತಿದ್ದ 'ಕೊರೊನೇಷನ್' ಥಿಯೇಟರಿಗೆ ಬಹು ಸಂಖ್ಯೆಯಲ್ಲಿ ನುಗ್ಗಿದರು. ಈ ಗದ್ದಲದಲ್ಲಿ ಎರಡು ಆಣೆ ಟಿಕೆಟನ್ನು ಎರಡು ರೂಪಾಯಿ ಕೊಟ್ಟು ಕೊಂಡವರೂ ಉಂಟು. ಚಿತ್ರ ಆರಂಭವಾಗುವುದಕ್ಕೆ ಮೊದಲು ಪಾಶ್ಚಾತ್ಯ ತರುಣಿಯರ ನೃತ್ಯ ನಡೆಯಿತು. ಅನಂತರ ನಲವತ್ತು ಮಿನಿಟುಗಳ ಚಲಚ್ಚಿತ್ರ ಪ್ರದರ್ಶನ. ಪ್ರವೇಶ ಶುಲ್ಕವಾಗಿ ವಸೂಲಿಯಾಗಿದ್ದ ಚಿಲ್ಲರೆ ನಾಣ್ಯದ ರಾಶಿಯನ್ನು ಸಾಗಿಸಲು ಚಿತ್ರ ನಿರ್ಮಾಪಕ ದಾದಾ ಸಾಹೇಬ ಫಾಲ್ಕೆ ಒಂದು ಎತ್ತಿನ ಗಾಡಿಯನ್ನು ತರಿಸಬೇಕಾಯಿತು.

'ಸತ್ಯ ಹರಿಶ್ಚಂದ್ರ' ಭಾರತದಲ್ಲಿ ತಯಾರಾದ ಮೊಟ್ಟಮೊದಲ ಪೂರ್ಣ ಪ್ರಮಾಣದ ಕಥಾಚಿತ್ರ. ಇದರ ಲೇಖಕ, ನಿರ್ಮಾಪಕ, ನಿರ್ದೇಶಕ, ಕಲಾ ನಿರ್ದೇಶಕ, ಮೇಕಪ್ ಮನ್, ಕ್ಯಾಮರಾಮನ್ ಎಲ್ಲವೂ ಒಬ್ಬನೇ – ದಾದಾಸಾಹೇಬ್ ಫಾಲ್ಕೆ. ಈತನೇ ನಿರ್ಮಿಸಿದ ಸ್ಟುಡಿಯೋದಲ್ಲಿ ಅರಣ್ಯ–ಅರಮನೆ ದೃಶ್ಯಗಳ ಚಿತ್ರೀಕರಣ ನಡೆಯಿತು. ಹೊರಾಂಗಣದ ಚಿತ್ರೀಕರಣವೂ ಆಯಿತು. ಈ ಚಲಚ್ಚಿತ್ರದ ಫಿಲ್ಮಿನ ಕಾಳಗಾದಿಗಳು ನಡೆದದ್ದು ಫಾಲ್ಕೆಯ ಅಡುಗೆ ಮನೆಯಲ್ಲಿ !

ದಾದಾ ಸಾಹೇಬ್

ಭಾರತದ ಚಲಚ್ಚಿತ್ರ ಉದ್ಯಮದ ಜನಕ ಫಾಲ್ಕೆಯ ಹುಟ್ಟೂರು ನಾಸಿಕದ ಹತ್ತಿರವಿರುವ ತ್ರ್ಯಂಬಕೇಶ್ವರ; ಜನನ 1870 ಏಪ್ರಿಲ್ 30ರಂದು. ತಂದೆ ಸಂಸ್ಕೃತದ ವಿದ್ವಾಂಸರು. ಮಗುವಿಗೆ ಅವರಿಟ್ಟ ಹೆಸರು ಧುಂಡೀರಾಜ. ತಂದೆಯೇ ಹುಡುಗನಿಗೆ ಸಂಸ್ಕೃತದ ಪಾಠ ಹೇಳಿದರು. ಪುರಾಣದ ಕಥೆಗಳೆಲ್ಲ ಬಾಲಕ ಫಾಲ್ಕೆಗೆ ಪರಿಚಿತವಾಗಿದ್ದುವು. ಆತನಿಗೆ ಬಾಲ್ಯದಿಂದಲೂ ಚಿತ್ರಕಲೆ, ನಟನೆ ಕುರಿತು ತುಂಬ ಆಸಕ್ತಿ. ಮೆಟ್ರಿಕ್ಯುಲೇಷನ್ ಆದೊಡನೆ ಮುಂಬಯಿಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ ಸೇರಿದ. ವರ್ಣ ಚಿತ್ರ ಕಲೆ ಮತ್ತು ಫೋಟೊಗ್ರಫಿಗಳನ್ನು ಅಭ್ಯಾಸ ಮಾಡಿದ. ಭಾರತ ಸರಕಾರದ ಪುರಾತತ್ತ್ವ ಸಂಶೋಧನಾ ಶಾಖೆಯಲ್ಲಿ ಫೋಟೊಗ್ರಾಫರ್ ಆಗಿ ಕೆಲಸಕ್ಕೆ ಸೇರಿದ. ಫೋಟೊಗ್ರಫಿಯಲ್ಲಿ ಹೆಚ್ಚಿನ ಪರಿಣತಿ ಪಡೆಯಲು ಜರ್ಮನಿಗೂ ಹೋಗಿಬಂದ.

1910ರಲ್ಲಿ ಒಂದು ದಿನ ಫಾಲ್ಕೆ ಮುಂಬಯಿಯ ಚಲಚ್ಚಿತ್ರ ಮಂದಿರವೊಂದರಲ್ಲಿ 'ದಿ ಲೈಫ್ ಆಫ್ ಕ್ರೈಸ್ಟ್' ಎಂಬ ಇಂಗ್ಲಿಷ್ ಚಿತ್ರವನ್ನು ನೋಡಿದ. ಕ್ರಿಸ್ತನನ್ನು ಕುರಿತ ಚಿತ್ರ ಮಾಡಬಹುದಾದರೆ ಕೃಷ್ಣನ ಚಿತ್ರ ಏಕೆ ಮಾಡಬಾರದು ಎಂಬ ಆಲೋಚನೆ ಅವನಿಗೆ ಬಂತು. ಕೃಷ್ಣನನ್ನು ಕುರಿತ ಧಾರ್ಮಿಕ ಗ್ರಂಥಗಳನ್ನೆಲ್ಲ ತಿರುವಿ ಹಾಕಿದ. ಹಾಗೆಯೇ ಮುಂಬಯಿಯಲ್ಲಿ ಅಲೆದು 'ಎ ಬಿ ಸಿ ಆಫ್ ಸಿನೆಮಾಟೊಗ್ರಫಿ' ಎಂಬ ಚಿಕ್ಕ ಪುಸ್ತಕ ದೊರಕಿಸಿಕೊಂಡು ಓದಿದ. ಚಲಚ್ಚಿತ್ರ ನಿರ್ಮಾಣದ ಪೂರ್ತಿ ವಿವರ ಪಡೆಯಲು ಫಾಲ್ಕೆ ಲಂಡನಿಗೂ ಹೋಗಿ ಬಂದ. ಬರುವಾಗ ಚಲಚ್ಚಿತ್ರ ಕ್ಯಾಮರಾ, ಕಚ್ಚಾ ಫಿಲ್ಮ್ ಮತ್ತಿತರ ಸಾಮಗ್ರಿಗಳನ್ನೂ ತನ್ನೊಡನೆ ತಂದ.

ಚಲಚ್ಚಿತ್ರ ತಯಾರಿಸಲು ಹಣಬೇಕು; ಫಾಲ್ಕೆಗೆ ಧನಸಹಾಯ ಮಾಡಲು ಯಾರೂ ಮುಂದೆ ಬರಲಿಲ್ಲ. ಅನುಭವವಿಲ್ಲದ ತರುಣನೊಬ್ಬ ಚಲಚ್ಚಿತ್ರ ತಯಾರಿಸಬಲ್ಲ ಎಂಬುದನ್ನು ಒಬ್ಬರೂ ನಂಬಲಿಲ್ಲ. ಸಸ್ಯವೊಂದರ ಬೆಳವಣಿಗೆಯನ್ನು ಕುರಿತ ಪುಟಾಣಿ ಚಿತ್ರವನ್ನು ನಿರ್ಮಿಸಿ ತೋರಿಸಿದ ಮೇಲೆ ಸಾಲ ಸಿಕ್ಕಿತು.

ಆ ವೇಳೆಗೆ ಶ್ರೀಕೃಷ್ಣನ ಜೀವನವನ್ನು ಚಿತ್ರಿಸುವ ಹಂಬಲ ಕರಗಿ ಹೋಗಿತ್ತು. ಫಾಲ್ಕೆ ಹರಿಶ್ಚಂದ್ರನ ಕಥೆಯನ್ನು ರಜತಪರದೆಯ ಮೇಲೆ ತರುವ ನಿರ್ಧಾರ ಮಾಡಿದ. ಹರಿಶ್ಚಂದ್ರನ ಹೆಂಡತಿ ತಾರಾಮತಿಯಾಗಿ ಅಭಿನಯಿಸಲು ಯಾವ ಹೆಂಗಸೂ ಮುಂದೆ ಬರಲಿಲ್ಲ. ಬೇರೆ ಮಾರ್ಗವಿಲ್ಲದೆ ಈ ಪಾತ್ರ ವಹಿಸಲು ಹೋಟಲು ಕೆಲಸಗಾರನೊಬ್ಬನನ್ನು ಹೊಂದಿಸಿಕೊಂಡ. ಆದರೆ ಆತ ಚಿಗುರುತ್ತಿದ್ದ ತನ್ನ ಮೀಸೆಯನ್ನು ಬೋಳಿಸಲು ಎಷ್ಟು ಮಾತ್ರಕ್ಕೂ ಒಪ್ಪಲಿಲ್ಲ. ಹಾಗೂ ಹೀಗೂ ಚಿತ್ರ ರಚನೆಯನ್ನು ಪೂರ್ಣಗೊಳಿಸಿದಾಗ ಫಾಲ್ಕೆಗೆ ಸಾಕುಸಾಕಾಗಿತ್ತು. ಆದರೇನು ಈ ಚಿತ್ರಕ್ಕೆ ದೊರೆತ ಯಶಸ್ಸು ಅವನಿಗೆ ಧೈರ್ಯ ಕೊಟ್ಟಿತು ಭಾರತದ ಹಲವು ಪಟ್ಟಣಗಳಲ್ಲಿ ಮಾತ್ರವಲ್ಲದೆ ಇಂಗ್ಲೆಂಡ್, ಬರ್ಮಾ, ಸಿಂಹಳ ಮತ್ತು ಪೂರ್ವ ಆಫ್ರಿಕದಲ್ಲೂ ಈ ಚಿತ್ರ ಪ್ರದರ್ಶಿತವಾಯಿತು.

ತಮ್ಮ ಮೊದಲ ಚಿತ್ರದಿಂದ ಭಾರತದಲ್ಲೆಲ್ಲ 'ದಾದಾ ಸಾಹೇಬ್' ಎಂದು ಪ್ರಸಿದ್ಧರಾದ ಫಾಲ್ಕೆ ಒಂದಾದ ಮೇಲೊಂದು ಚಿತ್ರಗಳನ್ನು ನಿರ್ಮಿಸತೊಡಗಿದರು. 'ಲಂಕಾದಹನ', 'ಕೃಷ್ಣಜನ್ಮ', 'ಸೇತುಬಂಧನ' ಮುಂತಾದುವು ಫಾಲ್ಕೆಗೆ ಕೀರ್ತಿಯನ್ನೂ ದುಡ್ಡನ್ನೂ ತಂದುವು. 'ಕಾಳೀ ಮರ್ದನ' ಆ ಚಿತ್ರದಲ್ಲಿ ದಾದಾಸಾಹೇಬನ ಮಗಳು ಮಂದಾಕಿನಿ ಬಾಲಕೃಷ್ಣನಾಗಿ ಅಭಿನಯಿಸಿದಳು. ಭಾರತೀಯ ಚಲಚ್ಚಿತ್ರದಲ್ಲಿ ಕಾಣಿಸಿಕೊಂಡ ಮೊದಲ ಹೆಣ್ಣು ಈಕೆ.

ತನ್ನ ಚಿತ್ರಗಳನ್ನು ತಯಾರಿಸಲು ಫಾಲ್ಕೆಯವರು ಮುಂಬಯಿಯ ನಾಲ್ವರು ಲಕ್ಷಾಧೀಶರೊಡನೆ ಕೂಡಿ 'ದಿ ಹಿಂದೂಸ್ತಾನ್ ಫಿಲ್ಮ್ ಕಂಪೆನಿ' ಸ್ಥಾಪಿಸಿದರು. ಸಂಸ್ಥೆಯ ಆದಾಯ ಹೆಚ್ಚಿದಂತೆ ಫಾಲ್ಕೆ ಮತ್ತು ಅವರ ಜೊತೆ ಪಾಲುದಾರರಾಗಿದ್ದವರ ನಡುವೆ ವಿರಸವೂ ಬೆಳೆಯಿತು. ಫಾಲ್ಕೆ ತಮ್ಮ ಉದ್ಯಮವನ್ನು ಬಿಟ್ಟು ಕಾಶಿಗೆ ಹೋಗಿ ನೆಲೆಸಿದರು. ಆದರೆ ಚಿತ್ರ ಪ್ರಪಂಚದ ಚಟ ಬಿಟ್ಟು ಹೋಗಲಿಲ್ಲ. ಮತ್ತೆ ಮುಂಬಯಿಗೆ ಬಂದು ಚಲಚ್ಚಿತ್ರ ನಿರ್ಮಾಣದಲ್ಲಿ ತೊಡಗಿದರು.

ದಾದಾ ಸಾಹೇಬ್ ಫಾಲ್ಕೆ ತಮ್ಮ ಸುದೀರ್ಘ ಚಲಚ್ಚಿತ್ರ ಜೀವನದಲ್ಲಿ ನಿರ್ಮಿಸಿದ ಚಿತ್ರಗಳ ಸಂಖ್ಯೆ ಸುಮಾರು 175. ಇವುಗಳಲ್ಲಿ ಹೆಚ್ಚಿನವು ಪೌರಾಣಿಕ ಚಿತ್ರಗಳು. ಫಾಲ್ಕೆ ತಮ್ಮ ಉದ್ಯಮದಲ್ಲಿ ಅಪಾರ ಸಂಪತ್ತನ್ನು ಗಳಿಸಿದರು. ಆದರೆ ಕೊಡುಗೈದೊರೆಯಾಗಿದ್ದ ಅವರ ವೆಚ್ಚ ಆ ದೊಡ್ಡ ಆದಾಯವನ್ನು ಮೀರುತ್ತಿತ್ತು.

1944 ಫೆಬ್ರುವರಿ 16ರಂದು ನಾಸಿಕದಲ್ಲಿ ತೀರಿಕೊಂಡಾಗ ಚಲಚಿತ್ರ ಉದ್ಯಮದ ಈ ಚಕ್ರವರ್ತಿ ಬಡತನದ ಹಂತಕ್ಕೆ ಬಂದು ಮುಟ್ಟಿದ್ದರು.

ಫಾಲ್ಕೆಯವರ ಸ್ಮರಣಾರ್ಥ ಭಾರತೀಯ ಚಲಚ್ಚಿತ್ರಲೋಕದ ಶ್ರೇಷ್ಠ ಸಾಧನೆಗಳಿಗಾಗಿ ಅಖಿಲ ಭಾರತ ಚಲಚ್ಚಿತ್ರ ನಿರ್ಮಾಪಕರ ಸಂಘದವರು ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿಯನ್ನು 1970ರಿಂದ ನೀಡುತ್ತಿದ್ದಾರೆ.

## ಫ್ಲಾಬೇರ್

ಆರು ವರ್ಷಗಳ ಪರಿಶ್ರಮದ ಫಲ ಆ ಕೃತಿ. ಇಂದಿಗೂ ಕೆಲವು ವಿಮರ್ಶಕರ ಅಭಿಪ್ರಾಯದಲ್ಲಿ ಅದು 19ನೆಯ ಶತಮಾನದ ಅತ್ಯುತ್ತಮ ಕಾದಂಬರಿ. ಗುಸ್ಟಾವ್ ಫ್ಲಾಬೇರನ ಈ ರಚನೆ –'ಮದಾಂ ಬಾವರಿ'– 1857ರಲ್ಲಿ ಪ್ರಕಟವಾಯಿತು.

'ಮಧಾಂ ಬಾವರಿ' ಮಹತ್ವಾಕಾಂಕ್ಷೆಯುಳ್ಳ ತರುಣಿಯೊಬ್ಬಳ ಕಥೆ. ಅವಳ ಗಂಡ ಒಬ್ಬ ಡಾಕ್ಟರ್. ಆತ ಸ್ವಭಾವತಃ ಒಳ್ಳೆಯವನಾಗಿದ್ದರೂ ಅವಳು ಕಲ್ಪಿಸಿಕೊಂಡಿದ್ದ ಆದರ್ಶದ ಪತಿಯಂತಿರಲಿಲ್ಲ. ನಿರಾಶೆ ಅವಳಲ್ಲಿ ಧರ್ಮಾಸಕ್ತಿಯನ್ನು ಹುಟ್ಟಿಸಿತು. ಆದರೆ ಅವಳು ಆ ಮಾರ್ಗವನ್ನು ಬಿಟ್ಟು, ಕೆಲವು ವರ್ಷಗಳ ಕಾಲ ಹಲವರೊಡನೆ ಸ್ವೇಚ್ಛಾ ಜೀವನ ನಡೆಸಿದಳು. ಅವರು ಕೈಬಿಟ್ಟಾಗ ಆತ್ಮಹತ್ಯೆ ಮಾಡಿಕೊಂಡಳು.

ಈ ಕಾದಂಬರಿ ಪ್ರಕಟವಾದಾಗ ಅದರ ಕರ್ತೃ ಫ್ಲಾಬೇರನನ್ನೂ ಅವನ ಪುಸ್ತಕ ಪ್ರಕಾಶಕನನ್ನೂ ನೀತಿ ವಿರೋಧ ವರ್ತನೆಯ ಆಪಾದನೆ ಹೊರಿಸಿ, ವಿಚಾರಣೆಗೆ ಗುರಿಮಾಡಿದರು. ಆದರೆ ನ್ಯಾಯಸ್ಥಾನದಲ್ಲಿ ಈ ಆಪಾದನೆ ಸ್ಥಿರಪಡಲಿಲ್ಲ.

ಫ್ಲಾಬೇರನ ಇನ್ನೊಂದು ಕಾದಂಬರಿ 'ದಿ ಸೆಂಟಿಮೆಂಟಲ್ ಎಜುಕೇಶನ್' 1869ರಲ್ಲಿ ಪ್ರಕಟವಾಯಿತು. ಇದರಲ್ಲಿ ಆ ಕಾಲದ ಸಾಮಾಜಿಕ ಹಾಗೂ ರಾಜಕೀಯ ಜೀವನ ಚಿತ್ರಿತವಾಗಿದೆ. ಫ್ಲಾಬೇರ್ ಅದನ್ನು ತನ್ನ ಮೇರುಕೃತಿಯೆಂದು ಪರಿಗಣಿಸಿದ್ದ.

'ಸಲಾಂಬೊ' ಚಾರಿತ್ರಿಕ ಕಾದಂಬರಿ. ಹಿಂದಿನ ಮಹಾಸಾಧನೆಗಳ ಬಗೆಗೆ ಅವನಿಗಿರುವ ಮೆಚ್ಚುಗೆ, ಆಧುನಿಕ ಕಾಲದವರ ಅತಿಸಾಮಾನ್ಯತೆ ಕುರಿತ ಅವನ ದ್ವೇಷ ಇದರಲ್ಲಿ ಎದ್ದು ತೋರುತ್ತವೆ.

ಆತ ಮೂರು ನಾಟಕಗಳನ್ನು ಬರೆದ. ಅವು ಯಾವುವೂ ಯಶಸ್ವಿಯಾಗಲಿಲ್ಲ.

ಫ್ಲಾಬೇರನ ಕೆಲವು ಕಾದಂಬರಿಗಳು ಇಂಗ್ಲಿಷಿಗೂ ಜಗತ್ತಿನ ಇನ್ನಿತರ ಭಾಷೆಗಳಿಗೂ ತರ್ಜುಮೆಯಾಗಿವೆ.

ಫ್ಲಾಬೇರ್ ಜನಿಸಿದ್ದು ಫ್ರಾನ್ಸಿನ ರೋನ್‌ನಲ್ಲಿ 1821ರ ಡಿಸೆಂಬರ್ 12ರಂದು. ತಂದೆ ಶಸ್ತ್ರವೈದ್ಯ. ಮಗ ವಕೀಲನಾಗಬೇಕೆಂಬುದು ಅವನ ಅಪೇಕ್ಷೆಯಾಗಿತ್ತು. ಚಿಕ್ಕವಯಸ್ಸಿನಿಂದಲೇ ಸಾಹಿತ್ಯದತ್ತ ಒಲವು. 10–11ನೆಯ ವಯಸ್ಸಿನಲ್ಲೇ ಚಿಕ್ಕ ನಾಟಕಗಳನ್ನು ಬರೆದು ಸ್ನೇಹಿತರನ್ನು ಸೇರಿಸಿಕೊಂಡು ಅಭಿನಯಿಸುತ್ತಿದ್ದ.

"ಪ್ರತಿಷ್ಠಿತ ವ್ಯಕ್ತಿಯಾಗಿ ಅಪಾರ ಜನಮನ್ನಣೆಯನ್ನು ಪಡೆಯಬೇಕೆಂಬ ಮಹದಾಕಾಂಕ್ಷೆ ರಣಹದ್ದಿನಂತೆ ನನ್ನ ಹೃದಯವನ್ನು ಕುಕ್ಕಿ ಮುಕ್ಕುತ್ತಿತ್ತು"- ಎಂದು ಅವನೇ ತನ್ನ ಟಿಪ್ಪಣಿ ಪುಸ್ತಕದಲ್ಲಿ ಬರೆದುಕೊಂಡಿದ್ದಾನೆ. ಅವನ ಟಿಪ್ಪಣಿ ಪುಸ್ತಕ ಅವನ ವ್ಯಕ್ತಿತ್ವ ಮತ್ತು ಆಲೋಚನೆಗಳಿಗೆ ಕನ್ನಡಿಯಂತಿದೆ. "ನಾನು ಮಾಡುವುದೆಲ್ಲವೂ ನನ್ನ ತೃಪ್ತಿಗಾಗಿ; ನಾನು ಏನನ್ನಾದರೂ ಬರೆದರೆ, ಅದು ನನ್ನ ಕೃತಿಯನ್ನು ನಾನೇ ಓದುವುದು ಸಾಧ್ಯವಾಗಲಿ ಎಂದು; ನಾನು ಚೆನ್ನಾಗಿ ಉಡುಪು ಹಾಕಿಕೊಂಡರೆ, ನನ್ನ ದೃಷ್ಟಿಯಲ್ಲಿ ನಾನೇ ಸೊಗಸಾಗಿ ಕಾಣುವುದಕ್ಕಾಗಿ; ಕನ್ನಡಿಯಲ್ಲಿ ನನ್ನ ಪ್ರತಿಬಿಂಬವನ್ನು ನೋಡಿಕೊಂಡು, ಕಿರುನಗೆ ಸೂಸುವುದು ನನಗೆ ನಾನೇ ಸೌಜನ್ಯ ತೋರಿಸುವುದಕ್ಕಾಗಿ"—ಎಂದು ತನ್ನ ಟಿಪ್ಪಣಿ ಪುಸ್ತಕದಲ್ಲಿ ಬರೆದುಕೊಂಡಿದ್ದಾನೆ. ಫ್ಲಾಬೇರ್ ಉದ್ದಕ್ಕೂ ಒಂಟಿಜೀವನ ನಡೆಸಿದ.

ಯೂರೋಪ್, ಸಮೀಪ ಪ್ರಾಚ್ಯ ಪ್ರದೇಶಗಳಲ್ಲೆಲ್ಲ ಪ್ರವಾಸ ಮಾಡಿ ಬಂದು ರೋವ್‌ನ ಸಮೀಪದಲ್ಲಿ ಕ್ರಾಯ್‌ಸೆಟ್‌ನಲ್ಲಿ ನೆಲೆಸಿ ಕಾದಂಬರಿಗಳನ್ನು ಬರೆಯುವ ಕಡೆ ಗಮನಹರಿಸಿದ. ಅವನಿಗೆ ಮೊಪಾಸಾ, ಎಮಿಲಿ ಜೋಲಾರಂಥ ಶ್ರೇಷ್ಠ ಸಾಹಿತಿ ಮಿತ್ರರಿದ್ದರು. 1880ರ ಮೇ 8ರಂದು ಕ್ರಾಯ್‌ಸೆಟ್‌ನಲ್ಲಿ ಆತ ಮೃತನಾದ.



ಅಗ್ರ ಪಂಕ್ತಿ : ಫ್ಲಾಬೇರ್

ಕಾದಂಬರಿಯ ರೂಪುರೇಷೆಗಳನ್ನು ಮೊದಲೇ ಬಹಳ ಕಟ್ಟುನಿಟ್ಟಾಗಿ ನಿರ್ಧರಿಸಿಕೊಂಡು ಅನಂತರ ಬರೆಯತೊಡಗುತ್ತಿದ್ದ. ಬರೆಯುವಾಗ ಒಂದೊಂದು ಮಾತನ್ನೂ ಎಚ್ಚರಿಕೆಯಿಂದ ಆರಿಸಿ ಬಳಸುತ್ತಿದ್ದ. ವಾಸ್ತವತೆ ಅವನ ಕೃತಿಗಳ ವಿಶೇಷಗುಣ. ವಿಡಂಬನಾತ್ಮಕ ವಿಷಣ್ಣತೆ ಆತನ ಕೃತಿಗಳಲ್ಲಿ ಧ್ವನಿಸುತ್ತದೆ.

"ಯಾವುದನ್ನು ಕುರಿತು ಬರೆದಿದ್ದೇನೆ ಎಂಬುದಕ್ಕಿಂತ ಅದನ್ನು ಯಾವ ರೀತಿಯಲ್ಲಿ ಬರೆದಿದ್ದೇನೆ ಎಂಬುದು ಮುಖ್ಯ" —ಎನ್ನುತ್ತಿದ್ದ ಫ್ಲಾಬೇರ್.

ಫ್ರೆಂಚ್ ಸಾಹಿತ್ಯ ಕ್ಷೇತ್ರವನ್ನು ಬೆಳಗಿದ ಪ್ರತಿಭಾವಂತ ಬರೆಹಗಾರರ ಅಗ್ರ ಪಂಕ್ತಿಯಲ್ಲಿ ಗುಸ್ಟಾವ್ ಫ್ಲಾಬೇರ್‌ಗೆ ಸ್ಥಾನ ದೊರೆತಿದೆ.

[illegible] ಇದು [illegible] ಪೋಪ್ ಮಾಡಿದ ಮೊದಲ ಪ್ರಯತ್ನ ಕಾವ್ಯ ರಚನೆ.

ಚಿಕ್ಕ ವ್ಯಾಪಾರಿಯೊಬ್ಬನ ಮಗನಾಗಿ 1688ರ ಮೇ 21ರಂದು ಪೋಪ್ ಲಂಡನ್ನಿನಲ್ಲಿ ಜನಿಸಿದ. ಹುಡುಗನಾಗಿದ್ದಾಗಲೇ ಇವನು [illegible]. ಆದರೆ ಆಗಿನಿಂದಲೇ ಅನಾರೋಗ್ಯ ಅವನ [illegible]. 12ನೆಯ ವರ್ಷದಲ್ಲಿ ತಗಲಿದ ಬೆನ್ನೆಲುಬಿನ ರೋಗದಿಂದಾಗಿ ಇವನ ಬೆನ್ನು ಗೂನಾಯಿತು. ನಾಲ್ಕೂವರೆ ಅಡಿಗಳಿಗಿಂತ ಹೆಚ್ಚಾಗಿ ಅವನು ಬೆಳೆಯಲೇ ಇಲ್ಲ. ಪೋಪ್ ರೋಮನ್ ಕ್ಯಾಥೊಲಿಕ್ ಧರ್ಮಕ್ಕೆ ಸೇರಿದವನು. ಬಾಲ್ಯದ ಅನಾರೋಗ್ಯ ಮತ್ತು ರೋಮನ್ ಕ್ಯಾಥೊಲಿಕರ ಬಗೆಗೆ ಇಂಗ್ಲೆಂಡಿನ ಬಹುಸಂಖ್ಯಾತ ಪ್ರಾಟೆಸ್ಟೆಂಟರಿಗೆ ಇದ್ದ ದ್ವೇಷಗಳಿಂದಾಗಿ ಪೋಪ್ ಶಾಲೆ ಕಾಲೇಜುಗಳಲ್ಲಿ ಕಲಿಯಲಾಗಲಿಲ್ಲ. ಮನೆಯಲ್ಲೇ ಕುಳಿತು ಸ್ಪೆನ್ಸರ್, ಡ್ರೈಡನ್ ಮೊದಲಾದವರ ಕವಿತೆಗಳನ್ನು ಓದತೊಡಗಿದ. ಫ್ರೆಂಚ್, ಲ್ಯಾಟಿನ್, ಇಟಾಲಿಯನ್, ಗ್ರೀಕ್ ಮತ್ತು ಇಂಗ್ಲಿಷ್‌ಗಳಲ್ಲಿ ಪ್ರಾವೀಣ್ಯ ಪಡೆದ. ಅವನದು ಚುರುಕಾದ ಪ್ರಚಂಡ ಬುದ್ಧಿ. ಕುರೂಪಿಯಾದ ತನ್ನನ್ನು ಯಾರಾದರೂ ಜೊತೆಗಾರರು ರೇಗಿಸಿದಾಗ ಅವನು ಅವರ ಮುಖ ಮುರಿಯುವಂತೆ ಆಡುತ್ತಿದ್ದ. ಆಗಿನ ಸಮಾಜದ ಪೊಳ್ಳು ನಯಗಾರಿಕೆ, ನಡತೆಗಳ ವಿರುದ್ಧ ಖಾರವಾಗಿ ಪ್ರತಿಕ್ರಿಯೆ ತೋರಿಸುವ ಬುದ್ಧಿ ಇವನಿಗೆ ಮೊದಲಿನಿಂದಲೂ ಬೆಳೆದುಬಂತು.

ತೀಕ್ಷ್ಣ ಬುದ್ಧಿಮತ್ತೆ : ಪೋಪ್

ಪೋಪನ ಕವನ ಸಂಕಲನ 'ಪ್ಯಾಸ್ಟೊರಲ್ಸ್' ; ತನ್ನ 16ನೆಯ ವರ್ಷದಲ್ಲೇ ಇವನ್ನು ಬರೆದೆ, ಎನ್ನುತ್ತಿದ್ದ. ಇದು 1709ರಲ್ಲಿ ಪ್ರಕಟವಾಯಿತು. ಅದರೊಂದಿಗೆ ಪೋಪ್ ಸಾಹಿತ್ಯ ಪ್ರಪಂಚಕ್ಕೆ ಹೆಜ್ಜೆ ಇಟ್ಟಂತಾಯಿತು. 1711ರಲ್ಲಿ ಪ್ರಕಟವಾದ 'ವಿಮರ್ಶೆಯನ್ನು ಕುರಿತ ಪ್ರಬಂಧ' ಎಂಬ ಕವನ ಇವನ ಬಗೆಗೆ ಇತರರ ಗೌರವವನ್ನು ಹೆಚ್ಚಿಸಿತು. 1712ರಲ್ಲಿ ಮತ್ತು 1714ರಲ್ಲಿ ಪ್ರಕಟವಾದ ಇವನ 'ದಿ ರೇಪ್ ಆಫ್ ದಿ ಲಾಕ್' ಎಂಬ ಅಣಕು-ಮಹಾಕಾವ್ಯ ಇಂಗ್ಲಿಷ್ ಸಾಹಿತ್ಯದಲ್ಲೇ ಅತ್ಯಂತ ವಿಶಿಷ್ಟವಾದದ್ದು. ಕುಲೀನ ಶ್ರೀಮಂತವರ್ಗದ ಒಬ್ಬ ಯುವಕ ಹೆಂಗಸೊಬ್ಬಳ ಗುಂಗುರು ಕೂದಲನ್ನು ಕತ್ತರಿಸಿ ಕದ್ದದ್ದಕ್ಕಾಗಿ ಎರಡು ಮನೆತನಗಳ ನಡುವೆ [illegible] ವಿರಸದ ಕಥೆಯನ್ನು ಈ ಕೃತಿಯಲ್ಲಿ ಪೋಪ್ ಅತ್ಯಂತ ಸ್ವಾರಸ್ಯವಾಗಿ ನಿರೂಪಿಸಿದ್ದಾನೆ. ನಿಜವಾಗಿ ನಡೆದ ಘಟನೆಯ ಆಧಾರದ ಮೇಲೆ ರಚಿಸಿದ ಈ ಕಾವ್ಯ ನಾನಾರ್ಥಗಳನ್ನುಳ್ಳ ಉತ್ತಮ ವಿಡಂಬನೆ. ಇದರ ಅನಂತರ ಪೋಪ್, ಹೋಮರನ 'ಇಲಿಯಡ್' ಮಹಾಕಾವ್ಯವನ್ನು ಭಾಷಾಂತರಿಸಿದ. ಮೂಲದ ಕಾವ್ಯಸೌಂದರ್ಯ ಇದರಲ್ಲಿ ಇಲ್ಲದಿದ್ದರೂ ತನ್ನದೇ ಆದ ವಿಶಿಷ್ಟ ಶೈಲಿಯಲ್ಲಿ ಪೋಪ್ ಇದನ್ನು ಅನುವಾದಿಸಿದ್ದಾನೆ. ಇದರ ಯಶಸ್ಸು ಅವನಿಗೆ 10 ಸಾವಿರ ಪೌಂಡ್ ಹಣ ಗಳಿಸಿಕೊಟ್ಟಿತು. ಇದರಿಂದಾಗಿ ಅವನ ಮುಂದಿನ ಜೀವನದಲ್ಲಿ ಆರ್ಥಿಕ ತೊಂದರೆ ಇರಲಿಲ್ಲ.

ಈ ಭಾಷಾಂತರದ ಯಶಸ್ಸಿನಿಂದಾಗಿ ಅವನಿಗೆ ಅನೇಕರು ಮಿತ್ರರಾದರು ; ಶತ್ರುಗಳೂ ಹುಟ್ಟಿಕೊಂಡರು. ಗೇ, ಸ್ವಿಫ್ಟ್‌ರಂಥ ಲೇಖಕರು ಇವನ ಗೆಳೆಯರಾದರು ; ಅಡಿಸನ್, ಥಿಯೊಬಾಲ್ಡ್ ಇವನ ವಿರೋಧಿಗಳಾದರು. ಶೇಕ್ಸ್‌ಪಿಯರನ ಕೃತಿಗಳನ್ನು ಸಂಪಾದಿಸಿದಾಗ ಪೋಪ್ ಮಾಡಿದ ಕೆಲವು ಲೋಪ ದೋಷಗಳನ್ನು ಥಿಯೊಬಾಲ್ಡ್ ಗುರುತಿಸಿ ಟೀಕಿಸಿದ. ಪೋಪ್ ತನ್ನ ಮೇಲಿನ ಟೀಕೆಗಳನ್ನೆಲ್ಲ ಸೇರಿಸಿ ತನ್ನೆಲ್ಲ ವಿರೋಧಿಗಳ ಬಗೆಗೆ 'ದಿ ಡನ್ಸಿಯಡ್' ಎಂಬ ವಿಡಂಬನಾತ್ಮಕ ಕವನ ಬರೆದ. ಇದರಲ್ಲಿರುವುದು ಅಪೂರ್ವ ಕಲ್ಪನೆ, ತೀಕ್ಷ್ಣ ಬುದ್ಧಿವಂತಿಕೆಯ ಕಟುನುಡಿಗಳು, ಅವಕ್ಕೆ ತಕ ಪ್ರಾಸಬದ್ಧ ಭಾಷೆ.

'ಇಲಿಯಡ್'ನ ಭಾಷಾಂತರದಿಂದ ಬಂದ ಹಣದಿಂದ ಪೋಪ್ ಟ್ವಿಕೆನ್‌ಹ್ಯಾಮ್‌ನಲ್ಲಿ ಒಂದು ಮನೆ ಕೊಂಡು ಅಲ್ಲಿ ನೆಲೆಸಿದ. ಆದರೆ ಅಲ್ಲಿಯೂ, ಅವನಿಗೆ ಮನಶ್ಶಾಂತಿ ಇರಲಿಲ್ಲ. ಈ ಸಮಯದಲ್ಲಿ ಇವನು 'ಎಪಿಸ್ಟಲ್ಸ್' ಎಂಬ ವಿಡಂಬನಾತ್ಮಕ ಕವನವನ್ನು ಬರೆದ. 1733ರಲ್ಲಿ ಪ್ರಕಟವಾದ 'ಮಾನವನನ್ನು ಕುರಿತು ಪ್ರಬಂಧ' ಎಂಬ ಕವನ ಇವನ ಅತ್ಯುತ್ತಮ ಕೃತಿಗಳಲ್ಲೊಂದು. ಇವನ ಕಾಲದಲ್ಲಿ ಮಾನವನ ಬಗೆಗೆ ಇದ್ದ ಕಲ್ಪನೆಯನ್ನೂ ಆಗಿನ ಕಾಲದ ತಾತ್ವಿಕ ಆಲೋಚನೆಗಳನ್ನೂ ಈ ಕವನ ಸುಂದರವಾಗಿ ನಿರೂಪಿಸುತ್ತದೆ. ಸಂಪ್ರದಾಯವಾದಿಯಾಗಿದ್ದ ತನ್ನ ಮತ್ತು ತನ್ನ ಕಾಲದ ಜನರ ಚಿಂತನೆಗಳನ್ನು ಕುರಿತು ಹೇಳುವಾಗ, ಹಿಂದಿನಿಂದಲೂ ಸಾಗಿಬರುವ ಕೆಲವು ಅಭಿಪ್ರಾಯಗಳು ಇವನ ಕವಿತೆಯಲ್ಲಿ ಸೇರಿಕೊಂಡಿವೆ. ಇದರಲ್ಲಿ ಹೇಳಿರುವ ರೀತಿಯೇ ಬಹು ಮುಖ್ಯವಾದದ್ದು.

ಪೋಪ್ ಬುದ್ಧಿವಂತ ಕವಿ. ಮಿಲ್ಟನ್, ವರ್ಡ್ಸ್‌ವರ್ತ್ ಮೊದಲಾದವರಲ್ಲಿ ಇರುವ ಕಾವ್ಯ ಸೌಂದರ್ಯದ ಅಂಶ ಇವನ ರಚನೆಯಲ್ಲಿ ಬಹಳ ಕಡಮೆ. ಆದರೆ ಹಾಸ್ಯ, ವಿಡಂಬನೆ, ಕಟುಟೀಕೆಗಳಿಗೆ ಬೇಕಾದ ಬುದ್ಧಿವಂತಿಕೆ, ಚತುರತೆ, ತೀಕ್ಷ್ಣ ಭಾಷೆ ಇವನ ವೈಶಿಷ್ಟ್ಯ. ಇವನು ತನ್ನ ಕವನಗಳಲ್ಲಿ ಬಳಸಿದ್ದ ಛಂದಸ್ಸನ್ನು ಇಂಗ್ಲಿಷಿನಲ್ಲಿ 'ವೀರ ದ್ವಿಪದಿ' ಎನ್ನುತ್ತಾರೆ. ಈ ಛಂದಸ್ಸಿನಲ್ಲಿ ಒಂದು ಸಾಲಿನಲ್ಲಿ ಹತ್ತು ಪದಭಾಗಗಳಿದ್ದು, ಎರಡೆರಡು ಸಾಲುಗಳು ಒಂದು ಘಟಕವಾಗಿ ರೂಪುಗೊಂಡು ಒಂದು ಅಂಶವನ್ನು ಅತ್ಯಂತ ಸ್ಪಷ್ಟವಾಗಿ ಲಯಬದ್ಧವಾಗಿ, ಮನಸ್ಸಿಗೆ ನಾಟುವಂತೆ ಹೇಳುತ್ತವೆ. ಸಾಮಾನ್ಯವಾಗಿ ಒಂದು ಸಾಲಿನ ಮಧ್ಯ ಹಾಗೂ ಕೊನೆಯಲ್ಲಿ ಶುದ್ಧ ಪ್ರಾಸವಿರುತ್ತದೆ. ಕೊನೆಯ ಪ್ರಾಸದ ಪದ ಸಾಮಾನ್ಯವಾಗಿ ಕ್ರಿಯಾಪದ.

ಪೋಪನನ್ನು ಆಂಗ್ಲ ಸಾಹಿತ್ಯದ ಆಗಸ್ಟನ್ ಯುಗದ ಪ್ರಮುಖ ಕವಿ ಎನ್ನುತ್ತಾರೆ. ಕ್ರಿಸ್ತ ಪೂರ್ವ 63ರಿಂದ ಕ್ರಿಸ್ತ ಶಕ 14ರ ತನಕ ರೋಮ್ ಚಕ್ರಾಧಿಪತ್ಯವನ್ನಾಳಿದ ಚಕ್ರವರ್ತಿ ಆಗಸ್ಟಸನ ಕಾಲದಲ್ಲಿ ಕಾವ್ಯರಚನೆ ಉನ್ನತ ಹಂತ

ವಸ್ತು ತಿಳಿಯಿತು. ಈ ಕವಿಗಳಿಂದ ಸ್ಫೂರ್ತಿ ಪಡೆದವರು ಇಂಗ್ಲೆಂಡಿನ 18ನೆಯ ಶತಮಾನದ ಕವಿಗಳು. ಅಲ್ಲಿಂದ ಆ ಶತಮಾನ ಇಂಗ್ಲಿಷ್ ಸಾಹಿತ್ಯದ ಆಗಸ್ಟನ್‌ಯುಗ ಎನಿಸಿಕೊಂಡಿತು.

ಪೋಪ್ ಅತ್ಯಂತ ವಿವಾದಾಸ್ಪದ ವ್ಯಕ್ತಿಯಾಗಿದ್ದ. ಅವನ ಶತ್ರುಗಳಿಗೆ ಅವನು ಜಂಬದ ಕೋಳಿ. ಅಗೌರವಸ್ಥ. ಸಣ್ಣತನದ ಕ್ರಿಮಿ. ಮಿತ್ರರಿಗೆ ಪ್ರಿಯನಾದ, ಧಾರಾಳಿಯಾದ, ಹಾಸ್ಯಪ್ರವೃತ್ತಿಯ ಬುದ್ಧಿವಂತ ವ್ಯಕ್ತಿ.

ರೊಮ್ಯಾಂಟಿಕ್ ಕಾವ್ಯಯುಗದಲ್ಲಿ ಇವನ ಪ್ರಭಾವ ಕಡಮೆಯಾದರೂ ಬೈರನ್, ಲ್ಯಾಮ್, ಹಾಜ್ಲಿಟ್, ಥ್ಯಾಕರೆ ಅಂಥವರು ಇವನನ್ನು ಬೆಂಬಲಿಸಿದರು. 18ನೆಯ ಶತಮಾನದ 'ನವಸಾಂಪ್ರದಾಯಿಕ' ಕವಿಗಳಲ್ಲಿ ಇವನ ಹೆಸರು ಅತ್ಯುನ್ನತ ಸ್ಥಾನದಲ್ಲಿ ನಿಲ್ಲುವಂಥದು.

## ಫಾಕ್ನರ್

ಚಿಕ್ಕವನಾಗಿದ್ದಾಗ ಆತ ತಮ್ಮಂದಿರಿಂದ ತನ್ನ ಕೆಲಸಗಳನ್ನು ಮಾಡಿಸಿಕೊಳ್ಳುತ್ತಿದ್ದ. ಅದಕ್ಕೆ ಪ್ರತಿಯಾಗಿ ಅವರ ಮನಸ್ಸನ್ನು ರಂಜಿಸಲು ಕಥೆಗಳನ್ನು ಹೇಳುತ್ತಿದ್ದ.

ಅವನೇ ಅಮೆರಿಕದ ಖ್ಯಾತ ಕಥೆಗಾರ, ಕಾದಂಬರಿಕಾರ, ವಿಲಿಯಂ ಫಾಕ್ನರ್; ನೊಬೆಲ್ ಬಹುಮಾನ, ಹೆನ್ರಿ ಸ್ಮಾರಕ ಪಾರಿತೋಷಕ ಹಾಗೂ ಎರಡು ಬಾರಿ ಪುಲಿಟ್ಜರ್ ಬಹುಮಾನಗಳ ವಿಜೇತ.

ಅಮೆರಿಕದ ಮಿಸಿಸಿಪ್ಪಿ ಸಂಸ್ಥಾನದ ನ್ಯೂ ಆಲ್ಬನಿಯಲ್ಲಿ ಫಾಕ್ನರ್ 1897ರ ಸೆಪ್ಟೆಂಬರ್ 25ರಂದು ಜನಿಸಿದ. ಅವನು ಹುಡುಗನಾಗಿದ್ದಾಗ ಅವನ ತಂದೆತಾಯಿಗಳು ಅಲ್ಲೇ ಹತ್ತಿರದ ಆಕ್ಸ್‌ಫರ್ಡ್‌ಗೆ ಬಂದು ಬಿಟ್ಟರು. ಬಹಳ ಸಣ್ಣವಯಸ್ಸಿನಲ್ಲೇ ಪದ್ಯರಚನೆಗೂ ತೊಡಗಿದ. ನಾಚಿಕೆ ಸ್ವಭಾವ ಅವನದು; ಯಾವ ಆಟದಲ್ಲೂ ಸೇರುತ್ತಿರಲಿಲ್ಲ. ವಿದ್ಯಾಭ್ಯಾಸದಲ್ಲೂ ಆಸಕ್ತಿ ಇರಲಿಲ್ಲ; ಹೈಸ್ಕೂಲ್ ವಿದ್ಯಾಭ್ಯಾಸವನ್ನೂ ಪೂರೈಸಲಿಲ್ಲ. ನ್ಯಾಯಶಾಸ್ತ್ರದ ವಿದ್ಯಾರ್ಥಿಯಾಗಿದ್ದ ಫಿಲಿಪ್‌ಸ್ಟೋನ್ ಎಂಬಾತ ಫಾಕ್ನರನ ಪದ್ಯಗಳನ್ನು ಓದಿ ಅವನಲ್ಲಿ ಆಸಕ್ತನಾದ. ಓದುವಂತೆ, ಚಿಂತನೆ ಮಾಡುವಂತೆ ಅವನು ಫಾಕ್ನರನನ್ನು ಪ್ರೇರೇಪಿಸಿ ಮಾರ್ಗದರ್ಶನ ನೀಡಿದ. 1924ರಲ್ಲಿ ಪ್ರಕಟವಾದ ಫಾಕ್ನರನ ಕವನ ಸಂಕಲನ 'ದಿ ಮಾರ್ಬ್‌ಲ್ ಫಾನ್' ಅನ್ನು ಅಚ್ಚುಹಾಕಲು ಧನಸಹಾಯವನ್ನೂ ಮಾಡಿದ.

ಮೊದಲನೆಯ ಮಹಾಯುದ್ಧದಲ್ಲಿ ಫಾಕ್ನರ್ ಕೆನಡದ ವಿಮಾನ ದಳವನ್ನು ಸೇರಿದ. ಫ್ರಾನ್ಸ್‌ನಲ್ಲಿ ಹೋರಾಡುತ್ತಿದ್ದಾಗ ಗಾಯಗೊಂಡ. ಅನೇಕ ವರ್ಷಗಳ ಅನಂತರ ಯುದ್ಧದ ಹಿನ್ನೆಲೆಯನ್ನಿಟ್ಟುಕೊಂಡು 'ಎ ಫೇಬ್‌ಲ್' ಎನ್ನುವ ಕಾದಂಬರಿಯನ್ನು ರಚಿಸಿದ. ಈ ಕಾದಂಬರಿಗೆ 1954ರ ಪುಲಿಟ್ಜರ್ ಬಹುಮಾನ ದೊರೆಯಿತು.

ಫಾಕ್ನರನ ಮೂರು ಸಣ್ಣ ಕಥೆಗಳ ಸಂಪುಟಗಳು, ಮೂರು ಪದ್ಯ ಸಂಗ್ರಹಗಳು, ಹಲವಾರು ಕಾದಂಬರಿಗಳು ಪ್ರಕಟವಾಗಿವೆ. ಆತನ ಮೊದಲನೆಯ ಕಾದಂಬರಿ 1926ರಲ್ಲಿ ಪ್ರಕಟವಾದ 'ಸೋಲ್ಜರ್ಸ್ ಪೇ'. ಪ್ರಕಾಶಕರು ತಿರಸ್ಕರಿಸಿದ ಕೃತಿ 'ದಿ ಸೌಂಡ್ ಅಂಡ್ ದಿ ಫ್ಯೂರಿ' ಕಾದಂಬರಿ. ಪರಿಷ್ಕರಿಸಿ ಕೊಟ್ಟಮೇಲೆ 1929ರಲ್ಲಿ ಅದು ಪ್ರಕಟವಾಯಿತು. ಫಾಕ್ನರ್‌ಗೆ ಕೀರ್ತಿತಂದುಕೊಟ್ಟ ಕಾದಂಬರಿ 1931ರಲ್ಲಿ ಪ್ರಕಟವಾದ 'ಸ್ಯಾಂಕ್ಚುಯರಿ'.

[illegible] ದಕ್ಷಿಣದ ಒಂದು ಮನೆತನದವರ ಶ್ರೇಷ್ಠತೆಯನ್ನು ಹೊಗಳುವುದು-'ಸಾರ್ಟೋರೀಸ್'ನ ವಸ್ತು.

ಅತ್ಯುತ್ತಮ ಸಣ್ಣಕತೆಗೆ [illegible] ಪಾರಿತೋಷಕದ ಪ್ರಥಮ ಬಹುಮಾನ [illegible] ಫಾಕ್ನರ್‌ಗೆ ದೊರೆಯಿತು.

ಫಾಕ್ನರನ ಕೀರ್ತಿ ಯೂರೋಪಿನಲ್ಲೆಲ್ಲ ಹರಡಿದ್ದರೂ ಅವನ ಕೃತಿಗಳು ಅಮೆರಿಕದಲ್ಲಿ ಅಷ್ಟಾಗಿ ಜನಪ್ರಿಯವಾಗಿರಲಿಲ್ಲ. 1946ರಲ್ಲಿ ಫಾಕ್ನರನ ಬರಹಗಳಲ್ಲಿ ಆರಿಸಿದ ಕೃತಿಗಳ ಸಂಕಲನವೊಂದು — 'ದಿ ಪೋರ್ಟಬಲ್ ಫಾಕ್ನರ್'–ಹೊರಬಂದ ಬಳಿಕ ಫಾಕ್ನರನ ಕೃತಿಗಳಲ್ಲಿ ಅಮೆರಿಕದ ಜನರ ಆಸಕ್ತಿ ಬೆಳೆಯಿತು.



ಮನೋಜ್ಞ ನಿರೂಪಣೆ : ಫಾಕ್ನರ್

ಅವನ ಅನೇಕ ಕಾದಂಬರಿಗಳ ವಸ್ತು ಅವನು ಹುಟ್ಟಿದ ಪ್ರದೇಶಕ್ಕೆ ಸಂಬಂಧಿಸಿದ್ದು. ಅಲ್ಲಿನ ಜನರ ಜೀವನ ಅವರ ಸಮಸ್ಯೆಗಳು ಅಲ್ಲಿನ ಘಟನೆಗಳು ಅವನ ಕಾದಂಬರಿಗಳಲ್ಲಿ, ಕಥೆಗಳಲ್ಲಿ ಪ್ರತಿಬಿಂಬಿತವಾಗಿವೆ. ಅಮೆರಿಕದ ಕಾದಂಬರಿ ರಂಗಕ್ಕೆ ಅವನು ಕೊಟ್ಟ ಶಕ್ತಿಯುತ, ಕಲಾತ್ಮಕ ಕಾಣಿಕೆಗಾಗಿ ಅವನಿಗೆ 1949ರ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು. 1962ರಲ್ಲಿ ಅವನು ತೀರಿಕೊಂಡ. ಮರುವರ್ಷ ಅವನ ಕೊನೆಯ ಕಾದಂಬರಿ 'ದಿ ರೀವರ್ಸ್'ಗೆ ಮರಣೋತ್ತರ ಪುಲಿಟ್ಜರ್ ಬಹುಮಾನ ಸಿಕ್ಕಿತು. ಈ ಬಹುಮಾನ ಹಿಂದೆಯೂ ಒಮ್ಮೆ ಅವನಿಗೆ ದೊರೆತಿತ್ತು.

ಫಾಕ್ನರ್ ನಿಜವಾದ ಘಟನೆಗಳನ್ನು ನಿರೂಪಿಸುವುದರ ಬದಲು ಪ್ರಜ್ಞಾಪ್ರವಾಹವನ್ನೂ ಆಲೋಚನೆ ಪ್ರತಿಕ್ರಿಯೆಗಳನ್ನು ವರ್ಣಿಸುವ ತಂತ್ರವನ್ನೂ 'ದಿ ಸೌಂಡ್ ಅಂಡ್ ದಿ ಫ್ಯೂರಿ' ಮೊದಲಾದ ಕಾದಂಬರಿಗಳಲ್ಲಿ ಬಳಸಿದ್ದಾನೆ.

ಆಧುನಿಕ ಸಾಹಿತ್ಯದಲ್ಲಿ ಒಂದು ಪ್ರಮುಖ ಸ್ಥಾನ ಗಳಿಸಿಕೊಂಡಿರುವ ಕಥಾಸಾಹಿತಿ, ಫಾಕ್ನರ್.


ತಾತ ಕಪೂರ್ : ಪೃಥ್ವೀರಾಜ್

ತಹಸೀಲ್ದಾರ. ಇವನ ಮುದ್ದಿನ ಮೊಮ್ಮಗ ಪೃಥ್ವೀರಾಜ್ ಹುಟ್ಟಿದ್ದು 1906ರಲ್ಲಿ. ಹುಟ್ಟಿದ ಮೂರೇ ವರ್ಷಗಳಲ್ಲಿ ತಾಯಿಯನ್ನು ಕಳೆದುಕೊಂಡ. ಪೋಲೀಸ್ ಇಲಾಖೆಯಲ್ಲಿದ್ದು ಊರಿಂದೂರಿಗೆ ಅಲೆಯುತ್ತಿದ್ದ ತಂದೆಯಂನ್ನು ಪೃಥ್ವೀ ನೋಡುತ್ತಿದ್ದುದೇ ಅಪರೂಪ. ಅವನು ಬೆಳೆದದ್ದು ತನ್ನ ತಾತನ ಪಾಲನೆ ಪೋಷಣೆಯಲ್ಲೇ.

ಪೃಥ್ವೀಗೆ ಶಾಲಾ ಪಾಠ ಪುಸ್ತಕಗಳಿಗಿಂತ ನಾಟಕಗಳಲ್ಲಿ ಭಾಗವಹಿಸುವುದರಲ್ಲೇ ಹೆಚ್ಚು ಆಸಕ್ತಿ. ಆದರೂ ಅದರಿಂದ ಅವನ ವಿದ್ಯಾಭ್ಯಾಸಕ್ಕೆ ಅಡ್ಡಿಯಾಗಲಿಲ್ಲ. ಮೆಟ್ರಿಕ್ ಪಾಸಾದ. ಮರುವರ್ಷ ಮದುವೆಯೂ ಆಯಿತು. ಪೃಥ್ವೀ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿ ಕಾಲೇಜು ಸೇರಿದ. ಬಿ. ಎ. ಯಲ್ಲಿ ತೇರ್ಗಡೆಯಾಗಿ ನ್ಯಾಯಶಾಸ್ತ್ರ ಕಲಿಯತೊಡಗಿದ. ಅದು ಹಿಡಿಸದೆ, ಓದುವುದನ್ನು ಬಿಟ್ಟು ನಟನಾಗಲು ನಿರ್ಧರಿಸಿದ. ಇನ್ನೂರು ರೂಪಾಯಿ ಸಾಲಪಡೆದು ಅಭಿನಯ ವೃತ್ತಿಯ ಅವಕಾಶವನ್ನು ಅರಸುತ್ತ ಹೊರಟ. ಲಾಹೋರಿನಿಂದ ಕಲ್ಕತ್ತೆಗೆ, ಕಲ್ಕತ್ತೆಯಿಂದ ಮುಂಬಯಿಗೆ ಯಾತ್ರೆ ಮಾಡಿದ. ಹೃಷ್ಟಪುಷ್ಟ ಶರೀರ, ತೇಜಸ್ವಿಯಾದ ಕಣ್ಣುಗಳು, ನಟನೆಯ ಚಾತುರ್ಯ—ಇವೆಲ್ಲ ಇದ್ದರೂ ಪೃಥ್ವೀರಾಜ್ ಕಪೂರ್‌ಗೆ ಮೊದಲ ಅಭಿನಯಾವಕಾಶ ದೊರೆತದ್ದು 'ಎಕ್ಸ್‌ಟ್ರಾ' ನಟನಾಗಿ. ಅದು ಮೂಕ ಚಿತ್ರ.

ಆದರೆ ಅವನ ಪ್ರತಿಭೆಗೆ ಶೀಘ್ರವಾಗಿ ಮನ್ನಣೆ ದೊರೆಯಿತು. ಎರಡೇ ವರ್ಷಗಳಲ್ಲಿ ನಾಯಕ ಪಾತ್ರ ಲಭಿಸಿತು. ಒಂದೆರಡು ಚಿತ್ರಗಳಲ್ಲಿ ಪಾತ್ರ ವಹಿಸುವ ಅವಕಾಶ ದೊರೆತ ಮೇಲೆ ಹಣದ ಚಿಂತೆಯೂ ದೂರವಾಯಿತು. ಖ್ಯಾತಿಯೂ ಹೆಚ್ಚಿತು.

ಮೂಕ ಚಿತ್ರಗಳಲ್ಲಿ ಅಭಿನಯಿಸಿ ಹೆಸರುಗಳಿಸಿದ ಪೃಥ್ವೀರಾಜ್ ಭಾರತದಲ್ಲಿ ತಯಾರಾದ ಮೊಟ್ಟಮೊದಲ ವಾಕ್ಚಿತ್ರ 'ಆಲಂ-ಆರಾ'ದಲ್ಲೂ ನಾಯಕನ ಪಾತ್ರ ನಿರ್ವಹಿಸಿದರು.

ಚಲಚ್ಚಿತ್ರಗಳಿಗೆ ಯಶಸ್ಸು ದೊರೆತ ಮೇಲೂ ಪೃಥ್ವೀರಾಜರಿಗೆ ನಾಟಕದ ವ್ಯಾಮೋಹ ಕಡಮೆಯಾಗಲಿಲ್ಲ. ಗ್ರಾಂಡ್ ಆಂಡರ್‌ಸನ್ ಥಿಯೇಟ್ರಿಕಲ್ ಕಂಪೆನಿ ಎಂಬ ನಾಟಕ ಸಂಸ್ಥೆ ಮುಂಬಯಿಗೆ ಬಂದಾಗ ಅದನ್ನು ಸೇರಿಕೊಂಡರು. ಶೇಕ್ಸ್‌ಪಿಯರ್ ನಾಟಕಗಳಲ್ಲಿ ಪಾತ್ರ ವಹಿಸಿದರು. 1932ರಲ್ಲಿ ಈ ಕಂಪೆನಿ ದಿವಾಳಿ ಎದ್ದಾಗ ಪೃಥ್ವೀರಾಜ್ ಮತ್ತೆ ಚಲಚ್ಚಿತ್ರರಂಗಕ್ಕೆ ಹಿಂದಿರುಗಬೇಕಾಯಿತು.

ಕಲ್ಕತ್ತೆಯ ನ್ಯೂ ಥಿಯೇಟರ್ಸ್ ಆ ಕಾಲಕ್ಕೆ ಅತ್ಯಂತ ಪ್ರಸಿದ್ಧವಾಗಿದ್ದ ಚಲಚ್ಚಿತ್ರ ನಿರ್ಮಾಣ ಸಂಸ್ಥೆ. ಪೃಥ್ವೀರಾಜ್ ಆ ಸಂಸ್ಥೆ ತಯಾರಿಸಿದ 'ಅಭಾಗಿನಿ', 'ಮಂಜಿಲ್', 'ಪ್ರೆಸಿಡೆಂಟ್', 'ದುಷ್ಮನ್'ಗಳಲ್ಲಿ ಮುಖ್ಯ ಪಾತ್ರವಹಿಸಿದರು. ಆರು ವರ್ಷ ಅಲ್ಲಿದ್ದು 1939ರಲ್ಲಿ ಮುಂಬಯಿಗೆ ಹಿಂದಿರುಗಿದರು. ಅನೇಕ ಚಿತ್ರಗಳಲ್ಲಿ ಅಭಿನಯಿಸಿದರು. 'ಸಿಕಂದರ್', 'ರಾಜನರ್ತಕಿ' ಚಿತ್ರಗಳಂ ಪೃಥ್ವೀಯ ಕೀರ್ತಿಯನ್ನು ಪರಾಕಾಷ್ಠೆಗೆ ಒಯ್ದುವು.

ಚಲಚ್ಚಿತ್ರಾಭಿನಯದಿಂದ ಸಾಕಷ್ಟು ಹಣ ಗಳಿಸಿದ ಮೇಲೆ ಪೃಥ್ವೀರಾಜ್ 1944ರಲ್ಲಿ ಸ್ವಂತ ನಾಟಕ ಸಂಸ್ಥೆ 'ಪೃಥ್ವೀ ಥಿಯೇಟರ್ಸ್' ಅನ್ನು ಆರಂಭಿಸಿದರು. ಆ ಸಂಸ್ಥೆ ಅಭಿನಯಿಸಿದ ಮೊದಲ ನಾಟಕ 'ಶಾಂಕುತಲ'. ಇದು ಒಂದು ಕಲಾರತ್ನ. ಆದರೂ ಈ ಪ್ರಯೋಗದಿಂದ ಅವರಿಗೆ ಅಪಾರ ಧನನಷ್ಟವಾಯಿತು. ಇದರಿಂದ ಪೃಥ್ವೀರಾಜ್ ಎದೆಗುಂದಲಿಲ್ಲ. ತನ್ನ ನಾಟಕ ಸಂಸ್ಥೆಯನ್ನು ಹದಿನಾರು ವರ್ಷ ನಡೆಸಿದರು. ಪೃಥ್ವೀನಾಟಕ ಸಂಸ್ಥೆ ಆರಂಭವಾದ ಕಾಲ ಸ್ವಾತಂತ್ರ್ಯ ಸಂಗ್ರಾಮದ ಸಮಯಂ. ಆಗ ಇವರ ನಾಟಕಗಳೂ ಜನಜಾಗೃತಿಯ ಉಪಕರಣಗಳಾದುವು. 'ಪಠಾಣ್' ಹಿಂದೂ—ಮುಸ್ಲಿಂ ಐಕಮತ್ಯವನ್ನು ಸಾರಿತು. 'ಘದ್ದರ್', 'ಆಹುತಿ' 'ಪೈಸಾ', 'ಕಿಸಾನ್,' 'ದೀವಾರ್' ಮುಂತಾದ ರಾಜಕೀಯ ಸಾಮಾಜಿಕ ವಿವೇಚನೆಯುಳ್ಳ ನಾಟಕಗಳನ್ನು ಆ ಸಂಸ್ಥೆ ಅಭಿನಯಿಸಿತು. ಈ ನಾಟಕಗಳು ಪೃಥ್ವೀ ನಾಟಕ ಸಂಸ್ಥೆಯ ಬಡತನವನ್ನು ನೀಗಲಿಲ್ಲ. ಅಷ್ಟೇ ಅಲ್ಲ ಅದರಿಂದ ಆದ ಸಾಲದ ಹೊರೆಯನ್ನು ಪೃಥ್ವೀರಾಜರ ಮಕ್ಕಳು ನಿವಾರಿಸಬೇಕಾಯಿತು.

ಮಧ್ಯವಯಸ್ಸು ದಾಟಿದ ಮೇಲೂ ಪೃಥ್ವೀರಾಜ್ ನಟನಾ ಸಾಮರ್ಥ್ಯ ಕುಗ್ಗಲಿಲ್ಲ. ಸುಮಾರು 53–54 ವರ್ಷದವರಾಗಿದ್ದಾಗ ಅವರು ನಟಿಸಿದ 'ಮೊಘಲ್ ಎ ಆಜಂ' ಇದಕ್ಕೆ ನಿದರ್ಶನ. ಈ ಚಿತ್ರ ಬಹಳ ಜನಪ್ರಿಯವಾಯಿತು. 'ಆಸ್ಮಾನ್ ಮಹಲ್'ನಲ್ಲಿ ಇವರ ನಟನೆಗಾಗಿ ಚೆಕೊಸ್ಲಾವಾಕಿಯದ ಅಕಾಡಮಿಯ ಪಾರಿತೋಷಕ 1966ರಲ್ಲಿ ಇವರಿಗೆ ಲಭಿಸಿತು. ಪ್ರಯೋಗಶೀಲತೆ ಪೃಥ್ವೀರಾಜರ ಹುಟ್ಟುಗುಣ. 'ಸಾಕ್ಷಾತ್ಕಾರ' ಕನ್ನಡ ಚಿತ್ರದಲ್ಲಿ ಪಾತ್ರ ವಹಿಸಲೆಂದೇ ಅವರು ಇಳಿವಯಸ್ಸಿನಲ್ಲಿ ಕನ್ನಡ ಕಲಿತದ್ದುಂಟು.

ಭಾರತೀಯ ಅಭಿನಯ ಕ್ಷೇತ್ರಕ್ಕೆ ಪೃಥ್ವೀರಾಜ್ ಸಲ್ಲಿಸಿದ ಅಪೂರ್ವ ಸೇವೆಯನ್ನು ಗಮನಿಸಿ ಭಾರತ ಸರಕಾರ ಅವರನ್ನು ರಾಜ್ಯಸಭೆಗೆ ಸದಸ್ಯರನ್ನಾಗಿ ನಾಮಕರಣ ಮಾಡಿತು. 1969ರಲ್ಲಿ 'ಪದ್ಮಭೂಷಣ' ಪ್ರಶಸ್ತಿ ಕೊಟ್ಟು ಪುರಸ್ಕರಿಸಿತು.

1971ರಲ್ಲಿ 'ಕಲ್ ಆಜ್ ಔರ್ ಕಲ್' ನಲ್ಲಿ ನಟಿಸುತ್ತಿದ್ದಾಗ ಪೃಥ್ವೀರಾಜ್‌ರು ತೀವ್ರ ಅನಾರೋಗ್ಯಕ್ಕೆ ಒಳಗಾದರು. ದೇಹಸ್ಥಿತಿಯನ್ನೂ ಲೆಕ್ಕಿಸದೆ ಮನೋದಾರ್ಢ್ಯದಿಂದ ಅಭಿನಯ ಮುಂದುವರಿಸಿ ಚಿತ್ರೀಕರಣ ಯಶಸ್ವಿಯಾಗಿ ಮುಕ್ತಾಯವಾಗಲು ಕಾರಣರಾದರು. ಅವರ ಮೊಮ್ಮಗ ರಣಧೀರ ಕಪೂರ್ ಆ ಚಿತ್ರದ ನಿರ್ದೇಶಕ.

ಪೃಥ್ವೀರಾಜ್ ಕಪೂರ್ ಗಂಟಲಿನ ಕ್ಯಾನ್ಸರಿನಿಂದ ತೀರಿಕೊಂಡರು. ಅದೇ ದಿವಸ ಪೃಥ್ವೀರಾಜರಿಗೆ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿಯನ್ನು ಮರಣೋತ್ತರ ಪುರಸ್ಕಾರವಾಗಿ ಜಾಹೀರು ಮಾಡಲಾಯಿತು. ಇದು ಭಾರತೀಯ ಚಲಚ್ಚಿತ್ರರಂಗಕ್ಕೆ ಅವರಿಂದ ಸಂದ ಅಮೂಲ್ಯ ಸೇವೆಗಾಗಿ ನೀಡಲಾದ ಗೌರವ.

## ಪ್ರೇಮ್‌ಚಂದ್

ಅಂದಿನ ಭಾರತದ ರೈತರ ಸ್ಥಿತಿ ಕರುಣಾಜನಕವಾಗಿತ್ತು. ಹಳ್ಳಿಯ ರೈತನ ಬಾಳಿನ ನೈಜ ಚಿತ್ರಣವನ್ನು ಆ ಲೇಖಕ ತನ್ನ ಕಾದಂಬರಿಯಲ್ಲಿ

ಮೂಡಿಸಿದ. ಪ್ರಕೃತಿ ಮುನಿದು, ಮಳೆ ಸಕಾಲಕ್ಕೆ ಆಗದೆ ಹೋದರೆ ಬೆಳೆ ಹಾಳು; ರೈತ ಜಮೀನುದಾರನಿಗೆ ಗೇಣಿ ಕೊಡಲೇ ಬೇಕು – ಅದು ತಪ್ಪುವಂತಿಲ್ಲ. ಸಾಹುಕಾರರಲ್ಲಿ ಸಾಲ ಮಾಡಿ ಹಣ ಸಲ್ಲಿಸು ತ್ತಾನೆ. ಬಡತನ ಹೆಗಲೇರುತ್ತದೆ; ಬೆಳೆದ ಮಗಳಿಗೆ ಮದುವೆ ಮಾಡ ಬೇಕು. ಹಿರಿಯರ ಇಚ್ಛೆಗೆ ವಿರುದ್ಧವಾಗಿ ಮದುವೆ ಮಾಡಿಕೊಂಡ ಮಗ ತಂದೆಯಿಂದ ದೂರವಾಗುತ್ತಾನೆ. ಹೀಗೆ ತನ್ನೆಲ್ಲ ವ್ಯವಹಾರದಿಂದ ಸೋಲನ್ನೇ ಎದುರಿಸಿದ ರೈತ ಸಾಯುವ ಕಾಲದಲ್ಲಿ ಗೋವನ್ನು ದಾನ ಮಾಡಬೇಕೆಂದು ಅಪೇಕ್ಷೆ ಪಡುತ್ತಾನೆ. ಅವನ ಪತ್ನಿ ರೈತನ ಕೈಯಲ್ಲಿ ನಾಲ್ಕಾಣೆ ಕೊಟ್ಟು 'ಗೋದಾನ'ವೆಂದು ಹೇಳಿ ದಾನ ಕೊಡಿಸುತ್ತಾಳೆ. ರೈತ ಸಾವನ್ನಪ್ಪುತ್ತಾನೆ.

ಇದು ವಿಖ್ಯಾತ ಹಿಂದೀ ಲೇಖಕ ಪ್ರೇಮ್‌ಚಂದರ 'ಗೋದಾನ' ಕಾದಂಬರಿಯ ಕಥಾವಸ್ತು.

ಹಳ್ಳಿಯ ಜೀವನ, ಧನಿಕರಿಂದ ಬಡವರ ಶೋಷಣೆ, ಬಡತನ ನಿವಾರಣೆ ಗಾಗಿ ಯಾರಿಂದಲೂ ಸಹಾಯ ಬಾರದಿರುವುದು, ಕೆಳಕ್ಕೆ ಬಿದ್ದವನನ್ನು ಮೇಲೇಳಲು ನೆರವಾಗುವ ಬದಲು ಅವನನ್ನು ಮತ್ತಷ್ಟು ಕೆಳಕ್ಕೆ ತುಳಿಯ ಬಯಸುವ ಜನ; ರೈತನ ಅನಕ್ಷರತೆಯ ಲಾಭ ಪಡೆಯುವ ಸಾಹುಕಾರರು –ಇವರೆಲ್ಲರ ನೈಜಸ್ವರೂಪವನ್ನು 'ಗೋದಾನ'ದಲ್ಲಿ ಕಾಣಬಹುದು. ಕೇವಲ ಉದಾತ್ತ ಧ್ಯೇಯಗಳ ಚಿತ್ರಣಕ್ಕೆ ಮನಸ್ಸು ಕೊಡದೆ ನಿಜಜೀವನವನ್ನು ಪ್ರೇಮ್‌ಚಂದ್ ಈ ಕಾದಂಬರಿಯಲ್ಲಿ ಬಹು ಸ್ಪಷ್ಟವಾಗಿ ನಿರೂಪಿಸಿದ್ದಾರೆ.

ಪ್ರೇಮ್‌ಚಂದ್ ಹಿಂದೀ ಮತ್ತು ಉರ್ದುಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಸುಮಾರು 1914ರ ವರೆಗೆ ಅವರು ಉರ್ದುವಿನಲ್ಲೇ ಹೆಚ್ಚಾಗಿ ಬರೆಯುತ್ತಿದ್ದರು. ಅಲ್ಲಿಂದಾಚೆಗೆ ಪ್ರಧಾನವಾಗಿ ಹಿಂದಿಯಲ್ಲೇ ಬರೆಯ ತೊಡಗಿದರು. ಅವರು ತಮ್ಮ ಅನೇಕ ಕೃತಿಗಳಲ್ಲಿ ರೈತನ ಜೀವನವನ್ನು ತಾವು ಕಂಡಂತೆ ಪ್ರತಿಬಿಂಬಿಸಿದ್ದಾರೆ. ಅವರು ಬರೆದದ್ದು ಸಣ್ಣ ಕಥೆ ಹಾಗೂ ಕಾದಂಬರಿಗಳನ್ನು. ಅಷ್ಟೇನೂ ಪುಷ್ಟವಾಗಿ ಬೆಳೆಯದೇ ಇದ್ದ ಹಿಂದೀ ಕಾದಂಬರಿಗೆ ಭದ್ರವಾದ ಸ್ಥಾನ ದೊರಕಿಸಿ ಕೊಟ್ಟ ಕೀರ್ತಿ ಅವರದು. ಅವರ ಕೃತಿಗಳ ಗುಣಗಳು : ನೈಜತೆ, ಉದಾತ್ತ ಭಾವನೆ, ಪ್ರಾಮಾಣಿಕತೆ, ಜೀವನದ ಸೂಕ್ಷ್ಮ ತಿಳಿವಳಿಕೆ. ಈ ಗುಣಗಳಿಂದಾಗಿ ಅವರು ನಿರ್ಮಿಸಿದ ಪಾತ್ರಗಳು ಕಣ್ಣಿಗೆ ಕಟ್ಟುತ್ತವೆ.

ಗೋದಾನ' 1956ರಲ್ಲಿ ಇಂಗ್ಲಿಷ್ ಭಾಷೆಗೆ ಅನುವಾದವಾಯಿತು.

ಅವರ ಇನ್ನೊಂದು ಕೃತಿ 'ನಿರ್ಮಲ'ದಲ್ಲಿ ಅಪಾತ್ರನಾದ ಗಂಡನೊಡನೆ ಬಾಳಿನುದ್ದಕ್ಕೂ ಕಹಿಯನ್ನೇ ಉಂಡ ಹೆಣ್ಣಿನ ಚಿತ್ರಣವಿದೆ. ಒಡವೆಯ ಆಸೆ ಹೆಣ್ಣಿಗೆ ಸಹಜವಾದದ್ದು. ತನ್ನ ಪತ್ನಿಯ ಆಸೆಯನ್ನು ಪೂರೈಸಲು ಅಲ್ಪ ವರಮಾನವಿದ್ದ ಪತಿ ತೊಳಲಾಡುವುದು 'ಗಬನ್' ಕಾದಂಬರಿಯ ವಸ್ತು. 'ಕರ್ಮಭೂಮಿ', 'ರಂಗಭೂಮಿ' ಪ್ರೇಮ್‌ಚಂದರ ಇತರ ಕಾದಂಬರಿಗಳು. ಇವು ಕೂಡ ದೇಶ ವಿದೇಶಗಳ ಹಲವಾರು ಭಾಷೆಗಳಿಗೆ ಭಾಷಾಂತರಗೊಂಡಿವೆ.

ಪ್ರೇಮ್‌ಚಂದ್ ಸಣ್ಣ ಕಥೆಗಳನ್ನು ಬರೆಯುವುದರಲ್ಲಿ ಸಿದ್ಧಹಸ್ತರಾಗಿ ದ್ದರು. ಅವರ ಸುಮಾರು 250 ಸಣ್ಣ ಕಥೆಗಳು 'ಮಾನ ಸರೋವರ್' ಎಂಬ ಕಥಾಸಂಕಲನದಲ್ಲಿ ಅಡಕವಾಗಿವೆ. ಈ ಸಂಕಲನ ಎಂಟು ಸಂಪುಟಗಳಲ್ಲಿ ಪ್ರಕಟವಾಗಿವೆ. ಉತ್ತರ ಭಾರತದ ಜನಜೀವನದ ವಿವಿಧ ಮುಖಗಳು ಇವರ ಸಣ್ಣಕಥೆಗಳ ವಸ್ತು.



ಧ್ರುವ ತಾರೆ : ಪ್ರೇಮ್‌ಚಂದ್

ಕಲೆಯ ದೃಷ್ಟಿಯಿಂದ ಕೂಡ ಅವರ ಅನೇಕ ಕಥೆಗಳು ಪರಿಪೂರ್ಣವಾದುವು. ಕೆಲಸದ ಸಲುವಾಗಿ ಭೇಟಿಗೆಂದು ಬರುತ್ತಿದ್ದವನು, ದಾರಿಯಲ್ಲಿ ಗಾಡಿಯೊಂದು ಮರಳಲ್ಲಿ ಹೂತು ಹೋಗಿರುವುದನ್ನು ಕಂಡು ಅದರ ಮಾಲಿಕನೊಡನೆ ತಾನೂ ಸಹಕರಿಸಿ ಗಾಡಿಯನ್ನು ನೂಕಲು ಸಹಾಯ ಮಾಡಿ ಮಾನವೀಯತೆಯ ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದು 'ಪರೀಕ್ಷಾ' ಕಥೆಯ ಸಾರಾಂಶ. ಗಾಡಿಯವನೇ ಸಂಸ್ಥಾನದ ದಿವಾನ. ಅಭ್ಯರ್ಥಿಗಳ ಮಾನವೀಯತೆಯನ್ನು ಪರೀಕ್ಷಿಸಲೆಂದೇ ಗಾಡಿಯನ್ನು ಮರಳಿನಲ್ಲಿ ಸಿಕ್ಕಿಬೀಳಿಸಿರುತ್ತಾನೆ.

'ಬಡೇ ಘರ್ ಕಿ ಬೇಟಿ' ಹೆಣ್ಣಿನ ಹೃದಯದ ಮಿಡಿತದ ಚಿತ್ರಣ.

ಪ್ರೇಮ್‌ಚಂದ್ 1880ರ ಜುಲೈ 31ರಂದು ಉತ್ತರ ಪ್ರದೇಶದ ವಾರಣಾಸಿ (ಕಾಶಿ) ಸಮೀಪದಲ್ಲಿರುವ ಲಮಾಹಿ ಎಂಬಲ್ಲಿ ಜನಿಸಿದರು. ಅವರ ನಿಜನಾಮ ಧನಪತ್‌ರಾಯ್ ಶ್ರೀವಾಸ್ತವ. 'ಪ್ರೇಮ್‌ಚಂದ್' ಎಂಬುದು ಕಾವ್ಯನಾಮ. ಉಪಾಧ್ಯಾಯನಾಗಿ ವೃತ್ತಿಜೀವನವನ್ನಾರಂಭಿಸಿದ ಪ್ರೇಮ್‌ಚಂದ್ ಸ್ವಲ್ಪಕಾಲಾನಂತರ ಶಾಲೆಗಳ ಸಬ್ ಇನ್ಸ್‌ಪೆಕ್ಟರ್ ಹುದ್ದೆಗೇರಿದರು. 1921ರಲ್ಲಿ ತಮ್ಮ ಉದ್ಯೋಗವನ್ನು ಬಿಟ್ಟು ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ನಡೆಯುತ್ತಿದ್ದ ಅಸಹಕಾರ ಚಳುವಳಿಯನ್ನು ಸೇರಿದರು. ಅವರು ಕೆಲ ಕಾಲ 'ಜಾಗರಣ' ಎಂಬ ವಾರಪತ್ರಿಕೆ ಹಾಗೂ 'ಹಂಸ' ಎಂಬ ಮಾಸಪತ್ರಿಕೆಯ ಸಂಪಾದಕರಾಗಿದ್ದರು.

1936ರಲ್ಲಿ ಜರಗಿದ ಅಖಿಲ ಭಾರತ ಪ್ರಗತಿಶೀಲ ಲೇಖಕರ ಸಮ್ಮೇಳನ ಪ್ರೇಮ್‌ಚಂದರ ಅಧ್ಯಕ್ಷತೆಯಲ್ಲಿ ಜರಗಿತು.

ಪ್ರೇಮ್‌ಚಂದ್ 1936 ಅಕ್ಟೋಬರ್ 8ರಂದು ವಾರಣಾಸಿಯಲ್ಲಿ ತಮ್ಮ ಕೊನೆಯುಸಿರೆಳೆದರು.

ಯಾವುದೇ ಭಾಷೆಯ ಸಾಹಿತ್ಯಕ್ಕೆ ಭೂಷಣವಾಗಬಹುದಾದಂಥ ಕಥಾ ಸಾಹಿತ್ಯವನ್ನು ರಚಿಸಿದ ಪ್ರೇಮ್‌ಚಂದ್ ಹಿಂದೀ ಸಾಹಿತ್ಯದ ಧ್ರುವತಾರೆ.

## ಪೋಪ್

" ನಾನಿನ್ನೂ ಮಗು ; ಕೀರ್ತಿ ಕತ್ತೆಯ ಮರಿಯಾಗಿರಲಿಲ್ಲ
ನನ್ನ ತೊದಲು ನುಡಿ ಆಗಲೇ ಕವನವಾಗಿತ್ತಲ್ಲ "

—ಎಂದು ಹೇಳಿದ ಅಲೆಗ್ಸಾಂಡರ್ ಪೋಪ್ ಇಂಗ್ಲಿಷ್ ಸಾಹಿತ್ಯದ 18ನೆಯ ಶತಮಾನದ ಅತ್ಯಂತ ಪ್ರಮುಖ ಕವಿ. ಮೇಲೆ ಹೇಳಿದ

## ಫಿಡಿಯಾಸ್

ಫಿಡಿಯಾಸ್ ಪ್ರಾಚೀನ ಗ್ರೀಸ್ ದೇಶದ ಶಿಲ್ಪಿ. ಅತ್ಯಂತ ಪ್ರತಿಭಾನ್ವಿತನೆಂದು ಜಗತ್ತಿನ ಇತಿಹಾಸದಲ್ಲಿ ಆತ ಪ್ರಸಿದ್ಧ.

ಕ್ರಿ. ಪೂ. ೫ನೆಯ ಶತಮಾನದ ಫಿಡಿಯಾಸ್ ಅಥೆನ್ಸ್ ನಗರದ ಚಿತ್ರಕಾರನೊಬ್ಬನ ಮಗ. ಅವನು ತನ್ನ ಕಲಾಜೀವನವನ್ನು ಆರಂಭಿಸಿದ್ದು ಚಿತ್ರಕಾರನಾಗಿ. ಅನಂತರ ಶಿಲ್ಪದ ಕಡೆಗೆ ತಿರುಗಿದ. ಗ್ರೀಸ್ ದೇಶದ ಶ್ರೇಷ್ಠ ಶಿಲ್ಪಶಾಸ್ತ್ರಜ್ಞ ಹೇಜಿಯಸನ ಶಿಷ್ಯನಾದ.

ಕ್ರಿ. ಪೂ. 444 ರಲ್ಲಿ ಅಥೆನ್ಸ್ ನಗರದ ಆಡಳಿತ ಸೂತ್ರಗಳನ್ನು ಪೆರಿಕ್ಲಿಸ್ ವಹಿಸಿಕೊಂಡಾಗ ಆ ನಗರವನ್ನು ಅಭಿವೃದ್ಧಿ ಪಡಿಸುವ ಕಾರ್ಯಕ್ರಮದಲ್ಲಿ ಫಿಡಿಯಾಸನ ಸಹಾಯವನ್ನು ಕೋರಿದ. ಅವನ ಕುಶಲತೆಯಿಂದ ಅಥೆನ್ಸ್ ಪ್ರಾಚೀನ ಗ್ರೀಸಿನ ಕಲಾಭವನವಾಯಿತು.

ಅಥೀನಾ ದೇವತೆಯ ವಕ್ಷಸ್ಥಲ, ಶಿರಸ್ಸು : ಫಿಡಿಯಾಸ್ ಕೃತಿ

ಇವನು ನಿರ್ಮಿಸಿದ ಮೂಲಕೃತಿಗಳು ಈಗ ಉಳಿದಿಲ್ಲ. ಅವುಗಳ ಪ್ರತಿಕೃತಿಗಳು ಮತ್ತು ಅವನ್ನು ಕುರಿತ ಪ್ರಾಚೀನ ವರ್ಣನೆಗಳಿಂದ ಅವುಗಳ ಮಹಾಸೌಂದರ್ಯವನ್ನು ಊಹಿಸಿಕೊಳ್ಳಬೇಕಾಗಿದೆ.

ಫಿಡಿಯಾಸನ ಮೊದಲ ಕೃತಿಗಳಲ್ಲಿ ಪ್ರಧಾನವಾದುವು ಗ್ರೀಕ್ ದೇವತೆಗಳ ಕಂಚಿನ ವಿಗ್ರಹಗಳು. ಇವು ರಚಿತವಾದದ್ದು ಸುಮಾರು ಕ್ರಿ. ಪೂ. 459ರಲ್ಲಿ. ಹೆಚ್ಚು ಕಡಮೆ ಇದೇ ಕಾಲದಲ್ಲಿ ಸ್ತ್ರೀರೂಪದ ಒಂದು ಕಂಚಿನ ವಿಗ್ರಹವನ್ನು ಅವನು ನಿರ್ಮಿಸಿದ. ಇಟಲಿಯ ಬೋಲೋನ್‌ನ ವಸ್ತುಸಂಗ್ರಹಾಲಯದಲ್ಲಿ ಒಂದು ಶಿರಸ್ಸಿದೆ; ಮತ್ತು ಜರ್ಮನಿಯ ಡ್ರೆಸ್ಡನ್‌ನ ವಸ್ತುಸಂಗ್ರಹಾಲಯದಲ್ಲಿ ತಲೆಯಿಲ್ಲದ ಒಂದು ದೇಹವಿದೆ. ಇವು ಫಿಡಿಯಾಸನ ಕೃತಿಗಳೇ. ಇವೆರಡೂ ಮೇಲೆ ಪ್ರಸ್ತಾಪಿಸಿದ ಕಂಚಿನ ಮೂಲವಿಗ್ರಹದ ಅಮೃತಶಿಲಾ ಪ್ರತಿಕೃತಿಯ ಭಾಗಗಳೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಪೀಠವೂ ಸೇರಿದಂತೆ ಸುಮಾರು 40 ಅಡಿ ಎತ್ತರವಿರುವ ಅಥೀನಾ ದೇವತೆಯ ವಿಗ್ರಹ ಚಿನ್ನ ಮತ್ತು ದಂತದಿಂದ ನಿರ್ಮಿತವಾಗಿವೆ. ಇದರ ಪ್ರತಿಷ್ಠಾಪನೆ ಅಥೆನ್ಸ್ ನಗರದ ಪಾರ್ಥನಾನ್ ದೇವಾಲಯದಲ್ಲಿ ಕ್ರಿ. ಪೂ. 438ರಲ್ಲಿ ಜರುಗಿತು.

ಇತಿಹಾಸದಲ್ಲಿ ಫಿಡಿಯಾಸನ ಹೆಸರನ್ನು ಅಮರಗೊಳಿಸಿದ ಕಲಾಕೃತಿ ಜೂಸ್ ದೇವತೆಯ ವಿಗ್ರಹ. ಗ್ರೀಸ್ ದೇಶದ ದಕ್ಷಿಣ ಭಾಗದಲ್ಲಿರುವ ಒಲಿಂಪಿಯಾ ಕ್ರಿ. ಪೂ. 457ರಲ್ಲಿ ಸ್ಥಾಪಿಸಲ್ಪಟ್ಟಿತು. ಗ್ರೀಕರ ನಂಬಿಕೆಯಂತೆ ದೇವತೆಗಳ ರಾಜ ಜೂಸ್. ಚಿನ್ನ, ದಂತ, ದೇವದಾರು ಮರಗಳಿಂದ ರಚಿತವಾಗಿ ವಜ್ರ, ವೈಢೂರ್ಯಗಳಿಂದ ಅಲಂಕೃತವಾದ ಸಿಂಹಾಸನದ ಮೇಲೆ ಕುಳಿತ ಏಳು ಪುರುಷ-ಪ್ರಮಾಣದ ವಿಗ್ರಹವಿದು. ಕಲ್ಲಿನ ವಿಗ್ರಹದ ಮೇಲೆ ಸವ್ರಣದ ದಂತದ ಹೊದಿಕೆ, ಬಲಗೈಯಲ್ಲಿ ದಂತದ ವಿಜಯದಂಡ, ಕಣ್ಣುಗಳಿಗೆ ಮಾಣಿಕ್ಯದ ಹರಳುಗಳು. ಗ್ರೀಕರ ಮೇಲೆ ವಿಜಯಗಳಿಸಿದ ರೋಮನ್ ದಳಪತಿ, ಗಾಂಭೀರ್ಯತೆಯೇ ಮೈ ತಳೆದಂತೆ ನಿಂತ ಈ ವಿಗ್ರಹವನ್ನು ನೋಡಿ ವಿಸ್ಮಯದಿಂದ ಮೂಕನಾಗಿ ನಿಂತುಬಿಟ್ಟನಂತೆ. ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು ಎಂಬ ಗೌರವಕ್ಕೆ ಈ ವಿಗ್ರಹ ಪಾತ್ರವಾಯಿತು.

"ಮನಸ್ಸು ವ್ಯಥೆಯಿಂದ ಭಾರವಾದಾಗ, ಬಾಳಿನ ಬಟ್ಟಲಲ್ಲಿ ಸದಾ ದುಃಖ ಮತ್ತು ದುರದೃಷ್ಟವೇ ತುಂಬಿಕೊಂಡಾಗ ಸುಖನಿದ್ರೆ ಎನ್ನುವುದು ಎಂದಿಗೂ ಹತ್ತಿರ ಸುಳಿಯದಿದ್ದಾಗ ಅಂಥ ವ್ಯಕ್ತಿ ಒಂದು ಕ್ಷಣ ಈ ಅದ್ಭುತ ವಿಗ್ರಹದ ಮುಂದೆ ಬಂದು ನಿಂತರೆ ಅವನ ಬಾಳಿನ ದುಃಖ ಸಂಕಟಗಳೆಲ್ಲವೂ ಮರೆತುಹೋದಾವು; ಜೀವನ ಸಹ್ಯವೆನಿಸೀತು,'' ಇದು ಖ್ಯಾತ ಲೇಖಕ ವಿಲ್ ಡ್ಯುರಾಂಟರ ಅಭಿಪ್ರಾಯ.

ಫಿಡಿಯಾಸನ ಬದುಕಿನ ಕೊನೆಯ ದಿನಗಳನ್ನು ಕುರಿತು ಹೆಚ್ಚಿನ ವಿವರಗಳು ನಮಗೆ ತಿಳಿದುಬಂದಿಲ್ಲ. ಒಟ್ಟಿನಲ್ಲಿ ಅದು ತುಂಬ ದಾರುಣವೂ ದುಃಖಮಯವೂ ಆಗಿದ್ದಿರಬೇಕು. ಅಥೀನಾ ವಿಗ್ರಹದ ಉಡುಪಿನ ಶೃಂಗಾರಕ್ಕಾಗಿ ಕೊಟ್ಟಿದ್ದ ಚಿನ್ನದ ಸ್ವಲ್ಪ ಭಾಗವನ್ನು ಕಳವು ಮಾಡಿದ ಎಂಬ ಆಪಾದನೆಗೆ ಆತ ಗುರಿಯಾಗಬೇಕಾಯಿತು. ತನ್ನ ಮೇಲೆ ಹೊರಿಸಿದ ಈ ಆರೋಪವನ್ನು ಫಿಡಿಯಾಸ್ ಅಲ್ಲಗಳೆದ. ಆದರೂ ಆತನಿಗೆ ಶಿಕ್ಷೆಯಾಯಿತು. ಆತ ತನ್ನ ಜೀವನದ ಕೊನೆಯ ದಿನಗಳನ್ನು ಸೆರೆಮನೆಯಲ್ಲಿ ಕಳೆಯಬೇಕಾಯಿತು. ಅಲ್ಲಿಯೇ ಕೊನೆಯುಸಿರೆಳೆದ. ಗ್ರೀಸ್ ದೇಶದ ಪ್ರತಿಭಾನ್ವಿತ ಶಿಲ್ಪಿಯೊಬ್ಬನ ಅಂತ್ಯ ಹೀಗೆ ದುಃಖಮಯ ಸನ್ನಿವೇಶದಲ್ಲಿ ನಡೆದುಹೋಯಿತು.

ಅವನು ರಚಿಸಿದ ಬೃಹತ್ ವಿಗ್ರಹಗಳಲ್ಲಿ ಕಂಡುಬರುವ ಭವ್ಯವೂ ಗಂಭೀರವೂ ಆದ ನಿಲುವು, ಶಾಂತ ಮುಖಮುದ್ರೆ, ಫಿಡಿಯಾಸನ ಕಲಾಶೈಲಿಯ ವಿಶಿಷ್ಟ ಗುಣಗಳಾಗಿವೆ. ಫಿಡಿಯಾಸನ ಮರಣಾನಂತರ ಶಿಷ್ಯರು ತಮ್ಮ ಗುರುವಿನ ಕಲಾಪ್ರಕಾರವನ್ನು ಮುಂದುವರಿಸಿದರು.

## ಫಿರ್ದೂಸಿ

"ಸುಗಂಧ ದ್ರವ್ಯ ಮಾರುವವನ ಬಳಿ ಓಡಾಡುವವರ ಬಟ್ಟೆಗೆ ಸುವಾಸನೆ ಬರಬಹುದು. ಇದ್ದಿಲು ಮಾಡುವವನ ಸಮೀಪಕ್ಕೆ ಹೋದರೆ ಬಟ್ಟೆ ಕಪ್ಪಾಗದೆ ಇನ್ನೇನಾದೀತು ?''

—ಇದು ಖ್ಯಾತ ಪಾರಸಿ ಕವಿ ಫಿರ್ದೂಸಿಯ ನುಡಿ.

ವೀರಶ್ರೇಷ್ಠರಾದ ಸೊಹ್ರಾಬ್ ಮತ್ತು ರುಸ್ತುಂ ಅವರ ಕಥೆಯನ್ನು ಬರೆದವನು ಫಿರ್ದೂಸಿ. ಆತ ಬರೆದಿರುವ 'ಶಾಹನಾಮ'ದಲ್ಲಿರುವ ಅನೇಕ ಕಥೆಗಳಲ್ಲಿ ಇದೂ ಒಂದು.

ತಂದೆಯ ಮುಖವನ್ನೇ ಕಾಣದೆ ಆತನ ಪರಾಕ್ರಮದ ಬಗೆಗೆ ಹೊಗಳಿಕೆಯ ಮಾತುಗಳನ್ನಷ್ಟೇ ಕೇಳಿದ್ದ ಸೊಹ್ರಾಬ್ ತಾಯಿಯನ್ನು ಹಿಂದೆ ಬಿಟ್ಟು, ತಂದೆ ರುಸ್ತುಮನನ್ನು ಕಂಡುಬರಬೇಕೆಂಬ ಹಂಬಲದಿಂದ ಹೊರಟ. ಯುದ್ಧಭೂಮಿಯಲ್ಲಿ ತಂದೆ ಮಗನ ಭೇಟಿ. ಪರಸ್ಪರ ಸಂಬಂಧ ಏನೆಂಬುದು ಇಬ್ಬರಿಗೂ ತಿಳಿಯದು. ಆದರೂ ತನ್ನೆದುರಿಗೆ



'ಸೊಹ್ರಾಬ್–ರುಸ್ತುಂ' ಕೃತಿಯಲ್ಲಿ [illegible]

ನಿಂತ ಯುವಕನನ್ನು ನೋಡಿ ರುಸ್ತುಮನ ಮನ ಮಿಡಿಯುತ್ತದೆ. ತನ್ನೊಡನೆ ಯುದ್ಧ ಮಾಡದೆ ಹಿಂದಕ್ಕೆ ಹೋಗುವಂತೆ ಆ ಸ್ಫುರದ್ರೂಪಿ ಹುಡುಗನಿಗೆ ಹೇಳುತ್ತಾನೆ. ಅವನು ಒಪ್ಪುವುದಿಲ್ಲ. ಕೊನೆಗೆ ಇಬ್ಬರಿಗೂ ಭೀಕರ ಕಾಳಗವಾಗುತ್ತದೆ. ತನ್ನನ್ನಿದಿರಿಸಿದ ಹುಡುಗನ ಸಾಮರ್ಥ್ಯವನ್ನು ಕಂಡು ಕೋಪಗೊಂಡು ರುಸ್ತುಂ "ರುಸ್ತುಂ" ಎಂದು ಅಬ್ಬರಿಸುತ್ತ ಅವನ ಮೇಲೇರಿ ಹೋಗುತ್ತಾನೆ. ತಂದೆಯ ಹೆಸರನ್ನು ಕೇಳಿದ ಸೊಹ್ರಾಬನ ಕೈಯಿಂದ ಶಸ್ತ್ರ ಕೆಳಕ್ಕೆ ಜಾರುತ್ತದೆ. ರುಸ್ತುಂ ಹೊಡೆದ ಪೆಟ್ಟಿನಿಂದ ಅವನು ನೆಲಕ್ಕುರುಳುತ್ತಾನೆ. ಸೊಹ್ರಾಬ್ ರುಸ್ತುಮನನ್ನು ಹತ್ತಿರಕ್ಕೆ ಕರೆದು ತಾನು ಅವನ ಮಗನೆಂದು ಹೇಳಿಕೊಳ್ಳುತ್ತಾನೆ. ತನಗೆ ಹುಟ್ಟಿದ್ದು ಗಂಡುಮಗುವೆಂದು ತಿಳಿದರೆ ಆ ಮಗು ವಯಸ್ಸಿಗೆ ಬಂದ ಮೇಲೆ ರುಸ್ತುಂ ಅವನನ್ನೂ ಯುದ್ಧರಂಗಕ್ಕೆ ಕರೆದೊಯ್ಯುವನೆಂಬ ಹೆದರಿಕೆಯಿಂದ ತಾನು ಹೆತ್ತದ್ದು ಹೆಣ್ಣುಮಗು ಎಂದು ನುಡಿದು ಸತ್ಯವನ್ನು ಅವನ ಹೆಂಡತಿ ಮರೆಮಾಚಿದ್ದಳು. ಆದ್ದರಿಂದ, ಸೊಹ್ರಾಬ್ ಹೇಳಿದ ಮಾತನ್ನು ರುಸ್ತುಂ ಮೊದಮೊದಲು ನಂಬುವುದಿಲ್ಲ. ಆಗ ಸೊಹ್ರಾಬ್ ತಾಯಿ ತನ್ನ ತೋಳಿಗೆ ಕಟ್ಟಿದ್ದ ಅಮೂಲ್ಯ ಹರಳನ್ನು ತೋರಿಸುತ್ತಾನೆ. ರುಸ್ತುಂ ಅದನ್ನು ತನ್ನ ಪತ್ನಿಗೆ ಕೊಟ್ಟಿದ್ದ. ಅದರ ಗುರುತು ಅವನಿಗೆ ಸಿಗುತ್ತದೆ. ಆಗ ಅವನು ತನ್ನ ಮಗನನ್ನು ಕೈಯಾರೆ ಕೊಂದುದಕ್ಕಾಗಿ ಪರಿತಪಿಸುತ್ತಾನೆ.

ಈ ಕಥೆ 'ಸೊಹ್ರಾಬ್ ಮತ್ತು ರುಸ್ತುಂ' ಕೃತಿಯ ವಸ್ತು.

'ಶಾಹನಾಮ' ಪರ್ಷಿಯದ ಮಹಾಕಾವ್ಯ. ಇದರಲ್ಲಿ ಸುಮಾರು 60,000 ದ್ವಿಪದಿಗಳಿವೆ. ಇದರಲ್ಲಿರುವುದು ಪರ್ಷಿಯದ ಇತಿಹಾಸ. 'ಶಾಹನಾಮ' ಬರೆಯಲು ಹೊರಟ ದಖೀಖೀ ಎಂಬ ಖ್ಯಾತ ಕವಿ 1,000 ದ್ವಿಪದಿಗಳನ್ನಷ್ಟೇ ಬರೆದಿದ್ದಾಗ ಕೊಲೆಯಾದ. ಅದನ್ನು ಪೂರ್ತಿಗೊಳಿಸುವ ಹೊಣೆ ಫಿರ್ದೂಸಿಯದಾಯಿತು. ಅವನು ಮೂವತ್ತು ವರ್ಷಗಳ ಕಾಲ ಶ್ರಮವಹಿಸಿ ಬರೆದು, 1010ರಲ್ಲಿ ಅದನ್ನು ಪೂರೈಸಿ, ಸುಲ್ತಾನ ಮಹಮದನಿಗೆ ಸಮರ್ಪಿಸಿದ.

'ಯೂಸುಫ್ ಮತ್ತು ಜುಲೇಖ' ಫಿರ್ದೂಸಿಯ ಇನ್ನೊಂದು ಕೃತಿ.

ತುಸ್ ನಗರದ ಸಮೀಪದ ಒಂದು ಹಳ್ಳಿ ಫಿರ್ದೂಸಿಯ ಜನ್ಮಸ್ಥಳ. ಅವನು ಜನಿಸಿದ್ದು ಸುಮಾರು 935ರಲ್ಲಿ. ತಂದೆ ಜಮೀನುದಾರ. ಫಿರ್ದೂಸಿಯ ಹೆಸರು ಮೌಲಾನಾ ಫಕ್ರುದ್ದೀನ್ ಅಹಮದ್ ಮೌಲಾನಾ ಫಿರಕುಲ್. ಮನೆತನದ ಜಮೀನಿನಿಂದ ಈತನಿಗೆ ಸಾಕಷ್ಟು ವರಮಾನ ಸಿಗುತ್ತಿತ್ತು. ಅವನಿಗೆ ಒಬ್ಬಳೇ ಮಗಳು. ಮಗಳ ಮದುವೆಯ ವರದಕ್ಷಿಣೆಗೆ ಹಣ ಕೂಡಿಸಲು ಆತ ಬರೆಹಕ್ಕೆ ಕೈಹಾಕಿದ. ಸುಲ್ತಾನ ಅಹಮದನ ಆಸ್ಥಾನ ಕವಿಯಾಗಿ 'ಶಾಹನಾಮ'ದ ರಚನೆಗೆ ತೊಡಗಿದ. ಇವನ ಕವಿತಾ ಕೌಶಲಕ್ಕೆ ಮೆಚ್ಚಿ ಸುಲ್ತಾನ ಕೊಟ್ಟ ಬಿರುದು 'ಫಿರ್ದೂಸಿ'. 'ಫಿರ್ದೂಸಿ' ಎಂದರೆ ಸ್ವರ್ಗದ ಕವಿ ಎಂದರ್ಥ. 'ಶಾಹನಾಮ' ಗ್ರಂಥಕ್ಕೆ ಫಿರ್ದೂಸಿ ನಿರೀಕ್ಷಿಸಿದ್ದಷ್ಟು ಬಹುಮಾನ ಸುಲ್ತಾನನಿಂದ ಬರಲಿಲ್ಲ. ಇತರ ಆಸ್ಥಾನ ಕವಿಗಳ ಮಾತಿಗೆ ಕಿವಿಗೊಟ್ಟು ಚಿನ್ನದ ನಾಣ್ಯಗಳ ಬದಲು ಸುಲ್ತಾನ ಬೆಳ್ಳಿನಾಣ್ಯಗಳನ್ನಿತ್ತ. ಫಿರ್ದೂಸಿ ನಿರಾಶನಾಗಿ ಆ ಹಣವನ್ನು ಜನರಿಗೆ ಹಂಚಿಬಿಟ್ಟ. ಈ ಸಂಗತಿ ತಿಳಿದರೆ ಸುಲ್ತಾನನಿಗೆ ಕೋಪ ಬರುವುದೆಂದು ಅಂಜಿ, ತುಸ್‌ನಗರದಿಂದ ಹೆರಾಟ್ ನಗರಕ್ಕೆ ಫಿರ್ದೂಸಿ ಓಡಿಹೋದ. ಅಲ್ಲಿ ಆರು ತಿಂಗಳ ಕಾಲ ಅಜ್ಞಾತವಾಸದಲ್ಲಿದ್ದ.

ಹೆರಾಟ್‌ನಿಂದ ಫಿರ್ದೂಸಿ ಮಜಾನ್‌ದೆರಾನ್‌ಗೆ ಹೋದ. ಇಲ್ಲಿ ಶಹರಿಯಾರನ ಆಶ್ರಯ ಪಡೆದ. ಸುಲ್ತಾನ ಮಹಮದನ ಬಗೆಗೆ ಫಿರ್ದೂಸಿ 100 ವಿಡಂಬನ ಪದ್ಯಗಳನ್ನು ಬರೆದು 'ಶಾಹನಾಮ'ದ ಆರಂಭದಲ್ಲಿ ಸೇರಿಸಿದ. 'ಶಾಹನಾಮ'ವನ್ನು ಶಹರಿಯಾರ್‌ಗೆ ಸಮರ್ಪಿಸಲು ಫಿರ್ದೂಸಿ ಇಚ್ಛಿಸಿದರೂ ಶಹರಿಯಾರ್ ಒಪ್ಪಲಿಲ್ಲ. ಫಿರ್ದೂಸಿ ಬರೆದಿದ್ದ 100 ಕವಿತೆಗಳನ್ನು ಕವಿತೆಯೊಂದಕ್ಕೆ 1000 ನಾಣ್ಯಗಳಂತೆ ಕೊಂಡುಕೊಂಡು 'ಶಾಹನಾಮ'ದಿಂದ ಅವನ್ನು ತೆಗೆದುಹಾಕಿಬಿಟ್ಟ. ಅನಂತರ ಫಿರ್ದೂಸಿ ತುಸ್‌ಗೆ ಬಂದ. ತನ್ನ ಅಕೃತ್ಯಕ್ಕೆ ಮರುಗಿದ ಸುಲ್ತಾನ ಮಹಮದ್, ಫಿರ್ದೂಸಿಗೆ ಗೌರವ ತೋರಬಯಸಿ 60,000 ನಾಣ್ಯಗಳಷ್ಟು ಬೆಲೆಬಾಳುವ ನೀಲಿಯನ್ನು ಒಂಟೆಗಳ ಮೇಲೆ ಹೇರಿ ತುಸ್‌ಗೆ ಕಳುಹಿಸಿದ. ಆದರೆ ಕಾಲ ಮಿಂಚಿತ್ತು: ಊರಿನ ಒಂದು ಬಾಗಿಲಿನಿಂದ ಒಂಟೆಗಳು ಒಳಹೊಕ್ಕಾಗ ಇನ್ನೊಂದು ಬಾಗಿಲಿನಿಂದ ಫಿರ್ದೂಸಿಯ ಶವದ ಮೆರವಣಿಗೆ ಊರಿನಿಂದಾಚೆಗೆ ಹೋಗುತ್ತಿತ್ತು. ತಂದೆ ಗತಿಸಿದ ಮೇಲೆ ಬಂದ ಬಹುಮಾನವನ್ನು ತೆಗೆದುಕೊಳ್ಳಲು ಅವನ ಮಗಳು ನಿರಾಕರಿಸಿದಳು.

ಫಿರ್ದೂಸಿ ಮೃತನಾದದ್ದು 1020ರಲ್ಲಿ. ಈತ ಪರ್ಷಿಯದ ಕವಿರತ್ನ, ಜನಪ್ರಿಯ ಕವಿ. ಶುದ್ಧ ಪರ್ಷಿಯನ್ ಭಾಷೆಯಲ್ಲಿ ಬಹುಮಟ್ಟಿಗೆ ಬರೆದಿರುವ 'ಶಾಹನಾಮ' ಸುಲಭವಾಗಿ ಅರ್ಥವಾಗದಿದ್ದರೂ ಅದನ್ನು ಜನ ಓದುತ್ತಾರೆ. ಓದಿಸಿ ಕೇಳುತ್ತಾರೆ. ಫಿರ್ದೂಸಿ ಜನಿಸಿದಾಗ ಅವನ ತಂದೆಗೆ, ಮಗ ಛಾವಣಿ ಮನೆಯ ಮೇಲ್ಗಡೆ ನಿಂತುಕೊಂಡು ಕವಿತೆಯನ್ನು ಗಟ್ಟಿಯಾಗಿ ಪಠಿಸಿದಂತೆಯೂ ಅದು ಮಾರ್ದನಿಗೊಂಡಂತೆಯೂ ಕನಸು ಬಿದ್ದಿತ್ತು. ಕನಸು ನಿಜವಾಯಿತು. ಫಿರ್ದೂಸಿ ಅಮರಕವಿಯಾದ.

## ಫೀಲ್ಡಿಂಗ್

1748ರಲ್ಲಿ ಹೆನ್ರಿ ಫೀಲ್ಡಿಂಗ್ ಬರೆದ 'ಟಾಮ್ ಜೋನ್ಸ್' ಪ್ರಕಟವಾಗಿ ಖ್ಯಾತಿ ಪಡೆದಾಗ ಜನ ಈತನನ್ನು 'ಪ್ರಥಮ ಇಂಗ್ಲಿಷ್ ಕಾದಂಬರಿಕಾರ'

ಎಂದು ಕರೆದರು. ವಾಸ್ತವವಾಗಿ 'ಟಾಮ್ ಜೋನ್ಸ್' ಮೊಟ್ಟ ಮೊದಲ ಇಂಗ್ಲಿಷ್ ಕಾದಂಬರಿಯೂ ಅಲ್ಲ; ಫೀಲ್ಡಿಂಗನ ಮೊದಲ ಕಾದಂಬರಿಯೂ ಅಲ್ಲ. ಆದರೆ ಸ್ಪಷ್ಟವಾಗಿ ರೂಪಿಸಿದ ಕಥಾವಸ್ತು ಮತ್ತು ಪಾತ್ರ ನಿರೂಪಣೆಗಳಿಂದಾಗಿ ಇದು ಕಥಾರಚನೆಯಲ್ಲಿ ನೂತನ ಮಾರ್ಗವನ್ನು ಅವಲಂಬಿಸಿತ್ತು. ಅದರಿಂದಲೇ ಇದು ಆ ಹೆಗ್ಗಳಿಕೆಗೆ ಪಾತ್ರವಾದದ್ದು. 'ಟಾಮ್ ಜೋನ್ಸ್' ಕೃತಿಯನ್ನು ಇಂಗ್ಲಿಷಿನ ಅತ್ಯಂತ ಶ್ರೇಷ್ಠ ಕಾದಂಬರಿಗಳಲ್ಲಿ ಒಂದೆಂದು ಈಗಲೂ ಪರಿಗಣಿಸುತ್ತಾರೆ.

ಲಂಡನಿನಲ್ಲಿ ನ್ಯಾಯಾಧೀಶನಾಗಿದ್ದ ಹೆನ್ರಿ ಫೀಲ್ಡಿಂಗ್ ಕಾದಂಬರಿಗಳನ್ನು ಬರೆಯಲು ಆರಂಭಿಸಿದ್ದು ಕೂಡ ಅನಿರೀಕ್ಷಿತವಾಗಿಯೇ. 1740ರಲ್ಲಿ ಸ್ಯಾಮುಎಲ್ ರಿಚರ್ಡ್‌ಸನ್ ಎಂಬ ಮುದ್ರಣಕಾರ ಬರೆದು ಪ್ರಕಟಿಸಿದ 'ಪಮೇಲ' ಎಂಬ ಗ್ರಂಥ ಇಂಗ್ಲೆಂಡಿನಲ್ಲಿ, ವಿಶೇಷವಾಗಿ ಆಂಗ್ಲ ಮಹಿಳೆಯರಲ್ಲಿ, ಜನಪ್ರಿಯವಾಗಿತ್ತು. ಈ ಕಥೆಯಿಂದ ಸ್ಫೂರ್ತಿ ಪಡೆದು ಇದನ್ನು ಅನುಕರಿಸಿ ಬರೆಯಲಾರಂಭಿಸಿದವರು ಅನೇಕ ಮಂದಿ. 'ಪಮೇಲ' ಭಾವಾತಿರೇಕದಿಂದ ಕೂಡಿದ ಪ್ರಣಯ ಕಥೆ. ಈ ಅಸಹಜ ಸಾಂಪ್ರದಾಯಿಕ ಶೈಲಿಯನ್ನು ಪರಿಹಾಸ್ಯಕ್ಕೆ ಗುರಿಮಾಡುವ ಉದ್ದೇಶದಿಂದ ಫೀಲ್ಡಿಂಗ್ 'ಜೋಸೆಫ್ ಆಂಡ್ರೂಸ್' ಎಂಬ ಕಥೆಯನ್ನು ಬರೆಯಲಾರಂಭಿಸಿದ. ಆದರೆ ಬರೆಯುತ್ತ ಬರೆಯುತ್ತ ಪಾತ್ರ ಚಿತ್ರಣದಲ್ಲಿ ಫೀಲ್ಡಿಂಗ್ ಎಷ್ಟು ಮಗ್ನನಾದನೆಂದರೆ, 'ಪಮೇಲ' ವನ್ನು ಪರಿಹಾಸ್ಯಕ್ಕೆ ಗುರಿಮಾಡಬೇಕೆಂಬ ತನ್ನ ಮೂಲ ಉದ್ದೇಶವನ್ನೇ ಮರೆತು ಬಿಟ್ಟ. 1742ರಲ್ಲಿ 'ಜೋಸೆಫ್ ಆಂಡ್ರೂಸ್' ಪ್ರಕಟವಾದಾಗ ಅದು ಶ್ರೇಷ್ಠ, ಸ್ವತಂತ್ರ ಕಾದಂಬರಿಯ ರೂಪ ಪಡೆದಿತ್ತು. ಇದರ ಯಶಸ್ಸಿನಿಂದ ಪ್ರೋತ್ಸಾಹಿತನಾಗಿ ಫೀಲ್ಡಿಂಗ್ ತನ್ನ ಮಹಾಕೃತಿ 'ಟಾಮ್ ಜೋನ್ಸ್' ಬರೆದ.

ಟಾಮ್ ಜೋನ್ಸ್ ಒಬ್ಬ ಅನಾಥ ಹುಡುಗ. ಅವನು ಎದುರಿಸಿದ ಕಷ್ಟಪರಂಪರೆ ಅನೇಕ. ಆದರೆ ಕೊನೆಗೆ ಅವನು ಶ್ರೀಮಂತನಾಗಿ, ತನ್ನ ಪ್ರೇಯಸಿಯನ್ನು ಮದುವೆಯಾಗಿ, ಎಲ್ಲವೂ ಸುಖಾಂತವಾಗುತ್ತದೆ. ಇದರ ಪಾತ್ರಗಳು ಸಾಮಾನ್ಯಜೀವನದಲ್ಲಿ ಕಂಡುಬರುವಂಥವು. ಕಥಾನಾಯಕ ಧೀರನಾಗಲೀ ಶೂರನಾಗಲೀ ಅಲ್ಲ. ಆಗಾಗ ತೊಂದರೆಗೆ ಸಿಕ್ಕಿಕೊಳ್ಳುವವನು. ಖಳನೂ ಹಾಗೆಯೇ. ಈತನಲ್ಲಿ ದುಷ್ಟತನಕ್ಕಿಂತ ಹಾಸ್ಯಪ್ರವೃತ್ತಿಯೇ ಹೆಚ್ಚು. ಅನಿರೀಕ್ಷಿತ, ಅದ್ಭುತ ಘಟನೆಗಳೂ ಇಲ್ಲ. ಇದರಲ್ಲಿ 18ನೆಯ ಶತಮಾನದ ಜನಜೀವನದ ಸುಂದರ ಚಿತ್ರಣವಿದೆ. ಅನಂತರ ಬಂದ ಕಾದಂಬರಿಕಾರರಿಗೆ ಈ ಕೃತಿ ಮಾದರಿಯಾಯಿತು.

ಫೀಲ್ಡಿಂಗನ ಮೂರನೆಯ ಹಾಗೂ ಕೊನೆಯ ಕಾದಂಬರಿ 'ಅಮೇಲಿಯ'. 'ಟಾಮ್ ಜೋನ್ಸ್' ನಲ್ಲಿರುವಂಥ ಹಾಸ್ಯಪ್ರಸಂಗಗಳು ಇದರಲ್ಲಿ ಕಡಮೆ. ಇಲ್ಲಿ ಬರುವ ಸಮಸ್ಯೆಗಳು ಗಂಭೀರವಾದುವು, ನಿಜಜೀವನಕ್ಕೆ ಇನ್ನೂ ಸಮೀಪವಾಗಿರುವಂಥವು. 'ಟಾಮ್ ಜೋನ್ಸ್' ಕಾದಂಬರಿಯನ್ನು ಅಷ್ಟಾಗಿ ಮೆಚ್ಚಿಕೊಳ್ಳದ ಸುಪ್ರಸಿದ್ಧ ಸಾಹಿತಿ ಸ್ಯಾಮುಎಲ್ ಜಾನ್ಸನ್ ಮುಂತಾದವರು ಅದನ್ನು ಮುಕ್ತಕಂಠದಿಂದ ಹೊಗಳಿದ್ದಾರೆ.

ಹೆನ್ರಿ ಫೀಲ್ಡಿಂಗ್ ಕಾದಂಬರಿಕಾರನಾಗಿ ಪ್ರಖ್ಯಾತನಾಗಿದ್ದರೂ ಅವನು ಹೆಚ್ಚಾಗಿ ಬರೆದಿರುವುದು ನಾಟಕಗಳನ್ನು. ಇಂಗ್ಲೆಂಡಿನ ಸಾಮರ್‌ಸೆಟ್‌ಶೈರ್ ಪ್ರಾಂತದ ಶ್ರೀಮಂತ ಮನೆತನದಲ್ಲಿ ಹುಟ್ಟಿದ ಫೀಲ್ಡಿಂಗ್ (ಜನನ: 1707 ಏಪ್ರಿಲ್ 22) 21 ವಯಸ್ಸಿನವನಾಗುವುದಕ್ಕೆ ಮೊದಲೇ ನಾಟಕಗಳನ್ನು ಬರೆಯಲು ಆರಂಭಿಸಿದ. ಇಂಗ್ಲೆಂಡ್ ಮತ್ತು ಹಾಲೆಂಡಿನ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವಿದ್ಯಾಭ್ಯಾಸ ಮಾಡಿದ್ದರೂ ನಾಟಕಗಳನ್ನು ಬರೆಯುವುದರಲ್ಲೂ ನಿರ್ದೇಶಿಸುವುದರಲ್ಲೂ ಇವನಿಗೆ ಹೆಚ್ಚು ಆಸಕ್ತಿ. 1727ರಿಂದ 37ರವರೆಗೆ ಫೀಲ್ಡಿಂಗ್ ಸುಮಾರು 25 ನಾಟಕಗಳನ್ನು ಬರೆದ, ಆಡಿಸಿದ. ಇವುಗಳಲ್ಲಿ ಹೆಚ್ಚಿನವು ಕಾಮಿಡಿಗಳು, ಹರ್ಷನಾಟಕಗಳು, ನಗೆನಾಟಕಗಳು. ಸರಕಾರದ ನೀತಿ ರೀತಿಗಳನ್ನೂ ಮಂತ್ರಿಗಳ ಮೋಸಗಳನ್ನೂ ಟೀಕಿಸುವ ಇವನ ನಾಟಕಗಳು ಬ್ರಿಟನಿನ ಪ್ರಧಾನ ಮಂತ್ರಿಯ ವಕ್ರದೃಷ್ಟಿಗೆ ಒಳಗಾದುವು. ಫೀಲ್ಡಿಂಗನನ್ನು ಹಿಡಿತದಲ್ಲಿ ಇಟ್ಟುಕೊಳ್ಳುವ ಉದ್ದೇಶದಿಂದ, ವಿಶೇಷ ಅನುಮತಿ ಕಾಯಿದೆಯನ್ನು 1737ರಲ್ಲಿ ಜಾರಿಗೆ ತಂದ. ಇದರಿಂದಾಗಿ ನಾಟಕ ಪ್ರದರ್ಶನಕ್ಕೆ ಅರಮನೆ ಆಡಳಿತಾಧಿಕಾರಿಯ ಅನುಮತಿ ಪಡೆಯಬೇಕಾಗಿ ಬಂತು. ಅಂಥ ಅನುಮತಿ ಪಡೆಯಲು ಫೀಲ್ಡಿಂಗ್ ಅಸಮರ್ಥನಾದ. ತಾನು ನಡೆಸುತ್ತಿದ್ದ ನಾಟಕ ಸಂಸ್ಥೆಯನ್ನು ಆತ ಮುಚ್ಚಬೇಕಾಯಿತು.



ಫೀಲ್ಡಿಂಗ್ : ಪ್ರಥಮ ಇಂಗ್ಲಿಷ್ ಕಾದಂಬರಿಕಾರ

ಫೀಲ್ಡಿಂಗ್‌ಗೆ ಹೊಸ ಉದ್ಯೋಗ ಅವಶ್ಯವಾಯಿತು. ತನ್ನ 33ನೆಯ ವಯಸ್ಸಿನಲ್ಲಿ ವಕೀಲಿವೃತ್ತಿಯನ್ನು ಆರಂಭಿಸಿದ. ಗೆಳೆಯನೊಬ್ಬನ ನೆರವಿನಿಂದ ಎಂಟು ವರ್ಷಗಳ ಬಳಿಕ ವೆಸ್ಟ್‌ಮಿನ್‌ಸ್ಟರ್‌ನ ಮ್ಯಾಜಿಸ್ಟ್ರೇಟ್ ಆದ. ವೇತನದ ಮೇಲೆ ನಿಯುಕ್ತನಾದ ಲಂಡನಿನ ಮ್ಯಾಜಿಸ್ಟ್ರೇಟರಲ್ಲಿ ಈತನೇ ಮೊದಲಿಗ. ಲಂಡನಿನಲ್ಲಿ ಕಳ್ಳತನವನ್ನು ಕಡಮೆಮಾಡಲು ಇವನು ರಚಿಸಿದ 'ಕಳ್ಳರನ್ನು ಹಿಡಿಯುವ ತಂಡ' ವೇ ಇಂದಿನ ಬ್ರಿಟಿಷ್ ಪೋಲೀಸು ಪಡೆಯ ಮೂಲರೂಪ ಎನ್ನಬಹುದು. ಪತ್ರಿಕೋದ್ಯಮದಲ್ಲೂ ಈತನಿಗೆ ಆಸಕ್ತಿ ಇತ್ತು. 'ಛಾಂಪಿಯನ್' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದ.

ಕೆಡುತ್ತಿದ್ದ ತನ್ನ ಆರೋಗ್ಯವನ್ನು ಸುಧಾರಿಸಿಕೊಳ್ಳಲು ಫೀಲ್ಡಿಂಗ್ 1754ರಲ್ಲಿ ಪೋರ್ಚುಗಲಿನ ಲಿಸ್ಬನಿಗೆ ಹೊರಟ. ಅದೇ ವರ್ಷ ಅಕ್ಟೋಬರ್ 8ರಂದು ನಿಧನನಾದ. ಆ ಪ್ರವಾಸವನ್ನು ಕುರಿತು ಬರೆದಿದ್ದ 'ಲಿಸ್ಬನ್ ಪ್ರವಾಸ' ಎಂಬ ಗ್ರಂಥ ಅವನ ಮರಣಾನಂತರ ಪ್ರಕಟವಾಯಿತು.

## ಫ್ರೆಂಚ್ ಕಲೆ, ಸಾಹಿತ್ಯ

ವಿಶ್ವದ ಕಲೆ. ಸಾಹಿತ್ಯಕ್ಕೆ ಅತ್ಯುತ್ತಮ ಕೊಡುಗೆಗಳನ್ನಿತ್ತಿರುವ ಕೆಲವೇ ರಾಷ್ಟ್ರಗಳಲ್ಲಿ ಫ್ರಾನ್ಸ್ ಒಂದು. ಫ್ರಾನ್ಸ್ ಹೊಸ ರೀತಿಯ ಕಲೆ. ಸಾಹಿತ್ಯಗಳನ್ನು ಸೃಷ್ಟಿಸುತ್ತ ಇಡೀ ಯೂರೋಪ್ ಹಾಗೂ ವಿಶ್ವದ ಮೇಲೆ ಭಾರಿ ಪ್ರಭಾವ ಬೀರುತ್ತ ಬಂದಿದೆ.

ಫ್ರಾನ್ಸಿನಲ್ಲಿ ಈಗ ಸೇರಿರುವ ಕೆಲವು ಪ್ರದೇಶಗಳಲ್ಲಿರುವ ಗವಿಗಳ ಗೋಡೆಗಳ ಮೇಲೆ ಸುಮಾರು 12.000 ವರ್ಷಗಳ ಹಿಂದಿನ ಚಿತ್ರಗಳಿವೆ. ಆದರೆ ಕ್ರಿ.ಶ. 1000ದವರೆಗೆ ಫ್ರಾನ್ಸಿಗೆ ತನ್ನದೇ ಆದ ಕಲಾಪರಂಪರೆ ಇರಲಿಲ್ಲ. 11ನೆಯ ಶತಮಾನದಿಂದ 12ನೆಯ ಶತಮಾನದವರೆಗೆ ಯೂರೋಪಿನ ಇತರ ಪ್ರದೇಶಗಳಲ್ಲಿ ನಡೆದಂತೆ ಫ್ರಾನ್ಸಿನಲ್ಲೂ ಇಗರ್ಜಿಗಳ ನಿರ್ಮಾಣವಾಯಿತು. ರೋಮನ್ ಮಾದರಿಯ ಭಾರಿ ಪ್ರಮಾಣದ ಸ್ತಂಭಗಳಿರುವ ಇಗರ್ಜಿಗಳು ಈ ಕಾಲದವು. ಚಿತ್ರಕಾರರು ಹಾಗೂ ಇತರ ಕಲಾವಿದರು ಪ್ರಾರ್ಥನಾ ಪುಸ್ತಕಗಳಿಗೆ ಚಿತ್ರ ಬರೆಯುವುದು. ಅಲಂಕರಿಸುವುದು ಮುಂತಾದ ಕೆಲಸಗಳಲ್ಲಿ ತೊಡಗಿದ್ದರು. ಈ ಕಾಲದ ಕಲಾಭಿವ್ಯಕ್ತಿಯ ಮೇಲೆ ಧಾರ್ಮಿಕ ಪ್ರಭಾವ ಬಹಳವಾಗಿತ್ತು.

12ನೆಯ ಶತಮಾನದ ಕೊನೆಕೊನೆಯಲ್ಲಿ ಫ್ರಾನ್ಸಿನ ವಾಸ್ತುಶಿಲ್ಪಕಲೆಯಲ್ಲಿ ಹೊಸ ಪರಂಪರೆಯೊಂದು ಕಂಡುಬಂತು ; ಮುಂದೆ ಅದು ತುಂಬ ಪ್ರಭಾವಶಾಲಿಯಾಯಿತು. ಇದೇ ಗಾತಿಕ್ ಕಲೆ. ತೆಳ್ಳನೆಯ ಗೋಡೆ. ಉದ್ದನೆಯ ಚೂಪಾದ ಶಿಖರ – ಇವರ ಲಕ್ಷಣ. ಗಾತಿಕ್ ಕಲೆಯ ಪ್ರಭಾವ ಚಿತ್ರಕಲೆಯ ಮೇಲೂ ಆಯಿತು. (ಗಾತ್ ಜನರು ಅನಾಗರಿಕರು. ಮುಂದಿನ ಶತಮಾನಗಳ ಜನರು ಹಿಂದಿನ ಕಲಾ ಶೈಲಿ ಇಷ್ಟವಾಗದೆ. ಅದನ್ನು ಗಾತಿಕ್ ಎಂದು ಕರೆದರು.) 14–15ನೆಯ ಶತಮಾನದಲ್ಲಿ ನಡೆದ ಫ್ರಾನ್ಸಿನ ನೂರು ವರ್ಷಗಳ ಯುದ್ಧ. ಅನಂತರ ಬಂದ ಕ್ಷಾಮ ಡಾಮರಗಳಿಂದಾಗಿ ದೊಡ್ಡ ಪ್ರಮಾಣದ ವಾಸ್ತುಶಿಲ್ಪ ರಚನೆ ಕಡಿಮೆಯಾಯಿತು. ಮನೆಯಲ್ಲೇ ಕುಳಿತು ಆಲಂಕಾರಿಕ ಶೈಲಿಯಲ್ಲಿ ಸುಂದರ ಕಲಾಕೃತಿಗಳನ್ನು ರಚಿಸುವ ಹವ್ಯಾಸ ಪ್ರಾರಂಭವಾಯಿತು. ಈ ಕಾಲದ ಕಲಾವಿದರಲ್ಲಿ ಗಮನಾರ್ಹವಾದವನು ಜಾನ್ ಫಾಕೇ.

15ನೆಯ ಶತಮಾನದಲ್ಲಿ ಐರೋಪ್ಯ ಜೀವನದಲ್ಲಿ ನವೋದಯ ಆರಂಭವಾದಾಗ, ಫ್ರಾನ್ಸಿನ ಕಲಾಚಟುವಟಿಕೆಯಲ್ಲಿ ಪುನಶ್ಚೇತನ ಉಂಟಾಯಿತು. ನವೋದಯ ಕಲೆಯ ಪ್ರಭಾವ ತೀವ್ರವಾಗುತ್ತಿದ್ದಂತೆ ಗಾತಿಕ್ ಕಲೆ ಕ್ಷೀಣಿಸತೊಡಗಿತು. ಫ್ರಾನ್ಸಿನ ದೊರೆಗಳಿಗಾಗಿ ಚಿತ್ರರಚಿಸಲು ಇಟಲಿಯಿಂದ ಕಲಾವಿದರು ಬಂದರು. ಇದರಿಂದ ಫ್ರಾನ್ಸಿನಲ್ಲಿ ಇಟಲಿಯ ಕಲೆಯ ಪ್ರಭಾವ ಮತ್ತಷ್ಟು ಹೆಚ್ಚಾಯಿತು. ಈ ಪ್ರಭಾವವನ್ನು ತನ್ನದಾಗಿಸಿಕೊಂಡು ಹೊಸ ಕಲಾಸೃಷ್ಟಿಯನ್ನು ಮಾಡಿದವನು ಫ್ರಾನ್ಸ್‌ವಾ ಮ್ಯಾನ್‌ಸಾರ್ಟ್(1598–1666). 16–17ನೆಯ ಶತಮಾನದ ಶಿಲ್ಪಿಗಳೂ ವಾಸ್ತುಶಿಲ್ಪಿಗಳೂ ಮೊದಲಿಗೆ ಇಟಲಿಯ ಕಲೆಯಿಂದ ಪ್ರಭಾವಿತರಾದರೂ ಕೊನೆಕೊನೆಗೆ ತಮ್ಮದೇ ಆದ ಶೈಲಿಗಳನ್ನು ಬೆಳೆಸಿಕೊಂಡರು. ಇಂಥವರಲ್ಲಿ ಪ್ರಮುಖರಾದ ಚಿತ್ರಕಾರರೆಂದರೆ ನಿಕೊಲಾಸ್ ಪೂಸಾನ್(1594-1665) ಮತ್ತು ಕ್ಲಾಡ್ ಲಾರೇನ್ (1600–82).

17ನೆಯ ಶತಮಾನದ ಅಂತ್ಯದಲ್ಲಿ ಫ್ರಾನ್ಸಿನ ದೊರೆ 14ನೆಯ ಲೂಯಿ (1638–1715) ಕಲೆಗೆ ತುಂಬ ಪ್ರೋತ್ಸಾಹ ಕೊಟ್ಟ. 15-16ನೆಯ ಲೂಯಿ ದೊರೆಗಳ ಕಾಲದಲ್ಲೂ ಕಲೆಗೆ ಪ್ರೋತ್ಸಾಹ ಮುಂದುವರಿಯಿತು. ಇದರಿಂದಾಗಿ ಫ್ರಾನ್ಸ್ ಕಲೆಯ 'ಕೇಂದ್ರ'ವಾಯಿತು.

1715ರಲ್ಲಿ ಫ್ರಾನ್ಸಿನ ಕಲೆಯಲ್ಲಿ ಹೊಸ ಸಂಪ್ರದಾಯವೊಂದು ಪ್ರಾರಂಭವಾಯಿತು. ದೊಡ್ಡ ಕಟ್ಟಡಗಳ ಬದಲು ಸಣ್ಣ ಸುಂದರವಾದ ಒಳರಚನೆ; ಚಿತ್ರ ಕಲೆಯಲ್ಲಿ ಗಂಭೀರ ಸನ್ನಿವೇಶದ ಬದಲಿಗೆ ಶೃಂಗಾರಪುಷ್ಟಿ –ಇವು ಈ ಸಂಪ್ರದಾಯದ ಲಕ್ಷಣ. ಇದನ್ನು ರೊಕೋಕೊ ಕಲೆ ಎಂದು ಕರೆಯುತ್ತಾರೆ. ಕಲ್ಲು ಚಿಪ್ಪುಗಳ–ರೊಕೊಕೊ–ಬಳಕೆ ಹೆಚ್ಚಾಗಿದ್ದುದರಿಂದ ಆ ಹೆಸರು ಬಂತು. ಜ್ಯಾನ್ ಅಂಟ್ವಾನ್ ವಾಟೊ (1684–1721) ಈ ಸಂಪ್ರದಾಯದ ಪ್ರಮುಖ ಕಲಾವಿದ.

ಹೀಗೆ ವಸ್ತುಗಳ ವಿವಿಧ ಅಂಶಗಳನ್ನು ಪ್ರತ್ಯೇಕಿಸಿ ಅವುಗಳನ್ನು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ರೂಪಿಸುವ ವಿಧಾನ ಹೊಸ ರೀತಿಯ ಅಮೂರ್ತಕಲೆಯಾಯಿತು.

ವಾಸ್ತುಶಿಲ್ಪದ ಮೇಲೂ ಹೊಸ ಚಿಂತನೆಯ ಪ್ರಭಾವಗಳು ಬಿದ್ದು ಅದರ ಸ್ವರೂಪ ಬದಲಾಗಿದೆ. ಕಾರ್ಬೂಸಿಯರ್ ಎಂದು ಕರೆಯಲ್ಪಡುತ್ತಿದ್ದ ಚಾರ್ಲ್ಸ್ ಎಡ್ವರ್ಡ್ ಜಾನರ್ಟ್ (1887–1965) ಈ ಶತಮಾನದ ಪ್ರಮುಖ ವಾಸ್ತುಶಿಲ್ಪಿ. ಭಾರತದ ಚಂಡೀಘಡ ನಗರವನ್ನು ರೂಪಿಸಿದವನು ಈತನೇ.

ಇತಿಹಾಸದ ದೃಷ್ಟಿಯಿಂದ ಫ್ರಾನ್ಸಿನ ಸಾಹಿತ್ಯ ಈಚೆಗೆ ಹುಟ್ಟಿದ್ದು ಎನ್ನಬಹುದು. ಲ್ಯಾಟಿನ್ ಮೂಲದ ಫ್ರೆಂಚ್ ಭಾಷೆ ಒಂದು ಸ್ವತಂತ್ರ ಭಾಷೆ ಎನ್ನುವಂತಾದದ್ದು 11ನೆಯ ಶತಮಾನದಲ್ಲಿ. ಆ ಕಾಲದ ಫ್ರೆಂಚ್ ಭಾಷೆಗೆ ಪ್ರಾಚೀನ ಫ್ರೆಂಚ್ ಎನ್ನುತ್ತಾರೆ.

19ನೆಯ ಶತಮಾನದಲ್ಲಿ. ಫ್ರಾನ್ಸಿನ ಮಹಾಕ್ರಾಂತಿಯ ಅನಂತರ. ಸಾಮಾನ್ಯವಾಗಿ ಅರಾಜಕತೆ ಅವ್ಯವಸ್ಥೆ ಕಂಡುಬಂದುವು. ಈ ಕಾಲದಲ್ಲಿ ಹುಟ್ಟಿಕೊಂಡ ಕಲೆಯ ಸಂಪ್ರದಾಯಗಳು ಅನೇಕ. ಇವರಲ್ಲಿ ಮುಖ್ಯವಾದದ್ದು ರೊಮ್ಯಾಂಟಿಸಿಸಂ. ಸಂಪ್ರದಾಯದ ಜಡಶೈಲಿಯ ವಿರುದ್ಧ ಹುಟ್ಟಿದ ರೊಮ್ಯಾಂಟಿಕ್ ಕಲಾ ಸಂಪ್ರದಾಯದಲ್ಲಿ ಯೂಜೀನ್ ಡಲಕ್ವಾ (1798–1863) ಮತ್ತು ಥಿಯೊಡೊರ್ ಜ್ಹೇರಿಕೋ (1791–1824) ಪ್ರಮುಖ ಕಲಾವಿದರು.

ರೊಮ್ಯಾಂಟಿಕ್ ಸಂಪ್ರದಾಯದ ಕಲಾವಿದರು ನೈಜತೆಗೆ ಹಾಗೂ ವಾಸ್ತವತೆಗೆ ದೂರವಾದ ಕಲಾರಚನೆಮಾಡುವವರೆಂಬ ಟೀಕೆಗೆ ಗುರಿಯಾದರು. ಈ ಟೀಕೆಗೆ ಪೂರಕವಾಗಿ ವಾಸ್ತವವಾದ ಹುಟ್ಟಿತು. ತಾವು ಕಂಡದ್ದನ್ನು ಕಂಡಹಾಗೆಯೇ ಚಿತ್ರಿಸಬೇಕೆಂದು ಹೇಳಿದ ಈ ಕಲಾವಿದರಲ್ಲಿ ಗುಸ್ಟಾವ್ ಕೂರ್ಬೆ (1819–1877) ಪ್ರಮುಖ.

1870ರ ಹೊತ್ತಿಗೆ ಕಲೆಯ ಬಗೆಗೆ ವಾದವಿವಾದಗಳಿಗೂ ಹೊಸ ಚಿಂತನಗಳಿಗೂ ಫ್ರಾನ್ಸ್ ತವರಾಯಿತು. ಇಂಥ ಹೊಸ ಚಿಂತನೆಗಳಲ್ಲಿ ಒಂದು ಅಭಿಪ್ರಾಯವನ್ನು ಅನುಸರಿಸಿ 'ಇಂಪ್ರೆಷನಿಸಂ' (ಸಮಷ್ಟಿ ಪರಿಣಾಮ) ಎಂಬ ಕಲಾ ಸಂಪ್ರದಾಯ ಬೆಳೆಯಿತು. ನಮ್ಮ ದೃಷ್ಟಿ ಬೆಳಕಿನ ಕಿರಣಗಳು ವಸ್ತುವಿನ ಮೇಲೆ ಬೀಳುವ ವಿಧಾನವನ್ನು ಅವಲಂಬಿಸಿದೆ ಎಂದು ಹೇಳಿದ ಈ ಕಲಾವಿದರು ತಮ್ಮ ಚಿತ್ರಗಳಲ್ಲಿ ಈ ಬೆಳಕು ಬೀಳುವ ವಿಧಾನದ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿದರು. ತೀವ್ರವಾದ ಬಣ್ಣ, ಚಿಕ್ಕ ಆದರೆ ದೃಢವಾದ ಕುಂಚದ ಎಳೆತ –ಈ ಕಲಾವಿದರ ಚಿತ್ರ ರಚನೆಯ ವೈಶಿಷ್ಟ್ಯವಾಗಿತ್ತು. ಕ್ಲಾಡ್ ಮೊನೆ (1840–1926) ಮತ್ತು ಕ್ಯಾಮಿಲ್ ಪಿಸಾರೋ

(1830–1903) ಈ ಪಂಥದ ಪ್ರಮುಖ ಕಲಾವಿದರು. ಈ ಸಂಪ್ರದಾಯವನ್ನು ಇಮಡಿ ಕಲಾಸೃಷ್ಟಿ ಮಾಡಿದ ಶಿಲ್ಪಿ ಆಗಸ್ಟ್ ರೋಡಿನ್ (1840–1917).

ಸಮಷ್ಟಿಪರಿಣಾಮದಿಂದ ಪ್ರಭಾವಿತರಾದ ಅನೇಕ ಕಲಾವಿದರು ಕ್ರಮೇಣ ತಮ್ಮದೇ ಆದ ಸ್ವಂತ ಶೈಲಿಗಳನ್ನು ರೂಪಿಸಿಕೊಂಡರು. ಇವರಲ್ಲಿ ಪ್ರಮುಖನಾದವನು ಪಾಲ್ ಸೇಜಾನ್ (1839–1906). ಸಮಷ್ಟಿ ಪರಿಣಾಮವಾದಿಗಳ ಹಾಗೆ ಬೆಳಕು ಬೀಳುವ ವಿಧಾನದಲ್ಲಿ ಆಸಕ್ತಿಹೊಂದಿದ್ದರೂ ವಸ್ತುವಿನ ಘನತ್ವವನ್ನು ಚಿತ್ರಿತೋರಿಸುವುದರಲ್ಲಿ ಇವನು ತನ್ನ ಗಮನ ಕೇಂದ್ರೀಕರಿಸಿದ. ಇದರಿಂದಾಗಿ ಇವನ ಕಲೆಯಲ್ಲಿ ವಸ್ತು ತನ್ನ ವಾಸ್ತವಿಕ ರೂಪವನ್ನೂ ಉಳಿಸಿಕೊಳ್ಳುತ್ತದೆ. ಇವನ ಕೃತಿಗಳು 20ನೆಯ ಶತಮಾನದ ಕಲೆಯ ಮೇಲೆ ಪ್ರಬಲ ಪರಿಣಾಮ ಬೀರಿದುವು.

20ನೆಯ ಶತಮಾನದಲ್ಲೂ ಕಲೆಗೆ ಫ್ರಾನ್ಸೇ ಕೇಂದ್ರವಾಗಿದ್ದಿತು. ಇದಕ್ಕೆ ಇಟಲಿಯ ಕಲಾವಿದ ಅಮೆಡಿಯೋ ಮೋಡಿಗ್ಲ್ಯಾನಿ (1884–1920) ಮತ್ತು ಸ್ಪೇನಿನ ಪಾಬ್ಲೊ ಪಿಕಾಸೊ (1881–     )ಫ್ರಾನ್ಸಿಗೆ ಬಂದು ನೆಲೆಸಿದ್ದೇ ಇದಕ್ಕೆ ಸಾಕ್ಷಿ. ಈ ಶತಮಾನದಲ್ಲೂ ಭಾರೀ ಪ್ರಯೋಗಗಳು ನಡೆದುವು. ಬಣ್ಣಗಳ ಬಳಕೆಯಲ್ಲಿ ದಿಟ್ಟತನವನ್ನು ತೋರಿದ ಗುಂಪಿನ ಕಲಾವಿದರಲ್ಲಿ ಹೆನ್ರಿ ಮಾಟಿಸ್ (1859–1954) ಪ್ರಮುಖ. ಗಾಢ ವರ್ಣಗಳನ್ನು ಬಳಸಿದವನು ಜಾರ್ಜ್ ರೆನ್ವಾ (1871–1958).

ವಸ್ತುವಿನ ಘನ ಆಕೃತಿಯಲ್ಲಿ ಆಸಕ್ತಿ ತೋರಿದ ಸೇಜಾನನ ಪ್ರಭಾವ 20ನೆಯ ಶತಮಾನದಲ್ಲಿ ಹೊಸ ಕಲಾಸಂಪ್ರದಾಯಕ್ಕೆ ನಾಂದಿಯಾಯಿತು. ಇದೇ ಕ್ಯೂಬಿಸಂ ; ಘನಾಕೃತಿ ಕಲೆ. ಈ ಸಂಪ್ರದಾಯದ ಕಲಾವಿದರು ವಿವಿಧ ಆಯಾಮಗಳಲ್ಲಿ ಕಾಣುವ ವಸ್ತುವಿನ ಆಕಾರಗಳನ್ನು ಒಂದೇ ತಲದಲ್ಲಿ ವ್ಯಕ್ತವಾಗುವಂತೆ ಚಿತ್ರಿಸಲು ಪ್ರಯತ್ನಿಸಿದರು. ಉದಾಹರಣೆಗೆ, ಒಬ್ಬನ ಮುಖವನ್ನು ಎದುರಿನಿಂದ ನೋಡಿದಾಗ ಕಾಣುವಂತೆ ಚಿತ್ರಿಸುವುದರ ಜೊತೆಗೆ, ಪಕ್ಕದಿಂದ ನೋಡುವಾಗ ಕಾಣುವ ಪಾರ್ಶ್ವಮುಖವನ್ನೂ ಅಲ್ಲೇ ಸೂಚಿಸುವುದು. ಪಿಕಾಸೋ, ಜಾರ್ಜಸ್ ಬ್ರಾಕ್ (1882–1963) ಈ ಸಂಪ್ರದಾಯದ ಪ್ರಮುಖ ಕಲಾವಿದರು.

ಪ್ರಾಚೀನ ಫ್ರೆಂಚ್ ಸಾಹಿತ್ಯದಲ್ಲಿ ಮುಖ್ಯವಾಗಿ ಎರಡು ಮಾರ್ಗಗಳು ಕಂಡುಬರುತ್ತವೆ. ಆದರ್ಶಮಯ ಹಾಗೂ ಉದಾತ್ತಭಾವನೆಗಳನ್ನೊಳಗೊಂಡ ಮಾರ್ಗ ಒಂದು. ಈ ಕಾವ್ಯಮಾರ್ಗದಲ್ಲಿ ಅತ್ಯಂತ ಪ್ರಮುಖವಾದದು 'ಗೆಸ್ಟೆಯ ಗಾನ' ಎಂಬ ಮಹಾಕಾವ್ಯ. ಮತ್ತೊಂದು ವಾಸ್ತವ ಮಾರ್ಗದ್ದು ಹಾಗೂ ವಿಡಂಬನಾತ್ಮಕವಾದದ್ದು. 13ನೆಯ ಶತಮಾನದ ಈ ಸಾಹಿತ್ಯ ಪ್ರಕಾರಕ್ಕೆ ಫಾಬ್ಲಿಯೋ ಎಂದು ಹೆಸರು. ಈ ಸಮಯದಲ್ಲಿ ರೂಪಕ ಕಥೆ ಕವನಗಳು ಹೆಚ್ಚು ಪ್ರಾಮುಖ್ಯ ಪಡೆದುವು. ಫ್ರೆಂಚ್ ಭಾಷೆಯಲ್ಲಿ ಭಾವಗೀತೆ—ನಾಟಕಗಳಂಥ ಪ್ರಕಾರಗಳು ಪ್ರಾರಂಭವಾದದ್ದು 'ಮಧ್ಯಯುಗ'ದಲ್ಲಿ, 12ರಿಂದ 16ನೆಯ ಶತಮಾನದವರೆಗೆ. 15ನೆಯ ಶತಮಾನದಲ್ಲಿದ್ದು ಆಗಿನ ವಸ್ತು, ಶೈಲಿಗಳನ್ನು ಬಳಸಿ ಭಾವಗೀತೆ ರಚಿಸಿದ ಅತ್ಯಂತ ಪ್ರಮುಖ ಕವಿ ಫ್ರಾನ್ಸ್ವಾ ವಿಯೋನ್ (1431–1463). ಆತನ ಕೃತಿಗಳಲ್ಲಿ ಆಧುನಿಕತೆಯ ಛಾಯೆ ಕಂಡುಬರುತ್ತದೆ.

16ನೆಯ ಶತಮಾನದ ಹೊತ್ತಿಗೆ ಫ್ರಾನ್ಸ್ ರಾಷ್ಟ್ರ ಹೊಸ ರೂಪ ತಾಳಿತು. ಇದೇ ಹೊತ್ತಿಗೆ ಪ್ರಾಚೀನ ಗ್ರೀಕ್ ಹಾಗೂ ಲ್ಯಾಟಿನ್ ಸಾಹಿತ್ಯ ಬೆಳಕಿಗೆ ಬಂದು ಇಡೀ ಫ್ರಾನ್ಸಿನ ಸಾಹಿತ್ಯ ಪ್ರಪಂಚಕ್ಕೆ ಹೊಸ ಸತ್ವವನ್ನು ಒದಗಿಸಿತು. ಮಾನವನ ಸಾಧನೆಗಳ ಬಗೆಗೆ ಹೊಸ ಆಶಾಭಾವನೆ ಹುಟ್ಟಿತು. ಜ್ಞಾನದಾಹ ಬೆಳೆಯಿತು. ನವೋದಯವಾಯಿತು. ಫ್ರಾನ್ಸಿನ ಮಧ್ಯಯುಗದ ಸಾಹಿತ್ಯ ಪ್ರಕಾರಗಳ ಬದಲಾಗಿ ಗ್ರೀಕ್, ಲ್ಯಾಟಿನ್‌ನಿಂದ ಬಂದ ಶೋಕ ಗೀತೆ, ಪ್ರಗಾಥ, ಕಾಮಿಡಿ, ಟ್ರ್ಯಾಜಿಡಿಗಳು ಈ ಕಾಲದ ಲೇಖಕರ ಮೇಲೆ ಪ್ರಭಾವ ಬೀರಿದುವು.

ಈ ಶತಮಾನದ ಕವಿಗಳಲ್ಲಿ ರಾನ್‌ಸಾರ್ (1524–85) ಪ್ರಮುಖನಾದವನು. ಇವನ ಹಾಗೂ ಇವನ ಮಿತ್ರರ ಕವನಗಳು ಭಾವಗೀತೆಯ ಪ್ರಕಾರದಲ್ಲಿ ನವಚೈತನ್ಯ ಮೂಡಿಸಿದುವು. ನವೋದಯ ಕಾಲದ ಆಶಾವಾದವನ್ನು ಮೈಗೂಡಿಸಿಕೊಂಡು, ತನ್ನ ವಿಶಿಷ್ಟ ಕಲ್ಪನೆ, ಬುದ್ಧಿವಂತಿಕೆ ಹಾಗೂ ಜೀವಂತ ಶೈಲಿಯಲ್ಲಿ ಗದ್ಯರಚನೆಯಲ್ಲಿ ತೊಡಗಿದ ರಾಬೆಲೇ (1495–1553) ಈ ಕಾಲದ ಪ್ರಮುಖ ಲೇಖಕ.

16ನೆಯ ಶತಮಾನದ ಕೊನೆಯ ಕಾಲದಲ್ಲಿ, ಕ್ರೈಸ್ತ ಧರ್ಮಯುದ್ಧಗಳ ಪರಿಣಾಮವಾಗಿ ನಿರಾಶೆಗೊಳಗಾಗಿದ್ದ ಪೀಳಿಗೆಯೊಂದು ಹುಟ್ಟಿತು. ಈ ನಿರಾಶಾಭಾವನೆಗಳನ್ನು ತನ್ನ ಪ್ರಬಂಧಗಳಲ್ಲಿ ಸೊಗಸಾಗಿ ವ್ಯಕ್ತಪಡಿಸಿದವನು ಮಾಂಟೆನಿ (1533–92).

17ನೆಯ ಶತಮಾನಕ್ಕೆ ಮೊದಲು ಫ್ರಾನ್ಸಿನಲ್ಲಿ ಅನೇಕ ಸಾಹಿತ್ಯ ಅಕಾಡೆಮಿಗಳೂ ಕೂಟಗಳೂ ಸ್ಥಾಪಿತವಾದುವು. ಇವುಗಳಿಂದಾಗಿ ಆಗಿನ ಸಾಹಿತ್ಯಕ್ಕೆ ಒಂದು ನಿರ್ದಿಷ್ಟ ರೂಪ ದೊರೆಯುವಂತಾಯಿತು. ಹಿಂದಿನ ಯುದ್ಧದಿಂದ ಬೇಸತ್ತಿದ್ದ ಜನ ಶಾಂತಿ ಹಾಗೂ ಸ್ಥಿರವಾದ ಧಾರ್ಮಿಕ ವ್ಯವಸ್ಥೆಗಾಗಿ ಹಾತೊರೆಯುತ್ತಿದ್ದರು. ಈ ಹಂಬಲ ಆಗಿನ ಸಾಹಿತ್ಯದಲ್ಲೂ ಪ್ರತಿಫಲಿತವಾಯಿತು.

ಅದೇ ಶತಮಾನದ ಉತ್ತರಾರ್ಧದಲ್ಲಿ ದೊರೆ 14ನೆಯ ಲೂಯಿಯ ಆಳ್ವಿಕೆಯಲ್ಲಿ ಸಾಹಿತ್ಯಕ್ಕೆ ತುಂಬ ಪ್ರೋತ್ಸಾಹ ಸಿಕ್ಕಿತು. ಮೋಲಿಯೇರ್, ರಾಸೀನ್‌ನಂಥ ಶ್ರೇಷ್ಠ ನಾಟಕಕಾರರು ಈ ಕಾಲದಲ್ಲಿ ನಾಟಕಗಳನ್ನು ರಚಿಸಿದರು. ದಕಾರ್ತೆಯ ತಾತ್ತ್ವಿಕ ಚಿಂತನೆ ಆಗಿನ ವೈಚಾರಿಕತೆಯ ಮೇಲೆ ಗಾಢ ಪ್ರಭಾವ ಬೀರಿತು.

ಈ ಪ್ರಭಾವ 18ನೆಯ ಶತಮಾನದ ಆದಿಯ ಹೊತ್ತಿಗೆ ಫ್ರಾನ್ಸಿನ ಚಿಂತನೆಗೆ ಹೊಸ ರೂಪ ಕೊಟ್ಟಿತು. ತರ್ಕಸಮ್ಮತವಾದ ವಿವೇಚನೆ ಬೇಕೆಂದು ದಕಾರ್ತೆ ಹೇಳಿದ್ದ. ಈ ವಿವೇಚನೆ 18ನೆಯ ಶತಮಾನದಲ್ಲಿ ಅತ್ಯಂತ ಸ್ವತಂತ್ರ ರೀತಿಯಲ್ಲಿ ಬೆಳೆಯಿತು. ಈ ಕಾಲವನ್ನು 'ವಿವೇಕ ಯುಗ' ಎನ್ನುತ್ತಾರೆ. ಸ್ವತಂತ್ರ ಹಾಗೂ ತರ್ಕಬದ್ಧ ಚಿಂತನೆಯಿಂದಾಗಿ ಹಿಂದಿನ ಸಿದ್ಧಾಂತಗಳು ಬಹು ಮಟ್ಟಿಗೆ ತಮ್ಮ ಪ್ರಭಾವವನ್ನು ಕಳೆದುಕೊಂಡುವು. ಮಾಂಟೆಸ್‌ಕ್ಯುನಂಥ (1689–1755) ರಾಜಕೀಯ ವಿಚಾರವಂತರು, ಡೀಡಿರೋ ಮತ್ತು ವಾಲ್ಟೇರ್‌ನಂಥ ತೀಕ್ಷ್ಣಮತಿಗಳಾದ ಜ್ಞಾನಪಿಪಾಸುಗಳು ಈ ಕಾಲದಲ್ಲಿದ್ದರು. ಪ್ರಚಂಡ ವಿಚಾರ ಪ್ರಖರತೆ, ಹೇಳುವುದನ್ನು ಮನ ಕಲಕುವಂತೆ ಹೇಳಬಲ್ಲ ಶಕ್ತಿ ಇವೆರಡನ್ನೂ ಮೈಗೂಡಿಸಿಕೊಂಡವನು ರೂಸೋ. ಇವನು ಈ ಶತಮಾನದ ಅತ್ಯಂತ ಪ್ರಭಾವಶಾಲೀ ಲೇಖಕ. ಈ ಎಲ್ಲ ತಾತ್ತ್ವಿಕ, ಸಾಹಿತ್ಯಕ ಹಾಗೂ ಸಾಮಾಜಿಕ ಚಟುವಟಿಕೆಗಳು ಫ್ರಾನ್ಸಿನ ಮಹಾಕ್ರಾಂತಿಗೆ ದಾರಿಮಾಡಿಕೊಟ್ಟುವು.

18ನೆಯ ಶತಮಾನದ ವೈಚಾರಿಕತೆಗೆ ಪ್ರತಿಕ್ರಿಯೆಯಾಗಿ 19ನೆಯ ಶತಮಾನದಲ್ಲಿ ರೊಮ್ಯಾಂಟಿಕ್ ಸಾಹಿತ್ಯ ಉದಯಿಸಿತು. ಫ್ರಾನ್ಸಿನ ಮಹಾಕ್ರಾಂತಿಯ ಅನಂತರದ ಸನ್ನಿವೇಶ, ನೆಪೋಲಿಯನ ಪ್ರಚಂಡ ವಿಜಯ ಹಾಗೂ ನಿರಾಶಾದಾಯಕ ಸೋಲು, ಬೆಳೆಯುತ್ತಿದ್ದ ಕೈಗಾರಿಕಾರಂಗ ಇವು ಈ ಸಂಪ್ರದಾಯ ಬೆಳೆಯಲು ದಾರಿಮಾಡಿದುವು. ಮತ್ತೊಮ್ಮೆ ಭಾವ

ಗೀತೆಯು ಪ್ರಕಾರ ಉಜ್ವಲವಾಯಿತು. ವಿಕ್ಟರ್ ಹ್ಯೂಗೋ (1802–85) ಆಗಿನ ಅತಿ ಶ್ರೇಷ್ಠ ಕವಿ, ಕಾದಂಬರಿಕಾರ. ಇವನಷ್ಟೇ ಗಣನೀಯನಾದ ಕಾದಂಬರಿಕಾರ ಬಾಲ್ಜಾಕ್.

ಈ ಶತಮಾನದ ಕೊನೆಗೆ ಬಂದ ಬೋದ್ಲೇರ್ ಮತ್ತು ರಿಂಬೋ ಫ್ರೆಂಚ್ ಸಾಹಿತ್ಯದಲ್ಲೇ ವಿಶಿಷ್ಟ ಸ್ಥಾನ ಪಡೆದವರು. ಇವರು ತಮ್ಮ ಕಾವ್ಯಾನುಭವವನ್ನು ಅತ್ಯಂತ ಪ್ರಬುದ್ಧ ಶೈಲಿಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಇವರ ಪ್ರಭಾವದಿಂದಾಗಿ ಮುಂದೆ 'ಸಾಂಕೇತಿಕ ಕಾವ್ಯ' ಹುಟ್ಟಿತು. ಸಾಂಕೇತಿಕ ಸಂಪ್ರದಾಯ ಇಡೀ ಯೂರೋಪಿನಲ್ಲೇ ಅತ್ಯಂತ ಪ್ರಭಾವ ಶಾಲಿಯಾಯಿತು.

ಕಾದಂಬರಿಯಲ್ಲಿ ವಾಸ್ತವ ಶೈಲಿಯನ್ನು ಬಳಸಿದ ಬಾಲ್ಜಾಕನ ಕೃತಿಗಳು ಫ್ರೆಂಚ್ ಸಾಹಿತ್ಯದಲ್ಲಿ ವಾಸ್ತವವಾದಕ್ಕೆ ಎಡೆಮಾಡಿಕೊಟ್ಟುವು. ಜೋಲಾ (1840–1902) ಫ್ಲಾಬೇರ್ (1821–80) 19ನೆಯ ಶತಮಾನದ ಪ್ರಭಾವಶಾಲೀ ಕಾದಂಬರಿಕಾರರು.

20ನೆಯ ಶತಮಾನದಲ್ಲೂ ಇದೇ ವಾಸ್ತವವಾದ, ಸಾಂಕೇತಿಕತೆಗಳು ಪ್ರಭಾವ ಬೀರಿದುವು. ಮಹಾಯುದ್ಧಗಳು ಫ್ರಾನ್ಸಿನ ಚಿಂತನಶೀಲರಾದ ಕೆಲವರಲ್ಲಿ ಹೊಸ ಆಲೋಚನೆಗಳಿಗೆ ಎಡೆಮಾಡಿಕೊಟ್ಟುವು. ವ್ಯಾಲೆರಿಯಂಥ ಕವಿಗಳು, ಪ್ರೌಸ್ಟ್‌ನಂಥ ಕಾದಂಬರಿಕಾರರು ಬಂದರು. ಜೀವನವನ್ನು ಅತ್ಯಂತ ಪ್ರಾಮಾಣಿಕವಾಗಿ ಕಂಡ ಆಂದ್ರೆ ಜೀದ್. ಆಲ್ಬರ್ಟ್ ಕಾಮು. ಸಾರ್ತ್ರ್‌ನಂಥ ಲೇಖಕರು ಜೀವನದ ಮೌಲ್ಯಗಳ ಬಗೆಗೆ ಅತ್ಯಂತ ಗಂಭೀರ ವಾಗಿ ಚಿಂತಿಸಿ ಕೃತಿರಚನೆಮಾಡಿದರು.

ಫ್ರೆಂಚ್ ಕಲೆ ಮತ್ತು ಸಾಹಿತ್ಯ ಜೀವಂತವಾಗಿದೆ, ಪ್ರಭಾವಶಾಲಿಯಾಗಿದೆ.

ನೋಡಿ : ಆಂದ್ರೆ ಜೀದ್ ; ಎಡ್ವರ್ಡ್ ಮಾನೆ ; ಕಾಮು ; ಕ್ಲಾಡ್ ಮೊನೆ ; ಗಾತಿಕ್ ಕಲೆ ; ಗುಸ್ಟಾವ್ ಕೂರ್ಬ ; ಗೋಗಿನ್ ; ಚರಿತ್ರಪೂರ್ವ ಕಲೆ; ಜೋಲಾ ; ಡೀಡಿರೋ ; ಡೂಮಾ ; ದಗಾ ; ಫ್ಲಾಬೇರ್ ; ಬಾಲ್ಜಾಕ್ ; ಬೋದ್ಲೇರ್ ; ಮಾಟಿಸ್ ; ಮೊಪಾಸಾ ; ಮೋಡಿಗ್ಲ್ಯಾನೀ ; ಮೋಲಿಯೇರ್ ; ರೂಸೋ ; ರೆನ್ವಾ ; ರೊಕೋಕೋ ಕಲೆ ; ರೋಡಿನ್ ; ರೊಮಾ ರೊಲಾ ; ವಾಲ್ಟೇರ್ ; ಸಮಷ್ಟಿಪರಿಣಾಮ ಕಲೆ ; ಸಾರ್ತ್ರ್ ; ಸೇಜಾನ್ ; ಹ್ಯೂಗೋ

## 'ಫೌಸ್ಟ್'

ಜರ್ಮನ್ ಕವಿ ಗಯಟೆಯ ಮಹಾನ್ ಕೃತಿ 'ಫೌಸ್ಟ್'.

'ಫೌಸ್ಟ್' ಎಂದರೆ 'ಅದೃಷ್ಟಶಾಲಿ' ಎಂದರ್ಥ. ಈ ಹೆಸರಿನ ಪಾತ್ರವನ್ನುಳ್ಳ ಒಂದು ದಂತಕಥೆ ಯೂರೋಪಿನ ಕೆಲ ದೇಶಗಳಲ್ಲಿ ಬಹಳ ಹಿಂದೆಯೇ ಪ್ರಚುರವಾಗಿತ್ತೆಂಬ ನಂಬಿಕೆಯಿದೆ. ಫೌಸ್ಟ್ ದೆವ್ವದೊಡನೆ ಕರಾರುಮಾಡಿಕೊಂಡ ಮಾನವ.

ಸುಮಾರು 16ನೆಯ ಶತಮಾನದಲ್ಲಿ ಜರ್ಮನಿಯಲ್ಲಿ ಈ ಹೆಸರಿನವನೊಬ್ಬ ಇದ್ದನೆಂದೂ ಆತ ಪಂಡಿತನೂ ತತ್ತ್ವವೇತ್ತನೂ ಆಗಿದ್ದನೆಂದೂ ಪ್ರತೀತಿ. ಅವನೊಬ್ಬ ಅಲೆಮಾರಿ ; ಯಕ್ಷಿಣೀ ವಿದ್ಯೆಗಳನ್ನು ಬಲ್ಲವನು ; ಅವನನ್ನು ಕಂಡವರು ಅವನಿಂದ ತುಂಬ ಪ್ರಭಾವಿತರಾಗುತ್ತಿದ್ದರು —ಎಂದು ಹೇಳಿಕೆ.

ಆತ ಸತ್ತಮೇಲೆ ಅವನ ಜೀವನದ ಬಗೆಗೆ —ಆತನ ಅದ್ಭುತ ಶಕ್ತಿಗಳ ಬಗೆಗೆ— ಕಥೆಗಳು ಹುಟ್ಟಿದುವು. ಇವೇ ಪ್ರಧಾನಾಂಶಗಳಾದ ಪುಸ್ತಕಗಳೂ ಹೊರಬಂದುವು. ಅಂದಿನಿಂದ ಇಂದಿನವರೆಗೆ ಫೌಸ್ಟ್ ಕಥೆಯಿಂದ ಸ್ಫೂರ್ತಿಗೊಂಡ ಬರೆಹಗಾರರು ಬಹು ಮಂದಿ. ಅವರಲ್ಲಿ 'ಫೌಸ್ಟ್' ಎಂಬ



ಫೌಸ್ಟ್ : ದೆವ್ವದೊಡನೆ ಕರಾರು

ಮಹೋನ್ನತ ದುರಂತ ನಾಟಕವನ್ನು ಬರೆದು ಫೌಸ್ಟ್ ಕತೆಯನ್ನು ವಿಶ್ವಸಾಹಿತ್ಯದ ಮಟ್ಟಕ್ಕೆ ಏರಿಸಿದ ಕೀರ್ತಿ ಜರ್ಮನಿಯ ಕವಿ ಗಯಟೆಗೆ ಸೇರಿದ್ದು. ಗಯಟೆ ತನ್ನ ಕಾವ್ಯನಾಟಕವನ್ನು ಬರೆಯುವುದಕ್ಕೆ ಬಹು ಮುಂಚೆಯೇ ಈ ಕಥೆಯನ್ನು ಜರ್ಮನಿಯಲ್ಲಿ ಸೂತ್ರದ ಬೊಂಬೆಯಾಟ ದಲ್ಲಿ ತೋರಿಸುತ್ತಿದ್ದರು. ಗಯಟೆ ಅದನ್ನು ನೋಡಿದ್ದ. ಅಲ್ಲಿನ ಫೌಸ್ಟ್ ಹೀನಸ್ಥಿತಿಗಿಳಿದು. ನಗೆಪಾಟಲಾಗುವ ವ್ಯಕ್ತಿ. ಇಂಥ ಫೌಸ್ಟ್ ನನ್ನು ತನ್ನ ಪ್ರತಿಭೆಯ ಮೂಸೆಯಲ್ಲಿಟ್ಟು ಗಯಟೆ ಉದಾತ್ತನಾಗಿಸಿದ : ಇಡೀ ಮಾನವಕುಲದ ತೊಳಲಾಟಗಳ ಪ್ರತೀಕವನ್ನಾಗಿ ಮಾಡಿದ. ಈ ಮಹಾಗ್ರಂಥವನ್ನು ಬರೆಯಲು ಗಯಟೆ ಅರವತ್ತು ವರ್ಷಗಳ ದೀರ್ಘ ಕಾಲ ತೆಗೆದುಕೊಂಡ.

ಗಯಟೆ ನಿರ್ಮಿಸಿದ ಫೌಸ್ಟ್ ಅಪಾರ ಜ್ಞಾನದಾಹವುಳ್ಳವನು ; ಹಾಗೆಯೇ ಸುಖಾನುಭವದಲ್ಲಿ ಕೂಡ ತೀವ್ರ ಆಸಕ್ತಿಯುಳ್ಳವನು. ತನ್ನ ಜೀವನ ವ್ಯರ್ಥವೆಂದು ನಿರ್ಧರಿಸಿಕೊಂಡು ಆತ್ಮವನ್ನು 'ಮೆಫಿಸ್ಟಾಫಲೀಸ್' ಎಂಬ ಮನುಷ್ಯರೂಪಿ ಪಿಶಾಚಿಗೆ ಮಾರಿಕೊಳ್ಳುತ್ತಾನೆ. ಇದಕ್ಕೆ ಬದಲಾಗಿ ಪಿಶಾಚಿಯು ಅವನಿಗೆ ಯೌವನವನ್ನು ಕೊಡುತ್ತದೆ. ಅವನ ಬಯಕೆ ಗಳನ್ನೆಲ್ಲ ಈಡೇರಿಸಲು ಒಪ್ಪುತ್ತದೆ. ಆದರೆ, ಒಂದು ಷರತ್ತಿನ ಮೇಲೆ. ತನಗೆ ತೃಪ್ತಿಯಾದ ಮೇಲೂ ಫೌಸ್ಟ್ ಮತ್ತೆ ಬೇಡಿದರೆ ಅವನ ಆತ್ಮ ಶಾಶ್ವತವಾಗಿ ಪಿಶಾಚಿಯ ಬಂಧನದಲ್ಲಿರಬೇಕು —ಎಂಬುದು ಷರತ್ತು. ತನ್ನ ಬಯಕೆಗಳನ್ನು ಒಂದಾದ ಮೇಲೊಂದರಂತೆ ಫೌಸ್ಟ್ ತಣಿಸಿಕೊಳ್ಳುತ್ತಾನೆ. ಆದರೆ ಅವನ ಜೀವನ ಪಾಪಗಳ ಹೊರೆಯಾಗುತ್ತದೆ. ಇಷ್ಟಾದರೂ ಅವನನ್ನು ರಕ್ಷಿಸುವ ಅಂಶವೊಂದಿದೆ. ಅದು ಸೌಂದರ್ಯ. ಸತ್ಯ ಹಾಗೂ ಒಳ್ಳೆಯದನ್ನು ಕಾಣಲು ಆತ ನಡೆಸುವ ಪ್ರಯತ್ನ. ಈ ಪ್ರಯತ್ನವೇ ಅವನನ್ನು ದೇವದೇವನ ಅನುಗ್ರಹಕ್ಕೆ ಯೋಗ್ಯನನ್ನಾಗಿ ಮಾಡುತ್ತದೆ.

'ಫೌಸ್ಟ್' ನಲ್ಲಿ ಎರಡು ಭಾಗಗಳಿವೆ. ಎರಡನೆಯ ಭಾಗದಲ್ಲಿ ಬರುವ ಪ್ರಸ್ತಾವನೆ ದಂತಕತೆಯಿಂದ ಭಿನ್ನವಾದ ಸಂದರ್ಭ.–ಗಯಟೆಯ ಕಲ್ಪನೆ.



ಆಧುನಿಕ ಜರ್ಮನ್ ರಂಗಭೂಮಿಯಲ್ಲಿ 'ಫೌಸ್ಟ್'

ಇಡೀ ಕಾವ್ಯದಲ್ಲಿ ಮೂರು ಹಂತಗಳನ್ನು ಗುರುತಿಸಬಹುದು. ಈ ಮೂರು ಹಂತಗಳಲ್ಲಿ ಮನುಷ್ಯನ ಸಹಜಪ್ರವೃತ್ತಿ ಹಾಗೂ ಭಾವೋದ್ರೇಕಗಳ, ಅವನ ಸಂಸ್ಕೃತಿ – ಪ್ರಜ್ಞೆ ಹಾಗೂ ಅವನ ವಾಸ್ತವ ಜೀವನಗಳ ರೂಪಕವಿದೆ.

ಪಿಶಾಚಿಯು ಫೌಸ್ಟ್‌ನನ್ನು ದುರ್ಮಾರ್ಗಕ್ಕೆಳೆಯುತ್ತದೆ. ಫೌಸ್ಟ್ ಇನ್ನೇನು ಅಧೋಗತಿಗಿಳಿಯುತ್ತಾನೆ ಎನ್ನುವ ಸಂದರ್ಭಗಳಲ್ಲೆಲ್ಲ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. ಪಿಶಾಚಿಯು ಅವನಲ್ಲಿ ಕಾಮವನ್ನು ಉತ್ತೇಜಿಸಲು ಯತ್ನಿಸಿದಾಗ ಫೌಸ್ಟ್ ಪ್ರೇಮಿಯಾಗುತ್ತಾನೆ. ಹೀಗೆ ಎರಡು ಶಕ್ತಿಗಳ ತಾಕಲಾಟ ಈ ನಾಟಕದ ಉದ್ದಕ್ಕೂ ಕಂಡುಬರುತ್ತದೆ.

ಗಯಟೆಯ ಫೌಸ್ಟ್ ಆಧುನಿಕ ಮನುಷ್ಯನ ಪ್ರತಿಬಿಂಬ. ಹೆಚ್ಚು ಹೆಚ್ಚು ಜ್ಞಾನ ಸಂಪಾದಿಸಲು ತುಳಿಯಬಾರದ ಹಾದಿಯಲ್ಲಿ ಮಾನವ ಹೆಜ್ಜೆ ಇಡುವುದರ ಚಿತ್ರಣ ಇಲ್ಲಿದೆ.

ದಾರ್ಶನಿಕರು, ಕಲಾವಿದರು, ಲೇಖಕರು, ನಾಟಕಕಾರರು, ಸಂಗೀತಗಾರರು, ನಟರು —ಇವರಿಗೆಲ್ಲ ಫೌಸ್ಟ್ ವಸ್ತುವಾಗಿದ್ದಾನೆ.

ಗಯಟೆಯ 'ಫೌಸ್ಟ್' ನೂರಾರು ಭಾಷೆಗಳಿಗೆ ಅನುವಾದಗೊಂಡಿದೆ.

ನೋಡಿ : ಗಯಟೆ

## ಬಂಕಿಮಚಂದ್ರ ಚಟ್ಟೋಪಾಧ್ಯಾಯ

'ವಂದೇ ಮಾತರಂ' ಗೀತೆ ಎಲ್ಲ ಭಾರತೀಯರಿಗೂ ಪರಿಚಿತ. ಈ ಗೀತೆಯನ್ನು ಬರೆದವರು ಬಂಗಾಳದ ಪ್ರಸಿದ್ಧ ಕಾದಂಬರಿಕಾರ ಬಂಕಿಮಚಂದ್ರ ಚಟ್ಟೋಪಾಧ್ಯಾಯರು. ಅವರ 'ಆನಂದಮಠ' ಎಂಬ ಕೃತಿಯಲ್ಲಿ ಈ ಗೀತೆ ಬರುತ್ತದೆ.

'ಬಂಕಿಮ' ಎಂದರೆ ಬಾಗಿದ ಎಂದು ಅರ್ಥ. ಎಂದರೆ ದಿನದಿಂದ ದಿನಕ್ಕೆ ವೃದ್ಧಿಯಾಗುತ್ತ ಹೋಗುತ್ತಿರುವ ಬಿದಿಗೆಯ ಚಂದ್ರನೇ ಬಂಕಿಮ ಚಂದ್ರ.

ಬಂಕಿಮಚಂದ್ರರು ಬಂಗಾಳದ ಕಾಂಟಾಲಪಾದಾ ಗ್ರಾಮದಲ್ಲಿ 1838ರಲ್ಲಿ ಹುಟ್ಟಿದರು. ಅವರ ತಂದೆ ಯಾದವಚಂದ್ರ ಚಟ್ಟೋಪಾಧ್ಯಾಯರು ಪಾರ್ಸಿ, ಇಂಗ್ಲಿಷ್ ಭಾಷೆಗಳಲ್ಲಿ ವಿದ್ವಾಂಸರಾಗಿದ್ದರು. ಬಂಕಿಮಚಂದ್ರರ ತಾಯಿ ವೈದಿಕಮನೆತನದ ಹೆಣ್ಣುಮಗಳು. ಪ್ರೇಮಮಯಿ, ಸಾತ್ವಿಕಳು. ಬಂಕಿಮಚಂದ್ರರ ಪ್ರಾಥಮಿಕ ವಿದ್ಯಾಭ್ಯಾಸ ಹಳ್ಳಿಯ ಪಾಠಶಾಲೆಯಲ್ಲಿ ನಡೆಯಿತು. ಅಲ್ಲಿಂದ ಮುಂದೆ ಅವರು ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜನ್ನು ಸೇರಿದರು. 1857ರ ಸಿಪಾಯಿದಂಗೆಯ ವೇಳೆಯಲ್ಲಿ ಕಲ್ಕತ್ತೆ ಪ್ರಕ್ಷುಬ್ಧವಾಗಿದ್ದರೂ ಬಂಕಿಮರು ವಿಚಲಿತರಾಗದೆ ತಮ್ಮ ಅಧ್ಯಯನ ಮುಗಿಸಿ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಅನಂತರ 1858ರಿಂದ 1882ರ ತನಕ ಯಶೋಹರ (ಜೆಸ್ಸೂರ್), ಹೂಗ್ಲಿ, ಮೇದಿನೀಪುರಗಳಲ್ಲಿ, ಸರಕಾರದ ವಿವಿಧ ಇಲಾಖೆಗಳಲ್ಲಿ ಅಧಿಕಾರಿಯಾಗಿ ಕೆಲಸಮಾಡಿದರು. ಬ್ರಿಟಿಷ್ ಸರಕಾರ ಅವರ ಸೇವೆಯನ್ನು ಮೆಚ್ಚಿ ಇವರಿಗೆ 'ರಾವ್‌ಬಹದ್ದೂರ್' ಎಂಬ ಬಿರುದನ್ನು ಕೊಟ್ಟಿತು. 1891ರಲ್ಲಿ ಸರಕಾರಿ ಸೇವೆಯಿಂದ ನಿವೃತ್ತರಾದರು.

ಸರಕಾರೀ ಉದ್ಯೋಗದಲ್ಲಿದ್ದಾಗಲೂ ಅವರು ಪದೇ ಪದೇ ಸಂಚಾರ ನಡೆಸುತ್ತಿದ್ದು ವಿವಿಧ ಪ್ರದೇಶಗಳ ಜೀವನದ ಹಲವು ಮುಖಗಳ ಪರಿಚಯ ಪಡೆದಿದ್ದರು. ಆಂಗ್ಲ ಸರಕಾರದಲ್ಲಿ ಉದ್ಯೋಗದಲ್ಲಿದ್ದರೂ ಬಂಕಿಮರ ದೇಶಪ್ರೇಮ ಉತ್ಕಟವಾಗಿತ್ತು. ಉದ್ಯೋಗದಲ್ಲಿದ್ದಾಗಲೇ ಅವರು ಕಾದಂಬರಿಗಳನ್ನು ಬರೆಯತೊಡಗಿದರು.

ರವೀಂದ್ರನಾಥ ಠಾಕೂರ್, ಮೈಕೆಲ್ ಮಧುಸೂಧನ ದತ್ತ, ಗಿರೀಶಚಂದ್ರ ಘೋಷ್, ದ್ವಿಜೇಂದ್ರಲಾಲ್‌ರಾಯ್ ಮುಂತಾದ ಅಂದಿನ ಬಂಗಾಳದ ಪ್ರಸಿದ್ಧ ಸಾಹಿತಿಗಳು, ಕಲಾವಿದರು, ನಾಟಕಕಾರರೊಂದಿಗೆ ಬಂಕಿಮಚಂದ್ರರಿಗೆ ನಿಕಟ ಸಂಬಂಧವಿತ್ತು. ರವೀಂದ್ರನಾಥ ಠಾಕೂರರಂತೂ ಬಂಕಿಮರ ಕಣ್ಣಮುಂದೆಯೇ ಬೆಳೆದ ಹುಡುಗ. ಒಮ್ಮೆ ಬಂಕಿಮಚಂದ್ರರನ್ನು ಸತ್ಕರಿಸಲೆಂದು ಒಂದು ಸಭೆ ಜರಗಿತು. ಆ ಸಭೆಯಲ್ಲಿ ಯುವಕ ರವೀಂದ್ರರೂ ಇದ್ದರು. ಬಂಕಿಮರು ತಮಗೆ ಹಾಕಿದ ಹಾರವನ್ನು ತೆಗೆದು ತಮ್ಮ ಬಳಿಯಲ್ಲೇ ಕುಳಿತಿದ್ದ ರವೀಂದ್ರರ ಕೊರಳಿಗೆ ಹಾಕಿ, ಅಭಿಮಾನದಿಂದ ಆಲಿಂಗಿಸಿದರು.

ಬಂಗಾಳದ ಪ್ರಸಿದ್ಧ ಸಂತಶ್ರೇಷ್ಠರಾದ ಶ್ರೀರಾಮಕೃಷ್ಣ ಪರಮಹಂಸರು ಒಮ್ಮೆ ಬಂಕಿಮಚಂದ್ರರನ್ನು ಕಂಡಾಗ, "ಬಂಕಿಮ, ಯಾಕೆ ಬಾಗಿದ್ದೀಯೆ?" ಎಂದು ಕೇಳಿದರು. "ಬ್ರಿಟಿಷರ ಬೂಟ್ ಕಾಲಿನ ಒದೆ ತಿಂದು ಹೀಗಾಗಿದ್ದೇನೆ" ಎಂದು ಬಂಕಿಮಚಂದ್ರರು ನಗುತ್ತ ಉತ್ತರ ಕೊಟ್ಟರು.

ಕಾದಂಬರಿಗಳು, ಕವಿತೆಗಳು, ಲೇಖನಗಳು, ಪ್ರಬಂಧಗಳು, ಭಗವದ್ಗೀತೆಯನ್ನು ಕುರಿತ ಭಾಷ್ಯ —ಹೀಗೆ ಬಂಕಿಮಚಂದ್ರರ ಸಾಹಿತ್ಯ ವೈವಿಧ್ಯಮಯವಾದದ್ದು. ಅವರ ಪ್ರಥಮ ಕಾದಂಬರಿ 'ರಾಜಮೋಹನನ ಹೆಂಡತಿ' ಇಂಗ್ಲಿಷಿನಲ್ಲಿ ಬರೆದದ್ದು. ಅದು ಮೊದಲ ಬಾರಿಗೆ ಕಲ್ಕತ್ತೆಯ ಒಂದು ಆಂಗ್ಲ ಭಾಷಾ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. 'ವಿಷವೃಕ್ಷ', 'ಇಂದಿರಾ', 'ಯುಗಳಾಂಗುಲೀಯ', 'ರಜನೀ', 'ರಾಧಾರಾಣಿ', 'ಕೃಷ್ಣಕಾಂತನ ಉಯಿಲು', —ಇವು ಅವರು ಬರೆದ ಆರು ಸಾಮಾಜಿಕ ಕಾದಂಬರಿಗಳು.

ಬಂಕಿಮಚಂದ್ರರು ಸ್ಕಾಟ್, ಲಿಟ್ಟನ್ ಮುಂತಾದ ಇಂಗ್ಲಿಷ್ ಕಾದಂಬರಿಕಾರರ ಪ್ರಸಿದ್ಧ ಕೃತಿಗಳನ್ನು ಓದಿ ಅವುಗಳಿಂದ ಸ್ಫೂರ್ತಿಪಡೆದಿದ್ದರು.



'ವಂದೇಮಾತರಂ' : ಬಂಕಿಮಚಂದ್ರ

ಬಂಕಿಮಚಂದ್ರರ ಹೆಸರಾಂತ ಐತಿಹಾಸಿಕ ಕಾದಂಬರಿಗಳು 'ದುರ್ಗೇಶನಂದಿನಿ', 'ಕಪಾಲ ಕುಂಡಲ', 'ಮೃಣಾಳಿನೀ', 'ಆನಂದಮಠ' ಮತ್ತು 'ದೇವಿ ಚೌಧುರಾಣಿ'. ಭಾರತದ ಚಾರಿತ್ರಿಕ ಘಟನೆಗಳು ಇವುಗಳಿಗೆ ಆಧಾರ.

'ವಂಗದರ್ಶನ' ಎಂಬ ಪತ್ರಿಕೆಯನ್ನು ಬಂಕಿಮರು ನಡೆಸುತ್ತಿದ್ದರು. ಆ ಪತ್ರಿಕೆ ಬಂಗಾಳದಲ್ಲಿ ಜನಪ್ರಿಯವಾಗಿತ್ತು. ಅವರ ಅನೇಕ ಕಾದಂಬರಿಗಳು ಆ ಪತ್ರಿಕೆಯಲ್ಲೇ ಧಾರಾವಾಹಿಯಾಗಿ ಪ್ರಕಟವಾದುವು.

1898ರಲ್ಲಿ ಬಂಕಿಮರು ಸ್ವರ್ಗಸ್ಥರಾದರು. 1938ರಲ್ಲಿ ಬಂಗಾಳದಲ್ಲಿ ಅವರ ಜನ್ಮ ಶತಾಬ್ದಿ ಉತ್ಸವವನ್ನು ವೈಭವದಿಂದ ಆಚರಿಸಲಾಯಿತು. ವಂಗ ಸಾಹಿತ್ಯ ಪರಿಷತ್ತು ಆ ಸಂದರ್ಭದಲ್ಲಿ ಅವರ ಎಲ್ಲ ಕೃತಿಗಳನ್ನು 3800 ಪುಟಗಳ ಬೃಹತ್ ಗ್ರಂಥರೂಪದಲ್ಲಿ ಪ್ರಕಟಿಸಿತು.

ಬಂಕಿಮಚಂದ್ರ ಚಟ್ಟೋಪಾಧ್ಯಾಯರಿಗೆ ಬಂಗಾಳಿ ಗದ್ಯ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಬಂಕಿಮಚಂದ್ರರ ಅನೇಕ ಕಾದಂಬರಿಗಳನ್ನು ವೆಂಕಟಾಚಾರ್ಯರು ಮೊಟ್ಟಮೊದಲ ಬಾರಿಗೆ ಕನ್ನಡ ಭಾಷೆಗೆ ಭಾಷಾಂತರಿಸಿದರು. ಕನ್ನಡ ವಾಚಕಲೋಕ ಆ ಕೃತಿಗಳನ್ನು ಆದರದಿಂದ ಸ್ವಾಗತಿಸಿತು.

## ಬಣ್ಣ

ನವಿಲು ಅದರ ನೃತ್ಯಕ್ಕೆ ಪ್ರಸಿದ್ಧ. ನವಿಲಿನ ರೀತಿ ಏನೇ ಇರಲಿ, ನೃತ್ಯ ಹೇಗೇ ಇರಲಿ ಅದು ಗರಿಗೆದರಿದಾಗ ಗರಿಗಳ ತುಂಬ ವಿಜೃಂಭಿಸುವ ಬಣ್ಣ ಕಣ್ಮನಗಳನ್ನು ಸೆಳೆಯುತ್ತದೆ.

ಹಸುರಿನ ಮಧ್ಯೆ ಅರಳಿದ ಹೂವು : ಹಿತವಾಗಿ ಬೆರೆಯುವ ಬಣ್ಣಗಳ ಉಡುಪು : ತಲೆಗೆ ಮುಡಿಯುವ ಬಣ್ಣಬಣ್ಣದ ಹೂಮಾಲೆ ; ಮನೆಗಳ ಗೋಡೆಗಳಿಗೆ ಹಚ್ಚುವ, ಕಣ್ಣಿಗೆ ಹಿತಕರವಾದ ಬಣ್ಣ ; ಪೀಠೋಪಕರಣಗಳಿಗೆ ತೊಡಿಸುವ ಬಣ್ಣ ಬಣ್ಣದ ಹೊದಿಕೆ—ಇವೆಲ್ಲವೂ ನಮ್ಮ ಜೀವನದಲ್ಲಿ ಬಣ್ಣಕ್ಕೆ ನಾವು ಕೊಡುವ ಪ್ರಾಶಸ್ತ್ಯದ ಕುರುಹಾಗಿವೆ. ಬಣ್ಣವಿಲ್ಲದ ಪ್ರಪಂಚವನ್ನು ಊಹಿಸುವುದೂ ಅಸಾಧ್ಯ. ಅಷ್ಟೇಕೆ ಚೆನ್ನಾದ ಒಂದು ಸಂಗೀತ ಕಾರ್ಯಕ್ರಮವನ್ನು ಕೂಡ ನಾವು 'ವರ್ಣಮಯವಾಗಿದ್ದಿತು' ಎಂದು ಬಣ್ಣಿಸಿ ಮೆಚ್ಚುಗೆ ತೋರಿಸುತ್ತೇವೆ. ಆದರೆ ಇದು ಕಣ್ಣಿಗೆ ಕಾಣುವ ಬಣ್ಣವಲ್ಲ. ವರ್ಣವೈವಿಧ್ಯದಿಂದ ದೊರೆಯುವ ಆನಂದವನ್ನೂ ಸಂತೋಷವನ್ನೂ ಸಂಗೀತದ ನಾದಮಾಧುರ್ಯ ಕೊಡುತ್ತದೆ ಎಂಬುದು ಇದರ ಅರ್ಥ.

ಚಿತ್ರ ಕಲಾವಿದನ ಅಭಿವ್ಯಕ್ತಿಯ ಮಾಧ್ಯಮ ಬಣ್ಣ. ಪ್ರತಿಯೊಬ್ಬ ಕಲಾವಿದ ಮೆಚ್ಚುವ, ಬಳಸುವ ಬಣ್ಣಗಳು, ಅವುಗಳ ಸಂಯೋಜನೆಗಳು ಭಿನ್ನ ಭಿನ್ನವಾಗಿರುತ್ತವೆ.

ಪ್ರಕೃತಿಯಲ್ಲಿ ಅಪಾರ ವರ್ಣ ವೈವಿಧ್ಯವನ್ನು ಕಾಣಬಹುದು. ಉಜ್ವಲ ಬಣ್ಣಗಳು, ಗಾಢವಾದ ಬಣ್ಣಗಳು, ಮಸಕು ಮಸಕು ಬಣ್ಣಗಳು, ಇವುಗಳ ನಾನಾ ಛಾಯೆಗಳು—ಇವನ್ನೆಲ್ಲ ಅಲ್ಲಿ ಕಾಣಬಹುದು. ಪ್ರಕೃತಿಯ ವರ್ಣಶ್ರೇಣಿ ಋತು ಋತುವಿನಲ್ಲೂ ಬದಲಾಗುತ್ತಿರುತ್ತದೆ. ವಸಂತದ ವರ್ಣವಿನ್ಯಾಸ ಮನಸ್ಸಿನಲ್ಲಿ ಉತ್ಸಾಹವನ್ನೂ ಹರ್ಷವನ್ನೂ ತುಂಬುತ್ತದೆ. ಮೋಡ ಮುಸುಕಿದ ವರ್ಷಋತುವಿನಲ್ಲಿ ವರ್ಣವೈಖರಿ ಗಂಭೀರವಾದದ್ದು. ಪ್ರಕೃತಿ ಪ್ರಚೋದಿಸುವ ವಿವಿಧ ಭಾವಗಳನ್ನು ಚಿತ್ರಿಸಬಯಸುವ ಕಲಾವಿದನಿಗೆ ಬಣ್ಣಗಳ ಬಗೆಗೆ ತಿಳಿವಳಿಕೆ ಅಗತ್ಯ.

ವರ್ಣಚಿತ್ರ ರಚನೆಯಲ್ಲಿ ಉಪಯೋಗಿಸುವ ಹಳದಿ, ಕೆಂಪು, ನೀಲಿ — ಇವು ಮೂರು ಪ್ರಾಥಮಿಕ ವರ್ಣಗಳು. ಹಳದಿ ಮತ್ತು ಕೆಂಪು ಬಣ್ಣಗಳ ಮಿಶ್ರಣದಿಂದ ಹುಟ್ಟುವ ಕಿತ್ತಳೆ, ಹಳದಿ ನೀಲಿ ಸೇರಿ ಹುಟ್ಟುವ ಹಸಿರು, ಕೆಂಪು ಮತ್ತು ನೀಲಿಯನ್ನು ಕೂಡಿಸುವುದರಿಂದ ದೊರೆಯುವ ನೇರಳೆ —ಇವು ದ್ವಿತೀಯ ವರ್ಗದ ವರ್ಣಗಳು. ಕಿತ್ತಳೆ ಹಸಿರು ಸೇರಿದಾಗ ದೊರೆಯುವ ಕಂದುಬಣ್ಣ, ಕಿತ್ತಳೆ ನೇರಳೆ ಸೇರಿದಾಗ ಹುಟ್ಟುವ ಕೆಂಗುಲಾಬಿ, ಹಸಿರು ನೇರಳೆಯ ಮಿಶ್ರಣದಿಂದ ರೂಪಗೊಳ್ಳುವ ಬೂದು ಬಣ್ಣ ಇವು ಮೂರನೆಯ ಗುಂಪಿನ ಬಣ್ಣಗಳು.

ಚಿತ್ರಕಾರನು ಮೊದಲನೆಯ ಆರು ಬಣ್ಣಗಳ ಸೂಕ್ತ ಮಿಶ್ರಣದಿಂದ ತಾನು ಬಯಸುವ ನೂರಾರು ವರ್ಣಛಾಯೆಗಳನ್ನು ರೂಪಿಸಿಕೊಳ್ಳಬಹುದು. ಮಿಶ್ರಣ ಪ್ರಮಾಣದ ಬದಲಾವಣೆಯಿಂದ ಕೂಡ ವಿವಿಧ ವರ್ಣಛಾಯೆಗಳು ಹುಟ್ಟುತ್ತವೆ. ಯಾವುದೇ ಬಣ್ಣಕ್ಕೆ ಬಿಳುಪನ್ನು ಬೆರೆಸುವುದರಿಂದ ಅದರ ಉಜ್ವಲತೆ ಕಡಮೆಯಾಗುತ್ತದೆ.

ಸಾಮಾನ್ಯವಾಗಿ ಕೆಲವು ಬಣ್ಣಗಳು ಮನಸ್ಸಿಗೆ ಹಿತವೆನಿಸುತ್ತವೆ ; ಕೆಲವು ಹಿತವೆನಿಸುವುದಿಲ್ಲ. ಒಂದೊಂದು ವೇಳೆ ವೈಯಕ್ತಿಕ ಪ್ರತಿಕ್ರಿಯೆಗಳಲ್ಲಿ ವ್ಯತ್ಯಾಸ ಕಾಣಬಹುದು. ಆದರೆ ಬಹು ಜನರಿಗೆ ಅನ್ವಯಿಸುವಂತೆ ಉಜ್ವಲ ಕೆಂಪು ಕಣ್ಣಿಗೆ ರಾಚಿದಂತೆ ಆಗುತ್ತದೆ. ಆಕಾಶ ಮತ್ತು ಸಮುದ್ರದ ನೀಲಿ ಬಣ್ಣಗಳು ಪ್ರಶಾಂತತೆಯ ಭಾವನೆಯನ್ನು ಉಂಟುಮಾಡುತ್ತವೆ. ಬಣ್ಣಗಳನ್ನು ಶೀತಲ ಹಾಗೂ ಶಾಖಸೂಚಕ ವರ್ಣಗಳೆಂದೂ ವಿಂಗಡಿಸುತ್ತಾರೆ. ನೀಲಿ ಶೀತಲವರ್ಗದ್ದು ; ಮನಸ್ಸಿನ ತಳಮಳ ತಗ್ಗಿಸುತ್ತದೆ. ಆದರೆ ಕಡುನೀಲಿ ಬಣ್ಣ ಇಂಥ ಹಿತ ತರಲಾರದು. ಕೆಂಪು ಉದ್ರೇಕಕಾರಿ : ಇದು ಶಾಖಸೂಚಕ ವರ್ಣ. ಆದರೂ ಕೆಂಪು ಜನಪ್ರಿಯ ಬಣ್ಣ. ಅನಂತರ ನೀಲಿ, ಹಸಿರು, ಹಳದಿ ಬಣ್ಣಗಳು.

ಒಳಾಂಗಣ ಅಲಂಕರಣಕ್ಕಾಗಿಯೂ ಮನೆಗಳಲ್ಲಿ ಬಣ್ಣಗಳನ್ನು ಉಪಯೋಗಿಸುತ್ತಾರೆ. ಇದು ಹಿತವಾಗಿರಬೇಕಾದರೆ ಬಣ್ಣದ ಉಪಯೋಗದಲ್ಲಿ ವಿವೇಚನೆ ಬೇಕಾಗುತ್ತದೆ. ಮಲಗುವ ಕೊಠಡಿ, ವಿಶ್ರಾಂತಿ ಪಡೆಯುವ ಜಾಗ, ಇಲ್ಲಿಗೆ ಸಮಾಧಾನ ಕೊಡುವ ಬಣ್ಣಗಳು ಉಚಿತ. ಅವು ತಿಳಿಯಾಗಿದ್ದರೂ ಒಳ್ಳೆಯದು. ಅತಿಥಿಗಳನ್ನು ಬರಮಾಡಿಕೊಳ್ಳುವ ಕೊಠಡಿ ಹೆಚ್ಚು ವರ್ಣರಂಜಿತವಾಗಿರಬಹುದು. ಕೊಠಡಿಯ ಗೋಡೆಗಳಿಗೆ ಶೀತಲವರ್ಗದ ಬಣ್ಣಗಳನ್ನು ಬಳೆದಾಗ, ಕೊಠಡಿ ಇರುವುದಕ್ಕಿಂತ ದೊಡ್ಡದಾಗಿಯೂ ಶಾಖಸೂಚಕ ವರ್ಣಗಳನ್ನು ಬಳೆದಾಗ ಅದು ಇರುವುದಕ್ಕಿಂತ ಚಿಕ್ಕದಾಗಿಯೂ ಕಾಣುತ್ತದೆ.

ನಾಟಕರಂಗದಲ್ಲಿ ಬಣ್ಣದ ದೀಪ, ತೆರೆಗಳನ್ನು ಉಪಯೋಗಿಸುವುದರಿಂದ ಸನ್ನಿವೇಶಕ್ಕೆ ಅನುಗುಣವಾದ ವಾತಾವರಣವನ್ನು ಕಲ್ಪಿಸಲು ಸಹಾಯವಾಗುತ್ತದೆ. ಹೊಂಬಣ್ಣದಿಂದ ಬೆಳಗಿನ ಹೊತ್ತಿನ ಭಾವನೆ ಬರಬಹುದು. ಅದೇ ದೃಶ್ಯದ ಮೇಲೆ ನೀಲಿವರ್ಗದ ಬಣ್ಣದ ಬೆಳಕುಬೀರಿದಾಗ ರಾತ್ರಿಯ ಅನುಭವವಾಗುತ್ತದೆ.

ತನ್ನ ಉಡುಗೆತೊಡುಗೆ, ಅಲಂಕರಣಗಳಲ್ಲಿ ಪ್ರತಿಯೊಂದು ಜನಾಂಗವೂ ತನ್ನದೇ ಆದ ವರ್ಣ ಅಭಿರುಚಿಯನ್ನು ಬೆಳೆಸಿಕೊಂಡಿರುತ್ತದೆ. ಅದು ಕಾಲಕಾಲಕ್ಕೂ ಬದಲಾಗುವುದುಂಟು.

ಬಣ್ಣ ಮಾನವನನ್ನು ಅನಾದಿಕಾಲದಿಂದಲೂ ಆಕರ್ಷಿಸಿದೆ.

**ನೋಡಿ : ಚಿತ್ರಕಲೆ ; ಜಲವರ್ಣಚಿತ್ರ ; ತೈಲಚಿತ್ರ**

## ಬರ್ನ್ಸ್

ಸ್ಕಾಟ್ಲೆಂಡಿನ ಗ್ರಾಮಾಂತರ ಹೋಟೆಲೊಂದು: ಕಾರ್ಮಿಕನೊಬ್ಬ ದೂರ ದೂರದ ಪ್ರದೇಶದಿಂದ ಬಂದು ಅಲ್ಲಿ ಕುಳಿತಿದ್ದಾನೆ. ಇದ್ದಕ್ಕಿದ್ದಂತೆ ಒಬ್ಬ. ರಾಬರ್ಟ್ ಬರ್ನ್ಸನ ಪದ್ಯವನ್ನು ಹಾಡಲಾರಂಭಿಸುತ್ತಾನೆ. ಎಲ್ಲರೂ ಕುತೂಹಲದಿಂದ ಕಿವಿ ನಿಮಿರಿಸಿಕೊಂಡು ಕೇಳುತ್ತಾರೆ. ಆ ಪದ್ಯವನ್ನು ಕೇಳುತ್ತಿರುವುದು ಅದೇ ಮೊದಲ ಬಾರಿಯೋ ಎಂಬಂತೆ ಆಗಾಗ ಮೆಚ್ಚುಗೆ ವ್ಯಕ್ತ ಮಾಡುತ್ತಾರೆ. ವಾಸ್ತವವಾಗಿ ಅವರೆಲ್ಲರಿಗೂ ಬರ್ನ್ಸನ ಹಾಡುಗಳು ಕಂಠಪಾಠವಾಗಿವೆ. ಹಾಡುತ್ತಿರುವವನು ಎಲ್ಲಿಯಾದರೂ ತೊದಲಿದರೆ, ತಪ್ಪಿದರೆ, ಐದಾರು ಜನ ಒಟ್ಟಿಗೆ ಅವನನ್ನು ತಿದ್ದುತ್ತಾರೆ. ಒಂದೆ ನೂರಾರು ಬಾರಿ ಕೇಳಿದ್ದರೂ ಈ ಹಾಡುಗಳು ಅವರಿಗೆ ಯಾವಾಗಲೂ ಹೊಚ್ಚ ಹೊಸವೇ. ಇಂಥ ಪ್ರಭಾವಶಾಲಿ ಕವಿ, ಬರ್ನ್ಸ್: ಆತ ಸ್ಕಾಟ್ಲೆಂಡಿನ ರಾಷ್ಟ್ರೀಯ ಕವಿ. ಐರ್‌ಶೈರ್ ಪ್ರಾಂತದ ಬಡ ರೈತನೊಬ್ಬನ ಮಗ ರಾಬರ್ಟ್ ಬರ್ನ್ಸ್, ಹುಟ್ಟಿದ್ದು 1759ರಲ್ಲಿ. ಅವನ ಜನ್ಮದಿನವಾದ ಜನವರಿ 25ರಂದು ಸ್ಕಾಟ್ಲೆಂಡಿನಾದ್ಯಂತ ವಿಶೇಷ ಉತ್ಸವಗಳು ನಡೆಯುತ್ತವೆ.



ಬರ್ನ್ಸ್ : ರಾಷ್ಟ್ರೀಯ ಕವಿ

ಹುಡುಗನಾಗಿದ್ದಾಗ ರಾಬರ್ಟ್ ಇತರ ರೈತರ ಮಡುಗರಂತೆ ಹೊಲದ ಕೆಲಸದಲ್ಲೇ ಹೆಚ್ಚಿನ ಸಮಯ ಕಳೆಯುತ್ತಿದ್ದ. ಅವನಿಗೂ ಇತರ ಹುಡುಗರಿಗೂ ಇದ್ದ ವ್ಯತ್ಯಾಸ ಒಂದೇ – ರಾಬರ್ಟನ ಜೇಬಿನಲ್ಲಿ ಯಾವಾಗಲೂ ಕವಿತೆ ಪುಸ್ತಕಗಳು ಇರುತ್ತಿದ್ದುವು. ಹೊಲ ಉಳುವಾಗ, ಆಯಾಸಗೊಂಡು ಕುದುರೆಗಳನ್ನು ವಿಶ್ರಾಂತಿಗೆ ಬಿಟ್ಟಾಗ ಅವನು ತನ್ನ ಜೇಬಿನಿಂದ ಪುಸ್ತಕಗಳನ್ನು ಹೊರತೆಗೆಯುತ್ತಿದ್ದ. ಅವನ್ನು ಓದುತ್ತಿದ್ದ. ಓದಿದಪದ್ಯಗಳನ್ನೇ ಮತ್ತೆ ಮತ್ತೆ ಓದುವುದು ಅವನ ಸ್ವಭಾವ ಕಡು ಬಡತನ ಇದ್ದರೂ ಅವನ ತಂದೆ ತನ್ನಿಂದ ಸಾಧ್ಯವಾದಷ್ಟು ವಿದ್ಯಾಭ್ಯಾಸವನ್ನು ಅವನಿಗೆ ಕೊಡಿಸಿದ. ಹೊಲದ ಕೆಲಸ ಕಡಮೆ ಇದ್ದ ಒಂದೆರಡು ತಿಂಗಳು ಹುಡುಗನನ್ನು ಶಾಲೆಗೆ ಕಳುಹಿಸುತ್ತಿದ್ದ. ಹುಡುಗ ಕೂಡ ಕಷ್ಟಪಟ್ಟು ಇಂಗ್ಲಿಷ್ ವ್ಯಾಕರಣ ಕಲಿತ; ನೃತ್ಯದ ಪಾಠಗಳನ್ನೂ ಹೇಳಿಸಿಕೊಂಡ.

ಹೊಲದ ಕೆಲಸದಿಂದ ಸ್ವಲ್ಪ ಬಿಡುವು ಸಿಕ್ಕಿತೆಂದರೆ ಸಾಕು ಬರ್ನ್ಸ್ ಪದ್ಯ ರಚಿಸುತ್ತಿದ್ದ. ಹಳ್ಳಿಯ ಹೋಟೆಲಿಗೆ ಹೋಗಿ ಗೆಳೆಯರೊಡನೆ ಹರಟೆ ಹೊಡೆಯುತ್ತಿದ್ದ. ಸ್ಕಾಟ್ಲೆಂಡಿನಲ್ಲಿ ಪ್ರಬಲವಾಗಿದ್ದ ಕಾಲ್ವಿನ್ ಧರ್ಮದ ಖಂಡನೆ ಅವನಿಗೆ ತೀರ ಇಷ್ಟವಾದ ಹವ್ಯಾಸ. ಹುಡುಗಿಯರೊಡನೆ ಗೆಳೆತನ ಬೆಳೆಸಿದ. ಕಲ್ಲು ಕೆಲಸಗಾರನೊಬ್ಬನ ಮಗಳನ್ನು ಮದುವೆಯಾಗ ಬಯಸಿದ. ಆದರೆ ಈ ಬಡ ತರುಣನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡಲು ಆತ ಒಪ್ಪಲಿಲ್ಲ. ಭಗ್ನಪ್ರೇಮ ಹಾಗೂ ಹಣದ ಅಭಾವದ ತೊಂದರೆಗಳಿಗೆ ಸಿಲುಕಿ ಬರ್ನ್ಸ್ ಊರುಬಿಟ್ಟು ಜಮೇಯಿಕಾ ದ್ವೀಪಕ್ಕೆ ವಲಸೆಹೋಗಲು ನಿರ್ಧರಿಸಿದ.

ಈ ದೂರದ ಪ್ರಯಾಣಕ್ಕೆ ದುಡ್ಡು ಬೇಕಲ್ಲ? ತನ್ನ ಹಲವಾರು ಪದ್ಯಗಳಲ್ಲಿ ಕೆಲವನ್ನು ಆರಿಸಿ ಒಂದು ಸಂಕಲನವನ್ನು ಸಿದ್ಧಗೊಳಿಸಿ ಅದನ್ನು ಪ್ರಕಟಣ ಸಂಸ್ಥೆಯೊಂದಕ್ಕೆ ಕೊಟ್ಟ. ಇದರಿಂದ ಇಪ್ಪತ್ತು ಪೌಂಡ್ ಹಣ ದೊರೆಯಿತು. ಮುದ್ರಿತವಾದ 600 ಪ್ರತಿಗಳು ಒಂದು ತಿಂಗಳೊಳಗೆ ಮಾರಾಟವಾದವು. ಇದರ ದ್ವಿತೀಯ ಮುದ್ರಣ ತರಲು ಅವನು ನಡೆಸಿದ ಪ್ರಯತ್ನ ವಿಫಲವಾಯಿತಾದರೂ ಅವನಿಗೆ ಎಡಿನ್‌ಬರೋದ ಗಣ್ಯವ್ಯಕ್ತಿಗಳ ಪರಿಚಯವಾಯಿತು. ಅವನ ಇನ್ನೊಂದು ಕವನ ಸಂಗ್ರಹ ಬೆಳಕಿಗೆ ಬಂತು. ಜಮೇಯಿಕಾಕ್ಕೆ ವಲಸೆಹೋಗುವ ಯೋಚನೆಯನ್ನು ಬರ್ನ್ಸ್ ಬಿಟ್ಟುಬಿಟ್ಟ.

ಎಡಿನ್‌ಬರೋದಲ್ಲಿ ಬರ್ನ್ಸ್ ಸಾಕಷ್ಟು ಜನಪ್ರಿಯನಾದರೂ, ಪಟ್ಟಣವಾಸ ಅವನಿಗೆ ಹಿಡಿಸಲಿಲ್ಲ. ಡನ್‌ಫ್ರೆಸ್‌ಶೈರ್‌ಗೆ ಹೋಗಿ ಹೊಲ ಕೊಂಡು ಅಲ್ಲೇ ಬೇಸಾಯದಲ್ಲಿ ನಿರತನಾದ. ತಾನು ಪ್ರೀತಿಸಿದ್ದ ಕಲ್ಲು ಕೆಲಸಗಾರನ ಮಗಳನ್ನು 1788ರಲ್ಲಿ ಮದುವೆಯಾದ. ವ್ಯವಸಾಯದಲ್ಲಿ ಹೆಚ್ಚಿನ ಆಸಕ್ತಿತೋರಿಸದೆ ಇದ್ದ ಕಾರಣ ಮತ್ತೆ ಕಷ್ಟ–ನಷ್ಟಗಳಿಗೆ ಒಳಗಾದ. 1791ರಲ್ಲಿ ಊರಿನ ಸುಂಕದ ಅಧಿಕಾರಿ ಕೆಲಸಕ್ಕೆ ಸೇರಿಕೊಂಡ. ಹೊರಗಿನಿಂದ ಬರುತ್ತಿದ್ದ ಮದ್ಯದ ಮೇಲೆ ಕರವಸೂಲಿ ಮಾಡುವುದು ಇವನ ಕೆಲಸವಾಗಿತ್ತು. ಉದ್ಯೋಗದಲ್ಲಿದ್ದಾಗ ಹೊತ್ತುಗೊತ್ತು ಇಲ್ಲದೆ ಕುಡಿಯುವುದನ್ನು ಕಲಿತ. ಇವನು ಫ್ರಾನ್ಸಿನ ಮಹಾಕ್ರಾಂತಿಯನ್ನು ಸಮರ್ಥಿಸಿ ಮಾತನಾಡುತ್ತಿದ್ದರಿಂದ ಸರಕಾರದ ಅವಕೃಪೆಗೆ ಪಾತ್ರನಾದ. ನ್ಯಾಯವಾಗಿ ಸಲ್ಲಬೇಕಾಗಿದ್ದ ಬಡತಿ ಇವನಿಗೆ ಸಿಗದೆ ಹೋಯಿತು. ಬರ್ನ್ಸನ ಕುಡಿತ ಮತ್ತೂ ಹೆಚ್ಚಿತು. ವಾತರೋಗ ಬಾಧಿಸಿತು. ಮೂವತ್ತೇಳನೆಯ ವಯಸ್ಸಿನಲ್ಲಿ, ಬಡತನದಲ್ಲಿ, ಬರ್ನ್ಸ್ 1796 ಜೂಲೈ 21ರಂದು ಕೊನೆಯುಸಿರೆಳೆದ.

ಬರ್ನ್ಸನ ಕೊನೆಯ ದಿನಗಳು ಕಷ್ಟದ ದಿನಗಳಾಗಿದ್ದರೂ ಅವನ ಅತ್ಯಂತ ಸುಂದರ ಪದ್ಯಗಳ ರಚನೆ ನಡೆದದ್ದು ಆ ಕಾಲದಲ್ಲಿ. ಆ ಅವಧಿಯಲ್ಲಿ ಬರ್ನ್ಸ್ ಸ್ಕಾಟ್ಲೆಂಡಿನ ಕವಿ ಮಾತ್ರವಲ್ಲದೆ ಜಗತ್ತಿನ ಕವಿ ಎನಿಸಿಕೊಳ್ಳುವಷ್ಟು ಉನ್ನತ ಸಾಧನೆಗಳನ್ನು ಕೈಗೂಡಿಸಿಕೊಂಡ. ಅವನ ಪ್ರೇಮಗೀತೆಗಳು ಇಂಗ್ಲಿಷ್ ಓದುಗರೆಲ್ಲರ ಮನವನ್ನು ಸೂರೆಗೊಂಡುವು. ಪ್ರಕೃತಿಯ ವರ್ಣನೆ, ಬಡವರ ಬಾಳಿನ ಚಿತ್ರಣಗಳಲ್ಲಿ ಬರ್ನ್ಸನನ್ನು ಮೀರಿಸಿದವರಿಲ್ಲ ಎಂದು ಹೇಳುವಂತಾಯಿತು. ಸ್ಕಾಟ್ಲೆಂಡಿನ ಜನ ಅವನನ್ನು ಅಷ್ಟಾಗಿ ಪ್ರೀತಿಸಲು ಕಾರಣ, ತನ್ನ ಕಾವ್ಯರಚನೆಯಲ್ಲಿ ಅವನು ಉಪಯೋಗಿಸುತ್ತಿದ್ದ ಸ್ಕಾಟ್ಲೆಂಡಿನ ಆಡುಭಾಷೆ. ಸ್ಕಾಟ್ಲೆಂಡಿನ ಜನ ಆಡುವ ಇಂಗ್ಲಿಷ್ ಭಾಷೆಯ ಪರಿಚಯ ವಿಲ್ಲದವರಿಗೆ ಬರ್ನ್ಸನ ಪದ್ಯಗಳನ್ನು ಪೂರ್ತಿಯಾಗಿ ಅರ್ಥಮಾಡಿಕೊಳ್ಳುವುದು ತುಸು ಕಷ್ಟ. ಬರ್ನ್ಸನ ಹಲವು ಕವನ ಸಂಕಲನಗಳ ಕೊನೆಗೆ

ಅರ್ಥಗಳನ್ನು ಕೊಟ್ಟಿದ್ದಾನೆ. ತಾನೂ ಇಂಗ್ಲಿಷಿನಲ್ಲಿ ಬರ್ನ್ಸ್ [illegible] ಹಾಡುಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಹೆಚ್ಚಿನವನ್ನು ಸಂಗೀತಕ್ಕೆ ಅಳವಡಿಸುವುದು ಸಾಧ್ಯ.

ತಾನು ದರಿದ್ರನಾಗಿದ್ದರೂ ಸಾಹಿತ್ಯದ ಸಿರಿವಂತಿಕೆಯನ್ನು ಜನತೆಗೆ ಹಂಚಿದ ಮಹಾಕವಿ ಬರ್ನ್ಸ್.

## ಬರ್ನಾರ್ಡ್ ಷಾ

"ನಿಜವನ್ನು ಹೇಳುವುದೇ ನನ್ನ ಹಾಸ್ಯ ನಿರೂಪಣೆಯ ವಿಧಾನ: ಯಾಕೆಂದರೆ ಸತ್ಯವೇ ಈ ಜಗತ್ತಿನಲ್ಲಿ ಅತ್ಯಂತ ತಮಾಷೆಯಾದ ಸಂಗತಿ" ಎಂದು ಹೇಳಿದ ಬರ್ನಾರ್ಡ್ ಷಾ ಸಾಹಿತ್ಯ ಪ್ರಪಂಚದ ಅತ್ಯಂತ ಕುತೂಹಲಕಾರಿ ವ್ಯಕ್ತಿ. ಪ್ರಚಂಡ ಬುದ್ಧಿವಂತಿಕೆ, ಅದ್ವಿತೀಯ ಕುಚೋದ್ಯ, ಕಟು ವಿಡಂಬನೆ, ಸ್ಪಷ್ಟವಾದ ಭಾಷೆ–ಶೈಲಿಗಳನ್ನುಳ್ಳ ಷಾ ಈ ಶತಮಾನದ ಮೊದಲ ಭಾಗದ ಅತ್ಯಂತ ಪ್ರಭಾವಶಾಲಿ ಇಂಗ್ಲಿಷ್ ನಾಟಕಕಾರ.

ಐರ್‌ಲೆಂಡಿನ ಡಬ್ಲಿನಿನಲ್ಲಿ 1856ರ ಜುಲೈ 26ರಂದು ಷಾ ಜನಿಸಿದ. ಚಿಕ್ಕಂದಿನಲ್ಲಿ ಸಂಗೀತ ಅಭ್ಯಾಸ ಮಾಡಿದ. ಧಾರ್ಮಿಕ ವಿಷಯಗಳ ಬಗೆಗೆ ಧೈರ್ಯವಾಗಿ, ಸ್ವತಂತ್ರವಾಗಿ ಮಾತನಾಡುವ ವಾತಾವರಣ ಅವನ ಮನೆಯಲ್ಲಿತ್ತು. ಇದರಿಂದಾಗಿ ಷಾ ಹತ್ತು ವರ್ಷ ತುಂಬುವ ಮೊದಲೇ ಇಗರ್ಜಿಗೆ ಹೋಗುವುದನ್ನು ಬಿಟ್ಟ. 15 ವರ್ಷವಾದಾಗ ಶಾಲೆಗೆ ಹೋಗುವುದನ್ನೂ ನಿಲ್ಲಿಸಿದ. ಆದರೆ ಮನೆಯಲ್ಲೇ ಕುಳಿತು ಬನ್‌ಯನನ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್', ಲಾಕ್‌ನ 'ಆನ್ ದಿ ಹ್ಯೂಮನ್ ಅಂಡರ್‌ಸ್ಟ್ಯಾಂಡಿಂಗ್' ನಂಥ ದೊಡ್ಡ ದೊಡ್ಡ ಗ್ರಂಥಗಳನ್ನು ಓದಿದ. ಶಾಲೆ ಬಿಟ್ಟ ಅನಂತರ ಕೊಂಚ ಕಾಲ ಜಮೀನು ದಲಾಲರ ಆಫೀಸೊಂದರಲ್ಲಿ ಕಾರಕೂನನಾಗಿ ಕೆಲಸ ಮಾಡಿದ.

ಷಾನಿಗೆ ಲೇಖಕನಾಗಬೇಕೆಂಬ ಬಯಕೆ ಬಲವಾಗಿತ್ತು. 1876ರಲ್ಲಿ ಲಂಡನಿಗೆ ಬಂದ. 1879ರಿಂದ 1883ರ ವರೆಗೆ ಐದು ಕಾದಂಬರಿಗಳನ್ನು ಬರೆದ. ಅವನ್ನು ಪ್ರಕಾಶಕರಿಗೆ ಕಳುಹಿಸಿದ. ಆದರೆ ಅವೆಲ್ಲ ಅಸ್ವೀಕೃತವಾಗಿ ಹಿಂದಕ್ಕೆ ಬಂದುವು.

ಈ ಸನ್ನಿವೇಶದಲ್ಲಿ ಷಾನ ಮೇಲೆ ಸಮಾಜವಾದದ ಪ್ರಭಾವ ತೀವ್ರವಾಗಿ ಆಯಿತು. ಸಮಾಜವಾದವನ್ನು ಕ್ರಾಂತಿಯ ಮೂಲಕ ತರಲು ಸಾಧ್ಯವಿಲ್ಲ; ಶಿಕ್ಷಣ ಕ್ರಮದಲ್ಲಿ ಸೂಕ್ತ ಬದಲಾವಣೆ ಮಾಡುವುದರಿಂದ ಮಾತ್ರ ಇದು ಸಾಧ್ಯ –ಎಂಬುದು ಅವನ ನಂಬಿಕೆಯಾಗಿತ್ತು. ಅದೇ ರೀತಿ ವಿದ್ಯಾಭ್ಯಾಸದ ಮೂಲಕ ಸಮಾಜಸುಧಾರಣೆಯೂ ಆಗಬೇಕೆಂದು ಅವನು ಹೇಳುತ್ತಿದ್ದ. ಸಮಾಜವಾದವನ್ನು ಅಂಗೀಕರಿಸಿದ್ದ ಫೇಬಿಯನ್ ಸೊಸೈಟಿ ಇವನ ಗಮನ ಸೆಳೆಯಿತು. ಇವನು 1884ರಲ್ಲಿ ಅದನ್ನು ಸೇರಿ ಪ್ರಮುಖ ಸದಸ್ಯನಾದ. ಸಂಘದ ಸದಸ್ಯನಾಗಿ ಷಾ ರಾಜಕೀಯ ಹಾಗೂ ಆರ್ಥಿಕ ವಿಚಾರಗಳ ಬಗೆಗೆ ಅನೇಕ ಭಾಷಣಗಳನ್ನು ಮಾಡಿದ. ಲೇಖನಗಳನ್ನು ಬರೆದು ಸಮಾಜವಾದವನ್ನು ಕುರಿತು ಪ್ರಚಾರ ಮಾಡಿದ. ಇದೇ ಸಮಯದಲ್ಲಿ ಪತ್ರಿಕೆಗಳಿಗೆ ಸಂಗೀತ, ನಾಟಕ ವಿಮರ್ಶೆಗಳನ್ನೂ ಬರೆಯುತ್ತಿದ್ದ.

ಇಬ್ಸೆನ್ ತನ್ನ ನಾಟಕಗಳಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಜೀವಂತ ಪಾತ್ರಗಳ ಮೂಲಕ ರಂಗದ ಮೇಲೆ ತಂದ ರೀತಿಯನ್ನು ಷಾ ಬಹಳ ಮೆಚ್ಚಿದ್ದ. ಇಬ್ಸೆನನಿಂದ ಪ್ರಭಾವಿತನಾಗಿದ್ದ ಷಾ ನಾಟಕ ಬರೆಯಲಾರಂಭಿಸಿದ.

ತನ್ನ ನಾಟಕಗಳ ಮೂಲಕ ಷಾ [illegible] ಸಮಾಜಸುಧಾರಣೆಗಾಗಿ ತನ್ನ ಕ್ರಾಂತಿಕಾರಕ [illegible] ಪರಿಣಾಮಕಾರಿಯಾಗಿ ಪ್ರಸಾರಮಾಡಿದ. 1892ರಲ್ಲಿ ಇವನ ಮೊದಲ ನಾಟಕ 'ವಿಡೋವರ್ಸ್ ಹೌಸ್' ಪ್ರದರ್ಶನಗೊಂಡಿತು. [illegible] ಅನೇಕ ನಾಟಕಗಳನ್ನು ಇವನು ಬರೆದರೂ ಅವುಗಳಲ್ಲಿದ್ದ ಸಾಮಾಜಿಕ ವಿಡಂಬನೆ ಹಾಗೂ ಕ್ರಾಂತಿಕಾರಕ ವಿಚಾರಗಳಿಂದಾಗಿ ಅವನ್ನು ರಂಗದ ಮೇಲೆ ಆಗ ಪ್ರದರ್ಶಿಸಲಾಗಲಿಲ್ಲ. ಆದರೆ ಷಾ ತನ್ನ ಮುದ್ರಿತ ನಾಟಕಗಳಿಗೆ ಬರೆಯುತ್ತಿದ್ದ ಅತಿ ದೀರ್ಘವಾದರೂ ಅತ್ಯಂತ ಕುತೂಹಲಕಾರಿಯಾದ ಮುನ್ನುಡಿಗಳಿಂದಾಗಿ, ಇವನ ನಾಟಕಗಳನ್ನು ಅನೇಕರು ಓದತೊಡಗಿದರು. 'ಆರ್ಮ್ಸ್ ಅಂಡ್ ದಿ ಮ್ಯಾನ್', 'ಕ್ಯಾಂಡಿಡ', 'ಯೂ ಕೆನ್ ನೆವರ್ ಟೆಲ್', 'ದಿ ಡೆವಿಲ್ಸ್ ಡಿಸೈಪ್‌ಲ್' ಮೊದಲಾದ ನಾಟಕಗಳನ್ನು ಷಾ ಈ ಸಮಯದಲ್ಲಿ ಬರೆದ. ಅಮೆರಿಕದ ಕ್ರಾಂತಿಯನ್ನು ಕುರಿತ 'ದಿ ಡೆವಿಲ್ಸ್ ಡಿಸೈಪ್‌ಲ್' ನಾಟಕದಿಂದ ಅವನಿಗೆ ತುಂಬ ಸಂಪಾದನೆಯೂ ಆಯಿತು. ಹೀಗೆ ತನ್ನ ಆರ್ಥಿಕ ಸ್ಥಿತಿ ಉತ್ತಮಗೊಂಡಮೇಲೆ ಅವನು ಪತ್ರಿಕೆಗಳಿಗೆ ಸಂಗೀತ, ನಾಟಕಗಳನ್ನು ಕುರಿತು ವಿಮರ್ಶೆ ಬರೆಯುವುದನ್ನು ನಿಲ್ಲಿಸಿಬಿಟ್ಟ.



ಸತ್ಯವೇ ತಮಾಷೆ : ಬರ್ನಾರ್ಡ್ ಷಾ

ಈ ಶತಮಾನದ ಆರಂಭದಲ್ಲಿ ಷಾನ ನಾಟಕಗಳನ್ನು ಇಂಗ್ಲೆಂಡಿನಲ್ಲಿ ಮಾತ್ರ ಆಡಲಾಗುತ್ತಿತ್ತು. 1915ರ ವೇಳೆಗೆ ಅವನ ಖ್ಯಾತಿ ಬೆಳೆದು ಅವನು ಯೂರೋಪಿನ ಅತ್ಯಂತ ಪ್ರಭಾವಶಾಲಿ ನಾಟಕಕಾರರಲ್ಲೊಬ್ಬನಾದ. 'ಮ್ಯಾನ್ ಅಂಡ್ ಸೂಪರ್ ಮ್ಯಾನ್' (1905), 'ಪಿಗ್‌ಮಾಲಿಯನ್' (1913), 'ಬ್ಯಾಕ್ ಟು ಮೆಥೂಸಲಾ' (1922), 'ಸೇಂಟ್ ಜೋನ್' (1923) ಮೊದಲಾದುವು ಈ ಸಮಯದಲ್ಲಿ ಷಾ ಬರೆದ ಪ್ರಮುಖ ನಾಟಕಗಳು. 1925ರಲ್ಲಿ ಷಾಗೆ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು.

ವೀರರಸಪ್ರಧಾನ ಅಥವಾ ಹುಡುಗಾಟಿಕೆಯ ಪ್ರಹಸನಗಳೇ ಜನಪ್ರಿಯ ನಾಟಕಗಳಾಗಿ ಮೆರೆಯುತ್ತಿದ್ದ ಕಾಲದಲ್ಲಿ ಷಾ ನಾಟಕ ಕ್ಷೇತ್ರಕ್ಕೆ ಹೊಸ ರೂಪವನ್ನು ಕೊಟ್ಟ. ಇಬ್ಸೆನನ ಹಾದಿಯಲ್ಲಿ ನಡೆದು, ನಾಟಕಗಳಲ್ಲಿ ಸಾಮಾಜಿಕ ಸಮಸ್ಯೆಗಳನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ವಿವೇಚಿಸಿದ. ಇವನ ನಾಟಕಗಳು, ಬುದ್ಧಿವಂತರನ್ನು –ಸುಶಿಕ್ಷಿತರನ್ನು ನಾಟಕಮಂದಿರ



ಸೂತ್ರದ ಬೊಂಬೆಯಾಟದ ಪ್ರೇಕ್ಷಕ ಬೊಂಬೆಗಳಾಗಿ ಶೇಕ್ಸ್‌ಪಿಯರ್, ಬರ್ನಾರ್ಡ್ ಷಾ

ಗಳಿಗೆ ಆಕರ್ಷಿಸಿದುವು. ಹೀಗೆ ಸಾಮಾಜಿಕ ಹಾಗೂ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಷಾನ ಸಾಧನೆ ಹಿರಿದಾದದ್ದು. ಯಾವುದೇ ತರ್ಕ ಅಥವಾ ತತ್ತ್ವಗಳಿಗಿಂತ ಜೀವನ ಮುಖ್ಯ. ಜೀವನದಲ್ಲಿ ತರ್ಕ ಉಳಿಯಲಾರದು; ಮಾನವರು ಉಳಿದಿರುತ್ತಾರೆ —ಎಂಬ ಅಭಿಪ್ರಾಯವನ್ನು ಷಾ ತನ್ನ ನಾಟಕಗಳಲ್ಲಿ ಪ್ರತಿಪಾದಿಸಿದ. ಶೇಕ್ಸ್‌ಪಿಯರನ ಅನಂತರ ಬಂದ ಇಂಗ್ಲಿಷ್ ನಾಟಕಕಾರರಲ್ಲಿ ಬರ್ನಾರ್ಡ್ ಷಾನೇ ಅತ್ಯಂತ ಹೆಚ್ಚು ಪ್ರಭಾವಶಾಲಿ.

ಷಾನ ವ್ಯಕ್ತಿತ್ವ ತೀರ ವಿಚಿತ್ರವಾದದ್ದು. ಮೊದಮೊದಲು ಸಭಾಕಂಪ ಇವನನ್ನು ಕಾಡುತ್ತಿತ್ತು. ಪ್ರಯತ್ನಪಟ್ಟು ಈ ಹೆದರಿಕೆಯನ್ನು ಕ್ರಮೇಣ ಕಳೆದುಕೊಂಡ; ಉತ್ತಮ ವಾಗ್ಮಿಯಾದ. ಅವನ ಸಂಭಾಷಣಾ ಚಾತುರ್ಯ ಸಮಯಸ್ಫೂರ್ತಿಗಳು ಅದ್ಭುತವಾದುವು. "ಗಾಂಧಿಜಿಯನ್ನು ನೀವೇಕೆ ಭೇಟಿ ಮಾಡಲಿಲ್ಲ?"—ಎಂದು ಯಾರೋ ಆತನನ್ನು ಕೇಳಿದಾಗ ಅವನು, "ಅವರನ್ನು ನಾನೇಕೆ ಕಾಣಬೇಕು? ಆತನೊಬ್ಬ ಮಹಾತ್ಮ, ನಾನೂ ಒಬ್ಬ ಮಹಾತ್ಮ" ಎಂದ. ಇದು ಕೇವಲ ಪರಿಹಾಸ್ಯದ ಮಾತು, ಅಷ್ಟೆ. ಗಾಂಧಿಜಿಯ ಬಗೆಗೆ ಅವನಿಗೆ ಅಪಾರ ಗೌರವವಿತ್ತು. ಮುಂದೆ ಒಮ್ಮೆ ಗಾಂಧಿಜಿಯನ್ನು ಕಂಡಾಗ "ಹಿಮಾಲಯವನ್ನು ನೋಡಿದಂತಾಯಿತು" ಎಂದ. ಗಾಂಧಿಜಿಯ ಕೊಲೆ ಸುದ್ದಿ ಕೇಳಿ, "ತುಂಬ ಸಜ್ಜನನಾಗಿರುವುದು ಕೂಡ ಎಷ್ಟು ಅಪಾಯಕರ ಎಂಬುದಕ್ಕೆ ಇದೊಂದು ನಿದರ್ಶನ" ಎಂದು ಉದ್ಗರಿಸಿದ.

ಬರ್ನಾರ್ಡ್ ಷಾ ಶುದ್ಧ ಸಸ್ಯಾಹಾರಿಯಾಗಿದ್ದ. ಸಿಗರೇಟು ಸೇದುತ್ತಿರಲಿಲ್ಲ; ಮದ್ಯಪಾನ ಮಾಡುತ್ತಿರಲಿಲ್ಲ.

ತೀರ ಬಡತನದಲ್ಲಿ ಲೇಖನ ವೃತ್ತಿಯನ್ನು ಪ್ರಾರಂಭಿಸಿದ ಷಾ ತನ್ನ ಕೊನೆಗಾಲಕ್ಕೆ ಸಾಕಷ್ಟು ಹಣ ಮಾಡಿದ್ದ. ತನ್ನ ಆಸ್ತಿಯಾದ 367.233 ಪೌಂಡ್‌ಗಳಲ್ಲಿ ಕೊಂಚ ಹಣವನ್ನು ತನ್ನ ಬಂಧುಗಳು ಹಾಗೂ ಸೇವಕರಿಗೆ ಹಂಚಲು ಮೀಸಲಿಟ್ಟ. ಮಿಕ್ಕ ಹಣ ಇಂಗ್ಲಿಷ್ ಭಾಷೆಯ ಅಭಿವೃದ್ಧಿಗಾಗಿ ಮುಡಿಪಾಯಿತು.

ಹಾಗೆ ತನ್ನ ಸಾಮರ್ಥ್ಯದಲ್ಲಿ ಅಗಾಧ ವಿಶ್ವಾಸ. ಈ ವಿಶ್ವಾಸ ಕೊಂಚ ಹೆಚ್ಚಾಗಿ, ೯೪ ವಯಸ್ಸಿನಲ್ಲಿದ್ದ ಅವನು ಒಮ್ಮೆ ತನ್ನ ತೋಟದಲ್ಲಿ ಗಿಡಗಳ ಟೊಂಗೆಗಳನ್ನು ತಾನೇ ಕತ್ತರಿಸಲು ಹೋಗಿ ಬಿದ್ದು ಕಾಲು ಮುರಿದುಕೊಂಡ. ಅನಂತರ ಅವನ ಆರೋಗ್ಯ ಸುಧಾರಿಸಲೇ ಇಲ್ಲ. 1950ರ ನವೆಂಬರ್ 3ರಂದು, ತನ್ನ 94ನೆಯ ವರ್ಷದಲ್ಲಿ ಕಣ್ಣುಮುಚ್ಚಿದ.

ಷಾ ಅತ್ಯಂತ ಕ್ರಿಯಾಶಾಲಿಯಾದ ಲೇಖಕ. ತನ್ನ 90ನೆಯ ವರ್ಷದಲ್ಲಿ ಬರೆದ 'ಬಾಯೆಂಟ್ ಬಿಲಿಯನ್' ನಾಟಕದ ಮುನ್ನುಡಿಯಲ್ಲಿ ಆತ ಹೀಗೆ ಹೇಳಿದ್ದಾನೆ: "ಇವನು ಮುದುಕನಾಗಿದ್ದಾನೆ, ಇನ್ನಾದರೂ ಬರೆಯುವುದನ್ನು ನಿಲ್ಲಿಸಬೇಕು ಎನ್ನದಿರಿ. ಎಲ್ಲಿಯವರೆಗೆ ನಾನು ಬದುಕಿರುತ್ತೇನೋ ಅಲ್ಲಿಯವರೆಗೆ ನಾನು ಬರೆಯಲೇಬೇಕು. ಬರೆಯುವುದನ್ನು ನಿಲ್ಲಿಸಿದ ತಕ್ಷಣ ಬದುಕಲು ಏನೂ ಇಲ್ಲದವರಂತೆ ನಾನು ಸಾಯಬೇಕಾಗುತ್ತದೆ."

ಬರೆದು ಅಮರರಾದವರಲ್ಲಿ ಗಣನೀಯ, ಬರ್ನಾರ್ಡ್ ಷಾ.

## ಬಯಲು ನಾಟ್ಯಮಂದಿರ

ಅದ್ಭುತ ಶಿರೋಭೂಷಣ, ದೊಡ್ಡ ಮೀಸೆ, ರಂಗುರಂಗಿನ ಬಟ್ಟೆಗಳು, ವಿಧವಿಧವಾದ ಕಂಠಾಭರಣಗಳು —ಇವು ಯಕ್ಷಗಾನದ ಪಾತ್ರಧಾರಿಗಳನ್ನು ನೋಡಿದವರಿಗೆ ಎದ್ದುಕಾಣುವ ಅಂಶಗಳು. ಯಕ್ಷಗಾನ ಕರ್ನಾಟಕದ ಜಾನಪದ ಕಲಾಪ್ರಕಾರಗಳಲ್ಲಿ ಮುಖ್ಯವಾದದ್ದು. ಇದರ ಪ್ರದರ್ಶನ ನಡೆಯುತ್ತಿದ್ದುದು, ಈಗಲೂ ಬಹುಮಟ್ಟಿಗೆ ನಡೆಯುವುದು, ಬಯಲಿನಲ್ಲಿಯೇ. ಜಾನಪದ ನೃತ್ಯಾದಿಗಳು ಕೂಡ ಬಯಲಿನಲ್ಲಿಯೇ ನಡೆಯುತ್ತವೆ. ಬಯಲಿನಲ್ಲಿ ಅಭಿನಯಿಸುವುದರಿಂದ ಯಕ್ಷಗಾನವನ್ನು ಬಯಲಾಟವೆಂದೂ ಕರೆಯುತ್ತಾರೆ. ಇದಕ್ಕೆ ಶಾಶ್ವತ ರಂಗಮಂಟಪಗಳಿಲ್ಲ, ಬರಿಯ ಚಪ್ಪರ ಮಾತ್ರ.

ಕ್ರಿ. ಪೂ. 5ನೆಯ ಶತಮಾನದಲ್ಲಿ ಗ್ರೀಕರು ಬಯಲು ರಂಗಮಂಟಪವನ್ನು ನಿರ್ಮಿಸಿದರು. ಕುದುರೆಯ ಲಾಳದಾಕಾರದ ನಾಟ್ಯಮಂದಿರ. ಮಧ್ಯೆ ಸಮತಟ್ಟಾದ ನಾಟ್ಯಮಾಡುವ ಸ್ಥಳ. ಸುತ್ತಲೂ ಪ್ರೇಕ್ಷಕರು ಕುಳಿತುಕೊಳ್ಳಲು ಕಲ್ಲಿನ ಅಥವಾ ಅಮೃತಶಿಲೆಯ ಸೋಪಾನ. ನಾಟ್ಯ ಮಾಡುವ ಸ್ಥಳದ ಹಿಂದುಗಡೆಗೆ ಅಗಲ ಕಿರಿದಾದ, ಉದ್ದನೆಯ ರಂಗಸ್ಥಳ. ನಾಟ್ಯಮಂದಿರಕ್ಕೆ ಛಾವಣಿ ಇರುತ್ತಿರಲಿಲ್ಲ.

ರಂಗಸ್ಥಳದ ಹಿಂಭಾಗದಲ್ಲಿ ಮಧ್ಯೆ ಹಾಗೂ ಪಾರ್ಶ್ವಗಳಲ್ಲಿ ಬಾಗಿಲುಗಳು ಇರುತ್ತಿದ್ದುವು. ಅಭಿನಯಿಸುವ ಪಾತ್ರಗಳು ಮಧ್ಯದ ಬಾಗಿಲಿನಿಂದ ರಂಗಪ್ರವೇಶ ಮಾಡಿದರೆ, ಮೇಳದವರು ಪಾರ್ಶ್ವದ ಬಾಗಿಲಿನಿಂದ ಬರುತ್ತಿದ್ದರು. ರಂಗಸ್ಥಳದ ವ್ಯವಸ್ಥೆ ಹೀಗೆ ಸರಳವಾಗಿದ್ದರೂ ಅವಶ್ಯ ಪರಿಣಾಮ ಉಂಟುಮಾಡಲು ಕೆಲವು ವೇಳೆ ಯಾಂತ್ರಿಕ ಸಲಕರಣೆ



ಗ್ರೀಕ್ ರಂಗಭೂಮಿಯ ನರ್ತನಸ್ಥಳ — ಮಧ್ಯದಲ್ಲಿರುವುದು ಪ್ರಾರ್ಥನಾವೇದಿಕೆಯ ಅಡಿಪಾಯ

ಗಳನ್ನು ಉಪಯೋಗಿಸುತ್ತಿದ್ದರು. ದೇವತೆಯ ಪ್ರವೇಶವಾಗಬೇಕಾದಾಗ, ದೇವತೆ ಆಕಾಶದಿಂದ ಇಳಿದುಬಂದಂತೆ ತೋರಿಸಲು ಆ ಪಾತ್ರಧಾರಿಯನ್ನು ರಂಗಸ್ಥಳಕ್ಕೆ ಯಾಂತ್ರಿಕ ವ್ಯವಸ್ಥೆಯ ಮೂಲಕ ಇಳಿಸುತ್ತಿದ್ದರು. ಹಾಗೆಯೇ ಪಾತಾಳ ಲೋಕದಿಂದ ಬರುವಂಥ ಪಾತ್ರಗಳನ್ನು ನೆಲಮಾಳಿಗೆಯ ಬಾಗಿಲ ಮೂಲಕ ರಂಗಮಂಚಕ್ಕೇರಿಸಲೂ ಯಾಂತ್ರಿಕ ವ್ಯವಸ್ಥೆ ಇತ್ತು.

ಕ್ರೈಸ್ತಧರ್ಮದ ಸಂತರ ಜೀವನವನ್ನು ಕುರಿತ ನಾಟಕಗಳನ್ನು ಕ್ರೈಸ್ತ ದೇವಾಲಯಗಳ ಆವರಣದಲ್ಲಿ ಮೆಟ್ಟಲುಗಳ ಮೇಲೆ, ಪ್ರದರ್ಶಿಸುವ ಪದ್ಧತಿ ಇತ್ತು. ಇಂಥ ನಾಟಕಗಳ ಪ್ರದರ್ಶನಕ್ಕೆ ಇನ್ನೂ ವಿಸ್ತಾರವಾದ ಸ್ಥಳ ಬೇಕೆನಿಸಿದಾಗ -ಹದಿಮೂರನೆಯ ಶತಮಾನದ ಕೊನೆಯ ಹೊತ್ತಿಗೆ- ದೇವಾಲಯದ ಹೊರಗೆ ಬಯಲಿನಲ್ಲಿ ನಾಟಕಗಳನ್ನು ಪ್ರದರ್ಶಿಸತೊಡಗಿದರು.

ನಾಟಕ ಕಲಾವಿದರು ಊರಿನಿಂದ ಊರಿಗೆ ಹೋಗಿ, ಎರಡು ಅಂತಸ್ತುಗಳ ರಂಗಮಂಚದ ಮೇಲೆ ನಾಟಕ ಆಡುತ್ತಿದ್ದರು. ಕಾಲ ಕಳೆದಂತೆ ವೃತ್ತಿ ನಾಟಕ ಕಲಾವಿದರೂ ಊರೂರು ತಿರುಗುತ್ತ ತಮ್ಮ ಬಿಡಾರದ ಅಂಗಳ ಅಥವಾ ಬೇರೆ ಅನುಕೂಲ ಸ್ಥಳವಲ್ಲಿ ನಾಟಕವನ್ನು ಅಭಿನಯಿಸುತ್ತಿದ್ದರು.

16ನೆಯ ಶತಮಾನದ ಇಂಗ್ಲೆಂಡಿನ ನಾಟ್ಯಮಂದಿರ ವೃತ್ತಾಕಾರದ ರಚನೆ. ಮರದಿಂದ ನಿರ್ಮಿತವಾದದ್ದು. ರಂಗಸ್ಥಳದ ಮುಂದೆ ಪ್ರೇಕ್ಷಕರು ನಿಂತು ನಾಟಕ ನೋಡಲು ತಗ್ಗಾದ ಸ್ಥಳ ಇರುತ್ತಿತ್ತು. ರಂಗಸ್ಥಳ ಮತ್ತು ಪ್ರೇಕ್ಷಕರ ಪಾವಟಿಗೆಗೆ ಮಾತ್ರ ಛಾವಣಿ ಇರುತ್ತಿತ್ತು. ತಗ್ಗುಸ್ಥಳದ ಮೇಲೆ ಛಾವಣಿ ಇರುತ್ತಿರಲಿಲ್ಲ. ರಂಗಸ್ಥಳದ ಹಿಂದೆಯೂ ಪುಟ್ಟ ಪಾವಟಿಗೆಯೊಂದು ಇರುತ್ತಿತ್ತು. ಇದನ್ನು ಉಪ್ಪರಿಗೆಯ ಮೊಗಸಾಲೆಗಳಂಥ ದೃಶ್ಯಗಳ ಅಭಿನಯಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ನಾಟಕಗಳನ್ನು ಬೆಳಕಿರುವ ವೇಳೆಯಲ್ಲಿ ಆಡುತ್ತಿದ್ದರು. ದೀಪಗಳನ್ನು ಉಪಯೋಗಿಸುತ್ತಿರಲಿಲ್ಲ.

ಪ್ರಯೋಗ ತಂತ್ರ ಬೆಳೆದಂತೆ ರಂಗಸ್ಥಳ ಮತ್ತು ರಂಗಸಜ್ಜಿಕೆಗಳ ನಿರ್ಮಾಣದಲ್ಲಿ ಮಹತ್ತರ ಬದಲಾವಣೆಗಳಾದುವು. ನಾಟಕಗಳು ಅದಕ್ಕೆಂದೇ ನಿರ್ಮಿತವಾದ ಕಟ್ಟಡಗಳಲ್ಲಿ ಪ್ರದರ್ಶಿಸಲ್ಪಡುವ ಅಭ್ಯಾಸ ರೂಢಿಗೆ ಬಂತು.

ಇತ್ತೀಚೆಗೆ ಬಯಲು ನಾಟ್ಯಮಂದಿರಗಳಲ್ಲಿ ನಾಟಕಪ್ರದರ್ಶನ ಮಾಡುವ ಪ್ರಯತ್ನಗಳು ನಡೆಯುತ್ತಿವೆ. ಭಾರತದ ಹಲವಾರು ಪ್ರಮುಖ ನಗರಗಳಲ್ಲೂ ಇತರ ಕಡೆಗಳಲ್ಲೂ ಅನೇಕ ಬಯಲು ನಾಟ್ಯಮಂದಿರಗಳನ್ನು ಕಟ್ಟಿದ್ದಾರೆ.

## ಬಸವನಾಳ

"ಇದುವರೆಗೆ ಆಗಿಹೋದ ಸಮ್ಮೇಳನಗಳಿಗೆ ಅಧ್ಯಕ್ಷರಾಗಿ ನಿಯೋಜಿತರಾದ ಮಹನೀಯರಂತೆ ನಾನೇನೂ ಕವಿ, ಗಮಕಿ, ವಾಗ್ಮಿ, ಸಾಹಿತಿಗಳ ವರ್ಗಕ್ಕೆ ಸೇರಿದವನಲ್ಲ. ಕನ್ನಡನಾಡು ನುಡಿಗಳ ಸಾಹಿತ್ಯ ಸಂಸ್ಕೃತಿಗಳ ಬಗೆಗೆ ಅಭಿಮಾನವನ್ನು ತಳೆದ ಹಲವರಲ್ಲಿ ನಾನೊಬ್ಬ."



ಬಸವನಾಳ : ವಿನಯಶೀಲತೆ

1944ರಲ್ಲಿ ರಬಕವಿಯಲ್ಲಿ ನಡೆದ ೨೮ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಬಸವನಾಳರು ಹೇಳಿದ ಈ ಮಾತುಗಳು ಅವರ ವಿನಯಶೀಲತೆಗೆ ಸಾಕ್ಷಿ.

ವೀರಶೈವ ಧರ್ಮ, ಸಾಹಿತ್ಯಗಳಿಗಾಗಿ ನಿರಂತರವಾಗಿ ದುಡಿಯುತ್ತಿದ್ದರೂ, ಕೊನೆಯವರೆಗೂ ಇವರು ಎಲೆಮರೆಯ ಕಾಯಿಯಂತೆ ಇರಲು ಇಷ್ಟಪಟ್ಟರು. ಆದರೂ ಉತ್ತರ ಕರ್ನಾಟಕದಲ್ಲಿ ಇವರ ಪ್ರಭಾವಕ್ಕೆ ಒಳಗಾಗದವರು ಅಪರೂಪ. ಅವರ ವ್ಯಕ್ತಿತ್ವವೇ ಅಂಥದು. ಸಂಪರ್ಕ ಪಡೆದವರು ಪ್ರಥಮ ಪರಿಚಯದಲ್ಲೇ ಅವರ ಮೋಡಿಗೆ ಒಳಗಾಗುತ್ತಿದ್ದರು.

ಇವರ ಪೂರ್ಣ ಹೆಸರು ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳ. ಕೈಗೊಂಡ ಪ್ರಧಾನಕಾರ್ಯ ವೀರಶೈವಧರ್ಮ, ಸಾಹಿತ್ಯಗಳ ಅಧ್ಯಯನ ಮತ್ತು ಪ್ರಸಾರ. ಇವರು ಎಂ. ಎ. ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾದರೂ ಸರಕಾರೀ ಕೆಲಸಕ್ಕೆ ಸೇರದೆ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಆಜೀವ ಸದಸ್ಯರಾಗಿ ಅದರ ಸೇವೆಗೆಂದೇ ತಮ್ಮ ಜೀವನವನ್ನು ಮುಡಿಪಾಗಿಟ್ಟರು.

ಬಸವನಾಳರು ಹುಟ್ಟಿದ್ದು ಧಾರವಾಡದಲ್ಲಿ, 1893ರಲ್ಲಿ. ಇವರ ಹೈಸ್ಕೂಲು ಶಿಕ್ಷಣ ಗದುಗಿನಲ್ಲೂ ಕಾಲೇಜು ಶಿಕ್ಷಣ ಪುಣೆಯಲ್ಲೂ

ನಡೆಯಿತು. ಅನಂತರ ವಿದ್ಯಾಪ್ರಚಾರವೇ ಇವರ ಧ್ಯೇಯವಾಯಿತು. ಧಾರವಾಡದ ಆರ್. ಎಲ್. ಎಸ್. ಹೈಸ್ಕೂಲು, ಸೊಲ್ಲಾಪುರದ ಕಾಡಾದಿ ಹೈಸ್ಕೂಲು ಮತ್ತು ಬೆಳಗಾವಿಯ ಜಿ. ಎ. ಹೈಸ್ಕೂಲು ಹಾಗೂ ಲಿಂಗರಾಜ ಕಾಲೇಜುಗಳ ಸ್ಥಾಪನೆಗಾಗಿ ಇವರು ದುಡಿದರು. ಆರ್. ಎಲ್. ಎಸ್. ಹೈಸ್ಕೂಲಿನ ಮುಖ್ಯಾಧ್ಯಾಪಕರಾಗಿಯೂ ಲಿಂಗರಾಜ ಕಾಲೇಜಿನ ವೈಸ್ ಪ್ರಿನ್ಸಿಪಾಲರಾಗಿಯೂ ಕೆಲಸ ಮಾಡಿದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಮುಖ ಸ್ಥಾನಗಳನ್ನು ಅಲಂಕರಿಸಿ ಬೆಳಗಿದರು. 'ಪ್ರಬೋಧ' ಮಾಸಪತ್ರಿಕೆ ಮತ್ತು 'ಜಯ ಕರ್ನಾಟಕ' ವಾರಪತ್ರಿಕೆಗೆ ಇವರು ಸಂಪಾದಕರಾಗಿದ್ದರು.

ಇಂಗ್ಲಿಷ್, ಕನ್ನಡ ಮತ್ತು ಮರಾಠಿ ಸಾಹಿತ್ಯಾಭ್ಯಾಸ, ಪ್ರಾಚೀನ ಗ್ರಂಥಗಳ ಪರಿಶೋಧನೆ, ಸಂಪಾದನೆ ಇವರ ವಿಶೇಷಾಸಕ್ತಿಯ ವಿಷಯಗಳಾಗಿದ್ದುವು. ನಾಗವರ್ಮನ 'ಕರ್ನಾಟಕ ಕಾವ್ಯಾವಲೋಕನಂ', ನಿಜಗುಣ ಶಿವಯೋಗಿಯ 'ಕೈವಲ್ಯ ಪದ್ಧತಿ', ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ' ಮತ್ತು 'ಬಸವಣ್ಣನವರ ವಚನಗಳು' —ಇವರು ಸಂಪಾದಿಸಿದ ಕೃತಿಗಳು. ಬಸವಣ್ಣನವರ ವಚನಗಳ ಇಂಗ್ಲಿಷ್ ಭಾಷಾಂತರವನ್ನು ಪ್ರಕಟಿಸುವುದರಲ್ಲಿಯೂ ಇವರು ನೆರವಾದರು.

1951 ಡಿಸೆಂಬರ್ 21ರಂದು ಬಸವನಾಳರು ಶಿವೈಕ್ಯರಾದರು.



ಅಭಿನವ ಕಾಳಿದಾಸ : ಬಸವಪ್ಪಶಾಸ್ತ್ರೀ

## ಬಸವಪ್ಪಶಾಸ್ತ್ರೀ

ಕೇವಲ ಹದಿನೆಂಟನೆಯ ವಯಸ್ಸಿನಲ್ಲೇ 'ಕೃಷ್ಣ ರಾಜಾಭ್ಯುದಯ' ಎಂಬ ಕಾವ್ಯವನ್ನು ರಚಿಸಿ ಪ್ರಖ್ಯಾತರಾದವರು ಬಸವಪ್ಪಶಾಸ್ತ್ರಿಗಳು. ಇವರು ಕಾಳಿದಾಸನ 'ಶಾಕುಂತಲ' ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸಿದರು. ದಿವಾನ್ ರಂಗಾಚಾರ್ಲುರಂಥ ರಸಿಕರಿಂದಲೂ ಪಂಡಿತೋತ್ತಮರಿಂದಲೂ ಕೂಡಿದ ಸಭೆಯಲ್ಲಿ ಅವರಿಗೆ 'ಅಭಿನವ ಕಾಳಿದಾಸ' ಎಂಬ ಪ್ರಶಸ್ತಿ ದೊರೆಯಿತು.

ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಪಂಡಿತರಾಗಿದ್ದ ಮಹಾದೇವಶಾಸ್ತ್ರಿಗಳ ಮಗ ಬಸವಪ್ಪಶಾಸ್ತ್ರೀ ; ಜನನ 1843ರಲ್ಲಿ. ಬಾಲ್ಯದಲ್ಲೇ ತಂದೆಯನ್ನೂ ತಾಯಿಯನ್ನೂ ಕಳೆದುಕೊಂಡರು. ಹುಡುಗನ ಪ್ರತಿಭೆ, ಬುದ್ಧಿಶಕ್ತಿಗಳನ್ನು ಗಮನಿಸಿದ ಅಳಿಯ ಲಿಂಗರಾಜ ಅರಸರು ಆಸ್ಥಾನದ ಮಹಾ ಪಂಡಿತರಾಗಿದ್ದ ಗರಳಪುರಿಶಾಸ್ತ್ರಿಗಳ ಬಳಿ ವ್ಯಾಸಂಗ ಮಾಡಲು ಅನುಕೂಲಮಾಡಿಕೊಟ್ಟರು.

ಬಸವಪ್ಪಶಾಸ್ತ್ರಿಗಳು ಹಳಗನ್ನಡವನ್ನೂ ಸಂಸ್ಕೃತ ಸಾಹಿತ್ಯ ನಾಟಕಗಳನ್ನೂ ಆಳವಾಗಿ ಅಭ್ಯಸಿಸಿ ಅವುಗಳಲ್ಲಿ ಅಪಾರ ಪಾಂಡಿತ್ಯ ಪಡೆದರು. ಸಂಗೀತದಲ್ಲೂ ಇವರಿಗೆ ತುಂಬ ಆಸಕ್ತಿ ಇತ್ತು. ಆ ಕ್ಷೇತ್ರದಲ್ಲೂ ಉತ್ತಮ ಜ್ಞಾನವನ್ನು ಗಳಿಸಿಕೊಂಡರು.

'ಶಿವಾಷ್ಟಕಮ್'. 'ತ್ರಿಷಷ್ಟಿ ಪುರಾತನಸ್ತವ', 'ಶಾರದಾದಂಡಕಮ್' ಮೊದಲಾದ ಸಂಸ್ಕೃತ ಕೃತಿಗಳನ್ನೂ 'ದಮಯಂತಿ ಸ್ವಯಂವರ', 'ಕೃಷ್ಣ ರಾಜಾಭ್ಯುದಯ'. 'ಸಾವಿತ್ರೀ ಚರಿತ್ರೆ' ಮೊದಲಾದ ಸ್ವತಂತ್ರ ಕನ್ನಡ ಕೃತಿಗಳನ್ನೂ ರಚಿಸಿದರು.

ಕನ್ನಡ ಸಾಹಿತ್ಯರಂಗದಲ್ಲಿ ಬಸವಪ್ಪಶಾಸ್ತ್ರಿಗಳ ಹೆಸರು ಚಿರಸ್ಥಾಯಿಯಾಗಿರುವುದು, ಅವರ 'ಕನ್ನಡ ಶಾಕುಂತಲ' ನಾಟಕದಿಂದ. ಮೂಲದ ಸೌಂದರ್ಯ. ಲಾಲಿತ್ಯ, ಓಜಸ್ಸುಗಳು ಈ ಭಾಷಾಂತರದಲ್ಲಿ ಪೂರ್ಣ ಪ್ರಮಾಣದಲ್ಲಿ ಮೂಡಿವೆ. 'ಶಾಕುಂತಲ'ದ ಅನೇಕ ಭಾಷಾಂತರಗಳಲ್ಲಿ ಬಸವಪ್ಪಶಾಸ್ತ್ರಿಗಳ ಕನ್ನಡ ಭಾಷಾಂತರ ಮೂಲಕ್ಕೆ ಅತ್ಯಂತ ಹತ್ತಿರವಾದದ್ದು ಮತ್ತು ಕಾಳಿದಾಸನ ಪ್ರತಿಭೆಗೆ ಕುಂದಿಲ್ಲದಂತೆ ಇರುವ ಭಾಷಾಂತರ. 1870ರ ಹೊತ್ತಿಗಾಗಲೇ ಚುರಮುರಿ ಶೇಷಗಿರಿರಾಯರು 'ಶಾಕುಂತಲ'ವನ್ನು ಕನ್ನಡಕ್ಕೆ ಭಾಷಾಂತರಿಸಿದ್ದರು. ಅದು ಜನಸಾಮಾನ್ಯರನ್ನು ಉದ್ದೇಶಿಸಿ ರಚಿಸಿದ ಕೃತಿ. ಬಸವಪ್ಪಶಾಸ್ತ್ರಿಗಳು 1883ರಲ್ಲಿ 'ಶಾಕುಂತಲ'ವನ್ನು ಭಾಷಾಂತರಿಸಿದಾಗ ಕಾಳಿದಾಸನ ಮೂಲಕ್ಕೆ ಸರಿಸಮವೆನಿಸುವಂಥ ಕೃತಿ ದೊರೆಯಿತು.

ಬಸವಪ್ಪಶಾಸ್ತ್ರಿಗಳು ಭವಭೂತಿಯ 'ಉತ್ತರ ರಾಮಚರಿತ', 'ಮಾಲತೀ ಮಾಧವ', ಶ್ರೀಹರ್ಷನ 'ರತ್ನಾವಳಿ'ಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕ್ಷೇಮೇಂದ್ರನ 'ಚಂಡ ಕೌಶಿಕ' ನಾಟಕದ ಭಾಷಾಂತರವನ್ನು ಅವರು ಆರಂಭಿಸಿದರಾದರೂ ಅದನ್ನು ಪೂರ್ಣಗೊಳಿಸುವುದರೊಳಗಾಗಿ ನಿಧನರಾದರು. ಅಪೂರ್ಣವಾಗಿದ್ದ ಈ ನಾಟಕವನ್ನು ದೇವಶಿಖಾಮಣಿ ಅಳಸಿಂಗರಾಚಾರ್ಯರು ಪೂರ್ಣಗೊಳಿಸಿದರು. ಸಿ. ಸುಬ್ಬರಾವ್ ಅವರ ನೆರವಿನಿಂದ ಶಾಸ್ತ್ರಿಗಳು ಶೇಕ್ಸ್‌ಪಿಯರನ 'ಒಥೆಲೊ' ನಾಟಕವನ್ನು 'ಶೂರಸೇನ ಚರಿತ್ರೆ' ಎಂದು ರೂಪಾಂತರಿಸಿದ್ದಾರೆ. ಶಾಸ್ತ್ರಿಗಳಿಗೆ ಇಂಗ್ಲಿಷ್ ಭಾಷಾಜ್ಞಾನ ಇಲ್ಲದಿದ್ದರೂ ಬೇರೆಯವರಿಂದ ಅದನ್ನೋದಿಸಿ, ಅರ್ಥವನ್ನು ತಿಳಿದುಕೊಂಡು, ಈ ನಾಟಕವನ್ನು ರಚಿಸಿದರು.

1882ರಲ್ಲಿ ಮೈಸೂರು ಅರಮನೆಯಲ್ಲಿ ಸ್ಥಾಪಿತವಾದ 'ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಇವರು ಬರೆದ 'ಶಾಕುಂತಲ' ಮತ್ತಿತರ ನಾಟಕಗಳನ್ನು ರಂಗಭೂಮಿಯ ಮೇಲೆ ಪ್ರದರ್ಶಿಸಿತು.

1891ರಲ್ಲಿ ಒಮ್ಮೆ ವಾಯುವಿಹಾರಕ್ಕೆಂದು ಕುದುರೆಗಾಡಿಯಲ್ಲಿ ಕುಳಿತು ಹೋಗುತ್ತಿದ್ದಾಗ ಅಪಘಾತಕ್ಕೊಳಗಾಗಿ ಇವರು ನಿಧನರಾದರು. ಆಗ ಇವರಿಗೆ ಕೇವಲ 48 ವರ್ಷ ವಯಸ್ಸು.

### ಬಸವೇಶ್ವರ

ನೋಡಿ—ಸಂಪುಟ ೮

### ಬಳ್ಳಾರಿ ಟಿ. ರಾಘವ

ಎತ್ತರದ ನಿಲುವು, ಮೋಹಕ ಮುಖ, ಗುಂಗುರು ಕೂದಲು, ಹರವಾದ ಹಣೆ, ತೇಜಃಪೂರ್ಣ ವಿಶಾಲ ನೇತ್ರಗಳು, ರಂಗಭೂಮಿಗೆ ಹೇಳಿಮಾಡಿಸಿದಂಥ ಕಂಠ—ಇವು ಬಳ್ಳಾರಿ ಟಿ. ರಾಘವರು ಪಡೆದುಬಂದ 'ಆಸ್ತಿ' ಗಳು. ಅವರು ಒಮ್ಮೆ ರಂಗಭೂಮಿಯನ್ನು ಪ್ರವೇಶಿಸಿ ಅಭಿನಯಿಸಲಾರಂಭಿಸಿದರೆ ಪ್ರೇಕ್ಷಕರು ಮಂತ್ರಮುಗ್ಧರಾಗಿ ಬಿಡುತ್ತಿದ್ದರು. ಕನ್ನಡ, ಹಿಂದೀ, ತೆಲುಗು, ತಮಿಳು, ಇಂಗ್ಲಿಷ್‌ಗಳಲ್ಲಿ ಪರಿಣಾಮಕಾರಿಯಾಗಿ ಅಭಿನಯಿಸುವ ವಿಶೇಷ ಶಕ್ತಿಯಿತ್ತು, ರಾಘವರಿಗೆ. ಅವರು ಒಮ್ಮೆ ಇಂಗ್ಲೆಂಡಿಗೆ ಹೋಗಿದ್ದಾಗ ಅವರ ಅಭಿನಯವನ್ನು ನೋಡಿದ ವಿಖ್ಯಾತ ಆಂಗ್ಲ ನಾಟಕಕಾರ ಬರ್ನಾರ್ಡ್ ಷಾ ಅದನ್ನು ತುಂಬ ಮೆಚ್ಚಿಕೊಂಡ; ಅನೇಕರಿಗೆ ಲಭಿಸದ ಆತ್ಮೀಯ ಸಂದರ್ಶನ ನೀಡಿದ. ಇಂಗ್ಲೆಂಡಿನ ಪತ್ರಿಕೆಗಳು ಅವರನ್ನು ಹೊಗಳಿದುವು. ಇಷ್ಟೆಲ್ಲ ಪ್ರಖ್ಯಾತಿ ಪಡೆದಿದ್ದರೂ ಸರಳ ಹಾಗೂ ವಿನಯಶಾಲಿಗಳಾಗಿದ್ದರು ರಾಘವರು.

ಬಳ್ಳಾರಿ ರಾಘವರು ಅಭಿನಯಿಸುತ್ತಿದ್ದ ಕಾಲದಲ್ಲಿ ನಟರು ಒಳ್ಳೆಯ ಸಂಗೀತಗಾರರಾಗಬೇಕಿತ್ತು. ಸ್ವತಃ ಶ್ರೇಷ್ಠ ಸಂಗೀತಗಾರರಲ್ಲವಾದರೂ ರಂಗಭೂಮಿಗೆ ಆದರ್ಶಪ್ರಾಯವಾದ ಮೈಕಟ್ಟು ಮತ್ತು ಪ್ರತಿಭಾಪೂರ್ಣ ಅಭಿನಯಗಳಿಂದಲೇ ಅವರು ರಾಘವರು ರಂಗಭೂಮಿಯನ್ನು ಸುಮಾರು 25 ವರ್ಷ ಕಾಲ ಆಳಿದರು.

ಒಂದು ಬಾರಿ ರಾಘವರ ಒಂದು ನಿರ್ದಿಷ್ಟ ಪಾತ್ರಾಭಿನಯವನ್ನು ಅನುಕರಿಸಬೇಕೆಂದು ಮದರಾಸಿನ ಮುಖ್ಯ ನಟರೊಬ್ಬರು ಅವರನ್ನು ಆ ಪಾತ್ರಾಭಿನಯ ತೋರಿಸುವಂತೆ ಕೇಳಿದರು. ರಾಘವರು ಆರು ಬಾರಿ ಅದನ್ನು ಅಭಿನಯಿಸಿದ ಮೇಲೂ ಆ ನಟರಿಗೆ ಅನುಕರಣೆಯ ರೀತಿ ಗೊತ್ತಾಗಲಿಲ್ಲ. ರಾಘವರ ಅಭಿನಯ ಒಂದು ಸಾರಿ ಇದ್ದಂತೆ ಮತ್ತೊಂದು ಬಾರಿ ಇರುತ್ತಿರಲಿಲ್ಲ.

ರಾಘವರಿಗೆ ಸಾಹಿತ್ಯ ಹಾಗೂ ನ್ಯಾಯಶಾಸ್ತ್ರಗಳಲ್ಲೂ ಪರಿಣತಿ ಇತ್ತು. ಅವರ ಅಭಿನಯ ಕಲೆ ಪ್ರೇಕ್ಷಕರಿಗೆ ಒಂದು ಅಮೋಘ ಅನುಭವವಾಗಿ ಪರಿಣಮಿಸಿತು. ಮಹಾಕಾವ್ಯ ವ್ಯಕ್ತಿಗಳ ಪಾತ್ರಾಭಿನಯದಲ್ಲಂತೂ ರಾಘವರದು ಎತ್ತಿದ ಕೈ. ಹರಿಶ್ಚಂದ್ರ, ದಶರಥ, ರಾವಣ, ಚಾಣಕ್ಯ, ಕಬೀರ ಮುಂತಾದ ಪಾತ್ರಗಳನ್ನು ಅವರು ಅಭಿನಯಿಸುತ್ತಿದ್ದ ರೀತಿ ಅವಿಸ್ಮರಣೀಯ. ಅನೇಕರಿಗೆ ಅವರು ಕೇವಲ ಮಾನವರಾಗಿ ಕಾಣದೆ, ಒಬ್ಬ ಅವಧೂತ ಪುರುಷರಾಗಿ ತೋರುತ್ತಿದ್ದರು. ಪೌರಾಣಿಕ ವ್ಯಕ್ತಿಚಿತ್ರಣದಲ್ಲಿ ಭಕ್ತಿರಸದಿಂದ ಅವರ ಪಾತ್ರಗಳು ತುಂಬಿ ತುಳುಕುತ್ತಿದ್ದುವು.

1880ರ ಆಗಸ್ಟ್ 2ರಂದು ಬಳ್ಳಾರಿಯ ನರಸಿಂಹಾಚಾರ್ಯರು ಹಾಗೂ ಪತ್ನಿ ಶೇಷಮ್ಮನವರಿಗೆ ತಾಡಪತ್ರಿ ರಾಘವಾಚಾರ್ಯರು ಔರಸಪುತ್ರನಾಗಿ ಜನಿಸಿದರು. 14ನೆಯ ವರ್ಷಕ್ಕೆಲ್ಲ ಮೆಟ್ರಿಕ್ಯುಲೇಷನ್ ಪರೀಕ್ಷೆ ಮಾಡಿಕೊಂಡರು. ಅನಂತರ ಎಫ್. ಎ. ಹಾಗೂ ಮದರಾಸಿನ ಬಿ. ಎ. ಮಾಡಿದರು. ಅಲ್ಪಕಾಲ ವೃತ್ತಿಯಲ್ಲಿದ್ದು ಮತ್ತೆ ಬಿ. ಎಲ್. ತರಗತಿಗೆ ಸೇರಿದರು. 1905ರಲ್ಲಿ ಈ ಪದವಿ ಪಡೆದರು. ಈ ವೇಳೆಗೆ ಅವರ ಮದುವೆಯಾಗಿತ್ತು.



ಅಮೋಘ ಅನುಭವ : ರಾಘವ

ಅನಂತರ ವಕೀಲ ವೃತ್ತಿ ಜೀವನ. 1927ರಲ್ಲಿ ಅವರು ಸರಕಾರಿ ವಕೀಲರಾದರು. ನ್ಯಾಯಾಲಯದಲ್ಲಿ ವಾಗ್ವೈಖರಿಗೆ, ಜಾಣತನಕ್ಕೆ ಹೆಸರಾಗಿದ್ದರು. ಇವರು ಮೊಕದ್ದಮೆಗಳನ್ನು ಮಂಡಿಸುವುದನ್ನು, ವಾದಿಸುವುದನ್ನು ಕೇಳಲು ಜನ ನೆರೆಯುತ್ತಿದ್ದರು. ಆಗಿನ ಸರಕಾರ ಅವರಿಗೆ 'ರಾವ್ ಬಹದೂರ್' ಬಿರುದನ್ನಿತ್ತಿತು.

'ಸಮಾಜ'—ಅಸ್ಪೃಶ್ಯತೆಯ ನಾಟಕ. ರಾಘವರ ನೇತೃತ್ವದಲ್ಲಿ ನಡೆದ ಈ ನಾಟಕದ ಒಂದು ಪ್ರದರ್ಶನಕ್ಕೆ ಗಾಂಧಿಜಿ ಪ್ರೇಕ್ಷಕರಾಗಿದ್ದರು. 'ಕರ್ನಾಟಕದ ಬಗೆಗೆ ನನ್ನೊಡನೆ ಉಳಿಯುವ ನೆನಪುಗಳಲ್ಲಿ ಇದು ಎಂದಿಗೂ ಉಳಿಯುವಂಥದು' ಎಂದು ಆ ನಾಟಕವನ್ನು ಕುರಿತು ಗಾಂಧಿಜಿ ಆಡಿದರು. ಬಳ್ಳಾರಿಯ 'ಸರಸ ವಿನೋದಿನಿ ಸಭಾ' ಹಾಗೂ ಬೆಂಗಳೂರಿನ 'ಅಡಾ' (ADA)—ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್—ಈ ನಾಟಕ ಸಂಘಗಳ ಜೀವನಸ್ವರೂಪಿಯಾಗಿ ರಾಘವರು ಕೆಲಸ ಮಾಡಿದರು. 'ಅಡಾ' ಸಂಸ್ಥೆಯು ಅವರ ನೇತೃತ್ವದಲ್ಲಿ ಮುಂಬಯಿ, ಕಲ್ಕತ್ತ, ಸಿಮ್ಲಾಗಳಿಗೆ ಹೋಗಿ 1931ರಲ್ಲಿ ನಾಟಕ ಪ್ರದರ್ಶನಗಳ ಜಯಭೇರಿ ಹೊಡೆದು ಬಂದಿತು.

ಇದಕ್ಕೆ ಮೊದಲು, 1928ರಲ್ಲಿ, ರಾಘವರು ಇಂಗ್ಲೆಂಡಿಗೆ ತೆರಳಿದರು. ಲಂಡನ್ ಮಹಾನಗರದಲ್ಲಿ ಅನೇಕ ನಾಟಕಗಳನ್ನು ವೀಕ್ಷಿಸಿದರು. ಅಲ್ಲಿನ ನಾಟಕಗಳಿಗೂ ನಮ್ಮ ನಾಟಕಗಳಿಗೂ ಇರುವ ವ್ಯತ್ಯಾಸವನ್ನು ಅವರು ಮನನ ಮಾಡಿಕೊಂಡರು. ಅನಂತರ ಪ್ಯಾರಿಸ್, ಬರ್ಲಿನ್‌ಗಳನ್ನು ಸಂದರ್ಶಿಸಿದರು. ಮರಳಿಬಂದ ಮೇಲೆ ನಮ್ಮ ನಾಟಕರಂಗವನ್ನೂ ಸುಧಾರಿಸುವ ಆಸೆ ಅವರಿಗೆ ಬಲವಾಯಿತು. ಈ ಕಾಲದಲ್ಲಿ ರಾಘವರಿಟ್ಟ ಇನ್ನೊಂದು ದಿಟ್ಟ ಹೆಜ್ಜೆ ಸ್ತ್ರೀ ಪಾತ್ರವನ್ನು ಅದುವರೆಗಿನಂತೆ ಪುರುಷರಲ್ಲದೆ, ಸ್ತ್ರೀಯರೇ ವಹಿಸಬೇಕೆಂದು ಸಾರಿದ್ದು ಮತ್ತು ಹಲವು ಸ್ತ್ರೀಕಲಾವಿದೆಯರನ್ನು ಕನ್ನಡ ರಂಗಭೂಮಿಗೆ ಪರಿಚಯಮಾಡಿಕೊಟ್ಟುದ್ದು. ಇದಕ್ಕೆ ಪ್ರತಿರೋಧ ಬಲವಾಗಿದ್ದುದು ಸಹಜವೇ. ಆದರೆ ರಾಘವರು ಸ್ವಲ್ಪವೂ ಧೃತಿಗೆಡದೆ ಮೊದಮೊದಲು ಅತ್ಯಂತ ಶ್ರಮವಹಿಸಿ ಸ್ತ್ರೀ ಪಾತ್ರಧಾರಿಗಳನ್ನು ರಂಗಭೂಮಿಯ ಮೇಲೆ ಕರೆತಂದರು. ನಾಟಕಗಳಲ್ಲಿ ನೈಜತೆ ಇರಬೇಕು, ಸಂಗೀತಕ್ಕೆ ಪ್ರಾಧಾನ್ಯ ಇರಬಾರದು—ಎಂದು ರಾಘವರು ಪರಿಣಾಮಕಾರಿಯಾಗಿ ವಾದಿಸಿದರು.

ಉದಾರತೆ, ಸೌಜನ್ಯ, ಜಿಜ್ಞಾಸುಮನಸ್ಸು—ಹೀಗೆ ಹಲವು ಗುಣಗಳ ಖನಿಯಾಗಿದ್ದ ಬಳ್ಳಾರಿ ರಾಘವರ ಸಂಭಾಷಣೆಯು ಸಮಯಸ್ಫೂರ್ತಿಗೆ ಒಂದು ಉದಾಹರಣೆಯಿದೆ. ಒಮ್ಮೆ ಬಳ್ಳಾರಿಯ ಕ್ಲಬ್ಬಿನಲ್ಲಿ ಮಾತನಾಡುತ್ತಿ

[illegible] ಅಂದರಂತೆ. ಅದಕ್ಕೆ 'ಹೌದು. ಅವ್ರ [illegible] ಒಂದು ದೋಣಿಗಾಗುತ್ತದೆ [illegible] ರಾಘವರವರ ಬಂದಿತು. ರಾಘವರ ಮನೆಯೊಂದರೆ [illegible] ತೆರೆದ ಮನೆ. ಸುಪ್ರಸಿದ್ಧ ನಾಟಕಕಾರ ಕೈಲಾಸಂ ಅವರ ಮನೆಗೆ [illegible] ಬಂದು ಹೋಗುತ್ತಿದ್ದರು. ಕವಿ ರವೀಂದ್ರನಾಥ ಠಾಕೂರರು. ಚಕ್ರವರ್ತಿ ರಾಜಗೋಪಾಲಾಚಾರಿ–ಇಂಥ ಹಿರಿಯರೆಲ್ಲ ರಾಘವರ ಅಪೂರ್ವ ಅಭಿನಯಕಲೆಯಿಂದ ಆನಂದಪಟ್ಟಿದ್ದಾರೆ.

[illegible] 'ತಿರುಪ ಆಸೆ' ನಾಟಕವನ್ನು ಅಭಿಯೋ ತೀರಬೇಕೆಂಬ ತಮ್ಮ ಬಯಕೆಯನ್ನು ತಮ್ಮ 66ನೆಯ ವಯಸ್ಸಿನಲ್ಲಿ ಪೂರೈಸಿಕೊಂಡರು. ಇದಾದ 15 ದಿನಗಳಿಗೆ ರಾಘವರಿಗೆ ಕಾಯಿಲೆಯಾಗಿ 1946 ಏಪ್ರಿಲ್ ತಿಂಗಳು 16ರಂದು ರಾತ್ರಿ ಅವರು ತೀರಿಕೊಂಡರು.

## ಬಾಕ್

ಜೊಹಾನ್ ಸೆಬಾಸ್ಟಿಯನ್ ಬಾಕ್ 18ನೆಯ ಶತಮಾನದ ಜರ್ಮನಿಯಲ್ಲಿ ಉತ್ತಮ ಆರ್ಗನ್ ವಾದ್ಯಗಾರನೆಂದು ಪ್ರಸಿದ್ಧನಾಗಿದ್ದ. ಆದರೆ ಅವನ ಸಂಗೀತ ರಚನೆಗಳನ್ನು ಜನ ಹೆಚ್ಚು ಕಡಮೆ ಮರತೇಬಿಟ್ಟಿದ್ದರು. ಸ್ವತಃ ಸಂಗೀತಗಾರನಾಗಿದ್ದ ಬಾಕ್‌ನ ಮಗ ಫಿಲಿಪ್ ಎಮಾನ್ಯುಯೆಲ್ "ನನ್ನ ತಂದೆ ಒಬ್ಬ ಮುದಿಗೊಡ್ಡು," ಅಂದುಬಿಟ್ಟ. ಬಾಕ್‌ನ ರಚನೆಗಳಲ್ಲಿ ಪುನರಾವರ್ತಿಸುತ್ತಿದ್ದ ಲಯಗಳು ಟೀಕೆಗೊಳಗಾದುವು. ಫ್ರೆಂಚ್ ವಿಮರ್ಶಕಿ ಕೊಲೆಟ್ ಬಾಕ್‌ನನ್ನು "ಒಂದು ಭವ್ಯ ಹೊಲಿಗೆ ಯಂತ್ರ" ಎಂದು ಕರೆದಳು.



ಮಾಸದ ಪ್ರತಿಭೆ : ಬಾಕ್

ಆದರೆ ಎರಡು ಶತಮಾನಗಳ ಬಳಿಕ ಬಾಕ್‌ನ ಸಂಗೀತದ ವಿಶಿಷ್ಟ 'ಬೀಟ್' ಇಂದಿನ ಪಾಪ್ ಸಂಗೀತಗಾರರನ್ನು ಹೆಚ್ಚು ಹೆಚ್ಚಾಗಿ ಆಕರ್ಷಿಸಿದೆ. ಅಮೆರಿಕದಲ್ಲಿ ಜನಪ್ರಿಯವಾದ ಜಾಸ್ ಸಂಗೀತದಲ್ಲಿ ಬಾಕ್‌ನ ತಂತ್ರಗಳನ್ನು ಅಳವಡಿಸಿಕೊಂಡಿದ್ದಾರೆ. ಬೀಟ್ಲ್‌ಗಳಲ್ಲಿ ಒಬ್ಬನಾದ ಜಾರ್ಜ್ ಹ್ಯಾರಿಸನ್ ತಮ್ಮ ಕೆಲವು ಹಾಡುಗಳಿಗೆ ಬಾಕ್ ಸ್ಫೂರ್ತಿ ಅಂದಿದ್ದಾನೆ.

ಜೊಹಾನ್ ಸೆಬಾಸ್ಟಿಯನ್ ಬಾಕ್‌ನದು ಸಂಗೀತಗಾರರ ವಂಶ. ಜರ್ಮನಿಯ ಐಸ್‌ನಾಕ್ ಎಂಬಲ್ಲಿ 1685ರಲ್ಲಿ ಹುಟ್ಟಿದ ಇವನು ಮಾತನಾಡುವುದನ್ನು ಕಲಿಯುವುದರ ಜೊತೆ ಜೊತೆಗೇ ಸಂಗೀತ ವಾದ್ಯಗಳನ್ನು ನುಡಿಸುವುದನ್ನೂ ಆರಂಭಿಸಿದ. ಪಿಟೀಲು ಬಾರಿಸುವುದನ್ನು ತಂದೆಯಿಂದ ಕಲಿತ. ಹತ್ತು ವರ್ಷ ತುಂಬುವುದಕ್ಕೆ ಮುಂಚೆಯೇ ತಂದೆಯನ್ನು ಕಳೆದುಕೊಂಡ ಬಾಕ್. ಓರ್‌ಡ್ರುಫ್ ಎಂಬ ಹಳ್ಳಿಯಲ್ಲಿದ್ದ ತನ್ನ ಅಣ್ಣನೊಡನೆ ಇರಲಾರಂಭಿಸಿದ. ಅಣ್ಣನಿಂದ ಆರ್ಗನ್ ವಾದ್ಯವನ್ನು ಕಲಿಯತೊಡಗಿದ. ಭಾನುವಾರ ಚರ್ಚಿನಲ್ಲಿ ಸೇರುತ್ತಿದ್ದ ಗಾಯನವೃಂದದಲ್ಲಿ ಬಾಲಕ ಸೆಬಾಸ್ಟಿಯನದೇ ಪ್ರಮುಖ ಪಾತ್ರ. ಸಂಗೀತದ ಪಾಠಗಳನ್ನೆಲ್ಲ ಕ್ಷಣಮಾತ್ರದಲ್ಲಿ ಕಲಿತುಕೊಳ್ಳುತ್ತಿದ್ದ ತಮ್ಮನನ್ನು ನೋಡಿ ಅಣ್ಣನಿಗೆ ಹೊಟ್ಟೆಯುರಿ. ಪ್ರಸಿದ್ಧ ಸಂಗೀತ ರಚನೆಗಳ ಹಸ್ತಪ್ರತಿಯೊಂದು ತನ್ನೊಡನೆ ಇದ್ದರೂ ತಮ್ಮನಿಗೆ ಅದನ್ನು ಮುಟ್ಟಗೊಡುತ್ತಿರಲಿಲ್ಲ. ಪ್ರತಿ ರಾತ್ರಿ ಎಲ್ಲರೂ ಮಲಗಿದಮೇಲೆ ಸೆಬಾಸ್ಟಿಯನ್ ಸದ್ದು ಮಾಡದೆ ಎದ್ದು ಚಂದ್ರನ ಬೆಳಕಿನಲ್ಲಿ ಹಸ್ತಪ್ರತಿಯ ಮತ್ತೊಂದು ಪ್ರತಿಯನ್ನು ಮಾಡತೊಡಗಿದ. ಒಂದು ದಿನ ಇದು ಅಣ್ಣನ ಕಣ್ಣಿಗೆ ಬಿತ್ತು. ಸೆಬಾಸ್ಟಿಯನ್ ಪ್ರತಿ ಮಾಡಿದ್ದನ್ನೆಲ್ಲ ಆತ ಕಸಿದುಕೊಂಡ. ಹದಿನೈದರ ಹುಡುಗ ಸೆಬಾಸ್ಟಿಯನ್ ಮನೆ ಬಿಟ್ಟು ಹೊರಟ.

ಸಂಗೀತವಾದ್ಯಗಳನ್ನು ಬಾರಿಸುವುದರಲ್ಲಿ ಬಾಕ್‌ಗೆ ಇದ್ದ ನೈಪುಣ್ಯದಿಂದಾಗಿ ಲ್ಯೂನೆಬರ್ಗ್ ಎಂಬಲ್ಲಿನ ಕಾನ್ವೆಂಟಿನ ಗಾಯನವೃಂದಕ್ಕೆ ಪ್ರವೇಶ ದೊರಕಿತು. ಶಾಸ್ತ್ರೀಯ ಸಂಗೀತಪಾಠವೂ ಲಭಿಸಿತು. ದೂರದ ಪಟ್ಟಣವಾದ ಹ್ಯಾಂಬರ್ಗ್‌ನಲ್ಲಿ ಪ್ರಸಿದ್ಧ ಸಂಗೀತಗಾರನೊಬ್ಬ ಬರುತ್ತಾನೆ ಎಂಬ ಸುದ್ದಿ ತಿಳಿದರೆ ಸಾಕು ಐವತ್ತು ಕಿಲೊಮೀಟರು ನಡೆದಾದರೂ ಸಂಗೀತ ಕಚೇರಿಗೆ ಬಾಕ್ ಹಾಜರಾಗುತ್ತಿದ್ದ.

18ನೆಯ ವಯಸ್ಸಿಗೆ ಸಂಗೀತ ಶಿಕ್ಷಣಕ್ಕೆ ಶರಣುಹೊಡೆದು ಅಲೆಮಾರಿ ಸಂಗೀತಗಾರನಾಗಿ ಬಾಕ್ ಹೊರಟ. ಲ್ಯೂಬೆಕ್ ಎಂಬ ಊರಿನ ದೊರೆಯ ಆಸ್ಥಾನದ ಸಂಗೀತಗಾರನೊಡನೆ ಸ್ನೇಹ ಬೆಳೆಸಿಕೊಂಡು ನಾಲ್ಕು ತಿಂಗಳು ಅಲ್ಲೇ ತಂಗಿದ. "ನನ್ನ ಮಗಳನ್ನು ಮದುವೆಯಾಗಿ ಇಲ್ಲೇ ಇದ್ದರೆ ನನ್ನ ಬಳಿಕ ಆಸ್ಥಾನ ಸಂಗೀತಗಾರನ ಸ್ಥಾನ ನಿನಗೆ ಸಿಗುವಂತೆ ಮಾಡುತ್ತೇನೆ" ಎಂದು ಆತ ಒತ್ತಾಯಪಡಿಸಲಾರಂಭಿಸಿದ. ವಯಸ್ಸಿನಲ್ಲಿ ತನಗಿಂತ ಬಹಳ ದೊಡ್ಡವಳಾಗಿದ್ದ ಈ ಹುಡುಗಿಯನ್ನು ಮದುವೆಯಾಗಲು ಒಪ್ಪದೆ, ಬಾಕ್ ಅಲ್ಲಿಂದ ಹೊರಟುಬಿಟ್ಟ. 1707ರಲ್ಲಿ ತನ್ನ ಸೋದರತ್ತೆಯ ಮಗಳನ್ನು ಲಗ್ನವಾದ. ಮರುವರ್ಷ ವೈಮಾರ್‌ನ ದೊರೆಯ ಆಸ್ಥಾನ ಸಂಗೀತಗಾರನಾಗುವ ಅವಕಾಶ ಇವನಿಗೆ ದೊರೆಯಿತು.

ವೈಮಾರ್‌ನಲ್ಲಿದ್ದ ಹತ್ತು ವರ್ಷ ಕಾಲ ಬಾಕ್ ಆರ್ಗನ್ ಮತ್ತು ಚರ್ಚ್ ಸಂಗೀತಕ್ಕೆ ಅಳವಡಿಸುವುದಕ್ಕೆ ಯೋಗ್ಯವಾದ ಹಲವು ಹಾಡುಗಳನ್ನು ರಚಿಸಿದ. ಶ್ರೇಷ್ಠ ಆರ್ಗನ್ ವಾದಕನೆಂದು ಅವನ ಕೀರ್ತಿ ಜರ್ಮನಿಯಲ್ಲೆಲ್ಲ ಹರಡಿತು. ದೂರದೂರದ ನಗರಗಳಲ್ಲಿ ಕಚೇರಿ ನಡೆಸಲು ಅವನಿಗೆ ಆಹ್ವಾನಗಳು ಬಂದುವು. ಕೋಥೆನ್ ಎಂಬಲ್ಲಿಯ ಅರಸ ತನ್ನ ಆಸ್ಥಾನ ಸಂಗೀತಗಾರನಾಗುವಂತೆ ಅವನನ್ನು ಆಮಂತ್ರಿಸಿದ. ಬಾಕ್ ಇದಕ್ಕೆ ಒಪ್ಪಿ ಹೊರಡಲು ಅನುವಾದಾಗ ವೈಮಾರ್‌ನ ಅರಸು ಸಿಟ್ಟಿಗೆದ್ದು ಆತನನ್ನು ಒಂದು ತಿಂಗಳ ಕಾಲ ಸೆರೆಯಲ್ಲಿಟ್ಟ. ಕೊನೆಗೆ ಕೋಥೆನ್‌ಗೆ ಹೋಗಲು ಅವನಿಗೆ ಅನುಮತಿ ದೊರೆಯಿತು.

ಆರ್ಕೆಸ್ಟ್ರಾ ಸಂಗೀತದಲ್ಲೆಲ್ಲ ಪ್ರಸಿದ್ಧವಾದದ್ದು 'ಬ್ರಾಂಡೆನ್‌ಬರ್ಗ್ ಕಾನ್ಸೆರ್ಟೊ'. ಈ ಆರು ಕೃತಿಗಳನ್ನು ಬಾಕ್ ರಚಿಸಿದ್ದು ಕೋಥೆನ್‌ನಲ್ಲಿದ್ದಾಗ. ಪಿಟೀಲಿನಲ್ಲಿ ಬಾರಿಸುವುದಕ್ಕೆಂದು ರಚಿಸಿದ ಸರಳ ಸುಂದರ ಸೊನಾಟಾ ಸಂಗೀತಕೃತಿ ಇಂದಿಗೂ ತನ್ನ ಹೊಸತನವನ್ನು ಉಳಿಸಿ

ಕೊಂಡಿತು. ತನ್ನ ಮಗನಿಗೆ ಪಿಯಾನೋ ಕಲಿಸಲು ಬಾಕ್ ಹೊಸ ಬಗೆಯ ಹಾಡುಗಳನ್ನು ರಚಿಸಿದ. ಪಿಯಾನೋ ಬಾರಿಸುವ ರೀತಿಯಲ್ಲೂ ಅವನು ಸುಧಾರಣೆ ಮಾಡಿದ. ಆಗಿನ ಸಂಗೀತಗಾರರು ಪಿಯಾನೋ ಬಾರಿಸಲು ನಾಲ್ಕು ಬೆರಳು ಮಾತ್ರ ಉಪಯೋಗಿಸುತ್ತಿದ್ದರು. ಬಾಕ್ ಹೆಬ್ಬೆಟ್ಟನ್ನೂ ಬಳಸುವುದಕ್ಕೆ ಆರಂಭಿಸಿದ. ಬೆರಳುಗಳನ್ನು ನೆಟ್ಟಗೆ ಮಾಡಿಕೊಂಡು ಉಪಯೋಗಿಸುವುದರ ಬದಲು ಅವನ್ನು ಬಗ್ಗಿಸಿ ಉಪಯೋಗಿಸಲು ಹೇಳಿಕೊಟ್ಟ. ಸಂಗೀತ ಶಿಕ್ಷಕನಾಗಿ ಅವನ ಕೀರ್ತಿ ಬೆಳೆಯಲಾರಂಭಿಸಿತು.

1723ರಲ್ಲಿ ಅರಸನೊಡನೆ ವಿರಸ ಉಂಟಾಗಿ ಬಾಕ್ ಅಲ್ಲಿಂದ ಹೊರಟು ಹೋಗಲು ನಿರ್ಧರಿಸಿದ. ಶಾಲೆಯೊಂದರಲ್ಲಿ ಸಂಗೀತ ಶಿಕ್ಷಕನಾಗಿ ಸೇರಿಕೊಂಡ. ವೇತನ, ಸಮಾಜದಲ್ಲಿ ಅಂತಸ್ತು ಎರಡೂ ಕಡಿಮೆಯಾದುವು. ಸಂಸಾರದ ಕಷ್ಟಗಳೂ ಹೆಚ್ಚಿದುವು. ಹೆಂಡತಿ ನಾಲ್ಕು ಮಕ್ಕಳನ್ನು ಹೆತ್ತು ಕಣ್ಮುಚ್ಚಿದ್ದಳು. ಬಾಕ್ ಸಂಗೀತಗಾರ್ತಿಯೊಬ್ಬಳನ್ನು ಮತ್ತೆ ಮದುವೆಯಾದ. ಅವಳು ಹದಿಮೂರು ಮಕ್ಕಳಿಗೆ ಜನ್ಮಕೊಟ್ಟಳು.

ಬಾಕ್‌ನ ಪುತ್ರರಲ್ಲಿ ಅನೇಕರು ಕ್ರಮೇಣ ಖ್ಯಾತ ಸಂಗೀತಗಾರರಾದರು.

ಮುದಿವಯಸ್ಸಿನಲ್ಲೂ ಬಾಕ್‌ನ ಸಂಗೀತ ಪ್ರತಿಭೆ ಮಸುಕಾಗಲಿಲ್ಲ. ಧಾರ್ಮಿಕ ಗೀತೆಗಳು, ದೇವನಾ ಸಂಗೀತದ ಹಾಡುಗಳು ಒಂದೊಂದಾಗಿ ರೂಪಿತವಾದುವು. ಒಂದು ರಾಗದೊಡನೆ ಮೇಳಕ್ಕಾಗಿ ಇನ್ನೊಂದನ್ನು ಸೇರಿಸಿ ಸಂವಾದಿರಾಗ ರಚಿಸುವುದರಲ್ಲಿ ಅವನಿಗೆ ವಿಶೇಷ ಪರಿಣತಿ ಇತ್ತು. ಕಣ್ಣಿನ ದೃಷ್ಟಿ ಮಂದವಾಗುತ್ತಿದ್ದರೂ ಹಾಡುಗಳ ರಚನೆಯಲ್ಲಿ ಬಾಕ್ ನಿರತನಾಗಿರುತ್ತಿದ್ದ. ಕುರುಡನಾಗಿ ಸಾಯುತ್ತ ಮಲಗಿದ್ದಾಗಲೂ ಒಂದು ಹಾಡನ್ನು ಹೇಳಿ ಬರೆಯಿಸಿದ; 1750ರ ಜೂಲೈ 28ರಂದು ತೀರಿಕೊಂಡಾಗ ಒಂದು ಹಾಡು ಅರ್ಧದಲ್ಲೇ ಉಳಿದಿತ್ತು. ಬಾಕ್ ತನ್ನ ರಚನೆಗಳನ್ನು ಪ್ರಕಟಿಸುತ್ತಿದ್ದುದೇ ಅಪರೂಪ. ಆತ ಅತ್ಯಂತ ಶ್ರೇಷ್ಠ ಸಂಗೀತಜ್ಞನೆಂದು ಪ್ರಸಿದ್ಧಿ ಪಡೆದದ್ದು ಅವನು ಮೃತನಾಗಿ 150 ವರ್ಷಗಳಾದ ಬಳಿಕ, 20ನೆಯ ಶತಮಾನದ ಆದಿಯಲ್ಲಿ.

## ಬಾಟಿಕ್ ಕಲೆ

ತಾನು ತೊಡುವ ಬಟ್ಟೆ ಆಕರ್ಷಕವಾಗಿ ಕಾಣುವಂತೆ ಮಾಡಲು ಮಾನವ ಅದಕ್ಕೆ ಬಣ್ಣ ಹಾಕಲು ಕಲಿತ; ಬಟ್ಟೆಯ ಮೇಲೆ ವಿಧವಿಧವಾದ ಬಣ್ಣಗಳನ್ನು ಮುದ್ರಿಸುವ ವಿಧಾನವನ್ನು ಕಂಡುಕೊಂಡ.

ಮೇಣ ಮತ್ತು ಬಣ್ಣಗಳನ್ನು ಉಪಯೋಗಿಸಿ, ಬಟ್ಟೆಯ ಮೇಲೆ ನಾನಾ ರೀತಿಯ ಚಿತ್ರಗಳನ್ನು ಮೂಡಿಸುವ ಕಲೆಯೇ 'ಬಾಟಿಕ್'.

ಬಾಟಿಕ್ ಕಲೆ ಭಾರತ, ಆಗ್ನೇಯ ಏಷ್ಯ, ಆಫ್ರಿಕಗಳಲ್ಲಿ 1,200 ವರ್ಷ ಹಿಂದಿನಿಂದಲೂ ಇದ್ದಿತು. ಈ ರಾಷ್ಟ್ರಗಳೊಡನೆ ವ್ಯಾಪಾರ ಸಂಬಂಧಗಳು ಬೆಳೆದಂತೆ ಈ ಕಲೆ ವ್ಯಾಪಾರಿಗಳ ಮೂಲಕ 17ನೆಯ ಶತಮಾನದಲ್ಲಿ ಯೂರೋಪಿಗೆ ಹರಡಿತು. ಜಾವಾದವರು ಆಚರಣೆಯಲ್ಲಿಟ್ಟುಕೊಂಡಿದ್ದ ಬಾಟಿಕ್ ಕೆಲಸದ ವಿಧಾನ ಅತಿ ಶ್ರಮದಾಯಕವೂ ದೀರ್ಘಕಾಲ ತೆಗೆದುಕೊಳ್ಳುವಂಥದೂ ಆಗಿತ್ತು. 15ನೆಯ ಶತಮಾನದಲ್ಲಿ ಕಡಮೆ ವೆಚ್ಚದಲ್ಲಿ ಶೀಘ್ರವಾಗಿ ಆಗುವ 'ಬಾಟಿಕ್' ಕೆಲಸದ ವಿಧಾನ ಅಲ್ಲಿ ಬಳಕೆಗೆ ಬಂತು. ಬಾಟಿಕ್ ಕಲೆ ಜಾವಾದಲ್ಲಿ ತುಂಬ ಮೇಲು ಮಟ್ಟಕ್ಕೆ ಏರಿತು; ಅಲ್ಲಿ ಅದು ರಾಷ್ಟ್ರೀಯ ಕಲೆಯೇ ಆಯಿತು.

ತುಂಬ ಹಿಂದಿನ ಕಾಲದಿಂದ ಬಾಟಿಕ್ ಕಲೆ ಭಾರತದಲ್ಲಿ ಬೆಳೆದು ಬಂದಿತ್ತಾದರೂ ಆಧುನಿಕ ಕಾಲದಲ್ಲಿ ಅದು ತನ್ನ ಪ್ರಾಶಸ್ತ್ಯವನ್ನು ಕಳೆದುಕೊಂಡಿತ್ತು. ಅದರ [illegible] ಕವಿ–ಕಲಾವಿದ ರವೀಂದ್ರನಾಥ ಠಾಕೂರರು. ಅವರು [illegible] ಗಳಲ್ಲಿ ಪ್ರವಾಸ ಮಾಡಿದ್ದರು. ಅಲ್ಲಿ [illegible] ಕಲೆಯಿಂದ ಆಕರ್ಷಿತರಾಗಿ, ಅವರ [illegible] ನಿಕೇತನದಲ್ಲಿ ಅದರ ಅಭ್ಯಾಸಕ್ಕಾಗಿ ವ್ಯವಸ್ಥೆ ಮಾಡಿದರು.

ಬಟ್ಟೆಯ ಮೇಲೆ ಎಲ್ಲಿ ಬಣ್ಣ ಕೂಡಬಾರದೆಂದಿದ್ದರೋ ಆ ಭಾಗಗಳಿಗೆ ಕರಗಿಸಿದ ಜೇನು ಅಥವಾ ಪ್ಯಾರಫಿನ್ ಮೇಣವನ್ನು ಬ್ರಷ್ಷಿನಿಂದ ಕಾದ ಬಳಿಸಿ ಹಚ್ಚಬೇಕು. ಮೇಣ ಆರಿ ಗಟ್ಟಿಯಾದ ಮೇಲೆ ಬಟ್ಟೆಯನ್ನು ನಮಗೆ ಬೇಕಾದ ಬಣ್ಣದಲ್ಲಿ ಅದ್ದಿ ಒಣಗಿಸಬೇಕು. ಅನಂತರ ಬಿಸಿ ನೀರಿನಲ್ಲಿ ಬಟ್ಟೆಯನ್ನು ನೆನೆಹಾಕಿದಾಗ ಮೇಣ ಕರಗಿಹೋಗುತ್ತದೆ. ಸರಳ ವಿನ್ಯಾಸಗಳಿಗೆ ಒಂದು ಸಲ ಹೀಗೆ ಮಾಡಿದರೆ ಸಾಕು. ಬೇರೆ ಬೇರೆ ಬಣ್ಣಗಳು ಬರುವಂಥ ಚಿತ್ರವನ್ನು ಮೂಡಿಸಬೇಕಾದರೆ ಈ ವಿಧಾನವನ್ನು ಹಲವು ಬಾರಿ ಅಂದರೆ ಎಷ್ಟು ಬಗೆಯ ಬಣ್ಣ ಬೇಕೋ ಅಷ್ಟು ಸಲ ಪುನರಾವರ್ತನೆ ಮಾಡಬೇಕು. ಇದು ಸರಳ ಬಾಟಿಕ್ ಕೆಲಸದ ವಿಧಾನ.

ಜಾವಾದಲ್ಲಿ ಅನುಸರಿಸುವ ವಿಧಾನ ಕಷ್ಟತರವು. ಬಟ್ಟೆಯನ್ನು ಚೆನ್ನಾಗಿ ಒಗೆದು ನೆನೆಸುತ್ತಾರೆ. ಬಟ್ಟೆಯನ್ನು ಚೌಕಟ್ಟಿನಲ್ಲಿ ಹಾಕಿದಮೇಲೆ ಕೆಲವು ವೇಳೆ ಇದ್ದಿಲಿನಿಂದ ರೇಖಾಚಿತ್ರವನ್ನು ಬರೆದುಕೊಳ್ಳುತ್ತಾರೆ.



'ಮನೆಯತ್ತ' : ಬಾಟಿಕ್ ಚಿತ್ರಕೃತಿ : ರಚನೆ –ಸುಕನ್ಯಾ ರಾಜಶೇಖರ್

ಮೊದಲಿಗೆ ಬಣ್ಣ ಹಾಕಲು ಸಸ್ಯಗಳಿಂದ ತಯಾರಿಸಿದ ರಂಗುಗಳನ್ನು ಉಪಯೋಗಿಸುತ್ತಿದ್ದರು. ಈಗ ರಾಸಾಯನಿಕಗಳಿಂದ ತಯಾರಿಸಲಾಗಿರುವ ರಂಗನ್ನೂ ಉಪಯೋಗಿಸುತ್ತಾರೆ.

ಬಾಟಿಕ್ ವಿಧಾನದಿಂದ ಬಟ್ಟೆಯ ಮೇಲೆ ಸುಂದರ ವಿನ್ಯಾಸಗಳನ್ನು ಮೂಡಿಸಲು ಕೌಶಲ ಬೇಕು. ಬಣ್ಣಗಳ ಚತುರ ಸಂಯೋಜನೆಯ ತಿಳಿವಳಿಕೆಯೂ ಚೆನ್ನಾಗಿ ಇರಬೇಕು. ಬೇರೆ ಬೇರೆ ಮೂಲ ವರ್ಣಗಳನ್ನು ಒಂದರೊಡನೊಂದು ಬೆರೆಸಿದಾಗ ಹುಟ್ಟುವ ಇತರ ಬಣ್ಣಗಳ ಅರಿವೂ ಇರಬೇಕು.

ಬಾಟಿಕ್ ಮಾಡಿರುವ ಬಟ್ಟೆಗಳನ್ನು ದಿಂಬಿನ ಚೀಲ, ಬಾಗಿಲು ಕಿಟಿಕಿ ಮತ್ತು ಗೋಡೆ ಪರದೆಗಳಿಗೂ ಉಡುಪಿನ ತಯಾರಿಕೆಗೂ ಸಾಮಾನ್ಯವಾಗಿ ಉಪಯೋಗಿಸುತ್ತಾರೆ.

ಈಗ ಭಾರತದ ಅನೇಕ ಸ್ಥಳಗಳಲ್ಲಿ ಬಾಟಿಕ್ ವಿಧಾನದಿಂದ ಬಟ್ಟೆಗಳ ಮೇಲೆ ವರ್ಣಚಿತ್ರಗಳನ್ನು ಮೂಡಿಸುವ ಕಲೆ ಉದ್ಯಮ ಸ್ವರೂಪದಲ್ಲಿ ನಡೆಯುತ್ತಿದೆ.

ಬಾಟಿಕ್ ವಿಧಾನವನ್ನು ಬಳಸಿ ಕಲಾವಿದರು ಚಿತ್ರಗಳನ್ನು ಕೂಡ ರಚಿಸುತ್ತಾರೆ. ಇದು ಬಾಟಿಕ್ ಚಿತ್ರಕಲೆ ಎಂಬ ಹೆಸರಿನಿಂದ ಪ್ರಚಾರಕ್ಕೆ ಬಂದಿದೆ.

## ಬಾಟಿಚೆಲ್ಲಿ

ಇಟಲಿಯ ಭಾಷೆಯಲ್ಲಿ 'ಬಾಟಿಚೆಲ್ಲಿ' ಎಂದರೆ 'ಪುಟ್ಟ ಪೀಪಾಯಿ' ಎಂದರ್ಥ. ಆದರೆ ಸಾಂಡ್ರೋ ಬಾಟಿಚೆಲ್ಲಿ ಬಹಳ ಸಣಕಲು ಆಸಾಮಿ. ಈತನ ಅಣ್ಣ ತನ್ನ ಬೊಜ್ಜುಮೈಯಿಂದಾಗಿ 'ಬಾಟಿಚೆಲ್ಲಿ' ಎಂಬ ಅಡ್ಡ ಹೆಸರಿನಿಂದ ಪ್ರಸಿದ್ಧನಾಗಿದ್ದ. ಆ ಹೆಸರೇ ತಮ್ಮ ಸಾಂಡ್ರೋಗೂ ಅಂಟಿಕೊಂಡಿತು. ಅವನು ಬಾಟಿಚೆಲ್ಲಿ ಸಾಂಡ್ರೋ ಆದ; ಈತ ಇಟಲಿಯ ಅತಿ ಶ್ರೇಷ್ಠ ಚಿತ್ರಕಾರರಲ್ಲಿ ಒಬ್ಬ ಅನಿಸಿದ್ದೂ ಇದೇ ಹೆಸರಿನಿಂದ.

ಸಾಂಡ್ರೋ ಹುಟ್ಟಿದ್ದು ಫ್ಲಾರೆನ್ಸಿನಲ್ಲಿ, ಕಲೆಯ ಸುವರ್ಣಯುಗದಲ್ಲಿ, 1444 ಅಥವಾ 1445ರಲ್ಲಿ. ತಂದೆ ಬಡ ಚಮ್ಮಾರ. ಓದುಬರಹ ಎಂದರೆ ಸಾಂಡ್ರೋಗೆ ತಲೆನೋವು. ಚಿಕ್ಕ ವಯಸ್ಸಿನಲ್ಲೇ ಅಕ್ಕಸಾಲಿಗನೊಬ್ಬನ ಸಹಾಯಕನಾಗಿ ಕೆಲಸಕ್ಕೆ ಸೇರಿಕೊಂಡ. ಆದರೆ ಚಿನ್ನದ ಕೆಲಸದಲ್ಲಿ ಅವನಿಗೆ ಆಸಕ್ತಿ ಹುಟ್ಟಲಿಲ್ಲ. ಚಿತ್ರಕಲೆ ಕಲಿಯಬೇಕೆಂದು ಆಸೆಯಾಯಿತು. ಪ್ರಸಿದ್ಧ ಕಲಾಕಾರ ಫ್ರಾ ಫಿಲಿಪ್ಪೋ ಲಿಪ್ಪಿಯ ಶಿಷ್ಯನಾದ. ವರ್ಣಚಿತ್ರಕಲೆಯ ತಂತ್ರಗಳನ್ನೆಲ್ಲ ಅತಿ ಉತ್ಸುಕತೆಯಿಂದ ಕಲಿತ. 25 ವರ್ಷದವನಾಗುವ ವೇಳೆಗೆ ಫ್ಲಾರೆನ್ಸಿನ ಪ್ರಸಿದ್ಧ ಚಿತ್ರಕಾರನಾದ.

ಬಾಟಿಚೆಲ್ಲಿಯ ವರ್ಣಚಿತ್ರಗಳ ವೈಶಿಷ್ಟ್ಯ ಅವುಗಳ ಕಾವ್ಯಶೀಲತೆ; ಅವನು ಚಿತ್ರಿಸಿದ ವ್ಯಕ್ತಿಗಳ ಪ್ರಶಾಂತಭಾವ. ಅವನ ಚಿತ್ರಗಳಲ್ಲಿನ ಸ್ತ್ರೀಯರ ನಾಜೂಕಾದ ಕೈಗಳು 'ಬಾಟಿಚೆಲ್ಲಿ ಕೈ'ಗಳೆಂದೇ ಹೆಸರಾಗಿವೆ. ಲಿಯೊನಾರ್ಡೊ ದ ವಿಂಚಿ, ಮೈಕೆಲೆಂಜಲೋ ಮತ್ತು ರಾಫೇಲ್‌ರಂಥ ಮಹಾ ಕಲಾವಿದರು ಈತನ ಸಮಕಾಲೀನರಾಗಿದ್ದರೂ ತನ್ನ ವಿಶಿಷ್ಟ ಶೈಲಿಯಿಂದಾಗಿ ಬಾಟಿಚೆಲ್ಲಿ ಹಿರಿಮೆಯ ಸ್ಥಾನ ಪಡೆದ.

ಆ ಕಾಲದಲ್ಲಿ ಮೆಡಿಸಿ ರಾಜವಂಶದವರು ಫ್ಲಾರೆನ್ಸಿನಲ್ಲಿ ಆಳುತ್ತಿದ್ದರು. ಅರಸ ಲಾರೆಂಜೊ ದ ಮೆಡಿಸಿ ಬಾಟಿಚೆಲ್ಲಿಯನ್ನು ತನ್ನ ಆಸ್ಥಾನ ಕಲಾವಿದನನ್ನಾಗಿ ಮಾಡಿಕೊಂಡ. ಬಾಟಿಚೆಲ್ಲಿಯ ಜೀವನದ ಹೆಚ್ಚಿನ ಭಾಗ ಅಲ್ಲೇ ಕಳೆಯಿತು. ಮೆಡಿಸಿ ರಾಜಮನೆತನದ ಬಗೆಗೆ ಇವನಿಗೆ ಇದ್ದ ಗೌರವ ಅಪಾರ. ಅಲ್ಲಿನ ಒಂದು ಇಗರ್ಜಿಯ ಗೋಡೆಗಳನ್ನು ಕ್ರೈಸ್ತ ಪುರಾಣದ ಚಿತ್ರಗಳಿಂದ ಅಲಂಕರಿಸಬೇಕಾದಾಗ ಬಾಟಿಚೆಲ್ಲಿ, ಒಂದು ಚಿತ್ರದಲ್ಲಿ ಅರಸನ ಕುಟುಂಬದ ಪ್ರಮುಖ ವ್ಯಕ್ತಿಗಳನ್ನೆಲ್ಲ ಚಿತ್ರಿಸಿದ. ಈ ಚಿತ್ರದ ಒಂದು ಮೂಲೆಯಲ್ಲಿ ಚಮ್ಮಾರಪುತ್ರ ಸಾಂಡ್ರೋ ಬಾಟಿಚೆಲ್ಲಿಯ ಚಿತ್ರ ಕೂಡ ಕಾಣಿಸಿಕೊಂಡಿದೆ.

ಬಾಟಿಚೆಲ್ಲಿಯ ಅತ್ಯಂತ ಪ್ರಸಿದ್ಧ ಕೃತಿ 'ಪ್ರಿಮಾ ರೀವಾ' (ವಸಂತ). ಬಾಟಿಚೆಲ್ಲಿ ರಚಿಸಿದ ಮನುಷ್ಯಾಕೃತಿಗಳು ಅಸಹಜವೆನಿಸುವಷ್ಟು ಉದ್ದನಾಗಿರುತ್ತವೆ. ಆದರೆ ಇವು ಚಲಿಸುತ್ತಿವೆಯೋ ಎಂಬಂತೆ ತೋರುತ್ತವೆ. ಹೆಚ್ಚೆನಿಸುವಂಥ ಅಲಂಕರಣ ಮತ್ತು ಪ್ರತಿ ವಿವರದಲ್ಲೂ ಕಾಣುವ ಸೂಕ್ಷ್ಮತೆ ಬಾಟಿಚೆಲ್ಲಿಯ ಚಿತ್ರಗಳ ವೈಶಿಷ್ಟ್ಯ. ಮುಖ್ಯ ಆಕೃತಿಗಳ ಹಿನ್ನೆಲೆಯಲ್ಲಿ ಸುಂದರ ಪ್ರಕೃತಿ ದೃಶ್ಯಗಳನ್ನು ಮೇಳೈಸುವ ಕಲೆ ಬಾಟಿಚೆಲ್ಲಿಗೆ ಸಿದ್ಧಿಸಿತ್ತು.



ಧರ್ಮನಿಷ್ಠ : ಬಾಟಿಚೆಲ್ಲಿ

ಬಾಟಿಚೆಲ್ಲಿಯ ಪ್ರಸಿದ್ಧಿಯನ್ನು ಕೇಳಿದ ಪೋಪ್ ಹೊಸದೊಂದು ಇಗರ್ಜಿ ಅಲಂಕರಣಕ್ಕಾಗಿ ಆತನನ್ನು ಕರೆಸಿದ. ಹದಿನೆಂಟು ತಿಂಗಳ ಕಾಲ ಅಲ್ಲಿದ್ದು ಕೆಲಸಮಾಡಿದ ಬಾಟಿಚೆಲ್ಲಿಯಲ್ಲಿ ಗಾಢವಾದ ಧಾರ್ಮಿಕ ಪ್ರವೃತ್ತಿ ಬೆಳೆಯಿತು. ಫ್ಲಾರೆನ್ಸಿಗೆ ಬಂದಿದ್ದ ಸವನರೋಲಾ ಎಂಬ ಕ್ರೈಸ್ತ ಪಾದ್ರಿಯ ಪ್ರಭಾವಕ್ಕೆ ಒಳಗಾಗಿ ತನ್ನ 'ಆಡಂಬರ'ವನ್ನೆಲ್ಲ ತೊರೆದ. ಅಷ್ಟೇ ಅಲ್ಲ, ಧಾರ್ಮಿಕವಲ್ಲದ ಕೆಲ ವರ್ಣಚಿತ್ರಗಳನ್ನು ಆತ ನಾಶಪಡಿಸಿದ.

ದಾಂತೆಯ ಮಹಾಕೃತಿ 'ಡಿವೈನ್ ಕಾಮಿಡಿ'ಯನ್ನು ಕುರಿ ಚರ್ಮದ ಮೇಲೆ ಚಿತ್ರಿಸಿದ್ದು ಬಾಟಿಚೆಲ್ಲಿಯ ಇನ್ನೊಂದು ಮುಖ್ಯ ಕೃತಿ. ಮಧ್ಯ ವಯಸ್ಸು ಸಮೀಪಿಸುತ್ತಿದ್ದಂತೆ ಅವನು ಚಿತ್ರ ಬರೆಯುವುದನ್ನು ಕಡಮೆ ಮಾಡಿದ. ಕೊನೆಯ ಹತ್ತು ವರ್ಷಗಳನ್ನು ತನ್ನ ಹಳ್ಳಿಯಲ್ಲಿ ವ್ಯವಸಾಯ ಮಾಡುತ್ತ ಕಳೆದ. 1510ರ ವಸಂತ ಕಾಲದಲ್ಲಿ ಕೊನೆಯುಸಿರೆಳೆದ. ಚಮ್ಮಾರರ ಕೇರಿಯಲ್ಲಿದ್ದ ಚಿಕ್ಕ ಇಗರ್ಜಿಯ ಸ್ಮಶಾನದಲ್ಲಿ ಇವನ ಪಾರ್ಥಿವ ಶರೀರವನ್ನು ಸಮಾಧಿಮಾಡಲಾಯಿತು.

## ಬಾಣ

ಚಿಕ್ಕಂದಿನಲ್ಲಿಯೇ ತಾಯಿ ತಂದೆಯರ ಮರಣ; ಆದರೂ ಪ್ರಯತ್ನಪಟ್ಟು ವಿದ್ಯಾರ್ಜನೆ; ಅನಂತರ ದೇಶಸಂಚಾರ; ಜನರ ನಡೆನುಡಿ ಆಚಾರ ವ್ಯವಹಾರಗಳ ನಿರೀಕ್ಷಣೆ; ಗ್ರಂಥ ರಚನೆ. ರಾಜಮನ್ನಣೆ —ಇವು ಬಾಣಭಟ್ಟನ ಜೀವಿತದ ವಿವಿಧ ಘಟ್ಟಗಳು.

ಸಂಸ್ಕೃತ ಕವಿ ಬಾಣ ಹುಟ್ಟಿದ್ದು ಶೋಣಾನದೀತೀರದ ಪ್ರಥುಕೂಟದಲ್ಲಿ. ಅವನ ತಂದೆ ಚಿತ್ರಭಾನು. ಬಾಣನು ಹರ್ಷವರ್ಧನನ ಆಸ್ಥಾನದಲ್ಲಿದ್ದನೆಂಬುದು ಖಚಿತವಾದ ವಿಚಾರ. ಅದು 7ನೆಯ ಶತಮಾನ.

ಛಂದಸ್ಸನ್ನು ಉಪಯೋಗಿಸಿ ಪದ್ಯರೂಪದಲ್ಲಿ ಗ್ರಂಥರಚನೆ ಮಾಡುವ ಪದ್ಧತಿ ಪ್ರಚಲಿತವಾಗಿದ್ದ ಆ ಕಾಲದಲ್ಲಿ ಬಾಣ ಗದ್ಯದಲ್ಲಿ ಗ್ರಂಥರಚನೆ ಮಾಡಿದ್ದು ಒಂದು ವಿಶೇಷ. ಅವನು ಹೀಗೆ ಬರೆದ ಎರಡು ಗ್ರಂಥಗಳೂ —'ಕಾದಂಬರಿ', 'ಹರ್ಷಚರಿತ್ರೆ' — ಅಪೂರ್ಣ. ಅಪೂರ್ಣವಾಗಿದ್ದ 'ಕಾದಂಬರಿ'ಯನ್ನು ಅವನ ಮಗ ಭೂಷಣಭಟ್ಟ ಪೂರ್ಣಗೊಳಿಸಿದ. 'ಹರ್ಷಚರಿತ್ರೆ' ಅಪೂರ್ಣವಾಗಿಯೇ ಉಳಿಯಿತು.

ಬಾಣನು 'ಚಂಡೀಶತಕ'ವೆಂಬ ಸ್ತೋತ್ರವನ್ನೂ ಬರೆದಿದ್ದಾನೆ.

'ಕಾದಂಬರಿ'ಯ ವಸ್ತು ಅಪೂರ್ವವಾದದ್ದು. ಅದು ಒಂದು ಜನ್ಮದ ಕಥೆಯಲ್ಲ, ಜನ್ಮಾಂತರಗಳ ಕಥೆ: ದೇಹ ಅಳಿದರೂ ಪ್ರೇಮ ಉಳಿದು ಬೆಳೆದ ಕಥೆ. ಕಾದಂಬರಿ ಮತ್ತು ಚಂದ್ರಾಪೀಡ, ಮಹಾಶ್ವೇತೆ ಮತ್ತು ಪುಂಡರೀಕ – ಇವರ ಪ್ರೇಮ ಪ್ರಸಂಗ ಕಾದಂಬರಿಯ ವಸ್ತು. ಇದರ ನಿರೂಪಣಾ ವಿಧಾನವೂ ಗಮನಾರ್ಹವಾದದ್ದು. ಶೂದ್ರಕನೆಂಬ ರಾಜನ ಆಸ್ಥಾನಕ್ಕೆ ತಂದ ಗಿಳಿಯೊಂದು ಈ ಕಥೆಯನ್ನು ಹೇಳುತ್ತದೆ. ಈ ಕಥೆಯನ್ನು ಕೇಳುತ್ತಿದ್ದ ಶೂದ್ರಕ ಮಹಾರಾಜನೇ ಕೊನೆಯಲ್ಲಿ ಚಂದ್ರಾಪೀಡನಾಗಿ ಪರಿವರ್ತಿತನಾಗುತ್ತಾನೆ. 'ಕಾದಂಬರಿ'ಯ ಸ್ವಾರಸ್ಯವನ್ನು ಕಂಡುಕೊಂಡವನಿಗೆ ಆಹಾರವೂ ರುಚಿಸುವುದಿಲ್ಲ —ಎಂಬ ಹೇಳಿಕೆ ಇದೆ. ಬಾಣನು ತನ್ನ ವಿಶಾಲ ತಿಳಿವಳಿಕೆ, ಅನುಭವಗಳನ್ನು ಈ ಕೃತಿಯಲ್ಲಿ ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡಿದ್ದಾನೆ ; ಇದರಲ್ಲಿರುವ ಜೀವನ ಚಿತ್ರಣ ಸುರಮ್ಯ. ಭಾರತೀಯ ಸಂಸ್ಕೃತಿ, ನಾಗರಿಕತೆಗಳ ವಾತಾವರಣವನ್ನು ಯಶಸ್ವಿಯಾಗಿ ಮೂಡಿಸಿದ್ದಾನೆ.

ಬಾಣನ ಶೈಲಿ ಪ್ರೌಢ. ಆದರೂ ಆಕರ್ಷಕ. ಬಾಣನ ಅನಂತರ ಸಂಸ್ಕೃತದಲ್ಲಿ ಕಥಾ ಸಾಹಿತ್ಯವನ್ನು ರಚಿಸಿದ ಹಲವಾರು ದಕ್ಷ ಲೇಖಕರು ಬಾಣನನ್ನು ಅನುಸರಿಸಿ ನಡೆದರೆಂಬುದು ಅವನ ಹಿರಿಮೆಗೆ ಸಾಕ್ಷಿ.

'ಕಾದಂಬರಿ'ಯಷ್ಟು ಉತ್ತಮ ಕೃತಿಯಲ್ಲ 'ಹರ್ಷಚರಿತ್ರೆ'. ತನ್ನ ಪೋಷಕನನ್ನು ಕುರಿತು ಬರೆಯುವಾಗ ಅವನು ಕೆಲವು ಮಿತಿಗಳಿಗೆ ಒಳಗಾಗ ಬೇಕಾಯಿತೊ ಏನೋ. ಒಬ್ಬ ಲೇಖಕ ತನ್ನ ಸಮಕಾಲೀನನನ್ನು ಕುರಿತು ಸಂಸ್ಕೃತದಲ್ಲಿ ರಚಿಸಿದ ಪ್ರಥಮ ಗ್ರಂಥ 'ಹರ್ಷಚರಿತ್ರೆ'. ಆದ್ದರಿಂದ ಈ ಐತಿಹಾಸಿಕ ಕಾವ್ಯಕ್ಕೆ ಸಂಸ್ಕೃತ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಈ ಅಪೂರ್ಣ ಕೃತಿಯಲ್ಲಿ ಹರ್ಷನ ಪೂರ್ವಜರು, ರಾಜ್ಯವರ್ಧನ, ಹರ್ಷವರ್ಧನ, ಈ ಸಹೋದರರ ತಂಗಿ ರಾಜ್ಯಶ್ರೀ ಅವರನ್ನು ಕುರಿತ ವಿವರಗಳಿವೆ. ಹರ್ಷವರ್ಧನನು ತನ್ನ ವೈರಿಗಳನ್ನು ಗೆದ್ದು ತನ್ನ ಸಿಂಹಾಸನವನ್ನು ಭದ್ರಗೊಳಿಸಿಕೊಳ್ಳುವ ಘಟ್ಟದಲ್ಲಿ ನಿರೂಪಣೆ ನಿಂತು ಹೋಗಿದೆ.

10ನೆಯ ಶತಮಾನದಲ್ಲಿದ್ದ ಒಂದನೆಯ ನಾಗವರ್ಮನು ಬಾಣನ 'ಕಾದಂಬರಿ'ಯನ್ನು ಕನ್ನಡಕ್ಕೆ ಪರಿವರ್ತಿಸಿದ್ದಾನೆ. ಇದು ಕನ್ನಡದ ಒಂದು ಪ್ರೌಢ ಕಾವ್ಯ.

'ನಾವೆಲ್' ಎಂಬ ಕೃತಿಗಳನ್ನು ಇಂಗ್ಲಿಷ್ 'ರೊಮಾನ್ಸ್' ಎಂದು ಕರೆಯುವುದು ವಾಡಿಕೆ. ಬಾಣನ ಕಾದಂಬರಿಯಿಂದಾಗಿಯೇ 'ನಾವೆಲ್' ಗಳನ್ನೂ ದೀರ್ಘ ಕಥೆ. ಆಧುನಿಕ ಸಿಂಗಳದ ಮುಂತಾದವು ಗದ್ಯರೂಪದ ಆ ಪ್ರಕಾರವನ್ನು 'ಕಾದಂಬರಿ' ಎಂದು ಕರೆಯಲಾಗುತ್ತದೆ. ಅಂತೂ 'ಕಾದಂಬರಿ' ಎಂಬ ಹೆಸರಿನೊಂದಿಗೂ ಒಂದನೆಯ ನಾಗವರ್ಮನ 'ಕರ್ಣಾಟಕ ಕಾದಂಬರಿ'ಯೊಂದಿಗೂ ಬಾಣಭಟ್ಟನ ಹೆಸರು ಸಾಹಿತ್ಯದಲ್ಲಿ ಸ್ಥಿರವಾಗಿ ಉಳಿದಿದೆ.

## ಬಾದಾಮಿ

ಬಿಜಾಪುರ ಜಿಲ್ಲೆಯಲ್ಲಿರುವ ಬಾದಾಮಿ ನಮ್ಮ ನಾಡಿನ ಮಹತ್ವದ ಪ್ರಾಚೀನ ಐತಿಹಾಸಿಕ ಕೇಂದ್ರಗಳಲ್ಲಿ ಒಂದು. ಚಾಲುಕ್ಯವಂಶದ ಮೂಲ ಪುರುಷನಾದ ಒಂದನೆಯ ಪುಲಿಕೇಶಿ ಆರನೆಯ ಶತಮಾನದ ಆರಂಭ ಕಾಲದಲ್ಲಿ ಬಾದಾಮಿಯ ಕೋಟೆಯನ್ನು ಕಟ್ಟಿಸಿದನೆಂಬುದಕ್ಕೆ ಐತಿಹಾಸಿಕ ಆಧಾರಗಳು ದೊರೆತಿವೆ. ಒಂದನೆಯ ಪುಲಿಕೇಶಿ ಇಲ್ಲಿ 'ವಾತಾಪಿಪುರ'ದ ಕೋಟೆಯನ್ನು ಕಟ್ಟುವುದಕ್ಕೆ ಮೊದಲೇ ಇಲ್ಲಿ ಒಂದು ಊರು ಇದ್ದಿರಬೇಕೆಂಬುದರಲ್ಲಿ ಅನುಮಾನವಿಲ್ಲ.

ಬಾದಾಮಿಯ ಚರಿತ್ರೆಯನ್ನು ತುಂಬ ಪ್ರಾಚೀನ ಕಾಲಕ್ಕೆ ಎಳೆದು ಕೊಂಡು ಹೋಗುವವರೂ ಇದ್ದಾರೆ. ಬಾದಾಮಿಯು ವಾತಾಪಿಯೆಂಬ ಮಾಯಾವಿ ರಾಕ್ಷಸ ಮತ್ತು ಅವನ ತಮ್ಮ ಇಲ್ವಲ ಇವರ ರಾಜಧಾನಿಯಾಗಿತ್ತೆಂದೂ ಅಗಸ್ತ್ಯಮುನಿಯಿಂದ ನಾಶಹೊಂದಿದ ವಾತಾಪಿಯೇ ಈತ ಎಂದೂ ಇವರು ಹೇಳುತ್ತಾರೆ.

ಬಾದಾಮಿ ಒಂದು ಪುರಾತನ ನಗರ ಅಥವಾ ಊರು ಎಂಬುದರಲ್ಲಿ ಮಾತ್ರ ಸಂದೇಹವಿಲ್ಲ.

ಬಾದಾಮಿ ಆಕರ್ಷಕ ನಿವೇಶನದಲ್ಲಿದೆ. ಈ ಊರು ಇರುವುದು ಎರಡು ಮರಳುಕಲ್ಲು ಗುಡ್ಡಗಳ ಶ್ರೇಣಿಯ ನಡುವೆ. ಇವುಗಳ ಮೇಲೆ ಸೂರ್ಯನ ಬೆಳಕು ಬಿದ್ದಾಗ ಹಲವು ಬಣ್ಣಗಳು ಮಿಂಚುತ್ತವೆ. ಊರಿನ ಮೂಡಲ ಮಗ್ಗುಲಲ್ಲಿ ಒಂದು ದೊಡ್ಡ ಸರೋವರವಿದೆ, ಬಾದಾಮಿಯ ಸುಪ್ರಸಿದ್ಧ ಗುಹಾಲಯಗಳು ಇದಕ್ಕೆ ಸಮೀಪವಾಗಿ ದಕ್ಷಿಣ ದಿಕ್ಕಿನಲ್ಲಿ ಹಬ್ಬಿರುವ ಬೆಟ್ಟದ ಸಾಲಿನಲ್ಲಿವೆ.

ಬಾದಾಮಿ ಗುಹೆಯಲ್ಲಿ ಸಾಲುಶಿಲ್ಪ





ಬಾದಾಮಿ ಭಿತ್ತಿಚಿತ್ರದ ಪ್ರತಿಕೃತಿ : ಎಂ. ವಿ. ಮಿಣಜಿಗಿ

ಬಾದಾಮಿ ಚಾಲುಕ್ಯರ ರಾಜಧಾನಿಯಾದ ಕಾಲದಲ್ಲಿ ಅದಕ್ಕೆ ವಾತಾಪಿ ಎಂಬ ಹೆಸರಿತ್ತು. ಚಾಲುಕ್ಯರ ವಶವಾಗುವುದಕ್ಕೆ ಮುಂಚೆ ಇದು ಪಲ್ಲವರಿಗೆ ಸೇರಿತ್ತು.

ಒಂದನೆಯ ಪುಲಿಕೇಶಿಯ ಮಕ್ಕಳಾದ ಕೀರ್ತಿವರ್ಮ ಮತ್ತು ಮಂಗಳೇಶರ ಕಾಲದಲ್ಲಿ ಬಾದಾಮಿಯ ಗುಡ್ಡಗಳಲ್ಲಿ ಒಂದೊಂದು ಅಖಂಡ ಬಂಡೆಯಲ್ಲಿ ನಾಲ್ಕು ಗುಹಾಲಯಗಳು ನಿರ್ಮಿಸಲ್ಪಟ್ಟುವು. ಇವುಗಳಲ್ಲಿ ಎರಡು ವೈಷ್ಣವ, ಒಂದು ಶೈವ, ಇನ್ನೊಂದು ಜೈನ ಸಂಪ್ರದಾಯಕ್ಕೆ ಸೇರಿವೆ. ಎರಡನೆಯ ಮತ್ತು ಮೂರನೆಯ ಗುಹೆಗಳ ನಡುವೆ ಒಂದು ತೀರ ಚಿಕ್ಕದಾದ ಆಕಾರರಹಿತ ಗುಹೆ ಇದೆ. ಇದು ಶಿಲ್ಪಿಗಳ ಕುಶಲ ಕಾರ್ಯಕ್ಕೆ ತಕ್ಕುದಾದ ದೊಡ್ಡ ಅಖಂಡ ಬಂಡೆಯುಳ್ಳದ್ದಾದ್ದರಿಂದ ಅಲ್ಲಿ ಕೆತ್ತನೆಯ ಕಾರ್ಯ ನಡೆದಿಲ್ಲ. ಇವನ್ನು ನಿರ್ಮಿಸಿ ಸುಮಾರು ಹದಿನಾಲ್ಕು ಶತಮಾನಗಳಾಗಿದ್ದರೂ ಇವಿನ್ನೂ ತಕ್ಕಮಟ್ಟಿಗೆ ಒಳ್ಳೆಯ ಸ್ಥಿತಿಯಲ್ಲೇ ಇವೆ. ಈ ಗುಹಾಲಯಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು, ಮಂಗಳೇಶನ ಶಾಸನವಿರುವ ಮತ್ತು ಉಳಿದುವುಗಳಿಗಿಂತ ಗಾತ್ರದಲ್ಲಿ ದೊಡ್ಡದಾಗಿರುವ ವೈಷ್ಣವ ಗುಹಾಲಯ. ತನ್ನನ್ನು ಪರಮಭಾಗವತನೆಂದು ಕರೆದುಕೊಂಡಿರುವ ಮಂಗಳೇಶ ಈ ಆಲಯ ನಿರ್ಮಾಣದಲ್ಲಿ ವಿಶೇಷ ಆಸಕ್ತಿ ವಹಿಸಿರಬೇಕೆಂಬುದು ಸ್ಪಷ್ಟ. ಇದರ ನಿರ್ಮಾಣವಾದದ್ದು 578ರಲ್ಲಿ. ಕೈಸಾಲೆಯ ಪಶ್ಚಿಮದಲ್ಲಿ ಆದಿಶೇಷನ ಮೇಲೆ ಮಂಡಿಸಿರುವ ಭವ್ಯವಾದ ವಿಷ್ಣುವಿನ ಮೂರ್ತಿ. ಇದರ ಸಮೀಪದಲ್ಲೇ ಇರುವ ವರಾಹಮೂರ್ತಿ, ನರಸಿಂಹ — ಇವು ಉತ್ತಮ ಶಿಲ್ಪಕೃತಿಗಳು. ಆಲಯದ ಇತರ ಭಾಗಗಳಲ್ಲಿರುವ ಶಿಲ್ಪವೂ ಅಷ್ಟೆ. ಇನ್ನೊಂದು ವೈಷ್ಣವ ಆಲಯದಲ್ಲಿರುವ ವಾಮನಮೂರ್ತಿ ಕೂಡ ಪ್ರೇಕ್ಷಣೀಯವಾದದ್ದು. ಈ ಆಲಯಗಳ ಛಾವಣಿಯೂ ಸೇರಿದಂತೆ ವಿವಿಧ ಭಾಗಗಳಲ್ಲಿ ವಿಧವಿಧವಾದ ಮೂರ್ತಿಶಿಲ್ಪವನ್ನೂ ಅಲಂಕಾರಿಕ ಕೆತ್ತನೆಗಳನ್ನೂ ಕಾಣಬಹುದು. ಶೈವ ಆಲಯದಲ್ಲಿರುವ ನಟರಾಜ ಮತ್ತು ಅರ್ಧನಾರೀಶ್ವರ ಮೂರ್ತಿ ಗಮನಾರ್ಹವಾಗಿವೆ. ನಟರಾಜನ ಸಮೀಪದಲ್ಲಿ ನಂದಿ, ಭೃಂಗಿಗಳ ಮೂರ್ತಿಯನ್ನೂ ಕಾಣಬಹುದು.

ಜಿನಾಲಯದಲ್ಲಿರುವ ಪ್ರಧಾನ ಮೂರ್ತಿ ಕೊನೆಯ ತೀರ್ಥಂಕರನಾದ ಮಹಾವೀರನದು. ಈ ಆಲಯದ ಗೋಡೆ ಮತ್ತು ಸ್ತಂಭಗಳ ಮೇಲೆ ತೀರ್ಥಂಕರರ ಮೂರ್ತಿಗಳನ್ನು ಕೆತ್ತಿದ್ದಾರೆ.

ಗುಹಾಲಯದ ಒಳಗಿರುವ ಶಿಲ್ಪಗಳಲ್ಲಿ ದೇವದೇವತೆಗಳ ರೂಪಗಳಲ್ಲದೆ ಪ್ರಾಣಿಗಳು, ಪಕ್ಷಿಗಳು ಮತ್ತು ಗಿಡ ಮರ ಬಳ್ಳಿ ಶಿಲ್ಪದ ಅಲಂಕರಣ ಭಾಗವಾಗಿ ರಚಿಸಲ್ಪಟ್ಟಿವೆ. ಇವೆಲ್ಲ ಸುಂದರ ಕೃತಿಗಳು. ಶಿಲ್ಪಿಗಳ ಕಲ್ಪನಾಶಕ್ತಿ, ಹಸ್ತಕೌಶಲಗಳಿಗೆ ಇವು ಸಾಕ್ಷಿ.

ಈ ಗುಹಾಲಯಗಳು ನಿರ್ಮಿತವಾದ ಅನಂತರ ಕಟ್ಟಿದ ದೇವಾಲಯಗಳಲ್ಲಿ ಈ ಗುಹಾಲಯಗಳ ಶಿಲ್ಪದ ಪ್ರಭಾವ ಎದ್ದು ಕಾಣುತ್ತದೆ.

ಬಾದಾಮಿಯಲ್ಲಿ ಈ ಗುಹಾಲಯಗಳಲ್ಲದೆ ಇನ್ನೂ ಕೆಲವು ಪ್ರಾಚೀನ ದೇವಾಲಯಗಳಿವೆ. ಬಾದಾಮಿಯ ಸರೋವರದ ಪೂರ್ವ ದಂಡೆಯಲ್ಲಿ ಇರುವ ಭೂತನಾಥ ದೇವಾಲಯದಲ್ಲಿ ಒಳ್ಳೆಯ ಶಿಲ್ಪಕೃತಿಗಳಿವೆ. ಇಲ್ಲಿ ಕಂಡುಬರುವ ಹಂಸಗಳ ಸಾಲು, ಗಂಗೆ ಯಮುನೆಯರು, ದ್ವಾರಪಾಲಕ ಮೂರ್ತಿಗಳು ಆಕರ್ಷಕವಾಗಿವೆ.

ಬಾದಾಮಿಯಲ್ಲಿರುವ ಇನ್ನೊಂದು ಗಮನಾರ್ಹ ದೇವಾಲಯ ಲಕುಲೀಶನದು. ಲಕುಲೀಶ ಶೈವಪಂಥವೊಂದರ ಪ್ರತಿಪಾದಕ. ಅವನು ಶಿವನ ಅವತಾರವೆಂಬ ನಂಬಿಕೆಯೂ ಇದೆ. ಬಾದಾಮಿಯನ್ನು ಬಿಟ್ಟರೆ, ದಕ್ಷಿಣ ಭಾರತದಲ್ಲಿ ಇನ್ನೆಲ್ಲೂ ಲಕುಲೀಶನ ಆಲಯಗಳಿಲ್ಲ.

ಬಾದಾಮಿ ಆ ಕಾಲಕ್ಕೆ ಉತ್ತಮ ರಕ್ಷಣಾವ್ಯವಸ್ಥೆಯುಳ್ಳ ಶ್ರೀಮಂತ ಪಟ್ಟಣವಾಗಿತ್ತೆಂದು ಇಮ್ಮಡಿ ಪುಲಿಕೇಶಿಯ ಕಾಲಕ್ಕೆ ಬಾದಾಮಿಗೆ ಬಂದಿದ್ದ ಹ್ಯುಯೆನ್‌ತ್ಸಾಂಗ್ ವರ್ಣಿಸಿದ್ದಾನೆ.

ಬಾದಾಮಿಯಲ್ಲಿ ಸುಮಾರು 18 ಶಾಸನಗಳು ದೊರೆತಿದ್ದು ಇವು ಕರ್ನಾಟಕದ ಇತಿಹಾಸದ ದೃಷ್ಟಿಯಿಂದ ಮುಖ್ಯವಾಗಿವೆ.

ಕರ್ನಾಟಕ ಕಲಾ ಪರಂಪರೆಗೆ ಬಾದಾಮಿಯ ಕಾಣಿಕೆ ಹಿರಿದಾದದ್ದು.

## ಬಾರೋಕ್ ಕಲೆ

ಭವ್ಯತೆ ಹಾಗೂ ಆಡಂಬರದ ಅಲಂಕರಣ ಬಾರೋಕ್ ಕಲೆಯ ವೈಶಿಷ್ಟ್ಯ. 'ಬಾರೋಕೊ' ಎಂಬ ಸ್ಪಾನಿಷ್ ಭಾಷೆಯ ಪದದ ಅರ್ಥ— ಅನಿರ್ದಿಷ್ಟ ಆಕಾರದ ಮುತ್ತು, ಅಥವಾ ಬಿರಿಯುವುದೇನೋ ಎಂಬಂತೆ ತೋರುವ ವರ್ತುಲಾಕಾರದ ಮುತ್ತು ಎಂದು. ಆಕೃತಿಗಳು ತಮ್ಮ ಮೇರೆಯನ್ನೂ ಮೀರಿ ಹೊರಬರುವುವೇನೋ ಎಂಬಂತೆ ಕಾಣುವ ವಾಸ್ತುಶಿಲ್ಪ ಮತ್ತು ಚಿತ್ರಗಳನ್ನು ಬಾರೋಕ್ ಕಲೆ ಎಂದು ಕರೆದರು. 18, 19ನೆಯ ಶತಮಾನಗಳಲ್ಲಿ ವಿಪರೀತ ಪಾಂಡಿತ್ಯ ಪ್ರದರ್ಶನಮಾಡುತ್ತಿದ್ದವರ ಅವಹೇಳನಕ್ಕಾಗಿಯೂ 'ಬಾರೋಕ್' ಪದವನ್ನು ಬಳಸುತ್ತಿದ್ದುದುಂಟು. ಒಟ್ಟಿನಲ್ಲಿ 17, 18ನೆಯ ಶತಮಾನಗಳಲ್ಲಿ (1600 ರಿಂದ 1750) ಇಟಲಿಯಲ್ಲಿ ವಿಕಾಸಗೊಂಡು ಬೇರೆ ಪ್ರದೇಶಗಳಿಗೂ ಹರಡಿದ ಒಂದು ವಿಶಿಷ್ಟ ಬಗೆಯ ಕಲಾವಿಧಾನವನ್ನು 'ಬಾರೋಕ್ ಕಲೆ' ಎಂದು ಕರೆಯುವುದು ರೂಢಿಯಲ್ಲಿದೆ.

15ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಇಟಲಿಯ ಶ್ರೇಷ್ಠ ಕಲಾವಿದ ಮೈಕೆಲೇಂಜಲೋನನ್ನು 'ಬಾರೋಕ್ ಕಲೆಯ ಜನಕ' ಎಂದು ಪರಿಗಣಿಸುತ್ತಾರೆ. ಇವನು ಫ್ಲಾರೆನ್ಸ್‌ನಲ್ಲಿ ನಿರ್ಮಿಸಿದ ಮೆಡಿಸಿ ವಂಶದ ಗುಲಿಯಾನೋ ಎಂಬ ಅರಸನ ಸಮಾಧಿ ಮತ್ತು ಲೋರೆಂಟಿಯನ್ ಲೈಬ್ರೆರಿ ಕಟ್ಟಡದ ಪ್ರವೇಶಾಂಗಣಗಳ ರಚನೆಯಲ್ಲಿ ಬಾರೋಕ್ ಕಲೆಯ ಮೂಲತತ್ತ್ವಗಳನ್ನು ಸುಲಭವಾಗಿ ಗುರುತಿಸಬಹುದು.

ಈ ಅಂಶವನ್ನು ಗಮನಿಸಿದಾಗ ಬಾರೋಕ್ ಕಲೆ, ಅದಕ್ಕೆ ಮೊದಲು ಪ್ರಸಿದ್ಧಿಗೆ ಬಂದ ನವೋದಯ ಕಲೆಯಿಂದ ಮೂಡಿದುದೆಂಬುದು ವ್ಯಕ್ತವಾಗುತ್ತದೆ. ನವೋದಯದ ಖ್ಯಾತ ಕಲಾವಿದರು ತಮ್ಮ ಅಭಿವ್ಯಕ್ತಿಯನ್ನು ವಿಸ್ತರಿಸಲು ನಡೆಸಿದ ಪ್ರಯತ್ನದ ಪರಿಣಾಮ ಇದು. ಮೈಕೆಲೇಂಜಲೋ ಮಾತ್ರವಲ್ಲದೆ ನವೋದಯ ಕಾಲದ ಪ್ರಮುಖ ಕಲಾವಿದರಾದ ರಾಫೇಲ್,

ಟಿಷನ್ ಮುಂತಾದವರ ಕೊನೆಯ ಅವಧಿಯ ಚಿತ್ರಗಳಲ್ಲಿ ಈ ಪ್ರಯತ್ನವನ್ನು ಕಾಣಬಹುದು.

ಮೈಕೆಲೇಂಜಲೋ ಅನಂತರ ಈ ಕಲಾಪ್ರಕಾರ ಪ್ರಸಿದ್ಧಿಗೆ ಬಂತು. ಬಾರೋಕ್ ಪ್ರಕಾರದ ಪ್ರಖ್ಯಾತ ಕಲಾವಿದರು ಗಿಯೊವಾನಿ ಬರ್ನಿನಿ, ಎಲ್‌ಗ್ರೆಕೋ, ರೆಂಬ್ರಾಂಟ್ ಮತ್ತಿತರರು.

ಇಟಲಿ, ಆಸ್ಟ್ರಿಯ, ಜರ್ಮನಿ, ಫ್ಲಾಂಡರ್ಸ್‌ಗಳಲ್ಲಿಯ ರೋಮನ್ ಕ್ಯಾಥೊಲಿಕ್ ಧರ್ಮಪೀಠಗಳವರು ಬಾರೋಕ್ ಕಲೆಯ ಪೋಷಕರು. ಅವರು ಧಾರ್ಮಿಕ ಪ್ರಚಾರಕ್ಕಾಗಿ ಕಲೆಯನ್ನು ಬಳಸಿದರು. ಇದರಿಂದ ಬಾರೋಕ್ ಕಲೆ ಆರಂಭದೆಸೆಯಲ್ಲಿ ಇಗರ್ಜಿಗಳಿಗೇ ಸೀಮಿತವಾಗಿದ್ದಿತು. ಇಗರ್ಜಿಗಳ ಗೋಡೆಗಳು ಹೊರಗೂ ಒಳಗೂ ಬಾಗಿಕೊಂಡಂತಿರುವುದು ಈ ವಾಸ್ತುಶಿಲ್ಪ ರಚನೆಯ ವೈಶಿಷ್ಟ್ಯ. ಕಟ್ಟಡದ ಒಳಗಿನ ಶಿಲ್ಪಗಳು, ವರ್ಣಚಿತ್ರಗಳು ಬೇರೆಬೇರೆ ಎಂಬ ಭಾವನೆ ಬರದಂತೆ ಅವು ಸಮರಸವಾಗಿ ಬೆರೆಯುವುದು ಈ ಕಲೆಯ ಒಂದು ಲಕ್ಷಣ. ಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆ ಈ ಮೂರೂ ಒಟ್ಟುಗೂಡಿ ನೋಡುವವರಲ್ಲಿ ಉದಾತ್ತಭಾವನೆ ಮೂಡಿಸುತ್ತವೆ. ಬಾರೋಕ್ ಕಲೆಯಲ್ಲಿ ಒಂದು ಕಲಾಕೃತಿಯ ಅಂಗಗಳಿಗಿಂತ ಆಕೃತಿಯ ಒಟ್ಟು ಪರಿಣಾಮದ ಕಡೆಗೆ, ನಾಟಕೀಯ ಪರಿಣಾಮದ ಕಡೆಗೆ ಹೆಚ್ಚು ಗಮನ. ಬಾರೋಕ್ ವಾಸ್ತುಶಿಲ್ಪ ವಿನ್ಯಾಸದಲ್ಲಿ, ಬೃಹದಾಕಾರದ ಸ್ತಂಭಗಳು ಕಟ್ಟಡದ ನೆಲಗಟ್ಟಿನಿಂದ ಆರಂಭವಾಗಿ ವಿವಿಧ ಅಂತಸ್ತುಗಳನ್ನು ಹಾಯ್ದು ಛಾವಣಿಯನ್ನು ಮುಟ್ಟುತ್ತವೆ.

17ನೆಯ ಶತಮಾನದ ಆದಿಕಾಲದಲ್ಲಿ ಬಾರೋಕ್ ಕಲೆ ರೋಮಿನಲ್ಲಿ ಆರಂಭವಾಗಿ ವಿಯೆನ್ನಾ, ಪ್ರಾಗ್, ಮಾಡ್ರಿಡ್, ಪ್ಯಾರಿಸ್‌ಗಳಿಗೆ ಹಬ್ಬಿತು.



ವರ್ಸೇಲ್ಸ್‌ನಲ್ಲಿ ಫ್ರಾನ್ಸಿನ ಹದಿನಾಲ್ಕನೆಯ ಲೂಯಿ ಕಟ್ಟಿಸಿದ ಬಾರೋಕ್ ಶೈಲಿಯ ಅರಮನೆ

ಸ್ಪೇನಿನವರು ದಕ್ಷಿಣ ಅಮೆರಿಕಕ್ಕೆ ವಲಸೆಹೋದಾಗ ಈ ಕಲೆ ಅಲ್ಲಿಗೂ ಹರಡಿತು. ಬಾರೋಕ್ ಕಲೆ ಆಸ್ಟ್ರಿಯದ ವಾಸ್ತುಶಿಲ್ಪ ಚಿತ್ರಕಲೆಗಳ ಮೇಲೆ ಬಹಳ ಮಟ್ಟಿಗೆ ಪರಿಣಾಮ ಮಾಡಿದೆ. ಬಾರೋಕ್‌ಕಲೆಯ ಮುಂದುವರಿದ ರೂಪವೇ 18ನೆಯ ಶತಮಾನದ ಆದಿಯಲ್ಲಿ ಆರಂಭವಾದ ರೊಕೋಕೋ ಕಲಾಶೈಲಿ.

ಮೊದಲು ಇಗರ್ಜಿಗಳಿಗೆ ಮಾತ್ರ ಸೀಮಿತವಾಗಿದ್ದ ಬಾರೋಕ್ ಕಲೆಯನ್ನು ಭವ್ಯವಾದ ಅರಮನೆಗಳು ಮತ್ತು ಕಟ್ಟಡಗಳ ರಚನೆಯಲ್ಲೂ ಅನಂತರ ಅಳವಡಿಸಿಕೊಳ್ಳಲಾಯಿತು. ಕಾರಂಜಿಗಳಿಂದ ಕೂಡಿದ ವಿಸ್ತಾರ ಉದ್ಯಾನಗಳನ್ನು ಈ ಅರಮನೆಗಳ ಸುತ್ತ ರಚಿಸಿದರು. ವಿಶಾಲವಾದ, ತಿರುವು ಮುರುವುಗಳಿರುವ ಅಟ್ಟದ ಮೆಟ್ಟಿಲುಗಳು ಈ ಕಾಲದ ವಾಸ್ತುಶಿಲ್ಪದ ಒಂದು ವೈಶಿಷ್ಟ್ಯ.

ಶರೀರ ಮತ್ತು ವಸ್ತ್ರಾಲಂಕಾರದಲ್ಲಿ ಪ್ರಬಲ ಚಲನಶೀಲತೆ ಇರುವುದು ಬಾರೋಕ್ ಶಿಲ್ಪದ ವಿಶೇಷ ಲಕ್ಷಣ. ಶಿಲ್ಪದಲ್ಲಿ ಸಾಧಿಸಿದ ಉಬ್ಬು ಇಳಿತಗಳಿಂದ ಉಂಟಾಗುವ ನೆರಳು ಬೆಳಕುಗಳ ವಿನ್ಯಾಸ ಈ ಶಿಲ್ಪದ ಒಟ್ಟು ಪರಿಣಾಮ ಸಾಧನೆಯ ಒಂದು ಮುಖ್ಯ ಅಂಶ.

'ಬಾರೋಕ್ ಸಂಗೀತ' ಎಂಬ ಮಾತೂ ಬಳಕೆಯಲ್ಲಿದೆ. ಬಾರೋಕ್ ಕಲೆ ಬಳಕೆಯಲ್ಲಿದ್ದ ಕಾಲದ ಸಂಗೀತಕ್ಕೆ ಈ ಹೆಸರು ಕೊಟ್ಟಿದ್ದಾರೆ. ಯೋಹಾನ್ ಸೆಬಾಸ್ಟಿಯನ್ ಬಾಕ್, ಜಾರ್ಜ್ ಫ್ರೆಡರಿಕ್ ಹ್ಯಾಂಡೆಲ್ ಇವರ ಸಂಗೀತ ಕೃತಿಗಳು ಈ ಕಾಲದವು. ಮೊದಮೊದಲು ಬಾರೋಕ್ ಸಂಗೀತ ಬಹುಮಟ್ಟಿಗೆ ಧಾರ್ಮಿಕವರ್ಗಕ್ಕೆ ಸೇರಿತ್ತು. ಆದರೆ ಬಾರೋಕ್ ಶೈಲಿಯ ಅತಿ ಸೊಗಸಾದ ರಚನೆಗಳೆಲ್ಲ ಲೌಕಿಕ ರಚನೆಗಳೇ ಆಗಿವೆ.

ಸಾಮಾಜಿಕ, ಧಾರ್ಮಿಕ, ವೈಜ್ಞಾನಿಕ ಹಾಗೂ ತಾತ್ತ್ವಿಕ ವಿಚಾರಗಳು ಯೂರೋಪಿನಲ್ಲಿ ಬದಲಾಗುತ್ತಿದ್ದ ಕಾಲದಲ್ಲಿ ಬಾರೋಕ್ ಶೈಲಿ ರೂಪುಗೊಂಡಿತು. ಹೀಗೆ ಬಾರೋಕ್ ಕಲೆ ಹೊಸದೊಂದು ಭಾವಸಂವೇದನೆಯ ಕಲಾತ್ಮಕ ಬಿಂಬವೆನಿಸಿತು.

### ಬಾಲ್ಜಾಕ್

"ನಾನು ಅಸಾಧಾರಣ ವ್ಯಕ್ತಿಗಳನ್ನು ಮೆಚ್ಚುತ್ತೇನೆ. ನಾನೂ ಅಂಥವರಲ್ಲೊಬ್ಬ"—ಹೀಗೆಂದು ಬರೆದವನು ಫ್ರಾನ್ಸಿನ ಸುಪ್ರಸಿದ್ಧ ಕಾದಂಬರಿಕಾರ



ಸನ್ಯಾಸಿನಿ ತೆರೇಸಾಳ ಹರ್ಷಾತಿರೇಕ
-ಬರ್ನಿನಿ ಕೃತಿ

[illegible] ಬಾಲ್ಜಾಕ್. [illegible] ಪ್ರತಿದಿನ 16-18 ಗಂಟೆಗಳ ಕಾಲ ದುಡಿಯುತ್ತಿದ್ದ. [illegible] ರಾತ್ರಿಯಲ್ಲಿ ಕೆಲಸಮಾಡುತ್ತಿದ್ದುದೂ ಉಂಟು. ಇಪ್ಪತ್ತು ವರ್ಷಗಳ ಅವಧಿಯಲ್ಲಿ ಇವನು 90 ಕಾದಂಬರಿಗಳನ್ನೂ ಅನೇಕ ಕಥೆ-ಪತ್ರಿಕಾ ಲೇಖನಗಳನ್ನೂ ಬರೆದ.

ಬಾಲ್ಜಾಕ್ ಫ್ರಾನ್ಸಿನ ಟೂರ್ಸ್ ಪ್ರಾಂತ್ಯದಲ್ಲಿ 1799ರಲ್ಲಿ ಜನಿಸಿದ. ಆತನ ತಂದೆ ರೈತಕುಟುಂಬದಲ್ಲಿ ಹುಟ್ಟಿ ಸ್ವಪ್ರಯತ್ನದಿಂದ ನ್ಯಾಯಶಾಸ್ತ್ರ ಅಭ್ಯಸಿಸಿ ಫ್ರಾನ್ಸಿನ ಸರಕಾರದಲ್ಲಿ ಉನ್ನತಾಧಿಕಾರಕ್ಕೆ ಬಂದವನು. ಬಾಲ್ಜಾಕನ ತಾಯಿ ಪ್ಯಾರಿಸಿನ ಶ್ರೀಮಂತ ವರ್ತಕರ ಕುಟುಂಬಕ್ಕೆ ಸೇರಿದವಳು. ತನ್ನ ಪತಿಗಿಂತ ಪ್ರಾಯದಲ್ಲಿ ಸುಮಾರು 32 ವರ್ಷ ಚಿಕ್ಕವಳು. ತನ್ನ ಮಕ್ಕಳನ್ನು ಕಠೋರ ಶಿಸ್ತಿನಿಂದ ಬೆಳೆಸಿದಳು. ತಾನು ಮಾತೃಪ್ರೇಮದಿಂದ ವಂಚಿತ ಎಂದು ಬಾಲ್ಯದಲ್ಲಿ ಬಾಲ್ಜಾಕ್ ತಿಳಿದುಕೊಂಡಿದ್ದ. ಅವನ ತಾಯಿಗೆ ಅವನ ಮೇಲೆ ಉಳಿದ ಮಕ್ಕಳ ಮೇಲಿದ್ದಷ್ಟು ಪ್ರೀತಿ ಇರಲಿಲ್ಲ. ಹೀಗಾಗಿ ಆತನ ಬಾಲ್ಯವೆಲ್ಲ ನಿರಾಶೆಯಲ್ಲಿ ಕಳೆಯಿತು. ಎಂಟರಿಂದ ಹದಿನಾಲ್ಕು ವರ್ಷ ಪ್ರಾಯದ ತನಕ ವಿಡೋಮೆ ಎಂಬಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಪಡೆದ. ತಮ್ಮ ಮಗ ವಕೀಲ ಅಥವಾ ಪಾದ್ರಿ ಆಗಬೇಕೆಂದು ಅವನ ತಂದೆತಾಯಿ ಬಯಸಿದ್ದರು. ಆದರೆ ಬಾಲ್ಜಾಕ್ 1819ರಲ್ಲಿ ಮನೆಯನ್ನು ತ್ಯಜಿಸಿ ಪ್ಯಾರಿಸಿಗೆ ಬಂದ. ತನ್ನ ಉಳಿದ ಕಾಲವನ್ನೆಲ್ಲ ಆತ ಆ ನಗರದಲ್ಲೇ ಕಳೆದ.



'ನಾನು ಅಸಾಧಾರಣ ವ್ಯಕ್ತಿ': ಬಾಲ್ಜಾಕ್

ಬಾಲ್ಜಾಕ್ ಪ್ಯಾರಿಸಿಗೆ ಬಂದ ಮೇಲೆ ಮೊದಲ 11 ವರ್ಷಗಳ ಕಾಲ ಆರ್ಥಿಕ ದುಸ್ಥಿತಿಯಿಂದ ಅನೇಕ ತೊಂದರೆಗಳನ್ನು ಅನುಭವಿಸಿದ. ಆದರೂ ಬರೆಹಗಾರನಾಗಿ ತನ್ನ ಬಾಳನ್ನು ರೂಪಿಸಿಕೊಳ್ಳಬೇಕೆಂದು ನಿರ್ಧರಿಸಿ, ಹೆಣಗಿದ. ಇವನು ಕಷ್ಟದಲ್ಲಿದ್ದಾಗ ಸ್ನೇಹಿತರ ಮತ್ತು ಬಂಧುಗಳ ಸಹಾಯ ಸಹಾನುಭೂತಿ ದೊರೆಯಿತು. ಪ್ಯಾರಿಸ್ ಮತ್ತು ಅಲ್ಲಿನ ಜನಜೀವನ ಅವನ ಕಾದಂಬರಿಗಳಿಗೆ, ಸಣ್ಣಕತೆಗಳಿಗೆ ವಸ್ತುಗಳು.

ಬಾಲ್ಜಾಕ್‌ನ ಜೀವಿತಕಾಲದಲ್ಲಿ ಫ್ರಾನ್ಸಿನ ರಾಜಕೀಯ ರಂಗದಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಆಗುತ್ತಿದ್ದುವು. ಬಾಲ್ಜಾಕ್ ನೆಪೋಲಿಯನ್ ಬೊನಪಾರ್ಟನ ಆಳ್ವಿಕೆಯ ಕಾಲದಲ್ಲಿ ಜೀವಿಸಿದ್ದ. ಅವನ ವ್ಯಕ್ತಿತ್ವ ಬಾಲ್ಜಾಕನ ಮೇಲೆ ಪ್ರಭಾವ ಬೀರಿತ್ತು. ಬಾಲ್ಜಾಕನ ಅನೇಕ ಕೃತಿಗಳಲ್ಲಿ ಅವನ ಪ್ರಸ್ತಾಪವಿದೆ.

1820ರಿಂದ 1848ರ ವರೆಗೆ ಬಾಲ್ಜಾಕ್ ಕಾದಂಬರಿ ರಚನೆಯಲ್ಲಿ ನಿರತನಾಗಿದ್ದ. ಈ ಮಧ್ಯೆ ಪತ್ರಿಕೆಗಳಲ್ಲೂ ಕೆಲಸಮಾಡುತ್ತಿದ್ದ; ನಿಯತಕಾಲಿಕಗಳಲ್ಲಿ ಸಣ್ಣಕಥೆಗಳನ್ನೂ ಲೇಖನಗಳನ್ನೂ ಬರೆಯುತ್ತಿದ್ದ.

ಬಾಲ್ಜಾಕ್‌ನ ಕಾದಂಬರಿಗಳೆಲ್ಲ ಪ್ಯಾರಿಸಿನ ಪ್ರಮುಖ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಬೆಳಕಿಗೆ ಬಂದುವು.

ಅವನ ಮೊತ್ತಮೊದಲ ಐತಿಹಾಸಿಕ ಕಾದಂಬರಿ 'ಲಾ ಚೌನಾಸ್' 1829ರಲ್ಲಿ ಪ್ರಕಟವಾಯಿತು. ರೂಸೋ, ಡಿಡೆರೋ, ರಿಚರ್ಡ್‌ಸನ್, ಬೈರನ್, ಗಯಟೆ ಮುಂತಾದ ಯೂರೋಪಿನ ಪ್ರತಿಭಾವಂತರ ಕೃತಿಗಳಿಂದ ಬಾಲ್ಜಾಕ್ ಪ್ರಭಾವಿತನಾಗಿದ್ದ.

ಬಾಲ್ಜಾಕ್ ತನ್ನ ಎಲ್ಲ ಕಾದಂಬರಿಗಳನ್ನು ವ್ಯವಸ್ಥಿತವಾಗಿ ಜೋಡಿಸಿ 'ಮಾನವನ ಜೀವನದ ಕಾಮಿಡಿ' ಎನ್ನುವ ಹೆಸರಿನ ಬೃಹತ್ ಸಂಪುಟದಲ್ಲಿ ಪ್ರಕಟಿಸಿದ. 'ಯೂಜೀನ್ ಗ್ರಾಂಡ್' (1933), 'ಲ ಪಿಯರ್ ಗಾರಿಯಾಟ್' (1834) ಮುಂತಾದುವು ಅವನ ಖ್ಯಾತ ಕಾದಂಬರಿಗಳು. ಶ್ರೀಮಂತವರ್ಗದವರು, ಮಧ್ಯಮವರ್ಗದವರು, ಪಟ್ಟಣಗಳಲ್ಲಿ ಹಳ್ಳಿಗಳಲ್ಲಿ ವಾಸಿಸುವ ತೀರಾ ಬಡಜನರು, ವೈದ್ಯರು, ಧರ್ಮಗುರುಗಳು, ವಕೀಲರು, ಪತ್ರಕರ್ತರು, ಅಧ್ಯಾಪಕರು, ಹೀಗೆ ಎಲ್ಲ ವರ್ಗಗಳ ಜನರ ಚಿತ್ರಣ ಇವನ ಕಾದಂಬರಿಗಳಲ್ಲಿ ಬರುತ್ತದೆ. ಅದು ಫ್ರಾನ್ಸಿನ ಸಮಕಾಲೀನ ಸಮಾಜದ ವಿಹಂಗಮ ನೋಟ. ವ್ಯಕ್ತಿಯ ಸ್ವಭಾವ ಮತ್ತು ನಡವಳಿಕೆಗಳ ಮೇಲೆ ಭೌಗೋಳಿಕ ವಾತಾವರಣ ವಿಶೇಷ ಪ್ರಭಾವ ಉಂಟುಮಾಡುತ್ತದೆ ಎಂದು ಅವನು ದೃಢವಾಗಿ ನಂಬಿದ್ದ. ಮನುಷ್ಯನ ಸ್ವಭಾವ, ವಿಚಿತ್ರ ಪ್ರವೃತ್ತಿಗಳ ಹೃದಯಂಗಮ ನಿರೂಪಣೆಯೇ ಅವನ ಕೃತಿಗಳ ಜೀವಾಳ.

ಬಾಲ್ಜಾಕನ ದೈಹಿಕಶಕ್ತಿ, ಪರಿಶ್ರಮ, ತಾಳ್ಮೆ ಅಸಾಧಾರಣ. ಪ್ರತಿದಿನವೂ ದೀರ್ಘಕಾಲ ಕೆಲಸಮಾಡುತ್ತ, ಪದೇಪದೇ ತುಂಬ ಕಟುವಾದ ಕರಿ ಕಾಫಿ ಕುಡಿಯುತ್ತಿದ್ದ. "ಕಾಫಿಯ ಪ್ರವಾಹದ ನೆರವಿನಿಂದ ಈ ಪುಸ್ತಕವನ್ನು ಬರೆದು ಮುಗಿಸಿದೆ" ಎಂದು ತನ್ನ ಕೃತಿಯೊಂದರಲ್ಲಿ ಹೇಳಿಕೊಂಡಿದ್ದಾನೆ. ಬಾಲ್ಜಾಕ್ ತನ್ನ ಗ್ರಂಥರಚನೆಯ ಅವಧಿಯಲ್ಲಿ ಸುಮಾರು 50,000ಕ್ಕೂ ಹೆಚ್ಚು ಕಪ್ ಕಟು ಕಾಫಿ ಕುಡಿದಿರಬಹುದೆಂದು ಲೆಕ್ಕಹಾಕಲಾಗಿದೆ.

ಮನುಷ್ಯನ ಸ್ವಭಾವ ನಡವಳಿಕೆಗಳ ಆಳವಾದ ಪರಿಜ್ಞಾನ, ಅಪರಿಮಿತ ಪ್ರತಿಭಾಶಕ್ತಿ, ನಾಟಕೀಯ ಪ್ರವೃತ್ತಿ ಈ ಎಲ್ಲ ಗುಣಗಳಿಂದಾಗಿ ಬಾಲ್ಜಾಕ್ ಫ್ರಾನ್ಸಿನ ಶ್ರೇಷ್ಠ ಕಾದಂಬರಿಕಾರರ ಪಂಕ್ತಿಗೆ ಸೇರುತ್ತಾನೆ. ಡಾಸ್ಟಯೆವ್‌ಸ್ಕಿ, ಹೆನ್ರಿ ಜೇಮ್ಸ್ ಮುಂತಾದ ಕಾದಂಬರಿಕಾರರು ಬಾಲ್ಜಾಕನ ಕೃತಿಗಳಿಂದ ಸ್ಫೂರ್ತಿ ಪಡೆದವರಲ್ಲಿ ಪ್ರಮುಖರು.

ಅವಿಶ್ರಾಂತ ದುಡಿಮೆ ಬಾಲ್ಜಾಕನ ಆರೋಗ್ಯವನ್ನು ಕೆಡಿಸಿತು. ಅವನು 1850ರ ಆಗಸ್ಟ್ 21ರಂದು ಮೃತನಾದ. ಅವನ ಶವಸಂಸ್ಕಾರ ಅದೇ ದಿನ ಪ್ಯಾರಿಸಿನಲ್ಲಿ ನಡೆಯಿತು. ಫ್ರಾನ್ಸಿನ ಖ್ಯಾತ ಸಾಹಿತಿ, ಬಾಲ್ಜಾಕನ ಪರಮ ಮಿತ್ರ ವಿಕ್ಟರ್ ಹ್ಯೂಗೋ ಶವಸಂಸ್ಕಾರದ ಸಂದರ್ಭದಲ್ಲಿ ಶೋಕಬಿಗಿದ ಕಂಠದಿಂದ ಅಗಲಿದ ಗೆಳೆಯನಿಗಾಗಿ ಚರಮ ಭಾಷಣ ಮಾಡಿದ.

## ಬಾಸ್‌ವೆಲ್

ಸ್ಯಾಮುಯಿಲ್ ಜಾನ್ಸನನ ಹೆಸರು ಕೇಳಿದೊಡನೆಯೇ ನಮ್ಮ ನೆನಪಿಗೆ ಬರುವ ಮತ್ತೊಂದು ಹೆಸರು ಜೇಮ್ಸ್ ಬಾಸ್‌ವೆಲ್. ಜಾನ್ಸನನ ಜೀವನ ಚರಿತ್ರೆಯನ್ನು ಬರೆದು ಬಾಸ್‌ವೆಲ್ ಜಗದ್ವಿಖ್ಯಾತನಾದ. ಈ ಜೀವನ

...ತ್ರಿಯುಂದಾಗಿ ಸ್ಯಾಮುಅಲ್ ಜಾನ್ಸನ್ ಬರೆಯಬಹುದಾದ ಎನ್ನುವುದೂ ...ಟು.

ಸ್ಕಾಟ್ಲೆಂಡಿನ ನ್ಯಾಯಾಧೀಶನೊಬ್ಬನ ಮಗನಾಗಿ ಬಾಸ್‌ವೆಲ್ 1740ರ ...ಕ್ಟೋಬರ್ 29ರಂದು ಎಡಿನ್‌ಬರೋದಲ್ಲಿ ಜನಿಸಿದ. ಎಡಿನ್‌ಬರೋ ...ವಿಶ್ವವಿದ್ಯಾಲಯದಲ್ಲಿ ನ್ಯಾಯಶಾಸ್ತ್ರವನ್ನು ಅಭ್ಯಸಿಸಿ 1766ರಲ್ಲಿ ವಕೀಲ ...ತ್ತಿ ಕೈಗೊಂಡ. ಆದರೆ ತಾನು ದೊಡ್ಡ ಲೇಖಕನಾಗಿ, ಪ್ರಖ್ಯಾತ ...ಹಿತಿಗಳ ಸಹವಾಸದಲ್ಲಿ ಕಾಲಕಳೆಯಬೇಕೆಂದು ಬಯಸಿದ ; ಸಾಹಿತ್ಯದಲ್ಲೇ ...ಚ್ಚು ಆಸಕ್ತಿ ತೋರಿಸಿದ. ಪರಿಣಾಮವಾಗಿ, ನ್ಯಾಯವಾದಿಯ ವೃತ್ತಿಯಲ್ಲಿ ...ನಿಗೆ ಯಶಸ್ಸು ದೊರೆಯಲಿಲ್ಲ.

ತನ್ನ ಕಾಲದ ಅತಿ ಪ್ರಮುಖ ಸಾಹಿತಿಯಾಗಿದ್ದ ಸ್ಯಾಮುಅಲ್ ...ನ್ಸನನ ಬಗೆಗೆ ಬಾಸ್‌ವೆಲ್‌ಗೆ ಅತೀವ ಗೌರವ, ಭಕ್ತಿ. ಅವನನ್ನು ಒಮ್ಮೆ ...ಟಿಯಾದ ಅನಂತರ ಆತನ ಜೀವನಚರಿತ್ರೆ ಬರೆಯಲು ಬಾಸ್‌ವೆಲ್ ...ಯೋಚಿಸಿದ.



ಜೀವನಚರಿತ್ರೆ : ಬಾಸ್‌ವೆಲ್

ಸ್ಕಾಟ್ಲೆಂಡಿನಲ್ಲಿ ಕೊಂಚ ಆಸ್ತಿ ಇದ್ದ ಕಾರಣ ಬಾಸ್‌ವೆಲ್ ನಿಗೆ ಲಂಡನಿನಲ್ಲೇ ನೆಲೆಸಲು ಆಗಲಿಲ್ಲ. ಆದರೂ ಸಮಯ ಬಂದಾಗಲೆಲ್ಲ ಲಂಡನಿಗೆ ಹೋಗಿ, ಸಾಧ್ಯವಾದಾಗಲೆಲ್ಲ ಜಾನ್ಸನನನ್ನು ಕಂಡು, ಆದಷ್ಟು ಹೊತ್ತು ಅವನೊಂದಿಗಿದ್ದು, ಮಾತುಕತೆ ನಡೆಸುತ್ತಿದ್ದ.

"ಬುದ್ಧಿವಂತರ ಜೊತೆ ಮಾತಾಡು, ಸಿರಿವಂತರ ಜೊತೆ ಊಟ ಮಾಡು" ಎಂದು ಜಾನ್ಸನ್ ...ಮ್ಮೆ ಬಾಸ್‌ವೆಲ್‌ನಿಗೆ ಹೇಳಿದನಂತೆ. ಬಾಸ್‌ವೆಲ್ ಈ ವಾಕ್ಯದ ...ಮೊದಲ ಭಾಗವನ್ನು ಅಕ್ಷರಶಃ ಪಾಲಿಸುತ್ತಿದ್ದ. ಜಾನ್ಸನನ ಹಿಂದೆ ...ಯಲ್ಲೊಂದು ಟಿಪ್ಪಣಿ ಪುಸ್ತಕ ಹಿಡಿದು ಓಡಾಡುತ್ತ ಅವನು ಹೇಳಿದ ...ಲ್ಲ ಬರೆದುಕೊಳ್ಳುತ್ತಿದ್ದ. ಜಾನ್ಸನ್‌ಗೆ ಪ್ರಶ್ನೆಗಳ ಮೇಲೆ ಪ್ರಶ್ನೆ ಹಾಕಿ, ...ಪ್ಪೊಮ್ಮೆ ಅಸಂಗತ ಪ್ರಶ್ನೆಗಳಿಗಾಗಿ ಬೈಸಿಕೊಳ್ಳುತ್ತಿದ್ದ. ಆದರೂ ...ಲ್ಲವನ್ನೂ ತನ್ನ ಟಿಪ್ಪಣಿ ಪುಸ್ತಕದಲ್ಲಿ ಗುರುತು ಹಾಕಿಕೊಳ್ಳುತ್ತಿದ್ದ. ...ನ್ಸನ್, ಗೋಲ್ಡ್‌ಸ್ಮಿತ್, ಗಿಬ್ಬನ್ ಮೊದಲಾದ ಪ್ರಖ್ಯಾತ ಸಾಹಿತಿಗಳು ...ತು ಹರಟೆ ಹೊಡೆಯುತ್ತಿದ್ದಾಗಲೂ ಬಾಸ್‌ವೆಲ್ ಜಾನ್ಸನನ ಪಕ್ಕದಲ್ಲಿ ...ನ್ನ ಟಿಪ್ಪಣಿ ಪುಸ್ತಕದೊಂದಿಗೆ ಹಾಜರಿರುತ್ತಿದ್ದ.

ತನ್ನ ಟಿಪ್ಪಣಿ ಪುಸ್ತಕ, ಆ ಕಾಲದ ಪ್ರಮುಖರು ಜಾನ್ಸನನ ಬಗೆಗೆ ...ಳಿದ ಮಾತುಗಳು, ಜಾನ್ಸನನ ಕಾಗದ ಪತ್ರಗಳು, ಮುದ್ರಿತ ಲೇಖನಗಳ ಸಂಗ್ರಹಾದ್ಯಾಗಳ ಆಧಾರದ ಮೇಲೆ ಬಾಸ್‌ವೆಲ್ ತನ್ನ ಶ್ರೇಷ್ಠ ಕೃತಿಯಾದ 'ಸ್ಯಾಮುಅಲ್ ಜಾನ್ಸನನ ಜೀವನಚರಿತ್ರೆ' ರಚಿಸಿದ. ಇದನ್ನು ಆಂಗ್ಲಭಾಷೆಯ ಶ್ರೇಷ್ಠ ಜೀವನಚರಿತ್ರೆ ಎಂದು ಅನೇಕ ಪ್ರಮುಖ ವಿಮರ್ಶಕರು ಹೊಗಳಿದ್ದಾರೆ. ಇದನ್ನು ಓದಿದಾಗ ನಮ್ಮ ಮಾನಸ ನೇತ್ರಗಳಿಗೆ ಜಾನ್ಸನನ ಚಿತ್ರವೊಂದರ ಪರಿಪೂರ್ಣ ಭಾವ ದೊರೆಯುತ್ತದೆ. ಬಾಸ್‌ವೆಲನ ಭಾಷೆ ಮತ್ತು ಶೈಲಿ ಅಷ್ಟು ಸುಂದರ.

ತನ್ನ 23ನೆಯ ವರ್ಷದವರೆಗೂ ಜಾನ್ಸನನನ್ನೇ ಕಾಣದ ಬಾಸ್‌ವೆಲ್ ಅವನೊಡನೆ ಕಳೆದದ್ದು ಒಟ್ಟು 276 ದಿನಗಳು ಮಾತ್ರ. ಇಷ್ಟು ಕಡಮೆ ಅವಧಿಯಲ್ಲಿ ಜಾನ್ಸನನ ವ್ಯಕ್ತಿತ್ವದ ವೈಶಿಷ್ಟ್ಯವನ್ನು ಅಷ್ಟು ಚೆನ್ನಾಗಿ ಗ್ರಹಿಸಿ ನಿರೂಪಿಸಿರುವುದು ಬಾಸ್‌ವೆಲನ ಪ್ರತಿಭೆಗೆ ನಿದರ್ಶನ. ಜಾನ್ಸನನ ಬಗೆಗೆ ಬಾಸ್‌ವೆಲ್‌ಗೆ ಅಪಾರ ಗೌರವ. ಇತರರು ಮಾತುಕತೆಯಲ್ಲಿ ಜಾನ್ಸನನಿಗಿಂತ ಹೆಚ್ಚು ಚುರುಕುತನ ತೋರಿಸಿದರೆ ಅದನ್ನು ಅವನು ಸಹಿಸುತ್ತಿರಲಿಲ್ಲ. ಈ ಪೂರ್ವಾಗ್ರಹದ ಛಾಯೆ ಅವನ ಪುಸ್ತಕದಲ್ಲಿ ಅಲ್ಲಲ್ಲಿ ಬಿದ್ದಿದೆ. ಈ ಜೀವನಚರಿತ್ರೆಯ ನಾಯಕ, ಬರೆದವನು ಹಾಗೂ ಈ ಜೀವನಚರಿತ್ರೆಯನ್ನು ಬರೆದ ವಿಧಾನಗಳು ಮಾತ್ರ ತೀರ ವಿಶಿಷ್ಟವಾದುವು. ಬೇರೆಯವರು ಗಮನಿಸದ ಅನೇಕ ಸಂಗತಿಗಳನ್ನು ಬಾಸ್‌ವೆಲ್ ಅತಿ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ವಿವಿಧ ಘಟನೆಗಳಲ್ಲಿ ಆತ ಕಾಣುತ್ತಿದ್ದ ನಾಟಕೀಯತೆ ಅದ್ಭುತವಾದದ್ದು. ಜೀವನಚರಿತ್ರೆಗಳ ಬೇರೆ ಯಾವ ಲೇಖಕರಿಗೂ ಇದು ಈ ಪ್ರಮಾಣದಲ್ಲಿ ಸಿದ್ಧಿಸಿಲ್ಲ.

ಜಾನ್ಸನ್ ಮತ್ತು ಬಾಸ್‌ವೆಲ್ ಸ್ಕಾಟ್ಲೆಂಡಿನ ಪಶ್ಚಿಮ ಕರಾವಳಿಗೆ ಸಮೀಪದ ದ್ವೀಪ ಸಮುದಾಯವಾದ ಹೆಬ್ರಿಡೀಸ್‌ಗೆ ಒಮ್ಮೆ ಪ್ರವಾಸ ಹೋಗಿದ್ದರು. ಈ ಪ್ರವಾಸದ ನೆನಪುಗಳನ್ನು ಬಾಸ್‌ವೆಲ್ ತನ್ನ ಇನ್ನೊಂದು ಪುಟ್ಟ ಪುಸ್ತಕದಲ್ಲಿ ವಿವರಿಸಿದ್ದಾನೆ. ಇದು 1785ರಲ್ಲಿ ಪ್ರಕಟವಾಯಿತು. 'ಜಾನ್ಸನನ ಜೀವನಚರಿತ್ರೆ' ಬಾಸ್‌ವೆಲನ ಮರಣಾನಂತರ 1791ರಲ್ಲಿ ಹೊರಬಂತು.

1769ರಲ್ಲಿ ಮದುವೆಯಾದ ಬಾಸ್‌ವೆಲ್‌ಗೆ ಐವರು ಮಕ್ಕಳು. ಕೊನೆಕಾಲದಲ್ಲಿ ತನ್ನ ಸುಖಜೀವನಕ್ಕೆ ಹಣ ಸಾಲದೆ ಅವನು ಸಾಲ ಮಾಡಬೇಕಾಯಿತು. ಇದರಿಂದಾಗಿ ಬಾಸ್‌ವೆಲನ ಮೊದಲಿನ ಉತ್ಸಾಹ ನಷ್ಟವಾಯಿತು. 1795ರಲ್ಲಿ ಅವನು ನಿಧನನಾದ.

ಬಾಸ್‌ವೆಲನ ಟಿಪ್ಪಣಿ ಪುಸ್ತಕದ ಅನೇಕ ಭಾಗಗಳು ಸುಮಾರು 100 ವರ್ಷಗಳ ಅನಂತರ ಅನಿರೀಕ್ಷಿತ ಸ್ಥಳಗಳಲ್ಲಿ ಸಿಕ್ಕಿದುವು. ಇವು ಸಂಪಾದಿತವಾಗಿ ಗ್ರಂಥರೂಪದಲ್ಲಿ ಪ್ರಕಟಗೊಂಡಿವೆ.

ನೋಡಿ : ಜಾನ್ಸನ್

## ಬ್ಯಾಬಿಲೋನಿಯದ ಕಲೆ

ಯೂಫ್ರೆಟೀಸ್ ಮತ್ತು ಟೈಗ್ರೀಸ್ ನದಿಗಳು ಹರಿಯುವ ಪ್ರದೇಶದಲ್ಲಿ ರೂಪುಗೊಂಡ ಸಾಮ್ರಾಜ್ಯ ಬ್ಯಾಬಿಲೋನಿಯ. ಕ್ರಿ. ಪೂ. 9,000 ವರ್ಷಗಳ ಹಿಂದೆಯೇ ಇಲ್ಲಿ ನಾಗರಿಕ ಜನರು ವಾಸವಾಗಿದ್ದರೆಂದು ಇತಿಹಾಸಜ್ಞರು ಅಭಿಪ್ರಾಯಪಟ್ಟಿದ್ದಾರೆ. ಬ್ಯಾಬಿಲೋನಿಯ ಪ್ರದೇಶದಲ್ಲಿ ರೂಪುಗೊಂಡ ಸಂಸ್ಕೃತಿಗೆ ಕಾರಣರಾದವರಲ್ಲಿ ಸುಮೇರಿಯದವರು, ಅಕ್ಕಾಡ್ ಜನಾಂಗದವರು ಮುಖ್ಯರು. ಬ್ಯಾಬಿಲೋನಿಯ ಸಾಮ್ರಾಜ್ಯ ಸುಮಾರು ಕ್ರಿ.ಪೂ. 2,300 ವರ್ಷಗಳ ಹಿಂದೆ ಹುಟ್ಟಿತು ; ಸುಮಾರು 760

[illegible] ಈ ಸಾಮ್ರಾಜ್ಯದಲ್ಲಿ ನಾನಾ ಕಲೆಗಳು ಅಭಿವೃದ್ಧಿಗೆ ಬಂದುವು.

[illegible] ಒಂದು ಪ್ರಮುಖ ಸಾಧನೆ. ಆ ಅವಧಿಯಲ್ಲಿ ಬ್ಯಾಬಿಲಾನ್ ನಗರ ತುಂಬ ಅಭಿವೃದ್ಧಿಹೊಂದಿತು.

[illegible] ಬ್ಯಾಬಿಲೋನಿಯದಲ್ಲಿ [illegible] ಅರ್ಥ. ಕ್ರಿ.ಪೂ. 19ನೆಯ [illegible] ಈ ಸಾಮ್ರಾಜ್ಯ ನಲ್ವತ್ತೆರಡು ವರ್ಷಗಳ [illegible] ಕಾಲದಲ್ಲಿ ಉನ್ನತ ಸ್ಥಿತಿ ತಲಪಿತು. '[illegible] ಶಾಸನ' ಎಂದು ಪ್ರಸಿದ್ಧವಾದ ಸಂಪ್ರದಾಯ ಸಂಹಿತೆಯನ್ನು ರಾಜ್ಯಕ್ಕೆ ಕೊಟ್ಟವನು ಈ ದೊರೆ. ಕ್ರಿ.ಪೂ. 612ರಲ್ಲಿ ಮತ್ತೆ ನೆಬೂಕ್ಯಾಡ್‌ನೆಜರ್ ಅರಸನ ಆಳ್ವಿಕೆಯಲ್ಲಿ ಬ್ಯಾಬಿಲೋನಿನ ಕಲೆ ಸಂಸ್ಕೃತಿಗಳು ವೈಭವದ ಪರಾಕಾಷ್ಠೆಯನ್ನು ತಲಪಿದುವು.

ಬ್ಯಾಬಿಲೋನ್ ತನ್ನ ವೈಭವದ ಅತ್ಯುನ್ನತಿಯ ಕಾಲದಲ್ಲಿ ಜಗತ್ತಿನ ಅತ್ಯಂತ ಸುಂದರ ಪಟ್ಟಣವಾಗಿತ್ತು. ಪಟ್ಟಣಕ್ಕೆ ರಕ್ಷಾಕವಚವಾಗಿ ಕಂಗೊಳಿಸುತ್ತಿದ್ದ ಈ ನಗರದ ಕೋಟೆಗೋಡೆಯ ಸುತ್ತಳತೆ ಸುಮಾರು ಏಳೂ ಕಾಲು ಕಿ.ಮೀ. ಗೋಡೆಯ ದಪ್ಪ ಅದರ ನೆತ್ತಿಯ ಮೇಲೆ ನಾಲ್ಕು ಕುದುರೆಗಳನ್ನು ಕಟ್ಟಿದ ರಥವನ್ನು ಓಡಿಸಬಹುದಾದಷ್ಟು. ಬ್ಯಾಬಿಲೋನಿನ ಸಮೀಪಕ್ಕೆ ಬಂದೊಡನೆಯೇ ಕಾಣಿಸುತ್ತಿದ್ದದ್ದು 198 ಮೀಟರು ಎತ್ತರದ ಏಳು ಹಂತಗಳ ಭವ್ಯ ಗುಡಿಗೋಪುರ. ಅದರ ಮೇಲೆ ಗಟ್ಟಿಯಾದ ಬಂಗಾರದ ಹಲಗೆ.

ಬ್ಯಾಬಿಲೋನಿಯದ ಕಲೆಯ ಒಂದು ಪ್ರಮುಖ ವೈಶಿಷ್ಟ್ಯ—ಕಟ್ಟಡ ಗೋಪುರಗಳ ರಚನೆಯಲ್ಲಿ ಬಳಸಲಾದ ಕಪ್ಪು ಮತ್ತು ಕೆಂಪು ವರ್ಣದ ಶಿಲೆಗಳು. ಕಂಚಿನ ವಿಗ್ರಹಗಳ ನಿರ್ಮಾಣದಲ್ಲಿ ಅವರು ಅಸಾಧಾರಣ ಪ್ರಗತಿ ಹೊಂದಿದ್ದರು. ಉತ್ತರ ಬ್ಯಾಬಿಲೋನಿಯದಲ್ಲಿ ಕಂಡುಹಿಡಿದ ಹಾಳುಬಿದ್ದ ಅರಮನೆಯ ಅವಶೇಷಗಳ ಗೋಡೆಗಳಲ್ಲಿ ವೈವಿಧ್ಯಮಯ ವರ್ಣರಂಜಿತ ಭಿತ್ತಿಚಿತ್ರಗಳು ಕಂಡುಬಂದಿವೆ. ಬಿಳಿಬಣ್ಣ ಸವರಿದ ಗೋಡೆಗಳಲ್ಲಿ ದೇವತಾರಾಧನೆ. ದೇವತೆಗೆ ಪ್ರಾಣಿಬಲಿ ಅರ್ಪಿಸುವ ಚಿತ್ರಗಳು ನಿರೂಪಿತವಾಗಿವೆ. ಎತ್ತರವಾಗಿ ಬೆಳೆದ ತಾಳೆಯ ಮರಗಳನ್ನು ಹತ್ತುತ್ತಿರುವ ಗುಲಾಮರ ನೈಜ ಚಿತ್ರಣವಿದೆ.

ನೆಬೂಕ್ಯಾಡ್‌ನೆಜರ್ ತನ್ನ ಭವ್ಯ ಅರಮನೆಯ ಬಳಿಯಲ್ಲಿ ತನ್ನ ರಾಣಿ ಅಮಿಟಿಯಾಳ ಪ್ರೀತ್ಯರ್ಥವಾಗಿ ಕಟ್ಟಿಸಿದ 'ಅಂತಸ್ತು ಉದ್ಯಾನ' ಪ್ರಪಂಚದ ಏಳು ಐತಿಹಾಸಿಕ ಅದ್ಭುತಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ. ಇದನ್ನು 'ತೂಗಾಡುವ ಉದ್ಯಾನಗಳು' ಎನ್ನುತ್ತಾರೆ.

ಬ್ಯಾಬಿಲೋನ್ ಕಲೆಯ ಕೇಂದ್ರವಾಗಿದ್ದಿತು. ಜ್ಞಾನ-ಶಿಕ್ಷಣ ಕೇಂದ್ರವೂ ಆಗಿತ್ತು. ಯೂರೋಪಿನ ವಿದ್ವಾಂಸರ ಸಂಶೋಧನೆಗಳಿಂದ ಎಷ್ಟೋ ಹೊಸ ವಿಚಾರಗಳು ಬೆಳಕಿಗೆ ಬಂದಿವೆ. ಅವರಲ್ಲೂ ಮುಖ್ಯವಾಗಿ ಸುಮಾರು 3,700 ವರ್ಷಗಳ ಹಿಂದೆ ಇದ್ದಿತೆನ್ನಲಾದ ಹಳೆಯ ಶಾಲೆಯ ಅವಶೇಷಗಳು ಕಾಣಸಿಕ್ಕಿವೆ. ಅಂದು ವಿದ್ಯಾರ್ಥಿಗಳು ಬರೆಯಲು ಉಪಯೋಗಿಸುತ್ತಿದ್ದ ಆವೆಮಣ್ಣಿನ ಫಲಕಗಳು ಇಂದಿಗೂ ಆ ಶಾಲೆಯ ನೆಲದ ಮೇಲೆ ಬಿದ್ದಿವೆ. ಬ್ಯಾಬಿಲೋನಿಯದಲ್ಲಿ ವಿಶಿಷ್ಟವಾದ ಲೇಖನಕಲೆಯೂ ರೂಢಿಯಲ್ಲಿತ್ತು. ಬ್ಯಾಬಿಲೋನಿಯದ ಪ್ರತಿಯೊಬ್ಬ ಬಾಲಕನೂ ಸುಮಾರು 200-400 ಸಂಕೇತಗಳನ್ನು ಕಲಿಯಬೇಕಾಗಿತ್ತು. ಪ್ರತಿಯೊಬ್ಬ ಬಾಲಕನಿಗೂ [illegible] ಆವೆಮಣ್ಣು ಲೇಪಿಸಿದ ಒಂದೊಂದು ಹಲಗೆಯನ್ನು ಕೊಡುತ್ತಿದ್ದರು. ಮೇಣ ಅಥವಾ ಆವೆಮಣ್ಣು ಸವರಿದ ಫಲಕದ ಮೇಲೆ ಅಕ್ಷರಗಳನ್ನು ಅ[illegible] ಬರೆಯುತ್ತಿದ್ದ. ಆ ಲೇಖನಿ ಒಂದು ಕಡೆ ಚೂಪಾಗಿಯೂ ಇನ್ನೊಂದು ಕಡೆ ದುಂಡಾಗಿಯೂ ಇರುತ್ತಿತ್ತು. ಚೂಪು ಕಡೆ ಬರೆಯಲು; ದುಂಡು ಕಡೆ, ಬರೆದದ್ದನ್ನು ಅಳಿಸಲು.

ಬ್ಯಾಬಿಲೋನಿಯ ಕಲೆಯೊಂದಿಗೆ ಸಾಹಿತ್ಯವೂ ಪ್ರಗತಿ ಹೊಂದಿತು. [illegible]ಯಲ್ಲಿ ಹಾಳುಬಿದ್ದ ಪ್ರಾಚೀನ ಅರಮನೆಯ ಅವಶೇಷಗಳಲ್ಲಿ ಆವೆಮಣ್ಣ[illegible] ಮೇಣದ ಫಲಕಗಳು ಸಿಕ್ಕಿವೆ. ಧರ್ಮ ನೀತಿ ನ್ಯಾಯಗಳನ್ನು ಕುರಿತ[illegible] ಲೇಖನಗಳಿರುವ ಈ ಫಲಕಗಳು ಲಂಡನಿನಲ್ಲಿರುವ ಬ್ರಿಟಿಷ್ ವಸ್ತುಸಂ[illegible]ಹಾಲಯದಲ್ಲಿ ಇಂದಿಗೂ ಸುರಕ್ಷಿತವಾಗಿ ಉಳಿದುಕೊಂಡಿವೆ.

## ಬ್ಯಾಲೆ

ನರ್ತಿಸಬೇಕೆಂಬ ಪ್ರಚೋದನೆ ಮಾನವನಿಗೆ ಬಹಳ ಹಿಂದಿನಿಂದಲ[illegible] ಬಂದಿರುವ ಗುಣ. ಸಂತೋಷ ವ್ಯಕ್ತಪಡಿಸಲೆಂದೋ, ಮತೀಯ[illegible] ಕ್ರಿಯಾವಿಧಿಗಳಲ್ಲೋ ಅಥವಾ ಸಾಮಾಜಿಕ ಸಮಾರಂಭಗಳಲ್ಲೋ ಅವನ[illegible] ನರ್ತಿಸುತ್ತಿದ್ದ.

ನೃತ್ಯದ ಒಂದು ವಿಧಾನ ಬ್ಯಾಲೆ. ರಂಗಭೂಮಿಯ ಮೇಲೆ ನಡೆಯು[illegible] ಬ್ಯಾಲೆ ನೃತ್ಯದಲ್ಲಿ ರಂಗಮಂಟಪದ ಅಲಂಕರಣ ಮತ್ತು ಸಂಗೀತಗಳಿ[illegible] ಮಹತ್ವವಿದೆ. ಬ್ಯಾಲೆಯಲ್ಲಿ ಒಂದು ಕಥೆ ಅಥವಾ ಭಾವನೆಯನ್ನು ಪ್ರೇಕ್ಷಕರಿಗೆ ಮೂಕಾಭಿನಯದಿಂದ ತಿಳಿಸಿಕೊಡುತ್ತಾರೆ. ನರ್ತಕ ನರ್ತ[illegible]ಯರು ಸಂಗೀತಕ್ಕೆ ಅನುಗುಣವಾಗಿ ಚಲಿಸುತ್ತಾರೆ. ಸಂಗೀತ, ಕಥೆ, ಅಲಂಕರಣ, ಉಡುಗೆ ಎಲ್ಲ ಬ್ಯಾಲೆಯ ಭಾಗಗಳು. ಬ್ಯಾಲೆ ಮಾನವ ದೇಹದ ಸೌಂದರ್ಯವನ್ನು ವ್ಯಕ್ತಗೊಳಿಸಬೇಕೆಂದು ಪುರಾತನ ಗ್ರೀಕರು ಅಭಿಪ್ರಾಯಪಟ್ಟರು. ಈ ಭಾವನೆ ಕಳೆದ ಸುಮಾರು 100 ವರ್ಷಗಳಿಂ[illegible] ಪ್ರಾಮುಖ್ಯ ಪಡೆದಿದೆ.

ಮಧ್ಯಯುಗದಲ್ಲಿ ಕ್ರೈಸ್ತ ಆರಾಧನಾಮಂದಿರಗಳಲ್ಲಿ ನಡೆಯುತ್ತಿದ್ದ[illegible] ಸೇವೆಗಳಲ್ಲಿ ನೃತ್ಯವೂ ಒಂದಾಗಿತ್ತು. ಈಗ ತಿಳಿದಿರುವಂತೆ ಇಟಲಿಯ[illegible] ಸಂಗೀತಗಾರ ಬಾಲ್ಥಜಾರ್ ಡಿ ಬ್ಯೂಜಾಯ್‌ಲಕ್ಸ್ ಪ್ರಥಮ ನೃತ್[illegible] ರಚನಕಾರ. ಆತ ತನ್ನ ಕೃತಿಯನ್ನು 'ರಾಣಿಯ ವಿನೋದ ಬ್ಯಾಲೆ' ಎಂದ[illegible] ಕರೆದ. ಆಗಿನಿಂದ ಈ ವರ್ಗದ ಪ್ರದರ್ಶನವನ್ನು ಬ್ಯಾಲೆ ಎಂದು ಕರೆಯು[illegible]ತ್ತಾರೆ. ಈ ಫ್ರೆಂಚ್ ಪದ ನೃತ್ಯ ಎಂದು ಅರ್ಥ ಕೊಡುವ ಇಟಾಲಿಯನ್ ಬ್ಯಾಲೇರ್‌ನಿಂದ ಬಂದದ್ದು. 'ರಾಣಿಯ ವಿನೋದ ಬ್ಯಾಲೆ'ಯನ್ನು 1580ರಲ್ಲಿ ಫ್ರಾನ್ಸಿನ ಕ್ಯಾಥರೀನ್ ದ ಮೆಡಿಸಿಯ ಆಸ್ಥಾನದಲ್ಲಿ ಪ್ರದರ್ಶಿಸಿದರು.

ಫ್ರಾನ್ಸಿನ ರಾಜಾಸ್ಥಾನ 17ನೆಯ ಶತಮಾನದಲ್ಲಿ ಬ್ಯಾಲೆಗೆ ತುಂ[illegible] ಪ್ರೋತ್ಸಾಹ ಕೊಟ್ಟಿತು.

ಬ್ಯಾಲೆಯಲ್ಲಿ ಕ್ರಮವಾಗಿ ಶಿಕ್ಷಣ ಕೊಡುವ ಸಂಸ್ಥೆ ಪ್ಯಾರಿಸ್ಸಿನಲ್ಲಿ 1661ರಲ್ಲಿ ಆರಂಭವಾಯಿತು. ಜನಪ್ರಿಯತೆ ಗಳಿಸಿದ ಬ್ಯಾಲೆ ಪ್ಯಾರಿಸಿನಿಂದ ಯೂರೋಪಿನಾದ್ಯಂತ ಹರಡಿಕೊಳ್ಳಲು ತಡವಾಗಲಿಲ್ಲ. ಇಟಲಿ, ರಷ್ಯ, ಡೆನ್ಮಾರ್ಕ್ ಮತ್ತು ಇಂಗ್ಲೆಂಡ್‌ಗಳಲ್ಲಿ ಪ್ರಖ್ಯಾತ ಬ್ಯಾಲೆ ಸಂಸ್ಥೆಗಳ[illegible] ಉದಯಿಸಿದುವು. ಆ ದೇಶಗಳ ಕಲಾವಿದರು ಬ್ಯಾಲೆ ನೃತ್ಯ ಪ್ರಕಾರಗಳಿ[illegible] ಅಮೂಲ್ಯ ಕಾಣಿಕೆಗಳನ್ನು ನೀಡಿದರು.

1681ರಲ್ಲಿ ಫ್ರಾನ್ಸಿನಲ್ಲಿ ಮೊಟ್ಟಮೊದಲ ಬ್ಯಾಲೆ ಕಲಾವಿದೆ, ಲಾ[illegible] ಫಾಂಟೇನ್ ಮೇರಿ ಕಮಾರ್ಗೊ (1710–70), ನಾಟ್ಯದ ಚಲನೆ ಸುಲಭ[illegible]



ಹಂಸ ನೃತ್ಯ

ರಾಜಕುಮಾರ ಮತ್ತು ಶಾಪಗ್ರಸ್ತ ಹಂಸ



ವಾಗುವಂತೆ ಲಂಗದ ಉದ್ದವನ್ನು ಕಡಮೆ ಮಾಡಿಕೊಂಡಳು. ಪಾದರಕ್ಷೆಗಳಲ್ಲಿ ಸಾಮಾನ್ಯವಾಗಿರುತ್ತಿದ್ದ ಒಮ್ಮಡಿ ಗೂಟವನ್ನು ತೆಗೆದು ಹರಪಿನಲ್ಲಿ ಸುಲಭವಾಗಿ ಕಾಲನ್ನು ಕತ್ತರಿಯಂತೆ ಇಟ್ಟುಕೊಳ್ಳುವ ಕಠಿಣ ಕೆಲಸವನ್ನು ಸಾಧಿಸಿದಳು.

19ನೆಯ ಶತಮಾನದ ಮಧ್ಯಭಾಗದಲ್ಲಿ ಯೂರೋಪಿನ ಪ್ರಥಮ ಖ್ಯಾತ ಬ್ಯಾಲೆ ನರ್ತಕಿ ಮೇರಿಯ ಟಾಗ್ಲಿಯೋನಿ (1804–84) ಕಾಲಬೆರಳ ತುದಿಯ ಮೇಲೆ ಎಷ್ಟು ಹಗುರವಾಗಿ ದೇಹವನ್ನು ನಿಲ್ಲಿಸಲು ತಾನು ಶಕ್ತಳು ಎಂಬುದನ್ನು ತೋರಿಸಿದಳು. 1832ರಲ್ಲಿ ಅವಳ ತಂದೆ ಫಿಲಿಪ್ಪೊ ಆಕೆಗೆಂದೇ ಒಂದು ನೃತ್ಯವನ್ನು ಸಿದ್ಧಪಡಿಸಿದ. ಆಮೇಲಿಯ ಪರಾರಿ, ಇನ್ನೊಬ್ಬ ಖ್ಯಾತ ಬ್ಯಾಲೆ ನರ್ತಕಿ.

ಮಾರಿಸ್ ಪೆಟಿಪಾ (1822–1910) ಫ್ರಾನ್ಸಿನವನು. ಆತ ಬ್ಯಾಲೆ ರಚನಕಾರನಾಗಿ ಖ್ಯಾತಿ ಗಳಿಸಿದ್ದು ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ. ಜೂಲ್ಸ್ ಫೆರೊ, ಫ್ರಾನ್ಸಿನ ಇನ್ನೊಬ್ಬ ಹೆಸರಾಂತ ಬ್ಯಾಲೆ ರಚನಕಾರ.

ಗಲೀನ ಉಲನೋವ

ಬ್ಯಾಲೆಯ ವಸ್ತುವನ್ನು ನಾಟಕೀಯವಾಗಿ ಅಭಿವ್ಯಕ್ತಗೊಳಿಸುವುದರಲ್ಲಿ ನೃತ್ಯ, ಮೂಕಾಭಿನಯ, ಸಂಗೀತ, ರಂಗಸಜ್ಜಿಕೆ, ವಸ್ತ್ರಭೂಷಣ—ಇವೆಲ್ಲವನ್ನೂ ಉಪಯೋಗಕ್ಕೆ ತಂದುಕೊಳ್ಳುವ ಸಂಪ್ರದಾಯವನ್ನು ಆರಂಭಿಸಿದವನು ಉತ್ತಮ ನಾಟ್ಯಪಟುವೂ ಬ್ಯಾಲೆ ರಚನಕಾರನೂ ಆದ ಮಿಶಲ್ ಫೋಕೀನ್. 'ಮರಣೋನ್ಮುಖಿ ಹಂಸ' ಎಂಬ ಬ್ಯಾಲೆ ಈತನ ಮಹಾಕೃತಿಗಳಲ್ಲೊಂದು.

ಅನ್ನಾ ಪಾವ್ಲೋವ, ವಾಸ್ಲಾವ್ ನಿಜಿನ್ಸ್ಕಿ, ಅಲಿಸಿಯಾ ಮಾರ್ಕೋವ, ಇಗೋರ್ ಯೂಸ್ಕೆವಿಚ್, ಮಾರ್ಗರೆಟ್ ಫಾಂಟೇನ್, ಗಲೀನ ಉಲನೋವ, ಮಯಾಪ್ಲಿಸೆತ್ಸ್ಕಯಾ, 20ನೆಯ ಶತಮಾನದ ಬ್ಯಾಲೆ ಕಲಾವಿದರು ಮತ್ತು ರಚನಕಾರರಲ್ಲಿ ಪ್ರಮುಖರು.

ಬ್ಯಾಲೆ ರಚನಕಾರ ಸ್ವತಃ ನೃತ್ಯ, ಸಂಗೀತ ಬಲ್ಲವನಾಗಿರಬೇಕು. ನರ್ತಕರು ಹೇಗೆ ಹೆಜ್ಜೆ ಇಡಬೇಕು ಎಂಬುವನ್ನೂ ಅವರ ಚಲನೆಯನ್ನೂ ನಿರ್ಧರಿಸುವವನು ಆತನೇ. ಸಂಗೀತಕ್ಕೆ ಹೊಂದುವಂತೆ ನೃತ್ಯದ ಚಲನೆಗಳನ್ನು ಆತ ರೂಪಿಸುತ್ತಾನೆ. ರಂಗಸಜ್ಜಿಕೆಯ ವಿನ್ಯಾಸ ಕೂಡ ಅವನ ಹೊಣೆ. ಕಥೆಗೆ ತಕ್ಕಂತೆ ರಂಗವನ್ನು ಸಜ್ಜುಗೊಳಿಸುವುದೂ ಈತನ ಜವಾಬ್ದಾರಿ.



ಮಯಾಪ್ಲಿಸೆತ್ಸ್ಕಯಾ

ಬ್ಯಾಲೆಯಲ್ಲಿ ನರ್ತಕ ನರ್ತಕಿಯರು ಮಾತನ್ನಾಡದೆ ಚಲನೆಯ ಮೂಲಕವೇ ಕಥಾಂಶವನ್ನು ಪ್ರೇಕ್ಷಕರಿಗೆ ವ್ಯಕ್ತಪಡಿಸಬೇಕು. ಚಲನೆಯ ಸೊಬಗಿನಿಂದ ಪ್ರೇಕ್ಷಕರನ್ನು ಸಂತೋಷಪಡಿಸಬೇಕಲ್ಲದೆ, ಕಥೆಯೂ ಅವರಿಗೆ ತಿಳಿಯುವಂತೆ ಮಾಡಬೇಕು.

ಬ್ಯಾಲೆಯ ಸಂಗೀತದಲ್ಲಿ ತಾಳಕ್ಕೆ ಪ್ರಾಧಾನ್ಯವಿರುತ್ತದೆ. ಅಲ್ಲದೆ ಸಂಗೀತ ಕಥೆಯ ವಾತಾವರಣಕ್ಕೆ ತಕ್ಕಂತೆ ಇರಬೇಕಾದದ್ದು ಅವಶ್ಯ. ಆದ್ದರಿಂದ ಬ್ಯಾಲೆಗಳಿಗಾಗಿಯೇ ಪ್ರತ್ಯೇಕ ಸಂಗೀತವನ್ನು ರಚಿಸಬೇಕಾಗುತ್ತದೆ. ಕೆಲವೊಮ್ಮೆ ಬೇರಾಗಿ ರಚಿತವಾದ ಸಂಗೀತ ಬ್ಯಾಲೆಗೆ ತಕ್ಕುದಾಗಿದ್ದರೆ ಅದನ್ನೂ ಉಪಯೋಗಿಸಬಹುದು. ಅಂಥ ಸಂಗೀತವನ್ನು ಆರಿಸಿಕೊಂಡು ಅದನ್ನು ಬ್ಯಾಲೆಗೆ ಅಳವಡಿಸಲು ಅಪಾರ ಜಾಣ್ಮೆ ಬೇಕು ; ಸಂಗೀತದಲ್ಲಿ ಒಳ್ಳೆಯ ಪರಿಶ್ರಮವೂ ಬೇಕು.

ಬ್ಯಾಲೆಯಲ್ಲಿ ಉಡುಗೆ ತೊಡುಗೆಗಳೂ ಒಂದು ಮುಖ್ಯ ಅಂಶ. ಉಡುಗೆಯೆಂದರೆ ನರ್ತಕ ನರ್ತಕಿಯರ ಒಂದು ಅವಿಭಾಜ್ಯ ಅಂಗ ಎಂದು ಹೇಳಬಹುದು. ಬ್ಯಾಲೆಯ ತಂತ್ರದಲ್ಲಿ ಇದರ ಪಾತ್ರ ಬಹಳ ಮಹತ್ವದ್ದು. ಉಡುಗೆಯ ಬಣ್ಣ ಹಾಗೂ ಅದರ ಆಕಾರಕ್ಕೆ ವೈಯಕ್ತಿಕ ಹಾಗೂ ಸಾಮೂಹಿಕ ನೃತ್ಯಗಳಲ್ಲಿ ಗಣ್ಯ ಸ್ಥಾನವಿದೆ. ರಂಗಸಜ್ಜಿಕೆಗೂ ಅಷ್ಟೆ.



ಜರ್ಮನಿಯಲ್ಲಿ ಬ್ಯಾಲೆ ಶಿಕ್ಷಣ



ಜೂಲ್ಸ್ ಫೆರೋ



ಅಮೇಲಿಯ ಪರಾರಿ

ಪಾತ್ರಗಳು ಮಾತುಗಳನ್ನಾಡದೆ ಇರುವುದರಿಂದ ಉಡುಗೆ ರಂಗಸಜ್ಜಿಕೆಗಳು ಪ್ರೇಕ್ಷಕರಿಗೆ ಕಥೆಯ ಸನ್ನಿವೇಶವನ್ನು ಸೂಚಿಸುವುದರಲ್ಲಿ ಸಹಾಯಕವಾಗುತ್ತವೆ.

ಬ್ಯಾಲೆ ಶಾಲೆಗೆ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಸೇರಿಸಿಕೊಳ್ಳುವ ಮೊದಲು ಅವರ ಆರೋಗ್ಯಸ್ಥಿತಿ ಹೇಗಿದೆ, ಹೆಜ್ಜೆಗಳ ಬಾಗು ಚೆನ್ನಾಗಿದೆಯೇ ಮೂಳೆಗಳು ಪ್ರಮಾಣಬದ್ಧವಾಗಿದ್ದು ಅವನ್ನು ಅವಶ್ಯತೆಗೆ ತಕ್ಕಂತೆ ರೂಪಿಸಿಕೊಳ್ಳಲು ಸಾಧ್ಯವೇ ಎಂಬುದನ್ನೆಲ್ಲ ಪರೀಕ್ಷಿಸುತ್ತಾರೆ. ಶಿಕ್ಷಣ 5 ಅಥವಾ 6 ವರ್ಷಗಳ ಕಾಲ ನಡೆಯುತ್ತದೆ.

8ರಿಂದ 10 ವರ್ಷಗಳ ವಯಸ್ಸಿನವರಾಗಿರುವಾಗಲೇ ನರ್ತಕ ನರ್ತಕಿಯರಿಗೆ ತರಬೇತಿ ಆರಂಭವಾಗುತ್ತದೆ. ಪ್ರಾರಂಭದಲ್ಲಿ ವಾರಕ್ಕೆ ಒಂದು ಪಾಠ ಮಾತ್ರ. ಎರಡು ವರ್ಷಗಳ ಹೊತ್ತಿಗೆ ದಿನಕ್ಕೊಂದು ಪಾಠ ಹೇಳಿಸಿಕೊಳ್ಳುವಷ್ಟು ತರಬೇತಿ ದೊರೆಯುತ್ತದೆ. ಮೊದಲು ಕಲಿಯಬೇಕಾದದ್ದು ಕಾಲಿನ ಐದು ಭಂಗಿಗಳು ಅಥವಾ ಸ್ಥಾನಗಳ ನಿರ್ವಹಣೆ. ಮೊದಲನೆಯ ಭಂಗಿ, ನೆಟ್ಟಗೆ ನಿಂತುಕೊಂಡು ಎರಡೂ ಕಾಲಿನ ಹಿಮ್ಮಡಿಗಳು ಪಕ್ಕಪಕ್ಕ ಬರುವಂತೆ ನಿಲ್ಲುವುದು. ಎರಡನೆಯದರಲ್ಲಿ, ಹಿಮ್ಮಡಿಗಳನ್ನು ದೂರ ಸರಿಸಿ ಎರಡು ಕೈಗಳನ್ನೂ ಚಾಚುವುದು. ಎಡಗಾಲು ಇದ್ದಂತೆಯೇ ಇದ್ದು ಬಲಗಾಲಿನ ಹಿಮ್ಮಡಿ ಎಡಪಾದದ ಮಧ್ಯಕ್ಕೆ ಬರುವಂತೆ ಇಟ್ಟುಕೊಳ್ಳುವುದು ಮೂರನೆಯದು. ನಾಲ್ಕನೆಯದರಲ್ಲಿ ಎಡಗಾಲು ಇದ್ದಂತೆಯೇ ಇದ್ದು ಬಲಗಾಲಿನ ಬೆರಳು ಎಡಗಾಲಿನ ಹಿಮ್ಮಡಿಯ ಸಮಕ್ಕಿರುವಂತೆ ಬಲಗಾಲನ್ನು ಸ್ವಲ್ಪ ಮುಂದಿಟ್ಟುಕೊಳ್ಳುವುದು. ಬಲಗಾಲಿನ ಬೆರಳುಗಳು ಎಡಗಾಲಿನ ಹಿಮ್ಮಡಿಗೆ ತಗಲುವಂತೆ ಇಟ್ಟುಕೊಳ್ಳುವುದು ಐದನೆಯ ಭಂಗಿ. ಇವು ಬ್ಯಾಲೆ ನೃತ್ಯಕ್ಕೆ ಆಧಾರಭೂತವಾದ ಭಂಗಿಗಳು.

ಬ್ಯಾಲೆ ನೃತ್ಯಕ್ಕೆ ಅಗತ್ಯವಾದ ಸ್ನಾಯುಗಳು ಬೆಳೆದು ಅವಕ್ಕೆ ಸರಿಯಾದ ತರಬೇತಿ ದೊರೆತ ಮೇಲೆ ಇನ್ನೂ ಹೆಚ್ಚು ಕಠಿಣವಾದ ಭಂಗಿಗಳು ಮತ್ತು ಚಲನೆಗಳನ್ನು ಕಲಿಸುತ್ತಾರೆ. ತರಬೇತಿ ಆರಂಭವಾಗಿ ಮೂರು ವರ್ಷಗಳಾಗುವವರೆಗೆ ಕಾಲಿನ ಬೆಟ್ಟುಗಳ ಮೇಲೆ ನಿಂತು ನರ್ತಿಸುವುದಕ್ಕೆ ಅವಕಾಶ ಕೊಡುವುದಿಲ್ಲ. ಏಕೆಂದರೆ ಎಳೆ ವಯಸ್ಸಿನಲ್ಲಿ ಮೂಳೆಗಳು ಮೃದುವಾಗಿರುತ್ತವೆ. ಆಗಲೇ ಬೆರಳಿನ ಮೇಲೆ ದೇಹದ ಭಾರ ಬಿದ್ದರೆ ಬೆರಳುಗಳು ವಿಕೃತಿಗೊಳ್ಳುವ ಸಂಭವವಿದೆ.



ಹೊಯ್ಸಳೇಶ್ವರ ನೃತ್ಯರೂಪಕ—
ಮಾಯಾರಾವ್ ರಚನೆ



ಉದಯಶಂಕರ್ ರಚನೆ — 'ಜೀವನ ಸ್ಪಂದನ'

ಅಮೆರಿಕದಲ್ಲಿ 1933ರ ಅನಂತರ ಬ್ಯಾಲೆ ಮೈತಳೆಯಿತು.

ಬ್ಯಾಲೆಗಳಲ್ಲಿ ಹೆಸರಾಂತವು 'ಹಂಸ ಸರೋವರ', 'ನಿದ್ರಾ ಸುಂದರಿ', 'ಪೆಟ್ರೂಷ್ಕ'. 'ಸಿಂಡರೆಲ', ' ನಡುಬೇಸಗೆಯ ಕನಸು ' ಮುಂತಾದುವು.

ಭಾರತದಲ್ಲಿ 'ಬ್ಯಾಲೆ'ಯನ್ನು ಆರಂಭಿಸಿ ಅದಕ್ಕೆ ಅಂತರರಾಷ್ಟ್ರೀಯ ಸ್ಥಾನಮಾನಗಳನ್ನು ಗಳಿಸಿಕೊಟ್ಟವರು ಉದಯಶಂಕರ್. ಅಡ್ಯಾರಿನ ಕಲಾಕ್ಷೇತ್ರದ ರುಕ್ಮಿಣಿ ಅರುಂಡೇಲ್, ಅಹಮದಾಬಾದಿನ ಮೃಣಾಲಿನಿ ಸಾರಾಭಾಯಿ ಮುಂತಾದವರು, ಭಾರತೀಯ ಕಥಾವಸ್ತು ಉಳ್ಳ ಬ್ಯಾಲೆಗಳನ್ನು ರಚಿಸಿ ಇವರು ಪ್ರದರ್ಶಿಸಿದ್ದಾರೆ. ಮಾಯಾರಾವ್ ರಷ್ಯದಲ್ಲಿ ಬ್ಯಾಲೆ ತರಬೇತಿ ಪಡೆದು ಬಂದಿರುವ ಕಲಾವಿದೆ. ಶ್ರೀ ರಾಮಾಯಣ ದರ್ಶನಂ ಕಾವ್ಯ, ಹೊಯ್ಸಳರ ಇತಿಹಾಸ ಇವುಗಳಿಂದ ಆರಿಸಿದ ವಸ್ತುಗಳನ್ನು ಅವಲಂಬಿಸಿ ಬ್ಯಾಲೆಗಳನ್ನು ಈಕೆ ರೂಪಿಸಿದ್ದಾರೆ.

## ಬ್ರಾಂಟಿ ಸೋದರಿಯರು

ಕ್ಯೂರರ್, ಎಲಿಸ್ ಹಾಗೂ ಆ್ಯಕ್ಟನ್ ಬೆಲ್–ಇವರ ಒಂದು ಕವನ ಸಂಗ್ರಹ 1846ರಲ್ಲಿ ಪ್ರಕಟವಾಯಿತು. ಇದು ಜನಪ್ರಿಯವಾಗಲಿಲ್ಲ. ಮಾರಾಟವಾದದ್ದು ಕೇವಲ ಎರಡೇ ಎರಡು ಪ್ರತಿಗಳು. ಇದರ ಪರಿಣಾಮವಾಗಿ ಇವರು ಕಾವ್ಯರಚನೆಯನ್ನು ಬಿಟ್ಟು, ಕಾದಂಬರಿ ಕ್ಷೇತ್ರವನ್ನು ಪ್ರವೇಶಿಸಿದರು, ಪ್ರಖ್ಯಾತರಾದರು. ಇವರೇ ಬ್ರಾಂಟಿ ಸೋದರಿಯರೆಂದು ಪ್ರಸಿದ್ಧರಾದ ಸಾಹಿತಿಗಳು. ಚಾರ್ಲೆಟ್, ಎಮಿಲಿ ಮತ್ತು ಆ್ಯನ್ ಇವರ ನಿಜವಾದ ಹೆಸರುಗಳು. ಆದರೆ ಅವನ್ನು ಬಹಿರಂಗಪಡಿಸಲು ಇಷ್ಟವಿಲ್ಲದೆ, ನಿಜ ಹೆಸರಿನ ಮೊದಲ ಅಕ್ಷರದಿಂದ ಆರಂಭವಾಗುವ

ಚಾರ್ಲೆಟ್ ಎಮಿಲಿ ಆ್ಯನ್

[illegible] ವರು.

[illegible] 1816ರಲ್ಲಿ [illegible] 1818ರಲ್ಲಿ, [illegible] 1820ರಲ್ಲಿ [illegible]. 1820ರಲ್ಲಿ ಇವರು ಹಾವರ್ತ್‌ಗೆ ಬಂದರು. 1821ರಲ್ಲಿ ತಾಯಿ ತೀರಿಕೊಂಡಳು. ಆಕೆಯ ಅವಿವಾಹಿತ ಸೋದರಿಯೊಬ್ಬಳು ಈ ಮಕ್ಕಳನ್ನು ನೋಡಿಕೊಳ್ಳಲು ಬಂದಳು. ಆದರೆ ಇದರಿಂದ ಅವರ ಒಂಟಿತನ ಅಷ್ಟಾಗಿ ದೂರವಾಗಲಿಲ್ಲ. ತಮಗೆ ತಾವೇ ಓದಿಕೊಳ್ಳುವುದು, ಚಿತ್ರ ಬರೆಯುವುದು, ಒಬ್ಬರಿಗೊಬ್ಬರು ಕಥೆಗಳನ್ನು ಹೇಳಿಕೊಳ್ಳುವುದರಲ್ಲೇ ಇವರು ತುಂಬ ಸಮಯ ಕಳೆಯುತ್ತಿದ್ದರು.

ಚಾರ್ಲೆಟ್ ಮತ್ತು ಎಮಿಲಿಯರನ್ನು ಅವರ ಅಕ್ಕಂದಿರಾದ ಮೇರಿಯ ಮತ್ತು ಎಲಿಜಬೆತ್ ಅವರ ಜೊತೆಯಲ್ಲಿ ಕವಾನ್‌ಬ್ರಿಡ್ಜ್‌ನಲ್ಲಿ ಒಂದು ಶಾಲೆಗೆ ಸೇರಿಸಿದರು. ಅಲ್ಲಿನ ಅಸಮರ್ಪಕ ಆಹಾರ, ವಸತಿಗಳಿಂದಾಗಿ ಆ ಹುಡುಗಿಯರೆಲ್ಲರೂ ಕಾಯಿಲೆ ಬಿದ್ದು 1825ರಲ್ಲಿ ತೀರಿಕೊಂಡರು. ಚಾರ್ಲೆಟ್, ಎಮಿಲಿ ಮನೆಗೆ ಹಿಂದಿರುಗಿದರು. ಆರು ವರ್ಷಗಳ ಅನಂತರ ಚಾರ್ಲೆಟ್, ರೋಹೆಡ್‌ನಲ್ಲಿ ಶಾಲೆಗೆ ಸೇರಿದಳು. ಆನ್ ಆ ಶಾಲೆಗೆ ಸೇರುವ ಹೊತ್ತಿಗೆ ಚಾರ್ಲೆಟ್ ಅಲ್ಲಿ ಉಪಾಧ್ಯಾಯಿನಿಯಾಗಿದ್ದಳು. ಈ ಸೋದರಿಯರು ಶಿಕ್ಷಕಿಯರಾಗಿ, ಮಕ್ಕಳ ರಕ್ಷಕಿಯರಾಗಿ ಹಲವು ಕಡೆ ಕೆಲಸ ಮಾಡಿದರು. ಆ ವೃತ್ತಿಗಳು ಸರಿಬರದೆ ಅವನ್ನು ಬಿಟ್ಟುಬಿಟ್ಟರು. ತಾವು ಮೂರು ಜನರೂ ಸೇರಿ ಒಂದು ಶಾಲೆ ತೆರೆಯಬೇಕೆಂದು ಉದ್ದೇಶಿಸಿ ದರು. ಅದಕ್ಕಾಗಿ ಚಾರ್ಲೆಟ್ ಮತ್ತು ಎಮಿಲಿ ಫ್ರೆಂಚ್ ಭಾಷೆ ಕಲಿಯಲು ಯತ್ನಿಸಿದರು. ಆದರೆ ಅವರ ಈ ಯೋಜನೆ ಕೈಗೂಡಲಿಲ್ಲ. ಈ ಸೋದರಿಯರಿಗೆ ಇದ್ದ ಒಬ್ಬನೇ ಸೋದರ ಕುಡುಕ. 1848ರಲ್ಲಿ ಈತ ಮರಣಹೊಂದಿದ. ಸೂಕ್ಷ್ಮ ದೇಹಸ್ಥಿತಿ ಇದ್ದ ಎಮಿಲಿ ಮತ್ತು ಆ್ಯನ್ ಕ್ಷಯಕ್ಕೆ ತುತ್ತಾದರು. ಎಮಿಲಿ 1848ರಲ್ಲೂ ಆ್ಯನ್ 1849ರಲ್ಲೂ ಸಾವಿಗೀಡಾದರು. ಚಾರ್ಲೆಟ್ ಒಬ್ಬಳೇ ತಂದೆಯೊಡನೆ ಉಳಿದಳು. 1854ರಲ್ಲಿ ತಂದೆಗೆ ಸಹಾಯಕ ಪಾದ್ರಿಯಾಗಿದ್ದ ಎ. ಬಿ. ಕೆಕೊಲಸ್‌ನನ್ನು ಮದುವೆಯಾದಳು; ಮರು ವರ್ಷವೇ ಮರಣಹೊಂದಿದಳು.

ಇಂಗ್ಲಿಷ್ ಸಾಹಿತ್ಯಕ್ಕೆ ಈ ಸೋದರಿಯರು ಇತ್ತಿರುವ ಕಾಣಿಕೆ ಅಮೂಲ್ಯ. ಚಾರ್ಲೆಟಳ ಮೊದಲ ಕಾದಂಬರಿ 'ಪ್ರಾಧ್ಯಾಪಕ' ಪ್ರಕಾಶಕರಿಂದ ತಿರಸ್ಕೃತವಾಯಿತಾದರೂ ಆಕೆ ಶೀಘ್ರವಾಗಿ 'ಜೇನ್ ಐರ್' ಎಂಬ ಇನ್ನೊಂದು ಕಾದಂಬರಿಯನ್ನು ಬರೆದಳು. ಇದು 1847ರಲ್ಲಿ ಪ್ರಕಟವಾಗಿ ಬಹು ಬೇಗ ವಾಚಕರ ಮೆಚ್ಚುಗೆ ಗಳಿಸಿಕೊಂಡಿತು. ಮುಂದೆ ಕೈಗಾರಿಕಾ ಕ್ರಾಂತಿಯ ಹಿನ್ನೆಲೆಯನ್ನುಳ್ಳ 'ಶರ್ಲಿ' ಯೂ 'ಪ್ರಾಧ್ಯಾಪಕ' ಕಾದಂಬರಿಯ ಪುನರ್ರಚನೆಯಾದ 'ವಿಲೆಟ್' ಎಂಬ ಕಾದಂಬರಿಯೂ ಸಿದ್ಧವಾದವು. 'ಜೇನ್ ಐರ್' ನಲ್ಲಿ ಆಕೆ ತಾನು ಮೊದಲು ಓದಿದ ಶಾಲೆಯಲ್ಲಿ ತನಗಾದ ಕಟು ಅನುಭವಗಳನ್ನೂ ರಕ್ಷಕಿಯಾಗಿದ್ದಾಗಿನ ತನ್ನ ಅನುಭವಗಳನ್ನೂ ಸೇರಿಸಿದ್ದಾಳೆ. ಈ ಮೂರು ಕಾದಂಬರಿಗಳಲ್ಲೂ ಅವಳ ಜೀವನದ ಪಡಿನೆಳಲು ಭಾವಪೂರ್ಣವಾಗಿ ಮೂಡಿಬಂದಿದೆ.

ಎಮಿಲಿ ಬರೆದದ್ದು ಒಂದೇ ಕಾದಂಬರಿ —'ವುದರಿಂಗ್ ಹೈಟ್ಸ್'. 1847ರಲ್ಲಿ ಇದು ಪ್ರಕಟವಾಯಿತು. ಆಂಗ್ಲ ಸಾಹಿತ್ಯದ ಮೇರುಕೃತಿಗಳಲ್ಲಿ ಒಂದೆಂದು ಈ ಕಾದಂಬರಿ ಪರಿಗಣಿತವಾಗಿದೆ. ಇದೊಂದು ಅದ್ಭುತ [illegible] ಪ್ರಕಟವಾದವು. [illegible] ವಾಯಿತು.

ಆನ್ ಬರೆದ ಕಾದಂಬರಿಗಳನ್ನು [illegible] ಅಕ್ಕಂದಿರನ್ನು [illegible]. 'ಆಗ್ನೆಸ್ ಗ್ರೇ', 'ದಿ ಟೆನೆಂಟ್ ಆಫ್ ವೈಲ್ಡ್‌ಫೆಲ್ ಹಾಲ್' ಗಳಲ್ಲಿ [illegible] ಚಿತ್ರಣವಿದೆ.

ಈ ಸೋದರಿಯರಿಗೆ ದೊರೆತ ಕೀರ್ತಿ ಅವರ ಜೀವನದ ರೀತಿಯ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ. ಅವರು ಗುಪ್ತನಾಮಗಳನ್ನಿಟ್ಟು ಕೊಂಡು ಬರೆಯುತ್ತಿದ್ದುದರಿಂದ ಜನತೆಗೆ ಅವರ ನಿಜನಾಮ ಪರಿಚಯವೂ ಆಗಲಿಲ್ಲ.

## ಬ್ರಾಮ್ಸ್

19ನೆಯ ಶತಮಾನದ ವೇಳೆಗೆ ಪಾಶ್ಚಾತ್ಯ ಸಂಗೀತ ಒಂದು ವಿಚಿತ್ರ ಘಟ್ಟ ಮುಟ್ಟಿತ್ತು. ಪರಂಪರಾನುಗತ ಸಂಗೀತ ಹಳತಾಗಿದೆಯೇ? ಹೊಸ ಶೈಲಿಯ ಸಂಗೀತ ಬೇಕೆ? ಎಂಬ ಜಿಜ್ಞಾಸೆ ಸಂಗೀತಗಾರರಲ್ಲಿ ಹುಟ್ಟಿತು. ಈ ಎರಡೂ ಸಂದೇಹಗಳನ್ನು ನಿವಾರಿಸಿದವನು ಯೊಹಾನೆಸ್ ಬ್ರಾಮ್ಸ್. ಸಾಂಪ್ರದಾಯಿಕರು ಅವನ ರಚನೆಗಳು ಸಂಗೀತದ ಹಳೆಯ ನಿಲುವನ್ನು ಬಿಟ್ಟುಕೊಟ್ಟಿಲ್ಲವೆಂದು ಮೆಚ್ಚಿಕೊಂಡರು. ಹೊಸತನ್ನು ಬಯಸುತ್ತಿದ್ದವರು, ಬ್ರಾಮ್ಸ್ ತನ್ನ ರಚನೆಗಳಲ್ಲಿ ಹೊಸ ಪರಿಣಾಮಗಳನ್ನು ಸಾಧಿಸಿದ್ದಾನೆ, ಹಳತನ್ನು ಮುರಿದಿದ್ದಾನೆ—ಎಂದು ಸಂತೋಷಪಟ್ಟರು; ಅವನು ತಮ್ಮವನು ಎಂದುಕೊಂಡರು. ಹೀಗೆ ಬ್ರಾಮ್ಸ್ ಎಲ್ಲರಿಗೂ ಬೇಕಾದವನಾದ: ಶ್ರೇಷ್ಠ ಸಂಗೀತಗಾರರಾದ ಬಾಕ್, ಬಿಥೋವನರ ಸಾಲಿಗೆ ಸೇರಿದ.

1833 ಮೇ 7ರಂದು ಜರ್ಮನಿಯ ಹ್ಯಾಂಬರ್ಗ್‌ನಲ್ಲಿ ಯೊಹಾನೆಸ್ ಬ್ರಾಮ್ಸ್ ಜನಿಸಿದ. ಅವನ ತಂದೆ ತಂತಿವಾದ್ಯಗಾರ. ತಾಯಿ ದರ್ಜಿ ಕೆಲಸಮಾಡಿ ಹಣ ಸಂಪಾದಿಸುತ್ತಿದ್ದಳು. ಸಂಸಾರದ ವರಮಾನ ಹೆಚ್ಚಿಸುವುದಕ್ಕಾಗಿ ಬ್ರಾಮ್ಸ್ ತನ್ನ 13–14ನೆಯ ವಯಸ್ಸಿನಲ್ಲಿಯೇ ಅಗ್ಗದ ಹೋಟೆಲುಗಳಲ್ಲಿ ಪಿಯಾನೋವಾದಕನಾದ. ಹಳೆಯ ಧಾಟಿಯ ರಚನೆಗಳಲ್ಲಿ ಹಲಕೆಲವು ವ್ಯತ್ಯಾಸಗಳನ್ನು ಮಾಡಿ ಅವು ಹೊಸ ರಚನೆಯಂತೆ ತೋರುವ ಹಾಗೆ ಬಾರಿಸುತ್ತಿದ್ದ. 15ನೆಯ ವಯಸ್ಸಿನಲ್ಲಿ ಹ್ಯಾಂಬರ್ಗ್‌ನಲ್ಲಿ ಮೊದಲ ಸಂಗೀತ ಕಚೇರಿ ನಡೆಸಿದ. ಐದು ವರ್ಷಗಳ ಅನಂತರ ರೆಮೇನ್ಯಿ ಎಂಬ ಹಂಗೆರಿಯ ಪಿಟೀಲುವಾದಕನ ಒಡಗೂಡಿ ಪ್ರವಾಸ ಮಾಡಿದ: ಸಂಗೀತ ಕಚೇರಿಗಳನ್ನು ನಡೆಸಿದ. ಈ ಸಂದರ್ಭದಲ್ಲಿ ಬ್ರಾಮ್ಸ್‌ಗೆ ಜೊ ಆಕಿಮ್ ಎಂಬ ಮತ್ತೊಬ್ಬ ಪಿಟೀಲು ಕಲಾವಿದನ ಪರಿಚಯವಾಯಿತು. ಈತ ಬ್ರಾಮ್ಸ್‌ನ ಆಜೀವಮಿತ್ರನಾದ. ಇವನಿಂದ ಅಂದಿನ ಹಿರಿಯ ಸಂಗೀತಗಾರರಾದ ಶೂಮನ್, ಲಿಸ್ಟ್ ಇವರ ಪರಿಚಯ ಬ್ರಾಮ್ಸ್‌ಗೆ ಆಯಿತು. ಶೂಮನ್ ಹಾಗೂ ಅವನ ಹೆಂಡತಿ ಕ್ಲಾರಾ ಇವರ ಜೀವನ ಪರ್ಯಂತ ಬ್ರಾಮ್ಸ್ ವಿಶ್ವಸನೀಯ ಗೆಳೆಯನಾಗಿ ಉಳಿದ. ಅವರು ಬ್ರಾಮ್ಸ್‌ನಲ್ಲಿದ್ದ ಸೃಜನಾತ್ಮಕ ಪ್ರತಿಭೆಯನ್ನು ಗುರುತಿಸಿ, ಅವನನ್ನು 'ಭವಿಷ್ಯದ ಗೇಯಕಾರ' ಎಂದು ಶ್ಲಾಘಿಸಿ, ಪ್ರೋತ್ಸಾಹಿಸಿದರು. 1857ರ ವೇಳೆಗೆ ಸಂಗೀತ ಕಚೇರಿಗಳನ್ನು ನಡೆಸುವುದಕ್ಕೋಸ್ಕರ, ಬ್ರಾಮ್ಸ್ ಹಲವಾರು ಪ್ರವಾಸಗಳನ್ನು ಮಾಡಿದ್ದ. ವಿಯೆನ್ನಾ ನಗರ ಅವನಿಗೆ ಬಹಳ ಮೆಚ್ಚುಗೆಯಾಯಿತು. 1872ರಲ್ಲಿ ಅಲ್ಲೇ ಸ್ಥಿರವಾಗಿ ನೆಲೆಸಿದ.

ಬ್ರಾಮ್ಸ್‌ನದು ಹೆಚ್ಚು ಏರಿಳಿತಗಳಿಲ್ಲದ ಜೀವನ. ಕೊನೆಯವರೆಗೂ ಅವಿವಾಹಿತನಾಗಿಯೇ ಇದ್ದ. ಸ್ವಲ್ಪ ಸಿಡುಕಿನ, ಪರಿಚಯ ಬೆಳೆಸುವುದೇ



ಸಮತೋಲನ : ಬ್ರಾಮ್ಸ್

ಕಷ್ಟ ಎನಿಸುವಂಥ ಸ್ವಭಾವ. ಕೆಲವು ಮಂದಿ ಸಂಗೀತಗಾರರು ಮಾತ್ರ ಅವನಿಗಿಷ್ಟ ಗೆಳೆಯರು. ಸಂಗೀತವನ್ನು ಬಿಟ್ಟು ಬೇರೆ ಯಾವುದಕ್ಕೂ ತನ್ನ ಜೀವನದಲ್ಲಿ ಸ್ಥಾನವೇ ಇಲ್ಲ ಎಂಬಂತೆ ವರ್ತಿಸುತ್ತಿದ್ದ.

ಬ್ರಾಮ್ಸ್ ನೂರಾರು ಕೃತಿಗಳನ್ನು ರಚಿಸಿದ್ದಾನೆ. ವಾದ್ಯವಾದನಕ್ಕಲ್ಲದೆ ಹಾಡುಗಾರಿಕೆಗೆ ಸಂಬಂಧಿಸಿದಂತೆಯೂ ಬ್ರಾಮ್ಸ್‌ನ ಸಂಗೀತ ಕೃತಿಗಳಿವೆ. ಅವನ ರಚನೆಗಳಲ್ಲಿ ಸಣ್ಣ ಬೈಠಕ್‌ಗಳಿಗಾಗಿ ಬರೆದುವೇ ಹೆಚ್ಚು. ಆದರೆ ಬ್ರಾಮ್ಸ್‌ನ ಖ್ಯಾತಿಗೆ ಕಾರಣವಾದುವು ಅವನ ಬೃಹತ್ ರಚನೆಗಳು. ಇಂಥ ಮೊದಲ ರಚನೆ 1865ರಲ್ಲಿ ರೂಪುಗೊಂಡ 'ಜರ್ಮನ್ ರಿಕ್ವಿಯಂ'. ಗತಿಸಿದ ತಾಯಿಯ ಸ್ಮರಣೆಗಾಗಿ ಸೃಷ್ಟಿಸಲ್ಪಟ್ಟ ಚರಮಗೀತೆ ಅದು. ಇತರ ವೃಂದಗಾನ ರಚನೆಗಳು 'ವಿಧಿಗೀತ', 'ವಿಜಯಗೀತ' ಮುಂತಾದುವು. ಅವನು ನಾಲ್ಕು ಸಿಂಫನಿಗಳನ್ನೂ ವಾದ್ಯಮೇಳಸಂಗೀತ–ಪಿಯಾನೋಗಾಗಿ 'ಸೊನಾಟ' ಗಳನ್ನೂ ರಚಿಸಿದ್ದಾನೆ. ವಾದ್ಯಮೇಳ ಸಂಗೀತಗಳು ಬ್ರಾಮ್ಸ್‌ನ ಉತ್ಕೃಷ್ಟ ಸೃಷ್ಟಿಗಳೆನ್ನಬಹುದು. ಗಾಯನ. ವಾದನಗಳನ್ನು ಮೇಳೈಸುವುದರಲ್ಲಿ ಅವನಿಗಿದ್ದ ಕೌಶಲ, ಗೀತೆಯ ಸಾಹಿತ್ಯವನ್ನಾರಿಸುವುದರಲ್ಲಿ ಅಭಿರುಚಿ ಇವುಗಳಿಂದ ಅವನ ಸಂಗೀತ ವಿಶಿಷ್ಟವೆನಿಸಿದೆ. ಗಮನವಿಟ್ಟು ಕೇಳದೆ ಅವನ ಸಂಗೀತದ ಸ್ವಾರಸ್ಯವನ್ನು ಗುರುತಿಸುವುದು ಕಷ್ಟ. ಆದರೂ. ಸಂಗೀತವನ್ನು ಅಭ್ಯಾಸ ಮಾಡದವರು ಕೂಡ ಅವನ ಸಂಗೀತಕ್ಕೆ ಮಾರುಹೋಗುತ್ತಾರೆ. ಕೃತಿಯ ಎಲ್ಲ ಘಟಕಗಳೂ ಪ್ರಮಾಣಬದ್ಧವಾಗಿರುವುದು ಅವು ಸಮತೋಲದಲ್ಲಿರುವುದು ಬ್ರಾಮ್ಸ್‌ನ ಸಂಗೀತದ ಪ್ರಧಾನ ಲಕ್ಷಣ. ಇದು ಆಕಸ್ಮಿಕವಲ್ಲ, ಉದ್ದೇಶಪೂರ್ವಕವಾಗಿ ಸಾಧಿಸಲ್ಪಟ್ಟುದು.

ಮೊದಲಿಗೆ ಶ್ರೇಷ್ಠ ಪಿಯಾನೋವಾದಕನೆಂದು ಹೆಸರುಗಳಿಸಿದ್ದ ಬ್ರಾಮ್ಸ್ ಅನಂತರ ತನ್ನ ರಚನೆಗಳಿಂದ ಖ್ಯಾತನಾದ. ಪಾಶ್ಚಾತ್ಯ ಸಂಗೀತದಲ್ಲಿ ಅವನ ಹೆಸರು ಚಿರಸ್ಮರಣೀಯವಾದದ್ದು.

ಬ್ರಾಮ್ಸ್ ತನ್ನ 64ನೆಯ ವಯಸ್ಸಿನಲ್ಲಿ 1897 ಏಪ್ರಿಲ್ 13ರಂದು ವಿಯೆನ್ನಾದಲ್ಲಿ ಮೃತನಾದ. ಸಾಯುವುದಕ್ಕೆ ಕೆಲ ಕಾಲಕ್ಕೆ ಮುಂಚೆ ಯಕೃತ್ತಿನ ಕ್ಯಾನ್ಸರ್‌ನಿಂದ ನರಳಿದ. ಅವನ ದೇಹವನ್ನು ಸಕಲ ಮರ್ಯಾದೆಗಳೊಡನೆ ಸಮಾಧಿಮಾಡಲಾಯಿತು.

## ಬಿ ಎಂ ಶ್ರೀ

"ಏರಿಸಿ, ಹಾರಿಸಿ, ಕನ್ನಡದ ಬಾವುಟ
ಓ ಹೊ ಕನ್ನಡದ ನಾಡು, ಆಹ ಕನ್ನಡ ನುಡಿ
ಹಾರಿಸಿ, ತೋರಿಸಿ, ಕೆಚ್ಚೆದೆಯ ಬಾವುಟ
ಗಾಳಿಯಲಿ ಫಟ ಫಟ, ದಾಳಿಯಲಿ ಚಟಚಟ"

... ... ... ...

"ಬಾಳ್ ಕನ್ನಡ ತಾಯ್
ಏಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜರಾಜೇಶ್ವರಿ"

—ಎಂದು ವೀರಗರ್ಜನೆಮಾಡಿ, ಕನ್ನಡ ಬಾವುಟವನ್ನು ಹಾರಿಸಿ, ಕನ್ನಡಿಗರ ಸ್ವಾಭಿಮಾನವನ್ನು ಏರಿಸಿದವರು ಬಿಎಂಶ್ರೀ –ಬಿ. ಎಂ. ಶ್ರೀಕಂಠಯ್ಯನವರು.

ಅನಾಥಶಿಶುವಾಗಿದ್ದ ಶಕುಂತಲೆಯನ್ನು ಕಣ್ವರು ಸಾಕಿ ಬೆಳೆಸಿದಂತೆ ನಿರ್ಲಕ್ಷಿಸಲ್ಪಟ್ಟಿದ್ದ ಕನ್ನಡವನ್ನು ಶ್ರೀಕಂಠಯ್ಯನವರು ಆದರದಿಂದ ಎತ್ತಿಕೊಂಡು ಪೋಷಿಸಿ ಬೆಳೆಸಿದರು: ಅವರು ಕನ್ನಡದ 'ಕಣ್ವಋಷಿ'. ಕನ್ನಡ ಸೇವೆ ಅವರ ಜೀವದುಸಿರಾಗಿತ್ತು; ಕಣ್ಣ ಬೆಳಕಾಗಿತ್ತು.

ವಿದ್ಯಾರ್ಥಿ ದೆಸೆಯಲ್ಲೇ ಶ್ರೀಕಂಠಯ್ಯನವರು ಕನ್ನಡದ ಹಿತಚಿಂತನೆಗೆ ಮನಸ್ಸು ಕೊಟ್ಟಿದ್ದರು. ಕನ್ನಡ ಭಾಷೆ, ಸಾಹಿತ್ಯ ಹಳೆಯ ಜಾಡಿನಲ್ಲಿಯೇ ಹೇಗೋ ಕುಂಟುತ್ತ ಸಾಗುತ್ತಿರುವುದನ್ನು ಗಮನಿಸಿದ 'ಶ್ರೀ' ಅವರು, ಕನ್ನಡದಲ್ಲಿ ಹೊಸತನವನ್ನು ಪ್ರಚೋದಿಸಲು ಏನು ಮಾಡಬೇಕೆಂಬ ಬಗೆಗೆ ಗೆಳೆಯರೊಡನೆ ಪದೇ ಪದೇ ಚರ್ಚಿಸುತ್ತಿದ್ದರು. ಉಪಾಧ್ಯಾಯ ವೃತ್ತಿಯನ್ನು ಕೈಕೊಂಡ ಮೇಲೆ ಕೂಡ ಅವರು ತಮ್ಮ ಈ ಕನಸು ನನಸಾಗಲು ನಿರಂತರವಾಗಿ ಶ್ರಮಿಸಿದರು.

ಬಿಎಂಶ್ರೀ ಅವರ ಮೂಲ ಸ್ಥಳ. ಇಂದಿನ ಮಂಡ್ಯ ಜಿಲ್ಲೆಯಲ್ಲಿರುವ ಬೆಳ್ಳೂರು. ಅವರ ತಂದೆ ಮೈಲಾರಯ್ಯನವರು: ತಾಯಿ ಭಾಗೀರಥಮ್ಮ. ಬಿಎಂಶ್ರೀ 1884 ಜನವರಿ 3ನೆಯ ತಾರೀಖು ಅವರ ತಾಯಿಯ ತೌರೂರಾದ ತುಮಕೂರು ಜಿಲ್ಲೆ ಸಂಪಿಗೆಯಲ್ಲಿ ಹುಟ್ಟಿದರು. ಮೈಲಾರಯ್ಯನವರು ಬುದ್ಧಿವಂತರು. ಶ್ರದ್ಧಾವಂತರು. ಬೇರೆ ಬೇರೆ ಕೆಲಸಗಳಲ್ಲಿದ್ದು ದುಡಿಯುತ್ತಿದ್ದರೂ ಸ್ವಪ್ರಯತ್ನದಿಂದ ಕಾನೂನನ್ನು ಅಭ್ಯಾಸಮಾಡಿ ಆ ಸಂಬಂಧದ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು; ವಕೀಲರಾಗಿ ಶ್ರೀರಂಗಪಟ್ಟಣದಲ್ಲಿ ನೆಲೆಸಿದರು.

ಬಿಎಂಶ್ರೀ ಅವರ ಮೊದಲ ವಿದ್ಯಾಭ್ಯಾಸ ಶ್ರೀರಂಗಪಟ್ಟಣದಲ್ಲೇ ನಡೆಯಿತು. ಅನಂತರ ಮೈಸೂರು ಮದರಾಸುಗಳಲ್ಲಿ ವಿದ್ಯಾಭ್ಯಾಸಮಾಡಿ ಎಂ.ಎ., ಬಿ.ಎಲ್., ಪದವೀಧರರಾದರು. ತಂದೆಯ ಮಾರ್ಗವನ್ನು ಅನುಸರಿಸಿ ವಕೀಲರಾಗದೆ, ಅಧ್ಯಾಪಕವೃತ್ತಿಯನ್ನು ಕೈಗೊಂಡರು: 1909ರಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಆಂಗ್ಲ ಸಾಹಿತ್ಯದ ಅಧ್ಯಾಪಕರಾದರು. ಶ್ರೇಷ್ಠ ಅಧ್ಯಾಪಕರೆಂಬ ಕೀರ್ತಿ ಪಡೆದರು.



ಕನ್ನಡದ ಕಣ್ವ

ಬಿಎಂಶ್ರೀ ಹುಟ್ಟಿನಿಂದ ಜ್ಞಾನದಾಹಿಗಳು. ಎಳೆಯ ವಯಸ್ಸಿನಲ್ಲಿ ರಾತ್ರಿ ಬಹು ಹೊತ್ತಿನವರೆಗೆ ಅಧ್ಯಯನ ನಡೆಸುತ್ತಿದ್ದುದಿರಲಿ, ಇಳಿ ವಯಸ್ಸಿನಲ್ಲಿ ಕೂಡ ಮಧ್ಯರಾತ್ರಿ ಕಳೆದ ಮೇಲೂ ಓದುತ್ತಲೇ ಇರುತ್ತಿದ್ದರು. ಈ ಪರಿಶ್ರಮದ ಫಲವಾಗಿ ಅವರು ಇಂಗ್ಲಿಷ್, ಕನ್ನಡ, ತಮಿಳು, ಸಂಸ್ಕೃತ ಭಾಷಾ ಸಾಹಿತ್ಯಗಳ ಬಗೆಗೆ ಅಪಾರ ಪಾಂಡಿತ್ಯ ಗಳಿಸಿಕೊಂಡರು; ಸಾಹಿತ್ಯ ರಂಗದಲ್ಲಿ ತುಲನಾತ್ಮಕ ದೃಷ್ಟಿಯನ್ನೂ ವಿಮರ್ಶನ ಶಕ್ತಿಯನ್ನೂ ಬೆಳೆಸಿಕೊಂಡರು. ಅವರ ಈ ಸಾಹಿತ್ಯ ತಪಸ್ಸಿನ ಫಲಗಳಲ್ಲೊಂದು –ಈ ಶತಮಾನದ ಆದಿ ಭಾಗದಲ್ಲಿ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಪ್ರಮಾಣದಲ್ಲಿ ತೋರಿಬಂದ 'ನವೋದಯ'. ಈ ನವೋದಯಕ್ಕೆ ಗಣನೀಯ ಪ್ರೇರಣೆಯನ್ನೊದಗಿಸಿದ ಸಾಹಿತ್ಯ ಕೃತಿ –ಬಿಎಂಶ್ರೀಯವರ 'ಇಂಗ್ಲಿಷ್ ಗೀತೆಗಳು'.

ಸಂಸ್ಕೃತ, ದ್ರಾವಿಡ ಹಾಗೂ ಇಂಗ್ಲಿಷ್ ಭಾಷೆಗಳ ಛಂದೋಪ್ರಕಾರಗಳ ಗಾಢ ಪರಿಚಯವಿದ್ದ ಬಿಎಂಶ್ರೀ ಕನ್ನಡ ಜಾಯಮಾನಕ್ಕೆ ಹೊಂದಿಕೊಳ್ಳುವಂಥ, ಆಧುನಿಕ ಭಾವನೆಗಳ ಪ್ರಕಾಶನಕ್ಕೆ ಸಹಾಯಕವಾಗುವಂಥ ಹೊಸ ಛಂದೋರೂಪಗಳನ್ನು ಕಲ್ಪಿಸಿದರು. ನವೋದಯದ ಕವಿಗಳು ವೇಗವಾಗಿ ಮುಂದುವರಿಯಲು ರಾಜಮಾರ್ಗವನ್ನು ನಿರ್ಮಿಸಿದರು.

ಕನ್ನಡ ನಾಟಕಸಾಹಿತ್ಯಕ್ಕೆ ಬಿಎಂಶ್ರೀಯವರ ಕೊಡುಗೆ ದೊಡ್ಡದು. 'ನಾಟಕ' ಅವರ ವಿಶೇಷ ಆಸಕ್ತಿಯ ಕ್ಷೇತ್ರವಾಗಿತ್ತು. ಶೇಕ್ಸ್‌ಪಿಯರನ ನಾಟಕಗಳನ್ನು ಕುರಿತು ಅವರು ಆಳವಾಗಿ ಅಭ್ಯಾಸಮಾಡಿದ್ದರು. ಕನ್ನಡದಲ್ಲಿ ನಾಟಕ ರಚನೆ ವಿಪುಲವಾಗಿಲ್ಲದಿದ್ದರೂ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಎಷ್ಟು ಸುಂದರವಾದ ಪ್ರಭಾವಶಾಲಿಯಾದ ನಾಟಕೀಯಾಂಶಗಳು ಇವೆ ಎಂಬುದನ್ನು ತೋರಿಸಲು, ಅವರು ರನ್ನನ 'ಸಾಹಸ ಭೀಮ ವಿಜಯ'ವನ್ನು 'ಗದಾಯುದ್ಧ' ನಾಟಕವನ್ನಾಗಿ ರೂಪಿಸಿದರು. ಗ್ರೀಕ್ ನಾಟಕಕಾರ ಸಾಫೋಕ್ಲೀಸನ ಸುಪ್ರಸಿದ್ಧ ಟ್ರಾಜಿಡಿ 'ಅಜೆಕ್ಸ್' ನಾಟಕವನ್ನು, ಮಹಾಭಾರತದ ಅಶ್ವತ್ಥಾಮನ ಜೀವನ ಘಟನೆಗಳಿಗೆ ಹೊಂದಿಸಿಕೊಂಡು 'ಅಶ್ವತ್ಥಾಮನ್' ನಾಟಕವನ್ನು ರಚಿಸಿದರು. ಆ ಮೂಲಕ ನಮ್ಮ ಪ್ರಾಚೀನ ಸಾಹಿತ್ಯದ ವಸ್ತುಗಳನ್ನಾರಿಸಿಕೊಂಡು ಎಂಥ ಒಳ್ಳೆಯ ನಾಟಕಗಳನ್ನು ರೂಪಿಸಬಹುದು ಎಂಬುದನ್ನು ತೋರಿಸಿದರು. ಅಷ್ಟು ಮಾತ್ರವಲ್ಲ ಕನ್ನಡದಲ್ಲಿ ರಮ್ಯ ಛಂದೋರೂಪಗಳ ನಿರ್ಮಾಣ ಸಾಧ್ಯತೆಯನ್ನೂ ತೋರಿಸಿದರು. 'ಪಾರಸೀಕರು' ಬಿಎಂಶ್ರೀಯವರ ಇನ್ನೊಂದು ಮೌಲಿಕ ಕೃತಿ. ಇದು ಗ್ರೀಕ್ ನಾಟಕಕಾರ ಎಸ್ಕಿಲಸ್‌ನ ನಾಟಕದ ಭಾಷಾಂತರ. ಉತ್ತಮ ಭಾಷಾಂತರಕ್ಕೆ ಇದೊಂದು ನಿದರ್ಶನ.

ಈ ಮೂರು ನಾಟಕಗಳು ರಂಗಭೂಮಿಯ ಮೇಲೂ ಯಶಸ್ವಿಯಾದುವು.

'ಹೊಂಗನಸುಗಳು' ಬಿಎಂಶ್ರೀಯವರ ಸ್ವಂತ ಕವನಗಳ ಸಂಕಲನ.

ಕವಿಗಳೂ ಸಾಹಿತ್ಯರಸಿಕರೂ ವಿಮರ್ಶಕರೂ ಆದ ಬಿಎಂಶ್ರೀ ಸಂಪಾದಿಸಿದ 'ಕನ್ನಡ ಬಾವುಟ' ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ, ಕನ್ನಡ ಕಾವ್ಯದ ಶಕ್ತಿಯ ಪರಿಚಯಮಾಡಿಕೊಳ್ಳುವವರಿಗೆ ಉತ್ತಮ ಮಾರ್ಗದರ್ಶಿ.

ಬಿಎಂಶ್ರೀ ಕನ್ನಡ ಸಾಹಿತ್ಯಕ್ಕೆ ಕೊಟ್ಟಿರುವ ಕೊಡುಗೆ ಹೀಗೆ ಗಮನಾರ್ಹವಾದುದಾದರೂ, ಅವರು ನಮ್ಮ ಜನರಲ್ಲಿ ಕನ್ನಡಪ್ರಜ್ಞೆ, ಕನ್ನಡದ ಮೇಲೆ ಅಭಿಮಾನ ಮೂಡಿಸಲು ಸಲ್ಲಿಸಿದ ಸೇವೆ ಘನವಾದದ್ದು.

ಬಿಎಂಶ್ರೀ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ 1938–42ರ ಅವಧಿಯಲ್ಲಿ ಕನ್ನಡ ನಾಡಿನ ಮೂಲೆಮೂಲೆಗಳಲ್ಲಿ ಸಂಚರಿಸಿ ಜನಜಾಗೃತಿ ಉಂಟುಮಾಡಿದರು. ಸಂಸ್ಕೃತಿ–ಸಾಹಿತ್ಯಗಳ ಬಗೆಗೆ ಕನ್ನಡಿಗರಲ್ಲಿ ಆಸಕ್ತಿಯನ್ನು ಬೆಳೆಸಲು, ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಕನ್ನಡ ಅಣುಗ, ಕನ್ನಡ ಕಾವ, ಕನ್ನಡ ಜಾಣ ಪರೀಕ್ಷೆಗಳ ಯೋಜನೆಯನ್ನು ಕಾರ್ಯರೂಪಕ್ಕೆ ತಂದರು.

ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆ, ಗುರಿ ಇವುಗಳ ಬಗೆಗೆ ಜನತೆಯಲ್ಲಿ ತಿಳಿವಳಿಕೆ ಮೂಡಿಸಲು 'ಕನ್ನಡ ನುಡಿ' ಪತ್ರಿಕೆಯನ್ನು ಪ್ರಾರಂಭಿಸಿದರು. ಪರಿಷತ್ತು ತನ್ನದೇ ಆದ ಮುದ್ರಣಾಲಯವನ್ನು ಸ್ಥಾಪಿಸಲು ಧನಸಹಾಯ ಮಾಡಿದರು.

ಇವರು ಮೈಸೂರು ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರ್ ಆಗಿದ್ದಾಗ, ಕನ್ನಡ ಎಂ. ಎ. ತರಗತಿ ಪ್ರಾರಂಭವಾಯಿತು. 'ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಮಾಲೆ'ಯನ್ನು ಆರಂಭಿಸಿ ಕಾವ್ಯ, ಕಲೆ, ಚರಿತ್ರೆ, ಧರ್ಮ, ವಿಜ್ಞಾನ ಮೊದಲಾದ ವಿಷಯಗಳನ್ನು ಕುರಿತಾದ ಪುಸ್ತಕಗಳ ಪ್ರಕಟಣೆಗೆ ಬುನಾದಿ ಹಾಕಿದರು.

ಇವರು ಕನ್ನಡನಾಡು, ಸಾಹಿತ್ಯ, ಸಂಸ್ಕೃತಿಗಳಿಗಾಗಿ ಸಲ್ಲಿಸಿದ ಅಪಾರ ಸೇವೆಗಾಗಿ 1938ರಲ್ಲಿ ಅವರಿಗೆ 'ರಾಜಸೇವಾಸಕ್ತ' ಬಿರುದು ದೊರೆಯಿತು. ಬಿಎಂಶ್ರೀ 1942ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ನಿವೃತ್ತರಾದ ಮೇಲೆ ಧಾರವಾಡದಲ್ಲಿ ಕರ್ನಾಟಕ ಎಜುಕೇಶನ್ ಬೋರ್ಡ್‌ನ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲ ಕಾಲ ಕೆಲಸಮಾಡಿದರು. ಆ ಕೆಲಸದಲ್ಲಿದ್ದಾಗಲೇ ಅವರು 1946ರ ಜನವರಿ 5ರಂದು ನಿಧನರಾದರು. ಕನ್ನಡ ನಾಡಿನ ಸುಪ್ರಸಿದ್ಧ ವ್ಯಕ್ತಿಯಾಗಿ ಮೆರೆದ ಬಿಎಂಶ್ರೀ ತಮ್ಮ ಜೀವನದಲ್ಲಿ ಹಲವಾರು ದುಃಖಗಳನ್ನು ಅನುಭವಿಸಿದರಾದರೂ, ಅವರ ಅಧ್ಯಯನ, ವಿದ್ಯಾದಾನ, ಸಾಹಿತ್ಯೋಪಾಸನೆ, ಕನ್ನಡ ಸೇವೆಗಳಿಗೆ ಎಂದೂ ಅವು ಅಡ್ಡಬರಲಿಲ್ಲ; ಅವರ ನಗೆಮುಖವನ್ನು ಬಾಡಿಸಲಿಲ್ಲ; ಅವರ ಕರ್ತವ್ಯ ಶ್ರದ್ಧೆಯನ್ನು ಕುಗ್ಗಿಸಲಿಲ್ಲ.

## ಬಿಡಾರಂ ಕೃಷ್ಣಪ್ಪ

ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಕಲೆ, ಸಾಹಿತ್ಯಗಳಲ್ಲಿ ಅಪಾರ ಆಸಕ್ತಿ. ಅವರು ಕಲಾವಿದರನ್ನು ಗೌರವಿಸು

ತ್ತಿದ್ದರು, ಪ್ರೋಷಿಸುತ್ತಿದ್ದರು. ಮುಮ್ಮಡಿಯವರು ತಾವೇ ಒಂದು 'ಯಕ್ಷಗಾನ' ವನ್ನು ಬರೆದಿದ್ದರು ; ಅವರ ಆಸ್ಥಾನದಲ್ಲಿದ್ದ ಅಳಿಯ ಲಿಂಗರಾಜು ಅನೇಕ ಯಕ್ಷಗಾನ ಪ್ರಸಂಗಗಳನ್ನು ಬರೆದಿದ್ದಾರೆ. ಹೀಗೆ ಆಗಿನ ಕಾಲದ ಮೈಸೂರು ರಾಜಾಸ್ಥಾನದಲ್ಲಿ ಯಕ್ಷಗಾನದ ಬಗೆಗೆ ಅಭಿಮಾನವಿತ್ತು. ದಕ್ಷಿಣ ಕನ್ನಡ ಜಿಲ್ಲೆ ಯಕ್ಷಗಾನಕ್ಕೆ ತುಂಬ ಪ್ರಸಿದ್ಧವಾಗಿದ್ದುದರಿಂದ ಮುಮ್ಮಡಿಯವರು ಆ ಕಡೆಯಿಂದ ಯಕ್ಷಗಾನ ಮಂಡಲಿಯನ್ನು ಕರೆಸಿಕೊಂಡರು. ಇಂಥ ಮಂಡಲಿಯ ಸದಸ್ಯರಾಗಿ ಮೈಸೂರಿಗೆ ಬಂದವರು ವಿಶ್ವನಾಥಯ್ಯನವರು. ಈ ಮಂಡಲಿಯವರಿಗಾಗಿ ಮೈಸೂರಿನಲ್ಲಿ ಒಂದು ಬಿಡಾರ ಏರ್ಪಟ್ಟಿತ್ತು. ಆದರಿಂದಾಗಿ ಅಲ್ಲಿರುವವರನ್ನು 'ಬಿಡಾರದವರು' ಎಂದು ಕರೆಯುವುದು ಬಳಕೆಯಾಯಿತು. ವಿಶ್ವನಾಥಯ್ಯನವರೂ ಇಂಥ ಬಿಡಾರದವರಲ್ಲಿ ಒಬ್ಬರು. ಇವರು ಮೈಸೂರಿನಲ್ಲೇ ವಸತಿಮಾಡಲು ನಿರ್ಧರಿಸಿದರು. ಅಲ್ಲೇ ನೆಲೆಸಿದಮೇಲೂ ಇವರ ಸಂಸಾರದವರಿಗೆ ಬಿಡಾರದವರು ಎಂಬ ಹೆಸರೇ ಉಳಿದುಕೊಂಡಿತು. ಕಾಲಾನುಕ್ರಮದಲ್ಲಿ ಅದು ' ಬಿಡಾರಂ ' ಎಂದಾಯಿತು.

ಬಿಡಾರದ ವಿಶ್ವನಾಥಯ್ಯನವರ ಮಕ್ಕಳೇ ಪ್ರಖ್ಯಾತ ಸಂಗೀತಗಾರರಾದ ಬಿಡಾರಂ ಕೃಷ್ಣಪ್ಪನವರು.

1866ರ ಸೆಪ್ಟೆಂಬರ್ ತಿಂಗಳಲ್ಲಿ ಬಿಡಾರಂ ಕೃಷ್ಣಪ್ಪನವರ ಜನನವಾಯಿತು. ತಾಯಿಯ ಹೆಸರು ಸರಸ್ವತಿ ಬಾಯಿ. ತಂದೆಗೆ ವಯಸ್ಸಾಗಿ, ಶಕ್ತಿ ಉಡುಗಿದಾಗ ಕೃಷ್ಣಪ್ಪನವರೂ ಅವರ ಅಣ್ಣ ಸುಬ್ಬರಾಯರೂ ತಾವು ಕಲಿತಿದ್ದ ದೇವರನಾಮಗಳನ್ನು ಹಾಡುತ್ತ ಜನರಿಂದ ಸಂಭಾವನೆ ಪಡೆದು ಸಂಸಾರ ನಿರ್ವಹಣೆ ಮಾಡುತ್ತಿದ್ದರು. ಒಮ್ಮೆ ಕೃಷ್ಣಪ್ಪನವರು ಮೈಸೂರು ಅರಮನೆ ಕೋಟೆಯ ಬಳಿಯ ಆಂಜನೇಯನ ದೇವಸ್ಥಾನದ ಮುಂದೆ ಹಾಡುತ್ತಿದ್ದಾಗ, ಮೈಸೂರಿನಲ್ಲಿ ಪ್ರಸಿದ್ಧರಾಗಿದ್ದ ಡಾಕ್ಟರ್ ನಂಜುಂಡರಾಯರು ಅವರ ಹಾಡುಗಾರಿಕೆ ಕೇಳಿ ಸಂತೋಷಪಟ್ಟು, ಒಂದು ರೂಪಾಯಿ ಕೊಟ್ಟರಂತೆ. ಹೀಗೆಯೇ ಒಮ್ಮೆ ದೇವಸ್ಥಾನಕ್ಕೆ ಬಂದಿದ್ದ ಸಾಹುಕಾರ್ ತಿಮ್ಮಯ್ಯನವರಿಗೂ ಕೃಷ್ಣಪ್ಪನವರ ಹಾಡುಗಾರಿಕೆ ಮೆಚ್ಚುಗೆಯಾಯಿತು. ಅವರಿಗೆ ಸಹಾಯ ಮಾಡಲು ನಿರ್ಧರಿಸಿ ಆಗ ಹೆಸರುವಾಸಿಯಾಗಿದ್ದ ಕರೂರು ರಾಮಸ್ವಾಮಿ ಎಂಬವರಲ್ಲಿ ಸಂಗೀತ ಕಲಿಯಲು ಏರ್ಪಾಡು ಮಾಡಿದರು. ಕೃಷ್ಣಪ್ಪನವರು ಅತೀವ ಭಕ್ತಿ ಶ್ರದ್ಧೆಗಳಿಂದ ಪಾಠ ಕಲಿತು ಸಂಗೀತ ವಿದ್ಯೆಯಲ್ಲಿ ಮುಂದುವರಿದರು. ಸೌಕರ್ಯವಿಲ್ಲದಿದ್ದ ತಮ್ಮ ಶಾರೀರವನ್ನು ಮೂರು ಸ್ಥಾಯಿಗಳಲ್ಲಿಯೂ ಹಾಡಲು ಅವರು ರೂಢಿಸಿದ ರೀತಿ ಅನುಕರಣೀಯವಾದದ್ದು. ದಿನವೂ ಬೆಳಗಿನ ಝಾವ ತಣ್ಣೀರಿನಲ್ಲಿ ನಿಂತು ಅಕಾರ ಸಾಧನೆ ಮಾಡುತ್ತಿದ್ದರು. ಸ್ವರಸ್ಥಾನಗಳ ಗಮಕಗಳ ಅಭ್ಯಾಸ ನಡೆಸಿದರು. ಹೀಗೆ ತಪಸ್ಸಿನಂತೆ ಸಂಗೀತಾಭ್ಯಾಸ ಮಾಡಿ ಶಾರೀರವನ್ನು ಮಣಿಸಿಕೊಂಡರು. ಶಾರೀರದ ಗಡಸುಹೋಗಿ, ಇಂಪು ಮೂಡಿ ಸ್ಥಾಯಿ ವ್ಯಾಪ್ತಿಯೂ ಹೆಚ್ಚಿತು. ಹೀಗೆ ಗಳಿಸಿಕೊಂಡ ಶಾರೀರ ಸಂಪತ್ತನ್ನು ಅವರು ಕಡೆಯವರೆಗೂ ಜತನವಾಗಿ ಉಳಿಸಿಕೊಂಡರು.

ಈ ವೇಳೆಗೆ ನಾಟಕ ಮಂಡಲಿಯೊಂದರಲ್ಲಿ ನಟರಾಗಿ ಕೆಲಸಮಾಡುವ ಅವಕಾಶ ಅವರದಾಯಿತು. ಗಿರಿಭಟ್ಟರ ತಮ್ಮಯ್ಯ, ಕರಿಗಿರಿರಾಯರು ಹಾಗೂ ವೀಣೆ ಶೇಷಣ್ಣ ಇವರಿಂದ ಸಂಗೀತ ಶಿಕ್ಷಣ ಪಡೆಯುವ ಸುಯೋಗವೂ ಲಭಿಸಿತು. ಮಹಾರಾಜರು ಕೃಷ್ಣಪ್ಪನವರ ಅಭಿನಯವನ್ನು ಮೆಚ್ಚಿಕೊಂಡು, ಅರಮನೆಯಿಂದ ಅವರಿಗೆ ಮಾಸಾಶನ ಕೊಡುವ ವ್ಯವಸ್ಥೆ ಮಾಡಿದರು. ಅವರ ಕಚೇರಿಗಳನ್ನು ಕೇಳಿ, ಸನ್ಮಾನಿಸಿದರು. ಕಾಲಾನುಕ್ರಮದಲ್ಲಿ ಅವರಿಗೆ 'ಗಾಯಕ ಶಿಖಾಮಣಿ', 'ಗಾನವಿಶಾರದ' ಎಂಬ ಬಿರುದುಗಳು ದೊರೆತುವು. ಮೈಸೂರು ಸಂಸ್ಥಾನದಲ್ಲೂ ಹೊರಗೂ ಸಂಗೀತ ಕಚೇರಿಗಳನ್ನು ನಡೆಸಿ ಅವರು ಖ್ಯಾತರಾದರು.



ಉಪಾಸನೆ : ಬಿಡಾರಂ

ಆಂಜನೇಯ ದೇವಸ್ಥಾನದ ಬಳಿ ತಮ್ಮ ಜೀವನದ ಭವಿಷ್ಯ ರೂಪುಗೊಂಡದ್ದರಿಂದ ಮಾರುತಿ ಹಾಗೂ ಶ್ರೀರಾಮ ಎಂದರೆ ಕೃಷ್ಣಪ್ಪನವರಿಗೆ ಅಪಾರ ಭಕ್ತಿ. ತಮ್ಮ ಸಂಗೀತ ಕಚೇರಿಗಳಿಂದ ದೊರೆತ ಧನವನ್ನು ಹಾಕಿ, ತಮ್ಮ ಸ್ವಂತಮನೆ ಬಿಟ್ಟುಕೊಟ್ಟು ಜಮೀನುಗಳನ್ನೂ ಮಾರಿ ಬಂದ ಹಣವನ್ನು ಬಳಸಿ, ಮೈಸೂರಿನಲ್ಲಿ ಈಗಿರುವ ಪ್ರಸನ್ನ ಸೀತಾರಾಮ ಮಂದಿರವನ್ನು ಸ್ಥಾಪಿಸಿದರು. ಆ ಕಾಲದಲ್ಲಿ ಮೈಸೂರಿನಲ್ಲಿ ಸಂಗೀತ ಕಚೇರಿಗಳಿಗಾಗಿ ಒಂದು ಸೂಕ್ತ ಕಟ್ಟಡವಿರಲಿಲ್ಲ. ಆ ಕೊರತೆಯನ್ನು ಹೀಗೆ ತುಂಬಿಸಿಕೊಟ್ಟರು. ಶಿಷ್ಯರಿಗೆ ಸಂಗೀತ ಪಾಠ ಹೇಳುವುದು, ಸಂಗೀತ ಕಚೇರಿಗಳನ್ನು ನಡೆಸುವುದು ; ಈ ಮಧ್ಯೆ ನಾಟಕ ಮಂಡಳಿಯ ವ್ಯವಸ್ಥೆ ಕೆಲಸ; ಪುರಸಭಾ ಸದಸ್ಯತ್ವ —ಹೀಗೆ ಅವಿರತವಾಗಿ ಅವರ ಚಟುವಟಿಕೆಗಳು ನಡೆದೇ ಇದ್ದುವು.

ಕೃಷ್ಣಪ್ಪನವರು ಪ್ರವರ್ಧಮಾನಕ್ಕೆ ಬರುತ್ತಿದ್ದ ರೀತಿಯಿಂದ ಅಸೂಯೆಗೊಂಡವರು ಅನೇಕ ಮಂದಿ. ಇದಕ್ಕಾಗಿ ಹಲವು ಬಾರಿ ವಿದ್ವಾಂಸರು ಅವರಿಗೆ ಸಭೆಯಲ್ಲಿ ಸವಾಲು ಹಾಕಿದುದೂ ಉಂಟು. ಆದರೆ ಕೃಷ್ಣಪ್ಪನವರು ಈ ಎಲ್ಲ ಪರೀಕ್ಷೆಗಳಲ್ಲೂ ವಿಜಯಿಯಾದರು. ಮಾತ್ರವಲ್ಲ, ತಮ್ಮ ಎದಿರಾಳಿಗಳಿಗೆ ಮರು ಸವಾಲು ಕೂಡ ಹಾಕಿದರು. ಆದರೂ ತಮ್ಮ ಇತಿಮಿತಿಗಳನ್ನು ಒಪ್ಪಿಕೊಳ್ಳಲು ಹಿಂಜರಿಯದ ವಿನಯ ಅವರಲ್ಲಿ ಮನೆಮಾಡಿತ್ತು. ಕರ್ಣಾಟಕ ಸಂಗೀತದಲ್ಲಿ ಸ್ವರಸ್ಥಾನ ಶುದ್ಧಿಗೆ ಗಮನವನ್ನು ಕೊಡಬೇಕು ಎನ್ನುವ ಪ್ರಾಮಾಣಿಕ ಆದರ್ಶ ಅವರದು. ತಮ್ಮ ಹಾಡುಗಾರಿಕೆಯಲ್ಲಿ ಮೇಳರಾಗ ಹಾಗೂ ಅವುಗಳ ಉಪಾಂಗ ರಾಗಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿದ್ದರು. ಉಳಿದ ಭಾಷಾಂಗ, ದೇಶೀಯ ರಾಗಗಳನ್ನು ಅಷ್ಟಾಗಿ ಬಳಸಿಕೊಳ್ಳುತ್ತಿರಲಿಲ್ಲ.

ಕಚೇರಿಗಳಲ್ಲಿ ಪಕ್ಕವಾದ್ಯದವರಿಗೆ ಗೌರವಪ್ರದರ್ಶನಮಾಡಿ ತಾವು ಜಯಭೇರಿ ಹೊಡೆಯುವುದೂ ಅವರ ರೀತಿಯಲ್ಲ. ಸಂಗೀತವು ಪಾಂಡಿತ್ಯ ಪ್ರದರ್ಶನ ಕ್ಕಲ್ಲ; ಅದು ಒಂದು ಉಪಾಸನೆ ಎಂಬುದು ಅವರ ಅಭಿಪ್ರಾಯ. ಪರಿಚಿತ ರಾಗಗಳಲ್ಲಿ ಸಾಮಾನ್ಯ ಶ್ರೋತೃಗಳೂ ಅರ್ಥಮಾಡಿಕೊಂಡು ಆನಂದಿಸುವಂತೆ ಹಾಡುತ್ತಿದ್ದರು. ಸಂಗೀತ ಕಚೇರಿಗಳಲ್ಲಿ ದೇವರನಾಮ ಗಳನ್ನು ಹಾಡುವುದನ್ನು ರೂಢಿಗೆ ತಂದವರೂ ಅವರೇ. ಮೂವತ್ತು ವರ್ಷ ಕಾಲ ಏಕಪ್ರಕಾರವಾಗಿ ಸಾರ್ವಜನಿಕ ಕಚೇರಿಗಳನ್ನು ನಡೆಸಿದ ಹಿರಿಮೆ ಬಿಡಾರಂ ಅವರದು. ಸಾಹಿತ್ಯದ ಅರ್ಥ ಎಲ್ಲರಿಗೂ ತಿಳಿಯುವಂತೆ ಹಾಡುತ್ತಿದ್ದುದು ಅವರ ಮತ್ತೊಂದು ವಿಶೇಷ ಗುಣ. ತಾವು ಹಾಡುತ್ತಿದ್ದ ಕೃತಿಯ ಪ್ರತಿಯೊಂದು ಪದದ ಅರ್ಥವನ್ನೂ ಚೆನ್ನಾಗಿ ಗ್ರಹಿಸಿ, ಕೃತಿಯ ಭಾವವನ್ನು ಅರ್ಥಮಾಡಿಕೊಂಡ ಮೇಲೆಯೇ ಅವರು ಅದನ್ನು ಹಾಡುತ್ತಿದ್ದರು. ಇದಕ್ಕಾಗಿ ಕೃತಿಯ ಭಾಷೆಯಲ್ಲಿ ಪಾಂಡಿತ್ಯವುಳ್ಳವರ ನೆರವನ್ನು ಅವರು ಪಡೆಯುತ್ತಿದ್ದರು. ಅಂಥ ಪಂಡಿತರು ತಮಗಿಂತ ಚಿಕ್ಕವಯಸ್ಸಿನವರಾದರೂ ತಾವೇ ಅವರ ಮನೆಗೆ ಹೋಗಿ ತಮಗೆ ಬೇಕಾದುದನ್ನು ಕೇಳಿ ತಿಳಿದುಕೊಳ್ಳುವಂಥ ವಿನಯ, ವಿದ್ಯಾಪ್ರೇಮ ಅವರಲ್ಲಿತ್ತು.

ಎಲ್ಲ ಕಡೆಗಳಲ್ಲೂ ವಿನಯದಿಂದ, ಶಿಸ್ತಿನಿಂದ ನಡೆದುಕೊಳ್ಳುವುದು ಆವಶ್ಯವೆಂದು ಅವರು ತಮ್ಮ ಶಿಷ್ಯರಿಗೆ ಒತ್ತಿ ಒತ್ತಿ ಹೇಳುತ್ತಿದ್ದರು. ತಮ್ಮ ಶಿಷ್ಯರಲ್ಲಿ ಯಾರಾದರೂ ಇದಕ್ಕೆ ವಿರುದ್ಧವಾಗಿ ವರ್ತಿಸಿದರೆ, ಅವರಿಗೆ ತುಂಬ ಕೋಪ ಬರುತ್ತಿತ್ತು. ಅಂಥ ಸಂದರ್ಭಗಳಲ್ಲಿ ಅವರು ತಮ್ಮ ಶಿಷ್ಯರಿಗೆ ಪೆಟ್ಟುಕೊಡಲೂ ಹಿಂಜರಿಯುತ್ತಿರಲಿಲ್ಲ.

ಬಿಡಾರಂ ಕೃಷ್ಣಪ್ಪನವರ ಶಿಷ್ಯಗಣದಲ್ಲಿ ಪ್ರತಿಷ್ಠಿತರಾದವರು ದಿವಂಗತ ಟಿ. ಚೌಡಯ್ಯ, ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ, ಬಿ. ದೇವೇಂದ್ರಪ್ಪ, ಆರ್. ಆರ್. ಕೇಶವಮೂರ್ತಿ, ಎ. ಕೆ. ಸುಬ್ಬರಾವ್ ಮುಂತಾದವರು.

ಕೃಷ್ಣಪ್ಪನವರದು ಮೃದುಪ್ರಕೃತಿ. ತಮ್ಮ ಶಿಷ್ಯರನ್ನು ತಮ್ಮ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು; ಅವರನ್ನು ಪ್ರೋತ್ಸಾಹಿಸುತ್ತಿದ್ದರು. ತಮ್ಮ ಸೌಜನ್ಯದಿಂದ ಎಲ್ಲರಿಗೂ ಬೇಕಾದವರಾಗಿದ್ದರು. ಆ ಕಾಲದ ಶ್ರೇಷ್ಠ ಗಾಯಕರಲ್ಲಿ ಒಬ್ಬರು ಎಂಬ ಗೌರವಕ್ಕೆ ಪಾತ್ರರಾಗಿದ್ದ ಬಿಡಾರಂ ಕೃಷ್ಣಪ್ಪನವರು ತಮ್ಮ 65ನೆಯ ವಯಸ್ಸಿನಲ್ಲಿ 1931 ಜೂಲೈ 29ರಂದು ಸ್ವರ್ಗಸ್ಥರಾದರು.

## ಬಿಥೋವನ

"ಪ್ರಿಯ ಬಿಥೋವನ್, ಬಹುಕಾಲದ ಆಸೆಯನ್ನು ತಣಿಸಿಕೊಳ್ಳಲೆಂದು ನೀನು ವಿಯೆನ್ನಾಕ್ಕೆ ಹೋಗಲಿದ್ದೀಯೆ. ಮೊಜಾರ್ಟ್‌ನನ್ನು ಒಲಿದಿದ್ದ ಪ್ರತಿಭೆ ತನ್ನ ಅಚ್ಚುಮೆಚ್ಚಿನ ವ್ಯಕ್ತಿಯ ಮರಣಕ್ಕಾಗಿ ಶೋಕಿಸುತ್ತಿದ್ದಾಳೆ. ಸಂಗೀತ ರಚನೆಯ ಅಕ್ಷಯಪಾತ್ರೆಯಂತೆ ಇರುವ ಹೈಡನ್ ಅವಳಿಗೆ ಈಗ ಆಸರೆಯಾಗಿದ್ದಾನಾದರೂ ಪ್ರತಿಭೆಗೆ ಅವನಲ್ಲಿ ಸಾಕಷ್ಟು ಕೆಲಸವಿಲ್ಲ. ಅವನನ್ನು ತ್ಯಜಿಸಿ ಬೇರೆಯವರನ್ನು ಸೇರಲು ತವಕಿಸುತ್ತಿದ್ದಾಳೆ. ಕಷ್ಟಪಟ್ಟು ಕೃಷಿ ಮಾಡು: ಮೊಜಾರ್ಟನ ಸಂಗೀತಸಾರವನ್ನು ಹೈಡನ್ ಬಳಿ ಪಡೆದುಕೊ.

ನಿನ್ನವನೇ ಆದ,

ವಾಲ್ಡ್‌ಸ್ಟೀನ್"

ಪಾಶ್ಚಾತ್ಯ ಸಂಗೀತದ ಅದ್ವಿತೀಯ ಗೇಯಕಾರ ಬಿಥೋವನ್ ತನ್ನ 22ನೆಯ ವಯಸ್ಸಿನಲ್ಲಿ ವಿಯೆನ್ನಾ ನಗರಕ್ಕೆ ಪ್ರಯಾಣ ಮಾಡಲಿದ್ದಾಗ ಅವನ ಹಿತಚಿಂತಕ ಹಾಗೂ ಆಶ್ರಯದಾತ ಕೌಂಟ್ ಫರ್ಡಿನೆಂಡ್ ವಾಲ್ಡ್‌ಸ್ಟೀನ್ ಬರೆದ ಪತ್ರ ಇದು.



ಜರ್ಮನಿಯ ಬಾನ್ ನಗರದಲ್ಲಿ ಲುಡ್ವಿಗ್ ವಾನ್ ಬಿಥೋವನ್, 1770 ಡಿಸೆಂಬರ್ 16ರಂದು ಜನ್ಮತಾಳಿದ. ತಂದೆ ಸಂಗೀತಗಾರ; ತಾತ ಸೇಂಟ್ ಪೀಟರ್ ಇಗರ್ಜಿಯಲ್ಲಿ ಪ್ರಧಾನ ಗಾಯಕ. ಹೀಗೆ ಬಿಥೋವನನ ಸಂಗೀತಪ್ರಜ್ಞೆ ಆನುವಂಶಿಕವಾದದ್ದು. ತಂದೆಗೋ ಮಗ ಬೇಗ ಒಳ್ಳೆಯ ಸಂಗೀತಗಾರನಾಗಿ ಚೆನ್ನಾಗಿ ಸಂಪಾದಿಸಿ, ಸಂಸಾರದ ಭಾರ ಹೊರಲೆಂಬ ಆತುರ. ಇದರಿಂದ ನಾಲ್ಕು ವರ್ಷವೂ ಸರಿಯಾಗಿ ತುಂಬದ ಎಳೆಯ ಬಿಥೋವನನ್ನು ಆಡಲೂ ಬಿಡದೆ ಅವನಿಗೆ ಪಿಟೀಲು ಹಾಗೂ ಪಿಯಾನೋ ಕಲಿಸಿದ. ಸಂಗೀತ ಬಿಟ್ಟರೆ ಬಿಥೋವನ್ ಪಡೆದ ಬೇರೆ ವಿದ್ಯಾಭ್ಯಾಸ ಅಷ್ಟಕ್ಕಷ್ಟೆ. ಆದರೂ ಅವನು ಸ್ವಪ್ರಯತ್ನದಿಂದ ಫ್ರೆಂಚ್ ಮತ್ತು ಇಟಾಲಿಯನ್ ಭಾಷೆಗಳನ್ನು ಕಲಿತು, ಗ್ರಂಥಾಧ್ಯಯನಮಾಡಿ ಜ್ಞಾನ ಸಂಪಾದಿಸಿದ.

ಕೇವಲ ಒಂಬತ್ತನೆಯ ವಯಸ್ಸಿನಲ್ಲಿ ಆಸ್ಥಾನ ಪಿಯಾನೋವಾದಕ ನೀಫೆ ಎಂಬವನಲ್ಲಿ ಶಿಷ್ಯವೃತ್ತಿ; ಹನ್ನೊಂದರಲ್ಲಿ ಅವನೊಡನೆ ಸಂಗೀತ ಕಚೇರಿ ಪ್ರವಾಸ; ಹನ್ನೆರಡಕ್ಕೆ ಆಸ್ಥಾನದಲ್ಲಿ ಅವನ ಸಹಾಯಕನಾಗಿ ಉದ್ಯೋಗ. ತಾಯಿಯ ಅಸ್ವಸ್ಥತೆ, ತಂದೆಯ ಬೇಜವಾಬ್ದಾರಿಗಳಿಂದಾಗಿ 15ನೆಯ ವಯಸ್ಸಿಗೆ ಸಂಸಾರದ ಹೊಣೆ. ತನ್ನ 17ನೆಯ ವಯಸ್ಸಿನಲ್ಲಿ ಒಮ್ಮೆ ವಿಯೆನ್ನಾಕ್ಕೆ ಹೋದಾಗ ಬಿಥೋವನ್ ಮೊಜಾರ್ಟನ ಎದುರು ಪಿಯಾನೋ ನುಡಿಸಿ ಅವನಿಂದ "ಈತ ಖ್ಯಾತ ಸಂಗೀತಗಾರನಾಗಬಲ್ಲ" ಎಂಬ ಪ್ರಶಂಸೆಗೆ ಪಾತ್ರ



ಬಿಥೋವನ್ ಕಚೇರಿ – ಸಮಕಾಲೀನ ಕೆತ್ತನೆ ಚಿತ್ರ

ನಾದ. ನೀಫೆ ತನ್ನ ಶಿಷ್ಯನ ಉಜ್ವಲ ಭವಿಷ್ಯವನ್ನು ಗುರುತಿಸಿ ಅವನು ವಿಯೆನ್ನಾಕ್ಕೆ ಹೋಗಿ ಸಂಗೀತಾಚಾರ್ಯ ಮೊಜಾರ್ಟನ ಬಳಿ ಸಂಗೀತ ಕಲಿಯಬೇಕೆಂದು ಸಲಹೆ ಕೊಟ್ಟ. ಹಣದ ಅಡಚಣೆಯಿಂದ ಬಿಥೋವನ್‌ಗೆ ಅದು ಸಾಧ್ಯವಾಗಲಿಲ್ಲ. ಈ ಮಧ್ಯೆ 1791ರಲ್ಲಿ ಮೊಜಾರ್ಟ್ ತೀರಿಕೊಂಡ. ಅನಂತರ ಬಿಥೋವನ್‌ನ ಅಭಿಮಾನಿ ಕೌಂಟ್ ಫರ್ಡಿನೆಂಡ್ ವಾಲ್ಡ್‌ಸ್ಟೀನ್. ಬಿಥೋವನ್ [illegible]ಗೆ ಹೋಗಿ ಹೈ[illegible] ಕೆಲ ಕಾಲ ಶಿಕ್ಷಣ ಪಡೆಯಲು ಸಹಾಯಮಾಡಿದ. ಪಿಯಾನೋ, ವಯೋಲಾ ಪಿಟೀಲು[illegible] ರಾಜಮನೆತನದ ಸಂಗೀತ ಸಭೆಗಳಲ್ಲಿ [illegible]. ಸಂಗೀತ ರಚನೆಯಲ್ಲಿನ್ನೂ ಹಳೆಯ ಸಂಪ್ರದಾಯದ ನಿರ್ಬಂಧಗಳು ಅವನಿಗೆ ಹಿಡಿಸುತ್ತಿರಲಿಲ್ಲ. "[illegible] ನಿಯಮಗಳನ್ನು ಮುರಿಯಲೆಂದೇ ಅವುಗಳನ್ನು ಕಲಿಯುತ್ತಿರುವೆ" ಎಂದ ಬಿಥೋವನ್.

ನಿರ್ಬಂಧಗಳನ್ನು ಕಿತ್ತೆಸೆಯುವುದು ಅವನ ವ್ಯಕ್ತಿತ್ವಕ್ಕೆ ಅತಿ ಸಹಜವಾಗಿತ್ತು. ಸಂಗೀತವನ್ನು ಅದರ ಹಳೆಯ ರೀತಿಗಳಿಂದ ಬಿಥೋವನ್ ವಿಮುಕ್ತಗೊಳಿಸಿದಂತೆ, ಸಂಗೀತಗಾರರನ್ನು ಬಿಗಿದಿದ್ದ ಕಟ್ಟುಗಳು ಸಡಿಲಿದುವು. ಬಿಥೋವನನ ಕಾಲದಲ್ಲಿ ಸಂಗೀತಗಾರರಿಗೆ ಸಮಾಜದಲ್ಲಿ ಗೌರವ ಸ್ಥಾನವಿರಲಿಲ್ಲ. ಸಂಗೀತಗಾರರು ಶ್ರೀಮಂತರ ಜೊತೆಯಲ್ಲಿ ಕೂಡುವಂತಿರಲಿಲ್ಲ. ಸಂಗೀತ ಸಭೆಯ ಅನಂತರ ಅವರು ಊಳಿಗದವರೊಡನೆ ಕುಳಿತು ಊಟಮಾಡಬೇಕಾಗಿತ್ತು. ಈ ಪದ್ಧತಿಯ ವಿರುದ್ಧ ಸಿಡಿದದ್ದು ಬಿಥೋವನ್. ತಾನೊಬ್ಬ ಕಲಾವಿದ. ಕಲಾವಿದನಿಗೆ ತಕ್ಕ ಗೌರವ ಸ್ಥಾನಮಾನಗಳು ದೊರೆಯಬೇಕು ಎಂದು ಒತ್ತಾಯಪಡಿಸಿದ. ಅವನ ಸೃಜನಶೀಲ ಸಂಗೀತ ಈ ಎಲ್ಲ ಗೌರವಗಳನ್ನು ಅವನಿಗೆ ದೊರಕಿಸಿಕೊಟ್ಟಿತು. ಪಾಶ್ಚಾತ್ಯ ಸಂಗೀತ ಪ್ರಪಂಚದ ಇತಿಹಾಸದಲ್ಲಿ ಬಿಥೋವನ್ ಕೇಂದ್ರ ವ್ಯಕ್ತಿ; ಏಕೆಂದರೆ ಅವನ ಕೊಡುಗೆಗಳು ಅಷ್ಟು ಅಮೂಲ್ಯವಾದುವು. ಅಷ್ಟು ಮುಖ್ಯವಾದುವು. ಅವನ ಅತಿ ಪ್ರಸಿದ್ಧ ರಚನೆಗಳು : ಒಂಬತ್ತು ಸಿಂಫನಿಗಳು, ತಂತೀವಾದ್ಯ ಚತುಷ್ಟಯಕ್ಕಾಗಿ ಬರೆದ 7 ಕೃತಿಗಳು, 32 ಪಿಯಾನೋ ಸೊನಾಟಗಳು, ಹಲವಾರು ಪೀಠಿಕಾ ಬಂಧಗಳು ; ಪಿಟೀಲಿಗಾಗಿಯೇ ರಚಿಸಿದ ಒಂದು ಧಾಟಿ ಮತ್ತು ಇತರ ಪ್ರಕಾರದ ಸಂಗೀತ ರಚನೆಗಳು ; ಹಾಗೂ ಒಂದು ಆಪೆರಾ 'ಫಿಡೆಲಿಯೋ'. ಈ ಮಹಾನ್ ಗೇಯಕಾರನನ್ನು ಸಂಗೀತ ಪ್ರಪಂಚದ ಶೇಕ್ಸ್‌ಪಿಯರ್ ಎಂದು ಕರೆದಿದ್ದಾರೆ. ಇವನು ತನ್ನಲ್ಲಿ ತುಂಬಿ ಮೊರೆಯುತ್ತಿದ್ದ ಭಾವನೆಗಳನ್ನೂ ವಿಚಾರಗಳನ್ನೂ ತನ್ನ ಸಂಗೀತ ರಚನೆಗಳಲ್ಲಿ ಮೂಡಿಸಲು ಅನುಸರಿಸಿದ ಮಾರ್ಗ ಹೊಸತು. ಸಂಗೀತವು ಲಲಿತ ನಾದಮಯವಾಗಿರಬೇಕೆಂಬ ನಿರ್ಬಂಧ ಅವನಿಗೆ ಒಪ್ಪಿಗೆಯಾಗಲಿಲ್ಲ. ಧಾಟಿ ನಿರ್ಣಯದಲ್ಲಿ ಅಂಕೆಗೊಳಗಾಗುವುದೂ ಅವನಿಗೆ ಇಷ್ಟವಿರಲಿಲ್ಲ. ಮೊಜಾರ್ಟ್, ಡನ್‌ರಂಥ ಗೇಯಕಾರರ ರಚನೆಗಳ ಚೌಕಟ್ಟಿನಲ್ಲೇ, ಆ ರಚನೆಗಳಿಗೆ ವಿವಿಧ ಬಗೆಯ ಪ್ರಸ್ತಾರ ಕೊಟ್ಟು ಅವಕ್ಕೆ ಅಪೂರ್ವವಾದ ಹೊಸ ಅಭಿವ್ಯಕ್ತಿ ನೀಡಿದ. ರಮ್ಯಯುಗದ ಸಂಗೀತ ಸೃಷ್ಟಿಸಿದ ತನ್ನ ಜೀವನದ ಉತ್ತರಾರ್ಧದಲ್ಲಿ ಬರೆದ ಸಂಗೀತ ರಚನೆಗಳಲ್ಲಿ ಮಾರ್ದವತೆ, ಕೋಲಾಹಲ, ಬೌದ್ಧಿಕ ಅನುಭವಗಳನ್ನು ಏರಕಮುಯ್ಯ. ಅವು ಅತ್ಯಂತ ಹೃದಯಸ್ಪರ್ಶಿಯಾಗುವಂತೆ ಮಾಡಿದ. ಹೀಗೆ ಅವನಿಂದ ಪಾಶ್ಚಾತ್ಯ ಸಂಗೀತಕ್ಕೆ ವಿಶಿಷ್ಟ ವೈಯಕ್ತಿಕ ಸ್ವರೂಪ ಬಂದಿತು.

ಮಾನವ ಶಾರೀರ ಸಾಮರ್ಥ್ಯದ ಸದುಪಯೋಗಕ್ಕೆ ಅನುವಾಗುವಂಥ ಸಂಗೀತ ರಚನಾ ಚಾತುರ್ಯವನ್ನು ಬಿಥೋವನ್ ಅಷ್ಟಾಗಿ ತೋರಿಲ್ಲ ಎಂಬ ಒಂದು ಅಂಶವನ್ನು ಬಿಟ್ಟು, ಪಾಶ್ಚಾತ್ಯ ಸಂಗೀತದ ಉಳಿದೆಲ್ಲ ಪ್ರಕಾರಗಳ ರಚನೆಯಲ್ಲಿ ಅವನಿಗೆ ಸಾಟಿಯಾದವರು ಯಾರೂ ಇಲ್ಲ.

ಬಿಥೋವನನ ಕೃತಿಗಳ ಸಿರಿಮೆ, ಅವನ ನಿರಂತರ ಪರಿಶ್ರಮದ ಫಲ. ಒಮ್ಮೆ ರಚಿಸಿದ್ದನ್ನು ಮತ್ತೆ ಮತ್ತೆ ಪರಿಷ್ಕರಿಸಿ, ತಿದ್ದಿ, ಹದಮಾಡಲು ಅವನು ಸತತವಾಗಿ ಶ್ರಮಿಸುತ್ತಿದ್ದ.

ಬಿಥೋವನನ [illegible] ಕಿವುಡನಾದದ್ದು. ಆದರೆ ಬಿಥೋವನ್ ಇದರಿಂದ ಧೃತಿಗೆಡಲಿಲ್ಲ. ತನ್ನ ಸಂಗೀತ [illegible] ಅನಂತರ ಅವನ ಸಂಭಾಷಣೆ ಕೇವಲ ಬರಹದ ಮೂಲಕವೇ ನಡೆಯಬೇಕಾಯಿತು. ಈ ಸಂಭಾಷಣೆಯ ಪುಸ್ತಕಗಳು ಸಂರಕ್ಷಿಸಲ್ಪಟ್ಟಿವೆ; ಅವನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ಇವು ಬಹಳ ನೆರವಾಗಿವೆ. ಒಂದು ಬಾರಿ ಅವನು ನಿರ್ದೇಶಿಸುತ್ತಿದ್ದ ವಾದ್ಯಗಾನದ ಮುಗಿದ ಮೇಲೆ ಸಭಿಕರು ಪ್ರಚಂಡ ಕರತಾಡನ ಮಾಡಿದರು. ಶ್ರೋತೃಗಳ ಕಡೆಗೆ ಬೆನ್ನು ತಿರುಗಿಸಿಕೊಂಡು ನಿರ್ದೇಶನ ಮಾಡುತ್ತಿದ್ದ ಬಿಥೋವನ್‌ಗೆ ಈ ಕರತಾಡನದ ಸದ್ದು ಕೇಳಿಸಲಿಲ್ಲ. ಜನ ತನ್ನ ಕೃತಿಯನ್ನು ಮೆಚ್ಚಲಿಲ್ಲವೆಂದು ಅವನು ನೊಂದುಕೊಂಡ. ಅವನ ಹತ್ತಿರವಿದ್ದವರು ಇದನ್ನು ಗ್ರಹಿಸಿ, ಅವನನ್ನು ಹಿಡಿದು ಸಭಿಕರ ಕಡೆಗೆ ತಿರುಗಿಸಿ ಅವರು ಕರತಾಡನಮಾಡುತ್ತಿರುವುದನ್ನು ತೋರಿಸಬೇಕಾಯಿತು.

ಯುವಕನಾಗಿ ವಿಯೆನ್ನಾಕ್ಕೆ ಹೋದ ಬಿಥೋವನ್ ತಾಯ್ನಾಡಿಗೆ ಮರಳಲಿಲ್ಲ. ವಿಯೆನ್ನಾವೇ ಅವನ ಸಂಗೀತ ಸೃಷ್ಟಿಯ ಕೇಂದ್ರವಾಯಿತು. ಬಿಥೋವನ್ ವ್ಯಕ್ತಿಶಃ ಒರಟು ಸ್ವಭಾವದವನು : ಅವ್ಯವಸ್ಥಿತ ರೀತಿ ನೀತಿ.



ಜನತೆಗೆ ಸಂಗೀತ : ಬಿಥೋವನ್

ಆದರೆ ಸೋದರನಲ್ಲಿ ಸಾಮಾನ್ಯನೂ ಎಂಥ ಪೋಲಿಯಾಗಿದ್ದ. ಮತ್ತು ಹೇಗೇನೂ ಅವನ ಅಸಾಮಾನ್ಯರಲ್ಲಿ ಹಾಯ್ದು ಹೋದರೂ ಅವನು ವಿವಾಹವಾಗಿಕೊಳ್ಳಲಿಲ್ಲ. ತನ್ನ ಸೋದರ ಮಗನನ್ನು 1815ರಲ್ಲಿ ದತ್ತು ತೆಗೆದುಕೊಂಡ. ಈ ನಿಷ್ಪ್ರಯೋಜಕ ಹುಡುಗನಿಂದ ಬಿಥೋವನನಿಗೆ ಶಾಂತಿ ದೊರೆಯಲಿಲ್ಲ.

1827 ಮಾರ್ಚ್ 26ರಂದು ವಿಯೆನ್ನಾದಲ್ಲಿ ಪ್ರಜ್ಞಾಹೀನನಾಗಿ ಕೊನೆಯ ಘಳಿಗೆಯಲ್ಲಿದ್ದ ಬಿಥೋವನ್‌ಗೆ ಜೋರಾಗಿ ಬಡಿದ ಸಿಡಿಲಿನ ಶಬ್ದ ಕೇಳಿಸಿತಂತೆ. ತಲೆಯನ್ನೆತ್ತಿ ಆಕಾಶದ ಕಡೆಗೆ ಕೋಪದಿಂದ ಕೈಮಾಡಿ ಆತ ಹಿಂದಕ್ಕೊರಗಿದನಂತೆ. ಬಿಥೋವನ್ ಕೊನೆಯುಸಿರೆಳೆದದ್ದು ಹೀಗೆ.

ಕೇವಲ ಶ್ರೀಮಂತರ, ರಾಜಾಧಿರಾಜರ ವಿಲಾಸಕ್ಕೆ ಮೀಸಲಾಗಿದ್ದ ಸಂಗೀತವನ್ನು ಸಾರ್ವಜನಿಕರ ಸಂತೋಷಕ್ಕಾಗಿ ಒದಗಿಸಿದ ಕೀರ್ತಿ ಬಿಥೋವನನದು.

## ಬುಲ್

ಸ್ಥೂಲ ಗಾತ್ರ, ಉಡುಪಿನಿಂದಾಗಲೀ ಬಾಹ್ಯನೋಟಕ್ಕಾಗಲೀ ಈತ ಗಮನ ನೀಡುವುದಿಲ್ಲ. ಮಧ್ಯವಯಸ್ಸು ದಾಟಿದೆ.

ಈತ ಜರ್ಮನಿಯ ಖ್ಯಾತ ಸಾಹಿತಿ ಹೀನ್ರಿಕ್ ಬುಲ್ 1972ರ ನೊಬೆಲ್ ಸಾಹಿತ್ಯ ಬಹುಮಾನ ವಿಜೇತ.

ಜರ್ಮನಿಯಲ್ಲಿ ರೈನ್ ನದಿಯ ದಡದ ಮೇಲಿನ ಸಾಂಸ್ಕೃತಿಕ ಮತ್ತು ಕೈಗಾರಿಕಾ ಪಟ್ಟಣ ಕೊಲೋನ್‌ನಲ್ಲಿ 1917 ರಲ್ಲಿ ಹೀನ್ರಿಕ್ ಬುಲ್‌ನ ಜನನ. ಬಡಗಿಯೊಬ್ಬನ ಎಂಟನೆಯ ಮಗ ಈತ. ಪ್ರಾಥಮಿಕ ವಿದ್ಯಾಭ್ಯಾಸ ಮುಗಿದ ಬಳಿಕ ಪುಸ್ತಕೋದ್ಯಮದಲ್ಲಿ ಶಿಕ್ಷಣ. ಹುಟ್ಟುವ ವೇಳೆಗೆ ಮೊದಲ ಜಾಗತಿಕ ಯುದ್ಧ ಮುಗಿಯುತ್ತ ಬಂದಿತ್ತು. ಯುವಕನಾಗುವ ಹೊತ್ತಿಗೆ ಎರಡನೆಯ ಜಾಗತಿಕ ಯುದ್ಧ ಆರಂಭವಾಯಿತು. ಆಗ ಬುಲ್ ಜರ್ಮನ್ ಸೈನ್ಯದಲ್ಲಿದ್ದ. ಅವನಿದ್ದ ದಳವನ್ನು ಪೂರ್ವರಂಗಕ್ಕೆ ಕಳುಹಿಸಿದರು. ಅಲ್ಲಿ ಹೋರಾಟದಲ್ಲಿ ಬುಲ್ ಅನೇಕ ಸಲ ಗಾಯಗೊಂಡ, ಸೆರೆಯಾಳಾದ. ಯುದ್ಧದಲ್ಲಿ ಶರೀರ ಮಾತ್ರವೇ ಅಲ್ಲ, ಬುಲ್‌ನ ಮನಸ್ಸೂ ತೀವ್ರವಾಗಿ ಗಾಸಿಗೊಂಡಿತು. ಯುದ್ಧ ಎಂಥ ಹುಚ್ಚುತನ ಎಂಬುದನ್ನು ಅವನು ಮನಗಂಡಿದ್ದ. ಆತ ವ್ಯಗ್ರನಾದ. ಈ ಬಗೆಯ ವಿಚಾರಗಳ ಹಿನ್ನೆಲೆಯಲ್ಲಿ ಬುಲ್ ಸಾಹಿತ್ಯರಚನೆಗೆ ಕೈ ಹಾಕಿದ. ಅದು 1949ನೆಯ ವರ್ಷ. ಆಗ ಅವನಿಗೆ 32 ವರ್ಷ ವಯಸ್ಸು. ಯುದ್ಧಾನಂತರ, 1951ರಲ್ಲಿ, ಸರಕಾರೀ ಕಚೇರಿಯಲ್ಲಿ ಉದ್ಯೋಗಿಯಾದ.

ಯುದ್ಧಾನಂತರ ಜರ್ಮನ್ ಸಾಹಿತ್ಯ : ಬುಲ್

ಬುಲ್‌ನ 'ರೈಲು ಸಮಯಕ್ಕೆ ಬಂತು' ಮತ್ತು 'ಆಡಮ್ ಎಲ್ಲಿದ್ದೀಯ?' ಮುಂತಾದ ಆರಂಭದ ಕಾದಂಬರಿಗಳಲ್ಲಿ ಯುದ್ಧದ ನಿರರ್ಥಕತೆ ಮತ್ತು ಹತಾಶಾಭಾವದ ಚಿತ್ರಣವನ್ನು ಕಾಣುತ್ತೇವೆ. ಈ ಕೃತಿಗಳು ಜನಪ್ರಿಯವಾದುವು, ಜರ್ಮನ್ ಸಾಹಿತ್ಯದಲ್ಲಿ ಬುಲ್‌ನ ಸ್ಥಾನ ಭದ್ರವಾಯಿತು.

ಸಣ್ಣ ಕತೆಗಳನ್ನೂ ಕಾದಂಬರಿಗಳನ್ನೂ ಬುಲ್ ಬರೆದಿದ್ದಾನೆ. 'ಕೋಡಂಗಿ', '9–30ರ ಹೊತ್ತಿಗೆ ಬಿಲಿಯರ್ಡ್ಸ್', 'ಡಾಕ್ಟರ್ ಮುರ್ಕ್‌ನ ಮೌನ ಸಂಚಯ'–ಇವು ಅವನ ಪ್ರಸಿದ್ಧ ಕಾದಂಬರಿಗಳು. ಅನಂತರದ ಅವನ ಕಾದಂಬರಿ 'ಒಬ್ಬ ಮಹಿಳೆಯ ಕೂಟಚಿತ್ರ' ಓದುಗ, ವಿಮರ್ಶಕರಿಬ್ಬರಿಂದಲೂ ಅಪಾರ ಮೆಚ್ಚುಗೆ ಪಡೆಯಿತು.

ಸುಮಾರು 40 ಗ್ರಂಥಗಳ ಈ ಕರ್ತೃ ಯುದ್ಧಾನಂತರದ ಜರ್ಮನಿಯ ಅತ್ಯಂತ ಪ್ರಸಿದ್ಧ ಸಾಹಿತಿಯೆಂದು ಪರಿಗಣಿತನಾಗಿದ್ದಾನೆ.

ಯುದ್ಧಾನಂತರದ ಜನಜೀವನದ ತೀಕ್ಷ್ಣ ವಿಡಂಬನಕಾರನೆಂದು ಬುಲ್ ಹೆಸರುವಾಸಿ. ಅವನ ಕೃತಿಗಳಲ್ಲಿ ಮೂಲಭೂತವಾಗಿ ಕಂಡುಬರುವ ಲಕ್ಷಣ ಸಿನಿಕತನ. "ಸ್ವಭಾವ ಚಿತ್ರಣದಲ್ಲಿ ಅವನಿಗಿರುವ ಜಾಣ್ಮೆ ಜರ್ಮನ್ ಸಾಹಿತ್ಯದ ಪುನರುತ್ಥಾನಕ್ಕೆ ಕಾರಣವಾಗಿದೆ", ಎಂದು ನೊಬೆಲ್ ಬಹುಮಾನ ಅಕಾಡೆಮಿ ಅವನಿಗೆ ಗೌರವ ಸಲ್ಲಿಸಿದೆ.

1929ರಲ್ಲಿ ಜರ್ಮನ್ ಸಾಹಿತಿ ಥಾಮಸ್ ಮಾನ್‌ಗೆ ನೊಬೆಲ್ ಸಾಹಿತ್ಯ ಬಹುಮಾನ ದೊರೆತಿತ್ತು. ಅನಂತರ ಅದನ್ನು ಪಡೆದ ವಿಶ್ವವಿಖ್ಯಾತನಾಗಿರುವ ಜರ್ಮನ್ ಸಾಹಿತಿ ಹೀನ್ರಿಕ್ ಬುಲ್.

ಬುಲ್ ವಿರಚಿತ ಕೃತಿಗಳು ಜಗತ್ತಿನ ಹಲವು ಭಾಷೆಗಳಲ್ಲಿ ಪ್ರಕಟವಾಗಿವೆ. 'ಮೊದಲ ದಿನಗಳ ಆಹಾರ' ಎಂಬ ಅವನ ಕಾದಂಬರಿ ಕೆಲವು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿದೆ.

## ಬೆಕೆಟ್

ಗೊಗೊ ಮತ್ತು ದೀದೀ ಎಂಬ ಅಲೆಮಾರಿಗಳಿಬ್ಬರು ನಡುದಾರಿಯಲ್ಲಿ ಮರವೊಂದರ ಬಳಿ 'ಗೋಡೋ'ಗಾಗಿ ಕಾದಿರುತ್ತಾರೆ. ತಮ್ಮ ಕಾಲಿಗೆ ಸರಿಹೋಗದ ಬೂಟನ್ನು ಬಿಚ್ಚುವುದು, ಕ್ಯಾರೆಟ್ಟು ತಿನ್ನುವುದು, ಎರಡು ನಿಮಿಷ ಜಗಳವಾಡಿ ತತ್‌ಕ್ಷಣ ರಾಜಿಯಾಗಿ ಆಲಿಂಗಿಸಿಕೊಳ್ಳುವುದು –ಹೀಗೆ ಕಾಲ ಕಳೆಯುತ್ತ ಮನಸ್ಸಿಗೆ ತೋಚಿದ್ದನ್ನು ಮಾತಾಡುತ್ತಿರುತ್ತಾರೆ. ಆಗ ಒಬ್ಬ ಯಜಮಾನ ಮತ್ತು ಅವನ ಸೇವಕ ಬರುತ್ತಾರೆ. ಯಜಮಾನನ ಕೈಯಲ್ಲಿನ ಚಾಟಿಯಿಂದ ಹೊಡೆತ ತಿಂದು ಅವನು ಕುಣಿ ಎಂದಾಗ ಕುಣಿದು, ಆಲೋಚಿಸು ಎಂದಾಗ ಜೋರಾಗಿ ಪೊಳ್ಳು ಧೀಮಂತತನದ ಮಾತು ಆಡುತ್ತ ಇರುತ್ತಾನೆ ಸೇವಕ. ಯಜಮಾನ – ಸೇವಕ ಎರಡನೆಯ ಅಂಕದಲ್ಲಿ ಮತ್ತೊಮ್ಮೆ ಬಂದಾಗ ಯಜಮಾನ ಕುರುಡನಾಗಿ, ಸೇವಕ ಮೂಕನಾಗಿರುತ್ತಾನೆ. ಇವರು ಹೋದಮೇಲೂ ದೀದೀ, ಗೊಗೊ ಗೋಡೋಗಾಗಿ ಕಾಯುತ್ತಿರುತ್ತಾರೆ. ಆಗ ಒಬ್ಬ ಹುಡುಗ ಬಂದು "ಗೋಡೋ ನಾಳೆ ಬರುತ್ತಾನೆ" ಎಂದು ಮೊದಲ ಅಂಕದ ಕೊನೆಯಲ್ಲಿ ಹೇಳಿದಂತೆಯೇ ಹೇಳುತ್ತಾನೆ. ಇವರಲ್ಲೊಬ್ಬ "ಹೋಗೋಣವೇ ?" ಎಂದಾಗ ಇನ್ನೊಬ್ಬ "ಆಗಲಿ" ಎನ್ನುತ್ತಾನೆ. ಆದರೆ ಇಬ್ಬರೂ (ಮೊದಲ ಅಂಕದ ಕೊನೆಯಲ್ಲಿಯಂತೆಯೇ) ಚಲಿಸದೆ ಅಲ್ಲೇ ಇರುತ್ತಾರೆ. – ಇದು ಬೆಕೆಟ್‌ನ 'ಗೋಡೋನ ನಿರೀಕ್ಷೆಯಲ್ಲಿ' ನಾಟಕದ ಕಥೆ.

ಸಾಂಪ್ರದಾಯಿಕವಲ್ಲದ ಈ ನಾಟಕ ಮಾನವ ಜೀವನದ ಅಸಂಬದ್ಧತೆ, ನಿರರ್ಥಕತೆಗಳನ್ನು ದಿಗ್ಭ್ರಮೆಗೊಳಿಸುವಷ್ಟು ಪರಿಣಾಮಕಾರಿಯಾಗಿ ವ್ಯಕ್ತಪಡಿಸಿದೆ; ಸಾಹಿತ್ಯ-ರಂಗಭೂಮಿಗಳೆರಡನ್ನೂ ಚಕಿತಗೊಳಿಸಿದೆ. ಬೆಕೆಟ್ ಈ ಶತಮಾನದ ಅತ್ಯಂತ ಪ್ರಭಾವಶಾಲಿ ಲೇಖಕನೆನಿಸಿಕೊಂಡ. 1969ರ ಸಾಹಿತ್ಯದ ನೊಬೆಲ್ ಬಹುಮಾನ ಇವನದಾಯಿತು.

ಐರ್‌ಲೆಂಡಿನ ಡಬ್ಲಿನಿನಲ್ಲಿ 1906ರ ಏಪ್ರಿಲ್ 13ರಂದು ಸ್ಯಾಮುಎಲ್ ಬೆಕೆಟ್ ಜನಿಸಿದ. ಡಬ್ಲಿನಿನ ಟ್ರಿನಿಟಿ ಕಾಲೇಜಿನಲ್ಲಿ ಓದಿ 1927ರಲ್ಲಿ ಪದವಿ ಪಡೆದ. 1928ರಿಂದ 30ರ ವರೆಗೆ ಪ್ಯಾರಿಸಿನಲ್ಲಿ ಇಂಗ್ಲಿಷ್ ಉಪಾಧ್ಯಾಯನಾಗಿದ್ದ. ಈ ಸಮಯದಲ್ಲಿ, ಬೆಕೆಟ್ ಐರ್‌ಲೆಂಡಿನ ಖ್ಯಾತ ಕಾದಂಬರಿಕಾರ ಜೇಮ್ಸ್ ಜಾಯ್ಸನ ಸಹವಾಸದಲ್ಲಿದ್ದು ಅವನ ಪ್ರಭಾವಕ್ಕೊಳಗಾದ. ಅನಂತರ ಕೊಂಚ ಕಾಲ ಡಬ್ಲಿನಿನಲ್ಲಿ ಫ್ರೆಂಚ್ ಭಾಷಾ ಉಪಾಧ್ಯಾಯನಾಗಿದ್ದ. ಲಂಡನ್, ಫ್ರಾನ್ಸ್, ಜರ್ಮನಿಗಳಲ್ಲಿ ಓಡಾಡಿಕೊಂಡು ಲೇಖನ, ಕವನ, ಕಥೆಗಳನ್ನು ಬರೆದುಕೊಂಡಿದ್ದ. 1937ರಲ್ಲಿ ಮತ್ತೆ ಪ್ಯಾರಿಸಿಗೆ ಬಂದು ನೆಲೆಸಿದ. ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಫ್ರಾನ್ಸಿನ ಪ್ರಜೆಗಳು ಜರ್ಮನರ ಆಕ್ರಮಣದ ವಿರುದ್ಧ ನಡೆಸಿದ ಚಳುವಳಿಯಲ್ಲಿ ಭಾಗವಹಿಸಿದ. ಅದರಿಂದಾಗಿ ಇವನು 1942ರಲ್ಲಿ ಫ್ರಾನ್ಸ್ ಬಿಡಬೇಕಾಯಿತು. ಯುದ್ಧಾನಂತರ ಮತ್ತೆ ಫ್ರಾನ್ಸಿನಲ್ಲಿ ನೆಲೆಸಿ ಬರೆಯತೊಡಗಿದ. 1952ರ ಅನಂತರ ತನ್ನ 'ಗೋಡೋನ ನಿರೀಕ್ಷೆಯಲ್ಲಿ' ನಾಟಕದಿಂದ ಜಗದ್ವಿಖ್ಯಾತನಾದ.



ಪರಿಣಾಮಕಾರಿ ಅಭಿವ್ಯಕ್ತಿ : ಬೆಕೆಟ್

ಬೆಕೆಟ್ ಸ್ವಭಾವತಃ ಅಂತರ್ಮುಖಿ. ಸ್ವಪ್ರಚಾರದ ವಿಷಯದಲ್ಲಿ ಅವನಿಗೆ ತೀರಾ ಸಂಕೋಚ. ತನ್ನ ನಾಟಕಗಳನ್ನು ನಿರ್ದೇಶಿಸಲು ಮಾತ್ರ ಹೊರಗೆ ಬರುತ್ತಿದ್ದು, ಮಿಕ್ಕಸಮಯದಲ್ಲಿ ತನ್ನ ಮನೆಯಲ್ಲಿಯೇ ಕಾಲ ಕಳೆಯುತ್ತಿದ್ದ.

ಮೊದಲು ಇಂಗ್ಲಿಷಿನಲ್ಲಿ ಕೆಲವು ಕವನಗಳನ್ನೂ 'ಮರ್ಫಿ' (1938) ಮತ್ತು 'ವ್ಯಾಟ್' (1942) ಎಂಬ ಕಾದಂಬರಿಗಳನ್ನೂ ಬರೆದ. ಬೆಕೆಟ್ ಫ್ರಾನ್ಸಿನಲ್ಲಿ ನೆಲೆಸಿ ಫ್ರೆಂಚನ್ನು ಕಲಿತ ಮೇಲೆ ಆ ಭಾಷೆಯಲ್ಲೇ ಬರೆಯಲಾರಂಭಿಸಿದ. ಗಡಿಬಿಡಿಯ ಪ್ರಪಂಚ, ಅದಕ್ಕೆ ಹೊಂದಿಕೊಳ್ಳಲಾಗದ ವ್ಯಕ್ತಿ, ನಿರರ್ಥಕ ನಿರೀಕ್ಷೆಯ ಮಾನವನ ಶಾಶ್ವತ ಸ್ಥಿತಿಯ ಮೂಲ ರೇಖೆಗಳು ಇವನ ಮೊದಲ ಕಾದಂಬರಿ 'ಮರ್ಫಿ'ಯಲ್ಲಿಯೇ ಕಾಣುತ್ತವೆ. 'ಮಾಲೋಯ್', 'ಮಾಲೋನ್ ಡೈಸ್' ಮತ್ತು 'ಅನ್‌ನೇಮಬಲ್' (1947-49) ಕಾದಂಬರಿತ್ರಯದಲ್ಲಿ ಬೆಕೆಟ್‌ನ ಜೀವನದೃಷ್ಟಿ ಮತ್ತಷ್ಟು ಸ್ಪಷ್ಟವಾಗಿ ವ್ಯಕ್ತವಾಗಿದೆ.

ಈ ಎಲ್ಲ ತಾತ್ತ್ವಿಕ ಪ್ರಶ್ನೆಗಳು ಅತ್ಯಂತ ಗಹನವಾಗಿ, ಗಂಭೀರವಾಗಿ, ಪರಿಣಾಮಕಾರಿಯಾಗಿ ಬೆಕೆಟ್ ಫ್ರೆಂಚ್ ಭಾಷೆಯಲ್ಲಿ ಬರೆದ 'ಗೋಡೋನ ನಿರೀಕ್ಷೆಯಲ್ಲಿ' ನಾಟಕದಲ್ಲಿ ಅಭಿವ್ಯಕ್ತಿ ಪಡೆದುವು. 1948ರಲ್ಲಿ ಬರೆದ ಈ ನಾಟಕವನ್ನು ಅನಂತರ ಅವನೇ ಇಂಗ್ಲಿಷಿಗೆ ಭಾಷಾಂತರಿಸಿ 1953ರಲ್ಲಿ ಪ್ರಕಟಿಸಿದ. ಕಾಲ-ದೇಶಗಳ ಅನಂತತೆಯಲ್ಲಿ ನಮ್ಮ ಧ್ಯೇಯ, ಗುರಿ, ಆದರ್ಶ, ನಿರೀಕ್ಷೆ, ಕಲೆ, ಸಾಹಿತ್ಯ, ಮಾತು, ಕ್ರಿಯೆಗಳೆಲ್ಲವೂ ಅದೆಷ್ಟು ಅಸಂಗತವಾಗಿ, ಅರ್ಥಹೀನವಾಗಿ ಕಾಣುತ್ತವೆ ಎಂಬುದು ಈ ನಾಟಕದಲ್ಲಿ ಪ್ರೇಕ್ಷಕ ಎದುರಿಸುವ ಪ್ರಶ್ನೆ. ಪ್ರತಿದಿನ ಗೊಗೊ, ದೀದೀ ಕಾಯುತ್ತಾರೆ, ಗೋಡೋವಿಗಾಗಿ; ಗೋಡೋ ಬರುವುದೇ ಇಲ್ಲ. ಅವನು ಬರುವುದಿರಲಿ, ಅವನಾರೆಂಬುದೇ ಗೊತ್ತಿಲ್ಲ. "ಗೋಡೋ ಯಾರೆಂಬುದು ನನಗೆ ತಿಳಿದಿದ್ದರೆ ನಾನೇ ನಾಟಕದಲ್ಲಿ ಹೇಳಿಬಿಡುತ್ತಿದ್ದೆ" ಎಂದಿದ್ದಾನೆ ಬೆಕೆಟ್. ಗೋಡೋ ಬರುವುದರಿಂದ ತಮ್ಮ ಜೀವನದ ಸ್ವರೂಪ ಬದಲಾಗುತ್ತದೆಂದು, ಕಾಯುತ್ತಿರುವ ಅಲೆಮಾರಿಗಳ ಆಸೆ. ಅದು ಹೇಗೆ ಬದಲಾಗುತ್ತದೆಂಬುದರ ಸುಳಿವೂ ಇಲ್ಲ ನಾಟಕದಲ್ಲಿ. ಗೋಡೋ ದೇವರ ಸಂಕೇತವಲ್ಲ—ಎಂದೂ ಬೆಕೆಟ್ ಹೇಳಿದ್ದಾನೆ.

ರಂಗಭೂಮಿಯ ಮೇಲೆ ಅನೇಕ ಸಾರಿ ಪ್ರದರ್ಶಿತವಾಗಿರುವ ಈ ನಾಟಕವನ್ನು ಪ್ರೇಕ್ಷಕರು ಆಸಕ್ತಿಯಿಂದ ನೋಡುವುದು ಮಾತ್ರವಲ್ಲದೆ ನೋಡಿದ ಮೇಲೆ ಗೋಡೋ ಯಾರು? ಹೊರಗಿನ ಜಗತ್ತೆ? ಸಮಾಜವೆ? ಮುಂತಾಗಿ ಪ್ರಶ್ನೆಗಳನ್ನು ಹಾಕುತ್ತಾರೆ. ನಾಟಕ ಪರಿಣಾಮಕಾರಿಯಾದುದರ ಗುರುತು ಇದು ಎನ್ನಬಹುದು. ಕಾಲ ದೇಶಗಳ, ಬಂಧನದಲ್ಲಿ ಸಿಕ್ಕಿಕೊಂಡು ಎಲ್ಲರೂ ಬಂದಿಗಳಾಗಿರುವ ನಮ್ಮ ಸ್ಥಿತಿಯನ್ನು ಈ ನಾಟಕ ಅತ್ಯಂತ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ ಎನ್ನಬಹುದು.

ಸ್ಯಾಮುಎಲ್ ಬೆಕೆಟ್ ಈಗ ಪ್ಯಾರಿಸಿನಲ್ಲಿ ನೆಲೆಸಿದ್ದಾನೆ.

## ಬೆನಗಲ್ ರಾಮರಾಯ

"ಕನ್ನಡವಳಿದೊಡೆ ಏನುಂಟು?
ಬರಿ ಕನ್ನಡಿಯೊಳಗಿನ ಹುಸಿಗಂಟು"

—ಹೀಗೆ ಹಾಡಿದ ಬೆನಗಲ್ ರಾಮರಾಯರು ಅಭ್ಯಾಸಮಾಡಿದ್ದು ಭೂಗರ್ಭವಿಜ್ಞಾನವನ್ನು. ಆದರೆ ಇವರ ಮಮತೆ ಯಾವಾಗಲೂ ಕನ್ನಡದ ಕಡೆಗೆ. ಇವರು 1903ರಷ್ಟು ಹಿಂದೆಯೇ ಕರ್ನಾಟಕ ಏಕೀಕರಣದ ಕಲ್ಪನೆಯನ್ನು ಮಾಡಿಕೊಂಡು ಕರ್ನಾಟಕದ ಭೂಪಟವನ್ನು ತಯಾರಿಸಿ ಪ್ರಕಟಿಸಿದರು. 'ಕನ್ನಡವನುಳಿದೆನಗೆ ಅನ್ಯ ಜೀವನವಿಲ್ಲ' ಎಂಬ ಸಮರ್ಪಣ ಭಾವದಿಂದ ದುಡಿದರು. ಕನ್ನಡ ನವೋದಯ ಕಾಲದಲ್ಲಿ ಕನ್ನಡದ ಅಭಿವೃದ್ಧಿಗಾಗಿ ಜೀವನವನ್ನು ಮುಡುಪಾಗಿಟ್ಟವರಲ್ಲಿ ಪ್ರಮುಖರಾದವರು.

ಬೆನಗಲ್ ರಾಯರು ಹುಟ್ಟಿದ್ದು 1876 ಏಪ್ರಿಲ್ 3ರಂದು. ಪ್ರಾರಂಭದ ವಿದ್ಯಾಭ್ಯಾಸ ನಡೆದದ್ದು ಮೂಲ್ಕಿ, ಮಂಗಳೂರು ಮತ್ತು ಪುತ್ತೂರುಗಳಲ್ಲಿ. ಮುಂದಿನ ವ್ಯಾಸಂಗ ಮಂಗಳೂರಿನ ಸರಕಾರೀ ಕಾಲೇಜು ಮತ್ತು ಮದರಾಸಿನ ಪ್ರೆಸಿಡೆನ್ಸಿ ಕಾಲೇಜುಗಳಲ್ಲಿ ನಡೆಯಿತು. 1896ರಲ್ಲಿ ಪಡೆದ ಬಿ.ಎ.



ಕನ್ನಡ ನವೋದಯ : ಬೆನಗಲ್

ಪರೀಕ್ಷೆಯಲ್ಲಿ ಇವರು ಇಡೀ ಮದರಾಸು ಪ್ರಾಂತ್ಯಕ್ಕೇ ಎರಡನೆಯವರಾಗಿ ತೇರ್ಗಡೆಯಾದರು. ವಿದ್ಯಾರ್ಥಿಯಾಗಿರುವಾಗಲೇ ಕನ್ನಡ ಚಟುವಟಿಕೆಯಲ್ಲಿ ಭಾಗವಹಿಸುತ್ತಿದ್ದ ರಾಯರು 1897ರಿಂದ ಮೂರು ವರ್ಷ ಕಾಲ ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದರು. 'ಆಧುನಿಕ ಕನ್ನಡದಲ್ಲಿ ನವೋದಯ' ಎಂಬ ಮಹಾಪ್ರಬಂಧ ರಚಿಸಿ ಎಂ. ಎ. ಪದವಿ ಪಡೆದ ಮೇಲೆ ಮೈಸೂರಿನ ಸರಕಾರೀ ಟ್ರೈನಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು. ರಾಯರು 1902ರಲ್ಲಿ ಮುಂಬಯಿ ಸರಕಾರದ ಭಾಷಾಂತರ ಶಾಖೆಯನ್ನು ಸೇರಿ ಎಂಟು ವರ್ಷ ದುಡಿದರು. ಅನಂತರ ಮದರಾಸ್ ಸರಕಾರದ ಭಾಷಾಂತರ ಶಾಖೆಗೆ ಬಂದು 1917ರಲ್ಲಿ ಈ ಶಾಖೆಯ ಮುಖ್ಯಾಧಿಕಾರಿಗಳಾದರು. ಅದೇ ಹುದ್ದೆಯಲ್ಲಿ ನಿವೃತ್ತರಾದರು.

ಬೆನಗಲ್ ಅವರದು ಬಹುಮುಖ ಪ್ರತಿಭೆ. ಮುಂಬಯಿ ವಿಶ್ವವಿದ್ಯಾಲಯದ ನ್ಯಾಯಶಾಸ್ತ್ರ ಪದವಿ ಪಡೆದದ್ದಲ್ಲದೆ ತೆಲುಗು ಭಾಷೆಯಲ್ಲೂ ಎಂ. ಎ. ಮಾಡಿಕೊಂಡಿದ್ದರು. ಸಂಸ್ಕೃತ, ಬಂಗಾಳಿ, ಮರಾಠಿ ಭಾಷೆಗಳನ್ನೂ ಚೆನ್ನಾಗಿ ತಿಳಿದಿದ್ದರು. ಇತಿಹಾಸ ಸಂಶೋಧನೆಯಲ್ಲೂ ಇವರಿಗೆ ಆಸಕ್ತಿ ಇತ್ತು. ತಂಜಾವೂರು ಮನೆತನದ ಕೈಫಿಯತ್ (ಚಾರಿತ್ರಿಕ ಘಟನೆಗಳನ್ನು ಕುರಿತ ಹೇಳಿಕೆ), ಹಳೇಬೀಡು ಕೈಫಿಯತ್‌ಗಳನ್ನು ಬೆಳಕಿಗೆ ತಂದು 'ಕೈಫಿಯತ್ತಿನ ರಾಮರಾಯರು' ಎಂದು ಹೆಸರು ಪಡೆದರು. ಮಂಗಳೂರಿನ 'ಸುವಾಸಿನಿ' ಮತ್ತು ಧಾರವಾಡದ 'ವಾಗ್ಭೂಷಣ' ಪತ್ರಿಕೆಗಳಿಗೆ ಕೆಲ ಕಾಲ ಸಂಪಾದಕರಾಗಿದ್ದರು. ಸಂಗೀತ, ನಾಟಕಗಳಲ್ಲಿ ಇವರಿಗಿದ್ದ ಆಸಕ್ತಿ ಅಪಾರ. ಮದರಾಸಿನ ಸುಪ್ರಸಿದ್ಧ ಕಲಾವಿಲಾಸಿ ನಾಟಕ ಸಂಸ್ಥೆ ಸುಗುಣವಿಲಾಸ ಸಭೆಯ ಕನ್ನಡ ವಿಭಾಗದ ಕಾರ್ಯದರ್ಶಿಯಾಗಿದ್ದರು. ಹಲವಾರು ಕನ್ನಡ ನಾಟಕಗಳನ್ನು ಪ್ರದರ್ಶಿಸಿ ಮದರಾಸಿನಲ್ಲಿ ಕನ್ನಡ ನಾಟಕಗಳಿಗೆ ಗೌರವವನ್ನು ಗಳಿಸಿಕೊಟ್ಟರು. ಇವರು ಕರ್ನಾಟಕ ವಿದ್ಯಾವರ್ಧಕ ಸಂಘದ ಆಜೀವಸದಸ್ಯರಾಗಿದ್ದರು.

ಕಾವ್ಯ, ಕಾದಂಬರಿ ಮತ್ತು ಶಿಶು ಸಾಹಿತ್ಯ ಕ್ಷೇತ್ರಗಳಲ್ಲಿ ರಾಮರಾಯರು ಸುಮಾರು 20 ಗ್ರಂಥಗಳನ್ನು ರಚಿಸಿದ್ದಾರೆ. ಪಾನ್ಯ ಸುಂದರಶಾಸ್ತ್ರಿಗಳೊಡನೆ ಸೇರಿ ಇವರು ರಚಿಸಿದ 'ಪುರಾಣನಾಮ ಚೂಡಾಮಣಿ' ಒಂದು ಅಮೂಲ್ಯ ಆಕರಗ್ರಂಥ. ಸಂಸ್ಕೃತದ 'ದೂತಾಂಗದ', 'ಶಾಪಸಂಭ್ರಮ' ನಾಟಕಗಳನ್ನು ಕನ್ನಡಿಸಿದವರೂ ಇವರೇ.

ಬೆನಗಲ್ ರಾಮರಾಯರು 1925ರಲ್ಲಿ ಬೆಳಗಾವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ನಿವೃತ್ತರಾದ ಬಳಿಕ ಬೆಂಗಳೂರಲ್ಲಿ ನೆಲೆಸಿದರು. ಕೊನೆಯ ತನಕವೂ ಕನ್ನಡ ಹಿತಸಾಧನೆಗಾಗಿ ದುಡಿದ ಕರ್ಮಯೋಗಿ ಇವರು. 1943 ಮೇ 8ರಂದು ಅವರು ನಿಧನರಾದರು.

## ಬೆಲಿನ್‌ಸ್ಕಿ

—"ನಮ್ಮ ಕಾಲದ ಕಲೆ ಎಂಥದು? ಅದು, ಸಮಾಜವನ್ನು ಕುರಿತ ತೀರ್ಪು; ಸಮಾಜದ ಪೃಥಕ್ಕರಣ. ಪರಿಣಾಮವಾಗಿ, ಸಮಾಜದ ವಿಮರ್ಶೆ. ಈಗ ವಿಚಾರದ ಅಂಶ ಕಲೆಯ ಅಂಶದೊಡನೆ ಬೆರೆತಿದೆ."

—"ವಾಸ್ತವತೆ : ಇದೀಗ ಆಧುನಿಕ ಜಗತ್ತಿನ ಘೋಷ ಮತ್ತು ಕೊನೇ ಮಾತು.........ವಾಸ್ತವತೆ ಮಣ್ಣಿನಿಂದ ಚಿಮ್ಮುತ್ತದೆ; ಎಲ್ಲ ವಾಸ್ತವತೆಯ ಮಾತೃಕೆಯಾದ ಮಣ್ಣೇ ಸಮಾಜ".

—"ಪ್ರಾಸಗಳ ಕುಣಿತದ ಕಾಲ ಕಳೆಯಿತು. ಅದು ಇನ್ನೆಂದೂ ಮರಳಿಬರದು. ಕ್ಷುಲ್ಲಕವಾದ ಭಾವ ವೈಪರೀತ್ಯಗಳಿಗೂ ಹೃದಯವಿಕಾರಗಳಿಗೂ ಈಗ ಬೆಲೆ ಇಲ್ಲ. ಆಳವಾದ ಭಾವನೆಗಳನ್ನೂ ವಿಚಾರಗಳನ್ನೂ ಕಲಾತ್ಮಕರೂಪದಲ್ಲಿ ವ್ಯಕ್ತಗೊಳಿಸುವುದೇ ಈಗ ಬೇಕಾದ್ದು. ಈ ದಿನ ಕಾವ್ಯದಲ್ಲಿ ಯಶಸ್ಸು ಗಳಿಸಲು ಪ್ರತಿಭೆಯೊಂದೇ ಸಾಲದು. ಕಾಲಧರ್ಮವನ್ನು ಕುರಿತು ಆತ ಶಿಕ್ಷಣ ಪಡೆದಿರಬೇಕು. ಕನಸಿನ ಜಗತ್ತಿನಲ್ಲಿ ಕವಿ ಬದುಕುವುದು ಇನ್ನು ಸಾಧ್ಯವಿಲ್ಲ"...

ಮೇಲಿನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದವನು 19ನೆಯ ಶತಮಾನದ ಶ್ರೇಷ್ಠ ರಷ್ಯನ್ ವಿಮರ್ಶಕ ಬೆಲಿನ್‌ಸ್ಕಿ.

ವಿಸಾರಿಯನ್ ಗ್ರಿಗರಿವಿಚ್ ಬೆಲಿನ್‌ಸ್ಕಿ ಹುಟ್ಟಿದ್ದು 1811ರಲ್ಲಿ (ಜೂನ್ 13). ತಂದೆ ವೈದ್ಯ.

1929ರಲ್ಲಿ ಬೆಲಿನ್‌ಸ್ಕಿ ಪ್ರೌಢವ್ಯಾಸಂಗ ಮುಗಿಸಿದ. ಮಾಸ್ಕೊ ವಿಶ್ವವಿದ್ಯಾನಿಲಯದಲ್ಲಿ ಪದವಿ ಪರೀಕ್ಷೆಗಾಗಿ ಅಧ್ಯಯನ ನಡೆಸಿದಾಗ ಈ ವಿದ್ಯಾರ್ಥಿ 'ಡ್ಮಿಟ್ರಿ ಕಾಲಿನಿನ್' ಎಂಬ ನಾಟಕ ಬರೆದ. ಭೂಮಾಲಿಕರ ದೌರ್ಜನ್ಯ ನಾಟಕದ ವಸ್ತು. ಪರಿಣಾಮ : ವಿಶ್ವವಿದ್ಯಾನಿಲಯದಿಂದ ಬೆಲಿನ್‌ಸ್ಕಿಯ ಉಚ್ಚಾಟನೆ. ಆ ಕ್ರಮ ಕೈಕೊಂಡಾಗ "ಹುಡುಗ ಅನಾರೋಗ್ಯ ಪ್ರಕೃತಿಯವನು: ಸ್ವಲ್ಪಮಟ್ಟಿಗೆ ದಡ್ಡ". ಎಂದು ಅಧಿಕಾರಿಗಳು ಕಾರಣ ನೀಡಿದರು.

ಅಲ್ಲಿಂದ ಆರಂಭವಾಯಿತು ಬೆಲಿನ್‌ಸ್ಕಿಯ ಬರೆವಣಿಗೆಯ ಬದುಕು. 22ನೆಯ ವಯಸ್ಸಿನಲ್ಲಿ ಆತ ಪತ್ರಿಕೋದ್ಯಮಿಯಾದ.

ಆತನ 'ಸಾಹಿತ್ಯ ಕನಸುಗಳು' ಲೇಖನಮಾಲೆ ಎಲ್ಲರ ಗಮನ ಸೆಳೆಯಿತು. 1838–39ರಲ್ಲಿ ಆತ ಪತ್ರಿಕೆಯೊಂದರ ಸಂಪಾದಕನಾದ.

ಆ ಕಾಲದಲ್ಲಿ ಸೇಂಟ್ ಪೀಟರ್ಸ್‌ಬರ್ಗ್ (ಈಗಿನ ಲೆನಿನ್‌ಗ್ರಾಡ್) ಬೌದ್ಧಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ಅಲ್ಲಿ ನೆಲೆಸಿದ ಬೆಲಿನ್‌ಸ್ಕಿ. ರಷ್ಯನ್ ಸಾಹಿತ್ಯದ ಮೊದಲ ಮಹಾ ವಿಮರ್ಶಕನಾಗಿ ರೂಪುಗೊಂಡ. ಅದು ಹದಿನೈದು ವರ್ಷಗಳ ಕಾಲ ನಡೆದ ನಿರಂತರ ಬರೆವಣಿಗೆ. ಆತ



ಶ್ರೇಷ್ಠ ವಿಮರ್ಶ : ಬೆಲಿನ್‌ಸ್ಕಿ

ನಡೆಸಿದ ಸಮಕಾಲೀನ ಸಾಹಿತ್ಯ ವಿಮರ್ಶೆ ರಷ್ಯನ್ ಸಾಹಿತ್ಯಕ್ಕೆ ಮಾರ್ಗದರ್ಶಿಯಾಯಿತು.

ಕಲೆ ಬದುಕಿಗೋಸ್ಕರ ಇರಬೇಕು; ಸಮಾಜ ಶಿಕ್ಷಣಕ್ಕೆ ಸಾಹಿತ್ಯ ಕಾರಣವಾಗಬೇಕು –ಎಂದು ಬೆಲಿನ್‌ಸ್ಕಿ ವಾದಿಸಿದ. ಸೃಷ್ಟಿಯಾದ ಪ್ರತಿಬಿಂಬವನ್ನು (ಸಾಹಿತ್ಯ ಕೃತಿಯನ್ನು) ಮೂಲದೊಡನೆ ಹೋಲಿಸಿ ನೋಡುವುದೇ ಆತ ಅನುಸರಿಸಿದ ವಿಮರ್ಶಾ ವಿಧಾನ. "ಮೊದಲಿನದಾಗಿ ಕವಿ ಒಬ್ಬ ಮನುಷ್ಯ. ಬಳಿಕ ಆತ ರಾಷ್ಟ್ರದ ಪ್ರಜೆ. ಅನಂತರ ತನ್ನ ಕಾಲದ ಕೂಸು... ಆದ್ದರಿಂದಲೇ ಕಾವ್ಯವನ್ನೂ ಕವಿಯನ್ನೂ ವಾತಾವರಣದಿಂದ ಪ್ರತ್ಯೇಕಿಸಿ ಮೀಮಾಂಸೆ ಮಾಡುವುದು ಸಾಧ್ಯವಿಲ್ಲ." ಎಂದ. ಕಲೆ, ವಿಜ್ಞಾನಗಳ ಸಂಬಂಧದ ಬಗೆಗೆ ಬೆಲಿನ್‌ಸ್ಕಿ ಹೀಗೆ ನುಡಿದ:

"ಕಲೆಯೂ ವಿಜ್ಞಾನವೂ ಒಂದೇ ಅಲ್ಲವೆಂಬುದನ್ನು ಜನರು ಬಲ್ಲರು. ಆದರೆ, ತಿರುಳಿಗೆ ಸಂಬಂಧಿಸಿ ವ್ಯತ್ಯಾಸವಿಲ್ಲ, ವ್ಯತ್ಯಾಸವಿರುವುದು ವಸ್ತುವನ್ನು ವಿವರಿಸುವ ವಿಧಾನದಲ್ಲಿ ಮಾತ್ರ–ಎಂಬುದು ಅವರಿಗೆ ತಿಳಿಯದು. ವಿಜ್ಞಾನಿ ತರ್ಕಸರಣಿಯಲ್ಲಿ ಮಾತನಾಡುತ್ತಾನೆ; ಕವಿ ಪ್ರತಿಮೆಗಳು ಮತ್ತು ಚಿತ್ರಗಳ ರೂಪದಲ್ಲಿ ಮಾತನಾಡುತ್ತಾನೆ. ಆದರೆ, ಇಬ್ಬರೂ ಹೇಳುವ ವಿಷಯ ಮಾತ್ರ ಒಂದೇ."

ಕವಿ ಪುಷ್ಕಿನನ ಕೃತಿಗಳನ್ನು ಕುರಿತ 500 ಪುಟಗಳ ವಿಮರ್ಶಾಗ್ರಂಥ ಬೆಲಿನ್‌ಸ್ಕಿಯ ಹಿರಿಮೆಗೆ ನಿದರ್ಶನ.

ಬೆಲಿನ್‌ಸ್ಕಿಯ ಕೃತಿಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು ಅವನ ಚರಮ ಕೃತಿ –'ಗೊಗೋಲ್‌ಗೆ ಕಾಗದ'.

ಗೊಗೋಲ್ ಆ ಕಾಲದ ಹೆಸರಾಂತ ಬರೆಹಗಾರ. ಅವನ ವಾಸ್ತವವಾದಿ ಕೃತಿಗಳನ್ನು ಬೆಲಿನ್‌ಸ್ಕಿ ಮೆಚ್ಚಿಕೊಂಡಿದ್ದ. ಆದರೆ ಗೊಗೋಲ್‌ನಲ್ಲಿ ಪ್ರತಿಗಾಮಿ ಪ್ರವೃತ್ತಿಯೂ ಇದೆ ಎಂದು ಬೆಲಿನ್‌ಸ್ಕಿಗೆ ಅನಿಸಿತು. ಅದರ ಬಹಿರಂಗ ಟೀಕೆಯೇ 'ಗೊಗೋಲ್‌ಗೆ ಕಾಗದ'. ಕ್ಷಯರೋಗ ಪೀಡಿತನಾಗಿ, ಚಿಕಿತ್ಸೆಗೆಂದು ಫ್ರಾನ್ಸ್ ಜರ್ಮನಿಗಳಿಗೆ ತೆರಳಿದಾಗ, ಅಲ್ಲಿ ಆ ಕೃತಿಯನ್ನು ಬೆಲಿನ್‌ಸ್ಕಿ ರಚಿಸಿದ.

ಬೆಲಿನ್‌ಸ್ಕಿಯ ಬದುಕು 37ನೆಯ ವರ್ಷಕ್ಕೇ ಮುಕ್ತಾಯವಾಯಿತು. 1848ರ ಮೇ 26ರಂದು ಆತ ಗತಿಸಿದ. ಪಾರ್ಥಿವ ಶರೀರವನ್ನು ಸೇಂಟ್ ಪೀಟರ್ಸ್‌ಬರ್ಗಿನಲ್ಲಿ ಸಮಾಧಿಮಾಡಿದರು.

'ಗೊಗೋಲ್‌ಗೆ ಕಾಗದ'ದ ಪ್ರಕಟಣೆಯನ್ನು ರಷ್ಯದ ಸರಕಾರ ನಿಷೇಧಿಸಿತು. ಅದನ್ನು ಓದಿದ, ಪ್ರತಿಮಾಡಿದ ತಪ್ಪಿಗಾಗಿ ಹಲವರು ಬಂಧಿಸಲ್ಪಟ್ಟರು. ಬೆಲಿನ್‌ಸ್ಕಿಯ ಹೆಸರನ್ನೇ ಪ್ರಸ್ತಾಪಿಸಬಾರದೆಂದು ರಷ್ಯದ ಪತ್ರಿಕೆಗಳ ಮೇಲೆ ಪ್ರತಿಬಂಧ ಹೊರಿಸಲಾಯಿತು.

ಬೆಲಿನ್‌ಸ್ಕಿ ಸತ್ತು ಐವತ್ತೇಳು ವರ್ಷಗಳಾದ ಮೇಲಷ್ಟೇ –1905ರಲ್ಲಿ– 'ಗೊಗೋಲ್‌ಗೆ ಕಾಗದ' ಪ್ರಕಟವಾಯಿತು.

## 'ಬೆವೂಲ್ಫ್'

ಸ್ವೀಡನಿನ ದಕ್ಷಿಣ ಭಾಗದಲ್ಲಿ ವಾಸವಾಗಿದ್ದ ಯೆಆಟಾಸ್ ಜನರ ರಾಜನ ಬಳಿ ಬೆವೂಲ್ಫ್ ಎಂಬ ಹುಡುಗನೊಬ್ಬ ವಾಸಿಸುತ್ತಿದ್ದ. ಇವನ ರೂಪ ಗುಣಗಳೆರಡೂ ಚೆನ್ನಾಗಿದ್ದುವು. ಇವನು ಶಕ್ತಿಶಾಲಿಯಾದರೂ ಮಹಾ ಸೋಮಾರಿ. ಇವನ ನಂಟನೇ ಆದ ರಾಜ ಒಮ್ಮೊಮ್ಮೆ ಇವನನ್ನು ಕುರಿತು "ಈ ಹುಡುಗ ಎಂದಿಗೂ ಒಳ್ಳೆಯ ಯೋಧನಾಗುವುದಿಲ್ಲ. ಈತ ಉತ್ಸಾಹ ಶೂನ್ಯ, ಸೌಮ್ಯ ಬಾಲಕ," ಎನ್ನುತ್ತಿದ್ದ. ಆದರೆ ಇದೇ ಹುಡುಗ ಮುಂದೆ ಅಪ್ರತಿಮ ಯೋಧನಾದ. ಪ್ರಚಂಡ ಧೈರ್ಯದಿಂದ ಅನೇಕ ಸಾಹಸಗಳನ್ನು ಕೈಗೊಂಡ. ಈ ಸಾಹಸಗಳನ್ನು ವರ್ಣಿಸುವ ಮಹಾ ಕಾವ್ಯವೇ 'ಬೆವೂಲ್ಫ್'.

ಆಂಗಲ್ಸ್ ಸ್ಯಾಕ್ಸನ್ ಮತ್ತು ಜೂಟ್ಸ್ ಎಂಬ ಜರ್ಮನಿಯ ಬುಡಕಟ್ಟುಗಳ ಹಲವು ಜನರು ಸುಮಾರು ಕ್ರಿ.ಶ. 5ನೆಯ ಶತಮಾನದ ವೇಳೆಗೆ ಇಂಗ್ಲೆಂಡಿಗೆ ಬಂದು ನೆಲೆಸಿದರು. ಇವರೆಲ್ಲ ಒಟ್ಟಿಗೆ ಆಂಗ್ಲೋ ಸ್ಯಾಕ್ಸನರೆಂಬ ಹೆಸರು ಪಡೆದರು. ಅವರು ತಮ್ಮಲ್ಲಿ ಪ್ರಚಾರದಲ್ಲಿದ್ದ ಕಥೆಗಳನ್ನು ಹಾಡಿನ ರೂಪದಲ್ಲಿ ಹೇಳುತ್ತಿದ್ದರು. ಹೀಗೆ ಮೂರು ನಾಲ್ಕು ಶತಮಾನಗಳವರೆಗೆ ಬರೀ ಬಾಯಿಮಾತಿನಲ್ಲಿ ಉಳಿದಿದ್ದ ಈ ಕಥೆಗಳನ್ನು ಅನಂತರ ಬರೆದಿಡಲಾಯಿತು. ಹೀಗೆ ಬರೆದಿಟ್ಟ ಕಥೆಗಳಲ್ಲಿ ಅತ್ಯಂತ ಪ್ರಮುಖವಾದದ್ದು, 'ಬೆವೂಲ್ಫ್'. ಇದು ಇಂಗ್ಲಿಷಿನ ಮೊಟ್ಟಮೊದಲ ಮಹಾಕಾವ್ಯ. ಇಂಗ್ಲಿಷ್ ಸಾಹಿತ್ಯ ಪ್ರಾರಂಭವಾದದ್ದು ಈ ಮಹಾಕಾವ್ಯದಿಂದಲೇ.

ಸುಮಾರು 750ರ ಹೊತ್ತಿಗೆ ಬರೆದಿಡಲಾದ ಈ ಮಹಾಕಾವ್ಯದ ಕರ್ತೃವಾಗಲೀ ಲಿಪಿಕಾರನಾಗಲೀ ಯಾರೆಂಬುದೇ ತಿಳಿಯದು. ಇದುವರೆಗೆ ಸಿಕ್ಕಿರುವ ಈ ಗ್ರಂಥದ ಏಕೈಕ ಹಸ್ತಪ್ರತಿ ಸುಮಾರು 1000 ವರ್ಷಗಳಷ್ಟು ಹಿಂದಿನದು. ಇದು ಈಗ ಲಂಡನಿನ 'ಬ್ರಿಟಿಷ್ ಮ್ಯೂಸಿಯಂ'ನಲ್ಲಿದೆ.

ಜರ್ಮನಿಯ ಬುಡಕಟ್ಟಿನ ಜನರಲ್ಲಿ ರೂಪುಗೊಂಡ ಈ ಮಹಾಕಾವ್ಯದಲ್ಲಿ ಅವರ ಪುರಾತನ ಸಂಪ್ರದಾಯಗಳ ಪ್ರಭಾವಗಳನ್ನು ಕಾಣಬಹುದು. ಆ ಕಾಲದ ಸಾಮಾಜಿಕ ಜೀವನ, ನಡವಳಿಕೆ, ನಂಬಿಕೆ ಮುಂತಾದುವು 'ಬೆವೂಲ್ಫ್'ನಲ್ಲಿ ಅತ್ಯಂತ ಸ್ಪಷ್ಟವಾಗಿ ಚಿತ್ರಿತವಾಗಿವೆ.

ಈ ಮಹಾಕಾವ್ಯದ ಕಥೆ ಇದು: ಡೆನ್ಮಾರ್ಕಿನ ದೊರೆ ಹ್ರಾತ್ಗರ್ ಅತ್ಯಮೂಲ್ಯ ಸಂಪತ್ತಿನಿಂದ ಕೂಡಿದ ಸೊಗಸಾದ ಅರಮನೆಯನ್ನು ಕಟ್ಟಿಸಿದ್ದ. ಇದರ ಹಿರಿಮೆಯನ್ನು ಕೇಳಿದ ಮಾನವರೂಪದ ಗ್ರೆಂಡಲ್ ಎಂಬ ಭಯಂಕರ ಭೂತವೊಂದು ಈ ಭವನದ ಮೇಲೆ ದಾಳಿಮಾಡಿ ಅಲ್ಲಿದ್ದವರನ್ನು ಕೊಲ್ಲಲು ಪ್ರಾರಂಭಿಸಿತು. ಈ ಸುದ್ದಿ ತಿಳಿದ ಬೆವೂಲ್ಫ್ ತನ್ನ ಮಿತ್ರರೊಂದಿಗೆ ಬಂದು, ಎಲ್ಲರನ್ನೂ ನಡುಗಿಸುತ್ತಿದ್ದ ಈ ಭಯಂಕರ ಭೂತವನ್ನು ತೀವ್ರವಾಗಿ ಗಾಯಗೊಳಿಸಿದ. ಗ್ರೆಂಡಲ್‌ನ ತಾಯಿ ತನ್ನ ಮಗನಿಗಾದ ಈ ಗತಿಯಿಂದ ಕೋಪಗೊಂಡು ತಾನೇ ದಾಳಿ ನಡೆಸಿದಳು. ಆಗ ಬೆವೂಲ್ಫ್ ಆ ಪಿಶಾಚಿಗಳು ವಾಸಿಸುತ್ತಿದ್ದ ಜವುಗು ಪ್ರದೇಶಕ್ಕೆ ಹೋಗಿ ಅವನ್ನು ಕೊಂದುಹಾಕಿದ.



ಮಹಾಕಾವ್ಯದ ನಾಯಕ ಬೆವೂಲ್ಫ್

ಮುಂದೆ ಬೆವೂಲ್ಫ್ ತಾನೇ ರಾಜನಾದ. ಅವನ ಆಳ್ವಿಕೆಯ ಕಾಲದಲ್ಲಿ ಬೆಂಕಿಯುಗುಳುವ ರಾಕ್ಷಸಾಕಾರದ ಭಯಂಕರ ಪ್ರಾಣಿಯೊಂದು ಪ್ರಜೆಗಳನ್ನು ಹಿಂಸಿಸಲಾರಂಭಿಸಿತು. ಆಗ ಬೆವೂಲ್ಫ್‌ಗೆ ಇಳಿವಯಸ್ಸು. ಅವನು ಅದನ್ನು ಲೆಕ್ಕಿಸದೆ ಆ ಪ್ರಾಣಿಯನ್ನು ನಿರ್ನಾಮಗೊಳಿಸಲೆಂದು ಕತ್ತಿ ಹಿಡಿದು ಹೊರಟ. ಆ ಪ್ರಾಣಿ ಉಗುಳಿದ ಬೆಂಕಿಯ ಕಾವಿನಿಂದ ಇವನ ಕತ್ತಿ ಕೆಂಪಗೆ ಕಾದುಹೋಯಿತು. ಆದರೂ ಅವನು ಆ ಪ್ರಾಣಿಯೊಡನೆ ಹೋರಾಡಿ ಅದನ್ನು ಕೊಂದ. ಆದರೆ ಹೋರಾಟದಲ್ಲಿ ಉಂಟಾದ ಗಾಯಗಳಿಂದ ತಾನೂ ಮಡಿದ.

ಹಾಡಿನ ರೂಪದ ಈ ಮಹಾಕಾವ್ಯ ಸುಮಾರು 3000 ಸಾಲುಗಳಷ್ಟಿದೆ. ಇದನ್ನು ಬರೆದಿರುವುದು ಪ್ರಾಚೀನ ಆಂಗ್ಲಭಾಷೆಯಲ್ಲಿ. ಇಂದಿನವರ ಉಪಯೋಗಕ್ಕಾಗಿ ಇದನ್ನು ಆಧುನಿಕ ಇಂಗ್ಲಿಷಿಗೆ ರೂಪಾಂತರಿಸಿದ್ದಾರೆ.

## ಬೆಳ್ಳಾವೆ ವೆಂಕಟನಾರಣಪ್ಪ

ಬೆಳ್ಳಾವೆ ತುಮಕೂರಿನ ಸಮೀಪದಲ್ಲಿರುವ ಒಂದು ಊರು. ಅಲ್ಲಿ ವೆಂಕಟನಾರಣಪ್ಪನವರು 1872 ಫೆಬ್ರುವರಿಯಲ್ಲಿ ಹುಟ್ಟಿದರು. ತಂದೆ ಪೋಸ್ಟ್‌ಮಾಸ್ಟರರಾಗಿದ್ದರು. ಅವರದು ಸದಾಚಾರ, ಸೌಜನ್ಯಗಳಿಗೆ ಹೆಸರಾದ ಮನೆತನ.

ವೆಂಕಟನಾರಣಪ್ಪನವರು ತುಮಕೂರು ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದರು. ಪ್ರೌಢ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜು ಸೇರಿದರು. ಜಾನ್ ಕುಕ್ ಆಗ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ವೆಂಕಟನಾರಣಪ್ಪ ಅವರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾದರು. ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಬಳಿಕ ಅದೇ ಕಾಲೇಜಿನಲ್ಲಿ ಉಪಾಧ್ಯಾಯರಾದರು. ಎಂ. ಎ. ಪದವಿ ಸಂಪಾದಿಸಲೆಂದು ಮದರಾಸಿಗೆ ವ್ಯಾಸಂಗಕ್ಕೆಂದು ಹೋದಾಗ, ಕಾಯಿಲೆ ಬಿದ್ದರು; ಅವರ ಸಮೀಪದ ಬಂಧುವಾದ ಸಿದ್ಧಾಂತಿ ಶಿವಶಂಕರಶಾಸ್ತ್ರಿಗಳ ನೆರವಿನಿಂದ ಗುಣಮುಖರಾಗಿ ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನ ಬೋಧಕರಾದರು.

ವೆಂಕಟನಾರಣಪ್ಪನವರದು ಶಿಸ್ತಿನ ಜೀವನ ; ಎಲ್ಲದರಲ್ಲೂ ಒಪ್ಪ, ಓರಣ. ಅವರು ಧರಿಸುತ್ತಿದ್ದ ಉಡುಪು ಅತ್ಯಂತ ಸರಳವಾಗಿದ್ದರೂ ಅಚ್ಚುಕಟ್ಟಾಗಿರುತ್ತಿತ್ತು: ಶುಭ್ರವಾದ ರುಮಾಲು, ಬಿಳಿಯ ಕೋಟು. ಚೆನ್ನಾಗಿ ಮಡಿಸಿ ಇಸ್ತ್ರೀಮಾಡಿದ ಉತ್ತರೀಯ, ಶುಭ್ರವಾದ ಧೋತ್ರ, ಎಡಗಡೆಯ ಮೇಲ್ಜೇಬಿನಲ್ಲಿ ಗಡಿಯಾರ, ಅದರ ಸರಪಳಿಯ ಇನ್ನೊಂದು ಕೊನೆಯನ್ನು ಕೋಟಿನ ಗುಂಡಿಯಲ್ಲಿ ಸಿಕ್ಕಿಸಿಕೊಂಡಿರುತ್ತಿದ್ದರು.

ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾಗ ವೆಂಕಟನಾರಣಪ್ಪನವರು ಶ್ರೇಷ್ಠ ಬೋಧಕರೆಂದು ಖ್ಯಾತರಾಗಿದ್ದರು. ಪ್ರತಿ ದಿನವೂ ಅಂದಂದಿನ ಪಾಠಗಳನ್ನು ಹೇಳಲು ಕ್ರಮವಾದ ಸಿದ್ಧತೆ ಮಾಡಿಕೊಳ್ಳುತ್ತಿದ್ದರು.

ಪ್ರತಿದಿನವೂ ತಪ್ಪದೆ ಪಾಠಪ್ರವಚನಕ್ಕೆ ಸಿದ್ಧತೆ ಮಾಡಿಕೊಳ್ಳಬೇಕಾದ್ದು ಪ್ರತಿಯೊಬ್ಬ ಉಪಾಧ್ಯಾಯನ ಕರ್ತವ್ಯ ಎಂಬುದು ಅವರ ದೃಢನಂಬಿಕೆಯಾಗಿತ್ತು. ಸ್ವಲ್ಪ ಕಾಲ ಮಹಾರಾಣಿ ಕಾಲೇಜಿನಲ್ಲಿ ಇಂಗ್ಲಿಷ್ ಬೋಧಕರಾಗಿಯೂ ಅವರು ಕೆಲಸ ಮಾಡಿದರು.

ವೆಂಕಟನಾರಣಪ್ಪನವರಿಗೆ ಬಹಳ ಮೆಚ್ಚುಗೆಯಾದ ವಿಷಯ – ವಿಜ್ಞಾನ. ಅದು ಜನರ ಮನಸ್ಸಿಗೆ ಹಿಡಿಯಬೇಕಾದರೆ ಅದನ್ನು ಅವರ ಭಾಷೆಯಲ್ಲಿಯೇ ಸುಲಭವಾದ ರೀತಿಯಲ್ಲಿ ಹೇಳಬೇಕಾದದ್ದು ಅವಶ್ಯ ಎಂಬುದನ್ನು ಅವರು ಮನಗಂಡಿದ್ದರು. ವಿಜ್ಞಾನವನ್ನು ಜನಪ್ರಿಯ ಮಾಡುವ ಉದ್ದೇಶದಿಂದ ಅವರು 'ವಿಜ್ಞಾನ' ಎಂಬ ಕನ್ನಡ ಮಾಸಪತ್ರಿಕೆಯನ್ನು ಸ್ಥಾಪಿಸಿ ಕೆಲ ಕಾಲ ಅಚ್ಚುಕಟ್ಟಾಗಿ ನಡೆಸಿದರು. ಆದರೆ ಅದಕ್ಕೆ ತಕ್ಕಷ್ಟು ಪ್ರೋತ್ಸಾಹ ದೊರೆಯದೆ ಅದನ್ನು ನಿಲ್ಲಿಸಬೇಕಾಯಿತು. ಕನ್ನಡದಲ್ಲಿ ಪ್ರಕಟವಾದ ಮೊಟ್ಟಮೊದಲನೆಯ ವಿಜ್ಞಾನ ಪತ್ರಿಕೆಯನ್ನು ನಡೆಸಿದ ಕೀರ್ತಿ ವೆಂಕಟನಾರಣಪ್ಪನವರಿಗೆ ಸಲ್ಲುತ್ತದೆ.

ಕನ್ನಡ ಜನತೆಯ ಜ್ಞಾನಭಂಡಾರ ಬೆಳೆಯದೆ, ಅವರ ಅಭಿವೃದ್ಧಿ ಸಾಧ್ಯವಿಲ್ಲ ಎಂಬುದನ್ನು ಮನಗಂಡು, ನಮ್ಮ ಜ್ಞಾನಭಂಡಾರದ ಕೊರತೆ



ಯನ್ನು ನಿವಾರಿಸಲು ನಿರಂತರವಾಗಿ ಶ್ರಮಿಸಿದವರಲ್ಲಿ ವೆಂಕಟನಾರಣಪ್ಪನವರಿಗೆ ಅಗ್ರಪಂಕ್ತಿ ಸಲ್ಲುತ್ತದೆ. ಒಂದು ಉತ್ತಮ ಇಂಗ್ಲಿಷ್-ಕನ್ನಡ ನಿಘಂಟು, ಕನ್ನಡದಲ್ಲಿ ಒಂದು ವಿಶ್ವಕೋಶ ಇವು ರೂಪುಗೊಂಡರೆ ಕನ್ನಡ ಜನತೆಯಲ್ಲಿ ಆಧುನಿಕ ವಿಚಾರಜ್ಞಾನ ಬೆಳೆಯಲು ಸಹಾಯಕವಾಗುತ್ತದೆ ಎಂದು ವೆಂಕಟನಾರಣಪ್ಪನವರು ಸುಮಾರು ಅರ್ಧ ಶತಮಾನದ ಹಿಂದೆಯೇ ಪ್ರತಿಪಾದಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಚುನಾವಣಾ ಕ್ಷೇತ್ರದಿಂದ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರಾಗಿ ಚುನಾಯಿತರಾಗಿದ್ದ ಅವರು 1926ನೆಯ ಅಕ್ಟೋಬರ್ ತಿಂಗಳಿನಲ್ಲಿ ನಡೆದ ಆ ಸಭೆಯ ಅಧಿವೇಶನದಲ್ಲಿ, "ಜನಸಾಮಾನ್ಯರಲ್ಲಿ ತಕ್ಕಷ್ಟು ಇಂಗ್ಲಿಷ್ ಜ್ಞಾನವನ್ನು ಹರಡುವುದು ಸದ್ಯದಲ್ಲಿ ಸಾಧ್ಯವಿಲ್ಲವಾದ್ದರಿಂದ ಅವರಿಗೆ ಪಾಶ್ಚಾತ್ಯ ವಿಜ್ಞಾನದ ಮೂಲಾಂಶಗಳ ತಿಳಿವಳಿಕೆಯಾದರೂ (ಕನ್ನಡದಲ್ಲಿ) ಲಭ್ಯವಾಗುವಂತೆ ಮಾಡುವುದಕ್ಕಾಗಿ, ಸರಕಾರದವರು ತಕ್ಕ ಸಿಬ್ಬಂದಿಯನ್ನು ನೇಮಿಸಿ, ಒಂದು ಸಕಲ ವಿಷಯ ಸಂಗ್ರಹವಾದ ಇಂಗ್ಲಿಷ್-ಕನ್ನಡ ನಿಘಂಟು ಮತ್ತು ಕನ್ನಡದಲ್ಲಿ ಒಂದು ವಿಶ್ವಕೋಶ –ಇವುಗಳ ರಚನೆಗೆ ತಕ್ಕ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಈ ಸಭೆ ಶಿಫಾರಸು ಮಾಡುತ್ತದೆ'' ಎಂಬ ನಿರ್ಣಯವನ್ನು ಮಂಡಿಸಿದರು.

ಸಭೆ ಈ ನಿರ್ಣಯವನ್ನು ಅಂಗೀಕರಿಸಿತು. ಸರಕಾರ ಈ ಶಿಫಾರಸಿನ ಒಂದು ಭಾಗವನ್ನು ಕಾರ್ಯಗತಮಾಡಲು ಒಪ್ಪಿದರೂ, ಅವಶ್ಯ ವ್ಯವಸ್ಥೆ ಮಾಡಲು ಎಂಟು ವರ್ಷ ತೆಗೆದುಕೊಂಡಿತು. 1933ರಲ್ಲಿ ವೆಂಕಟನಾರಣಪ್ಪನವರನ್ನೇ ಪ್ರಧಾನ ಸಂಪಾದಕರನ್ನಾಗಿ ನಿಯಮಿಸಿ, ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಇಂಗ್ಲಿಷ್-ಕನ್ನಡ ನಿಘಂಟು ರಚಿಸಲು ಆಜ್ಞೆ ಹೊರಡಿಸಿತು. ವೆಂಕಟನಾರಣಪ್ಪನವರು ಸುಮಾರು ಹತ್ತು ವರ್ಷ ಕಾಲ ಶ್ರಮಿಸಿ ಈ ನಿಘಂಟಿನ ಪ್ರಕಟಣೆಗೆ ಕಾರಣರಾದರು.

ಕರ್ಣಾಟಕ ಸಾಹಿತ್ಯ ಪರಿಷತ್ತು (ಮುಂದೆ ಕನ್ನಡ ಸಾಹಿತ್ಯ ಪರಿಷತ್ತು) ಆರಂಭವಾದಾಗಿನಿಂದಲೂ ಅದರೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡಿದ್ದ ವೆಂಕಟನಾರಣಪ್ಪನವರು ಈ ಸಂಸ್ಥೆಗೆ ಸಲ್ಲಿಸಿದ ಸೇವೆ ಅಮೂಲ್ಯವಾದದ್ದು.

'ಪಂಪ ರಾಮಾಯಣ', 'ಪಂಪ ಭಾರತ', ಇವುಗಳ ನಿಘಂಟು ಮತ್ತು ಗದ್ಯಾನುವಾದ, 'ಚಾವುಂಡರಾಯ ಪುರಾಣ', 'ಸೋಮೇಶ್ವರ ಶತಕ', 'ಕುಸುಮಾವಳಿ ಕಾವ್ಯ', 'ಶಬ್ದಮಣಿದರ್ಪಣ' ಮುಂತಾದ ಪ್ರಾಚೀನ ಕನ್ನಡ ಗ್ರಂಥಗಳ ಸಂಪಾದನೆ ಪ್ರಕಟಣೆಗಳ ಸಂಬಂಧದಲ್ಲಿ ಅವರು ಸಲ್ಲಿಸಿದ ಸೇವೆ ಸ್ಮರಣೀಯವಾದದ್ದು. ವಿದ್ವಾಂಸರಿಂದಲೂ ನುರಿತ ಲೇಖಕರಿಂದಲೂ ಪಾಂಡಿತ್ಯಪೂರ್ಣ ಲೇಖನಗಳನ್ನು ಬರೆಸಿ ಅವರು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯನ್ನು ಉತ್ತಮ ರೀತಿಯಲ್ಲಿ ನಡೆಸಿಕೊಂಡು ಬಂದರು.

ಪರಿಷತ್ತಿನ ಕಾರ್ಯದರ್ಶಿಯಾಗಿ, ಕೋಶಾಧಿಕಾರಿಯಾಗಿ ಅವರು ದೀರ್ಘ ಕಾಲ ಸೇವೆ ಸಲ್ಲಿಸಿದರು.

ಅವರ ನಿಯಮ ನಿಷ್ಠೆ ಅವರ ಕಾಲದಲ್ಲಿ ಮನೆಮಾತಾಗಿತ್ತು. ಗೊತ್ತಾದ ಕಾಲಕ್ಕೆ ಗೊತ್ತಾದ ಕೆಲಸ ಮಾಡುವುದು ಅವರ ಹುಟ್ಟುಗುಣವಾಗಿತ್ತು. ವೆಂಕಟನಾರಣಪ್ಪನವರು ಖಂಡಿತವಾದಿ. ತಮಗೆ ಸರಿದೋರಿದ್ದನ್ನು ಯಾವ ದಾಕ್ಷಿಣ್ಯಕ್ಕೂ ಒಳಗಾಗದೆ ಹೇಳಿಬಿಡುತ್ತಿದ್ದರು. ಇದರಿಂದಾಗಿ ಅವರಲ್ಲಿ ಎಲ್ಲರಿಗೂ ಅಪಾರ ಗೌರವವಿತ್ತು.

ಕನ್ನಡ ನಾಡು ನುಡಿಗಳಿಗಾಗಿ ಅವರು ಸಲ್ಲಿಸಿದ ಅಮೂಲ್ಯ ಸೇವೆಗಾಗಿ ಅವರನ್ನು 1937ರಲ್ಲಿ ಜಮಖಂಡಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಮೈಸೂರು ಮಹಾರಾಜರು ಅವರಿಗೆ 'ರಾಜಸೇವಾಸಕ್ತ' ಎಂಬ ಬಿರುದು ಕೊಟ್ಟು ಸನ್ಮಾನಿಸಿದರು.

ವೆಂಕಟನಾರಣಪ್ಪನವರು 1943 ಆಗಸ್ಟ್ 3ರಂದು ನಿಧನರಾದರು.

## ಬ್ರೆಕ್ಟ್

ಇಪ್ಪತ್ತನೆಯ ಶತಮಾನದ ಪ್ರಭಾವಶಾಲೀ ಜರ್ಮನ್ ನಾಟಕಕಾರ, ಕವಿ, ಮತ್ತು ಪ್ರತಿಭಾವಂತ ನಾಟಕ ನಿರ್ದೇಶಕ –ಬರ್ಟೋಲ್ಟ್ ಬ್ರೆಕ್ಟ್, ಕಾಲೈಕ್ಯವನ್ನು ಗಮನಿಸದ, ಘಟನಾವಳಿಯ ಚಿತ್ರಣವಾದ 'ಎಪಿಕ್ ಥಿಯೇಟರ್'ನ ಹೊಸ ಕಲ್ಪನೆಯನ್ನು ನಾಟಕ ಕ್ಷೇತ್ರದಲ್ಲಿ ತಂದವನು ಈತ.

ಜರ್ಮನಿಯ ಬವೇರಿಯ ಪ್ರಾಂತದಲ್ಲಿ 1898ರಲ್ಲಿ ಫೆಬ್ರುವರಿ 10ರಂದು ಬ್ರೆಕ್ಟ್ ಜನಿಸಿದ. ಮ್ಯೂನಿಕ್‌ನಲ್ಲಿ 1917ರಿಂದ 21ರ ವರೆಗೆ ವೈದ್ಯಕೀ ಅಭ್ಯಾಸ ಮಾಡಿದ. ಶಿಕ್ಷಣ ಪೂರ್ತಿಯಾಗುವುದಕ್ಕೆ ಮೊದಲೇ ಸೈನ್ಯದಲ್ಲಿ ವೈದ್ಯನಾಗಿ ಕೂಡ ಕೆಲಸ ಮಾಡಿದ. ಪ್ರಪ್ರಥಮವಾಗಿ ಯಶಸ್ವಿಯಾದ ಆತನ ನಾಟಕ 1922ರಲ್ಲಿ ಬರೆದ 'ಡ್ರಮ್ಸ್ ಇನ್ ದಿ ನೈಟ್'. 1927ರಲ್ಲಿ ಇವನ ಒಂದು ಕವನ ಸಂಕಲನ ಪ್ರಕಟವಾಯಿತು.

1924ರಿಂದ 33ರ ವರಗೆ ಬ್ರೆಕ್ಟ್ ಬರ್ಲಿನಿನಲ್ಲಿ ಪ್ರಖ್ಯಾತ ನಿರ್ದೇಶಕರಾಗಿದ್ದ ಮಾಕ್ಸ್ ರೈನ್‌ಹಾರ್ಟ್ ಮತ್ತು ಎರ್ವಿನ್ ಪಿಸ್ಕೇಟರ್ ಎಂಬವರೊಡನೆ ಕೆಲಸಮಾಡಿದ. ಇದೇ ಕಾಲದಲ್ಲಿ ಬ್ರೆಕ್ಟ್ ತನ್ನ 'ಎಪಿಕ್ ಥಿಯೇಟರ್' ಸಿದ್ಧಾಂತವನ್ನು ಪ್ರತಿಪಾದಿಸಿದ. "ನಾಟಕದಲ್ಲಿ ಬರುವ ಭಾವರಸಗಳು ಪ್ರೇಕ್ಷಕನನ್ನು ಉದ್ರೇಕಿಸಿ ಅವನನ್ನು ಶುದ್ಧೀಕರಿಸುತ್ತವೆ" ಎಂದು ಹಿಂದೆ ಅರಿಸ್ಟಾಟಲ್ ಹೇಳಿದ್ದ. "ನಾಟಕದ ಕೆಲಸ ಈ ಶುದ್ಧೀಕರಣವಲ್ಲ'' ಎಂದು ಬ್ರೆಕ್ಟ್ ವಾದಿಸಿದ. "ನಾಟಕದ ಭಾವ ರಸಗಳ ಪರಿಣಾಮಕ್ಕೆ ಪ್ರೇಕ್ಷಕರು ಒಳಗಾಗದೆ, ನಾಟಕವನ್ನು ನಿರ್ಲಿಪ್ತ, ವೈಜ್ಞಾನಿಕ ದೃಷ್ಟಿಯಿಂದ ಪರೀಕ್ಷಿಸುವಂತಿರಬೇಕು", ಎಂದ. ಇದರಿಂದಾಗಿ 'ಎಪಿಕ್ ಥಿಯೇಟರ್'ನ ನಾಟಕಗಳಲ್ಲಿ ಸಾಮಾನ್ಯವಾಗಿ ಪ್ರೇಕ್ಷಕ ಪ್ರೀತಿಸುವ ನಾಯಕ, ದ್ವೇಷಿಸುವ



'ಎಪಿಕ್ ಥಿಯೇಟರ್' : ಬ್ರೆಕ್ಟ್

[illegible] ಇಲ್ಲಿ [illegible] ಪ್ರೇಕ್ಷಕರು ಮೆಚ್ಚಬೇಕು ಅಥವಾ ದ್ವೇಷಿಸಬೇಕು. ಇದು ವಿವೇಚನಾ ಪ್ರಧಾನ. ಭಾವವಿಕಾರಗಳು ಇಲ್ಲಿ ಮುಖ್ಯವಲ್ಲ.

ಮಾರ್ಕ್ಸ್‌ವಾದದಿಂದ ಪ್ರಭಾವಿತನಾದ ನಾಟಕಕಾರ ಬ್ರೆಕ್ಟ್‌ನ ಮೇಲೆ ನಾಜಿ ಆಳ್ವಿಕೆಯ ವಕ್ರದೃಷ್ಟಿ ಬಿತ್ತು. ಬ್ರೆಕ್ಟ್ 1933ರಲ್ಲಿ ಜರ್ಮನಿಯನ್ನು ಬಿಟ್ಟು ಡೆನ್ಮಾರ್ಕಿಗೆ ಪಲಾಯನ ಮಾಡಿದ. 1933ರಿಂದ 41ರ ವರೆಗೆ ಬ್ರೆಕ್ಟ್ ಡೆನ್ಮಾರ್ಕಿನಲ್ಲಿ ಕಾಲಕಳೆದ. 1941ರಿಂದ 47ರ ವರೆಗೆ ಅಮೆರಿಕದಲ್ಲಿದ್ದು ಹಾಲಿವುಡ್‌ನ ಚಲಚ್ಚಿತ್ರರಂಗದಲ್ಲಿ ಕೈ ಆಡಿಸಿದ. ಈ ಅವಧಿಯಲ್ಲಿ ಇವನ ಪುಸ್ತಕಗಳನ್ನು ಜರ್ಮನಿಯಲ್ಲಿ ಸುಟ್ಟರು. ಅವನ ಜರ್ಮನ್ ಪೌರತ್ವ ವನ್ನೂ ರದ್ದುಪಡಿಸಿದರು. ಹೀಗಾಗಿ ಜರ್ಮನಿಯ ನಾಟಕ ಕ್ಷೇತ್ರಕ್ಕೂ ಇವನಿಗೂ ಇದ್ದ ಸಂಬಂಧ ಕಡಿದುಹೋಯಿತು. ಬ್ರೆಕ್ಟ್ ತನ್ನ ಅತ್ಯಂತ ಪ್ರಮುಖ ನಾಟಕಗಳನ್ನು ಬರೆದ ಕಾಲವಾದರೂ ಇದೇ. ಇತಿಹಾಸ, ದಂತಕಥೆಗಳಿಂದ ಸ್ಫೂರ್ತಿಪಡೆದು ಅವುಗಳ ಸತ್ವಗಳನ್ನು ಅವನು ತನ್ನ ನಾಟಕಗಳಲ್ಲಿ ತುಂಬಿದ. 'ಸೆಟ್‌ಜುವನಿನ ಒಳ್ಳೆಯ ಹೆಂಗಸು' (1943), 'ತಾಯಿ ಕರೇಜ್ ಮತ್ತು ಮಕ್ಕಳು' (1941), 'ಗೆಲಿಲಿಯೋನ ಜೀವನ' (1943) ಮೊದಲಾದುವು ಬ್ರೆಕ್ಟ್‌ನ ಪ್ರಮುಖ ನಾಟಕಗಳು. ಇವನ 'ದಿ ತ್ರೀ ಪೆನಿ ಆಪೆರಾ' ಮಧ್ಯಮವರ್ಗದ ಸಮಾಜದ ಚತುರ ವಿಡಂಬನೆ. ಇವನ ಅತ್ಯಂತ ಯಶಸ್ವೀ ನಾಟಕಗಳಲ್ಲಿ ಇದೂ ಒಂದು.

1947ರಲ್ಲಿ ಅಮೆರಿಕವನ್ನು ಬಿಟ್ಟ ಬ್ರೆಕ್ಟ್ ಕೊಂಚ ಕಾಲ ಸ್ವಿಟ್ಜರ್ ಲೆಂಡಿನ ಜ್ಯೂರಿಚ್‌ನಲ್ಲಿದ್ದು ಅನಂತರ ಬರ್ಲಿನ್‌ಗೆ ಹೋಗಿ ಅಲ್ಲಿ 'ತಾಯಿ ಕರೇಜ್' ನಾಟಕವನ್ನು ಪ್ರದರ್ಶಿಸಿದ. ಅವನ ಪತ್ನಿ ಹೆಲೆನ್ ವೀಗಲ್ ನಾಯಕಿ ಪಾತ್ರವನ್ನು ವಹಿಸಿದ್ದಳು. ಕೊಂಚ ಕಾಲದ ಅನಂತರ ಬ್ರೆಕ್ಟ್ ತನ್ನದೇ ಆದ ನಾಟಕದ ಮಂಡಲಿಯೊಂದನ್ನು ಕಟ್ಟಿಕೊಂಡು ತನ್ನ ನಾಟಕ ಪ್ರಯೋಗಗಳನ್ನು ನಡೆಸಿದ. ಸಾಂಪ್ರದಾಯಿಕವಲ್ಲದ ಇವನ ನಾಟಕ ಪ್ರಯೋಗಗಳು ಮತ್ತು ಮಾರ್ಕ್ಸ್ ಸಿದ್ಧಾಂತದಲ್ಲಿ ಇವನಿಗಿದ್ದ ಅಪಾರ ನಂಬಿಕೆ ಇವುಗಳಿಂದಾಗಿ ಬ್ರೆಕ್ಟ್ ವಿವಾದಾಸ್ಪದ ವ್ಯಕ್ತಿಯಾಗಿದ್ದ. ಆದರೂ ಇವನ ನಾಟಕಗಳು ಅತ್ಯಂತ ಪ್ರಭಾವಶಾಲಿಯಾದುವು.

1956ರ ಆಗಸ್ಟ್ 14ರಂದು ಬರ್ಲಿನಿನಲ್ಲಿ ಬ್ರೆಕ್ಟ್ ಕಾಲವಾದ.

## ಬೇಂದ್ರೆ

"ರಸವೆ ಜನನ
ವಿರಸ ಮರಣ
ಸಮರಸವೇ ಜೀವನ"

—ಹೀಗೆ ಕೇವಲ ಆರೇ ಆರು ಶಬ್ದಗಳಲ್ಲಿ, ಜೀವನವನ್ನು ಕುರಿತು ಅತ್ಯಂತ ಅರ್ಥಗರ್ಭಿತ ವಾಗಿ, ಪರಿಣಾಮಕಾರಿ ಯಾಗಿ, ಹೃದಯಸ್ಪರ್ಶಿ ಯಾಗಿ ವ್ಯಾಖ್ಯಾನ ಮಾಡಿರುವ ದಾರ್ಶನಿಕ ಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ. ಅವರ ಕಾವ್ಯನಾಮ 'ಅಂಬಿಕಾತನಯದತ್ತ'. ಅವರ ಮಾತಿನ ಮೋಡಿ ಅಪೂರ್ವ. ಅವರ ಕವನಗಳ ನಾದಮಾಧುರ್ಯ, ಲಯಚಾತುರ್ಯ ಅಪಾರ.

ಕವಿಪುಂಗವ ಬೇಂದ್ರೆ

"ಕುಣಿಯೋಣು ಬಾರ
ಕುಣಿಯೋಣು ಬಾ
ತಾಳ್ಯಾಕ ತಂತ್ಯಾಕ
ರಾಗಾದ ಚಿಂತ್ಯಾಕ
ಹೆಜ್ಜ್ಯಾಕ ಗೆಜ್ಜ್ಯಾಕ
ಕುಣಿಯೋಣು ಬಾರ"

—ಇದು ಅವರ 'ಕುಣಿಯೋಣು ಬಾರ' ಕವಿತೆಯಿಂದ.

ಕವಿ ಬೇಂದ್ರೆ ಉತ್ಸಾಹದ ಚಿಲುಮೆಯನ್ನುಕ್ಕಿಸಬಲ್ಲರು ; ಅಷ್ಟೇ ಚತುರತೆಯಿಂದ ಗಂಭೀರ ವಾತಾವರಣವನ್ನೂ ಕಲ್ಪಿಸಬಲ್ಲರು.

ಬೇಂದ್ರೆಯವರ ಪೂರ್ವಿಕರು ರತ್ನಗಿರಿ ಜಿಲ್ಲೆಯವರು. ಮನೆತನದ ಮೂಲ ಹೆಸರು ಠೋಸರ. ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಸಮೀಪದಲ್ಲಿರುವ ಶಿರಹಟ್ಟಿ, ಇವರು ಅನಂತರ ಬಂದು ನೆಲೆಸಿದ ತಾಣ. ಆಗ ಶಿರಹಟ್ಟಿ ಸಾಂಗ್ಲಿ ಸಂಸ್ಥಾನಕ್ಕೆ ಸೇರಿತ್ತು. ಬೇಂದ್ರೆ ಮನೆತನದವರು ಪ್ರಧಾನವಾಗಿ ವೈದಿಕವೃತ್ತಿಯವರು. ಜೊತೆಗೆ ದಕ್ಷಿಣ ಮಹಾರಾಷ್ಟ್ರದ ಸಂಸ್ಥಾನಗಳಲ್ಲಿ ಅಧ್ಯಾಪಕವೃತ್ತಿಯನ್ನೂ ನಡೆಸುತ್ತಿದ್ದರು. ಅಜ್ಜ ಅಪ್ಪಾ ಭಟ್ಟರು ದಶಗ್ರಂಥಿಗಳು ; ಯಾಜ್ಞಿಕ ಧರ್ಮಶಾಸ್ತ್ರ ತಿಳಿದವರಾಗಿದ್ದರು. 'ಪಾರ್ವತೀ ಪರಿಣಯ' ಎಂಬ ಕೀರ್ತನೆಯನ್ನು ಅವರು ಬರೆದಿದ್ದರು. ತಂದೆ ರಾಮಚಂದ್ರಭಟ್ಟರೂ ಸ್ವಲ್ಪ ಕಾಲ ಶಿಕ್ಷಕರಾಗಿದ್ದರು. ತಂದೆಯಿಂದ ಇವರಿಗೆ ಸಂಹಿತಾಂತ ಪಾಠವಾಗಿತ್ತು. ರಾಮಚಂದ್ರಭಟ್ಟ–ಅಂಬಿಕೆಯರಿಗೆ ಧಾರವಾಡದಲ್ಲಿ 1896ನೆಯ ಜನವರಿ 31ರಂದು ಮಗ ಹುಟ್ಟಿದ. ಅಂದು ದತ್ತಾತ್ರೇಯರ ಜನ್ಮದಿನವಾಗಿದ್ದುದರಿಂದ, ತಮ್ಮ ಮಗುವೂ ದತ್ತಾತ್ರೇಯರಂತೆ ಸಾಯಂಕಾಲ ಜನಿಸಿದುದರಿಂದ, ಮಗುವನ್ನು ದತ್ತಾತ್ರೇಯ ಎಂದೇ ಕರೆದರು.

ದತ್ತಾತ್ರೇಯ ಬುದ್ಧಿಶಾಲಿ. ಶಾಲೆ ಸೇರಿ 'ಬಿನ್‌ಇಯತ್ತೆ', ಒಂದನೆಯ ಇಯತ್ತೆಗಳನ್ನು ಮೂರು ತಿಂಗಳಿನಲ್ಲಿಯೇ ದಾಟಿಬಿಟ್ಟ. ಹನ್ನೊಂದು ವರ್ಷದವನಾಗಿದ್ದಾಗಲೇ ತಂದೆ ತೀರಿಕೊಂಡರು. 1913ರಲ್ಲಿ ಮೆಟ್ರಿಕ್‌ನಲ್ಲಿ ತೇರ್ಗಡೆ ಹೊಂದಿದ ಮೇಲೆ ಬೇಂದ್ರೆ ಪುಣೆಗೆ ಬಂದು ಕಾಲೇಜಿಗೆ ಸೇರಿಕೊಂಡರು. 1918ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಉಪಾಧ್ಯಾಯರಾದರು. ಅನಂತರ ಇವರು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಕಡೆಗಳಲ್ಲಿ ಅಧ್ಯಾಪಕರಾಗಿ ಕೆಲಸಮಾಡಿದರು. ಏತನ್ಮಧ್ಯೆ 1935ರಲ್ಲಿ ಎಂ.ಎ., ಆದರು. ಅನಂತರ ಕೆಲ ಕಾಲ ಸೊಲ್ಲಾಪುರ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಬೇಂದ್ರೆಯವರು ಕಾವ್ಯರಚನೆಗೆ ಮನಸ್ಸು ಕೊಟ್ಟರು. ಅಲ್ಲಿಂದಾಚೆಗೆ ನಿರಂತರವಾಗಿ ಕಾವ್ಯರಚನೆ ಮಾಡಿದರು. 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಲ್ಲಿ, 1918ರಲ್ಲಿ 'ಪ್ರಭಾತ' ಪತ್ರಿಕೆಯಲ್ಲಿ, ಅವರ ಮೊದಲ ಕವನ ಪ್ರಕಟವಾಯಿತು.

ಅವರು ಧಾರವಾಡದಲ್ಲಿದ್ದ ಕಾಲದಲ್ಲಿ 1921ರಲ್ಲಿ, 'ಗೆಳೆಯರ ಗುಂಪು' ಕಟ್ಟಿದರು. ಕಾವ್ಯವಾಚನ, ಕಾವ್ಯವಿಮರ್ಶೆ ಮುಂತಾದ ಸಾಹಿತ್ಯ ಚಟು ವಟಿಕೆಗಳಿಗೆ ಮೀಸಲಾಗಿದ್ದ ಗುಂಪು ಇದು. ಆ ಕಾಲದಲ್ಲಿ ಧಾರವಾಡ

ದಲ್ಲಿ ಕನ್ನಡ ಸಾಹಿತ್ಯ ಚಟುವಟಿಕೆಗಳ ಕೇಂದ್ರ ಇದಾಗಿತ್ತು. ಈ ಗುಂಪಿನ ಸದಸ್ಯರು 'ಜಯ ಕರ್ನಾಟಕ' ಮುಂತಾದ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದುದಲ್ಲದೆ. ಕೆಲ ಕಾಲ ಆ ಮಾಸ ಪತ್ರಿಕೆಯನ್ನೂ ನಡೆಸಿದರು.

ಬೇಂದ್ರೆಯವರು ಉತ್ತಮ ದೇಶಭಕ್ತರು. ಭಾರತ ಸ್ವಾತಂತ್ರ್ಯ ಸಾಧನೆಯಲ್ಲಿ ಅವರಿಗೆ ಅಪಾರ ಆಸಕ್ತಿ ಇತ್ತು. ಅಂದಿನ ರಾಜಕೀಯ ಚಳುವಳಿಯಲ್ಲಿ ಭಾಗವಹಿಸಿ. ಸೆರೆಮನೆ ವಾಸವನ್ನೂ ಅನುಭವಿಸಿದರು.

ಕೇವಲ ಕಾವ್ಯ ರಚನೆಯಲ್ಲಿ ಮಾತ್ರವಲ್ಲ. ಆಧ್ಯಾತ್ಮಿಕ ವಿಚಾರಗಳಲ್ಲೂ ನೆಟ್ಟ ಮನಸ್ಸು ಬೇಂದ್ರೆಯವರದು. ಅವರು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಅರವಿಂದರ ದರ್ಶನದಲ್ಲಿ ಆಸಕ್ತರಾದರು. ಅದರಿಂದ ಪ್ರಭಾವಿತರಾದರು. ಈ ಪ್ರಭಾವವನ್ನು ಅವರ ಜೀವನದಲ್ಲಿಯೂ ಕಾವ್ಯಗಳಲ್ಲಿಯೂ ಕಾಣಬಹುದು.

ಬೇಂದ್ರೆಯವರ ಹಲವಾರು ಕವನ ಸಂಕಲನಗಳು ಪ್ರಕಟವಾಗಿವೆ. 'ಗರಿ'. 'ಕಾಮಕಸ್ತೂರಿ'. 'ಮೂರ್ತಿ'. 'ಸೂರ್ಯಪಾನ'. 'ಅರಳು–ಮರಳು' ಇತ್ಯಾದಿ. 'ಅರಳು–ಮರಳು' ಕವನ ಸಂಕಲನಕ್ಕೆ 1958ರ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿ ಪಾರಿತೋಷಿಕ ದೊರೆಯಿತು.

ಬೇಂದ್ರೆಯವರು ಉತ್ತಮ ಗದ್ಯಲೇಖಕರು ಕೂಡ. ಹಲವಾರು ಸಂಶೋಧನಾತ್ಮಕ ಲೇಖನಗಳನ್ನೂ ಕಾವ್ಯವಿಮರ್ಶೆಗಳನ್ನೂ ಬರೆದಿದ್ದಾರೆ. ಅವರ ಹರಟೆಗಳೂ ಪ್ರಬಂಧಗಳೂ ಇವೆ.

ಬೇಂದ್ರೆಯವರ ಲೇಖನಶಕ್ತಿ ಕನ್ನಡಕ್ಕೇ ಸೀಮಿತವಾಗಿಲ್ಲ. ಮರಾಠಿಯಲ್ಲೂ ಕೃತಿರಚನೆ ಮಾಡಿದ್ದಾರೆ. 1965ರಲ್ಲಿ ಅವರ ಮರಾಠಿ ಕೃತಿ 'ಸಂವಾದ'ಕ್ಕೆ ಕೇಳ್ಕರ್ ಬಹುಮಾನ. ದೊರೆಯಿತು. ಅವರು ಕನ್ನಡದಲ್ಲಿ ಎಷ್ಟು ಪರಿಣಾಮಕಾರಿಯಾಗಿ ಭಾಷಣ ಮಾಡಬಲ್ಲರೋ ಅಷ್ಟೇ ಪರಿಣಾಮಕಾರಿಯಾಗಿ ಮರಾಠಿಯಲ್ಲಿಯೂ ಭಾಷಣ ಮಾಡಬಲ್ಲರು. ಅವರು ಇಂಗ್ಲಿಷಿನಿಂದ ಭಾಷಾಂತರ ಮಾಡಿರುವ ಅರವಿಂದರ 'ಭಾರತೀಯ ಪುನರ್ಜನ್ಮ' ಹಾಗೂ ರಾನಡೆಯವರ 'ಉಪನಿಷದ್ರಹಸ್ಯ'ಗಳು ಅಮೂಲ್ಯ ಗ್ರಂಥಗಳು.

ಬೇಂದ್ರೆಯವರು ಕವಿ. ದಾರ್ಶನಿಕ. ಅವರ ಕವಿತೆಗಳ ಅರ್ಥಗಾಂಭೀರ್ಯ ದೊಡ್ಡದು: ಧ್ವನಿ ವ್ಯಾಪಕವಾದದ್ದು. ತೀನಂಶ್ರೀಯವರು ಹೇಳಿದಂತೆ. "ಬೇಂದ್ರೆಯವರ ಕವಿತೆ ಒಂದು ಚಿಲುಮೆ. ನೋಡಲು ಚಿಕ್ಕದು: ತೋಡಿದಷ್ಟೂ ಅರ್ಥ ಉಕ್ಕುತ್ತಲೇ ಇರುತ್ತದೆ". ತಮ್ಮ ಕವನಕ್ಕೆ ಪುಷ್ಟಿಯನ್ನೂ ಪ್ರಭೆಯನ್ನೂ ತರುವಂತೆ ಅವರು ಆಡುಮಾತನ್ನು ಉಪಯೋಗಿಸುವ ರೀತಿಯಂತೂ ಅವರಿಗೇ ವಿಶಿಷ್ಟವಾದದ್ದು. ಅವರ ಕವನಗಳು ಅವರೇ ಓದಿದಾಗ ಈ ಮಾತುಗಳ ಅಪೂರ್ವ ಶಕ್ತಿ ಸೌಂದರ್ಯ ನಮಗೆ ಚೆನ್ನಾಗಿ ಗೋಚರವಾಗುತ್ತವೆ.

ಬೇಂದ್ರೆ ಕನ್ನಡ ಕವಿಪುಂಗವರಲ್ಲೊಬ್ಬರು. ಎಲ್ಲ ಕಾಲಕ್ಕೂ ಬಾಳುವಂಥ ಕವನಗಳನ್ನು ರಚಿಸಿ, ಕನ್ನಡವನ್ನು ಬೆಳಗಿದವರು.

1943ರಲ್ಲಿ ಶಿವಮೊಗ್ಗದಲ್ಲಿ ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಜರಗಿತು.

ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿಯಿಂದಲೂ ಬೇಂದ್ರೆಯವರು ಪುರಸ್ಕೃತರಾಗಿದ್ದಾರೆ. 'ಪದ್ಮಶ್ರೀ' ಪ್ರಶಸ್ತಿಯೂ ಗೌರವ ಡಾಕ್ಟರೇಟ್ ಪ್ರಶಸ್ತಿಯೂ ಅವರಿಗೆ ದೊರೆತಿವೆ.

## ಬೇಲೂರು, ಹಳೇಬೀಡು

"ಸೂಕ್ಷ್ಮ ಕೌಶಲದ ಕೆತ್ತನೆಯ ಕೆಲಸದ [illegible] ನಿರ್ಮಿಸಿದ ಅನೇಕ ಕಟ್ಟಡಗಳು ಹಿಂದೂಸ್ಥಾನದಲ್ಲಿವೆ. ಆದರೆ ಬೇಲೂರು. ಹಳೇಬೀಡುಗಳ ದೇವಾಲಯಗಳು ಅದ್ವಿತೀಯ [illegible]"

—ಇದು ಕಲಾವಿಮರ್ಶಕ ಫರ್ಗ್ಯೂಸನನ ಅಭಿಪ್ರಾಯ.

12–13ನೆಯ ಶತಮಾನಗಳಲ್ಲಿ ಕರ್ನಾಟಕವನ್ನು ಆಳಿದ ಹೊಯ್ಸಳ ಅರಸರ ಕಾಲದಲ್ಲಿ ಕಟ್ಟಿದ ಗುಡಿಗಳನ್ನು ಹೊಯ್ಸಳ ಶೈಲಿಯ ಸಂಪ್ರದಾಯದ ದೇವಾಲಯಗಳೆನ್ನುವುದು ವಾಡಿಕೆ. ಇದು ಆ ಹಿಂದೆ ರೂಪುಗೊಂಡಿದ್ದ ಚಾಲುಕ್ಯರ ವಾಸ್ತುಶಿಲ್ಪ ಕಲಾಶೈಲಿಯ ಮುಂದುವರಿಕೆ. ಆದರೂ ಹೊಯ್ಸಳ ಶೈಲಿಯಲ್ಲಿ ಕೆಲವು ವಿಶಿಷ್ಟ ಲಕ್ಷಣಗಳನ್ನು ಕಾಣಬಹುದು. ಇವು ಪ್ರಧಾನವಾಗಿ ಕಟ್ಟಡದ ತಳಪಾಯ. ವೇದಿಕೆ, ಶಿಲ್ಪಾಲಂಕರಣಗಳಿಗೆ ಸಂಬಂಧಿಸಿದುವು. ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳು ಈ ಶೈಲಿಗೆ ಒಳ್ಳೆಯ ಉದಾಹರಣೆಗಳು.

ಹೊಯ್ಸಳ ಗುಡಿಗಳು ನಕ್ಷತ್ರಾಕಾರದವು; ಭೂಮಟ್ಟದಿಂದ ಮೇಲೆದ್ದ ಜಗತಿಯ ಮೇಲೆ ಕಟ್ಟಲ್ಪಟ್ಟುವು. ಇದರಿಂದಾಗಿ ಇವು ಎದ್ದು ಕಾಣುತ್ತವೆ. ಕಟ್ಟಡ ಬಹುಕೋನಾಕೃತಿಯಲ್ಲಿರುವುದರಿಂದ ಚೌಕ ಅಥವಾ ಆಯತಾಕಾರದ ಕಟ್ಟಡಗಳಿಗಿಂತ ಅದರ ಗೋಡೆಗಳ ಒಟ್ಟು ಉದ್ದ ಹೆಚ್ಚಾಗಿರುತ್ತದೆ. ಇದರಿಂದ ಕೆತ್ತನೆ ಕೆಲಸಕ್ಕೆ ಅನುಕೂಲ: ಅಲ್ಲದೆ ಗೋಡೆಗಳ ಮೈಮೇಲೆ ಬೆಳಕು ನೆರಳುಗಳ ಪ್ರಭಾವ ಹೆಚ್ಚಾಗಲು ಅವಕಾಶ ಏರ್ಪಡುತ್ತದೆ.

ಹಾಸನ ಜಿಲ್ಲೆಯ ಯಗಚಿ ನದಿಯ ದಂಡೆಯ ಮೇಲಿದೆ. ಬೇಲೂರು. ಇದನ್ನು ಹಿಂದೆ ವೇಲಾಪುರ ಎಂದು ಕರೆಯುತ್ತಿದ್ದರು. ಹಳೇಬೀಡು ಬೇಲೂರಿನಿಂದ ಪೂರ್ವಕ್ಕೆ 17 ಕಿಲೊಮೀಟರು ದೂರದಲ್ಲಿದೆ.

ಬೇಲೂರು ಮತ್ತು ಹಳೇಬೀಡು ಗುಡಿಗಳ ಗೋಡೆಯ ಹೊರಭಾಗವನ್ನು ಹಲವು ಪಟ್ಟಿಕೆಗಳಾಗಿ ವಿಂಗಡಿಸಿ. ಅವೆಲ್ಲವನ್ನೂ ಬೇರೆ ಬೇರೆ ರೀತಿಯ ಶಿಲ್ಪಗಳಿಂದ ಅಲಂಕರಿಸಿದ್ದಾರೆ. ಬೇಲೂರಿನ ಚೆನ್ನಕೇಶವ ದೇವಾಲಯದ ಹೊರಮೈಯಲ್ಲಿ ಆನೆಯ ಸಾಲು. ಮಣಿಸರದ ಸಾಲು, ಕೀರ್ತಿಮುಖಗಳ ಸಾಲು. ಲತಾಪಟ್ಟಿಕೆಗಳು. ಅನೇಕ ಸುಂದರ ವಿಗ್ರಹಗಳು. ಕಥಾನಿರೂಪಕ ಫಲಕಗಳು. ಜಾಲಂಧ್ರಗಳು ರಚಿತವಾಗಿವೆ. ಇವೆಲ್ಲವೂ ಸುಂದರ ಕೃತಿಗಳೇ. ಈ ದೇವಾಲಯದಲ್ಲಿ ಮೂರು ಸಾವಿರಕ್ಕಿಂತಲೂ ಹೆಚ್ಚಾಗಿ ದೊಡ್ಡ ವಿಗ್ರಹಗಳೇ ಇವೆ. ಇದರಿಂದ ಈ ದೇವಾಲಯ ಅಲಂಕಾರ ಎಷ್ಟು ದೊಡ್ಡ ಪ್ರಮಾಣದ್ದು ಎಂಬುದನ್ನು ಸುಲಭವಾಗಿ ಊಹಿಸಬಹುದು. ಬೇಲೂರು ದೇವಾಲಯದ ಅತಿ ಮುಖ್ಯ. ಆಕರ್ಷಣೆ ಮದನಿಕಾ ವಿಗ್ರಹಗಳು. ಇವಕ್ಕೆ 'ಸಾಲಭಂಜಿಕಾ'. 'ಮದನಕೈ', 'ಶಿಲಾಬಾಲಿಕೆ' ಎಂಬ ಹೆಸರುಗಳೂ ಇವೆ. ಇವು ನಾನಾ ಭಂಗಿಯಲ್ಲಿರುವ ರಮ್ಯ ಸ್ತ್ರೀ ವಿಗ್ರಹಗಳು. ಇವುಗಳಲ್ಲಿ ಹೆಚ್ಚಿನ ಸಂಖ್ಯೆಯವು ದೇವಾಲಯ ಗೋಡೆಯ ಹೊರಮೈಯಲ್ಲಿ ಸ್ಥಾಪಿತವಾಗಿವೆ. ದೇವಾಲಯ ರಚಿತವಾದಾಗ ಒಟ್ಟು 42 ಮದನಿಕಾ ವಿಗ್ರಹಗಳಿದ್ದುವು: ಈಗ ಅವುಗಳಲ್ಲಿ ಕೆಲವು ಕಾಣೆಯಾಗಿವೆ.

ದೇವಾಲಯದ ನವರಂಗದಲ್ಲಿರುವ ಸ್ತಂಭಗಳು ಕೂಡ ಅಪೂರ್ವ ಕೆತ್ತನೆ ಕೆಲಸದಿಂದ ಕೂಡಿದುವು. ನಡುವಿನ ನಾಲ್ಕು ಕಂಬಗಳ ಮೇಲೂ ಮದನಿಕಾ ವಿಗ್ರಹಗಳಿವೆ.

ಬೇಲೂರಿನ ಚೆನ್ನಕೇಶವ ದೇವಾಲಯದ ಕಟ್ಟಡ ಮುಗಿದು ಅದರಲ್ಲಿ ವಿಜಯನಾರಾಯಣನ ಪ್ರತಿಷ್ಠೆ ಆದದ್ದು 1117ರಲ್ಲಿ. ವಿಷ್ಣುವರ್ಧನನನು, ಅವನ ರಾಣಿ ಶಾಂತಲೆ ಈ ದೇವಾಲಯದ ರಚನೆಯಲ್ಲಿ ಆಸಕ್ತರಾಗಿದ್ದರು. ತಲಕಾಡು ಚೋಳರ ಮೇಲೆ ಗಳಿಸಿದ ವಿಜಯದ ಸ್ಮಾರಕವಾಗಿ ವಿಷ್ಣುವರ್ಧನನು ಕಟ್ಟಿಸಿದ ಐದು ವೈಷ್ಣವ ದೇವಾಲಯಗಳಲ್ಲಿ ಇದೂ ಒಂದೆಂದು ನಂಬಲಾಗಿದೆ. ವಿಷ್ಣುವರ್ಧನನು ಕಟ್ಟಿಸಿದ ಈ ದೇವಾಲಯವನ್ನು ಇಮ್ಮಡಿ ಬಲ್ಲಾಳನು (1173—1220) ವಿಸ್ತರಿಸಿ ಹೊಸ ಮಂಟಪಗಳಿಂದ ಅಲಂಕರಿಸಿದ. ಚೆನ್ನಕೇಶವ ದೇವಾಲಯದ ಆವರಣದಲ್ಲಿ ಕಪ್ಪೆ ಚೆನ್ನಿಗರಾಯನ ಆಲಯವಿದೆ. ಶಾಂತಳೆ ಕಟ್ಟಿಸಿದ ಈ ದೇವಾಲಯದ ಮೂಲವಿಗ್ರಹದ ಮೂರ್ತಿ ಸುಂದರವಾದದ್ದು. ಹಾಗೆಯೇ ಚೆನ್ನಕೇಶವನ ಮೂರ್ತಿ ಕೂಡ ತುಂಬ ಸುಂದರವಾದದ್ದು. ಚೆನ್ನಕೇಶವನ ದೇವಾಲಯದ ಮುಂಭಾಗದಲ್ಲಿ ದ್ವಾರಪಾಲಕರಂತಿರುವ ವಿಗ್ರಹಗಳು ರತಿ–ಮನ್ಮಥರವು.

ಗಂಗರು ರಾಷ್ಟ್ರಕೂಟರ ಕಾಲದಲ್ಲೇ ಹಳೇಬೀಡು ಪ್ರಸಿದ್ಧವಾಗಿತ್ತು. ಆಗ ಅದಕ್ಕೆ ದೋರಸಮುದ್ರ ಎಂಬ ಹೆಸರಿತ್ತು. ಹೊಯ್ಸಳರ ಕಾಲದಲ್ಲಿ ಅದಕ್ಕೆ ದ್ವಾರಸಮುದ್ರವೆಂಬ ಹೆಸರು ರೂಢಿಗೆ ಬಂತು. ಇದು ಸುಮಾರು 300 ವರ್ಷ ಕಾಲ ಹೊಯ್ಸಳರ ರಾಜಧಾನಿಯಾಗಿತ್ತು.

ಇಲ್ಲಿ ಉಳಿದಿರುವ ದೇವಾಲಯಗಳಲ್ಲಿ ಹೊಯ್ಸಳೇಶ್ವರ ದೇವಾ ಭವ್ಯವಾದದ್ದು; ಹೊಯ್ಸಳ ಶೈಲಿಯ ದೇವಾಲಯಗಳಲ್ಲೆಲ್ಲ ಇದು ಅತಿ ದೊಡ್ಡದು. ಉತ್ತಮ ಶಿಲ್ಪಗಳನ್ನು ಉಳ್ಳದ್ದು. ಇದೊಂದು ಅವಳಿ ದೇವಾಲಯ. ಒಂದರ ಪಕ್ಕದಲ್ಲೊಂದರಂತೆ ಎರಡು ಗುಡಿಗಳನ್ನು ಕಟ್ಟಿ ನಡುವೆ ಒಂದು ಹಜಾರವನ್ನು ನಿರ್ಮಿಸಿ ಅವೆರಡಕ್ಕೂ ಸಂಬಂಧವನ್ನು ಕಲ್ಪಿಸಲಾಗಿದೆ. ಇವೆರಡೂ ಶಿವದೇವಾಲಯಗಳು. ಒಂದು ಲಿಂಗವನ್ನು ಹೊಯ್ಸಳೇಶ್ವರ ಎಂದೂ ಇನ್ನೊಂದನ್ನು ಶಾಂತಳೇಶ್ವರ ಎಂದೂ ಕರೆಯುತ್ತಾರೆ. ಇವು ಬಲು ದೊಡ್ಡ ಆಕಾರದ ಲಿಂಗಗಳು. ಒಂದೊಂದು ಗರ್ಭಗುಡಿಯ ಮುಂದೆಯೂ ಭವ್ಯವಾದ ನಂದಿಮಂಟಪ ಮತ್ತು ನಂದಿಗಳಿವೆ. ಈ ಸುಂದರ ದೇವಾಲಯವನ್ನು ಕಟ್ಟಿಸಿದವನು ವಿಷ್ಣುವರ್ಧನನ ದಂಡನಾಯಕನಾಗಿದ್ದ ಕೇತಮಲ್ಲ. ಇದರ ನಿರ್ಮಾಣ ಕಾಲ ಸುಮಾರು 1141–ಬೇಲೂರಿನ ಚೆನ್ನಕೇಶವ ದೇವಾಲಯ ನಿರ್ಮಾಣವಾದ ಕಾಲು ಶತಮಾನದ ಅನಂತರ. ಒಂದನೆಯ ನರಸಿಂಹ (1142–1173) ಈ ದೇವಾಲಯದ ತೆರೆದ ರಂಗಮಂಟಪಕ್ಕೆ ಜಾಲಂದ್ರಗಳನ್ನೂ ಹೊಸದಾಗಿ ನಾಲ್ಕು ಮಹಾದ್ವಾರಗಳನ್ನೂ ಸೇರಿಸಿದ. ಅವನ ಅನಂತರ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಈ ದೇವಾಲಯ ವಿಸ್ತಾರಗೊಂಡಿತು.

ಹೊಯ್ಸಳೇಶ್ವರ ದೇವಾಲಯದಲ್ಲಿ ಕಂಡುಬರುವ ಕೆತ್ತನೆ ಕೆಲಸ ಉತ್ತಮ ಮಟ್ಟದ್ದು. ಇದರಲ್ಲಿ ಹಲವಾರು ಪುರಾಣ ಕಥಾ ಪಟ್ಟಿಕೆಗಳಿವೆ. ಪಟ್ಟಿಕೆ

ಬೇಲೂರು ಶಿಲಾಬಾಲಿಕೆಯರು



ಯಲ್ಲಿರುವ ವಿಗ್ರಹಗಳ ಆಕಾರ ಚಿಕ್ಕದು. ಇಲ್ಲಿರುವ [illegible] ಸಮಕಾಲೀನ ಜೀವನಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ತಿಳಿದುಕೊಳ್ಳಬಹುದು. ಇಲ್ಲಿರುವ ಕೆಲವು ದೇವತಾವಿಗ್ರಹಗಳು ತುಂಬ ಸುಂದರವಾಗಿವೆ.

ಬೇಲೂರು ಹಳೇಬೀಡುಗಳ ದೇವಾಲಯಗಳಲ್ಲಿ ವಿಗ್ರಹಾದಿಗಳನ್ನು ನಿರ್ಮಿಸಿರುವ ರೂವಾರಿಗಳು — ಅಂದರೆ ಶಿಲ್ಪಿಗಳು —ತಮ್ಮ ಕೃತಿಗಳ ಮೇಲೆ ತಮ್ಮ ಹೆಸರನ್ನು ಕೆತ್ತಿದ್ದಾರೆ. ಇವರು ತಮ್ಮ ಹೆಸರುಗಳೊಂದಿಗೆ ಸೇರಿಸಿಕೊಂಡಿರುವ ಬಿರುದುಗಳನ್ನು ನೋಡಿದರೆ ಆ ಕಾಲಕ್ಕೆ ಇವರು ಪ್ರಖ್ಯಾತರಾಗಿದ್ದರೆಂದು ತೋರುತ್ತದೆ. ಹೊಯ್ಸಳೇಶ್ವರ ದೇವಾಲಯದ ನಾಲ್ಕು ಮಹಾದ್ವಾರಗಳಲ್ಲಿ ದಕ್ಷಿಣ ದಿಕ್ಕಿನದು ಅತ್ಯುತ್ತಮವಾದದ್ದು. ಇದನ್ನು ನಿರ್ಮಿಸಿದ ಕಾಳಿದಾಸಿ ತನ್ನನ್ನು 'ಮಲಪರ ಗಂಡ, ರೂವಾರಿಗಿರಿ ವಜ್ರದಂಡ' ಎಂದು ಕರೆದುಕೊಂಡಿದ್ದಾನೆ. ಈ ದೇವಾಲಯದಲ್ಲಿರುವ ರಾಮರಾವಣ ಯುದ್ಧದ ಫಲಕವನ್ನು ಕೆತ್ತಿದ ಶಿಲ್ಪಿ ತಾನಗುಂದೂರ ಹರಿದಾಸಿ; ತ್ರಿಮೂರ್ತಿ ವಿಗ್ರಹವನ್ನು ನಿರ್ಮಿಸಿದವನು ಬೇಲೂರ ಲಕಪ. ಪಾಶುಪತಾಸ್ತ್ರ ಪ್ರಸಂಗವನ್ನು ಕೆತ್ತಿದವನು ಕೇತಣ. ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿರುವ ಓಕುಳಿ ಆಟದ ಶಿಲಾಬಾಲಕಿಯನ್ನು ನಿರ್ಮಿಸಿದವನು ರೂವಾರಿ ಚಿಕ್ಕಹಂಪ. ಲಾಸ್ಯನೃತ್ಯ ನಡೆಸುತ್ತಿರುವ ಶಿಲಾಬಾಲಕಿಯನ್ನು ರೂಪಿಸಿದವನು ತನ್ನನ್ನು 'ಶ್ರೀಮಂತು ಗದುಗಿನ ತ್ರಿಕೂಟೇಶ್ವರ [illegible] ನಾಗೋಜ' ಎಂದು ಬಣ್ಣಿಸಿಕೊಂಡಿದ್ದಾನೆ.

ಈ ಶಿಲ್ಪಗಳ ಮೇಲಿರುವ ಅಂಕಿತದ ವಿವರಗಳನ್ನು ಗಮನಿಸಿದರೆ. ಕರ್ನಾಟಕದ ವಿವಿಧ ಭಾಗಗಳಿಂದ ಬಂದ ರೂವಾರಿಗಳು ಈ ದೇವಾಲಯಗಳ ರಚನೆಯಲ್ಲಿ ಪಾಲ್ಗೊಂಡಿದ್ದರೆಂಬುದು ಸ್ಪಷ್ಟವಾಗುತ್ತದೆ.

ಹಳೇಬೀಡಿನಲ್ಲಿರುವ ಕೇದಾರೇಶ್ವರ ದೇವಾಲಯವು ಆಕಾರದಲ್ಲಿ ಚಿಕ್ಕದಾದರೂ ಸುಂದರವಾದ ಚಿತ್ರಪಟ್ಟಿಕೆಗಳಿಂದ ಅಲಂಕೃತವಾಗಿದೆ. ಇದು ರಚಿತವಾದದ್ದು 1210ರಲ್ಲಿ. ಇದು ಉತ್ತಮ ಸ್ಥಿತಿಯಲ್ಲಿದ್ದಾಗ ಇದನ್ನು ನೋಡಿದ ಫರ್ಗ್ಯುಸನ್, ಪರ್ಸಿ ಬ್ರೌನ್ ಮುಂತಾದ ಕಲಾಭಿಜ್ಞರು ಇದನ್ನು ತುಂಬ ಮೆಚ್ಚಿಕೊಂಡಿದ್ದಾರೆ. ನಿರ್ಲಕ್ಷ್ಯದಿಂದ ಭಗ್ನವಾಗಿದ್ದ ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ.

ವಿಷ್ಣುವರ್ಧನನ ಕಾಲದಲ್ಲಿ (1133 ರಲ್ಲಿ) ಕಟ್ಟಿದ ಪಾರ್ಶ್ವನಾಥ ಬಸದಿ ಹಳೇಬೀಡಿನಲ್ಲಿರುವ ಬಸದಿಗಳಲ್ಲಿ ಅತ್ಯುತ್ತಮವಾದದ್ದು. ಇದರ ನವರಂಗದಲ್ಲಿರುವ ಸ್ತಂಭಗಳು ಮತ್ತು ಭುವನೇಶ್ವರಿ ಉತ್ತಮ ಶಿಲ್ಪಕೃತಿಗಳು.

ಹಳೇಬೀಡು ಕೇದಾರೇಶ್ವರ ದೇವಾಲಯದ ಹೊರಗೋಡೆಯ ಶಿಲ್ಪ



## ಬ್ಲೇಕ್

ನಾಲ್ಕು ವರ್ಷದ ಪುಟಾಣಿ ಹುಡುಗನಾಗಿದ್ದಾಗಲೇ ಕನಸುಗಳನ್ನು ಕಾಣಲಾರಂಭಿಸಿ, ಕೊನೆಯವರೆಗೂ ತನ್ನ ಕಲ್ಪನಾ ಪ್ರಪಂಚದಿಂದಲೇ ಸ್ಫೂರ್ತಿ ಪಡೆದು ಉತ್ತಮ ಚಿತ್ರಗಳನ್ನೂ ಕವನಗಳನ್ನೂ ರಚಿಸಿದ ವಿಶಿಷ್ಟ ವ್ಯಕ್ತಿ ವಿಲಿಯಂ ಬ್ಲೇಕ್. ಇವನಂತೆ ಕಲೆ–ಸಾಹಿತ್ಯ ಈ ಎರಡೂ ರಂಗಗಳಲ್ಲಿ ದುಡಿದ. ಖ್ಯಾತರಾದವರು ಹಲವರಿಲ್ಲ. ಇವನು ಬಾಲಕನಾಗಿದ್ದಾಗ. ದೇವತೆಗಳಿಂದ ಕೂಡಿದ ಒಂದು ಮರ ಕಂಡೆನೆಂದು ತನ್ನನ್ನು ಹೆತ್ತವರಿಗೆ ಹೇಳಿದ. ಅಂಥ ಕಲ್ಪನಾಶಕ್ತಿ ಅವನದು. ಕನಸು ಕಲ್ಪನೆಗಳಲ್ಲಿ ಕಂಡದನ್ನು ಚಿತ್ರಿಸುವುದು, ಬರೆಯುವುದು, ಹೊರಗಿನ ಪ್ರಪಂಚದ ದೃಶ್ಯಗಳನ್ನು ಚಿತ್ರಿಸುವುದಕ್ಕಿಂತ ಹೆಚ್ಚು ಸಹಜವಾದದ್ದು —ಎಂದು ಬ್ಲೇಕ್ ನಂಬಿದ್ದ.

ಲಂಡನಿನಲ್ಲಿ 1757ರ ನವೆಂಬರ್ 28ರಂದು ಬ್ಲೇಕ್ ಜನಿಸಿದ. ಇವನು ಇತರರಂತೆ ಅಲ್ಲ, ಇವನ ಸ್ವಭಾವವೇ ಬೇರೆ —ಎಂದು ಮನಗಂಡ ತಾಯಿ, ಬ್ಲೇಕ್‌ನನ್ನು ಶಾಲೆಗೆ ಕಳುಹಿಸದೆ, ಓದುವುದು, ಬರೆಯುವುದನ್ನು ತಾನೇ ಹೇಳಿಕೊಟ್ಟಳು. ಪೆನ್ಸಿಲನ್ನು ಸರಿಯಾಗಿ ಹಿಡಿದುಕೊಳ್ಳಲು ಬರುತ್ತಿದ್ದಂತೆ, ಇವನು ತನ್ನ ಕನಸು ಕಲ್ಪನೆಗಳಲ್ಲಿ ಮೂಡಿದ ಚಿತ್ರಗಳನ್ನು ಬರೆದನೇ ಹೊರತು ತನ್ನ ಸುತ್ತಲಿದ್ದ ವಸ್ತುಗಳ ಪ್ರತಿಚಿತ್ರ ಮಾಡಲಿಲ್ಲ ಹತ್ತು ವರ್ಷದವನಿದ್ದಾಗ ಇವನನ್ನು ಚಿತ್ರಕಲಾ ಶಾಲೆಗೆ ಕಳುಹಿಸಿದರು. ಆದರೆ ಅಲ್ಲಿ ಕೊಡುತ್ತಿದ್ದ ಚಿತ್ರಕಲೆಯ ಸಾಂಪ್ರದಾಯಿಕ ಶಿಕ್ಷಣ ಇವನಿಗೆ ಜುಗುಪ್ಸೆ ಉಂಟುಮಾಡಿತು. 14 ವರ್ಷವಾದಾಗ ಇವನನ್ನು ಕೆತ್ತನೆ ಕೆಲಸಗಾರನೊಬ್ಬನ ಬಳಿ ವೃತ್ತಿ ಶಿಕ್ಷಣ ಪಡೆಯಲು ಗೊತ್ತುಮಾಡಿದರು. 21ನೆಯ ವರ್ಷದಲ್ಲಿ ವೃತ್ತಿಶಿಕ್ಷಣ ಮುಗಿಸಿ, ಕೆತ್ತನೆಗಾರ ಹಾಗೂ ಚಿತ್ರಕಾರನಾಗಿ ಜೀವನ ಪ್ರಾರಂಭಿಸಿದ.


ಮುಗ್ಧತೆ ಅನುಭವ : ಬ್ಲೇಕ್

ಅರ್ಥವಿಲ್ಲದ ನಯವಾದ ಭಾಷೆಯಲ್ಲಿ ರಚಿಸಿದ ಸುಂದರ ಕವನಗಳನ್ನು ಕಂಡರೆ ಇವನಿಗಾಗದು. ಕಾವ್ಯ-ಕಲೆಗಳು ಪ್ರವಾದಿಯ ಗಂಭೀರ ಹಾಗೂ ಆಳವಾದ ಆಲೋಚನೆಯ ಫಲಗಳು ; ಅಲ್ಪ ವಿಷಯಗಳ ನಿರೂಪಣೆ ಅಲ್ಲ—ಎಂದು ಬ್ಲೇಕ್ ನಂಬಿದ್ದ.

ಇವನು ವೃತ್ತಿಶಿಕ್ಷಣ ಪಡೆಯುತ್ತಿದ್ದಾಗ, ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಅಮೆರಿಕದ ವಸಾಹತುಗಳು ನಡೆಸಿದ ದಂಗೆಗಳು ಇವನ ಮನಸ್ಸಿನ ಮೇಲೆ ಭಾರೀ ಪ್ರಭಾವ ಬೀರಿದುವು. ದಬ್ಬಾಳಿಕೆಯನ್ನೂ-ಪ್ರಭುತ್ವವನ್ನೂ ವಿರೋಧಿಸುವ ಕ್ರಾಂತಿಕಾರಿ ಭಾವನೆಗಳನ್ನು ಇವನು ಕೊನೆಯವರೆಗೂ ಬೆಂಬಲಿಸಿದ. 1789ರಲ್ಲಿ ನಡೆಸಿದ ಫ್ರಾನ್ಸಿನ ಮಹಾಕ್ರಾಂತಿ ಇವನ ಮೇಲೆ ಪ್ರಚಂಡ ಪರಿಣಾಮ ಬೀರಿತು. ಕ್ರಾಂತಿಯ ಅನಂತರ ರೂಪುಗೊಳ್ಳಬಹುದಾದ ಆದರ್ಶ ಸುಖೀರಾಜ್ಯದ ಕನಸು ಕಂಡ. ಚಿಕ್ಕಂದಿನಿಂದಲೇ ಆರಂಭಿಸಿ ಸ್ವಲ್ಪ ಕಾಲಾನಂತರ ಕೈಬಿಟ್ಟಿದ್ದ ಕಾವ್ಯರಚನೆಯನ್ನು ಮತ್ತೊಮ್ಮೆ ಕೈಗೊಂಡ. ಈ ರೀತಿ ಅತ್ಯಂತ ಆಶಾವಾದಿಯಾಗಿ ಇವನು ಬರೆದ ಕವನಗಳೇ 'ಮುಗ್ಧ ಕವನಗಳು'. ಇವು ಬ್ಲೇಕ್ ಬರೆದ ಅತ್ಯುತ್ತಮ ಕವನಗಳೆನ್ನಬಹುದು. ಇವುಗಳಲ್ಲಿ ಕೋಪತಾಪಗಳ ಉದ್ರೇಕವಿಲ್ಲ ; ಇವು ಸರಳ ಮತ್ತು ನೇರವಾದುವು.

ಫ್ರಾನ್ಸಿನ ಮಹಾಕ್ರಾಂತಿ ಇವನ ಕನಸಿನ ರಾಜ್ಯವನ್ನು ತರಲಿಲ್ಲ. ಫ್ರಾನ್ಸಿನಲ್ಲಿ ಹಿಂಸೆ ಯುದ್ಧಗಳು ತಾಂಡವವಾಡಿದುವು. ಇದರಿಂದ ಅವನಿಗೆ ಭ್ರಮೆನಿರಸನವಾಯಿತು. ಒಳ್ಳೆಯ ಹಾಗೂ ಕೆಟ್ಟ ಸ್ವಭಾವಗಳೆರಡರ ಮಿಶ್ರಣವಾದ ಮಾನವನ ದ್ವಿಮುಖತ್ವದ ಅರಿವಾಯಿತು. ಅನಂತರ ಬ್ಲೇಕ್ 'ಅನುಭವದ ಕವನ'ಗಳನ್ನು ಬರೆದ.

ಈ ಸಂಕಲನದ 'ಹುಲಿ' ಎಂಬ ಪದ್ಯದಲ್ಲಿ, ಅವನು ಕೆಟ್ಟತನ ಕ್ರೌರ್ಯಗಳಿಗೆ ಹುಲಿಯನ್ನು ಸಂಕೇತವಾಗಿಟ್ಟು, ಮುಗ್ಧತನ ದಯೆಗಳಿಗೆ ಕುರಿಮರಿಯನ್ನು ಸಂಕೇತಮಾಡಿ, "ಕುರಿಮರಿಯನ್ನು ಮಾಡಿದವನೇ ಹುಲಿಯನ್ನೂ ಮಾಡಿದನೆ ?" ಎಂದು ಪ್ರಶ್ನಿಸುತ್ತಾನೆ. ಫ್ರಾನ್ಸಿನ ಮಹಾಕ್ರಾಂತಿಯ ಪರಿಣಾಮಗಳು ಬ್ಲೇಕ್‌ಗೆ ಸಂತೃಪ್ತಿಯನ್ನು ತರಲಿಲ್ಲವಾದರೂ ಹುಟ್ಟುಕ್ರಾಂತಿಕಾರನಾದ ಅವನು ಕೊನೆಯವರೆಗೂ ಅದರ ಬೆಂಬಲಿಗನಾಗಿಯೇ ಉಳಿದ.

ಬ್ಲೇಕ್ 1782ರಲ್ಲಿ ಮದುವೆಯಾದ. ಅವನ ಹೆಂಡತಿ ವಿದ್ಯಾವಂತಳಲ್ಲದಿದ್ದರೂ ತನ್ನ ಪತಿ ಪ್ರತಿಭಾಶಾಲಿ ಎಂಬುದನ್ನರಿತು, ಅವನ ಬಗೆಗೆ ಅಪಾರ ಗೌರವವಿಟ್ಟು ಅವನನ್ನು ಉಪಚರಿಸುತ್ತಿದ್ದಳು. ಚಿತ್ರ ಬರೆಯುವುದರಲ್ಲಿ, ಬಣ್ಣ ಹಾಕುವುದರಲ್ಲಿ ಅವನಿಗೆ ಸಹಾಯ ಮಾಡುತ್ತಿದ್ದಳು.

1809ರಲ್ಲಿ ಬ್ಲೇಕ್ ತನ್ನ ಚಿತ್ರಗಳ ಪ್ರದರ್ಶನ ನಡೆಸಿದ. ಸಾಂಪ್ರದಾಯಿಕ ಕಲೆಯ ಹಾದಿಯನ್ನು ತುಳಿಯದೆ ತೀರ ವಿಶಿಷ್ಟ ಹಾದಿ ಹಿಡಿದಿದ್ದ ಇವನ ಚಿತ್ರಗಳನ್ನು ಕೆಲವರು ಹೊಗಳಿದರು ; ಕೆಲವರು ತೆಗಳಿದರು. ಸುಪ್ರಸಿದ್ಧ ಸಾಹಿತಿ ಲ್ಯಾಮ್, ಬ್ಲೇಕ್‌ನನ್ನು ಪ್ರತಿಭಾಶಾಲಿ ಎಂದು ಬಣ್ಣಿಸಿದ. ಅನಂತರ, ಅವನಿಗೆ ಅನೇಕ ಮಂದಿ ಶಿಷ್ಯರೂ ಮಿತ್ರರೂ ದೊರೆತರು. ಜಾನ್ ಲಿನೆಲ್ ಎಂಬ ಮಿತ್ರ ಕಲಾವಿದನೊಬ್ಬ ಬ್ಲೇಕ್‌ನಿಂದ 'ಬುಕ್ ಆಫ್ ಜೋಬ್' ಮತ್ತು ದಾಂತೆಯ 'ಡಿವೈನ್ ಕಾಮಿಡಿ' ಗ್ರಂಥಗಳಿಗೆ ಚಿತ್ರಗಳನ್ನು ಬರೆಸಿದ.

ತನ್ನ ಜೀವನದ ಬಹುಕಾಲದವರೆಗೆ ಎಲೆಮರೆಯ ಕಾಯಿಯಾಗಿಯೇ ಉಳಿದಿದ್ದ ಬ್ಲೇಕ್ 1827ರ ಆಗಸ್ಟ್ 12ರಂದು ಯಾವ ಚಿಂತೆಯೂ ಇಲ್ಲದೆ, ಅತ್ಯಂತ ಪ್ರಶಾಂತನಾಗಿ ನಿಧನ ಹೊಂದಿದ. ಇವನ ಅನೇಕ ಕೃತಿಗಳು ಬೆಳಕಿಗೆ ಬಂದದ್ದು, ಪ್ರಖ್ಯಾತವಾದದ್ದು, ಇವನ ಮರಣದ ಅನಂತರವೇ.

## ಬೈರನ್

"ತನ್ನೊರೆಯ ಸವೆಯುವುದು ಖಡ್ಗ
ತನ್ನೆದೆಯ ತೇಯುವುದು ಜೀವ—
ಹೃದಯ ಬಲು ದಣಿದಿಹುದು, ಉಸಿರಾಡಬೇಕು
ಒಲುಮೆಗೂ ಬಿಡುವು ಬೇಕು"

—ಇದು ಬೈರನನ ಅತ್ಯಂತ ಹೃದ್ಯವಾದ ಒಂದು ಕವಿತೆಯ ಕೆಲವು ಸಾಲುಗಳ ಕನ್ನಡ ಅನುವಾದ : 'ಶ್ರೀ' ಅವರು ರಚಿಸಿದ್ದು. ಅತಿ ರಮ್ಯ ಶೈಲಿಗೆ, ಸೆಲೆಯೊಡೆದು ಬರುವ ಚಿಲುಮೆಯಂತೆ ಪುಟಿಯುವ ಪ್ರಾಸಕಲೆಗೆ, ಛಂದಸ್ಸಿನ ಮೇಲಿನ ಪ್ರಭುತ್ವಕ್ಕೆ, ನಾದ ಮಾಧುರ್ಯಕ್ಕೆ ವಿಖ್ಯಾತನಾದ ಆಂಗ್ಲ ಕವಿ ಬೈರನ್. 'ಮಗು ಹೆರಾಲ್ಡನ ಯಾತ್ರೆ', 'ಡಾನ್ ಯೂಆನ್' ಇಂಥ ನೀಳ ಕಾವ್ಯಗಳಲ್ಲದೆ ಪ್ರಣಯಗೀತೆಗಳನ್ನೂ ಭಾವಗೀತೆಗಳನ್ನೂ ಬೈರನ್ ಬರೆದಿದ್ದಾನೆ. ಅವನ ಕವಿತೆಗಳಲ್ಲಿ ಮುಚ್ಚುಮರೆಯಿಲ್ಲದ ನೇರ ವಿಡಂಬನೆಯೂ ತನ್ನ ವ್ಯಕ್ತಿತ್ವದ ಅತಿರೇಕ ಪ್ರದರ್ಶನವೂ ಕಂಡುಬರುತ್ತದೆ ಎಂದು ಕೆಲವರ ಟೀಕೆ.


ಜಗತ್ಪ್ರಸಿದ್ಧಿ : ಬೈರನ್



ಬೈರನ್–ಗ್ರೀಕ್ ಉಡುಪಿನಲ್ಲಿ

ವಾಸ್ತವವಾಗಿ ಬೈರನನನ್ನು ಅರ್ಥಮಾಡಿಕೊಳ್ಳಲು ಅವನನ್ನು ಎರಡು ದೃಷ್ಟಿಗಳಿಂದ ವಿವೇಚಿಸಬೇಕು : ಕವಿಯಾಗಿ ಮತ್ತು ಮಾನವ ವ್ಯಕ್ತಿಯಾಗಿ. ಕವಿ ಬೈರನನ ಕವಿತಾಗುಣಗಳು ಶ್ರೇಷ್ಠ ಮಟ್ಟದವು. ಮಾನವ ಬೈರನನದು ಸ್ವೇಚ್ಛಾಪ್ರವೃತ್ತಿ.

ಬೈರನ್ ಹುಟ್ಟಿದ್ದು 1788 ಜನವರಿ 22ರಂದು : ಲಂಡನಿನಲ್ಲಿ. ಅವನ ದುಂದುಗಾರ ತಂದೆ ಜಾನ್ ಬೈರನ್ 'ಹುಚ್ಚು ಜಾಕ್' ಎಂದೇ ಕುಪ್ರಸಿದ್ಧನಾಗಿದ್ದ. ತಾಯಿ ಕ್ಯಾಥರೀನ್ ಶ್ರೀಮಂತ ಮನೆತನದವಳು. ಬೈರನ್‌ಗೆ ಹುಟ್ಟಿದಾಗಲೇ ಊನ ಕಾಲು. ಮೂರನೆಯ ವಯಸ್ಸಿಗೇ ತಂದೆಯನ್ನು ಕಳೆದುಕೊಂಡ. ತಾಯಿ ಅವನ ಮೇಲೆ ಒಮ್ಮೊಮ್ಮೆ ತುಂಬ ಪ್ರೀತಿ ತೋರಿದರೂ ಆಗಾಗ ಅವನ ಊನ ಕಾಲನ್ನು ಹಂಗಿಸಿ ಮಾತನಾಡುತ್ತಿದ್ದಳು. ಈ ಅಂಗವಿಕಲತೆಯನ್ನು ತಾನು ಮೀರಿದ್ದೇನೆಂಬುದನ್ನು ಪ್ರದರ್ಶಿಸಲೋ ಏನೋ, ಶಾಲೆಯಲ್ಲಿ ಅವನು ಅತ್ಯುತ್ತಮ ಈಜುಗಾರನೂ ಒಳ್ಳೆಯ ಆಟಗಾರನೂ ಆದ.

10ನೆಯ ವಯಸ್ಸಿನೊಳಗೆ ಅವನ ಚಿಕ್ಕಪ್ಪ ನಿಧನಹೊಂದಿದ. ಅದರಿಂದಾಗಿ ಬೈರನನಿಗೆ ಚಿಕ್ಕಪ್ಪನ ಆಸ್ತಿಯೂ ಲಾರ್ಡ್ ಪದವಿಯೂ ದೊರೆತುವು. ಅನಂತರ ಹ್ಯಾರೋದಲ್ಲಿ ಅವನ ವಿದ್ಯಾಭ್ಯಾಸ ನಡೆಯಿತು. 1805ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾನಿಲಯವನ್ನು ಸೇರಿದ. ಈ ವೇಳೆಗಾಗಲೇ ಅವನ ಕವಿತಾರಚನೆ ಆರಂಭವಾಗಿತ್ತು. 19ನೆಯ ವಯಸ್ಸಿನಲ್ಲಿ ಅವನ ಭಾವಗೀತೆಗಳ ಸಂಕಲನ 'ಸೋಮಾರಿತನದ ಘಳಿಗೆಗಳು' ಪ್ರಕಟವಾಯಿತು. ಇದಕ್ಕೆ ದೊರೆತದ್ದು ಕಟುಟೀಕೆಗಳ ಸ್ವಾಗತ. 'ಇಂಗ್ಲಿಷಿನ ಹಾಡು ಕವಿಗಳು ಹಾಗೂ ವಿಮರ್ಶಕರು' ಎಂಬ ತನ್ನ ಕವಿತೆಯಲ್ಲಿ ಬೈರನ್ ಆ ಟೀಕೆಗಳನ್ನು ಖಂಡಿಸಿದ. ಎರಡು ವರ್ಷಗಳ ಅನಂತರ ಈ ಖಂಡನೆಯನ್ನು ಹಿಂದಕ್ಕೆ ತೆಗೆದುಕೊಂಡ !

ಈ ವೇಳೆಗಾಗಲೇ ಅವನು ಪೋರ್ಚುಗಲ್, ಸ್ಪೇನ್, ಮಾಲ್ಟಾ, ಗ್ರೀಸ್, ಕಾನ್‌ಸ್ಟಾಂಟಿನೋಪ್‌ಲ್ ಮುಂತಾದ ಪ್ರದೇಶಗಳಲ್ಲಿ ಪ್ರವಾಸ ಮಾಡಿದ್ದ. 1812ರಲ್ಲಿ 'ಮಗು ಹೆರಾಲ್ಡನ ಯಾತ್ರೆ'ಯ ಮೊದಲ ಎರಡು ಅಧ್ಯಾಯಗಳು ಹೊರಬಂದುವು. ಈ ಕೃತಿ ಆಂಗ್ಲ ಸಾಹಿತ್ಯಕ್ಕೆ ಹೊಸತನವನ್ನು ತಂದುಕೊಟ್ಟಿತು. ಈ ಕಾವ್ಯದಿಂದಾಗಿ ಬೈರನ್ ಒಮ್ಮೆಲೇ ಪ್ರಖ್ಯಾತನಾದ. ಈ ಸಂಬಂಧವಲ್ಲಿ "ಒಂದು ಬೆಳಗ್ಗೆ ಎದ್ದಾಗ ನಾನು ಜಗತ್ಪ್ರಸಿದ್ಧನಾಗಿದ್ದೆ" ಎಂದು ಅವನೇ ಹೇಳಿಕೊಂಡಿದ್ದಾನೆ. 'ಅಬಿಡಾಸಿನ ವಧು', 'ಲಾರಾ', 'ಪ್ಯಾರಿಸಿನಿಯ' ಮುಂತಾದ ಅವನ ಉತ್ತಮ ಕೃತಿಗಳು 1813–16ರ ಅವಧಿಯಲ್ಲಿ ಪ್ರಕಟವಾದುವು. 1815ರಲ್ಲಿ ಅವನು ಅನೆ ಇಸಾಬೆಲ ಮಿಲ್‌ಬ್ಯಾಂಕ್ ಎಂಬಾಕೆಯನ್ನು ಮದುವೆಯಾದ. ಒಂದು ಹೆಣ್ಣುಮಗುವಾಯಿತು. ಮದುವೆಯಾದ ಕೇವಲ ಒಂದು ವರ್ಷದಲ್ಲೇ ಇಸಾಬೆಲ ತನ್ನ ಗಂಡನನ್ನು ತೊರೆದಳು. ಬೈರನ್ ಇಂಗ್ಲೆಂಡನ್ನು ಬಿಟ್ಟು ಇಟಲಿಗೆ ಹೋದ.

ಬೈರನ್ ಮತ್ತೆ ಇಂಗ್ಲೆಂಡಿಗೆ ಮರಳಲೇ ಇಲ್ಲ. ಇವನ ವೈಯಕ್ತಿಕ ಜೀವನ ಹಂತಹಂತವಾಗಿ ದುರ್ಗತಿಗಿಳಿಯಿತು ; ಆದರೆ ಅವನ ಕಾವ್ಯಸೃಷ್ಟಿ ವಿಪುಲವಾಗಿ ಬೆಳೆಯಿತು. 'ಬೆಪ್ಪೊ', 'ಕೇನ್' 'ಡಾನ್ ಯೂಆನ್'ಗಳು ಹೊರಬಂದುವು. 'ಡಾನ್ ಯೂಆನ್' ಆಂಗ್ಲಸಾಹಿತ್ಯಕ್ಕೆ ಅವನಿತ್ತ ಮಹತ್ತರ ಕೊಡುಗೆ. ಹದಿನಾರು ಅಧ್ಯಾಯಗಳ ಈ ಕಾವ್ಯ ಅತ್ಯುತ್ತಮ ವ್ಯಂಗ್ಯ ಸಾಹಿತ್ಯ. ಈ ಅಪ್ರತಿಮ ಕಾವ್ಯಕ್ಕೆ ಸಾಟಿಯಾದ ಕೃತಿ ಯಾವುದೂ ಈವರೆಗೆ ಬಂದಿಲ್ಲವೆಂದು ವಿಮರ್ಶಕರ ಅಭಿಪ್ರಾಯ. ಇದರಲ್ಲಿ ಅವನು ರಾಜರು, ಪತ್ರಿಕೆಗಾರರು ಮುಂತಾದವರ ಮೇಲೆ ತೀವ್ರವಾದ ಸೂಡಿ ಬಾಣಗಳನ್ನು ಎಸೆದಿದ್ದಾನೆ.

'ಕಾರ್ಸೇರ್', 'ಸ್ವರ್ಗ ಹಾಗೂ ಮರ್ತ್ಯ', 'ಮಧುರ ಹಿಬ್ರೂ ಹಾಡುಗಳು' ಮುಂತಾದುವು ಅವನ ಇತರ ಕೆಲವು ಕವಿತೆಗಳು. ಪತ್ರ ಬರೆವಣಿಗೆಯಲ್ಲೂ ಬೈರನ್ ನಿಸ್ಸೀಮ. ಅವನು ಬರೆದ ಸುಮಾರು 2,500 ಪತ್ರಗಳು ದೊರೆತಿವೆ.

ತುರ್ಕಿಯ ಹಿಡಿತದಿಂದ ವಿಮುಕ್ತ ಪಡೆಯಲು ಗ್ರೀಸಿನಲ್ಲಿ ನಡೆಯುತ್ತಿದ್ದ ಹೋರಾಟಕ್ಕೆ ಬೆಂಬಲ ಕೊಡುವುದಕ್ಕೆಂದು 1823ರಲ್ಲಿ ಬೈರನ್ ಇಟಲಿಯಿಂದ ಗ್ರೀಸಿಗೆ ತೆರಳಿದ. ಆದರೆ ಮಾರನೆಯ ವರ್ಷವೇ, 1824ರ ಏಪ್ರಿಲ್ 19ರಂದು, ಮಿಸೊಲೊಂಗಿ ಎಂಬಲ್ಲಿ ಅವನು ಕಾಲವಾದ.

## ಬೊಂಬೆ

ಬೊಂಬೆ ಕೂರಿಸಿ ಆರತಿ ಎತ್ತುವುದು ನವರಾತ್ರಿ ಹಬ್ಬದ ವೈಶಿಷ್ಟ್ಯ. ಈ ಹಬ್ಬವನ್ನು ಆಚರಿಸುವವರ ಮನೆಗಳಲ್ಲಿ ಗೊಂಬೆಗಳ ಮೇಳವೇ ನಡೆಯುತ್ತದೆ. ನವರಾತ್ರಿಯನ್ನು ಬೊಂಬೆಗಳ ಹಬ್ಬ ಎಂದು ಕರೆಯುವ ವಾಡಿಕೆಯೂ ಇದೆ. ಬೊಂಬೆ ಕೂರಿಸುವುದರಲ್ಲಿ ಮಕ್ಕಳಿಗೆ —ಅದರಲ್ಲೂ ಹುಡುಗಿಯರಿಗೆ— ತುಂಬ ಆಸಕ್ತಿ. ಈ ಬೊಂಬೆಗಳ ಪ್ರದರ್ಶನದಲ್ಲಿ ಮಾನವಾಕಾರದ ಬೊಂಬೆಗಳ ಜೊತೆಯಲ್ಲಿ ಇತರ ಆಟಿಗೆಗಳನ್ನೂ ಕಲಾತ್ಮಕ ವಸ್ತುಗಳನ್ನೂ ಇಡುತ್ತಾರೆ. ಬೊಂಬೆಗಳ ಉಡುಗೆ ತೊಡುಗೆಗಳು ಅವುಗಳ ಠೀವಿ, ಅವನ್ನು ಇಡುವ ಒಪ್ಪ ಓರಣ, ಇವು ಯಾರನ್ನಾದರೂ ಬೆರಗುಗೊಳಿಸುತ್ತವೆ.

ತನ್ನನ್ನೇ ಹೋಲುವ ಪ್ರತಿಕೃತಿಗಳನ್ನು ನಿರ್ಮಿಸುವುದು ಮನುಷ್ಯನ ಸಹಜಪ್ರವೃತ್ತಿಗಳಲ್ಲೊಂದು. ಸುಮಾರು ಕ್ರಿ. ಪೂ. 3000 ವರ್ಷಗಳ



ಡುಗರ ಆಟಿಗೆ (ಮೇಲಿನದು), ಹುಡುಗಿಯರ ಆಟಿಗೆ (ಕೆಳಗಿನದು) - ಪ್ರಾಚೀನ ಗ್ರೀಸಿನಲ್ಲಿ

ಪ್ರಾಚೀನ ಈಜಿಪ್ಟಿನ ಸಮಾಧಿಗಳಲ್ಲಿ ಸಿಕ್ಕಿರುವ ಬೊಂಬೆಗಳೇ ಅತಿ ಪ್ರಾಚೀನವಾದುವೆನ್ನಬಹುದು. ಸಿಂಧು ಕಣಿವೆಯ ಹರಪ್ಪದಲ್ಲಿ ದೊರಕಿರುವ ಬೊಂಬೆಗಳು ಕೂಡ ಸ್ವಲ್ಪ ಹೆಚ್ಚು ಕಡಮೆ ಇಷ್ಟೇ ಪ್ರಾಚೀನವಾದುವು. ಬೊಂಬೆ ತಯಾರಿಕೆಯಲ್ಲಿ ಉಪಯೋಗಿಸಬಹುದಾದ ವಸ್ತುಗಳ ಪಟ್ಟಿ ದೊಡ್ಡದು – ಮಣ್ಣು, ಕಲ್ಲು, ಮರ, ಮರದಹೊಟ್ಟು, ಬಟ್ಟೆ, ಕಾಗದ, ತಗಡು, ಬೆಂಡು, ಗಾಜು ಕಂಚು, ತಾಮ್ರ, ಚಿನ್ನ, ಬೆಳ್ಳಿ ಮತ್ತಿತರ ಲೋಹಗಳು, ಮಿಶ್ರ ಲೋಹಗಳು, ಪ್ಲಾಸ್ಟಿಕ್, ರಬ್ಬರ್, ಹೀಗೆ.

ಮೊದಮೊದಲು ತಯಾರಿಸಿದ ಬೊಂಬೆಗಳು ಮಣ್ಣಿನವು. ಸಾಮಾನ್ಯವಾಗಿ ಇದಕ್ಕೆ ಗಡಸು ಜೇಡಿಮಣ್ಣನ್ನು ಉಪಯೋಗಿಸುತ್ತಿದ್ದರು. ಕೆಲವು ಸಹಸ್ರ ವರ್ಷಗಳ ಹಿಂದೆ ರಚಿತವಾದ ಇಂಥ ಬೊಂಬೆಗಳು ದೊರೆತಿವೆ.

ಬೊಂಬೆಗಳ ತಯಾರಿಕೆಯಲ್ಲಿ ಜೇಡಿಮಣ್ಣನ್ನು ಒಣ ಹುಲ್ಲಿನೊಡನೆ ಬೆರೆಸಿ ಬೊಂಬೆಗಳನ್ನು ಮಾಡುತ್ತಿದ್ದುದೂ ಉಂಟು. ಬೊಂಬೆಗಳಿಗೆ ಮೊದಲು ಸುಣ್ಣವನ್ನು ಲೇಪಿಸಿ ಅನಂತರ ಅದರ ಮೇಲೆ ಕೆಮ್ಮಣ್ಣನ್ನು ಹಚ್ಚಿರುವುದೂ ಉಂಟು. ಕಂದು ಮತ್ತು ಕಪ್ಪು ಜೇಡಿಮಣ್ಣಿನಿಂದ ಮಾಡಿದ ಬೊಂಬೆಗಳೂ ದೊರೆತಿವೆ.

ಸುಟ್ಟ ಜೇಡಿಮಣ್ಣಿನ ಗಿಲಿಕಿಗಳು, ಪೀಪಿಗಳು, ಹಕ್ಕಿಗಳು, ಬಂಡಿಗಳ ಆಕಾರದ ಆಟಿಗೆಗಳೂ ದೊರೆತಿವೆ. ಇವೆಲ್ಲ ಕುತೂಹಲಕಾರಿಯಾದ ಬೊಂಬೆಗಳು.

ಬೊಂಬೆ ತಯಾರಿಕೆ ಪ್ರಮುಖ ಗೃಹ ಕೈಗಾರಿಕೆ; ಅದನ್ನು ಸಣ್ಣ ಪ್ರಮಾಣದ ಕೈಗಾರಿಕೆಯಾಗಿ ಮಾಡುವ ಪ್ರಯತ್ನಗಳೂ ನಡೆದಿವೆ.

ಬೊಂಬೆಗಳ ಸೌಂದರ್ಯ ಅದನ್ನು ತಯಾರಿಸುವವನ ಕಲಾದೃಷ್ಟಿ ಕೈಚಳಕಗಳನ್ನು ಅವಲಂಬಿಸಿರುತ್ತದೆ. ಅವನು ಬೊಂಬೆಗೆ ಕೊಡುವ ಆಕಾರ, ನಿಲುವು, ಮೂಡಿಸುವ ಭಾವ, ತೊಡಿಸುವ ಉಡುಗೆ ತೊಡುಗೆ, ರಚನಾ ಕ್ರಿಯೆಯಲ್ಲಿ ತೋರಿಸುವ ನಯ ನಾಜೂಕು, ಇವೆಲ್ಲ ಸೊಬಗನ್ನು ಹೆಚ್ಚಿಸುತ್ತವೆ.

ಬೊಂಬೆಗಳ ಸೌಂದರ್ಯ ಸಾಧನೆಯಲ್ಲಿ ಅವುಗಳ ಉಡುಗೆ ತೊಡುಗೆಗಳಿಗೆ ಒಂದು ಗಣ್ಯ ಸ್ಥಾನವಿದೆ. ಇವು ಎರಡು ರೀತಿಯಾಗಿರಬಹುದು. ಬೊಂಬೆಯ ಮೇಲೆಯೇ ಮೂಡಿಸಿದ್ದು; ಬೊಂಬೆ ತಯಾರಾದ ಮೇಲೆ



ಜರ್ಮನಿಯ ಆಧುನಿಕ ಬೊಂಬೆಗಳು

ಅದಕ್ಕೆ ತೊಡಿಸಿದ್ದು. ಮೂಡಿಸುವುದಕ್ಕಿಂತ ತೊಡಿಸುವುದೇ ಹೆಚ್ಚು ಎನ್ನಬಹುದು. ಉಡುಗೆ, ಆಭರಣಗಳನ್ನು ತೊಡಿಸುವುದರಿಂದ ಒಂದೇ ಸಂಕಲನದಲ್ಲಿರುವ ಬೊಂಬೆಗಳಲ್ಲಿ ವೈವಿಧ್ಯವನ್ನು ಸಾಧಿಸಬಹುದು.

ಬೇರೆ ಬೇರೆ ಬೊಂಬೆಗಳನ್ನು, ಒಟ್ಟಿನಲ್ಲಿ ಅಚ್ಚುಕಟ್ಟಾಗಿ ಕಾಣುವಂತೆ ಆಕರ್ಷಕವಾಗಿರುವಂತೆ ಜೋಡಿಸುವುದು ಕೂಡ ಒಂದು ಕಲೆ. ಉದಾ: ಮದುವೆಯ ಮೆರವಣಿಗೆ, ರಥೋತ್ಸವ, ಕಾಲ್ಚೆಂಡಿನ ಪಂದ್ಯ—ಹೀಗೆ. ಒಂದೊಂದು ಬೊಂಬೆಯೂ ಯಾವ ಸ್ಥಾನದಲ್ಲಿರಬೇಕು; ಒಂದಕ್ಕೊಂದಕ್ಕೆ ಎಷ್ಟು ಅಂತರವಿರಬೇಕು ಎಂಬುದು ಇದರಲ್ಲಿ ಮುಖ್ಯ.



ಮೈಸೂರು, ಪಂಜಾಬು, ರಾಜಸ್ಥಾನಗಳ ವಧುಗಳು –ಬೊಂಬೆಗಳು





ಮೊಹೆಂಜೊದಾರೊ ಸೃಷ್ಟಿ

# ಆಟಿಗೆ

ಗ್ರಾಮೀಣ ದಂಪತಿ

ಚನ್ನಪಟ್ಟಣ ನಿರ್ಮಾಣ

ಪೌರಾಣಿಕ ಪಾತ್ರಗಳು

ರಾಮಾಯಣ, ಮಹಾಭಾರತ ಮುಂತಾದ ಕಾವ್ಯಗಳಿಂದ ಆರಿಸಿದ ದೃಶ್ಯಗಳನ್ನು ಅಥವಾ ಇತಿಹಾಸದ ಘಟನೆಗಳನ್ನು ತೊಗಲುಬೊಂಬೆಗಳ ಅಥವಾ ಸೂತ್ರದ ಬೊಂಬೆಗಳ ಮೂಲಕ ನಿರೂಪಿಸುವುದೂ ಉಂಟು. ಇಂಥ ಪ್ರತ್ಯೇಕ ದೃಶ್ಯಗಳನ್ನು ರಚಿಸುವಾಗ ಅವರಲ್ಲಿ ಬರುವ ಪಾತ್ರಗಳ ರೂಪ, ಭಾವ, ಅಲಂಕಾರ, ನೈಕಟ್ಯ, ಹಿನ್ನೆಲೆ ಸೂಚಕ ವಸ್ತುಗಳು ಇವನ್ನು ಎಚ್ಚರಿಕೆಯಿಂದ ರೂಪಿಸಬೇಕಾಗುತ್ತದೆ. ಇದಕ್ಕೆ ಕಾವ್ಯ ಇತಿಹಾಸಗಳ ತಿಳಿವಳಿಕೆ ಅವಶ್ಯ.

ಚಲನೆಯುಳ್ಳ ಬೊಂಬೆಗಳಂತೆ ಚಲನೆಯಿಲ್ಲದ ಬೊಂಬೆಗಳೂ ಉಂಟು. ಹರಪ್ಪ, ಮೊಹೆಂಜೊದಾರೊ ಅವಶೇಷಗಳಲ್ಲಿರುವ ಬೊಂಬೆಗಳಲ್ಲಿ ತಲೆಯನ್ನು ಅತ್ತಿಂದಿತ್ತ ಆಡಿಸುವ ಗೂಳಿಗಳ ಬೊಂಬೆಗಳು ದೊರೆತಿವೆ. ಕೈಕಾಲು ಆಡಿಸಿ ಕುಪ್ಪಳಿಸುವ, ಮನುಷ್ಯರ ಚೇಷ್ಟೆಗಳನ್ನು ಅನುಕರಿಸುವ, ಬೊಂಬೆಗಳನ್ನು ಗಮನಿಸುವುದೇ ಒಂದು ಮೋಜು. ತಾಳಹಾಕುವ ಸೈಕಲ್ ತುಳಿಯುವ, ಬೀಸಣಿಗೆ ಬೀಸಿಕೊಳ್ಳುವ, ತಿನಿಸು ತಿನ್ನುವಂತೆ ಕೈಬಾಯಿ ಆಡಿಸುವುದೇ ಮುಂತಾದ ಚಲನೆಗಳ ಬೊಂಬೆಗಳ ತಯಾರಿಕೆಗೆ ಕಲೆಗಾರಿಕೆಯ ಜೊತೆಗೆ ಯಂತ್ರಜ್ಞಾನವೂ ಬೇಕಾಗುತ್ತದೆ.

ಭಾರತದಂತೆ ಬೇರೆ ಕೆಲವು ದೇಶಗಳಲ್ಲೂ ಬೊಂಬೆಗಳಿಗೆ ಧಾರ್ಮಿಕ ಪ್ರಾಶಸ್ತ್ಯವಿದೆ. ಉದಾಹರಣೆಗೆ, ಜಪಾನಿನಲ್ಲಿ ಪ್ರತಿ ವರ್ಷ ಮಾರ್ಚ್ 3ರಂದು ಜರಗುವ ಹಬ್ಬದ ಅಂಗವಾಗಿ ಬೊಂಬೆಯ ಮೆರವಣಿಗೆ ನಡೆಯುತ್ತದೆ.

ನಮ್ಮಲ್ಲೂ ಪ್ರತಿ ವರ್ಷ ಹಬ್ಬದ ಕಾಲದಲ್ಲಿ, ಹೊಸದಾಗಿ ತಯಾರಿಸಿದ ಗಣೇಶನ ಮೂರ್ತಿಗಳನ್ನು ಪೂಜಿಸುವುದು ಪದ್ಧತಿ. ಊರಿನವರು ಒಂದಾಗಿ ದೊಡ್ಡ ಗಣೇಶನ ಮೂರ್ತಿಯನ್ನಿಟ್ಟು ಕೆಲ ಕಾಲ ಅದನ್ನು ಪೂಜಿಸಿ, ಕೊನೆಯಲ್ಲಿ ವೈಭವದಿಂದ ಮೆರವಣಿಗೆ ಮಾಡಿ, ಕೆರೆ ಕೊಳಗಳಲ್ಲಿ ಮುಳುಗಿಸುವ ವಾಡಿಕೆಯೂ ಕೆಲವು ಸ್ಥಳಗಳಲ್ಲಿದೆ.

**ನೋಡಿ :** ಸೂತ್ರದ ಬೊಂಬೆ ಆಟ ; ತೊಗಲುಗೊಂಬೆ ಆಟ

## ಬೊಕಾಷಿಯೊ

ಯೂರೋಪಿನ ನವೋದಯ ಕಾಲದಲ್ಲಿ (1300–1600) ಇಟಲಿಯಲ್ಲಿ ಪ್ರಸಿದ್ಧರಾದ ಮೂವರು ಸಾಹಿತಿಗಳಲ್ಲಿ ಒಬ್ಬ ಗಿಯೋವನಿ ಬೊಕಾಷಿಯೊ. ಉಳಿದಿಬ್ಬರು ದಾಂತೆ ಮತ್ತು ಪೆಟ್ರಾರ್ಕ್. ಇವರು ಇಟಲಿಯ ನವೋದಯದ ಶಿಲ್ಪಿಗಳೆಂದು ಪ್ರಸಿದ್ಧರಾಗಿದ್ದಾರೆ.

'ಡಿಕಾಮರಾನ್' ಕಥಾಸಂಕಲನದ ಕರ್ತೃ ಬೊಕಾಷಿಯೊ. ಫ್ಲಾರೆನ್ಸಿನ ವರ್ತಕನೊಬ್ಬನ ಪ್ರಣಯ ಜೀವನದ ಫಲವಾಗಿ ಹುಟ್ಟಿದ. ತಂದೆಯ ಮನೆಯಲ್ಲಿ ಮಲತಾಯಿಯ ಆರೈಕೆಯಲ್ಲಿ ಬೆಳೆದ. ಆತನ ಬಾಲ್ಯ ದುಃಖಮಯವಾಗಿಯೇ ಇತ್ತು. ಹುಡುಗನಿಗೆ ಸಾಹಿತ್ಯದಲ್ಲಿ ಆಸಕ್ತಿ. ಆದರೆ ತಂದೆಗೆ ಆ ವಿಚಾರದಲ್ಲಿ ಕಿಂಚಿತ್ತಾದರೂ ಅಭಿಮಾನವಿರಲಿಲ್ಲ. ತನ್ನ ಮಗ ಶ್ರೀಮಂತ ವರ್ತಕನಾಗಬೇಕೆಂಬುದು ಆತನ ಬಯಕೆ. ಬೊಕಾಷಿಯೊ ನೇಪಲ್ಸ್‌ಗೆ ನ್ಯಾಯಶಾಸ್ತ್ರ ಕಲಿಯಲೆಂದು ಹೋದ. ಆದರೆ ಆತ ತನ್ನ ಯೌವನವನ್ನು ಬೇಟೆಯಲ್ಲಿ, ಕುಣಿತದಲ್ಲಿ, ನ್ಯಾಯಾಲಯದ ಶ್ರೀಮಂತ ಯುವಕ ಅಧಿಕಾರಿಗಳ ಮನೆಯ ಔತಣಕೂಟಗಳಲ್ಲಿ ಭಾಗವಹಿಸುತ್ತ ಕಳೆದ.

ಬೊಕಾಷಿಯೊ 23 ವರ್ಷದವನಿದ್ದಾಗ ಇಗರ್ಜಿಯೊಂದರಲ್ಲಿ ಅಪೂರ್ವ ಸುಂದರಿಯೊಬ್ಬಳನ್ನು ಕಂಡು ಅವಳಲ್ಲಿ ಅನುರಕ್ತನಾದ. ಆಕೆ ವಿವಾಹಿತೆ. ಈ ಸ್ನೇಹ ಸಂಬಂಧ 12 ವರ್ಷಗಳ ಕಾಲ ಮುಂದುವರಿಯಿತು. ಬೊಕಾಷಿಯೊನ ಪ್ರಾರಂಭದ ಕೃತಿಗಳಿಗೆ ಪ್ರೇರಣೆ ಇವಳೇ. ಬೊಕಾಷಿಯೊನ ಪ್ರಥಮ ಗದ್ಯ ಕಾದಂಬರಿ 'ಫಿಲೊಕೊಲೊ.' ಇದರ ವಸ್ತು ಮಧ್ಯಯುಗದ ಪ್ರೇಮಿಗಳ ಪ್ರಣಯ ಕತೆ. 'ಫಿಲೊಸ್ಟ್ರಾಟೊ' ಮತ್ತು 'ಟೆಸೀಡ' ಪ್ರಣಯ ಕಾವ್ಯಗಳು. ಬೊಕಾಷಿಯೊನ ಕಾವ್ಯರಚನೆಗೆ ಸ್ಫೂರ್ತಿ ನೀಡುತ್ತಿದ್ದ ಆಕೆ ಇದ್ದಕ್ಕಿದ್ದಂತೆ ಪ್ಲೇಗ್ ಎಂಬ ಸಾಂಕ್ರಾಮಿಕ ರೋಗಕ್ಕೆ ಆಹುತಿಯಾದಳು.

ಬೊಕಾಷಿಯೊ ಪೆಟ್ರಾರ್ಕ್‌ರ ಪ್ರಥಮ ಭೇಟಿ 1350ರಲ್ಲಿ ಫ್ಲಾರೆನ್ಸ್ ನಗರದಲ್ಲಿ ನಡೆಯಿತು. ಮುಂದೆ ಅವರಿಬ್ಬರೂ ಅತ್ಯಂತ ನಿಕಟ ಗೆಳೆಯರಾಗಿ ಉಳಿದರು. ಆಗಲೇ ಆತ ಲ್ಯಾಟಿನ್ ಭಾಷೆಯಲ್ಲಿ ಪೆಟ್ರಾರ್ಕನ ಜೀವನವನ್ನು ಕುರಿತು ಬರೆದಿದ್ದ. ಬೊಕಾಷಿಯೊ 'ಡಿಕಾಮರಾನ್' ರಚಿಸುತ್ತಿದ್ದ ಅವಧಿಯಲ್ಲಿಯೇ ಆತನಿಗೆ ಪೆಟ್ರಾರ್ಕನ ಪರಿಚಯವಾದದ್ದು. ಅದು ಅವನ ಸಾಹಿತ್ಯ ಚಟುವಟಿಕೆ ಮತ್ತು ಶೈಲಿಯ ಮೇಲೆ ಮಹತ್ತರ ಪರಿಣಾಮ ಉಂಟುಮಾಡಿತು.



ನವೋದಯ ಸಾಹಿತ್ಯ ರಚನೆ : ಬೊಕಾಷಿಯೊ

'ಡಿಕಾಮರಾನ್' ಎಂದರೆ 10 ದಿನಗಳು ಎಂದು ಅರ್ಥ. ಇಟಲಿಯನ್ನು ಕಪ್ಪು ಮೋಡದಂತೆ ಆವರಿಸಿದ ಕಪ್ಪು ಪ್ಲೇಗಿನ ಭೀಕರತೆಯಿಂದ ತಪ್ಪಿಸಿಕೊಂಡು ಕೆಲವು ಮಂದಿ ಯುವಕ, ಯುವತಿಯರು ಫ್ಲಾರೆನ್ಸಿನ ಹತ್ತಿರದ ಹಳ್ಳಿಯೊಂದರಲ್ಲಿ ವಾಸಿಸುತ್ತಾರೆ. ಅವರು 10 ದಿನಗಳಲ್ಲಿ ಹೇಳಿದ 100 ಸ್ವಾರಸ್ಯ ಕತೆಗಳ ಸಂಕಲನ 'ಡಿಕಾಮರಾನ್'.

ಬೊಕಾಷಿಯೊ ಇಟಲಿಯ ಪ್ರಥಮ ಗದ್ಯ ಬರಹಗಾರ. ಯೂರೋಪಿನ ದೇಶಗಳಲ್ಲಿ ಸಣ್ಣ ಕತೆಗಳ ರಚನೆಯನ್ನು ಪ್ರಾರಂಭಿಸಿದವರಲ್ಲಿ ಅವನೇ ಮೊದಲಿಗ. ಇಟಲಿಯ ಟಸ್ಕನೀ ಪ್ರಾಂತದಲ್ಲಿ ತನ್ನ ಜೀವನದ ಬಹು ಭಾಗವನ್ನು ಕಳೆದ. ಟಸ್ಕನೀ ಉಪಭಾಷೆಯಲ್ಲಿಯೇ ಆತ ಬರೆಯುತ್ತಿದ್ದ. ಈ ಉಪಭಾಷೆಯೇ ಮುಂದೆ ಇಟಾಲಿಯನ್ ಭಾಷೆ ಎನಿಸಿಕೊಂಡಿತು. 14ನೆಯ ಶತಮಾನದ ಕ್ರೂರವೂ ಒರಟೂ ಆದ ಸಮಾಜದ ದೈನಂದಿನ ಜೀವನದ ಸ್ವಾರಸ್ಯಕರ ಚಿತ್ರಣವನ್ನು ಅವನು ತನ್ನ ಕತೆಗಳಲ್ಲಿ ನೀಡಿದ. ಅವನ ಕೃತಿಗಳಲ್ಲಿ ಕ್ರೈಸ್ತ ಧರ್ಮಾಧಿಕಾರಿಗಳನ್ನು ಕುರಿತು ವಿಡಂಬನೆ ಇದ್ದರೂ ಸ್ವತಃ ಬೊಕಾಷಿಯೊ ನಿಷ್ಠಾವಂತ ಕ್ರೈಸ್ತನಾಗಿದ್ದ.

ಬೊಕಾಷಿಯೊ ಕೃತಿಗಳು ಇಂಗ್ಲೆಂಡಿನಲ್ಲಿ ಶೇಕ್ಸ್‌ಪಿಯರ್, ಡ್ರೈಡನ್, ಚಾಸರ್, ಕೀಟ್ಸ್, ಟೆನಿಸನ್ ಮುಂತಾದ ಪ್ರತಿಭಾವಂತ ಸಾಹಿತಿಗಳಿಗೂ ಸ್ಫೂರ್ತಿ ನೀಡಿದುವು.

ಬೊಕಾಷಿಯೊ ತನ್ನ ಜೀವನದ ಕೊನೆಗಾಲವನ್ನು ಕಡು ಬಡತನವಲ್ಲಿ ಕಳೆಯಬೇಕಾಯಿತು. ಸಾಹಿತ್ಯ ಕೃತಿಗಳನ್ನು ಭಾಷಾಂತರಿಸುತ್ತ ಹಣ ಸಂಪಾದಿಸುತ್ತಿದ್ದ. ಅಕ್ಟೋಬರ್ 1370ರಲ್ಲಿ ಫ್ಲಾರೆನ್ಸಿನ ಇಗರ್ಜಿಯಲ್ಲಿ ದಾಂತೆಯ 'ಡಿವೈನ್ ಕಾಮಿಡಿ' ಕಾವ್ಯವನ್ನು ಸಾರ್ವಜನಿಕರಿಗಾಗಿ ಓದಿ ಹೇಳಿದ. ದಾಂತೆಯ ಕಾವ್ಯವನ್ನು ಅವನು ವಿವರಿಸುತ್ತಿದ್ದ ರೀತಿ ಟೀಕೆಗೆ ಗುರಿಯಾಯಿತು.

1374ರಲ್ಲಿ ಅವನ ಜೀವದ ಗೆಳೆಯ ಪೆಟ್ರಾರ್ಕ್ ಮೃತನಾದ. ಬೊಕಾಷಿಯೊಗೆ ಇದು ಪ್ರಬಲ ಆಘಾತವಾಯಿತು. ಮರುವರ್ಷವೇ, ಅಂದರೆ 1375ರ ಡಿಸೆಂಬರ್ 21ರಂದು, ಬೊಕಾಷಿಯೊ ಸಹ ತೀರಿಕೊಂಡ.

## ಬೋದ್ಲೇರ್

ಬದುಕಿದ್ದಾಗ ಅವನ ಕೃತಿಗಳಿಗೆ ಮಾನ್ಯತೆ ದೊರೆಯಲಿಲ್ಲ; ಅಚ್ಚಾಗಿದ್ದ ಕೆಲವು ಪುಸ್ತಕಗಳು, ಮಾರಾಟವಾಗಿ ಹೋದರೂ ಪುನರ್ಮುದ್ರಣ ಕಾಣಲಿಲ್ಲ. ಅವನ ಇನ್ನು ಕೆಲವು ಕೃತಿಗಳು ಅಚ್ಚಾಗಲೇ ಇಲ್ಲ.

ಹೀಗೆ ತನ್ನ ಜೀವಿತಕಾಲದಲ್ಲಿ ಅಲಕ್ಷ್ಯಕ್ಕೆ ಒಳಗಾಗಿದ್ದ ಕವಿಯನ್ನು ಈಗ ಪ್ರಪಂಚದಾದ್ಯಂತ ವಿಮರ್ಶಕರು 19ನೆಯ ಶತಮಾನದ ಯೂರೊಪಿನ ಮಹಾನ್ ಕವಿಗಳಲ್ಲೊಬ್ಬನೆಂದು ಪರಿಗಣಿಸುತ್ತಾರೆ. ಆತನೇ ಫ್ರಾನ್ಸಿನ ಕವಿ–ವಿಮರ್ಶಕ ಚಾರ್ಲ್ಸ್ ಪೀರಿ ಬೋದ್ಲೇರ್.

ಅಮೆರಿಕದ ಎಡ್ಗರ್ ಅಲೆನ್ ಪೋನ ಕಥೆಗಳೆಂದರೆ ಬೋದ್ಲೇರ್‌ಗೆ ಅಪಾರ ಮೆಚ್ಚುಗೆ. ಅವನು ಪೋನ ಕಥೆಗಳನ್ನು ಫ್ರೆಂಚ್ ಭಾಷೆಗೆ ಅನುವಾದ ಮಾಡಿದ್ದ. 'ಕೇಡಿನ ಹೂಗಳು' ಬೋದ್ಲೇರನ ಮೊದಲ ಕವನ ಸಂಕಲನ. 1857ರಲ್ಲಿ ಮೊಟ್ಟಮೊದಲು ಪ್ರಕಟವಾದ ಈ ಸಂಕಲನ ಅವನ ಮೇರುಕೃತಿ. ಇದು ಒಳ್ಳೆಯದು. ಇದು ಕೆಟ್ಟದ್ದು ಎಂದು ಗುರುತಿಸುವಾಗ ಮನುಷ್ಯನ ಮನಸ್ಸಿನಲ್ಲೇಳುವ ದ್ವಂದ್ವ ಅವುಗಳಲ್ಲಿ ಪ್ರತಿಬಿಂಬಿತವಾಗಿವೆ; ಸಾಂಪ್ರದಾಯಿಕ ನೀತಿಯ ಟೀಕೆ ಇದೆ. ರಮ್ಯ ಕವಿತೆಗಳು ಜನಪ್ರಿಯವಾಗಿದ್ದ ಕಾಲದಲ್ಲಿ ಬಾಳಿದವನು. ಬೋದ್ಲೇರ್. ಅಂದಿನ ಓದುಗರಿಗೆ ಅವುಗಳ ಪರಿಚಯ ಮಾತ್ರವಿತ್ತು. ಆದ್ದರಿಂದ ಬೋದ್ಲೇರನ ಬಿರುಸು ಬರೆವಣಿಗೆ ಅವರಿಗೆ ನುಂಗಲಾರದ ತುತ್ತಾಯಿತು. ಅವನ ಕವನಗಳಲ್ಲಿ ಅನೀತಿಯ ಚಿತ್ರಣವಿದೆಯೆಂದು ಅವರು ಕೆರಳಿದರು. ಅನೀತಿ ಪ್ರಚಾರಕನೆಂದು ಬೋದ್ಲೇರನ ಬಂಧನವೂ ಆಯಿತು. ಆ ಸಂಕಲನದಲ್ಲಿದ್ದ ಕೆಲವು ಕವಿತೆಗಳನ್ನು ತೆಗೆದುಹಾಕದೆ ಅದನ್ನು ಫ್ರಾನ್ಸಿನಲ್ಲಿ ಪುನರ್ಮುದ್ರಿಸುವುದು ಸಾಧ್ಯವಿಲ್ಲವಾಯಿತು.

1845 ಹಾಗೂ 1846ರಲ್ಲಿ ನಡೆದ ಕಲಾ ವಸ್ತುಪ್ರದರ್ಶನದ ವಿಮರ್ಶೆಗಳನ್ನು ಬೋದ್ಲೇರ್ ಬರೆದ. ಇವನ ಕಲಾವಿಮರ್ಶೆಗಳನ್ನೊಳಗೊಂಡ ಪುಸ್ತಕ 'ಗದ್ಯದಲ್ಲಿರುವ ಪುಟ್ಟ ಪದ್ಯಗಳು' 1886ರಲ್ಲಿ ಪ್ರಕಟವಾಯಿತು.

ಗದ್ಯದಲ್ಲಿ ಹೇಳಲಾಗದುದನ್ನು ಕವಿತೆಯ ಮೂಲಕ ತಿಳಿಸಲು ಸಾಧ್ಯ ಎಂಬುದು ಬೋದ್ಲೇರನ ಅಭಿಪ್ರಾಯವಾಗಿತ್ತು. ಆತನ ಕವಿತೆಗಳಲ್ಲಿ ದುಃಖ, ಕುತೂಹಲಗಳು ತುಂಬಿವೆ. ಅವು ಸ್ವಪ್ನಗಳಂತಿವೆ.

ಬೋದ್ಲೇರ್ 1821ರ ಏಪ್ರಿಲ್ 9ರಂದು ಪ್ಯಾರಿಸಿನಲ್ಲಿ ಜನಿಸಿದ. ಆರು ವರ್ಷದ ಹಸುಳೆಯಾಗಿದ್ದಾಗಲೇ ತಂದೆಯನ್ನು ಕಳೆದುಕೊಂಡ.



ಕವಿತೆಯ ಹಿರಿಮೆ : ಬೋದ್ಲೇರ್

ಮಲತಂದೆ ಸೈನ್ಯಾಧಿಕಾರಿ. ಮಲತಂದೆಗೂ ಬೋದ್ಲೇರನಿಗೂ ಸರಿಬೀಳುತ್ತಿರಲಿಲ್ಲ. ಅವನು ಕಳೆದದ್ದು ಸಂತೋಷವಿಲ್ಲದ ಬಾಲ್ಯ. ಕಾಲೇಜು ವಿದ್ಯಾಭ್ಯಾಸ ಪ್ಯಾರಿಸಿನಲ್ಲಿ ನಡೆಯಿತು. ಬೋದ್ಲೇರ್ ಸ್ವಭಾವತಃ ದುಂದುಗಾರ. ಇದನ್ನು ನೋಡಿದ ಇವನ ತಾಯಿ 1841ರಲ್ಲಿ ಇವನನ್ನು ಭಾರತಕ್ಕೆ ಕಳುಹಿಸಿದಳು. ಅವನು ಭಾರತವನ್ನು ತಲಪಲಿಲ್ಲವಾದರೂ ಪೂರ್ವ ದೇಶಗಳ ಸಂಸ್ಕೃತಿ ಆತನ ಮನಸ್ಸನ್ನು ಆಕರ್ಷಿಸಿತು. ಪ್ಯಾರಿಸಿಗೆ ಹಿಂದಿರುಗಿದ ಮೇಲೆ ಅವನು ತನ್ನ ತಂದೆಯ ಕಡೆಯಿಂದ ಬಂದಿದ್ದ ಆಸ್ತಿಯನ್ನೆಲ್ಲ ದುಂದುಗಾರಿಕೆಯಲ್ಲಿ ಹಾಳುಮಾಡಿದ. ಕೈಯಲ್ಲಿ ಹಣವಿಲ್ಲದಾಗ ಕಲಾವಿದರನ್ನು ಕುರಿತು ಲೇಖನಗಳನ್ನು ಬರೆದುಕೊಟ್ಟು ಹಣ ಸಂಪಾದಿಸತೊಡಗಿದ.

1846ರಲ್ಲಿ ಪ್ಯಾರಿಸಿನಿಂದ ಬ್ರಸಲ್ಸ್‌ಗೆ ಬಂದ ಬೋದ್ಲೇರ್ ಎರಡು ವರ್ಷಗಳ ಕಾಲ ದುರ್ಗತಿಯಲ್ಲಿ ಕಾಲ ಕಳೆದ. ದೇಹಸ್ಥಿತಿ ಕೆಟ್ಟಿತು. ಬಡತನವೂ ಜೊತೆಗೆ ಬಿತ್ತು. ಅಸಹಾಯಕ ಸ್ಥಿತಿಯಲ್ಲಿ ಪ್ಯಾರಿಸಿಗೆ ಹಿಂದಿರುಗಿದ. ಬಡತನದಲ್ಲಿ ಬಳಲುತ್ತ ತನ್ನ 46ನೆಯ ವಯಸ್ಸಿನಲ್ಲಿ 1867, ಆಗಸ್ಟ್ 31ರಂದು ಪ್ಯಾರಿಸಿನ ಆಸ್ಪತ್ರೆಯೊಂದರಲ್ಲಿ ತೀರಿಕೊಂಡ.

ಫ್ರೆಂಚ್ ಹಾಗೂ ಇಂಗ್ಲಿಷ್ ಕವಿತಾಲೋಕದ ಮೇಲೆ ಬೋದ್ಲೇರ್ ಬೀರಿದ ಪ್ರಭಾವ ಗಣನೀಯವಾದದ್ದು. ಸ್ವಿನ್‌ಬರ್ನ್, ಡಾಸನ್ ಮೊದಲಾದ ಕವಿಗಳು ಇವನ ಪ್ರಭಾವಕ್ಕೆ ಒಳಗಾದರು. 20ನೆಯ ಶತಮಾನದ ಆಂಗ್ಲ ಸಾಹಿತ್ಯದಲ್ಲಿ ಬೋದ್ಲೇರನ ಪ್ರತ್ಯಕ್ಷ, ಅಪ್ರತ್ಯಕ್ಷ ಪ್ರಭಾವವನ್ನು ಗುರುತಿಸಬಹುದಾಗಿದೆ.

## ಬ್ರೌನಿಂಗ್ ದಂಪತಿ

ಕವಿತಾರಚನೆಗೂ ಆದರ್ಶ ದಾಂಪತ್ಯಕ್ಕೂ ಹೆಸರಾದ ಜೋಡಿ — ಬ್ರೌನಿಂಗ್ ಮತ್ತು ಆತನ ಪತ್ನಿ. ಆಕೆಯ ಹೆಸರು ಎಲಿಜಬೆತ್. ಆತನ

ಹೆಸರು ರಾಬರ್ಟ್. ಅವರ ಅಭಿವ್ಯಕ್ತಿಯ ಮಾಧ್ಯಮವಾದ ಕವಿತೆ ಅವರ ನಡುವೆ ಪ್ರೇಮಾಂಕುರವಾಗಲು ಕಾರಣವಾಯಿತು.

ಬದುಕಿನ ಆನಂದ ರಾಬರ್ಟ್‌ಗೆ ಇಷ್ಟ : ಸೌಂದರ್ಯ. ರಮ್ಯತೆಗಳಿಗಾಗಿ ಹಂಬಲಿಸುತ್ತಿತ್ತು ಎಲಿಜಬೆತಳ ಜೀವ. ಎಲಿಜಬೆತ್ ಗಂಡನಿಗಿಂತ ಆರು ವರ್ಷ ಹಿರಿಯವಳು. ಇಂಗ್ಲೆಂಡಿನ ಈಶಾನ್ಯಭಾಗದಲ್ಲಿರುವ ಡರ್‌ಹಾಮ್ ಎಂಬಲ್ಲಿ 1806 ಮಾರ್ಚ್ 6ರಂದು ಆಕೆಯ ಜನನ. ಬೆಟ್ಟಗುಡ್ಡಗಳಿಂದ ಕೂಡಿದ. ಸೊಬಗಿನ ಏಕಾಂತ ನೆಲೆಯಲ್ಲಿ ಅವಳ ಬಾಲ್ಯ ಕಳೆಯಿತು. 15ನೆಯ ವಯಸ್ಸಿನಲ್ಲಿ ಕುದುರೆ ಸವಾರಿ ಮಾಡುತ್ತಿದ್ದಾಗ ಕೆಳಗೆ ಬಿದ್ದು ಅವಳ ಬೆನ್ನೆಲುಬಿಗೆ ಪೆಟ್ಟಾಯಿತು. ಅಂದಿನಿಂದ ಅವಳು ದುರ್ಬಲಳಾದಳು. ಹೆಚ್ಚು ವಿಶ್ರಾಂತಿ ಪಡೆಯುವುದು ಅವಶ್ಯವಾಯಿತು. ಇದರಿಂದಾಗಿ ಅವಳ ಸಾಹಿತ್ಯೋಪಾಸನೆಗೆ ಅವಕಾಶ ದೊರೆಯಿತು. ಅವಳ ತಂದೆ ಅಹಂಕಾರಿ. ದರ್ಪ ಸ್ವಭಾವದವನು. ಆದರೂ ತನ್ನ ಮಗಳ ಸಾಹಿತ್ಯಾಸಕ್ತಿಯ ಬಗೆಗೆ ಅವನಿಗೆ ಹೆಮ್ಮೆ. ಅವಳಿಗೆ ಪುಸ್ತಕಗಳನ್ನು ತರಿಸಿಕೊಟ್ಟು ಪ್ರೋತ್ಸಾಹಿಸಿದ. ಎಲಿಜಬೆತ್ ತಾರುಣ್ಯದ ಹೊಸ್ತಿಲಲ್ಲಿದ್ದಾಗ ಬರೆದ ಕವಿತೆ 'ಮ್ಯಾರಥಾನ್ ಕಾಳಗ'. ಅನಂತರ ಕಾಲಕಾಲಕ್ಕೆ 'ಮನಸ್ಸಿನ ಬಗೆಗೆ ಒಂದು ನಿಬಂಧ ಮತ್ತು ಇತರ ಕವನಗಳು', 'ಬಂಧಿತ ಪ್ರೊಮಿಥಿಯಸ್', 'ಸೆರಫಿಮ್ ಮತ್ತು ಇತರ ಕವನಗಳು' ಮತ್ತು ಇನ್ನೆರಡು ಕವನ ಸಂಕಲನಗಳು ಹೊರಬಂದುವು.



ಕವಿದಂಪತಿ : ಎಲಿಜಬೆತ್, ರಾಬರ್ಟ್

ರಾಬರ್ಟ್ ಬ್ರೌನಿಂಗ್ ಅವಳ ಜೀವನವನ್ನು ಪ್ರವೇಶಿಸಿದ್ದು ಈ ಘಟ್ಟದಲ್ಲಿ. ಅವನಿಗೆ ಆಗ ತಾನೇ ಮೂವತ್ತು ವರ್ಷ ದಾಟಿತ್ತು. ವಿಮರ್ಶಕರು ಅವನ ಪ್ರತಿಭೆಯನ್ನು ಗುರುತಿಸಿದ್ದರು. ಆದರೆ ಅವನಿನ್ನೂ ಎಲಿಜಬೆತಳಷ್ಟು ಖ್ಯಾತಿ ಪಡೆದಿರಲಿಲ್ಲ. ಎಲಿಜಬೆತ್ ಬರೆದ ಪದ್ಯವೊಂದನ್ನು ಬ್ರೌನಿಂಗ್ ಓದಿದ. ಅದರಲ್ಲಿ ಅವನ ಪದ್ಯದ ಪ್ರಸ್ತಾಪ ಇದ್ದಿತು. ತನ್ನ ಪದ್ಯವನ್ನು ಆಕೆ ಅರ್ಥಮಾಡಿಕೊಂಡಿರುವ ರೀತಿ ಅವನಿಗೆ ಬಹಳ ಹಿಡಿಸಿತು. ಅವಳನ್ನು ಕಾಣಬೇಕೆಂದು ಆಶಿಸಿದ. ಅನುಮತಿ ಬೇಡಿದ : ಅವಳನ್ನು ಕಂಡು ಮಾತನಾಡಿದ. ಹೀಗೆ ಮೊದಲಾದ ಪರಿಚಯ ಅವರ ಪ್ರೇಮಜೀವನಕ್ಕೆ ನಾಂದಿಯಾಯಿತು.

ಎಲಿಜಬೆತ್ ತಂದೆ ಇವರ ವಿವಾಹಕ್ಕೆ ಒಪ್ಪಲಿಲ್ಲ. ಆದ್ದರಿಂದ 1846ರಲ್ಲಿ ಒಂದು ಪ್ರಾತಃಕಾಲ ಎಲಿಜಬೆತ್ ಯಾರಿಗೂ ಕಾಣದಂತೆ ಮನೆಯಿಂದ ಹೊರಬಿದ್ದಳು. ಚರ್ಚಿಗೆ ಹೋಗಿ ಬ್ರೌನಿಂಗನನ್ನು ಮದುವೆಯಾದಳು. ಅಂದಿನಿಂದ ಅವಳ ತಂದೆ ಕೊನೆಯವರೆಗೂ ಅವಳೊಡನೆ ಯಾವ ವ್ಯವಹಾರವನ್ನೂ ಇಟ್ಟುಕೊಳ್ಳಲಿಲ್ಲ.

ಬ್ರೌನಿಂಗ್, ಎಲಿಜಬೆತಳನ್ನು ಇಟಲಿಯ ಫ್ಲಾರೆನ್ಸ್‌ಗೆ ಕರೆದೊಯ್ದ. ಅಲ್ಲಿನ ಹಿತಕರವಾದ ಹವೆಯು, ಉಲ್ಲಾಸಿತ ಜೀವನ ಅವಳ ಬಾಳಿನ ವರ್ಷವನ್ನು ಹೆಚ್ಚಿಸಿದುವು. ಈ ಅವಧಿಯನ್ನು ಕುರಿತು ಎಲಿಜಬೆತ್, "ಜಗತ್ತಿನಲ್ಲಿ ಯಾರೂ ಇವರಿಗೆ ಇಷ್ಟು ಸಂತೋಷವನ್ನು ಅನುಭವಿಸಿರಲಾರರು." ಎಂದು ಹೇಳಿಕೊಂಡಿದ್ದಾಳೆ. ಅವರ ಪ್ರೇಮದ ಭಾವ ಎಲಿಜಬೆತ್ ಬರೆದ 'ಪೋರ್ಚುಗೀಸ್‌ನಿಂದ ಬಂದ ಸುನೀತಗಳು' ಎಂಬ 44 ಸುನೀತಗಳಲ್ಲಿ ಸುಂದರವಾಗಿ ಮೂಡಿದೆ. (ಬ್ರೌನಿಂಗ್ ಅವಳನ್ನು 'ನನ್ನ ಪುಟ್ಟ ಪೋರ್ಚುಗೀಸ್' ಎಂದು ಕರೆಯುತ್ತಿದ್ದ.)

"ನೀನೆಂದರೆನಗೆಷ್ಟು ಪ್ರೇಮ ? ಲೆಕ್ಕಿಸಲೆಳಸುವೆ ಅದರ ಪರಿಯ
ಎನ್ನಾತ್ಮ ಮುಟ್ಟಿರುವ ಆಳ. ಅಗಲ. ಎತ್ತರಕೆ
ಹಬ್ಬಿದೆ ನನ್ನ ಈ ಭಾವ........."

—ಇದು ಅವಳ ಒಂದು ಸುನೀತದ ಮೂರು ಸಾಲುಗಳು.

ಬ್ರೌನಿಂಗ್ ಗತಕಾಲದ ಕಲೆಯಲ್ಲಿ ಆಸಕ್ತಿ ತೋರಿಸಿದ. ಎಲಿಜಬೆತ್ ಸಮಕಾಲೀನ ರಾಜಕೀಯ ಜೀವನದಲ್ಲಿ ಆಸಕ್ತಳಾಗಿದ್ದಳು. ಇದ್ದಕ್ಕಿದ್ದಂತೆ 1861ರಲ್ಲಿ ಎಲಿಜಬೆತ್ ಕಾಲವಾದಳು.

ರಾಬರ್ಟ್ ಬ್ರೌನಿಂಗ್ ಹುಟ್ಟಿದ್ದು 1812ರ ಮೇ 7ರಂದು. ಗುಮಾಸ್ತೆಯ ಕೆಲಸದಲ್ಲಿದ್ದ ತಂದೆ, ಸುಸಂಸ್ಕೃತನಾದ ವ್ಯಕ್ತಿ ; ಒಳ್ಳೆಯ ಪುಸ್ತಕ ಭಂಡಾರ ಅವನಲ್ಲಿತ್ತು. ಕಾವ್ಯ ಮನೋವೃತ್ತಿಗೆ ಪೋಷಕವಾದ ವಾತಾವರಣದಲ್ಲಿ ಬ್ರೌನಿಂಗ್ ಬೆಳೆದ. ಅವನಿಗೆ ಸಂಗೀತ ಶಿಕ್ಷಣವೂ ದೊರೆಯಿತು. ಹತ್ತಿರದಲ್ಲಿದ್ದ ಚಿತ್ರಶಾಲೆಗೂ ಅವನು ಪದೇ ಪದೇ ಹೋಗಿಬರುತ್ತಿದ್ದ.

ಬ್ರೌನಿಂಗ್ ಚಿಕ್ಕಂದಿನಿಂದಲೂ ಬೈರನ್ ಮತ್ತು ಷೆಲ್ಲಿ — ಈ ಕವಿಗಳಲ್ಲಿ ಆಸಕ್ತನಾಗಿದ್ದ. ಅವನು ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಒಂದು ಕವನ ಸಂಕಲನ ಪ್ರಕಟಿಸಿದ. ಅದರಲ್ಲಿರುವ ಕವಿತೆಗಳಲ್ಲಿ ಬೈರನನ ಪ್ರಭಾವ ಎದ್ದುಕಾಣುತ್ತದೆ. ಬ್ರೌನಿಂಗನ ಮೇಲೆ ಕೀಟ್ಸನ ಪ್ರಭಾವವೂ ಇತ್ತು. 'ಪಾಲೀನ್' ಎಂಬ ನೀಳ್ಗವಿತೆಯನ್ನು ಪ್ರಕಟಿಸಿದಾಗ ಅವನಿನ್ನೂ ತರುಣ. ಕವಿಯ ವಯಸ್ಸನ್ನು ಗಮನಿಸಿದರೆ ಈ ಕೃತಿ ಅವನು ಉತ್ತಮ ಕವಿಯಾಗುವ ಲಕ್ಷಣಗಳನ್ನು ತೋರಿಸಿತು ಎನ್ನಬೇಕು. ಸುಮಾರು ಇಪ್ಪತ್ತು ವರ್ಷ ವಯಸ್ಸಿನವನಾಗಿದ್ದಾಗಲೇ ಬ್ರೌನಿಂಗ್ ಇಟಲಿ, ರಷ್ಯಗಳಲ್ಲಿ ಪ್ರವಾಸ ನಡೆಸಿದ. ಅನಂತರ, ಅಂದರೆ 23ನೆಯ ವರ್ಷ ತುಂಬುವ ಮೊದಲೇ, ಪ್ರಕಟಿಸಿದ 'ಪರಸಿಲಸ್' ಹಿರಿಯ ಕವಿಗಳಾದ ವರ್ಡ್ಸ್‌ವರ್ತ್ ಮುಂತಾದವರ ಗಮನ ಸೆಳೆಯಿತು : ಅವನಿಗೆ ಖ್ಯಾತಿಯನ್ನೂ ತಂದಿತು. ಅನಂತರ ಅನೇಕ ಕವಿತಾಸಂಕಲನಗಳನ್ನು ಬ್ರೌನಿಂಗ್ ಪ್ರಕಟಿಸಿದ. 1864ರಲ್ಲಿ ಪ್ರಕಟಿಸಿದ 'ಪಾತ್ರವರ್ಗ' ಅವನ ಅತ್ಯುತ್ತಮ ಕೃತಿಗಳಲ್ಲೊಂದು.

ಬ್ರೌನಿಂಗ್ ಚಿಕ್ಕವಯಸ್ಸಿನಿಂದಲೇ ಕವಿತಾರಚನೆಯಲ್ಲಿ ತೊಡಗಿದನಾದರೂ ಸಾಹಿತ್ಯರಂಗದಲ್ಲಿ ಗೌರವ ಸ್ಥಾನವನ್ನು ಪಡೆಯುವ ಹೊತ್ತಿಗೆ ಅವನ ವಯಸ್ಸು ಐವತ್ತರ ಗಡಿ ದಾಟಿತ್ತು.

ಎಲಿಜಬೆತಳ ಮರಣಾನಂತರ ಬ್ರೌನಿಂಗ್ ಇಂಗ್ಲೆಂಡಿಗೆ ಹಿಂದಿರುಗಿದ. 'ಪಾತ್ರವರ್ಗ'ವನ್ನು ಬರೆದದ್ದು ಇಲ್ಲೇ. 'ಉಂಗುರ ಮತ್ತು ಪುಸ್ತಕ'

(1868–69) ಅವನ ಸಾಧನೆಗಳಲ್ಲೆಲ್ಲ ಹಿರಿಯ ಮಟ್ಟದ್ದು. ಶ್ರೀಮಂತನೊಬ್ಬ ತನ್ನ ಕಿರಿವಯಸ್ಸಿನ ಮಡದಿಯನ್ನು ಕೊಲೆಮಾಡಿದ ಕಥೆ ಇದರ ವಸ್ತು. ಈ ಕವನದಲ್ಲಿ ಹನ್ನೆರಡು ಮಂದಿ ತಮಗೆ ತೋರಿದಂತೆ ಇದನ್ನು ವಿವರಿಸಿದ್ದಾರೆ. ಈ ಕೃತಿಯಲ್ಲಿ ಬ್ರೌನಿಂಗನ ಕಲ್ಪನಾಶಕ್ತಿ ಪ್ರತಿಭೆಗಳನ್ನು ಕಾಣಬಹುದಾಗಿದೆ. ವಿವಿಧ ಮನೋವೃತ್ತಿಗಳನ್ನು ವಿವೇಚಿಸುವಲ್ಲಿ ಕವಿಯ ಚಾತುರ್ಯ ಇದರಲ್ಲಿ ಎದ್ದು ತೋರುತ್ತದೆ. ಕೆಲವೇ ಮಾತುಗಳಲ್ಲಿ ಅದೆಷ್ಟು ಹೆಚ್ಚು ಭಾವವನ್ನು ತುಂಬುವುದು ಬ್ರೌನಿಂಗನ ವೈಶಿಷ್ಟ್ಯ. ಇದರಿಂದಾಗಿ ಬಹ್ವಂಶ ಅವನ ಕವಿತೆಗಳ ಭಾವ ಅಸ್ಪಷ್ಟವಾಗುತ್ತದೆ ಎಂಬ ಟೀಕೆಯೂ ಇದೆ. ಬ್ರೌನಿಂಗನ ಹಾಸ್ಯಪ್ರಜ್ಞೆ, ಕಲಾಮಯ ಅಭಿವ್ಯಕ್ತಿ, ಅಪಾರ ಜ್ಞಾನ, ಮಾನವನ ಜೀವನದ ಬಗೆಗೆ ಅವನ ಸಹಾನುಭೂತಿ, ತೀಕ್ಷ್ಣ ಒಳನೋಟ, ಉದಾತ್ತ ಆದರ್ಶಗಳು —ಅವನನ್ನು ಕವಿಗಳ ಅಗ್ರ ಪಂಕ್ತಿಯಲ್ಲಿ ನಿಲ್ಲಿಸಿವೆ.

ಇಂಗ್ಲೆಂಡಿನಿಂದ ಹಲವು ಬಾರಿ ಇಟಲಿಗೆ ಹೋಗಿಬಂದ ಬ್ರೌನಿಂಗ್ ಅಲ್ಲಿ ತಾನು ವಾಸಿಸುತ್ತಿದ್ದ 'ಅಸೋಲೊ' ಎಂಬ ತನ್ನ ಬಂಗಲೆಯ ಹೆಸರನ್ನು ಉಪಯೋಗಿಸಿಕೊಂಡು 'ಅಸೋಲಾಂಡೊ; ಕಾಲ್ಪನಿಕ ಹಾಗೂ ವಾಸ್ತವಾಂಶಗಳು' ಎಂಬ ತನ್ನ ಕೊನೆಯ ಕವನ ಸಂಕಲನವನ್ನು ಸಿದ್ಧಗೊಳಿಸಿದ. ಇದು ಅವನ ಮರಣದ ದಿನದಂದು, ಎಂದರೆ 1889, ಡಿಸೆಂಬರ್ 12ರಂದು, ಪ್ರಕಟವಾಯಿತು.

ಆಂಗ್ಲ ಸಾಹಿತ್ಯದ ವಿಕ್ಟೋರಿಯ ಯುಗದ ಕವಿಗಳಲ್ಲಿ ಬ್ರೌನಿಂಗ್ ಅತ್ಯಂತ ಸ್ವೋಪಜ್ಞ ಕವಿ.

## ಭರತನ 'ನಾಟ್ಯಶಾಸ್ತ್ರ'

ಭರತನ 'ನಾಟ್ಯಶಾಸ್ತ್ರ' ನಮಗೆ ದೊರೆತಿರುವ ಭಾರತೀಯ ಲಕ್ಷಣ ಗ್ರಂಥಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದದ್ದು. ಅದಕ್ಕೂ ಹಿಂದೆ ಶಿಲಾಲಿ ಮತ್ತು ಕೃಶಾಶ್ವ ಎಂಬವರು 'ನಟಸೂತ್ರ'ಗಳನ್ನು ರಚಿಸಿದ್ದರೆಂಬ ಬಗೆಗೆ ಉಲ್ಲೇಖವಿದೆ. ಆದರೆ ಈ ಗ್ರಂಥ ಈವರೆಗೆ ದೊರೆತಿಲ್ಲ.

'ನಾಟ್ಯಶಾಸ್ತ್ರ' ಯಾವಾಗ ರಚಿತವಾಯಿತು ಎಂಬುದು ಅಸ್ಪಷ್ಟ. ಸುಮಾರು ಕ್ರಿ. ಶ. ಒಂದನೆಯ ಅಥವಾ ಎರಡನೆಯ ಶತಮಾನದಲ್ಲಿ ರಚಿತವಾಗಿರಬೇಕೆಂಬ ಊಹೆ ಇದೆ. ಈಗ ನಮಗೆ ದೊರೆತಿರುವ 'ನಾಟ್ಯಶಾಸ್ತ್ರ' ಮೂಲ ಗ್ರಂಥವೇ ಅಥವಾ ಪ್ರಚಾರದಲ್ಲಿದ್ದ ಗ್ರಂಥವೊಂದರಿಂದ ಸಂಗ್ರಹಿಸಿದುದೇ ಎಂಬ ಬಗೆಗೆ ವಾದವಿದೆ. ಈಗ ದೊರೆತಿರುವ 'ನಾಟ್ಯಶಾಸ್ತ್ರ'ಕ್ಕೆ ಮೂಲವಾದ 12 ಸಾವಿರ ಶ್ಲೋಕಗಳ ಗ್ರಂಥವೊಂದು ಇದ್ದಿರಬಹುದೆಂದು ಕೆಲವು ಮಂದಿ ವಿದ್ವಾಂಸರ ಅಭಿಪ್ರಾಯ. ಈಗ ದೊರೆತಿರುವ 'ನಾಟ್ಯಶಾಸ್ತ್ರ'ದಲ್ಲಿ ಸುಮಾರು ಆರು ಸಾವಿರ ಶ್ಲೋಕಗಳು ಮಾತ್ರ ಇವೆ.

'ನಾಟ್ಯಶಾಸ್ತ್ರ'ದಲ್ಲಿ ಬಹುಭಾಗ ಸಂಸ್ಕೃತ ವಾಙ್ಮಯದಲ್ಲಿ ಪ್ರಸಿದ್ಧವಾದ ಅನುಷ್ಟುಪ್ ಛಂದಸ್ಸಿನಲ್ಲಿದೆ. ನಾಟಕ, ನಾಟ್ಯಗೃಹ, ನೃತ್ಯ, ಅಭಿನಯ, ಸಂಗೀತ, ರಸ ಮುಂತಾದ ವಿಚಾರಗಳಿಗೆ ಸಂಬಂಧಿಸಿದ ಹಲವಾರು ಅಂಶಗಳ ವಿವರಣೆ ಈ ಗ್ರಂಥದಲ್ಲಿದೆ. ಈ ಗ್ರಂಥದಲ್ಲಿರುವ 36 ಅಧ್ಯಾಯಗಳಲ್ಲಿ ಕೆಲವನ್ನು ಬಿಟ್ಟರೆ ಉಳಿದುವೆಲ್ಲವೂ ಪ್ರಧಾನವಾಗಿ ನಾಟ್ಯಕ್ಕೆ ಸಂಬಂಧಿಸಿದವು.

ಇದರಿಂದಾಗಿ 'ನಾಟ್ಯಶಾಸ್ತ್ರ' ಈ ಲಲಿತಕಲೆಗಳ ಒಂದು ವಿಶ್ವಕೋಶದಂತಿದೆ. ಕಾಲದಿಂದ ಕಾಲಕ್ಕೆ ಹಲವಾರು ಮಂದಿ ವಿದ್ವಾಂಸರು ಇದಕ್ಕೆ ವ್ಯಾಖ್ಯಾನಗಳನ್ನು ಬರೆದಿರುವುದನ್ನು ನೋಡಿದರೆ, ಭಾರತೀಯ ಕಲಾರಂಗದಲ್ಲಿ 'ನಾಟ್ಯಶಾಸ್ತ್ರ'ಕ್ಕೆ ಎಂಥ ಪ್ರಾಮುಖ್ಯ ಇತ್ತೆಂಬುದರ ಅರಿವಾಗುತ್ತದೆ. ಇಂಥ ಕೆಲ ಮಂದಿ ವ್ಯಾಖ್ಯಾನಕಾರರ ಹೆಸರುಗಳು ತಿಳಿದುಬಂದಿದ್ದರೂ ಅವರ ಗ್ರಂಥಗಳು ಮಾತ್ರ ನಮಗೆ ದೊರೆತಿಲ್ಲ. ನಮಗೆ ದೊರೆತಿರುವ ವ್ಯಾಖ್ಯಾನಗಳಲ್ಲಿ 'ಅಭಿನವ ಭಾರತಿ' ಪ್ರಸಿದ್ಧವಾದದ್ದು. ಇದನ್ನು ರಚಿಸಿದವನು 10ನೆಯ ಶತಮಾನದ ಕೊನೆಯಲ್ಲಿದ್ದ ಅಭಿನವಗುಪ್ತ.

## ಭವಭೂತಿ

ಸಂಸ್ಕೃತ ನಾಟಕಕಾರರಲ್ಲಿ ಕಾಳಿದಾಸನಂತೆಯೇ ಪ್ರಸಿದ್ಧನಾದವನೆಂದರೆ ಭವಭೂತಿ. 'ಮಹಾವೀರ ಚರಿತ', 'ಮಾಲತೀ ಮಾಧವ', 'ಉತ್ತರ ರಾಮಚರಿತ' ನಾಟಕಗಳನ್ನು ಬರೆದವನು ಭವಭೂತಿ.

ನೀಲಕಂಠ ಮತ್ತು ಜತುಕರ್ಣಿಯರು ಭವಭೂತಿಯ ತಂದೆ ತಾಯಿ; ವಂಶಪಾರಂಪರ್ಯವಾಗಿ ಶ್ರೋತ್ರೀಯರು. ಭವಭೂತಿಯ ಜನನ ಏಳನೆಯ ಶತಮಾನದ ಕೊನೆಯಲ್ಲಿ. ಆತನಿಗೆ ಶ್ರೀಕಂಠನೆಂಬ ಹೆಸರೂ ಇದ್ದಿತಂತೆ. ಹೆತ್ತವರು ಮಗನಿಗೆ ಭವಭೂತಿ ಎಂದು ಹೆಸರಿಟ್ಟರೋ ಶ್ರೀಕಂಠ ಎಂದು ಕರೆದರೋ ಸ್ಪಷ್ಟವಿಲ್ಲ. ಅವನ ಕಾವ್ಯಗಳು ಮಾತ್ರ ಭವಭೂತಿ ಎಂಬ ಹೆಸರನ್ನು ಹೊತ್ತಿವೆ. 'ಈಶ್ವರ' ಪ್ರಸಾದ ಎಂಬ ಅರ್ಥ ನೀಡುವ 'ಭವಭೂತಿ' ಅವನ ಬಿರುದು ಇದ್ದರೂ ಇರಬಹುದು ಎಂಬ ಊಹೆ. ಊರು ಪದ್ಮಪುರ. ಆ ಪದ್ಮಪುರ ಭಾರತದಲ್ಲಿ ಎಲ್ಲಿದೆಯೆಂದು ನಿಶ್ಚಿತವಾಗಿ ಗುರುತಿಸಲು ಆಗಿಲ್ಲ. ಭವಭೂತಿ ಸುಖಮಯ ಸಂಸಾರ ನಡೆಸಿದ ಎಂದು ಊಹಿಸಲು ಆಧಾರಗಳಿವೆ. ಆತ ಎಂಟೆದೆಯ ಕವಿ ಎನ್ನುವುದು ಅವನ ಬರಹಗಳಿಂದ ವ್ಯಕ್ತವಾಗುತ್ತದೆ. ತನ್ನ ಕಾವ್ಯಗಳನ್ನು ಖಂಡಿಸುತ್ತಿದ್ದವರಿಗೆ ಆತ ದಿಟ್ಟ ಉತ್ತರ ಕೊಡುತ್ತಿದ್ದ; "ನಿಮ್ಮ ರಸಿಕತೆ ಇನ್ನೂ ಬೆಳೆದಿಲ್ಲ. ನೀವು ನನ್ನ ಕೃತಿಯಿಂದ ದೂರವಿರಿ. ನಿಮಗಾಗಿ ನಾನು ಬರೆಯಲಿಲ್ಲ. ನನಗೆ ಸಮಾನ ಧರ್ಮನಾದವನು ಯಾರೊಬ್ಬನಾದರೂ ಎಂದಾದರೂ ಹುಟ್ಟುತ್ತಾನೆ. ಕಾಲ ನಿರವಧಿ, ಪೃಥ್ವಿ ಸುವಿಪುಲ" ಎಂಬುದು ಅವನ ಉತ್ತರದ ಧಾಟಿ.

ಭವಭೂತಿ ಹಿಂದಿನ ಸಂಸ್ಕೃತ ಕವಿಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವನು. ಸಂಸ್ಕೃತ ಭಾಷೆಯಲ್ಲಿ ಅವನದು ಅಪೂರ್ವ ಪಾಂಡಿತ್ಯ. ಅವನ ಬರೆಹದಲ್ಲಿ ಪ್ರೌಢಿಮೆ, ಅರ್ಥಗೌರವ, ಬೆಡಗುಗಳನ್ನು ಕಾಣಬಹುದು. ಓದುವವರಲ್ಲೂ ನೋಡುವವರಲ್ಲೂ ಮುಂದೇನು, ಮುಂದೇನು ಎಂಬ ಕುತೂಹಲವನ್ನು ಅವನ ನಾಟಕಗಳು ಕೆರಳಿಸುತ್ತವೆ.

ಹಿಂದಿನ ನಾಟಕಗಳಿಗೆ ಸಾಮಾನ್ಯವಾಗಿದ್ದ ಪಾತ್ರ ಸಂಯೋಜನೆಯನ್ನು ಭವಭೂತಿ ಬದಲಾಯಿಸಿದ. ರಾಜರ ಬಹುಪತ್ನೀ ಪ್ರೇಮದ ಬದಲು ಸಾಮಾನ್ಯ ನಾಯಕ ನಾಯಕಿಯರ ಪ್ರಣಯ ಜೀವನ ಅವನ ವಸ್ತುವಾಯಿತು. ಭೃತ್ಯ, ದಾಸಿಯರ ಪಾತ್ರಗಳಿಗೆ ಪ್ರಾಧಾನ್ಯ ಕೊಡುವುದು ಅವನಿಗೆ ಇಷ್ಟವಾಗಲಿಲ್ಲ. ಸ್ನೇಹ–ಸೌಹಾರ್ದ ಭಾವಗಳ ಚಿತ್ರಣ ಅವನಿಗೆ ಪ್ರಿಯ. ಅನುರಾಗದ ವಿವಿಧ ಹಂತಗಳನ್ನು ಕಾಮಶಾಸ್ತ್ರಕ್ಕೆ ಅನುಗುಣವಾಗಿ ಚಿತ್ರಿಸಬೇಕೆಂಬ ಬಯಕೆ ಅವನದು. ಎಲ್ಲಕ್ಕಿಂತ ಮಿಗಿಲಾಗಿ ಹೇಳಬೇಕಾದದ್ದನ್ನು ಸಂಗ್ರಹಿಸಿ ಹೇಳುವ ಅವನ ಸಾಮರ್ಥ್ಯ ಅದ್ಭುತ.

ಏಳು ಅಂಕಗಳ 'ಮಹಾವೀರ ಚರಿತ'ದ ಕಥಾವಸ್ತು–ರಾಮಾಯಣ. ರಾಮಲಕ್ಷ್ಮಣರು ವಿಶ್ವಾಮಿತ್ರನ ಆಶ್ರಮಕ್ಕೆ ಅವನ ಯಜ್ಞ ರಕ್ಷಣೆಗಾಗಿ ಬರುವುದರಿಂದ ಕಥೆಯ ಆರಂಭ. ರಾಮ ಪಟ್ಟಾಭಿಷೇಕದೊಡನೆ ಕಥೆ ಮುಕ್ತಾಯವಾಗುತ್ತದೆ. ಈ ವಿಸ್ತಾರವಾದ ವಸ್ತುವನ್ನು ಏಳೇ ಅಂಕಗಳ ನಾಟಕದಲ್ಲಿ ಭವಭೂತಿ ಅಡಕಗೊಳಿಸಿದ್ದಾನೆ.

'ಮಾಲತೀ ಮಾಧವ'ದಲ್ಲಿ ನಾಯಕ ಮಾಧವ. ನಾಯಕಿ ಮಾಲತಿ: ಇವರು ನೆರೆಯ ರಾಜ್ಯಗಳ ಮಂತ್ರಿಗಳಾದ ಬಾಲ್ಯ ಸ್ನೇಹಿತರಿಬ್ಬರ ಮಕ್ಕಳು. ಸ್ನೇಹಿತರಿಬ್ಬರೂ ತಮ್ಮ ಮಕ್ಕಳನ್ನು ಕೊಟ್ಟು ತಂದುಕೊಳ್ಳಬೇಕೆಂದು ನಿಶ್ಚಯಿಸಿಕೊಂಡರು. ಆದರೆ ದೊಡ್ಡವರಾದ ಮೇಲೆ ನಾಯಕ ನಾಯಕಿಯರು ಸಂಧಿಸಿ ಪ್ರೇಮಿಸಿ ಮದುವೆಯಾಗುವುದಕ್ಕೆ ವಿಘ್ನಗಳ ಪರಂಪರೆಯೇ ಅಡ್ಡ ಬರುತ್ತದೆ. ಮಾಧವ ಮಾಲತಿಯರ ತಂದೆಯರ ಸಹಪಾಠಿ ಬೌದ್ಧ ಭಿಕ್ಷುಣಿಯಾಗಿದ್ದ ಕಾಮಂದಕಿ ಇವರ ಮದುವೆಗೆ ನೆರವಾಗುತ್ತಾಳೆ. 10 ಅಂಕಗಳ ಈ ನಾಟಕ ಸುಖ ಸಮಾಗಮದಲ್ಲಿ ಸಮಾಪ್ತವಾಗುತ್ತದೆ.

ಕನ್ಯೆಯ ಇಷ್ಟಕ್ಕೆ ವಿರುದ್ಧವಾಗಿ ಮದುವೆಯನ್ನು ನಿಶ್ಚಯಿಸಬಾರದು ಎಂಬ ಅಂಶವನ್ನು ಭವಭೂತಿ ಈ ನಾಟಕದಲ್ಲಿ ಪ್ರತಿಪಾದಿಸಿದ್ದಾನೆ. ಸಮಾಜ ಪ್ರಣಯಿಗಳ ಆಶಾಭಾವಕ್ಕೆ ಕಾರಣವಾಗದೆ ತನ್ನ ನಿಯಮಗಳನ್ನು ಬದಲಿಸಿಕೊಳ್ಳಬೇಕೆಂದು ಮತ್ತೆ ಮತ್ತೆ ಸೂಚಿಸುತ್ತಾನೆ.

'ಉತ್ತರ ರಾಮಚರಿತ' ಭವಭೂತಿಯ ಏಳು ಅಂಕಗಳ ನಾಟಕ. ಅದನ್ನು ಬರೆಯುವ ವೇಳೆಗೆ ನಾಟಕರಚನಾ ಕಲೆಯಲ್ಲಿ ಅವನು ಪರಿಣತನಾಗಿದ್ದ ಎನ್ನುವುದುಂಟು; ಅಷ್ಟೊಂದು ರಸಪುಷ್ಟಿ ಆ ನಾಟಕಕ್ಕೆ ಬಂದಿದೆ. 'ರಾಮಾಯಣ'ದ ಉತ್ತರಕಾಂಡ ಕಥೆ ಇದರ ವಸ್ತು. ಸೀತಾ ಪರಿತ್ಯಾಗದಿಂದ ಕಥೆ ಮೊದಲಾಗುತ್ತದೆ; ವಾಲ್ಮೀಕಿ ಆಶ್ರಮದಲ್ಲಿ ಜೀವನ ನಡೆಸಿದ ಸೀತೆ ಕೊನೆಯಲ್ಲಿ ಗಂಗೆಗೆ ಬೀಳುತ್ತಾಳೆ. ಅರುಂಧತಿ ಆಕೆಯನ್ನು ರಾಮನಿಗೆ ಮತ್ತೆ ತಂದು ಒಪ್ಪಿಸುತ್ತಾಳೆ. ಭವಭೂತಿ ಈ ನಾಟಕದಲ್ಲಿ ಬಾಹ್ಯ ಘಟನೆಗಳಿಗಿಂತ ಮನೋವ್ಯಾಪಾರದ ಮಾರ್ಮಿಕ ವಿಶ್ಲೇಷಣೆಗೆ ಹೆಚ್ಚು ಮಹತ್ವ ಕೊಟ್ಟಿದ್ದಾನೆ.

ಈ ಮೂರು ನಾಟಕಗಳಲ್ಲದೆ ಇತರ ಕೃತಿಗಳನ್ನೂ ಭವಭೂತಿ ರಚಿಸಿರಬಹುದೆಂಬುದಕ್ಕೆ ಸುಳಿವು ಸಿಗುತ್ತದೆ. ಆದರೆ ಅವು ಈತನಕ ದೊರೆತಿಲ್ಲ.

## ಭಾಗವತ

'ರಾಮಾಯಣ,' 'ಮಹಾಭಾರತ,' 'ಭಾಗವತ'ಗಳನ್ನು ಭಾರತೀಯರು ಪವಿತ್ರ ಗ್ರಂಥಗಳೆಂದು ಭಾವಿಸುತ್ತಾರೆ. ವ್ಯಾಸ ಮಹರ್ಷಿಗಳು ಲೋಕ ಹಿತಕ್ಕಾಗಿ ರಚಿಸಿದರೆಂದು ಹೇಳುವ ಪುರಾಣಗಳಲ್ಲಿ 'ಭಾಗವತ'ವೂ ಒಂದು.

ಸಂಸ್ಕೃತದಲ್ಲಿ ರಚಿತವಾಗಿರುವ 'ಭಾಗವತ' 12 ಸ್ಕಂದಗಳುಳ್ಳ ವಿಸ್ತಾರ ಗ್ರಂಥ. ಮೊದಲನೆಯ ಎರಡು ಸ್ಕಂದಗಳು ಪೀಠಿಕಾರೂಪದಲ್ಲಿವೆ. ಮೂರನೆಯ ಸ್ಕಂದದಿಂದ ಕಥೆ ಆರಂಭವಾಗುತ್ತದೆ. ಬ್ರಹ್ಮನ ಉದಯ, ವೈಕುಂಠದ ವರ್ಣನೆ, ಜಯವಿಜಯರ ಕಥೆ, ಹಿರಣ್ಯಕಶಿಪುವಿನ ಚರಿತ್ರೆ, ದಕ್ಷಯಜ್ಞದ ಕಥೆ, ಗಿರಿಜಾಕಲ್ಯಾಣದ ವರ್ಣನೆ ಇವೆಲ್ಲವೂ ಪ್ರಾರಂಭದಲ್ಲಿ ಬರುತ್ತವೆ. 'ಭಾಗವತ'ದ 10ನೆಯ ಸ್ಕಂದ ಇಡೀ ಗ್ರಂಥದಲ್ಲಿ ಪ್ರಧಾನವಾದ ಭಾಗ. ಯಾದವ ಶಿರೋಮಣಿ ಶ್ರೀಕೃಷ್ಣನ ಚರಿತ್ರೆ ಇಲ್ಲಿ ಸವಿಸ್ತಾರವಾಗಿ ನಿರೂಪಿತವಾಗಿದೆ. ಶ್ರೀಕೃಷ್ಣನ ತಂದೆ–ತಾಯಿ ವಸುದೇವ ದೇವಕಿಯರ ವಿವಾಹದ ಕಥೆಯಿಂದ ಪ್ರಾರಂಭವಾಗಿ, ಶ್ರೀಕೃಷ್ಣ ಅಶ್ವಮೇಧಯಾಗ ಮಾಡಿಸಿದ ವರೆಗಿನ ಶ್ರೀಕೃಷ್ಣನ ಜೀವನ ವೃತ್ತಾಂತ 10ನೆಯ ಸ್ಕಂದದಲ್ಲಿವೆ. 11ನೆಯ ಸ್ಕಂದದಲ್ಲಿ ಶ್ರೀಕೃಷ್ಣನ ದೇಹತ್ಯಾಗದ ವೃತ್ತಾಂತ ಬರುತ್ತದೆ.

'ಭಾಗವತ' ರಚನೆಯಾದ ಕಾಲ, ಅದರ ಲೇಖಕನ ವಿಚಾರಗಳನ್ನು ಕುರಿತು ಖಚಿತವಾಗಿ ಹೇಳುವುದು ಸಾಧ್ಯವಾಗಿಲ್ಲ. ಇದು 7 ಅಥವಾ ನೆಯ ಶತಮಾನದಲ್ಲಿ ರಚಿತವಾಗಿರಬೇಕು [illegible] ಅಭಿಪ್ರಾಯವಿದೆ.

'ಭಾಗವತ'ದ ಕಥೆ ಬಹುಮಟ್ಟಿಗೆ 'ವಿಷ್ಣುಪುರಾಣ'ದ್ದು. ಹೀಗಿದ್ದರೂ ಅದರ ಆರು 'ಅಂಶ'ಗಳಲ್ಲಿ ಬರುವ ಶ್ರೀಕೃಷ್ಣನ ಕಥೆಯೇ ಇಲ್ಲಿ 12 ಸ್ಕಂದಗಳಾಗಿ ಬೆಳೆದಿದೆ. ಈ ವಿಸ್ತೃತರೂಪದಲ್ಲಿ ಕೃಷ್ಣನ ಮೇಲಿನ ಜನರ ಭಕ್ತಿ ಹೆಚ್ಚು ತೀವ್ರವಾಗಿಯೂ ದೃಢವಾಗಿಯೂ ಕಲಾತ್ಮಕವಾಗಿಯೂ ಮೂಡಿದೆ.

ವಿವಿಧ ಮನೋಭಾವ, ಸಂಸ್ಕಾರಗಳ ಹಲವು ಬಗೆಯ ಜನರ ಜೀವನ ಚಿತ್ರಗಳಿಂದ ಕೂಡಿದ 'ಭಾಗವತ' ಕಥೆಗಳ ಭಂಡಾರವಾಗಿದೆ. ಇದರಲ್ಲಿ ಲೋಕೋದ್ಧಾರಕನಾದ ಭಗವಂತನ ಕಥೆ ಬರುತ್ತದೆ. ಅಷ್ಟೇ ಅಲ್ಲದೆ ಅನೇಕ ಭಾಗವತೋತ್ತಮರ —ಭಗವಂತನ ಭಕ್ತರ— ಪುಣ್ಯಚರಿತೆಗಳೂ ಇವೆ. ಭಗವಂತನ ಪೂಜೆ, ಪ್ರಾರ್ಥನೆ ವಿಧಿವಿಧಾನಗಳೂ ಆಚಾರ ಸಂಪ್ರದಾಯಗಳೂ ತತ್ತ್ವ ವಿಚಾರಗಳೂ ಇಲ್ಲಿವೆ. ಲೌಕಿಕಜ್ಞಾನಕ್ಕೆ ಸಂಬಂಧಿಸಿದ ಹಲವಾರು ಅಂಶಗಳೂ ಈ ಗ್ರಂಥದಲ್ಲಿ ಸೇರಿವೆ. ಇದಲ್ಲದೆ ಮಾನವ ಅವಶ್ಯವಾಗಿ ಮಾಡಬೇಕಾದ್ದು ಹಾಗೂ ಮಾಡಬಾರದ್ದು ಯಾವುವು ಎಂಬುದನ್ನು ಸುಂದರವಾದ ಉಪಾಖ್ಯಾನಗಳ ಮೂಲಕ ನಿರೂಪಿಸಿದೆ.



ಕಾಳಿಂಗ ಮರ್ದನ –'ಭಾಗವತ' ಕಥಾ ಭಂಡಾರದಲ್ಲಿ

'ಭಾಗವತ' ಭಕ್ತಿಪ್ರಧಾನವಾದ ಗ್ರಂಥ. ಭಕ್ತಿಯ ಎಲ್ಲ ಪ್ರಕಾರಗಳ ವಿವರಣೆಯನ್ನು ಇಲ್ಲಿ ಕಾಣಬಹುದು.

'ಭಾಗವತ'ದಲ್ಲಿ ನಿರೂಪಿತವಾದ ಭಕ್ತಿ ವಿಧಾನಗಳು ಭಾರತದ ಮೂಲೆ ಮೂಲೆಗಳಿಗೂ ಹಬ್ಬಿ ಭಕ್ತಿಪಂಥ, ಭಾಗವತ ಸಂಪ್ರದಾಯಗಳನ್ನು ಪ್ರೇರೇಪಿಸಿದುವು. ಜನಸಾಮಾನ್ಯರ ಜೀವನ, ಧರ್ಮಾಚರಣೆಗಳ ಮೇಲೆ ಪ್ರಬಲ ಪ್ರಭಾವ ಬೀರಿದುವು. ಅನೇಕ ಮಂದಿ ಸಂತರ, ಸಂತ ಕವಿಗಳ ಉದಯಕ್ಕೆ ಕಾರಣವಾದುವು. ಭಾಗವತ ಸಂಪ್ರದಾಯ ಇಂದಿಗೂ ಒಂದು ಪ್ರಬಲ ಧಾರ್ಮಿಕ ಶಕ್ತಿಯಾಗಿದೆ.

'ಭಾಗವತ'ದ ಕನ್ನಡ ರೂಪ 'ಭಾಗವತ ಪುರಾಣ.' ಇದನ್ನು ಕನ್ನಡದಲ್ಲಿ ರಚಿಸಿದವರು ಯಾರೆಂಬ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಇದು ಒಬ್ಬನೇ

[illegible] ಪ್ರಬಂಧವು ಬೇರೆ ಬೇರೆ ಕವಿಗಳು ಬರೆದ ಕನ್ನಡ ಭಾಗವತದ ಭಾಗಗಳನ್ನು ಸಂಗ್ರಹಿಸಿದವರು ಚಾಟುವಿಠ್ಠಲನಾಥನೆಂದೂ [illegible]. ಕನ್ನಡ 'ಭಾಗವತ' ಭಾಮಿನೀ ಷಟ್ಪದಿಯಲ್ಲಿ ಬರೆದಿರುವ ಬೃಹದ್ಗ್ರಂಥ. ಇದರಲ್ಲಿ ೨೦೦ ಸಂಧಿಗಳೂ 12 ಸಾವಿರಕ್ಕಿಂತ ಹೆಚ್ಚು ಪದ್ಯಗಳೂ ಇವೆ. ಕಥನದಲ್ಲಿ ಸರಳತೆ ಇದೆ; ಸಾಹಿತ್ಯ ದೃಷ್ಟಿಯಿಂದ ಉತ್ತಮ ಗ್ರಂಥ–ಎನ್ನುವಂತಿಲ್ಲ.

## ಭಾತ್‌ಖಂಡೆ

ಆತನಿಗೆ ಸಂಗೀತದಲ್ಲಿ ಅಪಾರ ಆಸಕ್ತಿ. ಹಾಡುವುದಕ್ಕಷ್ಟೇ ಅಲ್ಲ, ಸಂಗೀತಶಾಸ್ತ್ರವನ್ನು ಆಳವಾಗಿ ಅಭ್ಯಸಿಸುವುದಕ್ಕೂ ಉತ್ಸುಕನಾಗಿದ್ದ. ಅಶಕ್ ಅಲಿಯ ಬಳಿ ಒಳ್ಳೆಯ ಖಯಾಲ್‌ಗಳ ಸಂಗ್ರಹವಿದೆ ಎಂದು ತಿಳಿದು ಬಂದಾಗ, ಆತನನ್ನು ತನ್ನ ಮನೆಗೆ ಕರೆಸಿಕೊಂಡ. ಅವನ ಬಳಿ ಸಂಗೀತಾಭ್ಯಾಸ ಮಾಡಲು ಆರಂಭಿಸಿದ. ಅಶಕ್ ಅಲಿಖಯಾಲ್ ಹಾಡುತ್ತಿದ್ದಾಗ, ಆತ ಅದರ ಸಾಹಿತ್ಯ ಮತ್ತು ಸ್ವರಪ್ರಸ್ತಾರ, ತಾಳಗಳನ್ನು ಬರೆದುಕೊಂಡ. ಒಡನೆಯೇ ಅದನ್ನು ಅವಲಂಬಿಸಿ —ಅಂದರೆ ಸ್ವರಪ್ರಸ್ತಾರ ನೋಡಿಕೊಂಡು — ಹಾಡಿ ತೋರಿಸುತ್ತಿದ್ದ. ಇಷ್ಟು ತ್ವರಿತವಾಗಿ ಆತ ಕಲಿಯುವುದನ್ನು ನೋಡಿ ಅಶಕ್ ಅಲಿ ಆಶ್ಚರ್ಯಚಕಿತನಾದ.

ಇಂಥ ಧೀಮಂತ ವ್ಯಕ್ತಿ ಭಾರತೀಯ ಸಂಗೀತ ಪ್ರಪಂಚಕ್ಕೆ ಅಮೋಘ ಸೇವೆ ಸಲ್ಲಿಸಿದ, ಪ್ರಾಚೀನ ಹಾಗೂ ಸಮಕಾಲೀನ ಭಾರತೀಯ ಸಂಗೀತವನ್ನು ಕುರಿತ ಸಂಶೋಧನೆಗಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟ, ವಿಷ್ಣು ನಾರಾಯಣ ಭಾತ್‌ಖಂಡೆ; ಆಧುನಿಕ ಕಾಲದಲ್ಲಿ ಭಾರತೀಯ ಸಂಗೀತಕ್ಕೆ ಒಂದು ವ್ಯವಸ್ಥಿತ ರೂಪ ಕೊಡಲು ಯತ್ನಿಸಿದ ಮಹಾ ವ್ಯಕ್ತಿ.



ಸಂಗೀತ ಪದ್ಧತಿ : ಭಾತ್‌ಖಂಡೆ

ವಿಷ್ಣು ನಾರಾಯಣ ಭಾತ್‌ಖಂಡೆ 1860ನೆಯ ಆಗಸ್ಟ್ 10ರಂದು ಜನಿಸಿದರು : ನಾಮಕರಣವಾದದ್ದು ಗಜಾನನ ಎಂದು. ರೂಢಿಯಲ್ಲಿ ಬಂದ ಹೆಸರು ವಿಷ್ಣು. ತಂದೆ ನಾರಾಯಣರಾವ್ ಭಾತ್‌ಖಂಡೆ. ಅವರು ಮುಂಬಯಿಯ ಒಂದು ದೊಡ್ಡ ಎಸ್ಟೇಟಿನ ಉಸ್ತುವಾರಿ ನೋಡುತ್ತಿದ್ದರು.

ವಿಷ್ಣುಗೆ ಎಳೆವಯಸ್ಸಿನಿಂದಲೂ ಸಂಗೀತವೆಂದರೆ ಆಕರ್ಷಣೆ. ಕೊಳಲು ಕಲಿತರು; ಹಾಡುತ್ತಲೂ ಇದ್ದರು. ರಾಮನವಮಿ, ಹೋಳಿ ಮೊದಲಾದ ಹಬ್ಬಗಳ ಸಂದರ್ಭಗಳಲ್ಲಿ ನಡೆಯುತ್ತಿದ್ದ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಲೂ ಇದ್ದರು, ಸಂಗೀತಾಸಕ್ತಿ ಅವರ ವಿದ್ಯಾಭ್ಯಾಸಕ್ಕೆ ಅಡ್ಡಬರಲಿಲ್ಲ. ಶಾಲೆಯ ಪಾಠದಲ್ಲೆಂದೂ ಅವರು ಹಿಂದಾಗಲಿಲ್ಲ. ಕಾಲೇಜಿನಲ್ಲಿ ಕಲಿಯುತ್ತಿದ್ದಾಗ ಅವರಿಗೆ ಸಿತಾರ್ ಕಲಿಯುವ ಹಂಬಲವಾಯಿತು. ವಲ್ಲಭದಾಸ್ ದಾಮುಲ್‌ಜಿ ಅವರ ಮನೆಗೆ ರಾತ್ರಿ ಹೊತ್ತು ಹೋಗಿ ಅವರು ಪಾಠವನ್ನು ತನ್ಮಯತೆಯಿಂದ ಕೇಳುತ್ತಿದ್ದರು. ಅವರು ಪಾಠ ಆರಂಭಿಸುವ ಮೊದಲೇ ಯಾರದೋ ಸಿತಾರ್ ತಂದು ಅವನ್ನು ಪಾರಿಸಲು ತಾವೇ ಯತ್ನಿಸಿದರು. ಪಾಠ ಆರಂಭಿಸಿದಾಗ, ಶಿಷ್ಯ ತಾನೇ ಆ ವಾದ್ಯವಾದನವನ್ನು ಆಗಲೇ ಕಲಿತಿರುವುದನ್ನು ಗಮನಿಸಿದ ಗುರುವಿಗೆ ಸಂತೋಷ. ಕೆಲ ದಿನಗಳಲ್ಲೇ ಚಿಕ್ಕ ಕೂಟಗಳಲ್ಲಿ ಇವರು ಸಿತಾರ್ ನುಡಿಸುವ ಮಟ್ಟಕ್ಕೆ ಬಂದರು. ಮುಂಬಯಿಯಲ್ಲಿ ಎಲ್ಲಿ ಉತ್ತಮ ಕಚೇರಿಗಳಾದರೂ ಇವರು ತಪ್ಪದೆ ಹೋಗಿ ಸಾರಗ್ರಹಣಮಾಡುತ್ತಿದ್ದರು. ಜೊತೆ ಜೊತೆಯಲ್ಲೇ ತಮ್ಮ ವಿದ್ಯಾಭ್ಯಾಸವನ್ನೂ ಮುಂದುವರಿಸಿ 1885ರಲ್ಲಿ ಬಿ.ಎ. ಮತ್ತು 1887ರಲ್ಲಿ ಎಲ್‌ಎಲ್.ಬಿ. ಪರೀಕ್ಷೆಗಳಲ್ಲಿ ಉತ್ತೀರ್ಣರಾದರು.

1884ರಲ್ಲಿ ಜ್ಞಾನ ಉತ್ತೇಜಕ ಮಂಡಲಿ ಎಂಬ ಸಂಗೀತ ಸಂಸ್ಥೆಗೆ ಸೇರಿದರು. ಇಲ್ಲಿ ಖ್ಯಾತ ಸಂಗೀತಗಾರರ ಕಚೇರಿಗಳನ್ನು ಕೇಳುವ ಅವಕಾಶ ದೊರೆಯಿತು. ಅದೇ ಕಾಲಕ್ಕೆ ಧ್ರುಪದ್, ಹೋರಿ, ಖಯಾಲ್, ತರಾನಾ, ಠುಮ್ರಿ ಮೊದಲಾದ ಸಾಂಪ್ರದಾಯಿಕ ಹಾಗೂ ನಿರ್ದಿಷ್ಟ ಸಂಗೀತ ರಚನೆಗಳ ಸಂಗ್ರಹಕ್ಕೂ ಕೈಹಾಕಿದರು. ಸಂಗೀತದ ಬಗೆಗೆ ಲಭ್ಯವಿದ್ದ ಎಲ್ಲ ಗ್ರಂಥಗಳನ್ನೂ ಓದಿದ ಭಾತ್‌ಖಂಡೆ, ಆ ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವ ನಿಯಮಗಳಿಗೂ ಸಮಕಾಲೀನ ಸಂಗೀತದ ರೀತಿಗೂ ಹೋಲಿಕೆಯೇ ಇಲ್ಲವೆಂಬುದನ್ನು ಕಂಡುಕೊಂಡರು.

ಆಗಿನ ಹಿಂದೂಸ್ತಾನಿ ಸಂಗೀತಗಾರರಲ್ಲಿ ಹೆಚ್ಚಿನವರು ಪ್ರಾಚೀನ ಗ್ರಂಥಗಳನ್ನು ಓದಿರಲಿಲ್ಲ. ರಾಗಗಳನ್ನು ಹಾಡಿ ತೋರಿಸುವುದು, ಹಾಡುಗಳನ್ನು ರಚಿಸುವುದು ಮತ್ತು ತಾವು ಸೇರಿದ 'ಘರಾನಾ'ವನ್ನು ಅನುಸರಿಸಿ (ಘರಾನಾ – ತಂದೆಯಿಂದ ಮಗನಿಗೆ ಅಥವಾ ಗುರುವಿನಿಂದ ಶಿಷ್ಯನಿಗೆ ಪರಂಪರಾಗತವಾಗಿ ಬಂದ ಗಾಯನ, ವಾದನಶೈಲಿ) ಅದರಂತೆ ಹಾಡುವುದು ಇವಿಷ್ಟು ಮಾತ್ರ ಅವರಿಗೆ ತಿಳಿದಿತ್ತು. ಭಾತ್‌ಖಂಡೆಯವರು ಈ ಮೂಲವನ್ನಿಟ್ಟುಕೊಂಡು ಸಂಗೀತದ ಸಿದ್ಧಾಂತ ಭಾಗವನ್ನು ಕ್ರಮಬದ್ಧಗೊಳಿಸಿದರು. ರಾಗಗಳನ್ನು ವರ್ಗೀಕರಣಮಾಡಿ ಅವನ್ನು ಒಂದು ಚೌಕಟ್ಟಿಗೆ ಹಾಕಿದರು. ಈಗ ಹೆಚ್ಚು ಪ್ರಚಾರದಲ್ಲಿರುವ 'ಥಾಟ್' ಪದ್ಧತಿ ರೂಢಿಗೆ ಬಂದದ್ದು ಇವರಿಂದಲೇ. ಇವರ ಈ ವೈಜ್ಞಾನಿಕ ಪದ್ಧತಿ ಸ್ನೇಹಿತರಿಗೆ, ಮಂಡಲಿಯ ಒಡನಾಡಿಗಳಿಗೆ ಮೆಚ್ಚುಗೆಯಾಗಿತ್ತು.

ಹೀಗೆ ಸಂಗೀತದಲ್ಲಿ ಭಾತ್‌ಖಂಡೆಯವರು ಅಪಾರ ಆಸಕ್ತಿ ವಹಿಸಿದ್ದುದರ ಜೊತೆಗೆ ಕರಾಚಿಯಲ್ಲಿ ವಕೀಲವೃತ್ತಿಯನ್ನೂ ನಡೆಸಲಾರಂಭಿಸಿದರು. ಕ್ರಿಮಿನಲ್ ಲಾ ಸಂಬಂಧದಲ್ಲಿ ದಕ್ಷರೆಂದು ಖ್ಯಾತಿ ಗಳಿಸಿದರು.

ಭಾತ್‌ಖಂಡೆಯವರ ಪತ್ನಿ ಹಾಗೂ ಹೆಣ್ಣು ಮಗು ಚಿಕ್ಕವಯಸ್ಸಿನಲ್ಲೇ ಮೃತರಾದರು. ಇದು ಭಾತ್‌ಖಂಡೆಯವರ ಜೀವನದ ಒಂದು ದುಃಖಮಯ ಪ್ರಸಂಗ. ಅನಂತರ ಅವರ ಗಮನವೆಲ್ಲ ವಕೀಲವೃತ್ತಿ ಹಾಗೂ ಸಂಗೀತದ ಕಡೆಗೆ ಹರಿಯಿತು.

ಭಾತ್‌ಖಂಡೆಯವರು 1904ರಲ್ಲಿ ದಕ್ಷಿಣ ಭಾರತದ ಪ್ರವಾಸ ಕೈಗೊಂಡರು. ಮದರಾಸು, ತಂಜಾವೂರು, ಮಧುರೆ, ಎಟ್ಟಯಾಪುರಂ ಬೆಂಗಳೂರು ಹಾಗೂ ಮೈಸೂರುಗಳನ್ನು ಸಂದರ್ಶಿಸಿದರು. ಸಂಗೀತಗಾರರನ್ನೂ ಸಂಗೀತಶಾಸ್ತ್ರಜ್ಞರನ್ನೂ ಭೇಟಿ ಮಾಡುವುದು, ಗ್ರಂಥಗಳನ್ನು ನೋಡುವುದು ಈ ಪ್ರವಾಸಕಾಲದಲ್ಲಿ ಅವರ ಕಾರ್ಯಕ್ರಮ. ಕರ್ಣಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಮುತ್ತುಸ್ವಾಮಿ ದೀಕ್ಷಿತರ ವಂಶದವರಾದ ಸುಬ್ಬರಾಮ ದೀಕ್ಷಿತರನ್ನು ಎಟ್ಟಯಾಪುರಂನಲ್ಲಿ ಭೇಟಿ ಮಾಡಿ ಅವರೊಡನೆ ಸಂಗೀತದ ಬಗೆಗೆ ಚರ್ಚೆ ನಡೆಸಿದರು. ದೀಕ್ಷಿತ ವಂಶದವರೇ ಆದ ವೆಂಕಟಮುಖಿಯವರು ಸುಮಾರು 1660ರಲ್ಲಿ ಬರೆದ ಸಂಗೀತಶಾಸ್ತ್ರ ಗ್ರಂಥ 'ಚತುರ್ದಂಡಿ ಪ್ರಕಾಶಿಕಾ'ದ ಹಸ್ತಪ್ರತಿಯನ್ನು ಅವರಿಂದ ಪಡೆದುಕೊಂಡರು. ರಾಮಾಮಾತ್ಯನ 'ಸ್ವರಮೇಳ ಕಲಾನಿಧಿ', ತುಳಜೇಂದ್ರನ 'ಸಂಗೀತ ಸಾರಾಮೃತ', 'ರಾಗಲಕ್ಷಣ' ಮುಂತಾದ ಸಂಗೀತ ಗ್ರಂಥಗಳ ಹಸ್ತಪ್ರತಿಗಳ ನಕಲುಗಳನ್ನು ಸಂಗ್ರಹಿಸಿಕೊಂಡು ಮುಂಬಯಿಗೆ ಹಿಂದಿರುಗಿದರು. ಅನಂತರ ಅವನ್ನು ಪ್ರಕಟಿಸಿದರು.

1908–9ರಲ್ಲಿ ಉತ್ತರ ಭಾರತದ ಯಾತ್ರೆ ಕೈಗೊಂಡರು. ಅಲಹಾಬಾದಿನಲ್ಲಿ ಪಂಡಿತ ಶ್ರೀಕೃಷ್ಣ ಜೋಶಿಯವರನ್ನು ಭೇಟಿಮಾಡಿದರು. ಜೋಶಿಯವರ ಪ್ರಯತ್ನದಿಂದ ಲೋಚನನ 'ರಾಗ ತರಂಗಿಣಿ'ಯ ಒಂದು ಪ್ರತಿ ಇವರಿಗೆ ದೊರೆಯಿತು. ಭಾತ್‌ಖಂಡೆಯವರು ಮತ್ತೆ ಎರಡು ಬಾರಿ ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡಿದರು.

ಈ ಪ್ರವಾಸಗಳ ಕಾಲದಲ್ಲಿ ತಾವು ಸಂಗ್ರಹಿಸಿದ ವಿಷಯಗಳನ್ನು ಸರಿಯಾಗಿ ಕ್ರೋಢೀಕರಿಸಲು, ವರ್ಗೀಕರಿಸಲು ಅವರು ಯತ್ನಿಸಿದರು.

ಅನಂತರ ಸಮಕಾಲೀನ ಸಂಗೀತದ ವರ್ಗೀಕರಣದ ಕೆಲಸ ಆರಂಭಿಸಿದರು. ಸಂಸ್ಕೃತ ಶ್ಲೋಕಗಳಿಂದ ಕೂಡಿದ 'ಲಕ್ಷ್ಯ ಸಂಗೀತ' ಎಂಬ ಗ್ರಂಥವನ್ನು ಪ್ರಕಟಿಸಿದರು. 1909ರಲ್ಲಿ 'ಹಿಂದೂಸ್ತಾನಿ ಸಂಗೀತ ಪದ್ಧತಿ'ಯ ಮೊದಲ ಭಾಗ ಪ್ರಕಟವಾಯಿತು. 1911ರಲ್ಲಿ 'ಲಕ್ಷಣಗೀತ' ಹೊರಬಂದಿತು. 1910ರಲ್ಲಿ ವಕೀಲ ವೃತ್ತಿಯನ್ನು ಪೂರ್ಣವಾಗಿ ತೊರೆದು ಸಂಗೀತಕ್ಕೇ ತಮ್ಮ ಎಲ್ಲ ಸಮಯವನ್ನೂ ವಿನಿಯೋಗಿಸತೊಡಗಿದರು.

1914ರ ವೇಳೆಗೆ 'ಹಿಂದೂಸ್ತಾನಿ ಸಂಗೀತ ಪದ್ಧತಿ'ಯ 2 ಹಾಗೂ 3ನೆಯ ಭಾಗಗಳು ಮುದ್ರಣವಾದುವು. 1915ರಲ್ಲಿ 'ಗೀತಮಾಲಿಕಾ' ಮಾಸಿಕದಲ್ಲಿ ಸಾಂಪ್ರದಾಯಿಕ ರಚನೆಗಳಿಗೆ ಸ್ವರಪ್ರಸ್ತಾರಗಳನ್ನು ಹಾಕಿ ಪ್ರಕಟಿಸತೊಡಗಿದರು. 'ಅಭಿನವ ರಾಗಮಂಜರಿ' ಎಂಬ ಗ್ರಂಥವನ್ನೂ ಅವರು ಪ್ರಕಟಿಸಿದರು.

1916ರಲ್ಲಿ ಬರೋಡದಲ್ಲಿ ಅಖಿಲ ಭಾರತ ಸಂಗೀತ ಸಮ್ಮೇಳನ ಜರಗಿತು. ಭಾತ್‌ಖಂಡೆ ಅವರು ಈ ಸಮ್ಮೇಳನದಲ್ಲಿ ಉತ್ತರ ಭಾರತದ ಸಂಗೀತದ ಚಾರಿತ್ರಿಕ ಸಮೀಕ್ಷೆಯನ್ನುಳ್ಳ ಇಂಗ್ಲಿಷ್ ಲೇಖನವನ್ನು ಓದಿದರು. ಈ ಸಂದರ್ಭದಲ್ಲೇ ಸಂಗೀತ ಸಮ್ಮೇಳನದ ಕಾರ್ಯ ಮುಂದುವರಿಸಲು ರಚಿತವಾದ ಸಮಿತಿಗೆ ಅವರು ಪ್ರಧಾನ ಕಾರ್ಯದರ್ಶಿ ಆದರು. 1918ರಲ್ಲಿ ಎರಡನೆಯ ಸಮ್ಮೇಳನ ದೆಹಲಿಯಲ್ಲಿ ಸಮಾವೇಶಗೊಂಡಿತು. ಕೆಲವು ರಾಗಗಳ ವಿಷಯದಲ್ಲಿದ್ದ ಭಿನ್ನಾಭಿಪ್ರಾಯಗಳ ಬಗೆಗೆ ಪ್ರಮುಖ ಸಂಗೀತಗಾರರು ವಿವೇಚನೆ ಮಾಡುವಂತೆ ಭಾತ್‌ಖಂಡೆ ಪ್ರೇರಿಸಿದರು; ಈ ವಿವೇಚನೆಯಿಂದ ರೂಪುಗೊಂಡ ನಿಯಮಗಳನ್ನು ತಮ್ಮ 'ಹಿಂದೂಸ್ತಾನಿ ಸಂಗೀತ ಪದ್ಧತಿ'ಯ ನಾಲ್ಕನೆಯ ಭಾಗದಲ್ಲಿ ಸೇರಿಸಿದರು.

ಬರೋಡ, ಗ್ವಾಲಿಯರ್ ಮತ್ತು ರಾಂಪುರಗಳ ಅರಸರ ಅಪೇಕ್ಷೆಯಂತೆ ಆಯಾ ಸ್ಥಳಗಳಲ್ಲಿ ಸಂಗೀತ ಶಾಲೆಗಳನ್ನು ಆರಂಭಿಸಿದರು. ಪಠ್ಯಕ್ರಮ, ತರಬೇತಿ ವಿಧಾನ, ಪರೀಕ್ಷೆ ಮುಂತಾದವುಗಳ ವಿವರವನ್ನೂ ನಿರ್ಧರಿಸಿದರು. ಆಗಾಗ್ಗೆ ಆ ಶಾಲೆಗಳಿಗೆ ಭೇಟಿಕೊಟ್ಟು ಅಲ್ಲಿನ ಕಾರ್ಯಕ್ರಮಗಳನ್ನು ಪರಿಶೀಲಿಸುತ್ತಿದ್ದರು. ಸಂಗೀತಶಾಲೆಗಳಲ್ಲಿ ಉಪಯೋಗಿಸಲು ತಕ್ಕ ಪಠ್ಯ ಪುಸ್ತಕಗಳಿರಲಿಲ್ಲ. ಆ ಕೊರತೆಯನ್ನು ನಿವಾರಿಸಲು ತಾವೇ ತಕ್ಕ ಪಠ್ಯ ಪುಸ್ತಕಗಳನ್ನು ಬರೆದರು.

1933ರಲ್ಲಿ ಭಾತ್‌ಖಂಡೆ ಪಾರ್ಶ್ವವಾಯು ವ್ಯಾಧಿಗೆ ತುತ್ತಾದರು. ಮೂರು ವರ್ಷಗಳ ಕಾಲ ಏಳಲಾರದೆ ಹಾಸಿಗೆಯಲ್ಲೇ ಮಲಗಬೇಕಾಯಿತು. 1936ರ ಸೆಪ್ಟೆಂಬರ್ 19—ಗಣೇಶ ಚತುರ್ಥಿಯಂದು—ಮೃತರಾದರು.

ಹಿಂದೂಸ್ತಾನಿ ಸಂಗೀತ ಪದ್ಧತಿಯನ್ನು ಸುವ್ಯವಸ್ಥಿತಗೊಳಿಸುವುದಕ್ಕೂ ಅದನ್ನು ಪ್ರಚುರಗೊಳಿಸುವುದಕ್ಕೂ ಭಾತ್‌ಖಂಡೆಯವರು ಸಲ್ಲಿಸಿದ ಸೇವೆ ಅಪೂರ್ವವಾದದ್ದು, ಮಹತ್ತರವಾದದ್ದು.

## ಭಾರತೀಯ ಕಾವ್ಯಮೀಮಾಂಸೆ

ಭಾರತದಲ್ಲಿ ಅತ್ಯಂತ ಪ್ರಾಚೀನ ವಾಙ್ಮಯವಾದ ವೇದಗಳಲ್ಲಿ ಉತ್ತಮ ಕಾವ್ಯಭಾಗಗಳಿವೆ. ಅವುಗಳಲ್ಲಿ ಅಲಂಕಾರಾದಿ ಸಾಹಿತ್ಯ ಲಕ್ಷಣಗಳನ್ನು ಕಾಣಬಹುದು. ಈ ಸಾಹಿತ್ಯ ಸೃಷ್ಟಿಯ ಜೊತೆ ಜೊತೆಯಲ್ಲಿಯೇ ಕಾವ್ಯಮೀಮಾಂಸೆಯೂ ಹುಟ್ಟಿರಬಹುದು –ಎಂಬುದು ಒಂದು ಊಹೆ. ಆದರೆ ಕ್ರಿಸ್ತ ಪೂರ್ವ ಕಾಲದಲ್ಲಿ ರಚಿತವಾದ ಯಾವ ಲಕ್ಷಣ ಗ್ರಂಥವೂ ಈವರೆಗೆ ನಮಗೆ ದೊರೆತಿಲ್ಲ.

ನಮ್ಮಲ್ಲಿ ಕಾವ್ಯಮೀಮಾಂಸಾ ಶಾಸ್ತ್ರವನ್ನು ಅಲಂಕಾರಶಾಸ್ತ್ರ ಎಂದು ಕೂಡ ಕರೆಯುತ್ತಾರೆ. ಕವಿ, ಸಹೃದಯ, ಕಾವ್ಯದ ಸ್ವರೂಪ, ಉದ್ದೇಶ, ಪ್ರಯೋಜನ, ಅಲಂಕಾರ, ರೀತಿ, ಧ್ವನಿ, ರಸ ಇವೆಲ್ಲ ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ವಿವೇಚನೆಗೊಳಗಾಗಿವೆ.

ಕ್ರಿ.ಶ. 1 ಅಥವಾ 2ನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ಭರತನ 'ನಾಟ್ಯಶಾಸ್ತ್ರ'ವೇ ಈವರೆಗೆ ನಮಗೆ ದೊರೆತಿರುವ ಭಾರತೀಯ ಲಕ್ಷಣ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದದ್ದು. ಇದರಲ್ಲಿ ನಿರೂಪಿತವಾಗಿರುವ ಅಂಶಗಳು ಪ್ರಧಾನವಾಗಿ ನಾಟ್ಯಕಲೆಯನ್ನು ಕುರಿತವಾದರೂ ಕಾವ್ಯಮೀಮಾಂಸೆಗೆ ಸಂಬಂಧಪಟ್ಟ ಕೆಲವು ಅಂಶಗಳೂ ಇದರಲ್ಲಿವೆ. ರಸದ ಸ್ವರೂಪ, ನಿಷ್ಪತ್ತಿ ಮುಂತಾದುವುಗಳನ್ನು ಮೊತ್ತ ಮೊದಲ ಬಾರಿಗೆ ವಿವೇಚನೆ ನಡೆಸಿರುವುದು ಭರತನ 'ನಾಟ್ಯಶಾಸ್ತ್ರ'ದಲ್ಲಿ.

ಭರತನ ಅನಂತರ ಅನೇಕ ಲಾಕ್ಷಣಿಕರು ಗ್ರಂಥಗಳನ್ನು ರಚಿಸಿದರು.

ಸುಮಾರು 8ನೆಯ ಶತಮಾನದ ದಂಡಿ ಮತ್ತು ಭಾಮಹ ಭಾರತೀಯ ಕಾವ್ಯ ಮೀಮಾಂಸೆಯ ಕ್ಷೇತ್ರದಲ್ಲಿ ಪ್ರಸಿದ್ಧರು. ಕಾವ್ಯದಲ್ಲಿ 'ರೀತಿ'ಯ ಸ್ಥಾನವನ್ನು ದಂಡಿ ತನ್ನ 'ಕಾವ್ಯಾದರ್ಶ' ಗ್ರಂಥದಲ್ಲಿ ಮೊತ್ತಮೊದಲಾಗಿ

ವಿರಚಿಸಿದ. ಗುಣಾನ್ವಿತವಾದ ಪದಜೋಡಣೆಯೇ 'ರೀತಿ'. ಗೌಡೀ ಮತ್ತು ವೈದರ್ಭೀ ರೀತಿ ಎಂದು ಎರಡು 'ರೀತಿ'ಗಳನ್ನು ಆತನು ಗುರುತಿಸಿದ್ದಾನೆ. ಅವುಗಳ ಲಕ್ಷಣಗಳನ್ನು ಸರಳವಾದ ರೀತಿಯಲ್ಲಿ ವಿವರಿಸಿದ್ದಾನೆ.

ಹಿಂದಿನ ಕಾವ್ಯಮೀಮಾಂಸಕರು ಕಾವ್ಯದಲ್ಲಿ ಅಲಂಕಾರಕ್ಕೆ ನೀಡಿದ್ದ ಪ್ರಾಶಸ್ತ್ಯವನ್ನು ತಗ್ಗಿಸಿ ತನ್ನದೇ ಆದ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದವನು ವಾಮನ (ಸುಮಾರು 800). ಅವನ ದೃಷ್ಟಿಯಲ್ಲಿ 'ರೀತಿ'ಯೇ ಕಾವ್ಯದ ಆತ್ಮ. ದಂಡಿ ಹೇಳಿದ ಎರಡು ವಿಧದ 'ರೀತಿ'ಗಳಿಗೆ 'ಪಾಂಚಾಲಿ' ಎಂಬ ಮೂರನೆಯ ವಿಧವನ್ನು ಸೇರಿಸಿದ. 'ಕಾವ್ಯಾಲಂಕಾರ ಸೂತ್ರವೃತ್ತಿ' ವಾಮನನ ಗ್ರಂಥದ ಹೆಸರು.

ರುದ್ರಟನ (ಸುಮಾರು 875) 'ಕಾವ್ಯಾಲಂಕಾರ' ಸಾಹಿತ್ಯಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ವಿವೇಚನೆಯುಳ್ಳ ಗ್ರಂಥ.

ರಾಜಶೇಖರನ (ಕ್ರಿ. ಶ. 910) 'ಕಾವ್ಯಮೀಮಾಂಸೆ' ಭಾರತೀಯ ಕಾವ್ಯಮೀಮಾಂಸಾ ಕ್ಷೇತ್ರದಲ್ಲಿ ಪ್ರಮುಖ ಗ್ರಂಥ. ಇದು ಕವಿಗಳ ಕೈಪಿಡಿ ಎನಿಸಿಕೊಂಡಿದೆ. ಕಾವ್ಯರಚನಾ ಸಂಬಂಧಗಳಲ್ಲಿ ಕವಿ ತಿಳಿಯಬೇಕಾದ ಅನೇಕ ವಿಷಯಗಳು ಆ ಗ್ರಂಥದಲ್ಲಿವೆ. 'ಕವಿ ಸಮಯ'ದ ಕುರಿತು ಮೊತ್ತ ಮೊದಲನೆಯ ವಿವೇಚನೆ ಈ ಗ್ರಂಥದಲ್ಲಿ ನಡೆದಿದೆ.

ಸ್ವಯಂ ವಿದ್ವಾಂಸನಾದ ಧಾರಾನಗರದ ಭೋಜರಾಜ ಅನೇಕ ಕವಿಗಳ ಪೋಷಕನೂ ಆಶ್ರಯದಾತನೂ ಆಗಿದ್ದ. ಇವನ 'ಸರಸ್ವತೀ ಕಂಠಾಭರಣ', 'ಶೃಂಗಾರ ಪ್ರಕಾಶ' ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದ ಎರಡು ಗ್ರಂಥಗಳು. ಎರಡನೆಯದು ಸಂಸ್ಕೃತ ಸಾಹಿತ್ಯದಲ್ಲಿಯೇ ಶ್ರೇಷ್ಠ ಲಕ್ಷಣ ಗ್ರಂಥವೆಂದು ಪ್ರಸಿದ್ಧವಾಗಿದೆ.

ಭಾರತೀಯ ಕಾವ್ಯಮೀಮಾಂಸೆಯಲ್ಲಿ ಬಹಳ ಮುಖ್ಯವಾದ 'ಧ್ವನಿತತ್ತ್ವ'ವನ್ನು ಮೂಲತಃ ಪ್ರತಿಪಾದಿಸಿದವನು ಆನಂದವರ್ಧನ (ಕಾಲ ಕ್ರಿ. ಶ. ಸುಮಾರು 800). ಅವನ ಗ್ರಂಥ 'ಧ್ವನ್ಯಾಲೋಕ'. 'ರಸ'ವೇ ಕಾವ್ಯದ ಆತ್ಮ ; ಕಾವ್ಯ ಶರೀರವು ರಸವನ್ನು ಪ್ರತಿಪಾದಿಸುವ ಮಾರ್ಗ, ಧ್ವನಿ ; ರಸ ಮತ್ತು ಧ್ವನಿಗಳ ಪರಸ್ಪರ ಹೊಂದಾಣಿಕೆಯೇ ಔಚಿತ್ಯ—ಎಂಬುದು ಇವನ ನಿಲುವು. ಧ್ವನಿತತ್ತ್ವದ ಮುಖ್ಯಾಂಶವಿದು.

ಕ್ರಿ. ಶ. 800ರಿಂದ 250 ವರ್ಷಗಳ ಕಾಲ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಒಂದು ಬಗೆಯ ರಚನಾತ್ಮಕ ಯುಗ ಎನ್ನಬಹುದು. ಧ್ವನಿತತ್ತ್ವದ ಮೇಲೆ ವಿಮರ್ಶೆ, ವ್ಯಾಖ್ಯಾನ, ಖಂಡನೆ, ಮಂಡನೆ, ಟೀಕೆಗಳು ಈ ಕಾಲದಲ್ಲಿ ಅತ್ಯಂತ ಬಿರುಸಾಗಿ ಹೊರಬಂದುವು. ಆದರೂ ಕೊನೆಗೂ ಆ ತತ್ತ್ವ ರೂಢಮೂಲವಾಗಿ ನಿಂತಿತು. ಆನಂದವರ್ಧನನು ತೋರಿಸಿದ ದಾರಿಯಲ್ಲೇ ಸಾಗಿದವನು ಮಮ್ಮಟ (ಕಾಲ ಸುಮಾರು 776–807). 'ಕಾವ್ಯ ಪ್ರಕಾಶ' ಅವನ ಗ್ರಂಥ. ಹಿಂದಿನವರು ಧ್ವನಿತತ್ತ್ವದ ವಿಷಯದಲ್ಲಿ ಹೇಳಿದ ವಿಚಾರಗಳನ್ನೆಲ್ಲ ಕ್ರೋಢೀಕರಿಸಿ ಧ್ವನಿತತ್ತ್ವವನ್ನು ಭದ್ರವಾದ ತಳಹದಿಯ ಮೇಲೆ ನಿಲ್ಲಿಸಿದ ಯಶಸ್ಸು ಇವನಿಗೆ ಸಲ್ಲುತ್ತದೆ.

ಅಭಿನವ ಗುಪ್ತನ ಸಮಕಾಲೀನನಾದ ಕುಂತಕ ' ವಕ್ರೋಕ್ತಿ ಜೀವಿತ ' ಎಂಬ ಗ್ರಂಥವನ್ನು ರಚಿಸಿದ. ಲೋಕದ ರೂಢಿಯ ಮಾತಿನಲ್ಲಿ ಇಲ್ಲದ ಯಾವುದೋ ಒಂದು ಸೊಬಗು —ವೈಚಿತ್ರ್ಯ— ಕವಿಯ ಉಕ್ತಿಯಲ್ಲಿ ಕಂಡುಬರುತ್ತದೆ. ಇಂಥ ಉಕ್ತಿಯನ್ನು ವಕ್ರೋಕ್ತಿ ಎನ್ನುತ್ತಾರೆ. ಈ ವೈಚಿತ್ರ್ಯವನ್ನು ಉಂಟುಮಾಡುವಂಥದು ಕವಿಕೌಶಲ ಎನ್ನುವುದು ಆತನ ಅಭಿಪ್ರಾಯ.

ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅದರಲ್ಲೂ ಮುಖ್ಯವಾಗಿ 'ಸಂಸ್ಕೃತ ಕಾವ್ಯಮೀಮಾಂಸೆ'ಯಲ್ಲಿ ಜಗನ್ನಾಥ ಪಂಡಿತನ ಹೆಸರು ಸ್ಮರಣೀಯವಾದದ್ದು. ಮೊಗಲ್ ಚಕ್ರವರ್ತಿ ಷಹಜಹಾನನ ಕಾಲದಲ್ಲಿ ಜೀವಿಸಿದ್ದ ಇವನು ಕವಿಯೂ ಆಗಿದ್ದ. 'ರಸಗಂಗಾಧರ' ಅವನು ಬರೆದ ಪ್ರೌಢ ಲಾಕ್ಷಣಿಕ ಗ್ರಂಥ. ಪ್ರಾಚೀನ ಅಲಂಕಾರಿಕರ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯವಾದ ತೀಕ್ಷ್ಣ ವಿವೇಚನೆಗೆ ಗುರಿಮಾಡಿ ತನ್ನದೇ ಆದ ಸಿದ್ಧಾಂತವನ್ನು ಪ್ರತಿಪಾದಿಸಿದವನು ಇವನು. ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವೇ ಕಾವ್ಯ ಎನ್ನುವುದು ಇವನ ನಿಲುವು.

ರಸಸಿದ್ಧಾಂತದ ಮೂಲ ಅಂಶಗಳು ಭರತನ 'ನಾಟ್ಯಶಾಸ್ತ್ರ'ದಲ್ಲಿ ಕಂಡುಬಂದರೂ ಅದನ್ನು ಕಾವ್ಯದ ಬಿಡಿಬಿಡಿ ಪದ್ಯಗಳಿಗೆ ಅನ್ವಯಿಸುವ ಪದ್ಧತಿ ಆಚರಣೆಗೆ ಬರಲು ಬಹಳ ಕಾಲ ಹಿಡಿಯಿತು. ಪ್ರಾರಂಭದಲ್ಲಿ ಅಲಂಕಾರಕ್ಕೆ ಪ್ರಾಧಾನ್ಯವಿತ್ತು. ದಂಡಿ ಮತ್ತಿತರ ಆಲಂಕಾರಿಕರು ಕಾವ್ಯದಲ್ಲಿ ಅಲಂಕಾರಗಳಿಗೇ ಹೆಚ್ಚಿನ ಮಹತ್ವ ನೀಡಿದರು. ವಾಮನನ ಅನಂತರ 'ರೀತಿ' ಯೇ ಕಾವ್ಯದ ಆತ್ಮವೆಂಬ ತತ್ತ್ವ ಪ್ರಬಲವಾಯಿತು. ಆದರೂ ಅಲಂಕಾರಗಳು ತಮ್ಮ ಸ್ಥಾನವನ್ನು ಕಳೆದುಕೊಳ್ಳಲಿಲ್ಲ. ರಸತತ್ತ್ವ, ಧ್ವನಿತತ್ತ್ವ ಇವೆರಡೂ ಭಾರತೀಯ ಕಾವ್ಯಮೀಮಾಂಸೆಯ ಕಣ್ಣುಗಳಿದ್ದಂತೆ. ಭರತನು ತನ್ನ 'ನಾಟ್ಯಶಾಸ್ತ್ರ' ದಲ್ಲಿ ಸ್ಥೂಲವಾಗಿ ಪ್ರತಿಪಾದಿಸಿದ ರಸತತ್ತ್ವವನ್ನು ಬಲವಾಗಿ ಸ್ಥಾಪಿಸಿದವನು ಅಭಿನವ ಗುಪ್ತ. "ವ್ಯಂಗ್ಯಾರ್ಥ ಸೂಚಕವಾದ ಧ್ವನಿ ಕಾವ್ಯದ ತಿರುಳು"—ಎಂದ ಆನಂದವರ್ಧನ. ಅವನ ಧ್ವನಿತತ್ತ್ವವನ್ನು ಕುರಿತು ತೀಕ್ಷ್ಣವಾದ ವಿಮರ್ಶೆಗಳೂ ಬಂದುವು. ಆನಂದವರ್ಧನನ ಬಳಿಕ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಹೊಸ ತತ್ತ್ವಗಳನ್ನು ನಿರೂಪಿಸಿ ಒಂದು ಸಂಪ್ರದಾಯದ ಮೇಲ್ಪಂಕ್ತಿ ಹಾಕಿಕೊಟ್ಟ ಪ್ರತಿಭಾವಂತರಾರೂ ಬರಲಿಲ್ಲ.

'ಕವಿರಾಜಮಾರ್ಗ', 2ನೆಯ ನಾಗವರ್ಮನ 'ಕಾವ್ಯಾವಲೋಕನ', ಸಾಳ್ವನ 'ರಸ ರತ್ನಾಕರ'—ಇವು ಕನ್ನಡದಲ್ಲಿ ರಚಿತವಾಗಿರುವ ಅಲಂಕಾರ ಗ್ರಂಥಗಳು. ಇವೆಲ್ಲವೂ ಬಹುಮಟ್ಟಿಗೆ ಸಂಸ್ಕೃತ ಅಲಂಕಾರ ಶಾಸ್ತ್ರಗಳ ಪಡಿಯಚ್ಚುಗಳೇ ಆಗಿವೆ.

ಭಾರತೀಯ ಕಾವ್ಯಮೀಮಾಂಸೆಯು ಗ್ರಂಥ ಸಮೃದ್ಧಿ ಮತ್ತು ತತ್ತ್ವ ಪ್ರತಿಪಾದನೆಯಲ್ಲಿ ಎರಡರಲ್ಲೂ ಮೇಲುವರ್ಗಕ್ಕೆ ಸೇರಿದೆ. ಪ್ರತಿಭಾವಂತರೂ ತೀಕ್ಷ್ಣಮತಿಗಳೂ ಆದ ವಿದ್ವಾಂಸರು ಎಲ್ಲ ಕಾಲಕ್ಕೂ ಎಲ್ಲ ಸಾಹಿತ್ಯಕ್ಕೂ ಅನ್ವಯಿಸುವ ಹಲವಾರು ತತ್ತ್ವಗಳನ್ನು ಪ್ರತಿಪಾದಿಸಿದ್ದಾರೆ. ಜಗತ್ತಿನ ಕಾವ್ಯಮೀಮಾಂಸಾ ರಂಗದಲ್ಲಿ ಭಾರತಕ್ಕೆ ಒಂದು ಮಹತ್ವದ ಸ್ಥಾನವನ್ನು ಈ ಗ್ರಂಥಗಳಲ್ಲಿ ಗಳಿಸಿಕೊಟ್ಟಿದ್ದಾರೆ.

ನೋಡಿ : ಆನಂದವರ್ಧನ ; 'ಕವಿರಾಜಮಾರ್ಗಂ' ; ಜಗನ್ನಾಥ ಪಂಡಿತ ; ದಂಡಿ ; ಭರತನ 'ನಾಟ್ಯಶಾಸ್ತ್ರ' ; ಮಮ್ಮಟ ; ರಾಜಶೇಖರ

## ಭಾರತೀಯ ಚಲಚ್ಚಿತ್ರ ಕಲೆ

ಒಮ್ಮೆ ದೆಹಲಿಯ ದೊಡ್ಡ ರಾಜಕಾರಣಿಯೊಬ್ಬರು ಮದರಾಸಿಗೆ ಬರುವವರಿದ್ದರು. ಮದರಾಸಿನ ಪ್ರಮುಖ ಪೌರರು ಅವರಿಗೆ ಸ್ವಾಗತದ ವ್ಯವಸ್ಥೆ ಮಾಡಿದ್ದರು. ವಿಮಾನ ನಿಲ್ದಾಣದಲ್ಲಿ ಬಂದು ಸೇರಿದ್ದ ದೊಡ್ಡ ಜನ ಸಮೂಹವನ್ನು ಕಂಡು ಸಮಾರಂಭವನ್ನು ಏರ್ಪಡಿಸಿದವರಿಗೆ ಎಲ್ಲಿಲ್ಲದ ಹಿಗ್ಗು. ದೆಹಲಿ ವಿಮಾನ ಬರುವುದಕ್ಕೆ ಇನ್ನೇನು ಕೆಲವೇ ಮಿನಿಟು ಇರುವಾಗ ಇನ್ನೊಂದು ವಿಮಾನದಲ್ಲಿ ಜನಪ್ರಿಯ ತಮಿಳು



ಚಲಚ್ಚಿತ್ರ ನಟನೊಬ್ಬ ಬಂದಿಳಿದ. ಜನ ಅವನೆಡೆಗೆ ನುಗ್ಗಿದ್ದೇ ನುಗ್ಗಿದ್ದು; ಹಾರಗಳನ್ನು ಹಾಕಿದ್ದೇ ಹಾಕಿದ್ದು. ದೆಹಲಿಯ ದೊಡ್ಡ ಮನುಷ್ಯರು ಬರುವ ಹೊತ್ತಿಗೆ ವಿಮಾನ ನಿಲ್ದಾಣ ಹೆಚ್ಚು ಕಡಮೆ ಖಾಲಿ!

ಭಾರತೀಯರ ಮೇಲೆ ಚಲಚ್ಚಿತ್ರಗಳ ಪ್ರಭಾವ ಅಂಥದ್ದು. ದಿವಂಗತ ಜವಾಹರಲಾಲ ನೆಹರೂ ಅವರ ಮಾತುಗಳಲ್ಲಿ ಹೇಳುವುದಾದರೆ "ಆಧುನಿಕ ಜಗತ್ತಿನಲ್ಲಿ ಅತ್ಯಂತ ದೊಡ್ಡ ಪರಿಣಾಮಕಾರೀ ಮಾಧ್ಯಮ –ಚಲಚ್ಚಿತ್ರ. ಭಾರತದಲ್ಲಿ ಪುಸ್ತಕಗಳು ಮತ್ತು ವೃತ್ತಪತ್ರಿಕೆಗಳ ಒಟ್ಟು ಪ್ರಭಾವಕ್ಕಿಂತಲೂ ಚಲಚ್ಚಿತ್ರದ ಪ್ರಭಾವ ಹೆಚ್ಚು". ಅನೇಕ ನಗರಗಳಲ್ಲಿ ಬಹು ಜನರಿಗೆ ಅದೊಂದೇ ಮನೋರಂಜನೆಯ ಮಾರ್ಗ.

20ನೆಯ ಶತಮಾನದ ಆರಂಭಕಾಲದಲ್ಲಿ ಭಾರತದಲ್ಲಿ ಚಲಚ್ಚಿತ್ರ ಯುಗ ಆರಂಭವಾಯಿತು. ಮೊಟ್ಟಮೊದಲು ತಯಾರಾದ ಚಲಚ್ಚಿತ್ರಗಳು ಬಹಳ ಚಿಕ್ಕವು : ಪೈಲ್‌ವಾನರ ಕುಸ್ತಿ ಪಂದ್ಯ. ದೆಹಲಿ ದರ್ಬಾರು. ಜಾತ್ರೆ, ನಾಟಕಗಳು –ಇಂಥವುಗಳನ್ನು ತೋರಿಸುವ ಚಿತ್ರಗಳು. ಭಾರತದಲ್ಲಿ ಮೊದಲು ರಚಿತವಾದ ಚಲಚ್ಚಿತ್ರಗಳು ಚಿಕ್ಕವಾಗಿದ್ದರಿಂದ ಇವುಗಳನ್ನು ತೋರಿಸುವುದರ ಜೊತೆಗೆ ಸಂಗೀತ ಕಚೇರಿ, ನೃತ್ಯ ಅಥವಾ ಯಕ್ಷಿಣೀ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡುವ ಪದ್ಧತಿ ಇತ್ತು.

ಒಂದು ನಿರ್ದಿಷ್ಟ ಕಥಾವಸ್ತುವಿದ್ದ ಚಲಚ್ಚಿತ್ರ ಭಾರತದಲ್ಲಿ ಮೊಟ್ಟಮೊದಲು ತಯಾರಾದದ್ದು 1912ರಲ್ಲಿ. ಆರ್. ಜಿ. ಥಾರ್ನೆಯವರು ತಯಾರಿಸಿದ ಈ ಚಿತ್ರ –'ಪುಂಡಲೀಕ್' ಆ ವರ್ಷ ಮೇ 18ರಂದು ಮುಂಬಯಿಯಲ್ಲಿ ಬಿಡುಗಡೆಯಾಯಿತು. 'ಪುಂಡಲೀಕ್' ತಯಾರಿಸಿದ ಆರ್. ಜಿ. ಥಾರ್ನೆ ವಿದೇಶೀ ವ್ಯಾಪಾರೀ ಸಂಸ್ಥೆ ಗ್ರೀವ್ಸ್ ಕಾಟನ್‌ನಲ್ಲಿ ಉದ್ಯೋಗಿಯಾಗಿದ್ದವರು. ಇವರು ತಯಾರಿಸಿದ್ದು ಇದೊಂದೇ ಚಿತ್ರ.

ಭಾರತೀಯ ಚಲಚ್ಚಿತ್ರದ ಪಿತಾಮಹ ಎಂಬ ಹೆಸರು ಬಂದಿರುವುದು, ಒಂದಾದ ಮೇಲೊಂದರಂತೆ ಹಲವು ಚಲಚ್ಚಿತ್ರಗಳನ್ನು ತಯಾರಿಸಿದ ದಾದಾ ಸಾಹೇಬ ಫಾಲ್ಕೆ ಅವರಿಗೆ. ಇವರ ಪ್ರಥಮ ಚಿತ್ರ 'ರಾಜಾ ಹರಿಶ್ಚಂದ್ರ' ಮುಂಬಯಿಯಲ್ಲಿ ಬಿಡುಗಡೆಯಾದದ್ದು 1913 ಮೇ 3ರಂದು. ಈ ಚಿತ್ರವೂ ಇವರು ಅನಂತರ ತಯಾರಿಸಿದ ಹತ್ತಾರು ಚಿತ್ರಗಳೂ ತುಂಬ ಜನಪ್ರಿಯತೆ ಗಳಿಸಿದುವು. ಇವರ 'ಶ್ರೀಕೃಷ್ಣ ಜನ್ಮ', 'ಕಾಳೀಯ ಮರ್ದನ'ಗಳಂಥ ಚಿತ್ರಗಳು ಭಾರತೀಯ ಚಲಚ್ಚಿತ್ರ ಕಲೆಯ ಅಭಿವೃದ್ಧಿಗೆ ಭದ್ರ ಬುನಾದಿ ಹಾಕಿದುವು.

ಬಂಗಾಳದಲ್ಲಿ ತಯಾರಾದ ಪ್ರಥಮ ಚಲಚ್ಚಿತ್ರ ಕೂಡ ಹರಿಶ್ಚಂದ್ರನನ್ನು ಕುರಿತದ್ದೇ. ಜೆ. ಎಫ್. ಮದನ್ ಅವರಿಂದ ನಿರ್ಮಿಸಲ್ಪಟ್ಟ 'ಸತ್ಯವಾದಿ ರಾಜಾ ಹರಿಶ್ಚಂದ್ರ' 1917ರಲ್ಲಿ ಹೊರಬಂತು. 'ಕೀಚಕ ವಧಂ' (1919) ಮದರಾಸಿನಲ್ಲಿ ತಯಾರಾದ ಮೊದಲ ಚಿತ್ರ. ಹಿಮಾಂಶುರಾಯ್ ಅವರ 'ಲೈಟ್ ಆಫ್ ಏಷ್ಯ', 'ಶಿರಾಜ್', 'ಕರ್ಮ' ಮುಂತಾದುವು ಅಂತರ ರಾಷ್ಟ್ರೀಯ ಖ್ಯಾತಿ ಗಳಿಸಿದುವು. ವಿ. ಶಾಂತಾರಾಮ್ ಅವರ 'ಉದಯಕಾಲ್' ದೇಶಭಕ್ತಿ ಪ್ರಚೋದಕವಾಗಿತ್ತು. ಆಗಿನ ಬ್ರಿಟಿಷ್ ಇಂಡಿಯ ಸರಕಾರ ಫಿಲ್ಮ್‌ಸೆನ್ಸಾರ್ ಬೋರ್ಡನ್ನು ರಚಿಸಲು ಈ ಚಿತ್ರ ಕಾರಣವಾಯಿತು.

ಆಗಿನ ಭಾರತೀಯ ಚಿತ್ರಗಳಲ್ಲಿ ಹೆಚ್ಚಿನವುಗಳ ಪ್ರದರ್ಶನ ಅವಧಿ ಒಂದು–ಒಂದೂವರೆ ಗಂಟೆಗಳಷ್ಟು ಇರುತ್ತಿತ್ತು. ಆದರೆ ಇದೇ ಕಾಲದಲ್ಲಿ ನಿರ್ಮಾಣವಾದ ಶ್ರೀರಾಮನ ವನವಾಸವನ್ನು ಕುರಿತ ಒಂದು ಚಲಚ್ಚಿತ್ರ ತುಂಬ ಉದ್ದವಾಗಿದ್ದು ನಾಲ್ಕು ಭಾಗಗಳಾಗಿ ಬೇರೆ ಬೇರೆ ದಿನ ಪ್ರದರ್ಶಿತವಾಯಿತು. ಇವೆಲ್ಲ ಮೂಕ ಚಿತ್ರಗಳು.

1931ರಲ್ಲಿ ಭಾರತದಲ್ಲಿ ಪ್ರಥಮ ವಾಕ್ಚಿತ್ರ 'ಆಲಂ ಆರಾ' ಬಿಡುಗಡೆಯಾಯಿತು. ಮೂಕಚಿತ್ರ ಯುಗ ಮುಕ್ತಾಯವಾಯಿತು. ಅಂದಿನ ವಾಕ್ಚಿತ್ರಗಳಲ್ಲಿ ಸಂಭಾಷಣೆಗಳು ಮಾತ್ರವಲ್ಲದೆ ಹಾಡುಗಳೂ ಇರುತ್ತಿದ್ದುವು. ಕೆಲವು ಚಲಚ್ಚಿತ್ರಗಳಲ್ಲಿ ಇಪ್ಪತ್ತರಿಂದ ಎಪ್ಪತ್ತರಷ್ಟು ಹಾಡುಗಳಿದ್ದದ್ದೂ ಉಂಟು. ಆಗಿನ ಹಲವು ವಾಕ್ಚಿತ್ರಗಳು ಅಂದಿನ ರಂಗಭೂಮಿಯಲ್ಲಿ ಪ್ರದರ್ಶಿತವಾಗುವ ನಾಟಕಗಳ ಪಡಿಯಚ್ಚಿನಂತೆ ಇರುತ್ತಿದ್ದುವು. ಭಾರತದಲ್ಲಿ ಈಗ ಸುಮಾರು ಇಪ್ಪತ್ತನಾಲ್ಕು ಭಾಷೆಗಳಲ್ಲಿ ಚಲಚ್ಚಿತ್ರಗಳು ತಯಾರಾಗುತ್ತವೆ. ಮೂಕಚಿತ್ರಗಳು ಆರಂಭವಾದಂದಿನಿಂದ



ಶ್ರೇಷ್ಠ ನಟನಟಿಯರಿಗೆ ಊರ್ವಶಿ ಪ್ರಶಸ್ತಿ.

VASANTASENA
OR
THE TOY CART
A drama written about two thousand years ago by King Shudrak.
Scenario and Direction by
M. Bhavnani
English titles by James H. Cousins
Art direction G. Venkatachalan
Photography by Machave
CAST
Vasantasena, a Courtesan Miss Enakshi Rama Rau
Dutta, wife of Charudatta Mrs. Kamaladevi Chattopadhya
Madanika Miss Nalini Turkhud

'ವಸಂತ ಸೇನಾ' ಮೂಕ ಚಿತ್ರದ ಜಾಹೀರಾತು –ಭವನಾನಿ ನಿರ್ದೇಶನ



ಅಶೋಕ ಕುಮಾರ್



ಸೈಗಲ್



ರಾಜ್‌ಕಪೂರ್



ಸಾಯಿರಾಬಾನು–ದಿಲೀಪ್



ಗರಿಮಾ - 'ಉಸ್ಕಿ ರೋಟಿ' ಯಲ್ಲಿ

ಈಚಿನ ಅರವತ್ತು ವರ್ಷಗಳಲ್ಲಿ ಭಾರತದಲ್ಲಿ ತಯಾರಾದ ಚಿತ್ರಗಳ ಒಟ್ಟು ಸಂಖ್ಯೆ ಸುಮಾರು 11,400. ಮುಂಬಯಿಯಲ್ಲೇ ಕೇಂದ್ರೀಕೃತವಾಗಿದ್ದ ಚಲಚ್ಚಿತ್ರ ಉದ್ದಿಮೆ ಬರಬರುತ್ತ ಭಾರತದಾದ್ಯಂತ ಹರಡಿತು.

ಕನ್ನಡಿಗರು ಈ ಕ್ಷೇತ್ರಕ್ಕೆ ಕಾಲಿಟ್ಟದ್ದು ತುಸು ತಡವಾಗಿಯೇ. ಕನ್ನಡ ಭಾಷೆಯ ಚಲಚ್ಚಿತ್ರಗಳ ರಚನೆ ಆರಂಭವಾಗುವುದಕ್ಕೆ ಕೆಲವು ವರ್ಷಗಳ ಹಿಂದೆಯೇ ಬೆಂಗಳೂರಿನಲ್ಲಿ ಮೂಕಚಿತ್ರಗಳ ರಚನೆ ಕೆಲ ಕಾಲ ನಡೆದಿತ್ತು. ಆಗ ರಚಿತವಾದ ಕೃತಿ ಏನಾಕ್ಷಿ ರಾಮರಾವ್, ಕಮಲಾದೇವಿ ಚಟ್ಟೋಪಾಧ್ಯಾಯ, ಕೈಲಾಸಂ ಮತ್ತಿತರರು ನಟಿಸಿದ 'ವಸಂತಸೇನಾ'.

ಮೊಟ್ಟಮೊದಲ ಕನ್ನಡ ಚಿತ್ರ 'ಸತಿ ಸುಲೋಚನ' ಪ್ರದರ್ಶನಕ್ಕೆ ಬಂದದ್ದು 1934ರಲ್ಲಿ. ಸುಬ್ಬಯ್ಯ ನಾಯ್ಡು, ನಾಗೇಂದ್ರರಾವ್, ಲಕ್ಷ್ಮೀಬಾಯಿ, ತ್ರಿಪುರಾಂಬ ಮತ್ತಿತರರು 'ಸತಿ ಸುಲೋಚನ' ಚಿತ್ರದ ಪಾತ್ರವರ್ಗದಲ್ಲಿದ್ದವರು. ಮುಂದಿನ ಒಂದು ದಶಕದಲ್ಲಿ ಕನ್ನಡ ಚಿತ್ರರಂಗದಲ್ಲಿ ಕೇಳಿಬರುತ್ತಿದ್ದ ಹೆಸರುಗಳು ಇವೇ. 1950ರ ಸುಮಾರಿಗೆ ರಾಜಕುಮಾರ್ (ಚಿತ್ರ : ಬೇಡರ ಕಣ್ಣಪ್ಪ), ಕಲ್ಯಾಣ್‌ಕುಮಾರ್ (ಚಿತ್ರ : ನಟಶೇಖರ), ಸರೋಜಾದೇವಿ (ಚಿತ್ರ : ಕಾಳಿದಾಸ) ಮುಂತಾದವರು ಬೆಳಕಿಗೆ ಬಂದವರು. ಕಲ್ಪನಾ, ಭಾರತಿ, ಶ್ರೀನಾಥ, ಎಲ್. ವಿ. ಶಾರದಾ, ತಲಗೇರಿ ವೆಂಕಟರಾವ್, ಕಾರ್ನಾಡ್, ಅನಂತರದ ಖ್ಯಾತ ನಟನಟಿಯರು.

ಭಾರತದಲ್ಲಿ ವಾಕ್ಚಿತ್ರ ಆರಂಭವಾದ ಅನಂತರದ ಎರಡು ದಶಕಗಳ ಕಾಲ ನಮ್ಮ ಚಿತ್ರಜಗತ್ತು ಮೂವರು 'ಚಲಚ್ಚಿತ್ರ ಮೊಗಲ' ರಿಂದ ಆಳಲ್ಪಟ್ಟಿತು. ನ್ಯೂಥಿಯೇಟರ್ಸ್‌ನ ಬಿ. ಎನ್. ಸರ್ಕಾರ್, ಪ್ರಭಾತ್‌ನ ವಿ. ಶಾಂತಾರಾಮ್ ಹಾಗೂ ಬಾಂಬೆ ಟಾಕೀಸಿನ ಹಿಮಾಂಶುರಾಯ್ ಮತ್ತು ಇವರ ನಟಿ–ಪತ್ನಿ ದೇವಿಕಾರಾಣಿ –ಇವರಿಂದ ತಯಾರಾದ ಚಿತ್ರಗಳು ಜನಪ್ರಿಯತೆಯ ಶೃಂಗಕ್ಕೆ ಏರಿದುವು. ಸೊಹ್ರಾಬ್ ಮೋದಿ, ಮೆಹಬೂಬ್, ಕಿದಾರ್ ಶರ್ಮ, ಕಿಶೋರ್‌ಸಾಹು ಮುಂತಾದವರು ಪ್ರಮುಖರಾದ ಇತರರು. ಪೃಥ್ವೀರಾಜ್‌ಕಪೂರ್, ದೇವಿಕಾರಾಣಿ, ಅಶೋಕ ಕುಮಾರ್, ಸೈಗಲ್, ಪಹಾರಿಸನ್ಯಾಲ್, ದಿಲೀಪ್‌ಕುಮಾರ್, ನರ್ಗೀಸ್, ಮೀನಾಕುಮಾರಿ, ರಾಜೇಶ್ ಖನ್ನ ಇವರೆಲ್ಲ ಹಿಂದಿ ಚಲಚ್ಚಿತ್ರರಂಗದ ಖ್ಯಾತ ನಟನಟಿಯರು. ಬಿಮಲ್ ರಾಯ್ ಅವರ 'ದೋ ಬಿಘಾ ಜಮೀನ್', ಕೆ. ಎ. ಅಬ್ಬಾಸ್ ಅವರ 'ಧರ್ತಿ ಕೆ ಲಾಲ್', ಚೇತನ್ ಆನಂದ್ ಅವರ 'ನೀಚ್ ನಗರ್', ರಾಜಕಪೂರ್



ವೈಜಯಂತಿಮಾಲಾ



ರಾಜೇಶ್ ಖನ್ನಾ



ಕಾಂಚನಮಾಲಾ

ಅವರ 'ಜಾಗ್ತೆ ರಹೋ' ಮತ್ತು ವಿ. ಶಾಂತಾರಾಮ್ ಅವರ 'ದೋ ಆಂಖೆ ಬಾರಾ ಹಾಥ್' ಕೆಲವು ವಿಖ್ಯಾತ ಚಿತ್ರಗಳು. ಮಲಯಾಳವಿನ 'ಚೆಮ್ಮೀನ್', ಕನ್ನಡದ 'ಸಂಸ್ಕಾರ', 'ಗೆಜ್ಜೆಪೂಜೆ' ಮುಂತಾದ ಚಿತ್ರಗಳು ನಮ್ಮ ರಾಷ್ಟ್ರದ ಹೊರಗೂ ಮೆಚ್ಚುಗೆಗೆ ಪಾತ್ರವಾಗಿವೆ. ಹಲವಾರು ಹಿಂದೀ ಚಿತ್ರಗಳೂ ಈ ಬಗೆಯ ಮನ್ನಣೆ ಪಡೆದಿವೆ.

1956ರಲ್ಲಿ ಸತ್ಯಜಿತ್ ರೇ ಅವರು ತಮ್ಮ ಮೊದಲ ಚಿತ್ರವನ್ನು ತಯಾರಿಸುವ ಹೊತ್ತಿಗೆ, ಚಲಚ್ಚಿತ್ರ ನಿರ್ಮಾಣ ಸಂಖ್ಯಾ ದೃಷ್ಟಿಯಿಂದ ಭಾರತ ಪ್ರಪಂಚದಲ್ಲಿ ಎರಡನೆಯ ಸ್ಥಾನವನ್ನು ಗಳಿಸಿತ್ತಾದರೂ ಅದಕ್ಕೆ ಅಂತರರಾಷ್ಟ್ರೀಯ ರಂಗದಲ್ಲಿ ಯಾವ ಸ್ಥಾನಮಾನವೂ ಇರಲಿಲ್ಲ.

ಪರಿಶುದ್ಧವೂ ಪೂರ್ತಿ ಭಾರತೀಯವೂ ಆದ ತನ್ನ ಚಿತ್ರಗಳ ಮೂಲಕ ಅಂತರರಾಷ್ಟ್ರೀಯ ಚಲಚ್ಚಿತ್ರೋತ್ಸವಗಳಲ್ಲಿ ಜಯಭೇರಿ ಹೊಡೆದ ಬಂಗಾಳಿ ಚಲಚ್ಚಿತ್ರ ನಿರ್ದೇಶಕ ಸತ್ಯಜಿತ್ ರೇ ಅವರು ಜಗತ್ತಿನ ಒಂಬತ್ತು ಮಂದಿ ಅಗ್ರಗಣ್ಯ ಚಲಚ್ಚಿತ್ರ ನಿರ್ದೇಶಕರಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟಿದ್ದಾರೆ. ಇವರ 'ಪಥೇರ್ ಪಾಂಚಾಲಿ', 'ಅಪರಾಜಿತೋ,' 'ಅಪೂರ್ ಸಂಸಾರ್', 'ತೀನ್ ಕನ್ಯಾ,' 'ಮಹಾನಗರ್', 'ಚಾರುಲತಾ' ಮುಂತಾದುವು ಭಾರತದ ಚಲಚ್ಚಿತ್ರ ರಂಗದಲ್ಲಿ ಅಮರವಾಗಿ ಉಳಿಯುವಂಥವು.

1950ರ ಅನಂತರದ ಭಾರತೀಯ ಚಲಚ್ಚಿತ್ರಗಳಲ್ಲಿ ಹೆಚ್ಚಿನವು ಗಲ್ಲಾಪೆಟ್ಟಿಗೆಯ ಮೇಲೆ ಕಣ್ಣಿಟ್ಟುಕೊಂಡೇ ತಯಾರಿಸಿದಂಥವು. ಇಂಥ ಚಲಚ್ಚಿತ್ರಗಳ ಪರಂಪರೆ ಬೆಳೆಯುತ್ತಿರುವ ಸಮಯದಲ್ಲೇ ಹೊಸ ಬಗೆಯ ಚಿತ್ರಗಳೂ ಬರಲಾರಂಭಿಸಿವೆ. ಕೋಟ್ಯಂತರ ರೂಪಾಯಿಗಳ ಖರ್ಚಿನಲ್ಲಿ ತಯಾರಿಸಿದ ವರ್ಣಚಿತ್ರಗಳ ಬೆಡಗು ಇವುಗಳಲ್ಲಿಲ್ಲ. ಆದರೆ ನೈಜತೆ, ಭಾವಪೂರ್ಣತೆಗಳಲ್ಲಿ ಇವು ಹೊಸ ಮಟ್ಟವನ್ನು ಮುಟ್ಟಿವೆ. 'ಭುವನ್ ಶೋಮ್'ನ ನಿರ್ದೇಶಕ ಮೃಣಾಲ್ ಸೇನರ ಹೆಜ್ಜೆಯ ಜಾಡಿನಲ್ಲಿ ಇಂಥ ಕೆಲವು ಚಿತ್ರಗಳು ತಯಾರಾಗಿವೆ. ಗುಜರಾಥಿಯ 'ಕಂಕು,' ಹಿಂದಿಯ 'ಸಾರಾ ಆಕಾಶ್', 'ಬದ್‌ನಾಮ್ ಬಸ್ತಿ,' 'ಉಸ್ಕಿ ರೋಟಿ,' ಕನ್ನಡದ 'ಸಂಸ್ಕಾರ,' 'ವಂಶವೃಕ್ಷ' ಈ ವರ್ಗಕ್ಕೆ ಸೇರಿದುವು.

ಕಥಾಚಿತ್ರಗಳ ತಯಾರಿಕಾ ಸಂಖ್ಯೆಯ ದೃಷ್ಟಿಯಿಂದ ಭಾರತ ಜಗತ್ತಿನಲ್ಲಿ ಪ್ರಮುಖ ಸ್ಥಾನ ಪಡೆದಿದೆ. ನಮ್ಮ ರಾಷ್ಟ್ರದಲ್ಲಿ ಸಾಕ್ಷ್ಯ ಚಿತ್ರ ಮತ್ತು ವಾರ್ತಾಚಿತ್ರಗಳ ತಯಾರಿಕೆಯೂ ಹೆಚ್ಚು ಸಂಖ್ಯೆಯಲ್ಲಿ ನಡೆಯುತ್ತಿದೆ. ಗುಣಮಟ್ಟದಲ್ಲೂ ಇವು ಬೇರೆ ದೇಶಗಳ ತಯಾರಿಕೆಗಳಷ್ಟೇ



'ವಸಂತಸೇನಾ' ವಾಕ್ಚಿತ್ರ —ಲಕ್ಷ್ಮೀಬಾಯಿ, ಪದ್ಮಾದೇವಿ



'ಮಿನುಗುತಾರೆ'
ಕಲ್ಪನಾ



ತಲಗೇರಿ ವೆಂಕಟರಾವ್



ಗಿರೀಶ್ ಕಾರ್ನಾಡ್

ಉತ್ತಮವಾಗಿವೆ. ಒಂದು ವಿಷಯದ ಮೇಲೆ ಹೆಚ್ಚಿನ ಮಾಹಿತಿ ಕೊಡುವ ಚಿಕ್ಕ ಪ್ರಮಾಣದ ಚಲಚ್ಚಿತ್ರವೇ ಡಾಕ್ಯುಮೆಂಟರಿ ಸಾಕ್ಷ್ಯಚಿತ್ರ. ಭಾರತದಲ್ಲಿ ತಯಾರಾದ ಅನೇಕ ಡಾಕ್ಯುಮೆಂಟರಿಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಬಹುಮಾನಗಳನ್ನು ಪಡೆದಿವೆ.

ನಮ್ಮ ರಾಷ್ಟ್ರದಲ್ಲಿ ವಾರದಿಂದ ವಾರಕ್ಕೆ ನಡೆಯುವ ಮುಖ್ಯ ಘಟನೆಗಳ ಚಲಚ್ಚಿತ್ರಗಳನ್ನು ದೇಶದ ಎಲ್ಲ ಭಾಗಗಳಲ್ಲೂ ತೋರಿಸುವ ಮಾಧ್ಯಮ ವಾರ್ತಾ ಚಿತ್ರಗಳು. ಇವು ರಾಷ್ಟ್ರದ ಎಲ್ಲ ಚಿತ್ರಮಂದಿರಗಳಲ್ಲೂ ತೋರಿಸಲ್ಪಡುತ್ತವೆ. ಭಾರತ ಸರಕಾರದ ಚಲಚ್ಚಿತ್ರ ವಿಭಾಗ ಮತ್ತು ರಾಜ್ಯ ಸರಕಾರಗಳು ಪ್ರಮುಖ ಘಟನೆಗಳನ್ನು ಕುರಿತ, ವಾರ್ತಾ ಚಿತ್ರಗಳನ್ನು ತಯಾರಿಸಿ ಪ್ರದರ್ಶನಕ್ಕೆ ಕಳುಹಿಸುತ್ತವೆ.

ಕೆಲವರಿಗೆ ನಟನೆಯ ಕಲೆ ಹುಟ್ಟಿನಿಂದಲೇ ಬರುತ್ತದೆ. ಆದರೆ ಇಂಥವರಿಗೂ ಚೆನ್ನಾಗಿ ತರಬೇತಿ ಕೊಟ್ಟರೆ ಈ ಪ್ರತಿಭೆ ಮತ್ತಷ್ಟು ಬೆಳಗುತ್ತದೆ. ಮುಂದಿನ ಚಲಚ್ಚಿತ್ರ ಕಲಾವಿದರಿಗೆ ತಕ್ಕದಾದ ತರಬೇತಿ ಕೊಡಲೆಂದೇ ಭಾರತ ಸರಕಾರ ಪುಣೆಯಲ್ಲಿ ಫಿಲ್ಮ್ ಇನ್‌ಸ್ಟಿಟ್ಯೂಟ್ ಎಂಬ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿತು. ನಟನೆ ಮಾತ್ರವಲ್ಲದೆ ಚಿತ್ರ ತಯಾರಿಯ ಇತರ ಅಂಗಗಳಲ್ಲೂ ಅಂದರೆ ಚಲಚ್ಚಿತ್ರ ನಿರ್ದೇಶನ, ಸಂಕಲನ ಮುಂತಾದುವುಗಳಲ್ಲೂ ಚಲಚ್ಚಿತ್ರ ರಚನೆಗೆ ಸಂಬಂಧಿಸಿದ ತಾಂತ್ರಿಕ ವಿಚಾರಗಳಲ್ಲೂ ಕಾರ್ಯಕರ್ತರನ್ನು ಈ ಸಂಸ್ಥೆ ತಯಾರಿಸುತ್ತದೆ.



ಎಲ್. ವಿ. ಶಾರದಾ

ಚಲಚ್ಚಿತ್ರ ರಚನೆಯಲ್ಲಿ ಕಲಾಭಿಜ್ಞತೆ ತಂತ್ರಜ್ಞಾನಗಳೆರಡಕ್ಕೂ ಸಮಾನ ಸ್ಥಾನವಿದೆ. ಇವೆರಡು ಅಂಶಗಳ ಸಾಮರಸ್ಯ ಇದ್ದಾಗ ಉತ್ತಮ ಚಲಚ್ಚಿತ್ರ ರೂಪುಗೊಳ್ಳುತ್ತದೆ. ಅಭಿನಯ ಕಲೆಯಲ್ಲಿ ಚಲಚ್ಚಿತ್ರಗಳು ಹೊಸದೊಂದು ಸಂಪ್ರದಾಯವನ್ನೇ ಬೆಳೆಸಿವೆ. ಭಾರತದ ವಿವಿಧ ಪ್ರದೇಶಗಳಲ್ಲಿ ಪ್ರತಿಭಾವಂತ ನಟನಟಿಯರು ಅಭಿವೃದ್ಧಿಗೆ ಬರಲು ಇವು ನೆರವಾಗಿವೆ. ಹಾಗೆಯೇ ಬೇರೆ ಬೇರೆ ಪ್ರದೇಶಗಳ ಉತ್ತಮ ಅಭಿನೇತೃಗಳು ತಮ್ಮ ತಮ್ಮ ಭಾಷೆಯಲ್ಲಿ ಮಾತ್ರವಲ್ಲದೆ, ಬೇರೆ ಭಾಷೆ ಕಲಿತು ಆ ಭಾಷೆಯ ಚಿತ್ರಗಳಲ್ಲೂ ಅಭಿನಯಿಸಲು ಅವಕಾಶವನ್ನು ಕಲ್ಪಿಸಿವೆ. ಅದೇ ರೀತಿ ಜನರು ತಮ್ಮ ಮಾತೃಭಾಷೆಯಲ್ಲದ ಇತರ ಭಾಷಾ ಚಿತ್ರಗಳನ್ನು ನೋಡಿ ಆನಂದಿಸುವುದೂ ಸಾಧ್ಯವಾಗಿದೆ.

ಕಥಾ ಸಾಹಿತ್ಯ ಹಾಗೂ ಗೀತೆ, ಸಂಭಾಷಣೆಗಳನ್ನು ಬರೆಯುವವರಿಗೂ ಚಲಚ್ಚಿತ್ರದಿಂದ ಪ್ರೋತ್ಸಾಹ ದೊರೆತಿದೆ; ಹಾಗೆಯೇ ಜನಪ್ರಿಯ ಸಂಗೀತವನ್ನು ನಿರ್ಮಿಸಬಲ್ಲವರಿಗೂ ಚಲಚ್ಚಿತ್ರ ಅವಕಾಶ ಒದಗಿಸಿದೆ.

ನಮ್ಮ ವಿಶಾಲ ರಾಷ್ಟ್ರದ ವಿವಿಧ ಭಾಗಗಳ ಜನ, ಒಬ್ಬರು ಇನ್ನೊಬ್ಬರ ಆಚಾರ ವಿಚಾರ, ಜೀವನ ವಿಧಾನ, ಕಲೆ, ಸಂಸ್ಕೃತಿಗಳನ್ನು ಅರ್ಥಮಾಡಿಕೊಳ್ಳಲೂ ಮೆಚ್ಚಲೂ ಚಲಚ್ಚಿತ್ರ ಆಕರ್ಷಕ ಮಾಧ್ಯಮವಾಗಿದೆ. ಭಾರತೀಯ ಚಲಚ್ಚಿತ್ರ ರಾಷ್ಟ್ರೈಕ್ಯಕ್ಕೆ ಕೂಡ ಸಹಕಾರಿಯಾಗಿದೆ.

ಭಾರತೀಯ ಚಲಚ್ಚಿತ್ರ ನಮ್ಮ ರಾಷ್ಟ್ರದ ಸಾಂಸ್ಕೃತಿಕ ಜೀವನದಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿಕೊಂಡಿದೆ; ಹಾಗೆಯೇ ಜಗತ್ತಿನ ಚಲಚ್ಚಿತ್ರ ರಂಗದಲ್ಲೂ ಒಂದು ಗಣ್ಯ ಸ್ಥಾನವನ್ನು ಪಡೆದಿದೆ.

ಭಾರತದಲ್ಲಿ ಚಿತ್ರಗಳ ಸಂಖ್ಯೆ ಗಣನೀಯವಾಗಿ ಏರಿದ್ದರೂ ಗುಣದ ದೃಷ್ಟಿಯಿಂದ ಅವು ಉತ್ತಮಗೊಳ್ಳಬೇಕಾಗಿದೆ. ಕಡಮೆ ವೆಚ್ಚದಿಂದ ತಯಾರಿಸುವ ರಮ್ಯ ಕಲಾತ್ಮಕ ಚಿತ್ರಗಳ ಸಂಖ್ಯೆ ಇನ್ನೂ ಹೆಚ್ಚಬೇಕು. ಇಂಥ ಚಿತ್ರಗಳನ್ನು ಪ್ರದರ್ಶಿಸಲೆಂದೇ ವಿಶಿಷ್ಟ ಚಲಚ್ಚಿತ್ರ ಮಂದಿರಗಳನ್ನು ರಾಷ್ಟ್ರದ ಆದ್ಯಂತ ನಿರ್ಮಿಸುವುದು ಅವಶ್ಯವೆನಿಸಿದೆ.

ಚಲಚ್ಚಿತ್ರಗಳು ಪ್ರಧಾನವಾಗಿ ಮನೋರಂಜನೆಯ ಮಾಧ್ಯಮ ಎಂಬುದು ನಿಜವಾದರೂ ಅವು ಸಮಾಜದ ಮೇಲೆ ಬೀರುವ ಪ್ರಭಾವ ಹಿರಿದಾದದ್ದು. ಜನರಲ್ಲಿ ತಮ್ಮ ಕಲೆ, ಸಂಸ್ಕೃತಿಗಳ ಬಗೆಗೆ ಪ್ರಜ್ಞೆಯನ್ನು ಬೆಳೆಸುವುದರಲ್ಲಿ ಅವುಗಳ ಪಾತ್ರ ಹಿರಿದು. ಆದ್ದರಿಂದ ಅವು ಕೇವಲ ಮನೋರಂಜನೆ ಅಲ್ಲದೆ, ಜನರ ಕಲಾ ಮತ್ತು ಸಾಂಸ್ಕೃತಿಕ ಪ್ರಜ್ಞೆಯನ್ನು ಬೆಳೆಸಲೂ ಸಹಾಯಕವಾಗುವಂತಿರುವುದು ಅಗತ್ಯವಾಗಿದೆ.

**ನೋಡಿ :** ಚಲಚ್ಚಿತ್ರ

## ಭಾರತೀಯ ಚಿತ್ರಕಲೆ

ಭಾರತೀಯ ಚಿತ್ರಕಲೆ ಪುರಾತನವಾದದ್ದು.

ಚಿತ್ರಕಲೆಯ ಅತಿ ಪ್ರಾಚೀನ ನಿದರ್ಶನಗಳೆಂದರೆ ಗವಿ ಚಿತ್ರಗಳು. ಭಾರತದಲ್ಲಿಯೂ ಗವಿ ಚಿತ್ರಗಳಿವೆ. ಮಧ್ಯಪ್ರದೇಶದ ರಾಮಘಡ ಬೆಟ್ಟದ ಯೋಗಿಪುರ ಗುಹೆಯಲ್ಲಿರುವ ಚಿತ್ರಗಳೇ ಈ ವರೆಗೆ ಭಾರತದಲ್ಲಿ ಕಂಡು ಬಂದಿರುವ ಅತ್ಯಂತ ಪುರಾತನ ಚಿತ್ರಗಳು ಎಂದು ತಜ್ಞರ ಅಭಿಪ್ರಾಯ. ಮಧ್ಯಪ್ರದೇಶದ ಸಿಂಗನ್‌ಪುರ, ಆಂಧ್ರಪ್ರದೇಶದ ಕರ್ನೂಲು, ಕರ್ನಾಟಕದ ಮಾಸ್ಕಿ ಇವುಗಳ ಬಳಿಯಿರುವ ಬೆಟ್ಟಗಳಲ್ಲಿನ ಕೆಲವು ಗುಹೆಗಳಲ್ಲಿ ಶಿಲಾಯುಗದಲ್ಲಿ –ಅಂದರೆ ಸುಮಾರು ಹತ್ತು ಸಾವಿರ ವರ್ಷಗಳ ಹಿಂದೆ, ಬರೆದ ಚಿತ್ರಗಳಿವೆ. ಇವುಗಳಲ್ಲಿ ಮನುಷ್ಯರ, ಗೂಳಿ, ಮತ್ತು ಹುಲಿಗಳ ಚಿತ್ರಣವಿದೆ. ಇವು ಜೀವಕಳೆಯಿಂದ ತುಂಬಿದ್ದು, ಆ ಕಾಲದ ಜನರ ಕಲಾಕೌಶಲ್ಯಕ್ಕೆ ನಿದರ್ಶನಗಳಾಗಿವೆ. ಸುಮಾರು 5,000 ವರ್ಷಗಳ ಹಿಂದಿನ ಸಿಂಧು ಕಣಿವೆಯ ಸಂಸ್ಕೃತಿಯಲ್ಲೂ ಚಿತ್ರ ರಚನೆ ನಡೆದಿತ್ತು ಎಂಬುದಕ್ಕೆ ಹರಪ್ಪ, ಮೊಹೆಂಜೊದಾರೊಗಳಲ್ಲಿ ದೊರೆತ ಮಡಕೆಯ ಚೂರುಗಳ ಮೇಲಿರುವ ರೇಖಾಚಿತ್ರಗಳು ಸಾಕ್ಷಿ.

ವೇದಕಾಲದ ಚಿತ್ರಗಳು ನಮಗೆ ದೊರೆತಿಲ್ಲವಾದರೂ, ಲಭ್ಯವಿರುವ ಇತರ ಆಧಾರಗಳಿಂದ, ಆ ಕಾಲದಲ್ಲಿ ಚಿತ್ರರಚನೆ ನಡೆದಿರಬೇಕೆಂದು ಊಹಿಸಲು ಅವಕಾಶವಿದೆ.

ಈ ಕಾಲದ ಅನಂತರ ನಮಗೆ ಭಾರತೀಯ ಚಿತ್ರಕಲೆಯ ದರ್ಶನ ವಾಗುವುದು ಅಜಂತದ ಗವಿಗಳಲ್ಲಿ, ಕ್ರಿ. ಪೂ. 2ನೆಯ ಶತಮಾನದ ಈಚೆಗೆ. ಅದಕ್ಕೆ ಹಿಂದೆ ರಚಿತವಾದ ಚಿತ್ರಗಳು ನಮಗೆ ದೊರೆತಿಲ್ಲವಾದರೂ ಬುದ್ಧನ ಕಾಲದಲ್ಲಿ —ಸುಮಾರು ಕ್ರಿ.ಪೂ. 500ರಲ್ಲಿ— ಬಿಂಬಸಾರನ ಆಸ್ಥಾನ ಚಿತ್ರ ಕಾರನು ಬುದ್ಧನ ವರ್ಣಚಿತ್ರವೊಂದನ್ನು ರಚಿಸಿದನೆಂದೂ ಬುದ್ಧನೇ ಆ ಚಿತ್ರದಡಿಯಲ್ಲಿ ತನ್ನ ಬೋಧನೆಯ ಸಾರಾಂಶವನ್ನು ಬರೆದನೆಂದೂ ಉಲ್ಲೇಖ ವಿದೆ. ಅಲ್ಲದೆ ಭಿತ್ತಿಚಿತ್ರಗಳ ರಚನೆಗೆ ಆರಿಸಬಹುದಾದ, ಆರಿಸಬಾರದ ವಸ್ತುಗಳು ಯಾವುವೆಂಬುದನ್ನು ಬುದ್ಧನು ತಿಳಿಸಿದನೆಂದೂ ಪ್ರತೀತಿಯಿದೆ.

ಅಜಂತದ ಗವಿಗಳಲ್ಲಿ ಚಿತ್ರ ರಚನಾಕಾರ್ಯ ಸುಮಾರು 800 ವರ್ಷಗಳ ಕಾಲ (ಕ್ರಿ. ಶ. 600ರ ತನಕ) ನಡೆಯಿತು. ಅಜಂತ ಗವಿಗಳು ಭಾರತೀಯ ಚಿತ್ರಕಲೆಯ ದೊಡ್ಡ ಪ್ರದರ್ಶನಾಲಯಗಳೆನ್ನಬಹುದು. ಇಲ್ಲಿನ ಚಿತ್ರಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ಜೀವನಕ್ಕೆ ಸಂಬಂಧಿಸಿ ನಿರೂಪಣೆಗಳನ್ನು ಕಾಣಬಹುದಾದರೂ ಪ್ರಧಾನವಾಗಿ ಇಲ್ಲಿರುವ ಚಿತ್ರಗಳಿಗೆ ಬುದ್ಧನ ಜೀವನ ಮತ್ತು ಜಾತಕ ಕಥೆಗಳೇ ಪ್ರೇರಣೆ. ರಚನಾತಂತ್ರ ಮತ್ತು ಕಲಾದೃಷ್ಟಿಯಿಂದ ಇವು ಅಮೂಲ್ಯ ಕಾಣಿಕೆಗಳು.

ಬಾಗ್ ಗವಿಗಳಲ್ಲೂ ಅಜಂತ ಶೈಲಿಯ ಚಿತ್ರಕಲೆಯನ್ನು ಕಾಣಬಹುದು. ಅಜಂತದಲ್ಲಿ ಚಿತ್ರನಿರ್ಮಾಣ ಮುಗಿದ ಮೇಲೆ ಅಂದರೆ 6ನೆಯ ಶತಮಾನದ ಬಳಿಕ, ಚಿತ್ರರಚನೆ ದೊಡ್ಡ ಪ್ರಮಾಣದಲ್ಲಿ ನಡೆಯಲಿಲ್ಲ. ಪೂರ್ವ ಭಾರತದಲ್ಲಿ ಸ್ವಲ್ಪ ಕಾಲ ಬೌದ್ಧ ದೊರೆಗಳ ಆಶ್ರಯದಲ್ಲಿ ಚಿತ್ರಕಲೆಗೆ ಸ್ವಲ್ಪ ಪೋಷಣೆ ದೊರೆಯಿತಾದರೂ ನಾಲಂದಾ ವಿಶ್ವವಿದ್ಯಾನಿಲಯ ನಾಶವಾದ ಮೇಲೆ ಭಾರತೀಯ ಚಿತ್ರಕಲೆ ಮೂಲೆಗುಂಪಾಯಿತು. ಅದು ಉಳಿದದ್ದು ಗ್ರಂಥ ಅಲಂಕರಣ ಚಿತ್ರಲೇಖನಗಳಲ್ಲಿ ಮಾತ್ರ ಎಂದರೂ ತಪ್ಪಿಲ್ಲ. ಇದರಿಂದಾಗಿ ಹಿಂದಿನ ಚಿತ್ರಕಲಾ ಸಂಪ್ರದಾಯ ಸ್ವಲ್ಪಮಟ್ಟಿಗಾದರೂ ಜೀವಂತವಾಗಿ ಉಳಿದುಕೊಂಡಿತು. ಈ ವರ್ಗದ ಚಿತ್ರಗಳಲ್ಲಿ ಎದ್ದು ಕಾಣುವ ಅಂಶಗಳೆಂದರೆ ವ್ಯಕ್ತಿ ಚಿತ್ರಣದಲ್ಲಿ ಮೊನೆಯಾದ, ನೀಳವಾದ ಮೂಗು, ಮರಿಗಲ್ಲ, ಮೇಲೆದ್ದು ಬರುವಂತೆ ಕಾಣುವ ಕಣ್ಣುಗುಡ್ಡೆಗಳು, ದೇಹದ ಮುಂಭಾಗ ಸ್ವಲ್ಪ ಅಸ್ವಾಭಾವಿಕ ಎನ್ನುವಂತೆ ಸೆಟೆದಿರುವುದು– ಆದರೆ ಪ್ರಮಾಣಬದ್ಧವಾದ ಮುಂಡ; ಹಿನ್ನೆಲೆಯಲ್ಲಿ ಸಾಮಾನ್ಯವಾಗಿ ವಾಸ್ತುಚಿತ್ರಣ ಇಲ್ಲವೆ ಭೂದೃಶ್ಯ. ಈ ಚಿತ್ರಗಳಲ್ಲಿ ಪ್ರಧಾನ ವ್ಯಕ್ತಿಯನ್ನು ಬಿಟ್ಟರೆ ಬೇರೇನೂ ಕಾಣಸಿಗುವುದು ದುರ್ಲಭ.



ಇಸ್ಪೀಟು ಕಾರ್ಡಿನ ಮೇಲೆ ಕಿರುಚಿತ್ರ
—ಜಗನ್ಮೋಹನ ಚಿತ್ರಶಾಲೆಯಿಂದ

ಕೆಂಪು, ಹಳದಿ, ನೀಲಿ, ಹಸಿರು ಪ್ರಧಾನವಾಗಿ ಉಪಯೋಗಿಸಲ್ಪಟ್ಟ ಬಣ್ಣಗಳು. ಚಿತ್ರಕ್ಕೆ ವಿಶೇಷ ಕಳೆಗೊಡುವುದಕ್ಕಾಗಿ ಚಿನ್ನದ ಬಣ್ಣದ ಬಳಕೆಯೂ ಇತ್ತು. ಈ ಶೈಲಿಯ ಚಿತ್ರಣ ಮೊದಮೊದಲು ತಾಳೆಗರಿ ಗ್ರಂಥಗಳಲ್ಲಿ ಬಳಕೆಗೆ ಬಂತು. ಕಾಗದದ ಉಪಯೋಗ ಆರಂಭವಾದ ಬಳಿಕ ಈ ಶೈಲಿಯನ್ನು ಅದರ ಮೇಲೂ ಅನುಸರಿಸಿದರು. ಅಲಂಕರಣ, ಹೊಂಬಣ್ಣದ ಮೆರುಗುಗಳ ಕೆಲಸಗಳು ಹೆಚ್ಚಿದುವು.

16ನೆಯ ಶತಮಾನದ ಉತ್ತರಾರ್ಧದಲ್ಲಿ ಅಕ್ಬರನ ಆಡಳಿತ ಆರಂಭವಾದ ಮೇಲೆ ಭಾರತದಲ್ಲಿ ಒಂದು ಹೊಸ ಚಿತ್ರರಚನಾ ಶೈಲಿ ಆಚರಣೆಗೆ ಬಂತು. ಅಕ್ಬರ್, ಜಹಾಂಗೀರರಿಂದ ವಿಶೇಷ ಪ್ರೋತ್ಸಾಹ ಪಡೆದ ಈ ಶೈಲಿ ಔರಂಗಜೇಬನ ಆಳ್ವಿಕೆಯಲ್ಲಿ ಉಪೇಕ್ಷೆಗೆ ಗುರಿಯಾಯಿತು. ಅಕ್ಬರ್ ತನ್ನ ಬಾಲ್ಯದಲ್ಲಿ ಪರ್ಷಿಯದ ಚಿತ್ರಗಳನ್ನು ನೋಡಿ ಅವುಗಳ ಉಜ್ವಲ ಬಣ್ಣಗಳನ್ನೂ ರೇಖಾಸೌಂದರ್ಯವನ್ನೂ ಮೆಚ್ಚಿಕೊಂಡಿದ್ದ. ಅವನ ತಂದೆಯೊಡನೆ ಬಂದಿದ್ದ ಪರ್ಷಿಯದ ಇಬ್ಬರು ಚಿತ್ರಕಾರರೂ ಅವನ ಆಸ್ಥಾನದಲ್ಲಿದ್ದರು. ಇವರ ನೆರವಿನಿಂದ ಅಕ್ಬರ್ ಪ್ರವಾದಿಯ ಬಂಧು ಹಮ್ಜನ ಸಾಹಸ ವರ್ಣನೆಯ ಗ್ರಂಥವಾದ, 'ಹಮ್ಜನಾಮ'ಕ್ಕೆ ಅನೇಕ ಚಿತ್ರಗಳನ್ನು ಬರೆಸಿದ. ಮೊಗಲರ ಕಾಲದ



ದೇವೀಪ್ರಸಾದ್ ರಾಯ್ ಚೌಧುರಿ



ಎಮ್. ಎಫ್. ಹುಸೇನ್



ಅಮೃತ ಶೇರ್‌ಗಿಲ್

ವಿಲಾಸಮಯ ಸುಖಜೀವನದ ಪ್ರತಿಬಿಂಬವನ್ನು ಇದರಲ್ಲಿ ಕಾಣಬಹುದು.

ಇದೇ ಕಾಲಕ್ಕೆ ರಜಪೂತ ಕಲೆಯೂ ಸ್ವತಂತ್ರವಾಗಿ ಬೆಳೆಯಿತು. ಸಂಗೀತಕ್ಕೆ ಚಿತ್ರರೂಪ ಕೊಟ್ಟವರು ರಜಪೂತ ಶೈಲಿಯ ಕಲಾವಿದರು. ರಾಗ–ರಾಗಿಣಿ ಅಥವಾ ಚಿತ್ರಮಾಲಾ ಎಂಬುವು ಕಾವ್ಯ, ಸಂಗೀತ ಹಾಗೂ ಚಿತ್ರ –ಈ ಮೂರು ಕಲೆಗಳ ಭಾವವನ್ನು ಒಂದಾಗಿ ಮೇಳವಿಸಿ ಸೃಷ್ಟಿಸಲ್ಪಟ್ಟುವು. ಚಿತ್ರಕಲೆಯಲ್ಲಿ ಸಂಗೀತ ಭಾವ ಹೀಗೆ ಚಿತ್ರಿತವಾಗಿರುವುದು ಭಾರತದಲ್ಲಿ ಮಾತ್ರ. ಇದು ಕಲೆಗೆ ಒಂದು ವಿಶೇಷ ಕೊಡುಗೆ. ರಜಪೂತ ಕಲೆಯಲ್ಲಿ ರಾಜಾಶ್ರಯದಲ್ಲಿ ಬೆಳೆದ ಚಿತ್ರಕಲೆಯನ್ನು ಸಾಂಪ್ರದಾಯಿಕ ಹಾಗೂ ಹಿಮಾಚಲದ ಪಹಾಡಿ ಶೈಲಿಗಳೆಂದು ಎರಡು ವಿಧಾನಗಳನ್ನು ಗುರುತಿಸಬಹುದು.

ಬ್ರಿಟಿಷರು ಭಾರತದಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ ಮೇಲೆ, ಆ ಕಾಲದಲ್ಲಿ ಯೂರೋಪಿನಲ್ಲಿ –ಮುಖ್ಯವಾಗಿ ಇಂಗ್ಲೆಂಡಿನಲ್ಲಿ– ಆಚರಣೆಯಲ್ಲಿದ್ದ ಚಿತ್ರಕಲಾ ಶೈಲಿ, ತಂತ್ರಗಳು ಭಾರತಕ್ಕೂ ಪಸರಿಸಿದುವು.

ಮೂಲೆಗುಂಪಾಗಿದ್ದ ಭಾರತದ ಚಿತ್ರಕಲೆಯಲ್ಲಿ ನವಚೇತನ ಗೋಚರಿಸಿದ್ದು 19ನೆಯ ಶತಮಾನದ ಅಂತ್ಯ ಭಾಗದಲ್ಲಿ; ಅಬನೀಂದ್ರನಾಥರಂಥ ಭಾರತೀಯ ಕಲಾವಿದರ ಮತ್ತು ಭಾರತೀಯ ಸೌಂದರ್ಯ ಪ್ರಜ್ಞೆಯ ಮಹತ್ವವನ್ನರಿತಿದ್ದ ಹ್ಯಾವೆಲ್, ಪರ್ಸಿ ಬ್ರೌನ್ –ಇವರಂಥ ಕಲಾರಸಿಕರ ಪ್ರಯತ್ನದ ಫಲವಾಗಿ ಪುನರುಜ್ಜೀವನ ಚಳುವಳಿ ಆರಂಭವಾಯಿತು. ಪ್ರಾಚೀನ ಭಾರತೀಯ ಚಿತ್ರಗಳ ಪ್ರತಿಕೃತಿ ಅನುಕರಣೆಯೊಂದಿಗೆ ಈ ಚಳುವಳಿ ಆರಂಭವಾಯಿತಾದರೂ ಸ್ವಲ್ಪ ಕಾಲದೊಳಗಾಗಿ, ತನ್ನ ಪೂರ್ವ ಸಂಸ್ಕೃತಿಯಲ್ಲಿ ಬೇರು ಬಿಟ್ಟು ಚಿಗುರಿತು.

ಎರಡನೆಯ ಮಹಾಯುದ್ಧಾನಂತರ ಭಾರತದ ಮತ್ತು ವಿದೇಶಗಳ ಚಿತ್ರಕಲಾವಿದರ ನಡುವೆ ಸಂಪರ್ಕ ಬೆಳೆದು, ಭಾರತೀಯ ಚಿತ್ರಕಲೆಯ ಮೇಲೆ ಹೊಸ ಶಕ್ತಿಗಳ ಪ್ರಭಾವ ಬಿದ್ದಿದೆ. ನವ್ಯಚಿತ್ರಣ ವಿಧಾನಗಳು ಆಚರಣೆಗೆ ಬರುತ್ತಿವೆ.

ಕರ್ನಾಟಕದಲ್ಲಿ ಚಿತ್ರಕಲೆಗೆ ಮೊದಲಿನಿಂದಲೂ ಪೋಷಣೆ ದೊರೆತಿದೆ. ಅಜಂತದ ಮತ್ತು ಎಲ್ಲೋರದ ಭಿತ್ತಿಚಿತ್ರಗಳ ರಚನೆಯಲ್ಲಿ ಕನ್ನಡಿಗರ ಪಾತ್ರವಿದ್ದಿತು. ಚಾಲುಕ್ಯ ದೊರೆ ಎರಡನೆಯ ಪುಲಿಕೇಶಿಯ ಕಾಲದಲ್ಲಿ ಅಜಂತದ ಕೆಲವು ಚಿತ್ರಗಳ ರಚನೆ ನಡೆದಿರಬೇಕೆಂದು ತೋರಿಬರುತ್ತದೆ. ಅಜಂತದ ಚಿತ್ರರಚನಾ ಶೈಲಿಯನ್ನು ಕರ್ನಾಟಕದ ಇತರ ಕೆಲವೆಡೆಗಳಲ್ಲಿ ಕೂಡ ಕಾಣಬಹುದು. ಬಾದಾಮಿಯ ಗುಹಾಲಯ ಚಿತ್ರಗಳು ಇದಕ್ಕೆ

ಕೊಲಂಬೋ ಸಮುದ್ರ ತೀರ —ರಚನೆ, ರುಮಾಲೆ ಚನ್ನಬಸವಯ್ಯ



'ರಣಕಲಿ' –ನಂಜುಂಡಸ್ವಾಮಿ ಕೃತಿ





ಪಾವಂಜೆ ಗುರುರಾವ್ ಎಸ್. ನಂಜುಂಡಸ್ವಾಮಿ ಎಂ.ವಿ. ಮಿಣಜಿಗಿ

ಉತ್ತಮ ಉದಾಹರಣೆ. ಚಾಲುಕ್ಯರ ಕಾಲದ ಅನಂತರವೂ ಕನ್ನಡ ನಾಡಿನಲ್ಲಿ ಚಿತ್ರಕಲೆ ರಾಜರ ಆಶ್ರಯದಲ್ಲಿ ಬೆಳೆಯಿತು. ಹೊಯ್ಸಳರು ಮತ್ತು ವಿಜಯನಗರದ ಅರಸರ ಕಾಲದಲ್ಲಿ ಚಿತ್ರಕಲೆಗೆ ಪ್ರೋತ್ಸಾಹ ಸಿಕ್ಕಿತು. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಭಿತ್ತಿಚಿತ್ರಕಲೆ ದೊಡ್ಡ ಪ್ರಮಾಣದಲ್ಲಿ ಪುನರುಜ್ಜೀವನ ಹೊಂದಿತು. ಇಡೀ ದಕ್ಷಿಣ ಭಾರತವೇ ಈ ಪುನರುಜ್ಜೀವನದ ಪ್ರಭಾವಕ್ಕೆ ಒಳಗಾಯಿತು. ಆಂಧ್ರ ಪ್ರದೇಶದಲ್ಲಿರುವ ಲೇಪಾಕ್ಷಿಯ ದೇವಾಲಯದ ಗೋಡೆಗಳ ಮೇಲೂ ಭಾವಣಿಯಲ್ಲೂ ರಚಿತವಾಗಿರುವ ಚಿತ್ರಗಳು ವಿಜಯನಗರ ಸಾಮ್ರಾಜ್ಯದ ಕಾಲದ ಚಿತ್ರಕಲಾ ವೈಖರಿಗೆ ಉತ್ತಮ ನಿದರ್ಶನಗಳಾಗಿವೆ.

ದಕ್ಷಿಣ ಭಾರತದ ಅನೇಕ ದೇವಾಲಯಗಳಲ್ಲಿ ಇದ್ದಿರಬಹುದಾದ ಭಿತ್ತಿಚಿತ್ರಗಳು ಅಲಕ್ಷ, ಅವಿವೇಕ ವರ್ತನೆಗಳಿಂದ ಈಗ ಕಣ್ಣಿಗೆ ಕಾಣವಾಗಿದೆ. ಕೆಲವು ದೇವಾಲಯಗಳ ಗೋಡೆಗಳಿಗೆ ಬಳಿದಿರುವ ಸುಣ್ಣವನ್ನು ತೆಗೆದಾಗ ಅದರ ಹಿಂದೆ ಸುಂದರ ಭಿತ್ತಿಚಿತ್ರಗಳು ಅಡಗಿದ್ದುದು ಕಂಡುಬಂದಿದೆ.

[illegible]

ದಂಡಾವತಿ ಮಠ



ಮಕ್ಕಳ ಚಿತ್ರ ಸ್ಪರ್ಧೆ: ಬಾಲಪ್ರತಿಭೆ ಅರಳಲು ಅವಕಾಶ; ಹಿರಿಯರ ತನ್ಮಯತೆ ಕಣ್ಣಿಗೆ ಹಬ್ಬ

ಕೆಲವೆಡೆ ಭಿತ್ತಿಚಿತ್ರಗಳು ದುರವಸ್ಥೆಗೀಡಾಗಿರುವುದೂ ಉಂಟು.

19ನೆಯ ಶತಮಾನದಲ್ಲಿ ಮೈಸೂರು ಅರಸರು ಚಿತ್ರಕಲೆಗೆ ಒಳ್ಳೆಯ ಪ್ರೋತ್ಸಾಹ ಕೊಟ್ಟರು. ಈ ಬೆಂಬಲ 20ನೆಯ ಶತಮಾನದ ಮಧ್ಯ ಕಾಲದವರೆಗೂ ನಡೆದುಬಂತು.

ತಾವು ಕಂಡದ್ದನ್ನು ಚಿತ್ರಿಸಲು ಪ್ರಯತ್ನಿಸುವುದು ಮಕ್ಕಳ ಸ್ವಭಾವ. ಈ ಸಹಜ ಸ್ವಭಾವ ಅವರಲ್ಲಿ ಬೆಳೆಯಲು ಪ್ರೋತ್ಸಾಹ, ಮಾರ್ಗದರ್ಶನ ಅವಶ್ಯ.

ಸಾಮಾನ್ಯ ವಿದ್ಯಾಶಾಲೆಗಳಲ್ಲೂ ಚಿತ್ರಕಲೆಗೇ ಮೀಸಲಾದ ಶಾಲೆಗಳಲ್ಲೂ ಈ ಶಿಕ್ಷಣ ದೊರೆಯುತ್ತಿದೆ.

ಮಕ್ಕಳ ಚಿತ್ರಕಲಾಸಕ್ತಿಗೆ ಪ್ರೋತ್ಸಾಹ ಕೊಡುವ ಪ್ರಯತ್ನಗಳೂ ರಾಷ್ಟ್ರದ ವಿವಿಧ ಭಾಗಗಳಲ್ಲಿ ನಡೆಯುತ್ತಿವೆ. ಮಕ್ಕಳ ಕಲಾಪ್ರಜ್ಞೆಯ ಅಭಿವೃದ್ಧಿಯಲ್ಲಿ ಆಸಕ್ತಿಯುಳ್ಳ ಹಲವಾರು ಸಂಸ್ಥೆಗಳು ಮಕ್ಕಳಿಗಾಗಿ ಚಿತ್ರ ರಚನಾ ಸ್ಪರ್ಧೆಗಳನ್ನು ಏರ್ಪಡಿಸುತ್ತಿವೆ.

ಇಂಥ ಸಂಸ್ಥೆಗಳಲ್ಲಿ ಪ್ರಸಿದ್ಧವಾದದ್ದು ಮತ್ತು ಅಂತರ ರಾಷ್ಟ್ರೀಯ ವ್ಯಾಪ್ತಿಯುಳ್ಳದ್ದು ದೆಹಲಿಯ 'ಶಂಕರ್ಸ್ ವೀಕ್ಲಿ' ಯವರು ನಡೆಸುವ ಮಕ್ಕಳ ಚಿತ್ರ ರಚನಾ ಸ್ಪರ್ಧೆ. ಇದರಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳ ಮಕ್ಕಳೂ ಭಾಗವಹಿಸುತ್ತಾರೆ. ಈ ಸ್ಪರ್ಧೆಯ ಅಂಗವಾಗಿ ರಚಿತವಾದ ಹಲವಾರು ಚಿತ್ರಗಳು ಉತ್ತಮ ಮಟ್ಟದವು.



ಸೈಕಲ್ ಪಂದ್ಯ —ಕುಮಾರ ದಿಲೀಪ್ ರಚನೆ

ಪಾಶ್ಚಾತ್ಯ ಪ್ರಭಾವದಿಂದ ವ್ಯಂಗ್ಯ ಚಿತ್ರಕಲೆ ಕೂಡ ನಮ್ಮಲ್ಲಿ ಬೆಳೆದಿದೆ. ವಾರ್ತಾ ಪತ್ರಿಕೆಗಳಲ್ಲೂ ನಿಯತಕಾಲಿಕಗಳಲ್ಲೂ ವ್ಯಂಗ್ಯಚಿತ್ರಗಳು ಒಂದು ಗಣನೀಯ ಅಂಶವಾಗಿವೆ. ಶಂಕರ್, ಆರ್. ಕೆ. ಲಕ್ಷ್ಮಣ್, ಮೂರ್ತಿ, ಅಬು ಮುಂತಾದವರು ಅಂತರ ರಾಷ್ಟ್ರೀಯವಾಗಿಯೂ ಖ್ಯಾತ ವ್ಯಂಗ್ಯ ಚಿತ್ರಕಾರರು.

ಭಾರತದಲ್ಲಿ ಮೊದಲಿನಿಂದಲೂ ಚಿತ್ರಕಲೆಗೆ ತುಂಬ ಗೌರವವಿತ್ತು. ಶಾಸ್ತ್ರ ರೀತ್ಯಾ ರಚಿಸಲ್ಪಟ್ಟ ಚಿತ್ರದಿಂದ ಧರ್ಮ, ಅರ್ಥ ಕಾಮ, ಮೋಕ್ಷ ಸಾಧಿಸಬಹುದು ಎಂದು ಭಾರತೀಯ ಚಿತ್ರಶಾಸ್ತ್ರದಲ್ಲಿ ಉಲ್ಲೇಖವಿದೆ. ಭಾರತೀಯ ಕಲೆಯ ಪರಂಪರೆ ದೀರ್ಘವಾದದ್ದು. ಭಾರತೀಯ ಚಿತ್ರಕಲೆ

ಗಂಧದ ಫಲಕದ ಮೇಲೆ ವರ್ಣ ಚಿತ್ರಣ: ಕೆ. ಜಿ. ಸೋಮಶೇಖರ್ ಕೃತಿ





ತಮ್ಮದೇ ದಾರಿ : ಹೆಬ್ಬಾರ್

ಯಲ್ಲಿ ದೇವ ದೇವತೆಗಳನ್ನೂ ಮನುಷ್ಯಕಾಯಗಳ ರೂಪದಲ್ಲಿ ಚಿತ್ರಿಸಿದ್ದಾರೆ. ಹೀಗಾಗಿದ್ದರೂ ಪಾಶ್ಚಾತ್ಯ ಕಲೆಯಲ್ಲಿ ಇರುವಂತೆ ಈ ಮಾನವಾಕೃತಿಗೆ ಹೆಚ್ಚಿನ ಮಹತ್ವವಿಲ್ಲ. ಆಧ್ಯಾತ್ಮಿಕ ಸಂದೇಶವನ್ನು ಅಭಿವ್ಯಕ್ತಿಗೊಳಿಸುವುದಕ್ಕೆ ಈ ರೂಪ ಒಂದು ಮಾಧ್ಯಮ, ಅಷ್ಟೆ. ಅಜಂತದ ಚಿತ್ರಗಳನ್ನಾಗಲೀ ಹಿಂದಿನ ಯಾವುದೇ ಭಾರತೀಯ ಕಲಾಕೃತಿಗಳನ್ನಾಗಲೀ ನೋಡಿದಾಗ ಈ ಅಂಶವನ್ನು ಗುರುತಿಸಬಹುದು.

ಆಧುನಿಕ ಭಾರತದ ವಿಖ್ಯಾತ ಕಲಾವಿದರ ಪಂಕ್ತಿಯಲ್ಲಿ ಅಬನೀಂದ್ರನಾಥ ಠಾಕೂರ್, ನಂದಲಾಲ ಬಸು, ದೇವೀಪ್ರಸಾದ್ ರಾಯ್ ಚೌಧುರಿ, ಜೆಮಿನಿ ರಾಯ್, ಅಮೃತ ಶೇರ್‌ಗಿಲ್, ಕೆ. ವೆಂಕಟಪ್ಪ, ಕೆ. ಕೆ. ಹೆಬ್ಬಾರ್, ಎಮ್.ಎಫ್. ಹುಸೇನ್ ಮುಂತಾದವರು ಗಣ್ಯರು. ಯುವ ಪೀಳಿಗೆಯ ವಾಸುದೇವ್ ನವ್ಯಶೈಲಿಯ ಹೆಸರಾಂತ ಕಲಾವಿದ.

ಯುವ ಪೀಳಿಗೆಯ ವಾಸುದೇವ್



ದಂಡಾವತಿಮಠ, ಮಿಣಜಗಿ, ಎಸ್. ನಂಜುಂಡಸ್ವಾಮಿ, ಇನಾಮತಿ, ಅ.ನ. ಸುಬ್ಬರಾವ್ ಕನ್ನಡನಾಡಿನ ಖ್ಯಾತ ಚಿತ್ರ ಶಿಕ್ಷಕರು.



ಆಧುನಿಕ ಭಾರತೀಯ ಕಲೆ ಹೊಸ ಹಾದಿಗಳನ್ನು ಕಂಡುಕೊಳ್ಳುತ್ತಿದೆ.
ಆಧುನಿಕತೆಯಿಂದ ಅದು ಪ್ರಭಾವಿತವಾಗುತ್ತಿದೆ.

## ಭಾರತೀಯ ಜ್ಞಾನಪೀಠ ಸಾಹಿತ್ಯ ಪಾರಿತೋಷಿಕ



ಭಾರತ ರಾಜ್ಯಾಂಗದಲ್ಲಿ ನಿರೂಪಿತವಾಗಿರುವ ಭಾರತೀಯ ಭಾಷೆ ಯಾವುದರಲ್ಲೇ ಆಗಲಿ ಕೃತಿ ರಚನೆ ಮಾಡಿರುವ ಯಾರಾದರೂ ಪಡೆಯಬಹುದಾದ ಪಾರಿತೋಷಕ – ಭಾರತೀಯ ಜ್ಞಾನಪೀಠದ ಸಾಹಿತ್ಯ ಪಾರಿತೋಷಿಕ. ಈ ಪಾರಿತೋಷಿಕವನ್ನು ಪಡೆದ ಲೇಖಕನಿಗೆ ನಗದಾಗಿ ಒಂದು ಲಕ್ಷ ರೂಪಾಯಿಗಳನ್ನೂ ಪಾರಿತೋಷಿಕ ಪಡೆದುದರ ಸಂಕೇತವಾಗಿ ಒಂದು ಸರಸ್ವತಿಮೂರ್ತಿಯನ್ನೂ ಕೊಟ್ಟು ಗೌರವಿಸುತ್ತಾರೆ.

ಭಾರತೀಯ ಜ್ಞಾನಪೀಠವನ್ನು ಕಲ್ಕತ್ತೆಯ ಶಾಂತಿಪ್ರಸಾದ ಜೈನ್ ಅವರು 1944ರಲ್ಲಿ ಸ್ಥಾಪಿಸಿದರು. ಇದರ ಉದ್ದೇಶ –ಸಂಸ್ಕೃತ, ಪ್ರಾಕೃತ, ಪಾಲಿ, ಅಪಭ್ರಂಶ, ತಮಿಳು, ಕನ್ನಡ ಮುಂತಾದ ಭಾಷೆಗಳಲ್ಲಿರುವ ಪ್ರಾಚೀನ ಗ್ರಂಥಗಳ ಹಸ್ತಪ್ರತಿಗಳನ್ನು ಪ್ರಕಟಿಸುವುದು ಮತ್ತು ಆಧುನಿಕ ಭಾರತೀಯ ಭಾಷೆಗಳಲ್ಲಿ ಅತ್ಯುತ್ತಮ ಸೃಜನಾತ್ಮಕ ಸಾಹಿತ್ಯಕೃತಿಗೆ ಪ್ರತಿ ವರ್ಷವೂ ಒಂದು ಲಕ್ಷ ರೂಪಾಯಿಗಳ ಪಾರಿತೋಷಿಕ ಕೊಡುವುದು.

ಪಾರಿತೋಷಿಕ ಪ್ರದಾನಕ್ಕೆ ಸಂಬಂಧಿಸಿದ ಯೋಜನೆ ಮತ್ತು ನಿಯಮಾವಳಿಗಳು ಸಿದ್ಧವಾದ ಮೇಲೆ 1965ರಿಂದ ಪಾರಿತೋಷಿಕವನ್ನು ಕೊಡುವ ಪದ್ಧತಿ ಆಚರಣೆಗೆ ಬಂತು. 1965ರ ಪಾರಿತೋಷಿಕಕ್ಕಾಗಿ, 1920ರಿಂದ 1958ರ ವರೆಗಿನ ಅವಧಿಯಲ್ಲಿ ಪ್ರಕಟವಾದ ಗ್ರಂಥಗಳನ್ನು ಗಣನೆಗೆ ತಂದುಕೊಳ್ಳ

ಭಾರತೀಯ ಜ್ಞಾನಪೀಠ
ಪಾರಿತೋಷಿಕ ಫಲಕ



[illegible] ವರ್ಷಾವಧಿಗೆ ಕೊಡುವ ಪಾರಿತೋಷಿಕಕ್ಕೆ ಸಂಬಂಧಿಸಿದ [illegible] ಅಥವಾ ಪಾರಿತೋಷಿಕ ಆಯ್ಕೆ ಸಮಿತಿ ನಿರ್ಧರಿಸುತ್ತದೆ.

ಭಾರತ ಸಂವಿಧಾನದಲ್ಲಿ ನಿರೂಪಿತವಾಗಿರುವ ಯಾವುದೇ ಭಾಷೆಯಲ್ಲಿ ಸೃಜನಾತ್ಮಕ ಕೃತಿಯನ್ನು ರಚಿಸುವ ಯಾವನೇ ಕವಿಗೆ ಈ ಬಹುಮಾನ ಸಲ್ಲಬಹುದಾದರೂ ಪಾರಿತೋಷಿಕ ಪ್ರದಾನ ಕೆಲವು ನಿಯಮಗಳನ್ನು ಅನುಸರಿಸಿ ನಡೆಯುತ್ತದೆ. ಮೊದಲನೆಯದಾಗಿ ಪಾರಿತೋಷಿಕ ಪಡೆಯುವ ವ್ಯಕ್ತಿ ಭಾರತದ ಪ್ರಜೆಯಾಗಿರಬೇಕು; ಸಲಹಾ ಸಮಿತಿ ಆ ವ್ಯಕ್ತಿಯ ಗ್ರಂಥವನ್ನು ಪಾರಿತೋಷಿಕಕ್ಕಾಗಿ ಸೂಚಿಸುವ ಅವಧಿ ಕಾಲದಲ್ಲಿ ಅವನು ಜೀವಂತನಾಗಿರಬೇಕು. ಸಾಮಾನ್ಯವಾಗಿ ಲೇಖಕನ ಯಾವುದಾದರೊಂದು ಕೃತಿಯನ್ನು ಅನುಲಕ್ಷಿಸಿ ಪಾರಿತೋಷಿಕವನ್ನು ಕೊಡುತ್ತಾರೆ; ಸಮಾನ ಯೋಗ್ಯತೆಯುಳ್ಳ ಗ್ರಂಥಗಳ ನಡುವೆ ಸ್ಪರ್ಧೆ ಏರ್ಪಟ್ಟಾಗ, ಲೇಖಕನ ಎಲ್ಲ ಸೃಜನಾತ್ಮಕ ಕೃತಿಗಳನ್ನು ಗಮನಕ್ಕೆ ತೆಗೆದುಕೊಳ್ಳುತ್ತಾರೆ.

ಪಾರಿತೋಷಿಕವನ್ನು ನಿರ್ಣಯಿಸುವ ವಿಧಾನ ಈ ರೀತಿ ಇದೆ :

ಒಂದೊಂದು ಭಾಷೆಗೂ ಸಂಬಂಧಿಸಿದಂತೆ, ಸಲಹಾ ಸಮಿತಿಗಳು. ಈ ಸಮಿತಿಗಳು ತಮಗೆ ಸಂಬಂಧಿಸಿದ ಭಾಷೆಯಲ್ಲಿ, ಒಂದು ನಿರ್ಧಾರಿತ ಅವಧಿಯಲ್ಲಿ ಪ್ರಕಟವಾದ ಉತ್ತಮ ಕೃತಿಗಳೆಲ್ಲವನ್ನೂ ಪರಿಶೀಲಿಸಿ, ಸೃಜನಾತ್ಮಕತೆ ಹಾಗೂ ರಚನಾಕೌಶಲ ಇವೆರಡರಲ್ಲೂ ಅತ್ಯುತ್ತಮ ಕೃತಿಯನ್ನು ಹೆಸರಿಸುತ್ತದೆ. ಮತ್ತು ಈ ಆಯ್ಕೆಯನ್ನು ಏಕೆ ಮಾಡಲಾಯಿತೆಂಬ ಬಗೆಗೆ ಒಂದು ವರದಿಯನ್ನೂ ಸಿದ್ಧಪಡಿಸುತ್ತದೆ. ಇದಲ್ಲದೆ ಗುಣದ ದೃಷ್ಟಿಯಿಂದ ಆಯ್ಕೆಯಾದ ಗ್ರಂಥಕ್ಕೆ ಸಮೀಪವೆನಿಸುವಂಥ ನಾಲ್ಕು ಐದು ಗ್ರಂಥಗಳ ಬಗೆಗೆ ಕೂಡ ಒಂದು ವರದಿಯನ್ನು ಕೊಡುತ್ತದೆ. ಇದು ಮೊದಲನೆಯ ಹಂತ.

ಸಲಹಾ ಸಮಿತಿಗಳು ಸೂಚಿಸಿದ ಗ್ರಂಥಗಳು ಭಾಷಾ–ಸಮೂಹ ಸಮಿತಿಗಳ ಪರಿಶೀಲನೆಗೆ ಬರುತ್ತವೆ. ಈ ಸಮಿತಿಗಳು ತಮಗೆ ಸಂಬಂಧಿಸಿದ ಭಾಷೆಗಳಲ್ಲಿ ಸೂಚಿತವಾಗಿರುವ ಗ್ರಂಥಗಳನ್ನು ಪರಿಶೀಲಿಸಿ, ಅವುಗಳಲ್ಲಿ ಅತ್ಯುತ್ತಮವಾದದ್ದನ್ನು ಆಯ್ಕೆಯ ಸಮಿತಿಗೆ ತಿಳಿಸುತ್ತದೆ. ಇದು ಎರಡನೆಯ ಹಂತ.

ಆಯ್ಕೆ ಸಮಿತಿ, ಭಾಷಾ ಸಮೂಹ ಸಮಿತಿಗಳ ಸೂಚನೆಗಳನ್ನು ಪರಿಶೀಲಿಸಿ, ಆ ವರ್ಷದ ಪಾರಿತೋಷಿಕ ಯಾರಿಗೆ ಸಲ್ಲಬೇಕೆಂಬುದನ್ನು ನಿರ್ಣಯಿಸುತ್ತದೆ. ಈ ಸಂಬಂಧದಲ್ಲಿ ಅದು ಖ್ಯಾತ ವಿಮರ್ಶಕರ ಅಭಿಪ್ರಾಯ ಪಡೆಯುವುದೂ ಉಂಟು. ಪಾರಿತೋಷಿಕ ಪ್ರದಾನದ ವಿಚಾರದಲ್ಲಿ ಈ ಸಮಿತಿಯ ನಿರ್ಣಯವೇ ಕೊನೆಯದು.

ಸಾಹಿತ್ಯ ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳ ಭಾಷಾ ವಿಭಾಗಗಳು ಮುಂತಾದ ವಿದ್ವತ್ ಸಂಸ್ಥೆಗಳನ್ನು ತಮಗೆ ಸಂಬಂಧಿಸಿದ ಭಾಷೆಯ ಅತ್ಯುತ್ತಮ ಕೃತಿಯನ್ನು ಸೂಚಿಸುವಂತೆ ಜ್ಞಾನಪೀಠ ಮನವಿ ಮಾಡಿಕೊಳ್ಳುತ್ತದೆ. ಸಾರ್ವಜನಿಕರಲ್ಲಿ ಯಾರು ಬೇಕಾದರೂ ಯಾವುದೇ ಭಾಷೆಯಲ್ಲಿ ತಮಗೆ ಅತ್ಯುತ್ತಮವೆಂದು ತೋರುವ ಕೃತಿಯನ್ನು ಹೆಸರಿಸಿ ಜ್ಞಾನಪೀಠಕ್ಕೆ ಬರೆಯಬಹುದು.

ಒಮ್ಮೆ ಜ್ಞಾನಪೀಠ ಪಾರಿತೋಷಿಕವನ್ನು ಸ್ವೀಕರಿಸಿದ ಗ್ರಂಥಕರ್ತನಿಗೆ ಮತ್ತೊಮ್ಮೆ ಅದು ದೊರೆಯುವುದಿಲ್ಲ. ಯಾವುದೇ ಭಾಷೆಯ ಗ್ರಂಥಕ್ಕೆ ಒಮ್ಮೆ ಪಾರಿತೋಷಿಕ ದೊರೆತ ಮೇಲೆ ಮುಂದಿನ ಎರಡು ವರ್ಷಗಳ ಕಾಲ ಆ ಭಾಷೆಯ ಗ್ರಂಥಕ್ಕೆ ಪಾರಿತೋಷಿಕ ಕೊಡುವುದಿಲ್ಲ. ಅಂತಿಮ ಆಯ್ಕೆಯಲ್ಲಿ ಒಂದಕ್ಕಿಂತ ಹೆಚ್ಚು ಕೃತಿಗಳು ಪಾರಿತೋಷಿಕಕ್ಕೆ ಅರ್ಹವೆಂದು ನಿರ್ಧರಿಸಲ್ಪಟ್ಟರೆ, ಅಂಥ ಸಂದರ್ಭದಲ್ಲಿ ಪಾರಿತೋಷಿಕದ ಮೌಲ್ಯವನ್ನು ಎಲ್ಲ ವಿಜಯಿಗಳಿಗೂ ಸಮನಾಗಿ ಹಂಚಲಾಗುತ್ತದೆ.

1966ರ ಜ್ಞಾನಪೀಠ ಪಾರಿತೋಷಿಕ ಕನ್ನಡ ಮಹಾಕವಿ ಕುವೆಂಪು ಅವರ 'ರಾಮಾಯಣ ದರ್ಶನಂ' ಮತ್ತು ಗುಜರಾತಿನ ಮಹಾಕವಿ ಉಮಾಶಂಕರ ಜೋಷಿಯವರ ಕವನ ಸಂಕಲನ 'ನಿಶೀಥಾ' ಇವೆರಡಕ್ಕೂ ಲಭಿಸಿತು. ಪ್ರಥಮ ಭಾರತೀಯ ಜ್ಞಾನಪೀಠ ಪಾರಿತೋಷಿಕ ದೊರೆತದ್ದು ಕೇರಳದ ಮಹಾಕವಿ ಜಿ. ಶಂಕರ ಕುರುಪ್ ಅವರ ಕವನ ಸಂಕಲನ 'ಓಡಕ್ಕುಳಲ್'ಗೆ.

## ಭಾರತೀಯ ನೃತ್ಯಕಲೆ

ಭರತನಾಟ್ಯ, ಕಥಕ್ಕಳಿ, ಕಥಕ್, ಮಣಿಪುರಿ – ಈ ಹೆಸರುಗಳು ಸಾಧಾರಣವಾಗಿ ಎಲ್ಲರಿಗೂ ಪರಿಚಿತವಾದುವೇ. ಇವು ಭಾರತೀಯ ನೃತ್ಯದಲ್ಲಿ ಶಾಸ್ತ್ರೀಯ ನೃತ್ಯಗಳೆಂದು ಪ್ರಸಿದ್ಧವಾಗಿರುವ ನಾಲ್ಕು ಶೈಲಿಗಳು. ಇವಲ್ಲದೆ ಭಾರತೀಯ ನೃತ್ಯವು ಇನ್ನೂ ಹಲವಾರು ಶಾಸ್ತ್ರೀಯ ನೃತ್ಯ ಪ್ರಭೇದಗಳನ್ನೂ ಆದಿವಾಸಿಗಳ ಹಾಗೂ ಜಾನಪದ ನೃತ್ಯಗಳನ್ನೂ ಒಳಗೊಂಡಿದೆ. ಭಾರತೀಯ ನೃತ್ಯ ಪರಂಪರೆ ಪ್ರಾಚೀನವಾದದ್ದು. ಇದೊಂದು ಪರಿಪೂರ್ಣ ಕಲೆ. ಇದು ಕೇವಲ ಮನೋರಂಜನೆಯ ಮಾಧ್ಯಮವಲ್ಲ. ಸಂಗೀತ ಶಿಲ್ಪಾದಿಕಲೆಗಳಂತೆ ಮೋಕ್ಷಸಾಧನೆಯೇ ಭಾರತೀಯ ನೃತ್ಯದ ಪರಮೋದ್ದೇಶ. ಧರ್ಮ ಮತ್ತು ದರ್ಶನಗಳು ಭಾರತೀಯ ನೃತ್ಯಕಲೆಯಲ್ಲಿ ಹಾಸುಹೊಕ್ಕಾಗಿವೆ.

ಉದಯಶಂಕರ್–ಸಿಮ್ಕಿ



'ಶ್ರೀ ರಾಮಾಯಣ ದರ್ಶನಂ' ನೃತ್ಯರೂಪಕ

ಚಂದ್ರನಿಗಾಗಿ ರಾಮು ಅತ್ತಾಗ "ಕೈಕೆ ನಡೆದಳ್ ಬಳಿಗೆ. ನುಡಿಸಿದಳ್...ದಾಸಿ ಮಂಥರೆಯು"

"ಬಿಳಿಯಾನೆ-ಸೊಂಡಿಲಂದದ ನೀಳ ತೋಳಿಂದೆ ತುಡುಕಿದನು ಕಲ್ಪಭೂರುಹ ಸದೃಶ ಚಾಪಮಂ"

ಶಿವ –ನಟರಾಜ– ಭಾರತೀಯ ನೃತ್ಯದ ಅಧಿದೇವತೆ. ಆತ್ಮ ಮತ್ತು ದೇಹಗಳ ಸಂಪೂರ್ಣ ಐಕ್ಯ ಅತ್ಯಂತ ಉನ್ನತ ಯೋಗವೆಂಬುದು ಭಾರತೀಯರ ಅಭಿಪ್ರಾಯ. ಈ ಯೋಗವನ್ನು ನೃತ್ಯದ ಮೂಲಕ ಸಾಧಿಸ ಬಹುದೆಂದು ನಟರಾಜ ಶಿವನ ನೃತ್ಯ ಸಾರುತ್ತದೆ. ಪರಮಾತ್ಮನಾದ ಶ್ರೀಕೃಷ್ಣನ ಬಳಿಗೆ ಜೀವಾತ್ಮಗಳು ಗೋಪಿಯರ ರೂಪದಲ್ಲಿ ಆಕರ್ಷಿಸಲ್ಪಡುವುದರ ಸಂಕೇತವೇ ಎನ್ನುತ್ತಾರೆ.

ನೃತ್ಯದ ಬಗೆಗೆ ದೊರೆತಿರುವ ಗ್ರಂಥಗಳಲ್ಲೆಲ್ಲ ಭರತಮುನಿಯ 'ನಾಟ್ಯ ಶಾಸ್ತ್ರ' ಅತ್ಯಂತ ಪ್ರಾಚೀನವಾದುದ್ದು. ಇದರಲ್ಲಿ ಸಂಗೀತ ಕಾವ್ಯ ನಾಟಕ ಗಳ ವಿಚಾರವೂ ಬರುತ್ತದೆ. ಭಗವಂತನ ಆರಾಧನೆಯಲ್ಲಿ ಭಾರತೀಯ ಕಲೆಗಳಿಗೆ ಮಹತ್ವದ ಸ್ಥಾನವಿದೆ.

ಭಾರತೀಯ ನೃತ್ಯದಲ್ಲಿ ತಾಂಡವ, ಲಾಸ್ಯ ಎಂದು ಎರಡು ಪ್ರಕಾರಗಳು. ಶಿವನು ತನ್ನ ನೃತ್ಯದ ಮುಖ್ಯ ತತ್ತ್ವಗಳನ್ನು ಪ್ರಕಟಿಸುವಂತೆ ತನ್ನ ಗಣಗಳಲ್ಲೊಬ್ಬನಾದ ತಂಡುವಿಗೆ ಆಜ್ಞಾಪಿಸಿದನೆಂದೂ ಅವನು ಪ್ರಕಟಿಸಿದ ನೃತ್ಯ ಪ್ರಕಾರ ತಾಂಡವ ನೃತ್ಯವೆಂದೂ ಹೇಳಿಕೆ. ಅದೇ ರೀತಿ ಪಾರ್ವತಿದೇವಿ ತನ್ನ ನೃತ್ಯ ವಿಧಾನವನ್ನು ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನ ಹೆಂಡತಿ ಉಷೆಗೆ ಹೇಳಿಕೊಟ್ಟಳೆಂದೂ ಅದೇ ಲಾಸ್ಯವೆಂದೂ ನಂಬಿಕೆಯಿದೆ. ನೃತ್ಯವನ್ನು ಕುರಿತ ಸಾಹಿತ್ಯ ಭಾರತದಲ್ಲಿ ಸಾಕಷ್ಟಿದೆ. ಋಗ್ವೇದದಲ್ಲಿ ನೃತ್ಯದ ಪ್ರಸ್ತಾಪವಿದೆ. ಭರತನ 'ನಾಟ್ಯಶಾಸ್ತ್ರ' ಕ್ರಿಸ್ತ ಶಕ ಆರಂಭದಲ್ಲಿ, ಅಥವಾ ಅದಕ್ಕಿಂತ ತುಸು ಅನಂತರ ರಚಿತವಾಗಿರಬೇಕು. ಮುಂದೆ ದೊರೆಯುವ ಮುಖ್ಯ ಗ್ರಂಥ ನಂದಿಕೇಶ್ವರನ 'ಅಭಿನಯ ದರ್ಪಣ.' ಇದು 5ರಿಂದ 13ನೆಯ ಶತಮಾನದ ಅವಧಿಯಲ್ಲಿ ರಚಿತವಾಗಿರಬೇಕೆಂದು ಊಹೆ. ಶುಭಂಕರ ಕವಿಯ 'ಹಸ್ತಮುಕ್ತಾವಲಿ'–13ರಿಂದ 16ನೆಯ ಶತಕಗಳ ಅವಧಿಯಲ್ಲಿ ಬರೆಯಲ್ಪಟ್ಟದ್ದು. ಅನಂತರ ನೃತ್ಯಶಾಸ್ತ್ರ ಗ್ರಂಥಗಳು ವಿಪುಲವಾಗಿ ಹೊರಬಂದುವು.

ಭಾರತೀಯ ನೃತ್ಯ ಕಲೆಯಲ್ಲಿ ನೃತ್ಯ, ನೃತ್ತ, ನಾಟ್ಯ ಎಂದು ಮೂರು ವಿಭಾಗಗಳಿವೆ. ಈ ಮೂರು ಶಬ್ದಗಳೂ ನಟ್ ಎಂಬ ಧಾತುವಿ


ಉದಯಶಂಕರ್


ಶಾಂತಾರಾವ್


ರಾಮಗೋಪಾಲ್



ರುಕ್ಮಿಣಿ ಅರುಂಡೇಲ್

ನಿಂದ ಹುಟ್ಟಿವೆ. ನೃತ್ತ ಎಂದರೆ ರಸ, ಭಾವಗಳಿಲ್ಲದ ಆದರೆ ತಾಳ, ಲಯ ಪ್ರಾಶಸ್ತ್ಯವುಳ್ಳ ಕುಣಿತ. ನೃತ್ತವು ಸಂಗೀತ ಹಾಗೂ ಅಭಿನಯಗಳಿಂದ ಕೂಡಿದ್ದು, ರಸಭಾವಗಳಿಂದ ಶೋಭಿಸುತ್ತದೆ. ನೃತ್ಯವೇ ವಿಸ್ತಾರಗೊಂಡು ನಾಟ್ಯವಾಗಿದೆ. ಅಭಿನಯದ ಅಂಶಗಳು ಹೆಚ್ಚಾಗಿ, ವೇಷ, ಭೂಷಣ, ಮಾತು, ಸಂಗೀತಗಳೂ ಸೇರಿ ನಾಟ್ಯ ಪ್ರಭಾವಶಾಲಿಯಾಗುತ್ತದೆ. ಭಾರತೀಯ ನೃತ್ಯಕ್ಕೆ ವಿಶಿಷ್ಟವಾದ ಅಂಶಗಳೆಂದರೆ 'ಹಸ್ತಮುದ್ರೆ'ಗಳು. ಇವು ನಾಟ್ಯದಲ್ಲಿ ಉಪಯೋಗಿಸುವ ಸ್ವಹಸ್ತಭಾಷೆ. ಇವುಗಳ ಒಟ್ಟು ಸಂಖ್ಯೆ ಎಷ್ಟೆಂಬ ಬಗೆಗೆ ನಾಟ್ಯಶಾಸ್ತ್ರಕಾರರಲ್ಲಿ ಒಮ್ಮತವಿಲ್ಲ. ಭರತನು ತನ್ನ 'ನಾಟ್ಯಶಾಸ್ತ್ರ'ದಲ್ಲಿ ಒಟ್ಟು 64 ಹಸ್ತಗಳನ್ನು ಸೂಚಿಸಿದ್ದಾನೆ. ಅವುಗಳ ಲಕ್ಷಣಗಳನ್ನೂ ವಿನಿಯೋಗವನ್ನೂ –ಅಂದರೆ ಅದನ್ನು ನಾಟ್ಯದಲ್ಲಿ ಯಾವ ಸಂಬಂಧದಲ್ಲಿ ಉಪಯೋಗಿಸಬಹುದೆಂಬುದನ್ನು– ಹೇಳಿದ್ದಾನೆ. ಈ ಹಸ್ತಗಳ ಮೂಲಕ ಅನೇಕ ವಸ್ತುಗಳನ್ನೂ ಸನ್ನಿವೇಶ, ಭಾವಗಳನ್ನೂ ಸೂಚಿಸಬಹುದು.

ಭಾರತೀಯ ಶಾಸ್ತ್ರೀಯ ನೃತ್ಯಗಳಲ್ಲಿ ಭರತನಾಟ್ಯವು ದಕ್ಷಿಣ ಭಾರತದಲ್ಲಿ ಹೆಚ್ಚು ಪ್ರಚಲಿತವಾಗಿದೆ. ತಮಿಳುನಾಡು, ಆಂಧ್ರ, ಕರ್ನಾಟಕಗಳ ದೇವಾಲಯ ಹಾಗೂ ಅರಮನೆಗಳು ಈ ಕಲೆಯನ್ನು ಬಹುವಾಗಿ ಪೋಷಿಸಿದುವು. ಕೂಚುಪುಡಿ, ಭಾಗವತ ಮೇಳ, ಕೊರವಂಜಿ, ಮೋಹಿನಿ ಆಟ್ಟಂ ಮುಂತಾದುವು ಈ ನಾಟ್ಯತಂತ್ರದಿಂದ ತುಂಬ ಪ್ರಭಾವಿತವಾಗಿವೆ. ನಟುವಾಂಗಕ್ಕೆ ಭರತನಾಟ್ಯದಲ್ಲಿ ಪ್ರಮುಖ ಸ್ಥಾನವಿದೆ. ನಟುವಾಂಗದವರು ನೃತ್ಯದ ನಡೆ, ಅದರ ಪ್ರಭೇದಗಳನ್ನೂ ಮರದ ಮಣೆಯ ಮೇಲೆ ಕೋಲಿನಿಂದ ತಟ್ಟಿ ನಿರ್ದೇಶಿಸುತ್ತಾರೆ. ಭರತನಾಟ್ಯವನ್ನು ಕಲಿಸುವುದೂ ಇವರ ಕೆಲಸ. ಈ ಕೆಲಸವನ್ನು ನಿರ್ವಹಿಸುವವರು ಪುರುಷರೇ ಸಾಮಾನ್ಯ ನಿಯಮವಾದರೂ ಮೈಸೂರಿನಲ್ಲಿ ಜಟ್ಟಿ ತಾಯಮ್ಮ, ವೆಂಕಟಲಕ್ಷಮ್ಮ ಮತ್ತಿತರ ಸ್ತ್ರೀಯರೂ ನಟುವಾಂಗ ಮಾಡುತ್ತಿದ್ದುದುಂಟು.

ಇತ್ತೀಚಿನ ಕಾಲದಲ್ಲಿ ಭರತನಾಟ್ಯದ ಪುನರುದ್ಧಾರಕ್ಕೆ ಕಾರಣರಾದವರಲ್ಲಿ ಪಂದನಲ್ಲೂರು ಮೀನಾಕ್ಷಿ ಸುಂದರಂ ಪಿಳ್ಳೈ, ಬಾಲಸರಸ್ವತಿ ಹಾಗೂ ರುಕ್ಮಿಣಿ ಅರುಂಡೇಲ್ –ಇವರನ್ನು ಹೆಸರಿಸಬಹುದು.

ಕಥಕ್ಕಳಿ ಕೇರಳದ ನೃತ್ಯ. ಕಥೆಯ ಆಟ (ಕಳಿ) ಎಂದು ಇದರರ್ಥ. ಕೇವಲ ಗಂಡಸರೇ ಪಾತ್ರವಹಿಸುವ ನೃತ್ಯವಿದು. ಪುರಾಣ ಇತಿಹಾಸಗಳ ಕಥೆಗಳನ್ನೂ ಪ್ರಸಂಗಗಳನ್ನೂ ವರ್ಣಮಯ ಉಡುಗೆ ತೊಡುಗೆ ಧರಿಸಿದ ಪಾತ್ರಧಾರಿಗಳು ನರ್ತಿಸಿ ತೋರುವರು. ಈ ನೃತ್ಯ ಪ್ರಕಾರ ಬಹುಮಟ್ಟಿಗೆ ವೀರರಸ, ರೌದ್ರರಸ ಪ್ರಧಾನವಾದದ್ದು. ಒಂದು ಕಾಲದಲ್ಲಿ ಜನಪ್ರಿಯವಾಗಿದ್ದು ಅನಂತರ ಮೂಲೆಗುಂಪಾಗಿದ್ದ ಈ ನೃತ್ಯಪ್ರಕಾರವನ್ನು ಪುನರುಜ್ಜೀವನಗೊಳಿಸಿದವರು ಮಹಾಕವಿ ವಳ್ಳತ್ತೋಳ್ ಅವರು.



ವೆಂಕಟಲಕ್ಷಮ್ಮ

ಕಥಕ್ಕಳಿಯಲ್ಲಿ ತಾಂಡವ ಪ್ರಕಾರಕ್ಕೂ ವೀರ್ಯವತ್ತಾದ ನೃತ್ಯಕ್ಕೂ ಮುಖ್ಯ ಸ್ಥಾನವಿದೆ. ವಿಪುಲವಾದ ಪ್ರಸಾಧನ, ಆಕರ್ಷಕವಾದ ವಸ್ತ್ರಾಭರಣಗಳು ಹಾಗೂ ಆಂಗಿಕಾಭಿನಯ ಇವಕ್ಕೆ ಇದರಲ್ಲಿ ಪ್ರಾಮುಖ್ಯವಿದೆ.

ಕಥಕ್ಕಳಿ ನೃತ್ಯಪ್ರಕಾರದಲ್ಲಿ ಪರಿಣಾಮಕಾರಿಯಾದ ಪ್ರಯೋಗಗಳನ್ನು ನಡೆಸಿದವರಲ್ಲಿ ಗುರು ಕುಂಜು ಕುರುಪ್, ಗೋಪೀನಾಥ್, ಕಲಾಮಂಡಲಂ ಕೃಷ್ಣನ್ ನಾಯರ್ ಮುಂತಾದವರು ಪ್ರಮುಖರು.

ಉತ್ತರ ಭಾರತದಲ್ಲಿ ಪ್ರಚಾರದಲ್ಲಿರುವ ಕಥಕ್ ನೃತ್ಯದಲ್ಲಿ ಹೆಜ್ಜೆಯ ವಿನ್ಯಾಸಗಳಿಗೆ ಪ್ರಾಧಾನ್ಯ.



ಬಾಲಸರಸ್ವತಿ

ಪಾದವಿನ್ಯಾಸದಲ್ಲಿ ವೇಗವುಂಟು. 'ಚಕ್ಕರ್' ಎನ್ನುವ ಸುತ್ತು ಚಲನೆ ಈ ನೃತ್ಯ ಪ್ರಕಾರದ ವೈಶಿಷ್ಟ್ಯ. ವೇಷ ಭೂಷಣಗಳಲ್ಲಿ ಅಷ್ಟೇನೂ ಆಡಂಬರ ವಿಲ್ಲ. ಶೃಂಗಾರಭಾವ ಹೆಚ್ಚು. ಅಕ್ಬರನ ಕಾಲದಲ್ಲಿ ಉತ್ತರ ಭಾರತದ ನೃತ್ಯವು ಪರ್ಷಿಯ ಮತ್ತು ಅರೇಬಿಯದ ಸಂಸ್ಕೃತಿಗಳಿಂದ ಪ್ರಭಾವಿತವಾದಾಗ ಈಗಿನ ಕಥಕ್ ಶೈಲಿ ಹುಟ್ಟಿತು –ಎಂಬ ಅಭಿಪ್ರಾಯವಿದೆ. ಮುಸಲ್ಮಾನ ಅರಸರ ಪೋಷಣೆಗೆ ಒಳಗಾದ ಮೇಲೆ ಕಥಕ್ ಕೇವಲ ಮನೋರಂಜನೆಗೆ ವಿಲಾಸಲಾದ ಆಸ್ಥಾನ ನೃತ್ಯವಾಯಿತಾದರೂ ಮೂಲ ಸ್ವರೂಪದಲ್ಲಿ ಅದು ಭಕ್ತಿ ಪ್ರಧಾನವಾದ ಆರಾಧನಾ ನೃತ್ಯವಾಗಿತ್ತು. ಕಥಕ್ ನೃತ್ಯದ ಚಲನೆಗಳು ಬಹಳ ಲಲಿತ. ಮಿಂಚಿನಂತೆ ಸರಿಯುವ ಪಾದಚಲನೆ. ಕಥಕ್ ನೃತ್ಯ ತಂತ್ರದೃಷ್ಟಿಯಿಂದ ಶಾಸ್ತ್ರೀಯ ನೃತ್ಯ. ಅಚ್ಚನ್ ಮಹಾರಾಜ್, ಶಂಭು ಮಹಾರಾಜ್, ಬ್ರಿಜು ಮಹಾರಾಜ್ ಮತ್ತು ಪಂಡಿತ ಸುಂದರ ಪ್ರಸಾದ್ ಪ್ರತಿಷ್ಠಿತ ಆಧುನಿಕ ಕಥಕ್ ನರ್ತಕರು.



ಗೋಪಿನಾಥ್ : ಕಥಕ್ಕಳಿ



ಸಿತಾರಾ ದೇವಿ : ಕಥಕ್

ಮಣಿಪುರಿ –ಮಣಿಪುರ ರಾಜ್ಯದ ನೃತ್ಯ. ಇದರಲ್ಲಿ 'ಲಾಯ ಹರೋಬ' ಮತ್ತು 'ರಾಸ್' ಎಂಬ ಎರಡು ಪ್ರಕಾರಗಳಿವೆ. 'ಲಾಯ ಹರೋಬ' ಅತ್ಯಂತ ಹಳೆಯ ಮಣಿಪುರ ನೃತ್ಯ ವಿಧಾನ; ದೇವತಾ ತೃಪ್ತಿಯೇ ಇದರ ಉದ್ದೇಶ. ರಾಧಾ ಕೃಷ್ಣರನ್ನು ಕುರಿತ ಬಂಗಾಳಿ ಹಾಡುಗಳನ್ನು ಆಧರಿಸಿ ರೂಪಿಸಲ್ಪಟ್ಟ ನೃತ್ಯಗಳಿಗೆ ರಾಸ್ (ರಾಸಲೀಲ) ಎನ್ನುತ್ತಾರೆ. ಇದರಲ್ಲಿ ಪಾತ್ರವಹಿಸುವವರು ಸ್ತ್ರೀಯರು ಮಾತ್ರ. ಈ ನೃತ್ಯದಲ್ಲಿ ತಾಂಡವ ಮತ್ತು ಲಾಸ್ಯ ಪ್ರಕಾರಗಳ ಮಿಶ್ರಣವನ್ನು ಕಾಣಬಹುದು. ವರ್ತುಲ ಅಥವಾ ಅರ್ಧವರ್ತುಲ



ಇಂದ್ರಾಣಿ : ಒಡಿಸಿ



ಯಾಮಿನಿ ಕೃಷ್ಣಮೂರ್ತಿ : ಕೂಚಿಪುಡಿ



ತಂಬಾ ಚೌಧುರಿ, ಸುವರ್ಣ ರಘುವೇರಿ : ಮಣಿಪುರಿ

ಆಕಾರದಲ್ಲಿ ನಿಂತು ನರ್ತಿಸುವುದು ಸಂಪ್ರದಾಯ. ನೃತ್ಯ ಮತ್ತು ವೃಂದ ಗಾನದ ಸಮ್ಮಿಶ್ರ ರೂಪ ಮಣಿಪುರಿ ನೃತ್ಯ. ಆಕರ್ಷಕವಾದ ಉಡುಗೆ ತೊಡುಗೆಗಳು, ಝುಗಝುಗಿಸುವ ಆಭರಣ, ಕನ್ನಡಿಯ ಚೂರುಗಳಿಂದ ಹೊಲಿದ ವಸ್ತ್ರ, ಇವುಗಳಿಂದ ಮಣಿಪುರಿ ನೃತ್ಯ ಸೊಗಸಾಗಿ ಅತ್ಯಂತ ವರ್ಣಮಯವಾಗಿ ತೋರುತ್ತದೆ. ಪುರುಷರೇ ಭಾಗವಹಿಸುವ ಮೃದಂಗನೃತ್ಯ, ತಾಳ ನೃತ್ಯಗಳು ಕೂಡ ಮಣಿಪುರಿ ನೃತ್ಯ ಸಂಪ್ರದಾಯದ ವೈಶಿಷ್ಟ್ಯಗಳು. ವಿವಿಧ ಪ್ರಕಾರಗಳ ಭಾರತೀಯ ನೃತ್ಯಗಳಲ್ಲಿ ವೇಷ ಭೂಷಣಗಳಲ್ಲಿ ಮಾರ್ಪಾಡುಗಳಾಗಿವೆ. ಕೆಲವು ಸಂದರ್ಭಗಳಲ್ಲಿ ಅವು ಸರಳಗೊಳಿಸಲ್ಪಟ್ಟಿವೆ. ಆದರೆ ಮಣಿಪುರಿ ಪ್ರಕಾರದಲ್ಲಿ ಇಂಥ ಬದಲಾವಣೆಗಳು ಅಷ್ಟಾಗಿ ಆಗಿಲ್ಲ. ಮಣಿಪುರಿ ನೃತ್ಯರಂಗದಲ್ಲಿ ಗುರು ಅಮೂಬಿಸಿಂಗ್ ಪ್ರಸಿದ್ಧರು.

ಪ್ರಾಚೀನ ಒಡಿಸಿ ನೃತ್ಯಗಳು ಕೂಡ ಇತ್ತೀಚೆಗೆ ಜನಪ್ರಿಯತೆಯನ್ನು ಗಳಿಸಿಕೊಳ್ಳುತ್ತಿವೆ.

ಸೋವಿಯೆತ್ ರಷ್ಯದಲ್ಲಿ ಭಾರತೀಯ ನೃತ್ಯಾಭ್ಯಾಸ



ಭಾರತೀಯ ಜಾನಪದ ನೃತ್ಯಗಳು ವೈವಿಧ್ಯಪೂರ್ಣವಾದುವು. ಒಂದೊಂದು ಪ್ರಾಂತದಲ್ಲೂ ಆಯಾ ಪ್ರದೇಶಕ್ಕೆ ವಿಶಿಷ್ಟವಾದ ಜಾನಪದ ನೃತ್ಯಗಳಿವೆ. ನಾಡಹಬ್ಬ, ರಾಷ್ಟ್ರೀಯ ಹಬ್ಬಗಳ ಸಂದರ್ಭಗಳಲ್ಲಿ ಇವುಗಳನ್ನು ಪ್ರದರ್ಶಿಸುವ ಸಂಪ್ರದಾಯ ಬೆಳೆದಿದೆ. ಇದರಿಂದಾಗಿ ಗ್ರಾಮವಾಸಿಗಳು ಮಾತ್ರವಲ್ಲದೆ, ಪಟ್ಟಣವಾಸಿಗಳೂ ಇದರಲ್ಲಿ ಆಸಕ್ತಿ ತೋರುತ್ತಾರೆ.

'ಬ್ಯಾಲೆ' ಎಂಬ ಪಾಶ್ಚಾತ್ಯ ನೃತ್ಯರೂಪಕ ವಿಧಾನವನ್ನು ಇಂದು ಭಾರತೀಯ ನೃತ್ಯಕ್ಕೆ ಹೊಂದಿಸಿಕೊಳ್ಳಲಾಗಿದೆ. ಈಗ ಎಲ್ಲ ಬಗೆಯ ಶಾಸ್ತ್ರೀಯ ನೃತ್ಯಗಳಲ್ಲಿಯೂ ಬ್ಯಾಲೆ ರಚಿಸಲಾಗಿದೆ. ಕೆಲವು ಬ್ಯಾಲೆಗಳಲ್ಲಿ ಜಾನಪದ ನೃತ್ಯಗಳನ್ನು ಅಳವಡಿಸಲಾಗಿದೆ. ಭಾರತದ ಕಥಾ ಸಂಪತ್ತು ಹೇರಳವಾಗಿರುವುದರಿಂದ ಬ್ಯಾಲೆಯ ಬೆಳವಣಿಗೆಗೆ ಒಳ್ಳೆಯ ಅವಕಾಶವಿದೆ.



ಮಾಯಾರಾವ್

ಭಾರತೀಯ ನೃತ್ಯ ತನ್ನ ಸಂಪ್ರದಾಯವನ್ನು ಉಳಿಸಿಕೊಂಡು, ಹೊಸತನ್ನೂ ಒಗ್ಗಿಸಿಕೊಂಡು ಬೆಳಗುತ್ತಿದೆ.

ನೋಡಿ : ಬ್ಯಾಲೆ

## ಭಾರತೀಯ ರಂಗಭೂಮಿ

" ಆಂಗಿಕಂ ಭುವನಂ ಯಸ್ಯ ವಾಚಿಕಂ ಸರ್ವ ವಾಙ್ಮಯಂ
ಆಹಾರ್ಯಂ ಚಂದ್ರತಾರಾದಿ ತನ್ನಮೋಸ್ಸಾತ್ವಿಕಂ ಶಿವಂ "

"ವಿಶ್ವವನ್ನೇ ಆಂಗಿಕ ಅಭಿನಯವನ್ನಾಗಿ ಮಾಡಿಕೊಂಡು, ಎಲ್ಲ ಸಾಹಿತ್ಯಗಳನ್ನೂ ವಾಚಿಕಾಭಿನಯವನ್ನಾಗಿ ಮಾಡಿಕೊಂಡು, ಚಂದ್ರ ನಕ್ಷತ್ರಗಳನ್ನೇ ಆಭರಣಗಳನ್ನಾಗಿ ಹೊಂದಿರುವ ಶಿವನಿಗೆ ವಂದನೆಗಳು".

ಇದು ಪರಂಪರೆಯಾಗಿ ಬಂದ ಒಂದು ಮಂಗಳ ಸ್ತೋತ್ರ. ಪ್ರಾಚೀನ ಭಾರತೀಯ ರಂಗಭೂಮಿ ಧಾರ್ಮಿಕ ಹಿನ್ನೆಲೆಯುಳ್ಳದ್ದು ಎಂಬುದಕ್ಕೆ ಇದು ನಿದರ್ಶನ.

ರಂಗಭೂಮಿ ಎಂಬ ಮಾತಿಗೆ ಇಂದಿನ ಅರ್ಥ ನಾಟಕ ಪ್ರದರ್ಶನ ಸ್ಥಳ ಎಂದೇ. ಆದರೆ ರಂಗಭೂಮಿ ಜೀವಂತವಾಗಿರುವುದು ಅಲ್ಲಿ ನಡೆಯುವ ನಾಟಕಗಳಿಂದ. ಆದ್ದರಿಂದ ಸಾಮಾನ್ಯವಾಗಿ ರಂಗಭೂಮಿ ಎಂಬ ಮಾತಂ- ಬರೆದ ನಾಟಕ ಮತ್ತು ಅದನ್ನು ರಂಗದ ಮೇಲೆ ಆಡುವ ಕ್ರಿಯೆ ಇವೆರಡನ್ನೂ ಒಳಗೊಳ್ಳುತ್ತದೆ ಎಂದೂ ಭಾವಿಸಬಹುದು. ಅಭಿನಯಕ್ಕೆಂದು ಬರೆದ ದೃಶ್ಯ ಕಾವ್ಯ (ನಾಟಕ, ರೂಪಕ)ಗಳ ಉದ್ದೇಶ ಸಾರ್ಥಕವಾಗುವುದು ಅವು ರಂಗಭೂಮಿಯ ಮೇಲೆ ಬಂದಾಗಲೇ.

'ಭಾರತೀಯ ರಂಗಭೂಮಿ' ಎಂದರೆ ವೇದಕಾಲ ಅಥವಾ ಅದಕ್ಕಿಂತ ಮುಂಚೆ ಇದ್ದ ನಾಟಕರೂಪಗಳಿಂದ ಹಿಡಿದು, ಇಂದು ಆಧುನಿಕ ಭಾರತದ ವಿವಿಧ ಭಾಷೆಗಳಲ್ಲಿ ರಚಿತವಾಗಿ ಆಡಲ್ಪಡುತ್ತಿರುವ ನಾಟಕಗಳವರೆಗೆ ಎಲ್ಲ ನಾಟಕ ಮತ್ತು ರಂಗಪ್ರಯೋಗಗಳನ್ನು ಒಳಗೊಳ್ಳುತ್ತದೆ. ಈಗ ಭಾರತೀಯ ನಾಟಕಗಳು ಅಪಾರ ವೈವಿಧ್ಯ ತೋರಿದರೂ ಹಿಂದೆ ಬಹುಕಾಲದವರೆಗೆ ಭಾರತದ ಎಲ್ಲ ಪ್ರದೇಶಗಳ ನಾಟಕಗಳೂ ಒಂದೇ

ರೀತಿಯ ನಿಯಮಗಳಿಗೆ ಅನುಸಾರವಾಗಿ ರಚಿತವಾಗುತ್ತಿದ್ದುವು. ಈ ವಿವಿಧತೆಯಲ್ಲಿ ಏಕತೆಯನ್ನು ನಾವು ಸ್ಥೂಲವಾಗಿ ಕಾಣುವುದರಿಂದಲೆ ಭಾರತೀಯ ರಂಗಭೂಮಿ ಎಂಬ ಕಲ್ಪನೆ ಸಾಧ್ಯವಾಗಿದೆ. ಸಂಸ್ಕೃತ ಭಾಷೆ ಅತ್ಯಂತ ಪ್ರಭಾವಶಾಲಿಯಾಗಿದ್ದದ್ದೇ ಇದಕ್ಕೆ ಕಾರಣ. ಈ ಪ್ರಭಾವವನ್ನು ಜಾನಪದ ನಾಟ್ಯಗಳಲ್ಲೂ ಕಾಣಬಹುದು.

ಭಾರತೀಯ ರಂಗಭೂಮಿಯ ಉಗಮ ಯಾವಾಗ ? ಈ ಪ್ರಶ್ನೆಗೆ ಉತ್ತರ ಕೊಡಲು ನಮಗೆ ಇರುವ ಆಧಾರವೆಂದರೆ ಲಿಖಿತರೂಪದಲ್ಲಿ ಉಳಿದಿರುವ ಕೆಲವು ಕೃತಿಗಳು. ಕೇವಲ ಮಾತಿನಲ್ಲೇ ಉಳಿದು ರಂಗದ ಮೇಲೆ ಆಡಿರಬಹುದಾದ ನಾಟಕಗಳ ಬಗೆಗೆ ನಾವು ಏನೂ ಹೇಳುವಂತಿಲ್ಲ. ವೇದಗಳಲ್ಲಿ ನಾಟಕೀಯ ಸನ್ನಿವೇಶ, ನಾಟಕೀಯ ಭಾಷೆಗಳಿರುವುದನ್ನು ಕಂಡಾಗ, ಭಾರತೀಯ ರಂಗಭೂಮಿ ವೇದಕಾಲಕ್ಕೆ ಮುಂಚಿನಿಂದಲೂ ಇದ್ದಿರಬೇಕು ಎಂದು ಊಹಿಸಬಹುದು. ಅಷ್ಟೊಂದು ಪ್ರಮುಖ ವಲ್ಲದ 'ಸಭ್ಯ' ಎಂದು ಗಣಿಸಲಾಗದ ನಾಟಕಗಳನ್ನು 'ಉಪರೂಪಕ'ಗಳೆಂದು ಕರೆಯುತ್ತಾರೆ. ಈ ಗುಂಪಿಗೆ ಸೇರಬಹುದಾದ ನಾಟಕಗಳನ್ನು ಹಿಂದೆ ಪ್ರಾಕೃತ ಭಾಷೆಯಲ್ಲಿ ರಚಿಸುತ್ತಿದ್ದರೆಂದೂ ಇವು ಈಗ ನಮಗೆ ಸಿಕ್ಕಿರುವ ಅತ್ಯಂತ ಹಿಂದಿನ ಸಂಸ್ಕೃತ ನಾಟಕಗಳಿಗಿಂತಲೂ ಹಿಂದಿನವೆಂದೂ ಅಭಿಪ್ರಾಯವಿದೆ.

ರಂಗಭೂಮಿಯ ಬಗೆಗೆ ನಮಗೆ ಸಿಕ್ಕಿರುವ ಗ್ರಂಥಗಳಲ್ಲಿ ಭರತನ 'ನಾಟ್ಯಶಾಸ್ತ್ರ'ವೇ ಅತ್ಯಂತ ಪ್ರಾಚೀನ ಗ್ರಂಥ. ಇದು ಕ್ರಿ. ಶ. ಎರಡು ಅಥವಾ ಮೂರನೆಯ ಶತಮಾನದ ಕೃತಿ ಎನ್ನುತ್ತಾರೆ. ಈಗ ನಮಗೆ ಸಿಗುವ ಲಿಖಿತ ರೂಪವನ್ನು ಈ ಕೃತಿ ಕ್ರಿ.ಶ. 4 ಅಥವಾ 5ನೆಯ ಶತಮಾನದಲ್ಲಿ ಪಡೆದಿದ್ದರೂ ಇರಬಹುದು.

ಬ್ರಹ್ಮನೇ 'ನಾಟ್ಯಶಾಸ್ತ್ರ'ವನ್ನು ರಚಿಸಿದ್ದು, ಅದು ತೀರ ಕ್ಲಿಷ್ಟವಾಗಿದ್ದಾಗ ಭರತ ಅದನ್ನು ಸರಳಗೊಳಿಸಿ ಬರೆದ –ಎಂದು ಹೇಳಿಕೆ. ನಾಟಕ ಯಾವ ರೀತಿಯಲ್ಲಿರಬೇಕು, ಯಾವ ರೀತಿ ಇರಬಾರದು ಎಂಬ ಬಗೆಗೆ 'ನಾಟ್ಯಶಾಸ್ತ್ರ'ದಲ್ಲಿ ದೀರ್ಘ ನಿಯಮಾವಳಿಗಳಿವೆ.

ಭರತನ 'ನಾಟ್ಯಶಾಸ್ತ್ರ'ದ ಪ್ರಭಾವ ಅಪಾರವಾದದ್ದು. ಇದು ಹಿಂದಿನ ಭಾರತೀಯ ರಂಗಭೂಮಿಗೆ ಒಂದು ಅಧಿಕೃತ ಕೈಪಿಡಿಯಾಯಿತು. ಇವನ ಕೃತಿಯಲ್ಲಿ ಬರುವ ಸೂತ್ರಧಾರ ಎಲ್ಲ ನಾಟಕಗಳಲ್ಲೂ ಕಂಡು ಬರುತ್ತಾನೆ. ಅಷ್ಟೇ ಅಲ್ಲದೆ ಜಾನಪದ ನಾಟಕಗಳಲ್ಲೂ ಇವನು ಕಾಣ ಸಿಗುತ್ತಾನೆ. ಈ ಕೃತಿಯ ಪ್ರಭಾವ ಜನಸಾಮಾನ್ಯರನ್ನೂ ಮುಟ್ಟಿತ್ತು ಎಂಬುದನ್ನು ಇದು ತೋರಿಸುತ್ತದೆ.

ಋಗ್ವೇದದ 'ಸಂವಾದ ಸೂಕ್ತ'ಗಳಂಥ ಕೆಲವು ವೈದಿಕ ನಾಟಕಗಳ ಮೂಲಗಳನ್ನು ಬಿಟ್ಟರೆ ಈಗಿನ ಅರ್ಥದಲ್ಲಿ ನಾಟಕಗಳನ್ನು ಬರೆದ ಮೊಟ್ಟ ಮೊದಲನೆಯ ಸಂಸ್ಕೃತ ನಾಟಕಕಾರ ಅಶ್ವಘೋಷ. ಇವನ ಕಾಲ ಸುಮಾರು ಕ್ರಿ. ಶ. 100. ಇವನ ಅನಂತರ ಭಾಸ, ಕಾಳಿದಾಸ, ಶೂದ್ರಕ, ವಿಶಾಖದತ್ತ, ಭವಭೂತಿ ಮೊದಲಾದ ಪ್ರಖ್ಯಾತ ನಾಟಕಕಾರರು ಅನೇಕ ನಾಟಕಗಳನ್ನು ಬರೆದರು. ಮಹಾಭಾರತ, ರಾಮಾಯಣಗಳು ಹಲವು ಪ್ರಮುಖ ನಾಟಕಗಳಿಗೆ ವಸ್ತುಗಳನ್ನು ಒದಗಿಸಿವೆ. ಇಡೀ ಸಂಸ್ಕೃತ ನಾಟಕಗಳ ರಾಶಿಯಲ್ಲಿ ಇಂದು ನಾವು ಪಾಶ್ಚಾತ್ಯ ತತ್ತ್ವಕ್ಕನುಗುಣವಾಗಿ 'ಟ್ರಾಜಿಡಿ' ಎಂದು ಕರೆಯುವ ರೂಪದ ನಾಟಕಗಳಿಲ್ಲ. ಆಯಾಸ, ದುಃಖ, ಬೇಸರ ಅಥವಾ ದುರದೃಷ್ಟದಿಂದ ಕುಗ್ಗಿಹೋದ ಜನರಿಗೆ ಉಲ್ಲಾಸ ಕೊಡುವಂತೆ ಮತ್ತು ಮನಸ್ಸು–ದೇಹಗಳಿಗೆ ವಿಶ್ರಾಂತಿ ನೀಡುವಂತೆ ನಾಟಕಗಳು



ಪಾತ್ರಧಾರಣೆ : ಪ್ರಸಾಧನಾಗೃಹದಲ್ಲಿ ಪಂಢರೀಬಾಯಿ

ಇರಬೇಕು ಎಂದು ಭರತನ 'ನಾಟ್ಯಶಾಸ್ತ್ರ'ದಲ್ಲಿ ಹೇಳಿದೆ. ಸಾವು ನೋವುಗಳ ನಿರೂಪಣೆಯಿಂದ ನಾವು ನಮ್ಮ ನಾಟಕಗಳನ್ನು ಮುಕ್ತಾಯಗೊಳಿಸುತ್ತಿರಲಿಲ್ಲ. ನಾಟಕದ ಮಧ್ಯೆ ಈ ಅಂಶಗಳು ಬಂದರೂ ಅದು ಮುಕ್ತಾಯವಾಗುತ್ತಿದ್ದದ್ದು ಸಂತಸದಲ್ಲಿ. ಇಂಥ ಅಂಶಗಳನ್ನು 'ದೈವ ವಿಕೋಪ', 'ದುರದೃಷ್ಟ' ಎಂದು ನಮ್ಮ ಸಂಸ್ಕೃತ ನಾಟಕಕಾರರು ಪರಿಗಣಿಸುತ್ತಿದ್ದರು.

ಭರತನ 'ನಾಟ್ಯಶಾಸ್ತ್ರ'ದಲ್ಲಿ, 'ನಾಟಕರಂಗ' ಅಥವಾ 'ರಂಗಮಂಟಪ'ದ ಉಗಮ, ಅವಶ್ಯತೆಗಳ ಬಗೆಗೆ ಒಂದು ಕುತೂಹಲಕಾರಿ ಕಥೆ ಇದೆ. ಭರತ ಮುನಿ 'ಅಮೃತ ಮಂಥನ' ಎಂಬ ಒಂದು ನಾಟಕವನ್ನು ಆಡಿಸಿದ. ಈ ನಾಟಕಕ್ಕೆ ಎಲ್ಲ ವರ್ಗದವರಿಗೂ ಪ್ರವೇಶವಿದ್ದುದರಿಂದ ವಿಶಾಲವಾದ ಬಯಲಿನಲ್ಲೇ ನಾಟಕವಾಡಬೇಕಾಯಿತು. ಈ ನಾಟಕವನ್ನು ನೋಡಿದ ರಾಕ್ಷಸರು ನಾಟಕದಲ್ಲಿ ತಮ್ಮ ಸೋಲು ನಿರೂಪಿತವಾದದ್ದನ್ನು ಕಂಡು, ಕೆರಳಿ ಅಲ್ಲಿದ್ದ ನಾಟಕರಂಗವನ್ನೇ ಧ್ವಂಸಮಾಡಿದರು. ಬ್ರಹ್ಮ ಅವರನ್ನು ಸಮಾಧಾನಪಡಿಸಿದ ; ಆದರೆ ಭರತನಿಗೆ, ನಾಟಕಗಳು ಇನ್ನು ಮುಂದೆಯೂ ಇಂಥ ಅನಾಹುತಕ್ಕೆ ಕಾರಣವಾಗಬಹುದೆಂದು ಅನ್ನಿಸಿತು. ಅವನು ಇದನ್ನು ತಪ್ಪಿಸಲು ರಂಗಮಂಟಪವನ್ನೊಳಗೊಂಡ ಭವನಗಳನ್ನು ಕಟ್ಟುವ ರೀತಿಯನ್ನು ರೂಪಿಸಿದ. ರಂಗಮಂಟಪ ಬಯಲಿಗಿಂತ ಒಂದು ಭವನದೊಳಗಿದ್ದರೆ ಇಂಥ ಅನಾಹುತಗಳಿಂದ ರಕ್ಷಣೆ ಸಿಗಬಹುದೆಂದು ಅವನು



ಹಿಂದಿಯಲ್ಲಿ ಮೋಲಿಯೇರ್ ನಾಟಕ 'ಬಿಚ್ಚು' — ಅಲ್ಕಾಜಿ ನಿರ್ದೇಶನ

ಭಾವಿಸಿದ. 'ನಾಟ್ಯಶಾಸ್ತ್ರ'ದಲ್ಲಿ ನಾಟ್ಯಮಂಟಪ ಅಥವಾ ಪ್ರೇಕ್ಷಾಗೃಹವನ್ನು ಯಾವ ರೀತಿ ಕಟ್ಟಬೇಕು. ಅವುಗಳ ಉದ್ದ–ಅಗಲ ಎಷ್ಟಿರಬೇಕು ಎಂಬ ಬಗೆಗೆ ವಿವರಣೆಗಳು ಇವೆ. ಚೌಕ. ಉದ್ದ ಮತ್ತು ತ್ರಿಕೋಣಾಕಾರದ ಮೂರು ವಿಧದ ನಾಟ್ಯಮಂಟಪಗಳನ್ನು ಇವನು ಹೇಳುತ್ತಾನೆ· ನಮ್ಮ ರಂಗಭೂಮಿಯಲ್ಲಿ ತೆರೆ (ಪರದೆ)ಗಳ ಉಪಯೋಗ ಹಿಂದಿನಿಂದ ಬಂದುದಲ್ಲ; ಮಧ್ಯಕಾಲದ ಕ್ರೈಸ್ತ ಧರ್ಮೀಯರಿಂದ ಇಟಲಿಯಲ್ಲಿ ಪ್ರಾರಂಭವಾಗಿ, ಯೂರೊಪಿನಲ್ಲಿ ಬಳಕೆಗೆ ಬಂದು 18ನೆಯ ಶತಮಾನದ ವೇಳೆಗೆ ನಮ್ಮ ರಂಗಭೂಮಿಯಲ್ಲಿ ಕಾಣಿಸಿಕೊಂಡಿತು.

ಕ್ರಿ. ಶ. 10–12ನೆಯ ಶತಮಾನದ ಹೊತ್ತಿಗೆ ಸಂಸ್ಕೃತ ನಾಟಕಗಳ ಪ್ರಭಾವ ಮತ್ತು ಪ್ರಾಮುಖ್ಯ ಇಳಿಮುಖವಾಗತೊಡಗಿದುವು. ಇದಕ್ಕೆ ಕಾರಣಗಳು ಹಲವಾರು. ಈ ಹೊತ್ತಿಗಾಗಲೇ ಉತ್ತರ ಭಾರತದಲ್ಲಿ ಪ್ರಾದೇಶಿಕ ಭಾಷೆಗಳು ಬೆಳೆದು ಸಂಸ್ಕೃತ ಕೇವಲ ಪಂಡಿತರ ಭಾಷೆಯಾಗಿ ಉಳಿದಿತ್ತು. ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳು ಈ ವೇಳೆಗೆ ತಮ್ಮದೇ ಆದ ಅಮೂಲ್ಯ ಸಾಹಿತ್ಯವನ್ನು ಸೃಷ್ಟಿಸಿದ್ದುವು. ಯಾವಾಗ ಜನ ಆಡುವ ಭಾಷೆ ಹಾಗೂ ಪಂಡಿತ ಭಾಷೆಗಳ ನಡುವೆ ಅಂತರ ಹೆಚ್ಚುತ್ತದೋ ಆಗ ಸಾಮಾನ್ಯವಾಗಿ ಪಂಡಿತ ಭಾಷೆ ಜನಜೀವನದ ಸಂಪರ್ಕ ಕಳೆದುಕೊಳ್ಳುತ್ತದೆ. ಈ ಸಮಯದಲ್ಲೂ ಹಾಗೇ ಆಯಿತು. ಜೊತೆಗೆ ಮುಸಲ್ಮಾನ ದಾಳಿ, ಸಂಸ್ಕೃತ ನಾಟಕಗಳಿಗೆ ಇದ್ದ ಪ್ರೋತ್ಸಾಹವನ್ನು ಕೊನೆಗಾಣಿಸಿತು.

ಮುಂದೆ ನಮ್ಮ ಸಾಹಿತ್ಯದಲ್ಲಿ ನಾಟಕ ಹುಟ್ಟಿದ್ದು ಕಳೆದ ಸುಮಾರು ಎರಡು–ಮೂರು ಶತಮಾನಗಳಿಂದೀಚೆಗೆ. ನಾಟಕದ ಪುನರುತ್ಥಾನವಾದದ್ದು ಭಾರತದ ವಿವಿಧ ಭಾಷೆಗಳಲ್ಲಿಯೇ –ಸಂಸ್ಕೃತದಲ್ಲಲ್ಲ.

ಈ ಪುನರುತ್ಥಾನದ ಬಗೆಗೆ ತಿಳಿಯುವ ಮೊದಲು ಭಾರತದ ಹಳ್ಳಿ–ಗ್ರಾಮಗಳಲ್ಲಿ ಅತ್ಯಂತ ಹಿಂದಿನಿಂದಲೂ ಬೆಳೆದುಬಂದಿದ್ದ ಜಾನಪದ ರಂಗಭೂಮಿಯನ್ನು ಕುರಿತು ವಿವೇಚಿಸುವುದು ಸೂಕ್ತ.

ಜಾನಪದ ರಂಗಭೂಮಿ ಜನರಿಗೆ ತೀರ ಹತ್ತಿರವಾಗಿದ್ದು, ಅವರ ಕಲಾಸಕ್ತಿಗಳನ್ನು ಎಲ್ಲ ವಿಧಗಳಲ್ಲೂ ಪೂರೈಸುವ ಮಾಧ್ಯಮವಾಗಿತ್ತು. ಈ ಕಾರಣದಿಂದಲೇ ಅದು ಸಾಮಾನ್ಯವಾಗಿ ನೃತ್ಯ, ಅಭಿನಯ, ಕಥೆ, ಸಂಗೀತ ಎಲ್ಲವನ್ನೂ ಒಳಗೊಂಡಿರುತ್ತಿತ್ತು. ಇವುಗಳ ಉಗಮ ಇತರ ರಂಗಭೂಮಿಯ ಪ್ರಕಾರಗಳಿಗಿಂತ ಹಿಂದಿನದು ಎನ್ನಬಹುದು.

ಸಾಮಾನ್ಯವಾಗಿ, 'ರಾಮಾಯಣ', 'ಮಹಾಭಾರತ' ಅಥವಾ ಪುರಾಣಗಳ ಕಥೆಗಳನ್ನು ಇವು ಒಳಗೊಂಡಿದ್ದರೂ ಕಥೆ ಒಂದು ನೆಪ ಮಾತ್ರ. ಯಕ್ಷಗಾನ, ಬಯಲಾಟ, ಭಾಗವತರಾಟ, ಕಥಕ್ಕಳಿ, ಯಾತ್ರಾ (ಜಾತ್ರಾ) ಮೊದಲಾದ ನೃತ್ಯ–ಕಥನ ಪ್ರಕಾರಗಳು ಬೆಳೆದುಬಂದದ್ದು ಹೀಗೆಯೇ. ಭಕ್ತಿಪಂಥದ ಪ್ರಭಾವದಿಂದಾಗಿ ಕಥಾ ಕಾಲಕ್ಷೇಪಗಳು ಹುಟ್ಟಿಕೊಂಡುವು. ಇಂದಿಗೂ ಈ ಪ್ರಕಾರಗಳು ಭಾರತೀಯ ನೃತ್ಯ–ರಂಗಭೂಮಿಗಳಲ್ಲಿ ಪ್ರಮುಖ ಸ್ಥಾನವನ್ನಾವರಿಸಿವೆ. ನೃತ್ಯ–ನಾಟಕಗಳ ಬಗೆಗೆ ಈ ಶತಮಾನದಲ್ಲಿ ನೂತನ ಪ್ರಯೋಗಗಳನ್ನು ನಡೆಸಿದವರು ಉದಯಶಂಕರ್. ಪಾಶ್ಚಾತ್ಯ ದೇಶಗಳಲ್ಲಿದ್ದು ಅಲ್ಲಿನ ರಂಗತಂತ್ರ, ರಂಗವ್ಯವಸ್ಥೆಗಳನ್ನು ಅಭ್ಯಸಿಸಿದ ಇವರು ಹೊಸ ಯಶಸ್ವೀ ಪ್ರಯೋಗಗಳನ್ನು ನಡೆಸಿದರು.

ಸಂಸ್ಕೃತ ನಾಟಕ ಇಳಿಮುಖವಾದ ಅನಂತರ ಜಾನಪದ ರಂಗಭೂಮಿ ಅತ್ಯಂತ ಪ್ರಮುಖ ಮಾಧ್ಯಮವಾಗಿ ಬೆಳೆದಿತ್ತು. 18ನೆಯ ಶತಮಾನದ ವರೆಗೂ ಇದು ಪ್ರಭಾವಶಾಲೀ ರಂಗಭೂಮಿಯಾಗಿ ಉಳಿಯಿತು.

ಪ್ರಾದೇಶಿಕ ಭಾಷೆಗಳಲ್ಲಿ ನಾಟಕ ರಚನೆ ಪ್ರಾರಂಭವಾದದ್ದು 18ನೆಯ ಶತಮಾನದ ಆದಿಯಿಂದ. ಇದಕ್ಕೆ ಮುಂಚಿನ ಮೊಟ್ಟಮೊದಲ ಕನ್ನಡ ನಾಟಕವೆಂದರೆ 'ಮಿತ್ರವಿಂದಾ–ಗೋವಿಂದ' ಎಂಬುದು. ಇದರ ಕರ್ತೃ ಸಿಂಗರಾರ್ಯ. ಇದು 'ರತ್ನಾವಳಿ' ಸಂಸ್ಕೃತ ನಾಟಕದ ಕನ್ನಡ ರೂಪಾಂತರ. ಈ ನಾಟಕ ರಚನೆಗೆ ಮುಂಚೆ 1630ರಲ್ಲಿ ಪಂಜಾಬಿ ಭಾಷೆಯಲ್ಲೂ ಒಂದು ಅನುವಾದ ಬಂದಿತ್ತು. ಇದಾದ ಅನಂತರ ಬೇರೆಬೇರೆ ಪ್ರದೇಶಗಳ ರಾಜರ ಆಶ್ರಯದಲ್ಲಿ, ಪುರಾಣ ಕಥೆಗಳನ್ನಾಧರಿಸಿದ ನಾಟಕಗಳನ್ನು ಆಡುವ ಪದ್ಧತಿ ಬಹುಕಾಲ ಇತ್ತು.

ಇಂಗ್ಲಿಷರ ಪ್ರಭಾವದಿಂದಾಗಿ ಬಂಗಾಳ, ಮಹಾರಾಷ್ಟ್ರಗಳಲ್ಲಿ ಆಧುನಿಕ ರೀತಿಯ ನಾಟಕಗಳು ಕಾಣಿಸಿಕೊಂಡುವು. 19ನೆಯ ಶತಮಾನದ ಕೊನೆಯ ಭಾಗದಲ್ಲಿ ಹಿಂದಿಯಲ್ಲಿ ನಾಟಕಗಳನ್ನು ರಚಿಸಿದ ಭರತೇಂದು ಹರಿಶ್ಚಂದ್ರ ಆಧುನಿಕ ಭಾರತೀಯ ರಂಗಭೂಮಿಗೆ ಭದ್ರ ತಳಪಾಯ ಹಾಕಿದ.

ಈ ವೇಳೆಗೆ ವೃತ್ತಿನಾಟಕಕಾರರು ನಾಟಕ ಬರೆದರು. ರಂಗಭೂಮಿಗೆಂದೇ ಬರೆದ ನಾಟಕಗಳು ರಚಿತವಾಗಿ ಸಾಹಿತ್ಯ–ರಂಗ ಭೂಮಿಗಳ ಸಂಪರ್ಕ ನಿಕಟವಾಯಿತು.

ಈ ಶತಮಾನದ ಮಧ್ಯಭಾಗದ ಹೊತ್ತಿಗೆ, ನಾಟಕಗಳಲ್ಲಿ ಹಿಂದೆ ಇದ್ದ ಸಂಗೀತ, ನೃತ್ಯ ಇವು ಬಹಳಷ್ಟು ಕಡಮೆಯಾಗತೊಡಗಿದುವು. ಇದಕ್ಕೆ ಮುಖ್ಯ ಕಾರಣ ಸಮಕಾಲೀನ ಸಾಮಾಜಿಕ ಚಿತ್ರಣವನ್ನು ನಿಷ್ಠವಾಗಿ ಕೊಡಬೇಕೆಂಬ ಉದ್ದೇಶ. ಪ್ರೇಕ್ಷಕರ ಮನಸ್ಸನ್ನು ರಂಜಿಸಲೇಬೇಕಾದ ಅಗತ್ಯ ಹವ್ಯಾಸಿ (ವಿಲಾಸಿ) ನಾಟಕಕಾರರಿಗೆ ಇರಲಿಲ್ಲ. ಇದರಿಂದಾಗಿ ಹೊಸ ಪ್ರಯೋಗಗಳು ಬರಲು ಪ್ರಾರಂಭವಾದುವು.



ರವೀಂದ್ರನಾಥ ಠಾಕೂರರ 'ವಿಸರ್ಜನ'

ಪಾಶ್ಚಾತ್ಯರಲ್ಲಿ ಪ್ರಾರಂಭವಾದ 'ರಂಗವಿರೋಧಿ' ಅಂಶಗಳನ್ನೊಳಗೊಂಡ ಅಸಂಗತ ನಾಟಕಗಳ ಪ್ರಭಾವ ಇಂದು ಭಾರತೀಯ ರಂಗಭೂಮಿಯ ಮೇಲೂ ಆಗಿದೆ.

ಧೀಮಂತ ಲೇಖಕ, ನಿರ್ದೇಶಕ, ನಟರಿಂದ ಹೊಸ ಹೊಸ ಪ್ರಯೋಗಗಳು ನಡೆಯುತ್ತಿವೆ: ಸಿನಿಮಾದ ಪ್ರಭಾವ ರಂಗಭೂಮಿಯನ್ನು ವಿರೂಪಗೊಳಿಸದಂತೆ ನೋಡಿಕೊಳ್ಳಲು ಪ್ರಯತ್ನಗಳಾಗುತ್ತಿವೆ. 'ಶ್ರೀರಂಗ', ಬಾದಲ್ ಸರ್ಕಾರ್, ವಿಜಯ ತೆಂಡೂಲ್ಕರ್, ಮೋಹನ್ ರಾಕೇಶ್, ಶಂಭು ಮಿತ್ರ, ಗಿರೀಶ್ ಕಾರ್ನಾಡ್, ಬಿ. ವಿ. ಕಾರಂತ್, ಉತ್ಪಲ್ ದತ್ ಮೊದಲಾದವರು ಆಧುನಿಕ ಭಾರತೀಯ ರಂಗಭೂಮಿಯಲ್ಲಿ ಹೊಸ ಸತ್ವವನ್ನು ಮೂಡಿಸಲು ಪ್ರಯತ್ನಿಸುತ್ತಿದ್ದಾರೆ.

## ಭಾರತೀಯ ಶಿಲ್ಪ, ವಾಸ್ತುಶಿಲ್ಪ

ಬೇಲೂರು, ಹಳೇಬೀಡು, ಕಂಚಿ, ಮಧುರೆ, ಕೊನಾರ್ಕ್, ಖಜುರಾಹೊ ಮುಂತಾದ ಸ್ಥಳಗಳಲ್ಲಿರುವ ದೇವಾಲಯಗಳು ಭಾರತೀಯ ವಾಸ್ತುಶಿಲ್ಪದ ವೈಭವದ ಪ್ರತೀಕಗಳಾಗಿವೆ.

ವೇದಕಾಲದಲ್ಲಿ ವಿಗ್ರಹಗಳ ಅಥವಾ ದೇವಾಲಯಗಳ ನಿರ್ಮಾಣ ಆಯಿತೆಂಬುದಕ್ಕೆ ಆಧಾರಗಳಿಲ್ಲ. ಇತರ ಧಾರ್ಮಿಕ ಪಂಥಗಳು ದೇವಾಲಯಗಳನ್ನು ಕಟ್ಟಿಕೊಂಡಿರಬಹುದು. ಮರವೇ ಇಂಥ ರಚನೆಗಳ ವಾಸ್ತು ಸಾಮಗ್ರಿ. ಕಾಲಕ್ರಮದಲ್ಲಿ ಅವು ನಾಶವಾಗಿರಬಹುದು. ವೇದ ಕಾಲದಲ್ಲಿ ಹೋಮಗಳಿಗಾಗಿ ಯಜ್ಞವೇದಿಕೆಗಳನ್ನು ರಚಿಸುವ ಪದ್ಧತಿಯಿತ್ತು. ಮೊದಮೊದಲು ಈ ವೇದಿಕೆಗಳ ರಚನೆ ಅತ್ಯಂತ ಸರಳವಾಗಿದ್ದರೂ ಕ್ರಮೇಣ ಅವುಗಳ ನಿರ್ಮಾಣ ಜಟಿಲವೂ ಕಲಾಪೂರ್ಣವೂ ಆಯಿತೆಂದು ತೋರುತ್ತದೆ. ತೈತ್ತಿರೀಯ ಸಂಹಿತೆಯಲ್ಲಿ ಹೀಗೆ ಹಲವು ಬಗೆಯ ವೇದಿಕೆಗಳ ಉಲ್ಲೇಖ ದೊರೆಯುತ್ತದೆ. ರಥ, ಗರುಡಪಕ್ಷಿ ಮುಂತಾದ ಆಕಾರಗಳಲ್ಲಿ ವೇದಿಕೆಗಳ ನಿರ್ಮಾಣವಾಗುತ್ತಿತ್ತೆಂದು ತೋರುತ್ತದೆ. ಶುಲ್ವಸೂತ್ರಗಳಲ್ಲಿ ಯಜ್ಞವೇದಿಕೆಗಳ ನಿರ್ಮಾಣಕ್ಕೆ ಸಂಬಂಧಿಸಿದ ಅಳತೆಗಳನ್ನೂ ಕೊಡಲಾಗಿದೆ. ಈ ವಿವರಗಳ ಆಧಾರದ ಮೇಲೆ ಅಂಥ ರಚನೆಗಳ ವಿನ್ಯಾಸವನ್ನು ಚಿತ್ರಿಸಬಹುದಾಗಿದೆ. ಇಂದಿನ ಭಾರತೀಯ ದೇವಾಲಯಗಳಿಗೆ ಪ್ರೇರಕವಾಗಿರಬಹುದಾದ ಪುರಾತನ ರೂಪ 'ಯಜ್ಞ ಮಂಟಪ' ವಿರಬೇಕು. ಇದನ್ನು ಬಿದಿರಿನಿಂದ ರಚಿಸುತ್ತಿದ್ದರು. ಮರದಿಂದ ಕಟ್ಟಿದ ರಚನೆಗಳಿಗಿಂತಲೂ ಇದು ಹಿಂದಿನದು. ಋಗ್ವೇದದಲ್ಲಿ ಮರದ ವಾಸ್ತುಶಿಲ್ಪ ರಚನೆಗಳು ಹೆಸರಿಸಲ್ಪಟ್ಟಿವೆ. ಅಲ್ಲಲ್ಲಿ ಕಲ್ಲಿನ ನಿರ್ಮಾಣಗಳ ಬಗೆಗೂ ಉಲ್ಲೇಖಗಳಿವೆ. ಯಜ್ಞವೇದಿಕೆಗಾಗಿ ಕಟ್ಟುತ್ತಿದ್ದ ಮಣ್ಣಿನ ದಿಬ್ಬಗಳೇ ಮುಂದೆ ಸ್ತೂಪಗಳಿಗೆ ಸ್ಫೂರ್ತಿ ಕೊಟ್ಟಿರಬಹುದೆಂದು ಊಹಿಸಲಾಗಿದೆ.

ಮೊಹೆಂಜೊದಾರೊ ಹಾಗೂ ಹರಪ್ಪಗಳಲ್ಲಿ ನಡೆಸಿದ ಭೂಶೋಧನೆಗಳಿಂದ ಸುಮಾರು 5,000 ವರ್ಷಗಳ ಹಿಂದಿನ ಪ್ರಾಚೀನ ಭಾರತೀಯ ವಾಸ್ತುಶಿಲ್ಪದ ಲಕ್ಷಣಗಳನ್ನು ಕಾಣಬಹುದು. ಅತ್ಯಂತ ಅಚ್ಚುಕಟ್ಟಾದ ನಿರ್ಮಾಣ ಆ ಕಾಲದಲ್ಲಿ ನಡೆದಿತ್ತೆಂಬುದು ಈ ಶೋಧನೆಗಳಿಂದ ಬೆಳಕಿಗೆ ಬಂದಿದೆ. ವಿಶಾಲವಾದ ರಸ್ತೆಗಳು, ಒಂದು ಅಥವಾ ಎರಡಂತಸ್ತಿನ ಮನೆಗಳು, ಆ ಕಾಲಕ್ಕೆ ಇನ್ನೆಲ್ಲೂ ಕಂಡುಬರದ ನಗರನೈರ್ಮಲ್ಯ, ಸಾಧನಾ ವ್ಯವಸ್ಥೆ ಇವನ್ನೆಲ್ಲ ಅಲ್ಲಿ ಕಾಣಬಹುದು. ಅಗಿನ ಒಂದು ಪ್ರಮುಖ ನಿರ್ಮಾಣವೆಂದರೆ ಸ್ನಾನಗೃಹ. ಮೊಹೆಂಜೊದಾರೊ, ಹರಪ್ಪ ಪ್ರದೇಶಗಳಲ್ಲಿ ಮಾತ್ರವಲ್ಲದೆ ಉತ್ತರ ಭಾರತದ ಹಲವಾರು ಸ್ಥಳಗಳಲ್ಲಿ ಈ ಸಂಸ್ಕೃತಿ ಪರಮಿತ್ರೆಯುದಕ್ಕೆ [illegible] ರೂಪುಗೊಂಡ ಅನಂತರದ ಕಾಲದಲ್ಲಿ –ಅಂದರೆ ಸುಮಾರು ಕ್ರಿ. ಪೂ. 4ನೆಯ ಶತಮಾನದವರೆಗೆ ಭಾರತೀಯ ವಾಸ್ತುಶಿಲ್ಪದ ಬಗೆಗೆ ತಿಳಿದು ಬಂದಿರುವುದು ಅತ್ಯಲ್ಪ. ಕ್ರಿ. ಪೂ. 4ನೆಯ ಶತಮಾನದ [illegible] ಅಂದಿನ ವಾಸ್ತುಶಿಲ್ಪದ ಬಗೆಗೆ ಕೆಲವು ಊಹೆಗಳನ್ನು ಮಾಡಬಹುದು. ಬೌದ್ಧ ಸಾಹಿತ್ಯದಲ್ಲಿ ದೊಡ್ಡ ನಗರಗಳು ಮತ್ತು ಸೌಧಗಳ ಬಗೆಗೆ ಉಲ್ಲೇಖಗಳು ದೊರೆಯುತ್ತವೆ. ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿದ್ದ ಗ್ರೀಕ್ ರಾಯಭಾರಿ ಮೆಗಾಸ್ತನೀಸನ ಬರವಣಿಗೆಯಲ್ಲಿ ರಾಜಧಾನಿ ಪಾಟಲೀಪುರದ ವರ್ಣನೆ ದೊರೆಯುತ್ತದೆ. ಪಾಟಲೀಪುರದಲ್ಲಿದ್ದ ದೊಡ್ಡ ಅರಮನೆಯನ್ನು ಮರದಿಂದ ಕಟ್ಟಿದ್ದರು. ಕಾಲಕ್ರಮದಲ್ಲಿ ಅದು ನಾಶವಾಯಿತೆಂದು ತೋರುತ್ತದೆ.

ಅಶೋಕ ಚಕ್ರವರ್ತಿಯ ಕಾಲದಲ್ಲಿ, ಅಂದರೆ ಕ್ರಿ. ಪೂ. 3ನೆಯ ಶತಮಾನದಲ್ಲಿ, ಭಾರತೀಯ ವಾಸ್ತುಶಿಲ್ಪ ಮತ್ತು ಶಿಲ್ಪ ಕಲೆಗಳು ಅಮೂಲ್ಯ ಪ್ರಗತಿಯನ್ನು ಸಾಧಿಸಿದುವು. ಕಟ್ಟಡಗಳಿಗಾಗಿ ಮರದ ಬದಲು ಕಲ್ಲಿನ ಉಪಯೋಗ ಬೆಳೆಯಿತು. ಅಶೋಕನ ಕಾಲದಲ್ಲಿ ನಿರ್ಮಿತವಾದ ಶಿಲಾಸ್ತಂಭಗಳು – ಉದಾಹರಣೆಗೆ ಸಾರನಾಥದ ಸ್ತಂಭ – ಶ್ರೇಷ್ಠಮಟ್ಟದವು. ಗುಹಾಲಯಗಳು, ಅರಮನೆಗಳು ಈ ಕಾಲದಲ್ಲಿ ನಿರ್ಮಿತವಾದುವು. ಈ ಚಟುವಟಿಕೆ ಅಶೋಕನ ಕಾಲದ ಅನಂತರವೂ ಮುಂದುವರಿಯಿತು; ಹೆಚ್ಚು ಹೆಚ್ಚು ಪರಿಷ್ಕಾರಗೊಂಡಿತು. ಪುಣೆಯ ಸಮೀಪದಲ್ಲಿರುವ ಭಾಜ ಪ್ರದೇಶದಲ್ಲಿ ರಚಿತವಾದ ವಿಹಾರ ಗುಹಾಲಯದ ವಾಸ್ತುಶಿಲ್ಪ ವಿಧಾನ, ಶಿಲ್ಪ ವೈಖರಿ ಈ ಪ್ರಗತಿಗೆ ನಿದರ್ಶನ. ಇದು ಕ್ರಿ.ಪೂ. 2ನೆಯ ಶತಮಾನಕ್ಕೆ ಸೇರಿದ್ದು. ಇಂದ್ರನು ಐರಾವತದ ಮೇಲೆ ಸವಾರಿ ಮಾಡುತ್ತಿರುವ ದೃಶ್ಯವೆಂದು ಗುರುತಿಸಿರುವ ಉಬ್ಬು ಶಿಲ್ಪವೊಂದು ಇಲ್ಲಿದೆ. ಇದು ಈ ವರ್ಗದ ಒಂದು ಅಪೂರ್ವ ಕೃತಿ –ಎಂದು ಪರಿಗಣಿಸಲ್ಪಟ್ಟಿದೆ.

ಕಾರ್ಲೆ ಮುಂತಾದ ಸ್ಥಳಗಳಲ್ಲಿರುವ ಗುಹಾ ಚೈತ್ಯಗಳ ಶಿಲ್ಪಕಾರ್ಯ ಅದ್ಭುತವಾದದ್ದು. ಮರಗೆಲಸವನ್ನು ಹೋಲುವಂಥ ಶೈಲಿ, ವಿನ್ಯಾಸಗಳನ್ನು ಅನುಸರಿಸಿ ಗುಹಾಲಯಗಳನ್ನು ಕಲ್ಲಿನಲ್ಲಿ ಕೊರೆದಿರುವುದೂ ಸುಂದರವಾದ ಶಿಲಾಮೂರ್ತಿ, ಚಿತ್ತಾರಗಳಿಂದ ಅಲಂಕರಿಸಿರುವುದೂ ಅಂದಿನ ಕಾಲದ ವಾಸ್ತುಶಿಲ್ಪ ಮತ್ತು ಶಿಲ್ಪ ಕಲಾಪ್ರೌಢಿಮೆಗೆ ಸಾಕ್ಷಿ. ಅಜಂತದ ಕೆಲವು ಗುಹಾಲಯಗಳು ಅವುಗಳಲ್ಲಿರುವ ಶಿಲ್ಪ ವೈಭವಕ್ಕಾಗಿ ಪ್ರಸಿದ್ಧವಾಗಿದೆ. ಇಲ್ಲಿ ಗುಹಾಲಯ ರಚನೆ ಮತ್ತು ಅಲಂಕರಣ ಕ್ರಿ.ಪೂ. 2ನೆಯ ಶತಮಾನದಿಂದ ಕ್ರಿ.ಶ. 8ನೆಯ ಶತಮಾನದವರೆಗೆ ನಡೆಯಿತು.

ಬೌದ್ಧಮತ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಚೈತ್ಯಗಳು ಕಟ್ಟಲ್ಪಟ್ಟುವು. ಬುದ್ಧಪೂರ್ವಕಾಲದಲ್ಲಿಯೇ ಪವಿತ್ರ ವ್ಯಕ್ತಿಗಳ ಅವಶೇಷಗಳ ಮೇಲೆ ಒಂದು ದಿಬ್ಬವನ್ನು ಕಟ್ಟುವ ಪದ್ಧತಿ ಇತ್ತು. ಸ್ತೂಪ ಒಂದು ರೀತಿಯ ಕಟ್ಟಡ. ಅಶೋಕನ ಕಾಲದ ಸಾಂಚಿಯ ಬೃಹತ್ ಸ್ತೂಪ ಹಾಗೂ ಅದರ ಬಳಿಯ ಉಳಿದ ವಾಸ್ತುಶಿಲ್ಪ ರಚನೆಗಳಿಗೆ ಭಾರತದ ವಾಸ್ತುಶಿಲ್ಪದ ಇತಿಹಾಸದಲ್ಲಿ ಮಹತ್ವದ ಸ್ಥಾನವಿದೆ. ಭೋಪಾಲ್ ನಗರದಿಂದ ಸ್ವಲ್ಪ ದೂರದಲ್ಲಿರುವ ಸಾಂಚಿಯ ಸ್ತೂಪ ಇಟ್ಟಿಗೆಯಿಂದ ನಿರ್ಮಿತವಾಗಿದೆ. ಈ ವೇಳೆಗಾಗಲೇ ಭಾರತ ತನ್ನದೇ ಆದ ವಾಸ್ತು ಹಾಗೂ ಶಿಲ್ಪ ಕಲೆಗಳನ್ನು ಸಾಧಿಸಿಕೊಂಡಿತ್ತೆಂಬುದು ನಿರ್ವಿವಾದ.


ಮೈಸೂರಿನ ಬಸವದೇವಾಲಯ : ಶಿಲ್ಪಿ ಸಿದ್ಧಲಿಂಗಸ್ವಾಮಿ ರಚನೆ

ಸ್ತೂಪದ ಮುಖ್ಯ ಅಂಗ ಗುಮ್ಮಟ. ಇದರ ಒಳಭಾಗದಲ್ಲಿ ಕೋಣೆ ಯಂಥ ಪೊಳ್ಳಾದ ಭಾಗವಿರುತ್ತದೆ. ಪವಿತ್ರ ಅವಶೇಷವನ್ನಿಡುವುದಕ್ಕಾಗಿ ಸ್ತೂಪದ ಸುತ್ತ ಜಗತಿ, ಮೇಲಕ್ಕೆ ಹತ್ತಿಹೋಗಲು ಮೆಟ್ಟಲುಗಳು ಇರುತ್ತವೆ. ಗುಮ್ಮಟದ ತುದಿ ಚಪ್ಪಟೆಯಾಗಿದ್ದು ಇದರ ಮೇಲೆ ಛತ್ರಿಯಂತೆ ಎದ್ದು ನಿಲ್ಲುವ 'ಯಷ್ಟಿ', ಗುಮ್ಮಟದ ಸುತ್ತ ನೆಲದ ಮಟ್ಟದಲ್ಲಿ, ಜಗತಿಯ ಮಟ್ಟದಲ್ಲಿ ಹಾಗೂ ಯಷ್ಟಿಯ ಸುತ್ತ ಕಲ್ಲಿನ ಕಟಕಟಿ ಇರುತ್ತದೆ. ಇವುಗಳ ಮೇಲೆ ಆಕರ್ಷಕ ಶಿಲ್ಪಗಳಿವೆ. ಸ್ತೂಪದ ಪ್ರವೇಶ ದ್ವಾರಗಳನ್ನು ತೋರಣಗಳೆನ್ನುತ್ತಾರೆ. ಇವುಗಳ ಸ್ತಂಭ ಮತ್ತು ಮೇಲ್ಭಾಗದ ಅಡ್ಡಪಟ್ಟಿಗಳ ಮೇಲೆ ಅನೇಕ ಕಥಾನಕ ಶಿಲ್ಪಗಳಿರುತ್ತವೆ. ಬುದ್ಧನ ಜೀವನ ಮತ್ತು ಜಾತಕ ಕಥೆಗಳ ನಿರೂಪಣೆಯನ್ನು ಇಲ್ಲಿ ಕಾಣಬಹುದು.

ಅಶೋಕನ ಕಾಲದ ಹೊತ್ತಿಗೆ ಪ್ರಾಚೀನ ರೋಮ್‌ನ ಶಿಲ್ಪ ಶೈಲಿ ಭಾರತ ಶಿಲ್ಪಕಾರ್ಯದ ಮೇಲೆ ತನ್ನ ಪ್ರಭಾವವನ್ನು ಬೀರಿತು. ಇದನ್ನು ಗಾಂಧಾರ ಶೈಲಿ ಎನ್ನುತ್ತಾರೆ. ಈ ಶಿಲ್ಪ ತುಂಬ ಅಂದವಾದದ್ದು. ಈ ಶೈಲಿಯಲ್ಲಿ ರಚಿತವಾದ ಬುದ್ಧನ ವಿಗ್ರಹಗಳು ಇದಕ್ಕೆ ನಿದರ್ಶನ.


ತಾಳಗಾತಿ : ಕೊನಾರ್ಕ್ ಶಿಲ್ಪ

ದಕ್ಷಿಣ ಭಾರತದ ಅಮರಾವತಿಯಲ್ಲಿರುವ ಸ್ತೂಪ ಗಮನಾರ್ಹವಾದದ್ದು. ಈ ಸ್ತೂಪ ಅತ್ಯುತ್ತಮ ಶಿಲ್ಪದಿಂದ ಕೂಡಿದೆ. ಈ ಶೈಲಿಯನ್ನನುಸರಿಸಿದ ಶಿಲ್ಪ ಶೈಲಿಗೆ 'ಅಮರಾವತಿ ಶೈಲಿ' ಎಂಬ ಹೆಸರು. ಗುಪ್ತರ ಕಾಲದ ವೇಳೆಗೆ (320–650) ಭಾರತೀಯ ವಾಸ್ತುಶಿಲ್ಪ ಹಾಗೂ ಶಿಲ್ಪಕಲೆಗಳು ಉನ್ನತ ಮಟ್ಟವನ್ನು ಮುಟ್ಟಿದ್ದುವು. ಮನೋಜ್ಞವಾದ ಸಾರನಾಥದ ಸ್ತೂಪ, ಅಜಂತದ ಕೆಲವು ಗುಹಾಶಿಲ್ಪಗಳು ಇದಕ್ಕೆ ದೃಷ್ಟಾಂತ. ಗುಪ್ತರ ಕಾಲದ ಅರಮನೆ ಈಗ ಉಳಿದಿಲ್ಲ. ಅಲಂಕೃತ ಮುಂಭಾಗ ಹಾಗೂ ಒಳಗಿನ ಕಂಬಗಳು, ಪ್ರಶಸ್ತ ಕಂಬಗಳಿಂದ ಕೂಡಿದ ಸಭಾಂಗಣಗಳು, ವರ್ಣ ಚಿತ್ರಗಳಿಂದ ತುಂಬಿದ ಛಾವಣಿ, ಚಿತ್ರ ಶಾಲೆ ಮತ್ತು ಸಂಗೀತ ಭವನಗಳು ಈ ಅರಮನೆಗಳಲ್ಲಿದ್ದುವೆಂದು ಭಾವಿಸಲಾಗಿದೆ. ಗುಪ್ತರ ಅನಂತರ ಭಾರತೀಯ ವಾಸ್ತುಶಿಲ್ಪ ಮೂರು ಸುಸ್ಪಷ್ಟ ಶೈಲಿಗಳಲ್ಲಿ ಮುಂದುವರಿಯಿತು. ಇವನ್ನು ನಾಗರ, ವೇಸರ ಮತ್ತು ದ್ರಾವಿಡ ಎಂದು ಕರೆಯುತ್ತಾರೆ.

ನಾಗರ ಶೈಲಿಯ ದೇವಾಲಯಗಳ ಶಿಖರ ಹಲವು ಅಂತಸ್ತುಗಳಿಂದ ಕೂಡಿರುತ್ತದೆ. ದೂರದಿಂದ ನೋಡಿದಾಗ ಶಿಖರ ಮಧ್ಯಭಾಗದಲ್ಲಿ ಸ್ವಲ್ಪ ಉಬ್ಬಿದ ಉದ್ದರೇಖೆಗಳು ಪ್ರಧಾನವಾಗಿ ತೋರುತ್ತವೆ. ಈ ಶೈಲಿಯ ದೇವಾಲಯಗಳನ್ನು ಉತ್ತರ ಭಾರತದಲ್ಲಿ ಕಾಣಬಹುದು. ಭುವನೇಶ್ವರದ ಪರಶುರಾಮೇಶ್ವರ, ಲಿಂಗರಾಜ ದೇವಾಲಯಗಳೂ ಕೊನಾರ್ಕದ ಸೂರ್ಯ ದೇವಾಲಯವೂ ಪುರಿಯ ಜಗನ್ನಾಥ ದೇವಾಲಯವೂ ಈ ವರ್ಗಕ್ಕೆ ಸೇರಿದುವು. ಈ ದೇವಾಲಯಗಳಲ್ಲಿ ಉತ್ತಮ ಶಿಲ್ಪಕೃತಿಗಳನ್ನು ಕಾಣಬಹುದು.


ಅಬುಬೆಟ್ಟದ ದಿಲ್‌ವಾಡಾ ಮಂದಿರ

ದ್ರಾವಿಡ ಶೈಲಿಯ ದೇವಾಲಯಗಳ ಶಿಖರಗಳು ನಾಗರ ಶೈಲಿಯಿಂದ ಭಿನ್ನವಾದುವು. ಇವುಗಳಲ್ಲಿ ಅಡ್ಡಗೆರೆಗೆ ಪ್ರಾಧಾನ್ಯವಿದೆ. ಗೋಪುರದ ಆಕಾರ ಪಿರಮಿಡ್ ರೀತಿಯದು. ಅಡ್ಡಡ್ಡವಾದ ಹಲವಾರು ಪಂಕ್ತಿಗಳಿಂದ ಕೂಡಿರುತ್ತದೆ. ಈ ಶೈಲಿಯ ಉತ್ತಮ ನಿದರ್ಶನಗಳನ್ನು ತಮಿಳು ನಾಡಿನ ಅನೇಕ ಕಡೆಗಳಲ್ಲಿ ಕಾಣಬಹುದು.



ಬಾದಾಮಿಯ ವಿಷ್ಣು



ಬಾಲಿಕೆ : ಭುವನೇಶ್ವರದ ಅಲಂಕರಣ ಶಿಲ್ಪ

ವೇಸರ ಶೈಲಿಯ ದೇವಾಲಯಗಳು ಗುಜರಾತ, ಮೈಸೂರು ರಾಜ್ಯಗಳಲ್ಲಿ ಕಂಡುಬರುತ್ತವೆ. ದ್ರಾವಿಡ ಮತ್ತು ನಾಗರ ವಾಸ್ತುಶಿಲ್ಪ ಶೈಲಿಗಳ ಸಮಾಗಮವನ್ನು ಇದರಲ್ಲಿ ಕಾಣಬಹುದು. ಚಾಲುಕ್ಯರ ವಾಸ್ತುಶಿಲ್ಪಗಳಲ್ಲಿ ಈ ಪ್ರಭಾವ ಮೂಡಿದೆ. ಪಟ್ಟದಕಲ್ಲು, ಅಬು ಮುಂತಾದೆಡೆಗಳಲ್ಲಿ ಈ ಸಂಪ್ರದಾಯಕ್ಕೆ ಸೇರಿದ ಹಲವು ದೇವಾಲಯಗಳಿವೆ.

ಈ ಮೂರು ಶೈಲಿಯ ದೇವಾಲಯಗಳಲ್ಲೂ ಉತ್ತಮ ಶಿಲ್ಪಗಳಿವೆ. ವಾಸ್ತುಶಿಲ್ಪದ ದೃಷ್ಟಿಯಿಂದ ಈ ಮೂರು ಶೈಲಿಗಳಲ್ಲೂ ಬದಲಾವಣೆಗಳಾಗುತ್ತ ಬಂದಿವೆ. ಮೊದಮೊದಲು ಸರಳವಾಗಿದ್ದ ರಚನೆಗಳು



ಶಿವ-ಪಾರ್ವತಿ :
ಶಿಲ್ಪ ರಚನೆ

ಕ್ರಮೇಣ ಜಟಿಲವಾದುವು; ಆಕಾರದಲ್ಲಿ ದೊಡ್ಡವಾದುವು. ಕೆತ್ತನೆ ಕೆಲಸ ಹೇರಳವಾಯಿತು. ದ್ರಾವಿಡ ಶೈಲಿಯ ದೇವಾಲಯಗಳಲ್ಲಿ ಚೋಳರ ಕಾಲದಲ್ಲಿ ಗರ್ಭಗುಡಿಯ ಮೇಲಿನ ಶಿಖರದ ಎತ್ತರ ಹೆಚ್ಚಿತು. ಅನಂತರ ಪಾಂಡ್ಯರ ಕಾಲದಲ್ಲಿ ಬೃಹತ್ ಪ್ರಮಾಣದ ಮಹಾದ್ವಾರಗಳು ಸೇರಿದುವು.



ದಂತದಲ್ಲಿ ರಾಧೆ–ಕೃಷ್ಣ —ವೆಂಕಪ್ಪನವರ ರಚನೆ

ಚಾಲುಕ್ಯರ ಕಾಲದಲ್ಲಿ ಬಾದಾಮಿ ಗುಡ್ಡಗಳಲ್ಲಿ ಗುಹಾಲಯಗಳು ನಿರ್ಮಿತವಾದುವು. ಇವುಗಳಲ್ಲಿ ಮೂರು ವೈಷ್ಣವಾಲಯಗಳು, ಒಂದು ಶೈವ, ಇನ್ನೊಂದು ಜೈನ.

ಹೊಯ್ಸಳ ಶೈಲಿ ಚಾಲುಕ್ಯರ ಶೈಲಿಯ ಮುಂದುವರಿಕೆಯೇ ಆಗಿದೆ. ಈ ಶೈಲಿಯ ದೇವಾಲಯಗಳ ವೈಶಿಷ್ಟ್ಯ–ನಕ್ಷತ್ರಾಕಾರದ ತಳಹದಿ, ವಿಪರೀತವೆನಿಸುವಷ್ಟು ಅಲಂಕರಣ.

ಎಲ್ಲೋರದ ಗುಡ್ಡದ ಒಂದೇ ಮುಖದಲ್ಲಿ ಅನೇಕ ಗುಹೆಗಳಿವೆ. ಇವುಗಳಲ್ಲಿ ಬೌದ್ಧ ಸಂಪ್ರದಾಯಕ್ಕೆ ಸೇರಿದ ಹದಿನೈದು ಚೈತ್ಯಗಳೂ ವಿಹಾರಗಳೂ ಇವೆ. 4ನೆಯ ಶತಮಾನದ ಮಧ್ಯ ಭಾಗದಿಂದ ಏಳೆಂಟನೆಯ ಶತಮಾನಗಳ ಕಾಲದಲ್ಲಿ ಇವು ನಿರ್ಮಿತವಾದುವು. ಇವುಗಳಲ್ಲಿ ಕಂಡುಬರುವ ವಾಸ್ತುಶಿಲ್ಪ ವಿನ್ಯಾಸ, ಶಿಲ್ಪ ಚಾತುರ್ಯಗಳು ಅದ್ಭುತವಾದುವು.

ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಗವಿಗಳಲ್ಲದೆ, ಹಿಂದೂ ಮತ್ತು ಜೈನ ಧರ್ಮಗಳಿಗೆ ಸಂಬಂಧಿಸಿದ ಗುಹಾಲಯಗಳೂ ಎಲ್ಲೋರದಲ್ಲಿವೆ. ಇವು 6ನೆಯ ಶತಮಾನದ ಮಧ್ಯ ಭಾಗದಿಂದ ಎಂಟನೆಯ ಶತಮಾನದ ಮಧ್ಯ ಭಾಗದವರೆಗಿನ ಅವಧಿಯಲ್ಲಿ ರಚಿತವಾದುವು.



ಜಯಪುರ ರಾಣಾ ಪ್ರತಾಪ ಸಾಗರ ಅಣೆಕಟ್ಟೆಯಲ್ಲಿ 'ಶ್ರಮಜೀವಿ ಸ್ಮಾರಕ' —ಎ. ಕೆ. ಚೆಟ್ಟಿ ಕೃತಿ

ಎಲ್ಲೋರದ ಕೈಲಾಸ ದೇವಾಲಯ ಒಂದು ದೊಡ್ಡ ಬಂಡೆಯಲ್ಲಿ ಕೊರೆದದ್ದು. ಇಂಥ ದೇವಾಲಯ ಜಗತ್ತಿನಲ್ಲೆಲ್ಲೂ ಕಂಡುಬರುವುದಿಲ್ಲ.



'ಶ್ರಮಜೀವಿ ಸ್ಮಾರಕ' ಶಿಲ್ಪದ ಒಂದು ಆಕೃತಿಯ ವಿವರ



'ಶ್ರಮಜೀವಿ ಸ್ಮಾರಕ'ದ ಶಿಲ್ಪಿ ಎ. ಕೆ. ಚೆಟ್ಟಿ



ಶಿಲ್ಪಿ ಎಸ್. ವಿ. ಚಿನ್ನಾಚಾರ್



ಶಿಲ್ಪಿ ಸಿದ್ಧಲಿಂಗಸ್ವಾಮಿ

ಇದರಲ್ಲಿ ದ್ರಾವಿಡ ಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಈ ಮಹಾಕೃತಿ ನಿರ್ಮಿತವಾದುದ್ದು ೮ನೆಯ ಶತಮಾನದ ಪ್ರಥಮಾರ್ಧದಲ್ಲಿ.

ಭಾರತದಲ್ಲಿ ಮೊಗಲರ ಆಳ್ವಿಕೆ ದೃಢವಾದ ಮೇಲೆ, ಸಿರಿಯಾ ಈಜಿಪ್ಟ್ ಪರ್ಷಿಯ ಮುಂತಾದ ದೇಶಗಳ ಮಹಮ್ಮದೀಯ ಶೈಲಿ ಹಾಗೂ ಭಾರತೀಯ ಶೈಲಿಯ ಪರಸ್ಪರ ಪ್ರಭಾವದಿಂದ ಒಂದು ಹೊಸ ರೀತಿಯ ವಾಸ್ತುಶಿಲ್ಪ ವಿಧಾನ ಭಾರತದಲ್ಲಿ ಆರಂಭವಾಯಿತು. 12ನೆಯ ಶತಮಾನದ ಆರಂಭಕಾಲದಲ್ಲಿ ರಚಿತವಾದ ದೆಹಲಿಯ ಜುಮ್ಮಾ ಮಸೀದಿಯಲ್ಲಿ ಈ ಪ್ರಭಾವ ಸಂಗಮವನ್ನು ಕಾಣಬಹುದು. ದೆಹಲಿಯ ಸಮೀಪದಲ್ಲಿರುವ ಕುತುಬ್‌ಮಿನಾರ್, ಆಗ್ರಾದಲ್ಲಿರುವ ತಾಜ್‌ಮಹಲ್ ಮುಂತಾದುವು ಮಹಮ್ಮದೀಯ ವಾಸ್ತುಶಿಲ್ಪಕ್ಕೆ ಉತ್ತಮ ಉದಾಹರಣೆಗಳು. ಚಕ್ರವರ್ತಿಗಳು ಮತ್ತು ಸುಲ್ತಾನರ ಕಾಲದಲ್ಲಿ ಕಟ್ಟಿದ್ದ ಅನೇಕ ಮಸೀದಿಗಳೂ ಕಲಾಪೂರ್ಣ ಕೃತಿಗಳಾಗಿವೆ. ಮೊಗಲರ ಸಾಮ್ರಾಜ್ಯ ವಿಸ್ತರಿಸಿದಂತೆ ಅವರಿಗೆ ಸೇರಿದ ಇತರ ಪ್ರದೇಶಗಳಲ್ಲೂ ಈ ಕಲೆಯ ಪ್ರಭಾವ ಬಿದ್ದಿತು. ದಕ್ಷಿಣ ಭಾರತದಲ್ಲಿ ಉತ್ತಮ ಮಹಮ್ಮದೀಯ ವಾಸ್ತುಶಿಲ್ಪಕ್ಕೆ ಬಿಜಾಪುರದ ಗೋಳಗುಮ್ಮಟ ಒಂದು ನಿದರ್ಶನ. ದೇವಾಲಯ, ಮಸೀದಿಗಳಂತೆ ಕ್ರೈಸ್ತ ಆರಾಧನಾ ಮಂದಿರಗಳೂ ಭಾರತದಲ್ಲಿ ನಿರ್ಮಿತವಾಗಿವೆ. ಅವು ಗಣನೀಯ ವಾಸ್ತುಶಿಲ್ಪ ಸೃಷ್ಟಿಗಳು. ಐರೋಪ್ಯ ಶೈಲಿಯ ಭವ್ಯ ಚರ್ಚುಗಳನ್ನು ಪೋರ್ಚುಗೀಸರು ಭಾರತದಲ್ಲಿ ಕಟ್ಟಿದರು. ಗೋವಾದಲ್ಲಿರುವ ಹೆಸರಾಂತ ಸಂತ ಜೇವಿಯರ್ ಚರ್ಚು ಇದಕ್ಕೆ ಒಂದು ಉತ್ತಮ ಉದಾಹರಣೆ. ಮೊಗಲರ ಆಳ್ವಿಕೆಯ ಪತನದ ಅನಂತರ ವಾಸ್ತುಶಿಲ್ಪ ಕಲೆ ಬೇರೆ ಬೇರೆ ಸಂಸ್ಥಾನಾಧೀಶರಿಂದ ಪೋಷಿಸಲ್ಪಟ್ಟಿತು. ರಜಪೂತರ ಆಳ್ವಿಕೆಯಲ್ಲಿ ಸುಂದರ ಅರಮನೆಗಳು ಕಟ್ಟಲ್ಪಟ್ಟುವು. ಇಂಗ್ಲೆಂಡಿನಲ್ಲಿ ರೂಢಿಯಲ್ಲಿದ್ದ ಗಾತಿಕ್ ಶೈಲಿಯ ಕಟ್ಟಡಗಳು ಭಾರತದಲ್ಲಿ ನಿರ್ಮಿತವಾದುವು.



ಶಿಲ್ಪಿ ರೆಂಜಾಳ ಗೋಪಾಲ ಶೆಣೈ

ಅರವಿಂದರು —ಚೆಟ್ಟಿ ರಚನೆ



ಧರ್ಮಸ್ಥಳ ಗೊಮ್ಮಟೇಶ್ವರ —ನಿರ್ಮಾಣ ಹಂತದಲ್ಲಿ



ಗಳನ್ನು ಭಾರತೀಯ ಶಿಲ್ಪಿಗಳು ಅನುಸರಿಸಿದ್ದಾರೆ. ಇದರಿಂದಾಗಿ ಭಾರತೀಯ ಶಿಲ್ಪಿ ತಾನು ಕಡೆಯುವ ಪ್ರತಿಮೆಯಲ್ಲಿ ಮಾನವಾಕಾರದ ಪರಿಪೂರ್ಣತೆಯನ್ನು ಸಾಧಿಸುವ ಗೋಜಿಗೆ ಹೋಗದೆ ಇದ್ದರೂ ಸುಂದರವಾದ ಪ್ರಭಾವಪೂರ್ಣವಾದ ವಿಗ್ರಹಗಳನ್ನು ನಿರ್ಮಿಸುವುದು ಸಾಧ್ಯವಾಗಿದೆ. ಲಲಿತವಾದ, ಹಿತವಾದ, ನೋಟಕ್ಕೆ ಥಕ್ಕೆ ತಾರದ ರೇಖೆಗಳು ಭಾರತೀಯ ಶಿಲ್ಪಕೃತಿಗಳ ವೈಶಿಷ್ಟ್ಯ.

ಗಿಡ ಮರ ಬಳ್ಳಿಗಳ, ಪ್ರಾಣಿಗಳ ಶಿಲ್ಪವೂ ಒಂದೇ. ಧ್ಯಾನ. ಚಿಂತನೆಗಳಿಂದ ಗೋಚರವಾದ 'ದರ್ಶನ'ದ ಪ್ರಭಾವವನ್ನು ತನ್ನ ಕೃತಿಯಲ್ಲಿ ಮೂಡಿಸುವುದು ಭಾರತೀಯ ಶಿಲ್ಪಿಯ ಆದರ್ಶ. ರೂಪ ಸೌಂದರ್ಯದಲ್ಲಿ ಅವನಿಗೆ ಆಸಕ್ತಿ ಇದೆಯಾದರೂ ತನ್ನ ಕೃತಿಯಲ್ಲಿ ಭಾವ ಸೌಂದರ್ಯಕ್ಕೇ ಅತಿ ಮಹತ್ವ ನೀಡಿದ್ದಾನೆ.



ಡೊಳ್ಳು ಬಾರಿಸುವವರು : ರೆಂಜಾಳರ ಕೃತಿ –ರಚನೆಯ ಹಂತದಲ್ಲಿ

ಇತ್ತೀಚೆಗೆ ಭಾರತದಲ್ಲಿ ಆಧುನಿಕ ಶೈಲಿಯ ಕಟ್ಟಡಗಳೂ ನಿರ್ಮಾಣವಾಗುತ್ತಿವೆ. ಇವುಗಳ ರಚನೆಯಲ್ಲಿ ಪ್ರಬಲ ಪಾಶ್ಚಾತ್ಯ ಪ್ರಭಾವವನ್ನು ಕಾಣಬಹುದು.

ಹಿಂದಿನ ಭಾರತೀಯ ವಾಸ್ತುಶಿಲ್ಪಗಳ ಉದಾಹರಣೆಯಾಗಿ ಈಗ ಉಳಿದಿರುವುವು ಪ್ರಧಾನವಾಗಿ ದೇವಾಲಯಗಳೇ. ದೇವಾಲಯಗಳಲ್ಲದೆ ಅರಮನೆಗಳ, ನಗರಗಳ, ಕೋಟೆಗಳ ನಿರ್ಮಾಣದಲ್ಲಿ ಭಾರತೀಯರು ಉತ್ತಮ ಸಾಧನೆಗಳನ್ನು ಕೈಗೊಂಡಿದ್ದರೆಂಬುದಕ್ಕೆ ಅನೇಕ ಆಧಾರಗಳಿವೆ.

ಭಾರತೀಯ ಶಿಲ್ಪವನ್ನು ಮೊಹೆಂಜೊದಾರೊ, ಹರಪ್ಪ ಸಂಸ್ಕೃತಿಯ ಕಾಲದಿಂದ ಗುರುತಿಸಬಹುದು. ಮಣ್ಣು, ಕಲ್ಲು, ಲೋಹಗಳಿಂದ ಮಾನವ ಮತ್ತು ಪ್ರಾಣಿಗಳ ಮುದ್ರಿಕೆಗಳನ್ನೂ ಮಣಿ ಮುಂತಾದುವನ್ನೂ ಆಗ ರಚಿಸಿರುವುದು ಕಂಡುಬರುತ್ತದೆ. ಅಲ್ಲಿಂದೀಚೆಗೆ, ಬುದ್ಧಕ್ಕೂ ಭಾರತೀಯ ಶಿಲ್ಪಕಲೆ ಅಭಿವೃದ್ಧಿ ಹೊಂದಿದ್ದನ್ನೂ ದೇವಾಲಯ ರಚನೆಯಲ್ಲಿ ಶಿಲ್ಪಕೃತಿಗಳಿಗೆ ಪ್ರಾಧಾನ್ಯ ದೊರೆತದ್ದನ್ನೂ ಕಾಣುತ್ತೇವೆ. ದೇವದೇವತೆಗಳ ವಿಗ್ರಹಗಳು, ಪುರಾಣಾದಿಗಳಿಂದ ಆರಿಸಿದ ಸನ್ನಿವೇಶಗಳ ಚಿತ್ರಣ, ನಾನಾ ವಿಧದ ನಾಟ್ಯಭಂಗಿಯಲ್ಲಿರುವ ಸುಂದರ ಸ್ತ್ರೀಯರು, ಪ್ರಾಣಿಗಳು ಮುಂತಾದುವೆಲ್ಲವೂ ಶಿಲ್ಪದ ವಸ್ತುಗಳಾಗಿವೆ. ಕಲ್ಲಿನಿಂದ ಮಾತ್ರವಲ್ಲದೆ ಲೋಹದಲ್ಲೂ ಸುಂದರ ದೇವತಾ ವಿಗ್ರಹಗಳು ಮತ್ತಿತರ ಕಲಾಕೃತಿಗಳು ರೂಪಿಸಲ್ಪಟ್ಟಿವೆ. ನಟರಾಜ ಮೂರ್ತಿ ರಚನೆ ಭಾರತ ಶಿಲ್ಪಿಗಳ ಒಂದು ವಿಶಿಷ್ಟ ಸಾಧನೆ. ಈ ಶಿಲ್ಪ ಇಂದು ಜಗತ್ತಿನ ಎಲ್ಲ ಭಾಗಗಳ ಕಲಾವಿದರ, ರಸಿಕರ ಮೆಚ್ಚುಗೆಗೆ ಪಾತ್ರವಾಗಿದೆ.

ದೇವತಾ ಮೂರ್ತಿಗಳ ರಚನೆಯ ಬಗೆಗೆ ಭಾರತೀಯ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಕೆಲವು ನಿಯಮಗಳಿವೆ. ಪ್ರತಿಮೆಗಳನ್ನು ಚಿನ್ನ, ಬೆಳ್ಳಿ, ತಾಮ್ರ, ಕಲ್ಲು, ಮರ, ಮರಳು, ಗಾಜು ಮತ್ತು ಮಣ್ಣಿನಿಂದ ರಚಿಸಬಹುದೆಂಬ ಸೂಚನೆ ಇದೆ. ಮೂರ್ತಿಯ ವಿವಿಧ ಅಂಗಗಳು ಯಾವ ಯಾವ ಪ್ರಮಾಣದಲ್ಲಿರಬೇಕೆಂಬ ಬಗೆಗೆ ಸಮರ್ಪಕವಾದ ವಿವರಣೆಗಳು ಶಿಲ್ಪಗ್ರಂಥಗಳಲ್ಲಿ ದೊರೆಯುತ್ತವೆ. ವಿವಿಧ ಭಂಗಿಗಳಿಗೆ, ಚಲನೆಯನ್ನು ಸೂಚಿಸುವ ವಿವಿಧ ಸ್ಥಿತಿಗಳಿಗೆ ತಕ್ಕಂತೆ ಈ ಪ್ರಮಾಣ ಬದಲಾಗುತ್ತದೆ. ಈ ಎಲ್ಲ ನಿಯಮ

## ಭಾರತೀಯ ಸಂಗೀತ

ಎಲ್ಲ ರಾಷ್ಟ್ರಗಳ ಸಂಗೀತದಂತೆ ಭಾರತದ ಸಂಗೀತಕ್ಕೂ ಜಾನಪದ ಗಾಯನವೇ ಮೂಲ. ದೀರ್ಘ ಇತಿಹಾಸವುಳ್ಳ ಭಾರತದಲ್ಲಿ ಪ್ರಾಚೀನ ಜನತೆಯ ಸಂಗೀತದ ರೂಪ ಹೇಗಿತ್ತೆಂಬುದನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಆದರೆ ಈ ಬಗೆಗೆ ಕೆಲವು ಊಹೆಗಳನ್ನು ಮಾಡಬಹುದು. ಈ ಊಹೆಗಳಿಗೆ ಮುಖ್ಯ ಆಧಾರ, ಆಧುನಿಕ ಪ್ರಭಾವಕ್ಕೆ ಇನ್ನೂ ಒಳಗಾಗದೆ ಇರುವ ಅರಣ್ಯವಾಸಿಗಳ, ಗಿರಿಜನರ ಸಂಗೀತ. ಶಾಸ್ತ್ರೀಯ ಸಂಗೀತದಲ್ಲಿ ಉಪಯೋಗಿಸುವ ಏಳು ಸ್ವರಗಳ ಬದಲು, ಈ ಆದಿವಾಸಿಗಳ ಸಂಗೀತದಲ್ಲಿ ಕೇವಲ ಐದು ಸ್ವರಗಳ ಉಪಯೋಗವನ್ನು ಕಾಣಬಹುದು. ಇವರ ಕೆಲವು ಗಾಯನಗಳು ವೇದಪಠಣದ ಧಾಟಿಗೆ ಅತಿ ಸಮೀಪವಾಗಿವೆ. ಈ ಹಾಡುಗಳನ್ನು ದೂರದಿಂದ ಕೇಳಿದಾಗ, ಎಲ್ಲೋ ವೇದಪಠಣವಾಗುತ್ತಿರುವ ಭಾವನೆ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ.

ಭಾರತೀಯ ಸಂಗೀತದ ಉಗಮ ಸಾಮವೇದದಲ್ಲಿ ಎಂಬ ಪರಂಪರಾಗತ ನಂಬಿಕೆ ಇದೆ. ಸಾಮವೇದ ಗಾನಪ್ರಧಾನವಾದದ್ದು ಎಂಬುದಂತೂ ನಿಜ.

ಭಾರತೀಯ ಸಂಗೀತದ ಬೆಳವಣಿಗೆಯನ್ನು ಕೆಲವು ಅವಧಿಗಳಾಗಿ ವಿಂಗಡಿಸಬಹುದು. ವೇದಗಳ ಕಾಲದಿಂದ ಭರತಮುನಿಯ ಕಾಲದವರೆಗಿನ ಅವಧಿ ; ಅಂದರೆ ಸುಮಾರು ಕ್ರಿ.ಪೂ. 2000ದಿಂದ ಸುಮಾರು ಕ್ರಿ.ಶ.2ನೆಯ ಶತಮಾನದ ವರೆಗಿನ ಕಾಲ. ಭರತ ಮತ್ತು ಅವನ ಅನಂತರದ ಕಾಲ —2ನೆಯ ಶತಮಾನದಿಂದ 13ನೆಯ ಶತಮಾನದವರೆಗಿನದು. ಮೂರನೆಯದು, ಮಹಮ್ಮದೀಯರು ಭಾರತಕ್ಕೆ ಬಂದ ಅನಂತರದ ಕಾಲ —ಅಂದರೆ 11ನೆಯ ಶತಮಾನದಿಂದ 19ನೆಯ ಶತಮಾನದ ವರೆಗಿನ ಅವಧಿ. ನಾಲ್ಕನೆಯದು, 19ನೆಯ 20ನೆಯ ಶತಮಾನದ ಕಾಲ.

ವೇದಕಾಲದ ಸಂಗೀತದ ಛಾಯೆ ನಮಗೆ ತಿಳಿಯುವುದು ಪರಂಪರಾಗತವಾಗಿ ಬಂದಿರುವ ವೇದಪಠಣ ಮತ್ತು ಅದಕ್ಕೆ ಸಮಕಾಲೀನವೆಂದು ಊಹಿಸಬಹುದಾದ, ಕೆಲವು ಅರಣ್ಯ ತಂಡಗಳಲ್ಲಿ ಪ್ರಚಲಿತವಿರುವ ಸಂಗೀತದಿಂದ. ಭರತನಿಗೆ ಹಿಂದಿನ ಅವಧಿಯ ಕೊನೆಯ ಭಾಗದಲ್ಲಿ ಈ ಜಾನಪದ ಸಂಗೀತಕ್ಕೆ ಶಾಸ್ತ್ರದ ರೂಪುಕೊಡುವ ಪ್ರಯತ್ನ ನಡೆದಿದ್ದರೂ ನಡೆದಿರಬಹುದು.

ಹಿಂದೂಸ್ತಾನಿ ಸಂಗೀತದಲ್ಲಿ ಎಲ್ಲ ರಾಗ ಥಾಟ ಪದ್ಧತಿಯಿದ್ದು. ಈ ಭಾತಖಂಡೆಯವರು ಈಗ ಇರುವ ಥಾಟ್‌ಗಳೆಂದು ಅವರು ಆ ಕಾಲದಲ್ಲಿ ಪ್ರಚಾರದಲ್ಲಿ ರಾಗಗಳನ್ನು ಹತ್ತು 'ಥಾಟ್'ಗಳಾಗಿ ವಿಂಗಡಿಸಿದರು. ಇದು ಕರ್ನಾಟಕ ಸಂಗೀತದ ಕೆಲವು ಮೇಳಗಳನ್ನು ಅನುಸರಿಸಿದಂತೆ ಇದೆ.

ಹೆಸರುಗಳು ಬೇರೆಯಾದರೂ ಸ್ವರಗಳ ಬಳಕೆಯಲ್ಲಿ ಒಂದೇ ಎನ್ನಬಹುದಾದ ಕೆಲವು ಸಮಾನ ರಾಗಗಳನ್ನು ಈ ಎರಡೂ ಪದ್ಧತಿಗಳಲ್ಲಿ ಕಾಣಬಹುದು. ಉದಾಹರಣೆಗಾಗಿ ಹಿಂದೂಸ್ತಾನಿಯ ಭೂಪ್. ಕರ್ನಾಟಕ ಸಂಗೀತದ ಮೋಹನ; ಮಾಲಕೌಂಸ್-ಹಿಂದೋಳ; ಕಾಫಿ. ಬಿಹಾಗ್. ಭೈರವ. ಜೋಗಿಯಾ. ಬಿಲಾವಲ್—ಕ್ರಮವಾಗಿ ಖರಹರಪ್ರಿಯ. ಬೇಹಾಗ್, ಮಾಯಾಮಾಳವಗೌಳ, ಸಾವೇರಿ, ಶಂಕರಾಭರಣ ರಾಗಗಳಿಗೆ ಸಮವಾಗಿವೆ.

ಹೀಗೆಯೇ ತಾಳಗಳಲ್ಲಿ ಕೂಡ: ಹಿಂದೂಸ್ತಾನಿಯ ತ್ರಿತಾಲ್–ಕರ್ನಾಟಕದ ಆದಿತಾಳ; ಝಪತಾಳ—ಝಂಪೆತಾಳ; ದಾದರಾ—ರೂಪಕ ತಾಳ ಇವನ್ನು ಹೋಲುತ್ತವೆ.

ಕರ್ನಾಟಕ ಸಂಗೀತದಲ್ಲಿ ಗೀತ. ಸ್ವರಜತಿ. ವರ್ಣ. ಕೃತಿ. ಪದ. ಜಾವಳಿ. ತಿಲ್ಲಾನಗಳಂಥ ರಚನಾಪ್ರಕಾರಗಳಿರುವಂತೆ. ಹಿಂದೂಸ್ತಾನಿ ಸಂಗೀತದಲ್ಲೂ ಧ್ರುಪದ್ ಅಥವಾ ಧ್ರುವಪದ. ಧಮಾರ್, ಖ್ಯಾಲ್, ತುಮರೀ, ಟಪ್ಪಾ, ತರಾನಾ, ಘಜಲ್ ಮುಂತಾದ ಪ್ರಕಾರಗಳಿವೆ. ಗಂಭೀರವೂ ವೀರರಸ ಪ್ರಧಾನವೂ ಆದ ಧ್ರುಪದದ ರಚನೆ 15ನೆಯ ಶತಮಾನದಲ್ಲಿ ಮೊಟ್ಟ ಮೊದಲ ಬಾರಿ ರೂಪುಗೊಂಡಿತು. 16ನೆಯ ಶತಮಾನದಲ್ಲಿ ಅದು ತುಂಬ ಅಭಿವೃದ್ಧಿಗೆ ಬಂದಿತು. ಶೃಂಗಾರರಸಪ್ರಧಾನವಾದ ಖ್ಯಾಲ್ 15–18ನೆಯ ಶತಮಾನದಲ್ಲಿ ಬೆಳೆಯಿತು. ಘಜಲ್‌ನಲ್ಲಿ ಸಾಹಿತ್ಯಭಾವ ಪ್ರಧಾನವಾದದ್ದು ; ಇದು ಲಘು ಸಂಗೀತವರ್ಗಕ್ಕೆ ಸೇರಿದ್ದು.

ಹಿಂದೂಸ್ತಾನಿ ಸಂಗೀತದಲ್ಲಿ 'ಘರಾನಾ'ಗಳಿಗೆ ಪ್ರಾಮುಖ್ಯವಿದೆ. ಹಿಂದೆ ಆಚಾರ್ಯ ಸ್ಥಾನದಲ್ಲಿದ್ದವರು ತಮ್ಮ ಪ್ರತಿಭೆಯಿಂದ ರೂಪಿಸಿದ ಚೈತನ್ಯಪೂರ್ಣ ಗಾಯನಶೈಲಿಯನ್ನು ಅವರ ಮಕ್ಕಳೂ ಶಿಷ್ಯರೂ ಅನುಸರಿಸಿಕೊಂಡು ಬಂದರು. ಇದೇ 'ಘರಾನಾ'. ಅಂದರೆ ಶೈಲಿಯ ಹಾಡುಗಾರಿಕೆ ಪರಂಪರಾಗತವಾದದ್ದು. ಈ ಒಂದೊಂದು ಘರಾನಕ್ಕೂ ಒಬ್ಬ ಪ್ರಸಿದ್ಧ ಸಂಗೀತಗಾರನ ಸಂಬಂಧವಿದೆ. ಉದಾಹರಣೆಗಾಗಿ ಗ್ವಾಲಿಯರ್ ಘರಾನಾ ನತ್ಥನ್ ಪೀರ್ ಬಕ್ಸ್ ಎಂಬಾತನಿಂದಲೂ ಜಯಪುರ್ ಘರಾನಾ ಮನರಂಗ್ ಎಂಬಾತನಿಂದಲೂ ಆರಂಭವಾದುವೆಂದು ಭಾವಿಸಲಾಗಿದೆ.

ಕರ್ನಾಟಕ ಸಂಗೀತರಂಗದಲ್ಲೂ ಶಿಷ್ಯಪರಂಪರೆ ಇದೆ; ಆದರೆ ಅವು ಘರಾನಾ ರೂಪದಲ್ಲಿಲ್ಲ.

ಹಿಂದೂಸ್ತಾನಿ ಸಂಗೀತಕ್ಕಿಂತ ಕರ್ನಾಟಕ ಸಂಗೀತದಲ್ಲಿ ಸಾಹಿತ್ಯಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ.

ಕರ್ನಾಟಕ ಸಂಗೀತ ಕಚೇರಿಗಳಲ್ಲಿ, ತಾಳವಿಲ್ಲದೆಯೇ ರಾಗಮಾಲಿಕೆಯ ರೂಪದಲ್ಲಿ ಶ್ಲೋಕಗಳನ್ನು ಹಾಡುವುದುಂಟು. ಹಿಂದೂಸ್ತಾನಿ ಸಂಗೀತದಲ್ಲಿ ಇಂಥ ಪದ್ಧತಿಯಿಲ್ಲ.

ಹಿಂದೂಸ್ತಾನಿ ಸಂಗೀತಗಾರರು ಕಚೇರಿಗಳಲ್ಲಿ ಹಾಡುವಾಗ ಕೈಯಲ್ಲಿ ತಾಳ ಹಾಕಿ ತೋರಿಸುವುದಿಲ್ಲ. ತಾಳಗತಿಯನ್ನು ತಬಲದವರು ತೋರಿಸುತ್ತಿರುತ್ತಾರೆ. ಆದರೆ ಆಗಿಂದಾಗ್ಗೆ ಕೈಯಲ್ಲಿ ತಾಳ ಹಾಕುವ ಅಭ್ಯಾಸ ಕರ್ನಾಟಕ ಪದ್ಧತಿಯ ಸಂಗೀತದಲ್ಲಿದೆ. ಅಂದಮಾತ್ರಕ್ಕೆ ಹಿಂದೂಸ್ತಾನಿ ಸಂಗೀತಗಾರರು ತಾಳಕ್ಕೆ ಅಷ್ಟಾಗಿ ಲಕ್ಷ್ಯಕೊಡುವುದಿಲ್ಲ ಎಂದಲ್ಲ. ಹಿಂದೂಸ್ತಾನಿ ಪದ್ಧತಿಯಲ್ಲಿ. ಆರಂಭಿಕ ವಿದ್ಯಾರ್ಥಿಗಳು ಕೈಯಿಂದ ತಾಳ ಹಾಕಿಕೊಂಡೇ ಅಭ್ಯಾಸಮಾಡುತ್ತಾರೆ. ತಾಳದ 'ಠೇಕಾ' ವನ್ನು ಮನಸ್ಸಿನಲ್ಲಿ ಚೆನ್ನಾಗಿ ನಾಟಿದ ಮೇಲೆ ಕೈಯಲ್ಲಿ ತಾಳಹಾಕುವುದನ್ನು ಬಿಟ್ಟು, ತಬಲದ ಬೋಲ್‌ಗಳನ್ನು ಅನುಸರಿಸಿ ಹಾಡುತ್ತಾರೆ.

ಹಿಂದೂಸ್ತಾನಿ ಮತ್ತು ಕರ್ನಾಟಕ ಸಂಗೀತ ಕಚೇರಿಗಳಲ್ಲಿ ಕಂಡುಬರುವ ಪ್ರಧಾನ ವ್ಯತ್ಯಾಸವೆಂದರೆ. ಕರ್ನಾಟಕ ಸಂಗೀತ ಕಚೇರಿಯಲ್ಲಿ ಪಕ್ಕವಾದ್ಯ ಬಾರಿಸುವವರಿಗೆ ಸ್ವತಂತ್ರವಾದನಕ್ಕೆ ಅವಕಾಶವಿರುವಂತೆ. ಹಿಂದೂಸ್ತಾನಿ ಸಂಗೀತ ಕಚೇರಿಯಲ್ಲಿ ಸಾಮಾನ್ಯವಾಗಿ ಅವಕಾಶವಿರುವುದಿಲ್ಲ. ಹಾಗೆಯೇ ಸಾರಂಗಿ ಮುಂತಾದ ಪಕ್ಕವಾದ್ಯಗಳ ವಾದನ ಕೂಡ ಮೃದುವಾಗಿಯೇ ಇರುತ್ತದೆ.

ಸುಮಾರು ಅರ್ಧ ಶತಮಾನದ ಹಿಂದೆ ಉತ್ತರಾದಿ, ದಕ್ಷಿಣಾದಿ ಸಂಗೀತಗಳು ತೀರಾ ಭಿನ್ನ ಮಾರ್ಗಾವಲಂಬಿಗಳೆಂಬ ಭಾವವಿತ್ತಾದರೂ ಈಗ ಇಂಥ ಅಭಿಪ್ರಾಯವಿಲ್ಲ. ಇವೆರಡರ ಮೂಲವೂ ಒಂದೇ ಎಂಬುದರ ತಿಳಿವಳಿಕೆ ಗಾಢವಾಗಿದೆ. ಒಂದು ಶೈಲಿಯ ಗುಣಾಂಶವನ್ನು ಅಥವಾ ಸೌಂದರ್ಯವನ್ನು ಇನ್ನೊಂದು ಪದ್ಧತಿಯವರು ಅನುಸರಿಸುವುದು ರೂಢಿಗೆ ಬರುತ್ತಿದೆ. ಅವರು ತಮ್ಮ ಹಾಡುಗಾರಿಕೆಯ ನಡುವೆ, ಸ್ವರಗಳನ್ನು ಹಾಡುವುದೂ ಕರ್ನಾಟಕ ಸಂಗೀತಗಾರರು ಹಿಂದೂಸ್ತಾನಿ ರಾಗಗಳನ್ನು ಹಾಡುವುದೂ ಆರಂಭವಾಗಿದೆ.

ಕರ್ನಾಟಕದ ಲಘು ಸಂಗೀತದಲ್ಲಿ ಹಿಂದಿನಿಂದಲೂ —ಎಂದರೆ ನಮ್ಮ ನಾಟಕಗಳಲ್ಲಿ ಸಂಗೀತದ ಪ್ರಭಾವ ಬಲವಾಗಿದ್ದ ಕಾಲದಿಂದ— ನಾಟಕ ಸಂಗೀತದಲ್ಲಿ ಹಲವಾರು ಹಿಂದೂಸ್ತಾನಿ ರಾಗಗಳಿಗೆ ಪ್ರಾಶಸ್ತ್ಯ ದೊರೆತಿತ್ತು. ಉದಾ : ಮಾಂಡ್, ಕಮಾಚ್, ಕಾಫಿ, ಪೀಲು. ಸಿಂಧುಭೈರವಿ ಹೆಚ್ಚು ಬಳಕೆಯಲ್ಲಿದ್ದುವು. ಇತ್ತೀಚೆಗೆ ಕನ್ನಡ ಭಾಷೆಯ ಚಲಚ್ಚಿತ್ರಗಳಲ್ಲೂ ಹಿಂದೂಸ್ತಾನಿ ಸಂಗೀತದ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು. ಹಾಗೆಯೇ ಕೆಲವು ಕರ್ನಾಟಕ ರಾಗಗಳು ಹಿಂದೂಸ್ತಾನಿ ಸಂಗೀತರಂಗವನ್ನು ಪ್ರವೇಶಿಸಿವೆ. ಪರಸ್ಪರ ಸಂಪರ್ಕಾನುಕೂಲಗಳು ಹೆಚ್ಚುತ್ತಿರುವ ಈ ಕಾಲದಲ್ಲಿ ಇಂಥ ವಿನಿಮಯ ಅನಿವಾರ್ಯ. ಅವು ಬೆಳವಣಿಗೆಗೂ ಸಹಕಾರಿ.

ಭಾರತದ ಜನಪದ ಸಂಗೀತ ಕೂಡ ವೈವಿಧ್ಯಮಯವಾದದ್ದು. ಜನಪದ ಸಂಗೀತವು ರೂಪುಗೊಳ್ಳಲು ಆಯಾ ಪ್ರದೇಶದ ಭೌತಿಕ ಪರಿಸ್ಥಿತಿ, ಜೀವನ ವಿಧಾನಗಳು ಪ್ರಬಲ ಪ್ರಚೋದಕ ಶಕ್ತಿಗಳು. ಆದ್ದರಿಂದ ನಮ್ಮ ವಿಶಾಲ ರಾಷ್ಟ್ರದ ಜನಪದ ಸಂಗೀತದಲ್ಲಿ ವೈವಿಧ್ಯಗಳ ಜೊತೆಗೆ ವೈಶಿಷ್ಟ್ಯಗಳೂ



ಹೊನ್ನಪ್ಪ ಭಾಗವತರ್

ಉಂಟು. ಇತ್ತೀಚಿಗೆ ಜಾನಪದ ಸಂಗೀತದ ಸಂಕಲನ ಮತ್ತು ಅಧ್ಯಯನಕ್ಕೆ ಗಮನ ಕೊಡಲಾಗುತ್ತಿದೆ. ಅಲ್ಲದೆ, ಲಘು ಸಂಗೀತ. ವಾದ್ಯಮೇಳ ರಚನೆಗಳಲ್ಲಿ ಅವುಗಳ ಉಪಯೋಗವೂ ನಡೆದಿದೆ.

ಹೀಗೆ ಒಂದು ಕಾಲಕ್ಕೆ ಹಿಂದೂಸ್ತಾನಿ–ಕರ್ನಾಟಕ ಸಂಗೀತಗಳ ಮಧ್ಯೆ ಹಾಗೂ ಶಾಸ್ತ್ರೀಯ– ಜಾನಪದ ಸಂಗೀತಗಳ ನಡುವೆ ಇದ್ದ ಕೋಟೆಗೋಡೆಗಳು ಮುರಿದು ಬೀಳುತ್ತಿವೆ; ಇವೆಲ್ಲ ಪ್ರಕಾರಗಳ ಸಂಗೀತಕ್ಕೆ ಮೂಲಭೂತವಾದ ಅಂಶಗಳನ್ನು ಅನುಲಕ್ಷಿಸುವ ದೃಷ್ಟಿ ಬೆಳೆಯುತ್ತಿದೆ.

ಈಗ ಕೆಲವು ದಶಕಗಳ ಹಿಂದೆ ಭಾರತಕ್ಕಷ್ಟೆ ಸೀಮಿತವಾಗಿದ್ದ ಭಾರತೀಯ ಸಂಗೀತ ಇಂದು ಹಲವಾರು ಹೊರ ದೇಶಗಳಲ್ಲಿ —ಅದರಲ್ಲೂ ಅಮೆರಿಕದಲ್ಲಿ ಜನಪ್ರಿಯವಾಗುತ್ತಿದೆ. ಹಲವಾರು ಮಂದಿ ಭಾರತೀಯ ಸಂಗೀತಗಾರರಿಗೆ ಅಲ್ಲಿ ಮನ್ನಣೆ ದೊರೆತಿದೆ. ಕೆಲ ಮಂದಿ ವಿದೇಶೀಯರೂ ನಮ್ಮ ಸಂಗೀತವನ್ನು ಅಭ್ಯಾಸ ಮಾಡುತ್ತಿದ್ದಾರೆ; ಭಾರತೀಯ ಸಂಗೀತದ ವಿಶಿಷ್ಟ ಗುಣಗಳನ್ನು ಗುರುತಿಸುವ ಕೆಲಸ ನಡೆಸಿದ್ದಾರೆ. ಹೀಗೆ ಭಾರತೀಯ ಸಂಗೀತದ ವಿದೇಶೀ ಆರಾಧಕರ ಸಂಖ್ಯೆ ಬೆಳೆಯುತ್ತಿದೆ; ಭಾರತೀಯ ಸಂಗೀತಕ್ಕೆ ಹೊರನಾಡುಗಳಲ್ಲೂ ಮಾನ್ಯತೆ ದೊರೆಯುತ್ತಿದೆ.

ನೋಡಿ : ಕರ್ನಾಟಕ ಸಂಗೀತ; ಹಿಂದೂಸ್ತಾನಿ ಸಂಗೀತ

## ಭಾರತೀಯ ಸಾಹಿತ್ಯ

ಭಾರತ ಹಲವು ಭಾಷೆಗಳ ದೇಶ. ಅನೇಕ ಭಾರತೀಯ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಯಾಗುತ್ತದೆ. ಭಾಷೆಗಳು ಭಿನ್ನವಾದರೂ ಈ ಎಲ್ಲ ಬರೆವಣಿಗೆಯಲ್ಲೂ ಮಿಡಿಯುವ ಚೇತನ ಮೂಲತಃ ಒಂದೇ. ಈ ಮಾನದಂಡದಿಂದಲೇ ಭಾರತೀಯ ಸಾಹಿತ್ಯವನ್ನು ನಾವು ಗುರುತಿಸುತ್ತೇವೆ.

ಸಂಸ್ಕೃತ, ಬಂಗಾಳಿ, ಕನ್ನಡ, ಹಿಂದೀ, ತಮಿಳು, ಮಲಯಾಳಂ, ತೆಲುಗು ಕಾವ್ಯ ಕಥೆ ಕಾದಂಬರಿ ನಾಟಕ ಇವೆಲ್ಲವೂ ಭಾರತೀಯ ಸಾಹಿತ್ಯವೇ.

ಸಂಸ್ಕೃತ ಭಾರತದ ಪ್ರಾಚೀನ ಭಾಷೆ. ಸಂಸ್ಕೃತ ಸಾಹಿತ್ಯದ ಅತ್ಯಂತ ಪುರಾತನ ಕೃತಿ, ವೇದ. ದೇವರನ್ನು ಪ್ರಶಂಸಿಸುವ, ಪ್ರಾರ್ಥನೆ ಮಾಡುವ ಸ್ತೋತ್ರಗಳು ವೇದಗಳಲ್ಲಿವೆ. ಭಾರತೀಯ ಸಾಹಿತ್ಯದ ಉಗಮ ವೇದಗಳಲ್ಲಿದೆ.

'ಮಹಾಭಾರತ', 'ರಾಮಾಯಣ'ಗಳು ಭಾರತದ ಮಹಾಕಾವ್ಯಗಳು. 'ಮಹಾಭಾರತ'ದ ಒಂದು ಭಾಗ ಭಗವದ್ಗೀತೆ.

ಪ್ರಾಚೀನ ಭಾರತದಲ್ಲಿ ವೈದ್ಯ, ವಾಸ್ತುಶಿಲ್ಪ, ಖಗೋಳವಿಜ್ಞಾನ, ತತ್ತ್ವಶಾಸ್ತ್ರ, ಕಾನೂನು, ಗಣಿತ, ವ್ಯಾಕರಣ, ಸಂಗೀತ ಮುಂತಾದ ವೈಜ್ಞಾನಿಕ ಕೃತಿಗಳೂ ಸಾಹಿತ್ಯರೂಪದಿಂದ ಹೊರತಾಗಿರಲಿಲ್ಲ. ವೈಜ್ಞಾನಿಕ ಗ್ರಂಥಗಳು ಪದ್ಯರೂಪದಲ್ಲಿದ್ದುವು.

ಭಾರತೀಯ ಸಾಹಿತ್ಯದಲ್ಲಿ ಜನಜೀವನದ ಪ್ರತಿಬಿಂಬವನ್ನು ಕಾಣುತ್ತೇವೆ. ಭಾರತೀಯ ಜೀವನದಲ್ಲಿ ಮತಕ್ಕೆ ಮಹತ್ತ್ವ. ತಮ್ಮ ತಮ್ಮ ಮತಗಳನ್ನು ಹರಡಲು ಜನರಿಗೆ ತಮ್ಮ ತಮ್ಮ ಭಾಷೆಗಳೇ ಮಾಧ್ಯಮಗಳಾದುವು. ಬೌದ್ಧಸಾಹಿತ್ಯ ಪಾಳಿ ಭಾಷೆಯಲ್ಲಿ ರಚಿತವಾಯಿತು. ಪ್ರಾಕೃತದಲ್ಲಿ ಇನ್ನೊಂದು ರೂಪ ಅರ್ಧಮಾಗಧಿಯಲ್ಲಿ ಜೈನಮತದ ಗ್ರಂಥಗಳಿವೆ. ಹಿಂದಿಯಲ್ಲೂ ಮೊದಲು ಬಂದದ್ದು ಜೈನ ಹಾಗೂ ಸಿದ್ಧ ಪಂಥದವರ ಸಾಹಿತ್ಯ. ನಾಥ ಸಂಪ್ರದಾಯದವರು ಮರಾಠಿ ಸಾಹಿತ್ಯದ ಮೊದಲ ಕೃತಿಗಳನ್ನು ರಚಿಸಿದವರು. ಇವರಲ್ಲದೆ ಮಹಾನುಭಾವ ಪಂಥದವರೂ ಮರಾಠಿಯಲ್ಲೇ ಬರೆದರು. ಇತರ ನಾಥ ಪಂಗಡದವರು ಪಂಜಾಬಿ ಭಾಷೆಯಲ್ಲಿ ಕೃತಿ ರಚನೆ ಮಾಡಿದರು. ತಾಂತ್ರಿಕರು ಕಾಶ್ಮೀರೀ ಭಾಷೆಯಲ್ಲಿ ಬರೆದರು. ಬಂಗಾಳಿ ಭಾಷೆಯಲ್ಲಿ 10ನೆಯ ಶತಮಾನದಲ್ಲಿ ಬೌದ್ಧ ಮತೀಯ ಭಾವಗೀತೆಗಳು ರಚಿತವಾದುವು. ದೆಹಲಿ, ಆಗ್ರಾಗಳ ದಂಡಿನ ಯುದ್ಧಗಳಲ್ಲಿ ಹುಟ್ಟಿದ ಭಾಷೆ ಉರ್ದು. ಉರ್ದುವಿನ ಮೊದಲ ಸಾಹಿತ್ಯ 14ನೆಯ ಶತಮಾನದ ಕೊನೆಯ ಭಾಗದಲ್ಲಿ ಬಂತು. ಕನ್ನಡದಲ್ಲಿ ದಾಸರ ಪದಗಳೂ ಶಿವಶರಣರ ವಚನಗಳೂ ಜೈನ ಕಾವ್ಯಗಳೂ ರಚಿತವಾದುವು.



ಸರೋಜಿನಿ ನಾಯ್ಡು

ಭಾರತೀಯ ಭಾಷೆಗಳಲ್ಲಿ ಸಂಸ್ಕೃತವನ್ನು ಹೆಚ್ಚು ಆಶ್ರಯಿಸದೆ ಸಾಹಿತ್ಯ ಮೊದಲು ರಚಿತವಾದದ್ದು ತಮಿಳಿನಲ್ಲಿ. ತಮಿಳು ಸಾಹಿತ್ಯ ಪ್ರಾಯಶಃ ಕ್ರಿ.ಪೂ. 3ನೆಯ ಶತಮಾನದಷ್ಟು ಹಳೆಯದು.



ತೋರು ದತ್

ಪ್ರಾಚೀನ ತಮಿಳು ಸಾಹಿತ್ಯ ಬೆಳೆದದ್ದು 'ಸಂಗಮ್' (ಸಂಘ) ಎಂಬ ಸಾಹಿತ್ಯ ಕೂಟಗಳಲ್ಲಿ. ಒಂದಾದ ಮೇಲೊಂದರಂತೆ ಮೂರು ಸಂಗಮ್‌ಗಳು ರೂಪುಗೊಂಡುವೆಂಬ ಹೇಳಿಕೆಯಿದೆ. ಮೊದಲನೆಯ ಸಂಗಮ್ ಕಾಲದ ಕೃತಿಗಳು ಸಿಕ್ಕಿಲ್ಲ. ಎರಡನೆಯ ಸಂಗಮ್ ಕಾಲದ ಕವಿಗಳ ಕೃತಿಭಾಗಗಳ ಉಲ್ಲೇಖಗಳು ಅಲ್ಲಲ್ಲಿ ದೊರೆಯುತ್ತವೆ. ವ್ಯಾಕರಣಾದಿ ಭಾಷಾ ಸಾಹಿತ್ಯ ಶಾಸ್ತ್ರಕ್ಕೆ ಸಂಬಂಧಿಸಿದ 'ತೊಲ್‌ಕಾಪ್ಪಿಯಮ್' ನಮಗೆ ದೊರೆತಿರುವ ಅತ್ಯಂತ ಪ್ರಾಚೀನ ತಮಿಳು ಗ್ರಂಥ. ಇದು ಎರಡನೆಯ ಸಂಗಮ್ ಕಾಲದ್ದು. ಅಲ್ಲಿಂದಾಚೆಗೆ, ಕ್ರಿ.ಶ. 4ರಿಂದ 6ನೆಯ ಶತಮಾನದ ಅವಧಿಯಲ್ಲಿ ರಚಿತವಾದ 'ತಿರುಕ್ಕುರಳ್' ಅನಂತರದ 'ಶಿಲಪ್ಪದಿಗಾರಮ್', 'ಮಣಿಮೇಗಲೈ' ಪ್ರಾಚೀನ ತಮಿಳು ಸಾಹಿತ್ಯದ ಮಹಾಕಾವ್ಯಗಳು.

ಮಹಾಕಾವ್ಯಗಳ ಅನಂತರ ಶೈವ ಮತ್ತು ವೈಷ್ಣವ ಪಂಥದ ನಾಯನಾರರು ಮತ್ತು ಆಳ್ವಾರರುಗಳಿಂದ ತಮಿಳಿನಲ್ಲಿ ಭಕ್ತಿಸಾಹಿತ್ಯ ಬೆಳೆಯಿತು. 18ನೆಯ ಶತಮಾನದ ಅರುಣಾಚಲಮ್ ಕವಿರಾಯರ್, 19ನೆಯ ಶತಮಾನದ ರಾಮಲಿಂಗಸ್ವಾಮಿ ಈ ಪರಂಪರೆಯವರು.

19ನೆಯ ಶತಮಾನ, ತಮಿಳು ಸಾಹಿತ್ಯದ ನವೋದಯ ಕಾಲ. ಕಾದಂಬರಿ, ನಾಟಕ ಮುಂತಾದುವು ರಚಿತವಾದುವು. ವೇದನಾಯಕಮ್ ಪಿಳ್ಳೆ, ಸುಂದರಮ್ ಪಿಳ್ಳೆ, ಸೂರ್ಯನಾರಾಯಣ ಶಾಸ್ತ್ರೀ, ಸುಬ್ರಹ್ಮಣ್ಯ

ಭಾರತಿ. [illegible] ಭಾರತಿದಾಸನ್. [illegible] ಮುಂತಾದವರು ಆಧುನಿಕ ತಮಿಳು ಸಾಹಿತ್ಯ ರಂಗದಲ್ಲಿ ಪ್ರಸಿದ್ಧರು.

ತೆಲುಗು ಭಾಷೆಯಲ್ಲಿ ಸಾಹಿತ್ಯ ರಚನೆ ಆರಂಭವಾದದ್ದು 12ನೆಯ ಶತಮಾನದಲ್ಲಿ 'ನನ್ನಯ್ಯ'ನ 'ಮಹಾಭಾರತ'ದಿಂದ ಎನ್ನಬಹುದು. ಈತನ ಮೇಲೆ ಕನ್ನಡದ ಆದಿಕವಿ ಪಂಪನ ಪ್ರಭಾವವಿತ್ತು ಎನ್ನುತ್ತಾರೆ. ಇವನು ಆರಂಭಿಸಿದ ಮಹಾಭಾರತವನ್ನು ತಿಕ್ಕನ, ಎರ್ರಪ್ರಗಡ ಎಂಬುವರು ಪೂರ್ಣಗೊಳಿಸಿದರು. 12ನೆಯ ಶತಮಾನದಲ್ಲಿದ್ದ ಕನ್ನಡ ಕವಿ ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲೂ ಗ್ರಂಥ ರಚನೆ ಮಾಡಿದ್ದಾನೆ.

ಶ್ರೀನಾಥ, ಪೋತನ ಹದಿನೈದನೆಯ ಶತಮಾನದ ಪ್ರಸಿದ್ಧ ಕವಿಗಳು. ಪುರಂದರದಾಸರ ಸಮಕಾಲೀನರಾದ ತಾಳ್ಳಪಾಕಂ ಅಣ್ಣಮಾಚಾರ್ಯರು ಅನೇಕ ಭಕ್ತಿ ಗೀತೆಗಳನ್ನು ರಚಿಸಿದ್ದಾರೆ.

ವಿಜಯನಗರದ ಅರಸರಿಂದ ಪೋಷಿತನಾದ ಅಲ್ಲಸಾನಿ ಪೆದ್ದನ ಪ್ರಸಿದ್ಧ ಕವಿ. ವಿಜಯನಗರದ ಅರಸು ಕೃಷ್ಣದೇವರಾಯನೂ ಉತ್ತಮ ಕಾವ್ಯ ರಚನೆ ಮಾಡಿದ್ದಾನೆ. ತೆಲುಗಿನಲ್ಲಿ ಅನೇಕ ಸಂಗೀತ ಕೃತಿಗಳನ್ನು ರಚಿಸಿದ ಕವಿ ಸಂತ ತ್ಯಾಗರಾಜ.

19–20ನೆಯ ಶತಮಾನದಲ್ಲಿ ತೆಲುಗು ಸಾಹಿತ್ಯ ಹೊಸ ಮಾರ್ಗವನ್ನು ಹಿಡಿಯಿತು. ಹಳೆಯ ಜಾಡಿನ ಪ್ರೌಢವರ್ಗದ ಕವಿತಾ ರಚನೆ ತೆಲುಗಿನಲ್ಲಿ ಮುಂದುವರಿಯುತ್ತಿದೆಯಾದರೂ ಆಧುನಿಕ ಮತ್ತು ನವ್ಯ ಶೈಲಿಯ ಕೃತಿಗಳು ವಿಪುಲವಾಗಿ ಬೆಳೆದಿವೆ. ವೀರೇಶಲಿಂಗಂ ಪಂತುಲು, ಗುರುಜಾಡ ಅಪ್ಪಾರಾವ್, ದೇವುಲಪಲ್ಲಿ ಸುಬ್ಬರಾಯಶಾಸ್ತ್ರೀ ಮತ್ತು ಕೃಷ್ಣಶಾಸ್ತ್ರೀ, ಘರ್ಮರಾವ್ ತಿರುಪತಿ-ವೆಂಕಟೇಶ್ವರ ಕವಿದ್ವಯರು, ಚಲ್ಲಪಲ್ಲಿ ವೆಂಕಟ ಶಾಸ್ತ್ರೀ, ವಿಶ್ವನಾಥ ಸೂರ್ಯನಾರಾಯಣ, ಉಮ್ಮರಾಲಿ ಷಾ, ದುವ್ವೂರಿ ರಾಮರೆಡ್ಡಿ, 'ಶ್ರೀ ಶ್ರೀ' ಮುಂತಾದವರು ಈ ಅವಧಿಯ ಪ್ರಮುಖ ಸಾಹಿತಿಗಳಲ್ಲಿ ಕೆಲವರು.

ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಇನ್ನೊಂದು ಮುಖ್ಯ ಭಾಷೆ ಮಲಯಾಳಂ. ಇದರ ಆದಿಕಾಲದ ಸಾಹಿತ್ಯದಲ್ಲಿ ತಮಿಳು ಮತ್ತು ಸಂಸ್ಕೃತದ ಪ್ರಭಾವ ಬಲವಾಗಿ ಕಾಣುತ್ತದೆ. ಮಲಯಾಳಂ ಮತ್ತು ಸಂಸ್ಕೃತ ಭಾಷೆಯ ಪದಗಳನ್ನು ಸುರಮ್ಯವಾಗಿ ಮೇಳವಿಸಿದ 'ಮಣಿ ಪ್ರವಾಳ' ಎಂಬ ವಿಶಿಷ್ಟ ಭಾಷಾಶೈಲಿಯೇ ಮಲಯಾಳಂನಲ್ಲಿ ಬೆಳೆದಿದೆ. 18ನೆಯ ಶತಮಾನದವರೆಗೆ ಮಲಯಾಳೀ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರಬಲ ಆಕರವಾಗಿತ್ತು. ಕೇರಳದ ಮೇಲೆ ಇಂಗ್ಲಿಷರ ಪ್ರಭಾವ ಬಿದ್ದ ಬಳಿಕ 19ನೆಯ ಶತಮಾನದಲ್ಲಿ ಮಲಯಾಳಂ ಸಾಹಿತ್ಯ ಹೊಸ ಮಾರ್ಗ ಹಿಡಿಯಿತು. ಕುಮಾರನ್ ಆಶಾನ್, ಬಾಲಕೃಷ್ಣ ಪಣಿಕ್ಕರ್ ಈ ಮಾರ್ಗದ ಆದ್ಯ ಪ್ರವರ್ತಕರು. ಅದಕ್ಕೆ ಪುಷ್ಟಿಯನ್ನು ಕೊಟ್ಟು ಬೆಳೆಸಿದವರು ವಲ್ಲತ್ತೋಳ್.

20ನೆಯ ಶತಮಾನದ ನಾಲ್ಕನೆಯ ದಶಕದ ಕೊನೆಯಲ್ಲಿ ಮಲಯಾಳಂನಲ್ಲಿ 'ಪುರೋಗಾಮಿ ಪ್ರಗತಿಶೀಲ ಸಾಹಿತ್ಯ' ಯುಗ ಆರಂಭವಾಯಿತು. ಜೋಸೆಫ್ ಮುಂಡಸ್ಸೇರಿ ಮುಂತಾದವರು ಈ ಪಂಥವನ್ನು ಬೆಳೆಸಿದರು.

ಮೊದಲ ಭಾರತೀಯ ಜ್ಞಾನಪೀಠದ ಪಾರಿತೋಷಿಕವನ್ನು ಪಡೆದವರು ಮಲಯಾಳಂ ಭಾಷೆಯ ಮಹಾಕವಿ ಜಿ. ಶಂಕರ ಕುರುಪ್.

ನಾಟಕ, ಸಣ್ಣಕಥೆ, ಕಾದಂಬರಿ ಪ್ರಕಾರಗಳು ಮಲಯಾಳಂನಲ್ಲಿ ವಿಪುಲವಾಗಿ ಬೆಳೆದಿವೆ. [illegible] ಕೃಷ್ಣಪಿಳ್ಳೆ. [illegible] ಹೆಸರಾಂತ ನಾಟಕಕಾರರು. ತಗಳಿ ಶಿವಶಂಕರಪಿಳ್ಳೆ, [illegible] ಕುನ್ನಂ ವರ್ಕಿ, ಕೇಶವ ದೇವ್, ಬಷೀರ್ ಮುಂತಾದವರು ಕಥಾಸಾಹಿತ್ಯದಲ್ಲಿ ಪ್ರಸಿದ್ಧರು.

ಕನ್ನಡದಲ್ಲಿ ಸಾಹಿತ್ಯ ರಚನೆ 10ನೆಯ ಶತಮಾನದಲ್ಲಿ ಆರಂಭವಾಯಿತು. ಪಂಪ ಆದಿಕವಿ. ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ, ವಚನ ಈ ಬಗೆಯ ಕಾವ್ಯಗಳು ರಚಿತವಾದುವು. 14ನೆಯ ಶತಮಾನದಲ್ಲಿ ಚಂಪೂಕಾವ್ಯಗಳೂ ಅನಂತರ ಷಟ್ಪದಿ ಕಾವ್ಯಗಳೂ ಬಂದುವು. ಭೀಮಕವಿಯ 'ಬಸವ ಪುರಾಣ' ಷಟ್ಪದಿ ಕಾವ್ಯ. ಚಾಮರಸನ 'ಪ್ರಭುಲಿಂಗ ಲೀಲೆ', ಕುಮಾರ ವ್ಯಾಸನ 'ಭಾರತ' 15ನೆಯ ಶತಮಾನದ ಶ್ರೇಷ್ಠ ಕೃತಿಗಳು. ನಂಜುಂಡ ಕವಿ, ನಿಜಗುಣ ಶಿವಯೋಗಿ, ಚಿಕುಪಾಧ್ಯಾಯ, ಷಡಕ್ಷರ ದೇವ, ಲಕ್ಷ್ಮೀಶ, ಸರ್ವಜ್ಞರಂಥ ಕವಿಗಳು 16ರಿಂದ 18ನೆಯ ಶತಮಾನದ ವರೆಗೆ ಉತ್ತಮ ಸಾಹಿತ್ಯ ರಚಿಸಿದರು.

ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡದಲ್ಲಿ ಆಧುನಿಕ ಸಾಹಿತ್ಯ ಆರಂಭವಾಗಿ ವಿವಿಧ ಪ್ರಕಾರಗಳಲ್ಲಿ ಬೆಳೆಯಿತು.

ಉತ್ತರ ಭಾರತದ ಭಾಷೆಗಳಿಗೆಲ್ಲ ಪ್ರಾಕೃತದ ಅಪಭ್ರಂಶವೇ ಮೂಲ. ಈ ಭಾಷೆಗಳಲ್ಲಿ ಉಳಿದುಕೊಂಡಿರುವುದನ್ನು ಆಯಾ ಸಾಹಿತ್ಯದ ಸಂಪ್ರದಾಯವೆಂದು ಪರಿಗಣಿಸಬೇಕು.

ಮಹಮ್ಮದೀಯರ ಪ್ರಭುತ್ವವಿದ್ದ 13ನೆಯ ಶತಮಾನದಲ್ಲಿ, ಅವರ ಭಾಷೆಯ ಪ್ರಭಾವದಿಂದಾಗಿ ಆಗಿನ ಉತ್ತರ ಭಾರತದ ಭಾಷೆಗಳಲ್ಲಿ ಬದಲಾವಣೆಗಳೂ ಹೊಂದಾಣಿಕೆಗಳೂ ಆದುವು. 13ನೆಯ ಶತಮಾನದ ಖ್ಯಾತ ಲೇಖಕ ಅಮೀರ್ ಖುಸ್ರು ಹಿಂದಿಯಲ್ಲೂ ಪರ್ಷಿಯನ್ ಭಾಷೆಯಲ್ಲೂ ಕವನಗಳನ್ನು ರಚಿಸಿದ್ದಾನೆ. ಚಿಕ್ಕ ಚಿಕ್ಕ ಪ್ರೇಮಗೀತೆ, ಘಜಲ್‌ಗಳು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ರಚಿತವಾದುವು.

ಬಾಹ್ಯ ಪ್ರಭಾವದಿಂದ ಎಚ್ಚೆತ್ತುಕೊಂಡು ತಮ್ಮ ಸಾಹಿತ್ಯದ ಪುನರುದ್ಧಾರಕ್ಕೆ ಬದ್ಧಕಂಕಣರಾಗುವ ಪ್ರವೃತ್ತಿ ಏಕಪ್ರಕಾರವಾಗಿ ಎಲ್ಲ ಭಾರತೀಯ ಭಾಷಾ ಸಾಹಿತ್ಯದಲ್ಲೂ ಸಾಮೂಹಿಕವಾಗಿ ಕಂಡುಬರುತ್ತದೆ. ತಮಿಳಿನಲ್ಲಿ ಭಕ್ತಿ ಪಂಥದವರು ರಚಿಸಿದ ಬೋಧಪ್ರದ ಸಾಹಿತ್ಯ ಉತ್ತರ ಭಾರತದವರಿಗೆ ಸ್ಫೂರ್ತಿ ನೀಡಿತು. ಚೈತನ್ಯ, ಸೂರದಾಸ, ತುಳಸೀದಾಸ, ಕಬೀರ್ ಭಕ್ತ ಕವಿಗಳಲ್ಲಿ ಉಲ್ಲೇಖಾರ್ಹರು.

14ರಿಂದ 16ನೆಯ ಶತಮಾನಗಳಲ್ಲಿ ವೀರೋಚಿತ ಅಥವಾ ರಮ್ಯ ಶೈಲಿ ಪ್ರಾಮುಖ್ಯ ಪಡೆದಿತ್ತು. ರಾಜಸ್ಥಾನೀ, ಪಂಜಾಬಿ, ಪಶ್ಚಿಮ ಹಿಂದೀ ಹಾಗೂ ಒಡಿಯಾ ಸಾಹಿತ್ಯದಲ್ಲಿ ಈ ಶೈಲಿಗಳು ಹೆಚ್ಚಾಗಿ ಬಂದುವು. 17ನೆಯ ಶತಮಾನದ ಮರಾಠಿ ಸಾಹಿತ್ಯದಲ್ಲಿ ಮುಖ್ಯವಾಗಿ ಕಂಡು ಬರುವುದು ವೀರವರ ಶಿವಾಜಿಯನ್ನು ಹೊಗಳುವ ಲಘು ಕಾವ್ಯಗಳು.

16ನೆಯ ಶತಮಾನದ ಗುಜರಾತಿ ಸಾಹಿತ್ಯದಲ್ಲಿ ಮುಖ್ಯವಾದುವು ಜೀವನಚರಿತ್ರೆಗಳು. ಅದೇ ಕಾಲದ ಪಂಜಾಬಿ ಸಾಹಿತ್ಯದಲ್ಲಾದರೂ ಅಷ್ಟೆ. ಜೀವನಚರಿತ್ರೆಗಳು ಮತ್ತು ಕಥನಕವನಗಳು ರಚಿತವಾಗಿರುವುದು ಕಂಡುಬರುತ್ತದೆ.

18ನೆಯ ಶತಮಾನದಲ್ಲಿ ಉರ್ದು ಸಾಹಿತ್ಯ ಉತ್ತರ ಭಾರತದಲ್ಲಿ ಹೆಚ್ಚಾಗಿ ಬೆಳೆಯಿತು. ಸಯ್ಯದ್ ಅಹಮದ್ (1817–98) ಇಸ್ಲಾಂ ಸಂಸ್ಕೃತಿ ಮತ್ತು ಪಾಶ್ಚಿಮಾತ್ಯ ವಿದ್ಯೆಗಳ ಸಮನ್ವಯ ಮಾಡಲು ಯತ್ನಿಸಿ ಅಲೀಘರ್ ಚಳುವಳಿಯ ಪ್ರವರ್ತಕನಾದ. ಮಹಮದ್ ಇಕ್ಬಾಲ್ (1873–1938)

ಹೆಸರಾಂತ ಕವಿ. ಹಿಂದೀ ಕಾದಂಬರಿ ಸಾಮ್ರಾಟರೆನಿಸಿದ ಪ್ರೇಮ್‌ಚಂದರು ಉರ್ದುವಿನಲ್ಲೂ ಬರೆದು ಉರ್ದುವಿನ ಕಾದಂಬರಿ ಸಾಹಿತ್ಯಕ್ಕೆ ಅಡಿಪಾಯ ಹಾಕಿದರು. ಉರ್ದುವಿನಲ್ಲಿ ಸಣ್ಣ ಕಥೆಗಳನ್ನೂ ಬರೆದರು.

ಹದಿನಾಲ್ಕನೆಯ ಶತಮಾನದವನಾದ [illegible] ಬಂಗಾಳಿ ಸಾಹಿತ್ಯ ಕೃತಿವಾಸನಿಂದ ಉತ್ತಮ ಕೃತಿಗಳನ್ನು ಪಡೆಯಿತು. ಇವನ 'ರಾಮಾಯಣ' ಇಂದಿಗೂ ತುಂಬ ಜನಪ್ರಿಯ ಕಾವ್ಯ.

ಬಂಗಾಳಿ ಸಾಹಿತ್ಯದಲ್ಲಿ ಭಕ್ತಿಗೀತೆಗಳ ರಚನೆ ಬಲು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಚಂಡೀದಾಸ, ಚೈತನ್ಯ ಈ ವರ್ಗದಲ್ಲಿ ಮೊದಲಿಗರು.

ಹತ್ತೊಂಬತ್ತನೆಯ ಶತಮಾನದಲ್ಲಿ ಬಂಗಾಳಿ ಸಾಹಿತ್ಯ ಆಂಗ್ಲ ಪ್ರಭಾವಕ್ಕೆ ಒಳಗಾಯಿತು. ಬಂಗಾಳಿಯಲ್ಲಿ ಮೈಕೆಲ್ ಮಧುಸೂಧನ ದತ್ (1824–73) ಸರಳರಗಳೆಯಲ್ಲಿ 'ತಿಲೋತ್ತಮ', 'ಮೇಘನಾದ ವಧ' ಮಹಾ ಕಾವ್ಯವನ್ನು ಬರೆದರು. ರವೀಂದ್ರನಾಥ ಠಾಕೂರ್ (1861–1941) ನೂರಾರು ಕವನಗಳನ್ನೂ ಸಣ್ಣ ಕಥೆಗಳನ್ನೂ ಕಾದಂಬರಿಗಳನ್ನೂ ನಾಟಕಗಳನ್ನೂ ಬರೆದರು. ಗಾತ್ರದಲ್ಲಾಗಲಿ, ವೈಶಿಷ್ಟ್ಯದಲ್ಲಾಗಲಿ, ಅವರನ್ನು ಮೀರಿಸಿದ ಸಾಹಿತಿಗಳು ವಿರಳ. ಅವರ ಗದ್ಯ, ಸಣ್ಣ ಕತೆಗಳು, ಕವನಗಳು ಉತ್ತಮ ವರ್ಗದವು. ಅವರ ಇಂಗ್ಲಿಷ್ ಕವನ ಸಂಕಲನ 'ಗೀತಾಂಜಲಿಗೆ' 1913ರಲ್ಲಿ ನೊಬೆಲ್ ಪಾರಿತೋಷಕ ಲಭಿಸಿತು. ಬಂಕಿಮಚಂದ್ರ ಚಟ್ಟೋಪಾಧ್ಯಾಯ, ಶರಚ್ಚಂದ್ರ ಚಟ್ಟೋಪಾಧ್ಯಾಯ ಖ್ಯಾತ ಕಾದಂಬರಿಕಾರರು. ಎಳೆ ವಯಸ್ಸಿನಲ್ಲಿ ಕಮರಿಹೋದ ತೋರು ದತ್ ಆಂಗ್ಲ ಕಾವ್ಯರಚನೆಯಲ್ಲಿ ಪ್ರೌಢಿಮೆ ತೋರಿದಾಕೆ. ಕವಯಿತ್ರಿ ಸರೋಜಿನಿನಾಯ್ಡು 'ಭಾರತದ ಕೋಗಿಲೆ' ಎನಿಸಿಕೊಂಡವರು.

ಹಿಂದಿಯಲ್ಲಿ 'ಭರತೇಂದು ಹರಿಶ್ಚಂದ್ರ' (1850–85) ತಮ್ಮದೇ ಆದ ಒಂದು ಪಂಥವನ್ನು ಸಂಘಟಿಸಿದರು. ಮಹಾವೀರ ಪ್ರಸಾದ ದ್ವಿವೇದಿ (1868–1908) ಹಿಂದಿಯ ಸಾಹಿತ್ಯ ಭಾಷೆಯೊಂದಕ್ಕೆ ಆಕಾರವಿತ್ತರು. ರಮ್ಯ ಕಾವ್ಯಕ್ಕೆ ಹೆಸರಾದವರು ಸೂರ್ಯಕಾಂತ ತ್ರಿಪಾಠಿ. ಸುಮಿತ್ರಾನಂದನ ಪಂತರು ಪ್ರಗತಿವಾದವನ್ನು ಮಂಡಿಸಿದರು. ಮುಂದೆ ಪಂತ್ ಜ್ಞಾನಪೀಠ ಪ್ರಶಸ್ತಿ ವಿಜೇತರಾದರು. 'ಅಜ್ಞೇಯ' ನವ್ಯ ಕವಿತೆಯ ರಚಯಿತರು. ಇವರದು ಪ್ರಯೋಗವಾದ.

ದಲಪತ್‌ರಾಮ್ ದಯಾಭಾಯಿ (1820–98) ಗುಜರಾತಿ ಕವಿಗಳಲ್ಲಿ ಸಾಂಪ್ರದಾಯಿಕ ಪದ್ಧತಿಗೂ ನವ್ಯ ಪದ್ಧತಿಗೂ ಸೇತುವೆಯಂತಿದ್ದವರು. ಗೋವರ್ಧನರಾಮ್ ತ್ರಿಪಾಠಿ (1855–1907) ಅವರ ಕಾದಂಬರಿ 'ಸರಸ್ವತಿಚಂದ್ರ' ಗುಜರಾತಿ ಕಲ್ಪನಾ ಸಾಹಿತ್ಯದ ಮೊದಲ ಕೃತಿ. ಮಹಾತ್ಮಾ ಗಾಂಧಿಯವರು (1869–1948) ಮನಮುಟ್ಟುವ ನೇರ ಶೈಲಿಯಲ್ಲಿ ರಾಜಕೀಯ ಲೇಖನಗಳನ್ನು ಬರೆದರು. ಉಮಾಶಂಕರ ಜೋಷಿ ಹೊಸ, ಹಳೆಯ ಎರಡೂ ಪ್ರಕಾರಗಳಲ್ಲಿ ನಿಷ್ಣಾತರು. ಕವಿತೆ, ಸಾಹಿತ್ಯ, ವಿಮರ್ಶೆಗಳಲ್ಲೂ ಖ್ಯಾತರಾಗಿದ್ದಾರೆ. 1969ರ ಭಾರತೀಯ ಜ್ಞಾನಪೀಠ ಪ್ರಶಸ್ತಿ ಕುವೆಂಪು ಮತ್ತು ಜೋಷಿಯವರಿಗೆ ಜೊತೆಯಾಗಿ ದೊರೆಯಿತು.

ಮರಾಠಿಯಲ್ಲಿ ಗೋಪಾಲ ಗಣೇಶ ಅಗರ್‌ಕರ್ (1856–95) ಗದ್ಯದಲ್ಲಿ ಒಳ್ಳೆಯ ಶೈಲಿ ಬಳಕೆಗೆ ತಂದರು. ಹರಿನಾರಾಯಣ ಆಪ್ಟೆ ಆರಂಭದ ಕಾದಂಬರಿಕಾರರು. ರಮ್ಯ ಕವಿ ಭಾಸ್ಕರ ರಾಮಚಂದ್ರ ತಾಂಬೆ (1874–1941), ಕಾದಂಬರಿಕಾರ ವಿಷ್ಣು ಸಖಾರಾಮ ಖಾಂಡೇಕರ್ (1898) ಇವರೆಲ್ಲ ಆಧುನಿಕ ಮರಾಠೀ ಸಾಹಿತ್ಯದ ಪ್ರಮುಖರು.

[illegible] ಸ್ವಾತಂತ್ರ್ಯ ಹೋರಾಟದ ಅವಧಿಯಲ್ಲಿ ಸಾಹಿತ್ಯವೂ ಅದರ ಪ್ರಭಾವಕ್ಕೊಳಗಾಯಿತು.

ಸಾಹಿತ್ಯದ ಮನೋರಂಜಕ ಪ್ರಕಾರ ನಾಟಕ. ಸಂಸ್ಕೃತ ಸಾಹಿತ್ಯದಲ್ಲಿ ನಾಟಕಗಳು ಹೇರಳವಾಗಿ ಬಂದಿವೆ. ಕಾಳಿದಾಸನ 'ಶಾಕುಂತಲಾ' ಜರ್ಮನ್ ಭಾಷೆಗೂ ಇಂಗ್ಲಿಷಿಗೂ ಅನುವಾದಗೊಂಡು ಪಾಶ್ಚಾತ್ಯ ದೇಶಗಳ ಮೆಚ್ಚುಗೆ ಪಡೆಯಿತು. ಕಾಳಿದಾಸ ಕವಿಶ್ರೇಷ್ಠ; ಭಾಸ, ಶೂದ್ರಕ, ಶ್ರೀಹರ್ಷ, ಭವಭೂತಿ ಮುಂತಾದವರೆಲ್ಲ ಖ್ಯಾತ ನಾಟಕಕಾರರು. ಸಂಸ್ಕೃತದ 'ಪಂಚತಂತ್ರ' ಕಥೆಗಳು ಎಲ್ಲ ಭಾರತೀಯ ಭಾಷೆಗಳನ್ನು ಆವರಿಸಿವೆ; ವಿಶ್ವದ ಇತರ ಭಾಷೆಗಳಿಗೂ ಅನುವಾದಿತವಾಗಿವೆ, ಅಥವಾ ರೂಪಾಂತರಗೊಂಡಿವೆ.

ಪ್ರಭಾವಗಳಿಗೆ ಸಂಬಂಧಿಸಿ ಭಾರತೀಯ ಸಾಹಿತ್ಯ ಮುಚ್ಚಿದ ಮನೆಯಲ್ಲ. ಹೊರಗಿನ ಗಾಳಿಗಳೂ ಇಲ್ಲಿ ಬೀಸುತ್ತವೆ.

ಭಾರತೀಯ ಸಾಹಿತ್ಯದ ಹೊಸ ಪ್ರಯೋಗಗಳು ನಡೆಯುತ್ತಲೇ ಇವೆ. ನಮ್ಮದು ಜೀವಂತ ಸಾಹಿತ್ಯ ಎನ್ನುವುದಕ್ಕೆ ಇದು ನಿದರ್ಶನ.

ನೋಡಿ : ಆಳ್ವಾರರು ; ಕನ್ನಡ ಸಾಹಿತ್ಯ ; ತಿರುಕ್ಕುರಳ್ ; ತ್ಯಾಗರಾಜ ; ಬಂಕಿಮಚಂದ್ರ ಚಟ್ಟೋಪಾಧ್ಯಾಯ ; ಭವಭೂತಿ ; ಭಾಸ ; ಭಾರತೀಯ ಜ್ಞಾನಪೀಠ ಪಾರಿತೋಷಿಕ ; ರವೀಂದ್ರನಾಥ ಠಾಕೂರ್ ; ವಲ್ಲತ್ತೋಳ್ ; ವೇದ ; ಸುಬ್ರಹ್ಮಣ್ಯ ಭಾರತಿ ; ಹರಿನಾರಾಯಣ ಆಪ್ಟೆ

## ಭಾವಗೀತೆ

"ಬೊಬ್ಬೆಯ ಹಬ್ಬಿಸಿ ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ
ಅಬ್ಬರದಲ್ಲಿ ಭೋರ್ ಭೋರನೆ ಗುಮ್ಮಿಸಿ
ಬರುತದೆ ಮೈತೋರದೆ ಬರುತದೆ"

ಪಂಜೆ ಮಂಗೇಶರಾಯರು ರಚಿಸಿದ ಒಂದು ಭಾವಗೀತೆ 'ತೆಂಕಣ ಗಾಳಿಯಾಟ'ದ ಸಾಲುಗಳಿವು.

ಕಾವ್ಯದ ವಿವಿಧ ಪ್ರಕಾರಗಳಲ್ಲಿ ಭಾವಗೀತೆ ಒಂದು ಪ್ರಮುಖ ರೂಪ. ಇಂಗ್ಲಿಷಿನಲ್ಲಿ 'ಲಿರಿಕ್' ಎಂದು ಕರೆಯುವ ಕವನವರ್ಗವನ್ನು ಕನ್ನಡದಲ್ಲಿ ಭಾವಗೀತೆ ಎನ್ನುವ ರೂಢಿಯಿದೆ. ಭಾವಗೀತೆ ಎನ್ನುವ ಮಾತಿನಿಂದ ಎರಡು ಅಂಶಗಳು ವ್ಯಕ್ತವಾಗುತ್ತವೆ. ಒಂದು : ಈ ರಚನೆ ಭಾವಾತ್ಮಕವಾಗಿರಬೇಕು ಎಂಬುದು. ಇನ್ನೊಂದು : ಈ ರಚನೆಯಲ್ಲಿ ಗೇಯತೆ ಅಂದರೆ ಹಾಡಲು ಅನುಕೂಲವಾಗುವಂಥ ಗುಣ ಇರಬೇಕು ಎಂಬುದು.

ಯಾವುದಾದರೊಂದು ಸಂದರ್ಭದಲ್ಲಿ ಕವಿತೆಯಲ್ಲಿ ಮೂಡುವ ಉತ್ಕಟ ಭಾವದ ನಿರೂಪಣೆ ಭಾವಗೀತೆಯಲ್ಲಿರುತ್ತದೆ. ಆ ಭಾವತೀವ್ರತೆಯಿಂದಾಗಿ ಅದು ನಮ್ಮ ಹೃದಯವನ್ನು ಮುಟ್ಟುತ್ತದೆ. ಅದರ ಗೇಯಗುಣ ಕೂಡ ಇದಕ್ಕೆ ಸಹಾಯಕವಾಗುತ್ತದೆ. ಗೇಯತೆಯಂತೆ ಸಂಕ್ಷಿಪ್ತತೆ ಅಂದರೆ ಹೇಳಬೇಕಾದದ್ದನ್ನು ಆದಷ್ಟು ಕಡಿಮೆ ಮಾತುಗಳಲ್ಲಿ ಹೇಳುವುದು ಭಾವಗೀತೆಯ ಇನ್ನೊಂದು ಲಕ್ಷಣ.

[illegible] ಭಾವಗೀತೆಯನ್ನು [illegible] ಪ್ರಕೃತಿಯ [illegible] ಪ್ರಣಯದ ಆಸೆ, ನಿರಾಶೆ, ವಿರಹ, ಮಿಲನ, ಕಾತರ, ಕಳವಳ, ಬಾಳಿನ ಸುಖ–[illegible] ಭಾವಗೀತೆಯ ವಸ್ತುವಾಗಬಹುದು.

ಭಾವಗೀತೆ ಕವಿಯ ಅನುಭವದಿಂದ ಅರಳಿದ್ದು. ಅದು ಸ್ವಂತ ಅನುಭವವಿರಬಹುದು: ಅಥವಾ ತನ್ನ ಸುತ್ತಮುತ್ತಣ ಜೀವನ ಸನ್ನಿವೇಶಗಳನ್ನು ನಿರೀಕ್ಷಿಸಿ, ಪರಿಶೀಲಿಸಿ ಪಡೆದ ಅನುಭವವಾಗಿರಬಹುದು. ಇಂಥ ಅನುಭವ ತೀವ್ರವಾದಾಗ ಕವಿಹೃದಯದಲ್ಲಿ ಭಾವ ಹೊಮ್ಮುತ್ತದೆ, ಭಾವಗೀತೆ ರೂಪುಗೊಳ್ಳುತ್ತದೆ, ಹಾಡಾಗಿ ಹರಿಯುತ್ತದೆ.

ಕವಿ ಬೇಂದ್ರೆಯವರು ಭಾವಗೀತೆಯ ಸ್ವರೂಪವನ್ನು ತುಂಬ ಮಾರ್ಮಿಕವಾಗಿ ನಿರೂಪಿಸಿದ್ದಾರೆ :

"ಮಾತು ಮಾತು ಮಥಿಸಿ ಬಂದ ನಾದದ ನವನೀತಾ
ಹಿಗ್ಗಿ ಹಿರಿ ಹಿಗ್ಗುಗಿತ್ತು ತನ್ನ ತಾನೆ ಪ್ರೀತಾ
ಅರ್ಥವಿಲ್ಲ, ಸ್ವಾರ್ಥವಿಲ್ಲ ಬರಿಯ ಭಾವಗೀತಾ"

ಭಾವಗೀತೆ ನಾದದ ಬೆಣ್ಣೆಯ ಮುದ್ದೆ; ರಚಿಸಿದವರಿಗೂ ಓದಿದವರಿಗೂ ಅದು ಸಂತೋಷವನ್ನುಂಟುಮಾಡುತ್ತದೆ. ಓದುವವರ ಸಂಸ್ಕಾರಕ್ಕೆ ಅನುಸಾರವಾಗಿ ಅದು ಅರ್ಥ ಕೊಡುತ್ತದೆ.

ಕವಿ ಕುವೆಂಪು ಅವರು ಭಾವಗೀತೆ "ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರ" ಎಂದಿದ್ದಾರೆ.

ಭಾವಗೀತೆಗಳ ರಚನೆಯ ಪರಂಪರೆ ದೀರ್ಘವಾದದ್ದು. ವೇದಗಳಲ್ಲಿ, ಜಾನಪದ ಗೀತೆಗಳಲ್ಲಿ ಇವುಗಳ ಮೂಲವನ್ನು ಕಾಣಬಹುದು. ಕ್ರಿ.ಪೂ. 7ನೆಯ ಶತಮಾನದಲ್ಲಿದ್ದ ಗ್ರೀಕ್ ಕವಯಿತ್ರಿ ಸಾಫೋ ಮತ್ತು ಇತರ ಕವಿಗಳು ಉತ್ತಮ ಭಾವಗೀತೆಗಳನ್ನು ರಚಿಸಿದ್ದಾರೆ. ಈ ಮೂಲದಿಂದ ಸ್ಫೂರ್ತಿ ಪಡೆದ ಹಲವಾರು ಐರೋಪ್ಯ ಭಾಷಾಕವಿಗಳು ಭಾವಗೀತೆಗಳ ರಚನೆಯನ್ನು ಕೈಗೊಂಡರು. 18ನೆಯ ಶತಮಾನದಲ್ಲಿದ್ದ ಆಂಗ್ಲ ಕವಿಗಳಾದ ವರ್ಡ್ಸ್‌ವರ್ತ್, ಕೋಲ್ರಿಜ್, ಷೆಲ್ಲಿ, ಮೊದಲಾದ ಕವಿಗಳು ಭಾವಗೀತೆಗಳ ರಚನೆಯಲ್ಲಿ ಅಪೂರ್ವ ಯಶಸ್ಸನ್ನು ಗಳಿಸಿದ್ದಾರೆ. ಇಂಗ್ಲಿಷ್ ಭಾಷೆಯಲ್ಲಿ ಭಾವಗೀತೆಗಳ ರಚನೆ ಆರಂಭವಾದದ್ದು ಇವರಿಂದಲೇ. ಈ ಕವಿಗಳಿಂದ ಸ್ಫೂರ್ತಿಪಡೆದ ಭಾರತೀಯ ಕವಿಗಳು ಅನೇಕರು. ಇವರಲ್ಲಿ ರವೀಂದ್ರನಾಥ ಠಾಕೂರರು ಅಗ್ರಗಣ್ಯರು. ನಮ್ಮ ದೇಶಭಾಷೆಯೊಂದರಲ್ಲಿ ಭಾವಗೀತೆಗಳ ರಚನೆ ದೊಡ್ಡ ಪ್ರಮಾಣದಲ್ಲಿ ಆರಂಭವಾದದ್ದು ಇವರಿಂದಲೇ ಎನ್ನಬಹುದು.

ನಾವು ಈಗ ಭಾವಗೀತೆಗಳೆಂದು ಕರೆಯುವ ಕಾವ್ಯಪ್ರಕಾರ ಕಳೆದ ಮೂರು ಶತಮಾನಗಳಲ್ಲಿ ವಿವಿಧ ರಾಷ್ಟ್ರಗಳ ಭಾಷೆಗಳಲ್ಲಿ ವಿಪುಲವಾಗಿ ಬೆಳೆದುಬಂದಿದೆ. ಈ ಶತಮಾನದ ಮೂರನೆಯ ದಶಕದಲ್ಲಿ ಕನ್ನಡದಲ್ಲಿ ಭಾವಗೀತೆಯ ರಚನೆ ಆರಂಭವಾಯಿತು. ಈ ಕಾವ್ಯಪ್ರಕಾರಕ್ಕೆ ಬಲವಾದ ಪ್ರಚೋದನೆ ದೊರೆತದ್ದು ಬಿ. ಎಂ. ಶ್ರೀ. ಅವರ 'ಇಂಗ್ಲಿಷ್ ಗೀತೆ'ಗಳಿಂದ. ಇಂಗ್ಲಿಷ್ ಸಾಹಿತ್ಯದ ಉತ್ತಮ ಭಾವಗೀತೆಗಳ ವಸ್ತು ಮತ್ತು ಛಂದಸ್ಸಿನ ವೈವಿಧ್ಯವನ್ನು ಈ ಕೃತಿ ಕನ್ನಡಿಗರಿಗೆ ಎತ್ತಿ ತೋರಿಸಿತು.

ಕನ್ನಡ ಭಾವಗೀತೆ ತನ್ನ ಬೆಳವಣಿಗೆಯಲ್ಲಿ ಮೂರು ದೆಸೆಗಳಿಂದ ಸ್ಫೂರ್ತಿ, ಶಕ್ತಿ, ಪ್ರೇರಣೆಗಳನ್ನು ಪಡೆದಿದೆ. ಆಂಗ್ಲ ಸಾಹಿತ್ಯದಿಂದ ಅಭಿವ್ಯಕ್ತಿ ವಿಧಾನವನ್ನೂ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಪರಂಪರೆಯನ್ನೂ, ಜಾನಪದ ಸಾಹಿತ್ಯದಿಂದ ಆಡುಮಾತಿನ ಸತ್ವವನ್ನೂ ಅದು ಗ್ರಹಿಸಿಕೊಂಡಿದೆ ಎನ್ನಬಹುದು. ಸಮಕಾಲೀನ ಕನ್ನಡ ಕವಿಗಳಿಂದ ಕನ್ನಡ ಭಾವಗೀತೆ ಸಮೃದ್ಧವಾಗಿ ಬೆಳೆಯುತ್ತಿದೆ.

ಅವರಲ್ಲಿ ಹಲವರು ಅತ್ಯಂತ ಮನೋಜ್ಞ ಭಾವಗೀತೆಗಳನ್ನು ಬರೆದಿದ್ದಾರೆ. ಬುದ್ಧಿಪ್ರಧಾನವಾದ ನವ್ಯಕಾವ್ಯ ರೂಪುಗೊಳ್ಳುತ್ತಿರುವಾಗಲೂ, ಭಾವ ಮತ್ತು ಗೇಯಗುಣ ಪ್ರಧಾನವಾದ ಭಾವಗೀತೆಯ ಜನಪ್ರಿಯತೆ ಕುಗ್ಗಿಲ್ಲ.

## ಭಾಷಾಂತರ

ಪ್ರಪಂಚದಾದ್ಯಂತ ಸಾವಿರಾರು ಭಾಷೆಗಳು ಬಳಕೆಯಲ್ಲಿವೆ. ಎಲ್ಲರೂ ಎಲ್ಲ ಭಾಷೆಗಳನ್ನೂ ಕಲಿಯುವುದು ಅಸಾಧ್ಯ. ಕೆಲವು ಭಾಷೆಗಳ ಮೇಲೆ ಪ್ರಭುತ್ವ ಗಳಿಸುವುದು ಕೂಡ ಕಷ್ಟ. ಆದರೆ ಬೇರೆ ಬೇರೆ ಭಾಷೆಗಳಲ್ಲಿರುವ ಸಾಹಿತ್ಯ, ಸಂಶೋಧನೆ, ತಂತ್ರಜ್ಞಾನ, ಮುಂತಾದ ವಿಪುಲ ಅರಿವಿನ ಭಂಡಾರವನ್ನು ಭಾಷಾಂತರದ ನೆರವಿನಿಂದ ನಾವು ಪಡೆಯಬಹುದು.

ಕ್ರಿ.ಪೂ. 250ರಷ್ಟು ಹಿಂದೆಯೇ ಲಿವಿಯಸ್ ಆಂಡ್ರೋನಿಕಸ್ 'ಒಡಿಸ್ಸಿ' ಯನ್ನು ಲ್ಯಾಟಿನ್ ಭಾಷೆಗೆ ಭಾವಾನುವಾದ ಮಾಡಿದ್ದ. ಈಗ ತಿಳಿದಿರುವಂತೆ ಸಾಹಿತ್ಯ ಕೃತಿಯೊಂದು ಬೇರೆ ಭಾಷೆಗೆ ಅನುವಾದವಾದದ್ದು ಇದೇ ಮೊದಲು.

ಕ್ರಿ.ಶ. 3–4ನೆಯ ಶತಮಾನದಲ್ಲಿ ಭಾರತದಿಂದ ಬೌದ್ಧ ಭಿಕ್ಷುಗಳು ಚೀನಕ್ಕೆ ಹೋಗಿ ಅನೇಕ ಬೌದ್ಧ ಗ್ರಂಥಗಳನ್ನು ಚೀನೀ ಭಾಷೆಗೆ ಭಾಷಾಂತರ ಮಾಡಿದರು.

ಮಧ್ಯಯುಗದಲ್ಲಿ ಭಾಷಾಂತರದ ಕೆಲಸ ಹೆಚ್ಚಾಗಿ ಕ್ರೈಸ್ತ ಮಠಗಳಲ್ಲಿ ನಡೆಯುತ್ತಿತ್ತು. ಇಂಗ್ಲೆಂಡಿನ ಅರಸ ಆಲ್ಫ್ರೆಡ್ ತನ್ನ ದೇಶದಲ್ಲಿ ಸಾಹಿತ್ಯ ಹಾಗೂ ವಿದ್ಯಾಭ್ಯಾಸಗಳನ್ನು ಪುನರುಜ್ಜೀವನಗೊಳಿಸುವ ಉದ್ದೇಶದಿಂದ ನಾಲ್ಕು ಲ್ಯಾಟಿನ್ ಪುಸ್ತಕಗಳನ್ನು ಅಂದಿನ ಬಳಕೆಯ ಆಂಗ್ಲೊ ಸ್ಯಾಕ್ಸನ್ ಭಾಷೆಗೆ ಭಾಷಾಂತರ ಮಾಡಿಸಿದ. 12–13ನೆಯ ಶತಮಾನಗಳಲ್ಲಿ ಲ್ಯಾಟಿನ ಪುಸ್ತಕಗಳನ್ನು ತಮ್ಮ ತಮ್ಮ ದೇಶಭಾಷೆಗಳಿಗೆ ಭಾಷಾಂತರಮಾಡಿಕೊಳ್ಳುವುದು ಪದೇ ಪದೇ ನಡೆಯಿತು.

ನವೋದಯ ಕಾಲದಲ್ಲಿ ಎಂದರೆ 14–15–16ನೆಯ ಶತಮಾನಗಳಲ್ಲಿ ಪ್ರಾಚೀನ ಕೃತಿಗಳನ್ನು ಯೂರೋಪಿನ ಪ್ರಾದೇಶಿಕ ಭಾಷೆಗಳಿಗೆ ಅನುವಾದ ಮಾಡುವ ಪ್ರವೃತ್ತಿ ಬಲಗೊಂಡಿತು. ಹೋಮರ್, ವರ್ಜಿಲ್, ಒವಿಡ್ ರಂಥವರ ಕಾವ್ಯಗಳು, ಪ್ಲೇಟೊ, ಅರಿಸ್ಟಾಟಲ್‌ರ ತತ್ತ್ವಶಾಸ್ತ್ರ ಗ್ರಂಥಗಳು ಯೂರೊಪಿನಾದ್ಯಂತ ಅನುವಾದಗೊಂಡುವು. ಗ್ರೀಕ್ ಭಾಷೆಯಲ್ಲಿ ವಿದ್ವಾಂಸರಿಗೆ ಪುನರಾಸಕ್ತಿ ಹುಟ್ಟಿದ್ದು ಇದೇ ಕಾರಣದಿಂದ. ಪ್ರಾಚೀನ ಗ್ರೀಕ್ ಗ್ರಂಥಗಳನ್ನು ಮಾತ್ರವಲ್ಲದೆ ಗ್ರಂಥಾಲಯಗಳಲ್ಲಿ ಮೂಲೆ ಗುಂಪಾಗಿದ್ದ ಲ್ಯಾಟಿನ್ ಗ್ರಂಥಗಳನ್ನು ಕೂಡ ಹುಡುಕಿ ತೆಗೆದು ಭಾಷಾಂತರ ಮಾಡುವುದೂ ನಡೆಯಿತು.

ಹತ್ತೊಂಬತ್ತನೆಯ ಶತಮಾನದಲ್ಲಿ ಮ್ಯಾಕ್ಸ್‌ಮುಲ್ಲರ್ ಅವರು ವೈದಿಕ ಸಾಹಿತ್ಯವನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದರು. ಇದರಿಂದ ಭಾರತದ ಧರ್ಮ ಸಂಸ್ಕೃತಿಗಳ ಅರಿವು ಪಾಶ್ಚಾತ್ಯ ದೇಶಗಳಲ್ಲಿ ಬೆಳೆಯಿತು.

ಭಾಷಾಂತರದಲ್ಲಿ ಅನುಸರಿಸಬೇಕಾದ ನಿಯಮಗಳು, ಉಪಯೋಗಿಸಬೇಕಾದ ಶೈಲಿ ಮುಂತಾದುವುಗಳ ವಿಚಾರದಲ್ಲಿ ಆಗಿಂದಾಗ್ಗೆ ಅಭಿಪ್ರಾಯಗಳು ಬದಲಾಗುತ್ತಿರುತ್ತವೆ. ಒಂದು ಪೀಳಿಗೆಯ ಭಾಷಾಂತರ ಮುಂದಿನ ಪೀಳಿಗೆಯವರಿಗೆ ರುಚಿಸದೆ ಹೋಗಬಹುದು. ಏಕೆಂದರೆ, ಭಾಷಾ ಶೈಲಿ ಕಾಲಕಾಲಕ್ಕೆ ಬದಲಾಗುತ್ತ ಹೋಗುತ್ತದೆ. 20ನೆಯ ಶತಮಾನದ ಭಾಷಾಂತರಗಳಲ್ಲಿ ಮೂಲ ಗ್ರಂಥದ ಶೈಲಿಯ ಪ್ರಾಧಾನ್ಯ ಕಡಮೆಯಾಯಿತು. ಸರಳವಾಗಿ ಮೂಲದ ಭಾವಕ್ಕೆ ಸಂವಾದಿಯಾಗಿರುವಂತೆ ಭಾಷಾಂತರ ಮಾಡುವುದು ಮುಖ್ಯವೆನಿಸಿತು. ಒಂದು ಭಾಷೆಯ ಕೃತಿಯನ್ನು ಆಧರಿಸಿ, ಬೇರೆ ಭಾಷೆಯಲ್ಲಿ ಪುನಃ ಸೃಷ್ಟಿ ಮಾಡುವುದೂ ಆರಂಭವಾಯಿತು. ಈ ವಿಧಾನದಿಂದ ರೂಪಾಂತರಗಳು ದೊರೆತುವು. ನವೋದಯದ ಅನಂತರ ಪ್ರಪಂಚದ ಅನೇಕ ಭಾಷೆಗಳ ಕೃತಿಗಳು ಲೋಕದ ವಿವಿಧ ಭಾಷೆಗಳಿಗೆ ಭಾಷಾಂತರಗೊಂಡಿವೆ.



ಸಿ. ಪಿ. ಕೆ.

ಭಾಷಾಂತರದ ಲಾಭ ಲೇಖಕರು, ಓದುಗರಿಗಷ್ಟೇ ಅಲ್ಲ; ಒಂದು ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೂ ಅದರಿಂದ ಉಪಯುಕ್ತವಾದದ್ದು. ಒಂದು ಭಾಷೆಯ ಮೂಲ ಪದದಿಂದ ರೂಪುಗೊಂಡ ಪದಗಳು ಇನ್ನೊಂದು ಭಾಷೆಗೆ ಸೇರಿ ಆ ಭಾಷೆಯನ್ನು ಸಂಪದ್ಭರಿತ ಮಾಡುವ ಕೆಲಸ ಜಗತ್ತಿನ ಎಲ್ಲ ಭಾಗಗಳಲ್ಲೂ ನಡೆದಿದೆ. ಗ್ರೀಕ್ ಹಾಗೂ ಲ್ಯಾಟಿನಿನ ಅನೇಕ ಪದಗಳು ಯೂರೊಪಿನ ಹಲವಾರು ಭಾಷೆಗಳಲ್ಲಿ ಸ್ವೀಕೃತವಾಗಿವೆ. ಇಂಥ ಪದಗಳು ಫ್ರೆಂಚ್, ಇಂಗ್ಲಿಷ್, ಸ್ಪ್ಯಾನಿಷ್‌ಗಳಲ್ಲಿ ಅಧಿಕ. ಅನೇಕ ಭಾರತೀಯ ಭಾಷೆಗಳು ಸಂಸ್ಕೃತದ ಪದಗಳನ್ನು ತಮ್ಮವಾಗಿಸಿಕೊಂಡಿವೆ.

ಒಂದನೆಯ ಶತಮಾನದ ಪ್ಲುಟಾರ್ಕ್ ಬರೆದ ಜೀವನ ವೃತ್ತಾಂತಗಳ ಗ್ರಂಥವನ್ನು ನಾರ್ತ್ ಎಂಬಾತ 16ನೆಯ ಶತಮಾನದ ಕೊನೆಯಲ್ಲಿ ಇಂಗ್ಲಿಷಿಗೆ ಭಾಷಾಂತರಮಾಡಿದ. ಶೇಕ್ಸ್‌ಪಿಯರ್ ತನ್ನ ಕೊರಿಯೊಲನಸ್ ಮತ್ತು ಜೂಲಿಯಸ್ ಸೀಸರ್ ನಾಟಕಗಳಿಗೆ ಇದರಿಂದ ಮೂಲ ವಸ್ತುವನ್ನು ಪಡೆದ. 16ನೆಯ ಶತಮಾನದ ಆದಿಭಾಗದಲ್ಲಿದ್ದ ವಯಾಟ್ ಭಾಷಾಂತರಿಸಿದ ಪೆಟ್ರಾರ್ಕನ ಸಾನೆಟ್‌ಗಳ (ಸುನೀತಗಳ) ಪ್ರಕಟಣೆಯಿಂದ ಆಂಗ್ಲ ಸಾಹಿತ್ಯಕ್ಕೆ ಸಾನೆಟ್‌ನ ಸ್ವರೂಪದ ಪರಿಚಯವಾಯಿತು.

ಭಾಷಾಂತರದಿಂದಾಗಿ ಒಂದು ಭಾಷೆಯವರು ರೂಢಿಸಿಕೊಂಡ ವಿಶಿಷ್ಟ ಸಾಹಿತ್ಯ ರಚನಾತಂತ್ರಗಳು ಇತರ ಭಾಷೆಗಳಿಗೂ ಹರಡುವುದು ಸಾಧ್ಯವಾಗಿದೆ. ರಷ್ಯದ ಟಾಲ್‌ಸ್ಟಾಯ್, ಟುರ್ಗೆನೈಫ್ ಮುಂತಾದವರ ಕೃತಿಗಳು ಆಂಗ್ಲ ಕಾದಂಬರಿಕಾರರ ಮೇಲೆ ಪ್ರಭಾವ ಬೀರಿವೆ. ಇದು ಸಾಧ್ಯವಾದದ್ದು ಅವರ ಕೃತಿಗಳು ಇಂಗ್ಲಿಷಿಗೆ ಭಾಷಾಂತರವಾಗಿದ್ದ[illegible] [illegible] ಹೇಳಬಹುದಾದರೆ, ನಮ್ಮಲ್ಲಿ ಕಾದಂಬರಿ ಪ್ರಕಾರ ಬಂದುದು [illegible] ಬಂಗಾಳಿ ಮತ್ತು ಮರಾಠಿ ಕಾದಂಬರಿಗಳ ಅನುವಾದದಿಂದಲೇ.

ಭಾಷಾಂತರವೆಂದರೆ ಒಂದು ಪದಕ್ಕೆ ಪದ [illegible] ಯಾಂತ್ರಿಕ ಕೆಲಸವಲ್ಲ. ಮೂಲದ ಭಾವ, ಭಾವನೆಗಳು ಭಾಷಾಂತರದಲ್ಲೂ ಮೂಡಿಬರಬೇಕು. ಅದು ಮೂಲಕೃತಿಯಷ್ಟೇ ಪ್ರಭಾವಶಾಲಿಯಾಗಬೇಕು.

ಅತ್ಯಂತ ಹೆಚ್ಚು ಸಂಖ್ಯೆಯ ಭಾಷೆಗಳಿಗೆ ಅನುವಾದವಾಗಿರುವ ಒಂದು ಗ್ರಂಥವೆಂದರೆ ಬೈಬಲ್. ಇದು ಕನ್ನಡವೂ ಸೇರಿದಂತೆ ವಿಶ್ವದ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ. ಕನ್ನಡಕ್ಕೆ ಸಂಸ್ಕೃತ, ಇಂಗ್ಲಿಷ್, ಬಂಗಾಳಿ, ಉರ್ದು, ಮತ್ತಿತರಭಾಷೆಗಳಿಂದ ಕೃತಿಗಳು ಭಾಷಾಂತರಗೊಂಡಿವೆ. ಕನ್ನಡದ ಈ ಕ್ಷೇತ್ರದಲ್ಲಿ ಪರಿಣತರು ನಾರಾಯಣ ಸಂಗಮ, ಸಿ.ಪಿ.ಕೆ., ನರೇಗಲ್ ಪ್ರಹ್ಲಾದರಾವ್, ಚಿ. ನ. ಮಂಗಳಾ, ಡಾ. ಎಂ. ಎಸ್. ಕೃಷ್ಣಮೂರ್ತಿ, ಪಂಚಾಕ್ಷರಿ ಹಿರೇಮಠ ಮುಂತಾದವರು.



ನಾರಾಯಣ ಸಂಗಮ

ವಿಶ್ವಸಂಸ್ಥೆಯ ಸಭೆಗಳಲ್ಲಿ ಸದಸ್ಯ ರಾಷ್ಟ್ರಗಳ ಪ್ರತಿನಿಧಿಗಳು ಬೇರೆ ಬೇರೆ ಭಾಷೆಗಳಲ್ಲಿ ಮಾತನಾಡುತ್ತಾರೆ. ಒಬ್ಬ ಪ್ರತಿನಿಧಿಯ ಭಾಷಣ ನಡೆಯುತ್ತಿರುವಾಗಲೇ ಇತರ ಸದಸ್ಯರ ಅನುಕೂಲಕ್ಕಾಗಿ ಅದನ್ನು ಬೇರೆ ಕೆಲವು ಪ್ರಮುಖ ಭಾಷೆಗಳಿಗೆ ಏಕಕಾಲದಲ್ಲಿ ಭಾಷಾಂತರಮಾಡುವ ಮತ್ತು ಅವುಗಳಲ್ಲಿ ತಮಗೆ ಯಾವ ಭಾಷೆಯ ಅನುವಾದ ಬೇಕೋ ಅದನ್ನು ಸದಸ್ಯರು ಕೇಳುವ ವ್ಯವಸ್ಥೆ ಅಲ್ಲಿದೆ. ಇದರಿಂದ ಎಷ್ಟು ಅನುಕೂಲ! ಕಾಲದ ಮಿತವ್ಯಯವನ್ನೂ ಸಾಧಿಸಬಹುದು. ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಭಾಷಾಂತರದ ಸ್ಥಾನ ಮಹತ್ವದ್ದು. ಅಂತರರಾಷ್ಟ್ರೀಯ ಸಂಪರ್ಕ ವ್ಯವಹಾರಗಳು ಬೆಳೆಯುತ್ತಿರುವ ಈ ಕಾಲದಲ್ಲಿ ಭಾಷಾಂತರದ ವ್ಯವಸ್ಥೆ ಒಂದು ಅವಶ್ಯ ಅಂಗವಾಗಿಯೇ ಪರಿಣಮಿಸಿದೆ. ಭಾಷಾಂತರದ ಶ್ರಮವನ್ನು ತಪ್ಪಿಸಲು ಒಂದು ಅಂತರರಾಷ್ಟ್ರೀಯ ಭಾಷೆಯನ್ನು ರೂಪಿಸುವ ಪ್ರಯತ್ನಗಳೂ ನಡೆದವುದುಂಟು. ಆದರೆ ಈ ಪ್ರಯೋಗದಲ್ಲಿ ಅನೇಕ ಸಮಸ್ಯೆಗಳು ಉದ್ಭವಿಸಿ ಅಷ್ಟೇನೂ ಯಶಸ್ವಿಯಾಗಲಿಲ್ಲ.

'ರಾಮಾಯಣ', 'ಮಹಾಭಾರತ'ಗಳು ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಮಹಾಕಾವ್ಯಗಳು. ಸಂಸ್ಕೃತದಲ್ಲಿರುವ ಈ ಗ್ರಂಥಗಳು ಭಾರತದ ಭಾಷೆಗಳಿಗಲ್ಲದೆ ಪ್ರಪಂಚದ ಹಲವಾರು ಭಾಷೆಗಳಿಗೂ ಭಾಷಾಂತರವಾಗಿವೆ. ಇದರಿಂದ ವಿಶ್ವಕ್ಕೆ ಪ್ರಾಚೀನ ಭಾರತೀಯ ಕಾವ್ಯ ಸಂಪತ್ತಿನ, ಸಂಸ್ಕೃತಿಯ ಪರಿಚಯ ಆಗಿದೆ. ಭಾಷಾಂತರದಿಂದ ಅನೇಕ ಭಾಷೆಗಳ ವಸ್ತು ವೈವಿಧ್ಯತೆಗಳ ಅರಿವಾಗುತ್ತದೆ.



ತಿ. ನ. ಮಂಗಳಾ

ವಿಜ್ಞಾನದ ಮುನ್ನಡೆ ತೀವ್ರವಾಗಿ ಸಾಗುತ್ತಿರುವ ಇಂದಿನ ಯುಗದಲ್ಲಿ ಹೊಸ ಹೊಸ ಸಂಶೋಧನೆಗಳು ನಡೆಯುತ್ತಲೇ ಇರುತ್ತವೆ. ಯಾವುದೇ ದೇಶದಲ್ಲಿ ಆದ ಹೊಸ ಸಂಶೋಧನೆಯ ವಿವರಗಳು ಸ್ವಲ್ಪಕಾಲದೊಳಗಾಗಿ ಪ್ರಪಂಚದಾದ್ಯಂತ ಚೆನ್ನಾಗಿ ಪ್ರಚಾರವಾಗುವುದು ಭಾಷಾಂತರಗಳ ಮೂಲಕವೇ.

ಪ್ರಪಂಚದ ಜನಕೋಟಿಯಲ್ಲಿ ಪರಸ್ಪರ ತಿಳಿವಳಿಕೆಯನ್ನು ಮೂಡಿಸಲು ಸಹಕಾರಿಯಾದ ವಿಧಾನಗಳಲ್ಲಿ ಭಾಷಾಂತರ ಅತಿ ಮುಖ್ಯವಾದದ್ದು.

## ಭಾಷೆ

ಮನುಷ್ಯ ತನ್ನ ಭಾವನೆಗಳನ್ನು, ಅಭಿಪ್ರಾಯಗಳನ್ನು ಬೇರೊಬ್ಬರಿಗೆ ತಿಳಿಸಲು ಮಾತುಗಳನ್ನು ಉಪಯೋಗಿಸುತ್ತಾನೆ. ಈ ಮಾತುಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಆಡಿದಾಗ ಆಡಿದವನ ಅಭಿಪ್ರಾಯ ಏನೆಂಬುದು ಇತರರಿಗೆ ಗೊತ್ತಾಗುತ್ತದೆ.

ಹೀಗೆ ಮಾತುಗಳ ಸರಿಯಾದ ಜೋಡಣೆಯಿಂದ ಭಾಷೆ ರೂಪುಗೊಳ್ಳುತ್ತದೆ. ಭಾಷೆಗಳು ಅನೇಕ. ಪ್ರಪಂಚದ ಆದ್ಯಂತ 3,000ಕ್ಕಿಂತ ಹೆಚ್ಚು ಭಾಷೆಗಳು ಉಪಯೋಗದಲ್ಲಿವೆ.

ಭಾಷೆ ಹುಟ್ಟಿದ್ದು ಹೇಗೆ ? ಈ ಬಗೆಗೆ ಅನೇಕ ವಾದಗಳಿವೆ. ಈ ವಾದಗಳೇನೇ ಇರಲಿ, ಸಮಾಜ ಜೀವಿಯಾದ ಮಾನವ, ತನ್ನ ಜೊತೆಯವರೊಡನೆ ವ್ಯವಹರಿಸಲು ಮೊದಮೊದಲು ಸಂಜ್ಞೆಗಳನ್ನು ಉಪಯೋಗಿಸುತ್ತಿದ್ದು ಅನಂತರ ಮಾತುಗಳನ್ನು ಕಲ್ಪಿಸಿಕೊಂಡನೆಂಬುದು ನಿರ್ವಿವಾದ. ಮಾತು ಬಳಕೆಗೆ ಬಂದ ಬಹು ಕಾಲದ ಅನಂತರ ಬರೆವಣಿಗೆ ಬಂತು.

ಬರಹ ಬರುವುದಕ್ಕೆ ಬಹಳ ಕಾಲದ ಹಿಂದೆಯೇ ಸಾಹಿತ್ಯ ಸೃಷ್ಟಿಯಾಯಿತೆಂಬುದು ನಿಜ. ಅನೇಕ ಪ್ರಾಚೀನ ಜನಾಂಗಗಳ ಮಹಾಕಾವ್ಯಗಳು ಮೊದಲು ಕಂಠಸ್ಥವಾಗಿಯೇ ಇದ್ದು ಆಮೇಲೆ ಬರೆವಣಿಗೆಯ ರೂಪಕ್ಕೆ ಬಂದುವು.

ಮೊದಮೊದಲು ಕೇವಲ ವ್ಯವಹಾರಕ್ಕಾಗಿ ಉಪಯೋಗವಾಗುತ್ತಿದ್ದ ಭಾಷೆ ಬೆಳೆದಂತೆ —ಅಂದರೆ ಮಾತುಗಳ ಸಂಖ್ಯೆ, ಅವುಗಳ ಜೋಡಣೆಯ ನೈಪುಣ್ಯ ಬೆಳೆದಂತೆ— ಸಾಹಿತ್ಯ ಸೃಷ್ಟಿ ಆಯಿತು. ಹೇಳುವುದನ್ನು ಸುಂದರವಾಗಿ ಹೇಳಬೇಕು, ಮನಮುಟ್ಟುವಂತೆ ಹೇಳಬೇಕು —ಎಂಬ ಮಾನವನ ಆಕಾಂಕ್ಷೆ, ಆಸೆಯ ಫಲವೇ ಸಾಹಿತ್ಯ. ಭಾಷೆಯ ಶಕ್ತಿ ಬೆಳೆದಂತೆ ಸಾಹಿತ್ಯದ ಶಕ್ತಿ ಸೌಂದರ್ಯಗಳೂ ಬೆಳೆದುವು. ಹಾಗೆಯೇ ಆಡುಭಾಷೆಗೆ ಒಂದು ಅಚ್ಚುಕಟ್ಟನ್ನು ರೂಪಿಸುವ, ಸಾಹಿತ್ಯ ಲಕ್ಷಣಗಳನ್ನು ನಿರ್ಧರಿಸುವ ನಿರೂಪಿಸುವ ಪ್ರಯತ್ನಗಳು ನಡೆದುವು.

ಭಾಷೆ, ಸಾಹಿತ್ಯಗಳ ಸಂಬಂಧ ತುಂಬ ನಿಕಟವಾದದ್ದು. ಬೆಳೆಯುತ್ತ ಹೋಗುವುದು, ವಿಸ್ತಾರವಾಗುವುದು ಇವುಗಳ ಲಕ್ಷಣ. ಬೇರೆ ಬೇರೆ ಪ್ರದೇಶಗಳ ಭಾಷೆ ಸಾಹಿತ್ಯಗಳ ಪರಸ್ಪರ ಸಂಪರ್ಕದಿಂದ ಅವು ಬೆಳೆಯುತ್ತವೆ, ಪುಷ್ಟಿಗೊಳ್ಳುತ್ತವೆ.

ಭಾಷೆ ಅಭಿವ್ಯಕ್ತಿಯ ಮಾಧ್ಯಮವಾದದ್ದರಿಂದ, ಮಾನವನ ತಿಳಿವಳಿಕೆ ಬೆಳೆದಂತೆ, ಅದನ್ನು ಇತರರಿಗೆ ತಿಳಿಸುವ ಆವಶ್ಯಕತೆ ಬೆಳೆದಂತೆ, ಭಾಷೆಯ ಪದಸಂಪತ್ತಿಯೂ ಬೆಳೆಯಬೇಕಾಗುತ್ತದೆ. ಹಳೆಯ ಪದಗಳ ಆಧಾರದ ಮೇಲೆ ಹೊಸ ಪದಗಳ ನುಡಿಗಟ್ಟುಗಳ ರಚನೆ, ಅನ್ಯ ಭಾಷೆಯ ಪದಗಳ ಸ್ವೀಕರಣ —ಇವು ನಡೆಯುತ್ತವೆ. ಹೀಗೆ ಭಾಷೆ ಪುಷ್ಟವಾಗುತ್ತದೆ. ಸಮೃದ್ಧವಾದ ಭಾಷೆ ಸಾಹಿತ್ಯಸೃಷ್ಟಿ ವಿಶಾಲಗೊಳ್ಳಲು ನೆರವಾಗುತ್ತದೆ.

ನೋಡಿ : ಉಪಭಾಷೆ ; ಭಾಷಾವಿಜ್ಞಾನ ; ಭಾಷೆ –ಸಂಪುಟ ೧

## ಭಾಸ

"ಭಾಸನು ಬರೆದ ನಾಟಕಗಳ ಸತ್ವವನ್ನು ಪರೀಕ್ಷಿಸಲು ವಿದ್ವಾಂಸರು ಅವನ್ನು ಬೆಂಕಿಗೆ ಎಸೆದಾಗ 'ಸ್ವಪ್ನವಾಸವದತ್ತ' ನಾಟಕವೊಂದನ್ನು ಮಾತ್ರ ಬೆಂಕಿ ಸುಡಲಿಲ್ಲ" ಎಂದು ಸುಪ್ರಸಿದ್ಧ ಕಾವ್ಯಮೀಮಾಂಸಕ, ಕವಿ, ನಾಟಕಕಾರ ರಾಜಶೇಖರ ಒಂದೆಡೆ ಹೇಳಿದ್ದಾನೆ. ಈ ಪ್ರಸಂಗ ನಿಜವೋ ಸುಳ್ಳೋ. ಆಗಿನ ಕಾಲದ ವಿದ್ವಾಂಸರ ವಿಮರ್ಶೆಯ 'ಅಗ್ನಿಪರೀಕ್ಷೆ' ಯಲ್ಲಿ ಸ್ವಪ್ನವಾಸವದತ್ತ ವಿಜಯಿಯಾಯಿತು ಎಂಬುದು ಮಾತ್ರ ಇದರಿಂದ ಸ್ಪಷ್ಟವಾಗುತ್ತದೆ.

ಸಂಸ್ಕೃತ ನಾಟಕಕಾರರಲ್ಲಿ ಅತಿ ಪ್ರಸಿದ್ಧನಾದ ಕಾಳಿದಾಸನಿಗಿಂತ ಸುಮಾರು ನೂರು ವರ್ಷ ಹಿಂದಿನ ಶ್ರೇಷ್ಠ ಸಂಸ್ಕೃತ ನಾಟಕಕಾರ, ಭಾಸ, ಅಂದರೆ ಅವನ ಕಾಲ ಸುಮಾರು 300. ನಮಗೆ ಪೂರ್ಣರೂಪದಲ್ಲಿ ದೊರೆತಿರುವ ಸಂಸ್ಕೃತ ನಾಟಕಗಳಲ್ಲಿ ಭಾಸನ ನಾಟಕಗಳೇ ಅತ್ಯಂತ ಪ್ರಾಚೀನವಾದುವು. ಭಾಸ ದಕ್ಷಿಣ ಭಾರತದವನೆಂದು ಸಾಮಾನ್ಯವಾಗಿ ಎಲ್ಲ ವಿದ್ವಾಂಸರೂ ಅಭಿಪ್ರಾಯಪಟ್ಟಿದ್ದಾರೆ. ಅವನು ಕೇರಳದವನಿರಬಹುದು ಎಂಬುದು ಕೆಲವರ ಊಹೆ. ಭಾಸನ ಜೀವನ ಕುರಿತು ನಮಗೆ ಯಾವ ವಿವರಗಳೂ ತಿಳಿದುಬಂದಿಲ್ಲ.

ಭಾಸ ಸುಮಾರು 25–30 ನಾಟಕಗಳನ್ನೂ ಒಂದು ನಾಟ್ಯಶಾಸ್ತ್ರ ಗ್ರಂಥವನ್ನೂ ಬರೆದನೆಂಬ ನಂಬಿಕೆಯಿದೆ. ಆದರೆ ನಮಗೆ ಲಭಿಸಿರುವ ಅವನ ನಾಟಕಗಳು 14 ಮಾತ್ರ : 'ಪ್ರತಿಜ್ಞಾ ಯೌಗಂಧರಾಯಣ', 'ಸ್ವಪ್ನವಾಸವದತ್ತ', 'ಅವಿಮಾರಕ', 'ಚಾರುದತ್ತ', ಇವು ಬೃಹತ್ಕಥೆಯಿಂದ ಪ್ರೇರಿತವಾದುವು. 'ಪ್ರತಿಮಾ ನಾಟಕ' ಮತ್ತು 'ಅಭಿಷೇಕ ನಾಟಕ' 'ಯಜ್ಞಫಲ' ಇವು ರಾಮಾಯಣ ಕಥಾನಕಕ್ಕೆ ಸಂಬಂಧಿಸಿದುವು. 'ಬಾಲಚರಿತ' ಭಾಗವತದ ಕಥೆಯ ಮೇಲೆ ಆಧಾರಪಟ್ಟದ್ದು. 'ಪಂಚರಾತ್ರ', 'ಮಧ್ಯಮ ವ್ಯಾಯೋಗ', 'ದೂತವಾಕ್ಯ', 'ದೂತ ಘಟೋತ್ಕಚ', 'ಕರ್ಣಭಾರ', 'ಊರುಭಂಗ', ಇವುಗಳ ವಸ್ತು ಮಹಾಭಾರತದಿಂದ ಸಂಗ್ರಹಿಸಿದ್ದು.

'ಪ್ರತಿಜ್ಞಾ ಯೌಗಂಧರಾಯಣ' ಮತ್ತು 'ಸ್ವಪ್ನವಾಸವದತ್ತ' ಇವೆರಡೂ ವತ್ಸರಾಜ ಉದಯನನನ್ನು ಕುರಿತ ನಾಟಕಗಳು. ಉದಯನನು ವೀಣೆ ನುಡಿಸುವುದರಲ್ಲಿ ನಿಪುಣ ; ಶೂರ, ಸುಂದರಾಂಗ. ಪಕ್ಕದ ರಾಜ್ಯದ ದೊರೆ ಮಹಾಸೇನನಿಗೆ ತನ್ನ ಮಗಳು ವಾಸವದತ್ತೆಯನ್ನು ಉದಯನನಿಗೆ

ಕೊಟ್ಟು ಮದುವೆಮಾಡಿಕೊಡುವ ಹಂಬಲ. ಈ ವಿಚಾರದಲ್ಲಿ ನೇರವಾಗಿ ಮಾತುಕತೆ ನಡೆಸಿದರೆ ಉದಯನ ಒಪ್ಪಲಾರನೇನೋ ಎಂದು ಎಣಿಸಿ ಅವನನ್ನು ಸೆರೆಹಿಡಿಸಿ ತರಿಸಿ ತನ್ನ ಮಗಳಿಗೆ ವೀಣೆ ನುಡಿಸುವುದನ್ನು ಕಲಿಸಲು ನಿಯೋಜಿಸುತ್ತಾನೆ. ಮುಂದೆ ಆಕೆಯ ಪ್ರಣಯದಲ್ಲಿ ಉದಯನ ಬಂದಿ. ಅವನನ್ನು ಬಿಡಿಸಿ ತರಲು ಅವನ ಮಂತ್ರಿ ಯೌಗಂಧರಾಯಣ ಪ್ರತಿಜ್ಞೆ ಮಾಡುತ್ತಾನೆ. ಅತ ಉದಯನ ಮತ್ತು ವಾಸವದತ್ತೆ ಅರಮನೆ ಯಿಂದ ಓಡಿಹೋಗಿ ವಿವಾಹವಾಗುವಂತೆ ಮಾಡುತ್ತಾನೆ. ನಾಲ್ಕು ಅಂಕಗಳ 'ಪ್ರತಿಜ್ಞಾ ಯೌಗಂಧರಾಯಣ' ನಾಟಕದಲ್ಲಿ ಮಂತ್ರಿಯ ಪ್ರತಿಜ್ಞೆ ಮತ್ತು ಸಾಹಸಗಳಿಗೇ ಪ್ರಾಧಾನ್ಯ.

'ಪ್ರತಿಜ್ಞಾ ಯೌಗಂಧರಾಯಣ'ದ ಕಥೆ, 'ಸ್ವಪ್ನವಾಸವದತ್ತ' ದಲ್ಲಿ ಮುಂದುವರಿಯುತ್ತದೆ. ವಾಸವದತ್ತೆಯನ್ನು ಮದುವೆಯಾದ ಮೇಲೆ ಉದಯನ ಸುಖಲೋಲುಪನಾಗಿ ರಾಜಕಾರಣದತ್ತ ಗಮನಹರಿಸುವುದಿಲ್ಲ. ಹೀಗಾದರೆ ರಾಜ್ಯ ಕೈಬಿಟ್ಟು ಹೋಗಬಹುದೆಂದು ಶಂಕಿಸಿದ ಯೌಗಂಧ ರಾಯಣ ಪರಿಸ್ಥಿತಿಯನ್ನು ಸರಿಪಡಿಸಲು ಒಂದು ಉಪಾಯ ಹೂಡುತ್ತಾನೆ. ಬಲಿಷ್ಠನಾದ ದರ್ಶಕರಾಜನ ತಂಗಿ ಪದ್ಮಾವತಿಯನ್ನು ಉದಯನನಿಗೆ ಮದುವೆಮಾಡಿಸಬೇಕೆಂಬುದೇ ಈ ತಂತ್ರ. ಉದಯನ ಬೇಟೆಗೆ ಹೋಗಿದ್ದಾಗ ಬಿಡಾರಕ್ಕೆ ಬೆಂಕಿ ಬಿದ್ದಿತೆಂದೂ ಅದರಲ್ಲಿ ಸಿಕ್ಕಿ ತಾನೂ ವಾಸವ ದತ್ತೆಯೂ ಮೃತರಾದಂತೆ ಸುದ್ದಿ ಹಬ್ಬಿಸುತ್ತಾನೆ. ತಾನೂ ವಾಸವ ದತ್ತೆಯೂ ವೇಷ ಮರೆಸಿಕೊಂಡು ದರ್ಶಕನ ಅರಮನೆಯನ್ನು ಸೇರಿಕೊಳ್ಳುತ್ತಾರೆ. ವಾಸವದತ್ತೆ ಪದ್ಮಾವತಿಯ ಅಂತಃಪುರದಲ್ಲಿ ಪರಿಚಾರಕಿ ಯಾಗುತ್ತಾಳೆ. ಉದಯನನು ತನ್ನ ಪ್ರಿಯಪತ್ನಿ ಮತ್ತು ದಕ್ಷಮಂತ್ರಿ ಇಬ್ಬರೂ ಬೆಂಕಿಯಲ್ಲಿ ಸುಟ್ಟುಹೋದ ವದಂತಿಯನ್ನು ನಂಬಿ ಚಿಂತೆಗೊಳ ಗಾಗುತ್ತಾನೆ. ಸ್ವಲ್ಪ ಕಾಲಾನಂತರ ಪದ್ಮಾವತಿ ಮತ್ತು ಉದಯನ ಇವರ ವಿವಾಹ ನಡೆಯುತ್ತದೆ. ಆದರೂ ಉದಯನ, ವಾಸವದತ್ತೆಯನ್ನು ಜ್ಞಾಪಿಸಿಕೊಳ್ಳುತ್ತಲೇ ಇರುತ್ತಾನೆ. ಹತ್ತಿರದಲ್ಲೇ ಇರುತ್ತಿದ್ದ ವಾಸವ ದತ್ತೆ ಇವನ್ನೆಲ್ಲ ನೋಡುತ್ತಿರುತ್ತಾಳೆ. ಪದ್ಮಾವತಿಯ ಮದುವೆಯ ಅನಂತರ ಯೌಗಂಧರಾಯಣ ಮತ್ತು ವಾಸವದತ್ತೆಯರು ಬದುಕಿರುವುದು ತಿಳಿದು ಮತ್ತೆ ಎಲ್ಲ ಒಂದಾಗುತ್ತಾರೆ. 'ಸ್ವಪ್ನವಾಸವದತ್ತ' ನಾಟಕದ ಕಥಾಂಶ ಇದು. ಈ ನಾಟಕರಚನೆಯಲ್ಲಿ ಭಾಸನು ತೋರಿರುವ ಕೌಶಲ ಅಪೂರ್ವವಾದದ್ದು. ವಾಸವದತ್ತೆ, ಪದ್ಮಾವತಿಯರ ವ್ಯಕ್ತಿತ್ವವನ್ನು ಭಾಸ ಬಲು ಪರಿಣಾಮಕಾರಿಯಾಗಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ. 'ಸ್ವಪ್ನವಾಸವದತ್ತ' ಒಂದು ಅಪ್ರತಿಮ ಕಲಾಕೃತಿ.

'ಸ್ವಪ್ನವಾಸವದತ್ತ'ದಷ್ಟೇ ಉತ್ಕೃಷ್ಟವಾದ ಇನ್ನೊಂದು ಕೃತಿ 'ಪ್ರತಿಮಾ ನಾಟಕ'. ರಾಮನು ವನವಾಸಕ್ಕೆ ಹೋದದ್ದರಿಂದ ಉಂಟಾದ ದುಃಖದ ಪರಿಣಾಮವಾಗಿ ದಶರಥನ ಮರಣ; ಭರತನು ತನ್ನ ಸೋದರ ಮಾವನ ಮನೆಯಿಂದ ಹಿಂದಿರುಗುತ್ತಿದ್ದಾಗ ಅಯೋಧ್ಯೆಯ ಹೊರವಲಯ ದಲ್ಲಿದ್ದ 'ಪ್ರತಿಮಾಗೃಹ'ಕ್ಕೆ ಬರುವುದು. ರಘುವಂಶದಲ್ಲಿ ಆಗಿಹೋದ ಖ್ಯಾತ ಅರಸರ ಪ್ರತಿಮೆಗಳನ್ನು ಸ್ಥಾಪಿಸಿರುವ ಈ ಗೃಹದಲ್ಲಿ ತನ್ನ ತಂದೆಯ ವಿಗ್ರಹವನ್ನು ಕಂಡು ಅವನು ಮೃತನಾಗಿರಬೇಕೆಂದು ಊಹಿಸಿ ಭರತ ದುಃಖಿಸುವುದು. ಇದು ಈ ನಾಟಕದ ಪ್ರಧಾನವಸ್ತು. ಆದರೆ ಈ ನಾಟಕದ ಘನತೆಗೆ ಕಾರಣವಾದ ಅಂಶಗಳೆಂದರೆ ಇದರಲ್ಲಿರುವ ಅಪೂರ್ವ ಪಾತ್ರಸೃಷ್ಟಿ; ಆ ಪಾತ್ರ ಸೃಷ್ಟಿಗೆ ಅನುಕೂಲವಾದ ಸನ್ನಿವೇಶ ರಚನೆಯ ಚಾತುರ್ಯ. ಎ. ಆರ್. ಕೃಷ್ಣಶಾಸ್ತ್ರಿಗಳು ಹೇಳಿರುವಂತೆ "ಈ ನಾಟಕದ ಸೊಬಗು ಇಂತಹದೆಂದೂ ಇಷ್ಟೇ ಎಂದೂ ಹೇಳಲು ಸಾಧ್ಯವಾಗದಂಥ ಅಸಾಧ್ಯ ; ಅದು ನಿಘಂಟಾಗಿದೆ ; ನಾಟಕದಲ್ಲಿನ ಪ್ರತಿಯೊಂದು ವಾಕ್ಯ ಯಲ್ಲಿಯೂ ಕಂಡುಬರುವುದಾಗಿದೆ."

ಭಾಸನ ಭಾರತಕಥಾ ನಾಟಕಗಳ 'ಪಂಚರಾತ್ರ'ದಲ್ಲಿ ಬಹಳ ಕಲ್ಪನಾಚಾತುರ್ಯ. ನಾಟಕೀಯ ಸಂಭಾಷಣೆಗಳನ್ನು ಧಾರಾಳ ಪ್ರಮಾಣ ದಲ್ಲಿ ಕಾಣಬಹುದು. ಮೂರು ಅಂಕಗಳ ಈ ನಾಟಕ ವಿರಾಟ ಪರ್ವದಲ್ಲಿ ಬರುವ ಉತ್ತರಗೋಗ್ರಹಣದ ಪ್ರಸಂಗವನ್ನಾಧರಿಸಿದ್ದು. ಆದರೂ ಇದು ಎಲ್ಲ ವಿಧಗಳಲ್ಲೂ ಸ್ವತಂತ್ರ ನಾಟಕ. ಇಲ್ಲಿ ಬರುವ ಪಾತ್ರಗಳು ಭಾಸನ ಪ್ರತಿಭೆಯ ಬೆಳಕಿನಲ್ಲಿ ಹೊಸ ರೂಪತಾಳಿ ಮೆರೆಯು ತ್ತವೆ. ನಾಟಕಕಥೆಯಲ್ಲಿ ಕಲ್ಪಿತವಾಗಿರುವ ಸನ್ನಿವೇಶಗಳು ಕೂಡ ಅಪೂರ್ವವಾದುವು. ಭೀಷ್ಮ, ದ್ರೋಣರಂಥ ಹಿರಿಯರು ಚಾತುರ್ಯ ದಿಂದ ನಡೆದುಕೊಂಡಿದ್ದರೆ ಮಹಾಭಾರತ ಯುದ್ಧವನ್ನು ತಪ್ಪಿಸಬಹು ದಾಗಿತ್ತು ಎಂಬ ಅಂಶವನ್ನು ಭಾಸ ಈ ನಾಟಕದಲ್ಲಿ ಅತಿ ರಮ್ಯವಾಗಿ ಸೂಕ್ಷ್ಮವಾಗಿ ನಿರೂಪಿಸಿದ್ದಾನೆ. ಈ ನಾಟಕದಲ್ಲಿ ಬರುವ ಸಂಭಾಷಣೆಗಳ ಚಾತುರ್ಯ ಮೋಹಕವಾಗಿದೆ.

ಭಾಸನ ನಾಟಕಗಳ ಸೌಂದರ್ಯವನ್ನು ತಿಳಿಯಬೇಕಾದರೆ ಅವನ್ನು ಮೂಲದಲ್ಲಾಗಲೀ ಒಳ್ಳೆಯ ಭಾಷಾಂತರದಲ್ಲಾಗಲೀ ಓದಬೇಕು ; ಕೇವಲ ಕಥಾಸಂಗ್ರಹವನ್ನೋದುವುದರಿಂದ ಅವುಗಳ ಸ್ವಾರಸ್ಯದ ಕಲ್ಪನೆ ಕೂಡ ನಮಗೆ ಆಗಲಾರದು. ಏಕೆಂದರೆ ತಾನು ಆರಿಸಿಕೊಂಡ ಮೂಲವಸ್ತುವಿಗೆ ಭಾಸ ಕೊಟ್ಟಿರುವ ಪುಷ್ಟವಾದ ಹೊಸ ರೂಪ, ಅದರ ಮೇಲೆ ಅವನು ಮಾಡಿರುವ ರಮ್ಯವಾದ ಕುಸುರಿ ಕೆಲಸ, ಕಲ್ಪಿಸುವ ವಾತಾವರಣ ಇವೆಲ್ಲ ಅದ್ಭುತವಾದುವು. ಆದ್ದರಿಂದಲೇ ಅವನು ನಾಟಕರಚನೆಯಲ್ಲಿ ಕಾಳಿದಾಸ ನನ್ನೂ ಮೀರಿದವನೆಂದು ಪರಿಗಣಿತನಾಗಿದ್ದಾನೆ.

## ಭಿತ್ತಿಚಿತ್ರ

ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಅಥವಾ ಗೋಡೆಯಂಥ ಮೈಯ ಮೇಲೆ ರಚಿಸಿದ ಚಿತ್ರ. ಚರಿತ್ರಪೂರ್ವಕಾಲದಿಂದಲೂ ಮಾನವ ಭಿತ್ತಿಚಿತ್ರ ರಚನೆಯಲ್ಲಿ ಆಸಕ್ತಿ ತೋರಿಸಿದ್ದಾನೆ. ಆ ಕಾಲದಲ್ಲಿ ಗುಹೆಗಳ ಬಂಡೆಗಳ ಮೇಲೆ ಅವನು ರಚಿಸಿದ ಚಿತ್ರಗಳನ್ನು ನಾವು ವಿವಿಧ ರಾಷ್ಟ್ರಗಳಲ್ಲಿ ಈಗಲೂ ಕಾಣಬಹುದು. ಭಿತ್ತಿಚಿತ್ರ ರಚನೆಯ ಬಗೆಗೆ ಮಾನವನಿಗಿರುವ ಆಸಕ್ತಿ ಅಂದಿನಿಂದ ಇಂದಿನವರೆಗೂ ನಡೆದು ಬಂದಿದೆ. ಆದರೆ ಕಾಲದಿಂದ ಕಾಲಕ್ಕೆ ಭಿತ್ತಿಚಿತ್ರ ರಚನೆಯ ತಂತ್ರದಲ್ಲಿ ಅವುಗಳ ವಸ್ತು ವಿನ್ಯಾಸಗಳಲ್ಲಿ ಭಿನ್ನತೆಗಳು ಕಂಡುಬರುತ್ತವೆ.

ಫ್ರೆಸ್ಕೊ ಎಂಬುದು ಭಿತ್ತಿಚಿತ್ರಗಳಲ್ಲಿ ಒಂದು ಪ್ರಕಾರ. 'ಫ್ರೆಸ್ಕೊ' ಎಂದರೆ ಹೊಸದು ಎಂದರ್ಥ. ಇದು ಇಟಾಲಿಯನ್ ಭಾಷೆಯ ಮಾತು. ಗೋಡೆ, ಬಂಡೆ ಇಂಥವರ ಮೇಲ್ಮೈಯನ್ನು ಸಮತಳವಾಗಿ ಸಿದ್ಧಪಡಿಸಿ ಕೊಂಡು ಅದರ ಮೇಲೆ ರಚಿಸುವ ಜಲವರ್ಣ ಚಿತ್ರವೇ 'ಫ್ರೆಸ್ಕೊ'.

ಗವಿಗಳ ಬಂಡೆಯ ಮೇಲ್ಮೈಯನ್ನು ಸಮಮಾಡಿಕೊಂಡು ಮರಳು, ಭತ್ತದ ಹುಲ್ಲು ಅಥವಾ ಪಾಚಿ,ಕಪ್ಪೆಚಿಪ್ಪು ಮೊದಲಾದುವನ್ನು ದೀರ್ಘಕಾಲ ಬೆಲ್ಲದ ನೀರಿನಲ್ಲಿ ನೆನಸಿಟ್ಟು ಅವನ್ನು ಅರೆದು ಕಲ್ಲಿನ ಮೇಲೆ ಬಳಿಯು ವುದು. ಈ ವಜ್ರ ಲೇಪನದ ತೇವ ಆರುವ ಮುನ್ನ ಅವರ ಮೇಲೆ ಚಿತ್ರ ರಚನೆ ಮಾಡುವುದು ಪದ್ಧತಿ. ಮೊದಲು ಚಿತ್ರದ ಹೊರ ರೇಖೆಗಳನ್ನು



ಗಿರಿಕಾನನಗಳ ಮಧ್ಯೆ ವಿರಕ್ತ ಬೌದ್ಧ ಭಿಕ್ಕುಗಳು ತಮ್ಮ ಇರುವಿಕೆಗಾಗಿ ಸೃಷ್ಟಿಸಿಕೊಂಡ ಕಲಾಪರಿಸರವಾದ ಅಜಂತಾ ಗುಹಾಲಯದ ಅಲಂಕರಣ ಭಿತ್ತಿಚಿತ್ರ

ಕಂದುಬಣ್ಣದಿಂದ ಗುರುತಿಸಿಕೊಂಡು ಅನಂತರ ಬಣ್ಣವನ್ನು ತುಂಬುತ್ತಾರೆ. ಈ ವಿಧಾನವನ್ನು ಅನುಸರಿಸಿ ರಚಿಸಿರುವ ಚಿತ್ರಗಳು ಅನೇಕ ಶತಮಾನಗಳಾದರೂ ಕೆಡದೆ ಚೆನ್ನಾಗಿ ಉಳಿಯುತ್ತವೆ.

ಗಾರೆಯ ಗಿಲಾವು ಮಾಡಿದ ಗೋಡೆಯ ಮೇಲೆ ಮತ್ತೆ ನಯಗಾರೆ ಮತ್ತು ಸುಣ್ಣದ ಲೇಪನಮಾಡಿ, ತೇವ ಆರುವುದಕ್ಕೆ ಮೊದಲೇ ಅದರ ಮೇಲೆ ಚಿತ್ರ ರಚನೆ ಮಾಡುವುದೂ ಉಂಟು. ವಿಸ್ತಾರವಾದ ಚಿತ್ರರಚನೆ ಮಾಡಲು ಹೆಚ್ಚು ಕಾಲ ಹಿಡಿಯುವುದರಿಂದ ಲೇಪನ ಒಣಗಿಹೋಗುವುದು ಸಹಜ. ಹೀಗಾಗದಂತೆ ಮಾಡಲು ಚಿತ್ರರಚನೆಗೆ ಬೇಕಾಗುವ ವಿಸ್ತಾರ ಸ್ಥಳದ ಒಂದು ಭಾಗಕ್ಕೆ ಮಾತ್ರ ಲೇಪನವನ್ನು ಹಾಕಿ, ಅದರ ತೇವ ಆರುವಷ್ಟರಲ್ಲಿ ಅಲ್ಲಿ ಚಿತ್ರ ರಚಿಸುವುದೂ ಅನಂತರ ಅದರ ಮುಂದಿನ ಭಾಗಕ್ಕೆ ಲೇಪನಮಾಡಿ ಅದರ ಮೇಲೆ ಚಿತ್ರಣ ನಡೆಸುವುದೂ ಉಂಟು. ಲೇಪನ ತೇವವಾಗಿರುವಾಗ ರಚಿಸಿದ ಈ ವರ್ಣಚಿತ್ರಗಳು ಲೇಪನ ವಸ್ತುವಿನೊಳಕ್ಕೆ ಹರಡಿ, ಅದರ ಭಾಗವಾಗಿಬಿಡುತ್ತವೆ. ಅದರಿಂದಲೇ ಈ ವಿಧಾನದಲ್ಲಿ ರಚಿಸಿದ ಚಿತ್ರಗಳು ಬಹುಕಾಲ ಬಾಳುತ್ತವೆ.

ಗೋಡೆಗಳ ಅಲಂಕರಣಕ್ಕಾಗಿ ಫ್ರೆಸ್ಕೊ ಚಿತ್ರಗಳನ್ನು ರಚಿಸುವುದು, ತೈಲಚಿತ್ರರಚನೆ ಆಚರಣೆಗೆ ಬಂದಮೇಲೆ ಹಿಂದಕ್ಕೆ ಬಿದ್ದಿತು.

ಅಜಂತದ ಚಿತ್ರಗಳು ಫ್ರೆಸ್ಕೊ ತಂತ್ರವನ್ನು ಅನುಸರಿಸಿ ರಚಿಸಲ್ಪಟ್ಟಿವೆ. ಕೆಲವು ಈ ಚಿತ್ರಗಳು ಅತ್ಯಂತ ಪ್ರಾಚೀನವಾದುವು; ಇವು ಕ್ರಿ. ಪೂ. 2ನೆಯ ಶತಮಾನಕ್ಕೆ ಸೇರಿದುವು ಎಂದು ವಿದ್ವಾಂಸರ ಅಭಿಪ್ರಾಯ.

ಸುಪ್ರಸಿದ್ಧ ಚಾಲುಕ್ಯ ಚಕ್ರವರ್ತಿ, ಕರ್ನಾಟಕದ ವೀರಾಗ್ರೇಸರನಾದ ಇಮ್ಮಡಿ ಪುಲಿಕೇಶಿಯು ಪರ್ಷಿಯದ ರಾಯಭಾರಿಗಳಿಗೆ ಒಡ್ಡೋಲಗದಲ್ಲಿ ದರ್ಶನಕೊಡುತ್ತಿರುವುದರ ಚಿತ್ರ ಅಜಂತದ ಒಂದು ಗುಹೆಯಲ್ಲಿದೆ.

ಅಸಿಸಿ, ಫ್ಲಾರೆನ್ಸ್‌ಗಳ ಕ್ರೈಸ್ತ ದೇವಾಲಯಗಳಲ್ಲಿ ಇಟಲಿಯ ಚಿತ್ರಕಾರ ಜಿಯತ್ತೊ (1267–1337) ರಚಿಸಿದ ಫ್ರೆಸ್ಕೊಗಳು ಇವೆ. ಮೇರಿ ಜೋಸೆಫರು ಶಿಶು ಕ್ರಿಸ್ತನೊಡನೆ ಈಜಿಪ್ಟಿಗೆ ಓಡಿಹೋದ ಘಟನೆ ಆತನ ಒಂದು ಫ್ರೆಸ್ಕೋದ ವಸ್ತು.

ಇಟಲಿಯಲ್ಲಿ ಫ್ರೆಸ್ಕೊ ರಚನೆ 15–16ನೆಯ ಶತಮಾನಗಳಲ್ಲಿ ಉತ್ತುಂಗ ಶಿಖರಕ್ಕೇರಿತ್ತು. ಮೈಕೆಲೇಂಜಲೋ, ಸಿಸ್ಟೈನ್ ಪ್ರಾರ್ಥನಾಭವನದಲ್ಲಿ ಹಳೆಒಡಂಬಡಿಕೆ ಪುಸ್ತಕದಿಂದ ಆರಿಸಿದ ಹಲವು ಘಟನೆಗಳ ದೃಶ್ಯಗಳನ್ನು ಚಿತ್ರಿಸಿದ್ದಾನೆ. ಇವುಗಳಲ್ಲೊಂದರಲ್ಲಿ 343 ಆಕೃತಿಗಳಿವೆ. ಈ ಮಹತ್ಕೃತಿಯನ್ನು ರಚಿಸಲು ಆತನಿಗೆ ನಾಲ್ಕೂವರೆ ವರ್ಷಗಳು ಹಿಡಿದುವು.

ಈ ಶತಮಾನದ ಮೂರು ನಾಲ್ಕನೆಯ ದಶಕಗಳಲ್ಲಿ ದೊಡ್ಡ ದೊಡ್ಡ ಸಾರ್ವಜನಿಕ ಕಟ್ಟಡಗಳ ನಿರ್ಮಾಣ ಹೆಚ್ಚಿದಂತೆ ಫ್ರೆಸ್ಕೊ ತಂತ್ರ ಪುನರುಜ್ಜೀವನಗೊಂಡಿತು. ಅಮೆರಿಕ, ಮೆಕ್ಸಿಕೋಗಳಲ್ಲಿ ಫ್ರೆಸ್ಕೊ ವಿಧಾನ ಬಳಕೆಗೆ ಬಂತು. ಮೆಕ್ಸಿಕೋದ ಆಧುನಿಕ ಫ್ರೆಸ್ಕೊ ಚಿತ್ರಕಾರರಲ್ಲಿ ಡೀಗೊ ರಿವೆರ ಮತ್ತು ಜೋಸ್ ಕ್ಲೆಮೆಂಟ್ ಬರೋಜ್ಕೊ ಪ್ರಮುಖರು. ಬರೋಜ್ಕೋನ 'ಸೃಜನಶೀಲ ಮಾನವ' ಎಂಬ ಫ್ರೆಸ್ಕೊದಲ್ಲಿ, ಸುತ್ತಿಗೆ ಹಿಡಿದು ಏನನ್ನೋ ಬಡಿಯು ಹೊರಟಿರುವವನೊಬ್ಬನನ್ನೂ ವಿಭಾಜನ ಮಟ್ಟ, ವಿಭಾಜಕಗಳನ್ನಿಟ್ಟುಕೊಂಡು ಏನೋ ರೇಖಿಸಲು ಪ್ರಯತ್ನಿಸುವ ಇಬ್ಬರನ್ನೂ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.

ದೃಶ್ಯಗಳನ್ನು ನಿರ್ದಿಷ್ಟ ರೇಖೆಗಳಲ್ಲಿ ನಿಚ್ಚಳವಾಗಿ ಮೂಡಿಸಲು ಫ್ರೆಸ್ಕೊ ಉತ್ತಮ ತಂತ್ರ.


ಅಜಂತಾ ಗೋಡೆಯ ಕಿರುಚಿತ್ರ ಮಾಲಿಕೆ

16ನೆಯ ಶತಮಾನದ, ಫ್ಲಾರೆನ್ಸಿನ ಬರೆಹಗಾರ–ಕಲಾವಿದ–ವಾಸ್ತುಶಿಲ್ಪಿ ಜಾರ್ಜಿಯೋವಸಾರಿ, ಫ್ರೆಸ್ಕೋವನ್ನು ಕುರಿತು "ಇದು ನಿಜವಾಗಿಯೂ ತುಂಬ ದೃಢವಾದದ್ದು, ಖಚಿತವಾದದ್ದು, ಇತರ ಚಿತ್ರುದ ವಿಧಾನಗಳೆಲ್ಲಕ್ಕಿಂತಲೂ ದೀರ್ಘ ಕಾಲ ಬಾಳಿಕೆ ಬರುವಂಥದ್ದು. ದಿನ ಕಳೆದಂತೆ ಉಳಿದವಕ್ಕಿಂತ ಹೆಚ್ಚು ಮನೋಹರತೆಯನ್ನೂ ಸಾಮರಸ್ಯವನ್ನೂ ಇದು ಖಂಡಿತವಾಗಿಯೂ ಪಡೆಯುತ್ತದೆ" ಎಂದಿದ್ದಾನೆ.

ನವೋದಯದ ಆರಂಭದಿಂದ ಇಂದಿನವರೆಗೆ ಭಿತ್ತಿಚಿತ್ರದ ಎಲ್ಲ ಅವಶ್ಯತೆಗಳನ್ನೂ ಸಮರ್ಥವಾಗಿ ಪೂರೈಸಿಕೊಟ್ಟಿರುವ ತಂತ್ರ ಫ್ರೆಸ್ಕೊ. ಚಿತ್ರಣ ವಿಧಾನಗಳಲ್ಲಿ ಅನೇಕ ಬದಲಾವಣೆಗಳಾಗಿದ್ದರೂ ಫ್ರೆಸ್ಕೊ ತಂತ್ರ ಇಂದಿಗೂ ಉತ್ಕೃಷ್ಟ ಚಿತ್ರಣ ಮಾಧ್ಯಮವೆಂಬ ಕೀರ್ತಿಯನ್ನು ಉಳಿಸಿಕೊಂಡು ಬಂದಿದೆ.

ಗೋಡೆಗಳ ಮೇಲೆ ತೈಲವರ್ಣದಿಂದ ಚಿತ್ರಗಳನ್ನು ರಚಿಸುವ ಪದ್ಧತಿಯೂ ಇದೆ. ಪ್ರಚಾರಕ್ಕಾಗಿ, ಚಿತ್ರಗಳನ್ನು ಕಾಗದದ ಮೇಲೆ ಮುದ್ರಿಸಿ ಅವನ್ನು ಗೋಡೆಗಳಿಗೆ ಅಂಟಿಸುತ್ತಾರೆ. ಇವನ್ನೂ ಭಿತ್ತಿಚಿತ್ರಗಳೆಂದು ಕರೆಯುವ ವಾಡಿಕೆ ಇದೆ. ಇಂಥ ಭಿತ್ತಿಚಿತ್ರಗಳು ಪ್ರಚಾರ ದೃಷ್ಟಿಯಿಂದ ಪ್ರೇರಿತವಾಗಿದ್ದರೂ, ಪ್ರಚಾರವೇ ಅವುಗಳ ಮುಖ್ಯ ಉದ್ದೇಶವಾಗಿದ್ದರೂ ಇವುಗಳಲ್ಲಿ ಕೆಲವು ಕಲಾತ್ಮಕವಾಗಿರುತ್ತವೆ; ಕಲಾಕೃತಿಗಳೆಂದು ಭಾವಿಸುವಷ್ಟು ಆಕರ್ಷಕವಾಗಿರುತ್ತವೆ.

ನಗರಗಳಲ್ಲಿ ಎಷ್ಟೋ ಕಡೆ ಗೋಡೆಯ ಒಂದಂಗುಲವೂ ಕಾಣಿಸದಂತೆ ಪ್ರಚಾರ ಭಿತ್ತಿಚಿತ್ರಗಳನ್ನು ಅಂಟಿಸಿಬಿಡುತ್ತಾರೆ. ಭಾರತದಲ್ಲಿ ಚುನಾವಣೆಯ ವೇಳೆ ಗೋಡೆಗಳನ್ನು ಭಿತ್ತಿಚಿತ್ರಗಳು ಆವರಿಸುತ್ತವೆ.

ಖ್ಯಾತ ಫ್ರೆಂಚ್ ಚಿತ್ರಕಾರ ಲಾತ್ರೆಕ್ ಇಂಥ ಕಲಾತ್ಮಕ ಪ್ರಚಾರ ಭಿತ್ತಿ–ಚಿತ್ರಗಳನ್ನು ಬರೆದವರಲ್ಲಿ ಮೊದಲಿಗ.

ನೋಡಿ : ಅಜಂತ, ಎಲ್ಲೋರ ; ಚರಿತ್ರಪೂರ್ವಕಲೆ ; ಜಿಯತ್ತೊ ; ಮೈಕೆಲೆಂಜಲೋ ; ರಾಫೇಲ್ ; ಲಾತ್ರೆಕ್

## ಮಕ್ಕಳ ಸಾಹಿತ್ಯ

"ಅಜ್ಜಿ, ಕಥೆ ಹೇಳಜ್ಜೀ. ..." "ಅಮ್ಮಾ, ಒಂದು ಕಥೆ ಹೇಳೇ ......"

ಮಕ್ಕಳು ಮಾಡುವ ಈ ಬಗೆಯ ವಿನಂತಿ ಎಲ್ಲ ಮನೆಗಳಲ್ಲಿಯೂ ಕೇಳಬರುತ್ತದೆ. ಜೋಗುಳ ಹಾಡಿನಿಂದ ಮೊದಲಾಗಿ ಅದ್ಭುತ ರಮ್ಯ ಕಿನ್ನರಿಕಥೆಗಳ ತನಕ ವರ್ಣವೈವಿಧ್ಯ ಉಳ್ಳ ಕ್ಷೇತ್ರ ಮಕ್ಕಳಸಾಹಿತ್ಯ.

ಪ್ರಾಚೀನ ಕಾಲದಲ್ಲಿ ಚಾರಣ ಕವಿಗಳು ಊರಿಂದ ಊರಿಗೆ ಸಂಚರಿಸಿ, ಕಥನಕವನಗಳನ್ನು ಹಾಡುತ್ತ ಮಕ್ಕಳ ಮನಸ್ಸನ್ನು ರಂಜಿಸುತ್ತಿದ್ದರು. 12-13ನೆಯ ಶತಮಾನಗಳಲ್ಲಿ ಜರ್ಮನಿಯಲ್ಲಿ ಇಂಥ ಕವಿಗಳು ಹೇರಳವಾಗಿದ್ದರು; ಅವರು ಸೃಷ್ಟಿಸಿದ ಸಾಹಿತ್ಯದ ಪಾತ್ರಗಳು ರಾಜರಾಣಿಯರು, ಮಾಂತ್ರಿಕರು, ರಾಕ್ಷಸರು, ವೀರಯೋಧರು, ಮತ್ತಿತರರು. ಮೊಟ್ಟಮೊದಲು ಲ್ಯಾಟಿನ್ ಭಾಷೆಯಲ್ಲಿ ಮಕ್ಕಳಿಗಾಗಿ ಪುಸ್ತಕಗಳನ್ನು ರಚಿಸಿದವನು ಇಂಗ್ಲೆಂಡಿನ ಒಬ್ಬ ಉಪಾಧ್ಯಾಯ, ಬೀಡ್ ಎಂಬಾತ. ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್ ಆನ್‌ಸೆಲ್ಮ್ ಮಕ್ಕಳಿಗಾಗಿ ಸಾಮಾನ್ಯ ತಿಳಿವಳಿಕೆ ನೀಡುವ ವಿಶ್ವಕೋಶವನ್ನು ರಚಿಸಿದ. ಈಯೆಲ್ಲ ಬರೆವಣಿಗೆ ಹಸ್ತಾಕ್ಷರದಲ್ಲೇ ಇತ್ತು.

15ನೆಯ ಶತಮಾನದಲ್ಲಿ ಮುದ್ರಣ ರೂಢಿಗೆ ಬಂದ ಆರಂಭದಲ್ಲೇ ಅಚ್ಚಾದ ಪುಸ್ತಕ 'ಈಸೋಪನ ನೀತಿಕಥೆಗಳು'. ಮುಂದೆ ಕಿರಿಯರು ಹಿರಿಯರೆಲ್ಲರನ್ನೂ ರಂಜಿಸಿದ ಸ್ವಿಫ್ಟ್ ಬರೆದ 'ಗಲಿವರನ ಪ್ರವಾಸಗಳು,' ಡೆಫೋ ಬರೆದ 'ರಾಬಿನ್‌ಸನ್ ಕ್ರೂಸೋ' ಪ್ರಕಟವಾದುವು.

'ನಿದ್ರಾಸುಂದರಿ', 'ಸಿಂಡರೆಲ್ಲಾ' ಕತೆಗಳು ಫ್ರಾನ್ಸಿನಲ್ಲಿ ಜನ್ಮತಳೆದುವು. ಜರ್ಮನಿಯ ಗ್ರಿಮ್ ಸಹೋದರರು (ಜೇಕಬ್ ಗ್ರಿಮ್ ಮತ್ತು ವಿಲ್‌ಹೆಲ್ಮ್ ಗ್ರಿಮ್) ಮಕ್ಕಳಿಗಾಗಿ ಚಿರಕಾಲ ಬಾಳುವಂಥ ಕಥೆಗಳನ್ನು ಬರೆದರು.

ಪರ್ಷಿಯನ್ ಭಾಷೆಯ 'ಸಾವಿರದೊಂದು ರಾತ್ರಿ' ಕಥೆಗಳು ಫ್ರೆಂಚ್ ಮತ್ತು ಇಂಗ್ಲಿಷ್ ಭಾಷೆಗಳಿಗೂ ಮುಂದೆ ಜಗತ್ತಿನ ಇತರ ಭಾಷೆಗಳಿಗೂ ಅನುವಾದಗೊಂಡು ವಿಶ್ವದಾದ್ಯಂತ ಜನಪ್ರಿಯವಾದವು. ಅಲಿಬಾಬ ಮತ್ತು ನಲವತ್ತು ಕಳ್ಳರು, ಅಲ್ಲಾವುದ್ದೀನನ ಅದ್ಭುತ ದೀಪ, ಸಿಂದಾಬಾದ್ ನಾವಿಕ—ಇವೆಲ್ಲ ಈ ಸಂಗ್ರಹದಲ್ಲಿನ ಕಥೆಗಳು.

ಮಕ್ಕಳ ಸಾಹಿತ್ಯದಲ್ಲಿ ಜಗತ್ಪ್ರಸಿದ್ಧವಾದ ಹೆಸರು ಡೆನ್ಮಾರ್ಕಿನ ಹಾನ್ಸ್ ಕ್ರಿಶ್ಚಿಯನ್ ಆಂಡರ್‌ಸನ್. ಅವನ ಕಥಾಸಂಕಲನ ಡೆನ್ಮಾರ್ಕಿನ ಗ್ರಾಮೀಣ ಜೀವನದ ಸುಂದರಚಿತ್ರವನ್ನು ನೀಡುತ್ತದೆ. ಇವನ ಕಥೆಗಳು ಭೌಗೋಳಿಕ ಎಲ್ಲೆಗಳನ್ನು ದಾಟಿ ಯೂರೋಪಿನ ಸೊತ್ತಾದುವು. ಮುಂದೆ ಅವನ ಶೈಲಿಯನ್ನು ಅನುಸರಿಸಿ ಅನೇಕರು ಬರೆದರು.



ಹೊಯ್ಸಳ

ಗಣಿತವಿಜ್ಞಾನದ ಪ್ರಾಧ್ಯಾಪಕ ಚಾರ್ಲ್ಸ್ ಡಾಜ್‌ಸನನು ಲೂಯಿ ಕ್ಯಾರೆಲ್ ಎಂಬ ಕಾವ್ಯ ನಾಮದಿಂದ 'ಆಲೀಸ್ ಇನ್ ವಂಡರ್‌ಲ್ಯಾಂಡ್' ಎಂಬ ಕೃತಿಯನ್ನು ಬರೆದ. ಜನಪ್ರಿಯತೆಯಲ್ಲಿ ಅದು ಬೈಬಲನ್ನೂ ಷೇಕ್ಸ್‌ಪಿಯರನ ನಾಟಕಗಳನ್ನೂ ಸರಿಗಟ್ಟುತ್ತದೆ. 19ನೆಯ ಶತಮಾನದ ಅಂತ್ಯದಲ್ಲಿ ಅಮೆರಿಕದ ಖ್ಯಾತ ಹಾಸ್ಯ ಲೇಖಕ ಮಾರ್ಕ್ ಟ್ವೇನ್ ಬರೆದ 'ಟಾಮ್‌ಸಾಯರನ ಸಾಹಸಗಳು', 'ಹಕ್ಲ್ ಬೆರಿಫಿನನ ಸಾಹಸಗಳು' ಕಿರಿಯ ಓದುಗರಿಗೆ ಪ್ರಿಯವಾದುವು.

ಲೂಯಿ ಕ್ಯಾರೆಲನ 'ಆಲೀಸ್ ಇನ್ ವಂಡರ್‌ಲ್ಯಾಂಡ್' ನಲ್ಲಿ "ಚಿತ್ರಗಳಿಲ್ಲದ್ದು ಅದೆಂಥ ಪುಸ್ತಕ ?" ಎಂದು ಆಲಿಸ್ ಕೇಳಿದ್ದಳು. ಆ ಪುಸ್ತಕಕ್ಕೆ ಸ್ವತಃ ಕ್ಯಾರೆಲನೇ ಚಿತ್ರಗಳನ್ನು ಬರೆದ.

20ನೆಯ ಶತಮಾನದಲ್ಲಿ ಮಕ್ಕಳಿಗಾಗಿ ಸಚಿತ್ರ ಪುಸ್ತಕಗಳ ಪ್ರಕಟಣೆ ದೊಡ್ಡ ಪ್ರಮಾಣದಲ್ಲಿ ಆರಂಭವಾಯಿತು. ವಿಷಯದ ವಿವರಣೆ ಮತ್ತು ಅದನ್ನು ನಿರೂಪಿಸುವ ಚಿತ್ರಗಳು ಒಂದಕ್ಕೊಂದು ಪೂರಕವಾದುವು.

ಚಿತ್ರಗಳ ಮೂಲಕ ಕಥೆಯನ್ನು ನಿರೂಪಿಸುವ ಮಕ್ಕಳ ಕಾಮಿಕ್ ಪುಸ್ತಕಗಳು ರೂಪತಳೆದುವು.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಸಂಸ್ಕೃತ ಮೂಲದ 'ಪಂಚತಂತ್ರ' ಕಥೆಗಳೂ 'ಹಿತೋಪದೇಶ' ಕಥೆಗಳೂ ಎಲ್ಲ ದೇಶೀಯ ಭಾಷೆಗಳ ಮೂಲಕವೂ ಹರಿದುಬಂದು ಮಕ್ಕಳ ಮನಸ್ಸನ್ನು ರಂಜಿಸಿವೆ. ದೇಶದ ಗಡಿಯಾಚೆಗೂ ಸಾಗಿ ಬೇರೆ ಭಾಷೆಗಳಲ್ಲೂ ಅವತರಿಸಿವೆ.

ಕನ್ನಡದಲ್ಲಿ ಲಾಲಿ ಪದಗಳು, ಒಗಟುಗಳು, ಮನೆಯಲ್ಲಿ ಅಜ್ಜ ಅಜ್ಜಿಯರು ಹೇಳುವ ರಾಜಕುಮಾರ-ರಾಜಕುಮಾರಿಯರ ಕತೆಗಳು, ರಾಮಕೃಷ್ಣಾದಿ ಅವತಾರ ಪುರುಷರ ಲೀಲೆಗಳನ್ನು ವರ್ಣಿಸುವ ಕತೆಗಳು, 'ಪಂಚತಂತ್ರ'ದ ನೀತಿಕಥೆಗಳು—ಇವೇ ಚಿಕ್ಕಮಕ್ಕಳಿಗೆ ನಮ್ಮಲ್ಲಿ ಸಿಗುವ ಪ್ರಥಮ ಶಿಕ್ಷಣ. ಮುದ್ರಣಕಲೆ ಬಂದ ಬಳಿಕ ಶಾಲೆಯಲ್ಲಿ ಕಲಿಯುವ ಮಕ್ಕಳಿಗಾಗಿ ಪಠ್ಯ ಪುಸ್ತಕಗಳು ರಚಿತವಾದವು. ಜಿ.ವಾಸುದೇವಯ್ಯನವರ ಒಂದನೆಯ ಬಾಲಬೋಧೆಯಲ್ಲಿ ಸುಲಭವಾದ ರಮ್ಯವಾದ ಪದಗಳನ್ನು ಮೊದಲು ಅಚ್ಚು ಹಾಕಿದರು. ಮಕ್ಕಳಿಗೆ ನಿಜವಾದ ತಿಳಿವಳಿಕೆ ಕೊಡುವ ದೃಷ್ಟಿಯಿಂದ ಗಹನ ವಿಷಯಗಳನ್ನು ಪುಟ್ಟಪುಟ್ಟ ವಾಕ್ಯಗಳಲ್ಲಿ ಅರ್ಥವಾಗುವಂತೆ ಬರೆಯಲಾಯಿತು.

ಎಂ. ಎಸ್. ಪುಟ್ಟಣ್ಣನವರ 'ನೀತಿ ಚಿಂತಾಮಣಿ' ಮಕ್ಕಳ ಜನಪ್ರಿಯ ಪುಸ್ತಕ. ಕುವೆಂಪು ಅವರ 'ಬೊಮ್ಮನ ಹಳ್ಳಿಯ ಕಿಂದರಿಜೋಗಿ' ಮತ್ತು 'ಮೋಡಣ್ಣನ ತಮ್ಮ' ಕನ್ನಡ ಮಕ್ಕಳ ಮೆಚ್ಚಿನ ಕೃತಿಗಳು.

ಪಂಜೆ ಮಂಗೇಶರಾಯ, ಶಿವರಾಮ ಕಾರಂತ, ಜಿ. ಪಿ. ರಾಜರತ್ನಂ, ಮೇವುಂಡಿ ಮಲ್ಲಾರಿ, ದ. ಕೃ. ಭಾರದ್ವಾಜ, ದೇವುಡು, ನಾ. ಕಸ್ತೂರಿ, ಹೊಯ್ಸಳ, ಬಿ. ಎಸ್. ಪಾಂಡುರಂಗರಾವ್, ಬಿ. ದಾಮೋದರ ಬಾಗ, ಬಿ. ಶಂಕರಭಟ್ಟ, ಬಿ. ಎಂ. ಶರ್ಮಾ ಮತ್ತು 'ಸಿಸು' ಸಂಗಮೇಶ—ಇವರೆಲ್ಲ ಮಕ್ಕಳ ಸಾಹಿತ್ಯ ರಚನೆಗಾಗಿ ದುಡಿದಿರುವವರಲ್ಲಿ ಪ್ರಮುಖರು.

ಮೇವುಂಡಿ ಮಲ್ಲಾರಿ

ಎ. ಆರ್. ಕೃಷ್ಣಶಾಸ್ತ್ರೀ ಅವರ 'ನಿರ್ಮಲ ಭಾರತೀ' ಕನ್ನಡದ ಮಕ್ಕಳ ಸಾಹಿತ್ಯಕ್ಕೆ ಒಂದು ಶ್ರೇಷ್ಠ ಕೊಡುಗೆ. ಅನುಪಮಾ ನಿರಂಜನ ಅವರ 'ದಿನಕ್ಕೊಂದು ಕಥೆ' ಮಕ್ಕಳಿಗಾಗಿ ಬರೆದ ಮುನ್ನೂರ ಅರವತ್ತೈದು ಕಥೆಗಳುಳ್ಳ ಸಂಪುಟ.

ಲಲಿತಸಾಹಿತ್ಯ ಮಾತ್ರವಲ್ಲದೆ ವಿಜ್ಞಾನ ಮತ್ತಿತರ ವಿಷಯಗಳ ಮೇಲೂ ಮಕ್ಕಳ ಸಾಹಿತ್ಯ ರಚನೆಯಾಗುತ್ತಿದೆ. ಈ ವಿಷಯದಲ್ಲಿ ಪಾಶ್ಚಾತ್ಯ ರಾಷ್ಟ್ರಗಳ ಸಾಧನೆ ದೊಡ್ಡದು. ಭಾರತದಲ್ಲೂ ಕನ್ನಡವನ್ನೊಳಗೊಂಡು ಎಲ್ಲ ಭಾಷೆಗಳಲ್ಲಿ ಇಂಥ ಸಾಹಿತ್ಯಸೃಷ್ಟಿ ಮಕ್ಕಳ ಸಾಹಿತ್ಯ ರಚನೆಯಲ್ಲಿ ಹೊಸ ಅಧ್ಯಾಯವನ್ನು ತೆರೆದಿದೆ.

ನೋಡಿ : ಈಸೋಪ್ ; ಎಂ. ಎಸ್. ಪುಟ್ಟಣ್ಣ ; ಎ. ಆರ್. ಕೃಷ್ಣಶಾಸ್ತ್ರೀ ; ಕುವೆಂಪು ; ಗ್ರಿಮ್ ಸಹೋದರರು ; ಡೆಫೊ ; ದೇವುಡು ; ನೀತಿಕಥೆ ; 'ಪಂಚತಂತ್ರ' ; ಪಂಜೆ ಮಂಗೇಶರಾಯ ; ಮಾರ್ಕ್ ಟ್ವೇನ್ ; ಶಿವರಾಮ ಕಾರಂತ ; 'ಸಾವಿರದೊಂದು ರಾತ್ರಿ' ; ಸ್ವಿಫ್ಟ್ ; ಹಾನ್ಸ್ ಕ್ರಿಶ್ಚಿಯನ್ ಆಂಡರ್‌ಸನ್

## ಮಮ್ಮಟ

"ಕಾವ್ಯವು ಕೀರ್ತಿಗಾಗಿ, ಧನಾರ್ಜನೆಗಾಗಿ, ವ್ಯವಹಾರಜ್ಞಾನಕ್ಕಾಗಿ, ಅಮಂಗಳ ನಿವಾರಣೆಗಾಗಿ, ತತ್ಕಾಲದಲ್ಲಿ ಪರಮಾನಂದವನ್ನು ಪಡೆಯುವುದಕ್ಕಾಗಿ, ಪ್ರಿಯಪತ್ನಿಯಂತೆ ಉಪದೇಶಿಸುವುದಕ್ಕಾಗಿ".

ಕವಿ ಮತ್ತು ಸಹೃದಯನ ದೃಷ್ಟಿಯಿಂದ ಕಾವ್ಯದ ಪ್ರಯೋಜನವನ್ನು ಮಮ್ಮಟ ಹೀಗೆ ನಿರೂಪಿಸಿದ್ದಾನೆ.

ಲಕ್ಷಣಶಾಸ್ತ್ರ ಪ್ರಪಂಚದಲ್ಲಿ ಮಮ್ಮಟನ 'ಕಾವ್ಯಪ್ರಕಾಶ'ಕ್ಕೆ ಗೌರವದ ಸ್ಥಾನವಿದೆ. ಕಾವ್ಯಪ್ರಪಂಚದ ಹಲವಾರು ಮುಖ್ಯ ಅಂಶಗಳನ್ನು ಕ್ರಮಬದ್ಧವಾಗಿ ಸಮನ್ವಯಗೊಳಿಸಿದ ಗ್ರಂಥ ಇದು. ವಿಷಯ ಸಂಗ್ರಹಣ, ವಿಷಯ ಪ್ರತಿಪಾದನೆಯ ಕ್ರಮ, ಭಾಷೆ ಮತ್ತು ಶೈಲಿಯ ದೃಷ್ಟಿಯಿಂದ ಮಮ್ಮಟನ ಗ್ರಂಥಕ್ಕೆ ವಿಶೇಷ ಮಾನ್ಯತೆ ಇದೆ. ಕಾವ್ಯದ ಲಕ್ಷಣ, ಕಾವ್ಯ ಪ್ರಯೋಜನ, ಶಬ್ದಾರ್ಥ ವಿಚಾರ, ಕಾವ್ಯದ ಗುಣದೋಷಗಳು, ಶಬ್ದಾಲಂಕಾರ, ಅರ್ಥಾಲಂಕಾರಗಳು, ಚಿತ್ರಕಾವ್ಯದ ಲಕ್ಷಣಗಳು, (ಚಿತ್ರಕಾವ್ಯ-ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಜೋಡಿಸಿ ಸಾಧಿಸುವ ಶಬ್ದವೈಚಿತ್ರ್ಯ) ಮುಂತಾದ ವಿಚಾರಗಳನ್ನು ವಿಸ್ತಾರವಾಗಿ ಈ ಗ್ರಂಥ ನಿರೂಪಿಸುತ್ತದೆ.

'ಕಾವ್ಯಪ್ರಕಾಶ'ಕ್ಕೆ ಸುಮಾರು 70 ವ್ಯಾಖ್ಯಾನಗಳು ರಚಿಸಲ್ಪಟ್ಟಿವೆ. 'ಕಾವ್ಯಪ್ರಕಾಶ'ಕ್ಕೆ ಮನೆಮನೆಯಲ್ಲೂ ವ್ಯಾಖ್ಯಾನಗಳು ಹುಟ್ಟಿವೆ. ಆದರೂ ಇದು ಹಿಂದಿನಂತೆಯೇ ಕ್ಲಿಷ್ಟವಾಗಿಯೇ ಇದೆ, ಎಂದು ಒಬ್ಬ ವ್ಯಾಖ್ಯಾನಕಾರ ಹೇಳುತ್ತಾನೆ. 'ಕಾವ್ಯಪ್ರಕಾಶ'ದ ಮೊತ್ತಮೊದಲನೆಯ ವ್ಯಾಖ್ಯಾನಕಾರ ಮಾಣಿಕ್ಯಚಂದ್ರ.

ಮಮ್ಮಟನು ಕ್ರಿ. ಶ. ಸುಮಾರು 1100ರಲ್ಲಿ ಜೀವಿಸಿದ್ದಿರಬೇಕು. ಆತನ ಗ್ರಂಥದ ಪ್ರಥಮ ವ್ಯಾಖ್ಯಾನವು ಕ್ರಿ. ಶ. 1159–60ರಲ್ಲಿ ರಚಿತವಾಯಿತು. ಮಮ್ಮಟನು 'ನೈಷಧೀಯ' ಕರ್ತೃ ಶ್ರೀಹರ್ಷನ (ಕಾಲ : ಕ್ರಿ.ಶ. 12ನೆಯ ಶತಮಾನದ ಉತ್ತರಾರ್ಧ) ಸೋದರಮಾವ ಎಂಬ ಹೇಳಿಕೆಯಿದೆ.

ಹಿಂದಿನ ಆಲಂಕಾರಿಕರ ಅಭಿಪ್ರಾಯಗಳನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿ, ಅದನ್ನು ಸ್ಪಷ್ಟ ಸಿದ್ಧಾಂತವನ್ನಾಗಿ ರೂಪಿಸಿರುವುದು ಮಮ್ಮಟನ ಹಿರಿಮೆ.

## ಮಯಾಕೊವ್‌ಸ್ಕಿ

ರಷ್ಯದ ಮಯಾಕೊವ್‌ಸ್ಕಿ ಬಹುಮುಖ ಪ್ರತಿಭೆಯನ್ನು ಮೆರೆದ ಸಾಹಿತಿ, ಕಲಾವಿದ. ಅವನು ಕವಿತೆ, ನಾಟಕಗಳನ್ನು ಬರೆದ. ಕಮ್ಯೂನಿಸಮಿನ ಪ್ರಚಾರಕ್ಕಾಗಿ ವರ್ಣಚಿತ್ರ, ವ್ಯಂಗ್ಯಚಿತ್ರಗಳನ್ನು ರಚಿಸಿಕೊಟ್ಟ. ಮಕ್ಕಳಿಗಾಗಿ ಬೋಧಪ್ರದ ಪುಸ್ತಕಗಳನ್ನು ಬರೆದ. ಚಲಚ್ಚಿತ್ರಕ್ಕೆ ಸಾಹಿತ್ಯವನ್ನೊದಗಿಸಿದ್ದು ಮಾತ್ರವಲ್ಲದೆ, ಕೆಲವು ಚಿತ್ರಗಳಲ್ಲಿ ಪಾತ್ರವನ್ನೂ ವಹಿಸಿದ. ಮ್ಯಾಕ್ಸಿಂ ಗಾರ್ಕಿಯ 'ಕ್ರಾನಿಕಲ್' ಎಂಬ ನಿಯತಕಾಲಿಕದಲ್ಲಿಯೂ ಕೆಲಸ ಮಾಡುತ್ತಿದ್ದ. 1935ರಲ್ಲಿ ರಷ್ಯದ ನಾಯಕ ಸ್ಟಾಲಿನ್, " ಸೋವಿಯೆತ್ ಯುಗದ ಅತ್ಯುತ್ತಮ ಹಾಗೂ ಮೇಧಾವಿ ಕವಿ " ಎಂದು ಇವನನ್ನು ಕೊಂಡಾಡಿದ.

ಕಾರಾಗೃಹದಲ್ಲಿ ಏಕಾಕಿಯಾಗಿ ಬಂಧನದಲ್ಲಿದ್ದಾಗ ಮಯಾಕೊವ್‌ಸ್ಕಿ 1909ರಲ್ಲಿ ಕವಿತಾರಚನೆ ಆರಂಭಿಸಿದ. ಅಲ್ಲಿಂದ ಹೊರಬಂದ ಮೇಲೆ ಸಾಂಪ್ರದಾಯಿಕ ಕಲೆಯನ್ನು ವಿರೋಧಿಸಿ ನೂತನ ಮಾರ್ಗವನ್ನು ಅನುಸರಿಸುವವರ ಗುಂಪಿಗೆ ಸೇರಿದ. 1912ರಲ್ಲಿ ಈ ಪಂಥದವರ ಕವನ ಸಂಗ್ರಹ ಸಾರ್ವಜನಿಕ ಅಭಿರುಚಿಗೆ ಸವಾಲುಹಾಕಿತು. ಇದರಲ್ಲಿ ಮಯಾಕೊವ್‌ಸ್ಕಿಯ ಕವನಗಳು ಪ್ರಥಮ ಬಾರಿಗೆ ಪ್ರಕಟವಾದುವು. ಈ ಪಂಥದ ಪ್ರಮುಖ ಕವಿ ಎಂಬ ಖ್ಯಾತಿ ಅವನಿಗೆ ದೊರೆಯಿತು. 'ಷರಾಯಿಯಲ್ಲಿ ಮೋಡಗಳು', ಅವನ ಹೆಸರಾಂತ ಕವಿತೆ. ವಿಡಂಬನಾತ್ಮಕ ನಾಟಕ ' ತಗಣೆ' ಹಾಗೂ ಅನೇಕ ನಾಟಕಗಳನ್ನು ಅವನು ಬರೆದಿದ್ದಾನೆ. ಇವುಗಳಲ್ಲಿ ಹೆಚ್ಚಿನವು ರಷ್ಯದ ಕಮ್ಯೂನಿಸ್ಟ್ ಪಕ್ಷದ ಪ್ರಚಾರಕ್ಕಾಗಿ ಬರೆದ ಕವಿತೆ, ನಾಟಕಗಳು. 1913ರಲ್ಲಿ 'ವ್ಲಾದಿಮಿರ್ ಮಯಾಕೊವ್‌ಸ್ಕಿ' ಎಂಬ ಕಾವ್ಯಮಯ ಏಕಪಾತ್ರವಿರುವ ನಾಟಕವನ್ನು ಬರೆದು ಆತ ತಾನೇ ಅದನ್ನು ಅಭಿನಯಿಸಿದ. ರಷ್ಯದ ನಾಯಕ ಲೆನಿನ್ ನಿಧನನಾದಾಗ ಇವನು ಬರೆದ ಗೀತೆ ಶ್ರೇಷ್ಠ ಶೋಕ ಗೀತೆಯಾಗಿದೆ.

ಮಯಾಕೊವ್‌ಸ್ಕಿ ಸಮಕಾಲೀನ ಘಟನೆಗಳನ್ನು ತನ್ನ ಕವಿತೆಗಳಲ್ಲಿ ಬಣ್ಣಿಸಿದ್ದಾನೆ. ಪ್ರಪಂಚದ ಬಗೆಗೆ ಅವನಿಗಿದ್ದ ಅತೃಪ್ತಿ ಅವನ ಕೆಲವು ಕವನಗಳಲ್ಲಿ ವ್ಯಕ್ತವಾಗಿದೆ. ಇತರ ಕವಿಗಳಂತಲ್ಲದೆ ಜನಸಾಮಾನ್ಯರು ಬಳಸುವ ಮಾತುಗಳನ್ನೇ ತನ್ನ ಕವಿತೆಗಳಲ್ಲಿ ಅವನು ಉಪಯೋಗಿಸಿದ್ದಾನೆ; ರಚನಾತಂತ್ರದಲ್ಲೂ ನವೀನ ವಿಧಾನ.

1893ನೆಯ ಜುಲೈ 19ರಂದು ಮಯಾಕೊವ್‌ಸ್ಕಿ ಜಾರ್ಜಿಯಾದ ಬಾಗ್‌ದಡಿಯಲ್ಲಿ (ಈಗ ಈ ಊರನ್ನು–ಮಯಾಕೊವ್‌ಸ್ಕಿ ಎಂದು ಕರೆಯುತ್ತಾರೆ) ಜನಿಸಿದ. ಯುವಕನಾದಾಗ 1908ರಲ್ಲಿ ರಷ್ಯದ ಬಾಲ್ಷೆವಿಕ್ ಪಕ್ಷಕ್ಕೆ ಸೇರಿದ. ರಷ್ಯದ ಮಹಾಕ್ರಾಂತಿಯ ಅನಂತರ ಬಾಲ್ಷೆವಿಕ್ ಪಕ್ಷ ಅಧಿಕಾರಕ್ಕೆ ಬಂದಾಗ ಮಯಾಕೊವ್‌ಸ್ಕಿ ಪಕ್ಷದ ಪ್ರಚಾರಕ್ಕೆ ತನ್ನ ಕಲಾ ಶಕ್ತಿಯನ್ನು ಉಪಯೋಗಿಸತೊಡಗಿದ; ಕವಿತೆ ನಾಟಕಗಳನ್ನು ಪರಿಣಾಮಕಾರಿಯಾಗಿ ಪ್ರಚಾರಕ್ಕೆ ಬಳಸಿಕೊಂಡ.

ಮಯಾಕೊವ್‌ಸ್ಕಿಯ ವೈಯಕ್ತಿಕ ಜೀವನ ಸುಖಮಯವಾಗಿರಲಿಲ್ಲ. 1930ರ ಏಪ್ರಿಲ್ 14ರಂದು ಮಾಸ್ಕೋದಲ್ಲಿ ಆತ ಆತ್ಮಹತ್ಯೆ ಮಾಡಿಕೊಂಡ.



ಕ್ರಾಂತಿಕವಿ ಮಯಾಕೊವ್‌ಸ್ಕಿ

ಮಯಾಕೊವ್‌ಸ್ಕಿ ಕವಿತಾರಚನೆಯಲ್ಲಿ ತುಳಿದ ಹೊಸ ಮಾರ್ಗ ಆತನ ಸಮಕಾಲೀನ ಹಾಗೂ ಅನಂತರದ ರಷ್ಯದ ಕವಿತೆಗಳ ಮೇಲೆ ತುಂಬಾ ಪ್ರಭಾವ ಬೀರಿತು.

## ಮಹಮುದ್ ಇಕ್ಬಾಲ್

"ಸಾರೇ ಜಹಾನ್‌ಸೆ ಅಚ್ಛಾ ಹಿಂದೂಸ್ತಾನ್ ಹಮಾರಾ"

ಭಾರತದ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿದ ಯುವಕಯುವತಿಯರ ನಾಲಿಗೆಗಳ ಮೇಲೆ ಕುಣಿದಾಡುತ್ತಿದ್ದ ಹಾಡು ಇದು. ಮುಹಮುದ್ ಇಕ್ಬಾಲ್ ಬರೆದ ಈ ಗೀತೆ ಪ್ರತಿಯೊಬ್ಬ ಭಾರತೀಯನ ಹೃದಯದಲ್ಲಿ ಹುಮ್ಮಸ್ಸು ತುಂಬುತ್ತಿತ್ತು.

ಈ ಶತಮಾನದ ಉರ್ದು ಕವಿಗಳಲ್ಲಿ ಇಕ್ಬಾಲ್‌ನಂಥ ಪ್ರತಿಭಾಶಾಲಿ ಇನ್ನೊಬ್ಬರಿಲ್ಲ.

ಇಕ್ಬಾಲ್‌ನ ಜನನ ಪಂಜಾಬಿನ ಸಿಯಾಲ್‌ಕೋಟ್‌ನಲ್ಲಿ, 1873 ರಲ್ಲಿ ಈತನ ಪೂರ್ವಜರು ಕಾಶ್ಮೀರಿ ಹಿಂದೂಗಳು. ವಿದ್ಯಾಭ್ಯಾಸ ಸಿಯಾಲ್‌ಕೋಟ್, ಲಾಹೋರ್, ಇಂಗ್ಲೆಂಡಿನ ಕೇಂಬ್ರಿಜ್, ಜರ್ಮನಿಯ



'ಸಾರೇ ಜಹಾನ್‌ಸೆ' : ಮಹಮದ್ ಇಕ್ಬಾಲ್

ಹೈಡೆಲ್‌ಬರ್ಗ್ ಮತ್ತು ಮ್ಯೂನಿಕ್‌ಗಳಲ್ಲಿ ಆಯಿತು. ಮ್ಯೂನಿಕ್ ವಿಶ್ವ ವಿದ್ಯಾಲಯದಿಂದ ತತ್ತ್ವಜ್ಞಾನದ ಡಾಕ್ಟರೇಟ್ ಪಡೆದ. 1908ರಲ್ಲಿ ಭಾರತಕ್ಕೆ ಮರಳಿದ ಇಕ್ಬಾಲ್ ಲಾಹೋರಿನಲ್ಲಿ ನೆಲೆಸಿ ವಕೀಲಿವೃತ್ತಿ ಆರಂಭಿಸಿದ, ರಾಜಕಾರಣಕ್ಕೆ ಕೈಹಾಕಿದ.

ಇಸ್ಲಾಮಿ ಪಂಥದ ಅಳಿದುಹೋದ ನಾಗರಿಕತೆಯಿಂದ ಆರಂಭಿಸಿ ಈಗಿನ ಹೀನಸ್ಥಿತಿಯನ್ನು ಪ್ರಸ್ತಾಪಿಸುವುದು ಇಕ್ಬಾಲ್‌ನ ಹೆಚ್ಚಿನ ಕವನಗಳ ವಸ್ತು. ಈ ಹಾಡುಗಳು ತಮ್ಮ ಪಂಥವನ್ನು ಸುಧಾರಿಸಿ ಒಗ್ಗಟ್ಟಾಗಲು ಮಹಮ್ಮದೀಯರಿಗೆ ಕರೆನೀಡಿ ಮುಕ್ತಾಯಗೊಳ್ಳುತ್ತವೆ. ಅಂಥ ವಿಶ್ವಾಸ ವನ್ನು ತೋಡೆದು ಸಮಾಜ ಸುಧಾರಣೆ ನಡೆಯಲೆಂದು ಈ ಗೀತೆಗಳು ಒತ್ತಾಯಪಡಿಸುತ್ತವೆ.

ಮಹಮದ್ ಇಕ್ಬಾಲ್ ಕವಿಯೂ ತತ್ತ್ವಜ್ಞಾನಿಯೂ ಆಗಿದ್ದ. ದಾರ್ಶನಿಕ ಕೃತಿಯಾದ 'ಅಸ್ರಾರ ಖುದ್ಮಿ' (1915)—ಆತ್ಮರಹಸ್ಯ—ಈತನ ಮೊದಲ ಮಹಾಕೃತಿ. ವ್ಯಕ್ತಿಯ ನೈತಿಕ ವಿಕಾಸವನ್ನು ಉಪದೇಶಿಸುವುದು ಇದರ ಮೂಲ ತತ್ತ್ವ. ಭಾರತದ ಮಧ್ಯಮ ವರ್ಗದ ಮಹಮ್ಮದೀಯರ ಮೇಲೆ ಅದರಲ್ಲೂ ಯುವಜನಾಂಗದ ಮೇಲೆ– ಇದರ ಪ್ರಭಾವ ಅಗಾಧವಾದದ್ದು. ಈ ಸಾಹಿತ್ಯವನ್ನು ಗೌರವಿಸಿ ಬ್ರಿಟಿಷ್ ಸರಕಾರ 1922ರಲ್ಲಿ ಇಕ್ಬಾಲ್‌ಗೆ 'ನೈಟ್' (ಸರ್) ಪದವಿಯನ್ನು ನೀಡಿತು.

ತನ್ನ ಹೆಚ್ಚಿನ ಕವಿತೆಗಳನ್ನು ಆತ ಪರ್ಷಿಯನ್ ಭಾಷೆಯಲ್ಲಿ ಬರೆಯುತ್ತಿದ್ದರೂ ಜನಸಾಮಾನ್ಯರಿಗೆ ತನ್ನ ಸಂದೇಶವನ್ನು ತಲಪಿಸಲು ಉರ್ದು ಭಾಷೆಯ ಮಾಧ್ಯಮವನ್ನು ಬಳಸುತ್ತಿದ್ದ. ಕವಿತಾರಚನೆಯ ಶಾಸ್ತ್ರೀಯ ಪದ್ಧತಿಯನ್ನು ಉಳಿಸಿಕೊಂಡೇ ಹೊಸ ವಿಧಾನಗಳನ್ನು ಆಚರಣೆಗೆ ತಂದವರಲ್ಲಿ ಇಕ್ಬಾಲ್ ಪ್ರಮುಖ.

ಪಶ್ಚಿಮದ ಜೀವನ ವಿಧಾನ ದರ್ಶನಗಳ ಬಗೆಗೆ ಇಕ್ಬಾಲ್‌ಗೆ ಅಸಮಾಧಾನವಿತ್ತು. ಹಲವು ವರ್ಷಗಳ ಅನಂತರ ಅವನು ಬರೆದ 'ಪಯಾಮೆ ಮಶರಿಕ್' ('ಪೂರ್ವದ ಸಂದೇಶ') ಜರ್ಮನ್ ಕವಿ ಗಯಟೆಯ ಪಶ್ಚಿಮದ ವಿಚಾರಸರಣಿಗೆ ಉತ್ತರವಾಗಿದೆ.

1927ರಲ್ಲಿ ಇಕ್ಬಾಲ್ ಪಂಜಾಬಿನ ವಿಧಾನಸಭೆಯ ಸದಸ್ಯನಾಗಿ ಆಯ್ಕೆಯಾದ. 1929ರಲ್ಲಿ ಆತ ಮೈಸೂರು ಮತ್ತು ಹೈದರಾಬಾದುಗಳನ್ನು ಸಂದರ್ಶಿಸಿದ. ಶ್ರೀರಂಗಪಟ್ಟಣದಲ್ಲಿ ಟಿಪ್ಪು ಸುಲ್ತಾನನ ಗೋರಿಯ ಮುಂದೆ ನಿಂತಾಗ ತನ್ನ 'ಜಾವಿದ್‌ನಾಮ' ಕೃತಿಯನ್ನು ಬರೆಯಲು ಪ್ರೇರಿತನಾದ.

1930ರಲ್ಲಿ ಮಹಮ್ಮದ್ ಇಕ್ಬಾಲ್ ಭಾರತೀಯ ಮುಸ್ಲಿಂ ಲೀಗಿನ ಅಧ್ಯಕ್ಷನಾದ. ಮುಸಲ್ಮಾನರಿಗೆ ಪ್ರತ್ಯೇಕ ದೇಶ ಬೇಕೆಂಬ ವಿಚಾರವನು ಆತ ಮುಂದಿಟ್ಟದ್ದು ಆಗಲೇ. ಭಾರತದ ವಿಭಜನೆಯ ವಿಚಾರ ಈತನಿಂದಲೆ ಆರಂಭವಾಯಿತು ಎನ್ನಬೇಕು. ಭಾರತದ ಸಂವಿಧಾನ ರಚನೆಗೆ ಏರ್ಪಡಿಸಿದ್ದ 1931ರ ದುಂಡು ಮೇಜಿನ ಪರಿಷತ್ತಿಗೆ ಇಕ್ಬಾಲನೂ ಪ್ರತಿನಿಧಿಯಾಗಿದ್ದ.

1938ರ ಏಪ್ರಿಲ್ 21ರಂದು ಇಕ್ಬಾಲ್ ಲಾಹೋರಿನಲ್ಲಿ ಕಾಲವಾದ.

ಇಕ್ಬಾಲ್ ಮಡಿದ ಒಂಬತ್ತೇ ವರ್ಷಗಳಲ್ಲಿ ಭಾರತ ಇಬ್ಭಾಗವಾಯಿತು. ಪಾಕಿಸ್ತಾನ ಮಹಮ್ಮದ್ ಇಕ್ಬಾಲ್‌ನನ್ನು ತನ್ನ ರಾಷ್ಟ್ರಕವಿ ಎಂದು ಅಂಗೀಕರಿಸಿತು.

## ಮಹಮದ್ ಪೀರ್

'ಚಂದ್ರಕಲಾ ನಾಟಕ ಮಂಡಲಿ' ಧಾರವಾಡದಲ್ಲಿ ಬೀಡುಬಿಟ್ಟಿತ್ತು. ಆ ದಿನ ನಾಟಕ ನೋಡಲು ಕನ್ನಡ ಧುರೀಣರಾದ ಮುದವೀಡು ಕೃಷ್ಣರಾಯರು. ಆಲೂರು ವೆಂಕಟರಾಯರು ಮತ್ತು ಕವಿ ದ. ರಾ. ಬೇಂದ್ರೆ ಅವರು ಬಂದಿದ್ದರು. ಅಂದಿನ ನಾಟಕ 'ಸಂಸಾರ ನೌಕ'. ಸುಂದರನ ಪಾತ್ರವನ್ನು ಅತ್ಯಂತ ಪರಿಣಾಮಕಾರಿಯಾಗಿ ಅಭಿನಯಿಸಿದ ನಟ ಅವರೆಲ್ಲರಿಗೂ ಮೆಚ್ಚುಗೆಯಾದ. ಮುದವೀಡು ಕೃಷ್ಣರಾಯರು ಯುವಕನನ್ನು ಅಭಿನಂದಿಸಿ ಸಂಗೀತ, ಸಾಹಿತ್ಯ. ಅಭಿನಯಗಳ ತ್ರಿವೇಣೀ ಸಂಗಮದಂತಿರುವ ಆತನಿಗೆ ಬಿನ್ನವತ್ತಳೆ ಅರ್ಪಿಸುವುದಾಗಿ ತಿಳಿಸಿದರು. ವಿನಯಶೀಲನಾದ ಯುವಕ, ತಾನು ಅಂಥ ಗೌರವಕ್ಕೆ ಅರ್ಹನಲ್ಲ ಎಂದ. ಆಗ ಕೃಷ್ಣರಾಯರು, ಧಾರವಾಡದ ಕಲಾಪ್ರೇಮಿಗಳು ಆತನ ಅರ್ಹತೆಯನ್ನು ಗುರುತಿಸಿ ತಮ್ಮ ಮೂಲಕ ಬಿನ್ನವತ್ತಳೆ ಕೊಡಿಸುತ್ತಿದ್ದಾರೆಂದು ತಿಳಿಸಿ, ಆತನಿಗೆ 'ಕಲಾಧುರಂಧರ' ಎಂಬ ಬಿರುದನ್ನಿತ್ತರು.

ಆ ಯುವಕನೇ ಕನ್ನಡ ರಂಗಭೂಮಿಯನ್ನು ಹೊಸ ಹಾದಿಯಲ್ಲಿ ನಡೆಸಲು ಸಾಹಸಪಟ್ಟ ಮಹಮದ್ ಪೀರ್.

ಪೀರ್ ಅವರು ಮೊದಲು ಅಭಿನಯಿಸಿದ್ದು ಹಾಸ್ಯ ಪಾತ್ರಗಳನ್ನು—ಗಿರಿಧರಲಾಲ್ ನಾಟಕ ಕಂಪನಿಯಲ್ಲಿ. ಅನಂತರ ಮುಖ್ಯ ಪಾತ್ರಗಳ ಅಭಿನಯವೂ ಇವರ ಪಾಲಿಗೆ ಬಂತು. ಇಲ್ಲಿ ಹಲವು ವರ್ಷಗಳನ್ನು ಕಳೆದ ಅನಂತರ 'ಭಾರತ ಜನ ಮನೋಲ್ಲಾಸಿನಿ ಸಭಾ'ದಲ್ಲಿ ಸೇರಿಕೊಂಡರು.

ಇದನ್ನು ಗುರುಕಾರ್ ನಾಟಕ ಕಂಪನಿ ಎಂದೂ ಕರೆಯುತ್ತಿದ್ದರು. ಚನ್ನಪಟ್ಟಣದ ತ್ರಿಯಂಬಕ ಶಾಸ್ತ್ರಿಗಳು ಈ ಸಂಸ್ಥೆಯ ಒಡೆಯರು. ಆ ಕಾಲದಲ್ಲಿ ಅಭಿನಯ ಚತುರರೆಂದು ಖ್ಯಾತರಾಗಿದ್ದ ಎಂ. ವಿ. ಸುಬ್ಬಯ್ಯ ನಾಯ್ಡು. ಎಂ. ಸುಬ್ಬರಾವ್ –ಇವರಂಥ ಶ್ರೇಷ್ಠ ಕಲಾವಿದರು ಆ ಕಂಪನಿಯಲ್ಲಿದ್ದರು. ಇಂಥವರ ನಡುವೆ ಕೂಡ ಪೀರರು ತಮ್ಮ ಕಲಾಚಾತುರ್ಯವನ್ನು ಮೆರೆದು ಜನಪ್ರಿಯರಾದರು. 1930ರವರೆಗೆ ಈ ಸಂಸ್ಥೆಯಲ್ಲಿ ಇದ್ದರು. ಅನಂತರ ತಮ್ಮದೇ ನಾಟಕ ಸಂಸ್ಥೆಯನ್ನು ಸ್ಥಾಪಿಸಲು ನಿರ್ಧರಿಸಿದರು. ಅಂದಿನ ಆರ್ಥಿಕ ಬಿಕ್ಕಟ್ಟು ಎದೆಗುಂದಿಸುವಂತಿದ್ದರೂ ಅಳುಕದೆ, ತುಂಬ ಪ್ರಯತ್ನಪಟ್ಟು, 1932ರಲ್ಲಿ 'ಚಂದ್ರಕಲಾ ನಾಟಕ ಮಂಡಲಿ'ಯನ್ನು ಸ್ಥಾಪಿಸಿದರು. ಬಿ. ಆರ್. ಪಂತುಲು, ಎಚ್. ಎಲ್. ಎನ್. ಸಿಂಹ, ಡಿಕ್ಕಿ ಮಾಧವರಾವ್. ಎಚ್. ಆರ್. ಶಾಸ್ತ್ರಿಗಳಂಥ ನುರಿತ ನಟರನ್ನು ತಮ್ಮ ಸಂಸ್ಥೆಗೆ ಆಕರ್ಷಿಸಿದರು.

ಪೀರರು ನಾಟಕ ಸಂಸ್ಥೆ ಆರಂಭಿಸುವ ಹೊತ್ತಿಗೆ ಕನ್ನಡ ರಂಗಭೂಮಿ ಹಿಂದಿನ ವೈಭವವನ್ನೂ ಲವಲವಿಕೆಯನ್ನೂ ಬಹುಮಟ್ಟಿಗೆ ಕಳೆದು

ಕೊಂಡಿತ್ತು. ವರದಾಚಾರ್ಯರ ಅನಂತರ ಅದು ಕಳಾಹೀನವಾಗಿತ್ತು; ಅದಕ್ಕೆ ಹೊಸ ಚೇತನವನ್ನು ತುಂಬಲು ಪೀರರು ಮುಂದಾದರು. ತಮ್ಮ ಗುರಿಸಾಧನೆಗಾಗಿ ಬಹುಮುಖವಾಗಿ ಶ್ರಮಿಸಿದರು. ಎಚ್.ಎಲ್.ಎನ್. ಸಿಂಹ ಅವರು ರಚಿಸಿದ ಸಾಮಾಜಿಕ ನಾಟಕ 'ಸಂಸಾರ ನೌಕ'ವನ್ನೂ ಬಿ. ಪುಟ್ಟಸ್ವಾಮಯ್ಯನವರ 'ಷಾಜಹಾನ್', 'ಗೌತಮ ಬುದ್ಧ'ದಂಥ ಹೊಸ ಮಾದರಿಯ ನಾಟಕಗಳನ್ನೂ ರಂಗಭೂಮಿಯ ಮೇಲೆ ತಂದರು. ರಂಗಸಜ್ಜಿಕೆ, ಅಭಿನಯಗಳಲ್ಲಿ ಉನ್ನತ ಮಟ್ಟವನ್ನು ಮುಟ್ಟಲು ಶ್ರಮಿಸಿದರು. ವೃತ್ತಿನಾಟಕ ಸಂಸ್ಥೆಗಳು ಪೌರಾಣಿಕ ನಾಟಕಗಳ ಪ್ರದರ್ಶನಕ್ಕೇ ಹೆಚ್ಚಾಗಿ ಮನಸ್ಸು ಕೊಟ್ಟಿದ್ದ ಆ ಕಾಲದಲ್ಲಿ ಸಮಕಾಲೀನ ಸಾಮಾಜಿಕ ಜೀವನದ ಕುಂದುಕೊರತೆಗಳನ್ನು ಎತ್ತಿತೋರಿಸುವಂಥ 'ಸಂಸಾರ ನೌಕ' ನಾಟಕವನ್ನು ರಂಗಭೂಮಿಯ ಮೇಲೆ ಪ್ರದರ್ಶನಕ್ಕೆ ತಂದದ್ದು, ಪೀರರ ಪ್ರಗತಿಶೀಲತೆಗೆ ಕುರುಹಾಗಿದೆ. ಸುಮಾರು 40 ವರ್ಷ ಕಳೆದ ಮೇಲೂ ಈ ನಾಟಕ ಜನಪ್ರಿಯವಾಗಿತ್ತೆಂಬುದು ಗಮನಾರ್ಹವಾದ ಅಂಶ.

ಉತ್ತಮ ನಾಟಕವನ್ನು ಪ್ರಯೋಗಿಸಬೇಕೆಂಬುದು ಪೀರರ ಹಂಬಲ. ಬಳ್ಳಾರಿಯಲ್ಲಿ ಪೀರರು ತಂಗಿದ್ದಾಗ ಬೆಂಜಮಿನ್ ಫ್ರಾಂಕ್ಲಿನ್ ಎಂಬ ಕಲಾವಿದರು ತಮ್ಮ ಮಂಡಲಿಯೊಂದಿಗೆ ಬಂದಿದ್ದರು. ಅವರ 'ಹ್ಯಾಮ್ಲೆಟ್' ನಾಟಕ ಪೀರರಿಗೆ ಇಷ್ಟವಾಯಿತು. ಫ್ರಾಂಕ್ಲಿನ್ನರ ಅಭಿನಯ ಅದ್ಭುತ ಎನಿಸಿತು. ಅಂತಹ ನಾಟಕವನ್ನು ಕನ್ನಡ ರಂಗಭೂಮಿಗೆ ತರಬೇಕೆಂದು ಬಯಸಿ ಬಿ. ಪುಟ್ಟಸ್ವಾಮಯ್ಯನವರ 'ಷಾಜಹಾನ್' ಆರಿಸಿಕೊಂಡರು. ಈ ನಾಟಕದ ಮೊದಲ ಪ್ರದರ್ಶನ ಮಂಗಳೂರಿನಲ್ಲಿ ನಡೆಯಿತು. ಪೀರರು ಈ ವೇಳೆಗೆ ಕರ್ನಾಟಕದಲ್ಲಿ ಮಾತ್ರವಲ್ಲ, ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳಲ್ಲಿ ಸಂಚರಿಸಿ ಕೀರ್ತಿಗಳಿಸಿದ್ದರು.

'ಗೌತಮ ಬುದ್ಧ' ನಾಟಕದಲ್ಲಿ ಪೀರರ ಬುದ್ಧನ ಪಾತ್ರಾಭಿನಯವನ್ನು ಮೆಚ್ಚಿದ ರಸಿಕರು ಪೀರರನ್ನು 'ರಂಗಭೂಮಿಯ ಪ್ರತ್ಯಕ್ಷ ಬುದ್ಧ' ಎಂದು ಕರೆದರು. ಪೀರರ ಸೌಮ್ಯವಾದ ದುಂಡು ಮುಖ ಆ ಪಾತ್ರಕ್ಕೆ ಬಲು ಚೆನ್ನಾಗಿ ಹೊಂದುತ್ತಿತ್ತು; ಇವರ ಜೊತೆಗೆ ಮನೋಜ್ಞವಾದ, ನೈಜ ಅಭಿನಯ ಜೊತೆಗೂಡಿದಾಗಲಂತೂ ಪ್ರೇಕ್ಷಕರು ಸ್ಥಳಕಾಲಗಳನ್ನು ಮರೆತು, ಬುದ್ಧನ ಸಾನ್ನಿಧ್ಯವನ್ನು ಅನುಭವಿಸುತ್ತಿದ್ದರು. ನಿದ್ರಿಸುತ್ತಿದ್ದ ತನ್ನ ಹೆಂಡತಿಯನ್ನೂ ಮಗುವನ್ನೂ ತೊರೆದು ಬುದ್ಧ ನಡುರಾತ್ರಿಯಲ್ಲಿ ಅರಮನೆಯಿಂದ ಹೊರಟುಹೋಗುವ ದೃಶ್ಯದ ಅಭಿನಯದಲ್ಲಿ ಪೀರರ ಸಿದ್ಧಿ ಅದ್ಭುತವಾದದ್ದು; ಮನಮುಟ್ಟುವಂಥದು. ಈ ನಾಟಕ ರಂಗಭೂಮಿಯ ಮೇಲೆ ಬಂದದ್ದು 1931ರಲ್ಲಿ. 'ಷಾಜಹಾನ್' ಮತ್ತು 'ಗೌತಮ ಬುದ್ಧ' ನಾಟಕಗಳು ಜನಪ್ರಿಯವೂ ವಿದ್ವಜ್ಜನಪ್ರಿಯವೂ ಆದುವು. ನಮ್ಮ ವೃತ್ತಿರಂಗಭೂಮಿಯಲ್ಲಿ ಸರಳ ರಗಳೆಯಲ್ಲಿ ಬರೆದ ನಾಟಕ ಪ್ರದರ್ಶನವಾದದ್ದು 'ಗೌತಮ ಬುದ್ಧ'ದ ಮೂಲಕವೇ.



ಬುದ್ಧನ ಪಾತ್ರದಲ್ಲಿ ಪೀರ್

ಪೀರರ ಅಭಿರುಚಿ ಸುಸಂಸ್ಕೃತವಾದದ್ದು. ನಾಟಕದಲ್ಲಿ ಅಸಭ್ಯ ಸಂಭಾಷಣೆ ಅಥವಾ ಸಂದರ್ಭಗಳಿಗೆ ಎಡೆ ಇರಬಾರದೆಂಬುದು ಅವರ ಖಚಿತ ಅಭಿಪ್ರಾಯವಾಗಿತ್ತು. ಈ ಉದ್ದೇಶವನ್ನು ಅವರು ತಮ್ಮ ನಾಟಕಗಳ ಪ್ರಯೋಗದಲ್ಲಿ ಕಾರ್ಯರೂಪಕ್ಕೆ ತಂದಿದ್ದರು.

ಪೀರರ ಒಂದು ದೊಡ್ಡ ಗುಣವೆಂದರೆ ಯಾರಾದರೂ ತಮ್ಮ ತಪ್ಪನ್ನು ತೋರಿಸಿಕೊಟ್ಟರೆ ಅದನ್ನು ಒಪ್ಪಿಕೊಂಡು, ಸರಿಪಡಿಸಿಕೊಳ್ಳುತ್ತಿದ್ದುದು. ಒಮ್ಮೆ, ಬಳ್ಳಾರಿಯಲ್ಲಿ 'ಕೃಷ್ಣ ಲೀಲಾ' ನಾಟಕ ಆಡುತ್ತಿದ್ದರು. ಪೀರರದು ನಾರದನ ಪಾತ್ರ. ನಾಟಕ ನೋಡಿದವರೊಬ್ಬರು ಪೀರರಿಗೆ, ಅವರು ನಾರದನ ಪಾತ್ರವನ್ನು ಸರಿಯಾಗಿ ಮಾಡುತ್ತಿಲ್ಲವೆಂದು ಬರೆದು, ಅದನ್ನು ಸರಿಪಡಿಸಿಕೊಳ್ಳಲು ಕೆಲವು ಸೂಚನೆಗಳನ್ನು ಕೊಟ್ಟರು. ಪೀರರು ಆತನ ಸಲಹೆಗಳನ್ನು ಅಂಗೀಕರಿಸಿದ್ದಲ್ಲದೆ, ಆತನಿಗೆ ತಮ್ಮ ಕೃತಜ್ಞತೆಯನ್ನು ಸೂಚಿಸಿ ಪತ್ರ ಬರೆದರು.

ಪಾತ್ರವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಆ ಪಾತ್ರದ ವ್ಯಕ್ತಿತ್ವ ಮೂಡುವಂತೆ ಅಭಿನಯಿಸುವ ಕಲೆ ಪೀರರಿಗೆ ಸಿದ್ಧಿಸಿತ್ತು. ಬುದ್ಧ, ಸುಂದರ, ದಾರಾ, ನಾರದ, ಮಕರಂದ ಮುಂತಾದ ಪಾತ್ರಗಳನ್ನು ಅವರು ಚೊಕ್ಕವಾಗಿ ಅಭಿನಯಿಸುತ್ತಿದ್ದರು. ಆ ಪಾತ್ರಗಳಿಗೆ ಜೀವಕಳೆ ತುಂಬುತ್ತಿದ್ದರು.

ಪೀರ್ ಅವರು ಬಾಲ್ಯದಿಂದಲೂ ಸಾಹಸಿ. ಅವರು ತಮ್ಮ ಸೋದರ ಮಾವನ ಆಶ್ರಯದಲ್ಲಿ ಮೈಸೂರಿನಲ್ಲಿ ಬೆಳೆದರು. ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದರು. ಆಗಿನಿಂದಲೇ ಅವರಿಗೆ ನಾಟಕಗಳಲ್ಲಿ ತುಂಬ ಆಸಕ್ತಿ. ಹಾಗೂ ಹೀಗೂ ಕಾಸು ಕೂಡಿಸಿಕೊಂಡು ವರದಾಚಾರ್ಯರೇ ಮುಂತಾದವರ ನಾಟಕಗಳನ್ನು ನೋಡಿ ಆನಂದಿಸು



ಮಹಮದ್ ಪೀರ್

ತ್ತಿದ್ದರು. ನಾಟಕದ ಹಾಡುಗಳನ್ನು ಕಲಿತು ತಮ್ಮ ಮಿತ್ರರ ಮುಂದೆ ಹಾಡುತ್ತಿದ್ದರು. ಇದನ್ನು ನೋಡಿ ಬಾಲಕರ ಕಂಪನಿಯು 'ಕೃಷ್ಣಲೀಲಾ' ನಾಟಕವನ್ನು ಆಡಿದ ಮೇಲೆ ಆ ನಾಟಕವನ್ನು ರಂಗದ ಮೇಲೆ ತರಬೇಕೆಂಬ ಅವರ ಹಂಬಲ ಬಲವಾಯಿತು. ತಮ್ಮ ಕೆಲ ಮಿತ್ರ ಸ್ನೇಹಿತರನ್ನು ಕೂಡಿಕೊಂಡು ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲೇ ಆ ನಾಟಕವನ್ನು ಪ್ರದರ್ಶಿಸಿದರು. ಅದರಲ್ಲಿ ತಾವೇ 'ವಿಜಯ'ನ ಪಾತ್ರ ಅಭಿನಯಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

ಪೀರರು ಹೈಸ್ಕೂಲಿನಲ್ಲಿದ್ದಾಗ ಗಾಂಧಿಜಿಯ ದಸ್ತಗಿರಿ ಆಯಿತು. ವಿದ್ಯಾರ್ಥಿವರ್ಗದಲ್ಲಿ ಉದ್ರೇಕ ತುಂಬಿತ್ತು. ಈ ಸನ್ನಿವೇಶದಲ್ಲಿ ಹೈಸ್ಕೂಲಿನ ಪ್ರಿನ್ಸಿಪಾಲ್ ಬ್ರಂಟ್ ಸಾಹೇಬರು ಹುಡುಗರಿಗೆ ಬುದ್ಧಿ ಹೇಳುತ್ತ ಗಾಂಧಿಜಿಯನ್ನು 'ಮಿಸ್ಟರ್ ಗಾಂಧಿ' ಎಂದು ಕರೆದರು ; ಪೀರರ ದೇಶಪ್ರೇಮ, ಸ್ವಾಭಿಮಾನಗಳೆರಡೂ ಕೆರಳಿದುವು. ಮುಂದೆ ನುಗ್ಗಿ ಪ್ರಿನ್ಸಿಪಾಲ್ ಬ್ರಂಟ್ ಅವರ ತಲೆಯ ಮೇಲಿದ್ದ ಹ್ಯಾಟನ್ನು ಹಾರಿಸಿ, "ಮಹಾತ್ಮಾ ಗಾಂಧಿ ಅನ್ನೋ ಮಗನೇ" ಎಂದು ಆರ್ಭಟಿಸಿದರು. ಇದರ ಪರಿಣಾಮವಾಗಿ ಪೀರರು ಶಾಲೆಯನ್ನು ಬಿಡಬೇಕಾಯಿತು; ಹಾಗೆ ಶಾಲೆಬಿಟ್ಟವರು ಅಭಿನೇತೃವಿನ ಜೀವನವನ್ನು ಅವಲಂಬಿಸಿದರು.

ರಂಗಭೂಮಿ ಒಂದು ಪವಿತ್ರ ಸ್ಥಾನವೆಂಬುದು ಅವರ ನಂಬುಗೆ. ಅವರು ಕಂಪನಿ ನಡೆಸುತ್ತಿದ್ದಾಗ ನಟನಟಿಯರು ಕೈಕಾಲು ತೊಳೆದೇ ಪ್ರಸಾಧನ ಗೃಹವನ್ನು ಪ್ರವೇಶಿಸಬೇಕು ಎಂಬ ನಿಯಮವನ್ನಿಟ್ಟಿದ್ದರು ; ಅಲ್ಲಿ ಧೂಮಪಾನ ಮಾಡಲು ಕೂಡ ಯಾರಿಗೂ ಅವಕಾಶ ಕೊಡುತ್ತಿರಲಿಲ್ಲ.

ಪೀರರು ತಮ್ಮ ನಾಟಕ ಕಂಪನಿಯನ್ನು ನಡೆಸುತ್ತಿದ್ದಾಗ ಅನೇಕ ಬಾರಿ ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿ ಸಾಲಮಾಡಬೇಕಾಗುತ್ತಿತ್ತು. ಅದನ್ನು ತೀರಿಸುವುದೂ ಕಷ್ಟವಾಗುತಿತ್ತು. ಆದರೆ ತಮಗೆ ಸಾಲ ಕೊಟ್ಟವರ ಬಗೆಗೆ ಅವರು ನಡೆದುಕೊಳ್ಳುತ್ತಿದ್ದ ರೀತಿ, ಸಾಧ್ಯವಾದ ಮಟ್ಟಿಗೆ ಸಾಲಗಳನ್ನು ತೀರಿಸಲು ಅವರು ನಡೆಸುತ್ತಿದ್ದ ನಿರಂತರ ಪ್ರಯತ್ನ ಇವುಗಳಿಂದಾಗಿ ಅವರು ತಮಗೆ ಸಾಲಕೊಟ್ಟವರ ಗೌರವಕ್ಕೆ ಪಾತ್ರರಾಗುತ್ತಿದ್ದರು. "ಬೇಕಾದ್ದಾಗಲಿ, ತನ್ನ ಸಾಲದ ಹಣವನ್ನು ವಸೂಲುಮಾಡಿಯೇ ಬಿಡುತ್ತೇನೆ ; ಇಲ್ಲದಿದ್ದರೆ ನಾಟಕಗೃಹಕ್ಕೆ ಬೆಂಕಿಯನ್ನಾದರೂ ಇಟ್ಟು ಬಿಡುತ್ತೇನೆ" ಎಂದು ಕೋಪೋದ್ರೇಕ ಸ್ಥಿತಿಯಲ್ಲಿ ಬಂದು ಅವರ ಗೌತಮಬುದ್ಧನ ಪಾತ್ರಾಭಿನಯವನ್ನು ನೋಡಿದ ಶ್ರೀಮಂತರೊಬ್ಬರು, ನಾಟಕ ಮುಗಿದ ಮೇಲೆ ಪ್ರಸಾಧನ ಗೃಹಕ್ಕೆ ಧಾವಿಸಿಬಂದು "ನಿನ್ನ ಅಭಿನಯ ನೋಡಿ ನನ್ನ ಜನ್ಮಸಾರ್ಥಕವಾಯಿತು" ಎಂದು ಹೇಳಿ, ತಮಗೆ ಬರಬೇಕಾದ ಹಣವನ್ನು ಬಿಟ್ಟುಕೊಟ್ಟು, "ಚೆನ್ನಾಗಿ ಬಾಳು," ಎಂದು ಹರಸಿ ಹೋದದ್ದೂ ಉಂಟು.

ಸ್ವಂತ ನಾಟಕ ಸಂಸ್ಥೆಯನ್ನು ಸ್ಥಾಪಿಸಿದ ಮೇಲೆ ಪೀರರು ಹೆಚ್ಚು ಕಾಲ ಇರಲಿಲ್ಲ; 1937ರಲ್ಲಿ ಮೈಸೂರಿನಲ್ಲಿ ಅನಿರೀಕ್ಷಿತವಾಗಿ ತೀರಿಕೊಂಡರು.

ಆದರೆ ಕೇವಲ ಐದು ವರ್ಷಗಳ ಈ ಅವಧಿಯಲ್ಲಿ ಕನ್ನಡ ರಂಗಭೂಮಿಯ ಮುನ್ನಡೆಗೆ ಅವರಿಂದ ಸಂದ ಸೇವೆ ಮಾತ್ರ ಮಹತ್ವಪೂರ್ಣವಾದದ್ದು.

## ಮಹಾಕಾವ್ಯ

'ರಾಮಾಯಣ' ಮತ್ತು 'ಮಹಾಭಾರತ'ಗಳು ನಮ್ಮ ದೇಶದ ಮಹಾಕಾವ್ಯಗಳು. 'ರಾಮಾಯಣ'ವನ್ನು ವಾಲ್ಮೀಕಿಯೂ 'ಮಹಾಭಾರತ'ವನ್ನು ವ್ಯಾಸರೂ ಬರೆದರೆಂಬುದು ಪರಂಪರಾಗತ ನಂಬಿಕೆ.

ಒಬ್ಬನೇ ಕವಿಯಿಂದ ರಚಿತವಾದ ದೀರ್ಘವೂ ಮಹತ್ವಪೂರ್ಣವೂ ಆದ ಕಾವ್ಯವೇ ಮಹಾ ಕಾವ್ಯ. ಇಂಥ ಕಾವ್ಯದಲ್ಲಿ ಸಾಮಾನ್ಯವಾಗಿ ಒಂದೇ ವಿಧವಾದ ಛಂದಸ್ಸು ಇರುತ್ತದೆ. ಅಷ್ಟಾದಶ ವರ್ಣನೆಗಳೂ ನವರಸಗಳ ನಿರೂಪಣೆಯೂ ಇದರಲ್ಲಿರುತ್ತವೆ. ವಸ್ತು ಐತಿಹಾಸಿಕ ಅಥವಾ ಪೌರಾಣಿಕ. ಇಂಥ ಕಾವ್ಯದ ನಾಯಕ ಉದಾತ್ತ ಗುಣಗಳಿಂದ ಕೂಡಿದವನು. ಅವನು ಧೀರ, ಸಾಹಸಿ, ಧರ್ಮನಿಷ್ಠ. ಇವು ಸಾಮಾನ್ಯವಾಗಿ ಮಹಾಕಾವ್ಯದಲ್ಲಿ ಕಂಡುಬರುವ ಲಕ್ಷಣಗಳು. ನಾಯಕನ ಹೆಗ್ಗಳಿಕೆಯನ್ನು ಎತ್ತಿಹಿಡಿಯುವುದು ಮತ್ತು ಅವನ ಸಾಧನೆ, ವ್ಯಕ್ತಿತ್ವಗಳ ಮೂಲಕ ಸತ್ಯಧರ್ಮಗಳ ಹಿರಿಮೆಯನ್ನು ಪ್ರತಿಪಾದಿಸುವುದು ಮಹಾಕಾವ್ಯದ ಪ್ರಧಾನ ಉದ್ದೇಶ. ಮಹಾ ಕಾವ್ಯದ ನಾಯಕ ಸಾಮಾನ್ಯ ಮಾನವರಿಗಿಂತ ಹೆಚ್ಚು ಸಾಮರ್ಥ್ಯವುಳ್ಳವನು ; ಧೀರ. ಅವನಲ್ಲಿರುವ ಅನೇಕ ಸದ್ಗುಣಗಳಿಂದ ಅವನು ಆದರ್ಶ ಪುರುಷನಾಗಿ ರೂಪುಗೊಳ್ಳುತ್ತಾನೆ. ಮಹಾಕಾವ್ಯದಲ್ಲಿ ಅತಿಮಾನುಷ ಶಕ್ತಿಗಳ ಕೈವಾಡವನ್ನು ಕಾಣಬಹುದು.

ಭಾರತದಲ್ಲಿ ಮಾತ್ರವಲ್ಲ, ಇನ್ನೂ ಹಲವಾರು ರಾಷ್ಟ್ರಗಳಲ್ಲಿ ಅವಕ್ಕೆ ವಿಶಿಷ್ಟವಾದ ಮಹಾಕಾವ್ಯಗಳು ರಚಿತವಾಗಿವೆ. ಪ್ರಾಚೀನ ಗ್ರೀಸಿನ 'ಇಲಿಯಡ್' ಮತ್ತು 'ಒಡಿಸ್ಸಿ', ಇಂಗ್ಲಿಷ್ ಭಾಷೆಯ 'ಬೆವೂಲ್ಫ್' ಮುಂತಾದುವು ಆಯಾದೇಶದ ಪ್ರಸಿದ್ಧ ಮಹಾಕಾವ್ಯಗಳು. ಆದರೆ ಇವಾವುವೂ 'ರಾಮಾಯಣ', 'ಮಹಾಭಾರತ'ಗಳಷ್ಟು ವಿಸ್ತಾರವಾಗಿಲ್ಲ ; ಆದರೂ ಅವುಗಳ ಕಾವ್ಯ ಶಕ್ತಿಯಿಂದಾಗಿ ಅವು ಮಹಾಕಾವ್ಯಗಳೆಂದು ಪರಿಗಣಿತವಾಗಿವೆ.

ಒಂದು ಭಾಷೆಯ ಮಹಾಕಾವ್ಯದ ಲಕ್ಷಣ ಸ್ವರೂಪಗಳು ಇನ್ನೊಂದರ ಮಹಾಕಾವ್ಯಕ್ಕಿಂತ ಭಿನ್ನವಾಗಿರುವುದುಂಟು. ಕಾಲ ಕಳೆದಂತೆ ಮಹಾಕಾವ್ಯ ರೂಪರೇಷೆಗಳಲ್ಲಿ ಬದಲಾವಣೆಗಳಾಗಿವೆ. ಸಾಹಿತ್ಯ ಸಂಪ್ರದಾಯಗಳು, ಕವಿಗಳ ಪ್ರತಿಭೆ ಇವುಗಳನ್ನು ಅನುಸರಿಸಿ ಮಹಾಕಾವ್ಯಗಳ ಸ್ವರೂಪದಲ್ಲಿ ವೈವಿಧ್ಯ ಮೂಡಿದೆ.

ಮಹಾಕಾವ್ಯಗಳನ್ನು ಸಾಮಾನ್ಯವಾಗಿ ಎರಡು ಬಗೆಯಾಗಿ ವಿಂಗಡಿಸುತ್ತಾರೆ. ಪರಂಪರಾಗತವಾಗಿ ಜನರ ಬಾಯಲ್ಲಿ ದೀರ್ಘಕಾಲ ಉಳಿದುಬಂದು ಅನಂತರ ಗ್ರಂಥರೂಪವನ್ನು ಪಡೆದ ಜಾನಪದ ಕಾವ್ಯಗಳು ಒಂದು ಬಗೆಯವು. ಇದನ್ನು ಪ್ರಾಥಮಿಕ ಮಹಾಕಾವ್ಯಗಳು ಎನ್ನುತ್ತಾರೆ. ಅನೇಕ ವೇಳೆ ಪ್ರಾಥಮಿಕ ಮಹಾಕಾವ್ಯಗಳನ್ನು ರಚಿಸಿದವರು ಯಾರೆಂಬುದು ಗೊತ್ತೇ ಇರುವುದಿಲ್ಲ. 'ಬೆವೂಲ್ಫ್' ಇದಕ್ಕೆ ಒಂದು ಉದಾಹರಣೆ. ಸಾಮಾಜಿಕ ವ್ಯವಸ್ಥೆ ಬದಲಾದ ಹಾಗೆ, ತತ್ತ್ವಜಿಜ್ಞಾಸೆ ಬೆಳೆದಂತೆ ನೂತನ ಜೀವನದೃಷ್ಟಿ, ಅಭಿರುಚಿ ರೂಪುಗೊಂಡಾಗ ಉದ್ದಾಮ ಕವಿಗಳು ಅವುಗಳಿಂದ ಪ್ರೇರಿತರಾಗಿ ಮಹಾಕಾವ್ಯಗಳನ್ನು ರಚಿಸುವುದುಂಟು. ಇವನ್ನು ಸಾಹಿತ್ಯ ಮಹಾಕಾವ್ಯಗಳೆಂದು ಕರೆಯುವುದು ವಾಡಿಕೆ. ವಿಸ್ತಾರ, ರಚನಾವೈಖರಿಗಳಲ್ಲಿ ಇವು ಹಿಂದಿನ ಮಹಾಕಾವ್ಯಗಳಿಂದ ಸ್ಫೂರ್ತಿಯನ್ನು ಪಡೆಯುವ ಸಂಭವವಿದ್ದೇ ಇದೆ. ಹೀಗೆ ರಚಿತವಾದ ಮಹಾಕಾವ್ಯಗಳ ಮೇಲೆ ಇತರ ಭಾಷಾ ಸಾಹಿತ್ಯಗಳ ಪ್ರಭಾವ ಬೀಳುವುದೂ ಸಹಜ.

ಮಹಾಕಾವ್ಯ ತಾನು ರೂಪುಗೊಂಡ ಕಾಲದ, ಸಮಾಜದ ಸಂಸ್ಕೃತಿ, ಜೀವನದರ್ಶನ, ಜೀವನಮೌಲ್ಯ ಚಿಂತನೆಗಳ ವಿವರಣೆ, ವಿಮರ್ಶೆಗಳನ್ನು ಒಳಗೊಂಡಿರುತ್ತದೆ. ಈ ದೃಷ್ಟಿಯಿಂದ ಮಹಾಕಾವ್ಯಗಳ ಅಧ್ಯಯನ

ಅಮೂಲ್ಯವಾದದ್ದು. ವಿವಿಧ ರಾಷ್ಟ್ರಗಳ ಕಾಲಗಳ ಮಾನವ ಸಂಸ್ಕೃತಿ ವಿಕಾಸಗಳನ್ನು ಗುರುತಿಸಲು ಅದು ಸಹಕಾರಿಯಾಗುತ್ತದೆ.

ಕನ್ನಡದ ಇತ್ತೀಚಿನ ಮಹಾಕಾವ್ಯ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ'.

ನೋಡಿ: 'ಇಲಿಯಡ್'; 'ಒಡಿಸ್ಸಿ'; 'ಬೇವುಲ್ಫ್'; 'ಮಹಾಭಾರತ'; 'ರಾಮಾಯಣ'

## ಮಹಾತ್ಮ್ಯೆ ಸಾಹಿತ್ಯ

ಮಹಾತ್ಮ್ಯೆ ಎಂದರೆ ಹಿರಿಮೆ, ಗಂಭೀರವಾದದ್ದು ಎಂದರ್ಥ. ಯಾವುದೇ ಸ್ಥಳ ಅಥವಾ ದೇವತೆಯ ಹಿರಿಮೆಯನ್ನು ಕುರಿತು ವಿವರಿಸುವ ಕೃತಿಗಳನ್ನು ಮಹಾತ್ಮ್ಯೆ ಸಾಹಿತ್ಯವೆಂದು ಕರೆಯುವುದು ವಾಡಿಕೆ.

'ದೇವೀ ಮಹಾತ್ಮ್ಯೆ', 'ವೆಂಕಟೇಶ ಮಹಾತ್ಮ್ಯೆ'ಯಂಥ ಗ್ರಂಥಗಳು ಸಂಬಂಧಪಟ್ಟ ದೇವತೆಗಳ ಅವತರಣ, ಅಪೂರ್ವ ಸಾಧನೆಗಳ ವಿವರಗಳನ್ನು ಒಳಗೊಂಡಿರುತ್ತವೆ. ಮಹಾತ್ಮ್ಯೆ ಗ್ರಂಥ ಯಾವ ದೇವತೆಗೆ ಸಂಬಂಧಿಸಿರುತ್ತದೆಯೋ ಆ ದೇವತೆ ಮಿಕ್ಕೆಲ್ಲ ದೇವತೆಗಳಿಗಿಂತ ಮಿಗಿಲಾದದ್ದು ಎಂದು ಹೇಳುವುದು ಮಹಾತ್ಮ್ಯೆ ಸಾಹಿತ್ಯದ ಮುಖ್ಯ ಲಕ್ಷಣ.

ಇನ್ನು ಸ್ಥಳಗಳನ್ನು ಕುರಿತ ಮಹಾತ್ಮ್ಯೆ ಸಾಹಿತ್ಯ ಸ್ಥಳ ಪುರಾಣರೂಪದ್ದು. ಹಿಂದೆ ಆ ಸ್ಥಳದಲ್ಲಿ ಬಾಳಿದ ಮಹರ್ಷಿಯರು, ಅವರು ನಡೆಸಿದ ಅದ್ಭುತ ಕಾರ್ಯಗಳು, ಆ ಪುಣ್ಯ ಕ್ಷೇತ್ರಕ್ಕೆ ಬಂದು ತಪಶ್ಚರ್ಯೆಯಿಂದ, ದೇವತಾನುಗ್ರಹದಿಂದ ತಮ್ಮ ಪಾಪವನ್ನೋ ಶಾಪವನ್ನೋ ಕಳೆದುಕೊಂಡವರ ಕಥೆ ಇವೆಲ್ಲ ಸ್ಥಳ ಮಹಾತ್ಮ್ಯೆಯನ್ನು ಕುರಿತ ಸಾಹಿತ್ಯದಲ್ಲಿರುತ್ತವೆ. ಆ ಮಹಿಮೆಯುಳ್ಳ ಕ್ಷೇತ್ರ ಎಲ್ಲಿದೆ ಎಂಬುದರ ವಿವರಗಳನ್ನೂ ಅದರಲ್ಲಿ ಕಾಣಬಹುದು.

ದೇವತೆಗಳು, ಸ್ಥಳಗಳಲ್ಲದೆ ನದಿಗಳನ್ನು ಕುರಿತ ಮಹಾತ್ಮ್ಯೆ ಸಾಹಿತ್ಯವೂ ಇದೆ. ಉದಾಹರಣೆಗಾಗಿ ಕಾವೇರಿ ನದಿಯ ಮಹಾತ್ಮ್ಯೆಯನ್ನು ಕುರಿತ ಸಾಹಿತ್ಯ.

ಮಹಾತ್ಮ್ಯೆ ಸಾಹಿತ್ಯ ಭಾರತೀಯ ಪುರಾಣಗಳ ಒಂದು ಅಂಗ. ಸ್ಕಂದ ಪುರಾಣದಲ್ಲಿ ಇಂಥ ಅನೇಕ ಆಖ್ಯಾನಗಳೂ ಉಪಾಖ್ಯಾನಗಳೂ ಬರುತ್ತವೆ. ಪುರಾಣಗಳು ಈಗಿರುವ ರೂಪದಲ್ಲಿ ರಚಿತವಾದದ್ದು ಐದು ಆರನೆಯ ಶತಮಾನದಲ್ಲಿ ಎಂಬ ಅಭಿಪ್ರಾಯವಿದೆ.

ಇನ್ನು ಸ್ಥಳ ಮಹಾತ್ಮ್ಯೆಯ ಕಡೆಗೆ ನಾವು ತಿರುಗಿದರೆ, ಕೆಲವು ಸ್ವಾರಸ್ಯವಾದ ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. ಅವೇನೆಂದರೆ, ಈ ಸ್ಥಳಗಳು ನಮ್ಮ ರಾಷ್ಟ್ರದಲ್ಲಿ ಎಲ್ಲಿವೆ ? ಅವುಗಳ ಸುತ್ತಮುತ್ತ ಇರುವ ಬೆಟ್ಟಗುಡ್ಡಗಳು, ನದಿಗಳು ಮುಂತಾದುವು ಯಾವುವು ? ಆ ಸ್ಥಳದ ಹೆಸರೇನು ? ಆ ಹೆಸರು ಅದಕ್ಕೆ ಬಂದುದೇಕೆ ? ಆ ಕ್ಷೇತ್ರದಲ್ಲಿನ ವಿಶೇಷ ಸ್ಥಾನಗಳು ಯಾವುವು? –ಎಂಬುವು. ಸುಮಾರು 15 ಶತಮಾನಗಳ ಹಿಂದೆಯೇ ನಮ್ಮ ರಾಷ್ಟ್ರದ ವಿವಿಧ ಪ್ರದೇಶಗಳ ಭೌಗೋಳಿಕ ವಿವರಗಳನ್ನು ನಮ್ಮ ಜನರು ಸ್ಪಷ್ಟವಾಗಿ ತಿಳಿದುಕೊಂಡಿದ್ದರು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಈ ಸ್ಥಳ ಮಹಾತ್ಮ್ಯೆಯಲ್ಲಿ ಬರುವ ಕಥೆಗಳಲ್ಲಿ ಆ ಕಾಲದ ವ್ಯಾಪಾರ, ಸಂಚಾರಮಾರ್ಗಗಳು ಮುಂತಾದ ವಿವರಗಳೂ ಅಲ್ಲಲ್ಲಿ ಬರುತ್ತವೆ.

ಪುರಾಣಗಳಲ್ಲಿ ಕಂಡುಬರುವ ಸಾಹಿತ್ಯಾಂಶಗಳು ಮಹಾತ್ಮ್ಯೆ ಸಾಹಿತ್ಯದಲ್ಲಿಯೂ ಕಂಡುಬರುತ್ತವೆ. ಅವುಗಳ ಕಥಾಂಶಗಳೂ ಸ್ವಾರಸ್ಯವಾದುವು.

## 'ಮಹಾಭಾರತ'

'ಮಹಾಭಾರತ' ಜಗತ್ಪ್ರಸಿದ್ಧವಾದ ಗ್ರಂಥ; ಅದು ಮಹತ್ತರ. ಇಷ್ಟು ದೊಡ್ಡ ಪ್ರಮಾಣದ ಗ್ರಂಥ ಜಗತ್ತಿನಲ್ಲಿ ಇನ್ನಾವುದೂ ಇಲ್ಲ. ಜಗತ್ತಿನ ಯಾವುದೇ ಮಹಾಕಾವ್ಯದ ವಿಸ್ತಾರ 'ಮಹಾಭಾರತ'ದ ಹತ್ತರಲ್ಲೊಂದು ಅಂಶದಷ್ಟು ಕೂಡ ಇಲ್ಲ.

'ಮಹಾಭಾರತ'ವನ್ನು ಇತಿಹಾಸ ಅಥವಾ ಪುರಾಣ–ಇತಿಹಾಸ ಎಂದು ಕರೆಯುವುದು ನಮ್ಮಲ್ಲಿ ವಾಡಿಕೆ. ಇತಿಹಾಸ ಎಂದರೆ ಹೀಗೆ ಇತ್ತು, ಹೀಗೆ ಆಯಿತು ಎಂದು ತಿಳಿಸುವ ಗ್ರಂಥ; ಇತಿಹಾಸದಲ್ಲಿ ಕೇವಲ ಚರಿತ್ರೆಯೇ ಅಲ್ಲದೆ, ಪುರಾಣ, ಚರಿತ್ರೆ, ಕಥೆ, ಉದಾಹರಣೆ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ವಿಚಾರ ಇವೆಲ್ಲವೂ ಸೇರಿರುತ್ತವೆ. ಈ ವಿವರಣೆ 'ಮಹಾಭಾರತ'ಕ್ಕೆ ಚೆನ್ನಾಗಿ ಒಪ್ಪುತ್ತದೆ. ಮೇಲೆ ಹೇಳಿದ ಲಕ್ಷಣಗಳನ್ನೆಲ್ಲ ಅದರಲ್ಲಿ ಕಾಣಬಹುದು.

'ಮಹಾಭಾರತ'ವನ್ನು ಬರೆದವರು ಯಾರು? ವ್ಯಾಸರು ಇದನ್ನು ಬರೆದರೆಂದು ಒಂದು ಪ್ರಾಚೀನ ನಂಬಿಕೆಯಿದೆ.



ಅರ್ಜುನನಿಗೆ ಕೃಷ್ಣನ ಉಪದೇಶ : ಭಗವದ್ಗೀತೆ

ಮಹಾಭಾರತವನ್ನು ಬರೆದರು ಎಂದು ಒಪ್ಪಿಕೊಂಡರೂ ನಮ್ಮಲ್ಲಿ ಈಗ ಪ್ರಚಾರದಲ್ಲಿರುವ 'ಮಹಾಭಾರತ'ದ ಪಾಠ ಮಾತ್ರ ವ್ಯಾಸರು ರಚಿಸಿದ್ದಲ್ಲವಾದ ಕೃತಿ. ತಜ್ಞರ ಮತವನ್ನು ಎಂಬುದು ಅನೇಕ ಮಂದಿ ವಿದ್ವಾಂಸರ ಅಭಿಪ್ರಾಯ. ಏಕೆಂದರೆ, ಭಾರತ ವೈಶಂಪಾಯನನು ಹೇಳಿದಂತೆ ಇದೆಯೇ ಹೊರತು, ಅವನು ವ್ಯಾಸ ರಚಿತ ಗ್ರಂಥವನ್ನು ಓದುತ್ತಿರುವಂತೆ ಇಲ್ಲ. ವೈಶಂಪಾಯನನು ಈ ಕಥೆಯನ್ನು ವ್ಯಾಸರಿಂದ ಕೇಳಿದ್ದನೆಂದೂ ಅದನ್ನನುಸರಿಸಿ ಅವನು ಆ ಕಥೆಯನ್ನು ಹೇಳಿದು ದಾಗಿಯೂ 'ಮಹಾಭಾರತ'ದಲ್ಲೇ ಉಲ್ಲೇಖವಿದೆ. ಈ ಸಂಬಂಧವಾದ ಅಂಶಗಳೆಲ್ಲವನ್ನೂ ಪರಿಶೀಲಿಸಿ, ವಿದ್ವಾಂಸರು ಹೀಗೆ ಅಭಿಪ್ರಾಯಪಟ್ಟಿದ್ದಾರೆ: ವ್ಯಾಸ ರಚಿತವಾದ 'ಜಯ'ವೆಂಬ ಕಾವ್ಯವನ್ನು ವೈಶಂಪಾಯನನು ಸಂಪಾದಿಸಿ, 'ಭಾರತ' ವನ್ನು ಸಿದ್ಧಪಡಿಸಿದನು. ಸೂತಪುರಾಣಿಕನು ಅದಕ್ಕೆ ಉಪೋದ್ಘಾತ, ವಿಷಯಸೂಚಿಕೆ, ಟಿಪ್ಪಣಿಗಳು, ಅನುಬಂಧಗಳನ್ನು ಸೇರಿಸಿ, 'ಮಹಾಭಾರತ' ವೆಂದು ಪ್ರಸ್ತುತ ರೂಪ ನೀಡಿದನು —ಎಂದು. ಸೂತಪುರಾಣಿಕನು ರೂಪಿಸಿದ 'ಮಹಾಭಾರತ'ಕ್ಕೂ ಕಾಲದಿಂದ ಕಾಲಕ್ಕೆ ಸೇರ್ಪಡೆಗಳಾಗಿದ್ದಿರಬೇಕು. ಉತ್ತರ ಭಾರತ, ದಕ್ಷಿಣ ಭಾರತಗಳಲ್ಲಿ ಪ್ರಚಾರದಲ್ಲಿರುವ 'ಮಹಾಭಾರತ'ಗಳಲ್ಲಿ ಪರಸ್ಪರ ಭಿನ್ನತೆಯಿರುವುದು ಈ ಅಭಿಪ್ರಾಯಕ್ಕೆ ಪೋಷಕವಾಗಿದೆ. ಸೂತಪುರಾಣಿಕನ ಕಾಲದಿಂದೀಚೆಗೆ 'ಮಹಾಭಾರತ'ವನ್ನು ಪ್ರತಿಮಾಡಿದ ಲಿಪಿಕಾರರು ಅಥವಾ ಪ್ರಾಂತೀಯ ಕವಿಗಳು ಈ ಹೊಸ ಪ್ರಸಂಗಗಳ ಜೋಡಣೆಗೆ ಕಾರಣರಾಗಿರಬಹುದು.

ಹೀಗಾಗಿ 'ಮಹಾಭಾರತ'ದ ಮೂಲ ಪಾಠವನ್ನು ಗೊತ್ತು ಹಚ್ಚುವುದು ತುಂಬ ಶ್ರಮದ ಕಾರ್ಯವಾಗಿದೆ. ಮೂಲ ಪಾಠವಲ್ಲದಿದ್ದರೂ ಅದಕ್ಕೆ ಆದಷ್ಟು ಸಮೀಪವಾದ, ಶುದ್ಧ ಪಾಠವನ್ನು ನಿರ್ಣಯಿಸಲು ಡಾ. ವಿ.ಎಸ್. ಸುಕ್ತಂಕರವರ ನೇತೃತ್ವದಲ್ಲಿ ಸಂಶೋಧನಾ ಕಾರ್ಯ ನಡೆಯಿತು. ಇದರ ಫಲವಾಗಿ 'ಮಹಾಭಾರತ'ದ ಸಂಶುದ್ಧ ಪಾಠ ಪ್ರಕಟವಾಗಿದೆ.

'ಮಹಾಭಾರತ'ದಲ್ಲಿ ಹೇಳಿರುವ ಪ್ರಧಾನ ಘಟನೆಗಳು ಐತಿಹಾಸಿಕಾಂಶಗಳೆಂದು ಒಪ್ಪಿಕೊಂಡರೆ ಕುರುಕ್ಷೇತ್ರದ ಯುದ್ಧ ನಡೆದದ್ದು ಯಾವಾಗ ಎಂಬ ಪ್ರಶ್ನೆಯೇಳುತ್ತದೆ. ಈ ಪ್ರಶ್ನೆಗೆ ಖಚಿತವಾದ ಉತ್ತರ ದೊರೆತಿಲ್ಲವಾದರೂ ಅದು ಕೊನೆಯ ಪಕ್ಷ ಮೂವತ್ತು ಶತಮಾನಗಳ ಹಿಂದೆ, ಅಂದರೆ, ಕ್ರಿ. ಪೂ. 10ನೆಯ ಶತಮಾನಕ್ಕೆ ಹಿಂದೆಯೇ ನಡೆದಿರಬೇಕೆಂದು ವಿದ್ವಾಂಸರ ಅಭಿಪ್ರಾಯ. 'ಮಹಾಭಾರತ'ದ ಮೂಲ ಲೇಖಕರು ವ್ಯಾಸರೆಂದು ಒಪ್ಪಿಕೊಂಡರೆ 'ಮಹಾಭಾರತ' ಯುದ್ಧ ಕಾಲದಲ್ಲಿ ಇದ್ದ ಅವರು ಕೂಡ ಅದೇ ಕಾಲದವರಾಗುತ್ತಾರೆ. ಈಗ ನಮಗೆ ದೊರೆತಿರುವ 'ಮಹಾಭಾರತ' ರೂಪುಗೊಂಡದ್ದು ಯಾವಾಗ—ಎಂಬ ವಿಚಾರದಲ್ಲೂ ಭಿನ್ನಾಭಿಪ್ರಾಯಗಳಿವೆ. ಕ್ರಿ. ಪೂ. 400 ಎನ್ನುವವರಿದ್ದಾರೆ; ಕ್ರಿ. ಶ. 400 ಎನ್ನುವವರಿದ್ದಾರೆ. ಅಂದರೆ— ಇಂದು ಪ್ರಚಾರದಲ್ಲಿರುವ ರೂಪಕ್ಕೆ ಅದು ಬಂದು ಸುಮಾರು 1,500 ವರ್ಷಗಳಾದರೂ ಆಗಿರಬಹುದು.

'ಮಹಾಭಾರತ' ಕುರುವಂಶದ ಕಥೆ; ಆ ವಂಶದವರಾದ ದುರ್ಯೋಧನ, ಧರ್ಮರಾಯ ಹಾಗೂ ಇವರ ಸಹೋದರರ ನಡುವೆ ರಾಜ್ಯಕ್ಕಾಗಿ ನಡೆದ ಹೋರಾಟ ಇದರ ಮುಖ್ಯ ವಸ್ತು. ಈ ವಸ್ತುವಿನ ನಿರೂಪಣೆಯೊಡನೆ ಹಾಸುಹೊಕ್ಕಾಗಿ ಅನೇಕ ವಿಷಯಗಳೂ ಅವನ್ನು ಸ್ಪಷ್ಟಪಡಿಸುವ ಉದಾಹರಣೆಗಳೂ ಸೇರಿಕೊಂಡಿವೆ; ಧರ್ಮಜಿಜ್ಞಾಸೆಯೂ ಬೆರೆತಿದೆ. ಈಗಿರುವಂತೆ ಮಹಾಭಾರತದ ಅರ್ಧಭಾಗ ಧರ್ಮನೀತಿಗಳ ವಿವರಣೆಗೆ ಮೀಸಲು; ಅನ್ವರ್ಥ ಕಥಾಭಾಗ. ಹೀಗಾಗಿ ಇದು ಭಾರತೀಯ ಸಂಸ್ಕೃತಿಯ ಒಂದು ವಿಶ್ವಕೋಶವೇ ಆಗಿದೆ; ಜೊತೆಗೆ ಇದೊಂದು ಮಹಾಕಾವ್ಯ ಕೂಡ. ಪ್ರಾಚೀನ ಸಂಸ್ಕೃತ ಕವಿಗಳೂ ಆಲಂಕಾರಿಕರೂ 'ಮಹಾಭಾರತ'ವನ್ನು ಸಾರವತ್ತಾದ ಕಾವ್ಯವೆಂದೇ ಹೇಳಿದ್ದಾರೆ. ಡಾ. ವಿ.ಆರ್. ಕೃಷ್ಣಶಾಸ್ತ್ರಿಗಳು ಹೇಳಿರುವಂತೆ 'ಮಹಾಭಾರತ'ದಲ್ಲಿರುವ ವಸ್ತುವೈಚಿತ್ರ್ಯ, ಪಾತ್ರವೈವಿಧ್ಯ, ಭಾವಸಂಪತ್ತು, ರಸಪ್ರವಾಹ, ಜೀವನವಿಮರ್ಶೆ, ಅಪೂರ್ವವಾದದ್ದು. 'ಮಹಾಭಾರತ'ವು ಕಥೆಗಳ ಗಣಿ. ಅವರಲ್ಲಿ ಬರುವ ಉಪಕಥೆಗಳ ವೈವಿಧ್ಯಕ್ಕೆ ಕೊನೆಯಿಲ್ಲ—ಮುಂದೆ ಇವು "ಸಂಸ್ಕೃತ ಸಾಹಿತ್ಯಕ್ಕೂ ದೇಶಭಾಷಾ ಸಾಹಿತ್ಯಕ್ಕೂ ಆಧಾರ"ವಾದುವು. "ಕೆಲವು ದೇಶಾಂತರ ಸಾಹಿತ್ಯಗಳಿಗೂ ಹೋಗಿ ಸೇರಿ ಜನಪ್ರಿಯವಾದುವು".

ನಮಗೆ ಈಗ ದೊರೆತಿರುವ 'ಮಹಾಭಾರತ'ದಲ್ಲಿ ಪರಸ್ಪರ ವಿರುದ್ಧಾಂಶಗಳು ಅಲ್ಲಲ್ಲಿ ಕಂಡುಬರುತ್ತವೆ. ಇದಕ್ಕೆ ಕಾರಣವಿಲ್ಲದಿಲ್ಲ. ಸುಮಾರು ಒಂದು ಸಾವಿರ ವರ್ಷಗಳ ಕಾಲ ಬೆಳೆದು ರೂಪುಗೊಂಡ ಈ ಕೃತಿಯಲ್ಲಿ ಇಂಥ ದೋಷ ಹುಟ್ಟಿಕೊಳ್ಳುವುದು ಸಹಜವೇ. ಈ ಮಹಾಕಾವ್ಯವನ್ನು ಓದಿದಾಗ ನಮಗೆ ಎದ್ದು ಕಾಣುವ ಅಂಶ, ಜೀವನ ದುಃಖಮಯವಾದದ್ದು ಎಂಬುದು; ನಾವು ಋಜುಮಾರ್ಗದಿಂದ ಅದನ್ನು ಇದಿರಿಸಿ ಬಾಳುವುದು ಮೇಲು ಎಂಬುದು. ಪ್ರಸಿದ್ಧ ಆಲಂಕಾರಿಕನಾದ ಆನಂದವರ್ಧನನು (ಸುಮಾರು 850) ಭಾರತವನ್ನು ಓದಿದ ಮೇಲೆ ನಮ್ಮಲ್ಲುಂಟಾಗುವುದು ವೈರಾಗ್ಯ, ಶಾಂತಿಯನ್ನು ಸಾಧಿಸಬೇಕೆಂಬ ಅಪೇಕ್ಷೆ—ಎಂದು ಸೂಚಿಸಿದ್ದಾನೆ. 'ಭಾರತಮಂಜರಿ'ಯನ್ನು ಬರೆದ ಕ್ಷೇಮೇಂದ್ರನು (11ನೆಯ ಶತಮಾನ) ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಈ ಸಂಬಂಧದಲ್ಲಿ ಅವನು ಬರೆದ ಶ್ಲೋಕವೊಂದರಲ್ಲಿ, ಚತುಸ್ಸಮುದ್ರ ಪರ್ಯಂತವಾದ ಸಾಮ್ರಾಜ್ಯವನ್ನಾಳಿದ ದುರ್ಯೋಧನ, ಒಂಟಿಯಾಗಿ ತೊಡೆ ಮುರಿಸಿಕೊಂಡು ಬಿದ್ದ; ಅವನು ಇನ್ನೂ ಬದುಕಿದ್ದಾಗಲೇ ತೋಳಗಳು ಅವನನ್ನು ಕಿತ್ತುಕೊಂಡು ತಿಂದುವು; ಇನ್ನು ಇಡೀ ಜಗತ್ತನ್ನೇ ಗೆದ್ದ ಅರ್ಜುನ, ದಸ ಕಾಯುವವರಿಗೆ ಸೋತುಹೋದ; ಯಾದವರಂತೂ ತಮ್ಮತಮ್ಮಲ್ಲಿ ಕಾದಾಡಿಕೊಂಡು ಹಾಳಾದರು. ಇದೆಲ್ಲವನ್ನೂ ಯೋಚಿಸಿ ಶಾಂತಿಯ ಕಡೆಗೆ ಲಕ್ಷ್ಯಕೊಡಿ—ಎಂದಿದ್ದಾನೆ.

'ಮಹಾಭಾರತ'ದ ಗಣನೀಯ ಭಾಗ ತತ್ತ್ವವಿವೇಚನೆಗೆ, ಧರ್ಮಾಚರಣೆಯ ನಿರೂಪಣೆಗೆ ಮೀಸಲಾಗಿದೆ. 'ಭಗವದ್ಗೀತೆ' ಯು 'ಮಹಾಭಾರತ'ದ ಒಂದು ಮುಖ್ಯ ಅಂಗವೇ ಆಗಿದೆ.

'ಮಹಾಭಾರತ'ವು ಜಗತ್ತಿನ ಹಲವಾರು ಭಾಷೆಗಳಿಗೆ ಅನುವಾದಿಸಲ್ಪಟ್ಟಿದೆ; ಹಾಗೆಯೇ 'ಭಗವದ್ಗೀತೆ' ಕೂಡ ಹಲವಾರು ಭಾಷೆಗಳಿಗೆ ಅನುವಾದವಾಗಿದೆ. ಹಿಂದೂ ಧರ್ಮದ ಆಚಾರ್ಯರಾದ ಶಂಕರ, ರಾಮಾನುಜ, ಮಧ್ವರು ಇದಕ್ಕೆ ವಿಸ್ತಾರವಾಗಿ ವ್ಯಾಖ್ಯಾನಗಳನ್ನು ಬರೆದಿದ್ದಾರೆ. 'ಪ್ರಸ್ಥಾನತ್ರಯಿ' ಎಂದು ಪ್ರಸಿದ್ಧವಾದ ಹಿಂದೂ ಧರ್ಮದ ಮೂರು ಆಕರಗಳಲ್ಲಿ 'ಭಗವದ್ಗೀತೆ'ಯೂ ಒಂದು.

ನೋಡಿ : ವ್ಯಾಸ

## ಮಹಾರಾಜಪುರಂ ವಿಶ್ವನಾಥ ಅಯ್ಯರ್

ತಂಜಾವೂರಿನಲ್ಲಿ ತಿರುಕ್ಕೋಡಿಕಾವಲ್ ಎಂಬಲ್ಲಿ ನಟರಾಜನ ಆಲಯವಿದೆ. ಅಲ್ಲಿ ಪ್ರತಿದಿನ ಸಂಗೀತ ಸೇವೆ. ಅಲ್ಲಿ ಒಂದು ದಿನ ಅಮೋಘವಾದ ನಾದಸ್ವರವಾದನ ಕೇಳಿದ ಬಾಲಕನಿಗೆ, ಸಂಗೀತದ



ಸಾಧನೆ : ಮಹಾರಾಜಪುರಂ

ಹುಚ್ಚು ಹಿಡಿಯಿತು ; ಬೇರೆ ಇನ್ನು ಯಾವ ವಿದ್ಯೆಯಲ್ಲೂ ಆಸಕ್ತಿ ಹುಟ್ಟಲಿಲ್ಲ. ಅದ್ದರಿಂದ ಅವನಿಗೆ ಸಂಗೀತ ಪಾಠವನ್ನೇ ಹೇಳಿಸ ಬೇಕಾಯಿತು. ಅದನ್ನವನು ತುಂಬ ಉತ್ಸಾಹದಿಂದ, ಶ್ರದ್ಧೆಯಿಂದ ಕಲಿತ. ಸುಪ್ರಸಿದ್ಧ ಸಂಗೀತಗಾರ ಮಹಾರಾಜಪುರಂ ವಿಶ್ವನಾಥ ಅಯ್ಯರ್ ಸಂಗೀತ ರಂಗವನ್ನು ಪ್ರವೇಶಿಸಿದ್ದು ಹೀಗೆ.

ತಿರುಕ್ಕೋಡಿಕಾವಲಿನ ಬಳಿಯ ಮಹಾರಾಜಪುರವೇ ಇವರ ಊರು. ವಿಶ್ವನಾಥ ಅಯ್ಯರ್ ಅವರ ತಂದೆ ರಾಮಯ್ಯರ್ ಅವರಿಗೆ ಸಂಗೀತವೆಂದರೆ ತುಂಬ ಅಭಿಮಾನ. ಅವರು ಅದನ್ನು ಚೆನ್ನಾಗಿ ತಿಳಿದುಕೊಂಡೂ ಇದ್ದರು. ತಮ್ಮ ಮಗನಿಗೆ ಸಂಗೀತವನ್ನು ಬಿಟ್ಟು ಬೇರೆ ಯಾವ ವಿದ್ಯೆಯಲ್ಲಿಯೂ ಆಸಕ್ತಿಯಿಲ್ಲವೆಂಬುದು ಸ್ಪಷ್ಟವಾದ ಮೇಲೆ. ಅವನಿಗೆ ಬೇರೆ ವಿದ್ಯೆ ಕಲಿಸುವ ಆಸೆಯನ್ನು ಬಿಟ್ಟರು ; ಉಮಯಾಳಪುರಂ ಸ್ವಾಮಿನಾಥ ಅಯ್ಯರ್ ಎಂಬ ಸುಪ್ರಸಿದ್ಧ ವಿದ್ವಾಂಸರಲ್ಲಿ ಸಂಗೀತ ಕಲಿಯಲು ವ್ಯವಸ್ಥೆ ಮಾಡಿದರು.

ತಮ್ಮ ಶಾರೀರವನ್ನು ಪಳಗಿಸಿಕೊಳ್ಳಲು. ತಮ್ಮ ಕಂಠ ತಾವು ಅಪೇಕ್ಷಿಸಿದಂತೆ ನುಡಿಯುವಂತೆ ಮಾಡಲು ಮಹಾರಾಜಪುರಂ ದೀರ್ಘಕಾಲ ಶ್ರಮಿಸಿದರು ; ತಮ್ಮ ಪ್ರಯತ್ನದಲ್ಲಿ ಕೃತಕೃತ್ಯರೂ ಆದರು.

ಉಮೆಯಾಳಪುರಂ ಸ್ವಾಮಿನಾಥ ಅಯ್ಯರ್‌ರವರಿಂದ ಶಿಕ್ಷಣ ಪಡೆದ ಮೇಲೆ ಅವರು ಇನ್ನೊಬ್ಬರು ಗುರುಗಳಲ್ಲಿ ತಮ್ಮ ಅಭ್ಯಾಸವನ್ನು ಮುಂದುವರಿಸಿದರು. ಈ ಹೊತ್ತಿಗೆ ಅವರ ಕಂಠಸಂಪತ್ತಿ ಚೆನ್ನಾಗಿಯೇ ರೂಪಗೊಂಡಿತ್ತು.

ಎರಡನೆಯ ಗುರುಗಳಲ್ಲಿ ಅಭ್ಯಾಸ ಮುಗಿದ ಮೇಲೆ ಮಹಾರಾಜಪುರಂ ಅವರು. ತಮ್ಮ ತಾಳಜ್ಞಾನವನ್ನು ಅಭಿವೃದ್ಧಿಪಡಿಸಿಕೊಳ್ಳಲು ಪಳನಿಗೆ ಹೋದರು. ಅಲ್ಲಿನ ವಿದ್ವಾಂಸರಿಂದ ಕಲಿಯಬೇಕಾದದ್ದನ್ನು ಕಲಿತರು. ಹೀಗೆ ಸಂಗೀತ ವಿದ್ಯೆಯನ್ನು ಕೈಗೂಡಿಸಿಕೊಂಡ ಮೇಲೆ ಅವರು ಅನೇಕ ಕಡೆಗಳಲ್ಲಿ ಸಂಗೀತ ಕಚೇರಿಗಳನ್ನು ನಡೆಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

ಮಹಾರಾಜಪುರಂ ಅವರು ಕಲಿತದ್ದು ಪರಿಣತಿ ಪಡೆದದ್ದು ಕರ್ಣಾಟಕ ಸಂಗೀತದಲ್ಲಿ. ಆದರೂ ಹಿಂದೂಸ್ತಾನಿ ಸಂಗೀತದಲ್ಲಿ ಅವರಿಗೆ ತುಂಬ ಆಸಕ್ತಿಯಿತ್ತು. ಬಾಲಗಂಧರ್ವರ ಗಾಯನ ಶೈಲಿಯನ್ನು ಅವರು ಮೆಚ್ಚಿಕೊಂಡಿದ್ದರು ; ಆಗಾಗ ಆ ಶೈಲಿಯನ್ನನುಕರಿಸಿ ಹಾಡುತ್ತಿದ್ದದ್ದೂ ಉಂಟು. ಕರ್ಣಾಟಕ ಸಂಗೀತದ ರಾಗಗಳಲ್ಲಿ ವಿಶ್ವನಾಥ ಅಯ್ಯರ್ ಅವರಿಗೆ ಅಚ್ಚುಮೆಚ್ಚಾಗಿದ್ದ ರಾಗಗಳು ಹಲವಾರು : ಮೋಹನ, ದರ್ಬಾರ್ ಮುಖಾರಿ, ದೇವಗಾಂಧಾರಿ, ಮುಂತಾದುವು. ದರ್ಬಾರಿ ಕಾನಡ, ಜೋನ್‌ಪುರಿ, ಬಾಗೇಶ್ರೀ ಮುಂತಾದ ಹಿಂದೂಸ್ತಾನಿ ಸಂಗೀತದ ರಾಗಗಳೂ ಅವರಿಗೆ ಅಚ್ಚುಮೆಚ್ಚಾಗಿದ್ದುವು. ಕೇಳಿದವರು ಪರವಶರಾಗುವಂತೆ ಅವರು ಹಾಡುತ್ತಿದ್ದರು.

## ಮಾರ್ಕ್ ಟ್ವೇನ್

"……………ಬೆಳಗಿನ ಜಾವ ನಾನು ಕಣ್ಣು ಬಿಟ್ಟಾಗ ನನ್ನ ಕೋಣೆಯಲ್ಲಿ ಎರಡು ಕೋತಿಗಳು ಓಡಾಡುತ್ತಿದ್ದುದನ್ನು ಕಂಡೆ. ಒಂದು ಕೋತಿ ಕನ್ನಡಿಯ ಮುಂದೆ ಕುಳಿತು ತಲೆ ಬಾಚಿಕೊಳ್ಳುತ್ತಿತ್ತು. ಇನ್ನೊಂದು ಕೋತಿ ನನ್ನ ಟಿಪ್ಪಣಿ ಪುಸ್ತಕ ಹಿಡಿದು ನಾನು ಬರೆದಿದ್ದ ಹಾಸ್ಯಪೂರಿತ ಟಿಪ್ಪಣಿಯನ್ನು ಓದಿ ಅಳುತ್ತಿತ್ತು. ಬಾಚಣಿಗೆ ಹಿಡಿದು ಕುಳಿತಿದ್ದ ಕೋತಿಯ ಬಗೆಗೆ ನನಗೆ ಅಷ್ಟು ಯೋಚನೆಯಾಗಲಿಲ್ಲ. ಆದರೆ ಮತ್ತೊಂದು ಕೋತಿಯ ನಡತೆಯಿಂದ ನನಗೆ ಕೆಡುಕೆನಿಸಿತು. ಈಗಲೂ ಇದು ನನಗೆ ನೋವುಂಟು ಮಾಡುತ್ತದೆ"—ಎಂದು ಮಾರ್ಕ್ ಟ್ವೇನ್ ಒಂದು ಕಡೆ ಬರೆದಿದ್ದಾನೆ.

ವಿಶ್ವದ ಪ್ರಮುಖ ಹಾಸ್ಯಲೇಖಕರಲ್ಲೊಬ್ಬನಾದ ಅಮೆರಿಕದ ಮಾರ್ಕ್ ಟ್ವೇನನ ಕೃತಿಗಳನ್ನೋದಿದಾಗ ಮನಸಾರೆ ನಗದವರಿಲ್ಲ.

ಮಿಸ್ಸೌರಿಯ ಸಮೀಪದಲ್ಲಿರುವ ಫ್ಲಾರಿಡ ಎಂಬ ಹಳ್ಳಿಯಲ್ಲಿ 1835ರ ನವೆಂಬರ್ 30 ರಂದು ಇವನು ಜನಿಸಿದ. ಇವನಿಗೆ ತಂದೆ ತಾಯಿ ಇಟ್ಟ ಹೆಸರು ಸ್ಯಾಮ್ಯುಯೆಲ್ ಲಾಂಗ್‌ಹಾರ್ನ್ ಕ್ಲೆಮೆನ್ಸ್ ಎಂದು. ಇವನಿನ್ನೂ ಚಿಕ್ಕವನಿದ್ದಾಗಲೇ ಇವನ ತಂದೆ ತನ್ನ ಕುಟುಂಬವನ್ನು ಮಿಸಿಸಿಪಿ ನದಿಯ ದಡದಲ್ಲಿದ್ದ ಹ್ಯಾನಿಬಾಲ್ ಎಂಬಲ್ಲಿಗೆ ಕರೆದೊಯ್ದ. ಆ ನದಿ ಸುತ್ತಮುತ್ತಲಿನ ಮರಗಳು. ಚಟುವಟಿಕೆಯ ಜನತೆ. ಬಾಲಕನ ಮೇಲೆ ಪ್ರಭಾವ ಬೀರಿದುವು. ನದಿಯ ಮೂಲಕ ಹಾದುಹೋಗುತ್ತಿದ್ದ ಪ್ರಯಾಣಿಕರು ಹೇಳುತ್ತಿದ್ದ ಕಥೆ ಕೇಳುವುದು. ಹೇಳುವುದು ಇವನ ನಿತ್ಯಕರ್ಮವಾಯಿತು.

ಕ್ಲೆಮೆನ್ಸ್‌ಗೆ 11 ವರ್ಷವಾಗಿದ್ದಾಗ ಇವನ ತಂದೆ ತೀರಿಕೊಂಡ. ಇವನಿಗೆ ಶಾಲೆ ಬೇಡವಾಯಿತು. ಮೊದಲು ಮುದ್ರಣಾಲಯ ಒಂದರಲ್ಲಿ ಕೆಲಸ ಮಾಡುತ್ತಿದ್ದು ಅನಂತರ ತನ್ನ ಅಣ್ಣ ಪ್ರಾರಂಭಿಸಿದ್ದ ಪತ್ರಿಕೆಗೆ ಸೇರಿದ. ಕೊಂಚ ಕಾಲದ ಅನಂತರ ನ್ಯೂಯಾರ್ಕ್, ಫಿಲಡೆಲ್ಫಿಯಗಳ ಕಡೆ ಪ್ರಯಾಣ ಮಾಡಿ ಮುದ್ರಣಾಲಯ ಸಿಕ್ಕಲ್ಲಿ ಕೆಲಸಕ್ಕೆ ಸೇರಿರುತ್ತಿದ್ದ. ಆದರೆ ನದಿಯ ಸಾಹಸಮಯ ಜೀವನ ಇವನನ್ನು ಕೈಬೀಸಿ ಕರೆಯುತ್ತಿತ್ತು. 1857ರಲ್ಲಿ ಅಭ್ಯಾಸೀ ಕೆಲಸಗಾರನಾಗಿ ಒಂದು ಹಡಗನ್ನು ಸೇರಿದ. ಮುಂದೆ ನಾವಿಕನಾಗಲು ಇವನಿಗೆ ಅಪ್ಪಣೆಯೂ ಸಿಕ್ಕಿತು. ಕೊಂಚ ಕಾಲದ ಅನಂತರ ಅಮೆರಿಕದಲ್ಲಿ ಅಂತರ್ಯುದ್ಧ ಪ್ರಾರಂಭವಾಗಿ ಇವನು ಕೆಲಸ ಬಿಡಬೇಕಾಯಿತು.

ಇದೇ ಸಮಯಕ್ಕೆ ವರ್ಜೀನಿಯಾದ ನೆವಾಡದಲ್ಲಿದ್ದ ಪತ್ರಿಕೆಯೊಂದರಿಂದ ಇವನಿಗೆ ಕರೆಬಂತು.

ತಾವು ಸಾಗುವ ನದಿಯ ನೀರಿನ 12 ಅಡಿ ಆಳವನ್ನು ಸೂಚಿಸಲು ಆಗಿನ ಕಾಲದ ಅಂಬಿಗರು 'ಮಾರ್ಕ್ ಟ್ವೇನ್' ಎಂದು ಕೂಗುತ್ತಿದ್ದರು. ಬಾಲ್ಯದಿಂದ ನದೀ ಜೀವನದಲ್ಲಿ ಆಸಕ್ತನಾಗಿದ್ದ ಕ್ಲೆಮೆನ್ಸ್ ಅದನ್ನೇ ತನ್ನ ಕಾವ್ಯನಾಮವಾಗಿ ಇಟ್ಟುಕೊಂಡ.

1864ರಲ್ಲಿ ಟ್ವೇನ್, 'ಮಾರ್ನಿಂಗ್ ಕಾಲ್' ಎಂಬ ಸಾನ್‌ಫ್ರಾನ್ಸಿಸ್ಕೋದ ಪತ್ರಿಕೆಗೆ ಬರೆಯತೊಡಗಿದ. ಈ ಕಾಲದಲ್ಲಿ ಇವನು ಕೈಗೊಂಡ ಪ್ರವಾಸಗಳ ವಿವರ 1872ರಲ್ಲಿ ಪ್ರಕಟವಾದ 'ರಫಿಂಗ್ ಇಟ್' ಎಂಬ ಕೃತಿಯಲ್ಲಿ ಚಿತ್ರಿತವಾಗಿದೆ. 1865ರಲ್ಲಿ ನ್ಯೂಯಾರ್ಕ್‌ನ ಪತ್ರಿಕೆ 'ದಿ ಸಾಟರ್‌ಡೇ ಪ್ರೆಸ್'ನಲ್ಲಿ ಪ್ರಕಟವಾದ 'ಕ್ಯಾಲಿವೆರಾಸ್ ಕೌಂಟಿಯ ಜಿಗಿಯುವ ಕಪ್ಪೆ' ಎಂಬ ಕಥೆಯಿಂದ ಇವನ ಕೀರ್ತಿ ಎಲ್ಲೆಲ್ಲೂ ಹಬ್ಬಿತು. ಮುಂದೆ ಅನೇಕ ಕಡೆ ಪ್ರಯಾಣ ಮಾಡಿ ಭಾಷಣಗಳನ್ನು ಮಾಡಿದ; ಲೇಖನಗಳನ್ನು ಬರೆದ. ಯೂರೋಪ್ ಮೊದಲಾದ ಪ್ರದೇಶಗಳಲ್ಲಿ ಮಾಡಿದ ಪ್ರಯಾಣ



ನೋವು, ನಗೆ : ಮಾರ್ಕ್ ಟ್ವೇನ್

ಗಳನ್ನು 'ಹೊರನಾಡ ಮುಗ್ಧರು' (1869) ಎಂಬ ಪುಸ್ತಕದಲ್ಲಿ ಚಿತ್ರಿಸಿದ.

1870ರಲ್ಲಿ ಟ್ವೇನ್ ಮದುವೆಯಾದ. ಇವನ ಕುಟುಂಬ ಜೀವನ ಬಹು ಸಂತಸಮಯವಾಗಿ ಇತ್ತು. 'ಟಾಮ್ ಸಾಯರನ ಸಾಹಸಗಳು' (1876), 'ಹಕ್‌ಲ್‌ಬೆರಿ ಫಿನ್‌ನ ಸಾಹಸಗಳು' (1876), 'ಮಿಸಿಸಿಪ್ಪಿ ದಡದ ಮೇಲಿನ ಜೀವನ' (1883), ಇವನ ಪ್ರಮುಖ ಕೃತಿಗಳು. ಮಿಸಿಸಿಪಿ ದಡದ ಮೇಲಿನ ಸಣ್ಣ ಊರಿನಲ್ಲಿ ನಡೆಯುವಂತೆ ಚಿತ್ರಿಸಲಾದ ಈ ಕಥೆಯ ನಾಯಕ ಟಾಮ್‌ಸಾಯರ್. ಟ್ವೇನನ ಚಿಕ್ಕಂದಿನ ದಿನಗಳ ಅನೇಕ ನೆನಪುಗಳು ಈ ಕಥೆಯ ಮೇಲೆ ಪ್ರಭಾವ ಬೀರಿವೆ. ಇವನ 'ಹಕ್‌ಲ್‌ಬೆರಿ ಫಿನ್' ಕಾದಂಬರಿ ಅಮೆರಿಕದ ಅತ್ಯುತ್ತಮ ಕಾದಂಬರಿಗಳಲ್ಲೊಂದು ಎಂದು ಪರಿಗಣಿತವಾಗಿದೆ. ಇವನ 'ದಿ ಪ್ರಿನ್ಸ್ ಅಂಡ್ ದಿ ಪಾಪರ್' (1882) ಕಥೆಯನ್ನು ಇವನ ಮೂವರು ಹೆಣ್ಣು ಮಕ್ಕಳು ನಾಟಕ ರೂಪದಲ್ಲಿ ಅಭಿನಯಿಸುತ್ತಿದ್ದರು.

ಮಾರ್ಕ್ ಟ್ವೇನನ ಸಾಹಸಗಳು ಕೊನೆಗಾಲದಲ್ಲಿ ಅವನಿಗೆ ಕೊಂಚ ತೊಂದರೆಯನ್ನೇ ತಂದುವು. ಮುದ್ರಣ ಮೊಳೆ ಜೋಡಿಸುವ ಹೊಸ ರೀತಿಯ ಯಂತ್ರವನ್ನು ರೂಪಿಸಲು ತೊಡಗಿ ಹಣ ಕಳೆದುಕೊಂಡ; ಪ್ರಕಟನಾಲಯವೊಂದನ್ನು ಸ್ಥಾಪಿಸಿ ಕೈಸುಟ್ಟುಕೊಂಡ. ಸುಮಾರು ಒಂದು ಲಕ್ಷ ಡಾಲರ್‌ನಷ್ಟು ಸಾಲಮಾಡಿದ. ಅದನ್ನು ತೀರಿಸಲೆಂದು ವಿಶ್ವಪರ್ಯಟನೆ ಮಾಡಿ ಭಾಷಣಗಳನ್ನು ಕೊಟ್ಟು ಹಣ ಸಂಪಾದಿಸಿದ. ಈ ಪ್ರವಾಸ ಕಾಲದಲ್ಲಿ ಇವನು ಭಾರತಕ್ಕೂ ಬಂದಿದ್ದ. ನಮ್ಮವರು ಬಟ್ಟೆ ಒಗೆಯುವ ವಿಧಾನ ನೋಡಿ ಆಶ್ಚರ್ಯಪಟ್ಟು ಇವನು "ಕಲ್ಲನ್ನು ಒಡೆಯಲು ಅಗಸರು ಉಪಯೋಗಿಸುವ ಉಪಕರಣವೇ ಅಂಗಿ" ಎಂದು ಹೇಳಿದ.

ತನ್ನ ವಿಶ್ವಪರ್ಯಟನೆಯಲ್ಲಿ ಸಂಪಾದಿಸಿದ ಹಣದ ಬಗೆಗೆ ಟ್ವೇನ್, "ನಾವು ಹದಿಮೂರು ತಿಂಗಳ ಕಾಲ ಭಾಷಣ ಮಾಡುತ್ತಾ ದರೋಡೆ ಮಾಡಿದೆವು. ಆ ಹಣವನ್ನು ನನ್ನ ಮಿತ್ರನಿಗೆ ಕಳುಹಿಸಿದೆ. ಅವನು ಅದನ್ನು ಬ್ಯಾಂಕಿನಲ್ಲಿಟ್ಟು ನನ್ನ ಸಾಲಗಾರರಿಗೆ ಸಲ್ಲಿಸಿದ" ಎಂದಿದ್ದಾನೆ. 1898ರ ವೇಳೆಗೆ ಒಂದೂ ಕಾಸೂ ಸಾಲ ಉಳಿಸಿಕೊಂಡಿರಲಿಲ್ಲ.

ಹೇಲಿ ಧೂಮಕೇತು ಕಂಡಾಗ ತಾನು ಹುಟ್ಟಿದವನೆಂದು ಹೇಳುತ್ತಿದ್ದ ಇವನು ಮತ್ತೆ ಆ ಉಲ್ಕೆ ಕಂಡಾಗ ಅದರ ಜೊತೆ ಹೋಗದಿದ್ದರೆ ಅದು ತನ್ನ ಜೀವನದ ಅತಿ ದೊಡ್ಡ ನಿರಾಸೆಯಾಗುತ್ತದೆ ಎನ್ನುತ್ತಿದ್ದ. 1910ರ ಏಪ್ರಿಲ್ 20ರಂದು ಹೇಲಿ ಧೂಮಕೇತು ಮತ್ತೆ ಕಾಣಿಸಿತು. ಹಾಸ್ಯ ಸಾಹಿತ್ಯ ಪ್ರಕಾರದ ಪ್ರಮುಖ ನಕ್ಷತ್ರ ಮಾರ್ಕ್ ಟ್ವೇನ್ ಮರುದಿನವೇ ಕಣ್ಮರೆಯಾದ.

## ಮಾಟಿಸ

ಆಧುನಿಕ ಚಿತ್ರಕಲೆಯ ಆದ್ಯಪ್ರವರ್ತಕರಲ್ಲಿ ಒಬ್ಬ ಹೆನ್ರಿ ಮಾಟಿಸ್. 20ನೆಯ ಶತಮಾನದ ಆರಂಭದ ವರ್ಷಗಳಲ್ಲಿ ಫ್ರಾನ್ಸಿನಲ್ಲಿ ಹೊಸ ಬಗೆಯ ಕಲಾವಿದರ ಪಂಗಡ ಹುಟ್ಟಿಕೊಂಡಿತು. ಬಣ್ಣಗಳ ಸ್ವಚ್ಛಂದ ಉಪಯೋಗ ಇವರ ವೈಶಿಷ್ಟ್ಯ. ಇವರ ಚಿತ್ರಗಳು ಪ್ರಕೃತಿಯಲ್ಲಿ ಕಂಡು ಬರುವ ವಸ್ತುಗಳನ್ನು ತುಸುಮಟ್ಟಿಗೂ ಹೋಲುತ್ತಿರಲಿಲ್ಲ. ಕೆಂಪು ಅಥವಾ ಊದಾಬಣ್ಣದ ಮರ, ಅಚ್ಚ ಹಳದಿ, ಆಕಾಶ, ಹಸುರಾಗಿರುವ ರಸ್ತೆಗಳು– ಇವನ್ನೆಲ್ಲ ಕಾಣಬಹುದಾಗಿತ್ತು, ಇವರ ಚಿತ್ರಗಳಲ್ಲಿ. ಈ ಹೊಸ ರೀತಿಯ ಕಲಾವಿದರು ಕೆಲವರು ಪ್ಯಾರಿಸಿನಲ್ಲಿ ಒಂದು ಪ್ರದರ್ಶನ ಏರ್ಪಡಿಸಿದರು. ನೋಡಲು ಬಂದವರಿಗೆ ಆ ಚಿತ್ರಗಳು ಏನೇನೂ ಅರ್ಥವಾಗಲಿಲ್ಲ. ಜನ ಈ ಕಲಾವಿದರನ್ನು 'ಕಲೆಯ ಕೊಲೆಗಾರರು', 'ಬೆನ್ನೆಲುಬು ಇಲ್ಲದವರು' ಎಂದು ಕರೆದರು. ಮತ್ತೆ ಕೆಲವರು ಇವರನ್ನು 'ಫಾವಿ'ಗಳು (ಕಾಡುಮೃಗಗಳು) ಎಂದರು. ಚಿತ್ರಕಾರರಿಗೆ ಇದರಿಂದ ಬೇಸರಕ್ಕಿಂತ ಹೆಚ್ಚಾಗಿ ಸಂತೋಷವೇ ಆಯಿತು. ಅವರು ತಮ್ಮನ್ನು ಫಾವ್ ಪಂಥದವರೆಂದು ಕರೆದುಕೊಳ್ಳಲಾರಂಭಿಸಿದರು. ಇವರ ಮುಖಂಡ ಹೆನ್ರಿ ಮಾಟಿಸ್.

ಮಾಟಿಸ್ ಪ್ರದರ್ಶನಕ್ಕೆ ಇಟ್ಟಿದ್ದ ಚಿತ್ರ –'ಹ್ಯಾಟ್ ಧರಿಸಿದ ಹೆಂಗಸು'– ಟೀಕೆಗೆ ಒಳಗಾದರೂ ಕೊನೆಗೆ ಮಾರಾಟವಾಯಿತು. ಇದರಿಂದ ಉತ್ಸಾಹಿತನಾದ ಮಾಟಿಸ್ ಮತ್ತಷ್ಟು ಅಸಹಜವಾದ ಚಿತ್ರಗಳನ್ನು ಬರೆಯಲು ಆರಂಭಿಸಿದ. ಕೀರ್ತಿ ಹೆಚ್ಚಿದರೂ ಮಾಟಿಸ್ ಬದಲಾಗಲಿಲ್ಲ. ಕಷ್ಟಪಟ್ಟು ಕೆಲಸಮಾಡುವ ಸರಳ ಮನಸ್ಸಿನ ಚಿತ್ರಕಾರನಾಗಿಯೇ ಉಳಿದ. ದಪ್ಪ ದೇಹ. ಕನ್ನಡಕದ ಹಿಂದಿನಿಂದ ಹೊಳೆಯುವ ಕಣ್ಣುಗಳಿಂದಾಗಿ ಇವನು ಹಳ್ಳಿಯ ವೈದ್ಯನಂತೆ ಕಾಣುತ್ತಿದ್ದ. ಗೆಳೆಯರು ಮಾಟಿಸ್‌ನನ್ನು 'ಡಾಕ್ಟರ್' ಎಂದೇ ಕರೆಯುತ್ತಿದ್ದರು.

ಹೆನ್ರಿ ಮಾಟಿಸ್ ಹುಟ್ಟಿದ್ದು ಉತ್ತರ ಫ್ರಾನ್ಸಿನ ಲೆ ಕ್ಯಾಟೂ ಎಂಬಲ್ಲಿ; 1869ರ ಡಿಸೆಂಬರ್ 31ರಂದು. ಶಾಲಾ ವಿದ್ಯಾಭ್ಯಾಸ ಮುಗಿಸಿದ ಕೂಡಲೇ ತಂದೆ ಇವನನ್ನು ನ್ಯಾಯಶಾಸ್ತ್ರಾಭ್ಯಾಸಕ್ಕಾಗಿ ಪ್ಯಾರಿಸಿಗೆ ಕಳುಹಿಸಿದ. ಅದನ್ನು ಅರ್ಧದಲ್ಲೇ ನಿಲ್ಲಿಸಿ ಮನೆಗೆ ಹಿಂದಿರುಗಿದ ಮಾಟಿಸ್ ವಕೀಲನೊಬ್ಬನ ಗುಮಾಸ್ತೆಯಾದ. ಪ್ರತಿ ದಿನ ಕಚೇರಿಗೆ ಹೋಗುವುದಕ್ಕೆ ಮುಂಚೆ ಚಿತ್ರಕಲೆಯನ್ನು ಅಭ್ಯಾಸ ಮಾಡುತ್ತಿದ್ದ. ಕೊನೆಗೆ 22 ವರ್ಷ



ಹೊಸ ಕಲಾ ಶೈಲಿ : ಮಾಟಿಸ್

ವಯಸ್ಸಿನ ಹೆನ್ರಿ ಮಾಟಿಸ್ ತನ್ನ ತಂದೆಯ ವಿರೋಧವನ್ನು ಗಮನಿಸದೆ ಮತ್ತೆ ಪ್ಯಾರಿಸಿಗೆ ಬಂದು ಕಲಾಶಾಲೆಯೊಂದನ್ನು ಸೇರಿದ.

ಮಾಟಿಸ್ ಕಲಿತದ್ದು ಸಾಂಪ್ರದಾಯಿಕ ಚಿತ್ರಕಲೆಯನ್ನು. ಆದರೆ ಕ್ರಮೇಣ ಆತ ಪ್ರಕೃತಿ ಮತ್ತು ಅದರ ಚಿತ್ರಣ ಇವೆರಡೂ ಏಕರೀತಿಯಾಗಿರ ಬೇಕಾಗಿಲ್ಲ ಎಂಬ ನಿರ್ಧಾರಕ್ಕೆ ಬಂದ. ಕಡು ಬಣ್ಣಗಳನ್ನು ಉಪಯೋಗಿಸ ತೊಡಗಿದ. ಇವನ ಚಿತ್ರಗಳಲ್ಲಿ ವಸ್ತುಗಳಿಗಿಂತ ಬಣ್ಣಗಳೇ ಎದ್ದು ಕಾಣು ತ್ತಿದ್ದುವು. ವಾಸ್ತವತೆಗಿಂತ ಹೆಚ್ಚಾಗಿ ಕಲ್ಪನೆಗೇ ಪ್ರಾಧಾನ್ಯ ದೊರೆಯಿತು. ಹೆಂಗಸರನ್ನು ಕುರೂಪವಾಗಿ ಚಿತ್ರಿಸುವುದರಲ್ಲಿ ಪ್ರಸಿದ್ಧನಾದ ಮಾಟಿಸನ ಚಿತ್ರಗಳಿಗೆ ಮೂಲ ಮಾದರಿಯಾಗಿ ಕೂರಲು ಯಾರೂ ಒಪ್ಪಲಿಲ್ಲ. ಮನಸ್ಸಿನ ಭಾವನೆಗಳನ್ನು ಸರಳವಾಗಿ ಪ್ರತಿನಿಧಿಸುವುದೇ ಇವನ ಧ್ಯೇಯ ವಾಗಿತ್ತು. "ನನ್ನ ಚಿತ್ರಗಳನ್ನು ಹೋಲುವ ಹೆಂಗಸೊಬ್ಬಳು ಬೀದಿಯಲ್ಲಿ ಭೇಟಿಯಾದರೆ ನಾನೇ ಮೂರ್ಛೆ ಹೋದೇನು," ಎನ್ನುತ್ತಿದ್ದ ಮಾಟಿಸ್.

ಹೊಸ ಶೈಲಿಯ ಕಲೆಯನ್ನು ಆರಂಭಿಸಿದವನೆಂದು ಹೆಸರು ಗಳಿಸಿದರೂ ಮಾಟಿಸ್ 1910ರಲ್ಲಿ ತನ್ನ ಚಿತ್ರಕಲೆಯ ರೀತಿಯನ್ನು ಬದಲಿಸಿದ. ಆಧುನಿಕ ಚಿತ್ರಕಾರರೊಡನೆ ಸ್ಪರ್ಧಿಸುವುದನ್ನು ಬಿಟ್ಟುಬಿಟ್ಟು ಸಾಂಪ್ರದಾಯಿಕ ಶೈಲಿಯ ಚಿತ್ರಣವನ್ನು ಮತ್ತೆ ಆರಂಭಿಸಿದ. ನಿಜವಾದ ಸೇಬಿನಂತೆ ಇರುವ ಹಣ್ಣುಗಳನ್ನೂ ಸುಂದರಿಯಾಗಿ ತೋರುವ ಹೆಂಗಸರ ಚಿತ್ರಗಳನ್ನೂ ಬರೆಯ ತೊಡಗಿದ. ವರ್ಣಚಿತ್ರಗಳಲ್ಲಿ ಬಣ್ಣಗಳನ್ನು ಹದವಾಗಿ ಉಪಯೋಗಿಸಲಾರಂಭಿಸಿದ.

ವರ್ಣಚಿತ್ರಗಳಲ್ಲದೆ ರೇಖಾಚಿತ್ರರಚನೆ, ಶಿಲ್ಪಕಲೆಗಳಲ್ಲೂ ಮಾಟಿಸ್ ಪ್ರಾವೀಣ್ಯ ಪಡೆದಿದ್ದ.

ವೃದ್ಧಾಪ್ಯ ಸಮೀಪಿಸುತ್ತಿದ್ದಂತೆ ಮಾಟಿಸನ ಆರೋಗ್ಯ ಕೆಡ ಲಾರಂಭಿಸಿತು. ಹಾಸಿಗೆ ಬಿಟ್ಟು ಏಳುವುದೇ ಕಷ್ಟವಾಯಿತು. ಈ ಸ್ಥಿತಿಯಲ್ಲೂ ಅವನು ಚಿತ್ರ ಬರೆಯುವುದನ್ನು ಬಿಡಲಿಲ್ಲ. ಹಾಸಿಗೆಯ ಮೇಲಿದ್ದುಕೊಂಡೇ, ಉದ್ದವಾದ ಕೋಲಿನ ತುದಿಗೆ ಕಟ್ಟಿದ ಬ್ರಷ್‌ನಿಂದ ವರ್ಣಚಿತ್ರಗಳನ್ನು ರಚಿಸುತ್ತಿದ್ದ.

ಮಾಟಿಸ್‌ನ ಕೊನೆಯ ಕಲಾಕೃತಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ್ದು. ಫ್ರಾನ್ಸಿನ ವೆನ್ಸ್ ಪಟ್ಟಣದಲ್ಲಿ ಒಂದು ಇಗರ್ಜಿ ಕಟ್ಟುವ ಹೊಣೆ ವಹಿಸಿಕೊಂಡ. ಕಟ್ಟಡದ ರೂಪುರೇಷೆ, ದೊಡ್ಡ ಕಿಟಕಿಗಳಿಗೆ ಬಣ್ಣಬಣ್ಣದ ಗಾಜಿನ ಅಲಂಕಾರ, ಆಸನ ವ್ಯವಸ್ಥೆ, ಗೋಡೆಗಳಲ್ಲಿ ವರ್ಣಚಿತ್ರಗಳನ್ನು ಬರೆಯುವುದು ಮುಂತಾದ ಎಲ್ಲ ಕೆಲಸಗಳಿಗೂ ಮೇಲ್ವಿಚಾರಣೆಯನ್ನು ಇವನೇ ನಡೆಸಿದ. ಹಾಸಿಗೆಯಲ್ಲಿ ಮಲಗಿ ಬಣ್ಣದ ಕಾಗದ ಚೂರು ಗಳನ್ನು ಬೇರೆ ಬೇರೆ ರೀತಿಗಳಲ್ಲಿ ಅಳವಡಿಸಿ ಚರ್ಚಿಗಾಗಿ ವಿನ್ಯಾಸಗಳನ್ನು ತಯಾರಿಸಿದ. ತನ್ನ 81ನೆಯ ವಯಸ್ಸಿನಲ್ಲಿ ಪೂರ್ತಿಯಾದ ಈ ಚರ್ಚನ್ನು ಇವನು ಹೆಮ್ಮೆಯಿಂದ "ನನ್ನ ಮಹಾಕೃತಿ" ಎಂದು ಕರೆಯುತ್ತಿದ್ದ.

ನಾಲ್ಕು ವರ್ಷಗಳ ಅನಂತರ ಹೆನ್ರಿ ಮ್ಯಾಟಿಸ್ ನೀಸ್ ಪಟ್ಟಣದಲ್ಲಿ 1954ರ ನವೆಂಬರ್ 3ರಂದು ತೀರಿಕೊಂಡ.

## ಮಾರಿಯಾಕ್

"ರೈಲು ಪ್ರಯಾಣದಲ್ಲಿ ಓದಲು ಅತ್ಯುತ್ತಮ ಪುಸ್ತಕ, ಮಾರಿಯಾಕ್‌ನ ಕಾದಂಬರಿ" ಎಂದು ಹೇಳುವುದುಂಟು. ಸ್ಪಷ್ಟವಾದ ರೂಪುರೇಷೆಗಳಿಂದಾಗಿ ಈ ಕಾದಂಬರಿಗಳ ಕಥೆಯ ಪ್ರತಿ ಅಂಶವೂ ಜನಸಾಮಾನ್ಯರಿಗೆ ಸುಲಭವಾಗಿ ತಿಳಿಯುತ್ತದೆ. ಇದೇ ಕಾರಣದಿಂದಾಗಿ ಮಾರಿಯಾಕ್ ಫ್ರಾನ್ಸ್ ದೇಶದ ಜನಪ್ರಿಯ ಲೇಖಕ.


ಜನಪ್ರಿಯತೆ : ಮಾರಿಯಾಕ್

ಫ್ರಾಂಕೊಸ್ ಮಾರಿಯಾಕ್‌ನ ಕೃತಿಗಳನ್ನು ಅಭ್ಯಾಸ ಮಾಡಿದವರು ಅವನು ಒಬ್ಬನೇ ವ್ಯಕ್ತಿಯಲ್ಲ, ಹಲವು ಮಂದಿ ಮಾರಿಯಾಕ್‌ಗಳಿರಬೇಕು ಎಂದು ಅನುಮಾನ ಪಡುವುದೂ ಉಂಟು. ಕವಿ, ಕಾದಂಬರಿಕಾರ, ನಾಟಕಕಾರ, ಪ್ರಬಂಧ ಲೇಖಕ ಮತ್ತು ಪತ್ರಿಕಾಕರ್ತನಾಗಿ ಇವನು ಫ್ರಾನ್ಸಿನ ಸಾಹಿತ್ಯ ಕ್ಷೇತ್ರದಲ್ಲಿ ಆರು ದಶಕಗಳ ಕಾಲ ಬೆಳಗಿದ. 1952ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ಪಡೆದು ಜಗತ್ಪ್ರಸಿದ್ಧನಾದ.

ಮಾರಿಯಾಕ್ ಫ್ರಾನ್ಸಿನ ಬಾಡ್ರ್ಯಾಕ್ಸ್ ಎಂಬಲ್ಲಿ 1885ರ ಅಕ್ಟೋಬರ್ 11ರಂದು ಹುಟ್ಟಿದ. ಧಾರ್ಮಿಕ ವಾತಾವರಣದಲ್ಲಿ ಬೆಳೆದ ಇವನಲ್ಲಿ ಕ್ರೈಸ್ತ ಧರ್ಮದ ನಂಬಿಕೆ ದೃಢವಾಗಿ ಬೇರೂರಿತ್ತು. ಬಾಡ್ರ್ಯಾಕ್ಸ್ ವಿಶ್ವವಿದ್ಯಾಲಯದಲ್ಲೇ ಅವನ ವಿದ್ಯಾಭ್ಯಾಸ ನಡೆಯಿತು.

ಮಾರಿಯಕ್‌ನ ಸಾಹಿತ್ಯ ಜೀವನ ಆರಂಭವಾದದ್ದು 1909ರಲ್ಲಿ, ಅವನ ಕವನಸಂಗ್ರಹ ಪ್ರಕಟವಾದಾಗ. ಎರಡು ವರ್ಷಗಳ ಬಳಿಕ ಮತ್ತೊಂದು ಕವನಸಂಗ್ರಹ ಹೊರಬಂತು. ಆದರೆ ಇವನು ಪ್ರಖ್ಯಾತನಾದದ್ದು 1922ರ ಸುಮಾರಿಗೆ, ಅವನ ಕೆಲವು ಕಾದಂಬರಿಗಳು ಪ್ರಕಟವಾದ ಬಳಿಕ.

ಮಾರಿಯಾಕ್‌ನ ಹುಟ್ಟೂರು ಇದ್ದ ಪ್ರಾಂತದ ಮಧ್ಯಮವರ್ಗದ ಕುಟುಂಬಗಳ ಚಿತ್ರಣವನ್ನು ಇವನ ಹೆಚ್ಚಿನ ಕಾದಂಬರಿಗಳಲ್ಲಿ ಕಾಣಬಹುದು. ಮಾನವೀಯ ಸಂಬಂಧದಲ್ಲಿ ತಿಕ್ಕಾಟಗಳು, ತಾರುಣ್ಯದಲ್ಲಿ ಅಧಿಕವಾಗಿರುವ ಮಾನಸಿಕ ಏರಿಳಿತ, ಆಧುನಿಕ ಭೋಗಪ್ರವೃತ್ತಿಯಿಂದ ಕುಟುಂಬ ಜೀವನ ದಲ್ಲಿ ಉಂಟಾಗುವ ಬದಲಾವಣೆಗಳು ಮತ್ತು ಹುಟ್ಟುವ ಧಾರ್ಮಿಕ ಜ್ಞಾನ ಮಾರಿಯಾಕ್‌ನ ಕಾದಂಬರಿಗಳ ಕಥಾವಸ್ತು. 1932ರಲ್ಲಿ ಪ್ರಕಟ ವಾದ 'ಲೆ ನಾಯ್ಡ್ ಡಿ ವೈಪರ್ಸ್' ಎಂಬ ಕಾದಂಬರಿ ಇವನ ಅತ್ಯಂತ ಶ್ರೇಷ್ಠ ಕೃತಿ. ತನ್ನ ಹೆಂಡತಿ ಮಕ್ಕಳನ್ನೇ ತೀವ್ರವಾಗಿ ದ್ವೇಷಿಸುತ್ತಿದ್ದ ಮುದುಕನೊಬ್ಬನ ಕಥೆಯಿದು. ಕೊನೆಗೆ ಅವನ ಮನಸ್ಸು ಬದಲಾಗಿ ಎಲ್ಲವೂ ಸಂಖಾಂತವಾಗಿ ಕಥೆ ಮುಗಿಯುತ್ತದೆ.

ಫ್ರಾನ್ಸಿನ ರಾಜಕೀಯದ ಮೇಲೂ ಮಾರಿಯಾಕ್‌ನ ಪ್ರಭಾವ ಬಿದ್ದಿದೆ. ಎರಡನೆಯ ಮಹಾಯುದ್ಧದ ಸಮಯದಲ್ಲಿ ಈತ ಭೂಗತನಾಗಿದ್ದುಕೊಂಡು ವೃತ್ತಪತ್ರಿಕೆಗಳನ್ನು ನಡೆಸುತ್ತ ಆಕ್ರಮಣಕಾರರನ್ನು ಕಟುವಾಗಿ ಖಂಡಿಸಿದ. ಯುದ್ಧದ ಬಳಿಕ ಅಧ್ಯಕ್ಷ ಡಿಗಾಲ್ ಸರಕಾರ ಇವನನ್ನು ಗೌರವಿಸಿತು.

ಮಾರಿಯಾಕ್ 1970ರ ಸೆಪ್ಟೆಂಬರ್ 1ರಂದು ಕಾಲವಾದ.

## ಮಾರಿಸ್ ಷೆವಾಲಿಯರ್

"ಪ್ಯಾರಿಸ್‌ನಲ್ಲಿ ಎರಡು ಅದ್ಭುತಗಳಿವೆ: ಐಫೆಲ್ ಗೋಪುರ ಮತ್ತು ಮಾರಿಸ್ ಷೆವಾಲಿಯರ್".

ಅರ್ಧಶತಮಾನಕ್ಕೂ ಹೆಚ್ಚು ಕಾಲ ಸಂಗೀತಗಾರನಾಗಿ ಚಲಚ್ಚಿತ್ರ ನಟನಾಗಿ ಜಗತ್ಪ್ರಸಿದ್ಧನಾದ ಮಾರಿಸ್ ಷೆವಾಲಿಯರ್‌ನನ್ನು ಕುರಿತು ಫ್ರೆಂಚ್ ಲೇಖಕ ಜೀನ್ ಕಾಕ್‌ಟೋ ಹೇಳಿದ ಮಾತುಗಳಿವು.

ಪ್ಯಾರಿಸಿನ ರಸ್ತೆಗಳಲ್ಲಿ ಅನಾಥನಾಗಿ ಅಲೆಯುತ್ತಿದ್ದ ಷೆವಾಲಿಯರ್ ಹಾಲಿವುಡ್ಡಿನ ಅತ್ಯಂತ ಧನಿಕ ನಟರಲ್ಲಿ ಒಬ್ಬನಾದದ್ದು ಅದ್ಭುತ ಕಥೆ.

ಪ್ಯಾರಿಸಿನ ಸಮೀಪದ ಮೆನಿಲ್‌ಮಾಂಟೆಂಟ್ ಎಂಬ ಊರಿನಲ್ಲಿ 1888ರ ಸೆಪ್ಟೆಂಬರ್ 12 ರಂದು ಷೆವಾಲಿಯರ್ ಹುಟ್ಟಿದ. ಗೆಳೆಯರೊಡನೆ ಪರಿಹಾಸ್ಯ ಮಾಡುತ್ತ, ನಾಳೆಯ ಯೋಚನೆಯನ್ನು ತಲೆಗೆ ಹಚ್ಚಿಕೊಳ್ಳದೆ ಬೀದಿ ಅಲೆಯುತ್ತಿದ್ದ ಅವನಿಗೂ ಇತರ ಭಿಕಾರಿ ಹುಡುಗರಿಗೂ ಇದ್ದ ವ್ಯತ್ಯಾಸ ಒಂದೇ : ಸಂಗೀತದಲ್ಲಿ ಇವನ ಅಭಿರುಚಿ.

12ನೆಯ ವಯಸ್ಸಿಗೆ ಪ್ಯಾರಿಸಿನ ಹೋಟೆಲ್ ಒಂದರಲ್ಲಿ ಹಾಡತೊಡಗಿದ. ಈ ಹರಕು ಬಟ್ಟೆಯ ಹುಡುಗನನ್ನು ಜನ ಕುತೂಹಲದಿಂದ ನೋಡಿದರು. ಗೊರಗೊರ ಅನ್ನುತ್ತಿದ್ದ ಇವನ ಸ್ವರವನ್ನು ಕೇಳಿ ಹೊಟ್ಟೆತುಂಬ ನಕ್ಕರು. ಅಲ್ಲಿಂದಾಚೆಗೆ ಸುಮಾರು ಎಪ್ಪತ್ತು ವರ್ಷಗಳ ಕಾಲ ಪ್ರಸಿದ್ಧ ಸಂಗೀತಗಾರನಾಗಿ ಮೆರೆದನಾದರೂ ಷೆವಾಲಿಯರ್‌ಗೆ ಇದ್ದ ಕಂಠಸಂಪತ್ತು ಅಷ್ಟಕ್ಕಷ್ಟೇ. "ನಾನು ನನ್ನ ಕಂಠಕಿಂತ ಹೆಚ್ಚಾಗಿ ಹೃದಯದಿಂದ ಹಾಡುತ್ತೇನೆ" ಎಂದು ಅವನೇ ಅನ್ನುತ್ತಿದ್ದ.

ಹೃದಯದಿಂದ ಹಾಡು : ಷೆವಾಲಿಯರ್

ಮೊದಮೊದಲು ಚಿಕ್ಕಪುಟ್ಟ ನಾಟಕ ಕಂಪನಿಗಳಲ್ಲಿ ಕೆಲಸ ಮಾಡುತ್ತ ಜಾತ್ರೆ, ಸಂತೆಗಳಲ್ಲಿ ಹಾಡುತ್ತ ದಿನ ದೂಡಬೇಕಾಯಿತು ಷೆವಾಲಿಯರ್. ಒಂದನೆಯ ಮಹಾಯುದ್ಧ ಆರಂಭವಾದಾಗ ದೃಢಕಾಯದ ಷೆವಾಲಿಯರ್ ಸೈನ್ಯಕ್ಕೆ ಸೇರಿದ. ಯುದ್ಧ ಖೈದಿಯಾಗಿ ಜರ್ಮನರ ಯುದ್ಧ ಸೆರೆಯಾಳುಗಳ ಶಿಬಿರಗಳಲ್ಲಿ 30 ತಿಂಗಳು ಕಳೆದ. ಬಿಡುಗಡೆ ಹೊಂದಿದ ಮೇಲೆ ಮತ್ತೆ ತನ್ನ ಹಳೆಯ ವೃತ್ತಿಗೆ ಹಿಂದಿರುಗಿದ. ಆದರೆ 1922ರಲ್ಲಿ ಪ್ಯಾರಿಸಿನ ದೊಡ್ಡ ನಾಟಕ ಮಂದಿರವೊಂದರಲ್ಲಿ ಮೊದಲ ಬಾರಿ ಅಭಿನಯಿಸಬೇಕಾಗಿ ಬಂದಾಗ ಭಯದಿಂದ ಮಾತೇ ಹೊರಡಲಿಲ್ಲ. ನರಗಳ ದೌರ್ಬಲ್ಯಕ್ಕೆ ಒಳಗಾಗಿ ಹಲವು ತಿಂಗಳ ಕಾಲ ರಂಗಭೂಮಿಯಿಂದ ದೂರವಿರಬೇಕಾಯಿತು. ಕೊನೆಗೆ ಹಳ್ಳಿಗಳ ಚಿಕ್ಕ ನಾಟಕ ಮಂದಿರಗಳ ನಾಟಕ ಆಡಲು ಆರಂಭಿಸಿದಾಗ ತುಸು ಧೈರ್ಯ ಬಂತು. ಅನಂತರ ಪ್ಯಾರಿಸಿನ ನಾಟಕಮಂದಿರಗಳಲ್ಲಿ ಷೆವಾಲಿಯರ್ ಯಶಸ್ವಿಯಾಗಿ ಅಭಿನಯಿಸಲು ಶಕ್ತನಾದ.

ಫ್ರಾನ್ಸಿನಲ್ಲಿ ಸಾಕಷ್ಟು ಪ್ರಸಿದ್ಧನಾದ ಮೇಲೆ ಅವನು ಹಾಲಿವುಡ್ಡಿನಲ್ಲಿ ತನ್ನ ಅದೃಷ್ಟ ಪರೀಕ್ಷೆ ಮಾಡಲು ನಿರ್ಧರಿಸಿದ. ಹೀಗೆ, ಪ್ಯಾರಿಸಿನ ಎರಡು ಅದ್ಭುತಗಳಲ್ಲಿ ಒಂದು ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ಸ್ಥಳಾಂತರಗೊಂಡಿತು. 1928ರಲ್ಲಿ ಚಿತ್ರಜಗತ್ತನ್ನು ಪ್ರವೇಶಿಸಿದ ಷೆವಾಲಿಯರ್ ಒಮ್ಮಿಂದೊಮ್ಮೆಲೇ ಅಮೆರಿಕದಲ್ಲೆಲ್ಲ ಪ್ರಸಿದ್ಧನಾದ. ಫ್ರೆಂಚ್ ಉಚ್ಚಾರಣಾ ವೈಖರಿಯಲ್ಲಿ ಇಂಗ್ಲಿಷ್ ಮಾತನಾಡುತ್ತಿದ್ದ ಈತ ಜನರ ಮೆಚ್ಚಿನ ನಟನಾದ. ಹತ್ತು ಹನ್ನೆರಡು ವರ್ಷಗಳ ಅನಂತರ ಷೆವಾಲಿಯರ್ ಹಾಲಿವುಡ್ಡಿನ ಅತ್ಯಂತ ಪ್ರಸಿದ್ಧ ನಟರಲ್ಲಿ ಒಬ್ಬನಾದ. ಆ ಹೊತ್ತಿಗೆ ಅವನ ವಾರ್ಷಿಕ ಆದಾಯ ಹತ್ತು ಲಕ್ಷ ಡಾಲರುಗಳಿಗಿಂತ ಹೆಚ್ಚಾಗಿತ್ತು.

ಮಾರಿಸ್ ಷೆವಾಲಿಯರನ ಜನಪ್ರಿಯತೆಗೆ ಮುಖ್ಯ ಕಾರಣ ತಾನು ಮಾಡುತ್ತಿದ್ದ ಕೆಲಸದ ಪ್ರತಿ ವಿವರಕ್ಕೂ ಇವನು ಕೊಡುತ್ತಿದ್ದ ವಿಶೇಷ ಗಮನ. ಚಲಚ್ಚಿತ್ರದ ಯಾವುದೇ ದೃಶ್ಯದ ಅಭಿನಯವಾಗಲೀ ಅದು ಸಮರ್ಪಕವಾಗುವವರೆಗೂ ಇವನ ಮನಸ್ಸಿಗೆ ನೆಮ್ಮದಿ ಇರುತ್ತಿರಲಿಲ್ಲ.

ಮೊದಲಿನಿಂದಲೂ ಷೆವಾಲಿಯರ್‌ಗೆ ನಟನೆಗಿಂತ ಹಾಡುವುದೇ ಹೆಚ್ಚು ಇಷ್ಟವಾಗಿತ್ತು. ಏಕಪಾತ್ರಾಭಿನಯ ಮತ್ತು ಸಂಗೀತ ಕಚೇರಿಗಳನ್ನು ನಡೆಸಲೆಂದು ಇವನು ಪ್ರವಾಸ ಕೈಗೊಂಡ. ಜಗತ್ತಿನ ಪ್ರಮುಖ ರಾಷ್ಟ್ರಗಳನ್ನೆಲ್ಲ ಸಂಪರ್ಕಿಸಿದ. ಇವನ ಸಂಗೀತ ಕಚೇರಿಗಳಲ್ಲಿ ಪ್ರೇಕ್ಷಕರಿಗೂ ಗಾಯಕನಿಗೂ ಏರ್ಪಡುತ್ತಿದ್ದ ಸಂಬಂಧ ವಿಶೇಷವಾದದ್ದು. ಕಚೇರಿಯ ಮಧ್ಯದಲ್ಲೇ ಇವನು ಪ್ರೇಕ್ಷಕರ ಹತ್ತಿರಕ್ಕೆ ಬಂದು "ಎಲ್ಲರಿಗೂ ಚೆನ್ನಾಗಿ ಕೇಳಿಸುತ್ತಾ ಇದೆಯೆ?" ಎಂದು ವಿಚಾರಿಸಿಕೊಳ್ಳುತ್ತಿದ್ದ.

ಶಾಲೆಯಲ್ಲಿ ಕಲಿಯುವ ಅವಕಾಶ ಅವನಿಗೆ ದೊರೆಯಲಿಲ್ಲವಾದರೂ ಷೆವಾಲಿಯರ್ ಜೀವನಪರ್ಯಂತ ಸ್ವಪ್ರಯತ್ನದಿಂದ ತನ್ನ ತಿಳಿವಳಿಕೆಯನ್ನು ಬೆಳೆಸಿಕೊಳ್ಳುತ್ತಲೇ ಇದ್ದ. ಬಿಡುವು ಸಿಕ್ಕಾಗಲೆಲ್ಲ ಪ್ರಸಿದ್ಧ ಲೇಖಕರ ಪುಸ್ತಕಗಳನ್ನು ಓದುವುದು ಅವನ ಹವ್ಯಾಸವಾಗಿತ್ತು.

ಓದುವುದರ ಜೊತೆಗೆ ಬರೆಯುವ ಚಟವೂ ಇವನಿಗೆ ಅಂಟಿಕೊಂಡಿತ್ತು. ತನ್ನ ಜೀವನ ಘಟನೆಗಳನ್ನು ಕುರಿತು ಈತ ಬರೆದ ಎರಡು ಪುಸ್ತಕಗಳು ಜನಪ್ರಿಯತೆ ಗಳಿಸಿವೆ.

ವೃದ್ಧಾಪ್ಯ ಆವರಿಸುತ್ತಿದ್ದರೂ ಷೆವಾಲಿಯರ್‌ನ ಉತ್ಸಾಹ ಕುಂದಲಿಲ್ಲ. "ಮರಣವನ್ನು ಕುರಿತು ಆಲೋಚಿಸುವಾಗ, ಅದರ ಬದಲು ಮುದಿಯಾಗುತ್ತಿರುವುದೇ ಲೇಸು ಅನಿಸುತ್ತದೆ" ಎಂದು ಅವನು ಅನ್ನುತ್ತಿದ್ದ. ತನ್ನ 79ನೆಯ ಹುಟ್ಟುಹಬ್ಬದಂದು ನಡೆಸಿದ ಪತ್ರಿಕಾಗೋಷ್ಠಿಗೆ ಷೆವಾಲಿಯರ್ ಮುಷ್ಟಿಕಾಳಗದ ಕೈಚೀಲವನ್ನು ಧರಿಸಿಕೊಂಡು ಬಂದ. ತನ್ನ ಕೈಯನ್ನು ಮೇಲೆತ್ತಿ "ಜೀವನ ಒಂದು ಕಾಳಗ. ಅದರಲ್ಲಿ 79 ಸುತ್ತು ಇಷ್ಟು ಯಶಸ್ವಿಯಾಗಿ ಹೋರಾಡಿದ್ದು ಒಂದು ಅದ್ಭುತವೇ ಸರಿ" ಎಂದು ಘೋಷಿಸಿದ.

ನಾಲ್ಕು ವರ್ಷಗಳ ಅನಂತರ 1972ರ ಜನವರಿ ತಿಂಗಳಲ್ಲಿ. ಈ ಪ್ರತಿಭಾಶಾಲಿ ನಟ ತನ್ನ ಕೊನೆಯುಸಿರೆಳೆದ.

## ಮಾಸ್ತಿ ವೆಂಕಟೇಶ ಅಯ್ಯಂಗಾರ್

'ಮಾಸ್ತಿ ಕನ್ನಡದ ಆಸ್ತಿ' ಎಂಬ ಹೇಳಿಕೆ ಈಗೊಂದು ನಾಣ್ಣುಡಿಯೇ ಆಗಿದೆ. ಮಾಸ್ತಿಯವರು ಕನ್ನಡ ನಾಡಿನ ಒಂದು ಅಮೂಲ್ಯ ಆಸ್ತಿ : ಅವರು ಕನ್ನಡ ನಾಡಿಗೆ ಕೊಟ್ಟಿರುವ ಸಾಹಿತ್ಯರೂಪದ ಆಸ್ತಿಯೂ ಹಿರಿದಾದದ್ದು.

'ಶ್ರೀನಿವಾಸ' ಎಂಬುದು ಅವರ ಕಾವ್ಯನಾಮ. ಅವರ ಸ್ಥಳ ಕೋಲಾರ ಜಿಲ್ಲೆಯಲ್ಲಿರುವ ಮಾಸ್ತಿ ಎಂಬ ಗ್ರಾಮ. ಆ ಊರಿಗೆ ಈ ಹೆಸರು ಬರಲು ಅವರ ವಂಶದ ಹಿರಿಯರೊಬ್ಬರು ಕಾರಣರಾದರು. ಆಗಿನ ಕಾಲದಲ್ಲಿ ಟಿಪ್ಪು ಸುಲ್ತಾನ ಇದ್ದ. ಇವರ ಪೂರ್ವಜರು ಅವನ ದಿವಾನರಾಗಿದ್ದರು. ಯಾವುದೋ ಕಾರಣಕ್ಕಾಗಿ ಸುಲ್ತಾನನಿಗೆ ದಿವಾನರ ಮೇಲೆ ಅಸಮಾಧಾನ ಉಂಟಾಯಿತು. ಒಂದು ದಿನ ಅವರನ್ನು ತನ್ನ ಅರಮನೆಗೆ ಬರಮಾಡಿಕೊಂಡು ಹಾಲು ಕೊಟ್ಟ. ಅದನ್ನು ಕುಡಿದು ದಿವಾನರು ಜೀವಂತರಾಗಿ ಮನೆಗೆ ಹಿಂದಿರುಗಲಿಲ್ಲ. ಅವರ ಪತ್ನಿ ಸಹಗಮನಮಾಡಿ ಮಹಾಸತಿ ಆದರು. ಆ ಊರಿಗೆ ಮಾಸ್ತಿ ಎಂಬ ಹೆಸರಾಯಿತು.

ವೆಂಕಟೇಶ 1891ರ ಜೂನ್ 6ರಂದು ಹುಟ್ಟಿದ್ದು. ಆಗ ಮನೆಯಲ್ಲಿ ಬಡತನವಿತ್ತು. ಅವರು ಹೊಂಗೇನಹಳ್ಳಿ, ಶಿವಾರಪಟ್ಟಣ, ಮಳವಳ್ಳಿಗಳಲ್ಲಿ ಬಂಧುಗಳ ನೆರವಿನಿಂದ ಕಷ್ಟಪಟ್ಟು ವಿದ್ಯಾಭ್ಯಾಸ ಮಾಡಿದರು. ಅನಂತರ ಮೈಸೂರಿಗೆ ಬಂದು ವೆಸ್ಲಿಯನ್ ಮಿಷನ್ ಸ್ಕೂಲಿನಲ್ಲಿ ಓದಿ ಮದರಾಸು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಪ್ರಥಮಶ್ರೇಣಿಯಲ್ಲಿ ಉತ್ತೀರ್ಣರಾದರು. ವಿದ್ಯಾರ್ಥಿವೇತನ ದೊರೆತದ್ದರಿಂದ ಓದು ಮುಂದುವರಿಸಲು ಅನುಕೂಲವಾಯಿತು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಎಫ್. ಎ. ಗೆ ಸೇರಿದರು. ಅವರು ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ತಂದೆ ತೀರಿಕೊಂಡರು. ಎಫ್. ಎ. ಪರೀಕ್ಷೆಯಾದ ಮೇಲೆ ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಬಂದು ಉತ್ತಮ ವರ್ಗದಲ್ಲಿ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅನಂತರ ಸೆಂಟ್ರಲ್ ಕಾಲೇಜಿನಲ್ಲಿ ಮೂರು ತಿಂಗಳು ಉಪಾಧ್ಯಾಯರಾಗಿದ್ದು ಹಣ ಸಂಪಾದನೆ ಮಾಡಿ ಪುನಃ ಮದ್ರಾಸಿಗೆ ಹೋಗಿ ಇಂಗ್ಲಿಷ್ ಎಂ. ಎ. ಗೆ ಸೇರಿಕೊಂಡರು. 1914ರಲ್ಲಿ ಮೇಲಿನ ವರ್ಗದಲ್ಲಿ ತೇರ್ಗಡೆಹೊಂದಿ ಚಿನ್ನದ ಪದಕವನ್ನೂ ನಗದು ಬಹುಮಾನವನ್ನೂ ಪಡೆದರು. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಒಂದೂವರೆ ತಿಂಗಳು ಉಪಾಧ್ಯಾಯರಾಗಿದ್ದು ತಿರುಗಿ ಬೆಂಗಳೂರಿಗೆ ಬಂದು ಮೈಸೂರು ಸಂಸ್ಥಾನದ ಸಿವಿಲ್ ಪರೀಕ್ಷೆಗೆ ಕುಳಿತು ಮೊದಲನೆಯವರಾಗಿ ತೇರ್ಗಡೆಯಾದರು. ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರ್ ಉದ್ಯೋಗ ದೊರಕಿತು.

ತಮ್ಮ ಅಧಿಕಾರಕ್ಕೆ ಸಂಬಂಧಿಸಿದ ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸುವುದರ ಜೊತೆಗೆ ಮಾಸ್ತಿಯವರು ಸಾಹಿತ್ಯರಚನೆಗೂ ಕೈಹಾಕಿದರು. ಅವರು ತಮ್ಮ ಅಭಿವ್ಯಕ್ತಿಗೆ ಪ್ರಧಾನವಾಗಿ ಆರಿಸಿಕೊಂಡ ಮಾಧ್ಯಮ–ಸಣ್ಣ ಕಥೆ. ಆ ಹೊತ್ತಿಗಾಗಲೇ ಕನ್ನಡದಲ್ಲಿ ಸಣ್ಣ ಕಥೆಗಳ ರಚನಾಪ್ರಯತ್ನ ನಡೆದಿತ್ತಾದರೂ ಕನ್ನಡ ಸಾಹಿತ್ಯರಂಗದಲ್ಲಿ ಅವಕ್ಕೊಂದು ಗಣ್ಯಸ್ಥಾನ ಗಳಿಸಿಕೊಟ್ಟವರು 'ಶ್ರೀನಿವಾಸ'ರು.

'ಶ್ರೀನಿವಾಸ'ರ ಸಣ್ಣ ಕಥೆಗಳು ಪತ್ರಿಕೆಗಳಲ್ಲಿ ಪ್ರಕಟವಾದಾಗ ಅವನ್ನು ಕುರಿತು ಟೀಕೆಗಳು ಬಂದುವಾದರೂ ಅವು ಜನರ ಮೆಚ್ಚುಗೆಗೆ ಪಾತ್ರವಾದುವು. ಅಲ್ಲಿಂದಾಚೆಗೆ ಅವರು ನೂರಾರು ಸಣ್ಣ ಕಥೆಗಳನ್ನು ಬರೆದು, ಹಲವಾರು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ಸಣ್ಣಕಥೆಗಳು ಇಂಗ್ಲಿಷ್ ಹಾಗೂ ಇತರ ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ.

ಕಥೆಯ ವಸ್ತು ಯಾವುದೇ ಇರಲಿ. ಅದು ಅವರ ಲೇಖನಿಯ ಮೂಸೆಯಲ್ಲಿ ಹಾದುಬಂದಿತೆಂದರೆ ಅಪರಂಜಿಯಾಗುತ್ತದೆ. ಕಥೆ ಹೇಳುವುದು, ಕಥೆಯಲ್ಲಿ ಬರುವ ಪಾತ್ರಗಳನ್ನೂ ಅವುಗಳ ಭಾವ ಭಾವನೆಗಳನ್ನೂ ಅತಿ ಸಹಜವಾದ ರೀತಿಯಲ್ಲಿ ಮನಮುಟ್ಟುವಂತೆ ಚಿತ್ರಿಸುವುದರಲ್ಲಿ ಅವರು ತೋರುವ ಕೌಶಲ ಅಪೂರ್ವವಾದದ್ದು. ಅವರ ಲೋಕಾನುಭವ, ಯಾವುದೇ ಸನ್ನಿವೇಶವನ್ನಾಗಲೀ ವ್ಯಕ್ತಿಯನ್ನಾಗಲೀ ಮಾನವೀಯತೆ ದೃಷ್ಟಿಯಿಂದ ಕಾಣುವ ಹೃದಯ —ಇವರ ಕಥೆಗಳಿಗೆ ಜೀವಕಳೆಯನ್ನು ತುಂಬುತ್ತವೆ. ಇಂಥ ಕಲೆಗಾರಿಕೆಯುಳ್ಳವರು ಯಾವುದೇ ಸಾಹಿತ್ಯದಲ್ಲಾದರೂ ಅಪರೂಪವೇ. ಅವರ ಕಥಾಲೋಕ ಓದುಗರನ್ನು ಮರುಳುಗೊಳಿಸುವ ಹಾಗೂ ಹೃದಯ ವಿಕಾಸಗೊಳಿಸುವ ಸೃಷ್ಟಿ. ಅದರ ವೈವಿಧ್ಯ ಕೂಡ ಅಪಾರ, ದೇಶ ಕಾಲಗಳ ಮೇರೆಯನ್ನು ಮೀರಿದ್ದು.


ಕನ್ನಡದ ಆಸ್ತಿ : ಮಾಸ್ತಿ

'ಶ್ರೀನಿವಾಸ'ರ ಸಾಹಿತ್ಯಸೃಷ್ಟಿ ಸಣ್ಣ ಕಥೆಗಳಿಗಷ್ಟೇ ಸೀಮಿತವಾಗಿಲ್ಲ. ಅವರು ಕವನ, ಕಾದಂಬರಿ, ನಾಟಕಗಳನ್ನೂ ಬರೆದಿದ್ದಾರೆ ; ಸಮಕಾಲೀನ ವಿಚಾರಗಳ ಮೇಲೆ ಟೀಕೆ ಟಿಪ್ಪಣಿಗಳನ್ನೂ ಬರೆದಿದ್ದಾರೆ. ಈ ಟೀಕೆ ಟಿಪ್ಪಣಿಗಳಲ್ಲಿ ಹರಿತವಾದ ತರ್ಕ ವೈಖರಿ ನೋಡಬಹುದು. ಕವನ, ಕಾದಂಬರಿ, ನಾಟಕಗಳಲ್ಲಿ ಅವರ ಕುಶಲತೆ, ರಸಜ್ಞತೆ, ತಪಸ್ಸು, ಸೌಮ್ಯತೆ, ಜೀವನದರ್ಶನಗಳನ್ನು ಸ್ಪಷ್ಟವಾಗಿ ಕಾಣಬಹುದು. ಋಜುತ್ವ ಅವರ ಬರೆಹಗಳ ಪ್ರಧಾನ ಲಕ್ಷಣ.

ಸಾಹಿತ್ಯ ವಿಮರ್ಶೆಯಲ್ಲಿಯೂ ಮಾಸ್ತಿಯವರು ಪಳಗಿದ ಕೈ. ಅವರ ವಿಮರ್ಶೆಗಳ ಕೆಲವು ಸಂಕಲನಗಳು ಪ್ರಕಟವಾಗಿವೆ. ಸುರಸ ಶೈಲಿ, ನವಚೈತನ್ಯ, ಇವುಗಳ ವೈಶಿಷ್ಟ್ಯ.

ಭಾರತವನ್ನು ಕುರಿತು ಇವರು ಬರೆದಿರುವ 'ಭಾರತ ತೀರ್ಥ', ರಾಮಾಯಣವನ್ನು ಕುರಿತು ಬರೆದಿರುವ 'ಆದಿಕವಿ ವಾಲ್ಮೀಕಿ' ಇವರ ವಿದ್ವತ್ತು, ವಿಚಾರ ಶೀಲತೆಗಳಿಗೆ ನಿದರ್ಶನ.

ರವೀಂದ್ರನಾಥ ಠಾಕೂರರು ಮತ್ತು ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಗಳನ್ನೂ ಇವರು ಬರೆದಿದ್ದಾರೆ. ಪರಮಹಂಸರ ಚರಿತ್ರೆಯಂತೂ ಶ್ರೀಯಾದ ಕನ್ನಡ ಗದ್ಯ.

'ಭಾವ' ಇವರ ಜೀವನ ಘಟನೆ, ನೆನಪುಗಳನ್ನೊಳಗೊಂಡ ಆತ್ಮವೃತ್ತ. ಇದು ಮೂರು ಸಂಪುಟಗಳಷ್ಟು ವಿಸ್ತಾರವಾದ ಗ್ರಂಥ. ಇದರಲ್ಲಿ ಅವರ ಸಮಕಾಲೀನ ವ್ಯಕ್ತಿಗಳ, ಪ್ರಸಂಗಗಳ ನಿರೂಪಣೆ ರಮ್ಯವಾಗಿದೆ.

ಮಾಸ್ತಿಯವರು ಶೇಕ್ಸ್‌ಪಿಯರನ ಕೆಲವು ನಾಟಕಗಳನ್ನೂ ರವೀಂದ್ರನಾಥ ಠಾಕೂರರ 'ಚಿತ್ರಾಂಗದಾ' ವನ್ನೂ ಅನುವಾದ ಮಾಡಿದ್ದಾರೆ.

ಇವರ ನಾಟಕಗಳಲ್ಲಿ 'ಯಶೋಧರ', 'ಕಾಕನಕೋಟೆ', 'ಶಿವಾಜಿ', 'ತಿರುಪಾಣಿ', 'ತಾಳೀಕೋಟೆ' ಮುಂತಾದುವು ರಂಗಭೂಮಿಯ ಮೇಲೆ ಪ್ರದರ್ಶಿತವಾಗಿ ಜನಮೆಚ್ಚುಗೆಗೆ ಪಾತ್ರವಾಗಿವೆ. ಅವರು ರಚಿಸಿರುವ ಪ್ರಸಾರ ನಾಟಕಗಳಲ್ಲಿ 'ಪುರಂದರದಾಸ', 'ಭಟ್ಟರ ಮಗಳು' ಖ್ಯಾತವಾದುವು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಮಾಸ್ತಿಯವರು ಸಲ್ಲಿಸಿದ ಸೇವೆ ಗಣನೀಯವಾದದ್ದು. ಅವರು ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ಪ್ರವಾಸಮಾಡಿ ಕನ್ನಡಿಗರಲ್ಲಿ ಅವರ ಸಾಹಿತ್ಯ ಸಂಸ್ಕೃತಿಗಳ ಬಗೆಗೆ ಆಸಕ್ತಿಯನ್ನು ಬೆಳೆಸಿದರು. 1924ರಲ್ಲಿ ಬೆಳಗಾವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿ ಆಯ್ಕೆಗೊಂಡರು. ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ ಕೊಟ್ಟು ಅವರ ಸಾಹಿತ್ಯ ಸೇವೆಯನ್ನು ಪುರಸ್ಕರಿಸಿತು. ಪಿ ಇ ಎನ್ ಸಂಸ್ಥೆಯ ಒಂದು ಸಮ್ಮೇಳನ ಅವರ ಅಧ್ಯಕ್ಷತೆಯಲ್ಲಿ ಜರುಗಿತು.

ಕನ್ನಡ ನಾಡಿನ ವಿವಿಧ ಭಾಗಗಳ ಸಾಹಿತಿಗಳ ಹಾಗೂ ಭಾರತದ ವಿವಿಧ ಭಾಗಗಳ ಸಾಹಿತಿಗಳ ಪರಸ್ಪರ ಪರಿಚಯವನ್ನು ಬೆಳೆಸಲು ಮಾಸ್ತಿ ವಿಶೇಷವಾಗಿ ಶ್ರಮಿಸಿದ್ದಾರೆ.

ಮಾಸ್ತಿಯವರ ಸಾಹಿತ್ಯಸೃಷ್ಟಿಗಿಂತ ದೊಡ್ಡದು ಅವರ ವ್ಯಕ್ತಿತ್ವ. ಅವರ ಸರಳ ಜೀವನ, ಉದಾರತೆ, ಸ್ನೇಹಶೀಲತೆ, ಉದಾತ್ತಭಾವನೆ, ಋಜುತ್ವ ಅಪೂರ್ವವಾದುವು. ಜೀವನದ ಕಷ್ಟ ದುಃಖಗಳನ್ನು ದಿಟ್ಟತನದಿಂದ ಇದಿರಿಸುವ ಸ್ಥೈರ್ಯ ಅನುಪಮವಾದದ್ದು. ಈ ಗುಣಗಳಿಂದಾಗಿ ಮಾಸ್ತಿ ಘನವಂತ ವ್ಯಕ್ತಿಯಾಗಿದ್ದಾರೆ.

1972ರಲ್ಲಿ ಬೆಂಗಳೂರಿನಲ್ಲಿ ಅವರ 81ನೆಯ ಹುಟ್ಟು ಹಬ್ಬವನ್ನು ಆಚರಿಸಿದರು. 'ಶ್ರೀನಿವಾಸ' ಎಂಬ ಸಂಭಾವನಾಗ್ರಂಥ ಆ ಸಂದರ್ಭದಲ್ಲಿ ಅವರಿಗೆ ಅರ್ಪಿಸಲ್ಪಟ್ಟಿತು.

## ಮ್ಯಾಥ್ಯೂ ಆರ್ನಾಲ್ಡ್

ಮ್ಯಾಥ್ಯೂ ಆರ್ನಾಲ್ಡ್ 35 ವರ್ಷಗಳ ಕಾಲ ಶಾಲಾ ಇನ್ಸ್‌ಪೆಕ್ಟರನಾಗಿದ್ದ. ಹೆಚ್ಚಿನ ಸಮಯವನ್ನು ಬಿಡುವಿಲ್ಲದ ಪ್ರವಾಸದಲ್ಲಿ ಕಳೆದ. ಆದರೂ ಸಮಯ ಸಿಕ್ಕಿದಾಗಲೆಲ್ಲ ಆತ ಕವನಗಳನ್ನೂ ಪ್ರಬಂಧಗಳನ್ನೂ ಬರೆಯುತ್ತಿದ್ದ.

ಆ ಬರೆವಣಿಗೆಯ ಹಿರಿಮೆಯಿಂದಾಗಿ ಆತ 19ನೆಯ ಶತಮಾನದ ಅತಿ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬನೆನಿಸಿಕೊಂಡ.

ಆತನ 'ಟಾಮ್ ಬ್ರೌನನ ಶಾಲಾ ದಿನಗಳು' ಎಂಬ ಕೃತಿಯಲ್ಲಿ ಬರುವ ಮುಖ್ಯೋಪಾಧ್ಯಾಯ ಥಾಮಸ್. ಮ್ಯಾಥ್ಯೂ ಆರ್ನಾಲ್ಡ್‌ನ ತಂದೆಯ ಪ್ರತಿ ಚಿತ್ರವೇ. ಒಂಬತ್ತು ಮಕ್ಕಳಲ್ಲಿ ಹಿರಿಯವನಾದ ಮ್ಯಾಥ್ಯೂ ಇಂಗ್ಲೆಂಡಿನ ಲ್ಯಾಲಿಹಾಮ್ ಎಂಬಲ್ಲಿ 1822ರ ಡಿಸೆಂಬರ್ 24ರಂದು ಜನಿಸಿದ. ತನ್ನ ತಂದೆ ಮುಖ್ಯೋಪಾಧ್ಯಾಯನಾಗಿದ್ದ ರಗ್ಬಿ ಪಬ್ಲಿಕ್ ಸ್ಕೂಲಿನಲ್ಲಿ ಶಿಕ್ಷಣಮುಗಿಸಿದ ಮೇಲೆಆಕ್ಸ್‌ಫರ್ಡ್‌ನ ಬ್ಯಾಲಿಯಲ್ ಕಾಲೇಜಿಗೆ ಆರ್ನಾಲ್ಡ್ ಸೇರಿದ. 1844ರಲ್ಲಿ ಪದವೀಧರನಾದ.



ಶ್ರೇಷ್ಠತಮ ವಿಮರ್ಶ : ಆರ್ನಾಲ್ಡ್

ರಗ್ಬಿ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಅವನ ಕವನ 'ಅಲರಿಕ್ ಅಟ್ ರೋಮ್'ಗೆ ಬಹುಮಾನ ಬಂತು. ಆಗ ಅವನಿಗೆ 18 ವರ್ಷ. ಕಾಲೇಜಿನಲ್ಲಿದ್ದಾಗಲೂ ಅವನ 'ಕ್ರಾಮ್‌ವೆಲ್' ಎಂಬ ಕವಿತೆಗೆ ಬಹುಮಾನ ದೊರೆಯಿತು.

ವಿದ್ಯಾಭ್ಯಾಸ ಮುಗಿಸಿದ ಮೇಲೆ ಆರ್ನಾಲ್ಡ್ 1851ರ ವರೆಗೆ ಲಾರ್ಡ್ ಲ್ಯಾನ್ಸಡೌನ್‌ರ ಆಪ್ತಕಾರ್ಯದರ್ಶಿಯಾಗಿದ್ದ. ಅನಂತರ ಶಾಲಾ ಇನ್ಸ್‌ಪೆಕ್ಟರ್ ಉದ್ಯೋಗಕ್ಕೆ ಸೇರಿಕೊಂಡ. ಅನಂತರದ ಕಾಲ ಫಲಪ್ರದ ಸಾಹಿತ್ಯಜೀವನದ ವರ್ಷಗಳು.

1894ರ ಜೂಲೈಯಲ್ಲಿ ಪ್ರಕಟವಾದ ಆರ್ನಾಲ್ಡನ ಪ್ರಥಮ ಕವನ ಸಂಕಲನ ಜನಪ್ರಿಯತೆ ಗಳಿಸಲಿಲ್ಲ. ಪ್ರಕಾಶಕರು ಕೆಲವು ದಿನಗಳಲ್ಲೇ ಅದರ ಪ್ರತಿಗಳ ಮಾರಾಟವನ್ನು ನಿಲ್ಲಿಸಿಬಿಟ್ಟರು. 1852ರಲ್ಲಿ ಹೊರಬಿದ್ದ ಇನ್ನೊಂದು ಪುಸ್ತಕಕ್ಕೂ ಇದೇ ಗತಿಯಾಯಿತು. ಆದರೆ ಮರು ವರ್ಷ ಆತನ 'ಸೊಹ್ರಾಬ್ ಮತ್ತು ರುಸ್ತುಂ', 'ಪಂಡಿತ ಜಿಪ್ಸಿ' ಮುಂತಾದ ಶ್ರೇಷ್ಠ ಕೃತಿಗಳನ್ನೊಳಗೊಂಡಿದ್ದ ಗ್ರಂಥ ಹೊರಬಿದ್ದೊಡನೆ, ಆರ್ನಾಲ್ಡನ ಹೆಸರು ಮನೆಮಾತಾಯಿತು. 1867ರ 'ಹೊಸ ಕವನಗಳು' ಕೃತಿ ಆಂಗ್ಲ ಸಾಹಿತ್ಯ ಚರಿತ್ರೆಯಲ್ಲಿ ಆತನಿಗೆ ಶಾಶ್ವತ ಸ್ಥಾನವನ್ನು ದೊರಕಿಸಿ ಕೊಟ್ಟಿತು.

ಪಾಂಡಿತ್ಯಪೂರ್ಣ ಗಂಭೀರ ಶೈಲಿ ಆರ್ನಾಲ್ಡನದು. ಸುಂದರ ಕಥೆಗಳನ್ನು ಆವೇಶವಿಲ್ಲದ, ಸರಳ ವಾಕ್ಯಗಳಲ್ಲಿ ಹೇಳುವ ಕಲೆ ಅವನಿಗೆ ಸಿದ್ಧಿಸಿತ್ತು. 'ಪರಿತ್ಯಕ್ತ ಮತ್ಸ್ಯಪುರುಷ' ಇದಕ್ಕೆ ಒಂದು ಉದಾಹರಣೆ.

ಕಾಲಕಳೆದಂತೆ ಆರ್ನಾಲ್ಡನ ಆಸಕ್ತಿ ಪದ್ಯದಿಂದ ಗದ್ಯದೆಡೆಗೆ ಹರಿಯಿತು. ಸಾಹಿತ್ಯ ವಿಮರ್ಶೆಯ ಕ್ಷೇತ್ರಕ್ಕೂ ಅವನು ಪದಾರ್ಪಣೆ ಮಾಡಿದ. ಪ್ರಾಚೀನ ಹಾಗೂ ಸಮಕಾಲೀನ ಸಾಹಿತ್ಯ ಕೃತಿಗಳನ್ನು ಓದಿ ಅರಗಿಸಿಕೊಳ್ಳುವುದು, ಅವುಗಳ ಹಿರಿಮೆ–ಲೋಪಗಳನ್ನು ಗುರುತಿಸುವುದು ಅವನಿಗೆ ಸುಲಭವಾಗಿತ್ತು. 'ವಿಮರ್ಶೆಯನ್ನು ಕುರಿತ ಪ್ರಬಂಧಗಳು' ಅವನ ಪ್ರಮುಖ ಕೃತಿ. ಇದರ ಪ್ರಕಟಣೆಯಿಂದ ಮ್ಯಾಥ್ಯೂ ಆರ್ನಾಲ್ಡ್ ಆ ಶತಮಾನದ ಕೆಲವೇ ಶ್ರೇಷ್ಠತಮ ವಿಮರ್ಶಕರಲ್ಲಿ ಒಬ್ಬನಾದ.

1857ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಕಾವ್ಯ ಪ್ರಾಧ್ಯಾಪಕನಾದ. ಹತ್ತು ವರ್ಷಗಳ ಕಾಲ ಈ ಸ್ಥಾನವನ್ನಲಂಕರಿಸಿದ್ದ. ಲ್ಯಾಟಿನ್ ಭಾಷೆಯಲ್ಲಿ

ಪ್ರವಚನ ನಡೆಸುತ್ತಿದ್ದ ಹಿಂದಿನ ಪದ್ಧತಿಯನ್ನು ಬಿಟ್ಟು, ಇಂಗ್ಲಿಷಿನಲ್ಲೇ ಭಾಷಣಮಾಡುವ ಹೊಸ ಸಂಪ್ರದಾಯ ಆರಂಭಿಸಿದ. 1883ರಲ್ಲಿ ವಿದ್ಯಾಧಿಕಾರಿ ಕೆಲಸದಿಂದ ನಿವೃತ್ತನಾದ ಮೇಲೆ ಆರ್ನಾಲ್ಡ್ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಕೆನಡಗಳಲ್ಲಿ ಭಾಷಣ ಪ್ರವಾಸಗಳನ್ನು ಕೈಗೊಂಡ. ಮರಳಿ ಬಂದು ಇಂಗ್ಲೆಂಡಿನ ಲಿವರ್‌ಪೂಲ್‌ಗೆ ಭೇಟಿಕೊಟ್ಟಾಗ —1888ನೆಯ ಏಪ್ರಿಲ್ 15ರಂದು— ಹೃದಯಾಘಾತದಿಂದ ನಿಧನನಾದ.

## ಮಿಲ್ಟನ್

"ನಾನು ಏನು ಯೋಚಿಸುತ್ತಿರುವೆ–ಎಂದು ಕೇಳಿರುವೆ ಅಲ್ಲವೆ? ಸೃಷ್ಟಿಕರ್ತನ ಅನುಗ್ರಹದಿಂದ ಶಾಶ್ವತ ಕೀರ್ತಿಗಳಿಸಲು ಯೋಚಿಸುತ್ತಿದ್ದೇನೆ. ಇದಕ್ಕಾಗಿ ನನ್ನ ರೆಕ್ಕೆಗಳು ಬಲಿತು, ಹಾರಾಡಲು ಸಿದ್ಧವಾಗುವಂತೆ ಮಾಡುತ್ತಿದ್ದೇನೆ."

ಇದು ಮಿಲ್ಟನ್ ತನ್ನ ಮಿತ್ರನೊಬ್ಬನಿಗೆ ಬರೆದ ಪತ್ರ. ಆ ವೇಳೆಗಾಗಲೇ ಅವನು ಕೆಲವು ಕಿರಿಯ ಕಾವ್ಯಗಳನ್ನು ಬರೆದು ತನ್ನ 'ರೆಕ್ಕೆ'ಯನ್ನು ಬಲಿಸಿಕೊಂಡಿದ್ದ. ಮಹಾಕಾವ್ಯವೊಂದನ್ನು ಬರೆಯಲು ಸಿದ್ಧನಾಗುತ್ತಿದ್ದ. ಅಪಾರ ವಿದ್ವತ್ತು, ಪ್ರಚಂಡ ಕಲ್ಪನಾ ಶಕ್ತಿ, ಪ್ರತಿಭೆ, ಅಗಾಧ ಜೀವನಾನುಭವ ಅವನಿಗಿದ್ದುವು. ಜೊತೆಗೆ ಬರೆಯಬೇಕೆಂಬ ದೃಢ ನಿರ್ಧಾರವೂ ಬರೆಯಬಲ್ಲೆನೆಂಬ ಆತ್ಮವಿಶ್ವಾಸವೂ ಅವನಲ್ಲಿತ್ತು. ಇದರ ಫಲವೇ ಇಂಗ್ಲಿಷ್ ಭಾಷೆಯ ಅತ್ಯಂತ ಪ್ರಮುಖ ಮಹಾಕಾವ್ಯ ಎನಿಸಿಕೊಂಡಿರುವ 'ಪ್ಯಾರಡೈಸ್ ಲಾಸ್ಟ್'ನ ರಚನೆ.

ಸಂಗೀತ ರಚನೆಯಲ್ಲಿ ಆಸಕ್ತಿ ಇದ್ದ ಗುಮಾಸ್ತೆಯೊಬ್ಬನ ಮಗ ಮಿಲ್ಟನ್; 1609ರ ಡಿಸೆಂಬರ್ 9ರಂದು ಲಂಡನಿನಲ್ಲಿ ಜನಿಸಿದ. 1632ರ ವೇಳೆಗೆ ಕೇಂಬ್ರಿಜಿನ ಕ್ರೈಸ್ಟ್ ಕಾಲೇಜಿನಿಂದ ಎಂ.ಎ. ಡಿಗ್ರಿ ಪಡೆದ. ಅನಂತರ ಸುಮಾರು ಆರು ವರ್ಷಗಳ ಕಾಲ ತನ್ನ ತಂದೆಯೊಡನೆ ಇದ್ದ. ಈ ಸಮಯದಲ್ಲಿ ಗ್ರೀಕ್, ಲ್ಯಾಟಿನ್ ಮೊದಲಾದ ಭಾಷೆಗಳ ಮಹಾಕಾವ್ಯಗಳನ್ನು ಅಭ್ಯಸಿಸಿದ. ಈ ವೇಳೆಯಲ್ಲಿ ಇವನು ಬರೆದ ಕೃತಿ 'ಲಾಲೆಗ್ರೋ', (ಸಂತುಷ್ಟ ವ್ಯಕ್ತಿ). ಇದರಲ್ಲಿ ಪ್ರಸನ್ನ ಮನಸ್ಕನಾದ ವ್ಯಕ್ತಿಯೊಬ್ಬನ ಜೀವನದ ಒಂದು ದಿನದ ಬಣ್ಣನೆ ಇದೆ. ಇನ್ನೊಂದು ಕೃತಿ, 'ಇಲ್ ಪೆನ್‌ಸೆರೋಸೋ' (ವಿಚಾರವಂತ ವ್ಯಕ್ತಿ). ಮೇಧಾವಿಯೊಬ್ಬನ ಜೀವನದ ಒಂದು ದಿನದ ನಿರೂಪಣೆ ಇದು. 'ಲಿಸಿಡಾಸ್' ಒಂದು ಶೋಕಗೀತೆ.

ಮಹಾಕಾವ್ಯವನ್ನು ರಚಿಸಲು ಸಾಹಿತ್ಯ ಪಾಂಡಿತ್ಯ, ಕವನರಚನಾಶಕ್ತಿ ಇವೆರಡೇ ಸಾಲವು, ಇವುಗಳ ಜೊತೆಗೆ ಅಪಾರವಾದ ಜೀವನಾನುಭವವೂ ಬೇಕು ಎಂದು ಭಾವಿಸಿದ ಮಿಲ್ಟನ್ 1638ರಲ್ಲಿ ವಿದೇಶ ಪ್ರವಾಸಕ್ಕೆ ಹೊರಟ. ದೀರ್ಘಕಾಲ ಇಟಲಿಯಲ್ಲಿದ್ದು ಹಿಂದಿರುಗಿ ಬಂದ ಮೇಲೆ ಉಪಾಧ್ಯಾಯವೃತ್ತಿ ಕೈಗೊಂಡ. ರಾಜಕೀಯದಲ್ಲಿ 'ಪ್ಯೂರಿಟನ್' ಪಂಥಕ್ಕೆ ಬೆಂಬಲವಿತ್ತು. ಅನೇಕ ಲೇಖನ, ಕಿರುಹೊತ್ತಗೆಗಳನ್ನು ಬರೆದ. 1644ರಲ್ಲಿ ಮಿಲ್ಟನ್ 'ವಿದ್ಯಾಭ್ಯಾಸವನ್ನು ಕುರಿತು' ಎಂಬ ಲೇಖನ ಪ್ರಕಟಿಸಿದ. ಜೀವನವನ್ನು ಸೂಕ್ತ ರೀತಿಯಲ್ಲಿ ಎದುರಿಸುವಂತೆ ವಿದ್ಯಾರ್ಥಿಯನ್ನು ಸಜ್ಜುಗೊಳಿಸುವುದೇ ವಿದ್ಯಾಭ್ಯಾಸದ ಗುರಿಯಾಗಬೇಕು ಎಂಬ ಪ್ರತಿಪಾದನೆ ಆ ಲೇಖನದಲ್ಲಿತ್ತು. ಆ ಕಾಲದಲ್ಲಿ ಅವನ ಆ ದೃಷ್ಟಿ, ಅಭಿಪ್ರಾಯಗಳು ಕ್ರಾಂತಿಕಾರಿಯಾಗಿ ಕಂಡುವು.

ಪುಸ್ತಕಗಳನ್ನು ಪ್ರಕಟಿಸುವ ಮುನ್ನ ಅದನ್ನು ಸರಕಾರೀ ಅಧಿಕಾರಿಗಳ ಪರಿಶೀಲನೆಗೆ ಗುರಿಮಾಡಬೇಕೆಂಬ ಅಭಿಪ್ರಾಯದ ವಿರುದ್ಧ ಮಿಲ್ಟನ್ ತೀವ್ರ ಹೋರಾಟ ನಡೆಸಿದ. ಮನುಷ್ಯನನ್ನು ಕೊಲ್ಲುವವನು ವಿಚಾರವಂತ ಪ್ರಾಣಿಯನ್ನು ಕೊಲ್ಲುತ್ತಾನೆ; ಆದರೆ ಪುಸ್ತಕಗಳನ್ನು ನಾಶ ಮಾಡುವವನು ವಿಚಾರವನ್ನೇ ನಾಶ ಮಾಡಿಬಿಡುತ್ತಾನೆ ಎಂದು ಮಿಲ್ಟನ್ ವಾದಿಸಿದ. ಇವನ ಬರೆಹಗಳಿಂದ ಪ್ರಭಾವಿತನಾದ ಅಂದಿನ ಬ್ರಿಟನಿನ 'ರಕ್ಷಕ ಪ್ರಭು' ಆಲಿವರ್ ಕ್ರಾಮ್‌ವೆಲ್, ಮಿಲ್ಟನನನ್ನು ಕಾರ್ಯದರ್ಶಿಯನ್ನಾಗಿ ನಿಯಮಿಸಿಕೊಂಡ.



ಮಹಾಕವಿ : ಮಿಲ್ಟನ್

1652ರಲ್ಲಿ ಮಿಲ್ಟನನ ಕಣ್ಣಿನ ತೊಂದರೆ ಹೆಚ್ಚಾಗಿ ಅವನು ಕುರುಡನಾದ. ಆದರೂ ಕಾರ್ಯದರ್ಶಿಯಾಗಿ ತನ್ನ ಕೆಲಸ ನಿರ್ವಹಿಸುತ್ತಲೇ ಇದ್ದ. ಕ್ರಾಮ್‌ವೆಲ್‌ನ ಮರಣಾನಂತರ 1660ರಲ್ಲಿ ಪಟ್ಟಕ್ಕೆ ಬಂದ ಎರಡನೆಯ ಚಾರ್ಲ್ಸ್ ಮಿಲ್ಟನನನ್ನು ಬಂಧಿಸಿ ಜುಲ್ಮಾನೆ ವಿಧಿಸಿದ. ಮುಂದೆ ಮಿಲ್ಟನನ ಬಿಡುಗಡೆಯಾಯಿತಾದರೂ ಅವನು ಜನರಿಂದ ದೂರವಿರಬೇಕಾಯಿತು. ಈ ಹೊತ್ತಿಗಾಗಲೇ ಮಿಲ್ಟನ್ ತನ್ನ ಜೀವನದ ಮಹದಾಕಾಂಕ್ಷೆಯಾಗಿದ್ದ ಮಹಾಕಾವ್ಯ ರಚನೆಗೆ ಕೈಹಾಕಿದ್ದ. ಅದನ್ನು ಮುಂದುವರಿಸಿದ.

1658ರಿಂದ 1665ರ ವರೆಗಿನ ಅವಧಿಯಲ್ಲಿ ಬರೆದ ಮಹಾಕಾವ್ಯ 'ಪ್ಯಾರಡೈಸ್ ಲಾಸ್ಟ್' ಹನ್ನೆರಡು ಭಾಗಗಳ ಕೃತಿ. ಈ ಮಹಾಕಾವ್ಯದ ಮೂಲ ಕಥೆ ಬೈಬಲಿನಿಂದ ಆರಿಸಿಕೊಂಡದ್ದು. ಆಡಂ ಮತ್ತು ಈವ್ ಸೈತಾನನ ದುಷ್ಪ್ರೇರಣೆಗೆ ಒಳಗಾಗಿ ಸ್ವರ್ಗವನ್ನು ಕಳೆದುಕೊಳ್ಳುವ ಕಥೆ ಇದರಲ್ಲಿದೆ. ಮಿಲ್ಟನನ ಸರಳ ರಗಳೆ ಈ ವೇಳೆಗೆ ಮಹಾಕಾವ್ಯಕ್ಕೆ ಬೇಕಾದ ಗಾಂಭೀರ್ಯವನ್ನೂ ಬಿಗಿಯನ್ನೂ ಗಳಿಸಿತ್ತು. ಮಿಲ್ಟನನ ಭವ್ಯ ಕಲ್ಪನಾಶಕ್ತಿ, ಒಳ್ಳೆಯವರ ವಿಷಯದಲ್ಲಿ ಅವನಿಗಿದ್ದ ಅಪಾರ ಗೌರವ ಈ ಮಹಾಕಾವ್ಯದಲ್ಲಿ ವ್ಯಕ್ತವಾಗಿವೆ.

ಮಹಾಕಾವ್ಯವನ್ನು ರಚಿಸ ಬಯಸುವ ಕವಿ ಪಾಂಡಿತ್ಯ ಉಳ್ಳವನಾಗಿದ್ದರೆ ಸಾಲದು : ಅವನು ಒಳ್ಳೆಯ ಹಾಗೂ ಪರಿಶುದ್ಧ ಜೀವನವನ್ನೂ ನಡೆಸಬೇಕು ಎಂಬುದು ಮಿಲ್ಟನನ ನಂಬಿಕೆಯಾಗಿತ್ತು. ಈ ನಂಬಿಕೆಗಳಿಗೆ ಅನುಸಾರವಾಗಿ ಮಿಲ್ಟನ್ ಬಾಳಿದ.

ಮಿಲ್ಟನ್ ತನ್ನ ಜೀವನ ಸರ್ವಸ್ವವನ್ನೇ ಧಾರೆಯೆರೆದು ರಚಿಸಿದ ಈ ಕೃತಿಯಲ್ಲಿ ವಿಚಾರದ ಭವ್ಯತೆ, ಅಭಿವ್ಯಕ್ತಿಯ ಗಾಂಭೀರ್ಯ ಎದ್ದು ಕಾಣುತ್ತವೆ. ಶೇಕ್ಸ್‌ಪಿಯರನನ್ನು ಬಿಟ್ಟರೆ ಮಿಲ್ಟನನೇ ಅತ್ಯುನ್ನತ ಮಹಾಕವಿ ಎಂದು ಹೆಚ್ಚಿನ ವಿಮರ್ಶಕರ ಅಭಿಪ್ರಾಯ.

'ಪ್ಯಾರಡೈಸ್ ಲಾಸ್ಟ್'ನ ಅನಂತರ ಮಿಲ್ಟನ್ 'ಪ್ಯಾರಡೈಸ್ ರೀಗೇನ್ಡ್' ಮತ್ತು 'ಸಾಮ್ಸನ್ ಅಗೊನಿಸ್ಟಿಸ್' ಎಂಬ ಕೃತಿಗಳನ್ನು ರಚಿಸಿದ. ದುಷ್ಪ್ರೇರಣೆ, ಆಮಿಷಗಳನ್ನು ಲೆಕ್ಕಿಸದ ಕ್ರಿಸ್ತನ ಭವ್ಯ ಕಥೆ 'ಪ್ಯಾರಡೈಸ್ ರೀಗೇನ್ಡ್' ಕಾವ್ಯದಲ್ಲಿದೆ.

'ಸಾಮ್ಸನ್ ಅಗೊನಿಸ್ಟಸ್' ಗ್ರೀಕ್ ನಾಟಕಗಳ ಶೈಲಿಯಲ್ಲಿರುವ, ಮಿಲ್ಟನನ ಪ್ರಸಿದ್ಧ ನಾಟಕ. ಇದರಲ್ಲಿ ಬರುವ ಸಾಮ್ಸನನ ಕಥೆಗೂ ಮಿಲ್ಟನನ ಜೀವನದ ಘಟನೆಗಳಿಗೂ ಅನೇಕ ಹೋಲಿಕೆಗಳಿವೆ. ಮೂರು ಸಲ ಮದುವೆಗಳನ್ನು ಮಾಡಿಕೊಂಡರೂ ಮಿಲ್ಟನನಿಗೆ ಜೀವನದಲ್ಲಿ ಸುಖವೇ ದೊರಕಲಿಲ್ಲ. ಕೊನೆಗಾಲದಲ್ಲಿ ಅವನ ಮಕ್ಕಳೇ ಅವನ ಮಾತನ್ನು ಕೇಳದೆ ಅವಿಧೇಯರಾದರು. ಆದರೂ ಮಿಲ್ಟನ್ ತನ್ನ ಕುರುಡುತನದಿಂದಾಗಿ ಅವರನ್ನೇ ಅವಲಂಬಿಸಬೇಕಾಗಿತ್ತು. ಪ್ರಜೆಗಳು ರಾಜರ ದಾಸರಾಗಿ ವೈಯಕ್ತಿಕ ಸ್ವಾತಂತ್ರ್ಯ ಕಳೆದುಕೊಂಡಿರುವುದನ್ನು ನೋಡಿ ಮಿಲ್ಟನ್ ತಳಮಳಿಸುತ್ತಿದ್ದ. ಅವನ ಈ ಎಲ್ಲ ವೈಯಕ್ತಿಕ ವೇದನೆಗಳು ಈ ನಾಟಕದಲ್ಲಿ ವ್ಯಕ್ತವಾಗಿವೆ. ಸಾಮ್ಸನನಂತೆ ಕೊನೆಗಾಲದಲ್ಲಿ ಕುರುಡನಾಗಿದ್ದ ಮಿಲ್ಟನ್ ಸಾಮ್ಸನನಂತೆಯೇ ತನ್ನ ಆದರ್ಶ, ಧ್ಯೇಯಗಳಿಗಾಗಿ ಕೊನೆಯ ಉಸಿರು ಇರುವವರೆಗೂ ಹೋರಾಡಿ, 1674ರ ನವೆಂಬರ್ 8 ರಂದು ಕಣ್ಮುಚ್ಚಿದ.

## ಮೀನಾಕ್ಷಿ ಸುಂದರಂ ಪಿಳ್ಳೈ

ತಮಿಳುನಾಡಿನ ತಂಜಾವೂರಿನ ಸಮೀಪದಲ್ಲಿರುವ ಪಂದನಲ್ಲೂರು ನಾಟ್ಯ, ಸಂಗೀತಗಳಿಗೆ ಪ್ರಸಿದ್ಧವಾದ ಕೇಂದ್ರ; ಅದರಲ್ಲೂ ಭರತನಾಟ್ಯ ಶಿಕ್ಷಣಕ್ಕೆ ಹೆಸರಾದ ಸ್ಥಾನ. ಪಂದನಲ್ಲೂರಿನ ಮೀನಾಕ್ಷಿ ಸುಂದರಂ ಪಿಳ್ಳೈ ಅವರು ಈ ಶತಮಾನದ ಸುಪ್ರಸಿದ್ಧ ನಾಟ್ಯಾಚಾರ್ಯರಲ್ಲೊಬ್ಬರು. ಇವರು ಹುಟ್ಟಿದ್ದು ಪಂದನಲ್ಲೂರಿನಲ್ಲೇ, 1868ರಲ್ಲಿ. ಸಂಗೀತ, ನಾಟ್ಯ ವಿದ್ಯೆಗಳಿಗೆ ಪ್ರಸಿದ್ಧವಾಗಿದ್ದ ಮನೆತನ ಇವರದು. ಕರ್ಣಾಟಕ ಸಂಗೀತದ ತ್ರಿಮೂರ್ತಿಗಳಲ್ಲೊಬ್ಬರೆಂದು ಪ್ರಸಿದ್ಧರಾದ ಮುತ್ತುಸ್ವಾಮಿ ದೀಕ್ಷಿತರನ್ನು ತಿರುವಾರೂರಿನಿಂದ ತಂಜಾವೂರಿಗೆ ಕರೆಸಿಕೊಂಡು, ಅವರು ಅಲ್ಲಿರಲು ವ್ಯವಸ್ಥೆಮಾಡಿ, ಅವರಲ್ಲಿ ಸಂಗೀತ ಕಲಿತು ಪರಿಣತಿ ಪಡೆದ ನಾಲ್ಕು ಮಂದಿ ಸಹೋದರರಾದ ಚಿನ್ನಯ್ಯ, ಪೊನ್ನಯ್ಯ, ವಡಿವೇಲು, ಶಿವಾನಂದ ಇವರು ಮೀನಾಕ್ಷಿ ಸುಂದರಂ ಪಿಳ್ಳೈ ಅವರ ವಂಶದ ಹಿರಿಯರು. ಈ ಘನ ವಿದ್ವಾಂಸರು ವಾಗ್ಗೇಯಕಾರರಾಗಿದ್ದುದಲ್ಲದೆ, ನಾಟ್ಯಾಚಾರ್ಯರೂ ಆಗಿದ್ದರು; ತಂಜಾವೂರು, ಮೈಸೂರು, ತಿರುವಾಂಕೂರು ರಾಜಾಸ್ಥಾನಗಳ ಗೌರವಕ್ಕೆ ಪಾತ್ರರಾಗಿದ್ದರು.



ಭರತನಾಟ್ಯ ಶಿಕ್ಷಣ : ಮೀನಾಕ್ಷಿ ಸುಂದರಂ ಪಿಳ್ಳೈ

ಮೀನಾಕ್ಷಿ ಸುಂದರಂ ಪಿಳ್ಳೈ ಅವರು ಪರಂಪರಾಗತವಾದ ಭರತನಾಟ್ಯ ಶಾಸ್ತ್ರ ಪಾರಂಗತರಾಗಿದ್ದರು. ತಮ್ಮ ಜೀವಿತಕಾಲದಲ್ಲಿ ಅನೇಕ ಮಂದಿಗೆ ನಿರಂತರವಾಗಿ ವಿದ್ಯಾದಾನ ಮಾಡಿದರು. ಕಲಿತುದೆಲ್ಲ ಖಚಿತವಾಗಿರಬೇಕು ; ಪರಿಪೂರ್ಣವಾಗಿರಬೇಕು ಎಂಬುದು ಪಿಳ್ಳೈ ಅವರ ನಿಲುವು. ಅದ್ದರಿಂದ ತಮ್ಮಲ್ಲಿ ಶಿಕ್ಷಣ ಪಡೆಯಲು ಬಂದವರೆಲ್ಲರನ್ನೂ ಕಠೋರ ಶಿಕ್ಷಣ—ನಿಯಮಗಳಿಗೆ ಅವರು ಒಳಗುಮಾಡುತ್ತಿದ್ದರು ; ಇದರ ಪರಿಣಾಮವಾಗಿ. ಅವರಲ್ಲಿ ಭರತನಾಟ್ಯ ಕಲಿತವರೆಲ್ಲರಲ್ಲೂ ಒಂದು ಸಮಾನ ಶೈಲಿ ಅಳವಡುತ್ತಿತ್ತು. ಇದರ ವೈಶಿಷ್ಟ್ಯಗಳಿಂದಾಗಿ ಇದು ಪಂದನಲ್ಲೂರು ಶೈಲಿ ಎಂದೇ ಹೆಸರು ಪಡೆಯಿತು. ತಾಳದ ದೃಢ ಆಧಾರದ ಮೇಲೆ ರೂಪಿಸಲ್ಪಟ್ಟ ಸ್ಪಷ್ಟ, ಖಚಿತ ನಾಟ್ಯಭಂಗಿಗಳು ಈ ಶೈಲಿಯ ವಿಶೇಷ ಲಕ್ಷಣ. ಮೀನಾಕ್ಷಿ ಸುಂದರಂ ಪಿಳ್ಳೈ ಅವರಲ್ಲಿ ಶಿಕ್ಷಣ ಪಡೆದ ನರ್ತಕ ನರ್ತಕಿಯರು : ಅಡ್ಯಾರಿನ ರುಕ್ಮಿಣೀದೇವಿ, ಬೆಂಗಳೂರಿನ ಶಾಂತಾರಾವ್ ಮತ್ತು ರಾಮಗೋಪಾಲ್. ಇವರೆಲ್ಲರೂ ಶ್ರೇಷ್ಠ ನರ್ತಕ ನರ್ತಕಿಯರೆಂದು ಅಂತರರಾಷ್ಟ್ರೀಯ ಮೆಚ್ಚುಗೆ ಪಡೆದಿದ್ದಾರೆ.

ಅರ್ಧ ಶತಮಾನಕ್ಕೂ ಹೆಚ್ಚು ಕಾಲ ನಿರಂತರವಾಗಿ ಭರತನಾಟ್ಯ ಶಿಕ್ಷಣದಲ್ಲಿ ತೊಡಗಿ ಅನೇಕಾನೇಕ ಮಂದಿ ಶಿಷ್ಯರನ್ನು ಭರತನಾಟ್ಯ ಪಟುಗಳನ್ನಾಗಿ ರೂಪಿಸಿದ ಮೀನಾಕ್ಷಿ ಸುಂದರಂ ಪಿಳ್ಳೈ ಅವರು ಈ ಶತಮಾನದ ನಾಟ್ಯಾಚಾರ್ಯರಲ್ಲಿ ಪ್ರಥಮ ಪಂಕ್ತಿಗೆ ಸೇರಿದವರು. ಭರತನಾಟ್ಯ ಸಂಪ್ರದಾಯ ರಕ್ಷಣೆಗೆ ಅವರಿಂದ ಸಂದ ಸೇವೆ ಅಪೂರ್ವವಾದದ್ದು.

ಮೀನಾಕ್ಷಿ ಸುಂದರಂ ಪಿಳ್ಳೈ ಅವರು 1954ರ ಅಕ್ಟೋಬರ್ ತಿಂಗಳಲ್ಲಿ ತಮ್ಮ 86ನೆಯ ವಯಸ್ಸಿನಲ್ಲಿ ತೀರಿಕೊಂಡರು.

## ಮುಖವಾಡ

ಒಂದಾನೊಂದು ಊರಿನಲ್ಲಿ ಒಬ್ಬ ರಾಜನಿದ್ದ. ಅವನ ಬಳಿ ಒಬ್ಬ ಹಾಸ್ಯಗಾರ ಇದ್ದ. ಒಂದು ದಿನ ಅವನು ಮಾಡಿದ ಹಾಸ್ಯ ಹದ್ದು ಮೀರಿತು ಎನಿಸಿತು ರಾಜನಿಗೆ; ರಾಜ ಕೋಪಗೊಂಡು, "ನಾಳೆಯಿಂದ ನಿನ್ನ ಮುಖವನ್ನು ನನಗೆ ತೋರಿಸಬೇಡ," ಎಂದು ಆರ್ಭಟಿಸಿದ. ಹಾಸ್ಯಗಾರ ತಲೆಬಾಗಿಸಿಕೊಂಡು ಹೊರಟುಹೋದ. ಮಾರನೆಯ ದಿನ ಒಂದು ವಿಚಿತ್ರ ಆಕೃತಿ ಅರಸನ ಮುಂದೆ ಬಂದು ನಿಂತಿತು. ತಲೆಗೆ ಒಂದು ಮಡಿಕೆಯ ಮುಸುಕು. ನೋಟ ಮರೆಯಾಗದಿರಲೆಂದು ಕಣ್ಣುಗಳ ಇದಿರು ಸಣ್ಣ ತೂತು. ರಾಜನೊಡನಿದ್ದ ಅವನ ಪುಟ್ಟ ಮಗು ಈ ವಿಚಿತ್ರ ವೇಷವನ್ನು ಕಂಡು ಕಿಟಾರನೆ ಕಿರಿಚಿಕೊಂಡಿತು. ರಾಜ ಗಡಸು ಧ್ವನಿಯಲ್ಲಿ ಕೇಳಿದ : "ಯಾರೋ ನೀನು ? ಇಲ್ಲಿಗೇಕೆ ಬಂದೆ ?". "ಮಹಾಸ್ವಾಮಿ, ನಾಳೆಯಿಂದ ನನಗೆ ನಿನ್ನ ಮುಖ ತೋರಿಸಬೇಡವೆಂದು ತಾವೇ ಅಪ್ಪಣೆ ಮಾಡಿದ್ದಿರಲ್ಲ; ಅದರಿಂದ ಮುಖ ಮರೆಸಿಕೊಂಡು ಬಂದೆ." ಎಂದಿತು ಆ ವ್ಯಕ್ತಿ. ಆತ ರಾಜನ ಆಸ್ಥಾನದ ಹಾಸ್ಯಗಾರ. ಮಡಕೆಯೇ ಅವನಿಗೆ ಮುಖವಾಡವಾಯಿತು.

ಇದು ಮುಖವಾಡವನ್ನು ಕುರಿತ ಒಂದು ಕಥೆ.

ಮುಖವಾಡ ಮುಖವನ್ನು ಮರೆಸುವ ಒಂದು ಸಾಧನ.

ಚರಿತ್ರಪೂರ್ವ ಗವಿಚಿತ್ರಗಳಲ್ಲಿ ಮುಖವಾಡ ಹಾಕಿಕೊಂಡು ನರ್ತಿಸುತ್ತಿರುವ ವ್ಯಕ್ತಿಗಳ ಚಿತ್ರಣವಿದೆ. ಈ ಮುಖವಾಡಗಳೆಲ್ಲ ಸತ್ತ ಪ್ರಾಣಿಗಳ ತಲೆ ಬುರುಡೆಗಳಿಗೆ ಅವುಗಳ ಚರ್ಮ, ಕೊಂಬು ಇತ್ಯಾದಿ ಭಾಗಗಳನ್ನು

ಹೋಮಿಸಿದಂಥವು. ಹೊಸ ಶಿಲಾಯುಗದ ವೇಳೆಗೆ ಕಾಲ್ಪನಿಕ ರೂಪದ ರಾಕ್ಷಸರ, ಪೆಡಂಭೂತಗಳ ರೂಪದ ಮುಖವಾಡಗಳು ಉಪಯೋಗಕ್ಕೆ ಬಂದುವು.

ಹೀಗೆ ಮುಖವಾಡದ ಉಪಯೋಗ ಬಹು ಪುರಾತನವಾದದ್ದು. ಮುಖವಾಡದ ಮೂಲಕ ಪಾತ್ರದ ಮನೋಭಾವವನ್ನು ಸೂಚಿಸುವ ಕಲೆ ಹಳೆಯದು. ವಿಶೇಷವೆಂದರೆ ಇಂದಿಗೂ – ಅತಿ ಮುಂದುವರಿದ ನಾಗರಿಕ ಸಮಾಜಗಳಲ್ಲೂ– ಮುಖವಾಡದ ಬಳಕೆಯಿದೆ. ರಂಗಭೂಮಿಯ ಪ್ರಥಮ ವಿಕಾಸಘಟ್ಟಗಳಲ್ಲಿ ಕೂಡ ಮುಖವಾಡದ ಉಪಯೋಗ ದೊಡ್ಡ ಪ್ರಮಾಣದಲ್ಲಿತ್ತು.

ಪ್ರಾಚೀನ ಗ್ರೀಕ್ ರಂಗಭೂಮಿ ಮುಖವಾಡಗಳ ಬಳಕೆಗೆ ಹೆಸರಾಗಿದೆ. ಇದಕ್ಕೆ ಕಾರಣವಿಲ್ಲದಿಲ್ಲ. ಗ್ರೀಕ್ ನಾಟಕಶಾಲೆ ಅನೇಕ ಸಹಸ್ರ ಮಂದಿ ಕೂಡಬಹುದಾದ ಬಯಲು ನಾಟ್ಯಮಂದಿರ. ರಂಗಸ್ಥಳದಿಂದ ದೂರದಲ್ಲಿದ್ದ ಪ್ರೇಕ್ಷಕರಿಗೆ ಪಾತ್ರಧಾರಿಯ ಮುಖಭಾವ ಸ್ಪಷ್ಟವಾಗಿ ಕಾಣಿಸುವುದು ಕಷ್ಟವಾಗುತ್ತಿತ್ತು. ಇದರಿಂದ ನಟನ ಮುಖವನ್ನು ಮುಖವಾಡದಿಂದ ಅಲಂಕರಿಸುತ್ತಿದ್ದರು. ಮುಖವಾಡ ಕಂಡ ಕೂಡಲೇ ಪಾತ್ರ ಚಿಕ್ಕವಯಸ್ಸಿನದೇ, ಮುಪ್ಪಿನ ಪುರುಷನದೇ, ಸ್ತ್ರೀಯದೇ, ಹರ್ಷ ಅಥವಾ ಕರುಣಾರಸ ಪ್ರಧಾನವಾದದ್ದೇ ಮುಂತಾದ ಅಂಶಗಳನ್ನು ಪ್ರೇಕ್ಷಕ ಸುಲಭವಾಗಿ ಗುರುತಿಸಬಹುದಾಗಿತ್ತು. ಅಭಿನಯಿಸುತ್ತಿರುವಂತೆಯೇ ನಟ ತಾನು ಧರಿಸಿಕೊಂಡಿದ್ದ ಒಂದು ಮುಖವಾಡವನ್ನು ಥಟ್ಟನೆ ತಳ್ಳಿ ಬೇರೊಂದು ಮುಖವಾಡವನ್ನು ಪ್ರದರ್ಶಿಸುವುದರ ಮೂಲಕ [illegible] ಪರಿವರ್ತನೆಯನ್ನು ಸೂಚಿಸುತ್ತಿದ್ದರು. ಮುಖವಾಡಕ್ಕೆ [illegible] ಅಳವಡಿಸಿದ ಆಲಿಕೆಯ ಮೂಲಕ ಮಾತನಾಡಿದಾಗ ನಟನ ಕಂಠಧ್ವನಿ ದೊಡ್ಡದಾಗುತ್ತಿತ್ತು. ಬಾಯಿ, ಕಣ್ಣು, ಮೂಗು [illegible] ಕೊರೆದು, ಸೂಕ್ತವಾಗಿ ಬಣ್ಣ ಹಾಕಿ ಮುಖವಾಡ ತಯಾರಿಸುತ್ತಿದ್ದರು.

ಗ್ರೀಕರ ಕಾಲದಿಂದ ಇಂದಿನವರೆಗೆ ಚಿರಪರಿಚಿತವಾಗಿರುವ ಎರಡು ಮುಖ್ಯ ಬಗೆಯ ನಾಟಕ ಮುಖವಾಡಗಳೆಂದರೆ ಬಾಯಿಯ ಮೂಲೆಗಳು ಮೇಲಕ್ಕೆ ತಿರುವಲ್ಪಟ್ಟ, ಮುಖದ ಮಾಂಸಖಂಡಗಳು ಉಬ್ಬಿಕೊಂಡಂತಿರುವ ಕಾಮಿಡಿ ಮುಖವಾಡ; ಬಾಯಿಯ ಮೂಲೆಗಳು ಕೆಳಕ್ಕೆ ಎಳೆದಂತಿರುವ ಯಾತನೆ ಅನುಭವಿಸುವಂಥ ಮುಖಲಕ್ಷಣವಿರುವ ಟ್ರಾಜಿಡಿ ಮುಖವಾಡ. ಈ ಎರಡು ಚಿತ್ರಗಳನ್ನು ಈಗಲೂ ನಾಟಕ ಪ್ರಚಾರ ಪತ್ರಿಕೆಯಲ್ಲಿ ಉಪಯೋಗಿಸುವುದುಂಟು.

ಮಧ್ಯಯುಗ ಕಾಲದ ಯೂರೋಪಿನಲ್ಲಿ ಮುಖವಾಡಗಳ ಉಪಯೋಗ ವ್ಯಾಪಕವಾಗಿದ್ದಿತು.

ಕೆಲವು ದೇಶಗಳಲ್ಲಿ ಜಾತ್ರೆ ಮತ್ತಿತರ ಉತ್ಸವ ಸಮಾರಂಭಗಳಲ್ಲಿ ತಮಾಷೆಗಾಗಿ ಮುಖವಾಡ ಧರಿಸುವುದುಂಟು. ಇದು ಯಾವುದಾದರೊಂದು ವಿಶಿಷ್ಟ ಪಾತ್ರದ ಮುಖವಾಡವಾಗಿರಬಹುದು; ಇಲ್ಲವೆ ಕೇವಲ ಕಲ್ಪನೆಯ ಸೃಷ್ಟಿಯಾಗಿರಬಹುದು. ಅಥವಾ ಮುಖದ ಮೇಲ್ಭಾಗವನ್ನು ಮಾತ್ರ ಮುಚ್ಚುವ ಮುಖವಾಡವಾಗಿರಬಹುದು. ಈ ಶತಮಾನದ ಮೂರನೆಯ ದಶಕದಲ್ಲಿ ನಾಟಕಗಳಲ್ಲಿ ಉಪಯೋಗಿಸಲು ಅನೇಕ ಬಗೆಯ ಮುಖವಾಡಗಳ ರಚನಾ ಪ್ರಯೋಗ ನಡೆಯಿತು. ಅನಂತರ ಅನೇಕ ನಾಟಕಗಳಲ್ಲಿ ಮುಖವಾಡಗಳನ್ನು ಧರಿಸುವ ರೂಢಿಯೂ ಆಚರಣೆಗೆ ಬಂತು. ಯೂಜೀನ್ ಓ' ನೀಲನ 'ದಿ ಗ್ರೇಟ್ ಗಾಡ್ ಬ್ರೌನ್' ಎಂಬ ಸಾಂಕೇತಿಕ ನಾಟಕದಲ್ಲಿ ನಟರು ಮುಖವಾಡ ಧರಿಸಿಯೇ ಅಭಿನಯಿಸಿದರು. ಅದು ಆ ರೀತಿಯ ಅಭಿನಯಿಸುವುದಕ್ಕಾಗಿಯೇ ಬರೆದ ನಾಟಕ. ಇದಲ್ಲದೆ ಶೇಕ್ಸ್‌ಪಿಯರ್‌ನ 'ಮ್ಯಾಕ್‌ಬೆತ್', ಬರ್ನಾರ್ಡ್ ಷಾನ 'ಆಂಡ್ರೂಕ್ಲೆ ಮತ್ತು ಸಿಂಹ'–ಈ ನಾಟಕಗಳಲ್ಲಿ ಕೂಡ ಮುಖವಾಡಗಳನ್ನು ಉಪಯೋಗಿಸಿ ಅಭಿನಯಿಸಲಾಗಿದೆ. ಪಾಬ್ಲೊ ಪಿಕಾಸೋನಂಥ ಶ್ರೇಷ್ಠ ಚಿತ್ರಕಾರ ನಾಟಕಗಳಿಗೆ ಮುಖವಾಡ ತಯಾರಿಸಿ ಕೊಟ್ಟಿದ್ದಾನೆ.

ಜಪಾನಿನ ಜನಜೀವನದಲ್ಲಿ ಹಾಸುಹೊಕ್ಕಾಗಿರುವ 'ನೋ' ನಾಟಕಗಳು 14ನೆಯ ಶತಮಾನದಿಂದ ಪ್ರಚಲಿತವಾಗಿವೆ. ಗ್ರೀಕ್ ನಾಟಕಗಳಂತೆ ಇವುಗಳಲ್ಲಿ ಮುಖವಾಡದ ಬಳಕೆಯಿದೆ. ಇಂಥ ನಾಟಕಗಳು ಇನ್ನೂರಕ್ಕಿಂತ ಹೆಚ್ಚಾಗಿ ದೊರೆತಿವೆ. 'ನೋ' ನಾಟಕಗಳಲ್ಲಿ ಉಪಯೋಗಿಸುವ ಸುಮಾರು ನೂರಇಪ್ಪತ್ತೈದು ಬಗೆಯ ಮುಖವಾಡಗಳು ಈವರೆಗೆ ಕಂಡುಬಂದಿವೆ.

ಚೀನ, ಟಿಬೆಟ್, ಜಾವಾಗಳಲ್ಲಿಯೂ ಮುಖವಾಡಗಳ ಬಳಕೆಯಿದೆ. ನಮ್ಮ ದೇಶದಲ್ಲಿಯೂ ಭೂತಾರಾಧನೆ, ಗ್ರಾಮದೇವತೆಗಳ ಉತ್ಸವ ಕಾಲದಲ್ಲಿ ಸೋಮ (ಜೋಮ) ಮುಂತಾದ ಮುಖವಾಡಗಳನ್ನು ಧರಿಸಿಕೊಂಡು ಕುಣಿಯುವ ಪದ್ಧತಿ ಇದೆ. ಹುಲಿವೇಷ ಕಟ್ಟುವವರೂ ಮುಖವಾಡ ಬಳಸುವುದುಂಟು. ಜೀರೇದೇವರ ಕುಣಿತದಲ್ಲೂ ಮುಖವಾಡಗಳ ಬಳಕೆ ಇದೆ.

ಸಾಂಕೇತಿಕ ನಾಟಕಗಳಲ್ಲಿ ವಿಶೇಷ ಪಾತ್ರಗಳ ಅವಾಸ್ತವಿಕತೆಯನ್ನು ಸಾಧಿಸಲು ಮುಖವಾಡ ಬಳಸುತ್ತಾರೆ.

ಅಲಜ

ವಿವಿಧ ಮುಖವಾಡಗಳು—
ರಂಜನೆಗೆ, ಧಾರ್ಮಿಕ ಆಚರಣೆಗೆ

## ಮುಗಳಿ

ಬಾಲಕ ರಂಗನಾಥನಿಗೆ ಶಾಲೆ–ಪುಸ್ತಕ ಇವುಗಳಿಗಿಂತ ಸಿಹಿತಿಂಡಿಗಳ ಮೇಲೆಯೇ ಹೆಚ್ಚು ಪ್ರೀತಿ; ಪ್ರತಿದಿನವೂ ಬೆಳಗ್ಗೆ 'ಬೆಲ್ಲಾಹಿಟ್ಟಿ'ನ ದೊಡ್ಡ ಉಂಡೆ ಸಿಕ್ಕರೆ ಮಾತ್ರ ಶಾಲೆಗೆ ಹೋಗುವ ಯೋಚನೆ. ತಿಂಡಿಯಿದ್ದ ಜೇಬು ಖಾಲಿಯಾದರೆ ಮಧ್ಯದಾರಿಯಿಂದಲೇ ಮನೆಗೆ 'ವಾಪಸ್'. ತಿಂಡಿ-ತೀರ್ಥ ಎಂದರೆ ಬಾಯಿ ಬಿಡುವ ಈ ಹುಡುಗನಿಗೆ ವಿದ್ಯೆ ಏನು ಬಂದೀತು ಎಂದು ತಾಯಿಗೆ ಸದಾ ಯೋಚನೆ.

ಆದರೆ ಮುಂದೆ ಇದೇ ಹುಡುಗ ಕವಿತೆ, ನಾಟಕ, ಕಾದಂಬರಿ, ಕಥೆ, ಹರಟೆ, ಪ್ರಬಂಧ, ವಿಮರ್ಶೆಗಳಲ್ಲೆಲ್ಲ ಕೈಯಾಡಿಸುವ 'ರಸಿಕರಂಗ'ನಾದ, ಕನ್ನಡ ನಾಡಿನ ಗಡಿಯಾಚೆ ನೆಲೆಸಿ ಕನ್ನಡದ ಶಿಕ್ಷಕನಾದ, ರಕ್ಷಕನಾದ.



ಪಾಂಡಿತ್ಯ : ಮುಗಳಿ

ರಂಗನಾಥ ಮುಗಳಿಯ ತಂದೆ ಶ್ರೀನಿವಾಸರಾಯರು. ಬಾಗಲಕೋಟೆ, ಮುದ್ದೇಬಿಹಾಳ ಮುಂತಾದ ಕಡೆಗಳಲ್ಲಿ ಅವರು ವಕೀಲಿ ನಡೆಸಿದರು. ತಾಯಿ ಕಮಲಕ್ಕನವರ ತವರೂರಾದ ಹೊಳೆಆಲೂರೇ ರಂಗನಾಥ ಹುಟ್ಟಿದ ಊರು. ಜನನ 1906ರ ಜುಲೈ 15ರಂದು. ಪ್ರಾಥಮಿಕ ಶಿಕ್ಷಣ ಬಾಗಲಕೋಟೆಯಲ್ಲಿ ನಡೆಯಿತು. ಹದಿನಾರರ ಹುಡುಗನಾಗಿದ್ದಾಗ ಮಹಾತ್ಮಾ ಗಾಂಧಿಯವರ ಅಸಹಕಾರ ಚಳುವಳಿಯ ಕರೆಗೆ ಓಗೊಟ್ಟು ನೂಲು ತೆಗೆಯಲು, ಖಾದಿ ಬಟ್ಟೆಯನ್ನು ಹೊತ್ತು ಊರೂರು ತಿರುಗಿ ಮಾರಲು ತೊಡಗಿದ. ತಮ್ಮ ಒಬ್ಬನೇ ಮಗ ಈ ರೀತಿ ತನ್ನ 'ಭವಿಷ್ಯವನ್ನು ಹಾಳು ಮಾಡಿಕೊಳ್ಳುವುದು' ತಂದೆ–ತಾಯಿಯರಿಗೆ ಹೇಗೆ ಒಗ್ಗೀತು? ಮಗನನ್ನು ಮತ್ತೆ ಶಾಲೆಗೆ ಹೋಗುವಂತೆ ಒಪ್ಪಿಸಬೇಕಾದರೆ ಅವರಿಗೆ ಸಾಕುಬೇಕಾಯಿತು. ಶಾಲೆಗೆ ಹಿಂದಿರುಗಲು ಒಪ್ಪಿದ ಮೇಲೆ ಕೂಡ ರಂಗನಾಥ, ಸರಕಾರೀ ಶಾಲೆಗೆ ಹೋಗುವುದಿಲ್ಲ ಎಂದು ಪಟ್ಟುಹಿಡಿದು, ಬಿಜಾಪುರದ ಖಾಸಗೀ ಶಾಲೆ ಸೇರಿದ.

ಈ ಶಾಲೆಯಲ್ಲಿ ರಂಗನಾಥ ಮುಗಳಿಗೆ ಸಮವಯಸ್ಕ ಹುಡುಗರ ಗೆಳೆತನಕ್ಕಿಂತ ಪುಸ್ತಕಗಳ ಸಹವಾಸವೇ ಹೆಚ್ಚಾಯಿತು. 1924ರಲ್ಲಿ ಧಾರವಾಡದ ಕರ್ನಾಟಕ ಕಾಲೇಜು ಸೇರಿದ ಮೇಲೆ ಸಾಹಿತ್ಯ ಚಿಂತನೆಗೆ ಮತ್ತಷ್ಟು ಅನುವು ದೊರೆಯಿತು. ಕೈಲಾಸಂ, ಮಾಸ್ತಿ, ಬೇಂದ್ರೆ ಅಂಥ ಸಾಹಿತಿಗಳ ಸಂಗದಿಂದ ಈತನ ವ್ಯಕ್ತಿತ್ವ ಮತ್ತಷ್ಟು ವಿಕಾಸಗೊಂಡಿತು. ಸಂಸ್ಕೃತದ ಬಿ. ಎ. (ಆನರ್ಸ್). ಕನ್ನಡ–ಇಂಗ್ಲಿಷ್ ವಿಷಯಗಳಲ್ಲಿ ಎಂ. ಎ. ಪದವಿಗಳನ್ನು ಪಡೆದದ್ದೂ ಆಯಿತು. ತಂದೆಯ ಅಪೇಕ್ಷೆಯಂತೆ ವಕೀಲ ವೃತ್ತಿಗೆ ಅಭ್ಯಾಸ ಮಾಡುವ ಬದಲು, ಉಪಾಧ್ಯಾಯರಾಗಲು ರಂಗನಾಥ ಮುಗಳಿ ನಿಶ್ಚಯಿಸಿದರು. ಮುಂಬಯಿಯಲ್ಲಿ ಬಿ. ಟಿ. ತರಬೇತಿ ಮುಗಿಸಿ ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ಅಧ್ಯಾಪಕರಾದರು. ಎರಡು ವರ್ಷಗಳ ಬಳಿಕ ದೂರದ ಸಾಂಗಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾದರು.

ಸಾಂಗಲಿ ಮಹಾರಾಷ್ಟ್ರಕ್ಕೆ ಸೇರಿದ ಸ್ಥಳ. ಕನ್ನಡ ನಾಡಿಗೆ ಕನ್ನಡ ನುಡಿಗೆ ಹೊರಗಾದ ಪ್ರದೇಶ. ಆದರೂ ಮುಗಳಿಯವರು ಇಲ್ಲಿ ಕನ್ನಡ ಪ್ರಾಧ್ಯಾಪಕರಾದ ಬಳಿಕ ಅನೇಕ ಕನ್ನಡ ವಿದ್ಯಾರ್ಥಿಗಳನ್ನು ತಮ್ಮೆಡೆಗೆ ಆಕರ್ಷಿಸಿದರು; ಮರಾಠಿಯನ್ನು ಕಲಿತು ತಾವು ಮರಾಠಿ ಜನರ ಗೌರವಕ್ಕೂ ಪಾತ್ರರಾದರು.

ಕವಿ ಮುಗಳಿಯವರು ರಚಿಸಿದ 'ಬಾಸಿಗ'ದಲ್ಲಿ 80 ಕವನಗಳೂ 'ಅಪಾರ ಕರುಣೆ'ಯಲ್ಲಿ 37 ಕವನಗಳೂ ಇವೆ. 'ಓಂ ಅಶಾಂತಿ'ಯಲ್ಲಿ ವ್ಯಕ್ತಿಗತವಾದ ಭಾವನೆಯ ಕವಿತೆಗಳಿದ್ದರೆ 'ಬಾಸಿಗ'ದಲ್ಲಿ ಭಕ್ತಿ, ರಾಷ್ಟ್ರೀಯತಾ ಭಾವಗಳಿಗೆ ಇಂಬು ದೊರೆತಿದೆ. 'ಅಪಾರ ಕರುಣೆ'ಯ ಕವಿತೆಗಳು ಮುಗಳಿಯವರ ನಿಸರ್ಗ ಪ್ರೇಮಕ್ಕೆ ಸಾಕ್ಷಿ:

"ಹೋ ಬಂತು ಬಂತಕೋ ಭೂತ<br>
ಬೇತರದಂತೆ<br>
ಪಡುವಣ ಬಿರುಗಾಳಿ<br>
ಚೈತ್ರಮಾಸದ ಕಾಳಿ"

ರಂ. ಶ್ರೀ. ಮುಗಳಿಯವರು ಮೂರು ಕಾದಂಬರಿಗಳನ್ನು ಬರೆದಿದ್ದಾರೆ: 'ಬಾಳುರಿ', 'ಕಾರಣ ಪುರುಷ', 'ಅನ್ನ'. ಇವುಗಳ ಪ್ರಧಾನ ಲಕ್ಷಣ ಆಯಾ ಕಾಲದ ಸಾಮಾಜಿಕ ಸಮಸ್ಯೆಗಳ ನೈಜ ಚಿತ್ರಣ.

ಮಾರ್ಮಿಕ ಮಾತುಗಾರಿಕೆಯ ಸವಿಯನ್ನು ಕಾಣಬೇಕಾದರೆ ಇವರ ನಾಟಕಗಳನ್ನು ಓದಬೇಕು, ನೋಡಬೇಕು. ಮುಗಳಿ ಅವರ ಏಕಾಂಕಗಳು, ಸಣ್ಣ, ದೊಡ್ಡ ಸಾಮಾಜಿಕ ನಾಟಕಗಳು ರಂಗಭೂಮಿಯ ಮೇಲೆ ಅಭಿನಯಿಸಲ್ಪಟ್ಟಿವೆ; ರೇಡಿಯೋ ಮೂಲಕ ಪ್ರಸಾರಗೊಂಡಿವೆ. ಇವರ ಸಣ್ಣ ಕಥೆ, ಪ್ರಬಂಧ, ಹರಟೆಗಳು ಆಗಾಗ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ತಾವು ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ರಚನೆ ಮಾಡಿದ್ದರೂ ಕಾವ್ಯ ಮತ್ತು ವಿಮರ್ಶೆ ಇವೆರಡೇ ತಮ್ಮ ಮುಖ್ಯ ಕಾರ್ಯಕ್ಷೇತ್ರಗಳೆಂದು ಮುಗಳಿಯವರೇ ಹೇಳಿಕೊಂಡಿದ್ದಾರೆ. ವಿಮರ್ಶಕನ ನಿಖರತೆ ಕವಿಯ ಲಾಲಿತ್ಯಗಳನ್ನು ಇವರ ಬರೆಹಗಳಲ್ಲಿ ಕಾಣಬಹುದು. ಮುಗಳಿಯವರ ವಿಮರ್ಶಾಗ್ರಂಥಗಳನ್ನು ಓದುವಾಗ ವಿಮರ್ಶೆಯೂ ಒಂದು ಸುಂದರ ಕಲೆ ಎಂದು ಅನಿಸುತ್ತದೆ. 'ರನ್ನನ ಕೃತಿ ರತ್ನ', 'ತವನಿಧಿ'ಗಳಂಥ ಹೊತ್ತಗೆಗಳಿಂದ ಹಿಡಿದು 'ಕನ್ನಡ ಸಾಹಿತ್ಯ ಚರಿತ್ರೆ'ಯಂಥ ಉದ್ಗ್ರಂಥದ

ವರೆಗೆ ಪಾಂಡಿತ್ಯ, ಲಾಲಿತ್ಯಗಳ ಸಮನ್ವಯವನ್ನು ಕಾಣಬಹುದು. ಅವರ ಹಲವು ವರ್ಷಗಳ ಸಾಹಿತ್ಯಾಭ್ಯಾಸದ ಫಲ 'ಕನ್ನಡ ಸಾಹಿತ್ಯ ಚರಿತ್ರೆ'. ಪುಣೆ ವಿಶ್ವವಿದ್ಯಾನಿಲಯ ಈ ಕೃತಿಯನ್ನು ಮೆಚ್ಚಿ ಅವರಿಗೆ ಡಾಕ್ಟರೇಟ್ ಪ್ರಶಸ್ತಿಯನ್ನು ಕೊಟ್ಟಿತು. ಸಾಹಿತ್ಯ ಅಕಾದೆಮಿಯ ರಾಷ್ಟ್ರೀಯ ಪ್ರಶಸ್ತಿಯೂ ಈ ಗ್ರಂಥಕ್ಕೆ ದೊರೆಯಿತು.

ಸತತ ಅಭ್ಯಾಸಿಯಾದ ಮುಗಳಿಯವರು ಕರ್ನಾಟಕ ಸಂಸ್ಕೃತಿಯನ್ನು ಆಳವಾಗಿ ಅಧ್ಯಯನ ಮಾಡಿ 'ದಿ ಹೆರಿಟೇಜ್ ಆಫ್ ಕರ್ನಾಟಕ' ಎಂಬ ಇಂಗ್ಲಿಷ್ ಗ್ರಂಥ ಬರೆದಿದ್ದಾರೆ.

ಸಾಂಗಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದಾಗ ಕೂಡ ಮುಗಳಿಯವರು ಬೆಂಗಳೂರಿನ 'ಜೀವನ' ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿದ್ದು ಸೇವೆ ಸಲ್ಲಿಸಿದರು. ನಾಡಹಬ್ಬ, ಸಾಹಿತ್ಯೋತ್ಸವಗಳಿಗಾಗಿ ಕರ್ನಾಟಕದಲ್ಲೆಲ್ಲ ಸಂಚರಿಸಿದರು. 1942ರಲ್ಲಿ ಪುಣೆಯಲ್ಲಿ ನಡೆದ ಹೊರನಾಡ ಕನ್ನಡಿಗರ ಸ್ನೇಹ ಸಮ್ಮೇಳನದ ಯೋಜಕರಲ್ಲಿ ಇವರೂ ಒಬ್ಬರಾಗಿದ್ದರು. ಇವರ ಕನ್ನಡ ಸೇವೆಯನ್ನು ಗಮನಿಸಿ, 1963ರಲ್ಲಿ ತುಮಕೂರಿನ ಸಮೀಪದ ಸಿದ್ಧಗಂಗೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಲಾಯಿತು.

ಸಾಂಗಲಿ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದು ನಿವೃತ್ತರಾದ ಮೇಲೆ ಮುಗಳಿಯವರು ಮೈಸೂರು ರಾಜ್ಯದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆಯ ನಿರ್ದೇಶಕರಾಗಿ ಕೆಲ ಕಾಲ ಸೇವೆ ಸಲ್ಲಿಸಿದರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿಯೂ ಕನ್ನಡ ಶಾಖೆಯ ಮುಖ್ಯಸ್ಥರಾಗಿಯೂ ಸ್ವಲ್ಪ ಕಾಲ ಕೆಲಸ ಮಾಡಿದರು.

ನಿವೃತ್ತರಾದ ಬಳಿಕ ಬೆಂಗಳೂರಿನಲ್ಲೇ ನೆಲೆಸಿದ ಮುಗಳಿಯವರು ಸಾಹಿತ್ಯ ಚಟುವಟಿಕೆಯಲ್ಲಿ ಸದಾ ನಿರತರು.

## ಮುತ್ತಯ್ಯ ಭಾಗವತರ್

ಕಥಾ ಕಾಲಕ್ಷೇಪ ನಡೆಸುವುದರಲ್ಲಿ ಹೆಸರು ಗಳಿಸಿ, ಅನಂತರ ಒಳ್ಳೆಯ ಗಾಯಕರೆಂದು ಖ್ಯಾತಿಪಡೆದು ಆಮೇಲೆ ವಾಗ್ಗೇಯಕಾರರಾಗಿ ಉತ್ತಮ ಕೃತಿ ರಚನೆ ನಡೆಸಿ ಕರ್ನಾಟಕ ಸಂಗೀತರಂಗದಲ್ಲಿ ಗಣ್ಯರಾದವರು ಮುತ್ತಯ್ಯ ಭಾಗವತರು.

ಮುತ್ತಯ್ಯ ಹುಟ್ಟಿದ್ದು ತಿರುನಲ್ವೇಲಿ ಜಿಲ್ಲೆಯ ಹರಿಕೇಶ ನೆಲ್ಲೂರಿನಲ್ಲಿ, 1877ರ ಜನವರಿ ತಿಂಗಳಿನಲ್ಲಿ. ತಂದೆ ಲಿಂಗ ಅಯ್ಯರ್. ಹತ್ತನೆಯ ವರ್ಷದಲ್ಲೇ ಅವರು ತೀರಿಕೊಂಡರು. ಮುತ್ತಯ್ಯ ಚಿಕ್ಕಪ್ಪನ ಬಳಿ ಬೆಳೆದ. ಅವರಲ್ಲೇ ಸಂಸ್ಕೃತಾಭ್ಯಾಸ ಮಾಡಿದ. ಆದರೆ ಒಲವೆಲ್ಲ ಸಂಗೀತದ ಕಡೆಗೆ. ಹೀಗಾಗಿ ತಿರುವಯ್ಯಾರಿಗೆ ತೆರಳಿ ಅಲ್ಲಿ ಸಾಂಬಶಿವ ಅಯ್ಯರ್ ಅವರ ಬಳಿ ಏಳೆಂಟು ವರ್ಷ ಕಾಲ ಶಿಷ್ಯವೃತ್ತಿ ಮಾಡಿ ಸಂಗೀತ ಕಲಿತ. ಅದರಲ್ಲಿ ಪ್ರಾವೀಣ್ಯ ಪಡೆದು ಊರಿಗೆ ಹಿಂದಿರುಗಿದ.

ಕಥಾ ಕಾಲಕ್ಷೇಪವೆಂದರೆ ಆಗ ಜನರಿಗೆ ಅಚ್ಚುಮೆಚ್ಚು. ಮುತ್ತಯ್ಯನವರಿಗೆ ಒಳ್ಳೆಯ ಕಂಠ, ಸಂಗೀತ ಪಾಂಡಿತ್ಯ ಇದ್ದುವು. ಜೊತೆಗೆ ಶ್ರದ್ಧೆಯಿಂದ ಕಲಿತಿದ್ದ ಸಂಸ್ಕೃತ ಸಾಹಿತ್ಯದ ಬೆಂಬಲವಿತ್ತು. ಆಕರ್ಷಕ ಮಾತುಗಾರಿಕೆಯೂ ಇತ್ತು. ಇವೆಲ್ಲವನ್ನೂ ಉಪಯೋಗಕ್ಕೆ ತುದುಕೊಳ್ಳುವ ದೃಷ್ಟಿಯಿಂದ ಮುತ್ತಯ್ಯನವರು ಕಥಾ ಕಾಲಕ್ಷೇಪವನ್ನು ಕೈಗೊಂಡರು. ಬಲುಬೇಗ ಜನರ ಮೆಚ್ಚುಗೆ ಗಳಿಸಿದರು. 'ಮುತ್ತಯ್ಯ ಭಾಗವತ'ರೆಂಬ ಮನ್ನಣೆಗೆ ಪಾತ್ರರಾದರು. ಜನ ಅವರ ವಿದ್ವತ್ಪೂರ್ಣ ಕಥಾ ಕಾಲಕ್ಷೇಪವನ್ನು ಅನಂತರ [illegible] ಕೇಳಲು ಹಾತೊರೆಯುವಂತಾಯಿತು. ಇವರ ಕೀರ್ತಿ [illegible] ಹರಡಿತು. ತಿರುವಾಂಕೂರು ಸಂಸ್ಥಾನ ಇವರನ್ನು ಪುರಸ್ಕರಿಸಿತು.

ಇಲ್ಲಿಂದ ಮುಂದೆ ಮುತ್ತಯ್ಯ ಭಾಗವತರ ದೃಷ್ಟಿ ಪೂರ್ಣವಾಗಿ ಸಂಗೀತದ ಕಡೆಗೆ ತಿರುಗಿತು. ಮಧುರೆಗೆ ಹೋಗಿ ಅಲ್ಲಿ ಒಂದು ಸಂಗೀತ ಶಾಲೆ ಪ್ರಾರಂಭಿಸಿದರು. ವಿದ್ಯಾರ್ಥಿಗಳಿಗೆ ಉಚಿತವಾಗಿ ಸಂಗೀತ ಶಿಕ್ಷಣ ಕೊಡಲಾರಂಭಿಸಿದರು. ಅನಂತರ ಮುತ್ತಯ್ಯ ಭಾಗವತರಿಗೆ ದೊರೆತ ಗೌರವಾದರಗಳು ಹಲವಾರು. ಎಟ್ಟಿಯಾಪುರದ ಮಹಾರಾಜರು ಇವರನ್ನು ತಮ್ಮ ಆಸ್ಥಾನಕ್ಕೆ ಆಹ್ವಾನಿಸಿ ಬಹುಮಾನಿಸಿದರು. ಅಣ್ಣಾಮಲೈ ವಿಶ್ವವಿದ್ಯಾಲಯದ ಸಂಗೀತ ಶಾಲೆಯ ಮುಖ್ಯಸ್ಥರಾಗಿ ಸೇವೆ ಸಲ್ಲಿಸುವ ಅವಕಾಶ ಇವರಿಗೆ ದೊರೆಯಿತು. ಹಿರಿಯ ಸಂಗೀತ ವಿದ್ವಾಂಸರೊಡನೆ ಪರಿಚಯ ಬೆಳೆಯಿತು. ಸ್ವಲ್ಪ ಕಾಲಾನಂತರ ಮುತ್ತಯ್ಯ ಭಾಗವತರು ನಮ್ಮ ರಾಷ್ಟ್ರದ ವಿವಿಧ ಭಾಗಗಳಲ್ಲೂ ರಂಗೂನಿನಲ್ಲೂ ಪ್ರವಾಸಮಾಡಿ 1927ರಲ್ಲಿ ಮೈಸೂರಿಗೆ ಆಗಮಿಸಿದರು. ಅಂದಿನ ಮೈಸೂರು ಮಹಾರಾಜರು ನಾಲ್ವಡಿ ಕೃಷ್ಣರಾಜ ಒಡೆಯರ ಸಮ್ಮುಖದಲ್ಲಿ ಹಾಡಿ ಮಹಾರಾಜರ ಮೆಚ್ಚುಗೆಗೆ ಪಾತ್ರರಾದರು. 'ಗಾಯಕ ಶಿಖಾಮಣಿ' ಎಂಬ ಬಿರುದು ದೊರೆಯಿತು. ಭಾಗವತರು ಮೈಸೂರು ರಾಜಾಸ್ಥಾನದ ಪ್ರಮುಖ ಗಾಯಕರಾಗಿ ಮೈಸೂರಿನಲ್ಲಿಯೇ ನೆಲೆಸಿದರು.



ದೇವಿ ಸಂಕೀರ್ತನೆ : ಮುತ್ತಯ್ಯ ಭಾಗವತರ್

ಮೈಸೂರಿನಲ್ಲಿದ್ದ ಕಾಲದಲ್ಲಿ ಮುತ್ತಯ್ಯ ಭಾಗವತರು ಕೈಗೂಡಿಸಿಕೊಂಡ ಮಹತ್ವದ ಸಾಧನೆ, ದೇವಿಯನ್ನು ಕುರಿತು ಅವರು ರೂಪಿಸಿದ ಕೀರ್ತನೆಗಳು. ಕನ್ನಡ ಭಾಷೆಯಲ್ಲಿ ಉತ್ತಮ ಸಂಗೀತ ಕೃತಿಗಳು ರಚಿತವಾಗಬೇಕೆಂಬ ನಾಲ್ವಡಿ ಕೃಷ್ಣರಾಜ ಒಡೆಯರ ಸೂಚನೆಯನ್ನು ಅಂಗೀಕರಿಸಿ ಮುತ್ತಯ್ಯ ಭಾಗವತರು ಈ ಕೀರ್ತನೆಗಳನ್ನು ರೂಪಿಸಿದರು. ಇವುಗಳಲ್ಲಿ ಸಂಸ್ಕೃತ ಪದಗಳು ಹೆಚ್ಚಾಗಿವೆಯಾದರೂ ಇವು ಕನ್ನಡ ಗೀತೆಗಳು. ಇವನ್ನು ರಚಿಸುವುದರಲ್ಲಿ ಭಾಗವತರಿಗೆ ನೆರವಾದವರು ಮೈಸೂರಿನ ವಿದ್ವಾಂಸರಾದ ದೇವೋತ್ತಮ ಜೋಯಿಸರು. ಮುತ್ತಯ್ಯ ಭಾಗವತರು ಈ ಕೀರ್ತನೆಗಳಿಗೆ ಜೋಡಿಸಿರುವ ಸಂಗೀತ ತುಂಬ ಆಕರ್ಷಕವಾದದ್ದು. ಸಾಂಪ್ರದಾಯಿಕ

ಸಂಗೀತದ ಅಚ್ಚುಕಟ್ಟಿನಲ್ಲೂ ಎಂಥ ರಂಜನೀಯತೆ ಸಾಧ್ಯ ಎಂಬುದನ್ನು ಈ ಗೀತೆಗಳು ಎತ್ತಿತೋರಿಸುತ್ತವೆ. ಇವುಗಳಲ್ಲಿ ಹಲವಾರು ಕೀರ್ತನೆಗಳು ತುಂಬ ಜನಪ್ರಿಯವಾಗಿವೆ. ಸಂಗೀತಗಾರರು ತಮ್ಮ ಕಚೇರಿಗಳಲ್ಲಿ ಇವನ್ನು ಹಾಡುವುದು ರೂಢಿಗೆ ಬಂದಿದೆ.

1936ರಲ್ಲಿ ಮುತ್ತಯ್ಯ ಭಾಗವತರು ತಿರುವಾಂಕೂರು ರಾಜಾಸ್ಥಾನದ ವಿದ್ವಾಂಸರಾಗಿ ನಿಯಮಿಸಲ್ಪಟ್ಟರು. ತಿರುವಾಂಕೂರಿನ ಅರಸರೂ ಸುಪ್ರಸಿದ್ಧ ವಾಗ್ಗೇಯಕಾರರೂ ಆದ ಸ್ವಾತಿ ತಿರುನಾಳ್ ಅವರ ಜ್ಞಾಪಕಾರ್ಥವಾಗಿ ತಿರುವನಂತಪುರದಲ್ಲಿ 'ಸ್ವಾತಿ ತಿರುನಾಳ್ ಮ್ಯೂಸಿಕ್ ಅಕಾಡೆಮಿ' 1938ರಲ್ಲಿ ಆರಂಭವಾದಾಗ ಅದರ ಅಧ್ಯಕ್ಷರಾಗುವ ಅವಕಾಶ ಮುತ್ತಯ್ಯ ಭಾಗವತರಿಗೆ ದೊರೆಯಿತು.

ತಮಿಳು ಭಾಷೆಯಲ್ಲಿ ಅವರು 'ಸಂಗೀತ ಕಲ್ಪದ್ರುಮ'ವನ್ನು ಬರೆದಿದ್ದಾರೆ. ತಿರುವಾಂಕೂರು ವಿಶ್ವವಿದ್ಯಾನಿಲಯವು 1943ರಲ್ಲಿ ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ಕೊಟ್ಟು ಸನ್ಮಾನಿಸಿತು.

1945 ಜೂನ್ 30ರಂದು ಮುತ್ತಯ್ಯ ಭಾಗವತರು ದೈವಾಧೀನರಾದರು.

ಮುತ್ತಯ್ಯ ಭಾಗವತರು ಸಂಸ್ಕೃತ, ತಮಿಳು, ತೆಲುಗು ಭಾಷೆಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಇವು ಭಕ್ತಿಪ್ರಧಾನವಾದುವು. ಹರಿಕೇಶ ಎಂಬುದು ಇವರ ಅಂಕಿತ. ಕರ್ಣಾಟಕ ಸಂಗೀತಾಭ್ಯಾಸಿಗಳಿಗೆ ತುಂಬ ಅನುಕೂಲವಾಗಿ ಒದಗುವ ಕೀರ್ತನೆಗಳು ಇವು.

ಕೀರ್ತನೆಗಳಷ್ಟೇ ಅಲ್ಲದೆ ವರ್ಣ, ದರು, ತಿಲ್ಲಾನ ಮುಂತಾದ ಇತರ ಗೇಯ ರಚನೆಗಳನ್ನೂ ಮುತ್ತಯ್ಯ ಭಾಗವತರು ಮಾಡಿದ್ದಾರೆ. ಮೋಹನ ಕಲ್ಯಾಣ ರಾಗದ 'ಭುವನೇಶ್ವರಿಯ ನೆನೆ ಮಾನಸವೆ', ವಿಜಯನಾಗರಿ ರಾಗದ 'ವಿಜಯಾಂಬಿಕೆ ವಿಮಲಾತ್ಮಿಕೆ', ಕಾಂಬೋಧಿಯ 'ರತ್ನ ಕಂಚುಕಧಾರಿಣಿ ಅಂಬಾ', ಉರ್ಮಿಕರಾಗದ 'ಕಾಳರಾತ್ರಿ ಸ್ವರೂಪಿಣಿ', ಅಮೃತವರ್ಷಿಣಿಯ 'ಸುಧಾಮಯಿ—ಸುಧಾನಿಧಿ' ಇವು ಅವರ ಅತ್ಯಂತ ಜನಪ್ರಿಯ ಕೃತಿಗಳಲ್ಲಿ ಕೆಲವು.

## ಮುತ್ತುಸ್ವಾಮಿ ದೀಕ್ಷಿತ

ಬೇಸಿಗೆಯ ಕಾಲ ಮಟ ಮಟ ಮಧ್ಯಾಹ್ನ ; ನೀರಿಲ್ಲದ ನೆರಳಿಲ್ಲದ ಹಾದಿ ; ಅದರಲ್ಲಿ ಕೆಲವು ಮಂದಿ ಪ್ರಯಾಣಮಾಡುತ್ತಿದ್ದಾರೆ. ಅವರಲ್ಲೊಬ್ಬರಿಗೆ ತುಂಬ ಆಯಾಸವಾಯಿತು. ಮರದ ನೆರಳಿನಲ್ಲಾದರೂ ಸ್ವಲ್ಪ ಕಾಲ ವಿಶ್ರಮಿಸಿಕೊಂಡು ಮುಂದುವರಿಯೋಣವೆಂದುಕೊಂಡರು. ಅಲ್ಲೇ ಸ್ವಲ್ಪ ದೂರದಲ್ಲಿ ಊರಮುಂದಿದ್ದ ತೋಟದ ಮರದಡಿಯಲ್ಲಿ ಕುಳಿತರು. ತೇಜಸ್ವಿಯಾದ ಈ ವ್ಯಕ್ತಿ ಆಯಾಸಗೊಂಡಿರುವುದನ್ನು ಕಂಡ ಆ ತೋಟದ ಮಾಲಿಕ ಅವರಿಗೆ ಕುಡಿಯಲು ನೀರು ತರಿಸಿಕೊಟ್ಟು ಉಪಚರಿಸಿದ. ನೀರು ಕುಡಿದು ಸುಧಾರಿಸಿಕೊಂಡ ಮೇಲೆ ಆತ ಕೇಳಿದರು : "ಇದೇನು ಇಲ್ಲಿ ಸುತ್ತಮುತ್ತ ಎಲ್ಲೂ ನೀರು ಇಲ್ಲವಲ್ಲ". "ಈ ಪ್ರದೇಶದಲ್ಲಿ ನೀರಿನ ಬರ, ಜನ ತುಂಬ ಕಷ್ಟಕ್ಕೆ ಒಳಗಾಗಿದ್ದಾರೆ" ಎಂದು ಉತ್ತರ ಬಂತು. ಒಡನೆಯೇ ಆ ತೇಜಸ್ವಿ ತನಗೆ ನೀರು ತಂದುಕೊಟ್ಟಾತನನ್ನು ಮುಂದಿಟ್ಟುಕೊಂಡು. ಆ ಊರಿನ ದೇವಿಯ ದೇವಾಲಯಕ್ಕೆ ಹೋದರು. ಅಲ್ಲಿ ಸ್ವಲ್ಪ ಹೊತ್ತು ದೇವಿಯ ಧ್ಯಾನಮಾಡಿ ತಾವೇ ಕಲ್ಪಿಸಿಕೊಂಡ ಅಮೃತವರ್ಷಿಣಿ ಎಂಬ ರಾಗದಲ್ಲಿ 'ಆನಂದಾಮೃತವರ್ಷಿಣೀ' ಎಂಬ ಕೀರ್ತನೆಯನ್ನು ಹಾಡಿದರು. ಶುಭ್ರವಾಗಿದ್ದ ಆಕಾಶದಲ್ಲಿ ಕಾರ್ಮೋಡಗಳು ಕೂಡಿದುವು. ಧಾರಾಕಾರವಾಗಿ ಮಳೆ ಸುರಿಯಿತು.



ರಾಗ – ಭಾವ : ಮುತ್ತುಸ್ವಾಮಿ ದೀಕ್ಷಿತ

ಇದೊಂದು ಪ್ರಚಲಿತ ಕಥೆ. ಹೀಗೆ ಬೆಂದ ಭೂಮಿಯನ್ನು ಮಳೆಯಿಂದ ತಣಿಸಿದ ಪವಾಡಗಾರ ಕರ್ಣಾಟಕ ಸಂಗೀತರಂಗದ ತ್ರಿಮೂರ್ತಿಗಳಲ್ಲೊಬ್ಬರೆಂದು ಪ್ರಸಿದ್ಧರಾದ ಮುತ್ತುಸ್ವಾಮಿ ದೀಕ್ಷಿತರು. ಇದೊಂದೇ ಅಲ್ಲ, ದೀಕ್ಷಿತರು ಇನ್ನೂ ಹಲವಾರು ಪವಾಡಗಳನ್ನು ಮೆರೆದರೆಂದು ಹೇಳಿಕೆಗಳಿವೆ.

ಮುತ್ತುಸ್ವಾಮಿ ದೀಕ್ಷಿತರ ಜನನದ ಬಗೆಗೂ ಒಂದು ಕಥೆ ಇದೆ. ಅವರ ತಂದೆ ರಾಮಸ್ವಾಮಿ ದೀಕ್ಷಿತರು ತಿರುವಾರೂರಿನಲ್ಲಿದ್ದವರು ; ಅಲ್ಲಿನ ತ್ಯಾಗರಾಜಸ್ವಾಮಿ ದೇವಾಲಯದೊಡನೆ ನಿಕಟ ಸಂಬಂಧ ಇಟ್ಟುಕೊಂಡಿದ್ದವರು. ಘನ ವಿದ್ವಾಂಸರು. ಜೊತೆಗೆ ಖ್ಯಾತ ಸಂಗೀತಗಾರರು ಹಾಗೂ ವಾಗ್ಗೇಯಕಾರರು. ಹಂಸಧ್ವನಿ ರಾಗವನ್ನು ರೂಪಿಸಿದವರು. ಅವರಿಗೆ ಬಹಳ ಕಾಲದವರೆಗೆ ಮಕ್ಕಳಾಗಲಿಲ್ಲ. ರಾಮಸ್ವಾಮಿ ದೀಕ್ಷಿತರೂ ಅವರ ಪತ್ನಿ ಸುಬ್ಬುಲಕ್ಷ್ಮಿ ಅಮ್ಮಾಳ್ ಅವರೂ ವೈದೀಶ್ವರ ಕೋಯಿಲ್ ಎಂಬ ಕ್ಷೇತ್ರದ ಬಾಲಾಂಬಿಕಾ ದೇವಿಯನ್ನು ನಲವತ್ತು ದಿನ ಆರಾಧಿಸಿದರು. ಕೊನೆಯ ದಿನ ರಾತ್ರಿ ದೇವಿಯು ದೀಕ್ಷಿತರ ಕನಸಿನಲ್ಲಿ ಕಾಣಿಸಿಕೊಂಡು ಮುತ್ತಿನ ಹಾರವೊಂದನ್ನು ಕೊಟ್ಟಂತಾಯಿತು. ದೇವಿಯ ಈ ಅನುಗ್ರಹದ ಫಲವಾಗಿ ಒಂದು ವರ್ಷದೊಳಗಾಗಿ. 1775ರಲ್ಲಿ ತಿರುವಾರೂರಿನಲ್ಲಿ. ರಾಮಸ್ವಾಮಿಯವರಿಗೆ ಪುತ್ರೋತ್ಸವವಾಯಿತು. ತ್ಯಾಗರಾಜಸ್ವಾಮಿಯ ವಸಂತೋತ್ಸವ ನಡೆಯುತ್ತಿದ್ದ ಕಾಲದಲ್ಲಿ ದೇವಿಕೊಟ್ಟ ಮುತ್ತಿನ ಹಾರದ ಪ್ರಸಾದದ ಫಲವಾಗಿ ಹಾಗೂ ಕುಮಾರಸ್ವಾಮಿ ಹುಟ್ಟಿದ ಕೃತಿಕಾ ನಕ್ಷತ್ರದಲ್ಲಿ ಹುಟ್ಟಿದ್ದರಿಂದ, ರಾಮಸ್ವಾಮಿ ದೀಕ್ಷಿತರು ತಮ್ಮ ಈ ಮಗನಿಗೆ ಮುತ್ತು ಕುಮಾರಸ್ವಾಮಿ ಎಂದು ಹೆಸರಿಟ್ಟರು. ಇದೇ ಮುಂದೆ ಸಂಕ್ಷಿಪ್ತವಾಗಿ ಮುತ್ತುಸ್ವಾಮಿ ಆಯಿತು.

ಮುತ್ತುಸ್ವಾಮಿ ಹುಟ್ಟಿದ ಅನಂತರ ರಾಮಸ್ವಾಮಿಯವರಿಗೆ ಚಿನ್ನಸ್ವಾಮಿ, ಬಾಲುಸ್ವಾಮಿ ಎಂಬ ಇನ್ನಿಬ್ಬರು ಗಂಡು ಮಕ್ಕಳೂ ಬಾಲಾಂಬಿಕೆ ಎಂಬೊಬ್ಬ ಮಗಳೂ ಹುಟ್ಟಿದರು.

ಮುತ್ತುಸ್ವಾಮಿ ತುಂಬ ಚುರುಕು ಬುದ್ಧಿಯ ಹುಡುಗ. ಅಧ್ಯಯನ ದಲ್ಲಂತೂ ಅವನಿಗೆ ಅಪರಿಮಿತ ಆಸಕ್ತಿ. ಹದಿನಾರು ವಯಸ್ಸು ತುಂಬುವ ದರೊಳಗಾಗಿ ಸಂಸ್ಕೃತ, ಜೋತಿಷ್ಯ, ಸಾಹಿತ್ಯ, ಮಂತ್ರಶಾಸ್ತ್ರಗಳಲ್ಲಿ ಪಾಂಡಿತ್ಯ ಗಳಿಸಿಕೊಂಡ. ಸಂಗೀತ ಕಲೆ, ಶಾಸ್ತ್ರಗಳೆರಡರಲ್ಲೂ ಪ್ರವೀಣರಾಗಿದ್ದ ತಮ್ಮ ತಂದೆ ರಾಮಸ್ವಾಮಿ ದೀಕ್ಷಿತರಲ್ಲಿ ಇವೆರಡನ್ನೂ ಅಭ್ಯಾಸಮಾಡಿ ಹಾಡುಗಾರಿಕೆ, ವೀಣಾವಾದನಗಳಲ್ಲಿ ಪ್ರಾವೀಣ್ಯ ಗಳಿಸಿಕೊಂಡ.

ಮುತ್ತುಸ್ವಾಮಿ ಇನ್ನೂ ಚಿಕ್ಕವಯಸ್ಸಿನವನಾಗಿದ್ದಾಗ ಅವರ ತಂದೆಗೆ ಮುತ್ತುಕೃಷ್ಣ ಮೊದಲಿಯಾರರ ಪರಿಚಯವಾಯಿತು. ರಾಮಸ್ವಾಮಿ ಯವರ ವಿದ್ವತ್ತಿನಿಂದ ಆಕರ್ಷಿತನಾದ ಆತ ರಾಮಸ್ವಾಮಿ ದೀಕ್ಷಿತರನ್ನು ತನ್ನ ಸ್ಥಳವಾದ ಮನಾಲಿಗೆ ಬಂದು ನೆಲೆಸುವಂತೆ ಆಹ್ವಾನಿಸಿದ. ಅವರು ಆಮಂತ್ರಣವನ್ನು ಸ್ವೀಕರಿಸಿ ಮನಾಲಿಗೆ ಹೋದರು. ಆತ ಗತಿಸಿದ ಮೇಲೆಯೂ ಅಲ್ಲಿಯೇ ಇದ್ದರು. ಆತನ ಮಗ ದೀಕ್ಷಿತರನ್ನು ಗೌರವ ದಿಂದಲೇ ನಡೆಸಿಕೊಳ್ಳುತ್ತಿದ್ದ.

ಈತ ಕಾರ್ಯಾರ್ಥವಾಗಿ ಮದರಾಸಿಗೆ ಹೋದಾಗಲೆಲ್ಲ ದೀಕ್ಷಿತರ ಕುಟುಂಬದವರಲ್ಲಿ ಯಾರನ್ನಾದರೂ ತನ್ನೊಡನೆ ಕರೆದುಕೊಂಡು ಹೋಗು ತ್ತಿದ್ದ. ಅಗ ಈಸ್ಟ್ಇಂಡಿಯಾ ಕಂಪನಿಯ ಕಾಲ. ಪಾಶ್ಚಾತ್ಯ ಸಂಗೀತ ಅಲ್ಲಿ ಕೇಳಿಬರುತ್ತಿತ್ತು. ಹೀಗೆ ಮುತ್ತುಸ್ವಾಮಿ ದೀಕ್ಷಿತರಿಗೂ ಅವರ ತಮ್ಮ ಬಾಲುಸ್ವಾಮಿಗೂ ಪಾಶ್ಚಾತ್ಯ ಸಂಗೀತದ ಪರಿಚಯವಾಯಿತು. ಬಾಲುಸ್ವಾಮಿ ಪಾಶ್ಚಾತ್ಯ ಸಂಗೀತಗಾರನೊಬ್ಬನಿಂದ ಪಿಟೀಲು ವಾದನವನ್ನು ಕಲಿತುಕೊಂಡ ; ಮುತ್ತುಸ್ವಾಮಿ ದೀಕ್ಷಿತರೂ ಈ ವಾದ್ಯವನ್ನು ಕಲಿತು ಅದನ್ನು ಕರ್ಣಾಟಕ ಸಂಗೀತಕ್ಕೆ ಪಳಗಿಸಿಕೊಂಡರು, ತಮ್ಮ ಶಿಷ್ಯರಿಗೆ ಹೇಳಿ ಕೊಟ್ಟರು. ಈಗ ಪಿಟೀಲು ಕರ್ಣಾಟಕ ಸಂಗೀತದಲ್ಲಿ ಪಕ್ಕವಾದ್ಯವಾಗಿ ಅನಿವಾರ್ಯವಾಗಿದೆ ; 'ತನಿ' ವಾದ್ಯವಾಗಿಯೂ ಪ್ರಸಿದ್ಧವಾಗಿದೆ.

ರಾಮಸ್ವಾಮಿ ದೀಕ್ಷಿತರ ಗುರುಗಳಾದ ಚಿದಂಬರನಾಥರು ಒಮ್ಮೆ ಮನಾಲಿಗೆ ಬಂದಿದ್ದಾಗ ಮುತ್ತುಸ್ವಾಮಿಯವರ ಸಂಗೀತ, ಸಾಹಿತ್ಯ, ಶಾಸ್ತ್ರ ಪ್ರೌಢಿಮೆಯಿಂದ ಆಕರ್ಷಿತರಾಗಿ, ಅವರನ್ನು ತಮ್ಮೊಡನೆ ಕಾಶಿಗೆ ಕರೆದು ಕೊಂಡು ಹೋದರು. ಅಲ್ಲಿದ್ದ 5–6 ವರ್ಷಗಳ ಅವಧಿಯಲ್ಲಿ ದೀಕ್ಷಿತರು ಉತ್ತರಾದಿ ಸಂಗೀತವನ್ನು ಅಭ್ಯಾಸಮಾಡಿದರು. ಚಿದಂಬರನಾಥರಿಂದ ಶ್ರೀವಿದ್ಯೆಯ ಉಪದೇಶ ಪಡೆದರು. ಗುರುಗಳ ಅವಸಾನಾನಂತರ ಮನಾಲಿಗೆ ಹಿಂದಿರುಗಿದರು.

ಅಲ್ಲೂ ಗುರುಗಳ ಯೋಚನೆಯೇ ದೀಕ್ಷಿತರ ಮನಸ್ಸನ್ನು ತುಂಬಿತ್ತು. ತಮ್ಮ ಗುರುಗಳು ಸುಬ್ರಹ್ಮಣ್ಯಸ್ವಾಮಿಯ ಭಕ್ತರೆಂಬುದನ್ನು ನೆನೆದು 40 ದಿನಗಳ ಕಾಲ ಸುಬ್ರಹ್ಮಣ್ಯೇಶ್ವರನ ಸೇವೆಮಾಡಬೇಕೆಂದು ತಿರುತ್ತಣಿ ಬೆಟ್ಟಕ್ಕೆ ಹೋದರು. ಅಲ್ಲಿಯೇ ಸುಬ್ರಹ್ಮಣ್ಯನನ್ನು ಕುರಿತು ಕೃತಿರಚನೆ ಮಾಡಿ ಹಾಡಿದರು. ಸುಬ್ರಹ್ಮಣ್ಯನ ಇನ್ನೊಂದು ಹೆಸರಾದ 'ಗುಹ' ಎಂಬ ಹೆಸರನ್ನವಲಂಬಿಸಿ ತಮ್ಮ ಕೃತಿಗಳಿಗೆ 'ಗುರುಗುಹ' ಎಂಬ ಅಂಕಿತ ಇಟ್ಟುಕೊಂಡರು.

ನಮ್ಮ ವಾಗ್ಗೇಯಕಾರರಲ್ಲಿ ಮುತ್ತುಸ್ವಾಮಿ ದೀಕ್ಷಿತರಷ್ಟು ಕ್ಷೇತ್ರ ಯಾತ್ರೆ ಮಾಡಿದವರು ಯಾರೂಇಲ್ಲ ಇವೆನ್ನಬಹುದು. ಬೇರೆ ಬೇರೆ ಪವಿತ್ರ ಸ್ಥಳಗಳಿಗೆ ಹೋದಾಗಲೆಲ್ಲ ಹರಿ, ಹರ, ದೇವಿ ಇಂಥ ಯಾವ ಭೇದವೂ ಇಲ್ಲದೆ ಅಲ್ಲಿನ ಎಲ್ಲ ಪ್ರಸಿದ್ಧ ದೇವರನ್ನು ಕುರಿತು ಕೀರ್ತನೆಗಳನ್ನು ರಚಿಸಿ ದ್ದಾರೆ. ಈ ಕೀರ್ತನೆಗಳಲ್ಲಿ ಬರುವ ವಿವರಗಳಿಂದ ನಾವು ಆಯಾ ಕ್ಷೇತ್ರ ದೇವತೆಗಳ ವೈಶಿಷ್ಟ್ಯವನ್ನು ಅರಿತುಕೊಳ್ಳಬಹುದಾಗಿದೆ.

ಮುತ್ತುಸ್ವಾಮಿ ದೀಕ್ಷಿತರು ತಿರುವಾರೂರಿನಲ್ಲಿ ಕೆಲ ಕಾಲವಿದ್ದು, ಬಳಿಕ ತಮ್ಮ ಕೆಲ ಶಿಷ್ಯರ ಪ್ರಾರ್ಥನೆಯಂತೆ, ತಂಜಾವೂರಿಗೆ ಹೋಗಿ ನೆಲೆಸಿದರು. ಆಮೇಲೆ ಸ್ವಲ್ಪಕಾಲ ಮತ್ತೆ ತಿರುವಾರೂರಿನಲ್ಲಿದ್ದರು. ಈ ಹೊತ್ತಿಗಾಗಲೇ ಮಧುರೆಗೆ ಹೋಗಿ ನೆಲೆಸಿದ್ದ ಅವರ ತಮ್ಮಂದಿರಲ್ಲಿ ಒಬ್ಬನಾದ ಚಿನ್ನಸ್ವಾಮಿ ತೀರಿಕೊಂಡ ಸುದ್ದಿ ಬಂತು. ಉಳಿದಿರುವ ತಮ್ಮ ಬಾಲುಸ್ವಾಮಿಯನ್ನಾದರೂ ನೋಡಿಕೊಂಡು ಬರೋಣವೆಂದು ಮಧುರೆಗೆ ಹೋದರು. ಅಣ್ಣನ ವಿಯೋಗದಿಂದ ದುಃಖಿತನಾಗಿದ್ದ ಬಾಲುಸ್ವಾಮಿ ಆ ಹೊತ್ತಿಗೆ ರಾಮೇಶ್ವರಕ್ಕೆ ಯಾತ್ರೆಹೋಗಿದ್ದ. ದೀಕ್ಷಿತರು ಮಧುರೆಯಲ್ಲಿ ಕೆಲ ಕಾಲ ವಿದ್ದು ಅವನ ಬರುವಿಗಾಗಿ ಕಾದರು. ಬರದಿರಲು ದೀಕ್ಷಿತರು ರಾಮೇಶ್ವರಕ್ಕೆ ಹೋದರು. ಆ ಹೊತ್ತಿಗೆ ಬಾಲುಸ್ವಾಮಿ ರಾಮೇಶ್ವರ ಬಿಟ್ಟಿದ್ದ. ಯಾತ್ರೆ ಗಾಗಿ ಅಲ್ಲಿಗೆ ಬಂದಿದ್ದ ಎಟ್ಟಯಾಪುರದ ಅರಸು ಬಾಲುಸ್ವಾಮಿಯ ಸಂಗೀತ ದಿಂದ ಮೋಹಿತನಾಗಿ ಆತನನ್ನು ತನ್ನೊಡನೆ ಕರೆದುಕೊಂಡು ಹೋದನೆಂದು ತಿಳಿಯಿತು. ದೀಕ್ಷಿತರು ಅಲ್ಲಿಗೇ ಹೊರಟರು. ಅವರು ಅಮೃತ ವರ್ಷಿಣಿ ರಾಗವನ್ನು ರೂಪಿಸಿ ಮಳೆಬರಿಸಿದ ಕಥೆ ಆ ಪ್ರಯಾಣಕಾಲದ್ದು.

ಎಟ್ಟಯಾಪುರದ ಮಹಾರಾಜ ದೀಕ್ಷಿತರನ್ನು ಗೌರವದಿಂದ ಕಂಡು ಅಲ್ಲಿಯೇ ಉಳಿದುಕೊಳ್ಳುವಂತೆ ಕೇಳಿಕೊಂಡ. ದೀಕ್ಷಿತರು ಅದಕ್ಕೆ ಒಪ್ಪಿ ದರು. ತಪೋನಿಷ್ಠರಾಗಿರುತ್ತ ಶಿಷ್ಯರಿಗೆ ವಿದ್ಯಾದಾನ ಮಾಡಿದರು. ತಮ್ಮ ಅಂತ್ಯಕಾಲ ಸಮೀಪಿಸಿದ್ದನ್ನು ಅರಿತು, ಆ ದಿನ ಬೆಳಗ್ಗೆ ತಮ್ಮ ಅನುಷ್ಠಾನ ಗಳನ್ನೆಲ್ಲ ಮುಗಿಸಿ, ತಮ್ಮ ಶಿಷ್ಯರು ದೇವೀ ಕೀರ್ತನೆಗಳನ್ನು ಹಾಡುತ್ತಿರು ವುದನ್ನು ಕೇಳುತ್ತ ಕೇಳುತ್ತಲೇ ನಿಧನ ಹೊಂದಿದರು. ಅದು 1834ನೆಯ ವರ್ಷದ ದೀಪಾವಳಿಯ ಹಿಂದಿನ ದಿನ ; ಆಗ ಅವರಿಗೆ 59 ವರ್ಷ ವಯಸ್ಸು.

ಮುತ್ತುಸ್ವಾಮಿ ದೀಕ್ಷಿತರು ಅಪ್ರತಿಮ ದೈವಭಕ್ತರು. ಅದರಲ್ಲೂ ದೇವೀ ಆರಾಧನೆಯಲ್ಲಿ ಅವರಿಗೆ ಅಪಾರ ಶ್ರದ್ಧೆ ಇತ್ತು.

ತ್ಯಾಗರಾಜರು ಮತ್ತು ಶಾಮಶಾಸ್ತ್ರಿಗಳ ಸಮಕಾಲೀನರಾಗಿದ್ದ ದೀಕ್ಷಿತರು ಅವರಿಬ್ಬರನ್ನೂ ಕಂಡಿದ್ದರು. ತಂಜಾವೂರಿನಲ್ಲಿ ಕೆಲ ಕಾಲ ಶಾಮಶಾಸ್ತ್ರಿಗಳ ನೆರೆಯವರಾಗಿಯೇ ಬಾಳಿದರು. ಅವರ ಮಗ ಸುಬ್ಬರಾಯಶಾಸ್ತ್ರಿಗೆ ಸಂಗೀತ ಪಾಠ ಹೇಳಿದರು.

ದೀಕ್ಷಿತರ ಕೀರ್ತನೆಗಳು ರಾಗ–ಭಾವ ಪ್ರಧಾನವಾದುವು, ಪ್ರಾರ್ಥನಾ ರೂಪವಾದುವು. ಸಾಮಾನ್ಯವಾಗಿ ಉಪಯೋಗದಲ್ಲಿಲ್ಲದಿದ್ದ ಅನೇಕ ಅಪೂರ್ವ ರಾಗಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಕೆಲವು ಕೃತಿ ಗಳಲ್ಲಿ ಹಿಂದೂಸ್ತಾನಿ ಸಂಗೀತದ ಪ್ರಭಾವವನ್ನೂ ಕಾಣಬಹುದು.

ಅವರ ಎಲ್ಲ ಕೀರ್ತನೆಗಳೂ ಸುಂದರವಾದುವು. ಕೆಲವಂತೂ ತುಂಬ ಜನಪ್ರಿಯವಾಗಿವೆ. ದೀಕ್ಷಿತರ ಕೃತಿಗಳಲ್ಲಿ ಅವರ ಸಾಹಿತ್ಯ ಪಾಂಡಿತ್ಯ ವನ್ನೂ ಕಾಣಬಹುದು.

## ಮುದವೀಡು ಕೃಷ್ಣರಾಯ

**1947**ರಲ್ಲಿ ನಮಗೆ ಸ್ವಾತಂತ್ರ್ಯ ದೊರೆಯುವುದಕ್ಕೆ ಮುಂಚೆ 2–3 ದಶಕಗಳ ಕಾಲ ಸ್ವಾತಂತ್ರ್ಯ ಸಾಧನೆಗಾಗಿ ಹೋರಾಟ ನಡೆಯಿತಷ್ಟೆ. ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕ, ಮಹಾತ್ಮಾಗಾಂಧಿ, ಜವಾಹರಲಾಲ್ ನೆಹರೂ, ವಲ್ಲಭಭಾಯಿ ಪಟೇಲ್ ಮುಂತಾದವರು



ಕನ್ನಡ ಗರ್ಜನೆ : ಮುದವೀಡು

ಆ ಕಾಲದ ಅತ್ಯಂತ ಜನಪ್ರಿಯ ನಾಯಕರು. ಇವರಲ್ಲಿ ಯಾರೇ ಆಗಲೀ ಕನ್ನಡ ನಾಡಿಗೆ ಬಂದರೆ ಅವರೊಡನೆ ಒಬ್ಬ ವ್ಯಕ್ತಿ ತಪ್ಪದೇ ಇರುತ್ತಿದ್ದರು. ಆ ನಾಯಕರು ಇಂಗ್ಲಿಷ್, ಹಿಂದೀ, ಮರಾಠಿ ಈ ಮೂರರಲ್ಲಿ ಯಾವ ಭಾಷೆಯಲ್ಲಿ ಭಾಷಣ ಮಾಡಲಿ, ಅದನ್ನು ಆಗಿಂದಾಗಲೇ ಕನ್ನಡಕ್ಕೆ ಅನುವಾದಮಾಡಿ ಆ ವ್ಯಕ್ತಿ ಹೇಳುತ್ತಿದ್ದರು. ಹೀಗೆ ನಮ್ಮ ರಾಷ್ಟ್ರ ನಾಯಕರ ಕನ್ನಡ ಕಂಠವಾಗಿದ್ದವರು, ಮುದವೀಡು ಕೃಷ್ಣರಾಯರು. ಮುದವೀಡು ಅವರು ಹುಟ್ಟಿದ್ದು 1874ನೆಯ ಫೆಬ್ರುವರಿ 24ನೆಯ ದಿನಾಂಕ, ಬಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ. ತಂದೆ ಹನುಮಂತ ರಾಯರು ; ತಾಯಿ ಗಂಗಾಬಾಯಿ. ಬಾಲ್ಯದಲ್ಲಿಯೇ ತಬ್ಬಲಿಯಾದ ಕೃಷ್ಣರಾಯರನ್ನು ಅವರ ಚಿಕ್ಕಮ್ಮ ಸಾಕಿದರು.

ಮುದವೀಡು ಅವರ ಪ್ರಾಥಮಿಕ ವಿದ್ಯಾಭ್ಯಾಸ ನಡೆದದ್ದು ಮರಾಠಿಯಲ್ಲಿ, ಕಾರವಾರದಲ್ಲಿ. ಅನಂತರ ಧಾರವಾಡಕ್ಕೆ ಬಂದು ಕನ್ನಡ ಕಲಿತು ಮಾಧ್ಯಮಿಕ ಶಾಲೆಯನ್ನು ಸೇರಿದರು. ಮೆಟ್ರಿಕ್ಯುಲೇಷನ್ ತರಗತಿಯವರೆಗೆ ಅಭ್ಯಾಸಮಾಡಿದರು. ಆ ಹೊತ್ತಿಗೆ ನಮ್ಮ ರಾಷ್ಟ್ರದ ರಾಜಕೀಯ ಚಳುವಳಿಯಲ್ಲಿ ತೀವ್ರಗಾಮಿಗಳ ಉದಯವಾಗಿತ್ತು. ಬಾಲಗಂಗಾಧರ ತಿಲಕರು ಕಾಂಗ್ರೆಸಿಗೆ ಸೇರಿ ಆರು ವರ್ಷ ಆಗಿತ್ತು. ಅವರು ವರ್ಚಸ್ವೀ ನಾಯಕರು. ಈ ವಾತಾವರಣ ಮುದವೀಡು ಅವರ ಮೇಲೂ ಪ್ರಭಾವ ಬೀರಿತು. ಪರೀಕ್ಷೆಗೆ ಕಟ್ಟಲೆಂದು ಹಣ ತೆಗೆದುಕೊಂಡು ಪುಣೆಯಲ್ಲಿ ಸಮಾವೇಶಗೊಂಡ ರಾಜಕೀಯ ಸಮ್ಮೇಳನಕ್ಕೆ ಹೋದರು ; ಅಲ್ಲಿ ತಿಲಕರ ಭಾಷಣ ಕೇಳಿದರು. ಅವರ ವಿಚಾರಧಾರೆ ಇವರಿಗೆ ಮೆಚ್ಚುಗೆಯಾಯಿತು. ಅವರ ಪ್ರಭಾವಕ್ಕೊಳಗಾಗಿ ಮುದವೀಡು ರಾಜಕೀಯ ರಂಗಕ್ಕಿಳಿದರು. ಇದು ನಡೆದದ್ದು 1895ರಲ್ಲಿ.

ಮುದವೀಡು ಅವರಿಗೆ ರಾಜಕೀಯ ದೀಕ್ಷೆ ಕೊಟ್ಟವರು ತಿಲಕರು, ಅವರಿಗೆ ಕನ್ನಡ ದೀಕ್ಷೆ ಕೊಟ್ಟವರು ಅವರ ಚಿಕ್ಕಮ್ಮನ ಮಗ ರೊದ್ದ ಶ್ರೀನಿವಾಸರಾಯರು. ಅವರ ಪ್ರಭಾವದಿಂದ ಮುದವೀಡು ಅವರಲ್ಲಿ ಕನ್ನಡದ ಮೇಲೆ ಉಜ್ವಲ ಅಭಿಮಾನ ಬೆಳೆಯಿತು. ಉತ್ತರ ಕರ್ನಾಟಕದಲ್ಲಿ ಪ್ರಬಲವಾಗಿದ್ದ ಮರಾಠಿ ಪ್ರಭಾವವನ್ನು ತಪ್ಪಿಸಿ, ಜನರಲ್ಲಿ ಕನ್ನಡದ ಬಗೆಗೆ ಆಸಕ್ತಿ, ಅಭಿಮಾನಗಳನ್ನು ಪ್ರಚೋದಿಸಲು ಅವರು ನಿರಂತರವಾಗಿ ಶ್ರಮಿಸಿದರು. ಕನ್ನಡನಾಡಿನ ಏಕೀಕರಣ ಅವರ ಜಪವಾಯಿತು.

ಮುದವೀಡು ಅವರು ಕನ್ನಡ ನಾಡಿಗೆ ಸಲ್ಲಿಸಿರುವ ಸೇವೆ ಬಹುಮುಖವಾದದ್ದು. ಹಾಗೆಯೇ ರಾಷ್ಟ್ರದ ಸ್ವಾತಂತ್ರ್ಯ ಸಮರದಲ್ಲಿ ಅವರು ವಹಿಸಿದ ಪಾತ್ರವೂ ಗಣನೀಯವಾದದ್ದು. ಆ ಆಂದೋಲನಗಳಲ್ಲಿ ಅವರು ಅನೇಕ ಬಾರಿ ಭಾಗವಹಿಸಿದರು. ಇದಲ್ಲದೆ, 'ಕರ್ನಾಟಕ ವೃತ್ತ', 'ಧನಂಜಯ' ಪತ್ರಿಕೆಗಳನ್ನು ನಡೆಸಿ, ಅವುಗಳ ಮೂಲಕ ಜನರಲ್ಲಿ ರಾಜಕೀಯ ಜಾಗೃತಿಯನ್ನುಂಟುಮಾಡಿದರು. 'ಧಾರವಾಡ ವೃತ್ತ' ಎಂಬ ಮರಾಠಿ ಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದರು. ಕನ್ನಡ ಪತ್ರಿಕೋದ್ಯಮವನ್ನು ಬೆಳೆಸಲು ಶ್ರಮಿಸಿದರು.

ಉತ್ತರ ಕರ್ನಾಟಕದಲ್ಲಿ ಮರಾಠಿ ನಾಟಕಗಳು ಮೆರೆಯುತ್ತಿದ್ದ ಕಾಲದಲ್ಲಿ, ಕನ್ನಡ ರಂಗಭೂಮಿಯನ್ನು ಕಟ್ಟುವ ಪ್ರಯತ್ನ ನಡೆಸಿದವರಲ್ಲಿ ಮುದವೀಡು ಅವರೂ ಒಬ್ಬರು. 1904ರಲ್ಲಿ 'ಭಾರತ ಕಲೋತ್ತೇಜನ ನಾಟಕ ಸಮಾಜ' ವನ್ನು ಆರಂಭಿಸಿ ಕನ್ನಡ ನಾಟಕ ಪ್ರದರ್ಶನಗಳನ್ನು ಏರ್ಪಡಿಸಿದರು. ನಾಟಕ, ಸಂಗೀತಾದಿ ಲಲಿತಕಲೆಗಳಲ್ಲಿ ಮುದವೀಡು ಅವರಿಗಿದ್ದ ಆಸಕ್ತಿ ಅಪಾರವಾದದ್ದು. ಅವರು ನಾಟಕ ಪ್ರದರ್ಶನಗಳಲ್ಲಿ ಭಾಗವಹಿಸುತ್ತಿದ್ದುದು ಮಾತ್ರವಲ್ಲದೆ, ಹಾರ್ಮೋನಿಯಂ ಅನ್ನೂ ಬಾರಿಸುತ್ತಿದ್ದರು. ತಾವೇ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದರು. ಕನ್ನಡ ಚಲಚ್ಚಿತ್ರ 'ಚಿರಂಜೀವಿ' ಯ ನಿರ್ಮಾಣದಲ್ಲಿ ಅವರು ಭಾಗವಹಿಸಿದ್ದರು ; ಅದರಲ್ಲಿ ಅಭಿನಯಿಸಿದರು. ಧಾರವಾಡದಲ್ಲಿ ಜರಗಿದ ಮೊಟ್ಟಮೊದಲ ಕನ್ನಡ ನಾಟ್ಯಕಲಾ ಪರಿಷತ್ತಿನ ಸ್ವಾಗತಾಧ್ಯಕ್ಷರಾಗಿ, ಆ ಸಮ್ಮೇಳನದ ಯಶಸ್ಸಿಗೆ ಕಾರಣರಾದರು. ಮುದವೀಡು ಅವರು ಕನ್ನಡದಲ್ಲಿ ಕೆಲವು ಗ್ರಂಥಗಳನ್ನೂ ಬರೆದಿದ್ದಾರೆ. 'ಚಿತ್ತೂರು ಮುತ್ತಿಗೆ', 'ವಿಕ್ರಮ ಶಶಿಕಲಾ', 'ಪ್ರೇಮಭಂಗ', 'ರಾಮರಾಜ್ಯ ವಿಯೋಗ' ಇವರ ಕೃತಿಗಳು.

ಕನ್ನಡ ನಾಡಿನಲ್ಲಿ ಮುದವೀಡು ಕೃಷ್ಣರಾಯರು ಪ್ರಸಿದ್ಧರಾದದ್ದು ಭಾಷಣಗಳಿಂದಾಗಿ. ಅವರ ಧ್ವನಿ ಗಂಭೀರ. ಮಾತು ಸಿಂಹಗರ್ಜನೆಯಂತಿರುತ್ತಿತ್ತು. ಧ್ವನಿವರ್ಧಕಗಳು ನಮ್ಮಲ್ಲಿ ಇನ್ನೂ ಪ್ರಚಾರಕ್ಕೆ ಬರದಿದ್ದ ಕಾಲ ಅದು. ಅನೇಕ ಸಹಸ್ರಮಂದಿಯ ಸಭೆಯಲ್ಲಿ ಅವರು ಭಾಷಣ ಮಾಡಿದರೆ ಅದು ಸಭೆಯ ಕೊನೆಯಲ್ಲಿದ್ದವರಿಗೂ ಸ್ಪಷ್ಟವಾಗಿ ಕೇಳುತ್ತಿತ್ತು ; ಅಂಥ ಕಂಠಶ್ರೀ ಮುದವೀಡು ಅವರದು. ಜವಾಹರ್ ಲಾಲರಿಗಂತೂ ಇವರ ವಾಗ್ ವೈಖರಿ ಅಚ್ಚುಮೆಚ್ಚು. ನೆಹರೂ ಅವರು, ಸಾರ್ವಜನಿಕ ಸಭೆಗಳಲ್ಲಿ ಭಾಷಣಮಾಡುವಾಗ ಒಟ್ಟಿಗೆ ಹತ್ತಾರು ವಾಕ್ಯಗಳನ್ನು ಹೇಳಿಬಿಡುತ್ತಿದ್ದರು. ಒಂದು ಭಾವ, ಅದಕ್ಕೊಂದು ವಾಕ್ಯವೃಂದ – ಇದು ಅವರ ಭಾಷಣದ ಶೈಲಿ. ಮುದವೀಡುರವರು ಇಡೀ ವಾಕ್ಯವೃಂದವನ್ನು ಕೇಳಿಕೊಂಡು ಅನಂತರ ಅದನ್ನು ಅದೇ ಕ್ರಮದಲ್ಲಿ ಚಾಚೂ ತಪ್ಪಿಲ್ಲದಂತೆ ಕನ್ನಡಕ್ಕೆ ಭಾಷಾಂತರಿಸಿ ಹೇಳುತ್ತಿದ್ದರು. ನೆಹರೂ ಅವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ 1937ರ ಚುನಾವಣೆ ಸಂಬಂಧದಲ್ಲಿ ಪ್ರಚಾರ ನಡೆಸಲು ಕರ್ನಾಟಕಕ್ಕೆ ಬಂದಿದ್ದರು. ಎಂದಿನಂತೆ ಮುದವೀಡು ಅವರು ನೆಹರೂ ಅವರ ಭಾಷಾಂತರಕಾರರು. ಬಿಡುವಿಲ್ಲದ ಅನೇಕಾನೇಕ ಸಭೆಗಳಲ್ಲಿ ನೆಹರೂ ಅವರ ಭಾಷಣಗಳನ್ನು ಭಾಷಾಂತರಿಸಿ ಹೇಳಿ ಮುದವೀಡು ಅವರಿಗೆ ಗಂಟಲು ಕಟ್ಟಿತು. ಮುಂದಿನ ಸಭೆಯಲ್ಲಿ ತಾವು ಇನ್ನು ಮಾತನಾಡುವುದು ಸಾಧ್ಯವಿಲ್ಲ ಎಂದು ಮುದವೀಡು ಅವರು ಹೇಳಿದಾಗ, ನೆಹರೂ ಅವರು "ನಾನೇನು ಮಾಡಲಿ, ನನ್ನ ಧ್ವನಿವರ್ಧಕ ಕೆಟ್ಟುಹೋದ ಮೇಲೆ" ಎಂದು ಕೇಳಿದರು. ಇನ್ನು ಯಾರು ಭಾಷಾಂತರಮಾಡಿದರೂ ಅದು ಮುದವೀಡು ಅವರ ಭಾಷಾಂತರದಷ್ಟು ಸೊಗಸಾಗಿರಲಾರದು ; ಸಭೆಯಲ್ಲಿ ನೆರೆದವರಿಗೆಲ್ಲ ಅಷ್ಟು ಸ್ಪಷ್ಟವಾಗಿ ಕೇಳಿಸಲಾರದು ಎಂಬ ಚಿಂತೆ ನೆಹರೂ ಅವರಿಗೆ.

ಮುದವೀಡು ಕೃಷ್ಣರಾಯರು ಕನ್ನಡ ಭಾಷೆಗೆ, ಕನ್ನಡ ನಾಡಿಗೆ ಸಲ್ಲಿಸಿದ ಅಪೂರ್ವ ಸೇವೆಯನ್ನು ಗಮನಿಸಿ, ಕನ್ನಡ ಜನತೆ ಅವರನ್ನು 1939ರಲ್ಲಿ

ಬೆಳಗಾವಿಯಲ್ಲಿ ನಡೆದ 24ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು.

ಸುಮಾರು ಅರ್ಧ ಶತಮಾನ ಕಾಲ ಕನ್ನಡ ನಾಡಿಗೂ ರಾಷ್ಟ್ರಕ್ಕೂ ನಿರಂತರ ಸೇವೆ ಸಲ್ಲಿಸಿದ ಮುದವೀಡು ಅವರು ತಮ್ಮ 73ನೆಯ ವಯಸ್ಸಿನಲ್ಲಿ, 1947ನೆಯ ಸೆಪ್ಟೆಂಬರ್ 2ರಂದು, ನಿಧನರಾದರು.

## ಮುದ್ದಣ

ಜಡಿಮಳೆಯಿಂದ ಬೇಸರಗೊಂಡಿದ್ದ ಮನೋರಮೆ, ಮನೆಗೆ ಬಂದ ತನ್ನ ಗಂಡ ಮುದ್ದಣನಿಗೆ ಕಾಲು ತೊಳೆಯಲು ನೀರಿತ್ತು ಉಪಚರಿಸಿ, ನಲ್ಲ ತೆಯೊಂದನ್ನು ಹೇಳುವಂತೆ ಕೇಳಿಕೊಳ್ಳುತ್ತಾಳೆ. ನವರಸಭರಿತವಾದ ರಾಮಾಯಣದ ಕಥೆಯೊಂದನ್ನು ಹೇಳಲು ಮುದ್ದಣ ಒಪ್ಪಿಕೊಳ್ಳಬೇಕಾಗುತ್ತದೆ. ಕೊನೆಗೆ 'ಹೃದ್ಯಮಪ್ಪ ಗದ್ಯ' ದಲ್ಲಿ ರಾಮಾಶ್ವಮೇಧದ ಕಥೆಯನ್ನು ಹೇಳುತ್ತಾನೆ.

ಆ ಕೃತಿಯೇ 'ರಾಮಾಶ್ವಮೇಧ'. ಈ ಕಥೆಯುದ್ದಕ್ಕೂ ಮುದ್ದಣ ಮನೋರಮೆಯರ ಸ್ವಾರಸ್ಯವಾದ ಸಲ್ಲಾಪ ಬೆರೆತುಕೊಂಡಿದೆ.

'ರಾಮಾಶ್ವಮೇಧ' ವನ್ನು ಬರೆದವನು 19ನೆಯ ಶತಮಾನದ ಕೊನೆಯ ಭಾಗದಲ್ಲಿ ಬಾಳಿದ ನಂದಳಿಕೆ ಲಕ್ಷ್ಮೀನಾರಣಪ್ಪ. ಈತನ ಕಾವ್ಯನಾಮ: ಮುದ್ದಣ.

ಮುದ್ದಣ ತನ್ನ 'ರಾಮಾಶ್ವಮೇಧ' ಕೃತಿ ರಚನೆಗೆ ಹಳೆಗನ್ನಡ ಭಾಷೆಯನ್ನು ಉಪಯೋಗಿಸಿದ್ದಾನೆ. ರಚನಾತಂತ್ರ, ಧೋರಣೆ ಹೊಸದು.

ಉಡುಪಿ ಕಾರ್ಕಳಗಳ ನಡುವೆ ಇರುವ ನಂದಳಿಕೆ ಒಂದು ಚಿಕ್ಕ ಹಳ್ಳಿ. ಲಕ್ಷ್ಮೀನಾರಣಪ್ಪ ಹುಟ್ಟಿದ್ದು ಅಲ್ಲಿ, 1869ರಲ್ಲಿ. ತಂದೆ ಪಾತಾಳಿ ತಿಮ್ಮಪ್ಪಯ್ಯ; ತಾಯಿ ಮಹಾಲಕ್ಷ್ಮಮ್ಮ. ಬಡತನದಿಂದಾಗಿ ಅವನ ವಿದ್ಯಾಭ್ಯಾಸ ಕುಂಟುತ್ತ ಸಾಗಿತ್ತು. ಉಡುಪಿಯ ಇಂಗ್ಲಿಷ್ ಶಾಲೆಯನ್ನು ಬಿಟ್ಟು, ಕನ್ನಡದ ಶಾಲೆಗೆ ಸೇರಿದ. ಓದು ಮುಗಿಸಿದ ಮೇಲೆ ಇವನ ಮುಖ್ಯೋಪಾಧ್ಯಾಯರು ಇವನನ್ನು, ವ್ಯಾಯಾಮ ಶಿಕ್ಷಕನಾಗಿ ತರಬೇತಿ ಹೊಂದಲು ಮದರಾಸಿಗೆ ಕಳುಹಿಸಿದರು. ಸರಕಾರದ ವೆಚ್ಚದಲ್ಲಿ ಈ ತರಬೇತಿ ಮುಗಿಸಿ ಬಂದ ಲಕ್ಷ್ಮೀನಾರಣಪ್ಪ ಉಡುಪಿ ಹೈಸ್ಕೂಲಿನಲ್ಲಿ ವ್ಯಾಯಾಮ ಶಿಕ್ಷಕನಾದ. ಆಗ ಆತನ ಸಂಬಳ ತಿಂಗಳಿಗೆ 10 ರೂಪಾಯಿ.

ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಮುದ್ದಣ ಸಂಗೀತಪ್ರಿಯ. ಯಕ್ಷಗಾನ ಪ್ರಸಂಗಗಳು ಎಲ್ಲಿ ನಡೆದರೆ ಅಲ್ಲಿ ಹಾಜರು. ಯಕ್ಷಗಾನದ ಪ್ರಾಸಬದ್ಧ ಭಾಷೆ ಅವನ ಮೇಲೆ ಮೋಡಿ ಬೀಸಿತು.

ಈ ವೇಳೆಗೆ ಮುದ್ದಣನಿಗೆ, ಅವನು ಕೆಲಸಮಾಡುತ್ತಿದ್ದ ಶಾಲೆಯಲ್ಲಿಯೇ ಉಪಾಧ್ಯಾಯರಾಗಿದ್ದು ಮರಾಠಿಯಲ್ಲಿ ನಾಟಕವನ್ನೂ ಕನ್ನಡದಲ್ಲಿ ಯಕ್ಷಗಾನ ಪ್ರಸಂಗಗಳನ್ನೂ ಬರೆದು ಪ್ರಖ್ಯಾತರಾಗಿದ್ದ ಮಳಲಿ ಸುಬ್ಬರಾಯರ ಗೆಳೆತನವಾಯಿತು. ಕಾವ್ಯರಚನೆಯಲ್ಲಿ ಆಸಕ್ತಿಯಿದ್ದ ಮುದ್ದಣನಿಗೆ ಇವರು ಮಾರ್ಗದರ್ಶಕರಾದರು. ಇವರ ನೆರವಿನಿಂದ ಮುದ್ದಣ ಸಂಸ್ಕೃತ ರತ್ನಾವಳೀ ನಾಟಕದ ಕಥೆಯನ್ನು 'ರತ್ನಾವಳೀ ಕಲ್ಯಾಣ' ಎಂಬ ಯಕ್ಷಗಾನ ಪ್ರಸಂಗವನ್ನಾಗಿ ರಚಿಸಿದ. ಇದಾದ ಅನಂತರ 'ಕುಮಾರ ವಿಜಯ' ಎಂಬ ಇನ್ನೊಂದು ಯಕ್ಷಗಾನವನ್ನೂ ಬರೆದ.

ಸುಬ್ಬರಾಯರಿಗೆ ಕುಂದಾಪುರಕ್ಕೆ ವರ್ಗವಾದಾಗ ತಾನೂ ಅಲ್ಲಿಗೇ ವರ್ಗ ಮಾಡಿಸಿಕೊಂಡ. ಆದರೆ ಈ ವೇಳೆಗೆ ಪ್ರೌಢಕಾವ್ಯ ರಚಿಸಬೇಕೆಂಬ ಆಸೆ ಇವನಲ್ಲಿ ಅಂಕುರಿಸಿತ್ತು. 'ಶಬ್ದಮಣಿದರ್ಪಣಂ' ಮತ್ತಿತರ ವ್ಯಾಕರಣ ಗ್ರಂಥಗಳನ್ನು ಅಧ್ಯಯನಮಾಡಿ ಅರಗಿಸಿಕೊಂಡು, ಕಿಟಲ್ ಅವರ ಶಬ್ದಕೋಶವನ್ನು ತಿರುವಿ ಹಾಕಿದ. ಹಳಗನ್ನಡದಲ್ಲಿ ಅಪಾರ ಪಾಂಡಿತ್ಯ ಗಳಿಸಿಕೊಂಡ.


ರಾಮಾಶ್ವಮೇಧ : ಮುದ್ದಣ

ಸುಬ್ಬರಾಯರಿಂದ ದಿನದಿನವೂ ಸಂಸ್ಕೃತ 'ಅದ್ಭುತ ರಾಮಾಯಣ' ವನ್ನೋದಿಸಿ ಕೇಳುವುದು; ಅದನ್ನನುಸರಿಸಿ ತಾನು ಹಳಗನ್ನಡದಲ್ಲಿ ಬರೆದು ಆ ಭಾಗವನ್ನು ಅವರಿಗೆ ತೋರಿಸಿ ಅವರ ಸೂಚನೆಗಳನ್ನು ಪಡೆಯುವುದು–ಹೀಗೆ ಮುದ್ದಣ 'ಅದ್ಭುತ ರಾಮಾಯಣ' ವನ್ನು ರಚಿಸಿದ. ಅದು ಪುರಾತನ ಗ್ರಂಥ, ಸಂಗ್ರಹದಲ್ಲಿ ದೊರೆತುದು; ಕರ್ತೃ ಯಾರೆಂದು ಗೊತ್ತಿಲ್ಲ–ಎಂದು ತಿಳಿಸಿ, ಹಸ್ತಪ್ರತಿಯನ್ನು 1894ರಲ್ಲಿ 'ಕಾವ್ಯಮಂಜರಿ' ಸಂಪಾದಕರಿಗೆ ಕಳುಹಿಸಿದ. ಅವರು ಅದನ್ನು ಪ್ರಕಟಿಸಿದರು. ಅನಂತರ 'ಶ್ರೀರಾಮ ಪಟ್ಟಾಭಿಷೇಕಂ' ಎಂಬ ಷಟ್ಪದಿಯ ಕಾವ್ಯವನ್ನು ರಚಿಸಿದ. ಅದು 'ಮಹಾಲಕ್ಷ್ಮಿ' ಎಂಬ ಪೂರ್ವ ಕವಯಿತ್ರಿಯ ಕೃತಿ ಎಂದು ಹೇಳಿ 'ಕಾವ್ಯ ಮಂಜರಿ'ಗೆ ಕಳುಹಿಸಿದ. ಅದೂ ಪ್ರಕಟವಾಯಿತು.

ನಂದಳಿಕೆ ಲಕ್ಷ್ಮೀನಾರಾಣಪ್ಪನ ಪ್ರಖ್ಯಾತ ಕೃತಿ 'ರಾಮಾಶ್ವಮೇಧ'. ಇದರ ಭಾಷೆ ಕೂಡ ಹಳಗನ್ನಡವೇ. ಇದನ್ನು ಬರೆಯುವ ಹೊತ್ತಿಗೆ, ಮುದ್ದಣ, ಬಂಗಾಳಿಯಿಂದ ಕನ್ನಡಕ್ಕೆ ಅನುವಾದವಾಗಿದ್ದ ವೆಂಕಟಾಚಾರ್ಯರ ಕಾದಂಬರಿಗಳನ್ನು ಓದಿರಬೇಕು; ಆ ಕಾದಂಬರಿಗಳ ಸಂಭಾಷಣೆಗಳಿಂದ ಪ್ರಭಾವಿತನೂ ಆಗಿರಬೇಕು: ಅವನ 'ರಾಮಾಶ್ವಮೇಧ' ದಲ್ಲಿ ಇದರ ಹೊಳಹು ಕಾಣುತ್ತದೆ — ಎಂದು ಕೆಲ ವಿದ್ವಾಂಸರ ಅಭಿಪ್ರಾಯ. ಲಕ್ಷ್ಮೀನಾರಾಣಪ್ಪನನ್ನು ಅವನ ತಾಯಿ ಮುದ್ದಿನಿಂದ 'ಮುದ್ದಣ್ಣ' ಎಂದು ಕರೆಯುತ್ತಿದ್ದರೆಂದೂ, ಆ ಸವಿನೆನಪನ್ನು ಅವಲಂಬಿಸಿ ಅವನು 'ಮುದ್ದಣ' ಎಂಬ ಕಾವ್ಯನಾಮವನ್ನು ಇರಿಸಿಕೊಂಡನೆಂದೂ ಊಹೆ.

'ರಾಮಾಶ್ವಮೇಧ'ದ ಕಥೆ ರಾಮಾಯಣದ್ದು. ಆದರೆ ಅದನ್ನು ಹೇಳಿರುವ ರೀತಿ, ಅಲ್ಲಿ ಓದುಗನ ಪ್ರತಿನಿಧಿಯಾಗಿ ಮನೋರಮೆಗೆ ಕೊಟ್ಟಿರುವ ಸ್ಥಾನ, ಮುದ್ದಣ –ಮನೋರಮೆಯರ ಸಲ್ಲಾಪಗಳು ಹಳಗನ್ನಡ ಕಾವ್ಯಗಳಲ್ಲಿ ಕಂಡುಬಾರದಂಥವು. ಹೊಸ ದೃಷ್ಟಿಯ ಕವಿ ಹಳೆಯ ಕಾಲದ ಭಾಷೆಯಲ್ಲಿ ಕೃತಿರಚನೆ ಮಾಡಿದರೆ ಅದು ಹೇಗೆ ರೂಪುಗೊಳ್ಳಬಹುದು ಎಂಬುದಕ್ಕೆ 'ರಾಮಾಶ್ವಮೇಧ' ಒಂದು ಉದಾಹರಣೆ.

ಭಗವದ್ಗೀತೆ, ರಾಮಾಯಣಗಳ ಕನ್ನಡ ಅನುವಾದ, ಕಾಮಶಾಸ್ತ್ರವನ್ನು ಕುರಿತ ಗ್ರಂಥ, ಸಂಶೋಧನಾತ್ಮಕ ಲೇಖನ, 'ಗೋದಾವರಿ' ಎಂಬ

[illegible] ಲಕ್ಷ್ಮೀನಾರಾಯಣ [illegible] ವ್ಯಾಕರಣ, [illegible] ಗ್ರಂಥ ರಚನೆಯ ಯೋಜನೆಯನ್ನು ಹಾಕಿಕೊಂಡಿದ್ದರಂತೆ. ಆದರೆ ಕೆಲ ಕಾಲದಿಂದ ಅವರನ್ನು ಬಾಧಿಸುತ್ತಿದ್ದ ಕ್ಷಯರೋಗದ ಪರಿಣಾಮವಾಗಿ ಅವರು 1901 ಫೆಬ್ರವರಿ 16ರಂದು, ಕೇವಲ 32ನೆಯ ವಯಸ್ಸಿನಲ್ಲೇ ಕಾಲವಾದ.

## ಮುಮ್ಮಡಿ ಕೃಷ್ಣರಾಜ

ಮೈಸೂರು ಒಡೆಯ ರಾಜವಂಶದ ಇತಿಹಾಸದಲ್ಲಿ ಮುಮ್ಮಡಿ ಕೃಷ್ಣರಾಜರ ಹೆಸರು ಚಿರಸ್ಥಾಯಿಯಾಗಿರುವಂತೆ, ಕನ್ನಡ ಸಾಹಿತ್ಯದ ಇತಿಹಾಸದಲ್ಲೂ ಅದು ದೃಢವಾಗಿ ನಿಲ್ಲುತ್ತದೆ. ಏಕೆಂದರೆ ಕನ್ನಡ ನಾಡಿನ ಪಂಡಿತರಿಗೆ, ಕಲಾವಿದರಿಗೆ, ಕವಿಗಳಿಗೆ ಉದಾರ ಪೋಷಣೆ ನೀಡಿದ ದೊರೆ ಅವರು. ಕನ್ನಡ ಸಾಹಿತ್ಯ ರಚನೆಯನ್ನು ಪ್ರೋತ್ಸಾಹಿಸಿ, ತಾವೂ ಗ್ರಂಥ ರಚನೆ ಮಾಡಿದರು.



ಕನ್ನಡ ಗದ್ಯ : ಮುಮ್ಮಡಿ ಕೃಷ್ಣರಾಜ

ಮುಮ್ಮಡಿಯವರು ಹುಟ್ಟಿದ್ದು ಶ್ರೀರಂಗಪಟ್ಟಣದಲ್ಲಿ, 1794ರಲ್ಲಿ. ತಂದೆ ಖಾಸಾ ಚಾಮರಾಜ ಒಡೆಯರು. ಆಗ ಟಿಪ್ಪುಸುಲ್ತಾನರ ಆಡಳಿತ ನಡೆದಿತ್ತು. ಮೈಸೂರು ರಾಜಮನೆತನ ಬಂಧನಕ್ಕೊಳಗಾಗಿತ್ತು. ಹೀಗೆ ಬಂಧನದಲ್ಲಿ ಹುಟ್ಟಿ ಬಾಲ್ಯದಲ್ಲಿಯೇ ತಬ್ಬಲಿಯಾದರೂ ಮುಮ್ಮಡಿಯವರು ಸುಮಾರು ಐದು ವರ್ಷಗಳ ಅನಂತರ, ಟಿಪ್ಪು ಆಳ್ವಿಕೆ ಕೊನೆಗೊಂಡಮೇಲೆ, ಮೈಸೂರು ಸಿಂಹಾಸನವನ್ನೇರಿದರು; ಅಜ್ಜಿ ಲಕ್ಷ್ಮಮ್ಮಣ್ಣಿಯವರ ಪೋಷಣೆಯಲ್ಲಿ ಬೆಳೆದರು.

ಅವರಿಗೆ ಬಾಲ್ಯದಲ್ಲಿ ಒಳ್ಳೆಯ ವಿದ್ಯಾಭ್ಯಾಸ ದೊರೆಯಿತು. ಅಂದಿನ ಕಾಲಕ್ಕೆ ರಾಜರಿಗೆ ಕೊಡುತ್ತಿದ್ದ ಶಿಕ್ಷಣವನ್ನೆಲ್ಲ ಇವರು ಪಡೆದರು. ಕನ್ನಡ, ಸಂಸ್ಕೃತ, ಮರಾಠಿ ಮತ್ತು ಪಾರ್ಸಿ ಭಾಷೆಗಳನ್ನೂ ಕಲಿತರು.

ಚಿಕ್ಕಂದಿನಿಂದಲೂ ಮುಮ್ಮಡಿಯವರದು ಗಂಭೀರ ವ್ಯಕ್ತಿತ್ವ. ಮುಮ್ಮಡಿ ಕೃಷ್ಣರಾಜ ಒಡೆಯರು ನೇರ ರಾಜ್ಯಾಡಳಿತವನ್ನು ವಹಿಸಿಕೊಂಡದ್ದು ಹದಿನೆಂಟು ವರ್ಷ ವಯಸ್ಸಿನವರಾಗಿದ್ದಾಗ. ಅನಂತರದ ಕಾಲ ಭಾರತದ ಇತಿಹಾಸದಲ್ಲಿ ಪರ್ವಕಾಲ. ಆ ಹೊತ್ತಿಗೆ ಬ್ರಿಟಿಷರು ಭಾರತದ ಹಲವಾರು ಮಂದಿ ಪ್ರಬಲ ರಾಜರನ್ನು ಸೋಲಿಸಿ ತಮ್ಮ ಶಕ್ತಿಯನ್ನು ಬಲಪಡಿಸಿಕೊಂಡಿದ್ದರು. ಅಲ್ಲಿಂದಾಚೆಗೆ ಭಾರತದ ಮೇಲೆ ತಮ್ಮ ಹಿಡಿತವನ್ನು ಅವರು ಬಲಪಡಿಸುತ್ತ ನಡೆದರು. ಇದರಿಂದಾಗಿ, ಅನೇಕ ಮಂದಿ ಭಾರತೀಯ ವಿದ್ವಾಂಸರಿಗೆ, ಕಲಾವಿದರಿಗೆ ರಾಜಾಶ್ರಯ ತಪ್ಪಿಹೋಗುವಂತಾಯಿತು. ಈ ಸ್ಥಿತಿಯಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಅನೇಕ ಮಂದಿ ವಿದ್ವಾಂಸರಿಗೆ, ಕಲಾವಿದರಿಗೆ ತಮ್ಮ ಆಸ್ಥಾನದಲ್ಲಿ ಎಡೆಗೊಟ್ಟು ಪೋಷಿಸಿದರು. ಈ ದೃಷ್ಟಿಯಿಂದ ಮುಮ್ಮಡಿಯವರ ಸಾರಸ್ವತ ಸೇವೆ ಅಪೂರ್ವವಾದದ್ದು. ಸುಮಾರು ಎರಡು ಶತಮಾನಗಳ ಹಿಂದೆ ಚಿಕದೇವರಾಜ ಒಡೆಯರ ಕಾಲದಲ್ಲಿ ಪಂಡಿತರು, ಕವಿಗಳಿಂದ ಮೈಸೂರು ರಾಜಾಸ್ಥಾನ ಶೋಭಿಸಿದಂತೆ, ಮತ್ತೆ ಮುಮ್ಮಡಿಯವರ ಕಾಲದಲ್ಲೂ ಶೋಭಿಸಿತು.

ಮುಮ್ಮಡಿ ಕೃಷ್ಣರಾಜರು ಸ್ವತಃ ಕವಿಗಳಾಗಿದ್ದು ಕೆಲವು ಸ್ತೋತ್ರಗಳನ್ನೂ ಹಲವಾರು ಗ್ರಂಥಗಳನ್ನೂ ಬರೆದಿದ್ದಾರೆ. ಇವುಗಳಲ್ಲಿ ಕಥಾಸಾರ, ಪುರಾಣ ಸಂಗ್ರಹ, ಟೀಕೆ, ಮಹಾತ್ಮ್ಯ ಶತಕ ಹಾಡು ಮುಂತಾದವು ಇವೆ. ಇವೆಲ್ಲ ಪುರಾಣ ಸಾಹಿತ್ಯವನ್ನು ಅವಲಂಬಿಸಿದುವು. ಇವುಗಳಲ್ಲೆಲ್ಲ ಗಣನೀಯ ಕೃತಿ 'ಕೃಷ್ಣರಾಜ ವಾಣೀ ವಿಲಾಸ ಎಂಬ ಮಹಾಭಾರತದ ಕನ್ನಡ ಟೀಕು'. ಇದು ರಚನೆಯಾದ ಕಾಲ 1820. ಕನ್ನಡ ಗದ್ಯರೂಪದಲ್ಲಿ ಮಹಾಭಾರತ ಪ್ರಕಟವಾದದ್ದು ಇದೇ ಮೊದಲು ಎಂಬುದು ಗಮನಾರ್ಹ ಸಂಗತಿ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಹೊಸಗನ್ನಡ ಗದ್ಯ ರಚನೆ ಆರಂಭವಾಯಿತು. 'ಮುದ್ರಾ ಮಂಜೂಷ'ದ ಕರ್ತೃ ಕೆಂಪುನಾರಾಯಣ ಇದೇ ಕಾಲದವನು.

ಮುಮ್ಮಡಿಯವರ ಆಸ್ಥಾನದಲ್ಲಿದ್ದು ವಿಪುಲವಾಗಿ ಗ್ರಂಥ ರಚನೆಮಾಡಿದ ವ್ಯಕ್ತಿ ಅಳಿಯ ಲಿಂಗರಾಜ. ಈತನೂ ಕೂಡ ಮುಮ್ಮಡಿಯವರಂತೆ ಸ್ತೋತ್ರ ಸಾಹಿತ್ಯವನ್ನು ರಚಿಸಿದ್ದಾನೆ. ಆದರೆ ಈತನ ವಿಶಿಷ್ಟ ಶಕ್ತಿ ಯಕ್ಷಗಾನ ರಚನೆಗೆ ಮೀಸಲಾಗಿದೆ. ಈತ ಸುಮಾರು 47 ಯಕ್ಷಗಾನ ಕೃತಿಗಳನ್ನು ರಚಿಸಿದ್ದಾನೆ.

ಮುಮ್ಮಡಿಯವರು ಉದಾರಿಗಳಾಗಿದ್ದರು. ರಾಜರಿಗೆ ಬರುವ ಆದಾಯ ಜನರಿಂದಲೇ ಬರುತ್ತದೆಯಾದ್ದರಿಂದ ಜನರ ಧರ್ಮ, ಸಾಹಿತ್ಯ, ಕಲೆ, ಸಂಸ್ಕೃತಿಗಳನ್ನು ಪೋಷಿಸುವುದು ರಾಜನ ಕರ್ತವ್ಯ ಎಂಬುದು ಅವರ ಅಭಿಪ್ರಾಯವಾಗಿತ್ತು. ತಮ್ಮ ಜೀವನ ಪರ್ಯಂತ ಅವರು ಅದೇ ರೀತಿ ನಡೆದುಕೊಂಡರು.

ಮುಮ್ಮಡಿಯವರ ಜೀವನಕ್ಕೆ ಸಂಬಂಧಿಸಿದಂತೆ ಗಮನಿಸಬೇಕಾದ ಇನ್ನೊಂದು ಅಂಶ, ಮೈಸೂರು ಸಂಸ್ಥಾನವನ್ನು ಒಡೆಯರ ವಂಶದಿಂದ ಕಸಿದುಕೊಂಡು ಕಬಳಿಸಲು ಪ್ರಯತ್ನಿಸಿದ ಬ್ರಿಟಿಷ್ ಸರಕಾರದೊಡನೆ

ಅವರು ನಡೆಸಿದ ನಿರಂತರ ಹೋರಾಟ. ಈ ಪ್ರಶ್ನೆ ಬ್ರಿಟಿಷ್ ಪಾರ್ಲಿಮೆಂಟಿನ ಮುಂದೆ ಬಂತು. ಕೊನೆಗೆ ಬ್ರಿಟಿಷ್ ಸರಕಾರ ಮೈಸೂರು ಸೀಮೆಯ ಆಡಳಿತವನ್ನು ತಮ್ಮ ದತ್ತುಮಗ ಚಾಮರಾಜ ಒಡೆಯರವರಿಗೆ ಕೊಡಲೊಪ್ಪುವಂತೆ ಕೃಷ್ಣರಾಜ ಒಡೆಯರು ಮಾಡಿದರು. ತಮ್ಮ ಹೋರಾಟಕ್ಕೆ ಹೀಗೆ ವಿಜಯ ದೊರೆತದ್ದನ್ನು ಕಂಡು. ಸಂತೃಪ್ತರಾಗಿ 1868ರಲ್ಲಿ ಕಣ್ಮುಚ್ಚಿದರು.

## ಮುಳಿಯ ತಿಮ್ಮಪ್ಪಯ್ಯ

ಸುಸಂಸ್ಕೃತಳಾದ ತಾಯಿ ತನ್ನ ಪುಟ್ಟ ಮಗನಿಗೆ ರಾಮಾಯಣ ಓದಿ. ಅದನ್ನು ಸುಂದರವಾಗಿ ವಿವರಿಸುತ್ತಿದ್ದಳು. ಅದನ್ನು ಕೇಳುತ್ತ ಕೇಳುತ್ತ ಮಗನಿಗೆ, ತಾನೂ ರಾಮಾಯಣ ಬರೆಯಬೇಕು ಎನಿಸಿತು. ತನ್ನ ಈ ಹಂಬಲವನ್ನು ತಾಯಿಯ ಮುಂದೆ ಹೇಳಿಕೊಂಡು ತಾನೂ ಒಂದು ರಾಮಾಯಣವನ್ನು ಬರೆಯುವುದಾಗಿ ಪ್ರತಿಜ್ಞೆಮಾಡಿದ. ದೊಡ್ಡವನಾದ ಮೇಲೆ ಆತ 'ನವನೀತ ರಾಮಾಯಣ'ವನ್ನು ಬರೆದಾಗ ಈ ಅಂಶವನ್ನು ಸ್ಮರಿಸಿಕೊಂಡು ತನ್ನ ಗ್ರಂಥಾರಂಭದಲ್ಲಿ,

"ಪಡಿಗಾಣದಿಂಚರದಿ ಗಮಕ
ದೊಡ್ಡವಣೆಯಿಂ
ಪಾಡಿ ರಾಮಾಯಣವನೂಡಿದೆ
ಮಗಂಗೆ ನಿ
ನ್ನಡಿಗೆ ಹೊಸಪೊಂದು ರಾಮಾ
ಯಣಂ ಬರೆದು ಕಾ
ಣಿಕೆಯಿಪೆನೆಂದು ಪೂಣ್ದುದ
ನದೇಂ ಮರೆದಪೆನೆ?" ಎಂದ.



'ನಾಡೋಜ ಪಂಪ' : ಮುಳಿಯ

'ನವನೀತ ರಾಮಾಯಣ' ವನ್ನು ಬರೆದವರು ಮುಳಿಯ ತಿಮ್ಮಪ್ಪಯ್ಯನವರು. 'ನಾಡೋಜ, ಪಂಪ', 'ಪಾರ್ತಿಸುಬ್ಬ' ಎಂಬ ವಿದ್ವತ್ಕೃತಿಗಳನ್ನು ಕನ್ನಡಿಗರಿಗಿತ್ತ ತಿಮ್ಮಪ್ಪಯ್ಯನವರು ಕನ್ನಡದ ಉತ್ಕರ್ಷಕ್ಕಾಗಿ ನಾನಾ ರೀತಿಯಲ್ಲಿ ಶ್ರಮಿಸಿದರು. ಅಂಡಯ್ಯನಿಗಿದ್ದಂಥ ಕನ್ನಡಪ್ರೇಮ ಇವರಿಗಿತ್ತು. ತಮಗಿದ್ದ ವಿಶಾಲ ಸಾಹಿತ್ಯ ಪ್ರಜ್ಞೆ, ಅಪಾರ ಸಂಶೋಧನಾಶಕ್ತಿ ಎಲ್ಲವನ್ನೂ ಕನ್ನಡದ ಮೇಲ್ಮೆಯನ್ನು ಸಾಧಿಸಲು ವಿನಿಯೋಗಿಸಿದರು.

ತಿಮ್ಮಪ್ಪಯ್ಯನವರು ಜನಿಸಿದ್ದು ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದ ಬಳಿ ಇರುವ ಮುಳಿಯ ಎಂಬಲ್ಲಿ, 1888ರ ಮಾರ್ಚ್ 3ರಂದು. ಇವರ ತಂದೆ ಕೇಶವ ಭಟ್ಟರು ; ತಾಯಿ ಮೂಕಾಂಬಿಕಾ. ತೀರ ಬಡತನದಲ್ಲಿ ಜೀವನ ಸಾಗಿಸುತ್ತಿದ್ದ ಇವರು ತಮ್ಮ ಮಗನಿಗೆ ತಮ್ಮೂರಲ್ಲೇ ವಿದ್ಯಾಭ್ಯಾಸ ಮಾಡಿಸಿದರು. ಮನೆಯಲ್ಲೇ ಸಂಸ್ಕೃತವನ್ನೂ ಹೇಳಿಕೊಟ್ಟರು.

ತಿಮ್ಮಪ್ಪಯ್ಯನವರ ಜ್ಞಾನದಾಹ ಅವರ ಊರಿನಲ್ಲಿ ನೀಗಲಿಲ್ಲ. ತಮ್ಮ ಜ್ಞಾನಭಂಡಾರವನ್ನು ಬೆಳೆಸಿಕೊಳ್ಳಲು ಅವರು 1906ರಲ್ಲಿ ತಿರುವಾಂಕೂರಿಗೆ ಹೋಗಿ, ಅಲ್ಲಿಂದ ಮೈಸೂರಿಗೆ ಬಂದರು. ಮೈಸೂರಿನಲ್ಲಿ ಪಾಠವನ್ನು ಮಾಡಿಕೊಂಡಿದ್ದು ಸ್ವಪ್ರಯತ್ನದಿಂದ ಸಂಗೀತವನ್ನು ಕಲಿತರು.

1910ರಲ್ಲಿ ಊರಿಗೆ ಹಿಂತಿರುಗಿದ ತಿಮ್ಮಪ್ಪಯ್ಯನವರು ರಾಮಾಯಣ-ಭಾರತ ವಾಚನ, ಯಕ್ಷಗಾನಗಳ ರಚನೆ, ದಾಸರ ಪದಗಳ ಹಾಡುಗಾರಿಕೆಗಳಲ್ಲಿ ತಮ್ಮ ಕೌಶಲವನ್ನು ಬೆಳೆಸಿಕೊಂಡರು. ತಾಳ ಮದ್ದಳೆಗಳಲ್ಲಿ 'ಅರ್ಥಧಾರಿ' ಯಾಗಿ ಪ್ರಸಿದ್ಧಿಗೆ ಬಂದರು.

ಮರುವರ್ಷ ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ನೇಮಕಗೊಂಡ ತಿಮ್ಮಪ್ಪಯ್ಯನವರು ಸಾಹಿತ್ಯ ಸೃಷ್ಟಿಯ ಕಡೆ ಹೆಚ್ಚು ಗಮನ ಕೊಟ್ಟರು. ಮುದ್ದಣನ 'ರಾಮಾಶ್ವಮೇಧ'ದಿಂದ ಪ್ರಭಾವಿತರಾಗಿ 1913ರಲ್ಲಿ 'ಚಂದ್ರಾವಳಿ ವಿಲಾಸ' ಎಂಬ ಹಳೆಗನ್ನಡ ಗದ್ಯಕಾವ್ಯವನ್ನು ರಚಿಸಿದರು. 'ಹಗಲಿರುಳು' ಎಂಬ ನಾಟಕ. ಅಂಡಯ್ಯನ 'ಕಬ್ಬಿಗರ ಕಾವ'ದ ಮಾದರಿಯಲ್ಲಿ ಅಚ್ಚಗನ್ನಡ ಪದ್ಯಕಾವ್ಯ : 'ಸೊಬಗಿನ ಬಳ್ಳಿ', 'ನಡತೆಯ ನಾಡು' ಎಂಬ ಗದ್ಯಕಾವ್ಯ, 'ಬಡಹುಡುಗಿ' ಎಂಬ ಖಂಡಕಾವ್ಯ ಇವುಗಳನ್ನು ಬರೆದರು.

1915ರಲ್ಲಿ 'ಕನ್ನಡ ಕೋಗಿಲೆ' ಎಂಬ ಮಾಸ ಪತ್ರಿಕೆಗೆ ತಿಮ್ಮಪ್ಪಯ್ಯನವರು ಸಂಪಾದಕರಾದರು. ಈ ಪತ್ರಿಕೆಯ ಸಂಬಂಧದಿಂದ ಇವರಿಗೆ 'ಕೋಗಿಲೆ ತಿಮ್ಮಪ್ಪಯ್ಯ' ಎಂದು ಹೆಸರಾಯಿತು,

ಇವರ ವಿದ್ವತ್ತನ್ನು ಮನಗಂಡಿದ್ದವರ ನೆರವಿನಿಂದ ತಿಮ್ಮಪ್ಪಯ್ಯನವರಿಗೆ 1908ರಲ್ಲಿ ಸೇಂಟ್ ಅಲೋಶಿಯಸ್ ಕಾಲೇಜಿನಲ್ಲಿ ಕನ್ನಡ ಪಂಡಿತರ ಹುದ್ದೆ ದೊರೆಯಿತು. ಸುಮಾರು 30 ವರ್ಷ ಕಾಲ ಅವರು ಆ ಸಂಸ್ಥೆಯಲ್ಲೇ ಅಧ್ಯಾಪಕರಾಗಿದ್ದರು. ಅನೇಕ ಸಹಸ್ರ ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡಿದರು. ಇವರ ಎಷ್ಟೋ ಶಿಷ್ಯರ ಮಕ್ಕಳೂ ಕೂಡ ಇವರ ಶಿಷ್ಯರಾದುದುಂಟು.

ಮಂಗಳೂರಿನಲ್ಲಿ ನಡೆದ 1927ರ ಸಾಹಿತ್ಯ ಸಮ್ಮೇಳನದಲ್ಲಿ 'ಅಂಡಯ್ಯನ ಕನ್ನಡಮೆಂಸಿಪ್ಪಾನಾಡೂ' ಎಂಬ ವಿದ್ವತ್ ಉಪನ್ಯಾಸವನ್ನು ಇವರು ಓದಿದರು. ಅದರಿಂದ ಇವರ ನಿಜವಾದ ಪ್ರತಿಭೆ ಪ್ರಕಾಶಕ್ಕೆ ಬಂತು. ನಾಲ್ಕೇ ವರ್ಷಗಳ ಅನಂತರ ತಿಮ್ಮಪ್ಪಯ್ಯನವರು ಕಾರವಾರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು.

ತಿಮ್ಮಪ್ಪಯ್ಯನವರಿಗೆ ಶಂಕರಭಟ್ಟರೆಂಬ ತಮ್ಮನಿದ್ದರು. ಅವರಿಗೆ ಕಾದಂಬರಿ ಇಷ್ಟ. ಅಣ್ಣನಿಗೆ "ಕಾದಂಬರಿ ಬರೆ" ಎಂದು ಹೇಳಿ ಹೇಳಿ ಬೇಸತ್ತು, ಕೊನೆಗೆ ಒಮ್ಮೆ "ನೀನು ಬರಿ ದಡ್ಡ" ಎಂದರಂತೆ. ಆ ಸೋದರ 1934ರಲ್ಲಿ ನಿಧನರಾದರು. ಮರುವರ್ಷ ತಿಮ್ಮಪ್ಪಯ್ಯನವರ ಸಾಮಾಜಿಕ ಕಾದಂಬರಿ 'ಪಶ್ಚಾತ್ತಾಪ' ಪ್ರಕಟವಾಯಿತು.

1938ರಲ್ಲಿ ಪಂಪನ ಕಾವ್ಯದ ಬಗೆಗೆ ಬರೆದ ವಿಮರ್ಶಾತ್ಮಕ ಕೃತಿ 'ನಾಡೋಜ ಪಂಪ' ತಿಮ್ಮಪ್ಪಯ್ಯನವರ ಅಮೂಲ್ಯ ಕೃತಿ. ಒಬ್ಬ ಕವಿಯ ಕೃತಿಯ ಬಗೆಗೆ ಇಷ್ಟು ದೀರ್ಘವಾದ ಆಳವಾದ ವಿಮರ್ಶೆ ಕನ್ನಡದಲ್ಲಿ ಆ ವರೆಗೆ ಬಂದಿರಲಿಲ್ಲ.

1904ರಲ್ಲಿ ಪ್ರಕಟವಾದ ಇವರ 'ನವನೀತ ರಾಮಾಯಣ' ಕೂಡ ಅಪೂರ್ವ ಗ್ರಂಥ. ಮಹಾಕಾವ್ಯದ ಧಾಟಿಯಲ್ಲಿ ಬರೆದ ಈ ಕೃತಿ ಅವರ ಕವಿತಾ ಪ್ರತಿಭೆಗೆ ಉತ್ತಮ ನಿದರ್ಶನ.

ಯಕ್ಷಗಾನ ಪ್ರಸಂಗಗಳ ರಚನಕಾರ, ಕವಿ ಎಂದು ಹೆಸರಾಂತ ಪಾರ್ತಿಸುಬ್ಬನ ಬಗೆಗೆ ಬರೆದ ಸಂಶೋಧನಾತ್ಮಕ ಕೃತಿ ಇವರ ಇನ್ನೊಂದು ಮಹತ್ವದ ಸಾಧನೆ. ತಮ್ಮ ಸಂಶೋಧನೆಗಳ ಆಧಾರದ ಮೇಲೆ ತಿಮ್ಮಪ್ಪಯ್ಯನವರು ಪಾರ್ತಿ ಸುಬ್ಬನ ಜೀವನವನ್ನು ಇಲ್ಲಿ ರಮ್ಯವಾಗಿ ಚಿತ್ರಿಸಿದ್ದಾರೆ. ನೃಪತುಂಗನ 'ಕವಿರಾಜಮಾರ್ಗ'ವನ್ನು ಕುರಿತ ವಿಮರ್ಶಾತ್ಮಕ ಕೃತಿ 'ಕವಿ ರಾಜಮಾರ್ಗ ವಿವೇಕ' ಇವರ ಮತ್ತೊಂದು ಮೌಲಿಕ ಗ್ರಂಥ.

ವೈಯಕ್ತಿಕ ಜೀವನದಲ್ಲಿ ಉದಾರಿ. ಸಹೃದಯಿ. ಹಸನ್ಮುಖಿ. ವಿನಯಶೀಲ ಎಂದು ತಿಮ್ಮಪ್ಪಯ್ಯನವರು ಖ್ಯಾತರಾಗಿದ್ದರು. ಎಲ್ಲರಿಗೂ ಪ್ರಿಯರಾಗಿದ್ದರು. ಅವರು ಗಮಕ ಶೈಲಿಯಲ್ಲಿ ಓದುತ್ತಿದ್ದ ಮಹಾಕಾವ್ಯ ವಾಚನ ಕೇಳುಗರಿಗೆ ಹಬ್ಬವಾಗುತ್ತಿತ್ತು. ಕನ್ನಡದ ಗುರುಗಳಾಗಿ ಅಸಂಖ್ಯ ಶಿಷ್ಯರ ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದರು.

1950ರ ಜನವರಿ 16ರಂದು ಮುಳಿಯ ತಿಮ್ಮಪ್ಪಯ್ಯನವರು ಆಗ ಮದರಾಸಿನಲ್ಲಿದ್ದ ತಮ್ಮ ಹಿರಿಯ ಮಗನ ಮನೆಯಲ್ಲಿ ನಿಧನರಾದರು.

## ಮೆಲ್ವಿಲ್

1885ರಲ್ಲಿ ಆಂಗ್ಲ ವಿಮರ್ಶಕ ರಾಬರ್ಟ್ ಬುಕ್ಯಾನನ್ ಪ್ರಸಿದ್ಧ ಕವಿ ವಾಲ್ಟ್ ವ್ಹಿಟ್‌ಮನ್‌ನನ್ನು ಭೇಟಿಮಾಡಲು ಅಮೆರಿಕಕ್ಕೆ ಬಂದಾಗ, ಸಾಹಿತ್ಯ ಕ್ಷೇತ್ರದಲ್ಲಿ ವ್ಹಿಟ್‌ಮನನಿಗೆ ಸರಿದೊರೆಯಾದ ಸಾಹಿತಿ ಹರ್ಮನ್ ಮೆಲ್ವಿಲ್‌ನನ್ನು ಕಾಣಬೇಕೆಂದು ಅಪೇಕ್ಷಿಪಟ್ಟ. ಈ ಮಹಾ ಲೇಖಕ ನ್ಯೂಯಾರ್ಕ್‌ನಲ್ಲೇ ಎಲ್ಲೋ ಇದ್ದಾನೆ ಎಂದು ತಿಳಿದಿದ್ದರೂ ಅವನನ್ನು ಪತ್ತೆಹಚ್ಚುವುದು ಸಾಧ್ಯವಾಗಲಿಲ್ಲ. ಕೊನೆಗೂ 'ಮಾಬಿಡಿಕ್'ನ ಸೃಷ್ಟಿಕರ್ತ ಮೆಲ್ವಿಲ್‌ನನ್ನು ಭೇಟಿಯಾಗದೆಯೇ ಬುಕ್ಯಾನನ್ ಹಿಂದಿರುಗಬೇಕಾಯಿತು.

ಇಂದು 'ಮಾಬಿಡಿಕ್' ಜಗತ್ತಿನ ಹತ್ತು ಶ್ರೇಷ್ಠ ಕಾದಂಬರಿಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ. ಆದರೆ 1851ರಲ್ಲಿ ಇದು ಪ್ರಕಟವಾದಾಗ ಇದನ್ನು ಕೇಳುವವರೇ ಇರಲಿಲ್ಲ. ಮುಂದಿನ ಹತ್ತು ವರ್ಷಗಳಲ್ಲಿ ಪ್ರತಿ ವರ್ಷವೂ ಮಾರಾಟವಾಗುತ್ತಿದ್ದ ಈ ಗ್ರಂಥದ ಪ್ರತಿಗಳ ಸಂಖ್ಯೆ ಸುಮಾರು 125 ಮಾತ್ರ. ಇಪ್ಪತ್ತೈದು ವರ್ಷಗಳ ಅನಂತರ ಇದರ ಸರಾಸರಿ ಮಾರಾಟ ವರ್ಷಕ್ಕೆ 22ಕ್ಕೆ ಇಳಿಯಿತು. ಈಗಲಾದರೋ ಪ್ರತಿ ವರ್ಷ ಲಕ್ಷಗಟ್ಟಲೆ ಪ್ರತಿಗಳು ಮಾರಾಟವಾಗುತ್ತವೆ.

ಹರ್ಮನ್ ಮೆಲ್ವಿಲ್ ನ್ಯೂಯಾರ್ಕ್ ನಗರದ ಶ್ರೀಮಂತನೊಬ್ಬನ ಮಗ ; ಜನನ 1819 ಆಗಸ್ಟ್ ಒಂದರಂದು. ವ್ಯಾಪಾರದಲ್ಲಿ ತಾನು ಗಳಿಸಿದ್ದ ಸಂಪತ್ತನ್ನೆಲ್ಲ ತಂದೆ ಕಳೆದುಕೊಂಡಾಗ ಹರ್ಮನ್ ಶಾಲೆ ಬಿಟ್ಟು ಅಣ್ಣನ ಹ್ಯಾಟ್ ಅಂಗಡಿಯಲ್ಲಿ ಕೆಲಸಮಾಡಬೇಕಾಯಿತು. ಸ್ವಲ್ಪ ಕಾಲ ಹೊಲಗಳಲ್ಲಿ ಆಲೂಗಡ್ಡೆ ಅಗೆದು ತೆಗೆಯುವ ಕೆಲಸಗಾರನಾಗಿ, ಬ್ಯಾಂಕ್ ಗುಮಾಸ್ತೆಯಾಗಿ ದುಡಿದ ಬಳಿಕ, ನಾವಿಕನಾಗಲು ನಿರ್ಧರಿಸಿದ. ಹತ್ತಿಯ ಸರಕು ಹೊತ್ತು ಇಂಗ್ಲೆಂಡಿನ ಲಿವರ್‌ಪೂಲಿಗೆ ಹೊರಟ ಹಡಗಿನಲ್ಲಿ ನಾವಿಕನಾಗಿ ಕೆಲಸಕ್ಕೆ ಸೇರಿದಾಗ ಹರ್ಮನ್ ಮೆಲ್ವಿಲ್‌ಗೆ ಕೇವಲ ಹದಿನೇಳು ವರ್ಷ ವಯಸ್ಸು.



'ಮಾಬಿಡಿಕ್' : ಮೆಲ್ವಿಲ್'

ಹಡಗಿನಲ್ಲಿನ ಕೊಳಕು ಪರಿಸರ, ಅಸಹ್ಯ ವ್ಯವಹಾರಗಳ ಅರಿವಾಗಲು ಮೆಲ್ವಿಲ್‌ಗೆ ಹೆಚ್ಚು ದಿನ ಬೇಕಾಗಲಿಲ್ಲ. "ಹಡಗಿನ ಅಡುಗೆಯಾಳು ಸ್ನಾನ ಮಾಡುತ್ತಿದ್ದುದನ್ನು ನಾನು ನೋಡಿದ್ದು ಒಂದೇ ಸಲ. ಕತ್ತಲೆ ಕವಿದಿದ್ದ ರಾತ್ರೆಯಲ್ಲಿ ಯಾರೂ ತನ್ನನ್ನು ನೋಡುತ್ತಿಲ್ಲ ಎಂಬ ಭರವಸೆಯಿಂದ, ಸಾರುಮಾಡುವ ದೊಡ್ಡ ಪಾತ್ರೆಯಲ್ಲೇ ಅವನು ಸ್ನಾನಮಾಡುತ್ತಿದ್ದ" ಎಂದು ಮೆಲ್ವಿಲ್ ಜ್ಞಾಪಿಸಿಕೊಂಡಿದ್ದಾನೆ. ಅಮೆರಿಕಕ್ಕೆ ಹಿಂದಿರುಗಿದ ಮೇಲೆ ಮೆಲ್ವಿಲ್ ಶಾಲಾ ಅಧ್ಯಾಪಕನಾದ. ಮೂರೂವರೆ ವರ್ಷಗಳ ಬಳಿಕ ಪುನಃ ನಾವಿಕನಾಗುವ ಹಂಬಲ ಇವನನ್ನು ಕಾಡತೊಡಗಿತು.

ಮೆಲ್ವಿಲ್ ಎರಡನೆಯ ಬಾರಿ ಕೆಲಸಕ್ಕೆ ಸೇರಿಕೊಂಡದ್ದು ತಿಮಿಂಗಿಲದ ಬೇಟೆಗೆ ಹೊರಟ ಹಡಗೊಂದರಲ್ಲಿ. ಇದರಲ್ಲಿನ ಪರಿಸ್ಥಿತಿ ಹೋಲಿಸಿದರೆ ಮೊದಲಿನ ಹಡಗೇ ಎಷ್ಟೋ ಮೇಲು. ಈ ಹಡಗಿನ ಕ್ಯಾಪ್ಟನ್ ಮಹಾ ಕ್ರೂರಿ. ಇತರ ನಾವಿಕರೂ ಅಷ್ಟೇ ಒರಟರು. ಆದರೆ ಟೋಬಿಯಸ್ ಗ್ರೀನ್ ಎಂಬ ಹುಡುಗ ಮಾತ್ರ ಮೆಲ್ವಿಲ್‌ನ ಗೆಳೆಯನಾದ. ದುರಸ್ತಿಗಾಗಿ ಮಾರ್ಕೆಸಾಸ್ ದ್ವೀಪಗಳಲ್ಲಿ ಒಂದಾದ ನೂಕು–ಹೀವಾದಲ್ಲಿ ಹಡಗು ನಿಂತಾಗ ಈ ಗೆಳೆಯರಿಬ್ಬರೂ ಆ ಹಡಗನ್ನು ಬಿಟ್ಟು ಓಡಿಹೋದರು.

ಇವರು ಸೇರಿದ್ದು ನರಭಕ್ಷಕರಿದ್ದ ಒಂದು ದ್ವೀಪವನ್ನು. ಆದರೆ ಇವರನ್ನು ಹಿಡಿದುಕೊಂಡ ಟೈಪೀ ಪಂಗಡದ ನರಭಕ್ಷಕರು ಸ್ನೇಹಪರರಾಗಿದ್ದರು. ಮೆಲ್ವಿಲ್‌ನ ಬಾತುಕೊಂಡ ಕಾಲನ್ನು ಗುಣಪಡಿಸಲು ವೈದ್ಯರನ್ನು ಹುಡುಕಿಕೊಂಡು ಬರಲು ಟೋಬಿಯಸ್ ಗ್ರೀನ್‌ಗೆ ಅನುಮತಿ ಕೊಟ್ಟರು. ಟೋಬಿಯಸ್ ಹಿಂದಿರುಗಿ ಬರಲಿಲ್ಲ. ಬೇರೊಂದು ಹಡಗಿನವರು ಆತನನ್ನು ಬಲಾತ್ಕಾರದಿಂದ ಒಯ್ದರು. ಮೆಲ್ವಿಲ್ ಒಬ್ಬನೇ ಹಲವಾರು ವಾರಗಳನ್ನು ಈ ದ್ವೀಪದಲ್ಲಿ ಕಳೆದ.

ಅಮೆರಿಕದ ನಾವಿಕನೊಬ್ಬ ನರಭಕ್ಷಕರ ಕೈಗೆ ಸಿಕ್ಕಿಬಿದ್ದಿರುವುದನ್ನು ಕೇಳಿ ಹತ್ತಿರದಲ್ಲೇ ಹಾದು ಹೋಗುತ್ತಿದ್ದ ಹಡಗಿನ ಕ್ಯಾಪ್ಟನ್ ನರಭಕ್ಷಕರಿಗೆ ತುಪಾಕಿ, ಸಿಡಿಮದ್ದು ಮತ್ತು ಹತ್ತಿ ಬಟ್ಟೆಗಳನ್ನು ಪರಿಹಾರವಾಗಿ ಕೊಟ್ಟು ಮೆಲ್ವಿಲ್‌ನನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದ. ಟೈಪೀಗಳು ಈ ನಿಯಮಕ್ಕೆ ಒಪ್ಪದಿದ್ದಾಗ ಮೆಲ್ವಿಲ್ ಮೆಲ್ಲನೆ ನುಣುಚಿಕೊಂಡು ಕಾದು ನಿಂತಿದ್ದ ದೋಣಿಗೆ ಹಾರಿ ಪರಾರಿಯಾಗಲು ಯತ್ನಿಸಿದ. ಈಜಿಕೊಂಡು

ಬಂದು ಅವನನ್ನು ಹಿಡಿಯಲು ಪ್ರಯತ್ನಿಸಿದ ಟೈಪೀ ಮುಖಂಡನನ್ನು ಮೆಲ್ವಿಲ್ ಕೊಲ್ಲಬೇಕಾಯಿತು.

ನೂಕು–ಹಿವಾ ದ್ವೀಪವನ್ನು ಬಿಟ್ಟು ಎರಡು ತಿಂಗಳ ಬಳಿಕ ಮೆಲ್ವಿಲ್ ನಾವಿಕರ ದಂಗೆಯೊಂದರಲ್ಲಿ ಭಾಗವಹಿಸಿ ತಾಯಿತಿ ದ್ವೀಪಕ್ಕೆ ಬಂದಿಳಿದ. ಇನ್ನೂ ಹಲವು ಸಾಹಸಗಳ ಬಳಿಕ ಈತ ಅಮೆರಿಕದ ನೌಕಾ ಪಡೆಯನ್ನು ಸೇರಿದ.

ಅಂತೂ ಇಂತೂ ಮನೆಸೇರಿದ ಇಪ್ಪತ್ತೈದರ ಮೆಲ್ವಿಲ್ ಸಾಹಸ ಕಥೆಗಳ ನಿಕ್ಷೇಪವೇ ಆಗಿದ್ದ.

1846ರಲ್ಲಿ ಪ್ರಕಟವಾದ 'ಟೈಪೀ' ಮೂರನೆಯ ವರ್ಷ ಹೊರಬಂದ 'ಓಮೂ' ಬೇಗನೆ ಜನಪ್ರಿಯವಾದುವು. ಇವೆರಡೂ ನರಭಕ್ಷಕರ ನಡುವೆ ನಡೆಸಿದ ಜೀವನವನ್ನು ಆಧರಿಸಿದ ಕಥೆಗಳು. 'ಮಾರ್ದಿ' ಮತ್ತು 'ರೆಡ್‌ಬರ್ನ್' 1849ರಲ್ಲಿ ಪ್ರಕಟವಾದುವು. ಮೂರನೆಯ ವರ್ಷ ಪ್ರಕಟವಾದ 'ವೈಟ್ ಜ್ಯಾಕೆಟ್' ಆಗಿನ ಕಾಲದ ನೌಕಾಜೀವನಕ್ಕೆ ಸಂಬಂಧಿಸಿದ್ದು. ಇದು ಪ್ರಕಟವಾದ ಮೇಲೆ ನಾವಿಕರಿಗೆ ಕೊಡುತ್ತಿದ್ದ ದೈಹಿಕ ಶಿಕ್ಷೆಯ ಪದ್ಧತಿ ರದ್ದುಗೊಳಿಸಲ್ಪಟ್ಟಿತೆಂಬುದು ಗಮನಾರ್ಹ ಅಂಶ. ಈ ಪುಸ್ತಕಗಳು ಪ್ರಕಟವಾದ ಮೇಲೆ ಸಾಕಷ್ಟು ಹಣವೂ ದೊರೆಯಿತು. ಬರವಣಿಗೆಯಿಂದ ಬದುಕಬಲ್ಲೆನೆಂಬ ಧೈರ್ಯವೂ ಅವನಿಗೆ ಬಂತು.

1850ರಲ್ಲಿ ಮೆಲ್ವಿಲ್ ತನ್ನ ಕುಟುಂಬದೊಡನೆ ಪಿಟ್ಸ್‌ಬರ್ಗ್ ಎಂಬಲ್ಲಿ ನೆಲೆಯೂರಿದ. ಉತ್ತಮ ಕಾದಂಬರಿಕಾರನಾಗಿ ರೂಪುಗೊಳ್ಳಬೇಕೆಂಬ ಅಭಿಲಾಷೆಯಿಂದ ಇಂಗ್ಲಿಷ್ ಸಾಹಿತ್ಯವನ್ನು ಅಭ್ಯಸಿಸತೊಡಗಿದ. ಶೇಕ್ಸ್‌ಪಿಯರ್ ಮತ್ತು ಇತರ ಶ್ರೇಷ್ಠ ನಾಟಕಕಾರರ ಪ್ರಭಾವ ಇವನ ಮೇಲೆ ಬಿತ್ತು.

ಒಂದು ವರ್ಷದ ಪರಿಶ್ರಮದ ಬಳಿಕ 1851ರಲ್ಲಿ 'ಮಾಬಿಡಿಕ್' ಪ್ರಕಟವಾಯಿತು. ನೆರೆಯಲ್ಲೇ ವಾಸಿಸಿದ್ದ ಸಾಹಿತಿಯೂ ಗೆಳೆಯನೂ ಆದ ನೆಥಾನಿಯಲ್ ಹಾಥಾರ್ನ್ ಇದನ್ನು ಓದಿ ಬಹಳವಾಗಿ ಮೆಚ್ಚಿಕೊಂಡ. ಮೆಲ್ವಿಲ್ ತನ್ನ ಈ ಕೃತಿಯನ್ನು ಹಾಥಾರ್ನ್‌ಗೇ ಅರ್ಪಿಸಿದ್ದ. ಆದರೆ ಜನ ಇವನ ಪ್ರತಿಭೆಯನ್ನು ಗುರುತಿಸಲಿಲ್ಲ. ಸಾಮಾನ್ಯ ಜೀವನದಲ್ಲಿ ಕಂಡು ಬರದ, ಪ್ರೌಢ ಹಾಗೂ ಕಾವ್ಯಮಯ ಭಾಷೆಯಲ್ಲಿ ರಚಿತವಾದ 'ಮಾಬಿಡಿಕ್'ನ ಶೈಲಿ ಬಹಳ ಹಳೆಯ ರೀತಿಯದು ಎಂದು ವಿಮರ್ಶಕರು ಅಭಿಪ್ರಾಯಪಟ್ಟರು.

ಪೂರ್ಣವಾಗಿ ಬಿಳಿ ಬಣ್ಣದ ಮೈಯುಳ್ಳ ಮಾಬಿಡಿಕ್ ಎಂಬ ಭಯಂಕರ ತಿಮಿಂಗಿಲವೊಂದು ಸಮುದ್ರಗಳಲ್ಲಿ ಸಂಚರಿಸುತ್ತಿರುವುದೆಂಬ ನಂಬಿಕೆ ಆಗಿನ ಕಾಲದ ನಾವಿಕರಲ್ಲಿತ್ತು. ಮೆಲ್ವಿಲ್‌ನ ದುರಂತ ಕಾದಂಬರಿ 'ಮಾಬಿಡಿಕ್'ನಲ್ಲಿ ಬರುವ ಕ್ಯಾಪ್ಟನ್ ಆಹಾಬ್‌ನ ಎಡ ಕಾಲನ್ನು ಇದು ಕಡಿದು ನುಂಗಿಬಿಟ್ಟಿತ್ತು. ಸೇಡು ತೀರಿಸಲು ಛಲದಿಂದ ಕ್ಯಾಪ್ಟನ್ ಆಹಾಬ್ ಈ ಬಿಳಿ ತಿಮಿಂಗಿಲವನ್ನು ಅರಸುತ್ತ ಸಮುದ್ರದಲ್ಲಿ ಅಲೆಯುವುದೇ 'ಮಾಬಿಡಿಕ್'ನ ಕಥಾವಸ್ತು. ತಿಮಿಂಗಿಲಬೇಟೆಯ ನಿಕಟ ಪರಿಚಯವಿದ್ದ ಮೆಲ್ವಿಲನ ಕೈಯಲ್ಲಿ ಈ ಸಾಹಸಕಥೆ ಅತಿ ನೈಜ ರೂಪವನ್ನು ಪಡೆದಿದೆ.

'ಮಾಬಿಡಿಕ್' ಜನಪ್ರಿಯವಾಗದೆ ಇದ್ದುದರಿಂದ ಮೆಲ್ವಿಲ್ ನಿರಾಶನಾದರೂ ಬರೆಯುವುದನ್ನು ಬಿಡಲಿಲ್ಲ. ತನ್ನ ಲೇಖನ ವ್ಯವಸಾಯವನ್ನು ಮುಂದುವರಿಸಿ 1852ರಲ್ಲಿ 'ಪಿಯರಿ' ಯನ್ನು ಪ್ರಕಟಿಸಿದ. ಅದಕ್ಕೂ ಇದೇ ಗತಿಯಾಯಿತು. ಅನಂತರ ಮೆಲ್ವಿಲ್ ಬರೆದದ್ದೇ ಕಡಮೆ. ಸುಂಕದ ಇಲಾಖೆಯಲ್ಲಿ ಮೇಲ್ವಿಚಾರಕನಾಗಿ. ಕೆಲಸಮಾಡುತ್ತ ಆಗಾಗ ಲಾದರೊಮ್ಮೆ ಕವಿತೆ ಬರೆಯುತ್ತ ಅನಾಮಧೇಯನಾಗಿ ಬಾಳಿದ. 1891ರ ಸೆಪ್ಟೆಂಬರ್ 28ರಂದು ಈತ ಕಾಲವಾಗುವುದಕ್ಕೆ ಮೊದಲೇ 'ಬಿಲ್ಲಿ ಬಡ್' ಎಂಬ ತನ್ನ ಕೊನೆಯ ಕಾದಂಬರಿಯನ್ನು ಬರೆದು ಮುಗಿಸಿದ್ದ. ಅದು ಅನೇಕ ವರ್ಷಗಳ ಅನಂತರ –1924ರಲ್ಲಿ –ಪ್ರಕಟವಾಯಿತು.

## ಮೇಸ್‌ಫೀಲ್ಡ್

" ನಿರ್ಜನ ಕಡಲು, ಆಗಸಗಳ ನಡುವೆ ನಾ ಮತ್ತೆ ತೇಲಬೇಕು.
ದಿಕ್ಕು ತಿಳಿಯಲೊಂದು ಚುಕ್ಕಿ, ತೇಲುವುದಕ್ಕೊಂದು ಹಡಗು
ಇವೆರಡೆ ಎನಗೆ ಸಾಕು"

ಎಳೆತನದ ಬಹುಭಾಗವನ್ನು ಸಮುದ್ರಯಾನದಲ್ಲಿ ಕಳೆದ ಇಂಗ್ಲೆಂಡಿನ ಕವಿ ಜಾನ್ ಮೇಸ್‌ಫೀಲ್ಡ್‌ನ ಕವಿತೆಯೊಂದರ ಸಾಲುಗಳಿವು.

ಇಂಗ್ಲೆಂಡಿಗೆ ಸೇರಿದ ಲೆಡ್‌ಬರಿಯಲ್ಲಿ ಮೇಸ್‌ಫೀಲ್ಡ್ 1878ನೆಯ ಜೂನ್ 1ರಂದು ಜನಿಸಿದ. ಚಿಕ್ಕ ವಯಸ್ಸಿನಲ್ಲಿಯೇ ತಬ್ಬಲಿಯಾದ ಮೇಸ್‌ಫೀಲ್ಡ್ ಸುಮಾರು 13 ವರ್ಷದವನಾಗಿದ್ದಾಗ ವೃತ್ತಿಶಿಕ್ಷಣ ಪಡೆಯಲು ಹಡಗಿನಲ್ಲಿ ಕೆಲಸಕ್ಕೆ ಸೇರಿದ. ವ್ಯಾಪಾರೀ ಹಡಗುಗಳಲ್ಲಿ ನಾವಿಕನಾಗಿ ಅನೇಕ ವರ್ಷಗಳ ಕಾಲ ದುಡಿದ. ಈ ಕಡಲ ಜೀವನ ಬೇಸರವಾದಾಗ, 1894ರಲ್ಲಿ ಅದನ್ನು ಬಿಟ್ಟು ಮೂರು ವರ್ಷಕಾಲ ನ್ಯೂಯಾರ್ಕಿನಲ್ಲಿ ನೆಲೆಸಿದ. ಜೀವನೋಪಾಯಕ್ಕಾಗಿ ರೊಟ್ಟಿ ಅಂಗಡಿಯಲ್ಲಿ, ಕುದುರೆಲಾಯದಲ್ಲಿ, ಜಮಖಾನೆ ತಯಾರಿಸುವ ಕಾರಖಾನೆಯಲ್ಲಿ ಕೆಲಸ ಮಾಡಿದ. ಬಿಡುವಿನ ಅವಧಿಯಲ್ಲಿ ಅನೇಕ ಪುಸ್ತಕಗಳನ್ನು ಓದಿದ. ಇದರ ಪರಿಣಾಮವಾಗಿ ತಾನೂ ಏಕೆ ಬರೆಯಬಾರದು, ಎನ್ನುವ ಯೋಚನೆ ಅವನಿಗೆ ಬಂತು.

1897ರಲ್ಲಿ ಮೇಸ್‌ಫೀಲ್ಡ್ ಲಂಡನಿಗೆ ಹಿಂದಿರುಗಿದ. ಕವಿತೆ, ಪ್ರಬಂಧ, ಸಣ್ಣ ಕಥೆಗಳನ್ನು ಬರೆದು ಪತ್ರಿಕೆಗಳಿಗೆ ಕಳುಹಿಸಿದ. 1902ರಲ್ಲಿ ಅವನ ಮೊದಲನೆಯ ಕವನಸಂಕಲನ 'ಸಾಲ್ಟ್ ವಾಟರ್ ಬ್ಯಾಲಡ್ಸ್' ಪ್ರಕಟವಾಯಿತು. ಈ ಸಂಗ್ರಹದಲ್ಲಿರುವ 'ಸೀ ಫಿವರ್' ಆತನ ಸಣ್ಣ ಕವಿತೆಗಳಲ್ಲಿ



ಆಸ್ಥಾನ ಕವಿ :
ಮೇಸ್‌ಫೀಲ್ಡ್

ಅಮೂಲ್ಯವಾದದ್ದು ಎನಿಸಿಕೊಂಡಿದೆ. 'ಸೌತ್ ಅಂಡ್ ಈಸ್ಟ್', 'ಆನ್ ದಿ ಹಿಲ್' ಅವನ ಇನ್ನೆರಡು ಉತ್ತಮ ಕವನ ಸಂಕಲನಗಳು.

ಮೇಸ್‌ಫೀಲ್ಡ್‌ನಿಗೆ ಕೀರ್ತಿ ತಂದ ಕೃತಿ 'ದಿ ಎವರ್ ಲಾಸ್ಟಿಂಗ್ ಮರ್ಸಿ'. ಇದೊಂದು ದೀರ್ಘ ಕಥನ ಕವನ. ಪ್ರಕಟವಾದದ್ದು 1911ರಲ್ಲಿ. ಪ್ರಾಸವೈಶಿಷ್ಟ್ಯ, ನವೀನತೆಗಳಿಂದ ಈ ಕವನ ಆಕರ್ಷಕವಾಗಿದೆ. ವಸ್ತು ನಿರೂಪಣೆಯಲ್ಲೂ ಹೊಸ ಮಾರ್ಗ ಹಿಡಿದಿದೆ. ಇದು ಮೇಸ್‌ಫೀಲ್ಡನ ಪ್ರಮುಖ ಕೃತಿಗಳಲ್ಲಿ ಒಂದು.

ಮೇಸ್‌ಫೀಲ್ಡ್ 'ಮಲ್ಟಿಟ್ಯೂಡ್ ಅಂಡ್ ಸಾಲಿಟ್ಯೂಡ್', 'ಸಾರ್ಡ್ ಹಾರ್ಕರ್', ಮುಂತಾದ ಕಾದಂಬರಿಗಳನ್ನೂ ಬರೆದಿದ್ದಾನೆ. 'ದಿ ಟ್ರಯಲ್ ಆಫ್ ಜೀಸಸ್', 'ದಿ ಕಮಿಂಗ್ ಆಫ್ ಕ್ರೈಸ್ಟ್' ಅವನು ಬರೆದ ನಾಟಕಗಳಲ್ಲಿ ಎರಡು. 'ಎ ಟರ್ಪಾಲಿನ್ ಮಸ್ಟರ್' ಅವನ ಸಣ್ಣಕಥೆಗಳ ಒಂದು ಸಂಗ್ರಹ. ಪ್ರಬಂಧ ವಿಮರ್ಶೆಗಳ ಸಂಕಲನ 'ವಿಲಿಯಂ ಶೇಕ್ಸ್‌ಪಿಯರ್ ಅಂಡ್ ಪೊಯೆಟ್ರಿ'.

1930ರಲ್ಲಿ ಮೇಸ್‌ಫೀಲ್ಡ್‌ನನ್ನು ಬ್ರಿಟನಿನ ರಾಷ್ಟ್ರಕವಿಯನ್ನಾಗಿ ಘೋಷಿಸಿ, ಗೌರವಿಸಿದರು.

1935ರಲ್ಲಿ 'ಆರ್ಡರ್ ಆಫ್ ಮೆರಿಟ್' ಪ್ರಶಸ್ತಿ ಅವನಿಗೆ ದೊರೆಯಿತು.

1952ರಲ್ಲಿ ರಚಿತವಾದ 'ಸೋ ಲಾಂಗ್ ಟು ಲರ್ನ್' ಮೇಸ್‌ಫೀಲ್ಡನ ಆತ್ಮಕಥೆ. ಅವನ 'ಬಾಕ್ಸ್ ಆಫ್ ಡಿಲೈಟ್ಸ್' ಮಕ್ಕಳಿಗಾಗಿ ಬರೆದ ಪುಸ್ತಕ.

ಕವಿತ್ವ, ಸಾಹಸಕಥನಗಳಲ್ಲಿ ಮೇಸ್‌ಫೀಲ್ಡ್ ಎತ್ತಿದ ಕೈ. ಕಥೆ ಹೇಳುವುದರಲ್ಲಿ ಅವನ ಜಾಣ್ಮೆ 14ನೆಯ ಶತಮಾನದ ಲೇಖಕ–ಕವಿ ಚಾಸರನ ಕೌಶಲವನ್ನು ನೆನಪಿಗೆ ತರುತ್ತದೆ.

1967ನೆಯ ಮೇ 12ರಂದು ಮೇಸ್‌ಫೀಲ್ಡ್ ನಿಧನನಾದ.

## ಮೈಕೆಲೆಂಜಲೋ

ಅಮೃತಶಿಲೆಯ ಬೃಹತ್ ತುಂಡೊಂದು ಬಿದ್ದಿತ್ತು. ಶಿಲ್ಪಕಲಾವಿದರಿಗೆ ಅದು ಸವಾಲೆನಂತಿತ್ತು. ಅದು ಅಸಮರ್ಪಕ ಆಕಾರದ ತುಂಡು. ಯಾವ ಶಿಲ್ಪಿಯೂ ಕೃತಿ ರಚನೆಗಾಗಿ ಅದನ್ನು ಆರಿಸಲಿಲ್ಲ.

ಕೊನೆಗೆ ಒಬ್ಬ ಶಿಲ್ಪಿ ತನ್ನ ಕೃತಿರಚನೆಗಾಗಿ ಆ ಶಿಲೆಯನ್ನು ಆಯ್ಕೆ ಮಾಡಿದ. ಸುಮಾರು ಮೂರು ವರ್ಷಗಳ ಕಾಲ ಅವನು ಯಾರ ಕಣ್ಣಿಗೂ ಬೀಳದಂತೆ ಅದರ ಮೇಲೆ ಕೆಲಸ ನಡೆಸಿದ. ಜನರಿಗೆ ಕೇಳಿಸುತ್ತಿದ್ದುದು ಅವನ ಉಳಿಯ ಹೊಡೆತದ ಶಬ್ದ ಮಾತ್ರ. ಕೊನೆಗೊಮ್ಮೆ ಆ ಮೂರ್ತಿಯ ನಿರ್ಮಾಣ ಮುಗಿದಾಗ ಶಿಲ್ಪಿಯ ಸಾಮರ್ಥ್ಯ ಬೆಳಕಿಗೆ ಬಂತು. ಆ ಮೂರ್ತಿ ಗೋಲಿಯತ್ ಎಂಬ ರಾಕ್ಷಸನನ್ನು ಕೊಂದ ಡೇವಿಡ್‌ನದು. ಈ ಅಪೂರ್ವ ಕೃತಿಯನ್ನು ನಿರ್ಮಿಸಿದಾತ ಮೈಕೆಲೆಂಜಲೋ. ಅವಿವಾಹಿತನಾಗಿಯೇ ಉಳಿದು ತನ್ನ ಆಯುಸ್ಸನ್ನು ಕಲೆಗಾಗಿ ಸವೆಸಿದ ಕಲಾವಿದ ಆತ.

ಇಟಲಿಯ ಫ್ಲಾರೆನ್ಸಿನ ಬಳಿಯಿರುವ ಕ್ಯಾಪ್ರಿಸಿಯಲ್ಲಿ ಮೈಕೆಲೆಂಜಲೋ 1475ರ ಮಾರ್ಚ್ 6ರಂದು ಜನಿಸಿದ. ಮಗ ಹುಟ್ಟಿದಾಗ ಆಕಾಶದಲ್ಲಿ ಶುಭ ಲಕ್ಷಣಗಳು ಕಂಡುಬಂದುದರಿಂದ ತಂದೆ ತನ್ನ ಮಗನ ಭವಿಷ್ಯದ ಬಗೆಗೆ ತುಂಬಾ ಆಶಾಭಾವನೆಗಳನ್ನು ಬೆಳೆಸಿಕೊಂಡ.

ಆದರೆ ಮಗನನ್ನು ಶಾಲೆಗೆ ಕಳುಹಿಸಿದಾಗ ಅವನಿಗೆ ಓದಿನಲ್ಲಿ ಏನೇನೂ ಆಸಕ್ತಿ ಇಲ್ಲ ಎಂಬುದು ಸ್ಪಷ್ಟವಾಯಿತು. ಆ ಹುಡುಗನಿಗಿದ್ದದ್ದು ಚಿತ್ರಕಾರನಾಗಬೇಕೆಂಬ ಹೆಬ್ಬಯಕೆಯೊಂದೇ.



ಅಮರ : ಮೈಕೆಲೆಂಜಲೋ

ಕೊನೆಗೆ ತಂದೆ ಮೈಕೆಲೆಂಜಲೋನನ್ನು ಚಿತ್ರಕಾರ ಘಿರ್ಲ್ಯಾಂಡಿಯೋ ಬಳಿ ಕಳುಹಿಸಿದ. ಅಲ್ಲಿ ಅವನಿಗೆ ಚಿತ್ರಕಲೆ, ಭಿತ್ತಿಚಿತ್ರ ರಚನೆಗಳಲ್ಲಿ ಶಿಕ್ಷಣ ದೊರೆಯಿತು. ಅಲ್ಲಿಂದ ಮುಂದೆ ಮೈಕೆಲೆಂಜಲೋ ಫ್ಲಾರೆನ್ಸಿನ ಅರಸ ಲಾರೆನ್ಜೊ ದ ಮೆಡಿಸಿ ಸ್ಥಾಪಿಸಿದ್ದ ಶಿಲ್ಪ ಶಾಲೆಯಲ್ಲಿ ಅಭ್ಯಾಸ ಮುಂದುವರಿಸಿದ. ಶಿಲ್ಪಕಲೆಯನ್ನು ಕರಗತಮಾಡಿಕೊಂಡ ಆ ಹುಡುಗನ ಕಲಾನೈಪುಣ್ಯ ಅರಸನ ಗಮನ ಸೆಳೆಯಿತು. ಅವನು ಹುಡುಗನನ್ನು ತನ್ನ ಅರಮನೆಗೆ ಕರೆದೊಯ್ದ. ಎರಡು ವರ್ಷಗಳ ಕಾಲ ಮೈಕೆಲೆಂಜಲೋ ಅಲ್ಲಿಯೇ ಇದ್ದ. ಆ ಅವಧಿಯಲ್ಲಿ ಮೈಕೆಲೆಂಜಲೋಗೆ ಆಸ್ಥಾನದ ವಿದ್ವಾಂಸರ ಸಹವಾಸ ದೊರೆಯಿತು. ಪ್ಲೇಟೋನ ತತ್ತ್ವಜ್ಞಾನ ಹಾಗೂ ದಾಂತೆಯ ಕವಿತೆಗಳ ಪರಿಚಯ ಅವನಿಗಾಯಿತು. ಅವನಲ್ಲಿ ಕವಿತಾಶಕ್ತಿ ಜಾಗೃತವಾಯಿತು.

1492ರಲ್ಲಿ ಲಾರೆನ್ಜೊ ಮೃತನಾದ ಮೇಲೆ ಮೈಕೆಲೆಂಜಲೋ ರೋಮ್ ನಗರಕ್ಕೆ ಬಂದು ಯೇಸುವಿನ ತಾಯಿ (ಮೆಡೋನ) ತನ್ನ ಮಗನ ಮೃತದೇಹವನ್ನಿಟ್ಟುಕೊಂಡು ದುಃಖಿಸುತ್ತಿರುವ ಶಿಲ್ಪವನ್ನು ಕಡೆದ. ಅನೇಕ ಮೂರ್ತಿಗಳನ್ನು ಅವನು ಕಡೆದಿದ್ದಾನಾದರೂ ಅವನು ತನ್ನ ಅಂಕಿತವನ್ನು ಮೂಡಿಸಿರುವುದು ಇದೊಂದು ಶಿಲ್ಪದ ಮೇಲೆ ಮಾತ್ರ. ಈ ಕೃತಿಯ ಮೇಲೆ ತನ್ನ ಹೆಸರನ್ನು ಏಕೆ ಕೆತ್ತಿದ ಎಂಬುದನ್ನು ಕುರಿತು ಒಂದು ಕಥೆ ಇದೆ. ಆ ಶಿಲ್ಪ ಜನರ ಮೆಚ್ಚುಗೆಗೆ ಪಾತ್ರವಾಯಿತಾದರೂ ಆ ಕೃತಿ ಬೇರೊಬ್ಬ ಕಲಾವಿದನಿಂದ ನಿರ್ಮಿತವಾದುದೆಂದು ಅವರು ಆಡಿಕೊಳ್ಳುತ್ತಿದ್ದುದು ಮೈಕೆಲೆಂಜಲೋನ ಕಿವಿಗೆ ಬಿತ್ತು. ಈ ತಪ್ಪು ಅಭಿಪ್ರಾಯವನ್ನು ಕೊನೆಗಾಣಿಸಬೇಕೆಂದು, ಒಂದು ರಾತ್ರಿ ಅವನು ಆ ಶಿಲ್ಪವನ್ನಿರಿಸಿದ್ದ ಇಗರ್ಜಿಗೆ ಹೋಗಿ ಆ ಮೂರ್ತಿಯ ಮೇಲೆ ತನ್ನ ಹೆಸರನ್ನು ಕೆತ್ತಿದ.

ತಂದೆಯ ಕರೆಯನ್ನು ಮನ್ನಿಸಿ ಮೈಕೆಲೆಂಜಲೋ 1501ರಲ್ಲಿ ಫ್ಲಾರೆನ್ಸಿಗೆ ಹಿಂದಿರುಗಿದ. ಅಲ್ಲಿ ಅವನು ನಡೆಸಿದ ಮಹಾ ಸಾಧನೆ —ಆರಂಭದಲ್ಲೇ ಹೇಳಿದ ಡೇವಿಡ್‌ನ ಮೂರ್ತಿಯ ರಚನೆ. ಇದನ್ನು ಫ್ಲಾರೆನ್ಸಿನ ಅರಮನೆಯ ಮುಂದೆ ಪ್ರತಿಷ್ಠಾಪಿಸಲಾಯಿತು.

1505ರಲ್ಲಿ ಪೋಪ್ 2ನೆಯ ಜೂಲಿಯಸ್, ಮೈಕೆಲೆಂಜಲೋನನ್ನು ರೋಮಿಗೆ ಬರಮಾಡಿಕೊಂಡು, ತನಗಾಗಿ ಒಂದು ಗೋರಿಯನ್ನು ರಚಿಸಬೇಕು—ಎಂದ. ಈ ಕೆಲಸ ನಡೆಯುತ್ತಿದ್ದಾಗ ಸಿಸ್ಟೈನ್ ಚಾಪಲ್‌ನ ಛಾವಣಿ ಒಳಮೈಯನ್ನು ಚಿತ್ರಗಳಿಂದ ಸಿಂಗರಿಸಬೇಕೆಂದು ಪೋಪ್ ಅವನಿಗೆ ಸೂಚಿಸಿದ. ಮೈಕೆಲೆಂಜಲೋ "ಚಿತ್ರರಚನೆ ನನ್ನ ಕೆಲಸವಲ್ಲ, ರಾಫೇಲ್ ಮಾಡಲಿ," ಎಂದು ಹೇಳಿದ. ಆದರೆ ಪೋಪ್ ಬಲವಂತಮಾಡಿ ಆ ಕೆಲಸ ಮಾಡುವಂತೆ ಮೈಕೆಲೆಂಜಲೋನನ್ನು ಒಪ್ಪಿಸಿದ. 10,000 ಚದರ ಅಡಿಗಳಷ್ಟು ವಿಸ್ತಾರದಲ್ಲಿ ಮೈಕೆಲೆಂಜಲೋ ಚಿತ್ರ ರಚಿಸಬೇಕಾಯಿತು. ಅವನು ತನ್ನ ಚಿತ್ರರಚನೆಗಾಗಿ ಕ್ರೈಸ್ತಧರ್ಮದ 'ಸೃಷ್ಟಿಪುರಾಣ'ದಿಂದ ವಿಷಯಗಳನ್ನು ಆರಿಸಿಕೊಂಡ. ಪ್ರಪಂಚದ ಉದಯ, ಸೂರ್ಯ ಚಂದ್ರರ ಸೃಷ್ಟಿ, ಮಾನವನ ಸೃಷ್ಟಿ ಈ ಚಿತ್ರಗಳಲ್ಲಿ ಕೆಲವು. ನಾಲ್ಕು ವರ್ಷ ನಿರಂತರವಾಗಿ ಶ್ರಮಿಸಿ ಈ ಎಲ್ಲ ಚಿತ್ರಗಳನ್ನು ಬರೆದು ಪೂರೈಸಿದ. ಈ ಚಿತ್ರಮಾಲೆ ಮೈಕೆಲೆಂಜಲೋನ ಮಹತ್ಸಾಧನೆಗಳಲ್ಲೊಂದು ಎನಿಸಿದೆ. ಈ ಚಿತ್ರಗಳ ರಚನೆ ಆದ ಮೇಲೆ ಅವನು ಪುನಃ ಗೋರಿಗೆ ಸಂಬಂಧಿಸಿದ ಕೆಲಸ ಮುಂದುವರಿಸಿದ. ಅದರಲ್ಲಿ ಮೋಸೆಸ್‌ನ ಗುಲಾಮರ ಮೂರ್ತಿಗಳು ಮುಖ್ಯವಾದುವು. ಮೈಕೆಲೆಂಜಲೋ ಮಧ್ಯೆಮಧ್ಯೆ ಬೇರೆ ಬೇರೆ ಕೆಲಸಗಳನ್ನು ಮಾಡಿ ಮುಗಿಸುತ್ತಿದ್ದುದರಿಂದ, ಸ್ಮಾರಕದ ಕೆಲಸ ಪೂರ್ತಿಯಾಗಲು ಅನೇಕ ವರ್ಷಗಳೇ ಬೇಕಾದುವು.

ಮೆಡಿಸಿ ಮನೆತನದವರ ಗೋರಿಗಳು ಫ್ಲಾರೆನ್ಸಿನ ಸಾನ್ ಲಾರೆನ್ಸೊ ಇಗರ್ಜಿಯಲ್ಲಿವೆ. ಇದರ ಕೆಲಸಕ್ಕಾಗಿ ಮೈಕೆಲೆಂಜಲೋ ನೇಮಕಗೊಂಡಾಗ ರೋಮಿನಿಂದ ಫ್ಲಾರೆನ್ಸಿಗೆ ಆತ ತಿರುಗಿ ಬರಬೇಕಾಯಿತು. ಆತ ನಿರ್ಮಿಸಿದ ಲಾರೆನ್ಸೊ ದ ಮೆಡಿಸಿ ಕುಳಿತುಕೊಂಡಿರುವಂತಿರುವ ಶಿಲ್ಪ ಒಂದು ಅಪೂರ್ವ ಕೃತಿ ಎನಿಸಿದೆ.



ಗುಲಾಮನ ಶಿಲ್ಪ
—ಮೈಕೆಲೆಂಜಲೋ ಕೃತಿ

ಫ್ರೆಂಚರು, ಜರ್ಮನರು, ಸ್ಪೇನಿನವರು 1527ರಲ್ಲಿ ಇಟಲಿಯ ಮೇಲೆ ದಾಳಿ ಮಾಡಿದರು. ಫ್ಲಾರೆನ್ಸಿನ ರಕ್ಷಣೆಯನ್ನು ಬಲಪಡಿಸುವ ಹೊಣೆ ಮೈಕೆಲೆಂಜಲೋನ ಮೇಲೆ ಬಿತ್ತು. ಅವನು ಫ್ಲಾರೆನ್ಸಿನ ಭದ್ರತೆಗಾಗಿ ಒಂದು ಕೋಟೆಯನ್ನು ನಿರ್ಮಿಸಿದ.

1534ರಲ್ಲಿ ಮೈಕೆಲೆಂಜಲೋ ಫ್ಲಾರೆನ್ಸನ್ನು ಬಿಟ್ಟು ಮತ್ತೆ ರೋಮ್‌ಗೆ ಹೋಗಿ ಕೊನೆಯವರೆಗೂ ಅಲ್ಲೇ ನೆಲೆಸಿದ. ವಾಟಿಕನ್ ಸೌಧದ ಸಿಸ್ಟೈನ್‌ಪ್ರಾರ್ಥನಾ ಭವನದಲ್ಲಿ 'ಕೊನೆಯ ತೀರ್ಪು' ಚಿತ್ರವನ್ನು ರಚಿಸುವ ಕೆಲಸವನ್ನು ಮೈಕೆಲೆಂಜಲೋಗೆ ವಹಿಸಿಕೊಡಲಾಯಿತು. ಈ ಚಿತ್ರದಲ್ಲಿ ವ್ಯಕ್ತಿಗಳ ಆಕಾರ ದೊಡ್ಡದು ; ಚಿತ್ರಣ ಶಕ್ತಿಯುತವಾಗಿದೆ.



'ಸಂತ ಜಾನನೊಡನೆ ಮೆಡೋನ್ನ ಮತ್ತು ಮಗು'
—ಮೈಕೆಲೆಂಜಲೋನ ಅಪೂರ್ಣ ಕೃತಿ

ಸಂತ ಪೀಟರಿನ ಇಗರ್ಜಿ ವಿಶ್ವದಲ್ಲೇ ಹಿರಿದಾದದ್ದು. ಇದರ ಬೃಹತ್ ಗೋಪುರದ ನಿರ್ಮಾಣ ಕಾರ್ಯವನ್ನು ಕೂಡ ಮೈಕೆಲೆಂಜಲೋ ಸಮರ್ಥವಾಗಿ ನಿರ್ವಹಿಸಿದ. ಅವನ ವಾಸ್ತುಶಿಲ್ಪ ಶಾಸ್ತ್ರ ಪ್ರೌಢಿಮೆಯನ್ನು ಈ ಕೃತಿಯಿಂದ ಮನಗಾಣಬಹುದು.

ವೃದ್ಧನಾದ ಮೈಕೆಲೆಂಜಲೋ ರೋಮ್‌ನಲ್ಲಿ ಒಂದು ಸಣ್ಣ ಮನೆಯಲ್ಲಿ ಇರತೊಡಗಿದ. ಹಣವಂತನಾಗಿದ್ದರೂ ಸರಳ ರೀತಿಯಲ್ಲಿ ಜೀವಿಸುತ್ತಿದ್ದ. ಶುದ್ಧ ಚಾರಿತ್ರ್ಯವುಳ್ಳ ಬಡ ಕನ್ಯೆಯರ ಮದುವೆ ಖರ್ಚಿಗಾಗಿ ಧನ ಸಹಾಯ ಮಾಡುತ್ತಿದ್ದ.

ಮೈಕೆಲೆಂಜಲೋ ಕವಿ ಕೂಡ. ಕ್ರೈಸ್ತ ಧರ್ಮ, ಪ್ರೇಮದ ಸಂತಸ, ಕಲೆಯ ಶಕ್ತಿ ಅವನ ಅನೇಕ ಕವಿತೆಗಳ ವಸ್ತುಗಳು.

ಮೈಕೆಲೆಂಜಲೋ ನಿರ್ಮಿಸಿದ ಮಹಾಶಿಲ್ಪ 'ನಿದ್ರಿಸುತ್ತಿರುವ ನಾರಿ' ಅವನ ಕಾಲದಲ್ಲೇ ಎಲ್ಲ ಪ್ರಮುಖ ಕಲಾವಿದರ ಪ್ರಶಂಸೆಗೆ ಪಾತ್ರವಾಯಿತು. ಈ ಶಿಲ್ಪವನ್ನು ಕುರಿತು ಮೈಕೆಲೆಂಜಲೋ ಬರೆದಿರುವ ಕವಿತೆ ಅವನ ವ್ಯಕ್ತಿತ್ವ, ತಾತ್ತ್ವಿಕದೃಷ್ಟಿ, ಕಾವ್ಯರಚನಾಶಕ್ತಿಗಳನ್ನು ಎತ್ತಿತೋರಿಸುತ್ತದೆ. ಆ ಶಿಲ್ಪವೇ ಹೇಳುವಂತಿರುವ ಮಾತುಗಳು ಇವು :

" ನಿದ್ರೆ ನನಗೆ ಪ್ರಿಯ. ಅದಕ್ಕಿಂತ ಪ್ರಿಯ ಕಲ್ಲಿನಲ್ಲಿ ಕೆತ್ತಿರುವ
ನನ್ನ ಈ ರೂಪ ; ನಾಚಿಕೆಗೇಡಿತನ ವಿನಾಶಗಳಿರುವನಕ
ಅದೊಂದು ವರ —ಕೇಳಲು, ನೋಡಲು ಆಗದಿರುವುದು.
ನನ್ನನೆಬ್ಬಿಸಬೇಡಿ —ಮೆಲುದನಿಯಲಿ ಮಾತಾಡಿ "

ಮೈಕೆಲೆಂಜಲೋ ಮೆಡಿಸಿ ಮನೆತನದ ಅರಸರಿಗಾಗಿ ಅಮೋಘ ಶಿಲ್ಪಗಳನ್ನು ರಚಿಸಿದ; ಅವರಿಂದ ಪೋಷಣೆ ಪಡೆದ. ಆದರೂ, ಫ್ಲಾರೆನ್ಸಿನಲ್ಲಿ ಗಣರಾಜ್ಯ ಸ್ಥಾಪನೆ ಮಾಡಲು ನಡೆದ ಪ್ರಜಾ ಆಂದೋಳನವನ್ನು ಹತ್ತಿಕ್ಕಿ ಅವರು ಪ್ರಾಬಲ್ಯಕ್ಕೆ ಬಂದದ್ದು ಅವನಿಗೆ ದುಃಖವನ್ನುಂಟುಮಾಡಿತು. ಈ ಶೋಕಭಾವ ಅವನ ಕೃತಿಗಳಲ್ಲಿ ಕಾಣುತ್ತದೆ ಎಂಬ ಅಭಿಪ್ರಾಯವಿದೆ.

ಲಿಯೊನಾರ್ಡೊ ದ ವಿಂಚಿ, ರಾಫೇಲ್‌ರಂಥ ಮಹಾಶಿಲ್ಪಿಗಳ, ಚಿತ್ರಕಾರರ ಸಮಕಾಲೀನ ಮೈಕೆಲೆಂಜಲೋ ; ಅವರಿಗೆ ಸಮಾನಸ್ಕಂಧನಾಗಿ ತಲೆಯೆತ್ತಿ ನಿಂತು ಅಪಾರ ಜನಪ್ರಿಯತೆಯನ್ನೂ ಘನತೆಯನ್ನೂ ಗಳಿಸಿಕೊಂಡವನು.

ಮೈಕೆಲೆಂಜಲೋ [illegible] ರೋಮ್ ನಗರ ದಲ್ಲಿ ನಿಧನನಾದ. ತಾನು ಹುಟ್ಟಿದಾಗ ಕಂಡುಬಂದ ಶುಭ ಶಕುನಗಳಿಗೆ [illegible] ವ್ಯಕ್ತಿಯನ್ನಾಗಲಿ ಸಾಧನೆಯನ್ನಾಗಲೀ [illegible] ಹಾಗೆ ಸಾಧ್ಯವಾಗಲಿಲ್ಲವೆಂಬುದು ಮೈಕೆಲೆಂಜ ಲೋನ [illegible]. ಅದರಿಂದ ಅವನು ವ್ಯಥಿತನೂ ಆಗಿದ್ದ. ಆದರೆ [illegible] ಶಕುನಗಳು ಫಲಿಸುವುದೇ [illegible]ದ್ದರು.

ಅವನ ಮರಣಾನಂತರ ನಾಲ್ಕು ಶತಮಾನಗಳು ಕಳೆದಿವೆ. ಮೈಕೆಲೆಂಜ ಲೋನ ಕೀರ್ತಿ ಸ್ಥಿರವಾಗಿ ಉಳಿದಿದೆ.

ಮೈಕೆಲೆಂಜಲೋನ ಕೃತಿಗಳಲ್ಲಿ —ಅವು ಚಿತ್ರವೇ ಆಗಿರಲಿ ಶಿಲ್ಪವೇ ಆಗಿರಲಿ — ಜೀವಕಳೆಯನ್ನು ಕಾಣಬಹುದು. ತನ್ನ ಜೀವನದ ಸುಖ ದುಃಖಗಳ ಅನುಭವಗಳನ್ನು ಮೈಕೆಲೆಂಜಲೋ ತಾನು ರಚಿಸಿದ ವ್ಯಕ್ತಿಗಳಲ್ಲಿ ತುಂಬಿದ್ದಾನೆಯೋ ಎನಿಸುವಷ್ಟು ಸಹಜ ಸುಂದರ ಭಾವ. ಅವುಗಳಲ್ಲಿ ಮೂಡಿದ ಭಾವ. ಭಂಗಿ ಎರಡರಲ್ಲೂ ಅವು ಅದ್ವಿತೀಯ. ಜಗತ್ತಿನ ಕಲಾಪ್ರಪಂಚಕ್ಕೆ ಅವು ಅಮೂಲ್ಯ ಕಾಣಿಕೆಗಳು.

## ಮೈಸೂರು ವಾಸುದೇವಾಚಾರ್ಯ

ಪರ್ವಕಾಲಗಳಲ್ಲಿ ಶ್ರೀರಂಗಪಟ್ಟಣಕ್ಕೆ ಹೋಗಿ ಕಾವೇರಿ ಸ್ನಾನ. ಶ್ರೀರಂಗನಾಥ ದರ್ಶನ ಮುಗಿಸಿ ಬರುವುದು ಮೈಸೂರುವಾಸಿಗಳ ಹಳೆಯ ಸಂಪ್ರದಾಯ. ಆ ಕಾಲದಲ್ಲಿ ವಾಹನ ಸೌಕರ್ಯ ಅಷ್ಟಾಗಿ ಇರಲಿಲ್ಲ. ಕಾಲು ನಡಿಗೆಯಲ್ಲಿ ಹೋಗಿಬರುವುದು ಸಾಮಾನ್ಯವಾಗಿತ್ತು. ಹೀಗೆ ಯಾವುದೋ ಒಂದು ದಿನ ಮೈಸೂರಿ ನಿಂದ ಹೊರಟ ಯಾತ್ರಿಕರು ಗುಂಪು ಗುಂಪಾಗಿ ಶ್ರೀರಂಗಪಟ್ಟಣದೆಡೆಗೆ ಸಾಗಿ ದ್ದರು. ಇಬ್ಬರು ಹುಡುಗರು ಇಂಥ ಒಂದು ಗುಂಪನ್ನು ಸೇರಿಕೊಂಡರು. ಒಬ್ಬ ಹತ್ತು–ಹನ್ನೆರಡು ವಯಸ್ಸಿ ನವನು, ಇನ್ನೊಬ್ಬ ಇವನಿಗಿಂತ ಎರಡು–ಮೂರು ವರ್ಷ ಹಿರಿಯ. ಚಿಕ್ಕವನು ಮೂಕ ; ದೊಡ್ಡವನು ಕಿವುಡ. ಅವರ ದುರವಸ್ಥೆಯನ್ನು ಕಂಡು ಉಳಿದವರಿಗೆಲ್ಲ ಕನಿಕರ ; ಕಿವುಡ, ಮೂಕರಾಗಿದ್ದರೂ ಶ್ರದ್ಧೆ ಯಿಂದ ತೀರ್ಥ ಸ್ನಾನಕ್ಕೆ ಬರುತ್ತಿದ್ದಾ ರಲ್ಲ ಎಂಬ ಮೆಚ್ಚುಗೆ. ಶ್ರೀರಂಗ ಪಟ್ಟಣ ಸೇರಿ ಸ್ನಾನಕ್ಕೆಂದು ನದಿಗಿಳಿ ದೊಡನೆಯೇ ಆ ಅಂಗವಿಕಲರ 'ಶಾಪ ವಿಮೋಚನೆಯಾಯಿತು. ಮೂಕನ ಮುಖದಿಂದ ಸ್ಫುಟವಾದ ಮಂತ್ರೋಚ್ಚಾರಣೆ ಆರಂಭವಾಯಿತು. ಆಡಿದ್ದೆಲ್ಲ ಕೇಳಿಸಿತು ಕಿವುಡನಿಗೆ.

'ಸಂಗೀತ ಕಲಾರತ್ನ'

ಬುದ್ಧಿವಂತರಾದ ಈ ಹುಡುಗರು ಇಷ್ಟೊಂದು ಜನರ ಮೇಲೆ ಹಾಸ್ಯದ ಚಟಾಕಿ ಹಾರಿಸಿದ್ದರು. ಇವರ ಜೊತೆಯಲ್ಲಿ ಬಂದವರಿಗೆಲ್ಲ ಅದುವರೆಗೂ ತಮ್ಮೊಡನೆ ಚೆಲ್ಲಾಟ ನಡೆಸಿ ತಮ್ಮನ್ನು ಮೂರ್ಖರನ್ನಾಗಿ ಮಾಡಿದ ಇವರ ಮೇಲೆ ಕೋಪ. ಇವರ ಜೊತೆಯಲ್ಲಿ ಆ ಹಾಸ್ಯ ಪ್ರಸಂಗವನ್ನು ನೆನೆದು ನಗು.

ತುಂಟತನಕ್ಕೆ ಹೆಸರಾಗಿದ್ದ 'ಮೂಕ'ನೇ ಮುಂದೆ 'ಸಂಗೀತ ಕಲಾರತ್ನ' ಎನಿಸಿದ. ಸುಂದರ ಕೃತಿಗಳನ್ನು ರಚಿಸಿ ಕರ್ನಾಟಕ ಸಂಗೀತ ಸಂಪತ್ತನ್ನು ಬೆಳೆಸಿದ. ಸಂಗೀತ ವಿಚಾರದಲ್ಲಿ ಏನಾದರೂ ಸಮಸ್ಯೆ ತಲೆದೋರಿದಾಗ ಪರಿಹಾರಕ್ಕಾಗಿ ಜನ ಈತನ ಬಳಿಗೆ ಬರುವಷ್ಟು ಅಗಾಧವಾಗಿತ್ತು ಈತನ ಸಂಗೀತಜ್ಞಾನ.

ಹೀಗೆ ಖ್ಯಾತಿಪಡೆದ ವ್ಯಕ್ತಿಯೇ ಮೈಸೂರು ವಾಸುದೇವಾಚಾರ್ಯರು.

ವಾಸುದೇವಾಚಾರ್ಯರ ತಂದೆ ಸುಬ್ರಹ್ಮಣ್ಯಾಚಾರ್ಯರು ದೊಡ್ಡ ಸಂಸ್ಕೃತ ಪಂಡಿತರು. ಮೈಸೂರು ಅರಮನೆಯಲ್ಲಿ ಪುರಾಣಿಕರಾಗಿದ್ದವರು. ಅವರ ಹಿರಿಯ ಮಗ ವಾಸುದೇವ ಹುಟ್ಟಿದ್ದು 1865ರ ಮೇ 28ರಂದು. ಮಗುವಿಗೆ ಮೂರು ವರ್ಷ ಕಳೆಯುವ ಹೊತ್ತಿಗೆ ತಂದೆಯ ವಿಯೋಗ ವಾದದ್ದರಿಂದ ಅಜ್ಜನ ಆಶ್ರಯ ಪಡೆಯಬೇಕಾಯಿತು. "ವಾಸುವನ್ನು ತಂದೆಯಂತೆ ಪಂಡಿತನನ್ನಾಗಿ ಮಾಡಿ ವಂಶದ ಕೀರ್ತಿ ಉಳಿಸ್ತೇನೆ," ಎಂದು ಅಜ್ಜ ಗೋಪಾಲಾಚಾರ್ಯ ನಿರ್ಧರಿಸಿದರು. ಅರಮನೆಯ ಅಧಿಕಾರಿ ಗಳನ್ನು ಕಂಡು ಹುಡುಗನ ತಂದೆಯ ವೇತನವನ್ನು ಹುಡುಗನಿಗೆ ಕೊಡಿಸ ಬೇಕೆಂದು ತುಂಬ ಪ್ರಯತ್ನಪಟ್ಟರು. ಈ ಪ್ರಯತ್ನದ ಫಲವಾಗಿ ಅವನಿಗೆ ತಿಂಗಳಿಗೆ ನಾಲ್ಕೂವರೆ ರೂಪಾಯಿ ಸಂದಾಯವಾಗುವ ಏರ್ಪಾಡಾಯಿತು.

ವಾಸುದೇವನಿಗೆ ಕಿರಿಯವಯಸ್ಸಿ ನಿಂದಲೇ ಸಂಸ್ಕೃತ ಪಾಠ ಆರಂಭ ವಾಯಿತು. ಪ್ರೌಢ ಸಂಸ್ಕೃತ ವಿದ್ಯಾ ಭ್ಯಾಸ ನಡೆದದ್ದು ಮೈಸೂರು ಮಹಾ ರಾಜಾ ಸಂಸ್ಕೃತ ಮಹಾಪಾಠಶಾಲೆ ಯಲ್ಲಿ. ಆದರೂ ಆಸಕ್ತಿ ಮಾತ್ರ ಸಂಗೀತದಲ್ಲೇ. ಅಜ್ಜನಿಗೆ ತಿಳಿಯದಂತೆ ಸಂಗೀತ ವಿದ್ವಾಂಸರೊಬ್ಬರಲ್ಲಿ ಪಾಠ ಹೇಳಿಸಿಕೊಳ್ಳಲು ಪ್ರಯತ್ನಪಟ್ಟದ್ದೂ ಉಂಟು. ಈ ಸುದ್ದಿ ಅಜ್ಜನಿಗೆ ತಿಳಿದು "ವಂಶಕ್ಕೇ ಕಳಂಕ ತರುವಂಥ ಕೆಲಸಕ್ಕೆ ಮನಸ್ಸು ಮಾಡಿದನಲ್ಲ ವಾಸು," ಎಂದು ನೊಂದುಕೊಂಡರು. ಮೊಮ್ಮ ಗನ ಮೇಲಿನ ನಿಯಂತ್ರಣವನ್ನು ಮತ್ತಷ್ಟು ಬಲಪಡಿಸಿದರು.

ಒಮ್ಮೆ ಪಾಠಶಾಲೆಯಲ್ಲೇ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಮತ್ತು ಮಹಾ ವೈದ್ಯನಾಥ ಅಯ್ಯರ್ ಅವರ ಕಚೇರಿ ಗಳನ್ನು ಕೇಳುವ ಸುಯೋಗ ವಾಸು ವಿಗೆ ದೊರೆಯಿತು. "ಕಲಿತರೆ ಇಂಥ ಸಂಗೀತವನ್ನೇ ಕಲಿಯಬೇಕು," ಎಂದು ನಿರ್ಧರಿಸಿದ್ದೂ ಆಯಿತು. ಮೈಸೂರು ಮಹಾರಾಜರಾಗಿದ್ದ ಚಾಮರಾಜ ಒಡೆಯರನ್ನು ಕಂಡು ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಬಳಿ ಸಂಗೀತ ಅಭ್ಯಾಸ ಮಾಡಬೇಕೆಂಬ ತಮ್ಮ ಹಂಬಲವನ್ನು ಹೇಳಿಕೊಂಡ. ವಾಸುವಿಗೆ ಅರಮನೆಯ ಸಹಾಯ ದೊರೆಯಿತು ; ತಿರುವಯ್ಯಾರಿನಲ್ಲಿ ಪಟ್ಣಂ ಅವರ ಶಿಷ್ಯವೃತ್ತಿ ಕೈಗೊಳ್ಳು

ವ್ರವು ಸಾಧ್ಯವಾಯಿತು. ಆಗ ವಾಸುಪಿಗೆ ಹತ್ತೊಂಬತ್ತು ವರ್ಷ ವಯಸ್ಸು.

ಆರು ವರ್ಷಗಳ ಗುರುಕುಲವಾಸ ನಡೆಸಿ ವಾಸುದೇವಾಚಾರ್ಯರು ಕರ್ಣಾಟಕ ಸಂಗೀತವನ್ನು ಕರಗತಮಾಡಿಕೊಂಡರು. ಅಯ್ಯರ್ ಅವರ ಸಂಗೀತ ರಚನೆಗಳನ್ನು ಸುಂದರವಾಗಿ ಹಾಡುವುದನ್ನು ಕಲಿಯುವುದರ ಜೊತೆಗೆ ತಾವೇ ನೂತನ ಕೃತಿಗಳನ್ನು ರಚಿಸತೊಡಗಿದರು. ಮೈಸೂರಿಗೆ ಹಿಂದಿರುಗಿ ಚಾಮರಾಜ ಒಡೆಯರ ಆಸ್ಥಾನದಲ್ಲಿ ವಿದ್ವಾಂಸರಾಗಿ ನೆಲೆಸಿದರು.

ಮೈಸೂರು ವಾಸುದೇವಾಚಾರ್ಯರು ಶ್ರೇಷ್ಠ ಗಾಯಕರಾಗಿದ್ದರೂ ಕರ್ಣಾಟಕ ಸಂಗೀತ ಚರಿತ್ರೆಯಲ್ಲಿ ಅವರ ಹೆಸರು ಅಮರವಾಗಿರುವುದು ಅವರ ಸಂಗೀತ ರಚನೆಗಳಿಂದ. ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿರುವ ಇವರ ಸುಮಾರು ಇನ್ನೂರು ಕೀರ್ತನೆ, ವರ್ಣ, ಸ್ವರಜತಿ ಮುಂತಾದುವು ಕರ್ಣಾಟಕ ಸಂಗೀತದ ಅಮೂಲ್ಯ ಆಸ್ತಿ. ಬಿಲಹರಿ ರಾಗದ 'ಶ್ರೀ ಚಾಮುಂಡೇಶ್ವರಿ', ಸುನಾದ ವಿನೋದಿನಿ ರಾಗದ 'ದೇವಾಧಿದೇವ', ಮೋಹನರಾಗದ 'ರಾರಾ ರಾಜೀವಲೋಚನ', ಕಮಾಚ್ ರಾಗದಲ್ಲಿರುವ 'ಬ್ರೋಚೇವಾರೆವರುರಾ' ಮುಂತಾದುವು ಇವರ ಕೆಲವು ಕೃತಿರತ್ನಗಳು.

ಚಾಮರಾಜ ಒಡೆಯರ ಅನಂತರ ಪಟ್ಟಕ್ಕೆ ಬಂದ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಕ್ಷಿಣದ ಪ್ರಸಿದ್ಧ ವಿದ್ವಾಂಸರೊಬ್ಬರು ಅರಮನೆಯ ಆತಿಥ್ಯ ಪಡೆಯುವ ಸಮಯದಲ್ಲಿ ಪ್ರಭುಗಳೊಡನೆ ಮಾತನಾಡುತ್ತ, "ಕರ್ಣಾಟಕ ಸಂಗೀತಕ್ಕೆ ಎಪ್ಪತ್ತೆರಡು ಮೇಳಗಳ ಅವಶ್ಯತೆಯೇ ಇಲ್ಲ. ಲೆಕ್ಕಕ್ಕೆ ಎಪ್ಪತ್ತೆರಡು ಮೇಳಕರ್ತರಾಗಗಳಿವೆಯೇ ಹೊರತು, ಮೂವತ್ತಾರು ಮೇಳ ಕರ್ತರಾಗಗಳಲ್ಲಿ ರಚನೆಗಳೇ ಇಲ್ಲ. ಈ ರಾಗಗಳನ್ನು ಧಾರಾಳವಾಗಿ ಕಿತ್ತುಹಾಕಬಹುದು" ಎಂದರಂತೆ. ಮಹಾರಾಜರು ಕರ್ಣಾಟಕ ಸಂಗೀತದ ಮಹಾ ಅಭಿಮಾನಿ. ಆಸ್ಥಾನ ವಿದ್ವಾಂಸರನ್ನು ಕರೆದರು. "ಯಾವ ಯಾವ ಮೇಳಕರ್ತಗಳಲ್ಲಿ ರಚನೆಗಳಿಲ್ಲವೋ ಅವುಗಳಲ್ಲೆಲ್ಲ ವರ್ಣ, ಕೀರ್ತನೆಗಳನ್ನು ಕೂಡಲೇ ರಚಿಸಬೇಕು" ಎಂದರು. ಈ ಸಂದರ್ಭದಲ್ಲಿ ವಾಸುದೇವಾಚಾರ್ಯರ ಕೆಲವು ರಚನೆಗಳು ರೂಪುಗೊಂಡುವು. ಈ ರೀತಿ ಸನ್ನಿವೇಶ ನಿಮಿತ್ತ ಕೆಲವು ಕೀರ್ತನೆಗಳು ರಚಿತವಾದರೆ, ಮನೋಧರ್ಮ ಒದಗಿ ಬಂದಾಗ ಮತ್ತೆ ಕೆಲವು ಕೀರ್ತನೆಗಳು ರಚಿತವಾದುವು.

ಮೈಸೂರಿನಲ್ಲಿ ಹುಟ್ಟಿ ತಮ್ಮ ಜೀವನದ ಒಂಬತ್ತು ದಶಕಗಳನ್ನು ಮೈಸೂರಿನಲ್ಲಿಯೇ ಕಳೆದ ವಾಸುದೇವಾಚಾರ್ಯರು, ಕೊನೆಯ ವರ್ಷಗಳಲ್ಲಿ ಮದರಾಸಿನ ಕಲಾಕ್ಷೇತ್ರದ ಸಂಗೀತ ಇಲಾಖೆಯ ಆಚಾರ್ಯ ಪೀಠವನ್ನು ಅಲಂಕರಿಸಿದರು. ಕಲಾಕ್ಷೇತ್ರದಲ್ಲಿ ರಚಿತವಾದ ರಾಮಾಯಣ ನೃತ್ಯರೂಪಕಕ್ಕೆ ಇವರು ಸಂಗೀತ ಅಳವಡಿಸಿದರು. ಇದು ಇವರ ಅಪೂರ್ವ ಸಾಧನೆಗಳಲ್ಲಿ ಒಂದು.

ತುಂಬುಜೀವನ ಬಾಳಿದ ವಾಸುದೇವಾಚಾರ್ಯರಿಗೆ ದೊರೆತ ಪ್ರಶಸ್ತಿಗಳೂ ಬಿರುದುಗಳೂ ಅವೆಷ್ಟೋ. ಸ್ವಯಂ ಸಂಗೀತಜ್ಞರಾಗಿದ್ದ ರವೀಂದ್ರನಾಥ ಠಾಕೂರರು ಇವರನ್ನು 'ಸಂಗೀತ ಭಾವಜ್ಞ ಶಿಖಾಮಣಿ' ಎಂದು ಕರೆದರು. ಮದರಾಸಿನ ಸಂಗೀತ ಅಕಾಡೆಮಿಯವರು ಇವರನ್ನು ತಮ್ಮ ವಾರ್ಷಿಕ ಸಂಗೀತ ಸಮ್ಮೇಳನದ ಅಧ್ಯಕ್ಷರನ್ನಾಗಿ ಗೌರವಿಸಿ 'ಸಂಗೀತ ಕಲಾನಿಧಿ' ಎಂಬ ಬಿರುದನ್ನು ಕೊಟ್ಟರು. 1959ರಲ್ಲಿ ಪದ್ಮಭೂಷಣ ಪ್ರಶಸ್ತಿ ಇವರಿಗೆ ಬಂತು. ರಾಷ್ಟ್ರೀಯ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯೂ ಇವರಿಗೆ ದೊರೆಯಿತು. [illegible] 1961 ಮೇ 17ರಂದು– ವಾಸುದೇವಾಚಾರ್ಯರು ಕಾಲವಾದರು.

## ಮೈಸೂರು ಸದಾಶಿವರಾಯ

ಗಾನಯೋಗಿ ತ್ಯಾಗರಾಜರು ಒಮ್ಮೆ ತೀರ್ಥಯಾತ್ರೆ ಮಾಡುತ್ತ ವಾಲಾಜಾಪೇಟೆಯಲ್ಲಿದ್ದ ತಮ್ಮ ಶಿಷ್ಯ ವೆಂಕಟರಮಣ ಭಾಗವತರ ಮನೆಗೆ ಬಂದರು. ಯುವಕನೊಬ್ಬ ಆ ಸಂದರ್ಭಕ್ಕೋಸ್ಕರವೆಂದೇ ತಾನು ರಚಿಸಿದ 'ತ್ಯಾಗರಾಜಸ್ವಾಮಿ ವೆಡಲಿನ' ಎಂಬ ಕೀರ್ತನೆಯನ್ನು ತ್ಯಾಗರಾಜರ ಇದಿರಿನಲ್ಲಿ ಹಾಡಿದ. ಅವರು ಆ ಕೀರ್ತನೆಯನ್ನು ಮೆಚ್ಚಿಕೊಂಡು, "ನೀನು ಶ್ರೇಷ್ಠ ಸಂಗೀತಗಾರನಾಗುವೆ" ಎಂದು ಹೇಳಿ ಆಶೀರ್ವದಿಸಿದರು.

ಈ ರೀತಿ ಬೆಳೆಯ ಸಿರಿ ಮೊಳಕೆಯಲ್ಲೇ ಕಂಡಿತು: ಸಂಗೀತ ಸದಾಶಿವರಾಯರ ಪ್ರತಿಭೆ ಕಿರಿವಯಸ್ಸಿನಲ್ಲೇ ಹೊರಚಿಮ್ಮಿತು.

ಪ್ರಸಿದ್ಧ ವಾಗ್ಗೇಯಕಾರ ಮೈಸೂರು ಸದಾಶಿವರಾಯರ ಜೀವನವನ್ನು ಕುರಿತು ತಿಳಿದುಬಂದಿರುವುದು ಬಹಳ ಕಡಮೆ. ಇವರ ಜನ್ಮಸ್ಥಳ ಈಗಿನ ಆಂಧ್ರಪ್ರದೇಶದ ಚಿತ್ತೂರಿಗೆ ಸಮೀಪದಲ್ಲಿರುವ ಗಿರಂಪೇಟೆ ಎಂಬುದು. ಹತ್ತೊಂಬತ್ತನೆಯ ಶತಮಾನದ ಆರಂಭಕಾಲದಲ್ಲಿ ಇವರ ಜನನವಾಗಿರಬೇಕು. ಯಾವುದೋ ಸಣ್ಣ ಕಾರಣಕ್ಕಾಗಿ ಕೋಪಿಸಿಕೊಂಡು ಹನ್ನೆರಡನೆಯ ವಯಸ್ಸಿನಲ್ಲಿ ಹುಡುಗ ಸದಾಶಿವರಾಯ ಮನೆ ಬಿಟ್ಟು ಹೊರಟ. ಅಲ್ಪಸ್ವಲ್ಪ ವಿದ್ಯಾಭ್ಯಾಸ ಆಗಿದ್ದುದರಿಂದ ಮುಂದೆ ಚಿತ್ತೂರು ಜಿಲ್ಲಾ ಕಲೆಕ್ಟರರ ಕಛೇರಿಯಲ್ಲಿ ಗುಮಾಸ್ತೆ ಕೆಲಸ ಸಿಕ್ಕಿತು.

ಸದಾಶಿವರಾಯರ ಸಂಗೀತಾಭ್ಯಾಸ ನಡೆದದ್ದು ವಾಲಾಜಾಪೇಟೆ ವೆಂಕಟರಮಣ ಭಾಗವತರಲ್ಲಿ. ಸಂಗೀತ ಅಭ್ಯಾಸ ಮುಗಿಸಿ ಮೈಸೂರಿಗೆ ಬಂದಾಗ ಇವರಿಗೆ ಸುಮಾರು 30 ವರ್ಷ. ಆಗಿನ ಮೈಸೂರು ಮಹಾರಾಜರು– ಮುಮ್ಮಡಿ ಕೃಷ್ಣರಾಜ ಒಡೆಯರು– ಇವರ ಪಾಂಡಿತ್ಯವನ್ನು ಮೆಚ್ಚಿಕೊಂಡರು. ಆಸ್ಥಾನ ವಿದ್ವಾಂಸರ ಪದವಿ ಇವರ ಪಾಲಿಗೆ ಬಂತು. ಅಂದಿನಿಂದ ರಾಯರು ಮೈಸೂರಿನಲ್ಲಿ ನೆಲೆಸಿ 'ಮೈಸೂರು ಸದಾಶಿವರಾಯರಾದರು.

ಸದಾಶಿವರಾಯರು ನೂರಾರು ಕೃತಿಗಳನ್ನು ರಚಿಸಿದರೂ ಇದುವರೆಗೆ ದೊರೆತಿರುವುದು ಸುಮಾರು 52 ಮಾತ್ರ. ಇವುಗಳಲ್ಲಿ ಕೀರ್ತನೆ, ತಿಲ್ಲಾನ ಮತ್ತು ವರ್ಣಗಳಿವೆ. ಸುಂದರವಾದ ಸ್ವರಸಾಹಿತ್ಯವನ್ನೂ ಅವರು ರಚಿಸಿದ್ದಾರೆ. 16 ಕೀರ್ತನೆಗಳು ಸಂಸ್ಕೃತದಲ್ಲೂ ಉಳಿದುವು ತೆಲುಗಿನಲ್ಲೂ ಇವೆ. ಇವರ ರಚನೆಗಳಲ್ಲಿ 'ಸದಾಶಿವ' ಎಂಬ ಸ್ವನಾಮ ಮುದ್ರಿಕೆ ಇದೆ.

ಸದಾಶಿವರಾಯರು ಸ್ವಭಾವತಃ ಉದಾರಿ, ಕರುಣಾಳು. ಪ್ರತಿ ದಿನ ಮಧ್ಯಾಹ್ನದ ಹೊತ್ತಿಗೆ ಮನೆಯ ಹೊರಗೆ ನಿಂತುಕೊಂಡು ಊಟಕ್ಕೆ ಅತಿಥಿಗಳು ಯಾರಾದರೂ ಸಿಗುವರೋ ಎಂದು ನೋಡುವುದು ಅವರ ಅಭ್ಯಾಸ. ಎಂಟು ಹತ್ತು ಜನರಾದರೂ ಸಿಕ್ಕದ ದಿನ ರಾಯರಿಗೆ ಊಟ ರುಚಿಸುತ್ತಿರಲಿಲ್ಲವಂತೆ.

ಸದಾಶಿವರಾಯರ ಗೆಳೆಯನಾಗಿದ್ದ ಒಬ್ಬ ವ್ಯಾಪಾರಿ ಒಮ್ಮೆ ಅಗತ್ಯ ಕೆಲಸದ ಮೇಲೆ ಪರವೂರಿಗೆ ಹೋಗಬೇಕಾಯಿತು. ಅಂಗಡಿಯ ಮೇಲ್ವಿಚಾರಣೆಯನ್ನು ರಾಯರಿಗೆ ವಹಿಸಿ ಅವನು ಹೊರಟುಹೋದ. ಸದಾಶಿವರಾಯರ ಅನುಕಂಪ ಗುಣ ಗೊತ್ತಿದ್ದ ಕೆಲವರು ತಮ್ಮ ಕಷ್ಟಗಳನ್ನು ಹೇಳಿಕೊಂಡು ಅಂಗಡಿಯಿಂದ ಸಾಮಾನುಗಳನ್ನು ಒಯ್ಯಲಾರಂಭಿಸಿದರು. ವ್ಯಾಪಾರಿ ಗೆಳೆಯ ಹಿಂದಿರುಗಿದಾಗ ಅಂಗಡಿ ಹೆಚ್ಚು ಕಡಮೆ ಬರಿದಾಗಿತ್ತು.

ದಾಸರು, "[illegible] ಕೃಷ್ಣನಾಗಿ [illegible] ಅವರ ಕೃಷ್ಣ [illegible] [illegible] ಇಲ್ಲವೆ [illegible] ಮೇಲೆ ನಾನು [illegible] ಆ ಕೃಷ್ಣ ನಾನೇ [illegible]" ಎಂದರು. ದಾಸರು, "ಆ ಕೃಷ್ಣ ನನಗೇ ಇರಲಿ [illegible]" ಎಂದ. ಇದು ಸದಾಶಿವರಾಯರ ಸ್ವಭಾವವನ್ನು ಕುರಿತು ಪ್ರಚಲಿತವಿರುವ ಕಥೆ.

ಸದಾಶಿವರಾಯರ ಶಿಷ್ಯಪರಂಪರೆ ದೊಡ್ಡದು. [illegible] ಮೈಸೂರಿಗೆ ಕೀರ್ತಿತಂದ ವೀಣೆ ಶೇಷಣ್ಣ ಮತ್ತು ವೀಣೆ ಸುಬ್ಬಣ್ಣನಂಥವರು ಮೊದಲು ಸಂಗೀತಾಭ್ಯಾಸ ಮಾಡಿದ್ದು ಇವರಲ್ಲೇ.

ಮೈಸೂರು ಸದಾಶಿವರಾಯರು ದಕ್ಷಿಣ ಭಾರತದ ಪ್ರಸಿದ್ಧ ಕ್ಷೇತ್ರಗಳಲ್ಲಿ ಸಂಚರಿಸಿ ಅಲ್ಲಿನ ಪ್ರಸಿದ್ಧ ದೇವತೆಗಳನ್ನು ಸ್ತುತಿಸಿ ಕೀರ್ತನೆಗಳನ್ನು ರಚಿಸಿದ್ದಾರೆ. ಶ್ರೀರಂಗಂ, ಕಾಂಚೀಪುರಂ, ಬೇಲೂರು, ಶ್ರೀರಂಗಪಟ್ಟಣ, ಪಳನಿ ಮುಂತಾದ ಕ್ಷೇತ್ರದೇವತೆಗಳ ಗುಣಗಾನಮಾಡುವ ಹಲವು ಕೀರ್ತನೆಗಳಿವೆ. ಇವು ಭಕ್ತಿಪ್ರಧಾನವಾಗಿದ್ದರೂ ಯತಿ, ಗಣ, ಪ್ರಾಸಗಳಂಥ ಛಂದೋಲಕ್ಷಣಗಳನ್ನು ಹೊಂದಿವೆ. 'ಪ ಮಗುವ ಬೋಧಿಂ ಚೆರಾ' ಎಂಬ ರಚನೆಯನ್ನು ನೃತ್ಯಕ್ಕೆ ಅಳವಡಿಸಲಾಗಿದೆ.

ಸದಾಶಿವರಾಯರದು ತುಂಬುಜೀವನ. ತೀರಿಕೊಳ್ಳುವ ಹೊತ್ತಿಗೆ ವಯಸ್ಸು ಎಂಬತ್ತಕ್ಕೂ ಮೀರಿತ್ತು. ಸಾವು ಸಮೀಪಿಸುತ್ತಿದ್ದುದರ ಅರಿವು ಗಾನಯೋಗಿ ಮೈಸೂರು ಸದಾಶಿವರಾಯರಿಗೆ ಮುಂದಾಗಿಯೇ ತಿಳಿದಿತ್ತೆಂದು ತೋರುತ್ತದೆ. ಒಂದು ದಿನ ಬೆಳಗ್ಗೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ ಉತ್ತರಕ್ಕೆ ಮುಖಮಾಡಿ ಕುಳಿತರು. ವಸಂತರಾಗದ 'ಕಮಲಾಕಾಂತ ಶ್ರೀ ಕೃಷ್ಣಾನಂತ' ಎಂಬ ಕೃತಿಯನ್ನು ಹಾಡುತ್ತ ಕೊನೆಯ ಉಸಿರನ್ನೆಳೆದರು.

## ಮೊಗಲ್ ಚಿತ್ರಕಲೆ

ಬಾಬರನ ಸಂತತಿಯವರಾದ ಮೊಗಲರ ಆಳ್ವಿಕೆಯ ಕಾಲದಲ್ಲಿ ಭಾರತದಲ್ಲಿ ರೂಪುಗೊಂಡ ಚಿತ್ರಕಲಾ ಸಂಪ್ರದಾಯವನ್ನು ಮೊಗಲ್ ಚಿತ್ರಕಲೆ ಎಂದು ಕರೆಯುತ್ತಾರೆ. ಭಾರತ ಮತ್ತು ಪರ್ಷಿಯದ ಚಿತ್ರಕಲೆಗಳ ಗುಣಾಂಶಗಳನ್ನು ಗ್ರಹಿಸಿದ ಚಿತ್ರಕಲೆ ಇದು.

ಬಾಬರನು 1526ರಲ್ಲಿ ಇಬ್ರಾಹಿಂ ಲೋಡಿಯನ್ನು ಪಾಣಿಪತ್ತದ ಯುದ್ಧದಲ್ಲಿ ಗೆದ್ದಾಗ ಭಾರತದಲ್ಲಿ ಮೊಗಲರ ಆಳ್ವಿಕೆ ಆರಂಭವಾಯಿತು. ಕಲಾಪ್ರಿಯನಾದರೂ ಅನೇಕ ಯುದ್ಧಗಳಲ್ಲಿ ತೊಡಗಿದ್ದರಿಂದ ಕಲೆಯ ಅಭಿವೃದ್ಧಿಗೆ ಇವನು ಹೆಚ್ಚಾಗಿ ಗಮನ ಕೊಡಲಾಗಲಿಲ್ಲ.

ಇವನ ಮಗ ಹುಮಾಯೂನ್ ತನ್ನ ಜೀವಿತಕಾಲದಲ್ಲಿ ಷೇರ್ ಷಾನಿಂದ ಸೋಲನ್ನನುಭವಿಸಿ, ಪರ್ಷಿಯಕ್ಕೆ ಓಡಿಹೋಗಬೇಕಾಯಿತು. ಅಲ್ಲಿದ್ದಾಗ ಪರ್ಷಿಯದ ಚಿತ್ರಕಲೆಯ ಬಗೆಗೆ ಇವನಲ್ಲಿ ಆಸಕ್ತಿ ಬೆಳೆಯಿತು.

ಹುಮಾಯೂನ್ ಪರ್ಷಿಯದಿಂದ ಕಾಬೂಲಿಗೆ ಬಂದಾಗ ತನ್ನೊಡನೆ ಪರ್ಷಿಯದ ಒಬ್ಬ ಚಿತ್ರಕಾರನನ್ನು ಕರೆದುಕೊಂಡು ಬಂದ. ಆ ಹೊತ್ತಿಗೆ ತನ್ನ ತಂದೆಯನ್ನು ಸೇರಿಕೊಂಡ ಅಕ್ಬರನಿಗೆ ಇನ್ನಿಬ್ಬರು ಪರ್ಷಿಯದ ಚಿತ್ರಕಲಾವಿದರ ಪರಿಚಯವಾಯಿತು. ಚಿತ್ರಕಲೆಯಲ್ಲಿ ಅವನ ಆಸಕ್ತಿಯೂ ಬೆಳೆಯಿತು.

ಅಕ್ಬರ್ ರಾಜ್ಯಾಧಿಪತ್ಯವನ್ನು ವಹಿಸಿಕೊಂಡ ಮೇಲೆ ಚಿತ್ರಕಲೆಗೆ ತುಂಬ ಪ್ರೋತ್ಸಾಹ ಕೊಟ್ಟ. ಪರ್ಷಿಯ ಮತ್ತು ಭಾರತೀಯ ಕಲಾಸಂಪ್ರದಾಯಗಳ ಪರಸ್ಪರ ಸಮ್ಮಿಳನವನ್ನು ಪ್ರಚೋದಿಸಿದ. ಇವನ ಕಾಲದಲ್ಲಿ ಪರ್ಷಿಯದ ಕಲಾವಿದರು ಮತ್ತು ಭಾರತೀಯ ಕಲಾವಿದರು ಒಟ್ಟಾಗಿ ಕೆಲಸಮಾಡಿ, ಮೊಗಲ್ ಶೈಲಿ ರೂಪುಗೊಳ್ಳಲು ಸಹಾಯಕರಾದರು. ಫರೂಕ್ ಬೇಗ್, ದಸವಂತ್, ಬಾಸವನ್ ಮುಂತಾದ ಕಲಾವಿದರು ಈ ವಿಶಿಷ್ಟ ಶೈಲಿಯ ವೈವಿಧ್ಯವನ್ನು ಬೆಳೆಸಿದರು.

ಈ ಕಾಲದಲ್ಲಿ ಅನೇಕ ಚಾರಿತ್ರಿಕ ಗ್ರಂಥಗಳಿಗೆ ಚಿತ್ರಾಲಂಕರಣ ನಡೆಯಿತು. ಬಾಬರನ ಆತ್ಮಚರಿತ್ರೆ, ಮೊಗಲ ವಂಶದ ಚರಿತ್ರೆಯಾದ 'ತರೀಖ್ —ಐ— ಖಾನ್‌ದಾನ್ —ಇ— ತೈಮೂರಿಯಾ', 'ಅಕ್ಬರ್ ನಾಮ' ಮುಂತಾದುವು ಗಣನೀಯವಾದುವು.

ಅಕ್ಬರನ ಕಾಲದಲ್ಲಿ ಅವನ ಆಜ್ಞೆಯಂತೆ 'ರಾಮಾಯಣ', 'ಮಹಾಭಾರತ', 'ಹರಿವಂಶಗಳು' ಪರ್ಷಿಯನ್ ಭಾಷೆಗೆ ಅನುವಾದಿಸಲ್ಪಟ್ಟುವು. ಇವುಗಳಲ್ಲೂ ಅನೇಕ ಚಿತ್ರಗಳಿವೆ. ಚಕ್ರವರ್ತಿಯ ಆಜ್ಞೆಯಂತೆ, ತೀರಿಕೊಂಡಿದ್ದ ಹಾಗೂ ಸಮಕಾಲೀನರಾಗಿದ್ದ ಅನೇಕ ಪ್ರಮುಖ ವ್ಯಕ್ತಿಗಳ ಚಿತ್ರಣವೂ ನಡೆಯಿತು.

ಅಕ್ಬರನ ಮಗನಾದ ಜಹಾಂಗೀರ್ ಕೂಡ ಚಿತ್ರಕಲಾಪ್ರೇಮಿಯಾಗಿದ್ದ. ತಾನು ರಾಜ್ಯಾಧಿಕಾರವನ್ನು ವಹಿಸಿಕೊಳ್ಳುವುದಕ್ಕೆ ಮೊದಲೇ ಹಲವಾರು ಮಂದಿ ಚಿತ್ರಕಾರರಿಗೆ ಆಶ್ರಯ ಕೊಟ್ಟಿದ್ದ. ಈತನ ಕಾಲದಲ್ಲಿ ರಚಿತವಾದ ಚಿತ್ರಗಳನ್ನು ನೋಡಿದರೆ ಈ ಅವಧಿಯಲ್ಲಿ ಸಹಜ ದೃಶ್ಯ ರಚನೆಗಳ ಕಡೆಗೆ ದೃಷ್ಟಿ ಹರಿದಂತೆ ಕಂಡುಬರುತ್ತದೆ. ಆಸ್ಥಾನ ಜೀವನದ ಅನೇಕ ದೃಶ್ಯಗಳು ಈ ಕಾಲದಲ್ಲಿ ರಚಿಸಲ್ಪಟ್ಟುವು. ಆದರೆ ಈ ಚಿತ್ರಗಳಲ್ಲಿ ಸಹಜತೆ ಅಷ್ಟಾಗಿ ಕಾಣುವುದಿಲ್ಲ. ಆಸ್ಥಾನದ ಶಿಸ್ತಿನ ನಡವಳಿಕೆಯ ಪರಿಣಾಮವಾದ ಕೃತಕತೆ, ಬಿಗುವು ಕಾಣುತ್ತವೆ. ಚಿತ್ರಕಾರರು ಆಸ್ಥಾನದ



16ನೆಯ ಶತಮಾನದ 'ಹಮ್‌ಜನಾಮ' ಕೃತಿಯಲ್ಲಿ ಚಿತ್ರಾಲಂಕರಣ



ಕಾಂಗ್ರಾ ಶೈಲಿಯ ಕೃತಿ –18ನೆಯ ಶತಮಾನ

ಯಥಾವತ್ ಚಿತ್ರಣದಲ್ಲಿ ಆಸಕ್ತರಾಗಿದ್ದುದೇ ಇದಕ್ಕೆ ಕಾರಣವಿರಬಹುದು. ಪಕ್ಷಿಗಳ ಮತ್ತು ಪ್ರಾಣಿಗಳ ವರ್ಣ ವೈಭವದಿಂದ ಆಕರ್ಷಿತನಾದ ಚಕ್ರವರ್ತಿ ಅವುಗಳ ಚಿತ್ರಣಕ್ಕೂ ಪ್ರೋತ್ಸಾಹಕೊಟ್ಟ. ಇಂಥ ಚಿತ್ರಗಳ ರಚನೆಯಲ್ಲಿ ಖ್ಯಾತನಾದವನು ಉಸ್ತಾದ್ ಮನ್ಸೂರ್.

ಈ ಕಾಲದಲ್ಲಿ ಅಂಚುಕಟ್ಟಿನ ಅಲಂಕಾರ ಚಿತ್ರಣವೂ ನಡೆಯಿತು. ಬೇಟೆ, ಸಂಗೀತ, ನೃತ್ಯ, ವಿಹಾರಕೂಟ, ಪ್ರವೃತ್ತಿನಿರತರು—ಹೀಗೆ ನಾನಾ ವಿಧವಾದ ವಸ್ತುಗಳನ್ನು ಈ ಚಿತ್ರಗಳಲ್ಲಿ ಉಪಯೋಗಿಸಿಕೊಳ್ಳಲಾಗಿದೆ.

ಈ ಕಾಲದ ಮೊಗಲ್ ಚಿತ್ರಕಲೆಯ ಮೇಲೆ ಐರೋಪ್ಯ ಪ್ರಭಾವ ಬಿದ್ದಿತು. ವ್ಯಕ್ತಿಗಳನ್ನು ಎದುರಿಗೆ ಇಟ್ಟುಕೊಂಡು ರೂಪಚಿತ್ರಣ ಮಾಡುವುದು ಆರಂಭವಾಯಿತು.

ಜಹಾಂಗೀರ್ ಚಕ್ರವರ್ತಿಯ ಕಾಲದಲ್ಲಿ, ಚಿತ್ರರಚನೆ ಆಸ್ಥಾನಗಳಿಂದ ಹೊರಕ್ಕೂ ಹರಡಿತು. ಮೊಗಲ್ ಸಂಪ್ರದಾಯದಲ್ಲಿ ಶಿಕ್ಷಣಪಡೆದಿದ್ದ ಹಲವಾರು ಮಂದಿ ಚಿತ್ರಕಾರರಿಗೆ ಶ್ರೀಮಂತರೂ ವ್ಯಾಪಾರಿಗಳೂ ಆಶ್ರಯ ಕೊಟ್ಟರು. ಈ ವರ್ಗದ ಚಿತ್ರಕಾರರಿಂದ ರಚಿತವಾದ ಚಿತ್ರಗಳು ತಂತ್ರ ಹಾಗೂ ಕಲಾತ್ಮಕತೆಯ ದೃಷ್ಟಿಯಿಂದ ಅಷ್ಟೇನೂ ಉತ್ತಮವಾಗಿಲ್ಲ. ಮೂಲತಃ ಮೊಗಲ್ ಸಂಪ್ರದಾಯಕ್ಕೆ ಸೇರಿದ್ದರೂ ರಜಪೂತ ಕಲೆಯಿಂದ ಹಲವಾರು ಅಂಶಗಳನ್ನು ಅಂಗೀಕರಿಸಿದ ಜನಪ್ರಿಯ ಶೈಲಿ ಈ ಕಾಲದಲ್ಲಿ ಆರಂಭವಾಗಿ ಬೆಳೆಯಿತು.

ಜಹಾಂಗೀರನ ಅನಂತರ ಷಹಜಹಾನನ ಕಾಲದಲ್ಲಿ ಚಿತ್ರಕಲೆಗೆ ಪ್ರೋತ್ಸಾಹವಿದ್ದರೂ ಅವನ ದೃಷ್ಟಿ ದೊಡ್ಡ ಕಟ್ಟಡಗಳ ನಿರ್ಮಾಣದ ಕಡೆಗಿತ್ತು. ಈ ಕಾಲದಲ್ಲಿ ಗ್ರಂಥಾಲಂಕಾರದ ಸಂಬಂಧದಲ್ಲಿ ಉತ್ತಮ ಚಿತ್ರರಚನೆಯಾಯಿತು.

ಅನಂತರದ್ದು ಮೊಗಲ್ ಚಿತ್ರಕಲೆಯ ಅವನತಿಯ ಕಾಲ. ಏಕೆಂದರೆ ಔರಂಗಜೇಬನಿಗೆ ಚಿತ್ರಕಲೆಯಲ್ಲಿ ಆಸಕ್ತಿ ಇರಲಿಲ್ಲ. ಆಸ್ಥಾನದ ಆಶ್ರಯ ತಪ್ಪಿದ ಮೇಲೆ ಕಲಾವಿದರು ತಮ್ಮ ಜೀವನೋಪಾಯಕ್ಕಾಗಿ ಸಾಮಾನ್ಯ ಮಟ್ಟದ ಚಿತ್ರಗಳನ್ನು ಬೇಗ ಬೇಗ ರಚಿಸಬೇಕಾಯಿತು. 18ನೆಯ ಅನಂತರದ ಮೊಗಲ್ ಚಕ್ರವರ್ತಿ ಮುಹಮ್ಮದ್ ಷಾ ಗೆ ಚಿತ್ರಕಲೆಯಲ್ಲಿ ಆಸಕ್ತಿ ಇದ್ದಿತಾದರೂ ಅವನ ಕಾಲದಲ್ಲಿ ರಚಿತವಾದ ಚಿತ್ರಗಳು ಅವನತಿಯ ಜಾಡಿನಲ್ಲೇ ಸಾಗಿವೆ. 1739ರಲ್ಲಿ ನಾದಿರ್ ಷಾ ದೆಹಲಿಯ ಮೇಲೆ ದಾಳಿ ಮಾಡಿದ. ಅನಂತರ ಮೊಗಲ್ ಚಿತ್ರಕಲೆ ನಾಮಾವಶೇಷವಾಯಿತು.

ಆದರೆ ಈ ದುರಂತ ಭಾರತೀಯ ಚಿತ್ರಕಲೆಯಲ್ಲಿ ಒಂದು ಶೈಲಿಗೆ ಮಾರ್ಗಮಾಡಿಕೊಟ್ಟಿತು. ನಾದಿರ್ ಷಾನ ದಾಳಿಯ ಪರಿಣಾಮವಾಗಿ ಅನೇಕ ಮಂದಿ ಹಿಂದೂ ಚಿತ್ರಕಾರರು ದೆಹಲಿಯನ್ನು ಬಿಟ್ಟು ಹೊಸ ಆಶ್ರಯ ಹುಡುಕುತ್ತ ಪಂಜಾಬಿನ ಕಣಿವೆಗಳ ಕಡೆಗೆ ಹೊರಟರು. ಇವರೆಲ್ಲರೂ ಮೊಗಲ್ ಚಿತ್ರರಚನಾ ಶೈಲಿಯಲ್ಲಿ ಪಳಗಿದವರೇ ಆಗಿದ್ದರು. ಅಲ್ಲಿ ಇವರಿಗೆ ರಾಜಾ ದಿಲೀಪಸಿಂಗನ ಅನಂತರ ಅವನ ಮಗ ಗೋವರ್ಧನ ಚಂದನ ಆಶ್ರಯ ದೊರೆಯಿತು. ಗೋವರ್ಧನ ಚಂದನ ಮಗ ಪ್ರತಾಪ ಚಂದ ಕಾಂಗ್ರಾ ಕೋಟೆಯನ್ನು ಆಕ್ರಮಿಸಿಕೊಂಡು ಅಲ್ಲಿ ನೆಲೆಸಿದ ಮೇಲೆ, ಅದು ಚಿತ್ರಕಾರರ ನೆಲೆಯಾಯಿತು. ಅವನ ಆಶ್ರಯದಲ್ಲಿ ಉತ್ತಮ ಚಿತ್ರರಚನೆ ನಡೆಯಿತು. ವಿಷ್ಣು ಭಕ್ತಿಯಿಂದ ಪ್ರೇರಿತರಾದ ಉತ್ತಮ ಕಲಾವಿದರು, ಜಯದೇವನ 'ಗೀತಗೋವಿಂದ', 'ರಾಮಾಯಣ', 'ಮಹಾಭಾರತ', 'ಭಾಗವತ' ಗ್ರಂಥಗಳಿಂದ ಆರಿಸಿದ ಸಂದರ್ಭಗಳನ್ನು ಆಧರಿಸಿ ಸುಂದರ ಚಿತ್ರಗಳನ್ನು ಬರೆದರು. ಹಾಗೆಯೇ ಋತುಗಳನ್ನು ನಿರೂಪಿಸುವ ಮತ್ತು ರಾಗಗಳನ್ನು ನಿರೂಪಿಸುವ ಚಿತ್ರಗಳನ್ನೂ ರಚಿಸಿದರು. ಕಾಂಗ್ರಾ ಶೈಲಿಯಲ್ಲಿ ಉತ್ತಮ ಕಿರುಚಿತ್ರಗಳೂ ರಚಿತವಾದುವು. ಇವುಗಳ ರೇಖಾಲಾಲಿತ್ಯ, ವರ್ಣಮೋಹಕತೆ ಅಪೂರ್ವ. ಕಾಂಗ್ರಾ ಸಂಪ್ರದಾಯದ ಚಿತ್ರಗಳಲ್ಲಿ ಮೊಗಲ್ ಹಾಗೂ ರಜಪೂತ ಚಿತ್ರಕಲಾ ಶೈಲಿಯ ಪ್ರಭಾವವಿದ್ದರೂ ಇದು ಒಂದು ವಿಶಿಷ್ಟ ಶೈಲಿಯಾಗಿ ರೂಪಗೊಂಡು ಲೋಕ ವಿಖ್ಯಾತವಾಯಿತು. ಕೃಷ್ಣ–ರಾಧೆಯರ ಪ್ರೇಮ ನಿರೂಪಣೆ ಈ ಶೈಲಿಯ ವಿಶಿಷ್ಟ ಕೊಡುಗೆ.

## ಮೋಜಾರ್ಟ್

ಐದು ವರ್ಷದ ಬಾಲಕ ವುಲ್ಫ್‌ಗಾಂಗ್ ಮೋಜಾರ್ಟ್ ಸುಂದರ ನೃತ್ಯ ಸಂಗೀತ ಬರೆಯುತ್ತಾನೆ ಎಂದಾಗ, ಕೇಳಿದವರು ಯಾರೂ ಆ ಮಾತನ್ನು ನಂಬಲಿಲ್ಲ. ಈ ಸೋಜಿಗವನ್ನು ಪರೀಕ್ಷಿಸಲು ಊರಿನ ಬಿಷಪ್ ಆ ಬಾಲಕನೊಬ್ಬನನ್ನೇ ಕೋಣೆಯೊಂದರಲ್ಲಿ ಕೂರಿಸಿ, ತಾನೇ ಬರೆದ ಒಂದು ಹಾಡಿಗೆ ಸಂಗೀತ ಜೋಡಿಸುವಂತೆ ಹೇಳಿದ. ಆ ಹುಡುಗ ರಚಿಸಿದ ಸಂಗೀತದ ಸೌಂದರ್ಯ, ಗಾಂಭೀರ್ಯಗಳನ್ನು ಕಂಡು ಬಿಷಪ್‌ಗೆ ಆಶ್ಚರ್ಯವಾಯಿತು.

'ಸಂಗೀತಗಾರರ ಸಂಗೀತಗಾರ' ಎನಿಸಿದ ಮೋಜಾರ್ಟ್‌ನನ್ನು ಒಮ್ಮೆ ಹುಡುಗನೊಬ್ಬ ತನಗೂ ಸಂಗೀತರಚನೆಯ ಗುಟ್ಟನ್ನು ಹೇಳಿಕೊಡೆಂದು ಪಟ್ಟುಹಿಡಿದ. "ಇದರ ವಿಷಯ ನೀನು ತಲೆಕೆಡಿಸಿಕೊಳ್ಳಬೇಡ ; ನೀನಿನ್ನೂ ಚಿಕ್ಕವನು" ಎಂದು ಮೋಜಾರ್ಟ್ ಎಷ್ಟು ಹೇಳಿದರೂ ಹುಡುಗ ಬಿಡಲಿಲ್ಲ. "ನೀನು ಇನ್ನೂ ಚಿಕ್ಕವನಾಗಿರುವಾಗಲೇ ಸಂಗೀತರಚನೆ ಮಾಡಲಿಲ್ಲವೆ ?" ಎಂದು ಕೇಳಿದ. "ಅದೇನೋ ನಿಜ. ಆದರೆ ಆಗ ನಾನು ಸಂಗೀತ ರಚಿಸುವುದು ಹೇಗೆಂದು ಯಾರನ್ನೂ ಕೇಳುತ್ತಿರಲಿಲ್ಲವಲ್ಲ ?" ಎಂದು

ನಸುನಗುತ್ತಲೇ ಹೇಳಿ, ಮೊಜಾರ್ಟ್ ಆ ಹುಡುಗನ ಬಾಯಿಮುಚ್ಚಿಸಿದ. ಹುಟ್ಟು ಸಂಗೀತಗಾರ ಮೊಜಾರ್ಟನ ತಂದೆ ಆಸ್ಟ್ರಿಯದ ಸಾಲ್ಸ್‌ಬರ್ಗಿನ ಬಿಷಪನ ವಾದ್ಯ ಮೇಳದ ನಿರ್ದೇಶಕನಾಗಿದ್ದ. ತನ್ನ ಮಕ್ಕಳಿಗೂ ಚಿಕ್ಕ ವಯಸ್ಸಿನಲ್ಲೇ ಸಂಗೀತಪಾಠ ಹೇಳಿಕೊಡಲು ಆರಂಭಿಸಿದ್ದ. ಅವನು ತನ್ನ ಹಿರಿಯ ಮಗಳಿಗೆ ಸಂಗೀತ ಅಭ್ಯಾಸ ಮಾಡಿಸುತ್ತಿದ್ದಾಗ ಮೂರು ವರ್ಷದ ಮೊಜಾರ್ಟ್ ತನಗೂ ಸಂಗೀತ ಪಾಠ ಬೇಕೆಂದು ಹಠ ಹಿಡಿಯುತ್ತಿದ್ದ. ಹೀಗಾಗಿ ಇವನಿಗೂ ಸಂಗೀತಾಭ್ಯಾಸ ಆರಂಭವಾಯಿತು. ಐದು ವರ್ಷಕ್ಕೇ ಇವನು ಸಂಗೀತವಾದ್ಯಗಳನ್ನು ನುಡಿಸುವಂತಾದ. ಅಷ್ಟು ಮಾತ್ರವಲ್ಲದೆ ಸ್ವತಃ ಸಂಗೀತರಚನೆಯನ್ನೂ ಮಾಡತೊಡಗಿದ.

ಮೊಜಾರ್ಟ್ ಏಳು ವರ್ಷದವನಾಗಿದ್ದಾಗ ತಂದೆ ಅವನನ್ನು ಕರೆದುಕೊಂಡು ಜರ್ಮನಿ, ಫ್ರಾನ್ಸ್ ಮತ್ತು ಇಟಲಿಯ ಪ್ರವಾಸಕ್ಕೆ ಹೊರಟ. ಹುಡುಗನ ಸಂಗೀತ ಕಚೇರಿಗೆ ಬಂದಿದ್ದವರೆಲ್ಲ ಇವನ ಪ್ರತಿಭೆಯನ್ನು ಹೊಗಳಿದ್ದೇ ಹೊಗಳಿದ್ದು ; ರಾಜಮಹಾರಾಜರು ಬಗೆಬಗೆಯ ಬಹುಮಾನಗಳನ್ನು ಕೊಟ್ಟದ್ದೇ ಕೊಟ್ಟದ್ದು. 13ನೆಯ ವಯಸ್ಸಿಗೆ ಈತ ಇಟಲಿಯಲ್ಲಿ ಪ್ರವಾಸ ಮಾಡುತ್ತಿದ್ದಾಗ ಪೋಪ್ ಮೊಜಾರ್ಟನನ್ನು ಕರೆಸಿ 'ಷೆವಾಲಿಯರ್' ಎಂಬ ಗೌರವ ಪ್ರಶಸ್ತಿಯನ್ನು ಕೊಟ್ಟ. ಅದೇ ವರ್ಷ ಮೊಜಾರ್ಟನ ತಂದೆ ಸತ್ತುಹೋದ. ಆದರಿಂದ ತೆರವಾಗಿದ್ದ ಸಂಗೀತ ನಿರ್ದೇಶಕನಸ್ಥಾನ ಮೊಜಾರ್ಟ್‌ಗೆ ದೊರೆಯಿತು.

ಹಳೆಯ ಬಿಷಪ್ ಸತ್ತು ಅವನ ಸ್ಥಾನಕ್ಕೆ ಬಂದ ಹೊಸಬನೊಡನೆ ಮೊಜಾರ್ಟ್‌ಗೆ ಭಿನ್ನಾಭಿಪ್ರಾಯ ಉಂಟಾದ್ದರಿಂದ, ತನ್ನ ಸ್ಥಾನವನ್ನು ಮೊಜಾರ್ಟ್ ಬಿಟ್ಟು ಆಸ್ಟ್ರಿಯದ ರಾಜಧಾನಿ ವಿಯೆನ್ನಾಗೆ ಹೋದ. ಆಸ್ಟ್ರಿಯದ ಅರಸನ ಆಸ್ಥಾನದಲ್ಲಿ ಸಂಗೀತಗಾರನಾಗುವ ಅಭಿಲಾಷೆಯನ್ನು ವ್ಯಕ್ತಪಡಿಸಿದ. ಆದರೆ ಆಗ ಇಟಲಿಯವರನ್ನು ಸಂಗೀತಗಾರರನ್ನಾಗಿ ನೇಮಿಸಿಕೊಳ್ಳುವುದೇ ಪದ್ಧತಿಯಾಗಿತ್ತು. ಆದ್ದರಿಂದ ಪ್ರತಿಭಾವಂತ ಮೊಜಾರ್ಟ್‌ಗೆ ಸರಿಯಾದ ಸ್ಥಾನ ಸಿಗಲಿಲ್ಲ. ತನ್ನ ಬೆಳೆಯುತ್ತಿದ್ದ ಸಂಸಾರದ ಹೊಟ್ಟೆಯನ್ನು ನಿರ್ವಹಿಸಲು ಮೊಜಾರ್ಟ್ ಸಂಗೀತಪಾಠ ಹೇಳಿಕೊಡಲು ಆರಂಭಿಸಿದ. ಬಿಡುವಿಲ್ಲದೆ ಸಂಗೀತರಚನೆಯನ್ನೂ ಮಾಡುತ್ತಿದ್ದ.

ಮೊಜಾರ್ಟ್ ರಚಿಸದೇ ಇದ್ದ ಸಂಗೀತ ಪ್ರಕಾರವೇ ಇಲ್ಲವೆನ್ನಬಹುದು. ಆಪೆರಾ, ಸಿಂಫನಿ, ಸಂಗೀತ, ವಾದ್ಯಸಂಗೀತ, ಧಾರ್ಮಿಕ ಸಂಗೀತ ಮತ್ತಿತರ ಹಲವು ಬಗೆಯ ಕೃತಿಗಳನ್ನು ಅವನು ರಚಿಸಿದ್ದಾನೆ. ಇವುಗಳ ಒಟ್ಟು ಸಂಖ್ಯೆ 600ಕ್ಕೂ ಹೆಚ್ಚು.

ಮೊಜಾರ್ಟನ ಪ್ರತಿಭೆಯನ್ನು ಕಂಡು ಅಸೂಯೆ ಪಡುತ್ತಿದ್ದವರ ಸಂಖ್ಯೆಯೇನೂ ಕಡಮೆಯಾಗಿರಲಿಲ್ಲ. ಗೆಳೆಯನಾಗಿದ್ದವನೇ ಒಬ್ಬ ಇವನಿಗೆ ವಿಷಹಾಕಲು ಯತ್ನಿಸಿದ್ದೂ ಉಂಟು. ಅದು ನಿಧಾನವಾಗಿ ಪರಿಣಾಮ ಮಾಡುವ ವಿಷ. ಇದರಿಂದಾಗಿ ಮೊಜಾರ್ಟನ ಜೀವನದ ಕೊನೆಗಾಲದಲ್ಲಿ ಒಂದು ಕ್ಷಣವೂ ಅವನಿಗೆ ನೆಮ್ಮದಿ ಇರಲಿಲ್ಲ. ತನ್ನ ಸಾವು ಸಮೀಪಿಸುತ್ತಿರುವುದು ಅವನಿಗೆ ಅರಿವಾಗಿತ್ತು. "ನನ್ನ ಬುದ್ಧಿ ದುರ್ಬಲಗೊಂಡಿದೆ. ಏಕಾಗ್ರತೆ ಎಂಬುದೇ ಇಲ್ಲ. ನನ್ನ ಸಾವಿನ ದಿನ ದೂರವಿಲ್ಲ. ಈ ಯೋಚನೆ ಬಂದಾಗಲೆಲ್ಲ ನಾನು ಹೆಚ್ಚು ಹೆಚ್ಚಾಗಿ ಕೆಲಸದಲ್ಲಿ ತೊಡಗುತ್ತೇನೆ. ಏಕೆಂದರೆ ಸುಮ್ಮನೆ ಮಲಗಿಕೊಂಡು ಕಾಲ ಕಳೆಯುವುದಕ್ಕಿಂತ ಒಂದು ನಿಮಿಷವೂ ಬಿಡದೆ ಕೆಲಸ ಮಾಡುತ್ತಿದ್ದರೆ ಮನಸ್ಸಿಗೆ ಎಷ್ಟೋ ನೆಮ್ಮದಿ. ನಾನು ಈಗ ಎತ್ತಿಕೊಂಡಿರುವ ಕೆಲಸವನ್ನು ಅರ್ಧದಲ್ಲೇ ನಿಲ್ಲಿಸಲಾರೆ," ಎಂದು ಹೇಳುತ್ತಿದ್ದ.



'ಸಂಗೀತಗಾರರ ಸಂಗೀತಗಾರ' : ಮೊಜಾರ್ಟ್

ಮೊಜಾರ್ಟನ ಅತ್ಯಂತ ಶ್ರೇಷ್ಠ ಕೃತಿ ಎನಿಸಿದ ಸಂಗೀತ ರಚನೆ 'ಮಾಂತ್ರಿಕ ಕೊಳಲಿ'ನ ಕೊನೆಯ ಭಾಗ ಪೂರ್ಣಗೊಂಡದ್ದು ಈ ಕಾಲದಲ್ಲಿ. ತೀವ್ರ ಅನಾರೋಗ್ಯದಿಂದ ನರಳುತ್ತಿದ್ದಾಗಲೂ ಇವನು ಮುಂಜಾನೆಯಿಂದ ಮಧ್ಯರಾತ್ರಿಯವರೆಗೆ ಕೆಲಸ ಮಾಡುತ್ತಿದ್ದ. ಮೂವತ್ತೈದರ ಮೊಜಾರ್ಟ್ 1791ರ ಡಿಸೆಂಬರ್ ೫ರಂದು ತೀರಿಕೊಂಡಾಗ, ಗೆಳೆಯರಾರೂ ಅವನ ಹತ್ತಿರವಿರಲಿಲ್ಲ. ಸಾಯುವ ಹೊತ್ತಿಗೆ ಅವನೊಡನೆ ಪುಡಿಕಾಸೂ ಇರಲಿಲ್ಲ. ವಿಪರೀತ ಸಾಲವೂ ಆಗಿತ್ತು. ದಿವಾಳಿಗಾರರ ಸ್ಮಶಾನದಲ್ಲಿ ಮೊಜಾರ್ಟನ ಶವವನ್ನು ಹೂಳಲಾಯಿತು. ಹೀಗೆ ಮುಗಿಯಿತು ಅತ್ಯಂತ ಪ್ರತಿಭಾಶಾಲಿಯಾದ ಸಂಗೀತಗಾರ ಮೊಜಾರ್ಟನ ಜೀವನ.

ಗೋರಿಯ ಮೇಲೆ ಹೆಸರಿನ ಫಲಕವಿಲ್ಲ. ಆ ಕಾರಣ ಮೊಜಾರ್ಟನ ಸಮಾಧಿ ಯಾವುದು ಎಂದು ಕಂಡುಹಿಡಿಯುವುದು ಸಾಧ್ಯವಾಗಿಲ್ಲ.

## ಮೊಪಾಸಾ

"ವಿಕ್ಟರ್ ಹ್ಯೂಗೋನ ಅನಂತರ ಮೊಪಾಸಾ ನಮ್ಮ ಕಾಲದ ಅತ್ಯಂತ ಶ್ರೇಷ್ಠ ಲೇಖಕನಾಗಿದ್ದಾನೆ. ನಾನು ಅವನ ಕೃತಿಗಳನ್ನು ಬಹಳವಾಗಿ ಮೆಚ್ಚುತ್ತೇನೆ. ಅವನ ಸಮಕಾಲೀನ ಲೇಖಕರಲ್ಲಿ ಅವನನ್ನು ಮೇಲ್ಪಂಕ್ತಿಯಲ್ಲಿ ಇರಿಸಲು ಬಯಸುತ್ತೇನೆ."

ಫ್ರಾನ್ಸಿನ ಪ್ರಸಿದ್ಧ ಸಣ್ಣಕಥಾ ಲೇಖಕ ಮೊಪಾಸಾನನ್ನು ಕುರಿತು ರಷ್ಯದ ಖ್ಯಾತ ಸಾಹಿತಿ ಟಾಲ್‌ಸ್ಟಾಯ್ ಹೇಳಿದ ಮಾತುಗಳಿವು.

ಫ್ರಾನ್ಸಿನ ಕಥೆಗಾರ ಮೊಪಾಸಾ ತನ್ನ ಕಥೆಗಳನ್ನು ವಾಸ್ತವಿಕವೂ ವಿಶಿಷ್ಟವೂ ಆದ ಶೈಲಿಯಿಂದ ಜಗತ್ತಿನ ಜನಮನವನ್ನು ರಂಜಿಸಿದ್ದಾನೆ. ಫ್ರಾನ್ಸಿನ ನಿರೊಮಿನ್ ಪ್ರಾಂತದಲ್ಲಿ 1850 ಆಗಸ್ಟ್ ೫ರಂದು ಮೊಪಾಸಾ ಜನಿಸಿದ. ಅವನ ತಂದೆ ಗುಸ್ತಾವ್ ದ ಮೊಪಾಸಾ ಪ್ಯಾರಿಸಿನ ಷೇರ್ ದಲ್ಲಾಳಿಯ ಸಂಸ್ಥೆಯೊಂದರಲ್ಲಿ ಪಾಲುಗಾರನಾಗಿದ್ದ. 1846ರಲ್ಲಿ ಪ್ಯಾರಿಸಿನ ಶ್ರೀಮಂತ ಮನೆತನದ ಒಬ್ಬಳು ಕನ್ಯೆಯೊಡನೆ ಅವನ ವಿವಾಹವಾಯಿತು.

ಆದರೆ ಅವರ ಸಂಸಾರಜೀವನ ಸುಖಮಯವಾಗಿರಲಿಲ್ಲ. ಮೊಪಾಸಾ ಜನಿಸಿದ ಕೆಲವೇ ತಿಂಗಳಲ್ಲಿ ಗಂಡಹೆಂಡಿರಲ್ಲಿ ವಿರಸ ತಲೆದೋರಿತು. ಪತ್ನಿ ಗಂಡನನ್ನು ತ್ಯಜಿಸಿ ವಗ್ರ್ಯೂಸ್ ಎಂಬಲ್ಲಿದ್ದ ತನ್ನ ಜಮೀನಿನಲ್ಲಿ ವಾಸಿಸಲು ಪ್ರಾರಂಭಿಸಿದಳು. ನಾರ್ಮಂಡಿಯ ಕರಾವಳಿ ಪ್ರದೇಶದಲ್ಲಿ ನಾವಿಕರು, ರೈತಮಕ್ಕಳ ಒಡನಾಟದಲ್ಲಿ ಮೊಪಾಸಾನ ಬಾಲ್ಯದ ದಿನಗಳು ಕಳೆದುವು.

13 ವರ್ಷ ವಯಸ್ಸಿನವನಾಗಿದ್ದಾಗ ಮೊಪಾಸಾ ಶಾಲೆಗೆ ಹೋಗಲು ಪ್ರಾರಂಭಿಸಿದ. ಹಳ್ಳಿಯ ಪಾದ್ರಿಯೊಬ್ಬನಿಂದ ಲ್ಯಾಟಿನ್ ಭಾಷೆಯನ್ನು ಕಲಿತುಕೊಂಡ. ಶ್ರಮಪಟ್ಟು ವಿದ್ಯಾಭ್ಯಾಸ ಮಾಡಿ 1807ರಲ್ಲಿ ಕ್ಯಾನ್ ವಿಶ್ವವಿದ್ಯಾನಿಲಯದಲ್ಲಿ ಮೆಟ್ರಿಕ್ಯುಲೇಷನ್ ಪಾಸುಮಾಡಿದ.

1870ರಲ್ಲಿ ಫ್ರಾನ್ಸ್ ಮತ್ತು ಜರ್ಮನಿಗಳ ನಡುವೆ ಯುದ್ಧ ನಡೆದಾಗ ಆತ ನ್ಯಾಯಶಾಸ್ತ್ರದ ವಿದ್ಯಾರ್ಥಿಯಾಗಿದ್ದ. ಯುದ್ಧದ ಘಟನೆಗಳು ಅವನ ಮನಸ್ಸಿನ ಮೇಲೆ ಗಾಢ ಪರಿಣಾಮ ಉಂಟುಮಾಡಿದುವು. ಯುದ್ಧ ಮುಗಿದ ಬಳಿಕ ಮೊಪಾಸಾನಿಗೆ ನೌಕಾಶಾಖೆಯಲ್ಲಿ ಗುಮಾಸ್ತನ ಕೆಲಸ ಸಿಕ್ಕಿತು. ಇದರಿಂದ ಸರಕಾರಿ ಕಾರ್ಯಾಲಯಗಳಲ್ಲಿ ನೌಕರರ ಯಾಂತ್ರಿಕ ದುಡಿಮೆಯ ವಿವಿಧ ಮುಖಗಳ ಪರಿಚಯ ಅವನಿಗಾಯಿತು. ಈ ಅನುಭವವನ್ನು ಅವನು ಮುಂದೆ ಸಣ್ಣ ಕಥೆಗಳ ರಚನೆಯಲ್ಲಿ ಬಳಸಿದ.

ಮೊಪಾಸಾ ಫ್ರಾನ್ಸಿನ ಕಾದಂಬರಿಕಾರ ಫ್ಲಾಬೇರನ ಪ್ರಭಾವದ ಬೆಳಕಿನಲ್ಲಿ ಬೆಳೆದವನು. ಕಥಾರಚನೆಯ ಬಗೆಗೆ ಆತನಿಂದ ದೊರೆತ ಪ್ರೇರಣೆ, ಸ್ಫೂರ್ತಿಗಳನ್ನು ಮೊಪಾಸಾ ತನ್ನ ಜೀವನದುದ್ದಕ್ಕೂ ಸ್ಮರಿಸಿಕೊಳ್ಳುತ್ತಿದ್ದ. ತನ್ನ ಕಾಲದ ತರುಣ ಲೇಖಕರಾದ ಪಾಲ್ ಅಲೆಕ್ಸಿಸ್, ಹೆನ್ರಿ ಸಿಯಾರ್ಡ್ ಮುಂತಾದವರ ಜೊತೆಯಲ್ಲಿ ಆತನಿಗೆ ನಿಕಟ ಗೆಳತನವಿತ್ತು. ಪ್ರತಿ ಭಾನುವಾರ ಮಿದಾನ್ ಎಂಬಲ್ಲಿ ಎಮಿಲಿ ಜೋಲಾ ನ ಮನೆಯಲ್ಲಿ ಆರಾಮವಾಗಿ ಹರಟುತ್ತ ಕಾಲ ಕಳೆಯುತ್ತಿದ್ದ.

1880ರಲ್ಲಿ ಎಮಿಲಿ ಜೋಲಾ ಮತ್ತು ಅವನ ಗೆಳೆಯರ ಗುಂಪು ಫ್ರಾನ್ಸ್–ಜರ್ಮನ್ ಯುದ್ಧದ ಅನುಭವಗಳನ್ನು ಕುರಿತಾದ ಕಥಾಸಂಕಲನವೊಂದನ್ನು ಪ್ರಕಟಿಸಿತು. ಮೊಪಾಸಾನ ಒಂದು ಕಥೆ ಅದರಲ್ಲಿತ್ತು. ಈ ಸಂಕಲನ ಸಾಹಿತ್ಯರಂಗದಲ್ಲಿ ತೀವ್ರವಾದ ವಿವಾದಗಳಿಗೆ ಎಡೆಗೊಟ್ಟಿತು. ಆದರೂ ಅದರಲ್ಲಿ ಸೇರಿದ್ದ 'ಬಾಲ್ ದ ಸೂಫ್' ಎಂಬ ಮೊಪಾಸಾನ ಕಥೆಯನ್ನು ಜಗತ್ತಿನ ಕಥಾಸಾಹಿತ್ಯದ ಮೇರುಕೃತಿ ಎಂದು ವಿಮರ್ಶಕರು ಹೊಗಳಿದರು.

1881ರಲ್ಲಿ ಪ್ರಕಟವಾದ ಕಥಾಸಂಕಲನ 'ಲಾ ಮಾರಿಸನ್ ಟೆಲ್ಲರ್' ವಿಷಯ ವೈವಿಧ್ಯದ ದೃಷ್ಟಿಯಿಂದ ಗಣನೀಯವಾದದ್ದು. ಮೊಪಾಸಾನ ಮುಂದಿನ ಕೃತಿ ವೈಭವಕ್ಕೆ ಇದು ನಾಂದಿಯಾಯಿತು.

1883–84ರ ಅವಧಿಯಲ್ಲಿ ಸುಮಾರು ಆರು ಕಥಾ ಸಂಕಲನಗಳು ಪ್ರಕಟವಾದುವು. ಮೊಪಾಸಾನ ಸಣ್ಣ ಕಥೆಗಳಲ್ಲಿ 'ವಜ್ರಹಾರ', 'ದಾರದ ತುಂಡು' ಅತ್ಯಂತ ಪ್ರಸಿದ್ಧವಾದುವು. ಇವೂ ಮೊಪಾಸಾನ ಇತರ ಹಲವಾರು ಕಥೆಗಳೂ ಜಗತ್ತಿನ ಪ್ರಮುಖ ಭಾಷೆಗಳಿಗೆ ಅನುವಾದಗೊಂಡಿವೆ.

ಸಣ್ಣ ಕಥೆಗಳಂತೆ ಸುದೀರ್ಘ ಕಾದಂಬರಿಗಳನ್ನೂ ಮೊಪಾಸಾ ರಚಿಸಿದ್ದಾನೆ. 'ಬೇಲ್ ಆಮಿ' 1888ರಲ್ಲಿ ರಚಿತವಾದ ಸಾಮಾಜಿಕ ಕಾದಂಬರಿ. ಪ್ಯಾರಿಸಿನ ಚತುರರು, ಕುಟಿಲರು, ವ್ಯಾಪಾರಿಗಳು ಹಾಗೂ ಪತ್ರಿಕೋದ್ಯಮಿಗಳು ಈ ಕಾದಂಬರಿಯಲ್ಲಿ ತೀವ್ರ ವಿಡಂಬನೆಗೆ ಗುರಿಯಾಗಿದ್ದಾರೆ.



ಮೀರಿಸಿದವರು ಯಾರೂ ಇಲ್ಲ : ಮೊಪಾಸಾ

ಮೊಪಾಸಾನ ಕೃತಿಗಳ ಪ್ರಧಾನ ಲಕ್ಷಣ – ವಾಸ್ತವಿಕತೆ. ನಾರ್ಮಂಡಿಯ ಗ್ರಾಮೀಣ ಪರಿಸರದಲ್ಲಿ ಬೆಳದ ಮೊಪಾಸಾನ ರಚನೆಗಳಲ್ಲಿ ಆ ಪ್ರದೇಶದ ವರ್ಣನೆ ಸೊಗಸಾಗಿ ಮೂಡಿದೆ. ಗ್ರಾಮೀಣ ಜನಜೀವನದ ಸರಳತೆ, ಸವಿಜಿತೆಗಳನ್ನು ನಿರೂಪಿಸುವುದರಲ್ಲಿ ಅವನ ಪ್ರತಿಭೆಯ ಹೊಳಹನ್ನು ಕಾಣಬಹುದು.

ಮೊಪಾಸಾನ ಅನೇಕ ಸಣ್ಣ ಕಥೆಗಳಲ್ಲಿ ದುರಂತ ಚಿತ್ರಣ ಅಪೂರ್ವವಾದದ್ದು. ಯೂರೋಪಿನ ಶ್ರೇಷ್ಠ ವಿಮರ್ಶಕ ಟೇನ್ ಮೊಪಾಸಾನ ಸಣ್ಣ ಕಥೆಗಳನ್ನು ಪ್ರಾಚೀನ ಗ್ರೀಸ್ ದೇಶದ ಪ್ರಸಿದ್ಧ ದುರಂತ ನಾಟಕ ಕರ್ತೃ ಎಸ್ಕಿಲಸ್‌ನ ನಾಟಕಗಳಿಗೆ ಹೋಲಿಸಿದ್ದಾನೆ.

ಬಡ ಜನರು, ನಿರ್ಗತಿಕರು ಎಂದರೆ ಮೊಪಾಸಾಗೆ ಅಪಾರ ಅನುಕಂಪ, ಕರುಣೆ. ಅವರ ಜೀವನವನ್ನು ಕುರಿತು ಅವನು ಹಲವಾರು ಸಣ್ಣ ಕಥೆಗಳನ್ನು ಬರೆದಿದ್ದಾನೆ.

ಮೊಪಾಸಾನ ಸಣ್ಣ ಕಥೆಗಳು ಸರಳವಾದುವು. ಅನಗತ್ಯ ಶಬ್ದ ಪ್ರಯೋಗಗಳಿಗೆ ಅಲ್ಲಿ ಸ್ಥಾನವಿಲ್ಲ.

ಮೊಪಾಸಾನ ಜೀವನ ಸುಖಮಯವಾದದ್ದೇನೂ ಅಲ್ಲ. ಆಗಾಗ್ಗೆ ಬರುತ್ತಿದ್ದ ತಲೆನೋವು ಅವನಿಗೆ ಸಹಿಸಲಸಾಧ್ಯವಾದ ಬಾಧೆ ಕೊಡುತ್ತಿತ್ತು. ಜೊತೆಗೆ ಮದ್ಯಪಾನ ಅವನ ಮೇಲೆ ದುಷ್ಪರಿಣಾಮ ಉಂಟುಮಾಡಿತು. ಇದರ ಪರಿಣಾಮವಾಗಿ ಅವನ ಆರೋಗ್ಯ ಕೆಟ್ಟಿತು. ಮನಸ್ಸೂ ದುರ್ಬಲವಾಯಿತು. ಅವನು ಆಗಾಗ ಮಾನಸಿಕ ಭ್ರಮೆಗಳಿಗೆ ಒಳಗಾಗುತ್ತಿದ್ದ. ಇಂಥ ಒಂದು ಸಂದರ್ಭದಲ್ಲಿ ತನ್ನ ಮಾನಸಿಕ ವೇದನೆಯನ್ನು ತಾಳಲಾರದೆ ಅವನು ತನ್ನ ಕುತ್ತಿಗೆಯನ್ನು ಕುಯ್ದುಕೊಂಡ. ಆದರೆ ಈ ಆತ್ಮಹತ್ಯೆಯ ಪ್ರಯತ್ನ ವಿಫಲವಾಯಿತು. ಅವನು ಸಾಯಲಿಲ್ಲ. 1893ರ ವರೆಗೂ ಏನಾದರೊಂದು ತೊಂದರೆಯಿಂದ ನರಳುತ್ತಲೇ ಇದ್ದು ಕೊನೆಗೆ ಪ್ಯಾರಿಸಿನ ಆಸ್ಪತ್ರೆಯೊಂದರಲ್ಲಿ ತೀರಿಕೊಂಡ.

ಮೊಪಾಸಾನ ಸಣ್ಣ ಕತೆಗಳು ಜಗತ್ತಿನ ಸಣ್ಣ ಕಥಾಪ್ರಪಂಚದ ಮೇಲೆ ಗಮನಾರ್ಹ ಪ್ರಭಾವ ಬೀರಿವೆ. ಮೊಪಾಸಾನನ್ನು ಅನುಕರಿಸಿದವರು, ಅವನ ಮಾರ್ಗವನ್ನು ಅನುಸರಿಸಿದವರು ಹಲವರು : ಆದರೆ ಅವನನ್ನು ಮೀರಿಸಿದವರು ಮಾತ್ರ ಯಾರೂ ಇಲ್ಲ.



ತೀವ್ರ ಉತ್ಸುಕ ಜೀವನ : ಮೋಡಿಗ್ಲ್ಯಾನೀ

### ಮೋಡಿಗ್ಲ್ಯಾನೀ

ಚಿಂತೆಯೇ ಮೂರ್ತಿವೆತ್ತಂತೆ ಮೇಜಿನ ಮೇಲೆ ಕೈಯೂರಿ ಕುಳಿತಿದ್ದಾನೆ ಒಬ್ಬಾತ. ಅಂಡಾಕಾರದ ಮುಖ, ಉದ್ದನೆಯ ಕೈಕಾಲುಗಳು, ಚಿಂತೆಯ ಭಾರದಿಂದ ಅರೆ ಮುಚ್ಚಿರುವ ಕಣ್ಣುಗಳು –ಇದು ಇಟಲಿಯ ಚಿತ್ರಕಾರ, ಶಿಲ್ಪಿ ಅಮೇಡಿಯೊ ಮೋಡಿಗ್ಲ್ಯಾನೀ (ಭಾಷಾ ಉಚ್ಚಾರ : ಮೋಡಿಲ್ಯಾನೀ) ರಚಿಸಿರುವ ಒಂದು ಚಿತ್ರ. ಇದಕ್ಕೆ ಅವನು ಕೊಟ್ಟಿರುವ ಹೆಸರು 'ಪ್ರತ್ರಿಶಿಷ್ಯ'.

"ಅಲ್ಪ ಕಾಲದ್ದಾದರೂ ತೀವ್ರ ಉತ್ಸುಕ ಜೀವನ ನನಗೆ ಇಷ್ಟ." ಎಂದು ಅವನು ತನ್ನ ಸ್ನೇಹಿತನೊಬ್ಬನ ಹತ್ತಿರ ಹೇಳುತ್ತಿದ್ದ. ಉದ್ವಿಗ್ನ ಮತ್ತು ಸಾಹಸಮಯ ಜೀವನ ನಡೆಸುತ್ತ, ಚಿತ್ರ ಅಥವಾ ಶಿಲ್ಪಗಳನ್ನು ರಚಿಸುತ್ತ ಇರಬೇಕೆಂಬುದು ಅವನ ಅಪೇಕ್ಷೆಯಾಗಿತ್ತು. ಹೆಚ್ಚು ಕಡಿಮೆ ಅಂಥ ಜೀವನವನ್ನೇ ಅವನು ನಡೆಸಿದ.

ಮೋಡಿಗ್ಲ್ಯಾನೀ ಹುಟ್ಟಿದ್ದು ಇಟಲಿಯ ಲೆಗ್‌ಹಾರ್ನ್‌ನಲ್ಲಿ, 1884ನೆಯ ಜೂಲೈ 12ರಂದು, ಮಧ್ಯಮವರ್ಗದ ಯಹೂದ್ಯರ ಮನೆತನದಲ್ಲಿ. ಹುಡುಗ ಅಷ್ಟೇನೂ ಆರೋಗ್ಯವಂತನಾಗಿರಲಿಲ್ಲ. 16ನೆಯ ವಯಸ್ಸಿನಲ್ಲಿ ಅವನಿಗೆ ಕ್ಷಯರೋಗ ಅಂಟಿತು. ಆದ್ದರಿಂದ ಚಳಿಗಾಲವನ್ನು ಕಳೆಯಲು ಅವನನ್ನು ದಕ್ಷಿಣ ಇಟಲಿಯ ನೇಪ್‌ಲ್ಸ್‌ಗೆ ಕಳುಹಿಸಿದರು. ಆಗ ರೋಮ್, ಫ್ಲಾರೆನ್ಸ್, ವೆನಿಸ್‌ಗಳಿಗೂ ಭೇಟಿಕೊಟ್ಟ. ನವೋದಯ ಕಾಲದ ಚಿತ್ರಗಳನ್ನು ಅಭ್ಯಸಿಸಿದ. ವೆನಿಸ್‌ನಲ್ಲಿದ್ದಾಗ, ತಾನು ಶಿಲ್ಪಿಯಾಗಬೇಕೆಂದು ನಿರ್ಧರಿಸಿದ. ಮೈಕೆಲೆಂಜಲೋನ ಕೃತಿಗಳನ್ನು ಪರಿಚಯ ಮಾಡಿಕೊಂಡ.

1906ರಲ್ಲಿ ಪ್ಯಾರಿಸಿಗೆ ಬಂದು ಅಲ್ಲಿಯ ಕಲಾಶಾಲೆಗೆ ಸೇರಿದ. ಶಿಲ್ಪಿಯಾಗಿ ಕೆಲಸ ಮಾಡಲು ಬೇಕಾದ ಸಾಮಗ್ರಿಗಳು ಹೆಚ್ಚು ಬೆಲೆಯವು. ಅವನ್ನು ಕೊಳ್ಳುವ ಸಾಮರ್ಥ್ಯ ಅವನಲ್ಲಿರಲಿಲ್ಲ. ಅಲ್ಲೇ ಕಟ್ಟಡ ಕಟ್ಟುತ್ತಿದ್ದ ಕೆಲಸಗಾರರನ್ನು ಬೇಡಿ, ತನಗೆ ಬೇಕಾದ ಕಲ್ಲನ್ನು ಅವರಿಂದ ತೆಗೆದುಕೊಳ್ಳುತ್ತಿದ್ದ. ಕಲ್ಲಿನ ಮೇಲೆ ಉಳಿ ಕೆಲಸ ಮಾಡುವಾಗ ಏಳುತ್ತಿದ್ದ ಧೂಳು ಅವನ ಶ್ವಾಸಕೋಶವನ್ನು ಹೊಕ್ಕು ತೊಂದರೆ ಕೊಡುತ್ತಿತ್ತು. ಆದರೆ ಮೋಡಿಗ್ಲ್ಯಾನೀ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ತನ್ನ ಕೆಲಸ ಮುಂದುವರಿಸುತ್ತಿದ್ದ. ದೈಹಿಕ ನೋವನ್ನು ಮರೆಯಲು ಮಾದಕ ವಸ್ತುಗಳ ಸೇವನೆ ಆರಂಭಿಸಿದ.

ಪ್ಯಾರಿಸಿನಲ್ಲಿ ಮೋಡಿಗ್ಲ್ಯಾನೀಗೆ ಸುಪ್ರಸಿದ್ಧ ಚಿತ್ರಕಾರ ಪಾಬ್ಲೊ ಪಿಕಾಸೋನ ಪರಿಚಯವಾಯಿತು. ಅವನ ಪ್ರಭಾವಕ್ಕೆ ಒಳಗಾದ. ಆಫ್ರಿಕದ ನೀಗ್ರೊ ಕಲೆಯ ಸರಳತೆ, ಬಾಹ್ಯನಿಷ್ಠೆಗಳಿಗೆ ಮಾರುಹೋದ. ಆತನ ಶಿಲ್ಪ ಹಾಗೂ ತೈಲ ಚಿತ್ರಗಳಲ್ಲಿ ಇದರ ಪ್ರಭಾವ ಎದ್ದುಕಾಣುತ್ತದೆ.

ಮೋಡಿಗ್ಲ್ಯಾನೀ ಸ್ವಾಭಿಮಾನಧನ. ಕೈಯಲ್ಲಿ ಹಣವಿಲ್ಲದಾಗ ಅಲ್ಲಲ್ಲಿ ತಿರುಗಾಡುತ್ತ, ಕೊಂಚ ತಿಂಡಿ ಅಥವಾ ಪಾನೀಯಕ್ಕಾಗಿ ಹೋಟಲಿನಲ್ಲಿ ಇರುತ್ತಿದ್ದ ಜನರ ಚಿತ್ರ ಬರೆದುಕೊಟ್ಟು ನಾಲ್ಕು ಕಾಸು ಸಂಪಾದಿಸುತ್ತಿದ್ದನೇ ಹೊರತು ಯಾರಿಂದಲೇ ಆಗಲಿ ದಾನ ತೆಗೆದುಕೊಳ್ಳುತ್ತಿರಲಿಲ್ಲ.

ಅವನು ಆಗಾಗ ಅನವಶ್ಯ ಭಾವೋದ್ರೇಕಕ್ಕೆ ಒಳಗಾಗುತ್ತಿದ್ದುದೂ ಉಂಟು. ಒಮ್ಮೆ ಮೋಡಿಗ್ಲ್ಯಾನೀ ಅಮೆರಿಕದ ಪ್ರವಾಸಿ ಮಹಿಳೆಯೊಬ್ಬಳ ಚಿತ್ರ ಬರೆದ. ಚಿತ್ರಕ್ಕೆ ಮಾದರಿಯಾಗಿದ್ದವಳಿಗೆ ಅವನು ಆ ಚಿತ್ರವನ್ನು ಕೊಟ್ಟಾಗ ಆಕೆ, "ಇದರ ಮೇಲೆ ನಿಮ್ಮ ಹಸ್ತಾಕ್ಷರ ಹಾಕಿ ಕೊಟ್ಟರೆ ಇದರ ಬೆಲೆ ಹೆಚ್ಚುತ್ತದೆ" ಎಂದು ಹೇಳಿದಳು. ಈ ಸಲಹೆಯಿಂದ ಸಿಟ್ಟಿಗೆದ್ದ ಮೋಡಿಗ್ಲ್ಯಾನೀ ಆ ಚಿತ್ರವನ್ನು ತೆಗೆದುಕೊಂಡು ಅದರ ಮೇಲೆ ಅಡ್ಡಡ್ಡವಾಗಿ ದಪ್ಪ ಅಕ್ಷರಗಳಲ್ಲಿ ಸಹಿ ಮಾಡಿಬಿಟ್ಟ.

ಒಂದು ಸಲ ಅವನು ತನ್ನ ಚಿತ್ರಗಳನ್ನು ಮಾರಲು ವ್ಯಾಪಾರಿಯಲ್ಲಿಗೆ ಹೋದ. ಅವಕ್ಕೆ ಹೇಳಿದ ಬೆಲೆಯೇ ಕಡಿಮೆ. ವ್ಯಾಪಾರಿ ಇನ್ನೂ ಕಡಿಮೆ ಬೆಲೆಗೆ ಕೊಡಬೇಕೆಂದು ಒತ್ತಾಯ ಪಡಿಸಿದ. ತನ್ನ ಮನಶ್ಶಾಂತಿ ಕಳೆದುಕೊಂಡ ಮೋಡಿಗ್ಲ್ಯಾನೀ ಆ ಚಿತ್ರಗಳನ್ನು ಸೂಜಿಯಿಂದ ಚುಚ್ಚಿ ದಾರದಿಂದ ಪೋಣಿಸಿ, ಅಂಗಡಿಯ ಹಿಂದಿದ್ದ ಒಂದು ಕೊಠಡಿಯಲ್ಲಿ ತೂಗಹಾಕಿ ಹೊರಟು ಹೋದ.

1917ರಲ್ಲಿ ಮೋಡಿಗ್ಲ್ಯಾನೀ ಕಲಾವಿದ್ಯಾರ್ಥಿನಿ ಜೀನ್ ಹೆಬುಟರ್ಸ್‌ಳನ್ನು ಭೇಟಿಯಾದ. ಅವಳನ್ನು ಮದುವೆಯಾದ. ಒಬ್ಬ ಮಗಳೂ ಹುಟ್ಟಿದಳು. ದುರ್ವ್ಯಸನಗಳಿಂದಾಗಿ ಅವನ ಆರೋಗ್ಯ ಹಾಳಾಯಿತು. 1920ರ ಜನವರಿ 25ರಂದು ಮೋಡಿಗ್ಲ್ಯಾನೀ ಪ್ಯಾರಿಸಿನಲ್ಲಿ ಮೃತನಾದ. ಜೀನ್ ಆತ್ಮಹತ್ಯೆ ಮಾಡಿಕೊಂಡಳು.

ಕಲಾವಿದರು ಮೋಡಿಗ್ಲ್ಯಾನೀಯ ಕೃತಿಗಳನ್ನು ಮೆಚ್ಚಿ ಹೊಗಳುತ್ತಿದ್ದರೂ ಅವನ ಚಿತ್ರಗಳು, ಅವನ ಜೀವಿತಕಾಲದಲ್ಲಿ ಅಷ್ಟಾಗಿ ಜನಪ್ರಿಯವಾಗಲಿಲ್ಲ. 1916ರಲ್ಲಿ ಈತನಿಗೆ ಪೋಲೆಂಡಿನ ಕಲಾವಸ್ತು ವ್ಯಾಪಾರಿ, ಕವಿ, ಲಿಯೊಪಾಲ್ಡ್ ಜೊಬ್ರೊವ್‌ಸ್ಕಿಯ ಪರಿಚಯವಾಯಿತು. ಆತ 1917ರಲ್ಲಿ ಇವನ ಚಿತ್ರಗಳ ಪ್ರದರ್ಶನವನ್ನು ಏರ್ಪಡಿಸಿದ್ದಲ್ಲದೆ, ಇವನ ಚಿತ್ರಗಳು ತಕ್ಕಮಟ್ಟಿನ ಬೆಲೆಗೆ ಮಾರಾಟವಾಗುವಂತೆ ಮಾಡಿದ.

ಮೋಡಿಗ್ಲ್ಯಾನೀ ಜೀವಿಸಿದ್ದು 36 ವರ್ಷ ಮಾತ್ರ. ಇಟಲಿಯವನೇ ಆದ ದಾಂತೆ ಅವನ ಮೆಚ್ಚುಗೆಯ ಕವಿ. ಆತ ಬರೆದ 'ಡಿವೈನ್ ಕಾಮಿಡಿ'ಯ ಸಾಲುಗಳನ್ನು ಅವನು ಕಂಠಪಾಠ ಮಾಡಿದ್ದ. ಮೋಡಿಗ್ಲ್ಯಾನೀಯದು ಕವಿಯ ಮನೋಧರ್ಮ. ಕವನಗಳ ರೂಪದಲ್ಲಿ ಕವಿ ಹೇಳುವುದನ್ನು ಪೆನ್ಸಿಲಿನ ಗೆರೆಗಳು, ಕುಂಚದ ಎಳೆತಗಳಿಂದ ಕಲಾವಿದ ಸೂಚಿಸಬೇಕೆಂಬುದು ಅವನ ಅಭಿಪ್ರಾಯವಾಗಿತ್ತು.

ಮೋಡಿಗ್ಲ್ಯಾನೀಯ ಮರಣಾನಂತರ ಅವನ ಚಿತ್ರಗಳಿಗೆ ಬೆಲೆ ಬಂತು. ವ್ಯಕ್ತಿ ಚಿತ್ರಣದಲ್ಲಿ ಅವನು ತೋರುವ ಸರಳತೆ, ರೇಖೆಗಳ ಬಳುಕು, ಸಹಜ ವರ್ಣವಿನ್ಯಾಸ ಮೆಚ್ಚುಗೆಗೆ ಪಾತ್ರವಾದುವು. ಹಾಗೆಯೇ ಆ ವ್ಯಕ್ತಿಗಳ ಸ್ವಲ್ಪ ಉದ್ದವಾದ ಗುಂಡು ಮುಖ, ನೀಳವಾದ ತೋಳುಗಳು ಸ್ವಲ್ಪ ದೀರ್ಘವೆನಿಸುವ ಕತ್ತು, ಓರೆ ನೋಟಗಳು ಜನಮನವನ್ನು ಆಕರ್ಷಿಸಿದುವು.

ಬಾಳಿದ್ದು ಅಲ್ಪ ಕಾಲವಾದರೂ ಚಿರಸ್ಥಾಯಿಯಾದ ಕೀರ್ತಿ ಗಳಿಸಿದ ಕಲಾವಿದ ಮೋಡಿಗ್ಲ್ಯಾನೀ.

## ಮೋಲಿಯೇರ್

ಮೋಲಿಯೇರ್ ಫ್ರಾನ್ಸಿನ ಸುಪ್ರಸಿದ್ಧ ನಾಟಕಕಾರ. ಅವನನ್ನು ಆಧುನಿಕ 'ಕಾಮಿಡಿ'ಗಳ ಸೃಷ್ಟಿಕರ್ತ ಎಂದು ಕರೆಯುವುದುಂಟು. ಮೋಲಿಯೇರ್ ಎಂಬುದು ಅವನ ಪ್ರಸಿದ್ಧ ಸಂಕ್ಷಿಪ್ತನಾಮ. ಆತನ ನಿಜವಾದ ಹೆಸರು ಜೀನ್ ಬ್ಯಾಪ್ಟಿಸ್ಟ್ ಫೋಕಿಲಾನ್ ಮೋಲಿಯೇರ್.

1622ರಲ್ಲಿ ಮೋಲಿಯೇರ್ ಪ್ಯಾರಿಸಿನಲ್ಲಿ ಜನಿಸಿದ. ಅವನು ಚಿಕ್ಕ ವಯಸ್ಸಿನವನಾಗಿದ್ದಾಗ ಅವನ ಅಜ್ಜ ಅವನನ್ನು ಪ್ಯಾರಿಸಿನ ನಾಟಕ ಮಂದಿರಗಳಿಗೆ ಕರೆದುಕೊಂಡು ಹೋಗುತ್ತಿದ್ದ. ಮೋಲಿಯೇರ್ 15 ವರ್ಷದವನಾಗಿದ್ದಾಗ ಕ್ರೈಸ್ತರ ಜೆಸ್ಯೂಟ್ ಪಂಗಡದ ಕಾಲೇಜೊಂದನ್ನು ಸೇರಿದ. ಲ್ಯಾಟಿನ್ ನಾಟಕಗಳ ಅಧ್ಯಯನ ಮತ್ತು ಅಭಿನಯಗಳಲ್ಲಿ ಆಸಕ್ತಿ ತೋರಿದ. ಇವೆಲ್ಲವೂ ಮೋಲಿಯೇರನ ನಾಟಕ ಕಲಾಸಕ್ತಿ ಬೆಳೆಯಲು ಸಹಾಯಕವಾದುವು ; ನಾಟಕ ಸಂಸ್ಥೆಯೊಂದನ್ನೂ ಕಟ್ಟಬೇಕೆಂಬ ಆಸೆಯನ್ನು ಅವನಲ್ಲಿ ಕೆರಳಿಸಿದವು.

ತನ್ನ ತಾಯಿಯ ಕಡೆಯಿಂದ ಹಣ ಪಡೆದು ಮೋಲಿಯೇರ್ ನಾಟಕ ಸಂಸ್ಥೆಯೊಂದನ್ನು ಸ್ಥಾಪಿಸಿದ. ಆ ಸಂಸ್ಥೆ ಕೆಲವು 'ಟ್ರಾಜಿಡಿ'ಗಳನ್ನು ಪ್ರದರ್ಶಿಸಲು ಪ್ರಾರಂಭಿಸಿತು. ಆ ಮೊದಲೇ ಬಹಳ ವ್ಯವಸ್ಥಿತವಾಗಿ ಪ್ರಬಲವಾಗಿ ಬೆಳೆದಿದ್ದ ಕೆಲವು ನಾಟಕ ಸಂಸ್ಥೆಗಳ ತೀವ್ರ ಸ್ಪರ್ಧೆಯಿಂದ ಮೋಲಿಯೇರ್‌ನ ನಾಟಕ ಪ್ರದರ್ಶನಗಳು ಲಾಭದಾಯಕವಾಗಲಿಲ್ಲ ; ತುಂಬ ನಷ್ಟವೂ ಆಯಿತು. ಮಾಡಿದ ಸಾಲವನ್ನು ತೀರಿಸಲಾಗದೆ ಅವನು ಒಂದೆರಡು ಸಲ ಸೆರೆಮನೆವಾಸವನ್ನೂ ಅನುಭವಿಸಬೇಕಾಯಿತು. ಆದರೂ ಮೋಲಿಯೇರ್ ನಾಟಕ ಪ್ರದರ್ಶನದಲ್ಲಿ ತನ್ನ ಆಸಕ್ತಿಯನ್ನು ಕಳೆದುಕೊಳ್ಳಲಿಲ್ಲ ; ದಿಟ್ಟತನದಿಂದ ಮುಂದುವರಿದ. ಅವನು ಫ್ರಾನ್ಸಿನ ಚಕ್ರವರ್ತಿ 14ನೆಯ ಲೂಯಿಯ ಸಹೋದರ ಫಿಲಿಪ್ ಮತ್ತು ರಾಜಕುಟುಂಬದವರ ಮುಂದೆ ಅಭಿನಯಿಸಿದ ಪ್ರಹಸನವೊಂದು ಅವರ ವಿಶೇಷ ಮೆಚ್ಚುಗೆಗೆ ಪಾತ್ರವಾಯಿತು. ಅನಂತರ ಫ್ರಾನ್ಸಿನ ರಾಜಕುಟುಂಬದವರಿಗೆ ಮೀಸಲಾದ ನಾಟಕಶಾಲೆಯಲ್ಲಿ ಪ್ರದರ್ಶನ ನಡೆಸಲು ಅವನಿಗೆ ಅವಕಾಶ ಸಿಕ್ಕಿತು.

ಈ ರಾಜಪ್ರೋತ್ಸಾಹದಿಂದ ಮೋಲಿಯೇರ್‌ನ ನಾಟಕ ಮಂಡಲಿ ಚೇತರಿಸಿಕೊಂಡಿತು. ಮೋಲಿಯೇರ್ ತಾನೇ ನಾಟಕಗಳನ್ನು ಬರೆದು ಅವನ್ನು ಪ್ರದರ್ಶಿಸಲಾರಂಭಿಸಿದ.

ಖ್ಯಾತ ಆಂಗ್ಲ ನಾಟಕಕಾರ ಶೇಕ್ಸ್‌ಪಿಯರನಂತೆ ಮೋಲಿಯೇರನೂ ನಾಟಕ ಕಂಪನಿಯ ವ್ಯವಸ್ಥಾಪಕನಾದ ; ಖ್ಯಾತ ನಟನಾದ ; ಕಾಲ ದೇಶಗಳ ಮಿತಿಯನ್ನು ಮೀರಿದ ಪ್ರತಿಭಾವಂತ ನಾಟಕಕಾರನಾದ.

ಕಾಮಿಡಿ ನಾಟಕಗಳನ್ನು ಲಘುಪ್ರಹಸನಗಳ ಮಟ್ಟದಿಂದ ಒಂದು ಸೃಷ್ಟ್ಯಾತ್ಮಕ ಕಲೆಯ ಮಟ್ಟಕ್ಕೆ ಏರಿಸಿದ ಕೀರ್ತಿ ಮೋಲಿಯೇರ್‌ಗೆ ಸಲ್ಲುತ್ತದೆ.

'ತಾರ್ತೂಫ್' ಮೋಲಿಯೇರ್‌ನ ನಾಟಕಗಳಲ್ಲಿ ಅತ್ಯಂತ ಪ್ರಸಿದ್ಧವಾದದ್ದು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ವಂಚನೆ, ಪಾದ್ರಿಗಳ ಕಪಟತನವನ್ನು ಕುರಿತ ಮೂರು ಅಂಕಗಳ ನಾಟಕ ಇದು. ಇದು ಪ್ರಕಟವಾದಾಗ ಫ್ರಾನ್ಸಿನ ರಾಜಕೀಯ, ಧಾರ್ಮಿಕ ವಲಯಗಳಲ್ಲಿ ವಿವಾದದ ಬಿರುಗಾಳಿ ಮೊರೆಯಿತು. ಸರಕಾರ ಈ ನಾಟಕದ ಪ್ರದರ್ಶನವನ್ನು ನಿಲ್ಲಿಸಬೇಕೆಂದು ಆಜ್ಞೆಮಾಡಿತು. ಫ್ರಾನ್ಸಿನ ಧಾರ್ಮಿಕ ಪ್ರಮುಖರು ಆ ನಾಟಕದ ಮೇಲೆ ಬಹಿಷ್ಕಾರ ಹಾಕಿದರು. ಆದರೆ ಸುಮಾರು 1670ರಲ್ಲಿ ಆ ನಾಟಕ ಸಾರ್ವಜನಿಕವಾಗಿ ಪ್ರದರ್ಶಿತವಾದಾಗ, ಅದು ತುಂಬ ಜನಪ್ರಿಯವಾಯಿತು. ಫ್ರೆಂಚ್ ನಾಟಕ ಪ್ರಕಾರದ ಶ್ರೇಷ್ಠ ಕೃತಿಯೆಂದು ಹೊಗಳಲ್ಪಟ್ಟಿತು.



ಮೋಲಿಯೇರ್

ಮೋಲಿಯೇರ್ ತನ್ನ ಪ್ರತಿಯೊಂದು ನಾಟಕದಲ್ಲೂ ಮನುಷ್ಯನ ದೌರ್ಬಲ್ಯ, ಅಸಂಬದ್ಧ ನಡವಳಿಕೆ, ಶುಷ್ಕ ಸೊಗಸುಗಾರಿಕೆಗಳನ್ನು ಪರಿತ ಮಾತುಗಳಿಂದ ಗೇಲಿ ಮಾಡುತ್ತಾನೆ. ಜಿಪುಣರು, ಮೂರ್ಖರು, ಆಷಾಢಭೂತಿ ಗಳು, ದಗಾಖೋರರು, ಮೋಸಗಾರರು, ಹರಟೆಮಲ್ಲರು, ತಾವು ಪ್ರತಿಷ್ಠಾವಂತರೆಂದು ತೋರಿಸಿಕೊಳ್ಳಬಯಸುವ ಅಲ್ಪರು ಯಾರೂ ಇವನ ವಿಡಂಬನೆಯ ತಿವಿತದಿಂದ ಪಾರಾಗಿಲ್ಲ. ಅವನು ತನ್ನ ಸುತ್ತಮುತ್ತಲ ಸಮಾಜವನ್ನು ಸೂಕ್ಷ್ಮವಾಗಿ ನೋಡುತ್ತಿದ್ದ. ಮಾನವ ಸ್ವಭಾವವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಮೋಲಿಯೇರ್ ಬಲು ನಿಪುಣ. ಆದ್ದರಿಂದಲೇ ಅವನ ಕೃತಿಗಳೂ ಅವನ ಅಭಿನಯವೂ ಜೀವಕಳೆಯಿಂದ ಕೂಡಿರುತ್ತಿದ್ದವು. ಅವನು ಪ್ರತಿಭಾವಂತ ಹಾಸ್ಯ ನಟನಾಗಿದ್ದ.

ಮದುವೆಯಾಗಿ ಮೂರು ಮಕ್ಕಳನ್ನು ಪಡೆದ ಮೇಲೆ 1672 ಫೆಬ್ರವರಿ 17ರಂದು ಮೋಲಿಯೇರನ ಹೆಂಡತಿ ಮೃತಳಾದಳು. ಇದರಿಂದ ಅವನಿಗೆ ಅಪಾರ ದುಃಖವಾಯಿತು. ಆ ಆಘಾತದಿಂದ ಚೇತರಿಸಿಕೊಳ್ಳಲು ಸ್ವಲ್ಪ ಕಾಲ ಹಿಡಿಯಿತು. ಅನಂತರ ಅವನು ಮತ್ತೆ ನಾಟಕ ರಚನೆ, ಅಭಿನಯ, ನಾಟಕ ಪ್ರದರ್ಶನಗಳಲ್ಲಿ ತೊಡಗಿದ. ಕ್ರಮೇಣ ಅವನ ಆರೋಗ್ಯ ಕೆಟ್ಟಿತು. ವಿಶ್ರಾಂತಿ ತೆಗೆದುಕೊಳ್ಳುವಂತೆ ಅವನ ಗೆಳೆಯರು ತುಂಬ ಒತ್ತಾಯ ಮಾಡಿದರೂ ಅವನು ಅವರ ಸೂಚನೆಯನ್ನು ಕಡೆಗಣಿಸಿ, ನಾಟಕದಲ್ಲಿ ಅಭಿನಯಿಸುವುದನ್ನು ಮುಂದುವರಿಸಿದ. ಅವನ ನಾಟಕ ಮಂಡಳಿಯ 50 ಜನರ ಜೀವನ ಅವನೊಬ್ಬನ ಅಭಿನಯವನ್ನು ಅವಲಂಬಿಸಿತ್ತು. 1673ನೆಯ ಫೆಬ್ರವರಿ 17ನೆಯ ತಾರೀಖು ನಾಟಕಪ್ರದರ್ಶನದಲ್ಲಿ ಭಾಗವಹಿಸಿ ವಿಪರೀತ ಆಯಾಸಗೊಂಡು ಮನೆಗೆ ಹಿಂತಿರುಗಿದ. ಒಂದು ಚೂರು ಬ್ರೆಡ್ಡು ಹಾಲು ಗಿಣ್ಣು ತೆಗೆದುಕೊಂಡ. ಆಹಾರ ದಕ್ಕಲಿಲ್ಲ. ವಾಂತಿಯಾಯಿತು. ಅದೇ ರಾತ್ರಿ ಕೊನೆಯುಸಿರೆಳೆದ.

ಅವನ ಮರಣಶಯ್ಯೆಯ ಬಳಿ ಯಾವ ಪಾದ್ರಿಯೂ ಸುಳಿಯಲಿಲ್ಲ. ಅವನ ಶವಸಂಸ್ಕಾರ ಮಾಡಿಸಲೂ ಮುಂದೆ ಬರಲಿಲ್ಲ. ಕೊನೆಗೆ ಆತನ ಗೆಳೆಯರು ರಾಜನ ಅನುಮತಿ ಪಡೆದು ಅವನ ದೇಹವನ್ನು ಸೇಂಟ್ ಜೋಸೆಫ್ ಸ್ಮಶಾನದಲ್ಲಿ ಮಣ್ಣುಮಾಡಿದರು —ಯಾವ ಧಾರ್ಮಿಕ ಉತ್ತರ ಕ್ರಿಯೆಯೂ ಇಲ್ಲದೆ. ಫ್ರಾನ್ಸಿನ ಮಹಾಕ್ರಾಂತಿಯ ಕಾಲದಲ್ಲಿ ಅವನ ದೇಹದ್ದೆಂದು ಭಾವಿಸಲಾದ ಅವಶೇಷಗಳನ್ನು ಅಲ್ಲಿಂದ ಬೇರೊಂದು ಸ್ಮಶಾನಕ್ಕೆ ಸಾಗಿಸಲಾಯಿತು, ಎನ್ನುತ್ತಾರೆ.

[illegible] ಸ್ವಾರ್ಥ ಗಳಿಸುತ್ತಾರೆ. [illegible] ನಾಟಕಗಳನ್ನು ಅಲ್ಲೇ ವಿಶೇಷವಾಗಿ ಪ್ರದರ್ಶಿಸುತ್ತಿದ್ದ.

ಅಥವಾ [illegible] ರಂಗಮಂಚದಲ್ಲಿ ಒಂದು ಹಳೆಯ ಆರಾಮ ಕುರ್ಚಿ [illegible] ಮೋಲಿಯೇರ್ ಆ ಕುರ್ಚಿಯಲ್ಲಿ ಕುಳಿತು ಅಲ್ಲಿಗೆ ಬರುತ್ತಿದ್ದ ಗಿರಾಕಿಗಳ ಸಂಭಾಷಣೆಯನ್ನು ಆಸಕ್ತಿಯಿಂದ ಕೇಳುತ್ತಿದ್ದನಂತೆ.

## ಯಕ್ಷಗಾನ

"ಯಕ್ಷಗಾನ ಪ್ರಸಂಗಗಳು, ಲಾವಣಿಗಳು, ಜಾವಳಿಗಳು, ಕೀರ್ತನೆಗಳು, ಮದುವೆಯ ಹಾಡುಗಳು, ತೊಟ್ಟಿಲ ಹಾಡುಗಳು ಮೊದಲಾದುವೆಲ್ಲವೂ ದೇಸಿಯಲ್ಲಿ ಕೂಡುತ್ತವೆ. ಅದರಲ್ಲಿಯೂ ಯಕ್ಷಗಾನವೆಂದರೆ ದೇಸಿಯ ಕಣ್ಣು", ಎಂದಿದ್ದಾರೆ ಗೋವಿಂದ ಪೈ, ತಮ್ಮ 'ಪಾರ್ತಿಸುಬ್ಬ' ಕೃತಿಯಲ್ಲಿ.

ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಬೇಸಾಯ ಪ್ರಮುಖ ಉದ್ಯೋಗ. ಮಳೆಗಾಲದ ಕೊನೆಯ ಹೊತ್ತಿಗೆ ಗದ್ದೆಯ ಕೆಲಸವೆಲ್ಲ ಮುಗಿದು ಬೇಸಾಯಗಾರರಿಗೆ ಸ್ವಲ್ಪ ವಿಶ್ರಾಂತಿ ಸಿಗುತ್ತದೆ. ಇಂಥ ಕಾಲದಲ್ಲಿ ಒಂದು ದಿನ ಕತ್ತಲು ಕವಿದೊಡನೆ ದೂರದಿಂದ ಚಂಡೆ ಮದ್ದಳೆಯ ಧ್ವನಿ ಕೇಳಿಸಿದರೆ, 'ಇವೊತ್ತು ಇಂಥ ಊರಿನಲ್ಲಿ ಬಯಲಾಟ ಇದೆ' ಎಂದು ಜನರಿಗೆ ತಿಳಿಯುತ್ತದೆ. ಬೇಗ ಬೇಗ ಊಟದ ಶಾಸ್ತ್ರ ಮುಗಿಸಿ ನಾಲ್ಕಾರು ಜನ ಗುಂಪುಕೂಡಿ ಕತ್ತಲಲ್ಲಿ ಕಾಲ್ನಡಿಗೆಯಲ್ಲೇ ಯಕ್ಷಗಾನ ಪ್ರದರ್ಶನ ನೋಡಲು ಹೊರಟುಬಿಡುತ್ತಾರೆ. ಹತ್ತು ಹನ್ನೆರಡು ಮೈಲು ದೂರ ನಡೆದಾದರೂ ಯಕ್ಷಗಾನ ನೋಡಲು ಬರುತ್ತಾರೆ.

ಯಕ್ಷಗಾನ ನಡೆಯುವುದು ಬಯಲಿನಲ್ಲಿ. ಆದ್ದರಿಂದ ಇದನ್ನು ಬಯಲಾಟವೆಂದೂ ಕರೆಯುತ್ತಾರೆ. ಬಯಲಾಟ ನಡೆಯುವ ಸ್ಥಳಕ್ಕೆ 'ರಂಗಸ್ಥಳ' ವೆಂದು ಹೆಸರು. ಬಯಲಿನ ಒಂದು ಕಡೆ ನಾಲ್ಕು ಕಂಬಗಳ ಮಧ್ಯೆ ಸುಮಾರು ಹದಿನೈದು ಅಡಿಗಳ ಚಚ್ಚೌಕ ಭಾಗವೇ ರಂಗಸ್ಥಳ. ಆಯಾಯ ದಿನಗಳಲ್ಲಿ, 'ರಾಹು' ವಿನ ದಿಕ್ಕನ್ನು ತಪ್ಪಿಸಿ ರಂಗಸ್ಥಳವನ್ನು ಕಟ್ಟುತ್ತಾರೆ. ರಂಗಸ್ಥಳಕ್ಕೆ ತೆಂಗಿನಗರಿಯ ಚಪ್ಪರಹಾಕಿ ಮಾವಿನ ಎಲೆಯ ತೋರಣದಿಂದ ಸಿಂಗರಿಸುತ್ತಾರೆ. ಹಿಂದಿನ ಕಾಲದಲ್ಲಿ ರಂಗಸ್ಥಳದ ಇಕ್ಕೆಲಗಳಲ್ಲಿಯೂ ದೊಡ್ಡ ದೊಡ್ಡ ಕೈದೀಪಗಳ ಬೆಳಕನ್ನು ಏರ್ಪಡಿಸುತ್ತಿದ್ದರು; ದೊಂದಿ ಹಿಡಿಯುತ್ತಿದ್ದರು. ಅನಂತರ ಗ್ಯಾಸ್‌ಲೈಟ್ ಬಂತು. ಈಗ ವಿದ್ಯುದ್ದೀಪಗಳ ಉಪಯೋಗವೂ ಆಚರಣೆಯಲ್ಲಿದೆ. ರಂಗಸ್ಥಳದ ಹಿಂಬದಿಯಲ್ಲಿ ಒಂದು 'ಹಡಿಮಂಚ' ಹಾಕಿ ಹಿಮ್ಮೇಳದವರಿಗೆ ಕುಳಿತುಕೊಳ್ಳಲು ಏರ್ಪಾಡು. ಹಡಿಮಂಚದ ಬಲಭಾಗದಲ್ಲಿ ನೆಲದಮೇಲೆ ಚಂಡೆಬಾರಿಸುವವನ ಸ್ಥಾನ.

ಹಿಮ್ಮೇಳದವರು ಇರುವ ಬದಿಯನ್ನು ಬಿಟ್ಟು ರಂಗಸ್ಥಳದ ಉಳಿದ ಮೂರು ದಿಕ್ಕುಗಳಲ್ಲಿ ಪ್ರೇಕ್ಷಕರು ಕೂರಲು ಸ್ಥಳ. ಕೆಲವರಿಗೆ ಬಯಲಿನ ನೆಲವೇ ಆಸನವಾದರೆ ಇನ್ನು ಕೆಲವರು ಮನೆಯಿಂದಲೇ ಚಾಪೆ, ಜಮಖಾನ ತಂದಿರುತ್ತಾರೆ. ಮಧ್ಯರಾತ್ರಿಯಲ್ಲಿ ನಿದ್ದೆಬಂದರೆ ಬೇಕಾಗಬಹುದೆಂಬ ಮುನ್ನೆಚ್ಚರಿಕೆಯಿಂದ ತಲೆದಿಂಬನ್ನು ತರುವುದೂ ಉಂಟು. ಇಡೀ ಬಯಲಲ್ಲಿ ಕುಳಿತೋ ನಿಂತೋ ಸುತ್ತಾಡುತ್ತಲೋ ಆಟವನ್ನು ನೋಡಬಹುದು.

ರಂಗಸ್ಥಳದಿಂದ ತುಸು ದೂರದಲ್ಲಿ ಬಣ್ಣಹಚ್ಚುವ 'ಚೌಕಿ'. ಆಟ ಆರಂಭವಾಗುವುದಕ್ಕೆ ಒಂದೆರಡು ಗಂಟೆಗಳಿರುವಾಗಲೇ ನಟರು ವೇಷ ಕಟ್ಟಿಕೊಳ್ಳುವುದಕ್ಕೆ ಆರಂಭಿಸುತ್ತಾರೆ. ಊರ ಹುಡುಗರು ಸಾಕಷ್ಟು ಮುಂಚಿತವಾಗಿ ಬಂದು ಸ್ತ್ರೀವೇಷ, ಕಿರಾತ, ರಾಕ್ಷಸ, ಮುಂತಾದ ವೇಷಗಳು ಸಿದ್ಧವಾಗುವುದನ್ನು ನೋಡುತ್ತ ನಿಂತುಬಿಡುತ್ತಾರೆ.

ಬಯಲಾಟದಲ್ಲಿ ಹಾಡುವವರು ಒಬ್ಬರೇ—'ಭಾಗವತರು'. ಇವರು ಬಯಲಾಟದ ನಿರ್ದೇಶಕರೂ ಹೌದು. ವೇಷಧಾರಿಗಳು ಆಡಿ ತೋರಿಸುವ ಕಥಾಭಾಗವನ್ನು 'ಪ್ರಸಂಗ' ಎನ್ನುತ್ತಾರೆ. ಬಯಲಾಟದ ತಂಡದವರಿಗೆ 'ಮೇಳದವರು' ಎಂದು ಹೆಸರು. ವೇಷಧಾರಿಗಳು ಹಗಲಲ್ಲಿ ನಿದ್ರಿಸಿ ರಾತ್ರಿಯಲ್ಲಿ ಎದ್ದಿರುವ ನಿಶಾಚರರು. ವೇಷಧಾರಿಗಳು ಅಷ್ಟೇನೂ ಬಲಿಷ್ಠರಾಗಿಲ್ಲದಿದ್ದರೂ ಬಣ್ಣ ಬಳಿದುಕೊಂಡು ವೇಷಧರಿಸಿದಾಗ ಭಯಂಕರ ರಾಕ್ಷಸರಾಗಿಯೋ ಸುಂದರ ಸ್ತ್ರೀ ವೇಷವಾಗಿಯೋ ರೂಪಾಂತರ ಹೊಂದುತ್ತಾರೆ.

ಭಾಗವತರಿಗೆ ವಿಶೇಷ ವೇಷಭೂಷಣಗಳಿಲ್ಲ. ಎಲೆಯಡಿಕೆ ಜಗಿಯುತ್ತಲೋ ನಶ್ಯವನ್ನು ಏರಿಸುತ್ತಲೋ ಹಡಿಮಂಚದ ಮೇಲೆ ಅವರು ಕುಳಿತುಕೊಳ್ಳುತ್ತಾರೆ. ಕೈಯಲ್ಲಿ ಒಂದು ಚಿಕ್ಕ ಜಾಗಟೆ ಅಥವ ಚಕ್ರತಾಳ. ಹೆಚ್ಚಿನ 'ಪ್ರಸಂಗ'ಗಳು ಅವರಿಗೆ ಬಾಯಿಪಾಠ. ಹತ್ತಿರದಲ್ಲೇ ಪ್ರಸಂಗಗಳ ಪುಸ್ತಕಗಳ ಕಂತೆಯೂ ಇರುತ್ತದೆ. ಇವರ ಸುತ್ತು ಹಿಮ್ಮೇಳದವರು ಕುಳ್ಳಿರಲು ಸ್ಥಳವಿರುತ್ತದೆ. ಮೃದಂಗ ಅಥವಾ ಮದ್ದಳೆ, ಶ್ರುತಿ, ತಾಳ ಮತ್ತು ಚಂಡೆ —ಇವಿಷ್ಟೇ ಹಿಮ್ಮೇಳವಾದ್ಯಗಳು.

ಮೊದಲಿಗೆ ರಂಗಸ್ಥಳವನ್ನು ಪ್ರವೇಶಿಸುವವರು ಕೋಡಂಗಿಗಳು ಅಥವಾ 'ಹನುಮರಾಯ'ನ ಬಳಗ. ಚಿತ್ರವಿಚಿತ್ರವಾಗಿ ವೇಷಧರಿಸಿಕೊಂಡ ಇವರನ್ನು ನೋಡಿದೊಡನೆ ನಗುವಿನ ಲಹರಿ ಹರಿಯುತ್ತದೆ. ಇವರು



ಬಡಗುತಿಟ್ಟಿನ
ವೇಷಗಾರಿಕೆ



ಖ್ಯಾತ ಯಕ್ಷಗಾನ ಕಲಾವಿದ ಕೆರೆಮನೆ ಶಿವರಾಮ ಹೆಗಡೆ ಅರ್ಜುನನ ಪಾತ್ರದಲ್ಲಿ

ವಕ್ರವಕ್ರವಾಗಿ ಕುಣಿಯುತ್ತ, ಒಬ್ಬರಿಗೊಬ್ಬರು ಹೊಡೆದಾಡುತ್ತ, ಹಾಸ್ಯ ಮಾಡುತ್ತ ಇರುವಾಗ ಸಮಯ ಹೋಗುವುದೇ ತಿಳಿಯುವುದಿಲ್ಲ. ಹನುಮ ನಾಯಕ ಒಮ್ಮೆ ದ್ವಾರಪಾಲಕನಾಗಿ, ಮತ್ತೊಮ್ಮೆ ರಾಯಭಾರಿಯಾಗಿ, ಇನ್ನೊಮ್ಮೆ ಮಂತ್ರಿಯಾಗಿ –ಹೀಗೆ ಇಡೀ ಬಯಲಾಟದ ಉದ್ದಕ್ಕೂ ಬರುತ್ತಿದ್ದು ಜನರನ್ನು ನಗಿಸುತ್ತಿರುತ್ತಾನೆ.

ಕೋಡಂಗಿಗಳ ಬಳಿಕ ಬರುವವರು 'ಬಾಲಗೋಪಾಲ'ರು. ಇವರು ಗೋಕುಲದ ಬಲರಾಮ ಕೃಷ್ಣರು ಎಂಬುದು ಕಲ್ಪನೆ. ಇವರು ಕೆಲ ಹೊತ್ತು ಭಗವಂತನ ಲೀಲೆಯನ್ನು ತೋರಿಸುವ ನೃತ್ಯಮಾಡಿದ ಮೇಲೆ ಸ್ತ್ರೀ ವೇಷ ಬರುತ್ತದೆ. ಬಯಲಾಟದಲ್ಲಿ ಸ್ತ್ರೀಯರು ಪಾತ್ರವಹಿಸುವುದಿಲ್ಲ. ಗಂಡಸರೇ ಹೆಂಗಸರ ಪಾತ್ರವನ್ನೂ ಅಭಿನಯಿಸುತ್ತಾರೆ. ಕೋಡಂಗಿಗಳ ಹಾಸ್ಯ, ಗೋಪಾಲ ಮತ್ತು ಸ್ತ್ರೀ ವೇಷದ ನೃತ್ಯ ಪ್ರತಿ ಬಯಲಾಟದಲ್ಲೂ—ಪ್ರಸಂಗ ಯಾವುದೇ ಇರಲಿ— ಇದ್ದೇ ಇರುತ್ತವೆ. ಹೀಗೆ ಸುಮಾರು ಎರಡು ಗಂಟೆಗಳ ಪೂರ್ವರಂಗದ ಅಥವಾ ಸಭಾಲಕ್ಷಣದ ಕಾರ್ಯಕ್ರಮವಾದ ಮೇಲೆ ಕಥೆಯ ಆರಂಭ. ಅಷ್ಟರಲ್ಲಿ ಜನರೆಲ್ಲ ಬಂದು ಸೇರಿರುತ್ತಾರೆ.

ಹೆಚ್ಚಿನ ಪೌರಾಣಿಕ ಪ್ರಸಂಗಗಳು ಮೊದಲಾಗುವುದು ಮಹಾರಾಜನೊಬ್ಬನ ಒಡ್ಡೋಲಗದಿಂದ. ಭಾಗವತರು ತಮ್ಮ ವಿಶೇಷ ರೀತಿಯ ಹಾಡುಗಾರಿಕೆಯಿಂದ 'ಇವನು ಇಂಥಿಂಥ ಶೂರ, ಈತ ಈ ಬಗೆಯ ಪರಾಕ್ರಮಿ' ಎಂದು ಪ್ರೇಕ್ಷಕರಿಗೆ ಪಾತ್ರಗಳ ಪರಿಚಯ ಮಾಡಿಸುತ್ತಾರೆ. ಪಾತ್ರಗಳು ಪರಸ್ಪರ ಮಾತನಾಡಬೇಕಾದ್ದನ್ನೂ ಹಾಡಿನ ಮೂಲಕ ಭಾಗವತರು ಸೂಚಿಸುತ್ತಾರೆ. ವೇಷಧಾರಿಗಳು ತಮ್ಮ ಪಾತ್ರಗಳಿಗೆ ತಕ್ಕಂತೆ ಕುಣಿಯುತ್ತಾರೆ; ಸಂಭಾಷಿಸುತ್ತಾರೆ. ಉದ್ದಕ್ಕೂ ಇದೇ ರೀತಿ ಭಾಗವತರು ಹಾಡಿನ ಮೂಲಕ ಕಥೆಯನ್ನು ಬೆಳೆಸುವುದು; ಪಾತ್ರಧಾರಿಗಳು ಅದನ್ನು ಆಡಿತೋರಿಸುವುದು. ಮಧ್ಯರಾತ್ರಿಯ ಹೊತ್ತಿಗೆ ಆರಂಭವಾದ ಬಯಲಾಟ ಬೆಳಗಾಗುವವರೆಗೂ ನಡೆಯುತ್ತದೆ.

ಪಾತ್ರಗಳ ವೇಷಭೂಷಣಗಳೂ ಹಳೆಯ ಸಂಪ್ರದಾಯದವು. ಮುಖಕ್ಕೆ ವಿವಿಧ ಬಣ್ಣಗಳು, ಮೈಮೇಲೆಲ್ಲ ಮರದ ಬೆಂಡಿನ ಆಭರಣಗಳು. ಅವುಗಳಿಗೆ ಝಗಝಗಿಸುವ ಸುನೇರಿ ಕಾಗದ ಅಂಟಿಸಿ, ಗಾಜಿನ ತುಂಡುಗಳನ್ನು ಹಚ್ಚಿ ಹೊಳಪು ಕೊಡುತ್ತಾರೆ. ದೂತ, ಬ್ರಾಹ್ಮಣ ಅಥವಾ ಋಷಿಗಳಂಥ ಪಾತ್ರಗಳಿಗೆ ಇಂಥ ಆಡಂಬರವಿಲ್ಲ. ಅವು ಬಹುಮಟ್ಟಿಗೆ ಸ್ವಾಭಾವಿಕವಾಗಿರುತ್ತವೆ. ಆದರೆ ದೇವತೆಗಳ, ರಾಕ್ಷಸರ ವೇಷ ಹಾಕಿಕೊಳ್ಳಲು ಎರಡು–ಮೂರು ಗಂಟೆಗಳಾದರೂ ಬೇಕು. ರಕ್ಕಸ ವೇಷಧಾರಿಗಳು ಮುಖಕ್ಕೆ ಕಪ್ಪು, ಕೆಂಪು ಬಳಿದುಕೊಳ್ಳುವುದಲ್ಲದೆ ಅದರ ಮೇಲೆ ಚುಟ್ಟಿಗಳು ಎಂಬ ಅಕ್ಕಿಯ ಹಿಟ್ಟಿನ ರೇಖೆಗಳನ್ನೂ ಕಾಳುಗಳನ್ನೂ ವಿವಿಧ ವಿನ್ಯಾಸಗಳಲ್ಲಿ ಅಂಟಿಸಿಕೊಳ್ಳುವುದುಂಟು. ಬಲವಾದ ಕರಿಮೀಸೆ ಇವರನ್ನು ಇನ್ನೂ ಭಯಂಕರವಾಗಿ ಕಾಣಿಸುವಂತೆ ಮಾಡುತ್ತದೆ. ರಾಕ್ಷಸ ವೇಷಧಾರಿಗಳು ಅಂಗಗಳಿಗೆಲ್ಲ ಬಟ್ಟೆಯನ್ನು ಸುತ್ತಿಸುತ್ತಿ ಅತಿಮಾನುಷ ಆಕಾರವನ್ನು ಪಡೆಯುತ್ತಾರೆ. ಆಕಾರಕ್ಕೆ ತಕ್ಕ ಗಾತ್ರದ ಕಿರೀಟ. ಕಿರಿಯ ಪ್ರಾಯದ ಪಾತ್ರಗಳಿಗೆ ಚಿಕ್ಕದಾದ 'ಕೇದಗೆ ಮುಂದಲೆ'ಯ ಕಿರೀಟಗಳಾದರೆ ಹಿರಿಯ ಪಾತ್ರಗಳಿಗೆ ಭಾರೀ ಆಕಾರದ 'ಮುಂಡಾಸು' ಕಿರೀಟ. ರಾಕ್ಷಸ ಪಾತ್ರಗಳಿಗೆ ಬಟ್ಟಲು ಕಿರೀಟ. ಈ ಪಾತ್ರಗಳವರು ಕವಚ, ಭುಜಕೀರ್ತಿ, ಖಡ್ಗ, ಬಿಲ್ಲು–ಬಾಣ ಮುಂತಾದುವುಗಳನ್ನು ಧರಿಸುತ್ತಾರೆ.

ಭಯಂಕರ ರಾಕ್ಷಸ, ರಂಗಸ್ಥಳವನ್ನು ಪ್ರವೇಶಿಸುವ ರೀತಿ ವಿಶೇಷವಾದದ್ದು. 'ಬಣ್ಣದ ಚೌಕಿ' ಯಿಂದ ಹೊರಡುವಾಗಲೇ ಆ ಪಾತ್ರ ಭಯಂಕರವಾಗಿ ಆರ್ಭಟಿಸಲು ಆರಂಭಿಸುತ್ತದೆ. ಆರ್ಭಟಿಸುತ್ತ ರಂಗಸ್ಥಳದತ್ತ ನುಗ್ಗುತ್ತಿರುವ ಈ ವೇಷಧಾರಿಯ ಪಕ್ಕದಲ್ಲೇ ಬೆಂಕಿಯ ದೊಂದಿಯೊಂದನ್ನು ಹಿಡಿದುಕೊಂಡು ಒಬ್ಬ ಬರುತ್ತಾನೆ; ಅದರ ಉರಿಯ ಮೇಲೆ ಆಗಾಗ ರಾಳದ ಪುಡಿ ಎರಚಿ ಭುಗ್ಗನೆ ಉರಿಯೆಬ್ಬಿಸುತ್ತಾನೆ. ರಾಕ್ಷಸ ಪಾತ್ರ ರಂಗಸ್ಥಳ ಪ್ರವೇಶಿಸುವ ಹೊತ್ತಿಗೆ ಚಂಡೆಯ ಧ್ವನಿ ಕಿವಿಗಡಚಿಕ್ಕುವಂತಾಗುತ್ತದೆ. ಸದ್ದಿಗೆ ಎಂಥ ಗಾಢ ನಿದ್ರೆಯಲ್ಲಿದ್ದವರೂ ಗಡಬಡಿಸಿ ಎದ್ದು ಕೂರುತ್ತಾರೆ.

ಹಿಮ್ಮೇಳದಲ್ಲಿ ಸಂಗೀತ, ಅಭಿನಯದಲ್ಲಿ ನೃತ್ಯ, ಸಂಭಾಷಣೆಯಲ್ಲಿ ಸಾಹಿತ್ಯ, ವೇಷಭೂಷಣದಲ್ಲಿ ಚಿತ್ರಕಲೆ –ಹೀಗೆ ಯಕ್ಷಗಾನ ಬಯಲಾಟ ಹಲವು ಕಲೆಗಳ ಸಂಗಮ; ಅನಕ್ಷರಸ್ಥರಿಗೆ ಪುರಾಣದ ಕಥೆಗಳನ್ನು



ತೆಂಕುತಿಟ್ಟಿನ ವೇಷಗಾರಿಕೆ



ಯಕ್ಷಗಾನ ಕಲಾವಿದೆ : ಅಮೆರಿಕದ ಮಾರ್ಥಾ ಆಷ್ಟನ್

ತಿಳಿಸಿಕೊಡುವ ಸಾಧನ ಕೂಡ. ಇದು ನಾಡಿನ ಸಂಸ್ಕೃತಿಯ ತಿರುಳನ್ನು ಉಳಿಸಿಕೊಂಡು ಬಂದ ಕಲೆ. ಮನೋರಂಜನೆಯ ಮಹತ್ತಾದ ಮಾಧ್ಯಮವೂ ಹೌದು.

ಈಗ ಒಟ್ಟು ನಾಲ್ಕು ನೂರು ಪ್ರಸಂಗಗಳಿವೆ ಎಂಬ ಅಂದಾಜಿದೆ. ಇವುಗಳಲ್ಲಿ ಸುಮಾರು ನೂರು ಪ್ರಸಂಗಗಳು ಪುಸ್ತಕ ರೂಪದಲ್ಲಿವೆ. ಕೆಲವು ಓಲೆಗರಿ ಮತ್ತು ಕಾಗದದಲ್ಲಿ ಲಿಖಿತರೂಪದಲ್ಲಿವೆ. ಮತ್ತೆ ಕೆಲವು ಪರಂಪರೆಯಾಗಿ ಬಂದು ಹಾಡುವವರ ಬಾಯಿಯಲ್ಲಿ ಮಾತ್ರ ಉಳಿದಿವೆ. ಕೆಲ ಭಾಗವತರು 30–40 ಪ್ರಸಂಗಗಳನ್ನು ಹಾಡಬಲ್ಲರು. 'ಮೋಹಿನೀ ಭಸ್ಮಾಸುರ', 'ಕೃಷ್ಣಾರ್ಜುನ ಕಾಳಗ', 'ಅಭಿಮನ್ಯು ಕಾಳಗ', 'ದಾನಶೂರ ಕರ್ಣ', 'ಸೈಂಧವ ವಧೆ', 'ಅತಿಕಾಯ ಇಂದ್ರಜಿತು ಕಾಳಗ' ಮುಂತಾದುವು ಕೆಲ ಪ್ರಸಿದ್ಧ ಪ್ರಸಂಗಗಳು. 'ದೇವೀ ಮಹಾತ್ಮ್ಯೆ'ಯಲ್ಲಿ ಹತ್ತಾರು ರಕ್ಕಸರು ರಂಗಸ್ಥಳಕ್ಕೆ ಬರಲು ಅವಕಾಶ ಇರುವುದರಿಂದ ಇದು ಹೆಚ್ಚು ಜನಪ್ರಿಯವಾಗಿದೆ.

ಯಕ್ಷಗಾನವೂ ಗಂಧರ್ವಗಾನದಂತೆಯೇ ಒಂದು ಗಾಯನ ಪದ್ಧತಿ, ಇದನ್ನು ಬಯಲಾಟದ ರೂಪದಲ್ಲಿ ಆಡಿತೋರುವುದು ಮಾತ್ರವಲ್ಲದೆ ತಾಳಮದ್ದಳೆ, ಬೊಂಬೆಯಾಟ, ತೊಗಲುಗೊಂಬೆಯಾಟ ಮುಂತಾದ ರೀತಿಗಳಲ್ಲೂ ಪ್ರದರ್ಶಿಸುತ್ತಾರೆ. ಮಳೆಗಾಲದ ಸಮಯದಲ್ಲಿ ಬಯಲಾಟ ಪ್ರದರ್ಶನಕ್ಕೆ ಅವಕಾಶವಿಲ್ಲದ್ದರಿಂದ 'ತಾಳಮದ್ದಳೆ' ನಡೆಯುತ್ತದೆ. ಇದು ಬಯಲಾಟದ ಶ್ರವ್ಯ ಪ್ರಕಾರ. ಇದರ 'ಅರ್ಥಧಾರಿ'ಗಳು ವೇಷಭೂಷಣಗಳಿಲ್ಲದೆ ಒಬ್ಬೊಬ್ಬರು ಪಾತ್ರವಹಿಸಿ ಕುಳಿತುಕೊಂಡೇ ಸಂಭಾಷಿಸುತ್ತಾರೆ. ಈ ಪದ್ಧತಿಯಲ್ಲೂ ಭಾಗವತರು ಮತ್ತು ಹಿಮ್ಮೇಳದವರು ಇರುತ್ತಾರೆ.



ಖ್ಯಾತ ಯಕ್ಷಗಾನ ಕಲಾವಿದ ವೀರಭದ್ರ ನಾಯಕ್

ಊರ ಶ್ರೀಮಂತರು ನೂರಾರು ರೂಪಾಯಿ ಖರ್ಚು ಮಾಡಿ ಬಯಲಾಟದ ಮೇಳದವರನ್ನು ಕರೆಸಿ ಆಡಿಸುವುದು ಪದ್ಧತಿ. ಯಾವುದೋ ವಿಪತ್ತಿನಲ್ಲಿ "ಇಂಥ ದೇವರ ಆಟ ಆಡಿಸುತ್ತೇವೆ", ಎಂದು ಹರಕೆ ಹೊತ್ತು ಬಯಲಾಟ ನಡೆಸುವವರೂ ಇದ್ದಾರೆ. ಈಗೀಗ ಹಲವು ಮೇಳಗಳು ಡೇರೆ ಹಾಕಿ, ಟಿಕೆಟು ಇಟ್ಟು, ಬಯಲಾಟ ಪ್ರದರ್ಶಿಸುವುದೂ ಬಳಕೆಗೆ ಬಂದಿದೆ. ಸಾಂಪ್ರದಾಯಿಕ ಉಡುಪು, ಒಡವೆಗಳ ಬದಲಿಗೆ ನಾಜೂಕಿನ ಬಟ್ಟೆ ಬರೆ ತೊಟ್ಟು, ಸಮಕಾಲೀನ ವಿಷಯಗಳನ್ನು ಮಾತುಕತೆಯಲ್ಲಿ ಬೆರೆಸುವವರೂ ಇದ್ದಾರೆ. ಗಾಂಧಿ, ನೆಹರೂ, ರಾಮಕೃಷ್ಣ ಪರಮಹಂಸರಂಥ ಮಹಾತ್ಮರ ಕಥೆಗಳನ್ನೂ ನೃಪತುಂಗನಂಥ ಐತಿಹಾಸಿಕ ವ್ಯಕ್ತಿಯ ಕಥೆಯನ್ನೂ ಬಯಲಾಟದ ರೂಪದಲ್ಲಿ ಪ್ರದರ್ಶಿಸುವ ಪ್ರಯತ್ನವೂ ನಡೆದಿದೆ.

ಡಾ. ಕೋಟ ಶಿವರಾಮ ಕಾರಂತರು ಹತ್ತಾರು ವರ್ಷಗಳಿಂದ ಯಕ್ಷಗಾನದಲ್ಲಿ ಸಂಶೋಧನೆ ನಡೆಸಿದ್ದಾರೆ. ಉಡುಪಿ, ಧರ್ಮಸ್ಥಳಗಳಲ್ಲಿ ತರಬೇತಿ ಕೇಂದ್ರಗಳು ಪ್ರಾರಂಭವಾಗಿವೆ. ಯಕ್ಷಗಾನ ಬಯಲಾಟದ ಬಗೆಗೆ ವಿದ್ಯಾವಂತರಲ್ಲೂ ಆಸಕ್ತಿ ಬೆಳೆಯುತ್ತಿದೆ. ಈ ಕಲೆಯನ್ನು ಕುರಿತು ವಿಚಾರಸಂಕಿರಣಗಳೂ ನಡೆಯುತ್ತಿವೆ. ವಿದೇಶೀಯರು ಕೂಡ ಈ ಕಲೆಯಲ್ಲಿ ಆಸಕ್ತಿವಹಿಸಿ ಅದರ ಇತಿಹಾಸ, ಪ್ರದರ್ಶನ ತಂತ್ರ, ಅಭಿನಯ ವಿಧಾನಗಳನ್ನು ಆಳವಾಗಿ ಅಭ್ಯಸಿಸುತ್ತಿದ್ದಾರೆ ; ಪ್ರದರ್ಶನಗಳಲ್ಲಿ ಪಾತ್ರವನ್ನೂ ವಹಿಸುತ್ತಿದ್ದಾರೆ.

ನೋಡಿ : ಪಾರ್ತಿ ಸುಬ್ಬ

## ಯಸುನರಿ ಕವಾಬಾಟ

ಮೂರು ವರ್ಷದ ಪುಟಾಣಿ ಮಗುವಾಗಿದ್ದಾಗಲೇ ತಂದೆ ತಾಯಿಯರನ್ನು ಕಳೆದುಕೊಂಡು, ಅನಂತರ ಕೊಂಚ ಕಾಲದಲ್ಲೇ ಅಜ್ಜ ಅಜ್ಜಿಯರನ್ನೂ ಕಳೆದುಕೊಂಡು. ಅನಾಥನಾದವನು ಯಸುನರಿ ಕವಾಬಾಟ. ಈ ಏಕಾಂಗಿಗೆ 1968ರಲ್ಲಿ ಸಾಹಿತ್ಯದ ನೊಬೆಲ್ ಬಹುಮಾನ ದೊರಕಿದಾಗ ಅವನ ಖ್ಯಾತಿ ಲೋಕವ್ಯಾಪ್ತಿಯನ್ನು ಪಡೆಯಿತು. ರವೀಂದ್ರನಾಥ ಠಾಕೂರರನ್ನು ಬಿಟ್ಟರೆ ಸಾಹಿತ್ಯಕ್ಕಾಗಿ ನೊಬೆಲ್ ಬಹುಮಾನ ಪಡೆದ ಏಷ್ಯ ಖಂಡದ ಸಾಹಿತಿ ಜಪಾನಿನ ಕವಾಬಾಟ ಒಬ್ಬನೇ.

ಒಸಾಕಾದ ಬಳಿ 1899 ಜೂನ್ 11ರಂದು ಕವಾಬಾಟ ಜನಿಸಿದ. ಬಾಲ್ಯದಲ್ಲಿ ತಬ್ಬಲಿಯಾದವನು ದೊಡ್ಡವನಾದ ಮೇಲೂ ಒಂಟಿಯಾಗಿಯೇ ಬಾಳಿದ. ಟೋಕಿಯೋ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಹಾಗೂ ಜಪಾನೀ ಸಾಹಿತ್ಯಾಭ್ಯಾಸಮಾಡಿ 1924ರಲ್ಲಿ ಡಿಗ್ರಿ ಪಡೆದ. ಅವನು ಅನುಭವಿಸಿದ ಏಕಾಕಿತನದ ಛಾಯೆ ಅವನ ಸಾಹಿತ್ಯದಲ್ಲಿ ಎದ್ದು ಕಾಣುತ್ತದೆ.

'ಇಜು ನೃತ್ಯಗಾತಿ' ಇವನ ಪ್ರಥಮ ಗ್ರಂಥ. ಇದು ಅವನ ಶಿಕ್ಷಣ ಮುಗಿದೊಡನೆಯೇ ಪ್ರಕಟವಾಯಿತು. ಅಲೆದಾಡುವ ನೃತ್ಯಗಾತಿಯೊಬ್ಬಳ ಜೊತೆಯಲ್ಲಿದ್ದಾಗ ಕ್ಷಣಕಾಲ ಮನಶ್ಶಾಂತಿ ಪಡೆಯುವ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯೊಬ್ಬನ ಕಥೆ ಇದರಲ್ಲಿದೆ. 1935ರಲ್ಲಿ ಪ್ರಾರಂಭಿಸಿ 1947ರ ಹೊತ್ತಿಗೆ ಮುಗಿಸಿದ 'ಹಿಮ ದೇಶ' ಕಾದಂಬರಿ ಇವನ ಪ್ರಮುಖ ಕೃತಿ. ನಿರ್ಗತಿಕ ಗೈಶಾ ಹುಡುಗಿಯ ಕಥೆ ಇದರ ವಸ್ತು. 'ಸಾವಿರ ಕೊಕ್ಕರೆಗಳು', 'ಪರ್ವತದ ಧ್ವನಿ' ಮತ್ತು 'ಗೋ' ಇತರ ಮುಖ್ಯ ಕೃತಿಗಳು. ಇವನ ಅನೇಕ ಕೃತಿಗಳನ್ನು ಎಡ್ವರ್ಡ್ ಸೈಡೆನ್‌ಸ್ಟಿಕರ್ ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ.



ನೊಬೆಲ್ ಬಹುಮಾನ : ಕವಾಬಾಟ

ಸಾಹಿತ್ಯ ಪ್ರಚಾರಾತ್ಮಕವಾಗಿರದೆ ಕಲಾತ್ಮಕವಾಗಿರಬೇಕೆಂದು ನಂಬಿದ್ದ ಸಾಹಿತಿ ಕವಾಬಾಟ. ಒಂದು ಕ್ಷಣದ ಮನಸ್ಥಿತಿಯನ್ನು ಚಿತ್ರಿಸುವಾಗ ಕವಾಬಾಟ ತೋರಿಸುವ ಅಪೂರ್ವ ಗ್ರಹಣಶಕ್ತಿ, ಭಾವ ತೀವ್ರತೆಗಳು ಜಪಾನಿನ ವಿಶಿಷ್ಟ ಕಾವ್ಯಪ್ರಕಾರವಾದ 'ಹಾಯಿಕು' ಬಗೆಗೆ ಅವನಿಗಿದ್ದ ಒಲವನ್ನು ತೋರಿಸುತ್ತವೆ. ಇಂಥ ಅಸ್ಥಿರ ಕ್ಷಣವನ್ನು ಚಿತ್ರಿಸುವಾಗಿನ ತತ್‌ಕ್ಷಣತೆ ಕವಾಬಾಟನ ಶೈಲಿಯ ವೈಶಿಷ್ಟ್ಯ. ಆ ಕ್ಷಣ ಎಷ್ಟೇ ಸುಂದರವಾದರೂ ಅದು ಅಸ್ಥಿರವೆಂಬ ಭಾವವೂ ಒಟ್ಟಿಗೆ ಬಂದು, ಸೌಂದರ್ಯ–ಕುರೂಪಗಳ ಮಿಶ್ರಭಾವ ಅಭಿವ್ಯಕ್ತವಾಗುತ್ತದೆ. ತಿಳಿನೀರಿನಂಥ ಸ್ಪಷ್ಟ ಭಾಷೆಯಲ್ಲಿ ಕವಾಬಾಟ ಬರೆದರೂ ಆ ಪದಗಳ ಹಿಂದಿನ ದ್ವಂದ್ವ ಧ್ವನಿ, ಸಾಂಕೇತಿಕತೆಗಳು ಜಪಾನಿ ಸಂಸ್ಕೃತಿ–ಸಂಪ್ರದಾಯಗಳ ಹಿನ್ನೆಲೆಯಲ್ಲಿ ಆಳವಾದ ಅರ್ಥ ಪಡೆಯುತ್ತವೆ.

1948ರಿಂದ 1965ರ ವರೆಗೆ ಕವಾಬಾಟ ಜಪಾನಿನ ಪಿ ಇ ಎನ್ ಕ್ಲಬ್‌ನ ಅಧ್ಯಕ್ಷನಾಗಿದ್ದ; ಅನೇಕ ಸಾಹಿತ್ಯ ಸಂಘ ಸಂಸ್ಥೆಗಳ ಗೌರವಕ್ಕೆ ಪಾತ್ರನಾಗಿದ್ದ. ಜಪಾನೀ ಸರಕಾರದ ಸಾಂಸ್ಕೃತಿಕ ಪ್ರಶಸ್ತಿಯೂ ಅವನಿಗೆ ದೊರಕಿತು. "ಅಸಾಧಾರಣ ಸಂವೇದನೆಯಿಂದ ಜಪಾನೀ ಮನಸ್ಸಿನ ಸತ್ವವನ್ನು ತಿಳಿಸಿದ ಇವನ ಕಥನ ನೈಪುಣ್ಯಕ್ಕಾಗಿ" ನೊಬೆಲ್ ಬಹುಮಾನ ದೊರೆತಾಗ ಕವಾಬಾಟ ಅತಿವಿನಯದಿಂದ "ನನಗೆ ದೊರೆತ ಸನ್ಮಾನ–ಗೌರವಗಳಲ್ಲಿ ಅರ್ಧ ಭಾಗ ನನ್ನ ಕೃತಿಗಳ ಭಾಷಾಂತರಕಾರರಿಗೆ ಸಲ್ಲಬೇಕು" ಎಂದು ನುಡಿದ.

ಕವಾಬಾಟ ಜಗದ್ವಂದ್ಯನಾದ ಸ್ವಲ್ಪ ಸಮಯದಲ್ಲೇ ಸಾವು ಬಂತು. ಜೀವನದುದ್ದಕ್ಕೂ ಒಂಟಿಯಾಗಿಯೇ ಇದ್ದ ಕವಾಬಾಟ 1971ರಲ್ಲಿ ಆತ್ಮಹತ್ಯೆಮಾಡಿಕೊಂಡ.

## ಯೂಜೀನ್ ಓ'ನೀಲ್

"ಯಾಂಕ್: ಹುಂ ! ನನ್ನನ್ನು ಬಂಧಿಸು ! ಜೈಲಿನಲ್ಲಿಡು !
ಬೇಗ, ನನಗೆ ಕೈಕೋಳ ಹಾಕು !
ಪೋಲಿಸಿನವ : ನೀನೇನು ಮಾಡುತ್ತಿದ್ದೆ ?
ಯಾಂಕ್: ಬದುಕೋದಕ್ಕೆ ಅವಶ್ಯವಾದ್ದು ಮಾಡುತ್ತಾ ಇದ್ದೆ !
ನಾನು ಹುಟ್ಟಿದ್ದೇ ನೋಡು ಹೌದು
ಅದೇ ನನ್ನ ಅಪರಾಧ ಬರೆದುಕೋ ನಾನು
ಹುಟ್ಟಿದೆ ಗೊತ್ತಾಯ್ತಲ್ಲ"

ಈ ಸಂಭಾಷಣೆ ಯೂಜೀನ್ ಗ್ಲಾಡ್‌ಸ್ಟನ್ ಓ' ನೀಲ್ ಬರೆದ ಒಂದು ನಾಟಕದಲ್ಲಿ ಬರುತ್ತದೆ. ಜೀವನದ ಕಷ್ಟ, ನೋವು, ಬೇಸರಗಳನ್ನು ಅತಿ ಕಟುವಾಗಿ ಅನುಭವಿಸಿದ ಓ'ನೀಲ್‌ಗೆ 'ಹುಟ್ಟುವುದೇ ಅಪರಾಧ' ಎನಿಸಿತ್ತು. ತನ್ನ ಜೀವನಾನುಭವವನ್ನು ದುರಂತ ನಾಟಕಗಳ ಮೂಲಕ ಅತ್ಯಂತ ವಾಸ್ತವ ರೀತಿಯಲ್ಲಿ ವ್ಯಕ್ತಪಡಿಸಿ, ಅಮೆರಿಕದ ನಾಟಕ ರಚನೆಯಲ್ಲಿ ಇವನು ಹೊಸ ಅಧ್ಯಾಯ ಪ್ರಾರಂಭಿಸಿದ. ಪುಲಿಟ್ಜರ್ ಸಾಹಿತ್ಯ ಬಹುಮಾನ (ನಾಲ್ಕು ಬಾರಿ) ಹಾಗೂ ನೊಬೆಲ್ ಸಾಹಿತ್ಯ ಬಹುಮಾನ ಪಡೆದ ನಾಟಕಕಾರ ಓ'ನೀಲ್.

ಯಶಸ್ವೀ ನಟನಾಗಿದ್ದ ಜೇಮ್ಸ್ ಓ'ನೀಲ್‌ನ ಮಗ ಯೂಜೀನ್ ಓ'ನೀಲ್ ; ಜನನ 1888ರ ಅಕ್ಟೋಬರ್ 16ರಂದು, ನ್ಯೂಯಾರ್ಕಿನಲ್ಲಿ. ಇವನ ತಾಯಿ ಆಗಾಗ ಅನಾರೋಗ್ಯದಿಂದ ನರಳುತ್ತಿದ್ದಳು ; ತಂದೆ ತನ್ನ ನಾಟಕದ ಕಂಪನಿಯ ಕೆಲಸದಲ್ಲೇ ನಿರತನಾಗಿರುತ್ತಿದ್ದ. ಇವನ ಅಣ್ಣ ಇವನಿಗಿಂತ 10 ವರ್ಷ ದೊಡ್ಡವನು; ವಸತಿಶಾಲೆಯಲ್ಲೇ ಇರುತ್ತಿದ್ದ. ಹೀಗಾಗಿ ಓ' ನೀಲ್ ಬಾಲ್ಯದಲ್ಲಿ ಏಕಾಂಗಿಯಾಗಿ ಅಂತರ್ಮುಖಿಯಾಗಿ ಬೆಳೆದ. 7 ವರ್ಷವಾದಾಗ ಅವನನ್ನೂ ವಸತಿಶಾಲೆಗೇ ಸೇರಿಸಿದರು. ಅಲ್ಲಿ ಓದು ಮುಗಿಸಿದ ಓ' ನೀಲ್ ನಾಚುವ ಸುಂದರ ಮುಖದ ಮಂಕು ಹುಡುಗ ನಾಗಿದ್ದ. 1906ರಲ್ಲಿ ಕಾಲೇಜಿಗೆ ಸೇರಿದರೂ ಒಂದು ವರ್ಷದ ಅನಂತರ ಬಿಟ್ಟುಬಿಟ್ಟ.

ಶಾಲೆಯ ಗೋಡೆಗಳ ಒಳಗೆ ಕುಳಿತು ಕಲಿಯುವುದಕ್ಕಿಂತ ಹೊರಗಿನ ವಿಶಾಲ ಪ್ರಪಂಚದಲ್ಲಿ ಹತ್ತಾರು ಜನರನ್ನು ಕಂಡು, ಅವರೊಡನೆ ಕೂಡಿ ಪಾಠ ಕಲಿಯುವುದೇ ಲೇಸು ಎಂದು ಓ'ನೀಲ್ ಯೋಚಿಸಿದ. ಸಮುದ್ರಯಾನ ಕೈಗೊಂಡ. ಹೊಸ ಹೊಸ ಜನರನ್ನು ಭೇಟಿಯಾಗಿ ಹೊಸ ಹೊಸ ಅನುಭವ



ಮಾನವನ ಹೋರಾಟ :

[illegible] ಇದರಿಂದ ಇವನಿಗೆ ಲಭಿಸಿತು.

[illegible] ವರ್ಷದವನಾದಾಗ ಓ'ನೀಲ್ ಬರೆಯಲು ಪ್ರಾರಂಭಿಸಿದ. ಇದೇ ಸಮಯದಲ್ಲಿ ಕ್ಷಯರೋಗಕ್ಕೆ ಈಡಾಗಿ ಇವನು ಆಸ್ಪತ್ರೆ ಸೇರಬೇಕಾಯಿತು. ಆಗಲೇ ಓ'ನೀಲ್ ಜೀವನದ ಬಗೆಗೆ ಗಂಭೀರವಾಗಿ ಚಿಂತನೆ ನಡೆಸಿದ. 1914ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯವನ್ನು ಸೇರಿ ನಾಟಕ ರಚನೆಯನ್ನು ಕುರಿತು ಅಭ್ಯಾಸಮಾಡಿದ. ಅನಂತರ ನಾಟಕಗಳನ್ನು ಬರೆಯಲು ಆರಂಭಿಸಿದ.

1920ರಲ್ಲಿ ಇವನು ಬರೆದ 'ಎಂಪರರ್ ಜೋನ್ಸ್' ಮತ್ತು 1921ರಲ್ಲಿ ರಚಿಸಿದ 'ದಿ ಹೇರಿ ಏಪ್' ಇವನು ಮೊದಲು ಬರೆದ ನಾಟಕಗಳಲ್ಲಿ ಅತ್ಯಂತ ಪ್ರಮುಖವಾದುವು. 'ಎಂಪರರ್ ಜೋನ್ಸ್'ನಲ್ಲಿ ಮೊದಲಿನಿಂದ ಕೊನೆಯವರೆಗೆ ರಂಗವ್ಯವಸ್ಥೆ ಬದಲಾಗದೆ ಏಕಪ್ರಕಾರವಾಗಿ ಇರುತ್ತದೆ. ಹಿನ್ನೆಲೆಯಲ್ಲಿ ತಮಟೆ ಸದ್ದು ಅತ್ಯಂತ ಮೃದುವಾಗಿ ಆರಂಭವಾಗಿ ನಾಟಕದ ಕ್ರಿಯೆ ಕಾವೇರುತ್ತ ಹೋದಂತೆ ಅದೂ ಏರುತ್ತ ಹೋಗಿ, ಕ್ರಿಯೆಯ ಪರಾಕಾಷ್ಠೆಯೊಂದಿಗೆ ತಮಟೆ ಸದ್ದು ಸಹ ಪರಾಕಾಷ್ಠೆ ಮುಟ್ಟುತ್ತದೆ. ಇಂಥ ಹೊಸ ತಂತ್ರಗಳನ್ನು ಉಪಯೋಗಿಸಿಕೊಂಡ ಓ'ನೀಲ್‌ನ ನಾಟಕಗಳ ಪ್ರಯೋಗ ಅತ್ಯಂತ ಪರಿಣಾಮಕಾರಿಯಾಯಿತು.

ನಾರ್ವೆಯ ಹೆನ್ರಿಕ್ ಇಬ್ಸೆನ್ ಮತ್ತು ಸ್ವೀಡನಿನ ಆಗಸ್ಟ್ ಸ್ಟ್ರಿಂಡ್‌ಬರ್ಗ್‌ರ ನಾಟಕಗಳನ್ನೆಲ್ಲ ಓ'ನೀಲ್ ಓದಿದ್ದ. ಸ್ಟ್ರಿಂಡ್‌ಬರ್ಗ್ ಚಿಕ್ಕಂದಿನಲ್ಲಿ ಬಡತನ ಅನುಭವಿಸಿದವನು. ಮುಂದೆ ಮೂರು ಬಾರಿ ಮದುವೆಯಾದರೂ ಜೀವನದಲ್ಲಿ ಸಂತೃಪ್ತಿ ಸಿಗದೆ, ನೋವು ಬೇಸರಗಳನ್ನುಂಡ. ಈ ಕಟು ಅನುಭವಗಳು ಅವನ ನಾಟಕಗಳಲ್ಲಿ ವ್ಯಕ್ತವಾಗಿದ್ದವು.

ಓ'ನೀಲ್‌ನ ಬಾಳು ಕೂಡ ಇಂಥದೇ. ಅವನೂ ಮೂರು ಬಾರಿ ಮದುವೆಯಾದರೂ ಜೀವನದಲ್ಲಿ ಸಂತೃಪ್ತಿ ಕಾಣದೆ ಹೋದ. ಇದರಿಂದ ಇವನ ಚಿಂತನೆಯ ಮೇಲೆ ಇಬ್ಸೆನ್ ಮತ್ತು ಸ್ಟ್ರಿಂಡ್‌ಬರ್ಗ್‌ರ ಪ್ರಭಾವ ತೀವ್ರವಾಗಿ ಆದುದರಲ್ಲಿ ಆಶ್ಚರ್ಯವಿಲ್ಲ. ರೊಮ್ಯಾಂಟಿಕ್ ಮತ್ತು ಭಾವೋದ್ರಿಕ್ತ ನಾಟಕಗಳು ಪ್ರಭಾವಶಾಲಿಯಾಗಿ ಮೆರೆಯುತ್ತಿದ್ದಾಗ, ಹೊಸ ತಂತ್ರದಿಂದ ಕೂಡಿದ ಇವನ ವಾಸ್ತವಿಕ ಹಾಗೂ ದುರಂತ ನಾಟಕಗಳು ಸಮಕಾಲೀನ ರಂಗಭೂಮಿಯಲ್ಲಿ ಹೊಸ ಅಧ್ಯಾಯ ಪ್ರಾರಂಭಿಸಿದುವು.

1920ರಲ್ಲಿ 'ಬಿಯಾಂಡ್ ದಿ ಹೊರೈಜನ್' ನಾಟಕ ಓ'ನೀಲನ ಹೆಸರನ್ನು ಅಮೆರಿಕದ ಅತ್ಯಂತ ಪ್ರಮುಖ ನಾಟಕಕಾರರ ಸಾಲಿಗೆ ಸೇರಿಸಿತು. 1922ರಲ್ಲಿ ಪ್ರಕಟವಾದ 'ಅನ್ನ ಕ್ರಿಸ್ಟೀ' ಸಹ ಅತ್ಯಂತ ಯಶಸ್ವೀ ನಾಟಕವಾಯಿತು. ಈ ಎರಡು ನಾಟಕಗಳಿಗೂ 1928ರಲ್ಲಿ ಪ್ರಕಟವಾದ 'ಸ್ಟ್ರೇಂಜ್ ಇಂಟರ್‌ಲೂಡ್' ನಾಟಕಕ್ಕೂ ಪುಲಿಟ್ಜರ್ ಬಹುಮಾನಗಳು ಸಿಕ್ಕಿದುವು. 'ಲಾಂಗ್ ಡೇಸ್ ಜರ್ನಿ ಇನ್ ಟು ನೈಟ್' ಎಂಬ ನಾಟಕಕ್ಕಾಗಿ ಇವನ ನಿಧನಾನಂತರ 1956ರಲ್ಲಿ ಪುಲಿಟ್ಜರ್ ಬಹುಮಾನ ದೊರಕಿತು. ಅದು ಅವನಿಗೆ ನೀಡಲಾದ ನಾಲ್ಕನೆಯ ಪುಲಿಟ್ಜರ್ ಬಹುಮಾನ.

ವಿಧಿ, ಸಮಾಜ ಇವು ಮಾತ್ರವಲ್ಲದೆ ತನ್ನ ವಿರುದ್ಧ ತಾನೇ ಹೋರಾಡುವ ಮಾನವನ ಚಿತ್ರಣ ಓ' ನೀಲ್ ನಾಟಕಗಳಲ್ಲಿ ಸಿಗುತ್ತದೆ. ಇಂಥ ಹೋರಾಟವನ್ನು ಓ'ನೀಲ್‌ನೇ ತನ್ನ ಜೀವನದಲ್ಲಿ ಎದುರಿಸುತ್ತಿದ್ದ. ಇವನ ವಿವಾಹ ಜೀವನದಲ್ಲಿ ಕೊನೆಯವರೆಗೆ ಶಾಂತಿ ತರಲಿಲ್ಲ. ಇವನ ಮೊದಲ ಹೆಂಡತಿಗೆ ಹುಟ್ಟಿದ ಮಗ ಆತ್ಮಹತ್ಯೆ ಮಾಡಿಕೊಂಡ; ಎರಡನೆಯ ಹೆಂಡತಿಯ [illegible] ಜೀವನದಲ್ಲಿ ಯಾವುದೇ ಉದ್ದೇಶ ಗುರಿ ಇಲ್ಲದೆ ಅಲೆದಾಡಿದ. ಮೂರನೆಯ ಹೆಂಡತಿಯ ಮಗಳು 18 ವರ್ಷದವಳಾಗಿದ್ದಾಗ ತನ್ನ ತಂದೆಯಷ್ಟು ಹಿರಿಯ ವಯಸ್ಸಿನವನಾಗಿದ್ದ ಸುಪ್ರಸಿದ್ಧ ನಟ ಚಾರ್ಲಿ ಚಾಪ್ಲಿನನ್ನು ಮದುವೆಯಾದಳು.

1936ರಲ್ಲಿ ಓ'ನೀಲ್‌ಗೆ ನೊಬೆಲ್ ಬಹುಮಾನ ದೊರೆಯಿತು. ಅನಂತರ ಅನಾರೋಗ್ಯದಿಂದಾಗಿ ಹೆಚ್ಚು ಬರೆಯಲು ಅವನಿಗೆ ಸಾಧ್ಯವಾಗಲಿಲ್ಲ. ಹನ್ನೊಂದು ನಾಟಕಗಳ ಶ್ರೇಣಿಯೊಂದನ್ನು ಬರೆಯಬೇಕೆಂದು ಅವನು ಯೋಜನೆ ಹಾಕಿಕೊಂಡಿದ್ದ. ಇದು ಇವನ ಉತ್ಕಟ ಮಹದಾಕಾಂಕ್ಷೆಯ ಯೋಜನೆಯಾಗಿತ್ತು. 1800ರಿಂದ ತನ್ನ ಕಾಲದವರೆಗಿನ ಅಮೆರಿಕದ ಜೀವನದ ವಿವಿಧ ಮುಖಗಳನ್ನು ಈ ಹನ್ನೊಂದು ನಾಟಕಗಳಲ್ಲಿ ಚಿತ್ರಿಸಬೇಕೆಂಬುದು ಅವನ ಉದ್ದೇಶವಾಗಿತ್ತು. ಇದಕ್ಕಾಗಿ ಟಿಪ್ಪಣಿಗಳನ್ನು ಸಿದ್ಧಮಾಡಿ, ಒಂದು ನಾಟಕವನ್ನು ಬರೆದು ಮುಗಿಸಿದ. ಆದರೆ ಲೇಖನಿಯನ್ನು ಹಿಡಿದುಕೊಳ್ಳಲಾಗದಂಥ ಅದುರು ರೋಗ ಬಂದು ಅವನ ಮಹದಾಕಾಂಕ್ಷೆಗೆ ಕೊಡಲಿ ಏಟುಹಾಕಿತು. 1953ರ ನವೆಂಬರ್ 27ರಂದು ಓ'ನೀಲ್ ನಿಧನನಾದ.

ನೋಡಿ : ಇಬ್ಸೆನ್

## ಯೂರಿಪಿಡೀಸ್

" ಜನರು ಯಾವ ರೀತಿ ಇದ್ದಾರೆಯೋ ಅದೇ ರೀತಿ ಅವನು ಚಿತ್ರಿಸುತ್ತಾನೆ ; ಜನ ಯಾವ ರೀತಿ ಇರಬೇಕು ಎಂಬುದನ್ನು ನಾನು ಚಿತ್ರಿಸುವೆ " ಹೀಗೆಂದು ಸಾಫೋಕ್ಲೀಸ್ ತನ್ನ ಸಮಕಾಲೀನ ಯೂರಿಪಿಡೀಸನ ಬಗೆಗೆ ಹೇಳಿದನೆಂದು ಪ್ರತೀತಿ. ಇವರಿಬ್ಬರೂ ಪ್ರಾಚೀನ ಗ್ರೀಸಿನ ನಾಟಕಕಾರರು. ಆಗಿನ ಮತ್ತೊಬ್ಬ ಹೆಸರಾಂತ ನಾಟಕಕಾರ ಎಸ್ಕಿಲಸ್. ಈತ 92 ನಾಟಕಗಳನ್ನು ರಚಿಸಿದನೆಂದು ಹೇಳಿಕೆ ಇದೆ. ಅವುಗಳಲ್ಲಿ 82 ನಾಟಕಗಳ ಹೆಸರು ತಿಳಿದಿದೆ. ಆದರೆ ಇದುವರೆಗೆ ದೊರೆತಿರುವ ನಾಟಕಗಳ ಸಂಖ್ಯೆ ಮಾತ್ರ ಕೇವಲ ಹತ್ತೊಂಬತ್ತು. ಇವುಗಳಲ್ಲಿ 17 ಟ್ರಾಜಿಡಿಗಳು, ಒಂದು ಪ್ರಣಯ ನಾಟಕ ಮತ್ತೊಂದು ವಿಡಂಬನಾತ್ಮಕ.

ಯೂರಿಪಿಡೀಸ್ ಒಬ್ಬ ವಿಚಿತ್ರ ವ್ಯಕ್ತಿಯೆಂದೇ ಅವನ ಸಮಕಾಲೀನ ಗ್ರೀಕರ ಭಾವನೆ. ಇವನ ತಂದೆ ಸ್ಥಿತಿವಂತ. ಇವನಿಗೆ ಒಳ್ಳೆಯ ಶಿಕ್ಷಣ



ಇಂದಿಗೂ ಜೀವಂತ : ಯೂರಿಪಿಡೀಸ್

ದೊರೆಯಿತು. ತಾರುಣ್ಯದಲ್ಲಿ ಉತ್ತಮ ಕ್ರೀಡಾಪಟು; ಸೈನಿಕ ವೃತ್ತಿಯನ್ನೂ ಹೊರಬಲ್ಲವನು. ಆದರೆ ಯುದ್ಧ, ಅದರ ತಂತ್ರ, ಪರಿಣಾಮಗಳೆಂದರೆ ಅವನಿಗಾಗದು; ಒಂಟಿತನ ಅವನೇ ಆರಿಸಿಕೊಂಡ ಜೀವನದ ಬಗೆ. ಸಮುದ್ರಕ್ಕೆ ಎದುರಾದ ಗವಿಯೊಂದರಲ್ಲಿ, ಬೇಸರ ತರುವ ಪರಿಸರದಲ್ಲಿ, ಅವನ ನಾಟಕ ರಚನೆ ಸಾಗುತ್ತಿತ್ತು. ಆಗಿನ ಕಾಲಕ್ಕೆ ತೀರ ಭಿನ್ನವಾದ ಅವನ ಮತ್ತೊಂದು ಗುಣವೆಂದರೆ ಪುಸ್ತಕಗಳನ್ನು ಸಂಗ್ರಹಿಸುವುದು. ಹೀಗೆ ಪುಸ್ತಕಭಂಡಾರ ಹೊಂದಿದ್ದವರಲ್ಲಿ ಯೂರಿಪಿಡೀಸನೇ ಮೊದಲಿಗ.

ಸುಮಾರು ಕ್ರಿ.ಪೂ. 484ರಲ್ಲಿ ಅವನು ಹುಟ್ಟಿರಬೇಕೆಂದು ತರ್ಕಿಸಲಾಗಿದೆ. ಅವನು ಚಿತ್ರಕಲೆ, ತತ್ತ್ವಶಾಸ್ತ್ರಗಳನ್ನೂ ಕಲಿತಿದ್ದ; ಸಾಕ್ರಟೀಸನ ಗೆಳೆಯನಾಗಿದ್ದ. 25ನೆಯ ವಯಸ್ಸಿಗೆ ನಾಟಕ ಬರೆಯಲು ಆರಂಭಿಸಿದ. ಅಲ್ಲಿಂದ 50 ವರ್ಷಕಾಲ ನಾಟಕ ರಚನೆಯಲ್ಲಿ ನಿರತನಾಗಿದ್ದ. ಆಗಿನ ಕಾಲದಲ್ಲಿ ಗ್ರೀಸಿನಲ್ಲಿ ವರ್ಷವರ್ಷವೂ ನಡೆಯುತ್ತಿದ್ದ ನಾಟಕೋತ್ಸವಗಳಲ್ಲಿ ಅವನ ನಾಟಕಗಳಿಗೆ ಐದು ಬಾರಿ ಬಹುಮಾನ ದೊರೆಯಿತು. ಮೊದಲನೆಯ ಬಾರಿ ಅವನಿಗೆ ಬಹುಮಾನ ದೊರೆತದ್ದು ಅವನು ನಾಟಕ ರಚನೆ ಆರಂಭಿಸಿದ 14 ವರ್ಷಗಳ ಅನಂತರ. ಅವನ 39ನೆಯ ವಯಸ್ಸಿನಲ್ಲಿ. ಅವನ ನಾಟಕಗಳನ್ನು ಆಗಿನವರು ಹೆಚ್ಚು ಮೆಚ್ಚಿರಲಿಕ್ಕಿಲ್ಲ ಎಂದು ಇದರಿಂದ ಊಹೆ ಮಾಡುವವರೂ ಇದ್ದಾರೆ. ಇದೇನೇ ಇರಲಿ ಯೂರಿಪಿಡೀಸನ ನಾಟಕಗಳು ಆಗಿನ ಕಲ್ಪನೆಗಳಾದ ದಿವ್ಯವಾಣಿಯನ್ನೂ ಭವಿಷ್ಯ ಹೇಳುವುದನ್ನೂ ಅಣಕಿಸುತ್ತಿದ್ದುವು ಎಂಬುದು ನಿಜ. ಧರ್ಮಾಚರಣೆಯಲ್ಲಿ ಸಂಪ್ರದಾಯಬದ್ಧತೆಯನ್ನೂ ಇವು ನಿರೋಧಿಸುತ್ತಿದ್ದುವು. ದೇವರ ಕಲ್ಪನೆಯನ್ನು ಒಂದು ಹೊಸ ರೀತಿಯಲ್ಲಿ ಕಾಣುವ ಹಾಗೂ ವಿವರಿಸುವ ಪ್ರಯತ್ನ ಈ ನಾಟಕಗಳಲ್ಲಿ ಕಂಡುಬರುತ್ತದೆ. ರಾಜಕೀಯ, ಮತೀಯ ಹಾಗೂ ನೈತಿಕ ನಂಬಿಕೆಗಳ ಅಂಧಾನುಕರಣೆಯನ್ನು ವಿಮರ್ಶಿಸಿ ನೋಡುವ ವೈಜ್ಞಾನಿಕ ವಿಚಾರಪರತೆ ಆಗ ಹೊಸದಾಗಿ ಹುಟ್ಟಿದ ಒಂದು ಪಂಥ. ಇದರ ಪ್ರಪ್ರಥಮ ಬೆಂಬಲಿಗ ಯೂರಿಪಿಡೀಸ್.

ಯೂರಿಪಿಡೀಸ್ ಇಷ್ಟು ಆಧುನಿಕ ವಿಚಾರಪರನಾದರೂ ತನ್ನ ನಾಟಕಗಳ ಕಥಾವಸ್ತು ಮತ್ತು ಪಾತ್ರಗಳನ್ನು ಮಾತ್ರ ಎಂದಿನಂತೆ ರೂಢಿಯಲ್ಲಿರುವ ಕಥೆ, ಐತಿಹ್ಯ, ಪುರಾಣಕಥೆಗಳಿಂದಲೇ ಆರಿಸಿದ್ದಾನೆ. ಇಂಥ ಸವಕಲು ವಸ್ತುವನ್ನು ಆರಿಸಿಕೊಂಡಿದ್ದರೂ ಅವನ ನಾಟಕಗಳಲ್ಲಿ ಹೊಸತನ ಇರುವುದನ್ನು ಕಾಣಬಹುದು. ಏಕೆಂದರೆ ಅವನ ಪಾತ್ರಗಳು ಆ ಕಾಲದ ಪ್ರಚಲಿತ ಕಥೆಗಳ ವೀರರಂತೆ ಅತಿಮಾನುಷ ವ್ಯಕ್ತಿಗಳಲ್ಲ. ಏನನ್ನೂ ಎಂಥದನ್ನೂ ಜಯಿಸುವ ವ್ಯಕ್ತಿಗಳಲ್ಲ. ಮಾನವ ಸಹಜವಾದ ಅವಗುಣ, ದುರ್ಬಲತೆಗಳನ್ನೂ ಹೊಂದಿದ್ದಂತೆ ಆ ಪಾತ್ರಗಳನ್ನು ಯೂರಿಪಿಡೀಸ್ ಚಿತ್ರಿಸಿದ್ದಾನೆ.

'ಮಿಡಿಯ', 'ಅಲ್‌ಸೆಸ್ಟಿಸ್', 'ಆಂಡ್ರೂಮಾಷೆ', 'ಇಫಿಜಿನಿಯ', 'ಎಲೆಕ್ಟ್ರ', 'ಬಾಕೀ' ಇವು ಅವನ ಪ್ರಮುಖ ನಾಟಕಗಳಲ್ಲಿ ಕೆಲವು. 'ಆಂಡ್ರೂಮಾಷೆ' ಅವನ ಅತಿ ಸುಂದರ ನಾಟಕಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಉದಾತ್ತ ಮನೋಭಾವದ ಪರಿಶುದ್ಧ ಚೆಲುವು ಇಲ್ಲಿ ಮೂಡಿದೆ. 'ಅಲ್‌ಸೆಸ್ಟಿಸ್' ಎಂಬುದು ಪತಿ ಬದುಕಿರಲೆಂದು ತನ್ನ ಜೀವವನ್ನು ಬಲಿ ಕೊಡಲು ಸಿದ್ಧಳಾದ ಸತಿಯೊಬ್ಬಳ ಕಥೆ. ಯೂರಿಪಿಡೀಸನ ದುರಂತ ನಾಟಕಗಳಲ್ಲಿ ಕೆಲವು ಬಾರಿ ವಿಚಿತ್ರ ಸನ್ನಿವೇಶಗಳಿರುತ್ತವೆ; ಪಾತ್ರಗಳ ಇಕ್ಕಟ್ಟಿನಲ್ಲಿ ಸಿಲುಕಿಕೊಂಡು ಪಾರಾಗಲು ಸಾಧ್ಯವಿಲ್ಲದೆ ಒದ್ದಾಡುತ್ತಿರುವಾಗ ಇದ್ದಕ್ಕಿದ್ದಂತೆ ದೇವದೇವತೆಗಳು ಬಂದು ಈ ಸಮಸ್ಯೆಯನ್ನು ಪರಿಹರಿಸುವರು [illegible] ಅವನ ಹೊಸ ಕಲ್ಪನೆ. [illegible] ಪತ್ರರೂಪದ ಪ್ರಸ್ತಾಪ. [illegible] ಶ್ರೇಷ್ಠ ಮಟ್ಟದ್ದು.

ಯೂರಿಪಿಡೀಸ್ ಹುಟ್ಟಿದ್ದು ಅಥೆನ್ಸಿನ ಸಮೀಪದಲ್ಲಿರುವ ಸಲಾಮಿಸ್ ದ್ವೀಪದಲ್ಲಿ. ಅವನು ಸುಮಾರು 40[illegible]ರಲ್ಲಿ ತನ್ನ [illegible] ಮ್ಯಾಸಿಡೋನಿಯಕ್ಕೆ ಹೋಗಿ ನೆಲೆಸಿದ. ಮರುವರ್ಷವೇ ಅಲ್ಲೇ ತೀರಿಕೊಂಡ. ಮ್ಯಾಸಿಡೋನಿಯದವರು ಅವನಿಗಾಗಿ ಒಂದು ಅದ್ಭುತ ಸ್ಮಾರಕ ಕಟ್ಟಿಸಿದರು.

ಜಗತ್ತಿನ ಹಿರಿಯ ನಾಟಕಕಾರರಲ್ಲಿ ಒಬ್ಬನಾದ ಯೂರಿಪಿಡೀಸನ ನಾಟಕಗಳ ಪ್ರದರ್ಶನ ಮೊದಲಿಗಿಂತ ಈಗ ಹೆಚ್ಚಾಗಿ ನಡೆಯುತ್ತಿದೆ.

## ಯೇಟ್ಸ್

"ವಿವೇಕ ಮೊದಲು ಪ್ರತಿಮೆಗಳ ಮೂಲಕ ಮಾತನಾಡುತ್ತದೆ."

—ಹೀಗೆ ಹೇಳಿದವನು ಯೇಟ್ಸ್. ಈ ಶತಮಾನದ ಪ್ರಮುಖ ಕವಿಗಳಲ್ಲೊಬ್ಬ. ಕಲ್ಪನಾರಹಿತ ವಾಸ್ತವವಾದದ ವಿರುದ್ಧ ಸಿಡಿದೆದ್ದ. ಸಾಂಕೇತಿಕ, ಆಧ್ಯಾತ್ಮಿಕ, ದಾರ್ಶನಿಕ ಕಾವ್ಯದತ್ತ ಅವನು ಒಲವು ತೋರಿಸಿದ. ಮಾತೃಭೂಮಿಯಾದ ಐರ್‌ಲೆಂಡಿನ ಬಗೆಗೆ ಯೇಟ್ಸ್‌ಗೆ ಅಪಾರ ಪ್ರೇಮ. ಅವನು ಐರ್‌ಲೆಂಡಿನ ಸಾಹಿತ್ಯ–ನಾಟಕ ಕ್ಷೇತ್ರವನ್ನು ಸಂಪದ್ಭರಿತವನ್ನಾಗಿ ಮಾಡಿದ.

ವಿಲಿಯಂ ಬಟ್ಲರ್ ಯೇಟ್ಸ್ ಡಬ್ಲಿನಿನ ಪ್ರಾಟೆಸ್ಟೆಂಟ್ ಕುಟುಂಬವೊಂದರಲ್ಲಿ 1865ರ ಜೂನ್ 13ರಂದು ಜನಿಸಿದ. ಯೇಟ್ಸ್‌ನ ಬಾಲ್ಯ ಸುಖಮಯವಾಗಿರಲಿಲ್ಲ. "ನನ್ನ ಬಾಲ್ಯದ ನೋವುಗಳ ಹೊರತಾಗಿ ಇನ್ನೇನೂ ನನಗೆ ನೆನಪಿಲ್ಲ." ಎಂದು ಯೇಟ್ಸ್‌ನೇ ಹೇಳಿದ್ದಾನೆ.

ಯೇಟ್ಸ್ ಮೊದಲು ಮನೆಯಲ್ಲಿಯೇ ತಂದೆಯಿಂದ ಪಾಠ ಕಲಿತ; ಅನಂತರ ಲಂಡನಿನಲ್ಲಿ ಸ್ವಲ್ಪಕಾಲ ಓದಿದ. ಆಮೇಲೆ ಡಬ್ಲಿನಿಗೆ ಹಿಂದಿರುಗಿ ತನ್ನ ವಿದ್ಯಾಭ್ಯಾಸ ಮುಂದುವರಿಸಿದ; ಸ್ವಲ್ಪ ಕಾಲ ಚಿತ್ರಕಲೆಯನ್ನೂ ಕಲಿತ. ತನ್ನ ಕೆಲವು ಕವನ, ಲೇಖನಗಳು ಐರಿಷ್ ಪತ್ರಿಕೆಗಳಲ್ಲಿ ಪ್ರಕಟವಾದಾಗ ತಾನು ಲೇಖಕನಾಗಬೇಕೆಂದು ನಿಶ್ಚಯಿಸಿದ. 1887ರಲ್ಲಿ ಲಂಡನಿಗೆ ಹೋಗಿ ಅಲ್ಲಿಯ ಸಾಹಿತಿಗಳೊಡನೆ ಸಂಪರ್ಕ ಬೆಳೆಸಿದ. ಎರಡು ವರ್ಷಗಳ ಅನಂತರ ಆತನ ಮೊದಲ ಕವನ ಸಂಗ್ರಹ ಪ್ರಕಟವಾಯಿತು.

ಲಂಡನ್ ಮತ್ತು ಡಬ್ಲಿನ್‌ಗಳಲ್ಲಿ ಐರಿಷ್ ಸಾಹಿತ್ಯ ಸಂಘಗಳು ರೂಪುಗೊಳ್ಳಲು ಯೇಟ್ಸ್ ಕಾರಣನಾದ. ತನ್ನ ನಾಡಿನ ನಾಟಕರಂಗದ ಉದ್ಧಾರಕ್ಕಾಗಿ ತಾನೇ



ವಿವೇಕ, ಪ್ರತಿಮೆ : ಯೇಟ್ಸ್

ಒಂದು ನಾಟಕ ಸಂಸ್ಥೆಯನ್ನು ಕಟ್ಟಿದ. ನಾಟಕಗಳನ್ನು ಬರೆದು ಅವನ್ನು ಪ್ರದರ್ಶಿಸಲಾರಂಭಿಸಿದ.

1902ರಲ್ಲಿ ಪ್ರದರ್ಶಿತವಾದ 'ಕಾಥ್ಲೀನ್' ಎಂಬ ನಾಟಕ ಈ ಸಂಸ್ಥೆಯ ಅತ್ಯಂತ ಯಶಸ್ವೀ ನಾಟಕಗಳಲ್ಲೊಂದು. ಇದನ್ನು ಬರೆದವನು ಯೇಟ್ಸ್. ಆತ ಪ್ರೀತಿಸುತ್ತಿದ್ದ ಮಾಡ್ ಗಾನ್ ಎಂಬ ಸುಂದರ ಯುವತಿ ಈ ನಾಟಕದಲ್ಲಿ ಕ್ಯಾಥ್ಲೀನ್ ಪಾತ್ರವನ್ನು ವಹಿಸಿದ್ದಳು. ಆಕೆಗಾಗಿಯೇ ಅವನು ಈ ನಾಟಕವನ್ನು ಬರೆದನೆಂದು ಪ್ರತೀತಿ. 1904ರಲ್ಲಿ ಇತರರ ನೆರವಿನೊಂದಿಗೆ ಯೇಟ್ಸ್ ಸ್ಥಾಪಿಸಿದ 'ಅಬೀ ನಾಟಕ ಮಂದಿರ'ದಲ್ಲಿ ಜಾನ್ ಮಿಲಿಂಗ್‌ಟನ್ ಸಿಂಜ್ ಮೊದಲಾದ ಪ್ರಖ್ಯಾತ ನಾಟಕಕಾರರ ನಾಟಕಗಳು ಪ್ರದರ್ಶಿತವಾದುವು. ಇಬ್ಸೆನನ ವಾಸ್ತವವಾದ ನಾಟಕ ಸಂಪ್ರದಾಯವಾಗಿದ್ದ ಆಗಿನ ಕಾಲದಲ್ಲಿ ಯೇಟ್ಸ್ 'ದಿ ಲ್ಯಾಂಡ್ ಆಫ್ ಹಾರ್ಟ್ಸ್ ಡಿಸೈರ್' ಮೊದಲಾದ ನಾಟಕಗಳನ್ನು ಬರೆದು ಆ ಸಂಪ್ರದಾಯದ ವಿರುದ್ಧ ಬಂಡೆದ್ದ.

ವಿಜ್ಞಾನದ ಶೋಧನೆಗಳು ಮಾನವನ ಕಲ್ಪನಾರಾಜ್ಯದ ಮೇಲೆ, ಆಕ್ರಮಣ ನಡೆಸುತ್ತಿದ್ದುದನ್ನು ಯೇಟ್ಸ್ ವಿರೋಧಿಸಿದ. ಐರಿಷ್ ಜಾನಪದ ಕಾವ್ಯದಲ್ಲಿ ಮತ್ತು ಅನುಭಾವಿ ಸಾಹಿತ್ಯದಲ್ಲಿ ನಿಗೂಢ ಸಂಕೇತಗಳಿರುವುದು ಇವನ ಗಮನ ಸೆಳೆಯಿತು. 1914ರಲ್ಲಿ ಪ್ರಕಟವಾದ 'ರೆಸ್ಪಾನ್ಸಿಬಿಲಿಟೀಸ್', 'ದ ಟವರ್' (1928), 'ದ ವೈಂಡಿಂಗ್ ಸ್ಟೇರ್ ಅಂಡ್ ಅದರ್ ಪೊಯೆಮ್ಸ್' (1933) ಮೊದಲಾದುವು ಇವನ ಕೆಲವು ಪ್ರಮುಖ ಕವನ ಸಂಗ್ರಹಗಳು.

ತನ್ನ ಜೀವಿತಕಾಲದಲ್ಲೇ ಯೇಟ್ಸ್ ಅತ್ಯಂತ ಪ್ರಭಾವಶಾಲೀ ವ್ಯಕ್ತಿಯಾಗಿದ್ದ. ಸಮಕಾಲೀನ ಸಮಸ್ಯೆಗಳ ಬಗೆಗೆ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತ ಲೇಖನಗಳನ್ನು ಬರೆಯುತ್ತಿದ್ದ. 1917ರಲ್ಲಿ ಜಾರ್ಜಿ ಹೈಡೆಲೀಸ್ಳ್ ಎಂಬಾಕೆಯನ್ನು ಮದುವೆಯಾದ. 1922ರಲ್ಲಿ ಸ್ವತಂತ್ರ ಐರ್ಲೆಂಡಿನ ಶಾಸನ ಸಭಾಸದಸ್ಯನಾದ. 1923ರಲ್ಲಿ ಇವನಿಗೆ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು.

ಒಂದು ವರ್ಷಕಾಲ ಅನಾರೋಗ್ಯದಿಂದ ನರಳಿದ ಯೇಟ್ಸ್ 1939ರ ಜನವರಿ 28ರಂದು ಫ್ರಾನ್ಸಿನಲ್ಲಿ ನಿಧನನಾದ. ಇವನ ಮೃತಶರೀರವನ್ನು ಫ್ರಾನ್ಸಿನ ನೀಸ್ ಎಂಬಲ್ಲಿ ಮಣ್ಣು ಮಾಡಲಾಯಿತು. 1948ರಲ್ಲಿ ಇವನ ಅಸ್ಥಿಯನ್ನು ಐರ್ಲೆಂಡಿಗೆ ತಂದು ಸ್ಲೈಗೋ ಎಂಬ ಊರಿನ ಬಳಿಯ ಇಗರ್ಜಿಯ ಅಂಗಳದಲ್ಲಿ ಸಮಾಧಿ ಮಾಡಿದರು.

## ರಂಗನಾಥ ದಿವಾಕರ

ರಾಜಕೀಯ ಪಟು ರಂಗನಾಥ ರಾಮಚಂದ್ರ ದಿವಾಕರರಿಗೆ ರಾಜಕೀಯಕ್ಕಿಂತ ದರ್ಶನ ಸಾಹಿತ್ಯ ಸಂಸ್ಕೃತಿಗಳಲ್ಲೇ ಹೆಚ್ಚು ಆಸಕ್ತಿ. ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದಾರೆ; ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ್ದಾರೆ; ಉಪಾಧ್ಯಾಯನಾಗಿ, ಪತ್ರಿಕೋದ್ಯಮಿಯಾಗಿ, ಸಾಹಿತಿಯಾಗಿ ನಾಡು, ನುಡಿಗಳಿಗೆ ಸೇವೆ ಸಲ್ಲಿಸಿದ್ದಾರೆ. ಹೀಗೆ ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿ ದಿವಾಕರರು.

ರಂಗನಾಥ ರಾಮಚಂದ್ರ ದಿವಾಕರರು ಧಾರವಾಡದಲ್ಲಿ 1894ರ ಸೆಪ್ಟೆಂಬರ್ 30ರಂದು ಜನಿಸಿದರು. ಪ್ರಾರಂಭಿಕ ವಿದ್ಯಾಭ್ಯಾಸ ಬೆಳಗಾವಿ, ಹುಬ್ಬಳ್ಳಿಗಳಲ್ಲಿ ನಡೆಯಿತು. ಹೆಚ್ಚಿನ ಅಧ್ಯಯನ ಪುಣೆ, ಮುಂಬಯಿಗಳಲ್ಲಿ. ಅವರು 1918ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ 1919ರಲ್ಲಿ ನ್ಯಾಯಶಾಸ್ತ್ರ ಪದವಿಗಳಿಸಿಕೊಂಡರು.

ಧಾರವಾಡದಲ್ಲಿ ಉಪಾಧ್ಯಾಯರಾಗಿ ಅವರ ಉದ್ಯೋಗ ಜೀವನ ಆರಂಭವಾಯಿತು. ಕೊಲ್ಹಾಪುರ, ಧಾರವಾಡಗಳ ಆರ್ಟ್ಸ್ ಕಾಲೇಜುಗಳಲ್ಲಿ ಇಂಗ್ಲಿಷ್ ಉಪನ್ಯಾಸಕರಾಗಿದ್ದರು. 1920–21ರಲ್ಲಿ ಗಾಂಧಿಜಿ ಅಸಹಕಾರ ಚಳುವಳಿ ಪ್ರಾರಂಭಿಸಿದಾಗ ದಿವಾಕರರೂ ಅದರಲ್ಲಿ ಸೇರಿಕೊಂಡರು. 'ಕರ್ಮವೀರ' ವಾರಪತ್ರಿಕೆಯನ್ನಾರಂಭಿಸಿ ಕನ್ನಡ ಜನತೆಯ ರಾಷ್ಟ್ರಾಭಿಮಾನವನ್ನು ಎಚ್ಚರಗೊಳಿಸಲು ದುಡಿದರು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯನಿರತ ಸದಸ್ಯರಾಗಿ ಆ ಸಂಸ್ಥೆಯ ಹಲವಾರು ಅಧಿಕಾರ ಸ್ಥಾನಗಳಲ್ಲಿದ್ದು ಸೇವೆಸಲ್ಲಿಸಿದರು. 1942ರ 'ಭಾರತದಿಂದ ತೊಲಗಿ' ಚಳುವಳಿಯ ಕಾಲದಲ್ಲಿ ಭೂಗತರಾಗಿದ್ದುಕೊಂಡು ಎರಡು ವರ್ಷಗಳ ಕಾಲ ಚಳುವಳಿಗಾಗಿ ದುಡಿದರು. ಇವರನ್ನು ಹಿಡಿದು ಕೊಟ್ಟವರಿಗೆ ಅಥವಾ ಹಿಡಿಯಲು ಸಹಾಯಕವಾದ ಸಂದ್ಧಿಯನ್ನು ಕೊಟ್ಟವರಿಗೆ 5,000 ರೂಪಾಯಿ ಬಹುಮಾನವೆಂದು ಅಂದಿನ ಸರಕಾರ ಘೋಷಿಸಿತ್ತು. ಆದರೆ ಕೊನೆಯವರೆಗೂ ಇವರ ನೆಲೆಯನ್ನು ಪತ್ತೆ ಹಚ್ಚುವುದು ಪೋಲೀಸರಿಗೆ ಸಾಧ್ಯವಾಗಲಿಲ್ಲ. ಕೊನೆಗೆ ಗಾಂಧಿಜಿಯ ನಿರ್ದೇಶದಂತೆ 1944ರಲ್ಲಿ ತಾವೇ ಪೋಲೀಸರಿಗೆ ಶರಣಾಗತರಾದರು.



ಬಹುಮುಖ ಪ್ರತಿಭೆ: ದಿವಾಕರ

1946ರಲ್ಲಿ ದಿವಾಕರರು ಭಾರತ ರಾಜ್ಯಾಂಗ ಸಭೆಗೆ ಆಯ್ಕೆಯಾದರು. ಈ ಸಭೆಯೇ ಲೋಕಸಭೆಯ ಕಾರ್ಯವನ್ನೂ ನಿರ್ವಹಿಸುತ್ತಿತ್ತು. ರೋಮಿನಲ್ಲಿ 1948ರಲ್ಲಿ ಜರುಗಿದ ಅಂತರ ಲೋಕಸಭಾ ಸಮ್ಮೇಳನಕ್ಕೆ ಭಾರತದ ಪ್ರತಿನಿಧಿಯಾಗಿ ಹೋಗಿದ್ದರು. ಅಲ್ಲಿಂದ ಹಿಂದಿರುಗಿದ ಅನಂತರ, ಭಾರತ ಸರಕಾರದ ವಾರ್ತಾ ಹಾಗೂ ಪ್ರಸಾರ ಶಾಖೆಯ ರಾಜ್ಯಸಚಿವರಾದರು. 1952ರ ಏಪ್ರಿಲ್‌ನಲ್ಲಿ ಬಿಹಾರಿನ ರಾಜ್ಯಪಾಲರಾದರು. 1957ರಲ್ಲಿ ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯ ಅಧ್ಯಕ್ಷರಾದರು.

ಕನ್ನಡ ವೃತ್ತಪತ್ರಿಕಾರಂಗ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ದಿವಾಕರರು ಸಲ್ಲಿಸಿರುವ ಸೇವೆ ಗಣನೀಯವಾದದ್ದು.

ದಿವಾಕರರು ಲೋಕಶಿಕ್ಷಣ ಸಂಸ್ಥೆಯ ಸ್ಥಾಪಕರು; ಅದರ ಏಕೈಕ ಧರ್ಮದರ್ಶಿ. ಈ ಸಂಸ್ಥೆ 'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯನ್ನು 1935ರಿಂದ ನಡೆಸಿಕೊಂಡು ಬರುತ್ತಿದೆ. ಅಲ್ಲದೆ 'ಕರ್ಮವೀರ' ವಾರಪತ್ರಿಕೆ, 'ಕಸ್ತೂರಿ' ಮಾಸಪತ್ರಿಕೆಗಳನ್ನೂ ಪ್ರಕಟಿಸುತ್ತಿದೆ; ಅನೇಕ ಪುಸ್ತಕಗಳನ್ನು ಪ್ರಕಟಪಡಿಸಿದೆ.

ದಿವಾಕರರು ರಚಿಸಿರುವ ಹಲವು ಗ್ರಂಥಗಳು ಉಪನಿಷತ್ತುಗಳಿಗೆ ಸಂಬಂಧಿಸಿದುವು. ಅವರು ವಚನಶಾಸ್ತ್ರವನ್ನು ಕುರಿತು ಒಂದು ಗ್ರಂಥ ವನ್ನು ಬರೆದಿದ್ದಾರೆ. ಅದೇ ರೀತಿ ಹರಿದಾಸರ ಬಗೆಗೆ ಒಂದು ಗ್ರಂಥ ವನ್ನು ರಚಿಸಿದ್ದಾರೆ.

ದಿವಾಕರರು ರಚಿಸಿರುವ ಗ್ರಂಥರಾಶಿ ದೊಡ್ಡದು. ಹಾಗೆಯೇ ಅವುಗಳ ವಸ್ತುವೈವಿಧ್ಯವೂ ವಿಶಾಲವಾದದ್ದು. ಭಗವಾನ್ ಬುದ್ಧ, ರಾಮಕೃಷ್ಣ ಪರಮಹಂಸ, ಅರವಿಂದ–ಇವರ ತತ್ತ್ವಗಳನ್ನು ಕುರಿತು ಬರೆದಿದ್ದಾರೆ.

ದಿವಾಕರರ ಮೇಲೆ ಅತ್ಯಂತ ಪ್ರಬಲ ಪ್ರಭಾವವನ್ನು ಬೀರಿದ ವ್ಯಕ್ತಿ ಗಾಂಧಿಜಿ. ಅವರು ಗಾಂಧಿಜಿಯನ್ನೂ ಅವರ ಸತ್ಯಾಗ್ರಹ ತಂತ್ರವನ್ನೂ ಕುರಿತು ಅಮೂಲ್ಯ ಗ್ರಂಥಗಳನ್ನು ರಚಿಸಿದ್ದಾರೆ.

ದಿವಾಕರರು ಕನ್ನಡ, ಇಂಗ್ಲಿಷ್ ಎರಡು ಭಾಷೆಗಳಲ್ಲೂ ಚೆನ್ನಾಗಿ ಬರೆಯಬಲ್ಲರು.

ಮೈಸೂರು ಸರಕಾರದವರು ಪ್ರಕಟಿಸಿದ 'ಕರ್ನಾಟಕ ಥ್ರೂ ದಿ ಏಜಸ್' ದಿವಾಕರರ ಸಂಪಾದಕತ್ವದಲ್ಲಿ ರಚಿತವಾಯಿತು. 'ಕರ್ನಾಟಕ ಪರಂಪರೆ' ಅದರ ಕನ್ನಡ ಅನುವಾದ.

1938ನೆಯ ಡಿಸೆಂಬರಿನಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ರಂಗನಾಥ ದಿವಾಕರರು ಅಧ್ಯಕ್ಷರಾಗಿದ್ದರು.

ಸ್ವಾತಂತ್ರ್ಯ ಹೋರಾಟದಲ್ಲಿ ದಿವಾಕರರು ಅನೇಕ ಬಾರಿ ಸೆರೆಮನೆ ಸೇರಬೇಕಾಯಿತು. ಆ ಅವಧಿಗಳನ್ನು ಅವರು ಅಧ್ಯಯನ, ಚಿಂತನೆ ಗಳಿಗಾಗಿ ಸದುಪಯೋಗಪಡಿಸಿಕೊಂಡು ತಮ್ಮ ಜ್ಞಾನಭಂಡಾರವನ್ನು ಬೆಳೆಸಿಕೊಂಡರು. ಗ್ರಂಥಗಳನ್ನು ರಚಿಸಿ ತಮ್ಮ ತಿಳಿವನ್ನು ಜನತೆಗೆ ಹಂಚಿದರು. ರಾಜಕಾರಣಿ, ಲೇಖಕ, ಗಾಂಧಿವಾದಿ, ತತ್ತ್ವವೇತ್ತ, ಪತ್ರಿಕೋದ್ಯಮಿ, ಸಮಾಜಸೇವಕ ದಿವಾಕರರದು ವಿಶಿಷ್ಟ ವ್ಯಕ್ತಿತ್ವ; ಅವರ ಕಾರ್ಯರಂಗ ವಿಸ್ತಾರವಾದದ್ದು.

## ರಂಗಸಜ್ಜಿಕೆ

"ಹೊಸ ನಾಟಕ, ಹೊಸ ಡ್ರೆಸ್, ಹೊಸ ಪರದೆಗಳು!"

—ಹಿಂದೆ ನಾಟಕ ಕಂಪನಿಗಳು ಯಾವುದಾದರೊಂದು ಊರಿಗೆ ಬಂದಾಗ ನಾಟಕಗಳ ಜಾಹೀರಾತಿಗಾಗಿ ಬೀದಿಗಳಲ್ಲಿ ಹಂಚುತ್ತಿದ್ದ ಹಸ್ತಪತ್ರಿಕೆಗಳಲ್ಲಿ ತಪ್ಪದೆ ಇರುತ್ತಿದ್ದ ಮಾತುಗಳಿವು. ನಾಟಕಕಾರ, ನಟ –ಇವರಿಗಿಂತಲೂ ವೇಷಭೂಷಣಗಳು ಮತ್ತು ಪರದೆಗಳಿಗೇ ಹೆಚ್ಚಿನ ಮಹತ್ವ ಈ ಪ್ರಚಾರ ಗಳಲ್ಲಿ ದೊರೆಯುತ್ತಿತ್ತು. ಯಾವುದೇ ನಾಟಕವನ್ನು ಪರಿಣಾಮಕಾರಿಯಾಗಿ ಮಾಡಬೇಕಾದರೆ ಸಮರ್ಪಕ ರಂಗಸಜ್ಜಿಕೆ ಅಗತ್ಯ. ರಂಗಭೂಮಿಯ ಸಜ್ಜಿಕೆ ನಾಟಕದ ಸನ್ನಿವೇಶಕ್ಕೆ ಪೂರಕವಾಗಿರಬೇಕು; ಅವಶ್ಯ ವಾತಾ ವರಣದ ಕಲ್ಪನೆಗೆ ಪೋಷಕವಾಗಿರಬೇಕು.

ರಂಗಸಜ್ಜಿಕೆ, ನಾಟಕ ಕಲೆಯಷ್ಟೇ ಹಳೆಯದೆನ್ನಬಹುದು. ಮೊಟ್ಟ ಮೊದಲ ರಂಗಭೂಮಿ ಅತಿ ಸರಳ ರೂಪದ್ದಾಗಿತ್ತು —ಸಾಂಪ್ರದಾಯಿಕ ಯಕ್ಷಗಾನದ ರಂಗಸ್ಥಳದಂತೆ. ಆದರೆ ಸರಿಯಾದ ಹಿನ್ನೆಲೆಯ ಸೃಷ್ಟಿ, ನಾಟಕದ ಸನ್ನಿವೇಶವನ್ನು ಅರ್ಥಮಾಡಿಕೊಳ್ಳಲು ಕಣ್ಣನ್ನು ತಣಿಸಲು ತುಂಬ ಸಹಾಯಕವೆಂಬುದನ್ನು ಗ್ರಹಿಸಿದ ಮೇಲೆ, ರಂಗಭೂಮಿ ಯನ್ನು ಹೆಚ್ಚು ಹೆಚ್ಚು ವೈಭವಯುತವಾಗಿ ಮಾಡುವ ಅಭ್ಯಾಸ ಬೆಳೆಯಿತು. ಮೊದಮೊದಲು ಕೇವಲ ಸಾಂಕೇತಿಕವಾಗಿರುತ್ತಿದ್ದ ರಂಗಾಲಂಕಾರ, ರಂಗದ ಕಡೆಗೆ ಮುಖವಾಗಿ [illegible] ವಾಗಿ ಬರೆಯಲಾದ ಹಿನ್ನೆಲೆಯನ್ನು ಪ್ರದರ್ಶಿಸಿ [illegible] ರಂಗಸಜ್ಜಿಕೆಯನ್ನು ರೂಪಿಸುವ ಕಲೆ ಬೆಳೆಯಿತು. [illegible] ಪರದೆ, ಬೀದಿಯ ಪರದೆ ಹಾಗೂ ಮನೆ, ಕಾಡು, ಆಸ್ಥಾನ ಉದ್ಯಾನಗಳ ದೃಶ್ಯಗಳನ್ನು ಬಿಂಬಿಸುವ ಪರದೆಗಳು ರಂಗಸಜ್ಜಿಕೆಯ ಪ್ರಧಾನ ಅಂಗ ಗಳಾದುವು.

ಸುತ್ತಿಕೊಂಡು ಮೇಲಕ್ಕೇರುವ ಪರದೆಯ ವೇಗ ಅಷ್ಟೊಂದು ಪರಿಣಾಮಕಾರಿಯಲ್ಲ ಎನಿಸಿದಾಗ, ಕಣ್ಣುಮುಚ್ಚಿ ತೆರೆಯುವುದರೊಳಗೆ ಅರಮನೆಹೋಗಿ ಕಾಡೇ [illegible]ಯಾಗುವಂತೆ, ಆಲಯ ಮಾಯವಾಗಿ ಬಯಲು ಕಾಣಿಸುವಂತೆ ಸರಾಗವಾಗಿ ಪಕ್ಕಕ್ಕೆ ಸರಿದುಹೋಗುವ ಚೌಕಟ್ಟುಗಳು ಬಂದುವು. ಬಣ್ಣಗಳ ತೀಕ್ಷ್ಣತೆ, ದೀಪವ್ಯವಸ್ಥೆಯ ಸಂಕೀರ್ಣತೆ ಜನರನ್ನು ಆಕರ್ಷಿಸುವ ಸಾಧನಗಳಾದುವು; ನಿಜವಾದ ಕುದುರೆ, ಆನೆ, ಮೋಟಾರು ಕಾರುಗಳನ್ನು ರಂಗದ ಮೇಲೆ ತಂದು ನಾಟಕದ 'ವೈಭವ'ವನ್ನು ಹೆಚ್ಚಿಸುವ ಪ್ರಯತ್ನಗಳೂ ನಡೆದುವು. ವೃತ್ತಿ ರಂಗಭೂಮಿಯಲ್ಲಿ ಬಹುಮಟ್ಟಿಗೆ ಈ ವ್ಯವಸ್ಥೆಯೇ ಉಳಿದುಕೊಂಡಿದೆ. ನಾಟಕದ ವಸ್ತು ಯಾವುದೇ ಇರಲಿ, ಯಾವ ಕಾಲದ್ದೇ ಆಗಿರಲಿ ಇಂಥ ಮಾಮೂಲಿ ರಂಗಸಜ್ಜಿಕೆಗಳನ್ನು ಉಪಯೋಗಿಸುವುದರಿಂದ, ನಾಟಕದಲ್ಲಿ ರಸಾಭಾಸವಾಗುತ್ತಿತ್ತು. ಕ್ರಮೇಣ, ರಂಗಸಜ್ಜಿಕೆ ಕಾಲ ಸಂದರ್ಭಗಳಿಗೆ ಅನುಗುಣವಾಗಿರಬೇಕೆಂಬ ಭಾವನೆ ಬೇರೂರಲಾರಂಭಿಸಿತು.

ಇಂದಿನ ವಿಲಾಸಿ ರಂಗಭೂಮಿಯಲ್ಲಿ ವಾಸ್ತವತೆಗಿಂತ ಸರಳತೆಗೆ, ಸಾಂಕೇತಿಕತೆಗೆ ಹೆಚ್ಚು ಮಹತ್ವ. ಪಟಪಟನೆ ಬಡಿಯುತ್ತಿರುವ ಬಾವುಟ ಸಾಕು, ವೇಗವಾಗಿ ಬೀಸುತ್ತಿರುವ ಗಾಳಿಯನ್ನು ಸೂಚಿಸುವುದಕ್ಕೆ; ಧ್ವಜ ವನ್ನು ಹೊತ್ತ, ಆಯುಧ ಧರಿಸಿದ ಕೆಲವೇ ಪಾತ್ರಗಳು ದೊಡ್ಡ ಸೈನ್ಯವನ್ನು ಪ್ರತಿನಿಧಿಸಬಹುದು. ಕೋಟೆಯ ಮಹಾದ್ವಾರ ಅದರ ಹಿಂದಿರುವ ಪಟ್ಟಣವನ್ನು ಸೂಚಿಸಬಹುದು. ನೊಬೆಲ್ ಪಾರಿತೋಷಕ ವಿಜೇತ ಸ್ಯಾಮುಅಲ್ ಬೆಕೆಟನ ನಾಟಕ 'ವೇಯ್ಟಿಂಗ್ ಫಾರ್ ಗೋಡೋ'ದ ಹಿನ್ನೆಲೆಯ ರಂಗಸಜ್ಜಿಕೆಯೆಂದರೆ ಹೆಚ್ಚು ಎಲೆಗಳಿಲ್ಲದ ಒಂದು ಮರ ಮಾತ್ರ. ಇದರ ಎಲೆಗಳು ಉದುರುವುದೇ ಕಾಲ ಕಳೆದು ಹೋಗು ತ್ತಿರುವುದರ ಸೂಚನೆ.

ದೀಪವ್ಯವಸ್ಥೆ, ರಂಗಾಲಂಕಾರದ ಇನ್ನೊಂದು ಪ್ರಮುಖ ಅಂಗ. ನಾಟಕದ ಸನ್ನಿವೇಶ, ಕಾಲ ಹಾಗೂ ಕ್ರಿಯೆಗಳಿಗೆ ತಕ್ಕ ವಾತಾವರಣವನ್ನು ಮೂಡಿಸಲು ಬೆಳಕು ನೆರಳುಗಳ ವಿನ್ಯಾಸ ಮುಖ್ಯ ಮಾಧ್ಯಮ. ಬಣ್ಣದ ಬೆಳಕೂ ಈ ಕೆಲಸಕ್ಕೆ ನೆರವಾಗುತ್ತದೆ. ಕೆಂಪು ರೌದ್ರವನ್ನು– ದುರಂತವನ್ನು, ಹಸಿರು ವಸಂತ –ಯೌವನವನ್ನು, ಕಾವಿ ಸೇವೆ– ತ್ಯಾಗಗಳನ್ನು ಸೂಚಿಸಲು ಸಹಾಯಕವಾಗಬಹುದು. ರಂಗಸಜ್ಜಿಕೆಯ ವೈಭವಕ್ಕಿಂತ ಅದರ ಸರಳತೆಯನ್ನು ಇಂದಿನ ಸುಶಿಕ್ಷಿತ ಪ್ರೇಕ್ಷಕರು ಹೆಚ್ಚಾಗಿ ಮೆಚ್ಚಿಕೊಳ್ಳುತ್ತಾರೆ. ಥಳಕು ಆಡಂಬರಕ್ಕಿಂತ ವಾಸ್ತವಿಕತೆಯ ಕಡೆಗೆ ಅವರ ಒಲವು ಹೆಚ್ಚು.

ನಾಟಕ ನೋಡುತ್ತಿರುವಾಗ ಪ್ರೇಕ್ಷಕನ ದೃಷ್ಟಿ ನಟ ನಟಿಯರ ಮೇಲೆ, ಅವರ ಅಭಿನಯ ನಾಟಕದ ಕ್ರಿಯೆಯ ಮೇಲೆ ಕೇಂದ್ರೀಕೃತವಾಗಿರಬೇಕು: ರಂಗಸಜ್ಜಿಕೆ ಇವಕ್ಕೆ ಅಡ್ಡಿಯಾಗಬಾರದು —ಎಂಬುದು ಇಂದಿನ ದೃಷ್ಟಿ. ಈ ಅಂಶವನ್ನು ಲಕ್ಷ್ಯದಲ್ಲಿಟ್ಟುಕೊಂಡು ನಾಟಕದ ಕ್ರಿಯೆಗೆ ಸಹಾಯಕವಾದ ರಂಗಸಜ್ಜಿಕೆಯನ್ನು ನಿರ್ಮಿಸುವ ಪದ್ಧತಿ ಈಗ ಬೆಳೆಯುತ್ತಿದೆ. ಇಂಥ

ರಂಗಸಜ್ಜಿಕೆ ವಾಸ್ತವಿಕ ಶೈಲಿಯಲ್ಲಿ ಇರಬಹುದು. ಕೇವಲ ಸಾಂಕೇತಿಕವಾಗಿಯಾದರೂ ಇರಬಹುದು. ಪ್ರದರ್ಶನಕ್ಕೆ ರಂಗಸಜ್ಜಿಕೆ ಅತ್ಯವಶ್ಯವಾದರೂ ಅದು ಅರ್ಥಪೂರ್ಣವಾಗಿರಬೇಕು ಎಂಬುದು ಇಂದಿನ ದೃಷ್ಟಿ.

## ರಂಗೋಲೆ ಕಲೆ

ಮನೆಯ ಮುಂದೆ ಶುಭ್ರ ನೆಲದ ಮಡಿಯಿಂದ ರೂಪಿಸಿದ ಕಣ್ಮನ ಸೆಳೆಯುವ ಚಿತ್ತಾರಗಳು. ಮನೆಯ ಒಳಹೊಕ್ಕು ದೇವರಿರುವ ಕಡೆ ನೋಡಿದರೆ ಅಲ್ಲಿಯೂ ಕಲಾಪೂರ್ಣ ಚಿತ್ತಾರ. ಇದು ಭಾರತದಲ್ಲಿ ಸಾಮಾನ್ಯವಾಗಿ ಕಂಡುಬರುವ ನೋಟ.



...ಮಹಿಳೆಯರಿಗೆ ಮೀಸಲಾದದ್ದು

ರಂಗೋಲೆ ಒಂದು ಜನಪದಕಲೆ. ಹಬ್ಬ ಹರಿದಿನಗಳಲ್ಲಂತೂ ಬೀದಿಯಲ್ಲಿ ಸಾಗಿದಾಗ ಮನೆಗಳ ಮುಂದೆ ಪ್ರಮಾಣಬದ್ಧವಾದ ಲಲಿತರೇಖೆಗಳನ್ನು ಅನಾಯಾಸವಾಗಿ ಎಳೆದು ಬರೆದ ವಿಸ್ತಾರವಾದ ರಂಗೋಲೆ ಚಿತ್ರಗಳು ಕಣ್ಣಿಗೆ ಬೀಳುತ್ತವೆ. ಮತ್ತೆ ಮತ್ತೆ ನೋಡೋಣ ಎನಿಸುವಷ್ಟು ಅವು ಆಕರ್ಷಕ. ರಂಗೋಲೆ ಕಲೆ ಮಹಿಳೆಯರಿಗೇ ಮೀಸಲಾದದ್ದು. ಇದು ವಿನ್ಯಾಸ ಮಾತ್ರವಲ್ಲ; ಧಾರ್ಮಿಕ ವಾತಾವರಣದಲ್ಲಿ ಬೆಳೆದುಬಂದ ಒಂದು ಉತ್ಕೃಷ್ಟ ಕಲೆ ಕೂಡ.

ರಂಗೋಲೆ ಕಲೆ ಭಾರತಕ್ಕೆ ವಿಶಿಷ್ಟವಾದದ್ದು; ರಾಷ್ಟ್ರದ ತುಂಬ ಹರಡಿಕೊಂಡಿದೆ. ಆದರೆ ಒಂದೊಂದು ಪ್ರದೇಶದಲ್ಲಿ ಒಂದೊಂದು ಹೆಸರಿದೆ. ಕರ್ನಾಟಕದಲ್ಲಿ ಇದನ್ನು ರಂಗೋಲಿ, ರಂಗೋಲೆ ಎಂದು ಕರೆದರೆ, ಗುಜರಾತಿನಲ್ಲಿ ಸತಿಯಾ, ಉತ್ತರಪ್ರದೇಶದಲ್ಲಿ ಸಾಂರ್ಝು ಎನ್ನುತ್ತಾರೆ. ರಂಗೋಲೆಯಿಡುವ ಶೈಲಿ, ಅದಕ್ಕಾಗಿ ಉಪಯೋಗಿಸುವ ವಸ್ತುಗಳು, ವಿನ್ಯಾಸ ಇವೆಲ್ಲದರಲ್ಲೂ ಪ್ರಾದೇಶಿಕ ಭೇದಗಳಿವೆ.

ರಂಗೋಲೆ ಇಡುವುದು ನಮ್ಮ ಕಲೆಗಳಲ್ಲೊಂದು; ಇದು ಚಿತ್ರಕಲೆಗೆ ಸಂಬಂಧಿಸಿದ್ದು. ಇದಕ್ಕೆ ದೀರ್ಘ ಪರಂಪರೆಯಿದೆ. ರಂಗೋಲೆ ಇಡುವುದು ಯಾವಾಗ ಆರಂಭವಾಯಿತು, ಹೇಗೆ ಬೆಳೆಯಿತು ಎಂಬುದು ಅಸ್ಪಷ್ಟ. ಚರಿತ್ರಪೂರ್ವಯುಗದ ಮಾನವ ಕೂಡ ತಾನು ವಾಸಿಸುತ್ತಿದ್ದ ಗುಹೆಗಳಲ್ಲಿ ರಂಗೋಲೆಯಂಥ ರೇಖಾಚಿತ್ರಗಳನ್ನೂ ಚುಕ್ಕೆಗಳ ಸಮೂಹವನ್ನೂ ಚಿತ್ರಿಸಿರುವುದನ್ನು ನೋಡಿದರೆ, ರಂಗೋಲೆಯ ಇತಿಹಾಸದ ಬೇರು ಮಾನವನ ಇತಿಹಾಸದಲ್ಲಿ ಬಹಳ ಆಳದವರೆಗೆ ಇಳಿದಿದೆಯೇನೋ ಎನಿಸುತ್ತದೆ. ಗುಹೆಗಳಲ್ಲಿ ಕಂಡುಬರುವ ಈ ಗುರುತುಗಳು ಮಾಂತ್ರಿಕ ಕ್ರಿಯೆಗೆ ಸಂಬಂಧಪಟ್ಟುವಾಗಿದ್ದು, ದುಷ್ಟ ಶಕ್ತಿಗಳ ನಿವಾರಣೆಯ, ಸತ್ಫಲ ಸಾಧನೆಯ ಪ್ರಯತ್ನಕ್ಕೆ ಸಂಬಂಧಿಸಿದ ಸಂಜ್ಞೆಗಳಿರಬಹುದು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಭಾರತದಲ್ಲಿ ರಂಗೋಲೆ ಕಲೆ ಒಂದು ಧಾರ್ಮಿಕ ಆಚರಣೆಯಾಗಿ ಉಳಿದಿರುವುದು ಈ ಅಭಿಪ್ರಾಯಕ್ಕೆ ಪುಷ್ಟಿಕೊಡುತ್ತದೆ. ಪೂಜಾಸ್ಥಾನಗಳನ್ನೂ ಯಜ್ಞಶಾಲೆಗಳನ್ನೂ ರಂಗೋಲೆಯಿಂದ ಅಲಂಕರಿಸುವುದು ಬಹಳ ಹಿಂದಿನಿಂದ ನಡೆದು ಬಂದ ಪದ್ಧತಿ.

ರಂಗೋಲೆಯನ್ನು ಧೂಳೀಚಿತ್ರ ಎಂದು ಕರೆಯುವುದೂ ಉಂಟು. ವಿವಿಧ ವಸ್ತುಗಳ ಪುಡಿಯನ್ನು ಉಪಯೋಗಿಸಿ ರಚಿಸುವ ಚಿತ್ರ–ಧೂಳೀಚಿತ್ರ. 'ಕಾದಂಬರಿ' ಮುಂತಾದ ಸಂಸ್ಕೃತ ಗ್ರಂಥಗಳಲ್ಲಿ ರಂಗೋಲೆಯ ವಿನ್ಯಾಸ ಅವುಗಳನ್ನು ರಚಿಸುವ ವಿಧಾನಗಳ ಬಗೆಗೆ ವಿವರಗಳಿವೆ.

ಇಂಥ ಉಲ್ಲೇಖಗಳು ಪ್ರಾಚೀನ ಕನ್ನಡ ಗ್ರಂಥಗಳಲ್ಲೂ ದೊರೆಯುತ್ತವೆ. 'ಬಸವ ಪುರಾಣ'ದಲ್ಲಿ ರಂಗೋಲಿಯ ಅಂಗಗಳನ್ನು ಕುರಿತು, "ವೃತ್ತಂ ಲತೆ ಸ್ವಸ್ತಿಕಂ ಪದ್ಮರೇಖೆ, ಗೃಹಲಕ್ಷಣಮೆನಿಪ್ಪ ಒಂಥಂ ರಂಗವಾಲಿಯುಕ್ಕು" ಎಂದು ಹೇಳಿದೆ.

ರಂಗೋಲಿ ಕಲೆಗೂ ಧಾರ್ಮಿಕ ಆಚರಣೆಗಳಿಗೂ ನಿಕಟ ಸಂಬಂಧವಿದೆ. ಕೆಲವು ಸಾಮಾಜಿಕ ಉತ್ಸವಗಳಲ್ಲೂ ರಂಗೋಲಿ ಅಲಂಕರಣ ನಡೆಯುತ್ತದೆ. ಒಟ್ಟಿನಲ್ಲಿ ಎಲ್ಲ ಶುಭ ಸಮಾರಂಭ ಸನ್ನಿವೇಶಗಳಲ್ಲೂ ಈ ಸುಂದರ ಕಲೆ ಜನರ ಆನಂದೋತ್ಸಾಹಗಳಿಗೆ ಪೂರಕವಾಗಿ ಮೆರೆಯುತ್ತದೆ. ವ್ರತನೇಮಾದಿಗಳಲ್ಲಿ, ಮದುವೆ, ಅನ್ನಪ್ರಾಶನ, ಉಪನಯನ ಮುಂತಾದ ಸಮಾರಂಭಗಳಲ್ಲಿ ತಳಿರು ತೋರಣಗಳಂತೆ ರಂಗೋಲಿಯೂ ಅವಿಚ್ಛಿನ್ನ ಅಂಗಗಳಾಗಿವೆ. ಚಿಕ್ಕ ಊರುಗಳಲ್ಲಿ ಹಳ್ಳಿಗಾಡಿನಲ್ಲಿ ರಥೋತ್ಸವದ ಸಮಯದಲ್ಲಿ ರಥ ಹಾಯುವ ಬೀದಿಗಳನ್ನು ಚೆನ್ನಾಗಿ ಗುಡಿಸಿ ನೀರು ಚಿಮುಕಿಸಿ ಅಥವಾ ಸಾರಿಸಿ ಅವರ ಮೇಲೆ ಯಾವ ಅಳತೆಪಟ್ಟಿಗಳ ನೆರವೂ ಇಲ್ಲದೆ ಸಮಪ್ರಮಾಣದ ಹಿರಿಯ ಪರಿಮಾಣದ ರಂಗೋಲಿ ಚಿತ್ರಗಳನ್ನು ರಚಿಸುತ್ತಾರೆ.

ರಂಗೋಲಿ ಹಾಕುವುದಕ್ಕೆ ಸಾಧಾರಣವಾಗಿ ಉಪಯೋಗಿಸುವ ಸಾಮಗ್ರಿ ಎಂದರೆ ಹೆಂಟೆಗಳಿಂದ ಒಡೆದ ಬಿಳಿಯ ಮಣ್ಣು ಅಥವಾ ರಂಗೋಲಿ ಕಲ್ಲಿನ ಸಣ್ಣ ಪುಡಿ. ದೇವರ ಮುಂದೆ ಅಕ್ಕಿ ಹಿಟ್ಟು ಉದುರಿಸಿ ರಂಗೋಲಿ ಹಾಕುವುದೂ ಉಂಟು. ದೊಡ್ಡ ಪ್ರಮಾಣದಲ್ಲಿ ರಂಗೋಲಿ ಹಾಕುವುದಕ್ಕೆ ಮೊದಲು, ರೇಖಾರಚನೆಗೆ ಅನುಕೂಲವಾಗುವಂತೆ ಚುಕ್ಕೆಗಳನ್ನು ಹಾಕಿಕೊಳ್ಳುತ್ತಾರೆ. ಅನಂತರ ಅವುಗಳನ್ನು ರೇಖೆಗಳಿಂದ ಕೂಡಿಸಿ ನಾನಾ ವಿನ್ಯಾಸಗಳನ್ನು ಮೂಡಿಸುವುದು ವಾಡಿಕೆ. ಇಂಥ ರಂಗೋಲಿ ರಚನೆಗಳಲ್ಲಿ ವಿನ್ಯಾಸ ವೈವಿಧ್ಯವಿದೆ. ಚಿತ್ರಕಲೆಯ ಪರಿಶ್ರಮವಿಲ್ಲದಿದ್ದರೂ ಚುಕ್ಕೆಗಳ ಆಧಾರದ ಮೇಲೆ ಪ್ರಮಾಣಬದ್ಧವಾದ ವಿವಿಧಾಕೃತಿಗಳನ್ನು ರಚಿಸುವುದು ಅದ್ಭುತ ಸಾಧನೆಯೆಂದೇ ಹೇಳಬೇಕು.

ಒಂದು ರಥೋತ್ಸವಕಾಲದಲ್ಲಿ ಹೆಣ್ಣುಮಕ್ಕಳು ಚುಕ್ಕಿ ವಿಧಾನವನ್ನು ಅನುಸರಿಸಿ ಬೀದಿಯ ಅಗಲಕ್ಕೂ ಸುಂದರ ರೇಖಾವಿನ್ಯಾಸಗಳನ್ನುಳ್ಳ ರಂಗೋಲಿ ಹಾಕುತ್ತಿದ್ದುದನ್ನು ಕಂಡ ಆಂಗ್ಲ ಚಿತ್ರಕಲಾವಿದನೊಬ್ಬ 'ಚಿತ್ರಕಲೆಯನ್ನು ಕ್ರಮವಾಗಿ ಅಭ್ಯಾಸಮಾಡದ ಈ ಹೆಣ್ಣುಮಕ್ಕಳು ಯಾವ ಅಳತೆಗೋಲೂ ಇತರ ಉಪಕರಣಗಳೂ ಇಲ್ಲದೆ ಇಷ್ಟು ಜಟಿಲವಾದ ವಿನ್ಯಾಸವನ್ನು ಇಷ್ಟು ಖಚಿತವಾಗಿ, ಇಷ್ಟು ಸುಂದರವಾಗಿ ರಚಿಸುವುದನ್ನು ನೋಡಿ ನನಗೆ ತುಂಬ ಆಶ್ಚರ್ಯವಾಗುತ್ತದೆ,' ಎಂದು ಹೊಗಳಿದ.

ಆಯಾ ಸಂದರ್ಭಕ್ಕೆ ಸೂಕ್ತವಾದ ರಂಗೋಲಿಗಳನ್ನು ಹಾಕುವುದೂ ರೂಢಿಯಲ್ಲಿದೆ. ವರಮಹಾಲಕ್ಷ್ಮಿಯ ಹಬ್ಬದ ದಿನ ಗೌರಿಕೂಡಿಸಿರುವಲ್ಲಿ ಮುಂದುಗಡೆ ರಂಗೋಲಿಯಲ್ಲಿ ಎರಡು ಆನೆಗಳನ್ನು ಚಿತ್ರಿಸುವುದುಂಟು. ನಾಗರ ಪಂಚಮಿಗೆ ಸರ್ಪದ ರಂಗೋಲಿ. ಗೋಕುಲಾಷ್ಟಮಿಯಲ್ಲಿ ಕೃಷ್ಣನ ತೊಟ್ಟಿಲು ತೂಗುವ ದಿನ ಮಂಟಪದ ಮುಂದೆ ತೊಟ್ಟಿಲಿನ ರಂಗೋಲಿ. ಆ ದಿನ ಬಾಲಕೃಷ್ಣ ತಲೆಬಾಗಿಲಿನಿಂದ ಪ್ರವೇಶಿಸಿ ಒಳಗೆ ಬರುವನೆಂದು ಸೂಚಿಸಲು ಪುಟ್ಟ ಪುಟ್ಟ ಹೆಜ್ಜೆಗಳನ್ನು ಹೊರಬಾಗಿಲಿನಿಂದ ತೊಟ್ಟಲಿನವರೆಗೆ ರಂಗೋಲಿಯಲ್ಲಿ ಚಿತ್ರಿಸುತ್ತಾರೆ. ರಥಸಪ್ತಮಿಯ ದಿನ ಮೇಲುಕೋಟೆಯ ಚೆಲುವನಾರಾಯಣಸ್ವಾಮಿಯ ಉತ್ಸವದಂದು, ನಸುಕಿನಲ್ಲಿಯೇ ದೇವಾಲಯದ ಸುತ್ತಲೂ ಇರುವ ಬೀದಿಗಳಲ್ಲಿ ನೂರಾರು ನಮೂನೆಯ ರಂಗೋಲಿಗಳನ್ನು ಅಲ್ಲಿನ ಹೆಂಗಳೆಯರು ಚಿತ್ರಿಸುವ ಸಂಪ್ರದಾಯವಿದೆ.

ವಿಖ್ಯಾತ ವ್ಯಕ್ತಿಗಳು, ಪೌರಾಣಿಕ ಅಥವಾ [illegible] ದೃಶ್ಯ ಇಲ್ಲವೇ ಪ್ರಸಂಗಗಳು ಅಥವಾ ಕೇವಲ ಅಲಂಕಾರಿಕವಾದ ನಾನಾ ವಿನ್ಯಾಸಗಳನ್ನು ಬಣ್ಣ ಬಣ್ಣದ ರಂಗೋಲಿಯಲ್ಲಿ [illegible] ದೊಡ್ಡದಾಗಿ ಚಿತ್ರಿಸುವುದುಂಟು.

ರಂಗೋಲಿಗೆ ಮುಖ್ಯ ಕಲ್ಲಿನ ಪುಡಿಯನ್ನಲ್ಲದೆ [illegible] ಅಕ್ಕಿಹಿಟ್ಟನ್ನೂ ಬಳಸುತ್ತಾರೆ. ಇದಕ್ಕೆ ಬಣ್ಣವನ್ನು ಸೇರಿಸಿ ದ್ರವರೂಪದಲ್ಲಿ ಉಪಯೋಗಿಸುವುದೂ ಉಂಟು. ಈ ದ್ರವ ಹಿಟ್ಟಿನಲ್ಲಿ ಬಟ್ಟೆ ತುಂಡನ್ನು ಅದ್ದಿ ಬಲಗೈ ಹೆಬ್ಬೆರಳು ಮತ್ತು ಪಕ್ಕದ ಎರಡು ಬೆರಳುಗಳಲ್ಲಿ ಹಿಡಿದು ಮೃದುವಾಗಿ ಅದುಮುತ್ತ ಹಿಟ್ಟು ತೋರುಬೆರಳು, ನಡುಬೆರಳುಗಳ ಮೇಲೆ ಹರಿಯುವಂತೆ ಮಾಡಿ ಬೆರಳುಗಳ ತುದಿಯಿಂದ ವಿನ್ಯಾಸಗಳನ್ನು ಬರೆಯುತ್ತಾರೆ. ಬಂಗಾಲದಲ್ಲಿ ಈ ಬಗೆಯ ರಂಗೋಲಿ ಹೆಚ್ಚು ಬಳಕೆಯಲ್ಲಿದೆ. ಇದಕ್ಕೆ ಅಲ್ಲಿ 'ಅಲ್ಪನಾ' ಎಂದು ಹೆಸರು. ಅಕ್ಕಿಹಿಟ್ಟಿನ ಜೊತೆ ಮೈದಾ ಹಿಟ್ಟು ಬೆರೆಸಿ ರಂಗೋಲಿ ಹಾಕಿದರೆ, ಅದು ಬಹಳ ದಿನ ಮಾಸುವುದಿಲ್ಲ. ಇಂಥ ಹಿಟ್ಟಿನ ರಂಗೋಲಿಯನ್ನು ಚಿಕ್ಕ ತಟ್ಟೆಗಳಲ್ಲಿ ಚಿತ್ತಾರಗಳನ್ನು ಬರೆದು ದೀಪಾರತಿ ತಟ್ಟೆಗಳನ್ನಾಗಿ ಉಪಯೋಗಿಸುತ್ತಾರೆ.

ಬಂಗಾಲದಲ್ಲಿ ಹಾಕುವ ಅಲ್ಪನಾ ಶಾಂತಿನಿಕೇತನದಲ್ಲಿ ಪೋಷಿಸಲ್ಪಟ್ಟು, ಆಧುನಿಕತೆಗೂ ಹೊಂದಿಕೊಂಡು, ಈಗ ನೂತನವಾಗಿದೆ.

ರಂಗೋಲಿ ಕಲೆಯನ್ನು ಕೈವಶಗವ ಯಾರು ಬೇಕಾದವರೂ ಒಗ್ಗಿಸಿಕೊಳ್ಳ ಬಹುದಾದ ಸಾಧನ —ರಂಗೋಲಿ ಕೊಳವೆ ಅಥವಾ ತಟ್ಟೆ. ಇವುಗಳಲ್ಲಿ ಹೂವು ಮತ್ತಿತರ ಸರಳವಿನ್ಯಾಸಗಳು ರಂಧ್ರಗಳ ರೂಪದಲ್ಲಿ ಇರುತ್ತವೆ. ರಂಗೋಲಿಯನ್ನು ಕೊಳವೆಗಳಲ್ಲಿ ತುಂಬಿ ಎಳೆದರೆ ಅಥವಾ ತಟ್ಟೆಗಳ ಮೇಲೆ ಹರಡಿ ತಟ್ಟೆಯನ್ನು ತಟ್ಟಿದರೆ, ವಿನ್ಯಾಸ ನೆಲದ ಮೇಲೆ ಮೂಡುತ್ತದೆ. ಕೆಲವರು ಕುಂಚ ಬಳಸಿ ದೀರ್ಘಕಾಲ ನಿಲ್ಲುವಂಥ ಬಣ್ಣಗಳಿಂದ ರಂಗೋಲಿ ವಿನ್ಯಾಸಗಳನ್ನು ಬರೆಯುತ್ತಾರೆ. ಒಣಗಿದ ಮೇಲೆ ನೀರು ಹಾಕಿ ತೊಳೆದರೂ ಅವು ಅಳಿಸಿಹೋಗುವುದಿಲ್ಲ.

ನಮ್ಮ ರಂಗೋಲಿ ಕಲೆ ದೇಶದಲ್ಲಿ ಗೃಹದ ಕಲೆಯಾಗಿ ಬೆಳಗುತ್ತದೆ. ಭಾರತೀಯರ ದೈನಂದಿನ ಜೀವನದಲ್ಲೂ ಕಲೆ ಹಾಸುಹೊಕ್ಕಾಗಿದೆ ಎಂಬುದಕ್ಕೆ ರಂಗೋಲಿ ಕಲೆ ಒಂದು ದೃಷ್ಟಾಂತ.

## ರಜಪೂತ ಚಿತ್ರಕಲೆ

'ರಾಗಿಣಿ ಮಧುಮಾಧವಿ',—ಇದು ಒಂದು ಚಿತ್ರದ ಹೆಸರು.

ಒಂದು ಮನೆ; ಅದರ ಛಾವಣಿಯ ಅಂಚಿನಲ್ಲಿ ಕುಳಿತ ನವಿಲೊಂದು ಕೆಳಕ್ಕೆ ಕತ್ತು ಚಾಚಿದೆ. ಸುಂದರ ಸ್ತ್ರೀಯೊಬ್ಬಳು ಮಧು ತುಂಬಿದ ಬಟ್ಟಲನ್ನು ಅದರ ಕಡೆಗೆ ಎತ್ತಿ ಹಿಡಿದಿದ್ದಾಳೆ. ಮನೆಯ ಒಳಗಿನಿಂದ ಬರುತ್ತಿರುವ ಇನ್ನೊಬ್ಬಳು ಒಂದು ಕೈಯಲ್ಲಿ ಚಾಮರ, ಇನ್ನೊಂದರಲ್ಲಿ ಪಾನಪಾತ್ರೆ ಹಿಡಿದಿದ್ದಾಳೆ. ಮನೆಯ ಇದಿರಿನಲ್ಲಿರುವ ಬಾಳೆಯ ಗಿಡದಲ್ಲಿ ಗೊನೆ ಬಿಟ್ಟಿದೆ.

—ಇದು 18ನೆಯ ಶತಮಾನದ ಮಧ್ಯಕಾಲದಲ್ಲಿ ರಚಿತವಾದ ಒಂದು ರಜಪೂತ ಶೈಲಿಯ ಚಿತ್ರ.

ರಾಜಸ್ಥಾನಿ ಅಥವಾ ರಜಪೂತ ಚಿತ್ರಕಲೆ ಅಭಿವೃದ್ಧಿಗೆ ಬಂದದ್ದು ರಜಪೂತ ರಾಜರು, ಸಾಮಂತರು, ಶ್ರೀಮಂತರ ಆಶ್ರಯದಲ್ಲಿ, ಅವರು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ. ಅಂದರೆ ಸುಮಾರು 17–18ನೆಯ ಶತಮಾನಗಳಲ್ಲಿ. ಆಗ ರಾಜಸ್ಥಾನದ ಉದಯಪುರ, ಚಿತ್ತೂರು, ಬಿಕನೀರ್, ಜಯಪುರ, ಚಾವಂಡ, ಜೋಧಪುರಗಳು ಈ ಕಲೆಯ

ಕಂಡುಬರುತ್ತವೆ. ಆ ಕಾಲದ ರಾಜಸ್ಥಾನಿ ಕಾವ್ಯದಂತೆ ರಜಪೂತ [illegible] ಅನೇಕ ರಾಗಗಳನ್ನು ಸಾಮಾನ್ಯ ಶೃಂಗಾರವರ್ಗದ ಅಥವಾ ಇನ್ನಿತರ ಪ್ರೇಮ ಭಾವನೆಗಳ ಪ್ರತಿಬಿಂಬವಾಗಿದೆ. [illegible] ಧಾರ್ಮಿಕ ಸಂಪ್ರದಾಯದ ಸ್ವರೂಪ. ಪ್ರೇಮ ಪ್ರಸಂಗ, [illegible] ಋತುಗಳ ಮತ್ತು [illegible] ಇವು ಈ ಕಲಾ ಶೈಲಿಯ ಚಿತ್ರಗಳ ವಸ್ತುಗಳು. ಇದಲ್ಲದೆ ಸಂಗೀತ ಭಾವವನ್ನು ನಿರೂಪಿಸುವ 'ರಾಗಮಾಲಾ' ಚಿತ್ರಗಳೂ ಸಾಂಪ್ರದಾಯಿಕ ನಾಯಕ ನಾಯಕಿಯರ ಭಾವ ವಿಲಾಸವನ್ನು ತೋರಿಸುವ ಚಿತ್ರಗಳೂ ಇವೆ.

ಸುಮಾರು 12ನೆಯ ಶತಮಾನದಿಂದ 17ನೆಯ ಶತಮಾನದವರೆಗಿನ ಅವಧಿಯಲ್ಲಿ ಭಾರತದ ಹಲವಾರು ಭಾಗಗಳಲ್ಲಿ ನಡೆದ ನಿರಂತರ ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧಗಳ ಪ್ರಭಾವ–ಪರಿಣಾಮಗಳಿಂದ ರೂಪಿತವಾದದ್ದು ರಜಪೂತ ಕಲೆ. ಇವರ ಜೊತೆಗೆ ಪಶ್ಚಿಮ ಭಾರತದ, ದೆಹಲಿ ಸುಲ್ತಾನರ ಕಾಲದ ಹಾಗೂ ಮೊಗಲ್ ಚಿತ್ರಕಲಾ ಶೈಲಿಗಳ ಪ್ರಭಾವವೂ ರಜಪೂತ ಕಲೆಯ ಮೇಲೆ ಬಿದ್ದಿದೆ.

16ನೆಯ ಶತಮಾನದ ಅಂತ್ಯ ಭಾಗ ಹಾಗೂ 17ನೆಯ ಶತಮಾನದ ಆರಂಭ ಕಾಲದ ಎರಡು ದಶಕಗಳು ರಜಪೂತ ಕಲೆಯ ಮೊದಲ ಘಟ್ಟ. ಆಗ ಮೇವಾರ ಪ್ರದೇಶ ಇವರ ಪ್ರಧಾನ ಕಾರ್ಯಸ್ಥಾನ. ಪಶ್ಚಿಮ ಭಾರತದಲ್ಲಿ ಬೆಳೆದುಬಂದಿದ್ದ ಹಸ್ತಪ್ರತಿ ಚಿತ್ರಣ ಕಲೆಯನ್ನು ಈ ಕಾಲದ ರಜಪೂತ ಕಲಾವಿದರು ತಮ್ಮದಾಗಿ ಮಾಡಿಕೊಂಡರು : ಅವರು ರಚಿಸಿದ ಹಸ್ತಪ್ರತಿ ಚಿತ್ರಗಳು ನೇರ ಹಾಗೂ ಸರಳ. ಜೊತೆಗೆ ಗಾಢ ಬಣ್ಣಗಳನ್ನು ಪ್ರಯೋಗಿಸುತ್ತಿದ್ದರು : ಆಕೃತಿಗಳು ಛಾಯಾರೂಪದಲ್ಲಿರುತ್ತಿದ್ದುವು. ನಿರ್ದಿಷ್ಟ ರೇಖೆಯೊಳಗೆ ಉಜ್ವಲ ಬಣ್ಣಗಳನ್ನು ಸಮತಟ್ಟಾಗಿ ತುಂಬುತ್ತಿದ್ದರು : ಗಿಡಮರಗಳನ್ನು ವಿಶಿಷ್ಟ ಸಾಂಪ್ರದಾಯಿಕ ರೀತಿಯಲ್ಲಿ ಚಿತ್ರಿಸುತ್ತಿದ್ದರು. ಉಡುಪು ಪಾರದರ್ಶಕವಾಗಿರುತ್ತಿತ್ತು. ಇವನ್ನೆಲ್ಲ ನೋಡಿದಾಗ ಪಶ್ಚಿಮ ಭಾರತೀಯ ಹಾಗೂ ದೆಹಲಿ ಸುಲ್ತಾನರ ಕಾಲದ ಚಿತ್ರಕಲೆಗಳು ರಜಪೂತ ಚಿತ್ರಕಲೆಗೆ ಮೂಲ ಪ್ರಚೋದಕಗಳೆಂಬುದು ವ್ಯಕ್ತವಾಗುತ್ತದೆ.



17ನೆಯ ಶತಮಾನ ರಜಪೂತ ಕಲೆಯ ವೈಭವದ ಕಾಲ. ಈ ಅವಧಿಯಲ್ಲಿ ರಚಿತವಾದ ಮೊದಲಿನ ಕಾಲದ ಚಿತ್ರಗಳಲ್ಲಿ ಸರಳತೆಗೆ ಬದಲಾಗಿ ಜಟಿಲತೆ ತಲೆದೋರಿತು. ವರ್ಣಗಳ ತೀವ್ರತೆ ತಗ್ಗಿ ವೈವಿಧ್ಯ ಹೆಚ್ಚಿತು. ಸ್ಪಂದನಶೀಲತೆ ಏರ್ಪಟ್ಟಿತು. ರಜಪೂತ ಶೈಲಿಯ ಕಲಾವಿದರು. ಮೊಗಲ್ ಸಂಪ್ರದಾಯದವರಿಂದ ಕೆಲವು ಪಾಠಗಳನ್ನು ಕಲಿತರಾದರೂ ತಮ್ಮ ವಿಶಿಷ್ಟ ಸಾಂಕೇತಿಕತೆಯನ್ನು, ಸ್ಪಂದನಶೀಲತೆಯನ್ನು ವರ್ಣಸಂಯೋಜನೆಯನ್ನು ಹಾಗೂ ಮಾನವ ಚಿತ್ರಗಳ ಭಾವ ನಿರೂಪಕ ಭಂಗಿಗಳನ್ನು ಉಳಿಸಿಕೊಂಡರು.

ರಜಪೂತ ಶೈಲಿಯ ಚಿತ್ರಗಳು ಕಾವ್ಯಶೀಲವೆಂದು ಹೇಳುವುದುಂಟು. ಯಾವುದಾದರೊಂದು ಪ್ರಸಂಗವನ್ನು ಸಂಕೇತ ಮತ್ತು ಪ್ರತಿಮಾ ವಿಧಾನದಿಂದ ನಿರೂಪಿಸುವುದು ಈ ಶೈಲಿಯ ವೈಶಿಷ್ಟ್ಯ. ಈ ಚಿತ್ರಗಳಲ್ಲಿ ಬರುವ ಮಾನವರಾಗಲೀ ಮೃಗಗಳಾಗಲೀ ಮರಗಳಾಗಲೀ ಮನೆಯಾಗಲೀ ಅವು ಪ್ರಕೃತಿಸಹಜ ರೂಪದಲ್ಲಿರುವುದಿಲ್ಲ. ಅವು ಸಾಂಕೇತಿಕ ಅಥವಾ ವರ್ಗ ಲಕ್ಷಣವುಳ್ಳವು. ಚಿತ್ರದಲ್ಲಿ ಯಾವುದು ಪ್ರಮುಖ, ಯಾವುದು ಪ್ರಮುಖವಲ್ಲ ಎಂಬುದನ್ನು ಸೂಚಿಸುವುದರಲ್ಲೂ ಸಾಂಕೇತಿಕತೆಯುಂಟು. ಇದು ಚಿತ್ರದ ವಿವಿಧ ಅಂಶಗಳಿಗೆ ಚಿತ್ರದಲ್ಲಿ ದೊರೆಯುವ ಸ್ಥಳದ ಪ್ರಮಾಣವನ್ನು, ಅವುಗಳ ಬಣ್ಣವನ್ನು ಅವಲಂಬಿಸಿದೆ.

18ನೆಯ ಶತಮಾನದಲ್ಲಿ ಮೊಗಲರ ಪ್ರಭಾವದ ಫಲವಾಗಿ ರೂಪಚಿತ್ರ ರಚನೆ ಆರಂಭವಾಯಿತು. ಈ ಶತಮಾನದ ಪೂರ್ವಾರ್ಧದಲ್ಲಿ ರಜಪೂತ ಕಲೆ ಮೊಗಲ್ ಚಿತ್ರಕಲೆಯ ತೀವ್ರ ಪ್ರಭಾವಕ್ಕೆ ಒಳಗಾಯಿತು.

ಹೀಗೆ ಹಲವಾರು ಪ್ರಭಾವಗಳಿಂದ ರಜಪೂತ ಚಿತ್ರಕಲೆ ತನ್ನದೇ ಆದ ವೈಶಿಷ್ಟ್ಯಗಳಿಂದ ಭಾರತದ ಅಮೂಲ್ಯ ಚಿತ್ರಕಲಾ ಸಂಪ್ರದಾಯಗಳಲ್ಲೊಂದಾಗಿ ಬೆಳೆದು ಉತ್ತಮ ಫಲಗಳನ್ನು ಕೊಟ್ಟಿತು.

## ರತ್ನಾಕರವರ್ಣಿ

'ಭರತೇಶವೈಭವ' ಎಂಥ ಮೋಹಕ ಹೆಸರು ! ಈ ಭವ್ಯ ಕೃತಿಯನ್ನು ರಚಿಸಿದ ರತ್ನಾಕರವರ್ಣಿ ಕನ್ನಡ ಸಾಹಿತ್ಯದ ಗಣ್ಯಕವಿ. ಇವನು 'ರತ್ನಾಕರ ಶತಕ', 'ಅಪರಾಜಿತೇಶ್ವರ ಶತಕ' ಹಾಗೂ 'ತ್ರಿಲೋಕ ಶತಕ'ಗಳೆಂಬ ಮೂರು ಶತಕಗಳನ್ನು ಬರೆದಿದ್ದಾನೆ. ಅವನು ರಚಿಸಿದ ಆಧ್ಯಾತ್ಮಿಕ ಗೀತೆಗಳು ಈವರೆಗೆ ನೂರಕ್ಕೂ ಮೇಲ್ಪಟ್ಟು ದೊರೆತಿವೆ. 'ಭರತೇಶ ವೈಭವ' ಅವನ ಮೇರುಕೃತಿ.

ಭರತ ಮತ್ತು ಬಾಹುಬಲಿ ಜೈನಧರ್ಮದ ಆದಿಪ್ರವರ್ತಕನಾದ ಋಷಭ ದೇವನ ಮಕ್ಕಳು. ಬಾಹುಬಲಿಯು ಭರತನೊಡನೆ ಯುದ್ಧಮಾಡಿ ಗೆದ್ದರೂ ಅನಂತರ ವಿರಕ್ತನಾಗಿ ರಾಜ್ಯ, ವೈಭವಗಳನ್ನು ತೊರೆದು ಹೋದನೆಂಬುದು ಪುರಾಣ ಕಥೆ. ರತ್ನಾಕರವರ್ಣಿ ತನ್ನ ಕಾವ್ಯದಲ್ಲಿ ಬದಲಾವಣೆ ಮಾಡಿ, ಭರತನು ಮೃದುವಚನಗಳಿಂದ ತಮ್ಮನನ್ನು ಒಲಿಸಿಕೊಂಡು ಯುದ್ಧವನ್ನು ನಿವಾರಿಸಿದಂತೆ ನಿರೂಪಿಸಿದ್ದಾನೆ. ಇದು ರತ್ನಾಕರವರ್ಣಿ ಚಿತ್ರಿಸಿರುವ ಸ್ಥಿತಪ್ರಜ್ಞ ಭರತನ ವ್ಯಕ್ತಿತ್ವಕ್ಕೆ ಸರಿಹೊಂದುತ್ತದೆ. ಪಾತ್ರಸೃಷ್ಟಿಯಲ್ಲಿ ಮಾತ್ರವಲ್ಲದೆ ಶೈಲಿಯಲ್ಲಿಯೂ ರತ್ನಾಕರವರ್ಣಿಯದು ಮೇಲುಗೈ ; 'ಭರತೇಶವೈಭವ'ದಲ್ಲಿ ಅದು ಸರಳ ಸ್ಪಷ್ಟ. ಸಿದ್ಧಾಂತ ಪ್ರತಿಪಾದನೆಯ ಸಂದರ್ಭದಲ್ಲಿ ಕೂಡ ಕ್ಲಿಷ್ಟತೆಯಿಲ್ಲ.

'ಭರತೇಶವೈಭವ'ದ ಕಥಾವಸ್ತು ವಿಸ್ತಾರವಾದದ್ದೇನೂ ಅಲ್ಲ. ಆದರೂ ವರ್ಣನೆಗಳಿಂದ ತುಂಬಿರುವ 'ಭರತೇಶವೈಭವ' ಸುಮಾರು 10,000

'ರಾಗಿಣಿ ಮಧುಮಾಧವಿ

ಸಾಂಗತ್ಯಗಳ ದೀರ್ಘ ಕಾವ್ಯ ; ಭೋಗ ವಿಜಯ, ದಿಗ್ವಿಜಯ, ಯೋಗ ವಿಜಯಗಳೆಂಬ ಮೂರು ಭಾಗಗಳನ್ನು ಇದು ಒಳಗೊಂಡಿದೆ.

ರತ್ನಾಕರನ ವರ್ಣನೆಗಳೂ ಉಪಮಾನಗಳೂ ಮನೋಜ್ಞವಾದುವು. "ಅಟ್ಟುವ ತೆರೆಯ ಮುಂದೋಡುವ ತೆರೆಯ ಪೆರ್ಚಟ್ಟದಂತೇಳ್ವ ತೆರೆಗಳ ತೊಟ್ಟನೆ ಬಯಲಹ ತೆರೆಗಳನು..." ಈ ಮಾತುಗಳು ಸಮುದ್ರದ ತರಂಗ ಮಾಲೆಗಳ ಲೀಲೆಯ ಚಿತ್ರವನ್ನು ಕಣ್ಣ ಮುಂದೆ ಕಟ್ಟುತ್ತವೆ.

ಹಾಗೆಯೇ "ಜಂಗಮಲತೆಗಳಂದದೆ ಬಂದು ಕುಳಿತರಾ ಹೆಂಗಳೆಲ್ಲರು ಪಂಕ್ತಿಯಾಗಿ" ಎಂಬುದನ್ನು ಓದಿದಾಗ, ಬಳುಕುತ್ತ ಬಳುಕುತ್ತ ಲಘುವಾಗಿ ನಡೆಯುತ್ತ ನಡೆದು ಬರುವ ಸುಂದರ ಲತಾಂಗಿಯರ ಚಿತ್ರ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ.

"ಹೊಳೆವ ಕನ್ನಡಿ ಕಯ್ಯಲಿರ್ದು ನೋಡದೆ ನೀರ ನೆಳಲಲ್ಲಿ ಮೊಗವ ನೋಳ್ಪಂತೆ" ಎಂಬ ವಾಕ್ಸರಣಿಗೆ ನಾವು ತಲೆದೂಗುತ್ತೇವೆ.

ಶೃಂಗಾರದ ವರ್ಣನೆಯಲ್ಲಂತೂ ಈ ಕವಿಯನ್ನು ಮೀರಿಸಿದವರು ಕನ್ನಡದಲ್ಲಿಲ್ಲ ಎನಿಸುತ್ತದೆ. ಭರತೇಶ ಚಕ್ರವರ್ತಿಯ, ಅವನ ರಾಣಿಯರ ನಡುವಿನ ಪ್ರೇಮವನ್ನು ಇವನು ಅತ್ಯಂತ ಹೃದಯಂಗಮವಾಗಿ ನಿರೂಪಿಸಿದ್ದಾನೆ. ಭರತೇಶ ಭೋಗಿಯಾದರೂ ಯೋಗಿ, ರಸಿಕನಾದರೂ ವಿರಕ್ತ, ಹೀಗೆ ಅಪೂರ್ವ ಮಾನವನಾಗಿ ಅತಿಮಾನವನಾಗಿ ಮೆರೆದಿದ್ದಾನೆ ಭರತೇಶ. ರತ್ನಾಕರವರ್ಣಿಯ ಕೌಶಲದಿಂದಾಗಿ. ಇದರಲ್ಲಿ ಉಪಮೆಗಳು ಹೇರಳ. ರಾಜನಾದರೂ ಭರತೇಶ ಪೂಜೆಗೆ ಹೋಗುವಾಗ ತೋರುವ ಸರಳತೆ, ಭರತೇಶ ಮತ್ತು ಅವನ ತಾಯಿಯ ನಡುವಣ ಅಪ್ರತಿಮ ವಾತ್ಸಲ್ಯ, ಭರತೇಶ ತನ್ನ ನಾದಿನಿಯೊಂದಿಗೆ ಆಡುವ ನಲುಮೆಯ ಮಾತುಗಳು, ನಡೆಸುವ ವಾದ, ಮೆಚ್ಚಿನ ರಾಣಿ ಕುಸುಮಾಜಿ ಹಾಗೂ ಅವನ ನಡುವಣ ನಲ್ಮಾತುಗಳು, ರಾಣೀವಾಸದಲ್ಲಿ ಅನೇಕ ಮಂದಿ ರಾಣಿಯರಿದ್ದರೂ ಅವರಲ್ಲಿ ಇನಿತಾದರೂ ಮಾತ್ಸರ್ಯ, ಅಸೂಯೆಗಳ ಸೋಂಕೇ ಇಲ್ಲದ ಅತ್ಯಂತ ಸಂತಸದ ಉಲ್ಲಾಸದ ವಾತಾವರಣ, ಕಡೆಯಲ್ಲಿ ಭರತೇಶ ದೀಕ್ಷೆಹೊತ್ತು ಹೊರಟಾಗ ಯಾರಿಗೂ ಬೇಡವಾದ ಅರಮನೆ, ಅವನ ರಾಣಿಯರೂ ಮಕ್ಕಳೂ ದೀಕ್ಷೆಗಾಗಿ ಹಂಬಲಿಸುವುದು —ಇಂಥ ಆತ್ಮೀಯ ಸನ್ನಿವೇಶಗಳನ್ನು ಕವಿ ನಿರೂಪಿಸಿರುವ ರೀತಿ ಸಹಜ ಸುಂದರ ವಾಗಿದೆ; ಓದುಗರ ಹೃದಯದಲ್ಲಿ ಭಾವೋತ್ಕರ್ಷ ಉಂಟುಮಾಡುತ್ತದೆ.

ಅವನ ಶತಕತ್ರಯಗಳು ರಚಿತವಾದದ್ದು 'ಭರತೇಶವೈಭವ' ಸೃಷ್ಟಿಯಾದ ಅನಂತರ. ಇಲ್ಲಿ ಶೃಂಗಾರದ ವರ್ಣನೆಯಾಗಲೀ ಸರಸದ ನುಡಿಗಳಾಗಲೀ ಇಲ್ಲ. ಆದರೆ ಇಲ್ಲಿಯೂ ಆದರ್ಶದ ವರ್ಣನೆ ಇದೆ. ವಿಶ್ವಕ್ಕೆ ಅನ್ವಯಿಸುವ ಸಂದೇಶವಿದೆ. ಆತ್ಮಜಾಗೃತಿಗೆ ಕರೆಯಿದೆ. ರತ್ನಾಕರಶತಕದಲ್ಲಿ ಸಮಾಜದ ಕಿಸುರನ್ನು ತೆಗೆದುಹಾಕುವ ಆದೇಶವಿದೆ. ಇದರಲ್ಲಿ, ಸನ್ಯಾಸ ಸ್ವೀಕರಿಸಿ ಅದರಿಂದ ಹೆಮ್ಮೆ ತಳೆದವರನ್ನು ರತ್ನಾಕರನು ಕಟುವಾಗಿ ಟೀಕಿಸಿದ್ದಾನೆ. 'ಅಪರಾಜಿತ ಶತಕ'ದಲ್ಲಿ ನೀತಿ, ವೈರಾಗ್ಯ, ಆತ್ಮವಿಚಾರಗಳು ಕಂದಪದ್ಯಗಳ ಚೌಕಟ್ಟಿನಲ್ಲಿ ಚೆಲುವಾಗಿ ಮೂಡಿವೆ. ಇದನ್ನು ಬರೆಯುವ ವೇಳೆಗೆ ಅವನ ಮನಸ್ಸು ಪರಿಪಕ್ವವಾಗಿದ್ದಂತೆ ತೋರುತ್ತದೆ. ಕೃತಿಗಳ ವಿಚಾರ ಆತ್ಮಜ್ಞಾನವಾದರೂ ಈ ಎರಡೂ ಶತಕಗಳಲ್ಲಿ ರಸಾವೇಶವಿದೆ. ಭಗವಂತನಿಗಾಗಿ ಕಾತರಿಸುವ ಜೀವಿಯ ವರ್ಣನೆಯಂತೂ ಅತ್ಯಂತ ಕಾವ್ಯಮಯವಾಗಿದೆ. 'ತ್ರಿಲೋಕ ಶತಕ'ವೂ ಕಂದಪದ್ಯಗಳಲ್ಲಿ ರಚಿತವಾದದ್ದೇ. ಸೃಷ್ಟಿಯ ಸಂಬಂಧದಲ್ಲಿ ಜೈನ ಧರ್ಮದ ನಿಲುವು ಈ ಶತಕದ ವಸ್ತು.



ರತ್ನಾಕರವರ್ಣಿ – ಬಾಯಿರಿ ಕಲ್ಪನೆ

ರತ್ನಾಕರನ ಆಧ್ಯಾತ್ಮಿಕ ಗೀತೆಗಳೂ ಗೇಯ ರಚನೆಗಳು.

"ಹೊರ ಹೊರಗಾಡಿದರೇನುಂಟು, ಒಳ
ಮರಿದು ನೋಡಿದರಲ್ಲವೆ ದೇವನುಂಟು"
"ಮನವ ದಂಡಿಸಿ ತನ್ನ ನೋಡದೆ ಮೈಯಾನೆ
ಅನುದಿನ ದಂಡಿಸಿ ಫಲವೇನು"

—ಹೀಗೆ ಹಲವು ಜನ್ಮತಳೆಯುವ ಭವದ ಪರದಾಟಗಳನ್ನು ನೆನೆದು. ಸರಳ ಶೈಲಿಯಲ್ಲಿ ವಿವೇಕವನ್ನು ಬೋಧಿಸುವ ರೀತಿ ಸೊಗಸಾಗಿದೆ.

ರತ್ನಾಕರವರ್ಣಿ ಕರ್ನಾಟಕದ ಪಶ್ಚಿಮ ತೀರದ ಮೂಡುಬಿದಿರೆ ಅರಸುಮನೆತನಕ್ಕೆ ಸೇರಿದ ದೇವರಾಜನ ಮಗ. ಜನನ ಸುಮಾರು 1532 ರಲ್ಲಿ. ಜೈನ ಮತ ಸಿದ್ಧಾಂತ ಹಾಗೂ ಸಾಹಿತ್ಯಗಳಲ್ಲಿ ಪ್ರಾವೀಣ್ಯ ಗಳಿಸಿದ ಮೇಲೆ ಇವನು ಕಾರ್ಕಳದ ಭೈರರಸನ ಆಸ್ಥಾನಕವಿಯಾಗಿದ್ದ. ಅಲ್ಲಿ ಭೈರರಸನ ಪುತ್ರಿಯೊಡನೆ ಇವನ ಸ್ನೇಹವಿದ್ದಿತು. ಇದು ಬಹಿರಂಗ ವಾದಾಗ ರತ್ನಾಕರವರ್ಣಿ ಅಲ್ಲಿಂದ ತಲೆಮರೆಸಿಕೊಂಡು ಓಡಿಹೋದ ; ಹುಂಚದ ಮಹೇಂದ್ರ ಕೀರ್ತಿಗಳಿಂದ ಅಣುವ್ರತ ದೀಕ್ಷೆ ಪಡೆದ. ಅನಂತರ ಸುಮಾರು 1567ರಲ್ಲಿ 'ಭರತೇಶವೈಭವ'ವನ್ನು ಬರೆದ. ಜೈನಾಗಮ ವಿರುದ್ಧವಾದ ಅಂಶಗಳು ಅದರಲ್ಲಿ ಇವೆ ಎಂದು ಕೆಲವರು ಆರೋಪಿಸಿದಾಗ, ನಿಜವಾದ ತಿಳಿವು ಉಂಟಾದವನಿಗೆ ಮತ ಯಾವುದಾದರೇನಂತೆ ಎಂದು ವೀರಶೈವ ಮತವನ್ನು ರತ್ನಾಕರ ಅವಲಂಬಿಸಿದ. ಮತ್ತೆ ಸಮಾಧಾನಚಿತ್ತನಾಗಿ ಜೈನಧರ್ಮಕ್ಕೆ ಹಿಂದಿರುಗಿದ ಎಂದು ಹೇಳುತ್ತಾರೆ. ರತ್ನಾಕರವರ್ಣಿಯ ವೈಯುಕ್ತಿಕ ಜೀವನದ ಬಗೆಗೆ ತಿಳಿದಿರುವುದು ಇಷ್ಟೆ. ಇದರ ಬಗೆಗೂ ಭಿನ್ನಾಭಿಪ್ರಾಯಗಳಿಲ್ಲದಿಲ್ಲ. ಅಸಾಮಾನ್ಯ ಘಟನಾವಳಿಯಿಂದ ಕೂಡಿದ ಜೀವನ ಆತನದು ಎಂಬುದು ಮಾತ್ರ ಸ್ಪಷ್ಟ.

[illegible] ತನ್ನ [illegible] ತನ್ನ ಕಾವ್ಯವನ್ನು [illegible] ಹಾರಿಹೋಗುತ್ತಾರೆ ಎಂದಿದ್ದಾನೆ.

“[illegible] ಕನ್ನಡಿಗರು, ತಮ್ಮ [illegible] [illegible] ಘೋರಾಗವೆಂದು ತಿಳಿವರು, ದೈಯುಚ್ಚಿ ಕೇಳಬೇಕಣ್ಣ” ಎಂದು ನುಡಿದಿದ್ದಾನೆ.

ಕಾವ್ಯವನ್ನು ರಚಿಸಿದರೆ ಕಬ್ಬಿನಂತೆ ರಚಿಸಬೇಕು. ಬಿದಿರಿನಂತಲ್ಲ — ಎಂಬ ರಸದ್ರಷ್ಟೃ ರತ್ನಾಕರನದು. ಈ ಸಿದ್ಧಾಂತವನ್ನು ಅವನು ತನ್ನ ಕಾವ್ಯರಚನೆಯಲ್ಲಿ ಸಮರ್ಪಕವಾಗಿ ಅನುಸರಿಸಿದ್ದಾನೆ. 'ಭರತೇಶ ವೈಭವ'ದ ಉದ್ದೇಶ ಆಧ್ಯಾತ್ಮಿಕವಾದರೂ ಅವನು ಅದರಲ್ಲಿ ಪಾಂಡಿತ್ಯ ಪ್ರದರ್ಶನಕ್ಕಾಗಲೀ ಧಾರ್ಮಿಕ ವಿಚಾರಗಳ ನೀರಸ ನಿರೂಪಣೆಗಳಿಗಾಗಲೀ ಎಡೆಕೊಟ್ಟಿಲ್ಲ. ಕಾವ್ಯ ಭಾವಕ್ಕೆ ಹಾನಿ ತಟ್ಟದ ರೀತಿಯಲ್ಲಿ ಸುಲಲಿತವಾಗಿ, ಮನೋಜ್ಞವಾಗಿ, ವಿವರಗಳನ್ನು ತನ್ನ ಕಾವ್ಯದಲ್ಲಿ ಸೇರಿಸಿದ್ದಾನೆ.

ರತ್ನಾಕರವರ್ಣಿ 1600ರ ಅನಂತರ ನಿಧನನಾದ — ಎಂದು ಎಣಿಸಲಾಗಿದೆ.

## ರನ್ನ

ಶ್ರವಣಬೆಳಗೊಳ ಪ್ರಸಿದ್ಧ ಜೈನ ಯಾತ್ರಾಸ್ಥಳ. ಅಲ್ಲಿನ ಚಿಕ್ಕ ಬೆಟ್ಟದ ಬಂಡೆಯೊಂದರ ಮೇಲೆ ಮುದ್ದಾದ ಅಕ್ಷರಗಳಲ್ಲಿ 'ಶ್ರೀ ಕವಿರತ್ನಂ' ಎಂಬ ಅಂಕಿತವನ್ನು ಕೆತ್ತಲಾಗಿದೆ. ಕನ್ನಡ ಸಾಹಿತ್ಯಾಭಿಮಾನಿಗಳು ಅದನ್ನು ನೋಡಿದಾಗಲೆಲ್ಲ ಹರ್ಷ ಪುಲಕಿತರಾಗುತ್ತಾರೆ. ಅದು ಕನ್ನಡದ ಕವಿರತ್ನ ರನ್ನನ ನೆನಪನ್ನು ತಂದುಕೊಡುವುದೇ ಆ ಆನಂದಕ್ಕೆ ಕಾರಣ.

ಕನ್ನಡ ಸಾಹಿತ್ಯದಲ್ಲಿ 'ರತ್ನತ್ರಯರು' ಎಂದು ಪ್ರಸಿದ್ಧರಾದವರಲ್ಲಿ ರನ್ನ ಒಬ್ಬ. ಆತ ಕನ್ನಡದ ಹೆಮ್ಮೆಯ ಕವಿ. ಅವನ ಕೃತಿಗಳಲ್ಲಿ ದೊರೆಯುವ ವಿವರಗಳಿಂದ ಆತನ ಜೀವನಕ್ಕೆ ಸಂಬಂಧಿಸಿದ ಕೆಲವು ಅಂಶಗಳು ಗೊತ್ತಾಗುತ್ತವೆ. ಹುಟ್ಟಿದ್ದು 949ರಲ್ಲಿ ಮುದುವೊಳಲಿನಲ್ಲಿ — ಎಂದರೆ ಈಗಿನ ಮುಧೋಳದಲ್ಲಿ; ತಂದೆ ಜಿನವಲ್ಲಭೇಂದ್ರ; ತಾಯಿ ಅಬ್ಬಲಬ್ಬೆ. ವೃಥಬಾಹು, ರೇಚಣ, ಮಾರಯ್ಯ ಸಹೋದರರು. ಇವರದು ಬಳೆಗಾರರ ವಂಶ.

ರನ್ನ ಬಾಲ್ಯವನ್ನು ರಮ್ಯ ಪರಿಸರದಲ್ಲಿ ಕಳೆದ. ದಕ್ಷಿಣಕ್ಕೆ ಬಂದು ಶ್ರವಣಬೆಳಗೊಳದಲ್ಲಿ ಅಜಿತ ಸೇನಾಚಾರ್ಯರಲ್ಲಿ ವಿದ್ಯೆಯನ್ನು ಕಲಿತ; ಜಕ್ಕಿ, ಶಾಂತಿ ಎಂಬವರು ಅವನ ಹೆಂಡತಿಯರು. ಅವನಿಗೆ ಇಬ್ಬರು ಮಕ್ಕಳು ಹುಟ್ಟಿದರು. ಮಗನಿಗೆ ತನ್ನ ಆಶ್ರಯದಾತನಾದ ಚಾವುಂಡ ರಾಯನ ಹೆಸರಿನಲ್ಲಿ ರಾಯನೆಂದೂ ಮಗಳಿಗೆ ತನ್ನ ಆಶ್ರಯದಾತೆ ಅತ್ತಿಮಬ್ಬೆಯ ಹೆಸರಿನಲ್ಲಿ ಅಬ್ಬೆಯೆಂದೂ ಹೆಸರು ಇಟ್ಟ. ಮೊದಲು ಸಾಮಂತರಲ್ಲಿಯೂ ಮಂಡಲೇಶ್ವರರಲ್ಲಿಯೂ ಇದ್ದು ಅನಂತರ ಚಾಲುಕ್ಯ ವಂಶದ ಚಕ್ರವರ್ತಿ ತೈಲಪನ ಆಸ್ಥಾನವನ್ನು ಸೇರಿದ. ಉತ್ತಮ ಕಾವ್ಯರಚನೆ ಮಾಡಿ, ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದ. ಒತ್ತಿಗಾವೆ ಎಂಬ ಜಹಗೀರೂ ಅವನಿಗೆ ದೊರೆಯಿತು.

ರನ್ನನು ನಾಲ್ಕು ಕೃತಿಗಳನ್ನು ರಚಿಸಿರುವುದಾಗಿ ಉಲ್ಲೇಖವಿದೆ. 'ಅಜಿತ ಪುರಾಣ', 'ಸಾಹಸಭೀಮ ವಿಜಯಂ', 'ಚಕ್ರೇಶ್ವರ ಚರಿತಂ', 'ಪರಶುರಾಮ ಚರಿತಂ' ಇವೇ ಆ ನಾಲ್ಕು ಗ್ರಂಥಗಳು. ಅವರೆ ಇವುಗಳಲ್ಲಿ ಕೊನೆಯ ಎರಡು ಗ್ರಂಥಗಳು ದೊರೆತಿಲ್ಲ. ಇವುಗಳ ವಸ್ತು ಯಾವುದೆಂದೂ ಖಚಿತವಾಗಿ ತಿಳಿಯದು. ಈ ಬಗೆಗೆ ಭಿನ್ನ ಭಿನ್ನ ಊಹೆಗಳಿವೆ. ಈಗಾಗಲೇ ದೊರೆತಿರುವ ರನ್ನನ ಎರಡು ಗ್ರಂಥಗಳಲ್ಲಿ 'ಅಜಿತ ಪುರಾಣ'ವು ಜೈನ ಧಾರ್ಮಿಕ ಗ್ರಂಥ, ಅಜಿತ ತೀರ್ಥಂಕರರನ್ನು ಕುರಿತದ್ದು. ಇದು ರಚಿತವಾದದ್ದು 993ರಲ್ಲಿ; ಆಗ ರನ್ನನ ವಯಸ್ಸು 44 ವರ್ಷ. ತನ್ನ ಆಶ್ರಯದಾತೆ ಅತ್ತಿಮಬ್ಬೆಗಾಗಿ ಅವನು ಈ ಪುರಾಣವನ್ನು ಬರೆದ. ಈ ಕೃತಿಯಲ್ಲಿ ಮತ ಪ್ರಕ್ರಿಯೆಗೆ ಪ್ರಮುಖ ಸ್ಥಾನ. ಕವಿಯ ಪ್ರತಿಭಾಪ್ರದರ್ಶನಕ್ಕೆ ಇಲ್ಲಿ ಕಡಿವಾಣವಿದೆ. ಆದರೂ ಸಂದರ್ಭ ದೊರೆತಾಗಲೆಲ್ಲ ಕವಿ ರನ್ನ, ಶಾಸ್ತ್ರಜ್ಞ ರನ್ನನನ್ನು ಮೀರಿ ನಿಂತಿರುವುದು ಎದ್ದು ಕಾಣುತ್ತದೆ. ತನಗಿಂತ ಮುಂಚೆ ಜೈನ ಪುರಾಣಗಳನ್ನು ಬರೆದ ಪಂಪ, ಪೊನ್ನರಿಂದ ರನ್ನ ಪ್ರಭಾವಿತನಾಗಿರುವನಾದರೂ 'ಅಜಿತ ಪುರಾಣ'ದ ರಚನೆಯಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಮೆರೆದಿದ್ದಾನೆ. ಪರಿಣಾಮವನ್ನು ಸಾಧಿಸಿದ್ದಾನೆ. ಈ ಕಾವ್ಯದ ಶೈಲಿಯನ್ನು ಬಿಎಂಶ್ರೀ ಅವರು 'ಧೀರಶಾಂತ'ಎಂದು ಕರೆದಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ರನ್ನನ ಹೆಸರನ್ನು ಅಮರಗೊಳಿಸಿರುವ ಕೃತಿ 'ಗದಾಯುದ್ಧ' ಎಂದು ಪ್ರಸಿದ್ಧವಾಗಿರುವ 'ಸಾಹಸಭೀಮ ವಿಜಯಂ'. ಇದು ಲೌಕಿಕ ಗ್ರಂಥ. ಇದರ ರಚನೆಯ ಕಾಲ ಖಚಿತವಾಗಿಲ್ಲ. ಚಾಲುಕ್ಯ ವಂಶದ ತೈಲಪ ಚಕ್ರವರ್ತಿಯ ಕಾಲದಲ್ಲಿ ಇದು ರಚಿತವಾಗಿರಬೇಕು ; ಇದರಲ್ಲಿ ವರ್ಣಿತವಾಗಿರುವುದು, ಸತ್ಯಾಶ್ರಯನ ಸಾಹಸಗಳೇ ಇರಬೇಕು — ಎಂದು ಊಹೆ.

ಈ ಗ್ರಂಥ ರಚನೆಯಲ್ಲಿ ರನ್ನನು ಪಂಪನಿಗೆ ಅನೇಕ ವಿಧಗಳಲ್ಲಿ ಋಣಿಯಾಗಿದ್ದಾನೆ. ಅವನ ಈ ಕಾವ್ಯದ ಹೆಸರಿನಲ್ಲಿ ಬರುವ 'ಸಾಹಸ ಭೀಮ' ಎಂಬ ಮಾತು ಕೂಡ ಪಂಪನಿಂದ ಎತ್ತಿಕೊಂಡದ್ದು. ಪಂಪನ 'ಭಾರತ'ದ ಗದಾಯುದ್ಧದ ಭಾಗವೇ ಇದಕ್ಕೆ ತಳಹದಿ. ಬಿಎಂಶ್ರೀ ಯವರು ಹೇಳಿರುವಂತೆ ಅವನು ಪಂಪನ "ಸ್ಫೂರ್ತಿಯನ್ನೂ ವಾಗ್ದೋರಣೆಯನ್ನೂ ಹೃದಯದಲ್ಲಿ ತುಂಬಿಕೊಂಡು ಆತನು ಶ್ರುತಿ ಎತ್ತಿದ ಚರಣಗಳನ್ನು ಆಲಾಪನೆ ಮಾಡುತ್ತಾ ತನ್ನ ಸರಸ್ವತೀ ಪ್ರಸನ್ನಶಕ್ತಿ ಉಕ್ಕಿ......... ಕನ್ನಡ ಸಾಹಿತ್ಯದ ಅತ್ಯುತ್ಕೃಷ್ಟವೆಂದು ಹೇಳಬಹುದಾದ ಕಾವ್ಯವನ್ನು ನಿರ್ಮಿಸಿದ್ದಾನೆ." ಈ ಕಾವ್ಯದ "ವಸ್ತು ವಿನ್ಯಾಸ, ಸಂಭಾಷಣೆಯ ನಾಟಕೀಯತೆ, ರಸ ಪ್ರವಾಹ, ಗಂಡುತನದ ಮಹಾಶೈಲಿ, ಮಿತವರ್ಣನೆ, ಸಂಸ್ಕೃತ–ಕನ್ನಡದ ಹಿತ ಮೈತ್ರೀ ಸಮ್ಮಿಳನ—ಇವು ಅತಿ ರಮಣೀಯವಾಗಿವೆ."

'ಸಾಹಸಭೀಮ ವಿಜಯ'ದ ನಾಯಕ ಭೀಮಸೇನ; ಅವನ ಪ್ರತಿನಾಯಕ ದುರ್ಯೋಧನ. ಕಾವ್ಯದ ತುಂಬ ಭೀಮನ ಪ್ರತಾಪ ತುಂಬಿದೆಯಾದರೂ, ದುರ್ಯೋಧನನ ಚಿತ್ರಣ ಅಪೂರ್ವ ರೀತಿಯಲ್ಲಿ ರೂಪುಗೊಂಡಿದೆ. ಇದರಿಂದಾಗಿ ದುರ್ಯೋಧನನ ಲೋಪದೋಷಗಳು ಏನೇ ಇರಲಿ, ಅಭಿಮಾನಧನನಾದ ಅವನನ್ನು ಮೆಚ್ಚಿಕೊಳ್ಳುವುದು ಮಾತ್ರವಲ್ಲ, ಅವನಿಗೆ ಅನಿವಾರ್ಯವಾಗಿ ಬಂದ ದುರಂತ ಮರಣಕ್ಕಾಗಿ ಶೋಕಿಸುತ್ತಾನೆ. ಅವನು ಮಾಡಿದ ತಪ್ಪುಗಳು ಏನೇ ಇರಲಿ – ಅವನು ಧೀರ ಎನಿಸುತ್ತದೆ. ರನ್ನನ ಕವಿತಾ ಕೌಶಲದಿಂದ ದುರ್ಯೋಧನ ಅಪೂರ್ವ ಮಾನವನಾಗಿ ನಮ್ಮ ಕಣ್ಣು ಮುಂದೆ ನಿಲ್ಲುತ್ತಾನೆ.

ರನ್ನನು 'ಗದಾಯುದ್ಧ'ದ ರಚನೆಯಲ್ಲಿ ಪಂಪನಿಂದ ಮಾತ್ರವಲ್ಲ, ಇತರ ಪ್ರಾಚೀನ ಕವಿಗಳಿಂದಲೂ ಸ್ಫೂರ್ತಿ ಪಡೆದಿದ್ದಾನೆ. ಭಾಸನ 'ಊರು ಭಂಗ', ಭಟ್ಟನಾರಾಯಣನ 'ವೇಣೀ ಸಂಹಾರ' ನಾಟಕಗಳ ಪ್ರಭಾವ ಈತನ ಮೇಲೆ ಆಗಿದೆ.

'ಗದಾಯುದ್ಧ' ಚಂಪೂಕಾವ್ಯವಾದರೂ ಅದರಲ್ಲಿ ಕಂಡುಬರುವ ನಾಟಕೀಯತೆ ಗಮನಾರ್ಹವಾದದ್ದು. ಸನ್ನಿವೇಶಗಳಲ್ಲೂ ಅಷ್ಟೇ; ನಿರೂಪಣೆಯಲ್ಲೂ ಅಷ್ಟೇ.

ದುರ್ಯೋಧನನ ಮಿತ್ರಪ್ರೇಮ, ಭ್ರಾತೃಪ್ರೇಮಗಳು ಅಸದೃಶವಾದುವು. ಅವನು ಕರ್ಣನನ್ನು ಕುರಿತು ಹಂಬಲಿಸುವ ರೀತಿ ಯಾರ ಕರುಳನ್ನಾದರೂ ಇರಿಯುತ್ತದೆ :

" ನಿನ್ನ ಕೆಳೆಯಂ ಸುಯೋಧನ
ನನ್ನೋಡದೆ ನುಡಿದಪ್ಪಿಕೊಳ್ಳದೆ ಬೆಸನೇ
ನೆನ್ನದೆ ಜೀಯೆನ್ನದೆ ದೇ
ವೆನ್ನದೆ ಏಕುಸಿರದಿರ್ಪ ಅಂಗಾಧಿಪತೀ ".

ರನ್ನನ ಮಾತಿನ ಜಾಣ್ಮೆಯಂತೂ ನೇರವಾಗಿ ಹೃದಯವನ್ನು ಮುಟ್ಟುವಂಥದು, ಕಣ್ಣುಮುಂದೆ ಚಿತ್ರಮಾಲಿಕೆಯನ್ನೇ ಕಟ್ಟುವಂಥದು.

ವೈಶಂಪಾಯನ ಸರೋವರದಲ್ಲಿ ಅಡಗಿಕೊಂಡಿದ್ದ ದುರ್ಯೋಧನ ಭೀಮನ ಸಿಂಹಗರ್ಜನೆಯನ್ನು ಕೇಳಿದಾಗ ಅವನ ಪ್ರತಿಕ್ರಿಯೆಯೇನು? 'ನೀರೊಳಗಿರ್ದುಂ ಬೆಮರ್ತನುರಗಪತಾಕಂ' ಎನ್ನುತ್ತಾನೆ ರನ್ನ. ದುರ್ಯೋಧನನ ಮರಣ ಸಂದರ್ಭದಲ್ಲಿ 'ಕುರುಕುಲಾರ್ಕನುಮರ್ಕನು ಮಸ್ತಮೈದಿದರ್' ಎನ್ನುತ್ತಾನೆ.

" ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತೆರೆಯೆ ನುಡಿದ . . ."

–ಮಹಾಕವಿ, ರನ್ನ. ಆತ ಕವಿ ರತ್ನ.

## ರವೀಂದ್ರನಾಥ ಠಾಕೂರ್

ಹನ್ನೊಂದು ವರ್ಷದ ಒಬ್ಬ ಬಾಲಕ. ಅವನಿಗಿಂತ ಐದು ವರ್ಷ ದೊಡ್ಡವನಾದ ಜ್ಯೋತಿ ಪ್ರಕಾಶ, ಬಂಗಾಳಿಯಲ್ಲಿ ಕವಿತೆಯ ಸಾಲುಗಳನ್ನು ಹೇಗೆ ಕಟ್ಟುತ್ತಾರೆಂಬುದನ್ನು ತಿಳಿಸಿಹೇಳಿ ಕವಿತೆ ರಚಿಸುವಂತೆ ಈ ಬಾಲಕನಿಗೆ ಹೇಳಿದ. ಬಾಲಕ ಕವಿತೆಗಳನ್ನು ರಚಿಸಲು ಆರಂಭಿಸಿಯೇ ಬಿಟ್ಟ. ಅವನು ವಿದ್ಯಾರ್ಥಿಯಾಗಿದ್ದ ಬಂಗಾಳಿ ಅಕಾಡೆಮಿಯ ಮುಖ್ಯೋಪಾಧ್ಯಾಯರಿಗೂ ಈ ಸಂಗತಿ ತಿಳಿಯಿತು. ಅವರು ಅವನನ್ನು ತಮ್ಮಲ್ಲಿಗೆ ಕರೆದು ತಾವೇ ಒಂದು ಪದ್ಯದ ಎರಡು ಸಾಲುಗಳನ್ನು ಬರೆದು, ಕವನವನ್ನು ಪೂರ್ಣಗೊಳಿಸುವಂತೆ ಆ ಬಾಲಕನನ್ನು ಕೇಳಿದರು. ಅವನು ಆ ಎರಡು ಸಾಲುಗಳನ್ನು ಬರೆದಾಗ ಅವರಿಗೆ ಅವನ ಪ್ರತಿಭೆಯ ಬಗೆಗೆ ಸಂಶಯ ಉಳಿಯಲಿಲ್ಲ. ಇದನ್ನು ಅವರು ಸೂಪರಿಂಟೆಂಡೆಂಟರಿಗೆ ತಿಳಿಸಿದರು. ಸೂಪರಿಂಟೆಂಡೆಂಟರು ನೀತಿಬೋಧಾತ್ಮಕ ಪದ್ಯವೊಂದನ್ನು ಬರೆಯಲು ಬಾಲಕನನ್ನು ಕೇಳಿದರು. ಅವನ ಕವಿತ್ವಶಕ್ತಿ ಅವರಿಗೆ ಸಂತೋಷ ಉಂಟುಮಾಡಿತು. ಶಾಲೆಯ ಅತ್ಯಂತ ಮೇಲಿನ ತರಗತಿಗೆ ಬಾಲಕನನ್ನು ಕರೆದೊಯ್ದು, ಕವಿತೆಯನ್ನು ಓದಲು ಹೇಳಿದರು.

ಕಾಲಕ್ರಮದಲ್ಲಿ ನೊಬೆಲ್ ಬಹುಮಾನ ಪಡೆದು ವಿಶ್ವಕವಿಯೆಂದು ಪ್ರಸಿದ್ಧಿ ಪಡೆದ ರವೀಂದ್ರನಾಥ ಠಾಕೂರರೇ ಆ ಬಾಲಕ.

ರವೀಂದ್ರನಾಥ ಠಾಕೂರರದು ಪ್ರಖ್ಯಾತ ವಂಶ. ಅವರ ಅಜ್ಜ ದ್ವಾರಕನಾಥ ಠಾಕೂರರು 1846ರಲ್ಲಿ ಲಂಡನ್ನಿನಲ್ಲಿ ತೀರಿಕೊಂಡಾಗ ಮಗ ದೇವೇಂದ್ರನಾಥ ಠಾಕೂರರಿಗೆ ಕೇವಲ 27 ವರ್ಷ. ದೇವೇಂದ್ರನಾಥರ ಮನಸ್ಸು ಚಿಕ್ಕ ವಯಸ್ಸಿನಿಂದಲೂ ಐಹಿಕ ಸುಖಾಭಿಲಾಷೆಗಳಿಂದ ದೂರವಾಗಿತ್ತು; ಧಾರ್ಮಿಕ ವಿಷಯಗಳತ್ತ ಒಲಿದಿತ್ತು. ದ್ವಾರಕನಾಥರದು ದೊಡ್ಡ ಕುಟುಂಬ. ಅವರ ಮರಣದಿಂದಾಗಿ ಆ ಒಟ್ಟು ಕುಟುಂಬವನ್ನು ನಿರ್ವಹಿಸುವ ಹೊಣೆ ದೇವೇಂದ್ರನಾಥರ ಮೇಲೆ ಬಿತ್ತು. ತಂದೆ, ಎಷ್ಟೋ ವ್ಯಾಪಾರಗಳನ್ನಾರಂಭಿಸಿದ್ದರು. ತುಂಬ ಸಾಲವನ್ನೂ ಮಾಡಿದ್ದರು. ದೇವೇಂದ್ರನಾಥರು ಆ ವ್ಯಾಪಾರಗಳನ್ನು ಅಂತ್ಯಗೊಳಿಸಿ, ಸಾಲ ತೀರಿಸಲು ವಾಯಿದೆ ಪಡೆದು ಎಲ್ಲ ಸಾಲವನ್ನೂ ತೀರಿಸಿದರು.


ವಿಶ್ವಕವಿ

ತಮ್ಮ ಮನೆತನದ ವ್ಯವಹಾರಗಳನ್ನು ಒಂದು ಹದಕ್ಕೆ ತಂದರು. ಪುನಃ ತಮ್ಮ ಮನಸ್ಸನ್ನು ಅಧ್ಯಾತ್ಮದ ಕಡೆಗೆ ತಿರುಗಿಸಿದರು.

ದೇವೇಂದ್ರನಾಥ ಮತ್ತು ಶಾರದಾದೇವಿಯರ 14ನೆಯ ಶಿಶುವಾಗಿ ರವೀಂದ್ರನಾಥ ಠಾಕೂರರು 1861ನೆಯ ಮೇ 7ರಂದು ಕಲ್ಕತ್ತಾದ ಜೊರಾಸಂಕೋದಲ್ಲಿ ಜನಿಸಿದರು. ಮೊದಲಿನಿಂದಲೂ ರವೀಂದ್ರರು ಸ್ವತಂತ್ರ ಮನೋವೃತ್ತಿಯವರು. ಇದರಿಂದಾಗಿ ಅವರಿಗೆ ಶಾಲೆಯ ಕಟ್ಟುಪಾಡು ರುಚಿಸಲಿಲ್ಲ. ಆದ್ದರಿಂದ ತಮ್ಮ ವಿದ್ಯಾಭ್ಯಾಸವನ್ನು ಅವರು ಬಹುಕಾಲ ಮುಂದುವರಿಸಲಿಲ್ಲ. ಪ್ರತಿ ಸಂಜೆ ಮನೆಯಲ್ಲಿ ನಡೆಯುತ್ತಿದ್ದ 'ರಾಮಾಯಣ', 'ಮಹಾಭಾರತ'ಗಳ ವಾಚನದಲ್ಲಿಮಾತ್ರ ಇವರಿಗೆ ತುಂಬ ಆಸಕ್ತಿ. ಅವನ್ನು ತಪ್ಪದೆ ಕೇಳುತ್ತಿದ್ದರು. ಬಂಗಾಳಿ ಭಾಷೆಯಲ್ಲಿ ಪ್ರಕಟವಾಗುತ್ತಿದ್ದ ಎಲ್ಲ ಪತ್ರಿಕೆಗಳೂ ಪುಸ್ತಕಗಳೂ ಇವರ ಮನೆಗೆ ಬರುತ್ತಿದ್ದುವು. ರವೀಂದ್ರರು ಕೈಗೆ ಸಿಕ್ಕಿದ ಆ ಎಲ್ಲ ಪುಸ್ತಕಗಳನ್ನೂ ಓದುತ್ತಿದ್ದರು; ಹೀಗೆ ಚಿಕ್ಕ ವಯಸ್ಸಿನಿಂದಲೇ ತಮ್ಮ ಭಾಷಾಜ್ಞಾನವನ್ನೂ ವಿಚಾರಶಕ್ತಿಯನ್ನೂ ಬಹಳವಾಗಿ ಬೆಳೆಸಿಕೊಂಡರು. ರವೀಂದ್ರರು 14 ವರ್ಷ ವಯಸ್ಸಿನವರಾಗಿದ್ದಾಗ ಅವರ ತಾಯಿ ತೀರಿಕೊಂಡರು. ಇದು ರವೀಂದ್ರರ ಮನಸ್ಸಿಗೆ ತುಂಬ ವ್ಯಥೆಯನ್ನುಂಟುಮಾಡಿತು.

ದೇವೇಂದ್ರನಾಥರು ತಮಗೆ ಧ್ಯಾನಮಾಡಲು ಅನುಕೂಲವಾಗಿರಲೆಂದು ಬೋಲ್ಪುರ ಎಂಬಲ್ಲಿಂದ ಸ್ವಲ್ಪ ದೂರದಲ್ಲಿ 'ಶಾಂತಿನಿಕೇತನ' ಎಂಬ ಒಂದೇ ಒಂದು ಮನೆಯನ್ನು ಕಟ್ಟಿಕೊಂಡಿದ್ದರು. ಒಮ್ಮೆ ತಂದೆಯೊಡನೆ ಹಿಮಾಲಯಕ್ಕೆ ಹೋಗುವ ಮಾರ್ಗದಲ್ಲಿ ರವೀಂದ್ರರು 'ಶಾಂತಿನಿಕೇತನ'ವನ್ನು ಮೊದಲ ಬಾರಿಗೆ ಕಂಡರು. ಹಿಮಾಲಯದ ಭವ್ಯತೆ ಅವರನ್ನು ಸೆರೆಹಿಡಿಯಿತು.

ಕಲ್ಕತ್ತೆಯಲ್ಲಿದ್ದಾಗ ಮನೆಯಲ್ಲಿಯೇ ರವೀಂದ್ರರಿಗೆ ಪಾಠ ಹೇಳಿಸುವ ವ್ಯವಸ್ಥೆ ಇತ್ತು. ಈ ಹೊತ್ತಿಗಾಗಲೇ ರವೀಂದ್ರರು ಬಂಗಾಳಿ, ಸಂಸ್ಕೃತ,

[illegible] ಭಾಷೆಯನ್ನು [illegible]. ಸಾಹಿತ್ಯದತ್ತ ಇವರ [illegible] ಗಮನಿಸಿದ [illegible] ಶಿಕ್ಷಕ ಇವರಿಗೆ ಕಾಳಿದಾಸನ 'ಶಾಕುಂತಲ', 'ಕುಮಾರಸಂಭವ'ಗಳ ಪಾಠ ಹೇಳಿದ. ಇದು ಅವರ ಸಾಹಿತ್ಯಾಸಕ್ತಿಯನ್ನೂ ಪ್ರಜ್ಞೆಯನ್ನೂ ಬೆಳೆಸಿತು.

ರವೀಂದ್ರರಿಗೆ 1883ರಲ್ಲಿ ಮೃಣಾಲಿನೀ ದೇವಿಯೊಡನೆ ವಿವಾಹವಾಯಿತು. 1890ರಲ್ಲಿ ಅವರು ಇಂಗ್ಲೆಂಡಿಗೆ ಹೋಗಿ ಮೂರು ತಿಂಗಳಿದ್ದು ಹಿಂದಿರುಗಿದರು. ಅನಂತರ ಮನೆತನದ ಜಮೀನು ನೋಡಿಕೊಳ್ಳುವ ಹೊಣೆಗಾರಿಕೆ ಇವರದಾಯಿತು. ಇದರಿಂದಾಗಿ ರೈತರ ಕಷ್ಟನಿಷ್ಠುರಗಳ ಪರಿಚಯವಾಯಿತು. ಅವರ ತೊಂದರೆಗಳನ್ನು ಸಹಾನುಭೂತಿಯಿಂದ ನೋಡಿ, ಪರಿಹಾರ ಒದಗಿಸಲು ಯತ್ನಿಸಿದರು. 1898ರ ಸೆಪ್ಟೆಂಬರ್ 20ರಂದು ಅಣ್ಣ ಸತ್ಯೇಂದ್ರನಾಥರೊಡನೆ ಮತ್ತೆ ಇಂಗ್ಲೆಂಡಿಗೆ ಹೋದರು. ಲಂಡನ್ ವಿಶ್ವವಿದ್ಯಾನಿಲಯವನ್ನು ಸೇರಿ ಒಂದೂವರೆ ವರ್ಷಗಳ ಕಾಲ ಆಂಗ್ಲಸಾಹಿತ್ಯವನ್ನು ಅಭ್ಯಾಸ ಮಾಡಿದರು. ಈ ಅವಧಿಯಲ್ಲೂ ಅನಂತರವೂ ಅವರ ಸಾಹಿತ್ಯರಚನೆ ನಿರಂತರವಾಗಿ ನಡೆದೇ ಇತ್ತು. ಕೆಲವು ಕವನಸಂಗ್ರಹಗಳೂ ಪ್ರಕಟವಾದುವು. 1912ರಲ್ಲಿ ರವೀಂದ್ರರು ಅನಾರೋಗ್ಯದ ಅನಂತರ ವಿಶ್ರಾಂತಿ ಪಡೆಯುತ್ತಿದ್ದಾಗ ತಮ್ಮ ಬಂಗಾಳಿ ಕವನ ಸಂಕಲನಗಳಿಂದ ಆರಿಸಿದ ಕೆಲವು ಕವನಗಳನ್ನು ಇಂಗ್ಲಿಷಿಗೆ ಭಾಷಾಂತರಿಸತೊಡಗಿದರು. ಅನಂತರ ಆರೋಗ್ಯ ಸುಧಾರಣೆಗಾಗಿ ಇಂಗ್ಲೆಂಡಿಗೆ ಹೊರಟಾಗ ಸಮುದ್ರಯಾನ ಕಾಲದಲ್ಲೂ ಈ ಭಾಷಾಂತರ ಕಾರ್ಯವನ್ನು ಮುಂದುವರಿಸಿದರು. ಈ ಕವನಗಳನ್ನು 'ಗೀತಾಂಜಲಿ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಇದು ಆಂಗ್ಲ ಕವಿ ಯೇಟ್ಸ್‌ಗೆ ಬಹಳ ಮೆಚ್ಚುಗೆಯಾಯಿತು. ಮಾರನೆಯ ವರ್ಷವೇ, ಅಂದರೆ ರವೀಂದ್ರರು 44 ವರ್ಷದವರಾಗಿದ್ದಾಗ, ಈ ಕವನ ಸಂಕಲನಕ್ಕೆ ನೊಬೆಲ್ ಬಹುಮಾನ ದೊರಕಿತು. ರವೀಂದ್ರರು ಈ ಹಣವನ್ನು ಬ್ಯಾಂಕಿನಲ್ಲಿಟ್ಟು ಅದರಿಂದ ಬಂದ ಬಡ್ಡಿಯನ್ನು ಶಾಂತಿನಿಕೇತನದಲ್ಲಿ ತಾವು ಸ್ಥಾಪಿಸಿದ್ದ ಶಾಲೆಯ ನಿರ್ವಹಣೆಗಾಗಿ ಉಪಯೋಗಿಸಿದರು. ಕ್ರಮ ಕ್ರಮವಾಗಿ ಈ ಸಂಸ್ಥೆಯನ್ನು ಬೆಳೆಸಿ 1918ರಲ್ಲಿ 'ವಿಶ್ವ ಭಾರತಿ' ಎಂಬ ವಿಶ್ವವಿದ್ಯಾನಿಲಯವನ್ನಾಗಿ ರೂಪಿಸಿದರು.



ರವೀಂದ್ರರ ಇಂಗ್ಲಿಷ್ ಕೈಬರಹ

ವಿಶ್ವಭಾರತಿಯಲ್ಲಿ ಸಾಮಾನ್ಯ ವಿದ್ಯಾಭ್ಯಾಸ, ನಾನಾವಿಧ ತತ್ತ್ವಜ್ಞಾನಗಳ ಅಧ್ಯಯನ, ಕಲೆ, ಸಂಗೀತ, ಶಿಕ್ಷಣ, ಶಿಲ್ಪ, ಚೀನೀ ಮತ್ತು ಹಿಂದೀ ವಿಭಾಗಗಳಿದ್ದುವು.

ಭೂ ವ್ಯವಸಾಯದ ಮತ್ತು ಬಗೆ ಬಗೆಯ ಗ್ರಾಮೋದ್ಯೋಗಗಳನ್ನು ಆಧರಿಸಿ ಗ್ರಾಮಜೀವನವನ್ನು ಸುಧಾರಿಸುವ ಬಗೆಗೆ ಸೂಕ್ತ ಪ್ರಯೋಗಗಳನ್ನು ನಡೆಸಲು ಶಾಂತಿನಿಕೇತನಕ್ಕೆ ಸಮೀಪವಾಗಿ ಶ್ರೀನಿಕೇತನ ಸ್ಥಾಪಿಸಿದರು. 1935ರಲ್ಲಿ ವಿಶ್ವಭಾರತಿಯು ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿಬಿದ್ದಾಗ ರವೀಂದ್ರರು ತಮ್ಮ ಕೆಲವು ನಾಟಕ ಮತ್ತು ಗೀತ ರೂಪಕಗಳನ್ನು ರಂಗಪ್ರಯೋಗಕ್ಕೆ ಸಿದ್ಧಗೊಳಿಸಿ ತಮ್ಮ ವಿದ್ಯಾರ್ಥಿಗಳ ತಂಡದೊಡನೆ ಪ್ರವಾಸ ಹೊರಟರು. ನಾಟಕದ ಪ್ರದರ್ಶನದಿಂದ ಬಂದ ಹಣವನ್ನು ವಿಶ್ವಭಾರತಿಗಾಗಿ ಉಪಯೋಗಿಸಿದರು. ಮುಂದೆ ಗಾಂಧಿಜಿ, 1942ರ ಪೂರ್ವಾರ್ಧದಲ್ಲಿ, ವಿಶ್ವಭಾರತಿಗಾಗಿ 5 ಲಕ್ಷ ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿಕೊಟ್ಟರು.

ರವೀಂದ್ರರು ಈ ಶತಮಾನದ ಪ್ರಮುಖ ಕವಿಗಳೆಂದು ಪರಿಗಣಿಸಲ್ಪಟ್ಟು ವಿಶ್ವಕವಿ ಎಂಬ ಖ್ಯಾತಿಯನ್ನು ಪಡೆದರಾದರೂ ಅವರ ಕಾರ್ಯಕ್ಷೇತ್ರ ಸಾಹಿತ್ಯರಂಗಕ್ಕೆ ಮಾತ್ರ ಮೀಸಲಾಗಿರಲಿಲ್ಲ. ಅವರ ಪ್ರತಿಭೆ, ಆಸಕ್ತಿಗಳು ಬಹುಮುಖ. ಅವರು ಗಮಕಿ, ಗಾಯಕರು. ತಾವೇ ಗೀತೆಗಳನ್ನು ರಚಿಸಿ ಅವಕ್ಕೆ ತಾವೇ ಹೊಸ ಬಗೆಯ ಧಾಟಿಗಳನ್ನು ಕಲ್ಪಿಸಿ ಹಾಡುತ್ತಿದ್ದರು. ಇವರ ಈ ಕೃತಿಗಳು ರವೀಂದ್ರ ಸಂಗೀತವೆಂದು ಪ್ರಸಿದ್ಧವಾಗಿವೆ. ಬಂಗಾಳಿಯನ್ನು ಬಲ್ಲವರಿಗೆಲ್ಲ ರವೀಂದ್ರ ಸಂಗೀತ ಬಹಳ ಪ್ರಿಯವಾಗಿವೆ.

ರವೀಂದ್ರರು ಉತ್ತಮ ನಟರೂ ನಿರ್ದೇಶಕರೂ ಆಗಿದ್ದರು. ಚಿತ್ರರಚನೆಯಲ್ಲೂ ಅವರಿಗೆ ಆಸಕ್ತಿ ಇತ್ತು. ಹಾಗೆಯೇ ಮೂಲೆಗುಂಪಾಗಿ ಹೋಗುತ್ತಿದ್ದ ಗ್ರಾಮೀಣ ಕುಶಲಕಲೆಗಳ ಪುನರುಜ್ಜೀವನಕ್ಕಾಗಿ ರವೀಂದ್ರರು ಸಲ್ಲಿಸಿದ ಸೇವೆ ಅಪಾರ. ಹಾಗೆಯೇ ಬಂಗಾಳಿ ಜಾನಪದ ಸಂಗೀತವನ್ನು ಮತ್ತೆ ಜನಪ್ರಿಯವನ್ನಾಗಿ ಮಾಡಲು ಪ್ರಯತ್ನಿಸಿದರು.

ಶಿಕ್ಷಣರಂಗದಲ್ಲಿ ಅವರಿಗಿದ್ದ ಆಸಕ್ತಿಗೆ, ಈ ರಂಗದಲ್ಲಿ ಅವರು ನಡೆಸಲು ಉದ್ದೇಶಿಸಿದ ನೂತನ ಪ್ರಯೋಗಗಳಿಗೆ. ಅವರು ಸ್ಥಾಪಿಸಿದ 'ವಿಶ್ವಭಾರತಿ'ಯೇ ಸಾಕ್ಷಿ.

ಕವಿ ರವೀಂದ್ರರಿಗೆ ಪ್ರಕೃತಿ ಸ್ಫೂರ್ತಿದಾಯಿನಿ. ಗಂಗಾನದಿಯ ಒಂದು ಕವಲಾದ ಪದ್ಮಾ ನದಿಯಂತೂ ಅವರ ಪಾಲಿಗೆ ಜೀವವಾಹಿನಿ. ಈ ನದಿ ಅವರ ಎಷ್ಟೋ ಕವನಗಳ ವಸ್ತುವಾಗಿದೆ. ರವೀಂದ್ರರದು ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಪಳಗಿದ ಕೈ. ಅವರು ಬರೆದಿರುವ ಕವನಗಳೇ ಸುಮಾರು 5,000 ದಷ್ಟಿವೆ. ಇವಲ್ಲದೆ ಸಹಸ್ರಾರು ಗೀತೆಗಳು, 'ಮಾನಸಿ', 'ನೈವೇದ್ಯ', 'ಗೀತಾಂಜಲಿ', 'ನವಜಾತಕ್' ಮುಂತಾದ ಕವನ ಸಂಕಲನಗಳು ಅವರ ಅಪೂರ್ವ ಕವಿತ್ವಶಕ್ತಿಗೆ ನಿದರ್ಶನಗಳಾಗಿವೆ.

'ವಾಲ್ಮೀಕಿ ಪ್ರತಿಭಾ', 'ರಕ್ತಕರಬಿ', 'ವಿಸರ್ಜನ', 'ಮುಕ್ತಧಾರಾ', 'ಚಿತ್ರಾಂಗದಾ', 'ಚಂಡಾಲಿಕಾ' ಇತ್ಯಾದಿ ಒಟ್ಟು 21 ನಾಟಕಗಳು ಪ್ರಸಿದ್ಧ ವಾಗಿವೆ.

'ಚೊ ಖೇರ್ ಬಾಲಿ', 'ಗೋರಾ', 'ಯೋಗಾಯೋಗ' ಮುಂತಾದ 12 ಕಾದಂಬರಿಗಳಲ್ಲಿ ಆಯಾಕಾಲದ ಸುಂದರ ಸಮಾಜ ಜೀವನವನ್ನು ಕಾಣಬಹುದು. ಅವರ ಕಾದಂಬರಿಗಳಲ್ಲಿ ಬರುವ ಪಾತ್ರಗಳು ಜೀವಂತ. ವರ್ಣನೆ ಹೃದಯಸ್ಪರ್ಶಿ.

'ಗಲ್ಪಗುಚ್ಛ', ಅವರ ಸಣ್ಣ ಕಥೆಗಳ ಸಂಗ್ರಹ. ಅವರು ಕಂಡ ಗ್ರಾಮಜೀವನದ ಹಲವಾರು ಮುಖಗಳ ರಸಪೂರ್ಣ ಚಿತ್ರಣವನ್ನು ಈ ಸಂಕಲನ ಕಥೆಗಳಲ್ಲಿ ಕಾಣಬಹುದು.

'ಯೂರೋಪ್' 'ಪ್ರವಾಸೀರ್ ಪತ್ರ', 'ಜಪಾನ್ ಜಾತ್ರಿ', 'ರಶಿಯಾರ್‌ಚಿಠಿ' ಇವೇ ಮೊದಲಾದುವು ಇವರ ಪ್ರವಾಸ ಕಥನಗಳು.

ಪ್ರಬಂಧ ಲೇಖನವಲ್ಲೂ ರವೀಂದ್ರರು ಸಿದ್ಧಹಸ್ತರು. 'ವಿಚಿತ್ರ ಪ್ರಬಂಧ', 'ಸಾಹಿತ್ಯ', 'ಚರಿತ್ರಪೂಜಾ', 'ಸಮಾಜ', 'ಸ್ವದೇಶ', 'ಶಾಂತಿನಿಕೇತನ', 'ವಿಶ್ವಪರಿಚಯ', 'ಸಭ್ಯತಾರ್ ಸಂಕಟ್' ಇವರ ಪ್ರಬಂಧ ಸಂಕಲನಗಳು.

'ಜೀವನಸ್ಮೃತಿ', 'ಛೇಲೀ ಬೇಲಾ' ನೆನಪುಗಳ ಆಗರ. 'ಛಿನ್ನಪತ್ರ', 'ಭಾನುಸಿಂಹೇರ್ ಪತ್ರಾವಳಿ', ಪತ್ರ ಸಂಗ್ರಹಗಳು. 'ಭಾನುಸಿಂಹ' ಎಂಬುದು ಕಾವ್ಯರಚನೆ ಮಾಡಲಾರಂಭಿಸಿದಾಗ ರವೀಂದ್ರರು ಇಟ್ಟು ಕೊಂಡಿದ್ದ ಕಾವ್ಯನಾಮ.

ಅಮೆರಿಕದಲ್ಲಿ ರವೀಂದ್ರರು ಮಾಡಿದ ಭಾಷಣಗಳು 'ಪರ್ಸನಾಲಿಟಿ' ಎಂಬ ಪುಸ್ತಕ ರೂಪದಲ್ಲಿ 1917ರಲ್ಲಿ ಪ್ರಕಟವಾದುವು.

ರವೀಂದ್ರರು ಚಿತ್ರಕಾರರೂ ಆಗಿದ್ದರು. ಚಿತ್ರಲಿಪಿಯ ಎರಡು ಸಂಪುಟ ಗಳಲ್ಲಿ ಇವರ ಚಿತ್ರಗಳನ್ನು ಸಂಗ್ರಹಿಸಿಡಲಾಗಿದೆ.

ನಮ್ಮ ರಾಷ್ಟ್ರಗೀತೆ 'ಜನಗಣಮನ ಅಧಿನಾಯಕ ಜಯ ಹೇ'ಯನ್ನು ಬರೆದವರೂ ರವೀಂದ್ರರೇ.

1913 ರಿಂದ 1920ರ ಅವಧಿಯಲ್ಲಿ ರವೀಂದ್ರರ ಅನೇಕ ಪುಸ್ತಕಗಳು ಇಂಗ್ಲಿಷ್ ಹಾಗೂ ಯುರೋಪಿನ ಇತರ ಭಾಷೆಗಳಿಗೆ ಅನುವಾದ ಗೊಂಡುವು. ರವೀಂದ್ರರ ಖ್ಯಾತಿ ಜಗತ್ತಿನ ಎಲ್ಲ ಭಾಗಗಳಿಗೂ ಹರಡಿತು. ರವೀಂದ್ರರು 80 ವರ್ಷಗಳ ತುಂಬು ಬಾಳು ನಡೆಸಿ 1941ನೆಯ ಆಗಸ್ಟ್ 7ನೆಯ ತಾರೀಖಿನಂದು ಕೀರ್ತಿಶೇಷರಾದರು.

**ನೋಡಿ : ಅಬನೀಂದ್ರನಾಥ ಠಾಕೂರ್ ; ಯೇಟ್**

## ರಷ್ಯದ ಕಲೆ, ಸಾಹಿತ್ಯ

ರಷ್ಯದ ಕಲೆ ರೂಪುತಳೆದದ್ದು ಸುಮಾರು 7ನೆಯ ಶತಮಾನದಲ್ಲಿ, ನೀಪರ್ ಮತ್ತು ವೋಲ್ಗಾನದಿ ದಂಡೆಗಳಲ್ಲಿ ವಾಸಿಸುತ್ತಿದ್ದ ಸ್ಲಾವ್ ಭಾಷೆ ಯನ್ನಾಡುತ್ತಿದ್ದ ಜನರ ನಡುವೆ. 10ನೆಯ ಶತಮಾನದಲ್ಲಿ ರಷ್ಯ ಚಿಕ್ಕ ರಾಷ್ಟ್ರವಾಗಿದ್ದು, ಅದರ ವ್ಯಾಪ್ತಿ ಕೀವ್ ಹಾಗೂ ಅದರ ಉಪನಗರ ನೊವೋಗ್ರಾದ್ ಪ್ರದೇಶಕ್ಕೆ ಮಾತ್ರ ಸೀಮಿತವಾಗಿತ್ತು. ಕೀವ್‌ನ ಜನರು ಬೈಜಾಂಟಿಯಮ್ ಪ್ರದೇಶದ ಜನರ ಸಂಪರ್ಕದಿಂದ ಅದೇ ಬಗೆಯ ಧಾರ್ಮಿಕ ಭಾವನೆಯನ್ನು ಬೆಳೆಸಿಕೊಂಡರು; ಅವರು ರೂಢಿಸಿಕೊಂಡಿದ್ದ ಕಲೆಗಳಿಂದ ಪ್ರಭಾವಿತರಾದರು. ಚಿತ್ರಕಲೆಯಲ್ಲಿ ಅವರು ಪೂರ್ಣವಾಗಿ ಬೈಜಾಂಟಿಯಮ್ ಚಿತ್ರಕಾರರ ಶೈಲಿಯನ್ನೇ ಅನುಸರಿಸಿದರು. ಕಸೂತಿ, ಲೋಹದ ಕೆಲಸ. ಕಲ್ಲಿನ ಕೆಲಸ [illegible] ಜರ್ಮನರ ಪ್ರಭಾವ [illegible] ರಷ್ಯನರು ಬೈಜಾಂಟಿಯನ್ನರ ಶೈಲಿಯೊಡನೆ ತಮ್ಮ ಶೈಲಿಯನ್ನೂ ಬೆರೆಸಿ ಒಂದು ಹೊಸ ಶೈಲಿಯನ್ನೇ ನಿರ್ಮಿಸಿದರು. ಶಿಲ್ಪಕಲೆಯಲ್ಲಿ [illegible] ಹೆಚ್ಚಿನ ಆಸಕ್ತಿ ತೋರಲಿಲ್ಲ.

8ನೆಯ ಶತಮಾನದಲ್ಲಿ ರಷ್ಯದ [illegible] ವಿಗ್ರಹಗಳ ನಿರ್ಮಾಣವನ್ನು ನಿಷೇಧಿಸಿತು. ಆದರೂ ಕಂಚು, ಮರ, ಶಿಲೆ ಯಲ್ಲಿ ಸುಂದರವಾದ ಕೆತ್ತನೆ ಕಲಸದ ಕಲಾಕೃತಿಗಳು ಆ ಕಾಲದಲ್ಲಿ ಸೃಷ್ಟಿಯಾದುವು.

15ನೆಯ ಶತಮಾನದಲ್ಲಿ ನೊವೋಗ್ರಾದ್ ನಗರ ರಷ್ಯದ ಪ್ರಮುಖ ಕಲಾಕೇಂದ್ರವಾಗಿತ್ತು. ಕ್ರೈಸ್ತ ಮಂದಿರದ ಪವಿತ್ರ ಪ್ರವೇಶವನ್ನು ಉಳಿದ ಭಾಗದಿಂದ ಪ್ರತ್ಯೇಕಿಸಲು ಪ್ರತಿಮೆಗಳಿಂದ ಅಲಂಕರಿಸಿದ ಬಾಗಿಲುಗಳುಳ್ಳ ಅಡ್ಡತಡೆಗಳ ರಚನೆ ಆ ಕಾಲದ ರಷ್ಯದ ವಾಸ್ತು ಶಿಲ್ಪದ ಕಲ್ಪನೆ. ರಷ್ಯದ ಕೀವ್ ನಗರದಲ್ಲಿ ಬೈಜಾಂಟೈನ್ ಶೈಲಿಯಲ್ಲಿ ನಿರ್ಮಿತವಾದ ಕಟ್ಟಡಗಳಲ್ಲಿ 'ಪವಿತ್ರ ಜ್ಞಾನ' ಎಂಬ ಪ್ರಾರ್ಥನಾ ಮಂದಿರ ಇತಿಹಾಸ ಪ್ರಸಿದ್ಧವಾದವು. ನೊವೋಗ್ರಾದ್ ಎಂಬಲ್ಲಿರುವ ಒಂದು ಚರ್ಚ್ ಓಕ್‌ಮರದಿಂದ ನಿರ್ಮಾಣ ವಾಗಿತ್ತು. ಮರದ ಹದಿಮೂರು ಗುಮ್ಮಟಗಳಿಂದ ಅಲಂಕೃತವಾಗಿತ್ತು. ಅದು ಬೆಂಕಿಯಿಂದ ನಾಶವಾಯಿತು. ಮತ್ತೆ ಪುನಃ ಐದು ಗುಮ್ಮಟ ಗಳಿಂದ ಕೂಡಿದ ಶಿಲೆಯ ಮಂದಿರ ಅದೇ ಸ್ಥಳದಲ್ಲಿ ನಿರ್ಮಿತವಾಯಿತು.

ರಷ್ಯದ ಹಳ್ಳಿಗಳಲ್ಲೂ ಮನೆಯ ಬಾಗಿಲು ಕಿಟಿಕಿಗಳ ಚೌಕಟ್ಟು, ಹೂತೋಟದ ಬಾಗಿಲುಗಳು. ವ್ಯವಸಾಯಕ್ಕೆ ಉಪಯೋಗಿಸುವ ಗಾಡಿ ಗಳು ಮುಂತಾದುವುಗಳಲ್ಲಿ ಕೂಡ ಸುಂದರವಾದ ಚಿಕ್ಕ ಚಿಕ್ಕ ಚಿತ್ರಗಳಿರು ತ್ತಿದ್ದುವು.

16ನೆಯ ಶತಮಾನದಲ್ಲಿ ರಷ್ಯ ಸಾಮ್ರಾಜ್ಯ ಸುಸಂಘಟಿತವಾಯಿತು. ಅತಿ ರಮ್ಯ ಅರಮನೆಗಳು, ಬಲವಾದ ಕೋಟೆಗಳು ಈ ಕಾಲದಲ್ಲಿ ನಿರ್ಮಾಣವಾದುವು. 17ನೆಯ ಶತಮಾನದ ಕೊನೆಯ ಮತ್ತು 18ನೆಯ ಶತಮಾನದ ಆದಿಭಾಗಗಳಲ್ಲಿ ಆಳಿದ ಸುಪ್ರಸಿದ್ಧ ಚಕ್ರವರ್ತಿ ಪೀಟರನ ಕಾಲದಲ್ಲಿ ರಷ್ಯ, ಪಾಶ್ಚಾತ್ಯ ಆಧುನಿಕತೆಯ ಪ್ರಭಾವಕ್ಕೊಳಗಾಯಿತು. ಪಾಶ್ಚಾತ್ಯರ ಉಡುಗೆ ತೊಡುಗೆ, ಆಚಾರವಿಚಾರಗಳು, ವಾಸ್ತುಶಿಲ್ಪ, ಶಿಲ್ಪ, ಕಲೆಗಳ ಅನುಕರಣೆ ರಷ್ಯದಲ್ಲಿ ಬೆಳೆಯಿತು. ಹಾಲೆಂಡ್, ಜರ್ಮನಿ, ಇಂಗ್ಲೆಂಡು, ಫ್ರಾನ್ಸ್‌ಗಳಿಂದ ಕಲಾವಿದರಿಗೆ ಸ್ವಾಗತ ದೊರೆಯಿತು. ಹಾಲೆಂಡ್, ಗ್ರೀಸ್ ಮತ್ತು ರೋಮಿನ ಕಟ್ಟಡಗಳ ಶೈಲಿಯನ್ನು ಅನುಸರಿಸಿ ನೀಳವೂ ಮಟ್ಟಸವೂ ಆದ ಭವ್ಯ ಅರಮನೆಗಳು, ಗಿಲಾವುಮಾಡಿ ಬಣ್ಣ ಹಚ್ಚಿದ ಭವನಗಳು ರಷ್ಯದಲ್ಲಿ ನಿರ್ಮಾಣವಾದುವು. ಚಿತ್ರ ಮತ್ತು ಶಿಲ್ಪದಲ್ಲಿ ಪಾಶ್ಚಾತ್ಯ ರೀತಿಯ ವ್ಯಕ್ತಿಚಿತ್ರಣ ಆಚರಣೆಗೆ ಬಂತು. ಪೀಟರ್ ಮಹಾಶಯನ ಕಾಲದಲ್ಲಿ ಡೊಮಿನಿಕೊ ಟ್ರೆಸ್ಸಿನಿ ಪ್ರಮುಖ ಶಿಲ್ಪಿ.

18ನೆಯ ಶತಮಾನದ ರಷ್ಯದ ಚಿತ್ರಕಲೆಯಲ್ಲಿ ಧಾರ್ಮಿಕತೆ ಪ್ರಧಾನ ಲಕ್ಷಣವಾಗಿತ್ತು. ಕಿರುಚಿತ್ರಕಲೆ, ಭಿತ್ತಿಚಿತ್ರಗಳು, ಬಣ್ಣ ಬಣ್ಣದ ಗಾಜು ಗಳಿಂದ ರಚಿಸಿದ ಚಿತ್ರ ಇವುಗಳಲ್ಲೂ ಭಕ್ತಿಯ ಪ್ರಭಾವ ಎದ್ದು ಕಾಣುತ್ತದೆ. ರುಬ್ಲೆವ್ ರಷ್ಯದ ಖ್ಯಾತ ಧಾರ್ಮಿಕ ಚಿತ್ರಕಾರ. ಧಾರ್ಮಿಕ ಮಹಾನು ಭಾವರ ಪೂರ್ಣ ಪ್ರಮಾಣದ ಚಿತ್ರಗಳನ್ನು ರಚಿಸುವುದರಲ್ಲಿ ಆತ ನಿಪುಣ ನಾಗಿದ್ದ. 18ನೆಯ ಶತಮಾನದ ಮಧ್ಯಭಾಗದಲ್ಲಿ ರಷ್ಯದ ಕಲೆಯ ಮೇಲೆ ಬಾರೋಕ್ ಕಲೆಯ ಪ್ರಭಾವ ಬಿದ್ದಿತು.



ರಷ್ಯನ್ ಸಮ್ರಾಟ ಪೀಟರ್ — ಮೊಸೇಯಿಕ್ ರಚನೆ

19ನೆಯ ಶತಮಾನದಲ್ಲಿ ಬ್ರೈಲೋವ್ ರಚಿಸಿದ 'ಪಾಂಪೆಯ ಕೊನೆಯ ದಿನಗಳು' ಸಮಕಾಲೀನ ಯುರೋಪಿನ ಮೇರುಕೃತಿ ಎಂದು ಪರಿಗಣಿತವಾಗಿದೆ.

1917ರ ಅಕ್ಟೋಬರ್ ಕ್ರಾಂತಿಯ ಅನಂತರ ಸೋವಿಯೆತ್ ಸರಕಾರ ರಚಿತವಾಯಿತು. ಇದರಿಂದ ಕಲಾವಿದರ ಮೇಲೆ ರಾಜಕೀಯ ಸಿದ್ಧಾಂತದ ಪ್ರಭಾವ ಬಿದ್ದಿತು. ಇತ್ತೀಚೆಗೆ ರಷ್ಯದ ಚಿತ್ರ ಮತ್ತು ಶಿಲ್ಪಕಲೆಗಳಲ್ಲಿ ಹೊಸ ಶೈಲಿಗಳು ಆಚರಣೆಯಲ್ಲಿವೆ.

ರಷ್ಯದ ಸಂಗೀತ ತನ್ನದೇ ಆದ ಕೆಲವೊಂದು ವಿಶಿಷ್ಟ ಲಕ್ಷಣಗಳನ್ನು ಒಳಗೊಂಡಿದೆ. ರಷ್ಯದಲ್ಲಿ ಮೊದಲು ಚರ್ಚ್ ಸಂಗೀತ, ಜಾನಪದ ಸಂಗೀತ, ಗ್ರಾಮೀಣ ಜಾನಪದ ನೃತ್ಯಗಳು ಪ್ರಚಾರದಲ್ಲಿದ್ದುವು. 16ನೆಯ ಶತಮಾನದಲ್ಲಿ ಇಟಲಿಯ ಅಪೆರಾ ರಷ್ಯದ ಸಂಗೀತವನ್ನೂ ಪ್ರವೇಶಿಸಿತು. ರಷ್ಯದ ಶ್ರೀಮಂತ ಮನೆತನದವರು ಇದಕ್ಕೆ ಪ್ರೋತ್ಸಾಹ ನೀಡಿದರು. ಜಾನಪದ ಸಂಗೀತ ನೃತ್ಯಗಳು ಸಮೃದ್ಧವಾಗಿ ಬೆಳೆದು ಜನಮನವನ್ನು ರಂಜಿಸಿದುವು. ಹಳ್ಳಿಯ ರೈತರ ದುಡಿಮೆಯ ಬಾಳ್ವೆಯ ಕತೆ ಅವುಗಳ ವಸ್ತು.

ಮಿಖಾಯಿಲ್ ಗ್ಲಿಂಕಾ ಎರಡು ಅಪೆರಾಗಳನ್ನೂ ಮೂರು ವಾದ್ಯಮೇಳ ಗೇಯಗಳನ್ನೂ ರಚಿಸಿದ. ಇವು ಜಾನಪದ ಸಂಗೀತದ ಮೇಲೆ ಆಧಾರಪಟ್ಟುವು. ಇವು ಜನಪ್ರಿಯವಾದುವು. ಮುಸ್ಸೋರ್‍ಸ್ಕಿ ರಚಿಸಿದ ಅಪೆರಾಗಳಲ್ಲಿ ಜೀವನದ ವಾಸ್ತವಿಕ ದೃಶ್ಯಗಳು ಸೇರಿವೆ. ಜರ್ಮನ್, ಫ್ರೆಂಚ್, ಇಟಾಲಿಯನ್ ಸಂಗೀತಗಳಲ್ಲಿ ನಿಷ್ಣಾತನಾಗಿದ್ದ ಚೈಕಾವ್‍ಸ್ಕಿ ಪ್ರತಿಭಾಶಾಲಿ. ಇವನು ಅಪೆರಾ, ಬ್ಯಾಲೆ, ಸಿಂಫನಿ ಮುಂತಾದ ಪ್ರಕಾರಗಳಲ್ಲಿ ಸುಮಾರು 100 ಗೇಯಕೃತಿಗಳನ್ನು ರಚಿಸಿದ್ದಾನೆ. ಅವನ 'ಹಂಸ ಸರೋವರ' ಮತ್ತು 'ನಿದ್ರಾ ಸುಂದರಿ' ಇವೆರಡು ಬ್ಯಾಲೆಗಳು ಜಗತ್ಪ್ರಸಿದ್ಧವಾಗಿವೆ. ಅಲೆಗ್ಸಾಂಡರ್ ಸ್ಕ್ರಿಯಬಿನ್ ಮತ್ತು ಐಗೊರ್ ಸ್ಟ್ರಾವಿಸ್ಕಿ ಅವರ ಗೇಯ ಕೃತಿಗಳು ಧಾರ್ಮಿಕ ವಿಚಾರಧಾರೆಯಿಂದ ಪ್ರಭಾವಿತವಾಗಿವೆ.

ಸೋವಿಯೆತ್ ಸರಕಾರ ಅಧಿಕಾರಕ್ಕೆ ಬಂದ ಮೇಲೆ ರಷ್ಯದಲ್ಲಿ ಸಂಗೀತ ಚಟುವಟಿಕೆ ಬೆಳೆಯಿತು. ಪಾಸ್ಟಕೋವ್ ರಚಿಸಿದ ಕೆಲವು ಅಪೆರಾಗಳು ಜನಪ್ರಿಯವಾಗಲಿಲ್ಲ. ಆದರೂ ರಷ್ಯದ ಕ್ರಾಂತಿಯನ್ನು ಕುರಿತ ಮತ್ತು ಎರಡನೆಯ ಮಹಾಯುದ್ಧದಲ್ಲಿ ರಷ್ಯನರು ಜರ್ಮನರನ್ನು ಇದಿರಿಸಿ ನಡೆಸಿದ ಹೋರಾಟವನ್ನು ಕುರಿತ ಇವನ ಅಪೆರಾಗಳು ಜನರ ಮೆಚ್ಚುಗೆ ಗಳಿಸಿದುವು. ಈತ ಇತರ ಪ್ರಕಾರಗಳ ಗೇಯ ಕೃತಿಗಳನ್ನೂ ರಚಿಸಿದ್ದಾನೆ.

ರಷ್ಯದ ಬ್ಯಾಲೆಗಳು ಜಗತ್ಪ್ರಸಿದ್ಧವಾಗಿವೆ.

ರಷ್ಯದಲ್ಲಿ ಮೊದಲು ಜನ ಆಡುತ್ತಿದ್ದ ಭಾಷೆ ಸ್ಲಾವೊನಿಕ್. ಕೀವ್ ನಗರ ರಷ್ಯದ ಸಾಂಸ್ಕೃತಿಕ ಕೇಂದ್ರವಾಗಿದ್ದ ಕಾಲದಲ್ಲಿ, ಅಂದರೆ 10ರಿಂದ 13ನೆಯ ಶತಮಾನದ ಅವಧಿಯಲ್ಲಿ, ರಚಿತವಾದ ಸಾಹಿತ್ಯವೆಲ್ಲ ಹಳೆಯ ಸ್ಲಾವೊನಿಕ್ ಭಾಷೆಯಲ್ಲೇ ಇತ್ತು; ಅದು ಆ ಪ್ರದೇಶದಲ್ಲಿ ಪ್ರಚಾರದಲ್ಲಿದ್ದ ಪಾಶ್ಚಾತ್ಯ ಕ್ರೈಸ್ತಧರ್ಮದಿಂದ ಪ್ರಭಾವಿತವಾಗಿತ್ತು. ಹೀಗೆ ಗ್ರಂಥಸ್ಥವಾದ ಸಾಹಿತ್ಯವಲ್ಲದೆ ಜನರ ಬಾಯಿಯಲ್ಲಿ ಉಳಿದಿದ್ದ ಸಾಹಿತ್ಯದ ಪ್ರಮಾಣ ದೊಡ್ಡದು. ಸಾಮಾನ್ಯ ಜನರ ಬಾಯಲ್ಲಿ ಅನೇಕಾನೇಕ ಕತೆಗಳೂ ಹಾಡುಗಳೂ ನೆಲೆಸಿದ್ದುವು, ಪ್ರಚಾರದಲ್ಲಿದ್ದುವು.

ಈ ಕಾಲದ ಎರಡು ಕೃತಿಗಳು ಗಮನಾರ್ಹವಾದುವು. ನೆಸ್ಟರ್ ಬರೆದ 'ಚಾರಿತ್ರಿಕ ವೃತ್ತಾಂತಗಳು' ಇವುಗಳಲ್ಲಿ ಒಂದು. ಐತಿಹಾಸಿಕ ಮತ್ತು ಸಮಕಾಲೀನ ಘಟನೆಗಳನ್ನು ಜೀವಂತ ರೀತಿಯಲ್ಲಿ ನಿರೂಪಿಸುವ ಈ ಕೃತಿ ಆ ಕಾಲದ ಉತ್ತಮ ಗದ್ಯಶೈಲಿಗೆ ಉದಾಹರಣೆ. 'ಇಗ್‍ನೋರ್‍ನ ದಂಡಯಾತ್ರೆಯ ಕತೆ' ಇನ್ನೊಂದು ಉತ್ತಮ ಕೃತಿ. ಇದು 12ನೆಯ ಶತಮಾನದ ಕೊನೆಯ ಭಾಗದಲ್ಲಿ ರಚಿತವಾದದ್ದು. ರಷ್ಯವನ್ನು ಅತಿಕ್ರಮಿಸಲು ಬಂದ ಏಷ್ಯದ ದಾಳಿಕಾರರನ್ನು ರಷ್ಯದವರು ಧೈರ್ಯದಿಂದ ಇದಿರಿಸಿ ಹೋರಾಡಿದ್ದನ್ನು ನಿರೂಪಿಸುವ ವೀರಗಾಥೆ ಇದು.

ಚಕ್ರವರ್ತಿ ಪೀಟರನ ಕಾಲದಲ್ಲಿ, ರಷ್ಯದ ವಿವಿಧ ಕಲೆಗಳಲ್ಲಿ ಆಧುನಿಕತೆ ಮೂಡಿದಂತೆ, ಸಾಹಿತ್ಯದ ಮೇಲೆಯೂ ಯುರೋಪಿನ ಪ್ರಭಾವ ಬಿದ್ದಿತು. ಆ ಕಾಲದ ತನಕ ರಷ್ಯನ್ ಆಡುಮಾತಿನಲ್ಲಿ ಯಾವ ಪುಸ್ತಕವೂ ರಚಿತವಾಗಿರಲಿಲ್ಲ. ಆ ಹಿಂದಿನ ಗ್ರಂಥಗಳೆಲ್ಲ ಹಳೆಯ ಸ್ಲಾವೊನಿಕ್ ಭಾಷೆಯಲ್ಲೇ ಇರುತ್ತಿದ್ದುವು. ರಷ್ಯನರ ಆಡುಭಾಷೆ ಮತ್ತು ಹಳೆಯ ಸ್ಲಾವೊನಿಕ್ ಭಾಷೆಗಳನ್ನು ಸೂಕ್ತವಾದ ರೀತಿಯಲ್ಲಿ ಬೆರೆಸಿ (ಕನ್ನಡಕ್ಕೆ ಸಂಸ್ಕೃತವನ್ನು ಬೆರೆಸಿದಂತೆ) ಸಾಹಿತ್ಯ ರಚನೆಗೆ ಒದಗುವಂಥ ಒಂದು ಮಾಧ್ಯಮವನ್ನು ಸೃಷ್ಟಿಸಿದವನು ಮಿಖಾಯಿಲ್ ಲೊಮೊನೊಸೊವ್. ಹೀಗೆ 18ನೆಯ ಶತಮಾನದ ಹೊತ್ತಿಗೆ, ರಷ್ಯದ ಭಾಷೆ ಒಂದು ವಿಶಿಷ್ಟರೂಪವನ್ನು ತಾಳಿತು. ಆ ಭಾಷೆಯಲ್ಲಿ ಸಾಹಿತ್ಯ ರಚನೆಯನ್ನು ಪ್ರಚೋದಿಸಿತು. ಭಾವಗೀತೆಗಳು, ವಿಡಂಬನೆಗಳು ಹೊರಬಂದುವು. ಈ ಕಾಲದಲ್ಲಿದ್ದ ಐವಾನ್ ಕ್ರಿಲೋವ್

ನೀತಿಕಥೆಗಳ ಜನಕನೆಂದು ಪ್ರಸಿದ್ಧನಾದನು. ಅವನ ಕತೆಗಳಲ್ಲಿ 'ಪಂಚ ತಂತ್ರ'ದ ಪ್ರಭಾವವನ್ನು ಗುರುತಿಸಬಹುದು.

ನೆಪೋಲಿಯನನ ಕಾಲದ ಯುದ್ಧಗಳ ಅನಂತರ ರಷ್ಯದ ಸಾಹಿತ್ಯದಲ್ಲಿ ಒಂದು ಸುವರ್ಣಯುಗವೇ ಆರಂಭವಾಯಿತು. ಕತೆ, ಕಾವ್ಯಗಳನ್ನು ಬರೆದ ಅಲೆಗ್ಸಾಂಡರ್ ಪುಷ್ಕಿನ್ ಈ ಕಾಲದ ಮಹಾಸಾಹಿತಿ. ಇದನ್ನು 'ಪುಷ್ಕಿನ್ ಯುಗ' ಎಂದರೂ ತಪ್ಪಾಗಲಾರದು. 1840ರ ವರೆಗೆ ನಡೆದ ಈ ಯುಗದ ಅವಧಿಯಲ್ಲಿ ಉತ್ತಮ ಭಾವಗೀತೆಗಳು ರಚಿಸಲ್ಪಟ್ಟುವು. ಇದೇ ಕಾಲದಲ್ಲಿದ್ದ ನಿಕೊಲಾಯ್ ಗೊಗೋಲ್ ರಷ್ಯದ ಪ್ರಮುಖ ಕಾದಂಬರಿಕಾರ. ಅವನ 'ಮೃತ ಆತ್ಮಗಳು' ಜಗತ್ತಿನ ಸಾಹಿತ್ಯದಲ್ಲಿ ಅಸಮಾನ ಹಾಸ್ಯ ಕೃತಿಯೆಂದು ಹೊಗಳಲ್ಪಟ್ಟಿದೆ. ಲಿಯೋ ಟಾಲ್‌ಸ್ಟಾಯ್, ಡಾಸ್ಟಯೆವ್‌ಸ್ಕಿ ಮತ್ತು ಟುರ್ಗೆನೈಫ್ ಜಗತ್ತಿನ ಸಾಹಿತ್ಯಕ್ಕೆ ಅತ್ಯುತ್ಕೃಷ್ಟ ಕಾದಂಬರಿಗಳನ್ನು ನೀಡಿ, ಶಾಶ್ವತ ಕೀರ್ತಿಗಳಿಸಿದರು. ಡಾಸ್ಟಯೆವ್‌ಸ್ಕಿಯ ಮರಣಾನಂತರ 1917ರ ಅಕ್ಟೋಬರ್ ಕ್ರಾಂತಿಯವರೆಗಿನ ಅವಧಿಯಲ್ಲಿ ರಷ್ಯದ ಸಾಹಿತ್ಯರಂಗದಲ್ಲಿ ಬೆಳಗಿದ ವ್ಯಕ್ತಿ ಆಂಟನ್ ಚೆಕಾಫ್. ಕುತೂಹಲ ಕೆರಳಿಸುವ ತಂತ್ರದಿಂದ ಕೂಡಿದ ಅವನ ಸಣ್ಣ ಕತೆಗಳು ಬಹುಬೇಗನೆ ಜನರ ಮೆಚ್ಚುಗೆ ಗಳಿಸಿದುವು. ಅವನ ನಾಟಕಗಳು ಯಶಸ್ವಿಯಾದುವು. ಮಾಕ್ಸಿಂ ಗಾರ್ಕಿ ರಷ್ಯದ ಸಾಹಿತ್ಯಪ್ರಪಂಚದಲ್ಲಿ ಅಗ್ರಗಣ್ಯ. ಅವನ ಕಾದಂಬರಿಗಳು ಜಗತ್‌ಪ್ರಸಿದ್ಧವಾಗಿವೆ. ತನ್ನ ಕಾಲದ ಯುವಕ ಸಾಹಿತಿಗಳ ಪ್ರತಿಭೆ ಅರಳಲು ಅವನು ನೀಡಿದ ಪ್ರೋತ್ಸಾಹ, ಸಹಾಯ ಅಸಾಧಾರಣ.

ಮನುಷ್ಯ ಮತ್ತು ಸಮಾಜ ಇವೆರಡರ ಸಂಬಂಧ; ಮನುಷ್ಯನ ಮನಸ್ಸಿನೊಳಗಣ ತಾಕಲಾಟ : ಸೋಲು–ಗೆಲುವುಗಳ ದಾರುಣ ಚಿತ್ರವನ್ನು ಕಣ್ಣಿಗೆ ಕಟ್ಟುವಂಥ ಶೈಲಿಯಲ್ಲಿ ಬಣ್ಣಿಸಿರುವುದು ರಷ್ಯದ ಕಾದಂಬರಿಗಳ ವಿಶಿಷ್ಟತೆ. ಇಂಗ್ಲಿಷ್ ಕಾದಂಬರಿಕಾರರೂ ಸೇರಿದಂತೆ ಜಗತ್ತಿನ ವಿವಿಧ ಭಾಗಗಳ ಕಥಾಸಾಹಿತ್ಯ ಲೇಖಕರ ಮೇಲೆ ಡಾಸ್ಟಯೆವ್‌ಸ್ಕಿ ಮತ್ತು ಚೆಕಾಫ್‌ರ ಕೃತಿಗಳು ಪ್ರಭಾವ ಬೀರಿವೆ.

ರಷ್ಯದಲ್ಲಿ ಸೋವಿಯೆತ್ ಸರಕಾರ ಸ್ಥಾಪಿತವಾದ ಮೇಲೆ ರಷ್ಯದ ಲೇಖಕರು ಅದರ ಸಿದ್ಧಾಂತಗಳ ವರ್ಚಸ್ಸಿಗೆ ಒಳಗಾದರು. ಅವರ ಕೃತಿಗಳು ವಿಶಿಷ್ಟ ಲಕ್ಷಣಗಳಿಂದ ಕೂಡಿವೆಯಾಗಿ ಅವನ್ನು ಸೋವಿಯೆತ್ ಸಾಹಿತ್ಯ ಎಂದೇ ಪ್ರತ್ಯೇಕವಾಗಿ ವರ್ಗೀಕರಿಸುತ್ತಾರೆ.

ನೋಡಿ : ಅಪೆರಾ ; ಗಾರ್ಕಿ ; ಗೊಗೋಲ್ ; ಚೆಕಾಫ್ ; ಚೈಕಾವ್‌ಸ್ಕಿ ; ಟಾಲ್‌ಸ್ಟಾಯ್ ; ಟುರ್ಗೆನೈಫ್ ; ಡಾಸ್ಟಯೆವ್‌ಸ್ಕಿ ; ಪಾಶ್ಚಾತ್ಯ ಚಿತ್ರಕಲೆ ; ಪಾಶ್ಚಾತ್ಯ ಸಂಗೀತ ; ಪಾಸ್ಟರ್‌ನಾಕ್ ; ಪುಷ್ಕಿನ್ ; ಬ್ಯಾಲೆ ; ಬೆಲಿನ್‌ಸ್ಕಿ ; ಮಯಾಕೊವ್‌ಸ್ಕಿ ; ಷೆಲೊಖೋವ್ ; ಸ್ಟನಿಸ್ಲಾವ್‌ಸ್ಕಿ ; ಸೋವಿಯೆತ್ ಸಾಹಿತ್ಯ

## ರಸ್ಕಿನ್

ಆತ ಪ್ರತಿಭಾವಂತ. ದುಂದುಗಾರ. ಸ್ವಲ್ಪಮಟ್ಟಿಗೆ ಬುದ್ಧಿವಿಕಲ್ಪವೂ ಆಗಿತ್ತು. ಆತ್ಮಹತ್ಯೆ ಮಾಡಿಕೊಂಡ.

ಆತನ ಮಗ –ಸೊನ್. ತಮ್ಮ ಮಗನಲ್ಲಿ ವಯಸ್ಸಿಗೆ ಮೀರಿದ ಭಾವನೆಗಳನ್ನೂ ಚಂಚಲ ಬುದ್ಧಿಮತ್ತೆಯನ್ನೂ ಕಂಡು ಅವನನ್ನು ಪ್ರಪಂಚದ ನಿಷ್ಠುರ ಸತ್ಯದಿಂದ ದೂರವಾಗಿ ಬೆಳೆಸಿದರು. ಅಲ್ಲದೆ ಅವನನ್ನು ತನಗೆ ಬೇಕಾದಂತೆ ಮುಂದುವರಿಯಲು ಬಿಡದೆ ತಡೆಹಾಕುತ್ತಿದ್ದರು. ಹೀಗೆ ಆಟದ ಸಾಮಾನುಗಳಿಲ್ಲದೆ, ಸ್ನೇಹಿತರ ಒಡನಾಟವಿಲ್ಲದೆ ಆ ಹುಡುಗ ತನ್ನ ತಾಯಿ–ತಂದೆಗೆ ಅಂಟಿಕೊಂಡು ಕಾಲ ಕಳೆದ. ತಂದೆಗೆ ಸಾಹಿತ್ಯ ಚಿತ್ರಕಲೆಗಳಲ್ಲಿ ಆಸಕ್ತಿ; ತಾಯಿಗೆ ಧರ್ಮದಲ್ಲಿ ಆಸಕ್ತಿ. ತನ್ನ ಮಗ ಪ್ರತಿದಿನವೂ ತಪ್ಪದೆ ಬೈಬಲ್ ಓದಬೇಕೆಂದು ವಿಧಿಸಿದ್ದಳು. ಹೀಗೆ ಕಲೆ, ಸಾಹಿತ್ಯ, ಧರ್ಮ ಇವುಗಳ ಪ್ರಭಾವದಲ್ಲಿ ಬೆಳೆದ ಬಾಲಕ ದೊಡ್ಡವನಾದ ಮೇಲೆ ವಿಶ್ವವಿಖ್ಯಾತನಾದ. ಅವನೇ ಇಂಗ್ಲೆಂಡಿನ ಲೇಖಕ, ಕಲಾವಿದ, ವಿಮರ್ಶಕ ಹಾಗೂ ಸಮಾಜ ಸುಧಾರಕ ಜಾನ್ ರಸ್ಕಿನ್.

ಜಾನ್ ರಸ್ಕಿನ್ 1819ನೆಯ ಫೆಬ್ರುವರಿ 8ರಂದು ಲಂಡನ್ನಿನಲ್ಲಿ ಹುಟ್ಟಿದ. ಶ್ರೀಮಂತನಾಗಿದ್ದ ದ್ರಾಕ್ಷಾರಸ ಮದ್ಯದ ವ್ಯಾಪಾರಿಯ ಒಬ್ಬನೇ ಮಗ ರಸ್ಕಿನನ ವಿದ್ಯಾಭ್ಯಾಸ ಮನೆಯಲ್ಲೇ ನಡೆಯಿತು. 18ನೆಯ ವಯಸ್ಸಿನವನಾಗಿದ್ದಾಗ ಆಕ್ಸ್‌ಫರ್ಡಿನಲ್ಲಿ ಅಭ್ಯಾಸವನ್ನು ಮುಂದುವರಿಸಲು ಬಂದ. ಆಗ ಅವನ ತಾಯಿಯೂ ಅವನೊಂದಿಗೆ ಬಂದಳು.

ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಪ್ರೇಮಪ್ರಸಂಗದಲ್ಲಿ ಹತಾಶನಾದರೂ ಓದಿನಲ್ಲಿ ರಸ್ಕಿನ್ ಹಿಂದಾಗಲಿಲ್ಲ. ಕಾವ್ಯರಚನೆಯಲ್ಲೂ ತನ್ನ ಕೃಷಿಯನ್ನು ಮುಂದುವರಿಸಿದ. ವಿಶ್ವವಿದ್ಯಾಲಯದ ವಿದ್ಯಾರ್ಥಿ ಕವಿಗಳಲ್ಲಿ ಅತ್ಯುತ್ತಮ ರಚನೆ ಮಾಡಿದವರಿಗೆ ಕೊಡುವ ನ್ಯೂ ಡಿ ಗೇಟ್ ಬಹುಮಾನವನ್ನು ಪಡೆದ. 1842ರಲ್ಲಿ ಪದವೀಧರನಾದ.

ನಾಲ್ಕು ವರ್ಷಗಳ ಅನಂತರ ರಸ್ಕಿನ್ ವಿವಾಹಮಾಡಿಕೊಂಡ. ಆದರೆ ಅದು 1854ರಲ್ಲಿ ವಿಚ್ಛೇದನದಲ್ಲಿ ಕೊನೆಗಂಡಿತು.

ರಸ್ಕಿನ್ ಚಿಕ್ಕ ವಯಸ್ಸಿನವನಾಗಿದ್ದಾಗಲೇ ಅವನ ತಂದೆ ತನ್ನ ಪ್ರವಾಸ ಕಾಲದಲ್ಲಿ ಮಗನನ್ನೂ ಜೊತೆಯಲ್ಲೇ ಕರೆದುಕೊಂಡು ಹೋಗುತ್ತಿದ್ದ. ಇದರಿಂದಾಗಿ ರಸ್ಕಿನ್‌ಗೆ ಪ್ರಸಿದ್ಧ ಕಲಾವಿದರ ಕೃತಿಗಳನ್ನು ನೋಡುವ, ಪ್ರಕೃತಿ ಸೌಂದರ್ಯವನ್ನು ಕಂಡು ಆನಂದಪಡುವ ಅವಕಾಶ ಸಿಕ್ಕಿತು. ಅವನ ಕಲಾಪ್ರಜ್ಞೆ ಬೆಳೆಯಿತು. ಆಂಗ್ಲ ಚಿತ್ರಕಲಾವಿದ ಜೋಸೆಫ್ ಟರ್ನರ್ ರಸ್ಕಿನನ ಮೆಚ್ಚುಗೆಯ ಚಿತ್ರಕಾರನಾದ. ರಸ್ಕಿನ್ ದೊಡ್ಡವನಾದ ಮೇಲೆ ಚಿತ್ರಕಲೆಯ ಬಗೆಗೆ ಆಳವಾಗಿ ಅಧ್ಯಯನಮಾಡಿ ಪುಸ್ತಕಗಳನ್ನು ಬರೆದ. 1869ರಲ್ಲಿ ಆಕ್ಸ್‌ಫರ್ಡಿನಲ್ಲಿ ಲಲಿತಕಲೆಯ ಪ್ರಾಧ್ಯಾಪಕನಾಗಿ ನಿಯಮಿತನಾದ. ಆದರೆ ಮರುವರ್ಷವೇ ತೀವ್ರ ಕಾಯಿಲೆಗೊಳಗಾದ. ರಸ್ಕಿನ್ ತನ್ನ ಜೀವನವಿಡೀ ಆಗಾಗ್ಗೆ ಮಾನಸಿಕ ವ್ಯಾಧಿಯಿಂದ ಬಳಲುವಂತಾಯಿತು. ಆರೋಗ್ಯ ಚೆನ್ನಾಗಿದ್ದಾಗ ಅವನು ಬರೆಯುತ್ತಿದ್ದ. 1872ರಲ್ಲಿ ಕಾನಿಸ್ಟನ್ ಸರೋವರದ ಬಳಿ ಬ್ರಾಂಟ್‌ವುಡ್ ಮನೆಗೆ ವಾಸಕ್ಕೆ ಬಂದ. ಇಲ್ಲಿ ಅವಕಾಶವಾದಾಗಲೆಲ್ಲ ಸ್ವಲ್ಪಸ್ವಲ್ಪವಾಗಿ 'ಆತ್ಮಕಥೆ'ಯನ್ನು ಬರೆದ. ಆದರೆ ಅದು ಇನ್ನೂ ಆರಂಭದ ದೆಸೆಯಲ್ಲಿದ್ದಾಗಲೇ 1900ನೆಯ ಜನವರಿ 20ರಂದು ಮರಣಹೊಂದಿದ.

ಪದವೀಧರನಾಗುವ ವೇಳೆಗೆ ರಸ್ಕಿನನ ಹಲವಾರು ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಜೋಸೆಫ್ ಟರ್ನರ್ ಸಮಷ್ಟಿಪರಿಣಾಮ ಪದ್ಧತಿಯಲ್ಲಿ ರಚಿಸಿದ ಚಿತ್ರಗಳು ವಿಮರ್ಶಕರ ಕಟುಟೀಕೆಗಳಿಗೆ ಒಳಗಾದುವು. ಟರ್ನರನ ಅಭಿಮಾನಿಯಾಗಿದ್ದ ರಸ್ಕಿನ್ ಕೋಪೋದ್ರಿಕ್ತನಾಗಿ ಟರ್ನರನ ಪಕ್ಷವಹಿಸಿ ಲೇಖನಗಳನ್ನು ಬರೆದ. ಟರ್ನರನ ಕಲೆಯನ್ನು ಪ್ರಶಂಸಿಸಿ ಬರೆದ ಲೇಖನಗಳನ್ನೊಳಗೊಂಡ 'ಮಾಡರ್ನ್ ಪೇಂಟರ್ಸ್' ಪುಸ್ತಕದ ಮೊದಲ ಭಾಗವನ್ನು 1843ರಲ್ಲಿ ಪ್ರಕಟಿಸಿದ. ಇದು ರಸ್ಕಿನ್‌ಗೆ ಕೀರ್ತಿಯನ್ನು ತಂದಿತು. ಈ ಗ್ರಂಥದ ಉಳಿದ ನಾಲ್ಕು ಭಾಗಗಳು ಪ್ರಕಟವಾದ ಮೇಲೆ ಅವನ ಕೀರ್ತಿ ಇನ್ನೂ ಹೆಚ್ಚಿತು. ಸಮಕಾಲೀನ ಕಲಾವಿಮರ್ಶಕರಲ್ಲಿ ಅವನಿಗೆ ಅತ್ಯಂತ ಪ್ರಮುಖ ಸ್ಥಾನ ದೊರೆಯಿತು.



'ಅನ್ ಟು ದಿಸ್ ಲಾಸ್ಟ್' ಕರ್ತೃ

1846–54ರ ಅವಧಿಯಲ್ಲಿ ರಸ್ಕಿನ್ ವೆನಿಸ್‌ಗೆ ಹೋಗಿ ಮಧ್ಯಯುಗದ ವಾಸ್ತುಶಿಲ್ಪ ನಿರ್ಮಾಣಗಳನ್ನು ಅಭ್ಯಾಸ ಮಾಡಿದ. 1849ರಲ್ಲಿ ವೆನಿಸ್‌ನಲ್ಲಿಯೇ 'ಸೆವೆನ್ ಲ್ಯಾಂಪ್ಸ್ ಆಫ್ ಆರ್ಕಿಟೆಕ್ಚರ್' ಎಂಬ ಗ್ರಂಥವನ್ನೂ ಅನಂತರ 'ದ ಸ್ಟೋನ್ಸ್ ಆಫ್ ವೆನಿಸ್' ಎಂಬ ಪುಸ್ತಕವನ್ನೂ ಬರೆದ. ಇವುಗಳಲ್ಲಿ ಆತ ಒಂದು ದೇಶದ ಜನತೆಯ ನೈಜ ಗುಣವನ್ನು ಅಲ್ಲಿನ ವಾಸ್ತುಶಿಲ್ಪದ ಸ್ವರೂಪದಿಂದ ಕಂಡುಹಿಡಿಯಬಹುದೆಂಬ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಕ್ರಮೇಣವಾಗಿ ರಸ್ಕಿನನ ಆಸಕ್ತಿ ಬದಲಾಗುತ್ತ ಬಂತು. ಉತ್ತಮ ಸಾಹಿತ್ಯವನ್ನು ಕುರಿತು 'ಸೆಸೇಮ್ ಅಂಡ್ ಲಿಲೀಸ್' ಎಂಬ ಪುಸ್ತಕವನ್ನು ಬರೆದ.

ಕಲಾಕೃತಿಗಳ ನಿರ್ಮಾಣಕ್ಕೆ ನೆರವಾಗುವಂತೆ ಸಾಮಾಜಿಕ ಸ್ಥಿತಿಗತಿಗಳ ಬಗೆಗೆ ರಸ್ಕಿನ್ ಅಧ್ಯಯನ ಮಾಡತೊಡಗಿದ. ತಾನು ಮಾಡುವ ಕೆಲಸದಲ್ಲಿ ಕೆಲಸಗಾರ ಸಂತೋಷವಾಗಿರಬೇಕೆಂಬ ರಸ್ಕಿನನ ಅಭಿಪ್ರಾಯವನ್ನು ಹೊರಗೆಡವುತ್ತದೆ 'ಅನ್ ಟು ದಿಸ್ ಲಾಸ್ಟ್' ಪುಸ್ತಕ. ಈ ಪುಸ್ತಕ ರಸ್ಕಿನನ ಮೆಚ್ಚುಗೆಯ ಗ್ರಂಥ. ಗಾಂಧಿಜಿಯ ಸರ್ವೋದಯ ಕಲ್ಪನೆಗೆ ಪ್ರೇರಣೆ ನೀಡಿದ ಕೃತಿ ಇದು.

ರಸ್ಕಿನ್ ತನ್ನ ಆಸ್ತಿಯ ಬಹುಭಾಗವನ್ನು ಜನೋಪಕಾರಿ ಸಂಸ್ಥೆಗಳಿಗೆ ದಾನಮಾಡಿದ.

## ರಾಘವಾಂಕ

ರಾಘವಾಂಕ ಹಂಪೆಯಲ್ಲಿ ಹುಟ್ಟಿ ಬೆಳೆದವನು. ಇವನನ್ನು ರಾಘವ, ರಾಘವ ಪಂಡಿತ ಎಂದು ಕರೆಯುತ್ತಿದ್ದುದೂ ಉಂಟು. ಇವನಿಗೆ 'ಉಭಯ ಕವಿ ಕಮಲ ರವಿ', 'ಕವಿಶರಭ ಭೇರುಂಡ' ಎಂಬ ಬಿರುದುಗಳಿದ್ದುವು. ತಂದೆ ಮಹಾದೇವಭಟ್ಟ, ತಾಯಿ ರುದ್ರಾಣಿ. ಮಹಾಶಿವಭಕ್ತನೂ ಕವಿಯೂ ಆದ ಹಂಪೆಯ ಹರಿಹರ ರಾಘವಾಂಕನ ಸೋದರಮಾವ.

ರಾಘವಾಂಕ ಕನ್ನಡ ಸಾಹಿತ್ಯದಲ್ಲಿ ಹೊಸದಾರಿ ತುಳಿದ ಕವಿ. ಅವನು ಜೀವಿಸಿದ್ದ ಕಾಲದ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಆತ 12ನೆಯ ಶತಮಾನದ ಕೊನೆಯ ಭಾಗದಿಂದ 13ನೆಯ ಶತಮಾನದ ಆದಿಭಾಗದ ತನಕ ಇದ್ದವನೆಂದು ಭಾವಿಸಬಹುದು. ಕಾವ್ಯದ ವಸ್ತು, ಉದ್ದೇಶ, ಭಾಷಾಶೈಲಿ, ಛಂದಸ್ಸು ಎಲ್ಲದರಲ್ಲೂ ಹಿಂದಿನಿಂದ ಬೆಳೆದುಬಂದಿದ್ದ ಪರಂಪರೆಯನ್ನು ತ್ಯಜಿಸಿ ರಾಘವಾಂಕ ತನ್ನದೇ ಆದ ಹೊಸ ಹಾದಿಯಲ್ಲಿ ಸಾಗಿದ. ಕನ್ನಡದಲ್ಲಿ ಮೊಟ್ಟಮೊದಲಬಾರಿಗೆ ಷಟ್ಪದಿ ಛಂದಸ್ಸಿನಲ್ಲಿ ಕಾವ್ಯಗಳನ್ನು ಬರೆದು ಕನ್ನಡ ಷಟ್ಪದಿ ಕಾವ್ಯಗಳ ಪರಂಪರೆಯನ್ನು ಸ್ಥಾಪಿಸಿದ.

ಹರಿಹರನ ಪಾಂಡಿತ್ಯ ಹಾಗೂ ಶಿವಭಕ್ತಿಯ ವಾತಾವರಣದಲ್ಲಿ ಬೆಳೆದವನು ರಾಘವಾಂಕ. ಅವನು ತನ್ನ ಕಾವ್ಯ ರಚನೆಯಲ್ಲಿ ಹರಿಹರನಿಂದ ಸ್ಫೂರ್ತಿ ಪಡೆದಿದ್ದಾನೆ. ಆದರೆ ಕಾವ್ಯದ ಶೈಲಿ ಮತ್ತು ಛಂದಸ್ಸಿನ ಉಪಯೋಗದಲ್ಲಿ ತನ್ನದೇ ಪ್ರತಿಭೆಯನ್ನು ವ್ಯಕ್ತಪಡಿಸಿದ್ದಾನೆ.

ನಮಗೆ ದೊರೆತಿರುವುದು ರಾಘವಾಂಕನ ಐದು ಕೃತಿಗಳು ಮಾತ್ರ: 'ಸೋಮನಾಥ ಚರಿತೆ', 'ವೀರೇಶ ಚರಿತೆ', 'ಸಿದ್ಧರಾಮ ಪುರಾಣ', 'ಹರಿಶ್ಚಂದ್ರ ಕಾವ್ಯ', 'ಶರಭ ಚಾರಿತ್ರ'. 'ಹರಿಹರ ಮಹತ್ವ' ಎಂಬ ಅವನ ಒಂದು ಕೃತಿ ದೊರೆತಿಲ್ಲ.

'ಸೋಮನಾಥ ಚರಿತೆ' ವಾರ್ಧಕ ಷಟ್ಪದಿಯಲ್ಲಿ ರಚಿತವಾದ ಕಾವ್ಯ. ಶಿವಭಕ್ತನಾದ ವ್ಯಾಪಾರಿ ಆದಯ್ಯ ಸೌರಾಷ್ಟ್ರದಿಂದ ಕನ್ನಡ ನಾಡಿನ ಪುಲಿಗೆರೆಗೆ ಬಂದು 'ಸೌರಾಷ್ಟ್ರ ಸೋಮನಾಥ'ನನ್ನು ಅಲ್ಲಿ ಪ್ರತಿಷ್ಠಾಪಿಸಿದ್ದು, ಪವಾಡಗಳನ್ನು ಮೆರೆದು, ಅಲ್ಲಿನ ಜೈನರನ್ನು ಶಿವಭಕ್ತರನ್ನಾಗಿ ಮಾಡಿದ್ದು ಈ ಗ್ರಂಥದ ವಸ್ತು. 'ಸಿದ್ಧರಾಮ ಪುರಾಣ', ಒಂಬತ್ತು ಸಂಧಿಗಳುಳ್ಳ ದೊಡ್ಡ ಕಾವ್ಯ; 12ನೆಯ ಶತಮಾನದ ಸೊನ್ನಲಿಗೆಯ ಕರ್ಮಯೋಗಿ, ವಚನಕಾರ ಸಿದ್ಧರಾಮನ ಜೀವನ ಸಾಧನೆ, ಸಿದ್ಧಿಯ ನಿರೂಪಣೆ ಇದರಲ್ಲಿವೆ. 'ವೀರೇಶ ಚರಿತೆ' ಚಿಕ್ಕ ಕಾವ್ಯ. ಶಿವನ ಕೋಪದಿಂದ ಹುಟ್ಟಿದ ವೀರಭದ್ರನು ದಕ್ಷನ ಯಜ್ಞವನ್ನು ನಾಶಮಾಡಿದ ಕತೆ ಇದು. ಈ ಕಾವ್ಯದಲ್ಲಿ ಪ್ರಧಾನವಾಗಿರುವುದು ರೌದ್ರರಸ. ನಾಲ್ಕು ಮಾತ್ರೆಯ ಉದ್ದಂಡ ಷಟ್ಪದಿಯಲ್ಲಿ ಇದು ರಚಿತವಾಗಿದೆ. 'ಹರಿಶ್ಚಂದ್ರ ಕಾವ್ಯ'ದ ವಸ್ತು ಪುರಾಣ ಪ್ರಸಿದ್ಧವಾದ ಹರಿಶ್ಚಂದ್ರನ ಕಥೆ. ರಾಘವಾಂಕನ ಪ್ರತಿಭೆಯಿಂದಾಗಿ ಇದು ಉತ್ತಮ ಕಾವ್ಯವಾಗಿ ಅರಳಿದೆ. ವಿನೂತನ ಸನ್ನಿವೇಶ ಸೃಷ್ಟಿ, ಪಾತ್ರಪೋಷಣೆ, ಸುಂದರ ವರ್ಣನೆ, ನಾಟಕೀಯ ಸಂವಾದ, ಪಾತ್ರಗಳ ಅಂತರಂಗದ ಒಳತೋಟಿಯ ನಿರೂಪಣೆ; ಇವು ಈ ಕಾವ್ಯದಲ್ಲಿ ಉತ್ತಮ ರೀತಿಯಲ್ಲಿ ಬಂದಿವೆ. ಈ ಗುಣಗಳಿಂದಾಗಿ 'ಹರಿಶ್ಚಂದ್ರ ಕಾವ್ಯ' ಕನ್ನಡ ಸಾಹಿತ್ಯದ ಒಂದು ಶ್ರೇಷ್ಠ ಕೃತಿಯಾಗಿದೆ. ರಾಘವಾಂಕನ ಹರಿಶ್ಚಂದ್ರ, ಚಂದ್ರಮತಿ, ಸಿದ್ಧರಾಮ ಮುಂತಾದ ಪಾತ್ರಗಳು ಮಾನವೀಯತೆಯನ್ನೂ ಜೀವನದ ಉದಾತ್ತ ಆದರ್ಶಗಳನ್ನೂ ಎತ್ತಿಹಿಡಿಯುತ್ತವೆ.

ರಾಘವಾಂಕ ಜೀವಿಸಿದ್ದ ಕಾಲ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹತ್ವದ್ದು. ಅದು, ಪೂರ್ವದ ಹಳಗನ್ನಡದೊಂದಿಗೆ ಹೊಸಗನ್ನಡ ರೂಪಗಳು ಕಾವ್ಯರಂಗವನ್ನು ಪ್ರವೇಶಿಸಿದ ಕಾಲ.

ಈ ಪ್ರಯೋಗಕ್ಕೆ ರಾಘವಾಂಕನ ಕಾಣಿಕೆ ಗಮನೀಯವಾದದ್ದು. ಅವನು, ತನ್ನದೇ ಆದ ಸರಳ ಸುಂದರ ಪರಿಣಾಮಕಾರೀ ಶೈಲಿಯನ್ನು ರೂಪಿಸಿಕೊಂಡಿದ್ದಾನೆ. ಕನ್ನಡ ಗಾದೆಗಳನ್ನೂ ಅಚ್ಚ ಕನ್ನಡ ಮಾತುಗಳನ್ನೂ ಬಳಸಿಕೊಂಡು ಪರಿಣಾಮಕಾರಿಯಾದ ಚಿತ್ರಗಳನ್ನು ಮೂಡಿಸುವುದರಲ್ಲಿ ಅವನು ಅಗ್ರಗಣ್ಯ. 'ಹೆತ್ತ ತಾಯಿಯುಂ ಮಾರಿ ತೊತ್ತ ಕೊಂಬರೆ?', 'ಸಿಡಿಲು ಹೊಡೆವರೆ ಹಿಡಿದ ಕೊಡೆ ಕಾವುದೆ?', 'ಬಿತ್ತಿಲ್ಲ, ಬೆಳೆಯಿಲ್ಲ ನೀರಿಲ್ಲ ಹಮುಳವಿರಲಿಲ್ಲ', 'ನಿಂದು, ನಡೆದು, ಅಳುಕುತ್ತ ಬಳುಕುತ್ತ, ಕಡುಹಸಿದು, ಕಸುಗಾಯನಗಿದ ಗಿಳಿಗಳ ಬಳಗವಂತೆ' –ಇಂಥ ಮಾತುಗಾರಿಕೆ ಸನ್ನಿವೇಶದ ಸ್ಪಷ್ಟ ಚಿತ್ರವನ್ನು ನಮ್ಮ ಕಣ್ಣಿಗೆ ಕಟ್ಟುತ್ತದೆ, ನೇರವಾಗಿ ನಮ್ಮ ಮನಸ್ಸನ್ನು ಮುಟ್ಟುತ್ತದೆ.

ರಾಘವಾಂಕನ ಕನ್ನಡ ನುಡಿಯ ಪ್ರೇಮದಂತೆ ಅವನ ಕನ್ನಡ ನಾಡಿನ ಪ್ರೇಮ ಕೂಡ ಹಿರಿದಾದದ್ದು. ಅವನ ದೃಷ್ಟಿಯಲ್ಲಿ ಗಂಗಾನದಿಯಷ್ಟೇ ಪವಿತ್ರ ತುಂಗಭದ್ರೆ; 'ದುರಿತವನುರಿಹಿ ಸುಡುವ ಕಿಚ್ಚು' ಈ ಪುಣ್ಯ ನದಿ; ಪಂಪಾಕ್ಷೇತ್ರ ಕಾಶಿಗೆ ಸಮಾನ. 'ಅಧಿಕ ಪುಣ್ಯದ ಬೀಡು, ಮಂಗಳದ ನೆಲೆವೀಡು, ಮುಕ್ತಿಯ ಮೂಲಮನೆ'ಯಾದುವು ಕಾಶಿ ಹಂಪೆಗಳು ಎನ್ನುತ್ತಾನೆ ರಾಘವಾಂಕ.

ಕನ್ನಡ ಸಾಹಿತ್ಯದಲ್ಲಿ ಹೊಸ ಮಾರ್ಗವೊಂದನ್ನು ಕಲ್ಪಿಸಿ, ಷಟ್ಪದಿ ಸಂಪ್ರದಾಯವನ್ನು ಸ್ಥಾಪಿಸಿದ ಕೀರ್ತಿ ರಾಘವಾಂಕನದು.

## ರಾಜಮಾಣಿಕ್ಯಂ ಪಿಳ್ಳೈ

ಪಿಟೀಲನ್ನು ಪಕ್ಕವಾದ್ಯವಾಗಿ ಬಾರಿಸುವುದರಲ್ಲಿ ತಮ್ಮದೇ ಆದ ಶೈಲಿಯನ್ನು ರೂಢಿಸಿಕೊಂಡವರು ಕುಂಭಕೋಣಂ ರಾಜಮಾಣಿಕ್ಯಂ ಪಿಳ್ಳೈ ಅವರು. ಇವರು ಹುಟ್ಟಿದ್ದು ಕುಂಭಕೋಣಂನಲ್ಲಿ : 1898ನೆಯ ಆಗಸ್ಟ್ ತಿಂಗಳು 5ರಂದು.

ಇವರು ಮೊದಲು ಕುಂಭಕೋಣಂ ಕಂದಸ್ವಾಮಿ ಪಿಳ್ಳೈ ಅವರಲ್ಲಿಯೂ ಅನಂತರ ಪಂದನಲ್ಲೂರು ಚಿನ್ನಯ್ಯ ಪಿಳ್ಳೈ ಅವರಲ್ಲಿಯೂ ಸಂಗೀತಾಭ್ಯಾಸ ನಡೆಸಿದರು. ಬಳಿಕ ಸುಪ್ರಸಿದ್ಧ ಪಿಟೀಲು ವಿದ್ವಾಂಸರಾದ ತಿರುಕ್ಕೋಡಿಕಾವಲ್ ಕೃಷ್ಣಅಯ್ಯರ್ ಮತ್ತು ತಿರುಕ್ಕೋಡಿಕಾವಲ್ ರಾಮಸ್ವಾಮಿ ಅಯ್ಯರ್ ಇವರಿಬ್ಬರಲ್ಲೂ ಪಿಟೀಲು ವಾದನವನ್ನು ಅಭ್ಯಾಸಮಾಡಿ ಅದರಲ್ಲಿ ಪಾರಂಗತರಾದರು.

ಸುಪ್ರಸಿದ್ಧ ಸಂಗೀತಗಾರರೂ ಕೀರ್ತನಕಾರರೂ ಆದ ಗಾಯಕ ಶಿಖಾಮಣಿ ಮುತ್ತಯ್ಯ ಭಾಗವತರು ಆ ಕಾಲದಲ್ಲಿ ಸ್ಕಂದ ಷಷ್ಠಿಯನ್ನು ತುಂಬ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಅದರ ಅಂಗವಾಗಿ ಸಂಗೀತಾದಿ ಕಾರ್ಯಕ್ರಮಗಳು ನಡೆಯುತ್ತಿದ್ದುವು. ಇಂಥ ಒಂದು ಸಮಾರಂಭದಲ್ಲಿ ರಾಜಮಾಣಿಕ್ಯಂ ಪಿಳ್ಳೈ ಅವರು ಆಲಂಗುಡಿ ನಟೇಶಭಾಗವತರಿಗೆ ಪಕ್ಕವಾದ್ಯಗಾರರಾಗಿ ಪಿಟೀಲು ಬಾರಿಸಿದರು. ಚೆನ್ನಾಗಿ ಬಾರಿಸುತ್ತಾರೆಂಬ ಪ್ರಶಸ್ತಿಗೆ ಪಾತ್ರರಾಗಿ ಬೆಳಕಿಗೆ ಬಂದರು. ಈ ಖ್ಯಾತಿ ದಿನದಿನಕ್ಕೆ ಬೆಳೆಯಿತು; ಕರ್ಣಾಟಕ ಸಂಗೀತ ಪದ್ಧತಿಯ ಅತ್ಯುತ್ತಮ ಪಿಟೀಲು ವಾದಕರೆಂದು ಖ್ಯಾತರಾದರು.

ಅವರು ಆದರ್ಶಪ್ರಾಯ ಪಕ್ಕವಾದ್ಯಗಾರರೆಂದು ಪರಿಗಣಿಸಲ್ಪಟ್ಟಿದ್ದರು. ಕರ್ಣಾಟಕ ಸಂಗೀತದಲ್ಲಿ ಪಲುಕು, ನುಡಿಕಾರಗಳನ್ನು ಬಲಪಡಿಸಲು ಸಹಾಯಕವಾದ ಹಲವಾರು ತಂತ್ರಗಳನ್ನು ಅವರು ರೂಢಿಸಿದರು.

ಮದರಾಸು ಸಂಗೀತ ಅಕಾಡೆಮಿಯ 'ಸಂಗೀತ ಕಲಾನಿಧಿ' ಪ್ರಶಸ್ತಿ 1948ರಲ್ಲೂ ರಾಷ್ಟ್ರ ಪ್ರಶಸ್ತಿ 1959ರಲ್ಲೂ ರಾಜಮಾಣಿಕ್ಯಂ ಪಿಳ್ಳೈ ಅವರಿಗೆ ದೊರೆಯಿತು. ಅವರು 72 ವರ್ಷಗಳ ತುಂಬು ಬಾಳನ್ನು ನಡೆಸಿ 1970ನೆಯ ಸೆಪ್ಟೆಂಬರಿನಲ್ಲಿ ಕಾಲವಾದರು.

## ರಾಜಶೇಖರ

ಸರಸ್ವತಿಯ ಸುಕುಮಾರನೇ ಕಾವ್ಯಪುರುಷ. ಶಬ್ದಾರ್ಥಗಳೇ ಅವನ ಶರೀರ; ಅವನ ಚೇತನದಲ್ಲಿ ಮಾಧುರ್ಯ, ಔದಾರ್ಯ, ಪ್ರಸಾದ ಗುಣಗಳು ತುಂಬಿವೆ. ಅವನ ಆತ್ಮವೇ ರಸ, ಮಾತೆಲ್ಲ ಚಮತ್ಕಾರದಿಂದ ತುಂಬಿ ಅಲಂಕಾರವೆನಿಸಿದೆ. ಸಾಹಿತ್ಯ ವಿದ್ಯೆ ಅವನ ನಲ್ಲೆ. ಅವರ ಪ್ರಣಯ ಲೀಲೆಯಲ್ಲಿ ಸಕಲ ಕಾವ್ಯ ಶೋಭಾಂಗಗಳೂ ಉದಯಿಸಿವೆ.

ಕಾವ್ಯ ಪುರುಷನ ಈ ಸುಂದರ ಕಲ್ಪನೆ 10ನೆಯ ಶತಮಾನದಲ್ಲಿದ್ದ ಕವಿ, ನಾಟಕಕಾರ, ಆಲಂಕಾರಿಕ, ರಾಜಶೇಖರನದು.

[illegible] ಇದಿರಬೇಕೆಂದು ತೋರುತ್ತದೆ.

ರಾಜಶೇಖರನು ಹುಟ್ಟಿದ್ದು 'ಯಾಯಾವರ' ವಂಶದಲ್ಲಿ. [illegible] ಯಂತೆ ರಾಜಶೇಖರನಿಗೂ ತನ್ನ ವಂಶದ ಮೇಲೆ ಬಹಳ ಅಭಿಮಾನ. ಇವನ [illegible] ಎಂದು ಪ್ರತೀತಿ. ಅವನ ಮುತ್ತಾತನ ಹೆಸರು ಅಕಾಲಜಲದ. ಇವನನ್ನು 'ಮಹಾರಾಷ್ಟ್ರ ಚೂಡಾಮಣಿ' ಎನ್ನಲಾಗಿದೆ. ಆದ್ದರಿಂದ ರಾಜಶೇಖರನ ಪೂರ್ವಿಕರು ಮಹಾರಾಷ್ಟ್ರ ಪ್ರಾಂತದಿಂದ ಕನ್ಯಾಕುಬ್ಜದ ಕಡೆಗೆ ಬಂದವರಿರಬೇಕು. ಅವನ ತಂದೆಯ ಹೆಸರು 'ದುಹಿಕ' ಅಥವಾ 'ದುರ್ದುಕ'. ಇವನು ಮಹಾ ಮಂತ್ರಿಯಾಗಿದ್ದನೆಂದೆ ಕಂಡುಬರುತ್ತದೆ. ತಾಯಿಯ ಹೆಸರು ಶೀಲವತಿ; ಹೆಂಡತಿ ಅವಂತಿ ಸುಂದರಿ. ಇವಳು ಚಾಹಮಾನ ಕುಲದ 'ಚೂಡಾರತ್ನ' ಎಂದು ಹೊಗಳಲ್ಪಟ್ಟಿದ್ದಾಳೆ. ಇವಳು ಉತ್ತಮ ವಿದುಷಿಯೂ ಕವಯಿತ್ರಿಯೂ ಅಲಂಕಾರ ಶಾಸ್ತ್ರದಲ್ಲಿ ಪ್ರವೀಣೆಯೂ ಆಗಿದ್ದಳು. ಪ್ರಾಕೃತದಲ್ಲಿ ಪಾಂಡಿತ್ಯ ಉಳ್ಳವಳಾಗಿದ್ದಳು. ರಾಜಶೇಖರನು ತನ್ನ 'ಕಾವ್ಯಮೀಮಾಂಸೆ'ಯಲ್ಲಿ ಆಕೆಯ ಅಭಿಪ್ರಾಯಗಳನ್ನು ಅಲ್ಲಲ್ಲಿ ಉಲ್ಲೇಖಿಸಿದ್ದಾನೆ.

ರಾಜಶೇಖರ ಕನ್ಯಾಕುಮಾರಿಯಿಂದ ಕಾಶ್ಮೀರದ ತನಕ ದೇಶ ಸಂಚಾರ ಮಾಡಿರಬೇಕೆಂಬುದು ಅವನ ಕೃತಿಗಳಲ್ಲಿ ಬರುವ ವರ್ಣನೆಗಳಿಂದ ವ್ಯಕ್ತವಾಗುತ್ತದೆ. ಅವನು ತುಂಬ ರಸಿಕ ಕೂಡ. ರಾಜಶೇಖರನಿಗೆ 'ಕವಿರಾಜ' ಎಂಬ ಬಿರುದಿತ್ತು. ಇತಿಹಾಸ, ಪುರಾಣ, ಶಾಸ್ತ್ರ, ರಾಜನೀತಿ, ಮಂತ್ರತಂತ್ರಗಳಲ್ಲೂ ಅವನಿಗೆ ಗಾಢವಾದ ಪಾಂಡಿತ್ಯವಿತ್ತು. 'ಕರ್ಪೂರ ಮಂಜರಿ' ಎಂಬ ಪ್ರಾಕೃತದಲ್ಲಿರುವ ನಾಟಕ, 'ವಿದ್ಧಸಾಲಭಂಜಿಕಾ', 'ಬಾಲರಾಮಾಯಣ', 'ಬಾಲ ಭಾರತ' ಎಂಬ ಸಂಸ್ಕೃತ ನಾಟಕಗಳನ್ನು ಅವನು ರಚಿಸಿದ್ದಾನೆ. ಅವನ 'ಬಾಲ ಭಾರತ' ನಾಟಕದ ಎರಡು ಅಂಕಗಳು ಮಾತ್ರ ದೊರೆತಿವೆ.

ರಾಜಶೇಖರನ ಮಹತ್ವದ ಕೃತಿಯಾದ 'ಕಾವ್ಯಮೀಮಾಂಸೆ' ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಿದೆ. ವೇದಗಳಲ್ಲೂ ಗುಣ, ರಸ, ಅಲಂಕಾರಗಳಿವೆ ಎಂಬುದನ್ನು ಮೊಟ್ಟಮೊದಲು ತೋರಿಸಿಕೊಟ್ಟವನು ರಾಜಶೇಖರ. ಆಲಂಕಾರಿಕರು ಸಾಮಾನ್ಯವಾಗಿ ಕೈ ಬಿಡುವ, ಚುಟುಕದಲ್ಲಿ ಹಾರಿಸಿಬಿಡುವ, ಹಲವಾರು ಅಂಶಗಳನ್ನು ರಾಜಶೇಖರನು ತನ್ನ ಕಾವ್ಯಮೀಮಾಂಸೆಯಲ್ಲಿ ಪ್ರಧಾನವಾಗಿ ವಿವರಿಸಿದ್ದಾನೆ. ಇದು ರಾಜಶೇಖರನ ವೈಶಿಷ್ಟ್ಯ. ಅವನು ಈ ಗ್ರಂಥದಲ್ಲಿ ಬಳಸಿರುವ ಗದ್ಯಶೈಲಿ ಸರಳವಾದದ್ದು. ಅವಶ್ಯವಾದೆಡೆಗಳಲ್ಲಿ ಸಂಸ್ಕೃತ ಮಹಾಕವಿಗಳ ಕೃತಿಗಳಿಂದ ಉದಾಹರಣೆಗಳನ್ನು ಎತ್ತಿಕೊಟ್ಟಿದ್ದಾನೆ. ತನ್ನ 'ಕಾವ್ಯಮೀಮಾಂಸೆ' ಗ್ರಂಥದಲ್ಲಿ 18 ಅಧಿಕರಣಗಳು ಇವೆ ಎಂದು ಇವನೇ ಹೇಳಿದ್ದಾನೆ. ಆದರೆ ಈಗ ನಮಗೆ ದೊರೆತಿರುವುದು 'ಕವಿರಹಸ್ಯ'ವೆಂಬ ಮೊದಲ ಅಧಿಕರಣ ಮಾತ್ರ. ಅಲಂಕಾರ ಶಾಸ್ತ್ರದಲ್ಲಿ ನಿರೂಪಿತವಾಗಿರುವ ಅಂಶಗಳ ಮಹತ್ವದ ದೃಷ್ಟಿಯಿಂದ ಇದು 'ಕವಿಗಳ ಕೈಪಿಡಿ' ಎಂದು ಪರಿಗಣಿಸಲ್ಪಟ್ಟಿದೆ.

## ರಾಜಾ ರವಿವರ್ಮ

ರಾಜಾ ರವಿವರ್ಮ ಹುಟ್ಟಿದ್ದು ತಿರುವನಂತಪುರದ ರಾಜವಂಶದಲ್ಲಿ. ಆದರೆ ಆತನ ಖ್ಯಾತಿ ಉಳಿದಿರುವುದು ಚಿತ್ರಕಾರನಾಗಿ. ರವಿವರ್ಮ ರಚಿಸಿದ

ಒಂದಲ್ಲ ಒಂದು ದೇವರ ಚಿತ್ರದ ಪ್ರತಿಕೃತಿಯನ್ನು ದಕ್ಷಿಣ ಭಾರತದ ಹಿಂದೂಗಳ ಮನೆಮನೆಗಳಲ್ಲೂ ಕಾಣಬಹುದು ; ಆತನ ಚಿತ್ರಗಳು ಗಳಿಸಿದ ಜನಪ್ರಿಯತೆ ಅಷ್ಟು ದೊಡ್ಡದು.

ತೈಲವರ್ಣಗಳನ್ನು ಉಪಯೋಗಿಸಿ ಭಾರತದ ಕಾವ್ಯಪುರಾಣ ಪ್ರಸಂಗಗಳ ದೇವತೆಗಳ ಚಿತ್ರವನ್ನು ರಚಿಸಿದವರಲ್ಲಿ ರವಿವರ್ಮನೇ ಮೊದಲಿಗ. ತನ್ನ ಚಿತ್ರರಚನೆಯಲ್ಲಿ ಆತ ಅನುಸರಿಸಿದ್ದು ಪಾಶ್ಚಾತ್ಯರ ವ್ಯಕ್ತಿಚಿತ್ರಣ ಶೈಲಿ, ವರ್ಣ ಸಂಯೋಜನೆ, ಸನ್ನಿವೇಶ. ಚಿತ್ರಣಗಳಲ್ಲಿ ರವಿವರ್ಮ ತನ್ನದೇ ಆದ ಮಾರ್ಗವನ್ನು ಕಂಡುಕೊಂಡು ಪ್ರಸಿದ್ಧನಾದ.

ರವಿವರ್ಮ ಹುಟ್ಟಿದ್ದು 1848 ಏಪ್ರಿಲ್ 29ರಂದು, ಕೇರಳದ ಕೊಟ್ಟಾಯಂ ಬಳಿಯ ಕಿಳಿಮಾನೂರು ಗ್ರಾಮದಲ್ಲಿ. ಆತನ ತಾಯಿ ಉಮಾಂಬಾ ಬಾಯಿ. ಆಕೆಗೆ ಸಂಗೀತ ಸಾಹಿತ್ಯ ಪಾಂಡಿತ್ಯ ಇದ್ದಿತು. ಆತನ ಮಾವನಾದ ರಾಜಾ ರಾಜವರ್ಮ ಸ್ವತಃ ಚಿತ್ರಕಾರ. ರವಿವರ್ಮನ ಚಿತ್ರಕಲಾಸಕ್ತಿಗೆ ಆತ ತುಂಬ ಪ್ರೋತ್ಸಾಹ ಕೊಟ್ಟರು : 14 ವರ್ಷದವನಿದ್ದಾಗ ಅವನನ್ನು ತಿರುವಾಂಕೂರು ಸಂಸ್ಥಾನದ ರಾಜಧಾನಿ ತಿರುವನಂತಪುರದ ಅರಮನೆಗೆ ಕರೆತಂದರು. ರಾಮಸ್ವಾಮಿ ನಾಯ್ಡು ಎಂಬವರು ಆಸ್ಥಾನ ಚಿತ್ರಕಾರರಾಗಿದ್ದರು. ಅವರಲ್ಲಿ ರವಿವರ್ಮ ಚಿತ್ರಕಲೆ ಶಿಕ್ಷಣ ಪಡೆದ.

ಆರು ವರ್ಷಗಳ ಅನಂತರ ತಿರುವಾಂಕೂರು ರಾಜಾಸ್ಥಾನದವರು ಬ್ರಿಟಿಷ್ ಚಿತ್ರಕಾರ ಥಿಯೋಡರ್ ಜೆನ್ಸನ್‌ನನ್ನು ತಮ್ಮಲ್ಲಿ ಕರೆಸಿಕೊಂಡಾಗ ತನ್ನ ಚಿತ್ರಕಲಾಭ್ಯಾಸವನ್ನು ಮುಂದುವರಿಸಲು ರವಿವರ್ಮನಿಗೆ ಹೆಚ್ಚಿನ ಅವಕಾಶ ದೊರೆಯಿತು. ರವಿವರ್ಮ ಆತನಿಂದ ತೈಲವರ್ಣ ಚಿತ್ರ ರಚನೆಯ ತಂತ್ರವನ್ನು ಕರಗತಮಾಡಿಕೊಂಡ. ತೈಲಚಿತ್ರ ರಚನೆಯ ಶಿಕ್ಷಣ ಪಡೆಯುವುದಕ್ಕೆ ಮೊದಲೇ ಭಾರತೀಯ ಸಂಸ್ಕೃತಿಗೆ ಅನುಸಾರವಾಗಿ ಚಿತ್ರರಚಿಸುವುದನ್ನು ರವಿವರ್ಮ ಕಲಿತಿದ್ದ. ಇದನ್ನು ಪಾಶ್ಚಾತ್ಯ ಚಿತ್ರ ರಚನಾತಂತ್ರದೊಡನೆ ಮೇಳವಿಸುವುದರಲ್ಲಿ ರವಿವರ್ಮ ಯಶಸ್ವಿಯಾದ.

ರವಿವರ್ಮ 18ನೆಯ ವರ್ಷದವನಾಗಿದ್ದಾಗ ಆಗಿನ ತಿರುವಾಂಕೂರು ಮಹಾರಾಜರು, ಆತನಿಗೆ ತನ್ನ ತಂಗಿಯನ್ನು ಕೊಟ್ಟು ಮದುವೆ ಮಾಡಿದರು. ಇದರಿಂದ ರವಿವರ್ಮನ ಸ್ಥಾನಮಾನ ಹೆಚ್ಚಿತು.

ತಿರುವನಂತಪುರದ ರೆಸಿಡೆಂಟ್ ಒತ್ತಾಯಮಾಡಿದ ಮೇರೆಗೆ ರವಿವರ್ಮ 1873ರಲ್ಲಿ ಮದ್ರಾಸಿನಲ್ಲಿ ನಡೆದ ವಸ್ತುಪ್ರದರ್ಶನದಲ್ಲಿ ತಾನು ಬರೆದಿದ್ದ ಹೆಣ್ಣಿನ ಚಿತ್ರವೊಂದನ್ನು ಪ್ರದರ್ಶಿಸಿದ. ಅದಕ್ಕೆ ಮೊದಲ ಬಹುಮಾನ ಬಂದಿತು. ಅದು ಅವನ ಯಶಸ್ಸಿಗೆ ದಾರಿಮಾಡಿಕೊಟ್ಟಿತು. ಮುಂದೆ ಇದೇ ಚಿತ್ರಕ್ಕೆ ವಿಯೆನ್ನಾದ ಅಂತರರಾಷ್ಟ್ರೀಯ ವಸ್ತು ಪ್ರದರ್ಶನದಲ್ಲೂ ಬಹುಮಾನ ಸಿಕ್ಕಿತು. ಮದರಾಸಿನ ಗೌರ್ನರ್ ಆತನಿಂದ ಚಿತ್ರಗಳನ್ನು ಬರೆಸಿಕೊಂಡ. ಮೈಸೂರಿನ ಮಹಾರಾಜರಾಗಿದ್ದ ಚಾಮರಾಜ ಒಡೆಯರು 1883ರಲ್ಲಿ ರವಿವರ್ಮನನ್ನು ಮೈಸೂರಿಗೆ ಕರೆಸಿ ಸುಮಾರು ಮೂರು ವರ್ಷ ತಮ್ಮಲ್ಲಿ ಇಟ್ಟುಕೊಂಡು, ಹಲವಾರು ಚಿತ್ರಗಳನ್ನು ಬರೆಸಿದರು. ಅವನ್ನು ಮೈಸೂರಿನ ಜಗನ್ಮೋಹನ ಚಿತ್ರಶಾಲೆಯಲ್ಲಿ ಪ್ರದರ್ಶಿಸಲಾಗಿದೆ.


ಜನಪ್ರಿಯತೆ : ರವಿವರ್ಮ

1888ರಲ್ಲಿ ಬರೋಡದ ಗಾಯಕವಾಡರು ತಮ್ಮಲ್ಲಿಗೆ ರವಿವರ್ಮನನ್ನು ಆಹ್ವಾನಿಸಿ ಚಿತ್ರಗಳನ್ನು ಬರೆಸಿದರು. ಮುಂದೆ ಎರಡು ವರ್ಷ ರವಿವರ್ಮ ಉತ್ತರ ಭಾರತದಲ್ಲಿ ಸಂಚರಿಸುತ್ತ ಚಿತ್ರಗಳನ್ನು ಬರೆದ. ಆತನ ಚಿತ್ರಗಳು ಜನಪ್ರಿಯವಾದುವು. ವಿಯೆನ್ನಾ ಮತ್ತು ಷಿಕಾಗೋಗಳಲ್ಲಿ ಆತನ ಚಿತ್ರಗಳ ಪ್ರದರ್ಶನವಾದ ಮೇಲೆ ಆತನ ಖ್ಯಾತಿ ವಿದೇಶಗಳಿಗೂ ಹರಡಿತು. ಹೆಚ್ಚು ಹೆಚ್ಚು ಜನ ಆತನ ಚಿತ್ರಗಳನ್ನು ಪಡೆಯಲು ಅಪೇಕ್ಷಿಸಿದರು. ಈ ಬೇಡಿಕೆಗಳನ್ನು ಪೂರೈಸುವುದೇ ಕಷ್ಟವಾಯಿತು. ಈ ಸಂದರ್ಭದಲ್ಲಿ ಬರೋಡದ ದಿವಾನ್ ಸರ್ ಮಾಧವರಾಯರು, "ಇಷ್ಟೊಂದು ದೊಡ್ಡ ಬೇಡಿಕೆಯನ್ನು ಬರಿಯ ಎರಡು ಕೈಗಳಿಂದ ನೀವು ಹೇಗೆ ಪೂರೈಸಬಲ್ಲಿರಿ? ನಿಮ್ಮ ಕೆಲವು ಆಯ್ದ ಕೃತಿಗಳನ್ನು ಯೂರೋಪಿಗೆ ಕಳುಹಿಸಿ ಅಚ್ಚು ಹಾಕಿಸಿ. ಅದರಿಂದ ನಿಮ್ಮ ಕೀರ್ತಿ ಹೆಚ್ಚುತ್ತದೆ ; ನಿಮ್ಮ ದೇಶಕ್ಕೆ ನಿಜವಾದ ಸೇವೆ ಸಲ್ಲಿಸಿದಂತೆಯೂ ಆಗುತ್ತದೆ" —ಎಂದು ಸಲಹೆ ಕೊಟ್ಟರು. ರವಿವರ್ಮ ಈ ಸಲಹೆ ಅಂಗೀಕರಿಸಿದ. ಆದರೆ ಪರದೇಶದಲ್ಲಿ ಚಿತ್ರಗಳನ್ನು ಮುದ್ರಣ ಮಾಡಿಸುವ ಬದಲು ಒಳ್ಳೆಯ ಮುದ್ರಣ ಯಂತ್ರಗಳನ್ನೇ ಇಲ್ಲಿಗೆ ತರಿಸಿದ. ಜನಸಾಮಾನ್ಯರ ಕೈಗೂ ನಿಲುಕುವಂತೆ ಅಗ್ಗದ ದರದಲ್ಲಿ ಒದಗಿಸುವುದಕ್ಕೋಸ್ಕರ ತನ್ನ ಹಲವಾರು ಚಿತ್ರಗಳನ್ನು ಅಧಿಕ ಪ್ರಮಾಣದಲ್ಲಿ ಮುದ್ರಿಸಿದ. ರವಿವರ್ಮನ ಚಿತ್ರಗಳು ಮನೆಮನೆಗಳನ್ನು ಮುಟ್ಟಿದುವು.

ಕೊನೆಯ ದಿನಗಳಲ್ಲಿ ರವಿವರ್ಮನ ಮೇಲೆ ವಿಶೇಷ ಜವಾಬ್ದಾರಿ ಬಿದ್ದಿತು. ಇನ್ನೂ ಪ್ರಾಪ್ತವಯಸ್ಕನಾಗದೇ ಇದ್ದ ತಿರುವಾಂಕೂರಿನ ಯುವರಾಜನ ಪೋಷಣೆ, ಶಿಕ್ಷಣಗಳ ಹೊಣೆಯನ್ನು ಇವನು ನಿರ್ವಹಿಸಬೇಕಾಯಿತು. ಆದರೂ ಆಗಾಗ ಮೈಸೂರು ಮಹಾರಾಜರ ಅಪೇಕ್ಷೆಯನ್ನು ಮನ್ನಿಸಿ ತನ್ನ ಸೋದರ ಖ್ಯಾತ ಚಿತ್ರಕಾರ ರಾಮವರ್ಮನೊಡನೆ ಮೈಸೂರಿಗೆ ಬಂದು, ಚಿತ್ರ ರಚನೆ ಮಾಡುತ್ತಿದ್ದ. ಒಮ್ಮೆ ಮೈಸೂರಿನಿಂದ


'ಸಂಗೀತಗಾರ್ತಿಯರು' : ರವಿವರ್ಮ ಕೃತಿ

ಹಿಂದಿರುಗುತ್ತಿದ್ದಾಗ ಅಸ್ವಸ್ಥನಾದ. ಹಾಸಿಗೆ ಹಿಡಿದ ಅವನು 1906ರಲ್ಲಿ ಅಕ್ಟೋಬರ್ 9ರಂದು ತಿರುವನಂತಪುರದಲ್ಲಿ ಕಾಲವಾದ.

'ರಾಜಾ ಹರಿಶ್ಚಂದ್ರ', 'ಮತ್ಸ್ಯಗಂಧಿ', 'ರಾವಣ ಮತ್ತು ಜಟಾಯು', 'ಕೃಷ್ಣ ರಾಯಭಾರ', 'ಶಕುಂತಲಾ ಪತ್ರಲೇಖನ', 'ರಾಮ-ಸಮುದ್ರ ರಾಜ ಪ್ರಸಂಗ', ಮುಂತಾದುವು ರವಿವರ್ಮನ ಜನಪ್ರಿಯ ಚಿತ್ರಗಳು. ಇಂಥ ಪೌರಾಣಿಕ ಚಿತ್ರಗಳಲ್ಲದೆ, ಉದಯಪುರದ ಕೋಟೆ, ಕೇರಳದ ಸ್ತ್ರೀಯರು, ಮೈಸೂರು ಅರಸು ಕುಟುಂಬ, ಹೀಗೆ [illegible]–ಮುಂತಾದ ಲೌಕಿಕ ಚಿತ್ರಗಳನ್ನೂ ಆತ ಬರೆದಿದ್ದಾನೆ.

ಮೈಸೂರು ಚಿತ್ರಶಾಲೆ, ತಿರುವನಂತಪುರದ ಚಿತ್ರಾಲಯ, ಬರೋಡದ ಲಕ್ಷ್ಮೀವಿಲಾಸ ಅರಮನೆ, ದೆಹಲಿಯ ರಾಷ್ಟ್ರೀಯ ಚಿತ್ರಾಲಯ, ಹೈದರಾಬಾದಿನ ಸಾಲಾರ್‌ಜಂಗ್ ವಸ್ತುಸಂಗ್ರಹಾಲಯ ಹಾಗೂ ಜಗತ್ತಿನ ಹಲವು ಪ್ರಸಿದ್ಧ ಚಿತ್ರಾಲಯಗಳಲ್ಲಿ ರವಿವರ್ಮನ ಚಿತ್ರಗಳನ್ನು ಕಾಣಬಹುದು.

## ರಾಫೇಲ್

ವಿಶ್ವವಿಖ್ಯಾತ ಚಿತ್ರಕಾರ ರಾಫೇಲ್ ಜೀವಿಸಿದ್ದು ಕೇವಲ ಮೂವತ್ತೇಳು ವರ್ಷ ಮಾತ್ರ. ಅವನು ರಚಿಸಿದ ಚಿತ್ರಗಳು ಅನೇಕ; ಅವನು ಬದುಕಿದ್ದಾಗ ದೊರೆತ ಜನಪ್ರಿಯತೆಯೂ ಅಪಾರ. ಅವನು ನಿಧನನಾಗಿ ನಾಲ್ಕು ಶತಮಾನಗಳಿಗಿಂತ ಹೆಚ್ಚು ಕಾಲ ಕಳೆದಿದೆಯಾದರೂ ಅವನ ಜನಪ್ರಿಯತೆ ಕುಗ್ಗಿಲ್ಲ.

ರಾಫೇಲ್ ಹುಟ್ಟಿದ್ದು ಇಟಲಿಯ ಉರ್‌ಬಿನೋ ಎಂಬಲ್ಲಿ, 1483ನೆಯ ಏಪ್ರಿಲ್ 6ರಂದು. ಅವನ ತಂದೆ ಗಿಯೋವನಿ ಸಾಂಜಿಯೋ ಕೂಡ ಕಲಾವಿದನಾಗಿದ್ದ, ಕವಿಯೂ ಆಗಿದ್ದ. ಇದರಿಂದಾಗಿ ಚಿತ್ರಕಲೆಯನ್ನು ಕಲಿಯುವಂತೆ ತನ್ನ ಮಗನಿಗೆ ಬಾಲ್ಯದಿಂದಲೂ ಪ್ರೋತ್ಸಾಹಕೊಟ್ಟ. ರಾಫೇಲ್ 12 ವರ್ಷದವನಾಗಿದ್ದಾಗಲೇ ಅವನ ತಂದೆ ತಾಯಿ ತೀರಿಕೊಂಡರು. ಆದರೂ ಅವನು ತನ್ನ ಚಿತ್ರಕಲಾಭ್ಯಾಸವನ್ನು ಮುಂದುವರಿಸಿದ.

ರಾಫೇಲನ ಗುರು ಪೆರೂಗೀನೋ. ಈ ಶ್ರೇಷ್ಠ ಕಲಾವಿದ ತನ್ನ ಶಿಷ್ಯನಲ್ಲಿ ಅಪಾರ ಆಸಕ್ತಿವಹಿಸಿ ಪಾಠ ಹೇಳಿದ. ರಾಫೇಲ್ ಕೂಡ ಬೇಗ ಬೇಗನೆ ಕಲಿತು, ತನ್ನ ಗುರುವಿನ ಕಲಾಮರ್ಮವನ್ನು ಅರಿತು, ಗುರುವನ್ನು ಮೀರಿಸಿದ ಕಲಾವಿದನಾದ. ರಾಫೇಲ್‌ನ ಕಲಾಜೀವನವನ್ನು ಮೂರು ಘಟ್ಟಗಳಾಗಿ ವಿಂಗಡಿಸಬಹುದು. ಮೊದಲನೆಯದು ಅವನ ಗುರುವಿನಲ್ಲಿ ಕಲಾಭ್ಯಾಸ ಮಾಡಿದ ಕಾಲ; ಎರಡನೆಯದು 1504ರಿಂದ 1508ರ ವರೆಗೆ ನಾಲ್ಕು ವರ್ಷ ಅವನು ಫ್ಲಾರೆನ್ಸ್‌ನಲ್ಲಿದ್ದ ಕಾಲ. ಈ ಅವಧಿಯಲ್ಲಿ ಅವನು ಲಿಯೊನಾರ್ಡೊ ದ ವಿಂಚಿ ಮತ್ತು ಮೈಕೆಲೆಂಜೆಲೊ ಇವರ ಪ್ರಭಾವಕ್ಕೆ ಒಳಗಾದ.



ಚಿರಂಜೀವಿ ರಾಫೇಲ್

ಮೂರನೆಯ ಘಟ್ಟ—ಪ್ರೌಢ [illegible] ನಂತರ 1508ರಲ್ಲಿ ರೋಮಿಗೆ ಬಂದು [illegible] ರಾಫೇಲ್ ತನ್ನ [illegible].

ರೋಮ್‌ನಲ್ಲಿದ್ದಾಗ ಅವನು ಪೋಪನ ಅಪ್ಪಣೆಯಂತೆ ಅವನ ನಿವಾಸವಾದ ವ್ಯಾಟಿಕನ್‌ನ ಹಲವಾರು ಕೋಣೆಗಳ ಗೋಡೆಗಳನ್ನು ಚಿತ್ರಗಳಿಂದ ಅಲಂಕರಿಸಬೇಕಾಯಿತು. ಅವನು ಈ ಕೆಲಸವನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಿದ. ಈ ಸಂದರ್ಭದಲ್ಲಿ ಅವನು ರಚಿಸಿದ 'ಅಥೆನ್ಸಿನ ವಿದ್ಯಾಶಾಲೆ' ಮತ್ತು 'ಅಪೊಲೊ ಹಾಗೂ ವಿದ್ಯಾಧಿಷ್ಠಾನ ದೇವತೆಗಳು' ಚಿತ್ರಗಳು ಇಂದಿಗೂ ಅತ್ಯುತ್ತಮ ಕಲಾಕೃತಿಗಳೆಂದು ವಿಖ್ಯಾತವಾಗಿವೆ. ಹಲವಾರು ವ್ಯಕ್ತಿಗಳನ್ನುಳ್ಳ ಚಿತ್ರಗಳನ್ನು ರಚಿಸುವಾಗ, ಅವು ಒಂದೊಂದೂ ಯಾವ ಸ್ಥಾನದಲ್ಲಿ, ನಿಲುವಿನಲ್ಲಿ ಇರಬೇಕೆಂಬುದನ್ನು ನಿರ್ಧರಿಸುವುದರಲ್ಲಿ ರಾಫೇಲ್ ತೋರಿರುವ ಜಾಣ್ಮೆ ಹಿರಿದು. ಅದು ಮೈಕಲೆಂಜಲೋನ ಜಾಣ್ಮೆಗೆ ಸರಿಸಮಾನವಾಗಿದೆ.

ರಾಫೇಲ್ ಉತ್ತಮ ಚಿತ್ರಕಾರನಾಗಿದ್ದಲ್ಲದೆ ಚಿತ್ರಜವನಿಕೆಗಳ ರಚನೆಯಲ್ಲಿಯೂ ದಕ್ಷನಾಗಿದ್ದ. ಪೋಪ್‌ನ ಅಪೇಕ್ಷೆಯಂತೆ ಅವನು, ಬೈಬಲ್ಲಿನ ಹೊಸ ಒಡಂಬಡಿಕೆಯಿಂದ ಆರಿಸಿದ ವಸ್ತುಗಳನ್ನು ಅವಲಂಬಿಸಿ ಅತ್ಯಂತ ಸುಂದರವೂ ಕಲಾತ್ಮಕವೂ ಆದ ಚಿತ್ರಜವನಿಕೆಗಳನ್ನು ನಿರ್ಮಿಸಿದ್ದಾನೆ. ಇವು ಈ ವರ್ಗದ ಕೃತಿಗಳಲ್ಲಿ ಮಹೋನ್ನತ ಕೃತಿಗಳೆಂದು ಪರಿಗಣಿತವಾಗಿವೆ.

ರಾಫೇಲ್, ಮೇರಿ ಕನ್ಯೆಯ ಹಲವಾರು ಚಿತ್ರಗಳನ್ನು ರಚಿಸಿದ್ದಾನೆ. ವಸ್ತುಭಾವಗಳಲ್ಲಿ ಇವು ಒಂದೇ ಆದರೂ ಭಂಗಿಯಲ್ಲಿಯೂ ರಚನಾಶೈಲಿಯಲ್ಲಿಯೂ ಭಿನ್ನಭಿನ್ನವಾಗಿವೆ. ಇವನ 'ಗೋಲ್ಡ್‌ಫಿಂಚ್‌ನ ಮಡೋನ' ಎಂಬ ಚಿತ್ರ ಈ ವರ್ಗದ ಚಿತ್ರಗಳಲ್ಲಿ ಅತ್ಯಂತ ಪ್ರಖ್ಯಾತವಾದದ್ದು. ಅವನು ಫ್ಲಾರೆನ್ಸಿನಲ್ಲಿದ್ದ ಕಾಲದಲ್ಲಿ ರಚಿತವಾದದ್ದು. ಸೌಂದರ್ಯ, ಭಾವುಕತೆಗಳ ಅಪೂರ್ವ ಸಂಗಮವನ್ನು ಈ ಚಿತ್ರದಲ್ಲಿ ಕಾಣಬಹುದು.

ರಾಫೇಲ್ ಸೌಂದರ್ಯಪೂಜ್ಞೆ ಅದ್ಭುತವಾದದ್ದು. ಅವನು ರಚಿಸಿರುವ ವ್ಯಕ್ತಿಚಿತ್ರಗಳು ಜೀವಕಳೆಯಿಂದ ಕೂಡಿವೆ. ಈ ಮಾತು ಅವನ ಎಲ್ಲ ಚಿತ್ರಗಳಿಗೂ ಅನ್ವಯಿಸುತ್ತದೆ.

ರಾಫೇಲ್ ಬಹಳ ಬೇಗನೆ ಖ್ಯಾತಿಯ ಶಿಖರಕ್ಕೇರಿದ. ಪೋಪ್‌ನ ಆಸ್ಥಾನದಲ್ಲಿ, ಕಲೆಯ ಸಂಬಂಧದಲ್ಲಿ ಅವನ ಮಾತೇ ಅಂತಿಮ ತೀರ್ಮಾನವಾಗಿತ್ತು. ಅವನು ಅಲ್ಲಿನ 'ಕಲಾಸರ್ವಾಧಿಕಾರಿ' ಎನಿಸಿದ್ದ.

ಅವನ ಈ ಖ್ಯಾತಿ ಜನಪ್ರಿಯತೆಗಳೇ ಒಂದು ರೀತಿಯಲ್ಲಿ ಅವನ ಅಕಾಲಮರಣಕ್ಕೆ ಕಾರಣವಾದುವೆಂದರೂ ತಪ್ಪಲ್ಲ. ವಿಶ್ರಾಂತಿಯೇ ಇಲ್ಲದೆ ನಿರಂತರವಾಗಿ ಅವನು ದುಡಿಯಬೇಕಾಯಿತು. ವ್ಯಾಟಿಕನ್‌ನಲ್ಲಿ ಅಲ್ಲದೆ, ಇನ್ನೊಂದು ಪ್ರಾಸಾದದಲ್ಲಿಯೂ ಅವನು ಚಿತ್ರಗಳನ್ನು ಬರೆಯಬೇಕಾಯಿತು. ಈ ಮಿತಿಮೀರಿದ ದುಡಿಮೆಯಿಂದ ಅವನು ಬಳಲಿದ.

ಅವನ ಕೊನೆಯ ಚಿತ್ರ 'ರೂಪಾಂತರ'ದ ವಸ್ತು ಏಸು ಕ್ರಿಸ್ತ ದಿವ್ಯರೂಪ ಪಡೆದದ್ದು. ಆ ಚಿತ್ರವನ್ನು ರಚಿಸುತ್ತಿದ್ದಾಗಲೇ ರಾಫೇಲ್ ಕೊನೆಯುಸಿರೆಳೆದ. ಅವನ ಮೃತ ದೇಹವನ್ನು ಸಾರ್ವಜನಿಕ ಪ್ರದರ್ಶನಕ್ಕಿಟ್ಟಾಗ ಈ ಅಪೂರ್ಣ ಚಿತ್ರವನ್ನೂ ಅದರ ಪಕ್ಕದಲ್ಲಿಟ್ಟಿದ್ದರು. ಇಡೀ ರೋಮಿಗೆ ರೋಮೇ ಅವನ ಅಂತ್ಯದರ್ಶನಕ್ಕಾಗಿ ಅವನ ಕಲಾಶಾಲೆಗೆ ಯಾತ್ರೆ ಮಾಡಿತು. ಇಂಥ ಸಾರ್ವಜನಿಕ ಗೌರವ ಪಡೆದ ಕಲಾವಿದರು ಅಪರೂಪ.

ಈ ಕಾಲದ ಪ್ರಸಿದ್ಧ ಕಲಾವಿದರ ಮಹಾನ ಕೃತಿಗಳನ್ನು ಗೌರವದಿಂದ ಅಭ್ಯಸಿಸಿದುದರ ಜೊತೆಗೆ ಪುರಾತನ ಅನೇಕ ಕಲಾಪ್ರಕಾರಗಳನ್ನು ಕೂಡಿಸಿ, ಅವನ್ನು ಅಳವಡಿಸಿಕೊಂಡು, ತನ್ನದೇ ಆದ ವಿಶಿಷ್ಟ ಶೈಲಿಯನ್ನು ಬೆಳೆಸಿಕೊಂಡವನು ರಾಫೇಲ್. ಚಿತ್ರಕಲಾರಂಗದಲ್ಲಿ ರಾಫೇಲನ ಹೆಸರು ಚಿರಸ್ಥಾಯಿ.

## ರಾಬರ್ಟ್ ಫ್ರಾಸ್ಟ್

ರಾಬರ್ಟ್ ಲೀ ಫ್ರಾಸ್ಟ್‌ಗೆ ಚಿಕ್ಕಂದಿನಿಂದಲೇ ಪದ್ಯ ಬರೆಯುವ ಹುಚ್ಚು. ಹೈಸ್ಕೂಲಿನಲ್ಲಿದ್ದಾಗಲೇ ಅವನ ಪದ್ಯ ಶಾಲೆಯ ಪತ್ರಿಕೆಯಲ್ಲಿ ಪ್ರಕಟವಾಯಿತು. ಅದನ್ನು ಕಂಡು ಅವನಿಗೆ ಎಲ್ಲಿಲ್ಲದ ಸಂತೋಷ. ಉತ್ಸಾಹದಿಂದ ಹೆಚ್ಚು ಹೆಚ್ಚಾಗಿ ಬರೆದು ಚಿಕ್ಕ ಚಿಕ್ಕ ಪತ್ರಿಕೆಗಳಿಗೆ ಕಳುಹಿಸುತ್ತಿದ್ದ. ಹಾಗೆ ಕಳುಹಿಸಿದ ಪದ್ಯಗಳೆಲ್ಲ ತಪ್ಪದೆ ಹಿಂದಕ್ಕೆ ಬರುತ್ತಿದ್ದುವು.



ಕಿರಿದರೊಳ್ ಪಿರಿದರ್ಥ : ಫ್ರಾಸ್ಟ್

ಹೊಟ್ಟೆ ಹೊರೆಯಲು ಫ್ರಾಸ್ಟ್ ಹೊಲದಲ್ಲಿ ಕೂಲಿ ಮಾಡಬೇಕಾಯಿತು. ಚಮ್ಮಾರನಾಗಿ, ನೆಯ್ಗೆಗೆ ದಾರಸುತ್ತುವ ಉರುಳೆಗಳನ್ನು ತಯಾರಿಸುವ ಕಾರಖಾನೆಯಲ್ಲಿ ಸಹಾಯಕನಾಗಿ ದುಡಿಯ ಬೇಕಾಯಿತು. ಆದರೂ ಪದ್ಯಗಳನ್ನು ಬರೆಯುವ ಗೀಳುಮಾತ್ರ ಅವನನ್ನು ಬಿಟ್ಟುಹೋಗಲಿಲ್ಲ. ಫ್ರಾಸ್ಟ್‌ನ ಮೊದಲ ಕವಿತಾಸಂಕಲನ ಪ್ರಕಟವಾದಾಗ ಅವನಿಗೆ ನಲವತ್ತು ವರ್ಷ. ಅನಂತರ ಸ್ವಲ್ಪ ಕಾಲದಲ್ಲೇ ಅವನು ಯೂರೋಪ್ ಅಮೆರಿಕಗಳಲ್ಲಿ ಪ್ರಸಿದ್ಧನಾದ. ಅವನ 75ನೆಯ ಮತ್ತು 85ನೆಯ ಜನ್ಮದಿನೋತ್ಸವ ಸಂದರ್ಭದಲ್ಲಿ ಅಮೆರಿಕದ ಸಂಸತ್ತು ಅವನಿಗೆ ಗೌರವ ಸೂಚಿಸುವ ನಿರ್ಣಯಗಳನ್ನು ಅಂಗೀಕರಿಸಿತು. 1960ರಲ್ಲಿ ಜಾನ್ ಕೆನಡಿ ಅಮೆರಿಕ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿ ಅಧಿಕಾರ ಸ್ವೀಕರಿಸಿದ ಸಮಾರಂಭದಲ್ಲಿ ಕವಿತೆಗಳನ್ನು ಓದಲು ಫ್ರಾಸ್ಟ್‌ಗೆ ಆಹ್ವಾನವೂ ಬಂತು.

ರಾಬರ್ಟ್ ಲೀ ಫ್ರಾಸ್ಟ್ ಸಾನ್ ಫ್ರಾನ್ಸಿಸ್ಕೋದ ಪತ್ರಿಕೋದ್ಯಮಿ [illegible] ಮಗ. ಹುಟ್ಟಿದ್ದು 1874ರ ಮಾರ್ಚ್ 26ರಂದು. ಮಾರನೆ ವರ್ಷವೇ ತಂದೆ ತೀರಿಕೊಂಡ. ಅನಂತರ, ಹನ್ನೊಂದು ವರ್ಷದ ರಾಬರ್ಟ್ ತನ್ನ ತಾಯಿಯೊಡನೆ ನ್ಯೂ ಇಂಗ್ಲೆಂಡ್ ಪ್ರಾಂತದ ಹಳ್ಳಿಯೊಂದಕ್ಕೆ ಹೋಗಿ ಅಲ್ಲಿ ನೆಲೆಸಿದ. ತಾಯಿ ಹಳ್ಳಿಯ ಶಾಲೆಯೊಂದರಲ್ಲಿ ಅಧ್ಯಾಪಕಿಯಾದಳು. ಮಗ ಅಲ್ಲಿಯೇ ವಿದ್ಯಾರ್ಥಿಯಾದ. ಅನಂತರ ಹೈಸ್ಕೂಲು ಪರೀಕ್ಷೆಯಲ್ಲಿ ಉನ್ನತ ದರ್ಜೆಯಲ್ಲಿ ಉತ್ತೀರ್ಣನಾದ್ದರಿಂದ ಕಾಲೇಜು ವಿದ್ಯಾಭ್ಯಾಸ ಮುಂದುವರಿಸಲು ಅವನಿಗೆ ವಿದ್ಯಾರ್ಥಿವೇತನ ಸಿಕ್ಕಿತು. ಆದರೆ ಕಾಲೇಜಿನ ಕಟ್ಟುನಿಟ್ಟಾದ ದಿನಚರಿ ರಾಬರ್ಟ್‌ಗೆ ಸರಿ ಹೋಗಲಿಲ್ಲ. ಕೆಲವು ತಿಂಗಳಲ್ಲೇ ಮನೆಗೆ ಹಿಂತಿರುಗಿದ. ಕಾರಖಾನೆಯಲ್ಲಿ ಕೆಲಸಕ್ಕೆ ಸೇರಿದ. ಸಮಯ ಸಿಕ್ಕಾಗಲೆಲ್ಲ ಪುಟ್ಟ ಪುಟ್ಟ ಕವಿತೆಗಳನ್ನು ಬರೆಯುತ್ತಲೇ ಇದ್ದ. 1894ರಲ್ಲಿ ಸಣ್ಣ ವೃತ್ತಪತ್ರಿಕೆಯೊಂದು ಇವನ ಒಂದು ಕವಿತೆಯನ್ನು ಪ್ರಕಟಿಸಿತು.

ಮಾರನೆಯ ವರ್ಷ ಇವನು ತನ್ನ ಹೈಸ್ಕೂಲಿನ ಸಹಪಾಠಿ ಎಲಿನರ್‌ಳನ್ನು ಮದುವೆಯಾದ. ತಾಯಿ ಪ್ರಾರಂಭಿಸಿದ್ದ ಶಾಲೆಯಲ್ಲಿ ಇವರಿಬ್ಬರೂ ಪಾಠ ಹೇಳಲು ಆರಂಭಿಸಿದರು. ಕೆಲ ಕಾಲಾನಂತರ ಶಿಕ್ಷಕನಾಗಿ ತರಬೇತಿ ಪಡೆಯಲು ಫ್ರಾಸ್ಟ್, ಹಾರ್ವರ್ಡ್ ವಿಶ್ವವಿದ್ಯಾಲಯವನ್ನು ಸೇರಿದ. ಆದರೆ ಎರಡನೆಯ ವರ್ಷದ ತರಗತಿಯಲ್ಲಿ ಓದುತ್ತಿದ್ದಾಗ ಅನಾರೋಗ್ಯ ನಿಮಿತ್ತ ಅಭ್ಯಾಸ ನಿಲ್ಲಿಸಿ ಮನೆಗೆ ಹಿಂದಿರುಗಿದ. ಮತ್ತೆ ಶಾಲಾಶಿಕ್ಷಕನಾಗಿ ಕೆಲಸ ಆರಂಭಿಸಿದ.

ಹಳ್ಳಿಯ ವಾತಾವರಣದಲ್ಲಿ ಬೆಳೆದ ಫ್ರಾಸ್ಟ್‌ನ ಕವನಗಳಲ್ಲಿ ಕಂಡು ಬರುವ ವ್ಯಕ್ತಿಗಳೂ ಘಟನೆಗಳೂ ಹಳ್ಳಿಯ ಜೀವನಕ್ಕೆ ಸಂಬಂಧಿಸಿದವೇ. ಸಾಮಾನ್ಯ ಜನರ ಜೀವನದ ಸನ್ನಿವೇಶಗಳನ್ನು ಆಡು ಭಾಷೆಯಲ್ಲೇ ಬರೆಯುವುದು ಫ್ರಾಸ್ಟ್‌ನ ಪದ್ಧತಿ. ಹಾಸ್ಯ, ವಿಡಂಬನೆಗಳು ಇದರಲ್ಲಿ ತುಂಬಿರುತ್ತವೆ. ಭಾವಪ್ರಧಾನವಾದ ಕಾವ್ಯರಚನೆ ಮುಖ್ಯವಾಗಿದ್ದ ಆ ಕಾಲದಲ್ಲಿ, ಇವನ ಕವಿತೆಗಳು ಕವಿತೆಗಳೇ ಅಲ್ಲ ಎಂದವರೂ ಉಂಟು. ಫ್ರಾಸ್ಟ್‌ನ 'ಬಳಸದ ದಾರಿ' ಎಂಬ ಕವನದಲ್ಲಿ ಆತ ಹೊಚ್ಚ ಹೊಸ ಹಾದಿ ತುಳಿದ. ಗಣ್ಯರು ಯಾರೂ ಆಗ ಇವನ ಪ್ರತಿಭೆಯನ್ನು ಗುರುತಿಸಲಿಲ್ಲ.

ರಾಬರ್ಟ್ ಫ್ರಾಸ್ಟ್‌ಗೂ ಅವನ ಪತ್ನಿ ಎಲೀನರ್‌ಗೂ ಪ್ರವಾಸದಲ್ಲಿ ವಿಶೇಷ ಆಸಕ್ತಿ. ಸ್ವಲ್ಪ ಕಾಲ ಬೇರೊಂದು ದೇಶಕ್ಕೆ ಹೋಗಿ ಇರೋಣ ಎಂದು ಅವರು ನಿರ್ಧರಿಸಿದರು. ಕೆನಡಾಕ್ಕೆ ಸೇರಿದ ವಾನ್‌ಕೂವರ್ ದ್ವೀಪಕ್ಕೆ ಹೋಗುವ ಹಂಬಲ ಫ್ರಾಸ್ಟ್‌ನದು, ಇಂಗ್ಲೆಂಡಿಗೇ ಹೋಗಬೇಕೆಂದು ಹೆಂಡತಿಯ ಹಟ. ಎಲ್ಲಿಗೆ ಹೋಗುವುದೆಂದು ನಿರ್ಧರಿಸಲು ನಾಣ್ಯವೊಂದನ್ನು ಮಿಡಿದರು. ನಾಣ್ಯ ಎಲೀನರ್ ಪರವಾಗಿ ಬಿತ್ತು. ಇದ್ದ ಹೊಲ ಮನೆಗಳನ್ನು ಮಾರಿ 1912ರಲ್ಲಿ ಇವರು ಇಂಗ್ಲೆಂಡನ್ನು ಸೇರಿದರು.

ಇಂಗ್ಲೆಂಡಿನಲ್ಲಿ ರಾಬರ್ಟ್ ಫ್ರಾಸ್ಟ್‌ನ ಕವನಗಳಿಗೆ ಪ್ರಕಾಶಕರು ಸಿಗುವುದು ಕಷ್ಟವಾಗಲಿಲ್ಲ. ಪ್ರಕಟವಾದ ಪುಸ್ತಕಗಳು ಜನಪ್ರಿಯವಾದುವು. ವಿಮರ್ಶಕರ ಹೊಗಳಿಕೆಯೂ ಲಭಿಸಿತು. ಗಣ್ಯ ಸಾಹಿತಿಗಳು ಫ್ರಾಸ್ಟ್‌ನ ಗೆಳೆಯರಾದರು. 1915ರಲ್ಲಿ ಇವನು ಅಮೆರಿಕಕ್ಕೆ ಹಿಂದಿರುಗಿದಾಗ ಭವ್ಯ ಸ್ವಾಗತ ದೊರಕಿತು.

ಒಂದಾದ ಮೇಲೆ ಒಂದರಂತೆ ಫ್ರಾಸ್ಟ್‌ನ ಕವನ ಸಂಕಲನಗಳು ಹೊರಬಂದುವು. ಸಭೆ ಸಮಾರಂಭಗಳಲ್ಲಿ ತನ್ನ ಕವನಗಳನ್ನು ಓದಲು ಫ್ರಾಸ್ಟ್‌ಗೆ ಕರೆಗಳು ಬಂದುವು. ಹಲವು ವಿಶ್ವವಿದ್ಯಾಲಯಗಳಲ್ಲಿ ಈತ ಗೌರವ ಪ್ರಾಧ್ಯಾಪಕನಾದ. ಅಮೆರಿಕ ಮತ್ತು ಇಂಗ್ಲೆಂಡಿನ ಅನೇಕ ವಿಶ್ವವಿದ್ಯಾಲಯಗಳು ಇವನಿಗೆ ಗೌರವ ಪದವಿಗಳನ್ನು ಕೊಟ್ಟು ಪುರಸ್ಕರಿಸಿದುವು. ಇವನ ಕವನ ಸಂಕಲನಗಳಿಗೆ ನಾಲ್ಕು ಬಾರಿ ಪುಲಿಟ್ಜರ್ ಸಾಹಿತ್ಯ ಬಹುಮಾನ ಬಂತು.

ಹೇಳಬೇಕಾದ ವಿಷಯಗಳನ್ನು ಆದಷ್ಟು ಕಡಿಮೆ ಮಾತುಗಳಲ್ಲಿ ಹೇಳುವುದು ಫ್ರಾಸ್ಟ್‌ನ ಕಾವ್ಯ ವೈಶಿಷ್ಟ್ಯ. ಬರೆವಣಿಗೆಯಲ್ಲಿ ಸ್ಪಷ್ಟತೆ ಇರಬೇಕೆಂಬುದು ಅವನ ಖಚಿತ ಅಭಿಪ್ರಾಯ. "ನಿಮಗೆ ಇಷ್ಟವಾದ ಸಾಹಿತ್ಯ ಪತ್ರಿಕೆ ಯಾವುದು ?" ಎಂದು ಕೇಳಿದಾಗ ಫ್ರಾಸ್ಟ್ 'ಸೈಂಟಿಫಿಕ್ ಅಮೆರಿಕನ್' ಎಂದನಂತೆ. ಫ್ರಾಸ್ಟ್ ಹೇಳುವಂತೆ ಅವನ ಕವನಗಳು "ಹರ್ಷ ಭಾವನೆಯಿಂದ ಆರಂಭವಾಗಿ ವಿವೇಕದಲ್ಲಿ ಕೊನೆಗಾಣುತ್ತವೆ." ಆಡುಭಾಷೆಯಲ್ಲಿರುವ ಅವನ ಕವನಗಳನ್ನು ಓದಿದಾಗ, ಕವಿ ನಮ್ಮೊಡನೆ ಮಾತನಾಡುತ್ತಿದ್ದಾನೇನೋ ಎನಿಸುತ್ತದೆ.

ರಾಬರ್ಟ್ ಲೀ ಫ್ರಾಸ್ಟ್ 1963ರ ಜನವರಿ 26ರಂದು ಬಾಸ್ಟನ್‌ನಲ್ಲಿ ತೀರಿಕೊಂಡಾಗ ಅಮೆರಿಕದ ಜನತೆ ತನ್ನ ಆತ್ಮೀಯ ಬಂಧುವೊಬ್ಬನನ್ನು ಕಳೆದುಕೊಂಡಂತೆ ಶೋಕಿಸಿತು.

ಫ್ರಾಸ್ಟ್‌ನ ಕವಿತೆಗಳಲ್ಲಿ ಜವಾಹರಲಾಲರಿಗೆ ಆಸಕ್ತಿಯಿತ್ತು. ಜವಾಹರರು ದಿವಂಗತರಾದಾಗ ಅವರ ಮೇಜಿನ ಮೇಲೆ ಫ್ರಾಸ್ಟನ ಒಂದು ಕವಿತೆಯ ನಾಲ್ಕು ಸಾಲುಗಳಿದ್ದುವು. ಜವಾಹರರು ತಾವೇ ಅದನ್ನು ಪ್ರತಿಮಾಡಿದ್ದರು.

## ರಾಬಿನ್‌ಹುಡ್

ಬ್ರಿಟನಿನ ಜನರ ಮನಸ್ಸಿನಲ್ಲಿ ಬೇರೂರಿ ನಿಂತಿರುವ ಸಾಹಸಿ ರಾಬಿನ್ ಹುಡ್. ಅವನ ಸಾಹಸಗಳನ್ನು ಬಣ್ಣಿಸುವ ಕತೆಗಳೂ ಹಾಡುಗಬ್ಬಗಳೂ ಅನೇಕ. ಅವುಗಳಲ್ಲಿ ಹೇಳಿರುವಂತೆ, ಅವನೂ ಅವನ ಸಂಗಡಿಗರೂ ಇಂಗ್ಲೆಂಡಿನ ಷೆರ್‌ವುಡ್ ಅರಣ್ಯದಲ್ಲಿ ವಾಸಿಸುತ್ತಿದ್ದರು; ದುಷ್ಟ ಶ್ರೀಮಂತರನ್ನು ದೋಚುತ್ತಿದ್ದರು. ಹೀಗೆ ದೋಚಿದ್ದನ್ನು ಬಡವರಿಗೆ ಹಂಚುತ್ತಿದ್ದರು. ತೊಂದರೆಗೆ ಸಿಲುಕಿದವರು ಬಡವರಾಗಲೀ ಶ್ರೀಮಂತರಾಗಲೀ ಅವರ ನೆರವಿಗೆ ಬರುತ್ತಿದ್ದರು. ರಾಬಿನ್‌ಹುಡ್‌ಗೆ ಏಸು ಕ್ರಿಸ್ತನ ತಾಯಿ ಮೇರಿಯೆಂದರೆ ತುಂಬ ಭಕ್ತಿ. ಅದರಿಂದಾಗಿ ಅವನು ಮಹಿಳೆಯರು ಯಾರೇ ಆಗಲಿ ಅವರನ್ನು ಬಹಳ ಗೌರವದಿಂದ ಕಾಣುತ್ತಿದ್ದ. ಅವಶ್ಯ ಸಂದರ್ಭಗಳಲ್ಲಿ ಅವರಿಗೆ ರಕ್ಷಣೆ ಕೊಡುತ್ತಿದ್ದ.

ರಾಬಿನ್‌ಹುಡ್ ಎಂಬ ಒಬ್ಬ ವ್ಯಕ್ತಿ ಇದ್ದನೆ ? ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ಇನ್ನೂ ದೊರಕಿಲ್ಲ. 1322ರ ಒಂದು ದಾಖಲೆಯಲ್ಲಿ ಅವನ ಹೆಸರು ಬರುವುದೇ ಅವನ ಬಗೆಗೆ ನಮಗೆ ದೊರೆತಿರುವ ಅತಿ ಪ್ರಾಚೀನ ಪ್ರಸ್ತಾಪ. ಮುಂದಿನ ಒಂದೆರಡು ಶತಮಾನಗಳ ಸಾಹಿತ್ಯದಲ್ಲಿ ಅವನ ವಿಚಾರ ಅಲ್ಲಲ್ಲಿ ಬರುತ್ತದೆ. ರಾಬಿನ್‌ಹುಡ್‌ನ ಕಾರ್ಯಕ್ಷೇತ್ರವಾಗಿದ್ದಿತೆಂದು ಹೇಳುವ ಪ್ರದೇಶದಲ್ಲಿ, ಅವನ ಹೆಸರಿನ ಒಂದು ಕೊಲ್ಲಿ ಮತ್ತು ಒಂದು ಗುಹೆ ಇವೆ ಎಂಬುದೂ ಗಮನಾರ್ಹ.

16ನೆಯ ಶತಮಾನದ ಹೊತ್ತಿಗೆ ರಾಬಿನ್‌ಹುಡ್‌ನ ಬಗೆಗೆ ಅನೇಕ ಕತೆಗಳು ಹುಟ್ಟಿಕೊಂಡುವು.

ರಾಬಿನ್‌ಹುಡ್‌ನ ಜೀವನ ಕಥೆಯನ್ನು ಹೀಗೆ ಸಂಗ್ರಹಿಸಬಹುದು:

12ನೆಯ ಶತಮಾನದ ಕೊನೆ, 13ನೆಯ ಶತಮಾನದ ಆರಂಭ — ಈ ಅವಧಿಯಲ್ಲಿ ಇಂಗ್ಲೆಂಡಿನ ಅರಸು ರಿಚರ್ಡ್ ಹೊರನಾಡಿನಲ್ಲಿ ಯುದ್ಧ ನಿರತನಾಗಿದ್ದ. ಅವನ ಸೋದರ ಜಾನ್ ಆಗ ರಿಚರ್ಡ್ ಪರವಾಗಿ ರಾಜ್ಯಭಾರ ನಡೆಸುತ್ತಿದ್ದ. ಜಾನ್ ಕ್ರೂರಿ; ನ್ಯಾಯಪಕ್ಷಪಾತಿಯಲ್ಲ. ಈ ಸನ್ನಿವೇಶದಲ್ಲಿ ಜಾನ್ ಮತ್ತು ಅವನ ಬೆಂಬಲಿಗರ ವಿರುದ್ಧ ಬಂಡಾಯ ಹೂಡಿದವನು ರಾಬಿನ್‌ಹುಡ್. ಇದರಿಂದಾಗಿ ಅವನು ಕಾನೂನಿನ ರಕ್ಷಣೆಗೆ ಬಾಹಿರನೆಂದು ಘೋಷಿಸಲ್ಪಟ್ಟ. ಯಾರು ಬೇಕಾದರೂ ಅವನನ್ನು ಕೊಲ್ಲಬಹುದಾಗಿತ್ತು. ಹೀಗೆ ಕೊಂದವರಿಗೆ ಶಿಕ್ಷೆಯೂ ಇರಲಿಲ್ಲ. ಇದರಿಂದಾಗಿ ಅವನು ಬಹಳ ಕಷ್ಟ ಪಡಬೇಕಾಯಿತು. ಅರಣ್ಯ ಸೇರಿದ. ಜಾನನ ಆಡಳಿತದಲ್ಲಿ ಅಸಂತೃಪ್ತರಾದ ಅನೇಕ ಹಳ್ಳಿಗಾರರು ಅವನೊಡನೆ ಸೇರಿಕೊಂಡರು. ಶ್ರೀಮಂತ ಜನರ ಮೇಲೆ ದಬ್ಬಾಳಿಕೆ ನಡೆಸುತ್ತ ಅವರನ್ನು ಶೋಷಿಸುತ್ತ ಇದ್ದ ಸಾಮಂತರಾದವರ ಪುರಪ್ರಮುಖರು. ಕ್ರೈಸ್ತಮಠದ ಮಠಾಧಿಕಾರಿ ಇಂಥವರನ್ನು ಕಂಡರೆ ಅವನಿಗೆ ಆಗುತ್ತಿರಲಿಲ್ಲ. ಅವರಿಗೆ ಕಿರುಕುಳ ಕೊಡುವುದು ಅವರನ್ನು ದೋಚುವುದು ರಾಬಿನ್‌ಹುಡ್ ಮತ್ತು ಅವನ ಹಿಂಬಾಲಕರ ಕಾರ್ಯಕ್ರಮ. ಹೀಗೆ ದೋಚಿದ್ದನ್ನು ಅವನು ಬಡವರಿಗೆ, ಹೀನಸ್ಥಿತಿಯಲ್ಲಿದ್ದವರಿಗೆ ಹಂಚಿಬಿಡುತ್ತಿದ್ದ. ಇದರಿಂದಾಗಿ ಅವನು ಜನಪ್ರಿಯನಾದ. ದರೋಡೆಗಾರ ಎನಿಸಿಕೊಳ್ಳದೆ, ಪ್ರಚಂಡ ಸಾಹಸಿ ಎಂದು ಹೆಸರು ಪಡೆದ. ಯುದ್ಧಾನಂತರ ದೊರೆ ರಿಚರ್ಡ್ ಇಂಗ್ಲೆಂಡಿಗೆ ಹಿಂದಿರುಗಿದ ಮೇಲೆ ರಾಬಿನ್‌ಹುಡ್‌ನ ಕೀರ್ತಿ ಅವನ ಕಿವಿಗೂ ಬಿತ್ತು. ಅವನು ಕ್ರೈಸ್ತ ಸನ್ಯಾಸಿಯ ವೇಷ ಧರಿಸಿ ರಾಬಿನ್‌ಹುಡ್‌ನನ್ನು ಕಾಣಲು ಷೆರ್‌ವುಡ್ ಅರಣ್ಯಕ್ಕೆ ಬಂದ. ತಾನು ಅರಸನ ಪ್ರತಿನಿಧಿ ಎಂದು ಹೇಳಿಕೊಂಡಾಗ ರಾಬಿನ್‌ಹುಡ್ ಅವನಿಗೆ ಮರ್ಯಾದೆ ತೋರಿದ. ಅರಸನೇ ತಾನು ಎಂಬ ನಿಜಾಂಶವನ್ನು ಅವನು ಬಯಲು ಮಾಡಿದಾಗ, ರಾಬಿನ್‌ಹುಡ್ ಭಕ್ತಿಯಿಂದ ಮೊಳಕಾಲೂರಿ ವಂದಿಸಿದ. ಸುಪ್ರೀತನಾದ ರಿಚರ್ಡ್ ದೊರೆ ರಾಬಿನ್‌ಹುಡ್‌ನನ್ನು ಲಂಡನಿಗೆ ಕರೆದೊಯ್ದು ಅವನಿಗೆ ಒಂದು ಜಹಗೀರಿಯನ್ನು ಕೊಟ್ಟು, ಸನ್ಮಾನಿಸಿದ. ಆದರೆ, ರಿಚರ್ಡ್ ದೊರೆಯ ಮರಣಾನಂತರ ಅವನ ಸೋದರ ಜಾನ್ ಪಟ್ಟಕ್ಕೆ ಬಂದಮೇಲೆ ರಾಬಿನ್‌ಹುಡ್ ಮತ್ತು ಅವನ ಸಂಗಡಿಗರು ಮತ್ತೆ ಕಾಡಿಗೆ ಹೋಗಬೇಕಾಯಿತು. ಹೋರಾಟದಲ್ಲಿ ಗಾಯಗೊಂಡಾಗಲೆಲ್ಲ ರಾಬಿನ್‌ಹುಡ್ ತನ್ನ ಸೋದರ ಸಂಬಂಧಿಯೊಬ್ಬಳ ಬಳಿ ಆಶ್ರಯ ಪಡೆಯುತ್ತಿದ್ದ. ಆಕೆ ಅವನ ಶುಶ್ರೂಷೆ ಮಾಡುತ್ತಿದ್ದಳು. ಒಮ್ಮೆ ಆಕೆ ರಾಬಿನ್‌ಹುಡ್‌ನ ವಿರೋಧಿಯೊಬ್ಬನ ಪ್ರಭಾವಕ್ಕೆ ಒಳಗಾಗಿ ರಾಬಿನ್‌ಹುಡ್‌ನ ಗಾಯದಿಂದ ತುಂಬ ರಕ್ತ ಸೋರುವಂತೆ ಮಾಡಿದಳು. ಇದರಿಂದಾಗಿ ಅವನು ಸಾವಿಗೀಡಾದ. ಮರಣ ಕಾಲದಲ್ಲಿ ತನ್ನ ಬಳಿಯಿದ್ದ ಸಂಬುಗೆಯ ಬಂಟ ಲಿಟಲ್ ಜಾನ್‌ನಿಂದ ತನ್ನ ಬಿಲ್ಲು ಬಾಣಗಳನ್ನು ತರಿಸಿಕೊಂಡು ಬಾಣ ಪ್ರಯೋಗ



ಶ್ರೀಮಂತರನ್ನು ದೋಚಿ ...

[illegible] ಬೇಕೆಂದು ಆಜ್ಞಾಪಿಸಿ ಕೊನೆಯ ಉಸಿರೆಳೆದ.

ರಾಬಿನ್‌ಹುಡ್ ಐತಿಹಾಸಿಕ ವ್ಯಕ್ತಿಯೋ ಕಲ್ಪನೆಯೋ ಆ ಮಾತು ಬೇರೆ. [illegible] ಅವನನ್ನು ಕುರಿತ ವಿವರಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸ ಇರುವ ಸುಮಾರು 60 ಕಥೆಗಳಿವೆ. ಸುಮಾರು 30 ನಾಟಕಗಳೂ 7 ಗೀತ ನಾಟಕಗಳೂ ರಚಿತವಾಗಿವೆ. ಚಲಚ್ಚಿತ್ರ ನಿರ್ಮಾಪಕರು ಅವನ ವ್ಯಕ್ತಿತ್ವವನ್ನು ತಮ್ಮ ಕಥಾವಸ್ತುವನ್ನಾಗಿ ಆರಿಸಿಕೊಂಡು ಚಿತ್ರರಚನೆ ಮಾಡಿದ್ದಾರೆ. ಇವೆಲ್ಲ ರಾಬಿನ್‌ಹುಡ್‌ನ ಜೀವನ, ಸಾಹಸಗಳು ಗಳಿಸಿರುವ ಅಪಾರ ಜನಪ್ರಿಯತೆಗೆ ನಿದರ್ಶನ.

## 'ರಾಮಾಯಣ'

"ಈ ಭೂಮಿಯ ಮೇಲೆ ನದಿಗಳು ಹರಿಯುತ್ತಿರುವಷ್ಟು ಕಾಲ, ಗಿರಿಗಳು ನಿಂತಿರುವಷ್ಟು ಕಾಲ ರಾಮಾಯಣವೂ ಪ್ರಚಲಿತವಾಗಿರುತ್ತದೆ"– ಎಂಬುದು 'ರಾಮಾಯಣ'ವನ್ನು ಕುರಿತ ಒಂದು ಹೇಳಿಕೆ. 'ರಾಮಾಯಣ'ವನ್ನು ಬರೆಯುವಂತೆ ವಾಲ್ಮೀಕಿಗೆ ಸೂಚಿಸಿದ ಸಂದರ್ಭದಲ್ಲಿ ಬ್ರಹ್ಮ ಈ ಮಾತನ್ನು ಹೇಳಿದನಂತೆ. 'ರಾಮಾಯಣ'ದ ನಾಯಕ ರಾಮಚಂದ್ರ. ಅವನು ಸತ್ಯಪರಾಕ್ರಮಿ; ಗಂಡಸರನ್ನೂ ಮೋಹಕ್ಕೆ ಒಳಗುಮಾಡುವಂಥದು ಅವನ ರೂಪು; ಅವನ ಶೌರ್ಯಕ್ಕಿಂತಲೂ ಮೇರೆಯಿಲ್ಲ; ಪಿತೃಭಕ್ತಿ ಅಸಮಾನವಾದದ್ದು. ರಾಮಚಂದ್ರನ ರಾಣಿ ಸೀತೆ. ಅವಳು ಅಪ್ರತಿಮ ಸುಂದರಿ; ಅವಳ ಶೀಲ, ಪತಿಭಕ್ತಿ, ಅಪೂರ್ವವಾದುವು.

ಹೀಗೆ 'ರಾಮಾಯಣ'ದಲ್ಲಿ ಬರುವ ಒಂದೊಂದು ಪಾತ್ರವೂ ಒಂದಲ್ಲ ಒಂದು ರೀತಿಯಲ್ಲಿ ಆಕರ್ಷಕ. ದಶರಥನ ಪುತ್ರವಾತ್ಸಲ್ಯ, ಭರತನ ಭ್ರಾತೃಪ್ರೇಮ, ಲಕ್ಷ್ಮಣನ ನಿಷ್ಠೆ, ಆಂಜನೇಯನ ಸ್ವಾಮಿಭಕ್ತಿ, ವಿಭೀಷಣನ ವಿವೇಕ, ಇವೆಲ್ಲ ನಮ್ಮ ಮನಸ್ಸನ್ನು ಸೆರೆಹಿಡಿಯುತ್ತವೆ.

ರಾಮಾಯಣವನ್ನು 'ಆದಿ ಕಾವ್ಯ' ಎನ್ನುವುದು ಸಂಪ್ರದಾಯ. ಆದಿ ಕಾವ್ಯವೆಂದರೆ ಮೊದಲನೆಯ ಕಾವ್ಯ. ರಾಮಾಯಣ ರಚನೆಗೆ ಹಿಂದೆ ಸಂಸ್ಕೃತದಲ್ಲಿ ರಚನೆಗಳು ಇದ್ದಿರಬಹುದಾದರೂ ಪೂರ್ಣ ಸ್ವರೂಪದ ಕಾವ್ಯ ರೂಪುಗೊಂಡದ್ದು ರಾಮಾಯಣದ ರಚನೆಯಿಂದಲೇ ಎಂಬುದು ಇದರ ಅರ್ಥ. ರಾಮಾಯಣವನ್ನೋದಿ ಅದರ ಕಾವ್ಯಶಕ್ತಿಯನ್ನು ಅರಿತಾಗ ಆದಿಕಾವ್ಯವೆಂಬ ಹೆಸರು ಅದಕ್ಕೆ ಎಷ್ಟು ಚೆನ್ನಾಗಿ ಒಪ್ಪುತ್ತದೆ ಎಂಬುದು ನಮಗೆ ಮನವರಿಕೆಯಾಗುತ್ತದೆ. 'ರಾಮಾಯಣ' ಆದಿ ಕಾವ್ಯ ಮಾತ್ರವಲ್ಲ, ಅದು ಅಮರ ಕಾವ್ಯ —ಎಂದೆನಿಸುತ್ತದೆ.



ರಷ್ಯದಲ್ಲಿ
'ರಾಮಾಯಣ' ನಾಟಕ

ವಾಲ್ಮೀಕಿ ಮಹರ್ಷಿ ಬರೆದ ಈ ಕಾವ್ಯ, ಅಲ್ಲಿಂದೀಚೆಗೆ ಅನೇಕ ಮಹಾಕವಿಗಳ ಕಾವ್ಯರಚನೆಗೆ ಸ್ಫೂರ್ತಿ ನೀಡಿದೆ. ಭಾಸ, ಕಾಳಿದಾಸ, ಭವಭೂತಿಯಂಥ ಮಹಾಕವಿಗಳು 'ರಾಮಾಯಣ'ದಿಂದ ತಮ್ಮ ನಾಟಕಗಳಿಗೆ ವಸ್ತುವನ್ನಾರಿಸಿಕೊಂಡಿದ್ದಾರೆ. ತಮಿಳು ಕವಿ ಕಂಬ, ಹಿಂದಿ ಕವಿ ತುಲಸೀದಾಸ- ಬಂಗಾಳಿ ಕವಿ ಕೃತ್ತಿವಾಸ ಹೀಗೆ ಹಲವಾರು ಕವಿಗಳು 'ರಾಮಾಯಣ'ವನ್ನಾಧರಿಸಿ, ತಮ್ಮ ತಮ್ಮ ಭಾಷೆಯಲ್ಲಿ ರಾಮಾಯಣಗಳನ್ನು ಬರೆದಿದ್ದಾರೆ. ಈ ಪರಂಪರೆ, ಇಂದಿಗೂ ನಡೆದು ಬಂದಿದೆ. ರಾಷ್ಟ್ರಕವಿ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಈ ಪರಂಪರೆಯಲ್ಲಿ ಅರಳಿದ ಇತ್ತೀಚಿನ ಕೃತಿ.

'ರಾಮಾಯಣ'ದ ರಚನೆಯಾದದ್ದು ಯಾವಾಗ ಎಂಬ ಬಗೆಗೆ ಏಕಾಭಿಪ್ರಾಯವಿಲ್ಲ. ಅದು 'ಮಹಾಭಾರತ'ಕ್ಕಿಂತ ಮುಂಚೆ ರಚಿತವಾಗಿರಬೇಕು. ರಚನೆಯ ಕಾಲ ಕ್ರಿ. ಪೂ. 3ನೆಯ ಶತಮಾನ ಇರಬಹುದು. ಕ್ರಿ. ಶ. 2-3ನೆಯ ಶತಮಾನದಲ್ಲಿ ಈಗಿನ ರೂಪ ಬಂದಿರಬೇಕು—ಎಂದು ವಿದ್ವಾಂಸರ ಅಭಿಪ್ರಾಯ.

ಈಗ ಪ್ರಚಲಿತವಾಗಿರುವ ರಾಮಾಯಣದಲ್ಲಿ ಏಳು ಕಾಂಡಗಳಿವೆ. ಇವುಗಳಲ್ಲಿ ಕೊನೆಯ ಕಾಂಡ ಮೂಲರಚನೆಗೆ ಸೇರಿದ್ದಲ್ಲವೆಂದೂ ಮೂಲ ಗ್ರಂಥರಚನೆಯಾದ ಮೇಲೆ ಬೇರೆ ಯಾರಿಂದಲೋ ಸೇರಿಸಲ್ಪಟ್ಟಿದ್ದೆಂದೂ ಅಭಿಪ್ರಾಯವಿದೆ. ಆರು ಕಾಂಡಗಳಲ್ಲಿ ಶ್ರೀರಾಮನ ಮತ್ತು ಅವನ ಸಹೋದರರ ಜನನ, ಬಾಲ್ಯ, ವಿವಾಹ, ರಾಮನ ವನಪ್ರಯಾಣ, ದಶರಥನ ಮರಣ, ರಾಮನ ವನವಾಸ, ಸೀತಾಪಹರಣ, ಸುಗ್ರೀವ ಮೈತ್ರಿ, ಸೀತಾನ್ವೇಷಣೆ, ಸೇತುಬಂಧನ, ರಾಮ–ರಾವಣ ಯುದ್ಧ, ರಾವಣ ವಧೆ, ಅಯೋಧ್ಯಾಗಮನ, ಶ್ರೀರಾಮ ಪಟ್ಟಾಭಿಷೇಕ–ಇವುಗಳ ನಿರೂಪಣೆಯಿದೆ. ವಾಲ್ಮೀಕಿ ಬರೆದ ರಾಮಾಯಣ ಇಲ್ಲಿಗೆ ಮುಗಿಯುತ್ತದೆಂದು ವಿದ್ವಾಂಸರ ಅಭಿಪ್ರಾಯ. ಏಳನೆಯದಾದ ಉತ್ತರ ಕಾಂಡದಲ್ಲಿ ಸೀತಾವನವಾಸ, ಲವಕುಶ ಜನನ, ರಾಮನೊಡನೆ ಲವಕುಶರ ಕಾಳಗ, ಸೀತಾರಾಮರ ಪುನರ್ಮಿಲನ, ಸೀತೆಯ ಭೂಗರ್ಭ ಪ್ರವೇಶ –ಇವು ಪ್ರಧಾನಾಂಶಗಳು.

ಕಾವ್ಯರೂಪ ಮತ್ತು ರಸಪುಷ್ಟಿಯ ದೃಷ್ಟಿಯಿಂದ 'ರಾಮಾಯಣ' ಶ್ರೀರಾಮ ಪಟ್ಟಾಭಿಷೇಕದಿಂದ ಮುಕ್ತಾಯವಾಗುವುದೇ ಸೂಕ್ತ ಎನಿಸುತ್ತದೆ. ಒಂದು ರೀತಿಯಲ್ಲಿ ಸಂಪ್ರದಾಯವೂ ಇದಕ್ಕೆ ಬೆಂಬಲವಾಗಿದೆ. ಸಾಮಾನ್ಯವಾಗಿ 'ರಾಮಾಯಣ' ಪಾರಾಯಣವನ್ನು ಶ್ರೀರಾಮ ಪಟ್ಟಾಭಿಷೇಕದೊಡನೆ ಮುಗಿಸುವುದೇ ಪದ್ಧತಿ. ಹೀಗೆ 'ರಾಮಾಯಣ' ಸುಖಾಂತವಾದ ಕಥೆಯಾಗುತ್ತದೆಯಾದರೂ ಅದರ ಪ್ರಧಾನ ಶ್ರುತಿ ವಿರಹ, ಇದಕ್ಕೆ ಸಮಾನಾಂತರವಾಗಿ ಪ್ರೇಮದ ಹೊನಲೂ ಹರಿಯುತ್ತದೆ.

ತನ್ನ ಪ್ರಿಯ ಪುತ್ರನನ್ನು ಕಾಡಿಗೆ ಕಳುಹಿಸಿ ಆ ಅಗಲಿಕೆಯ ವ್ಯಥೆಯಿಂದ ಸಾಯುತ್ತಾನೆ ದಶರಥ; ಅವನ ಮರಣ ಅವನ ರಾಣಿಯರನ್ನು ದುಃಖಕ್ಕೆ ಈಡುಮಾಡುತ್ತದೆ; ಕಾಡಿಗೆ ಹೋದ ರಾಮ, ತನ್ನ ಮೇಲೆ ಅಭಿಮಾನವಿಟ್ಟಿದ್ದ ಪ್ರಜೆಗಳಿಂದ ದೂರವಾಗುತ್ತಾನೆ; ಪ್ರಜೆಗಳು ಇದಕ್ಕಾಗಿ ಶೋಕಿಸುತ್ತಾರೆ. ಅಯೋಧ್ಯೆಯಲ್ಲಿ ಉಳಿದ ಭರತನೂ ದುಃಖಿ. ರಾಮನಿಂದ ದೂರವಾದ ಜೀವನ ಅವನಿಗೆ ಬೇಸರ ತರುತ್ತದೆ. ಸೀತಾಪಹರಣ ಪ್ರಕರಣವಂತೂ ರಾಮಾಯಣದಲ್ಲಿ ಬರುವ ವಿರಹ ಪ್ರಸಂಗಗಳಿಗೆ ಶಿಖರಪ್ರಾಯ.



ಸೀತಾಪಹರಣದ ಬಳಿಕ ; ನರ-ವಾನರ ಮೈತ್ರಿ

ಕಾಡಿಗೆ ಹೋದ ಮಗನಿಂದ ದೂರವಾಗಿ ಬಾಳಿದ ಕೌಸಲ್ಯೆ, ಗಂಡ ಲಕ್ಷ್ಮಣ ವನವಾಸದಲ್ಲಿದ್ದಾಗ ತಾನು ಅರಮನೆಯಲ್ಲಿ ವಾಸಮಾಡಿದ ಊರ್ಮಿಳೆ ಇವರ ವಿರಹ ದುಃಖವೇನೂ ಸಾಮಾನ್ಯವಾದದ್ದಲ್ಲ. ಇಂಥ ವಿರಹಗಳ ತೆರೆಯನ್ನು ಛೇದಿಸಿಕೊಂಡು ಹೋಗುವ ಸತ್ವಶಾಲಿ ಪ್ರೇಮದ ನಿರೂಪಣೆ 'ರಾಮಾಯಣ'ದಲ್ಲಿ ತುಂಬಿ ಬಂದಿದೆ.

'ರಾಮಾಯಣ' ರಚನೆಗೆ ಕಾರಣವಾಯಿತೆಂದು ಹೇಳುವ ಒಂದು ಪ್ರಸಂಗವೂ ಈ ಕಾವ್ಯದ ಪ್ರಧಾನಶ್ರುತಿ ವಿರಹ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ವಾಲ್ಮೀಕಿ ಮಹರ್ಷಿ ನದೀಸ್ನಾನಕ್ಕೆ ಹೊರಟಿರುತ್ತಾರೆ. ಸುಪ್ರಸನ್ನವಾದ ಆ ಪ್ರಾತಃಕಾಲದಲ್ಲಿ ಎರಡು ಕ್ರೌಂಚ ಪಕ್ಷಿಗಳು ಸಂತೋಷವಾಗಿ ಸರಸವಾಡುತ್ತ ಆಕಾಶದಲ್ಲಿ ಹಾರಾಡುತ್ತಿರುತ್ತವೆ. ಆಗ ಬೇಡನೊಬ್ಬ ಬಾಣ ಬಿಡುತ್ತಾನೆ. ಅದರ ಹೊಡೆತಕ್ಕೆ ಸಿಕ್ಕಿ ಗಂಡು ಹಕ್ಕಿ ಸತ್ತುಬೀಳುತ್ತದೆ ; ಈ ಅಗಲಿಕೆಯಿಂದ ನೊಂದ ಹೆಣ್ಣು ಹಕ್ಕಿ ನೋವಿನಿಂದ ಕೂಗಿಕೊಳ್ಳುತ್ತದೆ. ಇದು ವಾಲ್ಮೀಕಿ ಮಹರ್ಷಿಯ ಹೃದಯವನ್ನು ಮುಟ್ಟುತ್ತದೆ. ಅವರು ಬೇಡನನ್ನು ಶಪಿಸುತ್ತಾರೆ. ಅದು ಒಂದು ಶ್ಲೋಕದ ರೂಪದಲ್ಲಿ ಹೊರಬೀಳುತ್ತದೆ. ಹೀಗೆ ಶೋಕದಿಂದ ಸ್ಫುರಿಸಿತು ಶ್ಲೋಕ–ರಾಮಾಯಣದ ಆದಿ ಶ್ಲೋಕ.

ಕಾವ್ಯದೃಷ್ಟಿಯಿಂದ 'ರಾಮಾಯಣ' ಅತ್ಯುತ್ತಮವಾದದ್ದು. ಅದರಲ್ಲಿ ಬರುವ ವರ್ಣನೆಗಳು, ಉಪಮಾನಗಳು, ಪಾತ್ರರಚನೆ, ಸರಳ ಭಾಷೆ —ಇವೆಲ್ಲ ಮೋಹಕವಾದುವು.

'ರಾಮಾಯಣ'ಕ್ಕೆ ಆಧ್ಯಾತ್ಮಿಕ, ಸಾಂಕೇತಿಕ ಅರ್ಥವಿದೆಯೆಂದೂ ಹೇಳುತ್ತಾರೆ.

ದೇವುಡು ಅವರು ಹೇಳಿದ ಹಾಗೆ, "ಮಹಾಭಾರತ ನಾನಾ ಬಿಳಲುಗಳನ್ನು ಬಿಟ್ಟು ವಿಸ್ತಾರವಾಗಿ ಹರಡಿರುವ ಭವ್ಯ ವೃಕ್ಷ; ರಾಮಾಯಣ ಎತ್ತರವಾಗಿ ಬೆಳೆದು ಗಂಭೀರವಾಗಿ ನಿಂತಿರುವ ಪವಿತ್ರ ಅಶ್ವತ್ಥ ವೃಕ್ಷ."

**ನೋಡಿ : ವಾಲ್ಮೀಕಿ**

## ರಾಷ್ಟ್ರಕವಿ

ಸರಕಾರದ ವಿರಿಯ ಗೌರವಕ್ಕೆ ಪಾತ್ರನಾದ ಕವಿಯನ್ನು 'ರಾಷ್ಟ್ರಕವಿ' ಎಂದು ಕರೆಯುವುದು ವಾಡಿಕೆ.

ಕವಿಗಳನ್ನು ಗೌರವಿಸುವುದು ಹಳೆಯ ಸಂಪ್ರದಾಯ. ಪ್ರಾಚೀನ ಗ್ರೀಕ್ ಮತ್ತು ರೋಮ್ ದೇಶಗಳವರು ತಮ್ಮ ಕವಿಗಳಿಗೆ ಹಸಿರೆಲೆಯ ಕಿರೀಟವಿಟ್ಟು ಸನ್ಮಾನಿಸುತ್ತಿದ್ದರು. ಲಾರಿಯೆಟ್ ಎಲೆಗಳಿಂದ ಈ ಕಿರೀಟವನ್ನು ಮಾಡುತ್ತಿದ್ದುದರಿಂದ, ಈ ಕಿರೀಟ ಪಡೆದವರು 'ಲಾರಿಯೆಟ್' ಎನಿಸಿಕೊಂಡರು. ಈ ಮಾತನ್ನು ಈಗ ಸಾಂಕೇತಿಕವಾಗಿ 'ಗೌರವ ಪಡೆದರು' ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. ಉದಾಹರಣೆಗೆ ನೊಬೆಲ್ ಬಹುಮಾನ ಪಡೆದವರನ್ನು 'ನೊಬೆಲ್ ಲಾರಿಯೆಟ್' ಎನ್ನುತ್ತಾರೆ. ಇಂಗ್ಲೆಂಡಿನಲ್ಲಿ ರಾಜಮನ್ನಣೆ ಪಡೆದ ಕವಿಯನ್ನು 'ಪೊಯೆಟ್ ಲಾರಿಯೆಟ್' ಎನ್ನುತ್ತಾರೆ.

14ನೆಯ ಶತಮಾನದಲ್ಲಿ ಇಂಗ್ಲೆಂಡನ್ನು ಆಳಿದ ಮೂರನೆಯ ಎಡ್ವರ್ಡ್, ಕವಿ ಜೆಫ್ರಿ ಚಾಸರ್‌ಗೆ ವಿಶ್ರಾಂತಿವೇತನವನ್ನೂ ಕೊಂಚ ವೈನನ್ನೂ ಕೊಡುತ್ತಿದ್ದ. 17ನೆಯ ಶತಮಾನದ ಮೊದಲ ಭಾಗದಲ್ಲಿ ಬ್ರಿಟನನ್ನು ಆಳಿದ 1ನೆಯ ಜೇಮ್ಸ್‌ನ ಕಾಲದಲ್ಲಿದ್ದ ಕವಿ ಬೆನ್ ಜಾನ್‌ಸನ್ ಆಸ್ಥಾನ ಕವಿಯಾಗಿ ನಿಯಮಿಸಲ್ಪಟ್ಟ.

ಹೀಗೆ ನಿಯಮಿತನಾದ ಕವಿಯನ್ನು 'ಪೊಯೆಟ್ ಲಾರಿಯೆಟ್' ಎಂದು ಕರೆಯುವ ಪದ್ಧತಿ ಆರಂಭವಾದದ್ದು 1670ರಿಂದ. ಅದಕ್ಕೆ ಮುಂಚೆ ಆಸ್ಥಾನಕವಿಗೆ ಈ ಬಿರುದಿರಲಿಲ್ಲ. ಈ ಬಿರುದನ್ನು ಪಡೆದ ಮೊದಲ ಕವಿ ಜಾನ್ ಡ್ರೈಡನ್. ಆತನಿಗೆ ವಾರ್ಷಿಕ ವೇತನವಾಗಿ 300 ಪೌಂಡುಗಳೂ ಒಂದು ಪೀಪಾಯಿ ವೈನೂ ಸಿಗುತ್ತಿದ್ದುವು.

ವಿಕ್ಟೋರಿಯಾ ಮಹಾರಾಣಿ ಲಾರ್ಡ್ ಟೆನಿಸನ್‌ನನ್ನು ಇಂಗ್ಲೆಂಡಿನ ರಾಷ್ಟ್ರಕವಿಯಾಗಿ ಘೋಷಿಸಿದಳು. ಆತನಿಗೆ ತಿಂಗಳಿಗೆ 72 ಪೌಂಡು ವೇತನವನ್ನೂ ಮದ್ಯದ ಬದಲು 27 ಪೌಂಡು ಹಣವನ್ನೂ ಕೊಟ್ಟಳು. ಈತ 1850-92ರ ಅವಧಿಗೆ ರಾಷ್ಟ್ರಕವಿಯಾಗಿದ್ದ. ಆತನಿಗೆ ರಾಣಿಯ ಬಗೆಗೆ ಅಪಾರ ಪ್ರೀತಿ ಗೌರವಗಳಿದ್ದುವು. ಟೆನಿಸನ್ ಆಕೆಗಾಗಿ ಅನೇಕ ಕವಿತೆಗಳನ್ನು ಬರೆದಿದ್ದ.

ಇಂಗ್ಲೆಂಡಿನ ರಾಷ್ಟ್ರಕವಿಯ ವೇತನದಲ್ಲಿ ಕಾಲಕಾಲಕ್ಕೆ ಬದಲಾವಣೆಯಾಯಿತು. ಹಾಗೆಯೇ ಅವರ ಕರ್ತವ್ಯದಲ್ಲೂ. ರಾಜಮನೆತನದವರ ಜನ್ಮದಿನಗಳು, ರಾಜ್ಯದ ಉತ್ಸವ ಸಂದರ್ಭಗಳಲ್ಲಿ ರಾಷ್ಟ್ರಕವಿ ಕವಿತೆಗಳನ್ನು ರಚಿಸಬೇಕಾದದ್ದು ತಪ್ಪಿಹೋಯಿತು. 1843ರಿಂದ 1850ರ ವರೆಗೆ ರಾಷ್ಟ್ರಕವಿಯಾಗಿದ್ದ ವಿಲಿಯಂ ವರ್ಡ್ಸ್‌ವರ್ತ್ ಆ ಪದವಿಯನ್ನೊಪ್ಪಿಕೊಳ್ಳುವ ಮೊದಲು, ನಿರ್ದಿಷ್ಟ ಸಂದರ್ಭಗಳಲ್ಲಿ ಕವಿತೆಗಳನ್ನು ಬರೆಯಬೇಕೆಂದು ತನ್ನನ್ನು ನಿರ್ಬಂಧಪಡಿಸಬಾರದೆಂದು ಶರತ್ತುಹಾಕಿದ್ದ. ಅದಕ್ಕೆ ಒಪ್ಪಿಗೆಯೂ ದೊರೆಯಿತು.

18ನೆಯ ಶತಮಾನದಲ್ಲಿ ರಾಜಕೀಯ ಕಾರಣಗಳಿಗಾಗಿ ರಾಷ್ಟ್ರಕವಿಗಳನ್ನು ಆರಿಸಲು ಆರಂಭಿಸಿದಾಗ ಆ ಪದವಿಗಿದ್ದ ಗೌರವ ಆದರಗಳು ಕಡಮೆಯಾದುವು.

ಇಂಗ್ಲೆಂಡಿನ ರಾಷ್ಟ್ರಕವಿಯನ್ನು ಆರಿಸುವ ಹೊಣೆ ಈಗ ಪ್ರಧಾನ ಮಂತ್ರಿಯದು. ಈಗಲೂ ರಾಷ್ಟ್ರಕವಿಯನ್ನು ರಾಜಪರಿವಾರಕ್ಕೆ ಸೇರಿದವನೆಂದೇ ಪರಿಗಣಿಸುತ್ತಾರೆ.

1930ರಿಂದ 1967ರ ವರೆಗೆ ಜಾನ್ ಮೇಸ್‌ಫೀಲ್ಡ್ ಇಂಗ್ಲೆಂಡಿನ ರಾಷ್ಟ್ರಕವಿಯಾಗಿದ್ದ. 1967ರಿಂದ 1972ರ ತನಕ ರಾಷ್ಟ್ರಕವಿಯಾಗಿದ್ದವನು ಸೆಸಿಲ್ ಡೇ ಲೂಯಿ. ಆತನ ಮರಣಾನಂತರ ನಿಯಮಿತನಾದ ರಾಷ್ಟ್ರಕವಿ ಜಾನ್ ಬೆಟ್‌ಜೆಮಾನ್.

ನಮ್ಮ ರಾಷ್ಟ್ರದಲ್ಲೂ ಕವಿಗಳನ್ನು ಗೌರವಿಸುವ ಪದ್ಧತಿ ಹಿಂದಿನಿಂದ ನಡೆದುಬಂದಿದೆ. ಭಾರತದ ರಾಜ ಮಹಾರಾಜರೂ ಚಕ್ರವರ್ತಿಗಳೂ

[illegible] ಕರೆಯುತ್ತಿದ್ದರು.

ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದಮೇಲೆ, ರಾಜ್ಯ ಸರಕಾರಗಳು ತಮ್ಮ ತಮ್ಮ ಪ್ರದೇಶದ ಪ್ರಮುಖ ಕವಿಗಳನ್ನು ಗೌರವಿಸುವ ಪದ್ಧತಿಯನ್ನು ಆಚರಣೆಗೆ ತಂದುವು. ಹೀಗೆ ಮನ್ನಣೆ ಪಡೆದ ಕವಿಗಳನ್ನು 'ರಾಷ್ಟ್ರಕವಿ' ಎಂದು ಕರೆಯುವ ಪ್ರಥಾ ವಾಡಿಕೆಯಾಯಿತು. 1949ರಲ್ಲಿ ಮದರಾಸು ರಾಜ್ಯ ಸರಕಾರ (ಆಗ ದಕ್ಷಿಣ ಕನ್ನಡ ಜಿಲ್ಲೆ ಮದರಾಸು ರಾಜ್ಯಕ್ಕೆ ಸೇರಿತ್ತು) ಎಂ. ಗೋವಿಂದ ಪೈ ಅವರಿಗೆ 'ರಾಷ್ಟ್ರಕವಿ' ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು.

ಈಗ ಕುವೆಂಪು ಅವರು 'ರಾಷ್ಟ್ರಕವಿ' ಎಂದು ಪ್ರಸಿದ್ಧರಾಗಿದ್ದಾರೆ.

ನೋಡಿ : ಕುವೆಂಪು ; ಗೋವಿಂದ ಪೈ

## ರಾಷ್ಟ್ರಗೀತೆ

"ಜನಗಣ ಮನ ಅಧಿನಾಯಕ ಜಯಹೇ
ಭಾರತ ಭಾಗ್ಯವಿಧಾತ............"

ಇದು ಭಾರತದ ರಾಷ್ಟ್ರಗೀತೆ. ಇದು ಯಾವಾಗ ಎಲ್ಲಿ ಕೇಳಿ ಬಂದರೂ ಥಟಕ್ಕನೆ ಎದ್ದುನಿಂತು ಹಾಡು ಮುಗಿಯುವವರೆಗೂ ಲಕ್ಷ್ಯಕೊಟ್ಟು ಕೇಳುತ್ತಿರಬೇಕಾದದ್ದು ನಾಗರಿಕನ ಕರ್ತವ್ಯ. ತನ್ನ ದೇಶವನ್ನು ಕುರಿತು ಗೌರವ ವ್ಯಕ್ತಪಡಿಸುವ ರೀತಿ ಇದು.

ಜಗತ್ತಿನ ವಿವಿಧ ರಾಷ್ಟ್ರಗಳಲ್ಲಿ ಒಂದೊಂದಕ್ಕೂ ರಾಷ್ಟ್ರಧ್ವಜ ಇರುವಂತೆ ತನ್ನದೇ ಆದ ರಾಷ್ಟ್ರಗೀತೆಯೂ ಇರುತ್ತದೆ. ಕೆಲವು ರಾಷ್ಟ್ರಗೀತೆಗಳು ದೇಶದ ಚರಿತ್ರೆಯಲ್ಲಿ ಮಹತ್ವದ ಘಟನೆ ಅಥವಾ ಕಾಲವನ್ನು ಕುರಿತವು. ತಮ್ಮ ರಾಷ್ಟ್ರ ಸಾಧಿಸಬಯಸುವ ಸುಖದ ದಿನಗಳ ಕಲ್ಪನೆ, ಬೇರೆ ಕೆಲವು ದೇಶಗಳ ರಾಷ್ಟ್ರಗೀತೆಗಳ ವಸ್ತು. ತಮ್ಮ ತಾಯ್ನಾಡಿನ ಮೇಲೆ ತಮಗಿರುವ ಪ್ರೀತಿಯ ನಿರೂಪಣೆ ಇತರ ಕೆಲವು ರಾಷ್ಟ್ರಗೀತೆಗಳಲ್ಲಿರುತ್ತದೆ. ತಮ್ಮ ದೇಶದ ನೈಸರ್ಗಿಕ ಸೊಬಗಿನ ಬಣ್ಣನೆ ಇನ್ನು ಕೆಲವು ರಾಷ್ಟ್ರಗೀತೆಗಳ ವಸ್ತು. ಸಾಮಾನ್ಯವಾಗಿ ರಾಷ್ಟ್ರಗೀತೆ ಯಾವುದು ಎಂಬುದನ್ನು ಆಯಾ ರಾಷ್ಟ್ರದ ಸರಕಾರ ನಿರ್ಧರಿಸುತ್ತದೆ. ರಾಷ್ಟ್ರೀಯ ಮಹತ್ವವಿರುವ ದಿನಗಳಲ್ಲೂ ಸಾರ್ವಜನಿಕ ಕಾರ್ಯಕ್ರಮಗಳ ಕೊನೆಯಲ್ಲೂ ರಾಷ್ಟ್ರಗೀತೆಯನ್ನು ಹಾಡುವುದು ಪದ್ಧತಿ.

ರಾಷ್ಟ್ರಗೀತೆಯ ಕಲ್ಪನೆ ಹುಟ್ಟಿದ್ದು ಲಂಡನಿನ ನಾಟಕ ಶಾಲೆಯೊಂದರಲ್ಲಿ, 1745ರಲ್ಲಿ. ಇಂಗ್ಲೆಂಡಿನಲ್ಲಿ ದೊರೆ ಎರಡನೆಯ ಜಾರ್ಜ್ ಆಳುತ್ತಿದ್ದಾಗ ಅವನಿಂದ ಅರಸುಪಟ್ಟವನ್ನು ಕಿತ್ತುಕೊಳ್ಳಲು ಸ್ಟ್ಯುಅರ್ಟ್ ರಾಜವಂಶದವನೊಬ್ಬ ದಾಳಿ ನಡೆಸಿದ. ಒಂದಾದ ಮೇಲೆ ಒಂದು ಪ್ರದೇಶವನ್ನು ವಶಪಡಿಸಿಕೊಳ್ಳುತ್ತ ಮುಂದುವರಿದ. ಏನಾಗುತ್ತದೋ ಎಂದು ಎಲ್ಲರಿಗೂ ಕಾತರ. ಇದೇ ಸಮಯ ಡ್ರೂರಿ ಲೇನ್ ಥಿಯೇಟರಿನಲ್ಲಿ ಸಂಗೀತ ನಿರ್ದೇಶಕನಾಗಿದ್ದ ಥಾಮಸ್ ಆರ್ನೆ, ಅರಸನ ಮೇಲೆ ತನಗಿದ್ದ ಪ್ರೀತಿ ವಿಶ್ವಾಸವನ್ನು ಒಂದು ಹಾಡಿನ ಮೂಲಕ ವ್ಯಕ್ತಪಡಿಸಿದ. ಅದರ ಅಭಿಪ್ರಾಯ ಇಷ್ಟು :

"ದೇವರೇ ನಮ್ಮಯ ದೊರೆಯನು ಹರಸು
ಉದಾತ್ತನಾಗಿಹ ಜಾರ್ಜ್ ದೊರೆಯನು ಉಳಿಸು"

ಡ್ರೂರಿ ಲೇನ್ ಥಿಯೇಟರಿನಲ್ಲಿ ನಡೆಯುತ್ತಿದ್ದ ಪ್ರತಿ ನಾಟಕದ ಕೊನೆಯಲ್ಲೂ ಈ ಹಾಡನ್ನು ಹಾಡಿದಾಗ, ಜನ ಅದನ್ನು ಉತ್ಸಾಹದಿಂದ ಸ್ವಾಗತಿಸಿದರು. ಆ ಬಳಿಕ ಬೇರೆ ನಾಟಕ ಕಂಪನಿಗಳವರೂ ಈ ಹಾಡನ್ನು ಹಾಡುವ ಪದ್ಧತಿಯನ್ನು ಅನುಸರಿಸಲು ಆರಂಭಿಸಿದರು. ಒಂದು ಪತ್ರಿಕೆ ಈ ಹಾಡನ್ನು ಮುದ್ರಿಸಿತು. ಅರಸನ ಅನುಯಾಯಿಗಳು ಎಲ್ಲೆಲ್ಲೂ ಇದನ್ನು ಹಾಡತೊಡಗಿದರು. ಯಾವುದೇ ನಾಟಕವಾಗಲೀ ಸಂಗೀತ ಕಚೇರಿಯಾಗಲೀ ಈ ಹಾಡು ಇಲ್ಲದೆ ಸಂಪೂರ್ಣವಾಗುವುದಿಲ್ಲ ಎನ್ನುವ ಮಟ್ಟಿಗೆ ಇದು ಪ್ರಚಾರಕ್ಕೆ ಬಂತು. ರಾಜಭಕ್ತಿ, ದೇಶಭಕ್ತಿಯ ಸಂಕೇತವಾಗಿದ್ದ ಈ ಹಾಡು 'ರಾಷ್ಟ್ರಗೀತೆ'ಯಾಗಿ ಸ್ಥಿರಪಟ್ಟಿತು. ಕಾಲಕಾಲಕ್ಕೆ ಇದರ ಸಾಹಿತ್ಯದಲ್ಲಿ ಸಂದರ್ಭೋಚಿತ ಬದಲಾವಣೆಗಳು ಆದುವು.

ಆಸ್ಟ್ರಿಯದ ಶ್ರೇಷ್ಠ ಸಂಗೀತ ರಚನಕಾರ ಹೇಡನ್ ಇಂಗ್ಲೆಂಡಿಗೆ ಬಂದಿದ್ದಾಗ ಬ್ರಿಟಿಷ್ ರಾಷ್ಟ್ರಗೀತೆಯನ್ನು ಕೇಳಿ ಮೆಚ್ಚಿಕೊಂಡ. ತನ್ನ ದೇಶಕ್ಕೂ ಇಂಥದೊಂದು ಗೀತೆ ಇದ್ದರೆ ಚೆನ್ನು ಎನಿಸಿತು ಅವನಿಗೆ. 1797ರಲ್ಲಿ ಆಸ್ಟ್ರಿಯದ ರಾಷ್ಟ್ರಗೀತೆ ರೂಪುಗೊಂಡದ್ದು ಇವನಿಂದಲೇ. ಹೇಡನ್ ರಚಿಸಿದ ಸಂಗೀತವನ್ನು ಆಧರಿಸಿ ಜರ್ಮನಿಯ ರಾಷ್ಟ್ರಗೀತೆ ಹುಟ್ಟಿತು. ಜರ್ಮನಿ ಮತ್ತು ಆಸ್ಟ್ರಿಯಗಳ ಸೇನೆಗಳನ್ನೆದುರಿಸಿ ಹೋರಾಡುತ್ತಿದ್ದ ಫ್ರೆಂಚ್ ಸೇನಾಧಿಕಾರಿ ರಚಿಸಿದ ಸಮರ ಗೀತೆಯನ್ನು ಫ್ರಾನ್ಸ್, ತನ್ನ ರಾಷ್ಟ್ರಗೀತೆಯನ್ನಾಗಿ ಅನಂತರ ಅಂಗೀಕರಿಸಿತು.

ಇಂಗ್ಲೆಂಡ್–ಅಮೆರಿಕಗಳ ಮಧ್ಯೆ 1812–14ರಲ್ಲಿ ನಡೆದ ಯುದ್ಧದ ಒಂದು ಸನ್ನಿವೇಶ ಅಮೆರಿಕದ ರಾಷ್ಟ್ರಗೀತೆಯ ರಚನೆಗೆ ಕಾರಣವಾಯಿತು. ಇಂಗ್ಲೆಂಡಿನ ಪ್ರಬಲ ನೌಕಾದಳವು ಬಾಲ್ಟಿಮೋರ್ ಬಂದರಿನ ಮೇಲೆ ದಾಳಿ ನಡೆಸಿತು. ನಗರದ ರಕ್ಷಣೆಗಾಗಿ ಮ್ಯಾಕ್‌ಹೆನ್ರಿ ಕೋಟೆಯಲ್ಲಿದ್ದ ಅಮೆರಿಕನ್ ಸೈನಿಕರು ವೀರಾವೇಶದಿಂದ ಹೋರಾಡುತ್ತಿದ್ದರು. ಫಿರಂಗಿಗಳು ಬೆಂಕಿ ಉಗುಳುತ್ತಿದ್ದುವು. ಫ್ರಾನ್ಸಿಸ್ ಸ್ಕಾಟ್ ಕೀ ಎಂಬ ಬಾಲ್ಟಿಮೋರಿನ ವಕೀಲನೊಬ್ಬ ಒಬ್ಬ ಗೆಳೆಯನನ್ನು ಕರೆದುಕೊಂಡು ಪುಟ್ಟ ದೋಣಿಯಲ್ಲಿ ಕುಳಿತು ಇಂಗ್ಲಿಷ್ ಯುದ್ಧ ನೌಕೆಗಳ ಕಡೆಗೆ ಹೊರಟಿದ್ದ –ಸೆರೆಯಾಗಿದ್ದ ಮಿತ್ರನೊಬ್ಬನನ್ನು ಬಿಡುವಂತೆ ನೌಕಾಧಿಕಾರಿಯನ್ನು ಕೇಳಿಕೊಳ್ಳಲು. ಇವರು ಯುದ್ಧನೌಕೆಯನ್ನು ಸೇರುವುದಕ್ಕೂ ಭಾರಿ ಫಿರಂಗಿ ಹೋರಾಟ ಆರಂಭವಾಗುವುದಕ್ಕೂ ಸರಿಹೋಯಿತು. ಇಬ್ಬರೂ ಕೈಯಲ್ಲಿ ಜೀವ ಹಿಡಿದು ಆ ರಾತ್ರಿಯನ್ನು ನೌಕೆಯಲ್ಲೇ ಕಳೆಯಬೇಕಾಯಿತು. ಮುಂಜಾನೆ ಬೆಳಕು ಹರಿಯುವ ಹೊತ್ತಿಗೆ ಕಣ್ಣುಜ್ಜಿಕೊಂಡು ಮ್ಯಾಕ್‌ಹೆನ್ರಿ ಕೋಟೆಯ ಕಡೆ ನೋಡುತ್ತಾನೆ. ಪಟ್ಟಿಗಳು ಮತ್ತು ನಕ್ಷತ್ರಗಳಿಂದ ಕೂಡಿದ ಸ್ವತಂತ್ರ ಅಮೆರಿಕದ ಧ್ವಜ ಇನ್ನೂ ಅಲ್ಲಿ ಹಾರಾಡುತ್ತಿತ್ತು. ಕೀಗೆ ಆದ ಆನಂದ ಹೇಳತೀರದು. ಕೆಳಗೆ ಬಿದ್ದಿದ್ದ ಲಕೋಟೆಯೊಂದನ್ನು ಎತ್ತಿಕೊಂಡು ಅದರ ಹಿಂಬದಿಯಲ್ಲಿ 'ತಾರೆಗಳಿಂದ ಥಳಥಳಿಸುವ ಬಾವುಟ' ಎಂಬ ಪದ್ಯವನ್ನು ಬರೆದ. ಇದನ್ನು ಬರೆದದ್ದು 1814ರಲ್ಲಿ. ಮುಂದೆ ಒಂದು ಶತಮಾನಕ್ಕೂ ಹೆಚ್ಚು ಕಾಲದ ಬಳಿಕ, 1931ರಲ್ಲಿ, ಅದು ಅಮೆರಿಕದ ಅಧಿಕೃತ ರಾಷ್ಟ್ರಗೀತೆಯಾಯಿತು. ಆ ಹಾಡು ಜನಪ್ರಿಯವಾಯಿತು. ಈ ಹಾಡಿಗೆ ಅಳವಡಿಸಿದ ಸಂಗೀತದ ಧಾಟಿ ಮಾತ್ರ ಹಳೆಯ ಇಂಗ್ಲೆಂಡಿನ ಒಂದು ಪಡಖಾನೆ ಹಾಡಿನದು.

ಎಲ್ಲ ರಾಷ್ಟ್ರಗೀತೆಗಳೂ ರಾಷ್ಟ್ರೀಯ ಭಾವನೆಯಿಂದ ತುಂಬಿ ತುಳುಕುತ್ತಿರುವುದು ಸಾಮಾನ್ಯ ಲಕ್ಷಣವಾದರೂ ಇದಕ್ಕೆ ಒಂದು ವಿನಾಯಿತಿ ಲಕ್ಸೆಂಬರ್ಗ್‌ನ ರಾಷ್ಟ್ರಗೀತೆ. ಆ ದೇಶದಲ್ಲಿ ರೈಲುಬಂಡಿಯನ್ನು ಮೊಟ್ಟಮೊದಲಿಗೆ ಓಡಿಸಿದ ಸಂದರ್ಭದಲ್ಲೇ ರಚಿತವಾದ 'ಬೆಂಕಿಯ ಬಂಡಿಯು ಸಿದ್ಧವಾಗಿದೆ' ಎಂಬ ಹಾಡೇ ಅಲ್ಲಿನ ರಾಷ್ಟ್ರಗೀತೆ.

ರವೀಂದ್ರನಾಥ ಠಾಕೂರರು ರಚಿಸಿದ 'ಜನ ಗಣ ಮನ' ಸ್ವತಂತ್ರ ಭಾರತದ ರಾಷ್ಟ್ರಗೀತೆ, ಈ ಹಾಡು ರಾಷ್ಟ್ರಗೀತೆ ಎಂದು ಅಂಗೀಕೃತವಾದದ್ದು 1950ರ ಜನವರಿ 26ರಂದು. ಇದೇ ಸಂದರ್ಭದಲ್ಲಿ, ಬಂಕಿಮ ಚಂದ್ರ ಚಟ್ಟೋಪಾಧ್ಯಾಯರವರ 'ವಂದೇಮಾತರಂ' ಹಾಡನ್ನು 'ರಾಷ್ಟ್ರಸ್ತುತಿ' ಎಂದು ಸ್ವೀಕರಿಸಿ ಅದಕ್ಕೂ ರಾಷ್ಟ್ರಗೀತೆಯ ಸ್ಥಾನಮಾನ ನೀಡಲಾಯಿತು.

1971ರಲ್ಲಿ ರೂಪುಗೊಂಡ ನಮ್ಮ ನೆರೆರಾಷ್ಟ್ರವಾದ ಬಾಂಗ್ಲಾದೇಶ ರವೀಂದ್ರನಾಥ ಠಾಕೂರರ ಗೀತೆಯೊಂದನ್ನು ರಾಷ್ಟ್ರಗೀತೆಯೆಂದು ಆಯ್ಕೆ ಮಾಡಿತು; ನಸರ್ ಉಲ್ ಇಸ್ಲಾಂ ಅವರ ಇನ್ನೊಂದು ಹಾಡನ್ನು 'ರಾಷ್ಟ್ರಸ್ತವ'ವಾಗಿ ಅಂಗೀಕರಿಸಿತು.

1957ನೆಯ ಮಾರ್ಚ್ ತಿಂಗಳಲ್ಲಿ ಘಾನ ಸ್ವತಂತ್ರವಾದಾಗ ಸಂಗೀತ ವಾದ್ಯಗಳಲ್ಲಿ ಒಂದು ಧಾಟಿಯನ್ನು ಬಾರಿಸಲಾಯಿತು. ಈ ಧಾಟಿಗೆ ಸೂಕ್ತವಾದ ಮಾತುಗಳನ್ನು ಜೋಡಿಸಿ ರಾಷ್ಟ್ರಗೀತೆಯನ್ನು ರಚಿಸಲು ಒಂದು ಸ್ಪರ್ಧೆ ಏರ್ಪಡಿಸಿದರು.

1947ರಲ್ಲಿ ಪಾಕಿಸ್ತಾನ ರೂಪುಗೊಂಡಾಗ ಅದಕ್ಕೆ ರಾಷ್ಟ್ರಗೀತೆಯಿರಲಿಲ್ಲ. ಅದರ ಧಾಟಿ ಮತ್ತು ಸಾಹಿತ್ಯವನ್ನು ರಚಿಸಲು ಎರಡು ಪ್ರತ್ಯೇಕ ಬಹುಮಾನಗಳನ್ನು ಘೋಷಿಸಲಾಯಿತು. ಈಗ ಪ್ರಚಾರದಲ್ಲಿರುವ ರಾಷ್ಟ್ರಗೀತೆಯನ್ನು 1954ರಲ್ಲಿ ಅಂಗೀಕರಿಸಲಾಯಿತು.

ರಾಷ್ಟ್ರಗೀತೆ ಜನರ ರಾಷ್ಟ್ರೀಯ ಮನೋಭಾವಕ್ಕೆ ಪ್ರೋತ್ಸಾಹ ಕೊಡುತ್ತದೆ.

ನೋಡಿ: ಬಂಕಿಮಚಂದ್ರ ಚಟ್ಟೋಪಾಧ್ಯಾಯ; ರವೀಂದ್ರನಾಥ ಠಾಕೂರ್

## ರಾಹುಲ ಸಾಂಕೃತ್ಯಾಯನ

ಹಿಂದೀ ಸಾಹಿತ್ಯರಂಗದ ರಾಹುಲ ಸಾಂಕೃತ್ಯಾಯನ ಎತ್ತರದ ನಿಲುವಿನ ಆಜಾನುಬಾಹು. ಮೃದು ಹೃದಯಿ. ಬೆಂಗಳೂರಿಗೆ ಬಂದಾಗ ಬಡ ಗೆಳೆಯನೊಬ್ಬನ ಮನೆಯಲ್ಲಿ ಇಳಿದುಕೊಂಡು ತಂಗಳು ಉಂಡು ಚಾಪೆಯ ಮೇಲೆ ಮಲಗಿದರು. ವಿಶ್ರಾಂತಿಯ ಬಳಿಕ ಊರನ್ನು ಅಲೆಯಲು ಹೊರಟರು. ನೂಕುನುಗ್ಗಲಿನಲ್ಲಿ ಮೆಜೆಸ್ಟಿಕ್ ಕಡೆ ಹೋಗುತ್ತಿದ್ದಾಗ ಇದ್ದಕ್ಕಿದ್ದಂತೆ ನಿಂತುಬಿಟ್ಟರು. ತಮ್ಮ ಎದೆ ಮುಟ್ಟಿನೋಡಿಕೊಳ್ಳುತ್ತ 'ಹಹಹಾ' ಎಂದು ನಕ್ಕರು. ಎಳೆಯ ಮಕ್ಕಳ ನಿರ್ಮಲವಾದ ನಗೆ. ಜುಬ್ಬದ ಎದೆ ಜೇಬಿನಲ್ಲಿದ್ದ ಅವರ ಪೆನ್ ಕಾಣೆಯಾಗಿತ್ತು. ವೈಯಕ್ತಿಕ ಕಷ್ಟನಷ್ಟಗಳೆಂದರೆ ಅವರಿಗೆ ಗಣನೆಯೇ ಇಲ್ಲ. ಜಗತ್ತಿನ ಜನರ ಕೊರಗೇ ಅಪಾರ ವ್ಯಾಸಂಗವನ್ನು ಕರಗಿಸುವ ಕಲೆ. ಅವರ ಲೇಖನಿಯ [illegible] ಶಕ್ತಿ.



ಲೆನಿನ್‌ಗ್ರಾಡ್‌ನಲ್ಲಿ
ರಾಹುಲ ಸಾಂಕೃತ್ಯಾಯನರ ಮೂರ್ತಿಶಿಲ್ಪ

ರಾಹುಲ ಸಾಂಕೃತ್ಯಾಯನರು ಹುಟ್ಟಿದ್ದು 1893ರಲ್ಲಿ ಉತ್ತರಪ್ರದೇಶದ ಅಜಂಗಢದಲ್ಲಿ. ಬಾಲ್ಯದ ಮದುವೆಗೆ ಅಂಜಿ ಮನೆಬಿಟ್ಟು ಕಾಶಿ(ಬನಾರಸ್)ಗೆ ಹೋದರು. ಸಂಸ್ಕೃತ ಅಧ್ಯಯನ ಮಾಡಿದರು. ಸ್ವಾಮಿ ದಯಾನಂದ ಸರಸ್ವತಿಯವರಿಂದ ಆಕರ್ಷಿತರಾಗಿ ಆರ್ಯ ಸಮಾಜವನ್ನು ಸೇರಿದರು.

ಸಾಂಕೃತ್ಯಾಯನ ಸ್ವಾತಂತ್ರ್ಯ ಸಮರ ಸೇರಿ ಸೆರೆಮನೆಯ ಸವಿಯುಂಡವರು. ಬಂದೀಖಾನೆಯಲ್ಲಿ ಪರಿಚಯಮಾಡಿಕೊಂಡ ಟಿಬೆಟ್‌ನವನೊಬ್ಬನಿಂದ ತಿಬ್ಬತಿ ಭಾಷೆಯನ್ನು ಕಲಿತುಕೊಂಡರು. ಸೆರೆಮನೆಯಿಂದ ತಪ್ಪಿಸಿಕೊಂಡಾಗ ಕೆಲ ವರ್ಷಗಳವರೆಗೆ ಟಿಬೆಟ್ಟೇ ಆಶ್ರಯಧಾಮವಾಯಿತು. ಬೌದ್ಧ ಲಾಮಾಗಳ ನೆರವಿನಿಂದ ಬುದ್ಧನ ತತ್ತ್ವಗಳನ್ನು ಅಧ್ಯಯನ ಮಾಡಿದರು. ರಾಹುಲರ ಸಂಶೋಧನೆ ಪ್ರಖ್ಯಾತ ಬೌದ್ಧ ತಾತ್ತ್ವಿಕರ ಕೆಲ ತಾಳೆಗರಿ ಹಸ್ತಪ್ರತಿಗಳು ಬೆಳಕಿಗೆ ಬರಲು ಕಾರಣವಾಯಿತು. ಅನೇಕ ಶತಮಾನಗಳ ಹಿಂದೆ ಭಾರತದ ನಾಲಂದಾ ವಿಶ್ವವಿದ್ಯಾಲಯಕ್ಕೆ ಸೇರಿದ್ದು ಅನಂತರ ಟಿಬೆಟ್‌ಗೆ ಹೋಗಿದ್ದ ಈ ಅಮೂಲ್ಯ ಕೃತಿಗಳ ಹಸ್ತಪ್ರತಿಗಳನ್ನು ಹೇಸರಗತ್ತೆಗಳ ಮೇಲೆ ಹೇರಿಕೊಂಡು ಭಾರತಕ್ಕೆ ಬಂದರು.

ರಾಹುಲ ಸಾಂಕೃತ್ಯಾಯನ ಕಮ್ಯೂನಿಸ್ಟ್ ಪಕ್ಷ ಸೇರಿದ್ದಕ್ಕೂ ಅವರ ಮಾನವೀಯತೆಯೇ ಕಾರಣ. ರಷ್ಯ ಅವರನ್ನು ಆಕರ್ಷಿಸಿತು. 1945ರಲ್ಲಿ ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದಲ್ಲಿ ಭಾರತೀಯ ತತ್ತ್ವಜ್ಞಾನದ ಅಧ್ಯಾಪಕರಾಗಿ ಕೆಲಸಮಾಡಲು ಹೋದರು. ಎರಡು ವರ್ಷಗಳ ಕಾಲ ಸಂಸ್ಕೃತ, ಪ್ರಾಕೃತ, ಹಿಂದಿ, ಉರ್ದು, ತಿಬ್ಬತಿ ಭಾಷೆಗಳನ್ನೂ ರಾಹುಲರು ಇಲ್ಲಿ ಕಲಿಸುತ್ತಿದ್ದರು. ಪತಂಜಲಿಯ 'ಮಹಾಭಾಷ್ಯ', ವಿಶಾಖದತ್ತನ 'ಮುದ್ರಾರಾಕ್ಷಸ', ಭಟ್ಟಿಯ 'ತರ್ಕ ಸಂಗ್ರಹ', ಶೂದ್ರಕನ 'ಮೃಚ್ಛಕಟಿಕ' ಮೊದಲಾದುವನ್ನು ಕಲಿಯಲು ರಷ್ಯದ ವಿದ್ವಾಂಸರಿಗೆ ರಾಹುಲರು ಸಹಾಯಮಾಡಿದರಲ್ಲದೆ, ಸಂಸ್ಕೃತ ಪದಗಳ ಸ್ಪಷ್ಟ ಉಚ್ಚಾರ ಕಲಿಯಲು ಅವರಿಗೆ ಮಾರ್ಗದರ್ಶಕರಾದರು. ಇವರ ಉಚ್ಚಾರಗಳ ಧ್ವನಿ ಮುದ್ರಿಕೆಗಳು ಈಗಲೂ ರಷ್ಯದಲ್ಲಿವೆ. ರಷ್ಯದಲ್ಲಿ ಭಾರತದ ಸಂಸ್ಕೃತಿ ಸಾಹಿತ್ಯಗಳ ಬಗೆಗೆ ಆಸಕ್ತಿ ಹುಟ್ಟಿಸಿ ಅಲ್ಲಿಯ ಅನೇಕ ವಿದ್ವಾಂಸರು ಅತ್ತಕಡೆ ತಮ್ಮ ಗಮನ ಹರಿಸುವಂತೆ ಮಾಡಿದವರು ರಾಹುಲ ಸಾಂಕೃತ್ಯಾಯನರು. ಇವರು ಅಲ್ಲಿ ಎಷ್ಟು ಪ್ರಭಾವಶಾಲಿಗಳಾಗಿದ್ದರೆಂಬುದನ್ನು, ಅಲ್ಲಿ ಸ್ಥಾಪಿತವಾಗಿರುವ ಮೂರ್ತಿಶಿಲ್ಪವೇ ತೋರಿಸುತ್ತದೆ. ರಷ್ಯನ್ ಮಹಿಳೆಯೊಬ್ಬಳನ್ನು ಪ್ರೇಮಿಸಿ ಮದುವೆಯಾದರೂ ಮುಂದೆ ಅವರು ಭಾರತಕ್ಕೆ ಮರಳಿದ್ದು ಮಾತ್ರ ಏಕಾಂಗಿಯಾಗಿಯೇ.

ಸಿಂಹಳದ ವಿದ್ಯಾಲಂಕಾರ ವಿಶ್ವವಿದ್ಯಾಲಯದಲ್ಲೂ ತತ್ತ್ವಜ್ಞಾನದ ವಿಭಾಗದ ಮುಖ್ಯಸ್ಥರಾಗಿ ಸಾಂಕೃತ್ಯಾಯನರು ದುಡಿದರು. ಆ ಬಳಿಕ ಇವರ ಜೀವನವೆಲ್ಲ ಲೇಖನ ಕಾರ್ಯಕ್ಕೆ ಮುಡುಪಾಯಿತು. ಹಲವು ಪ್ರಖ್ಯಾತ ಕಾದಂಬರಿಗಳ, ಇತಿಹಾಸ ಗ್ರಂಥಗಳ ಕರ್ತೃ ಇವರು. ಇವರ 'ಮಧ್ಯ ಏಷ್ಯಾ ಕಾ ಇತಿಹಾಸ್' ಎಂಬ ಸಾವಿರ ಪುಟಗಳ ಪುಸ್ತಕಕ್ಕೆ 1959ರಲ್ಲಿ ರಾಷ್ಟ್ರೀಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ದೊರೆಯಿತು. ಜೀವನವುದ್ದಕ್ಕೂ ದೇಶ ಸಂಚಾರಿಯಾಗಿದ್ದ ಇವರ ಪ್ರವಾಸಕಥನಗಳು ವಿವಿಧ ಭಾಷೆಗಳಿಗೆ ಭಾಷಾಂತರಗೊಂಡಿವೆ. 'ವೋಲ್ಗಾ ಸೆ ಗಂಗಾ' ಒಂದು ಅಪೂರ್ವಗ್ರಂಥ—ರಾಹುಲರ ಅಪಾರ ವಿದ್ವತ್ತು, ದೀರ್ಘ ಕಾಲದ ಸಂಶೋಧನೆಗಳ ಫಲ. ಈ ಗ್ರಂಥದಲ್ಲಿ

ಅವರು ಆರ್ಯ ಸಂಸ್ಕೃತಿಯ ವಿಕಾಸವನ್ನು ಅದರ ವಿವಿಧ ಹಂತಗಳಲ್ಲಿ ವಿವರವಾಗಿ ಆಕರ್ಷಕವಾಗಿ ವಿವರಿಸಿದ್ದಾರೆ.

ಹಿಂದೀ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯನ್ನು ಕೊಟ್ಟ ರಾಹುಲರು ತಮ್ಮ ಕೊನೆಗಾಲದಲ್ಲಿ ಕಡುಬಡವರಾಗಿದ್ದರು. ಸಣ್ಣ ಪುಟ್ಟ ಕಾಹಿಲೆಗಳೂ ಹತ್ತಿರ ಸುಳಿಯದಿದ್ದ ಈ ದೃಢಕಾಯದ ವ್ಯಕ್ತಿಗೆ 68ನೆಯ ವಯಸ್ಸಿನಲ್ಲಿ ಪಾರ್ಶ್ವವಾಯು ಬಡಿಯಿತು. ಸ್ವಲ್ಪ ಕಾಲ ಆ ವ್ಯಾಧಿಯಿಂದ ನರಳಿ, ತೀರಿಕೊಂಡರು.

## ರಿಪ್‌ವಾನ್ ವಿಂಕ್‌ಲ್

'ರಿಪ್‌ವಾನ್ ವಿಂಕ್‌ಲ್' ಒಂದೂವರೆ ಶತಮಾನದ ಹಿಂದೆ ವಾಷಿಂಗ್‌ಟನ್ ಇರ್ವಿಂಗ್ ಬರೆದ ಒಂದು ಕಾದಂಬರಿ. ಈ ಕಾದಂಬರಿಯ ನಾಯಕ 'ರಿಪ್‌ವಾನ್ ವಿಂಕ್‌ಲ್' ಮಾತಿಗೆ ಈಗ ಒಂದು ವಿಶೇಷಾರ್ಥವಿದೆ. ಸುತ್ತಮುತ್ತ ಆಗುತ್ತಿರುವ ಬದಲಾವಣೆಯನ್ನೇ ಗಮನಿಸದ 'ಓಬೀರಾಯ' ಅಂತ. ಈ ಅರ್ಥ ಕೂಡಿಕೊಂಡದ್ದು ಹೇಗೆ ?

ಅಮೆರಿಕದ ನ್ಯೂಯಾರ್ಕ್ ಸಂಸ್ಥಾನದಲ್ಲಿ ಕ್ಯಾಟ್ಸ್‌ಕೀಲ್ ಎಂಬ ಪರ್ವತ ಶ್ರೇಣಿಯಿದೆ. ಸುಮಾರು ಎರಡು ಶತಮಾನಗಳ ಹಿಂದೆ ಇಡೀ ಉತ್ತರ ಅಮೆರಿಕ ಇಂಗ್ಲೆಂಡಿನ ರಾಜರ ಅಧೀನದಲ್ಲಿತ್ತು. ಆಗ ಈ ಪರ್ವತಗಳ ಬುಡದಲ್ಲಿದ್ದ ಒಂದು ಚಿಕ್ಕಹಳ್ಳಿಯ ಹಳೆಯ ಮನೆಯೊಂದರಲ್ಲಿ ರಿಪ್ ವಾನ್ ವಿಂಕ್‌ಲ್ ವಾಸವಾಗಿದ್ದ. ಇವನು ಊರಿನಲ್ಲಿ ಎಲ್ಲರಿಗೂ ಬೇಕಾದವನು. ಯಾರು ಇವನಿಗೆ ಯಾವ ಬಿಟ್ಟಿ ಕೆಲಸ ಹೇಳಿದರೂ ಮರು ಮಾತನಾಡದೆ ಸಂತೋಷದಿಂದ ಅದನ್ನು ಮಾಡಿಕೊಡುತ್ತಿದ್ದದ್ದೇ ಇದಕ್ಕೆ ಕಾರಣ. ಕಥೆ ಹೇಳುವ, ಗಾಳಿಪಟ ಹಾರಿಸಲು ಕಲಿಸಿಕೊಡುವ, ಆಟಿಗೆಗಳನ್ನು ಮಾಡಿಕೊಡುವ ರಿಪ್‌ವಾನ್ ವಿಂಕ್‌ಲ್‌ನನ್ನು ಕಂಡರೆ ಮಕ್ಕಳಿಗೆ ಬಹಳ ಖುಷಿ.

ಪರರಿಗೆ ಉಪಕಾರಿಯಾದರೂ ಮನೆಗೆ ಮಾರಿ ಇವನು. ತನಗಾಗಿ ಅಥವಾ ತನ್ನ ಹೆಂಡತಿ ಮಕ್ಕಳಿಗಾಗಿ ಒಂದು ಸಣ್ಣ ಕೆಲಸವನ್ನೂ ಮಾಡುತ್ತಿರಲಿಲ್ಲ. ತನ್ನ ಜಮೀನಿನಂಥ ಕೆಲಸಕ್ಕೆ ಬಾರದ ಸ್ಥಳ ಎಲ್ಲೂ ಇಲ್ಲ ಎಂಬುದು ಇವನ ಅಭಿಪ್ರಾಯ. ತಾನು ಎಷ್ಟು ಪ್ರಯತ್ನಪಟ್ಟರೂ ತನ್ನ ಜಮೀನಿನ ವ್ಯವಹಾರ ಯಾವಾಗಲೂ ಯದ್ವಾತದ್ವವಾಗುತ್ತದೆ ಎಂಬುದು ಅವನ ನಂಬಿಕೆ. ಜಮೀನಿನ ಬೇಲಿ ಇದ್ದಕ್ಕಿದ್ದಂತೆ ಬಿದ್ದುಹೋಗುತ್ತದೆ; ಹಸು ತಪ್ಪಿಸಿಕೊಂಡು ಎಲ್ಲೋ ಹೋಗಿಬಿಡುತ್ತದೆ; ಹಾಗೆ ತಪ್ಪಿಸಿಕೊಳ್ಳದ ದಿನ ತೋಟದೊಳಕ್ಕೆ ನುಗ್ಗಿ ಭರ್ಜರಿಯಾಗಿ ಎಲೆಕೋಸು ತಿಂದುಬಿಡುತ್ತದೆ. ಇನ್ನೆಲ್ಲೂ ಇಲ್ಲದಷ್ಟು ವೇಗವಾಗಿ ಕಳೆಗಿಡಗಳು ಬೆಳೆದು ನಿಲ್ಲುತ್ತವೆ. ಕೆಲಸ ಮಾಡಲು ಹೊರಗೆ ಹೊರಟರಾಯಿತು, ಮಳೆ ಸಿದ್ಧ ... ...

ಇವನ ಕಾರುಬಾರಿನಿಂದ ಮನೆಯವರೆಲ್ಲ ಭಿಕಾರಿಗಳಾಗುವ ಸ್ಥಿತಿಗೆ ಇಳಿದರು. ಆಸ್ತಿ ದಿನದಿಂದ ದಿನಕ್ಕೆ ಕರಗಿತು. ಆದರೆ ರಿಪ್ ಇದಕ್ಕೆಲ್ಲ ಚಿಂತಿಸುವವನಲ್ಲ. ಕೆಲಸಮಾಡಿ ಹೊಟ್ಟೆತುಂಬ ತಿನ್ನುವ ಬದಲು ಆರಾಮವಾಗಿದ್ದು ಅರೆಹೊಟ್ಟೆ ತುಂಬಿಕೊಳ್ಳುವುದರಲ್ಲೇ ಅವನಿಗೆ ತೃಪ್ತಿ. ಹೆಂಡತಿ ಇವನನ್ನು ಸೋಮಾರಿ ಎಂದು ಬಯ್ದು ಮೂದಲಿಸಿದರೆ ಈತ ಸುಮ್ಮನೆ ಊರಿನ ಹೋಟಲಿನ ಕಡೆಗೆ ಎದ್ದು ಬಿಡುತ್ತಿದ್ದ. ಹೋಟಲಿನ ಮುಂದಿದ್ದ ಬೆಂಚೇ ಇವನಂಥ ಕೆಲವು ಸೋಮಾರಿಗಳ ಸಂಘದ ಕೇಂದ್ರ. ಇಲ್ಲಿ ಅರಸ ಮೂರನೆಯ ಜಾರ್ಜನ ಮಾಸಿದ ಛಾಯಾಚಿತ್ರದ ಕೆಳಗೆ ಕ್ಲಬ್ಬಿನ ಸಭೆ.

ಹೆಂಡತಿ ಇಲ್ಲಿಗೆ ಹುಡುಕಿಕೊಂಡು ಬಂದರೆ ರಿಪ್‌ವಾನ್ ವಿಂಕ್‌ಲ್ ಒಡನೆಯೇ ಕಾಲ್ಕಿತ್ತುತ್ತಿದ್ದ—ಮಾಡಬೇಕಾಗಿದ್ದ ಕೆಲಸದಿಂದ ತಪ್ಪಿಸಿಕೊಳ್ಳಲು ಕೈಯಲ್ಲಿ ಬಂದೂಕು ಹಿಡಿದು ಹಿಂದೆ ತನ್ನ ನಾಯಿ 'ವುಲ್ಫ್' ಅನ್ನು ಕಟ್ಟಿಕೊಂಡು ಕಾಡಿಗೆ ಹೋಗಿಬಿಡುತ್ತಿದ್ದ. ಹೀಗೆ ಶರದೃತುವಿನ ಒಂದು ದಿನ ಇವನು ಕ್ಯಾಟ್ಸ್‌ಕೀಲ್ ಪರ್ವತದ ಶಿಖರ ಪ್ರದೇಶವೊಂದಕ್ಕೆ ಬಂದಿದ್ದ. ಅಳಿಲುಗಳ ಬೇಟೆಯಾಡಿ ಆಯಾಸದಿಂದ ಹಾಗೇ ಹುಲ್ಲಿನ ಮೇಲೆ ಒರಗಿದ. 'ಹೊತ್ತಾಯಿತು, ಇನ್ನು ಎದ್ದು ಹೊರಡಬೇಕು' ಎಂದು ಯೋಚಿಸುವಷ್ಟರಲ್ಲಿ, "ರಿಪ್‌ವಾನ್ ವಿಂಕ್‌ಲ್, ರಿಪ್‌ವಾನ್ ವಿಂಕ್‌ಲ್" ಎಂದು ಕರೆದದ್ದು ಕೇಳಿಸಿತು.



ನಿರ್ಮಾಪಕ : ಇರ್ವಿಂಗ್

ಹಿಂದೆ ತಿರುಗಿನೋಡಿದರೆ ಯಾರೂ ಇಲ್ಲ. ಬೆಟ್ಟದಿಂದ ಇಳಿಯಲು ಇನ್ನೆರಡು ಹೆಜ್ಜೆ ಇಟ್ಟನೋ ಇಲ್ಲವೋ ಮತ್ತೆ ಅದೇ ಧ್ವನಿ. ಸಾಲದ್ದಕ್ಕೆ ನಾಯಿಯೂ ಗುರಗುಟ್ಟತೊಡಗಿತು. ನಾಯಿ 'ವುಲ್ಫ್' ನೋಡುತ್ತಿದ್ದ ದಿಕ್ಕಿನಲ್ಲೇ ರಿಪ್ ನೋಡಿದಾಗ, ಭಾರವಾದ ಹೊರೆ ಹೊತ್ತುಕೊಂಡು ಯಾರೋ ಕಷ್ಟಪಟ್ಟು ಬೆಟ್ಟ ಹತ್ತುತ್ತಿರುವಂತೆ ಕಾಣಿಸಿತು. ಊರಿನವರೇ ಯಾರೋ ಇರಬೇಕು ಎಂದುಕೊಂಡು ರಿಪ್ ಅವನ ಸಹಾಯಕ್ಕೆ ಧಾವಿಸಿದ. ಹತ್ತಿರ ಬಂದು ನೋಡಿದರೆ ವಿಚಿತ್ರ ಸ್ವರೂಪದ ಕುಳ್ಳ ಮನುಷ್ಯ; ಸೊಂಪಾಗಿ ಬೆಳೆದ ತಲೆಗೂದಲು ಮತ್ತು ನರೆತಗಡ್ಡದ ಮುದುಕ. ಹಿಂದಿನ ಕಾಲದ ಡಚ್ ವಲಸೆಗಾರರು ಧರಿಸುತ್ತಿದ್ದಂಥ ಬಟ್ಟೆ ಹಾಕಿಕೊಂಡಿದ್ದಾನೆ. ಹೆಗಲಿನ ಮೇಲೆ ಪುಟ್ಟ ಪೀಪಾಯಿ ಹೊತ್ತುಕೊಂಡಿದ್ದಾನೆ. ರಿಪ್‌ನನ್ನು ಕಂಡು ಅವನು 'ನನಗೆ ಸಹಾಯಮಾಡು' ಎಂಬಂತೆ ಸನ್ನೆ ಮಾಡಿದ. ರಿಪ್‌ಗೆ ಒಳಗೊಳಗೆ ಪುಕ್ಕಲು. ಆದರೂ ಅವನಿಗೆ ಸಹಾಯಮಾಡುತ್ತ ಅವನೊಡನೆ ಬೆಟ್ಟ ಹತ್ತಿದ.

ಅವರು ಬಂದದ್ದು ಬಂಡೆಯಲ್ಲಿದ್ದ ದೊಡ್ಡ ಕಿಂಡಿಯ ಬಳಿಗೆ. ಮೊದಲಿನ ಕುಳ್ಳ ಮನುಷ್ಯನಂತೆಯೇ ವೇಷ ಧರಿಸಿದ ಮುದುಕರ ಒಂದು ಗುಂಪೇ ಅಲ್ಲಿತ್ತು. 'ನೈನ್ ಪಿನ್ಸ್' ಎಂಬ ಆಟದಲ್ಲಿ ಅವರು ನಿರತರಾಗಿದ್ದರು. ರಿಪ್‌ನನ್ನು ನೋಡಿ, ತಮಗೆ ಮದ್ಯ ತಂದು ಕೊಡಲು ಅಪ್ಪಣೆ ಮಾಡಿದರು. ಅವರಿಗೆ ಮದ್ಯ ಸರಬರಾಜು ಮಾಡುವಾಗ ತಾನೂ ಸ್ವಲ್ಪ ರುಚಿನೋಡಿದ. ರಿಪ್‌ಗೆ ಮದ್ಯ ಕುಡಿದದ್ದೇ ಗೊತ್ತು, ಮರುಕ್ಷಣವೇ ಗಾಢ ನಿದ್ರೆ.

ರಿಪ್‌ವಾನ್ ವಿಂಕ್‌ಲ್‌ಗೆ ಎಚ್ಚರವಾದಾಗ ಆ ಮುದುಕನನ್ನು ಮೊದಲಿಗೆ ಅವನು ಎಲ್ಲಿ ಕಂಡಿದ್ದನೋ ಅಲ್ಲೇ ಬಿದ್ದಿದ್ದ. ಹೊತ್ತು ಮೇಲೇರಿತು. ಹಿಂದಿನ ರಾತ್ರಿಯ ಅನುಭವಗಳನ್ನೆಲ್ಲ ಜ್ಞಾಪಿಸಿಕೊಂಡಾಗ ರಿಪ್‌ನ ಎದೆ ಧಸಕ್ಕೆಂದಿತು. ರಾತ್ರಿಯೆಲ್ಲ ಮನೆಗೆ ಬರದೇ ಇದ್ದದ್ದಕ್ಕೆ ಹೆಂಡತಿಗೆ ಏನು ನೆಪ ಹೇಳುವುದು ಎಂಬ ಯೋಚನೆ ಹತ್ತಿಕೊಂಡಿತು. ತನ್ನ ಬಂದೂಕು ಎತ್ತಿಕೊಳ್ಳೋಣವೆಂದು ನೋಡಿದರೆ, ಅಲ್ಲಿದ್ದದ್ದು ತನ್ನ ಬಂದೂಕಿನ

ಬದಲು ತುಕ್ಕುಹಿಡಿದ ಮುರುಕು ಬಂದೂಕು. ನಾಯಿಯನ್ನು ಕರೆಯಲು ಸಿಳ್ಳುಹಾಕಿದರೆ ಅದೂ ನಾಪತ್ತೆ. ಮನೆಗೆ ಹೋಗಲು ಎದ್ದುನಿಂತರೆ ಕಾಲುಗಳು ಸೆಡೆತುಕೊಂಡಿವೆ. ರಿಪ್ ಅದೊಂದನ್ನೂ ಲಕ್ಷ್ಯಮಾಡದೆ ಮನೆಯ ಕಡೆ ಧಾವಿಸಿದ. ಹಳ್ಳಿಯನ್ನು ಸಮೀಪಿಸುತ್ತಿದ್ದಂತೆ ವಿಚಿತ್ರ ವೇಷದ ಜನ ಅವನ ಎದುರಾದರು. ಅವರು ಇವನನ್ನು ದುರುಗುಟ್ಟಿನೋಡಿ ತಮ್ಮಕೆನ್ನೆಯನ್ನು ಮುಟ್ಟಿಕೊಳ್ಳುತ್ತಿದ್ದರು. ರಿಪ್ ಸಹ ಹಾಗೆಯೇ ಮಾಡಿದಾಗ ತನ್ನ ಮುಖದ ಮೇಲೆ ಉದ್ದವಾದ ಗಡ್ಡ ಬೆಳೆದುಕೊಂಡಿರುವುದು ತಿಳಿಯಿತು.

ಊರು ಗುರುತೇ ಸಿಗದಷ್ಟು ಬದಲಾಗಿತ್ತು. ಎಲ್ಲೆಲ್ಲೂ ಹೊಸ ಮುಖಗಳು. ತನ್ನ ಮನೆಯ ಹಾದಿ ಹುಡುಕುವುದೇ ಕಷ್ಟವಾಯಿತು. ಹೆಂಡತಿಯ ಕೀರಲು ಧ್ವನಿಯನ್ನು ನಿರೀಕ್ಷಿಸುತ್ತ ಮೆಲ್ಲಮೆಲ್ಲನೆ ಮನೆಯ ಕಡೆಗೆ ಹೋದರೆ ಮನೆಯೇ ಬಿದ್ದು ಹೋಗಿದೆ. ಹೆಂಡತಿ ಮಕ್ಕಳೂ ಇಲ್ಲ. ಊರಿನ ಹೋಟೆಲಿನತ್ತ ಹೋದರೆ ಅದೂ ಇಲ್ಲ. ಆ ಜಾಗದಲ್ಲಿ ಬೇರೊಂದು ಕಟ್ಟಡ ಎದ್ದು ನಿಂತಿತ್ತು. ಎದುರಿಗೆ ಒಂದು ಸ್ತಂಭದ ಮೇಲೆ ಪಟ್ಟಿಗಳೂ ನಕ್ಷತ್ರಗಳೂ ಇದ್ದ ಹೊಸ ಧ್ವಜ. ರಾಜನ ಚಿತ್ರವೂ ಬದಲಾಗಿತ್ತು. ನೀಲಿ ಕೋಟು ಧರಿಸಿದ ಈ ರಾಜ,ರಾಜದಂಡದ ಬದಲು ಖಡ್ಗ ಹಿಡಿದುಕೊಂಡಿದ್ದ. ಕೆಳಗೆ 'ಜಾರ್ಜ್ ವಾಷಿಂಗ್‌ಟನ್' ಎಂಬ ದೊಡ್ಡ ಅಕ್ಷರಗಳ ಬರಹ.

ಹಿಂದೆ ಹೋಟೆಲಿನ ಹೊರಗೆ ಹರಟುತ್ತಿದ್ದ ಗೆಳೆಯರಿಗಾಗಿ ಹುಡುಕಿದಾಗ ಒಬ್ಬರೂ ಕಾಣಿಸಲಿಲ್ಲ. ಅಪರಿಚಿತರು ಅಲ್ಲಿ ಕುಳಿತು ಬಿರುಸಾಗಿ ಚರ್ಚೆ ನಡೆಸುತ್ತಿದ್ದರು. ಸ್ವಲ್ಪ ಹೊತ್ತಿನಲ್ಲೇ ಎಲ್ಲರ ಗಮನ ಇವನೆಡೆಗೆ ಹರಿಯಿತು. ಇವನ ಸುತ್ತು ಕಲೆತಿದ್ದ ದೊಡ್ಡ ಸಂದಣಿಯನ್ನು ಕಂಡು ಇವನು ಬಂಡಾಯ ನಡೆಸಲು ಪ್ರಯತ್ನಿಸುತ್ತಿದ್ದಾನೆಂದು ಇವನ ಮೇಲೆ ಆರೋಪ ಹೊರಿಸಿದರು. ತಾನು ಮಹಾರಾಜನ ನಿಷ್ಠ ಅನುಚರನೆಂದು ರಿಪ್ ಆಣೆಯಿಟ್ಟು ಹೇಳಿದಾಗ ಜನ ಸಿಟ್ಟಿಗೆದ್ದರು. ಅವನ ಕೈಗೆ ಬೇಡಿ ತೊಡಿಸುವುದೊಂದು ಮಾತ್ರ ಬಾಕಿ.

ವಾತಾವರಣ ಶಾಂತವಾಗಬೇಕಾದರೆ ಎಷ್ಟೋ ಹೊತ್ತು ಬೇಕಾಯಿತು. ರಿಪ್‌ವಾನ್ ವಿಂಕ್‌ಲ್ ತನ್ನ ಗೆಳೆಯರ ಬಗೆಗೆ ವಿಚಾರಿಸಿದ. ಒಬ್ಬ ಸತ್ತು ಹದಿನೆಂಟು ವರ್ಷವಾಯಿತೆಂದು ಗೊತ್ತಾಯಿತು. ಮತ್ತೊಬ್ಬ, ರಿಪ್ ಕೇಳಿಯೇ ಇರದ ಯುದ್ಧದಲ್ಲಿ ತೀರಿಕೊಂಡಿದ್ದ. ಇನ್ನೊಬ್ಬ 'ಶಾಸಕರ ಸಭೆ'ಯ ಸದಸ್ಯನಂತೆ. ಹಾಗೆಂದರೇನು ಎಂದು ರಿಪ್‌ಗೆ ತಿಳಿಯದು. "ಇಲ್ಲಿ ಯಾರಿಗೂ ರಿಪ್‌ವಾನ್ ವಿಂಕ್‌ಲ್ ಗೊತ್ತಿಲ್ಲವೆ ?" ಎಂದು ಕಳಕಳಿಯಿಂದ ಆತ ಪ್ರಶ್ನಿಸಿದ.

ಹಲವರು ತಮಗೆ ಗೊತ್ತು ಎಂದರು. ಅವರು ಬೊಟ್ಟುಮಾಡಿ ತೋರಿಸಿದ ಒಬ್ಬ ಯುವಕನ ಕಡೆ ನೋಡಿದ, ರಿಪ್. ಪರ್ವತ ಹತ್ತಿಹೋದ ದಿನ ತಾನು ಹೇಗಿದ್ದೆನೋ ಹಾಗೆಯೇ ಇವನೂ ಇದ್ದಾನೆ ಎನಿಸಿತು. ವಿಚಾರಿಸಿದ ಮೇಲೆ ಆತ ತನ್ನ ಮಗ ಎಂದು ತಿಳಿಯಿತು.

ತರುಣಿಯೊಬ್ಬಳು ಆ ಕಡೆ ಬಂದಳು. ರಿಪ್‌ವಾನ್ ವಿಂಕ್‌ಲ್‌ನ ಆಸಕ್ತಿ ಕೆರಳಿತು. ವಿಂಕ್‌ಲ್ ಅವಳನ್ನು ಮಾತನಾಡಿಸಿ ಪರಿಚಯ ಮಾಡಿಕೊಂಡ. "ನನ್ನ ತಂದೆ ಕಾಣೆಯಾಗಿ ಇಪ್ಪತ್ತು ವರ್ಷಗಳಾದುವು ; ತಾಯಿ ಸತ್ತು ಐದು ವರ್ಷಗಳಾದುವು; ನಾನೀಗ ಮದುವೆಯಾಗಿ ಸಂಸಾರ ಮಾಡಿಕೊಂಡಿದ್ದೇನೆ", ಎಂದಳು. ಈ ತರುಣಿ ತನ್ನ ಮಗಳೇ ಎಂದು ತಿಳಿಯಲು ರಿಪ್‌ಗೆ ಹೆಚ್ಚು ಹೊತ್ತುಬೇಕಾಗಿಲ್ಲ.

ಮುದುಕಿಯೊಬ್ಬಳು ಗುರುತು ಹಿಡಿದು "ಇಪ್ಪತ್ತು ವರ್ಷ ಎಲ್ಲಿ ಹೋಗಿದ್ದೆ ?" ಎಂದು ಪ್ರಶ್ನಿಸಿದಳು. ಇವನ ಕಥೆಯನ್ನು ಕೇಳಿದವರಿಗೆ ಅದನ್ನು ನಂಬುವುದೇ ಬಿಡುವುದೇ ಎಂಬ ಸಂದೇಹ. ಊರಿಗೆಲ್ಲ ಅತ್ಯಂತ ವೃದ್ಧನಾದ ಒಬ್ಬನನ್ನು ವಿಚಾರಿಸಲು, ಅವನು ರಿಪ್‌ನ ಕಥೆಯನ್ನು ಸಮರ್ಥಿಸಿದ.

ರಿಪ್‌ವಾನ್ ವಿಂಕ್‌ಲ್ ತನ್ನ ಮಗಳ ಮನೆಯಲ್ಲಿ ವಾಸಿಸತೊಡಗಿದ. ಹೊಸ ಹೊಸ ಸುದ್ದಿಗಳನ್ನು ತಿಳಿದುಕೊಳ್ಳುತ್ತ, ತನ್ನ ವಿಚಿತ್ರ ಕಥೆಗಳನ್ನು ಹೇಳುತ್ತ ನೆಮ್ಮದಿಯಿಂದ ಜೀವನ ಕಳೆದ.


ನಿರ್ಮಾಣ : ರಿಪ್‌ವಾನ್ ವಿಂಕ್‌ಲ್

ಈ ಪಾತ್ರ ಇರುವುದು 'ರಿಪ್‌ವಾನ್ ವಿಂಕ್‌ಲ್' ಕಾದಂಬರಿಯಲ್ಲಿ. ಅದರ ಕರ್ತೃ ವಾಷಿಂಗ್‌ಟನ್ ಇರ್ವಿಂಗ್. ಆತ ಖ್ಯಾತ ಲೇಖಕ.

1789ರ ಏಪ್ರಿಲಿನಲ್ಲಿ ಒಂದು ದಿನ. ಜಾರ್ಜ್ ವಾಷಿಂಗ್‌ಟನ್ ಅಮೆರಿಕದ ಮೊದಲ ಅಧ್ಯಕ್ಷನಾಗಿ ಪದವಿ ಸ್ವೀಕರಿಸಿ ಕೆಲವೇ ದಿನಗಳಾಗಿದ್ದುವು. ವೃದ್ಧ ದಾದಿಯೊಬ್ಬಳು ಆರು ವರ್ಷದ ಹುಡುಗನೊಬ್ಬನನ್ನು ಕರೆದುಕೊಂಡು ವಾಷಿಂಗ್‌ಟನ್‌ನನ್ನು ಹಿಂಬಾಲಿಸುತ್ತ ನ್ಯೂಯಾರ್ಕ್ ಬ್ರಾಡ್‌ವೇಯ ಅಂಗಡಿಯೊಂದನ್ನು ಹೊಕ್ಕಳು. ಅವನಿಗೆ ನಮಸ್ಕರಿಸಿ, "ಈ ಮಗುವಿಗೆ ನಿಮ್ಮ ಹೆಸರನ್ನೇ ಇಟ್ಟಿದ್ದೇವೆ" ಎಂದಳು. ವಾಷಿಂಗ್‌ಟನ್ ಪ್ರೀತಿಯಿಂದ ಹುಡುಗನ ತಲೆ ನೇವರಿಸಿ ಆಶೀರ್ವಾದ ಮಾಡಿದ. ದಾದಿ ಸಮಾಧಾನದಿಂದ 'ಇನ್ನು ಈ ಹುಡುಗ ದೊಡ್ಡ ಮನುಷ್ಯನಾಗುವುದು ಖಂಡಿತ' ಎಂದುಕೊಂಡಳು.

ಆ ಹುಡುಗನೇ ಮುಂದೆ ಅಮೆರಿಕದ ಶ್ರೇಷ್ಠ ಲೇಖಕ ಎನಿಸಿಕೊಂಡ ವಾಷಿಂಗ್‌ಟನ್ ಇರ್ವಿಂಗ್ (1783–1859). ಈತ ಪ್ರಬಂಧಕಾರ, ಚರಿತ್ರಕಾರ ಮತ್ತು ಕತೆಗಾರನಾಗಿ ಹೆಸರುಗಳಿಸಿದ.

ರಿಪ್‌ವಾನ್ ವಿಂಕ್‌ಲ್ ಮತ್ತು ಅವನ ಸೃಷ್ಟಿಕರ್ತನಲ್ಲಿದ್ದ ಹೋಲಿಕೆಗಳು ಹಲವಾರು. ಇರ್ವಿಂಗ್ ಹುಡುಗನಾಗಿದ್ದಾಗ ಆರೋಗ್ಯವಂತನಾಗಿರಲಿಲ್ಲ. ಶಾಲೆಯ ತನ್ನ ತರಗತಿಯಲ್ಲಿರುವುದಕ್ಕಿಂತ ಹೆಚ್ಚಾಗಿ, ಬಂದೂಕು ಹಿಡಿದುಕೊಂಡು, ನಾಯಿಯನ್ನೂ ಜೊತೆಯಲ್ಲಿ ಕರೆದುಕೊಂಡು, ಅಲೆದಾಡುತ್ತಿದ್ದದ್ದೇ ಹೆಚ್ಚು. ಕೆಲವೊಮ್ಮೆ ಈತ ತನ್ನ ಹುಟ್ಟೂರಾದ ನ್ಯೂಯಾರ್ಕಿನಲ್ಲಿ ಡಚ್ ವಲಸೆಗಾರರು ನೆಲೆಸಿದ್ದ ಪ್ರದೇಶಗಳಿಗೆ ಭೇಟಿಕೊಡುತ್ತಿದ್ದ. ಅವರ ಸಂತತಿಯವರು ಹೇಳುತ್ತಿದ್ದ ಚಿತ್ರವಿಚಿತ್ರ ಕಥೆಗಳನ್ನು ಕೇಳುತ್ತ ಕುಳಿತುಬಿಡುತ್ತಿದ್ದ. ಇಂಥ ಒಂದು ಜಾನಪದ ಕಥೆಯೇ 'ರಿಪ್‌ವಾನ್ ವಿಂಕ್‌ಲ್'ಗೆ ಆಧಾರವಾಯಿತು.

ಆಗಿರುವ ಬದಲಾವಣೆಗಳನ್ನು ಅರಿಯದವರನ್ನು ಈಗಲೂ ರಿಪ್‌ವಾನ್ ವಿಂಕ್‌ಲ್ ಎಂದು ಬಣ್ಣಿಸುತ್ತಾರೆ.

## ರೂಪಕಾಲಂಕಾರ

" ಜವನ ಮೀಸೆಯ ಮುರಿದನೋ ಭೈ
ರವನ ದಾಡೆಯನಲುಗಿದನೋ ವ್ಯಾ
ಘ್ರನ ಮೊಲೆಯುಣುವ ಸೆಳೆದನೋ ಕೇಸರಿಯ ಕೆಣಕಿದನೋ "

ಕುಮಾರವ್ಯಾಸ ಭಾರತದಲ್ಲಿ ಉತ್ತರಕುಮಾರ, ಕೌರವರು ಯುದ್ಧಕ್ಕೆ ಬಂದಿದ್ದಾರೆ ಎಂದು ತಿಳಿದಾಗ ರೋಷದಿಂದ ಹೇಳುವ ಮಾತುಗಳು ಇವು. ಕೌರವರು ಯುದ್ಧಕ್ಕೆ ಬಂದದ್ದು ಯಮನ ಮೀಸೆಯನ್ನು ಕಿತ್ತಂತೆ; ಭೈರವನ ಹಲ್ಲನ್ನು ಅಲುಗಿಸಿದಂತೆ ಎಂದು ಉತ್ತರಕುಮಾರ ಎನ್ನುತ್ತಾನೆ. ಆದರೆ ಮೇಲಿನ ಪದ್ಯದಲ್ಲಿ 'ಅಂತೆ' ಎಂಬ ಪ್ರತ್ಯಯಗಳಿಲ್ಲವೆ. ನೇರವಾಗಿ ಮುರಿದನೋ, ಅಲುಗಿದನೋ ಎಂದು ಕವಿ ಕೇಳುತ್ತಾನೆ. ಹೀಗೆ ಎರಡು ವಸ್ತುಗಳನ್ನು 'ಅಂತೆ' 'ಹಾಗೆ' ಮೊದಲಾದ ಪದಗಳನ್ನು ಬಳಸದೆ ನೇರವಾಗಿ ಹೋಲಿಸುವುದೇ ರೂಪಕ.

ಕಾವ್ಯಾಲಂಕಾರಗಳಲ್ಲಿ ರೂಪಕಾಲಂಕಾರವೂ ಒಂದು. ಕೋಪ ಅತಿಯಾದಾಗ ಕೆಲವರು "ಹೊರಟು ಹೋಗು, ಕತ್ತೆ!" ಎಂದು ಬೈಯುವುದುಂಟು. ಇಲ್ಲಿ ಕತ್ತೆ ಎನ್ನುವುದೂ ಒಂದು ರೂಪಕವೇ.

ಅಭಿಪ್ರಾಯವನ್ನು ಮತ್ತಷ್ಟು ಸ್ಪಷ್ಟಗೊಳಿಸಲು, ರೂಪಕಗಳನ್ನು ಬಳಸುತ್ತಾರೆ. 'ಜೀವನ ಹೂವಿನ ಹಾಸಿಗೆಯಲ್ಲ', ಎಂದಾಗ, ಹೂವಿನ ಹಾಸಿಗೆ ಎಷ್ಟು ಮೃದುವೋ ಅಷ್ಟು ಸುಖಕರವಲ್ಲ ಜೀವನ ಎಂದು ಅಭಿಪ್ರಾಯ. ಹೀಗೆ ಹೋಲಿಸುವಾಗ, 'ಜೀವನ ಹೂವಿನ ಹಾಸಿಗೆಯ ಹಾಗೆ ಅಲ್ಲ' ಎಂದರೆ, ಅದು ಉಪಮೆಯಾಗುತ್ತದೆ. 'ಹಾಗೆ' 'ಅಂಥ' ಪದಗಳನ್ನು ಬಳಸದಿದ್ದರೆ ರೂಪಕವಾಗುತ್ತದೆ

ಕಾವ್ಯದಲ್ಲಿ ರೂಪಕದ ಬಳಕೆ ಮೊದಲಿನಿಂದ ಬಂದದ್ದು. ಜಾನಪದ ಸಾಹಿತ್ಯ, ವಚನ ಸಾಹಿತ್ಯ, ಮಹಾಕಾವ್ಯಗಳಲ್ಲೆಲ್ಲ ರೂಪಕ ಬೇಕಾದಷ್ಟು ಸಿಗುತ್ತದೆ. ಕುಮಾರವ್ಯಾಸನಂತೂ 'ರೂಪಕ ಸಾಮ್ರಾಜ್ಯದ ಚಕ್ರವರ್ತಿ'ಯೇ.

ರೂಪಕವನ್ನು ಕವಿ ತನ್ನ ಸ್ವಂತ ಪ್ರತಿಭೆಯಿಂದ ಸೃಷ್ಟಿಸಬೇಕೇ ಹೊರತು ಇತರರಿಂದ ಕಲಿಯಲು ಅಸಾಧ್ಯ ಎಂದೇ ಅರಿಸ್ಟಾಟಲ್, ರೂಪಕಸೃಷ್ಟಿ ಪ್ರತಿಭಾಶಾಲಿಯಾದ ಕವಿಯ ಲಕ್ಷಣ ಎಂದ. ಹೋಲಿಕೆಗೆ ಸಿಗದ ವಸ್ತುಗಳಲ್ಲಿ ಹೋಲಿಕೆ ತೋರಿಸುವುದು ಒಳ್ಳೆಯ ರೂಪಕದ ಲಕ್ಷಣ.

ರೂಪಕಗಳು ಕೆಲವೊಮ್ಮೆ ವಿರುದ್ಧ ಹೋಲಿಕೆಗಳನ್ನು ಒಳಗೊಂಡಿರುವುದೂ ಉಂಟು. "ತನ್ನ ಪ್ರಿಯೆಯ ಕಣ್ಣುಗಳು ಮಂಜುಗಡ್ಡೆಯಿಂದಾದ ಉರಿಯುವ ಗಾಜಂಗಳು".... ಎಂದು ಆಂಗ್ಲಕವಿ ಕೌಲಿ ಒಂದು ಕಡೆ ಹೇಳುತ್ತಾನೆ. ತನ್ನ ಪ್ರಿಯೆಯಿಂದ ತಾನು ತಿರಸ್ಕೃತನಾದಾಗ ಅವಳ ಕಣ್ಣು ಮಂಜುಗಡ್ಡೆಯಂತೆ ಇರುತ್ತವೆ ; ಆದರೆ ಅದೇ ಕಣ್ಣು ಇವನಲ್ಲಿ ವಿರಹತಾಪ ಉಂಟುಮಾಡುವುದರಿಂದ ಅವು ಉರಿಯುವಂತೆಯೂ ಕಾಣುತ್ತವೆ—ಎಂದು ಅರ್ಥ. ಸಂಬಂಧವಿಲ್ಲದ ಹೋಲಿಕೆಗಳನ್ನು ರೂಪಕದಲ್ಲಿ ಒಟ್ಟಿಗೆ ಸೇರಿಸುವುದೂ ಉಂಟು. ಮಹಾಕಾವ್ಯಗಳಲ್ಲಿ ಮಹೋಪಮೆಗಳಿರುವಂತೆ, ದೊಡ್ಡ ರೂಪಕಗಳೂ ಇರುತ್ತವೆ.

**ನೋಡಿ : ಉಪಮೆ ; ಪ್ರತಿಮಾವಿಧಾನ**

## ರೂಪಾಂತರ

ಯಾವುದೇ ದೇಶದ ಸಾಹಿತ್ಯ ಭಂಡಾರ ಸಮೃದ್ಧವಾಗಬೇಕಾದರೆ ಇತರ ದೇಶಗಳ ಸಾಹಿತ್ಯದಿಂದ ಶ್ರೇಷ್ಠ ಕೃತಿಗಳನ್ನು ಭಾಷಾಂತರ, ರೂಪಾಂತರಗಳ ಮೂಲಕ ತಮ್ಮದಾಗಿಸಿಕೊಳ್ಳಬೇಕಾಗುತ್ತದೆ. ತಮ್ಮ ದೇಶ ಭಾಷೆ ಹೊರತು ಬೇರೆ ಭಾಷೆಗಳನ್ನು ತಿಳಿಯದ ಸಾಹಿತ್ಯಾಭಿಮಾನಿ ಇತರ ಭಾಷೆಗಳ ಉತ್ತಮ ಕೃತಿಗಳನ್ನು ಓದಿ, ಆನಂದಿಸಲು ಇದರಿಂದ ಅನುಕೂಲವಾಗುತ್ತದೆ.

ರೂಪಾಂತರ ಎಂದರೆ ಮೂಲಕೃತಿಯ ಕಥೆಯ ಹಂದರವನ್ನು ತೆಗೆದುಕೊಂಡು ಅದರಲ್ಲಿನ ರಸ, ಭಾವಗಳನ್ನುಳಿಸಿಕೊಂಡು ಅದನ್ನು ತಮ್ಮ ಸಮಾಜದ ಜೀವನರೀತಿ, ನಡವಳಿಕೆಗಳಿಗೆ ಅಳವಡಿಸಿಕೊಂಡು ಕೃತಿ ರಚನೆಮಾಡುವುದು. ಇದು ಒಂದು ವರ್ಗ.

ಕವಿತೆಯೊಂದನ್ನು ಸಂಗೀತಕ್ಕೆ ಹೊಂದಿಸುವುದು, ಕಾದಂಬರಿಯನ್ನು ನಾಟಕಕ್ಕೆ ಅಳವಡಿಸುವುದು — ಇವು ಕೂಡಾ ರೂಪಾಂತರವೇ.

ಒಂದು ಕೃತಿಯ ರೂಪಾಂತರವನ್ನು ರಚಿಸುವಾಗ, ಅನವಶ್ಯವೆಂದು ತೋರಿದ ಮೂಲಕೃತಿಯ ಭಾಗಗಳನ್ನು ಬಿಟ್ಟುಬಿಡಬಹುದು. ಇದರಿಂದ ಎಷ್ಟೋ ಸಲ ಕೃತಿ ಹೆಚ್ಚು ರಸಪೂರ್ಣವಾಗುತ್ತದೆ.

ಕನ್ನಡದಲ್ಲಿ ಕಾದಂಬರಿಗಳು ಅಪರೂಪವಾಗಿದ್ದ ಕಾಲದಲ್ಲಿ ಗಳಗನಾಥರು ಮರಾಠಿ ಕಾದಂಬರಿಗಳಿಂದ ಕಥೆಯನ್ನು ತೆಗೆದುಕೊಂಡು, ಅದಕ್ಕೆ ಒಂದು ಹೊಸ ರೂಪವನ್ನು ಕೊಟ್ಟರು. ಇಂಗ್ಲಿಷ್ ಭಾಷೆಯಿಂದಲೂ ಕನ್ನಡಕ್ಕೆ ಕಾದಂಬರಿಗಳು, ಸಣ್ಣ ಕಥೆಗಳು ಮತ್ತು ನಾಟಕಗಳು ರೂಪಾಂತರಹೊಂದಿವೆ.

ನಾಟಕಗಳು ಅಧಿಕ ಸಂಖ್ಯೆಯಲ್ಲಿ ರೂಪಾಂತರಗೊಂಡು ಸೇರಿವೆ. ಎಂ ಎಲ್ ಶ್ರೀಕಂಠೇಗೌಡರು ಖ್ಯಾತ ಆಂಗ್ಲ ನಾಟಕಕಾರ ಶೇಕ್ಸ್‌ಪಿಯರನ 'ಮಿಡ್‌ಸಮರ್ ನೈಟ್ಸ್ ಡ್ರೀಮ್' ಅನ್ನು 'ಪ್ರಮೀಳಾರ್ಜುನೀಯ' ಎಂಬುದಾಗಿ ಹೆಸರಿಸಿ ರೂಪಾಂತರ ಮಾಡಿದ್ದಾರೆ. ಇದೇ ನಾಟಕವನ್ನು ಮೂಲದಿಂದ ಕಥೆಯನ್ನು ಮಾತ್ರ ತೆಗೆದುಕೊಂಡು ಹೆಸರು, ಸಂಭಾಷಣೆಗಳನ್ನು ಬದಲಾಯಿಸಿ ಕೆಲವರು ಬರೆದಿದ್ದಾರೆ. ಕೆರೂರ ವಾಸುದೇವಾಚಾರ್ಯರು ಹೆಸರುಗಳನ್ನು ಮಾತ್ರ ಬದಲಾಯಿಸಿ, ನಾಟಕವನ್ನು ಮೂಲದಲ್ಲಿರುವಂತೆಯೇ ಉಳಿಸಿಕೊಂಡಿದ್ದಾರೆ. ಫ್ರೆಂಚ್ ನಾಟಕಕಾರ ಮೋಲಿಯೇರನ 'ಟಾರ್ತೂಫ್', ಎ. ಎನ್. ಮೂರ್ತಿರಾಯರ ಲೇಖನಿಯಿಂದ 'ಆಷಾಡಭೂತಿ'ಯಾಗಿ ಹೊರಬಂದಿದೆ. ಬಂಗಾಳಿ ಭಾಷೆಯಿಂದಲೂ ಕನ್ನಡಕ್ಕೆ ನಾಟಕಗಳು ಬಂದಿವೆ. ಬೆನಗಲ್ ರಾಮರಾಯರು ಮಧುಸೂದನದತ್ತರ ದುರಂತ ನಾಟಕ 'ಕೃಷ್ಣಾಕುಮಾರಿ'ಯನ್ನು ರೂಪಾಂತರಿಸಿದ್ದಾರೆ. ಬಿ. ಎಂ. ಶ್ರೀಯವರ 'ಅಶ್ವತ್ಥಾಮ', ಗ್ರೀಕ್ ಟ್ರಾಜಿಡಿ 'ಅಜೆಕ್ಸ್'ನ ಯಶಸ್ವೀ ರೂಪಾಂತರ.

ಕಾದಂಬರಿಯನ್ನು ಆಧರಿಸಿ ನಾಟಕಗಳನ್ನು ರೂಪಿಸುವುದೂ ಉಂಟು. ಅನಕೃ, ಬಿ. ಪುಟ್ಟಸ್ವಾಮಯ್ಯ, ತ್ರಿವೇಣಿ, ತರಾಸು ಮುಂತಾದವರ ಕಾದಂಬರಿಗಳು ಪ್ರಸಾರ ನಾಟಕಗಳಾಗಿ ರೂಪಾಂತರ ಹೊಂದಿವೆ.

ಆಂಗ್ಲ ಕವಿ ಚಾಸರ್ (1340–1400) ಫ್ಲಾರೆನ್ಸಿನ ಲೇಖಕ ಗೀಯೋವನಿ ಬೊಕಾಚಿಯೊ (1313–1375) ಬರೆದ ಕಥೆಗಳನ್ನು ರೂಪಾಂತರಪಡಿಸಿ 'ನೈಟ್ಸ್ ಟೇಲ್' ಮತ್ತು 'ಟ್ರ್ಯಾಲಸ್ ಅಂಡ್ ಕ್ರಿಸೈಡ್' ಬರೆದ.

ಉತ್ತಮ ಪುಸ್ತಕಗಳನ್ನು ಸಂಕ್ಷೇಪಿಸುವುದೂ ಒಂದು ರೀತಿಯ ರೂಪಾಂತರವೇ. ಮೂಲಗ್ರಂಥದ ವಾಕ್ಯಗಳನ್ನೇ ಪ್ರಧಾನವಾಗಿ ಉಪಯೋಗಿಸಿಕೊಂಡು ಕಥೆಯ ಓಟ, ಮೂಲದಲ್ಲಿರುವ ಭಾವನೆ, ರಸಗಳಿಗೆ ಲೋಪಬರದಂತೆ ಅಲ್ಲಲ್ಲಿ ಅಷ್ಟಷ್ಟು ಭಾಗಗಳನ್ನು ತೆಗೆದುಹಾಕಿ, ಒಂದು ಕಿರುಹೊತ್ತಗೆಗೆ ಸಾಕಾಗುವಷ್ಟು ಸಾಮಗ್ರಿಯನ್ನು ಬಳಸಿಕೊಳ್ಳುತ್ತಾರೆ. ಹೀಗೆ ಸಂಕ್ಷೇಪಗೊಳಿಸಲ್ಪಟ್ಟ ಶ್ರೇಷ್ಠ ಕೃತಿಗಳನ್ನು ನಾವು ಕೆಲವು ನಿಯತಕಾಲಿಕಗಳಲ್ಲಿ ಕಾಣಬಹುದು. ಇವು ಗ್ರಂಥ ರೂಪದಲ್ಲಿಯೂ ಪ್ರಕಟವಾಗುತ್ತವೆ.

ಇತರ ಭಾಷೆಗಳ ಗದ್ಯಕೃತಿಗಳ ಸತ್ವ ಪರಿಚಯಮಾಡಿಕೊಡುವುದರಲ್ಲಿ. ಅದರಲ್ಲೂ ಸಂಕ್ಷೇಪವಾಗಿ ಪರಿಚಯಮಾಡಿಕೊಡುವುದರಲ್ಲಿ. ರೂಪಾಂತರದ ಪಾತ್ರ ಅಮೂಲ್ಯವಾದದ್ದು.

## ರೂಬೆನ್ಸ್

ವೆನಿಸಿನ ಒಂದು ರಂಗುದಾಣ. ಅಂಗಳದಲ್ಲಿ ಯುವಕನೊಬ್ಬ ತಾನು ನೋಡಿದ್ದ ವಿಖ್ಯಾತ ಚಿತ್ರವೊಂದನ್ನು ಸ್ಮರಿಸಿಕೊಳ್ಳುತ್ತ ಅದರ ಪ್ರತಿಕೃತಿ ಬರೆಯುತ್ತಿದ್ದ. ಅಪರಿಚಿತ ವ್ಯಕ್ತಿ ಹಿಂದಿನಿಂದ, "ಅದ್ಭುತ! ಮೂಲಕೃತಿಗಿಂತ ಉತ್ತಮವಾಗಿ ಬಂದಿದೆ. ನನ್ನ ಸ್ನೇಹಿತ ಮಾಂಟುವಾ ಡ್ಯೂಕನ ಬಳಿಗೆ ಕರೆದುಕೊಂಡು ಹೋಗ್ತೀನೆ. ನಿನ್ನ ಅದೃಷ್ಟದ ಬಾಗಿಲು ತೆರೆದಂತೆಯೇ" ಎಂದು ಹೇಳಿ. ಯುವಕನನ್ನು ತನ್ನ ಸ್ನೇಹಿತನ ಬಳಿಗೆ ಕರೆದೊಯ್ದ. ಆಸ್ಥಾನ ಚಿತ್ರಕಾರನ ಕೆಲಸ ಆ ಯುವಕನಿಗೆ ಸಿಕ್ಕಿತು.

—ಆತನೇ ನವೋದಯ ಕಾಲದ ಶ್ರೇಷ್ಠ ಚಿತ್ರಕಾರರಲ್ಲೊಬ್ಬನಾದ ಪೀಟರ್ ಪಾಲ್ ರೂಬೆನ್ಸ್.

ರೂಬೆನ್ಸ್ ಅಸಾಮಾನ್ಯ ಕಲಾವಿದ. ಚಿತ್ರಿಸಲು ಹೊರಟರೆ ಬಹಳ ವೇಗವಾಗಿ ಕುಂಚ ಆಡಿಸುತ್ತಿದ್ದ. ಒಮ್ಮೆಯೂ ಅನುಮಾನಿಸುತ್ತಿರಲಿಲ್ಲ. ಒಂದು ಸಲವೂ ತಿದ್ದುತ್ತಿರಲಿಲ್ಲ. ನೂರಾರು ರೂಪಚಿತ್ರಗಳು, ಪ್ರಕೃತಿ ದೃಶ್ಯಗಳು, ಬೇಟೆ ದೃಶ್ಯಗಳು, ಅವನ ಕುಂಚದಿಂದ ರೂಪುಗೊಂಡಿವೆ. ಆದರೂ ಇವೆಲ್ಲದಕ್ಕಿಂತ ಉತ್ಕೃಷ್ಟವಾದುವೆಂದರೆ ಧಾರ್ಮಿಕ ವಸ್ತುಗಳನ್ನಿಟ್ಟುಕೊಂಡು ರಚಿಸಿದ ಚಿತ್ರಗಳು. ಕ್ರಿಸ್ತನನ್ನು ರೂಬೆನ್ಸ್‌ನಷ್ಟು ಕೋಮಲವಾಗಿ ಬೇರಾರೂ ಚಿತ್ರಿಸಿಲ್ಲ. ಶಿಲುಬೆಯ ಮೇಲೆ ಕ್ರಿಸ್ತ ಚಿತ್ರವನ್ನು, ಕ್ರಿಸ್ತನ ಮೃತದೇಹವನ್ನು ಶಿಲುಬೆಯಿಂದ ಇಳಿಸುತ್ತಿರುವ ಚಿತ್ರವನ್ನು, ಇಲ್ಲಿ ಉದಾಹರಿಸಬಹುದು. ದೇಹದ ವಿನ್ಯಾಸದಲ್ಲಿಯೇ ನೋಟಕನಿಗೆ ಕ್ರಿಸ್ತ ಅನುಭವಿಸುತ್ತಿರುವ ವೇದನೆಯ ಆಳ ಮನಸ್ಸಿಗೆ ತಟ್ಟುತ್ತದೆ. ತಲೆ ಇಟ್ಟುಕೊಂಡಿರುವ ರೀತಿ, ಕುಸಿದಿರುವ ದೇಹ ಎಲ್ಲ ಅದೇ ಪರಿಣಾಮ ಬೀರುತ್ತವೆ. ಚರ್ಚಿನಲ್ಲಿ ವೇದಿಕೆಯ ಬೃಹತ್ ಚಿತ್ರಗಳ ರಚನೆಯಲ್ಲಿ ರೂಬೆನ್ ಸಿದ್ಧಹಸ್ತನಾಗಿದ್ದ.

ಆಗ ನೆದರ್‌ಲೆಂಡಿಗೆ ಸೇರಿದ್ದ ಆಂಟ್‌ವರ್ಪ್‌ನ ಪ್ರಮುಖನಾಗಿದ್ದ, ಯೊಹಾನ್ ರೂಬೆನ್ಸ್. ರಾಜಕುಮಾರಿ ಆ್ಯನಳ ಕಾನೂನು ಸಲಹೆಗಾರನಾಗಿದ್ದ ಯೊಹಾನ್, ಆಕೆಯೊಡನೆ ಅನೈತಿಕ ಸಂಬಂಧ ಹೊಂದಿದ್ದನೆಂಬ ಅಪಾದನೆಗೆ ಗುರಿಯಾಗಿ, ದೇಶಭ್ರಷ್ಟನಾಗಿ, ಜರ್ಮನಿಯ ಸೈಗನ್‌ಗೆ ಬಂದ. ಅಲ್ಲಿ 1577 ಜೂನ್ 29ರಂದು ರೂಬೆನ್ಸ್‌ನ ಜನನವಾಯಿತು. 1587ರಲ್ಲಿ ಯೊಹಾನನ ಮರಣಾನಂತರ ಇವರೆಲ್ಲ ಆಂಟ್‌ವರ್ಪ್‌ಗೆ ಹಿಂತಿರುಗಿದರು.

ಸಣ್ಣ ಹುಡುಗ ರೂಬೆನ್ಸ್ ಶ್ರೀಮಂತರೊಬ್ಬರ ಮನೆಯಲ್ಲಿ ಕೆಲಸಕ್ಕೆ ಸೇರಿದ. ಅಲ್ಲಿ ಆತ ಒಳ್ಳೆಯ ನಡವಳಿಕೆ, ಗಾಂಭೀರ್ಯಗಳನ್ನು ಕಲಿತ. ತಂದೆಯ ದುರವಸ್ಥೆಯ ಅರಿವಿದ್ದುದರಿಂದ, ಆತನಲ್ಲಿ ಹುಡುಗಾಟದ ಸ್ವಭಾವ ಇರಲೇ ಇಲ್ಲ. ಚಿಕ್ಕಪುಟ್ಟ ಚಿತ್ರಕಾರರ ಶಿಷ್ಯನಾಗಿ ಕೆಲಸ ಮಾಡಿದ.

23 ವರ್ಷದ ರೂಬೆನ್ಸ್ ಇಟಲಿಗೆ ಬಂದ. ವೆನಿಸಿನಲ್ಲಿ ಮಾಂಟುವಾದ ಡ್ಯೂಕನ ಆಸ್ಥಾನ ಚಿತ್ರಕಾರನಾಗುವ ಅವಕಾಶ ಒದಗಿತು; ಅವನ ಜೀವನದ ಹೊಸ ಅಧ್ಯಾಯ ಆರಂಭವಾಯಿತು. ಮಾಂಟುವಾದ ಪ್ರಿನ್ಸ್ ಚಾಪೆಲ್‌ನಲ್ಲಿ ಹೆಸರಾಂತ ಮೂರು ವೇದಿಕೆ ಚಿತ್ರಗಳನ್ನು ರೂಬೆನ್ಸ್ ಬರೆದ.

1608ರಲ್ಲಿ [illegible] ಇಲ್ಲಿನ ಕ್ಯಾಥೆಡ್ರಾಲಿನಲ್ಲಿ [illegible] ಚಿತ್ರವನ್ನು ಆತ ಬರೆದ. ಎರಡು ವರ್ಷಗಳ ಅನಂತರ 'ಶಿಲುಬೆಯಿಂದ ಅವರೋಹಣ' ಚಿತ್ರ ರಚಿಸಿದ. ಇದು ಅವನ ಮೇರು ಕೃತಿ ಎನಿಸಿದೆ.

ನೆದರ್‌ಲೆಂಡಿನ ಅರಸ ಇವನ ಪ್ರತಿಭೆಗೆ ಮನಸೋತು ಆಸ್ಥಾನದ ಚಿತ್ರಕಾರನನ್ನಾಗಿ ನೇಮಿಸಿಕೊಂಡ. ನಗರದ ಸಭಾಭವನಕ್ಕೆ 'ಅಡೋರೇಷನ್ ಆಫ್ ದಿ ಮ್ಯಾಗಿ' ಚಿತ್ರವನ್ನು ಬರೆದ. ಇದರಲ್ಲಿ 28 ಮನುಷ್ಯಾಕೃತಿಗಳಿವೆ.

1626ರಲ್ಲಿ ರೂಬೆನ್ಸ್ ಇಸಬೆಲ್ಲಾ ಬ್ರಾಂಟ್‌ಳನ್ನು ಮದುವೆಯಾದ. ಅವರದು ಸುಖಿ ಸಂಸಾರ. ಭವ್ಯವಾದ ಮನೆ ಕಟ್ಟಿದ. ಹೆಂಡತಿ ಮೃತಳಾದಾಗ ದುಃಖಿತನಾದ ರೂಬೆನ್ಸ್ ರಾಯಭಾರಿಯ ಕೆಲಸವನ್ನು ಒಪ್ಪಿಕೊಂಡ. ಆದರೂ ಚಿತ್ರ ಬರೆಯುವುದನ್ನು ಬಿಡಲಿಲ್ಲ. ಸ್ಪೇನ್. ಇಂಗ್ಲೆಂಡುಗಳ



ಚಿತ್ರಕಾರ, ರಾಯಭಾರಿ : ರೂಬೆನ್ಸ್

ನಡುವೆ ಇದ್ದ ಮನಸ್ತಾಪವನ್ನು ದೂರಮಾಡಿ ಒಪ್ಪಂದಕ್ಕೆ ಎರಡೂ ರಾಜ್ಯಗಳ ಅರಸರ ಸಹಿ ಹಾಕಿಸಿದವನು ರೂಬೆನ್ಸ್. ಎರಡು ದೇಶಗಳವರೂ ಆತನಿಗೆ ನೈಟ್ ಪದವಿ ಇತ್ತು ಸನ್ಮಾನಿಸಿದರು.

1630ರಲ್ಲಿ ರೂಬೆನ್ಸ್ ಆಂಟ್‌ವರ್ಪ್‌ಗೆ ಹಿಂದಿರುಗಿದ. 16 ವರ್ಷದ ಹೆಲೆನಾ ಫರ್ಮಾಂಟಳನ್ನು ಮದುವೆಮಾಡಿಕೊಂಡ. ಅವಳ 15ಕ್ಕೂ ಹೆಚ್ಚು ರೂಪಚಿತ್ರಗಳನ್ನು ಬರೆದ. ಅವನ ಅನೇಕ ಧಾರ್ಮಿಕ ಹಾಗೂ ಪೌರಾಣಿಕ ಚಿತ್ರಗಳಿಗೆ ಆಕೆ ಮಾದರಿಯಾಗಿದ್ದಳು.

ರೂಬೆನ್ಸ್‌ನ ಕೃತಿಗಳಿಗೆ ಬೇಡಿಕೆ ಹೆಚ್ಚುತ್ತಿತ್ತು. ಅನೇಕ ಶಿಷ್ಯರ ಸಹಾಯದಿಂದ ಚಿತ್ರಗಳನ್ನು ಪೂರೈಸಬೇಕಾಗುತ್ತಿತ್ತು. ರೂಬೆನ್ಸ್ ರೇಖಾ ಚಿತ್ರವನ್ನು ಬರೆದುಕೊಡುತ್ತಿದ್ದ. ಶಿಷ್ಯರು ಬಣ್ಣ ಹಾಕಿದ ಮೇಲೆ. ಚಿತ್ರಕ್ಕೆ ಮುಕ್ತಾಯದ ಸೂಕ್ಷ್ಮ ಕುಸುರಿಯನ್ನು ರೂಬೆನ್ಸ್ ಮಾಡುತ್ತಿದ್ದ.

ಸಂಧಿವಾತ ಉಂಟಾಗಿ ರೂಬೆನ್ಸ್‌ಗೆ ಕುಂಚ ಹಿಡಿಯುವುದೇ ಕಷ್ಟವಾಯಿತು. ಆದರೂ ಆತ ಚಿತ್ರ ಬರೆಯುವುದನ್ನು ಬಿಡಲಿಲ್ಲ.

1640ರ ಮೇ 30ರಂದು ರೂಬೆನ್ಸ್ ಆಂಟ್‌ವರ್ಪ್‌ನಲ್ಲಿ ನಿಧನನಾದ.



**ರೂಸೋ**

18ನೆಯ ಶತಮಾನದಲ್ಲಿ ಯೂರೋಪಿನಲ್ಲಿ ಜನಜಾಗೃತಿ ಉಂಟುಮಾಡಿದ ಬುದ್ಧಿಜೀವಿ ರೂಸೋ.

1712ರಲ್ಲಿ ಜಿನೀವಾದಲ್ಲಿ ಜನಿಸಿದ ರೂಸೋ ಚಿಕ್ಕಂದಿನಲ್ಲಿ ಹೆತ್ತವರನ್ನು ಕಳೆದುಕೊಂಡ. ಫ್ರಾನ್ಸ್, ಸ್ವಿಟ್ಜರ್‌ಲೆಂಡ್‌ಗಳಲ್ಲಿ ಅಲೆದಾಡುತ್ತ ಜ್ಞಾನಾರ್ಜನೆ ಮಾಡಿದ. ನಿಶ್ಚಿತವಾಗಿ ಒಂದೆಡೆ ನೆಲೆ ನಿಲ್ಲದೆ ಸ್ವಚ್ಛಂದ ಜೀವನ ನಡೆಸುತ್ತ ರೂಸೋ ಕಾಲ ಕಳೆದರೂ ಆತ ಬರೆದ ಪುಸ್ತಕಗಳು, ಬೀರಿದ ಪ್ರಭಾವ ಅಪಾರ. ಆ ಕಾಲದ ಜನಜೀವನಕ್ಕೆ ಹೊಸತಾದ ವಿಚಾರಗಳು ಸಿದ್ಧಾಂತಗಳು ಅವನಿಂದ ಮೂಡಿಬಂದುವು. 1778ರಲ್ಲಿ ಪ್ಯಾರಿಸಿನ ಬಳಿ ತೀರಿಕೊಂಡ. ಆತ್ಮಚರಿತ್ರೆಯಾದ ' ತಪ್ಪೊಪ್ಪಿಗೆ ', ಕಾದಂಬರಿ ' ಎಮಿಲಿ', ' ಆದರ್ಶ ರಾಜ್ಯಾಂಗ ನಿರೂಪಣೆ ', ' ಸಾಮಾಜಿಕ ಒಡಂಬಡಿಕೆ' ಅವನ ಮುಖ್ಯ ಕೃತಿಗಳು.

ಮನುಷ್ಯ ತನ್ನ ದೇಹ ರಚನೆಯಿಂದಾಗಿ ಪ್ರಾಣಿಗೆ ಹತ್ತಿರದವನು ; ವಿಚಾರವಾದಿಯಾದ ಅವನು ಪ್ರಚಂಡ ; ಯಂತ್ರಗಳ ಹಾಗೆಯೇ ಅವನದು ಪರಿಮಿತ ಸಾಮರ್ಥ್ಯ. ಹೀಗೆ ಮನುಷ್ಯನನ್ನು ರೂಸೋ ಬಣ್ಣಿಸಿದ. ಈ ಬಗೆಯ ವಿಚಾರ ಆ ಕಾಲಕ್ಕೆ ಹೊಸದು.

ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನಿಗಿಂತ ಬೇರೆ; ಅವನವನ ಅಗತ್ಯಕ್ಕೆ ಅನುಗುಣವಾದ ಶಿಕ್ಷಣ ಅವನಿಗೆ ಬೇಕು–ಈ ಅಂಶವನ್ನು ರೂಸೋ ಪ್ರತಿಪಾದಿಸಿದ.

" ಮನುಷ್ಯ ಹುಟ್ಟುವಾಗ ಸ್ವತಂತ್ರ. ಆದರೆ ಎಲ್ಲೆಲ್ಲಿಯೂ ಆತ ಇರುವುದು ಸರಪಣಿಗಳಲ್ಲೇ" ಎಂಬುದು ಆತನ ಇನ್ನೊಂದು ಕೃತಿಯ ಮೊದಲ ಮಾತು. ಅದು ಅವನ ಜೀವನಾನುಭವ ಸಾರ.

ಅವನ ' ಎಮಿಲಿ ' ಕಾದಂಬರಿಯಲ್ಲಿ ಕಥಾನಾಯಕನಾದ ಎಮಿಲಿಗೆ ಶಿಕ್ಷಣ ಕೊಡುವ ಬಗೆಯನ್ನು ರೂಸೋ ವಿವರಿಸುತ್ತಾನೆ. ಅವನ ಪ್ರಕಾರ ಮಗು ತನ್ನ ಅನುಭವದಿಂದಲೇ ತಾನು ಕಲಿಯಬೇಕು. ಪುಸ್ತಕಗಳನ್ನು ನೀಡಲೇಬಾರದು ; 12ರ ವರೆಗೆ ದೈಹಿಕ ಶಿಕ್ಷಣಕ್ಕೆ ಮಹತ್ವ ; ದೃಢಕಾಯರಾಗುವುದನ್ನು ತಪ್ಪಿಸಬಾರದು. 12ರ ಸುಮಾರಿಗೆ ಬುದ್ಧಿಯ ಬೆಳವಣಿಗೆ ಶುರುವಾದಾಗ ಕೂಡ ಪುಸ್ತಕಗಳಿಂದ ದೂರ ಇರಿಸಬೇಕು ; ಏಕೆಂದರೆ ಕಿರಿಯ ತಾನಾಗಿ ಯೋಚನೆ ಮಾಡುವುದನ್ನು ಬೆಳೆಸಿಕೊಳ್ಳುವುದು ಅಗತ್ಯ. ಸಮಾಜದಲ್ಲಿ ತನ್ನ ಸ್ಥಾನ ಏನು ಎಂದು ಯೋಚಿಸುವ, ಭಾವ ತುಮುಲಕ್ಕೆ ಒಳಗಾಗುವ ಘಟ್ಟ ತಲಪಿದಾಗ ಅವನಿಗೆ ಧರ್ಮವನ್ನು ತಿಳಿಸಿಕೊಡಬೇಕು. ತನಗೆ ಬೇಕಾದಂಥ ಧರ್ಮವನ್ನು ತಾನಾಗಿ ಆರಿಸಿಕೊಳ್ಳುವ ಸ್ವಾತಂತ್ರ್ಯವೂ ಅವನಿಗಿರಬೇಕು. ಈ ಬಗೆಯ ಶಿಕ್ಷಣ ಆ ಕಾಲಕ್ಕೆ ಹಾಸ್ಯಾಸ್ಪದವಾಗಿ ಕಂಡರೂ ಮುಂದೆ ಮನೋವಿಜ್ಞಾನ ಬೆಳೆದಂತೆ ಇವನು ನಿರೂಪಿಸಿದ ಶಿಕ್ಷಣ ಸೂತ್ರಗಳು ಮಾನ್ಯವಾದುವು, ಅರ್ಥಬದ್ಧವಾದುವು.

ಅವನ 'ಸಾಮಾಜಿಕ ಒಡಂಬಡಿಕೆ ' ರಾಜಕೀಯ ಅನುಭವದ ಫಲ. ಪ್ರಜೆಗಳ ಅಭಿಮತವೇ ರಾಜ್ಯದಲ್ಲಿ ಸಾರ್ವಭೌಮ —ಎಂದು ಈ ಕೃತಿಯಲ್ಲಿ ರೂಸೋ ಸಾರಿದ. ಸುಮಾರು ಇಪ್ಪತ್ತು ಸಾವಿರ ಪ್ರಜಾಬಾಹುಳ್ಯದ ರಾಜ್ಯವು ಆದರ್ಶ ಸರಕಾರ ಹೊಂದಿರುವುದು ಹೇಗೆಂಬುದರ ನಿರೂಪಣೆ ಈ ಕೃತಿಯಲ್ಲಿದೆ. ಅದರ ಪ್ರಕಾರ ಪ್ರಜೆಯ ಅಭೀಷ್ಟವನ್ನು ಅನುಸರಿಸಿಯೇ ಸರಕಾರ ಆಳಬೇಕು. ಅದೇ ಸಾಮಾಜಿಕ ಒಡಂಬಡಿಕೆ.

ಈ ಕೃತಿ ಅಮೆರಿಕನರ ಸ್ವಾತಂತ್ರ್ಯ ಘೋಷಣೆಗೂ ಫ್ರಾನ್ಸಿನ ಮಹಾಕ್ರಾಂತಿಗೂ ಪ್ರೇರಣೆ ಒದಗಿಸಿತು.

ಪ್ರಖ್ಯಾತ ಕವಿ, ಸಾಹಿತಿಗಳ ಮೇಲೂ ಬುದ್ಧಿಜೀವಿಗಳ ಮೇಲೂ ರೂಸೋನ ಕೃತಿಗಳು ಅತ್ಯಂತ ಪ್ರಭಾವ ಬೀರಿವೆ.

ರೂಸೋ 1778ರಲ್ಲಿ ತೀರಿಕೊಂಡ.

**ರೆಂಬ್ರಾಂಟ್**

17ನೆಯ ಶತಮಾನದ ಡಚ್ ಚಿತ್ರಕಾರರಿಗೆ ಯಾವುದಾದರೂ ಒಂದು ಬಗೆಯ ವರ್ಣಚಿತ್ರ ಕಲೆಯಲ್ಲಿ ಮಾತ್ರ ನೈಪುಣ್ಯವಿರುತ್ತಿತ್ತು. ರೆಂಬ್ರಾಂಟ್ ಹಾಗಲ್ಲ. ಭೂದೃಶ್ಯ, ರೂಪಚಿತ್ರ, ಧಾರ್ಮಿಕ ವಸ್ತು, ಸಾಮಾನ್ಯ ಜನ ಜೀವನ, ಪ್ರಾಚೀನ ಗ್ರೀಕ್ ಹಾಗೂ ರೋಮಿನ ಭವ್ಯಕಥೆಗಳು—ಈ ಎಲ್ಲ ಬಗೆಗಳ ಚಿತ್ರಣದಲ್ಲಿಯೂ ಆತ ನಿಷ್ಣಾತನಾಗಿದ್ದ. ರೆಂಬ್ರಾಂಟನ ಕೃತಿಗಳಲ್ಲಿ ಗಮನಸೆಳೆಯುವ ಅಂಶವೆಂದರೆ ಮಾನವರ ಬಗೆಗೆ ಅವನ ಕರುಣೆ, ಮಾನಸಿಕ ಹೊಯ್ದಾಟಗಳ ಬಗೆಗಿನ ಅಪಾರ ತಿಳಿವಳಿಕೆ. ಅವನ ಚಿತ್ರಗಳನ್ನು ನೋಡಿದರೆ ಶೇಕ್ಸ್‌ಪಿಯರನ ನಾಟಕವನ್ನು ನೋಡಿದಂತೆ –ಎನ್ನುತ್ತಾರೆ. ಅವುಗಳಲ್ಲಿ ಮನುಷ್ಯನಿಗೆ ಸಹಜವಾದ ದುರ್ಬಲತೆ, ಆಸೆ, ನಿರಾಸೆಗಳು, ತಲ್ಲಣ,



ರೆಂಬ್ರಾಂಟ್ :
ತನ್ನನ್ನು ತಾನೇ ಕಂಡಂತೆ



ರೆಂಬ್ರಾಂಟ್ :

ಹೋಮರನ
ಮೂರ್ತಿಶಿಲ್ಪವನ್ನು
ಅವಲೋಕಿಸುತ್ತಿರುವ
ಅರಿಸ್ಟಾಟಲ್



ಕಾಲಾನಂತರದ ಕೀರ್ತಿ : ರೆಂಬ್ರಾಂಟ್

ಧೈರ್ಯೋತ್ಸಾಹಗಳು —ಇಂಥ ನಾನಾ ಭಾವಗಳ ಚಿತ್ರಣವಿದೆ ; ಎಲ್ಲಕ್ಕಿಂತ ಹೆಚ್ಚಾಗಿ ಮಾನವ ಬದುಕಿನ ಹಿರಿಮೆಯ ಸಂದೇಶ ಆ ಚಿತ್ರಗಳಲ್ಲಿ ಅಡಕವಾಗಿದೆ.

ತಾನು ಚಿತ್ರರಚನೆ ಮಾಡಬೇಕೆಂದೆನಿಸಿದಾಗ ರೂಪದರ್ಶಿ ಇಲ್ಲದಿದ್ದರೆ, ರೆಂಬ್ರಾಂಟ್ ಕನ್ನಡಿ ಉಪಯೋಗಿಸಿ ತನ್ನದೇ ಚಿತ್ರ ಬರೆಯುತ್ತಿದ್ದನಂತೆ. ಬಹುಶಃ ಇನ್ನಾವ ಚಿತ್ರಕಾರನೂ ಬರೆಯದಿದ್ದಷ್ಟು ಸ್ವಚಿತ್ರಗಳನ್ನು 60ರಷ್ಟು - ರೆಂಬ್ರಾಂಟ್ ಬರೆದಿದ್ದಾನೆ. ಇದು ಅಹಂಭಾವದ ಪ್ರೇರಣೆಯಲ್ಲ. ತನ್ನದೇ ಕಣ್ಣು, ಮೂಗು, ಬಾಯಿ ಇತ್ಯಾದಿಗಳು ಅವನಿಗೆ ಒಂದು ಸಾಧನ ಅಷ್ಟೆ. ಅವನ್ನು ಉಪಯೋಗಿಸಿ ವಿವಿಧ ಮುಖಭಾವಗಳನ್ನು ಮೂಡಿಸುವುದು ಉದ್ದೇಶ. ಆಗಿನ ಕಾಲಕ್ಕೆ ಅವನು ಆರಿಸಿದ ಚಿತ್ರವಸ್ತುಗಳಾದರೂ ಬಹಳ ಸಾಮಾನ್ಯ. ಯೋಧರು, ಕುಂಟ, ಮುದುಕಿ, ತನ್ನ ಮೇಲೆ ಕುಳಿತ ಚಿಗಟ ಹುಡುಕುತ್ತಿರುವ ನಾಯಿ, ಸೋಮಾರಿ ಬಿಸಿಲು ಕಾಯಿಸುತ್ತಿರುವುದು, ಮೊಮ್ಮಗನಿಗೆ ನಡಿಗೆ ಹೇಳಿಕೊಡುವ ಅಜ್ಜ —ಇಂಥ ವಸ್ತು, ಸನ್ನಿವೇಶಗಳಲ್ಲಿ ರೆಂಬ್ರಾಂಟ್ ಚೆಲುವನ್ನು ಕಂಡ. ಸೃಷ್ಟಿಯ ಅತಿ ಕ್ಷುಲ್ಲಕ ಜೀವದಲ್ಲೂ ದೇವರ ಅಂಶವನ್ನು ಗುರುತಿಸಿದ.

ರೆಂಬ್ರಾಂಟ್ ಹಾಲೆಂಡಿನ ಲೀಡನ್‌ನಲ್ಲಿ 1606 ಜುಲೈ 15ರಂದು ಹುಟ್ಟಿದ. ತಂದೆ ಮಿಲ್ ಮಾಲಿಕ. ಸಾಕಷ್ಟು ಅನುಕೂಲವಂತ. ರೆಂಬ್ರಾಂಟ್ ಹಾರ್ಮನ್ಸ್ ವಾನ್ ರೈನ್ ಎಂಬುದು ರೆಂಬ್ರಾಂಟನ ಪೂರ್ಣನಾಮ. ಒಳ್ಳೆಯ ಶಾಲೆಯಲ್ಲಿ ವಿದ್ಯಾಭ್ಯಾಸ. 13ನೆಯ ವಯಸ್ಸಿಗೆಲ್ಲ ರೆಂಬ್ರಾಂಟನ ತಂದೆ ಮಗನ ಹೆಸರನ್ನು ಲೀಡನ್ ವಿಶ್ವವಿದ್ಯಾನಿಲಯದಲ್ಲಿ ದಾಖಲೆ ಮಾಡಿಸಿದ. ಆದರೆ ರೆಂಬ್ರಾಂಟ್ ತಾನು ಚಿತ್ರಕಲೆ ಅಭ್ಯಸಿಸಲು ಇಷ್ಟಪಡುವುದಾಗಿ ಹೇಳಿ ತಂದೆಯ ಮನವೊಲಿಸಿದ. 1625ರಲ್ಲಿ ಆಮ್‌ಸ್ಟರ್‌ಡ್ಯಾಮಿಗೆ ಕಲಾವಿದ್ಯಾರ್ಥಿಯಾಗಿ ತೆರಳಿದ. ಕ್ರಮೇಣ ತನ್ನದೇ ಆದ ಚಿತ್ರರಚನಾ ವಿಧಾನಗಳನ್ನು ರೂಪಿಸಲು ರೆಂಬ್ರಾಂಟ್ ಆಸೆಪಟ್ಟ. ಇಂಥ ಪ್ರಯೋಗಾತ್ಮಕ ಪ್ರಯತ್ನ ಸ್ವಂತ ರೂಪ ಚಿತ್ರಗಳೊಡನೆ ಆರಂಭವಾಯಿತು.

ಸಾಸ್ಕಿಯಾ ಎಂಬ ಸುಂದರಿ 1634ರಲ್ಲಿ ರೆಂಬ್ರಾಂಟನ ಮಡದಿಯಾದಳು. 'ಅಂಗರಚನಾ ವಿಜ್ಞಾನದ ತರಗತಿ' ಎಂಬ ಒಂದು ಅತ್ಯುತ್ತಮ ಚಿತ್ರ ಬರೆದಾಗ ಅನೇಕ ನಿರೂಪಗಳು ದೊರೆತು, ಮದುವೆಯ ಕಾಲಕ್ಕೆ ಚೆನ್ನಾಗಿ ಹಣ ಗಳಿಸಿದ್ದ. ವಿವಾಹಾನಂತರ ರೆಂಬ್ರಾಂಟನ ಅನೇಕ ಚಿತ್ರಗಳಲ್ಲಿನ ಹೆಣ್ಣಿನ ಮುಖಕ್ಕೆ ಸಾಸ್ಕಿಯಾಳೇ ರೂಪದರ್ಶಿ. ಆಗಿನ ಎಂಟು ವರ್ಷಗಳ ಅವನ ಜೀವನದಲ್ಲಿ ಸುಖ ಸಂತೋಷ ತುಳುಕಾಡಿದುವು. ಒಂದಾದ ಮೇಲೊಂದು ಶ್ರೇಷ್ಠ ಕಲಾಕೃತಿಗಳು ಹೊರಬಂದುವು. ಚಿಕ್ಕಂದಿನಿಂದಲೂ ಧಾರ್ಮಿಕ ಆಸಕ್ತಿಯಿದ್ದ ರೆಂಬ್ರಾಂಟ್ ಹಲವು ಧಾರ್ಮಿಕ ವಸ್ತುಗಳ ಚಿತ್ರಗಳನ್ನು ರಚಿಸಿದ.

ಸಾಸ್ಕಿಯಾ 1642ರಲ್ಲಿ ಮೃತಳಾದಳು. ಇದು ರೆಂಬ್ರಾಂಟನಿಗೆ ದೊಡ್ಡ ಪೆಟ್ಟು. ಇದೇ ಕಾಲಕ್ಕೆ ಆತ ರಚಿಸಿದ ಒಂದು ಕೃತಿ ಅವನ ಖ್ಯಾತಿಯನ್ನು ಕೆಡಿಸಿತು. 'ಇರುಳಿನ ಕಾವಲು' ಎಂಬ ಚಿತ್ರದಲ್ಲಿ ಪೌರರಕ್ಷಕರ ಒಂದು ತಂಡದ ಚಿತ್ರ ಬರೆಯಬೇಕಿತ್ತು. ಈ ಚಿತ್ರಕ್ಕಾಗಿ ಹಣ ತೆತ್ತ ಪಹರೆಗಾರರಿಗೆ ಚಿತ್ರ ಸರಿಬೀಳಲಿಲ್ಲ. ಚಿತ್ರದಲ್ಲಿ ಎಲ್ಲ ವ್ಯಕ್ತಿಗಳಿಗೂ ಸಮಾನ ಮಹತ್ವ ದೊರೆತಿಲ್ಲ, ಎಂದು ಅವರು ಸಿಟ್ಟಾದರು. ರೆಂಬ್ರಾಂಟನ ಕೈಯಲ್ಲಿ ಅದು ಒಂದು ಸಮಗ್ರಚಿತ್ರದಂತೆ, ಕೆಲವರು ಮುಂದೆ ಕೆಲವರು ಹಿಂದೆ, ನೆರಳು ಬೆಳಕುಗಳಲ್ಲಿ ಇರುವವರಂತೆ, ಮೂಡಿಬಂದಿತ್ತು. ಇದನ್ನು ಮೆಚ್ಚುವ ಕಲಾಪ್ರಜ್ಞೆ ಆ ಜನರಿಗೆ ಇರಲಿಲ್ಲ.

ಈ ಗೊಂದಲದಿಂದ ಅವನ ಜನಪ್ರಿಯತೆ ಕುಗ್ಗಿತು. ದೊಡ್ಡ ಮನೆ. ಸಿರಿವಂತಿಕೆಯ ಬಾಳುಗಳಿಂದಾಗಿ ಹಣ ನೀರಿನಂತೆ ಖರ್ಚಾಗುತ್ತಿದ್ದಿತು. 1650ರಲ್ಲಿ ರೆಂಬ್ರಾಂಟನು ದಿವಾಳಿಯಾದ. ಅವನ ಮನೆಮಾರು, ಚಿತ್ರಗಳು ಎಲ್ಲವೂ ಹರಾಜಾದುವು.

ಬಡತನದಲ್ಲಿ ನರಳಿದರೂ ರೆಂಬ್ರಾಂಟ್ ಸಾಯುವವರೆಗೆ ಚಿತ್ರಗಳನ್ನು ಬರೆಯುತ್ತಲೇ ಇದ್ದ. ಮರಣಾನಂತರ ಇವು ಖ್ಯಾತಿ ಪಡೆದುವು. ಅವನ ಮಗನೂ ಮನೆಯ ಮೇಲ್ವಿಚಾರಕಿಯೂ ಅವನನ್ನು ಬಹಳ ವಾತ್ಸಲ್ಯದಿಂದ ನೋಡಿಕೊಂಡರು.

ರೆಂಬ್ರಾಂಟ್ 1669 ಅಕ್ಟೋಬರ್ 4ರಂದು ತೀರಿಕೊಂಡ. ಅವನ ಕಣ್ಣು ಮುಂದೆಯೇ ಮಗನೂ ವಾತ್ಸಲ್ಯಮಯಿಯಾದ ಮನೆಯ ಮೇಲ್ವಿಚಾರಕಿಯೂ ಮೃತರಾದದ್ದು ಅವನ ಜೀವನದ ಕೊನೆಯ ಆಘಾತಗಳು.

ರೆಂಬ್ರಾಂಟನ ಕೀರ್ತಿ ಅವನ ಕಾಲಾನಂತರ ಲೋಕಕ್ಕೆಲ್ಲ ಹರಡಿತು.

ರೆಂಬ್ರಾಂಟ್ ಕಲಾಪ್ರಪಂಚಕ್ಕೆ ಬಿಟ್ಟುಹೋಗಿರುವ ಅಪಾರ ಆಸ್ತಿ— 2,000 ರೇಖಾಚಿತ್ರಗಳು, 650 ವರ್ಣಚಿತ್ರಗಳು ಹಾಗೂ 300 ಕೊರೆಚಿತ್ರಗಳು. ಇವು ಆತನ ಹಿರಿಮೆಯನ್ನು ಸದಾ ಸಾರುತ್ತವೆ.

## ರೆನ್ವಾ

1870ರ ಸುಮಾರಿನಲ್ಲಿ ಪ್ಯಾರಿಸ್ ನಗರ ಕ್ರಾಂತಿಕಾರರ ಆಡಳಿತಕ್ಕೆ ಒಳಪಟ್ಟಿತು.

ನಗರದಲ್ಲಿ ಇನ್ನೂ ಗುಂಡಿನ ಮಳೆ ಸುರಿಯುತ್ತಿದ್ದರೂ ಕಲಾವಿದನೊಬ್ಬ ಚಿತ್ರರಚಿಸಲು ಬೇಕಾದ ಸಾಧನಗಳೊಡನೆ ಸೀನ್ ನದಿಯ ಬಳಿ ಬೀಡು ಬಿಟ್ಟಿದ್ದ. ಇವನನ್ನು ನೋಡಿದ ಕಾವಲುಗಾರ, ನದೀ ಪ್ರದೇಶದ ಭೂಪಟ ಬರೆಯುತ್ತಿರುವನೆಂದು ಆರೋಪಿಸಿ, ಅಧಿಕಾರಿಗಳ ಬಳಿಗೆ ಕರೆದುಕೊಂಡು ಹೋದ. ಅಲ್ಲಿದ್ದ ಒಬ್ಬ ಅಧಿಕಾರಿ ಕಲಾವಿದನ ಮಿತ್ರ. ಆತ ಕಲಾವಿದನನ್ನು ಆದರಿಸಿ ಮಹಡಿ ಮೇಲೆ ಕರೆದೊಯ್ದು, ಕೆಳಗಿದ್ದ ಜನರಿಗೆ "ಮಾರ್ಸೇಲ್ಸ್ ಹಾಡನ್ನು (ಕ್ರಾಂತಿಗೀತ) ಹಾಡಿ ರೆನ್ವಾನನ್ನು ಆದರಿಸೋಣ" ಎಂದು ಕೂಗಿದ.



ಆಕಾರ, ರೇಖೆ, ದಟ್ಟ ಬಣ್ಣ : ರೆನ್ವಾ

ಅಲ್ಲಿಂದ ಬಂದ ಕಲಾವಿದ ನೇರವಾಗಿ ತನ್ನ ಕೆಲಸದಲ್ಲೇ ನಿರತನಾದ.

ಈ ಕಲಾವಿದನೇ ಫ್ರಾನ್ಸಿನ ಚಿತ್ರಕಾರ ಹಾಗೂ ಶಿಲ್ಪಿ ಪೀರ್ ಆಗಸ್ಟ್ ರೆನ್ವಾ.

ಬಡತನದಲ್ಲಿ ಸಿಕ್ಕು ತೊಳಲಿ, ಬಳಲಿದವನು ರೆನ್ವಾ. ಉಪವಾಸವಿದ್ದ ದಿನಗಳೆಷ್ಟೋ. ಪರಿಸ್ಥಿತಿಯೊಡನೆ ಹೋರಾಡುತ್ತ ವರ್ಷಗಟ್ಟಲೆ ದುಡಿದು ಕೀರ್ತಿಯ ಶಿಖರವನ್ನು ಬಹಳ ಕಷ್ಟದಿಂದ ತಲಪಿದ. ಆದರೆ ಆತನ ಚಿತ್ರಗಳಲ್ಲಿ ನೋವಿನ ಸುಳಿವಿಲ್ಲ. ಹರ್ಷ, ಸೊಗಸುಗಾರಿಕೆ, ಕಂಡುಬರುತ್ತಿದ್ದುವು.

ದರ್ಜಿಯ ಮಗನಾಗಿ ಹುಟ್ಟಿದ (1841 ಫೆಬ್ರವರಿ 25) ರೆನ್ವಾಗೆ ಸಣ್ಣ ವಯಸ್ಸಿನಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ. ಶಾಲೆಯ ಪುಸ್ತಕದಲ್ಲಿ ಮುದ್ದಾದ ಚಿತ್ರಗಳನ್ನು ಬರೆದಿಡುತ್ತಿದ್ದ. ಮಗನ ಈ ಒಲವನ್ನು ಗುರುತಿಸಿದ ತಂದೆ 13 ವರ್ಷದ ಮಗನನ್ನು ಪಿಂಗಾಣಿ ಕಾರಖಾನೆಯಲ್ಲಿ ದುಡಿಯಲು ಕಳುಹಿಸಿದ. ಪಿಂಗಾಣಿ ತಟ್ಟೆಗಳ ಮೇಲೆ ಚಿತ್ರ ಬರೆಯುವುದು ಇವನ ಕೆಲಸ. ನಾಲ್ಕು ವರ್ಷಗಳ ಅನಂತರ ಈ ಕೆಲಸ ಯಾಂತ್ರೀಕೃತವಾದಾಗ ರೆನ್ವಾ ನಿರುದ್ಯೋಗಿಯಾದ. ಬೀಸಣಿಗೆ, ಕಿಟಕಿಯ ತೆರೆಗಳಿಗೆ ಚಿತ್ರ ಬರೆಯುವುದು. ಉಪಾಹಾರ ಗೃಹಗಳ ಗೋಡೆಗಳ ಮೇಲೆ ಚಿತ್ರ ರಚಿಸುವುದು ಕೆಲ ಕಾಲ ನಡೆಯಿತು. ರೆನ್ವಾ ಪ್ಯಾರಿಸಿನಲ್ಲಿ ಕಲಾಶಿಕ್ಷಣ ಪಡೆಯಲು ಅಗತ್ಯವಾದ ಹಣ ಕೂಡಿಸಿಕೊಂಡ.

1862ರಲ್ಲಿ ರೆನ್ವಾ ಸ್ವಿಸ್ ಚಿತ್ರಕಾರ ಚಾರ್ಲ್ಸ್ ಗ್ಲೈರ್‌ನ ಶಿಷ್ಯನಾಗಿ ಸೇರಿದ. ಇಲ್ಲಿ ಆತನಿಗೆ ಕ್ಲಾಡ್‌ಮೊನೆ, ಕ್ಯಾಮಿಲಿ ಪಿಸಾರೊ. ಆಲ್ಫ್ರೆಡ್ ಸಿಸ್ಲಿ ಇವರ ಗೆಳೆತನ ದೊರೆಯಿತು. ಈ ಯುವಕರು ಚಿತ್ರರಚನೆಯಲ್ಲಿ ಹೊಸ ಹಾದಿ ಹುಡುಕಿಕೊಂಡರು. ಆಕೃತಿ, ಪ್ರಕೃತಿ ಚಿತ್ರಗಳಲ್ಲಿ ಬೆಳಕು ಉಂಟುಮಾಡುವ ಬದಲಾವಣೆಗಳನ್ನು ತೋರಿಸಬೇಕೆಂಬುದು ಅವರ ಬಯಕೆ. ಇದಕ್ಕಾಗಿ ಶುದ್ಧವಾದ ಬಣ್ಣದಿಂದ ಸಣ್ಣ ಸಣ್ಣ ಭಾಗಗಳನ್ನು ತುಂಬುತ್ತಿದ್ದರು. ಇದೇ ಸಮಷ್ಟಿಪರಿಣಾಮ ಪದ್ಧತಿ ಎಂದು ಮುಂದೆ ಹೆಸರು ಪಡೆಯಿತು. 1874ರಲ್ಲಿ ಹಲವಾರು ಕಲಾವಿದರ ಕೃತಿಗಳ ಪ್ರದರ್ಶನ ನಡೆಯಿತು. ಅದರಲ್ಲಿದ್ದ ರೆನ್ವಾನ ಚಿತ್ರಗಳ ಬಗಗೆ ಉಗ್ರ ಟೀಕೆಗಳು ಬಂದುವು.

1879ರಲ್ಲಿ ಲೇಡಿ ಕಾರ್ಪೆಂಟರ್ ಎಂಬಾಕೆಯ ಮತ್ತು ಆಕೆಯ ಹೆಣ್ಣು ಮಕ್ಕಳ ಚಿತ್ರವನ್ನು ರೆನ್ವಾ ಬರೆದುಕೊಟ್ಟ. ಉತ್ತಮವಾಗಿ ಮೂಡಿಬಂದ ಆ ಚಿತ್ರದಿಂದ ರೆನ್ವಾಗೆ ಅನುಕೂಲವಾಯಿತು. ಅದನ್ನು ನೋಡಿದ ಶ್ರೀಮಂತರನೇಕರು ತಮ್ಮ ಚಿತ್ರಗಳನ್ನು ಬರೆಯಿಸಿದರು. ರೆನ್ವಾನ ಆರ್ಥಿಕ ಸ್ಥಿತಿ ಉತ್ತಮಗೊಂಡಿತು.

ಉಡುಪಿನ ತಯಾರಿಕೆ ಕೆಲಸದಲ್ಲಿದ್ದ ಒಬ್ಬ ಹುಡುಗಿಯಲ್ಲಿ ರೆನ್ವಾ ಅನುರಕ್ತನಾಗಿದ್ದ. ತನ್ನ ಆರ್ಥಿಕ ಸ್ಥಿತಿ ಸುಧಾರಿಸಿದ ಮೇಲೆ ಆಕೆಯನ್ನು ಮದುವೆಯಾದ. ನೂತನ ದಂಪತಿ 'ಮಧುಚಂದ್ರ'ಕ್ಕಾಗಿ ಇಟಲಿಗೆ ಹೋದರು.

ಇಟಲಿಯಲ್ಲಿ ರೆನ್ವಾ ಸಾಂಪ್ರದಾಯಿಕ ಕಲೆಯ ಶ್ರೇಷ್ಠ ಚಿತ್ರಕಾರರ ಕೃತಿಗಳನ್ನು ಅಭ್ಯಸಿಸಿದ. ಅವನು ಹೆಚ್ಚು ಗಮನಕೊಟ್ಟುದು ರಾಫೇಲ್ ರಚಿಸಿದ್ದ ಭಿತ್ತಿಚಿತ್ರಗಳಿಗೆ. ಈ ಅಧ್ಯಯನದ ಪರಿಣಾಮ ಆತನ ಚಿತ್ರಗಳಲ್ಲಿ ಕಾಣಿಸಿಕೊಂಡಿತು.

1883ರಲ್ಲಿ ರೆನ್ವಾ ಸಮಷ್ಟಿಪರಿಣಾಮ ಶೈಲಿಯನ್ನು ಬಿಟ್ಟು, ವಿರುದ್ಧ ಬಣ್ಣಗಳನ್ನು ಉಪಯೋಗಿಸಲಾರಂಭಿಸಿದ. ಆಕಾರ ರೇಖೆಯನ್ನು ಎಚ್ಚರಿಕೆಯಿಂದ ಹಾಕಿಕೊಳ್ಳುತ್ತಿದ್ದ. 1890ರಲ್ಲಿ ಬಣ್ಣಗಳನ್ನು ದಟ್ಟವಾಗಿ ಬಳಸತೊಡಗಿದ.

1890ರ ವೇಳೆಗೆ ಚೆನ್ನಾಗಿ ಗಳಿಸಿದ್ದ ರೆನ್ವಾ ಸಂಧಿವಾತದಿಂದ ಪೀಡಿತನಾದ. 1903ರಲ್ಲಿ, ಸ್ವಲ್ಪ ಬೆಚ್ಚಗಿನ ಹವೆಯಿದ್ದ ದಕ್ಷಿಣ ಫ್ರಾನ್ಸಿನಲ್ಲಿ ವಾಸಿಸಿದ. ತೊಂದರೆ ಕಡಮೆಯಾಗಲಿಲ್ಲ. ಗಾಲಿಕುರ್ಚಿಯಲ್ಲಿ ಕುಳಿತೇ ಚಿತ್ರಿಸಿದ.

ದೈಹಿಕವಾಗಿ ಬಾಧೆ ಅನುಭವಿಸುತ್ತಿದ್ದ ಕಾಲದಲ್ಲಿ ರೆನ್ವಾ ಶಿಲ್ಪಕಲೆಯಲ್ಲಿ ಆಸಕ್ತನಾದ. ರಿಚರ್ಡ್ ಗೈನೊ ಎಂಬ ಶಿಲ್ಪಿಯ ನೆರವಿನಿಂದ 'ವೀನಸ್' ಮತ್ತು 'ಅಗಸಗಿತ್ತಿ' ಶಿಲ್ಪಗಳನ್ನು ರಚಿಸಿದ.

ಅನಾರೋಗ್ಯದಿಂದ ನರಳಿ ರೆನ್ವಾ 1919ರ ಡಿಸೆಂಬರ್ 3ರಂದು ಮರಣಹೊಂದಿದ. ಸಾವಿಗೆ ಮುನ್ನ ಹೂವುಗಳ ಚಿತ್ರವನ್ನು ಆತ ಬರೆದು ಮುಗಿಸಿದ್ದ.

## ರೊಕೋಕೋ ಕಲೆ

ಪುರಾತನ, ಸಾಂಪ್ರದಾಯಿಕ ಕಲೆಯಿಂದ ಬೇರೆಯಾಗಲು 18ನೆಯ ಶತಮಾನದ ಆದಿಭಾಗದಲ್ಲಿ ನಡೆದ ಪ್ರಯತ್ನದ ಫಲ —ರೊಕೋಕೋ ಕಲೆ.

ಇದು ತಲೆದೋರಿದ್ದು ಫ್ರಾನ್ಸಿನಲ್ಲಿ, 18ನೆಯ ಶತಮಾನದ ಆದಿಭಾಗದಲ್ಲಿ. ಸುಮಾರು ಅರ್ಧ ಶತಮಾನ ಕಾಲ ಇದು ಆಚರಣೆಯಲ್ಲಿತ್ತು. ಈ ಶೈಲಿಯು ಆ ಹಿಂದೆ ಪ್ರಚುರವಾಗಿದ್ದ ಬಾರೋಕ್ ಕಲೆಯಿಂದ ಭಿನ್ನವಾದದ್ದು. ಬಾರೋಕ್ ಶೈಲಿಯ ಕಲೆ ಇರುತ್ತಿದ್ದುದು ವಿಸ್ತಾರ ಸ್ಥಳದ ರಚನೆಗಳಲ್ಲಿ; ಅದು ಬಹುತೇಕ ಧಾರ್ಮಿಕ ಕಟ್ಟಡಗಳಿಗೆ ಸೀಮಿತವಾಗಿತ್ತು. ಆದರೆ ರೊಕೋಕೋ ಶೈಲಿಯನ್ನು ವಿಸ್ತಾರವಲ್ಲದ ಸ್ಥಳಗಳಲ್ಲೂ ಬಳಸಿದರು. ಇದು ಮುಖ್ಯವಾಗಿ ಖಾಸಗಿ ಕಟ್ಟಡಗಳ ಒಳಾಂಗಣ ಅಲಂಕರಣ ರೂಪದಲ್ಲಿ ಮೆರೆಯಿತು.

ಈ ಕಲೆಯನ್ನು ಅಪಹಾಸ್ಯ ಮಾಡಲೆಂದೇ ಹುಟ್ಟಿದ ಪದವಾಗಿ ರೊಕೋಕೋ ಎಂಬ ಹೆಸರು ಮೊದಲು ಬಳಕೆಗೆ ಬಂತು. ರೊಕೇಲ್ ಹಾಗೂ ಕಾಕಿಲ್ —ಕಲ್ಲು ಮತ್ತು ಚಿಪ್ಪು— ಎಂಬ ಪದಗಳಿಂದ ಈ ಹೆಸರು ಬಂತು ಎನ್ನುತ್ತಾರೆ. ಏಕೆಂದರೆ ರೊಕೋಕೋ ಕಲೆಯಲ್ಲಿ ಈ ವಸ್ತುಗಳ ಬಳಕೆ ಸರ್ವಸಾಮಾನ್ಯವಾಗಿತ್ತು.

ವೈಭವಪ್ರಿಯನಾಗಿದ್ದ 14ನೆಯ ಲೂಯಿಯ ಆಸ್ಥಾನದಲ್ಲಿದ್ದ ಕಣ್ಣಿಗೆ ಆಯಾಸಕರವೆನಿಸುವಂಥ ಅತಿ ಭವ್ಯ ಶೈಲಿಯ ಕಲೆ. ಫ್ರಾನ್ಸಿನ ಶ್ರೀಮಂತ ವರ್ಗಕ್ಕೆ ಬೇಸರ ಮೂಡಿಸಿತ್ತು. ತಮ್ಮ ಮನೆಗಳ ಅಲಂಕರಣಕ್ಕೆ

ಲಘುಶೈಲಿಯು, ಹರ್ಷದಾಯಕ ಕಲೆಯನ್ನು ಅವರು ಅಪೇಕ್ಷಿಸಿದರು. 14ನೆಯ ಲೂಯಿಯ ಅನಂತರ ಫ್ರಾನ್ಸಿನ ಆಸ್ಥಾನದಲ್ಲಿ ಸ್ತ್ರೀಯರ ಪ್ರಭಾವ ಬೆಳೆಯಿತು. ರೊಕೋಕೋ ಕಲೆ ಬೆಳೆಯಲು ಇದು ಸಹಾಯಕವಾಯಿತು. ಕಲೆಯಲ್ಲಿ ಲಾಲಿತ್ಯ, ಲಾವಣ್ಯಗಳಿಗೆ ಹೆಚ್ಚಿನ ಸ್ಥಾನ ದೊರೆಯಿತು. ರೊಕೋಕೋ ಕಲೆ ಪ್ರಧಾನವಾಗಿ ಅಲಂಕರಣಕ್ಕೆ ಲಕ್ಷ್ಯಕೊಟ್ಟ ಕಲೆ. ಈ ಶೈಲಿಯಲ್ಲಿ ಅಲಂಕೃತವಾದ ಕೋಣೆಗಳ ಗೋಡೆಗಳ ಮೇಲೆಲ್ಲ ಕನ್ನಡಿಗಳಿರುತ್ತಿದ್ದುವು; ಛಾವಣಿಗೆ ತಿಳಿ ಗುಲಾಬಿ ಇಲ್ಲವೆ ತಿಳಿನೀಲಿಯ ಬಣ್ಣ ಇರುತ್ತಿತ್ತು. ಗಿಲೀಟು ಕೆಲಸಕ್ಕೆ ಕೂಡ ಇದರಲ್ಲಿ ಸ್ಥಾನವಿತ್ತು. ಕೋಣೆಯ ಒಳಭಾಗ ನಾನಾ ವಿಧವಾದ ಕೆತ್ತನೆ, ಮೂರ್ತಿ ಶಿಲ್ಪಗಳ ಅಲಂಕರಣದಿಂದ ತುಂಬಿರುತ್ತಿತ್ತು. ವಿನ್ಯಾಸಗಳು ಎಡ, ಬಲಗಳಲ್ಲಿ ಒಂದೇ ರೀತಿ ಇರಬೇಕೆಂಬ ನಿಯಮವೂ ಇರಲಿಲ್ಲ. ಇಂಗ್ಲಿಷ್ ವರ್ಣಮಾಲೆಯ C ಹಾಗೂ S ಅಕ್ಷರಗಳ ಅಂಕುಡೊಂಕಾದ ವಿನ್ಯಾಸಗಳನ್ನು ಅಲಂಕರಣದಲ್ಲಿ ಉಪಯೋಗಿಸುವುದು ರೊಕೋಕೋ ಶೈಲಿಗೆ ವಿಶಿಷ್ಟವಾದದ್ದು.

ಈ ಕಲಾಶೈಲಿ ಜರ್ಮನಿಯಲ್ಲಿ ಸ್ವತಂತ್ರ ರೀತಿಯಲ್ಲಿ ಬೆಳೆಯಿತು. ಅದರಲ್ಲಿ ಸಮಗ್ರತೆಯ ದೃಷ್ಟಿ ಪ್ರಾಧಾನ್ಯ. ಅಲ್ಲಿನ ಇಗರ್ಜಿಗಳಲ್ಲಿ ಈ ಶೈಲಿ ಬಳಕೆಗೆ ಬಂತು. ಶಿಲ್ಪ, ವಾಸ್ತುಶಿಲ್ಪ ಹಾಗೂ ವರ್ಣಚಿತ್ರ ಈ ಮೂರು ಬಗೆಯ ಕಲೆಗಳನ್ನು ಬಳಸಿದ್ದರೂ ಯಾವುದೇ ಒಂದು ಕಲೆ ಎದ್ದು ಕಾಣದಂತೆ, ಮೂರನ್ನೂ ಸಮನ್ವಯಗೊಳಿಸಿದ್ದು ಜರ್ಮನಿಯ ರೊಕೋಕೋ ಶೈಲಿಯ ವೈಶಿಷ್ಟ್ಯ. ಜರ್ಮನಿ ಹಾಗೂ ಇಂಗ್ಲೆಂಡುಗಳಲ್ಲಿ ರೊಕೋಕೋ ಶೈಲಿಯ ಪಿಂಗಾಣಿ ಮೂರ್ತಿಗಳೂ ಮಾಡಲ್ಪಟ್ಟುವು. ಫ್ರಾನ್ಸಿನಲ್ಲಿ ಆರಂಭವಾದ ರೊಕೋಕೋ ಕಲೆ ಆ ದೇಶದಲ್ಲಿ ಮಾತ್ರ ಬಹಳ ಬೇಗ ಅವನತಿ ಕಂಡಿತು. ಫ್ರಾನ್ಸಿನ ರೊಕೋಕೋ ಶೈಲಿ, ಅಲಂಕಾರಪ್ರಧಾನವಾದದ್ದು. ಜರ್ಮನಿಯೊಂದರಲ್ಲೇ ಅದು ಉನ್ನತ ಮಟ್ಟ ತಲಪಿತೆಂದು ಹೇಳಬಹುದು.

ರೊಕೋಕೋ ಶೈಲಿಯ ಶಿಲ್ಪಗಳಲ್ಲಿ ಸಮಾನತೆಗಿಂತ ಲಾಲಿತ್ಯ, ವಯ್ಯಾರಗಳಿಗೆ ಹೆಚ್ಚು ಪ್ರಾಶಸ್ತ್ಯ. ಯೂರೊಪಿನಲ್ಲಿ ಬೆಳೆದ ರೊಕೋಕೋ ಚಿತ್ರಣಶೈಲಿ ನಿಕಟವಾಗಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ್ದು. ಒಂದು ಅವಧಿಯ ಸಮಾಜ ಜೀವನದೊಡನೆ ಅದೂ ಕೊನೆಗಂಡಿತು.

18ನೆಯ ಶತಮಾನದಲ್ಲಿ ಪ್ರಮುಖವಾಗಿದ್ದ ರೊಕೋಕೋ ಕಲೆ ಆ ಕಾಲದ ಕಲಾಪ್ರಪಂಚದ ತಳಮಳದ ಪ್ರತೀಕ ಎಂಬ ಅಭಿಪ್ರಾಯವಿದೆ. ಪ್ರಧಾನವಾಗಿ ಮನೋರಂಜನೆಗಾಗಿಯೇ ಬೆಳೆದ ರೊಕೋಕೋ ಒಂದು ಅಮೂರ್ತ ಕಲೆ.

## ರೊಡಿನ್

ಮುದ್ದಾಗಿ ಕೆತ್ತಿರುವ ತಲೆ, ಕೆತ್ತದೆ ಮೆರುಗು ಕೊಡದೆ ಹಾಗೆಯೇ ಬಿಟ್ಟಿರುವ ಕಲ್ಲಿನ ಸೆರೆಯಿಂದ ಬಿಡುಗಡೆ ಬಯಸುತ್ತಿದೆಯೇನೋ ಎನ್ನುವಂತೆ ಕಾಣುತ್ತಿದೆ. ಶಿಲ್ಪದ ಹೆಸರು 'ವಿಚಾರಿ'. ಮನಸ್ಸಿನಲ್ಲಿ ಆಲೋಚನೆ ಮೂಡಿ, ಒಂದು ಸ್ಪಷ್ಟ ಆಕಾರ ತಾಳುತ್ತಲೇ ಮನಸ್ಸಿನಿಂದ ಹೊರಬರಲೆತ್ನಿಸುವಂತೆ, ತಲೆಯೂ ಆಕಾರತಳೆದು ಬಿಡುಗಡೆಗಾಗಿ ಹಾತೊರೆಯುತ್ತಿದೆಯೇನೋ ಎಂದು ನೋಟಕರಿಗೆ ಭಾಸವಾಗುವಷ್ಟು ಮಾರ್ಮಿಕ.

ಈ ಅದ್ಭುತ ಶಿಲ್ಪದ ಕರ್ತೃ 'ಆಧುನಿಕ ಶಿಲ್ಪಕಲೆಯ ಪಿತಾಮಹ' ಎಂಬ ಕೀರ್ತಿಗೆ ಪಾತ್ರನಾದ ಫ್ರಾನ್ಸಿಸ್ ಫ್ರಾನ್ಸ್‌ವಾ ರೊಡಿನ್.


ಆಧುನಿಕ ಶಿಲ್ಪಕಲೆಯ ಪಿತಾಮಹ

ಆತ ರೂಪಿಸಿದ ಮೊದಲನೆಯ ನೈಜ ಗಾತ್ರದ ಪ್ರತಿಮೆ 'ಕಂಚಿನ ಯುಗ'. ಈ ಕಂದುಬಣ್ಣದ ಕಂಚಿನ ಪ್ರತಿಮೆಯ ಮೇಲ್ಮೈ ತುಂಬಾ ಸಣ್ಣ ಸಣ್ಣ ಸಮತಲ ಸ್ಥಳಗಳು. ಒಂದೊಂದು ಸಮತಲ ಸ್ಥಳವೂ ಕನ್ನಡಿಯಂತೆ ಹೊಳೆದು, ತನ್ನ ಮೇಲೆ ಬಿದ್ದ ಬೆಳಕನ್ನು ಪ್ರತಿಫಲಿಸುತ್ತಿತ್ತು. ಪ್ರತಿಮೆಯನ್ನು ನೋಡುವವರು ಅದರ ಸುತ್ತ ಸುತ್ತಿದಂತೆಲ್ಲ ಬೆಳಕು ಒಂದು ಸ್ಥಳದಿಂದ ಮತ್ತೊಂದಕ್ಕೆ ಬದಲಾದಂತೆ ಭಾಸವಾಗುತ್ತಿತ್ತು. ಇದರ ಪರಿಣಾಮವಾಗಿ ಪ್ರತಿಮೆಯ ಮೇಲ್ಮೈ ಅಲೆಯಲೆಯಾಗಿ ಉಬ್ಬಿದಂತೆ, ಬಿಗಿತಗೊಂಡಂತೆ, ಅನಂತರ ಹಾಗೆಯೇ ಸಡಿಲವಾದಂತೆ ಕಾಣುತ್ತಿತ್ತು. ಇದರಿಂದ ಅದು ನಿಜವಾದ ಚರ್ಮವೇನೋ ಎಂಬ ಭ್ರಾಂತಿ ಉಂಟಾಗುತ್ತಿತ್ತು. 1877ರಲ್ಲಿ ಬೆಲ್ಜಿಯಮಿನ ಬ್ರುಸೆಲ್ಸ್‌ನಲ್ಲಿ ನಡೆದ ಪ್ರದರ್ಶನದಲ್ಲಿ ಈ ವಿಗ್ರಹ ವನ್ನಿಟ್ಟಾಗ ವಿಮರ್ಶಕರು ಜೀವಂತ ವ್ಯಕ್ತಿಯೊಬ್ಬನ ಮೈಯ ಅಚ್ಚು ತೆಗೆದು ಈ ಕೃತಿಯನ್ನು ಎರಕ ಹುಯ್ದಿರಬೇಕು ಎಂದು ಆರೋಪಿಸಿದರು. ಯಾರೂ ಅದರಲ್ಲಿ ಅಷ್ಟಾಗಿ ಆಸಕ್ತಿ ತೋರಲಿಲ್ಲ. ಏಳು ವರ್ಷಗಳ ಅನಂತರ ಅದು ಲಂಡನಿನಲ್ಲಿ ಪ್ರದರ್ಶಿತವಾದಾಗ, ಖ್ಯಾತಿ ಗಳಿಸಿತು.

1880ರಲ್ಲಿ ಪ್ಯಾರಿಸಿನ ಅಲಂಕಾರಿಕ ಕಲೆಗಳ ವಸ್ತು ಸಂಗ್ರಹಾಲಯಕ್ಕೆ ಮೀಸಲಿಡುವ ದೊಡ್ಡ ಬಾಗಿಲನ್ನು ನಿರ್ಮಿಸುವ ಮಹತ್ತರ ಕೆಲಸ ರೊಡಿನ್‌ನ ಪಾಲಿಗೆ ಬಂತು. ಬಾಗಿಲಿನ ಮೇಲೆ ಕೆತ್ತಲು ದಾಂತೆಯ 'ಡಿವೈನ್ ಕಾಮಿಡಿ'ಯಿಂದ ದೃಶ್ಯಗಳನ್ನು ಆರಿಸಿಕೊಳ್ಳಲಾಗಿತ್ತು. ಹೆಸರು: 'ನರಕದ ಬಾಗಿಲು'. ಇದಕ್ಕಾಗಿ ಸುಮಾರು 186 ಮೂರ್ತಿಗಳನ್ನು ಆತ ನಿರ್ಮಿಸಿದ. ಸುಮಾರು 30 ವರ್ಷಗಳ ಕಾಲ ಶ್ರಮಪಟ್ಟರೂ ಈ ಕೆಲಸ ಮುಗಿಯಲಿಲ್ಲ. ಈ ಬಾಗಿಲು ಆತನ ಮರಣಾನಂತರ 1938ರಲ್ಲಿ ಪೂರ್ಣಗೊಳಿಸಲ್ಪಟ್ಟಿತು. ರೊಡಿನ್‌ನ ಸುಪ್ರಸಿದ್ಧ ಕೃತಿಗಳಾದ 'ವಿಚಾರಿ', 'ಚುಂಬನ' ಮುಂತಾದುವು ಈ ಬಾಗಿಲಿನ ಅಂಗಶಿಲ್ಪಗಳಾಗಿ ಮೊದಲು ರಚಿತವಾದುವು.

ಹೊಸ ತಂತ್ರಗಳನ್ನು ಪ್ರಯೋಗ ಮಾಡುವುದರಲ್ಲಿ ರೊಡಿನ್‌ಗೆ ಆಸಕ್ತಿ ಬಹಳ. ಬರೀ ಕೈಯನ್ನಷ್ಟೇ ಕೆತ್ತುವುದು, ಒಂದು ಕಲ್ಲಿನ ತುಂಡಿನಲ್ಲಿ ದೇಹದ ಒಂದು ಭಾಗವನ್ನು ಮಾತ್ರ ಕೆತ್ತಿ ಬಹುಭಾಗ ಕಲ್ಲನ್ನು ಕೆತ್ತದೆ ಹಾಗೆಯೇ ಬಿಡುವುದು, ಶಿಲ್ಪಕ್ಕೆ ಮೆರುಗನ್ನು ಕೊಡದೇ ಇರುವುದು— ಇವೆಲ್ಲ ಆತ ನಡೆಸಿದ ನವ್ಯಪ್ರಯೋಗಗಳು. "ಶಿಲ್ಪ ಎಂದರೆ ಉಬ್ಬು ತಗ್ಗುಗಳ ಕಲೆ" –ಎನ್ನುತ್ತಿದ್ದ ರೊಡಿನ್. ಮನುಷ್ಯಾಕೃತಿಯ ಶಿಲ್ಪಗಳು ನೈಜವಾಗಿ ಕಾಣುವಂತೆ ಮಾಡಲು ಉಬ್ಬು ತಗ್ಗುಗಳನ್ನು ಅವನು ಧಾರಾಳವಾಗಿ ಉಪಯೋಗಿಸಿಕೊಳ್ಳುತ್ತಿದ್ದ.

ಒಂದರ ಮೇಲೊಂದಾಗಿ ಆತ ರಚಿಸಿದ ಕೃತಿಗಳು ಪ್ರಸಿದ್ಧಿ ಪಡೆದುವು. ರೋಡಿನ್‌ಗೆ ಸನ್ಮಾನಗಳ ಸುರಿಮಳೆಯೇ ಆಯಿತು. ವಿದ್ಯಾಸಂಸ್ಥೆಗಳ ಪದವಿಗಳು, ಕಲಾಸಂಸ್ಥೆಗಳ ಗೌರವಸ್ಥಾನಗಳು ಅವನಿಗೆ ಪ್ರಾಪ್ತವಾದುವು. ಶಿಲ್ಪಿಗಳು, ವರ್ಣಚಿತ್ರಕಾರರು ಮತ್ತು ಚಿತ್ರ ಕೊರೆಯುವವರ ಅಂತರ ರಾಷ್ಟ್ರೀಯ ಸಂಘದ ಅಧ್ಯಕ್ಷನಾಗಿ ಅವನು ಚುನಾಯಿತನಾದ.

ರೋಡಿನ್ ಹುಟ್ಟಿದ್ದು ಪ್ಯಾರಿಸಿನಲ್ಲಿ, 1840ರ ನವೆಂಬರ್ 12ರಂದು. 14ನೆಯ ವಯಸ್ಸಿನಲ್ಲೇ ರೇಖಾಚಿತ್ರ ಬರೆಯುವುದನ್ನು ಕಲಿಯಲಾರಂಭಿಸಿದ. 1854ರಿಂದ 1857ರ ವರೆಗೆ ಪ್ಯಾರಿಸ್‌ನ ಚಿತ್ರಲೇಖನ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದ. 1857ರಲ್ಲಿ ಪ್ರೌಢ ಚಿತ್ರಕಲಾಶಾಲೆಗೆ ಸೇರಲು ಪ್ರಯತ್ನಿಸಿದ. ಆದರೆ ಈತನ ರಚನಾ ಶೈಲಿ ಒರಟೆಂದು ಅಲ್ಲಿಗೆ ಪ್ರವೇಶ ಕೊಡಲು ನಿರಾಕರಿಸಿದರು. ಅನಂತರ ಅವನು ಶಿಲ್ಪಿಯೊಬ್ಬನ ಹತ್ತಿರ ಕೆಲಸಕ್ಕೆ ಸೇರಿಕೊಂಡ. ಜೊತೆಗೆ ಇತರರ ಕೃತಿಗಳನ್ನು ಪ್ಲಾಸ್ಟರಿನಲ್ಲಿ, ಲೋಹದಲ್ಲಿ ಎರಕಹುಯ್ದು ಕೊಡುವುದು ಮುಂತಾದ ಸಣ್ಣಪುಟ್ಟ ಕೆಲಸಗಳನ್ನೂ ಮಾಡುತ್ತಿದ್ದ. ದಿನ ಕಳೆದಂತೆ ಕೈ ಪಳಗಿತು; ಕುಶಲತೆ ಹೆಚ್ಚಿತು. ಆಮೇಲೆ ಕಟ್ಟಡಗಳಲ್ಲಿ ಶಿಲ್ಪಗಳನ್ನು ರಚಿಸುವ ಕೆಲಸ ಸಿಗತೊಡಗಿತು.

1875ರಲ್ಲಿ ಒಬ್ಬ ಸ್ನೇಹಿತನಿಂದ ಹಣವನ್ನು ಸಾಲವಾಗಿ ಪಡೆದು ಇಟಲಿಗೆ ಹೋದ. ಮೈಕೆಲೇಂಜಲೋ, ಮೊದಲಾದ ಶ್ರೇಷ್ಠ ಶಿಲ್ಪಿಗಳ ಶಿಲ್ಪಗಳನ್ನು ನೋಡಿ ಬಂದ. ಮುಂದೆ ರೋಡಿನ್‌ನ ಕೃತಿಗಳಲ್ಲಿ ಮೈಕೆಲೇಂಜಲೋನ ಪ್ರಭಾವ ಕಾಣತೊಡಗಿತು. ಇಟಲಿಯಿಂದ ಹಿಂದಿರುಗಿ ಬಂದಮೇಲೆ ತಾನೇ ಸ್ವತಂತ್ರವಾಗಿ ಕೆಲಸ ಮಾಡತೊಡಗಿದ. ಅನೇಕ ಉತ್ತಮ ಕೃತಿಗಳನ್ನು ರಚಿಸಿ ಖ್ಯಾತನಾದ.

ಕಲೆಯನ್ನು ಕುರಿತು ರೋಡಿನ್ ನಡೆಸಿದ ಸಂಭಾಷಣೆಗಳೂ ಫ್ರಾನ್ಸಿನ ಪ್ರಾರ್ಥನಾಮಂದಿರಗಳನ್ನು ಕುರಿತು ರಚಿಸಿದ ಪುಸ್ತಕವೂ ಪ್ರಕಟವಾಗಿವೆ.

ಫ್ರಾನ್ಸಿನ ಸರಕಾರ ಹೋಟೆಲ್ ಬಿರಾನ್‌ನಲ್ಲಿ ಕಲಾವಿದರು ಮತ್ತು ಸಾಹಿತಿಗಳಿಗೆ ವಸತಿಯನ್ನು ಕಲ್ಪಿಸಿತ್ತು. ರೋಡಿನ್ 1908ರಿಂದ ಈ ಹೋಟೆಲ್‌ನಲ್ಲೇ ವಾಸಮಾಡುತ್ತಿದ್ದ. ತನ್ನ ಆಪ್ತಮಿತ್ರನೊಬ್ಬನ ಅಪೇಕ್ಷೆಯಂತೆ ಅವನೊಡನೆ ಅಲ್ಲಿಯೇ ಖಾಯಂ ಆಗಿ ಇರಲು ರೋಡಿನ್ ನಿರ್ಧರಿಸಿದ. ತಾನು ಮಾರದೆ ಇದ್ದ ತನ್ನ ಎಲ್ಲ ಕಲಾಕೃತಿಗಳನ್ನೂ ತಾನು ಸಂಗ್ರಹಿಸಿದ್ದ ಕಲಾ ವಸ್ತುಗಳನ್ನೂ ಮ್ಯೂಡಾನ್ ಪ್ರದೇಶದಲ್ಲಿದ್ದ ತನ್ನ ಮನೆಯನ್ನೂ ರಾಷ್ಟ್ರಕ್ಕೆ ದತ್ತಿಯಾಗಿ ಕೊಟ್ಟು ಆ ಹೋಟೆಲಿನಲ್ಲೇ ಉಳಿದುಕೊಂಡ. 1917ರ ನವೆಂಬರ್ 17ರಂದು ರೋಡಿನ್ ಮೃತನಾದ ಮೇಲೆ ಆ ಹೋಟೆಲನ್ನೂ ಮ್ಯೂಡಾನ್‌ನಲ್ಲಿದ್ದ ಅವನ ಮನೆಯನ್ನೂ ರೋಡಿನ್ ವಸ್ತುಸಂಗ್ರಹಾಲಯವಾಗಿ ಪರಿವರ್ತಿಸಲಾಯಿತು. ಅಲ್ಲಿ ಅವನ ಅನೇಕ ಶಿಲ್ಪಗಳು ಹಾಗೂ ರೇಖಾ ಮತ್ತು ವರ್ಣಚಿತ್ರಗಳನ್ನು ನೋಡಬಹುದು.

"ಜೀವದಿಂದಿರುವ ಯಾವುದೂ ಕುರೂಪವಲ್ಲ. ದುಃಖ, ನೋವು, ಒಳ್ಳೆಯತನ, ಕೋಪ, ದ್ವೇಷ, ಪ್ರೇಮ, ಯಾವ ಭಾವನೆಯೇ ಇರಲಿ, ಒಂದೊಂದಕ್ಕೂ ತನ್ನದೇ ಆದ ಸೌಂದರ್ಯವಿದೆ", ಎಂಬುದು ರೋಡಿನ್‌ನ ಅಭಿಪ್ರಾಯವಾಗಿತ್ತು. ಜೀವನದ ಕಾಠಿನ್ಯವನ್ನು ತನ್ನ ಕೃತಿಗಳಲ್ಲಿ ಎತ್ತಿ ತೋರಿಸಲು ರೋಡಿನ್ ಎಂದೂ ಹಿಂದೆಗೆಯುತ್ತಿರಲಿಲ್ಲ.

ಶಿಲ್ಪಕಲೆಗೆ ಹೊಸ ವ್ಯಾಪ್ತಿ, ಅರ್ಥ ಹಾಗೂ ಉದ್ದೇಶಗಳನ್ನು ಕೊಟ್ಟ ಕ್ರಾಂತಿಕಾರಿ ಕಲಾವಿದರಲ್ಲಿ ರೋಡಿನ್ ಒಬ್ಬ.



ಕನ್ನಡ ಪ್ರೇಮ, ವಿದ್ಯಾಪ್ರೇಮ : ರೊದ್ದ

## ರೊದ್ದ ಶ್ರೀನಿವಾಸರಾಯ

1920ರಲ್ಲಿ ಹೊಸಪೇಟೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ರೊದ್ದ ಶ್ರೀನಿವಾಸರಾಯರು ಹರಿದು ಹಂಚಿಹೋಗಿದ್ದ ಕನ್ನಡ ನಾಡಿನ ದುಃಸ್ಥಿತಿಯನ್ನು ಕಂಡು ಮರುಗಿದರು. ಪರಭಾಷಾ ದಬ್ಬಾಳಿಕೆಯಿಂದ ಕನ್ನಡಕ್ಕೆ ಆಗುತ್ತಿರುವ ಅನ್ಯಾಯವನ್ನು ಅರಿತುಕೊಳ್ಳಲು ಕನ್ನಡಿಗರಿಗೆ ಕರೆಕೊಟ್ಟರು.

ಶ್ರೀನಿವಾಸರಾಯರ ಕನ್ನಡ ಪ್ರೇಮಕ್ಕೆ ಕಡಮೆಯಿಲ್ಲದ್ದು ಇವರ ವಿದ್ಯಾಪ್ರೇಮ. ಧಾರವಾಡದ ಕರ್ನಾಟಕ ಕಾಲೇಜು ಆರಂಭವಾದದ್ದೇ ಇವರ ಪ್ರಯತ್ನದಿಂದ. ಹಳ್ಳಿ ಹಳ್ಳಿ ಸುತ್ತಾಡಿ ಇದಕ್ಕಾಗಿ ಇವರು ಒಂದು ಲಕ್ಷ ರೂಪಾಯಿ ಕೂಡಿಸಿದರು. ಕಾಲೇಜು ಸ್ಥಾಪನೆ ಆದ ಬಳಿಕವೂ ಇವರಿಲ್ಲದೆ ಕಾಲೇಜಿನ ಒಂದು ಕೆಲಸವೂ ಆಗುವಂತಿರಲಿಲ್ಲ.

ರೊದ್ದ ಶ್ರೀನಿವಾಸರಾಯರ ಹುಟ್ಟೂರು ಧಾರವಾಡ. ಜನನ 1850ರ ಸೆಪ್ಟೆಂಬರ್ 17ರಂದು. ಪ್ರಾರಂಭ ವಿದ್ಯಾಭ್ಯಾಸ ನಡೆದದ್ದು ಮದಿಹಾಳದ ಶಾಲೆಯಲ್ಲಿ. ವಾರಾನ್ನದ ಊಟ. ಬೀದಿ ದೀಪದ ಓದು. ಮೆಟ್ರಿಕ್ಯುಲೇಷನ್ ಮುಗಿಸಿ ಪುಣೆಯ ಡೆಕ್ಕನ್ ಕಾಲೇಜು ಸೇರಿದರು. ಆರ್ಥಿಕ ಅಡಚಣೆಯಿಂದ ವಿದ್ಯಾಭ್ಯಾಸ ಅರ್ಧಕ್ಕೇ ನಿಂತಿತು. ಅನಂತರ ಅಂಟಿಕೊಂಡದ್ದು ಶಾಲಾ ಮಾಸ್ತರಿಕೆ. ಹುಬ್ಬಳ್ಳಿಯಲ್ಲಿ ಕೆಲಸ. ಇರುವುದು ಮದಿಹಾಳ. ಪ್ರತಿ ದಿನ ನೌಕರಿಮಾಡಲು ಹತ್ತು ಮೈಲಿ ಕಾಲ್ನಡೆ. ಈ ಎಲ್ಲ ಅನುಭವಗಳ ಬೇಗೆಯಲ್ಲಿ ಬೆಂದು ಇವರು ಪುಟವಿಟ್ಟ ಚಿನ್ನವಾದರು. ಬಡ ವಿದ್ಯಾರ್ಥಿಗಳ ಮೇಲೆ ಇವರಿಗೆ ಅಪಾರ ಅನುಕಂಪ. ಎಂಟು ವರ್ಷ ಹೈಸ್ಕೂಲು ಅಧ್ಯಾಪಕರಾಗಿ, ಹದಿನೆಂಟು ವರ್ಷ ಜಿಲ್ಲಾ ವಿದ್ಯಾಧಿಕಾರಿಯಾಗಿ, ಹತ್ತು ವರ್ಷ ಧಾರವಾಡ ಟ್ರೇನಿಂಗ್ ಕಾಲೇಜಿನ ಮುಖ್ಯಾಧಿಕಾರಿಯಾಗಿ 1908ರಲ್ಲಿ ನಿವೃತ್ತರಾದರು.

ಕನ್ನಡವನ್ನು ಕೇಳುವವರೇ ಇಲ್ಲದಿದ್ದ ಕಾಲದಲ್ಲಿ ಕನ್ನಡದಲ್ಲಿ ಆಸಕ್ತಿ ಮಹಿಸಿ, ಧಾರವಾಡ ಜಿಲ್ಲೆಯಲ್ಲಿ ಕನ್ನಡ ಶಾಲೆಗಳ ಸಂಖ್ಯೆಯನ್ನು 200ರಿಂದ 600ಕ್ಕೆ ಏರಿಸಿದರು. ಮಾಧ್ಯಮಿಕ ಶಾಲೆಗಳಲ್ಲಿ ದೇಶಭಾಷೆಗಳ ಮೂಲಕವೇ ಶಿಕ್ಷಣ ನಡೆಯಬೇಕು ಎಂದರು. ಧಾರವಾಡದ ಹೆಣ್ಣು ಮಕ್ಕಳ ಶಿಕ್ಷಣ ವಿದ್ಯಾಲಯ, ಕರ್ನಾಟಕ ಹೈಸ್ಕೂಲು, ಕರ್ನಾಟಕ ಮಹಿಳಾ ವಿದ್ಯಾಲಯ,

ಮಿತ್ರಸಮಾಜ, ಬೆಳಗಾಂ ವಿಚಾರಕ ಸಂಘ, ವ್ಯಾಪಾರ ಉತ್ತೇಜಕ ಸಂಘ ಇವರ ಪರಿಶ್ರಮದಿಂದ ರೂಪುಗೊಂಡುವು.

ಶ್ರೀನಿವಾಸರಾಯರ ಮಾತೃಭಕ್ತಿ ಮನೆಮಾತಾಗಿತ್ತು. ತಾಯಿಯ ಮಾತನ್ನು ಅವರು ಎಂದೂ ಮೀರಿದವರಲ್ಲ.

ನೌಕರಿಯಿಂದ ನಿವೃತ್ತರಾದ ಮೇಲೆ ರಾಯರ ಕಾರ್ಯಕ್ಷೇತ್ರ ಮತ್ತಷ್ಟು ವಿಸ್ತಾರವಾಯಿತು. 1908ರಿಂದ 1915ರ ವರೆಗೆ ಮುಂಬಯಿ ಲೆಜಿಸ್ಲೇಟಿವ್ ಕೌನ್ಸಿಲ್ ಸದಸ್ಯರಾಗಿ, 1912ರಿಂದ 1915ರ ವರೆಗೆ ಧಾರವಾಡ ನಗರಸಭೆ ಅಧ್ಯಕ್ಷರಾಗಿ ಮತ್ತು 1917ರಿಂದ 1925ರ ವರೆಗೆ ಧಾರವಾಡ ಜಿಲ್ಲೆಯ ಲೋಕಲ್ ಬೋರ್ಡ್ ಅಧ್ಯಕ್ಷರಾಗಿ ಇವರು ಸೇವೆ ಸಲ್ಲಿಸಿದರು. ಬುದ್ಧನ ಒಂದು ಜೀವನ ಚರಿತ್ರೆಯನ್ನೂ ಸ್ತ್ರೀ ಶಿಕ್ಷಣದ ಬಗೆಗೆ ಒಂದು ವೈಚಾರಿಕ ಪುಸ್ತಕವನ್ನೂ ಇವರು ಬರೆದಿದ್ದಾರೆ. ವಿದ್ಯಾಕ್ಷೇತ್ರದಲ್ಲಿ ಇವರು ಮಾಡಿದ ಸೇವೆಗಾಗಿ 'ರಾವ್ ಬಹದ್ದೂರ್', ಸಾರ್ವಜನಿಕ ಸೇವೆಗಾಗಿ 'ದಿವಾನ್ ಬಹದ್ದೂರ್' ಪ್ರಶಸ್ತಿಗಳು ಇವರವಾದುವು. ಬ್ರಿಟಿಷ್ ಸರಕಾರದಿಂದ ಸಿ.ಐ.ಇ. ಪ್ರಶಸ್ತಿಯೂ ದೊರಕಿತು.

1929ರ ಆಗಸ್ಟ್ 4ರಂದು ಕನ್ನಡನಾಡು ಧೀಮಂತ ವ್ಯಕ್ತಿ ರೊದ್ದ ಶ್ರೀನಿವಾಸರಾಯರನ್ನು ಕಳೆದುಕೊಂಡಿತು.

## ರೊಮಾ ರೊಲಾ

ಪ್ಯಾರಿಸಿನ ಸೋರ್‌ಬೋನ್ ವಿಶ್ವವಿದ್ಯಾನಿಲಯದಲ್ಲಿ ಒಂದು ತರಗತಿ. ಪ್ರಾಧ್ಯಾಪಕ ಕಲೆಯನ್ನು ಕುರಿತು ಉಪನ್ಯಾಸ ಮಾಡುತ್ತಿದ್ದ. ಸೊಗಸಾದ ಮಾತುಗಾರಿಕೆ. ಉಪನಿಷತ್ತಿನಿಂದಲೂ ರಾಮಕೃಷ್ಣ, ವಿವೇಕಾನಂದರ ಬೋಧನೆಗಳಿಂದಲೂ ಉದಹರಿಸುತ್ತಿದ್ದ ವಾಕ್ಯಗಳು. ವಿದ್ಯಾರ್ಥಿಗಳನ್ನು ಯಾವುದೋ ವಿಚಿತ್ರ ಪ್ರಪಂಚಕ್ಕೆ ಇವು ಕೊಂಡೊಯ್ಯುತ್ತಿದ್ದುವು.

—ಈ ಪ್ರಾಧ್ಯಾಪಕ ರೊಮಾ ರೊಲಾ. ಆತ ಆಧುನಿಕ ಫ್ರೆಂಚ್ ಸಾಹಿತ್ಯದ ಪ್ರಮುಖ ಲೇಖಕ ಕೂಡ. ರೊಮಾ ರೊಲಾ ಹುಟ್ಟಿದ್ದು ದಕ್ಷಿಣ ಫ್ರಾನ್ಸಿನ ಬರ್ಗಂಡಿ ಜಿಲ್ಲೆಯ ಕ್ಲೆಮಿಸಿ ಎಂಬ ಹಳ್ಳಿಯಲ್ಲಿ. ಮಧ್ಯಮ ವರ್ಗದ ಕುಟುಂಬದಲ್ಲಿ. 1866ರ ಜೂನ್ 29ರಂದು. ಬಾಲ್ಯದಿಂದಲೇ ಆತನನ್ನು ಆಕರ್ಷಿಸಿದ ಕಲೆ —ಸಂಗೀತ. ಪಿಯಾನೋ ವಾದನದಲ್ಲಿ ಆತ ನಿಪುಣನಾಗಿದ್ದ. 1886ರಲ್ಲಿ ರೊಮಾ ರೊಲಾ ಫ್ರಾನ್ಸಿನ ನ್ಯಾಷನಲ್ ನಾರ್ಮಲ್ ಶಾಲೆಗೆ ಸೇರಿದ. ಶಾಲೆಯಲ್ಲಿ ಇತಿಹಾಸವನ್ನು ಮುಖ್ಯ ಅಧ್ಯಯನ ವಿಷಯವಾಗಿ ಆರಿಸಿಕೊಂಡರೂ ಸಂಗೀತ ಮತ್ತು ಕಲೆಗಳಲ್ಲಿ ಆತನ ಅಭಿರುಚಿ ಬೆಳೆಯುತ್ತ ಹೋಯಿತು.

ಸಾಹಿತ್ಯದಲ್ಲಿ ಶೇಕ್ಸ್‌ಪಿಯರ್, ಗಯಟೆ, ಸಂಗೀತದಲ್ಲಿ ಬಿಥೋವನ್ ಮತ್ತು ಮೊಜಾರ್ಟ್, ರೊಲಾನ ಆರಾಧ್ಯಮೂರ್ತಿಗಳಾಗಿದ್ದರು. ರಷ್ಯದ ಪ್ರಸಿದ್ಧ ಕಾದಂಬರಿಕಾರ ಟಾಲ್‌ಸ್ಟಾಯ್ ಅವನಿಗೆ ಅಚ್ಚುಮೆಚ್ಚು. ಆತ ಬರೆದ ಕಾಗದಕ್ಕೆ ಟಾಲ್‌ಸ್ಟಾಯ್ 38 ಪುಟಗಳ ದೀರ್ಘ ಉತ್ತರ ಬರೆದಿದ್ದ. ಅದರಲ್ಲಿ ರೊಮಾ ರೊಲಾನನ್ನು 'ಪ್ರೀತಿಯ ಸಹೋದರ' ಎಂದು ಸಂಬೋಧಿಸಿದ್ದ. ಕಲೆ, ಸಾಹಿತ್ಯಗಳನ್ನು ಕಲಿತರೆ ಮಾತ್ರ ಸಾಲದು : [illegible] ಎಂದು ಉಪದೇಶಿಸಿದ್ದ. 1895ರಲ್ಲಿ ರೊಮಾ ರೊಲಾ ವಿದ್ಯಾರ್ಥಿವೇತನ ಪಡೆದು, ರೋಮಿನ ಪುರಾತತ್ತ್ವ ಮತ್ತು ಇತಿಹಾಸ ವಿದ್ಯಾಲಯದಲ್ಲಿ ತನ್ನ ಅಧ್ಯಯನ ಮುಂದುವರಿಸಲು ಹೋದ. ಅಲ್ಲಿಂದ ಹಿಂದಿರುಗಿದ ಮೇಲೆ ಮೊದಲು ನಾರ್ಮಲ್ ಸ್ಕೂಲಿನಲ್ಲೂ ಅನಂತರ ಸೋರ್‌ಬೋನ್ ವಿಶ್ವವಿದ್ಯಾನಿಲಯದಲ್ಲೂ ಅಧ್ಯಾಪಕನಾಗಿ ಕೆಲಸ ಮಾಡಿದ. ಅಲ್ಲಿರುವಾಗಲೇ ಆತ ಬಿಥೋವನ್, ಮೈಕೆಲೇಂಜೆಲೊ, ಟಾಲ್‌ಸ್ಟಾಯ್ ಇವರ ಜೀವನಚರಿತ್ರೆಗಳನ್ನು ಬರೆದ. ಇವುಗಳಲ್ಲಿ ಬಿಥೋವನನ ಜೀವನ ಚರಿತ್ರೆ ಅತ್ಯಂತ ಶ್ರೇಷ್ಠ ಕೃತಿ.

ಬರ್ಗಂಡಿಯ ದ್ರಾಕ್ಷಾ ತೋಟಗಳು, ವಿಯೆನ್ನಾದ ಅರಸರ ರಾಜಭವನಗಳು, ಪೋಪ್‌ನ ವ್ಯಾಟಿಕನ್ ಅರಮನೆ ಇವೆಲ್ಲವೂ ಆತನಿಗೆ ಸ್ಫೂರ್ತಿಯ ಸೆಲೆಗಳಾಗಿದ್ದುವು. ಇಟಲಿಯಲ್ಲಿ ರೂಪುಗೊಂಡ ನವೋದಯ, ಫ್ರಾನ್ಸಿನ ಮಹಾಕ್ರಾಂತಿ, ಭಾರತದಲ್ಲಿ ರಾಮಮೋಹನ ರಾಯ್ ನಡೆಸಿದ ಧಾರ್ಮಿಕ ಸಾಮಾಜಿಕ ಸುಧಾರಣೆಗಳು, ರಾಮಕೃಷ್ಣ, ವಿವೇಕಾನಂದರ ಬೋಧನೆಗಳು ಇವೆಲ್ಲ ರೊಮಾ ರೊಲಾನ ವ್ಯಕ್ತಿತ್ವವನ್ನು ರೂಪಿಸಿದ ಮಹತ್ವದ ಅಂಶಗಳು.

1919ರಲ್ಲಿ ಆತ ಮೊದಲ ಬಾರಿಗೆ ರವೀಂದ್ರನಾಥ ಠಾಕೂರರಿಗೆ ಪತ್ರ ಬರೆದ. ಈ ಪತ್ರದಿಂದ ಅವರಿಬ್ಬರ ಗೆಳೆತನ ಚಿಗುರಿತು. 1941ರಲ್ಲಿ ರವೀಂದ್ರರ ನಿಧನದವರೆಗೆ ಏಕಪ್ರಕಾರವಾಗಿ ಈ ಗೆಳೆತನ ಮುಂದುವರಿಯಿತು. ಹಾಗೆಯೇ ಜರ್ಮನ್ ವಿಜ್ಞಾನಿ ಐನ್‌ಸ್ಟೀನ್, ರಷ್ಯದ ಸಾಹಿತಿ ಮ್ಯಾಕ್ಸಿಂ ಗಾರ್ಕಿ, ಆಂಗ್ಲ ನಾಟಕಕಾರ ಜಾರ್ಜ್ ಬರ್ನಾರ್ಡ್ ಷಾ, ತತ್ತ್ವಜ್ಞಾನಿ ಬರ್ಟ್ರಂಡ್ ರಸೆಲ್ ಮುಂತಾದ ಮಹನೀಯರೊಡನೆ ಆತ ಪತ್ರವ್ಯವಹಾರ ಇಟ್ಟುಕೊಂಡಿದ್ದ.

ಅಪ್ರತಿಮ ಮಾನವತಾವಾದಿಯೂ ವಿಶ್ವಶಾಂತಿಪ್ರಿಯನೂ ಆಗಿದ್ದ ರೊಮಾ ರೊಲಾ, ಸರ್ವಾಧಿಕಾರತ್ವವನ್ನು ಸ್ಥಾಪಿಸಿದ ಫಾಸಿಸಮಿನ ವಿರೋಧಿಯಾಗಿದ್ದ. ಜರ್ಮನಿಯಲ್ಲಿ ಹಿಟ್ಲರ್ ಅಧಿಕಾರಕ್ಕೆ ಬಂದ ಕಾಲದಲ್ಲಿ ತನಗೆ ನೀಡಲಾದ 'ಗಯಟೆ ಪದಕ'ವನ್ನು ರೊಲಾ ತಿರಸ್ಕರಿಸಿದ.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಆತ ಬರೆದ ಒಂದು ಪ್ರಬಂಧ ಯುದ್ಧೋತ್ಸಾಹಿಗಳ ಕಟು ವಿಮರ್ಶೆಗೆ ಗುರಿಯಾಯಿತು. ಫ್ರೆಂಚರೂ ಜರ್ಮನರೂ ದ್ವೇಷವನ್ನು ತೊರೆದು ಪರಸ್ಪರ ಸಹಕರಿಸುತ್ತ ಶಾಂತಿಯುತ ಸಹಬಾಳ್ವೆ ನಡೆಸಬೇಕೆಂಬುದೇ ಆ ಪ್ರಬಂಧದ ವಿಷಯವಾಗಿತ್ತು. ತಾನು ತೀವ್ರವಾಗಿ ವಿರೋಧಿಸುತ್ತಿದ್ದ ಜರ್ಮನಿಯ ನಾಜಿ ಪಕ್ಷ ಹಾಗೂ ಇಟಲಿಯ ಫಾಸಿಸ್ಟ್ ಪಕ್ಷ ಎರಡನೆಯ ಮಹಾಯುದ್ಧದಲ್ಲಿ ಬಲವಾದ ಪೆಟ್ಟು ತಿಂದು ನಾಶವಾಗಿ ಹೋದುದನ್ನು ಆತ ಕಣ್ಣಾರೆ ಕಂಡ.

ರೊಲಾನ 'ಜೀನ್ ಕ್ರಿಸ್ಟಫ಼', ಮಹಾಕಾವ್ಯದ ಭವ್ಯತೆ ವಿಸ್ತಾರಗಳುಳ್ಳ ಕಾದಂಬರಿ. ಫ್ರಾನ್ಸಿನ ಪತ್ರಿಕೆಯೊಂದರಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಈ ಮಹಾಕೃತಿ ಅನಂತರ ಹತ್ತು ಭಾಗಗಳಾಗಿ ಪುಸ್ತಕರೂಪದಲ್ಲಿ ಪ್ರಕಟ





'ಜೀನ್ ಕ್ರಿಸ್ಟಫ಼' : ರೊಮಾ ರೊಲಾ

ದಾಯಿತು. ಇದರಿಂದ ವಿಶ್ವ ವಿಖ್ಯಾತನಾದ ಅವನಿಗೆ ಶ್ರೇಷ್ಠ ಸಾಹಿತ್ಯ ನಿರ್ಮಾಪಕನ ಕೀರ್ತಿ ಹಬ್ಬಿಸಿಕೊಟ್ಟಿತು. ಅವನಿಗೆ 1915ರಲ್ಲಿ ಸಾಹಿತ್ಯಕ್ಕಾಗಿ ನೊಬೆಲ್ ಪಾರಿತೋಷಕವನ್ನು ನೀಡಿದರು. ಕ್ರಿಸ್ಟೋಫ್ ಎಂಬ ಸಂಗೀತ ಕಲಾವಿದನೊಬ್ಬನ ಕಥೆ ಹತ್ತು ಸಂಪುಟಗಳ ಎರಡುಸಾವಿರ ಪುಟಗಳಲ್ಲಿನ ಈ ಕಾದಂಬರಿಯಲ್ಲಿ ಕಾವ್ಯಮಯ ಶೈಲಿಯಲ್ಲಿ ಮಾನಸ ಶಾಂತಿ. 'ಜೀನ್ ಕ್ರಿಸ್ಟೋಫ್' ಯುರೋಪಿನ ಕಲಾ ಪರಂಪರೆಗಳ ಸುಳಿಯಲ್ಲಿ ಸಿಲುಕಿ ನರಳಿ ಆತ್ಮವಿಶ್ವಾಸವನ್ನು ಕಳೆದುಕೊಳ್ಳುತ್ತೆ. ಜೀವನದ ಮತ್ತು ಕಲೆಗಳ ಬಗೆಗೆ ತನ್ನ ದೃಷ್ಟಿಯನ್ನು ಬದಲಿಸಿಕೊಳ್ಳುತ್ತಾನೆ. ಈ ಕಾದಂಬರಿ ಪ್ರಕಟವಾದಾಗ ಅದು ತರುಣ ಜನಾಂಗದ ಮೇಲೆ ವಿಶೇಷ ಪ್ರಭಾವ ಬೀರಿತು. ಜೀವನ ಮತ್ತು ಅದರ ಸಮಸ್ಯೆಗಳನ್ನು ಕುರಿತು ಅವರು ಗಾಢವಾಗಿ ಯೋಚಿಸಲು ಪ್ರೇರಿಸಿತು. ಆ ಮಹಾ ಕಾದಂಬರಿ ಮೂವತ್ತಕ್ಕೂ ಹೆಚ್ಚು ಭಾಷೆಗಳಿಗೆ ಅನುವಾದವಾಗಿದೆ.

ಫ್ರಾನ್ಸಿನ ಐತಿಹಾಸಿಕ ಘಟನೆಗಳಿಂದ ಪ್ರಚೋದಿತನಾಗಿ ರೊಮಾ ರೊಲಾ ರಚಿಸಿದ ಕೆಲವು ನಾಟಕಗಳೂ ಪ್ರಸಿದ್ಧವಾಗಿವೆ. ಕ್ರಾಂತಿಯನ್ನು ಕುರಿತು ಆತ ಬರೆದ ನಾಟಕಗಳಲ್ಲಿ ಕ್ರಾಂತಿಯ ಕಾರಣಗಳು ಮತ್ತು ಅದರ ಪರಿಣಾಮಗಳ ಮಾರ್ಮಿಕ ನಿರೂಪಣೆಯಿದೆ.

'ಮಹಾತ್ಮಾ ಗಾಂಧಿ' (1924), 'ರಾಮಕೃಷ್ಣ ಪರಮಹಂಸ' (1929), 'ವಿವೇಕಾನಂದ' (1930), - ಕೃತಿಗಳು ಆಧುನಿಕ ಭಾರತದ ಮಹಾಪುರುಷರ ವಿಚಾರವಾಗಿ ರೊಮಾ ರೊಲಾಗೆ ಇದ್ದ ತೀವ್ರ ಆಸಕ್ತಿ ಶ್ರದ್ಧೆಗಳ ದ್ಯೋತಕ.

ರೊಮಾ ರೊಲಾ 1922ರಿಂದ 1938ರ ವರೆಗೆ ತನ್ನ ತಂದೆ ಮತ್ತು ತಂಗಿಯೊಡನೆ ವಿಲಿನೂವೆ ಎಂಬಲ್ಲಿ ವಾಸಿಸುತ್ತಿದ್ದ. ಈ ಅವಧಿಯಲ್ಲಿ ಜಗತ್ತಿನ ವಿವಿಧ ಭಾಗಗಳ ಪ್ರತಿಷ್ಠಿತ ವ್ಯಕ್ತಿಗಳು ಅವನನ್ನು ಇಲ್ಲಿ ಭೇಟಿ ಮಾಡಿದರು. 1934ರಲ್ಲಿ ಅವನು ಒಬ್ಬಳು ರಷ್ಯನ್ ಮಹಿಳೆಯನ್ನು ಮದುವೆಯಾದ. ಇದು ಅವನ ಎರಡನೆಯ ಮದುವೆ. ರೊಮಾ ರೊಲಾ 1937ರಲ್ಲಿ ತನ್ನ ಜನ್ಮ ಪ್ರದೇಶದ ವಿಜಲೆ ಎಂಬಲ್ಲಿ ಒಂದು ಮನೆ ಕೊಂಡುಕೊಂಡು, 1939ರಲ್ಲಿ ಎರಡನೆಯ ಮಹಾಯುದ್ಧ ಆರಂಭವಾದ ಮೇಲೆ ಅಲ್ಲಿಗೆ ಹೋಗಿ ನೆಲೆಸಿದ. 1944ರ ಡಿಸೆಂಬರ್ 30ರಂದು ತನ್ನ 80ನೆಯ ವರ್ಷದಲ್ಲಿ ಅಲ್ಲೇ ಅವನು ಕಾಲವಾದ.

## ರೊಸೆಟ್ಟಿ

ರೊಸೆಟ್ಟಿ ಮನೆತನವೇ ಕಲಾವಿದರದು. ಲಂಡನಿನ ಅವರ ಮನೆಯಲ್ಲಿ ಯಾವಾಗಲೂ ಕಲೆಯ ವಾತಾವರಣವೇ ಇರುತ್ತಿತ್ತು.

ಗೇಬ್ರಿಯಲ್ ರೊಸೆಟ್ಟಿ ಇಟಲಿಯ ಕವಿ. ಈತನ ಕಾಲ 1783–1854. ಆತ ನೇಪ್‌ಲ್ಸ್‌ನ ವಸ್ತುಸಂಗ್ರಹಾಲಯದ ನಿರ್ವಾಹಕನಾಗಿದ್ದ. 1824ರಲ್ಲಿ ಆದ ರಾಜಕೀಯ ಗೊಂದಲಗಳಿಂದಾಗಿ ಲಂಡನಿಗೆ ವಲಸೆಬಂದ. ಅಲ್ಲಿನ ಕಿಂಗ್ಸ್ ಕಾಲೇಜಿನಲ್ಲಿ ಇಟಲಿ ಭಾಷಾ ಪ್ರಾಧ್ಯಾಪಕನ ಹುದ್ದೆ ದೊರಕಿತು.

ಈತನ ಮಗಳು ಕ್ರಿಸ್ಟಿಯಾನಾ ರೊಸೆಟ್ಟಿ. 17ನೆಯ ವಯಸ್ಸಿಗೆ ಬರುವ ತನ್ನ ಸಂಕಲನವನ್ನು ಹೊರತಂದ ಪ್ರತಿಭಾವಂತೆ. ಮಕ್ಕಳಿಗಾಗಿಯೇ ವಿಶೇಷ ಸಾಹಿತ್ಯ ರಚಿಸುವ ಪರಿಪಾಠವಿಲ್ಲದಿದ್ದ ಆ ಕಾಲದಲ್ಲಿ ಮಕ್ಕಳಿಗಾಗಿ 'ಸಿಂಗ್‌ಸಾಂಗ್' ಎಂಬ ಕವಿತೆಗಳ ಪುಸ್ತಕವನ್ನೂ 'ಸ್ಪೀಕಿಂಗ್ ಲೈಕ್‌ನೆಸಸ್' ಎಂಬ ಸಣ್ಣ ಕಥೆಗಳ ಸಂಗ್ರಹವನ್ನೂ ಆಕೆ ಬರೆದಳು. 'ಗಾಬ್ಲಿನ್ ಮಾರ್ಕೆಟ್', 'ದಿ ಫೇಸ್ ಆಫ್ ದಿ ಡೀಪ್', 'ನ್ಯೂ ಪೊಯೆಮ್ಸ್' ಆಕೆಯ ಹೆಸರಾಂತ ಕವನಸಂಗ್ರಹಗಳಲ್ಲಿ ಕೆಲವು. ಇವು ಆಕೆಯ ಮರಣಾನಂತರ ಪ್ರಕಟವಾದುವು. ಈಕೆಯ ಕಾಲ 1830–94.

ಕ್ರಿಸ್ಟಿಯಾನಾ ರೊಸೆಟ್ಟಿ ಸುಂದರಿ. ಅಣ್ಣ ದಾಂತೆ ಗೇಬ್ರಿಯಲ್ ಇವಳನ್ನೇ ಮಾದರಿಯಾಗಿಟ್ಟುಕೊಂಡು 'ವರ್ಜಿನ್ ಮೇರಿ' ಎಂಬ ಚಿತ್ರ ರಚಿಸಿದ. ದಾಂತೆ ಗೇಬ್ರಿಯಲ್ ರೊಸೆಟ್ಟಿ ಚಿತ್ರಕಾರ ಹಾಗೂ ಕವಿ.

ದಾಂತೆ ಗೇಬ್ರಿಯಲ್ ರೊಸೆಟ್ಟಿಯ ಜನನ 1828ರಲ್ಲಿ. ಎಲಿಜಬೆತ್ ಸಿಡಾಲ್ ಎಂಬಾಕೆಯನ್ನು 1860ರಲ್ಲಿ ರೊಸೆಟ್ಟಿ ವಿವಾಹವಾದ. ಅವನ ಅನೇಕ ಚಿತ್ರಗಳಿಗೆ ಆಕೆ ಮಾದರಿಯಾಗಿದ್ದಳು. ಹತಾಶನಾಗಿದ್ದ ಒಂದು ಘಳಿಗೆಯಲ್ಲಿ ರೊಸೆಟ್ಟಿ ಆತ್ಮಹತ್ಯೆಗೆ ಯತ್ನಿಸಿದ್ದುಂಟು. ಬರ್ಚಿಂಗ್‌ಟನ್‌ನಲ್ಲಿ 1882ನೆಯ ಏಪ್ರಿಲ್ 10ರಂದು ಕಾಲವಾದ.

ವಿಲಿಯಂ ಮೈಕೆಲ್ ರೊಸೆಟ್ಟಿ ಈಕೆಯ ಇನ್ನೊಬ್ಬ ಸಹೋದರ. ಈತ ಕವಿ ಹಾಗೂ ಕಲಾವಿಮರ್ಶಕ. ಈತನ ಕಾಲ 1829–1919.

ಚಿತ್ರಕಾರ–ಕವಿ ದಾಂತೆ ಗೇಬ್ರಿಯಲ್ ರೊಸೆಟ್ಟಿಯ ಕಲಾಕೃತಿಗಳಿಗೆ ಮೊದಮೊದಲು ಯಾವ ಪುರಸ್ಕಾರವೂ ದೊರೆಯಲಿಲ್ಲ. ಇವನ ಪ್ರತಿಭೆಯನ್ನು ಮೊದಲು ಗುರುತಿಸಿದವನು ಆಂಗ್ಲ ಕಲಾವಿಮರ್ಶಕ ಜಾನ್ ರಸ್ಕಿನ್. ಇದರಿಂದ ರೊಸೆಟ್ಟಿ ಉತ್ತೇಜಿತನಾದ. ಶ್ರೇಷ್ಠ ಕಲಾಕೃತಿಗಳು ಅವನಿಂದ ರಚಿತವಾಗಿ ಎಲ್ಲರ ಮೆಚ್ಚುಗೆಯನ್ನು ಪಡೆದುವು.

ರೊಸೆಟ್ಟಿಯ ಚಿತ್ರಗಳ ರಚನೆಯಲ್ಲಿ ಹೊಂದಾಣಿಕೆ, ತೀವ್ರ ಕಾವ್ಯಮಯ ದೃಷ್ಟಿ ಕಂಡುಬರುತ್ತವೆ. ದಿನ ಕಳೆದಂತೆ ಸಾಂಕೇತಿಕ ನಿರೂಪಣೆಗೆ ತೊಡಗಿದ.

ಇಟಲಿಯ ಕವಿಗಳ ಕವನಗಳ ಭಾಷಾಂತರದ ಸಂಗ್ರಹ ರೊಸೆಟ್ಟಿಯ ಪ್ರಮುಖ ಪುಸ್ತಕಗಳಲ್ಲೊಂದು.



ಒಡಹುಟ್ಟಿದವರು : ದಾಂತೆ ಗೇಬ್ರಿಯಲ್, ಕ್ರಿಶ್ಚಿಯಾನಾ

ಇಟಲಿಯ ಕವಿಗಳ ಕವನಗಳ ಭಾಷಾಂತರದ ಸಂಗ್ರಹ ರೊಸೆಟ್ಟಿಯ ಪ್ರಮುಖ ಪುಸ್ತಕಗಳಲ್ಲೊಂದು.

## ರೋಮನ್ ಕಲೆ

ರೋಮನ್ ಕಲೆ ರೂಪುಗೊಂಡದ್ದು ಇಟ್ರೂರಿಯಾದ ಜನರ ಮತ್ತು ಗ್ರೀಕರ ಕೊನೆಗಾಲದ ಕಲೆಗಳ ಪ್ರಭಾವದಿಂದ. ಈಗಿನ ಇಟಲಿಯ ಟಸ್ಕನಿ ಪ್ರದೇಶಕ್ಕೆ ಪ್ರಾಚೀನ ಕಾಲದಲ್ಲಿ ಇಟ್ರೂರಿಯಾ ಎಂಬ ಹೆಸರಿತ್ತು. ಅಲ್ಲಿನ ನಿವಾಸಿಗಳು ಕಬ್ಬಿಣ, ಕಂಚು, ಚಿನ್ನಗಳನ್ನು ಬಳಸಿ ಉತ್ತಮ ಕಲಾಕೃತಿಗಳನ್ನು ರಚಿಸುವುದರಲ್ಲಿ ನಿಪುಣರಾಗಿದ್ದರು. ಗ್ರೀಕರು ಕೂಡ ಉತ್ತಮ ವಾಸ್ತುಶಿಲ್ಪಗಳ ನಿರ್ಮಾಣದಲ್ಲಿ ಕುಶಲರಾಗಿದ್ದರು.

ಆರಂಭಕಾಲದಲ್ಲಿ ಒಂದು ಪುಟ್ಟ ನಗರರಾಜ್ಯವಾಗಿದ್ದ ರೋಮ್ ಕಾಲ ಕ್ರಮೇಣ ದೊಡ್ಡ ಸಾಮ್ರಾಜ್ಯವಾಗಿ ಬೆಳೆಯಿತು. ರೋಮ್ ಪ್ರಬಲವಾಗಿದ್ದ ಕಾಲದಲ್ಲಿ, ಅಂದರೆ ಕ್ರಿ. ಪೂ. ಒಂದನೆಯ ಶತಮಾನದಿಂದ ಕ್ರಿ. ಶ. ಐದನೆಯ ಶತಮಾನದವರೆಗೆ, ಕಲೆಗೆ ಅಪಾರ ಪ್ರಚೋದನೆ, ಪುರಸ್ಕಾರ, ಪೋಷಣೆ ದೊರೆತುವು. ಜಗತ್ತಿನ ಕೆಲವು ಅತ್ಯುತ್ತಮ ಕಲಾಕೃತಿಗಳು ಈ ಅವಧಿಯಲ್ಲಿ ರೂಪುಗೊಂಡುವು.

ರೋಮನರು ಉತ್ತಮ ವ್ಯವಹಾರಜ್ಞಾನವುಳ್ಳವರಾಗಿದ್ದರು. ಅವರು ತಮ್ಮ ನಗರ, ಅರಮನೆಗಳನ್ನೂ ಸಾರ್ವಜನಿಕ ಸ್ನಾನಗೃಹ, ಮಾರುಕಟ್ಟೆ, ನಾಟಕಶಾಲೆಗಳನ್ನೂ ವ್ಯವಸ್ಥಿತ ಯೋಜನೆಗಳಿಗೆ ಅನುಸಾರವಾಗಿ ನಿರ್ಮಿಸಿದರು. ಕಲ್ಲು–ಗಾರೆ, ಇಟ್ಟಿಗೆ, ಬಣ್ಣದ ಕಲ್ಲು, ಅಮೃತಶಿಲೆ ಮುಂತಾದ ಸಾಮಗ್ರಿಗಳ ಉಪಯೋಗ ಅವರಿಗೆ ತಿಳಿದಿತ್ತು.

ಕಟ್ಟಡಗಳ ಒಳಾಂಗಣ ರಚನೆಯಲ್ಲಿ ಗ್ರೀಕ್ ಮತ್ತು ರೋಮನ್ ಶೈಲಿಗಳ ನಡುವೆ ಕೆಲವು ಪ್ರಮುಖ ವ್ಯತ್ಯಾಸಗಳನ್ನು ಕಾಣಬಹುದು. ಗ್ರೀಕರ ಭವನಗಳ ವಿಸ್ತಾರ ಅಷ್ಟೇನೂ ದೊಡ್ಡದಲ್ಲ. ಕಟ್ಟಡಗಳ ಛಾವಣಿಯ ಒಳಮೈ ಚಪ್ಪಟೆಯಾಗಿರುತ್ತಿತ್ತು. ರೋಮನ್ ಕಟ್ಟಡಗಳಾದರೋ ವಿಶಾಲವಾಗಿರುತ್ತಿದ್ದುವು. ತಾಂತ್ರಿಕ ಕುಶಲತೆ ರೋಮನರ ವಾಸ್ತುಶಿಲ್ಪದ ವೈಶಿಷ್ಟ್ಯವಾಗಿತ್ತು.

ಬಸ್ಲಿಲಿಕ ಎಂದು ಕರೆಯಲ್ಪಡುತ್ತಿದ್ದ ಸಾರ್ವಜನಿಕ ವ್ಯವಹಾರ ಕೇಂದ್ರಗಳು, ಕ್ರೈಸ್ತ ದೇವಾಲಯಗಳು, ವರ್ತುಲಾಕಾರದ ಕ್ರೀಡಾಂಗಣಗಳು, ಸಮಾಧಿ ಭವನಗಳು ಮುಂತಾದುವು ರೋಮನರ ಪ್ರಧಾನ ವಾಸ್ತುಶಿಲ್ಪ ರಚನೆಗಳಾಗಿವೆ. ರೋಮನರ ಕ್ರೀಡಾಂಗಣಗಳು ವರ್ತುಲ ಅಥವಾ ಅಂಡಾಕಾರದಲ್ಲಿರುತ್ತಿದ್ದುವು. ಇವುಗಳ ಮಧ್ಯಭಾಗದಲ್ಲಿ ಭೂಮಟ್ಟಕ್ಕಿಂತ ಕೆಳಗೆ ಒಂದು ಮಲ್ಲರಂಗ ಅಥವಾ ಅಖಾಡ ಇರುತ್ತಿತ್ತು. ಅದರಿಂದ ಸ್ವಲ್ಪ ದೂರದಲ್ಲಿ ಏರುಪಂಕ್ತಿಯ ಪೀಠವ್ಯವಸ್ಥೆ. ಅಖಾಡದಲ್ಲಿ ಮಾನವರ ದ್ವಂದ್ವ ಕಾಳಗಗಳೂ ಮಾನವ ಮತ್ತು ಕ್ರೂರ ಮೃಗಗಳ ನಡುವೆ ಹೋರಾಟಗಳೂ ನಡೆಯುತ್ತಿದ್ದುವು. ರೋಮಿನ ಎಲ್ಲ ವರ್ಗಗಳ ಜನರೂ ಇವನ್ನು ನೋಡಿ ಮನೋರಂಜನೆ ಪಡೆಯುತ್ತಿದ್ದರು. ರೋಮನರು ಕಟ್ಟಿದ ಇಂಥ ಕ್ರೀಡಾಂಗಣಗಳು ತುಂಬಾ ದೊಡ್ಡವು. ಇವುಗಳಲ್ಲಿ ಅತ್ಯಂತ ದೊಡ್ಡದಾದ ಕೊಲೋಸಿಯಮಿನಲ್ಲಿ ಐವತ್ತು ಸಾವಿರ ಜನರು ಕೂಡಲು ಅವಕಾಶವಿತ್ತು. ಇದರ ನಿರ್ಮಾಣ ಕ್ರಿ. ಶ. 79ರಲ್ಲಿ ಆರಂಭವಾಯಿತು. ಕಟ್ಟಿ ಮುಗಿಸಲು ಹತ್ತುವರ್ಷ ಕಾಲ ತಗಲಿತು.

ಸತ್ತವರ ಸ್ಮಾರಕವಾಗಿ ಕಟ್ಟಿದ ಹಲವಾರು ಸಮಾಧಿ ಭವನಗಳು ಕೂಡ ದೊಡ್ಡ ಪ್ರಮಾಣದವು. ಅವುಗಳ ಗೋಡೆಗಳನ್ನು ಗ್ರೀಕ್ ಪುರಾಣಗಳಿಂದ [illegible] ಹಾಗೂ ಸುಂದರ [illegible] ಅಂದಗೊಳಿಸುತ್ತಿದ್ದರು. ರೋಮನರ ವಾಸದ ಮನೆಗಳೂ ಅಚ್ಚುಕಟ್ಟಾಗಿರುತ್ತಿದ್ದುವು. ಮನೆಯಲ್ಲಿನ ಪೀಠ, ದಿನಬಳಕೆಯ ಉಪಕರಣಗಳನ್ನು ಕೂಡ ಆಕರ್ಷಕ ನಕಾಸೆಗಳಿಂದ ಅಲಂಕರಿಸುತ್ತಿದ್ದರು.

ಪ್ಯಾಂತಿಯನ್–ರೋಮನರು ರಚಿಸಿದ ಇನ್ನೊಂದು ಅದ್ಭುತ ಕಟ್ಟಡ. ಇದು ಹಲವಾರು ದೇವತೆಗಳಿಗಾಗಿ ಕಟ್ಟಿದ ದೇವಾಲಯ. ಇದರಲ್ಲಿ ಸ್ನಾನಗೃಹಗಳೂ ಸಾರ್ವಜನಿಕ ಸಭಾಂಗಣಗಳೂ ಇದ್ದುವು. ಎರಡನೆಯ ಶತಮಾನದ ಟ್ರಾಜನ್ ಚಕ್ರವರ್ತಿಯ ಕಾಲದಲ್ಲಿ ಡಮಾಸ್ಕಸ್‌ನಲ್ಲಿದ್ದ ಅಪೊಲೊಡೋರಸ್ ಅಂದಿನ ಜಗತ್ತಿನ ಅತ್ಯಂತ ಪ್ರತಿಭಾನ್ವಿತ ವಾಸ್ತುಶಿಲ್ಪಿ. ಇವನು ಅನೇಕ ಕಟ್ಟಡ, ಸೇತುವೆ ಮುಂತಾದುವನ್ನು ಕಟ್ಟಿದ. ಇವನ ಅತ್ಯಂತ ಭವ್ಯ ನಿರ್ಮಾಣ ರೋಮ್ ನಗರದ 'ವೇದಿಕೆ' ಎಂಬ ಕಟ್ಟಡಗಳ ಸಮೂಹ. ಇದು ರೋಮ್ ನಗರದ ಕೇಂದ್ರಸ್ಥಾನವಾಗಿತ್ತು. ವಿಶಾಲ ಪ್ರದೇಶದಲ್ಲಿ ನಿರ್ಮಿತವಾಗಿದ್ದ ಕಟ್ಟಡಗಳ ಸಮೂಹದಲ್ಲಿ ಸರಕಾರೀ ಕಟ್ಟಡಗಳು, ದೇವಾಲಯಗಳು, ಅಂಗಡಿಗಳು, ಮಾರುಕಟ್ಟೆ, ಸಾರ್ವಜನಿಕ ಸಭಾಸ್ಥಾನ, ಸ್ನಾನ ಗೃಹಗಳು, ಮನೋರಂಜನಾ ಭವನಗಳು, ಎಲ್ಲವೂ ಇದ್ದುವು. ಇಲ್ಲಿ ಯಾವಾಗಲೂ ವಿಪರೀತ ಜನಸಂದಣಿ ಇರುತ್ತಿದ್ದುದರಿಂದ ವಾಹನ ಸಂಚಾರವನ್ನು ನಿರೋಧಿಸಿದ್ದರು. ಶಾಸಕರು, ಧರ್ಮಾಧಿಕಾರಿಗಳಂಥ ಪ್ರಮುಖ ವ್ಯಕ್ತಿಗಳು ಕೂಡ ಈ ಪ್ರದೇಶದಲ್ಲಿ ಕಾಲ್ನಡಿಗೆಯಲ್ಲೇ ಹೋಗಬೇಕಾಗಿತ್ತು.

ರೋಮನರು ತಮ್ಮ ಸೇನಾನಾಯಕರ, ಶಾಸಕರ ಮೂರ್ತಿಗಳನ್ನು ಅಮೃತಶಿಲೆಯಲ್ಲಿ ರಚಿಸಿದ್ದಾರೆ. ಈ ಕಲಾಪ್ರಕಾರವನ್ನು ಅವರು ಕಲಿತದ್ದು ಗ್ರೀಕರಿಂದ. ಆದರೂ ಇವರಲ್ಲಿ ತಮ್ಮ ವಿಶಿಷ್ಟ ಪ್ರತಿಭೆ ಕುಶಲತೆಗಳನ್ನು ವ್ಯಕ್ತಪಡಿಸಿದ್ದಾರೆ. ಆಗಸ್ಟಸ್ ಚಕ್ರವರ್ತಿಯ ಮೂರ್ತಿ, ಮಾರ್ಕಸ್ ಅವರೇಲಿಯಸ್ ಅಶ್ವಾರೂಢನಾಗಿ ಕುಳಿತ ವಿಗ್ರಹ, ಹಾಡ್ರಿಯನ್ ಚಕ್ರವರ್ತಿಯ ಶಿರಸ್ಸು ಮುಂತಾದವು ರೋಮನರ ಮೂರ್ತಿಶಿಲ್ಪಕಲಾ ಚಾತುರ್ಯಕ್ಕೆ ಉತ್ತಮ ನಿದರ್ಶನಗಳು. ಚಾರಿತ್ರಿಕ ಸ್ಮಾರಕಗಳಲ್ಲಿ ರೋಮಿನ ಇತಿಹಾಸದಲ್ಲಿ ಬೆಳಗಿದ ಕೆಲವು ಸ್ಮರಣೀಯ ವ್ಯಕ್ತಿಗಳನ್ನೂ ಘಟನೆಗಳನ್ನೂ ಚಿತ್ರಿಸಲಾಗಿದೆ. ಡೆಲ್ಫಿ ಎಂಬಲ್ಲಿ ನಿರ್ಮಿಸಿದ ವಿಜಯ ಸ್ಮಾರಕ ಶಿಲ್ಪಕೃತಿಯಲ್ಲಿ ಪೈದ್ನಾದಲ್ಲಿ ನಡೆದ ಘೋರ ಯುದ್ಧದ ಸನ್ನಿವೇಶಗಳನ್ನೂ ವಿಜಯಶಾಲಿಯಾದ ಚಕ್ರವರ್ತಿಯನ್ನು ವಿಜಯದ ಅಧಿದೇವತೆ ಸ್ವಾಗತಿಸುವ ದೃಶ್ಯವನ್ನೂ ಚಿತ್ರಿಸಿದ್ದಾರೆ.

ರೋಮನರು ರಚಿಸಿದ ಅನೇಕ ಚಿತ್ರಗಳು ನಾಶವಾಗಿ ಹೋಗಿವೆ. ಭೂಕಂಪದಿಂದ ನಾಶವಾದ ಪಾಂಪೆ ಮಹಾನಗರದ ಅವಶೇಷಗಳಲ್ಲೂ ರೋಮ್‌ನಲ್ಲಿರುವ ಭಗ್ನ ಭವನಗಳಲ್ಲೂ ಸುಂದರ ಭಿತ್ತಿಚಿತ್ರಗಳನ್ನೂ ಕಾಣಬಹುದು. ಸೊಗಸಾದ ಪ್ರಕೃತಿ ದೃಶ್ಯಗಳು, ಸುಂದರ ಸ್ತ್ರೀಯರು, ಮಕ್ಕಳು, ರೋಮಿನ ದೇವತೆಗಳು, ಧಾರ್ಮಿಕ ಸಮಾರಂಭಗಳು, ಮುಂತಾದುವು ರೋಮ್ ಚಿತ್ರಕಲೆಯ ವಸ್ತುಗಳಾಗಿದ್ದುವು. ಹಲವಾರು ಶತಮಾನಗಳ ಹಿಂದೆ ರಚಿತವಾದ ಈ ಚಿತ್ರಗಳು ಇಂದಿಗೂ ತಮ್ಮ ಹೊಸತನವನ್ನೂ ಕಳೆಯನ್ನೂ ಉಳಿಸಿಕೊಂಡಿವೆ. ಶಿಲ್ಪಕ್ಕಿಂತಲೂ ಚಿತ್ರಕಲೆಯಲ್ಲಿ ರೋಮನರು ಹೆಚ್ಚಿನ ಪ್ರತಿಭೆಯನ್ನು ಮೆರೆದಿದ್ದಾರೆ. ಬಣ್ಣಬಣ್ಣದ ಕಲ್ಲುಚೂರುಗಳನ್ನು ಜೋಡಿಸಿ ಆಕರ್ಷಕವಾದ ಚಿತ್ರರಚಿಸುವ ಕಲೆಯನ್ನು ಅವರು ಚೆನ್ನಾಗಿ ರೂಢಿಸಿಕೊಂಡಿದ್ದರು. ಮೊದ ಮೊದಲು ಈ ಚಿತ್ರಗಳು ನೆಲದ ಮೇಲಿರುತ್ತಿದ್ದುವು. ಅನಂತರ ಗೋಡೆಗಳ ಮೇಲೂ ಇಂಥ

ಬಗೆಯ ಚಿತ್ರಗಳನ್ನು ರೂಪಿಸುವ ಪದ್ಧತಿ ಬೆಳೆಯಿತು. ಈ ಚಿತ್ರಗಳಲ್ಲಿ ಅಂದಿನ ಸಾಮಾಜಿಕ ಜೀವನದ ನಿರೂಪಣೆಯನ್ನು ಕಾಣಬಹುದಾಗಿದೆ.

ಸಂಗೀತವನ್ನೂ ರೋಮನರು ಗ್ರೀಕರಿಂದ ಸ್ಫೂರ್ತಿಪಡೆದರು. ಗ್ರೀಕ್ ಜನರ ವಾದ್ಯಗಳನ್ನೇ ಅವರು ಉಪಯೋಗಿಸುತ್ತಿದ್ದರು. ವೀರ ಸಂಗೀತ ವನ್ನೂ ಅಂದರೆ ಸೈನ್ಯ ಯುದ್ಧ ಹೋರಾಟಗಳಿಗೆ ಸಂಬಂಧಿಸಿದ ಸಂಗೀತವನ್ನೂ ಅವರಿಗೆ ವಿಶೇಷ ಆಸಕ್ತಿ ಇತ್ತು. J ಆಕಾರದ 'ಲಿಟ್ಯುಸ್' ಎಂಬ ಕಹಳೆ, 'ಬುಸಿನಾ' ಎಂಬ ಹೆಸರಿನ ನೀಳವಾದ ಕಹಳೆ, ಡೋಲು, ಸಣ್ಣ ತಮಟೆಗಳು ಈ ವರ್ಗದ ಸಂಗೀತದಲ್ಲಿ ಪ್ರಧಾನವಾಗಿ ಉಪಯೋಗಿಸಲ್ಪಡುತ್ತಿದ್ದ ವಾದ್ಯಗಳು. ಗ್ರೀಕರಲ್ಲಿ ಬಳಕೆಯಲ್ಲಿದ್ದ 'ಸಿರಿಂಕ್ಸ್' ಎಂಬ ಪಿಳ್ಳಂಗೋವಿಯಂಥ ವಾದ್ಯದಿಂದ 'ಆರ್ಗನ್' ನಂಥ ಒಂದು ಸಂಗೀತವಾದ್ಯವನ್ನು ರೋಮನರು ರಚಿಸಿದರು. ಬಿಲ್ಲಿನ ಆಕಾರದಲ್ಲಿನ 'ಸಿತಾರಾ' ಎಂಬ ಒಂದು ತಂತೀ ವಾದ್ಯವನ್ನೂ ಅವರು ಉಪಯೋಗಿಸುತ್ತಿದ್ದರು. ರೋಮನರ ಜೀವನ ದಲ್ಲಿ ಸಂಗೀತ ಮನೋಲ್ಲಾಸದ ಒಂದು ಸಾಧನವಾಗಿತ್ತು. ಶ್ರೀಮಂತರ ಮನೆಗಳಲ್ಲಿ ನಡೆಯುತ್ತಿದ್ದ ಔತಣಗಳ ಕಾಲದಲ್ಲಿ ಸಂಗೀತ ಕಚೇರಿಗಳನ್ನು ನಡೆಸುವ ಅಭ್ಯಾಸವಿತ್ತು.

ಕ್ರೀಡಾಂಗಣದಲ್ಲಿ ದ್ವಂದ್ವ ಹೋರಾಟ ನಡೆಯುವ ಕಾಲದಲ್ಲಿ ಕೂಡ ಕಹಳೆ ಮುಂತಾದ ರಣ ವಾದ್ಯಗಳ ಸಂಗೀತ ನಡೆಯುತ್ತಿತ್ತು.

ರೋಮನ್ ಸಾಮ್ರಾಜ್ಯದ ಪತನಾನಂತರ ಸುಮಾರು ಹನ್ನೊಂದು ಶತ ಮಾನಗಳು ಕಳೆದ ಮೇಲೆ ರೋಮನರ ಕಲೆಯ ಪುನರುತ್ಥಾನ ಆರಂಭವಾಗಿ ಮುಂದುವರಿಯಿತು. ಇದು 'ನವೋದಯ'. ಈ ಕಾಲದಲ್ಲಿ ಇಟಲಿ ಪ್ರದೇಶದಲ್ಲಿ ಅನೇಕ ಮಂದಿ ಪ್ರತಿಭಾವಂತ ಶಿಲ್ಪಿಗಳೂ ಚಿತ್ರಕಾರರೂ ಉದಯಿಸಿದರು. ಅಮೂಲ್ಯ ಶಿಲ್ಪಗಳನ್ನೂ ವಾಸ್ತುಶಿಲ್ಪ ರಚನೆಗಳನ್ನೂ ಚಿತ್ರಗಳನ್ನೂ ನಿರ್ಮಿಸಿದರು. ಅವುಗಳ ಪರಂಪರೆಯ ಪ್ರಭಾವವನ್ನು ಯೂರೋಪಿನ ಅನೇಕ ರಾಷ್ಟ್ರಗಳಲ್ಲಿ ಇಂದಿಗೂ ಕಾಣಬಹುದು.

ನೋಡಿ : ನವೋದಯ ಕಲೆ ; ನವೋದಯ – ಸಂಪುಟ ೧ ; ಕಾಲುವೆ– ಸಂಪುಟ ೪ ; ಕೊಲೋಸಿಯಂ – ಸಂಪುಟ ೬

## ಲಕ್ಷ್ಮೀಶ

ಲಕ್ಷ್ಮೀಶ ಕವಿ ಬರೆದ 'ಜೈಮಿನಿ ಭಾರತ' ಕನ್ನಡ ಸಾಹಿತ್ಯದ ಅತ್ಯಂತ ಜನಪ್ರಿಯ ಕಾವ್ಯಗಳಲ್ಲಿ ಒಂದು. ಕೆಲವು ದಶಕಗಳ ಹಿಂದೆ ನಮ್ಮ ನಾಡಿನಲ್ಲಿ 'ಜೈಮಿನಿ ಭಾರತ' ವನ್ನು ಓದಿ ಅರ್ಥ ಹೇಳಬಲ್ಲವರನ್ನು ವಿದ್ಯಾ ವಂತರೆಂದು ಭಾವಿಸುತ್ತಿದ್ದರು. ಅವಿದ್ಯಾವಂತರೂ 'ಜೈಮಿನಿ ಭಾರತ'ದ ಪದ್ಯಗಳನ್ನು ಕಂಠಪಾಠ ಮಾಡಿಕೊಂಡು ಅರ್ಥಹೇಳುತ್ತಿದ್ದ ನಿದರ್ಶನಗಳು ಉಂಟು. ಲಕ್ಷ್ಮೀಶನ ಕಾವ್ಯಕ್ಕೆ ಆಕರ, ಸಂಸ್ಕೃತದಲ್ಲಿರುವ ಜೈಮಿನಿಯ ಅಶ್ವಮೇಧ ಪರ್ವದ ಕಥೆ. ಧರ್ಮರಾಯನು ಭ್ರಾತೃಹತ್ಯಾದೋಷ ಪರಿಹಾರಕ್ಕಾಗಿ ಕೈಗೊಂಡ ಅಶ್ವಮೇಧಕ್ಕೆ ಸಂಬಂಧಿಸಿದ ಅಂಶಗಳೇ ಈ ಕಾವ್ಯದ ಪ್ರಧಾನ ವಸ್ತುವಾದರೂ ಇದರಲ್ಲಿ ಹಲವಾರು ರಮ್ಯ ಕಥೆಗಳು ಪ್ರಾಸಂಗಿಕವಾಗಿ ಬಂದಿವೆ. ಹೀಗೆ ಲಕ್ಷ್ಮೀಶನ ಈ ಕಾವ್ಯ, ವೈವಿಧ್ಯಪೂರ್ಣ ರಂಜನೀಯ ಕಥಾಕೋಶವೇ ಆಗಿದೆ.

ಕವಿ ಲಕ್ಷ್ಮೀಶನ ಜನ್ಮಸ್ಥಳದ ಬಗೆಗೆ ವಿದ್ವಾಂಸರಲ್ಲಿ ಇನ್ನೂ ಭಿನ್ನಾಭಿಪ್ರಾಯಗಳಿವೆ. ಕವಿಯ ಜನ್ಮಸ್ಥಳ ಚಿಕ್ಕಮಗಳೂರು ಜಿಲ್ಲೆಯ ದೇವನೂರು ಎಂದು ಕೆಲವರ ಅಭಿಮತ. ಗುಲ್ಬರ್ಗ ಜಿಲ್ಲೆಯ ಸುರಪುರದ ಪಕ್ಕದಲ್ಲಿರುವ ದೇವಪುರ —ಎಂದು ಬೇರೆ ಕೆಲವರು ವಾದಿಸುತ್ತಾರೆ. ದೇವ ನೂರಿನಲ್ಲಿ ಲಕ್ಷ್ಮೀನಾರಾಯಣ ದೇವಸ್ಥಾನವಿದೆ. ದೇವಸ್ಥಾನದಲ್ಲಿ ಲಕ್ಷ್ಮೀಶನ ವಿಗ್ರಹವೂ ಇತರ ವಿಗ್ರಹಗಳ ಜೊತೆಗೆ ಪೂಜಿಸಲ್ಪಡುತ್ತದೆ. ದೇವಾಲಯದ ಪಶ್ಚಿಮ ದಿಕ್ಕಿನಲ್ಲಿರುವ ಮಂಟಪವು 'ಲಕ್ಷ್ಮೀಕಾಂತ ಹೆಬ್ಬಾರ ಮಂಟಪ' ಎಂದೇ ಪ್ರಸಿದ್ಧವಾಗಿದೆ. ಪ್ರತಿ ವರ್ಷವೂ ಅಲ್ಲಿ ನಡೆಯುವ ಕೊಠಾರೋತ್ಸವ ಕಾಲದಲ್ಲಿ ಲಕ್ಷ್ಮೀಶನ ಜೈಮಿನಿ ಭಾರತದ ಪದ್ಯಗಳನ್ನು ಹೇಳುವ ಸಂಪ್ರ ದಾಯವಿದೆ. ಈ ಮತ್ತು ಇನ್ನೂ ಕೆಲವಾರು ಆಧಾರಗಳ ಮೇಲೆ ಲಕ್ಷ್ಮೀಶ ದೇವನೂರಿನಲ್ಲಿದ್ದವನು ಎಂಬ ಅಭಿಪ್ರಾಯಕ್ಕೆ ಬರಬಹುದು.

ಲಕ್ಷ್ಮೀಶ ಕವಿಯ ಜೀವಿತಕಾಲವನ್ನು ಕುರಿತೂ ವಾದವಿವಾದಗಳಿವೆ. ಕ್ರಿ.ಶ. 1137ರಿಂದ 1700ರ ತನಕ ಇದು ಏರಿಳಿದಿದೆ. ಇವನು 14ನೆಯ ಶತಮಾನದ ಪ್ರಥಮಾರ್ಧ ದಲ್ಲಿ ಇದ್ದಿರಬೇಕೆಂಬುದು ಈಚಿನ ಅಭಿಪ್ರಾಯ.

ಲಕ್ಷ್ಮೀಶನ ತಂದೆಯ ಹೆಸರು ಅಣ್ಣಮಾಂಕ. ಲಕ್ಷ್ಮೀಶನಿಗೆ 'ಕರ್ಣಾಟಕ ಕವಿ ಚೂತವನ ಚೈತ್ರ' ಎಂದು ಬಿರುದಿತ್ತು. ಆದರೆ ದೊರೆತ ಕೆಲವು ಹಳೆಯ ಓಲೆ ಪ್ರತಿಗಳಲ್ಲಿ 'ಕರ್ಣಾ ಟಕ ಕವಿ ಚೈತ್ರವನ ಚೂತ' ಎಂದಿದೆ. ಡಿ. ಎಲ್. ನರಸಿಂಹಾಚಾರ್ಯರು ಇದೇ ಸಮಂಜಸವಾದ ಬಿರುದು ಎಂದು ಹೇಳಿದ್ದಾರೆ.

ರೆವೆರೆಂಡ್ ಮೂಕ್ಲಿಂಗ್ ಕನ್ನಡ 'ಜೈಮಿನಿ ಭಾರತ'



ಬ್ರಿಟಿಷ್ ಮ್ಯೂಸಿಯಮಿನ ರೋಮನ್ ರೂಪಶಿಲ್ಪಗಳ ಪ್ರತಿಕೃತಿಗಳು —ಮಾರಾಟಕ್ಕೆ



ಉಪಮಾಲೋಲ : ಲಕ್ಷ್ಮೀಶ

ವನ್ನು ಜರ್ಮನ್ ಭಾಷೆಗೆ ಅನುವಾದ ಮಾಡಿದನೆಂದು ತಿಳಿದುಬಂದಿದೆ. ಲಕ್ಷ್ಮೀಶನ 'ಜೈಮಿನಿ ಭಾರತ' ನಮ್ಮ ನಾಡಿನ ಜನಮನವನ್ನು ಆಕರ್ಷಿಸಿದ ಕಾವ್ಯ. ಆಕರ್ಷಕ ಕಥಾವಸ್ತು, ಮನೋಜ್ಞ ವರ್ಣನೆಗಳು, ಉತ್ತಮ ರಸಭಾವ ಪೋಷಣೆ, ಸುಂದರ ಅರ್ಥಾಲಂಕಾರ ಶಬ್ದಾಲಂಕಾರಗಳು, ಚೈತನ್ಯಪೂರ್ಣ ಪಾತ್ರಸೃಷ್ಟಿ ಈ ಕಾವ್ಯದ ಜೀವಾಳ. ತನ್ನ ಕಾವ್ಯವು 'ನಿರುತ ಮಂಜುಳ ಶಬ್ದದಿಂದೆ ಕಿವಿಗಿಂಪಾಗಿ' ಇದೆ ಎಂದು ಕವಿಯೇ ಹೇಳಿದ್ದಾನೆ. ಕೃಷ್ಣನ ಮಹಿಮೆಯನ್ನು ಕೊಂಡಾಡಲೆಂದೇ ಈ ಕೃತಿ ರಚಿಸಿದೆ ಎಂದು ನುಡಿದಿದ್ದಾನೆ.

ಕವಿ ಲಕ್ಷ್ಮೀಶನನ್ನು ಉಪಮಾಲೋಲ ಎಂದು ಕರೆಯುವುದುಂಟು. ಮಹಾಭಾರತ ಯುದ್ಧ ಕಾಲದಲ್ಲಿ ಗುರು ಬಂಧುವರ್ಗದ ವಧೆ ಮಾಡಿದ್ದನ್ನು ನೆನೆದು ದುಃಖಿತನಾಗಿದ್ದ ಧರ್ಮರಾಯನ ಸ್ಥಿತಿಯನ್ನು "ಅನಿಲ ಸಂಚಾರ ಮೊಂದಿನಿತಲ್ಲದುರಿವ ಕಡು ಬೇಸಿಗೆಯ ಬಿಸಿಲಿಂದ ಬಸವಳಿದ ಕೋಮಲ ರಸಾಲದಂತೆ" ಎಂದಿದ್ದಾನೆ. ತನ್ನನ್ನು ಕೊಲ್ಲಲು ಕರೆದೊಯ್ಯುತ್ತಿದ್ದ ಕಟುಕರ ನಡುವೆ ಇದ್ದ ಚಂದ್ರಹಾಸ "ಪಾಪಿಗಳೊಡಲೊಳಿಹ ಪರಮಾತ್ಮನಂತೆ; ... ಕಾಕಸಂಘಾತದೊಳು ಸಿಕ್ಕಿರ್ದ ಕೋಗಿಲೆಯ ಮರಿಯಂತೆ" ಎಂದು ವರ್ಣಿಸಿದ್ದಾನೆ. ಚಂದ್ರಹಾಸನನ್ನು ಕೊಲ್ಲಲು ನಿರ್ಧರಿಸಿದ್ದರೂ ಆತನ ಮೇಲೆ ಅಭಿಮಾನವಿದ್ದಂತೆ ತೋರ್ಪಡಿಸಿಕೊಳ್ಳುತ್ತಿದ್ದ ದುಷ್ಟಬುದ್ಧಿಯನ್ನು "ಕ್ರೂರ ನತ್ರಾಕುಲದೊಳಿಡಿದಿರ್ದ ಪೆರ್ಮಡು ಗಭೀರ ನಿರ್ಮಲ ಜಲದೊಳೆಸೆವಂತೆ" ಎಂದು ಬಣ್ಣಿಸಿದ್ದಾನೆ. ರಾಮಚಂದ್ರನು ತನ್ನನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿರುವನೆಂಬ ಮಾತು ಸೀತಾದೇವಿಯ ಕಿವಿಗೆ ಬಿದ್ದಾಗ ಅವಳು "ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿದಿಳೆಗೊರಗುವಂತೆ...ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡುನಡುಗುತೆ" ಎಂದಿದ್ದಾನೆ.

ಕಾವ್ಯದಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುವ ಹಾಸ್ಯ ಶೃಂಗಾರಗಳೂ ಅಲಂಕಾರ ಚಮತ್ಕಾರಗಳೂ ನಮ್ಮನ್ನು ಮುಗ್ಧಗೊಳಿಸುತ್ತವೆ. 'ಜೈಮಿನಿ ಭಾರತ'ದ ಜನಪ್ರಿಯತೆಗೆ ಇದೂ ಒಂದು ಕಾರಣ.

ಈ ಕಾವ್ಯದಲ್ಲಿ ಬರುವ ಸೀತಾಪರಿತ್ಯಾಗದ ಪ್ರಕರಣ ಹೃದಯಸ್ಪರ್ಶಿಯಾಗಿದೆ. ಸೀತೆಯ ದುಃಖ ಎಂಥ ಕಲ್ಲೆದೆಯನ್ನಾದರೂ ಕರಗಿಸುತ್ತದೆ. ವಿಧಿಯ ಕ್ರೌರ್ಯಕ್ಕೆ ತಲೆಬಾಗಿ "ಕರುಣಾಳು ರಾಘವನಲ್ಲಿ ತಪ್ಪಿಲ್ಲ. ಕಡು ಪಾತಕಂ ಗೈದು ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದೆನ್ನೊಳಪರಾಧಮುಂಟು" ಎಂಬ ಸೀತೆಯ ನುಡಿ ಯಾರ ಕರುಳನ್ನಾದರೂ ಕಿವಿಚುತ್ತದೆ. ಲಕ್ಷ್ಮೀಶನ ಶ್ರೇಷ್ಠತೆ ಅವನ ಕಾವ್ಯದುದ್ದಕ್ಕೂ ಮೆರೆಯುತ್ತದೆ.

## ಲಲಿತಕಲಾ ಅಕಾಡೆಮಿ

ಭಾರತದ ಶ್ರೇಷ್ಠ ಕಲಾಪರಂಪರೆಯನ್ನು ಉಳಿಸಿಕೊಂಡು, ಆಧುನಿಕ ಕಲೆಯ ಅಂಶಗಳನ್ನೂ ಸೇರಿಸಿ ನಮ್ಮ ಕಲಾಸಂಪತ್ತನ್ನು ಹೆಚ್ಚಿಸುವ ಧ್ಯೇಯವನ್ನು ಹೊತ್ತು, ರಾಷ್ಟ್ರೀಯ ಲಲಿತಕಲಾ ಅಕಾಡೆಮಿ 1954 ಆಗಸ್ಟ್ 4ರಂದು ಆರಂಭವಾಯಿತು. ಸಾರ್ವಜನಿಕ ಕಲಾಭಿರುಚಿಯ ಮಟ್ಟವನ್ನು ಸುಧಾರಿಸುವುದೂ ಇದರ ಉದ್ದೇಶ. ಅಕಾಡೆಮಿಯ ಚಟುವಟಿಕೆಯ ಕ್ಷೇತ್ರಗಳು :

**ಕಲಾಕೃತಿಗಳ ರಾಷ್ಟ್ರೀಯ ಪ್ರದರ್ಶನ :** ಇದು ಅಕಾಡೆಮಿಯ ಮಹತ್ವದ ವಾರ್ಷಿಕ ಕಾರ್ಯಕ್ರಮಗಳಲ್ಲಿ ಒಂದು. ಸಮಕಾಲೀನ ಭಾರತದ ಉತ್ತಮ ಕಲಾಕೃತಿಗಳನ್ನು ಬೆಳಕಿಗೆ ತರುವುದು ಇದರ ಉದ್ದೇಶ.

**ವಿದೇಶಿ ಕಲಾಕೃತಿಗಳ ಪ್ರದರ್ಶನ :** ಅಂತರರಾಷ್ಟ್ರೀಯ ಮಟ್ಟದ ಅನುಭವದಿಂದ ಕಲಾವಿದರಿಗೆ, ಕಲಾಭಿಮಾನಿಗಳಿಗೆ ದೃಷ್ಟಿವೈಶಾಲ್ಯ ಬರುತ್ತದೆ. ಕಲೆಯನ್ನು ಅರ್ಥಮಾಡಿಕೊಳ್ಳುವುದರಲ್ಲಿ ನೆರವಾಗುತ್ತದೆ. ಇದಕ್ಕಾಗಿ ಅಕಾಡೆಮಿ ಬೇರೆ ಬೇರೆ ದೇಶಗಳಿಂದ ಬಂದ ಕಲಾಕೃತಿಗಳ ಪ್ರದರ್ಶನವನ್ನು ಕೈಗೊಳ್ಳುತ್ತದೆ.

**ವಿದೇಶಗಳಲ್ಲಿ ಭಾರತದ ಕಲಾಕೃತಿಗಳ ಪ್ರದರ್ಶನ :** ಭಾರತದ ಕಲಾಕೃತಿಗಳ ಪ್ರದರ್ಶನವನ್ನು ಹೊರದೇಶಗಳಲ್ಲಿ ಏರ್ಪಡಿಸಿ ಇಲ್ಲಿನ ಕಲೆಯ ಬಗೆಗೆ ತಿಳಿವಳಿಕೆ ನೀಡಲಾಗುತ್ತದೆ.

**ದೇಶದ ಕುಶಲ ಕಲಾವಿದರು, ಶಿಲ್ಪಿಗಳು ಮತ್ತು ಚಿತ್ರಕಾರರ ಬಗೆಗೆ ಸಮೀಕ್ಷೆ :** ಪ್ರಾದೇಶಿಕ ಜಾನಪದ ಕಲಾಕೃತಿಗಳನ್ನೂ ಅವುಗಳನ್ನು ಸೃಷ್ಟಿಸುವ ಕಲಾವಿದರ ಸ್ಥಿತಿಗತಿಗಳನ್ನೂ ಕುರಿತು ಮಾಹಿತಿ ಸಂಗ್ರಹಿಸುವುದು ಈ ಕ್ಷೇತ್ರದ ಕಾರ್ಯ. ಪ್ರಾಚೀನ ಸ್ಮಾರಕಗಳು, ಶಿಲ್ಪಕೃತಿಗಳು ಮತ್ತು ಚಿತ್ರಕಲಾಕೃತಿಗಳ ಛಾಯಾಚಿತ್ರಗಳನ್ನು ಸಂಗ್ರಹಿಸಿ ಚಿತ್ರಭಂಡಾರ ರೂಪಿಸುವುದೂ ಅಕಾಡೆಮಿಯ ಕೆಲಸ.

**ಭಿತ್ತಿಚಿತ್ರಗಳ ಪ್ರತಿಕೃತಿ :** ಶಿಥಿಲಗೊಳ್ಳುವ ಅಜಂತ ಮುಂತಾದ ಗುಹೆಗಳಲ್ಲಿನ ಭಿತ್ತಿಚಿತ್ರಗಳ ಪ್ರತಿಕೃತಿಗಳನ್ನು ತಯಾರಿಸುವುದಲ್ಲದೆ, ದೇಶದಲ್ಲಿ ಈ ವರೆಗೆ ಬೆಳಕಿಗೆ ಬರದೆ ಉಳಿದಿರುವ ಇನ್ನೂ ಅನೇಕ ಭಿತ್ತಿಚಿತ್ರಗಳ ಪ್ರತಿಕೃತಿ ತಯಾರಿಕೆಯೂ ಅಕಾಡೆಮಿಯ ನೇತೃತ್ವದಲ್ಲಿ ನಡೆಯುತ್ತದೆ.

**ಪ್ರಕಟಣೆಗಳು :** ಉತ್ಕೃಷ್ಟ ಭಾರತೀಯ ಕಲಾಕೃತಿಗಳ ಬಗೆಗೆ ಜನಸಾಮಾನ್ಯರು, ವಿದ್ವಜ್ಜನರು ಇವರಿಬ್ಬರಿಗೂ ಅರ್ಥವಾಗುವಂತೆ, ಚಿಕ್ಕ ದೊಡ್ಡ ಪುಸ್ತಕಗಳನ್ನು ಹೊರತರುವುದೂ ಒಂದು ಕೆಲಸ. ಮೊಗಲ್ ಕಿರುಚಿತ್ರಗಳು, ಕೃಷ್ಣನ ಕಥೆ, ಮೇವಾರದ ವರ್ಣಚಿತ್ರಗಳು, ಅಜಂತದ ಚಿತ್ರಗಳು, ರಾಜಾ ರವಿವರ್ಮ, ವೆಂಕಟಪ್ಪ, ಹೆಬ್ಬಾರ್, ಮುಂತಾದವರ ಜೀವನ ಕೃತಿಗಳು—



ಲಾಂಛನ

ಹೀಗೆ ಸಮಕಾಲೀನ ಹಾಗೂ ಪುರಾತನ ಕಲೆಗಳ ವಿಷಯವಾಗಿ ಪುಸ್ತಕಗಳ ಪ್ರಕಟಣೆ ನಡೆದಿದೆ. ಇವಲ್ಲದೆ ತನ್ನದೇ ಆದ ಅಧಿಕೃತ ದ್ವೈವಾರ್ಷಿಕ ಪತ್ರಿಕೆಗಳನ್ನೂ ಅಕಾದೆಮಿ ಪ್ರಕಟಿಸುತ್ತಿದೆ. ಇದರಲ್ಲಿ ಸ್ವತಂತ್ರವಾದ ವೈಚಾರಿಕ ಲೇಖನಗಳು ಇರುತ್ತವೆ.

**ಕಲಾಸಂಸ್ಥೆಗಳಿಗೆ ಮಾನ್ಯತೆ:** ಯೋಗ್ಯ ಕಲಾಸಂಸ್ಥೆಗಳಿಗೆ ಮಾನ್ಯತೆ ನೀಡುವುದೂ ಅವುಗಳಿಗೆ ಧನಸಹಾಯ ಮಾಡುವುದೂ ಅಕಾದೆಮಿಯ ಕರ್ತವ್ಯ. ಅಕಾದೆಮಿಯು ತನ್ನ ಕೆಲಸಕಾರ್ಯಗಳನ್ನು ಯಶಸ್ವಿಯಾಗಿ ನಡೆಸಲು ಇಂಥ ಸಂಘಗಳ ಸಹಕಾರ ಅತ್ಯಗತ್ಯ. ಅಕಾದೆಮಿಯ ಬಹುಮಟ್ಟಿನ ಕಾರ್ಯಕ್ರಮಗಳು ಇವುಗಳ ಮೂಲಕ ನಡೆಯುತ್ತವೆ.

ಅತ್ಯುತ್ತಮ ಕಲಾವಿದರಿಗೆ ಸದಸ್ಯತ್ವ (ಫೆಲೋಷಿಪ್) ಇತ್ತು ಅಕಾದೆಮಿ ಗೌರವಿಸುತ್ತದೆ. ಜಾನಪದ ಗೀತೆ, ಕುಶಲ ಕಲಾವಸ್ತು ಸಂಗ್ರಹಗಳೂ ಇದರ ಕೆಲಸಗಳ ವ್ಯಾಪ್ತಿಗೆ ಒಳಪಡುತ್ತವೆ. ಸಂಪೂರ್ಣವಾಗಿ ಕೇಂದ್ರ ಸರಕಾರದ ನೆರವಿನಿಂದಲೇ ನಡೆಯುವ ಈ ಅಕಾದೆಮಿ ಶ್ರೇಷ್ಠ ದರ್ಜೆಯ ಕಲಾವಿದರಿಗೆ ಪ್ರತಿ ವರ್ಷ ಪ್ರಶಸ್ತಿಗಳನ್ನು ಕೊಟ್ಟು ಪುರಸ್ಕರಿಸುತ್ತದೆ. ತಾಮ್ರಪತ್ರ, ಅಂಗವಸ್ತ್ರ ಮತ್ತು 5,000 ರೂಪಾಯಿಗಳನ್ನು ಪ್ರಶಸ್ತಿ ಪಡೆದವರಿಗೆ ನೀಡುತ್ತದೆ.

ನವದೆಹಲಿಯಲ್ಲಿ 1968ರಲ್ಲಿ ಅಕಾದೆಮಿ ತ್ರೈವಾರ್ಷಿಕ ಕಲಾ ಉತ್ಸವ ನಡೆಸಿತು. ಇದರಲ್ಲಿ ಮೂವತ್ತೈದು ರಾಷ್ಟ್ರಗಳು ಭಾಗವಹಿಸಿದ್ದುವು.

ಕಲಾವಿದರ ಸಹಾಯ ನಿಧಿಯೊಂದನ್ನು ಈ ಸಂಸ್ಥೆ ಸಂಗ್ರಹಿಸುತ್ತಿದೆ. ಕಲಾವಿಷಯಕ ಉಪನ್ಯಾಸಗಳನ್ನೂ ಪ್ರಬಂಧ ಸ್ಪರ್ಧೆಗಳನ್ನೂ ಸಂಸ್ಥೆ ಏರ್ಪಡಿಸುತ್ತಿದೆ.

## ಲಾಂಗ್‌ಫೆಲೊ

"ಬಾಣವೊಂದ ಹಾರಿಸಿದೆ ಗಾಳಿಯಲ್ಲಿ
ನಾನರಿಯೆ ಬಿದ್ದಿತೆಲ್ಲೊ ಭೂಮಿಯಲ್ಲಿ
ಹಾರಿತು ಬಾಣವು ಅತಿ ವೇಗದಲಿ
ಕಣ್ ಹಿಂಬಾಲಿಸಲಾರದ ತೆರದಲ್ಲಿ"
"ಗಾಳಿಗೊಂದು ಹಾಡನು ಸುರಿದೆ
ಆದರದು ಬಿದ್ದಿತೆಲ್ಲೊ, ನಾನರಿಯೆ
ಯಾರಿಗುಂಟು ಅಂಥ ನೋಟ, ಶಕ್ತಿ
ಹಾಡುಹರಿದ ಜಾಡ ಹಿಡಿವ ರೀತಿ ?"

ಇಂಥ ಸರಳ, ಹೃದಯಸ್ಪರ್ಶಿ ಕವಿತೆಗಳನ್ನು ಬರೆದವನು ಅಮೆರಿಕದ ಕವಿ ಲಾಂಗ್‌ಫೆಲೊ. ಅವನ ಕವಿತೆಗಳಲ್ಲಿ ಮನುಷ್ಯ ಜೀವನದ ಬಗೆಗಿನ ತಿಳಿವಳಿಕೆ, ಅನುಕಂಪಗಳು ಧ್ವನಿಸುತ್ತವೆ.

ಹೆನ್ರಿ ವಾಡ್ಸ್‌ವರ್ತ್ ಲಾಂಗ್‌ಫೆಲೊ ಅನುಕೂಲಸ್ಥ ಮನೆತನದಲ್ಲಿ 1807ರ ಫೆಬ್ರುವರಿ 27ರಂದು ಅಮೆರಿಕದ ಪೋರ್ಟ್‌ಲೆಂಡಿನ ಮೈನ್ ಎಂಬಲ್ಲಿ ಜನಿಸಿದ. ತಂದೆಗೆ ವಕೀಲವೃತ್ತಿ. 14ನೆಯ ವಯಸ್ಸಿಗೆಲ್ಲ ಲಾಂಗ್‌ಫೆಲೊ ಕಾಲೇಜು ವಿದ್ಯಾಭ್ಯಾಸಕ್ಕೆ ಸಿದ್ಧನಾದ. ಮಗ ನ್ಯಾಯಶಾಸ್ತ್ರ ಓದಬೇಕೆಂದು ತಂದೆಯ ಆಸೆ. ಆದರೆ ಇವನ ಒಲವು ಸಾಹಿತ್ಯದೆಡೆಗೆ. ಪದವೀಧರನಾದ ಮೇಲೆ ಆಧುನಿಕ ಭಾಷೆಗಳಲ್ಲಿ ಪ್ರಾಧ್ಯಾಪಕ ಹುದ್ದೆ ದೊರೆತು. ಯೂರೋಪ್ ಪ್ರವಾಸ ಮಾಡಬೇಕಾಗಿ ಬಂತು. ಈ ಪ್ರವಾಸದಲ್ಲಿ ಫ್ರೆಂಚ್, ಸ್ಪಾನಿಷ್, ಹಾಗೂ ಇಟಾಲಿಯನ್ ಭಾಷೆಗಳನ್ನು ಲಾಂಗ್‌ಫೆಲೊ ಕಲಿತ. 1829ರಿಂದ 34ರವರೆಗೆ ಬೊಡೊಯಿನ್‌ನಲ್ಲಿ ಪ್ರಾಧ್ಯಾಪಕನ ಕೆಲಸ. 1831ರಲ್ಲಿ ಮೇರಿ



ಮಾನವೀಯ ಅನುಕಂಪ : ಲಾಂಗ್‌ಫೆಲೊ

ಸ್ಟೋರರ್ ಪೋರ್ಟರ್ ಎಂಬಾಕೆಯನ್ನು ಮದುವೆಯಾದ. 27ನೇ ವಯಸ್ಸಿಗೆ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಕೆಲಸ ದೊರೆಯಿತು. ಮತ್ತೆ ಯೂರೋಪು ಪ್ರವಾಸ ಕೈಗೊಳ್ಳುವ ಅವಕಾಶ ಲಭಿಸಿತು. ಈ ಬಾರಿಯ ಪ್ರವಾಸದಲ್ಲಿ ಮೇರಿ ಮೃತಳಾದಳು. ಈ ದುಃಖ ಮರೆಯಲು ಲಾಂಗ್‌ಫೆಲೊ ಅವಿರತ ದುಡಿಮೆಯಲ್ಲಿ ಮುಳುಗಿದ. 1836ರಿಂದ ಹಾರ್ವರ್ಡ್‌ನಲ್ಲಿ ಶಿಕ್ಷಕ ವೃತ್ತಿ ಆರಂಭವಾಯಿತು. ಮುಂದಿನ ಹದಿನೆಂಟು ವರ್ಷ ಹಾರ್ವರ್ಡಿನ ಅತ್ಯಂತ ಖ್ಯಾತ ಹಾಗೂ ಪ್ರೀತಿಪಾತ್ರ ಪ್ರಾಧ್ಯಾಪಕರಲ್ಲಿ ಒಬ್ಬನಾದ. ತನ್ನ 36ನೆಯ ವಯಸ್ಸಿನಲ್ಲಿ ಲಾಂಗ್‌ಫೆಲೊ ಮತ್ತೆ ಮದುವೆಯಾದ. 54ನೆಯ ವಯಸ್ಸಿನಲ್ಲಿ ಪುನಃ ವಿಧುರನಾದ. ಈ ದುರಂತಗಳನ್ನು ಬಿಟ್ಟರೆ ಲಾಂಗ್‌ಫೆಲೋನ ಜೀವನ ಸಾಧಾರಣವಾಗಿ ಪ್ರಶಾಂತವಾಗಿಯೂ ಸುಖದಾಯಕವಾಗಿಯೂ ಇದ್ದಿತು. ತನ್ನ ಐವರು ಮಕ್ಕಳೆಂದರೆ ಲಾಂಗ್‌ಫೆಲೋಗೆ ಅಪಾರ ಪ್ರೀತಿ.

ತನ್ನ ಕವಿತೆಗಳ ವಿಷಯಗಳನ್ನೂ ಲಾಂಗ್‌ಫೆಲೊ ಹಲವು ಮೂಲಗಳಿಂದ ಎರವಲು ಪಡೆದ. 'ಹಯವತ ಗೀತೆ' ಅವನ ಹೆಸರಾಂತ ನೀಳ್ಗವನ. ಅದಕ್ಕೆ ಆಧಾರ ಅಮೆರಿಕದ ರೆಡ್ ಇಂಡಿಯನ್ ಐತಿಹ್ಯ—ಒಬ್ಬ ವೀರ ಕಥಾನಾಯಕನ ಜೀವನ. ಬ್ರಿಟಿಷರು ಅಮೆರಿಕದಲ್ಲಿ ತಳವೂರುವ ಮುನ್ನ ಈತ ಜೀವಿಸಿದ್ದನಂತೆ. ಪರಸ್ಪರ ಕಲಹವಾಡುತ್ತಿದ್ದ ರೆಡ್ ಇಂಡಿಯನ್ ಗುಂಪುಗಳನ್ನು ಒಂದಾಗಿಸಿದ ಕೀರ್ತಿ ಇವನದು. ಇವನ ಹುಟ್ಟು ಒಂದು ರಹಸ್ಯ. ಬಹು ಸಾಮರ್ಥ್ಯಶಾಲಿ. ಪವಾಡವೆಂಬಂತೆ ಅವನ ಕೆಲಸಗಳು. ರೆಡ್ ಇಂಡಿಯನರಲ್ಲಿ ಶಾಂತಿ ನೆಲೆಸುವಂತೆ ಮಾಡುವುದು ಅವನ ಉದ್ದೇಶವಾಗಿತ್ತು. ಅವನ ಜೀವನದ ಅಂತ್ಯವೂ ಹೇಗೆ ಎಂದು ತಿಳಿಯದು. 'ಹಯವತ ಗೀತೆ' ಬಹಳ ಯಶಸ್ವಿಯಾಯಿತು.

ಕವಿತೆಗಳನ್ನಲ್ಲದೆ ನಾಟಕ–ಕಾದಂಬರಿಗಳನ್ನೂ ಲಾಂಗ್‌ಫೆಲೊ ಬರೆದಿದ್ದಾನೆ. 1851ರ ವೇಳೆಗೆ ಅವನ ಸಾಹಿತ್ಯ ಜೀವನ ಸಾಕಷ್ಟು ಲಾಭದಾಯಕವಾಗಿದ್ದುದರಿಂದ ತನ್ನ ಪ್ರಾಧ್ಯಾಪಕ ವೃತ್ತಿಯನ್ನು ಬಿಟ್ಟುಕೊಟ್ಟು ಪೂರ್ಣಾವಧಿ ಬರೆಹಗಾರನಾದ. ದಾಂತೆಯ 'ಡಿವೈನ್ ಕಾಮಿಡಿ'ಯನ್ನು

ಭಾಷಾಂತರಿಸಿದ. 1872ರಲ್ಲಿ 'ಕ್ರಿಸ್ಟಸ್' ಎಂಬ ಕೃತಿತ್ರಯಗಳ ಸಂಕಲನವನ್ನು ಪ್ರಕಟಿಸಿದ.

ಅಮೆರಿಕದ ಶಾಲಾ ಮಕ್ಕಳು ಚಂದಾಹಣ ಕೂಡಿಸಿ, ಲಾಂಗ್‌ಫೆಲೋನ 72ನೆಯ ವರ್ಷದ ಹುಟ್ಟುಹಬ್ಬದ ದಿನದಂದು ಚೆಸ್ಟ್‌ನಟ್ ಮರದಿಂದ ಮಾಡಿದ ಕುರ್ಚಿಯೊಂದನ್ನು ಅವನಿಗಿತ್ತರು. ಆ ವೇಳೆಗಾಗಲೇ ಅವನ 'ಹಳ್ಳಿಯ ಕಮ್ಮಾರ' ಎಂಬ ಪದ್ಯದ ಮೂಲಕ ಅಮರವಾಗಿತ್ತು ಈ ಮರ.

1882, ಮಾರ್ಚ್ 3ರಂದು ಲಾಂಗ್‌ಫೆಲೊ ಮೆಸಾಚುಸೆಟ್ಸ್‌ನ ಕೇಂಬ್ರಿಜ್‌ನಲ್ಲಿ ಕೊನೆಯುಸಿರೆಳೆದ. ಲಂಡನಿನ ವೆಸ್ಟ್‌ಮಿನ್‌ಸ್ಟರ್ ಆಬೀಯ ಕವಿಮೂಲೆಯಲ್ಲಿ ಒಂದು ಸ್ಮಾರಕ ಸ್ಥಾನ ಪಡೆದ ಅಮೆರಿಕದ ಕವಿಗಳಲ್ಲಿ ಲಾಂಗ್‌ಫೆಲೊ ಮೊದಲಿಗ.

## ಲಾತ್ರೆಕ್

ಹೆನ್ರಿ ದ ಟೂಲೂ ಲಾತ್ರೆಕ್‌ನನ್ನು ಜನ 'ಗೂನು ಬೆನ್ನಿನವ', 'ಪುಟ್ಟ ಪೆಡಂಭೂತ' ಇತ್ಯಾದಿ ಅಡ್ಡಹೆಸರುಗಳಿಂದ ಕರೆಯುತ್ತಿದ್ದರು. ಪ್ರಮಾಣಬದ್ಧವಾದ ಇವನ ದೇಹದ ಮೇಲ್ಭಾಗಕ್ಕೆ ಹೋಲಿಸಿದರೆ ಇವನ ಕಾಲುಗಳು ತುಂಬ ಮೋಟು. ಬಾಗಿಕೊಂಡಿದ್ದ ಬೆನ್ನು, ವಿಕೃತವಾದ ಮುಖ–ನೋಟಕ್ಕೆ ಲಾತ್ರೆಕ್ ಅಸಹ್ಯವಾಗಿದ್ದ. ಆದರೆ ಇವನ ವರ್ಣಚಿತ್ರಗಳನ್ನು ನೋಡಿದವರು, ಅವನ್ನು ಸೃಷ್ಟಿಸಿದವನು ಇಷ್ಟೊಂದು ಕುರೂಪಿ ಎಂದು ಊಹಿಸಲಾರರು. ತಮ್ಮ ಚಿತ್ರವನ್ನು ಲಾತ್ರೆಕ್‌ನಿಂದ ಬರೆಸಿಕೊಳ್ಳುವುದು ಅವನ ಕಾಲದ ಗಣ್ಯ ವ್ಯಕ್ತಿಗಳಿಗೆಲ್ಲ ಒಂದು ಹೆಮ್ಮೆಯ ಸಂಗತಿಯಾಗಿತ್ತು.

ಟೂಲೂ ಲಾತ್ರೆಕ್‌ನದು ಪುರಾತನ ಫ್ರೆಂಚ್ ಚಕ್ರವರ್ತಿಗಳ ವಂಶ. ದಕ್ಷಿಣ ಫ್ರಾನ್ಸಿನ ಆಲ್ಬೀ ನಗರದಲ್ಲಿ ಈತ 1864ರ ನವೆಂಬರ್ 24 ರಂದು ಜನಿಸಿದ. ಬಾಲ್ಯದಿಂದಲೇ ಅವನಿಗೆ ಚಿತ್ರ ಬರೆಯುವುದರಲ್ಲಿ ವಿಶೇಷ ಆಸಕ್ತಿ. ನಾಲ್ಕು ವರ್ಷ ವಯಸ್ಸಿನವನಾಗಿದ್ದಾಗ ಲಾತ್ರೆಕ್ ತನ್ನ ಪುಟ್ಟ ತಮ್ಮನ ದೀಕ್ಷಾಸ್ನಾನದ ಸಮಾರಂಭಕ್ಕೆ ಚರ್ಚಿಗೆ ಹೋಗಿದ್ದ. ದಾಖಲೆ ಪುಸ್ತಕದಲ್ಲಿ ಹಿರಿಯರೆಲ್ಲ ಸಹಿಹಾಕುವುದನ್ನು ನೋಡಿದ; ತಾನೂ ಸಹಿ ಹಾಕುತ್ತೇನೆ ಎಂದು ಹಠ ಹಿಡಿದ. "ಆದರೆ ನಿನಗೆ ಬರೆಯುವುದಕ್ಕೆ ಬರುವುದಿಲ್ಲವಲ್ಲ!" ಎಂದು ಯಾರೋ ಅವನನ್ನು ಗೇಲಿ ಮಾಡಿದರು. "ಹಾಗಾದರೆ ನಾನು ಎತ್ತಿನ ಚಿತ್ರ ಬರೆಯುತ್ತೇನೆ" ಎಂದ ಹುಡುಗ!

ಲಾತ್ರೆಕ್ ಹುಡುಗನಾಗಿದ್ದಾಗ ಅವನ ದೇಹ ಇತರ ಹುಡುಗರಂತೆ ಸರಿಯಾದ ಪ್ರಮಾಣದಲ್ಲೇ ಬೆಳೆದಿತ್ತು. 14ನೆಯ ವಯಸ್ಸಿನಲ್ಲಿ ಜಾರಿಬಿದ್ದುದರ ಪರಿಣಾಮವಾಗಿ ಒಂದು ಕಾಲಿನ ತೊಡೆ ಎಲುಬು ಮುರಿಯಿತು. ಮರುವರ್ಷ ಚರಂಡಿಯೊಳಕ್ಕೆ ಬಿದ್ದಾಗ ಇನ್ನೊಂದು ಕಾಲೂ ಊನವಾಯಿತು. ಬಳಿಕ ಇವನ ಮುಂಡ ಸರಿಯಾಗಿ ಬೆಳೆದರೂ ಕಾಲುಗಳು ಸಮರ್ಪಕವಾಗಿ ಬೆಳೆಯಲಿಲ್ಲ. ಇಂಥ ವಿಕಾರ ಆಕೃತಿಯ ಲಾತ್ರೆಕ್ ಹೋದಲ್ಲೆಲ್ಲ ಮಕ್ಕಳು ಸುತ್ತಿಕೊಂಡು ಅವನನ್ನು ಗೇಲಿ ಮಾಡುತ್ತಿದ್ದರು. ಅದನ್ನು ಅವನು ಅಷ್ಟಾಗಿ ಲಕ್ಷಿಸುತ್ತಿರಲಿಲ್ಲ ಎನ್ನಬಹುದು. ಏಕೆಂದರೆ ಅವನು ತನ್ನದೇ ವರ್ಣಚಿತ್ರ ಬರೆದುಕೊಂಡು ಅದರಲ್ಲಿ ತನ್ನ ಅಂಗವಿಕಲತೆಯನ್ನು ಉತ್ಪ್ರೇಕ್ಷೆ ಮಾಡಿದ್ದಾನೆ.

ಅಪಘಾತಗಳಾದ ಅನಂತರ ಚಿತ್ರರಚನೆಯೇ ಲಾತ್ರೆಕ್‌ನ ಜೀವನದ ಪ್ರಮುಖ ಆಸಕ್ತಿಯಾಯಿತು. ಪ್ರಸಿದ್ಧ ಚಿತ್ರಕಾರರ ಬಳಿಯಲ್ಲಿ ಕಲೆಯ ಅಭ್ಯಾಸ ಮಾಡಿದ. ಇಪ್ಪತ್ತು ವರ್ಷದ ತರುಣನಾಗಿದ್ದಾಗ ಲಾತ್ರೆಕ್ ಪ್ಯಾರಿಸಿನ ಮಾಂಟಮಾರ್ತ್ರ್ ಪ್ರದೇಶದಲ್ಲಿ ನೆಲೆಸಿದ. ಅಲ್ಲಿನ ನೈಟ್ ಕ್ಲಬ್‌ಗಳು, ಸಂಗೀತ ಶಾಲೆಗಳು, ಕುದುರೆ ಜೂಜಿನ ಮೈದಾನ ಮತ್ತು ಸರ್ಕಸ್‌ಗಳನ್ನು ಸಂದರ್ಶಿಸುವುದು ಲಾತ್ರೆಕ್‌ನ ನಿತ್ಯದ ಕಾರ್ಯವಾಯಿತು. ನೋಡಿದ್ದನ್ನೆಲ್ಲ ಈತ ವರ್ಣಚಿತ್ರಗಳಲ್ಲಿ ಮೂಡಿಸುತ್ತಿದ್ದ. ಪತ್ರಿಕೆಗಳಿಗೂ ಪುಸ್ತಕಗಳಿಗೂ ವ್ಯಂಗ್ಯ ಚಿತ್ರಗಳನ್ನು ಬರೆದು ಕೊಡುತ್ತಿದ್ದ. ಇವನ ನಿರೀಕ್ಷಣ ದೃಷ್ಟಿ ಬಲು ಚುರುಕು; ತಾನು ಕಂಡ ವ್ಯಕ್ತಿಗಳನ್ನು ಬಲು ಶೀಘ್ರವಾಗಿ ಚಿತ್ರಿಸುತ್ತಿದ್ದ.


ಪುಟ್ಟ ಪೆಡಂಭೂತ : ಲಾತ್ರೆಕ್

ಕ್ಯಾನ್ವಾಸ್, ರಟ್ಟು, ಕಾಗದ ಯಾವುದನ್ನಾದರೂ ಬಳಸಿ ಲಾತ್ರೆಕ್ ಚಿತ್ರ ಬರೆಯುತ್ತಿದ್ದ. ತೈಲವರ್ಣ, ಜಲವರ್ಣ ಅಥವಾ ಬಣ್ಣದ ಕಡ್ಡಿಗಳ ಉಪಯೋಗ ಎಲ್ಲದರಲ್ಲೂ ಜಾಣ್ಮೆ ಇತ್ತು. ಇವನ ಕಲೆಯ ಮೇಲೆ ಜಪಾನೀ ಚಿತ್ರಕಾರರ ಮರಕೆತ್ತನೆ ಮುದ್ರಿತ ಚಿತ್ರಗಳ ಮತ್ತು ಫ್ರೆಂಚ್ ಕಲಾವಿದ ಎಡ್ಗರ್ ದಗಾನ ಪ್ರಭಾವ ಸ್ಪಷ್ಟವಾಗಿ ತೋರುತ್ತದೆ. ಚಿತ್ರದ ಹರವಿನ ಅಂಚಿನಿಂದ ವ್ಯಕ್ತಿಯೊಬ್ಬನ ಮುಖ ಕತ್ತರಿಸಿದಂತೆ ಇರುವುದು; ಒಂದು ವ್ಯಕ್ತಿಯ ಭುಜವೋ ಕುರ್ಚಿಯ ಬೆನ್ನು ಭಾಗವೋ ನೋಟಕ್ಕೆ ಸ್ವಲ್ಪ ಅಡ್ಡವಾದಂತೆ ಇರುವುದು ಇವನ ಚಿತ್ರಣ ವೈಖರಿಗಳಲ್ಲೊಂದು. ಇದರಿಂದ ನಾವು ಚಿತ್ರವನ್ನು ನೋಡಿದಾಗ ಒಂದು ದೃಶ್ಯವನ್ನು ಥಟ್ಟನೆ ಕಂಡ ಅನುಭವವಾಗುತ್ತದೆ. ಲಾತ್ರೆಕ್ ತನ್ನ ಶ್ರೇಷ್ಠ ಕೃತಿಗಳಿಂದಾಗಿ ಅಮೂರ್ತ ಕಲಾರಂಗದ ಇತಿಹಾಸದಲ್ಲಿ ಸ್ಥಾನ ಗಳಿಸಿಕೊಂಡಿದ್ದಾನೆ.

'ಮೌಲಿನ್ ರೋಜ್' ಎಂಬ ಉಪಾಹಾರ ಮಂದಿರ ಲಾತ್ರೆಕ್‌ಗೆ ಅತಿ ಪ್ರಿಯವಾದ ವಿಶ್ರಾಂತಿ ಸ್ಥಾನವಾಗಿತ್ತು. ಪ್ರತಿ ದಿನವೂ ಅವನು ಅಲ್ಲಿ ತುಂಬ ಹೊತ್ತು ಕಳೆಯುತ್ತಿದ್ದ. ಅವನ ಕಲಾಪ್ರತಿಭೆಯನ್ನು ಗುರುತಿಸಿದ್ದ ಆ ಮಂದಿರದ ಮಾಲೀಕ ಲಾತ್ರೆಕ್‌ನನ್ನು "ನನ್ನ ಉಪಾಹಾರ ಮಂದಿರದ ಜಾಹೀರಾತಿಗಾಗಿ ಭಿತ್ತಿಚಿತ್ರಗಳನ್ನು ಬರೆದುಕೊಡು" ಎಂದು ಕೇಳಿಕೊಂಡ. ಲಾತ್ರೆಕ್ ಇದಕ್ಕೆ ಒಪ್ಪಿ 'ಪೋಸ್ಟರ್'ಗಳ ಮೂಲಚಿತ್ರಗಳನ್ನು ಬರೆದು ಕೊಟ್ಟ. ಅವನ ಈ ಚಿತ್ರಗಳ ವಿನ್ಯಾಸ ಮುದ್ರಣಕ್ಕೆ ಚೆನ್ನಾಗಿ ಒಗ್ಗಿಕೊಳ್ಳುತ್ತಿದ್ದುದರಿಂದ, ಅಚ್ಚಾದ ಅವನ ಭಿತ್ತಿಚಿತ್ರಗಳು ಜನಪ್ರಿಯವಾದುವು. ಹೀಗೆ ಲಾತ್ರೆಕ್ ಪ್ರಚಾರ ಚಿತ್ರಲೇಖನ ಕಲೆಯನ್ನು ರೂಪಿಸಿದವರಲ್ಲಿ ಗಣನೀಯನಾದ.

ವಿಪರೀತ ಮದ್ಯಪಾನ ಈ ಕಲಾವಿದನಿಗೆ ಅಂಟಿದ್ದ ಕೆಟ್ಟ ಚಟ. ನಿಯಮವಿಲ್ಲದ ಜೀವನ ಲಾತ್ರೆಕ್‌ನ ದೇಹ ಮನಸ್ಸುಗಳ ಮೇಲೆ ದುಷ್ಪರಿಣಾಮ ಉಂಟುಮಾಡಿತು. ಅವನ ತಾಯಿ ಅವನನ್ನು ಮಾನಸಿಕ ಚಿಕಿತ್ಸಾಲಯಕ್ಕೆ ಸೇರಿಸಿದಳು. ಅನೇಕ ತಿಂಗಳ ಆರೈಕೆಯ ಬಳಿಕ ಅವನ ಆರೋಗ್ಯ ಸುಧಾರಿಸಿತು. ಚಿಕಿತ್ಸೆ ಪಡೆಯುತ್ತಿದ್ದ ಕಾಲದಲ್ಲಿ ಅವನು ಸರ್ಕಸ್ಸಿನ ಚಿತ್ರಗಳನ್ನು ಬರೆಯತೊಡಗಿದ. ಈ ಚಿತ್ರಗಳನ್ನು ನೋಡಿದ ವೈದ್ಯರು ಇವನ್ನು ಬರೆದವನು ಹುಚ್ಚನಲ್ಲ ಎಂದು ನಿರ್ಧರಿಸಿ, ಇವನನ್ನು

ಚಿತ್ತಭ್ರಮಿತರ ಮನೆಗೆ ಸಾಗಿಸಿದರು. "ನನ್ನ ಚಿತ್ರಗಳಿಂದಲೇ ನಾನು ಸ್ವಾತಂತ್ರ್ಯ ಸಂಪಾದಿಸಿಕೊಂಡೆ" ಎಂದು ಲಾತ್ರೆಕ್ ನುಡಿದ.

ಆಸ್ಪತ್ರೆಯಿಂದ ಹೊರಗೆ ಬಂದ ಮೇಲೆ ಲಾತ್ರೆಕ್ ಹೊಸ ಉತ್ಸಾಹದಿಂದ ಚಿತ್ರ ರಚನೆಯನ್ನು ಮುಂದುವರಿಸಿದ. ಆದರೆ ಕೆಲವೇ ತಿಂಗಳಲ್ಲಿ ಮತ್ತೆ ಹಿಂದಿನ ಚಟಕ್ಕೆ ಬಲಿಯಾಗಿ, ಹದ್ದುಮೀರಿದ ಮದ್ಯಪಾನದಲ್ಲಿ ತೊಡಗಿ, 1901ರ ಸೆಪ್ಟೆಂಬರ್ 9ರಂದು ಕಣ್ಮುಚ್ಚಿದ. ಆಗ ಲಾತ್ರೆಕ್‌ನ ವಯಸ್ಸು ಮೂವತ್ತೇಳು ವರ್ಷ ಮಾತ್ರ.

## ಲಾವಣಿ

" ಬೇಷಕ್ ತಮಾಷಾ ಟೈಗರ್ ನಿಶಾನಾ
ಟೀಪು ಸುಲ್ತಾನನ ಬಿರುದಾಯ್ತು
ಮಸಲತ್‌ಮಾಡಿದ ಮೀರ್‌ಸಾದಕನಿಗೆ
ದೇಶದ್ರೋಹಿ ಎಂಬ್ಹೆಸರಾಯ್ತು "

—ಬ್ರಿಟಿಷರೊಡನೆ ಟಿಪ್ಪು ಸುಲ್ತಾನ ನಡೆಸಿದ ಕೊನೆಯ ಹೋರಾಟ ವಸ್ತುವಾಗಿರುವ 'ಶ್ರೀರಂಗಪಟ್ಟಣ ಲಾವಣಿ'ಯೆಂದು ಪ್ರಸಿದ್ಧವಾದ ಲಾವಣಿಯ ಪಲ್ಲವಿ ಇದು.

ಜನಪದ ಸಾಹಿತ್ಯದಲ್ಲಿ ಗೀತ ಸಾಹಿತ್ಯ ಪ್ರಮುಖವಾದದ್ದು. ಗೀತ ಸಾಹಿತ್ಯದಲ್ಲಿ ಎರಡು ಬಗೆ : ಭಾವಗೀತಾತ್ಮಕ ಜನಪದ ಗೀತೆಗಳು ; ಕಥನಾತ್ಮಕ ಲಾವಣಿಗಳು. ಹಾಡಿನ ರೂಪದ ಎಲ್ಲ ಕಥೆಗಳನ್ನು–'ಲಾವಣಿ' ಎಂದು ಕರೆಯುತ್ತಾರೆ. ಇದು ಕಂಠಸ್ಥ ಸಂಪ್ರದಾಯದಲ್ಲಿ ಸಾಗಿಬಂದದ್ದು. ಕಥೆ ಹೇಳುವುದು ಲಾವಣಿಯ ಪ್ರಧಾನ ಉದ್ದೇಶ. ಸಂಗೀತ ಇದಕ್ಕೆ ಅಧೀನ. ಬಹುಮಟ್ಟಿಗೆ ವಾದ್ಯಗಳ ಹಿನ್ನೆಲೆಯಲ್ಲಿ ಲಾವಣಿಗಳನ್ನು ಹಾಡುತ್ತಾರೆ. ಹೆಂಗಸರು ಹಾಡುವ ಇಂಥ ಪಾಡ್ಗತೆಗಳಿಗೆ ವಾದ್ಯಗಳನ್ನು ಬಳಸುವುದಿಲ್ಲ.

'ಪಿರಿಯಾಪಟ್ಟಣದ ಜಗಳ', ಟಿಪ್ಪು ಸುಲ್ತಾನನ ಅಂತ್ಯವನ್ನು ಹೃದಯ ಸ್ಪರ್ಶಿಯಾಗಿ ನಿರೂಪಿಸುವ 'ಶ್ರೀರಂಗಪಟ್ಟಣದ ಲಾವಣಿ', ಸಂಗ್ಯಾ ಎಂಬ ಬಡವನೊಬ್ಬ ಧನಿಕರ ಶೋಷಣೆಗೆ ತುತ್ತಾಗುವುದನ್ನು ಬಣ್ಣಿಸುವ 'ಸಂಗ್ಯಾನ ಲಾವಣಿ', ಮನ ಮಿಡಿಯುವ ಸಾಹಸ ವೃತ್ತಾಂತವಿರುವ 'ಸಂಗೊಳ್ಳಿರಾಯಣ್ಣನ ಲಾವಣಿ' ಇವು ಇಂಥ ಕೆಲವು ಪ್ರಸಿದ್ಧ ಲಾವಣಿಗಳು. ನಡೆದ ಸಂಗತಿಗಳನ್ನು ಇವು ವಿವರಿಸುತ್ತವೆ. ಆದ್ದರಿಂದ ಇವನ್ನು ಐತಿಹಾಸಿಕ ಲಾವಣಿಗಳು ಎಂದು ಕರೆಯುತ್ತಾರೆ.

ವೀರರಸಪ್ರಧಾನವಾದ ಲಾವಣಿಗಳಲ್ಲದೆ ಇತರ ರೀತಿಯ ಲಾವಣಿಗಳೂ ಇವೆ. ಶೃಂಗಾರಪ್ರಧಾನವಾದ ಲಾವಣಿಗಳಿಗೆ 'ರಂಗು' ಲಾವಣಿಗಳೆಂಬ ಹೆಸರಿದೆ.

ತತ್ತ್ವ ಬೋಧನೆಗೆ ಮೀಸಲಾದ ಲಾವಣಿಯನ್ನು 'ವೇದಾಂತದ ಲಾವಣಿ' ಎನ್ನುತ್ತಾರೆ. ಪ್ರಶ್ನೋತ್ತರ ರೂಪದ ಲಾವಣಿಗಳೂ ಉಂಟು. ಇವನ್ನು 'ಸವಾಲ್ ಲಾವಣಿ'ಗಳು ಎಂದು ಕರೆಯುತ್ತಾರೆ.

ಲಾವಣಿಯನ್ನು ಒಬ್ಬರೇ ಹಾಡಬಹುದು, ದ್ವಂದ್ವವಾಗಿ ಅಥವಾ ಪರಸ್ಪರ ಪೂರಕವಾಗಿ ಹಾಡಬಹುದು. ಎರಡು ತಂಡಗಳು ಎದುರು ಬದುರಾಗಿ ಕುಳಿತು ಹಾಡುವುದು ಸವಾಲ್ ಲಾವಣಿಯ ಕ್ರಮ. ಎರಡು ಗುಂಪುಗಳು ಸೇರಿ ಸವಾಲ್—ಜವಾಬ್ ನಡೆಸುವ ಸಭೆಯನ್ನು 'ನಝುಮ್' ಎನ್ನುತ್ತಾರೆ.

ಲಾವಣಿಕಾರರಲ್ಲಿ ಎರಡು ಸಂಪ್ರದಾಯಗಳಿವೆ. ಒಂದು 'ತುರಾ' ಇನ್ನೊಂದು 'ಕಲ್ಗಿ' ಅಥವಾ 'ಕಲ್ಕಿ'. ತುರಾದವರಿಗೆ ಹರದಾಸರು ಎಂದೂ ಕಲ್ಗಿಯವರಿಗೆ ನಾಗೇಶರು ಎಂದೂ ಹೆಸರುಂಟು. ತಾತ್ತ್ವಿಕವಾಗಿ ತುರಾದವರು ಪುರುಷಪ್ರಾಧಾನ್ಯವನ್ನೂ ಕಲ್ಗಿಯವರು ಶಕ್ತಿಪ್ರಾಧಾನ್ಯವನ್ನೂ ಅಂಗೀಕರಿಸಿರುವಂತೆ ತೋರುತ್ತದೆ. ಇವರಿಬ್ಬರೂ ತಾವು ಉಪಯೋಗಿಸುವ ಡಪ (ಡಬ್ಬು) ವನ್ನು ಬೇರೆ ಬೇರೆ ರೀತಿಯಲ್ಲಿ ಅಲಂಕರಿಸುತ್ತಾರೆ.

ಸ್ಪರ್ಧೆಯ ಕಾಲದಲ್ಲಿ ಕಲ್ಗಿಯವರು ಹೆಣ್ಣಿನ ಪಕ್ಷ; ತುರಾದವರು ಗಂಡಿನ ಪಕ್ಷ ಎನ್ನಬಹುದು.

ತುರಾ ಲಾವಣಿಯನ್ನು ಹಾಡುವಾಗ ಹಾಡುಗಾರಿಕೆಯಲ್ಲಿ ಲಯಕ್ಕೆ ಪ್ರಾಧಾನ್ಯ.

ಲಾವಣಿಗಳಲ್ಲಿ ಸಾಮಾನ್ಯವಾಗಿ ಆದಿ, ಝಂಪ, ಚಾಪು ತಾಳಗಳನ್ನು ಉಪಯೋಗಿಸುತ್ತಾರೆ. ಯಮನ್, ಪೀಲು, ಸಿಂಧು ಭೈರವಿ, ಶಂಕರಾಭರಣ, ಮಯಾಮಾಳವಗೌಳ, ಮಧ್ಯಮಾವತಿ, ಮೋಹನ ಮುಂತಾದ ಜನಪ್ರಿಯ ರಾಗಗಳನ್ನು ಬಳಸುತ್ತಾರೆ.

ಈ ಲಾವಣಿಗೆ ವಿಶಿಷ್ಟ ರೂಪವಿದೆ. ದ್ವಿಪದಿ ಇದಕ್ಕೆ ತಳಹದಿ. ಮೊದಲು 'ಪಲ್ಲವಿ'. ಅನಂತರ ಚಾಲ್. ಚಾಲ್ ಪಲ್ಲವಿಯಂಥ ನಾಲ್ಕು ತುಂಡುಗಳಿಂದ ಕೂಡಿದ್ದು. ಮುಂದಿನ ಉಡಾನ್ ಕೂಡಾ ದ್ವಿಪದಿಗಳನ್ನು ಸೇರಿಸಿ ಮಾಡಿದ್ದೇ ಆದರೂ, ಚಾಲ್‌ನಲ್ಲಿ ಇರುವುದಕ್ಕಿಂತ ಗಣಗಳಲ್ಲಿ ವ್ಯತ್ಯಾಸವಿರುವ ದ್ವಿಪದಿಗಳಿರುತ್ತವೆ. ಆಮೇಲೆ ಬರುವ ಗುಲ್ ಉಡಾನ್‌ನ ಛಂದಸ್ಸಿನಲ್ಲಿ ಸ್ವಾತಂತ್ರ್ಯವಿರುತ್ತದೆ. ಇದರ ಜೊತೆಗೆ ಕೊನೆಯಲ್ಲಿ ಶ್ಲೋಕ ಎಂಬ ಎರಡು ಸಾಲಿನ ರಚನೆಯನ್ನು ಇಲ್ಲವೇ 'ಸಖಿ'ಯನ್ನು ಹಾಡುತ್ತಾರೆ. 'ಸಖಿ'ಯಲ್ಲಿ ಷಟ್ಪದಿಯ ಛಾಯೆ ಕಾಣುತ್ತದೆ. ಈ ಅಚ್ಚು ಕಟ್ಟಿನ ಲಾವಣಿಯನ್ನು 'ಚಂಪೂ ಲಾವಣಿ' ಎನ್ನುತ್ತಾರೆ.

ಪಲ್ಲವಿ, ಚಾಲ್, ಉಡಾನ್, ಗುಲ್ ಉಡಾನ್, ಶ್ಲೋಕ ಅಥವಾ ಸಖಿ ಇವೆಲ್ಲಕ್ಕೂ ಸಂಬಂಧಿಸಿದಂತೆ ಹಾಡುವ ಕ್ರಮಗಳಿರುತ್ತವೆ. ಅವನ್ನು ಅನುಸರಿಸಿಯೇ ಲಾವಣಿಕಾರರು ಹಾಡುವುದು. ಒಂದೊಂದಕ್ಕೂ ಗತ್ತು, ಸ್ಥಾಯಿ ಬದಲಾಗುತ್ತವೆ. ಈ ಹಾಡುಗಾರಿಕೆಯಲ್ಲಿ ಪ್ರಾದೇಶಿಕ ಭೇದಗಳೂ ಇವೆ.

ಇನ್ನೊಂದು ಬಗೆಯ ಸರಳ ರಚನೆಯಿಂದ ಆದದ್ದು ಕಾವ್ಯವರ್ಗದ ಲಾವಣಿ. ಕಾವ್ಯವರ್ಗದ ಲಾವಣಿಯು ಏಕನಾದದ ಶ್ರುತಿ ಮತ್ತು ಏಕತಾಳದ ನಡೆ ಅನುಸರಿಸಿ, ಬೇಕೆಂದಾಗ ಮುಂದೆ ನಡೆದು, ಬೇಡವೆಂದಾಗ ನಿಲ್ಲುವ 'ಜಾತಿಪದ' ಗಳಿಂದ ಆದದ್ದು. ಇದರ ಹಾಡುಗಾರಿಕೆಯಲ್ಲಿ ಪುನರಾವರ್ತನೆ ಉಂಟು. ಈ ಪದಗಳಲ್ಲಿ 4 ಮತ್ತು 5 ಮಾತ್ರೆಯ ಗಣಗಳನ್ನು ಉಪಯೋಗಿಸುತ್ತಾರೆ.

"ಆರು ಶಾಸ್ತ್ರವ ಸಿದ್ಧಿಯ ಮಾಡು
ಹದಿನೆಂಟು ಪುರಾಣವ ಪಾಠವ ಮಾಡು
ಎಂಟೆಂಟು ದಿನಕ್ಕೊಮ್ಮೆ ಸಂತೆಯ ಮಾಡು
ರೊಕ್ಕ ನೋಡಿ ನೀ ವ್ಯಾಪಾರ ಮಾಡಣ್ಣಾ
ಕೇಳೋ ಜಾಣಾ"

ಇದು ಇಂಥ ಒಂದು 'ಜಾತಿ' ಪದ.

ಕನ್ನಡ ಕಾವ್ಯಗಳಲ್ಲಿ ಕಾಣುವ ಎರಡನೆಯ ಅಕ್ಷರದ ಪ್ರಾಸದ ಬದಲು ಲಾವಣಿಗಳಲ್ಲಿ ಅಂತ್ಯಪ್ರಾಸವಿರುತ್ತದೆ. ಒಮ್ಮೊಮ್ಮೆ ಅಂತ್ಯಪ್ರಾಸವನ್ನು ಬಿಡುವುದೂ ಒಂದು ಸಾಲನ್ನು ಬಿಟ್ಟು ಅದರ ಮುಂದಿನ ಸಾಲಿಗೆ ಅಂತ್ಯಪ್ರಾಸ ಕೂಡಿಸುವುದೂ ಉಂಟು.

ಲಾವಣಿ ಸುಮಾರು ಎರಡು ಸಾವಿರ ವರ್ಷಗಳ ಹಿಂದಿನಿಂದ ಪ್ರಚಲಿತವಾಗಿರುವುದೆಂಬ ಸಂಶಯವಿದೆ. "ಪುಟ್ಟ ಇಳಿಗೆ ತುರಾ ಕಲ್ಗಿ ಚರ್ಚೆ ತಿಳಿಯಲೋ ಜಾಹಿರ ಏಟ್ಟು ಸಾವಿರದೊಂಬೈನೂರ ವರ್ಷಗಳ ಮೇಲೆ ಚಿಲ್ಲರಾ" ಎಂಬ ಹೇಳಿಕೆಯಿದೆ. ಋಗ್ವೇದದಲ್ಲಿ ಮತ್ತು ಬೌದ್ಧ ಸಾಹಿತ್ಯದಲ್ಲಿ ಕಂಡುಬರುವ ಸಂವಾದಗಳಲ್ಲಿ ಲಾವಣಿಯ ಮೂಲವನ್ನು ಕಾಣಬಹುದೆಂಬುದು ಕೆಲವರು ವಿದ್ವಾಂಸರ ಅಭಿಪ್ರಾಯ.

ನಮ್ಮ ದೇಶದ ಲಾವಣಿಗಳಂಥ ವೀರರಸ ಪ್ರಧಾನವಾದ ಹಾಗೂ ಗೀತ ರೂಪದಲ್ಲಿರುವ ರಚನೆಗಳನ್ನು ಅನೇಕ ದೇಶಗಳಲ್ಲಿ ಕಾಣಬಹುದು.

ನಮ್ಮಲ್ಲಿ ಲಾವಣಿ ರಚನೆ ಮತ್ತು ಹಾಡುಗಾರಿಕೆ ಇಂದಿಗೂ ಜೀವಂತವಾಗಿ ಉಳಿದಿರುವ ಕಲೆ. ಇಂದಿನ ಲಾವಣಿಕಾರರು ಹಿಂದಿನ ಆಶ್ವಸ್ನೇ ಅನುಸರಿಸುವವರಾದರೂ ವಸ್ತುವಿನ ಆಯ್ಕೆಯಲ್ಲಿ ಸ್ವಾತಂತ್ರ್ಯ ವಹಿಸುತ್ತಾರೆ. ಸಮಕಾಲೀನ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳು ಮತ್ತು ಅವುಗಳ ವಿಮರ್ಶೆ ಇಂದಿನ ಲಾವಣಿಕಾರರ ವಸ್ತುಭಂಡಾರವನ್ನು ಸೇರಿವೆ. ಹೀಗೆ ಒಂದು ಕಾಲಕ್ಕೆ ವೀರಕಥನ, ಶೃಂಗಾರ, ತತ್ತ್ವಬೋಧೆಗಳಿಗೆ ವಿಾಸಲಾಗಿದ್ದ ಲಾವಣಿ, ಪ್ರಚಾರಮಾಧ್ಯಮವಾಗಿಯೂ ಬಳಕೆಗೆ ಬಂದಿದೆ.

## ಲ್ಯಾಟಿನ್ ಸಾಹಿತ್ಯ

ಪ್ರಾಚೀನ ರೋಮನ್ ಜನರು ಬಳಸುತ್ತಿದ್ದ ಭಾಷೆ ಲ್ಯಾಟಿನ್. ಮಧ್ಯ ಯುಗದಲ್ಲಿ ಅದು ರೋಮನ್ ಕ್ಯಾಥಲಿಕ್ ಧರ್ಮಪೀಠದ ಅಧಿಕೃತ ಭಾಷೆಯಾಗಿತ್ತು. ಕ್ರಿ.ಪೂ. 3ನೆಯ ಶತಮಾನದಿಂದ ಕ್ರಿ.ಶ. 17ನೆಯ ಶತಮಾನದ ತನಕ ಲ್ಯಾಟಿನ್ ಸಾಹಿತ್ಯ ಪ್ರಗತಿ ಹೊಂದಿತು.

ಪ್ರಾರಂಭದಲ್ಲಿ ಲ್ಯಾಟಿನ್ ಸಾಹಿತ್ಯ ವಿಶೇಷವಾಗಿ ಗ್ರೀಕ್ ಸಾಹಿತ್ಯದ ಪ್ರಭಾವದಿಂದ ಬೆಳೆಯಿತು. ರೋಮ್‌ನ ವಿದ್ವಾಂಸರು ಗ್ರೀಕ್ ಕೃತಿಗಳನ್ನು ಭಾಷಾಂತರ ಮಾಡುತ್ತಿದ್ದರು. ಕ್ರಿ.ಪೂ. 3ನೆಯ ಶತಮಾನದಲ್ಲಿ ಲಿವಿಯಸ್ ಅಂಡ್ರೋನಿಕಸ್ ಎಂಬ ಗ್ರೀಕ್ ಸೆರೆಯಾಳು –ಗುಲಾಮ –ಹೋಮರನ 'ಒಡಿಸ್ಸಿ' ಅನ್ನು ಲ್ಯಾಟಿನಿಗೆ ಭಾಷಾಂತರಿಸಿದ. ಗ್ರೀಕ್ ಛಂದಸ್ಸು, ಪುರಾಣಗಳು, ಪದ್ಯರಚನೆ, ಲ್ಯಾಟಿನ್ ಸಾಹಿತ್ಯದ ಮೇಲೆ ಪ್ರಭಾವ ಬೀರಿದುವು.

ಅಗಸ್ಟಸ್ ಚಕ್ರವರ್ತಿಯ ಆಳ್ವಿಕೆಯ ಕಾಲ ರೋಮ್‌ನಲ್ಲಿ ಲ್ಯಾಟಿನ್ ಸಾಹಿತ್ಯದ ಸುವರ್ಣಯುಗ. ಲ್ಯಾಟಿನ್ ಸಾಹಿತ್ಯದ ಪ್ರಸಿದ್ಧ ಕವಿಗಳಾದ ಹೊರೇಸ್, ವರ್ಜಿಲ್ ಮತ್ತು ಓವಿಡ್ ಈ ಕಾಲದಲ್ಲಿ ಜೀವಿಸಿದ್ದರು. ವರ್ಜಿಲನ ಕಾವ್ಯ 'ಈನಿಯಿಡ್' ಶ್ರೇಷ್ಠ ಕೃತಿ. ಹೊರೇಸನ ಕಟುವಾದ ವಿಡಂಬನ ಸಾಹಿತ್ಯ ಸಮಕಾಲೀನ ರೋಮನ್ ಸಮಾಜದ ಪರಿಸ್ಥಿತಿಯನ್ನು ಮನಮುಟ್ಟುವಂತೆ ನಿರೂಪಿಸುತ್ತದೆ. ಓವಿಡ್‌ನ 'ಮೆಟಮಾರ್‌ಫಸಿಸ್' ಗ್ರೀಕ್ ಪುರಾಣಗಳಿಂದ ಪ್ರಭಾವಿತವಾಗಿ ಬರೆದ ಕಥೆಗಳ ಸಂಗ್ರಹ.

ಲ್ಯಾಟಿನ್ ಸಾಹಿತ್ಯದ ಸುವರ್ಣಯುಗದಲ್ಲಿ ಜೀವಿಸಿದ್ದ ಪ್ರತಿಭಾನ್ವಿತ ವ್ಯಕ್ತಿ, ಸಿಸೆರೋ. ಅವನ ಪತ್ರಗಳ ಸಂಕಲನ, ಭಾಷಣಗಳ ಸಂಕಲನ ಲ್ಯಾಟಿನ್ ಸಾಹಿತ್ಯದಲ್ಲಿ ಶ್ರೇಷ್ಠ ಗದ್ಯವೆಂದು ಪರಿಗಣಿಸಲ್ಪಟ್ಟಿದೆ. ಕ್ರಿ.ಪೂ. 3ನೆಯ ಶತಮಾನ ಪ್ಲಾಟಸ್, ರೋಮಿನ ಪ್ರಸಿದ್ಧ ಕಾಮಿಡಿ ನಾಟಕಕಾರ. ಅವನ ಸುಮಾರು 20 ಕಾಮಿಡಿಗಳು ಪ್ರಸಿದ್ಧವಾಗಿವೆ. ಗ್ರೀಕ್ ಕಾಮಿಡಿಗಳಿಂದ ಆತ ವಿಶೇಷವಾಗಿ ಪ್ರಭಾವಿತನಾದ. ಶೇಕ್ಸ್‌ಪಿಯರ್, ಮೋಲಿಯೇರ್ ಮುಂತಾದವರ ಹರ್ಷಾಂತ ನಾಟಕಗಳಿಗೆ ಇವನ ಕಾಮಿಡಿಗಳು ಸ್ಫೂರ್ತಿ ನೀಡಿವೆ.

ರೋಮ್ ಸಾಮ್ರಾಜ್ಯದ ಪತನಾನಂತರ ಲ್ಯಾಟಿನ್ ಸಾಹಿತ್ಯದ ಪ್ರಗತಿ ಕುಂಠಿತವಾಯಿತು. ರೋಮಿನ ಕೊನೆಯ ಚಕ್ರವರ್ತಿ ಮಾರ್ಕಸ್ ಅರೇಲಿಯಸ್ ಲ್ಯಾಟಿನ್ ಭಾಷೆ ಸಾಹಿತ್ಯಗಳ ವಿಷಯದಲ್ಲಿ ವಿಶೇಷ ಆಸ್ಥೆ ವಹಿಸಿ, ಎಲ್ಲ ವಿಧದ ಪ್ರೋತ್ಸಾಹವನ್ನೂ ನೀಡಿದ. ಅವನ ಮರಣಾನಂತರ ಲ್ಯಾಟಿನ್ ಸಾಹಿತ್ಯ ಅವನತಿ ಹೊಂದಿತು.

ನವೋದಯ ಕಾಲದಲ್ಲಿ ಮತ್ತೆ ಲ್ಯಾಟಿನ್ ಸಾಹಿತ್ಯ ಪ್ರಾಧಾನ್ಯತೆ ಗೊಂಡಿತು. 15, 16ನೆಯ ಶತಮಾನದಲ್ಲಿ ರೋಮ್, ಫ್ಲಾರೆನ್ಸ್, ನೇಪಲ್ಸ್‌ಗಳು ಲ್ಯಾಟಿನ್ ಸಾಹಿತ್ಯದ ಅಧ್ಯಯನದ ಪ್ರಮುಖ ಕೇಂದ್ರಗಳಾಗಿದ್ದುವು. ಖ್ಯಾತಸಾಹಿತಿಗಳಾದ ದಾಂತೆ, ಪೆಟ್ರಾರ್ಕ್, ಬೊಕಾಚಿಯೋ ಲ್ಯಾಟಿನ್ ಭಾಷೆಯಲ್ಲಿ ಅಮೂಲ್ಯ ಕೃತಿಗಳನ್ನು ರಚಿಸಿದರು.

ಭಾರತದಲ್ಲಿ ಸಂಸ್ಕೃತ ಸಾಹಿತ್ಯಕ್ಕಿರುವ ಗೌರವದ ಸ್ಥಾನಕ್ಕೆ ಯೂರೋಪಿನಲ್ಲಿ ಲ್ಯಾಟಿನ್ ಸಾಹಿತ್ಯದ ಸ್ಥಾನವನ್ನು ಹೋಲಿಸಬಹುದು.

ನೋಡಿ : 'ಈನಿಯಿಡ್'; 'ಒಡಿಸ್ಸಿ'; ಓವಿಡ್; ವರ್ಜಿಲ್; ಹೊರೇಸ್;
ಹೋಮರ್

## ಲಿಪಿ

ನೋಡಿ : ಲಿಪಿ–ಸಂಪುಟ ೧

## ಲಿ ಪೊ

ಒಮ್ಮೆ ಮಿಂಗ್ ಹುವಾಂಗ್ ದೊರೆ, ಆಸ್ಥಾನದಲ್ಲಿ ದರ್ಬಾರು ನಡೆಸುತ್ತಿದ್ದಾಗ ಕೊರಿಯ ದೇಶದ ರಾಯಭಾರಿ ಬಂದು ತಮ್ಮ ರಾಜನ ಒಂದು ಸಂದೇಶವನ್ನು ನೀಡಿದ. ಕೊರಿಯ ಭಾಷೆಯಲ್ಲಿದ್ದ ಆ ಸಂದೇಶವನ್ನು ಮಂತ್ರಿಗಳಾರಿಗೂ ಓದಲು ಆಗಲಿಲ್ಲ. ಆಗ ರಾಜ ಕಿಡಿ ಕಿಡಿಯಾಗಿ "ಮೂರು ದಿನಗಳಲ್ಲಿ ಈ ಪತ್ರವನ್ನು ನೀವು ಓದದಿದ್ದರೆ, ನಿಮ್ಮ ಸ್ಥಾನಮಾನಗಳನ್ನು ಕಳೆದುಕೊಳ್ಳುತ್ತೀರಿ!" ಎಂದು ಗುಡುಗಿದ. ದಿಗ್ಭ್ರಮೆಗೊಂಡ ಮಂತ್ರಿಗಳಲ್ಲೊಬ್ಬ ಮರುದಿನ ದೊರೆಯ ಬಳಿಗೆ ಹೋಗಿ, "ಮಹಾಸ್ವಾಮಿ, ಈ ಕಾಗದವನ್ನು ಓದಬಲ್ಲವನು ಒಬ್ಬನಿದ್ದಾನೆ; ಅವನೊಬ್ಬ ಮಹಾಕವಿ, ಹೆಸರು ಲಿ ಪೊ ಎಂದು. ಅವನನ್ನು ಕರೆಸಿ ಓದಿಸಿ. ಅವನಿಗೆ ತಿಳಿಯದ ವಿಷಯವೇ ಇಲ್ಲ" ಎಂದ.

ಬರಲು ಮೊದಲು ನಿರಾಕರಿಸಿದ ಲಿ ಪೊ (ಭಾಷಾ ಉಚ್ಚಾರ: ಲಿ ಬೊ) ಅನಂತರ ಬಂದ. ಹಿಂದೆ ಯಾವುದೋ ಉದ್ಯೋಗಕ್ಕಾಗಿ ನಡೆದ ಪರೀಕ್ಷೆಯಲ್ಲಿ



ಚೀನೀ ನಂದನವನ :
ಲಿ ಪೊ

ತನ್ನ [illegible] ಮಾಡಿದ. [illegible] ತನ್ನ ಸಾಮರ್ಥ್ಯವನ್ನು ತೆಗೆಯುವಂತೆ ಮಾಡಿದ. ಕೊರಿಯ ದೊರೆಯ [illegible] ಈ ದೊರೆ ಉತ್ತರಕ್ಕೆ ಕಾಯುತ್ತಿದ್ದಾನೆಂದು ಹೇಳಿ, ಅದಕ್ಕೆ ತಕ್ಕ ಭರ್ಜರಿ ಉತ್ತರವನ್ನು ತಾನೇ ಬರೆದ.

ಲಿ ಪೊ ಉತ್ತರ ಓದಿದ ಕೊರಿಯದ ದೊರೆ ಹೆದರಿ ಕ್ಷಮಾಪಣೆ ಕೇಳಿದ. ಚೀನಾ ದೊರೆ ಲಿ ಪೊನ ಬುದ್ಧಿಮತ್ತಿಕೆಗೆ ಮೆಚ್ಚಿ ಬಹುಮಾನವಿತ್ತ.

ಲಿ ಪೊ ಚೀನದ ಅತ್ಯಂತ ಪ್ರಮುಖ ಕವಿಗಳಲ್ಲೊಬ್ಬ. ಮದ್ಯ–ಹೆಣ್ಣುಗಳ ಪ್ರಿಯನಾದ ಇವನು ಪ್ರೀತಿ, ವಿರಹ, ಸುಖಗಳ ಬಗೆಗೆ ಬರೆದಿರುವ ಕವನಗಳು ಚೀನಿ ಸಾಹಿತ್ಯದಲ್ಲೇ ಅಮೂಲ್ಯವಾದುವು.

ಕ್ರಿ.ಶ. 701ರಲ್ಲಿ ಚೀನದ ನೈಋತ್ಯ ಭಾಗದಲ್ಲಿರುವ ಸಜ್‌ವಾನ್‌ನಲ್ಲಿ ಲಿ ಪೊ ಜನಿಸಿದ. 19ನೆಯ ವರ್ಷದಲ್ಲಿ ಮನೆ ಬಿಟ್ಟು ಒಬ್ಬ ಸನ್ಯಾಸಿಯೊಡನೆ ಕೆಲ ಕಾಲ ಜೀವಿಸಿದ. ಈ ಹೊತ್ತಿಗಾಗಲೇ ಲಿ ಪೊ ಕವನಗಳನ್ನು ಬರೆಯಲು ಪ್ರಾರಂಭಿಸಿದ್ದ. ಮದುವೆಯಾದ ಅನಂತರ ಕೊಂಚ ಕಾಲ ಹೆಂಡತಿಯ ಮನೆಯಲ್ಲೇ ಇದ್ದ ಲಿ ಪೊ ಮತ್ತೆ ತಿರುಗಾಡಲು ಹೊರಟ. ಚಕ್ರವರ್ತಿಯ ಆಸ್ಥಾನದಲ್ಲಿ ಕವಿಯಾಗಬೇಕೆಂದಿದ್ದ ಇವನ ಆಸೆ ಫಲಿಸದೆ, ಮತ್ತೆ ಪಯಣ–ಓದುಗಳನ್ನು ಮುಂದುವರಿಸಿದ.

ಈ ಸಮಯದಲ್ಲಿ ಲಿ ಪೊಗೂ ಕವಿ ಡೂ ಫೂ (712–770)ಗೂ ಗೆಳೆತನ ಬೆಳೆಯಿತು. (ಡೂ ಫೂ ಮುಂದೆ ಚೀನದ ಪ್ರಮುಖ ಕವಿಯೆನಿಸಿದ). ತಮ್ಮಿಬ್ಬರ ಗೆಳೆತನದ ಬಗೆಗೆ ಡೂ ಫೂ ಬರೆದ ಈ ಕವನ ಲಿ ಪೊನ ವ್ಯಕ್ತಿತ್ವದ ಮೇಲೂ ಬೆಳಕು ಚೆಲ್ಲುತ್ತದೆ :

"ಲಿ ಪೊ ಬಗೆಗಾದರೆ, ಅವನಿಗೊಂದು ಪಾತ್ರೆ ಮದ್ಯ ಕೊಡಿ
ಅವನು ನೂರು ಕವನಗಳ ಬರೆದಾನು
ಚಾಂಗ್-ಅನ್ ನ ರಸ್ತೆಯೊಂದರ
ಮದ್ಯದಂಗಡಿಯಲ್ಲಿ ಕುಳಿತು ನಸುನಿದ್ದೆ ಮಾಡುವನು
ಚಕ್ರವರ್ತಿಯ ಕರೆಬಂದರೂ
ಆ ರಾಜವೈಭವದ ನೌಕೆಯನು ಏರದೆಯೆ
"ಕ್ಷಮಿಸು ದೊರೆಯೆ" ಎನುವನು ಅವನು—
"ನಾ ಮದ್ಯಗಳ ರಾಜ"

ಸುಂದರ ರೂಪಕಗಳು, ರಮ್ಯಶೈಲಿಗಳ ಮೂಲಕ ಲಿ ಪೊ ನ ಭಾವನೆಗಳು ತೀವ್ರವಾಗಿ ಅಭಿವ್ಯಕ್ತವಾಗುತ್ತವೆ. ನಿಶ್ಚಿಂತ ಸ್ವೇಚ್ಛಾ ಜೀವನವನ್ನು ಇವನ ಕವನಗಳು ಚಿತ್ರಿಸುತ್ತವೆ.

ಜೀವನದ ಗಂಭೀರ ಮುಖದ ಚಿತ್ರಣವನ್ನು ಆತ ಮಾಡಿದ್ದಾನೆ. ಯುದ್ಧದಲ್ಲಿ ಗಂಡಂದಿರನ್ನು ಕಳೆದುಕೊಂಡವರ ದುಃಖವನ್ನೂ ಪ್ರಣಯಿಗಳ ವಿರಹಗಳನ್ನೂ ಲಿ ಪೊ ಚಿತ್ರಿಸಿದ್ದಾನೆ.

ಮುಂದೆ ಚಕ್ರವರ್ತಿಯ ಮಗನೊಬ್ಬ ಲಿ ಪೊನ ಕವನಗಳನ್ನು ಕೇಳಿ ಅವನನ್ನು ತನ್ನ ಬಳಿ ಇರಿಸಿಕೊಂಡ. ಕೆಲ ಕಾಲದ ಅನಂತರ ಸರಕಾರವನ್ನು ಉರುಳಿಸಲು ಚಕ್ರವರ್ತಿಯ ಈ ಮಗ ಪ್ರಯತ್ನಿಸಿದನೆಂದು ಅವನನ್ನು ಹಿಡಿದಾಗ ಲಿ ಪೊನನ್ನು ಸಹ ಬಂಧಿಸಿದರು. ಅವನನ್ನು ದೂರ ಪ್ರದೇಶಕ್ಕೆ ಕಳುಹಿಸುವ ಮುನ್ನ ಅವನ ಮೇಲಿನ ಆರೋಪ ಸರಿಯಲ್ಲ ಎಂಬುದು ಸ್ಪಷ್ಟವಾಗಿ, ಅವನ ಬಿಡುಗಡೆಯಾಯಿತು.

ಹೆಚ್ಚು ಹಣ ಗಳಿಸದ ಲಿ ಪೊ ಜೀವನದ ಬಹುಭಾಗವನ್ನು ಬಡತನದಲ್ಲೇ ಕಳೆದ. ಕೊನೆಗಾಲದಲ್ಲಿ ಅನಾರೋಗ್ಯದಿಂದ ನರಳುತ್ತ ಮನೆಗೆ ಹಿಂತಿರುಗುತ್ತಿದ್ದಾಗ (762ರಲ್ಲಿ) ನಿಧನನಾದ. ಇವನ ವರ್ಣರಂಜಿತ ಜೀವನದ ಬಗೆಗೆ ಕಥೆಗಳನ್ನು ಕಟ್ಟಿದ ಜನ ಅವನ ಸಾವಿನ ಬಗೆಗೂ ಹೀಗೆ ಕಲ್ಪಿಸಿದರು : "ಕುಡಿದು ಮದಮತ್ತನಾಗಿದ್ದಾಗ ನದಿಯಲ್ಲಿ ಪ್ರತಿಫಲಿತವಾಗಿದ್ದ ಚಂದ್ರನನ್ನು ಆಲಿಂಗಿಸಿಕೊಳ್ಳಲು ಹೋಗಿ ಮುಳುಗಿ ನಿಧನನಾದ" ಎಂದರು.

ಶತಮಾನಗಳೇ ಕಳೆದುಹೋದರೂ. ಲಿ ಪೊ ನ ಕಾವ್ಯ ಚೀನೀ ಸಾಹಿತ್ಯದಲ್ಲಿ ಒಂದು ನಂದನವನದಂತಿದೆ.

## ಲಿಯೊನಾರ್ದೊ ದ ವಿಂಚಿ

ಲಿಯೊನಾರ್ದೊ ದ ವಿಂಚಿಯ ತಂದೆ ಪಿಯರೆ ದ ವಿಂಚಿಯ ಬಳಿಗೆ ಅವನ ಜಮೀನಿನ ಒಬ್ಬ ರೈತ ಒಂದು ದಿನ ಬಂದು, ತಾನು ಮರದಿಂದ ಕಡಿದು ತಯಾರಿಸಿದ ಉರುಟಾದ ಗುರಾಣಿಯೊಂದನ್ನು ನೀಡಿದ. ಫ್ಲಾರೆನ್ಸಿನ ಕುಶಲ ಕಲಾವಿದನ ಕೈಯಿಂದ ಅದರ ಮೇಲೆ ಒಂದು ಸುಂದರ ಚಿತ್ರವೊಂದನ್ನು ಬರೆಸಿಕೊಡಬೇಕೆಂದು ಕೇಳಿಕೊಂಡ. ಪಿಯರೆ ಆ ಗುರಾಣಿಯನ್ನು ಚಿತ್ರಕಲೆಯಲ್ಲಿ ಆಸಕ್ತಿ ಇದ್ದ ತನ್ನ ಮಗನ ಕೈಗಿತ್ತ. ಗುರಾಣಿ ಶೌರ್ಯ ಮತ್ತು ಧೈರ್ಯದ ಸಂಕೇತ. ಅದರ ಮೇಲೆ ಭೀಕರ ಚಿತ್ರವನ್ನು ರಚಿಸಬೇಕೆಂದು ನಿರ್ಧರಿಸಿ ಲಿಯೊನಾರ್ದೊ ಗ್ರೀಕ್ ಪುರಾಣದ ರಾಕ್ಷಸ 'ಮೆದುಸಾ'ನ ತಲೆಯನ್ನು ಗುರಾಣಿಯ ಮೇಲೆ ಚಿತ್ರಿಸಿದ. ಬೆಂಕಿ ಕಾರುವ ಕಣ್ಣುಗಳ, ಹೊಗೆ ಸೂಸುವ ಮೂಗಿನ, ವಿಷ ಕಾರುವ ಬಾಯಿಯ, ಭಯಂಕರ ತಲೆಯ ಚಿತ್ರವುಳ್ಳ ಗುರಾಣಿಯನ್ನು ಕಂಡ ಆತನ ತಂದೆಗೆ ಭಯವೆನಿಸಿತು. ಮಗನ ಈ ಅಪೂರ್ವ ಕಲ್ಪನಾಶಕ್ತಿ ಒಂದು ಪವಾಡ ಎಂದು ಆತನಿಗೆ ಅನಿಸಿತು.



ಮಹಾನ್ ಪ್ರತಿಭೆ : ವಿಂಚಿ

ಜಗತ್ತಿನ ಜ್ಞಾನದ ವಿವಿಧ ಶಾಖೆಗಳೆಲ್ಲ ಒಬ್ಬನೇ ವ್ಯಕ್ತಿಯಲ್ಲಿ ಬೆರೆತುಕೊಂಡಿದ್ದ ಮಹಾ ಮೇಧಾವಿ ಲಿಯೊನಾರ್ದೊ ದ ವಿಂಚಿ. ಇಟಲಿಯ ನವೋದಯ ಕಾಲದ ಮೂವರು ಪ್ರತಿಭಾಶಾಲಿಗಳಲ್ಲಿ ಲಿಯೊನಾರ್ದೊ ದ ವಿಂಚಿಯ ಹೆಸರು ಮೊದಲನೆಯದು. ಉಳಿದಿಬ್ಬರು ಮೈಕೆಲೆಂಜಲೋ ಮತ್ತು ರಾಫೇಲ್.

1452ರ ಏಪ್ರಿಲ್ 15ರಂದು ಇಟಲಿಯ ವಿಂಚಿ ಪಟ್ಟಣದಲ್ಲಿ 16 ವರ್ಷದ ಚೆಲುವೆ ರೈತ ಯುವತಿ ಕ್ಯಾಥರೀನ್‌ಳ ಮಗನಾಗಿ ಜನಿಸಿದ. ಆತನ ತಂದೆ ಪಿಯರೆ ದ ವಿಂಚಿ ವಕೀಲನಾಗಿದ್ದ. ಫ್ಲಾರೆನ್ಸಿನಲ್ಲಿ ಹರಿಯುವ ಹೊಳೆ. ಸೌರಭ ಸೂಸುವ ಹೂಗಳು. ಪೈನ್ ಮರಗಳೆಡೆಯಿಂದ ಬೀಸುವ ತಂಗಾಳಿ ಇಂಥ ಪ್ರಕೃತಿ ರಮ್ಯ ವಾತಾವರಣದಲ್ಲಿ ಅವನ ಕಲಾಪ್ರತಿಭೆ ಅರಳಿತು. ಇದೇ ನಿಸರ್ಗವೇ ಅವನ ಮೊದಲ ಗುರು. 15 ವರ್ಷ ಪ್ರಾಯದವನಿದ್ದಾಗ ವೆರೊಚಿಯೊ ಚಿತ್ರಕಾರನ ಕಲಾಶಾಲೆಯಲ್ಲಿ ವಿದ್ಯಾರ್ಥಿಯಾಗಿ ಸೇರಿದ. ಅಲ್ಲಿ ಗುರುವನ್ನು ಮೀರಿಸುವ ಶಿಷ್ಯನೆನಿಸಿದ. ಶಾಲೆಯಲ್ಲಿ ಲಿಯೊನಾರ್ದೊ ಗಣಿತ ಮತ್ತು ಸಂಗೀತ ಕಲೆಯಲ್ಲಿ ಅಪಾರ ಆಸಕ್ತ ತೋರಿಸಿದ. ಆತ ಬಾಲ್ಯದಲ್ಲಿ ಸ್ಫುರದ್ರೂಪಿಯಾಗಿದ್ದ. ಕುದುರೆ ಲಾಳವನ್ನೇ ಬರಿಗೈಯಿಂದ ಬಗ್ಗಿಸುವಷ್ಟು ಬಲಿಷ್ಠನೂ ಆಗಿದ್ದ.

1492ರಲ್ಲಿ ಮಿಲಾನ್‌ನ ಲೊಡ್ವಿಕೋ ದೊರೆಯ ಆಜ್ಞೆಯಂತೆ ಅವನ ಬಳಿಯಲ್ಲಿ ಸ್ವತಂತ್ರ ಕಲಾವಿದನಾಗಿ ಕೆಲಸ ಮಾಡಿದ. ಕುದುರೆಯ ಮೇಲೆ ಕುಳಿತ ಲೊಡ್ವಿಕೋನ ತಂದೆಯ ಬೃಹದಾಕಾರದ ಪ್ರತಿಮೆ ಮಾದರಿಯನ್ನು ರಚಿಸಿದ. 1499ರಲ್ಲಿ ಮಿಲಾನನ್ನು ಫ್ರೆಂಚರು ವಶಪಡಿಸಿಕೊಂಡಾಗ ಲಿಯೊನಾರ್ದೊ ಫ್ಲಾರೆನ್ಸಿಗೆ ಹಿಂದಿರುಗಿದ.

ರೋಮಿನ ಪೋಪ್‌ನ ಸಹೋದರ ಗಿಯಾಲಿಯಾನೋ ದ ಮೆಡಿಸಿಯ ಆಹ್ವಾನದ ಮೇರೆಗೆ 1513ರಲ್ಲಿ ಲಿಯಾನಾರ್ದೊ ರೋಮಿಗೆ ಹೋದ. ಮುಂದೆ ಜಗತ್ಪ್ರಸಿದ್ಧ ಚಿತ್ರಕಾರರಾದ ಮೈಕೆಲೆಂಜಲೋ ಮತ್ತು ರಾಫೇಲ್ ಆಗ ಇನ್ನೂ ತರುಣರಾಗಿದ್ದರು.

ಲಿಯೊನಾರ್ದೊವಿಗೆ ಜಗತ್ತಿನ ಎಲ್ಲ ಚಟುವಟಿಕೆಗಳ ಹಿಂದಿರುವ ನಿಯಮವನ್ನು ತಿಳಿದುಕೊಳ್ಳಬೇಕೆಂಬ ಆಸೆ. ಚಿತ್ರಕಲೆಗಾಗಿ ಮನುಷ್ಯರ ದೇಹರಚನೆಯನ್ನು ಅಭ್ಯಾಸಮಾಡಿದ. ಇಟಲಿಯ ಪ್ರಮುಖ ನಗರಗಳಾದ ಮಿಲಾನ್, ಫ್ಲಾರೆನ್ಸ್, ರೋಮ್‌ಗಳಲ್ಲಿ ಸಂಚರಿಸಿದ. ಚಿತ್ರಕಲೆಯ ತಂತ್ರದಲ್ಲಿ ಕೆಲವು ಪ್ರಮುಖ ಬದಲಾವಣೆಗಳನ್ನು ಆತ ಮಾಡಿದ. ಚಿತ್ರದಲ್ಲಿ ನೆರಳು ಬೆಳಕು, ಬಣ್ಣದಷ್ಟೆ ಪ್ರಮುಖವಾದದ್ದು ಎಂದು ಆತ ಸ್ಪಷ್ಟಪಡಿಸಿದ.

ಲಿಯೊನಾರ್ದೊನದು ಬಹುಮುಖ ಪ್ರತಿಭೆಯ ವ್ಯಕ್ತಿತ್ವ. ಆತ ಚಿತ್ರಕಾರ, ವಿಜ್ಞಾನಿ, ಶಿಲ್ಪಿ, ವಾಸ್ತುಶಿಲ್ಪಿ, ಗಣಿತವಿಜ್ಞಾನಿ, ಮಿಲಿಟರಿ ಎಂಜಿನಿಯರ್ ಎಲ್ಲವೂ ಆಗಿದ್ದ. ಸ್ಫೋಟಕಗಳ ಸಂಯೋಜನೆ, ಹಡಗುಗಳಲ್ಲಿ ಉಗಿಯನ್ನು ಚಾಲಕಶಕ್ತಿಯಾಗಿ ಉಪಯೋಗಿಸುವ ಸಾಧ್ಯತೆ, ವಿಮಾನ ಹಾರಾಟದಲ್ಲಿ ಪ್ರೊಪೆಲರುಗಳ ಪಾತ್ರ, ಅಯಸ್ಕಾಂತದ ಆಕರ್ಷಣೆ ಮುಂತಾದ ಅನೇಕ ವಿಚಾರಗಳನ್ನು ಆತ ಗಾಢವಾಗಿ ಆಲೋಚಿಸಿ ಟಿಪ್ಪಣಿಗಳನ್ನು ಬರೆದಿಟ್ಟುಕೊಂಡಿದ್ದ. ಲಿಯೊನಾರ್ದೊ ಬರೆಯುತ್ತಿದ್ದುದು ಎಡಗೈಯಲ್ಲಿ. ಪುಸ್ತಕದಲ್ಲಿ ಬಲದಿಂದ ಎಡಕ್ಕೆ ಬರೆಯುತ್ತಿದ್ದ. ಆ ಟಿಪ್ಪಣಿಗಳೇ ಸುಮಾರು 9,000 ಪುಟಗಳಿದ್ದುವು.

ಲಿಯೊನಾರ್ದೊ ದ ವಿಂಚಿಯ ಚಿತ್ರಗಳಲ್ಲಿ 'ಕೊನೆಯ ಭೋಜನ' ಮತ್ತು 'ಮೊನ ಲೀಸಾ' ಜಗತ್ಪ್ರಸಿದ್ಧವಾದುವು.

ಚಿತ್ರ ರಚಿಸುವಾಗ ಲಿಯೊನಾರ್ದೊಗೆ ನಿದ್ರೆ ಆಹಾರಗಳ ಪರಿವೆ ಇರುತ್ತಿರಲಿಲ್ಲ. ತನ್ನ ಚಿತ್ರಗಳ ಮುಂದೆ ಕುಳಿತು ಕುಂಚವನ್ನಾಡಿಸುತ್ತ, ಸ್ವಲ್ಪ ದೋಷ ಕಂಡರೆ ಸಾಕು ಚಿತ್ರವನ್ನು ಸಂಪೂರ್ಣವಾಗಿ ಅಳಿಸಿ ಬಿಡುತ್ತಿದ್ದ. ಫ್ಲಾರೆನ್ಸಿನ ಕಲಾಭಿಮಾನಿ ಜನತೆ ಅವನ ಸುತ್ತ ಸದಾ ನೆರೆದಿರುತ್ತಿದ್ದರು. ಅವನ ಚಿತ್ರಗಳು ಪ್ರದರ್ಶಿತವಾದಾಗ ನೋಡಲೆಂದು ಜನ ಕಿಕ್ಕಿರಿಯುತ್ತಿದ್ದರು. ತಮ್ಮ ಆಸ್ಥಾನಗಳಿಗೆ ಒಮ್ಮೆ ಲಿಯೊನಾರ್ದೊ ಭೇಟಿಕೊಟ್ಟರೆ ಅದೊಂದು ದೊಡ್ಡ ಗೌರವ ಎಂದು ರಾಜರು ಭಾವಿಸಿದ್ದರು.

ಲಿಯೊನಾರ್ದೊ ಸ್ವಚಿತ್ರ ರಚಿಸಿದ್ದಾನೆ. ಆ ಚಿತ್ರವನ್ನು ಬರೆದಾಗ ಆತನಿಗೆ ಐವತ್ತೆಂಟು ವರ್ಷ ಪ್ರಾಯ. ಆ ವಯಸ್ಸಿನಲ್ಲೇ ಅವನು ವೃದ್ಧಕಾಯನಾಗಿದ್ದ. ಫ್ರಾನ್ಸಿನ ದೊರೆಯ ಆಹ್ವಾನದ ಮೇರೆಗೆ ಅಂಬೋಯ್ಸ್ ಎಂಬಲ್ಲಿಗೆ ಹೋಗಿ ತನ್ನ ಕೊನೆಯ ದಿನಗಳನ್ನು ಅಲ್ಲಿ ಕಳೆದ. ಪಾರ್ಶ್ವವಾಯು ಬಡಿದು ಆತನ ಬಲದ ಕೈ ಶಕ್ತಿಹೀನವಾಯಿತು.

1529 ಮೇ 2ರಂದು ಜಗತ್ತಿನ ಈ ಮಹಾಪ್ರತಿಭಾವಂತ ವ್ಯಕ್ತಿ ತೀರಿಕೊಂಡ. ಮನುಷ್ಯನ ಸಾಧನೆ ಎಷ್ಟು ಎತ್ತರಕ್ಕೆ ಹೋಗಬಲ್ಲುದು ಎಂಬುದನ್ನು ಜಗತ್ತಿಗೆ ತೋರಿಸಿಕೊಟ್ಟ ಮಹಾನುಭಾವ ಈತ.

ನೋಡಿ : ಲಿಯನಾರ್ದೊ ದ ವಿಂಚಿ–ಸಂಪುಟ ೧, ೪

## ಲು ಶೂನ್

ವೈದ್ಯಕೀಯ ಕಲಿಯಲೆಂದು 1902ರಲ್ಲಿ ಸರಕಾರದ ವಿದ್ಯಾರ್ಥಿ ವೇತನ ತೆಗೆದುಕೊಂಡು ಚೀನದ ಹುಡುಗನೊಬ್ಬ ಜಪಾನಿಗೆ ಬಂದ. ಅಲ್ಲಿ ಒಮ್ಮೆ



ಸ್ವೈಜ ಚಿತ್ರಣ : ಲು ಶೂನ್

ರಷ್ಯ–ಜಪಾನುಗಳ ನಡುವಿನ ಯುದ್ಧದ ಸಾಕ್ಷ್ಯಚಿತ್ರವೊಂದನ್ನು ನೋಡಿದ. ಚಿತ್ರಿತವಾಗಿದ್ದ ನಿರಪರಾಧಿ ಮುಗ್ಧ ಜನರ ಸಾವು ಅವನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಉಂಟುಮಾಡಿತು. ಇಂಥ ದುಷ್ಕೃತ್ಯದ ವಿರುದ್ಧ ಎದ್ದುನಿಲ್ಲುವ ಸ್ಥೈರ್ಯವನ್ನು ಜನರಲ್ಲಿ ಮೂಡಿಸಬೇಕು ಎನಿಸಿತು. ಇದಕ್ಕೆ ಸಾಹಿತ್ಯವೇ ಉತ್ತಮ ಮಾಧ್ಯಮ ಎಂದುಕೊಂಡ. ವೈದ್ಯಕೀಯ ಕಲಿಯುವ ಆಸೆ ಮುರುಟಿಹೋಗಿ ಸಾಹಿತ್ಯ ಸೃಷ್ಟಿಯಲ್ಲಿ ಅಪಾರ ಆಸಕ್ತಿ ಹುಡುಗನಲ್ಲಿ ಮೂಡಿತು.

—ಆತನೇ ಲು ಶೂನ್. ಈ ಶತಮಾನದ ಮೊದಲ ಭಾಗದಲ್ಲಿ ತಾನು ಮಾಡಿದ ಸಾಹಿತ್ಯಕೃಷಿಯಿಂದ ಖ್ಯಾತಿ ಗಳಿಸಿದ. 'ಚೀನದ ಗಾರ್ಕಿ' ಎನಿಸಿಕೊಂಡ.

ಚೇಕಿಯಾಂಗ್ ಪ್ರಾಂತದ ಶಾವೊ ಸಿಂಗ್‌ನಲ್ಲಿ 1881ರ ಸೆಪ್ಟೆಂಬರ್ 25ರಂದು ಲು ಶೂನ್ ಜನಿಸಿದ. ಇವನ ನಿಜವಾದ ಹೆಸರು ಚೌ ಶು ಜೆನ್. ಇವನಿಗೆ 13 ವರ್ಷವಾಗಿದ್ದಾಗ, ಪೀಕಿಂಗ್‌ನಲ್ಲಿ ಅಧಿಕಾರಿಯಾಗಿದ್ದ ಇವನ ಅಜ್ಜ ಯಾವುದೋ ಕಾರಣಕ್ಕಾಗಿ ಬಂಧನಕ್ಕೊಳಗಾದ. ಇದೇ ಸಮಯಕ್ಕೆ, ವಿದ್ಯಾವಂತನಾದರೂ ನಿರುದ್ಯೋಗಿಯಾಗಿದ್ದ ಇವನ ತಂದೆಯು ಆರೋಗ್ಯ ಕೆಟ್ಟು, ಮೂರು ವರ್ಷಗಳ ಅನಂತರ ಆತ ನಿಧನನಾದ. ಇವೆಲ್ಲ ಬಾಲಕ ಲು ಶೂನನ ಮನಸ್ಸಿನ ಮೇಲೆ ಭಾರಿ ಪರಿಣಾಮ ಬೀರಿತು. ಲು ಶೂನನ ತಾಯಿ ವಿದ್ಯಾವಂತೆಯಾಗಿದ್ದಳು; ಮಗನಿಗೆ ಪ್ರೋತ್ಸಾಹ ನೀಡುತ್ತಿದ್ದಳು. ಮುಂದೆ 'ಲು' ಎಂಬ ಇವಳ ಕನ್ಯಾನಾಮವನ್ನೇ ಆಧರಿಸಿ 'ಲು ಶೂನ್' ಎಂಬ ಕಾವ್ಯನಾಮವನ್ನು ಚೌ ಶು ಜೆನ್ ಇಟ್ಟುಕೊಂಡ.

ಬಾಲಕನಾಗಿದ್ದಾಗಿನಿಂದಲೂ ಭಾರಿ ಬುದ್ಧಿವಂತನೆಂದು ಹೆಸರು ಪಡೆದವನು ಈತ. ಆರನೆಯ ವರ್ಷಕ್ಕೆ ಶಾಲೆಗೆ ಸೇರಿದ. ಕೆಲವೇ ಕಾಲದಲ್ಲೇ ಪ್ರಾಚೀನ ಗ್ರಂಥಗಳನ್ನು ಓದಲು ಪ್ರಾರಂಭಿಸಿದ. ಅಗಾಧ ಜ್ಞಾಪಕಶಕ್ತಿ ಇವನದು. ಪುರಾತನ ಗ್ರಂಥಗಳ ಬಗೆಗೆ ತನ್ನದೇ ಆದ ವ್ಯಾಖ್ಯಾನ ನೀಡುವಷ್ಟು ಧೈರ್ಯ ಇವನಿಗೆ ಚಿಕ್ಕಂದಿನಿಂದ ಬೆಳೆದುಬಂದಿತ್ತು.

ಬೆಳೆದು ಯುವಕನಾಗುವ ಹೊತ್ತಿಗೆ ದೇಶದಲ್ಲಿ ಸಾಮಾಜಿಕ ಅಸ್ಥಿರತೆ ತೀವ್ರವಾಗಿತ್ತು. ಚಿಂಗ್ ಪ್ರಭು ಸಂತತಿಯ ಅವನತಿಯ ಕಾಲ ಹತ್ತಿರವಾಗಿತ್ತು. ಆ ಸಂತತಿಯ ಆಳ್ವಿಕೆಯಲ್ಲಿದ್ದ ಲೋಪದೋಷಗಳು, ಲಂಚಗುಳಿತನ, ದಬ್ಬಾಳಿಕೆಗೆ ಜನ ರೋಸಿಹೋಗಿದ್ದರು. ಲು ಶೂನನ ವೈಯಕ್ತಿಕ ಜೀವನವೂ ದುಃಖಮಯವಾಗಿತ್ತು. ಇವೆರಡು ಪ್ರಭಾವಗಳಿಂದಲೂ ಶೂನನ ಜೀವನ ದೃಷ್ಟಿ ರೂಪುಗೊಂಡಿತು. ಸಣ್ಣಪುಟ್ಟ ಕೆಲಸಮಾಡಿಕೊಂಡು ಬದುಕು ನಿರ್ವಹಿಸುತ್ತಿದ್ದ ಲು ಶೂನ್ ಸಮಾಜದ ವಿವಿಧ ಮುಖಗಳನ್ನು ಹತ್ತಿರದಿಂದ ಕಂಡಿದ್ದ. ಇಡೀ ಸಮಾಜವೇ ಬದಲಾಗಿ ಜನರಿಗೆ ಸುಖ ಸಂತೋಷ ಸಿಗಬೇಕು ಎಂದು ಲು ಶೂನನಿಗೆ ಅನ್ನಿಸಿತು.

ಜಪಾನಿಗೆ ಓದಲು ಹೋದ ಲು ಶೂನನಿಗೆ ಅಲ್ಲಿ ವಿಶ್ವಸಾಹಿತ್ಯದ ಸ್ಥೂಲ ಪರಿಚಯವೂ ಆಯಿತು. ಹಕ್ಸ್ಲಿಯ 'ಇವಲ್ಯೂಷನ್ ಅಂಡ್ ಎಥಿಕ್ಸ್' ಪುಸ್ತಕ ಇವನ ಚಿಂತನೆಯ ಮೇಲೆ ಭಾರಿ ಪ್ರಭಾವ ಬೀರಿತು. ಜಪಾನಿ ಭಾಷೆಗೆ ತರ್ಜುಮೆಯಾಗಿದ್ದ ಬೈರನ್, ಷೆಲ್ಲಿ, ಹೈನ್, ಪುಷ್ಕಿನ್ ಮೊದಲಾದವರ ಕೃತಿಗಳನ್ನು ಲು ಶೂನ್ ಓದಿದ.

1908ರಲ್ಲಿ ಚಿಂಗ್ ಸಂತತಿಯ ವಿರುದ್ಧ ಕ್ರಾಂತಿ ಏಳಬೇಕೆಂದಿದ್ದವರೊಡನೆ ಸೇರಿ, ಮರುವರ್ಷ ಚೀನಕ್ಕೆ ಹಿಂದಿರುಗಿದ.

1911ರಲ್ಲಿ ನಡೆದ ಕ್ರಾಂತಿ ಚಿಂಗ್ ಸಂತತಿಯನ್ನು ಉರುಳಿಸಿತು.

1923ರಲ್ಲಿ ಲು ಶೂನನ ಮೊದಲ ಕಥಾ ಸಂಕಲನ ಪ್ರಕಟವಾಗಿ ಮನ್ನಣೆಗೆ ಪಾತ್ರವಾಯಿತು.

ಚಿಕ್ಕಂದಿನಲ್ಲಿ ತಾನು ತನ್ನ ಸುತ್ತಮುತ್ತ ಕಂಡಿದ್ದ ನೈಜ ವ್ಯಕ್ತಿಗಳನ್ನೇ ಲು ಶೂನ್ ತನ್ನ ಕಥೆಗಳಲ್ಲೂ ತಂದ. ಆ ವ್ಯಕ್ತಿಗಳನ್ನು ಕಾಡುತ್ತಿದ್ದ ಸಮಸ್ಯೆಗಳೇ ಇವನ ಕಥೆಗಳಲ್ಲೂ ಚಿತ್ರಿತವಾದುವು. 'ಹುಚ್ಚನ ದಿನಚರಿ', 'ನನ್ನ ಹಳೆಯ ಮನೆ', 'ಆಹ್ ಕ್ಯೂ–ಸತ್ಯಕಥೆ'—ಇವನ ಪ್ರಮುಖ ಕಥೆಗಳು. ಗಾರ್ಕಿ, ಗೊಗೋಲ್, ಪೊಲೊಪೋವ್, ಫೆದೆಯೇವ್ ಮೊದಲಾದವರ ಕೃತಿಗಳನ್ನು ಈ ಕಾಲದಲ್ಲಿ ಲು ಶೂನ್ ಭಾಷಾಂತರಿಸಿದ.

ಲು ಶೂನ್ 600 ರಿಂದ 700ರಷ್ಟು ಪ್ರಬಂಧಗಳನ್ನು ಬರೆದ. ಪ್ರಬಂಧಗಳ ವಿಷಯವಂತೂ ವೈವಿಧ್ಯಮಯ. ಇವು ಮಕ್ಕಳ ಆಟಗಳಿಂದ ಹಿಡಿದು ಕ್ರಾಂತಿಯವರೆಗೆ ಅನೇಕ ವಿಷಯಗಳನ್ನು ಕುರಿತಾದ ಗಂಭೀರ ಲೇಖನಗಳು. ಸಾಮಾನ್ಯ ಜನತೆಯ ಅಭ್ಯುದಯಕ್ಕಾಗಿ ಸಾಹಿತ್ಯವನ್ನು ಸಾಧನವನ್ನಾಗಿ ಲು ಶೂನ್ ಬಳಸಿಕೊಂಡರೂ ಅದಷ್ಟೇ ಸಾಹಿತ್ಯದ ಕೆಲಸ ಎಂದು ಅವನು ನಂಬಿರಲಿಲ್ಲ. ದೀನದಲಿತರಿಗೋಸ್ಕರ ಬರೆಯುವ ತವಕದಲ್ಲಿ ಸಾಹಿತ್ಯ ಮೌಲ್ಯಗಳು ಮಣ್ಣುಪಾಲಾಗಬಾರದು ಎಂದು ಅವನು ಎಚ್ಚರಿಸುತ್ತಿದ್ದ.

ಈ ಶತಮಾನದ ಚೀನೀ ಸಾಹಿತ್ಯದಲ್ಲಿ ಅತ್ಯಂತ ಪ್ರಭಾವಶಾಲಿ ಹಾಗೂ ಪ್ರತಿಭಾವಂತ ಸಾಹಿತಿ ಎಂದು ಹೆಸರುಪಡೆದಿದ್ದ ಲು ಶೂನ್ 1936ರ ಅಕ್ಟೋಬರ್ 19ರಂದು ಕಣ್ಮುಚ್ಚಿದ.

## ಲೂಯಿ ಆರ್ಮ್‌ಸ್ಟ್ರಾಂಗ್

ಪುಟ್ಟ ನೀಗ್ರೊ ಹುಡುಗನೊಬ್ಬ ನ್ಯೂಆರ್ಲಿಯನ್ಸ್‌ನ ಬೀದಿವಾದ್ಯಗಾರರ ಗುಂಪಿನಲ್ಲಿ ತುತೂರಿಯೂದುತ್ತ ಹಿಂದೆ ಬರುತ್ತಿದ್ದ. ಆ ಹುಡುಗನೇ ಮುಂದೆ ಜಾಸ್ ಸಂಗೀತಗಾರರಲ್ಲಿ ಅಗ್ರಗಣ್ಯನಾದ ಲೂಯಿ ಡೇನಿಯಲ್ ಆರ್ಮ್‌ಸ್ಟ್ರಾಂಗ್.


ಒಂಟಿವಾದನ : ಆರ್ಮ್‌ಸ್ಟ್ರಾಂಗ್

ಲೂಯಿ ಆರ್ಮ್‌ಸ್ಟ್ರಾಂಗ್ ಹುಟ್ಟಿದ್ದು 1900ರ ಜೂಲೈ 4ರಂದು, ಜಾಸ್ ಸಂಗೀತ ಜನ್ಮತಳೆದ ನ್ಯೂ ಆರ್ಲಿಯನ್ಸ್‌ನಲ್ಲಿಯೇ. ಅಲ್ಲಿಯ ವಾದ್ಯಗಾರರ ಗುಂಪಿನಲ್ಲಿ ತುತೂರಿ ಊದುತ್ತ ಆತ ಓಡಾಡುತ್ತಿದ್ದನಂತೆ. ಇವನಿಗೆ ಜಾಸ್ ಸಂಗೀತದ ಮೂಲ ಪುರುಷರನೇಕರ ಪರಿಚಯವಾಯಿತು. ಷಿಕಾಗೋದಲ್ಲಿ ವಾದ್ಯಗಾರ ಗುಂಪಿನ ನಾಯಕನಾಗಿದ್ದ ಜೋ 'ಕಿಂಗ್' ಆಲಿವರ್ 1922ರಲ್ಲಿ ಒಮ್ಮೆ, ತನ್ನ ಗುಂಪಿನಲ್ಲಿ ತುತೂರಿ ಊದುವಂತೆ ಆರ್ಮ್‌ಸ್ಟ್ರಾಂಗನನ್ನು ಕೇಳಿಕೊಂಡ. ಇಲ್ಲಿ ಆರ್ಮ್‌ಸ್ಟ್ರಾಂಗನ ಯಶಸ್ಸು ಅವನ ಮುಂದಿನ ಬದುಕನ್ನು ರೂಪಿಸಿತು. ಅಷ್ಟೇ ಅಲ್ಲ, ಜಾಸ್ ಸಂಗೀತದ ಸ್ವರೂಪವನ್ನೂ ಅದು ಬದಲಾಯಿಸಿತು.

ಅದುವರೆಗೆ ಜಾಸ್ ಸಂಗೀತದಲ್ಲಿ ಮುಖ್ಯವಾಗಿದ್ದದ್ದು ಮೇಳದ ಸಮಷ್ಟಿ ಪರಿಣಾಮ ; ವಾದ್ಯಗಾರರ ವೈಯಕ್ತಿಕ ಪ್ರತಿಭೆ ಗೌಣವಾಗಿತ್ತು. ಆದರೆ ಆರ್ಮ್‌ಸ್ಟ್ರಾಂಗನಂಥ ಅದ್ಭುತ ಪ್ರತಿಭೆಯ ಕಲಾವಿದನ ಮುಂದೆ ಈ ನಿಯಮ ಗಾಳಿಪಾಲಾಯಿತು. ಆರ್ಮ್‌ಸ್ಟ್ರಾಂಗ್ ಪ್ರಮುಖ ತುತೂರಿ ವಾದ್ಯಗಾರನಾಗಿ ಪ್ರಖ್ಯಾತನಾದ. 1925ರಿಂದ 1928ರ ವರೆಗೆ ಧ್ವನಿ

ಗ್ರಹಣ ಮಾಡಿಕೊಳ್ಳಲಾದ ಇವನ ಸಂಗೀತ ಜಾಸ್ ಸಂಗೀತಗಾರರಲ್ಲಿ ಇವನನ್ನು ಅಗ್ರಗಣ್ಯನನ್ನಾಗಿ ಮಾಡಿತು.

ಲೂಯಿ ಆರ್ಮ್‌ಸ್ಟ್ರಾಂಗ್ ಹಾಡುಗಾರನೂ ಆಗಿದ್ದ. ಅವನ ಗಂಡುಧ್ವನಿ. ರಾಗ ಸ್ವರ ವಿನ್ಯಾಸಗಳಲ್ಲಿದ್ದ ಅದ್ಭುತ ಕೌಶಲ. ಸಂಗೀತದ ಲವಲವಿಕೆ. ಅವನನ್ನು ಅತ್ಯಂತ ಜನಪ್ರಿಯ ಸಂಗೀತಗಾರನನ್ನಾಗಿ ಮಾಡಿದುವು.

ಸಾಮಾನ್ಯ ಹಾಡನ್ನು ಹೊಸ ರೀತಿಯಲ್ಲಿ ಹಾಡುವುದರಲ್ಲಿ ಆರ್ಮ್‌ಸ್ಟ್ರಾಂಗ್‌ನದು ಎತ್ತಿದ ಕೈ. ಹಾಡುಗಾರಿಕೆಯಲ್ಲಿ ಪದಗಳನ್ನು ಬಳಸದೆ ವಾದ್ಯದ ಸ್ವರಯೋಜನೆಯನ್ನು ಇವನು ತೋರಿಸುತ್ತಿದ್ದ.

ಹಾಸ್ಯಪ್ರಿಯ ಹಾಗೂ ಜನಪ್ರಿಯ ಹಾಡುಗಾರ ಆರ್ಮ್‌ಸ್ಟ್ರಾಂಗ್‌ನನ್ನು ಚಲಚ್ಚಿತ್ರ ರಂಗ ಸಹಜವಾಗಿಯೇ ಸೆಳೆಯಿತು.

'ನ್ಯೂಆರ್ಲಿಯನ್ಸ್‌ನಲ್ಲಿ ನನ್ನ ಜೀವನ'—ಈತನ ಆತ್ಮಕಥೆ.

1971ರಲ್ಲಿ ಆರ್ಮ್‌ಸ್ಟ್ರಾಂಗ್ ನಿಧನನಾದ.

## ಲೂಯಿಸ್ ಕ್ಯಾರಲ್

ನಡುಪಂಗಿ ಧರಿಸಿ, ಕೈಯಲ್ಲೊಂದು ಛತ್ರಿ ಹಿಡಿದು ಬಡಬಡನೆ ಬರುತ್ತಿದ್ದ ಮೊಲವೊಂದು ತಟಕ್ಕನೆ ನಿಂತು. ಜೇಬಿನಿಂದ ಚಿನ್ನದ ಗಡಿಯಾರ



ಗಣಿತಜ್ಞ ಕತೆಗಾರ ಕ್ಯಾರಲ್

ತೆಗೆದು ಸಮಯ ನೋಡಿ 'ಹೋ, ಇವತ್ತೂ ಲೇಟು' ಎಂದುಕೊಂಡು. ದಡಬಡನೆ ಓಡಿ ನೆಲದಲ್ಲಿದ್ದ ಕುಳಿಯೊಂದರಲ್ಲಿ ಜಿಗಿದು ಬಿಡುತ್ತದೆ.

ಎಂಥ ವಿಚಿತ್ರ, ಇಂಥ ಮೊಲವನ್ನು ನೋಡಿಯೇ ಇರಲಿಲ್ಲ—ಎಂದುಕೊಂಡ ಆಲಿಸ್, ಮೊಲ ಎಲ್ಲಿ ಹೋಯಿತೆಂದು ನೋಡಲು ಆ ಕುಳಿಯಲ್ಲಿ ಇಣುಕುತ್ತಾಳೆ. ಅಲ್ಲಿ ಅವಳು ನೋಡುವುದೇ 'ವಂಡರ್ ಲ್ಯಾಂಡ್' ಆ ವಿಚಿತ್ರ ಪ್ರಪಂಚದಲ್ಲಿ ಆಲಿಸ್ ಕಂಡದ್ದನ್ನು, ಅನುಭವಿಸಿದ್ದನ್ನು, 'ಆಲಿಸ್ ಇನ್ ವಂಡರ್‌ಲ್ಯಾಂಡ್' ಕಥೆ ಹೇಳುತ್ತದೆ.

'ಆಲಿಸ್ ಇನ್ ವಂಡರ್‌ಲ್ಯಾಂಡ್' ಪುಸ್ತಕ ಪ್ರಕಟವಾದಾಗ ಅದನ್ನೋದಿದ ಇಂಗ್ಲೆಂಡಿನ ವಿಕ್ಟೋರಿಯಾ ಮಹಾರಾಣಿ ಅದರ ಕರ್ತೃವನ್ನು ನೋಡ ಬಯಸಿದಳು. ನಾಚಿಕೆ ಸ್ವಭಾವದ ಲೂಯಿಸ್ ಕ್ಯಾರಲ್‌ನೊಂದಿಗೆ ಮಾತನಾಡಿ, ಅವನ ಮುಂದಿನ ಪುಸ್ತಕ ಪ್ರಕಟವಾದಾಗ ಅದನ್ನು ತನಗೆ ಕಳುಹಿಸಬೇಕು ಎಂದು ಹೇಳಿದಳು. ಕೊಂಚ ಕಾಲದ ಅನಂತರ ಅರ್ಥ ಮಾಡಿಕೊಳ್ಳಲು ಕಷ್ಟವಾದ ಚಾರ್ಲ್ಸ್ ಲುಟ್‌ವಿಜ್ ಡಾಜ್ಸನ್ ಎಂಬವನು ಬರೆದ ಗಣಿತದ ಪುಸ್ತಕವೊಂದು ಅವಳಿಗೆ ಬಂದಿತು. ಲೂಯಿಸ್ ಕ್ಯಾರಲ್ ಎಂಬ ಹೆಸರಿಟ್ಟುಕೊಂಡು 'ಆಲಿಸ್ ಇನ್ ವಂಡರ್‌ಲ್ಯಾಂಡ್' ಮತ್ತಿತರ ಪುಸ್ತಕಗಳನ್ನು ಬರೆದ ವ್ಯಕ್ತಿಯೇ ಗಣಿತಜ್ಞ ಚಾರ್ಲ್ಸ್ ಲುಟ್‌ವಿಜ್ ಡಾಜ್ಸನ್.

ಅವನ ಕೃತಿಗಳಷ್ಟೇ ಕುತೂಹಲಕಾರಿಯಾದದ್ದು ಲೂಯಿಸ್ ಕ್ಯಾರಲ್‌ನ ಜೀವನ. ಇಂಗ್ಲೆಂಡಿನ ಚೆಷೈರ್ ಬಳಿಯ ಡೇರ್ಸ್‌ಬರಿಯ ಕ್ರೈಸ್ತ



"ಹೋ ಇವತ್ತೂ ಲೇಟು..."

ಧರ್ಮಾಧಿಕಾರಿಯೊಬ್ಬನ ಮಗ ಲೂಯಿಸ್ ಕ್ಯಾರಲ್. ಇವನ ತಂದೆಗೆ ಹನ್ನೊಂದು ಮಂದಿ ಮಕ್ಕಳು. ಅದರಲ್ಲಿ ಕ್ಯಾರಲ್ ಮೊದಲನೆಯವನಾಗಿ

[illegible] ಟೀಕೆಗಳಲ್ಲಿ ಬುದ್ಧಿ [illegible]. ಕನ್ನಗನ್ನಡಿಯಾಗಿ ಒಡನಾಟ ಬೆಳೆಸಿದ. [illegible] ಅವನಿಗೆ ನಾಟಕೀಯವಾಗಿ ಕಾಣಿಸುತ್ತಿತ್ತು. ಮುಂದೆ ಇವೇ ಅವನ ಕೃತಿಗಳ ಪಾತ್ರಗಳಾದುವು.

ಆಕ್ಸ್‌ಫರ್ಡಿನಲ್ಲಿ ಗಣಿತ ಅಧ್ಯಯನ ನಡೆಸಿ ಆನರ್ಸ್‌ನ ಮೊದಲ ದರ್ಜೆಯಲ್ಲಿ ಉತ್ತೀರ್ಣನಾದ. ಕ್ಯಾರಲ್ 1855ರಲ್ಲಿ ಆಕ್ಸ್‌ಫರ್ಡಿನಲ್ಲಿ ಗಣಿತದ ಅಧ್ಯಾಪಕನಾದ. ಬ್ರಹ್ಮಚಾರಿಯಾಗಿಯೇ ಇದ್ದ ಕ್ಯಾರಲ್ ತನ್ನ ಜೀವನವಿಡೀ ಇಲ್ಲಿಯೇ ಅಧ್ಯಾಪಕನಾಗಿ ಕಳೆದ.

ಚಿಕ್ಕಂದಿನಿಂದಲೂ ಸೋದರ ಸೋದರಿಯರಿಗಾಗಿ ಸಣ್ಣಪುಟ್ಟ ಕವನಗಳನ್ನು ಕ್ಯಾರಲ್ ಬರೆದುತೋರಿಸುತ್ತಿದ್ದ. ನಾಟಕಗಳಲ್ಲಿ ಅವನಿಗೆ ಅಪಾರ ಆಸಕ್ತಿ. ಅವನ ತಾಯಿಯ ನಿಧನದಿಂದ ಕ್ಯಾರಲ್‌ಗೆ ಭಾರಿ ಆಘಾತ ಉಂಟಾಗಿ, ಮುಂದೆ ದೊಡ್ಡವನಾದಾಗಲೂ ತನ್ನ ಚಿಕ್ಕಂದಿನ ಸವಿನೆನಪುಗಳನ್ನೇ ಹೆಚ್ಚು ಯೋಚಿಸುತ್ತಿದ್ದ. ಕೊಂಚ ತೊದಲು ಇದ್ದುದರಿಂದ ಸಮಾಜದೊಂದಿಗೆ ಹೆಚ್ಚು ಬೆರೆಯದೆ ಚಿಕ್ಕ ಮಕ್ಕಳ ಸಾನ್ನಿಧ್ಯದಲ್ಲೇ ಇರುತ್ತಿದ್ದ. ಇದೇ ಅವನಿಗೆ ಪ್ರಿಯವಾಗಿತ್ತು. ಆಕ್ಸ್‌ಫರ್ಡಿನ ಪ್ರಾಧ್ಯಾಪಕ ಸಹೋದ್ಯೋಗಿ ಡಾ. ಲಿಡೆಲ್‌ನ ಮೂವರು ಪುಟಾಣಿ ಪುತ್ರಿಯರಿಗೆ ಈತ ಅಚ್ಚು ಮೆಚ್ಚು.

1862ರ ಜುಲೈ 4ರಂದು ಈ ಮಕ್ಕಳೊಂದಿಗೆ (ಅವರ ಹೆಸರು ಲೊರಿನ, ಅಲಿಸ್ ಮತ್ತು ಎಡಿತ್) ವಿಹಾರ ಹೊರಟಿದ್ದಾಗ ಕ್ಯಾರಲ್ ಕುತೂಹಲಕಾರಿಯಾದ ಒಂದು ಕಥೆಯನ್ನು ಅವರಿಗೆ ಹೇಳಿದ. ಮನೆಗೆ ಹಿಂತಿರುಗಿದ ಅನಂತರ ಹತ್ತು ವರ್ಷದ ಅಲಿಸ್ ಲಿಡೆಲ್, ಆ ಕಥೆಯನ್ನು ತನಗೆ ಬರೆದುಕೊಡಬೇಕೆಂದು ಕೇಳಿದಳು. ಇದೇ ಕಥೆಯನ್ನು ತನ್ನ ಸುಂದರ ಅಕ್ಷರಗಳಲ್ಲಿ ಬರೆದು, ತಾನೇ ಚಿತ್ರಗಳನ್ನೂ ರಚಿಸಿ, ಆ ಕಥೆಗೆ 'ಆಲಿಸ್ ಅಡ್ವೆಂಚರ್ಸ್ ಅಂಡರ್‌ಗ್ರೌಂಡ್' ಎಂದು ಹೆಸರಿಟ್ಟು ಆಲಿಸ್ ಲಿಡೆಲ್‌ಗೆ ಕ್ರಿಸ್‌ಮಸ್ ಉಡುಗೊರೆಯಾಗಿ ಇತ್ತ. ಇದೇ ಪುಸ್ತಕ ಮುಂದೆ ಕೆಲವು ಮಾರ್ಪಾಡುಗಳೊಂದಿಗೆ ಮತ್ತು ಜಾನ್ ಟೆನಿಯಲ್‌ನ ಚಿತ್ರಗಳೊಂದಿಗೆ 'ಆಲಿಸ್ ಅಡ್ವೆಂಚರ್ಸ್ ಇನ್ ವಂಡರ್‌ಲ್ಯಾಂಡ್' ಎಂದು ಪ್ರಕಟವಾಯಿತು. ಚಿಕ್ಕವರು-ದೊಡ್ಡವರೆನ್ನದೆ ಎಲ್ಲರಿಂದಲೂ ಭಾರಿ ಮೆಚ್ಚುಗೆ ಪಡೆದ ಈ ಕೃತಿ ವಿಶ್ವದ ಹಲವಾರು ಭಾಷೆಗಳಿಗೆ ಭಾಷಾಂತರವೂ ಆಯಿತು.

ಕ್ಯಾರಲ್ ತನ್ನ ಪ್ರಮುಖ ಪುಸ್ತಕ ಪ್ರಕಟವಾಗುವುದಕ್ಕೆ ಮುಂಚೆಯೂ ಹಲವಾರು ಪತ್ರಿಕೆಗಳಲ್ಲಿ ಹಾಸ್ಯಮಯ ಪದ್ಯಗಳನ್ನು ಬರೆಯುತ್ತಿದ್ದ. ಚಾರ್ಲ್ಸ್ ಲುಟ್‌ವಿಜ್ ಡಾಜ್ಸನ್ ಎಂಬ ತನ್ನ ನಿಜವಾದ ಹೆಸರಿನಲ್ಲಿ ಗಣಿತಕ್ಕೆ ಸಂಬಂಧಿಸಿದ ಲೇಖನ ಪುಸ್ತಕಗಳನ್ನು ಅವನು ರಚಿಸಿದ್ದಾನೆ. ಇವನ ಇತರ ಕೃತಿಗಳು : ಚಿಕ್ಕಮಕ್ಕಳಿಗಾಗಿಯೇ ಬರೆದ ಬೇರೆ ಕವನಗಳು ಹಾಗೂ ಒಂದು ಗಂಭೀರ ಕಥೆ. ಆದರೆ ಇವು ಅಷ್ಟೊಂದು ಯಶಸ್ಸು ಗಳಿಸಲಿಲ್ಲ.

ಅವನು ಉತ್ತಮ ಫೋಟೊಗ್ರಾಫರ್ ಸಹ. ಛಾಯಾಚಿತ್ರ ಕಲೆ ಹೆಚ್ಚು ಮುಂದುವರಿಯದ ಆ ಕಾಲದಲ್ಲಿ ಅವನು ತೆಗೆದ ಸಣ್ಣ ಮಕ್ಕಳ ಕೆಲವು ಚಿತ್ರಗಳು ಈಗಲೂ ಉತ್ತಮ ದರ್ಜೆಯವು ಎಂದು ಹೆಸರು ಪಡೆದಿವೆ.

ತನ್ನ ಸೋದರಿಯರೊಡನೆ ಕ್ರಿಸ್‌ಮಸ್ ದಿನಗಳನ್ನು ಗಿಲ್ಡ್‌ಫರ್ಡ್‌ನಲ್ಲಿ ಕಳೆದ ಕ್ಯಾರಲ್ 1898ರ ಜನವರಿ 6ರಂದು ಇನ್‌ಫ್ಲುಯೆಂಜಾಕ್ಕೆ ತುತ್ತಾಗಿ 14ರಂದು ನಿಧನನಾದ.

ತನ್ನ ಹಿಂದಿನ ಲೇಖಕರಂತೆ ಕಥೆಗಳಲ್ಲಿ ನೀತಿಬೋಧನೆಗೆ ತೊಡಗದೆ, ಕುತೂಹಲಕಾರಿ ಘಟನೆಗಳನ್ನೇ ಹೆಣೆದು ಆತ ಕಥೆ ರಚಿಸುತ್ತಿದ್ದ.

ಮಕ್ಕಳ ಸಾಹಿತ್ಯ ಹಾಗೂ ಹಾಸ್ಯಸಾಹಿತ್ಯದಲ್ಲಿ ಇವನ ಹೆಸರು ಚಿರಸ್ಥಾಯಿ.

## ವಚನ ಸಾಹಿತ್ಯ

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಮಾಣಿಕದ ದೀಪ್ತಿಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು
ಕೂಡಲ ಸಂಗಮದೇವಾ"

ನಾವು ಆಡುವ ಮಾತು ಹೇಗಿರಬೇಕು ಎನ್ನುವುದನ್ನು ಭಕ್ತಿ ಭಂಡಾರಿ ಬಸವೇಶ್ವರರು ತಮ್ಮ ಒಂದು ವಚನದಲ್ಲಿ ಹೀಗೆ ಸೊಗಸಾಗಿ ವರ್ಣಿಸಿದ್ದಾರೆ. ಇಂಥ ವಚನಗಳೇ ನಮ್ಮ ವಚನಕಾರರು ಕನ್ನಡ ಸಾಹಿತ್ಯಕ್ಕೆ ನೀಡಿದ ವಿಶಿಷ್ಟ ಕಾಣಿಕೆ.

12ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಸಾಮಾಜಿಕ, ಧಾರ್ಮಿಕರಂಗಗಳಲ್ಲಿ ಮಹತ್ತರ ಕ್ರಾಂತಿಯಾಯಿತು. ಈ ಕ್ರಾಂತಿಗೆ ನಾಂದಿ ಹಾಡಿದವರು ವೀರಶೈವ ವಚನಕಾರರು.

ಶಿವಶರಣರ ಬೋಧನೆಗಳು ಗದ್ಯರೂಪದಲ್ಲಿದ್ದುದರಿಂದ ಅವುಗಳಿಗೆ ವಚನಗಳೆಂಬ ಹೆಸರು ಬಂತು.

ಅಧ್ಯಾತ್ಮ ಧರ್ಮ ನೀತಿಗಳ ನಿರೂಪಣೆಯೇ ವಚನಗಳ ಮುಖ್ಯ ಉದ್ದೇಶ. ಅವು ಪ್ರಾಸಬದ್ಧ, ಗಾದೆಯ ಮಾತುಗಳಂತೆ ಸರಳ, ಆಡು ನುಡಿಯಲ್ಲೇ ಹೇಳಿರುವುದರಿಂದ ಸಾಮಾನ್ಯಜನರೂ ಅರ್ಥಮಾಡಿಕೊಳ್ಳುವಂತಿದೆ.

ವಚನಗಳು ನಡುಗನ್ನಡದ ಶೈಲಿಯಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಮುಂತಾದ ವಿಷಯಗಳನ್ನೊಳಗೊಂಡ ಆಧ್ಯಾತ್ಮಿಕ ಭಾವಗೀತೆಗಳು ಗಾಢವಾದ ಅನುಭವದ ಸೂಕ್ಷ್ಮತೆ ಸಹಜತೆ ಅಲಂಕಾರ ರಮ್ಯತೆ, ತನ್ನ ಇಷ್ಟದೈವದ ಎದುರಿನಲ್ಲಿ ಭಕ್ತನ ಆತ್ಮನಿವೇದನೆ. ಸರಳತೆ, ಲೌಕಿಕಜೀವನದಿಂದ ಆರಿಸಿದ ಉದಾಹರಣೆಗಳು. ದೃಷ್ಟಾಂತಗಳು ಇವು ವಚನಗಳ ಪ್ರಮುಖ ಗುಣಲಕ್ಷಣಗಳು. ವಚನಗಳಲ್ಲಿ ಶ್ರೇಷ್ಠಮಟ್ಟದ ರಸ, ಭಾವ, ಅಲಂಕಾರಗಳು ಇರುವುದರಿಂದ ಅವು ಉತ್ತಮ ಸಾಹಿತ್ಯವಾಗಿವೆ.

ಕಾಯಕ, ಜಾತಿ ಬೇಧ ನಿರ್ಮೂಲನ, ಸ್ತ್ರೀ ಪುರುಷ ಸಮಾನತೆ ವಚನಗಳಲ್ಲಿರುವ ಮುಖ್ಯ ವಿಷಯಗಳು.

ಹಾಡುವುದಕ್ಕೆ ಅನುಕೂಲವಾಗುವಂತೆ ವಚನಗಳು ರಚಿಸಲ್ಪಟ್ಟಿವೆ.

ವಚನ ಸಾಹಿತ್ಯ ಪ್ರಧಾನವಾಗಿ ಭಕ್ತಿ ಸಾಹಿತ್ಯ. 12ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಚೆನ್ನಬಸವಣ್ಣ, ಅಕ್ಕಮಹಾದೇವಿ ಮತ್ತಿತರ ಶಿವಶರಣ ಶರಣೆಯರು ಬಾಳಿದ್ದರು. ಅವರ ವಚನಗಳು ಒಂದು ಲಕ್ಷಕ್ಕೂ ಮೇಲ್ಪಟ್ಟು ದೊರೆತಿವೆ. ಇವರಿಗಿಂತ ಹಿಂದಿನವನು ದೇವರ ದಾಸಿಮಯ್ಯ. ರಾಮನಾಥ ಎಂಬ ಅಂಕಿತದಲ್ಲಿ ಅವನು ವಚನಗಳನ್ನು ಬರೆದ.

ಕರ್ನಾಟಕದ ಕಳಚೂರಿ ವಂಶದ ದೊರೆ ಬಿಜ್ಜಳನ ಬಳಿ ಮಂತ್ರಿಗಳಾಗಿದ್ದ ಬಸವೇಶ್ವರರು ವಚನಕಾರರಲ್ಲೆಲ್ಲ ಅಗ್ರಗಣ್ಯರು, ಪ್ರಸಿದ್ಧರು. ತಮ್ಮ ತನುಮನಧನಗಳನ್ನು ಶಿವನಿಗಾಗಿ ಶಿವಭಕ್ತರ ಸೇವೆಗಾಗಿ ಸಮರ್ಪಿಸಿದವರು ಅವರು. ಅವರ ವಚನಗಳಲ್ಲೆಲ್ಲ ಭಕ್ತ ಹೃದಯದ ಮೊರೆ, ಆತ್ಮನಿವೇದನೆ

ಮತ್ತೆ ಮತ್ತೆ ಕೇಳಿಸುತ್ತದೆ. "ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ". "ದಯೆಯೇ ಧರ್ಮದ ಮೂಲವಯ್ಯಾ" "ದೇವನೊಬ್ಬ ನಾಮ ಹಲವು"—ಈ ವಚನಗಳು ಸಮಾಜಕ್ಕೆ ಮಾರ್ಗದರ್ಶಿಗಳಾಗಿವೆ.

ಗುಹೇಶ್ವರ ಎಂಬ ತನ್ನ ಇಷ್ಟದೈವದ ಹೆಸರಿನಲ್ಲಿ ಅಲ್ಲಮಪ್ರಭು ವಚನಗಳನ್ನು ಬರೆದಿದ್ದಾನೆ.

20ನೆಯ ಶತಮಾನದಲ್ಲಿಯೂ ಕೆಲವರು ಕನ್ನಡದಲ್ಲಿ ವಚನಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ. ಎಸ್ ವಿ. ರಂಗಣ್ಣನವರು ಬರೆದ ಸುಮಾರು 1212 ವಚನಗಳನ್ನೊಳಗೊಂಡ 'ರಂಗಬಿನ್ನಪ' ಎಂಬ ಗ್ರಂಥ, ಎಸ್. ವಿ. ಪರಮೇಶ್ವರ ಭಟ್ಟರ 705 ವಚನಗಳನ್ನೊಳಗೊಂಡ 'ಉಪ್ಪು – ಕಡಲು' ಎಂಬ ಗ್ರಂಥ ಅವುಗಳಲ್ಲಿ ಪ್ರಧಾನವಾದುವು.

ನೋಡಿ : ಅಕ್ಕಮಹಾದೇವಿ ; ಕನ್ನಡ ಸಾಹಿತ್ಯ

## ವರ್ಜಿಲ್

ನೋಡಲು ಕುರೂಪಿ. ತಲೆನೋವು, ಗಂಟಲನೋವು, ಹೊಟ್ಟೆ ನೋವು—ಇವುಗಳಿಂದ ಬಳಲುತ್ತಿದ್ದ ರೋಗಿ. ಬಲು ನಾಚುವ ಸ್ವಭಾವ, ನಾಲ್ಕು ಜನರೆದುರಿಗೆ ಮಾತನಾಡಬೇಕಾಗಿ ಬಂದಾಗ ತೊದಲಿಬಿಡುತ್ತಿದ್ದ. ಈ ವ್ಯಕ್ತಿ ಪ್ರಾಚೀನ ರೋಮಿನ ಶ್ರೇಷ್ಠ ಮಹಾಕವಿ. ಯೂರೋಪಿನಲ್ಲಿ ಅನೇಕ ಶತಮಾನಗಳವರೆಗೆ 'ಕವಿ' ಎಂದರೆ ಇವನೊಬ್ಬನೇ ಎನ್ನುವಂತಾಗಿತ್ತು. 'ಈನಿಯಿಡ್' ಮಹಾಕಾವ್ಯ ರಚಿಸಿ ಕಾವ್ಯಪ್ರಪಂಚದಲ್ಲಿ ಅಮರನಾದ ಈ ವ್ಯಕ್ತಿಯೇ ವರ್ಜಿಲ್.

ಕ್ರಿ.ಪೂ. 70ರ ಅಕ್ಟೋಬರ್ 15ರಂದು ವರ್ಜಿಲ್ ಇಟಲಿಯ ಮಾಂಟುವ ಬಳಿ ಜನಿಸಿದ. ಕಾನೂನಿಗೆ ಸಂಬಂಧಿಸಿದ ಕೆಲಸಕ್ಕೆ ವರ್ಜಿಲ್ ಸೇರಬೇಕೆಂದು ಇವನ ತಂದೆಯ ಆಸೆ. ಅದಕ್ಕೆಂದೇ ವರ್ಜಿಲನನ್ನು ರೋಮ್ ನಗರಕ್ಕೆ ಕಳುಹಿಸಲಾಯಿತು. ಆದರೆ ಅಲ್ಲಿನ ಭೋಗಜೀವನ ಇವನಿಗೆ ಸರಿಬೀಳಲಿಲ್ಲ.

ಅವನಿಗೆ ಹಳ್ಳಿಯ ಬದುಕು ಭಾರಿ ಇಷ್ಟ. ಅಲ್ಲಿಯ ಸರಳಜೀವನ, ಜನರ ಮುಗ್ಧತೆ, ಕಾಯಕ ಇವನನ್ನು ಆಕರ್ಷಿಸಿದ್ದುವು. ಇವನಿಗೆ 30 ವರ್ಷವಾಗಿದ್ದಾಗ ಅವನ ಮೊದಲ ಕೃತಿ 'ಗೊಲ್ಲರ ಜೀವನ' ಅಥವಾ 'ಆಯ್ದ ಕವನಗಳು' ಪ್ರಕಟವಾಯಿತು. ಒಮ್ಮೆ, ಯುದ್ಧದಿಂದ ಹಿಂತಿರುಗಿದ ಸೈನಿಕರಿಗೆ ಕೊಡಲೆಂದು ಸರಕಾರ ಸಾರ್ವಜನಿಕರ ಭೂಮಿಯನ್ನು ವಶಕ್ಕೆ ತೆಗೆದುಕೊಂಡಾಗ, ಇವನ ಭೂಮಿಯನ್ನೂ ವಶಪಡಿಸಿಕೊಂಡಿತು. ಆದರೆ ಇವನ ಕವನಗಳನ್ನು ಮೆಚ್ಚಿದ್ದ ಕೆಲವು ಅಧಿಕಾರಿಗಳು ಅವನ ಭೂಮಿಯನ್ನು ಹಿಂದಕ್ಕೆ ಕೊಡಿಸಿದರು. ಈ ಅಧಿಕಾರಿಗಳಲ್ಲೊಬ್ಬ ಆಕ್ಟೇವಿಯನ್ ಆಗಸ್ಟಸ್. ಮುಂದೆ ಈತ ಸಮ್ರಾಟನಾದ. ಪದ್ಯದಲ್ಲಿ ವರ್ಜಿಲ್ ಆಗಸ್ಟಸ್‌ನಿಗೆ ಕೃತಜ್ಞತೆ ಅರ್ಪಿಸುತ್ತಾನೆ. ಇದೇ ಕವನದಲ್ಲಿ ಭೂಮಿಯನ್ನು ಕಳೆದುಕೊಂಡ ಹಳ್ಳಿಗನೊಬ್ಬ ಇನ್ನೊಬ್ಬನೊಡನೆ ತನ್ನ ದುಃಖ ಹೇಳಿಕೊಳ್ಳುವ ಸನ್ನಿವೇಶವೂ ಬರುತ್ತದೆ. ಪದ ಸಮುದಾಯದ ಲಾಲಿತ್ಯ, ಕಿವಿಗೆ ಇಂಪಾದ ಭಾಷಾ ವೈಶಿಷ್ಟ್ಯ ಇವನ ಕಾವ್ಯವನ್ನು ಜನಪ್ರಿಯ ಮಾಡಿದುವು. ಇಲ್ಲಿಯ ಕೆಲವು ಸನ್ನಿವೇಶಗಳು ಅವಾಸ್ತವವಾಗಿದ್ದರೂ ಕಾವ್ಯ ಸೌಂದರ್ಯದಿಂದ ಕೂಡಿವೆ.

'ಆಯ್ದ ಕವನಗಳು' ಸಂಕಲನದಲ್ಲಿರುವ ಮತ್ತೊಂದು ಕವನ, ಯುದ್ಧಗಳಿಲ್ಲದ, ಶಾಂತಿ ಸಂತೃಪ್ತಿಗಳಿಂದ ಕೂಡಿದ ಮುಂದಿನ ಆದರ್ಶರಾಜ್ಯವನ್ನು ಚಿತ್ರಿಸುತ್ತದೆ. ಅದೇ ವರ್ಷ (ಕ್ರಿ. ಪೂ. 40) ಮಗುವೊಂದು ಜನಿಸಲಿದ್ದು ಅನಂತರ ಈ ಯುಗ ಪ್ರಾರಂಭವಾಗುತ್ತದೆ [illegible] ಇದರಿಂದಾಗಿ ವರ್ಜಿಲ್ ಪ್ರವಾದಿ ಎಂದು ಹೆಸರು ಪಡೆದ.

ವರ್ಜಿಲನ ಎರಡನೆಯ ಪ್ರಮುಖ ಕೃತಿ 'ಕೃಷಿ ಕಲೆ'. [illegible] ಉಳುವುದು, ಮರ ನೆಡುವುದು, [illegible] ಸಾಕಣೆ, ಜೇನು ಸಾಕಣೆಗಳ ಬಗೆಗೆ ಬರೆಯಲಾಗಿದೆ. ಮಣ್ಣಿನ ಮಗನಾಗಿ ಬಾಳುವುದರಿಂದ ಸಿಗುವ ಸಂತಸ, ಆರೋಗ್ಯ, ತೃಪ್ತಿಗಳು ಆದರ್ಶಗಳ ರೂಪದಲ್ಲಿ ಇಲ್ಲಿ ಚಿತ್ರಿತವಾಗಿವೆ.

'ಈನಿಯಿಡ್' ವರ್ಜಿಲನ ಕೊನೆಯ ಹಾಗೂ ಅತ್ಯಂತ ಪ್ರಮುಖ ಕೃತಿ. ರೋಮನ್ ಚಕ್ರಾಧಿಪತ್ಯದ ಸ್ಥಾಪಕನೆಂದು ಹೇಳಲಾದ ಈನಿಯಸ್‌ನ ಕಥೆಯನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಆದರ್ಶ ಚಕ್ರವರ್ತಿಯ ಚಿತ್ರಣ ಇಲ್ಲಿದೆ.



'ಈನಿಯಿಡ್' : ವರ್ಜಿಲ್

ತನ್ನ ಕಾವ್ಯಗಳಿಗೆ ವರ್ಜಿಲ್ ಆರು ಗಣದ ಪಾದದ ಛಂದಸ್ಸನ್ನು ಬಳಸಿದ. ಭಾಷೆಯ ಬಳಕೆಯಲ್ಲಿದ್ದ ಅದ್ಭುತ ಗೇಯತೆ, ಛಂದಸ್ಸಿನ ಗಾಂಭೀರ್ಯ, ವಿವೇಕದ ಆಗರ ಇವನ ಕಾವ್ಯದಲ್ಲಿ ಕಾಣಬಹುದು. ಕೆಲವೊಮ್ಮೆ 2–3 ಪದಗಳಲ್ಲೇ ವಿವೇಕ ಗಟ್ಟಿಯಾಗಿ ಕಾಣುತ್ತದೆ. 'ದುಡಿಮೆ ಏನನ್ನಾದರೂ ಜಯಿಸಬಲ್ಲುದು', 'ನರಕಕ್ಕೆ ಇಳಿಯುವುದು ಬಲು ಸುಲಭ'— ಇಂಥ ನುಡಿಮುತ್ತುಗಳು ಅವನ ಕಾವ್ಯದಲ್ಲಿ ಅನೇಕ.

ಪ್ರತಿ ದಿನ ಬೆಳಗ್ಗೆ ವರ್ಜಿಲ್ ಅನೇಕ ಕಾವ್ಯದ ಅನೇಕ ಸಾಲು ಬರೆದು ಮುಗಿಸುತ್ತಿದ್ದ. ಅನಂತರ ಆ ಸಾಲುಗಳನ್ನು ಹಿಂಜಿ, ಜರಡಿಹಿಡಿದು, ಒಂದೇ ಒಂದು 'ಗಟ್ಟಿಕಾಳ'ನ್ನು ಆರಿಸಿಕೊಳ್ಳುತ್ತಿದ್ದ. ಇದರಿಂದ ಕೆಲವೊಮ್ಮೆ ದಿನಕ್ಕೆ ಸರಾಸರಿ ಒಂದೇ ಒಂದು ಸಾಲು ಕಾವ್ಯವನ್ನು ಮಾತ್ರ ಇವನು ಬರೆಯುತ್ತಿದ್ದ. ಇದರಿಂದಾಗಿಯೇ ವರ್ಜಿಲನಿಗೆ 'ಈನಿಯಿಡ್' ಕಾವ್ಯ ಮುಗಿಸಲು ಹತ್ತು ವರ್ಷ ಹಿಡಿಯಿತು. ಆದರೂ ಅವನಿಗೆ ತೃಪ್ತಿ ಇಲ್ಲ. ತನ್ನ ಈ ಕಾವ್ಯವನ್ನು ನಾಶಮಾಡಬೇಕೆಂದು ತಿಳಿಸಿ, ವರ್ಜಿಲ್ ಕ್ರಿ.ಪೂ. 19ರ ಸೆಪ್ಟೆಂಬರ್ 21ರಂದು ನಿಧನನಾದ. ಆದರೆ ಆಗಸ್ಟಸ್ ದೊರೆ ಇವನ ಮಾತು ಕೇಳದೆ 'ಈನಿಯಿಡ್'ನ ಪ್ರಕಟಣೆಗೆ ಏರ್ಪಾಟುಮಾಡಿದ.

ಪ್ರಕಟವಾದಾಗ ಈ ಕಾವ್ಯಕ್ಕೆ ಯೂರೋಪಿನಲ್ಲಿ ಸಿಕ್ಕ ಮನ್ನಣೆ ಅಷ್ಟಿಷ್ಟಲ್ಲ. ತನ್ನ ಕಾಲದಲ್ಲೇ ವರ್ಜಿಲ್ ಮಹಾಗೌರವದ ಹಾಗೂ ಜನಪ್ರಿಯನಾದ

ವ್ಯಕ್ತವಾದದ್ದು 'ಈನಿಯಡ್' [illegible] ಇವನ [illegible] ಸಾಹಿತ್ಯಕ್ಕೆ ಹೊಸ [illegible], ಮುಖ್ಯವಾಗಿ ಇವನಿಂದ ಹಾಗೂ ಇವನ ಮಿತ್ರ ಕವಿ ಹೊರೇಸ್‌ನಿಂದ.

ನೋಡಿ : 'ಈನಿಯಡ್'

## ವರ್ಜೀನಿಯಾ ವುಲ್ಫ್

ಆಂಗ್ಲ ಕಾದಂಬರಿಕಾರರಾದ ವೆಲ್ಸ್ ಮತ್ತು ಗಾಲ್ಸ್‌ವರ್ದಿಯರ ಕೃತಿಗಳು ಜನಪ್ರಿಯವಾಗಿದ್ದ ಕಾಲದಲ್ಲಿ ಅವುಗಳ ಬಗೆಗೆ ಅಸಮಾಧಾನ ಸೂಚಿಸಿ, ಕಾದಂಬರಿ ರಚನೆಯಲ್ಲಿ ಹೊಸ ಮಾರ್ಗವನ್ನು ಹಿಡಿದವಳು ವರ್ಜೀನಿಯಾ ವುಲ್ಫ್. ಮೇಲುನೋಟಕ್ಕೆ ಕಾಣುವುದನ್ನು ಆಳವಾಗಿ ಅಭ್ಯಸಿಸಿ, ಒಳಪ್ರಪಂಚ ಹೊರಗಿನದಕ್ಕಿಂತ ಬೇರೆಯಾಗಿರುತ್ತದೆ ಎಂಬುದನ್ನು ತನ್ನ ಪಾತ್ರಗಳ ಮೂಲಕ ತೋರಿಸಿಕೊಟ್ಟ ಖ್ಯಾತಿ ಈಕೆಗೆ ಸಲ್ಲುತ್ತದೆ. ತನ್ನ ಕಾದಂಬರಿ, ವಿಮರ್ಶೆಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಗಳಿಸಿದ ವುಲ್ಫ್ ಈ ಶತಮಾನದ ಆದಿಭಾಗದ ಪ್ರಮುಖ ಇಂಗ್ಲಿಷ್ ಲೇಖಕಿ.

ಒಳಪ್ರಪಂಚ : ವುಲ್ಫ್

ವರ್ಜೀನಿಯಾ ವುಲ್ಫ್ ಹುಟ್ಟಿದ್ದು ಲಂಡನಿನಲ್ಲಿ 1882ರ ಜನವರಿ 25ರಂದು. ಸರ್ ಲೆಸ್ಲಿ ಸ್ಟೀಫನ್‌ನ ಮಗಳು ಈಕೆ. ಸ್ಟೀಫನ್ ವಿಶಾಲ ದೃಷ್ಟಿಯ ವ್ಯಕ್ತಿ; ಯಾವ ಮಡಿವಂತಿಕೆಯನ್ನೂ ತೋರದೆ, ತನ್ನ ಪುಸ್ತಕ ಭಂಡಾರದ ಯಾವುದೇ ಪುಸ್ತಕವನ್ನಾದರೂ ಓದಲು ಈತ ಮಗಳಿಗೆ ಅನುಮತಿ ಇತ್ತಿದ್ದ. ಹೀಗೆ ವಿಸ್ತಾರವಾದ ಓದುಗಾರಿಕೆಯಿಂದ ವರ್ಜೀನಿಯಾಳ ಮೊದಲ ವಿದ್ಯಾಭ್ಯಾಸ ಆರಂಭವಾಯಿತು. ಮುಂದೆ ಲೇಖಕಿಯಾಗಲು ಅನುಕೂಲ ವಾತಾವರಣ ಅವಳಿಗೆ ಚಿಕ್ಕಂದಿನಿಂದಲೇ ಲಭಿಸಿತು.

ವರ್ಜೀನಿಯಾ ತನ್ನ 30ನೆಯ ವಯಸ್ಸಿನಲ್ಲಿ ಲಿಯೊನಾರ್ಡ್ ವುಲ್ಫ್ ಎಂಬಾತನನ್ನು ವಿವಾಹವಾದಳು. ಅವನೂ ಸಾಹಿತ್ಯಪ್ರೇಮಿ. ಇವರಿಬ್ಬರೂ ಸೇರಿ 1917ರಲ್ಲಿ ಹೋಗಾರ್ತ್ ಪ್ರಕಟನಾಲಯವನ್ನು ಪ್ರಾರಂಭಿಸಿದರು. ಪ್ರಖ್ಯಾತವಲ್ಲದ ಲೇಖಕರ ಉತ್ತಮ ಕೃತಿಗಳನ್ನು ಪ್ರಕಟಿಸುವುದು ಉದ್ದೇಶ. ವುಲ್ಫ್‌ಳ ಎಲ್ಲ ಕೃತಿಗಳೂ ಈ ಸಂಸ್ಥೆಯಿಂದಲೇ ಪ್ರಕಟವಾದುವು.

ಸುತ್ತಮುತ್ತಲಿನ ಜನರಿಂದ ನಮ್ಮನ್ನು ಪ್ರತ್ಯೇಕವಾಗಿ ಸುರಕ್ಷಿತವಾಗಿ ಇಟ್ಟಿರುವುದು ನಮ್ಮ ವ್ಯಕ್ತಿತ್ವ; ಈ ವ್ಯಕ್ತಿತ್ವವನ್ನು ಭೇದಿಸುವ ಅನುಭವಗಳನ್ನು ಕುರಿತು ತನ್ನ ಕೃತಿಗಳಲ್ಲಿ ಹೇಳಲು ಪ್ರಯತ್ನಿಸಿರುವುದಾಗಿ ವುಲ್ಫ್ ಒಂದು ಕಡೆ ಬರೆದಿದ್ದಾಳೆ. ಈಕೆಯ ಪ್ರಯೋಗಗಳು ಆಗಿನ ಕಾದಂಬರಿ ರಚನೆಯಲ್ಲಿ ಹೊಸ ಮಾರ್ಗವನ್ನು ತೆರೆದುವು.

1915ರಲ್ಲಿ ಪ್ರಕಟವಾದ ಇವಳ ಮೊದಲ ಕಾದಂಬರಿ 'ದಿ ವಾಯೆಜ್ ಔಟ್' ಕೊಂಚ ಮಟ್ಟಿಗೆ ಸಾಂಪ್ರದಾಯಿಕ ತಂತ್ರವನ್ನೇ ಬಳಸಿ ಬರೆದ ಆತ್ಮಕಥನ ಕಾದಂಬರಿ. ಮಾನವನ ಅಂತರಂಗದ ಭಾವನೆ, ಚಿಂತನೆಗಳಿಗೆ ಅಭಿವ್ಯಕ್ತಿ ನೀಡಲು ಇವಳು ಮಾಡಿದ ಪ್ರಥಮ ಪ್ರಯತ್ನ ಅದು. 'ಜೇಕಬ್ಸ್ ರೂಮ್' (1922) ಮುಂದಿನ ಕಾದಂಬರಿ. 1925ರಲ್ಲಿ ಪ್ರಕಟವಾದ 'ಮಿಸೆಸ್ ಡಾಲೊವೇ' ಚಿಂತನೆ ಹಾಗೂ ಕ್ರಿಯೆಗಳ ಮೂಲಕ ರೂಪುಗೊಂಡಿರುವ ಸಂಕೀರ್ಣ ಪ್ರತಿಮೆ. ಲಂಡನಿನ ಒಂದು ದಿನದ ಜೀವನ ನಿರೂಪಣೆ ಇದರಲ್ಲಿದೆ. ನಯಗಾರಿಕೆಯಿಂದ ಕೂಡಿದ ಜೀವನ ನಡೆಸುವ ಕಲೆ ಹಾಗೂ ವಾಸ್ತವವಾಗಿ ನಡೆಸಲೇಬೇಕಾಗಿ ಬರುವ ಘೋರ ಜೀವನ ಇವುಗಳ ನಡುವಣ ಘರ್ಷಣೆ 'ಟು ದಿ ಲೈಟ್ ಹೌಸ್. (1927)ನಲ್ಲಿ ಚಿತ್ರಿತವಾಗಿದೆ. ವರ್ಜೀನಿಯಾ ವುಲ್ಫ್‌ಳ ಮಹೋನ್ನತ ಕೃತಿ ಇದು. 'ಆರ್ಲ್ಯಾಂಡೊ' (1928) ಮತ್ತು 'ದಿ ವೇವ್ಸ್' (1931) ಅನಂತರದ ಪ್ರಮುಖ ಕೃತಿಗಳು.

ವುಲ್ಫ್ ಶ್ರೇಷ್ಠ ವಿಮರ್ಶಕಿಯೂ ಹೌದು. 'ಕಾಮನ್ ರೀಡರ್' ಎಂಬ ಇವಳ ಲೇಖನ ಸಂಕಲನದಲ್ಲಿರುವ 'ಆಧುನಿಕ ಕಾದಂಬರಿ' ಎಂಬ ಲೇಖನ, ಆ ವಿಷಯದ ಬಗೆಗೆ ಬಂದಿರುವ ಪ್ರಖ್ಯಾತ ಬರೆಹಗಳಲ್ಲಿ ಮುಖ್ಯವಾದದ್ದು. ತನ್ನ ಕಾಲದ ಜನಪ್ರಿಯ ಕಾದಂಬರಿಕಾರರು "ಕೆಲಸಕ್ಕೆ ಬಾರದವೂ ಶಾಶ್ವತವಲ್ಲದವೂ ಆದುವನ್ನು ಸತ್ಯ ಹಾಗೂ ಶಾಶ್ವತವಾದದ್ದು ಎಂದು ತೋರಿಸಲು ತಮ್ಮ ಅಸಾಮಾನ್ಯ ಜಾಣತನವನ್ನೂ ಪ್ರಚಂಡ ಸಾಮರ್ಥ್ಯವನ್ನೂ ವ್ಯರ್ಥವಾಗಿ ವ್ಯಯಮಾಡಿದ್ದಾರೆ" ಎಂಬ ಅಭಿಪ್ರಾಯಗಳನ್ನು ವುಲ್ಫ್ ವ್ಯಕ್ತಪಡಿಸಿರುವುದು ಅವಳ ವಿಮರ್ಶಾದೃಷ್ಟಿಗೂ ದಿಟ್ಟತನಕ್ಕೂ ಉದಾಹರಣೆ.

ತಾನು ಆತ್ಮಹತ್ಯೆ ಮಾಡಿಕೊಳ್ಳಲು ಯೋಚಿಸುತ್ತಿರುವುದನ್ನು ತಿಳಿಸುವ ಒಂದು ಪತ್ರ ಬರೆದಿಟ್ಟು 1941ರ ಮಾರ್ಚ್ 28ರಂದು ವುಲ್ಫ್ ಮನೆಯಿಂದ ಮಾಯವಾದಳು. ನೀರಿನಲ್ಲಿ ಮುಳುಗಿ ಪ್ರಾಣ ಕಳೆದುಕೊಂಡಿದ್ದ ಅವಳ ದೇಹ ಅನಂತರ ಸಿಕ್ಕಿತು. ವುಲ್ಫ್‌ಳ ಮರಣಾನಂತರ ಅವಳ ಗಂಡ ಲಿಯೊನಾರ್ಡ್ ವುಲ್ಫ್ ಅವಳು ಬರೆದಿಟ್ಟಿದ್ದ ಕೊನೆಯ ಕಾದಂಬರಿ 'ಬಿಟ್ವೀನ್ ದಿ ಆಕ್ಟ್ಸ್' ಅನ್ನೂ ಅವಳ ವಿಮರ್ಶಾತ್ಮಕ ಲೇಖನಗಳು–ಪತ್ರಗಳನ್ನೂ ಪ್ರಕಟಿಸಿದ.

## ವರ್ಡ್ಸ್‌ವರ್ತ್

"ಹಿಡಿದು ಮಂಜು ಬೀಳುತ್ತಿತ್ತು ಚುಕ್ಕಿ ಕಣ್ಣು ಮಿಟುಕುತ್ತಿತ್ತು:
'ಕುಡಿಯೊ ಕಂದ-ಕುಡಿಯೊ' ಎಂದು ನುಡಿದ ಮಾತು ಕಿವಿಗೆ ಬಿತ್ತು
ತಿರುಗಿ ನೋಡಲೊಬ್ಬೆಯಾಚೆ, ಒಬ್ಬಳಲ್ಲಿ ಹೆಣ್ಣುಮಗಳು
ನೊರೆಯ ಬಿಳುಪು ಕುರಿಯ ಮರಿಯ ತಲೆಯ ತಡವುತ್ತಿದ್ದಳು"

–ಬಿ ಎಂ ಶ್ರೀ ಅನುವಾದ,
'ಇಂಗ್ಲಿಷ್ ಗೀತೆಗಳು' ಕೃತಿಯಿಂದ

'ಮಂದಿನ ಕುರಿಮರಿ' ಎಂಬ ಕವನದ ನಾಲ್ಕು ಸಾಲು ಇವು. ಬರೆದವನು ಆಂಗ್ಲ ಕವಿ ವಿಲಿಯಂ ವರ್ಡ್ಸ್‌ವರ್ತ್. ಚಿಕ್ಕ ಹುಡುಗಿ ತನ್ನ ಪ್ರೀತಿಯ ಕುರಿಯ ಮರಿಯನ್ನು ಮಡಿಲಲ್ಲಿ ಮಲಗಿಸಿಕೊಂಡು ಹಾಲು ಕುಡಿಸುತ್ತ

ತಲೆ ಸವರುವ ಮನೋಹರ ದೃಶ್ಯ. ಕವಿ ಭಾವಪೂರ್ಣವಾಗಿ ಆ ಕವನವನ್ನು ಬರೆದಿದ್ದಾನೆ. ಕಾವ್ಯದ ವಸ್ತು ಸರಳ. ಭಾಷೆಯೂ ಸಹಜ. ಸುಂದರ.

ನಿಸರ್ಗದ ನಿಕಟ ಸಂಪರ್ಕದಿಂದ ಮನುಷ್ಯನ ಬದುಕು ಸುಗಮವೂ ಶ್ರೀಮಂತವೂ ಆಗುತ್ತದೆ ಎಂದು ವರ್ಡ್ಸ್‌ವರ್ತ್ ನಂಬಿದ್ದ. ನಿಸರ್ಗ ಮತ್ತು ಹಳ್ಳಿಯ ಜನರ ಜೀವನವೂ ಕಾವ್ಯಕ್ಕೆ ವಸ್ತುವಾಗಬಹುದು ಎಂದು ಆತ ತೋರಿಸಿಕೊಟ್ಟ. ಕಾವ್ಯವನ್ನು ಜನಸಾಮಾನ್ಯರು ಬಳಸುವ ಭಾಷೆಯಲ್ಲೇ ಆತ ಬರೆದ.

ಈತ 18ನೆಯ ಶತಮಾನದ ಮಹೋನ್ನತ ಆಂಗ್ಲ ಕವಿ.

ವರ್ಡ್ಸ್‌ವರ್ತ್ ಹುಟ್ಟಿ ಬೆಳೆದ ಸ್ಥಳ ಬ್ರಿಟಿಷ್ ದ್ವೀಪದಲ್ಲಿರುವ ಕಂಬರ್‌ಲ್ಯಾಂಡ್ ಪರ್ವತ ಪ್ರದೇಶದ ಕ್ಯಾಕರ್‌ಮೌತ್. ತಂದೆ, ಜಾನ್ ವರ್ಡ್ಸ್‌ವರ್ತ್. ರೈತಾಪಿ ಶ್ರೀಮಂತ ಕುಟುಂಬ. ತಾಯಿ ಚಿಕ್ಕಂದಿನಲ್ಲೇ ಮಗನಿಗೆ ಓದಲು ಬರೆಯಲು ಹೇಳಿಕೊಟ್ಟಳು. 'ದಾನ್ ಕ್ವಿಹೊತ್', 'ಗಲಿವರನ ಪ್ರವಾಸಗಳು', 'ಅರೇಬಿಯನ್ ನೈಟ್ಸ್' ಬಾಲಕನ ಮನಸೆಳೆದ ಪುಸ್ತಕಗಳು. ಅವನ ತಂದೆಯಂತೂ ಶೇಕ್ಸ್‌ಪಿಯರ್, ಸ್ಪೆನ್ಸರ್, ಮಿಲ್ಟನ್, ಪೋಪ್—ಇವರ ಕಾವ್ಯಗಳ ಅತ್ಯುತ್ತಮ ಭಾಗಗಳನ್ನು ತನ್ನ ಮಗ ಕಂಠಪಾಠ ಮಾಡಬೇಕೆಂದು ಆಜ್ಞಾಪಿಸಿದ್ದ. ಕಂಬರ್‌ಲ್ಯಾಂಡಿನ ಹಳ್ಳಿಯ ಜನಸಾಮಾನ್ಯರ ಜೀವನ, ಪ್ರಕೃತಿಯ ಜೀವಂತ ಸೌಂದರ್ಯ ವರ್ಡ್ಸ್‌ವರ್ತನ ಮೇಲೆ ಬಾಲ್ಯದಿಂದಲೇ ಪ್ರಭಾವ ಉಂಟುಮಾಡಿತ್ತು.

ಇಂಗ್ಲೆಂಡಿನ ಹಾಕ್‌ಶೆಡ್ ಶಾಲೆಯಲ್ಲಿ ಪ್ರಾಥಮಿಕ ಮಾಧ್ಯಮಿಕ ವಿದ್ಯಾಭ್ಯಾಸ ನಡೆಯಿತು. ಶಾಲೆಯ ಮುಖ್ಯೋಪಾಧ್ಯಾಯ ವಿಲಿಯಂ ಟೇಯ್ಲರ್ ಕಾವ್ಯಪ್ರೇಮಿ, ಪ್ರಗತಿಪರ ಅಭಿಪ್ರಾಯಗಳನ್ನು ಹೊಂದಿದ್ದ. ವಿದ್ಯಾರ್ಥಿಗಳ ದೈಹಿಕ ಮಾನಸಿಕ ಬೆಳವಣಿಗೆಗಾಗಿ ಶಾಲೆಯ ಪಾಠದ ಅನಂತರವೂ ಸಾಕಷ್ಟು ಸೌಕರ್ಯ ಕಲ್ಪಿಸಿದ್ದ. ಕೇಂಬ್ರಿಜ್‌ನ ಸೇಂಟ್ ಜಾನ್ ಕಾಲೇಜಿನಲ್ಲಿ ವರ್ಡ್ಸ್‌ವರ್ತ್‌ನ ಪ್ರೌಢ ವಿದ್ಯಾಭ್ಯಾಸ ನಡೆಯಿತು.

1791ರಲ್ಲಿ ವರ್ಡ್ಸ್‌ವರ್ತ್ ಫ್ರಾನ್ಸಿಗೆ ಹೋದ. ಅದು ಮಹಾಕ್ರಾಂತಿ ನಡೆಯುತ್ತಿದ್ದ ಕಾಲ. ಕ್ರಾಂತಿಕಾರರ ಪಕ್ಷವನ್ನು ಸೇರಬೇಕೆಂದು ವರ್ಡ್ಸ್‌ವರ್ತ್ ಬಯಸಿದ. ಆದರೆ ಆರ್ಥಿಕ ದುಸ್ಥಿತಿಯಿಂದಾಗಿ ಆತ ಲಂಡನಿಗೆ ಹಿಂದಿರುಗಲೇ ಬೇಕಾಯಿತು. 1792–1802ರ ಅವಧಿಯಲ್ಲಿ ಆತ ಮತ್ತೊಮ್ಮೆ ಫ್ರಾನ್ಸಿಗೆ ಭೇಟಿ ಕೊಟ್ಟ. ಫ್ರಾನ್ಸಿನ ಮಹಾಕ್ರಾಂತಿಯ ರಕ್ತಪಾತದ ದೃಶ್ಯಗಳು ವರ್ಡ್ಸ್‌ವರ್ತನ ಕನಸುಗಳನ್ನು ಭಗ್ನಗೊಳಿಸಿದುವು.

ಅದೇ ಕಾಲದಲ್ಲಿ ವರ್ಡ್ಸ್‌ವರ್ತ್ ಪ್ಯಾರಿಸಿನಲ್ಲಿ ಆನಿಟಿ ವೆಲನ್ ಎಂಬ ಶ್ರೀಮಂತವರ್ಗದ ಕನ್ಯೆಯನ್ನು ಪ್ರೇಮಿಸಿದ. ಅವಳಿಂದ ಆತನಿಗೆ ಒಂದು ಹೆಣ್ಣುಮಗುವೂ ಜನಿಸಿತು. ಫ್ರಾನ್ಸ್ ಇಂಗ್ಲೆಂಡ್‌ಗಳೊಳಗೆ ಯುದ್ಧ ಪ್ರಾರಂಭವಾದ ಕಾರಣ ವರ್ಡ್ಸ್‌ವರ್ತ್ ಅನಿವಾರ್ಯವಾಗಿ ಇಂಗ್ಲೆಂಡಿಗೆ ಹಿಂದಿರುಗಬೇಕಾಯಿತು. ಕೊನೆಯ ಸಲ ತನ್ನ ಪ್ರೇಯಸಿಯನ್ನು ಭೇಟಿಯಾದಾಗ 'ಇದೊಂದು ಸುಂದರ ಸಂಜೆ' ಎಂಬ ಕವನವನ್ನು ಬರೆದು ತನ್ನ ಮಗಳ ನೆನಪಿಗಾಗಿ ನೀಡಿದ.

1795ರಲ್ಲಿ ವರ್ಡ್ಸ್‌ವರ್ತ್ ತನ್ನ ತಂಗಿ ಡೊರೊತಿಯ ಜತೆಯಲ್ಲಿ ವಾಸಿಸುತ್ತಿದ್ದ. ಅವನ ಮನೆಯ ಸಮೀಪದಲ್ಲೇ ಕವಿ ಕೋಲ್‌ರಿಜನ ಮನೆಯೂ ಇತ್ತು. ವರ್ಡ್ಸ್‌ವರ್ತ್, ಕೋಲ್‌ರಿಜ್ ಇಬ್ಬರೂ ಗೆಳೆಯರಾದರು. ಭಾವಜೀವಿಯಾದ ವರ್ಡ್ಸ್‌ವರ್ತ್, ಕಾವ್ಯಪ್ರೇಮಿ ಡೊರೊತಿ ಮತ್ತು ಕೋಲ್‌ರಿಜ್ ಮೂವರೂ ಒಟ್ಟಿಗೆ ವಾಯುಸೇವನೆಗಾಗಿ ಕಿಂಟಕ್ ಹೆಚ್ಚು ಪ್ರದೇಶಗಳಲ್ಲಿ ತಿರುಗಾಡುತ್ತಿದ್ದರು. ಕಾವ್ಯದ ಬಗ್ಗೆ ವಿಶದವಾಗಿ ಚರ್ಚಿಸುತ್ತಿದ್ದರು. ಇಂಥ ಚರ್ಚೆಯ ಫಲವಾಗಿ 1798ರಲ್ಲಿ 'ಲಿರಿಕಲ್ ಬ್ಯಾಲಡ್ಸ್' ಎಂಬ ಕವನಸಂಗ್ರಹ ಪ್ರಕಟವಾಯಿತು. ಅದರ ಬಗ್ಗೆ ಸಾಹಿತ್ಯ ಪ್ರಪಂಚದಲ್ಲಿ ಗೊಂದಲವೆದ್ದಿತು. ಜನಸಾಮಾನ್ಯರ ಬದುಕನ್ನು ಕಾವ್ಯಕ್ಕೆ ವಸ್ತುವಾಗಿ ತೆಗೆದುಕೊಂಡು, ಅವರ ಭಾಷೆಯಲ್ಲಿ ಬರೆದದ್ದೇ ಗೊಂದಲಕ್ಕೆ ಕಾರಣ.

ವರ್ಡ್ಸ್‌ವರ್ತ್ ಪ್ರಥಮ ಕವನ ಸಂಕಲನ 'ಒಂದು ಸಂಜೆಯ ಸಂಚಾರ' 1793ರಲ್ಲಿ ಪ್ರಕಟವಾಯಿತು. ವರ್ಡ್ಸ್‌ವರ್ತ್‌ನ ಇನ್ನೊಂದು ಕವನ ಸಂಕಲನ ಪ್ರಕಟವಾದದ್ದು 1807ರಲ್ಲಿ. ಅತ್ಯಂತ ಸುಂದರ ಸಾನೆಟ್ (ಸುನೀತ) ಗಳು ಅದರಲ್ಲಿದ್ದುವು.


ನಿಸರ್ಗ ಪ್ರೇಮು : ವರ್ಡ್ಸ್‌ವರ್ತ್

ವರ್ಡ್ಸ್‌ವರ್ತ್‌ನ 'ದಿ ಪ್ರೆಲ್ಯೂಡ್' ದೀರ್ಘವಾದ ಆತ್ಮಕಥನಾರೂಪದ ಕವನ. 'ಕವಿಯ ಮನಸ್ಸಿನ ಬೆಳವಣಿಗೆ'. 'ಕೇಂಬ್ರಿಜಿನಲ್ಲಿ ವಾಸ'. 'ಬೇಸಿಗೆಯ ರಜಾದಿನಗಳು', 'ಕೇಂಬ್ರಿಜ್ ಮತ್ತು ಆಲ್ಪ್ಸ್, ಲಂಡನಿನಲ್ಲಿ ವಾಸ', 'ಫ್ರಾನ್ಸಿನಲ್ಲಿ ವಾಸ' ಎಂದು ಪ್ರತ್ಯೇಕ ಭಾಗಗಳು ಅದರಲ್ಲಿವೆ. 1805ರಲ್ಲಿ ಅದನ್ನು ಬರೆದು ಮುಗಿಸಿದ. ವರ್ಡ್ಸ್‌ವರ್ತ್ ಇದೇ ಕಾಲದಲ್ಲಿ ಮೇರಿ ಹಚಿಸನ್ ಎಂಬವಳನ್ನು ವಿವಾಹವಾಗಿದ್ದ. ಅವಳಿಂದ ಆತನಿಗೆ ಮೂವರು ಪುತ್ರಿಯರು ಜನಿಸಿದರು. ಅವರಲ್ಲಿ ಉಳಿದವಳು ಒಬ್ಬಳೇ.

ತನ್ನ ಜೀವನದ ಕೊನೆಗಾಲದಲ್ಲಿ ವರ್ಡ್ಸ್‌ವರ್ತ್ ಅಂಚೆಚೀಟಿ ವಿತರಣ ವಿಭಾಗದಲ್ಲಿ ಅಧಿಕಾರಿಯಾಗಿದ್ದು ನಿವೃತ್ತಿಹೊಂದಿದ. 1843ರಲ್ಲಿ ಬ್ರಿಟಿಷ್ ಸರಕಾರ ಆತನನ್ನು 'ರಾಷ್ಟ್ರಕವಿ' ಎಂದು ನೇಮಕಮಾಡಿತು. ತನ್ನ 80ನೆಯ ವರ್ಷ ವಯಸ್ಸಿನಲ್ಲಿ ವರ್ಡ್ಸ್‌ವರ್ತ್ ತೀರಿಕೊಂಡ.

ನೋಡಿ : ಕೋಲ್‌ರಿಜ್

## 'ವಡ್ಡಾರಾಧನೆ'

ಜಂಬೂದ್ವೀಪದ ಮಿಥಿಲೆಯೆಂಬ ಪಟ್ಟಣದಲ್ಲಿ ವಿದ್ಯುಚ್ಚೋರನೆಂಬ ಚೋರಶಿಖಾಮಣಿ. ಈತ ರಾತ್ರಿ ಹೊತ್ತು ನಗರದಲ್ಲಿ ಚಿನ್ನದ ಆಭರಣಗಳನ್ನು ಕಳವುಮಾಡಿ ಪಟ್ಟಣದ ಹೊರಗೆ ಗುಹೆಯೊಂದರಲ್ಲಿ ಬಚ್ಚಿಡುತ್ತಿದ್ದ. ಹಗಲೆಲ್ಲ ಮೈಗೆ ಅಂಜನ ಹಚ್ಚಿಕೊಂಡು ಕೀವು ರಕ್ತ ಸುರಿಯುವ

[illegible] ಒಂದು ದಿನ ವಿದ್ಯುಚ್ಚೋರ ರಾಜನ ಅಂತಃಪುರದಲ್ಲಿ ಅತ್ಯಂತ ರಹಸ್ಯಸ್ಥಳದಲ್ಲಿದ್ದ [illegible] ಹಾರವನ್ನು ಅಪಹರಿಸಿ ತನ್ನ ಗುಹೆಯಲ್ಲಿ ಬಚ್ಚಿಟ್ಟ. ದಿಗ್ಭ್ರಾಂತನಾದ ರಾಜ. ಕಳ್ಳನನ್ನು ಹಿಡಿಯುವ ಜವಾಬ್ದಾರಿಯನ್ನು ನಗರದ ತಳವಾರ ಯಮದಂಡನಿಗೆ ಒಪ್ಪಿಸಿದ. ಏಳು ದಿನಗಳಲ್ಲಿ ತಾನು ಕಳ್ಳನನ್ನು ಹಿಡಿಯದಿದ್ದರೆ ತನ್ನನ್ನು ಶೂಲಕ್ಕೆ ಏರಿಸಿಬಿಡಿ ಎಂದು ನುಡಿದ, ಯಮದಂಡ. ಆದರೆ ಆತ ಎಲ್ಲಿ ಹುಡುಕಿದರೂ ಕಳ್ಳನ ಸುಳಿವೇ ಇಲ್ಲ. ಕೊನೆಗೊಂದು ದಿನ ಹಾಳು ದೇವಾಲಯದ ಬಳಿ ಇದ್ದ ತೊನ್ನು ಹಿಡಿದ ಭಿಕ್ಷುಕನನ್ನು ಕಂಡು, ಅವನೇ ಕಳ್ಳನೆಂದು ಸಂದೇಹಿಸಿ, ಬಂಧಿಸಿ, ರಾಜನ ಬಳಿಗೆ ಎಳೆದು ತಂದ. ತಾನೊಬ್ಬ ಬಡ ಭಿಕ್ಷುಕ. ತಾನು ಯಾವ ಕಳ್ಳತನವನ್ನೂ ಮಾಡಿಲ್ಲ ಎಂದು ಆತ ಬಗೆಬಗೆಯಾಗಿ ಬಿರಲಿದರೂ ಪ್ರಯೋಜನವಾಗಲಿಲ್ಲ. ಯಮದಂಡ ಅವನನ್ನು ನಾನಾ ವಿಧದ ಚಿತ್ರಹಿಂಸೆಗೆ ಗುರಿಪಡಿಸಿದ. ಆದರೂ ಆತ ತಾನು ಕಳ್ಳನಲ್ಲ ಎಂದೇ ಬಾರಿಬಾರಿಗೂ ನುಡಿಯುತ್ತಿದ್ದ. ಯಮದಂಡ ತನ್ನದು ತಪ್ಪುಶಂಕೆ ಇರಬಹುದೆಂದು ಭಾವಿಸಿ ಭಿಕ್ಷುಕನನ್ನು ಬಿಡುಗಡೆ ಮಾಡಿದ. ರಾಜನಿಗೆ ತಾನು ಕೊಟ್ಟ ಮಾತಿನಂತೆ ಶೂಲಕ್ಕೇರಲು ಸಿದ್ಧನಾದ. ಆಗ ಭಿಕ್ಷುಕ ರಾಜಭಟರನ್ನು ತಡೆದು, ನಿಜರೂಪದಲ್ಲಿ ಕಾಣಿಸಿಕೊಂಡ. ಯಮದಂಡ ಬೆರಗಾದ.

ವಿದ್ಯುಚ್ಚೋರ ಯಮದಂಡನಿಗೆ ಅಪರಿಚಿತನಾಗಿರಲಿಲ್ಲ. ಬಾಲ್ಯದಲ್ಲಿ ಒಬ್ಬನೇ ಗುರುವಿನ ಬಳಿ ಅವರಿಬ್ಬರೂ ವಿದ್ಯಾಭ್ಯಾಸ ಮಾಡುತ್ತಿದ್ದರು. ಒಂದು ದಿನ ಹುಡುಗಾಟ ವಿಷಮಸ್ಥಿತಿ ತಲಪಿತ್ತು. "ನೀನು ಮುಂದೆ ತಳವಾರನಾದಾಗ ನಿನ್ನ ಕಾವಲಿನ ಪ್ರದೇಶದಲ್ಲಿ ಕಳವು ಮಾಡಿ ನಿನ್ನನ್ನು ಕೊಲ್ಲಿಸದಿರಲಾರೆ" ಎಂದು ಪ್ರತಿಜ್ಞೆ ಮಾಡಿದ ವಿದ್ಯುಚ್ಚೋರ. "ನಾನು ತಳವಾರನಾದಾಗ ನೀನು ಕದ್ದುದೇ ಆದರೆ ನಿನ್ನನ್ನು ಹಿಡಿದು ಕಟ್ಟಿಸಿ ದಂಡಿಸಿಯೇ ತೀರ್ರೇನೆ"—ಇದು ಯಮದಂಡನ ಪ್ರತಿಜ್ಞೆ.

ಅರಸ ಅವರಿಬ್ಬರನ್ನೂ ಕ್ಷಮಿಸಿದ. ಅನಂತರ ವಿದ್ಯುಚ್ಚೋರ ತನ್ನ ಕಳವಿನ ಐಶ್ವರ್ಯವನ್ನೆಲ್ಲ ಅವುಗಳ ಒಡೆಯರಿಗೆ ಸಲ್ಲಿಸಿ, ತಾನು ತಪಸ್ಸಿಗೆಂದು ಹೊರಟುಹೋದ. ವಿದ್ಯುಚ್ಚೋರ ರಿಸಿ ಎನಿಸಿಕೊಂಡ.

'ವಡ್ಡಾರಾಧನೆ'ಯಲ್ಲಿ ಬರುವ ವಿದ್ಯುಚ್ಚೋರ ರಿಸಿಯ ಸ್ವಾರಸ್ಯಕರ ಕತೆ ಇದು. 'ವಡ್ಡಾರಾಧನೆ' ಈ ಬಗೆಯ ರೋಮಾಂಚಕಾರಿಯಾದ ಜೈನ ಧಾರ್ಮಿಕ ಕತೆಗಳ ಗುಚ್ಛ; ನೀತಿಪ್ರದವೂ ಜ್ಞಾನಬೋಧಕವೂ ಆದ ಸುಕುಮಾರ ಸ್ವಾಮಿಯ ಕಥೆಯಿಂದ ಆರಂಭವಾಗಿ ವೃಷಭಸೇನನೆಂಬ ರಿಸಿಯ ಕತೆಯವರೆಗಿನ ಹತ್ತೊಂಬತ್ತು ಕತೆಗಳ ಸಂಗ್ರಹ.

ಗ್ರಂಥದ ಭಾಷಾಸ್ವರೂಪ, ಹಳಗನ್ನಡ ವ್ಯಾಕರಣ ಸ್ವರೂಪ ಇವನ್ನು ಆಧರಿಸಿ, ಈ ಗ್ರಂಥ ಸುಮಾರು ಕ್ರಿ.ಶ. 920ರಲ್ಲಿ ರಚಿತವಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕನ್ನಡದ ಆದಿಕಾವ್ಯವಾದ 'ಪಂಪಭಾರತ'ಕ್ಕಿಂತ ಹಿಂದಿನ ಕೃತಿ ಇದು.

'ವಡ್ಡಾರಾಧನೆ'ಯ ಕರ್ತೃ ಶಿವಕೋಟ್ಯಾಚಾರ್ಯ. ಆರಾಧನೆ ಎಂದರೆ ಸಾಧನೆ ಅಥವಾ ಸಿದ್ಧಿ ಎಂದು ಅರ್ಥ. ಹಿರಿಯ ಜೈನ ಯತಿಗಳ ಸಾಧನೆ ಸಿದ್ಧಿಗಳನ್ನು ತಿಳಿಸುವ ಕಥೆಗಳು 'ವೃದ್ಧಾರಾಧನಾ' ಅಥವಾ 'ವಡ್ಡಾರಾಧನೆ'.

'ವಡ್ಡಾರಾಧನೆ' ಕಥಾ ಸಂಗ್ರಹವನ್ನು ಕನ್ನಡದಲ್ಲಿ ಸಂಪಾದಿಸಿ ಪ್ರಕಟಿಸಿದ ಕೀರ್ತಿ ಡಾ. ಡಿ. ಎಲ್. ನರಸಿಂಹಾಚಾರ್ಯರಿಗೆ ಸಲ್ಲುತ್ತದೆ. 'ವಡ್ಡಾರಾಧನೆ'ಯನ್ನು ಕುರಿತು ಮೊದಲು ಪ್ರಸ್ತಾಪಿಸಿದವರು ಡಾ. ಫ್ಲೀಟ್ ಅವರು.

'ವಡ್ಡಾರಾಧನೆ'ಯ ಗದ್ಯ ಶೈಲಿ ಅಪೂರ್ವವಾದದ್ದು. ಹಳಗನ್ನಡಕ್ಕಿಂತಲೂ ಹಿಂದಿನ ಕನ್ನಡ ಗದ್ಯದ ಪರಿಚಯವನ್ನು ಅದು ಮಾಡಿಕೊಡುತ್ತದೆ. ಸಂಸ್ಕೃತ–ಕನ್ನಡ ಭಾಷೆಗಳ ಹಿತಮಿತವಾದ ಸಮ್ಮಿಲನ ಅದರಲ್ಲಿದೆ. 'ವಡ್ಡಾರಾಧನೆ' ಆಗಿನ ಕಾಲದ ಭಾಷಾಸ್ವರೂಪವನ್ನೂ ಜನಜೀವನವನ್ನೂ ತಿಳಿದುಕೊಳ್ಳಲು ತುಂಬ ಉಪಯುಕ್ತವಾದ ಗ್ರಂಥ.

ಕನ್ನಡ ಭಾಷೆಯ ಹಿರಿಮೆಯನ್ನು ಸಾರುವ ಕೃತಿ 'ವಡ್ಡಾರಾಧನೆ'.

## ವರದಾಚಾರ್

ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ವರದಾಚಾರ್ಯರು ಒಂದು ಧ್ರುವ ತಾರೆ. ಸುಮಾರು 25 ವರ್ಷಗಳ ಕಾಲ ನಾಟಕ ಕಲೆಯನ್ನೇ ತಮ್ಮ ಜೀವನದ ಗುರಿಯಾಗಿಟ್ಟುಕೊಂಡು ಅವರು ಕಲಾಸೇವೆ ಮಾಡಿದರು.



ರಂಗವೈಭವ : ವರದಾಚಾರ್

ವರದಾಚಾರ್ಯರು ಜನಿಸಿದ್ದು 1869ರ ಫೆಬ್ರವರಿ 2ರಂದು. ಅವರ ತಂದೆ ರಾಮಸ್ವಾಮಿ ಅಯ್ಯಂಗಾರರು ರೆವಿನ್ಯೂ ಶಿರಸ್ತೇದಾರರಾಗಿದ್ದರು. ವರದಾಚಾರ್ಯರು ತಮ್ಮ 10ನೆಯ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡರು. ತಂದೆಗೆ ಸಂಗೀತ ಕಲೆಯಲ್ಲಿ ತುಂಬ ಆಸಕ್ತಿ ಇತ್ತು. ಅದೇ ಗುಣ ಮಗನಲ್ಲಿಯೂ ಬೆಳೆಯಿತು.

ವರದಾಚಾರ್ಯರು ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿ ಎಫ್.ಎ. ಪಾಸು ಮಾಡಿದರು. ಮೈಸೂರಿನಲ್ಲಿ ಸರಕಾರೀ ಉದ್ಯೋಗದಲ್ಲಿದ್ದಾಗ ಗೌರೀ ನರಸಿಂಹಯ್ಯನವರ 'ಶ್ರೀ ಸರಸ್ವತೀ ವಿಲಾಸ ರತ್ನಾವಳಿ

ನಾಟಕ ಸಭಾ ಮಂಡಲಿ'ಯಲ್ಲಿ ಪಾತ್ರ ವಹಿಸಲಾರಂಭಿಸಿದರು. ತಮ್ಮ ಅಭಿನಯ ಚಾತುರ್ಯದಿಂದ ಸ್ವಲ್ಪ ಕಾಲದಲ್ಲೇ ಜನಮನವನ್ನು ಆಕರ್ಷಿಸಿ ಉತ್ತಮ ನಟ ಎಂಬ ಹೊಗಳಿಕೆಗೆ ಪಾತ್ರರಾದರು. ಸ್ವಲ್ಪ ಸಮಯದ ಬಳಿಕ ಆ ಸಂಸ್ಥೆಯನ್ನು ಬಿಟ್ಟು 'ಬೆಂಗಳೂರು ಯೂನಿಯನ್' ಎಂಬ ನಾಟಕ ಸಂಸ್ಥೆಯನ್ನು ಸೇರಿದರು. ಈ ಸಂಸ್ಥೆ ಒಡೆದುಹೋಯಿತು. ವರದಾಚಾರ್ಯರು 1902ರಲ್ಲಿ ತಾವೇ 'ಮೈಸೂರು ರತ್ನಾವಳಿ ನಾಟಕ ಸಭಾ'ವನ್ನು ಸ್ಥಾಪಿಸಿ ನಾಟಕ ಪ್ರದರ್ಶನವನ್ನು ಆರಂಭಿಸಿದರು; ತಮ್ಮ ಜೀವಮಾನ ಪರ್ಯಂತ ಕನ್ನಡ ರಂಗಭೂಮಿಗೆ ಸೇವೆ ಸಲ್ಲಿಸಿದರು.

ವರದಾಚಾರ್ಯರದು ತುಂಬ ಆಕರ್ಷಕ ವ್ಯಕ್ತಿತ್ವ; ನೋಡಿದೊಡನೆಯೇ ಗೌರವ ಮೂಡಿಸುವಂಥ ಗಂಭೀರ ರೂಪ. ಅವರ ನಡೆ ನುಡಿಗಳ ರೀತಿಯೂ ಅಷ್ಟೆ. ರಾಜ ಪಾತ್ರಗಳು ಅವರಿಗೆ ತುಂಬ ಚೆನ್ನಾಗಿ ಒಪ್ಪುತ್ತಿದ್ದುವು. ಅಂತೆಯೇ ಅವರು ರಾಜ ಪಾತ್ರಗಳನ್ನೇ ಹೆಚ್ಚಾಗಿ ಅಭಿನಯಿಸುತ್ತಿದ್ದರು. ಒಮ್ಮೆ ಅವರ ದುಷ್ಯಂತ ಚಕ್ರವರ್ತಿಯ ಪಾತ್ರವನ್ನು ನೋಡಿದ ಉತ್ತರ ಭಾರತದ ಇಬ್ಬರು ರಾಜರು "ರಾಜವಂಶದಲ್ಲಿ ಹುಟ್ಟಿದವರಿಗೆ ಕೂಡ ಅವರ ನಡೆ ನುಡಿ ಹೇಗಿರಬೇಕೆಂಬುದನ್ನು ತಿಳಿಸಿಕೊಡುವ ರೀತಿಯಲ್ಲಿ ಈತ ದುಷ್ಯಂತ ಪಾತ್ರವನ್ನು ವಹಿಸಿದ್ದಾರೆ", ಎಂದು ತಮ್ಮ ಮೆಚ್ಚುಗೆ ಸೂಚಿಸಿದರು.

ವರದಾಚಾರ್ಯರು ರಾವಣ, ಶಿಶುಪಾಲ, ಹಿರಣ್ಯಕಶಿಪು ಮುಂತಾದ ವೀರರಸ ಪ್ರಧಾನ ಪಾತ್ರಗಳನ್ನು ಪ್ರೇಕ್ಷಕರ ಮೈನವಿರೇಳುವಂತೆ ಅಭಿನಯಿಸುತ್ತಿದ್ದರು. ಹಾಗೆಯೇ, ಪ್ರೇಕ್ಷಕರ ಕಣ್ಣಲ್ಲಿ ನೀರಿಳಿಯುವಂತೆ ಹರಿಶ್ಚಂದ್ರನ ಪಾತ್ರವನ್ನು ಅಭಿನಯಿಸುತ್ತಿದ್ದರು. ದುಷ್ಯಂತ, ಮನ್ಮಥ ಮೊದಲಾದ ಶೃಂಗಾರರಸಪ್ರಧಾನ ಪಾತ್ರಗಳಲ್ಲಿ ಅವರ ಅಭಿನಯ ಅತ್ಯಂತ ವಿಶಿಷ್ಟವಾಗಿತ್ತು. 1919ರಲ್ಲಿ ಮೈಸೂರಿಗೆ ಬಂದಿದ್ದ ವಿಶ್ವಕವಿ ರವೀಂದ್ರನಾಥ ಠಾಕೂರರು 'ಪ್ರಹ್ಲಾದ ಚರಿತ್ರೆ' ನಾಟಕದಲ್ಲಿ ಅವರ ಅಭಿನಯವನ್ನು ನೋಡಿ "ಸ್ವತಃ ಹಿರಣ್ಯಕಶಿಪುವೇ ಈ ನಾಟಕದಲ್ಲಿ ಪಾತ್ರ ವಹಿಸಿದ್ದರೂ ವರದಾಚಾರ್ಯರಂತೆ ಹಿರಣ್ಯಕಶಿಪು ಪಾತ್ರವನ್ನು ಅಭಿನಯಿಸುವುದು ಸಾಧ್ಯವಾಗುತ್ತಿರಲಿಲ್ಲ," ಎಂದು ಶ್ಲಾಘಿಸಿದರು. ತಾವು ವಹಿಸುವ ಪಾತ್ರದ ವಿವಿಧ ಭಾಗಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಆ ಪಾತ್ರದಲ್ಲಿ ತನ್ಮಯರಾಗಿ ಅಭಿನಯಿಸುವ ಕಲಾಪ್ರತಿಭೆ ಅವರಲ್ಲಿತ್ತು. ಅವರ ಮೋಹಕ ಸಂಗೀತ ಪಾತ್ರಪೋಷಣೆಗೆ ನೆರವಾಗುತ್ತಿತ್ತು. ನಾಟಕದ ಸನ್ನಿವೇಶಕ್ಕೆ ಸರಿಹೊಂದುವಂತೆ, ರಸಪ್ರಚೋದಕವಾಗಿರುವಂತೆ ಅವರು ಹಾಡುತ್ತಿದ್ದರು. ನಾಟಕದ ಮಿತಿಯಲ್ಲಿ ಹಾಡುಗಾರಿಕೆ ಹೇಗಿರಬೇಕು ಎಂಬುದನ್ನು ಚೆನ್ನಾಗಿ ಅರಿತಿದ್ದರು. ಅಂಥ ಹಾಡುಗಾರಿಕೆಯ ಶೈಲಿಯನ್ನು ರೂಪಿಸಿದರು. ಹಾಡಿದಾಗ ಪ್ರೇಕ್ಷಕರು ಅವರಿಂದ ಮುಗ್ಧರಾಗುತ್ತಿದ್ದರು. ಅವರ ಹಾಡುಗಾರಿಕೆ ಜನಸಾಮಾನ್ಯಕ್ಕೆ ಮೆಚ್ಚುಗೆಯಾಗುತ್ತಿದ್ದಂತೆ ಸಂಗೀತ ವಿದ್ವಾಂಸರಿಗೂ ಪ್ರಿಯವಾಗಿತ್ತು. ಶಾಸ್ತ್ರ ನಿಯಮಗಳನ್ನು ಬಿಡದೆ, ಜನಸಾಮಾನ್ಯರಿಗೂ ಪ್ರಿಯವಾಗುವಂತೆ ಹಾಡುವ ಕಲೆ ಅವರಿಗೆ ಸಿದ್ಧಿಸಿತ್ತು.

ವರದಾಚಾರ್ಯರು ರಂಗಭೂಮಿಯನ್ನು ಪ್ರವೇಶಿಸಿದಾಗ, ರಂಗತಂತ್ರ ಅಷ್ಟಾಗಿ ಬೆಳೆದಿರಲಿಲ್ಲ. ಅದನ್ನು ಬೆಳೆಸಿ, ನಾಟಕ ಪ್ರಯೋಗವನ್ನು ರಮ್ಯವೂ ಆಕರ್ಷಕವೂ ಆಗುವಂತೆ ಮಾಡಿದ ಕೀರ್ತಿ ವರದಾಚಾರ್ಯರಿಗೆ ಸಲ್ಲುತ್ತದೆ.

ವರದಾಚಾರ್ಯರ ಸಾಹಿತ್ಯಪ್ರಜ್ಞೆ ಕೂಡ ದೊಡ್ಡದು. ಅವರು ಸುಪ್ರಸಿದ್ಧ ಪಂಡಿತರಿಂದ ನಾಟಕಗಳನ್ನು ಬರೆಸುತ್ತಿದ್ದರು. ಹಾಗೆ ಬರೆಸಿದ ನಾಟಕಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಅವನ್ನು ರಂಗಪ್ರಯೋಗಕ್ಕೆ ಅಳವಡಿಸಿಕೊಳ್ಳುತ್ತಿದ್ದರು. ಈ ಸಂದರ್ಭದಲ್ಲಿ ನಾಟಕ ಬರೆದ ವಿದ್ವಾಂಸರಿಗೆ ಉಪಯುಕ್ತವಾದ ಸಲಹೆಗಳನ್ನು ಕೊಟ್ಟು ಅವರ ಬರೆವಣಿಗೆಯಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿಸುತ್ತಿದ್ದರು. ಯಾವುದೇ ಕೃತಿಯನ್ನು, ತಮಗೆ ಸಮರ್ಪಕವಾಗಿ ತೋರುವವರೆಗೂ ರಂಗ ಪ್ರಯೋಗಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಆಚಾರ್ಯರೇ ಕೆಲವು ನಾಟಕಗಳನ್ನು ಬರೆದದ್ದೂ ಉಂಟು.


ರಾಜಪಾತ್ರ

ವರದಾಚಾರ್ಯರ ಅಭಿನಯಶಕ್ತಿ ಅಸಾಮಾನ್ಯವಾದದ್ದು. ಪಾತ್ರಗಳ ಅಂತರಂಗದ ಸಂಕೀರ್ಣಭಾವಗಳನ್ನು ಅವರು ತಮ್ಮ ಅಭಿನಯದಲ್ಲಿ ಎತ್ತಿತೋರಿಸುತ್ತಿದ್ದರು.

ವರದಾಚಾರ್ಯರ ಅಭಿನಯ ಕೌಶಲವನ್ನೂ ಕನ್ನಡ ರಂಗಭೂಮಿಯ ಮುನ್ನಡೆಗಾಗಿ ಅವರು ಸಲ್ಲಿಸಿದ ಅಪಾರ ಸೇವೆಯನ್ನೂ ಮೆಚ್ಚಿದ ಮೈಸೂರಿನ ಜನತೆ, 1910ರಲ್ಲಿ 'ಗಿಫ್ಟೆಡ್ ಆಕ್ಟರ್' (ವರನಟ) ಎಂಬ ಬಿರುದನ್ನೂ ರತ್ನಖಚಿತ ತೋಡವನ್ನೂ ಚಿನ್ನವತ್ತಳೆಯನ್ನೂ ಅವರಿಗೆ ಅರ್ಪಿಸಿ ಗೌರವಿಸಿತು.

ವರದಾಚಾರ್ಯರಿಗೆ ದೊರೆತ ಸಾರ್ವಜನಿಕ ಗೌರವಗಳೂ ಪದಕಗಳೂ ಅನೇಕ.

ಕುಂಭಕೋಣ, ಮಧುರೆ, ತಿರುಚಿನಾಪಳ್ಳಿ, ಮಂಗಳೂರು, ಉಡುಪಿ ಮುಂತಾದ ಕಡೆಗಳಲ್ಲೆಲ್ಲ ವರದಾಚಾರ್ಯರು ಸಂಚರಿಸಿ ತಮ್ಮ ನಾಟಕಗಳನ್ನು ಪ್ರದರ್ಶಿಸಿದರು. ತಿರುಚಿನಾಪಳ್ಳಿಯ ಕಲಾಭಿಮಾನಿಗಳು ಶ್ರೀಮತಿ ಅನಿ ಬೆಸೆಂಟರವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಅವರಿಗೆ 'ನಟಕ ಶಿರೋಮಣಿ' ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ('ನಟಕ' ಅಂದರೆ 'ನಟ' — ಬಳಕೆಯಲ್ಲಿ 'ನಾಟಕ ಶಿರೋಮಣಿ' ಎಂದಾಗಿದೆ.)

ವರದಾಚಾರ್ಯರು ನಿರಾಡಂಬರ ಜೀವಿ; ಬಹು ಉದಾರಿ. ಕಷ್ಟ ಸ್ಥಿತಿಯಲ್ಲಿದ್ದ ಅನೇಕರಿಗೆ ಅವರು ಧಾರಾಳವಾಗಿ ಧನಸಹಾಯ ಮಾಡಿದರು. ತಮ್ಮ ನಾಟಕ ಸಂಘದಲ್ಲಿ ಪಾತ್ರವಹಿಸುತ್ತಿದ್ದ ಬಾಲ ನಟರನ್ನು ತಮ್ಮ ಮಕ್ಕಳಂತೆ ಪೋಷಿಸಿದರು; ಅವರ ವಿದ್ಯಾಭ್ಯಾಸಕ್ಕೂ ವ್ಯವಸ್ಥೆ ಮಾಡಿದರು. ಅನೇಕ ಧರ್ಮಕಾರ್ಯಗಳಿಗಾಗಿ ದಾನಮಾಡಿದರು. ಅತಿ ಔದಾರ್ಯ


ಪ್ರೇಮಿ ರಾಮವರ್ಮ

ಅವರ ಒಂದು ದೋಷವಾಯಿತು. ಇದರ ಪರಿಣಾಮವಾಗಿ ಕೊನೆಗಾಲದಲ್ಲಿ ಆರ್ಥಿಕ ದುಸ್ಥಿತಿಗೆ ಸಿಕ್ಕಿಬಿದ್ದರು. ರತ್ನಾವಳಿ ನಾಟಕ ಸಂಸ್ಥೆಯನ್ನು ನಡೆಸಿಕೊಂಡು ಹೋಗುವುದು ಕಷ್ಟವಾಯಿತು. ಶಾರದಾ ಥಿಯೇಟರ್ಸ್ ಕಂಪನಿಯ ಮೂಲಕ ತಮ್ಮ ರಂಗ ಚಟುವಟಿಕೆಗಳನ್ನು ಪುನರಾರಂಭಿಸಿದರು. ಆದರೆ ಈ ಪ್ರಯತ್ನ ಫಲಕಾರಿಯಾಗಲಿಲ್ಲ. ಮತ್ತೆ ರತ್ನಾವಳಿ ನಾಟಕ ಸಂಸ್ಥೆಯನ್ನು ಪುನರುಜ್ಜೀವಿಸುವ ಪ್ರಯತ್ನ ನಡೆಸಿದರು. ಅದೂ ಅಷ್ಟೇನೂ ಯಶಸ್ವಿಯಾಗಲಿಲ್ಲ. ಈ ಹೊತ್ತಿಗೆ ಅವರ ಆರೋಗ್ಯವೂ ಕೆಟ್ಟಿತು; ಆಸ್ಪತ್ರೆ ಸೇರಬೇಕಾಯಿತು.

ವರದಾಚಾರ್ಯರು ಜಲೋದರ ವ್ಯಾಧಿಯಿಂದ ನರಳಿ 1926 ಏಪ್ರಿಲ್ 4ರಂದು ಭಾನುವಾರ ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ತೀರಿಕೊಂಡರು. ಅವರ ಕಳೇಬರದ ಸ್ಮಶಾನ ಯಾತ್ರೆಯಲ್ಲಿ ಅಸಂಖ್ಯಾತ ಕಲಾಭಿಮಾನಿಗಳು ಭಾಗವಹಿಸಿ, ತಮ್ಮನ್ನು ಅಗಲಿದ ಪ್ರಿಯ ನಟನಿಗೆ ಅಂತಿಮ ಗೌರವ ಸಲ್ಲಿಸಿದರು.



ಮಹಾಕವಿ

## ವಲ್ಲತ್ತೋಳ್

"ಭಾರತ, ಎಂಬ ಹೆಸರನ್ನು ಕೇಳಿದಾಕ್ಷಣ ನನ್ನ ಮನ ಅಭಿಮಾನದಿಂದ ಪುಲಕಿತವಾಗುತ್ತದೆ. ಓ! ಈ ಪ್ರಾಚೀನ ಪುಣ್ಯಭೂಮಿಯ ಮಹಿಮೆಯನ್ನು ಹೇಗೆಂದು ಬಣ್ಣಿಸಲಿ!" ಎಂದು ಹಾಡಿದವರು ಕೇರಳದ ಮಹಾಕವಿ ವಲ್ಲತ್ತೋಳ್.

1899ರಲ್ಲಿ ಕೇರಳದ ಮಂಗಳಂ ಎಂಬಲ್ಲಿ ಅವರು ಜನಿಸಿದರು. ವಲ್ಲತ್ತೋಳ್ ಎಂಬುದು ಅವರ ಕುಟುಂಬದ ಹೆಸರು. ನಾಮಧೇಯ ನಾರಾಯಣ ಮೆನನ್. ಆತ ಪ್ರತಿಭಾಶಾಲಿ ಎಂಬುದು ಚಿಕ್ಕ ವಯಸ್ಸಿನಲ್ಲೇ ಸ್ಪಷ್ಟವಾಯಿತು. ಅವರು ತಮ್ಮ ಮಾವನಿಂದ ಸಂಸ್ಕೃತ ಭಾಷೆಯನ್ನು ಕಲಿತುಕೊಂಡರು. ಆ ಭಾಷೆಯಲ್ಲಿ ಕವನಗಳನ್ನು ಬರೆಯುವ ಮಟ್ಟಿನ ವಿದ್ವತ್ತನ್ನು ಪಡೆದರು. ಅವರು ಹುಟ್ಟಿದ್ದು, ಬೆಳೆದದ್ದು ಬಡತನದಲ್ಲೇ. ಆದರೆ ಈ ಬಡತನದಿಂದ ಅವರ ಕರ್ತೃತ್ವಶಕ್ತಿ ಕುಗ್ಗಲಿಲ್ಲ. ವಲ್ಲತ್ತೋಳ್ ಎತ್ತರವಾದ ಪುಷ್ಟ ವ್ಯಕ್ತಿ. ಒಮ್ಮೆ ನೋಡಿದರೆ ಸಾಕು, ಎಂದಿಗೂ ಮನಸ್ಸಿನಿಂದ ಮರೆಯಾಗದಂಥ ಆಕರ್ಷಕ ವ್ಯಕ್ತಿತ್ವ. ಸಾಹಿತ್ಯದಲ್ಲಿ ಮಾತ್ರವಲ್ಲದೆ ಸಂಗೀತ ನಾಟ್ಯಗಳಲ್ಲಿಯೂ ಅವರಿಗೆ ವಿಶೇಷ ಆಸಕ್ತಿ ಇತ್ತು. ಅವನತಿಯ ಹಂತದಲ್ಲಿದ್ದ ಕೇರಳದ ಕಥಕ್ಕಳಿ ಮತ್ತು ಇತರ ನೃತ್ಯ ವಿಧಾನಗಳನ್ನು ಪುನರುಜ್ಜೀವನಗೊಳಿಸಲು ವಲ್ಲತ್ತೋಳ್ ಶ್ರಮಿಸಿದರು. ಕೇರಳ ಕಲಾಮಂಡಲಂ ಎಂಬ ಸಂಸ್ಥೆಯನ್ನು ಸ್ಥಾಪಿಸಲು ದುಡಿದರು; ಅದರ ಜೀವನಾಡಿಯಾಗಿ ಕೆಲಸ ಮಾಡಿದರು.

ವಲ್ಲತ್ತೋಳ್ ಅಪ್ರತಿಮ ದೇಶಪ್ರೇಮಿ. ತಮ್ಮ ದೇಶಭಕ್ತಿ ಗೀತಗಳಿಂದ ಜನತೆಯ ಹೃದಯದಲ್ಲಿ ರಾಷ್ಟ್ರಪ್ರೇಮವನ್ನು ಉದ್ದೀಪಿಸಿದರು. ಅವರ ಗೀತೆಗಳಿಂದ ಪ್ರಭಾವಿತರಾಗಿ ಮಾತೃಭೂಮಿಯ ದಾಸ್ಯಶೃಂಖಲೆಯನ್ನು ಕಿತ್ತೊಗೆಯಲು ಬ್ರಿಟಿಷರ ವಿರುದ್ಧ ಹೋರಾಡಿದವರು ಸಹಸ್ರಾರು ಜನ.

ತಮ್ಮ ತಾಯಿ ನಾಡು ಕೇರಳದ ಮೇಲೆ ವಲ್ಲತ್ತೋಳರಿಗೆ ಅಪಾರ ಪ್ರೀತಿ. ಈ ಪ್ರೀತಿ ಅವರ ರಾಷ್ಟ್ರಪ್ರೇಮಕ್ಕೆ ಎಂದೂ ಅಡ್ಡಬರಲಿಲ್ಲ. ಭಾರತಮಾತೆ ಅವರ ಆರಾಧ್ಯದೈವವಾಗಿದ್ದಳು. ಅವರ ಕವನಗಳಲ್ಲಿ ನಮ್ಮ ಪ್ರಾಚೀನ ಋಷಿಗಳು ವೇದಗಳಲ್ಲಿ ಉಲ್ಲೇಖಿಸಿದ ಉದಾತ್ತ ಭಾವನೆಗಳ ನಿರೂಪಣೆಯನ್ನು ಕಾಣಬಹುದು.

ವಲ್ಲತ್ತೋಳ್ ಅವರ ಮಹಾಕಾವ್ಯ 'ಚಿತ್ರಯೋಗಮ್'. ಅವರ ಸಾಹಿತ್ಯ ಪ್ರತಿಭೆಯಿಂದ ದೀಪ್ತವಾದ ಈ ಕೃತಿಯ ವಸ್ತು, 'ಕಥಾಸರಿತ್ಸಾಗರ'ದಲ್ಲಿ ಬರುವ ಮಂದಾರವತಿ ಮತ್ತು ಸುದರ್ಶನರ ಪ್ರಣಯ ಕಥೆ. ಅವರ ಪ್ರಥಮ ಭೇಟಿ, ಮೊದಲ ನೋಟದಲ್ಲಿ ಪ್ರಣಯಾಂಕುರ, ಅವರ ಪ್ರಣಯದ ಹಾದಿಯಲ್ಲಿ ಬರುವ ಅಡ್ಡಿ ಆತಂಕಗಳು, ಕೊನೆಗೆ ಅಡಚಣೆಗಳು ಪರಿಹಾರವಾಗಿ ಒಲಿದ ಜೀವಗಳ ಸಮ್ಮಿಳನ — ಇವೆಲ್ಲ ಈ ಮಹಾಕಾವ್ಯದಲ್ಲಿ ತುಂಬಾ ಸೊಗಸಾಗಿ ವರ್ಣಿತವಾಗಿವೆ. ಈ ಕಾವ್ಯ ರಚನೆಗಾಗಿ ಕೇರಳದ ಸಾಹಿತ್ಯ ಪ್ರಪಂಚ ಅವರನ್ನು 'ಮಹಾಕವಿ' ಎಂದು ಸಂಬೋಧಿಸಿತು.

ಪ್ರಾಚೀನ ಸಂಸ್ಕೃತ ಸಾಹಿತ್ಯದ ಗಾಢ ಪರಿಚಯವನ್ನು ಪಡೆದಿದ್ದ ವಲ್ಲತ್ತೋಳ್ 'ವಾಲ್ಮೀಕಿ ರಾಮಾಯಣ', ಕಾಳಿದಾಸನ 'ಶಾಕುಂತಲ' ಮತ್ತು ಭಾಸನ 'ಸ್ವಪ್ನವಾಸವದತ್ತ' ನಾಟಕಗಳನ್ನೂ ಹಾಲರಾಜನ 'ಸಪ್ತಶತಿ'ಯನ್ನೂ ಮಲಯಾಳಕ್ಕೆ ಭಾಷಾಂತರಿಸಿದ್ದಾರೆ. ಆದರೆ ಇವೆಲ್ಲದಕ್ಕಿಂತಲೂ ಹಿರಿದಾದ ಸಾಧನೆ ಋಗ್ವೇದದ ಮಲಯಾಳಂ ಅನುವಾದ. ಭಾರತ ಸರಕಾರ ಅವರ ಪರಿಶ್ರಮವನ್ನು ಗೌರವಿಸಿ ಗ್ರಂಥದ ಪ್ರಕಟಣೆಗೆ ನೆರವಾಯಿತು.

ವಲ್ಲತ್ತೋಳ್ ಕೆಲವು ಸುಂದರ ಭಾವಗೀತೆಗಳನ್ನೂ ರಚಿಸಿದ್ದಾರೆ. 'ಗಣಪತಿ', 'ಅನಿರುದ್ಧ', 'ವಿಲಾಸಲತಿಕಾ', 'ಸೀತಾ' ಇವು ಅವರು ರಚಿಸಿರುವ ಕಥನಕವನಗಳು. ಪೌರಾಣಿಕ ಶೈಲಿಯಲ್ಲಿ ರಚಿತವಾದ ಕೃತಿ 'ಬಾಪೂಜಿ', ಗಾಂಧಿಜಿಯ ಅಮಾನುಷ ಕೊಲೆ ಈ ಕೃತಿಯ ವಸ್ತು.

ವಲ್ಲತ್ತೋಳ್ ಅವರು ಆಧುನಿಕ ಶಿಕ್ಷಣ ಪಡೆದವರಲ್ಲ. ಅವರು ಯಾವ ವಿಶ್ವವಿದ್ಯಾನಿಲಯದಲ್ಲೂ ಕಲಿಯಲಿಲ್ಲ. ಅವರಿಗೆ ಇಂಗ್ಲಿಷ್ ಭಾಷೆಯ ಪರಿಚಯವೂ ಅಷ್ಟಾಗಿರಲಿಲ್ಲ. ಆದರೂ ಶೇಕ್ಸ್‌ಪಿಯರ್, ಬೈರನ್, ಷೆಲ್ಲಿ, ಕೀಟ್ಸ್, ಆಸ್ಕರ್ ವೈಲ್ಡ್, ಮುಂತಾದ ಪ್ರತಿಭಾವಂತ ಲೇಖಕರ ಕೃತಿಗಳು ಅವರಿಗೆ ತುಂಬ ಮೆಚ್ಚುಗೆಯಾಗಿದ್ದುವು.

ಬೈಬಲಿನಲ್ಲಿ ಬರುವ ಮೇರಿ ಮ್ಯಾಗ್ಡಲೀನಳ ಕರುಣಾಜನಕ ಕಥೆಯನ್ನು ಅವರು 'ಮಂಗ್ದಲಮ್ ಮರಿಯ' ಎಂಬ ಕಥನ ಕವನವಾಗಿ ಬರೆದಿದ್ದಾರೆ.

ತಿರುವಾಂಕೂರಿನ ರಾಜಾಸ್ಥಾನದಿಂದಲೂ ವಲ್ಲತ್ತೋಳ್ ಪುರಸ್ಕೃತರಾದರು.

ಮದರಾಸು ಸರಕಾರ ವಲ್ಲತ್ತೋಳ್ ಅವರಿಗೆ 'ರಾಷ್ಟ್ರಕವಿ' ಎಂಬ ಮನ್ನಣೆ ಕೊಟ್ಟಿತು. ಕೇರಳದ ಹಾಗೂ ಕೇಂದ್ರದ ಸಾಹಿತ್ಯ ಅಕಾಡೆಮಿಗಳ ಸದಸ್ಯರಾಗಿ ಅವರು ನಿಯೋಜಿತರಾಗಿದ್ದರು. ಈ ಎಲ್ಲ ಪ್ರಶಸ್ತಿ, ಬಿರುದುಗಳಿಗೆ ಕಿರೀಟವಿಡುವಂತೆ ಭಾರತದ ರಾಷ್ಟ್ರಾಧ್ಯಕ್ಷರು ವಲ್ಲತ್ತೋಳ್ ಅವರಿಗೆ 'ಪದ್ಮ ವಿಭೂಷಣ' ಪ್ರಶಸ್ತಿ ನೀಡಿ ಗೌರವಿಸಿದರು.

ಅವರ ಕೆಲವು ಕವಿತೆಗಳು ರಷ್ಯನ್ ಭಾಷೆಗೆ ಪರಿವರ್ತಿತವಾಗಿವೆ.

ವಲ್ಲತ್ತೋಳ್ 1958ರ ಮಾರ್ಚ್ 13ರಂದು ತೀರಿಕೊಂಡರು. ಆಗ ಅವರಿಗೆ 79 ವರ್ಷ ವಯಸ್ಸಾಗಿತ್ತು.

## ವ್ಯಂಗ್ಯಚಿತ್ರ



ಡೇವಿಡ್ ಲೋ ಇಂಗ್ಲೆಂಡಿನ ಶ್ರೇಷ್ಠತಮ ವ್ಯಂಗ್ಯಚಿತ್ರಕಾರ. ಮೇಲಿನದು ಆತ ರಚಿಸಿದ ಕೃತಿ. ಇಲ್ಲಿ ಅವನ ಕುಂಚಕ್ಕೆ ವಸ್ತುವಾಗಿರುವವನು ಚಿತ್ರಪ್ರೇಮಿ ಚರ್ಚಿಲ್.

ನೋಡಿ : ವ್ಯಂಗ್ಯ ಚಿತ್ರ –ಸಂಪುಟ ೧

## ವಾಗ್ನರ್

ಜರ್ಮನಿಯ ಶ್ರೇಷ್ಠ ವಾಗ್ಗೇಯಕಾರ ರಿಚರ್ಡ್ ವಾಗ್ನರ್ ಜನಿಸಿದ್ದು ಲೀಪ್ಸಿಗ್ ನಗರದಲ್ಲಿ, 1813ರ ಮೇ 22ರಂದು.

ತಂದೆ ನಗರಸಭೆಯ ಅಧಿಕಾರಿ. ರಿಚರ್ಡ್ ಆರು ತಿಂಗಳ ಮಗು ವಿದ್ದಾಗಲೇ ಆತ ತೀರಿಕೊಂಡ. ತಾಯಿ ಒಬ್ಬ ನಟನನ್ನು ಮರು ಮದುವೆ ಮಾಡಿಕೊಂಡಳು.

ಮನೆಯವರೆಲ್ಲ ಡ್ರೆಸ್ಡನ್ ನಗರಕ್ಕೆ ಬಂದು ನೆಲೆಸಿದರು. ವಾಗ್ನರ್ ಎಳೆ ವಯಸ್ಸಿನಲ್ಲೇ ನಾಟಕದ ಗೀಳು ಹಿಡಿಯಿತು. ಶಾಲೆಗೆ ಹೋಗುವಾಗಲೇ 1820ರಲ್ಲಿ ಸಂಗೀತವನ್ನು ಕಲಿಯತೊಡಗಿದ. 11ನೆಯ ವಯಸ್ಸಿನಲ್ಲಿ ಷೇಕ್ಸ್‌ಪಿಯರನ ಶೈಲಿಯನ್ನು ಅನುಸರಿಸಿ ಒಂದು ನಾಟಕ ಬರೆದ. 1821ರಲ್ಲಿ ಚಿಕ್ಕಪ್ಪ ಮೃತನಾದ. 1827ರಲ್ಲಿ ಪುನಃ ಲೀಪ್ಸಿಗ್‌ಗೆ ಬಂದು ನೆಲೆಸಿದರು. ವಾಗ್ನರನ ಇಬ್ಬರು ಸೋದರಿಯರು ನಟಿಯರಾಗಿದ್ದರು. ವಾಗ್ನರ್ ನಾಟಕಗಳಿಗೂ ಸಂಗೀತ ಕಛೇರಿಗಳಿಗೂ ಹೋಗಿಬರತೊಡಗಿದ. ತಾನೂ ಸಣ್ಣ ಕೃತಿಗಳನ್ನು ರಚಿಸಿದ.

ಸಣ್ಣ ಆಪೆರಾ ಸಂಸ್ಥೆಗಳಲ್ಲಿ ಸಂಗೀತ ನಿರ್ದೇಶಕನಾಗಿ ಊರಿಂದ ಊರಿಗೆ ಸುತ್ತಿದ. 1833ರಲ್ಲಿ ವಾಗ್ನರ್ ಸಂಗೀತವನ್ನೇ ವೃತ್ತಿಯನ್ನಾಗಿ ಮಾಡಿಕೊಂಡ. ಇಲ್ಲಿ ಆತನಿಗೆ ಮಿನ್ನ ಪ್ಲೇನರಳ ಪರಿಚಯವಾಗಿ 1836ರಲ್ಲಿ ಅವರ ವಿವಾಹ ಜರಗಿತು. ಮಿನ್ನ ನಟಿ. 1839ರಲ್ಲಿ ಪ್ಯಾರಿಸಿಗೆ ಹೋಗಿ ಬಂದರು. ಮರುವರ್ಷ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ತೊಡಗಿದ್ದನೆಂಬ ಆರೋಪಕ್ಕೆ ವಾಗ್ನರ್ ಒಳಗಾದ. 1849ರಲ್ಲಿ ಸ್ವಿಟ್ಜರ್‌ಲೆಂಡಿನ ಜೂರಿಚ್‌ಗೆ ಹೋದ. ಅಲ್ಲಿ ಹತ್ತು ವರ್ಷ ಕಳೆದ. ಅದು ಬಡತನ, ರೋಗಗಳಿಂದ ಬಳಲಿದ ಕಾಲಾವಧಿ. ಮುಂದೆ ಹತ್ತೂರು ಸುತ್ತಿ, ವಿಯೆನ್ನಾದಲ್ಲಿ ನೆಲೆಯೂರಿದ. ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿ, ಸೆರೆಮನೆ ವಾಸವನ್ನು ತಪ್ಪಿಸಿಕೊಳ್ಳಲು ಆ ಊರು ಬಿಟ್ಟುಬಿಡಬೇಕಾಯಿತು. 1866ರಲ್ಲಿ ಮಿನ್ನ ನಿಧನ ಹೊಂದಿದಳು.



ಕೀರ್ತಿಯ ಶಿಖರ : ವಾಗ್ನರ್

1870ರಲ್ಲಿ ಕಾಸಿಮಾ ಎಂಬಾಕೆಯನ್ನು ವಾಗ್ನರ್ ಮದುವೆಯಾದ.

ಅವನದು ಬಿರುಗಾಳಿಯಂಥ ಬದುಕು. ಆತ ಷೊಪಿನ್, ವರ್ಡಿ ಬ್ರಾಮ್‌ರಂಥ ರಚನಕಾರರ ಕಾಲದಲ್ಲಿದ್ದವನು; ಬಿಥೋವನನ ಅನಂತರ ಬಂದವನು. ಇವರೆಲ್ಲರ ಕೃತಿಗಳಿಂದ ವಾಗ್ನರ್ ಸಾಕಷ್ಟು ಪ್ರಭಾವಿತನಾಗಿದ್ದ. ಜರ್ಮನಿ ಶಕ್ತಿಯುತ ರಾಷ್ಟ್ರವಾಗಿ ರೂಪುಗೊಂಡ ಕಾಲ ಅದು. ಈ ವಾತಾವರಣದ ಪರಿಣಾಮ ವಾಗ್ನರನ ಮೇಲೂ ಆತನ ಸಂಗೀತದ ಮೇಲೂ ಆಯಿತು.

ನಾಟಕ ರಚನೆಯಲ್ಲಿ ವಾಗ್ನರ್ ಸಣ್ಣ ವಯಸ್ಸಿನಲ್ಲೇ ಸಿದ್ಧಿ ಪಡೆದಿದ್ದ. ನಾಟಕಕ್ಕೆ ಸಂಗೀತ ಅಳವಡಿಸುವ ಪ್ರಯತ್ನ ನಡೆಸಿದ್ದ.

ಹೊಸ ಬಗೆಯ ಆಪೆರಾ ರಚಿಸಿದ್ದು ವಾಗ್ನರನ ಪ್ರಸಿದ್ಧಿಗೆ ಕಾರಣವಾಯಿತು. ಅದನ್ನು ಆತ 'ಸಂಗೀತ ನಾಟಕ' ಎನ್ನುತ್ತಿದ್ದ. ಹಿಂದೆ ಸಂಭಾಷಣೆ ಬೇರೆ, ಹಾಡು ಬೇರೆ ಎಂಬ ಭಾವನೆ ಇತ್ತು. ಒಂದು

ನಾಟಕಕ್ಕೆ ಸಮಗ್ರತೆ ಬರಬೇಕಾದರೆ ಈ ಎಲ್ಲ ಮುಖಗಳೂ ಕೂಡಿ ಒಂದೇ ಪರಿಣಾಮ ಬೀರುವಂತಿರಬೇಕು ಎಂಬುದು ವಾಗ್ನರನ ಮತ.

ಮೊದಲ ಆಪೆರಾ 'ರೇನ್‌ಜಿ'. ಕರ್ತೃವಿಗೆ ಅದು ಕೀರ್ತಿ ತಂದಿತು. 'ದಿ ಫ್ಲೈಯಿಂಗ್ ಡಚ್‌ಮ್ಯಾನ್', 'ಟಾನ್‌ಹಾಸರ್' ಮತ್ತು 'ಲಾಹೆಂಗ್ರಿನ್' ಇತರ ವಾಗ್ನರ್ ಕೃತಿಗಳು.

ವಾಗ್ನರ್ ತನ್ನ ಕೃತಿಯಲ್ಲಿ ವಿವಿಧ ಸಂಗೀತದ ವಿವಿಧ ಸ್ವರಸಂಗತಿಗಳನ್ನು ಉಪಯೋಗಿಸುತ್ತಿದ್ದ. ಒಂದೊಂದು ಸ್ವರಸಂಗತಿಯೂ ಒಂದೊಂದು ಪಾತ್ರ ಅಥವಾ ಒಂದೊಂದು ಭಾವನೆಯ ದ್ಯೋತಕ.

1864ರಲ್ಲಿ ಬವೇರಿಯದ ದೊರೆ ಲುಡ್ವಿಗ್ ವಾಗ್ನರ್‌ನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿದ. ಮ್ಯೂನಿಕ್‌ನಲ್ಲಿ ವಾಗ್ನರನ ಅನೇಕ ನಾಟಕಗಳ ಪ್ರದರ್ಶನ ನಡೆಯಿತು. ಜರ್ಮನಿಯ ಬೈರಾಯ್ಟ್‌ನಲ್ಲಿ ದೊರೆ ಅವನಿಗೆ ಮನೆಮಾಡಿಕೊಟ್ಟ. ಹಿಂದೆ ಬರೆದು ಅರ್ಧಕ್ಕೆ ನಿಲ್ಲಿಸಿದ್ದ 'ದಿ ರಿಂಗ್' ಎಂಬ ನಾಟಕವನ್ನು ತ ಪೂರೈಸಿದ್ದು ಇಲ್ಲಿ. ಈ ನಾಟಕದ ಪ್ರದರ್ಶನಕ್ಕೆಂದೇ ನಿರ್ಮಿಸಿದ ರಂಗಮಂದಿರದಲ್ಲಿ ಅದು ಅಭಿನಯಿಸಲ್ಪಟ್ಟಿತು.

'ಪಾರ್ಸಿಫಾಲ್' ವಾಗ್ನರ್‌ನ ಅಂತಿಮ ಕೃತಿ.

'ನನ್ನ ಜೀವನ' ಎನ್ನುವುದು ಅವನ ಆತ್ಮಕಥೆ.

ಅಪಾರ ಆತ್ಮವಿಶ್ವಾಸ, ಏನೇ ಆದರೂ ಗೆಲ್ಲಲೇಬೇಕೆಂಬ ದೃಢಪ್ರವೃತ್ತಿ ವಾಗ್ನರ್‌ನಲ್ಲಿದ್ದುವು. ಅವರ ಬಲದಿಂದಲೇ ಕೀರ್ತಿಯ ಶಿಖರವನ್ನೇರಿದ.

1883ರ ಫೆಬ್ರುವರಿ 13ರಂದು ವಾಗ್ನರ್ ನಿಧನನಾದ.

ಬೈರಾಯ್ಟ್‌ನಲ್ಲಿ ಪ್ರತಿವರ್ಷ ವಾಗ್ನರ್‌ನ ಸ್ಮರಣೆ ಸಮಾರಂಭ ನಡೆಯುತ್ತದೆ.

## ವಾಗ್ಗೇಯಕಾರ

'ವಾಕ್' ಎಂದರೆ ಮಾತು. 'ಗೇಯ' ಎಂದರೆ ಹಾಡಲಿಕ್ಕೆ ಅನುಗುಣವಾದದ್ದು. ಮಾತು ರಾಗದ ಚೌಕಟ್ಟಿನಲ್ಲಿ ಸಂಯೋಜಿತವಾದಾಗ ಸಂಗೀತ ನಿರ್ಮಾಣವಾಗುತ್ತದೆ. ಇಂಥ ರಚನೆಯೊಂದರಲ್ಲಿ ಮಾತನ್ನೂ ಸ್ವರಲಯಗಳನ್ನೂ ರಚಿಸುವವನೇ ವಾಗ್ಗೇಯಕಾರ.

ಶ್ರೇಷ್ಠ ವಾಗ್ಗೇಯಕಾರನಿಗೆ ಸಂಗೀತದ ಲಕ್ಷ್ಯ, ಲಕ್ಷಣಗಳ ಜ್ಞಾನದ ಜೊತೆಗೆ ಒಳ್ಳೆಯ ಭಾಷಾಜ್ಞಾನವೂ ಅಗತ್ಯ. ಭಾರತದಲ್ಲಿ ಸಂಗೀತಕಲೆ ಆಧ್ಯಾತ್ಮಿಕ ಉನ್ನತಿಗೆ ಮಾರ್ಗವೆಂದು ಭಾವಿಸಲಾಗಿದೆ. ಸಂಗೀತ ರಚನೆಯಲ್ಲಿ ಮಾತಾಗಲೀ ಧಾತುವಾಗಲೀ ಪ್ರಧಾನವಾಗಿರಬಹುದು. ಸಾಹಿತ್ಯ ಉತ್ಕೃಷ್ಟ ಸಂಗೀತವನ್ನು ಹೆಚ್ಚು ರಂಜನೀಯವನ್ನಾಗಿ ಮಾಡುತ್ತದೆ. ತ್ಯಾಗರಾಜರು ಕೃತಿ ರಚನೆಯಲ್ಲಿ ಸಂಗೀತವನ್ನು ಅಳವಡಿಸಿದ ಮೊದಲ ವಾಗ್ಗೇಯಕಾರರು.

ಶ್ರೇಷ್ಠ ವಾಗ್ಗೇಯಕಾರನಿಗೆ ಸಂಗೀತ ಸಾಹಿತ್ಯಗಳೆರಡರಲ್ಲೂ ಪರಿಶ್ರಮ ಇರಬೇಕು. ಪುರಂದರದಾಸರು, ಅವರ ಅನಂತರ ಬಂದ ಕನಕದಾಸರು, ಜಗನ್ನಾಥ ದಾಸರು, ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮಶಾಸ್ತ್ರಿಗಳು, ಸ್ವಾತಿ ತಿರುನಾಳ್, ಮುತ್ತಯ್ಯ ಭಾಗವತರು, ಮೈಸೂರು ವಾಸುದೇವಾಚಾರ್ಯರು ಇವರೆಲ್ಲ ಕರ್ನಾಟಕ ಸಂಗೀತದ ಶ್ರೇಷ್ಠ ವಾಗ್ಗೇಯಕಾರರು.

## ವಾನ್ ಗೋ


ತಳಮಳ : ವಾನ್ ಗೋ

ಡಚ್ ಚಿತ್ರಕಾರ ವಾನ್ ಗೋ ದಕ್ಷಿಣ ಫ್ರಾನ್ಸಿನಲ್ಲಿ ನೆಲೆಸಿದಾಗ ಆತನನ್ನು ನೋಡಲು ಫ್ರೆಂಚ್ ಚಿತ್ರಕಾರ ಪಾಲ್ ಗೋಗಿನ್ (1848–1903) ಬಂದ; ವಾನ್‌ಗೋನ ಮನೆಯಲ್ಲೇ ತಂಗಿದ.

ಒಂದು ಸಂಜೆ ಆ ಊರಿನ ಕತ್ತಲು ಕವಿದ ಬೀದಿಯಲ್ಲಿ ಪಾಲ್ ಗೋಗಿನ್ ನಡೆದು ಹೋಗುತ್ತಿದ್ದ. ಹಿಂದಿನಿಂದ ಬಂದ ಹೆಜ್ಜೆಯ ಸದ್ದು ಕೇಳಿ ತಿರುಗಿ ನೋಡಿದ. ಕೈಲಿ ತೆರೆದ ಕ್ಷೌರಕತ್ತಿ ಹಿಡಿದುಕೊಂಡು ವಾನ್ ಗೋ ಧಾವಿಸಿ ಬರುತ್ತಿರುವುದು ಕಾಣಿಸಿತು. ಇವನು ಗದರಿಸಿದ ಕೂಡಲೇ ವಾನ್ ಗೋ ತನ್ನ ಕೊಠಡಿಗೆ ಹಿಂದಿರುಗಿದ. ಆತ್ಮಹತ್ಯೆ ಮಾಡಿಕೊಳ್ಳಬೇಕು ಎಂದುಕೊಂಡ. ಅಷ್ಟರಲ್ಲಿ ವಾನ್ ಗೋ ವೇಶ್ಯೆಯೊಬ್ಬಳಿಗೆ ತನ್ನ ಕಿವಿಯನ್ನು ಹರಿದುಕೊಡುತ್ತೇನೆ ಎಂದು ತಮಾಷೆಗಾಗಿ ಎಂದೋ ಮಾತುಕೊಟ್ಟದ್ದು ನೆನಪಿಗೆ ಬಂತು. ವಾನ್ ಗೋ ತನ್ನ ಒಂದು ಕಿವಿಯ ಸ್ವಲ್ಪ ಭಾಗವನ್ನು ಕತ್ತರಿಸಿ, ಅದನ್ನು ಆಕೆಯ ಮನೆಗೆ ಮುಟ್ಟಿಸಿ ಬಂದ; ಕೊಠಡಿಯಲ್ಲಿ ಕುಸಿದುಬಿದ್ದ. ಅಷ್ಟರಲ್ಲಿ ಕೊಠಡಿಗೆ ಬಂದ ಗೋಗಿನ್, ಹೊರಟುಬರುವಂತೆ ವಾನ್‌ಗೋನ ತಮ್ಮನಿಗೆ ತಂತಿ ಕೊಟ್ಟ.

ವಿಕೃತ ಮನಸ್ಸಿನ ವಾನ್ ಗೋ ಹಾಲೆಂಡಿನ ಶ್ರೇಷ್ಠ ಚಿತ್ರಕಾರರಲ್ಲೊಬ್ಬ. ಬಡತನ, ಭಗ್ನಪ್ರೇಮ, ನಿರಾಸೆಗಳಿಂದ ಅವನ ಮನಸ್ಸು ಕಹಿಯಾಗಿತ್ತು.

ವಾನ್ ಗೋ 1853ನೆಯ ಮಾರ್ಚ್ 30ರಂದು ಹಾಲೆಂಡಿನ ಗ್ರೂಟ್–ಜುಂಡರ್ಟ್‌ನಲ್ಲಿ ಜನಿಸಿದ. ತಂದೆ ಪ್ರಾಟೆಸ್ಟೆಂಟ್ ಕ್ರೈಸ್ತ ಪಾದ್ರಿ. ಆರು ಮಕ್ಕಳಲ್ಲಿ ಇವನೇ ಹಿರಿಯವನು. 16ನೆಯ ವಯಸ್ಸಿಗೇ ಹೇಗ್‌ನಲ್ಲಿರುವ ಗೋಪಿಲ್ ಚಿತ್ರ ಪ್ರದರ್ಶನ ಮಂದಿರದಲ್ಲಿ ಸಹಾಯಕನಾಗಿ ಕೆಲಸಕ್ಕೆ ಸೇರಿದ. 20ನೆಯ ವಯಸ್ಸಿನಲ್ಲಿ ಲಂಡನ್ನಿನಲ್ಲಿರುವ ಶಾಖೆಗೆ ವರ್ಗವಾಯಿತು. ಕೆಲಸದಲ್ಲಿ ನಿರಾಸಕ್ತಿಯುಂಟಾಗಿ ಅದನ್ನು ಬಿಟ್ಟುಬಿಟ್ಟ. ಪಾದ್ರಿಯಾಗಿ ಉದ್ಯೋಗ ಹಿಡಿದ. ಇವನಿದ್ದುದು ಗಣಿ ಕೆಲಸಗಾರರ ನಡುವೆ. ಅವರ ಕಷ್ಟಗಳಿಗಾಗಿ ಮರುಗುತ್ತಿದ್ದ ವಾನ್ ಗೋ, ಬಟ್ಟೆ ಇಲ್ಲದಿರುವವರಿಗೆ ತನ್ನ ಬಟ್ಟೆಯನ್ನೇ ಕೊಟ್ಟುಬಿಡುತ್ತಿದ್ದ. ತನ್ನ ಬಳಿ ಇದ್ದ ಸ್ವಲ್ಪ ಆಹಾರವನ್ನೇ ಹಸಿದವರೊಂದಿಗೆ ಹಂಚಿಕೊಂಡು ಊಟಮಾಡುತ್ತಿದ್ದ. ಮುಂದೆ ಈ ಕೆಲಸವನ್ನೂ ವಾನ್ ಗೋ ಬಿಟ್ಟುಬಿಟ್ಟ.

ಪಾದ್ರಿಯ ಕೆಲಸದಲ್ಲಿದ್ದಾಗ ಬಿಡುವಿನ ವೇಳೆಯಲ್ಲಿ ರೇಖಾಚಿತ್ರಗಳನ್ನು ಬರೆಯುತ್ತಿದ್ದ. ಚಿತ್ರಕಲೆಯಲ್ಲಿ ಶಿಕ್ಷಣ ಪಡೆಯಲು ವಾನ್ ಗೋ ಬ್ರಸೆಲ್ಸ್‌ಗೆ ಹೋದ. ಅಲ್ಲಿಂದ ಬಂದ ಮೇಲೆ ತಂದೆಯ ವ್ಯವಸಾಯ ಕ್ಷೇತ್ರದಲ್ಲಿಯೇ ನಿಂತು ಸರಳವಾದ ಹಳ್ಳಿಯ ಜೀವನದ ದೃಶ್ಯಗಳನ್ನು ಚಿತ್ರಿಸುತ್ತಿದ್ದ. 'ದಿ ಪೊಟ್ಯಾಟೊ ಈಟರ್ಸ್' ಈ ಕಾಲದಲ್ಲಿ ಬರೆದ ಚಿತ್ರಗಳಲ್ಲಿ ಮುಖ್ಯವಾದದ್ದು.

ವಾನ್ ಗೋನನ್ನು ಅವರ ಕುಟುಂಬದಲ್ಲಿ ಅರ್ಥಮಾಡಿಕೊಂಡಿದ್ದ ಒಬ್ಬನೇ ವ್ಯಕ್ತಿ ಅವನ ತಮ್ಮ ಥಿಯೊ. ಆತ ವಾನ್ ಗೋಗೆ ಹಣ ಕಳುಹಿಸುತ್ತಿದ್ದ. ಪ್ಯಾರಿಸಿಗೆ ಬಂದಮೇಲೆ ಸಮಷ್ಟಿ ಪರಿಣಾಮ ಪದ್ಧತಿಯಲ್ಲಿ ವಾನ್ ಗೋಗೆ ಆಸಕ್ತಿ ಬೆಳೆಯಿತು. ತಾನೂ ಚಿತ್ರಗಳಿಗೆ ಉಜ್ವಲ ಬಣ್ಣಗಳನ್ನು ಉಪಯೋಗಿಸತೊಡಗಿದ. ಪ್ಯಾರಿಸಿನ ಜೀವನ ಅವನ ಕಣ್ಣುಗಳನ್ನು ಸೆಳೆದಿತ್ತು. ಜನದಟ್ಟಣೆಯ ಕೊಳಕು ಬೀದಿಗಳು, ಕೆಫೆಗಳು, ಸುತ್ತಮುತ್ತಲಿನ ಪ್ರದೇಶಗಳು ಅವನ ಚಿತ್ರಗಳಿಗೆ ವಸ್ತುವಾದುವು. ಅನೇಕ ಚಿತ್ರಗಳನ್ನು ಆತ ರಚಿಸಿದ.

ಎರಡು ವರ್ಷಗಳ ಅನಂತರ ದಕ್ಷಿಣ ಫ್ರಾನ್ಸಿನ ಆರ್ಲಿನ್ಸ್‌ನಲ್ಲಿ ವಾನ್ ಗೋ ಮನೆಮಾಡಿದ. ಸೂರ್ಯಕಾಂತಿ ಹೂವುಗಳನ್ನು, ಸೂರ್ಯನ ಬೆಳಕಿನಿಂದ ಪ್ರಜ್ವಲಿತವಾಗಿರುವ ಹಣ್ಣಿನ ಮರಗಳನ್ನು ಚಿತ್ರಿಸಿದ. ಚಲಿಸುತ್ತಿರುವಂತೆ, ಜೀವಂತವಾಗಿರುವಂತೆ ಇದ್ದುವು ಅವನ ಚಿತ್ರಗಳು.

ವಾನ್ ಗೋನ ಜೊತೆಯಲ್ಲಿರಲು ಪಾಲ್ ಗೋಗಿನ್ ಬಂದಾಗ ಇಬ್ಬರೂ ಉತ್ಸಾಹದಿಂದ ಅನೇಕ ಚಿತ್ರಗಳನ್ನು ಬರೆದರು. ಆದರೆ ಕೆಲ ಕಾಲಾನಂತರ ಗೋಗಿನನ ದರ್ಪಯುಕ್ತ ನಡವಳಿಕೆ ಸರಿಬರದೆ ವಾನ್ ಗೋನ ಮನಸ್ಸು ಅಸ್ತವ್ಯಸ್ತವಾಯಿತು. ಹೋಟಲಿನಲ್ಲಿ ವಾನ್ ಗೋ ತನ್ನ ಗೆಳೆಯನ ಮೇಲೆ ಗಾಜಿನ ಲೋಟವನ್ನೆಸೆದ. ಕ್ಷೌರಕತ್ತಿ ಪ್ರಕರಣ ನಡೆದು, ಗೋಗಿನ್ ಪ್ಯಾರಿಸಿಗೆ ಹಿಂದಿರುಗಿದ ಮೇಲೆ, ವಾನ್ ಗೋ ಆಗಾಗ್ಗೆ ಹುಚ್ಚಾಸ್ಪತ್ರೆ ಸೇರಬೇಕಾಗಿ ಬಂತು. ಮನಸ್ಸು ಸ್ವಸ್ಥವಾಗಿದ್ದಾಗ ಚಿತ್ರಗಳನ್ನು ಬರೆಯುತ್ತಿದ್ದ. ಕೊನೆಗೊಮ್ಮೆ, ಅಸ್ವಸ್ಥತೆಯ ದಿನಗಳು ಹತ್ತಿರಬಂದಾಗ ಗುಂಡು ಹಾರಿಸಿಕೊಂಡು ವಾನ್‌ಗೋ ಆತ್ಮಹತ್ಯೆ ಮಾಡಿಕೊಂಡ. ಸೋದರ ಥಿಯೋನ ಮಡಿಲಲ್ಲಿ 1890ರ ಜೂಲೈ 29ರಂದು ನಿಧನನಾದ.

ಆತನ ಕೃತಿಗಳಲ್ಲಿ ಪ್ರಮುಖವಾದುವು —'ನಕ್ಷತ್ರಮಯ ರಾತ್ರಿ' 'ಸೂರ್ಯಕಾಂತಿ ಹೂಗಳು', 'ಸಿಪ್ರಸ್ ಮರಗಳು'. 'ಆರ್ಲಿನ್ಸ್ ಸೇತುವೆ' ಮತ್ತು ಅನೇಕ ಸ್ವಚಿತ್ರಗಳು.

ಚಿತ್ರಕಾರನಾಗಿ ಆತ ಕಳೆದದ್ದು ಹತ್ತೇ ವರ್ಷಗಳಾದರೂ ಸುಮಾರು 800 ತೈಲಚಿತ್ರಗಳನ್ನೂ 700 ರೇಖಾಚಿತ್ರಗಳನ್ನೂ ವಾನ್ ಗೋ ರಚಿಸಿದ್ದಾನೆ.

ಒಂದು ಆತ್ಮಕಥೆಯನ್ನೂ ವಾನ್ ಗೋ ಬರೆದಿದ್ದಾನೆ.

## ವಾಲ್ಟ್ ಡಿಸ್ನಿ

ಷಿಕಾಗೋ ನಗರದ ಹೂದೋಟವೊಂದರಲ್ಲಿ ದಿನಗೂಲಿಯ ಮೇಲೆ ಒಬ್ಬ ಹುಡುಗ ಕೆಲಸ ಮಾಡುತ್ತಿದ್ದ. ಆತ ವಾಸಿಸುತ್ತಿದ್ದುದು ಒಂದು ಗ್ಯಾರೇಜಿನಲ್ಲಿ. ಸಂಜೆ ಕೆಲಸದಿಂದ ಮರಳಿದ ಮೇಲೆ ಚಿತ್ರ ಬರೆಯುವುದು ಅವನ ಹವ್ಯಾಸ. ಆ ಗ್ಯಾರೇಜಿನಲ್ಲಿ ಒಂದು ಇಲಿಯ ಸ್ನೇಹ ಅವನಿಗೆ ಲಭಿಸಿತು. ಚಿತ್ರ ಬಿಡಿಸುವ ಹಾಳೆಯ ಬಳಿ ಕುಳಿತು ಇಲಿ ತನ್ನ ಮೀಸೆಯನ್ನು ತೀಡಿಕೊಳ್ಳುತ್ತಿತ್ತು. ಇಲಿಯ ಈ ಚೇಷ್ಟೆ ಆ ಹುಡುಗನ ಮನಸ್ಸನ್ನು ಆಕರ್ಷಿಸಿತು.

ಮುಂದೆ ಆ ಹುಡುಗ ಪ್ರಸಿದ್ಧ ಚಲಚ್ಚಿತ್ರ ನಿರ್ಮಾಪಕನಾದ. ವ್ಯಂಗ್ಯ ಚಲಚ್ಚಿತ್ರಗಳನ್ನು ನಿರ್ಮಿಸಿದ. ಯಶಸ್ಸು ಕಂಡ ಅವನ ಚಲಚ್ಚಿತ್ರಕ್ಕೆ ಇಲಿಯೇ ಸ್ಫೂರ್ತಿಯಾಯಿತು.

ಆ ಚಿತ್ರದ ನಿರ್ಮಾಪಕ —ವಾಲ್ಟ್ ಡಿಸ್ನಿ. ಚಿತ್ರದ ನಾಯಕ ಪಾತ್ರದ ಮಿಕ್ಕಿ ಮೌಸ್ ಒಂದು ಚತುರ ಇಲಿ. ವಾಲ್ಟ್ ಡಿಸ್ನಿ ಮುಂದೆ ವ್ಯಂಗ್ಯ ಚಲಚ್ಚಿತ್ರಗಳಲ್ಲಿ ಇತರ ಪ್ರಾಣಿಗಳನ್ನೂ ಪಾತ್ರಗಳನ್ನೂ ಸೃಷ್ಟಿಸಿದ.



ಕಿನ್ನರಲೋಕದ ಸೃಷ್ಟಿಕರ್ತ : ಡಿಸ್ನಿ

ವಾಲ್ಟ್ ಡಿಸ್ನಿ (ವಾಲ್ಟರ್ ಉರುಫ್ ಡಿಸ್ನಿ) 1905ರ ಡಿಸೆಂಬರ್ 5ರಂದು ಷಿಕಾಗೋದಲ್ಲಿ ಜನಿಸಿದ. ಕಿತ್ತು ತಿನ್ನುವ ಬಡತನ. ಚಿತ್ರ ಬಿಡಿಸುವುದರಲ್ಲಿ ಆಸಕ್ತಿ. ಜೀವನೋಪಾಯಕ್ಕಾಗಿ ಶ್ರಮದ ದುಡಿಮೆ. ಮೊದಲನೆಯ ಮಹಾಯುದ್ಧದ ವೇಳೆಗೆ ಆತನ ವಯಸ್ಸು 17. ಯುದ್ಧದ ಸಮಯದಲ್ಲಿ ಯೂರೋಪಿನಲ್ಲಿ ರೆಡ್‌ಕ್ರಾಸ್ ಸಂಸ್ಥೆಯ ಆಂಬ್ಯುಲೆನ್ಸ್ ಚಾಲಕನಾಗಿ ಕೆಲಸ ಮಾಡಿದ. ಯುದ್ಧ ಮುಗಿದಮೇಲೆ ಅಮೆರಿಕಕ್ಕೆ ಮರಳಿದ. ರಾತ್ರಿಹೊತ್ತು ಚಿತ್ರಕಲೆ ಬೋಧಿಸುವ ಶಾಲೆಯಲ್ಲಿ ಕಲಿಯಲು ಮೊದಲು ಮಾಡಿದ. ಚಲಚ್ಚಿತ್ರ ಮಂದಿರಗಳಲ್ಲಿ ಪ್ರದರ್ಶಿಸುವ ಸ್ಲೈಡುಗಳನ್ನು ತಯಾರಿಸುವ ಒಂದು ಜಾಹೀರಾತು ಸಂಸ್ಥೆಗೆ ನೆರವಾದ.

ಡಿಸ್ನಿಗೆ ವ್ಯಂಗ್ಯ ಚಲಚ್ಚಿತ್ರ ತೆಗೆಯಬೇಕೆಂಬಾಸೆ. ಸ್ಲೈಡುಗಳ ತಯಾರಿಕೆಯಲ್ಲಿ ಅನುಭವ ಕುದುರಿದಂತೆ ತನ್ನ ಸೋದರನ ಜೊತೆಗೂಡಿ



ಡಿಸ್ನಿಲ್ಯಾಂಡಿನ 'ಕೋಟೆ ಕೊತ್ತಲ'



'ಫಾಂಟೇಸಿಯ' ಚಿತ್ರಮಾಲಿಕೆಯಿಂದ



ಡಿಸ್ನಿಲ್ಯಾಂಡಿನಲ್ಲಿ ಕಂಪ್ಯೂಟರ್ ನಿಯಂತ್ರಿತ ಕರಡಿ

ಸ್ವಂತ ಚಲಚ್ಚಿತ್ರ ಕಂಪನಿಯನ್ನು ಆರಂಭಿಸಿದ. 1923ರಲ್ಲಿ ರಚಿಸಿದ ಮೊದಲ ವ್ಯಂಗ್ಯ ಚಿತ್ರದಲ್ಲಿ ಮನುಷ್ಯರ ಅಂಗಚೇಷ್ಟೆ ಮಾಡುವ ಒಂದು ಮೊಲದ ಪಾತ್ರ ಸೃಷ್ಟಿಸಿದ. ವ್ಯಂಗ್ಯ ಚಲಚ್ಚಿತ್ರ ರಚನೆ ಸುಲಭದ ಕೆಲಸವಲ್ಲ. ಮೊದಲು ಸಾವಿರಾರು ಸ್ಥಿರ ಅಣಕು ಚಿತ್ರಗಳನ್ನು ಬರೆಯಬೇಕು. ಒಂದು ಚಿತ್ರವನ್ನು ಅದರ ಹಿಂದಿನ ಮತ್ತು ಮುಂದಿನ ಚಿತ್ರಗಳಿಗೆ ಹೋಲಿಸಿದರೆ ಕಾಣಿಸುವ ವ್ಯತ್ಯಾಸ ಅಲ್ಪ. ಆದರೆ ಚಿತ್ರಗಳನ್ನು ಒಂದೇ ಸಮನೆ ವೇಗವಾಗಿ ಸರಿಸಿದರೆ ವ್ಯಂಗ್ಯ ಚಿತ್ರದ ಪಾತ್ರಗಳು ಸರಿದು ನಟಿಸಿದಂತೆ ಕಾಣುತ್ತದೆ. ಡಿಸ್ನಿಯ ಮೊದಲ ಚಿತ್ರಕ್ಕೆ ಯಶಸ್ಸು ದೊರೆಯಲಿಲ್ಲ. ಕಂಪನಿ ದಿವಾಳಿ ಏಳುವಂತಾಯಿತು. ಆಗಲೇ ಡಿಸ್ನಿ ಅಣಕು ಚಲಚ್ಚಿತ್ರದಲ್ಲಿ ಇಲಿಯನ್ನು —ಮಿಕ್ಕಿ ಮೌಸ್ ಅನ್ನು— ಸೃಷ್ಟಿಸಿದ್ದು. ಡಿಸ್ನಿಯ ಈ ಇಲಿ ಬೇಗ ಲೋಕವಿಖ್ಯಾತವಾಯಿತು. ಮುಂದೆ ಡಿಸ್ನಿ ಅನೇಕ ವ್ಯಂಗ್ಯ ಚಲಚ್ಚಿತ್ರಗಳನ್ನು ತಯಾರಿಸಿದ. ಕೀರ್ತಿ, ಹಣ ಎರಡನ್ನೂ ಗಳಿಸಿದ. ಆತನ 'ಸಿಲ್ಲಿ ಸಿಂಫನೀಸ್' ವ್ಯಂಗ್ಯ ಚಲಚ್ಚಿತ್ರ ಮಾಲೆ, ನೀತಿ ಕಥೆಗಳ ಚಿತ್ರಣ. ಇದರ ಸಂಗೀತ ವಿಶಿಷ್ಟವಾದದ್ದು.

ಡಿಸ್ನಿಯ ಕಲ್ಪನಾಶಕ್ತಿ ಅದ್ಭುತವಾಗಿತ್ತು. ಅವನ ಚಿತ್ರಗಳಲ್ಲಿ ಪ್ರಾಣಿಗಳು ಮಾತ್ರವಲ್ಲದೆ ಗಿಡ ಮರ ಹಾವುಗಳು ಕೂಡಾ ಪಾತ್ರಗಳೇ. ಡಿಸ್ನಿಯ ರಮ್ಯ ಪ್ರಪಂಚದಲ್ಲಿ ಜೇರುಂಡೆ ಹೂವಿನ ತುತ್ತೂರಿಯನ್ನೂದಬಲ್ಲುದು. ಗಿಡದ ಎಲೆಯು ಬಾಲಕಿಯಂತೆ ತೊನೆದಾಡಿ ನರ್ತಿಸಬಹುದು. ಅತಿ ಅಗಲ ಕಿವಿಗಳನ್ನು ಹೊಂದಿದ ಆನೆಮರಿ ಕಿವಿಗಳನ್ನು ರೆಕ್ಕೆಯ ಹಾಗೆ ಆಡಿಸುತ್ತ ಆಕಾಶದಲ್ಲಿ ಹಾರಬಲ್ಲುದು. ಅಷ್ಟೇಕೆ, ಸಾಗುತ್ತಿರುವ ರೈಲು ಬಂಡಿಯು ಹಳಿಯನ್ನು ದಾಟುತ್ತಿರುವ ಹಸುವಿಗೆ ಶಿರಬಾಗಿ ನಮಿಸಿ ನಿಂತು ಮತ್ತೆ ಮುಂದೆ ಸಾಗಬಹುದು ಕೂಡ. ಆಲೋಚಿಸುವ ಮಾತನಾಡುವ ಇಲಿಯಂತೆಯೇ ಡಿಸ್ನಿ ಮತ್ತೊಂದು ಪಾತ್ರವನ್ನು ಸೃಷ್ಟಿಸಿದ. ಅದೇ ಡೊನಾಲ್ಡ್ ಎಂಬ ಬಾತು. ಭಯ ವಿಹ್ವಲಳಾಗಿದ್ದ ಹುಡುಗಿಯೊಬ್ಬಳು ಪದ್ಯವೊಂದನ್ನು ಹಾಡುತ್ತಿದ್ದುದನ್ನು ಕಂಡಾಗ ಡೊನಾಲ್ಡ್ ಬಾತಿನ ಪಾತ್ರ ಕಲ್ಪನೆ ಡಿಸ್ನಿಗೆ ಬಂತು. ಅವನು ಸೃಷ್ಟಿಸಿದ ಇನ್ನೊಂದು ಪಾತ್ರ ಪ್ಲೂಟೋ ಎಂಬ ಅಳುಮೋರೆಯ ನಾಯಿ.

ಡಿಸ್ನಿ ಮೊದಲು ಮೊದಲು ತೆಗೆದ ಚಿತ್ರಗಳಲ್ಲಿ ಚಲನೆ ಇತ್ತೇ ಹೊರತು ಶಬ್ದವಿರಲಿಲ್ಲ. ಶಬ್ದ ಮಾಡುವ ಮಾತನಾಡುವ ಮಿಕ್ಕಿ ಮೌಸ್ ಚಿತ್ರಗಳನ್ನು 1930ರ ಸುಮಾರಿನಲ್ಲಿ ತಯಾರಿಸಿದಾಗ ಅವು ಮತ್ತಷ್ಟು ಜನಪ್ರಿಯವಾದುವು. 1933ರಲ್ಲಿ ಮೊದಲ ಬಣ್ಣದ ವ್ಯಂಗ್ಯ ಚಲಚ್ಚಿತ್ರವನ್ನು ಅವನು ತಯಾರಿಸಿದ. ಮೊದಲಿನ ಕಿರುಚಿತ್ರಗಳ ಬದಲಿಗೆ ಮುಂದೆ 1940ರ ಹೊತ್ತಿಗೆ ದೀರ್ಘವಾದ ವ್ಯಂಗ್ಯ ಚಲಚ್ಚಿತ್ರಗಳನ್ನು ತಯಾರಿಸಿದ. 'ಸಿಂಡರೆಲ್ಲಾ', 'ಆಲಿಸ್ ಇನ್ ವಂಡರ್ ಲ್ಯಾಂಡ್' ಇಂಥವು. 'ಪಿನೋಕಿಯೊ' ಮತ್ತು 'ಫಾಂಟೇಸಿಯ' ಡಿಸ್ನಿಯ ಅದ್ಭುತ ಕೃತಿಗಳು. ಚಿತ್ರದ ಪಾತ್ರಗಳು ಐರೋಪ್ಯ ಶಾಸ್ತ್ರೀಯ ಸಂಗೀತಕ್ಕೆ ತಮ್ಮ ಭಾವಗಳನ್ನು ಹೊಂದಿಸುತ್ತಿದ್ದುವು. 'ಸ್ನೋ ವೈಟ್' ಚಿತ್ರಕ್ಕಾಗಿ ಅವನು 20 ಲಕ್ಷ ಚಿತ್ರಗಳನ್ನು ಬರೆಸಬೇಕಾಯಿತು. ಇದಕ್ಕಾಗಿ 640 ಜನ ಚಿತ್ರಕಾರರು ದುಡಿದರು.

ವಾಲ್ಟ್ ಡಿಸ್ನಿ ವ್ಯಂಗ್ಯ ಚಲಚ್ಚಿತ್ರಗಳ ಜೊತೆಗೆ ನೈಜ ಚಲಚ್ಚಿತ್ರಗಳನ್ನೂ ನಿರ್ಮಿಸಿದ. ಪ್ರಾಣಿ, ಕೀಟ, ಪಕ್ಷಿಗಳ ಚಲನವಲನಗಳನ್ನು ಅವನು ಅತಿ ಹತ್ತಿರದಿಂದ ಚಿತ್ರಿಸಿದ. 1954ರಿಂದ ಟೆಲಿವಿಷನ್ ವ್ಯಂಗ್ಯ ಚಿತ್ರಗಳನ್ನು ಕೂಡಾ ತಯಾರಿಸಲು ಮೊದಲು ಮಾಡಿದ.

ವಾಲ್ಟ್ ಡಿಸ್ನಿಯ ಅದ್ಭುತ ಕಲ್ಪನೆ ನಿಜಜೀವನಕ್ಕಿಳಿದದ್ದು ಅವನ 'ಡಿಸ್ನಿ ಲ್ಯಾಂಡ್' ನಿರ್ಮಾಣದ ಮೂಲಕ. ಡಿಸ್ನಿ ಲ್ಯಾಂಡ್ 1955ರಲ್ಲಿ ಆತ ಲಾಸ್ ಏಂಜಲೀಸ್‌ನಲ್ಲಿ ನಿರ್ಮಿಸಿದ ಒಂದು ಅದ್ಭುತ ಪ್ರಪಂಚ. ಹಳೆಯ ಕಾಲದ ಕೋಟೆ ಕೊತ್ತಲಗಳನ್ನು ಅಲ್ಲಿ ಕಾಣಬಹುದು ; ಅತ್ಯಂತ ನೈಜವಾಗಿ ಕಾಣುವ ಅರಣ್ಯ ತಾಣಗಳನ್ನು ನೋಡಬಹುದು : ಒಂದೇ ಹಳಿಯ ಮೇಲೆ ಓಡುವ ರೈಲು, ವ್ಯೋಮನೌಕೆಗಳ ಮಾದರಿಗಳು ಮುಂತಾದುವನ್ನೂ ಕಾಣಬಹುದು. ಮಕ್ಕಳ ಪಾಲಿಗೆ ಅದೊಂದು ನೆಲದ ಮೇಲೆಯೇ ಸೃಷ್ಟಿಸಿದ ಕಿನ್ನರಲೋಕ. ಅಂಥದೇ ಇನ್ನೊಂದು ಡಿಸ್ನಿ ಲ್ಯಾಂಡನ್ನು ಫ್ಲಾರಿಡಾದಲ್ಲಿ ನಿರ್ಮಿಸುತ್ತಿದ್ದಾಗಲೇ 1966ರ ಡಿಸೆಂಬರ್ 15ರಂದು ಡಿಸ್ನಿ ತೀರಿಕೊಂಡ. ಆಗ ಅವನ ವಯಸ್ಸು ಅರವತ್ತೈದು ವರ್ಷ.

## ವಾಲ್ಟ್ ವ್ಹಿಟ್ಮನ್

1855ರಲ್ಲಿ ವಾಲ್ಟ್ ವ್ಹಿಟ್ಮನನ ಕವನ ಸಂಕಲನ 'ಲೀವ್ಸ್ ಆಫ್ ಗ್ರಾಸ್' ಪ್ರಕಟವಾಯಿತು. ಅದರಲ್ಲಿದ್ದದ್ದು ಹನ್ನೆರಡು ಕವಿತೆಗಳು. ಪುಟಸಂಖ್ಯೆ 95. ಗಿರಾಕಿಗಳಿಲ್ಲದೆ ಪ್ರತಿಗಳು ಮೂಲೆಗುಂಪಾದುವು. ಅಪ್ಪಿತಪ್ಪಿ ಈ ಪುಸ್ತಕವನ್ನು ಓದಿದ ಕೆಲವರು ಇದರಲ್ಲಿನ ಸಂಪ್ರದಾಯವಿರೋಧಿ ವಿಚಾರಗಳನ್ನೂ ಪ್ರಾಸಬದ್ಧವಲ್ಲದ ಕವಿತೆ ರಚನೆಯ ಪದ್ಧತಿಯನ್ನೂ ನೋಡಿ ಮೂಗುಮುರಿದರು. ತಮ್ಮಲ್ಲಿ ಗುಮಾಸ್ತೆಯಾಗಿರುವ ವ್ಹಿಟ್ಮನ್ ಈ 'ಅಶ್ಲೀಲ' ಪುಸ್ತಕವನ್ನು ಬರೆದ ಎಂದು ಅಮೆರಿಕದ ಗೃಹಖಾತೆಯ ಅಧಿಕಾರಿಗಳಿಗೆ ತಿಳಿದೊಡನೆ ಅವನ ನೌಕರಿ ಹೋಯಿತು.

ಆದರೆ ಆ ಪುಸ್ತಕ ಪ್ರಕಟವಾಗಿ ಸುಮಾರು ಹದಿನೈದು ವರ್ಷಗಳ ಬಳಿಕ ಇಂಗ್ಲೆಂಡಿನ ವಿಮರ್ಶಕರು ವ್ಹಿಟ್ಮನನ ಕವಿತೆಗಳನ್ನು ಬಾಯಿ ತುಂಬ



'ಗಂಡಸು' ಕವಿ : ವ್ಹಿಟ್ಮನ್

ಹೊಗಳಿದರು. ಆಂಗ್ಲ ಸಾಹಿತಿ ಆರ್. ಡಬ್ಲ್ಯು. ಎಮರ್ಸನ್ "ಅಮೆರಿಕದ ಸಾಹಿತ್ಯದಲ್ಲಿ ಇದು ಅಸಾಧಾರಣ ಪ್ರತಿಭೆ" ಎಂದು ಘೋಷಿಸಿದ. ಅಮೆರಿಕದ ಜನರೂ ಕಣ್ಣು ತೆರೆದು ವ್ಹಿಟ್ಮನನ ಪುಸ್ತಕದ ಪ್ರತಿಗಳನ್ನು ಕೊಂಡು ಓದತೊಡಗಿದರು.

'ಲೀವ್ಸ್ ಆಫ್ ಗ್ರಾಸ್' ಹನ್ನೊಂದು ಮುದ್ರಣಗಳನ್ನು ಕಂಡಿತು. ಪ್ರತಿ ಮುದ್ರಣದಲ್ಲಿ ವ್ಹಿಟ್ಮನ್ ಕೆಲಕೆಲವು ಹೊಸ ಕವನಗಳನ್ನು ಸೇರಿಸುತ್ತ ಹೋದ. 1892ರ ಆವೃತ್ತಿಯಲ್ಲಿ ನಾಲ್ಕುನೂರಕ್ಕಿಂತ ಹೆಚ್ಚು ಪುಟಗಳಿದ್ದುವು.

ವಾಲ್ಟ್ ವ್ಹಿಟ್ಮನ್ ನ್ಯೂಯಾರ್ಕ್ ಸಂಸ್ಥಾನದ ಲಾಂಗ್ ಐಲೆಂಡಿನ ಬಡಗಿಯೊಬ್ಬನ ಮಗ. ಜನನ 1819ರ ಮೇ 31ರಂದು. ವಾಲ್ಟ್‌ಗೆ ನಾಲ್ಕು ವರ್ಷ ವಯಸ್ಸಾಗಿದ್ದಾಗ ತಂದೆ ಹೆಚ್ಚಿನ ಉದ್ಯೋಗ ಅವಕಾಶ ಅರಸಿಕೊಂಡು ಬ್ರೂಕ್‌ಲಿನ್ ಪಟ್ಟಣಕ್ಕೆ ವಲಸೆ ಬಂದ. ವಾಲ್ಟ್‌ಗೆ ದೊರೆತ ವಿದ್ಯಾಭ್ಯಾಸ ಅಷ್ಟಕ್ಕಷ್ಟೇ. 'ಓದಿ ಅಲೆಯುವುದೂ ಕವಿತೆ ಬರೆಯುವುದೂ' ಇವನ ಹವ್ಯಾಸವಾಯಿತು. ಹೊಟ್ಟೆ ಹೊರೆಯುವುದಕ್ಕೆ ಈತ ವಕೀಲನ ಕಚೇರಿಯ ಜವಾನನಾಗಿ, ಮುದ್ರಣಕಾರನ ಸಹಾಯಕನಾಗಿ, ಹಳ್ಳಿ ಶಾಲೆಗಳಲ್ಲಿ ಅಧ್ಯಾಪಕನಾಗಿ ಕೆಲಸ ಮಾಡಿದ. 27ನೆಯ ವಯಸ್ಸಿನಲ್ಲಿ ಒಂದು ಸಣ್ಣ ವೃತ್ತಪತ್ರಿಕೆಯ ಸಂಪಾದಕನಾದ. ಆದರೆ ಎರಡು ವರ್ಷಗಳ ಬಳಿಕ ತನ್ನ ರಾಜಕೀಯ ಅಭಿಪ್ರಾಯಗಳಿಂದಾಗಿ ಕೆಲಸ ಕಳೆದುಕೊಳ್ಳಬೇಕಾಯಿತು. ಬೇರೆ ಏನೂ ತೋಚದೆ ತನ್ನ ತಂದೆಯ ಮನೆಗೆ ಹಿಂದಿರುಗಿ ಬಡಗಿ ಕೆಲಸ ಕಲಿಯತೊಡಗಿದ.

ಕೆಲ ಸಮಯದಲ್ಲೇ ವಾಲ್ಟ್ ವ್ಹಿಟ್ಮನ್ ಚತುರ ಬಡಗಿಯೆಂದು ಹೆಸರುಗಳಿಸಿದ. ಮರದ ಮನೆಗಳನ್ನು ಕಟ್ಟಿ ಮಾರುವ ಉದ್ಯೋಗದಲ್ಲಿ ಇವನು ಯಶಸ್ವಿಯಾದ. ಇದೇ ಸಮಯದಲ್ಲಿ ವಾಲ್ಟ್ ವ್ಹಿಟ್ಮನ್ ಕವಿತಾರಚನೆಯ ರೀತಿಯನ್ನು ರೂಢಿಸಿಕೊಂಡ. 1861ರಲ್ಲಿ ಅಮೆರಿಕದ ಅಂತರ್ಯುದ್ಧ ಆರಂಭವಾದಾಗ ಈತ ಗಾಯಾಳುಗಳ ಸೇವೆಗೆ ಸಿದ್ಧನಾದ. ಯುದ್ಧರಂಗದ ಇವನ ಅನುಭವಗಳು ಮತ್ತೆ ಹಲವು ಕವನಗಳ ರಚನೆಗೆ ಕಾರಣವಾದುವು. 1865ರಲ್ಲಿ ಇವನ 'ಡ್ರಮ್ ಟಾಪ್ಸ್' ಕವನಸಂಕಲನ ಪ್ರಕಟವಾಯಿತು.

ಇಂಥದೇ ಎಂದು ಹೇಳಬಹುದಾದ ಛಂದಸ್ಸು ಅಥವಾ ಪದಪ್ರಯೋಗದ ರೀತಿ ಇಲ್ಲದ ವ್ಹಿಟ್ಮನನ ಕವಿತೆಗಳು ಸಾಹಿತ್ಯರಂಗದಲ್ಲಿ ಕ್ರಾಂತಿಯನ್ನುಂಟುಮಾಡಿದುವು. ಮುಕ್ತ ಛಂದಸ್ಸಿನ ಜನಕ ಈತ. ಕವಿತೆಯಲ್ಲಿ ವ್ಯಕ್ತಪಡಿಸಿದ ವಿಚಾರಗಳೂ ಜನರಿಗೆ ಹೊಸದು. ವೈಯಕ್ತಿಕ ಸ್ವಾತಂತ್ರ್ಯದಿಂದ ಹಿಡಿದು ಲೈಂಗಿಕ ವಿಚಾರಗಳವರೆಗೆ ಹಲವು ವಿಷಯಗಳನ್ನು ಕುರಿತು ವ್ಹಿಟ್ಮನ್ ನಿರ್ಭಯವಾಗಿ ಬರೆದ. ಕವಿತೆಗಳಲ್ಲಿ ಸೌಂದರ್ಯವೂ ಒರಟುತನವೂ ಇದೆ. 'ಡೆಮಾಕ್ರಾಟಿಕ್ ವಿಸ್ತಾಸ್' ಎಂಬುದು ವ್ಹಿಟ್ಮನನ ಪ್ರಮುಖ ಗದ್ಯ ಕೃತಿ.

ವ್ಹಿಟ್ಮನನ ಕವಿತೆಗಳನ್ನು ಬಹುವಾಗಿ ಮೆಚ್ಚಿಕೊಂಡವರಲ್ಲಿ ಅಧ್ಯಕ್ಷ ಅಬ್ರಹಾಂ ಲಿಂಕನನೂ ಒಬ್ಬ. ಈತ ವ್ಹಿಟ್ಮನನನ್ನು ಮೊದಲಿಗೆ ಭೇಟಿಯಾದಾಗ "ಹೂಂ. ಇವನು ನಿಜವಾದ ಗಂಡಸಿನಂತೆ ಕಾಣ್ತಾನೆ" ಎಂದು ಲಿಂಕನ್ ಉದ್ಗರಿಸಿದ. ಲಿಂಕನ್ ತೀರಿಕೊಂಡಾಗ ವ್ಹಿಟ್ಮನ್ ಬರೆದ 'ಓ ಕ್ಯಾಪ್ಟನ್, ಮೈ ಕ್ಯಾಪ್ಟನ್' ಪ್ರಸಿದ್ಧ ಶೋಕಗೀತೆ.

1873ರಲ್ಲಿ ವ್ಹಿಟ್ಮನ್‌ಗೆ ಪಾರ್ಶ್ವವಾಯು ತಗಲಿದರೂ ಇವನ ಕವಿತೆಯ ಒರತೆ ಬತ್ತಲಿಲ್ಲ. ನ್ಯೂಜೆರ್ಸಿ ಸಂಸ್ಥಾನದ ಕ್ಯಾಮ್‌ಡೆನ್ ಎಂಬಲ್ಲಿ ಜಮೀನು ಖರೀದಿಮಾಡಿ, ಮನೆಕಟ್ಟಿಕೊಂಡು, ಇರತೊಡಗಿದ. ಯೂರೋಪಿನ ಪ್ರಸಿದ್ಧ ಸಾಹಿತಿಗಳೆಲ್ಲ ಇವನಲ್ಲಿಗೆ ಬಂದುಹೋಗುತ್ತಿದ್ದರು.

1892ರ ಮಾರ್ಚ್ 26ರಂದು ಎಪ್ಪತ್ತಮೂರರ ವ್ಹಿಟ್ಮನ್ ಕಣ್ಮುಚ್ಚಿದಾಗ, ಇಡೀ ಅಮೆರಿಕವೇ ಶೋಕ ಆಚರಿಸಿತು.

## ವಾಲ್ಮೀಕಿ

"ಕಾವ್ಯಶ್ರೀಯ ಕೊಂಬೆಯನ್ನೇರಿ' 'ರಾಮ ರಾಮ' ಎಂಬ ಮಧುರ ಅಕ್ಷರಗಳನ್ನು ಮಧುರವಾಗಿ ಧ್ವನಿಗೈಯುವ ವಾಲ್ಮೀಕಿ ಕೋಗಿಲೆಯನ್ನು ವಂದಿಸುತ್ತೇನೆ".

—ಪ್ರಾಚೀನ ಶ್ಲೋಕವೊಂದು ಭಾರತದ ಆದಿ ಕವಿ ವಾಲ್ಮೀಕಿಯನ್ನು ಹೀಗೆ ಹೊಗಳುತ್ತದೆ.

ವಾಲ್ಮೀಕಿ ರಾಮಾಯಣ ಲೋಕಪೂಜ್ಯ ಗ್ರಂಥ.

ವಾಲ್ಮೀಕಿ ಪ್ರಚೇತಸನ ಮಗ. ಕಾಡಿನಲ್ಲಿ ಬೇಡರ ಸಂಗಡ ಸೇರಿ ಆತ ದಾರಿಗಳ್ಳನಾದ. ದಾರಿಹೋಕರನ್ನು ಕಾಡಿಸಿ, ಪೀಡಿಸಿ, ಅವರಲ್ಲಿದ್ದುದನ್ನೆಲ್ಲ ದೋಚುತ್ತಿದ್ದ. ಒಮ್ಮೆ ಸಪ್ತರ್ಷಿಗಳು ಬಂದಾಗ ಅವರನ್ನೂ ಅದೇ ರೀತಿ ಹಿಂಸಿಸಿದ. ಆದರೆ ಅವರು ಈತನ ಮೇಲೆ ಕರುಣೆ ಇಟ್ಟು, "ಇಂಥ ನೀಚ ಕಾರ್ಯವನ್ನು ಬಿಟ್ಟುಬಿಡು ; ರಾಮನಾಮ ಸ್ಮರಣೆ ಮಾಡು", ಎಂದು ಉಪದೇಶಿಸಿದರು.

ಬೇಡ ಅಂತೆಯೇ ಹಗಲೂ ರಾತ್ರಿ ರಾಮನಾಮ ಜಪದಲ್ಲಿ ನಿರತನಾದ. ವರ್ಷಗಳೇ ಉರುಳಿದುವು. ಆತನ ಮೇಲೆ ಹುತ್ತಗಳು ಬೆಳೆದುವು. ಸಪ್ತರ್ಷಿಗಳು ಮತ್ತೆ ಬಂದು ಆತನನ್ನು ಎಚ್ಚರಿಸಿದಾಗ ಅವನಿಗೆ ಹೊಸ ಜನ್ಮ ಬಂತು. ವಲ್ಮೀಕ ಅಂದರೆ ಹುತ್ತ. ವಲ್ಮೀಕದಿಂದ ಹೊರ ಬಂದವನಾದ ಕಾರಣ ಅವನು ವಾಲ್ಮೀಕಿ ಎನಿಸಿಕೊಂಡ.

ವಾಲ್ಮೀಕಿ ಒಂದು ದಿನ ತಮಸಾ ನದಿಗೆ ಸ್ನಾನಕ್ಕಾಗಿ ಹೋಗುತ್ತಿದ್ದಾಗ ಆಕಾಶದಲ್ಲಿ ಹಾರಾಡುತ್ತಿದ್ದ ಕ್ರೌಂಚ ಪಕ್ಷಿ ಜೋಡಿಯನ್ನು ಕಂಡ. ಅವು



ವ್ಯಾಧ ಮತ್ತು ವಾಲ್ಮೀಕಿ

ಗಳಲ್ಲಿ ಗಂಡುಹಕ್ಕಿಯನ್ನು ಬೇಡನೊಬ್ಬ ಬಾಣದಿಂದ ನೆಲಕ್ಕೆ ಕೆಡವಿದ. ರಕ್ತಕಾರುತ್ತ ಚೀರುತ್ತ ನೆಲಕ್ಕೆ ಬಿದ್ದ ಗಂಡುಹಕ್ಕಿಯನ್ನು ಕಂಡು ಹೆಣ್ಣು ಹಕ್ಕಿ ಹೃದಯವಿದ್ರಾವಕವಾಗಿ ಕೂಗಿಕೊಂಡಿತು. ಶೋಕಾತಿರೇಕದಿಂದ ವಾಲ್ಮೀಕಿ ಬೇಡನನ್ನು ಶಪಿಸಿದ. ಅಂದಿನ ದುರ್ಘಟನೆಯಿಂದ ಋಷಿಯ ಮನಸ್ಸು ವ್ಯಾಕುಲವಾಯಿತು. ಆಶ್ರಮದಲ್ಲಿ ಧ್ಯಾನಮಗ್ನನಾಗಿದ್ದಾಗ ಬ್ರಹ್ಮನು ಕಾಣಿಸಿಕೊಂಡು, ನಾರದರಿಂದ ಕೇಳಿದಂತೆ 'ರಾಮಾಯಣ ಕಥೆ,ಯನ್ನು ಬರೆಯಲು ಹೇಳಿದ.

ಬ್ರಹ್ಮನಿಂದ ಸ್ಫೂರ್ತಿ ಮತ್ತು ಆಶೀರ್ವಾದ ಪಡೆದ ವಾಲ್ಮೀಕಿ ರಾಮಾಯಣ ಮಹಾಕಾವ್ಯವನ್ನು ರಚಿಸಿದ. ಅವನ ಹೃದಯದ ಶೋಕವೇ ಶ್ಲೋಕವಾಗಿ ಹರಿಯಿತು.

—ಇದು ಪ್ರಚಲಿತ ಕಥೆ.

ಸುಮಾರು 13ನೆಯ ಶತಮಾನದಲ್ಲಿ ರಚಿತವಾದ 'ಅಧ್ಯಾತ್ಮ ರಾಮಾಯಣ'ದಲ್ಲಿ ವಾಲ್ಮೀಕಿ ದ್ವಿಜನಾಗಿದ್ದ, ಆಚಾರದಲ್ಲಿ ಶೂದ್ರನಾಗಿ ಕಿರಾತನೊಡನೆ ಬೆಳೆದ ಎಂಬ ಉಲ್ಲೇಖವಿದೆ. 'ಕೃತ್ತಿವಾಸ ರಾಮಾಯಣ' (14ನೆಯ ಶತಮಾನ)ದಲ್ಲಿ ವಾಲ್ಮೀಕಿಯು ಚ್ಯವನಮುನಿಯ ಪುತ್ರನೆಂದೂ ಅವನ ಹೆಸರು ರತ್ನಾಕರನೆಂದೂ ದಸ್ಯುವೃತ್ತಿಯಿಂದ ಬೆಳೆದವನೆಂದೂ ಹೇಳಿದೆ. ಈ ಎರಡು ಅಭಿಪ್ರಾಯಗಳೂ ಪ್ರಮಾಣಭೂತವಾಗಿಲ್ಲ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಶ್ರೀರಾಮ ಸೀತಾ ಲಕ್ಷ್ಮಣರೊಂದಿಗೆ ಅರಣ್ಯವಾಸಕ್ಕೆ ಹೋದಾಗ ವಾಲ್ಮೀಕಿ ಅವರನ್ನು ಸತ್ಕರಿಸಿದ್ದು, ರಾಮನ ಅಪ್ಪಣೆಯಂತೆ ಲಕ್ಷ್ಮಣ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಹೊರಟುಹೋದಾಗ ವಾಲ್ಮೀಕಿ ಅವಳನ್ನು ತನ್ನ ಆಶ್ರಮಕ್ಕೆ ಕರೆದೊಯ್ದು ಋಷಿ ಪತ್ನಿಯರಿಂದ ಆದರಿಸಿದ್ದು, ವಾಲ್ಮೀಕಿ ಲವಕುಶರ ಸಂಗಡ ರಾಮನ ಸಭೆಗೆ ಬಂದು ಅಲ್ಲಿ ಲವಕುಶರು ರಾಮಾಯಣ ಗಾನ ಮಾಡಿದ್ದು, ಹೀಗೆ ರಾಮಾಯಣ ಮಹಾ ಕಾವ್ಯದ ಕೆಲವು ಸನ್ನಿವೇಶಗಳಲ್ಲಿ ಸ್ವತಃ ವಾಲ್ಮೀಕಿಯೂ ಕಾಣಿಸಿಕೊಳ್ಳುತ್ತಾನೆ.

'ರಾಮಾಯಣ' ಮಹಾಕಾವ್ಯವನ್ನು ರಚಿಸಿದ ವಾಲ್ಮೀಕಿಯ ಪ್ರತಿಭೆ ಅಸಾಧಾರಣವಾದದ್ದು. ಭಾರತದ ಎಲ್ಲ ಮುಖ್ಯ ಭಾಷೆಗಳಿಗೂ 'ವಾಲ್ಮೀಕಿ ರಾಮಾಯಣ' ಅನುವಾದಗೊಂಡಿವೆ. ಟಿಬೆಟ್, ಬಾಲಿ, ಜಾವಾ ಮೊದಲಾದೆಡೆಗಳಲ್ಲಿ ರಾಮಾಯಣದ ರೂಪಾಂತರಗಳಿವೆ.

**ನೋಡಿ :** 'ರಾಮಾಯಣ'

## ವಾಲ್ಟೇರ್

ಬಾಲಕ ವಾಲ್ಟೇರ್ ನಶ್ಯದ ಡಬ್ಬಿಯೊಡನೆ ಆಟವಾಡುತ್ತಿದ್ದುದನ್ನು ಕಂಡ ಅಧ್ಯಾಪಕರು ಅದನ್ನು ಕಿತ್ತುಕೊಂಡರು. ಹಿಂತಿರುಗಿಸಬೇಕೆಂದು ವಿನಂತಿಮಾಡುವ ಕವಿತೆ ಬರೆದರೆ ಮಾತ್ರ ಮರಳಿಕೊಡುತ್ತೇನೆ —ಎಂದರು. ಆಗ ವಾಲ್ಟೇರ್ ಬರೆದ ಕವಿತೆ ಈಗಲೂ ಪ್ರಸಿದ್ಧವಾಗಿದೆ; ಹಲವಾರು ಬಾರಿ ಅದು ಮುದ್ರಿಲಸ್ಪಟ್ಟಿದೆ.

18ನೆಯ ಶತಮಾನದ ಅತಿ ಶ್ರೇಷ್ಠ ಸಾಹಿತಿ ವಾಲ್ಟೇರ್ ಲೇಖನಿಯಾಡಿಸದ ಸಾಹಿತ್ಯ ಪ್ರಕಾರವೇ ಇಲ್ಲ. ದೊಡ್ಡ ಸಂಖ್ಯೆಯಲ್ಲಿ ಈತ ರಚಿಸಿದ ನಾಟಕಗಳು, ಕವಿತೆಗಳು, ಪ್ರೌಢ ಕಾವ್ಯಗಳು, ಕಥೆಗಳು, ಸಾಹಿತ್ಯ ವಿಮರ್ಶೆ, ಚರಿತ್ರೆ, ರಾಜಕೀಯ ಪ್ರಬಂಧಗಳು ಮತ್ತು ತತ್ತ್ವಜ್ಞಾನವನ್ನು ಕುರಿತ ಪುಸ್ತಕಗಳು ವಾಲ್ಟೇರನ ಹೆಸರನ್ನು ಅಮರಗೊಳಿಸಿವೆ. ಸಾಹಿತ್ಯ ಮಾತ್ರವಲ್ಲದೆ ಭೌತವಿಜ್ಞಾನ, ಗಣಿತಗಳಲ್ಲೂ ಅವನಿಗೆ ಪ್ರಭುತ್ವವಿತ್ತು.



ತೀಕ್ಷ್ಣ ಬರೆವಣಿಗೆ : ವಾಲ್ಟೇರ್

ಯೂರೋಪಿನ ಅನೇಕ ಪ್ರಮುಖ ವ್ಯಕ್ತಿಗಳಿಗೆ ಅವನು ಬರೆದ ಪತ್ರಗಳ ಸಂಖ್ಯೆ ಸುಮಾರು 20,000.

ವಾಲ್ಟೇರ್ ಹುಟ್ಟಿದ್ದು ಪ್ಯಾರಿಸಿನಲ್ಲಿ, 1694ರ ನವೆಂಬರ್ 21ರಂದು. ಅವನ ಪೂರ್ಣ ಹೆಸರು ಫ್ರಾಂಕಾಯಿ ಮೇರಿ ಅರೌಟ್ ದ ವಾಲ್ಟೇರ್. ಕಿರಿಯ ವಯಸ್ಸಿನಲ್ಲೇ ಅವನಿಗೆ ಲ್ಯಾಟಿನ್ ಮತ್ತು ಕ್ರೈಸ್ತಧರ್ಮದ ಶಿಕ್ಷಣವಾಯಿತು. ಆದರೆ ಶಾಲೆ ಬಿಟ್ಟು ಹೊರಬಂದೊಡನೆ ವಾಲ್ಟೇರ್ ಸ್ವಚ್ಛಂದವಾಗಿ ವರ್ತಿಸತೊಡಗಿದ. ಅವನ ತಂದೆಗೆ ದಿಗ್ಭ್ರಮೆಯಾಯಿತು. ತಂದೆಯ ಅಪೇಕ್ಷೆಯಂತೆ ಕಾಯಿದೆ ಶಿಕ್ಷಣವನ್ನು ಪಡೆಯಲೊಪ್ಪದೆ ಲೇಖಕನಾಗುವ ನಿರ್ಧಾರವನ್ನು ಆತ ವ್ಯಕ್ತಪಡಿಸಿದ.

ವಾಲ್ಟೇರ್‌ನದು ಅಸಾಧಾರಣ ಬುದ್ಧಿಶಕ್ತಿ. ಅವನೊಡನೆ ವಾದಿಸಿ ಗೆಲ್ಲುವುದು ಅಸಾಧ್ಯವಾಗಿತ್ತು. ಮಾತನ್ನು ತನಗೆ ಬೇಕಾದಂತೆ ತಿರುಗಿಸಿಕೊಂಡು ಇತರರನ್ನು ನಗೆಪಾಟಲು ಮಾಡುವ ಚಾತುರ್ಯ ವಾಲ್ಟೇರ್‌ನಲ್ಲಿತ್ತು.

ಪ್ಯಾರಿಸಿನಲ್ಲಿದ್ದ ರಾಜಪ್ರತಿನಿಧಿಯ ಅನೀತಿ ವರ್ತನೆಯನ್ನು ಟೀಕಿಸಿ ಬರೆದದ್ದಕ್ಕಾಗಿ ಈತ ಸೆರೆಮನೆ ಸೇರಬೇಕಾಯಿತು. ಆದರೆ ವಾಲ್ಟೇರ್ ತನ್ನ ಛಲ ಬಿಡಲಿಲ್ಲ. ಸ್ವಲ್ಪ ಸಮಯದಲ್ಲೇ ಒಬ್ಬ ಡ್ಯೂಕನ ದೂತರು, ಸಾರ್ವಜನಿಕ ಸ್ಥಳದಲ್ಲಿ ಇವನನ್ನು ಹಿಡಿದು ಚೆನ್ನಾಗಿ ಹೊಡೆದರು. ಮತ್ತೆ ಸೆರೆಮನೆ ಕಾಣಬೇಕಾಯಿತು. ದೇಶಬಿಟ್ಟು ಹೋಗಬೇಕೆಂಬ ಕರಾರಿನ ಮೇಲೆ ಅವನನ್ನು ಬಿಡುಗಡೆ ಮಾಡಿದರು. ವಾಲ್ಟೇರ್ ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿದ. ಆಗ ಅವನ ವಯಸ್ಸು ಮೂವತ್ತೆರಡು.

ಇಂಗ್ಲೆಂಡಿನ ರಾಜ್ಯಾಂಗ ಪದ್ಧತಿ, ವಾಕ್ ಸ್ವಾತಂತ್ರ್ಯಗಳಿಂದ ವಾಲ್ಟೇರ್ ಪ್ರಭಾವಿತನಾದ. ಮೂರು ವರ್ಷಗಳ ಬಳಿಕ ತಾಯ್ನಾಡಿಗೆ ಹಿಂದಿರುಗಿ ಸಾಮಾಜಿಕ ಬದಲಾವಣೆಗಳನ್ನು ಸಮರ್ಥಿಸಿ ಲೇಖನಗಳನ್ನು ಬರೆದ. 'ಇಂಗ್ಲಿಷ್ ಪತ್ರಗಳು' ಎಂಬ ಪುಸ್ತಕದಲ್ಲಿ ಈತ ಇಂಗ್ಲೆಂಡಿನ ಪದ್ಧತಿಗಳನ್ನು

ಹೊಗಳಿ ಫ್ರೆಂಚ್ ಪದ್ಧತಿಗಳನ್ನು ತೆಗಳಿ ಬರೆದಿದ್ದ. ಇದರಿಂದ ಸಿಟ್ಟಿಗೆದ್ದ ಸರಕಾರದ ಹಿಡಿತದಿಂದ ತಪ್ಪಿಸಿಕೊಳ್ಳಲು ಲೊರೇನ್ ಪ್ರಾಂತದ ಹಳ್ಳಿಗೆ ಹೋಗಿ ಇರತೊಡಗಿದ. ಮೂರು ದಶಕಗಳು ಮತ್ತೆ ಪ್ಯಾರಿಸಿಗೆ ಬರಲಿಲ್ಲ.

ಊರಿನಿಂದ ದೂರವಾದರೂ ವಾಲ್ಟೇರ್ ತನ್ನ ಹರಿತವಾದ ಬರವಣಿಗೆಯಿಂದ ಸರಕಾರದ ರೀತಿಗಳನ್ನೂ ಧಾರ್ಮಿಕ ಅಂಧಶ್ರದ್ಧೆಯನ್ನೂ ಖಂಡಿಸುವುದನ್ನು ನಿಲ್ಲಿಸಲಿಲ್ಲ. ಧರ್ಮಪೀಠವನ್ನು ಬಡಿದ್ಹೊಡಿ —ಎಂದು ಈತ ಜನರಿಗೆ ಕರೆಕೊಟ್ಟ. ವಾಲ್ಟೇರ್ ನಾಸ್ತಿಕನಾಗಿರಲಿಲ್ಲ. ಅವನು ಖಂಡಿಸುತ್ತಿದ್ದುದು ಕ್ರಿಸ್ತನನ್ನಲ್ಲ,—ಧರ್ಮಪೀಠದ ಪದ್ಧತಿಗಳನ್ನು, ಧರ್ಮಗುರುಗಳ ಅಕ್ರಮಗಳನ್ನು. ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಈತನಿಗೆ ದೃಢವಾದ ನಂಬಿಕೆಯಿತ್ತು.

ವಾಲ್ಟೇರನ ಸ್ವಾತಂತ್ರ್ಯಪ್ರೇಮ ಅದ್ಭುತವಾದದ್ದು. ತನ್ನ ವಿರೋಧಿಗಳ ಸ್ವಾತಂತ್ರ್ಯವನ್ನೂ ಅವನು ಗೌರವಿಸುತ್ತಿದ್ದ. "ನೀನು ಹೇಳಿದ್ದನ್ನು ಒಪ್ಪಲು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ. ಆದರೆ ನಿನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲು ನಿನಗಿರುವ ಸ್ವಾತಂತ್ರ್ಯವನ್ನು ನನ್ನ ಜೀವವನ್ನಾದರೂ ತೆತ್ತು ಕಾಪಾಡಿಯೇನು" ಎಂದು ವಾಲ್ಟೇರ್ ತನ್ನ ಸಮಕಾಲೀನನೊಬ್ಬನಿಗೆ ಬರೆದದ್ದುಂಟು.

ಸ್ವತಃ ಫ್ರೆಂಚ್ ಲೇಖಕನಾಗಿದ್ದ ಪ್ರಷ್ಯದ ಅರಸನಾದ ಎರಡನೆಯ ಫ್ರೆಡರಿಕ್‌ನ ಆಮಂತ್ರಣವನ್ನು ಸ್ವೀಕರಿಸಿ ವಾಲ್ಟೇರ್ 1751ರಲ್ಲಿ ಅವನ ಆಸ್ಥಾನಕ್ಕೆ ಹೋಗಿ ಅಲ್ಲಿ ನೆಲೆಸಿದ. ಮೂರು ವರ್ಷಗಳ ಬಳಿಕ ಚಕ್ರವರ್ತಿಯೊಡನೆ ಜಗಳವಾಗಿ, ಅಲ್ಲಿಂದ ಹೊರಬಿದ್ದ. ಸ್ವಿಟ್ಜರ್‌ಲೆಂಡಿನಲ್ಲಿ ಸ್ವಲ್ಪ ಕಾಲ ಅಲೆದಾಡಿ ಫ್ರಾನ್ಸ್–ಸ್ವಿಟ್ಜರ್‌ಲೆಂಡ್ ಗಡಿಯಲ್ಲಿದ್ದ ಫರ್ನೀ ಎಂಬ ಹಳ್ಳಿಯಲ್ಲಿ ಬಂದು ನೆಲೆಸಿದ. ಫ್ರೆಂಚ್ ಸರಕಾರದಿಂದ ಆಪತ್ತು ಒದಗಿದರೆ ಸ್ವಿಟ್ಜರ್‌ಲೆಂಡಿಗೆ ಪರಾರಿಯಾಗಲು ಅನುಕೂಲವೆಂದು ಆ ಸ್ಥಳವನ್ನು ಆರಿಸಿಕೊಂಡಿದ್ದ. ಇಲ್ಲಿ ವಾಲ್ಟೇರ್ ರಾಜಜೀವನ ನಡೆಸಿದ. ಬಡ ಕಾರ್ಮಿಕರಿಗೆ ವಿಪುಲವಾಗಿ ಸಹಾಯಮಾಡಿದ. ನಿರಾಶ್ರಿತರಿಗೆ ವಸತಿ ಕಲ್ಪಿಸಿದ. ಗಡಿಯಾರದ ಕಾರಖಾನೆ, ರೇಷ್ಮೆ ಬಟ್ಟೆ ಗಿರಣಿ, ಮರ ಕೊಯ್ಯುವ ಕಾರಖಾನೆ ಮುಂತಾದವನ್ನು ಸ್ಥಾಪಿಸಿದ. ಜನರ ನಾಟಕ ಮಂದಿರವನ್ನು ಕಟ್ಟಿ ತನ್ನ ನಾಟಕಗಳನ್ನು ಪ್ರದರ್ಶಿಸಿದ.

1778ರಲ್ಲಿ ಎಂಬತ್ತನಾಲ್ಕರ ಮುದುಕ ವಾಲ್ಟೇರ್ ತನ್ನ ಕೊನೆಯ ದುರಂತ ನಾಟಕ 'ಐರೀನ್'ನ ಪ್ರದರ್ಶನವನ್ನು ನೋಡಲು ಪ್ಯಾರಿಸಿಗೆ ಹೋದ. ಅಲ್ಲಿ ಅವನಿಗೆ ಭವ್ಯ ಸ್ವಾಗತ ದೊರೆಯಿತು. ಜನರಿಂದುಂಟಾದ ಹರ್ಷಾತಿರೇಕವನ್ನು ತಡೆಯುವ ಶಕ್ತಿ ವೃದ್ಧ ವಾಲ್ಟೇರನಿಗೆ ಇರಲಿಲ್ಲ. ಅದೇ ವರ್ಷ ಮೇ 30ರಂದು ಆತ ತೀರಿಕೊಂಡ.

ವಾಲ್ಟೇರ್–ಸಮಕಾಲೀನ ಚಿತ್ರಕಾರ ಕಂಡಂತೆ



## ವಾಸ್ತವವಾದ

ಚಿತ್ರಕಲೆಯಲ್ಲೂ ಸಾಹಿತ್ಯರಚನೆಯಲ್ಲೂ ಇರುವ ಒಂದು ಪಂಥ ವಾಸ್ತವವಾದ. ಯೂರೋಪಿನ ಪುನರುದಯ ಕಾಲಾವಧಿಯಲ್ಲಿ ಇದು ರೂಪುಗೊಂಡು ಮುಂದೆ ಬೆಳೆಯಿತು.

ಕಂಡದ್ದನ್ನು ಕಂಡಂತೆ ಬರೆಯುವುದು, ಚಿತ್ರಿಸುವುದು ವಾಸ್ತವವಾದದ ರೀತಿ. ಸಾಹಿತ್ಯ, ಚಿತ್ರ ಹಾಗೂ ಶಿಲ್ಪಕಲೆಗಳಲ್ಲೂ ವಾಸ್ತವವಾದ ಒಂದು ಪ್ರಮುಖ ಪಂಥ. ವಾಸ್ತವವಾದದಿಂದ ಪ್ರಭಾವಿತರಾದ ಬರೆಹಗಾರರೂ ಕಲಾವಿದರೂ ಇದ್ದುದನ್ನು ಇದ್ದಂತೆ ಬರೆಯಲು, ಚಿತ್ರಿಸಲು ಆರಂಭಿಸಿದರು.

ಪ್ರಾಚೀನ ಗ್ರೀಕ್ ಬರೆಹಗಾರರಾದ ಹೋಮರ್ ಹಾಗೂ ಅರಿಸ್ಟಾಫನೀಸರ ಕೃತಿಗಳಲ್ಲೂ ಭಾರತ, ಚೀನ, ಜಪಾನುಗಳ ಹಲವು ಹಿರಿಯ ಕಥೆಗಳಲ್ಲೂ ವಾಸ್ತವತೆಯು ಚಿತ್ರಣವಿದೆ. ಆದರೆ ವಾಸ್ತವವಾದ ಒಂದು ಪಂಥವಾಗಿ ಸಾಹಿತ್ಯ ಸೃಷ್ಟಿಯಾದದ್ದು 19ನೆಯ ಶತಮಾನದ ಯೂರೋಪಿನಲ್ಲಿ; ಆ ಬಗೆಯ ಈ ಪಂಥ ಆರಂಭವಾದದ್ದು ಫ್ರೆಂಚ್ ಬರೆಹಗಾರ ಬಾಲ್ಜಾಕ್, ಚಿತ್ರಕಾರ ಕೂರ್ಬೆ ಮತ್ತಿತರರಿಂದ. ಅನಂತರ ಫ್ರಾನ್ಸಿನ ಎಮಿಲಿ ಜೋಲಾ, ಮೊಪಾಸಾ, ರಷ್ಯದ ದಾಸ್ತಯೆವ್‌ಸ್ಕಿ, ಟಾಲ್‌ಸ್ಟಾಯ್, ಚೆಕಾಫ್, ಗಾರ್ಕಿ, ಇಂಗ್ಲೆಂಡಿನ ಡಿಕೆನ್ಸ್, ಅಮೆರಿಕದ ಹೆಮಿಂಗ್‌ವೇ ಅಂಥ ವಿಖ್ಯಾತ ಬರೆಹಗಾರರು ಈ ವಿಧಾನವನ್ನು ಅನುಸರಿಸಿದರು.

ಎಲ್ಲ ದೇಶಗಳ ಕಲೆ, ಸಾಹಿತ್ಯಗಳನ್ನೂ ಆವರಿಸಿರುವ ಪಂಥ ವಾಸ್ತವವಾದ.

## ವಾಸ್ತುಶಿಲ್ಪ

ಮಳೆಗಾಳಿಗಳಿಂದ ರಕ್ಷಣೆ ಪಡೆಯಲು ಮಾನವ ಮೊದಲು ಆಶ್ರಯಿಸಿದ್ದು ಪ್ರಕೃತಿಯೇ ನಿರ್ಮಿಸಿದ್ದ ಗವಿಗಳನ್ನು. ಹೀಗೆ ಗವಿಗಳಲ್ಲಿ ವಾಸಿಸುತ್ತಿದ್ದವರನ್ನು 'ಗವಿಮಾನವ'ರು ಎನ್ನುತ್ತೇವೆ. ಗವಿಮಾನವರ ಸಂಖ್ಯೆ ಬೆಳೆದು ಅವರೆಲ್ಲರಿಗೂ ವಾಸಿಸಲು ಬೇಕಾದಷ್ಟು ಸ್ಥಳ ಗವಿಗಳಲ್ಲಿ ಸಿಕ್ಕದಿದ್ದುದರಿಂದಲೋ ಏನೋ ಅವರು ತಮ್ಮ ಆವಾಸಕ್ಕಾಗಿ ಏನಾದರೊಂದು ಬೀಡನ್ನು ರಚಿಸಿಕೊಳ್ಳಬೇಕಾಯಿತು. ಇಂಥ ಬೀಡನ್ನು ರಚಿಸಲು ಪ್ರಯತ್ನಿಸಿದವರನ್ನು ಈ ಜಗತ್ತಿನ ಪ್ರಥಮ ವಾಸ್ತುಶಿಲ್ಪಿಗಳು ಎನ್ನಬಹುದು.

ಯಾವುದೇ ಕಾಲದ ವಾಸ್ತುಶಿಲ್ಪಿಯಾಗಲೀ ಕಟ್ಟಡ ನಿರ್ಮಾಣದಲ್ಲಿ ತೊಡಗುವುದಕ್ಕೆ ಮೊದಲು ಕೆಲವು ಅಂಶಗಳನ್ನು ಕುರಿತು ಖಚಿತ ಅಭಿಪ್ರಾಯಗಳನ್ನು ರೂಢಿಸಿಕೊಳ್ಳುವುದು ಅತ್ಯಗತ್ಯ. ಮೊದಲನೆಯದಾಗಿ ಗಮನಿಸಬೇಕಾದ ಅಂಶ –ಕಟ್ಟಡವನ್ನು ಏತಕ್ಕಾಗಿ ಉಪಯೋಗಿಸುತ್ತಾರೆ ಎಂಬುದು; ಎರಡನೆಯದಾಗಿ, ಅದನ್ನು ಕಟ್ಟಲು ದೊರೆಯಬಹುದಾದ ಸಾಮಗ್ರಿಗಳು ಯಾವುವು ಎಂಬುದು; ಮೂರನೆಯದಾಗಿ,



ಜಪಾನಿನ ಹಿಮೇಜಿ ಕೋಟೆ –17ನೆಯ ಶತಮಾನದ ರಚನೆ

ಆ ಕಟ್ಟಡವನ್ನು ಉಪಯೋಗಿಸುವವರಿಗೆ ಅದರಲ್ಲಿ ಅವಶ್ಯವಾಗಿರಬೇಕಾದ ಅನುಕೂಲಗಳು ಯಾವುವು ಎಂಬುದು. ಈ ಅಂಶಗಳನ್ನೆಲ್ಲ ಅವನು ಲಕ್ಷ್ಯದಲ್ಲಿಟ್ಟುಕೊಂಡು, ಇಂಥ ಕಟ್ಟಡ ಕಟ್ಟಲು ಸೂಕ್ತ ಸ್ಥಳವನ್ನು ನಿರ್ಧರಿಸಬೇಕಾಗುತ್ತದೆ.

ಕಟ್ಟಡ ಯಾವುದೇ ಉಪಯೋಗಕ್ಕಾಗಿರಲಿ, ಅದರಲ್ಲಿ ಮೂರು ಲಕ್ಷಣಗಳು ಇರಬೇಕಾದ್ದು ಅವಶ್ಯ —ರಕ್ಷಣೆ, ಗೋಪ್ಯತೆ, ಸೌಕರ್ಯ. ಮಾನವ ಮನೆಗಳನ್ನು –ಅವು ಹಿರಿ ಮನೆಗಳಾಗಲೀ ಅರಮನೆಗಳಾಗಲೀ ಕಟ್ಟಿಕೊಳ್ಳುವುದು ಪ್ರಧಾನವಾಗಿ ಈ ಮೂರು ಉದ್ದೇಶಗಳ ಸಾಧನೆಗಾಗಿಯೇ. ಈ ಗುಣಗಳಿಲ್ಲದ ಮನೆ ಅವನಿಗೆ ಸುಖವನ್ನು ಕೊಡುವುದರ ಬದಲು ಅನನುಕೂಲವನ್ನೇ ಉಂಟುಮಾಡುತ್ತದೆ. ಆದ್ದರಿಂದ ಎಲ್ಲ ಕಾಲದ ಎಲ್ಲ ರಾಷ್ಟ್ರಗಳ ವಾಸ್ತುಶಿಲ್ಪಿಗಳು ತಮ್ಮ ಗೃಹನಿರ್ಮಾಣದಲ್ಲಿ ಈ ಅಂಶಗಳಿಗೆ ಲಕ್ಷ್ಯ ಕೊಟ್ಟೇ ಕೊಡುತ್ತಾರೆ. ಈ ಅಂಶಗಳಿಂದಾಗಿಯೇ ವಾಸ್ತುಶಿಲ್ಪದ –ಅದರಲ್ಲೂ ಗೃಹ ನಿರ್ಮಾಣದ– ಸ್ವರೂಪ ಕಾಲದಿಂದ ಕಾಲಕ್ಕೆ ಬದಲಾಗುತ್ತ ಹೋಗುತ್ತದೆ.

ಈಗ್ಗೆ ಒಂದೂವರೆ ಎರಡು ಶತಮಾನಗಳ ಹಿಂದಿನವರೆಗೆ ಅರಮನೆಯ ಸುತ್ತ ಬಲವಾದ ಬೃಹದಾಕಾರದ ಕೋಟೆ ಕಟ್ಟುತ್ತಿದ್ದರು. ಇದು ರಕ್ಷಣೆಯ ದೃಷ್ಟಿಯಿಂದ. ಮನೆಗೆ ದಪ್ಪ ಗೋಡೆಗಳನ್ನು ಕಟ್ಟುತ್ತಿದ್ದರು. ಇದೇ ರೀತಿ, ಚಿಕ್ಕ ಕಿಟಕಿಗಳನ್ನಿಡುತ್ತಿದ್ದರು. ಮನೆಯಿಂದ ಒಳಕ್ಕೆ ಬರಲು, ಹೊರಕ್ಕೆ ಹೋಗಲು ಸಾಮಾನ್ಯವಾಗಿ ಒಂದೇ ಬಾಗಿಲಿರುತ್ತಿತ್ತು.

ಈಗ ಈ ಶೈಲಿಯ ಕಟ್ಟಣೆಕೆ ಇಲ್ಲ. ಅದು ಬದಲಾಗಿದೆ. ತೆಳ್ಳನೆಯ ಗೋಡೆಗಳು, ದೊಡ್ಡ ಕಿಟಕಿಗಳು ಬಂದಿವೆ. ಗೋಪ್ಯತೆ, ಸೌಕರ್ಯಗಳ ವಿಚಾರವೂ ಅಷ್ಟೆ. ಹಿಂದಿನ ಕಾಲದ ಅಡುಗೆಮನೆಗಳನ್ನು ಇಂದಿನ ಕಾಲದ ಮನೆಗಳಲ್ಲಿ ಕಟ್ಟಿರುವ ಅಡುಗೆಮನೆಗಳಿಗೆ ಹೋಲಿಸಿ ನೋಡಿದರೆ, ಸೌಕರ್ಯಗಳ ಭಾವನೆ ಹೇಗೆ ಬದಲಾಗಿದೆ ಎಂಬುದನ್ನು ಮನಗಾಣಬಹುದು.

ಮೊದಮೊದಲು ಮನೆ ಗುಡಿಸಿಲುಗಳನ್ನು ಮರದ ಕೊಂಬೆಗಳನ್ನು ಉಪಯೋಗಿಸಿ ರಚಿಸಿರಬಹುದು. ಅನಂತರ ಮಣ್ಣು ಇಟ್ಟಿಗೆ, ಕಲ್ಲು, ಮರ ಉಪಯೋಗಕ್ಕೆ ಬಂದಿರಬಹುದು. ಕಟ್ಟಡಗಳ ನಿರ್ಮಾಣದಲ್ಲಿ ಇಂದಿನ ವಾಸ್ತುಶಿಲ್ಪಿಗೆ ನೆರವಾಗುವ ವಸ್ತುಗಳ ಸಂಖ್ಯೆ-ವೈವಿಧ್ಯಗಳನ್ನು ಗಮನಿಸಿದರೆ, ಹಿಂದೆ ದೊರೆಯುತ್ತಿದ್ದ ವಸ್ತುಗಳು ಎಷ್ಟು ಮಿತಪ್ರಮಾಣದವು ಎಂಬುದು ಗೊತ್ತಾಗುತ್ತದೆ. ಇಂದು ಕಬ್ಬಿಣ ಮುಂತಾದ ಲೋಹಗಳು, ಗಾಜು, ಪ್ಲಾಸ್ಟಿಕ್, ಸಿಮೆಂಟುಗಳು ಬಳಕೆಗೆ ಬಂದಿವೆ. ಇವುಗಳನ್ನು ನಾನಾ ರೀತಿಗಳಲ್ಲಿ ಕೂಡ ಉಪಯೋಗಿಸಬಹುದಾಗಿದೆ. ಈ ಅನುಕೂಲತೆಗಳು ಹಿಂದಿನ ಕಾಲದ ವಾಸ್ತುಶಿಲ್ಪಿಗಳಿಗೆ ಇರಲಿಲ್ಲ. ಆದರೂ ಅವರು ತಮಗೆ ದೊರೆತ ವಸ್ತುಗಳಲ್ಲೇ ಅದ್ಭುತ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಹಲವನ್ನು ಜಗತ್ತಿನ ವಿವಿಧ ಭಾಗಗಳಲ್ಲಿ ನಾವು ಕಾಣಬಹುದು.

ವಾಸ್ತುಶಿಲ್ಪ ಕೇವಲ ಗೃಹನಿರ್ಮಾಣಕ್ಕೆ ಮೀಸಲಾಗಿಲ್ಲ. ಜಲಾಶಯ, ಕಾಲುವೆ, ಸೇತುವೆ, ರಸ್ತೆ, ಕೋಟೆ ಕೊತ್ತಲಗಳು, ನಗರಗಳು ಇಂಥ ನಿರ್ಮಾಣಗಳನ್ನೂ ಅದು ಒಳಗೊಳ್ಳುತ್ತದೆ. ಹಿಂದಿನ ಕಾಲದಲ್ಲಿ ನಿರ್ಮಿತವಾದ, ಈ ವರ್ಗದ ರಚನೆಗಳಲ್ಲಿ ಕೆಲವನ್ನು ಇಂದಿಗೂ ನೋಡಬಹುದಾಗಿದೆ. ಹೀಗೆ ವಿವಿಧ ಪ್ರಾಚೀನ ಜನಾಂಗಗಳು ಬೇರೆ ಬೇರೆ ಕಾಲಗಳಲ್ಲಿ ನಿರ್ಮಿಸಿರುವ ವಾಸ್ತುಶಿಲ್ಪ ಕೃತಿಗಳ ಅವಶೇಷಗಳನ್ನು ನೋಡಿದರೆ, ಒಂದೊಂದು ಜನಾಂಗವೂ ತಾನು ಬಾಳಿದ ಪ್ರದೇಶದ ಪ್ರಾಕೃತಿಕ ಸನ್ನಿವೇಶ, ಹವಾಗುಣಗಳನ್ನು ಅನುಸರಿಸಿ ನಿರ್ಮಾಣಗಳನ್ನು ರಚಿಸಿರುವುದು ಕಂಡುಬರುತ್ತದೆ. ಹಾಗೆಯೇ ಆಯಾ ಜನರ ಧಾರ್ಮಿಕ ಭಾವನೆಗಳು ಕೂಡ ಉತ್ತಮ ವಾಸ್ತುಶಿಲ್ಪರಚನೆಗೆ ಪ್ರೇರಕವಾಗಿವೆ. ಅದೇ ರೀತಿ ಕಟ್ಟಾಣೆಕೆಯ ಶೈಲಿಗಳು ಕೆಲವು ವೇಳೆ ಪ್ರತ್ಯೇಕ ಪ್ರತ್ಯೇಕವಾಗಿರುವುದೂ ಒಂದೊಂದು ಬಾರಿ ಪರಸ್ಪರ ಪ್ರಭಾವಕ್ಕೆ ಒಳಗಾಗಿರುವುದೂ ಕಂಡು ಬರುತ್ತದೆ. ಜಗತ್ತಿನ ವಾಸ್ತುಶಿಲ್ಪರಂಗದಲ್ಲಿ ಈ ವಿನಿಮಯ ಹಿಂದಿನಿಂದಲೂ ನಡೆದುಬಂದಿದೆ.



ಪ್ರಾಚೀನ ರೋಮ್ ನಗರದಲ್ಲಿ ಪಾಂಥಿಯಾನ್ ಗುಮ್ಮಟ

ಆಧುನಿಕ ದೃಷ್ಟಿಯಿಂದ ಕೂಡ ಉತ್ತಮ ವಾಸ್ತುಶಿಲ್ಪರಚನೆಗಳೆಂದು ಕರೆಯಬಹುದಾದ ಅತ್ಯಂತ ಪ್ರಾಚೀನ ಕಟ್ಟಡಗಳು ಈಜಿಪ್ಟಿನಲ್ಲಿರುವ ಪಿರಮಿಡ್ಡುಗಳು. ಇವು ಪ್ರಾಚೀನ ಈಜಿಪ್ಟಿನ ಅರಸರ ಸಮಾಧಿಗಳು. ಇವು ಕಲ್ಲಿನ ಕಟ್ಟಡಗಳು. ಸಾಮಾನ್ಯವಾಗಿ ಚೌಕ ತಳಹದಿಯ ಮೇಲೆ, ಪಕ್ಕದ ಗೋಡೆಗಳು ಇಳಿಜಾರಾಗಿಯೂ ಕೊನೆಯು ಚೂಪಾಗಿಯೂ ಇರುವಂಥ ಈ ಕಟ್ಟಡಗಳು ರಚನೆಯ ದೃಷ್ಟಿಯಿಂದ ಅದ್ಭುತ ಸಾಧನೆಗಳು. ಇವುಗಳ ರಚನೆ ಕ್ರಿ. ಪೂ. 3000ದಷ್ಟು ಹಿಂದಿನದು. ಇವುಗಳನ್ನು ಕಟ್ಟಿದ ಅನಂತರ ಈಜಿಪ್ಟಿನಲ್ಲಿ ದೇವಾಲಯಗಳನ್ನು ಕೂಡ ಕಟ್ಟಲಾಯಿತು. ಇವುಗಳ ಗರ್ಭಗೃಹದ ಸುತ್ತ ಕಂಬಸಾಲೆಯಿದ್ದು ಅದು ದಪ್ಪವಾದ ಗೋಡೆಯಿಂದ ಆವೃತವಾಗಿರುತ್ತಿತ್ತು. ಎರಡು ದೊಡ್ಡ ಗೋಪುರಗಳುಳ್ಳ ಮಹಾದ್ವಾರವೂ ಇರುತ್ತಿತ್ತು.

ಕ್ರಿ. ಪೂ. 2000 ಸುಮಾರಿಗೆ ಬ್ಯಾಬಿಲೋನಿಯ ಮತ್ತು ಅಸ್ಸೀರಿಯ ಸಂಸ್ಕೃತಿಗಳು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಉತ್ತಮವಾದ ಅರಮನೆಗಳನ್ನು ಕಟ್ಟಿದರು. ವಿವಿಧ ಹಂತಗಳಲ್ಲಿ ಕಟ್ಟಡ ನಿರ್ಮಾಣ ಮಾಡುತ್ತಿದ್ದುದೂ ಈ ಹಂತಗಳು ಕೆಳಗಿನಿಂದ ಮೇಲಕ್ಕೆ ಚಿಕ್ಕದಾಗುತ್ತ ಹೋಗಿ ಕೊನೆಯ ಹಂತ ಉಳಿದ ಎಲ್ಲ ಹಂತಗಳಿಗಿಂತ ಚಿಕ್ಕದಾಗಿದ್ದು ಚಚ್ಚೌಕ ಗೋಪುರದಂತಿದ್ದುದೂ ಈ ವಾಸ್ತುಶಿಲ್ಪದ ಲಕ್ಷಣ.

ಭಾರತದಲ್ಲಿ ರೂಪುಗೊಂಡ ಹರಪ್ಪ ಸಂಸ್ಕೃತಿಯೂ ಕ್ರಿ.ಪೂ. 3–4 ಸಹಸ್ರ ವರ್ಷ ಹಿಂದಿನದು. ಆ ಕಾಲದ ಜನರು ಕೂಡ ಗೃಹನಿರ್ಮಾಣ ನಗರ ನಿರ್ಮಾಣದಲ್ಲಿ ಚತುರರಾಗಿದ್ದರು. ದೇವಾಲಯಗಳ ರಚನೆಯಲ್ಲಿ ಅಲಂಕರಣದಲ್ಲಿ ಭಾರತ ಹಲವಾರು ಶೈಲಿಗಳನ್ನು ರೂಢಿಸಿಕೊಂಡಿತು. ಈ ವಿವಿಧ ಶೈಲಿಗಳಲ್ಲಿ ರಚಿತವಾದ ದೇವಾಲಯಗಳು ಜಗತ್ಪ್ರಸಿದ್ಧವಾಗಿವೆ.

ಗ್ರೀಕ್ ಮತ್ತು ರೋಮನ್ ಸಂಸ್ಕೃತಿಗಳ ಕಾಲದಲ್ಲೂ ವಾಸ್ತುಶಿಲ್ಪ ಉನ್ನತ ಮಟ್ಟವನ್ನು ಮುಟ್ಟಿತು. ಐರೋಪ್ಯ ವಾಸ್ತುಶಿಲ್ಪಕ್ಕೆ ಇವುಗಳಿಂದ ಪ್ರಬಲ ಪ್ರೇರಣೆ ದೊರೆಯಿತು. ಹೊಸ ಹೊಸ ವಿನ್ಯಾಸಗಳು ರೂಪುಗೊಂಡುವು. ಯೂರೋಪಿನ ವಾಸ್ತುಶಿಲ್ಪದ ಮೇಲೆ ಬೈಜಾಂಟಿಯಮ್ ಪ್ರದೇಶದ ವಾಸ್ತುಶಿಲ್ಪ ಕೂಡ ಪ್ರಭಾವ ಬೀರಿದೆ. ಕಾಲಕ್ರಮದಲ್ಲಿ ಸ್ತಂಭಗಳು, ಗುಮ್ಮಟಗಳು, ಭವ್ಯಕಟ್ಟಡಗಳ ಅನಿವಾರ್ಯ ಅಂಗಗಳಾದುವು.

ಭಾರತಕ್ಕೆ ಮಹಮ್ಮದೀಯರ ಪ್ರವೇಶವಾದ ಮೇಲೆ, ಹಿಂದೂ ಮತ್ತು ಇಸ್ಲಾಂ ಶೈಲಿಗಳೆರಡರ ಕೆಲವು ಅಂಶಗಳನ್ನು ಸೇರಿಸಿಕೊಂಡ ವಾಸ್ತುಶಿಲ್ಪ ಶೈಲಿ ಬೆಳೆಯಿತು. ಮುಸಲ್ಮಾನ ಅರಸರ ಸಮಾಧಿಗಳಲ್ಲೂ ಮಸೀದಿಗಳಲ್ಲೂ ಈ ಕಲೆಯ ವೈಭವವನ್ನು ಕಾಣಬಹುದು.

ಯೂರೋಪಿನ ವಾಸ್ತುಶಿಲ್ಪದಿಂದ ಅಮೆರಿಕ ಮೊದಮೊದಲು ಪ್ರೇರಣೆ ಪಡೆಯಿತಾದರೂ, ಅದು ಶೀಘ್ರವಾಗಿ ತನ್ನದೇ ಆದ ವಿಶಿಷ್ಟ ಶೈಲಿಯನ್ನು ರೂಢಿಸಿಕೊಂಡು ಬೃಹತ್ ಪ್ರಮಾಣದ ಕಟ್ಟಡಗಳನ್ನು ರೂಪಿಸಿತು.

ಭಾರತದ ವಾಸ್ತುಶಿಲ್ಪ ಆಗ್ನೇಯ ಏಷ್ಯದ ಕೆಲವು ಪ್ರದೇಶಗಳಿಗೆ ಹಬ್ಬಿದಂತೆ ಚೀನೀ ವಾಸ್ತುಶಿಲ್ಪ ಶೈಲಿ ಜಪಾನಿಗೆ ಹಬ್ಬಿತು. ಈ ವಿಸ್ತರಣ ನಡೆದದ್ದು ಬೌದ್ಧಧರ್ಮ ಆ ರಾಷ್ಟ್ರಗಳಿಗೆ ಹರಡಿದ್ದರಿಂದ.

ಆಧುನಿಕ ಕಾಲದಲ್ಲಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ, ವೈಜ್ಞಾನಿಕ ತಿಳಿವಳಿಕೆ ಹೆಚ್ಚಾಗಿದೆಯಲ್ಲದೆ, ಒಂದು ರಾಷ್ಟ್ರದ ವಾಸ್ತುಶಿಲ್ಪ ಇನ್ನೊಂದು ರಾಷ್ಟ್ರದ ವಾಸ್ತುಶಿಲ್ಪದ ಮೇಲೆ ಪ್ರಭಾವ ಬೀರುತ್ತಿದೆ. ಹಲವು ಅಂತಸ್ತುಗಳುಳ್ಳ ವಿಶಾಲ ಕಟ್ಟಡಗಳು ಆಧುನಿಕ ಕಾಲದ ಭವ್ಯ ನಿರ್ಮಾಣಗಳು. ಇಂಥ ಕಟ್ಟಡಗಳ ರಚನೆ ಮೊದಲು ಅಮೆರಿಕದಲ್ಲಿ ಆರಂಭವಾಯಿತಾದರೂ ಈ ಶೈಲಿಯ ಕಟ್ಟಡಗಳನ್ನು ಈಗ ಜಗತ್ತಿನ ಎಲ್ಲ ಭಾಗಗಳಲ್ಲೂ ಕಾಣಬಹುದು. ಆಧುನಿಕ ಕಟ್ಟಡಗಳಲ್ಲಿ ಮರ, ಉಕ್ಕು, ಸಿಮೆಂಟ್, ಪ್ಲಾಸ್ಟಿಕ್, ಗಾಜುಗಳ ಉಪಯೋಗ ಹೆಚ್ಚುತ್ತಿರುವುದು ಒಂದು ಗಮನಾರ್ಹ ಅಂಶ.



ಮೈಸೂರು ನಗರದ ಕಾಮಕಾಮೇಶ್ವರಿ ದೇವಾಲಯ.

ವಾಸ್ತುಶಿಲ್ಪ ಮಾನವನ ಜೀವನಕ್ಕೆ ಅತ್ಯಂತ ಹತ್ತಿರದ್ದು. ಆದ್ದರಿಂದ, ಅವನ ಜೀವನ ವಿಧಾನದಲ್ಲಿ ಬದಲಾವಣೆಗಳಾದಂತೆ ವಾಸ್ತುಶಿಲ್ಪವೂ ಅದಕ್ಕೆ ಅನುಗುಣವಾಗಿ ಬೆಳೆಯುತ್ತದೆ. ಅವನ ನಾನಾ ಅವಶ್ಯಕತೆಗಳನ್ನು ಪೂರೈಸುವ ಪ್ರಯತ್ನ ವಾಸ್ತುಶಿಲ್ಪದಲ್ಲಿ ನಿರಂತರವಾಗಿ ನಡೆಯುತ್ತದೆ.

## ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರೀ

"ಕನ್ನಡ ಬಂಟರ ಬಂಟಂ
ಕನ್ನಡ ಕಿಂಕರರ ಕಿಂಕರರ ಕಿಂಕರ ನಾಂ"

—ಹೀಗೆಂದು ತಮ್ಮನ್ನು ಕರೆದುಕೊಂಡ ಚಂದ್ರಶೇಖರ ಶಾಸ್ತ್ರಿಯವರನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಬೆಳ್ಳಿಯ ಹಬ್ಬದ ಅಧಿವೇಶನಕ್ಕೆ ಅಧ್ಯಕ್ಷರನ್ನಾಗಿ ಆರಿಸಿ (ಧಾರವಾಡ : 1940) ಕನ್ನಡದ ಜನ ಗೌರವಿಸಿದರು. ಶಾಸ್ತ್ರಿಗಳು ಸಂಸ್ಕೃತ ವಿದ್ವಾಂಸರಾಗಿದ್ದರೂ ಇವರ ಮಮತೆಯೆಲ್ಲ ಕನ್ನಡಕ್ಕೇ ಮೀಸಲು. "ಕನ್ನಡವೇ ನಾನು, ನಾನೇ ಕನ್ನಡ" ಎನ್ನುವ ಭಾವ ಇವರದು.

ಚಂದ್ರಶೇಖರ ಶಾಸ್ತ್ರೀ ಹಿರೇಮಠರು ಬಳ್ಳಾರಿ ಜಿಲ್ಲೆಯ ಹೊಳಲು ಗ್ರಾಮದಲ್ಲಿ ಜನಿಸಿದರು. ಕಾಶೀ, ಕಲ್ಕತ್ತೆ ಮುಂತಾದ ಸಂಸ್ಕೃತ ಭಾಷಾ ಕೇಂದ್ರಗಳಲ್ಲಿ ವ್ಯಾಸಂಗ ಮಾಡಿದ್ದಲ್ಲದೆ ಕನ್ನಡ, ಇಂಗ್ಲಿಷ್, ಮರಾಠಿ, ಉರ್ದು ಭಾಷೆಗಳನ್ನೂ ಕಲಿತುಕೊಂಡರು. 'ವಿದ್ಯಾಲಂಕಾರ', 'ವಿದ್ಯಾವಾಗೀಶ', 'ವ್ಯಾಕರಣತೀರ್ಥ' ಇತ್ಯಾದಿ ಬಿರುದುಗಳನ್ನು ಇವರು ಪಡೆದರು.

ಇವರು ಯಾದಗಿರಿ ಶಂಕರ ಸಂಸ್ಕೃತ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಮತ್ತು ಹುಬ್ಬಳ್ಳಿ ಶ್ರೀ ಜಗದ್ಗುರು ಗಂಗಾಧರ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ದುಡಿವಾಗಲೂ ಕನ್ನಡ ಸೇವೆಗೆ ವೇಳೆ ದೊರಕಿಸಿಕೊಳ್ಳುತ್ತಿದ್ದರು. ಧರ್ಮಶಾಸ್ತ್ರ, ವ್ಯಾಕರಣಶಾಸ್ತ್ರಗಳನ್ನು ಕುರಿತ ಇವರ ಅನೇಕ ಲೇಖನಗಳು ಪ್ರಕಟವಾಗಿವೆ.

ನಿಜಾಂ ಕರ್ನಾಟಕದಲ್ಲಿ ಕನ್ನಡಪ್ರೇಮ ಬೇರೂರಲು ಪ್ರಯತ್ನಿಸಿದವರಲ್ಲಿ ಇವರು ಪ್ರಮುಖರು.


ವ್ಯಾಕರಣತೀರ್ಥ

ಚಂದ್ರಶೇಖರಶಾಸ್ತ್ರಿಗಳು ವೀರಶೈವ ಸಾಹಿತ್ಯದ ಪ್ರಕಾಂಡ ಪಂಡಿತರೂ ಹೌದು. 1926 ರಷ್ಟು ಹಿಂದೆಯೇ 'ಭಗವಾನ್ ಬಸವೇಶ್ವರ ಜಯಂ' ಎಂಬ ಸುದೀರ್ಘ ಲೇಖನ ಬರೆದರು. ಹಲವು ವರ್ಷಗಳ ಸಾಹಿತ್ಯ ಚಿಂತನೆಯ ಬಳಿಕ 1961 ರಲ್ಲಿ 'ಬಸವತತ್ತ್ವ ರತ್ನಾಕರ' ಎಂಬ ಗ್ರಂಥ ಪ್ರಕಟವಾಯಿತು. 28 ಅಧ್ಯಾಯಗಳ ಈ ಕೃತಿಯಲ್ಲಿ ಬಸವಣ್ಣನವರ ಬಗೆಗೆ ಹಲವು ದುರ್ಲಭ ಧರ್ಮ ವಿಚಾರಗಳು ಅಡಕವಾಗಿವೆ. ಹಿಂದೂ ಮತ್ತು ವೀರಶೈವ ಧರ್ಮಗಳ ಸಂಬಂಧವನ್ನೂ ಇದು ವಿವರಿಸುತ್ತದೆ.

ಶ್ರೀಮಾನ್ ಶಾಸ್ತ್ರಿಯವರು ಮೈಸೂರು ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರು.

## ವ್ಯಾಸ

"ಭಗವಾನ್ ಬಾದರಾಯಣ ನಾಲ್ಕು ಮುಖಗಳಿಲ್ಲದ ಬ್ರಹ್ಮ; ಎರಡೇ ತೋಳಿನ ವಿಷ್ಣು; ಹಣೆಗಣ್ಣಿಲ್ಲದ ಈಶ್ವರ" ಎಂಬ ಅರ್ಥ ಕೊಡುವ ಪರಂಪರಾಗತ ಶ್ಲೋಕವೊಂದಿದೆ. ಬಾದರಾಯಣ ಎಂಬುದು ವ್ಯಾಸರಿಗಿರುವ ಇನ್ನೊಂದು ಹೆಸರು. ಮಹಾಭಾರತವನ್ನು ಬರೆದ ವ್ಯಾಸ ಮಹರ್ಷಿ ಬ್ರಹ್ಮ–ವಿಷ್ಣು–ಮಹೇಶ್ವರರ ಸ್ವರೂಪನೆಂಬುದು, ಅಂದರೆ ದೇವರಂತೆ ಸರ್ವಶಕ್ತನೆಂಬುದು, ಇದರ ಭಾವಾರ್ಥ.

ವ್ಯಾಸ ವೇದವನ್ನು ವಿಭಾಗಮಾಡಿದ ಮಹರ್ಷಿ. ಆದ್ದರಿಂದ ಆತನನ್ನು ವೇದವ್ಯಾಸನೆಂದು ಕರೆಯುವುದೂ ಉಂಟು. ಆತ ಯಮುನಾ ನದಿಯ ದ್ವೀಪವೊಂದರಲ್ಲಿ ಹುಟ್ಟಿದ ಕಾರಣ ಆತನಿಗೆ ದ್ವೈಪಾಯನ ಎಂಬ ಹೆಸರೂ ಇದೆ. ಆತನ ಮೈ ಬಣ್ಣ ಕೃಷ್ಣವರ್ಣ (ಕಪ್ಪು). ಆದ್ದರಿಂದ ಕೃಷ್ಣ ದ್ವೈಪಾಯನ ಎಂದೂ ಹೇಳುವುದುಂಟು. ಬದರೀವನದಲ್ಲಿ ಆಶ್ರಮವನ್ನು ಕಟ್ಟಿಕೊಂಡು ತಪಸ್ಸು ಮಾಡುತ್ತಿದ್ದ ಕಾರಣ ಆತ ಬಾದರಾಯಣ ಎನಿಸಿಕೊಂಡ. ಆತನ ತಿಳಿವಳಿಕೆ ಅಪಾರ. ಭಾರತೀಯರ ಆಧ್ಯಾತ್ಮಿಕ ಪರಂಪರೆ, ಆಚಾರ ವಿಚಾರ, ನಿಷ್ಠೆ, ಲೋಪದೋಷಗಳನ್ನೆಲ್ಲ ಆತ ಸ್ಪಷ್ಟವಾಗಿ ಪೂರ್ಣವಾಗಿ ಅರಿತಿದ್ದನೆಂದು ಹೇಳಬಹುದು. ಏಕೆಂದರೆ, ಶತಮಾನಗಳ ಅವಧಿಯಲ್ಲಿ ಬೆಳೆದು ಬಂದಿದ್ದ ವೇದವನ್ನು ವಿಂಗಡಿಸಿ ಅವಕ್ಕೆ ಒಂದು ರೂಪ, ಅಚ್ಚುಕಟ್ಟುಗಳನ್ನು ಒದಗಿಸಿದವನು ವ್ಯಾಸ.

'ಭಾರತ', 'ಭಾಗವತ'ಗಳಂಥ ಮಹಾಗ್ರಂಥಗಳನ್ನೂ ಬರೆದವನು ವ್ಯಾಸ. ಹದಿನೆಂಟು ಪುರಾಣಗಳನ್ನು ಬರೆದವನೂ ಇವನೇ. ಕಾಲಕಾಲಕ್ಕೆ ವೈದಿಕಮತವನ್ನು ಪುನರುಜ್ಜೀವನಗೊಳಿಸಿದ ಶಂಕರ, ರಾಮಾನುಜ, ಮಧ್ವರು ತಮ್ಮ ತತ್ತ್ವಪ್ರತಿಪಾದನೆಗಾಗಿ ಆಧಾರವಾಗಿಟ್ಟುಕೊಂಡ ಬ್ರಹ್ಮಸೂತ್ರಗಳನ್ನೂ ಭಗವದ್ಗೀತೆಯನ್ನೂ ಬರೆದವನು ಕೂಡ ವ್ಯಾಸನೇ.

ಇಂಥ ಪ್ರಚಂಡ ವ್ಯಕ್ತಿ ವ್ಯಾಸ ಯಾರು ? ಸಂಪ್ರದಾಯದಂತೆ ವ್ಯಾಸ, ಪರಾಶರನ ಮಗ; ಪರಾಶರ ವಸಿಷ್ಠನ ಮೊಮ್ಮಗ. ಹೀಗೆ ವ್ಯಾಸ, ಒಳ್ಳೆಯ ಆಧ್ಯಾತ್ಮಿಕ ಸಂತತಿಯವನು. ಆದ್ದರಿಂದ ಅವನು ಆನುವಂಶಿಕವಾದ ವಿದ್ಯೆಯಲ್ಲಿ ಪಾರಂಗತನಾಗಿದ್ದು, ತನ್ನ ಪ್ರತಿಭೆಯಿಂದ ಅನೇಕ ಗ್ರಂಥಗಳನ್ನು ರಚಿಸಿರಬಹುದು.

ವೇದಗಳನ್ನು ವಿಂಗಡಿಸಿದ ವ್ಯಾಸನೂ 'ಮಹಾಭಾರತ'ವನ್ನು ಬರೆದ ವ್ಯಾಸನೂ ಒಂದೇ ವ್ಯಕ್ತಿಯೇ ಎಂಬ ಬಗೆಗೆ ಅನುಮಾನವಿದೆ. ಅಂದರೆ ವ್ಯಾಸನೂ ವೇದವ್ಯಾಸನೂ ಒಂದೇ ವ್ಯಕ್ತಿಯೇ ಎಂಬುದು ಪ್ರಶ್ನೆ. ಸಂಪ್ರದಾಯದ ಪ್ರಕಾರ ವೇದವ್ಯಾಸರು ಹಲವರು. ಒಂದೊಂದು ಮಹಾಯುಗದಲ್ಲೂ ಒಬ್ಬೊಬ್ಬರು ವ್ಯಾಸರು ಹುಟ್ಟಿ ವೇದರಾಶಿಯನ್ನು ವಿಂಗಡಿಸುತ್ತಾರೆಂಬ ಹೇಳಿಕೆಯಿದೆ. ಇದರಂತೆ ಈವರೆಗೆ 27 ಮಂದಿ ವ್ಯಾಸರು ಆಗಿದ್ದಾರೆ. ದ್ವಾಪರಯುಗದಲ್ಲಿ ವ್ಯಾಸ ಮಹರ್ಷಿ ವೇದಗಳನ್ನು ವಿಂಗಡಿಸಿರಬಹುದು; 'ಭಾರತ' ಮುಂತಾದುವನ್ನು ಬರೆದಿರಬಹುದು ಎನ್ನುವವರೂ ಉಂಟು. ಈ ಅಭಿಪ್ರಾಯವನ್ನು ಒಪ್ಪದವರೂ ಇದ್ದಾರೆ.

ಮೂಲ 'ಭಾರತ' ವ್ಯಾಸರ ಕೃತಿಯಿರಬಹುದು; ಆದರೆ ಅದು ಆ ರೂಪದಲ್ಲಿ ನಮ್ಮ ಕೈ ಸೇರಿಲ್ಲ; ಕಾಲಕಾಲಕ್ಕೆ ಬೇರೆ ಬೇರೆಯವರು ಬದಲಾವಣೆ ಮಾಡಿದ್ದಾರೆ, ಸೇರಿಸಿದ್ದಾರೆ; ಈಗ ನಮ್ಮಲ್ಲಿರುವುದು ಹೀಗೆ ಬದಲಾದ 'ಭಾರತ' ಎಂಬ ಅಭಿಪ್ರಾಯವೂ ಇದೆ.

ವ್ಯಾಸ ಎಂಬ ಒಬ್ಬ ವ್ಯಕ್ತಿ ಯಾವಾಗಲಾದರೂ ಇದ್ದನೆ ಅಥವಾ ಅದು ಕೇವಲ ಕಲ್ಪನೆಯೆ ಎಂಬುದು ಇನ್ನೊಂದು ಪ್ರಶ್ನೆ. ವೈದಿಕ ಮತ ಪ್ರತಿಪಾದಕರಾದ ಶಂಕರ, ರಾಮಾನುಜ, ಮಧ್ವ ಈ ಮೂವರು ವ್ಯಾಸರನ್ನು ಕಂಡಿದ್ದರೆಂದೂ ತಮ್ಮ ತಮ್ಮ ಭಾಷ್ಯಗಳನ್ನು ಅವರಿಗೆ ತೋರಿಸಿದರೆಂದೂ ಅವರವರ ಜೀವನ ಚರಿತ್ರೆಗಳಲ್ಲಿ ಉಲ್ಲೇಖವಿದೆ. ಈ ಮೂವರು ಬೇರೆ ಬೇರೆ ಶತಮಾನಗಳಲ್ಲಿದ್ದವರು. ಹಾಗಾದರೆ ವ್ಯಾಸ ಹಲವು ಶತಮಾನಗಳ ಕಾಲ ಬದುಕಿದ್ದ ಎನ್ನೋಣವೆ ?

'ಮಹಾಭಾರತ'ಕ್ಕೂ ವ್ಯಾಸನಿಗೂ ತುಂಬ ನಿಕಟವಾದ ಸಂಬಂಧವಿದೆ; ಧೃತರಾಷ್ಟ್ರ, ಪಾಂಡು, ಇವರ ಹುಟ್ಟಿಗೆ ಕಾರಣನಾದವನು ಅವನು; ಭಾರತದ ಹಲವಾರು ಘಟನೆಗಳಿಗೆ ಅವನ ಸಂಬಂಧವಿದೆ; 'ಮಹಾಭಾರತ'ದ ಕಾಲದ ಆಗುಹೋಗುಗಳನ್ನು ಆತ ಕಣ್ಣಾರೆ ಕಂಡವನು: 'ಮಹಾಭಾರತ'ವನ್ನು ಅವನೇ ಬರೆದ ಎಂದು ಒಪ್ಪಿಕೊಂಡರೆ; ಈ ವ್ಯಾಸ ಅಂದಿನಿಂದ ಮೊನ್ನೆ ಮೊನ್ನೆಯವರೆಗೆ, ಅಂದರೆ ಈಗ್ಗೆ ಕೆಲವು ಶತಮಾನಗಳ ಹಿಂದಿನವರೆಗೆ, ಬದುಕಿದ್ದನೆ ಎಂಬ ಪ್ರಶ್ನೆ ಏಳುತ್ತದೆ.

ಈ ಪ್ರಶ್ನೆಗಳಿಗೆಲ್ಲ ತರ್ಕಬದ್ಧವಾದ ಖಚಿತವಾದ ಉತ್ತರ ಹೇಳುವುದು ಕಷ್ಟ. ನಮಗೆ ದೊರೆತಿರುವಷ್ಟು ಆಧಾರಗಳಿಂದ ಕೆಲವು ಊಹೆಗಳನ್ನು ಮಾಡಬಹುದು —ಅಷ್ಟೆ.

ಒಂದೊಂದು ಮಹಾಯುಗದಲ್ಲೂ ವ್ಯಾಸರು ಹುಟ್ಟಿದರು. ಈವರೆಗೆ 27 ಮಂದಿ ವ್ಯಾಸರು ಆಗಿದ್ದಾರೆ ಎಂಬ ಪರಂಪರಾಗತವಾದ ಹೇಳಿಕೆ ಗಮನಾರ್ಹವಾದದ್ದು. ಅವರು ಕಾಲಕಾಲಕ್ಕೆ ವೇದರಾಶಿಯನ್ನು ವಿಂಗಡಿಸುತ್ತಾರೆ ಎಂಬ ಹೇಳಿಕೆಯೂ ಮುಖ್ಯವಾದದ್ದು.

ಪುರಾಣಗಳ ಸಂಬಂಧದಲ್ಲಿಯೂ ಇಂಥದೇ ಹೇಳಿಕೆಯಿದೆ. ಕಾಲಕಾಲಕ್ಕೆ ಪುರಾಣಗಳ ಪುನರ್ರಚನೆಯಾಗುತ್ತದೆ ಎಂದು. ಇವೆಲ್ಲವನ್ನೂ ಲಕ್ಷಿಸಿದಾಗ —ಕಾಲದಿಂದ ಕಾಲಕ್ಕೆ ಬೆಳೆದು ನಿಂತ 'ವೇದ'ವನ್ನು ಎಂದರೆ ಜ್ಞಾನವನ್ನು, ಜನರು ಪಾಠಮಾಡಲು ವಿಂಗಡಿಸಿಕೊಟ್ಟವರನ್ನು ವ್ಯಾಸ, ವೇದವ್ಯಾಸ ಎಂದು ಕರೆಯುತ್ತಿದ್ದರೆಂದು ತೋರುತ್ತದೆ. ಇಂಥ ವಿಂಗಡಣೆ ಒಬ್ಬ ವಿದ್ವಾಂಸನಿಂದ ಆಗಿರಬಹುದು; ಹಲವಾರು ಮಂದಿ ಪಂಡಿತರ ಪರಿಶ್ರಮದ ಫಲವಾಗಿರಬಹುದು.

'ಪುರಾಣ' ಎಂದರೆ ಹಳೆಯದು; ಹಿಂದಿನದು. ಪುರಾಣಗಳು ಹಿಂದಿನ ಸಂಗತಿ ಘಟನೆಗಳನ್ನು ಕುರಿತವು. ಪುರಾಣಗಳನ್ನು ಬರೆಯುವ ಪದ್ಧತಿ ಇತ್ತೀಚಿನವರೆಗೂ ನಡೆದು ಬಂದಿದೆ. ಬಸವೇಶ್ವರ, ಚನ್ನ ಬಸವೇಶ್ವರರಂಥ ಚಾರಿತ್ರಿಕ ವ್ಯಕ್ತಿಗಳನ್ನು ಕುರಿತ ಪುರಾಣಗಳು ಕನ್ನಡದಲ್ಲಿವೆ. ಜನರ ದೃಷ್ಟಿ, ಅಭಿರುಚಿ ಬದಲಾದಂತೆ ಪುರಾಣ ಕಥೆಗಳಲ್ಲಿ ಗಣನೀಯ ಬದಲಾವಣೆಗಳನ್ನು ನಾವು ಕಾಣಬಹುದು. ಬದಲಾದ ಪರಿಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಹಳೆಯ ಕಥೆಗಳಲ್ಲಿ —ಪುರಾಣಗಳಲ್ಲಿ— ಸೂಕ್ತ ಬದಲಾವಣೆ ಮಾಡಿದವರನ್ನು ಕೂಡ ವ್ಯಾಸರೆಂದು ಕರೆದಿದ್ದರೆ ಆಶ್ಚರ್ಯವಿಲ್ಲ.

ಈ ಊಹೆ ಏನೇ ಇರಲಿ—'ವ್ಯಾಸ' ಎಂಬುದು ನಮ್ಮ ಜನಾಂಗದ ಜ್ಞಾನ ಮತ್ತು ಸಂಸ್ಕೃತಿಯ ಉಗ್ರಾಣವನ್ನು ಆಗಾಗ್ಗೆ ಪರಿಶೀಲಿಸಿ, ಜಳ್ಳನ್ನು ತೂರಿ ಗಟ್ಟಿಯಾಗಿದ್ದ ಕಾಳನ್ನು ರಕ್ಷಿಸಿಕೊಂಡು ಬಂದವರ ಸಂಕೇತವಾಗಿರಬೇಕು ಎಂದು ಭಾವಿಸಬಹುದು.

ಈ ವಾದ ವಿವಾದಗಳೇನೇ ಇರಲಿ; ಭಾರತೀಯ ಸಂಸ್ಕೃತಿಯಲ್ಲಿ ವ್ಯಾಸ ಎಂಬ ಹೆಸರು ಪ್ರಸಿದ್ಧವಾದದ್ದು, ಗೌರವಕ್ಕೆ ಪಾತ್ರವಾದದ್ದು.

**ನೋಡಿ :** ಪುರಾಣ ; 'ಮಹಾಭಾರತ' ; ವೇದ

## ವಿಜ್ಞಾನ ಕಥಾಸಾಹಿತ್ಯ

"ಮಂಗಳ ಲೋಕದ ಜೀವಿಗಳು ಬಂದು ಭೂಮಿಯ ಮೇಲೆ ಇಳಿದಿದ್ದಾರೆ. ಅವರ ವ್ಯೋಮನೌಕೆ ದುಂಡಾಗಿ ತಟ್ಟೆಯಂತಿದೆ. ಅವರ ಶರೀರಗಳು ವಿಚಿತ್ರವಾಗಿವೆ" –ಹೀಗೆಂದು ಒಂದು ವಿಜ್ಞಾನ ಕಥೆ ನಿರೂಪಿಸುತ್ತದೆ ಎನ್ನೋಣ. ಆಗ ಓದುಗನಿಗೆ ಭಾರೀ ಕುತೂಹಲ. ಆತ ಆಸಕ್ತಿಯಿಂದ ಆ ಕಥೆಯನ್ನು ಓದುತ್ತಾನೆ. ಶ್ರೇಷ್ಠ ವೈಜ್ಞಾನಿಕ ಕಥಾಸಾಹಿತ್ಯದಲ್ಲಿ ಅವಶ್ಯವಾಗಿ ಎರಡು ಅಂಶಗಳು ಕೂಡಿರಬೇಕು. ವಾಸ್ತವಾಂಶ ಹಾಗೂ ಕಲ್ಪನೆ. ಆಗ ಬರೆಹ ರೋಮಾಂಚಕಾರಿ ಆಗುತ್ತದೆ. ಓದುಗರ ಆಕರ್ಷಣೆಯನ್ನು ಉಳಿಸಿಕೊಳ್ಳುತ್ತದೆ.

ವಿಜ್ಞಾನ ಕಥಾ ಸಾಹಿತ್ಯ ರಂಜನೆಯ ಜೊತೆಗೆ ಶಿಕ್ಷಣವನ್ನೂ ಒದಗಿಸಬಲ್ಲುದು. ವಿಜ್ಞಾನದ ಹೊಸ ವಿಷಯಗಳನ್ನು ತಿಳಿಸಲು ವಿಜ್ಞಾನ ಕಥೆ ಶ್ರೇಷ್ಠ ಮಾಧ್ಯಮ. ಫ್ರೆಂಚ್ ಕಾದಂಬರಿಕಾರ ಜೂಲ್ಸ್ ವರ್ನ್, ಆಂಗ್ಲ ಲೇಖಕ ಎಚ್. ಜಿ. ವೆಲ್ಸ್, ಉತ್ತಮ ವಿಜ್ಞಾನ ಕಥಾಸಾಹಿತ್ಯದ ಜನಕರು.



ಐಸಾಕ್ ಅಸಿಮೋವ್



ಆರ್ಥರ್ ಸಿ. ಕ್ಲಾರ್ಕ್

ವಿಜ್ಞಾನ ಕಥಾಸಾಹಿತ್ಯ ಸಮಾಜದ ಮೇಲೆ ಪ್ರಭಾವ ಬೀರಲು ಶಕ್ತವಾಗಿದೆ. ಆರ್ಥರ್ ಸಿ. ಕ್ಲಾರ್ಕ್, ಐಸಾಕ್ ಅಸಿಮೋವ್ ಮುಂತಾದ ವಿಜ್ಞಾನ ಕಥಾಕಾರರು ಸ್ವತಃ ವಿಜ್ಞಾನಿಗಳು. ಇವರ ಕೃತಿಗಳು ಅನೇಕ ವಿದ್ಯಾರ್ಥಿಗಳ ಒಲವು ವಿಜ್ಞಾನದತ್ತ ಹರಿಯುವಂತೆ ಪ್ರಚೋದಿಸಿವೆ.

ಎಚ್. ಜಿ. ವೆಲ್ಸ್



ರಾಜಶೇಖರ ಭೂಸನೂರಮಠ

[illegible] ವಿಜ್ಞಾನ ಕಥೆಗಳ ಕರ್ತೃ.

ನೋಡಿ : ಜೂಲ್ಸ್ ವರ್ನ್

## ವಿದ್ಯಾಪತಿ

ಆತನಿಗೆ ತನ್ನ ಮರಣ ಸಮೀಪಿಸುತ್ತಿದೆ ಎಂಬುದು ತಿಳಿದಿತ್ತು. ಗಂಗಾ ನದಿಯ ದಡದಲ್ಲಿ ಕೊನೆಯುಸಿರೆಳೆಯಬೇಕೆಂಬ ಆಸೆ. ಪಲ್ಲಕಿಯಲ್ಲಿ ಕುಳಿತು ಬಿಸ್ಪಿ ಗ್ರಾಮದಿಂದ ಹೊರಟು ಮೂರು ದಿನಗಳ ಕಾಲ ಪ್ರಯಾಣ. ಮುಕ್ತಾಯತಪುರವನ್ನು ತಲುಪಿದಾಗ. ಆತ ಪಲ್ಲಕಿಯಿಂದ ಇಳಿದು, "ಗಂಗೆಯನ್ನರಸಿ ನಾನು ಹರದಾರಿಗಳ ದೂರ ಬಂದಿರುವಾಗ ಆ ತಾಯಿ ತನ್ನ ಮಗನಿಗಾಗಿ ಸ್ವಲ್ಪ ಈಚೆ ಬರಬಾರದೆ" ಎಂದು ಹತ್ತಿರ ಇದ್ದವರಿಗೆ ಹೇಳುತ್ತಾನೆ. ರಾತ್ರಿ ಕಳೆದು ಬೆಳಗಾದಾಗ ಗಂಗಾನದಿ ತನ್ನ ದಿಕ್ಕು ಬದಲಿಸಿ ಅಲ್ಲಿಗೆ ಬಂದಿದೆ. ಆತ ಗಂಗೆಯ ಬಳಿಯಲ್ಲಿ ಅಸುನೀಗುತ್ತಾನೆ.



ಅಳಿಯದ ಪದಗಳು : ವಿದ್ಯಾಪತಿ

ಇದಂ ಖ್ಯಾತ ಭಾರತೀಯ ಕವಿ ವಿದ್ಯಾಪತಿಯ ಸಾವಿನ ಬಗೆಗೆ ಪ್ರಚಲಿತವಿರುವ ಒಂದು ಕಥೆ.

ವಿದ್ಯಾಪತಿ ಹುಟ್ಟಿದ್ದು ಪಂಡಿತರ ವಂಶದಲ್ಲಿ. ಮನೆಯಲ್ಲಿ ಸುಸಂಸ್ಕೃತ ವಾತಾವರಣ. ಆತನೂ ಬಹುಭಾಷಾ ಪಂಡಿತನಾದ. ಬಹುಮುಖ ವ್ಯಕ್ತಿತ್ವ ಬೆಳೆಯಿತು. ಸಂಸ್ಕೃತ, ಅಪಭ್ರಂಶ ಹಾಗೂ ಮೈಥಿಲೀ ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿದ. ಮೈಥಿಲೀ ಭಾಷೆ ಮಾಗಧಿ ಪ್ರಾಕೃತದಿಂದ ಆದದ್ದು; ಬಂಗಾಳಿ ಮತ್ತು ಹಿಂದೀಗಳ ಮಧ್ಯದ ಭಾಷೆ. ಎರಡು ಭಾಷೆಗಳ ಲಕ್ಷಣಗಳೂ ಇದರಲ್ಲಿ ಕಾಣಬರುತ್ತದೆ. ಹೀಗಾಗಿ ಎರಡೂ ಭಾಷೆಗಳ ಜನರಿಗೆ ವಿದ್ಯಾಪತಿಯನ್ನು ತಮ್ಮವನೆಂದು ಹೇಳಿಕೊಳ್ಳಲು ಹೆಮ್ಮೆ. ಇದು ಕವಿಯ ಶ್ರೇಷ್ಠತೆಯ ದ್ಯೋತಕ.

ಸಂಸ್ಕೃತದಲ್ಲಿ ಬರೆದ 'ಭೂ ಪರಿಕ್ರಮಣ' ವಿದ್ಯಾಪತಿಯ ಮೊದಲನೆಯ ಕೃತಿ. ಬಲರಾಮನಿಗೆ ಶಾಪ ಉಂಟಾಗಿ ಅವನು ತೀರ್ಥಯಾತ್ರೆಗೆ ಹೊರಟ ಕಥೆ ಇದು. ಮಹಾರಾಜ ದೇವಸಿಂಹನ ಇಚ್ಛೆಯಂತೆ ಕವಿ ಇದನ್ನು ಬರೆದ. 'ಪುರುಷ ಪರೀಕ್ಷಾ' ಎಂಬುದು ಕಥೆಗಳ ಮೂಲಕ ಧರ್ಮ, ರಾಜನೀತಿಗಳನ್ನು ಹೇಳಿರುವ ಗ್ರಂಥ. ಎಲ್ಲ ಬಗೆಯ ದಾನಗಳನ್ನು ಕುರಿತು 'ದಾನ ವಾಕ್ಯಾವಲಿ'ಯಲ್ಲಿ ಹೇಳಿದ್ದಾನೆ. 'ದುರ್ಗಾಭಕ್ತಿ ತರಂಗಿಣಿ' ಮಿಥಿಲೆಯಲ್ಲಿ ಜರಗುವ ದುರ್ಗಾಪೂಜೆಯ ವರ್ಣನೆ. 'ಮಣಿ ಮಂಜರೀ' ನಾಟಕ. ರಾಜಾ ಚಂದ್ರಸೇನ ಮತ್ತು ಮಣಿ ಮಂಜರಿಯರ ಕಥೆ ನಾಟಕದ ವಸ್ತು. ಶಿವ ಪೂಜೆಯ ವಿಧಿಗಳನ್ನು 'ಶೈವ ಸರ್ವಸ್ವಸಾರ'ದಲ್ಲಿ ವಿವರಿಸಿದ್ದಾನೆ.

ಅಪಭ್ರಂಶ ಭಾಷೆಯಲ್ಲಿ ಆತ ಬರೆದಿರುವುದು ಕಾವ್ಯಗಳನ್ನು. 'ಕೀರ್ತಿ ಲತಾ'ದಲ್ಲಿ ಅರಸು ಕೀರ್ತಿಸಿಂಹನನ್ನು ಹಾಡಿ ಹೊಗಳಿದ್ದಾನೆ. ಇದು ಚಂಪೂಕಾವ್ಯ. 'ಕೀರ್ತಿಪತಾಕಾ ದೋಹಾ' ವಿದ್ಯಾಪತಿಯ ಮೆಚ್ಚುಗೆಯ ಆಶ್ರಯದಾತನಾದ ಮಹಾರಾಜ ಶಿವಸಿಂಹನ ಯಶಸ್ಸನ್ನು ಬಿಂಬಿಸಿದೆ.

ಮೈಥಿಲೀ ದೇಶೀ ಭಾಷೆ. ವಿದ್ಯಾಪತಿ ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತನಾಗಿದ್ದರೂ ದೇಶೀ ಭಾಷೆಯ ಮೇಲೆ ಅಪಾರ ಅಭಿಮಾನ. ಚಿಕ್ಕ ವಯಸ್ಸಿನಿಂದ ಮುಪ್ಪಡರುವತನಕ ವಿದ್ಯಾಪತಿ ಮೈಥಿಲೀ ಭಾಷೆಯಲ್ಲಿ ಗೇಯ ಪದಗಳನ್ನು ವಿಭಿನ್ನ ಸಂದರ್ಭಗಳಲ್ಲಿ ರಚಿಸುತ್ತಿದ್ದ. ಹೀಗೆ ರಚಿಸಿದ ಗೇಯ ಪದ್ಯಗಳಸಂಗ್ರಹ 'ಪದಾವಳಿ.' ಸಂಗೀತಶಾಸ್ತ್ರದ ನಿಯಮಗಳನ್ನು ಅನುಸರಿಸಿ ರಾಗತಾಳಬದ್ಧವಾಗಿ ಆತ ಪದಗಳನ್ನು ರಚಿಸಿದ್ದಾನೆ. ಒಂದು ಸಾವಿರಕ್ಕೂ ಹೆಚ್ಚಾಗಿರುವ ಪದಗಳಲ್ಲಿ ಶೃಂಗಾರ ಗೀತೆಗಳು; ಭಕ್ತಿ ಗೀತೆಗಳು ಮತ್ತಿತರ ವಿಧದ ಗೀತಗಳಿವೆ. ಗೋರಕ್ಷನಾಥ ಹಾಗೂ ಮತ್ಸ್ಯೇಂದ್ರ ನಾಥರಿಗೆ ಸಂಬಂಧಿಸಿದ 'ಗೋರಕ್ ವಿಜಯ' ನಾಲ್ಕು ಅಂಕಗಳ ನಾಟಕ. ಗೀತೆಗಳು ಮೈಥಿಲಿಯಲ್ಲೂ ಗದ್ಯಭಾಗ ಸಂಸ್ಕೃತ ಮತ್ತು ಪ್ರಾಕೃತಗಳಲ್ಲೂ ಇವೆ.

ಮಹಾರಾಜ ಶಿವಸಿಂಹ ವಿದ್ಯಾಪತಿಯನ್ನು 'ಅಭಿನವ ಜಯದೇವ' ಎಂದು ಕರೆದ. ಇದರ ಜೊತೆಗೆ 'ಮೈಥಿಲ ಕೋಕಿಲೆ' ಎಂಬ ಬಿರುದೂ ಸಂದಿತು.

ವಿದ್ಯಾಪತಿಯ ಭಾಷೆ ಲಲಿತವಾದದ್ದು; ಮಾಧುರ್ಯ ಉಳ್ಳದ್ದು. ಭಾವಕ್ಕೆ ತಕ್ಕ ಭಾಷೆ. ಒಮ್ಮೆ ಧುಮುಕುವ ಜಲಪಾತದಂತೆ ಭೋರ್ಗರೆದರೆ, ಒಮ್ಮೆ ನಿಧಾನವಾಗಿ ಹರಿವ ನದಿಯಂತೆ ಮಂಜುಳ. ಪದಗಳ ಆಯ್ಕೆಯಲ್ಲಿ ಪರಿಣತ. ಮಿತವಾದ ಶಬ್ದಗಳಲ್ಲಿ ಭಾವನೆಗಳನ್ನು ವ್ಯಕ್ತಪಡಿಸುವ ಕಲೆ ಆತನಿಗೆ ಸಿದ್ಧಿಸಿತ್ತು.

ಅಲಂಕಾರವನ್ನು ಉಪಯೋಗಿಸುವಲ್ಲಿ ಆತ ಸಂಪ್ರದಾಯವಾದಿಯಾಗಿರಲಿಲ್ಲ. ಒಂದು ಛಂದಸ್ಸಿಗೇ ಅಂಟಿಕೊಳ್ಳುತ್ತಿರಲಿಲ್ಲ. ಅದರಿಂದಾಗಿ ಪದ್ಯಗಳು ಸಂಗೀತ ಮತ್ತು ಸಾಹಿತ್ಯಗಳ ಸಂಗಮವಾಗಿವೆ.

ಆತ ಭಕ್ತ ಹಾಗೂ ಶೃಂಗಾರ ಕವಿ. ಹಿಂದಿಯಲ್ಲಿ ಶೈವ ಸಾಹಿತ್ಯ ರಚಿಸಿದ ಏಕಮಾತ್ರ ಕವಿ ಆತ. ಆತನ ಚರಣಗಳು ಹೀಗಿವೆ : (ಭಾಷಾಂತರ ಡಾ. ಎಂ. ಎಸ್. ಕೃಷ್ಣಮೂರ್ತಿ ಅವರದು.)

"ತೊರೆಯದಿರೆನ್ನ ಹರನೆ, ತೋರು ಮರುಕ
ಪತಿತರಲಿ ಪತಿತ ನಾನು ತಿರುಕ"

ರಾಧಾಕೃಷ್ಣರ ಪ್ರೇಮ, ಭಕ್ತಿನಿರೂಪಣೆ ಇವನ ಗೀತಗಳಲ್ಲಿ ಪ್ರಧಾನ ಅಂಶ. ಜಯದೇವನ 'ಗೀತಗೋವಿಂದ'ವನ್ನು ಅನುಸರಿಸಿರುವುದೂ ಕಂಡುಬರುತ್ತದೆ. ಭಕ್ತಿಯ ಜೊತೆ ಜೊತೆಗೇ ಶೃಂಗಾರವನ್ನೂ ತಂದಿದ್ದಾನೆ.

"ಅಭಿನವ ಜಲಧರ ಸುಂದರ ದೇಹ,
ಎಸೆಯುತಿಹುದು ಪೀತಾಂಬರ ಮಿಂಚಿನ ಗೇಹ
ಹೊಳೆವುದು ಶ್ಯಾಮಲ ಕುಟಿಲ ಕೇಶ
ಕಾಡಿಗೆ ಕಣ್ಣು, ಕಂಗೊಳಿಪುದು ಮದನವೇಷ"

ಕೃಷ್ಣನ ಈ ವರ್ಣನೆ ಮನೋಹರವಾಗಿದೆ. ಇತರ ಕಡೆಗಳಲ್ಲಿರುವಂತೆ ರಾಧೆ ಕೃಷ್ಣನಿಗಿಂತ ದೊಡ್ಡವಳಲ್ಲ. ವಿದ್ಯಾಪತಿಯ ರಾಧೆ ಚಿಕ್ಕವಳು.

ಕೃಷ್ಣನ ಪ್ರೇಮಧಾರೆಯಲ್ಲಿ ಮಿಂದ ರಾಧೆಗೆ ಆತ ಮಧುರೆಗೆ ಹೋದಾಗ ವಿರಹತಾಪ ತಡೆಯುವುದು ಕಷ್ಟವಾಗುತ್ತದೆ. ಕೃಷ್ಣನಿಗಾದರೂ ಅಷ್ಟೆ: ರಾಧೆಯನ್ನು ಅಗಲಿರಲಾರ. ಇವನ ಚಿತ್ರ ವಾಸ್ತವವಾಗಿ, ಸುಂದರವಾಗಿ, ಮನೋವೈಜ್ಞಾನಿಕವಾಗಿ ಮೂಡಿಬಂದಿದೆ. ಇವನ ಭಕ್ತಿ–ಶೃಂಗಾರದ ಪರಿ ಬಂಗಾಳಿಗಳ ಮೆಚ್ಚುಗೆಗೆ ಪಾತ್ರವಾಗಿದೆ.

ವಿದ್ಯಾಪತಿ ಸೌಂದರ್ಯಾರಾಧಕ, ಪ್ರಕೃತಿ ಉಪಾಸಕ, ಪ್ರಕೃತಿಯ ವರ್ಣನೆ ಅವನ ಗ್ರಂಥಗಳಲ್ಲಿ ಹರಿದು ಬಂದಿದೆ. ವಸಂತಋತುವಿನ ಮೋಹಕತೆ, ಮಳೆಗಾಲದ ಭೀಕರತೆ, ಪುಷ್ಪ ಭರಿತ ವನರಾಜಿಗಳನ್ನು ಮೋಹಕವಾಗಿ ಬಣ್ಣಿಸಿದ್ದಾನೆ.

"ಅರಳಿತು ಕುಸುಮ ಕುಂಜ ಕುಟೀರ ವನದಲಿ
ಪಂಚಮದಿಂಚರವ ಹಾಡಿತು ಕೋಗಿಲೆ"

ಆರು ಋತುಗಳ ವರ್ಣನೆಯನ್ನೂ ಆತ ಮಾಡಿದ್ದಾನೆ.

ವಿದ್ಯಾಪತಿಯ ಕಾಲ ಇನ್ನೂ ವಿವಾದಾಸ್ಪದವಾಗಿ ಉಳಿದಿದೆ. ಆತ ಕೆಲವು ರಾಜರ ಆಸ್ಥಾನದಲ್ಲಿದ್ದವನು. ಆ ರಾಜರ ಕಾಲವನ್ನು ಗಮನಿಸಿ, ವಿದ್ಯಾಪತಿ ಸುಮಾರು 1360ರಲ್ಲಿ ಜನಿಸಿರಬೇಕೆಂದು ಹೇಳುತ್ತಾರೆ. ಮಿಥಿಲೆಯ ದರ್ಭಾಂಗಾ ಜಿಲ್ಲೆಯ ವಿಸಪಿ ಅಥವಾ ಗಢವಿಸಪಿ ಗ್ರಾಮ ಇವನ ವಾಸಸ್ಥಳ. ತಂದೆ ಗಣಪತಿ ಠಾಕೂರ ಸಂಸ್ಕೃತ ಪಂಡಿತ. ಗಂಗಾಭಕ್ತಿ ತರಂಗಿಣಿ ಎಂಬ ಗ್ರಂಥವನ್ನು ಬರೆದಿದ್ದಾನೆ. ತಾಯಿ ಹಾಂಸಿನಿದೇವಿ. ಬಹುಕಾಲ ಮಕ್ಕಳಾಗದಿರಲು ಕಪಿಲೇಶ್ವರನ ಸೇವೆ ಮಾಡಿದ ಅನಂತರ ಜನಿಸಿದವನು ವಿದ್ಯಾಪತಿ. ತಂದೆ ಮತ್ತು ಹರಿಮಿಶ್ರ ಎಂಬವರು ಸಂಸ್ಕೃತ ಕಲಿಸಿದರು. ಲಕ್ಷ್ಮೀ–ಸರಸ್ವತಿಯರ ಅನುಗ್ರಹಕ್ಕೆ ಪಾತ್ರರಾಗಿದ್ದ ಮನೆತನ ಅವರದು.

ವಿದ್ಯಾಪತಿ ರಾಜರ ಆಸ್ಥಾನದಲ್ಲಿದ್ದರೂ ಜನಕವಿಯೂ ಆದ. ಶೃಂಗಾರ ಪ್ರಿಯನಾಗಿದ್ದ; ಭಕ್ತನೂ ಆಗಿದ್ದ. ಆಸ್ತಿಕತೆಯೊಡನೆ ಧರ್ಮದಲ್ಲಿ ನಿರಪೇಕ್ಷತೆಯೂ ಇತ್ತು. ಸಂಸ್ಕೃತದಲ್ಲಿ ಉದ್ದಾಮ ವಿದ್ವಾಂಸನಾದರೂ ಜನಸಾಮಾನ್ಯರ ದೇಶೀ ಭಾಷೆಯನ್ನು ಪ್ರೀತಿಸುತ್ತಿದ್ದ.

ವಿದ್ಯಾಪತಿಯ ಮತದ ಬಗೆಗೂ ವಿವಾದವಿದೆ. ಕೆಲವರು ಆತ ವೈಷ್ಣವ ಪಂಥದವನೆಂದೂ ಕೆಲವರು ಶೈವ ಪಂಥದವನೆಂದೂ ಹೇಳುತ್ತಾರೆ. ಆದರೆ ಆತ ಎಲ್ಲ ದೇವರನ್ನೂ ಸಮಾನವಾಗಿ ಕಾಣುವ ಸಮನ್ವಯವಾದಿಯಾಗಿದ್ದಂತೆ ತೋರುತ್ತದೆ. ಮಹಾರಾಜ ಶಿವಸಿಂಹ ವಿದ್ಯಾಪತಿಗೆ ವಿಸಪಿ ಗ್ರಾಮವನ್ನು ದಾನವಾಗಿ ಕೊಟ್ಟನೆಂಬ ಶಾಸನವಿದೆ.

ಗ್ರಿಯರ್ಸನ್ ಎಂಬ ಪಾಶ್ಚಾತ್ಯ ವಿದ್ವಾಂಸ 'ವಿದ್ಯಾಪತಿ ಅಂಡ್ ಹಿಸ್ ಕಂಟೆಂಪೊರರೀಸ್' ಎಂಬ ಪುಸ್ತಕದಲ್ಲಿ "ಹಿಂದೂಧರ್ಮದ ಸೂರ್ಯ ಮುಳುಗಿ ಹೋಗಬಹುದು, ಕೃಷ್ಣನಲ್ಲಿ ಶ್ರದ್ಧೆ ಅಳಿದುಹೋಗಬಹುದು, ಭವರೋಗದ ಔಷಧಿಯಾದ ಕೃಷ್ಣನ ಸ್ತುತಿಗಳೂ ಕಣ್ಮರೆಯಾಗಬಹುದು. ಆದರೆ ರಾಧಾಕೃಷ್ಣರ ಲೀಲಾಗಾನವಿರುವ ವಿದ್ಯಾಪತಿಯ ಪದಗಳು ಮಾತ್ರ ಎಂದೆಂದಿಗೂ ಅಳಿಯವು'' ಎಂದು ಪ್ರಶಂಸಿಸಿದ್ದಾನೆ.

## ವಿದೂಷಕ

'' ರಂಗಭೂಮಿಯ ಮೇಲೆ ವಿದೂಷಕನು ಬಂದಿರಲು
ಹಿಗ್ಗಿ ಹಿರಿದಾಗುವುದು ರಂಗಭೂಮಿ
ನೋಡುತ್ತ ಕೇಳುತ್ತ ಪ್ರೇಕ್ಷಕರು ಕುಳಿತಿರಲು
ಎಂಥ ಸಂಯೋಗ, ಆಹ, ಎಂಥ ಮೇಳ "

—ಇದು ಇಂಗ್ಲಿಷ್ ಲೇಖಕ ಲ್ಯಾಂಡರನ ಒಂದು ಪದ್ಯದ ಭಾವ. ತನ್ನ ವಿಚಿತ್ರ ವೇಷ, ನಗು ಹುಟ್ಟಿಸುವ ರೀತಿಯ ಹಾವಭಾವ, ಚುರುಕು ಮಾತುಗಳಿಂದ, ಮೂರ್ಖತನದ ತೋರಿಕೆಯ ನಟನೆಯಿಂದ ಪ್ರೇಕ್ಷಕರನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸುವವನೇ ವಿದೂಷಕ.

ಹಿಂದೆ ರಾಜಮಹಾರಾಜರ ಆಸ್ಥಾನಗಳಲ್ಲಿ ವಿದೂಷಕ ಇರುತ್ತಿದ್ದುದುಂಟು. ರಾಜನ ಮನಸ್ಸು ಖಿನ್ನವಾದಾಗ ಅಥವಾ ಬೇಸರಗೊಂಡಾಗ ತನ್ನ ಹಾಸ್ಯದಿಂದ ಅವನ ಮನಸ್ಸನ್ನು ರಂಜಿಸಿ ಬೇಸರ ಕಳೆಯುವುದೇ ವಿದೂಷಕನ ಕೆಲಸವಾಗಿತ್ತು. ಪ್ರಾಚೀನ ರೋಮಿನಲ್ಲೂ ಇಂಥ ವಿದೂಷಕರಿದ್ದರು.

ಸಂಸ್ಕೃತ ನಾಟಕಗಳಲ್ಲಿ ರಾಜಮಹಾರಾಜರ ಕಥೆ ನಾಟಕದ ವಸ್ತುವಾದಾಗ ಅವರೊಡನೆ ವಿದೂಷಕರೂ ಬಂದರು. ಸಂಸ್ಕೃತ ನಾಟಕರಂಗದಲ್ಲಿ ಸ್ಥಿರವಾಗಿ ನಿಂತರು. ಇವರು ರಾಜನನ್ನು ಮತ್ತು ಪ್ರೇಕ್ಷಕರನ್ನು ನಗಿಸುವುದು ಮಾತ್ರವಲ್ಲದೆ, ರಾಜನ ಪ್ರಣಯ ಸಾಹಸಗಳಿಗೆ ಸಹಾಯಮಾಡುವುದೂ ಉಂಟು. ಇವರ ತಂತ್ರಗಳಿಂದಾಗಿ ನಾಟಕ ಕ್ರಿಯೆ ತೀವ್ರವಾಗಿ ಕೆಲವೊಮ್ಮೆ ನಾಟಕಕ್ಕೆ ಅಪೂರ್ವ ಶೋಭೆ ಉಂಟಾಗುತ್ತದೆ. ಭಾರತೀಯ ಲಕ್ಷಣಗ್ರಂಥಗಳಲ್ಲಿ ವಿದೂಷಕನನ್ನು ನಾಯಕನ ಸಹಾಯಕನೆಂದು ಕರೆದಿದ್ದಾರೆ.



ಶ್ರೇಷ್ಠ ಆಂಗ್ಲ ವಿದೂಷಕ ರಿಚರ್ಡ್ ಚಾರ್ಲ್‌ಟನ್



ನಾಯಕನ ಸಂಗಾತಿ : ವಿದೂಷಕ



ಚಾಪ್ಲಿನ್ ಚಿತ್ರದಲ್ಲಿ ವಿದೂಷಕ ಪಾತ್ರಗಳು

ಶೇಕ್ಸ್‌ಪಿಯರನೇ ಮೊದಲಾದ ಪಾಶ್ಚಾತ್ಯ ನಾಟಕಕಾರರ ನಾಟಕಗಳಲ್ಲೂ ವಿದೂಷಕ ಬರುತ್ತಾನೆ. ಶೇಕ್ಸ್‌ಪಿಯರನ ಹೆನ್ರಿ ಸರಣಿಯ ನಾಟಕಗಳಲ್ಲಿ ಮತ್ತು 'ಕಿಂಗ್‌ಲಿಯರ್'ನಲ್ಲಿ ಬರುವ ಫಾಲ್‌ಸ್ಟಾಫ್ ಮತ್ತು ಫೂಲ್‌ಗಳು ವಿದೂಷಕರಲ್ಲಿ ಅತ್ಯಂತ ಪ್ರಮುಖರು.

ಸಾಮಾನ್ಯವಾಗಿ ವಿದೂಷಕರು ಪೆದ್ದರೆಂಬಂತೆ ನಡೆದುಕೊಂಡರೂ ಅವರು ನಿಜವಾಗಿ ಬುದ್ಧಿವಂತರು. ಯಾವುದೇ ಕಾರಣಕ್ಕಾಗಿ ಪರಿಸ್ಥಿತಿ ಬಿಗಡಾಯಿಸಿಕೊಂಡಾಗ ಅದನ್ನು ನಿವಾರಿಸಲು ತಕ್ಕ ತಂತ್ರಗಳನ್ನು ಒಡನೆಯೇ ಕಲ್ಪಿಸಬಲ್ಲ ಸಮಯಸ್ಫೂರ್ತಿಯುಳ್ಳ ಚತುರರು. ಇವರು ನಾಟಕದ ನಾಯಕ ನಾಯಕಿಯರಿಗೆ ತುಂಬ ಆಪ್ತರು, ಪ್ರಿಯರಾದವರು. ಆದರೂ ಅವರನ್ನು ವ್ಯಂಗ್ಯವಾಗಿ ಟೀಕಿಸುವುದೂ ಉಂಟು. ಇದು ಅವರು ಅನುಸರಿಸುವ ಜನಮನೋರಂಜನೆಯ ತಂತ್ರಗಳಲ್ಲೊಂದು. ಕೆಲವೊಮ್ಮೆ ಅವರ ಹಾಸ್ಯದ ಚಟಾಕಿ ಸಮಾಜದ ಲೋಪ ದೋಷಗಳ ಮೇಲೆ ಸಿಡಿಯುವುದೂ ಉಂಟು.

ಆಧುನಿಕ ನಾಟಕಗಳಲ್ಲಿ ವಿದೂಷಕ ಹಿಂದಿನಂತೆ ವಿಚಿತ್ರ ವೇಷದಿಂದ ಬರದಿದ್ದರೂ ಹಾಸ್ಯನಟನಾಗಿ ಬರುತ್ತಾನೆ. ಕನ್ನಡ ರಂಗಭೂಮಿಯಲ್ಲಿ ಹೀಗೆ ಹಾಸ್ಯವನ್ನೇ ಪ್ರಮುಖ ಮಾಧ್ಯಮವನ್ನಾಗಿಟ್ಟುಕೊಂಡು ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಷಯಗಳ ಬಗೆಗೆ ಟೀಕೆ ಮಾಡುತ್ತ ಅತ್ಯಂತ ಜನಪ್ರಿಯರಾದ ಹಾಸ್ಯನಟರೂ ಇದ್ದಾರೆ. ಯಕ್ಷಗಾನದಲ್ಲಿ ಬರುವ ಕೋಡಂಗಿ ಕೂಡ ವಿದೂಷಕವರ್ಗಕ್ಕೆ ಸೇರಿದವನೇ.

ಸರ್ಕಸ್ಸುಗಳಲ್ಲಿ ಬರುವ 'ಕ್ಲೌನ್'ಗೂ ನಾಟಕಗಳಲ್ಲಿ ಬರುವ ವಿದೂಷಕನಿಗೂ ವ್ಯತ್ಯಾಸಗಳುಂಟು. ಕ್ಲೌನ್ ತನ್ನ ಆಂಗಿಕ ಚೇಷ್ಟೆಗಳಿಂದ ಹುಚ್ಚಾಟಗಳಿಂದ ಜನರನ್ನು ನಗಿಸುತ್ತಾನೆ. ವಿದೂಷಕ ತನ್ನ ಪ್ರಚಂಡ ಬುದ್ಧಿಯನ್ನು ಉಪಯೋಗಿಸುತ್ತಾನೆ.

ಇಂದಿನ ಜನಪ್ರಿಯ ಸಿನೆಮಾಗಳಲ್ಲಿ ಕೂಡ ವಿದೂಷಕವರ್ಗದ ಪಾತ್ರ ಉಂಟು.

ವಿದೂಷಕರು ಎಲ್ಲರನ್ನೂ ನಗಿಸಿ, ತಾವು ತೀರ ಮುಗ್ಧ–ಪೆದ್ದರಂತೆ ನಡೆದುಕೊಂಡರೂ ವೈಯಕ್ತಿಕ ಜೀವನದಲ್ಲಿ ಅವರಿಗೂ ಇತರರಂತೆಯೇ ಸುಖ–ದುಃಖಗಳಿರುತ್ತವೆ.

ಒಮ್ಮೆ ಒಬ್ಬ ವಿದೂಷಕ ಡಾಕ್ಟರ ಬಳಿ ಹೋಗಿ ತನ್ನ ಅನಾರೋಗ್ಯವನ್ನು ವಿವರಿಸಿದ. ಡಾಕ್ಟರು, "ನೀವು ತುಂಬಾ ಚಿಂತೆಗೊಳಗಾಗಿರುವಂತಿದೆ. ಈ ಊರಲ್ಲಿ ಒಂದು ನಾಟಕ ನಡೀತಿದೆ – ಅದರಲ್ಲೊಬ್ಬ ವಿದೂಷಕ ಇದ್ದಾನೆ. ಆತ ಹೊಟ್ಟೆ ಹುಣ್ಣಾಗುವಂತೆ ನಗಿಸ್ತಾನೆ. ನೀವು ಹೋಗಿ ಆ ನಾಟಕವನ್ನು ನೋಡಿ ಬನ್ನಿ ಎಲ್ಲ ಸರಿಹೋಗ್ತದೆ" ಎಂದರು.

ಆಗ ರೋಗಿ ಹೇಳಿದ: "ಡಾಕ್ಟರೇ, ಆ ವಿದೂಷಕನೇ ನಾನು".

## ವಿಮರ್ಶೆ

'ವಿಮರ್ಶೆ' ಎಂಬ ಮಾತನ್ನು ಕೇಳಿದೊಡನೆಯೇ ನಮಗೆ 'ಸಾಹಿತ್ಯ ವಿಮರ್ಶೆ'ಯ ನೆನಪಾಗುತ್ತದೆ. ಏಕೆಂದರೆ ಇತ್ತೀಚಿನ ಕಾಲದಲ್ಲಿ ಸಾಹಿತ್ಯ ದೊಡ್ಡ ಪ್ರಮಾಣದಲ್ಲಿ ಬೆಳೆದಿದೆ.

ಆದರೆ ವಿಮರ್ಶೆ ಸಾಹಿತ್ಯರಂಗಕ್ಕೆ ಮಾತ್ರ ಮೀಸಲಿಲ್ಲ. ಅದು ಎಲ್ಲ ಕಲೆಗಳನ್ನೂ ಆವರಿಸುತ್ತದೆ. ಸೃಷ್ಟಿ ಕಲೆಯ ಒಂದು ಮುಖವಾದರೆ ವಿಮರ್ಶೆ ಇನ್ನೊಂದು ಮುಖ. ಕಲಾಸೃಷ್ಟಿ ಬೆಳೆಯಬೇಕಾದರೆ, ಸೃಷ್ಟಿಯಾದ ಕಲಾಕೃತಿಗಳಿಂದ ಜಳ್ಳನ್ನು ತೂರಿ ಕಾಳನ್ನು ತುಂಬಿಕೊಳ್ಳಬೇಕಾದರೆ, ವಿಮರ್ಶೆ ಅತ್ಯವಶ್ಯ.

ಯಾವುದೇ ಕಲಾಕೃತಿಯನ್ನು ವಿಮರ್ಶಿಸಬೇಕಾದರೆ, ವಿಮರ್ಶಕನಿಗೆ ಕೆಲವು ಅರ್ಹತೆಗಳಿರಬೇಕು. ಆ ಕಲೆಯ ಸ್ವರೂಪದ ಸಮಗ್ರ ಪರಿಚಯ, ಪೂರ್ವಾಗ್ರಹವಿಲ್ಲದ ವಿಶಾಲ ಮನೋಭಾವ, ಕಲಾಕೃತಿಯಿಂದ ರಸಾನುಭವ ಪಡೆಯುವ ಸಹೃದಯತೆ, ತನಗೆ ಸರಿಯೆಂದು ತೋರಿದ್ದನ್ನು, ಯಾವ ದಾಕ್ಷಿಣ್ಯಕ್ಕೂ ಕಟ್ಟುಬೀಳದೆ ಹೇಳುವ ದಿಟ್ಟತನ, ತಾನು ಹೇಳಬೇಕಾದ್ದನ್ನು ಸ್ಪಷ್ಟವಾಗಿ ಹೇಳಬಲ್ಲ ಶಕ್ತಿ –ಇವೇ ಆ ಅರ್ಹತೆಗಳು.

ವಿಮರ್ಶಕ ಎಷ್ಟೇ ದಕ್ಷನಿದ್ದರೂ ಅವನ ಅಭಿಪ್ರಾಯ ಸರ್ವಕಾಲಕ್ಕೂ ಮಾನ್ಯವಾಗುತ್ತದೆಂದಾಗಲೀ ಆಗಬೇಕೆಂದಾಗಲೀ ಹೇಳುವಂತಿಲ್ಲ. ಶೇಕ್ಸ್‌ಪಿಯರನ ನಾಟಕಗಳ ಬಗೆಗೆ ಅತ್ಯಂತ ಪ್ರಮುಖ ವಿಮರ್ಶಕರು ವಿಮರ್ಶೆಗಳನ್ನು ಬರೆದಿದ್ದರೂ ಇಂದಿಗೂ ಆ ಕೃತಿಗಳನ್ನು ಕುರಿತು ಹೊಸ ಹೊಸ ವಿಮರ್ಶೆಗಳು ಬರುತ್ತಲೇ ಇವೆ.

ಒಂದು ಕಾಲದಲ್ಲಿ ಅತ್ಯಂತ ಮಹತ್ವವುಳ್ಳದ್ದು ಎನಿಸಿದ ವಿಮರ್ಶೆ ಆ ಕಾಲದ ಜನರ ಜೀವನ ದೃಷ್ಟಿ, ಸಾಹಿತ್ಯಚಿಂತನೆ ವಿಮರ್ಶಾಪ್ರಜ್ಞೆಗಳನ್ನು ಪ್ರತಿನಿಧಿಸುತ್ತದೆ, ಅಷ್ಟೆ.

ಒಂದು ಸಾಹಿತ್ಯ ಕೃತಿಯನ್ನು ವಿಭಜಿಸಿ, ವಿಶ್ಲೇಷಿಸಿ ಅಭ್ಯಸಿಸುವುದು ಮತ್ತು ಅದನ್ನು ಇತರ ಕೃತಿಗಳೊಂದಿಗೆ ಹೋಲಿಸುವುದು –ಅಥವಾ ವಿಶ್ಲೇಷಣೆ ಮತ್ತು ತುಲನೆ– ವಿಮರ್ಶಕನ ಎರಡು ಸಾಧನಗಳೆಂದು ಖ್ಯಾತ ಆಂಗ್ಲ ಕವಿ–ವಿಮರ್ಶಕ ಟಿ.ಎಸ್. ಎಲಿಯಟ್ ಹೇಳಿದ್ದಾನೆ. ವಿಮರ್ಶಕ ಒಂದು ಕೃತಿಯ ಭಾಷೆ, ಶೈಲಿ, ಛಂದಸ್ಸು ಮೊದಲಾದ ತಾಂತ್ರಿಕ ಅಂಶಗಳನ್ನು ವಿಮರ್ಶಿಸುವಂತೆ, ಆ ಕೃತಿಯು ಸಾಹಿತಿ ಯಾವ ಮೌಲ್ಯಗಳನ್ನು ನಿರೂಪಿಸಲು ಹೊರಟಿದ್ದಾನೆ, ನಿರೂಪಣೆ ಸಮರ್ಪಕವೇ ಎಂಬುದನ್ನು



ಬಿ. ವಿ. ಕೆ. ಶಾಸ್ತ್ರಿ

ವಿಮರ್ಶಿಸುವಂತೆ, ಆ ಕೃತಿಯ ಸಾಹಿತಿ ಯಾವ ಮೌಲ್ಯಗಳನ್ನು ನಿರೂಪಿಸಲು ಹೊರಟಿದ್ದಾನೆ. ನಿರೂಪಣೆ ಸಮರ್ಪಕವಾಗಿದೆಯೆ ಎಂಬುದನ್ನೂ ಗಮನಿಸುತ್ತಾನೆ. ಸಾಹಿತಿ ತನ್ನ ಕೃತಿಗಳಲ್ಲಿ, ತನಗೆ ಸರಿಯೆನಿಸಿದ ಸಾಮಾಜಿಕ ನೈತಿಕ ಮೌಲ್ಯಗಳ ಬಗೆಗೆ ಹೇಳುತ್ತಾನೆ. ಆದ್ದರಿಂದ ಸಾಹಿತ್ಯ ವಿಮರ್ಶೆ– ಆತನ ಕೃತಿಯನ್ನು ಕುರಿತ ವಿಮರ್ಶೆ– ಒಂದು ದೃಷ್ಟಿಯಿಂದ ಜೀವನ ವಿಮರ್ಶೆಯೂ ಆಗುತ್ತದೆ ಎಂದು ಕೆಲವರ ಅಭಿಪ್ರಾಯ.

ವಿಶ್ವಸಾಹಿತ್ಯದಲ್ಲಿ ಮೊತ್ತಮೊದಲ ವಿಮರ್ಶಕನೆಂದು ಹೆಸರು ಪಡೆದವನು ಗ್ರೀಕ್ ತತ್ತ್ವಜ್ಞಾನಿ ಅರಿಸ್ಟಾಟಲ್. ಇವನ 'ಕಾವ್ಯಮೀಮಾಂಸೆ'. ಗ್ರೀಕ್ ನಾಟಕಕಾರರಾದ ಎಸ್ಕಿಲಸ್. ಸಾಫೋಕ್ಲೀಸ್, ಯೂರಿಪಿಡೀಸ್ ಮೊದಲಾದವರ ನಾಟಕಗಳ ಬಗೆಗೆ ಅತ್ಯುತ್ತಮ ವಿಮರ್ಶೆ ಎನಿಸಿದೆ. ಟ್ರಾಜಿಡಿಗಳ ವಸ್ತು. ಪರಿಣಾಮಗಳ ಬಗ್ಗೆ ಮಹತ್ವದ ಅಭಿಪ್ರಾಯಗಳನ್ನು ಅರಿಸ್ಟಾಟಲ್ ವ್ಯಕ್ತಪಡಿಸಿದ್ದಾನೆ. ಇವನ ಅನಂತರದವನಾದ ಖ್ಯಾತ ರೋಮನ್ ಕವಿ ಹೊರೇಸ್ ಬರೆದ 'ಕಾವ್ಯ ಕಲೆ' ಕೂಡ ಗಮನಾರ್ಹ ವಿಮರ್ಶಾಕೃತಿ.

ಭಾರತದಲ್ಲಿ ಕಾವ್ಯದ ಲಕ್ಷಣಗಳನ್ನು ಕುರಿತು ಕಾವ್ಯಮೀಮಾಂಸೆಗಳು ಬಂದುವು. ಆದರೆ ಅವು ಈಗಿನ ರೀತಿಯ ಸಾಹಿತ್ಯ ವಿಮರ್ಶೆಗಳಲ್ಲ; ಅವು ಪ್ರಧಾನವಾಗಿ ಲಕ್ಷಣ ಗ್ರಂಥಗಳು. ಪಾಶ್ಚಾತ್ಯ ಪ್ರಭಾವದಿಂದ ಈ ಶತಮಾನದಲ್ಲಿ ಆಧುನಿಕ ಸಾಹಿತ್ಯ ಪ್ರಾರಂಭವಾಗುತ್ತಿದ್ದಂತೆ ವಿಮರ್ಶೆಯೂ ಮೊದಲಾಯಿತು. ಪ್ರಾಚೀನ ಗ್ರಂಥಗಳನ್ನು ಆಧುನಿಕ ಮಾರ್ಗದಲ್ಲಿ ವಿಮರ್ಶಿಸುವ ಸಂಪ್ರದಾಯ ಏರ್ಪಟ್ಟಿತು. ಕನ್ನಡ ಸಾಹಿತ್ಯದಲ್ಲಿ ಬಿ ಎಂ ಶ್ರೀ. ವೆಂಕಣ್ಣಯ್ಯ. ಎ ಆರ್ ಕೃಷ್ಣಶಾಸ್ತ್ರೀ, ಡಿ ವಿ ಜಿ, ಮಾಸ್ತಿ. ವಿ ಕೃ ಗೋಕಾಕ, ಎಸ್ ವಿ ರಂಗಣ್ಣ, ಕುವೆಂಪು, ಬೇಂದ್ರೆ, ತೀ ನಂ ಶ್ರೀ, ಕೀರ್ತಿನಾಥ ಕುರ್ತಕೋಟಿ, ಅಡಿಗ ಮೊದಲಾದವರು ಉತ್ತಮ ವಿಮರ್ಶೆಗಳನ್ನು ಬರೆದಿದ್ದಾರೆ.



ಪಿ.ಆರ್. ತಿಪ್ಪೇಸ್ವಾಮಿ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ತನ್ನದೇ ಭದ್ರ ಸ್ಥಾನವನ್ನು ಗಳಿಸಿಕೊಂಡಿದೆ. ವಿಮರ್ಶಾ ಗ್ರಂಥಗಳ ಜೊತೆಗೆ, ನಿಯತ ಕಾಲಿಕಗಳಲ್ಲಿ ಬರುವ ವಿಮರ್ಶೆಗಳೂ ಸಾಹಿತ್ಯ ಕೃತಿಗಳ ಯೋಗ್ಯ ಮೌಲ್ಯನಿರ್ಣಯಕ್ಕೆ ಸಹಾಯಕವಾಗುತ್ತಿವೆ. ಹಾ. ಮಾ. ನಾಯಕ. ಕೆ. ನರಸಿಂಹಮೂರ್ತಿ, ಪಾ. ವೆಂ. ಆಚಾರ್ಯ. ಕೃಷ್ಣಮೂರ್ತಿ ಕಿತ್ತೂರ. ಯು. ಆರ್. ಅನಂತಮೂರ್ತಿ, ಎಲ್. ಎಸ್. ಶೇಷಗಿರಿರಾವ್, ಎಂ. ಜಿ. ಕೃಷ್ಣಮೂರ್ತಿ, ಜಿ.ಎಸ್. ಆಮೂರ, ನಿಸಾರ್ ಅಹಮ್ಮದ್, ಕ. ವೆಂ. ರಾಜಗೋಪಾಲ, ಗಿರಡ್ಡಿ ಗೋವಿಂದರಾಜ, ಇವರೆಲ್ಲ ಕನ್ನಡದ ಪ್ರಮುಖ ವಿಮರ್ಶಕರು.

ಸಾಮಾನ್ಯವಾಗಿ ವಿಮರ್ಶಕನೆನಿಸಿಕೊಂಡವನು ಉತ್ತಮ ಸಾಹಿತಿಯಾಗಲೀ ಕಲಾವಿದನಾಗಲೀ ಆಗಲಾರ ಎಂಬ ಅಭಿಪ್ರಾಯವಿದೆ. ಕಲಾತ್ಮಕ ಸೃಷ್ಟಿಗೆ ಪ್ರಯತ್ನಿಸಿ ವಿಫಲನಾದವನು ಕೊನೆಗೆ ವಿಮರ್ಶಕನಾಗುತ್ತಾನೆ ಎಂಬ ಕಟುನುಡಿಯೂ ಇದೆ. ಸಾಮಾನ್ಯವಾಗಿ ವಿಮರ್ಶಕನ ಅಲಗಿಗೆ ಬಲಿಯಾದ ಸೃಜನಶೀಲ ಲೇಖಕ ಎಸೆಯುವ ಪ್ರತಿಬಾಣ ಇದು. ಈ ಅಭಿಪ್ರಾಯ ನಿಜವಲ್ಲ ಎಂಬುದಕ್ಕೆ ಅನೇಕ ಉದಾಹರಣೆಗಳು ದೊರೆಯುತ್ತವೆ.

ವಿಮರ್ಶೆಗೆ ಸಂಬಂಧಿಸಿ ನಾವು ಅವಶ್ಯವಾಗಿ ಗಮನಿಸಬೇಕಾದ ಒಂದಂಶ ಉಂಟು. ಒಂದು ಕೃತಿಯ ಬಗೆಗೆ ವಿಮರ್ಶಕನೊಬ್ಬನ ಅಭಿಪ್ರಾಯವನ್ನು ನಾವು ಒಪ್ಪಿಕೊಳ್ಳಬೇಕಾಗಿಲ್ಲ. ನಾವೇ ಕೃತಿಯನ್ನೋದಿ, ನಮ್ಮ ಅನುಭವ ಜ್ಞಾನ ಸಹೃದಯತೆಗಳ ನೆರವಿನಿಂದ ನಮ್ಮದೇ ಆದ ಅಭಿಪ್ರಾಯವನ್ನು ರೂಪಿಸಿಕೊಳ್ಳಬೇಕು. ಆ ಅಭಿಪ್ರಾಯವನ್ನು ವಿಮರ್ಶಕನ ಹೇಳಿಕೆಯೊಡನೆ ಹೋಲಿಸಿ ನೋಡಿ, ಅವಶ್ಯವೆಂದು ತೋರಿದ ಸಂದರ್ಭಗಳಲ್ಲಿ ನಮ್ಮ ನಿಲುವನ್ನು ಬದಲಾಯಿಸಬಹುದು. ಹೀಗೆ ಮಾಡುವುದರಿಂದ ನಮ್ಮ ತಿಳಿವಳಿಕೆ. ವಿಮರ್ಶನ ದೃಷ್ಟಿ ಮತ್ತು ಕಲಾಭಿಜ್ಞತೆ ಉತ್ತಮಗೊಳ್ಳುತ್ತವೆ.

ಚಿತ್ರಕಲೆ, ಸಂಗೀತ, ನೃತ್ಯ, ನಾಟಕ ಮತ್ತಿತರ ಕಲಾಪ್ರಕಾರಗಳಿಗೆ ಸಂಬಂಧಿಸಿಯೂ ಎಲ್ಲ ದೇಶಗಳಲ್ಲೂ ವಿಮರ್ಶಕರಿರುತ್ತಾರೆ. ವಿ. ಸೀ., ಅನಕೃ ಒಳ್ಳೇ ಕಲಾವಿಮರ್ಶಕರು. ಬಿ.ವಿ.ಕೆ. ಶಾಸ್ತ್ರೀ (ಮುರಲಿ) ನಿಯತಕಾಲಿಕಗಳ ಮೂಲಕ ಮೇಲ್ಮಟ್ಟದ ಕಲಾವಿಮರ್ಶೆಗಳನ್ನು ಬರೆಯುವ ಹೆಸರಾಂತ ಕಲಾವಿಮರ್ಶಕರು. 'ರಾಜಶ್ರೀ' ಮತ್ತು ಎನ್. ಎಸ್. ಚಂದ್ರಶೇಖರರು ಸಹೃದಯ ವಿಮರ್ಶಕರೆಂದು ಹೆಸರು ಪಡೆದಿದ್ದಾರೆ. ಚಿತ್ರಕಲಾ ರಂಗದಲ್ಲಿ. ಕಲಾವಿದರನ್ನೂ ಅವರ ಕೃತಿಗಳನ್ನೂ ಕುರಿತು ಅನೇಕ ಪರಿಚಯಾತ್ಮಕ ಲೇಖನಗಳನ್ನು ಬರೆದು ಜನತೆಯ ತಿಳಿವಳಿಕೆಯನ್ನೂ ಅಭಿರುಚಿಯನ್ನೂ ಹೆಚ್ಚಿಸುತ್ತಿರುವವರು ಪಿ. ಆರ್. ತಿಪ್ಪೇಸ್ವಾಮಿ.

ಜನತೆಯ ಕಲಾಭಿಜ್ಞತೆಯನ್ನೂ ಸಾಹಿತ್ಯದಲ್ಲಿ ಸದಭಿರುಚಿಯನ್ನೂ ಕುದುರಿಸುವುದು ವಿಮರ್ಶೆಯಿಂದಾಗುವ ಉತ್ತಮ ಕಲಾಸೇವೆ, ಸಾಹಿತ್ಯ ಸೇವೆ.

## ವಿಶ್ವಕೋಶ

ನೋಡಿ : ಸಂಪುಟ ೧

## ವಿಷ್ಣು ದಿಗಂಬರ ಪಲೂಸ್ಕರ್

ಸಂಗೀತದ ಸೇವೆಯನ್ನೇ ತಮ್ಮ ಜೀವನವನ್ನಾಗಿ ಮಾಡಿಕೊಂಡು, ಆ ಕಲೆಯನ್ನು ಶ್ರೀಸಾಮಾನ್ಯರಿಗೂ ತಂದುಕೊಟ್ಟವರು ವಿಷ್ಣು ದಿಗಂಬರ ಪಲೂಸ್ಕರ್. ಹಿಂದೂಸ್ತಾನಿ ಸಂಗೀತ ಅವರ ದುಡಿಮೆಯ ಕ್ಷೇತ್ರ. ಈ ಸಂಗೀತವನ್ನು ಹಾಡುವ ಪದ್ಧತಿಗೆ ಅವರು ಒಂದು ಕ್ರಮಬದ್ಧ ತಳಹದಿ ಹಾಕಿದರು : ಸಂಗೀತ ವಿದ್ಯಾಸಂಸ್ಥೆಯನ್ನು ಕಟ್ಟಿದರು. ಸಂಗೀತ ಪತ್ರಿಕೆ



ಮಾರ್ಗದರ್ಶಿ : ಪಲೂಸ್ಕರ್

ಗಳನ್ನೂ ಪುಸ್ತಕಗಳನ್ನೂ ಪ್ರಕಟಿಸಿದರು. ಪಠ್ಯಪುಸ್ತಕ ರೂಪಿಸಿ ಸಂಗೀತ ಪರೀಕ್ಷೆಗಳನ್ನು ನಡೆಸಿದರು. ಸಂಸ್ಥೆಯಲ್ಲಿ ತಯಾರಾದ ವಿದ್ಯಾರ್ಥಿಗಳನ್ನು ಸಂಗೀತದ ಪ್ರಸರಣಕ್ಕಾಗಿ ದೇಶದ ಹಲವು ಕಡೆಗಳಿಗೆ ಕಳುಹಿಸಿದರು. ಹಲವು ಸಂತರ ಜನಪ್ರಿಯ ಭಜನೆಗಳನ್ನು ಶಾಸ್ತ್ರೀಯವಾಗಿ ಹಾಡುವ ವಿಧಾನ ತೋರಿಸಿಕೊಟ್ಟರು. ವಿಷ್ಣು ದಿಗಂಬರರು ಸಾಟಿಯಿಲ್ಲದ ಗಾಯಕರು. ಉಚ್ಚ ಶ್ರುತಿಯ, ತುಂಬಿದ ಕಂಠದ ನಾದಮಾಧುರ್ಯ ಅವರದು.

ವಿಷ್ಣು ದಿಗಂಬರ ಪಲೂಸ್ಕರರು ಜನಿಸಿದ್ದು 1872ರ ಆಗಸ್ಟ್ 18ರಂದು. ಕುರಂದವಾಡದಲ್ಲಿ. ತಂದೆ ದಿಗಂಬರ ಗೋಪಾಲ ಪಲೂಸ್ಕರರು ಕಥಾ ಕಾಲಕ್ಷೇಪ ಮಾಡುತ್ತಿದ್ದರು. ಇಂಥ ಕಲಾವಿದರಿಗೆ ಮಹಾರಾಷ್ಟ್ರದಲ್ಲಿ ಕೀರ್ತನಕಾರರೆಂದು ಹೆಸರು. ತಂದೆ ಹಾಡುವಾಗ ವಿಷ್ಣು ಹಾಗೂ ಅವರ ಸಹೋದರರು ದನಿಗೂಡಿಸುತ್ತಿದ್ದರು. ಆ ಎಳೆ ವಯಸ್ಸಿನಲ್ಲೇ ಉಚ್ಚ ಶ್ರುತಿಯಲ್ಲಿ ತುಂಬಿದ ಕಂಠದಿಂದ ಹೊರಹೊಮ್ಮುತ್ತಿದ್ದ ಅವರ ಸುಮಧುರ ಗಾಯನ ಯಾವಾಗಲೂ ಶ್ರೋತೃಗಳ ಮನಸ್ಸನ್ನು ಸೆರೆಹಿಡಿಯುತ್ತಿದ್ದಿತು.

ಕುರಂದವಾಡದ ಪ್ರಮುಖ ದಾಜಿ ಸಾಹೇಬ ಪಟವರ್ಧನರು ಈ ಹುಡುಗನ ವಿಷಯದಲ್ಲಿ ಆಸಕ್ತಿ ವಹಿಸಿದರು. ವಿಷ್ಣುವಿನ ವಿದ್ಯಾಭ್ಯಾಸ ಆರನೆಯ ಇಯತ್ತೆಯವರೆಗೆ ನಡೆಯಿತು. ಈ ಸಣ್ಣ ವಯಸ್ಸಿನಲ್ಲಿಯೇ ಅವರಿಗೆ ವಿವಾಹವಾಗಿತ್ತು. ಮುಂದಿನ ತಮ್ಮ ಜೀವನದ ಬಗೆಗೆ ಒಂದು ನಿರ್ಧಾರಕ್ಕೆ ಬರುವ ಆ ವೇಳೆಯಲ್ಲೇ ಊರಿನ ಒಂದು ಉತ್ಸವ ಸಮಯದಲ್ಲಿ ಹಾರಿಸಿದ ಬಿರುಸುಬಾಣ ಅವರ ಕಣ್ಣಿಗೆ ತಾಗಿ ದೃಷ್ಟಿ ಊನವಾಯಿತು.

ದಾಜಿ ಸಾಹೇಬರು ವಿಷ್ಣು ದಿಗಂಬರರನ್ನು ಚಿಕಿತ್ಸೆಗಾಗಿ ಮಿರಜ್‌ಗೆ ಕಳುಹಿಸಿಕೊಟ್ಟರು. ಅಲ್ಲಿ ಅವರ ಚಿಕಿತ್ಸೆ ಮಾಡುತ್ತಿದ್ದ ವೈದ್ಯರು ಅವರ ಕಂಠಶ್ರೀಯನ್ನೂ ಹಾಡುಗಾರಿಕೆಯ ಸೊಬಗನ್ನೂ ಸವಿದು ಆಸ್ವಾದಿಸಿದರು. ಮತ್ತು ಅಲ್ಲಿನ ಪ್ರಮುಖರಿಗೆ ಶಿಫಾರಸುಮಾಡಿ, ಸಂಸ್ಥಾನದ ಗಾಯಕರಾಗಿದ್ದ ಬಾಲಕೃಷ್ಣ ಬುವಾ ಇಚಲಕರಂಜೀಕರ ಅವರ ಬಳಿ ಶಿಕ್ಷಣಕ್ಕೆ ಏರ್ಪಾಟುಮಾಡಿಕೊಟ್ಟರು. ಬಾಲಕೃಷ್ಣ ಬುವಾರಲ್ಲಿ ವಿಷ್ಣು ಒಂಬತ್ತು ವರ್ಷ ಕಾಲ ಸಂಗೀತ ಕಲಿತರು. ಬಾಲಕೃಷ್ಣ ಬುವಾ ಅವರು ಗ್ವಾಲಿಯರ್ ಘರಾಣೆಯವರು. ಆಗಿನ ಕಾಲದಲ್ಲಿ ಗ್ವಾಲಿಯರ್ ಹಿಂದೂಸ್ತಾನಿ ಸಂಗೀತದ ಪ್ರಮುಖ ಕ್ಷೇತ್ರವಾಗಿದ್ದಿತು. ಇಂಥವರಲ್ಲಿ ಸಂಗೀತ ಕಲಿತ ಬಾಲಕೃಷ್ಣ ಬುವಾರ ಬಳಿ ವಿಷ್ಣು ದಿಗಂಬರರು ಶಿಷ್ಯವೃತ್ತಿ ಆರಂಭಿಸಿದಾಗ ಅವರಿಗೆ ಕೇವಲ 15 ವರ್ಷ. ಈಗಿನಂತೆ ಆಗ ಸಂಗೀತ ಪಾಠಕ್ರಮದ ಬಗೆಗೆ ಪುಸ್ತಕಗಳಾಗಲೀ ರಾಗವಿಷಯಕ ವಿವರಣೆಗಳಾಗಲೀ ಎಲ್ಲರಿಗೂ ಸುಲಭವಾಗಿ ದೊರೆಯುತ್ತಿರಲಿಲ್ಲ. ಗುರುಗಳ ಬಳಿ ಸತತವಾಗಿ ಇದ್ದು, ಅವರ ಸೇವೆ ಮಾಡಿ, ಅವರು ಹಾಡುವುದನ್ನು ಕೇಳಿಕೊಂಡು ಅದೇ ರೀತಿ ಅನುಕರಣೆ ಮಾಡಲು ಯತ್ನಿಸಿ ಸಂಗೀತ ಕಲಿಯುತ್ತಿದ್ದರು. ಪ್ರಶ್ನೆ ಕೇಳುವಂತಿರಲಿಲ್ಲ. ವಿಷ್ಣು ದಿಗಂಬರರು ಪ್ರತಿದಿನವೂ ಗಂಟೆಗಟ್ಟಲೆ ಕುಳಿತು ಅಭ್ಯಾಸಮಾಡಿದರು. ಗುರುವಿನ ಜೊತೆ ಸಭೆಗಳಲ್ಲಿ ಹಾಡಿದರು. ಕೆಲವೊಮ್ಮೆ ಅವರಿಗಿಂತ ಚೆನ್ನಾಗಿ ಹಾಡಿದ್ದೂ ಉಂಟು. ಇತರ ಶಿಷ್ಯರು ಗುರುವಿಗೆ ವಿಷ್ಣುವಿನ ಮೇಲೆ ಸಲ್ಲದ ಮಾತು ಹೇಳಿಕೊಡಲಾರಂಭಿಸಿದರು. ಪರಿಸ್ಥಿತಿ ಸೂಕ್ಷ್ಮವಾದಾಗ 1896ರ ಶ್ರಾವಣ ಮಾಸದ ಒಂದು ರಾತ್ರಿ ವಿಷ್ಣು ದಿಗಂಬರರು ಮಿರಜ್ ಬಿಟ್ಟರು. ಸತಾರಾ ತಲಪಿ, ಮೊಟ್ಟ ಮೊದಲು ಸ್ವತಂತ್ರವಾಗಿ ಒಬ್ಬರೇ ಕಚೇರಿಯಲ್ಲಿ ಹಾಡಿದರು.

ಅಲ್ಲಿಂದ ವಿಷ್ಣು ದಿಗಂಬರರು ಬರೋಡವನ್ನು ತಲಪಿದರು. ಪ್ರತಿಷ್ಠಿತರ ಪರಿಚಯ ಮಾಡಿಕೊಂಡು ತನ್ನ ಸಂಗೀತಕ್ಕೆ ಅವರ ಆಶ್ರಯ ಬೇಡದೆ, ರಾಮ ದೇಗುಲವೊಂದರಲ್ಲಿ ದಿನಾಲೂ ಸಂಗೀತಾಭ್ಯಾಸ ಮಾಡಿದರು. ಅವರ ಗಾಯನದಿಂದ ಜನರು ಆಕರ್ಷಿತರಾದರು. ಅವರ ಕೀರ್ತಿ ಹರಡಿತು. ರಾಜನ ಆಸ್ಥಾನದಲ್ಲಿ ಹಾಡುವ ಅವಕಾಶ ಒದಗಿತು. ಆದರೆ ಅಲ್ಲಿಯೂ ಸಂಗೀತಗಾರರು ಅವರ ಬಗೆಗೆ ಅಸೂಯೆ ತಳೆದದ್ದರಿಂದ ವಿಷ್ಣು ದಿಗಂಬರರು ಊರುಬಿಡಬೇಕಾಯಿತು. ಸಂಗೀತಕಲೆಗೆ ಒಂದು ಘನತೆಯ ಸ್ಥಾನ ನಿರ್ಮಿಸುವ, ಸಂಗೀತಗಾರರನ್ನು ಗೌರವದ ಮಟ್ಟಕ್ಕೆ ಏರಿಸುವ ಬಯಕೆ ವಿಷ್ಣು ದಿಗಂಬರರಿಗೆ ಅದಮ್ಯವಾಯಿತು. ಬರೋಡದಿಂದ ಕಾಥೇವಾಡ ತಲಪಿದರು. ಈ ಸಂಸ್ಥಾನದಲ್ಲಿ ಪ್ರವಾಸ ಮಾಡುತ್ತಿದ್ದಾಗ ಒಂದು ವಿಚಿತ್ರ ಘಟನೆ ಜರಗಿತೆಂದು ವಿಷ್ಣು ದಿಗಂಬರರೇ ಹೇಳಿದ್ದಾರೆ. ಗಿರಿನಾರ ಪರ್ವತದಲ್ಲಿ ಒಬ್ಬ ಸನ್ಯಾಸಿಯನ್ನು ಅವರು ಕಂಡರು. ಆತ "ನಮ್ರತೆ ಹಾಗೂ ವಿನಯಗಳು ಸಂಗೀತಗಾರನಿಗೆ ಅತ್ಯವಶ್ಯ" ಎಂದು ಹೇಳಿದರು. ಅಂದಿನಿಂದ ತಮ್ಮ ಭವಿಷ್ಯದ ಬಗೆಗೆ ವಿಷ್ಣು ದಿಗಂಬರರಿಗೆ ಖಚಿತ ಅಭಿಪ್ರಾಯ ಉಂಟಾಯಿತು. ಅಲ್ಲಿಂದ ಗ್ವಾಲಿಯರ್, ಮಥುರಾ, ಭರತಪುರ, ದೆಹಲಿಗಳನ್ನು ಸಂದರ್ಶಿಸಿದರು. ಈ ವೇಳೆಗೆ ಸಂಗೀತ ಕಲಾಪ್ರಚಾರಕ್ಕಾಗಿ ಹಿಂದಿ ಕಲಿತರು. ಸಂಗೀತಶಾಸ್ತ್ರ ವಿಷಯಗಳ ಚರ್ಚೆ. ಅಧ್ಯಯನಗಳನ್ನು ಮಾಡಿದರು.

ಸಂಗೀತ ಪಾಠಕ್ರಮಗಳಿಗೆ ಖಚಿತ ರೂಪನೀಡಲು ಸಂಗೀತ ಸ್ವರಪ್ರಸ್ತಾರ ಹಾಕುವ ವಿಧಾನವನ್ನು ವಿಷ್ಣು ದಿಗಂಬರರು ಕಂಡುಹಿಡಿದರು.

ಪಂಜಾಬಿಗೆ ಬರಬೇಕೆಂಬ ಆಮಂತ್ರಣ ಸ್ವೀಕರಿಸಿದರು. ಗಂಧರ್ವ ಮಹಾವಿದ್ಯಾಲಯ. ಸಂಗೀತ ಶಿಕ್ಷಣಕ್ಕಾಗಿ ಲಾಹೋರಿನಲ್ಲಿ ವಿಷ್ಣು ದಿಗಂಬರರು ಸ್ಥಾಪಿಸಿದ ಸಂಸ್ಥೆ. ಮುಂದೆ ಅವರು ಅದನ್ನು ಲಾಹೋರಿನಿಂದ ಮುಂಬಯಿಗೆ ಸ್ಥಳಾಂತರಿಸಿದರು. ಸಂಸ್ಥೆಯು ಸಂಗೀತ ಪ್ರಕಟಣೆಗಳನ್ನು ಆರಂಭಿಸಿತು.

ಚಿಕ್ಕಂದಿನಿಂದಲೂ ದೈವಭಕ್ತರಾಗಿ ಬೆಳೆದ ವಿಷ್ಣು ದಿಗಂಬರರು ವಯಸ್ಸಾದಂತೆ 'ರಾಮಾಯಣ' ಕ್ಕೆಹೆಚ್ಚಾಗಿ ಒಲಿದರು. ಮಹಾತ್ಮಾ ಗಾಂಧಿಯವರಿಗೆ ಬಹಳ ಪ್ರಿಯವಾಗಿದ್ದ 'ರಾಮ ಧುನ್, ರಘುಪತಿ ರಾಘವ ರಾಜಾರಾಮ್' ಧಾಟಿಯನ್ನು ರಚಿಸಿದವರು ಇವರೇ. 'ವಂದೇ ಮಾತರಂ', 'ಸಾರೇ

ಜಹಾನ್‌ಸೆ ಅಚ್ಛಾ ಹಿಂದೂಸ್ತಾನ್ ಹಮಾರಾ'. ಈ ಪ್ರಖ್ಯಾತ ಹಾಡುಗಳನ್ನು ರಚಿಸಿದ ಕೀರ್ತಿಯೂ ಇವರದು.

ಸ್ವಾತಂತ್ರ್ಯಪೂರ್ವದ ಅಂದಿನ ಕಾಲದಲ್ಲಿ ದೇಶಭಕ್ತಿ ಗೀತೆಗಳನ್ನು ಹಾಡುವುದರಲ್ಲಿ ಅವರು ಪ್ರದರ್ಶಿಸಿದ ಧೈರ್ಯ ಪ್ರಶಂಸನೀಯವಾದದ್ದು.

ಗಂಧರ್ವ ಮಹಾವಿದ್ಯಾಲಯದ ಸ್ಥಾಪನೆ ಬೆಳವಣಿಗೆಗಳಿಗಾಗಿ ಮಾಡಿದ್ದ ಸಾಲದ ದೆಸೆಯಿಂದ ಅದರ ನಿರ್ವಹಣೆ ಬರುಬರುತ್ತ ಕಷ್ಟವಾಯಿತು. ಸಾಲದ ಬಂದ ಹಣ ತುಂಬಿಸುವುದಕ್ಕೆಂದು ಪ್ರವಾಸ ಹೊರಟರು. 1924ರಲ್ಲಿ ವಿಷ್ಣು ದಿಗಂಬರರು ಮುಂಬಯಿಯಲ್ಲಿ ಇಲ್ಲದ ಸಮಯ ಸಾಧಿಸಿ ಸಂಸ್ಥೆಯ ಕಟ್ಟಡವನ್ನು ಸಾಲಗಾರರು ಹರಾಜು ಹಾಕಿಸಿಬಿಟ್ಟರು.

ಕೊನೆಯ ವರ್ಷಗಳಲ್ಲಿ 'ರಾಮಾಯಣ'ದ ಬಗೆಗೆ ವ್ಯಾಖ್ಯಾನಗಳನ್ನೂ ಕಥಾ ಕಾಲಕ್ಷೇಪಗಳನ್ನೂ ಮಾಡಿಕೊಂಡು ವಿಷ್ಣು ದಿಗಂಬರರು ವ್ಯಾಪಕವಾಗಿ ಪ್ರವಾಸ ಮಾಡಿದರು. ಆರೋಗ್ಯ ದಿನೇ ದಿನೇ ಹದಗೆಡುತ್ತಲೇ ಇತ್ತು. 1931ರಲ್ಲಿ ಅವರನ್ನು ಬಾಲ್ಯದಲ್ಲಿ ವಿದ್ಯೆ ಆರಂಭಿಸಿದ ಮಿರಜ್‌ಗೆ ಒಯ್ಯಲಾಯಿತು. ಒಂದು ಗಳಿಗೆಯೂ ಬಿಡದೆ ಶಿಷ್ಯರು ಹಾಡುತ್ತಿದ್ದ ರಾಮಧುನ್ ಕೇಳುತ್ತ 1931ನೆಯ ಆಗಸ್ಟ್ 21ರಂದು ವಿಷ್ಣು ದಿಗಂಬರರು ಕಾಲವಶರಾದರು.

ಭಾರತೀಯ ಸಂಗೀತದ ಇತಿಹಾಸದಲ್ಲಿ ಶಾಶ್ವತಸ್ಥಾನ ಪಡೆದ ಕಲಾವಿದ —ವಿಷ್ಣು ದಿಗಂಬರ ಪಲೂಸ್ಕರ್.

## ವಿ. ಸೀ.

" ಬಾಳನು ಶೋಧಿಸಿ ಶುಚಿಯನು ಬೆಳೆದರೆ
ಇಹವೇ ಅರಳದೆ ಪರವಾಗಿ ? "

—ಎಂದು ಹಾಡಿದ ವಿ. ಸೀತಾರಾಮಯ್ಯನವರು ನಮ್ಮ ನಾಡಿನ ಹಿರಿಯ ಕವಿಗಳಲ್ಲೊಬ್ಬರು.

ಅರ್ಥಶಾಸ್ತ್ರ, ಸಾಹಿತ್ಯ, ಕಲೆ, ಸಂಗೀತ –ಇವೆಲ್ಲದರಲ್ಲೂ ಅಗಾಧ ಪಾಂಡಿತ್ಯ ಹೊಂದಿರುವ ವಿ.ಸೀ. ಈ ಎಲ್ಲ ಕ್ಷೇತ್ರಗಳಲ್ಲೂ ಬಹುಕಾಲ ನಿಲ್ಲುವ ಅಧಿಕಾರಯುತ ಕೃತಿಗಳನ್ನು ರಚಿಸಿದ್ದಾರೆ.



ವಿಚಾರವಂತಿಕೆ : ವಿ. ಸೀ.

ಬೆಂಗಳೂರು ಜಿಲ್ಲೆಯ ಬೂದಿಗೆರೆಯಲ್ಲಿ 1899ರ ಅಕ್ಟೋಬರ್ 2ರಂದು ವಿ. ಸೀ. ಜನಿಸಿದರು. (ವಿ—ವಡಗೇನಹಳ್ಳಿ) ಇವರು ಎಂ.ಎ. ಮಾಡಿದ್ದು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅರ್ಥಶಾಸ್ತ್ರದಲ್ಲಿ. 1922ರಲ್ಲಿ ಚುನಾವಣೆ ಇಲಾಖೆಯಲ್ಲಿ ಅಧಿಕಾರಿಯಾಗಿ ಸೇವೆಯಲ್ಲಿದ್ದಾಗಲೇ ಇವರು ಸಾಹಿತ್ಯಸೃಷ್ಟಿ ಪ್ರಾರಂಭಿಸಿದರು. ಸಾಹಿತ್ಯದಲ್ಲಿನ ತೀವ್ರ ಆಸಕ್ತಿಯಿಂದಾಗಿ ಆ ಹುದ್ದೆಯನ್ನು ಬಿಟ್ಟು ಮೈಸೂರಿಗೆ ಮರಳಿ ಶಾರದಾವಿಲಾಸ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾದರು. ಎ. ಆರ್. ಕೃಷ್ಣಶಾಸ್ತ್ರಿಗಳ ಪ್ರೋತ್ಸಾಹದಿಂದಾಗಿ ಬೆಂಗಳೂರಿಗೆ ಬಂದು ಕಾಲೇಜಿನ ಕನ್ನಡ ಅಧ್ಯಾಪಕರಾದರು. ವಿ. ಸೀ. ಅವರ ಪಾಠ ಕೇಳಲು ಇತರ ಹುಡುಗರು ಬೇರೆ ತರಗತಿಗಳಿಗೆ ಹೋಗದೆ ಇವರ ತರಗತಿಗಳಿಗೆ ಬಂದು ನುಗ್ಗುತ್ತಿದ್ದುದೂ ಉಂಟು.

ವಿ.ಸೀ. ತಮ್ಮ ಅನೇಕ ಭಾವಗೀತೆಗಳಿಗೆ ತಾವೇ ರಾಗಗಳನ್ನೂ ಸೂಚಿಸಿದ್ದಾರೆ. 1931ರಲ್ಲಿ ಇವರ 'ಗೀತಗಳು' ಎಂಬ ಕವನ ಸಂಗ್ರಹ. ಅನಂತರ ಎರಡು ವರ್ಷಗಳಲ್ಲಿ 'ದೀಪಗಳು' ಪ್ರಕಟವಾದುವು. 'ಮನೆ ತುಂಬಿಸುವುದು', 'ಅಭೀ', 'ಶಬರಿ' ಮೊದಲಾದ ಕವನಗಳು ಜನಪ್ರಿಯವಾದುವು. 1935ರಲ್ಲಿ 'ನೆಳಲು ಬೆಳಕು' ಅನಂತರ 'ದ್ರಾಕ್ಷಿ ದಾಳಿಂಬೆ' ಕವನ ಸಂಗ್ರಹಗಳು ಹೊರಬಿದ್ದುವು. 'ದ್ರಾಕ್ಷಿ ದಾಳಿಂಬೆ' ಸಂಗ್ರಹದಲ್ಲಿ, ಬೇಲೂರಿನ ಚೆನ್ನಕೇಶವ ದೇವಾಲಯದ ಬಗೆಗೆ ಕವಿ ಹೃದಯ ಹೀಗೆ ನುಡಿಯುತ್ತದೆ:

" ಬಾಳಗಾನವೆ ಘನಿಸಿ ಶಿಲ್ಪವಾಗಿದೆ ಇಲ್ಲಿ
ನಾಡಭಾಗ್ಯದ ಚರಿತೆ ರೂಪಾಂತಿದೆ
ರೂಪಿಗಾತ್ಮವ ತುಂಬಿ ಅಮೃತ ಗೈದಿರಲಲ್ಲಿ
ಕಲೆ ಸಫಲವಾಯ್ತೆಂದು ಶಿಲೆ ಸಾರಿದೆ "

'ಹೆಜ್ಜೆ ಪಾಡು' ಅವರ ಇನ್ನೊಂದು ಕವನ ಸಂಗ್ರಹ.

ವಿ.ಸೀ. ಮೂಲತಃ ವಿಚಾರವಂತರು. ಅವರ ಕವನಗಳಲ್ಲಿ ವಿಚಾರ ಶಕ್ತಿಗೆ ಹಾಡಿನ ರೂಪ ಬಂದಿರುವುದನ್ನು ಕಾಣಬಹುದು.

'ಬೆಳುದಿಂಗಳು' (1959), 'ಸೀಕರಣೆ' (1970) ಇವರ ಪ್ರಬಂಧ ಸಂಕಲನಗಳು. 'ಮೈಸೂರು ರುಮಾಲು', 'ಕಾಯಿಲೆಗಳು' ಮೊದಲಾದ ಪ್ರಬಂಧಗಳು ವಿ.ಸೀ. ಅವರು ಉತ್ತಮ ಪ್ರಬಂಧಕಾರರೆಂದು ಸಾರುತ್ತವೆ. 'ಪಂಪಾ ಯಾತ್ರೆ' ಇವರು ಹಂಪೆಗೆ ಹೋದಾಗ ಅಲ್ಲಿ ಕಂಡದ್ದನ್ನು ಹೇಳುವ ಪ್ರವಾಸ ಕಥನ—ಒಂದು ರೀತಿಯಲ್ಲಿ ಗದ್ಯ ಭಾವಗೀತೆ. 'ಮಹನೀಯರು' ರಾಜ್ಯದ ಅಕಾಡೆಮಿ ಪ್ರಶಸ್ತಿ ಪಡೆದ ಕೃತಿ.

'ಸೊಹ್ರಾಬ್–ರುಸ್ತುಂ' ಮತ್ತು 'ಆಗ್ರಹ' ಇವರ ಎರಡು ನಾಟಕಗಳು. ಫಿರ್ದೂಸಿಯ 'ಶಾಹನಾಮ' ಕಾವ್ಯದಲ್ಲಿ ಬರುವ ಸನ್ನಿವೇಶವೊಂದನ್ನು ಆಧರಿಸಿ 'ಸೊಹ್ರಾಬ್–ರುಸ್ತುಂ' ನಾಟಕ ರಚಿತವಾಗಿದೆ. 'ಮಹಾಭಾರತ'ದ ಸನ್ನಿವೇಶವೊಂದರ ನಾಟಕೀಯ ಚಿತ್ರಣ 'ಆಗ್ರಹ'.

1937ರಲ್ಲಿ ಪ್ರಕಟವಾದ 'ಹಣ ಪ್ರಪಂಚ' ವಿ.ಸೀ. ಅವರ ಅರ್ಥಶಾಸ್ತ್ರ ಜ್ಞಾನದ ಫಲ. ವಿ.ಸೀ. ಅವರಿಗಿದ್ದ ಅರ್ಥಶಾಸ್ತ್ರದ ಪಾಂಡಿತ್ಯ, ಸಾಹಿತ್ಯ ಪ್ರತಿಭೆಗಳು ಈ ಗ್ರಂಥವನ್ನು ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯನ್ನಾಗಿ ಮಾಡಿವೆ.

ವಿ.ಸೀ. ಅವರಿಗೆ ಕಲೆಯ ಬಗೆಗೆ ಅಪಾರ ಆಸಕ್ತಿ. ಪಾಶ್ಚಾತ್ಯ ಕಲಾ ವಿಮರ್ಶಕರ ಅಭಿಪ್ರಾಯಗಳನ್ನು ಅಭ್ಯಸಿಸಿದ ಇವರು ಕಲೆಯ ಬಗೆಗೆ, ಅರ್ಥಶಾಸ್ತ್ರದಲ್ಲಿಯಂತೆಯೇ ಅಧಿಕಾರಯುತವಾಗಿ ಮಾತನಾಡಬಲ್ಲರು. ಇಷ್ಟೇ ಆಸಕ್ತಿ, ಭಾರತೀಯ ಹಾಗೂ ಪಾಶ್ಚಾತ್ಯ ಸಂಗೀತದಲ್ಲಿ. ಕಾಳಿದಾಸನ 'ಶಾಕುಂತಲ' ನಾಟಕದ ಬಗೆಗೆ ಇವರು ಬರೆದ ವಿಮರ್ಶೆ-ಒಂದು ವಿಶಿಷ್ಟ ಕೃತಿ.

1954 ರಲ್ಲಿ ಕುಮಟಾದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ವಿ.ಸೀ. ಅವರನ್ನು ಆರಿಸಲಾಯಿತು. 1955ರಲ್ಲಿ ವಿ. ಸೀ. ಆಕಾಶವಾಣಿಯಲ್ಲಿ ಪ್ರಾದೇಶಿಕ ನಿರ್ದೇಶಕರಾದರು. ಆ ಸ್ಥಾನದಲ್ಲಿ ಸುಮಾರು ಎರಡೂವರೆ ವರ್ಷ ದುಡಿದರು.

ಕನ್ನಡ ಹಿರಿಯ ಮಹನೀಯರಲ್ಲೊಬ್ಬರಾದ ಇವರು, ಶಾಸ್ತ್ರಿಯವರು ಹೇಳುವಂತೆ—

"ಬುದ್ಧಿ ಅನುಭವ ಯೋಚನೆಗಳ ವಿಸ್ತಾರದಲಿ
ಸೀತಣ್ಣ ನಮ್ಮ ನಾಡಿನ ಇಂದಿನತ್ಯಂತ
ಮೇಲ್ತರದ ಸಾಧಕರ ಪಂಕ್ತಿಯಲಿ ನಿಂತಿಹರು."

## ವೀಣೆ ಶೇಷಣ್ಣ

'ದೊರೆಗಳಿಗೆ ದೊರೆ' ಎಂದು ಪಾಶ್ಚಾತ್ಯರೊಬ್ಬರಿಂದ ಹೊಗಳಿಕೆಗೆ ಪಾತ್ರರಾದ ಹಿರಿಯ ಮೈಸೂರಿನ ವೈಣಿಕ ಶಿಖಾಮಣಿ ವೀಣೆ ಶೇಷಣ್ಣನವರದು. ಒಂದೇ ರಾಗವನ್ನು, ರಚನೆಯನ್ನು ಒಂದೊಂದು ಬಾರಿ ನುಡಿಸಿದಾಗಲೂ ಅದು 'ನಿತ್ಯನೂತನ'ವಾಗಿ ತೋರುತ್ತಿದ್ದುದು ಶೇಷಣ್ಣನವರ ವೀಣಾವಾದನ ವೈಖರಿ. ಸಮಕಾಲೀನ ರಾಜಮಹಾರಾಜರೂ ಉತ್ತರ ದಕ್ಷಿಣ ಭಾರತಗಳ ಹಿರಿಯ ಸಂಗೀತ ವಿದ್ವಾಂಸರೂ ಶೇಷಣ್ಣನವರ ವೀಣಾವಾದನಕ್ಕೆ ಮಾರುಹೋಗಿದ್ದರು, ಅವರನ್ನು ವಿಶೇಷ ಗೌರವದಿಂದ ನಡೆಸಿಕೊಳ್ಳುತ್ತಿದ್ದರು. 1924ರಲ್ಲಿ ನಡೆದ ಬೆಳಗಾವಿ ಕಾಂಗ್ರೆಸ್ ಅಧಿವೇಶನ ಕಾಲದಲ್ಲಿ ಇವರ ವೀಣಾವಾದನವನ್ನು ಕೇಳಿದ ಮಹಾತ್ಮಾ ಗಾಂಧಿಜಿ, ಜವಾಹರಲಾಲ್ ನೆಹರೂ, ಸರೋಜಿನಿ ನಾಯ್ಡು ಮುಂತಾದ ರಾಷ್ಟ್ರನಾಯಕರು ಆನಂದಪರವಶರಾದರು; ಅವರ ಕಲಾವಂತಿಕೆಯನ್ನು ಮೆಚ್ಚಿಕೊಂಡರು.

'ದೊರೆಗಳ ದೊರೆ' : ಶೇಷಣ್ಣ

ವೀಣೆ ಶೇಷಣ್ಣನವರು ಈ ಮೆಚ್ಚುಗೆಯನ್ನು ಸ್ವೀಕರಿಸಿದ ರೀತಿ ಅಪೂರ್ವವಾದದ್ದು. ಜಗತ್ತನ್ನು ಆಕರ್ಷಿಸಿದ ಗಾಂಧಿಯವರು ತನ್ನ ವೀಣಾವಾದನ ಮೆಚ್ಚಿದ್ದೇ ಸಾಕು; ಇದಕ್ಕಿಂತ ಹೆಚ್ಚಿನದು ಇನ್ನೇನು ಬೇಕು?—ಎಂದು ನಮ್ರತೆಯಿಂದ ಹೇಳಿದರು.

ಕನ್ನಡನಾಡಿನ ಸಂಗೀತ ಕೀರ್ತಿಧ್ವಜವನ್ನು ಹೀಗೆ ಎಲ್ಲೆಡೆಯೂ ಹಾರಿಸಿದ ಶೇಷಣ್ಣನವರು ಹುಟ್ಟಿದ್ದು ಸಂಗೀತಗಾರರ ವಂಶದಲ್ಲಿ. ಇವರ ಪೂರ್ವಜರು ಪ್ರಸಿದ್ಧ ವೀಣಾ ಕುಪ್ಪಯ್ಯನವರು. ಶೇಷಣ್ಣನವರ ತಂದೆ ಚಿಕ್ಕರಾಮಪ್ಪನವರು ಕೂಡ ಪ್ರಸಿದ್ಧ ವಿದ್ವಾಂಸರು. 1838ರಲ್ಲಿ ತಂಜಾವೂರಿನಿಂದ ಬಂದು ಮೈಸೂರಿನಲ್ಲಿಯೇ ನೆಲೆಸಿದರು. ಇವರ ನಾಲ್ಕು ಮಕ್ಕಳಲ್ಲಿ ಕಿರಿಯವರು ಶೇಷಣ್ಣನವರು. ಇವರು ಹುಟ್ಟಿದ್ದು 1852ರಲ್ಲಿ, ಕಾರ್ತೀಕ ಬಹುಳ ಪಂಚಮಿಯಂದು. ಇವರ ಸಂಗೀತಾಭ್ಯಾಸ ಮೊದಲಿಗೆ ತಂದೆಯವರಲ್ಲೇ ನಡೆಯಿತು. ಮೈಸೂರು ಅರಮನೆಯಲ್ಲಿ ಆಚರಿಸುತ್ತಿದ್ದ ಶಿವರಾತ್ರಿಯ ಸಂಗೀತ ಕಚೇರಿಗೆ ಶೇಷಣ್ಣನವರೂ ಒಮ್ಮೆ ತಂದೆಯ ಜೊತೆಗೂಡಿ ಹೋಗಿದ್ದರು, ಆಗ ಅವರಿಗೆ ಸುಮಾರು 10 ವರ್ಷ ವಯಸ್ಸು. ಪರಸ್ಥಳದಿಂದ ಬಂದಿದ್ದ ಸಂಗೀತ ವಿದ್ವಾಂಸರೊಬ್ಬರು ಅಂದಿನ ಕಚೇರಿಯಲ್ಲಿ ಒಂದು ಪಲ್ಲವಿಯನ್ನು ಹಾಡಿದರು. ಆಸ್ಥಾನದ ವಿದ್ವಾಂಸರು ಯಾರೂ ಇದನ್ನು ಯಶಸ್ವಿಯಾಗಿ ಹಾಡಲಾಗಲಿಲ್ಲ. ಆಗ ದೊರೆಗಳಿಗೆ ಅಸಮಾಧಾನವಾಯಿತು. ಶೇಷಣ್ಣನವರ ತಂದೆ ಚಿಕ್ಕರಾಮಪ್ಪನವರು ತಮ್ಮ ಮಗ ಇದನ್ನು ಹಾಡಬಲ್ಲ ಎಂದಾಗ, ಎಲ್ಲರಿಗೂ ಆಶ್ಚರ್ಯವಾಯಿತು. ಬಾಲಕ ಶೇಷಣ್ಣ ಎಲ್ಲರೂ ಚಕಿತರಾಗುವಂತೆ ಅದ್ಭುತವಾಗಿ ಹಾಡಿದ.

ಶೇಷಣ್ಣನವರ 12ನೆಯ ವಯಸ್ಸಿನ ವೇಳೆಗೆ ಅವರ ತಂದೆ ತೀರಿಕೊಂಡರು. ಅಂದಿನಿಂದ ಅಕ್ಕ ವೆಂಕಮ್ಮನವರೇ ಇವರ ಪಾಲನೆ, ಪೋಷಣೆಗಳ ಜವಾಬುದಾರಿಯನ್ನು ಹೊತ್ತರು. ಶಿಸ್ತಿನಿಂದ ತಮ್ಮನನ್ನು ಬೆಳೆಸಿದರು. ಶೇಷಣ್ಣನವರು ತಮ್ಮ ಬಂಧುವಾದ ದೊಡ್ಡ ಶೇಷಣ್ಣನವರಲ್ಲೂ ಮೈಸೂರು ಸದಾಶಿವರಾಯರಲ್ಲೂ ಕೆಲವಾರು ವರ್ಷಗಳವರೆಗೆ ಶಿಷ್ಯವೃತ್ತಿ ನಡೆಸಿದರು, ಅವ್ಯಾಹತವಾಗಿ ಸಾಧನೆ ಮಾಡಿದರು. ಸಾಧನೆಯಲ್ಲಿ ಶೇಷಣ್ಣನವರದು ಬಹಳ ಹಠ. ಒಂದು ಪಾಠವನ್ನು ಕಲಿತಾಗ ಅದನ್ನು ಚೆನ್ನಾಗಿ ಕರಗತಮಾಡಿಕೊಂಡು ಗುರುಗಳಿಂದ ಮೆಚ್ಚುಗೆ ಪಡೆದಮೇಲೆಯೇ ಅವರಿಗೆ ಸಮಾಧಾನ.

25–26ನೆಯ ವಯಸ್ಸಿನಲ್ಲಿ ಶೇಷಣ್ಣನವರು ದೇಶಸಂಚಾರ ಕೈಗೊಂಡರು. ಸಂಗೀತಕ್ಕೆ ಖ್ಯಾತಿವೆತ್ತ ತಮಿಳುನಾಡಿನ ಕೊಯಮತ್ತೂರು, ತಂಜಾವೂರು, ರಾಮನಾಥಪುರ ಮುಂತಾದ ಸ್ಥಳಗಳಲ್ಲೂ ರಾಜರ ಆಸ್ಥಾನಗಳಲ್ಲೂ ತಮ್ಮ ವೀಣಾವಾದನದಿಂದ ಜನಮನಗಳನ್ನು ಸೂರೆಗೊಂಡರು. ಎಲ್ಲೆಲ್ಲಿಯೂ ಗೌರವ, ಪ್ರಶಸ್ತಿಗಳು ಅವರಿಗೆ ದೊರೆತುವು. ಅವರ ವೀಣಾವಾದನವನ್ನು ಮೆಚ್ಚಿದ ಬರೋಡದ ಗಾಯಕವಾಡರು ಅವರನ್ನು ಮೇನಾದಲ್ಲಿ ಕುಳ್ಳಿರಿಸಿ ಮೆರವಣಿಗೆ ಮಾಡಿಸಿದರು. ಮೈಸೂರಿನ ಸಂಗೀತಗಾರರೆಂದರೆ ಅಸಡ್ಡೆಯಿಂದಿದ್ದ ದಕ್ಷಿಣ ದೇಶದ ಸಂಗೀತಗಾರರು ಶೇಷಣ್ಣನವರ ಘನರಾಗ ಪ್ರಸ್ತಾರ ವೈಖರಿ, ಪಲ್ಲವಿ ನುಡಿಸುವ ರೀತಿಗಳನ್ನು ಕಂಡು ಬೆರಗುಗೊಂಡರು. ಶೇಷಣ್ಣನವರು ದೆಹಲಿಯಲ್ಲಿ ಚಕ್ರವರ್ತಿ ಐದನೆಯ ಜಾರ್ಜ್ ಸಮ್ಮುಖದಲ್ಲಿ ಕೂಡ ವೀಣೆ ನುಡಿಸಿ ಸನ್ಮಾನಿತರಾದರು. ಮೈಸೂರಿನಲ್ಲಿ ಅವರಿಗೆ ದೊರೆತ ಸನ್ಮಾನ ಕೂಡ ಅಪೂರ್ವವಾದದ್ದು. ಮೈಸೂರು ಮಹಾರಾಜರು ಅವರಿಗೆ 'ವೈಣಿಕಶಿಖಾಮಣಿ' ಎಂಬ ಬಿರುದು ಕೊಟ್ಟು ಗೌರವಿಸಿದರು.

ವೀಣೆ ನುಡಿಸುವುದರಲ್ಲಿ ಶೇಷಣ್ಣನವರು ತುಂಬ ಪ್ರಸಿದ್ಧರಾಗಿದ್ದರೂ ಅವರಿಗೆ ಹಲವು ವಾದ್ಯಗಳನ್ನು ನುಡಿಸುವುದರಲ್ಲಿ ಪರಿಶ್ರಮವಿದ್ದಿತು. ಪಿಟೀಲು, ಪಿಯಾನೋ, ಸ್ವರಬತ್ತು, ಜಲತರಂಗ್—ಇವನ್ನೆಲ್ಲ ಚೆನ್ನಾಗಿ ನುಡಿಸಬಲ್ಲವರಾಗಿದ್ದರು.

ಶಂಕರಾಭರಣ, ಕೇದಾರಗೌಳ, ಬೇಗಡೆ, ಹಿಂದೂಸ್ತಾನಿಕಾಪಿ, ಜಂಝೂಟಿ, ಕಲ್ಯಾಣಿ —ಇವು ಶೇಷಣ್ಣನವರ ಅತಿ ಮೆಚ್ಚಿನ ರಾಗಗಳಾಗಿದ್ದುವು. ಮಧುರ ನಾದ, ಲಯಗಳು ಶೇಷಣ್ಣನವರ ವೀಣಾವಾದನದ ವೈಶಿಷ್ಟ್ಯ. ಅದರಲ್ಲಿ ಗಡುಸಿನ ಸೋಂಕೇ ಇರುತ್ತಿರಲಿಲ್ಲ. ವೀಣೆಯನ್ನು

ನುಡಿಸುವಾಗ ತಂತಿಯ ಮಿಡಿತ ಕೇಳಿಸಲೇ ಬಾರದು: ತಂತಿಯಿಂದ ಹೊರಹೊಮ್ಮುವ ನಾದ ಮಾತ್ರ ಕೇಳಿಸಬೇಕು—ಎಂಬುದು ಅವರ ಅಭಿಪ್ರಾಯವಾಗಿತ್ತು. ತಮ್ಮ ವೀಣಾವಾದನದಲ್ಲಿ ಅವರು ಈ ನಿಯಮವನ್ನು ತಪ್ಪದೆ ಪಾಲಿಸುತ್ತಿದ್ದರು.

ಶಾಂತ, ಸೌಜನ್ಯಮೂರ್ತಿಗಳಾದ ಶೇಷಣ್ಣನವರದು ನೋಡಿದೊಡನೆಯೇ ಮೋಹಗೊಳಿಸುವಂಥ ಸುಂದರ ಪ್ರಭಾವಶಾಲಿ ವ್ಯಕ್ತಿತ್ವ.

ಶೇಷಣ್ಣನವರು ಅತ್ಯುತ್ತಮ ವೀಣಾವಾದಕರು ಮಾತ್ರವಲ್ಲ; ವಾಗ್ಗೇಯಕಾರರು ಕೂಡ. ಆದರೆ ಅವರು ಈ ವಿಭಾಗದಲ್ಲಿ ಹೆಚ್ಚು ಕೃಷಿಮಾಡಿದವರಲ್ಲ. ವರ್ಣ, ಕೃತಿ, ಸ್ವರಜತಿ, ತಿಲ್ಲಾನಗಳನ್ನೂ ಕೆಲವು ದೇವರನಾಮಗಳನ್ನೂ ರಚಿಸಿದ್ದಾರೆ. ವಾದ್ಯಸಂಗೀತಕ್ಕೆ ಹಿತವಾಗಿರುವಂತೆ ರಚಿಸಿರುವ ಇವರ ಸ್ವರಜತಿಗಳು ಅಪೂರ್ವವಾದುವು. 'ಶೇಷ' ಎಂಬುದು ಇವರ ಅಂಕಿತ. ಮನಮೋಹಕವಾದ ಇವರ ರಚನೆಗಳಲ್ಲಿ ತಿಲ್ಲಾನಗಳು ಅತ್ಯಂತ ರಂಜನೀಯವಾಗಿವೆ, ಜನಪ್ರಿಯವಾಗಿವೆ.

ಶೇಷಣ್ಣನವರು ನಿಗರ್ವಿಗಳು. ದೈವಭಕ್ತರು. ಪ್ರತಿವರ್ಷವೂ ಕೃಷ್ಣ ಜಯಂತಿಯನ್ನು ತುಂಬ ವಿಜೃಂಭಣೆಯಿಂದ ನೆರವೇರಿಸುತ್ತಿದ್ದರು. ಆ ಸಂದರ್ಭದಲ್ಲಿ ಸ್ಥಳೀಯ ಹಾಗೂ ಪರಸ್ಥಳದ ವಿದ್ವಾಂಸರಿಂದ ಸಂಗೀತ ಕಚೇರಿಗಳನ್ನು ಏರ್ಪಡಿಸುತ್ತಿದ್ದರು.

ಶೇಷಣ್ಣನವರು ವಿದ್ಯಾಪಕ್ಷಪಾತಿಗಳು; ವಿದ್ವಾಂಸರನ್ನು ಗೌರವಿಸುತ್ತಿದ್ದರು. ಅನೇಕ ವರ್ಷಗಳ ಕಾಲ ಮೈಸೂರು ಅರಮನೆಯ ಸಂಗೀತ ಶಾಖೆಯ ಮುಖ್ಯಸ್ಥರಾಗಿದ್ದ ಇವರು ಅನೇಕ ಮಂದಿ ವಿದ್ವಾಂಸರಿಗೆ ಅರಮನೆಯ ಮೆಚ್ಚುಗೆ, ಪ್ರೋತ್ಸಾಹಗಳು ದೊರೆಯಲು ಕಾರಣರಾದರು.

## ವೀಣೆ ಸುಬ್ಬಣ್ಣ

"ವೀಣೆಯ ಬೆಡಗದು ಮೈಸೂರು" ಎಂದು ಹಾಡಿದರು ಬಿಎಂಶ್ರೀ. ಎಷ್ಟು ನಿಜ ಈ ಮಾತು!

ವೀಣೆ ಸುಬ್ಬಣ್ಣನವರು ಖ್ಯಾತ ಮೈಸೂರು ವೈಣಿಕರಲ್ಲೊಬ್ಬರು. ಅವರ ತಾತ ವೀಣೆ ವೆಂಕಟಸುಬ್ಬಯ್ಯನವರು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಪ್ರಸಿದ್ಧರಾಗಿದ್ದರು. ಸುಬ್ಬಣ್ಣನವರ ವಂಶದ ಹಿರಿಯರೆಲ್ಲರೂ ವೀಣೆ, ಸಂಗೀತಗಳಲ್ಲಿ ಪ್ರವೀಣರಾಗಿದ್ದವರೆ. ಸುಬ್ಬಣ್ಣನವರ ತಂದೆ ದೊಡ್ಡ ಶೇಷಣ್ಣನವರೇ ಸುಬ್ಬಣ್ಣನವರ ವೀಣಾ ವಿದ್ಯಾಗುರುಗಳು. 'ವೈಣಿಕ ಶಿಖಾಮಣಿ' ಎಂದು ಗೌರವಿಸಲ್ಪಟ್ಟ ಶೇಷಣ್ಣನವರು ಸುಬ್ಬಣ್ಣನವರ ಸಮೀಪ ಬಂಧುಗಳು; ಅವರಿಗಿಂತ ನಾಲ್ಕು ವರ್ಷ ದೊಡ್ಡವರು. ಇಬ್ಬರಿಗೂ ಜೊತೆಯಲ್ಲೇ ಸಂಗೀತ ಪಾಠ ಆರಂಭವಾಯಿತು. ಅವರಿಬ್ಬರೂ ಖ್ಯಾತ ವಾಗ್ಗೇಯಕಾರ ಮೈಸೂರು ಸದಾಶಿವರಾಯರಲ್ಲಿ ಸಂಗೀತಾಭ್ಯಾಸ ಮಾಡಿದರು. ಇಬ್ಬರೂ ಒಟ್ಟಿಗೆ ಸೇರಿ ವೀಣಾ ಕಚೇರಿಗಳನ್ನು ನಡೆಸುತ್ತಿದ್ದುದೂ ಉಂಟು.



ವೀಣೆ ಸುಬ್ಬಣ್ಣನವರ ತಾತ

ಒಮ್ಮೆ ಸುಬ್ಬಣ್ಣನವರೂ ಶೇಷಣ್ಣನವರೂ ತಂಜಾವೂರು ಮಹಾರಾಜರ ಮುಂದೆ ವೀಣಾವಾದನ ನಡೆಸುವುದೆಂದು ಗೊತ್ತಾಯಿತು. ಅದಕ್ಕೆ ಮುಂಚೆ ಇವರನ್ನು ಕಂಡ ಸ್ಥಳೀಕರೊಬ್ಬರು "ಇಲ್ಲಿ ಕಲ್ಯಾಣಿರಾಗ ಮುಟ್ಟಬೇಡಿ. ಮಹಾರಾಜರ ಆಸ್ಥಾನ ವಿದ್ವಾಂಸರೊಬ್ಬರು ಆ ರಾಗದಲ್ಲಿ ತುಂಬಾ ನಿಷ್ಣಾತರಾದವರು"—ಎಂದರು. ಇದನ್ನು ಕೇಳಿದ ತರುಣ ವೈಣಿಕರಿಬ್ಬರೂ ಕಲ್ಯಾಣಿರಾಗವನ್ನು ಎಂಟು ಹತ್ತು ದಿನ ಏಕಪ್ರಕಾರವಾಗಿ ಅಭ್ಯಾಸಮಾಡಿ ರಾಜರ ಆಸ್ಥಾನದಲ್ಲಿ ಬಾರಿಸಿದ್ದಲ್ಲದೆ, ರಾಜರ ಮೆಚ್ಚುಗೆಗೂ ಪಾತ್ರರಾದರು. ವೀಣಾವಾದನ ನೈಪುಣ್ಯದ ಜೊತೆಗೆ ಉತ್ತಮ ಶಾರೀರವೂ ಇತ್ತು ಸುಬ್ಬಣ್ಣನವರಿಗೆ. ವೀಣಾನಾದದೊಡನೆ ಮೇಳೈಸಿ ಅವರು ಹಾಡಿದಾಗ ಅದು ಶ್ರೋತೃಗಳಿಗೆ ರಸಪೌತಣವಾಯಿತು.

ಸುಬ್ಬಣ್ಣನವರು ಶ್ರೀಮಂತವಂಶದವರು: ರಸಿಕತೆ, ಔದಾರ್ಯಗಳು ಅವರ ಹುಟ್ಟುಗುಣವಾಗಿದ್ದುವು. ಹೂವು, ಸುಗಂಧದ್ರವ್ಯಗಳೆಂದರೆ


ವೀಣೆ, ರಸಿಕತೆ, ಔದಾರ್ಯ : ಸುಬ್ಬಣ್ಣ

ಅವರಿಗೆ ಅಮಿತವಾದ ಆಸಕ್ತಿ. ಪನ್ನೀರಿನಲ್ಲಿ ಅದ್ದಿ ನಾರಿಗೆ ಪುನುಗು ಹಚ್ಚಿ ಕಟ್ಟಿದ ಅರೆಬಿರಿದ ಮಲ್ಲಿಗೆ ಹೂವಿನ ಮಾಲೆಯ ಚಿಕ್ಕ ತುಂಡೊಂದು ಅವರ ಜೇಬಿನಲ್ಲಿ ಸದಾ ಇರುತ್ತಿತ್ತು. ಮೈಸೂರಿಗೆ ಬರುತ್ತಿದ್ದ ಸಂಗೀತ ವಿದ್ವಾಂಸರಿಗೆ, ಕಲಾವಿದರಿಗೆ, ಸುಬ್ಬಣ್ಣನವರ ಮನೆ ಆಶ್ರಯಸ್ಥಾನವಾಗಿತ್ತು. ಇತರ ವಿದ್ವಾಂಸರ ಸಂಗೀತ ಪ್ರಾವೀಣ್ಯವನ್ನು ಅವರು ಮೆಚ್ಚಿಕೊಳ್ಳುತ್ತಿದ್ದರು. ಅವರನ್ನು ಉದಾರವಾಗಿ ಗೌರವಿಸುತ್ತಿದ್ದರು. ಮಹಾ ವೈದ್ಯನಾಥ ಅಯ್ಯರ್ ಅವರು ಒಮ್ಮೆ ಮೈಸೂರಿಗೆ ಬಂದಾಗ ಸುಬ್ಬಣ್ಣನವರ ಮನೆಯಲ್ಲಿ ಅವರ ಸಂಗೀತ ಏರ್ಪಾಡಾಗಿತ್ತು. ಅವರ ಗಾಯನವನ್ನು ಕೇಳಿ ಆನಂದಪಟ್ಟ ಸುಬ್ಬಣ್ಣನವರು ತಮ್ಮ ಬೆರಳಿನಲ್ಲಿದ್ದ ಪಚ್ಚೆಯುಂಗುರವನ್ನು ಅವರ ಬೆರಳಿಗೆ ತೊಡಸಿದರು. ಒಮ್ಮೆ ಬೆಂಗಳೂರಿನ ನಾಗರತ್ನಮ್ಮನವರ ಸಂಗೀತ ಕಚೇರಿ ಅವರ ಮನೆಯಲ್ಲಿ ನಡೆಯಿತು. ಆಕೆ ಯೋಗ್ಯ ಮರ್ಯಾದೆ ಪಡೆದು ಹೊರಟಾಗ, ಎದುರಿಗೆ ಬೀರುವಿನಲ್ಲಿದ್ದ ಸುಗಂಧದ್ರವ್ಯದ ಸೀಸೆಗಳಲ್ಲಿ ಒಂದನ್ನು ತನಗೆ

ಕೊಡಬೇಕೆಂದು ಕೇಳಿಕೊಂಡರು. ಸುಬ್ಬಣ್ಣನವರು ಸ್ವಲ್ಪವೂ ಹಿಂದು ಮುಂದು ನೋಡದೆ, ಅದೇ ಬೆಳಗ್ಗೆ 800 ರೂ. ಕೊಟ್ಟು ತಂದಿದ್ದ ಸುಗಂಧದ್ರವ್ಯದ ಸೀಸೆಗಳನ್ನು ಆಕೆಗೆ ಕೊಟ್ಟುಬಿಟ್ಟರು.

ದಿವಾನರೂ ಮಹಾರಾಜರೂ ಸುಬ್ಬಣ್ಣನವರಿಗೆ ತುಂಬಾ ಅನುಕಂಪ. ಅರಮನೆಯಿಂದ ಅವರಿಗೆ [illegible] ತಿಂಗಳೂ ಸಂಬಳ ಬರುತ್ತಿತ್ತು. ಆದರೆ [illegible] ಬರುತ್ತಿದ್ದವರು ಹೇರಳ ಜನ. ಅರಮನೆಯ [illegible]. ಬಡವರಿಗೆ ಅವರು ತಮ್ಮ ಸಂಬಳದ ಬಹುಭಾಗವನ್ನು ಹಂಚಿಬಿಡುತ್ತಿದ್ದರು.

ತಮ್ಮ ಶಿಷ್ಯರ ಮೇಲೆ ಸುಬ್ಬಣ್ಣನವರಿಗೆ ತುಂಬಾ ಅಭಿಮಾನ, ಪ್ರೀತಿ. ಚಕ್ರಪಾಣಿರಾಯರು. ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರರು. ಆರ್. ಎಸ್. ಕೇಶವಮೂರ್ತಿ. ವಿ. ಶ್ರೀಕಂಠ ಅಯ್ಯರ್. ಸ್ವರಮೂರ್ತಿ ವೆಂಕಟನಾರಾಯಣರಾಯರು. ಶ್ರೀಮತಿ ವಿದುಷಿ ಸುಬ್ಬಮ್ಮನವರು ಅವರ ಶಿಷ್ಯರಲ್ಲಿ ಪ್ರಮುಖರು. ಪ್ರತಿ ದಿನ ಬೆಳಗ್ಗೆ 8–11ರ ತನಕ ಶಿಷ್ಯರಿಗೆ ಬೋಧನೆ. ವ್ಯಾಸಂಗ. ಅತಿಥಿ ಅಭ್ಯಾಗತರೊಡನೆ 12 ಗಂಟೆಗೆ ಅಚ್ಚುಕಟ್ಟಾದ ಊಟ, ಸ್ವಲ್ಪ ವಿಶ್ರಾಂತಿ. ಆಮೇಲೆ ಪುರಾಣವಾಚನ. ಕನ್ನಡ ಕಾದಂಬರಿಗಳನ್ನು ಓದುವುದರಲ್ಲೂ ಅವರಿಗೆ ಹೆಚ್ಚು ಆಸಕ್ತಿ. ಸಂಜೆ ತಿರುಗಾಡಿಕೊಂಡು ಬರುವುದು. ಇದು ಅವರ ಸಾಮಾನ್ಯ ದಿನಚರಿ.

ಸುಬ್ಬಣ್ಣನವರಿಗೂ ಮೈಸೂರಿನ ಅರಸ ಚಾಮರಾಜ ಒಡೆಯರಿಗೂ ತುಂಬ ಸ್ನೇಹ. ಬಾಲ್ಯದಲ್ಲಿ ಅವರಿಬ್ಬರೂ ಸಹಪಾಠಿಗಳಾಗಿದ್ದರು. ಮುಂದೆ ಸುಬ್ಬಣ್ಣನವರು ಅರಮನೆಯ ವೀಣಾಭಕ್ಷಿಯಾದರು. ಅನೇಕ ಮಂದಿ ಸಂಗೀತ ವಿದ್ವಾಂಸರಿಗೆ ಮಹಾರಾಜರ ಮನ್ನಣೆ ದೊರಕಿಸಿಕೊಟ್ಟರು.

ಶಂಕರಾಭರಣ, ಕಲ್ಯಾಣಿ, ಕಾಂಭೋಜಿ, ಕೇದಾರಗೌಳ—ಮುಂತಾದ ರಾಗಗಳಲ್ಲಿ ಅವರಿಗೆ ಅತಿಶಯ ಪ್ರೀತಿ. ಅತ್ಯಂತ ಸುಶ್ರಾವ್ಯವಾಗಿ ಅವನ್ನು ನುಡಿಸುತ್ತಿದ್ದರು. ಅವರ ವಾದನದಲ್ಲಿ ಒಂದು ಬಗೆಯ ಗಾಂಭೀರ್ಯವೂ ಸ್ವರ ಕಲ್ಪನೆಯಲ್ಲಿ ವೈವಿಧ್ಯವೂ ಇರುತ್ತಿದ್ದುವು.

ಸುಬ್ಬಣ್ಣನವರು ವಾಗ್ಗೇಯಕಾರರು ಕೂಡ. ಧರ್ಮವತಿ, ಋಷಭಪ್ರಿಯ, ಧೇನುಕ ಮುಂತಾದ ರಾಗಗಳಲ್ಲಿ ಕನ್ನಡ ಸಾಹಿತ್ಯವುಳ್ಳ ಕೃತಿಗಳನ್ನು ರಚಿಸಿದ್ದರು. ಯುವರಾಜ ಕಂಠೀರವ ನರಸರಾಜ ಒಡೆಯರ ವಿವಾಹ ಮಹೋತ್ಸವದಲ್ಲಿ ಅವರು ರಚಿಸಿದ ನವರಾಗ ಮಾಲಿಕಾ ಪ್ರಸಿದ್ಧವಾಗಿದೆ. ರಾಮನಾಡು, ತಿರುವಾಂಕೂರು, ಮದರಾಸು, ಮುಂತಾದ ಸ್ಥಳಗಳಲ್ಲಿ ಸಂಚರಿಸಿ ತಮ್ಮ ಸಂಗೀತ ಪ್ರೌಢಿಮೆಯನ್ನೂ ಪ್ರತಿಭೆಯನ್ನೂ ಪ್ರದರ್ಶಿಸಿದರು. 'ವೈಣಿಕ ವರಕೇಸರಿ' 'ವೈಣಿಕ ಚೂಡಾಮಣಿ'—ಎಂಬ ಪ್ರಶಸ್ತಿಗಳನ್ನು ಗಳಿಸಿದರು. ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಸುಬ್ಬಣ್ಣನವರಿಗೆ 'ವೈಣಿಕ ಪ್ರವೀಣ' ಎಂಬ ಬಿರುದು ನೀಡಿ ಗೌರವಿಸಿದರು. ಅವರ ಅಭಿಮಾನಿಗಳೂ ಶಿಷ್ಯರೂ ಅವರಿಗೆ 80ನೆಯ ವರ್ಷ ಸಹಸ್ರಚಂದ್ರದರ್ಶನ ಶಾಂತಿ ನಡೆದಾಗ ಚಿನ್ನವತ್ತಳೆಯನ್ನು ಅರ್ಪಿಸಿ ಪುರಸ್ಕರಿಸಿದರು.

ಸುಬ್ಬಣ್ಣನವರು 1939ರ ಜೂಲೈ ತಿಂಗಳಲ್ಲಿ ನಿಧನರಾದರು. ಅವಸಾನಕಾಲದಲ್ಲಿ ಕೂಡ ತಮ್ಮ ಶಿಷ್ಯರ ವೀಣಾವಾದನವನ್ನೂ ಗಾಯನವನ್ನೂ ಕೇಳುತ್ತ ಹರ್ಷಿಸಿದರು. ತಾವು ನುಡಿಸುತ್ತಿದ್ದ ವೀಣೆಯನ್ನು ತಮ್ಮ ಪ್ರಿಯ ಶಿಷ್ಯ ಕೇಶವಮೂರ್ತಿಯವರಿಗೆ ಆಶೀರ್ವದಿಸಿ ಕೊಟ್ಟರು. ಸಾಯುವ ಮುನ್ನ ದಶವಿಧ ದಾನಗಳನ್ನು ಮಾಡಿ ತಮ್ಮ ಸಂಪತ್ತನ್ನೂ ಐಶ್ವರ್ಯವನ್ನೂ ಶಿಷ್ಯರಿಗೂ ಆಪ್ತೇಷ್ಟರಿಗೂ ಹಂಚಿ ನೆಮ್ಮದಿಯಿಂದ ಕಣ್ಣುಮುಚ್ಚಿದರು.

## ವೆಂಕಟಪ್ಪ

ಕಲಕತ್ತಾ ಕಲಾಶಾಲೆಯ ಪ್ರಾಧ್ಯಾಪಕ ಅಬನೀಂದ್ರನಾಥ ಠಾಕೂರರ ಪ್ರಿಯ ಶಿಷ್ಯರಾಗಿದ್ದು ಚಿತ್ರಕಲೆಯನ್ನು ಕರಗತ ಮಾಡಿಕೊಂಡವರು ಕೆ. ವೆಂಕಟಪ್ಪನವರು. ಹಲವಾರು ವರ್ಷ ಅವರಲ್ಲಿ ಚಿತ್ರಕಲಾಶಿಕ್ಷಣ ಪಡೆದ ಬಳಿಕ ಮೈಸೂರಿಗೆ ಮರಳಿದ ವೆಂಕಟಪ್ಪನವರು ವೀಣೆಯ ವ್ಯಾಮೋಹಕ್ಕೆ ಒಳಗಾಗಿ ವೀಣೆ ಶೇಷಣ್ಣನವರಲ್ಲಿ ಏಳು ವರ್ಷಗಳ ಕಾಲ ಸಂಗೀತ ಶಿಕ್ಷಣ ಪಡೆದರು. "ವೆಂಕಟಪ್ಪನವರಿಗೆ ಸಂಗೀತದ ಹುಚ್ಚು ಹಿಡಿದಿದೆ. ಅವರು ಇನ್ನು ಚಿತ್ರಕಲೆಯ ಕೈ ಬಿಟ್ಟಂತೆಯೇ" ಎಂದು ಯಾರಿಂದಲೋ ತಿಳಿದ ಗುರು ಅಬನೀಂದ್ರರು ತಮ್ಮ ಈ ಶಿಷ್ಯನಿಗೆ ಒಂದು ಪತ್ರ ಬರೆದು "ಎಂಥ ಶ್ರೇಷ್ಠ ಸಂಗೀತಗಾರನಾಗಿದ್ದರೂ ಅವನ ಸಂಗೀತ ಉಳಿಯುವುದು ಅವನು ಬದುಕಿರುವ ವರೆಗೆ ಮಾತ್ರ. ಚಿತ್ರಕಲೆ ಹಾಗಲ್ಲ. ಚಿತ್ರಕಾರ ಸತ್ತು ನೂರಾರು ವರ್ಷ ಕಳೆದರೂ ಅವನು ಬಿಟ್ಟುಹೋದ ಚಿತ್ರಗಳು ತಮ್ಮನ್ನು ಸೃಷ್ಟಿಸಿದವನ ಗುಣಗಾನ ಮಾಡುತ್ತಿರುತ್ತವೆ. ನೀನು ಹೀಗೆ ಚಿತ್ರಬರೆಯುವುದನ್ನು ಬಿಟ್ಟುಬಿಡುವುದು ಸರಿಯಲ್ಲ" ಎಂದು ತಿಳಿಸಿದರು. ವೆಂಕಟಪ್ಪನವರು ಉತ್ತರ ಕೊಟ್ಟರು. ಪತ್ರದ ಮೂಲಕ ಅಲ್ಲ, ಒಂದು ಚಿತ್ರರೂಪದಲ್ಲಿ. ಅದರ ಹೆಸರು 'ವೀಣೆಯ ಹುಚ್ಚು'. ಒಂದು ಸುಂದರವಾದ ವೀಣೆ, ಅದರ ಎದುರು ಹುಚ್ಚನಂತೆ ಕಾಣುವ, ಮಂಡಿಯೂರಿ ವೀಣಾ ದೇವಿಯನ್ನು ಬೇಡುತ್ತಿರುವ ಒಬ್ಬ ಕಲಾವಿದ. ಹಿಂದೆ ಒಂದು ಪಾರ್ಶ್ವದಲ್ಲಿ ಒಂದು ದೊಡ್ಡ ಬೀರು. ಅದರ ಮೇಲೆ ಗುರುವಿನ ಮೂರ್ತಿಶಿಲ್ಪ. ಅದಕ್ಕೆ ತೆಳ್ಳನೆಯ ಬಟ್ಟೆಯ ಮುಸುಕು. ಈ ಶ್ರೇಷ್ಠ ಸಾಂಕೇತಿಕ ಕೃತಿಯನ್ನು ನೋಡಿದ ಅಬನೀಂದ್ರ ಠಾಕೂರರಿಗೆ, ತಮ್ಮ ಶಿಷ್ಯ ಚಿತ್ರಕಲೆಯನ್ನು ಕೈಬಿಟ್ಟಿಲ್ಲ ಎಂದು ಸಮಾಧಾನವಾಯಿತು.

ವರ್ಣಚಿತ್ರ, ಪ್ಲಾಸ್ಟರ್ ಆಫ್ ಪ್ಯಾರಿಸ್ ಮತ್ತು ತಾಮ್ರಫಲಕದ ಮೇಲೆ ಉಬ್ಬು ಕೆತ್ತನೆ, ಶಿಲ್ಪಗಳಲ್ಲಿ ವೆಂಕಟಪ್ಪ ಸಿದ್ಧಹಸ್ತರಾಗಿದ್ದರು. ಈ ಎಲ್ಲ ಪ್ರಕಾರಗಳಲ್ಲೂ ಅವರು ಹಲವಾರು ಉತ್ತಮ ಕೃತಿಗಳನ್ನು ನಿರ್ಮಿಸಿದರು. ವೀಣಾವಾದನದಲ್ಲೂ ವೀಣೆಗಳ ತಯಾರಿಕೆಯಲ್ಲೂ ಅವರು ಪ್ರವೀಣರಾಗಿದ್ದರು. ಹಲವು ವರ್ಷಗಳ ಕಾಲ ಕಲಾಭ್ಯಾಸ ಮಾಡಿ ಪಾಶ್ಚಾತ್ಯ ಹಾಗೂ ಬಂಗಾಳಿ ಚಿತ್ರ ರಚನಾ ಪದ್ಧತಿಗಳಲ್ಲಿ ಚೆನ್ನಾಗಿ ಪಳಗಿದವರಾಗಿದ್ದರೂ ವೆಂಕಟಪ್ಪನವರ ಕಲೆ ಯಾವುದೇ ಸಂಪ್ರದಾಯದ ಅನುಕರಣ ಆಗಿರಲಿಲ್ಲ. ಅದು ಅವರದೇ ಆಗಿತ್ತು.

ವೆಂಕಟಪ್ಪನವರು ಹುಟ್ಟಿದ್ದು 1886ರಲ್ಲಿ, ಚಿತ್ರಕಾರರ ವಂಶದಲ್ಲಿ. ಇವರ ಹಿರಿಯರು ವಿಜಯನಗರ ರಾಜರ ಆಶ್ರಯದಲ್ಲಿದ್ದ ಕಲಾವಿದರು. ಆ ಸಾಮ್ರಾಜ್ಯದ ಪತನಾನಂತರ ಮೈಸೂರಿಗೆ ಬಂದರು. ವೆಂಕಟಪ್ಪನವರ ತಂದೆ ಕೃಷ್ಣಪ್ಪನವರು ಮೈಸೂರಿನ ಮಹಾರಾಜರ ಆಸ್ಥಾನ ಚಿತ್ರಕಾರರಾಗಿದ್ದವರು. ವೆಂಕಟಪ್ಪನವರ ಬಾಲ್ಯ, ಯೌವನಗಳ ಹೆಚ್ಚಿನ ಭಾಗ ಮೈಸೂರಿನಲ್ಲೇ ಕಳೆಯಿತು. ಅಲ್ಲಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಇವರ ಕಲಾಶಿಕ್ಷಣ ಆರಂಭವಾಯಿತು. ಅನಂತರ ಮದರಾಸಿನ ಕಲಾಶಾಲೆಯಲ್ಲಿ ಅಭ್ಯಾಸ ಮಾಡಿ ಡಿಪ್ಲೊಮಾ ಪಡೆದರು.

ಒಮ್ಮೆ ಹುಡುಗ ವೆಂಕಟಪ್ಪನ ಒಂದು ಕೃತಿ –'ಸಿಂಹ ಸಿಂಹಿಣಿ'– ಅರಮನೆಯ ಅಧಿಕಾರಿಯೊಬ್ಬರ ಕಣ್ಣಿಗೆ ಬಿತ್ತು. ಅವರು ಅದನ್ನು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಗಮನಕ್ಕೆ ತಂದಾಗ, ಈ ಚಿತ್ರ ಒಬ್ಬ ಬಾಲಕ ಬರೆದದ್ದು ಎಂದು ಅವರು ನಂಬಲಿಲ್ಲ. ವೆಂಕಟಪ್ಪನವರನ್ನು

ಕೆ. ವೆಂಕಟಪ್ಪ :
ವೀಣೆಯ ಹುಚ್ಚು





ಕಲಾಸಾಗರ : ವೆಂಕಟಪ್ಪ

ಕರೆಸಿ ಅವರಿಂದ ಚಿತ್ರ ಬರೆಯಿಸಿ ನೋಡಿ ಖಚಿತಮಾಡಿಕೊಂಡರು. ಈ ಪ್ರಸಂಗದಿಂದ ಕಲಾಪ್ರೇಮಿಗಳಾದ ಕೃಷ್ಣರಾಜ ಒಡೆಯರಿಗೆ ವೆಂಕಟಪ್ಪನವರ ಮೇಲೆ ಅಭಿಮಾನ ಮೂಡಿತು. ಪ್ರೌಢ ಶಿಕ್ಷಣ ಪಡೆಯಲು ಅವರಿಗೆ ಅನುಕೂಲ ಮಾಡಿಕೊಡಲು ನಿರ್ಧರಿಸಿದರು. ಅದಕ್ಕೆ ಪೂರ್ವಭಾವಿಯಾಗಿ ಶಿಕ್ಷಕನೊಬ್ಬನನ್ನು ಗೊತ್ತು ಮಾಡಿ ವೆಂಕಟಪ್ಪನವರಿಗೆ ಇಂಗ್ಲಿಷ್ ಪಾಠ ಹೇಳಿಸಿದರು. ಅನಂತರ 1908ರಲ್ಲಿ ಪ್ರೌಢ ಕಲಾಶಿಕ್ಷಣಕ್ಕಾಗಿ ವೆಂಕಟಪ್ಪನವರನ್ನು ಕಲಕತ್ತೆಗೆ ಕಳುಹಿಸಿದರು. ಹಾಗೆ ವೆಂಕಟಪ್ಪನವರು ಅಬನೀಂದ್ರನಾಥ ಠಾಕೂರರ ಶಿಷ್ಯರಾದರು.

1910ರಲ್ಲಿ ಲಂಡನ್ನಿನ ಶ್ರೀಮತಿ ಹೆರಿಂಗ್‌ಹ್ಯಾಮ್ ಎಂಬ ವೃದ್ಧೆ ಅಜಂತ ಗುಹಾಲಯಗಳ ಭಿತ್ತಿಚಿತ್ರಗಳನ್ನು ಪ್ರತಿ ಮಾಡಿಸಲು ಭಾರತಕ್ಕೆ ಬಂದಳು. ಪ್ರಾಚೀನ ಭಿತ್ತಿಚಿತ್ರಗಳ ಪ್ರತಿಕೃತಿಗಳನ್ನು ರಚಿಸಿ ಕೊಡಲು ಕೆಲವು ಮಂದಿ ಚಿತ್ರಕಾರರ ನೆರವನ್ನೊದಗಿಸಬೇಕೆಂದು ಈಕೆ ಪ್ರಾಧ್ಯಾಪಕ ಅಬನೀಂದ್ರನಾಥ ಠಾಕೂರರನ್ನು ಕೇಳಿಕೊಂಡಳು. ಈ ಕೆಲಸ ನಡೆಸಿಕೊಡಲು ಅವರು ತಮ್ಮ ಇಬ್ಬರು ಮೆಚ್ಚಿನ ಶಿಷ್ಯರಾದ ನಂದಲಾಲ ಬಸು ಮತ್ತು ಕೆ. ವೆಂಕಟಪ್ಪನವರನ್ನು ಕಳುಹಿಸಿದರು. ಇವರಿಬ್ಬರೂ ಬರೆದ ಅಜಂತ ಚಿತ್ರಗಳು ಪುಸ್ತಕರೂಪದಲ್ಲಿ ಪ್ರಕಟವಾದಾಗ ವೆಂಕಟಪ್ಪನವರ ಕೀರ್ತಿ ದೇಶವಿದೇಶಗಳಲ್ಲಿ ಹರಡಿತು.

ಶಿಕ್ಷಣ ಮುಗಿದ ಮೇಲೆ ಮೈಸೂರಿಗೆ ಹಿಂದಿರುಗಿದ ವೆಂಕಟಪ್ಪನವರು ಮಹಾರಾಜರ ಅಪೇಕ್ಷೆಯಂತೆ ಮೈಸೂರಿನಲ್ಲಿ ನೆಲೆಸಿ ತಮ್ಮ ಚಿತ್ರ, ಶಿಲ್ಪ ರಚನಾ ಕಾರ್ಯದಲ್ಲಿ ನಿರತರಾದರು. ಮಹಾರಾಜರಿಗಾಗಿ ಪ್ಲಾಸ್ಟರ್ ಆಫ್ ಪ್ಯಾರಿಸಿನಲ್ಲಿ ಹಲವು ಉಬ್ಬು ಶಿಲ್ಪಗಳನ್ನು ತಯಾರಿಸಿದರು. ನಾಲ್ವಡಿ ಕೃಷ್ಣರಾಜಒಡೆಯರ ಮರಣಾನಂತರ ವೆಂಕಟಪ್ಪನವರು ಬೆಂಗಳೂರಿಗೆ ಬಂದರು.

ಅವರ ಚಿತ್ರಗಳಲ್ಲಿ ಹೆಚ್ಚಿನವು ಪ್ರಕೃತಿ ಚಿತ್ರಗಳು. ಇವು ಪ್ರಕೃತಿಯ ರಮಣೀಯತೆಯನ್ನೂ ಕ್ಷಣಿಕ ವೈಚಿತ್ರ್ಯಗಳನ್ನೂ ಸೆರೆಹಿಡಿದಂತೆ ತೋರುವ ವರ್ಣ ಚಿತ್ರಗಳು. ಪ್ರತಿ ಚಿತ್ರದಲ್ಲೂ ಅಚ್ಚರಿಗೊಳಿಸುವಂಥ ಸೂಕ್ಷ್ಮ ಕೆಲಸ. ಚಿತ್ರ ರಚನೆಯಲ್ಲಿ ಬಣ್ಣ, ರೇಖೆಗಳಿಗೆ ಇದ್ದಷ್ಟೇ ಪ್ರಾಶಸ್ತ್ಯ ಚಿತ್ರದ ವಸ್ತುವಿಗೂ ಇರುವುದು ವೆಂಕಟಪ್ಪನವರ ಚಿತ್ರಗಳ ವೈಶಿಷ್ಟ್ಯ. ಅವರ 'ಊಟಿಯ ದೃಶ್ಯಗಳು' ಎಂಬ ಚಿತ್ರಮಾಲೆ ಇದಕ್ಕೆ ಉತ್ತಮ ಉದಾಹರಣೆ.

ಪ್ಲಾಸ್ಟರ್ ಆಫ್ ಪ್ಯಾರಿಸಿನ ಉಬ್ಬು ಕೆಲಸದಲ್ಲಿ ಅವರು ಬಣ್ಣವನ್ನು ಬಳಸುತ್ತಿರಲಿಲ್ಲ. ಆದರೂ ಚತುರ ನಿರ್ಮಾಣದಿಂದ ಕೃತಿಯಲ್ಲಿನ ಉಬ್ಬು ತಗ್ಗುಗಳಲ್ಲಿ ವರ್ಣವಿನ್ಯಾಸದ ಪ್ರಭಾವವನ್ನು ತರುವುದಕ್ಕೂ ಕೃತಿಯ 'ವಸ್ತು'ವಿನ ಜೀವನ ಸಹಜವಾದ ಭಾವಗಳನ್ನು ಮೂಡಿಸುವುದಕ್ಕೂ ವೆಂಕಟಪ್ಪನವರು ಶಕ್ತರಾಗಿದ್ದರು.

ಅವರದು ಉಜ್ವಲ ಪ್ರತಿಭೆ. 'ಶಕುಂತಲೆಯ ಬೀಳ್ಕೊಡುಗೆ' ಅವರ ಕಲಾ ಪ್ರೌಢಿಮೆಯನ್ನು ಎತ್ತಿ ತೋರಿಸುವಂಥ ಕೃತಿ. ತನ್ನ ಪತಿಯನ್ನು ಸೇರುವ ಸಂತೋಷ, ತನ್ನವರನ್ನೆಲ್ಲ ಬಿಟ್ಟುಹೋಗಬೇಕಲ್ಲ ಎಂಬ ದುಗುಡ, ಹೊಸ ಬದುಕಿನ, ಹೊಸ ಸ್ಥಳಗಳ ಪರಿಚಯ ಪಡೆಯುವ ಕುತೂಹಲ— ಭಾವಗಳೆಲ್ಲವೂ ಶಕುಂತಲೆಯ ಮುಖದಲ್ಲಿ ತೋರಿ ಬರುತ್ತವೆ.

ರವೀಂದ್ರನಾಥ ಠಾಕೂರರ ಐದು ಭಂಗಿಗಳ ಭಾವಚಿತ್ರಗಳನ್ನು ಆಧಾರವಾಗಿಟ್ಟುಕೊಂಡು ವೆಂಕಟಪ್ಪನವರು ರವೀಂದ್ರರ ಒಂದು ಪ್ರತಿಮೆ ಕೆತ್ತಿದರು. ಇದು ಅವರ ಮೂರ್ತಿಶಿಲ್ಪ ಕುಶಲತೆಗೆ ಸಾಕ್ಷಿ. ಇನ್ನೊಂದು ಕೃತಿ 'ಮಾಣಿ'ಯಲ್ಲಿ ಮುಗ್ಧ ಬಾಲಕನೊಬ್ಬನ ಸಹಜ ರೂಪದ ದರ್ಶನವಾಗುತ್ತದೆ.

ವೆಂಕಟಪ್ಪನವರು ಕಿರಿಯ ಆಕಾರದ ಚಿತ್ರಗಳ ಕುಶಲ ರಚನೆಯಲ್ಲೂ ಪ್ರಸಿದ್ಧರು. ನುಣುಪು ಮಾಡಿದ ಸಣ್ಣ ದಂತದ ಫಲಕದ ಮೇಲೆ ಸೂಕ್ಷ್ಮ ವಿವರಗಳನ್ನೊಳಗೊಂಡ ಮುದ್ದಾದ ಚಿತ್ರಗಳನ್ನೂ ಅವರು ರಚಿಸಿದ್ದಾರೆ.

ವೆಂಕಟಪ್ಪನವರು ಕಲೆಗೆ ತಮ್ಮ ಜೀವನವನ್ನು ಮುಡುಪಾಗಿಟ್ಟ ಕಲಾ ತಪಸ್ವಿ. ತಾವು ಅದ್ವಿತೀಯ ಕಲಾವಿದರಾಗಿದ್ದರೂ ತಮ್ಮನ್ನು 'ಕಲಾ ವಿದ್ಯಾರ್ಥಿ' ಎಂದೇ ಅವರು ಕರೆದುಕೊಳ್ಳುತ್ತಿದ್ದರು. "ಕಲೆ ಒಂದು ಮಹಾಸಾಗರ ; ನನಗೆ ದಕ್ಕಿರುವುದು ಒಂದು ಹನಿ ಮಾತ್ರ" ಎಂದು ಅವರ ಹೇಳುತ್ತಿದ್ದರು.

ಕಲಾಕೃತಿಗಳ ರಚನೆಯಲ್ಲಿ ಅವರಿಗೆ ಎಷ್ಟು ಆಸಕ್ತಿಯಿತ್ತೋ ಅಷ್ಟೇ ಬದುಕಿನಲ್ಲಿ ಅನಾಸಕ್ತಿಯಿತ್ತು—ಹಣ, ಅಧಿಕಾರ, ಕೀರ್ತಿ ಪ್ರತಿಷ್ಠೆಗಳ ವಿಚಾರದಲ್ಲಿ. ಅಬನೀಂದ್ರನಾಥ ಠಾಕೂರರ ಸ್ಥಾನದಲ್ಲಿ ಕಲ್ಕತ್ತೆಯ ಕಲಾಶಾಲೆಯ ಮುಖ್ಯಸ್ಥರಾಗಿರಲು ವೆಂಕಟಪ್ಪನವರಿಗೆ ಕರೆ ಬಂದಿತ್ತು. ಅವರು ಒಪ್ಪಲಿಲ್ಲ.

ಶುಭ್ರ ಸರಳ ಜೀವನ ಅವರದು. ಯಾರ ಹಂಗಿಗೂ ಒಳಗಾಗದ ಸ್ವತಂತ್ರ ಜೀವಿ. ತಾವೇ ಅಡುಗೆ ಮಾಡಿಕೊಂಡು ಊಟ ಮಾಡುತ್ತಿದ್ದರು. ತಮ್ಮ ಕಲಾ ಶಾಲೆಯನ್ನು ತಾವೇ ಸ್ವಚ್ಛಗೊಳಿಸುತ್ತಿದ್ದರು —ಅದೂ ಪೂರ್ಣ ಶ್ರದ್ಧೆಯಿಂದ, ವ್ಯವಸ್ಥಿತವಾಗಿ.

ಕೆ. ವೆಂಕಟಪ್ಪನವರು ತಮ್ಮ ಕೊನೆಗಾಲದ ವರೆಗೂ—ವಯಸ್ಸು ಎಪ್ಪತ್ತೈದರ ಗಡಿ ಮುಟ್ಟಿದಾಗ ಕೂಡ— ಬಿಡುವಿಲ್ಲದೆ ದುಡಿಯುತ್ತಲೇ ಇದ್ದರು. ಭಾರತೀಯ ಚಿತ್ರಕಲೆಗೆ ವೆಂಕಟಪ್ಪನವರು ಕೊಟ್ಟ ಅಪೂರ್ವ ಕಾಣಿಕೆಯನ್ನು ಮನಗಂಡು ಕೇಂದ್ರ ಲಲಿತಕಲಾ ಅಕಾದೆಮಿ 1962ರಲ್ಲಿ ಅವರಿಗೆ ತನ್ನ ಪಾರಿತೋಷಿಕವನ್ನೂ ಸದಸ್ಯತ್ವವನ್ನೂ ಕೊಟ್ಟು ಗೌರವಿಸಿತು.

ಕೊನೆ ಕೊನೆಗೆ ಅವರ ಆರೋಗ್ಯ ಕೆಟ್ಟಿತು. 1965ರ ಮೇ ತಿಂಗಳು 25ರಂದು ಅವರು ತೀರಿಕೊಂಡರು. ಚಿತ್ರ, ಶಿಲ್ಪ ಕಲಾರಂಗಕ್ಕೆ ಅಪೂರ್ವ ಕಾಣಿಕೆಯನ್ನು ಸಲ್ಲಿಸಿ ಕರ್ನಾಟಕದ ಕಲಾಪರಂಪರೆಯ ಕೀರ್ತಿಯನ್ನು ಬೆಳಗಿದ ಕೆ. ವೆಂಕಟಪ್ಪನವರ ಕಲಾಕೃತಿಗಳನ್ನು ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಒಂದೆಡೆ ಸಂಗ್ರಹಿಸಿ ಸಾರ್ವಜನಿಕರು ಅವನ್ನು ನೋಡಿ ಆನಂದಿಸುವ

ಸಂಗ್ರಹಿಸಿದ್ದ ಶಿಲ್ಪಗಳು ಮತ್ತು ಇತರ ಕಲಾವಸ್ತುಗಳನ್ನೊಳಗೊಂಡ ಅದ್ಭುತವಾದ ಅವರ ಹೆಸರಿನಲ್ಲಿ ಬೆಂಗಳೂರಿನಲ್ಲಿ ಒಂದು ಭವ್ಯ ಚಿತ್ರ ಶಾಲೆಯನ್ನು ನಿರ್ಮಿಸಲಾಗಿದೆ.

## ವೆಂಕಟಮುಖಿ

ಕರ್ನಾಟಕ ಸಂಗೀತವನ್ನು ಅಭ್ಯಾಸಮಾಡುವವರಿಗೆಲ್ಲ ಪರಿಚಿತವಾದ ಹೆಸರು—ವೆಂಕಟಮುಖಿ. ಕ್ರಿ.ಶ. 1660ರ ಸುಮಾರಿನಲ್ಲಿ ರಚಿಸಿದ 'ಚತುರ್ದಂಡಿ ಪ್ರಕಾಶಿಕಾ' ಇಂದು—ಮುನ್ನೂರು ವರ್ಷಗಳ ಅನಂತರ ಕೂಡ—ಕರ್ನಾಟಕ ಸಂಗೀತದ ಪ್ರಧಾನ ಆಧಾರಗ್ರಂಥವಾಗಿ ಉಳಿದಿದೆ. ಅಂಥ ಮೌಲಿಕ ಕೃತಿ ಅದು.

ವೆಂಕಟಮುಖಿಯವರ ತಂದೆ ಗೋವಿಂದ ದೀಕ್ಷಿತರು ತುಂಬ ಪ್ರಭಾವ ಶಾಲಿ ವ್ಯಕ್ತಿ. ಇವರು ತಂಜಾವೂರಿನ ಚೆವ್ವಪ್ಪನಾಯಕ, ಅಚ್ಯುತಪ್ಪ ನಾಯಕ, ರಘುನಾಯಕ—ಈ ಮೂವರು ರಾಜರಿಗೂ ಮುಖ್ಯಮಂತ್ರಿ ಯಾಗಿದ್ದರು. ವೆಂಕಟಮುಖಿಯವರನ್ನು ವೆಂಕಟಾಧ್ವರಿ ಎಂದು ಕರೆಯುವುದೂ ಉಂಟು. ಅವರ ಹುಟ್ಟು ಹೆಸರು ವೆಂಕಟೇಶ ದೀಕ್ಷಿತ. ಇವರ ಗುರುಗಳು ಯಾರೆಂಬುದು ತಿಳಿಯದಾದರೂ ಇವರ ಗುರುವಿನ ಗುರು ತಾನಪ್ಪಾಚಾರ್ಯ ಎಂಬ ಉಲ್ಲೇಖವಿದೆ. ವೆಂಕಟಮುಖಿ ತಂಜಾವೂರಿನ ವಿಜಯರಾಘವ ನಾಯಕನ ಕಾಲದಲ್ಲಿದ್ದರು.

'ಚತುರ್ದಂಡಿ ಪ್ರಕಾಶಿಕಾ' ಎಂಬ ಮಾತಿನ ಅರ್ಥ ಸಂಗೀತದ ನಾಲ್ಕು ಆಧಾರಸ್ತಂಭಗಳನ್ನು ಕುರಿತು ತಿಳಿವಳಿಕೆ ಕೊಡುವ ಗ್ರಂಥ ಎಂದು. ಈ ಗ್ರಂಥದಲ್ಲಿ ಗೀತ, ಠಾಯ, ಆಲಾಪ, ಪ್ರಬಂಧ ಎಂಬ ನಾಲ್ಕು ಭಾಗಗಳ ಲಕ್ಷಣ ವಿಮರ್ಶೆಯಿದೆ.

ಕರ್ನಾಟಕ ಸಂಗೀತಕ್ಕೆ ವೆಂಕಟಮುಖಿಯ ವಿಶಿಷ್ಟ ಕಾಣಿಕೆ—ಹನ್ನೆರಡು ಸ್ವರಸ್ಥಾನಗಳ ಆಧಾರದಮೇಲೆ ಎಪ್ಪತ್ತೆರಡು ಮೇಳಕರ್ತ ರಾಗಗಳನ್ನು ರೂಪಿಸಿದ್ದು. ಈ ಮೇಳಕರ್ತ ರಾಗಗಳನ್ನು ಹನ್ನೆರಡು ಚಕ್ರಗಳಾಗಿ, ಅಂದರೆ ಗುಂಪುಗಳಾಗಿ, ವಿಂಗಡಿಸಲಾಗಿದೆ. ಒಂದೊಂದು ಚಕ್ರದಲ್ಲೂ ಆರು ರಾಗಗಳಿವೆ. ಇವುಗಳ ಸ್ವರಗಳ ನಿಯೋಜನೆಯಲ್ಲಿ ಒಂದು ಕ್ರಮ ವಿದ್ದು ಬೇರೆ ಬೇರೆ ರಾಗಗಳ ಸ್ವರೂಪವನ್ನು ಸುಲಭವಾಗಿ ಗುರುತಿಸಲು ನೆನಪಿನಲ್ಲಿಟ್ಟುಕೊಳ್ಳಲು ಅನುಕೂಲವಾಗಿದೆ. ಮೊದಲ ಆರು ಚಕ್ರಗಳ ರಾಗಗಳನ್ನು ಶುದ್ಧ ಮಧ್ಯಮ ರಾಗಗಳೆಂದೂ ಅನಂತರದ ಆರು ಚಕ್ರಗಳ ರಾಗಗಳನ್ನು ಪ್ರತಿಮಧ್ಯಮರಾಗಗಳೆಂದೂ ಕರೆಯುತ್ತಾರೆ. ಮೇಳಕರ್ತ ರಾಗ ಗಳನ್ನು ಜನಕರಾಗಗಳೆಂದೂ ರಾಗಾಂಗಗಳೆಂದೂ ಕರೆಯುತ್ತಾರೆ. ಈ ಜನಕರಾಗಗಳಿಂದ ಹುಟ್ಟುವ ರಾಗಗಳು ಜನ್ಯರಾಗಗಳು. ಇಂಥ ಜನ್ಯರಾಗಗಳ ಗುಂಪನ್ನು—ಮೇಳವನ್ನು—ಸಂಪೂರ್ಣವಾಗಿ ಪ್ರತಿ ನಿಧಿಸುವುದರಿಂದಲೇ ಇವಕ್ಕೆ ಮೇಳಕರ್ತರಾಗಗಳು ಎಂಬ ಹೆಸರಿದೆ.

ವೆಂಕಟಮುಖಿಯವರು ವಿಂಗಡಿಸಿದ ಈ ಮೇಳಕರ್ತರಾಗಗಳು ಬಹಳ ಕಾಲ ಉಪಯೋಗದಲ್ಲಿರಲಿಲ್ಲ. ಇನ್ನೊಬ್ಬ ಖ್ಯಾತ ಸಂಗೀತಗಾರ ಮುದ್ದು ವೆಂಕಟಮುಖಿ, ಗೋವಿಂದಾಚಾರ್ಯ ಮುಂತಾದವರು ಲಕ್ಷಣದಲ್ಲಿಯೂ ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು ಲಕ್ಷ್ಯದಲ್ಲೂ ಇವನ್ನು ನೆಲೆ ಗೊಳಿಸಿದರು. ಅಲ್ಲಿಯವರೆಗೆ ಇಪ್ಪತ್ತೊಂದು ಮೇಳಗಳು ಮಾತ್ರ ಪ್ರಚಾರ ದಲ್ಲಿದ್ದುವು. ತ್ಯಾಗರಾಜರೂ ಮುತ್ತುಸ್ವಾಮಿ ದೀಕ್ಷಿತರೂ ವೆಂಕಟಮುಖಿ ಯವರ ಶಿಷ್ಯ ಪರಂಪರೆಗೆ ಸೇರಿದವರು. ಅವರೂ, ಅವರ ಶಿಷ್ಯಪ್ರಶಿಷ್ಯರೂ ಈ ಮೇಳಕರ್ತರಾಗಗಳನ್ನೂ ಅವುಗಳ ಜನ್ಯರಾಗಗಳನ್ನೂ ತಮ್ಮ ರಚನೆಗಳ ಮೂಲಕ ಜನಪ್ರಿಯಗೊಳಿಸಿದರು. ಇದರ ಫಲವಾಗಿ ವೆಂಕಟಮುಖಿಯವರ ಮೇಳಕರ್ತ ಪದ್ಧತಿ ಕರ್ನಾಟಕ ಸಂಗೀತಕ್ಕೆ ಆಧಾರವಾಗಿ ನಿಂತಿದೆ.

ವೆಂಕಟಮುಖಿಯರು ಸ್ವತಃ ಗಾಯಕರೂ ವೈಣಿಕರೂ ಆಗಿದ್ದರು. ಅವರು ಹಲವು ಪ್ರಬಂಧ, ಗೀತ, ತಾನಗಳನ್ನು ರಚಿಸಿರುವುದಲ್ಲದೇ, ಶಿವಸ್ತುತಿ ರೂಪದ ತ್ಯಾಗರಾಜಾಷ್ಟಪದಿಯನ್ನು ಜಯದೇವನ 'ಗೀತ ಗೋವಿಂದ'ದ ಅಷ್ಟಪದಿಯ ಮಾದರಿಯಲ್ಲಿ ಬರೆದಿದ್ದಾರೆ. ಮಹಾ ಧೈವ ಭಕ್ತರೂ ಯಜ್ಞಯಾಗಾದಿಗಳನ್ನು ನಡೆಸಿದ್ದವರೂ ಆಗಿದ್ದ ವೆಂಕಟಮುಖಿ ಖ್ಯಾತ ಮೀಮಾಂಸಕರೂ ಆಗಿದ್ದು, 'ವಾರ್ತಿಕಾಭರಣ' ಎಂಬ ಪೂರ್ವ ಮೀಮಾಂಸಾ ಗ್ರಂಥವನ್ನು ರಚಿಸಿದ್ದಾರೆ.

## ವೆಂಕಟಾಚಾರ್ಯ

ಸಾಹಿತ್ಯವೆಂದರೆ ಸಾಮಾನ್ಯ ಜನರಿಗೆ ಕಬ್ಬಿಣದ ಕಡಲೆಯಂತಿದ್ದ ಕಾಲ ಅದು. ಆಗ ಎಲ್ಲರೂ ಓದಿ ಆನಂದಿಸಬಹುದಾದಂಥ 'ಆನಂದ ಮಠ' 'ವಿಷವೃಕ್ಷ', 'ದೇವಿ ಚೌಧುರಾಣಿ'—ಮುಂತಾದ ಹೆಸರಾಂತ ಕಾದಂಬರಿ ಗಳನ್ನು ಬಂಗಾಳಿಯಿಂದ ಕನ್ನಡಕ್ಕೆ ಅನುವಾದಿಸಿಕೊಟ್ಟ ಕೀರ್ತಿ ಬಿಂಡಿಗನವಲೆ ವೆಂಕಟಾಚಾರ್ಯರದು.

ತಮ್ಮ ವಿದ್ಯಾಭ್ಯಾಸದ ಅಂಗವಾಗಿ ಅವರು ಕಲಿತ ಭಾಷೆಗಳು ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್. ಆದರೂ ಬಂಗಾಳಿ ಸಾಹಿತ್ಯದ ಶ್ರೀಮಂತಿಕೆಯ ಕತೆ ಕೇಳಿ ಅದಕ್ಕೆ ಮನಸೋತು ಆ ಭಾಷೆಯನ್ನು ಅಭ್ಯಾಸಮಾಡಲು ನಿರ್ಧರಿಸಿದರು. ಪತ್ರಮುಖೇನ ಈಶ್ವರಚಂದ್ರ ವಿದ್ಯಾಸಾಗರರ ಪರಿಚಯ ಮಾಡಿಕೊಂಡು ಅವರ ಸಲಹೆ ಸೂಚನೆಗಳನ್ನು ಅನುಸರಿಸಿ ಬಂಗಾಳಿಯನ್ನು ಕಲಿತರು. ಆಗಿನ ಉದ್ದಾಮ ಬಂಗಾಳಿ ಬರೆಹಗಾರ ಬಂಕಿಮಚಂದ್ರರ ಕಾದಂಬರಿಗಳನ್ನು ಕನ್ನಡ ಜನತೆಗೆ ಪರಿಚಯಮಾಡಿಸಿದರು. ಕನ್ನಡಿಗರ ವಾಚನಾಸಕ್ತಿ ಅಭಿರುಚಿಗಳು ಬೆಳೆಯಲು ಗಟ್ಟಿಯಾದ ತಳಹದಿ ಹಾಕಿದರು.

ಕೌತುಕದ ಸನ್ನಿವೇಶಗಳಿಂದಲೂ ಪದಸಂಪತ್ತಿನಿಂದ ಕೂಡಿದ ವರ್ಣನೆ ಗಳಿಂದಲೂ ತುಂಬಿರುವ ಕೃತಿಗಳು ಬಂಕಿಮಚಂದ್ರರ ಕಾದಂಬರಿಗಳು. ಇವನ್ನು ಕನ್ನಡಕ್ಕೆ ತರುವಲ್ಲಿ ವೆಂಕಟಾಚಾರ್ಯರು ತೋರಿದ ಪ್ರತಿಭೆ ಅಸಾಮಾನ್ಯವಾದದ್ದು. ಮೂಲವನ್ನು ಅನುಸರಿಸಿರುವುದರಿಂದ, ಇವರ ಅನುವಾದದಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚು. ಆದರೂ ಶೈಲಿ ಸುಗಮ ವಾಗಿದ್ದು ಕನ್ನಡ ಓದುಗರ ಮನಸ್ಸನ್ನು ಸೂರೆಗೊಂಡಿತು. ಈ ಕಾದಂಬರಿ ಗಳಲ್ಲಿ ಕಂಡುಬಂದ ಉದಾತ್ತ ಭಾವನೆಗಳು, ದೇಶಪ್ರೇಮ, ಸ್ತ್ರೀ ವಿದ್ಯಾ ಭ್ಯಾಸ ಮುಂತಾದ ಸಮಕಾಲೀನ ವಿಚಾರ, ತಾಕಲಾಟಗಳ ವಿಶ್ಲೇಷಣೆಗಳು ಜನತೆಯ ಮೇಲೆ ಪ್ರಭಾವ ಬೀರಿದುವು. ವೆಂಕಟಾಚಾರ್ಯರ ಕೃತಿಗಳು ಅನೇಕ ಮಂದಿ ಕನ್ನಡ ಬರೆಹಗಾರರಿಗೆ ಸ್ಫೂರ್ತಿದಾಯಕವಾದವು.

ಕೊಳ್ಳೇಗಾಲ ವೆಂಕಟಾಚಾರ್ಯರ ಹುಟ್ಟೂರು. ಅವರ ಜನನ 1845ರಲ್ಲಿ. ತಂದೆ ಗರುಡಾಚಾರ್ಯರೇ ವೆಂಕಟಾಚಾರ್ಯರಿಗೆ ಸಂಸ್ಕೃತ ಗುರು. ಪ್ರಾಥಮಿಕ ವಿದ್ಯಾಭ್ಯಾಸದ ಅನಂತರ ವೆಂಕಟಾಚಾರ್ಯರು ತುಮಕೂರಿನ ಇಂಗ್ಲಿಷ್ ಸ್ಕೂಲಿಗೆ ಸೇರಿ ಜೂನಿಯರ್ ಮತ್ತು ಸೀನಿಯರ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಅನಂತರ ವಿವಾಹವಾಯಿತು. ಗುಮಾಸ್ತೆಯಾಗಿ ವೃತ್ತಿ ಜೀವನ ಆರಂಭಿಸಿದ ಅವರು 1902ರಲ್ಲಿ ಮುನ್ಸೀಫರಾಗಿ ನಿವೃತ್ತಿಹೊಂದಿದರು.

ವೆಂಕಟಾಚಾರ್ಯರು ಬಂಗಾಳಿಯನ್ನು ಕಲಿಯಲು ಆರಂಭಿಸಿದ್ದು ಅವರು ಶಿವಮೊಗ್ಗಾದಲ್ಲಿ ನಗರ ಡಿವಿಜನ್ ಕಚೇರಿಯಲ್ಲಿ ಹೆಡ್‌ಮುನ್‌ಶಿಯಾಗಿದ್ದಾಗ,



ಜನಸಮುದಾಯದ ಸಾಹಿತ್ಯ : ವೆಂಕಟಾಚಾರ್ಯ

ಉತ್ತರ ಭಾರತದ ಪ್ರವಾಸಮಾಡಿಬಂದ ಅವರ ಬಂಧುವೊಬ್ಬರ ಪ್ರೇರಣೆಯಿಂದ. ಆಗ ವೆಂಕಟಾಚಾರ್ಯರ ವಯಸ್ಸು 20–25 ವರ್ಷ. ಬಂಗಾಳಿ ಕಲಿಯುವುದರಲ್ಲಿ ತಮ್ಮ ಅಪ್ರತ್ಯಕ್ಷ ಗುರುವಾದ ಈಶ್ವರಚಂದ್ರ ವಿದ್ಯಾಸಾಗರರ 'ಭ್ರಾಂತಿ ವಿಲಾಸ'ವೇ ಅವರು ಬಂಗಾಳಿಯಿಂದ ಕನ್ನಡಕ್ಕೆ ಅನುವಾದಿಸಿದ ಮೊದಲಗ್ರಂಥ. ಈ ಗ್ರಂಥವನ್ನು ಮದರಾಸು ವಿಶ್ವವಿದ್ಯಾಲಯ ಪಠ್ಯಪುಸ್ತಕವಾಗಿ ಅಂಗೀಕರಿಸಿದ್ದರಿಂದ ಉತ್ಸಾಹಗೊಂಡ ಅವರು ವಿದ್ಯಾಸಾಗರರ 'ಸೀತಾ ವನವಾಸ', 'ಶಾಕುಂತಲಾ' ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಪ್ರಸಿದ್ಧ ಬಂಗಾಳಿಗಳೊಡನೆ ವೆಂಕಟಾಚಾರ್ಯರ ಸಖ್ಯ ಬೆಳೆಯಿತು. ಅವರ ಭಾಷಾಂತರ ಕಲೆ ಬಂಕಿಮಚಂದ್ರರ ಕಾದಂಬರಿಗಳ ಅನುವಾದಕ್ಕೆ ಹದಗೊಂಡಿತು.

ಬಂಕಿಮಚಂದ್ರರೆಂದರೆ ಆಗಿನ ಬಂಗಾಳದ ಜನತೆಗೆ ಅತ್ಯಂತ ಆದರ. ಭಾವ. ಭಾಷೆ. ಬಂಧ ಮೂರರಲ್ಲೂ ಉನ್ನತ ಮಟ್ಟವನ್ನು ಮುಟ್ಟಿದ್ದ ಬಂಕಿಮರ ಕಾದಂಬರಿಗಳ ಪರಿಚಯ ನಮ್ಮ ಜನರಿಗೆ ಆಗಬೇಕೆಂದು ವೆಂಕಟಾಚಾರ್ಯರು ಭಾವಿಸಿದರು. 'ದೇವಿ ಚೌಧುರಾಣಿ', 'ದುರ್ಗೇಶ ನಂದಿನಿ', 'ನವಾಬ ನಂದಿನಿ', 'ಆನಂದ ಮಠ', 'ವಿಷವೃಕ್ಷ' ಮುಂತಾದ ಕಾದಂಬರಿಗಳನ್ನು ಕನ್ನಡಕ್ಕೆ ತಂದರು.

ವೆಂಕಟಾಚಾರ್ಯರ ಲೇಖನ ಚಟುವಟಿಕೆ ಸುಮಾರು 40 ವರ್ಷ ಕಾಲ ಅವ್ಯಾಹತವಾಗಿ ನಡೆಯಿತು. ಅರವತ್ತು ಗ್ರಂಥಗಳು ಪ್ರಕಟವಾದುವು. ಅಧಿಕಾರದಿಂದ ನಿವೃತ್ತರಾದ ಮೇಲೆ ಕೂಡ ವೆಂಕಟಾಚಾರ್ಯರು ತಮ್ಮ ಸಾಹಿತ್ಯ ಸೇವೆಯನ್ನು ಮುಂದುವರಿಸಿದರು. 'ಅವಕಾಶ ತೋಷಿಣೀ' ಎಂಬ ಮಾಸ ಪತ್ರಿಕೆ ಸ್ಥಾಪಿಸಿ ಅದರಲ್ಲಿ ಕಥೆ, ಲಘು ಲೇಖನಗಳನ್ನು ಬರೆಯುತ್ತಿದ್ದರು. 1914ರ ಜೂನ್ 26ರಂದು ಅವರು ನಿಧನ ಹೊಂದಿದರು.

ವೆಂಕಟಾಚಾರ್ಯರು ದೈವಭಕ್ತರು. ಸದ್ಗುಣಿ. ಹಾಸ್ಯ ಪ್ರವೃತ್ತಿಯವರು ಕಾಲ್ನಡಿಗೆಯೆಂದರೆ ಅವರಿಗೆ ಬಹಳ ಇಷ್ಟ. ಊರಿಂದೂರಿಗೆ ಹೋಗುವಾಗಲೂ ಅವರು ಅನೇಕ ವೇಳೆ ನಡೆದೇ ಹೋಗುತ್ತಿದ್ದರು. ಅವರದು ದೃಢಕಾಯ. ವ್ಯಾಯಾಮ, ಕ್ರೀಡೆಗಳಲ್ಲಿಯೂ ಅವರಿಗೆ ತುಂಬ ಆಸಕ್ತಿ. ಟೆನಿಸ್ ಆಟದಲ್ಲಿ ಅವರು ಪರಿಣತಿ ಪಡೆದಿದ್ದರು. ಅಂದಿನ ಮೈಸೂರಿನ ಅರಸ ಶ್ರೀ ಚಾಮರಾಜ ಒಡೆಯರೂ ಅನೇಕ ಮಂದಿ ಆಂಗ್ಲ ಅಧಿಕಾರಿಗಳೂ ಇವರೊಡನೆ ಟೆನಿಸ್ ಆಡಲು ಆಸೆ ಪಡುತ್ತಿದ್ದರು.

ಕಾದಂಬರಿಯ ವಸ್ತು ವೈವಿಧ್ಯವೂ ತಂತ್ರವೂ ವಿಪುಲವಾಗಿ ಬೆಳೆದಿರುವ ಇಂದು ವೆಂಕಟಾಚಾರ್ಯರು ಅನುವಾದಿಸಿದ ಕಾದಂಬರಿಗಳಲ್ಲಿ ನ್ಯೂನತೆಗಳು ಕಾಣಬಹುದು. ಆದರೆ ಅಂದಿನ ಸಮಾಜದಲ್ಲಿ ಜಾಗೃತಿ ಉಂಟುಮಾಡುವುದಕ್ಕೂ ಓದುವ ದಾಹ ತಣಿಸುವುದಕ್ಕೂ ಅವು ನೆರವಾದುವು.

## ವೆರ್ಮೀರ

17ನೆಯ ಶತಮಾನದ ಚಿತ್ರಕಾರ ಜಾನ್ ವೆರ್ಮೀರ್ ತನ್ನ ಜೀವಿತಕಾಲದಲೇ ಪ್ರಮುಖ ಕಲಾವಿದನೆನಿಸಿದ್ದ. ಆದರೆ ಇವನು ಸತ್ತ ಕೆಲವೇ ವರ್ಷಗಳಲ್ಲಿ ಜನ ಇವನನ್ನು ಸಂಪೂರ್ಣ ಮರೆತುಬಿಟ್ಟರು. ಯಾತಕ್ಕೂ ಬಾರದವು ಎಂದು ಇವನ ಕೆಲವು ವರ್ಣಚಿತ್ರಗಳನ್ನು ಎಸೆದುಬಿಟ್ಟದ್ದೂ ಉಂಟು.

ಅನಂತರ ಇನ್ನೂರು ವರ್ಷಗಳ ಬಳಿಕ ಜನ, ಈತ ಜಗತ್ತಿನ ಅತ್ಯಂತ ಶ್ರೇಷ್ಠ ವರ್ಣಚಿತ್ರಕಾರ –ಎಂದರು. ಅಟ್ಟದಲ್ಲೋ ಹಳೆಯ ಗುದಾಮಿನಲ್ಲೋ ಸಿಕ್ಕ ಇವನ ವರ್ಣಚಿತ್ರಗಳು ಅಮೂಲ್ಯ ನಿಧಿಗಳಾದುವು. ಇವನ್ನು ಹರಾಜು ಮಾಡಲು ತಂದಾಗ, ಮಾರುಕಟ್ಟೆಯಲ್ಲಿ ವಿಪರೀತ ನೂಕುನುಗ್ಗಲು ಉಂಟಾಯಿತು.

ಜಾನ್ ವೆರ್ಮೀರ್. ಡೆಲ್ಫ್ಟ್‌ನ ವೆರ್ಮೀರ್ ಎಂದೂ ಹೆಸರುವಾಸಿಯಾಗಿದ್ದಾನೆ. ಡೆಲ್ಫ್ಟ್ ನೆದರ್‌ಲೆಂಡ್ಸ್ ಪ್ರದೇಶದ ಒಂದು ಸಣ್ಣ ಪಟ್ಟಣ. 1632ರ ಅಕ್ಟೋಬರ್ 31ರಂದು ವೆರ್ಮೀರ್ ಇಲ್ಲಿ ಹುಟ್ಟಿದ. ಈ ಪಟ್ಟಣವನ್ನು ಬಿಟ್ಟು ವೆರ್ಮೀರ್ ಎಂದೂ ಬೇರೆಡೆಗೆ ಹೋದ ಬಗೆಗೆ ಯಾವ ದಾಖಲೆಯೂ ಸಿಕ್ಕಿಲ್ಲ. ಈತನ ತಂದೆ ಒಂದು ಪಾನಗೃಹವನ್ನಿಟ್ಟುಕೊಂಡಿದ್ದ. ರೇಷ್ಮೆಬಟ್ಟೆಗಳನ್ನು ನೇಯುತ್ತಿದ್ದ. ಜೊತೆಗೆ ಕಲಾಕೃತಿಗಳ ವ್ಯಾಪಾರವನ್ನೂ ನಡೆಸುತ್ತಿದ್ದ. 1655ರಲ್ಲಿ ತಂದೆ ತೀರಿಕೊಂಡ ಮೇಲೆ ಜಾನ್ ವೆರ್ಮೀರ್ ಈ ವ್ಯಾಪಾರವನ್ನು ಮುಂದುವರಿಸಿದ.

ಬಾಲ್ಯದಲ್ಲೇ ಆತ ತನ್ನ ಪ್ರತಿಭೆಯನ್ನು ತೋರಲು ಆರಂಭಿಸಿರಬೇಕು. ಏಕೆಂದರೆ 21 ವರ್ಷ ವಯಸ್ಸಾಗುವ ವೇಳೆಗೆ ಇವನು ಚಿತ್ರಕಾರರ ಸಂಘದ ಸದಸ್ಯತ್ವವನ್ನು ಪಡೆದಿದ್ದನೆಂದೂ ಅನಂತರ ಅವನು ಮೂರು ವರ್ಷಗಳ ಕಾಲ ಆ ಸಂಘದ ಮುಖ್ಯಸ್ಥ ಕೂಡ ಆಗಿದ್ದನೆಂದೂ ತಿಳಿದುಬಂದಿದೆ. ಮಹಾ ಕಲಾವಿದ ರೆಂಬ್ರಾಂಟನ ಶಿಷ್ಯನಾದ ಕ್ಯಾರೆಲ್ ಫ್ಯಾಬ್ರಿಟಿಯಸ್ ವೆರ್ಮೀರ್‌ನ ಗುರು.

"ಕುಂದಿಲ್ಲದಂತೆ ಮಾಡಿದಾಗ ಸಣ್ಣ ಕೆಲಸವಾದರೂ ಮಹಾಕೃತಿಯಾಗುತ್ತದೆ" ಎಂದು ಮೈಕೆಲೆಂಜಲೋ ಹೇಳಿದ್ದ. ಇದೇ ವೆರ್ಮೀರನ ಯಶಸ್ಸಿನ ಗುಟ್ಟು. ಚಿತ್ರರಚನೆಯಲ್ಲಿ ಅವನು ತುಂಬ ಶ್ರಮವಹಿಸುತ್ತಿದ್ದ. ಅಂಚೆ ಚೀಟಿಯಷ್ಟು ದೊಡ್ಡದಾಗಿರುವ ತಲೆಯ ಮೇಲೆ ಬೀಳುವ ಬೆಳಕಿನ ಚಿವರಿಕೆಯನ್ನು ಚಿತ್ರಿಸಿ. ಅದನ್ನು ಹಿನ್ನೆಲೆಯ ಗೋಡೆಯಿಂದ ಬೇರೆ ಆಗಿ ತೋರುವಂತೆ ಮಾಡಲು. ಇವನು ಹಲವು ತಿಂಗಳು ಪರಿಶ್ರಮಪಡುತ್ತಿದ್ದ. ಇವನ ಚಿತ್ರಗಳು ಎಷ್ಟು ನಯವಾಗಿರುತ್ತಿದ್ದುವೆಂದರೆ ಅವುಗಳಲ್ಲಿ ಕುಂಚದ ಎಳೆತವನ್ನು ಪ್ರತ್ಯೇಕಪ್ರತ್ಯೇಕವಾಗಿ ಗುರುತಿಸುವುದು ಸಾಧ್ಯವಾಗುತ್ತಿರಲಿಲ್ಲ. ಇಷ್ಟು ಜಾಗರೂಕತೆಯಿಂದ ಕೆಲಸಮಾಡುತ್ತಿದ್ದುದರಿಂದ. ವೆರ್ಮೀರ್ ಜೀವಮಾನವಿಡೀ ದುಡಿದು ರಚಿಸಿದ ವರ್ಣಚಿತ್ರಗಳು ನಲವತ್ತು ಮಾತ್ರ.

ವೆರ್ಮೀರ್‌ನ ಹೆಚ್ಚಿನ ಚಿತ್ರಗಳು ರಚಿತವಾದದ್ದು ಚಿತ್ರಶಾಲೆಯೊಳಗೆ. ಗೃಹಜೀವನವೇ ಇವನ ಹೆಚ್ಚಿನ ಚಿತ್ರಗಳಿಗೆ ವಸ್ತು. ಒಬ್ಬ ಅಥವಾ

ಇಬ್ಬರು ವ್ಯಕ್ತಿಗಳು ಕೋಣೆಯಲ್ಲಿ ನಿಂತಿರುವುದು ಅಥವಾ ಕುಳಿತುಕೊಂಡಿರುವುದು ಸಾಮಾನ್ಯವಾಗಿ ಇವನ ಚಿತ್ರಗಳ ವಸ್ತು. ಚಿತ್ರದ [illegible] ಬೆಳಕು ಬಿದ್ದು ಒಳಗಿದ್ದ ವಸ್ತುಗಳನ್ನು ದೀಪ್ತಗೊಳಿಸುತ್ತದೆ.

ವೆರ್ಮೀರ್ ರಚಿಸಿದ ಅರ್ಧಕ್ಕರ್ಧದಷ್ಟು ಚಿತ್ರಗಳಲ್ಲಿ ಒಬ್ಬಳೇ ಹೆಂಗಸಿನ ರೂಪವನ್ನು ಕಾಣಬಹುದು. ನೀಲಿ ಮತ್ತು ನಸುಹಳದಿ ಇವನಿಗೆ ಬಹು ಇಷ್ಟವಾದ ಬಣ್ಣಗಳು. ಇವನ ಚಿತ್ರಗಳಲ್ಲಿ ಕಾಣುವ ಮನುಷ್ಯಾಕೃತಿಗಳು ಸಾಮಾನ್ಯವಾಗಿ ಈ ಬಣ್ಣಗಳ ಉಡುಪನ್ನೇ ಧರಿಸಿರುತ್ತವೆ. ಸೂರ್ಯಪ್ರಕಾಶದ ಪರಿಣಾಮವನ್ನು ತೋರಿಸಲು ಇವನು ಕಡುನೀಲಿ ಬಣ್ಣವನ್ನು ಉಪಯೋಗಿಸುತ್ತಿದ್ದ.

ಕುಂದಿಲ್ಲದ ಮಹಾಕೃತಿ : ವೆರ್ಮೀರ್

ವೆರ್ಮೀರನದು ದೊಡ್ಡ ಸಂಸಾರ. ವರ್ಣಚಿತ್ರಗಳು ಒಳ್ಳೆಯ ಬೆಲೆಗೆ ಮಾರಾಟವಾಗುತ್ತಿದ್ದುವು. ಆದರೆ ಚಿತ್ರಗಳನ್ನು ರಚಿಸಲು ಇವನಿಗೆ ಹೆಚ್ಚು ಕಾಲ ಹಿಡಿಯುತ್ತಿದ್ದುದರಿಂದ, ಚಿತ್ರ ಮಾರಾಟದಿಂದ ದೊರೆಯುತ್ತಿದ್ದ ಹಣ ಇವನ ವೆಚ್ಚಕ್ಕೆ ಸಾಕಾಗುತ್ತಿರಲಿಲ್ಲ. ಬಡತನ ಎಂದೂ ಇವನನ್ನು ಬಿಟ್ಟಿದ್ದೇ ಇಲ್ಲ. ಆದರೂ ಇತರ ಕಲಾಕಾರರ ಶ್ರೇಷ್ಠ ವರ್ಣಚಿತ್ರಗಳನ್ನು ತಾನು ಕಂಡರೆ ಕೊಳ್ಳದೆ ಬಿಡುತ್ತಿರಲಿಲ್ಲ. ಹೀಗಾಗಿ ವೆರ್ಮೀರ್ ತನ್ನ ಕೊನೆಗಾಲದಲ್ಲಿ ನಿರ್ಗತಿಕನೇ ಆಗಿದ್ದ. ವೆರ್ಮೀರನ ಗತಿ ಇದಾದರೂ ಅವನ ದುರ್ಲಭ ವರ್ಣಚಿತ್ರಗಳಿಗೆ ಯಾವಾಗಲೂ ಭಾರೀ ಬೆಲೆ. ಕೆಲವರು ವೆರ್ಮೀರನ ಅಂಕಿತ ಹಾಕಿ ನಕಲಿ ಚಿತ್ರಗಳನ್ನು ಬರೆದು ಹಣಗಳಿಸಿದ್ದೂ ಉಂಟು. ಮುಂದೆ 20ನೆಯ ಶತಮಾನದಲ್ಲಿ ನೆದರ್‌ಲೆಂಡ್ಸಿನವನೇ ಆದೊಬ್ಬ ಚಿತ್ರಕಾರ ವೆರ್ಮೀರನನ್ನು ಅನುಕರಿಸಿ ಆರು ವರ್ಣಚಿತ್ರಗಳನ್ನು ರಚಿಸಿದ; ಅವು ವೆರ್ಮೀರನ ಮೂಲಚಿತ್ರಗಳೆಂದು ಹೇಳಿ ಅವನ್ನು ಮಾರಿ ದೊಡ್ಡ ಮೊತ್ತದ ಹಣ ಗಳಿಸಿದ. 1946ರಲ್ಲಿ ಇವನ ದುಷ್ಕೃತ್ಯ ಪತ್ತೆಯಾಯಿತು. ಆವೇಳೆಗಾಗಲೇ ಇವನು ಎರಡೂವರೆ ಕೋಟಿ ರೂಪಾಯಿ ಗಳಿಸಿದ್ದ. 1675ರ ಡಿಸೆಂಬರ್ 15ರಂದು ವೆರ್ಮೀರ್ ತೀರಿಕೊಂಡ.

## ವೇದ

ಸಾವಿರಾರು ವರ್ಷಗಳ ಹಿಂದೆ ಸಿಂಧೂ ನದಿಯ ತೀರದಲ್ಲಿ ಆರ್ಯರು ನೆಲೆಸಿದರು. ಆ ಹೊಸ ಸನ್ನಿವೇಶದಲ್ಲಿ ನೆಲೆಸಿದಾಗ ತಮ್ಮ ಭಾವನೆಗಳನ್ನೂ ಆಲೋಚನೆಗಳನ್ನೂ ತಿಳಿವನ್ನೂ ಒಟ್ಟುಗೂಡಿಸಿದರು. ಅದನ್ನು ಶಿಷ್ಯರು ಗುರುಮುಖೇನ ಕಲಿತರು. ಹೀಗೆ ಈ ಜ್ಞಾನ ಪರಂಪರಾಗತವಾಗಿ ಉಳಿದುಬಂತು.

ಈ ತಿಳಿವಿನ ಸಮುದಾಯವೇ 'ವೇದ'. ವೇದ ಎಂದರೆ ಜ್ಞಾನ, ತಿಳಿವು. ವೇದಗಳನ್ನು ಶ್ರುತಿ, ಆಮ್ನಾಯ, ನಿಗಮ ಎಂದು ಕೂಡ ಕರೆಯುತ್ತಾರೆ. ಶ್ರುತಿ ಎಂದರೆ ಕೇಳಿದ್ದು; ಕೇಳಿಕೆಯಿಂದ ಸಂಗ್ರಹಿಸಿದ ಜ್ಞಾನ. ಪರಬ್ರಹ್ಮದ ವಿಷಯ ಚಿಂತನೆಗೆ ಸಾಧನವಾದ ಜ್ಞಾನ ಸಮುದಾಯವಾದದ್ದರಿಂದ 'ಆಮ್ನಾಯ'. ವೇದಗಳು ಆಧ್ಯಾತ್ಮಿಕ ವಿಚಾರದಲ್ಲಿ ನಿಷ್ಕೃಷ್ಟವಾದ ಜ್ಞಾನವನ್ನು ಕೊಡುವುದರಿಂದ ಅವು 'ನಿಗಮ'. ವೇದದಲ್ಲಿ ಪ್ರಧಾನವಾಗಿ ನಾಲ್ಕು ಅಂಶಗಳಿವೆ: ಸ್ತೋತ್ರ, ಪೂಜಾ ವಿಧಾನ, ಹಾಡು, ಮಂತ್ರಗಳು. ವೇದವನ್ನು ನಾಲ್ಕು ಗುಂಪುಗಳಾಗಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ವಿಂಗಡಿಸಿದ್ದಾರೆ. ಇದನ್ನು ವಿಂಗಡಿಸಿದವರು ವ್ಯಾಸರು. ಅದರಿಂದ ಅವರಿಗೆ ವೇದವ್ಯಾಸರೆಂದು ಹೆಸರಾಯಿತು.

ಋಗ್ವೇದದಲ್ಲಿ ದೇವತೆಗಳ ಸ್ತುತಿರೂಪವಾದ ರಚನೆಗಳಿವೆ. ಕಾವ್ಯ ಸೌಂದರ್ಯದ ದೃಷ್ಟಿಯಿಂದ ಋಗ್ವೇದಕ್ಕೆ ಪ್ರಥಮ ಸ್ಥಾನ. ಭಾವದ ಉನ್ನತಿಯಲ್ಲಿ, ರಸಪರಿಪೂರ್ಣತೆಯಲ್ಲಿ ಪದಬಂಧದಲ್ಲಿ, ಉತ್ತಮ ಕಾವ್ಯದ ಗುಣವನ್ನು ಇವುಗಳಲ್ಲಿ ಕಾಣಬಹುದು. ನಕ್ಷತ್ರಗಳನ್ನು ಇರುಳಿನ ಕಣ್ಣುಗಳೆಂದು ಕರೆದ ಋಷಿಗಳ ಸೌಂದರ್ಯಪ್ರಜ್ಞೆ ನಮ್ಮನ್ನು ಬೆರಗುಗೊಳಿಸುತ್ತದೆ.

ಋಕ್ ಎಂದರೆ ದೇವತಾಸ್ತುತಿರೂಪವಾದ ಪದ್ಯ. ಅನೇಕ ಋಕ್‌ಗಳ ಸಮುದಾಯವೇ ಸೂಕ್ತ. ಋಗ್ವೇದದಲ್ಲಿ ಇಂಥ 1017 ಸೂಕ್ತಗಳಿವೆ. ಋಕ್ಕುಗಳ ಒಟ್ಟು ಸಂಖ್ಯೆ 10,600. ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಿದ ಬಳಿಕ ಮನಸ್ಸಂತೋಷಕ್ಕಾಗಿ ಹಾಡಬೇಕು. ಈ ಹಾಡುಗಳನ್ನು ಒಳಗೊಂಡಿರುವ ಭಾಗ ಸಾಮವೇದ. ಸಾಮ ಎಂದರೆ ಗೀತೆ, ಹಾಡು–ಎಂದರ್ಥ. ಇಂಪಾಗಿ ಸುಶ್ರಾವ್ಯವಾಗಿ ಹಾಡಲು ಬರುವ ಎಷ್ಟೋ ವೇದಮಂತ್ರಗಳು ಅವುಗಳಲ್ಲಿವೆ. ಪೂಜೆಯಲ್ಲಿ ದೇವರನ್ನು ಹೊಗಳಿದರೆ ಮಾತ್ರ ಸಾಲದು. ನಿವೇದಿಸಬೇಕಾದ್ದನ್ನು ಕ್ರಮಬದ್ಧವಾಗಿ ಅರ್ಪಿಸಬೇಕು. ಇದು ಯಾಗ. ಯಾಗವನ್ನು ಒಬ್ಬನೇ ವ್ಯಕ್ತಿ ಮಾಡಲಾಗುವುದಿಲ್ಲ. ಅನೇಕರನ್ನು ಸಹಾಯಕ್ಕಾಗಿ ನಿಯಮಿಸಿಕೊಳ್ಳಬೇಕಾಗುತ್ತದೆ. ಹೀಗೆ ನಿಯಮಿತರಾದವರನ್ನು ಋತ್ವಿಕ್ಕುಗಳು ಎನ್ನುತ್ತಾರೆ. ಋತ್ವಿಕ್ಕಿನ ಕರ್ತವ್ಯ ಸಾಧನೆಗೆ ಉಪಯುಕ್ತವಾದ ವಿಷಯಗಳನ್ನು ಒಳಗೊಂಡ ವೇದ, ಯಜುರ್ವೇದ. ಇದಕ್ಕೆ ಅಧ್ವರ್ಯು ವೇದ ಎಂಬ ಹೆಸರೂ ಇದೆ.

ಯಜ್ಞಮಾಡುವಾಗ ಅನೇಕ ವಿಘ್ನಗಳು ಬರಬಹುದು. ಅವನ್ನು ನಿವಾರಿಸಲು ಸಹಾಯಕವಾದ ಅಂಶಗಳು ಅಥರ್ವವೇದದಲ್ಲಿವೆ.

ಯಜ್ಞಯಾಗಾದಿಗಳನ್ನು ಮಾಡುವ ವಿಧಾನ, ಅವರಲ್ಲಿ ಉಪಯೋಗಿಸುವ ವಸ್ತುಗಳು, ಯಜ್ಞದ ಸಮಯದಲ್ಲಿ ಪುರೋಹಿತರ ಕರ್ತವ್ಯ, ಅವರಿಗೆ ಕೊಡುವ ಸಂಭಾವನೆ, ಇತ್ಯಾದಿಗಳ ವಿವರಣೆ ವೇದಗಳ ಭಾಗವಾದ ಬ್ರಾಹ್ಮಣಗಳಲ್ಲಿ ದೊರೆಯುತ್ತದೆ. ವೇದ ಮಂತ್ರಗಳ ವಿವರಣೆ

ಗಳೂ ಇವರಲ್ಲಿವೆ. ವೈದಿಕಯುಗದ ಕಾರ್ಯಕಲಾಪದ ಭವ್ಯ ಚಿತ್ರವನ್ನು ಬ್ರಾಹ್ಮಣಗಳಲ್ಲಿ ಕಾಣಬಹುದು. ಬ್ರಾಹ್ಮಣಗಳು ಪ್ರಾಚೀನ ಸಂಸ್ಕೃತ ಭಾಷೆಯಲ್ಲಿರುವ ಗದ್ಯಕೃತಿಗಳು.

ಗೃಹಸ್ಥನಾಗಿ ಯಜ್ಞಯಾಗಾದಿಗಳನ್ನು ಮಾಡಿ ಸಾರ್ಥಕ ಬಾಳ್ವೆಯನ್ನು ನಡೆಸಿದ ಮೇಲೆ ಮುಪ್ಪು ಬಂದಾಗ ಅರಣ್ಯಕ್ಕೆ ಹೋಗಿ ತಪಸ್ಸಿನಲ್ಲಿ ನಿರತನಾಗುತ್ತಾನೆ; ಆಧ್ಯಾತ್ಮಿಕ ಚಿಂತನೆಗೆ ಮನಸ್ಸು ಕೊಡುತ್ತಾನೆ. ಆ ಚಿಂತನೆಗಳ ನಿರೂಪಣೆ 'ಆರಣ್ಯಕ' ಗಳಲ್ಲಿದೆ. ಸೃಷ್ಟಿ. ಜೀವ. ಜಗತ್ತು. ಈಶ್ವರ. ಪ್ರಪಂಚ. ಜೀವನಿಗೂ ಈ ಪ್ರಪಂಚಕ್ಕೂ ಇರುವ ಸಂಬಂಧ ಮುಂತಾದುವುಗಳನ್ನೊಳಗೊಂಡ ಜ್ಞಾನರಾಶಿ ಉಪನಿಷತ್ತುಗಳು. ಇಲ್ಲಿನ ವಿಚಾರಗಳು ತುಂಬಾ ಗಹನವಾದದ್ದರಿಂದ ಶಿಷ್ಯನು ಗುರುವಿನ ಸಮೀಪದಲ್ಲಿ ಕುಳಿತು ಏಕಾಗ್ರಚಿತ್ತದಿಂದ ಕೇಳಿ ತಿಳಿದುಕೊಳ್ಳಬೇಕಾಗುತ್ತಿತ್ತು. ಆದ್ದರಿಂದ ಇವುಗಳಿಗೆ ಉಪನಿಷತ್, ಎಂದರೆ ಹತ್ತಿರ ಕೂತು ತಿಳಿದುಕೊಳ್ಳುವುದು. ಎಂದು ಹೆಸರಾಯಿತು. ಇದು ವೇದದ ಕೊನೆಯ ಭಾಗವಾದ್ದರಿಂದ ಇದಕ್ಕೆ 'ವೇದಾಂತ' ಎಂಬ ಹೆಸರೂ ಇದೆ. ಉಪನಿಷತ್ತುಗಳ ಒಟ್ಟು ಸಂಖ್ಯೆ 108. ಅವುಗಳಲ್ಲಿ 10 ಮುಖ್ಯವಾದುವು. ಇವುಗಳನ್ನು ದಶೋಪನಿಷತ್ತುಗಳೆನ್ನುತ್ತಾರೆ. ಉಪನಿಷತ್ತುಗಳಲ್ಲಿ ಸ್ವಾರಸ್ಯಕರವಾದ ನೀತಿಬೋಧಕ ದೃಷ್ಟಾಂತ ಕತೆಗಳೂ ಇವೆ.

ವೇದಗಳ ರಚನೆ ಯಾವಾಗ ಆಯಿತು ಎಂಬುದು ಇನ್ನೂ ತುಂಬಾ ಚರ್ಚಾಸ್ಪದವಾಗಿದೆ. ಜರ್ಮನಿಯ ಮ್ಯಾಕ್ಸ್‌ಮುಲ್ಲರನ ಅಭಿಪ್ರಾಯದಂತೆ ವೇದಗಳು ಕ್ರಿ. ಪೂ. 1500–1200 ಮಧ್ಯೆ ರಚಿತವಾಗಿರಬೇಕು. ಡಾ. ಯಾಕೂಬಿ, ಬಾಲಗಂಗಾಧರ ತಿಲಕ ಮುಂತಾದವರು, ಖಗೋಳ ಶಾಸ್ತ್ರದ ಆಧಾರದಿಂದ ವೇದಗಳ ಕಾಲ ಕ್ರಿ.ಪೂ. 4500 ಎಂದು ವಾದಿಸಿದ್ದಾರೆ. ಲಂಡನ್ ವಿಶ್ವವಿದ್ಯಾಲಯದ ಭಾರತಾಧ್ಯಯನದ ಅಧ್ಯಾಪಕ ಭಾಷ್ಯಾಮರ ಪ್ರಕಾರ ವೇದಗಳ ಕಾಲ ಕ್ರಿ. ಪೂ. 1500—1000.

ಭಾರತೀಯ ಸಂಸ್ಕೃತಿಯ ಇತಿಹಾಸದಲ್ಲಿ ವೇದಗಳ ಸ್ಥಾನ ಹಿರಿದು. ವೇದಗಳಿಂದ ಪ್ರಾಚೀನ ಆರ್ಯರ ವಿಚಾರಗಳು –ನಾಗರಿಕತೆ, ಸಂಸ್ಕೃತಿ, ಧರ್ಮ, ಸಂಪ್ರದಾಯ, ಜೀವನಮೌಲ್ಯಗಳು, ನಂಬಿಕೆಗಳು— ಇವುಗಳ ತಿಳಿವಳಿಕೆ ನಮಗೆ ದೊರೆಯುತ್ತದೆ.

ಗಿರಿಶಿಖರದಿಂದ ಹರಿಯುವ ಸ್ವಚ್ಛ ಜಲಪ್ರವಾಹದಂತೆ ವೈದಿಕ ಋಷಿಗಳ ಕಲ್ಪನೆ ವೇದಗಳಲ್ಲಿ ಹರಿದಿದೆ. ತುಲನಾತ್ಮಕ ಭಾಷಾಶಾಸ್ತ್ರ ಜ್ಞಾನಕ್ಕೆ ವೇದಗಳ ಅಧ್ಯಯನ ಅವಶ್ಯ. ಇಹದ ಬದುಕನ್ನು ತೆಗಳದೆ, ನಮಗೂ ನಮ್ಮ ಸಂತೃಪ್ತಿಯುತ್ತ ಜೀವಿಸುವವರಿಗೂ ಒಪ್ಪುವಂತೆ ಬಾಳನ್ನು ಹಸನುಗೊಳಿಸಿ ಆತ್ಮಸಾಕ್ಷಾತ್ಕಾರ ಸಾಧಿಸುವ ಮಾರ್ಗವನ್ನು ವೇದಗಳು ತಿಳಿಸುತ್ತವೆ.

ಪ್ರಾಚೀನ ಭಾರತೀಯರ ಆಧ್ಯಾತ್ಮಿಕ ದೃಷ್ಟಿಯ ಮೂಲ ಈ ವೇದಗಳಲ್ಲಿದೆ. ಇಂದು ವಿಶ್ವದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ವೇದಗಳ ಅಧ್ಯಯನಕ್ಕೆ ಪ್ರಾಶಸ್ತ್ಯ ದೊರೆತಿದೆ.

## ವೇದನಾ ಸಂಗೀತ

ವೇದನಾ ಸಂಗೀತ ಕ್ರೈಸ್ತ ಧಾರ್ಮಿಕ ವಸ್ತುವನ್ನು ಅವಲಂಬಿಸಿದ ಸಂಗೀತ. ಕ್ರಿಸ್ತನ ಮರಣದ ಕಥೆಯನ್ನು ಇದಕ್ಕೆ ಅಳವಡಿಸಿಕೊಳ್ಳಲಾಗಿದೆ. ಕ್ರೈಸ್ತರು ಆಚರಿಸುವ ಈಸ್ಟರ್ ಹಬ್ಬಕ್ಕೆ ಮೊದಲು, ಎಂದರೆ ಈಸ್ಟರ್ ಭಾನುವಾರಕ್ಕೆ ಮೊದಲಿನ ವಾರ —ಪವಿತ್ರ ವಾರ— ಚರ್ಚುಗಳಲ್ಲಿ ಈ ಸಂಗೀತ ನಡೆಯುತ್ತದೆ. ಈ ಸಂಗೀತದಲ್ಲಿ [illegible] ಲ್ಯಾಟಿನ್ ಭಾಷೆಯನ್ನು [illegible] ಹೊಂದಿಸಿಕೊಂಡದ್ದು. ಇನ್ನೊಂದು, ಪ್ರಾದೇಶಿಕ ಭಾಷೆಗಳಲ್ಲಿ–ವಿಶೇಷವಾಗಿ ಜರ್ಮನ್ ಭಾಷೆಯಲ್ಲಿ–ಹಾಡುವಂಥದು.

ವೇದನಾ ಸಂಗೀತದ ಸ್ವರೂಪ ಕಾಲಕಾಲಕ್ಕೆ ಬದಲಾಗುತ್ತ ಬಂದಿದೆ. ಸುವಾರ್ತೆಕಾರರು ವಿವರಿಸಿರುವ ಕ್ರಿಸ್ತನ ಕೊನೆಗಾಲದ ಯಾತನೆಯ ಪ್ರಸಂಗವನ್ನು ಹಾಡುವುದು ಚರ್ಚುಗಳಲ್ಲಿ ಬಹು ಹಿಂದಿನಿಂದಲೂ ವಾಡಿಕೆಯಲ್ಲಿತ್ತು. ಈ ಸಂಗೀತದಲ್ಲಿ ಮಾತುಗಳು ಲ್ಯಾಟಿನ್ ಭಾಷೆಯಲ್ಲಿದ್ದು ಜನಸಾಮಾನ್ಯರಿಗೆ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಸುಮಾರು 12ನೆಯ ಶತಮಾನದ ವೇಳೆಗೆ ಹಾಡುವ ರೀತಿಯನ್ನು ಸ್ವಲ್ಪ ನಾಟಕೀಯವಾಗಿ ಮಾರ್ಪಡಿಸಲಾಯಿತು. ಮೂರು ಮಂದಿ ಪಾದ್ರಿಗಳು ಇದರಲ್ಲಿ ವಿಶಿಷ್ಟ ಪಾತ್ರಗಳನ್ನು ವಹಿಸಿ ಹಾಡುತ್ತಿದ್ದರು. ಒಬ್ಬ ಸುವಾರ್ತೆಕಾರನ ಮಾತುಗಳನ್ನು ಹಾಡುತ್ತಿದ್ದ ; ಮುಖ್ಯ ಕಥನ ಈತನಿಂದ. ಸಾಮಾನ್ಯ ಗತಿ ಹಾಗೂ ಮಧ್ಯ ಶ್ರುತಿಯಲ್ಲಿ ಹಾಡುಗಾರಿಕೆ ನಡೆಯುತ್ತಿತ್ತು. ಕ್ರಿಸ್ತನ ಮರಣ ಸಮಯದಲ್ಲಿ ಯೆಹೂದ್ಯರ ಗುಂಪು ಆಡಿಕೊಂಡ ಮಾತುಗಳನ್ನು ಹಾಡುವವನು ಮತ್ತೊಬ್ಬ ; ಇವನ ಹಾಡುಗಾರಿಕೆ ತೀವ್ರಗತಿ ಹಾಗೂ ಎತ್ತರದ ಶ್ರುತಿಯಿಂದ ಕೂಡಿರುತ್ತಿತ್ತು. ಮೂರನೆಯವನು, ಕ್ರಿಸ್ತನ ಮಾತುಗಳನ್ನು ನಿಧಾನ ಗತಿಯಲ್ಲಿ ಕೆಳ ಶ್ರುತಿಯಲ್ಲಿ ಗಂಭೀರವಾಗಿ ಹಾಡುತ್ತಿದ್ದ.

'ಹಾರ್ಮನಿ ಸಂಗೀತ'— ಎಂದರೆ ಒಂದೇ ಬಾರಿಗೆ ಗೊತ್ತಾದ ವಿವಿಧ ಸ್ವರಗಳನ್ನು ಒಟ್ಟಿಗೆ ನುಡಿಸುವುದು— ಆಚರಣೆಗೆ ಬಂದ ಮೇಲೆ ಯೆಹೂದ್ಯರ ಗುಂಪಿನ ಮಾತುಗಳನ್ನು ಹಲವಾರು ಕಂಠಗಳು ಹಾಡುವಂತೆ ವೇದನಾ ಸಂಗೀತ ಧಾಟಿಯಲ್ಲಿ ಬದಲಾವಣೆಗಳಾದುವು. ಅನಂತರ ಜರ್ಮನ್ ಭಾಷೆಯ ಸಾಹಿತ್ಯವುಳ್ಳ ವಿಶಿಷ್ಟ ವೇದನಾ ಸಂಗೀತ ಹುಟ್ಟಿಕೊಂಡಿತು. ಲೂಥರ್ ಪಂಥದ ಚರ್ಚುಗಳಲ್ಲಿ ವೇದನಾ ಸಂಗೀತ ಜರ್ಮನ್ ಭಾಷೆಯಲ್ಲಿ ಹಾಡಲ್ಪಡುತ್ತಿದ್ದಿತು. ಇದೇ ಕಾಲಕ್ಕೆ, ಅಂದರೆ 16ನೆಯ ಶತಮಾನದ ಮೊದಲ ಭಾಗದಲ್ಲಿ, ಸಂಗೀತದ ಮತ್ತೊಂದು ಪ್ರಕಾರ ಬೆಳೆಯಿತು. ಇದರಲ್ಲಿ ಯೆಹೂದ್ಯರ ಗುಂಪಿನ ಸಾಹಿತ್ಯವಲ್ಲದೆ ಕ್ರಿಸ್ತನ ಮತ್ತು ಸುವಾರ್ತೆಕಾರನ ಸಾಹಿತ್ಯಗಳನ್ನೂ ವೃಂದಗಾನದಲ್ಲಿ ಹಾಡುವುದು ರೂಢಿಗೆ ಬಂದಿತು.

17ನೆಯ ಶತಮಾನದ ವೇಳೆಗೆ ಸಂಗೀತ ಪ್ರಪಂಚದಲ್ಲಿ ಹಲವು ಬದಲಾವಣೆಗಳಾದುವು. ಸಂಗೀತದ ಮೂಲಶೈಲಿಯಲ್ಲಿ ಹಾಗೂ ವಾದ್ಯ ಸಂಗೀತದಲ್ಲಿ ಆದ ಈ ಬದಲಾವಣೆಗಳು ಪ್ರಾಟೆಸ್ಟೆಂಟ್ ಮತದ ಲೂಥರ್ ಸಂಪ್ರದಾಯದ ವೇದನಾ ಸಂಗೀತದ ಮೇಲೂ ಪ್ರಭಾವ ಬೀರಿದುವು. ಹೊಸ ಬಗೆಯ ಈ ವೇದನಾ ಸಂಗೀತ ಬಹಳ ಮನೋಜ್ಞವಾದದ್ದು. ಇದಕ್ಕೆ ತಂತಿ ವಾದ್ಯಗಳು, ಕೊಳಲುಗಳ ಹಿನ್ನೆಲೆ ಬೇರೆ ಸೇರಿತು. ನೂತನ ವೇದನಾ ಸಂಗೀತ ರಚಿಸಿದವರಲ್ಲಿ ಷೂಟ್ಸ್ ಮತ್ತು ಬಾಕ್ ಪ್ರಮುಖರು. ಸಂತ ಮ್ಯಾಥ್ಯೂನ ಸುವಾರ್ತೆಯನ್ನನುಸರಿಸಿ ಇವರಿಬ್ಬರೂ ರಚಿಸಿರುವ ವೇದನಾ ಸಂಗೀತ ಖ್ಯಾತವಾದದ್ದು. ಬಾಕ್‌ನ ರಚನೆಯಂತೂ ಪಾಶ್ಚಾತ್ಯ ಸಂಗೀತ ಇತಿಹಾಸದಲ್ಲಿ ಶ್ರೇಷ್ಠಕೃತಿಯೆಂದು ಪರಿಗಣಿಸಲ್ಪಟ್ಟಿದೆ.

ಈ ರಚನೆಯಲ್ಲಿ ತಾರಕ ಸ್ವರದ ಗಾಯಕನೊಬ್ಬ ಕಥನ ಗಾಯನ ನಡೆಸುತ್ತಾನೆ. ಕಥನದ ಮಧ್ಯೆ ಕ್ರಿಸ್ತನ ಮಾತುಗಳು ಬಂದಾಗ ಅವಕ್ಕೆ ವಿಶೇಷ ಹಿನ್ನೆಲೆ. ಕೊನೆಯ ಭೋಜನ ಸಮಯದಲ್ಲಿ "ನಿಮ್ಮಲ್ಲಿ ಒಬ್ಬರು

[illegible] ಎಂದು ಕ್ರಿಸ್ತ ನೋವು ತಾಳಿದ ಅನಂತರ "[illegible]. ತಂದೆ !" ಎಂದು ವೃಂದಗಾನದ ಕಂಠಗಳು ಒಂದಾದ ಮೇಲೆ [illegible] ಸಾವಕಾಶವಾಗಿ ಹಾಡುವುದು ಅಪೂರ್ವ ಪರಿಣಾಮ ಉಂಟುಮಾಡುತ್ತದೆ. "ಯಾರನ್ನು ಬಿಡುಗಡೆ ಮಾಡಲಿ, ಜೀಸಸನ್ನೋ, ಬಾರಾಬಾಸನ್ನೋ ?" ಎಂಬ ಅಧಿಕಾರಿಯ ಪ್ರಶ್ನೆಗೆ, "ಬಾರ್‌ಬಾಸ್" ಎಂಬ ಉತ್ತರ ವೃಂದಗಾನದ ಚಿಕ್ಕೋರಲಿನೊಂದಿಗೆ ಘನ ನಾದದಂತೆ ಉಕ್ಕಿಬರುತ್ತದೆ. ಈ ಸಂಗೀತಕೃತಿಯನ್ನು ಕೇಳಿದಾಗ ಮೂಲಕಥೆಯ ಚಿತ್ರ ಕಣ್ಣೆದುರು ಎದ್ದು ನಿಲ್ಲುತ್ತದೆ. ಕ್ರಿಸ್ತನನ್ನು ಶಿಲುಬೆಗೇರಿಸಿದ ಬಳಿಕ ಆಗುವ ಭೂಕಂಪ ಮತ್ತು ಇತರ ಘಟನೆಗಳಲ್ಲಿ ಬಾಕನ ಈ ಸಂಗೀತ ರಚನೆ ಬಹಳ ಪರಿಣಾಮಕಾರಿಯಾಗಿ ರೂಪುಗೊಂಡಿದೆ. ಏಕಕಂಠಗಾಯನ, ವೃಂದಗಾನ, ವಿವಿಧ ರೀತಿಗಳಲ್ಲಿ ವಾದ್ಯಗಳ ಬಳಕೆ ಇವೆಲ್ಲ ಸೇರಿದ ವೇದನಾ ಸಂಗೀತ ಭಕ್ತಿರಸ ಪ್ರಚೋದಕ. ಜರ್ಮನ್ ಸಾಹಿತ್ಯವುಳ್ಳ ವೇದನಾ ಸಂಗೀತ ಪರಂಪರೆಯಲ್ಲಿ ಬಾಕ್‌ನೇ ಕೊನೆಯ ರಚನಕಾರ ಎನ್ನಬಹುದು. ಅನಂತರ ಅಲ್ಲಲ್ಲಿ ಕೆಲವರು ಗೇಯಕಾರರು ವೇದನಾ ಸಂಗೀತ ರಚಿಸಿದ್ದಾರೆ.

ವಿವಿಧ ಕ್ರೈಸ್ತ ರಾಷ್ಟ್ರಗಳಲ್ಲಿ ಅವಕ್ಕೆ ವಿಶಿಷ್ಟವಾದ ವೇದನಾ ಸಂಗೀತ ಸಂಪ್ರದಾಯ ಕೂಡ ಬೆಳೆದುಬಂದಿದೆ.

## ವೇಮನ

ಕೌಪೀನಧಾರಿ. ಊರಿಂದ ಊರಿಗೆ ಹೋಗುವ ಅಲೆಮಾರಿ. ನೋಡಿದವರು ಹುಚ್ಚ ಅಂದುಕೊಳ್ಳುವಂಥ ಚಹರೆ. ಆದರೆ ಬಾಯಿ ತೆರೆದನೆಂದರೆ ಉದುರುತ್ತಿದ್ದುದು ನುಡಿಮುತ್ತು. ಅದನ್ನು ಕೇಳಿದವರು ತಮ್ಮನ್ನು ತಾವೇ ಮರೆತುಬಿಡಬೇಕು : ಮಂತ್ರಮುಗ್ಧರಂತೆ ಅವನ ಹಿಂದೆ ಹೊರಟುಬಿಡಬೇಕು.

ಇಂಥ ವ್ಯಕ್ತಿತ್ವದ ವೇಮನ ಕಣ್ಮುಚ್ಚಿ ಶತಮಾನಗಳೇ ಕಳೆದರೂ ಅವನ ಪ್ರಭಾವ ಕಡಮೆಯಾಗಿಲ್ಲ. ಜನ ಅವನ ಬೋಧನೆ ಮರೆತಿಲ್ಲ. ಇವನ ವಚನಗಳು ತೆಲುಗು ಭಾಷೆಯಲ್ಲಿ ಹಾಸುಹೊಕ್ಕಾಗಿವೆ. ಅವಿದ್ಯಾವಂತನಾದವನೂ ವೇಮನನ ವಚನವನ್ನು ಉದ್ಧರಿಸದೆ ಮಾತುಕತೆಯಾಡುವುದಿಲ್ಲ. ತೆಲುಗಿನ ಜನತಾ ಕವಿ, ವೇಮನ.

ವೇಮನನ ಕಾಲವಾಗಲೀ ಹುಟ್ಟೂರಾಗಲೀ ಇಂಥದೇ ಎಂದು ಯಾವ ವಿದ್ವಾಂಸರೂ ಒಮ್ಮತಕ್ಕೆ ಬಂದಿಲ್ಲ. ಇವನ ಜೀವನವನ್ನು ಕುರಿತು ಸತ್ಯಕ್ಕಿಂತ ದಂತಕಥೆಗಳೇ ಹೆಚ್ಚು ಪ್ರಚಾರದಲ್ಲಿವೆ. ಸುಮಾರು ಹದಿನಾರು–ಹದಿನೇಳನೆಯ ಶತಮಾನದಲ್ಲಿ ನೈಋತ್ಯ ಆಂಧ್ರಪ್ರದೇಶದಲ್ಲಿ ಇವನು ಹುಟ್ಟಿರಬೇಕು. ವೇಮನನ ವಚನಗಳಲ್ಲಿ ಕನ್ನಡಕ್ಕೆ ಹತ್ತಿರವಾದ ಕೆಲವು ಪದಗಳೂ ಇರುವುದರಿಂದ ಈತ ರಾಯಲಸೀಮೆಯವನೇ ಇರಬಹುದು. ಶ್ರೀಮಂತ ಮನೆತನ. ಇವನ ಅಣ್ಣ ಚಿಕ್ಕ ಸಂಸ್ಥಾನಕ್ಕೆ ಅಧಿಪತಿ. ಇದರಿಂದಾಗಿ ದುರ್ಗುಣಗಳು ಇವನಿಗೆ ಸಹಜವಾಗಿಯೇ ಬಂದುವು. ಮನೆಯವರು ಒತ್ತಾಯದಿಂದ ಮದುವೆಮಾಡಿದರೂ ಇವನ ಸ್ವಭಾವ ಸುಧಾರಿಸಲಿಲ್ಲ. ಯಾವುದೋ ಒಂದು ಸಂದರ್ಭದಲ್ಲಿ ವೇಮನನ ಮನಸ್ಸು ಬದಲಾಗಿ, ಸನ್ಯಾಸಿಯಾಗಿ ಮನೆಬಿಟ್ಟು ಹೊರಟ. ಲಂಬಿಕ ಶಿವಯೋಗಿ ಎಂಬವನನ್ನು ಗುರುವಾಗಿ ಮಾಡಿಕೊಂಡ.

ಶಿಷ್ಯವೃತ್ತಿ ಮುಗಿಸಿ ಹೊರಬಂದವನು ಬೇರೆಯೇ ವೇಮನ.

ವೇಮನ ಮಾತನಾಡಿದ್ದೇ ಪದ್ಯ; ಹೇಳಿದ್ದೇ ನೀತಿ. ಅವನು ಊರಿಂದ ಊರಿಗೆ ಹೋಗುತ್ತ, ಸಮಾಜದ ಹುಳುಕನ್ನು ಬೊಟ್ಟುಮಾಡಿ ತೋರಿಸುತ್ತ ಜೀವಿಸಿದ. ಮಹಾಕವಿ ವೇಮನ ಒಂದು ಪದ್ಯವನ್ನೂ ಬರೆದಿಡಲಿಲ್ಲ. ಇವನ ಬಾಯಿಯಿಂದ ಹೊರಟದ್ದನ್ನು ಕೇಳಿದ ಶಿಷ್ಯರು ಬರೆದಿಟ್ಟಷ್ಟು ಬಂತು. ಸುಮಾರು ನಾಲ್ಕು ಸಾವಿರ ಚಿಕ್ಕ ಪದ್ಯಗಳ ರಚನಕಾರ ವೇಮನ ಎನ್ನುತ್ತಾರೆ. ಈ ಪದ್ಯಗಳ ಜನಪ್ರಿಯತೆ ಎಷ್ಟು ಹೆಚ್ಚಿತೆಂದರೆ ಇವನ ಹೆಸರಿನಲ್ಲೇ ಪದ್ಯಗಳನ್ನು ಬರೆದವರು ಎಷ್ಟೋ ಮಂದಿ. ವೇಮನ ಬರೆದದ್ದು ಯಾವುದು, ಇತರರು ಅನುಕರಿಸಿ ಬರೆದದ್ದು ಯಾವುದು ಎಂದು ಕಂಡುಹಿಡಿಯುವುದು ಕಷ್ಟದ ಕೆಲಸ.

ವೇಮನನ ಪದ್ಯಗಳೆಲ್ಲ ಬಹಳ ಚಿಕ್ಕವು. ಹೆಚ್ಚಿನವು ನಾಲ್ಕು ಸಾಲುಗಳ ಆಟವೆಲದಿ, ತೇಟಗೀತೆಗಳಂಥ ತೆಲುಗು ಪದ್ಯರೂಪಗಳು. ಪದ್ಯ ಚಿಕ್ಕದಾಗಿದ್ದರೂ ಸ್ವಯಂ ಪರಿಪೂರ್ಣವಾದದ್ದು. ಭಾಷೆ ಸರಳ. ದೃಷ್ಟಾಂತಗಳು ನಿತ್ಯಜೀವನದಿಂದ ಆರಿಸಿದುವು. ತಾತ್ತ್ವಿಕ ವಿಚಾರಗಳು ಮಾತ್ರವಲ್ಲದೆ ವಿಡಂಬನೆ, ಹಾಸ್ಯಗಳೂ ಇರುವುದರಿಂದ ಸುಲಭವಾಗಿ ನೆನಪಿನಲ್ಲಿರುವಂಥವು. ಹೆಚ್ಚು ಕಡಮೆ ಪ್ರತಿಪದ್ಯವೂ 'ವಿಶ್ವದಾಭಿರಾಮ ವಿನರಾವೇಮ' (ವಿಶ್ವದಾಭಿರಾಮನಾದ ವೇಮಾ, ಕೇಳೋ) ಎಂದು ಮುಕ್ತಾಯವಾಗುತ್ತದೆ.

ವೇಮನ ಹುಟ್ಟಿನಿಂದಲೇ ಶ್ರೀಮಂತನಾದರೂ ಬಡವರ ಪಕ್ಷಪಾತಿ. "ಧನವನ್ನು ಒಬ್ಬನಿಗೂ ದಾನಗುಣವನ್ನು ಬೇರೊಬ್ಬನಿಗೂ ಕೊಟ್ಟು ಈ ಬ್ರಹ್ಮ ಹಾಳುಕೆಲಸ ಮಾಡಿದ್ದಾನೆ" ಎಂದು ಈತ ಒಂದು ಪದ್ಯದಲ್ಲಿ ಹೇಳಿದ್ದಾನೆ.

ಶ್ರೀಮಂತನ ಧನವನ್ನು ದೋಚಿ ಬಡವನಿಗೆ ಕೊಡಬೇಕು ಎನ್ನುವ ಸಮಾಜವಾದಿ ಈತ.

ಜನರ ಹುಚ್ಚು ವಿಚಾರಗಳನ್ನೆಲ್ಲ ತೊಡೆದುಹಾಕಬೇಕು ಎಂಬ ಉದ್ದೇಶದ ವೇಮನ ಸತ್ಕುಲಪ್ರಸೂತರೆನಿಸಿದವರನ್ನೂ ಬಿಡಲಿಲ್ಲ. " ಸ್ನಾನಮಾಡಿ



ನುಡಿಮುತ್ತು : ವೇಮನ

ವಿಭೂತಿ. ಗಂಧ ಹಚ್ಚಿಕೊಳ್ಳುವುದಕ್ಕಿಂತ ಮುಖ್ಯವಾಗಿ ಆತ್ಮಶುದ್ಧಿ ಮಾಡಬೇಕು" ಎಂದು ಒಂದು ಪದ್ಯದಲ್ಲಿ ಹೇಳಿದ. "ಆತ್ಮಶುದ್ಧಿಯಿಲ್ಲದೆ ಮಾಡುವ ಆಚಾರ, ಪಾತ್ರೆ ತೊಳೆಯದೆ ಅಡುಗೆ ಮಾಡಿದಂತೆ ವ್ಯರ್ಥ. ಅಂತರಂಗ ಶುದ್ಧಿಯಿಲ್ಲದ ಶಿವಪೂಜೆಯೂ ಹೀಗೆಯೇ ವ್ಯರ್ಥ" ಎಂದ.

ಈ ಪ್ರಪಂಚದಲ್ಲಿ ತನ್ನ ಕೆಲಸ ಮುಗಿಯಿತು ಎಂದು ಅನಿಸಿದೊಡನೆ ವೇಮನ ಪರ್ವತದ ಮೇಲಿದ್ದ ಗುಹೆಯೊಂದನ್ನು ಹೊಕ್ಕ. ಹಾಗೆ ಹೊಕ್ಕವನು ಹಿಂದೆ ಬರಲಿಲ್ಲ.

## ವೈ. ನಾಗೇಶಶಾಸ್ತ್ರಿ

ಹಲವು ಭಾಷೆಗಳಲ್ಲಿ ಪರಿಣತ. ಕಾವ್ಯ–ನಾಟಕ–ಕಾದಂಬರಿಗಳ ಕರ್ತೃ. ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ಶ್ರದ್ಧಾಳು, ವೈ. ನಾಗೇಶಶಾಸ್ತ್ರಿಗಳು.

'ಗವಿಸಿದ್ಧೇಶ್ವರ ಪುರಾಣ', 'ಮರಿಯೋಗೀಶ್ವರ ಪುರಾಣ', 'ಶ್ರೀಫಾಲಾಕ್ಷ ಶಿವಯೋಗೀಶ್ವರ ಪುರಾಣ' ಮೊದಲಾದ ಪುರಾಣಗಳನ್ನು ಕಾವ್ಯಪ್ರಕಾರದಲ್ಲಿ ರಚಿಸಿದ್ದಾರೆ. ಷಟ್ಪದಿ, ಚಂಪೂ ಕಾವ್ಯಗಳನ್ನೂ ಬರೆದಿದ್ದಾರೆ. ಕಾಳಿದಾಸನ 'ರಘುವಂಶ', 'ಕುಮಾರ ಸಂಭವ', 'ಭಗವದ್ಗೀತೆ', 'ಚಂದ್ರಾಲೋಕ' ಈ ಶೈಲಿಯಲ್ಲಿ ಬರೆದುವು.

'ವಿಜಯನಗರಾಭ್ಯುದಯ', 'ವಜ್ರಾಂಗುಲೀಯ'ಗಳು ನಾಟಕಗಳು.

ನಾಗೇಶಶಾಸ್ತ್ರಿಗಳು ಮೊದಲಿಗೆ ಬರೆದವುಗಳಲ್ಲಿ ಎರಡು ಕಾದಂಬರಿಗಳಿವೆ –'ವಿದ್ಯಾ ವಿನೋದಿನಿ' ಹಾಗೂ 'ಅಭಿನವ ಸೀತೆ.'

'ಶಿವಾನುಭವ ಸೂತ್ರಸಾರ,' 'ಷಟ್ಸ್ಥಲ ತತ್ತ್ವದರ್ಪಣ' ಶೈವಮತದ ಧರ್ಮಗ್ರಂಥಗಳು.

1915ರಲ್ಲಿ 'ಕರ್ನಾಟಕ ಬಂಧು' ವಾರಪತ್ರಿಕೆಯನ್ನು ಬಳ್ಳಾರಿಯಲ್ಲಿ ನಡೆಸುತ್ತಿದ್ದರು.

ಕರ್ನಾಟಕ ಏಕೀಕರಣಕ್ಕಾಗಿ ಬಹಳ ದುಡಿದರು. ಬಳ್ಳಾರಿಯಲ್ಲಿ ಏರ್ಪಡುತ್ತಿದ್ದ ನಾಡಹಬ್ಬ ಉತ್ಸವಗಳಲ್ಲಿ ಇವರದು ಪ್ರಮುಖ ಪಾತ್ರ.

ನಾಗೇಶಶಾಸ್ತ್ರಿಗಳು ಬಳ್ಳಾರಿ ಜಿಲ್ಲೆಗೆ ಸೇರಿದ ಏಳುಬೆಂಚಿ ಎಂಬಲ್ಲಿ 1893ರಲ್ಲಿ ಜನಿಸಿದರು. ವೀರಶೈವ ಗುರುಸ್ಥಲದ ನಮನಸ್ವಾಮಿ ಹಾಗೂ ನೀಲಾಂಬಿಕೆ ಇವರ ತಂದೆತಾಯಿ. ಬಡತನದಿಂದಾಗಿ ಪ್ರಾಥಮಿಕ ವಿದ್ಯಾಭ್ಯಾಸಕ್ಕೇ ಇವರ ಶಿಕ್ಷಣ ನಿಲ್ಲಬೇಕಾಯಿತು. ಕೆಲವು ಕಾಲ ಉಪಾಧ್ಯಾಯ ವೃತ್ತಿ ಕೈಗೊಂಡರು.



ಶ್ರದ್ಧೆ : ನಾಗೇಶಶಾಸ್ತ್ರೀ

ಕನ್ನಡ, ಸಂಸ್ಕೃತ, ತೆಲುಗು, ಸುಮಾರು 100ಕ್ಕೂ ಹೆಚ್ಚು ಗ್ರಂಥಗಳನ್ನು ಸ್ವಂತವಾಗಿ ಅಧ್ಯಯನಮಾಡಿ ಕಲಿತರು. ಕೊಟ್ಟೂರ ಗದುಗಿನ ವೀರಭದ್ರಶಾಸ್ತ್ರಿಗಳು ನಾಗೇಶಶಾಸ್ತ್ರಿಗಳಿಗೆ ಸಂಸ್ಕೃತ ಕಲಿಸಿದ ಪಾಠ ಹೇಳಿದವರು. ಬಳ್ಳಾರಿ ವಾರ್ಡ್ಲಾ ಪ್ರೌಢಶಾಲೆಯಲ್ಲಿ 1911ರಿಂದ ಕನ್ನಡ ಪಂಡಿತರಾಗಿದ್ದರು. ಮದನಪಲ್ಲಿಯ ಥಿಯೊಸಾಫಿಕಲ್ ಕಾಲೇಜಿನಲ್ಲಿ ಕೆಲವು ಕಾಲ ಕನ್ನಡ ಬೋಧಕರಾಗಿದ್ದರು. 1937ರಲ್ಲಿ ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಕೆಲಸ ಮಾಡಿದರು. ಬಳ್ಳಾರಿಯ ವೀರಶೈವ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ನಿವೃತ್ತರಾಗುವ ಪರ್ಯಂತ ಅಲ್ಲೇ ಇದ್ದರು. ಮೈಸೂರು ಮಹಾರಾಜರ ಆಸ್ಥಾನ ವಿದ್ವಾಂಸರಾಗಿ 1932ರಲ್ಲಿ ನೇಮಕಗೊಂಡರು. ಮರುವರ್ಷವೇ ಮಡಿಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಅವರದಾಯಿತು.

1925ರಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದ 'ಸರ್ವದರ್ಶನ ತೀರ್ಥ'. ಎರಡು ವರ್ಷಗಳ ಅನಂತರ ಮದರಾಸು ವಿಶ್ವವಿದ್ಯಾನಿಲಯದ 'ಕನ್ನಡ ಸಂಸ್ಕೃತ ವಿದ್ವಾನ್' ಪದವಿಗಳು ಇವರಿಗೆ ದೊರೆತುವು.

ನಾಗೇಶಶಾಸ್ತ್ರಿಗಳ ಪಾಂಡಿತ್ಯ, ಪ್ರತಿಭೆಗಳಿಗೆ ಪುರಸ್ಕಾರ ಲಭಿಸಿದೆ.

## ಶಂಭು ಮಹಾರಾಜ್

ಜರಿಯ ಕಿರೀಟ, ಥಳಥಳ ಹೊಳೆಯುವ ಬಟ್ಟೆ ಬರೆ ಧರಿಸಿ ಕಥಕ್ ಚಕ್ರವರ್ತಿ ಶಂಭು ಮಹಾರಾಜ್ ನಾಟ್ಯರಂಗವನ್ನು ಪ್ರವೇಶಿಸಿದಾಗ, "ಸಾಕ್ಷಾತ್ ಭಗವಂತನೇ ಪ್ರತ್ಯಕ್ಷನಾಗಿದ್ದಾನೆ" ಎಂದುಕೊಂಡು ಅನೇಕ ಮಂದಿ ಪ್ರೇಕ್ಷಕರು ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದರು. ಆತನ ನಾಟ್ಯಭಂಗಿ, ಅಭಿನಯಗಳನ್ನು ನೋಡಿ ವಿದ್ವಾಂಸರು ತಲೆದೂಗುತ್ತಿದ್ದರು.

ಶಂಭು ಮಹಾರಾಜರ ತಾತ, ಮುತ್ತಾತಂದಿರೂ ನರ್ತಕರೇ, ಲಖನೌ ನವಾಬನ ಆಸ್ಥಾನದಲ್ಲಿನ ನರ್ತಕನ ಉದ್ಯೋಗ ಅವರಿಗೆ ವಂಶ ಪಾರಂಪರ್ಯವಾಗಿ ಬಂದದ್ದು. ಶಂಭು ಒಂದು ವರ್ಷದ ಮಗುವಾಗಿದ್ದಾಗಲೇ ತಂದೆಯನ್ನು ಕಳೆದುಕೊಂಡರು. ಹೆಜ್ಜೆ ಹಾಕುವುದನ್ನು ಕಲಿಯುವ ಹೊತ್ತಿಗೆ ಅಣ್ಣ ಅಚ್ಚನ್ ಮಹಾರಾಜರಿಂದ ನೃತ್ಯ ಪಾಠ ಆರಂಭವಾಯಿತು. ತಮ್ಮ 20ನೆಯ ವಯಸ್ಸಿಗೆ ಶಂಭು ಮಹಾರಾಜ್ ಕಥಕ್ ನೃತ್ಯದಲ್ಲಿ ಪ್ರಾವೀಣ್ಯ ಪಡೆದಿದ್ದರು. 1926ರಲ್ಲಿ ಲಖನೌದಲ್ಲಿ ನಡೆದ ಅಖಿಲ ಭಾರತ ಸಂಗೀತ ಸಮ್ಮೇಳನದಲ್ಲಿ ಅವರ ಮೊಟ್ಟಮೊದಲ ಸಾರ್ವಜನಿಕ ನೃತ್ಯ ಪ್ರದರ್ಶನ ನಡೆಯಿತು. ಚಿನ್ನದ ಪದಕವೂ ದೊರೆಯಿತು.

ಬಹು ಪ್ರಾಚೀನ ಕಾಲದಿಂದಲೂ ದೇವಾಲಯಗಳಲ್ಲಿ ಆರಾಧನೆಯ ರೂಪದಲ್ಲಿ 'ಕಥಕ'ರೆಂಬ ನರ್ತಕರು ಮಾಡುತ್ತಿದ್ದ ಸುಂದರ ನೃತ್ಯಕ್ಕೆ ಕಥಕ್ ಎಂಬ ಹೆಸರಿತ್ತು. ನವಾಬರ ಆಡಳಿತ ಆರಂಭವಾದ ಮೇಲೆ ಅವರ ಆಸ್ಥಾನದಲ್ಲಿ ನರ್ತನಕ್ಕಿಂತ ಹೆಚ್ಚಾಗಿ ಸಲಾಮು ಹಾಕುವುದಕ್ಕೆ ಪ್ರಾಧಾನ್ಯ ದೊರೆಯಿತು. ಶಂಭು ಮಹಾರಾಜ್ ಈ ಪರಂಪರೆಯಲ್ಲಿ ಬೆಳೆದಿದ್ದರೂ ದರ್ಬಾರ್ ಮಹಲುಗಳಿಂದ ಹೊರಬಂದು ಸಾಮಾನ್ಯ ಜನರ ಕಲಾವಿದರಾದರು. ಪಂಡಿತ ಪಾಮರರಿಗೆಲ್ಲ ಬೇಕಾದವರಾದರು. ನರ್ತಿಸುವಾಗ ಮಧ್ಯೆ ಕೆಲವೊಮ್ಮೆ ನರ್ತನದ ಸೂಕ್ಷ್ಮ ಭಾವನೆಗಳನ್ನು ಜನರಿಗೆ ವಿವರಿಸುತ್ತಿದ್ದುದು ಅವರ ವಿಶೇಷತೆ.

ಶಂಭು ಮಹಾರಾಜರಿಗೆ 'ಅಭಿನಯ ಚಕ್ರವರ್ತಿ' ಎಂಬುದು ಇನ್ನೊಂದು ಹೆಸರು. ಅಭಿನಯ, ಕಥಕ್ ನಾಟ್ಯಪ್ರಕಾರದ ಮುಖ್ಯ ಅಂಗ. ಠುಮ್ರಿ, ಘಜಲ್, ದ್ರುಪದ್, ದಾದರಾ ಮುಂತಾದ ವರ್ಗಗಳ ಸಂಗೀತ ಕೃತಿಗಳ



ನೃತ್ಯಸಮ್ರಾಟ : ಶಂಭು ಮಹಾರಾಜ್

ಅರ್ಥವನ್ನು ಸೂಕ್ಷ್ಮವಾಗಿಯೂ ಹೃದಯಂಗಮವಾಗಿಯೂ ತನ್ನ ಮುಖಭಾವ. ವಿನ್ಯಾಸಗಳಿಂದ ವ್ಯಕ್ತಪಡಿಸುವ ಕಲೆಯನ್ನು ಶಂಭು ಮಹಾರಾಜ್ ಮೈಗೂಡಿಸಿಕೊಂಡಿದ್ದರು. ಮೂಕಾಭಿನಯದಲ್ಲೂ ಅವರು ಪರಿಣತರಾಗಿದ್ದರು. ಅವರ ನೃತ್ಯ ಸಂಗೀತಮಯವಾಗಿರುತ್ತಿದ್ದುದಲ್ಲದೆ ಅಭಿನಯ ಸಾಮಾನ್ಯ ಜನರಿಗೂ ಅರ್ಥವಾಗುವಂತಿರುತ್ತಿತ್ತು.

ಶಂಭು ಮಹಾರಾಜ್ ಕೃಷ್ಣನ ಪರಮಭಕ್ತ. ಕೃಷ್ಣನ ಪಾತ್ರದಲ್ಲಿ ನರ್ತಿಸುತ್ತಿರುವಾಗಲೆಲ್ಲ ಆನಂದಪರವಶರಾಗಿ ಲೆಕ್ಕವಿಲ್ಲದಷ್ಟು ಬಾರಿ ಅವರು ಕಣ್ಣೀರು ಸುರಿಸುತ್ತಿದ್ದುದುಂಟು.

ಭಾರತೀಯ ಕಲಾಕೇಂದ್ರದಲ್ಲಿ ಅಧ್ಯಾಪಕರಾಗಿ ನಿಯಮಿತರಾದ ಶಂಭು ಮಹಾರಾಜ್ ತಮ್ಮ 48ನೆಯ ವಯಸ್ಸಿನಲ್ಲಿ ಹುಟ್ಟೂರನ್ನು ಬಿಟ್ಟು ದೆಹಲಿಗೆ ಬಂದರು. ಆಗ ಅವರ ಶಿಷ್ಯವರ್ಗದಲ್ಲಿ ಇದ್ದದ್ದು ಒಬ್ಬಾಕೆ ಮಾತ್ರ —ಬೆಂಗಳೂರಿನ ಮಾಯಾರಾವ್.

ಕಥಕ್ ನರ್ತನ ಕಲೆಯ ಪ್ರಸಾರ ಶಂಭು ಮಹಾರಾಜರ ಜೀವನದ ಧ್ಯೇಯವಾಗಿತ್ತು. ಇದಕ್ಕಾಗಿ ಅವರು ಭಾರತದಾದ್ಯಂತ ಸಂಚಾರ ನಡೆಸಿದರು. ಅವರು ಗಳಿಸಿದ ಧನವೂ ಅಪಾರ. ಖರ್ಚು ಮಾಡಿದ ಹಣವೂ ಅಷ್ಟೆ. ಗಳಿಸಿದ್ದೆಲ್ಲ ಕಳೆದ ಮೇಲೆ ಅವರಿಗೆ ಉಳಿದ ಆಸ್ತಿ ಒಂದೇ—ಕೀರ್ತಿ. 'ಪದ್ಮಶ್ರೀ', 'ನೃತ್ಯ ಸಮ್ರಾಟ್'ಗಳಂಥ ಪ್ರಶಸ್ತಿಗಳೂ ಸಂಗೀತ ನಾಟಕ ಅಕಾದೆಮಿಯ ಪುರಸ್ಕಾರಗಳೂ ಶಂಭು ಮಹಾರಾಜರನ್ನು ಹುಡುಕಿಕೊಂಡು ಬಂದುವು.

ತಮ್ಮ ಕಲೆಯನ್ನು ಕುರಿತು ಶಂಭು ಮಹಾರಾಜರಿಗೆ ವಿಶೇಷ ಅಭಿಮಾನ. "ನಾನು ಕಥಕ್ ಸಂಪ್ರದಾಯದಲ್ಲಿ ಮುಳುಗಿ ಎದ್ದವನು. ನನ್ನ ನೃತ್ಯದಲ್ಲಿ ಅನೇಕ ಶತಮಾನಗಳ ಅನುಭವದ ಪ್ರಭಾವವಿದೆ, ಸಾರವಿದೆ. ಹೊಸಬನೊಬ್ಬ ಈ ಭವ್ಯತೆಯನ್ನು ಸಂಪಾದಿಸುವುದಾದರೂ ಹೇಗೆ ಸಾಧ್ಯ? ನಾನು ಸತ್ತುಹೋದರೆ ಶಾಸ್ತ್ರೀಯ ಕಥಕ್ ಅಲ್ಲಿಗೆ ಅಂತ್ಯ" ಎಂದು ಅವರು ಹೇಳುತ್ತಿದ್ದುದುಂಟು.

1970ರ ನವೆಂಬರ್ 4ರಂದು ಅರವತ್ತಮೂರರ ಶಂಭು ಮಹಾರಾಜ್ ಗಂಟಲ ಕ್ಯಾನ್ಸರಿನಿಂದ ಕಣ್ಮುಚ್ಚಿದರು.

## ಶರಚ್ಚಂದ್ರ ಚಟ್ಟೋಪಾಧ್ಯಾಯ

ಬಂಗಾಳದಲ್ಲಷ್ಟೇ ಅಲ್ಲ, ದೇಶದಾದ್ಯಂತ ಪ್ರಖ್ಯಾತರಾಗಿರುವ ಕಾದಂಬರಿಕಾರ ಶರಚ್ಚಂದ್ರರು. ಅವರ ಕತೆ ಕಾದಂಬರಿಗಳು ಮನೆ ಮಾತಾಗಿವೆ.

ಶರಚ್ಚಂದ್ರರ ಬಾಲ್ಯ ಮತ್ತು ಯೌವನ ಕಡುಬಡತನದಲ್ಲಿ ಕಳೆದುವು. ಚಿಕ್ಕಂದಿನಲ್ಲೇ ಅವರು ಹೆತ್ತವರನ್ನು ಕಳೆದುಕೊಂಡು ಅನಾಥರಾದರು. ತಂದೆ ಪ್ರಖ್ಯಾತ ಲೇಖಕರಾಗಿದ್ದರು. ಬಾಲಕ ಶರಚ್ಚಂದ್ರ ತಂದೆಯ ಕತೆ ಕಾದಂಬರಿಗಳನ್ನು ನಿದ್ದೆಗೆಟ್ಟು ಓದುತ್ತಿದ್ದ ; ಬಂಕಿಮಚಂದ್ರ ಚಟ್ಟೋಪಾಧ್ಯಾಯರ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿದ.

ಚಿಕ್ಕವರಿದ್ದಾಗಲೇ ಹೊಟ್ಟೆಯ ಪಾಡಿಗಾಗಿ ಊರೂರು ಅಲೆಯ ಬೇಕಾಯಿತು. 1903ರಲ್ಲಿ ಶರಚ್ಚಂದ್ರರು ಬರ್ಮಕ್ಕೆ ಹೋಗಿ ರಂಗೂನಿನ ಸರಕಾರೀ ಕಚೇರಿಯಲ್ಲಿ ಗುಮಾಸ್ತೆಯ ಕೆಲಸಕ್ಕೆ ಸೇರಿದರು. ಸ್ವದೇಶವನ್ನು ಬಿಟ್ಟು ರಂಗೂನಿಗೆ ಹೋದಾಗ ಅವರ ಬಳಿ ಇದ್ದುದು ಕೇವಲ ಎರಡು ರೂಪಾಯಿ. ತಾವು ಬರೆದ ನೀಳ್ಗತೆ 'ಬಡೀ ದೀದಿ'ಯ ಹಸ್ತಪ್ರತಿಯನ್ನು ಬರ್ಮಾದೇಶಕ್ಕೆ ಹೋಗುವ ಸಂದರ್ಭದಲ್ಲಿ ತಮ್ಮ ಆತ್ಮೀಯ ಗೆಳೆಯ ಸುರೇಂದ್ರನಾಥ ಗಂಗೋಪಾಧ್ಯಾಯರ ಬಳಿ ಕೊಟ್ಟು ಹೋಗಿದ್ದರು. ಅದು 'ಭಾರತಿ' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿ, ಸಾಹಿತ್ಯರಂಗದಲ್ಲಿ ಒಂದು ಬಿರುಗಾಳಿಯನ್ನೇ ಎಬ್ಬಿಸಿತು. ಅದಕ್ಕೆ ಬಂಗಾಳೀ ಸಾಹಿತ್ಯ ಸಂಘದ ಬಹುಮಾನವೂ ಲಭಿಸಿತು.

ಶರಚ್ಚಂದ್ರರ ಆರೋಗ್ಯ ಚೆನ್ನಾಗಿರಲಿಲ್ಲ. ಬರ್ಮದಲ್ಲಿ ಒಮ್ಮೆ ಅವರು ನರಭಕ್ಷಕರ ಕೈಗೆ ಸಿಕ್ಕಿ ಪಾರಾದರು. ಕೆಲಸ ಬಿಟ್ಟು ಕಲಕತ್ತೆಗೆ ಹಿಂದಿರುಗಿದರು.

ಅನಂತರ ಇವರು ಒಂದರ ಮೇಲೊಂದಾಗಿ ಕಾದಂಬರಿಗಳನ್ನು ರಚಿಸಿದರು. ಅವರ ಕತೆಗಳು 'ಭಾರತೀ', 'ಜಮುನಾ', 'ಭಾರತವರ್ಷ' ಪತ್ರಿಕೆಗಳಲ್ಲಿ ಪ್ರಕಟವಾದುವು. ಜನರು ಅತ್ಯಂತ ಕುತೂಹಲದಿಂದ ಆ ಕತೆಗಳನ್ನು ಓದುತ್ತಿದ್ದರು.

ಪ್ರಾಮಾಣಿಕತೆಗೂ ವಾಸ್ತವತೆಗೂ ಅವರ ಕೃತಿಗಳಲ್ಲಿ ಅಗ್ರ ಸ್ಥಾನ. ಶರಚ್ಚಂದ್ರರ ಕೆಲವು ಜನಪ್ರಿಯ ಕಥೆಗಳು ನಾಟಕಗಳಾಗಿ ರೂಪಾಂತರ ಗೊಂಡಿವೆ. ಅವರ ಕಾದಂಬರಿಗಳನ್ನು ಆಧರಿಸಿ ಚಲಚ್ಚಿತ್ರಗಳೂ ನಿರ್ಮಿಸಲ್ಪಟ್ಟಿವೆ.

ಸಾಹಿತ್ಯ ಅಭಿಮಾನಿಗಳಾದ ಸಣ್ಣ ವಯಸ್ಸಿನವರ ಗುಂಪು ಅವರ ಸುತ್ತ ಸದಾ ನೆರೆದಿರುತ್ತಿತ್ತು. ಯುವಜನರ ಸಾಹಿತ್ಯ ಸಂಸ್ಥೆಯೊಂದನ್ನು ಅವರು ಸ್ಥಾಪಿಸಿ, 'ಛಾಯಾ' ಎಂಬ ಪತ್ರಿಕೆಯನ್ನು ಆರಂಭಿಸಿದರು.

ಅವರ ಸಾಹಿತ್ಯಜೀವನದ ಮೊದಲ ಹಂತದಲ್ಲಿ ಕೆಲವು ಸ್ಮರಣೀಯ ಕಾದಂಬರಿಗಳು ರಚಿತವಾದುವು. ಅವುಗಳಲ್ಲಿ 'ದೇವದಾಸ' (1901), 'ಬಿಂದೂರ್‌ಛೆಲೆ' (1913), 'ಬಿರಾಜ್‌ಬಹು' (1914), 'ಪಲ್ಲಿ ಸಮಾಜ' (1916), 'ಚರಿತ್ರಹೀನ' (1917), 'ಶ್ರೀಕಾಂತ' (1919) ಗಮನಾರ್ಹವಾದುವು.

ಶರಚ್ಚಂದ್ರರ ಬಾಲ್ಯ, ಯೌವನದ ದಿನಗಳು ಬಹುಮಟ್ಟಿಗೆ 'ಶ್ರೀಕಾಂತ' ಕಾದಂಬರಿಯಲ್ಲಿ ಪ್ರತಿಬಿಂಬಿತವಾಗಿವೆ. ಅದು ಅವರ ಆತ್ಮಕಥೆಯಂತಿದೆ. ಅವರಿಗೆ ಹಕ್ಕಿಯಂತೆ ಹಾಡಲು, ಕೇಳುವವರ ಹೃದಯ ದ್ರವಿಸುವಂತೆ ಕೊಳಲು ಊದಲು ಬರುತ್ತಿತ್ತಂತೆ. 'ಶ್ರೀಕಾಂತ' ಮತ್ತು 'ಚರಿತ್ರಹೀನ' ದಲ್ಲಿ ಅವರ ಸಮುದ್ರಯಾನದ ಅನುಭವಗಳು ನಿರೂಪಿತವಾಗಿವೆ.



ಪ್ರಾಮಾಣಿಕತೆ. ವಾಸ್ತವತೆ : ಶರಚ್ಚಂದ್ರ

ಶರಚ್ಚಂದ್ರರು ಬಂಗಾಳಿ ಕಾದಂಬರಿ ಬರವಣಿಗೆಯ ಪ್ರಪಂಚಕ್ಕೆ ಹೊಸ ತಿರುವನ್ನೂ ಸಂಯೋಜನೆಯನ್ನೂ ಚೈತನ್ಯವನ್ನೂ ನೀಡಿದರು. ಅವರದು ಸಂಪ್ರದಾಯವನ್ನು ಮೀರಿನಿಂತ ಸ್ವಭಾವ. ವಿಭಿನ್ನ ಶೀಲ ಸ್ವಭಾವದ ವ್ಯಕ್ತಿಗಳ ಪರಿಚಯ ಅವರಿಗಿತ್ತು. ಅನಾಥರು, ದೀನದಲಿತರ ಬಗೆಗೆ ಅವರಿಗೆ ವಿಶೇಷ ಅನುಕಂಪ.

ಶರಚ್ಚಂದ್ರರ ಕೆಲವು ಕಾದಂಬರಿಗಳು ಇಂಗ್ಲಿಷ್, ಫ್ರೆಂಚ್, ಇಟಾಲಿಯನ್ ಭಾಷೆಗಳಿಗೆ ಅನುವಾದಿತವಾಗಿವೆ. ಕನ್ನಡಕ್ಕೆ ಎಲ್ಲ ಕೃತಿಗಳೂ ಅನುವಾದಿತವಾಗಿವೆ. ಬಂಗಾಳಿ ಮತ್ತು ಹಿಂದೀ ಭಾಷೆಗಳಲ್ಲಿ ಅವರ ಕೃತಿಗಳು ಹಲವಾರು ಆವೃತ್ತಿಗಳನ್ನು ಕಂಡಿವೆ.

ಬೇರಾವ ಭಾರತೀಯ ಕಾದಂಬರಿಕಾರನೂ ಕೊಡದ ಮಹತ್ವದ ಸ್ಥಾನವನ್ನು ಶರಚ್ಚಂದ್ರರು ಹೆಣ್ಣಿಗೆ ತಮ್ಮ ಕಾದಂಬರಿಗಳಲ್ಲಿ ನೀಡಿದ್ದಾರೆ. ತಮ್ಮ ತಪ್ಪೇನೂ ಇಲ್ಲದೆ ಸಮಾಜದ ನಿಂದೆ, ಅವಹೇಳನ, ತಿರಸ್ಕಾರಗಳಿಗೆ ಗುರಿಯಾದ ನಿರ್ಭಾಗ್ಯ ಸ್ತ್ರೀಯರ ಬಗೆಗೆ ಅವರ ಅಂತಃಕರಣ ಮಿಡಿದಿದೆ. 'ಗೃಹದಾಹ' ಅವರ ಒಂದು ಶ್ರೇಷ್ಠ ಕೃತಿ. ಬಂಗಾಳ, ಬರ್ಮ ಗಳಲ್ಲಿ ಆಗ ಕಿಡಿಕಾರುತ್ತಿದ್ದ ಕ್ರಾಂತಿಕಾರಿ ಚಟುವಟಿಕೆಗಳು ಅವರ 'ಪಥೇರ್ ದಾಬಿ' (1926) ಕಾದಂಬರಿಗೆ ಹಿನ್ನೆಲೆಯಾದವು. ಅವರ ಕೊನೆಯ ಪ್ರಸಿದ್ಧ ಕಾದಂಬರಿ 'ಶೇಷ ಪ್ರಶ್ನೆ' 1936ರಲ್ಲಿ ಪ್ರಕಟವಾಯಿತು.

ರವೀಂದ್ರನಾಥ ಠಾಕೂರರು ಶರಚ್ಚಂದ್ರರ ಕೃತಿಗಳನ್ನು ಬಹುವಾಗಿ ಮೆಚ್ಚಿಕೊಂಡು ಬಾಯ್ತುಂಬ ಹೊಗಳಿದ್ದಾರೆ. ಅವರ 'ಕಾಲೇರ ಯಾತ್ರಾ' ನಾಟಕ ಶರಚ್ಚಂದ್ರರಿಗೆ ಅರ್ಪಿತವಾಗಿದೆ.

ಶರಚ್ಚಂದ್ರರು ತಮ್ಮ ಜೀವನದ ಕೊನೆಯ ದಿನಗಳಲ್ಲಿ ನಗರದ ಸದ್ದುಗದ್ದಲಗಳಿಂದ ದೂರವಾಗಿದ್ದ ಪಾನಿತ್ರಾಸ್ ಎಂಬ ಹಳ್ಳಿಯಲ್ಲಿ ಹೆಚ್ಚಾಗಿ ವಾಸವಾಗಿರುತ್ತಿದ್ದರು. ಅಲ್ಲಿ ಅವರು ತಮಗೆ ಅರಿತಿದ್ದ ವೈದ್ಯಕೆಯನ್ನು ಬಳಸಿ ರೋಗಿಗಳ ಶುಶ್ರೂಷೆಯನ್ನೂ ಔಷಧೋಪಚಾರಗಳನ್ನೂ ನಡೆಸುತ್ತಿದ್ದರು.

ತಮ್ಮ 63ನೆಯ ವಯಸ್ಸಿನಲ್ಲಿ 1938ರ ಜನವರಿ 16ರಂದು ಶರಚ್ಚಂದ್ರರು ನಿಧನರಾದರು.

## ಶಾಂತಕವಿ

1870ರ ಸುಮಾರಿಗೆ ಉತ್ತರ ಕರ್ನಾಟಕದಲ್ಲೆಲ್ಲ ಮರಾಠಿ ನಾಟಕ ಕಂಪನಿಗಳು ಜಯಭೇರಿ ಬಾರಿಸುತ್ತಿದ್ದುವು. ಕನ್ನಡದಲ್ಲಿ ನಾಟಕಗಳಾಗಲೀ, ನಟರಾಗಲೀ ಇರುವುದು ಅಸಾಧ್ಯ ಎಂದು ಕನ್ನಡಿಗರು ಅಭಿಪ್ರಾಯ ತಳೆದಿದ್ದ ಕಾಲ ಅದು. ಈ ಕಾಲದಲ್ಲಿ ಸಕ್ಕರಿ ಬಾಳಾಚಾರ್ಯ ಎಂಬ ಬಡಶಾಲಾ ಉಪಾಧ್ಯಾಯರು ಪೌರಾಣಿಕ ಕಥೆಗಳನ್ನು ಆಧರಿಸಿ ಕನ್ನಡದಲ್ಲಿ ನಾಟಕಗಳನ್ನು ಬರೆದರು. ಈ ನಾಟಕವನ್ನು ಆಡಲು ಗದುಗಿನ ಕೆಲವು ಉತ್ಸಾಹೀ ತರುಣರನ್ನು ಕಲೆಹಾಕಿ ನಾಟಕ ಸಂಸ್ಥೆಯನ್ನು ಕಟ್ಟಿದರು. ಗದುಗಿನಿಂದ ಒಂಬತ್ತು ಮೈಲಿ ದೂರದಲ್ಲಿದ್ದಾಗಲೂ ಸಂಜೆ ಶಾಲೆಯ ಕೆಲಸ ಮುಗಿದಮೇಲೆ ಬಾಳಾಚಾರ್ಯರು ಒಂದು ಎಮ್ಮೆಯ ಮೇಲೆ ಕುಳಿತುಕೊಂಡು ಗದುಗಿಗೆ ಹೊರಡುತ್ತಿದ್ದರು—ನಟರನ್ನು ತರಬೇತು ಮಾಡಲು.

ಸಕ್ಕರಿ ಮನೆತನದ ಮೂಲ ಸ್ಥಳ ಧಾರವಾಡ ಜಿಲ್ಲೆಯ ಸಾತೇನಹಳ್ಳಿ. ಈ ಮನೆತನದ ಗೋಪಾಲಾಚಾರ್ಯರ ಮಗ ಬಾಳಾಚಾರ್ಯ ಹುಟ್ಟಿದ್ದು 1856ರಲ್ಲಿ. ಬಾಲ್ಯದಲ್ಲೇ ಸಂಸ್ಕೃತ ವಿದ್ಯಾಭ್ಯಾಸ ಆರಂಭವಾದರೂ ಹುಡುಗನಿಗೆ ಪಾಠಕ್ಕಿಂತ ಹೆಚ್ಚಾಗಿ ಹಾಡು ಕುಣಿತಗಳೇ ಇಷ್ಟ. ಭಾಗವತರಾಟ ಎಲ್ಲೇ ನಡೆಯಲಿ ಇವನಿಗೆ ಒಂದು ಪಾತ್ರ ಕಟ್ಟಿಟ್ಟದ್ದು. ದಾಸರ ಪದಗಳನ್ನು ಅನುಕರಿಸಿ ಹಾಡುಗಳನ್ನು ರಚಿಸಿ ಕವಿಯಾಗಲು ಪ್ರಯತ್ನಿಸಿದ್ದೂ ಉಂಟು. ಸಕ್ಕರಿ ಬಾಳಾಚಾರ್ಯ ಕುಲದೈವ ಶಾಂತೇಶನ ಹೆಸರನ್ನು ಇಟ್ಟುಕೊಂಡು 'ಶಾಂತಕವಿ' ಆದರು.

ರಾಗೀಬೆನ್ನೂರು ಕನ್ನಡದ ಶಾಲೆಯ ಉಪಾಧ್ಯಾಯರಾಗಿ ಸೇರಿಕೊಂಡಾಗ ಬಾಳಾಚಾರ್ಯರ ವಯಸ್ಸು ಕೇವಲ ಹದಿನಾಲ್ಕು. ಮೂರು ವರ್ಷಗಳ ಬಳಿಕ ಗದುಗಿನಲ್ಲಿ ಉಪಾಧ್ಯಾಯರಾಗಿದ್ದಾಗ ಇವರು ತಮ್ಮ ಪ್ರಥಮ ಸಂಗೀತನಾಟಕ 'ಉಷಾ ಹರಣ'ವನ್ನು ರಚಿಸಿದರು. 1837ರಲ್ಲಿ ಇದರ ಪ್ರದರ್ಶನ. ಆ ದಿನ ಈ ತರುಣ ನಾಟಕಕಾರನನ್ನು ಎಲ್ಲರೂ ಹೊಗಳುವವರೇ. ಕನ್ನಡ ನಾಟಕವೊಂದನ್ನು ಬರೆದು ರಂಗಮಂಚದ ಮೇಲೆ ಆಡಿಸಿದವರಲ್ಲಿ ಶಾಂತಕವಿಯೇ ಮೊದಲಿಗ. ಊರಿನ ತರುಣರು ಸೇರಿ ಮಾಡಿಕೊಂಡಿದ್ದ 'ಕರ್ನಾಟಕ ಸಂಗೀತ ನಾಟಕ ಮಂಡಳಿ'ಯವರು, ಈ ನಾಟಕದ ಯಶಸ್ಸಿನಿಂದ ಉತ್ಸಾಹಿತರಾಗಿ, ಇನ್ನೂ ಕೆಲವು ನಾಟಕಗಳನ್ನು ಬರೆದು ಕೊಡುವಂತೆ ಶಾಂತಕವಿಯನ್ನು ಒತ್ತಾಯಪಡಿಸಿದರು. 'ಶ್ರೀಯಾಳ ಸತ್ವಪರೀಕ್ಷೆ', 'ಕೀಚಕ ವಧೆ', 'ಸುಂದೋಪಸುಂದ ವಧೆ', 'ವತ್ಸಲಾ ಹರಣ', 'ಸೀತಾರಣ್ಯ ಪ್ರವೇಶ', 'ಸುಧನ್ವ ವಧೆ', 'ಶಕುಂತಲೆ' ಮುಂತಾದುವು ಶಾಂತಕವಿಯಿಂದ ರಚಿತವಾದ ನಾಟಕಗಳು.

ನಾಟಕ ಕಲೆಯ ಬಗೆಗೆ ಜನರಲ್ಲಿ ಹೊಸ ಅಭಿರುಚಿ ಹುಟ್ಟಿಸುವುದರಲ್ಲಿ ಶಾಂತಕವಿಯ ಪಾತ್ರ ಪ್ರಮುಖವಾದದ್ದು. ಇವರ ನಾಟಕಗಳನ್ನು ಆಡಲು ಕನ್ನಡ ನಾಡಿನ ಅಲ್ಲಲ್ಲಿ ನಾಟಕ ಕಂಪನಿಗಳು ಹುಟ್ಟಿಕೊಂಡುವು.

1881ರಲ್ಲಿ ಶಾಂತಕವಿಯನ್ನು ಸತ್ಕರಿಸಲು ಸಾರ್ವಜನಿಕ ಸಮಾರಂಭಗಳು ಜರಗಿದುವು. ಆಗಿನ್ನೂ ಶಾಂತಕವಿಗೆ ಇಪ್ಪತ್ತೈದು ವರ್ಷ ವಯಸ್ಸು.

ಶಾಂತಕವಿಯ ನಾಟಕಗಳು, ಯಕ್ಷಗಾನ ಬಯಲಾಟಕ್ಕೂ ಇಂದಿನ ನಾಟಕಕ್ಕೂ ಮಧ್ಯಸ್ಥರೂಪದವು. ಆರಂಭದಲ್ಲಿ ಗಣಪತಿ ಸ್ತೋತ್ರ, ಗಣಪತಿ ಪ್ರತ್ಯಕ್ಷನಾಗುವುದು, ಸರಸ್ವತೀ ಸ್ತೋತ್ರ, ಆಕೆ ಪ್ರತ್ಯಕ್ಷಳಾಗುವುದು, ಅವರ ವರಪ್ರಸಾದ—ಮುಂತಾದುವು ಇದ್ದುವು. ಸರಳ ಶೈಲಿ, ಸ್ವಾರಸ್ಯವಾದ ಸಂಭಾಷಣೆ ಶಾಂತಕವಿಯ ವೈಶಿಷ್ಟ್ಯ. ಪುರಾಣ ನಾಟಕಗಳ ರೀತಿ ಸಮಕಾಲೀನವಾದದ್ದು. ಬಾಣಾಸುರನು ತನ್ನ ಸೇನಾಧಿಪತಿಯೊಡನೆ ಮಾತನಾಡುವುದು ಉರ್ದು ಭಾಷೆಯಲ್ಲಿ. ಕೋಪಿಸಿಕೊಂಡ ಪತ್ನಿಯನ್ನು ಶಾಂತಗೊಳಿಸಲು ಶಿವ ಅವಳ ಕಾಲಿಗೆ ಬಿದ್ದು ಕ್ಷಮೆ ಬೇಡುತ್ತಾನೆ. 'ಚಂದ್ರಾವಳಿ ಚರಿತ್ರೆ' ನಾಟಕದಲ್ಲಿ ನಕ್ಷತ್ರಮಾಲಿಕಾ ಎಂಬವಳು ವನವಾಸಿದ್ದ



ಕನ್ನಡ ನಾಟಕ : ಸಕ್ಕರಿ ಬಾಳಾಚಾರ್ಯ

ದುಂಬಿಗಳನ್ನು ಕಂಡು "ವಿರಹಿಗಳನ್ನು ಎಳೆ ಎಳೆದು ತರಲಿಕ್ಕೆ ವಾರಂಟು ಕೊಟ್ಟು ಮಾರ ಮ್ಯಾಜಿಸ್ಟ್ರೇಟನು ಕಳುಹಿಸಿದ ಕರಿ ಅಂಗಿಯವರ ಹಿಂಡು" ಎಂದು ಉದ್ಗರಿಸುತ್ತಾಳೆ.

ಅಧ್ಯಾಪನ ವೃತ್ತಿಯ ಮಧ್ಯೆ ಸಾಹಿತ್ಯರಚನೆಗೆ ಸಿಗುತ್ತಿದ್ದ ವೇಳೆ ಕಡಮೆ. "ನಮ್ಮ ಬಂಗಾರದಂಥ ಹಗಲಿನ ಆಯುಷ್ಯವನ್ನು ಶಾಲೆಯ ವಿದ್ಯಾರ್ಥಿಗಳೊಡನೆ ತಲೆಯೊಡೆದು ಕೊಳ್ಳುತ್ತ ಕಳೆಯುತ್ತಿರುವುದರಿಂದ ನಮಗೆ ಉಂಟಾದ ವೇಳೆಯ ಅಭಾವದಿಂದಲೂ ಗ್ರಂಥರಚನೆಯ ಕಾರ್ಯದಲ್ಲಿ ಬಲು ಅವಸರ ಮಾಡುವ ನಮ್ಮ ವಿಲಕ್ಷಣ ಸ್ವಭಾವದಿಂದಲೂ ಸೂಟಿಯ ದಿವಸ ಇಲ್ಲವೆ ರಾತ್ರಿಯ ಕಾಲದಲ್ಲಿ ಅಲ್ಪಸ್ವಲ್ಪ ಬರೆಯಲು ದೊರಕುತ್ತಿರುವ ಸಮಯ ವಿಶೇಷದಲ್ಲಿ" ಶಾಂತಕವಿ 'ಎತ್ತುಂ ಪೊತ್ತರೆ ತಾಳಲಾರ'ದಷ್ಟು ಗ್ರಂಥಗಳನ್ನು ರಚಿಸಿದರು. ನಾಟಕ, ಕೀರ್ತನೆಗಳಲ್ಲದೆ ಇತರ ಗದ್ಯ-ಪದ್ಯಗಳನ್ನೂ ಲಾವಣಿ ಪದಗಳನ್ನೂ ಇವರು ರಚಿಸಿದರು. ಹತ್ತು ವರ್ಷಗಳ ಅವಧಿಯಲ್ಲಿ ಇವರು ಬರೆದ ಗ್ರಂಥಗಳ ಸಂಖ್ಯೆ ಸುಮಾರು ಅರವತ್ತೈದು. ಗಂಟೆಗೆ ಹದಿನೈದು ಪದಗಳನ್ನು ಬರೆದು ಇವರು 'ಶೀಘ್ರ ಕವಿ' ಎಂದು ಹೆಸರಾದರು. ಹಬ್ಬ-ಹುಣ್ಣಿಮೆಗಳಲ್ಲಿ ಹಾಡುವ ಪದ, ಮುಹಮ್ಮದರ ಅಲಾಹಿ ಪದ ಮುಂತಾದುವನ್ನು ಬರೆದು, ಹಾಡಿ ಜನಪ್ರಿಯರಾದರು.

ಆದರೆ ಕನ್ನಡ ಜನತೆ ನಾಟಕ ಕ್ಷೇತ್ರದ ಆದ್ಯ ಪ್ರವರ್ತಕನನ್ನು ಬಹು ಬೇಗ ಮರೆತುಬಿಟ್ಟಿತು. 1875ರಿಂದ 1912ರ ವರೆಗಿನ ಹದಿನೇಳು ವರ್ಷಗಳನ್ನು ಶಾಂತಕವಿ ಹೆಚ್ಚು ಕಡಮೆ ಅಜ್ಞಾತವಾಸದಲ್ಲಿದ್ದೇ ಕಳೆದರು. ಸಂಸಾರದ ಕಷ್ಟ, ಬಡತನದ ಬೇಗೆ ಅವರ ಬೆನ್ನು ಬಿಡಲಿಲ್ಲ. ಹನ್ನೆರಡು ರೂಪಾಯಿಗಳಿಗೆ ಕೆಲಸಕ್ಕೆ ಸೇರಿ ವರ್ಷಕ್ಕೆ ನಾಲ್ಕಾಣೆಯ ಹೆಚ್ಚುವರಿಯಂತೆ ನಲವತ್ತು ವರ್ಷ ದುಡಿದು ಇಪ್ಪತ್ತೆರಡು ರೂಪಾಯಿಗಳ ಸಂಬಳವನ್ನು ಪಡೆದು ಸಕ್ಕರಿ ಮಾಸ್ತರರು 1912ರಲ್ಲಿ ನಿವೃತ್ತಿಹೊಂದಿದರು.

ದೇಹವನ್ನು ಮುಪ್ಪು ಆವರಿಸುತ್ತಿದ್ದಂತೆ ಶಾಂತಕವಿಗಳ ಕನ್ನಡದ ಕೆಚ್ಚು ಹೆಚ್ಚೇ ಆಯಿತು. ಕನ್ನಡದ ಅಭಿಮಾನವನ್ನು ಜನರಲ್ಲಿ ತುಂಬಲು ಕೀರ್ತನೆಗಳನ್ನು ರಚಿಸಿ ಊರೂರು ಸುತ್ತಿ ಹಾಡಿ ಅಭಿನಯಿಸಿದರು. ಕನ್ನಡದ ಜನ ಬರಿ ಬಾಯುಪಚಾರಕರು, ಕೆಲಸಗಳ್ಳರು ಎಂದು ಮೂದಲಿಸಿದರು.

" ಎಲ್ಲಿರುವುದಭಿಮಾನ ಕನ್ನಡಿಗರೆ, ಪೇಳಿ
ಸುಳ್ಳೆ ಬಡಬಡಿಸುವಿರಿ ಸಭೆಗಳಲ್ಲಿ "—ಎಂದರು.

ಶಾಂತಕವಿಗಳು ಕನ್ನಡದ ಅಂಧಾಭಿಮಾನಿಗಳಲ್ಲ. ಇಂಗ್ಲಿಷಿನ ಶ್ರೇಷ್ಠ ಗ್ರಂಥಗಳನ್ನು ಅನುವಾದಿಸಿ ಕನ್ನಡದ ಭಂಡಾರವನ್ನು ತುಂಬಬೇಕೆಂದು ಕರೆಕೊಟ್ಟರು. ವೃದ್ಧರಾದ ಶಾಂತಕವಿ ಧಾರವಾಡದಲ್ಲಿ ನಾಲ್ಕನೆಯ ಸಾಹಿತ್ಯ ಸಮ್ಮೇಳನಕ್ಕೆ ಹಣಕೂಡಿಸಲು ಮನೆಮನೆಗೆ ಹೋಗಿ ಹಾಡಿದರು :

" ಬೇಡಲು ಕನ್ನಡ ದಾಸಯ್ಯ ಬಂದಿಹ
ನೀಡಿರಮ್ಮಾ ತಡಮಾಡದಲೇ "

ಶಾಂತಕವಿ ತಾನು ಮಾಡಿದ ಕೆಲಸ ಫಲಬಿಟ್ಟದ್ದು ಕಂಡು ಹಿಗ್ಗಿದರು. "ಈ ಕಾಲವಂ ನೋಡ ಬಯಬಯಸಿ ಮುದುಕನಾದೆನ್ನ ಸಂಪ್ರಾರ್ಥನೆಗೆ ಪರಮಾತ್ಮನಿಂದೊಲಿದ" ಎಂದು ಆನಂದಪಟ್ಟರು. 1920ರಲ್ಲಿ "ಧರೆಯೊಳುದಯಿಸಿದ ಕಾರ್ಯ ಸಫಲವಾಯಿತು" ಎಂಬ ತೃಪ್ತಿಯಿಂದಲೇ ಕಣ್ಮುಚ್ಚಿದರು.

## 'ಶಾಕುಂತಲ'

ದುಷ್ಯಂತ ಮಹಾರಾಜ ಬೇಟೆಯ ನಿಮಿತ್ತ ಕಾಡಿಗೆ ಹೋಗಿದ್ದಾಗ ಕಣ್ವಾಶ್ರಮದಲ್ಲಿ ಶಕುಂತಲೆಯನ್ನು ಕಂಡು ಅವಳಲ್ಲಿ ಅನುರಕ್ತನಾಗುತ್ತಾನೆ. ಶಕುಂತಲೆಯ ಸಾಕುತಂದೆಯಾದ ಕಣ್ವರು ಆಗ ತಮ್ಮ ಆಶ್ರಮದಲ್ಲಿರುವುದಿಲ್ಲ. ತಂದೆಯ ಅನುಮತಿ ಇಲ್ಲದೆ ವಿವಾಹ ಮಾಡಿಕೊಳ್ಳಲು ಶಕುಂತಲೆ ಮೊದಮೊದಲು ಒಪ್ಪದಿದ್ದರೂ ತನ್ನ ಸಾಕುತಂದೆ ಬರಲು ಇನ್ನೂ ತಡವಾಗುವ ಸಂಭವವಿದ್ದುದರಿಂದ ಗಾಂಧರ್ವ ವಿವಾಹ ರೀತ್ಯಾ ದುಷ್ಯಂತನನ್ನು ವರಿಸುತ್ತಾಳೆ. ದುಷ್ಯಂತ ಕೆಲವು ಕಾಲ ಶಕುಂತಲೆಯೊಡನೆ ಆಶ್ರಮದಲ್ಲಿದ್ದು ತನ್ನ ರಾಜಧಾನಿಗೆ ಹಿಂದಿರುಗುತ್ತಾನೆ. ಹಿಂದಿರುಗುವಾಗ ಅವಳನ್ನು ಬಹುಬೇಗ ತನ್ನ ಅರಮನೆಗೆ ಕರೆಸಿಕೊಳ್ಳುವುದಾಗಿ ಹೇಳಿ, ತನ್ನ ಮುದ್ರೆ ಉಂಗುರವನ್ನು ಅವಳಿಗೆ ಕೊಟ್ಟು ಹೋಗುತ್ತಾನೆ.

ಅನಂತರ ಕಣ್ವರು ಆಶ್ರಮಕ್ಕೆ ಹಿಂದಿರುಗುತ್ತಾರೆ. ತಮ್ಮ ದಿವ್ಯ ದೃಷ್ಟಿಯಿಂದ ನಡೆದ ವಿದ್ಯಮಾನಗಳನ್ನೆಲ್ಲ ಅರಿತುಕೊಳ್ಳುತ್ತಾರೆ. ತಾವು ಆಶ್ರಮದಲ್ಲಿಲ್ಲದಾಗ ವಿವಾಹಮಾಡಿಕೊಂಡ ಶಕುಂತಲೆಯನ್ನು ಅವಳ ಗಂಡ ದುಷ್ಯಂತನ ಬಳಿಗೆ ಕಳುಹಿಸಿಕೊಡಲು ವ್ಯವಸ್ಥೆಮಾಡುತ್ತಾರೆ. ಶಕುಂತಲೆ ದುಷ್ಯಂತನ ಅರಮನೆಗೆ ಹೋಗಿ ಅವನನ್ನು ಕಾಣುತ್ತಾಳೆ. ದೂರ್ವಾಸ ಶಾಪದ ಪರಿಣಾಮವಾಗಿ ಅವನಿಗೆ ಶಕುಂತಲೆಯನ್ನು ಮದುವೆಯಾದದ್ದು ಮರೆತುಹೋಗಿರುತ್ತದೆ. ಅದರ ನೆನಪನ್ನು ಮಾಡಿಕೊಡಲು ಅವನು ಕೊಟ್ಟಿದ್ದ ಮುದ್ರೆಯುಂಗುರವನ್ನು ಅವನಿಗೆ ತೋರಿಸಬೇಕೆಂದು ಶಕುಂತಲೆ ಬೆರಳಿನತ್ತ ದಿಟ್ಟಿಸುತ್ತಾಳೆ. ಅಲ್ಲಿ ಉಂಗುರ ಇರುವುದಿಲ್ಲ. ಪ್ರಯಾಣ ಕಾಲದಲ್ಲಿ ಅದು ಎಲ್ಲೋ ಕಳೆದುಹೋಗಿದೆ ಎಂಬುದರ ಅರಿವಾಗುತ್ತದೆ. ದುಷ್ಯಂತನು ಅವಳನ್ನು ಪತ್ನಿಯಾಗಿ ಸ್ವೀಕರಿಸಲು ನಿರಾಕರಿಸುತ್ತಾನೆ. ಶಕುಂತಲೆಯನ್ನು ರಾಜಧಾನಿಗೆ ಕರೆದುಕೊಂಡು ಬಂದಿದ್ದ ತಾಪಸರು ಅವಳನ್ನು ಅಲ್ಲಿಯೇ ಬಿಟ್ಟು ಕಣ್ವಾಶ್ರಮಕ್ಕೆ ಹಿಂದಿರುಗುತ್ತಾರೆ. ಶೋಕತಪ್ತಳಾದ ಶಕುಂತಲೆಯನ್ನು ಅವಳ ತಾಯಿ ಮೇನಕೆ ಕರೆದೊಯ್ಯುತ್ತಾಳೆ.

ಇತ್ತ ರಾಜಧಾನಿಯಲ್ಲಿ ಬೆಸ್ತನೊಬ್ಬ ತಾನು ಹಿಡಿದ ಮೀನನ್ನು ಸೀಳಿದಾಗ, ಅದರ ಹೊಟ್ಟೆಯಲ್ಲಿ ಮಹಾರಾಜನ ಮುದ್ರೆಯುಂಗುರ ಸಿಗುತ್ತದೆ. ಅದನ್ನು ಅವನು ಮಹಾರಾಜನಿಗೆ ಒಪ್ಪಿಸುತ್ತಾನೆ. ಅದನ್ನು ನೋಡಿದಾಗ ದುಷ್ಯಂತನಿಗೆ ಹಿಂದಿನ ಪ್ರಸಂಗಗಳೆಲ್ಲ ನೆನಪಿಗೆ ಬರುತ್ತವೆ. ಗರ್ಭಿಣಿಯಾಗಿದ್ದ ಶಕುಂತಲೆಯನ್ನು ತಾನು ತಿರಸ್ಕರಿಸಿದುದಕ್ಕಾಗಿ ತುಂಬ ವ್ಯಥೆಪಡುತ್ತಾನೆ.



ಬೆರಳಲ್ಲಿ ಉಂಗುರವಿಲ್ಲ

ಸ್ವಲ್ಪ ಕಾಲದ ಅನಂತರ ಇಂದ್ರನ ಅಪೇಕ್ಷೆಯಂತೆ ದುಷ್ಯಂತ ಅಮರಾವತಿಗೆ ಹೋಗುತ್ತಾನೆ. ಹಿಂದಿರುಗುತ್ತ ಮರೀಚ ಮಹರ್ಷಿಗೆ ವಂದಿಸಿ ಆಶೀರ್ವಾದ ಪಡೆಯಲೆಂದು ಅವರ ಆಶ್ರಮಕ್ಕೆ ಬರುತ್ತಾನೆ. ಅಲ್ಲಿ ಸಿಂಹದ ಮರಿಯನ್ನು ಹಿಡಿದು ಶಿಕ್ಷಿಸುತ್ತಿದ್ದ ಮಗುವೊಂದು ಅವನ ಕಣ್ಣಿಗೆ ಬೀಳುತ್ತದೆ. ಒಡನೆಯೇ ಆ ಮಗುವಿನ ಬಗೆಗೆ ಅವನ ಮನಸ್ಸಿನಲ್ಲಿ ಮಮತೆ ಉಕ್ಕಿ ಬರುತ್ತದೆ. ಆ ಸನ್ನಿವೇಶದಲ್ಲಿ, ತನ್ನ ಮಗುವನ್ನು ಕರೆದೊಯ್ಯಲು ಅಲ್ಲಿಗೆ ಬಂದ ಶಕುಂತಲೆಯನ್ನು ಕಾಣುತ್ತಾನೆ. ದುಷ್ಯಂತ ಅವಳನ್ನು ಗುರುತಿಸುತ್ತಾನೆ.

ದುಷ್ಯಂತ ಕಣ್ವಾಶ್ರಮದಿಂದ ಹೊರಟುಹೋದ ಮೇಲೆ ಶಕುಂತಲೆ ಅವನ ಚಿಂತೆಯಲ್ಲಿ ಮಗ್ನಳಾಗಿದ್ದಾಗ, ದೂರ್ವಾಸ ಮುನಿ ಅಲ್ಲಿಗೆ ಬಂದಿದ್ದರು. ಅನ್ಯಮನಸ್ಕಳಾಗಿದ್ದ ಶಕುಂತಲೆ ಅವರನ್ನು ಸತ್ಕರಿಸಿರಲಿಲ್ಲ. ಇದರಿಂದ ಅವರು ಕೋಪಗೊಂಡು ಶಪಿಸಿದ್ದರು. ಅದರ ಪರಿಣಾಮವಾಗಿ ದುಷ್ಯಂತನಿಗೆ ಶಕುಂತಲೆಯ ವಿಚಾರವಾಗಿ ಮರವೆಯುಂಟಾಗಿತ್ತು. ತನ್ನ ಮುದ್ರೆಯುಂಗುರವನ್ನು ಮತ್ತೆ ನೋಡಿದಾಗ ಅವನಿಗೆ ಶಾಪ ವಿಮೋಚನೆಯಾಗಿ ಆ ಮರವೆ ದೂರವಾಗಿ ನೆನಪು ಮರಳಿತ್ತು. ಈ ವಿಷಯ ತಿಳಿದ ಶಕುಂತಲೆ ಪ್ರಸನ್ನಳಾಗುತ್ತಾಳೆ. ಎಲ್ಲರೊಂದಾಗಿ ಸೇರಿ ಮರೀಚರ ಬಳಿ ಹೋಗುತ್ತಾರೆ.

ವಿಶ್ವಸಾಹಿತ್ಯದಲ್ಲಿ ಶ್ರೇಷ್ಠಸ್ಥಾನವನ್ನು ಪಡೆದಿರುವ 'ಅಭಿಜ್ಞಾನ ಶಾಕುಂತಲಂ' ನಾಟಕದ ಕಥಾ ಸಾರಾಂಶ ಇದು. ಇದರ ಕರ್ತೃ ಮಹಾಕವಿ ಕಾಳಿದಾಸ.

"ಕಾವ್ಯೇಷು ನಾಟಕಂ ರಮ್ಯಂ, ನಾಟಕೇಷು ಶಕುಂತಲಾ"—"ಕಾವ್ಯಗಳಲ್ಲಿಯೆ ರಮ್ಯವಾದುದೆಂದರೆ ನಾಟಕ. ನಾಟಕ ಕೃತಿಗಳಲ್ಲಿಯೇ ರಮ್ಯವಾದುದೆಂದರೆ ಶಕುಂತಲಾ" ಎಂಬ ಹೊಗಳಿಕೆಗೆ ಪಾತ್ರವಾಗಿದೆ ಈ ನಾಟಕ.

'ಕಾಳಿದಾಸಸ್ಯ ಸರ್ವಸ್ವಮಭಿಜ್ಞಾನ ಶಾಕುಂತಲಂ'--'ಶಾಕುಂತಲ ನಾಟಕ ಕಾಳಿದಾಸನ ಸರ್ವಸ್ವ' ಎನಿಸಿಕೊಂಡಿದೆ.

ಕಾಳಿದಾಸನ ಈ ನಾಟಕದ ವಸ್ತು ಹೊಸದೇನೂ ಅಲ್ಲ. 'ಮಹಾಭಾರತ'ದಲ್ಲಿ ಬರುವ ಶಕುಂತಲೋಪಾಖ್ಯಾನದಿಂದ ಇದನ್ನು ತೆಗೆದುಕೊಂಡಿದ್ದಾನೆ. ಆದರೆ ಕಥೆಯ ಓಟ ಸುಗಮವಾಗುವಂತೆ, ಪಾತ್ರ ಪೋಷಣೆಗೆ ಅನುಕೂಲವಾಗುವಂತೆ, ಅದರಲ್ಲಿ ತನಗೆ ಬೇಕಾದ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ.

ಕಣ್ವ, ದುಷ್ಯಂತ, ಶಕುಂತಲೆ ಹಾಗೂ ಮಗು ಸರ್ವದಮನ ಇವರು ಮಾತ್ರ ಮೂಲದಲ್ಲಿ ಬರುವ ವ್ಯಕ್ತಿಗಳು. ಕಾಳಿದಾಸನು ಶಕುಂತಲೆಯ ಸಖಿಯರಾದ ಪ್ರಿಯಂವದಾ, ಅನಸೂಯೆಯರನ್ನೂ ದುಷ್ಯಂತನ ವಿದೂಷಕ ಮಾಂಢವ್ಯ, ಕಣ್ವಾಶ್ರಮದ ತಾಪಸ ಶಾರ್ಙ್ಗರವ ಮುಂತಾದ ಪಾತ್ರಗಳನ್ನೂ ತನ್ನ ನಾಟಕದಲ್ಲಿ ಸೃಷ್ಟಿಸಿಕೊಂಡು, ಪಾತ್ರ ವೈವಿಧ್ಯವನ್ನು ಸಾಧಿಸಿದ್ದಾನೆ. ಮೂಲದಲ್ಲಿ ಉಂಗುರದ ಪ್ರಸ್ತಾಪವೇ ಇಲ್ಲ. ಅಲ್ಲಿ ಕಠಿನ ಹೃದಯಿಯಾದ ದುಷ್ಯಂತ ಅಸಹಾಯಳಾದ ಶಕುಂತಲೆಯನ್ನು ನಿರಾಕರಿಸುತ್ತಾನೆ. ಆದರೆ ಕಾಳಿದಾಸ ದುಷ್ಯಂತನ ಪಾತ್ರವನ್ನು ರೂಪಿಸಿರುವ ಬಗೆಯೇ ಬೇರೆ. ಅದಕ್ಕಾಗಿ ದೂರ್ವಾಸರು ಆಶ್ರಮಕ್ಕೆ ಬಂದಾಗ ಅನ್ಯಮನಸ್ಕಳಾಗಿದ್ದು ಅವರನ್ನು ಸತ್ಕರಿಸದೇ ಇದ್ದ ಶಕುಂತಲೆಗೆ ಅವರು ಶಾಪಕೊಡುವ ಸಂದರ್ಭವನ್ನು ಕಾಳಿದಾಸ ಕಲ್ಪಿಸಿಕೊಂಡಿದ್ದಾನೆ. ಸ್ವಭಾವತಃ ಸುಗುಣಿಯಾದ ದುಷ್ಯಂತ ಶಾಪದ ಫಲವಾಗಿ ತನ್ನ ಪತ್ನಿಯನ್ನು ಮರೆತಿದ್ದನೆಂದೂ ಶಾಪವಿಮೋಚನೆಯಾದ ಮೇಲೆ ತನ್ನ ತಪ್ಪಿಗಾಗಿ ವ್ಯಥೆಪಟ್ಟನೆಂದೂ ನಿರೂಪಿಸಿ ದುಷ್ಯಂತನನ್ನು ಉದಾತ್ತ ವ್ಯಕ್ತಿಯನ್ನಾಗಿ ಮಾಡಿದ್ದಾನೆ.

ಕಣ್ವರು ಹಣ್ಣು ತರಲು ವನಕ್ಕೆ ಹೋಗಿದ್ದರೆಂದೂ ಮೋಹಾಂಧಳಾದ ಶಕುಂತಲೆ ಅವರು ಬರುವವರೆಗೂ ಕಾಯಿರಲಾಗದೆ ದುಷ್ಯಂತನನ್ನು ವಿವಾಹವಾದಳೆಂದೂ ಮೂಲದಲ್ಲಿದೆ. ಕಾಳಿದಾಸ ಅದನ್ನು ಬದಲಿಸಿ ಕಣ್ವರು ಸೋಮತೀರ್ಥಕ್ಕೆ ಯಾತ್ರೆ ಹೋಗಿದ್ದರೆಂದೂ ಅವರು ಹಿಂದಿರುಗಿ ಬರಲು ಕೆಲ ಕಾಲ ಹಿಡಿಯುವುದೆಂದು ತಿಳಿದಿದ್ದ ಶಕುಂತಲೆ ಅನಿವಾರ್ಯವಾಗಿ ದುಷ್ಯಂತನನ್ನು ಗಾಂಧರ್ವವಿಧಿಯಿಂದ ವರಿಸಿದಳೆಂದೂ ಕಲ್ಪಿಸಿದ್ದಾನೆ.

ಕಾಳಿದಾಸನ 'ಅಭಿಜ್ಞಾನ ಶಾಕುಂತಲಾ' ಏಳು ಅಂಕಗಳ ನಾಟಕ; ಸುಖಾಂತ. ಈ ನಾಟಕದಲ್ಲಿ ಕಾಳಿದಾಸನ ಪಾತ್ರಸೃಷ್ಟಿ ಅಸಾಧಾರಣ. ದುಷ್ಯಂತ ಇಲ್ಲಿ ಕೇವಲ ಕಾಮಿಯಾಗಿಲ್ಲ. ಆತ್ಮಸಾಕ್ಷಿಯಂತೆ ನಡೆಯುವ ಧರ್ಮಜ್ಞನಾದ ರಾಜ; ಗಂಭೀರ ವ್ಯಕ್ತಿ. ಶಕುಂತಲೆಯ ಪಾತ್ರವಂತೂ ಮನಮೋಹಕವಾದದ್ದು. ಋಷ್ಯಾಶ್ರಮದ ಮುಗ್ಧ ತರುಣಿಯೊಬ್ಬಳು, ತನ್ನ ನಡವಳಿಕೆಯ ಬಗೆಗೆ ತಾನೇ ಪೂರ್ಣವಾದ ಹೊಣೆಗಾರಿಕೆ ಹೊತ್ತು ಅದರ ಪರಿಣಾಮವನ್ನು ಧೈರ್ಯವಾಗಿ ಎದುರಿಸುವ ಸ್ಥೈರ್ಯವಂತೆಯಾದ ಮಹಿಳೆಯಾಗಿ ರೂಪುಗೊಂಡಿರುವುದನ್ನು ಕಾಳಿದಾಸನ ಈ ನಾಟಕದಲ್ಲಿ ಕಾಣುತ್ತೇವೆ. ವಿಧಿಯು ಕೈವಾಡ ನಾಟಕದ ಕ್ರಿಯೆಯಲ್ಲಿ ಬಲವತ್ತರ ಪಾತ್ರ ವಹಿಸಿದೆ. ಅದನ್ನು ಪಾತ್ರಗಳ ವ್ಯಕ್ತಿತ್ವದ ನಿರೂಪಣೆಗೆ ಸಹಾಯಕವಾಗಿ ಉಪಯೋಗಿಸಿರುವುದು ಕಾಳಿದಾಸನ ಜಾಣ್ಮೆಯನ್ನು ತೋರಿಸುತ್ತದೆ.

ಈ ನಾಟಕವನ್ನು ಸರ್ ವಿಲಿಯಂ ಜೋನ್ಸ್ 1789ರಲ್ಲಿ ಇಂಗ್ಲಿಷಿಗೆ ಭಾಷಾಂತರ ಮಾಡಿದ. ಜಾರ್ಜ್ ಫಾರ್ಸ್ಟರ್ ಜರ್ಮನ್‌ಗೆ ಭಾಷಾಂತರಿಸಿದ. ಜರ್ಮನಿಯ ಕವಿ ಗಯಟೆ (1749–1832) ಆ ಕೃತಿಯನ್ನೋದಿ ತುಂಬ ಮೆಚ್ಚಿ, ಕೊಂಡಾಡಿದ.

ಇನ್ನೂ ಕೆಲ ವಿದೇಶೀ ಭಾಷೆಗಳಿಗೂ ಭಾರತದ ಪ್ರಾದೇಶಿಕ ಭಾಷೆಗಳಿಗೂ ಈ ಕೃತಿ ಅನುವಾದಗೊಂಡಿದೆ.

'ಶಾಕುಂತಲ' ಪ್ರಪಂಚದ ಶ್ರೇಷ್ಠತಮ ಸಾಹಿತ್ಯ ಕೃತಿಗಳ ಸಾಲಿನಲ್ಲಿ ಸ್ಥಾನ ಪಡೆದಿದೆ.

**ನೋಡಿ : ಕಾಳಿದಾಸ**

## ಶಾರ್ಙ್ಗದೇವ

ಶಾರ್ಙ್ಗದೇವ ಭಾರತೀಯ ಸಂಗೀತ ಶಾಸ್ತ್ರಜ್ಞರಲ್ಲಿ ಅಗ್ರಗಣ್ಯ. ಆತ ರಚಿಸಿರುವ 'ಸಂಗೀತ ರತ್ನಾಕರ' ಕರ್ನಾಟಕ ಹಾಗೂ ಹಿಂದೂಸ್ತಾನಿ—ಈ ಎರಡೂ ಪದ್ಧತಿಯ ಸಂಗೀತಗಾರರಿಂದ ಏಕಪ್ರಕಾರವಾಗಿ ಅಂಗೀಕೃತ ವಾಗಿರುವ ಮತ್ತು ಗೌರವಕ್ಕೆ ಪಾತ್ರವಾಗಿರುವ ಆಧಾರ ಗ್ರಂಥ.

ಶಾರ್ಙ್ಗದೇವನ ಅಜ್ಜ ಭಾಸ್ಕರದೇವ ಕಾಶ್ಮೀರದಿಂದ ದಕ್ಷಿಣ ಭಾರತಕ್ಕೆ ಬಂದು, ಯಾದವ ದೊರೆಗಳ ಆಸ್ಥಾನ ವಿದ್ವಾಂಸನಾಗಿದ್ದ. ಶಾರ್ಙ್ಗದೇವನ ತಂದೆಯ ಹೆಸರು ಸೋಢಲ; ಈತನು 13ನೆಯ ಶತಮಾನದಲ್ಲಿ ಆಳುತ್ತಿದ್ದ ಯಾದವ ವಂಶದ ಜೈತಗಿ ಮಹಾರಾಜನ ಆಶ್ರಯಪಡೆದು ಅವನ ಪ್ರಮುಖ ಅಧಿಕಾರಿಗಳಲ್ಲೊಬ್ಬನಾದ. ಶಾರ್ಙ್ಗದೇವ ಯಾದವ ಪ್ರಭು ಸಿಂಘಣನ ಆಸ್ಥಾನದಲ್ಲಿ ಕೋಶಾಧಿಕಾರಿಯಾಗಿದ್ದ. ಅವನು ತನ್ನನ್ನು 'ಕರಣಾಗ್ರಣಿ' ಎಂದು ಹೇಳಿಕೊಂಡಿದ್ದಾನೆ. ಸಂಗೀತಶಾಸ್ತ್ರದಲ್ಲಿ ಮಾತ್ರ ವಲ್ಲದೆ ವೈದ್ಯಶಾಸ್ತ್ರ, ವೇದಾಂತಗಳಲ್ಲಿ ಕೂಡ ಈತನಿಗೆ ಪಾಂಡಿತ್ಯವಿತ್ತು. 'ಅಧ್ಯಾತ್ಮ ವಿವೇಕ'ವೆಂಬ ಗ್ರಂಥವನ್ನೂ ಈತ ಬರೆದಿದ್ದಾನೆ.

ಸಂಸ್ಕೃತ ಭಾಷೆಯಲ್ಲಿ ರಚಿತವಾಗಿರುವ 'ಸಂಗೀತರತ್ನಾಕರ' ಹಲವಾರು ದೃಷ್ಟಿಗಳಿಂದ ಅಪೂರ್ವ ಗ್ರಂಥ. ತನ್ನ ಹಿಂದೆ ಆಗಿಹೋದ ಅನೇಕರ ಸಂಗೀತಶಾಸ್ತ್ರ ಗ್ರಂಥಗಳನ್ನು ಅಭ್ಯಾಸ ಮಾಡಿ, ಅವರ ಅಭಿಪ್ರಾಯಗಳನ್ನು ಚೆನ್ನಾಗಿ ವಿವೇಚಿಸಿ ಶಾರ್ಙ್ಗದೇವನು ಈ ಗ್ರಂಥವನ್ನು ಬರೆದಿದ್ದಾ ನೆಂಬುದು ಗಮನೀಯ ಅಂಶ. ಸಂಗೀತಕ್ಕೆ ಸಂಬಂಧಿಸಿದ ಎಲ್ಲ ಅಂಶಗಳ ನಿರೂಪಣೆ ಈ ಗ್ರಂಥದಲ್ಲಿದೆ. ಇದರಲ್ಲಿರುವ ಏಳು ಅಧ್ಯಾಯಗಳಲ್ಲಿ ಸ್ವರ, ರಾಗ, ಪ್ರಕೀರ್ಣ, ಪ್ರಬಂಧ ತಾಳ, ವಾದ್ಯ ಮತ್ತು ನೃತ್ಯಗಳನ್ನು ಕುರಿತ ನಿರೂಪಣೆಯಿದೆ. "ಜಗತ್ತಿನ ಎಲ್ಲ ಸಂಗೀತ ಪದ್ಧತಿಗಳಿಗೂ ಮೂಲಭೂತ ವಾಗಿರುವ ಪ್ರಮೇಯಗಳ ವೈಜ್ಞಾನಿಕ ಜಿಜ್ಞಾಸೆಯೇ ಈ ಗ್ರಂಥದಲ್ಲಿ ಬೀಜ ರೂಪದಲ್ಲಿದೆ" ಎಂಬುದು ವಿದ್ವಾಂಸರ ಅಭಿಪ್ರಾಯ. 'ಸಂಗೀತರತ್ನಾಕರ' ವನ್ನು ಸೂಕ್ಷ್ಮವಾಗಿ ಅಧ್ಯಯನಮಾಡಿದರೆ ಶಾರ್ಙ್ಗದೇವನು ಸಂಗೀತ ಮಾತ್ರವಲ್ಲ ಆತ್ಮವಿದ್ಯೆ, ಶರೀರ ವಿದ್ಯೆ, ಮನೋವಿಜ್ಞಾನ, ತತ್ತ್ವಶಾಸ್ತ್ರ, ನಾದವಿಜ್ಞಾನ, ಸೌಂದರ್ಯ ಮೀಮಾಂಸೆ ಮುಂತಾದುವುಗಳಲ್ಲೂ ಪರಿಣತಿಯನ್ನು ಪಡೆದಿದ್ದನೆಂಬುದು ಗೋಚರವಾಗುತ್ತದೆ.

ಸಂಗೀತದ ವಿಚಾರದಲ್ಲಿ ತನ್ನದು ಖಚಿತ ಅಭಿಪ್ರಾಯಗಳು ಎಂಬುದನ್ನು ಸೂಚಿಸುವಂತೆ ತನ್ನನ್ನು 'ನಿಶ್ಶಂಕ' ಎಂದು ಶಾರ್ಙ್ಗದೇವ ಕರೆದು ಕೊಂಡಿದ್ದಾನೆ.

'ಸಂಗೀತ ರತ್ನಾಕರ'ದ ಲೇಖನಶೈಲಿ ಸೂತ್ರರೂಪವಾದದ್ದು. ಆದ್ದರಿಂದ ತುಂಬ ಅರ್ಥಗರ್ಭಿತವಾದದ್ದು. ಇದರ ಅರ್ಥವಿವರಣೆಗಾಗಿ ಸಂಸ್ಕೃತ, ತೆಲುಗು, ಹಿಂದೀ ಭಾಷೆಗಳಲ್ಲಿ ಹಲವಾರು ವ್ಯಾಖ್ಯಾನಗಳು ಬರೆಯಲ್ಪಟ್ಟಿವೆ. ಇವುಗಳಲ್ಲಿ ಕಲ್ಲಿನಾಥನು ಬರೆದ 'ಸಂಗೀತ ಕಲಾನಿಧಿ' ಎಂಬ ವ್ಯಾಖ್ಯಾನ ತುಂಬ ಪ್ರಖ್ಯಾತವಾದದ್ದು. ಇದು ಸಂಸ್ಕೃತ ಭಾಷೆಯಲ್ಲಿದೆ.

ಶಾರ್ಙ್ಗದೇವನು ವೀಣಾವಾದ್ಯದಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಿ 'ನಿಶ್ಶಂಕ ವೀಣಾ' ಎಂಬ ವಾದ್ಯವನ್ನು ರಚಿಸಿದ.

ಶಾರ್ಙ್ಗದೇವನ ಅನಂತರ ಸುಮಾರು ಏಳು ಶತಮಾನಗಳು ಕಳೆದಿವೆ ಯಾದರೂ ಭಾರತೀಯ ಸಂಗೀತ ಪ್ರಪಂಚದಲ್ಲಿ ಅವನ ಆಚಾರ್ಯ ಸ್ಥಾನ ಇನ್ನೂ ಸುಭದ್ರವಾಗಿದೆ. ಭಾರತೀಯ ಸಂಗೀತ ಉಳಿದಿರುವವರೆಗೂ ಅವನ ಖ್ಯಾತಿ ಉಜ್ವಲವಾಗಿಯೇ ಇರುತ್ತದೆ.

## ಶ್ಯಾಮಶಾಸ್ತ್ರೀ

ಬೊಬ್ಬಿಲಿ ಕೇಶವಯ್ಯ ಸಂಗೀತದಲ್ಲಿ ಘನ ವಿದ್ವಾಂಸ; ಜೊತೆಗೆ ಅಹಂಕಾರವೂ ಇತ್ತು ಅವನಲ್ಲಿ. ಆತ ಒಮ್ಮೆ ತಂಜಾವೂರಿಗೆ ಬಂದಿದ್ದಾಗ ಅಲ್ಲಿನ ಆಸ್ಥಾನ ಗಾಯಕರಿಗೆ ಒಂದು ಸವಾಲು ಹಾಕಿದ—"ನನಗೆ ಸಮಾನ ವಾಗಿ ಹಾಡಬಲ್ಲವರು ಯಾರಾದರೂ ಇದ್ದರೆ ಮುಂದೆ ಬರಲಿ" ಎಂದು. ಆತ ಅಂದು ಹಾಡಿದ ಪಲ್ಲವಿ 'ಸಿಂಹನಂದನ' ಎಂಬ ಜಟಿಲವಾದ ತಾಳದ ಚೌಕಟ್ಟಿನಲ್ಲಿದ್ದಿತು. ಕೇಶವಯ್ಯನ ಸವಾಲನ್ನು ಇದಿರಿಸಲು ಒಬ್ಬ ಗಾಯಕ ಮುಂದೆ ಬಂದ. ಆ ಪಲ್ಲವಿಯನ್ನು ತಾನೇ ರಚಿಸಿದ 'ಶರಭನಂದನ' ಎಂಬ 79 ಅಕ್ಷರ ಕಾಲ ತಾಳದಲ್ಲಿ ಆತ ಹಾಡಿ ಸಭೆಯನ್ನು ದಂಗುಬಡಿಸಿದ. ಹೀಗೆ ಆಸ್ಥಾನದ ಗೌರವವನ್ನು ಉಳಿಸಿದ ಹಾಗೂ ಕರ್ಣಾಟಕ ಸಂಗೀತ ಪ್ರಪಂಚದಲ್ಲಿ ತನಗೆ ಗೌರವದ ಸ್ಥಾನವನ್ನು ಗಳಿಸಿಕೊಂಡ. ಕರ್ಣಾಟಕ ಸಂಗೀತದ ತ್ರಿಮೂರ್ತಿಗಳೆಂದು ಆರಾಧಿಸಲ್ಪಡುವ ಮೂವರು ಮಹಾನು ಭಾವರಲ್ಲಿ ಒಬ್ಬನಾದ ಶ್ಯಾಮಶಾಸ್ತ್ರಿಯೇ ಈತ. ಇನ್ನಿಬ್ಬರು ತ್ಯಾಗ ರಾಜರು ಹಾಗೂ ಮುತ್ತುಸ್ವಾಮಿ ದೀಕ್ಷಿತರು. ಈ ಮೂವರಲ್ಲಿ ಶ್ಯಾಮ ಶಾಸ್ತ್ರಿಗಳು ವಯಸ್ಸಿನಿಂದ ಹಿರಿಯರು.

ಶ್ಯಾಮಶಾಸ್ತ್ರಿಗಳ ಪೂರ್ವಜರು ಬಂಗಾರು ಕಾಮಾಕ್ಷಿಯ ಉಪಾಸಕರು— ಆ ದೇವಿಯನ್ನು ಅರ್ಚಿಸುತ್ತ ಕಂಚಿಯಲ್ಲಿ ನೆಲೆಸಿದ್ದವರು. ವಿಜಯ ನಗರ ಸಾಮ್ರಾಜ್ಯದ ಪತನದ ಅನಂತರ ತಮಗಾಗಿ ಒಂದು ಸ್ಥಳವನ್ನು ಅರಸುತ್ತ ಹೊರಟರು. ಸುರಕ್ಷಿತ ಸ್ಥಾನವನ್ನು ಹುಡುಕುತ್ತ ಅಲ್ಲಲ್ಲಿ ನಿಂತು ಸ್ಥಳ ಬದಲಾಯಿಸುತ್ತ ಕೊನೆಗೆ ತಿರುವಾಂಕೂರಿಗೆ ಬಂದರು. ಶ್ಯಾಮಶಾಸ್ತ್ರೀ ಹುಟ್ಟಿದ್ದು ಇಲ್ಲಿಯೇ, 1762ರ ಏಪ್ರಿಲ್ 26ರಂದು.



ಗುಣದೃಷ್ಟಿಯಿಂದ ಅಮೂಲ್ಯ
-ಶ್ಯಾಮಶಾಸ್ತ್ರೀ

ತಂದೆಯ ಹೆಸರು ವಿಶ್ವನಾಥ ಅಯ್ಯರ್. ಮಗನಿಗೆ ವೆಂಕಟ ಸುಬ್ರಹ್ಮಣ್ಯ ಎಂದು ನಾಮಕರಣಮಾಡಿದರು. ಮುದ್ದಿಗಾಗಿ ಶ್ಯಾಮಕೃಷ್ಣ ಎಂದು ಕರೆಯುತ್ತಿದ್ದರು. ಈ ಹೆಸರೇ ಅವರಿಗೆ ಸ್ಥಿರವಾಯಿತು.

ಶ್ಯಾಮಶಾಸ್ತ್ರಿಗಳ ವಂಶದಲ್ಲಿ ಯಾರೂ ಸಂಗೀತಗಾರರಾಗಿರಲಿಲ್ಲ. ಈ ಕಲೆಯಲ್ಲಿ ಅವರಿಗೆ ಆಸಕ್ತಿಯೂ ಇರಲಿಲ್ಲ. ಇದರಿಂದಾಗಿ ಶ್ಯಾಮಶಾಸ್ತ್ರಿಗಳಿಗೆ ದೈವದತ್ತವಾಗಿ ಒಳ್ಳೆಯ ಕಂಠವಿದ್ದರೂ ಯಾರೂ ಅವರಿಗೆ ಸಂಗೀತ ಪಾಠ ಹೇಳಿಸುವ ಗೋಜಿಗೆ ಹೋಗಲಿಲ್ಲ.

ಆದರೆ ಸಂಗೀತದ ವಿಚಾರದಲ್ಲಿ ತನ್ನ ಮಗನಿಗೆ ಇದ್ದ ಆಸಕ್ತಿಯನ್ನೂ ಪ್ರತಿಭೆಯನ್ನೂ ಗುರುತಿಸಿದ ತಾಯಿ ದೂರದ ನೆಂಟರೊಬ್ಬರಿಂದ ಮಗನಿಗೆ ಸಂಗೀತ ಪಾಠ ಹೇಳಿಸಿದರು. ಶ್ಯಾಮಶಾಸ್ತ್ರಿಗಳು 18ನೆಯ ವರ್ಷ ವಯಸ್ಸಿನವರಾಗಿದ್ದಾಗ ಅವರ ಸಂಸಾರ ತಂಜಾವೂರಿಗೆ ಹೋಗಿ ನೆಲೆಸಿತು. ಅಲ್ಲಿ ಶ್ಯಾಮಶಾಸ್ತ್ರಿಗಳಿಗೆ ಸಂಗೀತ ಸ್ವಾಮಿ ಎಂಬ ಸನ್ಯಾಸಿಗಳ ಪರಿಚಯವಾಯಿತು. ಅಧ್ಯಾತ್ಮ ಮತ್ತು ಸಂಗೀತ ಇವೆರಡರಲ್ಲೂ ಅಪೂರ್ವ ಸಿದ್ಧಿಯನ್ನು ಗಳಿಸಿದ್ದರು. ಕಾಶಿಯಿಂದ ಬಂದಿದ್ದ ಈ ಸನ್ಯಾಸಿಗಳು. ಸ್ವಾಮಿಗಳ ಏಕೈಕ ಶಿಷ್ಯರಾಗುವ ಸುಯೋಗ ಶಾಸ್ತ್ರಿಗಳಿಗೆ ದೊರೆಯಿತು. ತಾಳಶಾಸ್ತ್ರ, ಗತಿ, ಪ್ರಸ್ತಾರ ಮುಂತಾದ ವಿಷಯಗಳನ್ನು ಕುರಿತ ವಿಶೇಷ ವಿವರಗಳನ್ನೂ ಶಾಸ್ತ್ರಿಗಳು ಗುರು ಮುಖೇನ ತಿಳಿದುಕೊಂಡರು. ಅನಂತರ ಗುರುಗಳ ಆಜ್ಞೆಯಂತೆ ಆಗಿನ ಖ್ಯಾತ ಸಂಗೀತಗಾರರೂ ವಾಗ್ಗೇಯಕಾರರೂ ಆಗಿದ್ದ ಪಚ್ಚಿಮಿರಿ ಆದಿಅಪ್ಪಯ್ಯನವರನ್ನೂ ಆಡಿಗಡಿಗೆ ಸಂದರ್ಶಿಸಿದರು. ಅವರ ವಿಶೇಷ ಆದರ ಮೆಚ್ಚುಗೆಗಳಿಗೆ ಪಾತ್ರರಾದರು. ಚಿಕ್ಕಂದಿನಿಂದಲೂ ಶ್ಯಾಮಶಾಸ್ತ್ರಿಗಳಿಗೆ ಕೃತಿರಚನೆಯ ಬಗೆಗೆ ಒಲವು ಇದ್ದಂತೆ ತೋರುತ್ತದೆ. ಆದಿಅಪ್ಪಯ್ಯನವರಂಥ ವಾಗ್ಗೇಯಕಾರರ ಒಡನಾಟ ಆ ಆಸಕ್ತಿಗೆ ಪುಟ ಕೊಟ್ಟಿತು; ಅವರ ಕೃತಿರಚನೆಗೆ ಸ್ಫೂರ್ತಿಯನ್ನೊದಗಿಸಿತು. ಬಂಗಾರು ಕಾಮಾಕ್ಷಿಯ ಉಪಾಸಕರಾದ ಶಾಸ್ತ್ರಿಗಳ ಭಕ್ತಿಭಾವ ಹಲವಾರು ಕೃತಿಗಳ ರೂಪದಲ್ಲಿ ಹೊರಹೊಮ್ಮಿತು. ಸ್ವಲ್ಪ ಕಾಲದಲ್ಲೇ ಶಾಸ್ತ್ರಿಗಳು ಗಾಯನ, ಕೃತಿರಚನೆಗಳೆರಡರಲ್ಲೂ ನಿಪುಣರೆಂದು ಖ್ಯಾತರಾದರು.

ಶ್ಯಾಮಶಾಸ್ತ್ರಿಗಳ ಕೃತಿಗಳು ರಾಗಭಾವಗಳ ಸಾಮರಸ್ಯವನ್ನೂ ಹೃದ್ಯ ಸಾಹಿತ್ಯವನ್ನೂ ಉಳ್ಳ ರಚನೆಗಳು. 'ದೇವಿ ಬ್ರೋವ ಸಮಯಮಿದೆ, ಅತಿ ವೇಗಮೆ ವಚ್ಚಿ' (ದೇವಿ, ಅತಿಶೀಘ್ರವಾಗಿ ಬಂದು ರಕ್ಷಿಸುವ ಸಮಯ ವಿದಾಗಿದೆ), 'ಶಂಕರಿ ಶಂ ಕುರು ಚಂದ್ರಮುಖಿ' (ಚಂದ್ರಮುಖಿಯಾದ ಶಂಕರಿಯೇ ಮಂಗಳವನ್ನುಂಟುಮಾಡು) ಹಾಗೂ 'ಶ್ರೀ ಕಾಮಕೋಟಿ ಪೀಠಸ್ಥಿತೆ' ಎಂಬ ಸಾವೇರಿರಾಗದ ಕೃತಿಗಳು, ಆನಂದ ಭೈರವಿಯ 'ಮರಿ ವೇರೆ ದಿಕ್ಕೆವರಮ್ಮ' (ನಮಗೆ ಬೇರೆಯಾರು ದಿಕ್ಕು ತಾಯಿ) ಹಾಗೂ 'ಓ ಜಗದಂಬ', ಭೈರವಿಯ ಸುಂದರ ಸ್ವರಜತಿ 'ಕಾಮಾಕ್ಷಿ', ಶಂಕರಾಭರಣದ ಸುಪ್ರಸಿದ್ಧ 'ಸರೋಜದಳನೇತ್ರಿ ಹಿಮಗಿರಿ ಪುತ್ರಿ', ಧನ್ಯಾಸಿಯ 'ಮೀನ ಲೋಚನಿ ಅಂಬ'–ಈ ಎಲ್ಲ ಕೃತಿಗಳೂ ಅವರು ದೇವಿಯನ್ನು ಆತ್ಮೀಯವಾಗಿ ಮಾತನಾಡಿಸುವ ಶೈಲಿಯಲ್ಲಿವೆ. ಶಾಸ್ತ್ರಿಗಳು ಮಧುರೆ ಮೀನಾಕ್ಷಿಯನ್ನು ಕುರಿತು ರಚಿಸಿರುವ ನವರತ್ನ ಮಾಲಿಕೆ ಕೂಡ ವಿಖ್ಯಾತವಾದದ್ದು. ಇದು ದೇವಿಯ ಬಗೆಗಿನ ಅವರ ಅನನ್ಯ ಭಕ್ತಿಯನ್ನು ಸ್ಫುಟವಾಗಿ ಪ್ರತಿಬಿಂಬಿಸುತ್ತದೆ. ಅವರು ತಮ್ಮ ಕೃತಿಗಳಲ್ಲಿ 'ಶ್ಯಾಮಕೃಷ್ಣ' ಎಂಬ ಅಂಕಿತವನ್ನು ಉಪಯೋಗಿಸಿದ್ದಾರೆ. ಆನಂದಭೈರವಿ ರಾಗ ಅವರಿಗೆ ಮೆಚ್ಚಿನದೆಂದು ತೋರುತ್ತದೆ. ಅಪೂರ್ವ ರಾಗಗಳನ್ನೂ ಕ್ಲಿಷ್ಟ ತಾಳಗಳನ್ನೂ ಅವರು ಸರಾಗವಾಗಿ ನಿರ್ವಹಿಸಬಲ್ಲವರಾಗಿದ್ದರೂ ಮಾಂಜಿ, ಕಲಗಡ, ಚಿಂತಾಮಣಿ ಇವು ಅವರು ಬಳಸಿಕೊಂಡ ಕೆಲವು ಅಪೂರ್ವ ರಾಗಗಳು. [illegible] ನಾದ ಪದಜೋಡಣೆ, ಅಲ್ಲಲ್ಲಿ ಸ್ವರಾಕ್ಷರಗಳ [illegible] ಉಪಯೋಗ ಇವುಗಳಿಂದಾಗಿ ಶ್ಯಾಮಶಾಸ್ತ್ರಿಗಳ ಕೃತಿಗಳು ಕೇಳುವವರ ಕಿವಿಗೆ ಹಬ್ಬವಾಗುತ್ತವೆ. ವಿಳಂಬ ಗತಿಯ ಕೃತಿಗಳಿಗೆ ಶಾಸ್ತ್ರಿಗಳ ರಚನೆಗಳು ಉತ್ತಮ ಉದಾಹರಣೆಗಳು.

ಶಾಸ್ತ್ರಿಗಳು ತೆಲುಗು, ತಮಿಳು, ಸಂಸ್ಕೃತ ಈ ಮೂರು ಭಾಷೆಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಸುಮಾರು 300 ಕೃತಿಗಳನ್ನು ಇವರು ರಚಿಸಿರಬಹುದೆಂಬ ಊಹೆಯಿದೆ. ಈ ಸಂಖ್ಯೆ 108 ಎಂದು ಕೆಲವರ ಅಭಿಪ್ರಾಯ. ಇದು ಹೇಗೇ ಇರಲಿ ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಶಾಸ್ತ್ರಿಗಳು ರಚಿಸಿದ ಕೃತಿಗಳ ಸಂಖ್ಯೆ ಅತಿ ಕಡಿಮೆ. ಇವರ ಕೃತಿಗಳು ಪ್ರೌಢವಾದದ್ದರಿಂದಲೂ ಇವರಿಗೆ ಹೆಚ್ಚು ಮಂದಿ ಶಿಷ್ಯರಿಲ್ಲದೆ ಇದ್ದುದರಿಂದಲೂ ಇವರ ರಚನೆಗಳಿಗೆ ಒಡನೆಯೇ ಜನಪ್ರಿಯತೆ ದೊರೆಯಲಿಲ್ಲ. ಆದರೆ ಈಗ ಅವುಗಳಿಗೆ ಮೆಚ್ಚುಗೆ ದೊರೆತಿದೆ. ಶಾಸ್ತ್ರಿಗಳ ಶಿಷ್ಯಪರಂಪರೆಯಲ್ಲಿ ಅವರ ಮಗ ಸುಬ್ರಾಯಶಾಸ್ತ್ರೀ ಉಲ್ಲೇಖಾರ್ಹರು. ಇವರು ಉತ್ತಮ ಸಂಗೀತಗಾರರಾಗಿದ್ದರಲ್ಲದೆ, ವಾಗ್ಗೇಯಕಾರರೂ ಆಗಿದ್ದರು. ಶ್ಯಾಮಶಾಸ್ತ್ರಿಗಳ ಅನೇಕ ಕೃತಿಗಳು ನಮಗೆ ದೊರೆತಿರುವುದು ಇವರ ಮೂಲಕವೇ.

ತಮ್ಮ ಸಮಕಾಲೀನರಾದ ಮುತ್ತುಸ್ವಾಮಿ ದೀಕ್ಷಿತರು ಮತ್ತು ತ್ಯಾಗರಾಜರ ಪರಿಚಯ ಶ್ಯಾಮಶಾಸ್ತ್ರಿಗಳಿಗಿತ್ತು.

ಶಾಸ್ತ್ರಿಗಳು ತಮ್ಮ ಅವಸಾನವನ್ನು ಅರಿತಿದ್ದರೆಂದು ಒಂದು ಐತಿಹ್ಯವಿದೆ. ತಮ್ಮ ಪತ್ನಿ ಸ್ವರ್ಗಸ್ಥಳಾದ ಆರನೆಯ ದಿನವಂದು ಅಂದರೆ, 1827ರ ಫೆಬ್ರುವರಿ 6ರಂದು ಮಧ್ಯಾಹ್ನ, ಅವರು ಪರಂಧಾಮವನ್ನೈದಿದರು.

ಕರ್ನಾಟಕ ಸಂಗೀತ ಪ್ರಪಂಚಕ್ಕೆ ಶ್ಯಾಮಶಾಸ್ತ್ರಿಗಳ ಕೊಡುಗೆ ಸಂಖ್ಯಾದೃಷ್ಟಿಯಿಂದ ವಿಪುಲವಲ್ಲದಿದ್ದರೂ ಗುಣದೃಷ್ಟಿಯಿಂದ ಅಮೂಲ್ಯವಾದದ್ದು.

## ಶಿರಹಟ್ಟಿ ವೆಂಕೋಬರಾಯ

"ಎಲ್ಲಿ ನೋಡಲು ಮರಾಠಿ ನಾಟಕಮಯಂ ತಾನಾಯ್ತು ಕರ್ನಾಟಕಂ" ಎಂದು ಧಾರವಾಡದ ಶಾಂತಕವಿ ಉದ್ಗರಿಸಿದರು. ಇದು ಕಳೆದ ಶತಮಾನದ ಅಂತ್ಯಭಾಗದಲ್ಲಿ ಉತ್ತರ ಕರ್ನಾಟಕದ ಪರಿಸ್ಥಿತಿ. ಅಂಥ ಪರಿಸ್ಥಿತಿಯಲ್ಲಿ ಅಲ್ಲಿ ಮಹಾರಾಷ್ಟ್ರ ರಂಗಭೂಮಿಯ ಸಾರ್ವಭೌಮತ್ವವನ್ನು ಎದುರಿಸಿ ಕನ್ನಡ ನಾಟಕ ಸಂಸ್ಥೆಯನ್ನು ಕಟ್ಟಿ ಬೆಳೆಸಿದ ಸಾಹಸಿ, ಶಿರಹಟ್ಟಿ ವೆಂಕೋಬರಾಯರು.

ಹೈದರಾಬಾದ್ ಸಂಸ್ಥಾನಕ್ಕೆ ಸೇರಿದ್ದ ಕೊಪ್ಪಳದಲ್ಲಿನ ಸುಪ್ರಸಿದ್ಧ ವಕೀಲ ಹಣಮಂತರಾಯರ ಪುತ್ರ ವೆಂಕೋಬರಾವ್ ಜನಿಸಿದ್ದು 1888ರಲ್ಲಿ. ತಾಯಿ ಕೃಷ್ಣವೇಣಿ ಬಾಯಿ ಸಾಂಗಲಿ ಸಂಸ್ಥಾನ ಶಿರಹಟ್ಟಿಯಲ್ಲಿ ಪ್ರಸಿದ್ಧ ನರಗುಂದ ನಾಯಕರ ಮನೆತನದವರು. 12 ವರ್ಷ ವಯಸ್ಸಿನಲ್ಲೇ ವೆಂಕೋಬರಾವ್ ತಂದೆಯನ್ನು ಕಳೆದುಕೊಂಡರು. ತಾಯಿಯು ಮಗನೊಂದಿಗೆ ತವರಿಗೆ ಬಂದು ಶಿರಹಟ್ಟಿಯಲ್ಲಿ ಸೋದರ ತಮ್ಮಣ್ಣನಾಯಕನೊಡನೆ ವಾಸಿಸತೊಡಗಿದರು. ತಮ್ಮಣ್ಣನಾಯಕರಿಗೆ ಬಾಲಕ ವೆಂಕೋಬನ ಮೇಲೆ ಅಪಾರ ವಾತ್ಸಲ್ಯ. ಮುಂದೆ ವೆಂಕೋಬರಾವ್ ನಾಟಕ ಕಂಪನಿ ಪ್ರಾರಂಭಿಸುವಾಗ ಹಳೆಯ ಪೀಳಿಗೆಯ ಜನರಲ್ಲಿ ತಮ್ಮಣ್ಣನಾಯಕರೇ ಬೆಂಬಲದ ರಕ್ಷೆ ನೀಡಿದವರು. ಅವರು ವೆಂಕೋಬರಾಯರ ಕಂಪನಿಯ ನಾಟಕ ಆಡುವುದಕ್ಕೆ ಊರ ಮಧ್ಯದಲ್ಲಿ ಒಂದು ಚಿಕ್ಕ ನಾಟಕಗೃಹ ಕಟ್ಟಿಸಿಕೊಟ್ಟರು. ಮಹಾಲಕ್ಷ್ಮೀ ಥಿಯೇಟರ್ ಎಂಬ ಹೆಸರಿನ ಆ ಮಂದಿರ ಈಗಲೂ ಇದೆ.

ಹಿರಿಯರಾದವರು ವೆಂಕೋಬರಾಯರಿಗೆ ಚಿಕ್ಕ ವಯಸ್ಸಿನಲ್ಲಿಯೇ ರಾಮದುರ್ಗದ ಹತ್ತಿರದ ಮುನವಳ್ಳಿಯ ಜಮೀನುದಾರ ಗೋಪಾಲ ಘಡಸಿ ಅವರ ಮಗಳು ಲಕ್ಷ್ಮೀಬಾಯಿಯೊಡನೆ ವೈಭವದಿಂದ ವಿವಾಹಮಾಡಿಸಿದರು. ವೆಂಕೋಬರಾಯರಿಗೆ 1900ರಲ್ಲಿ ಒಬ್ಬ ಹೆಣ್ಣು ಮಗಳು (ಸುಂದರಾ) ಮತ್ತು 1904ರಲ್ಲಿ ಒಬ್ಬ ಗಂಡು ಮಗ (ಹನುಮಂತ ಉರ್ಫ್ ತಮ್ಮಯ್ಯ) ಜನಿಸಿದರು.

ವೆಂಕೋಬರಾಯರ ಪ್ರಾಥಮಿಕ ಶಿಕ್ಷಣ ಕೊಪ್ಪಳ, ಶಿರಹಟ್ಟಿಗಳಲ್ಲಿ. ಕೊಪ್ಪಳದಲ್ಲಿ ಉರ್ದುಪ್ರಭಾವ: ಶಿರಹಟ್ಟಿಯಲ್ಲಿ ಮರಾಠೀಪ್ರಭಾವ. ಆದಕಾರಣ ಕನ್ನಡದ ಜೊತೆಯಲ್ಲಿ ಉರ್ದು, ಮರಾಠಿ ಜ್ಞಾನವಿದ್ದಿತು.



ಕರ್ತೃತ್ವಶಾಲಿ : ವೆಂಕೋಬರಾಯ

ಪ್ರಾಥಮಿಕ ಶಾಲೆಯಲ್ಲೇ ಅವರು ನಾಟಕ ಪ್ರಹಸನಗಳಲ್ಲಿ ಪಾತ್ರವಹಿಸುತ್ತಿದ್ದರು. ಸಂಗೀತ, ಅಭಿನಯ ಮತ್ತು ಮಾತುಗಾರಿಕೆಗಳಲ್ಲಿ ಅವರ ಪ್ರತಿಭೆ ವ್ಯಕ್ತವಾಗಿತ್ತು. ಆಗ ಆ ಪ್ರದೇಶದಲ್ಲಿ ಕಿರ್ಲೋಸ್ಕರ ಕಂಪನಿ, ರಾಜಾಪುರ ಕಂಪನಿ, ಶಾಹು ನಗರವಾಸಿ ಕಂಪನಿ ಮೊದಲಾದ ಮರಾಠಿ ನಾಟಕ ಸಂಸ್ಥೆಗಳ ನಾಟಕಗಳು ಜನಪ್ರಿಯವಾಗಿದ್ದುವು. ಕನ್ನಡ ಕಂಪನಿಗಳು ಆ ಮಟ್ಟಕ್ಕೆ ಬರಲಾರವು ಎಂದು ಸಾಮಾನ್ಯ ನಂಬಿಕೆ. ಅಲ್ಲದೆ ನಾಟಕ ರಂಗವು ಪೋಲಿ ವೃತ್ತಿ ಎಂಬ ಭಾವನೆ. ವೆಂಕೋಬರಾಯರಿಗೆ ಕನ್ನಡ ನಾಟಕ ಕಂಪನಿಯನ್ನು ಕಟ್ಟಿ ಮೆರೆಸಬೇಕೆಂಬ ಗೀಳು. ಶಿರಹಟ್ಟಿ ಆಸುಪಾಸಿನ ಯುವಕರಿಗೆ ಆದರ್ಶವನ್ನು ಬೋಧಿಸಿ, ಅವರನ್ನು ಸೇರಿಸಿಕೊಂಡು ಮಹಾಲಕ್ಷ್ಮೀ ಪ್ರಾಸಾದಿತ ಸಂಗೀತ ನಾಟಕ ಮಂಡಲಿಯನ್ನು ಪ್ರಾರಂಭಿಸಿಯೇ ಬಿಟ್ಟರು. 1903ರಲ್ಲಿ ಈ ಮಂಡಲಿಯ ಪ್ರಥಮ ನಾಟಕ 'ಶ್ರೀನಿವಾಸ ಕಲ್ಯಾಣ' ಅಥವಾ 'ಪದ್ಮಾವತಿ ಪರಿಣಯ' ಯಶಸ್ವಿಯಾಯಿತು. ಅದನ್ನು ಬರೆದ ಶಿರಹಟ್ಟಿಯ ಇಬ್ಬರು ಶಾಲಾ ಶಿಕ್ಷಕರಿಗೆ ವೆಂಕೋಬರಾಯರು ಜರಿಯ ರುಮಾಲು ಉಡುಗೊರೆ ನೀಡಿದರು. ಅವರ ನಾಟಕ ಕಂಪನಿ ಸಂಚಾರ ಹೊರಟದ್ದು 1909ರಲ್ಲಿ. ಗದುಗಿನಲ್ಲಿ ಮೊದಲ ನೆಯ ಕ್ಯಾಂಪ್ ಅಲ್ಲಿ 'ಪದ್ಮಾವತಿ ಪರಿಣಯ', 'ಶಾಕುಂತಲಾ', 'ಶ್ರೀರಾಮ ಪಾದುಕಾಪಟ್ಟಾಭಿಷೇಕ' ಪ್ರದರ್ಶನಗಳಾದುವು. ಮುಂದೆ ಮೂರು ದಶಕ ಕಾಲ ಕರ್ನಾಟಕದ ಮೂಲೆಮೂಲೆಗಳಲ್ಲಿ ಮಾತ್ರವಲ್ಲದೆ, ಮದರಾಸು, ಕೇರಳ, ಮಹಾರಾಷ್ಟ್ರಗಳ ಕೆಲವು ಭಾಗಗಳಲ್ಲೂ ಶಿರಹಟ್ಟಿ ನಾಟಕ ಕಂಪನಿ ಸಂಚರಿಸಿತು, ಅದರ ಹೆಸರು ಮನೆಮಾತಾಯಿತು.

'ಪದ್ಮಾವತಿ ಪರಿಣಯ'ದಲ್ಲಿ ಶ್ರೀನಿವಾಸ, 'ಭೋಜ ಪ್ರಬಂಧ' ದಲ್ಲಿ ಘಟನಾಯಕ, 'ವಿವೇಕ ವಿಜಯ'ದ ನಾಯಕ ಮನೋರಾಯ ಮೊದಲಾದ ಪಾತ್ರಗಳ ನಟನಾಗಿ ವೆಂಕೋಬರಾಯರು ಜನಪ್ರಿಯರಾದರು. ಗಂಡು ಅಭಿನಯಕ್ಕೆ ಹೆಸರಾದ ಅವರು ಮುಂದೆ ಹೆಚ್ಚು ಕಾಲ ನಟನಾಗಿ ಉಳಿಯದೆ ಕಂಪನಿಯ ಆಡಳಿತ ನಿರ್ವಹಣೆಗೆ ಅಧಿಕ ಗಮನ ಕೊಟ್ಟರು. ಮೈಸೂರಿನ ಆಸ್ಥಾನ ವಿದ್ವಾನ್ ತಿರುಮಲೆ ವೆಂಕಟಾಚಾರ್ಯ, ಬೆಳ್ಳಾವೆ ನರಹರಿಶಾಸ್ತ್ರಿಗಳು ಮೊದಲಾಗಿ ಕರ್ನಾಟಕದ ಬೇರೆ ಬೇರೆ ಭಾಗಗಳ ಪಂಡಿತರಿಂದ ತಮ್ಮ ಕಂಪನಿಗಾಗಿ ನಾಟಕಗಳನ್ನು ಬರೆಸಿ ಪ್ರದರ್ಶಿಸಿದರು. ನಾಟಕ ಶಿಕ್ಷಕರಿಂದ ನಟರಿಗೆ ತರಪೇತಿ ಕೊಡಿಸುತ್ತಿದ್ದರು. ತಿರುಮಲೆ ವೆಂಕಟಾಚಾರ್ಯ ಮತ್ತು ಬ್ಯಾಡಗಿಯ ಪಂಡಿತ ಕವಲಿ ಮಾಸ್ತರರು ನಾಟಕ ಶಿಕ್ಷಕರಾಗಿ ಅವರ ಕಂಪನಿಯಲ್ಲಿದ್ದರು. ಕೆಲವು ಕಾಲ ಗುರುರಾವ್ ದೇಶಪಾಂಡೆಯವರು ನಟರಿಗೆ ಸಂಗೀತ ಹೇಳಿಕೊಟ್ಟರು. ಮುಂಬಯಿಯಲ್ಲಿ ಜರತಾರಿ ಕೆಲಸದ ಶಿಕ್ಷಣ ಪಡೆದಿದ್ದ ಒಬ್ಬರನ್ನು ಕಂಪನಿಯಲ್ಲಿ ಉಡುಪು ನಿರ್ಮಾಣಕ್ಕೂ ಮೂವರು ವರ್ಣಚಿತ್ರಕಾರರನ್ನು ದೃಶ್ಯ ಪರದೆ ನಿರ್ಮಾಣಕ್ಕೂ ನೇಮಿಸಿಕೊಂಡಿದ್ದರು.

ಶಿರಹಟ್ಟಿ ಕಂಪನಿಯಲ್ಲಿ ನಟರಾಗಿ ಹೆಸರು ಗಳಿಸಿದ ವಾಮನರಾವ್ ಮಾಸ್ತರರು ಗಾಯಕರೂ ಲೇಖಕರೂ ಆಗಿದ್ದರು. ವೆಂಕೋಬರಾಯರು ಹೋದ ಊರುಗಳಲ್ಲಿ ಉತ್ತಮ ನಟರ ಪ್ರತಿಭೆಯನ್ನು ಗುರುತಿಸಿ ಕಂಪನಿಗೆ ಸೇರಿಸಿಕೊಳ್ಳುತ್ತಿದ್ದರು. ಉತ್ತಮ ಗಾಯಕರಾದ ವಾಸುದೇವರಾವ್, ನಿಜಾಮ ಕರ್ನಾಟಕ ಭಾಗದ ಹೆಸರಾಂತ ಸ್ತ್ರೀ ಪಾತ್ರಧಾರಿ ಮಾಸ್ಟರ್ ಅಂಬಾದಾಸ, ಉತ್ತರ ಕರ್ನಾಟಕದ ಹಾಸ್ಯಪಟು ಲಕ್ಷ್ಮಣರಾವ್ ಪುರಿ, ಶಿರಹಟ್ಟಿ ಕಂಪನಿಯಲ್ಲಿ ಹೆಸರು ಹೊಂದಿದವರಾಗಿದ್ದರು. 'ರಾಮಾಂಜನೇಯ ಯುದ್ಧ' ದಲ್ಲಿ ಆಂಜನೇಯ ಪಾತ್ರಧಾರಿಯಾದ ನಂಜುಂಡಯ್ಯ 'ಕಲಿಯುಗದ ಆಂಜನೇಯ' ಎಂದು ಕರ್ನಾಟಕದಾದ್ಯಂತ ಪ್ರಸಿದ್ಧರಾಗಿದ್ದರು.

ವೆಂಕೋಬರಾಯರು ಮೈಸೂರು ಮಹಾರಾಜರಿಂದಲೂ ಉತ್ತರ ಕರ್ನಾಟಕದ ಹಲವು ಸಂಸ್ಥಾನಿಕರಿಂದಲೂ ಬಹುಮಾನಿತರಾದರು. ಸ್ವದೇಶೀ ಚಳುವಳಿಗೆ ಹಣ ಕೂಡಿಸಲು ಅವರು ಸಹಾಯಾರ್ಥ ಪ್ರದರ್ಶನಗಳನ್ನಿತ್ತರು. ಮಿತ್ರರಾದ ಡಾ. ಎನ್. ಎಸ್. ಹರ್ಡೀಕರರ ಭಾರತ ಸೇವಾದಳದ ಸಹಾಯಕ್ಕಾಗಿಯೂ ಪ್ರದರ್ಶನಗಳನ್ನು ನೀಡಿದರು. ರಾಷ್ಟ್ರೀಯ ನಾಯಕರಾದ ತಿಲಕ, ಜವಾಹರಲಾಲ ನೆಹರೂ ಮೊದಲಾದವರು ಅವರ ನಾಟಕಗಳನ್ನು ನೋಡಿ ಪ್ರಶಂಸಿಸಿದ್ದರು.

ವೆಂಕೋಬರಾಯರು 1914ರಲ್ಲಿ ತಮ್ಮ ಮಗಳ ಮದುವೆ ಮಾಡಿದರು. ಇಂಟರ್‌ಮೀಡಿಯೆಟ್ ತನಕ ವಿದ್ಯಾಭ್ಯಾಸ ಮಾಡಿದ ಮಗ ತಮ್ಮಯ್ಯನನ್ನು ಕಂಪನಿಯ ಆಡಳಿತ ನಿರ್ವಹಣೆ ನೋಡಿಕೊಳ್ಳಲು ಸೇರಿಸಿಕೊಂಡರು. ತಮ್ಮಯ್ಯನವರೂ ಒಳ್ಳೆಯ ಕಲಾವಿದರಾಗಿದ್ದು 'ಕಿತ್ತೂರು ಚೆನ್ನಮ್ಮ' ದಲ್ಲಿ ಥ್ಯಾಕರೆ 'ಮಿಸ್ ಮಾಧುರಿ'ಯಲ್ಲಿ ನಾಯಕನಾದ ಮನೋರಾಯ ಪಾತ್ರಗಳನ್ನು ನಿರ್ವಹಿಸಿ ಹೆಸರುಗಳಿಸಿದರು. ವೆಂಕೋಬರಾಯರ ಜೀವನ

1915ರಿಂದ 1930ರ ಅವಧಿಯಲ್ಲಿ ಅತ್ಯಂತ ಸುಖಮಯವಾಗಿತ್ತು. 1934ರಲ್ಲಿ ಅವರು ಅಸ್ವಸ್ಥರಾಗಿ ಹಾಸಿಗೆ ಹಿಡಿದರು. ಮುಂದೆ ಆರ್ಥಿಕ ದುರ್ದೆಸೆಯಿಂದ ಮಹಾರಾಷ್ಟ್ರ, ಕರ್ನಾಟಕಗಳಲ್ಲಿ ಅನೇಕ ನಾಟಕ ಕಂಪನಿಗಳು ನಿಂತು ಹೋದುವು. 1936ರಲ್ಲಿ ಶಿರಹಟ್ಟಿ ಕಂಪನಿಯನ್ನೂ ನಿಲ್ಲಿಸಬೇಕಾಯಿತು. ಅದೇ ವರ್ಷ ವೆಂಕೋಬರಾಯರಿಗೆ ಮಾತೃ ವಿಯೋಗವಾಯಿತು. ಅಸ್ವಸ್ಥತೆ ಮತ್ತು ಆರ್ಥಿಕ ತೊಂದರೆಗಳಿಂದ ಬಳಲಿದ ವೆಂಕೋಬರಾಯರು 1938ರ ಜೂಲೈ 15ರಂದು ನಿಧನರಾದರು.

ತಮ್ಮಯ್ಯನವರು 1939ರಲ್ಲಿ ಶಿರಹಟ್ಟಿ ಕಂಪನಿಯನ್ನು ಸಣ್ಣ ಪ್ರಮಾಣದಲ್ಲಿ ಪುನರಾರಂಭಿಸಿದರು. ತಾವೇ ಒಂದು ನಾಟಕ ಬರೆದು ಪ್ರದರ್ಶಿಸಿದರು. ಆದರೆ ಕಂಪನಿ ಮತ್ತೆ ಉಚ್ಛ್ರಾಯ ಹೊಂದದೆ ಒಂದೆರಡು ವರ್ಷಗಳಲ್ಲಿ ನಿಂತೇಹೋಯಿತು. ತಮ್ಮಯ್ಯನವರು ಅನಂತರ ಸಾಂಗಲಿ ಸಂಸ್ಥಾನದಲ್ಲಿ ಸರಕಾರೀ ಉದ್ಯೋಗಕ್ಕೆ ಸೇರಿ, 1960ರಲ್ಲಿ ನಿವೃತ್ತರಾದರು. ವೆಂಕೋಬರಾಯರ ಪತ್ನಿ ಲಕ್ಷ್ಮೀಬಾಯಿ 1952ರಲ್ಲಿ ನಿಧನರಾದರು.

ಕರ್ತೃತ್ವಶಾಲಿ ಹಾಗೂ ಸಾಹಸಿಯಾದ ವೆಂಕೋಬರಾಯರು ಕಂಪನಿಯಲ್ಲಿ ಒಗ್ಗಟ್ಟಿನಿಂದ ಕೆಲಸಮಾಡಿಸುತ್ತಿದ್ದರು. ಸಂಚಾರ ಕಾಲದಲ್ಲಿ ನಾಟಕ ಯಶಸ್ವಿಯಾಗಲು ಆಯಾ ಪ್ರದೇಶಕ್ಕೆ ತಕ್ಕಂತೆ ತಕ್ಕ ಬದಲಾವಣೆಗಳನ್ನೂ ಮಾಡುತ್ತಿದ್ದರು. ಶಿರಹಟ್ಟಿ ಕಂಪನಿ 35 ವರ್ಷ ಕಾಲ ನಾಟಕರಂಗಕ್ಕೆ ಸೇವೆ ಸಲ್ಲಿಸಿತು.

ಉತ್ತರ ಕರ್ನಾಟಕದಲ್ಲಿ ಕನ್ನಡ ರಂಗಭೂಮಿ ಹಾಗೂ ವೃತ್ತಿ ನಾಟಕ ಸಂಸ್ಥೆಗಳಿಗೆ ಗೌರವ ಸ್ಥಾನ ದೊರಕಿಸಿಕೊಟ್ಟ ಹಿರಿಯರಲ್ಲಿ ವೆಂಕೋಬರಾಯರು ಮೊದಲಿಗರು.

## ಶಿಲ್ಪ

ಮರದಲ್ಲಿ ಕೆತ್ತಿದ ದೇವ ದೇವತೆ, ಇಲ್ಲವೆ ಮೃಗ ಪಕ್ಷಿಗಳನ್ನು ಹಡಗುಗಳ ಮುಂಬದಿಯಲ್ಲಿ ಅಲಂಕಾರಕ್ಕಾಗಿ ಜೋಡಿಸುವ ಪದ್ಧತಿಯಿತ್ತು ಹಿಂದಿನ ಕಾಲದಲ್ಲಿ. ಹೀಗೆ ಅಲಂಕೃತವಾಗಿದ್ದ ಒಂದು ಹಡಗಿನಲ್ಲಿ ಅಪೂರ್ವ ಸುಂದರಿಯೊಬ್ಬಳ ಒಂದು ಪ್ರತಿಮೆ ಇದ್ದಿತು. ಇದರ ಸೌಂದರ್ಯ ಹಡಗಿನ ನಾವಿಕರನ್ನೆಲ್ಲ ಮರುಳುಗೊಳಿಸಿತು. ಅದನ್ನು ವೀಕ್ಷಿಸಿದ ನಾವಿಕರು ಆ ಸ್ತ್ರೀ ವಿಗ್ರಹ ತಮ್ಮನ್ನು ನೋಡಿ ನಕ್ಕಿತೆಂದು, ತಮ್ಮನ್ನು ಮಾತನಾಡಿಸಲು ತುಟಿಗಳನ್ನು ಅಲುಗಿಸಿತೆಂದು ಭ್ರಮಿಸುತ್ತಿದ್ದರು. ಪರಿಣಾಮವಾಗಿ ಹಲವಾರು ಮಂದಿ ನಾವಿಕರಿಗೆ ಹಗಲಿರುಳೂ ಇದೇ ಮೂರ್ತಿಯ ಧ್ಯಾನ. ಇವರು ಈ ಹಗಲುಗನಸಿಗೆ ಬಲಿಯಾಗಿ, ಕೆಲಸದಲ್ಲಿ ಹಿಂದಾಗುವುದನ್ನು ಕಂಡ ಹಡಗಿನ ಕಪ್ತಾನ, ಆ ಸುಂದರ ಸ್ತ್ರೀ ಮೂರ್ತಿಯನ್ನು ಹಡಗಿನಿಂದ ತೆಗೆಸಿ ಒಂದು ವಸ್ತುಸಂಗ್ರಹಾಲಯಕ್ಕೆ ಕೊಟ್ಟುಬಿಟ್ಟ. ಕೆಲವು ನಾವಿಕರಂತೂ ತಮ್ಮ ಮೆಚ್ಚಿನ ಮೂರ್ತಿ ಕಾಣೆಯಾದಾಗ ಆ ವಿರಹವನ್ನು ತಾಳಲಾರದೆ ಸಮುದ್ರಕ್ಕೆ ಹಾರಿ ಆತ್ಮಹತ್ಯೆ ಮಾಡಿಕೊಂಡರು. ಇತ್ತ ವಸ್ತುಸಂಗ್ರಹಾಲಯದಲ್ಲೂ ಇಂಥದೇ ಗೊಂದಲ. ಮೂರ್ತಿಯನ್ನು ಕಂಡು ಮೋಹ ಪರವಶರಾದವರು ಹಲವಾರು ಮಂದಿ. ಇನ್ನು ಈ ಮೂರ್ತಿಯನ್ನು ಹೀಗೆ ಪ್ರದರ್ಶಿಸುತ್ತಿದ್ದರೆ ಅಪಾಯ ಎಂದುಕೊಂಡು ಅಧಿಕಾರಿಗಳು ಅದನ್ನು ಹಳೇ ಸಾಮಾನು ದಾಸ್ತಾನಿನ ಕೊಠಡಿಯಲ್ಲಿರಿಸಿ, ಬಾಗಿಲು ಮುಚ್ಚಿಸಿ, ಬೀಗ ಹಾಕಿಬಿಟ್ಟರು.

ಇದೊಂದು ಪ್ರಚಲಿತ ದಂತಕಥೆ.



ದೇವೀಪ್ರಸಾದ್ ರಾಯ್‌ಚೌಧುರಿ ಕೃತ ಗಾಂಧೀಶಿಲ್ಪ

ಉತ್ತಮ ಶಿಲ್ಪದ ಆಕರ್ಷಕ ಶಕ್ತಿ ಅಂಥದ್ದು. ಪ್ರಾಚೀನ ಮನುಷ್ಯನೂ ಇದರ ಮಹತ್ವವನ್ನು ಕಂಡುಕೊಂಡಿದ್ದ. ಚಿತ್ರ ರಚನೆಯಂಥ ಕಲೆಗೆ ಹೋಲಿಸಿದರೆ ಶಿಲ್ಪ ಬಹಳ ಕಾಲ ಬಾಳುವಂಥದ್ದು. ಈಜಿಪ್ಟ್, ಬ್ಯಾಬಿಲೋನಿಯ, ಅಸ್ಸೀರಿಯ, ಗ್ರೀಕ್ ಮತ್ತು ರೋಮ್ ನಾಗರಿಕತೆಗಳಲ್ಲಿ ಶಿಲ್ಪದ ಸ್ಥಾನ ಇತರ ಲಲಿತ ಕಲೆಗಳಿಗಿಂತ ಹಿರಿಯದಾಗಿತ್ತು. ವಾಸ್ತವವಾಗಿ ಹಲವಾರು ಪ್ರಾಚೀನ ಸಂಸ್ಕೃತಿಗಳ ವಿಚಾರ ನಮಗೆ ತಿಳಿದಿರುವುದು ಆಯಾ ಕಾಲಗಳ ಶಿಲ್ಪಗಳಿಂದ.

ಗುಹೆಗಳಲ್ಲಿ ವಾಸಿಸುತ್ತಿದ್ದ ಕಾಲದಲ್ಲಿ ಮಾನವ ತನ್ನ ಒರಟು ಉಪಕರಣಗಳಿಂದ ಪ್ರಾಣಿಗಳ ಬೇಟೆಯಾಡುವ ಮನುಷ್ಯರ ಚಿತ್ರಗಳನ್ನು ಕೆತ್ತಿದ್ದುಂಟು. ಮಾನವನ ಚರಿತ್ರೆಯಲ್ಲಿ ಕಲೆ ಕಾಲಿಟ್ಟದ್ದು ಈ ರೂಪದಲ್ಲಿ. ಕಲ್ಲಿನಲ್ಲಿ ಆಕೃತಿಗಳನ್ನು ಕೆತ್ತುವ ಕಲೆ ಮೊದಲ ಹಂತ. ಕ್ರಮೇಣ ಉತ್ತಮ ಹತಾರಗಳು ತಯಾರಾದಂತೆ ಶಿಲ್ಪದಲ್ಲೂ ನಯ ನೈಜತೆಗಳು ಹೆಚ್ಚಿದುವು. ಮರ, ದಂತ ಇವು ಉಪಯೋಗಕ್ಕೆ ಬಂದು ಈ ಕಲೆ ಬೆಳೆಯಿತು. ಸುಮಾರು ಮುನ್ನೂರು ವರ್ಷ ಹಿಂದಿನವರೆಗೂ ಮರದ ಕೆತ್ತನೆಗಳಿಗೆ ಬಣ್ಣಗಳನ್ನು ಬಳಿಯುವುದು ಬಳಕೆಯಲ್ಲಿತ್ತು. ಈಗಲೂ ಕೂಡ ಈ ಸಂಪ್ರದಾಯ ಉಳಿದಿದೆ.

ಚಿಕ್ಕ ಮಕ್ಕಳು ಜೇಡಿಮಣ್ಣಿನಲ್ಲಿ ಆಕೃತಿಗಳನ್ನು ರೂಪಿಸುತ್ತ ಆನಂದ ಪಡುತ್ತಾರೆ. ಇದು ಒಂದು ರೀತಿಯ ಶಿಲ್ಪವೇ. ಜೇಡಿ, ಮೇಣ ಮುಂತಾದ ಮೃದು ಪದಾರ್ಥಗಳಲ್ಲಿ ರೂಪಿಸುವ ಕಲೆಗೆ ಲೆಪ್ಪ ಕೆಲಸ ಎಂಬ ಹೆಸರೂ ಇದೆ. ಕಲ್ಲು ಮರಗಳಂಥ ಗಟ್ಟಿ ವಸ್ತುಗಳನ್ನು ಕೆತ್ತಿ ರೂಪು ಕೊಡುವ ವಿಧಾನದಿಂದ ಇದು ಬಹಳ ಭಿನ್ನವಾದದ್ದು. ಮೃದು ಪದಾರ್ಥವನ್ನು ಸ್ವಲ್ಪ ಸ್ವಲ್ಪವೇ ಸೇರಿಸಿ ವಿನ್ಯಾಸವನ್ನು ಪೂರ್ತಿಗೊಳಿಸುತ್ತಾರೆ. ಇಂಥ ಕೃತಿಗಳು ಹೆಚ್ಚು ಕಾಲ ಬಾಳಬೇಕಾದರೆ ಈ ಆಕೃತಿಗಳನ್ನು ಕಂಚಿನಂಥ



[illegible] ನೂತನ ಶೈಲಿ

ಲೋಹವನ್ನು ಎರಕ ಹುಯ್ಯ ಬೇಕಾಗುತ್ತದೆ. ಮೊದಲು ಜೇಡಿ ಅಥವಾ ಮೇಣದ ಆಕೃತಿಯಿಂದ ಪ್ಲಾಸ್ಟರ್‌ಸಂಘಪದಾರ್ಥದಿಂದ ಅಚ್ಚನ್ನು ಪಡೆಯಬೇಕು. ಟೊಳ್ಳಾದ ಅಚ್ಚಿನೊಳಕ್ಕೆ ಕರಗಿದ ಬಿಸಿ ಲೋಹವನ್ನು ಹುಯ್ದು ಹಾಗೆಯೇ ಬಿಟ್ಟರೆ ಅದು ಆರಿದ ಮೇಲೆ ಗಟ್ಟಿಯಾಗಿ ಮೂಲ ಆಕೃತಿಯ ಪ್ರತಿರೂಪವಾಗುತ್ತದೆ. ಅನಂತರ ಅಚ್ಚನ್ನು ತೆಗೆದು ಬಿಡುತ್ತಾರೆ. ಇಂಥ ಕೃತಿ ಬಹುಕಾಲ ಬಾಳುತ್ತದೆ. ಕೆತ್ತಿ ಮಾಡಿದ ಶಿಲ್ಪ ಬಹಳ ದೊಡ್ಡದಾಗಿ ಭವ್ಯವಾಗಿ ಇರಬಹುದಾದರೂ ಲೆಪ್ಪ ಕೆಲಸದಿಂದ ಮಾಡಿದ ಕೃತಿಯ ನಯ ಇದಕ್ಕೆ ಬರುವುದಿಲ್ಲ. ಈ ನಯವನ್ನು ಸಾಧಿಸಲು ಅದಕ್ಕೆ ಮೆರುಗು ಕೊಡಬೇಕಾಗುತ್ತದೆ.

ನಮ್ಮ ಅಂಚೆ ಚೀಟಿಗಳಲ್ಲಿ ನೋಟುಗಳಲ್ಲಿ ಸಿಂಹದ ತಲೆಯಿರುವ ರಾಷ್ಟ್ರ ಲಾಂಛನದ ಚಿತ್ರವನ್ನು ಕಾಣಬಹುದು. ಆದರೆ ಇದೇ ಚಿತ್ರ ಒಂದು ನಾಣ್ಯದ ಮುಖದಲ್ಲಿ ಮೂಡಿಸಲ್ಪಟ್ಟಾಗ ಅದು ಶಿಲ್ಪ ಅನಿಸುತ್ತದೆ. ಇದಕ್ಕೆ ಉಬ್ಬುಚಿತ್ರ ಎಂಬ ಹೆಸರೂ ಉಂಟು. ಉಬ್ಬುಚಿತ್ರ ಎಂದರೆ ಚಪ್ಪಟೆಯಾದ ಹಿನ್ನೆಲೆಯಲ್ಲಿ ಉಬ್ಬಿರುವಂತೆ ರೂಪಿಸಿದ ಶಿಲ್ಪ.

"ಸತ್ತವರು ಸಂತುಷ್ಟರಾಗಿರಬೇಕಾದರೆ ಅವರ ಶವಗಳನ್ನು ಕೆಡದಂತೆ ಉಳಿಸಬೇಕು. ಅಥವಾ ಅವರ ಪ್ರತಿಮೆಗಳನ್ನಾದರೂ ನಿರ್ಮಿಸಬೇಕು" ಎಂಬುದು ಈಜಿಪ್ಟಿನ ಜನರ ಅಭಿಪ್ರಾಯವಾಗಿತ್ತು. ಆದ್ದರಿಂದ ಅಲ್ಲಿ ಮನುಷ್ಯನ ಪ್ರತಿಮೆಗಳನ್ನು ರಚಿಸುವ ಕಲೆ ಬೆಳೆಯಿತು.



ನೈಜೀರಿಯದ 16ನೆಯ ಶತಮಾನದ ಕಂಚಿನ ಪ್ರತಿಮೆ

ಮಾನವ ಆಕೃತಿಯ ರಚನೆಯ ಕಲೆ ಪರಿಪೂರ್ಣತೆಯನ್ನು ಪಡೆದದ್ದು ಗ್ರೀಕರಕಾಲದಲ್ಲಿ. ಮಾನವ ಆಕೃತಿಯುನ್ನು ನೈಜ ರೀತಿಯಲ್ಲಿ ನಿರ್ಮಿಸಲು ಗ್ರೀಕರು ಪ್ರಯತ್ನಿಸಿದರು. ಅಲ್ಲದೆ ದೇವದೇವತೆಗಳ ಬಗೆಗೆ ತಾವು ರೂಢಿಸಿಕೊಂಡಿದ್ದ ಕಲ್ಪನೆಯನ್ನು ಅವರು ಶಿಲ್ಪದ ಮೂಲಕ ಪರಿಣಾಮಕಾರಿಯಾಗಿ ನಿರೂಪಿಸಿದರು; ತಮ್ಮ ಭಾವನೆಗಳಿಗೆ ಮೂರ್ತ ಸ್ವರೂಪವನ್ನು ಕೊಟ್ಟರು. ಇವರ ಪ್ರತಿಮೆಗಳಲ್ಲಿ ಮಾನವನ ಆದರ್ಶ ರೂಪವನ್ನು ಕಾಣಬಹುದು. ರೋಮನರು ಗ್ರೀಕರನ್ನು ಗೆದ್ದು ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರೂ ಗ್ರೀಕರ ಕಲೆಗೆ ಮಾರುಹೋದರು. ಅವರ ಕಲೆಯನ್ನು ಅಳಿಯಲು ಬಿಡಲಿಲ್ಲ. ಅದರ ಆಧಾರದ ಮೇಲೆ ತಮ್ಮದೇ ಆದ ಶಿಲ್ಪ ರಚನಾ ವಿಧಾನವನ್ನು ರೂಢಿಸಿಕೊಂಡರು.

ಕ್ರಿ.ಶ. 3–4ನೆಯ ಶತಮಾನಗಳು ಕ್ರೈಸ್ತಮತ ಎಲ್ಲೆಲ್ಲಿಗೂ ಹರಡುತ್ತಿದ್ದ ಕಾಲ. ಆಗ ಚರ್ಚ್‌ಗಳಲ್ಲಿ ಸ್ಥಾಪಿಸಲು ಬೈಬಲ್ ಕಥೆಗಳಲ್ಲಿ ಬರುವ ಸಂತರ, ದೇವದೂತರ ಪ್ರತಿಮೆಗಳು ಹೆಚ್ಚು ಸಂಖ್ಯೆಯಲ್ಲಿ ರಚಿತವಾದುವು. ಆದರೂ ಆ ಕಾಲದ ಶಿಲ್ಪಿಗಳು ಸಾಮಾನ್ಯ ಮಾನವನನ್ನು ನಿರೂಪಿಸುವ ಶಿಲ್ಪ ರಚನೆಯನ್ನು ಸಂಪೂರ್ಣವಾಗಿ ಕೈಬಿಡಲಿಲ್ಲ. ಒಂದು ಪ್ರಾರ್ಥನಾ ಮಂದಿರದ ಗೋಡೆಯ ತುದಿಯಲ್ಲಿ 'ಹಲ್ಲು ನೋವಿನಿಂದ ನರಳುವ ಮನುಷ್ಯ'ನ ಶಿಲ್ಪವಿದೆ; ಒಬ್ಬಾತ ಬಾತುಕೊಂಡಿರುವ ತನ್ನ ಕೆನ್ನೆಯನ್ನು ಹಿಡಿದು ಯಾತನೆ ಪಡುತ್ತಿರುವಂತೆ ನಿರೂಪಿತವಾಗಿದೆ. ಆರಂಭ ಕಾಲದ ಇಗರ್ಜಿ ಶಿಲ್ಪ, ಬಹುಮಟ್ಟಿಗೆ ರೋಮನ್ ಶಿಲ್ಪದ ಪ್ರತಿರೂಪವಾಗಿತ್ತಾದರೂ ಇದರಲ್ಲಿ ಒಂದು ವ್ಯತ್ಯಾಸವುಂಟು. ಇಗರ್ಜಿ ಶಿಲ್ಪದ ಮೂರ್ತಿಗಳು ಬೆತ್ತಲೆ ವಿಗ್ರಹಗಳಲ್ಲ. ಪೂರ್ತಿ ಮೈಮುಚ್ಚುವಂತೆ, ಬಟ್ಟೆ ತೊಟ್ಟಿರುವಂತೆ ಇವನ್ನು ರೂಪಿಸಿದೆ.



ಮೌಂಟ್‌ರಷ್ಮೋರಿನ ಶಿಲೆಯಲ್ಲಿ ನಾಲ್ವರು ಅಮೆರಿಕನ್ ಅಧ್ಯಕ್ಷರ ಬೃಹತ್ ಸ್ಮಾರಕ: ಶಿಲ್ಪದಲ್ಲಿ ಲಿಂಕನನ ಮೂಗು ಐದು ಮೀಟರ್ ಉದ್ದ

15–16ನೆಯ ಶತಮಾನ ಇಟಲಿಯ ಕಲೆಯಲ್ಲಿ ನವೋದಯ ಕಾಲ. ಆಗಿನ ಶಿಲ್ಪಿಗಳು ಶ್ರೇಷ್ಠ ಕಲಾವಿದರು. ತಮ್ಮ ಕೃತಿಗಳಿಗೆ ಹೊಸ ಜೀವಕಳೆ ತುಂಬಿದರು. ಸುಂದರವಾದ, ಗಂಭೀರವಾದ ಮೂರ್ತಿಗಳನ್ನು ರಚಿಸಿದರು. ಡೊನಾಟೆಲ್ಲೋ (1380—1466) ಈ ಹೊಸ ಪಂಥದ ಸ್ಥಾಪಕನೆನ್ನಬಹುದು. ಅನಂತರದ ಮೈಕೆಲೆಂಜಲೋ (1475—1574) ಅತಿ ಶ್ರೇಷ್ಠ ಶಿಲ್ಪಿ. ದೊಡ್ಡ ಬಂಡೆಯನ್ನು ನೋಡಿದೊಡನೆ ಅದರೊಳಗೆ





ನಾಟ್ಯ ಸರಸ್ವತಿ – ಕಂಚಿನ ಪ್ರತಿಕೃತಿ : ರಚನೆ ಜಿಂಣಾಚಾರ್ಯ

ತನ್ನ ಭಾವೀ ಶಿಲ್ಪ ಮೂರ್ತಿಯ ರೂಪವನ್ನು ಕಾಣುವ 'ದರ್ಶನಶಕ್ತಿ' ಇವನಿಗಿತ್ತು. ಸ್ವತಃ ದೊಡ್ಡ ಆಕಾರದ ಆಳಾದ ಮೈಕೆಲೆಂಜಲೋ 'ಡೇವಿಡ್', 'ಮೋಸಸ್' ಮುಂತಾದ ಬೃಹದಾಕಾರದ ಮೂರ್ತಿಗಳನ್ನು ರಚಿಸಿದ್ದಾನೆ.

ಭಾರತದಲ್ಲೂ ಶಿಲ್ಪಕಲೆ ನಾನಾ ಮುಖವಾಗಿ ಬೆಳೆಯಿತು. ನಮ್ಮ ರಾಷ್ಟ್ರದ ವಿವಿಧ ಭಾಗಗಳಲ್ಲಿರುವ ದೇವಾಲಯಗಳಲ್ಲಿ ಅನೇಕ ವಿಧವಾದ ಮೂರ್ತಿ ಶಿಲ್ಪಗಳನ್ನೂ ಲತೆಗಳ, ಪ್ರಾಣಿಗಳ ಆಕಾರಗಳನ್ನೂ ಉಪಯೋಗಿಸಿ, ರೇಖಾಗಣಿತದ ವಿನ್ಯಾಸಗಳನ್ನು ಅನುಸರಿಸಿ ರಚಿಸಿರುವ ಅಲಂಕರಣ ಚಿತ್ರಗಳನ್ನು ಕಾಣಬಹುದು. ಇವೆಲ್ಲ ಬಹುಮಟ್ಟಿಗೆ ಕಲ್ಲಿನಿಂದ ರೂಪಿಸಲ್ಪಟ್ಟಿವೆ. ಇದಲ್ಲದೆ ಶ್ರವಣಬೆಳಗೊಳದಲ್ಲಿರುವ ಗೊಮ್ಮಟನಂಥ ಬೃಹದಾಕಾರದ ಏಕ ಶಿಲಾವಿಗ್ರಹಗಳ ನಿರ್ಮಾಣವೂ ನಮ್ಮಲ್ಲಿ ನಡೆದಿದೆ.

ಮರವನ್ನು ಮಾಧ್ಯಮವನ್ನಾಗಿ ಉಪಯೋಗಿಸಿ ರಚಿಸಿರುವ ಅಮೂಲ್ಯ ಕೃತಿಗಳನ್ನು ಭಾರತದಲ್ಲಿ ಕಾಣಬಹುದು. ಕರ್ನಾಟಕದ ಮೂಡಬಿದರೆಯಲ್ಲಿರುವ ಬಸದಿಯ ಕೆತ್ತನೆ ಕೆಲಸದ ವೈಖರಿ ಈ ಪ್ರಕಾರದ ಕಲಾ ನಿರ್ಮಾಣಕ್ಕೆ ಒಂದು ಉತ್ತಮ ಉದಾಹರಣೆ.

ಅರಸರು, ರಾಜಕಾರಣಿಗಳು ಮತ್ತು ಇತರ ವಿಖ್ಯಾತ ವ್ಯಕ್ತಿಗಳ ಪ್ರತಿಮೆಗಳನ್ನು ಅನೇಕ ಮುಖ್ಯ ಸ್ಥಳಗಳಲ್ಲಿ ಕಾಣಬಹುದು. ಹತ್ತೊಂಬತ್ತನೆಯ ಶತಮಾನದಲ್ಲಿ ಹೆಚ್ಚಾಗಿ ನಡೆದದ್ದು ಇಂಥ ಶಿಲ್ಪದ ರಚನೆ.

ಪೋಷಾಕಿನ ಫ್ಯಾಷನ್ ವರ್ಷದಿಂದ ವರ್ಷಕ್ಕೆ ಬದಲಾಗುವಂಥದು; ಶಿಲ್ಪವಾದರೋ ನೂರಾರು ವರ್ಷ ಬಾಳುವಂಥದ್ದು. ಆದ್ದರಿಂದ ಶಿಲ್ಪದ ಮೂಲಕ ಗಣ್ಯವ್ಯಕ್ತಿಗಳನ್ನು 'ಅಮರ'ರಾಗಿಸುವಾಗ ಅವರಿಗೆ ಯಾವ ರೀತಿಯ ಬಟ್ಟೆ ಹೊದಿಸಬೇಕು? ಎಂಬುದು ಒಂದು ಸಮಸ್ಯೆ. ಬಟ್ಟೆಬರೆಯ ಸೂಕ್ಷ್ಮ ವಿವರಗಳ ಕಡೆಗೆ ಲಕ್ಷ್ಯ ಕೊಡದೆ ಸದಾ ಕಾಲಕ್ಕೂ ಅನ್ವಯಿಸುವಂಥ ಸರಳವಾದ, ಎದ್ದು ಕಾಣದಿರುವಂಥ ಉಡುಗೆಯನ್ನು ರೂಪಿಸುವುದು ಒಂದು ವಿಧಾನ. ಶಿಲ್ಪದ ರಚನೆಯ ಕಾಲದಲ್ಲಿ ಬಳಕೆಯಲ್ಲಿರುವ ಉಡುಗೆ ತೋರಿಸುವುದು ಇನ್ನೊಂದು ರೀತಿ. ಹೀಗಲ್ಲದೆ, ವ್ಯಕ್ತಿಯ ಕಾಲ, ಶಿಲ್ಪರಚಿತವಾದ ಕಾಲ ಎರಡಕ್ಕೂ ಅಸಂಬದ್ಧವೆನಿಸುವಂಥ ಉಡುಪನ್ನು ರೂಪಿಸುವುದೂ ಉಂಟು. ಉದಾಹರಣೆಗೆ ಲಂಡನಿನ ಸೇಂಟ್ ಪಾಲ್ ಪ್ರಾರ್ಥನಾ ಮಂದಿರದಲ್ಲಿರುವ ಆಂಗ್ಲ ಸಾಹಿತಿ ಡಾ. ಜಾನ್ಸನನ ಪ್ರತಿಮೆ ರೋಮನ್ ಕಾಲದ ದೊಗಲೆ ಅಂಗವಸ್ತ್ರ ಹೊದ್ದುಕೊಂಡಿದೆ. ಆಂಟೋನಿಯೋ ಕ್ಯಾನೊವಾ ಎಂಬ ಇಟಲಿಯ ಶಿಲ್ಪಿ ರಚಿಸಿದ ನೆಪೋಲಿಯನನ ಪ್ರತಿಮೆ ಪೂರ್ತಿ ಬೆತ್ತಲೆಯಾಗಿದೆ. ಪ್ರಾಚೀನ ಗ್ರೀಕರೂ ಶಿಲ್ಪದಲ್ಲಿ

ಜಾವಾದ ಬೊರೊಬುದೂರ್‌ನಲ್ಲಿ ಶಿಲೆಯ ಮೇಲೆ ಕಥಾನಿರೂಪಣೆ : ಪಯಣ ಬೆಳೆಸುತ್ತಿರುವ ಅರಸು ಕುವರ : 8ನೆಯ ಶತಮಾನದ ಸೃಷ್ಟಿ





ರಷ್ಯದ ಕ್ರಾಂತಿ ನಾಯಕ

ಉಡುಗೆಯನ್ನು ತೋರಿಸದೆಯೇ ಪೋಷಾಕಿನ ಸಮಸ್ಯೆಯನ್ನು ಬಗೆಹರಿಸುತ್ತಿದ್ದರು.

ಹತ್ತೊಂಬತ್ತನೆಯ ಶತಮಾನದಲ್ಲಿ ಶಿಲ್ಪ ರಚನೆಯ ಬಗೆಗೆ ಕೆಲವು ಹೊಸಮಾರ್ಗಗಳು ಹುಟ್ಟಿಕೊಂಡುವು. ಆಗಸ್ಟ್ ರೊಡಿನ್‌ನನ್ನು (1840 – 1917) 'ಆಧುನಿಕ ಶಿಲ್ಪದ ಪಿತಾಮಹ' ಎನ್ನುತ್ತಾರೆ. ಎಲ್ಲ ಕ್ರಾಂತಿಕಾರಿ ಕಲಾವಿದರಂತೆ ರೊಡಿನ್ ಸಹ ಬಹಳ ಕಾಲ ಜನನಿಂದೆಗೆ ಗುರಿಯಾಗಬೇಕಾಯಿತು. ಒರಟಾದ ಮೇಲ್ಮೈ ಉಳ್ಳ ಇವನ ಶಿಲ್ಪವನ್ನು ನೋಡಿ ಜನ ಮೊದಲು "ಇದು ಅವಲಕ್ಷಣ"ಎಂದರು. ಆದರೆ "ಜೀವಕಳೆಯ ಯಾವ ಕೃತಿಯೂ ವಿಕಾರವೆನಿಸದು" ಎಂದು ರೊಡಿನ್ ಸಾರಿದ.

1877ರಲ್ಲಿ ಪ್ಯಾರಿಸಿನಲ್ಲಿ ರೊಡಿನ್‌ನ 'ಕಂಚಿನ ಯುಗ' ಎಂಬ ಶಿಲ್ಪಕೃತಿ ಪ್ರದರ್ಶಿತವಾಯಿತು. ರೊಡಿನ್ ಈ ಕೃತಿಯನ್ನು ತಾನೇ ರಚಿಸಿದನೆಂದು ಜನ ನಂಬಲಿಲ್ಲ. ಜೀವಂತ ವ್ಯಕ್ತಿಯಿಂದ ನೇರವಾಗಿ ಅಚ್ಚನ್ನು ತಯಾರಿಸಿ, ಅದರಲ್ಲಿ ಎರಕ ಹುಯ್ದು ಈ ಕೃತಿಯನ್ನು ರೂಪಿಸಿ, ಜನರನ್ನು ಮೋಸಗೊಳಿಸಿದ್ದಾನೆ ಎಂಬ ಆಪಾದನೆ ಹೊರಟಿತು. ಸರಕಾರೀ ಅಧಿಕಾರಿಗಳು ಈ ಬಗೆಗೆ ತನಿಖೆ ಮಾಡಲು ರೊಡಿನ್‌ನ ಮನೆಗೆ ಬಂದರು. ಈ ಆಪಾದನೆಗೆ ಬುಡವಿಲ್ಲವೆಂಬುದು ಅವರಿಗೆ ಮನದಟ್ಟಾಯಿತು. ಅವರು ಇವನ ಪ್ರತಿಭೆಯನ್ನು ಗುರುತಿಸಿದ್ದು ಮಾತ್ರವಲ್ಲದೆ, ಈ ಪ್ರತಿಮೆಯನ್ನು ಕೊಂಡುಕೊಳ್ಳುವಂತೆ ಸರಕಾರಕ್ಕೆ ಶಿಫಾರಸನ್ನು ಮಾಡಿದರು. ಆದರೂ ಮುಂದೆ ಇಂಥ ಆಪಾದನೆಗಳಿಗೆ ಅವಕಾಶವಿಲ್ಲದಂತೆ ಮಾಡಲು ತನ್ನ ಕೃತಿಗಳನ್ನು ನೈಜ ಆಕಾರಕ್ಕಿಂತ ಸಾಕಷ್ಟು ದೊಡ್ಡದಾಗಿಯೇ ರೊಡಿನ್ ನಿರ್ಮಿಸಿದ.



ಕ್ರಿ.ಪೂ. ೫೦ರ ಗ್ರೀಕ್ ಮೂಲದ ಶಿಲ್ಪ ಸೃಷ್ಟಿ : ಶಿಲೆಯಲ್ಲಿ ಯಾತನೆ

ಕಲೆ ಪ್ರಕೃತಿಯ ಕೇವಲ ಅನುಕರಣೆಯಾಗಿರಬಾರದು, ಸೃಷ್ಟ್ಯಾತ್ಮಕ ಅಂಶವನ್ನು ಒಳಗೊಂಡ ಕೃತಿಯಾಗಿರಬೇಕು ಎಂಬುದು ಆಧುನಿಕ ಶಿಲ್ಪಿಗಳ ಅಭಿಪ್ರಾಯ. ಆದ್ದರಿಂದಲೇ ಆಧುನಿಕ ಶಿಲ್ಪಕೃತಿಗಳು ಹಿಂದಿನ ಕಾಲದ ಶಿಲ್ಪ ಕೃತಿಗಳಿಗಿಂತ ಭಿನ್ನವಾಗಿ ಕಾಣುತ್ತವೆ. ಅವುಗಳಲ್ಲಿ ಸೂಕ್ಷ್ಮತೆ, ನಾಜೂಕು ಅಷ್ಟಾಗಿರುವುದಿಲ್ಲ. ಅವು ಸರಳವಾಗಿಯೂ ಸಾಂಕೇತಿಕವಾಗಿಯೂ ಇರುವುದೇ ಹೆಚ್ಚು. ರುಮೇನಿಯದ ಕಾನ್‌ಸ್ಟಾಂಟಿನ್ ಬ್ರಾಕೂಷ್ (1876–1957) ಮಾಡಿದ 'ಹೊಸದಾಗಿ ಹುಟ್ಟಿದ ಮಗು' ಶಿಲ್ಪ ಈ ಆಧುನಿಕ ದೃಷ್ಟಿಯನ್ನು ಪ್ರತಿನಿಧಿಸುತ್ತದೆ ಎನ್ನಬಹುದು. ಅಮೃತ ಶಿಲೆಯಲ್ಲಿ ಕೆತ್ತಿದ ಕೋಳಿಮೊಟ್ಟೆ ಆಕಾರದ ಪ್ರತಿಮೆ ಇದು. ನೋಡುವವರ ಕಲ್ಪನೆಯನ್ನು ಪ್ರಚೋದಿಸಬೇಕೆಂಬುದು ಆಧುನಿಕ ಶಿಲ್ಪದ ಉದ್ದೇಶ. ಶಿಲ್ಪದಲ್ಲಿ ಕಾಣುವ ರಂಧ್ರಗಳು ಅದರ ಘನಭಾಗದಷ್ಟೇ ಅರ್ಥಪೂರ್ಣವಾಗಿ ಇರಬಹುದು ಎಂಬುದು ಅವರ ನಿಲುವು. ಆಧುನಿಕ ಶಿಲ್ಪಿಗಳು ತಮ್ಮ ಕೃತಿಗಳನ್ನು ಇರಿಸಲು ಸುಂದರವಾದ ಕಟ್ಟಡಗಳ ಬದಲಿಗೆ ತೆರೆದ ಬಯಲನ್ನು ಆರಿಸಿಕೊಳ್ಳುತ್ತಾರೆ. ಶಿಲ್ಪಿ ತಾನು ರಚಿಸುವ ಶಿಲ್ಪದ ಆಕಾರವನ್ನು ಮಾತ್ರವಲ್ಲದೆ ಆ ಶಿಲ್ಪ ಎಲ್ಲಿ ಸ್ಥಾಪಿತವಾಗುತ್ತದೆ ಹಿನ್ನೆಲೆಯ



ಕನ್ನಡಿಗ ಶಿಲ್ಪಿ
ಗುರುರಾಜ ವರ್ಣೇಕರ



ವಾಷಿಂಗ್ಟನಿನಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ
ಮಹಾನ್ ಅಧ್ಯಕ್ಷ ಲಿಂಕನನ ಸ್ಮಾರಕ

ಸ್ವರೂಪವೇನು, ಆ ಸನ್ನಿವೇಶದಲ್ಲಿ ಶಿಲ್ಪ ಹೇಗೆ ಕಾಣಬಹುದು ಎಂಬ ಅಂಶಗಳನ್ನು ಗಮನಿಸಬೇಕೆಂಬುದು ಇಂದಿನ ಶಿಲ್ಪಿಗಳ ಅಭಿಮತ. ಅನೇಕ ಸಂದರ್ಭಗಳಲ್ಲಿ ಪ್ರಾಚೀನ ವಾಸ್ತುಶಿಲ್ಪ ಕಲಾವಿದರೂ ಈ ಅಂಶಕ್ಕೆ ಗಮನ ಕೊಟ್ಟಿರುವುದು ಕಂಡುಬರುತ್ತದೆ.

ಶಿಲ್ಪವನ್ನು ರಚಿಸುವ ರೀತಿ ಬದಲಾದಂತೆ ಅದಕ್ಕಾಗಿ ಹೊಸ ಹೊಸ ವಸ್ತುಗಳ ಉಪಯೋಗವೂ ಇತ್ತೀಚೆಗೆ ಹೆಚ್ಚುತ್ತಿದೆ. ಪ್ಲಾಸ್ಟಿಕ್, ಕ್ರೋಮಿಯಂ, ಉಕ್ಕು—ಇವನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಲಾಗುತ್ತದೆ. ಮರದ ಪೆಟ್ಟಿಗೆಗಳು, ಲೋಹದ ಸರಿಗೆ, ಲೋಹದ ಹಾಳೆ, ಮುರಿದ ಮೋಟರು ಭಾಗಗಳು, ಹಳೆಯ ಮೇಜು, ಕುರ್ಚಿಗಳ ತುಂಡುಗಳು —ಇಂಥವನ್ನೆಲ್ಲ ಶಿಲ್ಪಕೃತಿ ರಚನೆಯಲ್ಲಿ ಉಪಯೋಗಿಸಲಾಗುತ್ತಿದೆ. ಶಿಲ್ಪಕ್ಕೆ ಯಾವ ಅರ್ಥವೂ ಇರಬಾರದು ಎಂಬುದು 'ದಾದಾ' ಎಂಬ ಆಧುನಿಕ ಕಲಾ ಪ್ರಕಾರದ ಪ್ರತಿಪಾದಕರ ಅಭಿಪ್ರಾಯ.

ಆಧುನಿಕ ಶಿಲ್ಪವನ್ನು ಕನ್ನಡಿಯ ಗೂಡಿನೊಳಗೆ ಇರಿಸುವುದು ಕಡಮೆ. ಅಲೆಗ್ಸಾಂಡರ್ ಕಾಲ್ಡರ್ (ಜನನ 1898) ಎಂಬ ಅಮೆರಿಕದ ಶಿಲ್ಪಿ ಕಟ್ಟಡದ ಛಾವಣಿಯಿಂದ ತೂಗಹಾಕಲೆಂದೇ ಮಾಡಿದ 'ಚಲಿಸುವ' ಆಕೃತಿಗಳನ್ನು ರಚಿಸಿದ್ದಾನೆ. ಲೋಹದ ತುಂಡುಗಳು, ಕೀಲುಗಳಿಂದ ಜೋಡಿಸಿದ ಸರಿಗೆಗಳು ಮುಂತಾದುವುಗಳಿಂದ ನಿರ್ಮಿಸಿದ ಈ ಆಕೃತಿಗಳು ಗಾಳಿ ಬಂದಾಗ ಚಿತ್ರವಿಚಿತ್ರವಾಗಿ ನಾನಾ ರೂಪಗಳನ್ನು ತಾಳುತ್ತವೆ. ಈಚೆಗೆ ಕಂಪ್ಯೂಟರ್ ಪ್ರೇರಣೆಯಿಂದ ಚಲಿಸುವ ಶಿಲ್ಪಗಳೂ ರಚಿತವಾಗಿವೆ.

ನೋಡಿ : ಗೊಮ್ಮಟೇಶ್ವರ ; ಚರಿತ್ರಪೂರ್ವ ಕಲೆ ; ಡೊನಾಟೆಲೋ ; ಮೈಕೆಲೆಂಜಲೋ ; ರೊಡಿನ್

## ಶಿವರಾಮ ಕಾರಂತ

ಕಾರಂತರು ಪಳಗಿಸಿಕೊಂಡಿರುವ ಸಾಹಿತ್ಯ ಪ್ರಕಾರ ಒಂದೇ ? ಎರಡೇ ? ಕಥೆ, ಕಾದಂಬರಿ, ಗೀತನಾಟಕ, ಶಿಶುಸಾಹಿತ್ಯ, ವಿಜ್ಞಾನ ಸಾಹಿತ್ಯ –ಎಲ್ಲದರಲ್ಲೂ ಇವರದು ಹಿರಿಯ ಸಾಧನೆ. ಅಷ್ಟೇಕೆ, ಕಾರಂತರು ಬರೀ ಸಾಹಿತಿ ಮಾತ್ರವಲ್ಲ ; ಚಿತ್ರಕಾರ, ನಟ, ನರ್ತಕನೂ ಹೌದು. "ಕಾರಂತರು ಕೇವಲ ಒಬ್ಬ ವ್ಯಕ್ತಿಯಲ್ಲ, ಒಂದು ಸಂಸ್ಥೆ" ಎನ್ನುವುದು ಈ ಕಾರಣದಿಂದಲೇ.

ಅರಬ್ಬೀ ಸಮುದ್ರದ ಕರಾವಳಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೋಟ ಸಣ್ಣ ಊರು. 1902ರ ಅಕ್ಟೋಬರ್ 10ರಂದು ಇಲ್ಲಿ ಹುಟ್ಟಿದ ಶಿವರಾಮ ಕಾರಂತರು ಕಡಲನ್ನು ಎಷ್ಟು ನೋಡಿದರೂ ದಣಿಯರು. ಅದನ್ನು ಕುರಿತು ಎಷ್ಟು ಬರೆದರೂ ಬೇಸರಗೊಳ್ಳರು. 'ಕಡಲ ತೀರದ ಭಾರ್ಗವ' ಎಂಬುದು ಮಿತ್ರರು ಇವರಿಗೆ ಇಟ್ಟ ಹೆಸರು.

ಕಾರಂತರು ಹೈಸ್ಕೂಲಿನಲ್ಲಿರುವಾಗ ಪುಸ್ತಕಗಳೇ ಅವರ ಗೆಳೆಯರು. ಕನ್ನಡದಲ್ಲಿ ಆಗ ತಾನೇ ಬರುತ್ತಿದ್ದ ಕಾದಂಬರಿಗಳನ್ನು ಓದಿ ತಾವೂ ಅಂಥದೇ ಪುಸ್ತಕಗಳನ್ನು ಬರೆಯಬೇಕು ಎಂದುಕೊಂಡದ್ದುಂಟು. ಕಾಲೇಜು ಸೇರಿದವರು, ಮಹಾತ್ಮಾ ಗಾಂಧಿಯವರ ಅಸಹಕಾರ ಚಳುವಳಿಯಿಂದ ಆಕರ್ಷಿತರಾಗಿ ಓದನ್ನು ಬಿಟ್ಟರು. ಊರೂರು ತಿರುಗಿ ಜನರೊಡನೆ ಬೆರೆತು ಅನುಭವ ಗಳಿಸಿದರು. ಅವರ ದೃಷ್ಟಿಕೋನ ವಿಶಾಲವಾಯಿತು.



...ಹತ್ತು ಮುಖಗಳು : ಕಾರಂತ

ಪತ್ರಿಕಾ ಪ್ರಪಂಚವನ್ನು ಪ್ರವೇಶಿಸಿ 'ವಸಂತ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಅದನ್ನು ಅಚ್ಚುಕಟ್ಟಾಗಿ ಪ್ರಕಟಿಸಿದರು. ತಕ್ಕ ಪ್ರೋತ್ಸಾಹ ಸಿಗದೆ ಪತ್ರಿಕೆ ನಿಲ್ಲಿಸಬೇಕಾಯಿತು. ಮುಂದೆ 'ವಿಚಾರವಾಣಿ' ಎಂಬ ಪತ್ರಿಕೆಯನ್ನು ಸ್ವಲ್ಪ ಕಾಲ ನಡೆಸಿದರು. ಪ್ರಾರಂಭದಲ್ಲಿ ಇವರು ಎರಡು ಪತ್ತೇದಾರಿ ಕಾದಂಬರಿಗಳನ್ನು ಬರೆದಿಟ್ಟಿದ್ದರು. ಅವನ್ನು ಓದಿದ ಕವಿ ಹಾಗೂ

[illegible] ಅಂಥ ಬರೆದಾಗ ನಿರರ್ಥಕ ಎಂದು [illegible] ಸಲಹೆ ಕೊಟ್ಟರು. ಮುಂದೆ ಕಾರಂತರು ಬರೆದದ್ದು ಸಾಮಾಜಿಕ ಕಾದಂಬರಿ– '[illegible] ಸಂಸಾರ.' ಹೆಸರು ಕೇಳಿಯೇ [illegible] ಹೆದರಿಕೊಂಡರೆಂದು. ಅದೇ ಕಾದಂಬರಿಗೆ 'ಕನ್ಯಾಬಲಿ' ಎಂದು ನಾಮಕರಣ ಮಾಡಿದರು.

ಕಾರಂತರು ಬರೆದಿರುವುದೆಲ್ಲ ಅವರ ಅನುಭವದಿಂದ ಮೂಡಿಬಂದದ್ದು. ಕರಾವಳಿಯ ಕೆಲಸಗಾರರು ಘಟ್ಟದ ಮೇಲಿನ ಕಾಫಿ ತೋಟಗಳಿಗೆ ಹೋಗಿ ಸಾಯುತ್ತಿರುವುದನ್ನು ಕಂಡವರು, 'ಚೋಮನ ದುಡಿ'ಯಲ್ಲಿ ಆ ಜೀವನವನ್ನು ಚಿತ್ರಿಸಿದರು.

ವೇಗವಾದ ರಚನೆ ಕಾರಂತರಿಗೆ ಹುಟ್ಟಿನಿಂದ ಬಂದ ಗುಣ. 'ಚೋಮನ ದುಡಿ'ಯನ್ನು ಐದೇ ಐದು ದಿನಗಳಲ್ಲಿ ಬರೆದ ಇವರು 'ಮರಳಿ ಮಣ್ಣಿಗೆ'ಯ ಮೂವತ್ತು ಅಧ್ಯಾಯಗಳನ್ನು ಮೂವತ್ತು ದಿನಗಳಲ್ಲಿ ಬರೆದರು.

ಕಾರಂತರ ಕಾದಂಬರಿಗಳ ಸಂಖ್ಯೆ ಸುಮಾರು 35. 'ಬೆಟ್ಟದ ಜೀವ', 'ಸರಸಮ್ಮನ ಸಮಾಧಿ', 'ಕುಡಿಯರ ಕೂಸು' 'ಅಳಿದ ಮೇಲೆ' ಮುಂತಾದುವು ಇವರ ಜನಪ್ರಿಯ ಕಾದಂಬರಿಗಳಲ್ಲಿ ಕೆಲವು. 'ಮರಳಿ ಮಣ್ಣಿಗೆ' ಅವರಿಗೆ ಅಪಾರ ಖ್ಯಾತಿಯನ್ನು ತಂದ ಕಾದಂಬರಿ.

'ಆಡು ಮುಟ್ಟದ ಸೊಪ್ಪಿಲ್ಲ' ಎಂಬಂತೆ ಕಾರಂತರು ಕೈಗೊಳ್ಳದ ಕೆಲಸವಿಲ್ಲ ಎನ್ನಬಹುದು. ಅವರ ಆಸಕ್ತಿ, ಕಾರ್ಯಶಕ್ತಿಗಳು ಬಹುಮುಖವಾಗಿ ಹರಿದಿವೆ.

ಒಮ್ಮೆ ಚಲಚ್ಚಿತ್ರ ತಯಾರಿಸುವ ಹವ್ಯಾಸಕ್ಕೂ ಬಿದ್ದಿದ್ದರು. ಸಾಲ ಮಾಡಿ ಸಿನೆಕ್ಯಾಮರಾ ಕೊಂಡರು. ತಾವೇ ಬರೆದಿದ್ದ ಕಥೆಯನ್ನು ಚಿತ್ರೀಕರಿಸಲು ನಿರ್ಧರಿಸಿದರು. ಗೆಳೆಯರನ್ನು ಕೂಡಹಾಕಿ ಅಭಿನಯಿಸಲು ಪ್ರೋತ್ಸಾಹಿಸಿದರು. ಫೋಟೊಗ್ರಫಿಯನ್ನು ಕಲಿತುಕೊಂಡಿದ್ದ ಕಾರಂತರೇ ಫೋಟೋಗ್ರಾಫರ್, ಡೈರೆಕ್ಟರ್, ಪ್ರೊಡ್ಯೂಸರ್ ಎಲ್ಲ ಆದರು. ಅಂತೂ ಇಂತೂ 'ಭೂತರಾಜ್ಯ' ಮೂಕಚಿತ್ರ ಪೂರ್ಣವಾಯಿತು. ಮುಂದೆ ಫಿಲ್ಮ್ ಇದ್ದ ಪೆಟ್ಟಿಗೆಗೇ ಬೆಂಕಿಬಿದ್ದು ಚಿತ್ರ ನಾಶವಾಯಿತು. ಕಾರಂತರ ಚಲಚ್ಚಿತ್ರೋದ್ಯಮ ಅಲ್ಲಿಗೇ ನಿಂತಿತು.

ದೇಶ ಸಂಚಾರದ ಕಾಲದಲ್ಲಿ ಕಂಡ ಮರಾಠೀ ನಾಟಕಗಳ ಪರಿಣಾಮವಾಗಿ ನಾಟಕಗಳಲ್ಲಿನ ಇವರ ಆಸಕ್ತಿ ಬೆಳೆಯಿತು. ಮರಾಠೀ ನಾಟಕವೊಂದನ್ನು ಅನುವಾದಿಸಿದರು; ಅನೇಕ ಸ್ವತಂತ್ರ ನಾಟಕಗಳನ್ನೂ ಬರೆದರು. ನಾಟಕಗಳ ಪ್ರಯೋಗದಲ್ಲಿ ತರಬೇತಿ ಪಡೆಯಲು ನಾಟಕ ಕಂಪನಿಗಳ ಜೊತೆಯಲ್ಲಿ ಕೆಲಕಾಲ ಸುತ್ತಾಡಿದರು. ಆದರೆ, ನಾಟಕ ಸಂಸ್ಥೆಯನ್ನು ಕಟ್ಟಲು ಇವರು ನಡೆಸಿದ ಪ್ರಯತ್ನಗಳು ಫಲಕಾರಿಯಾಗಲಿಲ್ಲ.

ಕಾರಂತರು ಕನ್ನಡದಲ್ಲಿ ಗೀತನಾಟಕಗಳನ್ನು ಬರೆದವರಲ್ಲಿ ಮೊದಲಿಗರು. 1930ರಲ್ಲಿ ಗೀತನಾಟಕ 'ಮುಕ್ತದ್ವಾರ' ರಚಿತವಾಯಿತು. ಪುರಾಣ, ಇತಿಹಾಸ, ಜಾನಪದ ಸಾಹಿತ್ಯದಿಂದ ಕಥಾವಸ್ತುಗಳನ್ನೆತ್ತಿಕೊಂಡು 'ಕಿಸಾಗೋತಮಿ', 'ಬುದ್ಧೋದಯ', 'ಯಾರೋ ಅಂದರು' ಮುಂತಾದ ಗೀತ ನಾಟಕಗಳನ್ನು ಇವರು ರಚಿಸಿದರು.

ಸಂಗೀತ ಮತ್ತು ನೃತ್ಯ ಇವರಿಗೆ ಪ್ರಿಯವಾದ ಹವ್ಯಾಸಗಳು. ಇವೆರಡು ಕಲೆಗಳಲ್ಲೂ ಅವರು ಪಳಗಿದ್ದಾರೆ.

ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಸಂಸ್ಕೃತಿಯ ತಿರುಳಾದ ಯಕ್ಷಗಾನ ಬಯಲಾಟ ನಶಿಸಿಹೋಗುತ್ತಿದ್ದುದನ್ನು ಕಂಡು ಅದರ ಪುನರುತ್ಥಾನಕ್ಕಾಗಿ ಕಾರಂತರು ಪಣತೊಟ್ಟರು. ಅದನ್ನು ಕುರಿತು ಸಂಶೋಧನೆ ನಡೆಸಿದರು; ಅದರಲ್ಲಿ ಸುಧಾರಣೆ ಅವಶ್ಯವೆಂದು ಭಾವಿಸಿ ಅದಕ್ಕೂ ಕೈ ಹಾಕಿದರು. ಈ ಬಗೆಗೆ ಪ್ರಯೋಗಗಳನ್ನೂ ನಡೆಸಿದರು. ಇವರ 'ಯಕ್ಷಗಾನ ಬಯಲಾಟ' ಶ್ರೇಷ್ಠ ಸಂಶೋಧನಾತ್ಮಕ ಕೃತಿ. ಈ ಗ್ರಂಥಕ್ಕೆ ಸ್ವೀಡನ್ ದೇಶದ ಒಂದು ಪ್ರಶಸ್ತಿ ದೊರೆಯಿತು; ಮುಂದೆ ರಾಷ್ಟ್ರೀಯ ಸಾಹಿತ್ಯ ಅಕಾದೆಮಿಯ ಪ್ರಶಸ್ತಿಯೂ ಸಿಕ್ಕಿತು.

ಕಾರಂತರು ಕಾದಂಬರಿ ಕ್ಷೇತ್ರಕ್ಕೆ ಕಾಲಿರಿಸುವ ಮೊದಲೇ ಶಿಕ್ಷಣ ರಂಗವನ್ನು ಪ್ರವೇಶಿಸಿದ್ದರು. ಇವರು ತಮ್ಮ ಮನೆಯಲ್ಲೇ ತೆರೆದ 'ಬಾಲವನ', ಇದ್ದಷ್ಟು ಕಾಲ ಒಂದು ಉತ್ತಮ ಪ್ರಾಯೋಗಿಕ ಶಿಕ್ಷಣ ಕೇಂದ್ರವಾಗಿತ್ತು. ಅವರು ಪ್ರತಿ ವರ್ಷ ಮಕ್ಕಳ ಸಮ್ಮೇಳನವನ್ನು ನಡೆಸುತ್ತಿದ್ದರು. ಸರಕಾರದ ಶಿಕ್ಷಣ ಶಾಖೆಯಿಂದ ಇದಕ್ಕೆ ಪ್ರೋತ್ಸಾಹದ ಬದಲು ಉಪದ್ರವವೇ ಹೆಚ್ಚಾಗಿ, ಈ ಚಟುವಟಿಕೆ ನಿಂತುಹೋಯಿತು.

'ಬಾಲ ಪ್ರಪಂಚ' ಕಾರಂತರ ಅಪೂರ್ವ ಸಾಧನೆಗಳಲ್ಲೊಂದು. ಬಾಲಕಬಾಲಕಿಯರಿಗಾಗಿ ಬರೆದ ವಿಶ್ವಕೋಶ ಇದು. ಕನ್ನಡದಲ್ಲೇ ಏಕೆ, ಭಾರತದ ಯಾವುದೇ ಭಾಷೆಯಲ್ಲಿ ಇಂಥ ಪ್ರಯತ್ನ ಆ ಕಾಲಕ್ಕೆ, ಅಂದರೆ 1930ರ ಸುಮಾರಿನಲ್ಲಿ, ಹೊಸದು.

ಕಾರಂತರು ರಚಿಸಿದ 'ವಿಜ್ಞಾನ ಪ್ರಪಂಚ'ದ ನಾಲ್ಕು ಸಂಪುಟಗಳು ಉಪಯುಕ್ತ ಕೃತಿಗಳು. ಇವು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿವೆ.

'ಸಿರಿಗನ್ನಡ ಅರ್ಥಕೋಶ', ನಿಘಂಟು ಕ್ಷೇತ್ರದಲ್ಲಿ ಅವರ ಸಾಧನೆ.

ವಾಸ್ತುಶಿಲ್ಪ ಮತ್ತು ಶಿಲ್ಪಕೃತಿಗಳನ್ನು ನೋಡಿ, ಅಧ್ಯಯನ ಮಾಡಿ ಆನಂದಿಸುವುದೂ ಅವುಗಳ ಛಾಯಾಚಿತ್ರಗಳನ್ನು ತೆಗೆದಿಟ್ಟುಕೊಳ್ಳುವುದೂ ಕಾರಂತರಿಗೆ ಮೊದಲಿನಿಂದಲೂ ಅಂಟಿಕೊಂಡ ಹವ್ಯಾಸ. ಇದಕ್ಕಾಗಿ ಅವರು ಬಗಲಿಗೆ ಕ್ಯಾಮೆರಾ ತೂಗಹಾಕಿ ರಾಷ್ಟ್ರದಾದ್ಯಂತ ಸುತ್ತಿದ್ದಾರೆ—ಹಲವಾರು ಬಾರಿ. ಇವರ ಈ ಪ್ರವಾಸ ಅಧ್ಯಯನಗಳ ಸತ್ಫಲವನ್ನು 'ಚಾಲುಕ್ಯ ವಾಸ್ತು ಮತ್ತು ಶಿಲ್ಪ', 'ಅಬುವಿನಿಂದ ಬರಾಮಕ್ಕೆ', 'ಕರ್ನಾಟಕದಲ್ಲಿ ಚಿತ್ರಕಲೆ',— ಇಂಥ ಗ್ರಂಥಗಳಲ್ಲಿ ಕಾಣಬಹುದು. ಇವರ ವಿದೇಶ ಪ್ರಯಾಣದ ಫಲ —'ಅಪೂರ್ವ ಪಶ್ಚಿಮ'. 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಇವರ ಆತ್ಮವೃತ್ತ.

ಪ್ರಯೋಗಶೀಲ ಕಾರಂತರು 'ಯಕ್ಷಗಾನ'ವನ್ನು ನೃತ್ಯರೂಪಕದ ಮಟ್ಟಕ್ಕೇರಿಸಿದ್ದಾರೆ.

ಶಿವರಾಮ ಕಾರಂತರು 1956ರಲ್ಲಿ ಮೈಸೂರಿನಲ್ಲಿ ಜರಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಕಾರಂತರ ಸಾಧನೆಗಳಿಗಾಗಿ ಮೈಸೂರು ವಿಶ್ವವಿದ್ಯಾನಿಲಯವೂ ಕರ್ನಾಟಕ ವಿಶ್ವವಿದ್ಯಾಲಯವೂ ಅವರಿಗೆ ಡಿಲಿಟ್ ಪದವಿ ಇತ್ತು ಗೌರವಿಸಿವೆ. ಕೇಂದ್ರ ಸರಕಾರ 'ಪದ್ಮಭೂಷಣ' ಪ್ರಶಸ್ತಿ ನೀಡಿದೆ. ರಾಷ್ಟ್ರೀಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಅವರಿಗೆ ದೊರೆತಿದೆ.

## ಶ್ರೀರಂಗ

ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಆ ಸಮಾಜದಲ್ಲಿ ಕಂಡುಬರುವ ಲೋಪದೋಷಗಳನ್ನೂ ಅವಗುಣಗಳನ್ನೂ ವಿಶ್ಲೇಷಿಸಿ ಅವನ್ನು ಕಟು ಟೀಕೆಗೆ ಒಳಗುಮಾಡಿ, ಕುರುಡು ಸಮಾಜದ ಕಣ್ಣಿಗೆ ಅಂಜನಹಚ್ಚಿ ಅದರ ದೃಷ್ಟಿಯನ್ನು ಸರಿಪಡಿಸಲು ಹೊರಟ ನಮ್ಮ ವಿಚಾರಶೀಲ ನಾಟಕಕಾರರಲ್ಲಿ 'ಶ್ರೀರಂಗ' —ರಂಗಾಚಾರ್ಯ ವಾಸುದೇವಾಚಾರ್ಯ ಜಾಗೀರ

ದಾರ್— ಅಗ್ರಗಣ್ಯರು. ಸಂಪ್ರದಾಯಶೀಲ ಸಮಾಜ ಪ್ರತಿಭಟನೆ ತೋರಿತು. ಅಂಥ ಪ್ರತಿಭಟನೆಯಿಂದ ಮತ್ತಷ್ಟು ಸ್ಫೂರ್ತಿಪಡೆದು ಶ್ರೀರಂಗರು ನಾಟಕಗಳನ್ನು ರಚಿಸಿದರು.

ಶ್ರೀರಂಗರ ಹುಟ್ಟೂರು ಬಿಜಾಪುರದ ಜಿಲ್ಲೆಯ ಅಗರಖೇಡ. ಅವರು ಹುಟ್ಟಿದ್ದು 1904ರ ಸೆಪ್ಟೆಂಬರ್ 26ರಂದು. ಅವರ ಮೊದಲ ವಿದ್ಯಾಭ್ಯಾಸ ಅಗರಖೇಡ ಹಾಗೂ ಬಿಜಾಪುರಗಳಲ್ಲಿ ನಡೆಯಿತು. ಕಾಲೇಜು ವಿದ್ಯಾಭ್ಯಾಸ, ಪುಣೆಯ ಡೆಕ್ಕನ್ ಕಾಲೇಜಿನಲ್ಲಿ. ಸಂಸ್ಕೃತವನ್ನು ಪ್ರಧಾನ ವಿಷಯವನ್ನಾಗಿ ತೆಗೆದುಕೊಂಡು 1925ರಲ್ಲಿ ಬಿ. ಎ. ಪದವಿ ಪಡೆದರು. ಅನಂತರ ಇಂಗ್ಲೆಂಡಿಗೆ ಪ್ರಯಾಣ ಮಾಡಿದರು —ಐ. ಸಿ. ಎಸ್. ಪರೀಕ್ಷೆ ಕಟ್ಟಲು. ಆ ಪ್ರಯತ್ನವನ್ನು ಬಿಟ್ಟು ಅಲ್ಲಿ ಲಂಡನ್ ವಿಶ್ವವಿದ್ಯಾನಿಲಯದ ಎಂ. ಎ. ಪದವಿ ಪಡೆದು. 1928ರಲ್ಲಿ ಭಾರತಕ್ಕೆ ಹಿಂದಿರುಗಿದರು. 1930ರಿಂದ ಹದಿನೆಂಟು ವರ್ಷ ಕಾಲ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದರು. ಈ ವೇಳೆಗೆ ಅವರ ಮೊದಲ



ವಿಶ್ಲೇಷಣೆ : ಶ್ರೀರಂಗ

ನಾಟಕ 'ಉದರ ವೈರಾಗ್ಯ' (1929) ಹೊರ ಬಂದಿತು. ಅಲ್ಲಿಂದಾಚೆಗೆ ಅವರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಕಾಣಿಕೆ ಬಹು ಪ್ರಕಾರದ್ದು— ನಾಟಕ, ಕಾದಂಬರಿ, ಪ್ರಬಂಧ, ಜೀವನಚರಿತ್ರೆ, ಅನುವಾದ, ಸಾಹಿತ್ಯ ವಿಮರ್ಶೆ, ಭಾಷಾಶಾಸ್ತ್ರ, ಹೀಗೆ. ಆದರೆ ಅವರ ಕೀರ್ತಿ ಪ್ರಧಾನವಾಗಿ ಅವರ ನಾಟಕ ರಚನೆಯನ್ನು ಅವಲಂಬಿಸಿದೆ. ಇದುವರೆಗೂ ನೂರಕ್ಕೂ ಹೆಚ್ಚು ನಾಟಕಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಏಪ್ಪತ್ತಕ್ಕೂ ಹೆಚ್ಚಿನವು ಏಕಾಂಕ ನಾಟಕಗಳು.

ಶ್ರೀರಂಗರು [illegible] ಹಂತದಲ್ಲೇ ಅವರಿಗೆ ಕೀರ್ತಿ ತಂದ ಕೆಲವು ನಾಟಕಗಳು 'ಹರಿಜನ್ವಾರ', 'ಸಂಸಾರಿಗೆ ಕಂಸ', 'ನರಕದಲ್ಲಿ ನರಸಿಂಹ', 'ಪ್ರಪಂಚ ಪಾಣಿಪತ್ತು', 'ಸಂಧ್ಯಾಕಾಲ', 'ಜರಾಸಂಧಿ' ಇವನ್ನು ಹೆಸರಿಸಬಹುದು.

ತಾನೊಬ್ಬ ದೊಡ್ಡ ಸಮಾಜ ಸುಧಾರಕನೆಂದು ಕೊಚ್ಚಿಕೊಳ್ಳುತ್ತಿದ್ದವನನ್ನು ಕುರಿತ ವಿಡಂಬನೆ 'ಹರಿಜನ್ವಾರ'. ಇಂಥ ಸುಧಾರಕನ ಮನೆಯ ಮುಂದೆಯೇ ಚರಂಡಿಯಲ್ಲಿ ಬಿದ್ದಿರುವ ಹರಿಜನರ ಕೂಸನ್ನು ಮಾತ್ರ ಎತ್ತಿ ಉದ್ಧರಿಸುವ ಗೋಜಿಗೆ ಅವನು ಹೋಗುವುದಿಲ್ಲ. ಸಮಾಜ ಸುಧಾರಣೆಯ ಕಲ್ಪನೆಯೇ ಇಲ್ಲದ ಸಾಮಾನ್ಯನೊಬ್ಬನಿಂದ ಈ ಕರುಣೆಯ ಕೆಲಸ ನಡೆಯುತ್ತದೆ. ಅಣ್ಣತಮ್ಮಂದಿರಿಗೆ ಸಲ್ಲಬೇಕಾದ ಪಾಲಿನ ವಿಷಯವಾಗಿ ನಡೆಯುವ ಹೋರಾಟ ಇದರ ವಸ್ತು. ಸಮಾಜದ ದೌರ್ಜನ್ಯ, ದುರ್ಬಲತೆಗಳು ಈ ಕೃತಿಗಳಲ್ಲಿ ಚುರುಕಾದ ಟೀಕೆಗೆ ಒಳಗಾಗಿವೆ. ಈ ನಾಟಕಗಳಲ್ಲಿ ಬರುವ ಮಾತುಗಳು. ವ್ಯಂಗ್ಯ ಹಾಸ್ಯಗಳ ಮೇಲು ಹೊದಿಕೆಯನ್ನು ಹೊತ್ತ ಕಹಿಗುಳಿಗೆಗಳಂತಿವೆ. ಓದುಗನ, ಪ್ರೇಕ್ಷಕನ ಬುದ್ಧಿಗೆ ಇವು ಒಂದು ಸವಾಲು.

ನಾಟಕದ ವಸ್ತುವಿನ ಆಯ್ಕೆಯಲ್ಲಿ, ಅದರ ಬಂಧದಲ್ಲಿ, ವಿಚಾರ ಸರಣಿಯಲ್ಲಿ ಒಂದೊಂದು ಬಾರಿಯೂ ಹೊಸತನವನ್ನು ತೋರುವುದು ಶ್ರೀರಂಗರ ನಾಟಕರಚನೆಯ ವೈಶಿಷ್ಟ್ಯ. 'ಕೇಳುಜನಮೇಜಯ', 'ರಂಗ ಭಾರತ', 'ಶತಾಯುಗತಾಯು,' 'ಸ್ವರ್ಗಕ್ಕೆ ಮೂರೇ ಬಾಗಿಲು' ಮುಂತಾದುವು ಅವರ ಈ ಹೊಸತನಕ್ಕೆ ಪ್ರಯೋಗಶೀಲತೆಗೆ ಉದಾಹರಣೆಗಳು.

ಶ್ರೀರಂಗರು ಶ್ರೇಷ್ಠ ನಾಟಕಕಾರರಾಗಿರುವಂತೆ ಒಳ್ಳೆಯ ನಟರು ಹಾಗೂ ನಾಟಕ ನಿರ್ದೇಶಕರು ಕೂಡ. ನಾಟಕ ಕಲೆ ಅವರ ಅತ್ಯಂತ ಪ್ರಿಯ ಹವ್ಯಾಸ. ನಾಟಕವಾಡುವುದು, ಆಡಿಸುವುದರಲ್ಲಿ ಅವರ ಉತ್ಸಾಹ ಅಪರಿಮಿತ. ಅವರು ಧಾರವಾಡದಲ್ಲಿ ಅಧ್ಯಾಪಕರಾಗಿದ್ದಾಗ ಹಲವಾರು ಮಂದಿ ತರುಣ ಕಲಾವಿದರನ್ನು ಕಲೆಹಾಕಿ ಒಂದು ನಾಟಕ ವಿಲಾಸಿ ಸಂಘವನ್ನು ರೂಪಿಸಿದರು. ಅವರ ನೆರವಿನಿಂದ ತಮ್ಮ ನಾಟಕಗಳನ್ನು ರಂಗದ ಮೇಲೆ ತಂದರು. ಅವುಗಳನ್ನು ತಾವೇ ನಿರ್ದೇಶಿಸಿದರು. ಅವುಗಳಲ್ಲಿ ಅಭಿನಯಿಸಿದರು. ಉತ್ತರ ಕರ್ನಾಟಕ ಪ್ರದೇಶದಲ್ಲಿ ವಿಲಾಸಿ ನಾಟಕರಂಗವನ್ನು ಬೆಳೆಸಿದವರಲ್ಲಿ ಶ್ರೀರಂಗರು ಅಗ್ರಪಂಕ್ತಿಗೆ ಸೇರಿದವರು.

ನಾಟಕರಚನೆ ಶ್ರೀರಂಗರಿಗೆ ಹಿಡಿದಿರುವ ದೊಡ್ಡ ಚಟ ಎಂದರೂ ತಪ್ಪಲ್ಲ. ಅವರು ಯಾವುದೇ ಉದ್ಯೋಗದಲ್ಲಿರಲಿ —ಇಲ್ಲದೆ ಇರಲಿ— ಅವರ ನಾಟಕರಚನೆ ಮಾತ್ರ ನಿರಂತರವಾಗಿ ನಡೆದೇ ಇರುತ್ತದೆ. "ಅವುಗಳಲ್ಲಿ ತಂತ್ರವೈವಿಧ್ಯವಿರುವುದಾದರೂ 'ತಂತ್ರ'ಕ್ಕಾಗಿಯೇ ಅವರು ತಂತ್ರವನ್ನು ಬಳಸುವುದಿಲ್ಲ".

ಶ್ರೀರಂಗರಿಗೆ ಕನ್ನಡ, ಸಂಸ್ಕೃತ, ಇಂಗ್ಲಿಷ್, ಮರಾಠಿ ಭಾಷೆಗಳಲ್ಲಿ ಪಾಂಡಿತ್ಯವಿದೆ. ಕೇವಲ ಐದನೆಯ ವಯಸ್ಸಿನಲ್ಲಿ ಅವರು ತಮ್ಮ ಸಾಹಿತ್ಯ ಜೀವನವನ್ನು ಆರಂಭಿಸಿದರು. ಅದೂ ಸಂಸ್ಕೃತ ಪದ್ಯ ರಚನೆಯಿಂದ.

ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕರಾಗಿ ದೀರ್ಘಕಾಲ ಕೆಲಸ ಮಾಡಿದ ಅನಂತರ ಆ ಉದ್ಯೋಗಕ್ಕೆ ರಾಜಿನಾಮೆ ಕೊಟ್ಟರು. ಬಳಿಕ ಕೆಲ ಕಾಲ ಭಾರತ ಸರಕಾರದ ವಾರ್ತೆ ಹಾಗೂ ಪ್ರಸಾರ ಶಾಖೆಯ ಗೀತೆ ಮತ್ತು ನಾಟಕ ವಿಭಾಗದ ಸಾಹಿತ್ಯ ಶಾಖಾ ಅಧಿಕಾರಿಯಾಗಿದ್ದರು. ಆಮೇಲೆ ಬೆಂಗಳೂರಿನ ಆಕಾಶವಾಣಿಯ ನಾಟಕ ವಿಭಾಗದ ನಿರ್ದೇಶಕರಾಗಿದ್ದರು.

ಶ್ರೀರಂಗರು 19೫೫ರಲ್ಲಿ ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ರಾಷ್ಟ್ರೀಯ ಸಂಗೀತ ನಾಟಕ ಅಕಾಡೆಮಿಯು 19೬೮ರಲ್ಲಿ ಇವರಿಗೆ ಫೆಲೊಷಿಪ್ ಕೊಟ್ಟು ಗೌರವಿಸಿತು. ಇವರ ವಿದ್ವತ್ಪೂರ್ಣ ವಿಮರ್ಶಾತ್ಮಕ ಗ್ರಂಥ 'ಕಾಲಿದಾಸ'ಕ್ಕೆ 1971ರ ರಾಷ್ಟ್ರೀಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆಯಿತು.

'ಪದ್ಮಭೂಷಣ' 1972ರಲ್ಲಿ ಅವರಿಗೆ ಲಭಿಸಿತು. 1973ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ನಿಯುಕ್ತರಾದರು.

ಶ್ರೀರಂಗರು ಭಾಷಾಶಾಸ್ತ್ರವನ್ನು ಕುರಿತು 'ಶಾರದೆಯ ಸಂಸಾರ' ಎಂಬ ಗ್ರಂಥವನ್ನು ಬರೆದಿದ್ದಾರೆ. ಭಗವದ್ಗೀತೆಯನ್ನು ಕುರಿತ ಇವರ ಕೃತಿ 'ಗೀತಾ ಗಾಂಭೀರ್ಯ' 'ಪ್ರಕೃತಿ–ಪುರುಷ,' 'ವಿಶ್ವಾಮಿತ್ರ ಸೃಷ್ಟಿ' ಅವರ ಪ್ರಸಿದ್ಧ ಕಾದಂಬರಿಗಳು. 'ಭರಮಪ್ಪನ ಭೂತ' ಶ್ರೀರಂಗರ ಪತ್ತೇದಾರಿ ಕಾದಂಬರಿ.

'ದಿ ಇಂಡಿಯನ್ ಥಿಯೇಟರ್' ಭಾರತೀಯ ರಂಗಭೂಮಿಯನ್ನು ಕುರಿತ ಕೃತಿ.

ತಮಗೆ ಸರಿಯೆಂದು ತೋರಿದ್ದನ್ನು ನಿರ್ದಾಕ್ಷಿಣ್ಯವಾಗಿ ಸ್ಪಷ್ಟವಾಗಿ ಹೇಳುವ ಕೆಚ್ಚೆದೆಯ ವ್ಯಕ್ತಿ ಶ್ರೀರಂಗ.

## ಶೇಕ್ಸ್‌ಪಿಯರ್

ಆಂಗ್ಲ ಸಾಹಿತ್ಯ ಪ್ರಪಂಚದ ಅತ್ಯಂತ ಮಹತ್ವದ ಘಟನೆಯೊಂದು ನಡೆಯಿತು, 1623ರಲ್ಲಿ. ಅದೇ ಶೇಕ್ಸ್‌ಪಿಯರನ ಮೂವತ್ತಾರು ನಾಟಕಗಳ ಸಂಗ್ರಹದ ಪ್ರಕಟಣೆ. ಕರ್ತೃ ತೀರಿಕೊಂಡು ಆಗಲೇ ಏಳು ವರ್ಷಗಳಾಗಿದ್ದುವು. ಸಂಗ್ರಹವನ್ನು ಪ್ರಕಟಿಸಿದವರು ಶೇಕ್ಸ್‌ಪಿಯರನ ನಾಟಕ ಸಂಸ್ಥೆಯಲ್ಲಿದ್ದ ಇಬ್ಬರು ನಟರು.

ಜಗತ್ತಿನ ಪ್ರಮುಖ ಕವಿ–ನಾಟಕಕಾರರ ಪಂಕ್ತಿಯಲ್ಲಿ ಅಗ್ರಗಣ್ಯ ಶೇಕ್ಸ್‌ಪಿಯರ್. ಇವನ ನಾಟಕಗಳು ಉಜ್ವಲ ಪ್ರತಿಭೆ, ಅಪೂರ್ವ ಕಲ್ಪನೆ, ಅತ್ಯಂತ ಪ್ರಬುದ್ಧ ಸಂವೇದನೆಗಳ ಸಂಗಮ.

ಇಂಥ ಮಹಾವ್ಯಕ್ತಿಯಾದ ಶೇಕ್ಸ್‌ಪಿಯರ್ ಯಾರು ? ನಾವೀಗ ಯಾರನ್ನು ಶೇಕ್ಸ್‌ಪಿಯರ್ ಎಂದು ತಿಳಿದಿದ್ದೇವೆಯೋ ಅವನೇ ಈ ನಾಟಕಗಳನ್ನು ಬರೆದನೇ ? ಅಥವಾ ಬೇರೆ ಇನ್ನಾರಾದರೂ ಅವುಗಳ ಕರ್ತೃಗಳೇ? ಇದು ಇನ್ನೂ ಬಗೆಹರಿಯದ ವಾದ ವಿವಾದಗಳಿಗೆ ಒಳಗಾಗಿರುವ ಅಂಶ. ಸ್ಟ್ರಾಟ್‌ಫರ್ಡ್ ಸ್ಥಳದವನಾದ, ಹೆಚ್ಚು ವಿದ್ಯಾಭ್ಯಾಸ ಪಡೆಯದ ಶೇಕ್ಸ್‌ಪಿಯರ್‌ನಂಥ ವ್ಯಕ್ತಿ ಇಂಥ ನಾಟಕಗಳನ್ನು ಬರೆದಿರಬಲ್ಲನೇ ? ಮತ್ತು ಇಷ್ಟೊಂದು ನಾಟಕಗಳನ್ನು ಒಬ್ಬನೇ ವ್ಯಕ್ತಿ ಬರೆಯಲು ಸಾಧ್ಯವೇ ? ಎಂಬುದು ಕೆಲವರ ಪ್ರಶ್ನೆ. ಫ್ರಾನ್ಸಿಸ್ ಬೇಕನ್, ಕ್ರಿಸ್ಟಫರ್ ಮಾರ್ಲೊ, ಸರ್ ವಾಲ್ಟರ್ ರಾಲಿ, ಅರ್ಲ್ ಆಫ್ ಡರ್ಬಿ, ಅರ್ಲ್ ಆಫ್ ಆಕ್ಸ್‌ಫರ್ಡ್ ಮತ್ತು ಅರ್ಲ್ ಆಫ್ ಎಸೆಕ್ಸ್ ಇವರಲ್ಲಿ ಯಾರಾದರೊಬ್ಬರು ಈ ನಾಟಕಗಳನ್ನು ಬರೆದಿರಬಹುದು ಎಂಬ ವಾದವಿದೆ. 'ನಿಜವಾದ ಶೇಕ್ಸ್‌ಪಿಯರ್ ಎಂದರೆ ಇವನೇ' ಎಂದು ವಿವಿಧ ವಿದ್ವಾಂಸರು ಸೂಚಿಸಿರುವ ಹೆಸರುಗಳ ಕೆಲವು ಲೇಖಕರು ಸಾಮೂಹಿಕವಾಗಿ ಈ ನಾಟಕಗಳನ್ನು ಬರೆದಿರಬಹುದೆಂಬ ವಾದವೂ ಒಂದುಂಟು.

ಸಾಮಾನ್ಯವಾಗಿ ನಂಬಿರುವಂತೆ, ಈ ನಾಟಕಗಳನ್ನು ಬರೆದ ಶೇಕ್ಸ್‌ಪಿಯರ್, ಸ್ಟ್ರಾಟ್‌ಫರ್ಡ್ ಆನ್ ಏವನ್‌ನಲ್ಲಿ ಜನಿಸಿ, ಮುಂದೆ ನಟನಾಗಿ ಆನಂತರ ನಾಟಕಕಾರನಾದ. ಇವನು ಹುಟ್ಟಿದ್ದು 1564ರಲ್ಲಿ. ಏಪ್ರಿಲ್ 23ರಂದು ಅವನ ಜನ್ಮದಿನವನ್ನು ಆಚರಿಸುವುದು ಪದ್ಧತಿ.



ವಿಶ್ವಸಾಹಿತ್ಯಕ್ಕೆ ಕಿರೀಟ : ಶೇಕ್ಸ್‌ಪಿಯರ್ ಕೃತಿಗಳು

ಹುಟ್ಟೂರಿನ ಶಾಲೆಯಲ್ಲಿ ಶೇಕ್ಸ್‌ಪಿಯರ್ ತನ್ನ ವಿದ್ಯಾಭ್ಯಾಸವನ್ನು ಮುಗಿಸಿದ. ಅಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಪದವೀಧರರು ಉಪಾಧ್ಯಾಯರಾಗಿದ್ದರು. ಅವನಿಗೆ ಒಳ್ಳೆಯ ಶಿಕ್ಷಣವೇ ದೊರೆಯಿತು. ಇಲ್ಲಿಂದ ಮುಂದೆ ಕೆಲ ಕಾಲ ಅವನು ಏನು ಮಾಡುತ್ತಿದ್ದ ಎಂಬ ಬಗೆಗೆ ಸ್ಪಷ್ಟವಾದ ವಿವರಗಳು ದೊರೆತಿಲ್ಲ. 1582ರಲ್ಲಿ ಶೇಕ್ಸ್‌ಪಿಯರ್ ತನಗಿಂತ 7–8 ವರ್ಷ ಹಿರಿಯಳಾಗಿದ್ದ ಅನ್ ಹ್ಯಾಥವೇ ಎಂಬಾಕೆಯನ್ನು ಮದುವೆಯಾದ. ಇವರಿಗೆ ಮೂವರು ಮಕ್ಕಳಾದರು.



ಬಾ ತ ರಪ್ರನ್ ದುರಂತ ನಟ ತ್ತಾ ಪ್‌ಸಯಾವ
—ಅಥೆಲೋ ಪಾತ್ರದಲ್ಲಿ

ಮುಂದೆ ಶೇಕ್ಸ್‌ಪಿಯರನ ಬಗಗೆ ವಿವರ ಸಿಗುವುದು ಅವನು ಲಂಡನಿಗೆ ಬಂದಮೇಲೆ. 1592ರ ವೇಳೆಗೆ ಶೇಕ್ಸ್‌ಪಿಯರ್ ನಟನೆಂದೂ ಮೂರು ಐತಿಹಾಸಿಕ ನಾಟಕಗಳ ಕರ್ತೃವೆಂದೂ ಹೆಸರು ಪಡೆದಿದ್ದ. 'ಲಾರ್ಡ್ ಚೆಂಬರ್‌ಲಿನ್ಸ್ ಮೆನ್' ಎಂಬ ನಾಟಕ ಸಂಸ್ಥೆಯ ನಟನಾಗಿ ತನ್ನ ಜೀವನ ಆರಂಭಿಸಿದ ಶೇಕ್ಸ್‌ಪಿಯರ್ ಕ್ರಮೇಣ ಅತ್ಯಂತ ಪ್ರಭಾವಶಾಲಿ ನಾಟಕ ಕಾರನಾದ. 1592ರಲ್ಲಿ ಲಂಡನಿನಲ್ಲಿ ಪ್ಲೇಗ್ ರೋಗ ಹರಡಿದಾಗ ಎರಡು ವರ್ಷ ಕಾಲ ನಾಟಕಶಾಲೆಗಳನ್ನು ಮುಚ್ಚಿದರು. ಈ ಅವಧಿಯಲ್ಲಿ ಶೇಕ್ಸ್‌ಪಿಯರ್ ಎರಡು ದೀರ್ಘ ಕವನಗಳನ್ನು —'ವೀನಸ್ ಅಂಡ್ ಅಡೊನಿಸ್,' 'ದಿ ರೇಪ್ ಆಫ್ ಲ್ಯೂಕ್ರೆಸಿ'— ಬರೆದ. ಜೊತೆಗೆ ಸುನೀತಗಳನ್ನೂ ರಚಿಸಿದ. ನಾಟಕಶಾಲೆಗಳು ಮತ್ತೆ ಪ್ರಾರಂಭವಾದಾಗ 'ರೋಮಿಯೊ ಅಂಡ್ ಜೂಲಿಯೆಟ್', 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್,' 'ಮರ್ಚೆಂಟ್ ಆಫ್ ವೆನಿಸ್', ಮೊದಲಾದ ನಾಟಕಗಳನ್ನು ಶೇಕ್ಸ್‌ಪಿಯರ್ ಬರೆದ.

ಈ ವೇಳೆಗೆ ಅವನು ಸಾಕಷ್ಟು ಹಣವನ್ನು ಗಳಿಸಿದ್ದ. 1597ರಲ್ಲಿ ತನ್ನ ಹುಟ್ಟೂರಿನಲ್ಲಿ ಅತಿ ದೊಡ್ಡದಾದ ಮನೆಯೊಂದನ್ನು ಕೊಂಡುಕೊಂಡ. ಮುಂದೆ ಲಂಡನಿನಲ್ಲಿ ಹೊಸತೊಂದು ನಾಟಕಶಾಲೆಯನ್ನು ಕಟ್ಟುವುದರಲ್ಲಿ ಕೂಡ ನೆರವಾದ.

ಇದಾದ ಅನಂತರ ಶೇಕ್ಸ್‌ಪಿಯರ್ ತನ್ನ ಅತ್ಯಂತ ಅಮೂಲ್ಯ ನಾಟಕ ರತ್ನಗಳನ್ನು ರಚಿಸಿದ. 'ಹ್ಯಾಮ್ಲೆಟ್', 'ಕಿಂಗ್ ಲಿಯರ್', 'ಮ್ಯಾಕ್‌ಬೆತ್' ನಾಟಕಗಳು ಬಂದದ್ದು ಈ ಕಾಲದಲ್ಲೇ. 'ಟೆಂಪೆಸ್ಟ್' ನಾಟಕ ಇವನ ಕೊನೆಯ ನಾಟಕವಿರಬಹುದು. 1610ರ ಹೊತ್ತಿಗೆ ಸ್ಟ್ರಾಟ್ ಫರ್ಡ್‌ಗೆ ಹಿಂದಿರುಗಿ ಅಲ್ಲೇ ತನ್ನ ಕೊನೆಗಾಲವನ್ನು ಕಳೆದ; 1616ರ ಏಪ್ರಿಲ್ 23ರಂದು, ತನ್ನ 52ನೆಯ ಜನ್ಮದಿನದಂದು, ಕಣ್ಮುಚ್ಚಿದ. ಇವನ ಹುಟ್ಟೂರಿನ ಹೋಲಿ ಟ್ರಿನಿಟಿ ಚರ್ಚ್‌ನಲ್ಲಿ ಇವನ ಸಮಾಧಿ ಇದೆ.

ಶೇಕ್ಸ್‌ಪಿಯರ್ ತನ್ನ ಅನೇಕ ನಾಟಕಗಳಿಗೆ ಆಕರವಾಗಿ ಉಪಯೋಗಿಸಿ ಕೊಂಡದ್ದು ಆ ಮೊದಲೇ ಪ್ರಚಲಿತವಾಗಿದ್ದ ಕಥೆಗಳನ್ನು.

ಕೇವಲ ಚರಿತ್ರೆಯ ರೂಪದಲ್ಲಿದ್ದ ಕಥೆಗಳಿಗೆ ಇವನು ತನ್ನ ಪ್ರತಿಭಾಶಕ್ತಿ ಯಿಂದ ಹೊಸ ರೂಪವನ್ನು ಕೊಟ್ಟ. ಅವನ್ನು ಚಿರಂಜೀವಿಗಳನ್ನಾಗಿ ಮಾಡಿದ.

ಇವನು ಬರೆದ ನಾಟಕಗಳ ಮೂಲ ಹಸ್ತಪ್ರತಿಗಳು ನಮಗೆ ದೊರೆತಿಲ್ಲ. ಅವು ನಟರ ಕೈಯಿಂದ ಕೈಗೆ ಹೋಗಿ ನಷ್ಟವಾಗಿರಬಹುದು; 1613ರಲ್ಲಿ ಗ್ಲೋಬ್ ನಾಟಕಶಾಲೆಗೆ ಬೆಂಕಿ ಬಿದ್ದಾಗ ಕೆಲವು ಹಸ್ತಪ್ರತಿಗಳು ನಾಶವಾಗಿರ ಬಹುದೆಂಬ ಅಭಿಪ್ರಾಯವಿದೆ.

ಈಗ ಸಾಮಾನ್ಯವಾಗಿ ವಿದ್ವಾಂಸರು ಒಪ್ಪಿರುವಂತೆ, ಶೇಕ್ಸ್‌ಪಿಯರ್ ಬರೆದ ನಾಟಕಗಳ ಸಂಖ್ಯೆ 37, ಸುನೀತಗಳು 154. ನಾಟಕಗಳಲ್ಲಿ ಸ್ಥೂಲ ವಾಗಿ ಮೂರು ಗುಂಪುಗಳು : ಕಾಮಿಡಿಗಳು, ಟ್ರಾಜಿಡಿಗಳು, ಮತ್ತು ಐತಿಹಾಸಿಕ ನಾಟಕಗಳು.

ಇವನ ಕಾಮಿಡಿಗಳಲ್ಲಿ 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್', 'ಮರ್ಚೆಂಟ್ ಆಫ್ ವೆನಿಸ್', 'ಆಸ್ ಯು ಲೈಕ್ ಇಟ್', 'ಟೆಂಪೆಸ್ಟ್', ಮೊದಲಾದುವು ಜನಪ್ರಿಯವಾದುವು. ಇವನ ಅತ್ಯಂತ ಪ್ರಮುಖ ಟ್ರಾಜಿಡಿಗಳು ನಾಲ್ಕು: 'ಹ್ಯಾಮ್ಲೆಟ್', 'ಕಿಂಗ್ ಲಿಯರ್', 'ಮ್ಯಾಕ್‌ಬೆತ್' ಮತ್ತು 'ಅಥೆಲೋ'. 'ಎರಡನೆಯ ರಿಚರ್ಡ್', 'ಐದನೆಯ ಹೆನ್ರಿ' ಮೊದಲಾದುವು ಐತಿಹಾಸಿಕ ನಾಟಕಗಳು.



ಖ್ಯಾತ ಅಮೆರಿಕನ್ ನಟ ಜೋನ್ಸ್ —ಅಥೆಲೋ ಪಾತ್ರದಲ್ಲಿ

ಶೇಕ್ಸ್‌ಪಿಯರ್ ತನ್ನ ನಾಟಕಗಳನ್ನು ರಂಗಪ್ರದರ್ಶನಕ್ಕಾಗಿ ಬರೆದನೇ ಹೊರತು ಕೇವಲ ಓದಲೆಂದಲ್ಲ. ಈ ನಾಟಕಗಳಲ್ಲಿ ರಂಗಪ್ರಯೋಗಕ್ಕೆ ಅನು ಕೂಲವಾದ ನಾಟಕೀಯ ಕಥಾ ಸಂವಿಧಾನ ಎದ್ದು ಕಾಣುತ್ತದೆ. ಹೀಗಿದ್ದರೂ ಇವನ ಕಾವ್ಯ ಪ್ರತಿಭೆ ಅಮೋಘ.

ಇವನ ಭಾಷಾವಿಜ್ಞಾನ ಅಗಾಧ. ಅದನ್ನು ಬಳಸುವುದರಲ್ಲಿ ಅವನ ಔಚಿತ್ಯ ಜ್ಞಾನ ಅದ್ಭುತ. ರಾಜವರ್ಗಗಳವರ ಗಂಭೀರ ಭಾಷೆಯಿಂದ ಹಿಡಿದು ಕುಡು ಕರ ಭಾಷಾ ವೈಖರಿಯ ವರೆಗಿನ ಎಲ್ಲ ರೂಪಗಳನ್ನು ಇವನ ನಾಟಕಗಳಲ್ಲಿ ಕಾಣಬಹುದು. ಅತ್ಯಂತ ನವುರಾದ ಹಾಸ್ಯದಿಂದ ಹಿಡಿದು ಅತ್ಯಂತ ಕಟು ವಾದ ವಿಡಂಬನೆಯವರೆಗೆ ಎಲ್ಲ ಹಾಸ್ಯ ಪ್ರಕಾರಗಳೂ ಇವನ ಕೃತಿಗಳಲ್ಲುಂಟು. ಅತ್ಯಂತ ಅಶ್ಲೀಲ ಎನ್ನುವಂಥ ಭಾಷೆ ಯಿಂದ ಹಿಡಿದು ಅತ್ಯಂತ ಮಡಿವಂತಿ ಕೆಯ ಭಾಷೆಯವರೆಗೂ ನಾನಾ ವಿಧ ವಾದ ಶೈಲಿಗಳನ್ನು ಇವನು ಯಶಸ್ವಿ ಯಾಗಿ ಉಪಯೋಗಿಸಿದ್ದಾನೆ. ಮಾನವನ ಮನಸ್ಸನ್ನು ಶೇಕ್ಸ್‌ಪಿಯರ್ ಆಳವಾಗಿ ಅಭ್ಯಸಿಸಿದ್ದ. ಮಾನವನನ್ನು ನಿರಂತರವಾಗಿ ಕಾಡುವ ಕೆಲವು ಪ್ರಶ್ನೆಗಳನ್ನು ಇವನು ತನ್ನ ನಾಟಕಗಳಲ್ಲಿ ಪ್ರಧಾನವಾಗಿ ಮೂಡಿಸಿದ. ಅವನ ನಾಟಕಗಳು ಸತ್ವಪೂರ್ಣವಾಗಿರುವುದು, ಹೃದಯವನ್ನು ಮಿಡಿಯು ವುದು ಇದರಿಂದಲೇ. 'ಹಾಗೋ ಹೀಗೋ' ಎಂಬ ಡೋಲಾಯಮಾನ



ಶೇಕ್ಸ್‌ಪಿಯರ್ ಪಾತ್ರಗಳಿಗಾಗಿ ಪ್ರಖ್ಯಾತ

[illegible] ಅಧಿಕಾರದ [illegible] ಎಲ್ಲ ಕಾಲದಲ್ಲೂ ಕಾಣಬಹುದಾದ ದುರಂತ ಪಾತ್ರಗಳೇ.

ಶೇಕ್ಸ್‌ಪಿಯರ್ ಯಾವುದೇ ತಾತ್ತ್ವಿಕ ಸಿದ್ಧಾಂತವನ್ನು ಮನಸ್ಸಿನಲ್ಲಿಟ್ಟುಕೊಂಡು ನಾಟಕ ರಚಿಸಿದವನಲ್ಲ. ಜೀವನವನ್ನು ತಾನು ಕಂಡಂತೆ, ಅರ್ಥ ಮಾಡಿಕೊಂಡಂತೆ ಚಿತ್ರಿಸಿದ. ಅವನ ನಾಟಕಗಳ ಬಗೆಗೆ ಬಂದಿರುವ ವ್ಯಾಖ್ಯಾನಗಳ ಸಂಖ್ಯೆಯೂ ದೊಡ್ಡದು. ಇವನ ಕೃತಿಗಳ ಅಧ್ಯಯನಕ್ಕೆ ಮೀಸಲಾದ ನಿಯತಕಾಲಿಕಗಳಿವೆ. ಬಹುಶಃ ಇವನ ಬಗೆಗೆ ವಿಮರ್ಶಕರು, ಸಾಹಿತ್ಯಾಭ್ಯಾಸಿಗಳು ಬರೆದಷ್ಟು ವಿಶ್ವದ ಇನ್ನಾವ ಲೇಖಕನ ಬಗೆಗೂ ಬರೆದಿರಲಾರರು.

ಇವನಂ ರಚಿಸಿದ ಸುನೀತಗಳೂ ಬಹಳ ಮುಖ್ಯವಾದುವು. ಈತ ಮಹಾಕವಿ ಎಂಬುದನ್ನು ಈ ಸುನೀತಗಳು ಎತ್ತಿತೋರಿಸುತ್ತವೆ.

ಶೇಕ್ಸ್‌ಪಿಯರ್‌ನ ನಾಟಕಗಳು ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದವಾಗಿವೆ. ಅನೇಕ ಭಾಷೆಗಳಲ್ಲಿ ರಂಗದ ಮೇಲೆ ಆಡಲ್ಪಟ್ಟಿವೆ. ಈ ನಾಟಕಗಳ ಆಧಾರದ ಮೇಲೆ ಚಲಚ್ಚಿತ್ರಗಳೂ ತಯಾರಾಗಿವೆ. ವಿವಿಧ ಕಾಲದ ವಿವಿಧ ದೇಶಗಳ ಲೇಖಕರ, ಕವಿಗಳ ಮೇಲೆ ಇವನ ಪ್ರಭಾವ ಅಷ್ಟಿಷ್ಟಲ್ಲ.

" ಮಾನವ ದೇವಸೃಷ್ಟಿಯ ಕಿರೀಟ'' ಎಂದು ಶೇಕ್ಸ್‌ಪಿಯರ್ ಒಂದು ಕಡೆ ಹೇಳುತ್ತಾನೆ. ಅದೇ ರೀತಿ "ಶೇಕ್ಸ್‌ಪಿಯರನ ಕೃತಿಗಳು ವಿಶ್ವ ಸಾಹಿತ್ಯಕ್ಕೆ ಕಿರೀಟ" ಎಂದಿದ್ದಾರೆ.

## ಶೈಲಿ

ಸಾಹಿತ್ಯ ಮತ್ತು ಕಲಾಕೃತಿಗಳ ವಿಮರ್ಶೆಯ ಸಂಬಂಧದಲ್ಲಿ ಶೈಲಿ ಎಂಬ ಮಾತು ಪದೇ ಪದೇ ಬರುತ್ತಿರುತ್ತದೆ. ಈ ಕಾವ್ಯಶೈಲಿ ಚೆನ್ನಾಗಿದೆ ; ಈ ಮೂರ್ತಿಶಿಲ್ಪ ರೋಮನ್ ಶೈಲಿಯದು ; ಈ ಚಿತ್ರಕಾರನ ರಚನಾ ಶೈಲಿಯ ಮೇಲೆ ರೆಂಬ್ರಾಂಟನ ಪ್ರಭಾವ ಎದ್ದುಕಾಣುತ್ತದೆ ; ಇದು ಹೊಯ್ಸಳ ಶೈಲಿಯಲ್ಲಿ ಕಟ್ಟಿರುವ ದೇವಸ್ಥಾನ. ಇಂಥ ಮಾತುಗಳನ್ನು ನಾವು ಕೇಳುತ್ತಿರುತ್ತೇವೆ.

ಶೈಲಿ ಎಂದರೇನು ? ಅದನ್ನು ಕೆಲವೇ ಮಾತುಗಳಲ್ಲಿ ಸರ್ವಸಮ್ಮತವಾದ ರೀತಿಯಲ್ಲಿ ಹೇಳುವುದು ಸಾಧ್ಯವಿಲ್ಲ. ಇದಕ್ಕೆ ಪ್ರಧಾನ ಕಾರಣ ಶೈಲಿಯ ಸ್ವರೂಪವನ್ನು ಕುರಿತು ಬೇರೆ ಬೇರೆ ಕಾಲಗಳ ಬೇರೆ ಬೇರೆ ರಸಜ್ಞರು ಕೊಟ್ಟಿರುವ ವಿವರಣೆಗಳು. ಈ ವಿವರಣೆಗಳನ್ನು ಅಥವಾ ಅವುಗಳಲ್ಲಿ ಬಹುಭಾಗವನ್ನು ಪರಿಶೀಲಿಸಿದ ಮೇಲೆ, ಶೈಲಿಯನ್ನು ಕುರಿತ ಕೆಲವು ಪ್ರಧಾನ ದೃಷ್ಟಿಗಳನ್ನು ಗುರುತಿಸಬಹುದು.

ಉದ್ದೇಶಕ್ಕೆ ತಕ್ಕ ವಿಷಯ ಎತ್ತಿಕೊಂಡು. ಅದರ ಪ್ರತಿಪಾದನೆಗೆ ತಕ್ಕ ಪದಗಳನ್ನು ಆರಿಸಿ, ಅವನ್ನು ಯುಕ್ತವಾದ ಕ್ರಮದಲ್ಲಿ ಪೋಣಿಸಿ, ಬರೆವಣಿಗೆಯಲ್ಲಿ ಸ್ಪಷ್ಟತೆ, ಸೌಂದರ್ಯ, ಸತ್ವಗಳನ್ನು ಮೂಡಿಸಿದರಾಯಿತು ; ಇದರಿಂದ ಶೈಲಿ ತಾನಾಗಿ ರೂಪುಗೊಳ್ಳುತ್ತದೆ —ಎಂಬುದು ಒಂದು ದೃಷ್ಟಿ.

ಕೃತಿಗೆ ವಿಷಯ ಮುಖ್ಯವಲ್ಲ; ಅದು ಅಲ್ಪವಾದದ್ದಾಗಲೀ ಮಹತ್ವದ್ದಾಗಲೀ –ಅದನ್ನು ನಿರೂಪಿಸುವ ರೀತಿ ಮುಖ್ಯ; ಆದ್ದರಿಂದ ಶೈಲಿಯೇ ಸಾಹಿತ್ಯ ; ಕೃತಿಯಲ್ಲಿ ಕಾವ್ಯತ್ವ ಮೂಡುವುದು ಶೈಲಿಯಿಂದಲೇ ; ಕಾವ್ಯದಲ್ಲಿ ರಸೋತ್ಪಾದನೆಯಾಗುವುದೂ ಶೈಲಿಯಿಂದಲೇ—ಇದು ಇನ್ನೊಂದು ವಾದ.

ಶೈಲಿಯೆಂಬುದೇ ಇಲ್ಲ ; ತನ್ನ ಕೆಲಸವನ್ನು ಬಲ್ಲವನು ಶೈಲಿಯ ವಿಚಾರವನ್ನು ತಲೆಗೆ ಹಚ್ಚಿಕೊಳ್ಳಲೇ ಬೇಕಾಗಿಲ್ಲ —ಎಂಬುದು ಮತ್ತೊಂದು ಅಭಿಪ್ರಾಯ.

ಕೃತಿಯಲ್ಲಿ ಅರ್ಥ ಮುಖ್ಯವಾದದ್ದು : ಅದು ಹೊಳೆದರೆ ಸಾಕು ; ಅದನ್ನು ಹೇಳುವ ರೀತಿ ಅಷ್ಟು ಮುಖ್ಯವಲ್ಲ –ಎಂಬುದು ಬೇರೊಂದು ಪಂಥದವರ ವಾದ.

ಈ ವಾದಗಳಲ್ಲಿ ಯಾವುದರಲ್ಲೇ ಆಗಲಿ, ಶೈಲಿಯನ್ನು ಕುರಿತ ಸಂಪೂರ್ಣ ವಿವರಣೆ ಇಲ್ಲ. ಒಂದಲ್ಲ ಒಂದು ದೋಷವನ್ನು ಎತ್ತಿ ತೋರಿಸಬಹುದು. ಆದರೂ, ಶೈಲಿಗೆ ಸಂಬಂಧಿಸಿದಂತೆ ಯಾವುದಾದರೊಂದು ಅಂಶವನ್ನು ಇವೆಲ್ಲ ಪ್ರತಿಪಾದಿಸುತ್ತವೆ.

ಶೈಲಿ ಎಂದರೇನೆಂಬುದನ್ನು ಸೂತ್ರರೂಪದಲ್ಲಿ ಹೇಳುವ ಕೆಲವು ವಾಕ್ಯಗಳೂ ಇವೆ. 'ಕವಿಯೇ ಶೈಲಿ'; 'ಶೈಲಿ ಕವಿಯನ್ನು ಹಿಂಬಾಲಿಸುವ ಅವನ ಛಾಯೆಯಂತೆ'; 'ಶೈಲಿ ಮಾನವನ ಆತ್ಮದಂತೆ'—ಹೀಗೆ. ಇವುಗಳಿಂದ ವ್ಯಕ್ತವಾಗುವ ಒಂದು ಅಂಶವೆಂದರೆ, ಶೈಲಿಗೂ ಬರೆಹಗಾರನಿಗೂ ತುಂಬ ನಿಕಟ, ಆತ್ಮೀಯ ಸಂಬಂಧವಿದೆ ಎಂಬುದು. ಆದ್ದರಿಂದ, ಒಬ್ಬೊಬ್ಬ ಕವಿಗೂ ಅವನದೇ ಆದ ವ್ಯಕ್ತಿತ್ವವಿರುವಂತೆ ಅವನದೇ ಆದ ಶೈಲಿ ಇರುತ್ತದೆ ಎನ್ನಬಹುದು. ಒಂದೇ ವಸ್ತುವನ್ನು ಕುರಿತು ಹಲವಾರು ಮಂದಿ ಬರೆದರೂ ಬರೆವಣಿಗೆಗಳಲ್ಲಿ ಪರಸ್ಪರ ಭಿನ್ನತೆ ಇರುವುದಕ್ಕೆ ಕಾರಣ ಇದೇ.

ಕವಿಯಲ್ಲಿ ಶೈಲಿ ಹೇಗೆ ರೂಪುಗೊಳ್ಳುತ್ತದೆ ಎಂಬುದೂ ಒಂದು ಮುಖ್ಯ ಪ್ರಶ್ನೆ. ಭಾವನೆಗಳು ಕವಿಯ ಮನಸ್ಸಿನಲ್ಲಿ ರೂಪುಗೊಳ್ಳುವಾಗಲೇ ಅವುಗಳನ್ನು ನಿರೂಪಿಸುವ ಶಬ್ದ ಸಂಪತ್ತಿಯೂ ಅವನ ಮನಸ್ಸಿನಲ್ಲಿ ಮೂಡುತ್ತದೆ. ಪ್ರಾಚೀನ ಕವಿಗಳ ಅಭ್ಯಾಸ, ಉತ್ತಮ ಕವಿಗಳ ಅಭಿವ್ಯಕ್ತಿಯ ರೀತಿ, ಸತತ ಲೇಖನ ಪರಿಶ್ರಮ ಇವುಗಳಿಂದಾಗಿ ಅವನ ನಿರೂಪಣಾಶಕ್ತಿ ಬೆಳೆಯುತ್ತದೆ. ತಮಗೆ ಹಿಂದಿನ ಶ್ರೇಷ್ಠ ಕವಿಗಳ, ಲೇಖಕರ ಕೃತಿಗಳನ್ನು ಓದಿ ತಮ್ಮ ಶೈಲಿಯನ್ನು ಉತ್ತಮಗೊಳಿಸಿಕೊಂಡಿರುವೆವೆಂದು ಒಳ್ಳೆಯ ಲೇಖಕರೇ ಹಲವರು ಹೇಳಿಕೊಂಡಿದ್ದಾರೆ. ಹೀಗೆ ವಿದ್ವತ್ತು, ಅನುಭವ, ಭಾವತೀವ್ರತೆ, ಅಭಿವ್ಯಕ್ತಿಯ ಶಕ್ತಿ, ಶಬ್ದಭಂಡಾರ ಹಾಗೂ ಪ್ರತಿಭೆಯ ಸುರಮ್ಯ ಸಮ್ಮೇಳನದಿಂದ ಒಬ್ಬ ಕವಿಯ, ಲೇಖಕನ ಶೈಲಿ ರೂಪುಗೊಳ್ಳುತ್ತದೆ. ಕವಿ ಅಥವಾ ಲೇಖಕ ತಾನು ರಚಿಸಿದ್ದನ್ನು ತಾನೇ ವಿಮರ್ಶಾತ್ಮಕವಾಗಿ ವಿವೇಚಿಸಿದರೆ, ತಾನು ಮೊದಲು ಬರೆದದ್ದನ್ನು ತಿದ್ದಿ ಅದರ ಶೈಲಿಯನ್ನು ಉತ್ತಮಗೊಳಿಸಲು ಸಾಧ್ಯ.

ಕವಿಯ ಅಥವಾ ಲೇಖಕನ ಶಕ್ತಿಗೆ ಅನುರೂಪವಾಗಿ, ಅತ್ಯಂತ ಪ್ರಭಾವಶಾಲಿಯಾದ ಮಹಾಶೈಲಿ, ಮಧ್ಯಮ ಶೈಲಿ, ಅಧಮ ಶೈಲಿಗಳು ರೂಪುಗೊಳ್ಳುತ್ತವೆ ಎನ್ನಬಹುದು. ಮಹಾಕವಿಗಳ ಶೈಲಿ ಮಹಾಶೈಲಿ. ಶಬ್ದ, ಅರ್ಥಗಳ ಸಾಮರಸ್ಯ ಹೆಚ್ಚಿದಷ್ಟೂ ಶೈಲಿ ಮೋಹಕವಾಗುತ್ತದೆ ; ಮಹತ್ವವನ್ನು ಪಡೆಯುತ್ತದೆ.

ಸಾಹಿತ್ಯ ಶೈಲಿಯನ್ನು ಕುರಿತು ಈ ಮೊದಲು ಹೇಳಿರುವ ಅನೇಕ ಅಂಶಗಳು ಕಲೆಗೂ ಅನ್ವಯಿಸುತ್ತವೆ. ಉದಾಹರಣೆಗಾಗಿ, ಶಿಲ್ಪಿ–ಚಿತ್ರಕಾರರ ಸಂಬಂಧದಲ್ಲಿ ಹೀಗೆ ಹೇಳಬಹುದು : 'ಚಿತ್ರಕಾರ ಅಥವಾ ಶಿಲ್ಪಿಯೇ ಶೈಲಿ', 'ಶೈಲಿ ಕಲಾವಿದನನ್ನು ಹಿಂಬಾಲಿಸುವ ಅವನ ಛಾಯೆ' ಮಾತು ಕವಿಯ ಅಭಿವ್ಯಕ್ತಿಯ ಮಾಧ್ಯಮವಾಗಿರುವಂತೆ ಬಣ್ಣ, ರೇಖೆ

ಚಿತ್ರಕಾರನ ಅಭಿವ್ಯಕ್ತಿಯ ಮಾಧ್ಯಮ: ಹಾಗೇ ಉಬ್ಬುತಗ್ಗು ರೇಖೆಗಳು ಶಿಲ್ಪಿಯ ಅಭಿವ್ಯಕ್ತಿಯ ಮಾಧ್ಯಮ. ಅವನು ಈ ಮಾಧ್ಯಮವನ್ನು ಎಷ್ಟು ಅರ್ಥವತ್ತಾಗುವಂತೆ, ಪ್ರಭಾವಶಾಲಿಯಾಗುವಂತೆ ಉಪಯೋಗಿಸುತ್ತಾನೋ ಅದನ್ನು ಅನುಸರಿಸಿ ಅವನ ಶೈಲಿ ರೂಪುಗೊಳ್ಳುತ್ತದೆ.

ಕವಿಯ ಪಾಂಡಿತ್ಯ, ಅನುಭವ ಪ್ರತಿಭೆಗಳು ಅವನ ಕಾವ್ಯರಚನಾ ಸಾಮರ್ಥ್ಯವನ್ನು, ಶೈಲಿಯನ್ನು ನಿರ್ಣಯಿಸುವಂತೆ, ಕಲಾವಿದನ ತಂತ್ರಜ್ಞಾನ ಅನುಭವ, ಪ್ರತಿಭೆಗಳು ಅವನ ರಚನಾ ಸಾಮರ್ಥ್ಯವನ್ನು, ಶೈಲಿಯನ್ನು ರೂಪಿಸುತ್ತವೆ.

ಶೈಲಿ ಕವಿಯ, ಕಲಾವಿದನ ವ್ಯಕ್ತಿತ್ವದ ಪ್ರತಿಬಿಂಬ.

## ಶೋಕಗೀತೆ

ಶೋಕಗೀತೆ ಎಂದರೆ ದುಃಖದ ಹಾಡು. ಯಾವುದಾದರೂ ಘಟನೆ ಯಾಗಲೀ ಪರಿಸರವಾಗಲೀ ಕವಿಯ ಮನಸ್ಸಿಗೆ ತುಂಬ ದುಃಖ ಉಂಟು ಮಾಡುತ್ತದೆ ಎಂದುಕೊಳ್ಳೋಣ. ಅವನು ತನ್ನ ಈ ಭಾವನೆಯನ್ನು ಕವನದ ಮೂಲಕ ಹೊರಗೆಡಹಿದಾಗ ಶೋಕಗೀತೆ ಹುಟ್ಟುತ್ತದೆ. ಸಂಸ್ಕೃತದಲ್ಲಿ ಕಂಡುಬರುವ ಚರಮಶ್ಲೋಕಗಳು, ಚರಮಗೀತೆಗಳು ಈ ವರ್ಗಕ್ಕೆ ಸೇರಿ ದುವು. ಚರಮ ಎಂದರೆ ಕೊನೆಯ ಎಂದು ಅರ್ಥ. ತನ್ನ ಗೌರವಕ್ಕೆ, ಆದರಕ್ಕೆ, ಪ್ರೀತಿಗೆ ಪಾತ್ರನಾಗಿದ್ದ ವ್ಯಕ್ತಿ ತೀರಿಕೊಂಡಾಗ, ಆ ವ್ಯಕ್ತಿಯ ಮರಣವನ್ನು ಕುರಿತು ಬರೆವ ಕವನ ಚರಮಗೀತೆ.

ಕಾಳಿದಾಸನು ರಚಿಸಿದ ಒಂದು ಚರಮಗೀತೆಯನ್ನು ಕುರಿತು ಒಂದು ದಂತಕಥೆಯಿದೆ.

ಯಾರಾದರೂ ಒಂದು ಮಾತು ಹೇಳಿದರೆ, ನಿಜವಾಗಿಯೂ ನಡೆದು ಹೋಗುವುದೂ 'ವಾಕ್ಸಿದ್ಧಿ'. ಕಾಳಿದಾಸನಿಗೆ ಈ ಶಕ್ತಿಯಿದೆ ಎಂದು ಕೇಳಿದ ಭೋಜರಾಜ ಇದನ್ನು ಪರೀಕ್ಷಿಸಬೇಕೆಂದು ನಿರ್ಧರಿಸಿದ. ಒಂದು ದಿನ ಸೇವಕನಂತೆ ವೇಷಧರಿಸಿಕೊಂಡು ಕಾಳಿದಾಸನಲ್ಲಿಗೆ ಬಂದು "ಮಹಾರಾಜರು ತೀರಿಕೊಂಡರು" ಎಂದು ತಿಳಿಸಿದ. ತನ್ನ ಪೋಷಕನೂ ಪರಮ ಆಪ್ತನೂ ಆಗಿದ್ದ ರಾಜನ ಸಾವಿನ ಸುದ್ದಿ ಕೇಳಿ, ಕಾಳಿದಾಸನಿಗೆ ತುಂಬ ದುಃಖ ವಾಯಿತು. ಶೋಕಭರದಲ್ಲಿ ಭೋಜರಾಜ ಸತ್ತ, ಕವಿಗಳನ್ನು ಗೌರವಿಸು ವವರಾರು, ಪಂಡಿತರನ್ನು ಕೇಳುವವರಾರು ಎಂಬ ಭಾವವುಳ್ಳ ಶ್ಲೋಕ ಥಟ್ಟನೆ ಅವನ ಬಾಯಿಯಿಂದ ಹೊರಬಿತ್ತು. ತಕ್ಷಣವೇ ಅವನ ಮುಂದೆ ನಿಂತಿದ್ದ ಸೇವಕ ಸತ್ತು ನೆಲಕ್ಕುರುಳಿದ. ಸೇವಕನ ರೂಪದಲ್ಲಿ ಬಂದು ಅರಸನ ಸಾವಿನ ಸುದ್ದಿ ಹೇಳಿದವನು ಅರಸನೇ ಎಂಬುದನ್ನು ಒಡನೆಯೇ ಗ್ರಹಿಸಿದ ಕಾಳಿದಾಸ, ತಾನು ನುಡಿದಿದ್ದ ಚರಮ ಶ್ಲೋಕದಲ್ಲಿ ಎರಡು ಮಾತುಗಳನ್ನು ಬದಲಾಯಿಸಿ, ಭೋಜರಾಜ ಬದುಕಿದ್ದಾನೆ, ಅವನಿರುವಾಗ ಕವಿಗಳಿಂ ಪಂಡಿತರುಗಳಿಗೇನು ಕಡಮೆ ಎಂಬ ಶ್ಲೋಕ ಹೇಳಿದ. ಆಗ ರಾಜನಿಗೆ ಮತ್ತೆ ಜೀವ ಬಂದು ಆತ ಎದ್ದು ಕುಳಿತ.

ಗೌರವ ಪ್ರೀತಿಗಳಿಗೆ ಪಾತ್ರರಾಗಿದ್ದವರು ಸತ್ತಾಗ ಶೋಕವನ್ನು ಕಾವ್ಯ ರೂಪದಲ್ಲಿ ವ್ಯಕ್ತಪಡಿಸುವುದು ನಮ್ಮಲ್ಲಿ ಹಿಂದಿನಿಂದ ನಡೆದು ಬಂದಿದೆ ಎಂಬುದಷ್ಟೆ ಈ ದಂತಕಥೆಯಿಂದ ನಾವು ತಿಳಿದುಕೊಳ್ಳಬೇಕಾದ ಅಂಶ.

ಗಾಂಧಿಜಿ ತೀರಿಕೊಂಡಾಗ, ನಮ್ಮ ರಾಷ್ಟ್ರದ ಎಲ್ಲ ಭಾಷೆಗಳ ಕವಿಗಳೂ ಆ ಘಟನೆಯನ್ನು ಕುರಿತು ಶೋಕಗೀತೆಗಳನ್ನು ರಚಿಸಿದರು. ಇಂಥ ಕವನಗಳನ್ನು ಬರೆಯುವ ಪರಂಪರೆ ಇಂದಿಗೂ ಉಳಿದುಬಂದಿರುವುದನ್ನು ಇದು ಸೂಚಿಸುತ್ತದೆ. ಶೋಕಗೀತೆಯು ಪ್ರಾಚೀನ ಒಂದು ಪ್ರಕಾರ ವೆಂದು ಗಣಿಸಲ್ಪಟ್ಟಿದೆ.

ಪಾಶ್ಚಾತ್ಯ ದೇಶಗಳಲ್ಲಿ ಕೂಡ ಶೋಕಗೀತೆಗಳ ರಚನೆ ಪ್ರಾಚೀನ ಕಾಲ ದಿಂದ ನಡೆದುಬಂದಿದೆ. ಕ್ರಿ.ಪೂ. 3ನೆಯ ಶತಮಾನದಲ್ಲಿದ್ದ ಗ್ರೀಕ್ ಕವಿ ಥಿಯೋಕ್ರಿಟಸ್ ರಚಿಸಿದ 'ಸತ್ತುಹೋದ ಕುರುಬನೊಬ್ಬನ ಕುರಿತಾಗಿ' ಎಂಬುದು ಅತ್ಯಂತ ಪ್ರಾಚೀನ ಶೋಕಗೀತೆ.

ಶೋಕಗೀತೆ ಎಂಬ ಪದವನ್ನು ಇಂಗ್ಲಿಷಿನ 'ಎಲಿಜಿ'ಗೆ ಸಮಾನ ಅರ್ಥ ವುಳ್ಳ ಪದವನ್ನಾಗಿ ಉಪಯೋಗಿಸುವುದು ವಾಡಿಕೆ. ಇಂಗ್ಲೆಂಡಿನಲ್ಲಿ ನವೋದಯ ಕಾಲಾನಂತರ ಶೋಕಗೀತೆಗಳು ಎಲಿಜಿ ಎಂಬ ಹೆಸರಿನಿಂದ ಪ್ರಖ್ಯಾತವಾದದ್ದು ಇದಕ್ಕೆ ಕಾರಣ. ವಾಸ್ತವವಾಗಿ ಎಲಿಜಿ ಎಂಬ ಮಾತಿಗೂ ಶೋಕಕ್ಕೂ ಏನೇನೂ ಸಂಬಂಧವಿಲ್ಲ. 'ಎಲಿಜಿಯಿಕ್' ಎಂಬುದು ಪ್ರಾಚೀನ ಗ್ರೀಕ್ ಸಾಹಿತ್ಯದಲ್ಲಿ ಉಪಯೋಗದಲ್ಲಿದ್ದ ಛಂದಸ್ಸು. ಈ ಛಂದಸ್ಸಿನಲ್ಲಿ ಬರೆದ ಕವಿತೆಗಳು ಎಲಿಜಿಗಳು. ಇದು ದ್ವಿಪದಿ ಜಾತಿಗೆ ಸೇರಿದ ಛಂದಸ್ಸು. ಗ್ರೀಕ್ ಕವಿಗಳು ಈ ಛಂದಸ್ಸಿನಲ್ಲಿ ನಾನಾ ವಸ್ತು ಗಳನ್ನು ಕುರಿತು ಕವಿತೆಗಳನ್ನು ಬರೆದಿದ್ದಾರೆ. ಎಲಿಜಿ ಛಂದಸ್ಸಿನಲ್ಲಿ ಪ್ರೇಮ ಗೀತೆಗಳಿವೆ: ಸೈನಿಕರನ್ನು ಹುರಿದುಂಬಿಸುವ ಕೃತಿಗಳಿವೆ. ಭೋಜನ ಸಮಾರಂಭಕ್ಕೆ ಸಂಬಂಧಿಸಿದ ಪದ್ಯಗಳಿವೆ. ಸತ್ತವರ ಸ್ಮಾರಕಗಳ ಮೇಲೆ ಕೆತ್ತಿರುವ ಲೇಖನಗಳೂ ಶೋಕಗೀತೆಗಳೂ ಇವೆ. ಎಲಿಜಿ ಚಿಂತನೆಯಿಂದ ಕೂಡಿದ ವೈಯಕ್ತಿಕ ಕವಿತೆ. ಎಲಿಜಿಯಿಕ್ ಛಂದಸ್ಸಿನಲ್ಲಿ ಬರೆದ ಪ್ರಾಚೀನ ಗ್ರೀಕ್ ಕವಿಗಳಲ್ಲಿ ಥಿಯೋಕ್ರಿಟಸ್ ಮತ್ತು ಬಿಯಾನ ಇಂಗ್ಲಿಷ್ ಕವಿಗಳ ಮೇಲೆ ತುಂಬ ಪ್ರಭಾವ ಬೀರಿದ್ದಾರೆ.

ರೋಮಿನ ಚಕ್ರವರ್ತಿ ಆಗಸ್ಟಸ್ ಸೀಸರನ (ಕ್ರಿ.ಪೂ. 63–ಕ್ರಿ.ಶ. 14) ಕಾಲದಲ್ಲಿದ್ದ ಅನೇಕ ಲ್ಯಾಟಿನ್ ಕವಿಗಳು ಎಲಿಜಿ ಛಂದಸ್ಸಿನಲ್ಲಿ ಬರೆದರು. ಇವರಲ್ಲಿ ಓವಿಡ್ ಗಣನೀಯನಾದವನು.

ಇಂಗ್ಲಿಷ್ ಕವಿಗಳು ಪ್ರೇಮಗೀತೆ, ಶೋಕಗೀತೆ ಇವೆರಡರಲ್ಲೂ ಎಲಿಜಿ ಛಂದಸ್ಸನ್ನು ಉಪಯೋಗಿಸಿದ್ದಾರೆ.

ತನ್ನ ಮಿತ್ರ ಫಿಲಿಪ್ ಸಿಡ್ನಿಯ ನೆನಪಿಗಾಗಿ ಸರ್ ಎಡ್ಮಂಡ್ ಸ್ಪೆನ್ಸರ್ 1586ರಲ್ಲಿ ಶೋಕಗೀತೆಯನ್ನು ರಚಿಸಿದ. ಸ್ಪೆನ್ಸರನ ಅನಂತರ, ಶೋಕ ಗೀತೆಗಳನ್ನು ರಚಿಸಿದ ಇಂಗ್ಲಿಷ್ ಕವಿಗಳಲ್ಲಿ ಮಿಲ್ಟನ್, ಷೆಲ್ಲಿ ಗಣ್ಯರು. ಮಿಲ್ಟನ್ ರಚಿಸಿದ ಶೋಕಗೀತೆ 'ಲಿಸಿಡಾಸ್'; ಕೀಟ್ಸ್ ಕವಿಯ ನೆನಪಿಗಾಗಿ ಷೆಲ್ಲಿ ಬರೆದ 'ಅಡೋನೇಸ್' ಸುಪ್ರಸಿದ್ಧ ಕವಿತೆಗಳು.

ವಿಶ್ವಸಾಹಿತ್ಯದಲ್ಲಿ ಗೌರವದ ಸ್ಥಾನವನ್ನು ಗಳಿಸಿಕೊಂಡಿರುವಂಥದು ಆಂಗ್ಲ ಕವಿ ಥಾಮಸ್ ಗ್ರೇ ರಚಿಸಿದ 'ಗ್ರಾಮ ಸ್ಮಶಾನದಲ್ಲಿ ಬರೆದ ಶೋಕ ಗೀತೆ'.

ಜಗತ್ತಿನ ಎಲ್ಲ ರಾಷ್ಟ್ರಗಳ ಕವಿಗಳೂ ಒಂದಲ್ಲ ಒಂದು ಕಾಲದಲ್ಲಿ ಶೋಕ ಗೀತೆಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ಬೇಂದ್ರೆಯವರ 'ಹಾಡು–ಪಾಡು' ಸಂಕಲನದಲ್ಲಿ ಉತ್ತಮ ಶೋಕಗೀತೆಗಳಿವೆ. ಪಂಜೆ ಮಂಗೇಶರಾಯರು ತಮ್ಮ ಸಹೋದರನ ಮರಣದಿಂದ ವ್ಯಾಕುಲರಾಗಿ ಬರೆದ 'ಅಣ್ಣನ ವಿಲಾಪ' ಒಂದು ಹೃದಯಸ್ಪರ್ಶಿ ಗೀತೆ. ಟಿ. ಎಸ್. ವೆಂಕಣ್ಣಯ್ಯನವರು ಗತಿಸಿದಾಗ 'ಕುವೆಂಪು' ಅವರು ರಚಿಸಿದ ಶೋಕಗೀತೆಯಲ್ಲಿ ಬರುವ "ಜೀವ ನೆಲದಿಂದೊಡನೆ ಹೊಸ ಹಸಿರು ಹೊಮ್ಮುವುದೇ? ಹಸಿ ನೋವಿನಿಂದೆ ಹಾಡಿನ ಚಿಲುಮೆ ಚಿಮ್ಮುವುದೇ? ಮೌನವೇ ಮಹಾಸ್ಮೃತಿ ನಿಮಗೆ

ರಿಯ ವ್ಯಕ್ತಿ" ಮುಂತಾದ ಪದ್ಯಗಳಲ್ಲಿ ಶೋಕ ಗೀತೆ ರಚಿಸುವಾಗ ಕವಿಗಳು ಅನುಭವಿಸುವ ತೀವ್ರ ಆವೇದನೆಗೆ ಸಾಕ್ಷಿಯಾಗಿವೆ.

## ಶೂಬರ್ಟ್

"ಶೂಬರ್ಟ್ ಮುಟ್ಟಿದ್ದೆಲ್ಲ, ಅವನ ಕಣ್ಣಿಗೆ ಬಿದ್ದದ್ದೆಲ್ಲ ಸಂಗೀತವಾಗುತ್ತದೆ" ಎಂದು ಪ್ರಸಿದ್ಧ ಸಂಗೀತಗಾರನೊಬ್ಬ ಹೇಳಿದ್ದಾನೆ. ಕಾಳಿದಾಸನ ಸಂಸ್ಕೃತ ನಾಟಕ 'ಶಾಕುಂತಲ'ದ ಜರ್ಮನ್ ಭಾಷಾಂತರವನ್ನು ನೋಡಿದ ಶೂಬರ್ಟ್ ಅದನ್ನು ಸಂಗೀತಕ್ಕೆ ಅಳವಡಿಸಿದ. ಅವನ ಸಂಗೀತ ರಚನೆಗಳೆಲ್ಲ ಜಾನಪದ ಗೀತೆಗಳಂತೆ ಬಹಳ ಜನಪ್ರಿಯವಾದುವು.

ಸಂಗೀತವನ್ನು ರಚಿಸಲು ಶೂಬರ್ಟ್ ಪರಿಶ್ರಮ ಪಡುತ್ತಿರಲಿಲ್ಲ. ಈತ ಎಲ್ಲ ಬಗೆಯ ಸಂಗೀತವನ್ನೂ ಬರೆದ —ಗೀತಿಕಾಬಂಧ, ಸಿಂಫನಿ, ಆಪೆರಾ ಸಂಗೀತ, ಧಾರ್ಮಿಕ ಸಂಗೀತ, ಪಿಯಾನೋ ಸಂಗೀತ, ತಂತಿವಾದ್ಯ ಚತುಷ್ಟಯ ಇತ್ಯಾದಿ. ಈತನ ಹಾಡುಗಳೂ ವಾದ್ಯಮೇಳರಚನೆಗಳೂ ಜರ್ಮನಿಯ ಜನಜೀವನದಲ್ಲಿ ಹಾಸುಹೊಕ್ಕಾಗಿವೆ. ನಾಟಕಮಂದಿರಗಳಲ್ಲಿ, ಹೋಟೆಲುಗಳಲ್ಲಿ ಇವನ ಸಂಗೀತ ಪ್ರತಿಧ್ವನಿಸುತ್ತಿರುತ್ತದೆ. ಅಲೆಮಾರಿ ಸಂಗೀತಗಾರರು ಈ ಸಂಗೀತ ರಚನೆಗಳನ್ನು ಹಳ್ಳಿ ಹಳ್ಳಿಗೆ ಒಯ್ಯುತ್ತಾರೆ.

"ನನ್ನ ಪ್ರತಿಭೆ ಮತ್ತು ದಾರಿದ್ರ್ಯದ ಫಲ ನನ ಸಂಗೀತ" ಎಂದು ಫ್ರಾನ್ಜ್ ಶೂಬರ್ಟ್ ಅನ್ನುತ್ತಿದ್ದುದುಂಟು. ಈತ ಆಸ್ಟ್ರಿಯದ ರಾಜಧಾನಿ ವಿಯೆನ್ನಾದಲ್ಲಿದ್ದ ಬಡ ಶಾಲಾ ಮಾಸ್ತರೊಬ್ಬರ ಮಗ. (ಜನನ 31 ಜನವರಿ, 1797). ತಂದೆಗೆ ಹದಿನೆಂಟು ಮಕ್ಕಳು. ಅವರ ಮಧ್ಯೆ ಪುಟಾಣಿ ಫ್ರಾನ್ಜ್‌ಗೆ ವಿಶೇಷ ಅನುಕೂಲ ಒದಗಿಸುವುದು ಹೇಗೆ? ಆದರೆ ಈತ ಹುಟ್ಟು ಸಂಗೀತಗಾರ. ಸಣಕಲು ದೇಹದ ಫ್ರಾನ್ಜ್‌ನ ಸಂಗೀತ ಪ್ರತಿಭೆ ಚಿಕ್ಕಂದಿನಲ್ಲೇ ವ್ಯಕ್ತವಾಯಿತು. ಇವನಿಗೆ ಐದು ವರ್ಷ ಆಗುತ್ತಲೇ ತಂದೆ ತಾನೇ ಪಿಟೀಲು ಅಭ್ಯಾಸ ಮಾಡಿಸಲು ತೊಡಗಿದ. ಹಿರಿಯಣ್ಣನಿಂದ ಪಿಯಾನೋ ಪಾಠವಾಗುತ್ತಿತ್ತು. ಇವರು ತಮಗೆ ತಿಳಿದಷ್ಟು ಸಂಗೀತ ಕಲಿಸಿದ ಮೇಲೆ, ಊರಿನ ಚರ್ಚಿನ ಗೀತಮೇಳದ ಶಿಕ್ಷಕನ ಬಳಿಗೆ ಫ್ರಾನ್ಜ್‌ನನ್ನು ಕಳುಹಿಸಿದರು. ತಾನು ಯಾವುದನ್ನು ಕಲಿಸಲು ಹೊರಟರೂ ಈ ಹುಡುಗ ಅದನ್ನು ಮೊದಲೇ ಕಲಿತುಕೊಂಡಿರುವಂತೆ ಅನಿಸುತ್ತಿದ್ದ ಎಂದು ಶಿಕ್ಷಕನಿಗೆ ಆಶ್ಚರ್ಯ.

ಸಂಪದ್ಭರಿತ ಸಂಗೀತ: ಶೂಬರ್ಟ್

11ನೆಯ ವಯಸ್ಸಿಗೆ ಫ್ರಾನ್ಜ್ ಶೂಬರ್ಟ್ ವಿಯೆನ್ನಾದ ಸಂಗೀತಶಾಲೆಯನ್ನು ಸೇರಿದ. ಮತ್ತೆ ಎರಡು ವರ್ಷಗಳಲ್ಲೇ ಇವನು ಸ್ವತಂತ್ರ ಸಂಗೀತರಚನೆಗೆ ಆರಂಭಿಸಿದ್ದ. ಎಷ್ಟೋ ಬಾರಿ ಸಂಗೀತರಚನೆ ಮಾಡುತ್ತ ಮಾಡುತ್ತ ಬರೆಯಲು ಬೇಕಾದಷ್ಟು ಕಾಗದವೇ ಸಿಗದೆ ಶೂಬರ್ಟ್ ಪೇಚಾಡುತ್ತಿದ್ದುದುಂಟು. ಹದಿನೇಳು ತುಂಬುವಷ್ಟರಲ್ಲಿ ಈತ ಒಂದು ಸಿಂಫನಿ ಸಂಗೀತ ರಚನೆಯನ್ನು ನಿರ್ಮಿಸಿದ್ದ.

ಶೂಬರ್ಟ್ ತಾರುಣ್ಯಕ್ಕೆ ಕಾಲಿರಿಸುತ್ತಿದ್ದಂತೆ ಅವನ ಧ್ವನಿ ಒಡೆದು, ಸಂಗೀತಾಭ್ಯಾಸ ಬಿಡಬೇಕಾಯಿತು. ತಂದೆಯಂತೆಯೇ ಮಗನೂ ಶಾಲಾ ಅಧ್ಯಾಪಕನಾದ. ಆದರೆ ಶೂಬರ್ಟ್‌ಗೂ ಶಾಲಾ ಶಿಕ್ಷಕನ ಕೆಲಸಕ್ಕೂ ಎಣ್ಣೆ ಸೀಗೆ ಆಯಿತು. 1818ರಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ಪೂರ್ಣಾವಧಿ ಸಂಗೀತಗಾರನಾದ.

ಶೂಬರ್ಟ್ ಒಂದು ದಿನದಲ್ಲಿ ಎಂಟು–ಹತ್ತು ಹಾಡುಗಳನ್ನು ರಚಿಸಿದ್ದೂ ಉಂಟು. ಕಡುಬಡತನದಲ್ಲಿ ಜೀವಿಸುತ್ತಿದ್ದರೂ ಇವನು ಗೆಲುವಿನ ಗೀತೆಗಳನ್ನು ಬರೆಯುತ್ತಿದ್ದ. ಕೆಲವು ರಚನೆಗಳು ಜಾನಪದ ಗೀತೆಗಳಂತೆ ಸರಳ. ಇನ್ನು ಕೆಲವು ಸುಂದರವೂ ಸಂಕೀರ್ಣವೂ ಆದ ಸಿಂಫನಿ ರಚನೆಗಳು. ಆದರೆ ಇಂಥ ಹಾಡುಗಳಿಂದ ಹಣ ಹೇಗೆ ಬಂದೀತು?

ಒಂದು ದಿನ ಶೂಬರ್ಟ್ ಪ್ರಸಿದ್ಧ ಜರ್ಮನ್ ಕವಿ ಗಯಟೆಯ ಒಂದು ಪುಸ್ತಕವನ್ನು ಕಂಡ. ಓದುತ್ತ ಹೋದಂತೆ ಕವನಕ್ಕೆ ಹೊಂದುವ ಸಂಗೀತವೂ ಶೂಬರ್ಟ್‌ನ ತಲೆಯಲ್ಲಿ ಮೂಡುತ್ತ ಹೋಯಿತು. ಈ ಕವಿತೆಯ ಸಂಗೀತವನ್ನು ಪೂರ್ತಿಯಾಗಿ ಬರೆದಾದ ಮೇಲೆ ವಿಯೆನ್ನಾದ ಪ್ರಕಾಶಕನೊಬ್ಬ ಇದನ್ನು ಕೊಂಡು ಶೂಬರ್ಟ್‌ಗೆ ಸ್ವಲ್ಪ ಹಣ ಕೊಟ್ಟ. ಪ್ರಕಟವಾದೊಡನೆ ಈ ಪುಸ್ತಕ ಬಹಳ ಜನಪ್ರಿಯವಾಯಿತು.

ಶೂಬರ್ಟ್ ರಚಿಸಿದ ಹಾಡುಗಳ ಸಂಖ್ಯೆ 600ಕ್ಕೂ ಹೆಚ್ಚು. ಅವಿಶ್ರಾಂತ ದುಡಿಮೆ, ಬೆಂಬಿಡದ ಬಡತನ ಮತ್ತು ನಿರಾಶೆಗಳ ಪ್ರಭಾವ ಅವನ ಆರೋಗ್ಯದ ಮೇಲೂ ಕಾಣತೊಡಗಿತು. ಹಲವು ತಿಂಗಳ ಅನಾರೋಗ್ಯದ ಬಳಿಕ ಮೂವತ್ತೊಂದರ ಹರೆಯದ ಶೂಬರ್ಟ್ 1828ರ ನವೆಂಬರ್ 19ರಂದು ತೀರಿಕೊಂಡ.

ಗೆಳೆಯನೊಬ್ಬ ಇವನ ಸಮಾಧಿಯ ಮೇಲೆ ಬರೆದ ಚರಮವಾಕ್ಯವಿದು: "ಸಂಪದ್ಭರಿತ ಸಂಗೀತ ಇಲ್ಲಿ ನೆಲೆಸಿದೆ."

## ಶೂಮನ್

"ನನ್ನ ಇಡೀ ಜೀವನವೇ ಕವಿತೆ ಮತ್ತು ಗದ್ಯದ ನಡುವಿನ ಹೋರಾಟ ಅಥವಾ ಸಂಗೀತಕ್ಕೂ ನ್ಯಾಯಶಾಸ ಕ್ಕೂ ನಡೆದ ಹೋರಾಟ."

ಹೀಗೆಂದು ತನ್ನ 20ನೆಯ ವಯಸ್ಸಿನಲ್ಲಿ ತನ್ನ ತಾಯಿಗೆ ಬರೆದವನು ಜರ್ಮನಿಯ ರಾಬರ್ಟ್ ಅಲೆಗ್ಸಾಂಡರ್ ಶೂಮನ್. 19ನೆಯ ಶತಮಾನದ ಶ್ರೇಷ್ಠ ವಾಗ್ಗೇಯಕಾರನೆಂದು ಪ್ರಖ್ಯಾತನಾದವನು.

ಶೂಮನ್ ಹುಟ್ಟಿದ್ದು ಜರ್ಮನಿಯ ಸ್ಯಾಕ್ಸನಿ ಪ್ರಾಂತ್ಯದ ಜ್ವಿಕ್ ಎಂಬಲ್ಲಿ: 1810ರ ಜೂನ್ 8ರಂದು. ತಂದೆ ಸುಸಂಸ್ಕೃತ ಪುಸ್ತಕ ವ್ಯಾಪಾರಿ ಮತ್ತು ಪ್ರಕಾಶಕ. ಮಗನಲ್ಲಿ ಸಾಹಿತ್ಯ ಮತ್ತು ಸಂಗೀತದ

ಅಭಿರುಚಿ ಬೆಳೆಯಲು ಅವನ ಪ್ರೋತ್ಸಾಹವೇ ಕಾರಣ. ಚಿಕ್ಕಂದಿನಲ್ಲಿ ಶೂಮನ್ ಸಣ್ಣ ಕಥೆಗಳನ್ನೂ ಪದ್ಯಗಳನ್ನೂ ಬರೆಯುತ್ತಿದ್ದ; ಸಂಗೀತ ರಚನೆಯನ್ನೂ ಮಾಡುತ್ತಿದ್ದ. ಶಾಲಾ ವಿದ್ಯಾಭ್ಯಾಸ ಮುಗಿದ ಮೇಲೆ ಆಸಕ್ತಿಯಿಂದ ನ್ಯಾಯಶಾಸ್ತ್ರದ ಅಧ್ಯಯನ ಮಾಡಿದ. ಆದರೆ ಬಾಲ್ಯದಿಂದಲೇ ಅವನ ಒಲವೆಲ್ಲವೂ ಇದ್ದದ್ದು ಸಂಗೀತದ ಕಡೆಗೆ. ತಾನೊಬ್ಬ ಶ್ರೇಷ್ಠ ಪಿಯಾನೋ ವಾದಕನಾಗಬೇಕೆಂಬುದು ಅವನ ಬಾಳಿನ ಹೆಬ್ಬಯಕೆಯಾಗಿತ್ತು. ಅದಕ್ಕಾಗಿ ಅವನು ಶ್ರದ್ಧೆಯಿಂದ ಪಿಯಾನೋ ವಾದನವನ್ನು ಅಭ್ಯಾಸಮಾಡಿ, ತನ್ನದೇ ವಿಶಿಷ್ಟ ವಾದನಶೈಲಿಯೊಂದನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಆದರೆ ದುರದೃಷ್ಟವಶಾತ್ ಅವನ ಬಲಗೈಯ ಒಂದು ಬೆರಳಿಗೆ ಪೆಟ್ಟು ಬಿದ್ದು ಅದು ಊನವಾಗಿ ಪಿಯಾನೋವಾದನ ಕಷ್ಟವಾಯಿತು.

ರಸಿಕ ಮನೋಭಾವ ಅವನ ಗೇಯ ರಚನೆಗಳಲ್ಲಿ ತುಂಬಿ ಹರಿದಿದೆ. ಹೆಚ್ಚು ಕಡಮೆ ಅವನ ಬದುಕಿನಲ್ಲೂ ಅಂಥದೇ ವಾತಾವರಣವಿತ್ತು.

ಸಂಗೀತ ಕಲೆಗೆ ಸಮರ್ಪಣೆ : ಶೂಮನ್

ಅವನು ಸ್ನೇಹಪರ, ದಯಾಳು. ಫ್ರೆಡರಿಕ್ ವೀಕ್ ಎಂಬ ಪಿಯಾನೋ ವಾದಕನ ಮಾರ್ಗದರ್ಶನದಲ್ಲಿ ಶೂಮನ್ ಅಭ್ಯಾಸ ಮಾಡುತ್ತಿದ್ದಾಗ ಚೆಲುವೆಯಾದ ಅವನ ಮಗಳು ಕ್ಲಾರಾಳನ್ನು ಪ್ರೇಮಿಸಿ ವಿವಾಹವಾದ. ಅವಳೂ ಪಿಯಾನೋ ವಾದನದಲ್ಲಿ ನಿಪುಣೆ. ಅವರಿಬ್ಬರ ಪ್ರೇಮ ವಿವಾಹವಾದ ಬಳಿಕ ಶೂಮನ್ ಕೆಲವು ಅತ್ಯುತ್ತಮವಾದ ಪಿಯಾನೋ ಗೇಯ ರಚನೆಗಳನ್ನು ಮಾಡಿದ.

1834ರಲ್ಲಿ ಸಂಗೀತ ಕಲೆಗೆ ಸಂಬಂಧಿಸಿದಂತೆ '[illegible]ಗ್‌ನ ಹೊಸ ಸಂಗೀತದ ನಿಯತಕಾಲಿಕ' ಎಂಬ ಪತ್ರಿಕೆಯನ್ನು ಪ್ರಕಟಿಸಿದ. ಸಂಗೀತಾಭಿಮಾನಿಗಳಲ್ಲಿ ಸಂಗೀತಜ್ಞರಲ್ಲಿ [illegible] ಅಭಿರುಚಿಯನ್ನು ಬೆಳೆಸುವುದು ಈ ಪತ್ರಿಕೆಯ ಉದ್ದೇಶವಾಗಿತ್ತು. ಇದೇ ಕಾಲದಲ್ಲಿ 30 ವರ್ಷ ವಯಸ್ಸಿನ ಅವನ [illegible] ರೋಗಗ್ರಸ್ತನಾಗಿ [illegible] ಕೊಂಡನು. ಈ ಸಾವು ಶೂಮನನ ಮೇಲೆ ಪ್ರಬಲ ಆಘಾತವಾಗಿ ಪರಿಣಮಿಸಿತು.

1844ರಲ್ಲಿ ಶೂಮನ್ ತನ್ನ ಹೆಂಡತಿಯೊಡನೆ ರಷ್ಯ ದೇಶಕ್ಕೆ ಭೇಟಿ ಕೊಟ್ಟ. ಅವರಿಬ್ಬರೂ ಅನೇಕ ಕಡೆಗಳಲ್ಲಿ ಸಂಗೀತ ಕಚೇರಿಗಳನ್ನು ನಡೆಸಿದರು. ಆದರೆ ಇದ್ದಕ್ಕಿದ್ದಂತೆ ಶೂಮನ್‌ಗೆ ದೇಹಾಲಸ್ಯ ಉಂಟಾಗಿ ಜರ್ಮನಿಗೆ ಅವರು ಹಿಂದಿರುಗಬೇಕಾಯಿತು. ಐದು ವರ್ಷಗಳ ಅನಂತರ ಡ್ರೆಸ್ಸೆಲ್‌ಡ್ರಾಫ್‌ನಲ್ಲಿ ಸಂಗೀತ ನಿರ್ದೇಶಕನ ಕೆಲಸ ವಹಿಸಿಕೊಂಡ. ಆದರೆ ಆ ಕೆಲಸದಲ್ಲಿ ಅವನಿಗೆ ಯಶಸ್ಸು ದೊರೆಯಲಿಲ್ಲ.

ಸಂಗೀತ ಕಲೆಗಾಗಿ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ ಶೂಮನ್ ಜರ್ಮನಿಯ ಶ್ರೇಷ್ಠ ಗೇಯಕಾರರಾದ ಬಿಥೋವನ್ ಮತ್ತು ವಾಗ್ನರ್‌ರಂತೆಯೇ ಶ್ರೇಷ್ಠ ಕಲಾವಿದ. ಅವನು ಸುಮಾರು 150 ಪಿಯಾನೋ ಗೇಯಕೃತಿಗಳು ಮತ್ತು ಸಿಂಫನಿಗಳನ್ನು ಬರೆದಿದ್ದಾನೆ. ಅವನ ಕೃತಿಗಳು ಅವನ ವ್ಯಕ್ತಿತ್ವದ ಪ್ರತಿರೂಪಗಳಾಗಿವೆ.

ಸಮಕಾಲೀನ ಸಂಗೀತ ಪ್ರಪಂಚದ ಮೇಲೆ ಶೂಮನನ ಪ್ರಭಾವ ಗಮನಾರ್ಹ. ಬ್ರಾಮ್ಸ್ ಮತ್ತು ಷೊಪಿನ್‌ರಂಥ ಸಂಗೀತಕಲಾವಿದರ ಪ್ರತಿಭೆಯನ್ನು ಗುರುತಿಸಿ ಅವರನ್ನು ಪ್ರೋತ್ಸಾಹಿಸಿದವರಲ್ಲಿ ಶೂಮನ್ ಮೊಟ್ಟಮೊದಲಿಗ.

ಶೂಮನನ ಜೀವನದ ಕೊನೆಯ ದಿನಗಳು ಅತ್ಯಂತ ದಾರುಣವಾಗಿದ್ದುವು. ತೀವ್ರವಾದ ಮನೋವ್ಯಾಧಿ ಆತನಿಗೆ ಅಂಟಿತು. ಅದರ ಪರಿಣಾಮವಾಗಿ ಅವನು, ರೈನ್ ನದಿಗೆ ಹಾರಿ ಪ್ರಾಣ ಕಳೆದುಕೊಳ್ಳಲು ಯತ್ನಿಸಿದ. ಆದರೆ ಆ ಪ್ರಯತ್ನ ವಿಫಲವಾಯಿತು. ಕೊನೆಯ ಎರಡು ವರ್ಷಗಳ ಕಾಲ ಮನೋರೋಗಿಗಳ ಚಿಕಿತ್ಸಾ ಕೇಂದ್ರದಲ್ಲಿ ನರಳಿ ಅಲ್ಲಿಯೇ 1856ರ ಜೂಲೈ 29ರಂದು ಕಾಲವಾದ.

## ಶೆಲ್ಲಿ

'ಬಾನಾಡಿ', 'ಮೋಡ', 'ಪಶ್ಚಿಮ ಮಾರುತ' ಇಂಥ ಹೃದಯ ಅಪಹರಿಸುವ ಶೀರ್ಷಿಕೆಯುಳ್ಳ ಅತ್ಯಂತ ಭಾವಗುಣವುಳ್ಳ ಕವಿತೆಗಳನ್ನು ಬರೆದವನು ಶೆಲ್ಲಿ (ಭಾಷಾ ಉಚ್ಚಾರ: ಷೆಲೀ). ಕಾಮನಬಿಲ್ಲು, ಸಂಧ್ಯಾ ಸಮಯ, ನೀಲಗಗನ, ಮೇಲ ಮೇಲಕ್ಕೇರುವ ಬಾನಾಡಿ ಹಕ್ಕಿ ಇಂಥವನ್ನು ಚಿತ್ರಿಸಿದ ಶೆಲ್ಲಿ ತನ್ನ ಜೀವನದಲ್ಲಿಯೂ ಹೀಗೆ ಬಾನಿನಲ್ಲೇ ತೇಲಿದನೇನೋ ಎನಿಸಬಹುದು. ಆದರೆ ಜೀವನದ ತುಂಬ ನೋವು, ಕಷ್ಟಗಳನ್ನೇ ಅನುಭವಿಸಿದ ಕವಿ ಈತ. ಚಿತ್ರಿಸಿದ್ದು ಮಾತ್ರ ಮುಗಿಲು ಮುಟ್ಟುವ ಭಾವಗಳನ್ನು. ಕಾಯಿದೆ ಕಟ್ಟಳೆಗಳನ್ನು ಸಹಿಸಿದ ಮನೋಧರ್ಮ. ಇವುಗಳಿಂದ ಬಿಡಿಸಿಕೊಂಡು ಈ ಪ್ರಪಂಚಕ್ಕೆ ತನ್ನದೊಂದು ಸಂದೇಶ ಸಾರಲು ಆಶಿಸಿದ ಶೆಲ್ಲಿ. ಅವನ ಜೀವನವಿಡೀ ಈ ತೊಳಲಾಟಕ್ಕೆ ವಿಾಸಲಾಯಿತು.

ಆಗರ್ಭ ಶ್ರೀಮಂತ ಮನೆತನದಲ್ಲಿ 1792 ಆಗಸ್ಟ್ 4ರಂದು ಸಸೆಕ್ಸ್‌ನ (ಇಂಗ್ಲೆಂಡ್) ಫೀಲ್ಡ್‌ಪ್ಲೇಸ್ ಎಂಬಲ್ಲಿ ಪರ್ಸಿ ಬಿಷೆ ಶೆಲ್ಲಿ ಹುಟ್ಟಿದ. ಶಾಲೆಯಲ್ಲಿ ಹಾಗೂ ಈಟನ್ ಕಾಲೇಜಿನಲ್ಲಿ ಶೆಲ್ಲಿ ಮಾಡುತ್ತಿದ್ದ ಕುಚೇಷ್ಟೆಗಳಿಗಾಗಿ 'ಹುಚ್ಚು ಶೆಲ್ಲಿ' ಎಂಬ ಹೆಸರೇ ಅವನಿಗೆ ತಗಲಿಕೊಂಡಿತು. 'ನಾಸ್ತಿಕ

ಷೆಲ್ಲಿ' ಎಂದೂ ಅವನನ್ನು ಕರೆಯುತ್ತಿದ್ದರು. 'ನಾಸ್ತಿಕತೆಯ ಅವಶ್ಯತೆ' ಎಂಬ ಲೇಖನ ಬರೆದುದಕ್ಕಾಗಿ ಕಾಲೇಜಿನಿಂದ ಆತ ಹೊರದೂಡಲ್ಪಟ್ಟ.

1811ರಲ್ಲಿ–19ನೆಯ ವಯಸ್ಸಿನಲ್ಲಿ ಷೆಲ್ಲಿ ತನ್ನ ಶಾಲಾ ವಿದ್ಯಾರ್ಥಿ ಹ್ಯಾರಿಯೆಟ್ ವೆಸ್ಟ್‌ಬ್ರುಕ್ ಎಂಬ ರೂಪಸಿಯೊಡನೆ ಪಲಾಯನ ಮಾಡಿದ. ಸ್ಕಾಟ್‌ಲೆಂಡಿನಲ್ಲಿ ಅವರ ವಿವಾಹ ನಡೆಯಿತು. ಷೆಲ್ಲಿ ದಂಪತಿ ಹೆಚ್ಚು ಕಾಲ ಎಲ್ಲಿಯೂ ನಿಲ್ಲದೆ ಚಲಿಸುತ್ತಲೇ ಇದ್ದರು. ದಾಂಪತ್ಯ ಬಹಳ ಕಾಲ ಉಳಿಯಲಿಲ್ಲ. 23ನೆಯ ವಯಸ್ಸಿನಲ್ಲಿ ಮೇರಿ ಗಾಡ್‌ವಿನ್ ಎಂಬವಳನ್ನು ಮದುವೆಯಾದ. ಈಕೆ ಬರೆಹಗಾರಳೂ ಆಗಿದ್ದಳು. ಫ್ರಾಂಕನ್‌ಸ್ಟೀನ್ ಎಂಬ ವಿಕರಾಳರೂಪದ ಪಾತ್ರವುಳ್ಳ ಕಥೆಯನ್ನು ಸೃಷ್ಟಿಸಿದ ಖ್ಯಾತಿ ಇವಳದು. ಮೇರಿಯೊಡನೆ ಷೆಲ್ಲಿ ಇಟಲಿಗೆ ತೆರಳಿದ. ಅಲ್ಲಿ ಅವನ ರಮಣೀಯ ಕಾವ್ಯನಾಟಕ 'ಮುಕ್ತ ಪ್ರಾಮಿಥಿಯಾಸ್' ರಚಿತವಾಯಿತು. 'ಬಾನಾಡಿ', 'ಮೋಡ', 'ಪಶ್ಚಿಮ ಮಾರುತ ಪ್ರಗಾಥ,' ಕೀಟ್ಸ್ ಕವಿಯ ನೆನಪಿಗಾಗಿ 'ಅಡೊನೆಸ್', 'ಬಾಳ್ವೆಯ ಗೆಲುವು' ಮುಂತಾದ ಸ್ಮರಣೀಯ ಭಾವಗೀತೆಗಳನ್ನು ಬರೆದ. ಷೆಲ್ಲಿ ಅನೇಕ ಪ್ರಬಂಧಗಳನ್ನೂ ರಚಿಸಿದ. 'ಕಾವ್ಯದ ಪರವಾಗಿ' ಎಂಬ ಅವನ ಅಪೋಘ ಬರೆಹ 1821ರಲ್ಲಿ ಹೊರಬಂತು.

ಅನಭಿಷಿಕ್ತ ಶಾಸಕ : ಷೆಲ್ಲಿ

ಸಮಕಾಲೀನ ಕವಿ ಬೈರನ್ ಷೆಲ್ಲಿಯ ಗೆಳೆಯನಾಗಿದ್ದ. ತಮ್ಮ ಈ ಗೆಳೆತನವನ್ನು ಒಂದು ಕವಿತೆಯಲ್ಲಿ ಷೆಲ್ಲಿ ಚಿರಂತನಗೊಳಿಸಿದ್ದಾನೆ. ಬಾನಾಡಿಯ ಕೂಗಿಗೆ ಕವಿ ಹೃದಯ ಸ್ಪಂದಿಸುವ ಬಗೆ ಮನೋಜ್ಞ. ನೋವಿನ ಸೋಂಕಿಲ್ಲದ, ಪರಿಶುದ್ಧ ಉಲ್ಲಾಸದ ಭಾವವೆಂದು ಬಾನಾಡಿಯ ಹಾಡನ್ನು ಹೊಗಳುತ್ತ, ಹೀಗೆ ಹೇಳಿದ್ದಾನೆ.

" ಕುಂದುಸೋಕದ ನಮ್ಮ ನಗೆಯೊಳು
ಕೊನೆಗೆ ನೋವಿನಿಸಿರುವುದು
ನೊಂದ ಗೋಳನು ಹೇಳಿ ಕೊರೆವವು ಇನಿಯ ಕವನಗಳೆಮ್ಮೊಳು "

—'ಇಂಗ್ಲಿಷ್ ಗೀತಗಳು'

1822ರ ಜುಲೈ 8ರಂದು ಇಟಲಿಯ ತೀರದಾಚೆ ಬಿರುಗಾಳಿಗೆ ಸಿಲುಕಿದ ಷೆಲ್ಲಿಯ ದೋಣಿ ಮುಗುಚಿತು. ಷೆಲ್ಲಿ ನೀರಿನಲ್ಲಿ ಮುಳುಗಿ ಮೃತಪಟ್ಟ. ಆಗ ಅವನಿಗೆ 29 ವರ್ಷ ಪ್ರಾಯ.

ಇಂಗ್ಲಿಷ್ ಸಾಹಿತ್ಯದ ರಮ್ಯಯುಗದ ಕೀಟ್ಸ್, ಬೈರನರ ಶ್ರೇಣಿಯ ಶ್ರೇಷ್ಠ ಕವಿ ಷೆಲ್ಲಿ. ಈತನದು ಪ್ರವಾದಿ ಮನೋಭಾವ. ಕೆಟ್ಟದ್ದನ್ನೆಲ್ಲ ಬದಲಾಯಿಸಿ, ಮುಕ್ತ ಸಮಾಜವನ್ನು ನಿರ್ಮಿಸುವ ಆಸೆ: ಭವಿತವ್ಯದಲ್ಲಿ ಮಾನವ ಮಹಾನ್ ಸಾಧನೆಗಳನ್ನು ಎಸಗುವನೆಂಬ ನಂಬಿಕೆ–ಈ ಎಲ್ಲ ಭವ್ಯ ಕನಸುಗಳು ಅವನ ಸ್ಫೂರ್ತಿಯ ಸೆಲೆಯಾದುವು. ಆದರೆ ಗೌರವ, ಪ್ರಶಂಸೆಗಳು ಮಾತ್ರ ಜೀವಿತಕಾಲದಲ್ಲಿ ಅವನಿಗೆ ದೊರೆಯಲಿಲ್ಲ.

ಪತಿಯ ಕಾಲಾನಂತರ ಮೇರಿ ಅವನ ಜೀವನಚರಿತ್ರೆ ಬರೆದಳು. ಅವನ ಕವಿತೆಗಳನ್ನೂ ಬರೆಹಗಳನ್ನೂ ಪ್ರಬಂಧಗಳನ್ನೂ ಸಂಪಾದಿಸಿ, ಪ್ರಕಟಿಸಿದಳು.

'ಜಗತ್ತಿನ ಅನಭಿಷಿಕ್ತ ಶಾಸಕರು' ಎಂದು ಕವಿಗಳ ಮೇಲ್ಮೆಯನ್ನು ಷೆಲ್ಲಿ ಒಂದೆಡೆ ಬಣ್ಣಿಸಿದ್ದಾನೆ.

## ಷೊಪಿನ್

ಫ್ರೆಡರಿಕ್ ಫ್ರಾನ್ಸ್‌ವಾ ಷೊಪಿನ್ (ಭಾಷಾ ಉಚ್ಚಾರ : ಷೋಪ್ಯಾನ್) 19ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಖ್ಯಾತ ಪಿಯಾನೋ ವಾದಕ. ಒಂದೂವರೆ ಶತಮಾನ ಕಳೆದರೂ, ಲಂಡನ್ ಪ್ಯಾರಿಸ್ ನಗರಗಳಲ್ಲಿ ಸಂಗೀತ ಕಚೇರಿಗಳು ನಡೆಯುವ ಭವನಗಳಲ್ಲಿ ಷೊಪಿನ್ ರಚನೆಗಳು ಜೀವಂತವಾಗಿವೆ.

ಷೊಪಿನ್ ಪೋಲೆಂಡಿನ ವಾರ್ಸಾ ನಗರದ ಸಮೀಪದಲ್ಲಿ 1810ರ ಫೆಬ್ರುವರಿ 22ರಂದು ಜನಿಸಿದ. ಅವನ ತಂದೆ ನಿಕೊಲಾಸ್ ಫ್ರೆಂಚ್ ಜನಾಂಗದವನು. ತಾಯಿ ಪೋಲೆಂಡಿನ ಶ್ರೀಮಂತ ಮನೆತನದವಳು. ಹೀಗೆ ಅವನ ವ್ಯಕ್ತಿತ್ವದಲ್ಲಿ ಪೋಲೆಂಡ್ ಮತ್ತು ಫ್ರಾನ್ಸಿನ ಸಂಸ್ಕೃತಿಗಳು ಬೆರೆತಿದ್ದುವು. ಪೋಲಿಷ್ ಹಳ್ಳಿಯ ನೃತ್ಯಗೀತೆಗಳ ಮಾಧುರ್ಯ, ಫ್ರೆಂಚ್ ಸಂಗೀತದ ಗಂಭೀರ ಚಿತ್ತಾಕರ್ಷತೆ ಇವೆರಡನ್ನೂ ಆತನ ಪಿಯಾನೋ ಗೇಯದಲ್ಲಿ ಕಾಣಬಹುದು.

ತಂದೆ ಇಂಪಾಗಿ ಕೊಳಲು ನುಡಿಸುತ್ತಿದ್ದ. ತಾಯಿ ಸುಶ್ರಾವ್ಯವಾಗಿ ಹಾಡುತ್ತಿದ್ದಳು; ಹಿರಿಯ ಅಕ್ಕ ಲುಡ್ವಿಕಾ ಪಿಯಾನೋ ಬಾರಿಸುತ್ತಿದ್ದಳು. ಹೀಗೆ ಬಾಲ್ಯದಲ್ಲೇ ಸಂಗೀತ ಅವನನ್ನು ಆವರಿಸಿತ್ತು. ಬಾಲಕ ಫ್ರೆಡರಿಕ್ ತನ್ನ ಆರನೆಯ ವರ್ಷದಲ್ಲಿ ಪಿಯಾನೋ ಸಂಗೀತ ಪಾಠಗಳನ್ನು ಆಸಕ್ತಿಯಿಂದ ಅಭ್ಯಾಸಮಾಡಿದ. ಮಗನಿಗೆ ಸಂಗೀತದಲ್ಲಿರುವ ಅಭಿರುಚಿಯನ್ನು ಗಮನಿಸಿದ ತಂದೆ ವಾರ್ಸಾದಲ್ಲಿರುವ ಶ್ರೇಷ್ಠ ಗೇಯರಚನಕಾರ ಜೋಸೆಫ್ ಎಲ್ಸ್‌ನರ್‌ನ ಮಾರ್ಗದರ್ಶನದಲ್ಲಿ ಅಭ್ಯಾಸ ಮಾಡುವಂತೆ ಏರ್ಪಡಿಸಿದ.

ಒಂಬತ್ತು ವರ್ಷ ವಯಸ್ಸಿನಲ್ಲಿ ಷೊಪಿನ್ ತನ್ನ ಚುರುಕುಮಾತುಗಾರಿಕೆಯಿಂದಲೂ ಪಿಯಾನೋ ವಾದನದಲ್ಲಿನ ನಿಪುಣತೆ



ಜಾನಪದ ಸ್ಫೂರ್ತಿ : ಷೊಪಿನ್

ಯಿಂದಲೂ ವಾರ್ಸಾವ ಶ್ರೀಮಂತವರ್ಗವವರ ಮೆಚ್ಚುಗೆ ಗಳಿಸಿದ. ವಾರ್ಸಾಕ್ಕೆ ಭೇಟಿಯಿತ್ತ ರಷ್ಯದ ಚಕ್ರವರ್ತಿಯ ಸಮ್ಮುಖದಲ್ಲಿ ಪಿಯಾನೋ ನುಡಿಸಿ ಪ್ರಶಂಸೆಗೆ ಪಾತ್ರನಾದ. ಆಗ ಅವನಿಗೆ 14 ವರ್ಷ ವಯಸ್ಸು. ಆ ವೇಳೆಗಾಗಲೇ ಜರ್ಮನಿಯಲ್ಲಿ ರಾಬರ್ಟ್ ಷೂಮನ್ ತನ್ನ ಪಿಯಾನೋ ಗೇಯರಚನೆಗಳಿಂದ ಪ್ರಸಿದ್ಧನಾಗಿದ್ದ. ಷೊಪಿನ್ ಪಿಯಾನೋ ಗೇಯರಚನೆಗಳನ್ನು ಮಾಡುವಂತೆ ಮೊತ್ತಮೊದಲು ಪ್ರೋತ್ಸಾಹ ನೀಡಿದ ವ್ಯಕ್ತಿಯೇ ಆತ. ಷೂಮನ್ ವಿಯೆನ್ನಾದಲ್ಲಿ ಪ್ರಕಟಿಸುತ್ತಿದ್ದ ಸಂಗೀತವನ್ನು ಕುರಿತಾದ ನಿಯತಕಾಲಿಕ ಷೊಪಿನ್‌ಗೆ ಬಹಳ ಮೆಚ್ಚುಗೆಯಾಯಿತು. ಜರ್ಮನಿಯ ಪ್ರಾಗ್, ಡ್ರೆಸ್ಡನ್ ಮುಂತಾದ ನಗರಗಳಲ್ಲಿ ಸಂಚರಿಸಿ ಪಿಯಾನೋ ಸಂಗೀತ ಕಚೇರಿಗಳನ್ನು ನಡೆಸಿದ. ಕೆಲವು ಕಡೆ ಅವನ ಪಿಯಾನೋ ಸಂಗೀತ ವಿಮರ್ಶಕರ ಕಟು ಟೀಕೆಗೆ ಒಳಗಾಯಿತು.

ತನ್ನ 22ನೆಯ ವಯಸ್ಸಿನಲ್ಲಿ ಷೊಪಿನ್ ಪ್ಯಾರಿಸಿಗೆ ಭೇಟಿಯಿತ್ತ. ಅಲ್ಲಿ ರೊಮ್ಯಾಂಟಿಕ್ ಯುಗದ ಸಂಗೀತ ಕಲಾವಿದರ, ಸಾಹಿತಿಗಳ, ನಟರ, ಕವಿಗಳ, ಗೆಳೆತನ ಆತನಿಗೆ ಲಭಿಸಿತು.

1837ರಲ್ಲಿ ಆತ ಪ್ಯಾರಿಸಿನಲ್ಲಿದ್ದಾಗ ಖ್ಯಾತ ಲೇಖಕಿ ಜಾರ್ಜ್ ಸಾಂಡ್ ಇವನ ಸ್ನೇಹಿತೆಯಾದಳು. ಸ್ನೇಹ ಪ್ರಣಯದಲ್ಲಿ ಮುಂದುವರಿಯಿತು. ಹಲ ವರ್ಷ ಆಕೆ ಅವನ ಬಾಳಿನ ಸಂಗಾತಿಯಾಗಿದ್ದಳು. ಅವರ ಸಂಬಂಧ ಕೊನೆಗೆ ವಿರಸದಲ್ಲಿ ಮುಕ್ತಾಯವಾಯಿತು.

ಇನ್ನೂ ಯುವಕನಾಗಿದ್ದಾಗಲೇ ಆತ ಕ್ಷಯರೋಗಕ್ಕೆ ತುತ್ತಾದ. ದಿನೇ ದಿನೇ ಅವನ ಆರೋಗ್ಯ ಕುಸಿಯಿತು. ಇಂಗ್ಲೆಂಡಿನ ಪ್ರಸಿದ್ಧ ವೈದ್ಯರ ಬಳಿ ಆತ ಚಿಕಿತ್ಸೆ ಪಡೆದ. ಗುಣವಾಗದೆ, ನಿರಾಶನಾಗಿ ಪ್ಯಾರಿಸಿಗೆ ಹಿಂತಿರುಗಿದ. ಮರುವರ್ಷವೇ ಕ್ಷಯರೋಗದಿಂದ ತೀರಿಕೊಂಡ (1849ರ ಅಕ್ಟೋಬರ್ 17). ಆಗ ಅವನಿಗೆ 39 ವರ್ಷ ವಯಸ್ಸು.

ಷೊಪಿನ್ ರಚಿಸಿದ ಪಿಯಾನೋ ಸಂಗೀತ ಮಾಧುರ್ಯಗುಣದಿಂದ ಚಿತ್ತಾಕರ್ಷಕವಾಗಿದೆ. ಅವನ ಹೆಚ್ಚಿನ ಎಲ್ಲ ಗೇಯರಚನೆಗಳಿಗೂ ಪೋಲೆಂಡಿನ ರಾಷ್ಟ್ರೀಯ ನೃತ್ಯಗಳು ಸ್ಫೂರ್ತಿ ನೀಡಿದುವು.

ತನ್ನ ಜೀವನದ ಕೊನೆಯ ಕ್ಷಣದವರೆಗೂ ಷೊಪಿನ್ ಸಂಗೀತವನ್ನು ಅಭ್ಯಾಸಮಾಡುತ್ತಿದ್ದ; ಸಂಗೀತಪಾಠ ಹೇಳಿಕೊಡುತ್ತಿದ್ದ.

## ಷೊಲೊಖೋವ್

1965ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ರಷ್ಯದ ಸಾಹಿತಿ ಮಿಖೇಯ್ಲ್ ಷೊಲೊಖೋವ್‌ಗೆ ದೊರಕಿತು. ಬಹುಮಾನ ಸುದ್ದಿ ಪ್ರಕಟವಾದಾಗ ಆತ ರಷ್ಯದ ಕಾಜಾಕ್ ಪ್ರದೇಶದ ಬಯಲು ಸೀಮೆಯಲ್ಲಿ ಬೇಟೆಯಾಡುತ್ತ, ಹೊಸದೊಂದು ಕಾದಂಬರಿ ಬರೆಯುತ್ತ ಕಾಲ ಕಳೆಯುತ್ತಿದ್ದ.

ಆತನಿಗೆ ನೊಬೆಲ್ ಬಹುಮಾನ ಗಳಿಸಿಕೊಟ್ಟದ್ದು ರಷ್ಯದ ಡಾನ್ ನದೀ ತೀರದ ಕೊಸ್ಸಾಕ್ ಜನರ ಜೀವನವನ್ನು ನಿರೂಪಿಸುವ ಕಾದಂಬರಿ 'ಮೌನವಾಗಿ ಹರಿಯುತ್ತದೆ ಡಾನ್'. ಟಾಲ್‌ಸ್ಟಾಯ್ ರಚಿಸಿದ 'ಯುದ್ಧ ಮತ್ತು ಶಾಂತಿ' ಕಾದಂಬರಿಯ ಪರಂಪರೆಗೆ ಸೇರಿದ್ದು ಈ ಕೃತಿ.

ಮಿಖೇಯ್ಲ್ ಷೊಲೊಖೋವ್ 1905ರ ಮೇ 24ರಂದು ವಿಷನ್‌ಸ್ಕಾಯಾ ಎಂಬ ಕೊಸ್ಸಾಕ್ ಹಳ್ಳಿಯ ವ್ಯವಸಾಯ ಕ್ಷೇತ್ರವೊಂದರಲ್ಲಿ ಜನಿಸಿದ. 1920ರಲ್ಲಿ ಕ್ರಾಂತಿಕಾರಿ ಸೈನ್ಯದಲ್ಲಿ ಕೆಲಸಮಾಡಿ, ಎರಡು ವರ್ಷ ಮಾಸ್ಕೋದಲ್ಲಿದ್ದ ಮೇಲೆ, 1924ರಲ್ಲಿ ತನ್ನ ಹಳ್ಳಿಗೆ ಹಿಂದಿರುಗಿದ. ಅನಂತರ ಎರಡು ಬಾರಿ ಪಶ್ಚಿಮ ಯೂರೋಪಿನ ಪ್ರವಾಸ ಕೈಗೊಂಡ.

ಷೊಲೊಖೋವ್ ತನ್ನ ಮೊದಲ ಸಣ್ಣ ಕತೆ ಬರೆದಾಗ ಇನ್ನೂ 19 ವರ್ಷದ ತರುಣನಾಗಿದ್ದಾಗ. ಆತನ ಸಣ್ಣಕಥೆಗಳ ಸಂಕಲನ 'ಡಾನ್ ಕಥೆಗಳು' 1926ರಲ್ಲಿ ಪ್ರಕಟವಾಯಿತು.

1925ರಲ್ಲಿ 'ಮೌನವಾಗಿ ಹರಿಯುತ್ತದೆ ಡಾನ್' ಎಂಬ ಕಾದಂಬರಿ ಬರೆಯಲು ಪ್ರಾರಂಭಿಸಿದ. 15 ವರ್ಷಗಳ ಅನಂತರ ಕಾದಂಬರಿಯ ಕೊನೆಯ ಸಂಪುಟ ಹೊರಬಂತು.

ಮಿಖೇಯ್ಲ್ ಷೊಲೊಖೋವ್ ಬರೆಯಲು ಹೆಚ್ಚು ಕಾಲ ತೆಗೆದುಕೊಳ್ಳುತ್ತಿದ್ದ. ಆದರೆ ಬರೆವಣಿಗೆ ಮಾತ್ರ ಚೊಕ್ಕ. ಕೊಸ್ಸಾಕ್ ಬುಡಕಟ್ಟಿನ ರೈತರು, ಕಾರ್ಮಿಕರು, ಸೈನಿಕರು, ಬೇಟೆಗಾರರು, ಬೆಸ್ತರು, ಮುಂತಾದ ಸಾಮಾನ್ಯ ಜನವರ್ಗದ ಮಧ್ಯೆ ವಾಸಿಸಿ ಅವರ ಬದುಕಿನ ಸುಖ–ದುಃಖ, ನೋವು–ನಿರಾಶೆ, ದ್ವೇಷ–ಪ್ರೇಮ, ಆಸೆ–ಆಕಾಂಕ್ಷೆಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಂಡಿರುವ ಪ್ರಜ್ಞಾವಂತ ಲೇಖಕ ಷೊಲೊಖೋವ್. ಈ ಜನರ ಜೀವನವೇ ಆತನ ಕಾದಂಬರಿಗಳಿಗೆ ಆಧಾರ.



'ಮೌನವಾಗಿ ಹರಿಯುತ್ತದೆ .....' : ಷೊಲೊಖೋವ್

'ಮೌನವಾಗಿ ಹರಿಯುತ್ತದೆ ಡಾನ್'ನಲ್ಲಿ ಬರುವ ಕೆಲವು ಪಾತ್ರಗಳಂತೂ ನಮ್ಮ ಮನಸ್ಸಿನಲ್ಲಿ ಅಚ್ಚಳಿಯದೆ ನಿಲ್ಲುತ್ತವೆ. ಈ ಕಾದಂಬರಿ 60ಕ್ಕೂ ಹೆಚ್ಚು ಭಾಷೆಗಳಲ್ಲಿ ಪ್ರಕಟವಾಗಿದೆ. ಐವತ್ತು ಲಕ್ಷಕ್ಕಿಂತ ಹೆಚ್ಚು ಪ್ರತಿಗಳು ಮಾರಾಟವಾಗಿವೆ.

ಷೊಲೊಖೋವನ ಬರೆವಣಿಗೆ ಆಕರ್ಷಕವಾದದ್ದು. ಮಧುರ ಕಾವ್ಯಮಯತೆ, ಗಾಢ ಪ್ರಕೃತಿಪ್ರೇಮ, ಸುಸ್ಪಷ್ಟ ಪಾತ್ರಸೃಷ್ಟಿ, ಈತನ ಕೃತಿಗಳ ಜೀವಾಳ. ಸಾಹಿತಿ ಜನತೆಯಿಂದ ದೂರವಿರದೆ ಅವರಲ್ಲಿ ತಾನೂ ಒಬ್ಬನಾಗಿ ಬೆರೆತು ಜೀವಿಸಿದ್ದರಿಂದಲೇ ಆತ ಚಿತ್ರಿಸಿದ ಪಾತ್ರಗಳು ಅಷ್ಟು ಜೀವಂತವಾಗಿವೆ. ತಾನು ಸೃಷ್ಟಿಸುವ ಪಾತ್ರಗಳ ಸುಖ–ದುಃಖಗಳಲ್ಲಿ ಪಾಲುಗೊಳ್ಳುವ ಶಕ್ತಿ ಆತನಿಗಿರುವುದರಿಂದ ಆ ಪಾತ್ರಗಳು ಓದುಗನ ಹೃದಯವನ್ನು ಮಿಡಿಯುತ್ತವೆ.

ವಿಶೆನ್‌ಸ್ಕಾಯಾದಲ್ಲಿರುವ ಮಿಖೇಯ್ಲ್ ಷೊಲೊಖೋವನ ಮನೆಗೆ ರಷ್ಯದ ವಿವಿಧ ಭಾಗಗಳಿಂದ ಮಾತ್ರವಲ್ಲ, ಜಗತ್ತಿನ ಎಲ್ಲ ಭಾಗಗಳಿಂದಲೂ ಅಭಿಮಾನಿಗಳು ಬರುತ್ತಾರೆ. ಈ ಸಾಹಿತಿಯನ್ನು ಒಮ್ಮೆ ನೋಡಿದವರು ಅವನ ಮಾತನ್ನು ಒಮ್ಮೆ ಕೇಳಿದವರು, ಆತನ ಧೀಮಂತ ವ್ಯಕ್ತಿತ್ವವನ್ನು

ಪಡೆದಿದ್ದಾನೆ. ಸೋವಿಯೆಟ್ ಜನ್ಮನ ಓದುಗರೂ ಲೇಖಕರೂ ಆತನನ್ನು ತಮ್ಮ ನಾಡಿನ ಹಿರಿಯ ಸಾಹಿತಿ ಎಂದು ಭಾವಿಸಿ ಗೌರವಿಸುತ್ತಾರೆ.

## ಸಂಗೀತ

"ಸಂಗೀತ ಜ್ಞಾನ ವಿಹೀನುಲಕು ಮೋಕ್ಷಮುಗಲದಾ?" (ಸಂಗೀತ ಜ್ಞಾನವಿಲ್ಲದವನಿಗೆ ಮೋಕ್ಷ ದೊರೆಯುವುದೆ?) ಎಂದು ತಮ್ಮ ಒಂದು ಕೃತಿಯಲ್ಲಿ ಪ್ರಶ್ನಿಸಿದ್ದಾರೆ ತ್ಯಾಗರಾಜರು. ಸಂಗೀತದಿಂದ ಭಗವಂತನನ್ನು ಒಲಿಸಿಕೊಳ್ಳಬಹುದು ಎಂಬುದು ಪರಂಪರೆಯ ನಂಬಿಕೆ. ವಿದ್ಯಾಭಿಮಾನಿ ದೇವತೆ ಸರಸ್ವತಿ ತನ್ನ ಕೈಗಳಲ್ಲಿ ಪುಸ್ತಕ, ಜಪಮಾಲೆಗಳನ್ನು ಹಿಡಿದಿರುವಂತೆ ವೀಣೆಯನ್ನೂ ಹಿಡಿದಿದ್ದಾಳೆ. ಕೃಷ್ಣನಂತೂ ಮುರಲೀಗಾನಲೋಲ. ದೇವರುಗಳೂ ನಾರದಾದಿ ಮಹಾಮುನಿಗಳೂ ಸಂಗೀತದಲ್ಲಿ ಪ್ರಬಲ ಆಸಕ್ತಿಯುಳ್ಳವರೆಂದು ಹಿಂದೂಗಳು ಭಾವಿಸುತ್ತಾರೆ.

ಪ್ರಾಚೀನ ಗ್ರೀಸ್, ಈಜಿಪ್ಟ್‌ಗಳಲ್ಲಿ ದೇವದೇವತೆಗಳ ಆರಾಧನೆಯಲ್ಲಿ ಸಂಗೀತಕ್ಕೆ ಮಹತ್ವವಿತ್ತು. ಕ್ರೈಸ್ತ ದೇವಾಲಯಗಳಲ್ಲಿ ಸಂಗೀತಕ್ಕೆ ಮುಖ್ಯ ಸ್ಥಾನವಿದೆ.

ಭಾರತೀಯ ಶಾಸ್ತ್ರಗಳ ಪ್ರಕಾರ 64 ಕಲೆಗಳಿವೆ. ಕಲೆಗಳಲ್ಲಿ ವಿಶೇಷ ಹಾಗೂ ಸಾಮಾನ್ಯ ಎಂದು ಎರಡು ಪ್ರಭೇದಗಳು. ಶಾಸ್ತ್ರವೂ ಕಲೆಯೂ ಆಗಿರುವ ಸಂಗೀತ ವಿಶೇಷ ಕಲೆ ಎನಿಸಿದೆ. ಗೀತ, ವಾದ್ಯ, ನೃತ್ಯ ಈ ಮೂರು ಸೇರಿ ಸಂಗೀತವಾಗುತ್ತದೆ—ಎಂದು ನಮ್ಮ ಪ್ರಾಚೀನರ ಅಭಿಪ್ರಾಯ. ಈಗ ಸಾಮಾನ್ಯವಾಗಿ ಗೀತವಾದ್ಯಗಳು ಮಾತ್ರ ಸಂಗೀತದ ಅಂಗಗಳಾಗಿವೆ. ಸಂಗೀತದಲ್ಲಿ ರಾಗ, ತಾಳ, ಸಾಹಿತ್ಯಗಳು ಪ್ರಧಾನ ಅಂಶಗಳು.

ಸಂಗೀತ ಶ್ರೋತೃಗಳಿಗೆ ಆನಂದಕೊಡುವುದಷ್ಟೇ ಅಲ್ಲದೆ ಇನ್ನು ಕೆಲವು ಮಹತ್ವದ ಕೆಲಸಗಳನ್ನೂ ಅದರಿಂದ ಸಾಧಿಸಬಹುದಾಗಿದೆ. ದೇಹ ಮತ್ತು ಮನಸ್ಸಿನ ರೋಗಗಳನ್ನು ಸೂಕ್ತ ಸಂಗೀತದಿಂದ ಗುಣಪಡಿಸಬಹುದಾದ ಸಾಧ್ಯತೆಗಳಿವೆ ಎಂದು ತೋರಿಬಂದಿದೆ. ತಮ್ಮ ಸಂಗೀತದ ಪ್ರಭಾವದಿಂದ ದೀಪವನ್ನು ಬೆಳಗಿಸಿದ, ಮಳೆ ಸುರಿಸಿದ, ಕಲ್ಲನ್ನು ಕರಗಿಸಿದ ಸಂಗೀತಗಾರರ ಕತೆಗಳು ಇಂದಿಗೂ ಪ್ರಚಾರದಲ್ಲಿವೆ.

ಶಾಸ್ತ್ರೀಯ ಸಂಗೀತ ರೂಪುಗೊಳ್ಳುವುದಕ್ಕೆ ಬಹಳ ಕಾಲ ಮೊದಲೇ ಜಗತ್ತಿನ ಎಲ್ಲ ಭಾಗಗಳಲ್ಲೂ ಜನ ತಮ್ಮ ಸುಖ ಸಂತೋಷ ನೋವು ಅಳಲುಗಳನ್ನು ತೋಡಿಕೊಳ್ಳಲು ಯಾವುದಾದರೊಂದು ರೀತಿಯಲ್ಲಿ ಹಾಡುವುದು, ಶಬ್ದ ಮಾಡುವುದು, ಇದ್ದೇ ಇತ್ತು. ಜಾನಪದ ಸಂಗೀತದ ಬುನಾದಿ ಇದು. ಕಾಲಕ್ರಮದಲ್ಲಿ ಜಾನಪದ ಸಂಗೀತ ನಾನಾ ಪ್ರಭಾವ ಪರಿಷ್ಕರಣಗಳಿಗೆ ಒಳಗಾಗಿ, ಶಾಸ್ತ್ರೀಯ ಸಂಗೀತವಾಗಿ ವಿಕಾಸಗೊಂಡಿತು ಎಂಬುದು



ಕರ್ನಾಟಕ ಸಂಗೀತ ವಿದ್ವತ್ತು :
ರಾಳ್ಲಪಲ್ಲಿ ಅನಂತಕೃಷ್ಣ ಶರ್ಮ

ವಿವಿಧ ಜನಾಂಗಗಳ ಇತಿಹಾಸದಿಂದ ವ್ಯಕ್ತವಾಗುವ ಅಂಶ. ಮಾನವನ ಮಾತನಾಡುವ ಶಕ್ತಿ ಬೆಳೆದಂತೆ ಅವನ ಕಂಠ ಸ್ಫುಟವಾಗುತ್ತ ಬಂದು, ಅವನ ಧ್ವನಿಯಲ್ಲಿ ಕರ್ಕಶತೆ ಕಡಮೆಯಾಯಿತು. ಅವನ ಧ್ವನಿ ಆಕರ್ಷಕವಾಯಿತು. ಕ್ರಮೇಣ ಸಂಗೀತ ರೂಪುಗೊಂಡಿತು.

ಮೊದಲು ಮೊದಲು ಸಂಗೀತದಲ್ಲಿ ಐದು ಸ್ವರಗಳನ್ನು ಮಾತ್ರ ಉಪಯೋಗಿಸುತ್ತಿದ್ದು ಅನಂತರ ಏಳು ಸ್ವರಗಳನ್ನು ಉಪಯೋಗಿಸುವ ಪದ್ಧತಿ ಉಪಯೋಗಕ್ಕೆ ಬಂದಿತು. ಈಗಲೂ ಕೂಡ ಕೆಲವು ಗಿರಿಜನವರ್ಗಗಳವರು ಹಾಡುವ ಗೀತೆಗಳಲ್ಲಿ ಐದು ಸ್ವರಗಳನ್ನು ಮಾತ್ರ ಬಳಸುತ್ತಾರೆ. ಕೆಲವು ಪಾಶ್ಚಾತ್ಯ ದೇಶಗಳ ಸಂಗೀತದಲ್ಲೂ ಈ ಲಕ್ಷಣವನ್ನೇ ಕಾಣಬಹುದು.

ಸಂಗೀತದಲ್ಲಿ ಆಸಕ್ತಿಯಿದ್ದು ಕಂಠ ಮಧುರವಾಗಿಲ್ಲದಿರುವವರು ಹಾಡುವುದರ ಬದಲು ವಾದ್ಯ ವಾದನವನ್ನು ರೂಢಿಸಿಕೊಂಡಿರಬೇಕು. ಅನಂತರ ಹಾಡುಗಾರಿಕೆಯೊಂದಿಗೆ ವಾದ್ಯಗಳನ್ನು ಬಳಸುವುದು ರೂಢಿಗೆ ಬಂದಿರಬೇಕು. ಹೀಗೆ ಸಂಗೀತ ಈಗಿರುವ ರೂಪವನ್ನು ಮುಟ್ಟಲು ಅನೇಕ ಶತಮಾನಗಳ ಕಾಲ ಹಿಡಿದಿರಬೇಕು.

ಪ್ರಾಚೀನ ಗ್ರೀಕರು, ರೋಮನರು, ಈಜಿಪ್ಷಿನವರು, ಅಸ್ಸೀರಿಯದವರು ಹಾಗೂ ಸುಮೇರಿಯನರು ಅನೇಕ ಸಂಗೀತವಾದ್ಯಗಳನ್ನು ಬಲ್ಲವರಾಗಿದ್ದರು.

ಭಾರತದಲ್ಲಿ ಕರ್ಣಾಟಕ ಮತ್ತು ಹಿಂದೂಸ್ತಾನಿ ಎಂಬ ಎರಡು ಶಾಸ್ತ್ರೀಯ ಸಂಗೀತ ಪದ್ಧತಿಗಳು ಆಚರಣೆಯಲ್ಲಿವೆ. ಇವೆರಡೂ ಮೂಲತಃ ಒಂದೇ ಸಂಪ್ರದಾಯದಿಂದ ರೂಪುಗೊಂಡ ಶಾಖೆಗಳು.

ದಕ್ಷಿಣ ಭಾರತದ ಸಂಗೀತಕ್ಕಿಂತ ಉತ್ತರ ಭಾರತದ ಸಂಗೀತ ಹೊರಗಣ ಪ್ರಭಾವಕ್ಕೆ ಒಳಗಾಯಿತು. ಇವುಗಳಲ್ಲಿ ಪರ್ಷಿಯ ಮತ್ತು ಅರೇಬಿಯದ ಸಂಗೀತಗಳು ಮುಖ್ಯವಾದುವು. ಉತ್ತರ ಭಾರತದಲ್ಲಿ ಮುಸಲ್ಮಾನ ಆಳ್ವಿಕೆಯಿದ್ದ ಕಾಲದಲ್ಲಿ ಈ ಸಮನ್ವಯ ನಡೆಯಿತು.

ಮೊಗಲ್ ಸಾಮ್ರಾಜ್ಯ ಅಳಿದಮೇಲೆ ಬ್ರಿಟಿಷರ ಕಾಲದಲ್ಲಿ ಪಾಶ್ಚಾತ್ಯ ಸಂಗೀತವೂ ಭಾರತಕ್ಕೆ ಬಂತು. ಆದರೆ ಭಾರತೀಯ ಸಂಗೀತದ ಸ್ವರೂಪದ ಮೇಲೆ ಇದು ಹೆಚ್ಚು ಪ್ರಭಾವ ಬೀರಲಿಲ್ಲ.

ಬೌದ್ಧ ಮತ ಪ್ರಚಾರ ಪ್ರಬಲವಾಗಿದ್ದ ಕಾಲದಲ್ಲಿ ಭಾರತೀಯ ಸಂಗೀತ ಚೀನಾ, ಟಿಬೆಟ್, ಕೊರಿಯಾ, ಜಪಾನು ಮುಂತಾದ ರಾಷ್ಟ್ರಗಳಿಗೆ ಹರಡಿತು. ಈಗಲೂ ಕೆಲವು ಕಡೆಗಳಲ್ಲಿ ಈ ಪ್ರಭಾವದ ಕುರುಹುಗಳು ಅಲ್ಲಲ್ಲಿ ಉಳಿದುಕೊಂಡಿವೆ. ಜಿಪ್ಸಿಗಳಿಂದ ಭಾರತೀಯ ರಾಗಗಳು ಅರೇಬಿಯ, ಯೂರೋಪುಗಳಿಗೆ ಹಬ್ಬಿದುವು.

ಮೊದಮೊದಲು ಸಂಗೀತ ಬಾಯಿಯಿಂದ ಬಾಯಿಗೆ ಕಲಿಸಲ್ಪಡುತ್ತಿತ್ತು. ಕ್ರಮೇಣ ಸ್ವರಪ್ರಸ್ತಾರ, ತಾಳಗಳನ್ನೂ ಸೂಚಿಸಿ ಸಂಗೀತವನ್ನು ಬರೆಯುವ ಪದ್ಧತಿ ಪಾಶ್ಚಾತ್ಯ ಸಂಗೀತದಲ್ಲಿ ಮೊದಲು ರೂಢಿಗೆ ಬಂತು. ಇತರ ಸಂಗೀತ ಪದ್ಧತಿಗಳಲ್ಲೂ ಇದನ್ನು ಉಪಯೋಗಕ್ಕೆ ತಂದುಕೊಳ್ಳುವ ಪ್ರಯತ್ನಗಳು ನಡೆದಿವೆ.

ಸಂಗೀತದ ಮೋಹಕಶಕ್ತಿಗೆ ಒಳಗಾಗದವರು ಯಾರೂ ಇಲ್ಲ.

## ಸಂಗೀತ ನಾಟಕ ಅಕಾದೆಮಿ

ಭಾರತದಲ್ಲಿ ಹಿಂದಿನಿಂದಲೂ ಬಂದ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬರಲು ಮತ್ತು ಆಧುನಿಕ ಪ್ರವೃತ್ತಿಗಳಿಗೆ ಪ್ರೋತ್ಸಾಹ ನೀಡಲು




ಲಾಂಛನ

ಕೇಂದ್ರ ಸರಕಾರದವರು ಸಂಗೀತ ನಾಟಕ ಅಕಾದೆಮಿಯನ್ನು 1953ರಲ್ಲಿ ಆರಂಭಿಸಿದರು.

ಜನರಲ್ ಕೌನ್ಸಿಲ್ ವರಿಷ್ಠ ಅಧಿಕಾರ ಹೊಂದಿರುವ ಮಂಡಲಿ. ಅಕಾದೆಮಿಯ ಎಲ್ಲ ಕೆಲಸಗಳ ಮೇಲ್ವಿಚಾರಣೆ ಹಾಗೂ ವ್ಯವಹಾರ ಹತೋಟಿಗಳನ್ನು ನೋಡಿಕೊಳ್ಳಲು ಕಾರ್ಯನಿರ್ವಾಹಕ ಮಂಡಲಿ ನೇಮಕವಾಗಿದೆ. ಆರ್ಥಿಕ ಮಂಡಲಿ ಕಾರ್ಯನಿರ್ವಾಹಕ ಮಂಡಲಿಗೆ ಆರ್ಥಿಕ ವಿಷಯಗಳಲ್ಲಿ ಸಹಾಯ ಮಾಡುತ್ತದೆ.

ಅಕಾದೆಮಿಯವರು ಪ್ರತಿವರ್ಷ ಪ್ರಖ್ಯಾತ ಕಲಾವಿದರಿಗೆ ಪ್ರಶಸ್ತಿ ನೀಡುವ ಪರಿಪಾಠ ಇರಿಸಿಕೊಂಡಿದ್ದಾರೆ. ಕಲಾವಿದರು ಸಾಧಿಸಿರುವ ಉತ್ಕೃಷ್ಟ ಮಟ್ಟದ ಸಾಧನೆಗಳನ್ನು ರಾಷ್ಟ್ರೀಯ ಹಂತದಲ್ಲಿ ವಿವೇಚಿಸಿ ನೋಡಿ ಅರ್ಹರಾದವರಿಗೆ ಪ್ರಶಸ್ತಿ ನೀಡಲಾಗುವುದು. ಸಂಗೀತ, ನೃತ್ಯ, ನಾಟಕಗಳಲ್ಲಿ ಒಂದೊಂದರಲ್ಲೂ ನಾಲ್ಕು ಪ್ರಶಸ್ತಿಗಳನ್ನು ಕೊಡುವ ಏರ್ಪಾಡಿದೆ. ಪ್ರಶಸ್ತಿ –5,000 ರೂಪಾಯಿಗಳ ನಗದು ಬಹುಮಾನ ಹಾಗೂ ಒಂದು ತಾಮ್ರಪತ್ರ. ಸಮಾರಂಭದ ಅಧ್ಯಕ್ಷತೆಯನ್ನು ಭಾರತದ ರಾಷ್ಟ್ರಪತಿ ವಹಿಸಿ, ಪ್ರಶಸ್ತಿ ವಿತರಣೆ ಮಾಡುತ್ತಾರೆ. ಅಕಾದೆಮಿಯವರು ಮೂರು ದಿವಸಗಳ ಸಂಗೀತ ಹಾಗೂ ನೃತ್ಯಗಳ ಉತ್ಸವ ಏರ್ಪಡಿಸುತ್ತಾರೆ. ಪ್ರಶಸ್ತಿ ವಿಜೇತ ಕಲಾವಿದರು ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ.

ಸಂಗೀತ–ನೃತ್ಯಗಳಲ್ಲಿನ ವಿದ್ವಾಂಸರಾದ ಕೆಲವರನ್ನು ಅಕಾದೆಮಿಯ ಸದಸ್ಯರನ್ನಾಗಿ ಮಾಡಿಕೊಳ್ಳುತ್ತಾರೆ.

ಅಕಾದೆಮಿಯಲ್ಲಿ ಒಂದು ಗ್ರಂಥ ಭಂಡಾರವಿದೆ. ಧ್ವನಿಮುದ್ರಿಕೆಗಳ ಭಂಡಾರವೂ ಇದೆ. ಧ್ವನಿಮುದ್ರಿಸಿಕೊಳ್ಳುವ ಕರ್ಮಾಗಾರವಿದೆ. ಅಕಾದೆಮಿಯವರು ತಮಗೆ ಬೇಕಾದ ಧ್ವನಿಮುದ್ರಣ ಮಾಡಿಕೊಳ್ಳುವುದರ ಜೊತೆಗೆ ಆಸಕ್ತರಾದ ಸಾಂಸ್ಕೃತಿಕ ಸಂಘಗಳೂ, ವ್ಯಕ್ತಿಗಳೂ ಬಂದು ಧ್ವನಿ ಮುದ್ರಿಸಿಕೊಳ್ಳುವ ಸೌಕರ್ಯವನ್ನು ಕಲ್ಪಿಸಿದ್ದಾರೆ. ವಿದೇಶೀ ಸಂಸ್ಥೆಗಳು ಮತ್ತು ಘನ ವಿದ್ವಾಂಸರುಗಳಿಗೆ ಪುನರ್ಧ್ವನಿಮುದ್ರಣ ಮಾಡಿಕೊಳ್ಳುವ ಅವಕಾಶ ನೀಡಲಾಗಿದೆ. ಅಕಾದೆಮಿಯವರು ಆಫ್ರಿಕದ ಮತ್ತು ಗ್ರೀಸಿನ ಜನಪದ ಸಂಗೀತವನ್ನು ಪುನರ್ಧ್ವನಿ ಮುದ್ರಿಸಿಕೊಂಡಿದ್ದಾರೆ.

ಅಕಾದೆಮಿ ಸಂಗೀತ, ನೃತ್ಯ, ನಾಟಕಗಳ ವಿವಿಧ ಮುಖಗಳನ್ನು ಕುರಿತಾದ ಪುಸ್ತಕಗಳ ಪ್ರಕಟಣೆಯಲ್ಲಿ ಆಸಕ್ತಿವಹಿಸುತ್ತದೆ. ತಾನು ಪುಸ್ತಕಗಳನ್ನು ಪ್ರಕಟಿಸುವುದಲ್ಲದೆ, ಅಪ್ರಕಟಿತ ಹಸ್ತಪ್ರತಿಗೆ ಪ್ರಕಟಣೆಗೆ ನೆರವಾಗುತ್ತದೆ.

ಸಂಗೀತ, ನೃತ್ಯ, ನಾಟಕ ಸಂಘಗಳಿಗೆ ಆರ್ಥಿಕ ಸಹಾಯವನ್ನು ಅಕಾದೆಮಿ ನೀಡುತ್ತದೆ.

'ಸಂಗೀತ ನಾಟಕ ಅಕಾದೆಮಿ' ಪ್ರಕಟಿಸುವ ತ್ರೈಮಾಸಿಕ ಪತ್ರಿಕೆ ಆರಂಭವಾದದ್ದು 1965ರ ನವೆಂಬರ್‌ನಲ್ಲಿ.

ದ್ವೈಮಾಸಿಕ ಪತ್ರಿಕೆ 'ನ್ಯೂಸ್ ಬುಲೆಟಿನ್' ನಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತ ಸುದ್ದಿಗಳಿರುತ್ತವೆ.

ಅಕಾದೆಮಿ ಆಗಿಂದಾಗ್ಗೆ ಸಂಗೀತ, ನೃತ್ಯಗಳ ಕಾರ್ಯಕ್ರಮ ಏರ್ಪಡಿಸುತ್ತದೆ; ಸಂಗೀತ—ನೃತ್ಯ ಉತ್ಸವಗಳನ್ನು ನಡೆಸುತ್ತದೆ.

ಅಕಾದೆಮಿ ನಾಲ್ಕು ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸುತ್ತಿದೆ. ಜನಪದ ಸಂಗೀತ, ನೃತ್ಯ, ನಾಟಕಗಳ ವೀಕ್ಷಣೆ ಮತ್ತು ದಾಖಲೆ ಮಾಡುವುದು ಒಂದು ಯೋಜನೆ. ಇದರ ಅಂಗವಾಗಿ ಸಾಂಪ್ರದಾಯಿಕ ಮತ್ತು ಜಾನಪದ ಕಲೆಗಳ ವ್ಯವಸ್ಥಿತ ದಾಖಲೆ ಆಗಿದೆ. ಎರಡನೆಯದು, ಅಕಾದೆಮಿಯ ವಸ್ತು ಸಂಗ್ರಹಾಲಯದ ಅಭಿವೃದ್ಧಿ. ಸಂಗೀತ ವಿಜ್ಞಾನದಲ್ಲಿ ಸಂಶೋಧನೆ ನಡೆಸುವ ವಿಭಾಗ ಮೂರನೆಯದು. ಇದರಲ್ಲಿ ಚಿಕ್ಕ ಪ್ರಯೋಗಾಲಯವಿದೆ. ಅಗತ್ಯವಾದ ಮೂಲ ಉಪಕರಣಗಳನ್ನು ಇಟ್ಟುಕೊಂಡಿದ್ದಾರೆ. ನಾಲ್ಕನೆಯದಾಗಿ, ಸಂಗೀತ–ನೃತ್ಯಗಳಲ್ಲಿ ಉಪಾಧ್ಯಾಯರಾಗುವವರಿಗೆ ವಿಶೇಷ ತರಬೇತಿ ಕೊಡಲು ಏರ್ಪಾಡಿದೆ.

ಅಕಾದೆಮಿಯ ವತಿಯಿಂದ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ, ಕಥಕ್ ಕೇಂದ್ರ ಮತ್ತು ಜವಾಹರ್‌ಲಾಲ್ ನೆಹರೂ ಮಣಿಪುರಿ ನೃತ್ಯ ಅಕಾಡೆಮಿ ನಡೆಯುತ್ತಿವೆ.

## ಸಂಗೀತವಾದ್ಯಗಳು

ತೆಂಗಿನ ಹಸಿರು ಗರಿಯೊಂದನ್ನು ಕಿತ್ತು, ಪೀಪಿಮಾಡಿ, ಊದಿ ನಾದ ಬರಿಸುವುದು ಮಕ್ಕಳಿಗೆ ಒಂದು ವಿನೋದ. ಹೀಗೆಯೇ ಸರಳವಾಗಿ ಆರಂಭವಾಗಿ, ಇಂದು ಜಟಿಲ ರೂಪ ತಳೆದಿರುವ ನಾನಾ ಸಂಗೀತ ವಾದ್ಯಗಳಿವೆ.

ಸಂಗೀತನಾದ ಹೊರಡಿಸುವುದಕ್ಕಾಗಿ ರೂಪಿತವಾದ ಸಂಗೀತ ವಾದ್ಯಗಳ ವೈವಿಧ್ಯ ಅಪರಿಮಿತ. ಆದರೆ ಮುಖ್ಯವಾಗಿ ಇವನ್ನು ತಂತಿವಾದ್ಯಗಳು, ಗಾಳಿವಾದ್ಯಗಳು ಹಾಗೂ ತಾಳವಾದ್ಯಗಳೆಂಬ ಮೂರು ಪ್ರಧಾನ ಗುಂಪುಗಳಾಗಿ ವಿಂಗಡಿಸಬಹುದು.

ತಂತಿ ವಾದ್ಯಗಳಲ್ಲಿ ಅತ್ಯಂತ ಪರಿಚಿತ ವಾದ್ಯ ತಂಬೂರ ಅಥವಾ ತಂಬೂರಿ. ಇದು ಹಾಡುಗಾರಿಕೆಗೆ ಶ್ರುತಿಯ ಆಧಾರ ನೀಡುತ್ತದೆ. ಭಾರತದಾದ್ಯಂತ ಇದರ ಬಳಕೆಯಿದೆ.

ಜೀವಾಳ ಕೊಟ್ಟು ತಂಬೂರಿಯ ನಾದದ ಝೇಂಕಾರ ಹೆಚ್ಚಿಸಬಹುದು. ಪಂಚಮ, ಮಧ್ಯಮ ಶ್ರುತಿಗಳೆರಡಕ್ಕೂ ತಂಬೂರಿಯ ಶ್ರುತಿಯನ್ನು ಹೊಂದಿಸಿಕೊಳ್ಳಬಹುದು.

ವೀಣೆ ಬಹಳ ಪುರಾತನ ವಾದ್ಯ. ಹಿಂದಿನ ಶಿಲ್ಪಗಳಲ್ಲಿ ಹಲವು ಬಗೆಯ ವೀಣೆಗಳನ್ನು ಗುರುತಿಸಬಹುದು. ನಮ್ಮ ಪ್ರಾಚೀನ ಗ್ರಂಥಗಳಲ್ಲಿ ವಿವಿಧ ವೀಣೆಗಳ ಹೆಸರುಗಳಿವೆ. ಇಂದು ಉಪಯೋಗದಲ್ಲಿರುವ ವೀಣೆ, ಸುಮಾರು 360 ವರ್ಷಗಳಿಂದ ಬಳಕೆಯಲ್ಲಿದೆ. ಇದನ್ನು ಕಚ್ಛಪೀ ಎಂಬ ಪ್ರಾಚೀನ ವೀಣೆಯನ್ನು ಆಧರಿಸಿ ವೆಂಕಟಮಖಿಯ ತಂದೆ ಗೋವಿಂದ ದೀಕ್ಷಿತರು ರೂಪಿಸಿದರು ಎನ್ನುತ್ತಾರೆ. ಇದರಲ್ಲಿ ಮೇಲೆ ನಾಲ್ಕು ತಂತಿಗಳಲ್ಲದೆ ಮೂರು ತಾಳ ತಂತಿಗಳೂ ಇವೆ.



ಪ್ರಾಚೀನ ಈಜಿಪ್ಟಿನ ಹಾರ್ಪ್ ವಾದ್ಯ



ನವೋದಯ ಕಾಲದ ಯೂರೊಪಿನಲ್ಲಿ ಪಿಟೀಲುವಾದನ

ಸಿತಾರ್ ವಾದ್ಯದ ಆಕಾರ ತಂಬೂರಿಯಂತೆ. ವೀಣೆಯಲ್ಲಿ ನಿರ್ದಿಷ್ಟ ಸ್ವರಗಳಿಗೆ ಮೆಟ್ಟಲುಗಳಿರುವಂತೆ ಸಿತಾರದಲ್ಲಿ ಚಲಿಸಬಹುದಾದ ಸ್ವರದರ್ಶಕ ಪರ್ದಾಗಳನ್ನು ಜೋಡಿಸಿರುತ್ತಾರೆ. ಮೇಲೆ ಏಳು ತಂತಿಗಳು, ಅವುಗಳ ಕೆಳಗೆ ಸುಮಾರು 11 ಅಥವಾ 12 ತಂತಿಗಳನ್ನು ಕೊಟ್ಟಿರುತ್ತಾರೆ. ಪ್ರಧಾನ ತಂತಿಯನ್ನು ಮಿಡಿದಾಗ ಕೆಳ ತಂತಿಗಳು ಕಂಪಿಸಿ ನಾದಮಾಧುರ್ಯವನ್ನು ಹೆಚ್ಚಿಸುತ್ತವೆ.

ತಂತಿವಾದ್ಯಗಳಲ್ಲಿ ಕೆಲವು ಪ್ರಭೇದಗಳಿವೆ: ಮಿಡಿದು ಬಾರಿಸುವ, ಕಮಾನಿನಿಂದ ನುಡಿಸುವ ಹಾಗೂ ಬಡಿದು ಬಾರಿಸುವಂಥವು. ತಂಬೂರಿ, ವೀಣೆ, ಸಿತಾರ್‌ಗಳು ಮಿಡಿದು ಬಾರಿಸುವಂಥವು. ಪಿಟೀಲು, ಸಾರಂಗಿ ಕಮಾನಿನಿಂದ ಬಾರಿಸುವ ಗುಂಪಿನವು. ಒತ್ತಿಬಾರಿಸುವ ಗುಂಪಿಗೆ ಹಾರ್ಮೋನಿಯಂ, ಪಿಯಾನೋ, ಆರ್ಗನ್ ವಾದ್ಯಗಳು ಸೇರಿವೆ. ಲೈರ್, ಹಾರ್ಪ್, ಲ್ಯೂಟ್, ಗಿಟಾರ್, ಪಿಯಾನೋ, ಸೆಲ್ಲೊ, ವಯೋಲಾ ಮುಂತಾದ ಅನೇಕ ಬಗೆಯ ತಂತಿವಾದ್ಯಗಳು ಪಾಶ್ಚಾತ್ಯ ದೇಶದ ಸಂಗೀತದಲ್ಲಿ ರೂಢಿಯಲ್ಲಿವೆ. ಕರ್ಣಾಟಕ ಸಂಗೀತದಲ್ಲಿ ಪಕ್ಕವಾದ್ಯವಾಗಿಯೂ ತನಿ ವಾದ್ಯವಾಗಿಯೂ ಬಳಸಲಾಗುವ ಪಿಟೀಲು ಭಾರತೀಯ ಸಂಗೀತಕ್ಕೆ ದೊರೆತದ್ದು ಪಾಶ್ಚಾತ್ಯ ಸಂಗೀತದ ಸಂಪರ್ಕದಿಂದ. ಆದರೆ ರಾವಣ ಹಸ್ತ ಎಂಬ ಭಾರತೀಯ ವಾದ್ಯದಿಂದ ಪಿಟೀಲು ರೂಪುಗೊಂಡಿರಬಹುದೆಂಬ ಅಭಿಮತವನ್ನು ಪಾಶ್ಚಾತ್ಯ ಸಂಗೀತಗಾರರೇ ಕೆಲವರು ವ್ಯಕ್ತಪಡಿಸಿದ್ದಾರೆ. ಪಿಟೀಲಿನಂಥ ಒಂದು ವಾದ್ಯ ನಮ್ಮಲ್ಲಿತ್ತೆಂದೂ ಅದನ್ನು ಧನುರ್ವೀಣೆ ಎಂದು ಕರೆಯುತ್ತಿದ್ದರೆಂದೂ ಕೆಲವರು ಹೇಳುತ್ತಾರೆ. ಸಾರಂಗಿ, ದಿಲ್ ರುಬಾ, ಇಸ್‌ರಾಜ್ ಈ ತಂತಿವಾದ್ಯಗಳನ್ನು ಹಿಂದೂಸ್ತಾನಿ ಪದ್ಧತಿಯ ಸಂಗೀತದಲ್ಲಿ ಪಕ್ಕವಾದ್ಯಗಳಂತೆ ಉಪಯೋಗಿಸುತ್ತಾರೆ. ಗೋಟುವಾದ್ಯ, ಬೀನ್, ವಿಚಿತ್ರ ವೀಣಾ, ಸರೋದ್, ಸ್ವರಮಂಡಲ ಮುಂತಾದ ಇನ್ನೂ ಹಲವು ಬಗೆಯ ತಂತಿವಾದ್ಯಗಳು ಭಾರತೀಯ ಸಂಗೀತದಲ್ಲಿ ಬಳಕೆಯಲ್ಲಿವೆ.

ಕರದಲ್ಲಿ ಕೊಳಲು ಹಿಡಿದು ರಾರಾಜಿಸುವನೆಂದು ಶ್ರೀಕೃಷ್ಣನನ್ನು ವರ್ಣಿಸಿದ್ದಾರೆ. ಕೊಳಲನ್ನು ನೋಡದವರು ವಿರಳ. ಇದು ಗಾಳಿವಾದ್ಯಗಳ ಗುಂಪಿಗೆ ಸೇರಿದ್ದು ಹಸಿ ಬಿದಿರಿನ ಸ್ವಾದವನ್ನು ಹೀರಲು ದುಂಬಿ ಅದರಲ್ಲಿ ಸಣ್ಣ ಸಣ್ಣ ರಂಧ್ರಗಳನ್ನು ಕೊರೆದಿರಬೇಕು ; ಬೀಸುವ ಗಾಳಿ ಮೂಲಕ ಹಾಯ್ದಾಗ ನಾದೋತ್ಪತ್ತಿಯಾಗಿ, ಹತ್ತಿರವೇ ಇದ್ದ ಮಾನವನನ್ನು ಆಕರ್ಷಿಸಿರಬೇಕು. ಈ ಪ್ರಕೃತಿಸಿದ್ಧ ಕೊಳಲಿನಿಂದ ಸ್ಫೂರ್ತಿ ಪಡೆದು ಮಾನವ ತನ್ನದೇ ಆದ ಕೊಳಲನ್ನು ತಯಾರಿಸಿರಬೇಕು —ಇದು ಕೊಳಲಿನ ಉಗಮದ ಬಗೆಗೆ ಸ್ವಾರಸ್ಯಕರ ಊಹೆ.

ಕೊಳವೆಯಂತಿರುವ ವಾದ್ಯ ಕೊಳಲು ; ಊದುವುದಕ್ಕೆ ಪ್ರಧಾನ ರಂಧ್ರ, ಮುಖರಂಧ್ರ ; ಸ್ವಲ್ಪ ಅಂತರದಲ್ಲಿ ಎಂಟು ಅಥವಾ ಒಂಬತ್ತು ರಂಧ್ರಗಳು. ಕೊಳಲು ಬಾರಿಸುವವನು ಮುಖರಂಧ್ರದ ಮೂಲಕ ಗಾಳಿಯನ್ನು ಊದಿ ಈ ವಾದ್ಯವನ್ನು ನುಡಿಸುತ್ತಾನೆ. ಇದರ ರಂಧ್ರಗಳ ಮೇಲೆ ಬೆರಳುಗಳನ್ನು ಇಟ್ಟು ತೆಗೆಯುವುದರ ಮೂಲಕ ಸ್ವರಭೇದವನ್ನು ಹೊರಡಿಸುತ್ತಾನೆ. ಹಿಂದೂಸ್ತಾನಿ ಸಂಗೀತ ಪದ್ಧತಿಯಲ್ಲಿ ಉಪಯೋಗಿಸುವ ಕೊಳಲು ಕರ್ಣಾಟಕದ ಪದ್ಧತಿಯದಕ್ಕಿಂತ ಉದ್ದವಾಗಿರುತ್ತದೆ.

ನಾಗಸ್ವರ, ಶಹನಾಯ್, ಕ್ಲಾರಿನೆಟ್, ಸಾಕ್ಸೊಫೋನ್, ಪಿಕೋಲೋ, ಓಬೊ, ಕಹಳೆ, ಕೊಂಬು —ಇವೆಲ್ಲ ಗಾಳಿ ವಾದ್ಯಗಳು.

ಇಂದಿನ ಹಲವು ಸುಧಾರಿತ ವಾದ್ಯಗಳ ಮೂಲಸ್ವರೂಪವನ್ನು ಚರಿತ್ರಪೂರ್ವ ಮಾನವ ಉಪಯೋಗಿಸುತ್ತಿದ್ದ ಹಲವು ಸಂಗೀತ ಸಾಧನೆಗಳಲ್ಲಿ ಕಾಣಬಹುದು. ಬಹುಶಃ ತಾಳವಾದ್ಯವೇ ಮಾನವ ಮೊಟ್ಟ ಮೊದಲು ಕಂಡುಕೊಂಡ ಸಂಗೀತವಾದ್ಯ ಎನ್ನಬಹುದು.

ಅನಾಗರಿಕ ಮಾನವ ಕುಣಿಯುತ್ತ, ತನ್ನ ಕೈತಟ್ಟಿ, ನೆಲದಮೇಲೆ ಕಾಲುಗಳನ್ನು ಕುಟ್ಟಿ, ಎದೆ, ಹೊಟ್ಟೆ ಬಡಿದುಕೊಂಡು ಮೊದಮೊದಲು ಲಯವನ್ನು ಗುರುತಿಸುತ್ತಿದ್ದಿರಬಹುದು. ಇದು ತಮಟೆಯ ನಿರ್ಮಾಣಕ್ಕೆ ದಾರಿ ಮಾಡಿರಬಹುದು. ಪೊಳ್ಳು ಬುರುಡೆಯಲ್ಲಿ ಬೀಜ, ಕಲ್ಲುಗಳಂಥ ಪದಾರ್ಥಗಳನ್ನು ಹಾಕಿ ಗಿಲಿಕೆಯಂಥ ವಾದ್ಯ ತಯಾರಿಸಬಹುದು. ಭೂಮಿಯಲ್ಲಿ ಗುಳಿ ಮಾಡಿ ಅದರಮೇಲೆ ತೊಗಟೆ ಮುಚ್ಚಿ ಬಡಿದಾಗ ದುಂದುಭಿಯಂಥ ತಾಳವಾದ್ಯ ರೂಪುಗೊಂಡಿರಬಹುದು. ಹೀಗೆಯೇ ಕಾಲಾನುಕ್ರಮೇಣ ಆಕಸ್ಮಿಕವಾಗಿಯೂ ಹಲವು ಪ್ರಯೋಗಗಳಿಂದಲೂ ಹಲವು ಬಗೆಯ ತಾಳವಾದ್ಯಗಳು ರೂಪುತಳೆದಿರಬಹುದು.

ಗಾಳಿ ವಾದ್ಯಗಳು, ಅದರಲ್ಲಿಯೂ ಕೊಂಬು ವಾದ್ಯದ ಗುಂಪಿಗೆ ಸೇರಿದ ವಾದ್ಯಗಳು ಭಾರತದಲ್ಲಿ ಹೊರಾಂಗಣ ಸಂಗೀತಕ್ಕೆಂದು ರೂಪುಗೊಂಡಿವೆ. ಶುಭ ಸಮಯಗಳಲ್ಲಿ, ಹಬ್ಬ, ಉತ್ಸವಗಳಲ್ಲಿ, ನಾಗಸ್ವರ, ಶಹನಾಯ್‌ಗಳಂಥ ವಾದ್ಯಗಳ ಸಂಗೀತವಿದ್ದೇ ತೀರಬೇಕು. ದೇವಸ್ಥಾನದ ಸಂಗೀತದಲ್ಲಿ ಗಾಳಿವಾದ್ಯ ಅನಿವಾರ್ಯ. ಪ್ರಬಲ ಧ್ವನಿಯಿಂದಾಗಿ ಸಂಕೇತ ಸೂಚಿಸಲು ಇವು ಅತ್ಯಂತ ಉಪಯುಕ್ತ (ಉದಾ : ಕೊಂಬು, ಕಹಳೆ).



ಘಟಂ ಬಾರಿಸುತ್ತಿರುವ ಮಂಜುನಾಥ್


































1 ದಿಲ್‌ರುಬಾ 2 ನಾದಸ್ವರ ವಾದ್ಯಗಳು 3 ವೀಣೆ 4 ಪಿಟೀಲು 5 ಬಾಸುರಿ, ಕೊಳಲು 6 ಮೃದಂಗ 7 ತಂಬೂರಿ 8 ಹಾರ್ಮೋನಿಯಂ
9 ಕರಡಿವಾದ್ಯ, ಡಮರು 10 ತಬಲಾ 11 ಗೆಜ್ಜೆ, ತಾಳ



ಹಾರ್ಮೋನಿಯಂ ಅರುಣಾಚಲಪ್ಪ

ಬೇಟೆಯಾಡುತ್ತಿದ್ದ ಮಾನವ, ಬಾಣ ಹಾರಿಸಿದ ಅನಂತರ ಬಿಲ್ಲಿಗೆ ಕಟ್ಟಿದ ಹುರಿ (ಹೆದೆ) ಕಂಪಿಸಿ ನಾದ ಉಂಟುಮಾಡುತ್ತದೆ ಎಂಬುದನ್ನು ಮನಗಂಡ. ಇದೇ ಬಿಲ್ಲನ್ನು ಪೊಳ್ಳಾದ ವಸ್ತುವಿನ ಮೇಲಿರಿಸಿದಾಗ ಹೆದೆಯ ಕಂಪನ ನಾದ ಹೆಚ್ಚಿತು. ಬಿಲ್ಲಿಗೆ ಹಲವು ತಂತಿಗಳನ್ನು ಕಟ್ಟಿದಾಗ ವೀಣೆಯಂಥ ವಾದ್ಯದ ಅತಿ ಪ್ರಾಚೀನ ರೂಪದ ಹೊಳಹು ಕಂಡಿರಬೇಕು.

ಭಾರತದಲ್ಲಿ ಸಂಗೀತವಾದ್ಯಗಳ ಇತಿಹಾಸ ದೀರ್ಘವಾದದ್ದು. ಸಂಗೀತ, ನೃತ್ಯಗಳು ನಮ್ಮ ಧಾರ್ಮಿಕ ಭಾವನೆಯ ಅಭಿವ್ಯಕ್ತಿಯ ಪ್ರಧಾನ ರೂಪಗಳು. ವೇದ ಯುಗದಲ್ಲಿ ಅನೇಕ ಬಗೆಯ ವಾದ್ಯಗಳು ಉಪಯೋಗದಲ್ಲಿದ್ದುವು. ಪ್ರಾಚೀನ ಈಜಿಪ್ಟ್, ಅಸ್ಸೀರಿಯ, ಗ್ರೀಕ್ ರಾಷ್ಟ್ರಗಳಲ್ಲೂ ಸಂಗೀತವಾದ್ಯಗಳಿದ್ದುದು ತಿಳಿದುಬಂದಿದೆ. ಲೈರ್ ಗ್ರೀಕರ ಅತ್ಯಂತ ಮೆಚ್ಚಿನ ವಾದ್ಯವಾಗಿತ್ತು. ರೋಮನರಲ್ಲಿ ರಣವಾದ್ಯಗಳು ಬಳಕೆಯಲ್ಲಿದ್ದುವು. 17ನೆಯ ಶತಮಾನದ ವೇಳೆಗಷ್ಟೇ ತಂತಿವಾದ್ಯಗಳ ಪ್ರಾಧಾನ್ಯ ಹೆಚ್ಚಿತು. ಪಾಶ್ಚಾತ್ಯ ಸಂಗೀತದಲ್ಲಿ ವಾದ್ಯ ಸಂಗೀತ ಪ್ರಧಾನ ರೂಪವಾಯಿತು. ವಾದ್ಯಮೇಳಕ್ಕಾಗಿ ಸಂಗೀತ ರಚಿಸುವ ಪ್ರಯೋಗಗಳು 17ನೆಯ ಶತಮಾನದಿಂದ ಆರಂಭವಾದುವು.

ಮಾನವ ತನ್ನ ಕಂಠದ ಅಭಿವ್ಯಕ್ತಿ ಶಕ್ತಿಗೆ ಒಳಗಾಗದಂಥ ನಾದವನ್ನು ಸಂಗೀತ ವಾದ್ಯಗಳ ಮೂಲಕ ಸಾಧಿಸಿ ಸಂಗೀತ ಕ್ಷೇತ್ರವನ್ನು ವಿಸ್ತರಿಸಿದ್ದಾನೆ.

ನೋಡಿ : ಸಂಗೀತವಾದ್ಯ–ಸಂಪುಟ ೪

## ಸಂಚಿಯ ಹೊನ್ನಮ್ಮ

" ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು "

—ಚಿಕದೇವರಾಜ ಒಡೆಯರ ಪಟ್ಟಮಹಿಷಿ ದೇವಾಜಮ್ಮಣ್ಣಿಯ ಸಂಚಿಯವಳಾಗಿದ್ದ ಹೊನ್ನಮ್ಮ ಬರೆದ ' ಹದಿಬದೆಯ ಧರ್ಮ ' ಎಂಬ ನೀತಿಕಾವ್ಯದ ಸಾಲುಗಳಿವು.

ಹೊನ್ನಮ್ಮ ಜನಿಸಿದ್ದು ಯಳಂದೂರಿನ ಬಡಮನೆತನವೊಂದರಲ್ಲಿ. ಎಳೆತನದಲ್ಲೇ ತಂದೆತಾಯಿ ತೀರಿಕೊಂಡರು. ಹುಡುಗಿ ನೆಂಟರೊಬ್ಬರ ಮನೆಯಲ್ಲಿ ಕಷ್ಟದಿಂದ ದಿನ ಕಳೆಯುತ್ತಿದ್ದಳು. ಮೈಸೂರು ಅರಸರ ಸಂಬಂಧಿಕರು ಕೆಲವರು ಯಳಂದೂರಿನಲ್ಲಿದ್ದರು. ಅಂಥ ಮನೆತನವೊಂದರಲ್ಲಿ ದೇವಾಜಮ್ಮಣ್ಣಿ ಜನಿಸಿದಳು. ಶ್ರೀಮಂತಳಾದರೂ, ಬಡವರನ್ನು ಕಂಡರೆ ಆಕೆಗೆ ಕನಿಕರ. ಒಂದು ದಿನ, ಚಿಂದಿಯುಟ್ಟು ಅಳುತ್ತ ನಿಂತಿದ್ದ ಹೊನ್ನಮ್ಮ ಆಕೆಯ ಕಣ್ಣಿಗೆ ಬಿದ್ದಳು. ಹುಡುಗಿ, ಯಾರೆಂದು ವಿಚಾರಿಸಿ ತನ್ನ ಮನೆಗೆ ಕರೆತಂದಳು. ಹುಡುಗಿ, ದೇವಾಜಮ್ಮಣ್ಣಿಯ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತ ಓಡಾಡಿಕೊಂಡಿದ್ದಳು. ದೇವಾಜಮ್ಮಣ್ಣಿಗೆ ಅವಳಲ್ಲಿ ವಾತ್ಸಲ್ಯ ಬೆಳೆಯಿತು. ತಾನು ಮೈಸೂರಿನ ಚಿಕದೇವರಾಜ ಒಡೆಯರನ್ನು ಮದುವೆಯಾಗಿ ಶ್ರೀರಂಗಪಟ್ಟಣಕ್ಕೆ ಬಂದಾಗ, ಹೊನ್ನಮ್ಮನನ್ನೂ ಜೊತೆಯಲ್ಲಿ ಕರೆದುಕೊಂಡು ಬಂದಳು.

ಚಿಕದೇವರಾಜ ಒಡೆಯರು ಸ್ವತಃ ಕವಿ, ಕವಿಕಾವ್ಯ ಪಕ್ಷಪಾತಿ. ಆತನ ಆಸ್ಥಾನದಲ್ಲಿ ತಿರುಮಲಾರ್ಯ, ಸಿಂಗರಾರ್ಯ ಮೊದಲಾದ ಕವಿಗಳಿದ್ದರು. ಹೊನ್ನಮ್ಮನಲ್ಲಿ ಒಳಗೇ ಹುದುಗಿದ್ದ ವಿದ್ಯೆ ಕಲಿಯುವ ಆಸೆ ಇಂಥ ವಾತಾವರಣದಲ್ಲಿ ಸ್ಫುಟಗೊಂಡಿತು. ದೇವಾಜಮ್ಮಣ್ಣಿ ಹೊನ್ನಮ್ಮನ ಆಸೆಯನ್ನು ಗುರುತಿಸಿ ಅವಳ ವಿದ್ಯಾಭ್ಯಾಸಕ್ಕೆ ಏರ್ಪಾಟು ಮಾಡಿದಳು. ಸಿಂಗರಾರ್ಯ ಹೊನ್ನಮ್ಮನಿಗೆ ಕನ್ನಡ, ಸಂಸ್ಕೃತಗಳನ್ನು ಕಲಿಸಿದ. ಕಾವ್ಯ, ಅಲಂಕಾರ, ನಾಟಕಗಳ ಅಭ್ಯಾಸ ಮಾಡಿಸಿದ. ಹೊನ್ನಮ್ಮನಿಗೆ ಶಾಸ್ತ್ರಗ್ರಂಥ, ಧರ್ಮಗ್ರಂಥಗಳ ಪರಿಚಯವಾಯಿತು. ಪ್ರಪಂಚದ ಅರಿವು, ಅರಮನೆಯ ಸುಸಂಸ್ಕೃತ ಪರಿಸರಗಳೂ ಆಕೆಯ ಮೇಲೆ ಪರಿಣಾಮ ಉಂಟುಮಾಡಿದುವು. ಹೆಣ್ಣುಮಕ್ಕಳಿಗೆ ಉಪಯುಕ್ತವಾಗುವಂಥ ವಿಷಯವನ್ನು ಕವಿತೆಯ ರೂಪದಲ್ಲಿ ಬರಿ ಎಂಬುದಾಗಿ ಸೂಚನೆಯನ್ನೂ ಕೊಟ್ಟ ಸಿಂಗರಾರ್ಯ. ವಿನಯದಿಂದಲೇ ಆಕೆ ಅದಕ್ಕೊಪ್ಪಿಕೊಂಡಳು. ಹೊನ್ನಮ್ಮ ಅರಸರ ಸಮ್ಮತಿ ಪಡೆದು, ' ಹದಿಬದೆಯ ಧರ್ಮ ' ಎಂಬ ಗ್ರಂಥವನ್ನು ಬರೆದಳು.

" ಬಲ್ಲರಿಂದಾನು ಕೇಳಿದುದಕೆ ಪೆರ್ಚಕುಂದಿಲ್ಲದಂತೆಚ್ಚರುಗೂಡಿ
ಎಲ್ಲರುಮರಿವಂತೆಳವಾತುಗಳಿಂದೆ ಸೊಲ್ಲಿಸುವೆನು ಸೊಗಸುವೊಲು "
—ಎಂಬುದಾಗಿ ಹೊನ್ನಮ್ಮ ಹೇಳಿಕೊಂಡಿದ್ದಾಳೆ.

ತನ್ನ ಅನುಭವಕ್ಕೆ ಬಂದ ವಿಷಯವನ್ನೇ ಆಕೆ ಆರಿಸಿಕೊಂಡಳು. ಹೆಣ್ಣುಮಕ್ಕಳನ್ನು ಸಣ್ಣ ವಯಸ್ಸಿನಲ್ಲೇ ಮದುವೆಯಾಗಿ ಗಂಡನ ಮನೆಗೆ ಹೋದಾಗ ಯಾವ ರೀತಿ ನಡೆದುಕೊಳ್ಳಬೇಕೆಂಬುದನ್ನು ತಿಳಿಸಬೇಕೆಂಬುದು ಅವಳ ಮತ. ಹಾಗೆಯೇ ತಮ್ಮ ಮಗಳಿಗೆ ಗಂಡು ಹುಡುಕುವಾಗ



''ಪೆಣ್ಣಲ್ಲವೇ ....?'':
ಸಂಚಿಯ ಹೊನ್ನಮ್ಮ

ಬಾಂಧವ್ಯ, ಐಶ್ವರ್ಯಗಳಿಗೆ, ಮರುಳಾಗದೆ ಗುಣವಂತ, ರೂಪವಂತನನ್ನು ಹುಡುಕುವುದೊಳ್ಳೆಯದು ಎನ್ನುತ್ತಾಳೆ. ಅತ್ತೆಯಾದವಳು ಸೊಸೆಯನ್ನು ಪ್ರೀತಿ, ವಿಶ್ವಾಸದಿಂದ ತನ್ನ ಮಗಳೆಂಬಂತೆ ನಡೆಸಿಕೊಳ್ಳಬೇಕೆಂದು ಅವಳಾಸೆ. ಹೆಂಗಸಿಗೆ ತಾಳ್ಮೆ ಮುಖ್ಯವಾಗಿ ಬೇಕಾದ ಗುಣ. ಆಕೆ ಜೀವನದಲ್ಲಿ ಎಂಥೆಂಥ ಕಠಿಣ ಪ್ರಸಂಗಗಳನ್ನು ಎದುರಿಸಬೇಕಾಗುತ್ತದೆ. ಸಹನೆ ಅವಳನ್ನು ಆ ಕಷ್ಟ ಪರಿಸ್ಥಿತಿಯಿಂದ ಸುಲಭವಾಗಿ ಪಾರಾಗುವಂತೆ ಮಾಡುತ್ತದೆ. ಶೀಲವೇ ಹೆಂಗಸಿನ ಶ್ರೇಷ್ಠ ಒಡವೆ. ಅದನ್ನು ಕಾಯ್ದು ಕೊಂಡು ಬರಲು ಅವಳಲ್ಲಿ ಕೆಲವು ಗುಣಗಳಿರಬೇಕಾದದ್ದು ಅವಶ್ಯ. ಪತಿವ್ರತಾಧರ್ಮವನ್ನು ಸೀತೆ, ದಮಯಂತಿಯರು ಎಷ್ಟು ದುರ್ಭರ ಸನ್ನಿವೇಶಗಳಲ್ಲೂ ಹೇಗೆ ಕಾಪಾಡಿಕೊಂಡು ಬಂದರೆಂಬುದನ್ನು ಉದಹರಿಸಿದ್ದಾಳೆ.

"ಪಾತಿವ್ರತ್ಯದೇಳ್ಗೆಯ ಪರಿಕಿಪೆಂ
ದೋತು ರಾಘವನುಸಿರ್ದೊಡನೆ
ಸೀತೆ ಬೆಂಕಿಯ ಪುಗೆ ಶೀತಳಮಾದುದು
ಮಾತಾವುದು ಮತ್ತೆ ಬೇರೆ"

ಹೊನ್ನಮ್ಮ ಈಗ್ಗೆ ಸುಮಾರು 300 ವರ್ಷಗಳಷ್ಟು ಹಿಂದಿದ್ದವಳು. ಆಕೆಯ ಕೃತಿಯಲ್ಲಿ ನೀತಿಗೆ ಪ್ರಾಧಾನ್ಯ. ಹೇಳಬೇಕೆಂದಿರುವ ಮಾತನ್ನು ನೇರವಾಗಿ, ರಸಮಯ ಭಾಷೆಯಲ್ಲಿ ಹೇಳಿದ್ದಾಳೆ. ಗೃಹಿಣಿಯರ ಕೈಪಿಡಿಯಂತಿರುವ 'ಹದಿಬದೆಯ ಧರ್ಮ' ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳಲ್ಲೊಂದೆಂದು ಹೆಸರು ಗಳಿಸಿದೆ.

ಹೊನ್ನಮ್ಮ ಜನರ ಮನ್ನಣೆಗೆ ಪಾತ್ರಳಾದಳು. ಚಿಕದೇವರಾಜರಿಂದ ಸನ್ಮಾನಿತಳಾಗಿ, ಆಸ್ಥಾನ ಕವಯಿತ್ರಿಯ ಪದವಿಯನ್ನೂ ಪಡೆದಳು.

## ಸಂಶೋಧನೆ

ನಮ್ಮ ತಿಳಿವಳಿಕೆ ವಿಸ್ತಾರಗೊಳ್ಳಲು ತುಂಬ ಸಹಾಯಕವಾದ ಕಾರ್ಯಕ್ರಮ ಸಂಶೋಧನೆ. ಈ ಮಾತು ವಿಜ್ಞಾನ ಸಾಹಿತ್ಯ, ಕಲೆ, ಇತಿಹಾಸ ಮುಂತಾದ ಎಲ್ಲ ರಂಗಗಳಿಗೂ ಅನ್ವಯಿಸುತ್ತದೆ.

ನಮ್ಮ ಪೂರ್ವಜರು, ಎಂದರೆ ನಮಗೆ ಹಿಂದೆ ಇದ್ದ ಪೀಳಿಗೆಯ ಜನ, ತಮ್ಮ ಕಾಲದಲ್ಲಿ ನಾನಾ ಕ್ಷೇತ್ರಗಳಲ್ಲಿ ವಿಧವಿಧ ಸಾಧನೆಗಳನ್ನು ಕೈಗೂಡಿಸಿಕೊಂಡಿರುತ್ತಾರೆ. ಇವುಗಳನ್ನು ಕುರಿತ ವಿವರಗಳು —ಮಾತ್ರವಲ್ಲ ಈ ಸಾಧನೆಗಳೂ— ನಾನಾಕಾರಣಗಳಿಂದ ನಮ್ಮ ಕಣ್ಣಿಗೆ ಬೀಳದೆ ಎಲ್ಲೋ ಅಡಗಿರುತ್ತವೆ. ಇಂಥವನ್ನು ಹುಡುಕಿ ತೆಗೆದು, ಅವುಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿ, ವಿವೇಚನೆ ನಡೆಸಿ, ಅವುಗಳ ಬಗೆಗೆ ನಮಗೆ ತಿಳಿವಳಿಕೆ ಕೊಡುವುದೇ ಸಂಶೋಧನೆಯ ಪ್ರಧಾನ ಉದ್ದೇಶ. ಸಂಶೋಧನೆಯ ಫಲವಾಗಿ ನಮಗೆ ಹೊಸ ತಿಳಿವಳಿಕೆ ಉಂಟಾಗುತ್ತದೆ. ಉದಾಹರಣೆಗಾಗಿ ಕನ್ನಡನಾಡಿನ ಇತಿಹಾಸ, ಸಾಹಿತ್ಯ, ಕಲೆಗಳ ವಿಚಾರವನ್ನೇ ತೆಗೆದುಕೊಳ್ಳೋಣ. ನಮ್ಮ ನಾಡಿನಲ್ಲಿ ಅನೇಕ ರಾಜಮನೆತನಗಳು ಆಳಿದುವು. ಇವುಗಳಲ್ಲಿ ಹಲವು ರಾಜಮನೆತನಗಳ ಬಗೆಗೆ ನಮಗಿದ್ದ ತಿಳಿವಳಿಕೆ ತೀರ ಸ್ವಲ್ಪ. ಫ್ಲೀಟ್, ಹುಲ್ಷ್, ಲೂಯಿರೈಸ್‌ಮುಂತಾದ ಪಾಶ್ಚಾತ್ಯ ವಿದ್ವಾಂಸರು ಹಾಗೂ ಹೊಸಕೋಟೆ ಕೃಷ್ಣ ಶಾಸ್ತ್ರೀ, ಆರ್. ನರಸಿಂಹಾಚಾರ್ಯ ಮುಂತಾದವರ ಸಂಶೋಧನೆಗಳ ಫಲವಾಗಿ ಈಗ ಕನ್ನಡನಾಡಿನ ರಾಜಮನೆತನಗಳ ವಿಚಾರವಾಗಿ ಅನೇಕ ವಿವರಗಳು ಗೊತ್ತಾಗಿವೆ. ಕನ್ನಡನಾಡಿನ ಶಾಸನ ಸಂಪತ್ತು ದೊಡ್ಡ ಪ್ರಮಾಣದ್ದು. ಈಗಾಗಲೇ ಸಹಸ್ರಾರು ಶಾಸನಗಳನ್ನು ಪತ್ತೆಹಚ್ಚಿ ಅವುಗಳ ಒತ್ತಚ್ಚನ್ನು ತೆಗೆದು, ಅವನ್ನು ಓದಿದ್ದಾರೆ. ಈ ಕೆಲಸ ಮುಂದುವರಿಯುತ್ತಿದೆ. ಆದರೆ ಇನ್ನೂ ಸಂಗ್ರಹಿಸಬೇಕಾದ, ಓದಬೇಕಾದ ಶಾಸನಗಳು ಸಹಸ್ರಾರು ಇವೆ.



ಲೂಯಿ ರೈಸ್



ಎಂ. ಎಚ್. ಕೃಷ್ಣ



ಚಿದಾನಂದಮೂರ್ತಿ

ಕನ್ನಡನಾಡಿನ ಶಾಸನಗಳ ಸಂಶೋಧನಾ ರಂಗದಲ್ಲಿ ಆರ್. ಶ್ಯಾಮಶಾಸ್ತ್ರೀ, ಎಂ. ಎಚ್. ಕೃಷ್ಣ, ಎಂ. ಶೇಷಾದ್ರಿ, ಕೆ. ಜಿ. ಕುಂದಣಗಾರ, ಎಂ. ರಾಮರಾವ್, ಆರ್. ಎಸ್. ಪಂಚಮುಖಿ, ಎನ್. ಲಕ್ಷ್ಮೀನಾರಾಯಣ ರಾವ್, ತಾತಾಚಾರ್ಯ ಶರ್ಮ, ಜಿ. ಎಸ್. ಗಾಯಿ, ಪಾಂಡುರಂಗರಾವ್ ದೇಸಾಯಿ, ಎಂ.ಎಸ್. ನಾಗರಾಜರಾವ್, ಜಿ. ಎಸ್. ದೀಕ್ಷಿತ, ಎ. ಎಂ. ಅಣ್ಣಿಗೇರಿ, ಬಿ. ಆರ್. ಗೋಪಾಲ್, ಶ್ರೀನಿವಾಸ ರಿತ್ತಿ ಮೊದಲಾದವರು ಗಣನೀಯ ಕೆಲಸ ನಡೆಸಿದ್ದಾರೆ.



ಎಸ್. ಎಸ್. ಭೂಸನೂರಮಠ



ಬಿ. ಶಿವಮೂರ್ತಿ ಶಾಸ್ತ್ರೀ

ಶಾಸನಗಳ ಅಧ್ಯಯನದಿಂದ, ರಾಜಕೀಯ ಚರಿತ್ರೆಗೆ ಸಂಬಂಧಿಸಿದ ವಿಷಯಗಳು ಮಾತ್ರವಲ್ಲದೆ, ಆಯಾ ಕಾಲಕ್ಕೆ ಸಂಬಂಧಿಸಿದ ಸಾಮಾಜಿಕ ಸಾಂಸ್ಕೃತಿಕ ಜೀವನ, ವ್ಯಾಪಾರ ವಾಣಿಜ್ಯಾದಿಗಳನ್ನು ಕುರಿತ ಅಂಶಗಳೂ ಗೊತ್ತಾಗುತ್ತವೆ. 'ಕನ್ನಡ ನಾಡಿನ ಸಂಸ್ಕೃತಿ' ಎಚ್. ತಿಪ್ಪೇರುದ್ರಸ್ವಾಮಿಯವರು ರಚಿಸಿರುವ ಗಣನೀಯ ಕೃತಿ. ಕನ್ನಡ ನಾಡಿನ ಶಾಸನಗಳ ಅಧ್ಯಯನದ ಫಲವಾಗಿ ಚಿದಾನಂದಮೂರ್ತಿಯವರು ಬರೆದಿರುವ ಕೃತಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'.

ಕನ್ನಡ ಸಾಹಿತ್ಯ ರಂಗದಲ್ಲೂ ವಿಪುಲ ಸಂಶೋಧನೆ ನಡೆದಿದೆ. ಆರ್. ನರಸಿಂಹಾಚಾರ್ಯರು ಹಸ್ತಪ್ರತಿಗಳ ರೂಪದಲ್ಲಿದ್ದ ಅನೇಕ ಕನ್ನಡ ಗ್ರಂಥಗಳನ್ನು ಪರಿಶೀಲಿಸಿ 'ಕರ್ಣಾಟಕ ಕವಿ ಚರಿತ್ರೆ'ಯನ್ನು ರಚಿಸಿ ಕನ್ನಡ ಸಾಹಿತ್ಯದ ಹಾಸು ಬೀಸುಗಳ ಪರಿಚಯ ಮಾಡಿಕೊಟ್ಟರು. ಕನ್ನಡ ಕವಿಗಳ ಕಾಲದ ವಿಚಾರವಾಗಿ, ಕನ್ನಡ ಭಾಷೆ-ವ್ಯಾಕರಣಗಳ ಬಗೆಗೆ ಸಂಶೋಧನೆಯನ್ನು ನಡೆಸಿದವರಲ್ಲಿ ರೆವರೆಂಡ್ ಕಿಟಲ್, ಎ. ವೆಂಕಟಸುಬ್ಬಯ್ಯ, ಗೋವಿಂದ ಪೈ, ಎನ್. ಎಸ್. ರಾಜಪುರೋಹಿತ. ಎಸ್. ಜಿ. ನರಸಿಂಹಾಚಾರ್ಯ, ಎಂ. ಎ. ರಾಮಾನುಜಯ್ಯಂಗಾರ್, ಎ. ಎನ್. ನರಸಿಂಹಯ್ಯ, ಫ.ಗು. ಹಳಕಟ್ಟಿ. ಚೆನ್ನಪ್ಪ ಉತ್ತಂಗಿ, ಶಿ. ಶಿ. ಬಸವನಾಳ, ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರೀ, ಡಿ. ಎಲ್. ಎನ್., ತೀ.ನಂ.ಶ್ರೀ. ಮಹದೇವ ಪೂಜಾರ, ಬಿ. ಶಿವಮೂರ್ತಿ ಶಾಸ್ತ್ರೀ, ಎಸ್. ಎಸ್. ಭೂಸನೂರಮಠ, ಎಲ್. ಬಸವರಾಜು, ಹಂ. ಪ. ನಾಗರಾಜಯ್ಯ, ಜಿ. ವರದರಾಜರಾವ್, ಕೆ. ಎಂ. ಕೃಷ್ಣರಾವ್, ಡಿ. ಕೆ. ಭೀಮಸೇನ ರಾವ್, ಜಿ. ವೆಂಕಟಸುಬ್ಬಯ್ಯ ಮತ್ತಿತರರು ಗಣ್ಯರು.



ಎಸ್. ಶ್ರೀಕಂಠಶಾಸ್ತ್ರಿ

ಕನ್ನಡ ಜಾನಪದ ಸಾಹಿತ್ಯ, ಸಂಸ್ಕೃತಿಗಳ ರಂಗದಲ್ಲೂ ಸಂಶೋಧನೆ ನಡೆದಿದೆ. ಹಲಸಂಗಿ ಚೆನ್ನಮಲ್ಲಪ್ಪ (ಮಧುರಚೆನ್ನ), ಬೆಟಗೇರಿ ಕೃಷ್ಣಶರ್ಮ (ಆನಂದಕಂದ), ರಂಗಸ್ವಾಮಿ,ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮತಿಘಟ್ಟ ಕೃಷ್ಣಮೂರ್ತಿ, ಕರೀಂಖಾನ್, ಬಿ. ಎಸ್. ಗದ್ದಗಿಮಠ, ಆರ್. ಎಲ್. ಹೆಗಡೆ, ಕ.ರಾ.ಕೃ., ಜೀ.ಶಂ.ಪ. ಮತ್ತಿತರರು ಈ ಕ್ಷೇತ್ರದಲ್ಲಿ ದುಡಿದ್ದಾರೆ,

ಕನ್ನಡ ನಾಡಿನ ಹಲವಾರು ಪಾಳೆಯಗಾರರ ವಂಶಗಳ ಬಗೆಗೆ ಎಂ. ಎಸ್. ಪುಟ್ಟಣ್ಣನವರು ನಡೆಸಿದ ಸಂಶೋಧನೆಗಳು ಅಮೂಲ್ಯವಾದುವು. ಸಾಹಿತ್ಯ, ಪರಂಪರಾಗತವಾದ ರೂಢಿ, ವೇದಗಳು ಮುಂತಾದ ಹಲವಾರು ಆಕರಗಳ ಅಧ್ಯಯನ ನಡೆಸಿ ನಮ್ಮ ನಾಡು ನುಡಿಗಳ ಬಗೆಗೆ ನಿರಂತರವಾಗಿ ಸಂಶೋಧನೆ ನಡೆಸಿರುವವರಲ್ಲಿ ಶಂ. ಬಾ. ಜೋಶಿಯವರು ಪ್ರಸಿದ್ಧರು. ಇತಿಹಾಸ. ಸಂಸ್ಕೃತಿಗಳ ರಂಗದಲ್ಲಿ ಎಸ್. ಶ್ರೀಕಂಠಶಾಸ್ತ್ರಿಯವರ ಸಂಶೋಧನೆಗಳು ಪ್ರಮುಖವಾದುವು. ಯಾವುದೇ ರಾಷ್ಟ್ರದ ಇತಿಹಾಸ, ಸಂಸ್ಕೃತಿ, ಸಾಹಿತ್ಯಗಳ ಸ್ವರೂಪ, ಮಹತ್ವಗಳನ್ನು ಅರಿಯಲು ಸಂಶೋಧನೆ ತುಂಬ ಸಹಾಯಕ. ಐತಿಹಾಸಿಕ ಸಂಶೋಧನೆಗಳು ಎಷ್ಟೋ ಕಥೆ ಕಾದಂಬರಿಗಳಿಗೆ ಸಾಮಗ್ರಿ ಒದಗಿಸಿವೆ. ಈ ಕ್ಷೇತ್ರದಲ್ಲಿ ಎಂ. ವಿ. ಕೃಷ್ಣರಾವ್ ಮತ್ತು ಸೂರ್ಯನಾಥ ಕಾಮತರ ದುಡಿಮೆ ಗಮನಾರ್ಹವಾದದ್ದು.



ಎಂ. ಎಸ್. ಸುಂಕಾಪುರ

ಸಂಶೋಧನೆಯಿಂದ ದೊರೆಯುವ ಸಾಮಗ್ರಿ ಎಂ. ಎಸ್. ಸುಂಕಾಪುರರ 'ಕನ್ನಡದಲ್ಲಿ ಹಾಸ್ಯ' ದಂಥ ಮಹಾಪ್ರಬಂಧಗಳ ರಚನೆಗೆ ನೆರವಾಗಿದೆ.

**ನೋಡಿ :** ಆರ್. ನರಸಿಂಹಾಚಾರ್ಯ ; ಎಂ. ಎ. ರಾಮಾನುಜಯ್ಯಂಗಾರ್ ; ಎಂ. ಎಸ್. ಪುಟ್ಟಣ್ಣ ; ಎ. ಆರ್. ಕೃಷ್ಣಶಾಸ್ತ್ರೀ ; ಗೋವಿಂದ ಪೈ ; ಚೆನ್ನಪ್ಪ ಉತ್ತಂಗಿ ; ಜನಪದ ಸಾಹಿತ್ಯ ; ಟಿ. ಎಸ್. ವೆಂಕಣ್ಣಯ್ಯ ; ಡಿ ಎಲ್ ಎನ್ ; ತಿರುಮಲೆ ತಾತಾಚಾರ್ಯ ಶರ್ಮ ; ತೀ ನಂ ಶ್ರೀ ; ಬಸವನಾಳ ; ಹಳಕಟ್ಟಿ ; ಹೊಸಕೋಟೆ ಕೃಷ್ಣಶಾಸ್ತ್ರೀ

## ಸಂಸ

ಹಳಗನ್ನಡ ಸಾಹಿತ್ಯ, ಶಾಸನಗಳನ್ನೂ ಇತರ ಇತಿಹಾಸ ಆಕರಗಳನ್ನೂ ಆಳವಾಗಿ ಅಭ್ಯಾಸಮಾಡಿ, ಕನ್ನಡ ಭಾಷೆಯಲ್ಲಿ ಹಿಂದೆಂದೂ ಕಾಣದಿದ್ದಂಥ ಅಮೂಲ್ಯ ಐತಿಹಾಸಿಕ ನಾಟಕಗಳನ್ನು ಬರೆದ ಪ್ರಚಂಡ ಪ್ರತಿಭಾಶಾಲಿ 'ಸಂಸ'ರು. ಆದರೆ ಅವರದು ದುರಂತದ ಛಾಯೆ ಆವರಿಸಿದ ಮಹಾ ಪ್ರತಿಭೆ. ತಾವು ಕ್ರಾಂತಿಕಾರರೆಂದು ಭಾವಿಸಿದ ಪೋಲೀಸರು ತಮ್ಮಮೇಲೆ ಕಣ್ಣಿಟ್ಟು ತಮ್ಮನ್ನು ಹಿಂಸಿಸಲು, ನಾಶಗೊಳಿಸಲು ನಾನಾ ತಂತ್ರಗಳನ್ನು ಹೂಡುತ್ತಿದ್ದಾರೆಂಬ ತೀವ್ರವಾದ ಭ್ರಮೆ ಅವರನ್ನು ಕಾಡುತ್ತಿತ್ತು. ಇದರಿಂದಾಗಿ ಅವರು ತೀರ ವಿಲಕ್ಷಣ ವ್ಯಕ್ತಿಯಾಗಿ ಮನೋವೇದನೆಯಿಂದ ಬಳಲಿದರು. ಈ ಭ್ರಮೆಯೇ ಅವರ ದುರ್ಮರಣಕ್ಕೂ ಕಾರಣವಾಯಿತು.

'ಸಂಸ' ಎಂಬುದು ಎ.ಎನ್. ಸ್ವಾಮಿ ವೆಂಕಟಾದ್ರಿ ಅಯ್ಯರ್ ಅವರು ತಮ್ಮ ನಾಟಕಗಳಿಗಾಗಿ ಇಟ್ಟುಕೊಂಡ ಕಾವ್ಯನಾಮ. ಅವರು ತಮ್ಮನ್ನು ವೆಂಕಟಾದ್ರಿ ಪಂಡಿತ್ ಎಂದು ಕರೆದುಕೊಳ್ಳುತ್ತಿದ್ದದ್ದೂ ಉಂಟು. ಯಳಂದೂರು ತಾಲ್ಲೂಕಿನ ಅಗರ ಗ್ರಾಮದಲ್ಲಿ ಅವರು 1898ರ ಜನವರಿ 13ರಂದು ಜನಿಸಿದರು.

ಹುಡುಗ ವೆಂಕಟಾದ್ರಿ ಕೊಳ್ಳೇಗಾಲ, ಮೈಸೂರುಗಳಲ್ಲಿ ಮೊದಲು ಶಾಲಾ ವಿದ್ಯಾಭ್ಯಾಸ ಮಾಡಿದ. 1914ರಲ್ಲಿ ಎಸ್. ಎಸ್. ಎಲ್. ಸಿ. ಪರೀಕ್ಷೆ ಪಾಸಾಗದೆ, ವಿದ್ಯಾಭ್ಯಾಸವನ್ನು ಅಲ್ಲಿಗೇ ಮುಕ್ತಾಯಗೊಳಿಸಿದ. ಆದರೆ ತನ್ನ ಸಾಹಿತ್ಯಾಭ್ಯಾಸವನ್ನು ಬಿಡಲಿಲ್ಲ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದ ಕರಿಬಸವಪ್ಪಶಾಸ್ತ್ರಿಗಳಲ್ಲಿ ಪ್ರೌಢ ಕನ್ನಡ ಕಾವ್ಯಗಳನ್ನು ಅಭ್ಯಸಿಸಿದ.

ಮುಂದೆ ಯುವಕ ವೆಂಕಟಾದ್ರಿ ಮೈಸೂರಿನ ಶಾರದಾ ವಿಲಾಸ ಹೈಸ್ಕೂಲಿನಲ್ಲೂ ಮದರಾಸಿನ ಲಾಯಲಾ ಕಾಲೇಜಿನಲ್ಲೂ ಮಂಗಳೂರಿನ ಅಲೋಷಿಯಸ್ ಕಾಲೇಜಿನಲ್ಲೂ ಕನ ಡ ಪಂಡಿತರಾಗಿ ಸ್ವಲ್ಪ ಕಾಲ ಕೆಲಸ ಮಾಡಿದರು.

ಸಂಸರ ಆತ್ಮಾಭಿಮಾನ ಅವರಿಗೂ ಇತರರಿಗೂ ಹಿಂಸೆಯಾಗುವಷ್ಟು ಹಿರಿದಾದದ್ದು. ಇದರಿಂದಾಗಿ ಅವರು ಯಾವ ಉದ್ಯೋಗದಲ್ಲೂ ಬಹುಕಾಲವಿರುವುದು ಸಾಧ್ಯವಾಗಲಿಲ್ಲ. ಅವರು ಒಮ್ಮೆ ಶಾಂತ ಸಾಗರದಲ್ಲಿರುವ ಫಿಜಿ ದ್ವೀಪಗಳಿಗೆ ಹೋಗಲು ನಿರ್ಧರಿಸಿದ್ದು, ಭಾರತದಲ್ಲೆಲ್ಲೂ ನಿಂತಲ್ಲಿ ನಿಲ್ಲದೆ ಸುತ್ತಿದ್ದು ಇದೇ ಕಾರಣದಿಂದ ಎನ್ನಬಹುದು. ಸುಮಾರು 1934ರಲ್ಲಿ ಕ್ವೆಟ್ಟಾ ಪಟ್ಟಣಕ್ಕೆ ಹೋಗಿ ಅಲ್ಲಿಯ ರಕ್ಷಣಾ ಪಡೆಯವರಿಗೆ ತಮಿಳನ್ನು ಕಲಿಸುವ ಉಪಾಧ್ಯಾಯನಾಗಿ ಕೆಲಸಕ್ಕೆ ಸೇರಿಕೊಂಡರು. ಇಲ್ಲಿ ಭೂಕಂಪವಾದ ಮೇಲೆ 1936ರ ಹೊತ್ತಿಗೆ ಮೈಸೂರಿಗೆ ಹಿಂದಿರುಗಿದರು.

ಆ ವೇಳೆಗಾಗಲೇ ಪೋಲಿಸರು ತಮ್ಮನ್ನು ಹಿಂಬಾಲಿಸುತ್ತಿದ್ದಾರೆ, ಪೀಡಿಸುತ್ತಿದ್ದಾರೆ ಎಂಬ ಭ್ರಮೆ ಅವರ ಮನಸ್ಸನ್ನು ಹೊಕ್ಕಿತು. ಆದರೆ ವಾಸ್ತವವಾಗಿ ಯಾವ ಪೋಲಿಸನೂ ಇವರ ಮೇಲೆ ಕಣ್ಣಿಟ್ಟಿರಲಿಲ್ಲ. ಇವರ ಮೇಲೆ ಯಾವ ಆಪಾದನೆಯೂ ಇರಲಿಲ್ಲ. ಈ ಭ್ರಮೆಯ ಪರಿಣಾಮವಾಗಿ ಇವರ ಸಂಶಯ ಪ್ರವೃತ್ತಿ ಎಲ್ಲಿಯವರೆಗೆ ಹೋಯಿತೆಂದರೆ, ಇವರ ನಾಟಕಗಳನ್ನು ಮೆಚ್ಚಿ ಇವರ ಗೆಳೆತನ ಬಯಸಿ ಬಂದ ಕತೆಗಾರ ಆನಂದ, ಜಿ. ಪಿ. ರಾಜರತ್ನಂ ಇಂಥವರನ್ನು ಕೂಡ ಪೋಲಿಸರ ಗುಪ್ತದಳದವರೆಂದು ಅನುಮಾನಪಟ್ಟು ಅವರ ಸಂಬಂಧವನ್ನು ಕಳೆದುಕೊಂಡರು.

ಈ ಚಿತ್ತಭ್ರಮೆ ಅವರ ಪ್ರತಿಭೆಯನ್ನು ಕುಂದಿಸಲಿಲ್ಲ. ಇದು ಅತ್ಯಂತ ಆಶ್ಚರ್ಯಕರ ಅಂಶ. ಅವರ ಕವನ, ನಾಟಕಗಳು ಇದಕ್ಕೆ ಸಾಕ್ಷಿ. ಅವರು ರಚಿಸಿದ ಗ್ರಂಥರಾಶಿ ದೊಡ್ಡದು. ಆದರೆ ಅವುಗಳಲ್ಲಿ ಕೆಲವು ಕವನಗಳು, ಮತ್ತು ಆರು ನಾಟಕಗಳು ಮಾತ್ರ ಇಂದು ದೊರೆಯುತ್ತವೆ. ಅವರು ವಾಚಿಸಿದ ಕೆಲವು ಕವನಗಳನ್ನು ಕೇಳಿದವರಿದ್ದಾರೆ. ಆದರೆ ಅವು ಲಿಖಿತರೂಪದಲ್ಲಿಲ್ಲ. ನಾಟಕ ಬರೆಯುವುದಕ್ಕಾಗಿ ಅವರು ಸಿದ್ಧಮಾಡಿ ಇಟ್ಟುಕೊಂಡಿದ್ದ ಟಿಪ್ಪಣಿಗಳು ದೊರೆತಿವೆ. ತಾವು ಬರೆದಿದ್ದ ಕೆಲವು ನಾಟಕಗಳನ್ನು ಸಂಸರು ಬೆಂಕಿಹಚ್ಚಿ ಸುಟ್ಟುಬಿಟ್ಟರೆಂದು ಕೂಡ ತಿಳಿದುಬಂದಿದೆ.

ಇಂಥ ಅನಾಹುತದಿಂದ ತಪ್ಪಿಸಿಕೊಂಡು ಪ್ರಕಟವಾದ ಕೃತಿಗಳು ಕೆಲವು ಮಾತ್ರ. 'ಕೌಶಲ' ಎಂಬ ಕಥೆ (1914) ಎ. ಎನ್. ಸ್ವಾಮಿ ಎಂಬ ಹೆಸರಲ್ಲೂ 'ಶ್ರೀಮಂತೋದ್ಯಾನ ವರ್ಣನಂ' ಎಂಬ ಕಾವ್ಯ (1918), ವೆಂಕಟಾದ್ರಿ ಪಂಡಿತ ಎಂಬ ಹೆಸರಲ್ಲೂ ಸರ್ ಎಂ. ವಿಶ್ವೇಶ್ವರಯ್ಯನವರನ್ನು ಕುರಿತ ಪದ್ಯಮಾಲಿಕೆ (1921) ಸಾಮಿ ಎಂಬ ನಾಮಾಂಕಿತದಲ್ಲೂ ಪ್ರಕಟವಾಗಿವೆ. ಇವಲ್ಲದೆ 'ಸಂಸಪದಂ' ಎಂಬ ಕಾವ್ಯವೂ ಒಂದಿದೆ. ಇವರು 'ಸಂಸ' ಹೆಸರಿನಲ್ಲಿ ಬರೆದ ಉಳಿದ ಕೃತಿಗಳು ಆರು ನಾಟಕಗಳು ಮಾತ್ರ: 'ಸುಗುಣ ಗಂಭೀರ', 'ವಿಗಡ ವಿಕ್ರಮರಾಯ' 'ಬೆಟ್ಟದ ಅರಸು', 'ಬಿರುದಂತೆಂಬರ ಗಂಡ', 'ಮಂತ್ರಶಕ್ತಿ' ಮತ್ತು 'ವಿಜಯ ನಾರಸಿಂಹ'. ಈ ಆರು ನಾಟಕಗಳೂ ಮೈಸೂರಿನ ಯದುವಂಶದ ಅರಸರು ಮತ್ತು ಅವರ ಕಾಲದ ಆಗುಹೋಗುಗಳಿಗೆ ಸಂಬಂಧಿಸಿದುವು.

ನಾಟಕಗಳಿಗಾಗಿ ಅವರು ರೂಪಿಸಿದ್ದು ಹಳೆಗನ್ನಡ ಮಿಶ್ರಿತವಾದ ಒಂದು ಅಸಾಮಾನ್ಯ ಭಾಷೆ. ಬಹುಶಃ ನಾಟಕಗಳ ಘಟನೆಗಳ ಕಾಲದ ವಾತಾವರಣವನ್ನು ಮೂಡಿಸಲು ಅವರು ಈ ತಂತ್ರವನ್ನು ಅವಲಂಬಿಸಿರಬಹುದು. ಈ ಭಾಷೆ ಅಸಾಮಾನ್ಯವಾದರೂ ಒಟ್ಟಿನಲ್ಲಿ ಅದು ಪ್ರೇಕ್ಷಕರಿಗೆ ಅರ್ಥವಾಗುತ್ತದೆ. ಅವರ ಮೇಲೆ ಪ್ರಭಾವ ಬೀರುತ್ತದೆ.

ಸಂಸರು 'ಇಂಡಿಯನ್ ಶೆರ್ಲಾಕ್ ಹೋಮ್ಸ್ ಇನ್ ಇಂಗ್ಲೆಂಡ್' ಎಂಬ ಇಂಗ್ಲಿಷ್ ಕಾದಂಬರಿಯನ್ನು ಬರೆದರು. ಅದನ್ನು ಎಡಿನ್‌ಬರೋ ಪ್ರಕಟಣಾಲಯವೊಂದು ಪ್ರಕಟಿಸಲು ಒಪ್ಪಿತು. ಆದರೆ ಕರಾರಿನ ಶರತಗಳು ಸಂಸರಿಗೆ ಒಪ್ಪಿಗೆಯಾಗದೆ ಅದು ಪ್ರಕಟವಾಗಲಿಲ್ಲ.



ವಿಷಮ, ಜ್ವಲಂತ : ಸಂಸ

ಕೆಲವು ದಾಖಲೆಗಳ ಆಧಾರದ ಮೇಲೆ ಸಂಸರು ಒಟ್ಟು 27 ನಾಟಕಗಳನ್ನು ಬರೆದಿದ್ದರೆಂದು ಊಹಿಸಲು ತರ್ಕಿಸಲಾಗಿದೆ.

ಸಂಸರಿಗೆ ಪೋಲೀಸರ ಪೀಡೆಯು ಭ್ರಮೆ. ಸಂದೇಹಗಳು ಅಸಹನೀಯವಾದಾಗ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿ ವಿಫಲರಾದದ್ದುಂಟು. ಕೊನೆಗೆ ಅವರು ಮೈಸೂರಿನಲ್ಲಿ ತಮ್ಮ ಕೊಠಡಿಯಲ್ಲಿ 1939ರ ಫೆಬ್ರವರಿ 14ರಂದು ಇಲಿ ವಿಷ ತೆಗೆದುಕೊಂಡು ಪ್ರಾಣ ಬಿಟ್ಟರು. ಅದಕ್ಕೆ ಮುಂಚೆ ಎರಡು ಕಾಗದಗಳನ್ನು ಬರೆದಿಟ್ಟಿದ್ದರು. ಒಂದು ಪೋಲೀಸರಿಗೆ, ಇನ್ನೊಂದು 'ಸಂಬಂಧಪಟ್ಟವರಿಗೆ'. ಆ ಪತ್ರಗಳಲ್ಲಿ ಪೋಲೀಸರ ಬಗೆಗೆ ಅವರಿಗಿದ್ದ ಕೋಪ, ದ್ವೇಷ, ಮೈಸೂರು ಅರಸರ ಬಗೆಗೆ ಅವರಿಗಿದ್ದ ಗೌರವ, ಯಾವ ವಿಧವಾದ ಮತಧರ್ಮಗಳಲ್ಲೂ ಅವರಿಗೆ ನಂಬಿಕೆ ಇಲ್ಲದಿದ್ದುದು ಸ್ಪಷ್ಟವಾಗಿ ವ್ಯಕ್ತವಾಗುತ್ತವೆ.

ವಿಷಮ ಬಾಳನ್ನು ಬಾಳುತ್ತಿದ್ದರೂ ಅವರು ಕನ್ನಡಕ್ಕೆ ಉತ್ತಮ ಮತ್ತು ವಿಶಿಷ್ಟ ರೀತಿಯ ಕೃತಿಗಳನ್ನು ಕೊಟ್ಟರು.

## ಸಣ್ಣ ಕಥೆ

ಕಥೆಯ ಸವಿಗೆ ಮಾರುಹೋಗದವರು ಯಾರು? ಕಥೆ ಹೇಳುವುದು ಬಹಳ ಹಿಂದಿನಿಂದ ನಡೆದುಬಂದ ಕಲೆ; ಹಾಗೆಯೇ ಕಥೆ ಕೇಳುವುದೂ ಬಹಳ ಹಳೆಯ ಹವ್ಯಾಸ –ಮಕ್ಕಳಿಗೆ ಮಾತ್ರವಲ್ಲ ದೊಡ್ಡವರಿಗೆ ಕೂಡ.

ಕಥೆ ಹೇಳುವುದು ಯಾವಾಗ. ಹೇಗೆ ಆರಂಭವಾಯಿತು? ಉತ್ತರ ಕಷ್ಟ. ಮಾನವ ಮಾತನಾಡುವುದನ್ನು ಕಲಿತಾಗಿನಿಂದ ಅವನು ತನ್ನ ಅನುಭವಗಳನ್ನು ಇತರರಿಗೆ ವರ್ಣಿಸಲು ಪ್ರಯತ್ನಿಸಿದ್ದಿರಬೇಕು. ಈ ಪ್ರಯತ್ನದಲ್ಲಿ ಕತೆಗಾರಿಕೆಯ ಬೇರುಗಳನ್ನು ಕಾಣಬಹುದು. ಜಗತ್ತಿನ ಅತ್ಯಂತ ಪ್ರಾಚೀನ ಸಾಹಿತ್ಯದಲ್ಲಿ ಕೂಡ ಕಥೆಗಳು ಕಂಡುಬರುತ್ತವೆ. 'ರಾಮಾಯಣ,' 'ಮಹಾಭಾರತ', 'ಜಾತಕ ಕಥೆಗಳು', 'ಪಂಚತಂತ್ರ', 'ಕಥಾಸರಿತ್ಸಾಗರ', 'ಈಸೋಪನ ನೀತಿಕಥೆಗಳು,' 'ಸಾವಿರದೊಂದು ರಾತ್ರಿ' ಇವೆಲ್ಲ ಕಥೆಗಳ ಗಣಿಗಳು. ಹಿಂದೆ ಕಥೆಗಳು ಸಾಮಾಜಿಕ, ಧಾರ್ಮಿಕ, ನೈತಿಕ ಪದ್ಧತಿ ಆಚಾರಗಳನ್ನು ಸ್ಪಷ್ಟಪಡಿಸಲು ಹುಟ್ಟಿಕೊಂಡವು. ನೀತಿಕಥೆಗಳು ಕಿನ್ನರ ಕತೆಗಳು, ಜಾನಪದ ಕತೆಗಳು ಎಲ್ಲ ಭಾಷೆಗಳಲ್ಲೂ ಇವೆ. ಇವೆಲ್ಲ ಕಥೆಗಳೆಂಬುದು ನಿಜವಾದರೂ 'ಸಣ್ಣ ಕಥೆ'ಗಳಲ್ಲ. ನಾವು ಈಗ ಸಣ್ಣ ಕಥೆ ಎಂದು ಕರೆಯುವ ಸಾಹಿತ್ಯ ಪ್ರಕಾರ ಇತ್ತೀಚೆಗೆ ರೂಪುಗೊಂಡದ್ದು.

ಸಣ್ಣ ಕಥೆಯ ಪ್ರಕಾರ 19ನೆಯ ಶತಮಾನದ ಅನಂತರ ಹೆಚ್ಚು ಪ್ರಸಿದ್ಧಿಗೆ ಬಂತು. ಜನಪ್ರಿಯತೆಯಲ್ಲಿ ಕಾದಂಬರಿಯ ಬಳಿಕ ಸಣ್ಣ ಕಥೆಗೇ ಸ್ಥಾನ.

ಸಣ್ಣ ಕಥೆ ಅದರ ಹೆಸರೇ ಸೂಚಿಸುವಂತೆ ಗಾತ್ರದಲ್ಲಿ ಚಿಕ್ಕದು. ಕೇವಲ 300 ಶಬ್ದಗಳ ಸಣ್ಣಕತೆಯೂ ಇದೆ. 40,000 ಶಬ್ದಗಳ ಕತೆಯೂ ಇದೆ. ಇಂಥ ಉದ್ದವಾದ ಸಣ್ಣಕತೆಗಳನ್ನು ನೀಳ್ಗತೆಗಳು ಎನ್ನುತ್ತಾರೆ. ಸಣ್ಣ ಕತೆಗಳಲ್ಲಿ ಚೆನ್ನಾಗಿ ಪಳಗಿದ ಕತೆಗಾರರೂ ಒಮ್ಮೊಮ್ಮೆ ನೀಳ್ಗತೆಗಳನ್ನು ಬರೆಯುವುದುಂಟು. ತೆಗೆದುಕೊಂಡ ಕಥಾವಸ್ತುವನ್ನು ನಿರೂಪಿಸಲು ತುಸು ಹೆಚ್ಚು ಅವಕಾಶಬೇಕೆನಿಸಿದಾಗ ನೀಳ್ಗತೆ ಸೃಷ್ಟಿಯಾಗುತ್ತದೆ. ಗಾತ್ರದ ದೃಷ್ಟಿಯಿಂದ ಮಾತ್ರವಲ್ಲದೆ ವಸ್ತುವಿನ ಆಯ್ಕೆ, ರಚನೆಯ ತಂತ್ರಗಳಲ್ಲೂ ಸಣ್ಣ ಕಥೆಗೂ ಕಾದಂಬರಿಗೂ ವ್ಯತ್ಯಾಸವಿದೆ. ಒಂದು ಮನೋಭಾವ, ಒಂದು ಘಟನೆ, ಒಂದು ವ್ಯಕ್ತಿತ್ವ ಸಣ್ಣ ಕಥೆಯಲ್ಲಿ ಪ್ರಧಾನ ಅಂಶ. ಆರಂಭ ಮತ್ತು ಅಂತ್ಯಗಳೆರಡೂ ಮನಸೆಳೆಯುವಂತಿರಬೇಕು.

1350ರಲ್ಲಿ ಇಟಲಿಯ ಗಿಯೋವಾನಿ ಬೊಕಾಶಿಯೋ 'ಡೆಕಾಮೆರಾನ್' ಎಂಬ ಕೃತಿಯನ್ನು ರಚಿಸಿದ. ಅದರಲ್ಲಿ ನೂರು ಗದ್ಯ ಕಥೆಗಳಿವೆ. ಆಧುನಿಕ ಸಣ್ಣ ಕಥೆಯ ಲಕ್ಷಣಗಳು ಮೊಟ್ಟಮೊದಲಾಗಿ ಕಾಣಿಸಿಕೊಂಡದ್ದು ಈ ಕೃತಿಗಳಲ್ಲಿ. ಮಧ್ಯಯುಗದ ಕೆಲವು ಕಥೆಗಳು ಪದ್ಯರೂಪದಲ್ಲೂ ಇವೆ. ಅವುಗಳಲ್ಲಿ ಪ್ರಖ್ಯಾತವಾದದ್ದು ಚಾಸರನ 'ಕ್ಯಾಂಟರ್‌ಬರಿ ಕಥೆಗಳು'. ಕ್ಯಾಂಟರ್‌ಬರಿಗೆ ಹೋಗುತ್ತಿದ್ದ ಕಾಲದಲ್ಲಿ ಪ್ರವಾಸಿಗಳು ತಮ್ಮ ಪ್ರಯಾಣದ ಆಯಾಸ. ಬೇಸರಗಳ ಪರಿಹಾರಕ್ಕಾಗಿ ಹೇಳಿದ ಕಥೆಗಳು ಇದರಲ್ಲಿವೆ. ಕನ್ನಡದಲ್ಲಿ ಶ್ರೀನಿವಾಸರ 'ನವರಾತ್ರಿ' ಕವನ ರೂಪದಲ್ಲಿರುವ ಈ ಬಗೆಯ ಕಥಾಮಂಜರಿ.

19ನೆಯ ಶತಮಾನದ ದ್ವಿತೀಯ ಭಾಗದಿಂದೀಚೆಗೆ ಸಣ್ಣ ಕಥೆಯ ರಚನಾತಂತ್ರ ಕಲಾತ್ಮಕವಾಗಿ ಅರಳಿತು. ಎಡ್ಗರ್ ಅಲನ್ ಪೊ ಅಮೆರಿಕದ ಸಣ್ಣ ಕಥೆಗಾರರಲ್ಲಿ ಪ್ರಸಿದ್ಧ. ಅವನನ್ನು ಅನುಸರಿಸಿ ನಥಾನಿಯಲ್ ಹಾಥಾರ್ನ್, ಓ ಹೆನ್ರಿ, ಮಾರ್ಕ್ ಟ್ವೇನ್ ಮುಂತಾದವರು ಉತ್ತಮ ಕಥೆಗಳನ್ನು ಬರೆದರು. ರಷ್ಯದಲ್ಲಿ ಪುಷ್ಕಿನ್, ಟಾಲ್‌ಸ್ಟಾಯ್, ಟುರ್ಗೆನೈಫ್ ಮತ್ತು ಗಾರ್ಕಿ ಶ್ರೇಷ್ಠ ಸಣ್ಣಕತೆಗಳನ್ನು ಬರೆದರು. ಲು ಶೂನ್ ಚೀನೀ ಭಾಷೆಯಲ್ಲಿ ಉತ್ತಮ ಸಣ್ಣ ಕಥೆಗಳನ್ನು ಬರೆದ.

ಜಗತ್ತಿನ ವಿವಿಧ ಭಾಗಗಳಲ್ಲಿ ಸಣ್ಣ ಕಥಾಸಾಹಿತ್ಯ ಬೆಳೆದಿದೆ. ಭಾರತದಲ್ಲಿ ಬಂಗಾಳಿ, ಮರಾಠಿ, ಉರ್ದು, ಹಿಂದೀ ಮತ್ತಿತರ ಎಲ್ಲ ಭಾಷೆಗಳಲ್ಲೂ ಸಣ್ಣ ಕಥೆಗಳು ಬಂದಿವೆ. ಭಾರತದ ಇತರ ಭಾಷೆಗಳಲ್ಲಿರುವಂತೆ ಕನ್ನಡದಲ್ಲೂ ಈ ಶತಮಾನದಲ್ಲಿ ಸಣ್ಣಕಥೆಯ ಬೆಳವಣಿಗೆ ಪ್ರಶಂಸನೀಯ. ಕೆರೂರ, ಪಂಜೆ, ಕಾಮತ್ ಈ ಸಾಹಿತ್ಯ ಪ್ರಕಾರದಲ್ಲಿ ಮೊದಮೊದಲು ಕೃಷಿ ನಡೆಸಿದರು. ಕನ್ನಡದಲ್ಲಿ ಸಣ್ಣಕಥೆಗೆ ನಿರ್ದಿಷ್ಟ ಸ್ವರೂಪಕೊಟ್ಟು ಅದರ ಸ್ಥಾನವನ್ನು ಶಾಶ್ವತಗೊಳಿಸಿದವರು 'ಶ್ರೀನಿವಾಸ'ರು. 'ವೆಂಕಟಶಾಮಿಯ ಪ್ರಣಯ', 'ಮೊಸರಿನ ಮಂಗಮ್ಮ', 'ಸಾರಿಪುತ್ರರ ಕೊನೆಯ ದಿನಗಳು', 'ಇಂದಿರೆಯೋ ಅಲ್ಲವೊ', 'ಮಸುಮತ್ತಿ' ಮುಂತಾದುವು ಜನಪ್ರಿಯ ಕತೆಗಳು. ಸರಳ ಭಾಷೆ, ಆಕರ್ಷಕ ಶೈಲಿ, ಜೀವನದ ಸಹಜ ಚಿತ್ರಣ, ತಿಳಿಹಾಸ್ಯ, ಗಾಂಭೀರ್ಯ, ಬಂಧದ ಸೊಗಸುಗಳು 'ಶ್ರೀನಿವಾಸ'ರ ಕಥೆಗಳಿಗೆ ಅಪೂರ್ವ ಶೋಭೆಯನ್ನು ತಂದಿವೆ.

ಮಾಸ್ತಿಯವರ ಸಂಪ್ರದಾಯವನ್ನು ಅನುಸರಿಸಿ ಕಥೆಗಳನ್ನು ಬರೆದವರು 'ಆನಂದ' (ಅಜ್ಜಂಪುರ ಸೀತಾರಾಮ್), 'ಆನಂದಕಂದ' (ಬೆಟಗೇರಿ ಕೃಷ್ಣ ಶರ್ಮ) ಮುಂತಾದವರು. ಕೊಡಗಿನ ಗೌರಮ್ಮ (ಶ್ರೀಮತಿ ಬಿ. ಟಿ. ಜಿ. ಕೃಷ್ಣ) ಸೊಗಸಾದ ಸಣ್ಣ ಕಥೆಗಳನ್ನು ರಚಿಸಿದ್ದಾರೆ. ಕಾರಂತ, ಅನಕೃ ಕುವೆಂಪು, ಅಶ್ವತ್ಥ, ಭಾರತೀಪ್ರಿಯ ಮತ್ತಿತರರು ಒಳ್ಳೆಯ ಸಣ್ಣ ಕಥೆಗಳನ್ನು ಬರೆದಿದ್ದಾರೆ.

ಪ್ರಗತಿಶೀಲ ಚಳುವಳಿ ಕನ್ನಡದಲ್ಲಿ ಆರಂಭವಾದ ಕಾಲದಲ್ಲಿ ಉತ್ತಮ ಸಣ್ಣ ಕಥೆಗಳನ್ನು ಬರೆದವರು ಚದುರಂಗ, ತರಾಸು, ಕಟ್ಟೀಮನಿ, ಪಾಟೀಲ ಪುಟ್ಟಪ್ಪ, ಕೋ. ಚೆನ್ನಬಸಪ್ಪ.

ದೇವೇಂದ್ರಕುಮಾರ ಹಕಾರಿ, 'ಶ್ರೀಪಂಚ', ರಂ. ಶಾ., ಗೀತಾ ಕುಲಕರ್ಣಿ, ಆನಂದಿ ಸದಾಶಿವರಾವ್, ಸರಿತಾ ಕುಸುಮಾಕರ ದೇಸಾಯಿ, ಬಾಗಲೋಡಿ ದೇವರಾವ್, 'ರಂಜನ' ಭಟ್ಟ, ಸೇವ ನಮಿರಾಜ ಮಲ್ಲ, ವರದರಾಜ ಹುಯಿಲಗೋಳ, ಮಾವಿನಕೆರೆ ರಂಗನಾಥ್, ವಿಶುಕುಮಾರ್, ಜಯತೀರ್ಥ ರಾಜಪುರೋಹಿತ —ಇವರೆಲ್ಲ ಸಣ್ಣ ಕಥೆ ನೀಳ್ಗತೆ ಕ್ಷೇತ್ರದ ಪ್ರಮುಖರು.



ಕೋ. ಚೆನ್ನಬಸಪ್ಪ



ಪಾಟೀಲ ಪುಟ್ಟಪ್ಪ

ಯು. ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಪೂ. ಚಂ. ತೇ.. ಸದಾಶಿವ, ಲಂಕೇಶ್ –ಇವರದು ನವ್ಯಶೈಲಿಯ ಕಥನ.

ಒಮ್ಮೊಮ್ಮೆ ಬರೆಹ ಸುಸ್ಪಷ್ಟ ಕಥೆಯಾಗದೆ ಪ್ರಬಂಧರೂಪದ ಕಥಾಚಿತ್ರವಾಗಬಹುದು. ಇಂಥ ಬರೆಹಗಳ ಕ್ಷೇತ್ರದಲ್ಲಿ ದುಡಿದವರು. ಅ. ರಾ. ಮಿತ್ರ, ಅ. ರಾ. ಸೇ., ಕೇಫ. ಬುಳ್ಳ. ಎಸ್. ಎಸ್. ಗದಗಕರ್, ಟಿ. ಸುನಂದಮ್ಮ, ಇಂದಿರಾ ರಾಜಶೇಖರ್ ಮತ್ತಿತರರು.

ವಿಚಾರಪೂರ್ಣ ಕಥೆಗಳ ರಚನೆಯಲ್ಲಿ ರಾ. ಶಿ. ನಿಷ್ಣಾತರರು.

**ನೋಡಿ :** ಕನ್ನಡ ಸಾಹಿತ್ಯ

## ಸಮಷ್ಟಿಪರಿಣಾಮ ಕಲೆ

ಪ್ರಕೃತಿಯ ದೃಶ್ಯಗಳಿಗೆ ಪಟ್ಟಕ ಹಿಡಿದಂತೆ ಸಮಷ್ಟಿಪರಿಣಾಮ ಕಲೆ— ಎನ್ನುತ್ತಾರೆ. ಏಕೆಂದರೆ ಕಳೆದ ಶತಮಾನದ ಉತ್ತರಾರ್ಧದಲ್ಲಿ ಈ ಕಲಾಪಂಥ ಆರಂಭವಾದಾಗ ಅದರ ಕಲಾವಿದರು ಬಳಸಿದ ಬಣ್ಣಗಳ ಸಂಖ್ಯೆ ಪಟ್ಟಕದಲ್ಲಿ ಕಂಡುಬರುವ ಮೂಲವರ್ಣಗಳಷ್ಟು. ಪ್ರಕೃತಿಯಲ್ಲಿ ಇಂಥ ವಸ್ತುವಿದೆ ಎಂದು ತೋರಿಸುವುದಕ್ಕಿಂತ, ಒಂದು ದೃಶ್ಯವನ್ನು ನೋಡಿದಾಗ ಅದು ತನಗೆ ಹೇಗೆ ಭಾಸವಾಯಿತು ಎಂಬುದನ್ನು ಚಿತ್ರಿಸುವುದೇ ಸಮಷ್ಟಿಪರಿಣಾಮ ಪದ್ಧತಿ. ಇದರಿಂದ ಕಲೆ ಕ್ಷಣಭಂಗುರವಾದ ನೋಟವನ್ನು ಚಿತ್ರಿಸುವ ಕಲೆಯಾಯಿತು. ಸೂರ್ಯೋದಯ ಅಥವಾ ಸೂರ್ಯಾಸ್ತ, ಕ್ಷಣಕ್ಷಣಕ್ಕೆ ಬಣ್ಣಗಳು ಬದಲಾಗುತ್ತ ಇಡೀ ವಾತಾವರಣದ ಭಾವವೇ ಬದಲಾಗುವಂತೆ ತೋರುವ ಕಾಲ. ಹೀಗೆ ಒಂದೇ ಸಮನೆ ಬದಲಾಗುತ್ತಲೇ ಇರುವ ಸೊಬಗಿನ ದೃಶ್ಯಗಳನ್ನು ತನ್ನ ಚಿತ್ರದಲ್ಲಿ ಸೆರೆಹಿಡಿಯಲು ಪ್ರಯತ್ನಿಸಿದವರು ಈ ಪದ್ಧತಿಯ ಚಿತ್ರಕಾರರು. ವಾಸ್ತವವಾದಿ ಪದ್ಧತಿಯ ಚಿತ್ರಗಳಿಗೂ ಈ ಪದ್ಧತಿಯ ಚಿತ್ರಗಳಿಗೂ ವ್ಯತ್ಯಾಸವಿದೆ. ವಾಸ್ತವವಾದಿ ಚಿತ್ರಗಳಲ್ಲಿ ಕಂಡುಬರುವಷ್ಟು ವಿವರಗಳು ಇಲ್ಲಿ ಕಂಡುಬರುವುದಿಲ್ಲ. ಒಂದು ಕ್ಷಣದ ಭಾವವನ್ನು ಮಾತ್ರ ಸೆರೆಹಿಡಿಯುವ ಪ್ರಯತ್ನದಲ್ಲಿ ವಿವರಗಳಿಗೆ ಅವಕಾಶವಿಲ್ಲ.

ಸಮಷ್ಟಿವಾದದ ಈ ಆಂದೋಲನ ಸಂಗೀತ. ಸಾಹಿತ್ಯರಂಗಗಳಲ್ಲಿಯೂ ಕೆಲವು ಬದಲಾವಣೆಗಳನ್ನು ಉಂಟುಮಾಡಿತು. ಆದರೂ ದೃಶ್ಯರೂಪಕ್ಕೆ ನಿಕಟವಾದ ಈ ಶೈಲಿಯ ಪ್ರಭಾವ ಹೆಚ್ಚಾಗಿ ಕಂಡುಬಂದದ್ದು ಚಿತ್ರಕಲೆಯಲ್ಲಿ.

1874ರಲ್ಲಿ ಒಂದು ಕಲಾಪ್ರದರ್ಶನ ಪ್ಯಾರಿಸಿನಲ್ಲಿ ನಡೆಯಿತು. ಇದರಲ್ಲಿ ಪಿಸಾರೊ, ಸಿಸ್ಲಿ, ದಗಾ, ರೆನ್ವಾ ಇವರ ಕೃತಿಗಳಿದ್ದುವು. ಮೊನೆ 1872ರಲ್ಲಿ ಬರೆದ 'ಸಮಷ್ಟಿಪರಿಣಾಮ: ಸೂರ್ಯೋದಯ' ಎಂಬ ಶೀರ್ಷಿಕೆಯಿಂದ, ಸಮಷ್ಟಿಪರಿಣಾಮವಾದಿಗಳು ಎಂಬ ಹೆಸರು ಈ ಕಲಾವಿದರಿಗೆ ಬಂತು.

ಬೆಳಕು ಬಿದ್ದಾಗಲೆಲ್ಲ ನೋಟ ಹೇಗೆ ಕಾಣಿಸುತ್ತದೆ? ಇದನ್ನು ಯಥಾವತ್ತಾಗಿ ಮೂಡಿಸುವ ಬಣ್ಣಗಳಾವುವು? ಎಂಬುವು ಇವರ ಚಿತ್ರ ರಚನೆಗೆ ಸಂಬಂಧಿಸಿದ ಮುಖ್ಯಾಂಶಗಳು. ಸಮಷ್ಟಿ ಪರಿಣಾಮವಾದಿಗಳಾದ ಚಿತ್ರಕಾರರು ಆರಿಸಿದ್ದು ತಿಳಿಛಾಯೆಯ ಬಣ್ಣಗಳನ್ನು. ಅದಕ್ಕೆ ಮೊದಲು ಚಿತ್ರರಚನೆಯ ಬಳಕೆಯಲ್ಲಿದ್ದ ಕಡುಕಂದು, ಕಪ್ಪು ಬಣ್ಣಗಳನ್ನು ಅವರು ಕೈಬಿಟ್ಟರು. ನೇರಳೆ ಬಣ್ಣವನ್ನು ಸೃಷ್ಟಿಸುವುದಕ್ಕಾಗಿ ಕೆಂಪು ಹಾಗೂ ನೀಲಿಯನ್ನು ಬೆರೆಸಿ ಬಳಿಯುವ ಬದಲು ಕ್ಯಾನ್‌ವಾಸಿನ ಮೇಲೆ ಈ ಎರಡು ಶುದ್ಧ ಬಣ್ಣಗಳನ್ನು ಪಕ್ಕಪಕ್ಕದಲ್ಲಿ ಬಳೆದು ನೇರಳೆಯ ಬಣ್ಣದ ಭಾವವನ್ನು ಪ್ರಚೋದಿಸುತ್ತಿದ್ದರು. ದೂರದಿಂದ ನೋಡುವವರಿಗೆ ಇವೆರಡೂ ಮಿಳಿತವಾದಂತೆ ಕಂಡುಬರುತ್ತಿತ್ತು. ಹೀಗೆ ಬಣ್ಣದ ಸಮಷ್ಟಿಪರಿಣಾಮ ಉಂಟುಮಾಡುವುದಕ್ಕೆ ಭಿನ್ನವಿಧಾನವೆಂದು ಹೆಸರು. ಇನ್ನೊಂದು ವಿಧಾನ, ಅತ್ಯಂತ ಸುವ್ಯವಸ್ಥಿತವಾಗಿ ಚುಕ್ಕಿಗಳನ್ನಿಟ್ಟು ಬೆಳಕು ನೆಳಲುಗಳ ಪರಿಣಾಮ ಮೂಡಿಸುವುದು. ಇಲ್ಲಿಯೂ ಚಿತ್ರಕಾರ ಬಣ್ಣಗಳನ್ನು ಬೆರೆಸದೆ, ಶುದ್ಧ ಬಣ್ಣಗಳ ಚುಕ್ಕಿಗಳನ್ನೇ ಸೂಕ್ತ ರೀತಿಯಲ್ಲಿ ಬಳಸಿ ಒಟ್ಟಿನ ಪರಿಣಾಮ ಬರಿಸುತ್ತಾನೆ.

ಸಾಂಪ್ರದಾಯಿಕ ಕಲೆಗೆ ಒಗ್ಗಿದ ಜನರು ಸಮಷ್ಟಿಪರಿಣಾಮ ಚಿತ್ರಕಾರರ ಚಿತ್ರಗಳನ್ನು ಅಸಡ್ಡೆಯ ಅಪೂರ್ಣ ಕೃತಿಗಳೆಂದು ಪರಿಗಣಿಸಿದ್ದೂ ಉಂಟು.

ಹೊರಾಂಗಣದಲ್ಲೇ ಕೆಲಸ ಮಾಡುವುದು ಇವರ ರೀತಿ. ಏಕೆಂದರೆ ಒಂದೇ ನೋಟ ಬೆಳಕಿನ ವಿವಿಧ ಸ್ಥಿತಿಗಳಲ್ಲಿ ಬೇರೆ ಬೇರೆ ಬಗೆಯಾಗಿ ಕಾಣುತ್ತದೆ. ಎಂದು ಇವರು ಮನಗಂಡಿದ್ದರು. ಒಂದೇ ದೃಶ್ಯ ಬೇರೆ ಬೇರೆ ರೀತಿಯ ಬೆಳಕಿನ ಪರಿಮಾಣ ಹಾಗೂ ಪರಿಣಾಮಗಳಿಗೆ ಒಳಗಾದಾಗ ಬೇರೆ ಬೇರೆ ಚಿತ್ರವಾಗಿ ರೂಪಿಸುವುದು ಸಮಷ್ಟಿಪರಿಣಾಮ ಕಲೆಯ ವೈಶಿಷ್ಟ್ಯ. ಇದರಿಂದ ತಾವು ಚಿತ್ರಿಸುವ ಪದಾರ್ಥ ಯಾವುದು ಎಂಬುದಕ್ಕಿಂತ, ಅದರ ಮೇಲೆ ಬಿದ್ದ ಬೆಳಕಿನ ಪರಿಣಾಮ ಎಂಥದು ಎನ್ನುವುದು ಅವರಿಗೆ ಮುಖ್ಯವಾಯಿತು. ಹೀಗೆ ಒಂದೊಂದು ಸನ್ನಿವೇಶದಲ್ಲಿ ಒಬ್ಬೊಬ್ಬರಿಗೆ ಭಾಸವಾದ ಪರಿಣಾಮ ಮೂಡಿಸುವುದರಿಂದ ಸಮಷ್ಟಿಪರಿಣಾಮವಾದಿ ಚಿತ್ರಗಳಲ್ಲಿ ವೈಯಕ್ತಿಕ ವ್ಯತ್ಯಾಸಗಳು ಬಹಳ.

ಸಮಷ್ಟಿಪರಿಣಾಮ ಪದ್ಧತಿಯ ಕಲಾವಿದರು ಬೆಳಕಿನ ಬೆನ್ನು ಹತ್ತಿದರು. ಇದರಿಂದ ಕಣ್ಸೆಳೆಯುವ ವರ್ಣಮಯವಾದ, ಕಾಂತಿಯುಕ್ತ ಚಿತ್ರಗಳನ್ನೇನೋ ರಚಿಸಿದರು, ನಿಜ. ಆದರೆ ಅವರ ಆ ಶ್ರೇಷ್ಠ ಚಿತ್ರಗಳಲ್ಲಿಯೂ ಸತ್ವ ಸಾಲದೇನೋ ಎಂಬ ಒಂದು ಭಾವನೆ, ವಸ್ತು ನಿರೂಪಣೆ ಬಹಳ ಲಘುವಾಯಿತೇನೋ ಎಂಬ ಸಂದೇಹ ಮೂಡಿತು.

20ನೆಯ ಶತಮಾನದ ವೇಳೆಗೆ ಸಮಷ್ಟಿಪರಿಣಾಮ ಪಂಥ ಕ್ಷೀಣಿಸತೊಡಗಿತು.

ಸಂಗೀತದಲ್ಲಿ ಕೂಡ ಈ ಶೈಲಿಯು ಸ್ವಲ್ಪಮಟ್ಟಿಗೆ ಪ್ರಭಾವ ಬೀರಿತು. ತಂತೀವಾದ್ಯ ಚತುಷ್ಟಯಕ್ಕಾಗಿ ಕ್ಲಾಡ್ ಡಿಬುಸ್ಸಿ ಅಳವಡಿಸಿದ ಸಂಗೀತಕ್ಕೆ 1894ರಲ್ಲಿ ಸಮಷ್ಟಿಪರಿಣಾಮ ಸಂಗೀತ ಎಂಬ ಹೆಸರು ಬಂದಿತು. ವ್ಯವಸ್ಥಿತವಾಗಿ ಬೆಳೆಸಿಕೊಂಡು ಹೋಗುವುದರ ಬದಲು ಕೇಳುಗನೊಬ್ಬನ

ಮನಸ್ಸಿನಲ್ಲಿ ಯಾವುದೇ ಒಂದು ಸಂಗೀತ ಮಾಧುರ್ಯ ಒಂದು ಘಳಿಗೆಯಲ್ಲಿ ಯಾವ ಪರಿಣಾಮ ಉಂಟುಮಾಡುತ್ತದೆ ಎಂಬುದು ಇಲ್ಲಿ ಮುಖ್ಯ.

ನೋಡಿ : ಕ್ಲಾಡ್ ಮೊನೆ ; ದಗಾ ; ರೆನ್ವಾ

## ಸರ್ವಜ್ಞ

"ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ
ಪರ್ವತವೆ ಆದ ಸರ್ವಜ್ಞ"

ಅಗಾಧ ಪಾಂಡಿತ್ಯ, ಅಪಾರ ಜೀವನಾನುಭವ, ಬಲು ತೀಕ್ಷ್ಣವಾದ–ಆದರೆ ಅತಿ ಸರಳವಾದ ಭಾಷೆ, ಜಾನಪದ ಸತ್ವ, ಸಮಾಜದ ಮೂಢ ನಂಬಿಕೆಗಳನ್ನು ಕಟುವಾಗಿ ಟೀಕಿಸುವ ಪ್ರಾಮಾಣಿಕತೆ –ಇವುಗಳನ್ನೊಳಗೊಂಡ ಸರ್ವಜ್ಞನ ತ್ರಿಪದಿಗಳು ಕನ್ನಡದ ಅತ್ಯಂತ ಜನಪ್ರಿಯ ವಚನಗಳಾಗಿವೆ. ತಮಿಳಿನ ತಿರುವಳ್ಳುವರ್, ತೆಲುಗಿನ ವೇಮನರಂತೆ ಕನ್ನಡದಲ್ಲಿ ಸರ್ವಜ್ಞನ ಸ್ಥಾನ ವಿಶಿಷ್ಟವಾದದ್ದು. ಇವನ ಕಾಲ ಸುಮಾರು 18ನೆಯ ಶತಮಾನ.

ಸರ್ವಜ್ಞನ ಜನನ—ಜೀವನಗಳ ಬಗೆಗೆ ವಿವರಗಳು ದೊರೆತಿಲ್ಲ. ಅವನ ವಚನಗಳಿಂದಲೇ ತಿಳಿದು ಬರುವಂತೆ, ಧಾರವಾಡ ಜಿಲ್ಲೆಯ ಮಾಸೂರು ಗ್ರಾಮದಲ್ಲಿ ಬಸವರಸ ಎಂಬವನಿದ್ದ. ಇವನು ಪುತ್ರಾಕಾಂಕ್ಷಿಯಾಗಿ ಕಾಶಿಗೆ ಹೋಗಿ ವಾಪಸು ಬರುತ್ತಿದ್ದಾಗ ಅಂಬಲೂರು ಎಂಬಲ್ಲಿ ಕುಂಬಾರ ಕನ್ಯೆ ಮಾಳಿ ಎಂಬವಳ ಜೊತೆಯಲ್ಲಿ ಕೊಂಚ ಕಾಲವಿದ್ದ. ಇವಳಿಗೆ ಮುಂದೆ ಗಂಡು ಮಗುವಾಯಿತು. ಇವನೇ ಮುಂದೆ ಬೆಳೆದು 'ಸರ್ವಜ್ಞ'ನಾದ. ಆದರೆ ಸರ್ವಜ್ಞನಿಗೆ ತಾಯಿ ತಂದೆ ಎಂಬ ಮೋಹವಿಲ್ಲ. ಅವನೇ ಹೇಳುತ್ತಾನೆ—

"ಮಾಳನೂ ಮಾಳಿಯೂ ಕೂಳಿತ್ತ ಹೆಮ್ಮೆಯಲಿ
ಕೇಳಲೆನ್ನಾರ ಮಗನೆಂದು ನಾ ಶಿವನ
ಮೇಳದವನೆಂದೆ ಸರ್ವಜ್ಞ".

ಸರ್ವಜ್ಞ ಮನೆಬಿಟ್ಟು ಲೋಕಸಂಚಾರಮಾಡಿ ಜೀವನಾನುಭವ ಗಳಿಸಿಕೊಂಡ. 'ಕಂಡುದನು ನುಡಿದ'.

ಇವನು ಕ್ರಿ. ಶ. 16ನೆಯ ಶತಮಾನದ ಉತ್ತರಾರ್ಧದಲ್ಲಿ ಇದ್ದಿರಬಹುದೆಂದು ಅನೇಕ ವಿದ್ವಾಂಸರ ಅಭಿಮತ. "ಸರ್ವಜ್ಞನ ಜಾತಿ—ಮಾನವ ಜಾತಿ, ಅವನ ಮತ—ದೇವ ಮತ, ಅವನ ಕಾಲ—ಸರ್ವಕಾಲ", ಎಂದಿದ್ದಾರೆ ಬೇಂದ್ರೆಯವರು.

ಸರ್ವಜ್ಞನ ಪದ್ಯಗಳು ತ್ರಿಪದಿಗಳಾದರೂ ಅವುಗಳನ್ನು ವಚನಗಳೆಂದು ಕರೆಯುವುದು ವಾಡಿಕೆ. ಚೆನ್ನಪ್ಪ ಉತ್ತಂಗಿ ಅವರ 'ಸರ್ವಜ್ಞನ ವಚನಗಳು' ಸಂಕಲನದಲ್ಲಿ 2100 ಪದ್ಯಗಳಿವೆ.

ಸರ್ವಜ್ಞ ಯಾವುದಕ್ಕೂ ಹೆದರಿದವನಲ್ಲ. ತಾನು ಕಂಡ ಸಮಾಜದ ಹುಳುಕುಗಳನ್ನು ನಿರ್ಭಯವಾಗಿ ಟೀಕಿಸಿದ. ಜಾತಿಕುಲಗಳನ್ನು ಖಂಡಿಸಿ ಸರ್ವಜ್ಞ ಹೀಗೆ ನುಡಿದಿದ್ದಾನೆ :

"ಕುಲವಿಲ್ಲ ಯೋಗಿಗೆ ಛಲವಿಲ್ಲ ಜ್ಞಾನಿಗೆ
ತೊಲೆ ಕಂಬವಿಲ್ಲ ಗಗನಕ್ಕೆ, ಸ್ವರ್ಗದಲಿ
ಹೊಲಗೇರಿಯಿಲ್ಲ ಸರ್ವಜ್ಞ"

ಮೂರ್ಖನ ಲಕ್ಷಣವನ್ನು ಸೊಗಸಾಗಿ ಮೂರೇ ಸಾಲಲ್ಲಿ ಹೇಳಿದ್ದಾನೆ :

"ಮೂರ್ಖಂಗೆ ಬುದ್ಧಿಯನು ನೂರ್ಕಾಲ ಪೇಳಿದರೆ
ಗೋರ್ಕಲ್ಲ ಮೇಲೆ ಮಳೆ ಹುಯಿದರಾ ಕಲ್ಲು
ಹೀರ್ಕೊಂಬುದುಂಟೆ ಸರ್ವಜ್ಞ"

ಅನುಭವವಿಲ್ಲದೆ ಒಳಪಾಂಡಿತ್ಯದಿಂದ ಮೆರೆಯುತ್ತಿದ್ದವರನ್ನು ಕಂಡು ಹೀಗೆ ಅಂದಿದ್ದಾನೆ :

"ವೇದವೇ ಹಿರಿದೆಂದು ವಾದವನು ಮಾಡುವಿರಿ
ವೇದದಲೇನು ಅರಿದಿಹುದು? ಅನುಭವಿಯ
ವೇದವೇ ವೇದ ಸರ್ವಜ್ಞ"

"ಬ್ರಹ್ಮನನ್ನು ಕಂಡಿದ್ದೇವೆ" ಎಂದು ಹೇಳಿಕೊಂಡು ಡಂಭಾಚಾರ ನಡೆಸುವವರನ್ನು ಕಂಡರೆ ಇವನಿಗಾಗದು.

'ಬೊಮ್ಮವನು ಅರಿದಿಹರೆ ಸುಮ್ಮನಿದ್ದಿರಬೇಕು
ಬೊಮ್ಮವನು ಅರಿದು ಉಸುರಿದರೆ ಕಳೆಹೋಗಿ
ಕೆಮ್ಮಿ ಸತ್ತಂತೆ ಸರ್ವಜ್ಞ.'

ಕನ್ನಡದ ಬಗೆಗೆ ಸರ್ವಜ್ಞನ ಅಭಿಮಾನ ಅಪಾರ : "ತನ್ನ ಸಿರಿಯನು ತಾನು ಕನ್ನಡಿಯು ಕಾಂಬುದೇ?" ಎನ್ನುತ್ತಾನೆ. ಕನ್ನಡ 'ಕನ್ನಡಿಯ' ಹಾಗೆ, ಅದಕ್ಕೆ ತನ್ನ ಸಿರಿಯ ಅರಿವೇ ತನಗಿಲ್ಲ.

ರೈತರ ನಾಡಾದ ಭಾರತದಲ್ಲಿ "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು" ಎನ್ನುತ್ತಾನೆ ಸರ್ವಜ್ಞ.

ಸರ್ವಜ್ಞ ಹೇಳದ ವಿಷಯವಿಲ್ಲ. ಹೆಣ್ಣು, ಹೊನ್ನು, ಮಣ್ಣು, ಓದು, ನಕ್ಷತ್ರ ಫಲ, ಭಾಷೆ, ಜಾತಿ, ದೇಶ, ವೈದ್ಯ, ಒಗಟುಗಳು—ಹೀಗೆ ಅವನ ವಸ್ತು ವೈವಿಧ್ಯ ಅಪಾರವಾದದ್ದು.

ಎಲ್ಲ ದೃಷ್ಟಿಯಿಂದಲೂ 'ಸರ್ವಜ್ಞ' ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡ ಕವಿ ಇವನು.

## ಸರ್ವಾಂಟಿಸ್

ಮಧ್ಯ ಸ್ಪೇನಿನ ಲಾ ಮಂಚಾ ಪ್ರದೇಶವೊಂದು ವಿಶಾಲವಾದ ಮರುಭೂಮಿ. ವಿರಳವಾಗಿ ಬೆಳೆದ ಕುರುಚಲು ಗಿಡಗಳು, ಅಲ್ಲೊಂದು ಇಲ್ಲೊಂದು ಕಂಡುಬರುವ ಮುರುಕಲು ಗಾಳಿ ಗಿರಣಿಗಳನ್ನು ಬಿಟ್ಟರೆ ಬೇರೇನೂ ಅಲ್ಲಿ ಇಲ್ಲ.

ಆದರೆ 17ನೆಯ ಶತಮಾನದ 'ದಾನ್ ಕ್ವಿವೊತ್' ಕಥೆಯನ್ನು ಓದಿ ಸ್ಫೂರ್ತಿ ಪಡೆದವರು ಇದು ಒಂದು ಯಾತ್ರಾಸ್ಥಳವೋ ಎಂಬಂತೆ ಇಲ್ಲಿಗೆ ಬಂದು ಸೇರುತ್ತಾರೆ.

'ದಾನ್‌ಕ್ವಿವೊತ್' ಸೃಷ್ಟಿಕರ್ತ ಮೈಗೆಲ್ ಸರ್ವಾಂಟಿಸ್ ಸಾವೇದ್ರಾನ ಹುಟ್ಟೂರು ಅಕಾಲಾ ದ ಹನಾರಸ್ ಇರುವುದು ಇದೇ ಪ್ರದೇಶದಲ್ಲಿ.

ಸ್ಪೇನಿನ ಸಾಹಿತ್ಯದಲ್ಲೂ-ಲೋಕಸಾಹಿತ್ಯದಲ್ಲೂ-ಸರ್ವಾಂಟಿಸ್ ಚಿರಂಜೀವಿ.

ಆತ ಹುಟ್ಟಿದ್ದು 1547ರಲ್ಲಿ. ತಂದೆ ಬಡ ವೈದ್ಯ. ಅವನ ಬಳಿಗೆ ಚಿಕಿತ್ಸೆಗೆ ಬರುತ್ತಿದ್ದ ರೋಗಿಗಳು ಕಡಮೆ. ಕೊನೆಗೊಮ್ಮೆ ವಿಪರೀತ ಸಾಲಕ್ಕೆ ಸಿಕ್ಕಿಬಿದ್ದು ಅದನ್ನು ತೀರಿಸಲಾಗದೆ ಆತ ಸೆರೆಮನೆ ಸೇರಬೇಕಾಯಿತು. ಮಗ ಸರ್ವಾಂಟಿಸ್ ಹಾಗೂ ಹೀಗೂ ವಿದ್ಯಾಭ್ಯಾಸ ಮಾಡಿದ. ಚಿಕ್ಕ ಪುಟ್ಟ ಪದ್ಯಗಳನ್ನು ಬರೆಯುವುದು ಅವನ ಹವ್ಯಾಸವಾಗಿತ್ತು. 22ನೆಯ ವಯಸ್ಸಿನಲ್ಲಿ ಮನೆಬಿಟ್ಟು ಹೊರಟ ಸರ್ವಾಂಟಿಸ್ ರೋಮ್ ನಗರದಲ್ಲಿ ಒಬ್ಬ ಧರ್ಮಗುರುವಿನ ಸೇವಕನಾದ.

ಆ ಸಮಯದಲ್ಲಿ ಇಟಲಿಯಲ್ಲಿ ಸ್ಪೇನಿನ ಒಂದು ದೊಡ್ಡ ಕಾವಲು ಪಡೆ ಇತ್ತು. ಆ ಪಡೆಯ ಸೈನಿಕರ ಬಣ್ಣಬಣ್ಣದ ಉಡುಪಿನಿಂದ ಆಕರ್ಷಿತನಾದ ಸರ್ವಾಂಟಿಸ್ ಆ ಪಡೆಯನ್ನು ಸೇರಿಕೊಂಡ. ಅವನಿಗೆ ಹೊತ್ತು ಹೊತ್ತಿಗೆ ಹೊಟ್ಟೆತುಂಬ ಊಟ ಸಿಗತೊಡಗಿತು.

ಕ್ರೈಸ್ತಮತವನ್ನು ಹೇಳಹೆಸರಿಲ್ಲದಂತೆ ಮಾಡಲು ಶಪಥ ತೊಟ್ಟಿದ್ದ ತುರ್ಕಿಯ ಸುಲ್ತಾನ, ಇಟಲಿಯ ಮೇಲೆ ದಾಳಿ ನಡೆಸಲು 1571ರಲ್ಲಿ ಒಂದು ದೊಡ್ಡ ನೌಕಾಪಡೆಯನ್ನು ಕಳುಹಿಸಿದ. ತುರ್ಕಿಯ ನೌಕಾಪಡೆಯನ್ನು ಎದುರಿಸಲು ಇಟಲಿ ಮತ್ತು ಸ್ಪೇನಿನ ಯುದ್ಧ ನೌಕೆಗಳು ಹೊರಟುವು. ಇಂಥ ಒಂದು ಹಡಗಿನಲ್ಲಿ ಸರ್ವಾಂಟಿಸನೂ ಇದ್ದ.

ಈ ಯುದ್ಧದಲ್ಲಿ 8,000 ಕ್ರಿಶ್ಚಿಯನರೂ 25,000 ತುರುಕರೂ ಮಡಿದರು. ಅನೇಕ ಹಡಗುಗಳು ಜಲಸಮಾಧಿಯಾದುವು. ಮಲೇರಿಯ ಜ್ವರದಿಂದ ನರಳುತ್ತಿದ್ದರೂ ಸುಮ್ಮನಿರಲು ಒಪ್ಪದೆ ಸರ್ವಾಂಟಿಸ್ ಕದನಕ್ಕೆ ಇಳಿದ. ಎರಡು ಗುಂಡುಗಳು ಇವನ ಎದೆಗೆ ತಾಕಿದುವು. ಮೂರನೆಯದು ಎಡಗೈಗೆ ಬಡಿಯಿತು. ಆದರೂ ಅವನ ಪ್ರಾಣಕ್ಕೆ ಅಪಾಯವಾಗಲಿಲ್ಲ. ಯುದ್ಧದಲ್ಲಿ ಸರ್ವಾಂಟಿಸನ ಕಡೆಯವರಿಗೆ ಜಯವಾದಾಗ ವಿಜಯೋತ್ಸಾಹದಿಂದ ತನ್ನ ಶೌರ್ಯವನ್ನು ಹೊಗಳಿ ಸೇನಾಧಿಪತಿ ಬರೆದ, ಶಿಫಾರಸು ಪತ್ರವನ್ನು ಜೇಬಿನಲ್ಲಿಟ್ಟುಕೊಂಡು ಈತ ತನ್ನ ಅಣ್ಣನೊಡನೆ ತಾಯ್ನಾಡಿಗೆ ಹೊರಟ.



'ದಾನ್ ಕ್ವಿವೊತ್' : ಸರ್ವಾಂಟಿಸ್

ಆದರೆ ಸರ್ವಾಂಟಿಸನ ಪಾಲಿಗೆ ದುರದೃಷ್ಟವೇ ಕಾದಿತ್ತು. ಸರ್ವಾಂಟಿಸ್ ಪ್ರಯಾಣಮಾಡುತ್ತಿದ್ದ ಹಡಗು ಕಡಲುಗಳ್ಳರ ವಶವಾಯಿತು. ಸರ್ವಾಂಟಿಸನೂ ಅವನ ಅಣ್ಣನೂ ಸೆರೆ ಸಿಕ್ಕಿದರು. ಅವರನ್ನು ಬಿಟ್ಟುಕೊಡಲು ಭಾರೀ ಮೊತ್ತದ ಬಿಡುಗಡೆ ದಂಡ ಕೊಡಬೇಕು ಎಂದರು. ಕಡಲುಗಳ್ಳರು. ಇಬ್ಬರನ್ನೂ ಬಿಡಿಸಿಕೊಳ್ಳಲು ಬೇಕಾದಷ್ಟು ಹಣ ಸರ್ವಾಂಟಿಸನ ಕುಟುಂಬದವರಲ್ಲಿ ಇರಲಿಲ್ಲ. ಅಣ್ಣನಿಗೆ ಮಾತ್ರ ಬಿಡುಗಡೆ ಸಿಕ್ಕಿತು. ಸರ್ವಾಂಟಿಸ್ ಐದು ವರ್ಷ ಕಾಲ ಆಲ್ಜಿಯರ್ಸ್‌ನಲ್ಲಿ ಗುಲಾಮನಾಗಿ ದುಡಿಯಬೇಕಾಯಿತು. ಅಲ್ಲಿಂದ ತಪ್ಪಿಸಿಕೊಂಡು ಓಡಿಬರಲು ಅವನು ಅನೇಕ ಪ್ರಯತ್ನಗಳನ್ನು ನಡೆಸಿದನಾದರೂ ಒಂದೂ ಫಲಕಾರಿಯಾಗಲಿಲ್ಲ.

1580ರಲ್ಲಿ ಮೂವತ್ತಮೂರು ವಯಸ್ಸಿನ ಸರ್ವಾಂಟಿಸ್ ಸ್ಪೇನಿಗೆ ಬಂದು ಇಳಿದಾಗ, ಅವನನ್ನು ಕೇಳುವವರೇ ಇರಲಿಲ್ಲ. ಬರೆವಣಿಗೆಯಲ್ಲಿ ಒಂದು ಕೈನೋಡೋಣ ಎಂದು ಆತ ಕಾದಂಬರಿಯೊಂದನ್ನು ಬರೆದ. ಜನ ಇದನ್ನು ಅಷ್ಟಾಗಿ ಗಮನಿಸಲಿಲ್ಲ. ನಾಟಕಗಳನ್ನು ಬರೆಯಲು ಆರಂಭಿಸಿದ. ಅವನ್ನು ಯಾರೂ ಕೊಳ್ಳಲಿಲ್ಲ. ಸರ್ವಾಂಟಿಸ್ ನಿರಾಶೆಯಿಂದ ಬರೆಯುವ ಹಂಬಲವನ್ನೇ ಬಿಟ್ಟು, ಸರಕಾರೀ ಉದ್ಯೋಗಕ್ಕೆ ಪ್ರಯತ್ನಿಸಿದ. ತೆರಿಗೆ ವಸೂಲಿ ಮಾಡುವ ಕೆಲಸ ಸಿಕ್ಕಿತು.

ಹಣದ ಲೆಕ್ಕಾಚಾರವೆಂದರೆ ಸರ್ವಾಂಟಿಸನಿಗೆ ಭಾರಿ ತಲೆನೋವು. ಲೆಕ್ಕಪತ್ರಗಳಲ್ಲಿ ಹೆಚ್ಚು ಕಡಮೆಯಾಗಿ ಸರ್ವಾಂಟಿಸ್ ಸೆರೆಮನೆ ಕಾಣಬೇಕಾಯಿತು. ಮತ್ತೊಮ್ಮೆ, ವಸೂಲಿಮಾಡಿದ ತೆರಿಗೆಯ ದೊಡ್ಡ ಮೊತ್ತವನ್ನು ತನ್ನೊಡನೆ ಇಟ್ಟುಕೊಳ್ಳಲು ಹೆದರಿ ಸರ್ವಾಂಟಿಸ್ ಅದನ್ನು ಜೋಪಾನವಾಗಿಡಲು ಬ್ಯಾಂಕರನೊಬ್ಬನ ಕೈಗೆ ಕೊಟ್ಟ. ಆ ಬ್ಯಾಂಕರ್ ದಿವಾಳಿಯಾದ್ದರಿಂದ ಸರ್ವಾಂಟಿಸನಿಗೆ ಮತ್ತೆ ಸೆರೆಮನೆವಾಸ ಲಭಿಸಿತು.

ಬಿಡುಗಡೆಯಾಗಿ ಹೊರಬಂದ ಸರ್ವಾಂಟಿಸ್ ಬೇರೆ ವ್ಯಕ್ತಿಯೇ ಆಗಿದ್ದ. ಅವನ ಮನಸ್ಸು ಅನುಭವದಿಂದ ಪಕ್ವವಾಗಿತ್ತು. ಶೌರ್ಯ ಸಾಹಸಗಳ ಬಗೆಗೆ ಅವನಿಗಿದ್ದ ಭ್ರಮೆ ಮಾಯವಾಗಿತ್ತು. ಹೊಸದೊಂದು ಕಥಾವಸ್ತು ಅವನ ಮನಸ್ಸಿನಲ್ಲಿ ಮೂಡಿತ್ತು. ಆ ಕೃತಿಯನ್ನು ಸರ್ವಾಂಟಿಸ್ ಬರೆದ. ಅದೇ 'ದಾನ್ ಕ್ವಿವೊತ್'. 1605ರಲ್ಲಿ ಅದು ಪ್ರಕಟವಾಯಿತು.

'ದಾನ್ ಕ್ವಿವೊತ್'ನ ಜನಪ್ರಿಯತೆ ಸ್ಪೇನಿನ ಮೂಲೆಮೂಲೆಗೂ ಹರಡಿತು. ಇದರ ಮುಂದಿನ ಭಾಗಕ್ಕಾಗಿ ಜನ ಕೇಳತೊಡಗಿದರು. ಸರ್ವಾಂಟಿಸ್ 'ದಾನ್ ಕ್ವಿವೊತ್'ನ ಉತ್ತರಾರ್ಧವನ್ನು ಬರೆಯುತ್ತಿದ್ದಾಗಲೇ ಯಾವನೋ ಚೋರ ಸಾಹಿತಿ ಇದನ್ನು ಬರೆದು ಪ್ರಕಟಿಸಿಯೂ ಬಿಟ್ಟ. ಇದನ್ನು ಕೇಳಿದ ಸರ್ವಾಂಟಿಸ್, ಅವಿಶ್ರಾಂತವಾಗಿ ಬರೆಯುತ್ತ, ಎರಡನೆಯ ಭಾಗವನ್ನು ಮುಗಿಸಿದ. 1615ರಲ್ಲಿ ಇದು ಪ್ರಕಟವಾದಾಗ ಮೊದಲನೆಯ ಭಾಗಕ್ಕಿಂತಲೂ ಉತ್ತಮವಾದದ್ದು ಅನಿಸಿಕೊಂಡಿತು. ಸ್ವಲ್ಪ ಸಮಯದಲ್ಲೇ ನಾಲ್ಕು ಮುದ್ರಣಗಳನ್ನು ಕಂಡಿತು.

ಸರ್ವಾಂಟಿಸನ ಹೆಸರು ಸ್ಪೇನಿನಲ್ಲಿ ಮನೆಮಾತಾದರೂ ಇದರಿಂದ ಅವನಿಗೆ ಹಣ ದೊರಕಲಿಲ್ಲ. 1616ರ ಏಪ್ರಿಲ್ 23ರಂದು ಮಾಡ್ರಿಡ್‌ನಲ್ಲಿ ಈತ ತೀರಿಕೊಂಡ. ಕಾನ್ವೆಂಟಿನ ಸ್ಮಶಾನಭೂಮಿಯಲ್ಲಿ ಅವನನ್ನು ಮಣ್ಣುಮಾಡಿದರು. ಆ ಸ್ಥಳವನ್ನು ಗುರುತಿಸಲು ಅಲ್ಲಿ ಒಂದು ಕಲ್ಲನ್ನು ಕೂಡ ನೆಡಲಿಲ್ಲ.

ನೋಡಿ : 'ದಾನ್ ಕ್ವಿವೊತ್'

## ಸ್ತನಿಸ್ಲಾವ್‌ಸ್ಕಿ

—"ಅಭಿನಯಿಸುವ ಪ್ರತಿಯೊಂದು ಪಾತ್ರದಲ್ಲೂ ನೀನು ನೀನೇ ಆಗಿರು; ಆದರೆ ಪ್ರತಿಯೊಂದು ಪಾತ್ರದಲ್ಲೂ ಭಿನ್ನವಾಗಿರು."

ಎಲ್ಲ ನಟನಟಿಯರೂ ಗಮನಿಸಬೇಕಾದ ಈ ಸೂತ್ರವನ್ನು ಪೋಣಿಸಿದವನು ರಷ್ಯದ ರಂಗಭೂಮಿಯ ಶ್ರೇಷ್ಠತಮ ನಿರ್ದೇಶಕ ಸ್ತನಿಸ್ಲಾವ್‌ಸ್ಕಿ.

ಪುಟ್ಟದೊಂದು ಕಾರಖಾನೆಯ ಒಡೆಯನಾಗಿದ್ದ ಕಾನ್‌ಸ್ಟಾಂಟಿನ್ ಅಲೆಕ್ಸಿಯಿಪಾವ್ ಒಳ್ಳೆಯ ಹವ್ಯಾಸೀ ನಟನೆಂದು ಹೆಸರುಪಡೆದಿದ್ದ. ಆತ ಇರಿಸಿಕೊಂಡ ರಂಗನಾಮ ಸ್ತನಿಸ್ಲಾವ್‌ಸ್ಕಿ. ಇವನ ತಾತ ಗುಲಾಮನಾಗಿದ್ದವನು. 18ನೆಯ ಶತಮಾನದ ಉತ್ತರಾರ್ಧದಲ್ಲಿ ಮುಕ್ತನಾದ ಮೇಲೆ ಆತ ಮಾಸ್ಕೋದಲ್ಲಿ ಕಸೂತಿ ಕಾರಖಾನೆ ಸ್ಥಾಪಿಸಿದ.

ಅಲ್ಲಿ 1863ರ ಜನವರಿ 17ರಂದು ಕಾನ್‌ಸ್ಟಾಂಟಿನ್ ಅಲೆಕ್ಸಿಯಿಪಾವ್ ಜನಿಸಿದ. 4ನೆಯ ವಯಸ್ಸಿನಲ್ಲೇ ಎಳೆಯ ಕಾನ್‌ಸ್ಟಾಂಟಿನ್ ರಂಗದ ಮೇಲೆ ಅಭಿನಯಿಸಿದ. ಮುಂದೆ ಎಪ್ಪತ್ತು ವರ್ಷಗಳ ಕಾಲ ಅವನ ಬದುಕು ರಂಗಭೂಮಿಯೊಡನೆ ಬೆರೆತುಕೊಂಡಿತು.

ಸಾಂಪ್ರದಾಯಿಕ ರಂಗಮಂಟಪಕ್ಕಿಂತ ಭಿನ್ನವಾದ ನೂತನ ರಂಗಭೂಮಿಯನ್ನು—ಮಾಸ್ಕೋ ಆರ್ಟ್ ಥಿಯೇಟರನ್ನು— ಸ್ತನಿಸ್ಲಾವ್‌ಸ್ಕಿ ಮತ್ತು ಆತನ ಮಿತ್ರರು 1898ರ ಅಕ್ಟೋಬರ್ 14ರಂದು ಸ್ಥಾಪಿಸಿದರು. ಅದು ಚೆಕಾಫ್–ಗಾರ್ಕಿಯರು ಹೊಸ ಬಗೆಯ ನಾಟಕಗಳನ್ನು ಬರೆಯುತ್ತಿದ್ದ ಕಾಲ. ಅವುಗಳ ಅಭಿನಯಕ್ಕೆ ಹೊಸ ಶೈಲಿಯ ರಂಗಭೂಮಿ ಅವಶ್ಯವಾಗಿತ್ತು. ಇಂಥ ಸನ್ನಿವೇಶದಲ್ಲಿ ಸ್ತನಿಸ್ಲಾವ್‌ಸ್ಕಿಯ ಮಾರ್ಗದರ್ಶನ ಅಮೂಲ್ಯವೆನಿಸಿತು.

ಸ್ವತಃ ನಟನಾದ ಸ್ತನಿಸ್ಲಾವ್‌ಸ್ಕಿ ಹವ್ಯಾಸೀ ನಟನಟಿಯರಿಗೆ ತರಪೇತು ನೀಡಿದ. ರಂಗದ ಮೇಲೆ ಕೃತ್ರಿಮತೆಯಾಗಲೀ ಅತಿ ಅಭಿನಯವಾಗಲೀ ಸಲ್ಲದು; ರಂಗಭೂಮಿಯು ಸಾಂಘಿಕ ಸೃಷ್ಟಿ; ಉಗ್ರ ಶಿಸ್ತು ಅಗತ್ಯ; ಅಹಮಿಕೆಗೆ ಸ್ಥಾನವಿಲ್ಲ; ನಿಜವಾದ ನಟ ಉದಾರಿಯಾಗಿರಬೇಕು, ದಯಾಶೀಲನೂ ಪ್ರಾಮಾಣಿಕನೂ ವಿಶ್ವಸನೀಯನೂ ಆಗಿರಬೇಕು —ಎಂಬ ಅಂಶಗಳನ್ನು ಸ್ತನಿಸ್ಲಾವ್‌ಸ್ಕಿ ಮನವರಿಕೆಮಾಡಿಕೊಟ್ಟ.



ರಂಗಭೂಮಿ : ಸ್ತನಿಸ್ಲಾವ್‌ಸ್ಕಿ

ಸತತ ಪ್ರಯೋಗಶೀಲನಾಗಿದ್ದ ಸ್ತನಿಸ್ಲಾವ್‌ಸ್ಕಿ ಅಭಿನಯಕ್ಕೆ ಸಂಬಂಧಿಸಿ ಹಲವಾರು ಪ್ರಯೋಗಗಳನ್ನು ಮಾಡಿದ. ಭಾವರಾಗಗಳ ಮೂಲಕ ಒಬ್ಬ ನಟನು ಒಂದು ಪಾತ್ರವಾಗಿ ರೂಪಾಂತರಗೊಳ್ಳುವುದನ್ನು ಸಾಧಿಸಿದ.

ಮಾಸ್ಕೋ ಆರ್ಟ್ ಥಿಯೇಟರ್ ರಷ್ಯದ ರಂಗ ಭೂಮಿಯಲ್ಲಿ ಹೊಸ ದಾಖಲೆಗಳನ್ನು ಸ್ಥಾಪಿಸಿತು. ಮಾಸ್ಕೋ ಕಾರ್ಮಿಕರಿಗಾಗಿ ರಿಯಾಯತಿ ದರದಲ್ಲಿ ಪ್ರದರ್ಶನಗಳನ್ನು ಏರ್ಪಡಿಸಿತು. 1905ರ ಅಕ್ಟೋಬರ್‌ನಲ್ಲಿ ಗಾರ್ಕಿಯ 'ಲೋವರ್ ಡೆಪ್ತ್ಸ್' ನಾಟಕದ ಪ್ರದರ್ಶನದಿಂದ ದೊರೆತ ಹಣವನ್ನು, ಆಗ ಮುಷ್ಕರನಿರತರಾಗಿದ್ದ ಕೆಲಸಗಾರರ ಕುಟುಂಬಗಳಿಗೆ ನೀಡಿತು. (ಮುಂದೆ 1932ರಲ್ಲಿ ಮಾಸ್ಕೋ ಆರ್ಟ್ ಥಿಯೇಟರ್ ಹೆಸರೇ ಗಾರ್ಕಿ ಥಿಯೇಟರ್ ಎಂದಾಯಿತು.)

ಮಾರಿಯಾ ಲೀನಾ (1868–1941) ತನ್ನ 14ನೆಯ ವಯಸ್ಸಿನಲ್ಲೇ ರಂಗಭೂಮಿಯನ್ನು ಸೇರಿದ ಅಭಿನೇತ್ರಿ. 1888ರಲ್ಲಿ ಸ್ತನಿಸ್ಲಾವ್‌ಸ್ಕಿಯನ್ನು ಸಂಧಿಸಿದ ಈಕೆ ಆತನ ಹವ್ಯಾಸೀ ನಟವೃಂದದ ಸದಸ್ಯೆಯಾದಳು. 1889ರಲ್ಲಿ ಆತನನ್ನು ವಿವಾಹವಾದಳು. ಐವತ್ತು ವರ್ಷಗಳ ದಾಂಪತ್ಯ ಜೀವನದುದ್ದಕ್ಕೂ ಇಬ್ಬರೂ ಜೊತೆಯಾಗಿ ದುಡಿದರು. ಸ್ತನಿಸ್ಲಾವ್‌ಸ್ಕಿ ತನ್ನ 'ಆಕ್ಟರ್ ಪ್ರಿಪೇರ್ಸ್' ಗ್ರಂಥವನ್ನು 'ಶ್ರೇಷ್ಠತಮ ಶಿಷ್ಯೆ, ಮೆಚ್ಚುಗೆಯ ನಟಿ, ವಿಧೇಯ ಸಹಾಯಕಿ ಮಾರಿಯಾ ಪೆತ್ರೋವಾ ಲಿಲಿನಾಗೆ' ಅರ್ಪಿಸಿದ್ದಾನೆ.

1938ರ ಆಗಸ್ಟ್ 8ರಂದು ಸ್ತನಿಸ್ಲಾವ್‌ಸ್ಕಿ ತನ್ನ 75ನೆಯ ವಯಸ್ಸಿನಲ್ಲಿ ನಿಧನನಾದ.

1917ರ ಸಮಾಜವಾದಿ ಕ್ರಾಂತಿಯ ಬಳಿಕ, ತನ್ನ ದೇಶದ ರಂಗಭೂಮಿ ಚಟುವಟಿಕೆಗಳಿಗೆ ದಿಗ್ದರ್ಶನವೀಯುವ ಹೊಣೆ ಅವನದಾಗಿತ್ತು. 'ಜನತೆಯ ಕಲಾವಿದ' ಎಂಬ ಬಿರುದು ಪಡೆದ ಆರಂಭದ ನಟರಲ್ಲೊಬ್ಬ, ಸ್ತನಿಸ್ಲಾವ್‌ಸ್ಕಿ. 'ಆರ್ಡರ್ ಆಫ್ ರೆಡ್ ಬ್ಯಾನರ್' ಮತ್ತು 'ಆರ್ಡರ್ ಆಫ್ ಲೆನಿನ್' ಪ್ರಶಸ್ತಿಗಳೂ ಅವನಿಗೆ ದೊರೆತುವು. ಅವನ 75ನೆಯ ಹುಟ್ಟು ಹಬ್ಬದಂದು ಮಾಸ್ಕೋ ನಗರದಲ್ಲಿ ಆತ ವಾಸವಾಗಿದ್ದ ರಸ್ತೆಗೆ 'ಸ್ತನಿಸ್ಲಾವ್‌ಸ್ಕಿ ಬೀದಿ' ಎಂದು ನಾಮಕರಣ ಮಾಡಿದರು. ಸೋವಿಯೆತ್ ಒಕ್ಕೂಟದ ಹಲವು ಗಣರಾಜ್ಯಗಳಲ್ಲಿ ಸ್ತನಿಸ್ಲಾವ್‌ಸ್ಕಿಯ ಹೆಸರು ಹೊತ್ತಿರುವ ನಾಟಕಶಾಲೆಗಳಿವೆ.

'ಮೈ ಲೈಫ್ ಇನ್ ಆರ್ಟ್' ಮತ್ತು 'ಆಕ್ಟರ್ ಪ್ರಿಪೇರ್ಸ್'—ಸ್ತನಿಸ್ಲಾವ್‌ಸ್ಕಿಯ ಎರಡು ಕೃತಿಗಳು. ಇವು ಲೋಕದಾದ್ಯಂತ








ವಿವಿಧ ಪಾತ್ರಗಳಲ್ಲಿ ಸ್ತನಿಸ್ಲಾವ್‌ಸ್ಕಿ
—ಆರ್.ಎಸ್.ಎನ್. ರಚನೆ

ನಟನಟಿಯರ ಅಭ್ಯಾಸ ಗ್ರಂಥಗಳಾಗಿವೆ.

## ಸಾರ್ಟೋ


ಪಳಗಿದ ಕೈ : ಸಾರ್ಟೋ

"ದೋಷರಹಿತ ಚಿತ್ರಕಾರ" — ಫ್ಲಾರೆನ್ಸಿನ ಜನರ ಹೊಗಳಿಕೆ.

"ಫ್ಲಾರೆನ್ಸಿನಲ್ಲೊಬ್ಬ ಪುಟ್ಟ ವ್ಯಕ್ತಿ ಇದ್ದಾನೆ. ನಿನಗೆ ಸಿಕ್ಕಿದಂತೆಯೇ ಆತನಿಗೂ ಮಹತ್ತರ ಕೆಲಸಗಳಿಗೆ ಕರೆ ಬಂದರೆ, ನಿನ್ನ ಹುಬ್ಬಿನ ಮೇಲೆ ಬೆವರು ಬರುವಂತೆ ಮಾಡುತ್ತಾನೆ"—ಮೈಕೆಲೆಂಜಲೋ ರ್‍ಯಾಫೇಲನೊಡನೆ ಹೇಳಿದ ಮಾತಿದು.

ಈ ಮಾತುಗಳೆಲ್ಲ ಇಟಲಿಯ ಚಿತ್ರಕಾರ ಆಂಡ್ರೆಯಾ ಡೇಲ್ ಸಾರ್ಟೋನನ್ನು ಕುರಿತು ಆಡಿದುವು. ಸಾರ್ಟೋ ಅಪ್ರತಿಮ ಕುಶಲ ಕೆಲಸಗಾರನೆನಿಸಿಕೊಂಡ ಕಲಾವಿದ. ತನ್ನ ಜೀವಮಾನದಲ್ಲೇ ಕೀರ್ತಿಯ ಸವಿಯುಂಡವನು.

ಸಾರ್ಟೋ 1486ರ ಜೂಲೈ 16 ರಂದು ಫ್ಲಾರೆನ್ಸಿನಲ್ಲಿ ಹುಟ್ಟಿದ. ತಂದೆ ದರ್ಜಿ. ಎಳನೆಯ ವಯಸ್ಸಿನಲ್ಲೇ ಅಕ್ಕಸಾಲಿಗನೊಬ್ಬನ ಹತ್ತಿರ ಕೆಲಸ ಕಲಿಯಲು ಸೇರಬೇಕಾಯಿತು. ಆಮೇಲೆ ಪಿಯರೋ ಡಿ ಕಾಸಿಮೊ ಎಂಬ ಚಿತ್ರಕಾರನ ಬಳಿ ತರಬೇತಿ ಪಡೆದ. ಲಿಯೊನಾರ್ದೊ ದ ವಿಂಚಿ, ಮೈಕೆಲೆಂಜಲೋ ಇವರ ಚಿತ್ರಗಳ ಪ್ರತಿಕೃತಿಗಳನ್ನು ಬರೆದು ತನ್ನ ಕೈಚಳಕವನ್ನು ಉತ್ತಮಗೊಳಿಸಿಕೊಂಡ. 1508ರಲ್ಲಿ ಫ್ಲಾರೆಂಟೈನ್ ಕಲಾವಿದರ ತಂಡವನ್ನು ಸೇರಿದ, ತನ್ನದೇ ಚಿತ್ರಶಾಲೆಯನ್ನು ತೆರೆದ.

ಫ್ಲಾರೆನ್ಸ್‌ನ ಸರ್ವೈಟ್ ಪಂಥದ ಚರ್ಚಿನಲ್ಲಿ ಐದು ಚಿತ್ರಗಳನ್ನು ರಚಿಸಲು ಸಾರ್ಟೋಗೆ ಕರೆಬಂತು. ಸಂತ ಫಿಲಿಪ್ಪೋ ಬನಿಜಿ ಜೀವನದ ಘಟನೆಗಳನ್ನು ಇಲ್ಲಿ ಸಾರ್ಟೋ ನಿರೂಪಿಸಿದ. ಮುಂದೆ ಸಾರ್ಟೋ ಇವಕ್ಕೆ 'ಜರ್ನಿ ಆಫ್ ದಿ ಮ್ಯಾಗಿ' ಹಾಗೂ 'ಬರ್ತ್ ಆಫ್ ದಿ ವರ್ಜಿನ್' ಚಿತ್ರಗಳನ್ನು ಸೇರಿಸಿದ.

ಫ್ಲಾರೆನ್ಸಿನಲ್ಲಿ ಸಂತ ಬ್ಯಾಪ್ಟಿಸ್ಟ್ ಜಾನನ ಕಥೆಯನ್ನು ಫ್ರೆಸ್ಕೊ ವಿಧಾನವನ್ನು ಅನುಸರಿಸಿ ಚಿತ್ರಿಸಿದ. ಈ ಕೆಲಸ 11 ವರ್ಷಗಳ ಕಾಲ ನಡೆಯಿತು. ಇಟಲಿಯ ಖ್ಯಾತ ಚಿತ್ರಕಾರ ರಾಫೇಲನಿಗೆ (1483–1520) ಸಮನಾದವನೆಂಬ ಮೆಚ್ಚುಗೆಗೆ ಸಾರ್ಟೊ ಪಾತ್ರನಾದ.

1518ರಲ್ಲಿ ಫ್ರಾನ್ಸಿನ ದೊರೆ, ಪ್ಯಾರಿಸಿಗೆ ಬರುವಂತೆ ಸಾರ್ಟೋನನ್ನು ಆಹ್ವಾನಿಸಿದ. ಪತ್ನಿ ಲೂಕ್ರೇಸಿಯಾಳೊಡನೆ ಪ್ಯಾರಿಸಿಗೆ ತೆರಳಿದ ಸಾರ್ಟೋ ಅಲ್ಲಿ ಒಂದು ವರ್ಷ ಕೂಡಾ ಇರಲಿಲ್ಲ. ತಾನು ಮುಂದೆ ಕೈಗೊಳ್ಳುವ ಕೆಲಸಗಳಿಗಾಗಿ ಅರಸನ ಹತ್ತಿರ ಮುಂಗಡವಾಗಿ ಹಣ ಪಡೆದು, ಬೇಗ ಹಿಂದಿರುಗುವುದಾಗಿ ಭರವಸೆಕೊಟ್ಟು ಪ್ಯಾರಿಸಿನಿಂದ ಹೊರಟುಹೋದ. ಹಾಗೆ ಹೋದ ಸಾರ್ಟೋ ಫ್ಲಾರೆನ್ಸ್ ಸೇರಿದ. ಮತ್ತೆ ಪ್ಯಾರಿಸಿಗೆ ಮರಳಲಿಲ್ಲ.

ಫ್ಲಾರೆನ್ಸಿನಲ್ಲಿ ಸಾರ್ಟೋ ಅನೇಕ ಚಿತ್ರಗಳನು ಬರೆದ. ಕನ್ಯೆಯರು, ಹೆಂಗಸರು ಎಲ್ಲರ ಚಿತ್ರಗಳಲ್ಲೂ ಅವನ ಚೆಲುವೆ ಪತ್ನಿಯ ಹೋಲಿಕೆ ಕೆಲ ಮಟ್ಟಿಗಾದರೂ ಇರುತ್ತಿತ್ತು. ಫ್ಲಾರೆನ್ಸಿನಲ್ಲಿ 1530ರ ಸೆಪ್ಟೆಂಬರ್ 29 ರಂದು ಸಾರ್ಟೋ ತೀರಿಕೊಂಡ.

ಅತ್ಯುತ್ತಮ ಚಿತ್ರಕಾರನಲ್ಲಿ ಕಂಡುಬರುವ ಅಸಾಧಾರಣ ಪ್ರತಿಭೆ ಸಾರ್ಟೋನಲ್ಲಿ ಇರಲಿಲ್ಲ. ಆದರೆ ಚಿತ್ರಕಲೆಯಲ್ಲಿ ಅವನದು ಪಳಗಿದಕೈ. ಅವನು ಯಾವುದೇ ಅನುಕರಣ ಮಾಡಬಲ್ಲವನಾಗಿದ್ದ. ಅವನ ಚಿತ್ರಗಳಲ್ಲಿ ಚೆಲುವು, ಬಣ್ಣಗಳ ಹೊಂದಾಣಿಕೆ, ನೆರಳು–ಬೆಳಕುಗಳ ಮನೋಜ್ಞ ಪರಿಣಾಮ ಕಂಡುಬರುವಂತೆ ಸಾರ್ಟೋ ಜಾಣ್ಮೆಯಿಂದ ಚಿತ್ರಿಸುತ್ತಿದ್ದ.

ಸಾರ್ಟೋನ ಮೇರುಕೃತಿ 'ಹಾರ್ಪಿಸ್ ಮೆಡೋನ್ನ'. 'ಒಬ್ಬ ತರುಣನ ಚಿತ್ರ', 'ಕ್ರಿಸ್ತನ ಕೊನೆಯ ಭೋಜನ', 'ಬ್ಯಾಪ್ಟಿಸ್ಟ್ ಸೇಂಟ್ ಜಾನ್' ಮುಂತಾದುವು ಅವನ ಇತರ ಖ್ಯಾತ ಕೃತಿಗಳು.

## ಸಾರ್ತ್ರ್

ಮೌಲ್ಯಗಳಿಲ್ಲದ ಈ ಪ್ರಪಂಚದಲ್ಲಿ ಮಾನವ ತನ್ನ ಗುರಿ, ಧ್ಯೇಯಗಳನ್ನು ತಾನೇ ನಿರ್ಧರಿಸಿಕೊಳ್ಳಬೇಕು. ಹೀಗೆ ಪ್ರತಿಯೊಬ್ಬ ಮಾನವ ತನಗೆ ಬೇಕಾದ ಗುರಿ ಅಥವಾ ಉದ್ದೇಶಗಳನ್ನು ತಾನೇ ಆರಿಸಿಕೊಳ್ಳುತ್ತಾನೆ. ಈ ರೀತಿ ಒಂದು ಉದ್ದೇಶವನ್ನು ಆರಿಸಿಕೊಳ್ಳುವುದರಿಂದ ಅವನ ಜೀವನಕ್ಕೆ ಅರ್ಥಬರುತ್ತದೆ, ಅಷ್ಟೆ. ಅವನ ಜೀವನ ಮಾರ್ಗಕ್ಕೆ, 'ವಿಧಿ'ಗೆ ಅವನೇ ಹೊಣೆ.

—ಇದು ಅಸ್ತಿತ್ವವಾದದ ತಿರುಳು. ಈ ಶತಮಾನದಲ್ಲಿ, ಮುಖ್ಯವಾಗಿ ಮಹಾಯುದ್ಧಗಳ ಅನಂತರ, ವಿಶ್ವದ ಚಿಂತನೆಯ ಮೇಲೆ ಅತ್ಯಂತ ಪ್ರಭಾವ ಬೀರಿರುವ ಅಸ್ತಿತ್ವವಾದದ ಪ್ರಮುಖ ಮುಂದಾಳು ಫ್ರಾನ್ಸಿನ ಜೀನ್ (ಭಾಷಾ ಉಚ್ಚಾರ: ಜ್ಹಾನ್) ಪಾಲ್ ಸಾರ್ತ್ರ್.

ತನ್ನ ತಾತ್ತ್ವಿಕ ಚಿಂತನೆಗೆ ಅತ್ಯಂತ ಯಶಸ್ವಿಯಾಗಿ ಸಾಹಿತ್ಯದ ಮೂಲಕ ಅಭಿವ್ಯಕ್ತಿ ಇತ್ತ ಸಾರ್ತ್ರ್‌ಗೆ 1964ರಲ್ಲಿ ನೊಬೆಲ್ ಪ್ರಶಸ್ತಿ ನೀಡಿದರು. ಆದರೆ ಅದನ್ನು ಆತ ನಿರಾಕರಿಸಿದ.

ಫ್ರಾನ್ಸಿನ ನೌಕಾಧಿಕಾರಿಯೊಬ್ಬನ ಮಗನಾಗಿ 1905ರ ಜೂನ್ 21ರಂದು ಸಾರ್ತ್ರ್ ಫ್ರಾನ್ಸಿನಲ್ಲಿ ಜನಿಸಿದ. ಚಿಕ್ಕಂದಿನಲ್ಲೇ ಹೆತ್ತವರನ್ನು ಕಳೆದುಕೊಂಡ ಇವನು ತನ್ನ ಅಜ್ಜ ಕಾರ್ಲ್ ಷ್ವೈಟ್ಸರ್‌ನ ಆಶ್ರಯದಲ್ಲಿ ಬೆಳೆದ. 1929ರಲ್ಲಿ ಡಿಗ್ರಿ ಪಡೆದು ಹೈಸ್ಕೂಲೊಂದರಲ್ಲಿ ತತ್ತ್ವಜ್ಞಾನದ ಅಧ್ಯಾಪಕನಾದ.

ದ್ವಿತೀಯ ಮಹಾಯುದ್ಧದ ಹೋರಾಟದಲ್ಲಿ ಭಾಗವಹಿಸಿದ ಸಾರ್ತ್ರ್ ಜರ್ಮನರ ಸೆರೆಯಾಳಾದ. ಕೊಂಚ ಕಾಲದ ಅನಂತರ ತಪ್ಪಿಸಿಕೊಂಡು ಬಂಧವಿಮೋಚನಾ ಚಳುವಳಿಯ ನಾಯಕನಾದ. ಯುದ್ಧದ ಅನಂತರ ರಾಜಕೀಯ ಹಾಗೂ ಸಾಹಿತ್ಯಕ್ಷೇತ್ರಗಳಲ್ಲಿ ಭಾಗವಹಿಸಿದ; 1946ರಲ್ಲಿ ಒಂದು ಸಾಹಿತ್ಯ ಮಾಸಪತ್ರಿಕೆಯನ್ನು ಪ್ರಾರಂಭಿಸಿದ.

ಇವನ ಮೊಟ್ಟಮೊದಲ ಕಾದಂಬರಿ 'ಅಸಹ್ಯ' 1938ರಲ್ಲಿ ಪ್ರಕಟವಾಯಿತು. ಉದ್ದೇಶ ಗುರಿಗಳಿಲ್ಲದ ಮಾನವ ಜೀವನ ಅಸಹ್ಯಕರ ಎನಿಸುವುದನ್ನು ಈ ಕಾದಂಬರಿಯಲ್ಲಿ ಸಾರ್ತ್ರ್ ಹೇಳುತ್ತಾನೆ. 1943ರಲ್ಲಿ ಪ್ರಕಟವಾದ 'ಬೀಯಿಂಗ್ ಅಂಡ್ ನಥಿಂಗ್‌ನೆಸ್' ಎಂಬ ತಾತ್ತ್ವಿಕ ನಿಬಂಧ ಇವನ ಚಿಂತನೆಗಳನ್ನು ಸೊಗಸಾಗಿ, ತರ್ಕಬದ್ಧವಾಗಿ ಹೇಳುತ್ತದೆ. ದಿಗ್ಭ್ರಮೆ ಉಂಟಾಗುವಷ್ಟು ಮಾನವ ಸ್ವತಂತ್ರ; ಇದರಿಂದ ಯಾವ ಮೌಲ್ಯಗಳ ನೆರವೂ ಇಲ್ಲದೆ ತನ್ನ ದಾರಿಯನ್ನು ತಾನೇ ಆತ ಹುಡುಕಿಕೊಳ್ಳ



ಅಸ್ತಿತ್ವವಾದ : ಸಾರ್ತ್ರ್

ಬೇಕಾಗುತ್ತದೆ. ಹೀಗೆ ಹುಡುಕಿಕೊಳ್ಳುವಾಗ ಮತ್ತು ಆ ಹಾದಿಯಲ್ಲಿ ಸಾಗುವಾಗ ಅವನಿಗೆ ಆಗುವ ಅನುಭವಗಳಿಗೆ ಅವನೇ ಹೊಣೆ —ಎಂದು ಸಾರ್ತ್ರ್ ಈ ಗ್ರಂಥದಲ್ಲಿ ಹೇಳಿದ.

ಅಸ್ತಿತ್ವವಾದದ ಆಶಾವಾದವನ್ನು ಇವನ 'ನೊಣಗಳು' (1943) ಎಂಬ ನಾಟಕ ಮತ್ತು 'ಅಸ್ತಿತ್ವವಾದ ಮತ್ತು ಮಾನವೀಯತೆ' (1946) ಎಂಬ ಭಾಷಣಗಳ ಸಂಕಲನದಲ್ಲಿ ಕಾಣಬಹುದು. ಆದರೆ ಈ ಆಶಾವಾದವನ್ನು ಮುಂದೆ ಆತನೇ ನಿರಾಕರಿಸಿ, ತನ್ನ ಮೊದಲ ತತ್ತ್ವವನ್ನೇ ಒತ್ತಿಹೇಳ ತೊಡಗಿದ.

'ಆತ್ಮೀಯತೆ' (1939) ಎಂಬ ಇವನ ಕಥಾಸಂಗ್ರಹ ಮತ್ತು 'ದಿ ಏಜ್ ಆಫ್ ರೀಸನ್' (1945), 'ದಿ ರಿಪ್ರೀವ್' (1945), 'ಅಯರ್ನ್ ಇನ್ ದಿ ಸೋಲ್' (1949) ಎಂಬ ಕಾದಂಬರಿಗಳು ಇವನ ಮುಂದಿನ ಪ್ರಮುಖ ಕೃತಿಗಳು.

ಶಬ್ದಗಳಿಗೆ ಅಂಟಿದ ಅಸ್ಪಷ್ಟತೆಯ ರೋಗವನ್ನು ನಿವಾರಿಸಬೇಕು ; ಇದ್ದುದನ್ನು ಇದ್ದಂತೆ ಹೇಳುವುದೇ ಲೇಖಕನ ಕೆಲಸ : ರಾಜಕೀಯ ಸಮಸ್ಯೆಗಳಲ್ಲಿ ಸಾಹಿತ್ಯ ಭಾಗವಹಿಸಬೇಕು —ಇವು ಸಾರ್ತ್ರ್ ತನ್ನ 'ಸಾಹಿತ್ಯ ಎಂದರೇನು ?' (1948) ಎಂಬ ಕೃತಿಯಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳು.

ಪ್ರಪಂಚ ಶೂನ್ಯವೆಂದು ಸಾರ್ತ್ರ್ ಹೇಳಿದರೂ "ಅದರಲ್ಲಿ ಮಾನವ ತನ್ನ ಕರ್ಮದಿಂದ ತಪ್ಪಿಸಿಕೊಳ್ಳಲಾರ" ಎಂದೂ ಹೇಳಿದ. ಇದರಿಂದಲೇ, ರಾಜಕಾರಣದಲ್ಲಿ ಮಾನವ ಭಾಗವಹಿಸಬೇಕು. ತನ್ನ 'ಆರಿಸುವ' ಸ್ವಾತಂತ್ರ್ಯ ಕಳೆದುಕೊಳ್ಳಬಾರದು ಎಂದು ಅಭಿಪ್ರಾಯಪಟ್ಟ. ಸಾರ್ತ್ರ್ ಮಾರ್ಕ್ಸ್‌ವಾದಿಯಾದರೂ ಕಮ್ಯೂನಿಸ್ಟ್ ಪಕ್ಷಕ್ಕೆ ಸೇರಲಿಲ್ಲ. 1961ರಲ್ಲಿ ಆಲ್ಜೀರಿಯಾ ಸಮಸ್ಯೆ ಬಗೆಗೆ ತನ್ನ ವಸಾಹತುವಾದೀ ವಿರೋಧದ ಅಭಿಪ್ರಾಯಗಳನ್ನು ಸಾರ್ತ್ರ್ ಪ್ರಕಟಿಸಿದಾಗ ಅವನ ಮನೆಗೆ ಕೆಲವರು ಬಾಂಬನ್ನೆಸೆದರು. ಆದರೂ ಸಾರ್ತ್ರ್ ನಿರ್ಭಯ ಸಾಹಿತ್ಯಸೃಷ್ಟಿಯನ್ನಾಗಲೀ ಅಭಿಪ್ರಾಯ ಪ್ರಕಟಣೆಯನ್ನಾಗಲೀ ನಿಲ್ಲಿಸಲಿಲ್ಲ.

ಇವನ ಆತ್ಮಕಥೆಯ ಮೊದಲ ಸಂಪುಟವಾದ 'ಪದಗಳು' ಎಂಬ ಕೃತಿಯನ್ನು ಈ ಯುಗದ ಅತಿ ಶ್ರೇಷ್ಠ ಕೃತಿ ಎಂದು ಕೆಲವು ವಿಮರ್ಶಕರು ಕರೆದಿದ್ದಾರೆ. ಈ ಕೃತಿಗಾಗಿ ನೊಬೆಲ್ ಪ್ರಶಸ್ತಿಯೂ ದೊರಕಿತು. ಆದರೆ ಸಾರ್ತ್ರ್ ಪ್ರಶಸ್ತಿಯನ್ನು ನಿರಾಕರಿಸಿದ. "ಸಾರ್ತ್ರ್‌ನ ಕೃತಿಗಳು ಎಂದು ಓದುಗರು ನನ್ನ ಕೃತಿಗಳನ್ನು ಓದಿದಾಗ ಅವರ ಮೇಲಾಗುವ ಪರಿಣಾಮವೇ ಒಂದು ವಿಧವಾದರೆ, 'ನೊಬೆಲ್ ಬಹುಮಾನ ವಿಜೇತ ಸಾರ್ತ್ರ್'ನ ಕೃತಿಗಳು ಎಂದು ಓದುವಾಗ ಆಗುವ ಪರಿಣಾಮವೇ ಬೇರೆ. ನನ್ನದಲ್ಲದ ಹೊರಗಿನ ಪರಿಣಾಮ ಪ್ರಭಾವಗಳನ್ನು ಓದುಗರ ಮೇಲೆ ನಾನು ಹೇರಲಾರೆ" ಎಂದು ಸಾರ್ತ್ರ್ ತಾನು ನೊಬೆಲ್ ಬಹುಮಾನವನ್ನು ನಿರಾಕರಿಸಿದುದಕ್ಕೆ ಕಾರಣ ತಿಳಿಸಿದ.

ವಿವಾಹ ಬಂಧನದಲ್ಲಿ ನಂಬಿಕೆ ಇಲ್ಲದ ಸಾರ್ತ್ರ್, ತನ್ನ ಪ್ರೇಯಸಿ ಸೈಮನ್ ಡಿ ಬ್ಯೂವ್ಯೊರ್‌ಳೊಂದಿಗೆ ಜೀವನ ನಡೆಸುತ್ತಿದ್ದಾನೆ. ಬ್ಯೂವ್ಯೊರ್ ಸಹ ಅತ್ಯಂತ ಪ್ರಭಾವಶಾಲೀ ಲೇಖಕಿ.

## ಸಾಫೋ

" ಮೇಲು ಕೊಂಬೆಯ ತುತ್ತ ತುದಿಯಲ್ಲಿದೆ
ಅತಿ ಸವಿಯ, ಕಡುಗೆಂಪು, ಸೇಬು ಹಣ್ಣೊಂದು
ಹಣ್ಣು ಕುಯ್ಯುವವರು ಮರೆತರೇನೋ ಎಂಬಂತೆ —
ಅಲ್ಲ—ಮರೆತಿಲ್ಲ ಅವರು
ಅದು ಅವರ ಕೈಗೆಟುಕದ ಹಣ್ಣು, ಅಷ್ಟೆ"

ಸುಮಾರು ಕ್ರಿ.ಪೂ. 610ರಲ್ಲಿ ಜೀವಿಸಿದ ಸಾಫೋ ಬರೆದ ಒಂದು ಕವನದ ಕೆಲವು ಪಂಕ್ತಿಗಳು, ಇವು.

ಆತ್ಮೀಯವಾದ ಹೃದಯಸ್ಪರ್ಶಿಯಾದ ಕವಿತೆಗಳನ್ನು ಬರೆದು ಖ್ಯಾತಿ ಗಳಿಸಿದ ಪ್ರಾಚೀನ ಗ್ರೀಕಿನ ಕವಯಿತ್ರಿ —ಸಾಫೋ. ಅವಳ ಕಾಲದಲ್ಲಿ ಪ್ರಚಾರದಲ್ಲಿದ್ದ ಗ್ರೀಕ್ ಭಾಷೆಯ ಒಳನುಡಿಗಳಲ್ಲಿ ಒಂದಾದ ಲೆಸ್‌ಬಿಯನ್ ಭಾಷೆಯಲ್ಲಿ ಅವಳು ತನ್ನ ಕವಿತೆಗಳನ್ನು ಬರೆದಿದ್ದಾಳೆ. ಸಾಫೋಳ ಜೀವನದ ವಿಚಾರವಾಗಿ ನಮಗೆ ತಿಳಿದಿರುವುದು ಅತ್ಯಲ್ಪ. ಅವಳು ರಚಿಸಿದ ಕವಿತೆಗಳಲ್ಲಿ ಉಳಿದಿರುವುದು ಕೂಡ ಕೆಲವೇ ಕೆಲವು; ಅವೂ ಅಪೂರ್ಣ ರೂಪದಲ್ಲಿ: ಕವಯಿತ್ರಿಯ ಪ್ರತಿಭೆಯನ್ನು ಎತ್ತಿತೋರಲು ಇಷ್ಟೇ ಸಾಕು.

ಸುಮಾರು ಐವತ್ತಕ್ಕೂ ಹೆಚ್ಚು ಬಗೆಯ ಛಂದಸ್ಸುಗಳಲ್ಲಿ ಕೃತಿರಚನೆ ಮಾಡಿ ಅತ್ಯಂತ ಲಲಿತಶೈಲಿಯಲ್ಲಿ ಕವಿತೆಗಳನ್ನು ಬರೆದು, ಸರಳ ಸಹಜ ಸುಂದರ ಕವಿತ್ವಕ್ಕೆ ಹೆಸರಾದವಳು ಸಾಫೋ. ಅವಳ ಈ ಕೀರ್ತಿ ಅಂದಿನಿಂದ ಇಂದಿನವರೆಗೂ ಹಾಗೆಯೇ ಉಳಿದಿದೆ. ಹಲವು ಬಗೆಯ ಛಂದಸ್ಸುಗಳನ್ನು ಅವಳೇ ಕಲ್ಪಿಸಿದಳೆಂದು ಊಹೆ. ಅವಳು ಬಳಸಿದ ಒಂದು ಛಂದಸ್ಸನ್ನು ವಿದ್ವಾಂಸರು ಆಕೆಯ ಹೆಸರಿನಿಂದಲೇ —ಸಾಫಿಕ್ ಎಂದು— ಕರೆದಿದ್ದಾರೆ. ಅವಳ ಕವಿತೆಗಳು ಪ್ರಾಚೀನ ರೋಮಿನಲ್ಲಿ ಪ್ರಚಲಿತವಾಗಿದ್ದುವು, ಭಾಷಾಂತರಿಸಲ್ಪಡುತ್ತಿದ್ದುವು. ತಮ್ಮ ಬರೆಹಕ್ಕೆ ಅವಳ ಕವಿತೆಯ ಸಾಲು ಸಾಲುಗಳನ್ನೇ ಎರವಲು ತೆಗೆದುಕೊಂಡವರೂ ಉಂಟು. ಪ್ರಾಚೀನ ರೋಮಿನ ಖ್ಯಾತ ಕವಿ ಹೊರೇಸ್ ಸಾಫಿಕ್ ಛಂದಸ್ಸನ್ನು ಹೇರಳವಾಗಿ ಬಳಸಿದ್ದಾನೆ.

ಸಾಫೋ ಬರೆದ ಕವಿತೆಗಳು ಒಂಬತ್ತು ಪುಸ್ತಕಗಳ ರೂಪದಲ್ಲಿ ಹೊರ ಬಂದುವು : ಮೊದಲ ಎಂಟು ಪುಸ್ತಕಗಳು ಛಂದಸ್ಸಿಗೆ ಅನುಗುಣವಾಗಿ ವಿಂಗಡಿಸಲ್ಪಟ್ಟಿದ್ದುವು ; ಒಂಬತ್ತನೆಯದರಲ್ಲಿ ವಸ್ತುವಿಗೆ ಅನುಗುಣವಾಗಿ ಕವಿತೆಗಳನ್ನು ಜೋಡಿಸಲಾಗಿತ್ತು. ವಿವಾಹ ಸಮಯದಲ್ಲಿ ವೃಂದಗಾನದಂತೆ ಹಾಡುವುದಕ್ಕೋಸ್ಕರ ವಿವಿಧ ಛಂದಸ್ಸುಗಳಲ್ಲಿ ರಚಿತವಾಗಿ

ಬರೆಯಲ್ಪಟ್ಟ 'ವಿವಾಹ ಗೀತೆಗಳು' ಈ ಒಂಬತ್ತನೆಯ ಪುಸ್ತಕದಲ್ಲಿ ಅಡಕವಾಗಿದ್ದುವು. ಈ ಸಂಕಲನಗಳೆಲ್ಲವೂ ಸಾಫೋ ಗತಿಸಿದ ಮೂರು ನಾಲ್ಕು ಶತಮಾನಗಳ ಕಾಲ ದೊರೆಯುತ್ತಿದ್ದುವು. ಮಧ್ಯಯುಗದ ವೇಳೆಗೆ ಅವು ನಷ್ಟವಾದುವು; ಅಮೇಲೆ ಉಳಿದದ್ದು, ಇತರ ಲೇಖಕರು ಸಾಫೋ ಕೃತಿಗಳಿಂದ ಎತ್ತಿ ಬರೆದ ಕೇವಲ ಉಲ್ಲೇಖಗಳು. ಈಗ ಉಳಿದಿರುವುದು ಅವಳ ಕವಿತೆಗಳ ಕೆಲವೇ ಕೆಲವು ತುಣುಕುಗಳು ಮಾತ್ರ.

ಸಾಫೋ ಲೆಸ್‌ಬಾಸ್ ದ್ವೀಪವಾಸಿಯಾಗಿದ್ದಳು; ತಕ್ಕಮಟ್ಟಿನ ಸ್ಥಿತಿವಂತರ ಮನೆಯಲ್ಲಿ ಹುಟ್ಟಿದವಳು ಎಂದು ಭಾವಿಸಲು ಆಧಾರಗಳಿವೆ. ಅವಳಿಗೆ ವಿವಾಹವಾಗಿತ್ತು. ಕ್ಲೀಸ್ ಎಂಬ ಮಗಳು ಇದ್ದಳು. ಸಮಕಾಲೀನ ಕವಿ ಅಲ್‌ಕೇಯುಸ್ ಅವಳ ಗೆಳೆಯ. ಅವನ ಇದಿರಿನಲ್ಲಿ ಅವಳು ತನ್ನ ಕವಿತೆಗಳನ್ನು ಹಾಡುತ್ತಿದ್ದಳು.

ಆಗಿನ ಶ್ರೀಮಂತ ಮಹಿಳೆಯರು ಒಂದೆಡೆ ಕಲೆತು ಕವಿತಾರಚನೆ, ಕವಿತಾವಾಚನಗಳಲ್ಲಿ ತೊಡಗುವುದು ರೂಢಿಯಾಗಿದ್ದಿತು. ಸಾಫೋ ಇಂಥ ಸಾಹಿತ್ಯ ಕೂಟವೊಂದರ ಮುಖ್ಯಸ್ಥಳೂ ಜೀವಾಳವೂ ಆಗಿದ್ದಳು. ಅವಳು ತನ್ನ ಅನೇಕ ಗೆಳತಿಯರನ್ನು ಕುರಿತೂ ಕವಿತೆಗಳನ್ನು ರಚಿಸಿದಳು.

ಸಾಫೋ ತನ್ನ ಭಾವನೆಗಳಿಗೆ ಕವಿತೆಯ ರೂಪಕೊಟ್ಟಿರುವ ರೀತಿ ಪ್ರಭಾವಪೂರ್ಣವಾದದ್ದು. ತಮ್ಮ ಮನೋಭಾವಗಳನ್ನು ಅರ್ಥಮಾಡಿಕೊಳ್ಳಲು ಗ್ರೀಕರಿಗೆ ಈ ಕವಿತೆಗಳು ಅನಿವಾರ್ಯ ಮಾಧ್ಯಮವಾಗಿದ್ದುವು, ಗ್ರೀಕ್ ಪುರಾಣಗಳಲ್ಲಿ 'ಮ್ಯೂಸ್' ಗಳೆಂಬ ಒಂಬತ್ತು ಮಂದಿ ಕಲಾಭಿಮಾನಿ ದೇವತೆಗಳ ಉಲ್ಲೇಖವಿದೆ. ಪ್ಲೇಟೋನಂಥ ದಾರ್ಶನಿಕನು ಸಾಫೋಳನ್ನು 'ಹತ್ತನೆಯ ಕಲಾಭಿಮಾನಿ ದೇವತೆ' ಎಂದು ಕರೆದು ಗೌರವಿಸಿರುವುದನ್ನು ನೋಡಿದರೆ, ಗ್ರೀಕ್ ಕವಿತಾ ಪ್ರಪಂಚದಲ್ಲಿ ಅವಳ ಸ್ಥಾನ ಎಷ್ಟು ಹಿರಿಯದು ಎಂಬುದು ಸ್ಪಷ್ಟವಾಗುತ್ತದೆ.



## ಸಾಫೋಕ್ಲೀಸ್

ಪ್ರಾಚೀನ ಗ್ರೀಸಿನಲ್ಲಿ ಒಮ್ಮೆ ನಾಟಕ ಸ್ಪರ್ಧೆಯೊಂದು ನಡೆಯಿತು. ಆ ಸ್ಪರ್ಧೆಯಲ್ಲಿ ಆಗಿನ ಅತ್ಯಂತ ಪ್ರಮುಖ ಟ್ರಾಜಿಡಿ ನಾಟಕಕಾರ ಎಸ್ಕಿಲಸನೂ ಭಾಗವಹಿಸಿದ್ದ. ಆದರೆ ಮೊದಲ ಬಹುಮಾನ ಬಂದದ್ದು ಎಸ್ಕಿಲಸನಿಗಲ್ಲ. ಕೇವಲ ಇಪ್ಪತ್ತೆಂಟು ವರ್ಷದ ಸುಂದರ ದೃಢಕಾಯ ಯುವಕನೊಬ್ಬನಿಗೆ: ಇವನೇ ಸಾಫೋಕ್ಲೀಸ್. ಈ ಗೌರವಕ್ಕೆ ಪಾತ್ರವಾದ ಆತನ ನಾಟಕ 'ಟ್ರಿಪ್ಟಾಲಮಸ್'. ಇವನು ಮುಂದೆ ಸುಮಾರು ನೂರಿಪ್ಪತ್ತು ನಾಟಕಗಳನ್ನು ಬರೆದ. ಇವುಗಳಲ್ಲಿ ಇಪ್ಪತ್ತಕ್ಕೆ ಸ್ಪರ್ಧೆಯಲ್ಲಿ ಮೊದಲ ಬಹುಮಾನ ದೊರಕಿತು. ಅವನ ಇತರ ನಾಟಕಗಳು ದ್ವಿತೀಯ ಸ್ಥಾನದಿಂದ ಕೆಳಕ್ಕಿಳಿಯಲಿಲ್ಲ.

ಅಥೆನ್ಸ್‌ನ ಬಳಿಯಿದ್ದ ಕೊಲೋನಸ್‌ನಲ್ಲಿ ಕ್ರಿ. ಪೂ. 495ರಲ್ಲಿ ಸಾಫೋಕ್ಲೀಸ್ ಹುಟ್ಟಿದ. ಇವನು ಹದಿನಾರು ವರ್ಷ ವಯಸ್ಸಿನವನಾಗಿದ್ದಾಗ ಗ್ರೀಸಿನಲ್ಲಿ ಉತ್ಸವವೊಂದು ನಡೆಯಿತು. ಅದರಲ್ಲಿ ಮೇಳ ಗೀತೆ ಹಾಡಲಿದ್ದ ತರುಣರ ಗುಂಪಿಗೆ ಇವನನ್ನು ನಾಯಕನನ್ನಾಗಿ ಆರಿಸಿದರು. ಕಾರಣ–ಇವನ ಸುಂದರ ರೂಪು ಹಾಗೂ ನಡೆನುಡಿಗಳ ನಯ. ಮುಂದೆ ಇವನು ರಾಜಕೀಯ ಕ್ಷೇತ್ರದಲ್ಲಿ ಪ್ರಮುಖ ಸ್ಥಾನಕ್ಕೇರಿದ. ಸೇಮಾಸ್ ಯುದ್ಧದಲ್ಲಿ ಸೇನಾಧಿಪತಿಯಾಗಿ ನಿಯಮಿತನಾದ.

ಸಾಫೋಕ್ಲೀಸನ ಹೆಸರು ಸ್ಥಿರವಾಗಿ ಉಳಿದಿರುವುದು ಅವನು ರಚಿಸಿದ ನಾಟಕಗಳಿಂದ. ಪ್ರಾಚೀನ ಗ್ರೀಸಿನ ಮೂವರು ಮಹೋನ್ನತ ಟ್ರಾಜಿಡಿ ನಾಟಕಕಾರರೆಂದರೆ ಎಸ್ಕಿಲಸ್, ಸಾಫೋಕ್ಲೀಸ್ ಮತ್ತು ಯೂರಿಪಿಡೀಸ್.

ಸಾಫೋಕ್ಲೀಸ್ ನಾಟಕ ಬರೆಯುವವರೆಗೆ, ಗ್ರೀಕ್ ನಾಟಕಗಳಲ್ಲಿ ಎರಡು ಪಾತ್ರಗಳಿಗಿಂತ ಹೆಚ್ಚು ಪಾತ್ರಗಳು ಏಕಕಾಲದಲ್ಲಿ ರಂಗದ ಮೇಲೆ ಬಂದದ್ದೇ ಇಲ್ಲ. ಮೂರು ಪಾತ್ರಗಳು ಏಕಕಾಲದಲ್ಲಿ ರಂಗದ ಮೇಲೆ ಮೊಟ್ಟ ಮೊದಲ ಬಾರಿಗೆ ಬಂದದ್ದು—ಸಾಫೋಕ್ಲೀಸನ ನಾಟಕಗಳಲ್ಲಿ. ಇದು ನಾಟಕತಂತ್ರಗಳಲ್ಲಿ ಅತ್ಯಂತ ಗಮನಾರ್ಹವಾದ ಬದಲಾವಣೆ ಎಂದು ಪರಿಗಣಿಸಲಾಗಿದೆ. ನಾಟಕ ಕ್ರಿಯೆ, ಚಲನೆಗಳಿಗೆ ಇದರಿಂದ ವೇಗ ದೊರೆಯಿತು.

ಸಾಫೋಕ್ಲೀಸನ ನಾಟಕಗಳಲ್ಲಿ ದೊರೆತಿರುವುದು ಏಳು ಮಾತ್ರ. ಇವುಗಳಲ್ಲಿ ಅತ್ಯಂತ ಪ್ರಮುಖವಾದುವು–'ಏಜಾಕ್ಸ್', 'ಅಂತಿಗೊನೆ', 'ಎಲೆಕ್ಟ್ರಾ', 'ಈಡಿಪಸ್ ದೊರೆ', 'ಕಾಲೋನಸ್‌ನಲ್ಲಿ ಈಡಿಪಸ್.'

ಸಾಫೋಕ್ಲೀಸನ ಟ್ರಾಜಿಡಿಗಳಲ್ಲಿ ಬರುವ ಕ್ರಿಯೆಯೂ ಮಾತುಗಳೂ ನಾಟಕದ ಪರಾಕಾಷ್ಠೆಗೆ ಪೋಷಕವಾಗಿ ಮುಂದುವರಿಯುತ್ತವೆ. ಪರಾಕಾಷ್ಠೆ ಅತ್ಯಂತ ಸಂಯಮದಿಂದ, ಅಪೂರ್ವ ರೀತಿಯಲ್ಲಿ ಪ್ರಬಲವಾಗಿ ವ್ಯಕ್ತವಾಗುತ್ತದೆ. ಯೂರಿಪಿಡೀಸ್ ತನ್ನ ಕೃತಿಗಳಲ್ಲಿ ದೇವತೆಗಳನ್ನು ಪ್ರಶ್ನಿಸಿ, ತೆಗಳುತ್ತಾನೆ; ಎಸ್ಕಿಲಸ್ ಮಾನವನ ದುಷ್ಕೃತಿ ಮತ್ತು ನೋವಿನ ಅರ್ಥವನ್ನು ಹುಡುಕುತ್ತಾನೆ. ಆದರೆ ಸಾಫೋಕ್ಲೀಸ್ ಮಾನವನ ಹತೋಟಿ ಮೀರಿದ ಶಕ್ತಿಯೊಂದಿದೆ ಎಂದು ಒಪ್ಪಿಕೊಂಡು, ತನ್ನ ಗಮನವನ್ನು ಮಾನವನ ಮೇಲೆಯೇ ಕೇಂದ್ರೀಕರಿಸುತ್ತಾನೆ.

'ಅಂತಿಗೊನೆ' 'ಈಡಿಪಸ್ ದೊರೆ',— ಈ ನಾಟಕಗಳು ಇಂದಿಗೂ ಆಗಾಗ ಪ್ರದರ್ಶಿತವಾಗುತ್ತವೆ. 'ಈಡಿಪಸ್' ದೊರೆ ನಾಟಕದಲ್ಲಿ, ಈಡಿಪಸ್ ತನಗೆ ಅರಿವಿಲ್ಲದೆ ತನ್ನ ತಾಯಿಯನ್ನೇ ಮದುವೆಯಾಗಿರುತ್ತಾನೆ. ಅದನ್ನು ಅರಿಯುವಾಗ ಹಾಗೂ ಅರಿತಾಗ ಅವನು ನಡೆದುಕೊಳ್ಳುವ ರೀತಿ ವಿಶ್ವದ ನಾಟಕಗಳಲ್ಲೇ ಅತ್ಯಂತ ಅಪೂರ್ವ ಸನ್ನಿವೇಶಗಳು.

**ಕವಯಿತ್ರಿ :**
**ಸಾಫೋ**



ಟ್ರಾಜಿಡಿಯ ಹಿರಿಮೆ : ಸಾಫೋಕ್ಲೀಸ್

ಸಾಫೋಕ್ಲೀಸ್ 406ರಲ್ಲಿ ನಿಧನನಾದ. ಇವನು ಗ್ರೀಕರ ಅತ್ಯಂತ ಆದರ್ಶ ಪ್ರಾಯ ವ್ಯಕ್ತಿಯೇ ಆಗಿದ್ದ. ಇವನ ಕಾವ್ಯಪ್ರತಿಭೆ ಕೊನೆಗಾಲದವರೆಗೂ ಉಜ್ವಲವಾಗಿಯೇ ಉಳಿದಿತ್ತು ಎಂಬುದಕ್ಕೆ ಆವನು ತನ್ನ ತೊಂಬತ್ತನೆಯ ವರ್ಷದಲ್ಲಿ 'ಕಾಲೋನಸ್‌ನಲ್ಲಿ ಈಡಿಪಸ್' ನಾಟಕವನ್ನು ಬರೆದನೆನ್ನುವುದೇ ಸಾಕ್ಷಿ. ಇವನು ತುಂಬ ಸ್ನೇಹಶೀಲ. ಇವನಿಗೆ ಶತ್ರುಗಳೇ ಇರಲಿಲ್ಲವಂತೆ. ಇವನು ಸಾಯುವುದಕ್ಕೆ ಸ್ವಲ್ಪಮುಂಚೆ ತೀರಿಕೊಂಡ ಯೂರಿಪಿಡೀಸನನ್ನು ಹೊಗಳಲೆಂದು ತಾನು ಬರೆದ ಮೇಳಗಾನವೊಂದನ್ನು ರಂಗದ ಮೇಲೆ ಸಾಫೋಕ್ಲೀಸ್ ತಾನೇ ಬಂದು ಹಾಡಿದನಂತೆ.

ಸಾಫೋಕ್ಲೀಸನ ನಾಟಕಗಳಲ್ಲಿ ಬರುವ ಮೇಳಗೀತೆಗಳು ಅತ್ಯುತ್ತಮ ಭಾವಗೀತೆಗಳೆಂದು ಪರಿಗಣಿಸಲ್ಪಟ್ಟಿವೆ.

## ಸಾರಾ ಬರ್ನ್ಹಾರ್ಟ್

ಲಂಡನ್ನಿನ ಒಂದು ನಾಟಕಮಂದಿರದಲ್ಲಿ, ಸಾರಾ ಬರ್ನ್ಹಾರ್ಟ್ ಅಭಿನಯಿಸುವ ನಾಟಕ ನೋಡಲು ಜನ ಕಿಕ್ಕಿರಿದು ನೆರೆದಿದ್ದರು. ಮುಂದಿನ ಸಾಲಿನಲ್ಲಿ ಆಗಿನ ಪ್ರಿನ್ಸ್ ಆಫ್ ವೇಲ್ಸ್ ಕುಳಿತಿದ್ದ. ಸಾರಾ ರಂಗಮಂಚದ ಮೇಲೆ ಬಂದಾಗಲೆಲ್ಲ ಇತರರ ಜೊತೆ ತಾನೂ ಚಪ್ಪಾಳೆ ಹೊಡೆಯುತ್ತಿದ್ದ. ಕೊನೆಯ ದೃಶ್ಯದಲ್ಲಿ, ಕೊಲೆಯಾದ ತನ್ನ ಪ್ರಿಯಕರನ ಶವದ ಮೇಲೆ ಸಾರಾ ರೋದಿಸುತ್ತಾಳೆ. ಇದನ್ನು ಕಂಡು ತಾನೂ ಏಕೆ ನಾಟಕದಲ್ಲಿ ಪಾತ್ರ ವಹಿಸಬಾರದು ಎಂಬ ಯೋಚನೆ ರಾಜಕುಮಾರನಿಗೆ ಬಂತು. ಮರುದಿನ ಇದೇ ನಾಟಕ ಪ್ರದರ್ಶನ ನಡೆದಾಗ ಕೊನೆಯ ದೃಶ್ಯದಲ್ಲಿ ಪ್ರಿನ್ಸ್ ಆಫ್ ವೇಲ್ಸ್ 'ಶವ'ದ ಪಾತ್ರ ವಹಿಸಿದ.

ಜಗತ್ತಿನ ಅತ್ಯಂತ ಶ್ರೇಷ್ಠ ನಟಿ ಎಂದು ಕರೆಯಲ್ಪಡುವ ಸಾರಾ ಬರ್ನ್ಹಾರ್ಟ್‌ಳೆದುರು ರಾಜಮಹಾರಾಜರೂ ಸಾಹಿತಿಗಳೂ ತಲೆ ತಗ್ಗಿಸುತ್ತಿದ್ದರು. ಅಲೆಗ್ಸಾಂಡರ್ ಡ್ಯೂಮಾ, ವಿಕ್ಟರ್ ಹ್ಯೂಗೋ, ಎಮಿಲಿ ಜೋಲಾ, ಎಂಜಿನಿಯರ್ – ರಾಜಕಾರಣಿ ಫರ್ಡಿನಾಂಡ್ ಡಿ ಲೆಸೆಪ್ಸ್‌ರಂಥ ಪ್ರಸಿದ್ಧ ವ್ಯಕ್ತಿಗಳು ಅವಳ ಮಿತ್ರರಾಗಿದ್ದರು. ಆಕೆಯ ಪ್ರಿಯಕರರ ದುಂದುಗಾರಿಕೆಯ ಕಥೆಗಳಿಗೆ ಲೆಕ್ಕವಿಲ್ಲ. ಅವಳ ಮಧುರ ಕಂಠವನ್ನು ಕೇಳುತ್ತ ಕಂಳಿತ ವಿಮರ್ಶಕರು ವಿಮರ್ಶೆ ಮಾಡುವುದನ್ನೇ ಮರೆಯುತ್ತಿದ್ದರು. ಪತ್ರಿಕೆಯವರಿಗೆ ಸಾರಾ ಬರ್ನ್ಹಾರ್ಟ್‌ಳನ್ನು ಕುರಿತು ಬರೆಯುವುದು ಹವ್ಯಾಸವಾಗಿತ್ತು. "ನನ್ನ ಬಗೆಗೆ ಹೇಳಿರುವಷ್ಟು ಸುಳ್ಳನ್ನು ಪ್ರಪಂಚದಲ್ಲಿ ಬೇರೆ ಯಾರನ್ನು ಕುರಿತೂ ಹೇಳಿರಲಾರರು" ಎಂದು ಆಕೆ ಅನ್ನುತ್ತಿದ್ದಳು.

ಜೂಡಿತ್ ವಾನ್ ಹಾರ್ಡ್ ಎಂಬವಳ ಮಗಳು ಸಾರಾ. ಜನನ 1844ರ ಅಕ್ಟೋಬರ್ 24ರಂದು. ಸಾರಾ ಹುಟ್ಟಿದ ಬಳಿಕ ಕೆಲವೇ ದಿನಗಳಲ್ಲಿ ಅವಳ ತಂದೆ ಇದ್ದಕ್ಕಿದಂತೆ ಕಾಣೆಯಾದ. ವಾಸ್ತವವಾಗಿ ಜೂಡಿತ್‌ಗೂ ಸಾರಾಳ ತಂದೆಗೂ ಮದುವೆಯಾಗಿರಲಿಲ್ಲ. ಜೂಡಿತ್ ಮತ್ತೊಬ್ಬನನ್ನು ವರಿಸಿದಳು. ಸಾರಾ ಒಂದು ಕಾನ್ವೆಂಟನ್ನು ಸೇರಿದಳು. 15ನೆಯ ವಯಸ್ಸಿಗೆ ಶಿಕ್ಷಣ ಮುಗಿಸಿ ಮನೆಗೆ ಬಂದಾಗ ಕ್ರೈಸ್ತ ಸನ್ಯಾಸಿನಿಯಾಗಲು ಅವಳು ದೃಢ ನಿಶ್ಚಯಮಾಡಿದ್ದಳು. ನಟನೆಯ ವೃತ್ತಿಯನ್ನು ಕೈಗೊಳ್ಳುವುದು ಮಹಾ ಪಾಪ ಎಂದು ಅವಳಿಗೆ ಕಾನ್ವೆಂಟಿನಲ್ಲಿ ಹೇಳಿಕೊಟ್ಟಿದ್ದರು. ಆದರೆ, ತನ್ನ ತಾಯಿಯೊಡನೆ ಒಂದು ನಾಟಕನೋಡಲು ಹೋದ ಸಾರಾ ಪೂರ್ತಿಯಾಗಿ ಬದಲಾದಳು. ತಾನು ನಟಿಯಾಗುವೆ ಎಂದು ಹಟ ಹಿಡಿದಳು ; ಅಭಿನಯ ಶಿಕ್ಷಣ ಶಾಲೆಯೊಂದನ್ನು ಸೇರಿದಳು.

ಎರಡು ವರ್ಷಗಳ ಬಳಿಕ ಸಾರಾ ಬರ್ನ್ಹಾರ್ಟ್ ಪ್ಯಾರಿಸಿನಲ್ಲಿದ್ದ ರಾಷ್ಟ್ರೀಯ ನಾಟಕ ಸಂಸ್ಥೆಯಲ್ಲಿ ಕಿರಿಯ ನಟಿಯಾದಳು. ವಯಸ್ಸಿನಲ್ಲಿ ಕಿರಿಯಳಾಗಿದ್ದರೂ ಯಾರಿಗೂ ಬಗ್ಗಿ ನಡೆಯುವ ಗುಣ ಸಾರಾಳಲ್ಲಿ ಇರಲಿಲ್ಲ. ಪ್ರಸಿದ್ಧ ನಟಿಯೊಬ್ಬಳ ಕೆನ್ನೆಗೆ ಹೊಡೆದಳೆಂದು ಅವಳನ್ನು ಅಲ್ಲಿಂದ ಹೊರದಬ್ಬಿದರು. ಮತ್ತೂ ಒಂದೆರಡು ನಾಟಕ ಕಂಪನಿಗಳಲ್ಲಿ ಕೆಲಸ ಮಾಡಿದಳು. ಎಲ್ಲೂ ಸರಿಬೀಳಲಿಲ್ಲ. ಅವಳ ಹಿತೈಷಿಯಾಗಿದ್ದ ಪ್ರಸಿದ್ಧ ಸಾಹಿತಿ ಅಲೆಗ್ಸಾಂಡರ್ ಡ್ಯೂಮಾನಿಂದ ಪರಿಚಯ ಪತ್ರ ಪಡೆದು ಬೆಲ್ಜಿಯಮಿನ ರಾಜಧಾನಿ ಬ್ರಸೆಲ್ಸ್‌ಗೆ ರೈಲು ಹಿಡಿದಳು. ಸ್ವಲ್ಪ ಸಮಯದಲ್ಲೇ ಬ್ರಸೆಲ್ಸ್‌ನಲ್ಲಿ ಅವಳು ಅಪಾರ ಜನಪ್ರಿಯತೆ ಪಡೆದದ್ದಲ್ಲದೆ ಬೆಲ್ಜಿಯಮಿನ ಅರಸು ಸಂತತಿಯ ರಾಜಕುಮಾರನೊಬ್ಬನ ಹೃದಯವನ್ನೂ ಗೆದ್ದಳು. 1864ರಲ್ಲಿ ಅವಳಿಗೆ ಒಂದು ಗಂಡುಮಗುವಾಯಿತು.

ಪ್ಯಾರಿಸಿಗೆ ಹಿಂದಿರುಗಿದ ಸಾರಾ, ಓಡಿಯನ್ ಎಂಬ ಪ್ರಮುಖ ನಾಟಕ ಕಂಪನಿಯನ್ನು ಸೇರಿ, ಮುಖ್ಯ ನಟಿಯಾದಳು. ಓಡಿಯನ್ ಕಂಪನಿಯ ಜನಪ್ರಿಯತೆ ಇಮ್ಮಡಿಯಾಯಿತು. ಸಾರಾ ಫ್ರಾನ್ಸಿನ ಶ್ರೇಷ್ಠ ನಟಿ ಎಂದು ಜನ ಕೊಂಡಾಡಿದರು.

ಪ್ರಾಣಿಗಳು ಎಂದರೆ ಸಾರಾಗೆ ಪ್ರಾಣ. ಪುಟಾಣಿ ನಾಯಿಯೊಂದು ದಿನವಿಡೀ ಅವಳೊಡನೆಯೇ ಇರುತ್ತಿತ್ತು. ಒಂದು ದಿನ ಇದು ಎಲ್ಲರ ಕಣ್ಣು ತಪ್ಪಿಸಿ ರಂಗಮಂಚಕ್ಕೇ ಬಂತು. ಕಂಪನಿಯ ಮ್ಯಾನೇಜರ್ ಸಾರಾಗೆ ಛೀಮಾರಿ ಹಾಕಿದ; ದಂಡವನ್ನೂ ವಿಧಿಸಿದ. ಪರಿಣಾಮವಾಗಿ ಸಾರಾ ಓಡಿಯನ್ ಕಂಪನಿಯನ್ನು ಬಿಟ್ಟಳು; ಇನ್ನೊಂದು ಪ್ರಮುಖ ಸಂಸ್ಥೆ 'ಕಾಮಿಡೀ ಫ್ರಾಂಕಾಯಿ'ಗೆ ಸೇರಿದಳು.

ಫ್ರಾನ್ಸಿನಲ್ಲಿ ಅದ್ವಿತೀಯಳೆನಿಸಿದ ಮೇಲೆ ಸಾರಾ ವಿದೇಶಯಾತ್ರೆಯ ಯೋಜನೆ ಹಾಕಿದಳು. 1879ರಲ್ಲಿ ಅವಳು ಇಂಗ್ಲೆಂಡಿಗೆ ಬರುತ್ತಾಳೆ ಎಂದು ಕೇಳಿ ಜನ ಉತ್ಸಾಹದಿಂದ ಕಾಯತೊಡಗಿದರು. ಸಾರಾ ಬಂದಿಳಿದಾಗ ಪ್ರಸಿದ್ಧ ಲೇಖಕ ಆಸ್ಕರ್ ವೈಲ್ಡ್ ಅವಳ ದಾರಿಯಲ್ಲಿ ಹೂ ಚೆಲ್ಲಿ ಸ್ವಾಗತ ಬಯಸಿದ. ಅಮೆರಿಕಕ್ಕೆ ಬಂದಾಗ ಜನರಿಗೆ ಸಾರಾಳ ಹುಚ್ಚೇ ಹಿಡಿಯಿತು. 'ಸಾರಾ ಬರ್ನ್ಹಾರ್ಟ್ ಸುಗಂಧದ್ರವ್ಯ', 'ಸಾರಾ ಬರ್ನ್ಹಾರ್ಟ್ ಸಿಗರೇಟು', 'ಸಾರಾ ಬರ್ನ್ಹಾರ್ಟ್ ಮಿಠಾಯಿ', ಕೊನೆಗೆ ' ಸಾರಾ ಬರ್ನ್ಹಾರ್ಟ್ ಕನ್ನಡಕ'ಗಳೂ ಧಾರಾಳವಾಗಿ ಮಾರಾಟವಾಗತೊಡಗಿದುವು.

[illegible] ಯನ್ನು ಬಿಟ್ಟು, ಆಕೆಯು ಕಂಪನಿಯಲ್ಲಿ ಸೇರಿದಳು. 1882ರಲ್ಲಿ ಅವರು ವಿವಾಹವಾದರು. ಮರು ವರ್ಷ ವಿವಾಹ ವಿಚ್ಛೇದನವೂ ಆಯಿತು.

"ಸಾರಾ ಬರ್ನ್ಹಾರ್ಟ್ ನಟಿಸಿದ ನಾಟಕಗಳನ್ನು ನೋಡುವುದಕ್ಕಿಂತ ವಿಶೇಷವಾದದ್ದು ಏನಾದರೂ ಇದ್ದರೆ, ಅದು ಅವಳ ಜೀವನ ರೀತಿಯನ್ನು ನಿರೀಕ್ಷಿಸುವುದು" ಎಂದು, ಆಕೆ ಅಭಿನಯಿಸಿದ ಅನೇಕ ಪ್ರಸಿದ್ಧ ನಾಟಕಗಳ ಕರ್ತೃ ಸಾರ್ಡೋ ಹೇಳುತ್ತಿದ್ದ.


ಅಭಿನಯ : ಸಾರಾ

ಪಿಯಾನೊ ಬಾರಿಸುವುದು, ಪಿಸ್ತೂಲಿನಿಂದ ಗುಂಡು ಹಾರಿಸುವುದು ಮತ್ತು ಮೀನು ಹಿಡಿಯುವುದು ಅವಳ ಮೆಚ್ಚಿನ ಹವ್ಯಾಸಗಳು. ಆಕೆ ರಚಿಸಿದ ವರ್ಣಚಿತ್ರಗಳು ಆಗಾಗ ಪ್ರದರ್ಶಿತವಾಗುತ್ತಿದ್ದುವು. ಅವಳು ನಿರ್ಮಿಸಿದ ಶಿಲ್ಪಕೃತಿಗಳನ್ನು ಜನ ಹೊಗಳುತ್ತಿದ್ದರು.

1899ರಲ್ಲಿ ಆಕೆ ತನ್ನದೇ ನಾಟಕ ಸಂಸ್ಥೆಯನ್ನು ಸಂಘಟಿಸಿದಳು. 'ಸಾರಾ ಬರ್ನ್ಹಾರ್ಟ್ ನಾಟಕ ಸಂಸ್ಥೆ'ಯ ಮೊದಲ ನಾಟಕ 'ಹ್ಯಾಮ್ಲೆಟ್'. ಸ್ವತಃ ಸಾರಾ ಆ ನಾಟಕದಲ್ಲಿ ಹ್ಯಾಮ್ಲೆಟನ ಪಾತ್ರ ವಹಿಸಿದಳು. ಅನಂತರ ಅನೇಕ ನಾಟಕಗಳಲ್ಲಿ ಪುರುಷ ಪಾತ್ರವನ್ನು ಅವಳೇ ವಹಿಸುತ್ತಿದ್ದಳು. ಸಾರಾ ಬರ್ನ್ಹಾರ್ಟ್ ಕೆಲವು ಮೂಕ ಚಲಚ್ಚಿತ್ರಗಳಲ್ಲೂ ಅಭಿನಯಿಸಿದ್ದಾಳೆ. ಒಂದು ಕಾದಂಬರಿ, ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕ ಮತ್ತು ಮೂರು ನಾಟಕಗಳನ್ನು ಬರೆದಿದ್ದಾಳೆ. ಪ್ಯಾರಿಸಿನ ನಾಟಕ ಶಾಲೆಯಲ್ಲಿ ಕೆಲ ಕಾಲ ಇವಳು ಪ್ರಾಧ್ಯಾಪಕಳೂ ಆಗಿದ್ದಳು.

ಅಮೆರಿಕದ ಪ್ರವಾಸದಲ್ಲಿದ್ದಾಗ, ಜಿಮ್ನು, ಸಾರಾಳ ಬಲಗಾಲಿಗೆ ಬಲವಾದ ಪೆಟ್ಟು ತಗಲಿತು. ಬರಬರುತ್ತ ಇದರ ನೋವು ವಿಪರೀತವಾಗಿ ಆ ಕಾಲನ್ನೇ ಕತ್ತರಿಸಬೇಕಾಯಿತು. ಇದು ನಡೆದದ್ದು 1915ರಲ್ಲಿ. ಆಗ ಅವಳಿಗೆ ಎಪ್ಪತ್ತು ವರ್ಷ.

ಮರದ ಕಾಲಿನ ನೆರವಿನಿಂದ ನಡೆಯುತ್ತಿದ್ದರೂ ಸಾರಾಳಿಗೆ ನಾಟಕದ ಹುಚ್ಚು ಹೋಗಲಿಲ್ಲ. ಗಾಲಿಗಳಿದ್ದ ಕುರ್ಚಿಯಲ್ಲಿ ಕುಳಿತು ಅವಳು ನಾಟಕದಲ್ಲಿ ಅಭಿನಯಿಸುತ್ತಿದ್ದಳು. [illegible] ಅವಳು [illegible]. ಒಂದನೆಯ ಮಹಾಯುದ್ಧದ ಕಾಲದಲ್ಲಿ ಯುದ್ಧರಂಗಕ್ಕೆ ತೆರಳಿ, ಸೈನಿಕರಿಗೆ ಮನೋರಂಜನೆ ನೀಡಿದಳು.

1923ರ ಮಾರ್ಚ್ 26ರಂದು ತೀರಿಕೊಂಡಾಗಲೂ ಒಂದು ನಾಟಕದ ಪಾತ್ರ ವಿವರ ಅವಳ ಬದಿಯಲ್ಲಿತ್ತು.

## 'ಸಾವಿರದೊಂದು ರಾತ್ರಿ'

ಕತ್ತೆಯನ್ನು ಕರೆದುಕೊಂಡು ಹೊರಟಿದ್ದ ಪೆದ್ದನೊಬ್ಬನಿಗೆ ಇಬ್ಬರು ಮೋಸಗಾರರು ಎದುರಾದರು. ಅವರಲ್ಲೊಬ್ಬ, ಕತ್ತೆ ಹಾರುವಂತೆ ಮಾಡುವುದಾಗಿ ಹೇಳಿ, ಕತ್ತೆಯನ್ನು ಬಿಚ್ಚಿ ಸ್ನೇಹಿತನೊಡನೆ ಕಳುಹಿಸಿ, ತಾನೇ ಹಗ್ಗವನ್ನು ಕಟ್ಟಿಕೊಂಡು ಪೆದ್ದನ ಹಿಂದೆ ನಡೆದ. ಸ್ವಲ್ಪ ದೂರ ಸಾಗಿದ ಮೇಲೆ ಅವನು ನಿಲ್ಲಲು, ಪೆದ್ದ ಹಿಂದಿರುಗಿ ನೋಡಿ ಅವನನ್ನು ಕಂಡು "ನೀನು ಯಾರು?" ಎಂದು ವಿಚಾರಿಸಿದ. ಮೋಸಗಾರ, "ನಾನೇ ಕತ್ತೆ. ಕುಡಿದು ಬಂದಾಗ ಬುದ್ಧಿ ಹೇಳಿದ ತಾಯಿಗೆ ಹೊಡೆದದ್ದರಿಂದ ಕತ್ತೆಯಾದೆ; ನಿನ್ನ ಬಳಿ ಇದ್ದೆ" ಎಂದ. "ನಿನ್ನನ್ನು ದುಡಿಸಿದೆ. ಕ್ಷಮೆ ಇರಲಿ," ಎಂದು ಹೇಳಿ ಪೆದ್ದ ಅವನನ್ನು ಬಿಟ್ಟು ಮನೆಗೆ ಬಂದ.

ಆತ ಬರಿಗೈಯಲ್ಲಿ ಬಂದುದನ್ನು ನೋಡಿ ಅವನ ಹೆಂಡತಿ "ಕತ್ತೆ ಎಲ್ಲಿ?" ಎಂದು ಪ್ರಶ್ನಿಸಿದಳು. ಕತ್ತೆಯು ಹೇಳಿದ ಕಥೆಯನ್ನು ಆತ ಅವಳಿಗೆ ತಿಳಿಸಿದ. ಅವಳಿಗೂ ಕೆಡುಕೆನಿಸಿತು. ಪ್ರಾಯಶ್ಚಿತ್ತವೆಂದು, ಬಡವರಿಗೆ ದಾನಧರ್ಮ ಮಾಡಿದಳು. ಬೇರೆ ಕತ್ತೆಯನ್ನು ತಂದು ಕೆಲಸ ಆರಂಭಿಸಲು ಅವಳೇ ಸೂಚಿಸಿದಳು. ಪೆದ್ದ ಕತ್ತೆ ತರಲು ಹೊರಟ. ಮಾರುಕಟ್ಟೆಯಲ್ಲಿ ತನ್ನ ಹಿಂದಿನ ಕತ್ತೆಯನ್ನು ಕಂಡು ಅದರ ಬಳಿ ಹೋಗಿ ಕಿವಿಯಲ್ಲಿ "ಪುನಃ ಕುಡಿದು ತಾಯಿಗೆ ಹೊಡೆದು, ಈ ಸ್ಥಿತಿಗೆ ಬಂದೆಯಾ? ನೀನು ನನಗೆ ಬೇಡ" ಎಂದು ಉಸುರಿ, ಅಲ್ಲಿಂದ ಹೊರಟ.

ಇದು 'ಸಾವಿರದೊಂದು ರಾತ್ರಿ' ಕಥಾವಳಿಯ ಒಂದು ಕಥೆ.

'ಸಾವಿರದೊಂದು ರಾತ್ರಿ ಕಥೆಗಳು' ಅಥವಾ 'ಯವನಯಾಮಿನೀ ವಿನೋದ ಕಥೆಗಳು' ವಿಶ್ವದಾದ್ಯಂತ ಜನಪ್ರಿಯವಾಗಿರುವ ಕಥಾಸಂಗ್ರಹ. ಅದರ ರಚನೆಯ ಕಾಲವಾಗಲೀ, ಲೇಖಕ ಯಾರೆಂಬುದಾಗಲೀ ಖಚಿತವಾಗಿ ಗೊತ್ತಿಲ್ಲ. ಬಹುಶಃ ಇವು ಪರ್ಷಿಯದ ಕಥೆಗಳಿರಬಹುದು. ಬಾಯಿಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಹಬ್ಬಿ ಇವು ಶತಮಾನಗಳ ಕಾಲ ಪ್ರಸಾರಗೊಂಡಿವೆ.

ಪುಸ್ತಕ ಪ್ರಪಂಚಕ್ಕೆ ಈ ಕಥಾಸಂಗ್ರಹ ಕಾಲಿಟ್ಟಿದ್ದು 1704–17ರ ಅವಧಿಯಲ್ಲಿ. ಅರಬಿ ಭಾಷೆಯಿಂದ ಫ್ರೆಂಚ್ ಭಾಷೆಗೆ ತರ್ಜುಮೆಯಾದ ಮೇಲೆ ಯೂರೋಪಿನವರಿಗೆ ಈ ಮನೋರಂಜಕ ಪುಸ್ತಕದ ಪರಿಚಯ ವಾಯಿತು. ಆಂಟೋನಿ ಗ್ಯಾಲಂಡ್ ಭಾಷಾಂತರಿಸಿದ ಈ ಸಂಗ್ರಹ 'ಅರಬಿಯದ ರಾತ್ರಿಗಳು' ಎಂದು ಪ್ರಖ್ಯಾತವಾಯಿತು. 1724ರಲ್ಲಿ ಇಂಗ್ಲಿಷಿನ ಭಾಷಾಂತರ ಬಂತು. ಮುಂದೆ ಯೂರೋಪ್ ಹಾಗೂ ಏಷ್ಯದ ಪ್ರಮುಖ ಭಾಷೆಗಳಿಗೆ ಇದು ಅನುವಾದಗೊಂಡಿತು.

'ಸಾವಿರದೊಂದು ರಾತ್ರಿ'ಯ ಕಥೆಗಳನ್ನು ಒಂದು ಚೌಕಟ್ಟಿನಲ್ಲಿ ಸೇರಿಸಿದ್ದಾರೆ. ಶಹರಿಯಾರ್ ಸುಲ್ತಾನನ ಪತ್ನಿ ಅವನಿಗೆ ದ್ರೋಹ ಬಗೆದದ್ದರಿಂದ ಅವನಿಗೆ ಸ್ತ್ರೀಯರ ಬಗೆಗೆ ಕ್ರೋಧ ಉಂಟಾಗುತ್ತದೆ.



ಶಹರ್‌ಜಾದೆ—ಶಹರಿಯಾರ್

ಪ್ರತಿ ದಿನ ಒಬ್ಬಳನ್ನು ಮದುವೆಯಾಗಿ ಮಾರನೆಯ ದಿವಸ ಅವಳನ್ನು ಕೊಂದು ಹಾಕುವುದರ ಮೂಲಕ ಸೇಡು ತೀರಿಸಿಕೊಳ್ಳಲು ಯತ್ನಿಸುತ್ತಾನೆ. ಹೀಗೆಯೇ ಮೂರು ವರ್ಷಗಳು ಕಳೆದು ಹೋಗುತ್ತವೆ. ಕೊನೆಗೆ ಮಂತ್ರಿಯ ಮಗಳು ಶಹರ್‌ಜಾದೆ ಅರಸನನ್ನು ಮದುವೆಯಾಗಲು ಮುಂದೆ ಬರುತ್ತಾಳೆ. ಪ್ರತಿ ರಾತ್ರಿ ಒಂದು ಕಥೆಯನ್ನು ಆರಂಭಿಸಿ, ಆಸಕ್ತಿ ಕೆರಳಿಸುವ ಘಟ್ಟದಲ್ಲಿ, ಬೆಳಗಿನ ವೇಳೆಗೆ, ನಿಲ್ಲಿಸಿಬಿಡುತ್ತಾಳೆ. ಅರಸನು ಅವಳನ್ನು ಕೊಲ್ಲದೆ, ಅದೊಂದು ದಿನ ಜೀವದಾನ ಮಾಡಿ, ಕಥೆಯನ್ನು ಪೂರ್ಣವಾಗಿ ಕೇಳಬಯಸುತ್ತಾನೆ. ಶಹರ್‌ಜಾದೆ ಹಳೆಯ ಕಥೆ ಮುಗಿಯುತ್ತಿದ್ದಂತೆಯೇ ಅದರೊಡನೆ ಸಂಬಂಧಿಸಿದಂತೆ ಇನ್ನೊಂದು ಕಥೆಯನ್ನು ಆರಂಭಿಸಿಬಿಡುತ್ತಾಳೆ.

ಹೀಗೆ 1001 ದಿನಗಳು ಕಳೆದುಹೋಗುತ್ತವೆ. ಅರಸ ತನ್ನ ನಿರ್ಧಾರವನ್ನು ಬದಲಿಸಿ ಅವಳನ್ನೇ ರಾಣಿಯನ್ನಾಗಿ ಮಾಡಿಕೊಳ್ಳುತ್ತಾನೆ. ಶಹರ್‌ಜಾದೆ ಶಹರಿಯಾರನಿಗೆ ಹೇಳಿದ ಕಥೆಗಳೇ 'ಸಾವಿರದೊಂದು ರಾತ್ರಿ' ಕಥೆಗಳು.

ಈ ಕಥೆಗಳು ಮಕ್ಕಳ ಮುಂದೆ ಮಾಯಾಪ್ರಪಂಚವನ್ನೇ ತೆರೆದಿಡುವ ಉತ್ತಮ ಕಥಾ ಸಂಗ್ರಹ. 'ಅಲ್ಲಾವುದ್ದೀನನ ಅದ್ಭುತ ದೀಪ', 'ಅಲಿ ಬಾಬ ಮತ್ತು ನಲವತ್ತು ಮಂದಿ ಕಳ್ಳರು', 'ಸಿಂದಬಾದ್ ನಾವಿಕ' ಮತ್ತಿತರ ಪ್ರಸಿದ್ಧ ಕಥೆಗಳೆಲ್ಲ ಈ ಸಂಕಲನದಲ್ಲಿವೆ.

## ಸಾಹಿತ್ಯ

ಸಾಹಿತ್ಯ ಎಂಬುದು ಕಾವ್ಯಕ್ಕೆ ಇರುವ ಇನ್ನೊಂದು ಹೆಸರು. ಕಾವ್ಯದಲ್ಲಿ ಶಬ್ದ, ಅರ್ಥಗಳು ಜೊತೆಗೂಡಿ ಇರುವುದರಿಂದ ಅದನ್ನು ಸಾಹಿತ್ಯ ವೆನ್ನುತ್ತಾರೆ. 'ಸಹಿತ' ಎಂದರೆ ಜೊತೆಗೂಡಿದ್ದು. ಇದರ ಭಾವವೇ ಸಾಹಿತ್ಯ. ಇದು ಪದ್ಯ ಅಥವಾ ಗದ್ಯರೂಪದಲ್ಲಿರಬಹುದು ; ಗದ್ಯಪದ್ಯಗಳ ಮಿಶ್ರರೂಪದಲ್ಲಿರಬಹುದು. ಈಗ ಕವನ ಕವಿತೆಗಳನ್ನು ಕಾವ್ಯವೆಂದೂ ಕಥೆ ಕಾದಂಬರಿ, ಪ್ರಬಂಧ ಮುಂತಾದವನ್ನು ಸಾಹಿತ್ಯವೆಂದೂ ಕರೆಯುವ ಪದ್ಧತಿ ಇದೆ.

ಜೀವನ, ಅದರ ಆದರ್ಶ, ಸಮಸ್ಯೆ, ಸಾಧನೆ, ಅವನತಿಗಳ ದರ್ಶನವನ್ನು ಸಾಹಿತ್ಯ ಓದುಗನಿಗೆ ಮಾಡಿಸುತ್ತದೆ. ಒಟ್ಟಿನಲ್ಲಿ ಅದು ಜೀವನವನ್ನು ಪ್ರತಿಬಿಂಬಿಸುತ್ತದೆ ; ಈ ಪ್ರತಿಬಿಂಬವನ್ನು ಯಶಸ್ವಿಯಾಗಿ ಪರಿಣಾಮಕಾರಿಯಾಗಿ ರೂಪಿಸುವುದು ಶ್ರೇಷ್ಠ ಬರಹಗಾರನಿಗೆ ಮಾತ್ರ ಸಾಧ್ಯ. ಇಂಥ ಲೇಖಕರಿಂದ ಮಾತ್ರ ಉತ್ತಮ ಸಾಹಿತ್ಯ ಸೃಷ್ಟಿಯಾಗುತ್ತದೆ. ಅದನ್ನು ಓದಿ ಅರ್ಥಮಾಡಿಕೊಂಡವರು ಸಂತೋಷ ಪಡುತ್ತಾರೆ; ಸಂಸ್ಕಾರ ಹೊಂದುತ್ತಾರೆ.

ಪ್ರತಿಯೊಂದು ಶ್ರೇಷ್ಠ ಪುಸ್ತಕವೂ ಮಾನವನನ್ನು ಕುರಿತಾದ ಸಾಕ್ಷ್ಯಬರಹ. ಇದರಲ್ಲಿ ಮಾನವೀಯತೆ ಮಿಡಿಯುತ್ತಿರುತ್ತದೆ.

ಕಲ್ಪಿತ ಕಥೆ ಮತ್ತು ಇತರ ಬರೆಹ —ಇವು ಸಾಹಿತ್ಯದ ಎರಡು ಬಗೆ. ಸಾಹಿತ್ಯ ಆಯಾ ಕಾಲದ ಸಾಮಾಜಿಕ ಸ್ಥಿತಿಗತಿಗಳಿಗೂ ಜೀವನ ಮೌಲ್ಯಕ್ಕೂ ಕನ್ನಡಿಯಂತಿರುತ್ತದೆ. ಅದು ಯುಗಧರ್ಮದ ವಾಣಿಯಾಗುತ್ತದೆ. ಸಮಾಜಕ್ಕೆ ಸಂಜೀವಿನಿಯೂ ಆಗುತ್ತದೆ.

ನೋಡಿ : ಆಧುನಿಕ ಕಾವ್ಯ ; ಉಪಮೆ ; ಕಥನ ಕವನ ; ಕವಿ ; ಕವಿತೆ; ಕಾಮಿಡಿ ; ಕಾವ್ಯಮಂಜರಿ ; ಕಾವ್ಯ ಮೀಮಾಂಸೆ ; ಖಳನಾಯಕ ; ಗ್ರಂಥಕರ್ತ ; ಗೀತನಾಟಕ ; ಚುಟಕ ; ಛಂದಸ್ಸು ; ಟ್ರಾಜಿಡಿ ; ದಾಸಸಾಹಿತ್ಯ ; ಧಾರ್ಮಿಕ ಸಾಹಿತ್ಯ ; ನವರಸ ; ನವ್ಯ ಸಾಹಿತ್ಯ ; ನಾಟಕ ; ನೀತಿಕಥೆ ; ಪ್ರತಿಮಾ ವಿಧಾನ ; ಪ್ರವಾಸ ಸಾಹಿತ್ಯ ; ಪ್ರಸಾರ ನಾಟಕ ; ಪುರಾಣ ; ನಾಟಕ ; ಭಾರತೀಯ ಕಾವ್ಯಮೀಮಾಂಸೆ ; ಭಾವಗೀತೆ ; ಭಾಷಾಂತರ ; ಮಕ್ಕಳ ಸಾಹಿತ್ಯ ; ಮಹಾಕಾವ್ಯ ; ಮಹಾತ್ಮ್ಯ ಸಾಹಿತ್ಯ ; ರಸಾನುಭವ ; ರೂಪಕಾಲಂಕಾರ ; ರೂಪಾಂತರ ; ವಚನ ಸಾಹಿತ್ಯ ; ವಿಜ್ಞಾನ ಕಥಾ ಸಾಹಿತ್ಯ ; ವಿಮರ್ಶೆ ; ಸಂಶೋಧನೆ ; ಸಣ್ಣ ಕಥೆ ; ಸುನೀತ ; ಸುಭಾಷಿತ ; ಸ್ತೋತ್ರ ಸಾಹಿತ್ಯ ; ಸೌಂದರ್ಯ ಮೀಮಾಂಸೆ

## ಸಾಹಿತ್ಯ ಅಕಾದೆಮಿ

'ಸಾಹಿತ್ಯ' ಎಂಬುದು ಸಂಸ್ಕೃತ ಶಬ್ದ ; 'ಅಕಾದೆಮಿ' ಗ್ರೀಕ್ ಶಬ್ದ.

ಸಾಹಿತ್ಯ ಕ್ಷೇತ್ರದ ಪ್ರತಿಭಾನ್ವಿತರನ್ನು ಗೌರವಿಸುವುದು, ಭಾರತದ ಒಂದು ಭಾಷೆಯ ಕೃತಿಗಳನ್ನು ಇತರ ಭಾಷೆಗಳಿಗೆ ಭಾಷಾಂತರಿಸುವುದು, ಲೇಖಕರಲ್ಲಿ ಸೃಜನಾತ್ಮಕ ಸಾಹಿತ್ಯ ರಚನೆಯನ್ನು ಪ್ರೋತ್ಸಾಹಿಸುವುದು— ಇವು ಸಾಹಿತ್ಯ ಅಕಾದೆಮಿಯ ಉದ್ದೇಶಗಳು.



ಲಾಂಛನ



ರಾಜ್ಯ ಸಾಹಿತ್ಯ ಅಕಾದೆಮಿ ಪ್ರಶಸ್ತಿ
—ಕೆ. ಕೆ. ಹೆಬ್ಬಾರ್ ಕೃತಿ

ಸಾಹಿತ್ಯ ಅಕಾದೆಮಿ ರಾಷ್ಟ್ರೀಯಂ ವ್ಯಾಪ್ತಿಯುಳ್ಳ ಸಂಸ್ಥೆ. 1954ರ ಮಾರ್ಚ್ 12ರಂದಂ ಭಾರತ ಸರಕಾರದಿಂದ ಸ್ಥಾಪಿತವಾಯಿತು. ಭಾರತದ ಪ್ರಮುಖ ಭಾಷೆಗಳಲ್ಲಿ ನಡೆಯುವ ಸಾಹಿತ್ಯ ಚಟುವಟಿಕೆಗಳನ್ನು ಸಂಯೋಜಿಸಿ, ದೇಶದಲ್ಲಿ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಐಕ್ಯವನ್ನು ಸಾಧಿಸುವುದು ಈ ಸಂಸ್ಥೆಯ ಉದ್ದೇಶ. ಸ್ವಯಂ ಅಧಿಕಾರವುಳ್ಳ ಸಂಸ್ಥೆ ಸಾಹಿತ್ಯ ಅಕಾದೆಮಿ. ಅಧಿಕಾರವೆಲ್ಲವೂ ಅದರ ಪ್ರಧಾನ ಅಂಗವಾದ ಜನರಲ್ ಕೌನ್ಸಿಲ್‌ನಲ್ಲಿ ಕೇಂದ್ರೀಕೃತವಾಗಿದೆ.

ಜನರಲ್ ಕೌನ್ಸಿಲ್‌ನ ಅವಧಿ ಐದು ವರ್ಷಗಳು. ಸಾಹಿತ್ಯ ಅಕಾದೆಮಿಯ ಅಧ್ಯಕ್ಷ, ಉಪಾಧ್ಯಕ್ಷ, ಆರ್ಥಿಕ ಸಲಹೆಗಾರರ ಇಬ್ಬರು ಪ್ರತಿನಿಧಿಗಳು, ಕಾರ್ಯಕಾರಿ ಸಮಿತಿಯ ಸದಸ್ಯರು ಇವರೆಲ್ಲರನ್ನೂ ಜನರಲ್ ಕೌನ್ಸಿಲು ಚುನಾಯಿಸುತ್ತದೆ.

ಶ್ರೀ ಜವಾಹರಲಾಲ್ ನೆಹರೂ ಸಾಹಿತ್ಯ ಅಕಾದೆಮಿಯ ಮೊದಲ ಅಧ್ಯಕ್ಷರಾಗಿದ್ದರು. ಅವರು 1958ರಲ್ಲಿ ಮತ್ತು 1963ರಲ್ಲಿ ಪುನಃ ಅಧ್ಯಕ್ಷರಾಗಿ ಆಯ್ಕೆಯಾದರು. ಅವರ ಅನಂತರ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಹಾಗೂ ಡಾ. ಜಾಕೀರ್ ಹುಸೇನ್ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಬಳಿಕ ಡಾ. ಸುನೀತಿ ಕುಮಾರ ಚಟರ್ಜಿ ಸಾಹಿತ್ಯ ಅಕಾದೆಮಿಯ ಅಧ್ಯಕ್ಷರಾದರು.

ಸಾಹಿತ್ಯ ಅಕಾದೆಮಿಯ ಪ್ರಧಾನ ಕಾರ್ಯಾಲಯ ನವದೆಹಲಿಯ 'ರವೀಂದ್ರ ಭವನ'ದಲ್ಲಿದೆ. 1961ರಲ್ಲಿ ಗುರುದೇವ ರವೀಂದ್ರನಾಥ ಠಾಕೂರರ ಜನ್ಮ ಶತಾಬ್ದಿ ಸಮಾರಂಭದ ನೆನಪಿಗಾಗಿ ಕಟ್ಟಿದ ಆ ಭವನದಲ್ಲಿ ಸಂಗೀತ ನಾಟಕ ಮತ್ತು ಲಲಿತಕಲಾ ಅಕಾದೆಮಿಗಳ ಕಾರ್ಯಾಲಯಗಳೂ ಇವೆ. ಭಾರತದ ಪ್ರಮುಖ ಭಾಷೆಗಳ ಸುಮಾರು 35,000 ಗ್ರಂಥಗಳಿರುವ ಸಾಹಿತ್ಯ ಅಕಾದೆಮಿಯ ಗ್ರಂಥ ಭಂಡಾರವೂ ಇಲ್ಲೇ ಇದೆ. ಮದರಾಸು, ಮುಂಬಯಿ, ಕಲ್ಕತ್ತೆಗಳಲ್ಲಿ ಸಾಹಿತ್ಯ ಅಕಾದೆಮಿಯ ಪ್ರಾದೇಶಿಕ ಕಾರ್ಯಾಲಯಗಳಿವೆ.

'ಇಂಡಿಯನ್ ಲಿಟರೇಚರ್' ಎನ್ನುವ ಇಂಗ್ಲಿಷ್ ಮಾಸ ಪತ್ರಿಕೆ ಮತ್ತು 'ಸಂಸ್ಕೃತ ಪ್ರತಿಭಾ' ಎನ್ನುವ ಸಂಸ್ಕೃತ ಭಾಷೆಯ ಅರ್ಧ ವಾರ್ಷಿಕ ಪತ್ರಿಕೆ ಸಾಹಿತ್ಯ ಅಕಾದೆಮಿಯಿಂದ ಪ್ರಕಟವಾಗುವ ಎರಡು ಪ್ರಮುಖ ಪತ್ರಿಕೆಗಳು. ಜನಸಾಮಾನ್ಯರಿಗೆ ಸಾಹಿತ್ಯ ಅಕಾದೆಮಿಯ ಕಾರ್ಯ ಚಟುವಟಿಕೆಗಳನ್ನು ಪರಿಚಯ ಮಾಡಿಕೊಡಲು 'ಮಾಸಿಕ ವಾರ್ತಾ ಪುರವಣಿ'ಯೂ ಪ್ರಕಟವಾಗುತ್ತಿದೆ.

ಭಾರತೀಯ ಭಾಷೆಗಳಲ್ಲಿ ಅತ್ಯುತ್ತಮವಾದ ಕೃತಿಗೆ ವಾರ್ಷಿಕ ಬಹುಮಾನ ನೀಡುವ ಯೋಜನೆಯೊಂದನ್ನು ಸಾಹಿತ್ಯ ಅಕಾದೆಮಿ ರೂಪಿಸಿದೆ. ಇದರಂತೆ ಪ್ರತಿಯೊಂದು ಭಾಷೆಯಲ್ಲೂ ಅತ್ಯಂತ ಶ್ರೇಷ್ಠ ಗುಣಮೌಲ್ಯವಿರುವ ಕೃತಿಯನ್ನು ರಚಿಸಿದ ಸಾಹಿತಿಗೆ 5,000 ರೂ. ಬಹುಮಾನವನ್ನೂ ತಾಮ್ರಪತ್ರವನ್ನೂ ನೀಡಲಾಗುತ್ತದೆ. ಭಾರತದ ಸಂವಿಧಾನದಲ್ಲಿ ಹೇಳಿದ 15 ಭಾಷೆಗಳಲ್ಲದೆ, ಮೈಥಿಲಿ, ಡೋಗ್ರಿ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಭಾರತೀಯ ಲೇಖಕರು ಬರೆದ ಕೃತಿಗಳಿಗೂ ಈ ಬಹುಮಾನ ದೊರೆಯುತ್ತದೆ. ಭಾರತದ ಸಾಹಿತ್ಯದ ಶ್ರೀಮಂತಿಕೆಯ ಪ್ರಜ್ಞೆ ಜನತೆಯಲ್ಲಿ ಬೆಳೆಯಲು ಸಾಹಿತ್ಯ ಅಕಾದೆಮಿ ಶ್ರಮಿಸುತ್ತಿದೆ.

## ಸ್ಕಾಟ್

ಕೇವಲ ಒಂದೂವರೆ ವರ್ಷದ ಮಗುವಾಗಿದ್ದಾಗಲೇ ಪಾರ್ಶ್ವವಾಯು ಬಡಿದು ಬಲಗಾಲು ಉಪಯೋಗಕ್ಕೆ ಬಾರದಾಯಿತು. ಈ ಅನನುಕೂಲದಿಂದ ಸ್ವಲ್ಪವಾದರೂ ಚೇತರಿಸಿಕೊಳ್ಳಲೆಂದು ಇವನ ತಂದೆ ಇವನನ್ನು ತಾತನ ಮನೆಯಲ್ಲಿ ಬಿಟ್ಟ. ಅಲ್ಲಿ ಇವನ ಚಿಕ್ಕಮ್ಮ ಲಾವಣಿಗಳನ್ನು ಹಾಡಿ ಇವನನ್ನು ಸಂತಸಗೊಳಿಸುತ್ತಿದ್ದಳು. ಅಜ್ಜಿ ಸ್ಕಾಟ್ಲೆಂಡಿನ ಐತಿಹಾಸಿಕ ವೀರರ ಕಥೆಗಳನ್ನೂ ಹಾಡುಗಳನ್ನೂ ಹೇಳುತ್ತಿದ್ದಳು.

ಈ ಬಗೆಯ ವಾತಾವರಣದಲ್ಲಿ ಬೆಳೆದ ಸ್ಕಾಟ್ ಮುಂದೆ ತಾನೇ ಇಂಥ ಕಥೆಗಳನ್ನು ಬರೆದ. ಇವು ತುಂಬ ಜನಪ್ರಿಯವಾದುವು; ಪ್ರಕಟವಾಗುತ್ತಿದ್ದಂತೆ ಮಾರಾಟವಾಗಿಬಿಡುತ್ತಿದ್ದುವು. ಕಾಲೇಜಿನ ಹುಡುಗರು ಇವನ ಪುಸ್ತಕಗಳಿಗಾಗಿ ಹಾತೊರೆಯುತ್ತಿದ್ದರು. ಒಮ್ಮೆ ಯುದ್ಧಭೂಮಿಯಲ್ಲಿ ಸುತ್ತಲೂ ಭೀಕರ ಕದನ ನಡೆಯುತ್ತಿದ್ದಾಗ, ಒಬ್ಬ ಅಧಿಕಾರಿ ತನ್ನ ಸೈನಿಕರಿಗೆ ಇವನ ಕಥೆಯೊಂದನ್ನು ಓದಿ ಹೇಳಿದನಂತೆ!

ವಾಲ್ಟರ್ ಸ್ಕಾಟ್ ಸ್ಕಾಟ್ಲೆಂಡಿನ ಎಡಿನ್‌ಬರೋದಲ್ಲಿ 1771 ಆಗಸ್ಟ್ 15ರಂದು ಜನಿಸಿದ. ಹುಡುಗನಾಗಿದ್ದಾಗ ಖಾಸಗಿ ಉಪಾಧ್ಯಾಯರಲ್ಲಿ ವಿದ್ಯೆ ಕಲಿತು, 1783ರಲ್ಲಿ ಎಡಿನ್‌ಬರೋ ವಿಶ್ವವಿದ್ಯಾನಿಲಯವನ್ನು ಸೇರಿದ. ಅಲ್ಲಿ ಐತಿಹಾಸಿಕ ಕಥೆಗಳನ್ನು ಕಟ್ಟಿ ತನ್ನ ಮಿತ್ರನೊಬ್ಬನಿಗೆ ಹೇಳುತ್ತಿದ್ದುದೂ ಉಂಟು. ಕಾನೂನು ಶಾಸ್ತ್ರವನ್ನು ಅಭ್ಯಸಿಸುತ್ತಿದ್ದಾಗ ಸ್ಕಾಟ್ಲೆಂಡಿನ ಐತಿಹಾಸಿಕ ಪ್ರದೇಶಗಳಿಗೆ ಭೇಟಿ ಇತ್ತು ಅವನ್ನು ನೋಡಬೇಕೆಂದಿದ್ದ ತನ್ನ ಆಸೆಯನ್ನು ತೀರಿಸಿಕೊಂಡ. ಇದೇ ಸಮಯದಲ್ಲಿ ಅಲ್ಲಿನ ಕೆಲ ಪ್ರದೇಶಗಳಲ್ಲಿ ಪ್ರಚಾರದಲ್ಲಿದ್ದ ಲಾವಣಿ, ಹಾಡುಗಳನ್ನು ಕೂಡ ಸಂಗ್ರಹಿಸಿದ.

1797ರಲ್ಲಿ ಸ್ಕಾಟ್ ಮದುವೆಯಾದ. ಕಾನೂನು ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರೂ ಹಾಡುಗಬ್ಬ ಸಂಗ್ರಹಿಸುವುದನ್ನು ಬಿಡಲಿಲ್ಲ. 1799ರಲ್ಲಿ ಸೆಲ್‌ಕರ್ಕ್ ಪ್ರದೇಶದ ಡೆಪ್ಯೂಟಿ ಷೆರೀಫ್ ಆಗಿ ನೇಮಿತನಾದಾಗ ಇವನಿಗೆ ಕೈತುಂಬ ಸಂಬಳವೂ ಸಿಕ್ಕಿತು; ಕೆಲಸದ ಭಾರವೂ ಕಡಮೆಯಾಯಿತು. 1802–03 ರಲ್ಲಿ ಇವನ 'ಸ್ಕಾಟ್ಲೆಂಡಿನ ಗಡಿಯ ಮಧ್ಯಯುಗದ ಹಾಡುಗಳು' ಎಂಬ ಕೃತಿ ಮೂರು ಸಂಪುಟಗಳಲ್ಲಿ ಪ್ರಕಟವಾಯಿತು. 1805ರಲ್ಲಿ ಪ್ರಕಟವಾದ 'ಕೊನೆಯ ಚಾರಣ ಕಥನ ಕವನ' ಅತ್ಯಂತ ಜನಪ್ರಿಯವಾಯಿತು. 'ಸರೋವರದ ಮಹಿಳೆ' (1810) ಎಂಬ ಇವನ ಕವನ ಎಷ್ಟು ಜನಪ್ರಿಯವಾಯಿತೆಂದರೆ, ಈ ಕವನದ ಘಟನೆ ನಡೆದ ಸ್ಕಾಟ್ಲೆಂಡಿನ ಪ್ರದೇಶಗಳನ್ನು ನೋಡಲು ಅಸಂಖ್ಯಾತ ಪ್ರವಾಸಿಗರು ಸ್ಕಾಟ್ಲೆಂಡಿಗೆ ನುಗ್ಗಿದರು.

ತಾನು ಮೂಲತಃ ಕವಿ ಎಂದುಕೊಂಡಿದ್ದ ಸ್ಕಾಟ್‌ಗೆ ಕಾದಂಬರಿ ಬರೆಯಲು ಮೊದಮೊದಲು ಕೊಂಚ ಉದಾಸೀನ. ತನ್ನ ಮೊಟ್ಟಮೊದಲ ಐತಿಹಾಸಿಕ ಕಾದಂಬರಿ 'ವೇವರ್ಲಿ'(1814)ಯನ್ನು ತನ್ನ ಹೆಸರು ಹಾಕದೆಯೇ ಪ್ರಕಟಿಸಿದ. ಅನಂತರದ ತನ್ನ ಕಾದಂಬರಿಗಳ ಮೇಲೂ 'ವೇವರ್ಲಿಯ ಕರ್ತೃವಿನಿಂದ' ಎಂದೇ ಹೆಸರು ಹಾಕುತ್ತಿದ್ದ. ಇದೇ ವೇಳೆಗೆ ಬೈರನನ ಕೃತಿಗಳಿಂದಾಗಿ ಸ್ಕಾಟ್‌ನ ಕಾವ್ಯದ ಜನಪ್ರಿಯತೆ ಕೊಂಚ ತಗ್ಗಿದರೂ ಅವನ ಬಗೆಗೆ ಗೌರವ ಕಡಮೆಯಾಗಲಿಲ್ಲ. 1813ರಲ್ಲಿ

ಸ್ಕಾಟ್‌ನನ್ನು ರಾಷ್ಟ್ರಕವಿಯನ್ನಾಗಿ ಆರಿಸಿದಾಗ ಅವನು ಕವಿ ಸೌದಿಗೆ ಆ ಗೌರವ ಸಲ್ಲಲೆಂದು ಸೂಚಿಸಿ, ತಾನು ಅದನ್ನು ಬಿಟ್ಟುಕೊಟ್ಟ.

'ವೇವರ್ಲಿ' ಸ್ಕಾಟ್‌ನ ಮೊದಲ ಕೃತಿ. ಇಂಗ್ಲಿಷ್ ಸಾಹಿತ್ಯದಲ್ಲಿ ಅದು ಮೊಟ್ಟ ಮೊದಲ ಐತಿಹಾಸಿಕ ಕಾದಂಬರಿ. ಇದು ರಮ್ಯ ಐತಿಹಾಸಿಕ ಕಾದಂಬರಿ ಸಂಪ್ರದಾಯಕ್ಕೇ ಬಲವಾದ ಬುನಾದಿಯಾಯಿತು. ಆ ಕಾಲದ ಲೇಖಕನೊಬ್ಬ, "ಆ ಕಾದಂಬರಿಯು ವಸ್ತುವಿನ ಅನಿರೀಕ್ಷಿತ ಹೊಸತನ ನಮ್ಮನ್ನು ಸಂತಸದ ವಿದ್ಯುತ್ ಷಾಕ್‌ನಂತೆ ತಟ್ಟಿತು"–ಎಂದು ಹೇಳಿದ್ದಾನೆ. ಗತಕಾಲದ ಐತಿಹಾಸಿಕ ಘಟನೆಗಳು ಕಾದಂಬರೀ ಲೋಕವನ್ನು ಪ್ರವೇಶಿಸಲು ಅನುವು ಮಾಡಿಕೊಟ್ಟ ಕಾದಂಬರಿಕಾರ ಸ್ಕಾಟ್.

'ವೇವರ್ಲಿ' ಪ್ರಕಟವಾದ ಅನಂತರ ಸ್ಕಾಟ್, ಕವನ ಬರೆಯುವುದನ್ನು ಬಿಟ್ಟು ಸಂಪೂರ್ಣವಾಗಿ ಕಾದಂಬರಿಗಳನ್ನು ಮಾತ್ರ ಬರೆಯತೊಡಗಿದ. 'ಓಲ್ಡ್ ಮಾರ್ಟಾಲಿಟಿ' (1816), 'ರಾಬ್ ರಾಯ್' (1817) 'ಐವಾನ್ ಹೋ' (1819), 'ಕೆನಿಲ್‌ವರ್ತ್' (1822), 'ಕ್ವೆಂಟಿನ್ ಡರ್‌ವಾರ್ಡ್' (1823) ಅಂಥ ಪ್ರಮುಖ ಕಾದಂಬರಿಗಳು ಬಂದುವು. ಸ್ಕಾಟ್ ತನ್ನ ಕಾದಂಬರಿಗಳ ಮೂಲಕ ಜನರ ಮನಸ್ಸು ಇತಿಹಾಸದ ಕಡೆ ಹರಿಯುವಂತೆ ಮಾಡಿದ.

ತನ್ನ ಮೊದಲ ಜನಪ್ರಿಯ ಕವನಗಳು ಪ್ರಕಟವಾದಾಗ ದೊರೆತ ಹಣದಿಂದ ಕೊಂಡುಕೊಂಡ ಅರಮನೆಯಂಥ ಭಾರಿ ಮನೆಯನ್ನು ದುರಸ್ತಿ ಮಾಡಿಸುವುದರೊಳಗೆ ಇವನಿಗಿದ್ದ ಹಣವೆಲ್ಲ ಖರ್ಚಾಗಿಹೋಗಿತ್ತು. 1826ರಲ್ಲಿ ಇವನ ಕೃತಿಗಳನ್ನು ಪ್ರಕಟಿಸುತ್ತಿದ್ದ ಪ್ರಕಾಶನ ಸಂಸ್ಥೆ ನಷ್ಟಕ್ಕೊಳಗಾದಾಗ ಇವನ ಮೈತುಂಬ ಸಾಲಗಳಾದುವು. ಏನೇ ಆದರೂ ತನ್ನ ಸಾಲಗಳನ್ನು ತೀರಿಸಿಬಿಡಬೇಕೆಂದು ಒಂದರಮೇಲೊಂದರಂತೆ ಸ್ಕಾಟ್ ಗ್ರಂಥಗಳನ್ನು ಬರೆಯಲಾರಂಭಿಸಿದ. "ಧೈರ್ಯವಿಲ್ಲದೆ ಸತ್ಯವಿರಲು ಸಾಧ್ಯವಿಲ್ಲ; ಸತ್ಯವಿಲ್ಲದೆ ಸದ್ಗುಣ, ಸೌಶೀಲ್ಯಗಳು ಇರಲು ಆಗುವುದಿಲ್ಲ", ಎಂದು ತನ್ನ ಮಕ್ಕಳಿಗೆ ಹೇಳುತ್ತಿದ್ದ ಸ್ಕಾಟ್, ತಾನು ಅಕ್ಷರಶಃ ಹಾಗೆಯೇ ನಡೆದುಕೊಂಡ. [illegible] ನಿರ್ಧರಿಸಿದ. [illegible] ನಿತ್ರಾಣನಾದ. [illegible] ಅನಂತರ ಪಾರ್ಶ್ವವಾಯು [illegible] 1832 ಸೆಪ್ಟೆಂಬರ್ 21ರಂದು ಅವನು ನಿಧನನಾದ.

1827ರಲ್ಲಿ ಪ್ರಕಟವಾದ ಅವನ 'ನೆಪೋಲಿಯನ್ ಜೀವನಚರಿತ್ರೆ' ಎಂಬ ಕೃತಿ ಅವನ ಕಾದಂಬರಿಗಳಂತೆಯೇ ಜನಪ್ರಿಯವಾಯಿತು. ಅದೇ ವರ್ಷ ತನ್ನ ಮೊಮ್ಮಗನಿಗಾಗಿ ಬರೆದಿದ್ದ 'ತಾತನ ಕಥೆಗಳು' ಪ್ರಕಟವಾಯಿತು. ಈತನಿಗೆ ಸರ್ ಪದವಿ ದೊರೆತಿತ್ತು.

ಕವನ, ನಾಟಕ, ವಿಮರ್ಶೆಗಳನ್ನು ಬರೆದು ಹಾಗೂ ಡ್ರೈಡನ್ ಸ್ವಿಫ್ಟ್ ಮೊದಲಾದವರ ಕೃತಿಗಳ ಸಂಪಾದನಕಾರ್ಯ ನಡೆಸಿದ ಸ್ಕಾಟನ ಪ್ರತಿಭೆ ಬಹುಮುಖವಾದದ್ದು. ಆದರೂ ಅವನ ಸಾಹಿತ್ಯಶಕ್ತಿ ಪ್ರಮುಖವಾಗಿ ಹೊರ ಹೊಮ್ಮಿದ್ದು ರಮ್ಯ ಐತಿಹಾಸಿಕ ಕಾದಂಬರಿಗಳ ಮೂಲಕ. ಮೂವತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದು ಅವನು ತನ್ನ ಕಾಲದ ಅತ್ಯಂತ ಜನಪ್ರಿಯ ಕಾದಂಬರಿಕಾರನಾದ.

ಐತಿಹಾಸಿಕ ಘಟನೆಗಳನ್ನು ಮಾನವೀಯತೆಯ ದೃಷ್ಟಿಯಿಂದ ನೋಡಿ ಅದನ್ನು ಅತ್ಯಂತ ಜೀವಂತವಾಗಿ ಪುನಸ್ಸೃಷ್ಟಿಸಿದ ಕೀರ್ತಿ ಸ್ಕಾಟ್‌ನದು.



ಮಾನವೀಯ ಇತಿಹಾಸ : ಸ್ಕಾಟ್

## ಸ್ವಾತಿ ತಿರುನಾಳ್

ಸ್ವಾತಿ ತಿರುನಾಳರು ಬಾಳಿದ್ದು ಕೇವಲ ಮೂವತ್ತಮೂರು ವರ್ಷ ಮಾತ್ರ. ಈ ಅಲ್ಪಾಯುಷ್ಯದಲ್ಲಿ ಅವರ ಸಾಧನೆ ಅಸಾಧಾರಣ.

ತಿರುವಾಂಕೂರು ಸಂಸ್ಥಾನದ ರಾಜವಂಶದಲ್ಲಿ 1813ರ ಏಪ್ರಿಲ್ 16ರಂದು ಇವರ ಜನನ. ಚಿಕ್ಕಂದಿನಲ್ಲಿಯೇ ಹಲವು ಭಾಷೆಗಳ ಪಾಂಡಿತ್ಯ ಗಳಿಸಿದರು. ಹದಿನಾರರ ಹರೆಯದಲ್ಲಿ ಪಟ್ಟಾಭಿಷೇಕವಾಯಿತು. 18 ವರ್ಷ ದಕ್ಷ ಆಳ್ವಿಕೆ ನಡೆಸಿದರು. ಕಲೆಗೂ ತುಂಬ ಪ್ರೋತ್ಸಾಹಕೊಟ್ಟು, ಅನೇಕ ಪ್ರತಿಭಾವಂತರನ್ನು ಬೆಳಕಿಗೆ ತಂದರು. 1846 ಡಿಸೆಂಬರ್ 26ರಂದು ದೈವಾಧೀನರಾದರು.

ಸ್ವಾತಿ ತಿರುನಾಳರು ಸ್ವತಃ ಕವಿ. ಹದಿಮೂರು ಭಾಷೆಗಳನ್ನು ತಿಳಿದಿದ್ದರೂ ಅವರು ಕೃತಿ ರಚನೆ ಮಾಡಿದ್ದು ಮುಖ್ಯವಾಗಿ ಐದು ಭಾಷೆಗಳಲ್ಲಿ ಮಾತ್ರ —ಸಂಸ್ಕೃತ, ಮಲಯಾಳ, ಕನ್ನಡ, ಹಿಂದೀ ಹಾಗೂ ತೆಲುಗು ಭಾಷೆಗಳಲ್ಲಿ. ಪರ್ಷಿಯನ್ ಭಾಷೆಯೂ ಗೊತ್ತಿತ್ತು; ಇಂಗ್ಲಿಷಿನಲ್ಲಿಯೂ ಪರಿಶ್ರಮವಿದ್ದಿತು. ತಾವು ಕಲಿತ ಭಾಷೆಗಳ ಸಾಹಿತ್ಯದ ಪರಿಚಯವನ್ನೂ ಮಾಡಿಕೊಂಡರು. ಅವರು ಕರ್ನಾಟಕ ಹಿಂದೂಸ್ತಾನಿ ಸಂಗೀತಗಳೆರಡನ್ನೂ ಅರಿತಿದ್ದರು. ಸಂಗೀತ ರಚನೆ ಇವರಿಗೆ ನೀರು ಕುಡಿದಂತೆ. ಕರ್ನಾಟಕ ಸಂಗೀತಕ್ಕೆ ಅವರ ಕೊಡುಗೆ ಹೇರಳ. ತಾನವರ್ಣ, ಪದವರ್ಣ, ನವರಾಗ ಮಾಲಿಕೆಗಳು, ನವರಾತ್ರಿ ಕೀರ್ತನೆಗಳು, ಘನರಾಗ ಕೃತಿಗಳು, ರಾಮಾಯಣ, ಭಾಗವತ ಹಾಗೂ ದಶಾವತಾರ ಕೃತಿಗಳು, 200 ಕೀರ್ತನೆಗಳು, ಮಂಗಳ ಹಾಗೂ ತಿಲ್ಲಾನಗಳು, ಮೂವತ್ತಕ್ಕೂ ಹೆಚ್ಚಿನ ಹಿಂದೀ ರಚನೆಗಳು, ಇವಿಷ್ಟೂ ಸ್ವಾತಿ ತಿರುನಾಳರ ಕೃತಿಗಳು. ಇವರ ಸುಮಾರು 650 ರಚನೆಗಳು ಬೆಳಕಿಗೆ ಬಂದಿವೆ. ಸಾವಿರಕ್ಕೂ ಹೆಚ್ಚು ರಚನೆಗಳಿರಬಹುದೆಂಬ ಅಭಿಪ್ರಾಯವಿದೆ. ಸಾಧಾರಣವಾಗಿ ಇವರ ಕೃತಿಗಳಲ್ಲಿ ಕಂಡುಬರುವ ಅಂಕಿತ –ಪದುಮನಾಭ. ಕೆಲವು ಕೃತಿಗಳಲ್ಲಿ 'ಅಂಬುಜನಾಭ', 'ಕಮಲನಾಭ', 'ಪಂಕಜನಾಭ' ಮುಂತಾದ ಅಂಕಿತಗಳನ್ನು ಪರ್ಯಾಯವಾಗಿ ಉಪಯೋಗಿಸಿದ್ದಾರೆ.

[illegible] ಕಂಡರೂ ಭಿನ್ನಮಾರ್ಗ ಹಿಡಿದುವು.



ರಾಜ ಸಂಗೀತ : ಸ್ವಾತಿ

ಕವಿ–ವಾಗ್ಗೇಯಕಾರ ಸ್ವಾತಿಯವರು ಪರಮ ದೈವಭಕ್ತ. ಒಳ್ಳೆಯ ರಾಜನೀತಿಜ್ಞ, ಸಂಗೀತಗಾರ ಹಾಗೂ ಪಂಡಿತ ಎಂದೂ ಖ್ಯಾತರಾಗಿದ್ದರು. ಸಂಗೀತಶಾಸ್ತ್ರದ ಬಗೆಗೆ ಅವರು ಗ್ರಂಥ ಬರೆದಿದ್ದಾರೆ. ಅವರ ಕೈಬರಹ ದಲ್ಲಿರುವ ಈ ಗ್ರಂಥದ ಮೂಲಪ್ರತಿ ಈಗಲೂ ಕಾಣಸಿಗುತ್ತದೆ. ಸ್ವಾತಿ ತಿರುನಾಳರ ಸಂಗೀತ ರಚನಾಶೈಲಿ ವೈವಿಧ್ಯಪೂರ್ಣವಾದದ್ದು. ಅತ್ಯಂತ ಸರಳವಾದ ರಚನೆಗಳಿಂದ ಹಿಡಿದು ಸಂಗೀತಜ್ಞರನ್ನೂ ಬೆರಗುಗೊಳಿಸು ವಂಥ ಜಟಿಲ ಕೃತಿಗಳವರೆಗೆ ಇವರ ರಚನೆ ನಡೆದಿದೆ. ಇವರ ಕೃತಿಗಳ ಪದ ಸಮುದಾಯ, ಸ್ವರ ಸಮುದಾಯಗಳು ರಂಜನೀಯ ವಾಗಿವೆ. ತುಂಬ ಜನಪ್ರಿಯವಾದ 'ಭಾವಯಾಮಿ ರಘುರಾಮಂ' ಸ್ವಾತಿಯವರ ಕೃತಿಗಳಲ್ಲೊಂದು. ರಾಗದ ಇಂಪು, ಅಪೂರ್ವ ಸಂಚಾರ ಗಳು ಇವರ ಕೃತಿಗಳಿಗೆ ಕಳೆ ಇತ್ತಿವೆ. ಅಪೂರ್ವ ರಾಗಗಳಾದ ಗೋಪಿಕಾ ವಸಂತ, ದ್ವಿಜಾವಂತಿ, ಲಲಿತ ಪಂಚಮ, ಮೋಹನ ಕಲ್ಯಾಣಿ, ಪೂರ್ವ ಕಾಂಭೋಧಿ, ನವರಸ ಮುಂತಾದುವುಗಳಲ್ಲಿ ಇವರ ಕೃತಿಗಳಿವೆ. ನವರಾತ್ರಿ [illegible] ಸೂಕ್ತವಾದ ಕೀರ್ತನೆಗಳೂ [illegible] ರಚಿತವಾಗಿವೆ. ಇವಕ್ಕೆ ನವರಾತ್ರಿ ಕೀರ್ತನೆಗಳೆಂದು ಹೆಸರು. ಕುಚೇಲೋಪಾಖ್ಯಾನ, ಉತ್ಸವ ಪ್ರಬಂಧ, ಅಜಾಮಿಳೋಪಾಖ್ಯಾನ–ಎಂಬ ಮೂರು ಉಪಾಖ್ಯಾನ–ಹರಿಕಥಾ ಪ್ರಬಂಧಗಳನ್ನೂ ಸ್ವಾತಿಯವರು ರಚಿಸಿದ್ದಾರೆ. ಇವು ಅನೇಕ ಕೀರ್ತನೆಗಳನ್ನೂ ಶ್ಲೋಕಗಳನ್ನೂ ಒಳ ಗೊಂಡಿವೆ. ಇವರ ಹಲವಾರು ಕೃತಿಗಳು ಇನ್ನೂ ಅಪ್ರಕಟಿತ.

ಇಷ್ಟು ವೈವಿಧ್ಯಮಯವಾದ ಮಧುರ ಸಂಗೀತವುಳ್ಳ ಸ್ವಾತಿಯವರ ಕೃತಿಗಳು ಇತರ ವಾಗ್ಗೇಯಕಾರರ ಕೃತಿಗಳಂತೆ ಬೇಗ ಪ್ರಚುರಗೊಳ್ಳಲಿಲ್ಲ. ಅವರ ಕೃತಿಗಳು ಆಗ ತಿರುವಾಂಕೂರಿನಲ್ಲಿ ಪ್ರಚಾರದಲ್ಲಿದ್ದ ಸೋಪಾನ ಶೈಲಿಗಿಂತ ಭಿನ್ನವಾದದ್ದು ಒಂದು ಕಾರಣ. ಅವರ ಕೃತಿಗಳು ಸಂಸ್ಕೃತ ದಲ್ಲಿದ್ದುದರಿಂದ ಜನ ಸಾಮಾನ್ಯ ಅವುಗಳನ್ನು ಆಕರ್ಷಿಸದೆ ಹೋಗಿರಬಹುದು. ವಾಗ್ಗೇಯಕಾರರ ರಚನೆಗಳು ಪ್ರಸಿದ್ಧಿಗೆ ಬರುವುದು ಪ್ರಚಾರಗೊಳ್ಳುವುದು ಸಾಧಾರಣವಾಗಿ ಶಿಷ್ಯ ಪರಂಪರೆಯ ಮೂಲಕ. ಸ್ವಾತಿಯವರು ರಾಜರಾಗಿದ್ದುದರಿಂದ ಅವರು ಶಿಷ್ಯವರ್ಗವನ್ನು ಕಟ್ಟಲಿಲ್ಲ. ಆದ್ದರಿಂದ ಅವರಿಗೆ ಈ ಲಾಭ ದೊರೆಯಲಿಲ್ಲ. ಆದರೂ ಮುಂದೆ ಅವರ ರಚನೆಗಳ ಸೌಂದರ್ಯವನ್ನು ಕಂಡವರು, ಅವನ್ನು ಪ್ರಚುರ ಗೊಳಿಸಿದರು ; ಅದರಿಂದ ಸ್ವಾತಿ ತಿರುನಾಳರ ಕೃತಿಗಳಿಗೆ ಕರ್ಣಾಟಕ ಸಂಗೀತದಲ್ಲಿ ಮಾನ್ಯತೆ ದೊರೆಯಿತು.

## ಸಿಂಕ್ಲೇರ್ ಲೂಯಿಸ್

ಹರಿತವಾದ ಬರೆವಣಿಗೆಗೆ ಪ್ರಸಿದ್ಧನಾದ ಕಾದಂಬರಿಕಾರ, ಸಿಂಕ್ಲೇರ್ ಲೂಯಿಸ್.

"20ನೆಯ ಶತಮಾನದ ಅಮೆರಿಕದಲ್ಲಿ ವಾಸಿಸುವ ನಾಗರಿಕ, ಆಧುನಿಕ ಬಲಿಪೀಠದ ಮೇಲೆ ತನ್ನನ್ನು ತಾನೇ ಇರಿದುಕೊಂಡ ದೇವರಂತೆ ಚಿತ್ರ ಹಿಂಸೆಗೊಳಗಾಗಿದ್ದಾನೆ" –ಎಂಬುದು ಅವನ ಅಭಿಪ್ರಾಯವಾಗಿತ್ತು. ಹೀಗೆ ಆತ್ಮಹತ್ಯೆಮಾಡಿಕೊಂಡ 'ದೇವರ'ನ್ನೂ ಪರಿಣಾಮಕಾರಿಯಾದ ರೀತಿಯಲ್ಲಿ ಸಿಂಕ್ಲೇರ್ ಲೂಯಿಸ್ ವರ್ಣಿಸಿದ. ಇದನ್ನೋದಿದ ಎಷ್ಟೋ ಮಂದಿ ಗಣ್ಯವ್ಯಕ್ತಿಗಳು, ಸಿಂಕ್ಲೇರ್ ಲೂಯಿಸ್ ತಮ್ಮನ್ನೇ ಟೀಕಿಸಿದ್ದಾನೆ ಎಂದು ಕೊಂಡರು ; ಅವನ ಬರೆವಣಿಗೆಯನ್ನು ಖಂಡಿಸಿದರು. 1926ರಲ್ಲಿ ಇವನ ಕಾದಂಬರಿ 'ಆರೋಸ್ಮಿತ್'ಗೆ ಪುಲಿಟ್ಜರ್ ಬಹುಮಾನ ಬಂತು. ಸಮಾಜದ ವಿಡಂಬನೆಯನ್ನು ತಾನು ನಿಲ್ಲಿಸುವಂತೆ ಮಾಡಬೇಕೆಂದೇ ಈ ಬಹುಮಾನ ಕೊಡುವ ತಂತ್ರ ಹೂಡಿದ್ದಾರೆ ಎಂದು ಭಾವಿಸಿದ ಲೂಯಿಸ್ ಅದನ್ನು ತಿರಸ್ಕರಿಸಿದ. 1930ರಲ್ಲಿ ಈತ ನೊಬೆಲ್ ಬಹುಮಾನವನ್ನು ಸ್ವೀಕರಿಸುವ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ, ಈ ಗೌರವಕ್ಕೆ ತನಗಿಂತಲೂ ಹೆಚ್ಚು ಅರ್ಹರೆಂದು ತಾನು ಪರಿಗಣಿಸಿದ ಅನೇಕ ಲೇಖಕರನ್ನು ಹೆಸರಿಸಿದ.

ಸಾಹಿತ್ಯಕ್ಕಾಗಿ ನೊಬೆಲ್ ಬಹುಮಾನ ಪಡೆದ ಅಮೆರಿಕದ ಲೇಖಕರಲ್ಲಿ ಈತ ಮೊದಲಿಗ.

ಮಿನ್ನೆಸೋಟಾ ಸಂಸ್ಥಾನದ ಸಾಕ್ ಸೆಂಟರ್ ಎಂಬಲ್ಲಿ ಸಿಂಕ್ಲೇರ್ ಲೂಯಿಸ್ 1885ರ ಫೆಬ್ರವರಿ 7ರಂದು ಹುಟ್ಟಿದ. ಇಲ್ಲೇ ಹೈಸ್ಕೂಲು ಓದು ಮುಗಿಸಿದ ಬಳಿಕ ಯೇಲ್ ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮುಂದುವರಿಸಿದ. ಸದಾ ಏಕಾಂತವನ್ನೇ ಬಯಸುತ್ತಿದ್ದ ಈ ವಿಲಕ್ಷಣ ಹುಡುಗ ಹೆಚ್ಚಿನ ಕಾಲವನ್ನು ಓದುವುದರಲ್ಲಿ ಕಳೆಯುತ್ತಿದ್ದ. ಇನ್ನೂ

ಹುಡುಗನಾಗಿದ್ದಾಗಲೇ ಪದ್ಯ ಬರೆಯಲು ಆರಂಭಿಸಿದ. [illegible] ಪದಕ್ಕೆ ಮೊದಲೇ ಕಾಲೇಜು ಬಿಟ್ಟು ಸ್ವತಂತ್ರ ಲೇಖಕನಾಗಲು ನಿರ್ಧರಿಸಿದ. ಈ ಪ್ರಯತ್ನ ಫಲಕಾರಿಯಾಗದೆ ಹೋದಾಗ, ಪನಾಮಾ ಕಾಲುವೆ ನಿರ್ಮಾಣ ಪ್ರದೇಶಕ್ಕೆ ಹೋಗಿ ಉದ್ಯೋಗ ಹುಡುಕತೊಡಗಿದ. ಅಲ್ಲಿ ಕೆಲಸ ಸಿಗಲಿಲ್ಲ. ಮತ್ತೆ ಕಾಲೇಜಿಗೆ ಹಿಂತಿರುಗಿದ. 1908ರಲ್ಲಿ ಪದವೀಧರನಾದ.

ದೇಶದ ಹಲವು ಭಾಗಗಳ ವೃತ್ತಪತ್ರಿಕೆಗಳಲ್ಲಿ, ಪುಸ್ತಕ ಪ್ರಕಾಶಕರಲ್ಲಿ ಕೆಲಸಮಾಡುತ್ತ ಸಿಂಕ್ಲೇರ್ ಲೂಯಿಸ್ ನಾಲ್ಕಾರು ವರ್ಷ ಕಳೆದ. ಇವನ ಪ್ರಥಮ ಕಾದಂಬರಿ 'ಅವರ್ ಮಿಸ್ಟರ್ ರೆನ್' 1914ರಲ್ಲಿ ಪ್ರಕಟವಾಯಿತು. ಓದುಗರನ್ನೂ ಆಕರ್ಷಿಸಿತು. ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಇವನ ಸಣ್ಣ ಕತೆಗಳಂತೂ ಬಹಳ ಜನಪ್ರಿಯವಾಗಿದ್ದುವು. ತನ್ನ ಬರೆಹಗಳ ಆದಾಯದಿಂದಲೇ ಜೀವನ ನಡೆಸಬಹುದೆಂಬ ಭರವಸೆ ಹುಟ್ಟಿದ ಮೇಲೆ ನೌಕರಿಬಿಟ್ಟು ಪೂರ್ಣವಾಗಿ ಲೇಖನ ವೃತ್ತಿಯನ್ನೇ ಅವಲಂಬಿಸಿದ.

ಜೀವನ ಚಿತ್ರಣ : ಸಿಂಕ್ಲೇರ್ ಲೂಯಿಸ್

ಸಿಂಕ್ಲೇರ್ ಲೂಯಿಸ್ ಅಮೆರಿಕ ಜನಜೀವನದ ಹಲವು ಮುಖಗಳನ್ನು ಚತುರ ಪತ್ರಿಕೋದ್ಯಮಿಯ ದೃಷ್ಟಿಯಿಂದ ಸೂಕ್ಷ್ಮವಾಗಿ ಪರಿಶೀಲಿಸಿದ. ಸಮಾಜ ವಿಜ್ಞಾನಿಯ ನಿಷ್ಪಕ್ಷಪಾತತೆಯಿಂದ ಜನಜೀವನದ ಸೂಕ್ಷ್ಮ ವಿವರಗಳನ್ನು ಕಲೆಹಾಕಿದ. ವಿವರಗಳ ಸಂಯೋಜನೆಯಿಂದ ಅಮೆರಿಕದ ಪ್ರಾತಿನಿಧಿಕ ಪಟ್ಟಣದ ಸುಂದರ ಚಿತ್ರಣ ಮೂಡಿಬಂತು. ಇದೇ 'ಮೇಯಿನ್ ಸ್ಟ್ರೀಟ್' (1920) ಎಂಬ ಕಾದಂಬರಿ. ಸಮಾಜದ ಜನರ ಸಂಕುಚಿತ ಮನೋಭಾವದ ಈ ವಿಡಂಬನೆ ಬಹಳ ಬೇಗನೆ ಜನಪ್ರಿಯವಾಯಿತು.

'20ನೆಯ ಶತಮಾನದ ವಾಣಿಜ್ಯ ಮನೋಭಾವದಿಂದಾಗಿ ಉಂಟಾದ ಕೆಳಮಟ್ಟದ ನೈತಿಕ ಮತ್ತು ಸಾಂಸ್ಕೃತಿಕ ಪ್ರಕೃತಿಯುಳ್ಳ ವ್ಯಾಪಾರಿ' ಎಂಬ ಅರ್ಥದಲ್ಲಿ 'ಬ್ಯಾಬಿಟ್' ಎಂಬ ಮಾತನ್ನು ಉಪಯೋಗಿಸುವುದುಂಟು. ಸಿಂಕ್ಲೇರ್ ಲೂಯಿಸನ ಕಾದಂಬರಿ 'ಬ್ಯಾಬಿಟ್' (1922) ನಿಂದ ಇಂಗ್ಲಿಷ್ ಭಾಷೆಯಲ್ಲಿ ಬಳಕೆಗೆ ಬಂದ ಹೊಸ ಪದ ಇದು. ಜಾರ್ಜ್ ಬ್ಯಾಬಿಟ್ ಆ ಕಾದಂಬರಿಯಲ್ಲಿ ಬರುವ ಒಬ್ಬ ಕಾಲ್ಪನಿಕ ವ್ಯಕ್ತಿ. ಹಣಗಳಿಸುವುದರಲ್ಲೇ ನಿರತನಾಗಿದ್ದು ಇತರ ವಿಷಯಗಳನ್ನು ಕುರಿತು ಯೋಚಿಸಲು ಸಮಯವೇ [illegible] [illegible] ಬಹುಮಾನ ಸಿಕ್ಕಿದ್ದು ಈ ಕಾದಂಬರಿಯಿಂದಾಗಿಯೇ.

'ಆರೋಸ್ಮಿತ್' (1925), 'ಎಲ್ಮರ್ ಗ್ಯಾಂಟ್ರಿ' (1927), 'ಡಾಡ್ಸ್‌ವರ್ತ್' (1929) ಸಿಂಕ್ಲೇರ್ ಲೂಯಿಸನ ಇತರ ಕಾದಂಬರಿಗಳಲ್ಲಿ ಮುಖ್ಯವಾದುವು. ಇವನ ಕಾದಂಬರಿಗಳ ಒಟ್ಟು ಸಂಖ್ಯೆ 22. ಇವನ ಸ್ಪಷ್ಟ, ಸುಂದರ ಕಥನಶೈಲಿ ಬಹಳ ಮನೋರಂಜಕ. ಇವನು ವ್ಯಾಪಾರಿಗಳು, ವೈದ್ಯರು, ವಿಜ್ಞಾನಿಗಳು, ಧರ್ಮಾಧಿಕಾರಿಗಳು ಮತ್ತು ಸಮಾಜ ಸುಧಾರಕರನ್ನು ಕುರಿತೂ ಬರೆದಿದ್ದಾನೆ.

1928ರಲ್ಲಿ ಸಿಂಕ್ಲೇರ್ ಲೂಯಿಸ್ ಡೊರೊಥಿ ಥಾಮ್‌ಸನ್ ಎಂಬ ಲೇಖಕಿಯನ್ನು ವಿವಾಹವಾದ. ಈ ದಾಂಪತ್ಯ ಹದಿನಾಲ್ಕು ವರ್ಷಗಳ ಬಳಿಕ ವಿಚ್ಛೇದನದಲ್ಲಿ ಕೊನೆಗಂಡಿತು. ಸಿಂಕ್ಲೇರ್ ಲೂಯಿಸ್ ತನ್ನ ಜೀವನದ ಬಹುಭಾಗವನ್ನು ಯೂರೋಪಿನಲ್ಲೇ ಕಳೆದ. 1951ರ ಜನವರಿ 10ರಂದು ರೋಮ್ ನಗರದಲ್ಲಿ ಇವನ ಅವಸಾನವಾಯಿತು.

## ಸಿ. ಕೆ. ವೆಂಕಟರಾಮಯ್ಯ

ವೆಂಕಟರಾಮಯ್ಯನವರದು ಗಂಭೀರ ಆಕೃತಿ. ಅಚ್ಚುಕಟ್ಟಾದ ಉಡುಗೆ–ತೊಡುಗೆ. ನೋಡಿದೊಡನೆಯೇ ಗೌರವಭಾವ ಮೂಡುವಂಥ ವ್ಯಕ್ತಿತ್ವ. ಆಳತೆ ಮೀರಿದ ಔದಾರ್ಯ, ಇತಿಮಿತಿಯಿಲ್ಲದ ವಿನಯ ಇವರ ಹುಟ್ಟುಗುಣ. ಶ್ರೇಷ್ಠ ವಾಗ್ಮಿ. 'ಕನ್ನಡ ಮಾತುಗಾರಿಕೆಗೆ ಕುಂದಣವಿಟ್ಟವ'ರೆಂದು ಖ್ಯಾತರು. ಬರವಣಿಗೆಯೆಲ್ಲ ಕುಸುರಿನ ಕೆಲಸ. 1947ರಲ್ಲಿ ಹರಪನಹಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಸಿ.ಕೆ. ವೆಂಕಟರಾಮಯ್ಯನವರನ್ನು ಆರಿಸಿ, ಕನ್ನಡಿಗರು ಅವರನ್ನು ಗೌರವಿಸಿದರು.

ವೆಂಕಟರಾಮಯ್ಯನವರು ಚನ್ನಪಟ್ಟಣದಲ್ಲಿ 1896ರ ಡಿಸೆಂಬರ್ 10ರಂದು ಹುಟ್ಟಿದರು. ಹೈಸ್ಕೂಲಿನಲ್ಲಿದಾಗಲೇ ಸಾಹಿತ್ಯಕ್ಷೇತ್ರಕ್ಕೆ ಇವರ ಪದಾರ್ಪಣೆಯಾಯಿತು. ಅನಂತರ ಕೆಲವು ಕಾದಂಬರಿಗಳನ್ನೂ ಬರೆದರು. 1917ರಲ್ಲಿ ಮೈಸೂರು ವಿಶ್ವವಿದ್ಯಾಲಯ ಏರ್ಪಡಿಸಿದ್ದ ಗ್ರಂಥ ರಚನೆಯ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಮೇಲೆ ಬರೆಯುವ ಉತ್ಸಾಹ ಮತ್ತಷ್ಟು ಹೆಚ್ಚಿತು. ಎಂ. ಎ. ಮತ್ತು ಎಲ್. ಎಲ್. ಬಿ., ಶಿಕ್ಷಣ ಮುಗಿಸಿ ಸಿ. ಕೆ. ವೆಂಕಟರಾಮಯ್ಯನವರು ಚನ್ನಪಟ್ಟಣದಲ್ಲಿ ವಕೀಲವೃತ್ತಿ ಆರಂಭಿಸಿದರು. 1924ರಲ್ಲಿ ಸರಕಾರದ ಕನ್ನಡ ಭಾಷಾಂತರಕಾರರಾಗಿ ಸೇರಿದರು ಅವರು ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳನ್ನು ಆಳವಾಗಿ ಅಭ್ಯಾಸಮಾಡಿದ್ದಲ್ಲದೆ ತಮ್ಮ ಸಾಹಿತ್ಯ ಸೃಷ್ಟಿಯನ್ನು ಮತ್ತಷ್ಟು ಸಮೃದ್ಧಗೊಳಿಸಿದರು. ಇವರು 1928ರಲ್ಲಿ ಬರೆದ 'ನೀನೇ ನನ್ನ ಮುದ್ದು ಕೃಷ್ಣ', ಜನಪ್ರಿಯ ಕಥೆ. 'ಮಂಡೋದರಿ' ಪಂಡಿತಮಾನ್ಯ ನಾಟಕ. 'ಭಾಸ ಮಹಾಕವಿ'



ಕುಂದಣವಿಟ್ಟವರು :
ಸಿ. ಕೆ. ವೆಂ.

[illegible] ಮತ್ತು 'ನಮ್ಮ ಸಮಾಜ' ಮುಂತಾದವು ಇವರ ಇತರ ಕೃತಿಗಳು. [illegible] ಎಂಬ [illegible] 'ಅರೇಬಿಯನ್ ನೈಟ್ಸ್'ನ ಕನ್ನಡಾನುವಾದ 'ಸಾಪಿರದೊಂದು ರಾತ್ರಿ' ಸಿ. ಕೆ. ವೆಂ. ಅವರದು.

[illegible] ಇವರಿಗೆ 'ರಾಜಸೇವಾಸಕ್ತ' ಬಿರುದನ್ನು ಮೈಸೂರು ಮಹಾರಾಜರು ನೀಡಿದರು. ಇವರ ಸಾಹಿತ್ಯ ಮತ್ತು ಸಾರ್ವಜನಿಕ ಸೇವೆಯ ಕಾರಣವಾಗಿ ಭಾರತ ಸರಕಾರ 'ಪದ್ಮಶ್ರೀ' ಪ್ರಶಸ್ತಿಯನ್ನು ಕೊಟ್ಟಿದೆ.

## ಸಿದ್ಧಲಿಂಗಸ್ವಾಮಿ

ಪ್ರಾಚೀನ ಶಿಲ್ಪಶಾಸ್ತ್ರದ ನಿಯಮಗಳಿಗೆ ಅನುಸಾರವಾಗಿ ಅನೇಕಾನೇಕ ದೇವತಾ ವಿಗ್ರಹಗಳನ್ನೂ ವರ್ಣಚಿತ್ರಗಳನ್ನೂ ರಚಿಸಿ ಕೀರ್ತಿವಂತರಾದ ಮಹಾವ್ಯಕ್ತಿ, ಶಿಲ್ಪಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳು. ಇವರದು ಶಿಲ್ಪಿಗಳ ವಂಶ. ಇವರ ಹಿರಿಯರು ವಿಜಯನಗರದಲ್ಲಿ ಶಿಲ್ಪಿಗಳಾಗಿದ್ದು, ಆ ಸಾಮ್ರಾಜ್ಯದ ಪತನಾನಂತರ ಅಲ್ಲಿಂದ ಕೊಳ್ಳೇಗಾಲಕ್ಕೆ ಬಂದು ನೆಲೆಸಿದರೆಂದು ಪ್ರತೀತಿ.

ಸಿದ್ಧಲಿಂಗಸ್ವಾಮಿಗಳ ತಂದೆ ಸಿದ್ಧಪ್ಪಾಜಿಸ್ವಾಮಿ: ತಾಯಿ ಮಲ್ಲಾಜಮ್ಮಣ್ಣಿ. ಜನನ ತಾಯಿಯ ತವರೂರಾದ ಚಾಮರಾಜನಗರ ತಾಲ್ಲೂಕು ಚಂದಕವಾಡಿಯಲ್ಲಿ. 1885ರಲ್ಲಿ. ಸಿದ್ಧಲಿಂಗಸ್ವಾಮಿಗಳ ಮೊದಲ ಗುರುಗಳು. ಅವರ ತಂದೆ ಮತ್ತು ದೊಡ್ಡಪ್ಪ; ಇವರು ತಮಗೆ ವಂಶಪಾರಂಪರ್ಯವಾಗಿ ಲಭಿಸಿದ್ದ ಶಿಲ್ಪಶಾಸ್ತ್ರ, ಮಂತ್ರಶಾಸ್ತ್ರ, ಜ್ಯೋತಿಷ್ಯಾದಿಗಳನ್ನು ಕಲಿಸಿದರು. ಸಿದ್ಧಲಿಂಗಸ್ವಾಮಿಯವರು ಇನ್ನೂ ಚಿಕ್ಕವಯಸ್ಸಿನವರಾಗಿದ್ದಾಗಲೇ ಅವರ ತಂದೆ ಮತ್ತು ದೊಡ್ಡಪ್ಪನವರು ತೀರಿಕೊಂಡದ್ದರಿಂದ ಸಂಸಾರದಲ್ಲಿ ಕಷ್ಟಪರಿಸ್ಥಿತಿ ಏರ್ಪಟ್ಟಿತು. ಈ ಸನ್ನಿವೇಶದಲ್ಲಿ ಇವರ ಮನೆತನದ ಗುರುಗಳಾದ ನಂಜುಂಡ ಶಿವಯೋಗೀಂದ್ರ ಸ್ವಾಮಿಗಳು ಇವರ ಸಹಾಯಕ್ಕೆ ಬಂದರು; ಸಿದ್ಧಲಿಂಗಸ್ವಾಮಿಗಳು ತಮ್ಮ ವಿದ್ಯಾಭ್ಯಾಸವನ್ನು ನಿರಾತಂಕವಾಗಿ ಮುಂದುವರಿಸಲು ನೆರವಾದರು. ಅವರು ಶ್ರದ್ಧೆಯಿಂದ ಅಭ್ಯಾಸಮಾಡಿ, ಶಿಲ್ಪ ಮತ್ತು ಚಿತ್ರರಚನೆಯಲ್ಲಿ ನೈಪುಣ್ಯ ಗಳಿಸಿಕೊಂಡರು. ಕೊಳ್ಳೇಗಾಲದ ಸಮೀಪದಲ್ಲಿರುವ ಶಂಭುಲಿಂಗನ ಬೆಟ್ಟಕ್ಕೆ ಹೋಗಿ ಕಲಾಸಿದ್ಧಿಗಾಗಿ, ಅಲ್ಲಿ ಕೆಲ ಕಾಲ ತಪಶ್ಚರ್ಯೆಯಲ್ಲಿದ್ದು, ದಕ್ಷಿಣಾಮೂರ್ತಿಯ ವಿಗ್ರಹವೊಂದನ್ನು ತಾವೇ ನಿರ್ಮಿಸಿ ಅಲ್ಲಿನ ಗವಿಯೊಂದರಲ್ಲಿ ಪ್ರತಿಷ್ಠಿಸಿದರು. ಅನಂತರ ಅವರ ಗುರುಗಳ ಸೂಚನೆಯಂತೆ ವಿವಾಹ ಮಾಡಿಕೊಂಡರು.

ಸಿದ್ಧಲಿಂಗಸ್ವಾಮಿಗಳು ರಚಿಸಿದ ದೇವತಾಮೂರ್ತಿಗಳ ಸಂಖ್ಯೆ ದೊಡ್ಡದು. ಇವುಗಳ ರಚನೆಯಲ್ಲಿ ಅವರು ಕಲ್ಲು, ಮರಗಳನ್ನೂ ಲೋಹಗಳನ್ನೂ ಉಪಯೋಗಿಸಿದ್ದಾರೆ. ಇವೆಲ್ಲವೂ ಪ್ರಾಚೀನ ಶಿಲ್ಪಸಂಪ್ರದಾಯದ ತಾಲಪ್ರಮಾಣ ಲಕ್ಷಣಗಳನ್ನುಳ್ಳವಾಗಿದ್ದು ಸುಂದರವಾಗಿವೆ; ಅನೇಕ ಸ್ಥಳಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟು ಪೂಜೆಗೊಳ್ಳುತ್ತಿವೆ. ಕೃಷ್ಣರಾಜ ಸಾಗರದ ಕಟ್ಟೆಯ ಹೊರಮೈಯಲ್ಲಿ ಸ್ಥಾಪಿತವಾಗಿರುವ ಕಾವೇರಿ ದೇವಿಯ ಸುಂದರ ಶಿಲಾವಿಗ್ರಹ ಸಿದ್ಧಲಿಂಗಸ್ವಾಮಿಗಳಿಂದ ರಚಿತವಾದದ್ದು. ಜರ್ಮನಿಯ ಸುಪ್ರಸಿದ್ಧ ತತ್ತ್ವಜ್ಞಾನಿಯಾದ ಡಾಕ್ಟರ್ ರೊಡಾಲ್ಫ್ ಆಟೋ ಅವರಿಗಾಗಿ, ಆದಿ ಶಂಕರಾಚಾರ್ಯರ ವಿಗ್ರಹ ಒಂದನ್ನು ಸಿದ್ಧಲಿಂಗಸ್ವಾಮಿಗಳು ಮರದಲ್ಲಿ ತಯಾರಿಸಿಕೊಟ್ಟರು.

ಸಿದ್ಧಲಿಂಗಸ್ವಾಮಿಗಳು ಕುಶಲ ಶಿಲ್ಪಿಯಾಗಿದ್ದುದಲ್ಲದೆ ಅಪ್ರತಿಮ ವಿದ್ವಾಂಸರೂ ಆಗಿದ್ದರು. 'ಶಿಲ್ಪ ವಿದ್ಯಾರಹಸ್ಯೋಪನಿಷತ್' ಎಂಬ ಸಂಸ್ಕೃತ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. 'ಶಿಲ್ಪಸಾರ' ಎಂಬ ಕವನ ಸಂಕಲನದಲ್ಲಿ ಶಿಲ್ಪಿಯ ಮಹಿಮೆಯನ್ನು ವರ್ಣಿಸಿದ್ದಾರೆ. ಇದು ಇವರ ಸ್ವತಂತ್ರ ಕೃತಿ. 'ಮಾನಸಾರ' ವೆಂಬ ಪ್ರಾಚೀನ ಶಿಲ್ಪಶಾಸ್ತ್ರ ಗ್ರಂಥಕ್ಕೆ ಅನೇಕ ನಿದರ್ಶನ ಚಿತ್ರಗಳನ್ನು ರಚಿಸಿದರು. ಋಗ್ವೇದ ಸಂಹಿತೆಗಳು ಕನ್ನಡದಲ್ಲಿ ಅನುವಾದವಾಗಲು ಇವರು ಪ್ರೇರಕರಾದರು. ಸಿದ್ಧಲಿಂಗಸ್ವಾಮಿಗಳು ಉತ್ತಮ ವಾಗ್ಮಿಗಳೂ ಆಗಿದ್ದರು.

ಸಿದ್ಧಲಿಂಗಸ್ವಾಮಿಗಳಿಂದ ನಮ್ಮ ಶಿಲ್ಪಕಲೆಗೆ ಆದ ಅಮೂಲ್ಯ ಸೇವೆ— ಅವರು ಮೈಸೂರಿನಲ್ಲಿ ಸ್ಥಾಪಿಸಿ, ನಡೆಸಿಕೊಂಡು ಬಂದ 'ಶ್ರೀ ಜಗದ್ಗುರು ಶೈವ ಶಿಲ್ಪ ಬ್ರಹ್ಮರ್ಷಿ ಗುರುಕುಲ'. ಪ್ರಾಚೀನ ಸಂಪ್ರದಾಯದಂತೆ, ಶಿಲ್ಪಕಲೆ, ವಾಸ್ತುಶಿಲ್ಪಗಳಲ್ಲಿ ಶಿಕ್ಷಣಕೊಡಲು ಸ್ಥಾಪಿತವಾದ ಸಂಸ್ಥೆ ಇದು.

ಅವರ ಇನ್ನೊಂದು ಗಣನೀಯ ಸಾಧನೆ, ಅವರು ನಿರ್ಮಿಸಿದ ಕಾಮ–ಕಾಮೇಶ್ವರಿ ದೇವಾಲಯ. ಇದೂ ಮೈಸೂರಿನಲ್ಲಿದೆ.

ತಮ್ಮ ವಿದ್ವತ್ತು, ಕಲಾನೈಪುಣ್ಯಗಳಿಂದ ಅಪಾರ ಖ್ಯಾತಿಯನ್ನು ಗಳಿಸಿದ ಸಿದ್ಧಲಿಂಗಸ್ವಾಮಿಗಳು ಮೈಸೂರಿನಲ್ಲಿ ಕರಸ್ಥಳ ನಾಗಲಿಂಗಸ್ವಾಮಿಗಳ ಮಠದ ಪೀಠಾಧಿಪತಿಗಳಾಗಿ ಅನೇಕರ ಭಕ್ತಿ, ಗೌರವಗಳಿಗೆ ಪಾತ್ರರಾದರು. ಅವರು ಮೈಸೂರಿನ ಅರಮನೆಯ ದರ್ಬಾರ್‌ಹಾಲ್‌ನ ಮೇಲ್ಛಾವಣಿಯ ಒಳಮೈಯಲ್ಲಿ ಅನೇಕ ವರ್ಣಚಿತ್ರಗಳನ್ನು ರಚಿಸಿ ರಾಜಮನ್ನಣೆಗೆ ಪಾತ್ರರಾದರು. ಹೀಗೆ ಜನಮನ್ನಣೆಯನ್ನೂ ರಾಜಮನ್ನಣೆಯನ್ನೂ ಪಡೆದು ಕಲಾಪ್ರಪಂಚಕ್ಕೂ ಧಾರ್ಮಿಕ ರಂಗಕ್ಕೂ ಅಪಾರ ಸೇವೆಯನ್ನು ಸಲ್ಲಿಸಿದ ಸಿದ್ಧಲಿಂಗಸ್ವಾಮಿಗಳು 1952ರ ಮೇ 2ರಂದು ಶಿವೈಕ್ಯರಾದರು.

ನೋಡಿ : ಭಾರತೀಯ ಶಿಲ್ಪ, ವಾಸ್ತುಶಿಲ್ಪ

## ಸಿದ್ಧಾಂತಿ ಶಿವಶಂಕರಶಾಸ್ತ್ರೀ

"ಎಲ್ಲವನ್ನೂ ನಮ್ಮ ಭಾಷೆಯಿಂದ ನಾವು ಕಲಿಯುವುದೇ ಲೇಸು,"— ಕನ್ನಡದ ಬಗೆಗಿನ ಈ ಉದ್ಗಾರ ಆಧುನಿಕ ಎನಿಸಬಹುದು. ಆದರೆ ಈ ಮಾತುಗಳನ್ನು ಸುಮಾರು ಅರ್ಧ ಶತಮಾನಕ್ಕೆ ಮೊದಲೇ ಆಡಿದವರು ಸಿದ್ಧಾಂತಿ ಶಿವಶಂಕರಶಾಸ್ತ್ರಿಯವರು.



ಬಿಜಾಪುರದಲ್ಲಿ 1923ರಲ್ಲಿ ನಡೆದ ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಕನ್ನಡದ ಬಗೆಗೆ ಅವರು ಆಡಿದ ನುಡಿಗಳು ಇಂದಿನ ಪರಿಸ್ಥಿತಿಗೂ ಅನ್ವಯಿಸುವಂತಿವೆ. "ಕನ್ನಡ ಗ್ರಂಥ ಪ್ರಚಾರದಿಂದ ಆಬಾಲಸ್ತ್ರೀವೃದ್ಧರವರೆಗೆ ಭಾಷಾಭಿಮಾನವನ್ನು ನೆಲೆಗೊಳಿಸುವ ಪ್ರಯತ್ನ ಮಾಡಬೇಕು" ಎಂದರು ಶಿವಶಂಕರಶಾಸ್ತ್ರಿಗಳು.

ಅದಕ್ಕೂ ಹಿಂದೆಯೇ, ಎಂದರೆ 1915ರಲ್ಲಿಯೇ, ತಮ್ಮ 'ಸಮುದ್ದೇಶ ಪಂಚಕ' ದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಸಂಬಂಧವಾಗಿ ಅವರ ಉದ್ದೇಶಗಳು ಏನೇನಿರಬೇಕೆಂಬುವನ್ನು ಸ್ಪಷ್ಟಪಡಿಸಿದರು. ಕನ್ನಡ ಭಾಷೆಯ ಬಳಕೆ ಹೆಚ್ಚಿದಂತೆಲ್ಲ ಅದರಲ್ಲಿ ತೋರಿಬರುವ ಪಾರಿಭಾಷಿಕ ಶಬ್ದಗಳ ಅಭಾವವನ್ನು ಪೂರೈಸಿಕೊಳ್ಳಬೇಕು ; ಹೊಸಗನ್ನಡಕ್ಕೆ ಅನ್ವಯಿಸುವಂಥ ವ್ಯಾಕರಣ ತಯಾರಾಗಬೇಕು ; ಪತ್ರಪುಸ್ತಕಗಳು ಎಲ್ಲ ಕಡೆಯಲ್ಲೂ ಏಕಪ್ರಕಾರವಾಗಿರಬೇಕು ; ಕನ್ನಡ ಭಾಷೆಯ ಐಕಮತ್ಯ ಸಾಧಿಸಬೇಕು ; 'ಕನ್ನಡತನ' ಹರಡಬೇಕು –ಇವು ಅವರಿಂದ ನಿರೂಪಿತವಾದ ಉದ್ದೇಶಗಳು.

ಸಿದ್ಧಾಂತಿ ಶಿವಶಂಕರಶಾಸ್ತ್ರೀ 1864ರಲ್ಲಿ ಜನಿಸಿದರು. ಇವರ ತಂದೆಯವರು ಸುಬ್ರಹ್ಮಣ್ಯಶಾಸ್ತ್ರಿಗಳು ಕನ್ನಡದ ಸುಪ್ರಸಿದ್ಧ ವಿದ್ವಾಂಸರು. ಶಿವಶಂಕರಶಾಸ್ತ್ರಿ ಕನ್ನಡ, ತೆಲುಗು, ಸಂಸ್ಕೃತಗಳಲ್ಲಿ ಒಳ್ಳೆಯ ಪಾಂಡಿತ್ಯ ಪಡೆದವರು. ಮದರಾಸಿನ ಕ್ರಿಶ್ಚಿಯನ್ ಕಾಲೇಜು, ಪ್ರೆಸಿಡೆನ್ಸಿ ಕಾಲೇಜುಗಳಲ್ಲಿ ಮೂವತ್ತು ವರ್ಷಗಳ ಕಾಲ ಕನ್ನಡ ಪಂಡಿತರಾಗಿ ಕೆಲಸಮಾಡಿದರು.

ಕನ್ನಡದಲ್ಲಿ 'ಕರ್ಣಾಟಕ ನಳೋಪಾಖ್ಯಾನ', 'ಅಭಿನವ ಕಾದಂಬರಿ', 'ಕರ್ಣಾಟಕ ನರಕಾಸುರ ವಿಜಯ ವ್ಯಾಯೋಗಂ', 'ಶ್ರೀ ಶಂಕರ ಕಥಾಮೃತಂ' ಮೊದಲಾದ ಎಂಟು ಗ್ರಂಥಗಳನ್ನು ಶಾಸ್ತ್ರಿಗಳು ಬರೆದಿದ್ದಾರೆ.

ತಿಂಗಳಿಗೆ ಮನೆಮನೆಗೂ ಕನ್ನಡಕ್ಕಾಗಿ ಸ್ವಲ್ಪ ಹಣವನ್ನು ಮೀಸಲಿಟ್ಟರೆ ಕನ್ನಡ ಏಳ್ಗೆ ನಿರಾಯಾಸವಾಗಿ ಆಗಬಹುದೆಂಬುದು ಅವರ ಯೋಜನೆಯಾಗಿತ್ತು. ಅವರೇ ರಚಿಸಿರುವ ಕಂದ ಪದ್ಯ ಹೀಗಿದೆ :

'ಬಡಗನ್ನಡದ ನುಡಿವೆಣ್ಣ
ಬಡತನದಿಂ ಬಿಡಿಸಿ ನಾಡ ಸಿರಿವೆಣ್ಣಂ ಮಾ
ಳ್ಪೊಡೆ ಮನೆ ಮನೆಗಂ ನಾಡಿಗ
ರಿಡಲಕ್ಕುಂ ಮಾಸಮಾಸಕೆನಸುಂ ಪಣಮಂ'

ಕನ್ನಡದಲ್ಲಿ ಇವರು ಸಾಧಿಸಿದ ಪಾಂಡಿತ್ಯಕ್ಕಾಗಿ ಹಲವಾರು ಗೌರವಗಳು ಶಾಸ್ತ್ರಿಯವರಿಗೆ ಸಂದಿವೆ. ಮೈಸೂರು, ಶೃಂಗೇರಿ ಮುಂತಾಗಿ ಹಲವು ಕಡೆಯಿಂದ ಇವರಿಗೆ ಬಿರುದುಗಳು ದೊರೆತಿವೆ. ಮೈಸೂರು ಅರಸರಿಂದ 'ವಿದ್ಯಾನಿಧಿ' ಪ್ರಶಸ್ತಿ 1938ರಲ್ಲಿ ಲಭಿಸಿತು. ಮದರಾಸಿನಲ್ಲಿ ತಮ್ಮ ಅಧ್ಯಾಪಕವೃತ್ತಿ ಮುಗಿದ ಬಳಿಕ, ಎಂದರೆ 1921ರಿಂದ, ಶಾಸ್ತ್ರಿಯವರು ಬೆಂಗಳೂರಿನಲ್ಲಿ ನೆಲೆಸಿದರು.

ಶಿವಶಂಕರಶಾಸ್ತ್ರಿಯವರು ತಮ್ಮದೇ ಆದ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದರು. ಶಾಸ್ತ್ರಪಾರಂಗತರೂ ಆಚಾರಶೀಲರೂ ಸದ್ಗುಣಿಗಳೂ ಆಗಿದ್ದ ಇವರ ಚಿಂತನೆಗಳೆಲ್ಲ ಗಹನವಾದುವು. ಯಾವುದೇ ವಿಷಯವನ್ನು ಆಗುಹೋಗುಗಳ ನೆಲೆಯಿಂದ ವಿವೇಚಿಸುವ ದೃಷ್ಟಿ ವೈಶಾಲ್ಯ ಅವರದು. ತಪ್ಪೆಂದು ಕಂಡದ್ದನ್ನು ಕೈಬಿಡುತ್ತಿದ್ದರು.

1942ರಲ್ಲಿ ಶಾಸ್ತ್ರಿಯವರು ದೈವಾಧೀನರಾದರು.

## ಸಿಬಾಲಿಯುಸ್

20ನೆಯ ಶತಮಾನದ ಸರ್ವೋತ್ತಮ ವಾಗ್ಗೇಯಕಾರನೆಂಬ ಹೊಗಳಿಕೆಗೆ ಪಾತ್ರನಾದ ವ್ಯಕ್ತಿ ಫಿನ್ಲೆಂಡಿನ ಜಾನ್ ಸಿಬಾಲಿಯುಸ್.

ಜಾನ್ ಫಿನ್‌ಲೆಂಡಿನ ಹಮೀನ್‌ಲಿನ್ನಾದಲ್ಲಿ 1865ರಲ್ಲಿ ಜನಿಸಿದ. ಇವನ ತಂದೆ ಒಬ್ಬ ವೈದ್ಯ. ಮಗುವಿಗೆ ಎರಡು ವರ್ಷ ಆಗುವ ವೇಳೆಗೆ ಆತ ತೀರಿಕೊಂಡ. ಜಾನನ ಮೊದಲ ವಿದ್ಯಾಭ್ಯಾಸ ಸ್ವೀಡಿಷ್ ಭಾಷೆಯಲ್ಲಾಯಿತು. ಅನಂತರ ಫಿನ್ನಿಷ್ ಶಾಲೆಗೆ ಹೋಗಿ ಅದನ್ನು ಕಲಿತ. ಇವನು ಸಂಗೀತ ಅಭ್ಯಾಸ ಆರಂಭಿಸಿದಾಗ ಇವನಿಗೆ ಕೇವಲ ಒಂಬತ್ತು ವರ್ಷ. ಅದು ವರ್ಷಗಳ ನಂತರ ಪಿಟೀಲು ಕಲಿಯತೊಡಗಿದ.

ಜಾನ್ ನ್ಯಾಯವಾದಿಯಾಗಬೇಕೆಂದು ಅವನ ಮನೆಯವರ ಆಸೆ. ಅದಕ್ಕಾಗಿ ಅವರು ಅವನನ್ನು ಫಿನ್‌ಲೆಂಡಿನ ರಾಜಧಾನಿ ಹೆಲ್ಸಿಂಕಿಗೆ ಕಳುಹಿಸಿದರು. ಆದರೆ ಜಾನನ ಒಲವು ಸಂಗೀತದ ಕಡೆಗೆ. ಕೊನೆಗೆ ಅವನು ತನ್ನ ಮನೆಯವರನ್ನು ಒಪ್ಪಿಸಿ ಸಂಗೀತ ಶಾಲೆಗೆ ಸೇರಿದ. ಇಲ್ಲಿ ವಿದ್ಯಾಭ್ಯಾಸ ಮುಗಿಸಿದಮೇಲೆ ಗೇಯರಚನೆಯನ್ನು ಅಭ್ಯಾಸ ಮಾಡಲು ಎರಡು ವರ್ಷದ ಅವಧಿಯ ವಿದ್ಯಾರ್ಥಿವೇತನ ಅವನಿಗೆ ದೊರಕಿತು. ಬರ್ಲಿನ್ ಹಾಗೂ ವಿಯೆನ್ನಾಗಳಲ್ಲಿ ಒಂದೊಂದು ವರ್ಷ ಜಾನ್ ಕಲಿತ. ಅನಂತರ ಕೆಲವು ವರ್ಷಗಳ ತನಕ ಹೆಲ್ಸಿಂಕಿಯ ಸಂಗೀತಶಾಲೆಯಲ್ಲಿ ಅಧ್ಯಾಪಕನಾಗಿ ಕೆಲಸ ಮಾಡಿದ. 1897ರಲ್ಲಿ ಫಿನ್‌ಲೆಂಡಿನ ಸರಕಾರ ಜಾನ್‌ಗೆ ರಾಷ್ಟ್ರೀಯ ವೇತನ ನೀಡಿ ಮುಂದೆ ತನ್ನೆಲ್ಲ ಸಮಯವನ್ನೂ ಸಂಗೀತ ರಚನೆಗೆ ವಿನಿಯೋಗಿಸುವಂತೆ ಮಾಡಿತು. 1930ರಲ್ಲಿ ಆತನ ಮುಖ್ಯ ರಚನೆಗಳನ್ನು ಧ್ವನಿ ಮುದ್ರಿಸುವ ಕಾರ್ಯವನ್ನೂ ಸರಕಾರ ಕೈಗೊಂಡಿತು. ಹೆಲ್ಸಿಂಕಿಗೆ ಹತ್ತಿರದ ಸ್ಥಳವೊಂದರಲ್ಲಿ ಮನೆ ಮಾಡಿಕೊಂಡು ಜಾನ್ ಸಂಗೀತ ರಚನೆಯಲ್ಲಿ ಮಗ್ನನಾದ. ಆಗಾಗ ವಿದೇಶ ಪ್ರವಾಸ ಕೈಗೊಳ್ಳುತ್ತಿದ್ದ. ಉಳಿದ ಕಾಲವನ್ನೆಲ್ಲ ಆ ಪ್ರಶಾಂತ ಸ್ಥಳದಲ್ಲಿಯೇ ಕಳೆಯುತ್ತಿದ್ದ. ಫಿನ್‌ಲೆಂಡಿನ ಜನತೆ ಅವನನ್ನು ರಾಷ್ಟ್ರೀಯ ಗಣ್ಯಪುರುಷನೆಂದು ಗೌರವಿಸಿದರು.



ಮಹಾನ್ ವಾಗ್ಗೇಯಕಾರ : ಸಿಬಾಲಿಯುಸ್

ವೃದ್ಧಾಪ್ಯ ಆವರಿಸಿದ ಮೇಲೆ ಜಾನ್ ಸಿಬಾಲಿಯುಸ್ ಸಂಗೀತ ರಚನೆಗೆ ಅಷ್ಟಾಗಿ ಮನಸ್ಸು ಕೊಡಲಿಲ್ಲ.

ಜಾನ್ ಸಿಬಾಲಿಯುಸ್ ಉಜ್ವಲ ದೇಶಪ್ರೇಮಿ. ರಚನೆಗಳಲ್ಲಿ ತನ್ನ ರಾಷ್ಟ್ರಪ್ರೇಮಕ್ಕೆ ಅಭಿವ್ಯಕ್ತಿ ನೀಡಿದ್ದಾನೆ. ತನ್ನ ವಿದ್ಯಾಭ್ಯಾಸ ಮುಗಿಸಿ ಫಿನ್‌ಲೆಂಡಿಗೆ ಹಿಂದಿರುಗಿದ ಮೇಲೆ ಜಾನ್, ತನ್ನದೇ ಆದ ಸಂಗೀತ ನುಡಿಗಟ್ಟನ್ನು ಕಂಡುಕೊಂಡ. ಜಾನ್ ಜನಿಸಿದ ವೇಳೆಗೆ ಫಿನ್‌ಲೆಂಡ್ ರಷ್ಯದ ಅಧೀನದಲ್ಲಿತ್ತು. ಜನ ತಮ್ಮ ನಾಡಿನಲ್ಲಿ ಪರಂಪರಾನುಗತ ಐತಿಹ್ಯಗಳನ್ನೂ ಭಾಷೆಯನ್ನೂ ಉಳಿಸಿಕೊಂಡು ಬರಲು ವಾಗ್ಗೇಯಕಾರನಾದ ಜಾನ್ ನೆರವಾದ. ಇದಕ್ಕಾಗಿ ಒಂದು ಸಂಸ್ಥೆಯನ್ನು ಆತ ಸ್ಥಾಪಿಸಿದ.

'ಒಂದು ಕಥೆ' ಎಂಬುದು ವಾದ್ಯಮೇಳದ ರಚನೆ. ಅವನಿಗೆ ಕೀರ್ತಿ ತಂದುಕೊಟ್ಟ ಕೃತಿ ಇದು. ರಷ್ಯನರ ಆಳ್ವಿಕೆಗೆ ಪ್ರತಿಭಟನೆ ನೀಡುವ ವಸ್ತುವಿದ್ದ ಆರು ಚಾರಿತ್ರಿಕ ನಾಟಕಗಳಿಗೆ ಅವನು ಸಂಗೀತ ಒದಗಿಸಿದ. ಫಿನ್‌ಲೆಂಡಿನ ಮಹಾಕಾವ್ಯ 'ಕಲೆವಾಲ' ಅಥವಾ 'ವೀರರ ನಾಡು' ಇದರಿಂದ ಆಯ್ದ ಕಥೆಗಳೇ ನಾಟಕಗಳಿಗೆ ಆಧಾರ.

'ಏಳು ಸಿಂಫನಿಗಳು' ಬಹುಮಟ್ಟಿಗೆ ಸಿಂಫನಿಯನ್ನೇ ಹೋಲುವ, ಆದರೆ ಸಾಹಿತ್ಯಪ್ರಧಾನವಾದ ಕೃತಿಗಳು, ಪಿಟೀಲುವಾದನಕ್ಕಾಗಿ ಬರೆದ ಸಂಗೀತ —ಇವು ಜಾನನ ಮುಖ್ಯ ರಚನೆಗಳು. ಅಲ್ಲದೆ ಫಿನ್‌ಲೆಂಡಿನ ಅರಣ್ಯ ದೇವತೆ ಟಪ್ಯೋಯೊವನ್ನು ಕುರಿತ ಕವಿತೆ 'ಟಪಿಯೋಲ'ಕ್ಕೂ ಷೇಕ್ಸ್‌ಪಿಯರನ 'ಟೆಂಪೆಸ್ಟ್' ನಾಟಕಕ್ಕೂ 1925ರಲ್ಲಿ ಜಾನ್ ಸಂಗೀತ ಅಳವಡಿಸಿದ. ಒಂದು ಅಪೆರಾವನ್ನೂ ಆತ ಬರೆದಿದ್ದಾನೆ. ಉತ್ಕೃಷ್ಟವಾದ ಹಾಡುಗಳನ್ನೂ ಲಘು ಗೇಯಕೃತಿಗಳನ್ನೂ ನೀಡಿದ್ದಾನೆ. ಐತಿಹ್ಯದಿಂದ ಪ್ರೇರಿತನಾಗಿ ಪ್ರಭಾವಶಾಲಿಯೂ ಗಭೀರವೂ ಆದ ಸಂಗೀತವನ್ನೂ ಜಾನ್ ರಚಿಸಿದ್ದಾನೆ. ಇವನ್ನು ಕೇಳುವವರಿಗೆ ಫಿನ್‌ಲೆಂಡಿನ ಪ್ರಕೃತಿ ದೃಶ್ಯಗಳು ಕಣ್ಣಿಗೆ ಕಟ್ಟುತ್ತವೆ. ವಿಚಿತ್ರವಾದ ಲಯ, ಸ್ವಚ್ಛಂದವಾದ ರಾಗ, ಏಕಾಕಿತನದ ಗಂಭೀರ ವಾತಾವರಣಗಳು ಪ್ರೇಕ್ಷಕರ ಮನಸ್ಸನ್ನು ಸೆರೆಹಿಡಿಯುತ್ತವೆ.

ಸಿಂಫನಿಯಲ್ಲಿ ಬರುವ ಒಂದೊಂದು ಸಣ್ಣ ಭಾವವೂ ಮುಂದಿನ ಭಾವವನ್ನು ಸೂಚಿಸುವಂತಿದ್ದು, ಅಂತ್ಯದಲ್ಲಿ ಒಂದು ಬೃಹತ್ ಭಾವವಾಗಿ ಪರಿಣಮಿಸುವಂತೆ ಮಾಡುವ ಗೇಯ ವಿಧಾನವೇ ಜಾನನ ವೈಶಿಷ್ಟ್ಯ. ಅವನನ್ನು ಇತರ ಗೇಯಕಾರರು ಅನುಸರಿಸಿದ್ದಾರೆ.

ಮನೋವೃತ್ತಿಯ ಗಾಢತೆಯ ದೃಷ್ಟಿಯಿಂದ ಅವನ ರಚನೆಗಳು ಜರ್ಮನಿಯ ವಾಗ್ಗೇಯಕಾರ ಬಿಥೋವನನ (1770—1827) ರಚನೆಗಳಿಗೆ ಸರಿಸಮನಾದುವೆಂದು ಭಾವಿಸುತ್ತಾರೆ.

1957ರ ಸೆಪ್ಟೆಂಬರ್ 20ನೆಯ ದಿನಾಂಕ ತನ್ನ 92ನೆಯ ವಯಸ್ಸಿನಲ್ಲಿ ಜಾನ್ ಸಿಬಾಲಿಯುಸ್ ತೀರಿಕೊಂಡ.

## ಸ್ವಿಫ್ಟ್

ಪೀಟರ್, ಮಾರ್ಟಿನ್, ಜಾಕ್ —ಈ ಮೂವರು ಒಡಹುಟ್ಟಿದವರು. ತಂದೆ ಇವರೊಬ್ಬೊಬ್ಬರಿಗೂ ಒಂದೊಂದು ಅಂಗಿಯನ್ನು ಕೊಟ್ಟಿರುತ್ತಾನೆ. "ಇವನ್ನು ಸ್ವಚ್ಛವಾಗಿಟ್ಟುಕೊಂಡರೆ ಅದು ಜೀವಮಾನ ಪರ್ಯಂತ ಇರುತ್ತವೆ; ಅಲ್ಲದೆ ಅವರವರಿಗೆ ಸರಿಯಾಗಿ ಹೊಂದಿಕೊಂಡೂ ಇರುತ್ತದೆ" ಎಂದು ತಂದೆ ಹೇಳಿರುತ್ತಾನೆ. ಕೆಲವು ಕಾಲ ತಂದೆಯ ಸೂಚನೆಯನ್ನನುಸರಿಸಿ ಅವರು ಅಂಗಿಯನ್ನು ಚೆನ್ನಾಗಿಟ್ಟುಕೊಂಡಿರುತ್ತಾರೆ.



ವಿಡಂಬನೆ : ಸ್ವಿಫ್ಟ್

ಅನಂತರ ಆಧುನಿಕ ನಗರಕ್ಕೆ ಬಂದ ಈ ಸಹೋದರರು ತಮ್ಮ ಸ್ಥಾನಮಾನಗಳನ್ನೂ ಐಶ್ವರ್ಯವನ್ನೂ ಹೆಚ್ಚಿಸಿಕೊಳ್ಳುವ ಸಲುವಾಗಿ, ಹೊಸ ಹೊಸ ಅಲಂಕಾರ ಏನು ಕಂಡರೂ ಅದನ್ನು ತಮ್ಮ ತಮ್ಮ ಅಂಗಿಗೆ ಜೋಡಿಸಿಕೊಳ್ಳುತ್ತಲೇ ಇರುತ್ತಾರೆ. ಕೊನೆಗೆ ಈ ಸ್ಪರ್ಧೆಯ ಪರಿಣಾಮವಾಗಿ ಪೀಟರ್ ತನ್ನ ತಮ್ಮಂದಿರನ್ನು ಮನೆಯಿಂದ ಹೊರಹಾಕುತ್ತಾನೆ. ಇದರಿಂದ ಕೋಪಗೊಂಡ ಜಾಕ್ ತನ್ನ ಅಂಗಿಗೆ ಹೊಲಿದುಕೊಂಡಿದ್ದ ಅಲಂಕಾರಗಳನು ಕಿತ್ತುಹಾಕಲು ಹೋಗಿ ಅಂಗಿಯನ್ನೇ ಹರಿದುಬಿಡುತ್ತಾನೆ. ಮಾರ್ಟಿನ್ ಅಂಗಿಯ ಬಟ್ಟೆ ಹಾಳಾಗದಂತೆ ಎಷ್ಟು ಅಲಂಕರಣಗಳನ್ನು ಕೀಳುವುದು ಸಾಧ್ಯವೋ ಅಷ್ಟನ್ನು ಕಿತ್ತುಹಾಕುತ್ತಾನೆ.

ಈ ಕಥೆಯಲ್ಲಿ ಬರುವ ಮೂರು ಜನ ಸಹೋದರರೂ ಕ್ರೈಸ್ತಧರ್ಮದ ರೋಮನ್, ಲುಥೇರಿಯನ್ ಹಾಗೂ ಪ್ರೆಸಿಬಿಟೇರಿಯನ್ ಪಂಥಗಳ ಪ್ರತೀಕ. ಅಂಗಿ ಬೈಬಲ್. ಕ್ರೈಸ್ತಧಾರ್ಮಿಕ ಪಂಥಗಳು ಪ್ರಾಪಂಚಿಕತೆಗೆ ಮನಸ್ಸು ಕೊಟ್ಟುದರ ಸೂಚನೆ –ಅವರು ತಮ್ಮ ಅಂಗಿಗಳಿಗೆ ಹಚ್ಚಿಕೊಳ್ಳುವ ಅಲಂಕಾರಗಳು.

ಇದು ಜೊನಾಥನ್ ಸ್ವಿಫ್ಟ್‌ನ 'ದ ಟೇಲ್ ಆಫ್ ಎ ಟಬ್' ಎಂಬ ವಿಡಂಬನಾತ್ಮಕ ಕೃತಿಯಲ್ಲಿ ಬರುವ ಒಂದು ಕಥೆಯ ವಸ್ತು. ಈ ಗ್ರಂಥದಲ್ಲಿ ತನ್ನ ಪ್ರತಿಭೆ ಕಲ್ಪನಾ ವಿಲಾಸಗಳು ಸ್ಫುಟವಾಗಿ ಹೊಮ್ಮಿವೆ ಎಂಬುದು ಸ್ವಿಫ್ಟ್‌ನ ಅಭಿಪ್ರಾಯ.

ಜೊನಾಥನ್ ಸ್ವಿಫ್ಟ್ ಕ್ರೈಸ್ತಧರ್ಮ ಬೋಧಕ, ಕವಿ, ರಾಜಕೀಯ ಲೇಖಕ ಹಾಗೂ ವಿಡಂಬನಕಾರ. ಸ್ವಿಫ್ಟ್ ಐರ್ಲೆಂಡಿನ ಡಬ್ಲಿನ್‌ನಲ್ಲಿ 1667ರ ನವೆಂಬರ್ 30ರಂದು ಜನಿಸಿದ. ಅವನು ಹುಟ್ಟುವುದಕ್ಕೆ ಸ್ವಲ್ಪ ಮುಂಚೆ ಅವನ ತಂದೆ ತೀರಿಕೊಂಡಿದ್ದ. ಡಬ್ಲಿನ್‌ನ ಟ್ರಿನಿಟಿ ಕಾಲೇಜಿನಲ್ಲಿ ಓದಿ ಪದವೀಧರನಾದ. ಐರ್ಲೆಂಡಿನಲ್ಲಿ ನಡೆದ ಕ್ರಾಂತಿಯಿಂದಾಗಿ ಸ್ವಿಫ್ಟ್ 1689ರಲ್ಲಿ ಇಂಗ್ಲೆಂಡಿಗೆ ಬಂದು ಸರ್ ವಿಲಿಯಂ ಟೆಂಪಲ್‌ರ ಕಾರ್ಯದರ್ಶಿಯಾಗಿದ್ದ. ಇಲ್ಲಿ ಆತನಿಗೆ ರಾಜಕಾರಣಿಗಳು ಹಾಗೂ ವಿದ್ವಾಂಸರ ಪರಿಚಯವಾಯಿತು. ಓದಲು ಟೆಂಪಲ್‌ರ ಪುಸ್ತಕ

ಗಳೂ ದೊರೆತುವು. 1693ರಲ್ಲಿ ಪಾದ್ರಿ ದೀಕ್ಷೆಯನ್ನು ಪಡೆದುಕೊಂಡ. ಇಲ್ಲಿರುವಾಗಲೇ ಇವನಿಗೆ ಎಸ್ತರ್ ಜಾನ್ಸನ್‌ಳ ಪರಿಚಯವಾದದ್ದು. ಇವನು ಅವಳನ್ನು ಗುಟ್ಟಾಗಿ ಮದುವೆಯಾಗಿದ್ದನೆಂದು ಕೂಡ ಅನುಮಾನಿಸುವವರಿದ್ದಾರೆ. 1699ರಲ್ಲಿ ಅವನ ಆಶ್ರಯದಾತ ಸರ್ ವಿಲಿಯಂ ಟೆಂಪಲ್‌ನ ನಿಧನಾನಂತರ ಸ್ವಿಫ್ಟ್ ಐರ್ಲೆಂಡಿಗೆ ಹಿಂದಿರುಗಿ ಧರ್ಮಬೋಧಕನ ಕೆಲಸ ವಹಿಸಿಕೊಂಡ. 1704ರಲ್ಲಿ ಅವನ ಕೃತಿಗಳು ಪ್ರಕಟವಾದ ಬಳಿಕ ಉತ್ತಮ ವಿಡಂಬನಕಾರನೆಂಬ ಕೀರ್ತಿ ಅವನಿಗೆ ದೊರೆಯಿತು.

ಸ್ವಿಫ್ಟ್ ರಾಜಕಾರಣದ ಕಡೆಗೆ ಮನಸ್ಸು ತಿರುಗಿಸಿ ರಾಣಿ ಆ್ಯನ್‌ಳ ಆಳ್ವಿಕೆಯಲ್ಲಿ ಟೋರಿ ಪಕ್ಷದ ಪ್ರಚಾರಕನಾಗಿ ವಿಗ್ ಪಕ್ಷದ ವಿರುದ್ಧ ಅನೇಕ ಪುಸ್ತಿಕೆಗಳನ್ನು ಬರೆದ. 'ಎಗ್ಸಾಮಿನರ್' ಪತ್ರಿಕೆ ನಡೆಸಿದ. ಟೋರಿ ಮಂತ್ರಿಮಂಡಲ 1713ರಲ್ಲಿ ಪತನಹೊಂದಿದ ಮೇಲೆ ರಾಜಕೀಯದಿಂದ ನಿವೃತ್ತನಾದ. ತನ್ನ ಸಾಹಿತ್ಯರಚನೆಯನ್ನು ಮುಂದುವರಿಸಿದ.

1704ರಲ್ಲಿ ಪ್ರಕಟವಾದ ಸ್ವಿಫ್ಟ್‌ನ ಕೃತಿ 'ದ ಬ್ಯಾಟ್‌ಲ್ ಆಫ್ ಬುಕ್ಸ್' ಪ್ರಾಚೀನ ಹಾಗೂ ಸಮಕಾಲೀನ ಲೇಖಕರ ಯೋಗ್ಯತೆಯ ಬಗೆಗೆ ಆ ಕಾಲದಲ್ಲಿ ನಡೆಯುತ್ತಿದ್ದ ಚರ್ಚೆಯನ್ನು ಸ್ವಿಫ್ಟ್ ಈ ಕೃತಿಯಲ್ಲಿ ವಿಡಂಬನೆಗೆ ಗುರಿಮಾಡಿದ್ದಾನೆ: ಅರಸನ ಪುಸ್ತಕ ಭಂಡಾರದಲ್ಲಿರುವ ಗ್ರಂಥಗಳ ನಡುವೆ ನಡೆಯುವ ಕಾದಾಟದ ರೂಪದಲ್ಲಿದೆ ಈ ವಿಡಂಬನೆ.

ಅವನ 'ದಿ ಟೇಲ್ ಆಫ್ ಎ ಟಬ್' ಕೂಡ ಇದೇ ಕಾಲದಲ್ಲಿ ಪ್ರಕಟವಾಯಿತು.

ಮಾನವನ ಲೋಪದೋಷಗಳು, ಬೂಟಾಟಿಕೆ, ಅಧಿಕಾರಲಾಲಸೆಗಳನ್ನು ಕುರಿತಾದ ವಿಡಂಬನೆ 1726ರಲ್ಲಿ ಸ್ವಿಫ್ಟ್ ಬರೆದ 'ಗಲಿವರನ ಪ್ರವಾಸಗಳು'' ಈ ಕೃತಿರಚನೆಯ ದೃಷ್ಟಿ ಹೀಗಿದ್ದರೂ 'ಗಲಿವರನ ಪ್ರವಾಸಗಳು' ಮಕ್ಕಳಿಗೆ ಅತ್ಯಂತ ಪ್ರಿಯವಾದ ಗ್ರಂಥ. ಗಲಿವರ್ ಎಂಬವನು ನೌಕಾಘಾತದಿಂದ ನೀರು ಪಾಲಾಗಿ, ಕುಬ್ಜರ, ದೈತ್ಯರ, ಮಾನವರನ್ನಾಳುತ್ತಿದ್ದ ಕುದುರೆಗಳ ರಾಜ್ಯಗಳನ್ನು ಸೇರಿ ಅಲ್ಲಿ ಕಳೆಯುವ ದಿನಗಳ ಕಥೆ ಇದರಲ್ಲಿದೆ. ಸ್ವಿಫ್ಟ್ ಈ ಕಥೆಯ ಹಂದರವನ್ನು ಸಮಕಾಲೀನ ಜನರ ನಡೆ ನುಡಿ, ಆಚಾರ ವ್ಯವಹಾರ ಮತ್ತು ಅಲ್ಪತೆಗಳು ಹಾಸ್ಯ ಮಾಡುವುದಕ್ಕಾಗಿ ಉಪಯೋಗಿಸಿಕೊಂಡಿದ್ದಾನೆ.

'ಬಾಸಿಸ್ ಅಂಡ್ ಫಿಲೊಮನ್' ಸ್ವಿಫ್ಟ್‌ನ ಕಥನ ಕವನ.

ಸ್ವಿಫ್ಟ್‌ನ ವಿಡಂಬನೆ ಅಸೂಯೆಯಿಂದ ಪ್ರೇರಿತವಾಗಿರಲಿಲ್ಲ. ಮಾನವರ ದೋಷಗಳ ಬಗೆಗೆ ಅವನಿಗಿದ್ದ ಅಸಹನೆಯೇ ಅದಕ್ಕೆ ಕಾರಣ. ಅವನು ಮಾನವಪ್ರೇಮಿ.

ಸ್ವಿಫ್ಟ್ ತನ್ನ ಅಭಿಮಾನಕ್ಕೆ ಪಾತ್ರಳಾಗಿದ್ದ ಎಸ್ತರ್‌ಗೆ ಬರೆದಿದ್ದ ಕಾಗದಗಳು 'ಜರ್ನಲ್ ಟು ಸ್ಟೆಲ್ಲಾ' ಆಕೆಯ ಮರಣಾನಂತರ ಪ್ರಕಟವಾದುವು. ಇದು ಸ್ವಿಫ್ಟ್‌ನ ನೈಜವ್ಯಕ್ತಿತ್ವವನ್ನು ಎತ್ತಿತೋರಿಸುವ ಕೃತಿ. ವಿಡಂಬನಕಾರ ಸ್ವಿಫ್ಟ್‌ನ ಅಂತರಂಗದ ಮಾರ್ದವ ಮತ್ತು ಮಾನವೀಯತೆಗಳನ್ನು ಈ ಕೃತಿಯಲ್ಲಿ ಕಾಣಬಹುದು.

ಉತ್ತಮ ಲೇಖಕನೆಂದು ಖ್ಯಾತನಾದರೂ ತನ್ನ ಜೀವನದಲ್ಲೊದಗಿದ ನಿರಾಶೆಗಳ ಫಲವಾಗಿ ಮನಸ್ಸಿನ ಕ್ಷೋಭೆಗೊಳಗಾದ ಸ್ವಿಫ್ಟ್ 1742ರಲ್ಲಿ ಹುಚ್ಚನಾದ; 1745ರ ಅಕ್ಟೋಬರ್ 19ರಂದು ಮೃತನಾದ.

ಸ್ವಿಫ್ಟ್‌ನ ಬಗೆಗೆ ಹೇಳುತ್ತ ಅವನ ಆಪ್ತಮಿತ್ರರಲ್ಲೊಬ್ಬನಾಗಿದ್ದ ಖ್ಯಾತ ಸಾಹಿತಿ ಅಡಿಸನ್ "ಅತ್ಯುತ್ತಮ ಸಂಗಾತಿ, ನಿಷ್ಠ ಸ್ನೇಹಿತ ಹಾಗೂ ಈ ಯುಗದ ಅತ್ಯಂತ ಮೇಧಾವಿ'' ಎಂದಿದ್ದಾನೆ.

ಸಂತ ಪ್ಯಾಟ್ರಿಕ್ ಪ್ರಾರ್ಥನಾಮಂದಿರದಲ್ಲಿ ಎಸ್ತರ್ ಪಕ್ಕದಲ್ಲಿ ಸ್ವಿಫ್ಟ್‌ನನ್ನು ಸಮಾಧಿ ಮಾಡಲಾಯಿತು.

## ಸ್ಟೀನ್‌ಬೆಕ್

ಅಮೆರಿಕದ ಖ್ಯಾತ ಕಾದಂಬರಿಕಾರ. ಕತೆಗಾರ ಜಾನ್ ಸ್ಟೀನ್‌ಬೆಕ್ 1962ರ ನೊಬೆಲ್ ಸಾಹಿತ್ಯ ಪಾರಿತೋಷಕ ವಿಜೇತ.

ಅವನ ತಂದೆ ಖಜಾಂಚಿಯಾಗಿದ್ದ. ತಾಯಿ ಉಪಾಧ್ಯಾಯಿನಿ. ಉತ್ತಮ ಪುಸ್ತಕಗಳನ್ನು ಓದುವಂತೆ ಆಕೆ ಮಗನನ್ನು ಪ್ರೋತ್ಸಾಹಿಸುತ್ತಿದ್ದಳು. ಸಾಹಿತ್ಯರಚನೆಯಲ್ಲಿ ಸ್ಟೀನ್‌ಬೆಕ್‌ಗೆ ಮೊದಲಿನಿಂದಲೂ ಆಸಕ್ತಿ. ವಿದ್ಯಾರ್ಥಿದೆಸೆಯಲ್ಲಿಯೇ ಅವನು ವಿಶ್ವವಿದ್ಯಾನಿಲಯದ ನಿಯತಕಾಲಿಕಗಳಿಗೆ ಕವನಗಳನ್ನೂ ಹಾಸ್ಯಪ್ರಧಾನವಾದ ವಿಡಂಬನೆಗಳನ್ನೂ ಬರೆದುಕೊಡುತ್ತಿದ್ದ. ಸ್ಟೀನ್‌ಬೆಕ್‌ನ ಪ್ರಥಮ ಕಾದಂಬರಿ 'ಕಪ್ ಆಫ್ ಗೋಲ್ಡ್' 1929ರಲ್ಲಿ ಪ್ರಕಟವಾಯಿತು. ಮೂರು ವರ್ಷಗಳ ಅನಂತರ 'ಪ್ಯಾಸ್ಚರ್ ಆಫ್ ಹೆವನ್'. ಅದರ ಮರುವರ್ಷ 'ಟು ಎ ಗಾಡ್ ಅನ್‌ನೋನ್'. 1935ರಲ್ಲಿ 'ಟೋರ್ಟಿಲಾ ಫ್ಲ್ಯಾಟ್' ಕಾದಂಬರಿಗಳು ಹೊರಬಂದುವು.

ಆತನಿಗೆ ಮನ್ನಣೆ ತಂದುಕೊಟ್ಟ 'ಆಫ್ ಮೈಸ್ ಅಂಡ್ ಮೆನ್' ಕಾದಂಬರಿ ಪ್ರಕಟವಾದದ್ದು 1937ರಲ್ಲಿ. ಇದು ನಾಟಕವಾಗಿ ರೂಪಾಂತರ ಹೊಂದಿ ಪ್ರದರ್ಶಿಸಲ್ಪಟ್ಟಿತು. ಈ ನಾಟಕಕ್ಕೆ 1937–38ರ ನ್ಯೂಯಾರ್ಕ್ ನಾಟಕ ವಿಮರ್ಶಕರ ತಂಡದ ಪ್ರಶಸ್ತಿ ದೊರಕಿತು. ಈ ಕಥೆ 1940ರಲ್ಲಿ ಚಲಚ್ಚಿತ್ರವಾಯಿತು. ಜಾರ್ಜ್ ಮತ್ತು ಲೆನ್ನಿ ಕ್ಯಾಲಿಫೋರ್ನಿಯದ ವ್ಯವಸಾಯ ಕೂಲಿಗಾರರು. ಕಾಲುನಡಿಗೆಯಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆ ಹೋಗುತ್ತ ಜಮೀನಿನಲ್ಲಿ ಕೆಲಸ ಮಾಡುತ್ತ ಜೀವನ ನಿರ್ವಹಣೆ ಮಾಡಿಕೊಳ್ಳುತ್ತಿದ್ದರು. ಅವರಿಗೆ ನಿಲ್ಲಲು ಎಡೆಯಿಲ್ಲ. ಮನೆಯಿಲ್ಲ. ಯಾರದೋ ಹೊಲದಲ್ಲಿ ಬೆವರು ಸುರಿಸಿ ದುಡಿಯುವುದೇ ತಮ್ಮ ಬಾಳಾಯಿತಲ್ಲ. ತಮ್ಮದೆಂಬ ಒಂದು ತುಂಡು ಜಮೀನಾದರೂ ಇದ್ದರೆ ಎಷ್ಟು ಚೆನ್ನಾಗಿರುತ್ತಿತ್ತು —ಎಂಬುದು ಇವರ ಕನಸು, ಹಂಬಲ. ಇವರ ನೋವು ಹಂಬಲಗಳು ಓದುಗರ ಮನಸ್ಸು ಮಿಡಿಯುವಂತೆ ಈ ಕಾದಂಬರಿಯಲ್ಲಿ ಚಿತ್ರಿತವಾಗಿವೆ.



ಸೃಜತೆ, ರಮ್ಯತೆ : ಸ್ಟೀನ್‌ಬೆಕ್

ಓಕ್ಲಹೋಮಾದಿಂದ ಕ್ಯಾಲಿಫೋರ್ನಿಯಕ್ಕೆ ವಲಸೆ ಹೋಗುತ್ತಿದ್ದ ಜನರೊಡನೆ ದೇಶದ ಬಹು ಭಾಗದಲ್ಲಿ ತಿರುಗಾಡಿಬಂದ ಸ್ಟೀನ್‌ಬೆಕ್‌ನ ಲೇಖನಿಯಿಂದ 'ಗ್ರೇಪ್ಸ್ ಆಫ್ ರಾತ್' 1940ರಲ್ಲಿ ಹೊರಬಂತು. 1930ರ ಮುಗ್ಗಟ್ಟಿನ ಕಾಲದಲ್ಲಿ ಒಂದು ರೈತ ಕುಟುಂಬ ಪಟ್ಟ ಬವಣೆಗಳು, ಎದುರಿಸಿದ ಸಂಕಷ್ಟಗಳು ಈ ಕಾದಂಬರಿಯಲ್ಲಿ ವರ್ಣಿತವಾಗಿವೆ. ಇದು ಸ್ಟೀನ್‌ಬೆಕ್‌ನ ಮೇರುಕೃತಿ ಎಂದು ಪರಿಗಣಿಸಲ್ಪಟ್ಟಿದೆ. ಇದಕ್ಕೆ ಪುಲಿಟ್ಜರ್ ಬಹುಮಾನ ಬಂದಿತು. ಆ ವರ್ಷವೇ ಅದು ಚಲಚ್ಚಿತ್ರವಾಯಿತು.

'ದಿ ಲಾಂಗ್ ವ್ಯಾಲಿ' ಇವನ ಹನ್ನೆರಡು ಕಥೆಗಳ ಸಂಕಲನ.

ಸ್ಟೀನ್‌ಬೆಕ್‌ನ ಕೃತಿಗಳು ಸಾಮಾನ್ಯವಾಗಿ ಗ್ರಾಮಪ್ರದೇಶದ ಹಿನ್ನೆಲೆಯುಳ್ಳವು. ತನ್ನ ಕೃತಿಗಳಲ್ಲಿ ಹಳ್ಳಿಗಳ ಜೀವನವನ್ನು ನಿರೂಪಿಸಲು ಆತ ತನ್ನ ಜನ್ಮ ಪ್ರದೇಶವಾದ ಕ್ಯಾಲಿಫೋರ್ನಿಯದ ಸುತ್ತಮುತ್ತ ಇರುವ ಸ್ಥಳಗಳನ್ನೇ ಹೆಚ್ಚಾಗಿ ಆರಿಸಿಕೊಂಡಿದ್ದಾನೆ. ಆತನ ಕೃತಿಗಳಲ್ಲಿ ನೈಜತೆ, ರಮ್ಯತೆಗಳು ಹಾಸುಹೊಕ್ಕಾಗಿವೆ. ಹಳ್ಳಿಗರ ಜೀವನವನ್ನು ಅವನು ಸಹಾನುಭೂತಿಯಿಂದ ಕಂಡಿದ್ದಾನೆ. ಅದರೊಡನೆ ಮೃದು ಹಾಸ್ಯವೂ ಸೇರಿರುವುದು ಈ ಕೃತಿಗಳಿಗೆ ಮೆರುಗುಕೊಟ್ಟಿದೆ.

ಸ್ಟೀನ್‌ಬೆಕ್ ಕ್ಯಾಲಿಫೋರ್ನಿಯದ ಸಮೀಪದಲ್ಲಿರುವ ಸಾಲಿನಾಸ್‌ನಲ್ಲಿ 1902ರ ಫೆಬ್ರವರಿ 27ರಂದು ಜನಿಸಿದ. ವಿದ್ಯಾಭ್ಯಾಸಾನಂತರ 1925ರಲ್ಲಿ ನ್ಯೂಯಾರ್ಕಿಗೆ ಬಂದು ಅಲ್ಲಿ ಎರಡು ವರ್ಷಗಳ ಕಾಲ ಇದ್ದ. ಆಗ ಗಾರೆಕೆಲಸದವನ ಸಹಾಯಕನಾಗಿ, ಪತ್ರಿಕಾ ಸುದ್ದಿಗಾರನಾಗಿ ಕೆಲಸ ಮಾಡುತ್ತಿದ್ದ. ಕ್ಯಾಲಿಫೋರ್ನಿಯಕ್ಕೆ ಹಿಂದಿರುಗಿದ ಮೇಲೆ ಕೆಲ ಕಾಲ ಒಂದು ವ್ಯವಸಾಯ ಕ್ಷೇತ್ರದ ಉಸ್ತುವಾರಿಯನ್ನು ನೋಡಿದ. ಸ್ಟೀನ್‌ಬೆಕ್ ತನ್ನ ಮೊದಲ ಕಾದಂಬರಿಯನ್ನು ಬರೆದದ್ದು ಈ ಕೆಲಸದಲ್ಲಿದ್ದಾಗಲೇ.

1968ರ ಡಿಸೆಂಬರ್ 20ರಂದು ಸ್ಟೀನ್‌ಬೆಕ್ ನಿಧನನಾದ.

## ಸ್ಟೀವನ್‌ಸನ್

ಗಾಢ ನಿದ್ರೆಯಲ್ಲಿದ್ದ ತರುಣ ಲೇಖಕ ಸ್ಟೀವನ್‌ಸನನಿಗೆ ಕೆಟ್ಟ ಕನಸು ಬಿದ್ದು ಥಟ್ಟನೆ ಎಚ್ಚರವಾಯಿತು. ಹೆದರಿ ಎದ್ದು ಕುಳಿತ. ಬಳಿಕ ತನ್ನ ಮೇಜಿನ ಬಳಿಗೆ ಧಾವಿಸಿ ಕನಸಿನಲ್ಲಿ ಕಂಡದ್ದನ್ನು ಸರಸರನೆ ಬರೆದಿಟ್ಟ.

ಹಾಗೆ ಬರೆದಿಟ್ಟುದೇ ಮುಂದೆ ಜನಪ್ರಿಯ ಕಾದಂಬರಿ 'ಡಾಕ್ಟರ್ ಜೆಕಿಲ್ ಮತ್ತು ಮಿಸ್ಟರ್ ಹೈಡ್'ಗೆ ಮೂಲ ಸಾಮಗ್ರಿಯಾಯಿತು.

ಡಾಕ್ಟರ್ ಜೆಕಿಲ್ ಒಬ್ಬ ಪ್ರಸಿದ್ಧ ವಿಜ್ಞಾನಿ. ಗಣ್ಯ ನಾಗರಿಕ. ಎಲ್ಲರಿಗೂ ಬೇಕಾದವನು. ಆದರೆ ಅವನ ಒಂದು ಗುಟ್ಟು ಯಾರಿಗೂ ತಿಳಿದಿರಲಿಲ್ಲ. ಜೆಕಿಲ್ ತನ್ನ ಪ್ರಯೋಗಶಾಲೆಯಲ್ಲಿ ಒಂದು ವಿಚಿತ್ರ ಔಷಧಿಯನ್ನು ತಯಾರಿಸಿದ್ದ. ಈ ಔಷಧಿಯನ್ನು ಸ್ವಲ್ಪ ಪ್ರಮಾಣದಲ್ಲಿ ಸೇವಿಸಿದಾಗ ಅವನು ಬೇರೆ ಮನುಷ್ಯನೇ ಆಗುತ್ತಿದ್ದ. ಈ ಎರಡನೆಯ ವ್ಯಕ್ತಿ ಅತಿ ಕ್ರೂರಿ. ಎಳೆಯ ಮಕ್ಕಳ ಕತ್ತನ್ನು ಹಿಚುಕಲೂ ಹೇಸುವವನಲ್ಲ. ಅವನು ಜೆಕಿಲನ ಪ್ರಯೋಗಶಾಲೆಯಲ್ಲಿ ಇದ್ದ ಇನ್ನೊಂದು ಔಷಧಿಯನ್ನು ಸೇವಿಸಿದೊಡನೆ ಮತ್ತೆ ಸಾಧು ಸ್ವಭಾವದ ಡಾಕ್ಟರ್ ಜೆಕಿಲನಾಗುತ್ತಿದ್ದ.

ಮೈ ನವಿರೇಳಿಸುವ ಈ ಕಥೆಯನ್ನು ಸ್ಟೀವನ್‌ಸನ್ ಶಾಂತ ಭಾವೋದ್ರೇಕರಹಿತ ಶೈಲಿಯಲ್ಲಿ ಬರೆದಿದ್ದಾನೆ.

ಸ್ಟೀವನ್‌ಸನ್ ಬರೆದದ್ದು ಇಂಥ ಕಾದಂಬರಿಗಳನ್ನು ಮಾತ್ರವಲ್ಲ. ಕಿರಿಯರಿಗಾಗಿ ಸುಂದರವಾದ ಪದ್ಯಗಳು, ಸಣ್ಣ ಕಥೆಗಳು, ಪ್ರವಾಸಕಥನಗಳು ಮತ್ತು ಪ್ರಬಂಧಗಳು —ಇವನ್ನೆಲ್ಲ ಅವನು ಬರೆದ. ಸಾಹಸಕಥೆಯಾದ



ಕತೆಗಾರ : ಸ್ಟೀವನ್‌ಸನ್

'ನಿಧಿದ್ವೀಪ' ಸ್ಟೀವನ್‌ಸನನನ್ನು ತುಂಬ ಜನಪ್ರಿಯ ಲೇಖಕನನ್ನಾಗಿ ಮಾಡಿತು.

1850, ನವೆಂಬರ್ 13ರಂದು ಸ್ಕಾಟ್‌ಲೆಂಡಿನ ಎಡಿನ್‌ಬರೋದಲ್ಲಿ ರಾಬರ್ಟ್ ಲೂಯಿ ಸ್ಟೀವನ್‌ಸನ್ ಹುಟ್ಟಿದ. ಕೂಸು ಬದುಕಿದ್ದೇ ಹೆಚ್ಚು. ಹುಡುಗನಾಗಿದ್ದಾಗಲೂ ಎಂದೂ ಅವನು ಪೂರ್ತಿ ಆರೋಗ್ಯವಂತನಾಗಿರಲಿಲ್ಲ. ಸ್ಕಾಟ್‌ಲೆಂಡಿನಲ್ಲಿ ವರ್ಷದ ಬಹು ಭಾಗ ತುಂಬ ಚಳಿ. ಆ ಹವೆ ರಾಬರ್ಟನಿಗೆ ಸರಿಬೀಳಲಿಲ್ಲ. ಶಾಲೆಗೆ ಹೋದರೆ ಹೋದ, ಇಲ್ಲದಿದ್ದರೆ ಇಲ್ಲ. ಹೆಚ್ಚಿನ ಪಾಠ ಮನೆಯಲ್ಲೇ ನಡೆಯಿತು. ಈ ಸೂಕ್ಷ್ಮ ಪ್ರವೃತ್ತಿಯ ಕನಸುಗಾರ ಹುಡುಗನಿಗೆ ಸರಿಯಾದ ದಾದಿಯೇ ಸಿಕ್ಕಿದಳು. ಅವಳು ಹೇಳಿದ ಕಥೆಗಳ ಭೂತ–ಪಿಶಾಚಿಗಳು ಹುಡುಗನ ಕನಸಿನಲ್ಲಿ ಬಂದು ಇವನನ್ನು ಬೆಚ್ಚಿಬೀಳುವಂತೆ ಮಾಡುತ್ತಿದ್ದುವು.

ರಾಬರ್ಟ್ ಲೂಯಿ ಸ್ಟೀವನ್‌ಸನನ ತಂದೆ ಪ್ರಸಿದ್ಧ ಸಿವಿಲ್ ಎಂಜಿನಿಯರ್. ಮಗನನ್ನೂ ಎಂಜಿನಿಯರನ್ನಾಗಿ ಮಾಡಬೇಕೆಂದು ಆಶಿಸಿ ಹದಿನಾರನೆಯ ವಯಸ್ಸಿಗೆ ವಿಶ್ವವಿದ್ಯಾಲಯಕ್ಕೆ ಸೇರಿಸಿದ. ಆದರೆ ಅದರಲ್ಲಿ ರಾಬರ್ಟ್‌ಗೆ ಶ್ರದ್ಧೆ ಹುಟ್ಟಲಿಲ್ಲ. ಮೊದಲಿನಿಂದಲೂ ಬರೆಯುವುದರಲ್ಲೇ ವಿಶೇಷ ಆಸಕ್ತಿ. ತನ್ನ ಲೇಖನ ಕಲೆಯನ್ನು ಬೆಳೆಸಿಕೊಳ್ಳಲು ಪದ್ಯ, ಕಥೆ, ಪ್ರಬಂಧಗಳ ರಚನೆಯಲ್ಲಿ ತೊಡಗಿದ. ಅವನ್ನು ವಿಶ್ವವಿದ್ಯಾಲಯ ಪತ್ರಿಕೆಗೂ ಕಳುಹಿಸಿದ. ಅವನು ಎಲ್ಲಿ ಹೋದರೂ ತನ್ನೊಡನೆ ಎರಡು ಪುಸ್ತಕಗಳನ್ನು ತೆಗೆದುಕೊಂಡು ಹೋಗುತ್ತಿದ್ದ : ಒಂದು ಓದಲು, ಇನ್ನೊಂದು ಬರೆಯಲು. ಎಂಜಿನಿಯರಿಂಗ್ ಅಭ್ಯಾಸಕ್ಕೆ ಶರಣುಹೊಡೆದು ನ್ಯಾಯಶಾಸ್ತ್ರದ ತರಗತಿಗೆ ಸೇರಿದ. ಆ ಅಧ್ಯಯನವನ್ನು ಮುಗಿಸಿ ವಕೀಲನಾದ. ಆದರೆ ಆ ವೃತ್ತಿಯನ್ನು ಅವಲಂಬಿಸಲಿಲ್ಲ.

ಕಾಲೇಜು ಶಿಕ್ಷಣ ಸಂಚಾರದ ಕಥನವಾದ 'ಒಳನಾಡು ಪ್ರವಾಸ' (1878) ಮೊಟ್ಟ ಮೊದಲು ಪ್ರಕಟವಾದ ಸ್ಟೀವನ್‌ಸನ್‌ನ ಪುಸ್ತಕ. 'ಸ್ಟೀವನ್‌ಸನ್ ಮತ್ತು ಒಂದು ಕತ್ತೆ' ಅವನು ಫ್ರಾನ್ಸಿನಲ್ಲಿ ಕೈಗೊಂಡ ಕಾಲ್ನಡಿಗೆ ಪ್ರವಾಸದ

ಕಥೆ. ಇದೂ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. 1882ರಲ್ಲಿ ಹೊರಬಂದ 'ಆಧುನಿಕ ಅರೇಬಿಯನ್ ನೈಟ್ಸ್' ಅನೇಕ ಸಣ್ಣ ಕಥೆಗಳ ಸಂಕಲನ.

ಸ್ಟೀವನ್‌ಸನ್ ಫ್ರಾನ್ಸಿನಲ್ಲಿದ್ದಾಗ ಆತನಗಿಂತ ಹತ್ತು ವರ್ಷ ಹಿರಿಯಳಾಗಿದ್ದ ವಿವಾಹಿತ ಸ್ತ್ರೀ ಫ್ರಾನ್ಸಿ ಆಸ್‌ಬರ್ನ್ ಎಂಬುವಳಲ್ಲಿ ಅನುರಕ್ತನಾದ. 1879ರಲ್ಲಿ ಅಮೆರಿಕಕ್ಕೆ ಹೋಗಿ, ಅಲ್ಲಿ ಆಕೆ ವಿವಾಹ ವಿಚ್ಛೇದನ ಪಡೆದುಕೊಂಡ ಮೇಲೆ, 1880ರಲ್ಲಿ, ಅವಳನ್ನು ವಿವಾಹವಾದ. ಆ ಹೊತ್ತಿಗೆ ಆಕೆಗೆ ಇಬ್ಬರು ಮಕ್ಕಳಾಗಿದ್ದರು. ಸ್ಟೀವನ್‌ಸನ್ ತನ್ನ ಪತ್ನಿ ಮತ್ತು ಅವರ ಇಬ್ಬರು ಮಕ್ಕಳೊಡನೆ ಸ್ಕಾಟ್‌ಲೆಂಡಿಗೆ ಹಿಂದಿರುಗಿದ.

12 ವರ್ಷದ ತನ್ನ ಮಲಮಗ ಲಾಯಿಡ್ ಆಸ್‌ಬರ್ನ್‌ನ ಮೇಲೆ ಆತನಿಗೆ ವಿಶೇಷ ಮಮತೆ. ಅವನಿಗಾಗಿಯೇ 'ಸಿರಿದ್ವೀಪ' ಬರೆದದ್ದು. ಇದು ಮೊದಲಿಗೆ ಪತ್ರಿಕೆಯೊಂದರಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. 1883ರಲ್ಲಿ, ಸಿರಿದ್ವೀಪ, ಪುಸ್ತಕರೂಪದಲ್ಲಿ ಹೊರಬಂದಾಗ ಸ್ಕಾಟ್‌ಲೆಂಡಿನಲ್ಲಿ ಸ್ಟೀವನ್‌ಸನನ ಹೆಸರು ಮನೆಮಾತಾಯಿತು. ಅನಂತರ ಪ್ರಕಟವಾದ 'ಅಪಹೃತ' ಅದರ ಕಥೆಯ ಮುಂದುವರಿಕೆಯಾದ 'ಕ್ಯಾಟ್ರಿಯೋನಾ', 'ಮಕ್ಕಳ ಪದ್ಯಗಳು', 'ಹೂದೋಟ' ಮುಂತಾದ ಪುಸ್ತಕಗಳೂ ಬಹಳ ಜನಪ್ರಿಯವಾದುವು.

ಸ್ಕಾಟ್‌ಲೆಂಡಿನ ಹವೆಯಿಂದ ದೂರವಿರಲೆಂದು, ಅಮೆರಿಕದ ಸಮೋವ ದ್ವೀಪಕ್ಕೆ ಸ್ಟೀವನ್‌ಸನ್ ಬಂದ. ಅಲ್ಲಿ ದೊಡ್ಡ ಜಮೀನನ್ನು ಕೊಂಡು ಮನೆಕಟ್ಟಿ ಅಲ್ಲೇ ನೆಲೆಸಿದ. ತನ್ನ ಲೇಖನ ಕಾರ್ಯವನ್ನು ಮುಂದುವರಿಸಿದ. ಹುಡುಗ ಲಾಯಿಡ್ ಮತ್ತು ಸ್ಟೀವನ್‌ಸನ್ ಜೊತೆಯಾಗಿ ಕಥೆಗಳನ್ನು ಬರೆದರು. ನಲವತ್ತನಾಲ್ಕರ ಸ್ಟೀವನ್‌ಸನ್ 1894ರ ಡಿಸೆಂಬರ್ 3ರಂದು ಕಾಲವಾದಾಗ 'ಹರ್ಮಿಸ್ಟನ್‌ನ ಅಣೆಕಟ್ಟು' ಅಪೂರ್ಣವಾಗಿತ್ತು. ಇದು ಸ್ಟೀವನ್‌ಸನ್‌ನ ಶ್ರೇಷ್ಠ ಕೃತಿ ಎನ್ನುತ್ತಾರೆ.

ಸಮೋವದ ನಿವಾಸಿಗಳು ಸ್ಟೀವನಸನ್‌ನನ್ನು ಪ್ರೀತಿಗೌರವಗಳಿಂದ ಕಾಣುತ್ತಿದ್ದರು. ಅವರು ಇವನನ್ನು ಅಭಿಮಾನದಿಂದ 'ಟ್ಯುಸಿಟಾಲಾ'— ಕತೆಗಾರ— ಎಂದು ಕರೆಯುತ್ತಿದ್ದರು. ಸ್ಟೀವನ್‌ಸನ್ ಸತ್ತ ಮೇಲೆ ಇವರು ಅವನ ದೇಹವನ್ನು ತಮ್ಮ ದ್ವೀಪದ ವೋಯಾ ಬೆಟ್ಟದ ನೆತ್ತಿಗೆ ಕೊಂಡೊಯ್ದು ದಟ್ಟವಾದ ಮರಗಳಿಂದ ಆವೃತವಾದ ಒಂದು ಸುಂದರ ಸ್ಥಳದಲ್ಲಿ ಸಮಾಧಿ ಮಾಡಿದರು.

## ಸುನೀತ

ದಕ್ಷಿಣ ಫ್ರಾನ್ಸಿನಲ್ಲಿ ಆರಂಭವಾಗಿ, ಇಟಲಿಯಲ್ಲಿ ಪ್ರಬುದ್ಧಗೊಂಡು, ಇಂಗ್ಲಿಷ್ ಭಾಷೆಗೆ ಒದಗಿಬಂದ ಕವಿತಾಪ್ರಕಾರ ಸಾನೆಟ್. ಇದು ಹದಿನಾಲ್ಕು ಸಾಲುಗಳ ಭಾವಗೀತೆ. ಆಂಗ್ಲ ಸಾಹಿತ್ಯದಲ್ಲಿ ಪ್ರಚಾರದಲ್ಲಿದ್ದ ಈ ಛಂದೋರೂಪವನ್ನು ಕನ್ನಡದಲ್ಲಿ 'ಸುನೀತ' ಎಂದು ಕರೆಯುವ ಪದ್ಧತಿ ಬೆಳೆದು ಬಂದಿದೆ. ಮೂರು ಸಾಲುಗಳ ಪದ್ಯವನ್ನು ತ್ರಿಪದಿ, ಆರು ಸಾಲುಗಳ ಪದ್ಯವನ್ನು ಷಟ್ಪದಿ ಎನ್ನುವಂತೆ ಸುನೀತವನ್ನು ಚತುರ್ದಶ ಪದಿ ಎನ್ನಲೂ ಬಹುದು. 'ಶ್ರೀನಿವಾಸ'ರ 'ಮಲಾರ' ಎಂಬ ಸುನೀತ ಸಂಕಲನದಿಂದ ಕನ್ನಡ ಸಾಹಿತ್ಯದಲ್ಲಿ ಸುನೀತಕ್ಕೆ ಭದ್ರವಾದ ಸ್ಥಾನ ದೊರೆಯಿತು. ಈಗ ಸುನೀತ, ಮೂಲದ ರೂಪದಿಂದ ಭಿನ್ನವಾಗಿಯೂ ಭಾವ ಹಾಗೂ ವಸ್ತು ವೈವಿಧ್ಯ ಉಳ್ಳದ್ದಾಗಿಯೂ ಕನ್ನಡದಲ್ಲಿ ನೆಲೆಸಿದೆ.

ಸುನೀತ —ಸಾನೆಟ್— ಮೊದಲಿಗೆ ರೂಪುಗೊಂಡದ್ದು, ವಿಕಾಸಗೊಂಡದ್ದು ಇಟಲಿಯ ದಾಂತೆ, ಬೊಕಾಷಿಯೊ, ಪೆಟ್ರಾರ್ಕ್‌ಗಳಂಥ ಮಹಾ ಸಾಹಿತಿಗಳ ಪ್ರಯತ್ನದಿಂದ.

ಸುನೀತಗಳಿಗೆ [illegible] ಇನ್ನೊಂದು ಶೇಕ್ಸ್‌ಪಿಯರ್ [illegible] ಗಳಲ್ಲಿ [illegible] ದುಕಾರಿಯಾಗಿ [illegible] ಈ ಕವಿಗೆ [illegible]

ವಯಾಟ್ ಮತ್ತು ಸರ್ರೆ ಇಂಗ್ಲೆಂಡಿನಲ್ಲಿ ಸುನೀತ ಬರೆದ ಪ್ರಥಮ ಸಾಹಿತಿಗಳು.

ಸುನೀತವನ್ನು ಪರಿಣಾಮಕಾರಿಯಾಗಿ ಬಳಸಿದವನು ಶೇಕ್ಸ್‌ಪಿಯರ್. "ಈ ಕೀಲಿಕೈಯಿಂದ ಶೇಕ್ಸ್‌ಪಿಯರ್ ತನ್ನ ಹೃದಯದ ಬಾಗಿಲನ್ನು ತೆರೆದಿದ್ದಾನೆ" ಎಂದ ವರ್ಡ್ಸ್‌ವರ್ತ್. ಶೇಕ್ಸ್‌ಪಿಯರನ ಸುನೀತಗಳ ಚೆಲುವು, ಸತ್ವ ಅದ್ವಿತೀಯ. ಮನಸ್ಸಿನ ಚಿಂತನೆ, ಹೃದಯದ ಭಾವನೆಗಳನ್ನು ಹೊರಹೊಮ್ಮಿಸುವುದರಲ್ಲಿ, ಜೀವನದ ಘಟನೆ, ದರ್ಶನಗಳನ್ನು ವಿಶದವಾಗಿ ಇಲ್ಲವೆ ಗೂಢವಾಗಿ ನಿರೂಪಿಸುವುದರಲ್ಲಿ ಅದು ಅವನಿಗೆ ಚೆನ್ನಾಗಿ ಒದಗಿಬಂದಿದೆ. ಶೇಕ್ಸ್‌ಪಿಯರನ ಅನಂತರ ಕೀಟ್ಸ್, ಮಿಲ್ಟನ್, ಎಲಿಜಬೆತ್ ಬ್ಯಾರೆಟ್, ಬ್ರೌನಿಂಗ್ ಕವಿಗಳು ಅತ್ಯಂತ ಹೃದ್ಯವಾದ ಸುನೀತಗಳನ್ನು ರಚಿಸಿದರು.

ಕನ್ನಡದಲ್ಲಿ ಪೆಟ್ರಾರ್ಕ್, ಶೇಕ್ಸ್‌ಪಿಯರ್ —ಈ ಇಬ್ಬರು ಕವಿಗಳ ಮಾದರಿಗಳ ಸುನೀತಗಳೂ ರಚಿತವಾಗಿವೆ. ಅಂತ್ಯಪ್ರಾಸವಷ್ಟೇ ಅಲ್ಲದೆ, ಆದಿ, ಅನುಪ್ರಾಸಗಳುಳ್ಳ, ಪ್ರಾಸವೇ ಇಲ್ಲದ ಒಳಪ್ರಾಸವಿರುವ ಸುನೀತ ರಚನೆಯ ಪ್ರಯೋಗವೂ ನಡೆದಿದೆ. ಕನ್ನಡದಲ್ಲಿ ಸುನೀತಗಳು ಮೊಟ್ಟಮೊದಲು ಕಂಡುಬರುವುದು ಗೋವಿಂದ ಪೈ ಅವರ 'ಗಿಳಿವಿಂಡು' ಕವನ ಸಂಕಲನದಲ್ಲಿ. ಅನಂತರ ಮಾಸ್ತಿಯವರೇ ಮೊದಲಾದ ಹಲವಾರು ಕನ್ನಡ ಕವಿಗಳು ಸುನೀತಗಳನ್ನು ರಚಿಸಿದ್ದಾರೆ.

ಸುನೀತ ಮೊದಲಿನಿಂದಲೂ ಪ್ರಧಾನವಾಗಿ ಭಾವ ನಿರೂಪಕ ಕವನ. ಹರ್ಷ, ಬೇಸರ —ಹೀಗೆ ಒಂದೊಂದು ಭಾವವನ್ನು ತಳೆದ ಮನಸ್ಸಿನ ಏಳುಬೀಳುಗಳ ಸಮಗ್ರಚಿತ್ರವನ್ನು ಬಿಂಬಿಸುವ ಸುನೀತಗಳ ಮಾಲಿಕೆಗಳೂ ಪ್ರಕಟವಾಗಿವೆ. ಕಾಲಕಾಲಕ್ಕೆ ಹಲವು ಬಳವ್ಯತ್ಯಾಸಗಳಿಗೆ ಗುರಿಯಾದರೂ ಸಾಹಿತ್ಯ ಅಭಿವ್ಯಕ್ತಿಯಲ್ಲಿ ಇಂದಿಗೂ ಪ್ರಿಯ ಮಾಧ್ಯಮವಾಗಿ ಉಳಿದಿರುವುದು ಸುನೀತದ ಹಿರಿಮೆ. ವಸ್ತು ಯಾವುದೇ ಆಗಲಿ ಇದನ್ನು ಸುನೀತದಲ್ಲಿ ಪರಿಣಾಮಕಾರಿಯಾಗಿ ಅಳವಡಿಸಬಹುದು.

ಕನ್ನಡ ಭಾಷೆಯಲ್ಲಿ ಸುನೀತಗಳು ಉತ್ತಮ ರೀತಿಯಲ್ಲಿ ರೂಪುಗೊಂಡಿವೆ. ಗೋವಿಂದ ಪೈ, ಕುವೆಂಪು, 'ಶ್ರೀನಿವಾಸ', ಬೇಂದ್ರೆ, ಪು. ತಿ. ನ., ಮೊದಲಾದ ಹಲವರು ಕವಿಗಳು ಭಾವಪೂರ್ಣವೂ ಕಲಾತ್ಮಕವೂ ಆದ ಸುನೀತಗಳನ್ನು ರಚಿಸಿದ್ದಾರೆ; ಸುನೀತವನ್ನು ಕನ್ನಡಕ್ಕೆ ಚೆನ್ನಾಗಿ ಒಗ್ಗಿಸಿಕೊಂಡಿದ್ದಾರೆ.

## ಸುಬ್ಬಯ್ಯ ನಾಯ್ಡು

ತುತ್ತು ಅನ್ನಕ್ಕಾಗಿ ದನ ಕಾದು, ಕೂಲಿಮಾಡಿ ಶ್ರಮಿಸಿದ ಬಾಲಕ ಕನ್ನಡ ರಂಗಭೂಮಿಯ ಶ್ರೇಷ್ಠ ಕಲಾವಿದರಲ್ಲೊಬ್ಬನಾಗಿ ಅರಳಿ ಕೀರ್ತಿವಂತನಾದ. ಆತನೇ ಅಭಿನಯ ಕಲಾಪರಿಣತ ಎಂ.ವಿ. ಸುಬ್ಬಯ್ಯ ನಾಯ್ಡು.

ಸುಬ್ಬಯ್ಯ ನಾಯ್ಡು ಜನನ ಒಂದು ಬಡ ಕುಟುಂಬದಲ್ಲಿ, 1895ರಲ್ಲಿ. ಹುಡುಗನಿಗೆ ಚಿಕ್ಕಂದಿನಿಂದಲೂ ನಾಟಕವೆಂದರೆ ಅಪಾರ ಆಸಕ್ತಿ. ನಾಟಕ ನೋಡಬೇಕೆಂಬ ಹಂಬಲ. ಆದರೆ ಕೈಯಲ್ಲಿ ಕಾಸಿಲ್ಲ. ಕೆಲಸಮಾಡುತ್ತಿದ್ದ. ಕಾಸು ಕೂಡಿಸಿ ನಾಟಕ ನೋಡುತ್ತಿದ್ದ.



ಶ್ರೇಷ್ಠ ನಟನಕಲೆ : ಸುಬ್ಬಯ್ಯ ನಾಯ್ಡು

ಹೀಗೆ ಸ್ವಲ್ಪಕಾಲ ನಡೆಯಿತು. ತಂದೆ ಸತ್ತು ಹೋದರು. ತಾಯಿ ಮಗನನ್ನು ಕರೆದುಕೊಂಡು ತನ್ನ ಸಹೋದರನ ಮನೆಗೆ ಬಂದರು. ಸುಬ್ಬಯ್ಯ ನಾಯ್ಡುಗೆ ನಾಟಕ ಸಂಸ್ಥೆ ಸೇರಬೇಕೆಂಬ ಆಸೆ. ಇದಕ್ಕಾಗಿ ಪ್ರಯತ್ನ ನಡೆಸುತ್ತಿರುವುದು ಗೊತ್ತಾದಾಗ ಸೋದರಮಾವನ ಕೋಪಕ್ಕೆ ತುತ್ತಾಗಬೇಕಾಯಿತು. ತಾಯಿಯನ್ನೂ ಕರೆದುಕೊಂಡು ಮೈಸೂರಿಗೆ ಬಂದ.

ನಾಟಕದಲ್ಲಿ ನಾಯಕ ಪಾತ್ರವನ್ನು ವಹಿಸಬೇಕಾದರೆ ಒಳ್ಳೆ ಅಂಗ ಸೌಷ್ಠವ, ಮೈಕಟ್ಟು ಅಗತ್ಯವೆನಿಸಿತು. ಗರಡಿಗೆ ಸೇರಿ ಕಸರತ್ತು ಮಾಡಿದ; ಕುಸ್ತಿಯನ್ನೂ ಕಲಿತ. ಮಹಾರಾಜರ ಆಶ್ರಯದಲ್ಲಿ ನಡೆದ ಅನೇಕ ಕುಸ್ತಿಪಂದ್ಯಗಳಲ್ಲಿ ಭಾಗವಹಿಸಿ ಬಹುಮಾನಗಳನ್ನೂ ಗಳಿಸಿದ.

ಆ ಕಾಲದಲ್ಲಿ ಎಂ. ವಿ. ಮಾದಪ್ಪನವರು ಮೈಸೂರಿನಲ್ಲಿ ಹೆಸರಾಂತ ನಟರಾಗಿದ್ದರು. ಒಂದು ನಾಟಕ ಸಂಸ್ಥೆಯನ್ನೂ ನಡೆಸುತ್ತಿದ್ದರು. ಸುಬ್ಬಯ್ಯ ನಾಯ್ಡು ಮಾದಪ್ಪನವರ ಆಶ್ರಯ ಪಡೆದು ಸಂಗೀತ ಕಲಿತ. ಅಭಿನಯ ವಿಚಾರದಲ್ಲೂ ಇವರಿಂದ ಮಾರ್ಗದರ್ಶನ ಪಡೆದ.

ನಿರಂತರ ಪ್ರಯತ್ನದಿಂದ ನಾಯ್ಡು ಚೆನ್ನಾಗಿ ಹಾಡುವುದನ್ನು ಕಲಿತು, ಅಭಿನಯದಲ್ಲಿ ಪರಿಣತಿಯನ್ನು ಪಡೆದ. ಮೈಸೂರಿನ ಶಾಕುಂತಲಾ ಕಂಪನಿಯಲ್ಲೂ ಮುಂದೆ ತುಮಕೂರಿನ ಸೀತಪ್ಪನವರ ಕಂಪನಿಯಲ್ಲೂ ಕೆಲಸ ದೊರೆಯಿತು. ಆಗ ನಾಯ್ಡು ಅಭಿನಯಿಸುತ್ತಿದ್ದುದು ಸ್ತ್ರೀ ಪಾತ್ರಗಳನ್ನು. ಈ ಎರಡು ಸಂಸ್ಥೆಗಳಲ್ಲದೆ ಇನ್ನೂ ಕೆಲವೆಡೆಗಳಲ್ಲಿ ಅಭಿನಯಿಸಿ, ಕಲಾವಂತಿಕೆಯನ್ನು ಬೆಳೆಸಿಕೊಳ್ಳಲು ಅವಕಾಶ ದೊರೆಯಿತು.

ಉತ್ತಮ ನಟನೆಂಬ ಕೀರ್ತಿ ಬಂದದ್ದು ಗುಬ್ಬಿ ಕಂಪನಿಯನ್ನು ನಾಯ್ಡು ಸೇರಿದ ಅನಂತರ. 1926-27ರಲ್ಲಿ ಅವರು ಆ ಸಂಸ್ಥೆಯ ನಟನಾಗಿ ಮುಖ್ಯ ಪಾತ್ರಗಳನ್ನು ವಹಿಸಲಾರಂಭಿಸಿದರು : 'ರಾಜಭಕ್ತಿ' ನಾಟಕದಲ್ಲಿ ವಿಕ್ರಾಂತನ ಪಾತ್ರ ; 'ಕರ್ನಾಟಕ ಸಾಮ್ರಾಜ್ಯ' ನಾಟಕದಲ್ಲಿ ತಿರುಮಲರಾಯ. 'ಸ್ವಾಮಿ ನಿಷ್ಠೆ' ನಾಟಕದಲ್ಲಿ ಶಿವಾಜಿಯ ಪಾತ್ರಗಳನ್ನು ಪರಿಣಾಮಕಾರಿಯಾಗಿ ಅಭಿನಯಿಸಿ ಯಶಸ್ಸು ಗಳಿಸಿದರು. ನಾಯ್ಡು ಅವರು ಚಲಚ್ಚಿತ್ರರಂಗವನ್ನು ಪ್ರವೇಶಿಸಿದ್ದು ಜಿ. ಎಚ್. ವೀರಣ್ಣನವರು ತಯಾರಿಸಿದ ಮೂಕಚಿತ್ರ 'ಹಿಸ್ ಲವ್ ಅಫೇರ್' ಮೂಲಕ. ಅದರಲ್ಲಿ ಇವರು ನಾಯಕ ಪಾತ್ರವಹಿಸಿದ್ದರು. ಅನಂತರ ತೆರೆಗೆ ಬಂದ ಮೊದಲನೆಯ ಕನ್ನಡ ವಾಕ್ಚಿತ್ರ 'ಸತೀ ಸುಲೋಚನ' ದಲ್ಲೂ ಸುಬ್ಬಯ್ಯ ನಾಯ್ಡು ಅವರದೇ ನಾಯಕ ಪಾತ್ರ. ಆಗ ಅವರಿಗೆ ಆ ಚಿತ್ರದಲ್ಲಿ ಅಭಿನಯಿಸಿದ ಲಕ್ಷ್ಮೀಬಾಯಿಯವರ ಪರಿಚಯವಾಯಿತು. ಅನಂತರ ಆಕೆಯನ್ನು ಮದುವೆಯಾದರು.

ಸುಮಾರು ಇದೇ ಕಾಲದಲ್ಲಿ ಆರ್. ನಾಗೇಂದ್ರರಾಯರೊಡನೆ ಸೇರಿ 'ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ'ಯನ್ನು ಪ್ರಾರಂಭಿಸಿದರು. 'ಭೂಕೈಲಾಸ', 'ವಸಂತಸೇನಾ', 'ಕೀಚಕವಧೆ', 'ಸದಾರಮೆ', 'ನಿರುಪಮಾ' ಮೊದಲಾದ ನಾಟಕಗಳನ್ನು ಪ್ರದರ್ಶಿಸಿದರು. ಇವುಗಳಲ್ಲಿ 'ಭೂಕೈಲಾಸ' ಮತ್ತು 'ವಸಂತ ಸೇನಾ' ಜನಪ್ರಿಯವಾದುವು. ಮಂಡಲಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಸಂಚರಿಸಿ ನಾಟಕ ಪ್ರಯೋಗಮಾಡಿ ಖ್ಯಾತಿ ಗಳಿಸಿತು.

ಸಂಚಾರ ಕಾಲದಲ್ಲಿ ಮಂಡಲಿ ಮದರಾಸಿನಲ್ಲೂ ಮೊಕ್ಕಾಂ ಮಾಡಿತು. ಇವರ ನಾಟಕಗಳ ಯಶಸ್ಸು ಚಲಚ್ಚಿತ್ರ ನಿರ್ಮಾಪಕರನ್ನು ಆಕರ್ಷಿಸಿತು. ಇವರ ಮಂಡಲಿಯ 'ವಸಂತ ಸೇನಾ', 'ಹರಿಶ್ಚಂದ್ರ', 'ಮಹಾತ್ಮಾ ಕಬೀರ್' ಮುಂತಾದ ನಾಟಕಗಳು ಕನ್ನಡ, ತಮಿಳು, ತೆಲುಗು, ಭಾಷೆಗಳಲ್ಲಿ ಚಲಚ್ಚಿತ್ರ ರೂಪದಲ್ಲಿ ಬಂದುವು. ಹೀಗೆ ಚಲಚ್ಚಿತ್ರ ರಂಗದಲ್ಲೂ ಸುಬ್ಬಯ್ಯ ನಾಯ್ಡು ವಿಖ್ಯಾತರಾದರು.

ಗಂಭೀರ, ಭಕ್ತಿ, ವೀರ ಪಾತ್ರಗಳನ್ನು ಅವರು ಸಮಾನ ಚತುರತೆಯಿಂದ ಅಭಿನಯಿಸುತ್ತಿದ್ದರು. ದಶರಥ, ರಾವಣ, ಚಾರುದತ್ತ, ಏಚ್ಚಮ ನಾಯಕ, ಅಂಬರೀಷ, ಕಬೀರ ಪಾತ್ರಗಳನ್ನು ಹೃದಯಸ್ಪರ್ಶಿಯಾಗುವಂತೆ ನಟಿಸುತ್ತಿದ್ದರು.

1940ರಲ್ಲಿ ಮದರಾಸಿನಲ್ಲಿ ಮಂಡಲಿ ಬೀಡು ಬಿಟ್ಟಿತು. ಕನ್ನಡ ನಾಟಕಗಳು ಜನರಿಗೆ ರುಚಿಸಲಿಲ್ಲ. ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಲಿಲ್ಲ. 'ಭೂಕೈಲಾಸ', 'ವಸಂತಸೇನಾ' ನಾಟಕಗಳನ್ನು ತಮಿಳು ಪಂಡಿತರಿಂದ ಅನುವಾದ ಮಾಡಿಸಿದರು. ತಮಿಳು ಭಾಷೆಯನ್ನು ಕಲಿತರು. ಈ ನಾಟಕಗಳನ್ನು ತಮಿಳು ಭಾಷೆಯಲ್ಲಿಯೂ ಆಡಿದರು. ನಾಟಕಗಳು ಜನಪ್ರಿಯವಾದುವು. ಮದರಾಸಿನಲ್ಲಿ ಹತ್ತು ವರ್ಷ ಕಾಲ ಇದ್ದು ಬೆಂಗಳೂರಿಗೆ ಹಿಂದಿರುಗಿದರು. ಕೆಲವು ಕಾಲ ಸುಮ್ಮನಿದ್ದು ಲಕ್ಷ್ಮೀಬಾಯಿಯವರೊಂದಿಗೆ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ ಪುನರಾರಂಭಿಸಿದರು.

ನಾಯ್ಡು ಪ್ರಯೋಗಶೀಲರು. ನಾಟಕದ ಸಂದರ್ಭಕ್ಕೆ ತಕ್ಕಂತೆ ವಿವಿಧ ರೀತಿಯ ರಂಗಸಜ್ಜಿಕೆಯನ್ನು ಅಳವಡಿಸುತ್ತಿದ್ದರು. ಅಭಿನಯ ಚತುರತೆ, ನಿರ್ಮಾಪಕರಾಗಿ ಗಳಿಸಿದ ಯಶಸ್ಸಿಗೆ ಮಾರುಹೋಗಿದ್ದ ಜನತೆ ಕರ್ನಾಟಕದ ಅನೇಕ ಕಡೆಗಳಲ್ಲಿ ಇವರಿಗೆ ಸನ್ಮಾನ ಪತ್ರಗಳನ್ನೂ ಬಹುಮಾನಗಳನ್ನೂ ಇತ್ತು ತಮ್ಮ ಗೌರವ ತೋರಿಸಿದರು. ಮದರಾಸಿನ ಪ್ರಸಿದ್ಧ ಕಲಾವಿಲಾಸಿ ನಾಟಕ ಸಂಘವಾದ ಸುಗುಣ ವಿಲಾಸ ಸಭೆ ಇವರಿಗೆ ಸಾರ್ವಜನಿಕ ಸನ್ಮಾನ ಸಭೆ ಏರ್ಪಡಿಸಿ ಚಿನ್ನದ ಪದಕವನ್ನು ಕೊಟ್ಟಿತು.

ಕೇಂದ್ರ ಸಂಗೀತ ನಾಟಕ ಅಕಾದೆಮಿ ಇವರ ರಂಗಸೇವೆಯನ್ನು ಮೆಚ್ಚಿ ಪುರಸ್ಕರಿಸಿತು. ಮೈಸೂರು ರಾಜ್ಯದ ಅಕಾದೆಮಿ 1960 – 61ರಲ್ಲಿ ಸುಬ್ಬಯ್ಯ ನಾಯ್ಡುರವರನ್ನು ಗೌರವಿಸಲು ನಿರ್ಧರಿಸಿತ್ತು. ಆದರೆ ಆ ಪ್ರಶಸ್ತಿ ಪ್ರದಾನಕ್ಕೆ ಮೊದಲೇ, 1962ರ ಜೂಲೈ 21ರಂದು, ಅವರು ನಿಧನರಾದರು.

## ಸುಬ್ರಹ್ಮಣ್ಯ ಭಾರತಿ

ಐದು ಅಡಿ ಒಂಬತ್ತು ಅಂಗುಲದ ಮನುಷ್ಯ. ಮೈ ಬೆಳವಣಿಗೆ ಸಮ ಪ್ರಮಾಣವಾಗಿತ್ತು. ಅಚ್ಚುಕಟ್ಟಾಗಿ ತೀಡಿದ ಮೀಸೆ. ಹಣೆಯ ಮಧ್ಯದಲ್ಲಿ



ರಾಷ್ಟ್ರೀಯತೆ : ಭಾರತಿ

ಕುಂಕುಮದ ಬೊಟ್ಟು; ತಲೆಯ ಮೇಲೆ ವ್ಯವಸ್ಥಿತವಾಗಿ ಧರಿಸಿದ ದಕ್ಷಿಣಾದಿ ರುಮಾಲು, ಕಿಸೆಯಲ್ಲಿ ಕಾಗದ, ಸೀಸದ ಕಡ್ಡಿ—ಇದು ತಮಿಳಿನ ಶ್ರೇಷ್ಠ ಹಾಗೂ ಜನಪ್ರಿಯ ಕವಿ ಸುಬ್ರಹ್ಮಣ್ಯ ಭಾರತಿಯವರ ರೂಪ ವರ್ಣನೆ.

ತಿನ್ನವೆಲ್ಲಿ ಜಿಲ್ಲೆಯ ಎಟ್ಟಿಯಾಪುರಂ ಎಂಬಲ್ಲಿ 1882ನೆಯ ಡಿಸೆಂಬರ್ 11ರಂದು ಸುಬ್ರಹ್ಮಣ್ಯ ಭಾರತಿ ಜನಿಸಿದರು. ತಂದೆ ಚಿನ್ನಸ್ವಾಮಿ ಅಯ್ಯರ್: ತಾಯಿ ಲಕ್ಷ್ಮಿ. ಅವರು ಚಿಕ್ಕ ವಯಸ್ಸಿನವರಾಗಿದ್ದಾಗಲೇ ತಾಯಿ ತೀರಿಕೊಂಡರು. ಅವರ ಅಜ್ಜ ಬಾಲಕ ಸುಬ್ರಹ್ಮಣ್ಯನಿಗೆ ತಮಿಳು ಮಹಾಕಾವ್ಯಗಳನ್ನು ಓದಿ ಹೇಳುತ್ತಿದ್ದರು. ಇದರಿಂದಾಗಿ ಭಾರತಿಯವರಲ್ಲಿ ತಮಿಳು ಸಾಹಿತ್ಯದ ಬಗೆಗೆ ಅಪಾರ ಆಸಕ್ತಿ ಬೆಳೆಯಿತು. ಭಾರತಿಯವರ ತಂದೆಗೆ ತಮ್ಮ ಮಗ ಇಂಗ್ಲಿಷ್ ವಿದ್ಯೆ ಕಲಿತು ಸರಕಾರೀ ಅಧಿಕಾರಿಯಾಗಬೇಕೆಂಬ ಆಸೆ. ಮಗನಿಗಾದರೋ ತಮಿಳು ಸಾಹಿತ್ಯದಲ್ಲಿ ಆಸಕ್ತಿ. ಭಾರತಿ ಊರಿನ ದೇವಸ್ಥಾನದ ಮೂಲೆಯಲ್ಲಿ ಕುಳಿತು ಗಂಟ್ಟಾಗಿ ಸಾಹಿತ್ಯವನ್ನು ಅಧ್ಯಯನ ಮಾಡುತ್ತಿದ್ದರು.

ಅವರಿಗೆ 'ಭಾರತಿ' ಎಂಬ ಹೆಸರು ಬಂದದ್ದು ಹೇಗೆ ಎಂಬ ಬಗೆಗೆ ಒಂದು ಕಥೆಯಿದೆ.

ಎಟ್ಟಿಯಾಪುರದ ಜಮೀನ್ದಾರರ ಮನೆಯಲ್ಲಿ ಒಮ್ಮೆ ಒಂದು ವಿದ್ವತ್ ಸಭೆ ನಡೆಯಿತು. ವಿದ್ಯಾಭ್ಯಾಸದ ಕುರಿತಾಗಿ ಭಾರತಿಯವರಿಗೂ ಅಲ್ಲಿ ನೆರೆದಿದ್ದ ವಿದ್ವಾಂಸರಿಗೂ ಚರ್ಚೆ ನಡೆಯಿತು. ಅವರ ವಾದವನ್ನು ಮೆಚ್ಚಿದ ಪಂಡಿತನೊಬ್ಬನು ಅವರಿಗೆ 'ಭಾರತಿ' ಎಂಬ ಬಿರುವನ್ನು ಕೊಟ್ಟರು. ಅಂದಿನಿಂದ ಅವರು 'ಸುಬ್ರಹ್ಮಣ್ಯ ಭಾರತಿ' ಎಂದೇ ಪ್ರಸಿದ್ಧರಾದರು.

1897ರಲ್ಲಿ ವಿವಾಹವಾದಾಗ ಭಾರತಿಯವರ ವಯಸ್ಸು ಕೇವಲ 15 ವರ್ಷ ; ವಧು ಚೆಲ್ಲಮ್ಮನಿಗೆ ಏಳು ವರ್ಷ.

ಸುಬ್ರಹ್ಮಣ್ಯ ಭಾರತಿಯವರು ತಮ್ಮ ವೃತ್ತಿಜೀವನವನ್ನಾರಂಭಿಸಿದ್ದು ಮಧುರೆಯ ಪ್ರೌಢಶಾಲೆಯಲ್ಲಿ, ತಮಿಳು ಉಪಾಧ್ಯಾಯರಾಗಿ. ಆಗ ಅವರ ಸಂಬಳ ತಿಂಗಳಿಗೆ ಹದಿನೇಳೂವರೆ ರೂಪಾಯಿ. ಇಲ್ಲಿ ಸ್ವಲ್ಪ ಕಾಲ ಕೆಲಸ ಮಾಡಿದ ಮೇಲೆ ಮದರಾಸಿನ 'ಸ್ವದೇಶ ಮಿತ್ರನ್' ಪತ್ರಿಕೆಯ ಸಂಪಾದಕರಾದರು.

ಭಾರತಿಯವರ ದೇಶಪ್ರೇಮ ಅಪಾರವಾದದ್ದು. ಅವರ ದೇಶಭಕ್ತಿ ಗೀತೆಗಳ ಮೊದಲ ಸಂಕಲನ 'ಜನ್ಮಭೂಮಿ' 1909ರಲ್ಲಿ ಪ್ರಕಟವಾಯಿತು. ಅವರು ರಚಿಸಿದ ದೇಶಭಕ್ತಿಗೀತೆಗಳು ತಮಿಳು ಜನಸಮುದಾಯದ ಮೇಲೆ ಪ್ರಚಂಡ ಪರಿಣಾಮ ಉಂಟುಮಾಡಿದುವು. ಇದರಿಂದ ಸರಕಾರದ ಕಣ್ಣು ಕೆಂಪಾಯಿತು. ಭಾರತಿಯವರನ್ನು ಬಂಧಿಸಲು ಆಜ್ಞೆ ಹೊರಟಿತು. ಆದರೆ ಈ ಆಜ್ಞೆ ಕಾರ್ಯಗತವಾಗುವ ಮೊದಲೇ ಭಾರತಿಯವರು, ಆಗ ಫ್ರೆಂಚರ ಆಡಳಿತಕ್ಕೆ ಸೇರಿದ್ದ ಪಾಂಡಿಚೇರಿಗೆ ಹೋಗಿಬಿಟ್ಟರು. ಅಲ್ಲಿದ್ದಾಗ ಅವರಿಗೆ ಅರವಿಂದರ ಪರಿಚಯವಾಯಿತು ; ಪರಸ್ಪರ ಸ್ನೇಹ ಬೆಳೆಯಿತು. ಅಧ್ಯಯನವೂ ಮುಂದುವರಿಯಿತು. ಅರವಿಂದರು ನಡೆಸುತ್ತಿದ್ದ 'ಆರ್ಯ' ಪತ್ರಿಕೆಯಲ್ಲಿ ಬ್ರಿಟಿಷರ ದಬ್ಬಾಳಿಕೆಯನ್ನು ಖಂಡಿಸಿ ಲೇಖನಗಳನ್ನು ಬರೆದರು. 'ಭಾರತ' ಮತ್ತು 'ವಿಜಯ' ಎಂಬ ಪತ್ರಿಕೆಗಳ ಸಂಪಾದಕರಾಗಿ ಕೆಲಸ ಮಾಡಿದರು. ಈ ಅವಧಿಯಲ್ಲಿ ಅವರು ಹಲವಾರು ಭಕ್ತಿಗೀತೆಗಳನ್ನೂ ರಚಿಸಿದರು.

ಜೀವನದುದ್ದಕ್ಕೂ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದರು. ಆದರೂ ತಮ್ಮ ಹಾಸ್ಯ ಪ್ರವೃತ್ತಿಯನ್ನು ಕಳೆದುಕೊಳ್ಳಲಿಲ್ಲ. ಭಾರತಿಯವರಿಗೆ ಮಕ್ಕಳ ವಿಷಯದಲ್ಲಿ ತುಂಬಾ ಮಮತೆ, ವಾತ್ಸಲ್ಯ. ಅವರ 'ಪಾಪ್ಪ ಪಾಟ್ಟು' (ಮಗುವಿನ ಹಾಡು) ಮಕ್ಕಳಿಗಾಗಿಯೇ ಬರೆದ ಪದ್ಯಗಳು. ಇಂಪಾಗಿ ಹಾಡುತ್ತಿದ್ದರು. ಸೊಗಸಾಗಿ ಕಥೆ ಹೇಳುತ್ತಿದ್ದರು. ಆದುದರಿಂದ ಮಕ್ಕಳು ಸದಾ ಅವರ ಸುತ್ತುಮುತ್ತಲೂ ನೆರೆದಿರುತ್ತಿದ್ದರು.

ಅವರ ಪ್ರಧಾನ ಕಾವ್ಯಗಳಲ್ಲಿ 'ಕಣ್ಣನ್ ಪಾಟ್ಟು', 'ಪಾಂಚಾಲಿ ಶಪಥಂ', 'ಕುಯಿಲ್ ಪಾಟ್ಟು' ಮುಖ್ಯವಾದುವು. ಮೊದಲನೆಯದು ಶ್ರೀಕೃಷ್ಣನ ಕುರಿತಾಗಿ ಗಾಢಭಕ್ತಿಯಿಂದ ಕೂಡಿದ ಭಾವಗೀತಾಗುಚ್ಛ. 'ಪಾಂಚಾಲಿ ಶಪಥಂ' ಮಹಾಭಾರತದ ಕೆಲವು ಅಧ್ಯಾಯಗಳ ಅನುವಾದವೆಂದು ಕವಿಯೇ ಹೇಳಿಕೊಂಡಿದ್ದಾರೆ. 'ಕುಯಿಲ್ ಪಾಟ್ಟು' ಇಂಗ್ಲಿಷಿನ ಸರಳ ರಗಳೆಯನ್ನು ಹೋಲುವ 750 ಪದ್ಯಗಳ ಕಾವ್ಯ. ಇದು ಒಂದು ಕೋಗಿಲೆ, ಒಂದು ಗೂಳಿ, ಒಂದು ಕೋತಿಗೆ ಸಂಬಂಧಿಸಿದ ಕಟ್ಟುಕತೆ.

ಭಾರತಿಯವರು ಷೆಲ್ಲಿ, ವಿಕ್ಟರ್ ಹ್ಯೂಗೋ, ಗಯಟೆ ಮೊದಲಾದ ಸಾಹಿತಿಗಳ ಕೃತಿಗಳನ್ನು ಓದಿ ಅವುಗಳ ಅಪೂರ್ವ ಸೌಂದರ್ಯವನ್ನು ಮೆಚ್ಚಿಕೊಂಡಿದ್ದರು. ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕೃತಿಗಳು ಅವರಿಗೆ ಬಲು ಪ್ರಿಯವಾಗಿದ್ದುವು.

1921ನೆಯ ಜೂಲೈ ತಿಂಗಳಲ್ಲಿ ಒಂದು ದಿನ ಸುಬ್ರಹ್ಮಣ್ಯ ಭಾರತಿಯವರು ಅಪಘಾತಕ್ಕೊಳಗಾದರು. ಮದರಾಸಿನ ತಿರುವಲ್ಲಿಕ್ಕೇಣೀಯ ಪಾರ್ಥಸಾರಥಿ ದೇವಸ್ಥಾನದ ಎದುರುಗಡೆ ಆನೆಯೊಂದು ತನ್ನ ಸೊಂಡಿಲನ್ನು ಅವರ ಸೊಂಟಕ್ಕೆ ಸುತ್ತಿ ನೆಲಕ್ಕೆ ಎತ್ತಿ ಅಪ್ಪಳಿಸಿತು. ಇದರಿಂದ ಒಡನೆಯೇ ಜೀವಾಪಾಯ ಆಗದಿದ್ದರೂ ಅವರ ಆರೋಗ್ಯದ ಮೇಲೆ ತೀವ್ರ ದುಷ್ಪರಿಣಾಮ ಉಂಟಾಯಿತು. ಸೆಪ್ಟೆಂಬರ್ 12ರ ಬೆಳಗಿನ ಜಾವ ಅವರು ಕೊನೆಯುಸಿರೆಳೆದರು.

ಅವರ ಮರಣಾನಂತರ ಅವರ ಕವನಗಳು ಹಾಗೂ ಗದ್ಯಲೇಖನಗಳು ಹಲವಾರು ಸಂಪುಟಗಳಲ್ಲಿ ಪ್ರಕಟವಾದುವು. ರಾಷ್ಟ್ರೀಯ ಸಾಹಿತ್ಯ ಅಕಾದೆಮಿ ಭಾರತಿಯವರ ಕವನಗಳ ಅನುವಾದಗಳನ್ನು ಭಾರತದ ವಿವಿಧ ಭಾಷೆಗಳಲ್ಲಿ ಪ್ರಕಟಿಸಿದೆ. ನಮ್ಮ ಅಂಚೆ ಇಲಾಖೆಯವರು ಭಾರತಿಯವರ ನೆನಪಿಗಾಗಿ ಒಂದು ಅಂಚೆ ಚೀಟಿಯನ್ನು ಪ್ರಕಟಿಸಿದ್ದಾರೆ.

## ಸುಭಾಷಿತ

'ಸುಭಾಷಿತ' ಎಂದರೆ ಒಳ್ಳೆಯ ಮಾತು. ಯಾವುದಾದರೂ ವಿಚಾರವನ್ನು ಸುಂದರವಾದ, ಮನಕ್ಕೆ ನಾಟುವ ಮಾತುಗಳಲ್ಲಿ ತಿಳಿಸುವ ಹೇಳಿಕೆ ಸುಭಾಷಿತ. ಇಂಥ ಹೇಳಿಕೆಯನ್ನು ಸೂಕ್ತಿ, ಸದುಕ್ತಿ, ಮುಕ್ತಕ ಎಂದು ಕೂಡ ಕರೆಯುತ್ತಾರೆ.

ಸುಭಾಷಿತ ಒಂದು ಸಣ್ಣ ವಾಕ್ಯವಾಗಿರಬಹುದು, ಒಂದು ಪದ್ಯವಾಗಿರಬಹುದು. ಹೇಳಬೇಕಾದ್ದನ್ನು ಅಡಕವಾಗಿ, ಅಚ್ಚುಕಟ್ಟಾಗಿ, ಪೂರ್ಣವಾಗಿ ಹೇಳುವುದು ಸುಭಾಷಿತಗಳ ಮುಖ್ಯ ಲಕ್ಷಣ.

'' ಯಸ್ಯನಾಸ್ತಿಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಂ
ಲೋಚನಾಭ್ಯಾಂ ವಿಹೀನಸ್ಯ ದರ್ಪಣಃ ಕಿಂ ಕರಿಷ್ಯತಿ? ''
—ಇದೊಂದು ಸುಭಾಷಿತ.

"ಸ್ವತಃ ತಿಳಿವಳಿಕೆ ಇಲ್ಲದವನಿಗೆ ಶಾಸ್ತ್ರಗಳಿಂದ ಏನು ಪ್ರಯೋಜನವಾದೀತು ? ಕಣ್ಣೇ ಕಾಣಿಸದವನಿಗೆ ಕನ್ನಡಿಯಿಂದ ಏನು ಪ್ರಯೋಜನವಾದೀತು ?"—ಎಂಬುದು ಈ ಸುಭಾಷಿತದ ತಾತ್ಪರ್ಯ.

ಒಂದು ಲೇಖನ ಬರೆಯುವುದಕ್ಕೆ ಸಾಕಾಗುವಷ್ಟು ವಿಚಾರ ಈ ಸುಭಾಷಿತದ ಮೊದಲನೆಯ ಸಾಲಿನಲ್ಲಿ ಅಡಕವಾಗಿದೆ. ಎರಡನೆಯ ಸಾಲಿನಲ್ಲಿ ಕೆಲವೇ ಮಾತುಗಳಲ್ಲಿ ಒಂದು ಸೊಗಸಾದ ಉದಾಹರಣೆಯಿದೆ. ಒಮ್ಮೆ ಓದಿದರೆ ಸಾಕು ಸುಭಾಷಿತದ ಭಾವ ನಮ್ಮ ಮನಸ್ಸಿನೊಳಗೆ ಇಳಿಯುತ್ತದೆ, ಆಲೋಚನಾ ತರಂಗವನ್ನು ಎಬ್ಬಿಸುತ್ತದೆ.

ಸುಭಾಷಿತಗಳನ್ನು ಬರೆದವರು ಯಾರು? ಇವು ಒಬ್ಬರು ಬರೆದುವಲ್ಲ; ಒಂದು ಕಾಲಕ್ಕೆ ಬರೆದುವಲ್ಲ. ಬೇರೆ ಬೇರೆ ಕಾಲಗಳ ಬೇರೆ ಬೇರೆ ಕವಿಗಳು ಬರೆದುವು. ಅವರ ಗ್ರಂಥಗಳಿಂದ ಆರಿಸಿಕೊಂಡುವು. ಹೀಗೆ ಗ್ರಂಥಗಳಿಂದ ಆರಿಸಿದ ಸುಭಾಷಿತಗಳಲ್ಲದೆ ಜನರು ಅನುಭವದ ಫಲವಾಗಿ ಆಡಿದ ಮಾತುಗಳೂ ಸುಭಾಷಿತಗಳಾಗಬಹುದು.

ಜನರ ಸ್ವಭಾವ, ಜೀವನಾದರ್ಶ, ವ್ಯವಹಾರಧರ್ಮ ಮುಂತಾದುವುಗಳನ್ನೂ ತಿಳಿವಳಿಕೆಯನ್ನೂ ರೂಢಿಸಿಕೊಳ್ಳಲು ಸುಭಾಷಿತಗಳು ತುಂಬ ಸಹಕಾರಿ. ಆದರೆ ಅವನ್ನು ಸಂಗ್ರಹಿಸುವುದು ಮಾತ್ರ ಬಲು ಕಷ್ಟ. ಏಕೆಂದರೆ ಅವು ನಾನಾ ಗ್ರಂಥಗಳಲ್ಲಿ, ಕಾವ್ಯಗಳಲ್ಲಿ ಹರಡಿಹೋಗಿರುತ್ತವೆ. ಅನೇಕ ಗ್ರಂಥಗಳನ್ನು ಓದಿ, ಅವುಗಳಿಂದ ಸೂಕ್ತಿಗಳನ್ನು ಆರಿಸಿಕೊಳ್ಳುವುದು ಎಲ್ಲರಿಗೂ ಸಾಧ್ಯವಿಲ್ಲ. ಆದ್ದರಿಂದ ನಾನಾ ಗ್ರಂಥಗಳಿಂದ ಸುಭಾಷಿತಗಳನ್ನು ಆರಿಸಿ ಅವನ್ನು ಪ್ರಕಟಿಸಿದರೆ? ಆಗ ಅವು ಜನತೆಯ ಸಾಹಿತ್ಯಪ್ರಜ್ಞೆ, ಸಂಸ್ಕೃತಿಗಳನ್ನೂ ತಿಳಿವನ್ನೂ ಬೆಳೆಸಬಲ್ಲ ಸಾಧನಗಳಾಗುತ್ತವೆ.

ಸುಭಾಷಿತಗಳನ್ನೂ ಸಂಕಲನಗಳನ್ನೂ ಸಿದ್ಧಗೊಳಿಸುವುದು ಸುಲಭ ಕೆಲಸವಲ್ಲ. ಸಂಗ್ರಹಕಾರನಿಗೆ ಸಾಹಿತ್ಯದಲ್ಲಿ ಪರಿಶ್ರಮ, ಸೌಂದರ್ಯದ ಅರಿವು ಇರಬೇಕಾದದ್ದು ಅಗತ್ಯ. ಒಬ್ಬ ಕವಿಯ ಸುಭಾಷಿತ ಆರಿಸುವಾಗ ತಾನು ಆರಿಸಿದ ಸುಭಾಷಿತ ಕವಿಯ ಪ್ರೌಢಿಮೆಯನ್ನು ತೋರಿಸುವಂತಿದೆಯೇ, ಆತನ ವ್ಯಕ್ತಿತ್ವ ಅದರಲ್ಲಿ ಮೂಡಿದೆಯೇ, ಆತನ ಗೌರವ ಘನತೆಗಳಿಗೆ ಒಪ್ಪುವಂತಿದೆಯೇ ಎಂಬುವನ್ನು ಗಮನಿಸಬೇಕಾಗುತ್ತದೆ. ಇದಲ್ಲದೆ ಆರಿಸಿದ ಪದ್ಯ ಅಪೂರ್ಣವಾಗಿರಬಾರದು; ಕವನವನ್ನು ಓದಿದವರಿಗೆ ಅದು ಆನಂದಕೊಡುವಂತೆ ಇರಬೇಕು, ಎಂಬ ಅಂಶಗಳಿಗೂ ಗಮನಕೊಡಬೇಕಾಗುತ್ತದೆ.

ಈ ಅಂಶಗಳನ್ನೆಲ್ಲ ಗಮನಕ್ಕೆ ತಂದುಕೊಂಡು ರೂಪಿಸುವ ಕೆಲವಾರು ಸಂಸ್ಕೃತ ಸುಭಾಷಿತ ಸಂಕಲನಗಳಿವೆ. ಸಂಸ್ಕೃತ ಸುಭಾಷಿತ ಸಂಕಲನಗಳಲ್ಲಿ ಅತ್ಯಂತ ಹಳೆಯುವೆಂದರೆ 10ನೆಯ ಶತಮಾನದಲ್ಲಿ ರೂಪುಗೊಂಡ 'ಕವೀಂದ್ರ ವಚನ ಸಮುಚ್ಚಯ', ಸಂಗ್ರಾಹಕ ಯಾರೆಂಬುದು ತಿಳಿದಿಲ್ಲ. ಶ್ರೀಧರದಾಸನ 'ಸದುಕ್ತಿ ಕರ್ಣಾಮೃತ' 12ನೆಯ ಶತಮಾನದ ಸಂಕಲನ. ಶ್ರೀಧರದಾಸ ವಂಗದೇಶದವನು. ಜಲ್ಹಣನ 'ಸೂಕ್ತಿಮುಕ್ತಾವಳಿ' 13ನೆಯ ಶತಮಾನದ್ದು. ಜಲ್ಹಣ ಯಾದವವಂಶದ ಅರಸರ ಆಶ್ರಯದಲ್ಲಿದ್ದವನು. ಸಾಹಿತ್ಯ ವಿದ್ಯೆಯ ಹೃದಯವನ್ನು ತಿಳಿಯಬಯಸುವವರು ತನ್ನ ಈ ಸುಭಾಷಿತ ಸಂಕಲನವನ್ನು ನೋಡಬೇಕೆಂದು ಇವನು ಸೂಚಿಸಿದ್ದಾನೆ. ಈ ಗ್ರಂಥದ 'ಕವಿಕಾವ್ಯ ಪ್ರಶಂಸಾ' ಎಂಬ ವಿಭಾಗದಲ್ಲಿ ಅನೇಕ ಸಂಸ್ಕೃತ ಕವಿಗಳ ಮತ್ತು ಕವಯಿತ್ರಿಯರ ಹೆಸರುಗಳನ್ನೂ ಕಾವ್ಯಗಳು ಮತ್ತು ಅವುಗಳ ವೈಶಿಷ್ಟ್ಯವನ್ನೂ ವಿವರಿಸುವ ಪದ್ಯಗಳಿರುವುದು ಒಂದು ವಿಶೇಷ. 'ಶಾರ್ಙ್ಗಧರ ಪದ್ಧತಿ' ಹೆಸರೇ ಸೂಚಿಸುವಂತೆ ಶಾರ್ಙ್ಗಧರನ ಸಂಕಲನ. ಇವನ ಕಾಲ 14ನೆಯ ಶತಮಾನ. ಇತರ ಸುಭಾಷಿತ ಸಂಗ್ರಹಗಳಲ್ಲಿ ಕಂಡುಬಾರದ ಶಕುನಜ್ಞಾನ, ಭೂತವಿದ್ಯೆ, ಧನುರ್ವೇದ, ಗಾಂಧರ್ವವೇದ, ಆಯುರ್ವೇದಗಳನ್ನು ಕುರಿತಾದ ಪದ್ಯಗಳು ಇದರಲ್ಲಿವೆ. ಒಗಟುಗಳ ಅಧ್ಯಾಯವೂ ಉಂಟು. ಸ್ವಯಂ ಕವಿಯಾಗಿದ್ದ ವಲ್ಲಭದೇವನದು 'ಸುಭಾಷಿತಾವಳಿ'. ಇದೊಂದು ಬೃಹದ್ಗ್ರಂಥ. ಇದರಲ್ಲಿ ಚಿಕ್ಕದಾದರೂ ಮಾರ್ಮಿಕವಾಗಿರುವ ವಾಕ್ಯಗಳನ್ನೂ ಸೇರಿಸಿದ್ದಾನೆ. ಕಾಶೀನಾಥ ಶರ್ಮನ 'ಸುಭಾಷಿತ ರತ್ನ ಭಂಡಾರ' ದಲ್ಲಿ 10 ಸಾವಿರಕ್ಕಿಂತಲೂ ಹೆಚ್ಚು ಪದ್ಯಗಳಿವೆ.

ಭಾರತೀಯ ಸಂಸ್ಕೃತಿಯಲ್ಲಿ ಸುಭಾಷಿತಗಳಿಗೆ ಹಿಂದಿನಿಂದಲೂ ಮನ್ನಣೆ ಇದೆ. ಸಮಾರಂಭಗಳಲ್ಲಿ, ವಿದ್ವತ್ ಸಭೆಗಳಲ್ಲಿ, ರಾಜರ ಆಸ್ಥಾನಗಳಲ್ಲಿ ಸುಭಾಷಿತ ಪಠಣಕ್ಕೆ ಪ್ರಾಮುಖ್ಯ ಇತ್ತು. ಇದು ಅತಿಥಿಗಳ ಉಪಚಾರದ ಒಂದು ಅಂಗವೂ ಆಗಿತ್ತು.

ಜೀವನದ ಅನುಭವಗಳು, ರಾಗೋದ್ರೇಕಗಳು, ಮನುಷ್ಯನ ಮನಸ್ಸಿನಲ್ಲೇಳುವ ಆಸೆ, ಪ್ರೇಮ, ಉತ್ಸಾಹ, ದುಃಖ, ವ್ಯಥೆಗಳನ್ನು ಪ್ರತಿಬಿಂಬಿಸುವ ಸುಭಾಷಿತಗಳು ಯಾರ ಮನಸ್ಸನ್ನಾಗಲೀ ಸೂರೆಗೊಳ್ಳುವುದು ಸಹಜವೇ ಆಗಿದೆ. ಸುಭಾಷಿತಗಳಲ್ಲಿ ಎರಡು ಬಗೆಯ ಕವಿತೆಗಳು ಕಂಡುಬರುತ್ತವೆ. ಜೀವನದ ಅನುಭವದ ಸಾರವನ್ನು ಓದುಗರ ಮನಸ್ಸಿಗೆ ಹಿಡಿಯುವಂತೆ ಚೊಕ್ಕವಾಗಿ ನಿರೂಪಿಸಿರುವ ಹಿತನುಡಿಗಳು ಒಂದು ಬಗೆ. ಮಾನವನ ಮನದಲ್ಲೇಳುವ ಭಾವಗಳಿಗೆ ಗೀತೆಯ ರೂಪುಕೊಟ್ಟಿರುವಂಥವು ಇನ್ನೊಂದು ಬಗೆ. ಈ ವರ್ಗದ ಸುಭಾಷಿತಗಳಲ್ಲಿ ಕವಿ ತನ್ನ ಮನದಲ್ಲಿ ಪುಟಿದೇಳುವ ಭಾವನೆಗಳನ್ನು ಕೆಲವೇ ಮಾತುಗಳಲ್ಲಿ ಮಾರ್ಮಿಕವಾಗಿ ನಿರೂಪಿಸುತ್ತಾನೆ.

ಹಿಂದಿನ ಕಾಲದ ಹಲವಾರು ಗ್ರಂಥಗಳು ಈವರೆಗೆ ನಮ್ಮ ಕಣ್ಣಿಗೆ ಬಿದ್ದಿಲ್ಲ. ಇಂಥ ಅಲಭ್ಯ ಗ್ರಂಥಗಳ ಉಲ್ಲೇಖಗಳೂ ಅಜ್ಞಾತ ಕವಿಗಳ ಕವನಗಳೂ ನಮಗೆ ಸುಭಾಷಿತ ಸಂಕಲನಗಳಲ್ಲಿ ದೊರೆಯುತ್ತವೆ. ಇವು ಸಂಶೋಧಕರಿಗೆ ಅಮೂಲ್ಯ ಸಾಮಗ್ರಿಗಳು. ಕವಿಗಳ ಮತ್ತು ಗ್ರಂಥಗಳ ರಚನೆಯ ಕಾಲನಿರ್ಣಯ ಮಾಡಲು ಇವು ಸಹಾಯಕವಾಗಿವೆ.

''ಸತ್ಕವಿಗಳೆಂಬ ವೃಕ್ಷಗಳಿಂದ ಆಯ್ದು ತಂದ ಕವಿತ್ವಗಳೆಂಬ ಹೂವುಗಳನ್ನು —ಸುಭಾಷಿತಗಳನ್ನು— ಜನತೆಯ ಉಪಯೋಗಕ್ಕೆ ಒದಗುವ ರೀತಿಯಲ್ಲಿ ಆಕರ್ಷಕವಾಗಿರುವಂತೆ ಕಟ್ಟಿದ ಮಾಲೆಗಳೇ ಸುಭಾಷಿತ ಸಂಕಲನಗಳು''—ಎನ್ನುತ್ತದೆ ಒಂದು ಶ್ಲೋಕ.

## ಸೂತ್ರದ ಗೊಂಬೆ ಆಟ

ಜನಪದ ನಾಟಕ ಪ್ರಕಾರಗಳಲ್ಲಿ ಸೂತ್ರದ ಗೊಂಬೆ ಆಟವೂ ಒಂದು. ಇದು ಬಹಳ ಹಿಂದಿನಿಂದ ಬೆಳೆದುಬಂದಿರುವ ಕಲೆ. ಇವರಲ್ಲಿ ಪೌರಾಣಿಕ ಪ್ರಸಂಗಗಳನ್ನೂ ಇತರ ಕಥೆಗಳನ್ನೂ ಪ್ರದರ್ಶಿಸಲಾಗುತ್ತದೆ. ಇತ್ತೀಚೆಗೆ ಸಾಮಾಜಿಕ ವಸ್ತುಗಳನ್ನೂ ಸೂತ್ರದ ಗೊಂಬೆ ಆಟದಲ್ಲಿ ತೋರಿಸುತ್ತಿದ್ದಾರೆ.

ಗೊಂಬೆ ಆಡಿಸುವವರು ಒಂದು ಪರದೆಯ ಹಿಂಬದಿಯಲ್ಲಿರುತ್ತಾರೆ. ಅವರು ಆಡಿಸುವ ಬೊಂಬೆಗಳು ಪರದೆಯ ಮುಂಬದಿಯಲ್ಲಿ ಇರುತ್ತವೆ. ಅವುಗಳ ಅಂಗಾಂಗಗಳಿಗೆ ಕಟ್ಟಿದ ದಾರಗಳನ್ನು ಗೊಂಬೆ ಆಡಿಸುವವರು ಹಿಡಿದಿರುತ್ತಾರೆ. ಗೊಂಬೆ ಆಡಿಸುವವರ ಕೌಶಲ ಅದ್ಭುತವಾದದ್ದು. ನಾಟಕದಲ್ಲಿ ಮನುಷ್ಯರು ಬೇರೆಬೇರೆ ಪಾತ್ರಗಳನ್ನು ಅಭಿನಯಿಸುವಂತೆ ಗೊಂಬೆಯ ಆಟದಲ್ಲಿ ಗೊಂಬೆಗಳು ಪಾತ್ರವಹಿಸುತ್ತವೆ. ಗೊಂಬೆಯಾಟ ನಾಟಕದಷ್ಟೇ ಪರಿಣಾಮಕಾರಿಯಾಗಿರುತ್ತದೆ. ಗೊಂಬೆಗಳ ಅಂಗಾಂಗ ಚಲನೆಯಿಂದ, ಹಿನ್ನೆಲೆ ಸಂಗೀತ ಮತ್ತು ಮಾತುಗಾರಿಕೆಯಿಂದ, ಸೂತ್ರದ ಗೊಂಬೆಯಾಟದಲ್ಲಿ ಸನ್ನಿವೇಶಕ್ಕೆ ಅನುಗುಣವಾದ ರಸ, ಭಾವಗಳನ್ನು ಸಾಧಿಸುತ್ತಾರೆ.

ಸೂತ್ರದ ಗೊಂಬೆ ಆಟದ ಪರಂಪರೆ ಎಲ್ಲ ದೇಶಗಳಲ್ಲೂ ಇದ್ದುದು ಕಂಡಬರುತ್ತದೆ. ಭಾರತ, ಚೀನ, ಜಪಾನುಗಳಲ್ಲಿ ಇದು ಅತ್ಯಂತ ಹಳೆಯ ಕಲೆ. ಪ್ರಾಚೀನ ಈಜಿಪ್ಟಿನ ಅರಸರ ಗೋರಿಗಳಲ್ಲಿ ಇರಿಸಿದ್ದ ಸೂತ್ರದ ಗೊಂಬೆಗಳು ಕೆಡದೆ ಒಳ್ಳೆಯ ಸ್ಥಿತಿಯಲ್ಲಿ ದೊರೆತಿವೆ. ಪ್ರಾಚೀನ ಗ್ರೀಸಿನಲ್ಲಿ ಗೊಂಬೆಯಾಟದ ನಾಟಕ ಶಾಲೆಗಳಿದ್ದುವು. ರೋಮನರು ಗೊಂಬೆ ಆಟದ ಕಲೆಯನ್ನು ಇವರಿಂದ ಕಲಿತರು. ಸಾಧಾರಣವಾಗಿ ಇವರ ಗೊಂಬೆ ಆಟಗಳು ಮನೆಗಳಲ್ಲಿ ನಡೆಯುತ್ತಿದ್ದುವು. ಸಂಚಾರಿ ಆಟಗಾರರ ತಂಡದವರು ದಾರಿಯಲ್ಲೇ ಗೊಂಬೆ ಆಟವನ್ನು ನಡೆಸುತ್ತಿದ್ದರು.

ಯೂರೊಪಿನ ಎಲ್ಲ ದೇಶಗಳಲ್ಲೂ ಒಂದಲ್ಲ ಒಂದು ಬಗೆಯ ಸೂತ್ರ ಗೊಂಬೆ ಆಟದ ಪರಂಪರೆಯಿದ್ದರೂ ಇಟಲಿ ದೇಶದಲ್ಲಿ ಮಾತ್ರ ಸೂತ್ರದ ಗೊಂಬೆಯ ಆಟ ಚೆನ್ನಾಗಿ ಅಭಿವೃದ್ಧಿ ಹೊಂದಿ ಸುಪ್ರಸಿದ್ಧವಾಯಿತು. ಮಧ್ಯಯುಗದಲ್ಲಿ ಇಟಲಿಯ ಸೂತ್ರದ ಗೊಂಬೆ ಆಟದವರು ತಮ್ಮ ಪರಿಕರಗಳನ್ನೆಲ್ಲ ಇಂಗ್ಲೆಂಡ್, ಜರ್ಮನಿ, ಸ್ಪೇನ್, ಫ್ರಾನ್ಸ್—ಮುಂತಾದ ದೇಶಗಳಿಗೆ ಒಯ್ದು ಅಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಿದ್ದರು. ಯೂರೊಪಿನ ಸೂತ್ರದ ಗೊಂಬೆಯ ಆಟಗಳಿಗೂ ಮೊದಮೊದಲು ಧಾರ್ಮಿಕ ವಸ್ತುವನ್ನೇ ಆರಿಸಿಕೊಳ್ಳಲಾಯಿತು.



ಮನುಷ್ಯರ ಬದಲು ಗೊಂಬೆಗಳು



ಪಶ್ಚಿಮದಲ್ಲಿ ಗೊಂಬೆ ಆಟ

ಮೊದಲು ಕೇವಲ ಏಸುಕ್ರಿಸ್ತನ ಜನನ ಪ್ರಸಂಗವನ್ನು ಆರಿಸಿಕೊಂಡರು. ಅನಂತರ ಹಳೆಯ ಹೊಸ ಒಡಂಬಡಿಕೆ ಕಥೆಗಳು, ಸಂತರು, ಹುತಾತ್ಮರ ಜೀವನ ವೃತ್ತಾಂತಗಳು ಸೂತ್ರದ ಬೊಂಬೆಯ ಆಟದ ವಸ್ತುಗಳಾದುವು. ಆಮೇಲೆ ದಂತಕಥೆಗಳು ಅಳವಡಿಸಲ್ಪಟ್ಟುವು; ಕಾಲಕ್ರಮದಲ್ಲಿ ನಿತ್ಯಜೀವನದ ಘಟನೆಗಳು, ಹಾಸ್ಯಪ್ರಸಂಗಗಳು —ಇವು ವಸ್ತುಗಳಾದುವು. ಕೆಲವು ಕಥೆಗಳಂತೂ ಅತ್ಯಂತ ಜನಪ್ರಿಯವಾಗಿ ಅದರಲ್ಲಿ ಬರುವ ಪಾತ್ರಗಳು ಮನೆಮಾತಾಗಿವೆ. ಪಂಚ್ ಹಾಗೂ ಜೂಡಿ, ಹೌಡಿ ಡೂಡಿ, ಆ್ಯಂಡಿ ಪ್ಯಾಂಡಿ, ಸೂಟಿ—ಇವು ಇಂಥ ಕೆಲವು ಪಾತ್ರಗಳು. ಟೆಲಿವಿಷನ್ ಮೂಲಕ ಸೂತ್ರದ ಗೊಂಬೆಯ ಆಟವನ್ನು ಪ್ರದರ್ಶಿಸುತ್ತಿರುವುದರಿಂದ ಹೆಚ್ಚು ಹೆಚ್ಚು ಜನರು ಅದನ್ನು ಪದೇ ಪದೇ ನೋಡಲು ಅವಕಾಶ ಏರ್ಪಟ್ಟಿದೆ. ಇದರಿಂದ ಈ ಕಲಾಪ್ರಕಾರ ತುಂಬ ಜನಪ್ರಿಯವಾಗುತ್ತಿದೆ.

ಭಾರತದಲ್ಲಿ ಸೂತ್ರದ ಗೊಂಬೆ ಆಟ ಇಂದಿಗೂ ಜೀವಂತವಾಗಿ ಉಳಿದಿದೆ. ಇದನ್ನು ಕೇವಲ ಮನೋರಂಜನೆಗೇ ಅಲ್ಲದೆ ಪ್ರಚಾರಕಾರ್ಯ, ಶಿಕ್ಷಣ ಮುಂತಾದುವಕ್ಕೂ ಉಪಯೋಗಿಸುವ ಅಭ್ಯಾಸ ಬೆಳೆಯುತ್ತಿದೆ. ಮನೋರಂಜನೆಯ ಜೊತೆಜೊತೆಯಲ್ಲಿಯೇ ಜನಸಾಮಾನ್ಯರಿಗೆ ಹೆಚ್ಚಿನ ತಿಳಿವಳಿಕೆಯನ್ನು ಒದಗಿಸುವ ಪ್ರಯತ್ನ ಇದಂ.



[illegible]

ಅಮೆರಿಕದ ಒಂದು ವಿಶ್ವವಿದ್ಯಾಲಯದಲ್ಲಿ ಗೊಂಬೆ ಆಟವನ್ನು ಅಧ್ಯಯನದ ಒಂದು ಪ್ರಧಾನ ವಿಷಯವನ್ನಾಗಿ ಮಾಡಿದ್ದಾರೆ. ಗೊಂಬೆಯಾಟ ನಡೆಸುವವರ ಒಂದು ಅಂತರರಾಷ್ಟ್ರೀಯ ಸಂಘವೂ ಇದೆ. ಉತ್ತರ ಅಮೆರಿಕದಲ್ಲಿ ಈ ವಿಷಯವಾಗಿ ಒಂದು ಮಾಸಪತ್ರಿಕೆಯೂ ಉಂಟು. ಹೀಗೆ ಗೊಂಬೆ ಆಟ ಒಂದು ಅಂತರರಾಷ್ಟ್ರೀಯ ಕಲೆಯಾಗಿದೆ.

ಜಗತ್ತಿನ ಹಲವಾರು ರಾಷ್ಟ್ರಗಳಲ್ಲಿ ಗೊಂಬೆಯ ಆಟದ ಪ್ರದರ್ಶನಕ್ಕಾಗಿಯೇ ಕಟ್ಟಿದ ರಂಗಮಂದಿರಗಳಿವೆ.

ಬೊಂಬೆಯ ಆಟದಲ್ಲಿ ಸೂತ್ರದಿಂದ ಆಡಿಸುವ ಗೊಂಬೆ, ಸರಳುಗಳಿಂದ ಆಡಿಸುವ ಗೊಂಬೆ, ಕೈಗವಸು ಗೊಂಬೆ ಎಂದು ಹಲವು ಬಗೆಯ ಗೊಂಬೆಯ ಆಟಗಳಿವೆ.

ಸೂತ್ರದ ಗೊಂಬೆಯಲ್ಲಿ ಗೊಂಬೆಯನ್ನು ದಾರಗಳಿಂದ ಆಡಿಸಲಾಗುತ್ತದೆ. ಗೊಂಬೆಯ ಅಂಗಾಗಗಳು ಕೀಲುಗಳಿಂದ ಬಂಧಿಸಲ್ಪಟ್ಟಿರುತ್ತವೆ. ಗೊಂಬೆಯ ಅಂಗಾಂಗಗಳಿಗೂ ಕೆಳಗಿನ ದವಡೆಗಳಿಗೂ ಪೊಳ್ಳಾದ ಬೊಂಬೆಯ ಒಳಭಾಗದ ದಾರಗಳನ್ನು ತಗಲಿಸಿರುತ್ತಾರೆ. ಈ ದಾರಗಳನ್ನು ಬೊಂಬೆಯ ತಲೆಯ ಮೇಲೆ ಬೆತ್ತ ಅಥವಾ ಲೋಹದಿಂದ ಮಾಡಲ್ಪಟ್ಟ ಚಕ್ರಕ್ಕೆ ಕಟ್ಟಿರುತ್ತಾರೆ. ಸಂಬಂಧಪಟ್ಟ ದಾರಗಳನ್ನು ಎಳೆಯುವುದರ ಮೂಲಕ ಬೊಂಬೆಯನ್ನು ಬೇಕಾದಂತೆ ಕುಣಿಸುತ್ತಾರೆ. ಬೆತ್ತ, ಲೋಹಗಳಿಗೆ ಬದಲಾಗಿ ಪದರಹಲಗೆಯನ್ನು ಬಳಸುವುದೂ ಉಂಟು. ಮುಷ್ಟಿ ನಿಯಂತ್ರಣವನ್ನು ಎಡಗೈಯಲ್ಲಿ ಹಿಡಿಯುತ್ತಾರೆ. ಗೊಂಬೆಯ ಕೈಕಾಲು, ತಲೆಯ ಪಾರ್ಶ್ವಗಳು, ಬೆನ್ನು —ಹೀಗೆ ಗೊಂಬೆಯ ಎಲ್ಲ ಭಾಗಗಳಿಗೂ ಬೇರೆ ಬೇರೆ ನಿಯಂತ್ರಕ ದಾರಗಳಿದ್ದು ಅದನ್ನು ಬೇಕಾದಂತೆ ಎಳೆಯಬಹುದು. ಸೂತ್ರದ ಗೊಂಬೆಗಳನ್ನು ಆಡಿಸುವವರು ಒಂದು ಪರದೆಯ ಹಿಂದೆ ನಿಂತು ಬೊಂಬೆಗಳನ್ನು ರಂಗಕ್ಕೆ ಇಳಿಸುತ್ತಾರೆ. ಅನಂತರ ಗೊಂಬೆಗಳು ಕಥಾ ಸಂದರ್ಭಕ್ಕೆ ಸರಿಯಾಗಿ ಚಲಿಸುವಂತೆ ಮಾಡಲು ತಾವು ಹಿಡಿದಿರುವ ದಾರಗಳನ್ನು ಎಳೆಯುತ್ತಾರೆ. ಇದರಿಂದಾಗಿ ಗೊಂಬೆಗಳ



ನರಕಂತ ಗೊಂಬೆ

ಕೈಕಾಲು ತಲೆ ಮುಂತಾದ ಅಂಗಗಳಲ್ಲಿ ಚಲನೆಯುಂಟಾಗುವುದು. ಹೀಗೆ ಗೊಂಬೆಗಳನ್ನಾಡಿಸುವಾಗ ಅದನ್ನಾಡಿಸುವವರು ಗೊತ್ತಾದ ಕ್ರಮದಲ್ಲಿ ಒಂದು ತಪ್ಪನ್ನೂ ಮಾಡದಂತೆ ಕಾಲಕ್ಕೆ ಸರಿಯಾಗಿ ಸೂತ್ರಗಳನ್ನು ಎಷ್ಟು ಬೇಕೋ ಅಷ್ಟೇ ಎಳೆಯಬೇಕಾಗುತ್ತದೆ, ಅಳ್ಳಕ ಬಿಡಬೇಕಾಗುತ್ತದೆ. ಒಂದೊಂದು ಗೊಂಬೆಗೂ ಸಂಬಂಧಿಸಿದಂತೆ ಹಲವಾರು ದಾರಗಳಿರುವುದರಿಂದ ಆಡಿಸುವವರು ತಮ್ಮ ಎಲ್ಲ ಕೈಬೆರಳುಗಳಲ್ಲೂ ಸೂತ್ರವನ್ನು ಹಿಡಿದು ಗೊಂಬೆಯನ್ನಾಡಿಸಬೇಕಾಗುತ್ತದೆ. ಆದ್ದರಿಂದ ಅವರಿಗೆ ಚಲನೆಗಳು ಯಾವುವೆಂಬ ನೆನಪೂ ಏಕಾಗ್ರತೆಯೂ ಅತ್ಯವಶ್ಯ.

ವಿದೇಶಗಳಲ್ಲಿ ಇದನ್ನು 'ನೆರಳು ಗೊಂಬೆಯಾಟ' ಎಂದೂ ಕರೆಯುತ್ತಾರೆ. ಗೊಂಬೆಗಳನ್ನು ಸ್ವಲ್ಪಮಟ್ಟಿನ, ಪಾರದರ್ಶಕ ವಸ್ತುವಿನಿಂದ ತಯಾರಿಸಿದರೆ



ಗೊಂಬೆ ಸೈನಿಕರ
ಕವಾಯತು ವಿಧಾನ

ಆಕಾರ ಹಾಗೂ ಬಣ್ಣಗಳು ಸರಳವಾಗಿ ಪರಿಣಾಮಕಾರಿಯಾಗಿ ಕಾಣಿಸಿಕೊಳ್ಳುತ್ತವೆ. ಸೂತ್ರದ ಗೊಂಬೆಯ ಆಟದಲ್ಲಿ ಉಪಯೋಗಿಸುವ ಗೊಂಬೆಗಳ ವೇಷಭೂಷಣಗಳು ನಾಟಕದ ನಟರಂತೆಯೇ ಇರುತ್ತವೆ. ನಾಟಕದಲ್ಲಿ ಉಪಯೋಗಿಸುವಷ್ಟರ ಮಟ್ಟಿಗೆ ಅಲ್ಲದಿದ್ದರೂ ಸ್ವಲ್ಪಮಟ್ಟಿಗೆ ರಂಗಸಜ್ಜಿಕೆಯನ್ನು ಉಪಯೋಗಿಸುವುದೂ ಉಂಟು.

ಈ ಗೊಂಬೆಯ ಆಟಗಳಲ್ಲಿಯೂ ಮಾತುಗಳು, ಸಂಗೀತ ಇರಬೇಕೆಂದಿಲ್ಲ. ಆದರೆ ಸಾಮಾನ್ಯವಾಗಿ ಇವು ಇದ್ದೇ ಇರುತ್ತವೆ. ಮಾತುಗಳ ಭಾವಕ್ಕೆ ಅನುಗುಣವಾಗಿ ಗೊಂಬೆಗಳ 'ಅಭಿನಯ' ನಡೆಯುತ್ತದೆ. ಹಿನ್ನೆಲೆ ಸಂಗೀತ, ಹಾಡುಗಾರಿಕೆ ಈ 'ಅಭಿನಯ'ಕ್ಕೆ ಪೋಷಕವಾಗುತ್ತವೆ. ಇವೆಲ್ಲದರ ಪರಿಣಾಮವಾಗಿ, ಮಾನವ ನಟನಟಿಯರಿಲ್ಲವೆಂಬ ಕೊರತೆ ಬಿಟ್ಟರೆ, ಇದು ಒಂದು ವಾಸ್ತವ ನಾಟಕದಂತೆಯೇ ತೋರುತ್ತದೆ.

ಸೂತ್ರದ ಗೊಂಬೆಯ ಆಟವನ್ನು ಪ್ರದರ್ಶಿಸುವುದಕ್ಕೆ ಆಗುವ ವೆಚ್ಚ ನಾಟಕ ಪ್ರಯೋಗಕ್ಕೆ ತಗಲುವ ವೆಚ್ಚಕ್ಕಿಂತ ತುಂಬ ಕಡಮೆ. ಅದರ ರಂಗಭೂಮಿಗೆ ಬೇಕಾದ ಸ್ಥಳ ವಿಸ್ತಾರವೂ ಚಿಕ್ಕದು. ಹೆಚ್ಚಿನ ರಂಗ ಸಜ್ಜಿಕೆಗಳ ಹೊರೆಯಿಲ್ಲ. ಸೂತ್ರದ ಗೊಂಬೆಯ ಆಟದಲ್ಲಿ ಆಟಗಾರನ ಕೌಶಲ ಎಲ್ಲಕ್ಕಿಂತ ಹಿರಿದಾದ ಬಂಡವಾಳ. ಅದೊಂದಿದ್ದರೆ ಸಾಕು. ಪ್ರದರ್ಶನವನ್ನು ಯಶಸ್ವಿಯಾಗಿ ಮಾಡಬಹುದು.

ಕರ್ನಾಟಕದಲ್ಲಿ ಬಹಳ ಕಾಲದಿಂದಲೂ ನಡೆದುಬಂದ ಸೂತ್ರದ ಗೊಂಬೆಯಾಟ ಉತ್ತರ ಕರ್ನಾಟಕ ಹಾಗೂ ಕರಾವಳಿ ಭಾಗಗಳಲ್ಲಿ ಇಂದಿಗೂ ಜೀವಂತವಾಗಿದೆ. ಇವುಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದರೂ ಮೂಲ ತಂತ್ರ ಒಂದೇ. ಸ್ಥಳೀಯ ಯಕ್ಷಗಾನ ಪ್ರಸಂಗಗಳ ಪ್ರಭಾವವೂ ಈ ಕಲೆಯ ಮೇಲೆ ಆಗಿದೆ. ಯಕ್ಷಗಾನ ಪ್ರಸಂಗಗಳನ್ನು ಈ ಆಟಕ್ಕೆ ಅಳವಡಿಸಿಕೊಳ್ಳಲಾಗಿದೆ. ಯಕ್ಷಗಾನದ ವಾದ್ಯಗಳು ಹಾಗೂ ಭಾಗವತರು ಇದರ ಪ್ರಯೋಗದಲ್ಲಿ ಭಾಗವಹಿಸುತ್ತಾರೆ ಎಂಬುದು ಗಮನಾರ್ಹ ಅಂಶ.

## ಸ್ತೂಪ

ಭಾರತದ ವಾಸ್ತುಶಿಲ್ಪ ಪ್ರಕಾರಗಳಲ್ಲಿ ಸ್ತೂಪ ಅತ್ಯಂತ ಪ್ರಾಚೀನ ರಚನೆ ಎನ್ನಬಹುದು. ಬುದ್ಧ ಭಗವಾನನ ಅವಶೇಷಗಳನ್ನು ಕಾದಿರಿಸಿದ ಪವಿತ್ರ ಸ್ಥಳವನ್ನು ಆರಾಧನಾ ಮಂದಿರದಂತೆ ಕಟ್ಟಿರುವುದೇ - ಸ್ತೂಪ. ಭಾರತದ ಸಾಂಚಿ, ಸಾರನಾಥ ಮುಂತಾದಲ್ಲಿ ಸ್ತೂಪಗಳಿವೆ. ಅತ್ಯಂತ ಪ್ರಾಚೀನ ಸ್ತೂಪ ನೇಪಾಲದ ಗಡಿಯಲ್ಲಿರುವ ಪಿಪ್ರಾವಾದಲ್ಲಿದೆ. ಇದು ಶಾಕ್ಯರಿಂದ ಕಟ್ಟಲ್ಪಟ್ಟಿದ್ದು. ಪ್ರಪ್ರಥಮವಾಗಿ ಕಟ್ಟಿದ ಎಂಟು ಸ್ತೂಪಗಳಲ್ಲಿ ಇದೂ ಒಂದೆಂದು ಪರಿಗಣಿಸಲಾಗಿದೆ. ಇದರ ಕಾಲ ಸುಮಾರು ಕ್ರಿ.ಪೂ. 450. [illegible] ಶೈಲಿಗೆ ಬಹಳ ಮುಂಚಿನಿಂದಲೂ ಗೊತ್ತಿತ್ತೆಂಬುದು ವ್ಯಕ್ತವಾಗುತ್ತದೆ.

ಭಾರತದ [illegible] ಸ್ತೂಪಗಳು [illegible] ದೊರೆಯುತ್ತವೆ. [illegible] ಸ್ತೂಪ [illegible] ರಚನೆ. ಸಾಂಚಿಯ ಸ್ತೂಪ ಅಶೋಕನ ಕಾಲದ್ದು. ಸ್ತೂಪದ ವಿಶಿಷ್ಟ ಆಕೃತಿ ಗುಮ್ಮಟದಂತೆ ಅರ್ಧಗೋಳಾಕಾರ. ಇದನ್ನು 'ಅಂಡ' ಎನ್ನುತ್ತಾರೆ. [illegible] ಜಗತಿಯಂಥ ಭಾಗದ ಮೇಲೆ ಸ್ತೂಪವನ್ನು ಕಟ್ಟುತ್ತಾರೆ. ಪ್ರದಕ್ಷಿಣೆ ಮಾಡುವ ಕಾಲುದಾರಿಯು ಮೇಲೆ ವೇದಿಕೆ. ಜಗತಿ ಹಾಗೂ ಗುಮ್ಮಟಗಳನ್ನು ಒಂದು ಭದ್ರವಾದ ಕಲ್ಲು ಕಟಾಂಜನ ಪ್ರಾಕಾರದಿಂದ ಸುತ್ತುವರಿದಿರುತ್ತದೆ. ಕಟಾಂಜನದ ಭಾಗಗಳೆಂದರೆ ಕಲ್ಲು ಕಂಬಗಳು ಅಥವಾ ಸ್ತಂಭಗಳ [illegible] ಮತ್ತು ಉಷ್ಣೀಷ ಅಥವಾ ತಲೆಗಲ್ಲು. ಗುಮ್ಮಟದ ಅಗ್ರಭಾಗದಲ್ಲಿ ಚೌಕಾಕಾರದ ಪ್ರಾಕಾರವಿರುತ್ತದೆ. ಇದನ್ನು ಹರ್ಮಿಕ ಎನ್ನುತ್ತಾರೆ. ಇದರ ಮಧ್ಯದಲ್ಲಿ ಕೊಡೆಕಲ್ಲು (ಛತ್ರ) ಇರುತ್ತದೆ. ಛತ್ರ ಧರ್ಮದ [illegible] ಪ್ರತೀಕ.

ಸ್ತೂಪವನ್ನು ಬೇರೆ ಬೇರೆ ದೇಶಗಳಲ್ಲಿ ಟೋಪ್, ಡಗೋಬಾ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವುದೂ ಉಂಟು. ಸಾಂಚಿ (ಮಧ್ಯ ಭಾರತ) ಯಲ್ಲಿರುವ ಮಹಾಸ್ತೂಪದ ವ್ಯಾಸ 120 ಅಡಿ; ಎತ್ತರ 54 ಅಡಿ. ಸಾಂಚಿಯಲ್ಲಿ ಈ ಮಹಾಸ್ತೂಪವಲ್ಲದೆ ಇನ್ನೆರಡು ಸ್ತೂಪಗಳಿವೆ. ಇದಕ್ಕಿಂತ ಹಿಂದಿನವು ಸಾರನಾಥದಲ್ಲಿವೆ. ಇಲ್ಲಿನ ಅನೇಕ ಸ್ತೂಪಗಳು ದಾಳಿಗೆ ತುತ್ತಾಗಿ ನಾಶವಾಗಿವೆ. ಮೌರ್ಯ, ಕುಶಾನ, ಗುಪ್ತ—ಈ ಎಲ್ಲ ಆಳ್ವಿಕೆಯ ಕಾಲಗಳಲ್ಲಿ ಪ್ರಚಲಿತವಿದ್ದ ವಾಸ್ತುಶಿಲ್ಪ ರೀತಿಗಳನ್ನು ಸಾರನಾಥದ ಸ್ತೂಪಗಳಲ್ಲಿ ಕಾಣಬಹುದು. ಸ್ತೂಪಗಳು ಬೌದ್ಧಧರ್ಮವಿರುವ ಟಿಬೆಟ್, ಚೀನ, ಸಿಲೋನ್, ಬರ್ಮಗಳಲ್ಲಿಯೂ ಕಂಡುಬರುತ್ತವೆ.

ಸಮ್ರಾಟ ಅಶೋಕ ಅನೇಕ ಸ್ತೂಪಗಳನ್ನು ಕಟ್ಟಿಸಿದ್ದ.

## ಸೆಫೆರಿಸ್

'ಸೆಫೆರಿಸ್' ಎಂಬ ಪದವನ್ನು ಕೇಳುವಾಗ, ಈತ ಪ್ರಾಚೀನ ಗ್ರೀಸಿನ ಯಾವನೋ ವ್ಯಕ್ತಿ ಎನಿಸಬಹುದು. ಜಿಯೋರ್ಜಸ್ ಸೆಫೆರಿಸ್ ಗ್ರೀಸಿನವನು ನಿಜ. ಆದರೆ ಈತ ಆಧುನಿಕ ಗ್ರೀಸಿನ ಕವಿ. ಎರಡು ಸಾವಿರ ವರ್ಷಗಳ ಹಿಂದೆ ಆಗಿಹೋದ ಗ್ರೀಕ್ ವೈಭವದ ಪುನರುಜ್ಜೀವನಕ್ಕಾಗಿ ತನ್ನದೇ ರೀತಿಯಲ್ಲಿ ದುಡಿಯುತ್ತಿರುವ ಸಾಹಿತಿ ಈತ.

1963ರಲ್ಲಿ ಇವನಿಗೆ ದೊರಕಿದ ನೊಬೆಲ್ ಬಹುಮಾನ ಇಡೀ ಗ್ರೀಸಿಗೇ ಸಂದ ಗೌರವ. ಇವನು ಸಾಹಿತ್ಯಕ್ಕಾಗಿ ನೊಬೆಲ್ ಬಹುಮಾನ ಪಡೆದ ಪ್ರಥಮ ಗ್ರೀಕ್ ಕವಿ. ಟರ್ಕಿಯ ಸ್ಮಿರ್ನಾ ನಗರದಲ್ಲಿ ವಾಸವಾಗಿದ್ದ ಗ್ರೀಕ್ ದಂಪತಿಯ ಮಗ ಜಿಯೋರ್ಜಸ್ ಸೆಫೆರಿಸ್. ಇವನ ನಿಜ ನಾಮಧೇಯ ಜಿಯೋರ್ಜಸ್ ಸೆಫೆರಿಯಾಡೆಸ್. ಜನನ ದಿನಾಂಕ 1900ರ ಮಾರ್ಚ್ 1. ಈತ ತನ್ನ

ಸಾಂಚಿಯ ಸ್ತೂಪ



ಹದಿನಾಲ್ಕನೆಯ ವಯಸ್ಸಿನಲ್ಲಿ ಕವಿತಾರಚನೆಗೆ ಕೈಹಾಕಿದ. ಮೊದಲನೆಯ ಜಾಗತಿಕ ಯುದ್ಧದ ಸಮಯ ಹುಟ್ಟೂರನ್ನು ಬಿಟ್ಟು ಅಥೆನ್ಸ್ ನಗರದಲ್ಲಿ ವಿದ್ಯಾಭ್ಯಾಸ ನಡೆದ. ಅನಂತರ ಪ್ಯಾರಿಸಿನಲ್ಲಿ ನ್ಯಾಯಶಾಸ್ತ್ರ, ಸಾಹಿತ್ಯಗಳ ಅಧ್ಯಯನ. ಆಗಲೇ ಅವನಿಗೆ ಫ್ರೆಂಚ್ ಸಾಹಿತ್ಯದ ನಿಕಟ ಪರಿಚಯವಾದದ್ದು. ಇಂಗ್ಲಿಷ್ ಭಾಷೆಯನ್ನು ಸರಿಯಾಗಿ ತಿಳಿದುಕೊಳ್ಳಲು 1924–25ರ ಅವಧಿಯಲ್ಲಿ ಇವನು ಲಂಡನಿನಲ್ಲಿದ್ದ. ಮರಳಿ ಬಂದವನು ಗ್ರೀಸಿನ ವಿದೇಶ ವ್ಯವಹಾರಗಳ ಶಾಖೆಯಲ್ಲಿ ಉದ್ಯೋಗಿಯಾದ.

ಸೆಫೆರಿಸ್‌ನ ಕವಿತೆಗಳ ಪ್ರಥಮ ಸಂಕಲನ 'ಸಂಧಿ ಕಾಲ' ಪ್ರಕಟವಾದದ್ದು 1931ರಲ್ಲಿ. ಒಡನೆಯೇ ಸಾರ್ವಜನಿಕರೂ ವಿಮರ್ಶಕರೂ "ಇವನು ಭವಿತವ್ಯದ ಕವಿ" ಎಂದು ಗುರುತಿಸಿದರು. ಈ ಮಾತು ಸುಳ್ಳಾಗಲಿಲ್ಲ. ಒಂದೊಂದಾಗಿ ಇವನ ಕವನ ಸಂಕಲನಗಳು ಹೊರಬಂದುವು. 'ಕೊಳ' (1932), 'ಪುರಾಣದ ಕಥೆ' (1935), 'ಎಕ್ಸರ್‌ಸೈಸ್ ಪುಸ್ತಕ' (1940), 'ಕವಿತೆಗಳು' (1940), 'ಹಾಡುಹಕ್ಕಿ' (1942), ಸೆಫೆರಿಸ್‌ನ ಶ್ರೇಷ್ಠ ಕೃತಿಗಳಲ್ಲಿ ಕೆಲವು.



ಗ್ರೀಕ್ ಪರಂಪರೆ : ಸೆಫೆರಿಸ್

ಸಂಕ್ಷಿಪ್ತ ಪ್ರತಿಮಾವಿಧಾನ, ಸ್ಪಷ್ಟ ಭಾಷಾ ಪ್ರಯೋಗ—ಇವು ಸೆಫೆರಿಸ್ ಅನುಸರಿಸುವ ವಿಧಾನ. ಗ್ರೀಕ್ ಸಾಹಿತ್ಯದಲ್ಲಿ ಸಾಂಕೇತಿಕತೆಯನ್ನು ಆಚರಣೆಗೆ ತಂದವನೇ ಇವನು. ಗಾಂಭೀರ್ಯ, ಪ್ರಾಸಬದ್ಧತೆಗಳಿಂದ ಕೂಡಿದ ಇವನ ಕವನ ಪ್ರಾಚೀನ ಗ್ರೀಕ್ ಸಾಹಿತ್ಯವನ್ನು ನೆನಪಿಗೆ ತಂದುಕೊಡುತ್ತದೆ. ಆದರೆ ತನ್ನ ಕವಿತಾರಚನೆಗೆ ಈತ ಆರಿಸುವ ವಿಷಯ ಮಾತ್ರ ಸಮಕಾಲೀನವಾದದ್ದು. ಗ್ರೀಕ್ ಸಾಹಿತ್ಯ ಪರಂಪರೆಯಲ್ಲಿ ಆಳವಾದ ಪರಿಶ್ರಮವಿದ್ದರೂ ಇವನ ಜ್ಞಾನದಾಹಕ್ಕೆ ದೇಶ, ಭಾಷೆಗಳ ಬಂಧನವಿಲ್ಲ. ಫ್ರೆಂಚ್ ಆಧುನಿಕ ಕವಿಗಳ ಪ್ರಭಾವ ಇವನ ಮೇಲೆ ಬಿದ್ದಿದೆ. ಟಿ. ಎಸ್. ಎಲಿಯಟ್‌ನ ಆರಾಧಕನಾದ ಈತ ಅವನ ಅನೇಕ ಕೃತಿಗಳನ್ನು ಗ್ರೀಕ್ ಭಾಷೆಗೆ ಅನುವಾದಿಸಿದ್ದಾನೆ.

ಸೆಫೆರಿಸ್ ವೃತ್ತಿಯಿಂದ ರಾಜನೀತಿಜ್ಞ. ಕೈರೋ, ಜೊಹಾನ್ಸ್‌ಬರ್ಗ್, ಪ್ರಿಟೋರಿಯಾ, ಅಂಕಾರಾ, ಬೀರೂತ್, ಲಂಡನ್ ಮುಂತಾದ ಕಡೆಗಳಲ್ಲಿ ಇವನು ಗ್ರೀಸಿನ ರಾಯಭಾರಿಯಾಗಿದ್ದ. 1959ರಲ್ಲಿ ಸೈಪ್ರಸ್ – ಇಂಗ್ಲೆಂಡ್ ಒಪ್ಪಂದ ನಡೆದು ಸೈಪ್ರಸ್‌ಗೆ ಸ್ವಾತಂತ್ರ್ಯ ಸಿಗುವಂತೆ ದುಡಿದವರಲ್ಲಿ ಸೆಫೆರಿಸನೂ ಒಬ್ಬ. 1962ರಲ್ಲಿ ರಾಜಕೀಯದಿಂದ ನಿವೃತ್ತನಾದಂದಿನಿಂದ ಬರೆವಣಿಗೆಯೊಂದರಲ್ಲೇ ನಿರತನಾಗಿದ್ದಾನೆ.

## ಸೆಸಿಲ್ ಡೇ ಲೂಯಿಸ್

ಇಂಗ್ಲೆಂಡಿನ ರಾಷ್ಟ್ರಕವಿ ಎಂದು ಮಾನ್ಯನಾದವನು ಸೆಸಿಲ್ ಡೇ ಲೂಯಿಸ್. ಈತ ಕವಿ, ಕಾದಂಬರಿಕಾರ ಹಾಗೂ ಪತ್ತೇದಾರಿ ಕಥೆಗಳ ಕರ್ತೃವಾಗಿದ್ದ.

ಐರ್ಲೆಂಡಿನ ಬ್ಯಾಲಿಂಟೊಫರ್‌ನಲ್ಲಿ 1904ರ ಏಪ್ರಿಲ್ 27ರಂದು ಈತ ಜನಿಸಿದ. ತಂದೆ ಪಾದ್ರಿ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಇವನ ವಿದ್ಯಾಭ್ಯಾಸ ನಡೆಯಿತು. ಕವಿ ಆಡೆನ್‌ನ ಜೊತೆ ಸೇರಿ 'ಆಕ್ಸ್‌ಫರ್ಡ್ ಪೊಯೆಟ್ರಿ' ನಿಯತಕಾಲಿಕದ ಸಹಸಂಪಾದಕನಾಗಿ ಕೆಲಸ ಮಾಡಿದ. ಅನಂತರ ಕೇಂಬ್ರಿಜ್‌ನಲ್ಲಿ ಉಪನ್ಯಾಸಕನಾದ. 1925ರಿಂದ 1948ರ ಅವಧಿಯಲ್ಲಿ ಈತನ ಹತ್ತು ಕವನ ಸಂಕಲನಗಳು ಪ್ರಕಟವಾದುವು. ಕವನ ರಚನೆಗೇ ತನ್ನೆಲ್ಲ ಸಮಯವನ್ನೂ ವಿನಿಯೋಗಿಸಬೇಕೆಂದು ಆತ 1935ರಲ್ಲಿ ಅಧ್ಯಾಪನವೃತ್ತಿಯನ್ನು ಬಿಟ್ಟುಕೊಟ್ಟ. ಎರಡನೆಯ ಮಹಾಯುದ್ಧದ ಸಮಯದಲ್ಲಿ ಸಮಾಚಾರ ಸಚಿವಶಾಖೆಯಲ್ಲಿ ಸಂಪಾದಕನಾಗಿ ಕೆಲಸಮಾಡಿದ. 1951ರಿಂದ 1965ರ ವರೆಗೆ ಆಕ್ಸ್‌ಫರ್ಡ್‌ನಲ್ಲಿ ಕಾವ್ಯದ ಪ್ರಾಧ್ಯಾಪಕನಾದ. 1968ರಲ್ಲಿ, ರಾಷ್ಟ್ರಕವಿ ಮೇಸ್‌ಫೀಲ್ಡ್‌ನ ನಿಧನಾನಂತರ, ಇಂಗ್ಲೆಂಡಿನ ರಾಷ್ಟ್ರಕವಿಯೆಂದು ಸೆಸಿಲ್ ಡೇ ಲೂಯಿಸ್ ನಿಯೋಜಿತನಾದ.

ಡೇ ಲೂಯಿಸನ ಪ್ರಥಮ ಕವನ ಸಂಕಲನ– 'ಕಲೆಕ್ಟೆಡ್ ಪೊಯೆಮ್ಸ್' –1935ರಲ್ಲಿ ಹೊರಬಂತು. ಅದೇ ವರ್ಷ ಪತ್ತೇದಾರಿ ಕಥೆಗಳ ಸಂಗ್ರಹ 'ಎ ಕ್ವೆಶ್ಚನ್ ಆಫ್ ಪ್ರೂಫ್' ಕೂಡ ಪ್ರಕಟವಾಯಿತು. ಇದನ್ನು ಪ್ರಕಟಿಸಿದ್ದು ನಿಕೊಲಸ್ ಬ್ಲೇಕ್ ಎಂಬ ಅಂಕಿತದಲ್ಲಿ. ಡೇ ಲೂಯಿಸ್ 1941ರಲ್ಲಿ ವರ್ಜಿಲ್ (ರೋಮನ್ ಕವಿ ಕ್ರಿ.ಪೂ. 70-19) ವಿರಚಿತ 'ಜಾರ್ಜಿಕ್ಸ್' ಗ್ರಂಥವನ್ನೂ 1952ರಲ್ಲಿ 'ಈನಿಯಿಡ್' ಅನ್ನೂ ಭಾಷಾಂತರ ಮಾಡಿದ.

ಡೇ ಲೂಯಿಸ್ 'ಎ ಹೋಪ್ ಫಾರ್ ಪೊಯೆಟ್ರಿ', 'ಎಂಜಾಯಿಂಗ್ ಪೊಯೆಟ್ರಿ' ಮತ್ತು 'ದಿ ಗ್ರ್ಯಾಂಡ್ ಮ್ಯಾನರ್' ಎಂಬ ವಿಮರ್ಶಾ ಗ್ರಂಥಗಳನ್ನೂ ಬರೆದಿದ್ದಾನೆ.



ವಾಮಪಂಥದ ರಾಷ್ಟ್ರಕವಿ : ಸೆಸಿಲ್ ಡೇ ಲೂಯಿಸ್

'ದಿ ಫ್ರೆಂಡ್ಲಿ ಟ್ರೀ', 'ಸ್ಟಾರ್ಟಿಂಗ್ ಪಾಯಿಂಟ್' ಡೇ ಲೂಯಿಸ್‌ನ ಕಾದಂಬರಿಗಳಲ್ಲಿ ಕೆಲವು.

1954ರಲ್ಲಿ 'ಕಲೆಕ್ಟೆಡ್ ಪೋಯಮ್ಸ್' ಮತ್ತು 1958ರಲ್ಲಿ 'ಪೆಗಾಸಸ್ ಅಂಡ್ ಅದರ್ ಪೋಯೆಮ್ಸ್' ಪ್ರಕಟವಾದುವು.

ಡೇ ಲೂಯಿಸ್ ಬ್ರಿಟನಿನ ಕವಿಗಳಲ್ಲಿ ವಾಮಪಕ್ಷಕ್ಕೆ ಸೇರಿದವನು. ಡೇ ಲೂಯಿಸ್‌ನ ಮೊದಲ ಕೃತಿಗಳಲ್ಲಿ ಸಾಮಾಜಿಕ ಸಮಸ್ಯೆಗಳ ಪರಿಶೀಲನೆಯನ್ನು ಕಾಣಬಹುದು. ಅನಂತರದ ಕೃತಿಗಳಲ್ಲಿ ವ್ಯಕ್ತಿಸಂಬಂಧ ವಸ್ತುಗಳೇ ಹೆಚ್ಚು.

1972 ಮೇ 22ರಂದು ಸೆಸಿಲ್ ಡೇ ಲೂಯಿಸ್ ನಿಧನನಾದ.

## ಸೇಜಾನ್

'ಆಧುನಿಕ ಚಿತ್ರಕಲೆಯ ಪಿತಾಮಹ' ಎನಿಸಿಕೊಂಡ ಚಿತ್ರಕಾರ ಸೇಜಾನ್. ಬದುಕಿನುದ್ದಕ್ಕೂ ವಿಮರ್ಶಕರ ಕಟುಟೀಕೆಗೆ ಗುರಿಯಾದವನು ಈತ. ಚಿಕ್ಕವಯಸ್ಸಿನಲ್ಲಿ ತಂದೆ ತಂದುಕೊಟ್ಟ ಬಣ್ಣದ ಕಡ್ಡಿಗಳ ಪೆಟ್ಟಿಗೆ ಆತನನ್ನು ಚಿತ್ರಕಲಾ ಪ್ರಪಂಚದತ್ತ ಒಯ್ದಿತು. 22ನೆಯ ವಯಸ್ಸಿನಲ್ಲಿ ಪ್ಯಾರಿಸಿಗೆ ಬಂದ. ಎಡ್ವರ್ಡ್ ಮಾನೆ (1832–83), ಕ್ಯಾಮಿಲ್ ಪಿಸಾರೊ (1830–1903), ಗುಸ್ತಾವ್ ಕೂರ್ಬ (1819–77) ಮೊದಲಾದ ಚಿತ್ರಕಾರರ ಪರಿಚಯವಾಯಿತು. 10 ವರ್ಷಗಳ ಕಾಲ ಒರಟಾದ ಎಳೆತಗಳಿಂದ ಚಿತ್ರಬಿಡಿಸುತ್ತಿದ್ದ. 1872ರಿಂದ ಪಿಸಾರೊ ಜೊತೆ ಚಿತ್ರ ಬರೆಯಲಾರಂಭಿಸಿದ. ಸಮಷ್ಟಿಪರಿಣಾಮ ಪದ್ಧತಿಯ ಚಿತ್ರಗಳನ್ನು ನೋಡಿದ ಸೇಜಾನ್, ಹೊಸ ಪ್ರಯೋಗಗಳನ್ನು ಮಾಡಿದ. ಅಗತ್ಯ ಕಂಡುಬಂದಾಗ ಆಕೃತಿಯನ್ನು ವಿರೂಪಗೊಳಿಸಲು ಹಿಂದೆಗೆಯಲಿಲ್ಲ. ನೋಡುವವನಿಗೆ ವಸ್ತುವಿನ ಪೂರ್ಣ ಕಲ್ಪನೆ ಮೂಡುವುದೇ ಮುಖ್ಯ–ಎಂದ. ಯಾರ ನೆರವೂ ಇಲ್ಲದೆ ತಾನೇ ಸಾವಕಾಶವಾಗಿ ಪ್ರಯೋಗಗಳನ್ನು ಮಾಡುತ್ತ, ಶ್ರಮಪಟ್ಟು ತನ್ನದೇ ಆದ ಶೈಲಿಯನ್ನು ರೂಪಿಸಿಕೊಂಡ.

ಪ್ರಕೃತಿಯೆಲ್ಲ ಸ್ತಂಭಾಕೃತಿ, ಶಂಕು ಹಾಗೂ ವೃತ್ತಗಳಂಥ ಜಾಮಿತೀಯ ಆಕೃತಿಯನ್ನೇ ಮೂಲವಾಗಿ ಹೊಂದಿರುವಂಥವು ಎಂಬುದು ಸೇಜಾನನ ನಂಬುಗೆ. ಆತ ಕುಂಚ ಆಡಿಸುತ್ತಿದ್ದುದೇ ಕೋನೀಯವಾಗಿ. ಹೀಗೆ ಸೇಜಾನ್ 'ಕ್ಯೂಬಿಸಂ' ಚಿತ್ರಕಲೆಯ ಆದ್ಯಪ್ರವರ್ತಕನಾದ.



ಸೇಜಾನ್ ಶೈಲಿ ಹಾಗೂ [illegible] ರೂಪಚಿತ್ರ, ಪ್ರಕೃತಿಚಿತ್ರ ಹಾಗೂ ನಿರ್ಜೀವ ವಸ್ತು ಚಿತ್ರಗಳನ್ನು ಸಮರ್ಪಕವಾಗಿ ಚಿತ್ರಿಸುವ ಕೌಶಲ ಅವನಿಗಿತ್ತು. [illegible] 'ತೋಟಗಾರ', 'ಇಸ್ಪೀಟು ಆಟಗಾರರು', 'ಸೇಬುಹಣ್ಣುಗಳು' ಮೊದಲಾದ ಚಿತ್ರಗಳು ಸೇಜಾನನನ್ನು ಅಮರನನ್ನಾಗಿ ಮಾಡಿವೆ.

ಸೇಜಾನನ ಚಿತ್ರಪ್ರದರ್ಶನಗಳು 1874 ಹಾಗೂ 1877ರಲ್ಲಿ ನಡೆದುವು. ಸಮಷ್ಟಿಪರಿಣಾಮವಾದಿ ಚಿತ್ರಕಾರರ ಕೃತಿಗಳ ಜೊತೆಯಲ್ಲಿ ಈತನ ಕೃತಿಗಳು ಪ್ರದರ್ಶಿತವಾದುವು. ವಿಮರ್ಶಕರ ಕಟು ಟೀಕೆಗಳಿಗೆ ಅವನ ಚಿತ್ರಗಳು ಬಲಿಯಾದುವು. 1904ರಲ್ಲಿ ನಡೆದ ಯಶಸ್ವೀ ಚಿತ್ರಪ್ರದರ್ಶನ ಈ ಅಜ್ಞಾತ ಚಿತ್ರಕಾರನ ಪ್ರತಿಭೆಯ ಪರಿಚಯವನ್ನು ಜನತೆಗೆ ಮಾಡಿಕೊಡಲು ನೆರವಾಯಿತು.

ತನ್ನ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ವ್ಯಕ್ತಪಡಿಸುವುದಕ್ಕೆ ಸೂಕ್ತ ವಿಧಾನವನ್ನು ಕಂಡುಕೊಳ್ಳಲು ಸೇಜಾನ್ ದೀರ್ಘಕಾಲ ಶ್ರಮಿಸಿದ. ಆದರೆ ಅನೇಕ ಚಿತ್ರಪ್ರದರ್ಶನಾಲಯಗಳು ಅವನ ಚಿತ್ರಗಳನ್ನು ಸ್ವೀಕರಿಸಲು ನಿರಾಕರಿಸುತ್ತಿದ್ದುದು ಅವನಿಗೆ ಆಘಾತ ಉಂಟುಮಾಡಿತು. ಆತ ಒಂಟಿಯಾಗಿಯೇ ಉಳಿದ; ತನ್ನ ಮನ ಒಪ್ಪಿದಂತೆ ಚಿತ್ರಗಳನ್ನು ರಚಿಸುತ್ತ ಹೋದ. ಆತನ ಕೊನೆಗಾಲದ ಹತ್ತು ವರ್ಷಗಳಿಗೆ ಮುಂಚೆಯಷ್ಟೇ ಆತನ ಅಸಾಧಾರಣ ಪ್ರತಿಭೆಯನ್ನು ಕೆಲ ಚಿತ್ರಕಾರರು ಗುರುತಿಸಿದರು.

ಸೇಜಾನ್ ಫ್ರಾನ್ಸಿನ ಪ್ರೊವೆನ್ಸ್‌ನಲ್ಲಿ 1839ನೆಯ ಜನವರಿ 17ರಂದು ಜನಿಸಿದ. ತಂದೆ ಶ್ರೀಮಂತ ಬ್ಯಾಂಕರ್. ತಂದೆಗೆ ಮಗ ವ್ಯಾಪಾರ ಅಥವಾ ವಕೀಲಿ ಹುದ್ದೆ ಅವಲಂಬಿಸಬೇಕೆಂಬ ಆಸೆ. ಆದರೆ ಸೇಜಾನನ ಒಲವಿದ್ದುದು ಚಿತ್ರಕಲೆಯತ್ತ. ಫ್ರಾನ್ಸಿನ ಖ್ಯಾತ ಲೇಖಕ ಎಮಿಲಿ ಜೋಲಾ (1840–1902) ಇವನ ಬಾಲ್ಯಮಿತ್ರ. ಆತ ಸೇಜಾನನನ್ನು ಪ್ಯಾರಿಸಿಗೆ ಬರಲು ಪ್ರೋತ್ಸಾಹಿಸಿದ. ಕೊನೆಗೆ ತಂದೆ ಒಪ್ಪಿ, ಪ್ಯಾರಿಸಿಗೆ ಕಳುಹಿಸಿದ. 1886ರಲ್ಲಿ ತಂದೆ ಮರಣಹೊಂದಿದ. ಅಪಾರ ಐಶ್ವರ್ಯಕ್ಕೆ ಮಗ ವಾರಸುದಾರನಾದ.

ಜನಮೆಚ್ಚುಗೆ, ವಿಮರ್ಶಕರ ಒಳ್ಳೆಯ ಅಭಿಪ್ರಾಯ ಸೇಜಾನನಿಗೆ ದೊರೆತದ್ದು ಮಾತ್ರ ತಡವಾಗಿ.

ಕೊನೆಯ 20 ವರ್ಷಗಳನ್ನು ಸೇಜಾನ್ ಒಬ್ಬಂಟಿಗನಾಗಿ ಚಿತ್ರರಚನೆಯಲ್ಲಿ ಮಗ್ನನಾಗಿ ಕಳೆದ. ಹೊರಾಂಗಣದಲ್ಲಿ ಚಿತ್ರಿಸುವುದು ಆತನಿಗೆ ಪ್ರಿಯವಾಗಿತ್ತು. ಚಿತ್ರರಚಿಸುತ್ತ ಮಳೆಯಲ್ಲಿ ತೋಯಿಸಿಕೊಂಡ ಪರಿಣಾಮವಾಗಿ ಆತನ ದೇಹಸ್ಥಿತಿ ಕೆಟ್ಟಿತು. 1906ರ ಅಕ್ಟೋಬರ್ 22ರಂದು ಸೇಜಾನ್ ಮೃತನಾದ. ಆಗ ಅವನ ಬಳಿ ಯಾರೂ ಇರಲಿಲ್ಲ.

## ಸ್ಪೇನಿನ ಕಲೆ, ಸಾಹಿತ್ಯ

ಕಲಾಜಗತ್ತಿಗೆ ಗಣ್ಯ ಕಲಾವಿದರನ್ನು ನೀಡಿರುವ ದೇಶಗಳಲ್ಲಿ ಸ್ಪೇನ್ ಕೂಡ ಒಂದು. ಚಿತ್ರಕಲಾವಿದರಾದ ಎಲ್ ಗ್ರೆಕೊ, ಗೋಯಾ ಮತ್ತು ಪಾಬ್ಲೊ ಪಿಕಾಸೊ, ಸಾಹಿತಿಗಳಾದ ಹ್ವಾನ್ ರಾಮಾನ್ ಹೀಮೇನೇತ್, ಮಾರಟೀನೇತ್ ಮತ್ತು ಲೋಪ್ ಡಿ ವೇಗಾ ಸ್ಪೇನಿನವರು. ಸ್ಪೇನಿನ ಚಿತ್ರಕಲೆಯಲ್ಲಿ ಎದ್ದು ಕಾಣುವ ಗುಣ – ವ್ಯಕ್ತಿಗತ ಭಾವನೆ. 16ನೆಯ ಶತಮಾನಕ್ಕಿಂತಲೂ ಮುಂಚೆ ಚಿತ್ರಕಾರರ ಗುಂಪು ಇಗರ್ಜಿಗಳ ಗೋಡೆಗಳ ಮೇಲೆ ಭಿತ್ತಿಚಿತ್ರಗಳನ್ನು ಬರೆಯುತ್ತಿತ್ತು. ಇವರೇ ಬೈಜಾಂಟಿಯಂ ಶೈಲಿಯಲ್ಲಿ ಕಿರುಚಿತ್ರಗಳನ್ನೂ ಚಿತ್ರಫಲಕಗಳನ್ನೂ ರಚಿಸಿದರು.



'ಆಧುನಿಕ ಚಿತ್ರಕಲೆಯ ಪಿತಾಮಹ' :
ಸೇಜಾನ್

ಇಟಲಿ, ಫ್ರಾನ್ಸ್ ಹಾಗೂ ಫ್ಲೆಮಿಷ್ ಪ್ರದೇಶದ ಕಲಾವಿದರ ಪ್ರಭಾವ ಹೆಚ್ಚಾಗಿ ಸ್ಪೇನಿನ ಚಿತ್ರಕಲೆಗೆ ಅಂತರರಾಷ್ಟ್ರೀಯ ಸ್ವರೂಪ ಬಂದಿತು. ನೇಪಲ್ಸ್‌ನ ಸಂಬಂಧದ ಪರಿಣಾಮದಿಂದಾಗಿ ಸ್ಪೇನಿನ ಕಲೆಯ ಮೇಲೆ ಇಟಲಿಯ ಕಲೆ ಹೆಚ್ಚು ಪರಿಣಾಮ ಉಂಟುಮಾಡಿತು. ಇಟಲಿಯ ಚಿತ್ರಕಾರರನ್ನು ಮ್ಯಾಡ್ರಿಡ್‌ಗೆ ಕರೆಸಿಕೊಂಡರು. ಸ್ಪೇನಿನ ಪೂರ್ವ ಭಾಗದಲ್ಲಿರುವ ವ್ಯಾಲೆನ್ಸಿಯದಿಂದ ಕಲಾವಿದರನ್ನು ಶಿಕ್ಷಣಕ್ಕಾಗಿ ನೇಪಲ್ಸ್‌ಗೆ ಕಳುಹಿಸಿದರು. ನೇಪಲ್ಸಿನ ಕಾರವಾಗಿಯೊ (1573–1610) ಬೆಳಕು–ಕತ್ತಲೆ ಹೊಂದಾಣಿಕೆ, ಕೆಲವೇ ಬಣ್ಣಗಳ ಉಪಯೋಗ ಹಾಗೂ ನೈಜತೆಗಳಿಂದ ಚಿತ್ರಕಲೆಯಲ್ಲಿ ತನ್ನದೇ ಆದ ಶೈಲಿಯನ್ನು ರೂಪಿಸಿಕೊಂಡಿದ್ದ. ಈತನ ಶೈಲಿ ಸ್ಪೇನಿನ ಕಲೆಯ ಮೇಲೆ ಅಪಾರ ಪರಿಣಾಮ ಉಂಟುಮಾಡಿತು. ಗೋಯಾ (1746 –1828) ಶ್ರೇಷ್ಠ ಚಿತ್ರಕಾರ. ಪ್ರಕೃತಿಯಲ್ಲಿ ಗೆರೆಗಳೇ ಇಲ್ಲ; ಇರುವುದೊಂದೇ –ಸಮತಲ; ಸಮತಲ ಸಂದರ್ಭಕ್ಕೆ ತಕ್ಕಂತೆ ಮುಂದೆ ಬರುತ್ತದೆ. ಹಿಂದಕ್ಕೂ ಹೋಗುತ್ತದೆ ಎಂದು ಆತ ಅನ್ನುತ್ತಿದ್ದ. 20ನೆಯ ಶತಮಾನದ ಅತ್ಯಂತ ಪ್ರಸಿದ್ಧ ಚಿತ್ರಕಾರ ಪಾಬ್ಲೊ ಪಿಕಾಸೊ (1881– ) ಘನಾಕೃತಿ ಚಿತ್ರಗಳ ಕ್ಷೇತ್ರದಲ್ಲಿ ಹೆಸರಾಂತವನು.

ವಾಸ್ತುಶಿಲ್ಪದಲ್ಲಿ ಸ್ಪೇನಿನವರಿಗೆ ರಚನೆಯಷ್ಟೇ ಅಲಂಕರಣವೂ ಮುಖ್ಯವಾಗಿತ್ತು. ಅಲಂಕರಣ ಶೈಲಿಯ ಹೆಸರಿನಿಂದಲೇ ವಾಸ್ತುಶಿಲ್ಪವನ್ನು ಗುರುತಿಸುವುದು ಸ್ಪೇನಿನಲ್ಲಿ ರೂಢಿಗೆ ಬಂತು. ಪ್ರಾಣಿಗಳು, ಹಕ್ಕಿಗಳು, ಮುಖವಾಡಗಳನ್ನು ಕೆತ್ತಿ, ಬಣ್ಣಹಾಕಿ ಕಟ್ಟಡಗಳಿಗೆ ಬಳಸುವುದು ಒಂದು ಬಗೆಯ ಅಲಂಕರಣ ಶೈಲಿ. ದೊರೆ ಎರಡನೆಯ ಫಿಲಿಪ್‌ಗೆ ಇದು ಇಷ್ಟವಾಗಲಿಲ್ಲ. ಆತ ಮ್ಯಾಡ್ರಿಡ್ ಸಮೀಪದಲ್ಲಿ ಒಂದು ಪ್ರಾರ್ಥನಾಮಂದಿರ, ಒಂದು ಕ್ರೈಸ್ತಮಠ ಹಾಗೂ ಸರಕಾರೀ ಕಟ್ಟಡಗಳನ್ನು ಕಟ್ಟುವ ಕೆಲಸವನ್ನು ಆಜು ಆನ್ ದ ಹೆರೇರಾ (1530–97)ಗೆ ವಹಿಸಿದ. ಹೆರೇರಾ ಬೈಜಾಂಟಿಯಂ ವಾಸ್ತುಶಿಲ್ಪವನ್ನು ಅನುಸರಿಸಿ ಈ ಕಟ್ಟಡಗಳನ್ನು ನಿರ್ಮಿಸಿದ. ಇವು ದೀರ್ಘಕಾಲದವರೆಗೆ ಚರ್ಚುಗಳು ಮತ್ತಿತರ ಕಟ್ಟಡಗಳಿಗೆ ಮಾದರಿಯಾಗಿದ್ದುವು. ಆಂಟೋನಿಯಾ ಗಾಡಿ (1852–1926) ಕಟ್ಟಡ ರಚನೆಯಲ್ಲಿ ತನ್ನದೇ ಹೊಸ ಶೈಲಿ ರೂಪಿಸಿದ. ಆತ ನಿರ್ಮಿಸಿರುವ ಒಂದು ವಸತಿಗೃಹ ಜೇನುತುಪ್ಪ ತೊಟ್ಟಿಕ್ಕುತ್ತಿರುವ ಜೇನುಗೂಡಿನಂತಿದೆ.

ನೃತ್ಯಕ್ಕೆ ಬಹಳ ಕಾಲದಿಂದ ಹೆಸರುವಾಸಿಯಾದ ದೇಶ ಸ್ಪೇನ್.

ಸ್ಪೇನಿನ ಜನಪದ ಸಂಗೀತ ಆಯಾ ಪ್ರದೇಶದ ಲಕ್ಷಣಗಳನ್ನು ಒಳಗೊಂಡು ಪ್ರಾದೇಶಿಕ ಭಿನ್ನತೆ, ವೈಶಿಷ್ಟ್ಯಗಳಿಂದ ಕೂಡಿದೆ. ಮತೀಯ ಸಂಗೀತದ ಉಚ್ಛ್ರಾಯ ಕಾಲ ನವೋದಯ ಕಾಲ. 18ನೆಯ ಶತಮಾನದಲ್ಲಿ ಆಪೆರಾ ಪೂರ್ಣತೆ ಪಡೆದಿತ್ತು. ಲೂಯಿಸ್ ಮಿಸನ್‌ನ 'ದಿ ಎನಾಮರ್ಡ್ ಟ್ಯೂಟರ್' ಎಂಬುದು ಈ ವರ್ಗದ ಒಂದು ಮೇರುಕೃತಿ. 19ನೆಯ ಶತಮಾನದಲ್ಲಿ ಸಂಗೀತದ ಪುನಶ್ಚೇತನಕ್ಕೆ ಕಾರಣನಾದವನು ಫಿಲಿಪ್ ಪೆಡ್ರೆಲ್ (1841–1922). 'ಪಿರನೀಸಾ' ಆತ ಬರೆದ ತ್ರಿನಾಟಕ ಚಕ್ರ. ಇಮಾನ್ಯುಯೆಲ್ ಡಿ ಫಲ್ಲಾ (1876–1946)ನನ್ನು 20ನೆಯ ಶತಮಾನದ ಶ್ರೇಷ್ಠ ರಚನಕಾರ ಎನ್ನಬಹುದು. 'ತ್ರೀ ಕಾರ್ನರ್ಡ್ ಹ್ಯಾಟ್' ಈತ ರಚಿಸಿರುವ ಬ್ಯಾಲೆ. ಅರಬೀ ಸಂಗೀತದ ಪ್ರಭಾವವನ್ನು ಇದರಲ್ಲಿ ಕಾಣಬಹುದು.

ಸ್ಪೇನಿನವರು ಶಿಲ್ಪಕ್ಕೆ ಹೆಚ್ಚಾಗಿ ಬಳಸುತ್ತಿದ್ದ ವಸ್ತು, ಮರ. ಮರದಿಂದ ಮೂರ್ತಿಗಳನ್ನು ಕೊರೆಯುವಷ್ಟೇ ಪ್ರಾಮುಖ್ಯವನ್ನು ಅವರು ಅವಕ್ಕೆ ಬಣ್ಣ ಹಾಕುವುದಕ್ಕೂ ಕೊಡುತ್ತಿದ್ದರು.

ಸ್ಪೇನಿನ ಶಿಲ್ಪಿಗಳ ಮೇಲೆ ಇಟಲಿಯ ಶಿಲ್ಪಿಗಳ ಪ್ರಭಾವ ಮಹತ್ತರವಾದದ್ದು. ಇಟಲಿಯ ಖ್ಯಾತ ಶಿಲ್ಪಿ ಮೈಕೆಲೇಂಜೆಲೋನ ಶಿಷ್ಯ ಅಲ್ಫಾನ್ಸೋ ಸ್ಪೇನಿಗೆ ಹಿಂದಿರುಗಿದ ಮೇಲೆ ನಿರ್ಮಿಸಿದ ಶಿಲ್ಪಗಳಲ್ಲಿ ಅವನ ಗುರುವಿನ ಶೈಲಿ ಎದ್ದು ಕಾಣುತ್ತದೆ.

ಸ್ಪೇನಿನವರು ಕುಶಲ ಕಲೆಗಳಲ್ಲೂ ನಿಷ್ಣಾತರು; ಚಿನ್ನ, ಬೆಳ್ಳಿ, ಕಬ್ಬಿಣಗಳಲ್ಲಿ ಕುಶಲ ವಸ್ತುಗಳನ್ನು ನಿರ್ಮಿಸಿದ್ದಾರೆ. ಮೆರವಣಿಗೆಗಳಲ್ಲಿ ತೆಗೆದುಕೊಂಡು ಹೋಗುವ ಪೆಟ್ಟಿಗೆಗಳ ಮೇಲೆ ಅಪೂರ್ವ ಕೆತ್ತನೆ ಕೆಲಸಗಳು ಇರುವುದನ್ನು ಕಾಣಬಹುದು. ಕಬ್ಬಿಣದಿಂದ ಕಟಕಟೆಗಳನ್ನು ರಚಿಸುತ್ತಿದ್ದರು. ಅವನ್ನು ಪ್ರಧಾನವಾಗಿ ಬಳಸುತ್ತಿದ್ದುದು ಇಗರ್ಜಿಗಳಲ್ಲಿ. ಇವು ಕೂಡ ಸುಂದರ ಕೃತಿಗಳು.

ಸ್ಪ್ಯಾನಿಷ್ ಸಾಹಿತ್ಯ ಎಂದರೆ ಸ್ಪೇನಿನ ಒಂದು ಪ್ರದೇಶವಾದ ಕ್ಯಾಸ್ಟಿಲ್‌ನಲ್ಲಿ ಪ್ರಚಾರವಿದ್ದ ಭಾಷೆಯಲ್ಲಿ ಬರೆದ ಸಾಹಿತ್ಯ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಸ್ಪೇನಿನ ಆಡು ಮಾತುಗಳಲ್ಲಿ ಪ್ರಮುಖವಾದದ್ದು ಈ ಕ್ಯಾಸ್ಟಿಲ್ ಭಾಷೆಯೇ. ಸ್ಪೇನಿನ ಅತ್ಯಂತ ಪ್ರಾಚೀನ ಸಾಹಿತ್ಯ ಗ್ರಂಥಗಳು 12ನೆಯ ಶತಮಾನದವು. ಅವು ಹೆಚ್ಚಾಗಿ ಅಲೆಮಾರಿ ಜನರು ಹಾಡಿನ ರೂಪದಲ್ಲಿ ಹೇಳುತ್ತಿದ್ದ ಕಥೆಗಳು. ಯೂರೋಪಿನ ರಾಷ್ಟ್ರೀಯ ಮಹಾಕಾವ್ಯಗಳಲ್ಲಿ ಒಂದಾದ 'ಸಿಡ್‌ನ ಕವನಗಳು' ಎಂಬುದು ಮೂರು ಭಾಗಗಳಲ್ಲಿದೆ. ರಾಡ್ರಿಗೊ ಡಯಾಜ್ ಎಂಬ ವೀರನನ್ನು ಕುರಿತಾದ ಕಥೆಗಳು ಇದರಲ್ಲಿವೆ. 13ನೆಯ ಶತಮಾನದಲ್ಲಿ, ಹೆಚ್ಚು ವಿದ್ಯಾವಂತರಾಗಿದ್ದ ಪಾದ್ರಿಗಳು ಬರೆದ ಕವಿತೆಗಳು ಜೀವನಚರಿತ್ರೆಗಳು ಹೊರಬಂದುವು. ಕ್ಯಾಸ್ಟಿಲ್‌ನ ದೊರೆ ಹತ್ತನೆಯ ಅಲ್ಫಾನ್ಸೋ ವಿದ್ವಾಂಸರನ್ನು ಕರೆಸಿಕೊಂಡು ಚರಿತ್ರೆ, ವಿಜ್ಞಾನ, ಕಾನೂನು ಪುಸ್ತಕಗಳನ್ನು ಸ್ಪ್ಯಾನಿಷ್ ಭಾಷೆಯಲ್ಲಿ ಬರೆಸಿದ. 14ನೆಯ ಶತಮಾನದಲ್ಲಿ ಕಲ್ಪನಾ ಕಥೆಗಳು ಗದ್ಯರೂಪದಲ್ಲಿ ಬಂದುವು. 15ನೆಯ ಶತಮಾನ ಕವಿತೆ, ಕಥೆಗಳು, ನಾಟಕಗಳ ಕಾಲ. ಈ ಶತಮಾನವನ್ನು ನಾಟಕದ ಸುವರ್ಣಯುಗ ಎನ್ನುತ್ತಾರೆ. ಅದಕ್ಕಿಂತ ಹಿಂದೆಯೇ ನಾಟಕಗಳು ರಚಿತವಾಗಿದ್ದುವಾದರೂ ಅವುಗಳಲ್ಲಿ ಒಂದೂ ಪೂರ್ಣವಾಗಿ ದೊರೆತಿಲ್ಲ. ಸ್ಪ್ಯಾನಿಷ್ ನಾಟಕದ ಪಿತಾಮಹ ಯೂ ಆನ್ ಡೆಲ್ ಎನ್ಸಿನ. ಈತ ಕವಿ ಹಾಗೂ ಸಂಗೀತ ರಚನಕಾರ. ಭಾವಗೀತೆಗಳು, ಕವಿತೆಗಳು, ಸುನೀತಗಳು 16ನೆಯ ಶತಮಾನದಲ್ಲಿ ಬಂದುವು. ಅನೇಕ ಬಗೆಯ ಕಾದಂಬರಿಗಳೂ ಹೊರಬಂದುವು. ಜೀವನ ಮತ್ತು ಮನುಷ್ಯನ ಸ್ವಭಾವದ ವಿಮರ್ಶೆಯನ್ನೊಳಗೊಂಡ 'ದಾನ್ ಕ್ವಿಹೋತ್' ಕಾದಂಬರಿಯನ್ನು ಸರ್ವಾಂಟಿಸ್ (1547–1616) ಬರೆದ. ಅದು ಜಗತ್ಪ್ರಸಿದ್ಧಿ ಪಡೆಯಿತು. ಸರ್ವಾಂಟಿಸ್ ಸಣ್ಣ ಕಥೆಗಳು, ನಾಟಕಗಳನ್ನೂ ಬರೆದಿದ್ದಾನೆ.

18–19ನೆಯ ಶತಮಾನಗಳಲ್ಲಿ ರೊಮ್ಯಾಂಟಿಕ್ ಚಳುವಳಿ ಆರಂಭವಾಯಿತು. ಡ್ಯೂಕ್ ಆಫ್ ರಿವಾ (1791–1865) ಈ ಪ್ರಕಾರದ ಪ್ರಥಮ ಲೇಖಕ. ಪ್ರಾಂತೀಯ ನಡವಳಿಕೆಗಳು, ಪದ್ಧತಿಗಳ ಅಧ್ಯಯನವನ್ನು ಕುರಿತು ಗದ್ಯದಲ್ಲಿ ಬರೆಯುವ ನೂತನ ಶೈಲಿಯೊಂದು ರೂಪುಗೊಂಡಿತು. ಈ ಶೈಲಿಯ ಅನಂತರ ವಾಸ್ತವವಾದ ಬಂತು. ನಿಸರ್ಗವಾದವೂ ತಲೆಎತ್ತಿತು. ಬೆನಿಟೊ ಪೆರೆಜ್ ಗಾಲ್ಡೋಸ್ (1843—1920) ಈ ಎರಡೂ ಪ್ರಕಾರಗಳನ್ನು ಸಮನ್ವಯಮಾಡಿ ಬರೆಯುತ್ತಿದ್ದ.

19ನೆಯ ಶತಮಾನದ ಕೊನೆಯಲ್ಲಿ ಸ್ಪೇನ್ ಮತ್ತು ಅಮೆರಿಕದವರಿಗೆ ನಡೆದ ಯುದ್ಧದಲ್ಲಿ ಸ್ಪೇನಿನವರಿಗೆ ಸೋಲಾಯಿತು. ಕೆಲವು ಲೇಖಕರು

ಸ್ಪೇನ್ ಮತ್ತು ಅದನ್ನಾವರಿಸಿದ ಸಮಸ್ಯೆಗಳ ಬಗೆಗೆ ಬರೆಯುತ್ತಿದ್ದಾರೆ. ಮಿಗ್ಯುಲ್ ಡಿ ಉನಾಮುನೊ (1864–1936) ಈ ಗುಂಪಿನ ದಾರ್ಶನಿಕ ಲೇಖಕ. ಕವಿ ಹ್ವಾನ್ ರಾಮನ್ ಹಿಮೆನೆತ್‌ಗೆ 1956ರಲ್ಲಿ ನೊಬೆಲ್ ಪ್ರಶಸ್ತಿ ದೊರೆಯಿತು.

1936ರಲ್ಲಿ ಸ್ಪೇನ್‌ನಲ್ಲಿ ನಡೆದ ಅಂತರ್ಯುದ್ಧ, ಕಲೆಯ ದೃಷ್ಟಿಯಿಂದಲೂ ಬಹಳ ವಿನಾಶಕಾರಿಯಾಗಿತ್ತು. ಹಲವಾರು ಲೇಖಕರು ಯುದ್ಧ ಮತ್ತು ಅದರ ಪರಿಣಾಮಗಳನ್ನು ತಮ್ಮ ಕೃತಿಗಳಿಗೆ ವಸ್ತುವಾಗಿ ಆಯ್ದುಕೊಂಡರು. ಕ್ಯಾಮಿಲೊ ಜೋಸ್ ಸೆಲಾ, ಕಾರ್ಮೆನ್ ಲೊಫೊರೆಟ್ ಈಗಿನ ಪ್ರಮುಖ ಲೇಖಕರು.

## ಸ್ವೇಚ್ಛಾಸಂಕೇತ ಕಲೆ

"ಚಲನೆ ಮತ್ತು ಬೆಳಕು ಒಂದು ಕಾಯದ ಘಟಕಾಂಶಗಳನ್ನು ಭಗ್ನಗೊಳಿಸುತ್ತದೆ."

ಇದು ಸ್ವೇಚ್ಛಾಸಂಕೇತವಾದಿಗಳ ಅಭಿಪ್ರಾಯ. ಇವರ ಭಾವನೆಯಂತೆ ಈ ಪ್ರಪಂಚದಲ್ಲಿ ಎಲ್ಲವೂ ಯಾವಾಗಲೂ ಚಲಿಸುತ್ತಿರುತ್ತದೆ. ಯಾವುದೂ ನಿಜವಾಗಿ ಸ್ತಬ್ಧವಾಗಿರುವುದೇ ಇಲ್ಲ. ತಮ್ಮ ಈ ನಿಲುವನ್ನು ಕಲಾಕೃತಿಗಳಲ್ಲಿ ನಿರೂಪಿಸಲು ಅವರು ಅನುಸರಿಸಿದ ವಿಧಾನ ವಿಚಿತ್ರವಾದದ್ದು. ಒಂದು ವಸ್ತುವಿನ ಚಲನೆಯ ವಿವಿಧ ಘಟ್ಟಗಳನ್ನು ಒಂದೇ ಚಿತ್ರದಲ್ಲಿ ತೋರಿಸುವ ಅವರ ರೀತಿ ಹೀಗೆ: ಚೆಂಡನ್ನು ಎಸೆಯುವ ಕೈಯನ್ನು ಚಿತ್ರಿಸಬೇಕಾಗಿದೆ ಅನ್ನಿ. ಸ್ವೇಚ್ಛಾಸಂಕೇತವಾದಿಗಳು ಒಂದು ಕೈಯನ್ನು ಆ ಭಂಗಿಯಲ್ಲಿ ತೋರಿಸುವುದರಿಂದ ತೃಪ್ತರಾಗುವುದಿಲ್ಲ. ಆ ಕ್ಷಣಿಕ ಭಂಗಿಯಲ್ಲೂ ಚಲನೆ ಇದ್ದೇ ಇದೆ ಎಂಬುದು ಅವರ ಅಭಿಪ್ರಾಯ. ಆದ್ದರಿಂದ, ಒಂದು ಕೈಯನ್ನು ಆ ಭಂಗಿಯಲ್ಲಿ ಚಿತ್ರಿಸಿ, ಅದರ ಮುಂದೆ ಅದೇ ಚಿತ್ರವನ್ನು ಒಂದಾದ ಮೇಲೊಂದರಂತೆ ಹಲವಾರು ಬಾರಿ ಚಿತ್ರಿಸುತ್ತಾರೆ. ಹಾಗೆಯೇ ಓಡುತ್ತಿರುವ ಕುದುರೆಯನ್ನು ಚಿತ್ರಿಸಬೇಕಾದರೆ ಕೇವಲ ನಾಲ್ಕು ಕಾಲುಗಳಲ್ಲ, ಆ ನಾಲ್ಕು ಕಾಲುಗಳ ಪಕ್ಕಪಕ್ಕದಲ್ಲಿ ನಾಲ್ಕಾರು ಸಲ ಅನೇಕ ಕಾಲುಗಳನ್ನು ಮತ್ತೆ ಮತ್ತೆ ಚಿತ್ರಿಸುತ್ತಾರೆ.

ಸ್ವೇಚ್ಛಾಸಂಕೇತ ಕಲೆ, ಬಹುಮಟ್ಟಿಗೆ ಘನಾಕೃತಿ ವಿಧಾನಕ್ಕೆ ಋಣಿಯಾಗಿದೆ. ಆದರೆ ಘನಾಕೃತಿ ಕಲೆಯಲ್ಲಿ ಕಲಾವಿದ ವಸ್ತುಗಳನ್ನೂ ಮಾನವಾಕೃತಿಗಳನ್ನೂ ಅವುಗಳ ವಿವಿಧ ಮುಖಗಳನ್ನೂ ವಿಶ್ಲೇಷಿಸುವುದಕ್ಕೋಸ್ಕರ ಅವನ್ನು ಬೇರೆ ಬೇರೆಯಾಗಿ ತೋರಿಸಿದರೆ, ಸ್ವೇಚ್ಛಾಸಂಕೇತ ಕಲೆಯಲ್ಲಿ ಸಾರ್ವತ್ರಿಕ ಚಲನೆಯ ಅಂತರ್ಗತ ಶಕ್ತಿಯ ಅಭಿವ್ಯಕ್ತಿಗೋಸ್ಕರ ಈ ರೀತಿಯನ್ನು ಅನುಸರಿಸುತ್ತಾರೆ. ಎಲ್ಲ ವಸ್ತುಗಳೂ ನಿರಂತರ ಚಲನೆಯ ಸ್ಥಿತಿಯಲ್ಲಿರುವುದರಿಂದ ಅವುಗಳ ರೂಪ, ಆಕಾರಗಳಲ್ಲಿ ಬದಲಾವಣೆ ಆಗುತ್ತಲೇ ಇರುತ್ತದೆ ; ಆದ್ದರಿಂದ ಯಾವುದೇ ಆಕಾರಕ್ಕೆ ಒಂದು ಅಂತಿಮ ನೆಲೆ ಅಥವಾ ನಿಶ್ಚಿತ ರೂಪ ಇರುವುದಿಲ್ಲ.

ವಸ್ತುಗಳು ಚಲಿಸುವುದಕ್ಕೆ ಇರುವ ಹರವನ್ನು ಬಿಟ್ಟರೆ, ಹರವು ಎಂಬುದಕ್ಕೆ ಬೇರೆ ವಿಧದ ಅಸ್ತಿತ್ವವೇ ಇಲ್ಲ ಎಂಬುದು ಈ ಪಂಥದ ವಾದ.

ಚಿತ್ರಣದ ಆಕೃತಿಯನ್ನು ಈ ಪಂಥದ ಚಿತ್ರಕಾರರು ತಮ್ಮ ಭಾವನೆಗೆ ಅರಿವಾದಂತೆ ನಿರೂಪಿಸಿದರು; ಇಲ್ಲವೆ ವಸ್ತುವಿನ ಚಲನೆಗೆ ಅನುಗುಣವಾಗಿ, ಅದರ ಚಲನೆಯ ದೆಸೆಯಿಂದ ಉಂಟಾದ ಶಕ್ತಿ ರೇಖೆಗಳನ್ನು ಚಿತ್ರಿಸಿದರು. ಸ್ವೇಚ್ಛಾಸಂಕೇತ ಕಲಾವಿಧಾನದಲ್ಲಿ, ಕೃತಿಯನ್ನು ನೋಡುವಾಗ ಪ್ರೇಕ್ಷಕನಿಗೆ ತಾನು ಚಿತ್ರದ ಮಧ್ಯದಲ್ಲಿದ್ದೇನೆ ಎಂದು ತೋರಬಹುದು : ಒಂದು ವಸ್ತು ಅಥವಾ ಸನ್ನಿವೇಶ ಕಲಾವಿದನ [illegible] 'ಸ್ವೇಚ್ಛಾಸಂಕೇತ' [illegible] ಶತಮಾನದ ಮೊದಲನೆಯ ದಶಕದಲ್ಲಿ. ಸಮಕಾಲೀನ [illegible] ಸುವುದು, ಇಟಲಿಯನ್ನು ಬಲಿಷ್ಠ ರಾಷ್ಟ್ರವಾಗಿ ನಿರ್ಮಿಸಲು ಅಡ್ಡಿಯಾಗಿರುವ ಹಳೆಯ ಭಾವನೆ ವ್ಯವಸ್ಥೆಗಳೆಲ್ಲವನ್ನೂ ಕಟುವಾಗಿ ವಿರೋಧಿಸುವುದು ಇದರ ಧ್ಯೇಯವಾಗಿತ್ತು.

ಇಟಲಿಯ ಸಾಹಿತಿ ಮಾರಿನೆಟಿ 1909ರಲ್ಲಿ ಒಂದು ಘೋಷಣೆಯನ್ನು ಪ್ರಕಟಿಸಿದ. ಅದರಲ್ಲಿ ಯುದ್ಧ, ಶಕ್ತಿಪ್ರಯೋಗ, ಉತ್ಕಟ ದೇಶಾಭಿಮಾನ ಇವುಗಳ ಬಗೆಗೆ ತನ್ನ ಅಪಾರ ಮೆಚ್ಚುಗೆಯನ್ನು ತೋರಿದ. ಅದೇ ರೀತಿ ಹಿಂದಿನ ವಿಚಾರ, ಸಾಧನೆಗಳಿಗೆ ಗೌರವ ತೋರುವ, ಅವನ್ನು ರಕ್ಷಿಸುವ ವ್ಯವಸ್ಥೆಗಳಾದ ಗ್ರಂಥ ಭಂಡಾರ, ಪ್ರಾಚೀನ ವಸ್ತುಸಂಗ್ರಹಾಲಯ, ಅಕಾಡೆಮಿಗಳನ್ನು ಕಟುವಾಗಿ ಖಂಡಿಸಿದ. ಪೌರುಷಯುಕ್ತವಾದವನ್ನು ಮೆಚ್ಚಬೇಕೆಂದೂ ನೈತಿಕತೆ, ಉದಾರತೆ ಮುಂತಾದುವು ಹೆಣ್ಣಿಗತನದ ಲಕ್ಷಣಗಳೆಂದೂ ಸಾರಿದ. ವೇಗದಲ್ಲಿ ಸೌಂದರ್ಯವಿದೆ ಎಂದು ಪ್ರತಿಪಾದಿಸಿದ. ಓಡುವ ಕಾರಿನಂಥ ವಸ್ತು ಅವನಿಗೆ ಅತ್ಯಂತ ಸೊಗಸಾಗಿ ಕಂಡಿತು.

ಕವಿ ಮಾರಿನೆಟಿಯ ಈ ವಿಚಾರಗಳು ಕಲೆ ಹಾಗೂ ಸಂಗೀತ ರಂಗಗಳಿಗೆ ಹರಡಿದುವು. 20ನೆಯ ಶತಮಾನದ ಯಾಂತ್ರಿಕ ಬಲದ ಬಗೆಗೆ ಆಸಕ್ತಿ ಹೆಚ್ಚಿತು. ಮಾರಿನೆಟಿ 1911ರಲ್ಲಿ ಇಟಲಿಯ ಐದು ಮಂದಿ ಕಲಾವಿದರ ಚಿತ್ರಪ್ರದರ್ಶನವನ್ನು ಪ್ಯಾರಿಸಿನಲ್ಲಿ ಏರ್ಪಡಿಸಿದ. ಇದರಲ್ಲಿ ಭಾಗವಹಿಸಿದ ಬೊಚ್ಚಿಯೋನಿ (1882–1916) ಯನ್ನು ಸ್ವೇಚ್ಛಾಸಂಕೇತ ಕಲೆಯ ಉತ್ತಮ ಕಲಾವಿದ ಎನ್ನಬಹುದು. ಅವನ ವರ್ಣ ಚಿತ್ರಗಳು ಹಾಗೂ ಶಿಲ್ಪಗಳು ಅವನ ಕಾಲದ ನಾಗರಿಕತೆಯ ವೈವಿಧ್ಯವನ್ನೂ ಅದರ ಭರವಸೆ ಸಾಧನೆಗಳನ್ನೂ ಪ್ರತಿಬಿಂಬಿಸುತ್ತವೆ. ಬೊಚ್ಚಿಯೋನಿ ಚಿತ್ರಕಾರನಾಗಿದ್ದಂತೆ ಶಿಲ್ಪಿಯೂ ಆಗಿದ್ದ. ಅವನು ಸ್ವೇಚ್ಛಾಸಂಕೇತ ಕಲಾ ಶೈಲಿಯನ್ನನುಸರಿಸಿ ಶಿಲ್ಪಗಳನ್ನೂ ರಚಿಸಿದ. ಆತ 1916ರಲ್ಲಿ ಮೃತನಾದ ಮೇಲೆ ಸ್ವೇಚ್ಛಾಸಂಕೇತ ಕಲಾಸಂಪ್ರದಾಯ ಹಿಂದಕ್ಕೆ ಬಿದ್ದಿತು. ಮೊದಲನೆಯ ಮಹಾಯುದ್ಧದ ಅನಂತರ ಈ ಶೈಲಿ ತನ್ನ ಸತ್ವವನ್ನು ಕಳೆದುಕೊಂಡಿತು. ಸಮರ ನೀತಿಯನ್ನು ಪ್ರತಿಪಾದಿಸುವ ಈ ವರ್ಗದ ಕಲಾಕೃತಿಗಳು, ಪ್ರದರ್ಶಿತವಾದೆಡೆಗಳಲ್ಲೆಲ್ಲ ತೀವ್ರ ವಾದ ವಿವಾದಕ್ಕೆ ಎಡೆಗೊಟ್ಟುವು. ಆದರೂ ಫ್ರೆಂಚ್ ಘನಾಕೃತಿ ಕಲಾವಿದರು ರಷ್ಯ, ಬ್ರಿಟನ್, ಜರ್ಮನಿಗಳ ಕೆಲ ಕಲಾವಿದರು ಈ ಶೈಲಿಯಿಂದ ಪ್ರಭಾವಿತರಾದರು. 1930ರ ದಶಕದಲ್ಲಿ ಕೂಡ ಸ್ವೇಚ್ಛಾಸಂಕೇತವಾದಿಗಳ ಪರಂಪರೆ ಇದ್ದಿತಾದರೂ ಮುಂದೆ ಅದು ಅಷ್ಟೇನೂ ಪ್ರಭಾವಶಾಲಿಯಾಗಲಿಲ್ಲ.

## ಸೋವಿಯೆತ್ ಸಾಹಿತ್ಯ

1917 ಅಕ್ಟೋಬರ್ ಕ್ರಾಂತಿಯ ಫಲವಾಗಿ ರಷ್ಯದಲ್ಲಿ ಕಾರ್ಮಿಕರ ಮತ್ತು ರೈತರ ಸರಕಾರ ಸ್ಥಾಪಿತವಾಯಿತು. ದುಡಿಯುವ ಜನತೆಯ ಕೈಗೆ ಅಧಿಕಾರ ಬಂದಿತು. ಯು ಎಸ್ ಎಸ್ ಆರ್ –ಸೋವಿಯೆತ್ ಸಮಾಜವಾದೀ ಗಣರಾಜ್ಯಗಳ ಒಕ್ಕೂಟ–ಸ್ಥಾಪಿತವಾಯಿತು. ಏಷ್ಯ ಮತ್ತು ಯೂರೋಪು ಖಂಡಗಳೆರಡರಲ್ಲೂ ಹರಡಿರುವ ಸೋವಿಯೆತ್ ಒಕ್ಕೂಟ ಪ್ರಪಂಚದ ಒಟ್ಟು ಭೂಭಾಗದ ಆರರಲ್ಲೊಂದು ಪಾಲಿನಷ್ಟು ವಿಸ್ತಾರವಾಗಿದೆ.

ಸೋವಿಯೆತ್ ಒಕ್ಕೂಟ ರಚನೆಯಾದ ಬಳಿಕ ರಷ್ಯದಲ್ಲಿ ಬೆಳೆದ ಸಾಹಿತ್ಯವನ್ನು ಸೋವಿಯೆತ್ ಸಾಹಿತ್ಯ ಎಂದು ಗುರುತಿಸುತ್ತಾರೆ.



ಸೋಲ್‌ಜೆನಿಟ್ಸಿನ್



ಯೆವ್ತು ಶೆಂಕೋ

ರಷ್ಯದಲ್ಲಿ 1917ರ ರಾಜಕೀಯ ಕ್ರಾಂತಿಯಾದ ಬಳಿಕ ಆ ರಾಷ್ಟ್ರದ ಸಾಹಿತ್ಯ ಮತ್ತು ಕಲೆಗಳ ಮೇಲೂ ಪರಿಣಾಮ ಬೀರಿತು. ಹಿಂದಿನ ನಿಯಮಗಳನ್ನು ಕಿತ್ತೊಗೆದು, ತಮ್ಮ ಭಾವನಿರೂಪಣೆಯಲ್ಲಿ ಸ್ವೇಚ್ಛಾ ಸಂಕೇತಗಳನ್ನು ಉಪಯೋಗಿಸುವ ಸಂಪ್ರದಾಯವನ್ನು ಮುಂದುವರಿಸಿದರು. ಸ್ವೇಚ್ಛಾಸಂಕೇತ ಕಲಾಸಂಪ್ರದಾಯಕ್ಕೆ ಬುನಾದಿಹಾಕಿದವನು ವಿಕ್ಟರ್ ಖಿಲಬ್ನಿಕೋವ್. ಈತ 1910ರಲ್ಲಿ ಭವಿಷ್ಯವಾದಿ ಪಂಥವನ್ನು ಆರಂಭಿಸಿದ್ದ. ಮುಂದೆ ಸೋವಿಯೆತ್ ರಷ್ಯದ ಮಹಾಕವಿಯಾಗಿ ಮಾನ್ಯನಾದ. ಮಯಾಕೊವ್‌ಸ್ಕಿ ಕೂಡ ಈ ಸಂಸ್ಥೆಯ ಸದಸ್ಯನಾಗಿದ್ದ. ಈತನಲ್ಲದೆ ಇನ್ನಿಬ್ಬರು ಪ್ರತಿಭಾನ್ವಿತ ಕವಿಗಳು ಈ ಕಾಲದಲ್ಲಿ ಬೆಳಕಿಗೆ ಬಂದರು. ಇವರಲ್ಲೊಬ್ಬ, ಸರ್ಜೈ ಎಸ್‌ನಿಸ್ ಇನ್ನೊಬ್ಬ, ಬೋರಿಸ್ ಪಾಸ್ಟರ್‌ನಾಕ್.

ಸೋವಿಯೆತ್ ಸಮಾಜದಲ್ಲಿ ಲೇಖಕರು ವಹಿಸಬೇಕಾದ ನಿಲುವು ಯಾವುದು? ಅವರು ವಹಿಸಬೇಕಾದದ್ದು ಯಾವ ಪಕ್ಷವನ್ನು? ಎಂಬ ಪ್ರಶ್ನೆಗಳನ್ನು ಚರ್ಚಿಸಿ ರಷ್ಯದ ಖ್ಯಾತ ಕ್ರಾಂತಿಕಾರಿ ಸಾಹಿತಿ ಮ್ಯಾಕ್ಸಿಂ ಗಾರ್ಕಿ ಲೇಖನಗಳನ್ನು ಬರೆದ. "ಸಾಹಿತ್ಯ ವಾಸ್ತವವಾದಿಯಾಗಬೇಕು; ಆದರೆ ಅದು ಸಮಾಜವಾದೀ ವಾಸ್ತವವಾದವಾಗಿರಬೇಕು"–ಎಂದು ಮ್ಯಾಕ್ಸಿಂಗಾರ್ಕಿ ಸಾಹಿತ್ಯ ಸಿದ್ಧಾಂತಗಳನ್ನು ರೂಪಿಸಿದ. ಇದರಿಂದ ಪ್ರಭಾವಿತರಾದ ನೂರಾರು ರಷ್ಯನ್ ಲೇಖಕರು ಸೋವಿಯೆತ್ ಸಮಾಜದ 'ನವಮಾನವ'ನು ನಾಯಕನಾಗಿರುವ, ಸಾಹಿತ್ಯ ಕೃತಿಗಳನ್ನು ರಚಿಸಿದರು. ಈ ಎಲ್ಲ ಸಾಹಿತ್ಯ 'ಸೋವಿಯೆತ್ ಸಾಹಿತ್ಯ' ಎಂದು ಹೆಸರು ಪಡೆಯಿತು.

ಮಯಾಕೊವ್‌ಸ್ಕಿಯ ಕವಿತೆಗಳೂ ನಾಟಕಗಳೂ ಪ್ರಸಿದ್ಧವಾಗಿವೆ. ಮಕ್ಕಳಿಗಾಗಿ ವರ್ಣಚಿತ್ರಗಳನ್ನೂ ವ್ಯಂಗ್ಯಚಿತ್ರಗಳನ್ನೂ ಬೋಧಪ್ರದ ಪುಸ್ತಕಗಳನ್ನೂ ಆತ ಬರೆದ.

ರಷ್ಯದ ಕ್ರಾಂತಿಯ ಬಳಿಕ ಅಂತರ್ಯುದ್ಧದಿಂದಾಗಿ ಜನಜೀವನದಲ್ಲಿ ಅಲ್ಲೋಲಕಲ್ಲೋಲ ಉಂಟಾಯಿತು. ಆ ದಾರುಣ ಪರಿಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ಪರಿಣಾಮಕಾರಿಯಾದ ಶೈಲಿಯಲ್ಲಿ ಚಿತ್ರಿಸಿದವರಲ್ಲಿ ಬೋರಿಸ್ ಪಾಸ್ಟರ್‌ನಾಕ್, ಮಿಖೇಯಲ್ ಷೊಲೊಖೋವ್, ಅಲೆಕ್ಸಿ ಟಾಲ್‌ಸ್ಟಾಯ್ ಗಣನೀಯರಾದವರು.

ರಷ್ಯದಲ್ಲಿ ಪಂಚವಾರ್ಷಿಕ ಯೋಜನೆಗಳು ಪ್ರಾರಂಭವಾದಾಗ ಎಲ್ಲ ಕಲೆಗಳನ್ನೂ ಈ ಯೋಜನೆಗಳ ಪ್ರಚಾರಕ್ಕಾಗಿ ಉಪಯೋಗಿಸಬೇಕೆಂದು ಕಮ್ಯೂನಿಸ್ಟ್ ಪಕ್ಷ ನಿರ್ಧರಿಸಿತು. ಸ್ವಲ್ಪ ಕಾಲಾನಂತರ, ಈ ಪ್ರಯತ್ನವನ್ನು ಬಲಪಡಿಸುವ ಉದ್ದೇಶದಿಂದ 'ಸೋವಿಯೆತ್ ಒಕ್ಕೂಟದ ಬರೆಹಗಾರರ ಸಂಘ' ಸ್ಥಾಪಿತವಾಯಿತು. ದುಡಿಮೆಗಾರರ ಸಮಸ್ಯೆಗಳು, ಔದ್ಯೋಗೀಕರಣ, ಬದಲಾಗುತ್ತಿರುವ ಸಮಾಜ ಇಂಥ ವಿಚಾರಗಳು ಸಾಹಿತ್ಯ ಕೃತಿಗಳ ಮುಖ್ಯ ವಸ್ತುಗಳಾದುವು. ಈ ಅವಧಿಯಲ್ಲಿ ಮಿಖೇಯಲ್ ಷೊಲೊಖೋವ್ ರಚಿಸಿದ 'ಡಾನ್ ನದಿ ಶಾಂತವಾಗಿ ಹರಿಯುತ್ತದೆ' ಮತ್ತು 'ನವಭೂಮಿ' ಕಾದಂಬರಿಗಳು ಗಮನಾರ್ಹವಾದುವು.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಸೋವಿಯೆತ್ ಲೇಖಕರ ಸೃಜನಾತ್ಮಕ ಪ್ರತಿಭೆಗೆ ಅವಕಾಶ ದೊರಕಿತು. ಯುದ್ಧದಿಂದ ಮಾನವ ಜೀವನದ ಮೇಲಾಗುವ ಅನಾಹುತಗಳು, ದಾರುಣ ದುಷ್ಪರಿಣಾಮಗಳನ್ನು ಕುರಿತು ಕಾದಂಬರಿಗಳು ರಚಿತವಾದುವು. ಬೋರಿಸ್ ಗೋರ್‌ಬಟೋವನ 'ಸ್ಟಾಲಿನ್‌ಗ್ರಾಡ್ ಮುತ್ತಿಗೆ' ಕಾನ್‌ಸ್ಟಾಂಟಿನ್ ಸಿಮನೋವ'ನ 'ಹಗಲು ಮತ್ತು ರಾತ್ರಿಗಳು' ಅವುಗಳಲ್ಲಿ ಪ್ರಧಾನವಾದುವು. ಯುದ್ಧದ ಘಟನೆಗಳಿಗೆ ಸಂಬಂಧಿಸಿದ ಸಣ್ಣ ಕಥೆಗಳೂ ವ್ಯಕ್ತಿಚಿತ್ರಗಳೂ ಈ ಅವಧಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕಟವಾದುವು. ಸಿಮನೋವ್ ಬರೆದ 'ರಷ್ಯನರು' ಈ ಕಾಲದ ಶ್ರೇಷ್ಠ ಪ್ರಾತಿನಿಧಿಕ ನಾಟಕ.

ಸ್ಟಾಲಿನನ ಮರಣಾನಂತರ ಸಾಹಿತ್ಯ ಚಟುವಟಿಕೆಗಳ ಮೇಲೆ ಸರಕಾರದ ನಿಯಂತ್ರಣದ ಬಿರುಸು ತಗ್ಗಿತು. ಸೋವಿಯೆತ್ ರಷ್ಯದ ಆಗುಹೋಗುಗಳನ್ನು ಕುರಿತು ಕೇವಲ ಹೊಗಳಿಕೆ ತುಂಬಿರುವ ಅತಿಭಾವುಕ ಬರೆವಣಿಗೆ ಈಗ ಕಡಮೆಯಾಗಿದೆ. ಪರಿಸ್ಥಿತಿಯ ವಿಮರ್ಶಾತ್ಮಕ ನಿರೂಪಣೆಗೆ ಆರಂಭವಾಗಿದೆ.

ಆದರೂ ಸಿದ್ಧಾಂತದ ಕಟ್ಟುನಿಟ್ಟುಗಳಿಗೆ ಸಂಬಂಧಿಸಿ ಭಿನ್ನಾಭಿಪ್ರಾಯಗಳು ಕಾಣಿಸಿಕೊಳ್ಳುತ್ತಲೇ ಇರುತ್ತವೆ. ಬೋರಿಸ್ ಪಾಸ್ಟರ್‌ನಾಕ್‌ಗೆ ನೊಬೆಲ್ ಸಾಹಿತ್ಯ ಬಹುಮಾನ ಬಂದಾಗ ಕಪಿ ವಾತಾವರಣ ಉಂಟಾಯಿತು. ಮುಂದೆ ಸೋಲ್‌ಜೆನಿಟ್ಸಿನ್‌ಗೆ ನೊಬೆಲ್ ಬಹುಮಾನ ಬಂದಾಗಲೂ ಹೀಗೆಯೇ ಆಯಿತು.

ಸೋವಿಯೆತ್ ರಷ್ಯದ ಆಧುನಿಕ ಯುವಕವಿ ಯೆವ್ಗೆನಿ ಯೆವ್ತುಶೆಂಕೋ. ಈತ ಅಂತರರಾಷ್ಟ್ರೀಯ ಖ್ಯಾತಿ ಪಡೆದಿದ್ದಾನೆ.

ಸೋವಿಯೆತ್ ಸಾಹಿತ್ಯದ ಶ್ರೇಷ್ಠ ಕೃತಿಗಳು ಜಗತ್ತಿನ ಅನೇಕ ಭಾಷೆಗಳಲ್ಲಿ ದೊರೆಯುತ್ತವೆ.

## ಸ್ತೋತ್ರ ಸಾಹಿತ್ಯ

ಎಲ್ಲ ಭಾಷೆಗಳ ಸಾಹಿತ್ಯಗಳಲ್ಲೂ ಸ್ತೋತ್ರಗಳಿಗೆ ಒಂದು ಮುಖ್ಯ ಸ್ಥಾನವಿದೆ. ಜನರ ಧರ್ಮಶ್ರದ್ಧೆಯನ್ನು ಬೆಳೆಸುವುದರಲ್ಲಿ, ಉಳಿಸುವುದರಲ್ಲಿ, ಇವು ಗಣನೀಯ ಪಾತ್ರವಹಿಸಿವೆ. ನಮಗಿಂತಲೂ ಹಿರಿದಾದ ಒಂದು ಶಕ್ತಿಯಿದೆ; ಅದರ ಕೃಪೆಯಿಂದ ನಮಗೆ ಒಳ್ಳೆಯದಾಗುತ್ತದೆ: ಅದನ್ನು ಒಲಿಸಿಕೊಳ್ಳುವುದು ನಮ್ಮ ಕರ್ತವ್ಯ–ಎಂಬ ಭಾವನೆಯೇ ಸ್ತೋತ್ರ ರಚನೆಗೆ ಮೂಲ ಪ್ರೇರಣೆ.

ಪ್ರಾರ್ಥನೆ ಮತ್ತು ಸ್ತೋತ್ರಗೀತೆಗಳ ರಚನೆ ಬಹು ಹಿಂದಿನಿಂದಲೂ ನಡೆದುಬಂದಿದೆ. ಆದಿವಾಸಿಗಳು ಪ್ರಕೃತಿಯ ಕೋಪ ತಾಪಗಳಿಂದ ರಕ್ಷಣೆ ಪಡೆಯಲು, ರೋಗರುಜಿನಗಳಿಂದ ಪಾರಾಗಲು, ಆಯಾ ಘಟನೆಗಳಿಗೆ ಕಾರಣವಿರಬಹುದೆಂದು ತಾವು ಊಹಿಸಿಕೊಂಡಿದ್ದ ಶಕ್ತಿಗಳಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಆ ಪ್ರಾರ್ಥನೆಗಳು ತೀರ ಸರಳವಾಗಿದ್ದುವು. ಭಯವೇ ಅವುಗಳ ಪ್ರಚೋದಕ ಶಕ್ತಿ.

ನಾಗರಿಕತೆ ವಿಕಾಸಹೊಂದುತ್ತ ಹೋದಂತೆ ಪ್ರಾರ್ಥನೆಯ ಸ್ವರೂಪ ಬದಲಾಗುತ್ತ ಬಂತು. ಮಾನವ ತನ್ನ ಇಷ್ಟಾರ್ಥಸಿದ್ಧಿಗಾಗಿ, ಐಹಿಕ ಸುಖಭೋಗಗಳ ತೃಪ್ತಿಗಾಗಿ ತನ್ನ ಇಷ್ಟದೈವವನ್ನು ಪ್ರಾರ್ಥಿಸುವ ಪದ್ಧತಿ ಬೆಳೆಯಿತು. ತಪ್ಪು ಒಪ್ಪಿಗೆ, ದೇವರಲ್ಲಿ ನಂಬಿಕೆ, ಶ್ರದ್ಧೆ, ಭಕ್ತಿ ಮುಂತಾದ ಅಂಶಗಳು ಪ್ರಾರ್ಥನೆಯಲ್ಲಿ ಸೇರಿಕೊಂಡುವು.

ಪ್ರಪಂಚದಲ್ಲಿ ಆಚರಣೆಯಲ್ಲಿರುವ ಒಂದೊಂದು ಧರ್ಮಕ್ಕೂ ವಿಶಿಷ್ಟವಾದ ಸ್ತೋತ್ರಗೀತೆಗಳಿವೆ. ಇವುಗಳಲ್ಲಿ ಆಯಾ ಧರ್ಮಗಳ ಮೂಲ ಭಾವನೆಗಳ ಪ್ರಭಾವವನ್ನು ಸ್ಪಷ್ಟವಾಗಿ ಕಾಣಬಹುದು.

ವೇದಗಳಲ್ಲಿ ಕಂಡುಬರುವ ಸ್ತೋತ್ರಗಳೇ ಸ್ತೋತ್ರ ಸಾಹಿತ್ಯದ ಅತ್ಯಂತ ಪ್ರಾಚೀನ ಕೃತಿಗಳು. ವೇದಕಾಲದ ಅನಂತರ ರಚಿತವಾದ ಪುರಾಣ, ಇತಿಹಾಸ, ಕಾವ್ಯಗಳಲ್ಲಿ ಕೂಡ ಸ್ತೋತ್ರಗಳಿವೆ. ಇವುಗಳ ಮೊತ್ತ ದೊಡ್ಡದು, ನಾನಾ ಸಂದರ್ಭಗಳಲ್ಲಿ ನಾನಾ ದೇವತೆಗಳನ್ನು ಕುರಿತದ್ದು. ಧಾರ್ಮಿಕ ಸಂಪ್ರದಾಯ ಪಂಥಗಳು ಬೆಳೆದಂತೆ ಸ್ತೋತ್ರ ಸಾಹಿತ್ಯವೂ ಬೆಳೆಯಿತು. ಸ್ತೋತ್ರಗಳು ಅವುಗಳನ್ನು ರಚಿಸಿದ ಪ್ರಖ್ಯಾತ ಭಕ್ತರ, ಜ್ಞಾನಿಗಳ, ಆಚಾರ್ಯರ, ಶ್ರದ್ಧೆ, ಭಕ್ತಿ, ಜ್ಞಾನ ಸಾಹಿತ್ಯಪ್ರಜ್ಞೆಗಳ ಪ್ರತೀಕವಾಗಿವೆ. ದೈನಂದಿನ ಪ್ರಾರ್ಥನೆಯ ವೇಳೆಯಲ್ಲಿ ಜಪಧ್ಯಾನ ಮಾಡುವ ಮೊದಲು ಸ್ತೋತ್ರ ಪಠನ ಮಾಡುವ ಪದ್ಧತಿ ಹಿಂದೂಗಳಲ್ಲಿದೆ. ಸ್ತೋತ್ರ ಸಾಹಿತ್ಯದಲ್ಲಿ ಶಿವ, ವಿಷ್ಣು, ಶಕ್ತಿಗೂ ವಿವಿಧ ದೇವದೇವಿಯರಿಗೂ ಸಂಬಂಧಿಸಿದುವು ವೇದಾಂತ ವಿಚಾರಗಳ ಸ್ತೋತ್ರಗಳು. ತಾನು ಮಾಡಿದ ಪಾಪದ ಹೊರೆಯನ್ನು ನೀಗಬೇಕೆಂದು ದೇವರಲ್ಲಿ ಆರ್ತ ಭಾವದಿಂದ ಬೇಡಿಕೊಳ್ಳುವ ಅಪರಾಧ ಕ್ಷಮಾಪಣೆ ಸ್ತೋತ್ರಗಳಿವೆ. ಭಗವಂತನ ದರ್ಶನಕ್ಕಾಗಿ ಹಂಬಲ, ಕಾತರ, ವಿರಹವ್ಯಥೆಗಳನ್ನು ಹೊರಸೂಸುವ ಸ್ತೋತ್ರಗಳೂ ಇವೆ.

ಸ್ತೋತ್ರಗಳನ್ನು ಪಂಚಕ, ಅಷ್ಟಕ, ದಶಕ, ಪಂಚಾಶಿಕ, ಶತಕ ಹೀಗೆ ಸಂಖ್ಯಾತ್ಮಕವಾಗಿ ನಿರ್ದೇಶಿಸುವುದೂ ಉಂಟು.

ಹಾಡುವುದಕ್ಕೆ ಅಥವಾ ಲಯಬದ್ಧವಾಗಿ ಓದುವುದಕ್ಕೆ ಅನುಕೂಲವಾದ ಬಂಧ ಸ್ತೋತ್ರ ಸಾಹಿತ್ಯದ ಒಂದು ಸಾಮಾನ್ಯ ಗುಣ. ಸರಳ ಛಂದೋರೂಪಗಳೂ ಸರಳವಾದ ಭಾಷೆಯೂ ಸ್ತೋತ್ರಗಳನ್ನು ನೆನಪಿನಲ್ಲಿಡಲು ತುಂಬ ಸಹಕಾರಿ. ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಚೈತನ್ಯಾದಿಗಳು, ವೈಷ್ಣವ ಆಳ್ವಾರರು ಹಾಗೂ ವಿವಿಧ ಪಂಥಗಳ ಗುರುಗಳು ಕವಿಗಳು ಭಕ್ತಿಭಾವಭರಿತ ಸ್ತೋತ್ರಗಳನ್ನು ರಚಿಸಿದ್ದಾರೆ. ನಮ್ಮ ಸಾಂಪ್ರದಾಯಿಕ ಸಂಗೀತ ಸಾಹಿತ್ಯ ಕೂಡ ಒಂದು ದೃಷ್ಟಿಯಿಂದ ಸ್ತೋತ್ರ ಸಾಹಿತ್ಯವೇ. ಶಂಕರಾಚಾರ್ಯರು ಮುಂತಾದವರ ಸ್ತೋತ್ರಗಳಲ್ಲಿ ಭಕ್ತಿ ಭಾವದೊಡನೆ ಸೌಂದರ್ಯವೂ ಕೂಡಿಬಂದಿದೆ. ನಾದಮಾಧುರ್ಯ, ಉಕ್ತಿಸೌಂದರ್ಯ, ಸ್ತೋತ್ರ ಸಾಹಿತ್ಯದ ವಿಶಿಷ್ಟ ಲಕ್ಷಣಗಳು.

ಬೈಬಲ್ಲಿನಲ್ಲಿರುವ ಸ್ತೋತ್ರಗೀತ ಪ್ರಕಾರ ಕ್ರೈಸ್ತಮತದಲ್ಲಿ ಮುಖ್ಯ ಸ್ಥಾನ ಪಡೆದಿದೆ. ಚರ್ಚುಗಳಲ್ಲಿ ಆರಾಧನೆಗಾಗಿ ಸೇರಿದ ಜನರು ಈ ಸ್ತೋತ್ರಗಳನ್ನು ಸಾಮೂಹಿಕವಾಗಿ ಹಾಡುತ್ತಾರೆ. ಇದು ಆರಾಧನೆಯ ಒಂದು ಮುಖ್ಯಾಂಗ. ಮೂಲದಲ್ಲಿ ಅವು ಹೀಬ್ರೂ ಸಂಗೀತದ ಧಾಟಿಯಲ್ಲಿದ್ದುವು. ಅನಂತರ ಗ್ರೀಕ್ ಮತ್ತು ಲ್ಯಾಟಿನ್ ಸಂಗೀತದ ಧಾಟಿ ವಿನ್ಯಾಸದಲ್ಲಿ ಹಾಡಲಾಗುತ್ತಿತ್ತು. ಚರ್ಚಿನ ಧಾರ್ಮಿಕ ವಿಧಿಗಳಲ್ಲಿ ಪ್ರಧಾನ ಪಾತ್ರ ವಹಿಸತೊಡಗಿದ ಬೈಬಲ್ಲಿನ ಸ್ತೋತ್ರಗೀತೆಗಳಿಗೆ ಮಿಲಾನಿನ ಬಿಷಪ್ ಸೈಂಟ್ ಆಂಬ್ರೋಸ್ ಎಂಬುವನು ನಿರ್ದಿಷ್ಟ ಛಂದೋರೂಪಗಳನ್ನು ಅಳವಡಿಸಿದ. ಯೂರೋಪಿನಲ್ಲಿ ಮತ ಸುಧಾರಣೆಯ ಕಾಲದಲ್ಲಿ ಅನೇಕ ಸ್ತೋತ್ರ ಗೀತೆಗಳು ರಚಿತವಾದುವು. ಮಾರ್ಟಿನ್ ಲೂಥರ್ ಅನೇಕ ಸ್ತೋತ್ರಗೀತೆಗಳ ಸಂಕಲನವನ್ನು ಸಿದ್ಧಗೊಳಿಸಿದ. ಜನಸಾಮಾನ್ಯರಲ್ಲಿ ಹೆಚ್ಚಿನವರು ಅದನ್ನು ಓದಿ ಬಾಯಿಪಾಠ ಮಾಡಿಕೊಳ್ಳುತ್ತಿದ್ದರು.

## ಸೌಂದರ್ಯ ಮೀಮಾಂಸೆ

ಸೌಂದರ್ಯ ಮೀಮಾಂಸೆ ಎಂದರೆ ಸೌಂದರ್ಯವನ್ನು ಕುರಿತು ಪರೀಕ್ಷೆ, ವಿವೇಚನೆ ಎಂದರ್ಥ. ಸೌಂದರ್ಯವೆಂದರೇನು ? ಸೌಂದರ್ಯಕ್ಕೂ ಕಲೆಗೂ ಇರುವ ಸಂಬಂಧವೇನು ? ಜೀವನದಲ್ಲಿ ಸೌಂದರ್ಯದ ಸ್ಥಾನವೇನು? ಮುಂತಾದ ಅಂಶಗಳನ್ನು ಕುರಿತು ವಿವೇಚನೆ ನಡೆಸುವುದೇ ಸೌಂದರ್ಯ ಮೀಮಾಂಸೆ. ಇದರ ಅಧ್ಯಯನ, ಕಲೆಯ ಸೊಬಗನ್ನು ಅರಿಯಲು, ಅರ್ಥಮಾಡಿಕೊಳ್ಳಲು ನೆರವಾಗುತ್ತದೆ. ಬೇರೆ ಬೇರೆ ಕಾಲ, ದೇಶಗಳಲ್ಲಿ ಸೌಂದರ್ಯ ಮೀಮಾಂಸೆಯನ್ನು ಕುರಿತು ಗ್ರಂಥಗಳು ಬರೆಯಲ್ಪಟ್ಟಿವೆ.

ಸೌಂದರ್ಯಕ್ಕೂ ಕಲೆಗೂ ನಿಕಟ ಸಂಬಂಧವಿದೆ. ವ್ಯಕ್ತಿಯ ಭಾವನೆಗಳ ಅಭಿವ್ಯಕ್ತಿ – ಕಲೆ. ಕಲೆ ಪ್ರಕೃತಿಯನ್ನು ಅನುಕರಿಸಲು ಅದರ ಉದಾತ್ತತೆಯನ್ನು ಎತ್ತಿತೋರಿಸಲು ಅಥವಾ ಅದನ್ನು ವಿವರಿಸಲು ಪ್ರಯತ್ನಿಸುತ್ತದೆ. ಪ್ರಕೃತಿಯನ್ನು ಒಂದು ಮನೋಧರ್ಮದಲ್ಲಿ ಕಂಡಾಗ ಅಥವಾ ಅದರ ಸೌಂದರ್ಯವನ್ನು ಗ್ರಹಿಸಿದಾಗ ಕಲಾವಿದ ತನ್ನ ಭಾವನೆಗಳನ್ನು ತನ್ನ ಕಲಾಕೃತಿಯ ಮೂಲಕ ಅಭಿವ್ಯಕ್ತಿಗೊಳಿಸಲು ಪ್ರಯತ್ನಿಸುತ್ತಾನೆ.

ಕಲೆ ಒಂದು ಸಾರ್ವತ್ರಿಕ ಭಾಷೆ; ಒಂದು ಸಂಪರ್ಕ ಸಾಧನ. ಇದನ್ನು ಎಲ್ಲರೂ ಅರ್ಥಮಾಡಿಕೊಂಡು ತಮ್ಮ ಜೀವನವನ್ನು ರೂಪಿಸಿಕೊಳ್ಳಬೇಕು. ಹೀಗೆ ಸಾಮಾಜಿಕ ಸುಧಾರಣೆಗಾಗಿಯೂ ಕಲೆ ಶ್ರಮಿಸಬೇಕು—ಇವೇ ಮೊದಲಾದ ಹಲವು ಅಭಿಪ್ರಾಯಗಳ ವಿವೇಚನೆಯೂ ಸೌಂದರ್ಯ ಮೀಮಾಂಸೆಯಲ್ಲಿ ಸೇರುತ್ತದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸೌಂದರ್ಯದ ಕಲ್ಪನೆ ಮೂಡಿದ್ದು ಪ್ರಾಚೀನ ಗ್ರೀಕ್ ಸಮಾಜದಲ್ಲಿ. ಪ್ಲೇಟೊ ಇದರ ಬಗೆಗೆ ಚಿಂತನೆ ನಡೆಸಿದ. ಕ್ರಮಬದ್ಧವಾದ ಅಂಗ ಸಾಮರಸ್ಯವುಳ್ಳ ವಸ್ತು ಸುಂದರವಾದದ್ದು ಎಂದು ನಿರೂಪಿಸಿ ಅರಿಸ್ಟಾಟಲ್, ಚೆಲುವಿಗೆ ಒಂದು ಪರಿಮಿತಿ ನಿರ್ಮಿಸಿದ. ಮನಸ್ಸನ್ನು ರಂಜಿಸಿ, ಸಂತೋಷಪಡಿಸಿ, ಮಾನವನಲ್ಲಿ ನೈತಿಕಭಾವ ಮೂಡಿಸಿ, ಅವನಲ್ಲಿ ಭಾವ ಸಂಸ್ಕಾರವನ್ನುಂಟುಮಾಡಿ, ಅವನನ್ನು ಉನ್ನತಸ್ಥಿತಿಗೆ ಏರಿಸುವುದೇ ಕಲೆ ಎಂದು ಅಭಿಪ್ರಾಯಪಟ್ಟ. ಅಲ್ಲಿಂದ ಮುಂದೆ ನವೋದಯದವರೆಗೆ ಪಾಶ್ಚಾತ್ಯ ಜಗತ್ತಿನಲ್ಲಿ ಸೌಂದರ್ಯ ಮೀಮಾಂಸೆಯ ಬೆಳವಣಿಗೆ ಕಂಡುಬರುವುದಿಲ್ಲ. 18ನೆಯ ಶತಮಾನದಲ್ಲಿ ಅಲೆಗ್ಸಾಂಡರ್ ಬಾಮ್ ಗಾರ್ಟೆನ್ ಎಂಬವನು ಸೌಂದರ್ಯ ಮೀಮಾಂಸೆಯ

[illegible] ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರಾದ ಕೆಂಟ್, ಹೆಗೆಲ್, ಶೋಪೆನ್‌ಹಾವರ್ ಮುಂತಾದವರು ಸೌಂದರ್ಯ ಮೀಮಾಂಸೆ ಬಗೆಗೆ ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ರಸ್ಕಿನ್, ಟಾಲ್‌ಸ್ಟಾಯ್, ಸಂತಾಯನ ಮುಂತಾದ ಬರಹಗಾರರೂ ಈ ವಿಷಯವಾಗಿ ತಮ್ಮ ಆಲೋಚನೆಗಳನ್ನು ಹರಿಯಿಸಿದ್ದಾರೆ.

ಸೌಂದರ್ಯಪ್ರಜ್ಞೆ, ವಸ್ತುನಿಷ್ಠವಾಗಿರಬಹುದು. ಅಥವಾ ವ್ಯಕ್ತಿನಿಷ್ಠವಾಗಿರಬಹುದು. ನಾವು ನೋಡಿದ ಒಂದು ವಸ್ತು ಅಥವಾ ಸನ್ನಿವೇಶ ಸುಂದರವಾಗಿರಬಹುದು. ಅದ್ದರಿಂದ ಅದು ನಮಗೆ ಸುಂದರವೆನಿಸ ಬಹುದು. ಇದು ವಸ್ತುನಿಷ್ಠ ಸೌಂದರ್ಯಪ್ರಜ್ಞೆ. ನಾವು ನೋಡಿದ ವಸ್ತು ಅಥವಾ ಸನ್ನಿವೇಶ ಸುಂದರವಾಗಿದೆ ಎಂದು ನಮ್ಮ ಮನಸ್ಸಿಗೆ ತೋರ ಬಹುದು. ನಮ್ಮಲ್ಲಿಯೇ ಸಹಜವಾಗಿರುವ ಕೋಪ, ತೃಪ್ತಿ, ಸಂತೋಷ ಗಳಂಥ ಭಾವನೆಯಂತೆ ಇದು ನಮ್ಮ ಅಂತರಂಗದಲ್ಲಿ ಮೂಡುತ್ತದೆ. ಆದರೆ ಅದು ಎಲ್ಲರಿಗೂ ಅಷ್ಟೇ ಸುಂದರವಾಗಿ ಕಾಣದೆ ಇರಬಹುದು. ಸೌಂದರ್ಯ ಇರುವುದು ವಸ್ತುವಿನಲ್ಲಲ್ಲ. ಅದನ್ನು ನೋಡುವ ಕಣ್ಣಿನಲ್ಲಿ ಎಂಬ ಹೇಳಿಕೆ ವ್ಯಕ್ತಿನಿಷ್ಠ ಸೌಂದರ್ಯ ಪ್ರಜ್ಞೆಯ ಸ್ವರೂಪವನ್ನು ಸೂಚಿಸುತ್ತದೆ. ವೈಯಕ್ತಿಕ ಸೌಂದರ್ಯ ಪ್ರಜ್ಞೆಯ ಆಧಾರದ ಮೇಲೆ ಚಿತ್ರ ಕಲೆಯಲ್ಲಿಯೂ ಇತರ ಕಲೆಗಳಲ್ಲಿಯೂ ನಾನಾ ಪಂಥಗಳು ಹುಟ್ಟಿಕೊಂಡಿವೆ. ಅವುಗಳನ್ನು ಕುರಿತ ತಾತ್ತ್ವಿಕ ವಿವೇಚನೆಗಳೂ ಹುಟ್ಟಿಕೊಂಡಿವೆ: ವಾಸ್ತವ ವಾದ, ಸಮಷ್ಟಿಪರಿಣಾಮವಾದ, ಅಭಿವ್ಯಕ್ತಿವಾದ ಹೀಗೆ.

ಯಾವುದು ಸುಂದರ ಎಂಬುದರ ಬಗೆಗೂ ಕಾಲಕಾಲಕ್ಕೆ ಬದಲಾವಣೆ ಗಳಾಗುತ್ತವೆ. ಇದು ನಾನಾ ಪ್ರಭಾವಗಳ ಪರಿಣಾಮ. ಆಯಾ ಅವಧಿ ಯಲ್ಲಿ ಸುಂದರವೆಂದು ಕಂಡುದು ಕಲೆಯ ನಾನಾ ಪ್ರಕಾರಗಳಾದ ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ ವಾಸ್ತುಶಿಲ್ಪಗಳಲ್ಲಿ ರೂಪುಗೊಳ್ಳುತ್ತದೆ.

ಸತ್ಯಂ, ಶಿವಂ, ಸುಂದರಂ—ಎಂಬ ಸೂತ್ರ ವಾಕ್ಯವಿದೆ. ಕಲೆ ಸತ್ಯ, ಒಳ್ಳೆಯದು ಹಾಗೂ ಸುಂದರ. ಕವಿಯಾಗಲೀ ಕಲಾವಿದನಾಗಲೀ ತಾನು ಕಂಡು ಅನುಭವಿಸಿದ ಸೌಂದರ್ಯವನ್ನೂ ಭಾವನೆಗಳನ್ನೂ ತನ್ನ ಮಾಧ್ಯಮದ ಮೂಲಕ ಅಭಿವ್ಯಕ್ತಿಗೊಳಿಸುತ್ತಾನೆ. ರಸಿಕರು ಅದರಿಂದ ಮನೋರಂಜನೆಯನ್ನೂ ಸ್ಫೂರ್ತಿಯನ್ನೂ ಆನಂದವನ್ನೂ ಪಡೆಯುತ್ತಾರೆ. ಯಾವುದೇ ವಿಚಾರವಾಗಿ ತಿಳಿವಳಿಕೆ ಪಡೆಯಬಯಸುವವನು ಅದರಲ್ಲಿನ ಸತ್ಯವನ್ನು ಹುಡುಕುತ್ತಾನೆ. ಹೀಗೆ ಕಲಾವಿದನಾಗಲೀ ಸಾಹಿತಿಯಾಗಲೀ ತಾನು ಕಂಡುಕೊಂಡ ಸತ್ಯವನ್ನು -ಸೌಂದರ್ಯವನ್ನು- ಮತ್ತೆ ಸೌಂದರ್ಯದ ರೂಪದಲ್ಲಿಯೇ ತಿಳಿಸುತ್ತಾನೆ. ಇದರಿಂದಲೇ ಲಲಿತಕಲೆಗಳಲ್ಲಿ– ಚಿತ್ರ, ಶಿಲ್ಪ, ಸಂಗೀತಗಳಲ್ಲಿ– ಕಂಡುಬರುವ ಸೌಂದರ್ಯಕ್ಕೆ ಮನಸ್ಸು ಮಾರುಹೋಗುತ್ತದೆ. ವೈಜ್ಞಾನಿಕ ವಿಧಾನ, ವಿಶ್ಲೇಷಣೆ ಇಲ್ಲಿ ಮುಖ್ಯವಲ್ಲ. ಹೃದ್ಯತೆ ಮುಖ್ಯ. ತನ್ನ ಹೃದಯಕ್ಕೆ ಮುಟ್ಟಿದ್ದನ್ನು ಇತರರಿಗೆ ತಿಳಿಸ ಹೊರಟಾಗ ಕವಿ ಅಥವಾ ಕಲಾವಿದನಿಗೆ ಸೃಜನಶೀಲತೆ ಇರಬೇಕು. ಕಲಾ ಸೃಷ್ಟಿಯಲ್ಲಿ ಒಂದು ವಸ್ತುವಿನ ಹೊರ ಚೆಲುವಷ್ಟೇ ಅಲ್ಲ, ಅದರ ಸೌಂದರ್ಯದ ಅಂತಸ್ಸತ್ವವೇನು ಎಂಬುದರ ನಿರೂಪಣೆಯೂ ಮುಖ್ಯ. ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ಭಗವಂತನ ಸಾನ್ನಿಧ್ಯವನ್ನು, ಭಗವಂತನ ಮಂಗಳ ರೂಪವನ್ನು ಗುರುತಿಸುವುದು ಭಾರತೀಯ ಕಲೆಯ ವೈಶಿಷ್ಟ್ಯ. ಈ ಆಧ್ಯಾತ್ಮಿಕ ದೃಷ್ಟಿಯಿಂದಾಗಿ ಕಲೆ, ಅನೀತಿಯನ್ನು ಪ್ರಚೋದಿಸಬಾರದು ಎಂಬ ಅಭಿಪ್ರಾಯವೂ ಭಾರತೀಯರಲ್ಲಿತ್ತು. ಇತರ ರಾಷ್ಟ್ರಗಳಲ್ಲೂ ಇಂಥ ಭಾವನೆ ಇದ್ದುದು ತಿಳಿದುಬರುತ್ತದೆ.

ಕಲೆಯಲ್ಲಿ ನೀತಿ ಅನೀತಿ ಎಂಬ ಭಾವನೆಯನ್ನು ಆಧುನಿಕರು ಮಾನ್ಯ ಮಾಡುವುದಿಲ್ಲ. ಹೀಗೆ ಕಲೆಯ ರೀತಿ ನೀತಿಗಳೂ ಸೌಂದರ್ಯವನ್ನು ಕುರಿತ ಭಾವನೆಗಳೂ ಕಾಲಕಾಲಕ್ಕೆ ಬದಲಾಗುತ್ತಲೇ ಇರುತ್ತವೆ. ಒಂದು ರಾಷ್ಟ್ರ, ಒಂದು ಯುಗ ಸುಂದರವೆಂದು ಭಾವಿಸಿದ್ದನ್ನು ಇನ್ನೊಂದು ರಾಷ್ಟ್ರ ಅಥವಾ ಕಾಲದ ಜನರಾಗಲೀ ರಸಿಕರಾಗಲೀ ಮೆಚ್ಚದೇ ಹೋಗಬಹುದು.

## ಹರಿನಾರಾಯಣ ಆಪ್ಟೆ

ಸಾಹಿತ್ಯವೆಂದರೆ ಆ ಹುಡುಗನಿಗೆ ಪಂಚಪ್ರಾಣ: ಚಿಕ್ಕವನಾಗಿದ್ದಾಗಲೇ ಕೈಗೆ ಸಿಕ್ಕಿದ ಮರಾಠಿ ಪುಸ್ತಕಗಳನ್ನೆಲ್ಲ ಓದುತ್ತಿದ್ದ. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಮಿಲ್ಟನ್, ಶೇಕ್ಸ್‌ಪಿಯರ್, ಸ್ಕಾಟ್, ಷೆಲ್ಲಿ, ಕೀಟ್ಸ್, ಡಿಕನ್ಸ್, ಥ್ಯಾಕರೆ ಮುಂತಾದ ಆಂಗ್ಲ ಸಾಹಿತಿಗಳ ಗ್ರಂಥಗಳನ್ನೂ ಫ್ರೆಂಚ್ ಸಾಹಿತಿ ಮೋಲಿಯೇರ್‌ನ ನಾಟಕಗಳ ಇಂಗ್ಲಿಷ್ ಭಾಷಾಂತರ ಗಳನ್ನೂ ಓದಿದ್ದ. ಓದುವುದರ ಜೊತೆಗೆ ಬರೆಯುವುದರಲ್ಲೂ ಅವನಿಗೆ ಆಸಕ್ತಿ. ತನ್ನ ಶಾಲೆಯ ಸಂಸ್ಥಾಪಕ–ಪ್ರಧಾನೋಪಾಧ್ಯಾಯರು ಮರಣ ಹೊಂದಿದಾಗ, 89 ಪದ್ಯಗಳನ್ನುಳ್ಳ 'ಶಿಷ್ಯಜನ ವಿಲಾಪ' ಎಂಬ ಖಂಡ ಕಾವ್ಯವನ್ನೇ ಬರೆದ.

ತನ್ನ ಉಪಾಧ್ಯಾಯರೂ ಸುಪ್ರಸಿದ್ಧ ವಿದ್ವಾಂಸರೂ ಆಗಿದ್ದ ಅಗರ್‌ಕರ್ ಅವರು ಶೇಕ್ಸ್‌ಪಿಯರ್, ಕಾಳಿದಾಸ ಮತ್ತು ಭವಭೂತಿಯನ್ನು ಕುರಿತು ಬರೆದ ತುಲನಾತ್ಮಕ ವಿಮರ್ಶೆಯನ್ನು ಒಪ್ಪದೆ, ಅದನ್ನು ವಿಮರ್ಶಿಸಿ ದೊಡ್ಡಲೇಖನವನ್ನೇ ಬರೆದ; ಅವರು ರಚಿಸಿದ 'ಹಾಮ್ಲೆಟ್' ನಾಟಕದ ಮರಾಠಿ ಭಾಷಾಂತರವನ್ನು ಕುರಿತು 72 ಪುಟಗಳಷ್ಟು ದೀರ್ಘವಾದ ವಿಮರ್ಶೆ ಬರೆದ.

—ಹೀಗೆ ಚಿಕ್ಕವಯಸ್ಸಿನಲ್ಲಿಯೇ ಅದ್ಭುತ ಸಾಹಿತ್ಯ ಪ್ರಜ್ಞೆಯನ್ನೂ ವಿಮರ್ಶನಾ ಶಕ್ತಿಯನ್ನು ಪ್ರದರ್ಶಿಸಿದ ಪ್ರತಿಭಾವಂತ ಹರಿನಾರಾಯಣ ಆಪ್ಟೆ. ಮರಾಠಿ ಸಾಹಿತ್ಯಕ್ಕೆ ಅಪೂರ್ವವಾದ ಸೇವೆ ಸಲ್ಲಿಸಿದ ಹರಿನಾರಾಯಣ ಆಪ್ಟೆ ಹುಟ್ಟಿದ್ದು 1864ರ ಮಾರ್ಚ್ 8ರಂದು, ಇಂದೂರಿನಲ್ಲಿ, ಆಗ ಅವರ ತಂದೆ ಅಲ್ಲಿ ಕೆಲಸದಲ್ಲಿದ್ದರು. ಮಗ ಹುಟ್ಟಿದ ಅನಂತರ ಮುಂಬಯಿಗೆ ಬಂದರು. ಹರಿನಾರಾಯಣನ ವಿದ್ಯಾಭ್ಯಾಸ ಮುಂಬಯಿ, ಪುಣೆಗಳಲ್ಲಿ ನಡೆಯಿತು. ಗೋಖಲೆ, ಬಾಲಗಂಗಾಧರ ತಿಲಕರಂಥ ನಾಯಕರು ಇದ್ದ ಕಾಲ ಅದು. ಆಪ್ಟೆಯವರು ಈ ನಾಯಕರಿಂದ ಪ್ರಭಾವಿತರಾದರು. ರಾಜಕೀಯ ಚಳುವಳಿ, ಸಮಾಜ ಸುಧಾರಣೆಗಳಲ್ಲಿ ಆಸಕ್ತರಾದರು. ಆಪ್ಟೆ 19 ವರ್ಷ ವಯಸ್ಸಿನವರಾಗಿದ್ದಾಗ ಅವರಿಗೆ ಕಾನೀಟ್ಕರ್ ಎಂಬ ತರುಣ ವಕೀಲರ ಪರಿಚಯವಾಯಿತು. ಈ ಪರಿಚಯ ಸ್ನೇಹವಾಗಿ ಅರಳಿತು. ಆಪ್ಟೆಯವರೂ ಕಾನೀಟ್ಕರ್ ಅವರೂ ಜೀವದ ಗೆಳೆಯರಾದರು. ಆಪ್ಟೆಯವರ ಸಾಹಿತ್ಯ ಕೃಷಿಗೆ ತುಂಬ ಪ್ರೋತ್ಸಾಹವನ್ನು ಕೊಟ್ಟವರು ಇವರು.

ಕಾಲೇಜು ಬಿಟ್ಟು ಬಂದೊಡನೆಯೇ ಆಪ್ಟೆಯವರು ತಮ್ಮ ಕೆಲವು ಮಿತ್ರ ರೊಡಗೂಡಿ, ಮನೋರಂಜನೆಯೇ ಪ್ರಧಾನ ಉದ್ದೇಶವಾಗಿದ್ದ 'ಕರ್ಮ ಣೂಕ್' ಎಂಬ ವಾರಪತ್ರಿಕೆಯನ್ನು ಆರಂಭಿಸಿದರು. ಆಗ ಆಪ್ಟೆಯವರ ವಯಸ್ಸು ಕೇವಲ 24 ವರ್ಷ. ಆ ಹೊತ್ತಿಗಾಗಲೇ ಅವರು ಗಣ್ಯಲೇಖಕ ಎನಿಸಿಕೊಂಡಿದ್ದರು. ಅವರು ಬರೆದ ಹಲವಾರು ಕಾದಂಬರಿಗಳು 'ಕರ್ಮಣೂಕ್' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾದವು. ಆಪ್ಟೆ ಯವರಲ್ಲದೆ ಅನೇಕ ವಿದ್ವಾಂಸರು ಈ ಪತ್ರಿಕೆಗೆ ಲೇಖನಗಳನ್ನು ಬರೆಯು

ಶ್ರೇಷ್ಠರು. ಆಪ್ಟೆಯವರ ಸಾಹಿತ್ಯಸೇವೆ ಬಹುಮುಖವಾದದ್ದು. ಅವರು ಅನೇಕ ಸಾಮಾಜಿಕ ಹಾಗೂ ಐತಿಹಾಸಿಕ ಕಾದಂಬರಿಗಳನ್ನು ಬರೆದಿದ್ದಾರೆ. ಅಲ್ಲದೆ ಕವನಗಳನ್ನೂ ನಾಟಕಗಳನ್ನೂ ರಚಿಸಿದ್ದಾರೆ. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಸಮಕಾಲೀನ ಮರಾಠೀ ಸಾಮಾಜಿಕ ಜೀವನದ ನಿರೂಪಣೆಯಿದೆ. ಅವರು ತಮ್ಮ ಐತಿಹಾಸಿಕ ಕಾದಂಬರಿಗಳಿಗೆ ಪ್ರಧಾನವಾಗಿ ಭಾರತೀಯ ಇತಿಹಾಸದ ಮಧ್ಯಯುಗ, ರಾಜಪುತ್ರರು ಹಾಗೂ ಮರಾಠರ ಚರಿತ್ರೆ



ಅಪಾರ ಸೇವೆ : ಆಪ್ಟೆ

ಯಿಂದ ವಸ್ತುಗಳನ್ನಾರಿಸಿಕೊಂಡಿದ್ದಾರೆ. ಅವರ 'ಮಹಿಶೂರ ಚ ವಾಘ್' ಮೆಡೋಸ್ ಟೇಯ್ಲರನ 'ಟಿಪ್ಪುಸುಲ್ತಾನ್' ಎಂಬ ಕಾದಂಬರಿಯ ಮೇಲೆ ಆಧಾರಪಟ್ಟದ್ದು. ಆಪ್ಟೆಯವರ ಹಲವಾರು ಕಾದಂಬರಿಗಳು ಅಪೂರ್ಣವಾಗಿವೆ.

ಆಪ್ಟೆಯವರಿಂದ ಮರಾಠೀ ಸಾಹಿತ್ಯಕ್ಕೆ ಅಪಾರ ಸೇವೆ ಸಂದಿರುವಂತೆ, ಸಂಸ್ಕೃತ ಸಾಹಿತ್ಯ ಪ್ರಚಾರಕ್ಕಾಗಿ ಅವರಿಂದಾದ ಸೇವೆ ಕೂಡ ಹಿರಿದಾದದ್ದು. ಆಪ್ಟೆಯವರ ಚಿಕ್ಕಪ್ಪ ಮಹದೇವ ಚಿಮಣಾಜಿ ಆಪ್ಟೆಯವರು ಪುಣೆಯಲ್ಲಿ ಸ್ಥಾಪಿಸಿದ 'ಆನಂದಾಶ್ರಮ'ದ ಆಶ್ರಯದಲ್ಲಿ ಹರಿನಾರಾಯಣ ಆಪ್ಟೆಯವರು ಹಲವಾರು ಸಂಸ್ಕೃತ ಗ್ರಂಥಗಳನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದರು.

ಮನೆತನದ ನಾನಾ ಪರಿಸ್ಥಿತಿಗಳಿಂದಾಗಿ ಆಪ್ಟೆಯವರು ಸನಾತನ ಸಂಪ್ರದಾಯಕ್ಕೆ ಕಟ್ಟುಬಿದ್ದು ನಡೆದರಾದರೂ ಸಮಾಜಸುಧಾರಣೆಯಲ್ಲಿ ಅವರಿಗೆ ಅಪಾರ ಆಸಕ್ತಿಯಿತ್ತು. ಸಮಾಜ ಸುಧಾರಣೆಯ ವಿಚಾರಗಳನ್ನು ಜಾರಿ ಬೆಳೆಯಿಸಲು ಅವರು ನಿರಂತರವಾಗಿ [illegible] ಅವರ ಪ್ರಧಾನ ಕಾರ್ಯಕ್ಷೇತ್ರವಾಗಿತ್ತು. [illegible] ಎರಡು ದಶಕಗಳ ಕಾಲ ಅವರು ಸೇವೆ ಸಲ್ಲಿಸಿದರು. [illegible] ಪ್ರಬಲವಾಗಿದ್ದ ಅಂದಿನ ರಾಜಕೀಯ ರಂಗದಲ್ಲಿ ಆಪ್ಟೆಯವರಿಗೆ [illegible] ಇತ್ತು. ಅನೇಕ ಮಂದಿ ರಾಜಕೀಯ ನಾಯಕರು ಅವರ ಆಪ್ತಮಿತ್ರರಾಗಿದ್ದರು. ಸಮಕಾಲಿನ ಮರಾಠೀ ಸಾಹಿತ್ಯಕ್ಷೇತ್ರದಲ್ಲಂತೂ ಅವರು ಅದರ ಸಮ್ರಾಟರೇ ಆಗಿದ್ದರು.

ಆಪ್ಟೆಯವರು ತಮ್ಮ ಜೀವನದಲ್ಲಿ ಸಾಂಸಾರಿಕ ಕ್ಲೇಶ ದುರಂತಗಳನ್ನು ಅನುಭವಿಸಬೇಕಾಯಿತು. ಹಲವಾರು ಕಾರ್ಯಕ್ಷೇತ್ರಗಳಲ್ಲಿ ನಿರಂತರವಾಗಿ ದುಡಿಯಬೇಕಾಯಿತು. ತಮ್ಮ ಕ್ಲೇಶ, ಅನನುಕೂಲಗಳು ಏನೇ ಇರಲಿ ತಮ್ಮ ಕರ್ತವ್ಯವನ್ನು ತಪ್ಪದೆ ನಿರ್ವಹಿಸುವುದು ಆಪ್ಟೆಯವರ ಸ್ವಭಾವವಾಗಿತ್ತು.

ಒಮ್ಮೆ ಬರೋಡದಲ್ಲಿದ್ದಾಗ ಮಳೆಯಲ್ಲಿ ಸಿಕ್ಕಿಬಿದ್ದು ನೆನೆದುದರ ಪರಿಣಾಮವಾಗಿ ಆಪ್ಟೆಯವರ ಆರೋಗ್ಯ ಕೆಟ್ಟಿತು ; ಕೆಲವಾರು ತಿಂಗಳ ಕಾಲ ಚಿಕಿತ್ಸೆ ನಡೆದರೂ ಅದು ಸುಧಾರಿಸಲೇ ಇಲ್ಲ ; 1919ರ ಮಾರ್ಚ್ 3ರಂದು ಕಾಲಾಧೀನರಾದರು.

## ಹರಿಹರ

ತುಂಗಭದ್ರಾ ನದೀ ತೀರದ ರಮ್ಯಪ್ರದೇಶ ಹಂಪೆಯಲ್ಲಿ ಒಬ್ಬ ಅಸಾಮಾನ್ಯ ಭಕ್ತನಿದ್ದ. ಉಷಃಕಾಲಕ್ಕೆ ಮುಂಚೆಯೇ ಎದ್ದು, ಹೂಗಳನ್ನು ತಿರಿದು ತರುವುದು: ಹಂಪೆಯ ವಿರೂಪಾಕ್ಷನಿಗೆ ಅಲಂಕಾರಮಾಡಿ ಅವನನ್ನು ಭಕ್ತಿಯಿಂದ ಪೂಜಿಸುವುದು; ಅವನ ಗುಣಗಾನ ಮಾಡುವುದು ; ಭಕ್ತಿಪರವಶನಾಗಿ ಹಾಡುವುದು, ಕುಣಿಯುವುದು ಅವನ ಅಭ್ಯಾಸ.

ಈ ಮಹಾಭಕ್ತನೇ ಹಂಪೆಯ ಹರಿಹರ. ಇವನು ಪ್ರತಿಭಾಶಾಲಿಯಾದ ಕವಿ ಕೂಡ. ತನ್ನ ಉತ್ತಮ ಕೃತಿಗಳಿಂದ ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕಾಣಿಕೆ ಸಲ್ಲಿಸಿದ ಈ ಕವಿ 'ರಗಳೆಯ ಕವಿ'ಎಂದೂ ಪ್ರಸಿದ್ಧನಾಗಿದ್ದಾನೆ.

'ಗಿರಿಜಾ ಕಲ್ಯಾಣ', 'ಪಂಪಾ ಶತಕ', 'ರಕ್ಷಾಶತಕ', 'ಮುಡಿಗೆಯ ಅಷ್ಟಕ', ಶಿವಶರಣರನ್ನು ಕುರಿತ ರಗಳೆಗಳು —ಇವು ಹರಿಹರನ ಕೃತಿಗಳು.

ಹರಿಹರನ ಗುರು ಹಂಪೆಯ ಮಾಯಿದೇವ. 'ಹರಿಶ್ಚಂದ್ರ ಕಾವ್ಯ'ದ ಕರ್ತೃ ರಾಘವಾಂಕ —ಹರಿಹರನ ಸೋದರಳಿಯ. ಇವನ ಕಾಲದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಅವನು 13ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದಿರಬಹುದೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹೊಯ್ಸಳ ವೀರನರಸಿಂಹ ಬಲ್ಲಾಳನಲ್ಲಿ ಹರಿಹರ ಕರಣಿಕನಾಗಿದ್ದನೆಂದು ತಿಳಿದುಬರುತ್ತದೆ. ಹಂಪೆಯಲ್ಲಿ ವಿರೂಪಾಕ್ಷನ ದೇವಾಲಯದ ತೇರಿಗೆ ಬೆಂಕಿ ಹಬ್ಬಿಕೊಂಡಿತೆಂದೂ ಅದನ್ನು ಆತ ಕೈಗಳಿಂದ ಒರೆಸಿ ಆರಿಸಿದಂತೆಯೂ ದಂತಕಥೆಯೊಂದು ಪ್ರಚಾರದಲ್ಲಿದೆ.

ಹರಿಹರನ 'ಗಿರಿಜಾ ಕಲ್ಯಾಣ' ವೈಶಿಷ್ಟ್ಯಪೂರ್ಣ ಚಂಪೂ ಕಾವ್ಯ. ಶೈವ ಪುರಾಣಗಳಲ್ಲಿ ವರ್ಣಿಸಿದ ಶಿವ ಪಾರ್ವತಿಯರ ವಿವಾಹ ಇದರ ಕಥಾವಸ್ತು. ಪರ್ವತರಾಜನ ಮಗಳಾದ ಪಾರ್ವತಿಯೇ ಕಥಾನಾಯಕಿ. ಪಾರ್ವತಿಯ ಪತಿಭಕ್ತಿ ಮತ್ತು ಶ್ರದ್ಧೆಯ ನಿರೂಪಣೆಯೇ ಕವಿಯ ಉದ್ದೇಶ. ಈ

[illegible] ಕಾಣುತ್ತದೆ. ವರ್ಣನೆಗಳೂ ಉಪಮಾನಗಳೂ ಮನೋಜ್ಞವಾಗಿವೆ. ಪಾತ್ರಸೃಷ್ಟಿ ಮೋಹಕವಾಗಿದೆ.

'ಹರಿಹರನ ಪಂಪಾಶತಕ', 'ರಕ್ಷಾ ಶತಕ', ಪ್ರಸಿದ್ಧವಾದವು. ಹರಿಹರನ ಶತಕಗಳಲ್ಲಿ ಹಂಪೆಯ ವಿರೂಪಾಕ್ಷನ ಬಗೆಗೆ ಅವನಿಗಿದ್ದ ನಿಸ್ಸೀಮ ಭಕ್ತಿ, ನಿಷ್ಠೆ ಹೊರಹೊಮ್ಮಿವೆ. ಇವುಗಳಲ್ಲಿ ಅವನ ಜೀವನದ ಘಟನೆಗಳ ಸೂಚನೆಯೂ ಇದೆ.

ಭಕ್ತಿ ಜ್ಞಾನ ವೈರಾಗ್ಯಗಳನ್ನು ಕುರಿತು ಹೇಳುವುದು ಶತಕಗಳ ಉದ್ದೇಶ. ಹರಿಹರನು ಈ ಕೃತಿಗಳಲ್ಲಿ ಈ ಉದ್ದೇಶವನ್ನು ಉತ್ತಮ ರೀತಿಯಲ್ಲಿ ಸಾಧಿಸಿದ್ದಾನೆ.

ಹರಿಹರನನ್ನು 'ರಗಳೆಯ ಕವಿ' ಎಂದು ಕರೆಯುವುದು ವಾಡಿಕೆ. ಹರಿಹರನ ಕೀರ್ತಿ ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾಗಿ ನೆಲೆನಿಂತಿರುವುದು ಕೂಡ ಅವನು ರಚಿಸಿರುವ 'ರಗಳೆ'ಗಳಿಂದ. ಇಲ್ಲಿ 'ರಗಳೆ' ಎಂಬುದು ಒಂದು ಬಗೆಯ ಛಂದಸ್ಸನ್ನೂ ಪದ್ಯರಚನೆಯ ರೂಪವನ್ನೂ ಸೂಚಿಸುತ್ತದೆ. ಈ ಪದ್ಯರಚನೆಯಲ್ಲಿ ತ್ರಿಪದಿಯಲ್ಲಿ ಮೂರು ಸಾಲು, ಷಟ್ಪದಿಯಲ್ಲಿ ಆರು ಸಾಲು ಇರುವ ಹಾಗೆ, ಒಂದೊಂದು ಪದ್ಯಕ್ಕೆ ಇಷ್ಟೇ ಸಾಲುಗಳಿರಬೇಕೆಂಬ ನಿಯಮವಿಲ್ಲ. ಇದು ರಗಳೆಯ ಮುಖ್ಯ ಲಕ್ಷಣ. ಈ ಛಂದಸ್ಸನ್ನು ಕಾವ್ಯ ರಚನೆಗಾಗಿ ರೂಪಿಸಿ, ಯಶಸ್ವಿಯಾಗಿ ಉಪಯೋಗಿಸಿಕೊಂಡವನು ಹರಿಹರ. ಆದ್ದರಿಂದಲೇ ಅವನಿಗೆ 'ರಗಳೆಯ ಕವಿ'ಎಂಬ ಅಡ್ಡ ಹೆಸರು.

ಕಥನ ಕಾವ್ಯಕ್ಕೆ ಈ ಛಂದಸ್ಸು ತುಂಬ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಹರಿಹರ ಅನೇಕ ಮಂದಿ ಶಿವಭಕ್ತರ ಕತೆಗಳನ್ನು ರಗಳೆ ಛಂದಸ್ಸಿನಲ್ಲಿ ಬರೆದಿದ್ದಾನೆ. ಇಂಥ 100 ರಗಳೆಗಳು ದೊರೆತಿವೆ. ತಮಿಳು ಭಾಷೆಯಲ್ಲಿರುವ 'ಪೆರಿಯ ಪುರಾಣ' ಎಂಬ ಕಾವ್ಯದಲ್ಲಿ ಅರವತ್ತಮೂರು ಶಿವಭಕ್ತರ ಕತೆಗಳನ್ನು ಹೇಳಿದೆ. ಇದು ಹರಿಹರನಿಗಿಂತ ಹಿಂದಿನ ಕಾಲದಲ್ಲಿ ರಚಿತವಾದ ಗ್ರಂಥ. ತನ್ನ ರಗಳೆಗಳನ್ನು ರಚಿಸಲು ಹರಿಹರ ಈ ಗ್ರಂಥದಿಂದ ಪ್ರೇರಣೆ ಪಡೆದಿರಬಹುದು ಎಂಬ ಅಭಿಪ್ರಾಯವಿದೆ. ಹರಿಹರನ ರಗಳೆಗಳಲ್ಲಿ 'ನಂಜಿಯಣ್ಣನ ರಗಳೆ', 'ಮಹಾದೇವಿಯಕ್ಕನ ರಗಳೆ', 'ತಿರುನೀಲಕಂಠ ರಗಳೆ' ಪ್ರಸಿದ್ಧವಾದುವು.

ಹರಿಹರನ ಒಂದು ಶ್ರೇಷ್ಠ ಕೃತಿ 'ಬಸವರಾಜ ದೇವರ ರಗಳೆ'. ಬಸವಣ್ಣನವರ ಜೀವನವೃತ್ತಾಂತ ಇದರ ವಸ್ತು. ಈ ಕೃತಿಯಲ್ಲಿ ಹರಿಹರನು ಬಸವಣ್ಣನವರ ವ್ಯಕ್ತಿತ್ವವನ್ನೂ ಅವರ ಅನುಪಮ ಭಕ್ತಿಯನ್ನೂ ಸುಂದರವಾಗಿ ಮನಮುಟ್ಟುವಂತೆ ಬಣ್ಣಿಸಿದ್ದಾನೆ.

ಹರಿಹರನ ರಗಳೆಗಳಲ್ಲಿ ಭಕ್ತರ ಉತ್ಕಟತೆ, ತನ್ಮಯತೆ, ಕೊರಗು, ಕಳವಳಗಳ ಚಿತ್ರಣ ಸೊಗಸಾಗಿ ಬಂದಿದೆ. ಹರಿಹರನ ಭಕ್ತಹೃದಯದ ಮಿಡಿತವನ್ನು ಈ ಎಲ್ಲ ಕೃತಿಗಳಲ್ಲಿಯೂ ಕಾಣಬಹುದು. ಈ ರಗಳೆಗಳೊಂದೊಂದರಲ್ಲೂ ಶಿವಶರಣರ ಪುಣ್ಯಜೀವನ ನಮ್ಮ ಕಣ್ಣೆದುರಿಗೆ ಕಟ್ಟುವಂತಿದೆ.

ಹರಿಹರನ 'ಪುಷ್ಪರಗಳೆ' ರಮಣೀಯ ಭಾವಗೀತೆ. ಸೇವಂತಿಗೆ, ಜಾಜಿ, ಸಂಪಿಗೆ, ಮಲ್ಲಿಗೆ, ಕೇದಗೆ, ದವನ, ನಾನಾ ವಿಧದ ಪರಿಮಳದ ಹೂಗಳನ್ನು ಸಂಗ್ರಹಿಸಿ, ದೇವರ ಪೂಜೆಗಾಗಿ ಆ ಹೂಗಳನ್ನು ಅವುಗಳಿಗೆ ಸ್ವಲ್ಪವೂ ನೋವಾಗದಂತೆ ಮಾಲೆಕಟ್ಟಿ, ವಿರೂಪಾಕ್ಷನಿಗೆ ಅಲಂಕರಿಸುವ ಭಕ್ತನ ತನ್ಮಯತೆ, ಸರ್ವಾಲಂಕೃತ ದೇವರನ್ನು ಕಣ್ತುಂಬ ನೋಡಿ ಹಿಗ್ಗಿ ನಲಿದಾಡುವ ಬಗೆ, ಎಲ್ಲವೂ ಅದರಲ್ಲಿ ವರ್ಣಿತವಾಗಿವೆ. ಈ ದೃಷ್ಟಿಯಿಂದ 'ಪುಷ್ಪರಗಳೆ' ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಕಾವ್ಯ.

ಹರಿಹರ ಭಕ್ತ ಕವಿ. ಅಷ್ಟು ಮಾತ್ರವಲ್ಲ, ಪ್ರತಿಭಾವಂತನಾದ ಮಹಾಕವಿ.

## ಹರ್ಷ ಗೀತೆ

" ಘಲ್ಲು ಘಲ್ಲಮತಾ ಗೆಜ್ಜೆ ಘಲ್ಲು ಸಾದಮತಾ
ಗೆಜ್ಜೆ ಘಲ್ಲು ಸಾದಮತಾ
ಈ ಬಲ್ಲಿರಂಗ ನೊಲ್ಲಿಮೇಲ್ ಚೆಲ್ಲಿರೋಕುಳಿಯು
ಹಾಲಿನೋಕುಳಿಯೋ ಒಳ್ಳೆ ಲೀಲಿನೋಕುಳಿಯೋ
ಒಳ್ಳೆ ಲೀಲಿನೋಕುಳಿಯೋ
ಈ ಅಂದವುಳ್ಳೆ ರಂಗನ ಮೇಲ್ಹಿಂಗಂದರೋಕುಳಿಯೋ ॥
ತುಪ್ಪದೋಕುಳಿಯೋ ಒಳ್ಳೆ ಒಪ್ಪದೋಕುಳಿಯೋ
ಒಳ್ಳೆ ಒಪ್ಪದೋಕುಳಿಯೋ
ಈ ಒಪ್ಪವುಳ್ಳೆ ರಂಗನ ಮೇಲ್ಹಿಂಗಂದರೋಕುಳಿಯೋ
ಗಂಧದೋಕುಳಿಯೋ ಇದು ಚಂದದೋಕುಳಿಯೋ
ಒಳ್ಳೆ ಚಂದದೋಕುಳಿಯೋ ॥
ಈ ಅಂದವುಳ್ಳೆ ರಂಗನ ಮೇಲ್ಹಿಂಗಂದರೋಕುಳಿಯೋ

—ಇದೊಂದು ಓಕುಳಿ ಹಾಡು ; ರಥೋತ್ಸವದ ಸಂದರ್ಭದಲ್ಲಿ ಸಂತೋಷದಿಂದ ಹಾಡುವ ಗೀತೆ.

ಹೀಗೆ ಮನಸ್ಸಿಗೆ ಭಾರಿ ಸಂತೋಷವಾದಾಗ, ಮನಸ್ಸು ಉಲ್ಲಾಸಗೊಂಡಾಗ ಕವಿ ಹೇಳುವ ಹಾಡೇ ಹರ್ಷ ಗೀತೆ.

ಮಹಾಕಾವ್ಯ, ಭಾವಗೀತೆ, ಜಾನಪದ ಸಾಹಿತ್ಯಗಳಲ್ಲೆಲ್ಲ ಹರ್ಷಭಾವದ ಸಾಲುಗಳಿವೆ, ಆದರೂ ಅದೇ ಒಂದು ಪ್ರಕಾರವಾಗಿ ರೂಪುಗೊಳ್ಳಲಿಲ್ಲ.

ಸ್ಥೂಲವಾಗಿ, ಮನಸ್ಸು ಸಂತಸ ಉತ್ಸಾಹಗಳಿಂದ ಕೂಡಿದ್ದಾಗ ಹಾಡುವ ಗೀತೆಗಳೆಲ್ಲ ಹರ್ಷ ಗೀತೆ ಎಂದು ಹೇಳಬಹುದು.

ಮಾನವನ ಮನಸ್ಸು ವ್ಯಕ್ತಿಗತ ಹಾಗೂ ಪ್ರಾಪಂಚಿಕ ಸಂತಸಗಳನ್ನು ಅನುಭವಿಸುವಂತೆಯೇ ಹರ್ಷಗೀತೆಗಳನ್ನೂ ಸ್ಥೂಲವಾಗಿ ಎರಡು ಗುಂಪು ಮಾಡಬಹುದು. ಒಬ್ಬ ಮನುಷ್ಯ ತನ್ನ ಬಹುಕಾಲದ ಆಸೆ ನೆರವೇರಿದಾಗ ಹಾಡುವುದು ಅಥವಾ ಪ್ರಕೃತಿಯ ಯಾವುದೋ ದೃಶ್ಯ ಅಥವಾ ಯಾವುದೋ ಘಟನೆ ಅವನಲ್ಲಿ ಸಂತಸ ಉಂಟುಮಾಡಿದಾಗ ಅವನು ಹಾಡುವುದು ವ್ಯಕ್ತಿಗತವಾಗುತ್ತದೆ. ಎರಡನೆಯ ಗುಂಪಿನಲ್ಲಿ ಸುಗ್ಗಿ ಹಾಡುಗಳು, ಹಬ್ಬ–ಹರಿದಿನದ ಹಾಡುಗಳು ಮೊದಲಾದುವು ಬರುತ್ತವೆ. ಪ್ರಕೃತಿ ಸೌಮ್ಯಳಾಗಿ ಬೆಳೆಗಳಿಗೆ ಅನುಕೂಲವಾದಾಗ ಹಾಡುವ ಹಾಡುಗಳೂ ಉಂಟು. ಸಮೃದ್ಧಿಯಾದ ಬೆಳೆತಂದ ಸುಗ್ಗಿ ದಿನಗಳು ಆಧುನಿಕ ಕವಿಗಳಿಂದಲೂ ಹರ್ಷ ಗೀತೆ ಹೇಳಿಸಿವೆ. ಕುವೆಂಪು ಅವರು—

" ಅಡಿಯ ಗೆಜ್ಜೆ ನಡುಗೆ, ಹೆಜ್ಜೆಯಿಡುತ ಸುಗ್ಗಿ ಬರುತಿದೆ
ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗ ಸೊಗವ ತರುತಿದೆ
ಕಣಿವೆಯಿಳಿದು ತೆಮರನೇರಿ
ತರುಗಳಲ್ಲಿ ತಳಿರ ಹೇರಿ
ಹೊಸತು ಜೀವ ಕಳೆಯ ಬೀರಿ
ಸುಗ್ಗಿ ಮೂಡುತಿರುವುದು
ಬನದ ಬಿನದದಿನಿದುನಿನದ ಮನದೊಳಾಡುತಿರುವುದು"

ಹಬ್ಬಗಳು ಮಾನವನ ಸಂತಸದ ದಿನದ ಸಂಕೇತ. "ಹೋಳಿಯಲ್ಲಿ

ನೀರು ತುಂಬಿ, ಹೊಲದಲ್ಲಿ ನೀರು ತುಂಬಿ, ಊರೂರಿನ ಗಿಡಮನೆ ತುಂಬಿ. ಜನ ತುಂಬಿ, ದೀವಳಿಗೆ ಬರಲಿ ದಿನ ಬರಲಿ" ಎಂಬ ದೀವಳಿಗೆ ಹಾಡನ್ನು ಬೇಂದ್ರೆ ಹಾಡಿದ "ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ, ಹೊಸ ವರುಷಕೆ, ಹೊಸ ಹರುಷವ ಹೊಸತು ಹೊಸತು ತರುತಿದೆ" ಕವನವನ್ನು ಹಬ್ಬದ ಹರ್ಷಗೀತೆಗಳೆಂದು ಹೇಳಬಹುದು.

ನಮಗೆ ಸ್ವಾತಂತ್ರ್ಯಬಂದ ಸಮಯದಲ್ಲಿ ಸ್ವಾತಂತ್ರ್ಯವನ್ನು ಹಾಗೂ ಅದನ್ನು ಗಳಿಸಿಕೊಟ್ಟ ವೀರರನ್ನು ಕುರಿತ ಹರ್ಷಗೀತೆಗಳು ರಚಿತವಾದುವು.

## ಹಳಕಟ್ಟಿ

ಬಿಜಾಪುರಕ್ಕೆ ಭೇಟಿಕೊಟ್ಟವರು ತಪ್ಪದೆ ನೋಡಬೇಕಾದದ್ದು ಎರಡು: ಒಂದು ಭವ್ಯ ಕಟ್ಟಡ; ಇನ್ನೊಂದು ಭವ್ಯತಮ ವ್ಯಕ್ತಿ–ಎಂಬ ಹೇಳಿಕೆ ಇತ್ತು. ಆ ಭವ್ಯ ಕಟ್ಟಡ, ಅದಿಲ್‌ಷಾಹಿ ಅರಸರ ಕಾಲದ ಗೋಳಗುಮ್ಮಟ; ಭವ್ಯತಮ ವ್ಯಕ್ತಿ, ಫಕೀರಪ್ಪ ಗುರುಬಸಪ್ಪ ಹಳಕಟ್ಟಿ.

ಹಳಕಟ್ಟಿಯವರು ಹುಟ್ಟಿದ್ದು ಧಾರವಾಡದಲ್ಲಿ, 1880ರ ಜುಲೈ 2 ರಂದು. ಅವರು ಶ್ರಮಪಟ್ಟು ವಿದ್ಯಾಭ್ಯಾಸಮಾಡಿ ಬಿ. ಎ. ಮುಗಿಸಿ 1907ರ ಹೊತ್ತಿಗೆ ಎಲ್‌ಎಲ್.ಬಿ., ಪರೀಕ್ಷೆಯಲ್ಲಿ ಉತ್ತೀರ್ಣರಾದರು, ಬೆಳಗಾವಿಯಲ್ಲಿ ವಕೀಲರಾದರು. ಅನಂತರ ತಮ್ಮ ಕಾರ್ಯಕ್ಷೇತ್ರವನ್ನು ಬಿಜಾಪುರಕ್ಕೆ ಬದಲಾಯಿಸಿದರು. ತಮ್ಮ ವೃತ್ತಿಯಲ್ಲಿ ಖ್ಯಾತರೂ ಆದರು. ವೃತ್ತಿ ವಕೀಲಿಯಾದರೂ ಪ್ರವೃತ್ತಿಯಿಂದ ಅವರು ಸಾಹಿತ್ಯಪ್ರೇಮಿಯಾಗಿದ್ದರು. ಸಮಾಜ ಸೇವೆಯಲ್ಲಿಯೂ ಅವರಿಗೆ ಅಪಾರ ಆಸಕ್ತಿ ಇತ್ತು.

ಕನ್ನಡ ಸಾಹಿತ್ಯರಂಗಕ್ಕೆ ಹಳಕಟ್ಟಿಯವರು ಸಲ್ಲಿಸಿದ ಸೇವೆ ಅಪೂರ್ವವಾದದ್ದು. ಕನ್ನಡ ಸಾಹಿತ್ಯದ ಮೌಲಿಕಭಾಗವಾದ ವಚನ ಸಾಹಿತ್ಯವನ್ನು ಬೆಳಕಿಗೆ ತರಲು ಅವರು ಪಟ್ಟ ಶ್ರಮ, ತೋರಿದ ನಿಷ್ಠೆ ಅಪೂರ್ವವಾದುವು. ಕನ್ನಡ ವಿದ್ವಾಂಸರಿಗೆ ಕೂಡ ವಚನ ಸಾಹಿತ್ಯದ ಪರಿಚಯ ಅಷ್ಟಾಗಿ ಇಲ್ಲದಿದ್ದ ಕಾಲದಲ್ಲಿ ಅವರು ಊರೂರು ತಿರುಗಿ, ವೀರಶೈವರ ಮನೆಗಳಲ್ಲಿ ಮಠಗಳಲ್ಲಿ ಇದ್ದ ವಚನ ಸಾಹಿತ್ಯದ ಓಲೆಗರಿ ಗ್ರಂಥಗಳನ್ನು ಹುಡುಕಿ ತೆಗೆದು ಅವನ್ನು ಓದಿ, ಪರಿಷ್ಕರಿಸಿ, ಪ್ರತಿಮಾಡಿ ಪ್ರಕಟಿಸಿದರು. ಈ ಪ್ರಕಟಣೆಯನ್ನು ನಿರಂತರವಾಗಿ ನಡೆಸಿಕೊಂಡು ಬರುವ ಉದ್ದೇಶದಿಂದ ಒಂದು ಮುದ್ರಣಾಲಯವನ್ನು ಸ್ಥಾಪಿಸಿದರು. 'ಶಿವಾನುಭವ' ಎಂಬ ಮಾಸಪತ್ರಿಕೆಯನ್ನು ಆರಂಭಿಸಿ ನಡೆಸಿಕೊಂಡು ಬಂದರು.

ಹಳಕಟ್ಟಿಯವರ ಕಾರ್ಯಶಕ್ತಿ ಅದ್ಭುತವಾದದ್ದು. ವಕೀಲಿವೃತ್ತಿ, ಸಾಹಿತ್ಯ ಸೇವೆಗಳ ಜೊತೆ ಜೊತೆಯಲ್ಲಿಯೇ ಸಾರ್ವಜನಿಕ ಸೇವೆಯನ್ನೂ ಕೈಗೊಂಡರು. ಜನತೆಯಲ್ಲಿ ವಿದ್ಯೆಯನ್ನು ಹರಡಲು, ಹಲವಾರು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಲು ಶ್ರಮಿಸಿದರು. ರಾಜಕೀಯ ಸಾಮಾಜಿಕ ವಿಚಾರಗಳಲ್ಲಿ ಜನರ ತಿಳಿವಳಿಕೆಯನ್ನು ಬೆಳೆಸುವ ದೃಷ್ಟಿಯಿಂದ 'ನವ ಕರ್ನಾಟಕ' ಪತ್ರಿಕೆಯನ್ನು ಸ್ಥಾಪಿಸಿ ಅದನ್ನು ದೀರ್ಘಕಾಲ ನಡೆಸಿಕೊಂಡು ಬಂದರು. 1924ರಲ್ಲಿ ಮುಂಬಯಿ ಶಾಸನಸಭೆಗೆ ಚುನಾಯಿತರಾದರು; ಮುಂಬಯಿ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ ಸೇವೆ ಸಲ್ಲಿಸಿದರು.

ಹೀಗೆ ನಾನಾ ಕ್ಷೇತ್ರದಲ್ಲಿ ದುಡಿಯುತ್ತಿದ್ದರೂ ಅವರು ತಮ್ಮ ಸಾಹಿತ್ಯ ಸೇವೆಯನ್ನು ಮಾತ್ರ ನಿರಂತರವಾಗಿ ನಡೆಸಿಕೊಂಡೇ ಬಂದರೆಂಬುದು ಪ್ರಶಂಸಾರ್ಹವಾದದ್ದು.

ಅವರು ಅನೇಕ ಮಂದಿ ಶಿವಶರಣರ ವಚನಗಳನ್ನು ಸಂಪಾದಿಸಿ ಪ್ರಕಟಿಸಿದ್ದಲ್ಲದೆ, ವೀರಶೈವ ಧಾರ್ಮಿಕ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ



ಹಳಕಟ್ಟಿ

ಅಮೂಲ್ಯ ಗ್ರಂಥಗಳನ್ನೂ ರಚಿಸಿದರು. 'ವಚನಶಾಸ್ತ್ರಸಾರ' ಅವರ ಮೇರುಕೃತಿ, ಸುಮಾರು ಅರವತ್ತು ವರ್ಷಗಳ ಪರಿಶ್ರಮದ ಫಲ. ಇದಲ್ಲದೆ ಅವರು 'ಶಿವಾನುಭವ ಶಬ್ದಕೋಶ', 'ಶಿವಶರಣರ ಚರಿತ್ರೆಗಳು', 'ಏಳುನೂರು ಎಪ್ಪತ್ತು ಗಣಾಧೀಶ್ವರರ ಚರಿತ್ರೆಗಳು' ಮುಂತಾದ ಗ್ರಂಥಗಳನ್ನೂ ಬರೆದಿದ್ದಾರೆ. ಅವರು ಸಂಪಾದಿಸಿ ಪ್ರಕಟಿಸಿದ ಗ್ರಂಥಗಳು ಸುಮಾರು ಅರವತ್ತರಷ್ಟಿವೆ.

ಹಳಕಟ್ಟಿಯವರ ಕನ್ನಡ ಅಭಿಮಾನ ಅಪೂರ್ವವಾದದ್ದು. ಕರ್ನಾಟಕ ಸಾಹಿತ್ಯ ಪರಿಷತ್ತು ಆರಂಭವಾದಾಗಿನಿಂದ ಅದರ ಸದಸ್ಯರಾಗಿದ್ದ ಹಳಕಟ್ಟಿಯವರು. ಮುಂಬಯಿ ಆಧಿಪತ್ಯದ ಕನ್ನಡ ಪಠ್ಯಪುಸ್ತಕ ಸಮಿತಿ, ಪ್ರಾಥಮಿಕ ಶಿಕ್ಷಣ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ಅವರು ಸಾಹಿತ್ಯ, ಶಿಕ್ಷಣ, ಹಾಗೂ ಸಮಾಜ ಸೇವಾರಂಗಗಳಲ್ಲಿ ಸಲ್ಲಿಸಿದ ಅಮೂಲ್ಯ ಸೇವೆಯನ್ನು ಲಕ್ಷಿಸಿ ಬ್ರಿಟಿಷ್ ಇಂಡಿಯಾ ಸರಕಾರ ಅವರಿಗೆ 'ರಾವ್ ಬಹದ್ದೂರ್' ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಿತು. ಕನ್ನಡ ಸಾಹಿತ್ಯಕ್ಕಾಗಿ ಅವರು ಸಲ್ಲಿಸಿದ ಅಪೂರ್ವ ಸೇವೆಯನ್ನು ಕನ್ನಡ ಜನತೆ ಮೆಚ್ಚಿ, 1926ರಲ್ಲಿ ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. ಕರ್ನಾಟಕ ವಿಶ್ವವಿದ್ಯಾಲಯ ಅವರ ವಿದ್ವತ್ತನ್ನೂ ಸಾಹಿತ್ಯ ಸೇವೆಯನ್ನೂ ಕೃತಜ್ಞತೆಯಿಂದ ಸ್ಮರಿಸಿ ಅವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ಕೊಟ್ಟಿತು.

ಕನ್ನಡ ನುಡಿ, ಸಾಹಿತ್ಯ, ಸಂಸ್ಕೃತಿಗಳಿಗೆ ಸುಮಾರು ಅರ್ಧ ಶತಮಾನಕಾಲ ಸೇವೆ ಸಲ್ಲಿಸಿದ ಹಳಕಟ್ಟಿಯವರು 1964ರ ಜೂನ್‌ನಲ್ಲಿ ಶಿವೈಕ್ಯರಾದರು.

## ಹಾರ್ಡಿ

ಥಾಮಸ್ ಹಾರ್ಡಿ 19ನೆಯ ಶತಮಾನದಲ್ಲಿ ಜೀವಿಸಿದ್ದ ಪ್ರತಿಭಾನ್ವಿತ ಆಂಗ್ಲ ಕಾದಂಬರಿಕಾರ. ಆತ ಹಳ್ಳಿಯ ಜೀವನದಿಂದ ಪಾತ್ರಗಳನ್ನು ಆರಿಸಿಕೊಂಡು ಶ್ರೇಷ್ಠ ಕಾದಂಬರಿಗಳನ್ನು ರಚಿಸಿದ. ಹಳ್ಳಿಯ ಮಧ್ಯಮವರ್ಗ

[illegible] ಮುಗ್ಧಪ್ರೇಮ-[illegible] ಕಟು ವ್ಯಂಗ್ಯದೊಂದಿಗೆ ಅವನ ಕಾದಂಬರಿಗಳಲ್ಲಿ ನಿರೂಪಿತವಾಗಿವೆ.

ಥಾಮಸ್ ಹಾರ್ಡಿ ದಕ್ಷಿಣ ಇಂಗ್ಲೆಂಡಿನ ಡಾರ್ಚೆಸ್ಟರ್ ಬಳಿಯಲ್ಲಿರುವ [illegible]ನಲ್ಲಿ 1840ರ ಜೂನ್ 2ರಂದು ಜನಿಸಿದ. ಅವನ ಕಾದಂಬರಿಗಳಿಗೆಲ್ಲ ಈ ವೆಸೆಕ್ಸ್ ಪ್ರದೇಶದ ಹಳ್ಳಿಗಳ ರಮ್ಯ ಪ್ರಕೃತಿಯೇ [illegible]ಯಾಗಿತ್ತು. ತಂದೆ ಕಲ್ಲು ಕಟ್ಟಡದ ಕೆಲಸಗಾರ. ಆತ [illegible] ಬಾರಿಸುತ್ತಿದ್ದ. ಹಾರ್ಡಿಯಲ್ಲಿ ಸಂಗೀತವನ್ನು ಕುರಿತು ಪ್ರೇಮವೂ ವಾಸ್ತುಶಿಲ್ಪದಲ್ಲಿ ಆಸಕ್ತಿಯೂ ಬೆಳೆಯಲು ತಂದೆಯ



ಮಾನವೀಯ ಅನುಕಂಪ : ಹಾರ್ಡಿ

ಪ್ರೋತ್ಸಾಹವೇ ಕಾರಣ. ತಾಯಿಯಿಂದ ಆತ ಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡ. ಎಂಟು ವರ್ಷದ ತನಕ ಮನೆಯಲ್ಲಿ ತಾಯಿತಂದೆಯರ ಪ್ರೀತಿಯ ಆರೈಕೆಯಲ್ಲಿ ಬೆಳೆದ. ಅನಂತರ ಡಾರ್ಚೆಸ್ಟರ್ ಗ್ರಾಮರ್ ಶಾಲೆಯಲ್ಲೂ ಮುಂದೆ ಲಂಡನಿನ ಕಿಂಗ್ಸ್ ಕಾಲೇಜಿನಲ್ಲೂ ವಿದ್ಯಾಭ್ಯಾಸ ಮುಗಿಸಿದ. ಬಾಲ್ಯದಲ್ಲಿ ಥಾಮಸ್ ಹಾರ್ಡಿ ತುಂಬಾ ಸೂಕ್ಷ್ಮ ಮನೋವೃತ್ತಿಯವನೂ ನಾಚಿಕೆ ಸ್ವಭಾವದವನೂ ಆಗಿದ್ದ.

ಹಾರ್ಡಿ ತನ್ನ 22ನೆಯ ವಯಸ್ಸಿನಲ್ಲಿ ಲಂಡನಿನಲ್ಲಿ ಸಹಾಯಕ ವಾಸ್ತುಶಿಲ್ಪಿಯಾಗಿ ಕೆಲಸ ಮಾಡಿದ. ಆದರೆ ಮುಖ್ಯವಾಗಿ ಅವನ ಒಲವು ಸಾಹಿತ್ಯದ ಕಡೆಗಿತ್ತು. 1872ರಲ್ಲಿ ಅವನ ಮೊದಲ ಕಾದಂಬರಿ 'ಅಂಡರ್ ದಿ ಗ್ರೀನ್‌ವುಡ್ ಟ್ರೀ' ಪ್ರಕಟವಾಯಿತು.

ಅನಂತರದ 25 ವರ್ಷಗಳಲ್ಲಿ ಅವನ ಪ್ರಸಿದ್ಧ ಕಾದಂಬರಿಗಳು ಒಂದಾದ ಮೇಲೊಂದು ಪ್ರಕಟವಾದುವು. 'ಮೇಯರ್ ಆಫ್ ಕಾಸ್ಟರ್‌ಬ್ರಿಡ್ಜ್', 'ರಿಟರ್ನ್ ಆಫ್ ದಿ ನೇಟಿವ್', 'ಫಾರ್ ಫ್ರಮ್ ದಿ ಮ್ಯಾಡಿಂಗ್ ಕ್ರೌಡ್', 'ಟೆಸ್ ಆಫ್ ದಿ ಡ್ಯೂಬರ್‌ವಿಲ್', 'ಜೂಡ್ ದಿ ಅಬ್‌ಸ್ಕ್ಯೂರ್' ಅವುಗಳಲ್ಲಿ ಪ್ರಧಾನವಾದುವು.

1874ರಲ್ಲಿ ಥಾಮಸ್ ಹಾರ್ಡಿ ಎಮ್ಮಾ ಲವಿನಿಯಾ ಗಿಫರ್ಡ್ ಎಂಬುವಳನ್ನು ವಿವಾಹವಾದ. 1912ರಲ್ಲಿ ಅವನ ಹೆಂಡತಿ ತೀರಿಕೊಂಡಳು. ಎರಡು ವರ್ಷಗಳ ಅನಂತರ ಫ್ಲಾರೆನ್ಸ್ ಎಮಿಲಿ ಡಗ್ಡೇಲ್ ಎಂಬ ಚೆಲುವೆಯನ್ನು ವಿವಾಹವಾದ. ಮಕ್ಕಳಾಗಲಿಲ್ಲ. 'ಜೂಡ್ ದಿ ಅಬ್‌ಸ್ಕ್ಯೂರ್' ಕಾದಂಬರಿ ಪ್ರಕಟವಾದಾಗ ತೀವ್ರ ಪ್ರತಿಭಟನೆಯನ್ನೂ ಕಟು ವಿಮರ್ಶೆಯನ್ನೂ ಆತ ಎದುರಿಸಬೇಕಾಯಿತು. ಇದರಿಂದಾಗಿ ಅವನ ಮನಸ್ಸು ನೊಂದಿತು. ಕಾದಂಬರಿ ಬರೆಯುವುದನ್ನೇ ನಿಲ್ಲಿಸಿಬಿಡಲು ನಿರ್ಧರಿಸಿದ.

ಜೀವನದ ಕೊನೆಯ ಭಾಗದಲ್ಲಿ ಹಾರ್ಡಿ ತನ್ನ ಪ್ರತಿಭೆಯನ್ನು ಕವನಗಳ ರಚನೆಗಾಗಿ ಮೀಸಲಿಟ್ಟ. ಅವನ ಅತ್ಯಂತ ಪ್ರಧಾನ ಕಾವ್ಯ 'ವೆಸೆಕ್ಸ್ ಕವನಗಳು' ಎಂಬ ಹೆಸರಿನಲ್ಲಿ, ಅವನ 70ನೆಯ ವರ್ಷದಲ್ಲಿ, ಪ್ರಕಟವಾಯಿತು. ಇನ್ನೊಂದು ಕೃತಿಯಾದ 'ದಿ ಡೈನಾಸ್ಟ್' ಎಂಬುದು ನಾಟಕೀಯ ಮಹಾಕಾವ್ಯ.

ಥಾಮಸ್ ಹಾರ್ಡಿ ಅದೃಷ್ಟವಾದಿಯಾಗಿದ್ದ. ಜೀವನವನ್ನು ಕುರಿತು ಬಹಳ ನಿರಾಶಾದಾಯಕ ಮನೋಭಾವ. ಓದುಗರ ಮನಸೆಳೆಯುವಂತೆ ಕಥೆ ಹೇಳುವ ಕಲೆ ಅವನಿಗೆ ಕರಗತವಾಗಿತ್ತು. ಕೃತಿಗಳಲ್ಲಿ ಮಾನವೀಯ ಅನುಕಂಪ ಮಿಡಿಯುತ್ತಿತ್ತು.

1910ರಲ್ಲಿ ಥಾಮಸ್ ಹಾರ್ಡಿಗೆ ಇಂಗ್ಲೆಂಡಿನ ಸರಕಾರ 'ಆರ್ಡರ್ ಆಫ್ ಮೆರಿಟ್' ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಆತನ 70 ಮತ್ತು 80ನೆಯ ಹುಟ್ಟುಹಬ್ಬಗಳಲ್ಲಿ ಅಸಂಖ್ಯ ಅಭಿಮಾನಿಗಳೂ ಸ್ನೇಹಿತರೂ ಅವನಿಗೆ ಗೌರವ ಸಲ್ಲಿಸಿದರು.

ಥಾಮಸ್ ಹಾರ್ಡಿ 1928ರ ಜನವರಿ 11ರಂದು ತೀರಿಕೊಂಡ.

## ಹಾನ್ಸ್ ಕ್ರಿಶ್ಚಿಯನ್ ಆಂಡರ್‌ಸನ್

'ಕುರೂಪಿ ಬಾತುಕೋಳಿ' ಎಲ್ಲ ಮಕ್ಕಳೂ ಇಷ್ಟಪಡುವ ಕಥೆ. ಈ ಕಥೆ ಒಂದು ಮರಿಬಾತನ್ನು ಕುರಿತದ್ದು. ಅದರ ರೂಪ ನೋಡಿ ಆ ಹೊಂಡದಲ್ಲಿದ್ದ ಇತರ ಬಾತುಕೋಳಿಗಳು ನಗುತ್ತಿದ್ದುವು, ಕೀಟಲೆಮಾಡಿ ಅದನ್ನು ಅಳಿಸುತ್ತಿದ್ದುವು.

ಆದರೆ ಈ ಕುರೂಪಿ ಬಾತು ಬೆಳೆದು ಸುಂದರವಾದ ಹಂಸವಾಗುತ್ತದೆ, ಇತರ ಬಾತುಗಳು ಇದನ್ನು ನೋಡಿ ಹೊಟ್ಟೆಕಿಚ್ಚು ಪಡುವಂತಾಗುತ್ತದೆ.

ಒಂದು ರೀತಿಯಲ್ಲಿ ಈ ಕುರೂಪಿ ಬಾತುಕೋಳಿ ಬೇರಾರೂ ಅಲ್ಲ. ಸ್ವತಃ ಹಾನ್ಸ್ ಆಂಡರ್‌ಸನ್ನನೇ. ಬಡ ಮೋಚಿಯೊಬ್ಬನ ಬಲು ಕುರೂಪಿ ಮಗನಾದ ಆಂಡರ್‌ಸನ್ 'ಮಕ್ಕಳ ಕಥೆಗಳ ರಾಜ' ಅನಿಸಿದ್ದೇ ಒಂದು ಅಸಾಧಾರಣ ಕಥೆ.

ಹಾನ್ಸ್ ಕ್ರಿಶ್ಚಿಯನ್ ಆಂಡರ್‌ಸನ್ ಡೆನ್ಮಾರ್ಕಿನ ಓಡೆನ್ಸ್ ಎಂಬ ಚಿಕ್ಕ ಊರಲ್ಲಿ 1805ರ ಏಪ್ರಿಲ್ 2ರಂದು ಹುಟ್ಟಿದ. ಅದು ಒಂಟಿ ಕೋಣೆಯ ಮನೆ: ತಂದೆಯ ಪಾದರಕ್ಷೆ ಅಂಗಡಿಯೂ ಅದೇ. ತಂದೆ ಪಾದರಕ್ಷೆಗಳನ್ನು ಹೊಲಿಯುತ್ತ ಮಗನಿಗೆ ಡೆನ್ಮಾರ್ಕಿನ ಪ್ರಾಚೀನ ಜಾನಪದ ಕಥೆಗಳನ್ನೂ ಅರಬ್ಬೀ ಮೂಲದ ಯವನಯಾಮಿನೀ ಕಥೆಗಳನ್ನೂ ಹೇಳುತ್ತಿದ್ದ. ಹೀಗೆ ಹಳ್ಳಿಯ ಅಜ್ಜಿಕಥೆಗಳೆಲ್ಲ ಆಂಡರ್‌ಸನ್‌ನಿಗೆ ಕಂಠಪಾಠವಾದುವು. ಆದರೆ ಶಾಲೆಯಲ್ಲಿ ಮಾತ್ರ ಆತ ಕನಸುಕಾಣುತ್ತ ವೇಳೆ ಕಳೆಯುತ್ತಿದ್ದ.

ತಂದೆ ಸತ್ತ ಬಳಿಕ, ಮಲತಂದೆಯ ಅಸಡ್ಡೆಯಿಂದ ಬೇಸರಗೊಂಡ ಹದಿನಾಲ್ಕು ವರ್ಷ ವಯಸ್ಸಿನ ಆಂಡರ್‌ಸನ್ ಮನೆ ಬಿಟ್ಟು ರಾಜಧಾನಿ ಕೋಪೆನ್‌ಹೇಗನ್ನಿಗೆ ತಾನೊಬ್ಬನೇ ಬಂದ. ತಾನು ಮಹಾನಟ; ಮಹಾ ನರ್ತಕ ಮತ್ತು ಮಹಾಕವಿಯಾಗಬೇಕೆಂಬ ಹಂಬಲ ಅವನಿಗೆ. ದೊಡ್ಡ ಮನುಷ್ಯರ ಮನೆಗಳ ಬಾಗಿಲು ತಟ್ಟಿದ. ರಾಯಲ್ ಥಿಯೇಟರಿನಲ್ಲಿ ನಟನಾಗಬೇಕೆಂದು, ಹೇಗೋ ಮಾಡಿ ಅರಸನನ್ನು ಕಂಡು, ಅವನ ಮುಂದೆ ತಾನು ಬರೆದಿದ್ದ ಒಂದು ನಾಟಕವನ್ನು ಓದಿದ. ರಾಜ ಅವನಿಗೆ, ಈ ಹವ್ಯಾಸ ಬಿಟ್ಟು ಬಡಗಿಯಾಗು –ಎಂದು ಉಪದೇಶಿಸಿದ. ಪ್ರಸಿದ್ಧ ನರ್ತಕಿಯೊಬ್ಬಳ ಮನೆಗೆ ಹೋಗಿ ಆಂಡರ್‌ಸನ್ ಸಿಂಡರೆಲ್ಲ ನೃತ್ಯವನ್ನು ಮಾಡಿ ತೋರಿಸಿದ. ಆಕೆ ಭಯದಿಂದ ಚೀರಿ ಅವನನ್ನು ಹೊರಕ್ಕಟ್ಟಿದಳು. ದೊಡ್ಡತಲೆ, ಕ್ಷೀಣವಾದ ಬಿಳಿಚಿಕೊಂಡ ಮುಖ, ಅತಿ ಉದ್ದದ ಕೈಕಾಲುಗಳು, ವಕ್ರವಾದ ಚಲನೆ–ಹೀಗೆ ನರ್ತಕನಲ್ಲಿ ಇರಬಾರದ ಲಕ್ಷಣಗಳೆಲ್ಲ ಆಂಡರ್‌ಸನ್‌ನಲ್ಲಿದ್ದುವು.

ಆಂಡರ್‌ಸನ್ ಕವಿತೆ, ನಾಟಕಗಳನ್ನು ಬರೆದು ಪತ್ರಿಕೆಗಳಿಗೂ ರಾಯಲ್ ಥಿಯೇಟರಿಗೂ ಕಳುಹಿಸುತ್ತಲಿದ್ದ. ಅವನ್ನು ಅವರು ತಪ್ಪದೆ ಮರಳಿ ಕಳುಹಿಸುತ್ತಲೂ ಇದ್ದರು. ಕೊನೆಗೆ ರಾಯಲ್ ಥಿಯೇಟರಿನ ನಿರ್ದೇಶಕನೊಬ್ಬ ಆಂಡರ್‌ಸನ್‌ನಲ್ಲಿ ಹುದುಗಿದ್ದ ಪ್ರತಿಭೆಯನ್ನು ಗುರುತಿಸಿದ. ಆದರೆ ಶಿಕ್ಷಣದ ಅಭಾವದಿಂದ ಅವನ ಬರೆವಣಿಗೆ ವ್ಯಾಕರಣಬದ್ಧವಾಗಿರಲಿಲ್ಲ. ಊರಿನ ಕೆಲ ಮಹನೀಯರು ನಾಲ್ಕು ಕಾಸು ಸೇರಿಸಿ ಆಂಡರ್‌ಸನ್‌ನನ್ನು ಶಾಲೆಗೆ ಕಳುಹಿಸಿದರು. ಅವನ ಸಹಪಾಠಿಗಳೆಲ್ಲ ಅವನಿಗಿಂತ ಎಷ್ಟೋ ಕಿರಿಯರು. ಆಂಡರ್‌ಸನನ ಪ್ರತಿಭೆಯನ್ನೂ ಮಹನೀಯರು ಕೆಲವರು ಅವನ ಹಿತೈಷಿಗಳಾಗಿದ್ದುದನ್ನೂ ಕಂಡ ಶಾಲೆಯ ಅಧ್ಯಾಪಕ, ಅವನನ್ನು ಮನಸಾರೆ ದ್ವೇಷಿಸಿದ. ಚಿಕ್ಕ ಮಕ್ಕಳೆದುರು ಆಂಡರ್‌ಸನನನ್ನು ಲೇವಡಿ ಮಾಡಿದ. ಆಂಡರ್‌ಸನ್ ಶಾಲೆಬಿಟ್ಟು ಖಾಸಗಿಯಾಗಿ ಪಾಠ ಹೇಳಿಸಿಕೊಳ್ಳಬೇಕಾಯಿತು.

ಸದಾ ಕಲ್ಪನಾ ಸಾಮ್ರಾಜ್ಯದಲ್ಲಿ ಹಾರಾಡುತ್ತಿದ್ದ ಆಂಡರ್‌ಸನ್ ಬಳಿ ಯಕ್ಷಿಣಿ ಕಥೆಗಳ ಅಕ್ಷಯ ಪಾತ್ರೆಯೇ ಇದ್ದಂತಿತ್ತು. ಹೋದಲ್ಲೆಲ್ಲ ಕಥೆಗಾಗಿ ಮಕ್ಕಳು ಇವನಿಗೆ ಗಂಟುಬೀಳುತ್ತಿದ್ದರು. ಮಕ್ಕಳೆಂದರೆ ಅವನಿಗೂ ಮಮತೆ.

ಆತ ಕಾವ್ಯ, ನಾಟಕಗಳನ್ನು ಸಾಕಷ್ಟು ಬರೆಯುತ್ತಿದ್ದರೂ ಅದರಿಂದ ಹೊಟ್ಟೆ ಹೊರೆಯುವುದೇ ಕಷ್ಟವಾಗಿತ್ತು. ಹೀಗಿರುವಾಗಲೇ ಅವನ ಪ್ರಥಮ ಮಕ್ಕಳ ಕಥೆಗಳ ಪುಸ್ತಕ ಹೊರಬಂತು. ಆಗ ಆಂಡರ್‌ಸನ್‌ನಿಗೆ ಮೂವತ್ತು ವರ್ಷ ವಯಸ್ಸು.

ಆಂಡರ್‌ಸನನ ಯಕ್ಷಿಣಿ ಕಥೆಗಳ ಪುಸ್ತಕ ಬೇಗನೆ ಜನಪ್ರಿಯವಾಯಿತು. ಒಮ್ಮಿಂದೊಮ್ಮೆಲೆ ಎಲ್ಲರ ಬಾಯಲ್ಲೂ ಅವನ ಹೆಸರು ಕುಣಿಯಲಾರಂಭಿಸಿತು. ಅವನ ಕಥೆಗಳನ್ನು ಎಷ್ಟು ಬಾರಿ ಓದಿದರೂ ಮಕ್ಕಳಿಗೆ ತೃಪ್ತಿಯಾಗುತ್ತಿರಲಿಲ್ಲ. ಆಂಡರ್‌ಸನ್ ಹೊಸ ಹೊಸ ಕಥೆಗಳನ್ನು ಬರೆಯಲಾರಂಭಿಸಿದ. ಅವನ ಕೀರ್ತಿ ದೇಶದಿಂದ ದೇಶಕ್ಕೆ ಹರಡಿತು.

ಆಂಡರ್‌ಸನನ ಕಥೆಗಳನ್ನು ಯಕ್ಷಿಣಿ ಕಥೆಗಳೆಂದು ಕರೆದರೂ ಅವೆಲ್ಲ ಯಕ್ಷ–ಯಕ್ಷಿಣಿಗಳಿಗೆ ಮಾತ್ರ ಸಂಬಂಧಿಸಿದ ಕಥೆಗಳಲ್ಲ. ಹೆಚ್ಚಿನ ಕಥೆಗಳಲ್ಲಿ ಸಾಮಾನ್ಯ ಮನುಷ್ಯರೇ ಪಾತ್ರಗಳು. ಆದರೆ ಕಥೆ ಹೇಳುವ ರೀತಿಯಲ್ಲಿ ಮಾತ್ರ ಮೋಹಕ ಶಕ್ತಿಯಿದೆ. ಅವನ ಕಥೆಗಳಲ್ಲಿ ಪ್ರಾಣಿ, ಮರ, ಗೊಂಬೆ, ಮೇಜು, ಕುರ್ಚಿಗಳೂ ಮಾತನಾಡುತ್ತವೆ, ಕುಚೋದ್ಯ ಮಾಡುತ್ತವೆ.



ಕುರೂಪಿ ಬಾತುಕೋಳಿ : ಆಂಡರ್‌ಸನ್

ಕೆಲವು ಕಥೆಗಳು ಹೊಟ್ಟೆ ಹುಣ್ಣಾಗುವಂತೆ ನಗಿಸುವವೆ, ಕೆಲವು ಮನ ಮುಟ್ಟುವಂತೆ ದುಃಖಭರಿತವಾಗಿರುತ್ತವೆ.

'ಚಕ್ರವರ್ತಿಯ ಹೊಸ ಬಟ್ಟೆ', 'ಕೆಂಪು ಪಾದರಕ್ಷೆ', 'ಫರ್ ಮರ' 'ಟಿನ್ ಸೈನಿಕ', 'ಥಂಬಲೀನಾ', 'ಒರಟು ಹಂಸಗಳು' ಮುಂತಾದುವು ಆಂಡರ್‌ಸನನ ಅತಿ ಪ್ರಸಿದ್ಧ ಕಥೆಗಳಲ್ಲಿ ಕೆಲವು.

ತನ್ನ ಕಥೆಗಳಿಂದ ಆಂಡರ್‌ಸನ್ ಲೋಕ ವಿಖ್ಯಾತನಾದ. ಜಗತ್ತಿನ ಮಹಾಸಾಹಿತಿಗಳು ಅವನ ಸ್ನೇಹಿತರಾಗಿದ್ದರು. ರಾಜ ಮಹಾರಾಜರು ಅವನನ್ನು ತಮ್ಮಲ್ಲಿಗೆ ಕರೆಸಿಕೊಂಡು ಸತ್ಕರಿಸಿದರು. ಆದರೆ ಆಂಡರ್‌ಸನ್ ಜಂಬಪಡಲಿಲ್ಲ. ಸಾಮಾನ್ಯ ಜನರಂತೆಯೇ ಬಾಳಿದ. ಹಳೆಯ ಮಾದರಿಯ ಉಡುಪನ್ನು ಧರಿಸುವುದು ಅವನಿಗೆ ಇಷ್ಟವಾಗಿತ್ತು.

1867ರಲ್ಲಿ ಆಂಡರ್‌ಸನನ ಹುಟ್ಟೂರು ಓಡೆನ್ಸ್‌ನಲ್ಲಿ ಆತನ ಗೌರವಾರ್ಥ ಒಂದು ಉತ್ಸವ ಜರಗಿತು. ಊರನ್ನು ಆಡಂಬರದಿಂದ ಶೃಂಗರಿಸಿದರು. ಶಾಲೆಗಳಿಗೆ ರಜಾಕೊಟ್ಟರು. ಹಿಂದೆ ಹೀನೈಸಿದ್ದ ಜನರೇ ಅಂದು ಆತನನ್ನು ಹಾಡಿ ಹೊಗಳಿದರು.

ಎಂಟು ವರ್ಷಗಳ ಬಳಿಕ, 1875ರ ಆಗಸ್ಟ್ 4ರಂದು, ತಾನು ಅತ್ಯಂತ ಸುಖಿ ಎಂಬ ತೃಪ್ತಭಾವನೆಯಿಂದ ಆಂಡರ್‌ಸನ್ ನಿಧನನಾದ.

## ಹಾಪ್ಟ್‌ಮನ್

ಗೇಹಾರ್ಟ್ ಹಾಪ್ಟ್‌ಮನ್‌ನಂಥ ದಡ್ಡ ವಿದ್ಯಾರ್ಥಿ ಸಿಗವುದೇ ಕಷ್ಟ ಎಂಬುದು ಅವನ ಶಾಲೆಯ ಉಪಾಧ್ಯಾಯರ ಅಭಿಪ್ರಾಯವಾಗಿತ್ತು. ಕೆಲವು ವರ್ಷಗಳ ಶಾಲಾ ಶಿಕ್ಷಣದ ಬಳಿಕ, ಹೊಲದಲ್ಲಿ ನೇಗಿಲು ಹೂಡಲು ಮಾತ್ರ ಆತ ಯೋಗ್ಯ ಎಂದು ತೀರ್ಮಾನವಾಯಿತು. ಕೃಷಿಮಾಡಿ ಉನ್ನತಿಗೆ ಬರುವ ಲಕ್ಷಣ ಕಾಣದಿದ್ದಾಗ ಗೇಹಾರ್ಟ್ ಶಿಲ್ಪಕಲೆಯನ್ನು ಕಲಿಯಲು ನಿರ್ಧರಿಸಿದ. ಇಪ್ಪರಲ್ಲಿ ಇಪ್ಪತ್ತಮೂರರ ಹಾಪ್ಟ್‌ಮನ್

೬೫೭

... ಹೊಟ್ಟೆಪಾಡಿನ ಚಿಂತೆ ಕಳೆಯಿತು.

ಬರ್ಲಿನ್‌ನಲ್ಲಿ ಮನೆ ಮಾಡಿದ. ಕಲೆಯನ್ನು ಕೈಬಿಟ್ಟ. ಸಾಹಿತ್ಯದಲ್ಲಿ ಕೈ ಆಡಿಸಲು ಮನಸ್ಸು ಮಾಡಿದ. ನಾಟಕರಂಗದಲ್ಲಿ ಸ್ವಲ್ಪ ಅನುಭವ ಪಡೆದು ತಾನೇ ನಾಟಕರಚನೆಗೆ ತೊಡಗಿದ. ಇವನ ಮೊಟ್ಟಮೊದಲ ನಾಟಕ 'ಮುಂಜಾನೆಗೆ ಮುಂಚೆ' (1889) ಪ್ರಥಮ ಪ್ರದರ್ಶನದಲ್ಲೇ ಜನಪ್ರಿಯವಾಯಿತು. 1912ರಲ್ಲಿ ನೊಬೆಲ್ ಬಹುಮಾನ ದೊರೆಯಿತು. ಜಗದ್ವಿಖ್ಯಾತ ಸಾಹಿತಿಗಳ ಸಾಲಿನಲ್ಲಿ ಇವನಿಗೂ ಸ್ಥಾನ ಲಭಿಸಿತು.

ಇದ್ದಕ್ಕಿದ್ದಂತೆ ಶ್ರೀಮಂತರಾದುದರ ಪರಿಣಾಮವಾಗಿ ರೈತ ಕುಟುಂಬಗಳು ಹೀನ ಸ್ಥಿತಿಗೆ ಇಳಿಯುವುದೇ 'ಮುಂಜಾನೆಗೆ ಮುಂಚೆ' ನಾಟಕದ ವಸ್ತು. ಈ ನಾಟಕದಲ್ಲಿ ಸನ್ನಿವೇಶಗಳೂ ಸಂಭಾಷಣೆಗಳೂ ತುಂಬ ಸಹಜವಾಗಿ ಮೂಡಿವೆ. ಈ ನಾಟಕದ ರೈತರು ಕೇಂದ್ರ ಯುರೋಪಿನ ಸೈಲೀಷಿಯಾ ಪ್ರಾಂತದವರು. ಹಾಪ್ಟ್‌ಮನ್ ಕೂಡಾ ಇದೇ ಪ್ರಾಂತದವನು.



ಹೊಸ ಹಾದಿ : ಹಾಪ್ಟ್‌ಮನ್

ಹಾಪ್ಟ್‌ಮನ್ ಹುಟ್ಟಿದ್ದು 1862ರ ನವೆಂಬರ್ 15ರಂದು. ಆಗಿನ ಜರ್ಮನಿಯಲ್ಲಿ ಜನರು ಫ್ರೆಂಚ್, ರಷ್ಯನ್ ಮತ್ತು ಸ್ಕ್ಯಾಂಡಿನೇವಿಯನ್ ಸಾಹಿತಿಗಳಿಗೆ ಕೊಡುವಷ್ಟು ಗೌರವವನ್ನು ದೇಶೀಯ ಸಾಹಿತಿಗಳಿಗೆ ಕೊಡುತ್ತಿರಲಿಲ್ಲ. ಈ ಪರಿಸ್ಥಿತಿ ಬದಲಾಗಲು ಕಾರಣರಾದ ಪ್ರಭಾವಶಾಲೀ ಲೇಖಕರಲ್ಲಿ ಹಾಪ್ಟ್‌ಮನ್ ಗಣನೀಯ.

ನಾಟಕರಂಗದಲ್ಲಿ ಕ್ರಾಂತಿ ಉಂಟುಮಾಡಿದ ಹಾಪ್ಟ್‌ಮನನ ಇನ್ನೊಂದು ನಾಟಕ 'ನೇಕಾರರು' (1892). 1844ರಲ್ಲಿ ಸೈಲೀಷಿಯಾ ಪ್ರಾಂತದಲ್ಲಿ ನಡೆದ ನೇಕಾರರ ಕ್ರಾಂತಿಯೇ ಇದರ ವಸ್ತು. ಕಥೆಗೆ ಒಬ್ಬ ನಾಯಕನಿರುವ ಹಳೆಯ ಸಂಪ್ರದಾಯವನ್ನು ಈ ನಾಟಕ ಮುರಿಯಿತು. ಕ್ರಾಂತಿಯಲ್ಲಿ ಭಾಗವಹಿಸಿದ ಕೆಲಸಗಾರರ ತಂಡಕ್ಕೆ ತಂಡವೇ ಈ ನಾಟಕದಲ್ಲಿ ನಾಯಕ ಸ್ಥಾನವನ್ನು ಪಡೆದಿದೆ. 20ನೆಯ ಶತಮಾನದ ಆರಂಭಕಾಲದಲ್ಲಿ ರಚಿತವಾದ ಐರೋಪ್ಯ ನಾಟಕಗಳ ಮೇಲೆ ಈ ನಾಟಕ ತುಂಬ ಪ್ರಭಾವಬೀರಿತು.

ಹಾಪ್ಟ್‌ಮನನ ಪ್ರತಿಭೆ ಯಾವುದೇ ಒಂದು ಪ್ರಕಾರದ ಶೈಲಿಯ ನಾಟಕ ರಚನೆಗೆ ಮೀಸಲಾಗಲಿಲ್ಲ. ಗಂಭೀರವಾದ ಟ್ರಾಜಿಡಿಯಿಂದ ಲಘು ಕಾಮಿಡಿಯವರೆಗೆ ಇವನ ನಾಟಕಗಳ ವ್ಯಾಪ್ತಿ. ಇವನ 'ದಿ ಬೀವರ್ ಕೋಟ್' (1893) ಆಧುನಿಕ ಜರ್ಮನ್ ಸಾಹಿತ್ಯದ ಅತಿ ಶ್ರೇಷ್ಠ ಕಾಮಿಡಿ ಎನಿಸಿದೆ. 1893ರಲ್ಲೇ ಪ್ರದರ್ಶಿತವಾದ 'ಹಾನೆಲೆ' ನಾಟಕದಲ್ಲಿ ಮನುಷ್ಯರೂ ದೇವತೆಗಳೂ ಬೆರೆಯುವಂಥ ಅವಾಸ್ತವ ಸನ್ನಿವೇಶವಿದೆ. ಹಾಪ್ಟ್‌ಮನ್ ಕೆಲವೊಮ್ಮೆ ತನ್ನ ಒಂದೇ ನಾಟಕದಲ್ಲಿ, ತಾನು ರೂಢಿಸಿಕೊಂಡಿದ್ದ ಹಲವು ಶೈಲಿಗಳನ್ನು ಬೆರೆಸಿ ಬರೆಯುತ್ತಿದ್ದ.

ನಾಟಕಗಳು ಮಾತ್ರವಲ್ಲದೆ ಈತ ಇತರ ಕೃತಿಗಳನ್ನೂ ರಚಿಸಿದ್ದಾನೆ. 'ಗ್ರೀಸಿನಲ್ಲಿ ವಸಂತ' ಎಂಬುದು ಪ್ರವಾಸ ಕಥನ. 'ದಿ ಫೂಲ್ ಇನ್ ಕ್ರೈಸ್ಟ್ ಎಮಾನ್ಯುಯೆಲ್ ಕ್ವಿಂಟ್' ಎಂಬುದೊಂದು ಕಾದಂಬರಿ. 'ಟಿಲ್ ಯೂಲೆನ್ ಸ್ಪಯ್‌ಗೆಲ್' ಮಹಾಕಾವ್ಯ. ಹಾಪ್ಟ್‌ಮನನ ಅಮೆರಿಕ ಪ್ರವಾಸದ ಪರಿಣಾಮವಾಗಿ ಹುಟ್ಟಿಕೊಂಡ ಕಾದಂಬರಿ 'ಅಟ್ಲಾಂಟಿಸ್'.

ಹಾಪ್ಟ್‌ಮನನ ಶ್ರೇಷ್ಠ ಕೃತಿಗಳು 19ನೆಯ ಶತಮಾನದ ಕೊನೆಯ ಭಾಗ ಮತ್ತು 20ನೆಯ ಶತಮಾನದ ಆರಂಭದಲ್ಲಿ ಬರೆಯಲ್ಪಟ್ಟುವು. ಇವುಗಳನ್ನು ರಚಿಸಿದ ಅನಂತರವೂ ಹಾಪ್ಟ್‌ಮನ್ ತನ್ನ ಜೀವನದ ಕೊನೆಯತನಕ, ಅಂದರೆ 1946ರ ಜೂನ್ 6ರಂದು ಸೈಲೀಷಿಯಾ ಪ್ರಾಂತದ ಆಗ್ನೆಟೆಂಡಾರ್ಫ್ ಎಂಬಲ್ಲಿ ಕೊನೆಯುಸಿರೆಳೆಯುವವರೆಗೆ, ನಿರಂತರವಾಗಿ ಸಾಹಿತ್ಯಸೃಷ್ಟಿ ಮಾಡುತ್ತಲೇ ಇದ್ದ.

## ಹಾರಿಯಟ್ ಬೀಚರ್ ಸ್ಟೋ

ಟಾಮ್ ಎಂಬ ಗುಲಾಮು ನೀಗ್ರೊ ಪಡುವ ಸಂಕಷ್ಟಗಳ ಚಿತ್ರಣವೇ 'ಅಂಕಲ್ ಟಾಮ್ಸ್ ಕ್ಯಾಬಿನ್'. ಈ ಖ್ಯಾತ ಕಾದಂಬರಿಯ ಕರ್ತೃ ಹಾರಿಯಟ್ ಎಲಿಜಬೆತ್ ಬೀಚರ್ ಸ್ಟೋ.

ಅಮೆರಿಕ ಸಂಯುಕ್ತ ಸಂಸ್ಥಾನದ ದಕ್ಷಿಣ ಭಾಗದ ರಾಜ್ಯಗಳಲ್ಲಿ ಗುಲಾಮಗಿರಿ ಒಂದು ಕಾಲಕ್ಕೆ ತುಂಬ ವ್ಯಾಪಕವಾಗಿತ್ತು. ಸ್ಟೋ ಎಂದೂ ಗುಲಾಮರನ್ನು ಕೊಂಡವಳಲ್ಲ. ಆದರೆ ತನ್ನ ಸಂಚಾರ ಕಾಲದಲ್ಲಿ ಕೆಂಟುಕಿ ಪ್ರದೇಶದ ಗುಲಾಮರ ಜೀವನವನ್ನು ಕಂಡಿದ್ದಳು. ಆಕೆ ತನ್ನ 40ನೆಯ ವಯಸ್ಸಿನಲ್ಲಿ ಬರೆದ 'ಅಂಕಲ್ ಟಾಮ್ಸ್ ಕ್ಯಾಬಿನ್' ಗುಲಾಮಗಿರಿಯನ್ನು ವಿರೋಧಿಸುತ್ತಿದ್ದ ಪತ್ರಿಕೆಯೊಂದರಲ್ಲಿ ಧಾರಾವಾಹಿಯಾಗಿ 1851ರಲ್ಲಿ ಪ್ರಕಟವಾಯಿತು. ಬೇಗನೆ ಪುಸ್ತಕರೂಪದಲ್ಲೂ ಹೊರಬಿದ್ದಿತು. ಬಹುಬೇಗ ಜನರ ಮೆಚ್ಚುಗೆಯನ್ನೂ ಗಳಿಸಿತು. ಅಮೆರಿಕದಲ್ಲಿ ಮಾತ್ರವಲ್ಲ ವಿದೇಶಗಳಲ್ಲೂ ಅದು ಜನಪ್ರಿಯವಾಯಿತು. ಆದರೆ ಗುಲಾಮಗಿರಿ ಬಲವಾಗಿದ್ದ ಸಂಯುಕ್ತ ಸಂಸ್ಥಾನಗಳ ದಕ್ಷಿಣ ಭಾಗದಲ್ಲಿ ಅದನ್ನು 'ಅವಮಾನಕರ ಕೃತಿ' ಎಂದು ಜರೆದರು. 1861ರಲ್ಲಿ ಉತ್ತರ ಅಮೆರಿಕ ಖಂಡದಲ್ಲಿ ಗುಲಾಮಗಿರಿ ನಿರ್ಮೂಲಕ್ಕಾಗಿ ಅಂತರ್ಯುದ್ಧ ಆರಂಭವಾಗುವ ವೇಳೆಗೆ ಈ ಪುಸ್ತಕದ ಹತ್ತು ಹನ್ನೊಂದು ಲಕ್ಷ ಪ್ರತಿಗಳು ಮಾರಾಟವಾಗಿದ್ದುವು. ಇದನ್ನು ನಾಟಕರೂಪದಲ್ಲಿ ರಂಗಭೂಮಿಯ ಮೇಲೆ ಅಭಿನಯಿಸಿದರು. ಅದೂ ಅಪಾರ ಜನಮೆಚ್ಚಿಗೆ ಗಳಿಸಿತು. ಹೀಗೆ ಈ ಗ್ರಂಥ ಅಂತರ್ಯುದ್ಧದ ಪ್ರಚೋದಕಶಕ್ತಿಗಳಲ್ಲಿ ಒಂದಾಯಿತು. ಸುಮಾರು ಐವತ್ತು ವರ್ಷಗಳ ಕಾಲ ಈ ನಾಟಕದ ವಿವಿಧ ರೂಪಗಳು ಪ್ರದರ್ಶಿತವಾಗುತ್ತಲೇ ಇದ್ದುವು.

'ಅಂಕಲ್ ಟಾಮ್ಸ್ ಕ್ಯಾಬಿನ್' ಸುಮಾರು 22 ಭಾಷೆಗಳಿಗೆ ಭಾಷಾಂತರವಾಗಿದೆ.

ತನ್ನ ಈ ಗ್ರಂಥ ಕೇವಲ ಕಾಲ್ಪನಿಕವಾದದ್ದಲ್ಲ, ನೈಜ ವಿದ್ಯಮಾನಗಳ ಆಧಾರದ ಮೇಲೆ ರಚಿತವಾದದ್ದು—ಎಂಬುದನ್ನು ಸಿದ್ಧಪಡಿಸಲು ಸ್ಟೋ

1853ರಲ್ಲಿ 'ದಿ ಕೀ ಟು ಅಂಕಲ್ ಟಾಮ್ಸ್ ಕ್ಯಾಬಿನ್' ಎಂಬ ಪುಸ್ತಕವನ್ನು ಬರೆದಳು.

ಗುಲಾಮರ ಜೀವನವನ್ನು ಕುರಿತ ಇವಳ ಎರಡನೆಯ ಕೃತಿ 'ಡ್ರೆಡ್ ಎ ಟೇಲ್ ಆಫ್ ದಿ ಗ್ರೇಟ್ ಡಿಸ್ಮಲ್ ಸ್ವಾಂಪ್' 1856ರಲ್ಲಿ ಪ್ರಕಟವಾಯಿತು.

ಸ್ಟೋ ಇನ್ನೂ ಹಲವಾರು ಕಾದಂಬರಿಗಳು, ಕವನಗಳು, ಪ್ರಬಂಧಗಳು ಮತ್ತು ಸಣ್ಣಕಥೆಗಳನ್ನು ಬರೆದಿದ್ದಾಳೆ. ಆಕೆಯ ಸ್ಥಳವಾದ ನ್ಯೂ ಇಂಗ್ಲೆಂಡ್ ಪ್ರದೇಶದ ಹಿನ್ನೆಲೆಯ ಕಥೆಗಳು ಉತ್ತಮವಾಗಿವೆ. 'ದಿ ಮಿನಿಸ್ಟರ್ಸ್ ವ್ಯೂಯಿಂಗ್' (1859) ಈ ಬಗೆಯದು. 'ದಿ ಪರ್ಲ್ ಆಫ್ ಆರ್ಸ್ ಐಲೆಂಡ್' (1802), 'ಓಲ್ಡ್ ಟೌನ್ ಫೋಕ್ಸ್' (1869) ಇವಳ ಇತರ ಉತ್ತಮ ಕೃತಿಗಳು.



ನೀಗ್ರೊ ಜೀವನ ಚಿತ್ರ : ಹಾರಿಯಟ್

ಸ್ಟೋ 1811ರ ಜೂನ್ 14ರಂದು ಕನೆಕ್ಟಿಕಟ್ ರಾಜ್ಯದ ಲಿಚ್‌ಫೀಲ್ಡಿನಲ್ಲಿ ಜನಿಸಿದಳು. ತಂದೆ ಲೈಮನ್ ಬೀಚರ್, ಪಾದ್ರಿ. 1836ರಲ್ಲಿ ಆಕೆ ಕಾಲ್ವಿನ್ ಸ್ಟೋ ಎಂಬ ಪ್ರಾಧ್ಯಾಪಕನನ್ನು ವಿವಾಹವಾದಳು. ಆತ ಗುಲಾಮಗಿರಿ ವ್ಯವಸ್ಥೆಯ ಕಡುವಿರೋಧಿಯಾಗಿದ್ದ. 1853ರಲ್ಲಿ ಹಾರಿಯಟ್ ಯುರೋಪಿಗೆ ಭೇಟಿ ನೀಡಿ ಗುಲಾಮಗಿರಿಯ ವಿರುದ್ಧ ಅಮೆರಿಕದಲ್ಲಿ ನಡೆಯುತ್ತಿದ್ದ ಹೋರಾಟದಲ್ಲಿ, ಇಂಗ್ಲೆಂಡು ಗುಲಾಮಗಿರಿಯ ವಿರೋಧಕರ ಪಕ್ಷ ವಹಿಸುವಂತೆ ಮಾಡಲು ಪ್ರಯತ್ನಿಸಿದಳು.

1896ರ ಜುಲೈ 1ರಂದು ಆಕೆ ಹಾರ್ಟ್‌ಫೋರ್ಡ್‌ನಲ್ಲಿ ನಿಧನಳಾದಳು. ಅಮೆರಿಕದ ಅಧ್ಯಕ್ಷ ಅಬ್ರಹಾಂ ಲಿಂಕನ್‌ನನ್ನು ಈಕೆ ಭೇಟಿ ಮಾಡಿದಾಗ ಅವನು, "ಪುಸ್ತಕ [illegible] ಮಹಿಳೆ ನೀವೇ ಹಾಗಾದರೆ", ಎಂದ. ಎಂಥ ಅಪೂರ್ವ ಪ್ರಶಸ್ತಿ !

## ಹಿಂದೂಸ್ತಾನಿ ಸಂಗೀತ

ವಿಶಿಷ್ಟವಾದ ಲಕ್ಷಣಗಳನ್ನುಳ್ಳ ಹಾಗೂ ಭಾರತದಲ್ಲಿ ಪ್ರಚಾರದಲ್ಲಿರುವ ಸಂಗೀತವನ್ನು ಭಾರತೀಯ ಎಂದು ಕರೆಯುವ ಪದ್ಧತಿ ಇದೆ. ಈ ಪದ್ಧತಿಯ ಮೂಲ ತತ್ವಗಳು ಒಂದೇ ಆದರೂ ಸಂಪ್ರದಾಯ ಭೇದದಿಂದ ನಮ್ಮ ರಾಷ್ಟ್ರದಲ್ಲಿ ಶಾಸ್ತ್ರೀಯ ಸಂಗೀತ ಎರಡು ಪದ್ಧತಿಗಳಾಗಿ ಬೆಳೆದಿದೆ. ಒಂದು ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ ಪದ್ಧತಿ. ಇದನ್ನು ಕರ್ನಾಟಕ ಸಂಗೀತ ಎನ್ನುವರು; ದಕ್ಷಿಣಾದಿ ಅಥವಾ ದಾಕ್ಷಿಣಾತ್ಯ ಎಂದೂ ಹೇಳುತ್ತಾರೆ. ಇನ್ನೊಂದು ಉತ್ತರ ಭಾರತದಲ್ಲಿ ಪ್ರಚಾರದಲ್ಲಿರುವ ಪದ್ಧತಿ. ಇದನ್ನು ಹಿಂದೂಸ್ತಾನಿ ಸಂಗೀತ ಎನ್ನುವರು; ಉತ್ತರಾದಿ, ಔತ್ತರೇಯ ಎನ್ನುವುದೂ ಉಂಟು.



ಸಂಗೀತಜ್ಞ : ಅಮೀರ್ ಖುಸರೊ

ಇವೆರಡು ಸಂಗೀತ ಪದ್ಧತಿಗಳಿಗೂ ಆಧಾರವಾಗಿ ಉಪಯೋಗಿಸುವ ಪ್ರಾಚೀನ ಗ್ರಂಥಗಳು ಕೆಲವಿವೆ. ಭರತನ 'ನಾಟ್ಯಶಾಸ್ತ್ರ', ಮತಂಗನ 'ಬೃಹದ್ದೇಶಿ', ನಾರದನ 'ನಾರದೀಯ ಶಿಕ್ಷಾ'ಮುಂತಾದುವು ಈ ವರ್ಗಕ್ಕೆ ಸೇರಿದುವು, ಪ್ರಾಚೀನವಾದುವು. ಅನಂತರ ಬರೆದ ಆಧಾರಗ್ರಂಥಗಳಲ್ಲಿ, 13ನೆಯ ಶತಮಾನದಲ್ಲಿ ಶಾರ್ಙ್ಗದೇವನಿಂದ ರಚಿತವಾದ 'ಸಂಗೀತ ರತ್ನಾಕರ' ತುಂಬ ಗಣ್ಯವಾದದ್ದು.

ಬೇರೆ ಪ್ರಭಾವಗಳಿಗೆ ಅಷ್ಟಾಗಿ ಒಳಗಾಗದೆ ಭಾರತೀಯ ಸಂಗೀತವನ್ನು ಹೆಚ್ಚು ಶುದ್ಧವಾಗಿ ಉಳಿಸಿಕೊಂಡು ಬಂದಿರುವ ಪದ್ಧತಿ 'ಕರ್ನಾಟಕ ಸಂಗೀತ'. ಈ ಪರಂಪರೆಯಲ್ಲೇ ನಡೆಯುತ್ತಿದ್ದ ಉತ್ತರ ಭಾರತದ ಸಂಗೀತದಲ್ಲಿ ವ್ಯತ್ಯಾಸಗಳುಂಟಾದದ್ದು, ಮಹಮ್ಮದೀಯರ ದಾಳಿಗೆ ಉತ್ತರ ಭಾರತ ಒಳಗಾದ ಮೇಲೆ;



ಕಲಾಪೋಷಕ : ನವಾಬ್ ವಜಿದ್ ಅಲಿ ಷಾ



ಫಯಾಜ್ ಖಾನ್



ಅಬ್ದುಲ್ ಕರೀಂ ಖಾನ್



ಬಡೇ ಗುಲಾಂ ಅಲಿ ಖಾನ್

ಅವರ ಪ್ರಭಾವ ಬೆಳೆದ ಮೇಲೆ. ಹೀಗೆ ಪ್ರಭಾವ ಬೀರಿದ ಮುಹಮ್ಮದೀಯ ಸಂಗೀತಜ್ಞರಲ್ಲಿ ಅಮೀರ್ ಖುಸರೋ ಪ್ರಧಾನನಾದವನು. ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿ ಬಾಳಿದ ಇವನು ಪರ್ಷಿಯ, ಅಂದರೆ ಇರಾನಿನ, ಸಂಗೀತದ ಅನೇಕ ಅಂಶಗಳನ್ನು ಭಾರತೀಯ ಸಂಗೀತದಲ್ಲಿ ಅಳವಡಿಸಲು ಪ್ರಯತ್ನಿಸಿದ. ಹಲವಾರು ರಾಜಾಸ್ಥಾನಗಳಲ್ಲಿದ್ದ ಈ ಕವಿ ಸಂಗೀತಜ್ಞ, ಇತಿಹಾಸಕಾರ. ಸಂಗೀತ ಶಾಸ್ತ್ರವನ್ನು ಕುರಿತು ಗ್ರಂಥ ಬರೆದಿರಬಹುದೆಂದು ಅನುಮಾನವಿದೆಯಾದರೂ ಅಂಥ ಯಾವ ಗ್ರಂಥವೂ ಇದುವರೆಗೆ ದೊರೆತಿಲ್ಲ. ಸ್ವತಃ ಕವಿಯಾಗಿದ್ದ ಖುಸರೋ ಹಾಡುಗಳನ್ನು ರಚಿಸಿದ್ದು, ಅವುಗಳಲ್ಲಿ ಹಲವಾರು ಉಪಲಬ್ಧವಿವೆ. ಅವನು ಹಲವಾರು ರಾಗಗಳನ್ನೂ ತಾಳಗಳನ್ನೂ ರೂಪಿಸಿದ ಎನ್ನುವುದು ಪರಂಪರಾಗತ ನಂಬಿಕೆ.

ಮೊಗಲರ ಆಳ್ವಿಕೆಯ ಆರಂಭ ಕಾಲದಲ್ಲಿ ಉತ್ತರ ಭಾರತದ ಅರಸರೂ ನವಾಬರೂ ಸಂಗೀತಕ್ಕೆ ಒಳ್ಳೆಯ ಪ್ರೋತ್ಸಾಹ ಕೊಟ್ಟರು. ಅನಂತರ ಅಕ್ಬರನ ಕಾಲದಲ್ಲಿ ಮೊಗಲ್ ಸಾಮ್ರಾಜ್ಯ ಸ್ಥಿರಪಟ್ಟ ಮೇಲೆ ಅವನಿಂದಲೂ ಸಂಗೀತಕ್ಕೆ ತುಂಬ ಪ್ರೋತ್ಸಾಹ, ಮನ್ನಣೆ ದೊರೆತವು. ಹಿಂದೂಸ್ತಾನಿ ಸಂಗೀತ ಪ್ರಪಂಚದ ದಿವ್ಯಜ್ಯೋತಿ ಎನಿಸಿದ ತಾನ್‌ಸೇನ್ ಇದ್ದದ್ದು ಅಕ್ಬರನ ಆಸ್ಥಾನದಲ್ಲೇ. ಈ ಕಾಲದಲ್ಲಿ ಅನೇಕ ಮಂದಿ ಸಂಗೀತಜ್ಞರು ಉತ್ತರಾದಿ ಸಂಗೀತದ ಉನ್ನತಿಗೆ ಕಾರಣರಾದರು : ಇವರಲ್ಲಿ ತಾನ್‌ಸೇನನ ಗುರುಗಳಾದ ಸ್ವಾಮಿ ಹರಿದಾಸ್, ಸಂಗೀತ ಶಾಸ್ತ್ರಜ್ಞನಾಗಿದ್ದು ಹಲವಾರು ಸಂಗೀತ ಶಾಸ್ತ್ರಗ್ರಂಥಗಳನ್ನು ಬರೆದ ಪುಂಡರೀಕ ವಿಠಲ, ಉತ್ತಮ ಸಂಗೀತಕಾರರಾಗಿದ್ದ ಬ್ರಿಜ್‌ಚಂದ್, ಸಮ್ಮೋಹನ ಸಿಂಹ, ವೀಣಾಕಾರ ಶ್ರೀಚಂದ್ ಮುಂತಾದವರು ಮುಖ್ಯರು.

ಕರ್ಣಾಟಕ ಸಂಗೀತದಲ್ಲಿ ವರ್ಣ, ಕೀರ್ತನೆ ಇತ್ಯಾದಿ ರೂಪಗಳಿರುವಂತೆ ಹಿಂದೂಸ್ತಾನಿ ಸಂಗೀತದಲ್ಲಿ ಧ್ರುಪದ್, ಖ್ಯಾಲ್, ಠುಮರೀ, ಘಜಲ್, ಭಜನ್ ಇತ್ಯಾದಿ ಪ್ರಕಾರಗಳಿವೆ.

ಸವಾಯ್ ಗಂಧರ್ವ



ಬಸವರಾಜ ರಾಜಗುರು



ಕುಮಾರ ಗಂಧರ್ವ





ಮಲ್ಲಿಕಾರ್ಜುನ ಮನ್ಸೂರ್



ಗಂಗೂಬಾಯಿ ಹಾನಗಲ್



ಪಂಕಜ್ ಮಲ್ಲಿಕ್

'ಧ್ರುಪದ್' ಎಂಬ ಮಾತಿನ ಮೂಲರೂಪ ಧ್ರುವಪದ ಎನ್ನುತ್ತಾರೆ. 11ನೆಯ ಶತಮಾನದಲ್ಲಿದ್ದ ಗ್ವಾಲಿಯರ್‌ನ ರಾಜಾ ಮಾನಸಿಂಹನು ಪ್ರಾಚೀನ ಆಧಾರಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಧ್ರುವಪದಗಳನ್ನು ರಚಿಸಿದನೆಂದು ತಿಳಿದುಬಂದಿದೆ. 16ನೆಯ ಶತಮಾನದಲ್ಲಿ ಅಕ್ಬರನ ಆಸ್ಥಾನದಲ್ಲಿ ಗಾಯಕರೂ ವೀಣಾಕಾರರೂ ಧ್ರುವಪದ ಗಾಯನ ವಾದನಗಳಲ್ಲಿ ವಿವಿಧ ಶೈಲಿಗಳನ್ನು ರೂಪಿಸಿದರು. ಧ್ರುವಪದ ಗಾಯನದಲ್ಲಿ ಕೃತಿಯ ಸಾಹಿತ್ಯವನ್ನು ಬೇರೆ ಬೇರೆ ಕಾಲಗಳಲ್ಲಿಯೂ –ಎರಡನೆಯ ಕಾಲ ಮೂರನೆಯ ಕಾಲ. ಹೀಗೆ – ಚಮತ್ಕಾರವಾಗಿಯೂ ಹಾಡುವುದು ಪದ್ಧತಿ. ಈ ಪ್ರಕಾರದ ಗಾಯನ ಗಂಭೀರವೂ ರಸೋದ್ದೀಪಕವೂ ಆದದ್ದು.

'ಖ್ಯಾಲ್' ಎಂಬುದು ಪಾರಸಿ ಭಾಷೆಯಿಂದ ಬಂದದ್ದು ಎಂಬುದು ವಿದ್ವಾಂಸರ ಅಭಿಪ್ರಾಯ. ಖ್ಯಾಲ್‌ಗಳು ಸಾಮಾನ್ಯವಾಗಿ ಶೃಂಗಾರ ಭಾವಪ್ರಧಾನವಾದ ಕೃತಿಗಳು. ಇವುಗಳಲ್ಲಿ ಎರಡು ಬಗೆಗಳಿವೆ– 'ಬಡೇ ಖ್ಯಾಲ್' 'ಛೋಟೇ ಖ್ಯಾಲ್'. ಧ್ರುತ್‌ಲಯದಲ್ಲಿ ಹಾಡುವುದು ಛೋಟೇ ಖ್ಯಾಲ್, ವಿಲಂಬದಲ್ಲಿ ಹಾಡುವುದು ಬಡೇ ಖ್ಯಾಲ್. ಖ್ಯಾಲ್ ಗಾಯನ ಸದಾರಂಗ್, ಅದಾರಂಗ್ ಎಂಬವರಿಂದ ಜನಪ್ರಿಯತೆ ಪಡೆಯಿತೆಂದು ಐತಿಹ್ಯವಿದೆ. ಇವರು ಅನೇಕ ಖ್ಯಾಲ್‌ಗಳನ್ನು ರಚಿಸಿದ್ದಾರೆ.

'ಠುಮರೀ' ಭಾವಪ್ರಧಾನ ಗಾಯನ; ರಾಗದ ಶುದ್ಧತೆಯ ಕಡೆಗೆ ಅಷ್ಟಾಗಿ ಗಮನವಿರುವುದಿಲ್ಲ. ಬೇರೆ ಬೇರೆ ರಾಗಗಳನ್ನು ಮಿಶ್ರಮಾಡಿ ಕೂಡ ಹಾಡುತ್ತಾರೆ. ಹಾವಭಾವಗಳ ಮೂಲಕ ಹಾಡಿದ ಭಾವವನ್ನು ವ್ಯಕ್ತಪಡಿಸುವ ಪ್ರಯತ್ನ ಈ ಶೈಲಿಯ ವಿಶಿಷ್ಟತೆ. ಕಾಶಿ, ಲಕ್ನೋಗಳು ಈ ಶೈಲಿಯ ಹಾಡುಗಾರಿಕೆಯ ಪ್ರಸಿದ್ಧ ಕೇಂದ್ರಗಳು.

'ಘಜಲ್' ಹಿಂದೂಸ್ತಾನಿ ಸಂಗೀತದ ಜನಪ್ರಿಯ ಪ್ರಕಾರವಲ್ಲ. ಘಜಲ್‌ಗಳು ಸಾಮಾನ್ಯವಾಗಿ ಉರ್ದು ಅಥವಾ ಹಿಂದೀ ಭಾಷೆಯಲ್ಲಿರುತ್ತವೆ. ಇವು ಅರ್ಥಪೂರ್ಣ ಕವಿತೆಗಳಾದ್ದರಿಂದ ಅವುಗಳ ಭಾಷೆ ಮತ್ತು ಸಾಹಿತ್ಯಗಳ ಪರಿಚಯವಿರುವವರೇ ಅವನ್ನು ಹಾಡುವುದು ಪದ್ಧತಿ. ಈ ಗಾಯನದಲ್ಲಿ ಉಪಯೋಗಿಸುವ ತಾಳಗಳು ಲಘುಪ್ರವೃತ್ತಿಯವು.



ಭೀಮಸೇನ ಜೋಷಿ


ಅಲಿ ಅಕ್ಬರ್ ಖಾನ್


ಸಲೀಂ ಜಾಫರ್

ಮಾಡಿ ಈ ಪ್ರಕಾರದ ಸಂಗೀತದಲ್ಲಿ ಅಪಾರ ಆಸಕ್ತಿ ಬೆಳೆಯುವಂತೆ ಮಾಡಿದವರು ವಿಷ್ಣು ದಿಗಂಬರ ಪಲೂಸ್ಕರ್ ಅವರು.

ಘರಾನಾ ಮತ್ತು ಥಾಟ್ ಸಂಪ್ರದಾಯಗಳು ಹಿಂದೂಸ್ತಾನಿ ಸಂಗೀತಕ್ಕೆ ವಿಶಿಷ್ಟವಾದುವು. ಘರಾನಾ ಎಂದರೆ ಗುರುಪರಂಪರೆಯನ್ನು ಅನುಸರಿಸಿ ಹಾಡುವ ಪದ್ಧತಿ, ಇದು ಪ್ರಾಚೀನವಾದದ್ದು. ಥಾಟ್ ಇತ್ತೀಚಿನ ವ್ಯವಸ್ಥೆ. ಕರ್ಣಾಟಕ ಸಂಗೀತದಲ್ಲಿ ವೆಂಕಟಮುಖಿಯವರು ರೂಪಿಸಿದ 72 ಮೇಳಕರ್ತ ರಾಗಗಳ ಪದ್ಧತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ವಿಷ್ಣು ನಾರಾಯಣ ಭಾತ್‌ಖಂಡೆಯವರು ಹಿಂದೂಸ್ತಾನಿ ಸಂಗೀತದಲ್ಲಿ ಹತ್ತು 'ಥಾಟ್'ಗಳನ್ನು ರೂಪಿಸಿದರು. ಇದಕ್ಕೆ ಮುಂಚೆ ಹಿಂದೂಸ್ತಾನಿ ಸಂಗೀತದಲ್ಲಿ ರಾಗರಾಗಿಣಿ ಪದ್ಧತಿ ಇತ್ತು.

ಹಿಂದೂಸ್ತಾನಿ ಸಂಗೀತದಲ್ಲಿ ಹಲವಾರು ವಿಶಿಷ್ಟ ವಾದ್ಯಗಳನ್ನು ಉಪಯೋಗಿಸುತ್ತಾರೆ. ಇವುಗಳಲ್ಲಿ ಸಿತಾರ್, ಸಾರಂಗಿ, ದಿಲ್‌ರುಬಾ, ಸ್ವರಮಂಡಲ ಮುಂತಾದುವು ಮುಖ್ಯವಾದುವು. ನಾಗಸ್ವರದ ವರ್ಗಕ್ಕೆ ಸೇರಿದ ಹಿಂದೂಸ್ತಾನಿ ಸಂಗೀತವಾದ್ಯ ಶಹನಾಯ್, ಮೃದಂಗಕ್ಕೆ ಬದಲಾಗಿ ಅವರಲ್ಲಿ ತಬಲ ಉಪಯೋಗವಿದೆ. ತಂಬೂರಿ ಎರಡೂ ಪ್ರಕಾರಗಳಲ್ಲೂ ಏಕರೀತಿಯಲ್ಲಿ ಉಪಯೋಗದಲ್ಲಿರುವ ವಾದ್ಯ. ಇದನ್ನು ಹಿಂದೂಸ್ತಾನಿ ಸಂಗೀತಗಾರರು ತಾನ್‌ಪೂರಾ ಎನ್ನುತ್ತಾರೆ. ರೂಪದಲ್ಲಿ ಭಿನ್ನತೆ ಇದ್ದರೂ ಎರಡೂ ಸಂಪ್ರದಾಯಗಳಲ್ಲಿ ವೀಣೆಯ ಉಪಯೋಗವಿದೆ.

ಈ ಎರಡು ಪದ್ಧತಿಗಳ ನಡುವೆ ಪರಸ್ಪರ ವಿನಿಮಯ ಹೆಚ್ಚುತ್ತಿದೆ. ಉತ್ತರ ಭಾರತದಲ್ಲಿ ಕರ್ಣಾಟಕ ಸಂಗೀತದಲ್ಲೂ ದಕ್ಷಿಣ ಭಾರತದಲ್ಲಿ ಹಿಂದೂಸ್ತಾನಿ ಸಂಗೀತದಲ್ಲೂ ಆಸಕ್ತಿ ಬೆಳೆಯುತ್ತಿದೆ.

ನೋಡಿ : ಕರ್ಣಾಟಕ ಸಂಗೀತ ; ಭಾತ್‌ಖಂಡೆ ; ಭಾರತೀಯ ಸಂಗೀತ ; ವಿಷ್ಣು ದಿಗಂಬರ ಪಲೂಸ್ಕರ್


ವಿಲಾಯತ್ ಖಾನ್

'ಭಜನ್'ಗಳು ಭಕ್ತಿ, ಜ್ಞಾನ, ವೈರಾಗ್ಯ ಭಾವಪ್ರತಿಪಾದಕವಾದ ಭಕ್ತಿ ಗೀತಗಳು. ಇವು ಸಾಮಾನ್ಯವಾಗಿ ಹಿಂದೀ ಭಾಷೆಯಲ್ಲಿರುತ್ತವೆ; ಇವು ಸಂತರ ಕೃತಿಗಳು. ಶಾಸ್ತ್ರೀಯ ರಾಗಗಳನ್ನು ಅನುಸರಿಸಿ ಇವನ್ನು ಹಾಡುತ್ತಾರೆ. ಕೆಲವು ವೇಳೆ ರಾಗಗಳನ್ನು ಬೆರೆಸುವುದೂ ಉಂಟು. ಮೀರಾಬಾಯಿಯ ಭಜನ್‌ಗಳು ತುಂಬ ಪ್ರಸಿದ್ಧವಾಗಿದ್ದು ಭಾರತದ ಎಲ್ಲೆಡೆಗಳಲ್ಲಿಯೂ ಪ್ರಚಾರದಲ್ಲಿವೆ. ಭಜನ್‌ಗಳನ್ನು ಜನಪ್ರಿಯ

## ಹಿನ್ನೆಲೆ ಗಾಯನ

ಇಂದು ಎಳೆಯರಿಂದ ಹಿರಿಯರವರೆಗೆ ತಿಳಿದಿರುವ ಅತ್ಯಂತ ಜನಪ್ರಿಯ ಸಂಗೀತವೆಂದರೆ ಚಲಚ್ಚಿತ್ರ ಗೀತೆಗಳು. ಇವುಗಳನ್ನು ಹಾಡಿರುವ ಕಲಾವಿದ ಕಲಾವಿದೆಯರ ಸಂಖ್ಯೆ ದೊಡ್ಡದು. ನಮ್ಮಲ್ಲಿ ಲತಾ ಮಂಗೇಶ್‌ಕರ್, ಮಹಮದ್ ರಫಿ, ಮುಖೇಶ್, ಪಿ. ಸುಶೀಲಾ, ಪಿ. ಬಿ. ಶ್ರೀನಿವಾಸ್, ಮುಂತಾದವರು ಈ ವರ್ಗದ ಕಲಾವಿದರಲ್ಲಿ ತುಂಬ ಜನಪ್ರಿಯರಾಗಿದ್ದಾರೆ. ಇವರ ಹೆಸರುಗಳು ಮನೆಮಾತಾಗಿವೆ. ಇವರು ಹಾಡಿರುವ ಗೀತೆಗಳು ನೂರಾರು, ಸಹಸ್ರಾರು.


ಅಲ್ಲಾರಖಾ



ಮುಖೇಶ್ ಲತಾಮಂಗೇಶ್‌ಕರ್ ಪಿ. ಸುಶೀಲಾ

ಹಿನ್ನೆಲೆ ಗಾಯಕರು ಚಲಚ್ಚಿತ್ರದಲ್ಲಿ ಅಭಿನಯಿಸುವುದಿಲ್ಲ: ಅಭಿನಯಿಸುವವರಿಗೆ ತಮ್ಮ ಕಂಠದಾನ ಮಾಡುತ್ತಾರೆ. ಮಾತುಗಾರಿಕೆಗಲ್ಲ. ಹಾಡುಗಳಿಗೆ ಮಾತ್ರ. ಹಿನ್ನೆಲೆ ಗಾಯನವೆಂದು ಕರೆಯುವುದು ಈ ಹಾಡುಗಾರಿಕೆಯನ್ನೇ. ನಾಯಕನ ಹಾಡಿಗೆ ಶ್ರೇಷ್ಠ ಹಿನ್ನೆಲೆ ಗಾಯಕನನ್ನೂ ನಾಯಕಿಯ ಹಾಡಿಗೆ ಶ್ರೇಷ್ಠ ಹಿನ್ನೆಲೆ ಗಾಯಕಿಯನ್ನೂ ಆರಿಸುವುದು ಪದ್ಧತಿ. ಈ ಹಾಡುಗಳನ್ನು ಮೊದಲೇ ಧ್ವನಿಮುದ್ರಿಸಿಕೊಳ್ಳುತ್ತಾರೆ. ಆಯಾ ಸನ್ನಿವೇಶದ ಚಿತ್ರಣ ನಡೆಯುವಾಗ ಮೊದಲೇ ಸಿದ್ಧಪಡಿಸಿದ್ದ ಹಾಡಿನ ಮುದ್ರಿಕೆಯನ್ನು ನುಡಿಸುತ್ತಾರೆ. ನಾಯಕ ನಾಯಕಿಯರು ತಕ್ಕ ಹಾವ ಭಾವಗಳೊಡನೆ ಅಭಿನಯಿಸುತ್ತ ಹಾಡಿನ ಪದಗಳಿಗೆ ಅನುಸಾರವಾಗಿ ತಮ್ಮ ತುಟಿಗಳನ್ನು ಚಲಿಸುವುದರ ಮೂಲಕ 'ಹಾಡುತ್ತಾರೆ'. ಈ ಚಿತ್ರವನ್ನೂ ಹಾಡಿನ ಧ್ವನಿಮುದ್ರಿಕೆಯನ್ನೂ ಸರಿಯಾಗಿ ಮೇಳವಿಸಿದ ಚಲಚ್ಚಿತ್ರ ತೆರೆಯ ಮೇಲೆ ಪ್ರದರ್ಶಿಸಲ್ಪಟ್ಟಾಗ, ಅದನ್ನು ನೋಡುವವರಿಗೆ, ಅಭಿನಯಿಸುವ ವ್ಯಕ್ತಿಯೇ ಹಾಡುತ್ತಿರುವಂತೆ ಭಾಸವಾಗುತ್ತದೆ. ಭಾರತೀಯ ಚಲಚ್ಚಿತ್ರರಂಗದಲ್ಲಿ ಹಿನ್ನೆಲೆ ಗಾಯನದ ಪಾತ್ರ ವಿಶಿಷ್ಟವಾದದ್ದು. ಯಾಕೆಂದರೆ, ಸಾಮಾನ್ಯವಾಗಿ ಹಾಡುಗಳಿಲ್ಲದ ಚಲಚ್ಚಿತ್ರ ನಮ್ಮಲ್ಲಿ ಇಲ್ಲವೇ ಇಲ್ಲ, ಹಿಂದೆ ಒಂದು ಚಲಚ್ಚಿತ್ರದಲ್ಲಿ ಡಜನ್ ಗಟ್ಟಲೆ ಹಾಡುಗಳೂ ಇರುತ್ತಿದ್ದುವು.

ಕೇವಲ 25 ವರ್ಷಗಳ ಹಿಂದೆ ಹಿನ್ನೆಲೆ ಗಾಯನ ಅಪರೂಪವಾಗಿದ್ದಿತು. ಆಗ ಒಳ್ಳೆಯ ಕಂಠಶ್ರೀಯುಳ್ಳ ನಟ, ನಟಿಯರನ್ನೇ ಚಲಚ್ಚಿತ್ರಗಳಿಗೆ ಆರಿಸುತ್ತಿದ್ದರು. ಅವರೇ ಗೀತೆಗಳನ್ನು ಹಾಡುತ್ತಿದ್ದರು. ಜನಪ್ರಿಯರಾದ ಗಾಯಕರಿಗಂತೂ ಅನೇಕ ಹಾಡುಗಳಿರುತ್ತಿದ್ದುವು.

ಹಿನ್ನೆಲೆ ಗಾಯಕ ಪ್ರತಿಭಾವಂತ ಗಾಯಕನಾಗಿರಬೇಕು. ಬೇರೆ ಬೇರೆ ನಟರ ವ್ಯಕ್ತಿತ್ವಕ್ಕೆ ತಕ್ಕಂತೆ ಹಾಗೂ ವಿವಿಧ ಭಾವಗಳನ್ನು ಪರಿಣಾಮಕಾರಿಯಾಗಿ ಸೂಚಿಸುವಂತೆ ಅವರು ತಮ್ಮ ಕಂಠಗಳನ್ನು ಸರಿಹೊಂದಿಸಿಕೊಳ್ಳಬೇಕಾಗುತ್ತದೆ. ತಾವು ಕಂಠದಾನ ಮಾಡುವ ನಟ, ನಟಿಯರ ಧ್ವನಿಯನ್ನು ಹೋಲುವಂತೆ ಹಾಡುವ ಶಕ್ತಿ ಹಿನ್ನೆಲೆಯ ಗಾಯಕ, ಗಾಯಕಿಯರಿಗಿದ್ದರಂತೂ ತುಂಬ ಒಳ್ಳೆಯದೇ. ಅನೇಕ ಸಂದರ್ಭಗಳಲ್ಲಿ ಅವರು ನಗುವ, ಅಳುವ, ಅಟ್ಟಹಾಸ ಬೀರುವ ಸನ್ನಿವೇಶಗಳಿಗೆ ತಕ್ಕಂತೆ ಲಘುವಾಗಿ, ಗಂಭೀರವಾಗಿ ತಮ್ಮ ಕಂಠವನ್ನು ಅಳವಡಿಸಿಕೊಂಡು ನಕ್ಕು ಅತ್ತು ಹಾಡಬೇಕಾಗುತ್ತದೆ. ಹರ್ಷ ತೋರಿಕೊಳ್ಳುವ ಭಾವ, ಹರ್ಷದ ಅಭಿವ್ಯಕ್ತಿ ಮುಂತಾದುವನ್ನು ಹಾಡಿನ ಪದಗಳಷ್ಟೇ ಅಲ್ಲದೆ ಹಾಡುಗಾರಿಕೆಯಲ್ಲೂ ಒಡಮೂಡಿಸುವುದು ಹಿನ್ನೆಲೆ ಗಾಯನಕಲೆಯ ವೈಶಿಷ್ಟ್ಯ. ಕೆಲವು ಚಲಚ್ಚಿತ್ರಗಳು ಹಾಡುಗಳಿಂದಾಗಿಯೇ ಜನಪ್ರಿಯವಾಗುತ್ತವೆ. ಪ್ರೇಕ್ಷಕರನ್ನು ಚಿತ್ರಮಂದಿರಕ್ಕೆ ಆಕರ್ಷಿಸುತ್ತವೆ. ಇದು ಹಿನ್ನೆಲೆ ಗಾಯನದ ಹಿರಿಮೆ.

ಹಿನ್ನೆಲೆ ಗಾಯನದ ಧಾಟಿ ಸಾಧಾರಣವಾಗಿ ಸರಳ. ಮಧುರ. ಆಕರ್ಷಕ. ಚಲಚ್ಚಿತ್ರ ಗೀತೆಗಳ ಸಾಹಿತ್ಯ ಆಯಾ ಚಿತ್ರದ ಅವಶ್ಯತೆಗೆ ತಕ್ಕಂತೆ ಇರಬೇಕಾದದ್ದು ಅನಿವಾರ್ಯ. ಇದಕ್ಕೆ ಮಟ್ಟು ಹಾಕುವವನು ಸ್ವತಃ ಸಂಗೀತ ಪರಿಶ್ರಮವಿರುವ ಕವಿಯೇ ಆಗಿರಬೇಕು. ಬೇರೆ ಗೇಯಕಾರರೂ ಈ ಕೆಲಸ ಮಾಡುತ್ತಾರೆ. ಗೇಯಕಾರನೂ ಕವಿಯೂ ಒಟ್ಟಿಗೆ ಕುಳಿತು ಮಟ್ಟನ್ನು ನಿರ್ಧರಿಸುವುದು, ಕವಿ ಅದಕ್ಕೆ ಸಂದರ್ಭೋಚಿತವಾದ ಮಾತುಗಳನ್ನು ಜೋಡಿಸುವುದೂ ಉಂಟು. ಸಂದರ್ಭಕ್ಕೆ ತಕ್ಕ ಗೀತೆಗಳನ್ನು ಹಾಡಿಸಿದರೇನೇ ಅದು ಇಡೀ ಕಥೆಯ ಗುಣವನ್ನು ಹೆಚ್ಚಿಸುತ್ತದೆ.

ಹಿನ್ನೆಲೆ ಗಾಯನ ಒಂದು ವೃತ್ತಿ. ಈ ಪದ್ಧತಿ ಚಲಚ್ಚಿತ್ರಕ್ಕಷ್ಟೇ ಸೀಮಿತವಾಗಿಲ್ಲ; ನಾಟಕ ಪ್ರದರ್ಶನಗಳಲ್ಲಿ ಹಿಂದಿನಿಂದಲೂ ಇದು ಪ್ರಚಲಿತವಾಗಿತ್ತು. ನಾಟಕದಲ್ಲಿ ನರ್ತಕಿ ಹಾಡಿನ ಪದಗಳನ್ನು ಪಿಸುಗುಟ್ಟುತ್ತ ಗೀತೆಯ ಭಾವಕ್ಕೆ ತಕ್ಕಂತೆ ನರ್ತಿಸುವುದು ಪದ್ಧತಿಯಾಗಿತ್ತು. ಇಂದಿಗೂ ಈ ಪದ್ಧತಿ ಆಚರಣೆಯಲ್ಲಿದೆ. ಪೂರ್ವಭಾವಿಯಾಗಿ ಧ್ವನಿಮುದ್ರಿತವಾದ ಗೀತೆಯನ್ನು ನುಡಿಸುತ್ತ ಅದಕ್ಕನುಸಾರವಾಗಿ ನರ್ತಿಸುವುದು ರೂಢಿಯಲ್ಲಿದೆ. ನಾಟಕ, ಪ್ರಸಾರ ನಾಟಕಗಳಲ್ಲಿಯೂ ಹಿನ್ನೆಲೆ ಗಾಯನ ವಿಧಾನವನ್ನು ಅನುಸರಿಸುತ್ತಾರೆ.

ಎಲ್ಲ ಪಾಶ್ಚಾತ್ಯ ಚಲಚ್ಚಿತ್ರಗಳಲ್ಲೂ ಹಾಡುಗಳಿರುವುದಿಲ್ಲ. ಸಂಗೀತ ಪ್ರಧಾನ ಗೀತೆಗಳುಳ್ಳ ವಿಶಿಷ್ಟ ಚಲಚ್ಚಿತ್ರಗಳನ್ನೇ ಅವರು ನಿರ್ಮಿಸುತ್ತಾರೆ. ಸಂಗೀತ ಪ್ರಧಾನ ಚಿತ್ರಗಳಲ್ಲಿಯೂ ಆಪೆರಾಗಳಲ್ಲಿಯೂ ಹಿನ್ನೆಲೆ ಗಾಯನವನ್ನು ಅಳವಡಿಸುವ ಪದ್ಧತಿಯಿದೆ.

ಹಿನ್ನೆಲೆ ಗಾಯನ ಪದ್ಧತಿಯಿಂದ ಚಲಚ್ಚಿತ್ರರಂಗಕ್ಕೆ ಅತ್ಯಮೂಲ್ಯ ಲಾಭವಾಗಿದೆ. ವಾಕ್ಚಿತ್ರಗಳು ಪ್ರಚಾರಕ್ಕೆ ಬಂದ ಮೇಲೆ ಹಾಡುವ ಶಕ್ತಿಯಿಲ್ಲದ ನಟ, ನಟಿಯರು, ಎಷ್ಟೇ ಸಮರ್ಥರಿದ್ದರೂ ಅವರಿಗೆ ಮುಖ್ಯ

[illegible] ದೊರೆಯುವಂತಾಯಿತು. ಹಿನ್ನೆಲೆ ಗಾಯನ ವ್ಯವಸ್ಥೆಯಿಂದ ಈ ವಿಪರ್ಯಾಸ ತಪ್ಪಿತು. ಚಲಚ್ಚಿತ್ರದಲ್ಲಿ [illegible] ಅವರವರಿಗೆ ಸಲ್ಲಬೇಕಾದ ಸ್ಥಾನ ದೊರೆಯುವಂತಾಯಿತು.

## ಹಿನ್ನೆಲೆ ಸಂಗೀತ

ಒಂದು ನಾಟಕದಲ್ಲಿಯೇ ಆಗಲಿ, ಚಲಚ್ಚಿತ್ರದಲ್ಲಿಯೇ ಆಗಲಿ ಯಾವುದೇ ರಸಪ್ರಧಾನವಾದ ಒಂದು ಸನ್ನಿವೇಶದ ಅಭಿನಯ ನಡೆಯುತ್ತಿರುವಾಗ ಹಿನ್ನೆಲೆಯಲ್ಲಿ ವಾದ್ಯ ಸಂಗೀತ ಕೇಳಿಬರುತ್ತದೆ. ಒಂದೊಂದು ವೇಳೆ ಸಂದರ್ಭದ ಭಾವಕ್ಕೆ ಹೊಂದಿಕೊಳ್ಳುವ ಅರ್ಥವುಳ್ಳ ಗೀತೆ ಕೇಳಿಬರುವುದುಂಟು. ಇದೇ ಹಿನ್ನೆಲೆ ಸಂಗೀತ. ಇಲ್ಲಿ ಪ್ರಧಾನವಾದದ್ದು ನಾಟಕ ಅಥವಾ ಚಿತ್ರದ ಸನ್ನಿವೇಶ. ಅದಕ್ಕೆ ಪೂರಕವಾಗಿ, ಅದರ ಭಾವವನ್ನು ಪೋಷಿಸಿ ಬೆಳೆಸುವುದಕ್ಕಾಗಿ ಹಿನ್ನೆಲೆ ಸಂಗೀತವನ್ನು ಅಳವಡಿಸುತ್ತಾರೆ.

ಮನುಷ್ಯನ ಮನಸ್ಸಿನ ಹಲವು ಭಾವನೆಗಳನ್ನು ಜೀವನದ ಸನ್ನಿವೇಶ ಸಂದರ್ಭಗಳನ್ನು ಮಾತುಗಳ ಮೂಲಕ ಚಿತ್ರಿಸುವಂತೆ ನಾದದ ಮೂಲಕವೂ ಸೂಚಿಸಬಹುದು. ದುಃಖ ಸನ್ನಿವೇಶ ನಿರೂಪಣೆಯಲ್ಲಿ ಕರುಣರಸ ಪ್ರಧಾನ ರಾಗವನ್ನು ಅಥವಾ ಆ ರಾಗದ ಮಟ್ಟನ್ನು ಹಿನ್ನೆಲೆಯಲ್ಲಿ ಹಾಡಿದರೆ ಅಥವಾ ನುಡಿಸಿದರೆ ಸನ್ನಿವೇಶವನ್ನು ನೋಡುವವರ, ಕೇಳುವವರ ಮೇಲೆ ಪರಿಣಾಮ ಉಂಟಾಗುತ್ತದೆ. ಉದಾಹರಣೆಗೆ, ಶಹಾನಾ ಕರುಣರಸಪ್ರಧಾನ, ಅಠಾಣ ರೌದ್ರರಸಪ್ರಧಾನ ರಾಗಗಳು. ಶೋಚನೀಯ ಅಥವಾ ವ್ಯಾಕುಲ ಸನ್ನಿವೇಶದಲ್ಲಿ ಶಹಾನಾ ರಾಗವನ್ನು ಹಿನ್ನೆಲೆಯಲ್ಲಿ ಮಂದವಾಗಿ ನುಡಿಸಿದರೆ, ಹಾಗೆಯೇ ಒಂದು ಯುದ್ಧದ ಅಥವಾ ಯುದ್ಧಕ್ಕೆ ಹೊರಡುವ ದೃಶ್ಯಕ್ಕೆ ಅಠಾಣರಾಗದ ಹಿನ್ನೆಲೆ ಕೊಟ್ಟರೆ, ಆಯಾ ಭಾವಗಳು ಅತ್ಯಂತ ಮನೋಜ್ಞವಾಗಿ ಅಭಿವ್ಯಕ್ತವಾಗುತ್ತವೆ. ಹಿನ್ನೆಲೆ ಸಂಗೀತದ ಈ ಪ್ರಭಾವಶಕ್ತಿಯ ಬಳಕೆ ನಾಟಕ, ಪ್ರಸಾರ ನಾಟಕ ಚಲಚ್ಚಿತ್ರಗಳಲ್ಲಿ ಸಾಮಾನ್ಯವಾಗಿದೆ. ಇದರಿಂದ ಕೇಳುಗರ, ಪ್ರೇಕ್ಷಕರ ಅರಿವಿಲ್ಲದೆಯೇ ಅವರ ಮನಸ್ಸಿನ ಮೇಲೆ ಪರಿಣಾಮವಾಗುತ್ತದೆ. ನಾಟಕ ಅಥವಾ ಚಿತ್ರದ ಒಂದು ದೃಶ್ಯಕ್ಕೆ ಆರಂಭವಾಗುವ ಮೊದಲು ಭೂಪಾಲಿ ರಾಗ ಕೇಳಿದೆವೆನ್ನೋಣ. ಕೂಡಲೇ ಆ ದೃಶ್ಯದ ಕ್ರಿಯೆ ಉಷಃ ಕಾಲದಲ್ಲಿ ನಡೆಯುತ್ತದೆ ಎಂಬ ಕಲ್ಪನೆ ನಮ್ಮ ಮನಸ್ಸಿಗೆ ಬರುತ್ತದೆ.

ಚಲಚ್ಚಿತ್ರ ಗೀತೆಗಳಿಗಂತೂ ಹಿನ್ನೆಲೆ ಸಂಗೀತ ಅನಿವಾರ್ಯ; ಬಹುಪಾಲು ಹಾಡುಗಳು ಹಿನ್ನೆಲೆ ಸಂಗೀತದ ಒಂದು ಹೊಳಹಿನ ಅನಂತರವೇ ಆರಂಭವಾಗುತ್ತದೆ. ಇಲ್ಲಿಯಾದರೂ ಈ ಹಿನ್ನೆಲೆ ಸಂಗೀತದ ಉದ್ದೇಶ ಆ ಗೀತೆಯ ಭಾವಾರ್ಥಕ್ಕೆ ಅನುಗುಣವಾದ ವಾತಾವರಣವನ್ನು ಕಲ್ಪಿಸುವುದು, ಅದರ ಪರಿಣಾಮವನ್ನು ತೀವ್ರಗೊಳಿಸುವುದು. ಒಂದೇ ಒಂದು ಗೀತೆಗೆ ಒದಗಿಸುವ ಹಿನ್ನೆಲೆ ಸಂಗೀತದಲ್ಲಿ ಅನೇಕ ಸಂಗೀತವಾದ್ಯಗಳನ್ನು ಉಪಯೋಗಿಸುವುದು ಸಾಧ್ಯ. ಪಾಶ್ಚಾತ್ಯ ಸಂಗೀತದಲ್ಲಿ, ಹೀಗೆ ಭಾವ ಪ್ರಾಧಾನ್ಯಕ್ಕೆ ಪ್ರಾಶಸ್ತ್ಯ ಕೊಟ್ಟು ಬೆಳೆದು ಬಂದಿರುವ ಸಂಗೀತ ಪ್ರಕಾರ ಪ್ರೋಗ್ರಾಮ್ ಸಂಗೀತ. ಇದು ವಾದ್ಯ ಸಂಗೀತಕ್ಕೆ ಮಾತ್ರ ಸೀಮಿತವಾಗಿದೆ. ಸನ್ನಿವೇಶದ ಬಿಗುವು, ಪರಾಕಾಷ್ಠೆಗಳನ್ನು ಅದರ ಔನ್ನತ್ಯ, ಆಳ ತೀವ್ರತೆಗಳನ್ನು ವಿವಿಧ ಶ್ರುತಿಗಳಲ್ಲಿ ಧ್ವನಿಸುವಂತೆ ಮಾಡುವುದು ; ವಿವಿಧ ವಾದ್ಯಗಳಲ್ಲಿ ಬರುವ ನಾದ ಗುಣದಿಂದ ಸ್ಪರ್ಶಾದಿ ಕಲ್ಪನೆಗಳನ್ನು ಉಂಟುಮಾಡುವುದು ; ಚಲನೆ, ವೇಗ, ಪ್ರಕ್ಷುಬ್ಧತೆ ಮುಂತಾದ ಕಲ್ಪನೆಗಳನ್ನು ಲಯ ವ್ಯತ್ಯಾಸದಿಂದ ಸಾಧಿಸುವುದು —ಇವೆಲ್ಲ ಪ್ರೋಗ್ರಾಮ್ ಸಂಗೀತದಲ್ಲಿ ಗಣನೆಗೆ ಬರುವ ಅಂಶಗಳು.

ನಾಟಕ, ಚಲಚ್ಚಿತ್ರ, ಪ್ರಸಾರ ನಾಟಕಗಳಂಥ ಮನೋರಂಜನೆಯ ಮಾಧ್ಯಮಗಳಲ್ಲೆಲ್ಲ ಹಿನ್ನೆಲೆ ಸಂಗೀತ ಇಂದು ಹಾಸುಹೊಕ್ಕಾಗಿದೆ. ಹಿನ್ನೆಲೆ ಸಂಗೀತದಿಂದ ಪಿಯಾನೋ, ಗಿಟಾರ್, ಕ್ಲಾರಿಯೊನೆಟ್, ಆರ್ಗನ್ ಮುಂತಾದ ವಿಶಿಷ್ಟ ವಾದ್ಯಗಳು ಜನಪ್ರಿಯವಾಗಿವೆ.

## ಹಿಬ್ರೂ ಸಾಹಿತ್ಯ

ಬೈಬಲ್ಲಿನ 'ಹಳೆಯ ಒಡಂಬಡಿಕೆ' ಹಿಬ್ರೂ ಸಾಹಿತ್ಯಧಾರೆಯ ಆಕರ ಗ್ರಂಥ. ಇದು ಹಲವು ಪುಸ್ತಕಗಳ ಸಂಗ್ರಹಿತ ರೂಪ. 'ಹಳೆಯ ಒಡಂಬಡಿಕೆ' ಹಿಬ್ರೂ ಜನರ ಕಥೆ, ವಿಶೇಷವಾಗಿ ಏಕಮೇವ ಭಗವಂತನಿಗೂ ಇವರಿಗೂ ಇರುವ ಬಾಂಧವ್ಯವನ್ನು ಕುರಿತು ಬರೆದದ್ದು.

ಪ್ರಪಂಚದ ಅತಿ ಪುರಾತನ ಭಾಷೆಗಳಲ್ಲಿ ಒಂದಾದ ಹಿಬ್ರೂ ಭಾಷೆಯ ಈ ಪ್ರಥಮ ಸಾಹಿತ್ಯ ಕೃತಿ 'ಹಳೆಯ ಒಡಂಬಡಿಕೆ'ಯ ಕಾಲವನ್ನು ಸುಮಾರು 3,500—ಎಂದು ತರ್ಕಿಸಲಾಗಿದೆ. ಇದರಲ್ಲಿ ಹಿಬ್ರೂಗಳ, ಸಾವಿರ ವರ್ಷಗಳಿಗಿಂತ ಹೆಚ್ಚಿನ ಅವಧಿಯ ಚರಿತ್ರೆ ತಿಳಿದುಬರುತ್ತದೆ. ಅದರಲ್ಲಿರುವ ಕೆಲವು ಪದ್ಯಗಳಲ್ಲಿ ಶ್ರೇಷ್ಠ ಕಾವ್ಯಾಂಶವಿದೆ. ಇದರ ಕಥನ ರೀತಿಗೆ ಇಂದಿಗೂ ಸಾಟಿಯಿಲ್ಲ. ನೀತಿ, ನಿಯಮಗಳು, ಗಾದೆಗಳು ಇವೆಲ್ಲವೂ 'ಹಳೆಯ ಒಡಂಬಡಿಕೆ'ಯಲ್ಲಿ ಕಂಡುಬರುತ್ತವೆ. ಇದರಲ್ಲಿರುವ ಪುಸ್ತಕಗಳ ಬರಹ ನುರಿತ ಸಾಹಿತಿಗಳ ಕೃತಿಗಳಂತಿವೆ. ಹೆಸರಾಂತ 'ಟಾಲ್ಮೂಡ್' ಮತ್ತು 'ಮಿದ್ರಷ್'ಗಳೆಂಬ ಹಿಬ್ರೂ ಬರೆಹಗಳು ಹಳೆಯ ಒಡಂಬಡಿಕೆಯನ್ನು ಆಧರಿಸಿ ಬರೆಯಲ್ಪಟ್ಟಂಥವು. ಹಳೆಯ ಒಡಂಬಡಿಕೆ ಮತ್ತು ಕೆಲವು ಶಾಸನಗಳಷ್ಟೇ ಈಗ ಉಳಿದಿರುವ ಪ್ರಾಚೀನ ಹಿಬ್ರೂ ಸಾಹಿತ್ಯ.

ಕ್ರಿಸ್ತ ಶಕದ ಮೊದಲ ನಾಲ್ಕಾರು ಶತಮಾನಗಳಲ್ಲಿ ಟಾಲ್ಮೂಡ್ (ಕಲಿಯುವುದು ಅಥವಾ ಕಲಿಸುವುದು ಎಂದರ್ಥ) ಬರಹಗಳು ಹುಟ್ಟಿಕೊಂಡುವು.

ಮಧ್ಯಯುಗ ಕಾಲದಲ್ಲಿ ಹಿಬ್ರೂ ಸಾಹಿತ್ಯ ತನ್ನ ಸುವರ್ಣಯುಗವನ್ನು ತಲಪಿತು. ಜನರಿಗೆ ಬೈಬಲ್ ಹಾಗೂ ಟಾಲ್ಮೂಡ್‌ಬರೆಹಗಳನ್ನು ವಿವರಿಸುವ ಕೆಲಸವನ್ನು ಯೆಹೂದ್ಯ ಪಂಡಿತರು ನಡೆಸಿಯೇ ಇದ್ದರು. ಧಾರ್ಮಿಕ ಕವಿತೆಗಳು ಹೊಸದಾಗಿ ಹುಟ್ಟಿಕೊಂಡುವು. ಇವು ಪ್ರಾರ್ಥನಾ ಹೊತ್ತಗೆಯ ಭಾಗವಾದುವು. ತತ್ತ್ವಜ್ಞಾನ, ಕಾನೂನು, ಹಿಬ್ರೂ ವ್ಯಾಕರಣಗಳಲ್ಲಿ ಪ್ರಗತಿಯಾಗಿ, 900—1200 ವರ್ಷಗಳ



ಮೈಮೊನಿಡೆಸ್

ಅವಧಿಯಲ್ಲಿ ಸ್ಪೇನಿನ ಯೆಹೂದ್ಯರು ಉಜ್ವಲ ಹಿಬ್ರೂ ಸಾಹಿತ್ಯ ಸೃಷ್ಟಿ ಮಾಡಿದರು.

ಮೈಮೊನಿಡೆಸ್ ಎಂಬವನು—ನಿಜನಾಮಧೇಯ ರಬ್ಬಿ ಮೋಸೆಸ್ ಬೆನ್ ಮೈಮನ್ (1135–1204)— ಮಧ್ಯಯುಗದ ಯೆಹೂದಿ ಸಾಹಿತಿಗಳಲ್ಲಿ ಅತ್ಯಂತ ಪ್ರಖ್ಯಾತಿ ಪಡೆದ. 'ಕಂಗೆಟ್ಟವರಿಗೆ ಮಾರ್ಗದರ್ಶನ' ಎಂಬ ಪುಸ್ತಕದಲ್ಲಿ ಅನೇಕ ಧಾರ್ಮಿಕ ಸಮಸ್ಯೆಗಳನ್ನು ಕುರಿತು ಅವನು ಬರೆದಿದ್ದಾನೆ. ಆಗಿನ ಕವಿಗಳಲ್ಲಿ ಬಹಳ ಹೆಸರಾದವರು ಸಾಲೊಮನ್ ಇಬನ್ ಗೇಬಿರಾಲ್ ಮತ್ತು ಜೂಡ ಹಲೇವಿ. ಇಬ್ಬರೂ ಧಾರ್ಮಿಕ ಕಾವ್ಯರಚನೆ ಮಾಡಿದರು. ಮುಂದೆ ಹೊರ ದೇಶಗಳಲ್ಲಿ ನೆಲೆಸಿದ ಹಿಬ್ರೂ ಕವಿಗಳು ಇಸ್ರೇಲ್ ನಾಡಿನ ಕನಸು ಕಾಣತೊಡಗಿದರು. ಹಲೇವಿಯ 'ಜಿಯಾನ್ ಪ್ರಗಾಥಾ', 'ಕಡಲಿನ ಗೀತೆಗಳು' ಈ ಬಗೆಯ ಕವಿತೆಗಳು.

15ನೆಯ ಶತಮಾನದಲ್ಲಿ ಯೆಹೂದ್ಯರು ಸ್ಪೇನಿನಿಂದ ಅಟ್ಟಲ್ಪಟ್ಟರು. ಇದರಿಂದ ಹಿಬ್ರೂ ಸಾಹಿತ್ಯ ಇಳಿಮುಖವಾಯಿತು. ಯೆಹೂದ್ಯರು ಬೇರೆ ಬೇರೆಡೆಗಳಲ್ಲಿ ಹರಡಿ ಹಂಚಿಹೋದ ಕಾಲ ಅದು. ಆಗಿನ ಹಿಬ್ರೂ ಸಾಹಿತ್ಯವೆಂದರೆ ಕಟ್ಟಳೆಗೆ ಸಂಬಂಧಪಟ್ಟ ಬರೆಹಗಳು.

ಅನಂತರ ಹಿಬ್ರೂ ಸಾಹಿತ್ಯದ ಆಧುನಿಕ ಯುಗ ಆರಂಭವಾಯಿತು. ಆಧುನಿಕ ಹಿಬ್ರೂ ಬರೆಹಗಾರರು, ಎದುರಿಸಬೇಕಾಗಿ ಬಂದ ಸಮಸ್ಯೆ ಪುರಾತನವಾದ ಆ ಭಾಷೆಯನ್ನು ಹೊಸ ಅಭಿವ್ಯಕ್ತಿ, ವಿಚಾರಗಳ ಚೌಕಟ್ಟಿಗೆ ಅಳವಡಿಸುವುದು. 18ನೆಯ ಶತಮಾನದ ಉತ್ತರಾರ್ಧದಲ್ಲಿ ಆಧುನಿಕ ಹಿಬ್ರೂ ಸಾಹಿತ್ಯವು ಒಂದು ಚಳುವಳಿಯ ರೂಪದಲ್ಲಿ ಆರಂಭವಾಯಿತು. ಮೊದಲಿನಿಂದಲೂ ಹಿಂಸೆ, ಉಪದ್ರವಗಳಿಗೆ ಈಡಾಗಿ ಜೀವನದಲ್ಲಿ ಸಮಾನ ಅವಕಾಶಗಳು ದೊರೆಯದೆ ತೊಳಲಿದ ಯೆಹೂದ್ಯರಿಗೆ ಜರ್ಮನಿಯ ಕಲಿತವರೊಡನೆ ಬೆರೆಯುವ ಅಪೂರ್ವ ಸುಯೋಗ ಒದಗಿತು.

'ಜಿಯಾನ್ ಬಗೆಗಿನ ಒಲವು' ಎಂಬ ಮೊದಲ ಆಧುನಿಕ ಹಿಬ್ರೂ ಕಾದಂಬರಿಯನ್ನು ಅಬ್ರಹಾಮ್ ಮಾಪು ಬರೆದ. 'ಜಿಯಾನ್‌ವಾದ' ಹುಟ್ಟಿಕೊಂಡಿತು. ಜಿಯಾನ್ ಎಂದರೆ ಪುರಾತನ ಜೆರೂಸಲೆಮ್. ಇದರಿಂದಾಗಿ ಪಾಲೆಸ್ಟೀನಿನಲ್ಲಿ ಹಿಬ್ರೂ ಭಾಷೆ ಬಳಸುವವರು ಬಲಗೊಂಡರು. ಹಿಬ್ರೂ ಭಾಷೆಯ ಪುನರ್ಜನ್ಮವಾಯಿತು.

ಥಿಯೊಡೊರ್ ಹರ್ಜಲ್, ಆಷರ್ ಗಿನ್ಸ್‌ಬರ್ಗ್, ಬಯಾಲಿಕ್ ಚೆರ್ನಿಕಾವ್‌ಸ್ಕಿ, ಸೆಫಾರಿಮ್, ಮುಂತಾದ ಆಧುನಿಕ ಪ್ರತಿಭಾವಂತ ಬರೆಹಗಾರರು ಹಿಬ್ರೂ ಸಾಹಿತ್ಯ ಭಂಡಾರದ ಬೊಕ್ಕಸವನ್ನು ತುಂಬಿದರು. ಯೆಹೂದ್ಯರಲ್ಲಿ ರಾಷ್ಟ್ರೀಯತಾ ಮನೋಭಾವವನ್ನು ಪ್ರಚೋದಿಸಿದರು. ಹಿಬ್ರೂ ಕಾದಂಬರಿಗಳ, ಕವಿತೆಗಳ ಸಂಖ್ಯೆ ಬೆಳೆಯಿತು.

1948ರಲ್ಲಿ ಇಸ್ರೇಲಿನ ಸ್ಥಾಪನೆಯೊಂದಿಗೆ ಹಿಬ್ರೂ ಸಾಹಿತ್ಯದ ಉತ್ಕರ್ಷ ಆರಂಭವಾಯಿತು. ಹಿಬ್ರೂ ಭಾಷೆಯ ಶ್ರೇಷ್ಠ ಬರೆಹಗಾರ ಅಗ್ನನ್‌ಗೆ 1966ರಲ್ಲಿ ನೊಬೆಲ್ ಸಾಹಿತ್ಯ ಬಹುಮಾನ ದೊರೆಯಿತು.

ಜಗತ್ತಿನ ಪ್ರಾಚೀನ ಭಾಷೆಗಳಲ್ಲಿ ಒಂದಾದ ಹಿಬ್ರೂ ಹೊಸ ಉಡುಗೆ ಯುಟ್ಟು ಇಂದು ವಿಶ್ವಸಾಹಿತ್ಯರಂಗದಲ್ಲಿ ಮೆರೆಯುತ್ತಿದೆ.

### ಹಿರಾಡಟಸ್

ಈಜಿಪ್ಟಿನ ಬೆಕ್ಕುಗಳು ಬೆಂಕಿಯಲ್ಲಿ ಹಾರುತ್ತವೆ; ಮೆಸಾಜಿಟೆ ಎನ್ನುವ ಮಧ್ಯ ಏಷ್ಯದ ಆಕ್ಸಸ್ ನದೀ ತೀರದ ಕಾಡುಗಳಲ್ಲಿ ವಾಸಿಸುವ ಆದಿವಾಸಿಗಳು ತಮ್ಮ ತಂದೆತಾಯಿಯರನ್ನೇ ತಿನ್ನುತ್ತಾರೆ. ಪೆಡಾಸಸ್ ಎಂಬಲ್ಲಿರುವ ಅಥೆನಾ ದೇವತೆಯ ಪೂಜಾರಿಣಿಗೆ ಉದ್ದವಾದ ಗಡ್ಡವಿದೆ— ಮುಂತಾದ ವಿಚಿತ್ರವೂ ಕುತೂಹಲಕಾರಿಯೂ ಆದ ವಿಷಯಗಳನ್ನು ಒಳಗೊಂಡ ಚರಿತ್ರೆಯ ಗ್ರಂಥ ಬರೆದವನು ಹಿರಾಡಟಸ್. ಈತ ಪ್ರಪಂಚದ ಪ್ರಾಚೀನ ಇತಿಹಾಸಕಾರ. ಇವನನ್ನು 'ಇತಿಹಾಸದ ಪಿತಾಮಹ' ಎಂದು ಕರೆದಿದ್ದಾರೆ. 'ಹಿಸ್ಟರಿ' ಎಂಬ ಪದವನ್ನು ಮೊಟ್ಟ ಮೊದಲು ಇತಿಹಾಸ ಎಂಬ ಅರ್ಥದಲ್ಲಿ ಬಳಸಿದವನು ಇವನೇ. ಗ್ರೀಕ್ ಶಬ್ದ ಇಸ್ಟೋರಿ ಇಂದಿನ ಹಿಸ್ಟರಿ ಪದಕ್ಕೆ ಮೂಲ.



ಇತಿಹಾಸ : ಹಿರಾಡಟಸ್

ಏಷ್ಯಾ ಮೈನರಿನ ದಕ್ಷಿಣ ಭಾಗದಲ್ಲಿರುವ ಹಾಲಿಕಾರ್ನಾಸಸ್ ಎಂಬಲ್ಲಿ ಹಿರಾಡಟಸ್ ಜನಿಸಿದ. ಅವನ ಜನನ ಮತ್ತು ಮರಣ ಕಾಲ ವಿವರ, ಖಚಿತ ವರ್ಷಗಳು ತಿಳಿಯದು. ಪ್ರಾಚೀನ ಹೇಳಿಕೆಗಳ ಮೇರೆಗೆ ಹಿರಾಡಟಸ್ ಕ್ರಿ. ಪೂ. 484ರಲ್ಲಿ ಜನಿಸಿದ ಎಂದಿದೆ. ಯುವಕನಾಗಿದ್ದಾಗ ಇಟಲಿ. ಫೊನಿಸಿಯಾ. ಈಜಿಪ್ಟ್, ಲಿಬಿಯ. ಅರೇಬಿಯ. ಮೆಸಪಟೇಮಿಯ. ಸಿಥಿಯ, ಥ್ರೇಸ್ ಮುಂತಾದ ದೇಶಗಳಲ್ಲೆಲ್ಲ ಸಂಚರಿಸಿ ವಿಪುಲ ಅನುಭವ ಪಡೆದ. ತಾನು ಹೋದಲ್ಲೆಲ್ಲ ಕಂಡ ಪ್ರತಿಯೊಂದು ವಿಷಯದಲ್ಲೂ ಕುತೂಹಲ ವ್ಯಕ್ತಪಡಿಸುತ್ತಿದ್ದ. ತನಗೆ ತಿಳಿಯದ ವಿಚಾರವನ್ನು ಇತರರಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಆಸಕ್ತಿ ಅವನಲ್ಲಿತ್ತು. ತಾನು ಸಂಚರಿಸಿದ ಸ್ಥಳಗಳಲ್ಲೆಲ್ಲ ಆಯಾ ದೇಶಗಳ ಜನರ ಆಚಾರ ವಿಚಾರ, ಪದ್ಧತಿ, ಧರ್ಮ, ಸಮಾಜದ ಬಗೆಗೆ ಅಧ್ಯಯನ ನಡೆಸಿ ವಿಷಯ ಸಂಗ್ರಹಿಸಿಟ್ಟುಕೊಂಡಿದ್ದ. ಅವೇ ಚರಿತ್ರೆ ಬರೆಯಲು ಆತನಿಗೆ ಮೂಲ ಸಾಮಗ್ರಿಗಳಾದುವು. ಅವನು ಸುಮಾರು 40 ವಯಸ್ಸಿನವನಾಗಿದ್ದಾಗ ಅಥೆನ್ಸ್‌ನಲ್ಲಿದ್ದ; ಖ್ಯಾತ ನಾಟಕಕಾರ ಸಾಫೋಕ್ಲೀಸನನ್ನು ಅವನು ಭೇಟಿಯಾಗಿದ್ದ. ಅಥೆನ್ಸಿನ ದೊರೆ ಪೆರಿಕ್ಲೀಸನಿಗೆ ಹಿರಾಡಟಸ್‌ನ ಮೇಲೆ ವಿಶೇಷ ಅಭಿಮಾನವಿತ್ತು.

ಹಿರಾಡಟಸ್ ಕ್ರಿ. ಪೂ. 5ನೆಯ ಶತಮಾನದಲ್ಲಿ ಇತಿಹಾಸವನ್ನು ಬರೆದ. ಗ್ರೀಸ್ ದೇಶದ ನಗರಗಳ ಪ್ರಗತಿ, ಪರ್ಷಿಯ ಸಾಮ್ರಾಜ್ಯದ ಉದಯ; ಕ್ರಿ. ಪೂ. 480—490ರಲ್ಲಿ ಗ್ರೀಸಿನ ಮೇಲೆ ಪರ್ಷಿಯನರ ಆಕ್ರಮಣ; ಆಕ್ರಮಣಕಾರರನ್ನು ಎದುರಿಸಿದ ಗ್ರೀಕ್ ವೀರರ ಶೌರ್ಯ ವರ್ಣನೆ ಮುಂತಾದ ವಿಷಯಗಳನ್ನು ಒಂಬತ್ತು ಸಂಪುಟಗಳ ಇತಿಹಾಸದಲ್ಲಿ ವಿವರಿಸಿದ್ದಾನೆ. ಜನರ ನಡವಳಿಕೆ, ಉಡುಪು, ಧಾರ್ಮಿಕ ಸಾಮಾಜಿಕ ನಂಬಿಕೆಗಳು ಪ್ರತಿಯೊಂದು ವಿವರಾಂಶಗಳನ್ನೂ ವಿಶೇಷ ಗಮನವಿಟ್ಟು ಆತ ಬರೆದಿದ್ದಾನೆ. ಪ್ರಾಚೀನ ಜನರ ಮೂಢನಂಬಿಕೆಗಳು, ಅಂಧ ಶ್ರದ್ಧೆ

[illegible] ಉತ್ಸಾಹದಿಂದ ವರ್ಣಿಸಿದ್ದಾನೆ. ಹೋಮರನ ಕಾವ್ಯಗಳಿಂದ ಹಿರಾಡಟಸ್ ಪ್ರಭಾವಿತನಾಗಿದ್ದ. ಆತನ ಗದ್ಯದಲ್ಲಿ ಕೆಲವೆಡೆ ನಾಟಕೀಯ ಗುಣ, ಕಾವ್ಯಮಯತೆ ಕಂಡುಬರುತ್ತವೆ.

ಹಿರಾಡಟಸ್ ಪ್ರತಿಭಾಶಾಲಿ ಬರೆಹಗಾರ. ಗ್ರೀಕ್ ದೇಶದ ಪ್ರಖ್ಯಾತ ಯುದ್ಧಗಳಿಗೆ ಸಂಬಂಧಿಸಿದ ಕತೆಗಳಿಗೆ ಹಿರಾಡಟಸನ ಕೃತಿ ಅಮೂಲ್ಯ ಆಧಾರಗ್ರಂಥವಾಗಿದೆ.

ಹಿರಾಡಟಸ್ ತನ್ನ ಚರಿತ್ರೆಯ ಪುಸ್ತಕದ ಸ್ವಾರಸ್ಯಕರವಾದ ಭಾಗಗಳನ್ನು ಅಥೆನ್ಸ್ ಮತ್ತು ಒಲಿಂಪಿಯ ನಗರಗಳಲ್ಲಿ ಸಾರ್ವಜನಿಕರ ಮುಂದೆ ಓದಿ ಹೇಳುತ್ತಿದ್ದ. ಅವನ ವರ್ಣನೆಗಳನ್ನು ಕೇಳಿ ಉತ್ತೇಜಿತರಾದ ಗ್ರೀಸಿನ ಪ್ರಜೆಗಳು ಆತನಿಗೆ ನಿಧಿ ಅರ್ಪಿಸಿದರು.

**ನೋಡಿ :** ಹಿರಾಡಟಸ್–ಸಂಪುಟ ೧, ೭

## ಹು ಷಿ

ಈ ಶತಮಾನದ ಆದಿಯಲ್ಲಿ ಚೀನದ ಭಾಷೆ ವಿಚಿತ್ರ ಪರಿಸ್ಥಿತಿಯಲ್ಲಿತ್ತು. ಸಾಹಿತ್ಯದ ಭಾಷೆಯೇ ಬೇರೆ; ಮಾತನಾಡುವ ಭಾಷೆಯೇ ಬೇರೆ. ಅವೆರಡೂ ಚೀನೀ ಭಾಷೆಯೇ ಆದರೂ ಮಾತು ಮಾತ್ರ ಕಲಿತವನಿಗೆ ಪುಸ್ತಕ ಓದುವುದು ಅಸಾಧ್ಯವಾಗಿತ್ತು. ಕಾರಣ –ಬರೆವಣಿಗೆಯ ಭಾಷೆ ಸುಮಾರು ಎರಡು ಸಾವಿರ ವರ್ಷಗಳಿಂದ ಹೆಚ್ಚು ಬದಲಾಗದೆ ಬಂದದ್ದು; ಮಾತನಾಡುವ ಭಾಷೆ ಬಹಳಷ್ಟು ಬದಲಾಗಿ ಬೇರೆಯೇ ಆದದ್ದು.

ಮಾತನಾಡುವ ಭಾಷೆಯಲ್ಲೇ ಪುಸ್ತಕ ಬರೆಯಬಾರದೆ? –ಈ ಪ್ರಶ್ನೆಯನ್ನು ಅನೇಕರು ಕೇಳಿಕೊಂಡಿದ್ದರೂ ಅದನ್ನು ಗಂಭೀರವಾಗಿ ಪರಿಗಣಿಸಿದವನು 15 ವರ್ಷದ ಒಬ್ಬ ಬಾಲಕ. ಇವನು ಆಗಲೇ ಆಡು ಭಾಷೆಯಲ್ಲಿ ಹಲವಾರು ಲೇಖನಗಳನ್ನು ಬರೆದು ಪ್ರಕಟಿಸುವ ಧೈರ್ಯ ತೋರಿದ್ದ. ಈ ವಯಸ್ಸಿಗೆ ಪ್ರಾಚೀನ ಗ್ರಂಥಗಳನ್ನೆಲ್ಲ ಓದಿ ಆ ಭಾಷೆಯಲ್ಲಿ ಸೊಗಸಾಗಿ ಬರೆಯುವ ಸಾಮರ್ಥ್ಯ ಪಡೆದಿದ್ದ. ಆದರೂ ಜೀವಂತವಾದ ಆಡು ಭಾಷೆಯಲ್ಲೇ ಬರೆಯಬೇಕೆಂದು ಈ ಹುಡುಗ ಹಟತೊಟ್ಟ.

ಈತನೇ ಮುಂದೆ ಆಧುನಿಕ ಚೀನೀ ಸಾಹಿತ್ಯದ ಆದ್ಯಪ್ರವರ್ತಕ ಎನಿಸಿಕೊಂಡ ಹು ಷಿ.

1891ರಲ್ಲಿ ಹು ಷಿ ಶಾಂಘಾಯ್‌ಯಲ್ಲಿ ಜನಿಸಿದ. ಇವನ ತಂದೆ ಫಾರ್ಮೋಸದಲ್ಲಿ ನ್ಯಾಯಾಧೀಶನಾಗಿದ್ದ. ಬಾಲ್ಯದಲ್ಲೇ ಪ್ರಚಂಡ ಬುದ್ಧಿವಂತನೆಂದು ಹೆಸರಾಗಿದ್ದ ಹು ಷಿ ತನ್ನ ತಾಯಿಯ ಪ್ರೋತ್ಸಾಹದಿಂದ ಪ್ರಾಚೀನ ಕಾವ್ಯಗಳನ್ನು ಓದತೊಡಗಿದ. ಶಾಂಘಾಯ್‌ಯಲ್ಲೇ ಆರು ವರ್ಷಗಳ ಕಾಲ ಶಾಲಾಭ್ಯಾಸ ಮಾಡಿದ. ಆಗಲೇ ಸ್ವತಂತ್ರ ಚಿಂತನೆಯ ಶಕ್ತಿ ಪಡೆದ. ಅಗಾಧ ಜ್ಞಾನ ಗಳಿಸಿದ. ಅವನದು ಜೀವಂತ ಚೇತನ.

ವಿದ್ಯಾಭ್ಯಾಸಕ್ಕೋಸ್ಕರ ಅಮೆರಿಕಕ್ಕೆ ಹೋಗಲು ಉತ್ತೀರ್ಣನಾಗಬೇಕಾದ ಒಂದು ಪರೀಕ್ಷೆಯಲ್ಲಿ ಹು ಷಿ 1910ರಲ್ಲಿ ತೇರ್ಗಡೆಯಾದ. ಆ ವರ್ಷವೇ ಅಮೆರಿಕದ ಕಾರ್ನೆಲ್ ವಿಶ್ವವಿದ್ಯಾನಿಲಯಕ್ಕೆ ಸೇರಿ 1914ರಲ್ಲಿ ಡಿಗ್ರಿ ಸಂಪಾದಿಸಿದ. ಮತ್ತೆ ಮೂರೇ ವರ್ಷಗಳಲ್ಲಿ ಕೊಲಂಬಿಯಾ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪಡೆದ.

ಅಮೆರಿಕದಲ್ಲೂ ಅತ್ಯಂತ ಪ್ರತಿಭಾಶಾಲಿ ವಿದ್ಯಾರ್ಥಿ ಎಂದು ಹು ಷಿ ಹೆಸರು ಗಳಿಸಿದ. ಚೀನೀ ಭಾಷೆಯ ಸುಧಾರಣೆಯನ್ನು ಕುರಿತ ಲೇಖನಗಳನ್ನು ಈತ ಪ್ರಕಟಿಸಿದ. ಬರೆದರೆ, ಆಡು ಭಾಷೆಯಲ್ಲೇ ಕವನ ಬರೆಯಬೇಕೆಂದು ನಿರ್ಧರಿಸಿದ.

ಪೀಕಿಂಗ್ ರಾಷ್ಟ್ರೀಯ ವಿಶ್ವವಿದ್ಯಾನಿಲಯದಲ್ಲಿ ತತ್ತ್ವಜ್ಞಾನ ಅಧ್ಯಾಪಕನಾಗಿ ಹು ಷಿ 1917ರಲ್ಲಿ ಚೀನಕ್ಕೆ ಹಿಂದಿರುಗಿದ. ಇದೇ ವರ್ಷ ಭಾಷಾ ಸುಧಾರಣೆ ಬಗೆಗೆ ಹು ಷಿ ಉಪನ್ಯಾಸ ನೀಡಿ ಹಲವು ಸಲಹೆಗಳನ್ನಿತ್ತ. ಭಾವ-ಚಿಂತನೆಗಳೆರಡೂ ಸಾಹಿತ್ಯದಲ್ಲಿರಬೇಕು; ಸಾಹಿತ್ಯ ಕಾಲಕ್ಕೆ ತಕ್ಕಂತೆ ಬದಲಾಗುವುದರಿಂದ ಹಿಂದಿನ ಲೇಖಕರನ್ನು ಅನುಕರಿಸಬಾರದು; ಭಾವೋದ್ರೇಕತೆಯನ್ನು ಬಿಡಬೇಕು; ನಮ್ಮ ಅನುಭವವನ್ನು ನಮ್ಮ ಮಾತಿನಲ್ಲೇ (ನಾವು ಆಡುವ ಧಾಟಿಯಲ್ಲೇ) ಹೇಳಬೇಕು –ಇವು ಅವನ ಪ್ರಮುಖ ಸಲಹೆಗಳು.

"ಚಿಂತನೆ ಮತ್ತು ಭಾವನೆಗಳನ್ನು ಅಭಿವ್ಯಕ್ತ ಪಡಿಸುವುದೇ ಭಾಷೆ ಮತ್ತು ಸಾಹಿತ್ಯಗಳ ಕರ್ತವ್ಯ. ಸತ್ತ ಸಾಂಪ್ರದಾಯಿಕ ಭಾಷೆಯನ್ನು ಬಳಸುವವರು ತಮ್ಮ ಚಿಂತನೆಗಳನ್ನು ಸಾವಿರಾರು ವರ್ಷಗಳಷ್ಟು ಪ್ರಾಚೀನವಾದ ಭಾಷೆಗೆ ಭಾಷಾಂತರಿಸುತ್ತಾರೆ ... ಸತ್ತ ಭಾಷೆ ಎಂದಿಗೂ ಜೀವಂತ ಸಾಹಿತ್ಯವನ್ನು ಸೃಷ್ಟಿಸಲಾರದು ... ಚೀನಕ್ಕೆ ಜೀವಂತ ಸಾಹಿತ್ಯ ಬೇಕಿದ್ದರೆ ನಾವು ದಿನನಿತ್ಯ ಆಡುವ ಮಾತುಗಳನ್ನೇ ಬಳಸಬೇಕು'' ಎಂದು ಹು ಷಿ ಹೇಳಿದ.

ಹೊರಗಿನ ಪ್ರಭಾವಗಳಿಂದ ದೂರವಾಗಿ ಸಾಂಪ್ರದಾಯಿಕ ಜೀವನ ನಡೆಸುತ್ತಿದ್ದ ಚೀನೀಯರಿಗೆ ಹು ಷಿ ಯ ಮಾತುಗಳು ಕ್ರಾಂತಿಕಾರಕವಾಗಿ ಕಂಡುವು. ಹು ಷಿಯ ಅಭಿಪ್ರಾಯಗಳಿಗೆ ತರುಣ ಜನಾಂಗದ ಭಾರಿ ಬೆಂಬಲ ದೊರೆಯಿತು. ಕೆಲವು ನಿಯತಕಾಲಿಕಗಳು ಹು ಷಿ ಯ ಅಭಿಪ್ರಾಯಗಳನ್ನು ಅನುಮೋದಿಸಿ ಈ 'ಸಾಹಿತ್ಯಕ ಕ್ರಾಂತಿ'ಯನ್ನು ತೀವ್ರಗೊಳಿಸಿದುವು. ಈ ಭಾಷಾಕ್ರಾಂತಿ ಅಷ್ಟಕ್ಕೇ ನಿಲ್ಲಲಿಲ್ಲ; ಇಡೀ ಪ್ರಾಚೀನ ಸಾಹಿತ್ಯ, ಸಂಸ್ಕೃತಿ, ಸಮಾಜಗಳನ್ನು ಹೊಸ ದೃಷ್ಟಿಯಿಂದ ನೋಡುವ ಮನೋಭಾವವನ್ನು ಅದು ಬೆಳೆಸಿತು.

ತರ್ಕಬದ್ಧತೆ, ಸ್ಪಷ್ಟತೆ, ಸರಳತೆ, ಸೌಹಾರ್ದತೆಗಳಿಂದ ಕೂಡಿದ ಬರೆವಣಿಗೆ ಹು ಷಿ ಯದು. ಪ್ರಾಚೀನ ಚೀನೀ ತತ್ತ್ವಜ್ಞಾನ, ತರ್ಕವಿಧಾನದ ಬೆಳವಣಿಗೆಗಳ ಬಗೆಗೆ ಹು ಷಿ ಪುಸ್ತಕಗಳನ್ನು ಬರೆದಿದ್ದಾನೆ.

ಮುಂದೆ ಹು ಷಿ ಪೀಕಿಂಗ್ ರಾಷ್ಟ್ರೀಯ ವಿಶ್ವವಿದ್ಯಾನಿಲಯದ ಮಾನವಿಕ ವಿಭಾಗದ ಮುಖ್ಯಸ್ಥನಾದ. ಅನಂತರ ಕೆಲ ಕಾಲ ಅಮೆರಿಕದಲ್ಲಿ ಚೀನದ ರಾಯಭಾರಿಯಾಗಿದ್ದು, ತನ್ನ ವಿಶ್ವವಿದ್ಯಾಲಯದ ಕುಲಪತಿಯಾಗಿ ಹಿಂದಿರುಗಿದ. ಮುಂದೆ ಇವನನ್ನು ವಿಶ್ವಸಂಸ್ಥೆಯ ಚೀನೀ ಪ್ರತಿನಿಧಿಯನ್ನಾಗಿ ಮಾಡಿದರು.

1958ರಲ್ಲಿ ಫಾರ್ಮೋಸಕ್ಕೆ ಹಿಂದಿರುಗಿದ ಹು ಷಿ ಚೀನದ 'ಪಂಡಿತ ಸಂಘಟನೆ'ಯ ನಿರ್ದೇಶಕನಾಗಿ, ಬರೆವಣಿಗೆಯನ್ನೂ ಮುಂದುವರಿಸಿದ. 1962ರ ಫೆಬ್ರುವರಿ 24ರಂದು ನಿಧನನಾದ.

ಹು ಷಿ ನಡೆಸಿದ ಸಾಹಿತ್ಯ ಕ್ರಾಂತಿ ಚೀನದ ಸಾಹಿತ್ಯಕ್ಕೆ ಹೊಸ ಸ್ವರೂಪವನ್ನೇ ಕೊಟ್ಟಿತು. ಎಂದೇ ಇವನನ್ನು ಇಟಲಿಯ ದಾಂತೆಗೆ ಹೋಲಿಸುತ್ತಾರೆ.

## ಹ್ಯೂಗೊ !

ತಲೆತುಂಬ ಬಿಳಿಕೂದಲು; ನೀಳವಾದ ಬಿಳಿಗಡ್ಡ. ನೋಡಿದೊಡನೆಯೇ ಗೌರವವನ್ನು ಮೂಡಿಸುವಂಥ ಗಂಭೀರ ವ್ಯಕ್ತಿತ್ವ. ಸ್ವಂತ ಕುದುರೆ ಸಾರೋಟ ನ್ನಿಟ್ಟುಕೊಳ್ಳುವ ಸಾಮರ್ಥ್ಯವಿತ್ತು ಅವನಿಗೆ. ಆದರೂ ಅವನು ಸಾರ್ವಜನಿಕ ಕುದುರೆಗಾಡಿಯ ಮೇಲಂತಸ್ತಿನಲ್ಲಿ ಕುಳಿತು, ಪ್ರತಿ ಮಧ್ಯಾಹ್ನವೂ



ತಾಪ, ಅನುತಾಪ : ಹ್ಯೂಗೋ

ಒಂದು ಸಿಹಿತಿಂಡಿ ಅಂಗಡಿಗೆ ಹೋಗುತ್ತಿದ್ದ —ತನಗೆ ಅತ್ಯಂತ ಪ್ರಿಯವಾದ ಫ್ರೆಂಚ್ ಕೇಕ್ ತಿನ್ನುವುದಕ್ಕೆ.

ಇದು ಸುಮಾರು ತೊಂಬತ್ತು ವರ್ಷಗಳ ಹಿಂದಿನ ಮಾತು. ಇದು ನಡೆಯುತ್ತಿದ್ದುದು ಪ್ಯಾರಿಸ್ ನಗರದಲ್ಲಿ. ಈ ವ್ಯಕ್ತಿ ಸುಪ್ರಸಿದ್ಧ ಫ್ರೆಂಚ್ ಕಾದಂಬರಿಕಾರ, ಕವಿ, ನಾಟಕಕಾರ ವಿಕ್ಟರ್ ಹ್ಯೂಗೋ.

ವಿಕ್ಟರ್ ಹ್ಯೂಗೋ ಹುಟ್ಟಿದ್ದು 1802ನೆಯ ಫೆಬ್ರುವರಿ 26ರಂದು. ಅವನ ತಂದೆ ಜೋಸೆಫ್ ಲಿಯೊಪಾಲ್ಡ್ ಹ್ಯೂಗೋ, ಫ್ರಾನ್ಸಿನ ಚಕ್ರವರ್ತಿ ಒಂದನೆಯ ನೆಪೋಲಿಯನನ ಸೈನ್ಯದಲ್ಲಿ ಒಬ್ಬ ಅಧಿಕಾರಿಯಾಗಿದ್ದ. ಹ್ಯೂಗೋ ಬಾಲ್ಯದಲ್ಲಿಯೇ ಇಟಲಿ, ಸ್ಪೇನ್ ಮುಂತಾದ ದೇಶಗಳನ್ನು ತಂದೆಯೊಡನೆ ಸುತ್ತಿದ್ದ. ಮೂರು ವರ್ಷ ಆತ ಪ್ಯಾರಿಸಿನ ಶಾಲೆಯಲ್ಲಿ ಕಲಿತ.

ವಿಕ್ಟರ್ ಹ್ಯೂಗೋ 20 ವರ್ಷ ವಯಸ್ಸಿನವನಾಗಿದ್ದಾಗಲೇ ಆತನ ಮೊದಲ ಕವನ ಸಂಕಲನ ಪ್ರಕಟವಾಯಿತು. ಫ್ರೆಂಚ್ ಸಾಹಿತ್ಯ ಅಕಾಡೆಮಿಯ ವಾರ್ಷಿಕ ಕಾವ್ಯ ಸ್ಪರ್ಧೆಯಲ್ಲಿ ಬಹುಮಾನವನ್ನೂ ಗಳಿಸಿತು. ಇದರಿಂದ ಉತ್ತೇಜಿತನಾಗಿ ಆತ ನಾಟಕಗಳನ್ನು ರಚಿಸಿದ.

ಸಾಹಿತ್ಯ ಮತ್ತು ರಾಜಕೀಯದ ಬಗೆಗೆ ಬೆಳೆದು ಬಂದಿದ್ದ ಪ್ರಾಚೀನ ಸಂಪ್ರದಾಯವನ್ನು ಕಿತ್ತೊಗೆಯಲು ಹ್ಯೂಗೋ ಪ್ರಯತ್ನಿಸಿದ. ಫ್ರಾನ್ಸಿನ ರೊಮ್ಯಾಂಟಿಕ್ ಚಳುವಳಿಯಲ್ಲಿ ಉತ್ಸಾಹದಿಂದ ಹ್ಯೂಗೋ ಭಾಗವಹಿಸಿದ. 1821ರಲ್ಲಿ ತನ್ನ ಬಾಲ್ಯದ ಗೆಳತಿ ಅದಿಲ್ ಫೌಚರ್ ಎಂಬಾಕೆಯನ್ನು ವಿವಾಹವಾದ.

ಇಪ್ಪತ್ತೆರಡು ವರ್ಷಗಳ ಅನಂತರ ವಿಕ್ಟರ್ ಹ್ಯೂಗೋನ ಜೀವನದಲ್ಲಿ ದುರ್ಘಟನೆಯೊಂದು ಸಂಭವಿಸಿತು. ಆಗ ತಾನೇ ವಿವಾಹಮಾಡಿಕೊಂಡಿದ್ದ ಅವನ ಹಿರಿಯ ಮಗಳು ಲಿಯೊಪಾಲ್ಡೈನ್ ಮತ್ತು ಆಕೆಯ ಗಂಡ ನೌಕಾ ವಿಹಾರದಲ್ಲಿದ್ದಾಗ ದುರಂತ ಮರಣಕ್ಕೊಳಗಾದರು. ಲಿಯೊಪಾಲ್ಡೈನ್ ಅವನ ಅಚ್ಚುಮೆಚ್ಚಿನ ಮಗಳಾಗಿದ್ದಳು. ಹೀಗೆ ಅನಿರೀಕ್ಷಿತವಾಗಿ ಮಗಳನ್ನು ಕಳೆದುಕೊಂಡ ಹ್ಯೂಗೋ ಹೃದಯದ ಅಳಲನ್ನು ತನ್ನ ಒಂದು ಭಾವಗೀತೆಯಲ್ಲಿ ತೋಡಿಕೊಂಡ.

ವಿಕ್ಟರ್ ಹ್ಯೂಗೋಗೆ ಫ್ರಾನ್ಸಿನ ರಾಜಕೀಯದಲ್ಲಿ ಅಪಾರ ಆಸಕ್ತಿಯಿತ್ತು. ಇವನ ಕಾಲ ಫ್ರಾನ್ಸಿನ ರಾಜಕೀಯದಲ್ಲಿ ಕೋಲಾಹಲದ ಕಾಲ. ಮೂರನೆಯ ನೆಪೋಲಿಯನ್ ಎಂದು ಹೆಸರಾದ ಲೂಯಿ ಜನಾಭಿಪ್ರಾಯಕ್ಕೆ ತಲೆಬಾಗಿ ತನ್ನ ಸಾಮ್ರಾಜ್ಯಾಧಿಕಾರವನ್ನು ಬಿಟ್ಟುಕೊಟ್ಟು ಫ್ರಾನ್ಸಿನ ಗಣರಾಜ್ಯದ ಅಧ್ಯಕ್ಷನಾಗಿರಲು ಒಪ್ಪಿದರೂ, ಮೂರು ವರ್ಷಗಳ ಅನಂತರ 1851ರಲ್ಲಿ ಗಣರಾಜ್ಯವನ್ನು ಮೂಲೆಗೊತ್ತಿ ಮತ್ತೆ ಸಮ್ರಾಟನಾದ. ಗಣರಾಜ್ಯದ ಶಾಸನ ಮತ್ತು ರಾಜ್ಯಾಂಗ ಸಭೆಯ ಸದಸ್ಯನಾಗಿದ್ದ ಹ್ಯೂಗೋ ನೆಪೋಲಿಯನನ ರಾಜಕೀಯ ತಂತ್ರಗಳ ಕಡುವಿರೋಧಿಯಾಗಿದ್ದುದರಿಂದ, ಎರಡನೆಯ ಬಾರಿ ಆತ ಅಧಿಕಾರಕ್ಕೆ ಬಂದಾಗ ಹ್ಯೂಗೋ ಫ್ರಾನ್ಸ್ ಬಿಟ್ಟುಹೋಗಬೇಕಾಯಿತು; ಬ್ರಿಟಿಷ್ ಕಡಲ್ಗಾಲುವೆಯ ಗ್ಯುವ್‌ಸೆ ದ್ವೀಪದಲ್ಲಿ ವಾಸಿಸಬೇಕಾಯಿತು. ಈ ಅವಧಿಯಲ್ಲಿ ಅವನು ತನ್ನ ಕೆಲವು ಅಮೂಲ್ಯ ಕೃತಿಗಳನ್ನು ಬರೆದ. ಫ್ರಾನ್ಸಿನಲ್ಲಿ ಮತ್ತೆ ಗಣರಾಜ್ಯ ಸ್ಥಾಪನೆಯಾದಾಗ ಹಿಂದಿರುಗಿದ. ಹ್ಯೂಗೋನ ಕಾದಂಬರಿಗಳಲ್ಲಿ ಫ್ರಾನ್ಸಿನ ಮಧ್ಯಮ ಮತ್ತು ದಲಿತವರ್ಗದವರ ಜೀವನ ಚಿತ್ರಣ ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಮೂಡಿದೆ. ಅವನ 'ನಾಟರ್‌ಡ್ಯಾಂನ ಗೂನ,' 'ಲ ಮಿಸರಬ್‌ಲ್' ಕಾದಂಬರಿಗಳು ಲೋಕವಿಖ್ಯಾತವಾಗಿವೆ. ಇವು ಜಗತ್ತಿನ ಹಲವಾರು ಭಾಷೆಗಳಿಗೆ ಅನುವಾದವಾಗಿವೆ. ಫ್ರೆಂಚ್ ಸಾಹಿತ್ಯದ ಅಮೂಲ್ಯ ಗ್ರಂಥಗಳೆಂದು ಪರಿಗಣಿಸಲ್ಪಟ್ಟಿವೆ.

ಹ್ಯೂಗೋ ಪ್ರಸಿದ್ಧ ನಾಟಕಕಾರನೂ ಆಗಿದ್ದ. ಆತನ ಪ್ರಥಮ ನಾಟಕ 'ಹರ್ನನಿ' ಫ್ರೆಂಚ್ ರಂಗಭೂಮಿಯಲ್ಲಿ 1830ರಲ್ಲಿ ಮೊಟ್ಟಮೊದಲ ಬಾರಿಗೆ ಪ್ರದರ್ಶಿಸಲ್ಪಟ್ಟಿತು. ಪ್ರಾಚೀನ ಸಂಪ್ರದಾಯದ ವಿರುದ್ಧ ಸಿಡಿದೆದ್ದ ಈ ನಾಟಕ ದೊಡ್ಡ ಕೋಲಾಹಲವನ್ನೇ ಉಂಟುಮಾಡಿತು.

ಇವನ ಇನ್ನೊಂದು ನಾಟಕ 'ಲುಕ್ರೀಶಿಯಾ ಬೋರ್ಜಿಯಾ' ಎಂಬುದು ತುಂಬ ಜನಪ್ರಿಯವಾಯಿತು.

ವಿಕ್ಟರ್ ಹ್ಯೂಗೋ ಜೀವನದ ಕೊನೆಗಾಲ ಅತ್ಯಂತ ದುಃಖಮಯವಾಗಿತ್ತು. ಒಬ್ಬಳು ಮಗಳು ಆಗಲೇ ತೀರಿಕೊಂಡಿದ್ದಳು. ಇನ್ನೊಬ್ಬಳು ಮಗಳು ಬುದ್ಧಿಭ್ರಮಣೆಗೊಳಗಾಗಿ ಮೃತಳಾದಳು. 1868ರಲ್ಲಿ ಹೆಂಡತಿ ಕಾಲವಾದಳು. 1871ರಲ್ಲಿ ಆತನ ಮಗ ಕಣ್ಮುಚ್ಚಿದ. ಜೀವನದಲ್ಲಿ ಒಂದಾದ ಮೇಲೊಂದರಂತೆ ಬಂದ ದುಃಖಪರಂಪರೆ ಹ್ಯೂಗೋನ ಮನಸ್ಸಿನ ಮೇಲೆ ತೀವ್ರ ಪರಿಣಾಮ ಉಂಟುಮಾಡಿತು.

ವಿಕ್ಟರ್ ಹ್ಯೂಗೋ 1885ರ ಮೇ 22ರಂದು ತೀರಿಕೊಂಡ. ಅವನದು ಅತ್ಯಂತ ಸ್ಮರಣೀಯ ಅಂತಿಮಯಾತ್ರೆಯಾಗಿತ್ತು. ಸಾರ್ವಜನಿಕ ದರ್ಶನಕ್ಕಾಗಿ ಇಟ್ಟಿದ್ದ ಅವನ ಮೃತದೇಹವನ್ನು ಲಕ್ಷಾಂತರ ಜನ ಬಂದು ನೋಡಿ ಕೊನೆಯ ಗೌರವ ಸಲ್ಲಿಸಿದರು. ಫ್ರಾನ್ಸಿನ ಗಣ್ಯ ವ್ಯಕ್ತಿಗಳ ಸಮಾಧಿಗೆ ಮೀಸಲಾದ 'ಪಾಂಥಿಯಾನ್' ಸ್ಮಾರಕಗೃಹದಲ್ಲಿ ಅವನನ್ನು ಸಮಾಧಿ ಮಾಡಲಾಯಿತು.

ಹ್ಯೂಗೋನ ಮರಣಾನಂತರ ಅವನ ಸಂಪೂರ್ಣ ಕೃತಿಗಳು 40 ಸಂಪುಟಗಳಲ್ಲಿ ಪ್ಯಾರಿಸಿನಲ್ಲಿ ಪ್ರಕಟವಾದುವು. ಆತ ವಾಸಿಸುತ್ತಿದ್ದ ಮನೆ ಇಂದು 'ವಿಕ್ಟರ್ ಹ್ಯೂಗೋ ವಸ್ತುಸಂಗ್ರಹಾಲಯ' ವಾಗಿದೆ: ಕವಿಯ ಜೀವನಕ್ಕೆ ಸಂಬಂಧಿಸಿದ ಸ್ವಾರಸ್ಯಕರ ವಸ್ತುಗಳನ್ನು ಅಲ್ಲಿ ಇಡಲಾಗಿದೆ.

## ಹೆನ್ರಿ ರೂಸೋ

ಉಷ್ಣವಲಯದ ಕಾಡು ಮತ್ತು ಕ್ರೂರಮೃಗಗಳ ಚಿತ್ರ ಬರೆಯುವುದೆಂದರೆ ಹೆನ್ರಿ ರೂಸೋಗೆ ಬಹಳ ಇಷ್ಟ. ಬಣ್ಣ ಬಳಿಯುತ್ತ ಬಳಿಯುತ್ತ ಈತನಿಗೆ ತಾನು ಎಲ್ಲಿದ್ದೇನೆ ಎಂಬುದೇ ಮರೆತುಹೋಗುತ್ತಿತ್ತು. ತಾನು ಚಿತ್ರಿಸಿದ ಮೃಗಗಳು ತನ್ನನ್ನೇ ತಿಂದುಬಿಡುವಂತೆ ನೋಡುತ್ತಿವೆ ಎಂದು ಅನಿಸಿ ಅವನಿಗೆ ಭಯವಾಗುತ್ತಿತ್ತು. ಆಗಾಗ ಚಿತ್ರ ಬರೆಯುವುದನ್ನು ಬಿಟ್ಟು ಕಿಟಕಿಯ ಬಳಿಗೆ ಹೋಗಿ ನಿಂತು ಹೊರಗೆ ಇಣುಕಿ, ತಾನು ಇನ್ನೂ ಪ್ಯಾರಿಸಿನ ಒಂದು ಮೂಲೆಯಲ್ಲಿ ಕೊಳಕು ಕೊಠಡಿಯಲ್ಲೇ ಇದ್ದೇನೆ ಎಂದು ಖಚಿತಮಾಡಿಕೊಳ್ಳುತ್ತಿದ್ದ.

ರೂಸೋನದು ಮಗುವಿನ ಮನಸ್ಸು. ಅವನ ವರ್ಣಚಿತ್ರಗಳು ಅಷ್ಟೇ ಸರಳ.

ಚಿತ್ರಪ್ರದರ್ಶನವೊಂದರಲ್ಲಿ ರೂಸೋನ 'ಮಲಗಿರುವ ಜಿಪ್ಸಿ' ಚಿತ್ರ ಪ್ರದರ್ಶಿತವಾದಾಗ ಹೆಚ್ಚಿನ ಜನ ಅದನ್ನು ನೋಡಿ ಹಾಸ್ಯಮಾಡಿ ನಕ್ಕರು. ನಿಷ್ಕಪಟ ಸ್ವಭಾವದ ರೂಸೋ, ಇದನ್ನು ನೋಡಿ ಜನ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದಾರೆ ಎಂದುಕೊಂಡ. ತನ್ನ ಹುಟ್ಟೂರಾದ ಫ್ರಾನ್ಸಿನ ಲಾವೆಲ್‌ನ ಜನರಿಗೆ ಈ ವರ್ಣಚಿತ್ರವನ್ನು ಕಾಣಿಕೆಯಾಗಿ ನೀಡಿದ. "ನನ್ನ ನೆನಪಿಗಾಗಿ ಇಟ್ಟುಕೊಳ್ಳಿ" ಎಂದು ಹೇಳಿದ. ಊರು ಈ ಕಾಣಿಕೆಯನ್ನು ನಿರಾಕರಿಸಿತು. ಇದನ್ನು ತಿಳಿದು ರೂಸೋಗೆ ಕೋಪಕ್ಕಿಂತ ಹೆಚ್ಚು ದುಃಖವಾಯಿತು. ತನ್ನ ಕಲೆಯನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಒಬ್ಬರಿಗೂ ಇಲ್ಲವೆಂದು ನೊಂದುಕೊಂಡ. "ಒಂದು ದಿನ ನನ್ನ ಚಿತ್ರಗಳನ್ನು ಅಪೂರ್ವ ನಿಧಿಯಂತೆ ಕಾಪಾಡ್ತಾರೆ" ಎಂದ.

ರೂಸೋ ಸತ್ತುಹೋಗಿ ಎಷ್ಟೋ ವರ್ಷಗಳಾದ ಮೇಲೆ ನ್ಯೂಯಾರ್ಕಿನ ವಸ್ತು ಸಂಗ್ರಹಾಲಯ 1,83,500 ರೂಪಾಯಿ ಕೊಟ್ಟು 'ಮಲಗಿರುವ ಜಿಪ್ಸಿ' ಯನ್ನು ಕೊಂಡುಕೊಂಡಿತು. 1971ರಲ್ಲಿ ಅಮೆರಿಕದ ಕಲಾ ಸಂಗ್ರಾಹಕನೊಬ್ಬ 'ಅದ್ಭುತ ಪ್ರಕೃತಿ ಚಿತ್ರ' ಎಂಬ ಇನ್ನೊಂದು ವರ್ಣಚಿತ್ರವನ್ನು 55,80,000 ರೂಪಾಯಿಗಳಿಗೆ ಖರೀದಿಮಾಡಿದ. 20ನೆಯ ಶತಮಾನದ ವರ್ಣಚಿತ್ರಗಳಲ್ಲಿ ಇದರಷ್ಟು ಬೆಲೆಬಾಳುವಂಥದ್ದು ಬೇರೆ ಇಲ್ಲ.

ಆದರೆ ಹೆನ್ರಿ ರೂಸೋ ಜೀವಿಸಿದ್ದಾಗ ಶ್ರೀಮಂತಿಕೆ ಅವನ ಬಳಿ ಸುಳಿಯಲಿಲ್ಲ. ವಾಯುವ್ಯ ಫ್ರಾನ್ಸಿನ ಲಾವೆಲ್ ಪಟ್ಟಣದಲ್ಲಿ 1844ರ ಮೇ 20ರಂದು ಹುಟ್ಟಿದ ರೂಸೋ ಅರ್ಧದಲ್ಲೇ ಶಾಲೆಬಿಟ್ಟು, ಸೈನ್ಯಕ್ಕೆ ಸೇರಿದ. ನಾಲ್ಕು ವರ್ಷಗಳ ಬಳಿಕ ಪ್ಯಾರಿಸಿಗೆ ಹಿಂದಿರುಗಿ ಬಂದು, ಅಲ್ಲಿ ಸುಂಕ ವಸೂಲಿ ಗುಮಾಸ್ತೆಯಾದ. ಮದುವೆಯಾಗಿ ಸಂಸಾರಸ್ಥನಾದಾಗ ತನ್ನ ಒಂಬತ್ತು ಮಕ್ಕಳಲ್ಲಿ ಆರು ಮಕ್ಕಳನ್ನೂ ಪತ್ನಿಯನ್ನೂ ಕಳೆದುಕೊಂಡ. ಮರುಮದುವೆ ಮಾಡಿಕೊಂಡ; ಎರಡನೆಯ ಹೆಂಡತಿ ಹೆಚ್ಚು ಕಾಲ ಬದುಕಲಿಲ್ಲ.

ತನ್ನ 49ನೆಯ ವಯಸ್ಸಿನಲ್ಲಿ ಗುಮಾಸ್ತೆ ಉದ್ಯೋಗದಿಂದ ನಿವೃತ್ತಿ ಪಡೆದ ರೂಸೋ ಪೂರ್ಣಾವಧಿಯ ಚಿತ್ರಕಾರನಾಗಿ ಕೆಲಸಮಾಡತೊಡಗಿದ. ಆದರೆ ಇವನ ಚಿತ್ರಗಳನ್ನು ಕೊಂಡುಕೊಳ್ಳುವ ಗಿರಾಕಿಗಳನ್ನು ಹುಡುಕುವುದು ಅಸಾಧ್ಯವೇ ಆಗಿತ್ತು. ಬರುತ್ತಿದ್ದ ನಿವೃತ್ತಿವೇತನದಿಂದ ಹೊಟ್ಟೆ ತುಂಬಿಸುವುದು ಕಷ್ಟವಾಗಿತ್ತು. ರೂಸೋ ಚಿಕ್ಕ ಪುಟ್ಟ ಕಸುಬುಮಾಡಿ ಪುಡಿಕಾಸು ಸಂಪಾದಿಸಬೇಕಾಗಿತ್ತು. ಬರಹ ತಿಳಿಯದವರಿಗೆ ಪತ್ರ ಬರೆದುಕೊಡುವುದು, ನೆರೆಮನೆಯ ಹಾಲುಮಾರುವವನ ಮಗಳಿಗೆ ಪಿಟೀಲು ಪಾಠ,



ಮಗುಮನಸ್ಸು : ಹೆನ್ರಿ ರೂಸೋ

ಸಮೀಪದ ಜಿನಸಿನ ಅಂಗಡಿಯವನಿಗೆ ವ್ಯಾಕರಣ ಹೇಳಿಕೊಡುವುದು—ಇವುಗಳಿಂದ ಅವನು ದಿನ ಕಳೆಯಬೇಕಾಯಿತು.

ರೂಸೋ ತನ್ನ ಚಿತ್ರದ ಪ್ರತಿ ರೇಖೆಯನ್ನೂ ಅತ್ಯಂತ ಜಾಗರೂಕತೆಯಿಂದ ಎಳೆಯುತ್ತಿದ್ದ. 1910ರಲ್ಲಿ ಪ್ರದರ್ಶಿತವಾದ 'ಕನಸು' ಎಂಬ ವರ್ಣಚಿತ್ರದಲ್ಲಿರುವ ಕಾಡಿನ ದೃಶ್ಯದಲ್ಲಿ ಐವತ್ತಕ್ಕಿಂತ ಹೆಚ್ಚು ಛಾಯೆಗಳ ಹಸಿರುಬಣ್ಣವಿತ್ತು. ಒಂದೊಂದು ಚಿತ್ರ ಬರೆದು ಮುಗಿಸಲು ಎರಡು-ಮೂರು ತಿಂಗಳು ಬೇಕಾಗುತ್ತಿತ್ತು. ಇಷ್ಟಾದ ಮೇಲೆ ಅದೃಷ್ಟವಶಾತ್ ವರ್ಣಚಿತ್ರ ಮಾರಾಟವಾಗಿ ಐವತ್ತೋ ಅರವತ್ತೋ ರೂಪಾಯಿ ಬಂದರೆ ಅಂದು ರೂಸೋನ ಕೊಠಡಿಯಲ್ಲಿ ಸಂಭ್ರಮದ ಸಮಾರಂಭ. ನೆರೆಹೊರೆಯವರೆಲ್ಲ ಸೇರಿ ಹಾಡು-ಕುಣಿತಗಳಲ್ಲಿ ತೊಡಗುತ್ತಿದ್ದರು.

ವ್ಯಕ್ತಿಚಿತ್ರಗಳು, ಪ್ಯಾರಿಸಿನ ಸುತ್ತಮುತ್ತಲ ಹಳ್ಳಿಗಾಡಿನ ಪ್ರಕೃತಿ ಚಿತ್ರ ಮತ್ತು ಬಣ್ಣಬಣ್ಣದ ಅರಣ್ಯ ದೃಶ್ಯಗಳನ್ನು ರೂಸೋ ಚಿತ್ರಿಸಿದ. ಇವನ ಸಿಂಹಗಳಲ್ಲಿ ರಾಜಗಾಂಭೀರ್ಯವಿತ್ತು, ವನಗಳ ಸಾಧುತನ ಎದ್ದು ಕಾಣುತ್ತಿತ್ತು. ಕೋತಿಗಳಲ್ಲಿ ತುಂಟತನ ತುಳುಕುತ್ತಿತ್ತು. "ಅವನ ಚಿತ್ರಗಳಲ್ಲಿ ಮರದ ಎಲೆಗಳೂ ಆಕಾಶದ ಮೋಡಗಳೂ ಜೀವತಳೆದಿರುವಂತೆ ತೋರುತ್ತವೆ; ಆತನು ತನ್ನ ಕನಸುಗಳನ್ನು ಚಿತ್ರಿಸಬಲ್ಲವನಾಗಿದ್ದ" ಎಂದು ಕವಿ ಪಾಲ್ ಎಲುವಾರ್ಡ್ ಹೇಳಿದ್ದಾನೆ.

"ನಾನು ಸೈನ್ಯದಲ್ಲಿದ್ದಾಗ ಮೆಕ್ಸಿಕೋಗೆ ಹೋಗಿದ್ದೆ. ಅಲ್ಲಿಯ ಭವ್ಯ ಅರಣ್ಯಗಳ ದೃಶ್ಯಗಳನ್ನೇ ಜ್ಞಾಪಿಸಿಕೊಂಡು ನಾನು ವರ್ಣಚಿತ್ರಗಳನ್ನು ಬರೀತೇನೆ" ಎಂದು ರೂಸೋ ಹೇಳಿಕೊಳ್ಳುತ್ತಿದ್ದ. ಆದರೆ ಸೈನ್ಯದ ದಾಖಲೆಗಳ ಪ್ರಕಾರ, ರೂಸೋ ಮೆಕ್ಸಿಕೋಕ್ಕೆ ಹೋದದ್ದೇ ಇಲ್ಲ. ಪತ್ರಿಕೆಗಳ ಫೋಟೋಗಳಲ್ಲೋ ಮಕ್ಕಳ ಚಿತ್ರದ ಪುಸ್ತಕಗಳಲ್ಲೋ ಪ್ರಾಣಿಗಳ ಮೃಗಗಳ ಚಿತ್ರಗಳನ್ನು ನೋಡಿ ಅವುಗಳನ್ನು ಹೋಲುವ ಚಿತ್ರಗಳನ್ನು ಈತ ಬರೆಯುತ್ತಿದ್ದ. ಪ್ರಾಣಿಸಂಗ್ರಹಾಲಯಗಳಲ್ಲಿ ಹೋಗಿ ಪ್ರಾಣಿಗಳನ್ನು ನೋಡಿ ಬರುತ್ತಿದ್ದ.

ಹೆನ್ರಿ ರೂಸೋನ ಚಿತ್ರಗಳ ಪ್ರದರ್ಶನ ನಡೆದಾಗಲೆಲ್ಲ ವಿಮರ್ಶಕರು, ಇವು ಪುರಾತನ ಚಿತ್ರಗಳಂತೆ ಇವೆ ಎಂದು ಗೇಲಿಮಾಡಿದರು. ಆದರೆ

ಆಧುನಿಕ ಚಿತ್ರಕಾರರು ಇವನ ಪ್ರತಿಭೆಯನ್ನು ಗುರುತಿಸಿದರು. ಆಧುನಿಕ ಚಿತ್ರಕಾರ ಪಿಕಾಸೋ ರೂಸೋನ ಗೌರವಾರ್ಥ ತನ್ನ ಮನೆಯಲ್ಲಿ ಔತಣ ಏರ್ಪಡಿಸಿದ. ಪ್ಯಾರಿಸಿನ ಪ್ರಮುಖ ಆಧುನಿಕ ಚಿತ್ರಕಾರರೆಲ್ಲ ಅಲ್ಲಿ ಸೇರಿದ್ದರು. ಎಲ್ಲರೂ ರೂಸೋನನ್ನು ಹೊಗಳಿದ್ದೇ ಹೊಗಳಿದ್ದು. ಉದ್ದುದ್ದ ಭಾಷಣಗಳಾಗುತ್ತಿದ್ದಾಗ ಸಂತೋಷದಿಂದ ಮೈಮರೆತು ರೂಸೋ, ಕುಳಿತಲ್ಲೇ ನಿದ್ದೆಹೋದ.

ಪ್ರಶಂಸೆ ದೊರೆತರೂ ರೂಸೋನ ದುಡ್ಡಿನ ಅಡಚಣೆ ಮಾತ್ರ ಕಡಮೆಯಾಗಲಿಲ್ಲ. ಇವನ ಶಿಷ್ಯನೇ ಆಗಿದ್ದವನೊಬ್ಬ, ರೂಸೋ ತನ್ನಿಂದ ಸಾಲ ತೆಗೆದುಕೊಂಡು ಹಿಂದೆಕೊಡಲಿಲ್ಲ—ಎಂಬ ಸುಳ್ಳು ಆರೋಪ ಹೊರಿಸಿ, ದೂರುಕೊಟ್ಟ. ರೂಸೋ ಹೀಗೆ ಮಾಡುವವನಲ್ಲ, ಅವನು ಬರೀ ಪೆದ್ದ ಎಂದು ವಾದಿಸಿದ ಆತನ ವಕೀಲ, ತನ್ನ ವಾದಕ್ಕೆ ಸಮರ್ಥನೆಯಾಗಿ ರೂಸೋನ ವರ್ಣಚಿತ್ರವೊಂದನ್ನು ನ್ಯಾಯಾಲಯದಲ್ಲಿ ತೋರಿಸಿ, "ಇದು ಪೆದ್ದನ ಕೃತಿಯಲ್ಲವೇ" ಎಂದ. ರೂಸೋನ ಬಿಡುಗಡೆಯಾಯಿತು.

ಮರುವರ್ಷ, 1910ರ ಸೆಪ್ಟೆಂಬರ್ 4ರಂದು ಹೆನ್ರಿ ರೂಸೋ ಕಾಲವಾದಾಗ, ಗೆಳೆಯರು ಚಂದಾ ಸೇರಿಸಿ, ಅವನನ್ನು ಸಮಾಧಿ ಮಾಡಿದರು. ಶಿಲ್ಪಿ ಬ್ರಾಂಕುಸಿ ಗೋರಿ ರಚಿಸಿದ. ಲೇಖಕ ಅಪೊಲ್ಲಿನೈರ್ ಚರಮಲೇಖ ಬರೆದ.

## ಹೆಮಿಂಗ್‌ವೇ

1954ರ ನೊಬೆಲ್ ಸಾಹಿತ್ಯ ಬಹುಮಾನ ಪಡೆದ ಅಮೆರಿಕದ ಸಾಹಿತಿ ಹೆಮಿಂಗ್‌ವೇ ಬರೆಯುವ ವೇಳೆಗಿಂತಲೂ ಹೆಚ್ಚು ಕಾಲವನ್ನು ಪ್ರವಾಸದಲ್ಲಿ ಕಳೆಯುತ್ತಿದ್ದ. ಆಫ್ರಿಕದ ಕಾಡುಗಳಲ್ಲಿ ಬೇಟೆ, ಸ್ಪೇನಿನ ಗೂಳಿಕಾಳಗ ವೀಕ್ಷಣೆ, ಮತ್ತು ಕ್ಯೂಬಾದ ಸಮೀಪದ ಸಮುದ್ರದಲ್ಲಿ ಮೀನು ಹಿಡಿಯುವುದು —ಹೀಗೆ ವರ್ಷದ ಹೆಚ್ಚಿನ ಕಾಲ ಕಳೆಯುತ್ತಿತ್ತು.

ಅರ್ನೆಸ್ಟ್ ಹೆಮಿಂಗ್‌ವೇ ಭಾರೀ ಆಳು. ಶರೀರ ಎಷ್ಟು ದೃಢವೋ ಹೃದಯ ಅಷ್ಟೇ ಮೃದು. ಜೊತೆಗೆ ಸಂಕೋಚ ಸ್ವಭಾವ ಬೇರೆ. ಸ್ಟಾಕ್‌ಹೋಮಿನಲ್ಲಿ ನೊಬೆಲ್ ಪಾರಿತೋಷಿಕ ನೀಡಿಕೆಯ ಸಮಾರಂಭದಲ್ಲಿ ಈತ ಬರೆದಿಟ್ಟಿದ್ದ ಭಾಷಣವನ್ನು ಅಮೆರಿಕದ ರಾಯಭಾರಿ ಓದಿದ.

ಅರ್ನೆಸ್ಟ್ ಹೆಮಿಂಗ್‌ವೇಯ ಸಾಹಸಪ್ರವೃತ್ತಿ ಇವನ ತಂದೆಯಿಂದ ಬಂದದ್ದು. ತಂದೆ ಷಿಕಾಗೋ ನಗರದ ಒಂದು ಕೊನೆಯಲ್ಲಿರುವ ಓಕ್ ಪಾರ್ಕ್ ಎಂಬಲ್ಲಿ ವೈದ್ಯನಾಗಿದ್ದ. 1899ರ ಜೂನ್ 28ರಂದು ಹುಟ್ಟಿದ ಅರ್ನೆಸ್ಟ್ ಕಿರಿಯ ವಯಸ್ಸಿನಲ್ಲೇ ಮುಷ್ಟಿಕಾಳಗ ಮತ್ತು ಮೀನುಗಾರಿಕೆಗಳಲ್ಲಿ ವಿಶೇಷ ಆಸಕ್ತಿ ತಳೆದಿದ್ದ. ಪಾಠದಲ್ಲೂ ತರಗತಿಗೆ ಮೊದಲಿಗ. ಆದರೆ ಶಾಲೆಗೆ ಹೋಗುವುದೆಂದರೆ ಎಲ್ಲಿಲ್ಲದ ತಲೆನೋವು. ಹೈಸ್ಕೂಲು ಮುಗಿಸುವುದರೊಳಗೆ ಈತ ಎರಡು ಬಾರಿ ಮನೆಬಿಟ್ಟು ಓಡಿಹೋಗಿದ್ದ.

ಹದಿನೆಂಟರ ಹೆಮಿಂಗ್‌ವೇ 'ಸ್ಟಾರ್' ಎಂಬ ಪತ್ರಿಕೆಯ ವರದಿಗಾರನಾಗಿ ಸೇರಿದ. ಆದರೆ ಆಗ ನಡೆಯುತ್ತಿದ್ದ ಮೊದಲನೆಯ ಮಹಾಯುದ್ಧದಲ್ಲಿ ತಾನೂ ಭಾಗವಹಿಸಬೇಕೆಂದು ಸೈನ್ಯಕ್ಕೆ ಸೇರಲು ಇಷ್ಟಪಟ್ಟ. ಕಣ್ಣಿನ ದೃಷ್ಟಿ ಅಷ್ಟಾಗಿ ಸರಿಯಾಗಿರದ ಕಾರಣದಿಂದ ಸೈನ್ಯಕ್ಕೆ ಸೇರುವ ಆಸೆಯನ್ನು ಬಿಡಬೇಕಾಯಿತು. ಬದಲಿಗೆ ರೆಡ್‌ಕ್ರಾಸ್ ಸಂಸ್ಥೆಯ ಆ್ಯಂಬುಲೆನ್ಸ್ ಡ್ರೈವರ್ ಆದ. ಜೀವದ ಹಂಗುತೊರೆದು ಗಾಯಾಳುಗಳ ಸೇವೆ ಮಾಡಿದ. ತಾನೇ ಗಾಯಗೊಂಡು ಆಸ್ಪತ್ರೆ ಸೇರಿದ. ಇಟಲಿಯ ಸರಕಾರ ಎರಡು ಅತ್ಯುನ್ನತ ಪದಕಗಳನ್ನು ನೀಡಿ ಹೆಮಿಂಗ್‌ವೇಯನ್ನು ಗೌರವಿಸಿತು. ಶಸ್ತ್ರಚಿಕಿತ್ಸಕನೊಬ್ಬ ಇವನ ಕಾಲಿನಿಂದ ಲೋಹದ 28 ತುಂಡುಗಳನ್ನು ಹೊರತೆಗೆದ.


ಹೊರಗೆ ಕಲ್ಲು, ಒಳಗೆ ಹೂ : ಹೆಮಿಂಗ್‌ವೇ

ಯುದ್ಧ ಓಡಾದುವಂತಾದ ಕೂಡಲೇ ಹೆಮಿಂಗ್‌ವೇ ಮತ್ತೆ ಪತ್ರಿಕಾ ಪ್ರಪಂಚಕ್ಕೆ ಧಾವಿಸಿದ. ವರದಿಗಾರನಾಗಿ ಯೂರೊಪಿನಲ್ಲೆಲ್ಲ ಓಡಾಡಿದ. 1923ರಲ್ಲಿ ಇವನ 'ಮೂರು ಕಥೆಗಳು ಮತ್ತು ಹತ್ತು ಕವನಗಳು' ಸಂಗ್ರಹ ಪ್ರಕಟವಾಯಿತು. ಆದರೆ ಆ ಪುಸ್ತಕವನ್ನು ಕೊಂಡುಕೊಳ್ಳುವವರು ಇರಲಿಲ್ಲ. ಈ ಬಡ ಲೇಖಕ ಆಹಾರಕ್ಕಾಗಿ ಪ್ಯಾರಿಸಿನ ಪಾರ್ಕ್‌ಗಳಲ್ಲಿ ಪಾರಿವಾಳದ ಬೇಟೆ ಆಡಬೇಕಾಯಿತು.

ಹೆಮಿಂಗ್‌ವೇಯ ಪ್ರಥಮ ಕಾದಂಬರಿ 'ದಿ ಸನ್ ಆಲ್ಸೋ ರೈಸಸ್' (1926). ಪ್ರಕಟವಾದೊಡನೆ ಇದು ಜನಪ್ರಿಯವಾಯಿತು. ಹಿಂಸೆ, ಹೊಡೆದಾಟ, ಮರಣಗಳ ಕಥೆಗಳನ್ನು ಸರಳವಾದ ಶೈಲಿಯಲ್ಲಿ ಶಾಂತ ರೀತಿಯಲ್ಲಿ ಹೇಳುವ ಇವನ ಬರೆಹವನ್ನು ವಿಮರ್ಶಕರು ಹೊಗಳಿದರು. ವಾಕ್ಯರಚನೆ ಅತಿ ಸರಳವಾಗಿದ್ದರೂ ಇವುಗಳ ಒಟ್ಟು ಪರಿಣಾಮ ತೀವ್ರತಮ. ತನ್ನ ಅನುಭವವನ್ನೇ ಕಥೆಯ ರೂಪದಲ್ಲಿ ಹೇಳುವ ಶಕ್ತಿ ಹೆಮಿಂಗ್‌ವೇಯಲ್ಲಿತ್ತು. ಮೊದಲ ಮಹಾಯುದ್ಧದ ಕಾಲದ ಇಟಲಿ-ಆಸ್ಟ್ರಿಯ ಯುದ್ಧರಂಗದ ಹಿನ್ನೆಲೆಯಲ್ಲಿ ಹೆಣೆದ ಕಾದಂಬರಿ 'ಎ ಫೇರ್‌ವೆಲ್ ಟು ಆರ್ಮ್ಸ್' (1929). 'ಡೆತ್ ಇನ್ ದಿ ಆಫ್ಟರ್‌ನೂನ್' (1932) ಗೂಳಿಕಾಳಗ ಕುರಿತದ್ದು. ಸ್ಪೇನಿನ ಅಂತರ್ಯುದ್ಧ 'ಫಾರ್ ಹೂಮ್ ದಿ ಬೆಲ್ ಟಾಲ್ಸ್'ನ (1940) ಕಥಾವಸ್ತು.

ಹೆಮಿಂಗ್‌ವೇ ಲೇಖನ ಕಾರ್ಯ ನಡೆಸುತ್ತಿದ್ದಾಗ ಅತ್ಯಂತ ಏಕಾಗ್ರತೆಯಿಂದ ಕೆಲಸ ಮಾಡುತ್ತಿದ್ದ. "ಯಾವುದೇ ಪುಸ್ತಕ ಬರೆಯುವಾಗಲೂ ನಾನು ಅದನ್ನು ನೂರಾರು ಬಾರಿ ಓದ್ತೇನೆ. ಪ್ರತಿ ಪದಕ್ಕೂ ಸಾಣೆ ಹಿಡಿದು, ಅದು ಗೂಳಿ ಕಾಳಗದವನ ಕತ್ತಿಯಷ್ಟು ಹರಿತವಾಗುವಂತೆ ಮಾಡ್ತೇನೆ. 'ಎ ಫೇರ್‌ವೆಲ್ ಟು ಆರ್ಮ್ಸ್' ನ ಹಸ್ತಪ್ರತಿಯ ಕೊನೆಯ ಭಾಗವನ್ನು ನಾನು 39 ಬಾರಿ ತಿದ್ದಿದೆ. ಅಂತಿಮವಾಗಿ ಅಚ್ಚಾಗುವವರೆಗೂ ಕರಡು ಅಚ್ಚೊತ್ತಿನಲ್ಲಿ ಬದಲಾವಣೆ ಮಾಡುತ್ತಲೇ ಇದ್ದೆ." ಎಂದು ಹೆಮಿಂಗ್‌ವೇ ಹೇಳಿಕೊಂಡಿದ್ದಾನೆ. ಹೊಸ ಪುಸ್ತಕವನ್ನು ಬರೆಯುವಾಗ ಈತ, ದಿನದ ಕೊನೆಯಲ್ಲಿ ತಾನು ಅಂದು ಬರೆದ ಪದಗಳ ಒಟ್ಟು ಸಂಖ್ಯೆಯನ್ನು ಎಚ್ಚರಿಕೆಯಿಂದ ಲೆಕ್ಕಹಾಕಿ ಪುಸ್ತಕವೊಂದರಲ್ಲಿ ಬರೆದಿಡುತ್ತಿದ್ದ.

[illegible] ಕಾಲದಲ್ಲಿ ವರದಿಗಾರನಾಗಿ ಹೆಮಿಂಗ್‌ವೇ ಸ್ಪೇನಿಗೆ ಹೋದ. ಅಲ್ಲಿ ಹೋರಾಟದ [illegible] ವರದಿಗಾರನಾಗಿದ್ದರೂ [illegible] ಕಾಲಕ್ಕೆ [illegible]. ಯುದ್ಧ ಮುಗಿದ ಮೇಲೆ ಕ್ಯೂಬದಲ್ಲಿ ಜಮೀನು, ಮನೆ ಕೊಂಡು ಅಲ್ಲಿ ವಾಸಿಸತೊಡಗಿದ.

1952ರಲ್ಲಿ ಪ್ರಕಟವಾದ ಕಾದಂಬರಿ 'ದಿ ಓಲ್ಡ್ ಮ್ಯಾನ್ ಅಂಡ್ ದಿ ಸೀ'. ಪುಸ್ತಕದ ಸ್ಥೂಲ [illegible]ಯನ್ನು ನೋಡಿದರೆ. ಇದು ಒಂದು ಸಣ್ಣಕಥೆ ಮಾತ್ರ ಎನಿಸುತ್ತದೆ. ಚಿಕ್ಕ ದೋಣಿಯಲ್ಲಿ ಕುಳಿತು ಒಬ್ಬಂಟಿಗ ಮುದುಕ ಮೀನುಗಾರ ಮಾಡುವ ಒಂದು ಸಮುದ್ರಯಾನದ ಕಥನ ಇದರಲ್ಲಿದೆ. 1953ರಲ್ಲಿ ಇದಕ್ಕೆ ಪುಲಿಟ್ಜರ್ ಬಹುಮಾನ ಬಂತು. ಮಾರನೆಯ ವರ್ಷದ ನೊಬೆಲ್ ಪಾರಿತೋಷಿಕ ಇದಕ್ಕೆ ದೊರೆಯಿತು.

ಹೆಮಿಂಗ್‌ವೇಯ ಅವಿಶ್ರಾಂತ ದುಡಿಮೆಯ ಪರಿಣಾಮ ಅವನ ದೇಹದ ಮೇಲೂ ಕಂಡುಬರತೊಡಗಿತು. ತನ್ನ ಅನಾರೋಗ್ಯದ ಬಗೆಗೆ ಹೆಮಿಂಗ್‌ವೇಗೆ ಚಿಂತೆಯಾಯಿತು. 1961ರ ಜುಲೈ 2ರ ಬೆಳಗ್ಗೆ ತನ್ನ ಕೋವಿಯನ್ನು ಸ್ವಚ್ಛಗೊಳಿಸುತ್ತಲಿದ್ದ ಅರ್ನೆಸ್ಟ್ ಹೆಮಿಂಗ್‌ವೇ ತನ್ನೆಡೆಗೆ ಗುರಿ ಇಟ್ಟು ಆ ಕೋವಿಯನ್ನು ಹಾರಿಸಿ, ತನ್ನ ಅಸಾಧಾರಣ ಬದುಕನ್ನು ಸಮಾಪ್ತಗೊಳಿಸಿದ.

## ಹೈನ್

ಹೇನ್ರಿಕ್ ಹೈನ್ ಶಾಲೆಯಲ್ಲಿದ್ದಾಗ ಒಮ್ಮೆ ಅವನ ಸಹಪಾಠಿಯೊಬ್ಬನೊಡನೆ ಜಗಳವಾಡಿದ. ಪರಿಣಾಮವಾಗಿ ಸಹಪಾಠಿಯು ಇವನನ್ನು ಪಿಸ್ತೂಲಿನ ದ್ವಂದ್ವ ಯುದ್ಧಕ್ಕೆ ಕರೆದ. ಹೈನ್ ಅದಕ್ಕೆ ಒಪ್ಪಿಗೆ ಕೊಟ್ಟ.

ಇದು ಗೊತ್ತಾದಾಗ ಶಾಲೆಯ ಅಧಿಕಾರಿಗಳು ಇವನನ್ನು ಶಾಲೆಯಿಂದ ಹೊರಹಾಕಿದರು.

ಮುಂದೆ ಇವನು ನಿರ್ಭಯ ಲೇಖಕನಾಗಿ ಬೆಳಗಿದಾಗ, ಇವನ ಗ್ರಂಥಗಳನ್ನು ಮುಟ್ಟುಗೋಲು ಹಾಕುವುದಾಗಿ ಜರ್ಮನ್ ಸರಕಾರ ಬೆದರಿಸಿತು. ಯಾರೂ ಹತ್ತಿಕ್ಕಲಾಗದಂಥ ಪ್ರಚಂಡ ಪ್ರತಿಭೆಯಿದ್ದ ಹೈನ್ ಜರ್ಮನಿಯ ಶ್ರೇಷ್ಠ ಕವಿ ಎಂದು ವಿಶ್ವವಿಖ್ಯಾತನಾದ.

ಹೈನ್ ಮರಣ ಹೊಂದಿದ 85 ವರ್ಷಗಳ ಅನಂತರ, ಎರಡನೆಯ ಮಹಾಯುದ್ಧ ಕಾಲದಲ್ಲಿ, ಪ್ಯಾರಿಸ್ ನಗರವನ್ನು ಆಕ್ರಮಿಸಿಕೊಂಡಾಗ ಹೈನ್‌ನ ಸಮಾಧಿಯನ್ನು ನಾಶಪಡಿಸಬೇಕೆಂದು ಹಿಟ್ಲರ್ ಆಜ್ಞಾಪಿಸಿದ. ಇವನ ಪುಸ್ತಕಗಳನ್ನು ಬೆಂಕಿಗೆ ಹಾಕಿಸಿದ. "ಜರ್ಮನರು ಒಂದಲ್ಲ ಒಂದು ದಿನ ಇಡೀ ಜಗತ್ತನ್ನು ತೀವ್ರ ಭೀತಿಗೆ ಒಳಗುಮಾಡುತ್ತಾರೆ", ಎಂದು ಹೈನ್ ಭವಿಷ್ಯ ನುಡಿದಿದ್ದ ಎನ್ನುವುದೇ ಈ ಆಕ್ರೋಶಕ್ಕೆ ಕಾರಣ.

ಜರ್ಮನಿಯ ಡಸೆಲ್‌ಡಾರ್ಫ್‌ನಲ್ಲಿ 1797ರ ಡಿಸೆಂಬರ್ 13ರಂದು ಹೇನ್ರಿಕ್ ಹೈನ್ ಜನಿಸಿದ. ಹುಟ್ಟಿದ್ದು ಯೆಹೂದ್ಯ ಕುಟುಂಬದಲ್ಲಿ. ಹೆಸರು ಹ್ಯಾರಿ ಹೇನ್ರಿಕ್ ಹೈನ್. ಆದರೆ 1825ರಲ್ಲಿ ಇವನು ಕ್ರೈಸ್ತಧರ್ಮವನ್ನು ಸ್ವೀಕರಿಸಿ. ಹೇನ್ರಿಕ್ ಹೈನ್ ಎಂದು ಹೆಸರು ಬದಲಾಯಿಸಿಕೊಂಡ.

ಹುಟ್ಟೂರಿನ ಶಾಲೆಯಲ್ಲೇ ಹೈಸ್ಕೂಲನ್ನು ಸೇರಿದ. ಅಲ್ಲಿಯ ಉಪಾಧ್ಯಾಯರು ಕ್ಯಾಥೊಲಿಕ್ ಪಾದ್ರಿಗಳು. 1806ರಿಂದ 1813ರ ವರೆಗೆ ಡಸೆಲ್‌ಡಾರ್ಫನ್ನು ಫ್ರಾನ್ಸ್ ವಶಪಡಿಸಿಕೊಂಡದ್ದರಿಂದ ಇವನಿಗೆ ಫ್ರೆಂಚ್ ವಿದ್ಯಾಭ್ಯಾಸ ಸಿಕ್ಕಿತು. ಇವನು ಬಾಲಕನಾಗಿದ್ದಾಗ ನೆಪೋಲಿಯನ್ ಬೋನಪಾರ್ಟ್‌ನ ಯಶಸ್ಸು ಇವನ ಮೇಲೆ ಭಾರಿ ಪರಿಣಾಮ ಬೀರಿತು. ಇವನು ನೆಪೋಲಿಯನನ ಆರಾಧಕನಾದ.

ಮುಂದೆ ಕೊಂಚ ಕಾಲ ತನ್ನ ಶ್ರೀಮಂತ ಚಿಕ್ಕಪ್ಪನ ಬ್ಯಾಂಕನ್ನು ಸೇರಿ, ವಾಣಿಜ್ಯರಂಗದಲ್ಲಿ ಮುಂದುವರಿಯಲು ಪ್ರಯತ್ನಿಸಿ ವಿಫಲನಾದ. ಬಳಿಕ ಬಾನ್, ಗಾಟಿನ್‌ಜನ್ ಮತ್ತು ಬರ್ಲಿನ್ ವಿಶ್ವವಿದ್ಯಾನಿಲಯಗಳಲ್ಲಿ ನ್ಯಾಯಶಾಸ್ತ್ರ ಓದಿದ. ಇದೇ ಸಮಯದಲ್ಲಿ ಲೇಖಕರನೇಕರನ್ನು ಭೇಟಿಯಾದ. ಹೈನ್‌ಗೆ ಸಾಹಿತ್ಯದಲ್ಲಿ ಆಸಕ್ತಿಮೂಡಿತು. ಕವನಗಳನ್ನು ಬರೆಯಲಾರಂಭಿಸಿದ. 1821ರಲ್ಲಿ ಇವನ ಮೊದಲ ಕವನಸಂಕಲನ ಪ್ರಕಟವಾಯಿತು. 1825ರಲ್ಲಿ ಪದವೀಧರನಾದ.

1826ರಲ್ಲಿ 'ಹರ್ಜ್ ಪಯಣ' ಎಂಬ ಇವನ ಕೃತಿ ಹೊರಬಂದಾಗ ಇವನ ಹೆಸರು ಪ್ರಖ್ಯಾತವಾಯಿತು. ಆದರೂ ಜರ್ಮನಿಯಲ್ಲಿ ಇವನಿಗೆ ತಕ್ಕ ಪ್ರೋತ್ಸಾಹವಾಗಲೀ ನೆಮ್ಮದಿಯ ಜೀವನಕ್ಕೆ ಬೇಕಾದ ಅವಕಾಶಗಳಾಗಲೀ ಸಿಗದೆ, 1831ರಲ್ಲಿ ಫ್ರಾನ್ಸಿಗೆ ಹೊರಟುಹೋದ. ಈ ಹೊತ್ತಿಗೆ ಇವನು ಬರೆದಿದ್ದ 'ಹಾಡುಗಳ ಪುಸ್ತಕ' ಮತ್ತು 'ಪಯಣದ ಚಿತ್ರಗಳು' ಇವನಿಗೆ ವಿಶ್ವಖ್ಯಾತಿಯನ್ನು ತಂದಿದ್ದುವು.

ಇವನ ಮುಖ್ಯ ಸಾಧನೆ, ಗದ್ಯದಲ್ಲಿ. ಬುದ್ಧಿವಂತಿಕೆ, ವಿಡಂಬನೆಗಳ ಜೊತೆಗೆ ಭಾವಮಯತೆಯೂ ಕೂಡಿಕೊಂಡ ಇವನ ಗದ್ಯ ಅಪೂರ್ವವಾದದ್ದು. ಸಾಮಾಜಿಕ ಹಾಗೂ ರಾಜಕೀಯ ವಿಷಯಗಳ ಬಗೆಗೆ ತನ್ನ ಅಭಿಪ್ರಾಯಗಳನ್ನು ಹೈನ್ ಧೈರ್ಯದಿಂದ ವ್ಯಕ್ತಪಡಿಸುತ್ತಿದ್ದ. ಇದರಿಂದ ಫ್ರಾನ್ಸಿನ ಸರಕಾರ ಇವನ ಮೇಲೆ ಸಿಟ್ಟಾಯಿತು.

ಇವನಾದರೋ ಅದನ್ನು ಲೆಕ್ಕಿಸದೆ ಜರ್ಮನ್ ಫ್ರಾನ್ಸ್‌ಗಳ ನಡುವಣ ಸಂಬಂಧವನ್ನು ಉತ್ತಮಗೊಳಿಸುವ ದೃಷ್ಟಿಯಿಂದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತಲೇ ಇದ್ದ. ಫ್ರಾನ್ಸ್ ಸರಕಾರ ಇವನಿಗೆ ವಿಶ್ರಾಂತಿ ವೇತನ ಕೊಟ್ಟಿತು.

ವಿಮರ್ಶಕರ ಅಭಿಪ್ರಾಯದಂತೆ, ಹೈನ್‌ನ ವಿಶಿಷ್ಟ ಕಾವ್ಯ ಪ್ರತಿಭೆ ರೂಪುಗೊಳ್ಳಲು ಮೂರು ಅಂಶಗಳು ಪ್ರೇರಕವಾಗಿದ್ದುವು; ಇವನು ಹುಟ್ಟಿನಿಂದ ಯೆಹೂದ್ಯ;


ಜರ್ಮನ್ ಕಾವ್ಯ : ಹೈನ್

ಇದರಿಂದ ಯೆಹೂದ್ಯ ಪರಂಪರೆಯ ಭಾವ ತೀವ್ರತೆ ಇವನಲ್ಲಿತ್ತು. ಇವನು ಪಡೆದ ಫ್ರೆಂಚ್ ವಿದ್ಯಾಭ್ಯಾಸದಿಂದಾಗಿ ಸ್ಪಷ್ಟ ಹಾಗೂ ತರ್ಕಬದ್ಧ ಆಲೋಚನಾ ಸಾಮರ್ಥ್ಯ ಇವನಲ್ಲಿ ಬೆಳೆಯಿತು. ಜರ್ಮನಿಯಲ್ಲಿ ಹುಟ್ಟಿಬೆಳೆದದ್ದರಿಂದ ಇವನು ಮಿತಭಾಷಿಯಾಗಿ, ಕನಸು ಕಾಣುವ ಸ್ವಭಾವದವನಾದ.

ಇವನು ರೊಮ್ಯಾಂಟಿಕ್ ಸಂಪ್ರದಾಯದ ಕವಿಯಾದರೂ ಇವನ ಪ್ರತಿಭೆ ಆ ಸಂಪ್ರದಾಯವನ್ನು ಮೀರಿ ಬೆಳೆಯಿತು. ಇವನ ಕವನಗಳಲ್ಲಿರುವ ಗೇಯ ಗುಣ ಅತ್ಯಂತ ಪ್ರಮುಖ ಗೇಯಕಾರರಾದ ಷೂಬರ್ಟ್, ಷೂಮನ್, ಬ್ರಾಮ್ ಮೊದಲಾದವರ ಗಮನ ಸೆಳೆಯಿತು. ಅವರು ಇವನ ಹಲವಾರು ಕವನಗಳನ್ನು ಸಂಗೀತಕ್ಕೆ ಅಳವಡಿಸಿದರು.

1841ರಲ್ಲಿ ಹೈನ್ ಮದುವೆಯಾದ. ನಾಲ್ಕು ವರ್ಷಗಳ ಅನಂತರ ಬೆನ್ನುಹುರಿ ಕಾಯಿಲೆಯಿಂದ ಬಾಧಿತನಾದ. 1848ರ ಹೊತ್ತಿಗೆ ಆರೋಗ್ಯ ತೀರ ಹದಗೆಟ್ಟಿತು. ಈ ಸ್ಥಿತಿಯಲ್ಲಿ ಕೂಡ ಅವನು ಬರೆದ ಕವನಗಳು ಅತ್ಯಂತ ಸುಂದರವಾಗಿವೆ. ಹೈನ್ ಮತ್ತೆ ಯೆಹೂದಿ ಧರ್ಮದಲ್ಲಿ ಆಸಕ್ತಿ ತೋರುತ್ತಿದ್ದನೆಂಬುದನ್ನು ಈ ಕಾಲದಲ್ಲಿ ಬರೆದ ಕೆಲವು ಕವನಗಳಿಂದ ವ್ಯಕ್ತವಾಗುತ್ತದೆ. 1856ರ ಫೆಬ್ರವರಿ 17ರಂದು ಹೈನ್ ನಿಧನನಾದ.

ಈಗ ಜರ್ಮನಿಯಲ್ಲಿ ಹೈನ್‌ನ ಬಗೆಗೆ ಅಪಾರ ಗೌರವ ಬೆಳೆದಿದೆ. ಅನೇಕ ಸ್ಮಾರಕಗಳನ್ನು ರಚಿಸಿದ್ದಾರೆ. ಜರ್ಮನ್ ಮತ್ತು ಫ್ರಾನ್ಸಿನ ಸಾಹಿತ್ಯ ಸಂಸ್ಥೆಗಳು ಇವನ ಕೃತಿಗಳೆಲ್ಲವನ್ನು ಒಟ್ಟು 50 ಸಂಪುಟಗಳಲ್ಲಿ ಪ್ರಕಟಿಸುವ ಕಾರ್ಯ ಕೈಗೊಂಡಿವೆ.

## ಹೊಯ್ಸಳ ಶಿಲ್ಪ, ವಾಸ್ತುಶಿಲ್ಪ

ಕನ್ನಡನಾಡಿನಲ್ಲಿ ರೂಪುಗೊಂಡ ಶಿಲ್ಪ, ವಾಸ್ತುಶಿಲ್ಪ ಶೈಲಿಗಳು ಎರಡು : ಒಂದು ಚಾಲುಕ್ಯರ ಕಾಲದ್ದು ; ಇನ್ನೊಂದು ಈ ಸಂಪ್ರದಾಯದ ಮುಂದುವರಿಕೆಯೇ ಆದ ಹೊಯ್ಸಳರ ಕಾಲದ್ದು.

ಚಾಲುಕ್ಯರ ಅನಂತರ ಕನ್ನಡ ನಾಡಿನಲ್ಲಿ ಪ್ರಖ್ಯಾತವಾದ ರಾಜಮನೆತನ ಹೊಯ್ಸಳರದ್ದು. ಈ ಮನೆತನದವರು ಸುಮಾರು ಮುನ್ನೂರೈವತ್ತು



ಹೊಯ್ಸಳ ಲಾಂಛನ

ವರ್ಷ ರಾಜ್ಯಭಾರ ಮಾಡಿದರು —ಹನ್ನೊಂದನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದ ಮಧ್ಯಭಾಗದವರೆಗೆ. ಈ ಕಾಲದ ಮಧ್ಯೆ ಸುಮಾರು ಮುನ್ನೂರೈವತ್ತು ವರ್ಷಗಳ ಅವಧಿಯಲ್ಲಿ ಅನೇಕ ದೇವಾಲಯಗಳು ಹೊಯ್ಸಳರ ಶೈಲಿಯಲ್ಲಿ ನಿರ್ಮಿತವಾದುವು. ಹೊಯ್ಸಳ ರಾಜ್ಯದ ನಾನಾ ಭಾಗಗಳಲ್ಲಿ ರಾಜರು, ರಾಣಿಯರು ಮಾತ್ರವಲ್ಲದೆ, ಅವರ ದಂಡನಾಯಕರು, ಅವರ ರಾಜ್ಯದಲ್ಲಿದ್ದ ಶ್ರೀಮಂತರು, ವರ್ತಕರು ಕೂಡಾ ಉತ್ತಮ ದೇವಾಲಯಗಳನ್ನು ಕಟ್ಟಿಸಿದರು. ಈ ದೇವಾಲಯಗಳು ಯಾವುದೇ ಒಂದು ಪಂಥಕ್ಕೆ ಸೇರಿದ್ದಲ್ಲ. ವೈಷ್ಣವ, ಶೈವ, ಜೈನ ಸಂಪ್ರದಾಯಗಳಿಗೆ ಸೇರಿದುವು. ಯಾವುದೇ ಧರ್ಮಪಂಥದ್ದಾಗಲೀ ಯಾರೇ ಕಟ್ಟಿಸಿದ್ದಾಗಲೀ ಹೊಯ್ಸಳರ ಕಾಲದಲ್ಲಿ ಕಟ್ಟಿದ ದೇವಾಲಯಗಳ ಪ್ರಮುಖ ಸ್ಥಾನದಲ್ಲಿ ಹೊಯ್ಸಳ ಲಾಂಛನವಿರುವುದು ಒಂದು ವೈಶಿಷ್ಟ್ಯ. ಹೊಯ್ಸಳ ವಂಶದ ಮೂಲ ಪುರುಷನಾದ ಸಳನು ಕಠಾರಿ ಹಿಡಿದು ಹುಲಿಯನ್ನು ಇದಿರಿಸುವಂತಿರುತ್ತದೆ



ಅರಳಹಳ್ಳಿಯ ಸೋಮೇಶ್ವರದೇವಾಲಯ

ಈ ಲಾಂಛನ. ಹೊಯ್ಸಳ ದೇವಾಲಯಗಳಲ್ಲಿ ಸಾಮಾನ್ಯವಾಗಿ ಈ ಪ್ರಸಂಗವನ್ನು ಸೂಚಿಸುವ ಒಂದು ಶಿಲ್ಪಕೃತಿ ಇರುತ್ತದಾದರೂ, ಒಂದಕ್ಕಿಂತ ಹೆಚ್ಚು 'ಹೊಯ್–ಸಳ' ವಿಗ್ರಹಗಳಿರುವುದೂ ಉಂಟು. ಹೊಯ್ಸಳ ಶೈಲಿಯ ಆರಂಭಕಾಲದಲ್ಲಿ ಕಟ್ಟಿದ ಹಾಸನ ಜಿಲ್ಲೆಯ ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಾಲಯದಲ್ಲಿರುವಂತೆ ಹೊಯ್ಸಳ ಶೈಲಿಯ ದೇವಾಲಯ ರಚನೆಯಲ್ಲಿಯೂ ಕೆಲವು ವೈಶಿಷ್ಟ್ಯಗಳಿವೆ. ಇವುಗಳಲ್ಲಿ ಮುಖ್ಯವಾದದ್ದು ನಕ್ಷತ್ರಾಕಾರದ ತಲವಿನ್ಯಾಸ. ಈ ನಕ್ಷತ್ರಾಕಾರ ಯಾವಾಗಲೂ ಒಂದೇ ರೀತಿ ಇರುವುದಿಲ್ಲ. ನಾಲ್ಕು, ಆರು, ಎಂಟು, ಹನ್ನೆರಡು, ಹದಿನಾರು ಶಾಖೆಗಳುಳ್ಳ ನಕ್ಷತ್ರಾಕಾರದ ತಳಹದಿಗಳ ದೇವಾಲಯಗಳನ್ನು ಹೊಯ್ಸಳ ಶಿಲ್ಪಿಗಳು ನಿರ್ಮಿಸಿದ್ದಾರೆ. ಈ ತಲವಿನ್ಯಾಸದ ಮೂಲೆಗಳನ್ನು ಅನುಸರಿಸಿ ಒಂದು ಎತ್ತರದ ಜಗತಿ ಇರುತ್ತದೆ. ಇದು ನಾಲ್ಕು ಐದು ಅಡಿಗಳಷ್ಟು ಎತ್ತರವಾಗಿರುವುದೂ ಉಂಟು. ಈ ಅಗಲವಾದ ತಳಹದಿಯ ಮಧ್ಯದಲ್ಲಿ ಎದ್ದು ನಿಂತಂತೆ ದೇವಾಲಯವಿರುತ್ತದೆ. ದೇವಾಲಯದ ಗೋಡೆಗಳ ಮುಂದೆ, ಜಗತಿಯ ಅಂಚಿನವರೆಗೆ ತೆರವಾಗಿರುವ ಜಾಗ; ಹೊಯ್ಸಳ ದೇವಾಲಯಗಳಲ್ಲಿ ಸಾಮಾನ್ಯವಾಗಿ ಪ್ರದಕ್ಷಿಣಪಥ ಇರುವುದಿಲ್ಲ. ಈ ತೆರವಾದ ಜಾಗವನ್ನೇ ಪ್ರದಕ್ಷಿಣ ಪಥವಾಗಿ ಉಪಯೋಗಿಸುತ್ತಾರೆ. ಹೊಯ್ಸಳ ಶೈಲಿಯ ದೇವಾಲಯಗಳ ಗೋಡೆಗಳು ಅಷ್ಟೇನೂ ಎತ್ತರವಾಗಿರುವುದಿಲ್ಲ. ಆದರೆ ಅವುಗಳನ್ನು ಪಟ್ಟಿಕೆಗಳನ್ನಾಗಿ ವಿಂಗಡಿಸಿರುವುದರಿಂದಲೂ ಅವುಗಳಲ್ಲಿ ನಾನಾ



ಸೋಮನಾಥಪುರದ ಹೊಯ್ಸಳ ಶೈಲಿಯ ದೇವಾಲಯ

ರೀತಿಯ ಅಲಂಕರಣ, ಕಥಾನಕ ಮತ್ತು ಮೂರ್ತಿ ಶಿಲ್ಪಗಳಿರುವುದ ರಿಂದಲೂ ಈ ದೇವಾಲಯಗಳು ಗಿಡ್ಡವಾಗಿರುವಂತೆ ತೋರುವುದಿಲ್ಲ.

ಹೊಯ್ಸಳ ದೇವಾಲಯಗಳ ಗರ್ಭಗುಡಿಗಳ ಸಂಖ್ಯೆಯೂ ಗಣನೀಯ ವಾದದ್ದು. ಇವುಗಳಲ್ಲಿ ಒಂದೇ ಗರ್ಭಗುಡಿಯಿರುವ ದೇವಾಲಯಗಳೂ ಉಂಟು; ಬೇಲೂರಿನ ಚೆನ್ನಕೇಶವ ದೇವಾಲಯ ಇದಕ್ಕೆ ಒಳ್ಳೆಯ ಉದಾಹರಣೆ. ಎರಡು, ಮೂರು, ನಾಲ್ಕು, ಐದು ಗುಡಿಗಳಿರುವ ಹೊಯ್ಸಳ ದೇವಾಲಯಗಳೂ ಇವೆ. ಹೀಗೆ ಹಲವಾರು ಗರ್ಭಗುಡಿಗಳಿರುವಾಗ ದೇವಾಲಯದ ತಲವಿನ್ಯಾಸ ದೊಡ್ಡದಾಗುತ್ತದೆ. ಎರಡು ಗರ್ಭಗುಡಿಗಳಿರು ವಾಗ, ಒಂದೇ ವಿನ್ಯಾಸದ ಮೇಲೆ ಎರಡು ದೇವಾಲಯಗಳನ್ನು ಕಟ್ಟಿ ಅವು ಗಳ ನಡುವೆ 'ಸಂಘ್ಯಂಕಣ'ವನ್ನು ಕಟ್ಟಿ ಅವಕ್ಕೆ ಸಂಬಂಧವನ್ನು ಕಲ್ಪಿಸು ವುದೂ ಉಂಟು. ಹೊಯ್ಸಳ ದೇವಾಲಯಗಳ ಗರ್ಭಗುಡಿಗಳ ಮೇಲೆ ಇರುವ ಶಿಖರ ಕೂಡ ನಕ್ಷತ್ರಾಕಾರವಾಗಿ ಮೆಟ್ಟಿಲು ಮೆಟ್ಟಿಲಾಗಿ ಮೇಲ ಕ್ಕೇರಿರುತ್ತದೆ. ಶಿಖರದ ಮೆಟ್ಟಿಲು ಮೆಟ್ಟಿಲಿನಲ್ಲಿಯೂ ಕೀರ್ತಿಮುಖಗಳೂ ದೇವತಾವಿಗ್ರಹಗಳೂ ಆಲಂಕಾರಿಕ ಲತಾಪಟ್ಟಿಕೆಗಳೂ ಇರುತ್ತವೆ.

ಹೊಯ್ಸಳ ದೇವಾಲಯಗಳ ಇನ್ನೊಂದು ವೈಶಿಷ್ಟ್ಯ ಅವುಗಳಲ್ಲಿ ಉಪಯೋಗಿಸಿರುವ ಸುಂದರವಾದ ಕಡೆದ ಕಂಬಗಳು. ಇವುಗಳ ಆಕಾರದಲ್ಲಿ ಅಲಂಕರಣದಲ್ಲಿ ವೈವಿಧ್ಯವಿದೆ.

ಅಲಂಕರಣ ಶಿಲ್ಪ ಹೊಯ್ಸಳ ಶೈಲಿಯ ಬಹು ಮುಖ್ಯ ಅಂಶ; ಹೊಯ್ಸಳ ಶೈಲಿಯ ಮೂರ್ತಿಶಿಲ್ಪವೂ ಸುಂದರವಾದದ್ದು. ದೇವಾಲಯ ಗಳ ಗೋಡೆಗಳ ಹೊರಭಾಗದಲ್ಲಿ ಸ್ವಲ್ಪವೂ ಸ್ಥಳಬಿಡದಂತೆ ಸಾವಿರಾರು ಶಿಲ್ಪಕೃತಿಗಳಿರುವುದನ್ನು ಕಾಣಬಹುದು. ಗೋಡೆಗಳು ನಕ್ಷತ್ರಾಕಾರದ ತಲವಿನ್ಯಾಸವನ್ನನುಸರಿಸಿ ರಚಿತವಾಗಿರುವುದರಿಂದ, ಒಟ್ಟು ಗೋಡೆಯ ಉದ್ದ, ನೇರವಾದ ಗೋಡೆಗಳಿಗಿಂತ ಉದ್ದವಾಗುತ್ತದೆ. ಇದರಿಂದ ಈ ಗೋಡೆಗಳ ಮೇಲೆ, ಹೆಚ್ಚು ಹೆಚ್ಚು ಶಿಲ್ಪಗಳನ್ನು ಅಳವಡಿಸಲು ಸಾಧ್ಯ ವಾಗುತ್ತದೆ. ಯಾವುದೇ ದೇವಾಲಯದಲ್ಲಿ ಬಹು ಹೆಚ್ಚು ಸಂಖ್ಯೆಯ ಶಿಲ್ಪಗಳನ್ನು ಅಳವಡಿಸುವುದರಲ್ಲಿ ಹೊಯ್ಸಳ ಶಿಲ್ಪಿಗಳು ತೋರಿರುವ ಚಾತುರ್ಯ ಅಪೂರ್ವವಾದದ್ದು. ಅವುಗಳ ವಸ್ತುವೈವಿಧ್ಯವೂ ಅಪಾರ. ಅಲ್ಲಿ ಮೃಗಾದಿಗಳ ಚಿತ್ರಣವುಂಟು; ವಿವಿಧ ರೂಪದ ಲತಾಪಟ್ಟಿಕೆ ಗಳುಂಟು. 'ರಾಮಾಯಣ' 'ಮಹಾಭಾರತ'ಗಳ ಕಥಾಸನ್ನಿವೇಶಗಳ ಚಿತ್ರಣ ಮಾಲಿಕೆಗಳುಂಟು; ದೇವತಾ ಮೂರ್ತಿಗಳೂ ಉಂಟು.

ಚಾಲುಕ್ಯ ಶಿಲ್ಪಯುಗದಲ್ಲಿಯೂ ಶಿಲಾಬಾಲಿಕೆಯರನ್ನು ರಚಿಸಿದ್ದರು. ಆದರೂ ಹೊಯ್ಸಳ ಶಿಲ್ಪದಲ್ಲಿ ಶಿಲಾಬಾಲಿಕೆಯರಸ್ಥಾನ ಮಹತ್ವದ್ದು. ಈ ಶಿಲಾಮೂರ್ತಿಗಳನ್ನು 'ಸಾಲಭಂಜಿಕಾ', 'ಮದನಕೈ' ವಿಗ್ರಹಗಳು ಎಂದೂ ಕರೆಯುತ್ತಾರೆ. ಇವು ನಾನಾ ನಾಟ್ಯಭಂಗಿಗಳಲ್ಲಿ, ನಾನಾ ಭಾವ ಗಳಲ್ಲಿ ಇರುವ ಸುಂದರ ಸ್ತ್ರೀ ವಿಗ್ರಹಗಳು. ಬೇಲೂರಿನ ಚೆನ್ನ ಕೇಶವ ದೇವಾಲಯದಲ್ಲಿ ಇಂಥ 42 ಮದನಕೈ ವಿಗ್ರಹಗಳಿವೆ. ಇವು ದೇವಾಲಯ ಗೋಡೆಯ ಅಗ್ರಭಾಗ ದಲ್ಲಿ ಸ್ಥಾಪಿತವಾಗಿವೆ. ಇವುಗಳ ನಿರ್ಮಾಣದಲ್ಲಿ ಶಿಲ್ಪಿಗಳು ತೋರಿರುವ ಹಸ್ತಕೌಶಲ ಅಸಾಮಾನ್ಯವಾದದ್ದು; ಕೊರೆದಿರುವ ವಿವರಗಳೂ ಆಶ್ಚರ್ಯ ಕರ. ಈ ಶಿಲ್ಪಕೃತಿಗಳು ಲೋಕ ವಿಖ್ಯಾತವಾಗಿವೆ.

ಹೊಯ್ಸಳರ ಕಾಲದಲ್ಲಿ ನಮ್ಮ ನಾಡಿನಲ್ಲಿ ಒಂದು ದೊಡ್ಡ ಶಿಲ್ಪಿಗಳ ತಂಡವೇ ಇತ್ತು. ಈ ಶಿಲ್ಪಿಗಳನೇಕರು ತಾವು ಕೆತ್ತಿರುವ ಮೂರ್ತಿಗಳ ಪೀಠಗಳ ಮೇಲೆ ತಮ್ಮ ಹೆಸರುಗಳನ್ನು ಕೆತ್ತಿರುವುದರಿಂದ ಇವರ ಹೆಸರು ಗಳು ಮತ್ತು ಹಲವಾರು ಸಂದರ್ಭಗಳಲ್ಲಿ ಇವರ ವಂಶ, ಸ್ಥಳಗಳ ವಿವರ ಗಳೂ ಇವರಿಗಿದ್ದ ಬಿರುದುಗಳೂ ತಿಳಿದುಬಂದಿವೆ. ಇವರಲ್ಲಿ ಕೆಲವರು ಒಂದಕ್ಕಿಂಥ ಹೆಚ್ಚು ದೇವಾಲಯಗಳ ರಚನೆಯಲ್ಲಿ ಭಾಗವಹಿಸಿರುವುದೂ ಕಂಡುಬರುತ್ತದೆ.

ಕನ್ನಡನಾಡಿನ ವಾಸ್ತುಶಿಲ್ಪ, ಶಿಲ್ಪ ಪರಂಪರೆಗೆ ಹೊಯ್ಸಳರ ಕಾಲದಲ್ಲಿ ಸಂದ ಸೇವೆ ವಿಪುಲವಾದದ್ದು, ಮಹತ್ವದ್ದು.

## ಹೊರೇಸ್

"ಒಂದು ಕೆಲಸವನ್ನು ಆರಂಭಿಸುವುದೆಂದರೆ ಅದನ್ನು ಅರ್ಧದಷ್ಟು ಮುಗಿಸಿದಂತೆ", "ಕೋಪ ಎಂಬುದು ಕ್ಷಣಿಕವಾದ ಹುಚ್ಚು", "ಹಾ ! ವರ್ಷ ಗಳು ಹೇಗೆ ಉರುಳುತ್ತಿವೆ !", ಮುಂತಾದುವು ಪ್ರಾಚೀನ ರೋಮನ್ ಕವಿ ಹೊರೇಸನ ಮಾತುಗಳು. ಇಂಥ ಮಾತುಗಳನ್ನು ಉದಹರಿಸಿ ಹೇಳುವುದು ಆಗ ಪಾಂಡಿತ್ಯದ ಲಕ್ಷಣವೆನಿಸಿತ್ತು.

ರೋಮನ್ ಸಾಮ್ರಾಜ್ಯದ ಭಾಗವಾಗಿದ್ದ ವೆನ್ಯೂಸಿಯ ಎಂಬಲ್ಲಿ ಹೊರೇಸ್ ಕ್ರಿ.ಪೂ. 64ರಲ್ಲಿ ಹುಟ್ಟಿದ. ತಂದೆ ಮೊದಲಿಗೆ ಒಬ್ಬ ಗುಲಾಮ ನಾಗಿದ್ದು, ಅನಂತರ ಸ್ವಾತಂತ್ರ್ಯ ಪಡೆದು ಧನಿಕ ವ್ಯಾಪಾರಿಯಾದವನು. ಮಗನಿಗೆ ಉತ್ಕೃಷ್ಟ ವಿದ್ಯಾಭ್ಯಾಸ ಸಿಗಬೇಕು ಎಂಬ ಉದ್ದೇಶದಿಂದ, ಮೊದಲು ರೋಮ್‌ನಲ್ಲಿ, ಬಳಿಕ ಅಥೆನ್ಸ್‌ನಲ್ಲಿ, ಅವನಿಗೆ ಶಿಕ್ಷಣ ಕೊಡಿಸಿದ. ಹೊರೇಸ್ ಅಥೆನ್ಸ್‌ನಲ್ಲಿದ್ದಾಗ ರೋಮ್ ನಗರದಲ್ಲಿ ಜೂಲಿಯಸ್ ಸೀಸರನ ಕೊಲೆಯಾಗಿ ಅಂತರ್ಯುದ್ಧ ಆರಂಭವಾಯಿತು. ಚಕ್ರವರ್ತಿಯ ಪಟ್ಟಕ್ಕಾಗಿ ಬ್ರೂಟಸ್ ಮತ್ತು ಆಕ್ಟೇವಿಯಸ್ (ಇವನೇ ಮುಂದೆ ಆಗಸ್ಟಸ್ ಸೀಸರ್ ಎಂಬ ಹೆಸರು ಪಡೆದ) ಕಾದಾಡುತ್ತಿದ್ದರು. ಯುದ್ಧ ಗ್ರೀಸಿನ ವರೆಗೆ ಹಬ್ಬಿದಾಗ ಹೊರೇಸ್ ಬ್ರೂಟಸನ ಸೈನ್ಯವನ್ನು ಸೇರಿದ. ಇವನ



ಪ್ರಗಾಥ : ಹೊರೇಸ್

ಪಕ್ಷ ಸೋತು ಹೋಯಿತು. ತಾನು ಕತ್ತಿ – ಗುರಾಣಿಗಳನ್ನು ಎಸೆದು ಹೇಗೆ ಪಲಾಯನ ಮಾಡಿದೆ ಎಂಬುದನ್ನು ಹೊರೇಸ್ ತನ್ನ ಒಂದು ಹಾಡಿನಲ್ಲಿ ಹೇಳಿಕೊಂಡಿದ್ದಾನೆ.

ಹೊರೇಸ್ ಸೈನಿಕನಾಗುವುದಕ್ಕಲ್ಲ ಹುಟ್ಟಿದ್ದು, — ಕವಿಯಾಗಲು.

ಹೊರೇಸ್ ವ್ಯವಹಾರ ಜ್ಞಾನ ಉಳ್ಳ ಕವಿ. ಗೆದ್ದ ಎತ್ತಿನ ಬಾಲ ಹಿಡಿಯಲು ಮುಂದಾದ. ಯುದ್ಧ ಮುಗಿದ ಮೇಲೆ ರೋಮಿಗೆ ಬಂದು ಸರಕಾರೀ ಗುಮಾಸ್ತೆಯ ಕೆಲಸ ದೊರಕಿಸಿಕೊಂಡ. ಇದೇ ಸಮಯ ಇವನ ಕವಿತೆಗಳು ಇನ್ನೊಬ್ಬ ಮಹಾಕವಿ ವರ್ಜಿಲನ ಗಮನಕ್ಕೆ ಬಂದುವು. ಇವನ ಮೂಲಕ ಹೊರೇಸ್ ಆಗಸ್ಟಸ್ ಸೀಸರನ ಮುಖ್ಯಮಂತ್ರಿಗೆ ಪರಿಚಿತನಾದ. ಕವಿಗಳಿಗೆ ಆಶ್ರಯದಾತನಾದ ಆ ಮಂತ್ರಿ ಹೊರೇಸನ ಕೃತಿಗಳನ್ನು ಬಹಳವಾಗಿ ಮೆಚ್ಚಿಕೊಂಡ. ರೋಮಿನಿಂದ ಮೂವತ್ತು ಮೈಲು ದೂರದಲ್ಲಿದ್ದ ಜಮೀನನ್ನು ಹೊರೇಸ್‌ಗೆ ಬಹುಮಾನವಾಗಿ ಕೊಟ್ಟ. ಆಗ ಹೊರೇಸ್‌ಗೆ ಮೂವತ್ತೆರಡು ವರ್ಷ. ಅಲ್ಲಿಂದ ಮುಂದೆ ಅವನಿಗೆ ಎಂದೂ ಹಣದ ಅಡಚಣೆ ಇರಲಿಲ್ಲ. ಸ್ವತಃ ಗುಲಾಮನ ಮಗನಾಗಿದ್ದ ಹೊರೇಸ್ ಹತ್ತು ಜನ ಗುಲಾಮರನ್ನು ಇಟ್ಟುಕೊಂಡ.

ಪಾಲಿಗೆ ಬಂದದ್ದನ್ನು ಪಂಚಾಮೃತದಂತೆ ಸೇವಿಸಬೇಕೆಂಬುದು ಹೊರೇಸನ ಜೀವನ ತತ್ತ್ವ. ಹೊರೇಸನಿಗೆ ಹೊಟ್ಟೆ ತುಂಬ ಊಟ, ಬಾಯಿತುಂಬ ಮಾತು ಇಷ್ಟಿದ್ದರೆ ಸಾಕು. "ನಿನ್ನ ಸ್ನೇಹಿತರನ್ನು ಪ್ರೀತಿಸು ; ವೈರಿಗಳನ್ನು ನೋಡಿ ನಕ್ಕುಬಿಡು" ಎಂದು ಈತ ಅನ್ನುತ್ತಿದ್ದುದುಂಟು. ದೇವರಲ್ಲಿ ಭಕ್ತಿ, ಸರಳ ಜೀವನ (ತುಂಬಾ ಸರಳವಾಗಿರಬಾರದು, ಅಷ್ಟೆ) ಉದಾತ್ತ ವಿಚಾರ (ಇದು ತುಂಬಾ ಉದಾತ್ತವಾಗಿರಬಾರದು) —ಇವುಗಳಿಂದ ಜೀವನ ಸುಖಮಯವಾಗುತ್ತದೆ ಎಂಬುದು ಇವನ ಅಭಿಪ್ರಾಯ. ಇವನ ಕವಿತೆಗಳಲ್ಲೂ ದಿನನಿತ್ಯ ಕಂಡುಬರುವ ವಿಚಾರಗಳೇ ಹೆಚ್ಚು. ಅಡುಗೆಯಲ್ಲಿ ಅತ್ಯಧಿಕ ಬೆಳ್ಳುಳ್ಳಿ ಉಪಯೋಗಿಸುವುದರಿಂದ ಆಗುವ ಪರಿಣಾಮ, ತರಲೆ ಸ್ವಭಾವದವರ ಹಾವಳಿ, ಕುಡಿತದಿಂದ ಉಂಟಾಗುವ ಅನಾರೋಗ್ಯ, ಅದಕ್ಕೆ ಔಷಧ —ಇವೆಲ್ಲವನ್ನೂ ಇವನು ಚರ್ಚಿಸಿದ್ದುಂಟು. ತನ್ನನ್ನು ಮಹಾಕವಿ ವರ್ಜಿಲನೊಡನೆ ಹೋಲಿಸಿದವರನ್ನು ಹೊರೇಸ್ ಹಾಸ್ಯಮಾಡಿ ನಗುತ್ತಿದ್ದ.

ಹೊರೇಸ್ ಯಾವುದನ್ನು ಬರೆದರೂ ಅದರ ಪದವಿನ್ಯಾಸದ ಕುರಿತು ವಿಶೇಷ ಜಾಗರೂಕತೆ ವಹಿಸುತ್ತಿದ್ದ. ಕವಿತೆ ಸರಳವಾಗಿದ್ದರೂ ಅದು ಸೂಚಿಸುವ ಭಾವ ಗಂಭೀರ. ಹಾಸ್ಯದ ಹಿಂದೆ ಹರಿತವಾದ ವಿಡಂಬನೆ 'ನಗುನಗುತ್ತಲೇ ಅಹಿತವಾದ ಸತ್ಯವನ್ನು ಹೇಳುವುದು' ಇವನ ಕವಿತೆಗಳ ಉದ್ದೇಶ. 'ವಿಡಂಬನೆಗಳು' ಎಂಬ ಎರಡು ಸಂಪುಟಗಳ ಪುಸ್ತಕವನ್ನು ಇವನು ಬರೆದ.

'ಓಡ್ಸ್' ('ಪ್ರಗಾಥಗಳು') ಹೊರೇಸನ ಅತಿ ಶ್ರೇಷ್ಠ ಕೃತಿ. ಹತ್ತೊಂಬತ್ತಕ್ಕಿಂತ ಹೆಚ್ಚು ಛಂದಸ್ಸುಗಳಿಂದ ಕೂಡಿದ ಇದು ಹಾಡುವುದಕ್ಕಾಗಿಯೇ ರಚಿಸಿದ ಕೃತಿ. ಹಳ್ಳಿಯ ಪ್ರಶಾಂತ ಜೀವನ, ರೋಮನ್ ಸಾಮ್ರಾಜ್ಯದ ವೈಭವ, ಪ್ರೇಮ, ಸ್ನೇಹ, ಕಿರಿಯರಿಗೆ ಉಪದೇಶ, ಹಾಸ್ಯಭರಿತವಾದ ತನ್ನ ಅನುಭವಗಳು, ಇವೆಲ್ಲ ಇಲ್ಲಿ ಚಿತ್ರಿತವಾಗಿವೆ. ಹಲವು ಗೆಳೆಯರಿಗೆ ಈತ ಬರೆದ ಪತ್ರಗಳು ಶ್ರೇಷ್ಠ ಸಾಹಿತ್ಯ ಕೃತಿಗಳೆನಿಸಿವೆ. ಇಂಥ ಒಂದು ಪತ್ರ 'ಕವಿತೆಯ ಕಲೆ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

56 ವರ್ಷಗಳ ಪ್ರಶಾಂತ ಜೀವನದ ಬಳಿಕ ಕ್ರಿ.ಪೂ. 8ರಲ್ಲಿ ಹೊರೇಸ್ ತೀರಿಕೊಂಡ.

## ಹೊಸಕೋಟೆ ಕೃಷ್ಣಶಾಸ್ತ್ರೀ

1915ಕ್ಕೆ ಮುಂಚೆ ಅಶೋಕನ ಹಲವಾರು ಶಾಸನಗಳು ಸಿಕ್ಕಿದ್ದುವು. ವಿದ್ವಾಂಸರು ಅವು ಅಶೋಕನ ಶಾಸನಗಳಿರಬೇಕೆಂದು ಊಹಿಸಿದ್ದರಾದರೂ ಅವು ಅವನವೇ ಎಂದು ಖಚಿತವಾಗಿ ಹೇಳಲು ಬೇಕಾದ ಆಧಾರ ಇನ್ನೂ ಸಿಕ್ಕಿರಲಿಲ್ಲ. ಏಕೆಂದರೆ ಈ ಶಾಸನಗಳಲ್ಲಿ ಅವುಗಳ ರಚನೆಗೆ ಕಾರಣನಾದ ಅರಸನ ಹೆಸರು 'ದೇವಾನಾಂಪ್ರಿಯ' ಎಂದಿದ್ದುವೇ ಹೊರತು ಅಶೋಕನ ಹೆಸರು ಇರಲಿಲ್ಲ.

1915ರಲ್ಲಿ ರಾಯಚೂರು ಜಿಲ್ಲೆಯ ಮಸ್ಕಿ ಎಂಬಲ್ಲಿ ದೊರೆತ ಶಾಸನವೊಂದರಲ್ಲಿ 'ದೇವಾನಾಂಪ್ರಿಯ ಎನಿಸಿದ ಅಶೋಕರಾಜ' ಎಂಬ ಉಲ್ಲೇಖ ಇದ್ದುದರಿಂದ ದೇವಾನಾಂಪ್ರಿಯನು ಅಶೋಕನೆಂಬುದು ಖಚಿತವಾಯಿತು. ಹೀಗೆ. ಮಸ್ಕಿ ಶಾಸನ ಭಾರತ ಇತಿಹಾಸದಲ್ಲಿ ಒಂದು ಅಮೂಲ್ಯ ದಾಖಲೆಯಾಯಿತು. ಬ್ರಾಹ್ಮೀ ಲಿಪಿಯಲ್ಲಿದ್ದ ಈ ಶಾಸನವನ್ನು ಓದಿ, ಅದರ ಪೂರ್ಣಪಾಠವನ್ನು ಸಿದ್ಧಗೊಳಿಸಿ ಪ್ರಕಟಿಸಿದವರು ಹೊಸಕೋಟೆ ಕೃಷ್ಣಶಾಸ್ತ್ರಿಯವರು. ಆಗ ಅವರು ಉದಕಮಂಡಲದಲ್ಲಿದ್ದ ಇಂಡಿಯಾ ಸರಕಾರದ ಶಾಸನಗಳ ಇಲಾಖೆಯಲ್ಲಿ ಅಧಿಕಾರಿ ಆಗಿದ್ದರು.

ಕೃಷ್ಣಶಾಸ್ತ್ರಿಯವರ ಊರು ಬೆಂಗಳೂರು ಜಿಲ್ಲೆಯ ಹೊಸಕೋಟೆ. ಪಾರಂಪರ್ಯವಾಗಿ ಸಂಸ್ಕೃತ ವಿದ್ವತ್ತನ್ನು ರೂಢಿಸಿಕೊಂಡು ಬಂದ ವಂಶದಲ್ಲಿ ಹುಟ್ಟಿದವರು. ಅವರ ಜನನ ಸುಮಾರು 1877ರಲ್ಲಿ. ಬಾಲ್ಯದಲ್ಲಿ ಅವರಿಗೆ ಪ್ರಾಚೀನ ಪದ್ಧತಿಯ ಶಿಕ್ಷಣ ದೊರೆಯಿತು. ಅನಂತರ ಅವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಅಭ್ಯಾಸಮಾಡಿ ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು ; ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ಗಣಿತಶಾಸ್ತ್ರದ ಅಧ್ಯಾಪಕರಾದರು. ಈ ಗಣಿತ ಶಾಸ್ತ್ರಜ್ಞನನ್ನು ಪ್ರಾಚೀನ ಶಾಸನ ಓದುವುದಕ್ಕೆಳೆದವರು ಡಾ. ಹುಲ್ಷ್. ಈ ಸುಪ್ರಸಿದ್ಧ ಜರ್ಮನ್ ವಿದ್ವಾಂಸರು ಆಗ ಪುರಾತತ್ತ್ವ ಸಂಶೋಧನಾ ಇಲಾಖೆಯಲ್ಲಿ ಅಧಿಕಾರಿಯಾಗಿದ್ದರು. ಶಾಸ್ತ್ರಿಗಳ ಚುರುಕು ಬುದ್ಧಿ ಭಾಷಾಜ್ಞಾನಗಳನ್ನು ಕಂಡು ಅವರನ್ನು ತಮ್ಮ ಸಹಾಯಕ ಅಧಿಕಾರಿಯಾಗಿ ನಿಯಮಿಸಿಕೊಂಡರು.

ಶಾಸನ ಇಲಾಖೆಯಲ್ಲಿದ್ದಾಗ ಶಾಸ್ತ್ರಿಗಳು ನಡೆಸಿದ ಸಂಶೋಧನೆಗಳು ಅನೇಕ. ಇಲಾಖೆಗೆ ಸೇರಿದೊಡನೆಯೇ ಕನ್ನಡ, ತೆಲುಗು ಮತ್ತು ತಮಿಳು



ಸಂಶೋಧನೆ : ಕೃಷ್ಣಶಾಸ್ತ್ರೀ

ಭಾಷೆಗಳನ್ನು ಗಾಢವಾಗಿ ಅಭ್ಯಾಸಮಾಡಿ ಆ ಭಾಷೆಗಳ ಬಗೆಗೆ ತಮ್ಮ ಜ್ಞಾನವನ್ನು ಬೆಳೆಸಿಕೊಂಡರು. ವಿವಿಧ ಕಾಲಗಳ, ಭಾಷೆಗಳ, ಲಿಪಿಗಳನ್ನು ಓದುವುದನ್ನು ಚೆನ್ನಾಗಿ ಕಲಿತರು; ಹಾಗೆಯೇ ಪ್ರಾಚೀನ ನಾಣ್ಯಗಳ ಅಧ್ಯಯನ ವಿಧಾನದಲ್ಲೂ ಪರಿಣತರಾದರು. ಬ್ರಿಟಿಷ್ ಆಡಳಿತಕ್ಕೆ ಒಳಗಾಗಿದ್ದ ದಕ್ಷಿಣ ಭಾರತ ಪ್ರದೇಶಗಳ ಶಿಲಾಶಾಸನಗಳ ಕ್ರಮಬದ್ಧ ಪರಿಶೀಲನೆಯಲ್ಲಿ ಡಾ. ಹುಲ್ಷ್‌ರವರಿಗೆ ಅಮೂಲ್ಯವಾದ ನೆರವುಕೊಟ್ಟರು.

ಅವರು ಕರ್ನಾಟಕದ ಚರಿತ್ರೆಗೆ ಸಂಬಂಧಿಸಿದಂತೆ ನಡೆಸಿರುವ ಸಂಶೋಧನೆಗಳು ಅಮೂಲ್ಯವಾದುವು. ವಿಜಯನಗರದ ಅರಸರನ್ನು ಕುರಿತು ಅವರು ಬರೆದ ವಿದ್ವತ್ಪೂರ್ಣ ಲೇಖನಗಳು ಈ ಕ್ಷೇತ್ರದಲ್ಲಿ ಮುಂದೆ ಕೆಲಸ ಮಾಡುವವರಿಗೆ ಮಾರ್ಗದರ್ಶಕವಾದುವು. ಅವರು ಹೊಯ್ಸಳ, ಅಲೂಪ ಮತ್ತು ಚೋಳರಾಜ ವಂಶಗಳ ಬಗೆಗೆ ಕೂಡ ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಅವರು 'ಎಪಿಗ್ರಾಫಿಕಾ ಇಂಡಿಕಾ' ದ (ಭಾರತದ ಶಾಸನಗಳು) ಪ್ರಧಾನ ಸಂಪಾದಕರಾಗಿ ಕೂಡ ಅಮೂಲ್ಯ ಸೇವೆ ಸಲ್ಲಿಸಿದರು.

ನೆಲ್ಲೂರು ಜಿಲ್ಲೆಯ ಕೋಡೂರಿನಲ್ಲಿ ದೊರೆತ ನಿಧಿಯ ಸುಮಾರು ಹತ್ತು ಸಾವಿರ ನಾಣ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವನ್ನು ಕುರಿತು ಅವರು ಸಿದ್ಧಪಡಿಸಿದ ವರದಿ ಆ ವರ್ಗದ ಲೇಖನಗಳಲ್ಲಿ ಅತ್ಯುತ್ತಮವಾದುದೆಂದು ಪರಿಗಣಿತವಾಗಿದೆ.

'ದಕ್ಷಿಣ ಭಾರತದ ದೇವ ದೇವತಾ ಮೂರ್ತಿಗಳು'—ಅವರ ಶಾಸ್ತ್ರಜ್ಞಾನ ಸಂಪತ್ತನ್ನು ಎತ್ತಿ ತೋರಿಸುವ ಗ್ರಂಥ.

ಶಾಸ್ತ್ರಿಗಳಿಗೆ ಸಾಹಿತ್ಯದಲ್ಲೂ ಅಪಾರ ಆಸಕ್ತಿಯಿತ್ತು. ಅವರು ವಿದ್ಯಾರ್ಥಿಯಾಗಿದ್ದಾಗಲೇ ಕೀಟ್ಸ್, ಶೇಕ್ಸ್‌ಪಿಯರ್ ಮುಂತಾದ ಆಂಗ್ಲ ಕವಿಗಳ ಸುನೀತಗಳನ್ನೂ ಇತರ ಕವಿತೆಗಳನ್ನೂ ಸಂಸ್ಕೃತ ಭಾಷೆಗೆ ಅನುವಾದಿಸಿದ್ದರು.

ಶಾಸ್ತ್ರಿಗಳ ವಿದ್ವತ್ತು, ಶಾಸನದ ಇಲಾಖೆಗೆ ಅವರು ಸಲ್ಲಿಸಿದ ಅಪೂರ್ವ ಸೇವೆಗಳನ್ನು ಮನ್ನಿಸಿ ಬ್ರಿಟಿಷ್ ಇಂಡಿಯಾ ಸರಕಾರ ಅವರಿಗೆ 'ರಾವ್ ಬಹದ್ದೂರ್' ಬಿರುದನ್ನು ಕೊಟ್ಟಿತು; ಕನ್ನಡ ಜನತೆ ಅವರ ಸೇವೆಯನ್ನು ಗಮನಿಸಿ, 1924ರಲ್ಲಿ ಕೋಲಾರದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು.

ಶಾಸ್ತ್ರಿಗಳು ಭಾರತ ಸರಕಾರದ ಶಾಸನದ ಇಲಾಖೆಯ ಮುಖ್ಯಾಧಿಕಾರಿ ಸ್ಥಾನವನ್ನುಪಡೆದ ಮೊದಲ ಭಾರತೀಯರು. ತಮ್ಮ ಅಧಿಕಾರದಿಂದ ನಿವೃತ್ತರಾದ ಸ್ವಲ್ಪಕಾಲಾನಂತರ, 1928ರಲ್ಲಿ, ಬೆಂಗಳೂರಿನಲ್ಲಿ ಅವರು ನಿಧನರಾದರು.

## ಹೋಗಾರ್ತ್

"ನಾನು ಬರೆದ ಚಿತ್ರವೇ ಒಂದು ರಂಗಭೂಮಿ, ಅದರಲ್ಲಿ ಕಾಣುವ ವ್ಯಕ್ತಿಗಳೇ ನಟ–ನಟಿಯರು" ಎಂದು ಹೇಳುತ್ತಿದ್ದ, ವಿಲಿಯಂ ಹೋಗಾರ್ತ್. ಚಿತ್ರಮಾಧ್ಯಮವನ್ನು ನಾಟಕ ಮಾಧ್ಯಮದಂತೆ ಬಳಸಿಕೊಂಡ ಇವನು 18ನೆಯ ಶತಮಾನದ ಆಂಗ್ಲ ಚಿತ್ರಕಾರ. ಸಮಾಜದಲ್ಲಿ ತಾನು ಕಂಡ ಜೀವನ ವೈಖರಿಯ ಹಲವು ಘಟ್ಟಗಳನ್ನು ಇವನು ಚಿತ್ರಮಾಲಿಕೆಗಳಲ್ಲಿ ರೂಪಿಸುತ್ತಿದ್ದ. ಪ್ರಮುಖ ಘಟನೆಗಳ ಚಿತ್ರಣದ ಮೂಲಕ ಒಂದು ಜೀವನ ಕಥೆಯನ್ನು ಹೇಳುವ ಚಿತ್ರಗಳನ್ನು ಬರೆದು ಹೋಗಾರ್ತ್ ಚಿತ್ರರಚನೆಯಲ್ಲಿ ಒಂದು ವಿಶಿಷ್ಟ ಪ್ರಕಾರವನ್ನು ಸೃಷ್ಟಿಸಿ ಅದನ್ನು ಜನಪ್ರಿಯಗೊಳಿಸಿದ.

ಶಾಲಾ ಉಪಾಧ್ಯಾಯನೊಬ್ಬನ ಮಗನಾಗಿ ಹೋಗಾರ್ತ್ ಲಂಡನ್ ನಗರದಲ್ಲಿ 1697ರಲ್ಲಿ ಜನಿಸಿದ. ಚಿಕ್ಕ ಹುಡುಗನಾಗಿದ್ದಾಗಿನಿಂದಲೂ ಚಿತ್ರ ಬರೆಯುವುದರಲ್ಲಿ ಇವನಿಗೆ ಆಸಕ್ತಿ. ಇವನ ತಂದೆ ಇವನನ್ನು, ಬೆಳ್ಳಿತಗಡಿನ ಮೇಲೆ ಚಿತ್ರ ಕೆತ್ತುವವನೊಬ್ಬನ ಬಳಿ ಕೆಲಸಕ್ಕೆ ಸೇರಿಸಿದ. ಅನಂತರ ಇವನು ಸರ್ ಜೇಮ್ಸ್ ಥಾರ್ನ್‌ಹಿಲ್ ಎಂಬವನ ಬಳಿ ಚಿತ್ರಕಲೆಯನ್ನು ಅಭ್ಯಾಸ ಮಾಡಿದ; 1729ರಲ್ಲಿ ಅವನ ಮಗಳನ್ನೇ ಮದುವೆಯಾದ.

ಹೋಗಾರ್ತ್‌ನಂಥ ಉದ್ಯೋಗವಿಲ್ಲದ ವ್ಯಕ್ತಿಗೆ ತನ್ನ ಮಗಳನ್ನು ಕೊಡಲು ಥಾರ್ನ್‌ಹಿಲ್ ಕೊಂಚ ಹಿಂಜರಿದ. ಆದರೆ ಹೋಗಾರ್ತ್ ಮದುವೆಯಾದ ಎರಡು ವರ್ಷಗಳಲ್ಲಿ 'ದಿ ಹಾರ್‌ಲಟ್ಸ್ ಪ್ರೋಗ್ರೆಸ್' ಎಂಬ ಆರು ಚಿತ್ರಗಳ ಮಾಲಿಕೆಯೊಂದನ್ನು ರಚಿಸಿದ. ವೇಶ್ಯೆಯೊಬ್ಬಳ ಜೀವನದ ವಿವಿಧ ಹಂತಗಳನ್ನು ನಿರೂಪಿಸುವ ಈ ಚಿತ್ರಶ್ರೇಣಿ ಅಪಾರ ಜನಪ್ರಿಯತೆ ಗಳಿಸಿತು. ಇದರ ಮುದ್ರಿತ ಪ್ರತಿಗಳ ಮಾರಾಟದಿಂದ ಹೋಗಾರ್ತ್‌ಗೆ ಸುಮಾರು ಮೂವತ್ತೈದು ಸಾವಿರ ರೂಪಾಯಿಗಳಷ್ಟು ಹಣ ದೊರೆಯಿತು. ಇವನಿಗೆ ಮಗಳನ್ನು ಕೊಟ್ಟ ಮಾವನಿಗೆ ಸಮಾಧಾನವಾಯಿತು.

ಇವನ ಚಿತ್ರಗಳ ಮುದ್ರಿತ ಪ್ರತಿಗಳು ತುಂಬ ಜನಪ್ರಿಯವಾದದ್ದನ್ನು ಕಂಡ ಕೆಲವರು, ಇವನ ಅಪ್ಪಣೆ ಪಡೆಯದೆ ಅವನ್ನು ಮುದ್ರಿಸಿ ಮಾರತೊಡಗಿದರು. ಹೋಗಾರ್ತ್ ಇದನ್ನು ತೀವ್ರವಾಗಿ ವಿರೋಧಿಸಿದ. ಇಂಥ ವ್ಯವಹಾರವನ್ನು ತಡೆಗಟ್ಟಲು ಸರಕಾರ 1735ರಲ್ಲಿ ಒಂದು ಹೊಸ ಕಾನೂನನ್ನು ಜಾರಿಗೆ ತಂದಿತು. ಇದಕ್ಕೆ ಹೋಗಾರ್ತ್ ಆಕ್ಟ್ ಎಂದೇ ಹೆಸರಾಯಿತು.

'ಎ ರೇಕ್ಸ್ ಪ್ರೋಗ್ರೆಸ್' ಎಂಬ ಚಿತ್ರಶ್ರೇಣಿಯಲ್ಲಿ ತಂದೆಯನ್ನು ಕಳೆದುಕೊಂಡ ಯುವಕನೊಬ್ಬನಿಗೆ ಅಪಾರ ಆಸ್ತಿ ಸಿಕ್ಕು ಅವನು ಅದನ್ನು ಹಾಳು ಮಾಡಿ, ನಿರ್ಗತಿಕನಾಗಿ, ಜೈಲುವಾಸಕ್ಕೆ ಗುರಿಯಾಗಿ, ಅನಂತರ ಹುಚ್ಚರ ಆಸ್ಪತ್ರೆ ಸೇರುವ ದುರಂತ ಜೀವನದ ಕಥೆಯು ಚಿತ್ರಣವಿದೆ. ಪರಸ್ಪರ ಮೆಚ್ಚದ ಗಂಡು ಹೆಣ್ಣುಗಳನ್ನು ಹಣದಾಸೆಗಾಗಿ ಒತ್ತಾಯದಿಂದ ಮದುವೆ



ಕಥಾನಿರೂಪಣೆ : ಹೋಗಾರ್ತ್

ಮಾಡಿಸಿದರೆ ಅದರಿಂದ ಆಗಬಹುದಾದ ಪರಿಣಾಮ ಇವನ ಇನ್ನೊಂದು ಚಿತ್ರಶ್ರೇಣಿ ' ಮ್ಯಾರೇಜ್ ಎ ಲಾ ಮೋಡ್ 'ನ ವಸ್ತು.

ಚಿತ್ರಗಳ ಮೂಲಕ ಹೋಗಾರ್ತ್ ಕಥೆ ಹೇಳುತ್ತಿದ್ದ. ಆಗಿನ ಸಮಾಜದ ಲೋಪ ದೋಷಗಳನ್ನು ಕೂಡ ಅತ್ಯಂತ ಕಟುವಾಗಿ, ನಿರ್ಭಯವಾಗಿ, ಪರಿಣಾಮಕಾರಿಯಾಗಿ ಟೀಕಿಸುತ್ತಿದ್ದ. ಇವನ ಬುದ್ಧಿವಂತಿಕೆಯೂ ವಿಡಂಬನಾಶಕ್ತಿಯೂ ಹರಿತ. ಇವನ ಸೃಷ್ಟನೆಯ ಚಿತ್ರಗಳು ಅತ್ಯಂತ ವಾಸ್ತವಿಕವಾಗಿರುತ್ತಿದ್ದವು. ಇವನ ಹಾಗೆ ಚಿತ್ರಗಳ ಮೂಲಕ ಕಥೆ ನಿರೂಪಣೆ ಮಾಡಿದವರು ಚಿತ್ರಕಲೆಯ ಇತಿಹಾಸದಲ್ಲೇ ಅಪರೂಪ.

ಹೋಗಾರ್ತ್ ರೂಪಚಿತ್ರಗಳನ್ನೂ ರಚಿಸುತ್ತಿದ್ದ. ಹೋಗಾರ್ತ್ ಸ್ವಚಿತ್ರವನ್ನೂ ಬರೆದುಕೊಂಡಿದ್ದಾನೆ.

ಸಮಾಜದ ಹಿರಿಯ ಸ್ಥಾನದಲ್ಲಿದ್ದ ವ್ಯಕ್ತಿಯೊಬ್ಬನ ಚಿತ್ರವನ್ನು, ಹೋಗಾರ್ತ್ ಆತನ ಬೇಡಿಕೆ ಮೇರೆಗೆ ಬರೆದ. ವಾಸ್ತವವಾಗಿ ಆ ವ್ಯಕ್ತಿ ಮುಪ್ಪಡರಿ ಕುಂದಿಹೋಗಿದ್ದ. ಹೋಗಾರ್ತ್ ಬರೆದ ಚಿತ್ರ ನಿಜಸ್ಥಿತಿಯ ತದ್ರೂಪವಾಗಿತ್ತು. ಆದರೆ ಆ ಚಿತ್ರವನ್ನು ನೋಡಿದ ಮೇಲೆ ಅದು ಅಂದವಾಗಿಲ್ಲವೆಂದು ಆತ ಅದನ್ನು ತೆಗೆದುಕೊಳ್ಳಲು ನಿರಾಕರಿಸಿದ. ಆಗ ಹೋಗಾರ್ತ್ ಅವನಿಗೆ " ಮಹನೀಯರೇ, ಮೂರು ದಿನಗಳೊಳಗಾಗಿ ನಿಮ್ಮ ಚಿತ್ರವನ್ನು ನೀವು ತೆಗೆದುಕೊಳ್ಳದಿದ್ದರೆ ಅದಕ್ಕೆ ಒಂದು ಬಾಲವನ್ನು ಸೇರಿಸಿ, ಕಾಡುಪ್ರಾಣಿಗಳ ಪಾಲಕ ಮಿಸ್ಟರ್ ಹೇರ್‌ಗೆ ಕೊಟ್ಟುಬಿಡುತ್ತೇನೆ " ಎಂದು ಬರೆದ. ಈ ಕಾಗದ ಕಂಡ ಕೂಡಲೇ ಆ ಮಹನೀಯ ಶುಲ್ಕ ತೆತ್ತು, ತನ್ನ ಚಿತ್ರವನ್ನು ಕೊಂಡೊಯ್ದ.

ತನ್ನ ಕೊನೆಗಾಲದಲ್ಲಿ ಹೋಗಾರ್ತ್ 'ಸೌಂದರ್ಯ ವಿಶ್ಲೇಷಣೆ' ಎಂಬ ಒಂದು ನಿಬಂಧವನ್ನು ಬರೆದ. ಇಂಥ ಕೃತಿ ಇಂಗ್ಲಿಷಿನಲ್ಲಿ ಬಂದದ್ದು ಅದೇ ಮೊದಲು.

ಒಂದು ಸ್ವಚಿತ್ರದಲ್ಲಿ ಶೇಕ್ಸ್‌ಪಿಯರ್, ಮಿಲ್ಟನ್ ಮತ್ತು ಸ್ವಿಫ್ಟ್‌ರ ಪುಸ್ತಕಗಳನ್ನೂ ತನ್ನ ಚಿತ್ರದೊಂದಿಗೆ ಸೇರಿಸಿದ. ತನ್ನಲ್ಲಿ ಈ ಮೂವರ ಪ್ರತಿಭೆಯ ಅಂಶಗಳಿವೆ ಎಂಬುದು ಆತ ನೀಡಿದ ವಿವರಣೆ. ಶೇಕ್ಸ್‌ಪಿಯರ್‌ನಂತೆ ಇವನು ಚಿತ್ರಕಲೆಯನ್ನು ನಾಟಕೀಯ ನಿರೂಪಣೆಯ ಮಾಧ್ಯಮವನ್ನಾಗಿ ಮಾಡಿಕೊಂಡ. ಯಾವ ಠಕ್ಕೂ ವಂಚನೆಯೂ ಇಲ್ಲದೆ ಮಿಲ್ಟನನಂತೆ ತನ್ನ ಸೌಂದರ್ಯಕಲ್ಪನೆಗೆ ನಿರ್ಭಯವಾಗಿ ಅಭಿವ್ಯಕ್ತಿ ನೀಡಿದ. ಸ್ವಿಫ್ಟ್‌ನಂತೆ ತಾನು ಕಂಡ ಸಮಾಜದ ಲೋಪದೋಷಗಳನ್ನು ತನ್ನ ಚಿತ್ರಗಳ ಮೂಲಕ ಬಯಲಿಗೆಳೆದ.

1764ರಲ್ಲಿ ತನ್ನ 67ನೆಯ ವಯಸ್ಸಿನಲ್ಲಿ ಹೋಗಾರ್ತ್ ಕಾಲವಾದ.

## ಹೋಮರ್

ಭಾರತೀಯ ಸಾಹಿತ್ಯಕ್ಕೆ ವಾಲ್ಮೀಕಿ ಹೇಗೋ ಹಾಗೆ ಪಾಶ್ಚಾತ್ಯ ಸಾಹಿತ್ಯಕ್ಕೆ ಹೋಮರ್ ಆದಿಕವಿ. ' ಮಹಾಭಾರತ ',' ರಾಮಾಯಣ 'ಗಳಂತೆ ಮಹಾಕಾವ್ಯಗಳೆಂದು ಪ್ರಸಿದ್ಧವಾಗಿರುವ ' ಇಲಿಯಡ್ ' ಮತ್ತು ' ಒಡಿಸ್ಸಿ 'ಗಳನ್ನು ಬರೆದ ಮಹಾಕವಿ ಹೋಮರ್.

ಅವನ ಕಾಲ, ಹುಟ್ಟೂರು, ವಂಶಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಅವನ ಕಾವ್ಯದ ಒಂದೆರಡು ಸಾಲುಗಳ ಆಧಾರದ ಮೇಲೆ ಅವನು ಅಂಧನಾಗಿದ್ದನೆಂದು ಹೇಳುವುದುಂಟು. ಹೋಮರ್ ಎಂಬವನೇ ಇರಲಿಲ್ಲ ಎನ್ನುವವರೂ ಉಂಟು.

ಹೋಮರ್ ಎಂದರೆ ಕಲೆಹಾಕುವವನು, ಜೋಡಿಸುವವನು ಎಂಬ ಅರ್ಥವೂ ಇದೆ.

ಹೋಮರ್ ಒಬ್ಬ ಚಾರಣ ಕವಿ ಇದ್ದಿರಬಹುದು. 'ಇಲಿಯಡ್' ಹಾಗೂ 'ಒಡಿಸ್ಸಿ' ಕಲೆಹಾಕಿದ ಲಾವಣಿಗಳ ಆಧಾರದ ಮೇಲೆ ರಚಿತವಾಗಿರಬೇಕು ಎನ್ನುತ್ತಾರೆ. ಪ್ರಾಚೀನ ಗ್ರೀಕ್ ನಾಗರಿಕತೆಯನ್ನು ರೂಪಿಸುವುದರಲ್ಲಿ ಈ



ಪಶ್ಚಿಮದ ಆದಿಕವಿ : ಹೋಮರ್

ಮಹಾಕಾವ್ಯಗಳ ಮುಖ್ಯ ವಸ್ತು ಯುದ್ಧವು. ಗ್ರೀಸಿನ ಭವ್ಯ ಪರಂಪರೆಯನ್ನೂ ಧೀರರ ಕಥೆಗಳನ್ನೂ ಸ್ವಾರಸ್ಯದ ಸಂಪ್ರದಾಯಕ್ಕೆ ಕಳಸ ದ ಮಾದರಿಯಾಗಿ ಈ ಮಹಾಕಾವ್ಯಗಳು ರೂಪುಗೊಂಡವು. ಉಜ್ವಲ ಕಾವ್ಯಗಳಾದ 'ಇಲಿಯಡ್' ಮತ್ತು 'ಒಡಿಸ್ಸಿ'ಗಳು ಗ್ರೀಕ್ ಧರ್ಮದ ಆಕರಗ್ರಂಥಗಳೂ ಆದುವು. ಗ್ರೀಕರ ಇತಿಹಾಸ, ತತ್ತ್ವಜ್ಞಾನ, ನಾಟಕ, ಕಾವ್ಯ ಹಾಗೂ ವೈಜ್ಞಾನಿಕ ವಿಚಾರಗಳಲ್ಲೆಲ್ಲ ಹೋಮರನ ಕಾವ್ಯಧಾರೆ ಪ್ರತಿಬಿಂಬಿಸಿತು. ಗ್ರೀಸಿನ ವಾಗ್ಮಿಗಳಿಗೆ, ಕಲಾವಿದರಿಗೆ ಅದು ಸ್ಫೂರ್ತಿ ಚೇತನವಾಯಿತು.

ತನ್ನ ಕಾವ್ಯಗಳಲ್ಲಿ ಪ್ರಧಾನ ಕಥೆ ಮತ್ತು ಉಪಕಥೆಗಳನ್ನು ಅವನು ಹೆಣೆದಿರುವ ರೀತಿ ಸೊಗಸಾಗಿದೆ. ಹೋಮರ್ ನೀತಿಬೋಧಕನ ಪಾತ್ರ ವಹಿಸುವುದೇ ಇಲ್ಲ. ಅವನು ಹೇಳಬೇಕೆಂದಿರುವುದೆಲ್ಲ ಅವನ ಪಾತ್ರಗಳ ನಡೆನುಡಿಗಳ ಮೂಲಕ ಅಭಿವ್ಯಕ್ತಿ ಪಡೆಯುತ್ತದೆ. ಪ್ರತಿ ಕಥೆಯಲ್ಲೂ ಅವನದು ಜ್ವಲಂತ ಕಲ್ಪನಾಶಕ್ತಿ. ಮನುಷ್ಯರ ರೀತಿ ನೀತಿಗಳನ್ನೂ ಅವರ ಮಾನಸಿಕ ತೊಳಲಾಟವನ್ನೂ ಹೋಮರ್ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ.

ಹೋಮರನ ಮಹಾಕಾವ್ಯಗಳು ಜಗತ್ತಿನ ಬಹ್ವಂಶ ಭಾಷೆಗಳಿಗೆ ಅನುವಾದಗೊಂಡಿವೆ.

ಕಾಲ ಕಳೆದರೂ ಹೋಮರನ ಸಾಹಿತ್ಯ ಮಾಸಿಲ್ಲ. ಪ್ರತಿಯೊಂದು ಹೊಸ ಪೀಳಿಗೆಯೂ ಅವನ ಕೃತಿಗಳ ಅಧ್ಯಯನವನ್ನು ಆಸಕ್ತಿಯಿಂದ ಕೈಗೊಳ್ಳುತ್ತದೆ.

---

# ಸಂದರ್ಭಸೂಚಿ

ಬೆಂಗಳೂರು :

ಸರ್ಕಾರೀ ಮುದ್ರಣಾಲಯದ ಡೈರೆಕ್ಟರವರಿಂದ ಮುದ್ರಿಸಲ್ಪಟ್ಟಿತು

1973

N G

